GENERAL EDITORS·

Dr. A. N. Upadhye Dr. H. L Jain





SAMANTABHADRA'S

# RATNAKARAṆḌAKA ŚRĀVAKĀCĀRA

(WITH PAṆḌITA SADĀSUKHAJI'S HINDĪ VACANIKĀ ETC.)

TRANSLATED INTO KANNADA

by

ANNARAYA APPANNA MIRJI, SHEDBAL

PUBLISHED

by

GULABCHAND HIRACHAND DOSHI
JAIN SANSKRITI SAMRAKSHAKA SANGHA,
SHOLAPUR



1960

PRICE RUPEES FIFTEEN ONLY

**FIRST EDITION· 1000 COPIES**

Copies of this book can be had direct from Jaina Sanskriti Samrakshaka Sangha, Santosha Bhavana, Phaltan Galli, Sholapur (India)

PRICE Rs. 15 PER COPY, EXCLUSIVE OF POSTAGE



## जीवराज जैन ग्रंथमालाका परिचय

सोलापूर निवासी ब्रह्मचारी जीवराज गौतमचंदजी दोशी कई वर्षोंसे संसारसे उदासीन होकर धर्मकार्यमें अपनी वृत्ति लगा रहा थे। सन् १९४० में उनकी यह प्रबल इच्छा हो उठी कि अपनी न्यायोपार्जित संपत्तिका उपयोग विशेष रूपसे धर्म और समाजकी उन्नतिके कार्यमें करें। तदनुसार उन्होंने समस्त देशका परिभ्रमण कर जैन विद्वानोंसे साक्षात् और लिखित सम्मतियां इस बातकी संग्रह की कि कौनसे कार्यमें संपत्तिका उपयोग किया जाय। स्फुट मतसंचय कर लेनेके पश्चात् सन् १९४१ के ग्रीष्म कालमें ब्रह्मचारीजीने तीर्थक्षेत्र गजपंथा (नासिक) के शीतल वातावरणमे विद्वानोंकी समाज एकत्र की और ऊहापोह पूर्वक निर्णयके लिए उक्त विषय प्रस्तुत किया। विद्वत्सम्मेलनके फलस्वरूप ब्रह्मचारीजीने जैन संस्कृति तथा साहित्यके समस्त अंगोंके संरक्षण उद्धार और प्रचारके हेतुसे 'जैन संस्कृति संरक्षक संघ'की स्थापना की और उसके लिए ३००००) तीस हजारके दानकी घोषणा कर दी। उनकी परिग्रहनिवृत्ति बढती गई, और सन् १९४४ मे उन्होंने लगभग २,००,०००) दो लाखकी अपनी संपूर्ण संपत्ति संघको ट्रस्ट रूपमें अर्पण कर दी। इस तरह आपने अपने सर्वस्वका त्याग कर दी १६-१-५७ को अत्यन्त सावधानी और समाधानसे समाधिमरणकी आराधना की। इसी संघके अंतर्गत 'जीवराज जैन ग्रंथमाला' का संचालन हो रहा है। प्रस्तुत ग्रंथ इसी ग्रंथमालासे प्रकाशित हो रहा है।

*Published by*
Gulabchand Hirachand Doshi,
*Jaina Sanskriti Samrakshaka Sangha, Sholapur*

*Printed by*
Sharada Press,
*Car Street,*
*Mangalore-1.*



स्व. ब्र. जीवराज गौतमचंद दोशी

सस्थापक,

जैनसंस्कृति-सरक्षक-सघ, सोलापूर

# ಜೀವರಾಜ ಜೈನ ಗ್ರಂಥಮಾಲೆಯ ಪರಿಚಯ

ಸೊಲ್ಲಾಪುರ ನಿವಾಸಿಗಳಾದ ಬ್ರ. ಜೀವರಾಜ ಗೌತಮಚಂದ ದೋಶೀ ಇವರು ಕೆಲವೊಂದು ವರ್ಷಗಳಿಂದ ಸಂಸಾರದಲ್ಲಿ ಉದಾಸೀನರಾಗಿ ಧರ್ಮಕಾರ್ಯದಲ್ಲಿ ತಮ್ಮ ವೃತ್ತಿಯನ್ನು ಪ್ರವೃತ್ತಗೊಳಿಸಿದ್ದರು ಕ್ರಿ ಶ ೧೯೪೦ರಲ್ಲಿ ಅವರಿಗೆ ತಮ್ಮ ನ್ಯಾಯೋಪಾರ್ಜಿತ ಸಂಪತ್ತಿಯ ಉಪಯೋಗವನ್ನು ವಿಶೇಷರೂಪದಲ್ಲಿ ಧರ್ಮ ಮತ್ತು ಸಮಾಜದ ಉನ್ನತಿಯ ಕಾರ್ಯದಲ್ಲಿ ಮಾಡಬೇಕೆಂದು ಪ್ರಬಲ ಇಚ್ಛೆಯು ಉಂಟಾಯಿತು ಆಗ ಅವರು ಸಮಸ್ತ ಭಾರತವನ್ನು ಸಂಚರಿಸಿದರಲ್ಲದೆ ಅನೇಕ ವಿದ್ವಾಂಸರ ಪ್ರತ್ಯಕ್ಷ ಹಾಗೂ ಬರಹರೂಪದಲ್ಲಿ—ತಮ್ಮ ಸಂಪತ್ತಿಯ ವಿನಿಯೋಗವನ್ನು ಯಾವ ಕಾರ್ಯದಲ್ಲಿ ಮಾಡಬೇಕೆಂಬುದರ ಬಗ್ಗೆ—ಅಭಿಪ್ರಾಯಗಳನ್ನು ಕೂಡಹಾಕಿದರು ಈ ಅಭಿಪ್ರಾಯ ಸಂಗ್ರಹದ ತರುವಾಯ ಕ್ರಿ. ಶ ೧೯೪೧ರ ಗ್ರೀಷ್ಮಋತುವಿನಲ್ಲಿ ಈ ಬ್ರಹ್ಮಚಾರಿಗಳು ತೀರ್ಥಕ್ಷೇತ್ರ ಗಜಪಂಥದ (ನಾಶಿಕ) ಶಾಂತ ವಾತಾವರಣದಲ್ಲಿ ವಿದ್ವಾಂಸರನ್ನು ಒತ್ತಟ್ಟಿಗೆ ಕೂಡಿಸಿದರು. ಅಲ್ಲಿ ವಿಚಾರ-ವಿನಿಮಯದ ನಂತರ ನಿರ್ಣಯಾತ್ಮಕ ತಮ್ಮ ಇಚ್ಛೆಯನ್ನು ಪ್ರದರ್ಶಿಸಿದರು. ವಿದ್ವತ್ ಸಮ್ಮೇಲನದ ನಿರ್ಣಯದಂತೆ ಬ್ರಹ್ಮಚಾರೀಜಿಯವರು ಜೈನ ಸಂಸ್ಕೃತಿ ಹಾಗೂ ಸಾಹಿತ್ಯದ ಸಮಸ್ತ ಅಂಗಗಳ ಸಂರಕ್ಷಣ, ಉದ್ಧಾರ ಮತ್ತು ಪ್ರಚಾರದ ಹೇತುವಿನಿಂದ 'ಜೈನ ಸಂಸ್ಕೃತಿ ಸಂರಕ್ಷಕ ಸಂಘದ'ದ ಸ್ಥಾಪನೆಯನ್ನು ಮಾಡಿದರು ಅದಕ್ಕಾಗಿ ಮೂವತ್ತು ಸಾವಿರ ರೂಪಾಯಿಗಳ (೩೦,೦೦೦) ತಮ್ಮ ಕೊಡುಗೆಯನ್ನು ಘೋಷಿಸಿದರು. ಮುಂದೆ ಅವರ ಪರಿಗ್ರಹ ನಿವೃತ್ತಿಯು ಬೆಳೆಯುತ್ತಲೇ ಹೋಯಿತು ಅವರಿಂದ ಕ್ರಿ ಶ. ೧೯೫೪ರಲ್ಲಿ ಅವರು ಸುಮಾರು ಎರಡು ಲಕ್ಷದ (೨,೦೦,೦೦೦) ತಮ್ಮ ಸಂಪೂರ್ಣ ಸಂಪತ್ತಿಯನ್ನು ಸಂಘಕ್ಕೆ ವಿಶ್ವಸ್ತ ರೂಪದಿಂದ ಅರ್ಪಣಮಾಡಿದರು ಈ ಪ್ರಕಾರ ತಮ್ಮ ಸರ್ವಸ್ವವನ್ನು ತ್ಯಾಗಮಾಡಿ ದಿನಾಂಕ ೧೬—೧—೧೯೫೭ರಂದು ಅತ್ಯಂತ ಸಾವಧಾನ ಹಾಗೂ ಸಮಾಧಾನದಿಂದ ಸಮಾಧಿ ಮರಣದ ಆರಾಧನೆಯನ್ನು ಮಾಡಿದರು ಇವರು ಸ್ಥಾಪಿಸಿದ ಸಂಘದ ಅಂತರ್ಗತವಾಗಿ 'ಜೀವರಾಜ ಜೈನ ಗ್ರಂಥಮಾಲೆಯ' ಸಂಚಾಲನವು ನಡೆಯುತ್ತಿದೆ

# ವಿಷಯ ಸೂಚೀ

# ಮುಖ್ಯ ಸಂಪಾದಕೀಯ

ಜೈನ ಧಾರ್ಮಿಕ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಎರಡು ವಿಭಾಗಗಳು ಕಂಡು ಬರುತ್ತವೆ ಒಂದು ತತ್ತ್ವಜ್ಞಾನಕ್ಕೆ ಸಂಬಂಧಿಸಿದುದು, ಇನ್ನೊಂದು ಆಚಾರಕ್ಕೆ ಸಂಬಂಧಿಸಿದುದು ವ್ಯಾವಹಾರಿಕ ಜೀವನದ ದೃಷ್ಟಿಯಿಂದ ಆಚಾರ ಶಾಸ್ತ್ರದ ಸ್ಥಾನವು ಮಹತ್ವದ್ದಾಗಿರುತ್ತದೆ ಯಾಕೆಂದರೆ ಸದಾಚಾರದ ಮೂಲಕವೇ ಮನುಷ್ಯನು ಸಮಾಜದಲ್ಲಿ ಆದರವನ್ನೂ, ವೈಯಕ್ತಿಕ ಜೀವನದಲ್ಲಿ ಸುಖವನ್ನೂ ಹೊಂದುತ್ತಾನೆ ಇನ್ನು ಆಚಾರ ಶಾಸ್ತ್ರವು ಸಹ ಎರಡು ವಿಧವಾಗಿದೆ. ಒಂದು ಮುನಿಯ ಆಚಾರಕ್ಕೆ, ಇನ್ನೊಂದು ಗೃಹಸ್ಥರ ಆಚಾರಕ್ಕೆ ಸಂಬಂಧ ಉಳ್ಳುದಾಗಿದೆ ಮುನಿಗಳ ಆಚಾರವು ಯತಿಯ ಆಚಾರವು; ಗೃಹಸ್ಥಾಚಾರವು ಶ್ರಾವಕಾಚಾರವು ಈ ಎರಡೂ ಆಚಾರಗಳ ವಿವರಣೆಯು ದ್ವಾದಶಾಂಗ ಶ್ರುತಜ್ಞಾನದಲ್ಲಿ ಸಮಾವೇಶವಾಗುತ್ತದೆ ಸಾಧಾರಣವಾಗಿ ಪ್ರಥಮ ಶ್ರುತ ಆಚಾರಾಂಗದಲ್ಲಿ ಮುನಿ ಧರ್ಮದ ವಿವರವು ಬರುತ್ತದೆ ಏಳನೆಯ ಶ್ರುತಾಂಗವಾದ ಉಪಾಸಕಾಧ್ಯಯನದಲ್ಲಿ ಗೃಹಸ್ಥ ಧರ್ಮದ ನಿರೂಪಣೆಯು ಇದೆ ಉಪಲಬ್ಧ ದಿಗಂಬರ ಜೈನ ಸಾಹಿತ್ಯದಲ್ಲಿ ಮುನಿಧರ್ಮದ ವಿವರಣೆಯು ಸ್ವತಂತ್ರವಾಗಿ ಪ್ರಾಚೀನವಾದ 'ಮೂಲಾಚಾರ' ಎಂಬ ಗ್ರಂಥದಲ್ಲಿ ದೊರೆಯುತ್ತದೆ ಅದರಂತೆ ಗೃಹಸ್ಥ ಧರ್ಮವನ್ನು ನಿರೂಪಿಸುವ ವಿಶಿಷ್ಟ ಗ್ರಂಥವೆಂದು ಸ್ವಾಮಿ ಸಮಂತಭದ್ರ ವಿರಚಿತ 'ರತ್ನಕರಂಡಕ-ಶ್ರಾವಕಾಚಾರ'ವು ಪ್ರಸಿದ್ಧವಾಗಿದೆ

ಈ ರತ್ನಕರಂಡಕ-ಶ್ರಾವಕಾಚಾರವು ಸಂಸ್ಕೃತ ಪದ್ಯಗಳಲ್ಲಿ ರಚಿಸಲ್ಪಟ್ಟಿದೆ. ಇದರ ಭಾಷೆ ಮತ್ತು ಶೈಲಿಗಳು ಸರಳ, ಆಕರ್ಷಕ ಹಾಗೂ ಹೃದಯಂಗಮವಾಗಿವೆ ದಿಗಂಬರ ಜೈನ ಸಮಾಜದಲ್ಲಿ ಈ ಗ್ರಂಥದ ಪ್ರತಿಷ್ಠೆಯು ಬಹಳ ದೊಡ್ಡದಾಗಿದೆ ಅಲ್ಲದೆ ಶ್ರಾವಕರಲ್ಲಿ ಈ ಗ್ರಂಥವು ಅತ್ಯಂತ ಲೋಕಪ್ರಿಯವಾಗಿದೆ. ಅನೇಕ ಜನ ವಿದ್ಯಾರ್ಥಿಗಳೂ, ಧರ್ಮಾಭ್ಯಾಸಿಗಳೂ ಆದ ಶ್ರಾವಕರು ಈ ಶ್ರಾವಕಾಚಾರವನ್ನು ಕಂಠಸ್ಥ ಮಾಡುತ್ತ ಬಂದಿದ್ದಾರೆ ಅಲ್ಲದೆ ಪ್ರಸಂಗಕ್ಕನುಸರಿಸಿ ಇದರ ಶ್ಲೋಕಗಳನ್ನು ಪ್ರಮಾಣಕ್ಕೆಂದು ಉದಾಹರಿಸುತ್ತಾರೆ ಈ ಗ್ರಂಥವು ಇಷ್ಟೊಂದು ಸರಳ ಹಾಗೂ ಸುಬೋಧವಾದುದರಿಂದ ಇದರ ಮೇಲೆ ಸಂಸ್ಕೃತ ಭಾಷೆಯಲ್ಲಿ ವಿಶೇಷ ಟೀಕಾ ಗ್ರಂಥಗಳನ್ನು ಬರೆಯುವ ಕಾರಣವೇ ಬೀಳಲಿಲ್ಲ ಅದಕ್ಕಾಗಿ ಈ ಗ್ರಂಥದ ಮೇಲೆ ಪ್ರಭಾಚಂದ್ರರ ಸಂಸ್ಕೃತ ಟೀಕೆಯೊಂದೇ ಉಪಲಬ್ಧವಿದೆ ಅದು ಈ ಮೊದಲೇ ಮುಂಬಯಿಯ ಮಾಣಿಕಚಂದ ದಿಗಂಬರ ಜೈನ ಗ್ರಂಥ ಮಾಲೆಯ ಇಳನೆಯ ಕುಸುಮ-ವೆಂದು ಸನ್ ೧೯೨೫ ರಲ್ಲಿ ಪ್ರಕಟವಾಗಿದೆ ಇನ್ನು ದಕ್ಷಿಣ ದೇಶದ ಪ್ರಮುಖ ಭಾಷೆಗಳಾದ ತಮಿಳು, ಕನ್ನಡಗಳಲ್ಲಿ ಈ ಶ್ರಾವಕಾಚಾರದ ಅನುವಾದ ಮೊದಲಾದವುಗಳು ದೊರೆಯುತ್ತವೆ ವಿಶೇಷವಾಗಿ ಆಯತವರ್ಮನ ಕನ್ನಡ ಟೀಕೆಯು ಮಹತ್ವಪೂರ್ಣವಾಗಿದ್ದು ಮೂಲ ಗ್ರಂಥದ ಅಭ್ಯಾಸಕ್ಕೆ ಸಹಾಯಕಾರಿಯಾಗಿರುತ್ತದೆ. ಹಿಂದೀ ಭಾಷೆಯಲ್ಲಿ ಈ ಗ್ರಂಥದ ಮೇಲೆ ಪಂಡಿತ ಸದಾಸುಖಜಿಯವರು ವಿಸ್ತಾರವಾದ ವಚನಿಕೆಯನ್ನು ಬರೆದಿರುತ್ತಾರೆ ಈ ವಚನಿಕೆಯು ಪಂಡಿತರ ಜೈನ ಧರ್ಮದ ಗಾಢ ಅಭ್ಯಾಸದ ವಿಸ್ತೃತ ವಿವೇಚನೆಯ ಮತ್ತು ವಿಷಯವನ್ನು ತಿಳಿಸುವ ಪದ್ಧತಿಯ ಆದರ್ಶ ಗ್ರಂಥವಾಗಿದೆ ಉತ್ತರ ಹಿಂದುಸ್ಥಾನದಲ್ಲಿ ಜೈನ ಶ್ರಾವಕರು ಈ ಗ್ರಂಥವನ್ನು ಇಂದಿನ ವರೆಗೂ ಆದರದಿಂದ ಸ್ವಾಧ್ಯಾಯ ಮಾಡುತ್ತ ಬಂದಿದ್ದಾರೆ. ಈ ಗ್ರಂಥದ ಸ್ವಾಧ್ಯಾಯದಿಂದ ಎಷ್ಟೋ ಧಾರ್ಮಿಕ ಜನರ ಜೀವನವು ಸಮೃದ್ಧವೂ ಸಫಲವೂ ಆಗಿರುತ್ತದೆ ಜೈನ ಸಂಸ್ಕೃತಿ ಸಂಘದ ಸಂಸ್ಥಾಪಕರಾದ ಬ್ರ ಜೀವರಾಜ ಇವರ ಜೀವನದ ಮೇಲೆ ಈ ಗ್ರಂಥದ ಪ್ರಭಾವವು ಬಹಳಷ್ಟಾಗಿದೆ ಅವರು ಈ ಗ್ರಂಥದ ತಿರುಳನ್ನು ತಮ್ಮ ನಿತ್ಯದ ಜೀವನದಲ್ಲಿ ಆಚರಿಸಲು ಪ್ರಯತ್ನ ಮಾಡುತ್ತಿದ್ದರು, ಆಚರಿಸುತ್ತಿದ್ದರು ಅದರ ಸುಫಲವಾದರೂ ಸ್ಪಷ್ಟವಾಗಿ ಕಂಡು ಬಂತು ಅವರು ತಮ್ಮ ಮಧ್ಯ ವಯಸ್ಸಿನಿಂದಲೇ ವ್ಯಾವಸಾಯಿಕ ಪ್ರವೃತ್ತಿಯನ್ನು ಕಡಿಮೆ ಮಾಡುತ್ತ ಬಂದರು ಅಲ್ಲದೆ ಧಾರ್ಮಿಕ ಜೀವನದ ಕಡೆಗೆ ಅವರು ತಮ್ಮ ದೃಷ್ಟಿಯನ್ನು ಹರಿಯಿಸಿದರು. ಇಷ್ಟೇ ಅಲ್ಲ, ಅವರು ಜೈನ ಸಂಸ್ಕೃತಿ ಸಂರಕ್ಷಕ ಸಂಘವನ್ನು ಸ್ಥಾಪಿಸಿ ಅದಕ್ಕೆ ತಮ್ಮ ಸುಮಾರು ಎರಡು ಲಕ್ಷ ರೂಪಾಯಿಗಳ ಆಸ್ತಿಯನ್ನೆಲ್ಲ ಸಮರ್ಪಿಸಿದರು. ಮೇಲಾಗಿ ಕೊನೆಯವರೆಗೂ ಅತ್ಯಂತ ಶಾಂತ ನಿರಾಕುಲ ಮತ್ತು ಸಂತೋಷಮಯ ಧಾರ್ಮಿಕ ಜೀವನವನ್ನು ಬಾಳಿ ಅಂತ್ಯದಲ್ಲಿ ಒಳ್ಳೇ ಶಾಂತಿಯಿಂದ ಸಮಾಧಿ ಮರಣವನ್ನು ಸಾಧಿಸಿದರು

ಈ ಗ್ರಂಥದ ಸ್ವಾಧ್ಯಾಯ ಮಾಡುತ್ತಿರುವಾಗಲೇ ಬ್ರ ಜೀವರಾಜ ಭಾಯಿಯವರು ಅದರ ಅನುವಾದ-ವನ್ನು ಮರಾಠಿ ಭಾಷೆಯಲ್ಲಿ ಮಾಡಿದರು ಅದರ ಪ್ರಕಾಶನವೂ ಸಹ ಇದೇ ಗ್ರಂಥ ಮಾಲೆಯಲ್ಲಿ ಅವರ ಜೀವನ ಕಾಲದಲ್ಲಿಯೇ ಆಯಿತು

ಇನ್ನು ಪಂ. ಸದಾಸುಖಜಿಯವರ ಪೂಜೋಪಚಾರ, ಲೋಕಾಚಾರ ಇತ್ಯಾದಿ ವಿಷಯಗಳ ಮೇಲಿನ ವಿಚಾರಗಳು ಅವರಿಗೆ ಮಾನ್ಯವಾದ ತೇರಾಪಂಥ ಮತಕ್ಕೆ ಅನುಕೂಲವಾಗಿ ಇಲ್ಲಿ ನಿರೂಪಿಸಲ್ಪಟ್ಟಿವೆ ಆದರಿಂದ ಕನ್ನಡ ನಾಡಿನ ಪರಂಪರೆಗೆ ಅವು ಅಲ್ಲಲ್ಲಿ ವ್ಯತ್ಯಾಸವಾಗಿವೆ ಆದರೂ ಸುಬುದ್ಧ ವಾಚಕರು ಇವನ್ನೆಲ್ಲ ಅನೇಕಾಂತ ದೃಷ್ಟಿಯಿಂದಲೂ, ಸಹನ ಶೀಲತೆಯಿಂದಲೂ ಅರಿತುಕೊಳ್ಳಬೇಕು ಯಾಕಂದರೆ ಇವೆಲ್ಲ ಪಂ ಸದಾಸುಖಜಿಯವರ ವಿಚಾರಗಳೇ ಆಗಿವೆಯೇ ಹೊರತಾಗಿ ಸ್ವಾಮಿ ಸಮಂತಭದ್ರರ ವಿಚಾರಗಳೇನಲ್ಲ ಇಂಥ ಚಿಕ್ಕ ಪುಟ್ಟ ಮತ ಭೇದಗಳಿಂದ ಜೈನ ಧರ್ಮ ತಳಹದಿಯಾದ ಸಮ್ಯಕ್ತ್ವದ ಹಾನಿಯು ಆಗುವದಿಲ್ಲ, ಅಲ್ಲದೆ ವ್ರತಗಳಲ್ಲಿ ದೂಷಣೆಯೂ ಬರುವದಿಲ್ಲ

ಈಗಾಗಲೇ ಕನ್ನಡ ನಾಡಿನಲ್ಲಿಯೂ ಸಹ ಪಂ ಸದಾಸುಖಜಿಯವರ ಮೂಲ ಹಿಂದೀ ವಚನಿಕೆ ಮತ್ತು ಅದರ ಮರಾಠಿ ಭಾಷಾಂತರ ಇವುಗಳ ಸ್ವಾಧ್ಯಾಯವು ಅಲ್ಲಲ್ಲಿ ಕಂಡು ಬರುತ್ತದೆ ಎಷ್ಟೋ ಜನ ಶ್ರಾವಕರು ಬಹು ಆಸ್ಥೆಯಿಂದ ಈ ಗ್ರಂಥವನ್ನು ದಿನಾಲು ಸ್ವಾಧ್ಯಾಯಮಾಡುತ್ತಿರುತ್ತಾರೆ ಇದನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು ನಮ್ಮ ಮಿತ್ರರಾದ ಪ್ರೊ ಭೂಪಾಲ ಬಾಳಪ್ಪ ಬಾಗಿ, ಧಾರವಾಡ, ಇವರು ಬಾಹುಬಲಿಗೆ ಬಂದಾಗ ಸಂಘದ ವಿಶ್ವಸ್ತ ಮತ್ತು ಉತ್ಸಾಹಿ ವ್ಯವಸ್ಥಾಪಕರಾದ ಶ್ರೀಮಾನ್ ಮಾಣಿಕಚಂದ ವೀರಚಂದ ಶಹಾ ಇವರಿಗೆ 'ಈ ವಚನಿಕೆಯ ಅನುವಾದವು ಕನ್ನಡದಲ್ಲಿ ಆಗಬೇಕು, ಅದು ಜೀವರಾಜ ಗ್ರಂಥ ಮಾಲೆಯಲ್ಲಿಯೇ ಪ್ರಕಟವಾಗಬೇಕು.'—ಎಂದು ವಿನಂತಿ ಮಾಡಿ ಕೊಂಡರು. ಮುಂದೆ ಸಂಘದ ಸಂಚಾಲಕ ಸಮಿತಿಯ ಕೂಡುವಿಕೆಯಲ್ಲಿ ಈ ಮಾತಿನ ವಿಚಾರವಾಯಿತು ಇಂಥ ಗ್ರಂಥವನ್ನು ಕನ್ನಡದಲ್ಲಿ ಪ್ರಕಟಿಸುವುದು ಆರ್ಥಿಕ ದೃಷ್ಟಿಯಿಂದ ದೊಡ್ಡ ಸಾಹಸ ಹಾಗೂ ಹೊರೆಯಾಗಿದ್ದರೂ ಸಂಘದ ಅಧ್ಯಕ್ಷರಾದ ಶ್ರೀಮಾನ್ ಶೇಠ ಗುಲಾಬಚಂದ ಹಿರಾಚಂದಜಿಯವರು ಕನ್ನಡ ನಾಡಿನ ಶ್ರಾವಕರ ಧಾರ್ಮಿಕ ಲಾಭ-ವನ್ನು ಗಮನಿಸಿ ಈ ಪ್ರಕಾಶನ ವಿಚಾರವನ್ನು ಪ್ರೋತ್ಸಾಹಿಸಿದರು ಶ್ರೀ ಮಾಣಿಕಚಂದಜಿಯವರ ಸಾಹಸ, ಶ್ರೀಮಾನ್ ವಾಲಚಂದ ದೇವಚಂದಜಿಯವರ ಪ್ರೇರಣೆ ಮತ್ತು ಮುಖ್ಯ ಸಂಪಾದಕರ ಕಾರ್ಯತತ್ಪರತೆಯಿಂದ ಈ ಗ್ರಂಥದ ಕನ್ನಡ ಅನುವಾದವನ್ನು ಪ್ರಸಿದ್ಧಿಸುವ ನಿರ್ಣಯವಾಯಿತು. ಈ ಪ್ರಕಾಶನ ಕಾರ್ಯವೆಂದರೆ ಬ್ರ ಜೀವರಾಜ ಇವರು ಮಾಡಿದ ಮರಾಠಿ ಅನುವಾದದ ಉದ್ದೇಶವನ್ನೇ ಇನ್ನಷ್ಟು ಮುಂದರಿಸಿದಂತಾಯಿತು ಈ ಗ್ರಂಥದ ಕನ್ನಡ ಅನುವಾದ ವನ್ನು ಅನುರೂಪವಾಗಿ ಸಂಪಾದಿಸುವ ಭಾರವನ್ನು ಗ್ರಂಥಮಾಲೆಯ ಸಂಪಾದಕರಲ್ಲೊಬ್ಬರಾದ ಡಾ ಆ ನೇ. ಉಪಾಧ್ಯೆ ಇವರ ಮೇಲೆ ಹೊರಿಸಲಾಯಿತು. ಅವರ ಕೈಯಲ್ಲಿ ಹೆಚ್ಚಾಗಿ ಕೆಲಸಗಳಿದ್ದರೂ ಸಹ ಎಲ್ಲರ ಉತ್ಸಾಹವನ್ನು ನೋಡಿ, ಕನ್ನಡಿಗರ ಲಾಭವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರು ಈ ಕಾರ್ಯವನ್ನು ಸ್ವೀಕರಿಸಿದರು

ಈ ವಚನಿಕೆಯ ಕನ್ನಡ ಅನುವಾದವನ್ನು ಮಾಡಲು ಕನ್ನಡ ನಾಡಿನ ಪ್ರಸಿದ್ಧ ಸಾಹಿತಿಗಳಾದ ಶ್ರೀಯುತ ಅಣ್ಣಾರಾಯ ಮಿರ್ಜಿಯವರು ಒಪ್ಪಿದರು. ಅದರಂತೆ ಒಳ್ಳೇ ಆಸ್ಥೆಯಿಂದ ಈ ಕಾರ್ಯವನ್ನು ಅವರು ನೆರವೇರಿಸಿ-ದ್ದಾರೆ. ಈ ಗ್ರಂಥವು ಸಮೃದ್ಧವಾಗಬೇಕೆಂಬ ದೃಷ್ಟಿಯಿಂದ ಮೂಲ ಶ್ಲೋಕಗಳ ಅನ್ವಯಾರ್ಥವನ್ನೂ ಕೊಟ್ಟಿದ್ದಾರೆ ಆ ನಂತರ ಪಂ ಸದಾಸುಖಜಿಯವರ ವಚನಿಕೆಯ ಮೇಲಿಂದ ಅರ್ಥ ಹಾಗೂ ವಿಶೇಷಾರ್ಥಗಳನ್ನು ಕೊಡಲಾಗಿದೆ. ಇತ್ತೀಚೆಗೆ ಸಮಾಜದಲ್ಲಿಯ ಜ್ಞಾನವೃದ್ಧ ಹಾಗೂ ವಯೋವೃದ್ಧ ವಿದ್ವಾಂಸರಾದ ಶ್ರೀಮಾನ್ ಪಂ ಜುಗಲ ಕಿಶೋರಜಿ ಮುಖ್ತಾರ ಇವರು ರತ್ನಕರಂಡಕ-ಶ್ರಾವಕಾಚಾರದ ಮೇಲೆ 'ಸಮೀಚೀನ ಧರ್ಮಶಾಸ್ತ್ರ'ವೆಂಬ ಗ್ರಂಥದಲ್ಲಿ (ವೀರ ಸೇವಾ ಮಂದಿರ, ದಿಲ್ಲಿ, ಸನ್ ೧೯೫೫) ತಮ್ಮ ಅಮೂಲ್ಯ ವಿಚಾರಗಳನ್ನು ಪ್ರಕಟಿಸಿದ್ದಾರೆ ಇದರಿಂದ ಕೆಲವೊಂದು ಮಹತ್ವದ ವಿಷಯಗಳನ್ನು ಅನುವಾದ ಮಾಡಿ ಈ ಗ್ರಂಥದಲ್ಲಿ ಕೊಟ್ಟಿದೆ ಹೀಗೆ ಸಂಪಾದಿಸಿದ ವಿಷಯವನ್ನು ಕಂಸಿನಲ್ಲಿ ಕಾಣಿಸಲಾಗಿದೆ ಇಷ್ಟೇ ಅಲ್ಲದೆ, ರತ್ನಕರಂಡಕದ ಅಭ್ಯಾಸಕ್ಕೆ ಕನ್ನಡದಲ್ಲಿಯ ಮೌಲಿಕ ಮತ್ತು ಆನುಷಂಗಿಕ ಸಾಧನವು ದೊರೆಯಬೇಕು, ಅಲ್ಲದೆ ಒಂದು ದುರ್ಲಭವಾದ ಪ್ರಾಚೀನ ಕನ್ನಡ ಗ್ರಂಥದ ಉದ್ಧಾರವಾಗಬೇಕು, ಈ

ಉಭಯ ದೃಷ್ಟಿಯಿಂದ ಆಯತವರ್ಮನ ಕನ್ನಡ ರತ್ನಕರಂಡಕದೊಳಗಿನ ಮಹತ್ವದ ಭಾಗಗಳನ್ನು ಅಲ್ಲಲ್ಲಿ ಆಯಾ ಸೂತ್ರಗಳ ಮೇಲೆ ಅಡಿ ಟಿಪ್ಪಣಿಯ ರೂಪದಲ್ಲಿ ಕೊಡಲಾಗಿದೆ ಆಯತವರ್ಮನ ಗ್ರಂಥವು ದುರ್ಲಭವಾಗಿದ್ದು, ಅದರ ತ್ರುಟಿತವಾದ ಒಂದೇ ಪ್ರತಿಯು ಮೈಸೂರಿನಲ್ಲಿದೆ. ಅದರ ಪ್ರತಿಲಿಪಿಯನ್ನು ನಮಗೆ ದೊರಕಿಸಿ ಕೊಟ್ಟಿದ್ದಕ್ಕಾಗಿ ನಾವು ನಮ್ಮ ಪರಮ ಮಿತ್ರರಾದ ಪ್ರೊ ಡಿ ಎಲ್ ನರಸಿಂಹಾಚಾರ್ ಎಂ ಎ. ಇವರಿಗೆ ಕೃತಜ್ಞರಾಗಿದ್ದೇವೆ ಮೂಲ ಪ್ರತಿಯು ಅಲ್ಲಲ್ಲಿ ತ್ರುಟಿತವೂ ಅಶುದ್ಧವೂ ಆಗಿದೆ ಮೊದಲನೆಯ ಪ್ರಯತ್ನವೆಂದು ಯಥಾಶಕ್ತಿ ಮತ್ತು ಯಥಾಮತಿ ಇದರ ಸಂಪಾದನೆಯನ್ನು ಇಲ್ಲಿ ಮಾಡಿದೆ ಅಲ್ಲಲ್ಲಿ ಸದೋಷ ಪಾಠಗಳೂ ಕಾಣಿಸಬಹುದು. ಮುಂದ, ಹೆಚ್ಚು ಪ್ರತಿಗಳನ್ನು ದೊರಕಿಸಿ ವಿದ್ವಾಂಸರು ಆಯತವರ್ಮನ ಗ್ರಂಥವನ್ನು ಸಂಪೂರ್ಣವಾಗಿ ಪ್ರಸಿದ್ಧ ಗೊಳಿಸುವಾಗ ನಮ್ಮ ಈ ಸದೋಷ ಪ್ರಯತ್ನದ ಲಾಭವು ತುಸುವಾದರೂ ಆದಲ್ಲಿ ನಮಗೆ ಸಮಾಧಾನವಿದೆ ಇದಲ್ಲದೆ ಶ್ರೀಯುತ ಅಣ್ಣಾ ರಾಯರು ಕನ್ನಡ ವಾಙ್ಮಯದ ತಮ್ಮ ವಿಶಾಲವಾದ ಅಧ್ಯಯನದಿಂದ ಪ್ರಗಲ್ಭ ಕನ್ನಡ ಕವಿಗಳ ಕಾವ್ಯಗಳಿಂದ ಅನು ರೂಪವಾದ ಶ್ಲೋಕಗಳನ್ನು ಎತ್ತಿ ಯೋಗ್ಯ ಸಂದರ್ಭದಲ್ಲಿ ಕೊಟ್ಟಿರುತ್ತಾರೆ ಕೆಲವೆಡೆಯಲ್ಲಿಯಂತೂ ಈ ಶ್ಲೋಕ ಗಳು ಅತ್ಯಂತ ಸಮುಚಿತವಾಗಿದ್ದು, ಸ್ವಾಮಿ ಸಮಂತಭದ್ರರ ವಿಚಾರಗಳನ್ನೇ ವಿಶದವಾಗಿ ಕನ್ನಡ ನುಡಿಯಲ್ಲಿ ಹೇಳು ತ್ತವೆ ಇವನ್ನೆಲ್ಲ ಸಾಕಲ್ಯದಿಂದ ನೋಡಿದರೆ ಭಾಷೆಯು ಯಾವುದೇ ಇರಲಿ, ಜೈನ ಧರ್ಮದ ತತ್ತ್ವಜ್ಞಾನ ಹಾಗೂ ಆಚಾರಗಳಿಗೆ ಸಂಬಂಧಿಸಿದ ವಿಚಾರಗಳ ಪಾರ್ಶ್ವಭೂಮಿಯು ಹಾಗೂ ಹೃದಯವು ನಮ್ಮ ನಾಡಿನಲ್ಲಿ ಎಲ್ಲ ಕಡೆಗೆ ಏಕ ರೂಪವೇ ಆಗಿದೆ-ಎಂಬುದು ಕಂಡು ಬರುತ್ತದೆ.

ಈ ಗ್ರಂಥದ ಪರಿಶಿಷ್ಟಗಳಲ್ಲಿ "ತತ್ತ್ವ-ಸಮುಚ್ಚಯ"ದ ಕನ್ನಡ ಅನುವಾದವನ್ನು ಕೊಡಲಾಗಿದೆ ಹೀಗೆ ಮಾಡುವುದರಲ್ಲಿ ನಮ್ಮ ಮುಂದೆ ಎರಡು ಉದ್ದೇಶಗಳಿವೆ —(೧) ರತ್ನಕರಂಡಕ-ಶ್ರಾವಕಾಚಾರವನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡುವವರಿಗೆ ಸಂಪೂರ್ಣ ಜೈನ ತತ್ತ್ವಜ್ಞಾನದ ಪಾರ್ಶ್ವಭೂಮಿಯು ದೊರೆಯಬೇಕು, ಮತ್ತು (೨) ಕನ್ನಡಿ ಗರಿಗೆ ಜೈನ ತತ್ತ್ವಜ್ಞಾನದ ಸಾಂಗೋಪಾಂಗ ವಿವರಣೆಯನ್ನು ಕೊಡುವ ಈ ಗ್ರಂಥದ ಅನುವಾದವು ಲಭಿಸಬೇಕು, ಮೇಲಾಗಿ ಇದರಿಂದ ಕನ್ನಡದಲ್ಲಿ ಜೈನ ಧರ್ಮದ ಮೇಲಿನ ಪ್ರಾಕೃತ-ಸಂಸ್ಕೃತ ಗ್ರಂಥಗಳ ಅಭ್ಯಾಸಕ್ಕೆ ಸಾಧನವು ದೊರೆಯಬೇಕು ಇದರೊಡನೆ ಕೊಟ್ಟ ಶಬ್ದಕೋಶ ಮತ್ತು ಗ್ರಂಥಗಳ ಪರಿಚಯ ಇವೆಲ್ಲ ಕನ್ನಡ ನಾಡಿನ ವಿದ್ವಾಂಸ ರಿಗೆ ಉಪಯುಕ್ತವಾಗಬಹುದೆಂದು ನಾವು ನಂಬುತ್ತೇವೆ 'ತತ್ತ್ವಸಮುಚ್ಚಯ'ದ ಸಂಕಲನವನ್ನು ಮತ್ತು ಹಿಂದೀ ಅನು ವಾದವನ್ನು ಮಾಡಿದವರು ನಮ್ಮ ಸಹಕಾರಿಗಳಾದ ಡಾ ಹೀರಾಲಾಲ ಜೈನರವರಾಗಿದ್ದಾರೆ. ಜೈನ ಪರಿಭಾಷೆಯನ್ನು ವಿಸ್ತೃತವಾಗಿ ತಿಳಿಯಲು ಈ ಗ್ರಂಥವು ಬಹಳೇ ಉಪಯೋಗಿಯಾಗಿದೆ ನಾವು ಅರಿತ ಮಟ್ಟಿಗೆ ಇವುಗಳಲ್ಲಿಯ ಕೆಲವು ಗ್ರಂಥಗಳ ಪರಿಚಯವು ಕನ್ನಡದಲ್ಲಿ ಪ್ರಥಮತಃ ಪಂಡಿತರಿಗೆ ದೊರೆಯುತ್ತಲಿದೆ ಈ ಗ್ರಂಥವನ್ನು ಕನ್ನಡಿಸಲು ಅನುಮತಿಯನ್ನಿತ್ತ ಅದರ ಸಂಪಾದಕರಿಗೂ (ಡಾ. ಹೀರಾಲಾಲ ಜೈನ) ಮತ್ತು ಪ್ರಕಾಶಕರಿಗೂ (ಭಾರತ-ಜೈನ ಮಹಾಮಂಡಲ, ವರ್ಧಾ) ನಾವು ಕೃತಜ್ಞರಾಗಿದ್ದೇವೆ.

ಈ ಗ್ರಂಥದ ಕನ್ನಡ ಅನುವಾದವನ್ನು ಸ್ವಲ್ಪ ಕಾಲದಲ್ಲಿ ಸಿದ್ಧಪಡಿಸಿದುದಕ್ಕೆ ಈ ಸಂಘವು ಶ್ರೀಯುತ ಅಣ್ಣಾರಾಯ ಮಿರ್ಜಿಯವರಿಗೆ ಅಭಿನಂದನೆಯನ್ನು ಅರ್ಪಿಸುತ್ತದೆ. ಅದರಂತೆ ಮುದ್ರಣ ಪ್ರತಿಗಳ ಪರಿಶೋಧನೆ ಯನ್ನು-ತಮ್ಮ ಬಹುವಿಧ ಕಾರ್ಯಗಳಲ್ಲಿ ಅಮೂಲ್ಯ ವೇಳೆಯನ್ನು ಇದಕ್ಕಿತ್ತು-ಡಾ ಆ. ನೇ ಉಪಾಧ್ಯೆಯವರು ಮಾಡಿದರು ಅದರಂತೆ ಸಂಘದ ಕಾರ್ಯಕರ್ತರು ಇಷ್ಟು ವೆಚ್ಚದ ಗ್ರಂಥವನ್ನು ಪ್ರಕಟಿಸಿದ್ದು, ಅವರ ಧಾರ್ಮಿಕ ಭಾವನೆಯ ದ್ಯೋತಕವಾಗಿದೆ ಅವರ ಸೇವೆ, ಉತ್ಸಾಹಗಳನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಆಗಿದೆ ಹಾಗೆಯೇ ಮುದ್ರಣ ಕಾರ್ಯವನ್ನು ಬಹು ತತ್ಪರತೆಯಿಂದ ಮಾಡಿಸಿ ಕೊಟ್ಟುದಕ್ಕೆ ಶಾರದಾ ಮುದ್ರಣಾಲಯ, ಮಂಗಳೂರು, ಇದರ ಸಂಚಾಲಕರಿಗೆ ನಾವು ಕೃತಜ್ಞರಾಗಿದ್ದೇವೆ

ಕನ್ನಡ ನಾಡಿನ ಸಂಸ್ಕೃತಿ ಮತ್ತು ಸಾಹಿತ್ಯ ಇವುಗಳನ್ನು ಸಮೃದ್ಧ ಗೊಳಿಸುವುದರಲ್ಲಿ ಜೈನ ಆಚಾರ್ಯರು ಮತ್ತು ಶ್ರಾವಕರು ಆರಂಭದಿಂದಲೂ ಪ್ರಯತ್ನಿಸುತ್ತ ಬಂದಿದ್ದಾರೆ. ಜೈನ ಕನ್ನಡ ಕವಿಗಳ ಎಷ್ಟೋ ಉಪ-ಗ್ರಂಥ ಗಳು ಪ್ರಸಿದ್ಧವಾಗಿವೆ ಆದರೆ ಎಷ್ಟೋ ಜೈನ ಸಿದ್ಧಾಂತ ಗ್ರಂಥಗಳು ಅವುಗಳ ಕನ್ನಡ ವಿವೇಚನೆಗಳು ಇನ್ನೂ ಪ್ರಸಿದ್ಧ ವಾಗಬೇಕಾಗಿವೆ ಇವನ್ನೆಲ್ಲ ಮಾಡುವ ಹೊಣೆಯು ಕನ್ನಡಿಗರ ಮೇಲೆಯೇ ಇರುತ್ತದೆ. ಕನ್ನಡ ನಾಡಿನ ಸಾಹಿತ್ಯ,

ಸಂಸ್ಕೃತಿ ಮತ್ತು ಕೀರ್ತಿಗಳನ್ನು ಉಜ್ವಲಗೊಳಿಸುವುದರಲ್ಲಿ ಜೈನ ಧರ್ಮವು ಆಯಾ ಕಾಲದಲ್ಲಿ ಸಹಾಯವನ್ನು ನೀಡುತ್ತ ಬಂದಿದೆ. ಆದರಿಂದ ಕನ್ನಡ ನಾಡು ಜೈನಧರ್ಮದ ನಿವಾಸ ಸ್ಥಾನವಾಗಿತ್ತೆಂದು ಒಳ್ಳೇ ಗೌರವದಿಂದ ಒಂದು ಶಾಸನವು ಹೀಗೆ ವರ್ಣಿಸುತ್ತದೆ—

> ಜಿನಧರ್ಮಾವಾಸಮಾದತ್ತಮಳವಿನಯಪಾಗಾರಮಾದತ್ತು ಪದ್ಮಾ-
> ಸನನಿವಾಸ ಸದ್ಮಮಾದತ್ತತಿ ವಿಶದ ಯಶೋಧಾಮಮಾದತ್ತು ವಿದ್ಯಾ- ।
> ಧನಜನ್ಮಸ್ಥಾನಮಾದತ್ತಸಮ ತರಳ ಗಂಭೀರ ಸದ್ಗೇಹಮಾದ-
> ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರು ಕರ್ಣಾಟದೇಶಂ ॥

ಕನ್ನಡ ನಾಡಿನ ಸುಪುತ್ರರು ಜೈನ ಧರ್ಮ, ಸಂಸ್ಕೃತಿ ಮತ್ತು ಸಾಹಿತ್ಯದ ಅಭ್ಯಾಸವನ್ನು ಇನ್ನೂ ಮುಂದರಿಸಲೆಂದು ನಾವು ಕೋರುತ್ತೇವೆ ಇಂಥ ಕಾರ್ಯದಲ್ಲಿ ಈ ಗ್ರಂಥದಿಂದ ಸಲ್ಲಿಸಿದ ಸಾಧನಗಳು ಸ್ವಲ್ಪಾದರೂ ಉಪಯುಕ್ತವಾದಲ್ಲಿ ಅದರಿಂದ ನಮಗೆ ಸಮಾಧಾನವಿದೆ

ನಾಗಪುರ,
೩೦—೧೦—೧೯೫೯

ಆ. ನೇ. ಉಪಾಧ್ಯೆ
ಹೀರಾಲಾಲ ಜೈನ,
ಗ್ರಂಥಮಾಲಾ ಸಂಪಾದಕರು

# ಅನುವಾದಕರ ಅನುಭಾವ

ಈ ರತ್ನಕರಂಡಕ-ಶ್ರಾವಕಾಚಾರವನ್ನು ಕನ್ನಡಿಗರ ಕೈಯಲ್ಲಿಡುವಾಗ—ಬಹು ದಿನಗಳ ಬಯಕೆಗೊಂದು ರೂಪು ಬಂದುದರಿಂದ—ಅತ್ಯಂತ ಆನಂದವಾಗುತ್ತಿದೆ. ಚಿಕ್ಕಂದಿನಾಗ ಧಾರ್ಮಿಕ ಪರೀಕ್ಷೆಗೆಂದು ಈ ಶಾಸ್ತ್ರಗ್ರಂಥವನ್ನು ಕಂಠಸ್ಥ ಮಾಡಿ, ಅನ್ವಯಾರ್ಥವನ್ನು ಅಭ್ಯಾಸಮಾಡಿಯಾಗಿತ್ತು. ಮುಂದೆ ತಿಳುವಳಿಕೆಯು ಹೆಚ್ಚುತ್ತ ಹೋದಂತೆ, ವಾಚನ, ಮನನ, ಅನುಭವಗಳು ವಿಶಾಲಗೊಳ್ಳುತ್ತ ಹೋದುವು. ಆಗ ಶ್ರಾವಕಾಚಾರದ ಮಹಿಮೆಯ ಅರಿವು ಆಳ ಹಾಗೂ ವಿಕಾಸಗೊಳ್ಳುತ್ತ ನಡೆಯಿತು. ಭಾರತೀಯ ಸಮಾಜ ರಚನೆಯ ತಳಹದಿ, ಸಮಾಜಧರ್ಮ ಮತ್ತು ವಿಶ್ವಶಾಂತಿಗಳ ವಿಚಾರ ಬಂದಾಗಲೆಲ್ಲ ನನಗೆ ಈ ಶ್ರಾವಕಾಚಾರದ ಮೂಲದಲ್ಲಿರುವ ಕಲ್ಪನೆಯು ಹೊಳೆದು, ಒಂದು ಸಮುಚಿತ ಭಾವವು ಮನದಲ್ಲಿಯೇ ಗುಡಿಗಟ್ಟುತ್ತ ಹೋಯಿತು. ಅಂದಿನಿಂದ 'ಸಮಾಜ ಶಾಸ್ತ್ರ' ಎಂಬ ದೃಷ್ಟಿಯಿಂದ ಈ ಶ್ರಾವಕಾಚಾರವನ್ನು ಅವಲೋಕಿಸುವ ಕ್ರಮವು ಆರಂಭವಾಯಿತು. ಅದರ ಪರಿಣಾಮವಾಗಿ ಇಂದಿಗೆ ಹನ್ನೆರಡು ವರ್ಷಗಳ ಹಿಂದೆಯೇ 'ಸಮಂತಭದ್ರರ ಸಮಾಜಶಾಸ್ತ್ರ' ಎಂಬ ಪ್ರಬಂಧವನ್ನು ಬರೆದು ಪ್ರಕಟಿಸುವ ಯೋಜನೆಯನ್ನು ಕೈಕೊಳ್ಳಲಾಯಿತು. ಆದರೆ ಇತರ ಕಾರ್ಯಗಳಲ್ಲಿ ಅದು ಅಷ್ಟು ಮುಂದರಿಯದೆ ಹೋಯಿತು. ಅಂದರೂ ಅದು 'ಸಮಂತಭದ್ರ ಭಾರತೀ'ಯ ಒಂದು ಸಮಗ್ರ ದರ್ಶನವನ್ನು ಪಡೆಯುವ ಹವಣಿಕೆಯನ್ನುಂಟು ಮಾಡಿಬಿಟ್ಟಿತು. ಅಂದಿನಿಂದ ಸ್ವಾಮಿ ಸಮಂತಭದ್ರರ ಸ್ವಯಂಭೂ ಸ್ತೋತ್ರ, ಯುಕ್ತ್ಯನುಶಾಸನ, ಆಪ್ತಮೀಮಾಂಸೆ ಇತ್ಯಾದಿ ಗ್ರಂಥಗಳ ಅಭ್ಯಾಸಕ್ಕೆ ಆರಂಭವಾಯಿತು. ಅದರ ಫಲವಾಗಿ "ಸಮಂತಭದ್ರ ದೃಷ್ಟಿಯಲ್ಲಿ ಸ್ವಯಂಭೂ" ಎಂಬ ಲೇಖನ ಮಾಲೆಯು ರೂಪುಗೊಳ್ಳುತ್ತ ಹೋಯಿತು. ಆಯಾ ಕಾಲದಲ್ಲಿ ಅದನ್ನು ಧಾರವಾಡದಲ್ಲಿ ಪ್ರಕಟವಾಗುವ 'ಪ್ರದೀಪ' ಎಂಬ ಅಧ್ಯಾತ್ಮಿಕ ಮಾಸಪತ್ರಿಕೆಯಲ್ಲಿ ಪ್ರಕಟಗೊಳಿಸಲಾಯಿತು.[1] ಆಗ ಸಮಂತಭದ್ರ ಎಂಬ ಪದವು ಆಚಾರ್ಯರೊಬ್ಬರ ಹೆಸರಿಂದಾಗಿ ಮನದಲ್ಲಿ ನಿಲ್ಲದೆ ಅದು ಸಮಂತಾತ್ ಭದ್ರ ದೃಷ್ಟಿಯ 'ಸರ್ವೋದಯ ತೀರ್ಥ'ದ ಪಾರ್ಶ್ವಭೂಮಿಯಾಗಿ ಸ್ಥಿರಗೊಂಡಿತು. ಅದರಿಂದ ಜೀವನಕ್ಕೊಂದು ವಿಶೇಷ ಶ್ರದ್ಧೆ, ನಿಷ್ಠೆ ಮತ್ತು ಸಮ್ಯಕ್ತ್ವಗಳುಂಟಾದುವು. ಅಂಥ ಸಂದರ್ಭದಲ್ಲಿ ರತ್ನಕರಂಡಕ-ಶ್ರಾವಕಾಚಾರವನ್ನು ಕನ್ನಡಿಸುವ ಈ ಕಾರ್ಯವು ಪ್ರೊ. ಆದಿನಾಥ ನೇಮಿನಾಥ ಉಪಾಧ್ಯೆ, ಎಂ.ಎ., ಡಿ.ಲಿಟ್., ಕೊಲ್ಹಾಪುರ, ಇವರ ಕೃಪೆಯಿಂದ ನನ್ನ ಮುಂದೆ ಬಂತು.

'ಜೈನಧರ್ಮ' ಎಂಬ ಗ್ರಂಥವನ್ನು ಬರೆಯುತ್ತಿರುವಾಗಲೇ ಡಾ. ಉಪಾಧ್ಯೆಯವರ ಮಾರ್ಗದರ್ಶನದ ರೀತಿ, ಸಮಗ್ರದೃಷ್ಟಿ, ಆಳವಾದ ಪಾಂಡಿತ್ಯಗಳ ಪರಿಚಯವು ನನಗೆ ಆಗಿತ್ತು. ಅವುಗಳ ಲಾಭವನ್ನು ಹಾಗೆಯೇ ಸತತ ಮುಂದೆಯೂ ಪಡೆಯಲೆಂದು ಅವರ ನೇತೃತ್ವದಲ್ಲಿ ಧರ್ಮ, ಸಂಸ್ಕೃತಿ, ತತ್ತ್ವಜ್ಞಾನಗಳ ಅಭ್ಯಾಸವನ್ನು ಆರಂಭಿಸಿ "ಭಾರತೀಯ ಸಂಸ್ಕೃತಿಯ ವಿಕಾಸ" ಎಂಬ ಪ್ರಬಂಧ ಒಂದನ್ನು ಬರೆಯಲು ತೊಡಗಿದ್ದೆ. ಪ್ರಕಾಶಕರು ಇನ್ನೂ ಲಭಿಸದ-ಅಭ್ಯಾಸವು ಹೆಚ್ಚಿದಂತೆ ಸಾವಕಾಶವಾಗಿ ಮುಂದರಿಯುವ-ಆ ಕಾರ್ಯವನ್ನು ಪೂರ್ತಿಗೊಳಿಸುವ ಪೂರ್ವದಲ್ಲಿ ಜೈನ ಸಂಸ್ಕೃತಿ ಸಂರಕ್ಷಕ ಸಂಘವು ಪ್ರಕಟಿಸಲು ಮುಂದೆ ಬಂದಿರುವ ಈ ರತ್ನಕರಂಡಕ-ಶ್ರಾವಕಾಚಾರದ ಕಾರ್ಯವನ್ನು ಕೂಡಲೇ ಕೈಕೊಳ್ಳುವುದು ಉಚಿತವೆಂದು ಭಾವಿಸಿ ಇದಕ್ಕೆ ಕೈ ಹಾಕಿದೆ. ಈ ಗ್ರಂಥವನ್ನು ಕನ್ನಡದಲ್ಲಿ ಸಿದ್ಧಗೊಳಿಸುತ್ತ ಸಾಗಿದಂತೆ ಮನಸ್ಸಿಗಿಷ್ಟು ಶಾಂತಿ, ಸಮಾಧಾನ, ಸಂಯಮಗಳು ಅಳವಡುತ್ತ ಹೋದುವು. ಸ್ವಾನುಭವದ ಸೀಮೆಯು ವಿಸ್ತಾರಗೊಳ್ಳತೊಡಗಿತು. ಜೀವನದ ನಿತ್ಯ ಕ್ರಿಯೆಗಳಲ್ಲಿಯೂ ಸಹ ಒಂದು ಪರಿಷ್ಕೃತ ದೃಷ್ಟಿಯು ಲಭಿಸಿತು. ಆಗಾಗ ಬಾಹುಬಲಿ ಗುರುಕುಲದಲ್ಲಿ ಗುರುದೇವ ಶ್ರೀ ಸಮಂತಭದ್ರರು ಬೋಧಿಸಿದ ಸ್ವಾಧ್ಯಾಯದ ಮಹತ್ವವು ಅನುಭವಕ್ಕೆ ಬರತೊಡಗಿತು. ಇಂಥ ಅನುಭವದ ಸವಿಯನ್ನು ಸುತ್ತಲಿನ ನಾಲ್ಕು ಜನ ಸ್ನೇಹಿತರೊಡನೆ ಸವಿಯೋಣವೆಂದು ನೀಡಬಾಳದಲ್ಲಿ ಕಳೆದ ಎರಡು ವರ್ಷಾಕಾಲಗಳಲ್ಲಿ ಸತತ ವರ್ಷಾಯೋಗವೆಂಬಂತೆ ಈ ಕನ್ನಡ ಶ್ರಾವಕಾಚಾರವನ್ನು-ಬರೆಯುತ್ತ ಹೋದಂತೆ-ಗೃಹಸ್ಥರಿಗೆ ವಿವರಿಸಿ ಹೇಳಿಯೂ ಆಯಿತು. ಅದರಿಂದ ಶ್ರಾವಕಾಚಾರದ ಸ್ವಾಧ್ಯಾಯದ ಫಲವನ್ನು ಪ್ರತ್ಯಕ್ಷ ನಿರೀಕ್ಷಿಸಿದಂತೆ ಆಯಿತು. ಕೆಲವು ಜನ ತರುಣರಲ್ಲಿಯಾದರೂ

---

[1] ಪ್ರದೀಪ ಮಾಸಪತ್ರಿಕೆಯ ಸನ್ ೧೯೭೭ ಅಕ್ಟೋಬರ, ೧೯೭೮ ಅಗಷ್ಟ, ೧೯೭೯ ಜನವರಿ ಮತ್ತು ಅಕ್ಟೋಬರ ಸಂಚಿಕೆಗಳಲ್ಲಿ ನೋಡುವುದು.

ಇದರಿಂದ ಧರ್ಮಶ್ರದ್ಧೆ, ಸಚ್ಚಾರಿತ್ರ್ಯದ ಒಲವು ನಿಲುವುಗಳು ಮೂಡಿದಂತೆ ಕಂಡು ಬಂದುವು. ದಿನದಿನಕ್ಕೆ ಶ್ರಾವಕಾಚಾರವನ್ನು ಓದಿ ತಿಳಿಯುವ ಲವಲವಿಕೆಯು ಜನತೆಯಲ್ಲಿ ಹೆಚ್ಚುತ್ತೊಡಗಿದುದೊಂದು ಶುಭೋದಯವಾಗಿದೆ

ಜೈನ ಧರ್ಮ, ದರ್ಶನ ಮತ್ತು ಶಾಸನಗಳ ಅಭ್ಯಾಸವನ್ನು ಆರಂಭಿಸಿ, ಮುಂದರಿದಂತೆ ತೀರ್ಥಂಕರರ ಚರಿತ್ರೆ, ಅವರ ಭವಾವಳಿಯ ಕಥ, ಇಂದ್ರ ಪೂಜೆ ಸಮವಸರಣದ ಸ್ವರೂಪ, ಋದ್ಧಿ, ಸಿದ್ಧಿ, ಅನಂತ ಚತುಷ್ಟಯ, ಕೇವಲ ಜ್ಞಾನ ಇತ್ಯಾದಿ ಸಂಗತಿಗಳು, ಯಾವುದೋ ಒಂದು ಅರೂಪವನ್ನು ರೂಪುಗೊಳಿಸಲು, ಅಸಂಭವ ಜನ್ಯವಾದುದನ್ನು ಮಾತಿನಲ್ಲಿ ಪ್ರತಿಫಲಿಸಲು ಋಷಿ ಮುನಿಗಳಿಂದ ನಡೆದ ಪ್ರಯತ್ನದ ಪ್ರತೀಕಗಳೇನೋ ಎನ್ನುವ ಭಾವವೊಂದು ಮನದಾಳದಲ್ಲಿ ಮೂಡುತ್ತಲಿದೆ ಆಳವಾದ ನಿಧಿಧ್ಯಾಸ, ಮನನಗಳಿಂದ ಅದಕ್ಕೊಂದು ಸ್ಪಷ್ಟ ಆಕಾರವು ಇನ್ನೂ ಬಗೆಯಾಕಾಶದಲ್ಲಿ ಮೂಡಿ ನಿಲ್ಲಬೇಕಾಗಿದೆ ಆ ಅಮೂರ್ತವನ್ನು ಮೂರ್ತಗೊಳಿಸುವ ಸಾಧನೆಯಲ್ಲಿ ತೊಡಗಿದಾಗ-ಗೃಹಸ್ಥನಾಗಿರುವಾಗ-ಈ ಶ್ರಾವಕಾಚಾರವೊಂದು ಅನುಪಮ ಕೈದೀವಿಗೆಯಾಗುತ್ತದೆಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ ಮಾನವನು ಮಹಾಮಾನವತೆಯ ಕಡೆಗೆ ಸಾಗುವಾಗ 'ಗುಣಸ್ಥಾನ'ದ ಮೂಲ ಪಾಠವನ್ನು ಈ ಶ್ರಾವಕಾಚಾರದಿಂದಲೇ ಕಲಿಯುತ್ತಾನೆ 'ಪ್ರತಿಮಾ' ಧಾರಣೆಯೂ ಇಲ್ಲಿಯೇ ಇದೆ ಇವೆಲ್ಲವುಗಳ ಸಮಗ್ರವಾದ ನೋಟದಿಂದ ಈ ರತ್ನಕರಂಡಕ-ಶ್ರಾವಕಾಚಾರದ ಕನ್ನಡ ಅವತರಣ ಕಾರ್ಯವು ನಡೆದಿದೆ ಇದಕ್ಕೂ ಒಂದು ಪೂರ್ವ ಸಂಚಿತ, ಸಂಕೇತಗಳು ಕಾರಣವಾಗಿರಬೇಕೆಂದು ನಾನು ದೃಢವಾಗಿ ನಂಬಿದ್ದೇನೆ

ಇಂಥ ನಂಬುಗೆಗೆ ಕಾರಣವಾದ ಈ ಗ್ರಂಥ ಲೇಖನಕಾರ್ಯದಿಂದ ಕನ್ನಡ ನಾಡಿನ ಜನತೆಯಲ್ಲಿಯೂ ಧರ್ಮದಲ್ಲಿ ನಿಷ್ಠೆ, ಸಮ್ಯಕ್ತ್ವದ ಉದಯ, ಸಮ್ಯಕ್ ಚಾರಿತ್ರ್ಯದ ಅನುಷ್ಠಾನಗಳು ಉಂಟಾದಲ್ಲಿ ಈ ಶ್ರಮವು ಇನ್ನೂ ಸಾರ್ಥಕವೆಂದು ನಾನು ಭಾವಿಸುತ್ತೇನೆ ಈ ಭಾವನೆಯ ಸಫಲತೆಯಲ್ಲಿಯೇ ಈ ಪ್ರಕಾಶನ ಸಂಸ್ಥೆಯ ಸಂಸ್ಥಾಪಕರ ಸದುದ್ದೇಶದ ಸಿದ್ಧಿಯಿದೆ ಆ ಸಿದ್ಧಿಯು ಸಾಧಿಸುವುದಕ್ಕೆ ಕನ್ನಡ ಜನತೆಯೂ ಜೈನ ಶ್ರಾವಕರೂ ತಕ್ಕ ಸ್ಥಾನವೆನಿಸುತ್ತಾರೆಂದೂ ಜೈನ ಧರ್ಮ ಸಾಹಿತ್ಯಗಳ ವಿಕಾಸಕ್ಕೆ ಸಹಕಾರನೀಡಲೆಂದೂ ಹಾರೈಸುತ್ತೇನೆ.

ಶಾಂತಿ ಸೇವಾ ಸದನ,
ಸೇಡಬಾಳ.
ವಿಜಯಾದಶಮಿ
೧೧—೧೦—೧೯೫೯

—ಮಿರ್ಜಿ ಅಣ್ಣಾರಾಯ

# ಪ್ರಸ್ತಾವನೆ

ಸ್ವಾಮಿ ಸಮಂತಭದ್ರರ ಈ 'ರತ್ನಕರಂಡ-ಶ್ರಾವಕಾಚಾರ'ವು ಜೈನ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ಸ್ಥಾನವುಳ್ಳದಾಗಿದೆ. ಅದರಂತೆ ಶ್ರೇಷ್ಠ ಗ್ರಂಥವೂ ಆಗಿದೆ. ಸಾಮಾನ್ಯವಾಗಿ ಪ್ರತಿಯೊಂದು ಜಿನಮಂದಿರದಲ್ಲಿ ಇದರ ಪ್ರತಿಯನ್ನು ನಾವು ಕಾಣುತ್ತೇವೆ. ಇದು ಜೈನ ಗೃಹಸ್ಥರ ಆಚಾರವನ್ನು ಸೂತ್ರ ರೂಪದಲ್ಲಿ ಆದರೂ ಸಮಗ್ರವಾಗಿ ವಿವೇಚಿಸುವ ಶಾಸ್ತ್ರವಾಗಿದೆ. ಸಾಧಾರಣವಾಗಿ ಎರಡು ಚರಣಗಳುಳ್ಳ ಒಂದು ನೂರಾಐವತ್ತು ಶ್ಲೋಕಗಳ ಗ್ರಂಥವಿದು. ಗಾತ್ರದ ದೃಷ್ಟಿಯಿಂದ ನೋಡಿದರೆ ತೀರ ಚಿಕ್ಕ ಗ್ರಂಥವು. ಆದರೆ ಅರ್ಥ ವೈಶಾಲ್ಯವನ್ನು ಗಮನಿಸಿದರೆ ಇಷ್ಟು ಸರ್ವವ್ಯಾಪಿಯಾದ ಗ್ರಂಥವೇ ವಿರಳವೆಂದು ಹೇಳಬಹುದಾಗಿದೆ. ಈ ಗ್ರಂಥವನ್ನು ಆಚಾರ್ಯರು ನಿರೂಪಿಸಿದಾಗ ಹಾಗೂ ಮುಂದೆ ಕೆಲವು ಶತಕಗಳ ವರೆಗೆ ಜೈನ ಸಮಾಜದಲ್ಲಿ, ಈ ಶ್ರಾವಕಾಚಾರವನ್ನು ಸಂಪೂರ್ಣವಾಗಿ ತಮ್ಮ ಜೀವನದಲ್ಲಿ ಆಚರಿಸುವ ಸದ್‌ಗೃಹಸ್ಥರನ್ನು ಕಾಣಲಾಗುತ್ತಿತ್ತು, ಇಂದೂ ಕೆಲವೆಡೆಗಳಲ್ಲಿ ಕಾಣುತ್ತೇವೆ. ಆದರಿಂದ ಈ ಧರ್ಮಶಾಸ್ತ್ರಕ್ಕೆ ಅಂಥ ಶ್ರಾವಕರೇ ಜೀವಂತ ಟೀಕೆಯೆನಿಸುತ್ತಾರೆ. ಆದರೆ ಈಗ ಪರಿವರ್ತನಗೊಂಡ ಸಮಾಜ ಜೀವನದಲ್ಲಿ ಶ್ರಾವಕರಿಗೇ ಈ ಶ್ರಾವಕಾಚಾರದ ಅರ್ಥವನ್ನು ವಿಸ್ತಾರ ರೂಪವಾಗಿ ವಿವರಿಸಬೇಕಾಗಿದೆ. ಕಾಲ, ಸಮಾಜ, ದೇಶಗಳು ವ್ಯತ್ಯಾಸ ಹೊಂದಿದರೂ ಸಹ ಮಾನವ ಕಲ್ಯಾಣಕಾರಿಯಾದ ಧರ್ಮ, ನೀತಿಗಳು ಯಾವಾಗಲೂ ಒಂದೇ ಬಗೆಯಾಗಿರುತ್ತವೆ. ಅಂಥ ನಿತ್ಯ ಸತ್ಯ ಜೀವನ ತತ್ತ್ವಗಳನ್ನು ನಿರೂಪಿಸುವ ಗ್ರಂಥವು ಇದಾಗಿದೆ. ಇದನ್ನು ರಚಿಸಿದವರು ಪ್ರಾತಃಸ್ಮರಣೀಯರಾದ ಸ್ವಾಮಿ ಸಮಂತ-ಭದ್ರಾಚಾರ್ಯರಾಗಿದ್ದಾರೆ.

## ಸ್ವಾಮೀ ಸಮಂತಭದ್ರಾಚಾರ್ಯರು

ಈ ರತ್ನಕರಂಡ ಶ್ರಾವಕಾಚಾರದ ಕರ್ತೃವು ಸುಪ್ರಸಿದ್ಧ ಆಚಾರ್ಯರಾದ ಸ್ವಾಮೀ ಸಮಂತಭದ್ರರಾಗಿ-ದ್ದಾರೆ. ಭಾರತ ವರ್ಷದ ಮಹಾನ್ ನೀತಿಶಾಸ್ತ್ರವಿದರಲ್ಲಿ ಇವರ ಸ್ಥಾನವು ಉಚ್ಚ ತರಗತಿಯದೆಂದು ತಿಳಿಯಲ್ಪಡುತ್ತದೆ. ಜೈನ ಸಮಾಜದ ಪ್ರತಿಭಾಶಾಲಿ ಆಚಾರ್ಯ, ಸಮರ್ಥ ವಿದ್ವಾಂಸ ಹಾಗೂ ಲೇಖಕ, ಸುಪೂಜ್ಯ ಮಹಾತ್ಮರೆಂದು ಇವರ ಪ್ರಸಿದ್ಧಿಯು ಎಲ್ಲೆಡೆಗೂ ಇದೆ. ಅಲ್ಲದೆ ಸಮಂತಭದ್ರರು ಜೈನಧರ್ಮದ ಮರ್ಮಜ್ಞರಾಗಿದ್ದರು, ಜೈನಧರ್ಮದ ಸಾಕ್ಷಾತ್ ಜೀವಂತ ಮೂರ್ತಿಗಳೆನಿಸಿದ್ದರು, ವೀರಶಾಸನದ ಅದ್ವಿತೀಯ ಪ್ರತಿನಿಧಿಗಳಾಗಿದ್ದರು, ಇಷ್ಟೇ ಅಲ್ಲ ತಮ್ಮ ಕಾಲದ ಎಲ್ಲ ದರ್ಶನಶಾಸ್ತ್ರಗಳ ಅಭ್ಯಾಸವನ್ನು ಆಳವಾಗಿ ಮಾಡಿದವರಾಗಿದ್ದರು, ಮಹಾ ಜ್ಞಾನಿಗಳಾಗಿದ್ದರು. ಇದರಿಂದಾಗಿ ಅವರು ಎಲ್ಲ ದರ್ಶನ, ಧರ್ಮ ಅದವಾ ಮತಗಳನ್ನು ಸಮತೋಲ ಬುದ್ಧಿಯಿಂದ ಪರೀಕ್ಷಿಸಿ ಸತ್ಯವನ್ನು ಗ್ರಹಣ ಮಾಡುವುದಕ್ಕೆ ಸಮರ್ಥರಾಗಿದ್ದರು. ಅದರಂತೆಯೇ ಅಸತ್ಯವನ್ನು ನಿರ್ಮೂಲನಗೊಳಿಸಲಿಕ್ಕೆ ಸದಾ ಸಿದ್ಧರಾಗಿರುತ್ತಿದ್ದರು. ಏಕಾಂತ ವಾದವನ್ನಂತೂ ಇವರು ಎಳ್ಳಷ್ಟು ಸ್ವೀಕರಿಸುತ್ತಿರಲಿಲ್ಲ. ಇದರಿಂದ ಮಹಾನ್ ಆಚಾರ್ಯರೆನಿಸಿದ ಶ್ರೀ ವಿದ್ಯಾನಂದ ಸ್ವಾಮಿಗಳು 'ಯುಕ್ತ್ಯನು ಶಾಸನ'ದ ಟೀಕೆಯ ಕೊನೆಯಲ್ಲಿ ಸಮಂತಭದ್ರರನ್ನು 'ಪರೀಕ್ಷೇಕ್ಷಣ' ಎಂದು ಕರೆದಿದ್ದಾರೆ. ಅಂದರೆ ಸಮಂತಭದ್ರರು ಪರೀಕ್ಷಾನೇತ್ರಗಳಿಂದ ಎಲ್ಲವನ್ನು ಕಾಣುವಂಥವ-ರಾಗಿದ್ದರೆಂದು ಹೇಳಿದಂತಾಯಿತು.

ಅನುಶ್ರುತಿಯ ಪ್ರಕಾರ ಸ್ವಾಮೀ ಸಮಂತಭದ್ರಾಚಾರ್ಯರು ಕ್ಷತ್ರಿಯ ವಂಶದಲ್ಲಿ ಜನಿಸಿದ ಒಬ್ಬ ರಾಜಪುತ್ರರಾಗಿದ್ದರು. ಇವರ ತಂದೆಯು ಫಣಿಮಂಡಲಾಂತರ್ಗತ 'ಉರಗಪುರ'ದ ರಾಜನಾಗಿದ್ದನು.[1] ಈ ಉರಗಪುರವು ಪಾಂಡ್ಯದೇಶದ ಪ್ರಾಚೀನ ರಾಜಧಾನಿಯಾಗಿತ್ತು. ಇದರ ಉಲ್ಲೇಖವನ್ನು ಕಾಲಿದಾಸನೂ ಸಹ ಮಾಡಿರುವನು.[2] ಈ ನಗರವು ಕಾವೇರಿ ನದಿಯ ದಕ್ಷಿಣ ತೀರದಲ್ಲಿ ನೆಲೆಸಿತ್ತು.[3] ತ್ರಿಚನಾಪಳ್ಳಿಯ (ತಿರುಚಿನಪಲ್ಲಿ)

---

[1] ಶ್ರೀ ಶ್ರವಣ ಬೆಳ್ಗೊಳದ ಶ್ರೀ ದೋರ್ಬಲಿ ಜಿನದಾಸ ಶಾಸ್ತ್ರಿಗಳ ಶಾಸ್ತ್ರ ಭಂಡಾರದಲ್ಲಿರುವ ತಾಡಪತ್ರೀಯ 'ಆಪ್ತಮೀಮಾಂಸಾ'ದ ಪ್ರತಿಯಲ್ಲಿ ಹೀಗೆ ಹೇಳಿದೆ —

"ಇತಿ ಶ್ರೀ ಫಣಿಮಂಡಲಾಲಂಕಾರಸ್ಯೋರಗಪುರಾಧಿಪಸೂನೋಃ ಶ್ರೀಸ್ವಾಮಿಸಮಂತಭದ್ರಮುನೇಃ ಕೃತೌ ಆಪ್ತಮೀಮಾಂಸಾ-ಯಾಮ್"

[2] "ಅಥೋರಗಾಖ್ಯಸ್ಯ ಪುರಸ್ಯ ನಾಥಂ"—ರಘುವಂಶ ೬-೫೯

[3] ಕ್ರಿ ಶ ೬೭೪ ರ ಗಡವಾಲ ತಾಮ್ರಶಾಸನ—ಎಪಿ. ಇಂ, ೧೦—೧೦೩,

ಸಮೀಪದಲ್ಲಿರುವ ಉರೈಯ್ಯೂರವೇ ಈ ಉರಗಪುರವೆಂದು ಹೇಳಲಾಗುತ್ತದೆ ಇದು ಪ್ರಾಚೀನ ಚೋಳ ವಂಶೀಯರ ರಾಜಧಾನಿಯೂ ಆಗಿತ್ತು ಈ ನಗರದಲ್ಲಿ ಕ್ಷತ್ರಿಯ ವಂಶದಲ್ಲಿ ಜನಿಸಿದ ಶಾಂತಿವರ್ಮನು-ಸಮಂತಭದ್ರರ ಗೃಹಸ್ಥಾಶ್ರಮದ ಹೆಸರಿದು-ಆತ್ಮಹಿತ ಸಾಧನದ ಮತ್ತು ಲೋಕಹಿತದ ಭಾವನೆಗಳಿಂದ ಕೂಡಿದವನಾಗಿದ್ದನು. ಅದಕ್ಕಾಗಿ ಅವನು ತನ್ನ ಮನ, ತನ್ನ ರಾಜ್ಯ ವೈಭವಗಳ ಮೋಹದಲ್ಲಿ ಬೀಳದೆ ಮನೆಯಿಂದ ಹೊರಬಿದ್ದು, ದಕ್ಷಿಣ ಕಾಶಿ ಎನಿಸಿದ ಕಾಂಚೀ ಪಟ್ಟಣಕ್ಕೆ ಹೋಗಿ 'ನಗ್ನಾಟಕ' (ನಗ್ನ) ದಿಗಂಬರ ಸಾಧು ಪದವನ್ನು ಸ್ವೀಕರಿಸಿದನು ಅಲ್ಲದೆ ಸಂದರ್ಭ ಒದಗಿದಾಗ ಪರಿಸ್ಥಿತಿಗೆ ಅನುಸರಿಸಿ ಭಿನ್ನಮತೀಯರ ಸಾಧುಗಳ ವೇಷವನ್ನೂ ಸಹ ಧರಿಸಿ ಭಾರತದಲ್ಲಿ ಸಂಚರಿಸಿದನು [1] ಆದರೆ ಹೃದಯದಿಂದ ಅವನು ಯಾವಾಗಲೂ ನಿರ್ಗ್ರಂಥ ಸಾಧುವಾಗಿದ್ದನು

ಸಮಂತಭದ್ರಾಚಾರ್ಯರು ಜೈನ ಸಿದ್ಧಾಂತದ ಪ್ರಚಾರಕ್ಕಾಗಿಯೂ ಜನರ ಅಜ್ಞಾನ ಭಾವವನ್ನು ದೂರ ಮಾಡುವದಕ್ಕಾಗಿಯೂ ಭಾರತದ ವಿವಿಧ ಭಾಗಗಳಲ್ಲಿ ಸಂಚರಿಸಿದರು ಹಲವರ ಕೂಡ ವಾದ-ವಿವಾದವನ್ನೂ ಮಾಡಿದರು ಸಮಂತಭದ್ರರ ಈ ದೇಶಾಟನದ ವಿಷಯದಲ್ಲಿ ಶ್ರಿ ಎಮ್ ಎಸ್ ರಾಮಸ್ವಾಮಿ ಅಯ್ಯಂಗಾರರು ("ಸ್ಟಡೀಜ ಇನ್ ಸಾವುಥ ಇಂಡಿಯನ್ ಜೈನಿಝಂ") ಹೀಗೆ ಹೇಳಿದ್ದಾರೆ —"ಸಮಂತಭದ್ರರು ಬಹು ದೊಡ್ಡ ಜೈನ ಧರ್ಮದ ಪ್ರಸಾರಕರಿದ್ದರೆಂಬುದು ಸ್ಪಷ್ಟವೇ ಇದೆ ಅವರು ಜೈನ ಸಿದ್ಧಾಂತ ಮತ್ತು ಆಚಾರಗಳನ್ನು ದೂರ ದೂರದ ವರೆಗೆ ವಿಸ್ತರಿಸುವ ಉದ್ಯೋಗಮಾಡಿದರು ಇವರು ಹೋದಲ್ಲೆಲ್ಲ ಅನ್ಯ ಸಂಪ್ರದಾಯದವರೊಡನೆ ವಿರೋಧದ ಹೋರಾಟವನ್ನು ಮಾಡಬೇಕಾಯಿತು [2] ಆದರೂ ಅವರು ವಿಶಾಲ ಭಾರತವನ್ನೆಲ್ಲ ತನ್ನ ವಾದದ ಲೀಲಾ ಭೂಮಿಯನ್ನಾಗಿ ಮಾಡಿಕೊಂಡಿದ್ದರು ವಾದಕ್ಕಾಗಿ ಆಮಂತ್ರಣವನ್ನು ಕೊಡುವ ದಾರಿಯನ್ನಂತೂ ಅವರಿಂದೂ ನೋಡುತ್ತ ಕೂಡುತ್ತಿರಲಿಲ್ಲ ಅಜ್ಞಾನ ಭಾವದಿಂದ ಮಿಥ್ಯಾತ್ವದಲ್ಲಿ ಬಿದ್ದು, ಆತ್ಮಪತನವನ್ನು ಹೊಂದುವ ಜನರನ್ನು ಕಂಡರೆ ಸಾಕು, ಅಲ್ಲಿ ಸಮಂತಭದ್ರರು ಹೋಗಿ ಹಾಜರಾಗಿರುತ್ತಿದ್ದರು, ತಮ್ಮ ಸತ್ಯವಾದವನ್ನು ಹೂಡುತ್ತಿದ್ದರು. ಹಾಗೆ ಅವರ ಮನಃಪ್ರವೃತ್ತಿಯೇ ರೂಪುಗೊಂಡಿತ್ತು ಅದಕ್ಕಾಗಿ ಅವರು ಎಲ್ಲಿಯಾದರೂ ಮಹಾವಾದಿಗಳ ಸಭೆ ನೇರಿರಲಿ, ರಾಜಾಸ್ಥಾನದಲ್ಲಿ ವಾದಶಾಲೆಯ ನಿರ್ಮಾಣವಾಗಿರಲಿ, ಅಲ್ಲಿಯೇ ಸ್ವತಃ ಹೋಗಿ ಬಿಡುತ್ತಿದ್ದರು ವಿದ್ವಾಂಸರನ್ನು ವಾದಕ್ಕಾಗಿ ಆಹ್ವಾನಿಸುತ್ತಿದ್ದರು ಸಮಂತಭದ್ರರ ಸ್ಯಾದ್ವಾದ-ನ್ಯಾಯದ ತಕ್ಕಡಿಯಲ್ಲಿ ತೂಗಿದಂಥ ತಾತ್ತ್ವಿಕ ಭಾಷಣಗಳನ್ನು ಕೇಳಿ, ವಿದ್ವಾಂಸರು ಮುಗ್ಧರಾಗಿಬಿಡುತ್ತಿದ್ದರು ಅದಕ್ಕೆ ವಿರೋಧ ಪ್ರದರ್ಶಿಸುವವರು ತೀರ ಕಡಿಮೆ ಜನರಿರುತ್ತಿದ್ದರು ಇಂಥವರು ಅಹಂಕಾರದಿಂದಾಗಲಿ, ಅಜ್ಞಾನದಿಂದಾಗಲಿ ಸಮಂತಭದ್ರರೊಡನೆ ವಾದಕ್ಕೆ ನಿಂತರೆ ಬಹುಬೇಗನೆ ನಿರುತ್ತರರಾಗಬೇಕಾಗುತ್ತಿತ್ತು ಹೀಗೆ ಅಪ್ರತಿದ್ವಂದ್ವೀ ಸಿಂಹನಂತೆ ಕ್ರೀಡೆಯನ್ನಾಡುತ್ತ ನಿರ್ಭಯತೆಯಿಂದ ವಾದಕ್ಕಾಗಿ ಸಮಂತಭದ್ರರು ಭಾರತದ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಬಹುತರ ಎಲ್ಲ ದೇಶಗಳಲ್ಲಿ ಸಂಚರಿಸಿದ್ದಾರೆ ಹೀಗೆ ಸಂಚರಿಸುವಾಗ ಅವರೊಮ್ಮೆ 'ಕರಹಾಟಕ' ನಗರಕ್ಕೂ ಹೋಗಿದ್ದರು ಆ ಪಟ್ಟಣವು ವಿದ್ಯೆಯ ಉಚ್ಚ ಕೇಂದ್ರಸ್ಥಳವು, ಶೂರರ ನಿವಾಸಸ್ಥಾನವು, ಜನನಿಬಿಡ ನಗರವು ಆಗಿತ್ತು ಅಲ್ಲಿಯ ರಾಜ-ಸಭೆಯಲ್ಲಿ ತಮ್ಮ ಮಾತಿನ ಪ್ರಯೋಜನದ ವಿಷಯವನ್ನು ಸಮಂತಭದ್ರರು ಹೇಳುವ ಸಂದರ್ಭದೊಳಗಿನ ಒಂದು ಪದ್ಯವು ಶ್ರವಣ ಬೆಳ್ಗೊಳದ ಶಿಲಾಲೇಖಗಳಲ್ಲಿ ಹೀಗೆ ಸಂಗ್ರಹಿಸಲ್ಪಟ್ಟಿದೆ

> ಪೂರ್ವಂ ಪಾಟಲಿಪುತ್ರ-ಮಧ್ಯನಗರೇ ಭೇರೀ [3] ಮಯಾ ತಾಡಿತಾ
> ಪಶ್ಚಾನ್ಮಾಲವ-ಸಿಂಧು-ಠಕ್ಕ-ವಿಷಯೇ ಕಾಂಚೀಪುರೇ ವೈದಿಶೇ ।

---

[1] ಕಾಂಚ್ಯಾಂ ನಗ್ನಾಟಕೋಽಹಂ ಮಲಮಲಿನತನುರ್ಲಾಂಬುಶೇ ಪಾಂಡುಪಿಂಡಃ
ಪುಂಡ್ರೋಡ್ರೇ ಶಾಕ್ಯಭಿಕ್ಷುಃ ದಶಪುರನಗರೇ ಮಿಷ್ಟಭೋಜೀ, ಪರಿವ್ರಾಟ್ ।
ವಾರಾಣಸ್ಯಾಮಭೂವಂ ಶಶಧರಧವಲಃ ಪಾಂಡುರಾಂಗಸ್ತಪಸ್ವೀ
ರಾಜನ್ ಯಸ್ಯಾಸ್ತಿ ಶಕ್ತಿಃ ಸ ವದತು ಪುರತೋ ಜೈನನಿರ್ಗ್ರಂಥವಾದಿ ॥

[2] "He met with no opposition from other sects wherever he went"

[3] ಸಮಂತಭದ್ರರ ಕಾಲದಲ್ಲಿಯೂ ಫಾಹಿಯಾನ (ಕ್ರಿ ಶ ೪೦೦) ಮತ್ತು ಹುವೇನತ್ಸಂಗ (ಕ್ರಿ ಶ ೬೩೦) ಇವರ ಹೇಳಿಕೆಯ ಪ್ರಕಾರ ನಗರಗಳಲ್ಲಿ ಸಾರ್ವಜನಿಕ ಸ್ಥಾನದಲ್ಲಿ ಒಂದು ನಗಾರಿಯನ್ನು ಇಡುತ್ತಿದ್ದರೆಂದು ತಿಳಿಯುತ್ತದೆ ಯಾವ ವಿದ್ವಾಂಸನಾದರೂ ತನ್ನ ಮತವನ್ನು ಪ್ರಚಾರಮಾಡುವದಿದ್ದಲ್ಲಿ ಇಲ್ಲವೆ ವಾದದಲ್ಲಿ ನೈಪುಣ್ಯ ತೋರಿಸುವದಿದ್ದಲ್ಲಿ ಆ ನಗಾರಿಯನ್ನು ಬಾರಿಸುತ್ತಿದ್ದರು ಅದು ವಾದ್ಯ-ಘೋಷಣೆ ಎನಿಸುತ್ತಿತ್ತು —ಹಿಸ್ಟರೀ ಆಫ್ ಕನರೀಜ ಲಿಟರೇಚರ,

ಪ್ರಾಪ್ತೋಽಹಂ ಕರಹಾಟಕಂ ಬಹುಭಟಂ ವಿದ್ಯೋತ್ಕಟಂ ಸಂಕಟಂ
ವಾದಾರ್ಥೀ ವಿಚರಾಮ್ಯಹಂ ನರಪತೇ ಶಾರ್ದೂಲವಿಕ್ರೀಡಿತಂ ॥

ಈ ಪದ್ಯದಿಂದ ಕರಹಾಟಕವನ್ನು ತಲುಪುವ ಪೂರ್ವದಲ್ಲಿ ಯಾವ ಯಾವ ದೇಶ ಹಾಗೂ ನಗರಗಳಲ್ಲಿ ಸಮಂತಭದ್ರರು ವಾದಕ್ಕಾಗಿ ವಿಹಾರ ಮಾಡಿದರೆಂಬುದು ಗೊತ್ತಾಗುತ್ತದೆ ಅವರು ಪಾಟಲೀಪುತ್ರ, ಮಾಳವ, ಸಿಂಧು, ಪಂಜಾಬ (ಠಕ್ಕ), ಕಾಂಚೀಪುರ, ವೈದಿಶ (ಭಿಲಸಾ) ಈ ಮುಖ್ಯ ದೇಶಗಳಲ್ಲಿ ಸಂಚರಿಸಿದ್ದರು. ಅಲ್ಲಲ್ಲ ವಾದದ ನಗಾರಿಯನ್ನು ಬಾರಿಸಿದರು. ಬಹುತರ ಅಲ್ಲಿ ಯಾರೂ ಅವರನ್ನು ಎದುರಿಸಿ ಜಯಿಸಿದಂತೆ ಕಾಣುವದಿಲ್ಲ. ತಮ್ಮ ಉದ್ದೇಶವನ್ನು ಸಾಧಿಸುವುದರಲ್ಲಿ ಸಮಂತಭದ್ರರು ಸಂಪೂರ್ಣವಾಗಿ ಸಫಲತೆಯನ್ನು ಹೊಂದಿದ್ದರು

ಸಮಂತಭದ್ರರ ಈ ಸಫಲತೆಯು ಶ್ರವಣ ಬೆಳ್ಗೊಳದ "ಮಲ್ಲಿಷೇಣಪ್ರಶಸ್ತಿ" ಎಂಬ ಹೆಸರಿನ ಶಿಲಾಲೇಖದಲ್ಲಿ ನಂ ೫೪ (೬೭)ರಲ್ಲಿ ಉಲ್ಲೇಖಿಸಲ್ಪಟ್ಟಿದೆ ಅದನ್ನು ಶಕ ಸಂವತ್ ೧೦೫೦ರಲ್ಲಿ ಬರೆಯಲಾಗಿದೆ ಅದರಿಂದ ಹೀಗೆ ಗೊತ್ತಾಗುತ್ತದೆ—"ಮುನಿಸಂಘದ ನಾಯಕರಾದ ಆಚಾರ್ಯ ಸಮಂತಭದ್ರರಿಂದ ಸರ್ವಹಿತಕಾರಿಯಾದ ಜೈನ ಮಾರ್ಗವು ಕಲಿಕಾಲದಲ್ಲಿ ಪುನಃ ಎಲ್ಲ ದೃಷ್ಟಿಯಿಂದಲೂ ಭದ್ರವಾಯಿತು ಇವರ ಪ್ರಭಾವವು ಎಲ್ಲ ಕಡೆಗೂ ವ್ಯಾಪಿಸಿರುವುದರಿಂದ ಇವರು ಎಲ್ಲರ ಹಿತವನ್ನು ಸಾಧಿಸುವಂಥವರೂ ಎಲ್ಲರ ಪ್ರೇಮಪಾತ್ರರೂ ಆಗಿದ್ದಾರೆ:"—

ವಂದ್ಯೋ ಭಸ್ಮಕ-ಭಸ್ಮಸಾತ್ಕೃತಿಪಟುಃ ಪದ್ಮಾವತೀದೇವತಾ-
ದತ್ತೋದಾತ್ತಪದ-ಸ್ವಮಂತ್ರ-ವಚನ-ವ್ಯಾಹೂತ-ಚಂದ್ರಪ್ರಭಃ ।
ಆಚಾರ್ಯಃ ಸ ಸಮಂತಭದ್ರ-ಗಣಭೃದ್ಯೇನೇಹ ಕಾಲೇ ಕಲೌ
ಜೈನಂ ವರ್ತ್ಮ ಸಮಂತಭದ್ರಮಭವದ್ಭದ್ರಂ ಸಮಂತಾನ್ಮುಹುಃ ॥

ಈ ಪದ್ಯದ ಪೂರ್ವಾರ್ಧದಲ್ಲಿ ಸಮಂತಭದ್ರರ ಜೀವನದ ಕೆಲವು ಮಹತ್ವದ ಘಟನೆಗಳು ಉಲ್ಲೇಖಿಸಲ್ಪಟ್ಟಿವೆ—(೧) ಘೋರ ತಪಸ್ಸನ್ನು ಆಚರಿಸುವಾಗ ಶರೀರದಲ್ಲಿ 'ಭಸ್ಮಕ' ರೋಗವು ಹುಟ್ಟಿತು (೨) ಈ ವ್ಯಾಧಿಯನ್ನು ಬಹು ಬುದ್ಧಿಮತ್ತೆಯಿಂದ ಶಾಂತಗೊಳಿಸಲಾಯಿತು (೩) ಪದ್ಮಾವತೀ ಎಂಬ ಹೆಸರಿನ ದಿವ್ಯ ಶಕ್ತಿಯಿಂದ ಸಮಂತಭದ್ರರಿಗೆ ಉದಾತ್ತ ಪದವು ಪ್ರಾಪ್ತವಾಯಿತು (೪) ತನ್ನ ಮಂತ್ರಬಲದಿಂದ ಇಲ್ಲವೆ ಯೋಗ ಶಕ್ತಿಯಿಂದ ಚಂದ್ರಪ್ರಭ ಬಿಂಬವನ್ನು ಆಕರ್ಷಿಸಿದರು ಈ ಎಲ್ಲ ಘಟನೆಗಳು ಬಹಳ ಹೃದಯಸ್ಪರ್ಶಿಯಾಗಿವೆ.

ಇನ್ನು ಸಮಂತಭದ್ರರ ಯಶೋದುಂದುಭಿಯ ಇನ್ನೊಂದು ಉಲ್ಲೇಖವು ಬೇಲೂರ ತಾಲೂಕಿನ ಕನ್ನಡ ಶಿಲಾಲೇಖ ಒಂದರಲ್ಲಿ ಬಂದಿದೆ[1] ರಾಮಾನುಜಾಚಾರ್ಯ—ಮಂದಿರದ ಆವಾರದಲ್ಲಿರುವ ಸೌಮ್ಯನಾಯಕಿಯ ಮಂದಿರದ ಮೇಲ್ಛಾವಣಿನ ಕಲ್ಲಿನ ಮೇಲೆ ಇದನ್ನು ಕೆತ್ತಲಾಗಿದೆ. ಇದರ ಕಾಲವು ಶಕ ಸಂವತ್ ೧೦೫೯ ಆಗಿದೆ. ಈ ಶಿಲಾಲೇಖದಲ್ಲಿ ಹೀಗೆ ಹೇಳಿದೆ—ಶ್ರುತ ಕೇವಲಿಗಳು ಹಾಗೂ ಕೆಲವು ಆಚಾರ್ಯರ ತರುವಾಯ ಆದ ಸಮಂತಭದ್ರ ಸ್ವಾಮಿಗಳು ಶ್ರೀ ವರ್ಧಮಾನ ಮಹಾವೀರ ಸ್ವಾಮಿಯ ತೀರ್ಥದ—ಜೈನಮಾರ್ಗದ—ವೃದ್ಧಿಯನ್ನು ಸಹಸ್ರಪಟ್ಟು ಮಾಡಿದಂಥವರಾಗಿ ಹೋದರು[2] ಕಲಿಯುಗದಲ್ಲಿ ಸಮಂತಭದ್ರರು ಮಾಡಿದ ಧರ್ಮದ ಈ ಜಾಗೃತಿಯು ಸಾಮಾನ್ಯವಾದುದಲ್ಲ. ಇದರಿಂದ ಅವರ ಅದ್ವಿತೀಯ ಯೋಗ್ಯತೆಯೂ ದೊಡ್ಡ ವಿದ್ವತ್ತೆಯೂ ಅತುಲ ಕಾರ್ಯಕ್ಷಮತೆಯೂ ವ್ಯಕ್ತವಾಗುತ್ತವೆ ಅಲ್ಲದೆ ಅವರ ವ್ಯಕ್ತಿತ್ವವು ಮೂರ್ತರೂಪವನ್ನು ತಾಳಿ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಸ್ವಾಮೀಜಿಯವರ ಇಂಥ ಧರ್ಮ ಪ್ರಭಾವನೆಯನ್ನು ಅಕಲಂಕದೇವನಂಥ ಮಹಾನ್ ಆಚಾರ್ಯರು ತಮ್ಮ 'ಅಷ್ಟಶತಿ'ಯಲ್ಲಿ "ತೀರ್ಥಪ್ರಭಾವಿಕಾಲೆ ಕಲೌ" ಎಂದು ಗೌರವದಿಂದ ಉಲ್ಲೇಖಿಸಿದ್ದಾರೆ. ಇದರಂತೆಯೇ ಹರಿವಂಶಪುರಾಣದ ಕರ್ತೃವಾದ ಜಿನಸೇನಾಚಾರ್ಯರು ಸಮಂತಭದ್ರರ ವಚನಗಳು ಮಹಾವೀರ ಭಗವಾನ್‌ರ ವಚನಗಳಿಗೆ ಸಮಾನವೆಂದು ಹೇಳಿದ್ದಾರೆ.[3] ಹಾಗೆಯೇ ಶಿವಕೋಟಿ ಆಚಾರ್ಯರೂ ಕೂಡ ತಮ್ಮ 'ರತ್ನಮಾಲಾ'ದಲ್ಲಿ

---

[1] ಶಿಲಾಲೇಖ ನಂ. ೧೭. E C, V

[2] "ಶ್ರೀವರ್ಧಮಾನಸ್ವಾಮಿಗಳ ತೀರ್ಥದೊಳು ಕೇವಲಿಗಳು ಋದ್ಧಿಪ್ರಾಪ್ತರುಂ ಶ್ರುತಕೇವಲಿಗಳುಂ ಪಲರುಂ ಸಿದ್ಧಸಾಧ್ಯರ್ ಕಳ್ . (ತೀ) ರ್ತ್ಥಮಂ ಸಹಸ್ರಗುಣಂ ಮಾಡಿ ಸಮಂತಭದ್ರ ಸ್ವಾಮಿಗಳು ಸಂದರ್ ।"

[3] "ವಚಃ ಸಮಂತಭದ್ರಸ್ಯ ವೀರಸ್ಯೇವ ವಿಜೃಂಭತೇ ।

—ಹರಿವಂಶ ಪುರಾಣ

'ಜಿನರಾಜೋದ್ಯಚ್ಛಾಸನಾಂಬುಧಿಚಂದ್ರಮಾಃ' ಅಂದರೆ ಜಿನವಚನವೆಂಬ ಸಮುದ್ರಕ್ಕೆ ಚಂದ್ರನಿದ್ದಂತೆ ಸಮಂತಭದ್ರರು ಎಂದು ಹೇಳಿದ್ದಾರೆ. ಚಂದ್ರೋದಯದಿಂದ ಸಮುದ್ರವು ವೃದ್ಧಿಯನ್ನು ಹೊಂದುವಂತೆ ಸಮಂತಭದ್ರರ ಜನ್ಮದಿಂದ ಜೈನಧರ್ಮವು ವೃದ್ಧಿಯನ್ನು ಹೊಂದಿತು

ಹೀಗೆ ಸಮಂತಭದ್ರರು ಅನೇಕ ಉತ್ತಮೋತ್ತಮ ಗುಣಗಳ ಸ್ವಾಮಿಯೆನಿಸಿದ್ದರು ಅವರ ಕವಿತ್ವ, ಗಮಕತ್ವ, ವಾದಿತ್ವ ಮತ್ತು ವಾಗ್ಮಿತ್ವ ಎಂಬ ನಾಲ್ಕು ಗುಣಗಳು ಅಸಾಧಾರಣ ಯೋಗ್ಯತೆಯನ್ನು ಪಡೆದಿದ್ದವು ಈ ನಾಲ್ಕು ಶಕ್ತಿಗಳು ಅವರಲ್ಲಿ ವಿಶಿಷ್ಟ ತರಗತಿಯಲ್ಲಿ ವಿಕಾಸವನ್ನು ಹೊಂದಿದ್ದವು ಅದರಿಂದಾಗಿ ಅವರ ನಿರ್ಮಲ ಕೀರ್ತಿಯು ದೂರ ದೂರದ ವರೆಗೆ ಪಸರಿಸಿತ್ತು ಆ ಕಾಲದ ಕವಿ, ಗಮಕಿ, ವಾದಿ ಮತ್ತು ವಾಗ್ಮಿಗಳಲ್ಲಿ ಇವರು ಅತ್ಯಂತ ಶ್ರೇಷ್ಠರೆನಿಸಿದ್ದರು.[1] ಸ್ವಾಮೀ ಸಮಂತಭದ್ರರ ಈ ಗುಣಗಳನ್ನು ಅನೇಕ ಜನ ಆಚಾರ್ಯರೂ ಗ್ರಂಥ ಕರ್ತರೂ ಆದರದಿಂದ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದುಂಟು ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ

(೧) ಭಗವದ್ ಜಿನಸೇನಾಚಾರ್ಯರು ತಮ್ಮ ಆದಿಪುರಾಣದಲ್ಲಿ ಸಮಂತಭದ್ರರನ್ನು ''ಮಹಾನ್ ಕವಿವೇಧಾ'-ಕವಿಗಳನ್ನು ಉತ್ಪನ್ನ ಮಾಡುವಂಥ ಬ್ರಹ್ಮ—ಎಂದು ಕರೆದಿದ್ದಾರೆ ಅದರ ಜೊತೆಗೇನೇ ಸಮಂತ-ಭದ್ರರ ವಚನರೂಪೀ ವಜ್ರಪಾತದಿಂದ ಕುಮತರೂಪೀ ಪರ್ವತವು ತುಂಡು ತುಂಡಾಗಿ ಹೋಯಿತೆಂದೂ ಹೇಳಿದ್ದಾರೆ—

ನಮಃ ಸಮಂತಭದ್ರಾಯ ಮಹತೇ ಕವಿವೇಧಸೇ ।
ಯದ್ವಚೋವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯಃ ॥

(೨) ವಾದಿರಾಜಸೂರಿಯು ಯಶೋಧರ ಚರಿತ್ರೆಯಲ್ಲಿ ಸಮಂತಭದ್ರರನ್ನು 'ಕಾವ್ಯಮಾಣಿಕ್ಯಗಳ ಪರ್ವತ' ಎಂದು ಕರೆದಿದ್ದಾನೆ ಮೇಲಾಗಿ ಅವನು ನಮಗೆ ಸೂಕ್ತಿ ರತ್ನಗಳನ್ನು ಒದಗಿಸಲೆಂಬ ಭಾವವನ್ನು ವ್ಯಕ್ತಗೊಳಿಸಿದ್ದಾನೆ—

ಶ್ರೀ ಮತ್ಸಮಂತಭದ್ರಾದ್ಯಾಃ ಕಾವ್ಯ-ಮಾಣಿಕ್ಯರೋಹಣಾಃ ।
ಸಂತು ನಃ ಸಂತತೋತ್ಕೃಷ್ಟಾಃ ಸೂಕ್ತಿರತ್ನೋತ್ಕರಪ್ರದಾಃ ॥

(೩) ವಾದೀಭಸಿಂಹಸೂರಿಯು ತನ್ನ ಗದ್ಯಚಿಂತಾಮಣಿಯಲ್ಲಿ ಸಮಂತಭದ್ರ ಮುನೀಶ್ವರರ ಜಯ ಘೋಷವನ್ನು ಮಾಡುತ್ತ 'ಸರಸ್ವತಿಯ ಸ್ವಚ್ಛಂದ ವಿಹಾರಭೂಮಿ' ಎಂದು ಹೇಳಿದ್ದಾನೆ ಅಲ್ಲದೆ ಅವರ ವಚನರೂಪೀ ವಜ್ರದ ಪೆಟ್ಟಿನಿಂದ ಪ್ರತಿಪಕ್ಷಿಗಳ ಸಿದ್ಧಾಂತವೆಂಬ ಪರ್ವತದ ಶಿಖರಗಳು ತುಂಡು ತುಂಡಾಗಿದ್ದವು ಅರ್ಥಾತ್ ಸಮಂತಭದ್ರರ ಎದುರಿಗೆ ವಿರೋಧಿಗಳ ಸಿದ್ಧಾಂತಕ್ಕೆ ಏನೂ ಮಹತ್ವವು ಉಳಿಯುತ್ತಿರಲಿಲ್ಲ ಅಲ್ಲದೆ ಅವುಗಳನ್ನು ಪ್ರತಿಪಾದಿಸುವಂಥವರು ತಲೆಯೆತ್ತಿ ನಿಲ್ಲುವಂತೆಯೂ ಇರುತ್ತಿರಲಿಲ್ಲ—

ಸರಸ್ವತೀ-ಸ್ವೈರ-ವಿಹಾರಭೂಮಯಃ ಸಮಂತಭದ್ರಪ್ರಮುಖಾ ಮುನೀಶ್ವರಾಃ ।
ಜಯಂತಿ ವಾಗ್ವಜ್ರ-ನಿಪಾತ-ಪಾಟಿತ-ಪ್ರತೀಪರಾದ್ಧಾಂತ-ಮಹೀಧ್ರಕೋಟಯಃ ॥

(೪) ವರ್ಧಮಾನಸೂರಿಯು ವರಾಂಗಚರಿತದಲ್ಲಿ ಸಮಂತಭದ್ರನನ್ನು 'ಮಹಾ ಕವೀಶ್ವರ', 'ಕುವಾದಿ-ವಿದ್ಯಾ-ಜಯ-ಲಬ್ಧ-ಕೀರ್ತಿ' ಮತ್ತು 'ಸುತರ್ಕಶಾಸ್ತ್ರಾಮೃತಸಾರಸಾಗರ' ಎಂದು ಕೊಂಡಾಡಿದ್ದಾನೆ ಅಲ್ಲದೆ ಕವಿಯಾಗಬೇಕೆನ್ನುವ ನನ್ನ ಮೇಲೆ ಅವನು ಪ್ರಸನ್ನನಾಗಲಿ—ಅವನ ವಿದ್ಯೆಯು ನನ್ನ ಅಂತಃಕರಣಕ್ಕೆ ಸ್ಫೂರ್ತಿಯನ್ನೀ-ಯಲಿ ನನ್ನನ್ನು ಸಫಲ ಮನೋರಥನನ್ನಾಗಿ ಮಾಡಲಿ—

ಸಮಂತಭದ್ರಾದಿ-ಮಹಾಕವೀಶ್ವರಾಃ ಕುವಾದಿ-ವಿದ್ಯಾಜಯ-ಲಬ್ಧ-ಕೀರ್ತಯಃ ।
ಸುತರ್ಕ-ಶಾಸ್ತ್ರಾಮೃತಸಾರ-ಸಾಗರಾ ಮಯಿ ಪ್ರಸೀದಂತು ಕವಿತ್ವ ಕಾಂಕ್ಷಿಣಿ ॥

(೫) ಶುಭಚಂದ್ರಾಚಾರ್ಯನು ಜ್ಞಾನಾರ್ಣವದಲ್ಲಿ 'ಸಮಂತಭದ್ರನಂಥ ಕವೀಂದ್ರಸೂರ್ಯನ ಉದಯದಿಂದ ನಿರ್ಮಲ ವಚನಗಳೆಂಬ ಕಿರಣಗಳು ಎಲ್ಲಿ ಸ್ಫುರಿಸುತ್ತವೆಯೋ ಅಲ್ಲಿ ಲೋಕವು ಆಕಾಶದಂತೆ ಕಾಂತಿಮಯವಾಗುತ್ತದೆ ಅಲ್ಲಿ ಅಲ್ಪ ಜ್ಞಾನಿಗಳಾದ ಗರ್ವಿ ಜನರು ಉಳಿಯುವದೇ ಇಲ್ಲ '—

---

[1] ಕವೀನಾಂ ಗಮಕಾನಾಂ ಚ ವಾದೀನಾಂ ವಾಗ್ಮಿನಾಮಪಿ ।
ಯಶಃ ಸಾಮಂತಭದ್ರೀಯಂ ಮೂರ್ಧ್ನಿ ಚೂಡಾಮಣೀಯತೇ ॥ —ಆದಿಪುರಾಣ,

ಸಮಂತಭದ್ರಾದಿಕವೀಂದ್ರಭಾಸ್ವತಾಂ ಸ್ಫುರಂತಿ ಯತ್ರಾಮಲಸೂಕ್ತಿರಶ್ಮಯಃ ।
ವ್ರಜಂತಿ ಖದ್ಯೋತವದೇವ ಹಾಸ್ಯತಾಂ ನ ತತ್ರ ಕಿಂ ಜ್ಞಾನಲವೋದ್ಧತಾ ಜನಾಃ ॥

(೬) ಭಟ್ಟಾರಕ ಸಕಲ ಕೀರ್ತಿಗಳು ತಮ್ಮ ಪಾರ್ಶ್ವನಾಥಚರಿತ್ರದಲ್ಲಿ ಸಮಂತಭದ್ರರನ್ನು ಕುರಿತು "ಯಾರ ವಾಣಿಯು ಸಂಸಾರದಲ್ಲಿ ಎಲ್ಲ ರೀತಿಯಿಂದಲೂ ಮಂಗಲಮಯವಾಗಿರುವುದೋ ಮತ್ತು ಎಲ್ಲ ಜನರಿಗೂ ಉಪಕಾರ ಮಾಡುವಂಥದಾಗಿರುವುದೋ ಆ ಕವೀಶ್ವರ ಸಮಂತಭದ್ರನನ್ನು ಸಾದರದಿಂದ ವಂದಿಸುವೆ." —

ಸಮಂತಾದ್ಭುವನೇ ಭದ್ರಂ ವಿಶ್ವಲೋಕೋಪಕಾರಿಣೀ ।
ಯದ್ವಾಣೀ ತಂ ಪ್ರವಂದೇ ಸಮಂತಭದ್ರಂ ಕವೀಶ್ವರಮ್ ॥

(೭) ಬ್ರಹ್ಮ ಅಜಿತನು ತನ್ನ ಹನುಮಚ್ಚರಿತದಲ್ಲಿ ಸಮಂತಭದ್ರನನ್ನು 'ದುರ್ವಾದಿಗಳ ವಾದವೆಂಬ ಚರ್ಮರೋಗ–ಹುರುಕು, ಖಜ್ಜಿ–ದ ತಿನಿಸಿಗೆ ಮಹೌಷಧಿ' ಎಂದು ಹೇಳಿದ್ದಾನೆ —

ಜೀಯಾತ್ಸಮಂತಭದ್ರೋಽಸೌ ಭವ್ಯ–ಕೈರವ–ಚಂದ್ರಮಾಃ ।
ದುರ್ವಾದಿ–ವಾದ–ಕಂಡೂನಾಂ ಶಮನೈಕಮಹೌಷಧಿಃ ॥

(೮) ಕವಿ ದಾಮೋದರನು ಚಂದ್ರಪ್ರಭಚರಿತದಲ್ಲಿ "ಯಾರ ಗ್ರಂಥಗಳ ಅಭ್ಯಾಸದಿಂದ ಸಮಸ್ತ ಕವಿ ಸಮೂಹವು ಸಮ್ಯಗ್‌ಜ್ಞಾನದಲ್ಲಿ ಪಾರಾಂಗತರಾಗುತ್ತಾರೆಯೋ ಅಂಥ ಕವಿನಾಯಕ ಯೋಗಿ ಸಮಂತಭದ್ರರನ್ನು ಸ್ತುತಿಸುವೆ"—

ಯದ್ಭಾರತ್ಯಾಃ ಕವಿಃ ಸರ್ವೋಽಭವತ್ಸಂಜ್ಞಾನಪಾರಗಾಃ ।
ತಂ ಕವಿ–ನಾಯಕಂ ಸ್ತೌಮಿ ಸಮಂತಭದ್ರ–ಯೋಗಿನಮ್ ॥

(೯) ವಸುನಂದಿ ಆಚಾರ್ಯರು ಸ್ತುತಿವಿದ್ಯೆಯ ಟೀಕೆಯಲ್ಲಿ ಸಮಂತಭದ್ರನನ್ನು 'ಸದ್‌ಬೋಧರೂಪ'–ಸಮ್ಯಗ್ ಜ್ಞಾನದ ಮೂರ್ತಿ—ಮತ್ತು 'ವರಗುಣಾಲಯ'—ಉತ್ತಮ ಗುಣಗಳ ಮನೆ—ಎಂದು ಹೇಳಿದ್ದಾರೆ ಅಲ್ಲದೆ ಸಮಂತಭದ್ರರ ನಿರ್ಮಲ ಯಶದ ಕಾಂತಿಯಿಂದ ಮೂರು ಲೋಕಗಳು ಅಥವಾ ಭಾರತದ ಉತ್ತರ, ದಕ್ಷಿಣ ಮತ್ತು ಮಧ್ಯ ಈ ಮೂರೂ ಪ್ರದೇಶಗಳು ಪ್ರಕಾಶಮಾನವಾಗಿದ್ದುವು ಇವರ ಯಶಸ್ತೇಜವು ಎಲ್ಲ ಕಡೆಗೂ ಹಬ್ಬಿತ್ತು —

ಸಮಂತಭದ್ರಂ ಸದ್‌ಬೋಧಂ ಸ್ತುವೇ ವರ–ಗುಣಾಲಯಮ್ ।
ನಿರ್ಮಲಂ ಯದ್ಯಶಷ್ಕಾಂತಂ ಬಭೂವ ಭುವನತ್ರಯಮ್ ॥

(೧೦) ವಿಜಯವರ್ಣಿಯು ತನ್ನ 'ಶೃಂಗಾರಚಂದ್ರಿಕಾ' ಎಂಬ ಗ್ರಂಥದಲ್ಲಿ ಸಮಂತಭದ್ರನನ್ನು 'ಮಹಾ ಕವೀಶ್ವರ'ನೆಂದು ಹೇಳಿದ್ದಾನೆ ಅಲ್ಲದೆ 'ಇವರಿಂದ ರಚಿಸಲ್ಪಟ್ಟ ಪ್ರಬಂಧಗಳೆಂಬ ಸರೋವರದಲ್ಲಿ ರಸರೂಪದ ಜಲ, ಅಲಂಕಾರ ರೂಪದ ಕಮಲಗಳು ಶೋಭಿಸುತ್ತವೆ. ಅಲ್ಲಿ ಭಾವರೂಪದ ಹಂಸವು ಸಂಚರಿಸುತ್ತದೆ, ಸರಸ್ವತಿಯು ಕ್ರೀಡಿಸುತ್ತಾಳೆ.'—ಎಂದಿದ್ದಾನೆ ಸರಸ್ವತೀ ದೇವಿಯ ಕ್ರೀಡಾಸ್ಥಲ (ಉಪಾಶ್ರಯ) ವಾಗುವುದರಿಂದ ಸಮಂತಭದ್ರರ ಎಲ್ಲ ಪ್ರಬಂಧಗಳು (ಗ್ರಂಥ) ನಿರ್ದೋಷ, ಪವಿತ್ರ, ಮಹಿತಿಗಳಿಂದ ಕೂಡಿರುತ್ತವೆ.—

ಸಮಂತಭದ್ರಾದಿ ಮಹಾಕವೀಶ್ವರೈಃ ಕೃತಪ್ರಬಂಧೋಜ್ವಲ–ಸತ್ಸರೋವರೇ ।
ಲಸದ್ರಸಾಲಂಕೃತಿ–ನೀರ–ಪಂಕಜೇ ಸರಸ್ವತೀ ಕ್ರೀಡತಿ ಭಾವ–ಬಂಧುರೇ ॥

(೧೧) ಅಜಿತಸೇನಾಚಾರ್ಯರು ತಮ್ಮ ಅಲಂಕಾರಚಿಂತಾಮಣಿಯಲ್ಲಿ ಅನೇಕ ಪುರಾತನ ಪದ್ಯಗಳನ್ನು ಸಂಕಲನಮಾಡಿದ್ದಾರೆ ಅವುಗಳಿಂದ ಸಮಂತಭದ್ರರ ವಾದಮಹಾತ್ಮ್ಯವು ಬಹಳಷ್ಟು ತಿಳಿದು ಬರುತ್ತದೆ ಅವುಗಳಲ್ಲಿಯ ಒಂದು ಪದ್ಯದಿಂದ ಹೀಗೆ ವ್ಯಕ್ತವಾಗುತ್ತದೆ —'ಸಮಂತಭದ್ರರ ಕಾಲದಲ್ಲಿ ಕುವಾದೀ ಜನರು ಬಹುತರ ತಮ್ಮ ಸ್ತ್ರೀಯರ ಎದುರಿಗೇನೇ ಕಠೋರ ಮಾತುಗಳನ್ನು ಆಡುತ್ತಿದ್ದರು ತಮ್ಮ ಗರ್ವದ ಮಾತುಗಳನ್ನೂ ಪರಾಕ್ರಮದ ಸುದ್ದಿಗಳನ್ನೂ ಹೆಂಡರ ಮುಂದೆಯೇ ವಿವರಿಸುತ್ತಿದ್ದರು ಅಂಥವರು ಯಾವಾಗ ಸಮಂತಭದ್ರ ಯೋಗಿಗಳ ಎದುರಿಗೆ ಬರುತ್ತಿದ್ದರೋ ಆಗ ಅವರು ಮಧುರ ನುಡಿಗಳನ್ನು ಆಡುವಂಥವರಾಗುತ್ತಿದ್ದರು ನೀವೇ ನಮ್ಮ ರಕ್ಷಕರು—ಎನ್ನುತ್ತಿದ್ದರು ಇದೆಲ್ಲ ಸಮಂತಭದ್ರರ ಅಸಾಧಾರಣ ವ್ಯಕ್ತಿತ್ವದ ಪ್ರಭಾವವಾಗಿದೆ ಆ ಪದ್ಯವು ಹೀಗಿದೆ.—

ಕುವಾದಿನಃ ಸ್ವಕಾಂತಾನಾಂ ನಿಕಟೇ ಪರುಷೋಕ್ತಯಃ ।
ಸಮಂತಭದ್ರ-ಯತ್ಯಗ್ರೇ ಪಾಹಿ ಪಾಹೀತಿ ಸೂಕ್ತಯಃ ॥

ಇನ್ನೊಂದು ಪದ್ಯದಿಂದ ಈ ಸಂಗತಿಯು ಗೊತ್ತಾಗುತ್ತದೆ —'ಯಾವಾಗ ಮಹಾವಾದಿಯಾದ ಸಮಂತ-ಭದ್ರನು (ಸಭಾಸ್ಥಾನ ಮೊದಲಾದವುಗಳಲ್ಲಿ) ಬರುತ್ತಿದ್ದನೋ ಆಗ ಕುವಾದೀ ಜನರು ತಲೆ ಕೆಳಗೆ ಹಾಕಿ, ತಮ್ಮ ವಾದದ ಹೆಬ್ಬೆರಳಿನಿಂದ ನೆಲವನ್ನು ಬರೆಯುತ್ತಿದ್ದರು ಪ್ರತಿವಾದಿಗಳ ಮೇಲೆ ಸಮಂತಭದ್ರರ ಪ್ರಭಾವವು ಇಷ್ಟೊಂದು ಬೀಳುತ್ತಿತ್ತು' ಆ ಪದ್ಯವು ಹೀಗಿದೆ —

ಶ್ರೀಮತ್ಸಮಂತಭದ್ರಾಖ್ಯೇ ಮಹಾವಾದಿನಿ ಚಾಗತೇ ।
ಕುವಾದಿನೋಽಲಿಖನ್ಭೂಮಿಮಂಗುಷ್ಠೈರಾನತಾನನಾಃ ॥

ಇದಲ್ಲದೆ ಇನ್ನೂ ಒಂದು ಪದ್ಯದಲ್ಲಿಯೂ ಸಮಂತಭದ್ರರನ್ನು ಕುರಿತು ಹೀಗೆ ಹೇಳಲಾಗಿದೆ—'ಸ್ವಾಮೀ ಸಮಂತಭದ್ರರ ಎದುರಿನಲ್ಲಿ ಚತುರತೆಯೊಡನೆ ಸ್ಪಷ್ಟ ಹಾಗೂ ಶೀಘ್ರ ಮಾತನಾಡುವಂಥ ಧೂರ್ಜಟಿಯ (ಇವನೊಬ್ಬ ಪ್ರತಿವಾದಿಯಾದ ವಿದ್ವಾಂಸ) ನಾಲಿಗೆಯೂ ಕೂಡ ಬೇಗನೇ ತನ್ನ ಬಿಲವನ್ನು ಸೇರುತ್ತಿದ್ದಿತೋ—ಅವನಿಗೆ ಏನೂ ಮಾತನಾಡಲಿಕ್ಕೆ ಬರುತ್ತಿದ್ದಿಲ್ಲ—ಅಂದ ಮೇಲೆ ಉಳಿದ ವಿದ್ವಾಂಸರ ಕಥೆಯೇನು? ಅವರ ಅಸ್ತಿತ್ವವು ಸಮಂತಭದ್ರರ ಮುಂದೆ ಮಹತ್ವವಿಲ್ಲದಂತೆ ಆಗುತ್ತಿತ್ತು' ಈ ಪದ್ಯವು ಕವಿ ಹಸ್ತಿಮಲ್ಲನ 'ವಿಕ್ರಾಂತ ಕೌರವ' ನಾಟಕದಲ್ಲಿಯೂ ಕಂಡು ಬರುತ್ತದೆ ಅದು ಹೀಗಿದೆ—

ಅವಟು-ತಟಮಟತಿ ಝಟಿತಿ ಸ್ಫುಟ-ಪಟು-ವಾಚಾಟ-ಧೂರ್ಜಟೇರ್ಜಿಹ್ವಾ ।
ವಾದಿನಿ ಸಮಂತಭದ್ರೇ ಸ್ಥಿತವತಿ ಕಾ ಕಥಾನ್ಯೇಷಾಮ್ ॥

ಈ ಪದ್ಯವು ಶಕಸಂವತ್ ೧೦೫೦ ರಲ್ಲಿ ಬರೆಯಲ್ಪಟ್ಟ ಶ್ರವಣ ಬೆಳ್ಗೊಳ ಶಿಲಾಲೇಖ ನಂ ೫೪ (೬೭)ರಲ್ಲಿಯೂ ಸ್ವಲ್ಪ ಪಾಠ ಭೇದದಿಂದ ಉಪಲಬ್ಧವಿದೆ

(೧೨) ಶ್ರವಣ ಬೆಳ್ಗೊಳ ಶಿಲಾಲೇಖ ನಂ ೧೦೫ ರಲ್ಲಿ ಸಮಂತಭದ್ರರ ಜಯಘೋಷವನ್ನು ಮಾಡುತ್ತ ಹೀಗೆ ಹೇಳಲಾಗಿದೆ —'ಸುಂದರ ಹಾಗೂ ಪ್ರೌಢಯುಕ್ತಿಗಳಿಂದ ಕೂಡಿದ ಪ್ರವಚನಗಳು ವಾದಿಯೆಂಬ ಆನೆಯನ್ನು ವಶಮಾಡಿಕೊಳ್ಳುವುದರಲ್ಲಿ 'ವಜ್ರಾಂಕುಶ' ದಂತೆ ಇರುತ್ತವೆ ಸಮಂತಭದ್ರರ ಪ್ರಭಾವದಿಂದ ಈ ಸಂಪೂರ್ಣ ಪೃಥ್ವಿಯಲ್ಲಿ ಒಮ್ಮೆ ಕೆಟ್ಟ ವಾದವೆಂಬ ಸುದ್ದಿಯೂ ಸಹ ಇಲ್ಲದಂತಾಗಿತ್ತು ಆ ವಿಷಯದಲ್ಲಿ ಯಾರೂ ಮಾತನ್ನೂ ಸಹ ಆಡುತ್ತಿರಲಿಲ್ಲ'—

ಸಮಂತಭದ್ರಃ ಸ ಚಿರಾಯ ಜೀಯಾದ್ವಾದೀಭ-ವಜ್ರಾಂಕುಶ-ಸೂಕ್ತಿಜಾಲಃ ।
ಯಸ್ಯ ಪ್ರಭಾವಾತ್ಸಕಲಾವನೀಯಂ ವಂಧ್ಯಾಸ ದುರ್ವಾದುಕ-ವಾರ್ತಯಾಪಿ ॥

(೧೩) ಶ್ರವಣ ಬೆಳ್ಗೊಳ ಶಿಲಾಲೇಖ ನಂ ೧೦೮ ರಲ್ಲಿ ಭದ್ರಮೂರ್ತಿ ಸಮಂತಭದ್ರನಿಗೆ ಜಿನ ಶಾಸನದ ಪ್ರಣೇತಾ' (ಮುಖ್ಯ ಮುಖಂಡ) ಎಂದು ಹೇಳಲಾಗಿದೆ ಅಲ್ಲದೆ 'ಅವರ ವಜ್ರರೂಪೀ ವಚನದ ಕಠೋರ ಪೆಟ್ಟಿನಿಂದ ಪ್ರತಿವಾದಿಗಳೆಂಬ ಪರ್ವತಗಳು ಚೂರು ಚೂರಾಗಿ ಹೋಗುತ್ತವೆ ಯಾವ ಪ್ರತಿವಾದಿಯೂ ಅವರ ಎದುರಿಗೆ ನಿಲ್ಲುತ್ತಿದ್ದಿಲ್ಲ.'—ಎಂದೂ ವಿವರಿಸಿದೆ —

ಸಮಂತಭದ್ರೋಽಜನಿ ಭದ್ರಮೂರ್ತಿಸ್ತತಃ ಪ್ರಣೇತಾ ಜಿನಶಾಸನಸ್ಯ ।
ಯದೀಯ-ವಾಗ್ವಜ್ರ-ಕಠೋರಪಾತಶ್ಚೂರ್ಣೀಚಕಾರ ಪ್ರತಿವಾದಿ-ಶೈಲಾನ್ ॥

(೧೪) ತಿರುಮಕೂಡಲು ನರಸೀಪುರದ ಶಿಲಾಲೇಖ ನಂ ೧೦೫ ರಲ್ಲಿ ಸಮಂತಭದ್ರನ ಒಂದು ವಾದದ ಉಲ್ಲೇಖವನ್ನು ಮಾಡುತ್ತ ಹೀಗೆ ಹೇಳಲಾಗಿದೆ "ಯಾರು ವಾರಾಣಸಿಯ (ಬನಾರಸ) ರಾಜನ ಎದುರಿನಲ್ಲಿ ವಿರೋಧಿಗಳನ್ನು—ಅನೇಕಾಂತ ವಾದವನ್ನು ವಿರೋಧಿಸುವ ಎಲ್ಲ ಏಕಾಂತ ವಾದಿಗಳನ್ನು—ಪರಾಜಿತಗೊಳಿಸಿದ್ದನೋ, ಆ ಸಮಂತಭದ್ರ ಮುನೀಶ್ವರರು ಯಾರಿಂದ ಸ್ತುತಿಸಲ್ಪಡುವದಿಲ್ಲ?— ಎಲ್ಲರ ಸ್ತುತಿಗೂ ಪಾತ್ರರಾಗಿದ್ದಾರೆ "—

ಸಮಂತಭದ್ರಃ ಸಂಸ್ತುತ್ಯಃ ಕಸ್ಯ ನ ಸ್ಯಾನ್ಮುನೀಶ್ವರಃ ।
ವಾರಾಣಸೀಶ್ವರಸ್ಯಾಗ್ರೇ ನಿರ್ಜಿತಾ ಯೇನ ವಿದ್ವಿಷಃ ॥

(೧೫) ಸಮಂತಭದ್ರರ ಗಮಕತ್ವ ಮತ್ತು ವಾಗ್ಮಿತ್ವಗಳಂಥ ಗುಣಗಳ ವಿಶೇಷ ಪರಿಚಯವು ಅವರ ದೇವಾಗಮಾದಿ ಗ್ರಂಥಗಳ ಅವಲೋಕನದಿಂದ ಆಗುತ್ತದೆ ಆದರೆ ಸಮಂತಭದ್ರರ ವಾಣಿಯ ಮಹತ್ವವನ್ನು ಸೂಚಿಸುವ ಅನೇಕ ಉಲ್ಲೇಖ ವಾಕ್ಯಗಳಿಂದಲೂ ಅವರ ಗುಣಗಳ ಮಹತಿಯು ಕಂಡು ಬರುವಂತಿದೆ ಇಂಥ ವಾಕ್ಯಗಳು 'ಅಷ್ಟಸಹಸ್ರೀ' ಮೊದಲಾದ ಗ್ರಂಥಗಳಲ್ಲಿ ವಿಪುಲವಾಗಿ ನೋಡಲಿಕ್ಕೆ ಸಿಕ್ಕುತ್ತವೆ ಹಾಗೆಯೇ ಕವಿ ನಾಗರಾಜನ 'ಸಮಂತಭದ್ರ ಭಾರತೀ-ಸ್ತೋತ್ರ'ವು [1] ಈ ವಿಷಯದಲ್ಲಿ ಭಾವಪೂರ್ಣ ಹಾಗೂ ಸುಂದರ ಸರಸ ರಚನೆಯಾಗಿದೆ ಇನ್ನೂ ಒಂದೆರಡು ಉದಾಹರಣೆಗಳನ್ನು ಇಲ್ಲಿ ಅವಲೋಕಿಸಬಹುದು ಇದರಿಂದ ಸಮಂತಭದ್ರರ ಗಮಕಕಲೆ, ವಚನ ಮಹಾತ್ಮ್ಯಗಳ ಪರಿಚಯವು ಇನ್ನಷ್ಟು ಆಗುತ್ತದೆ

(ಅ) ವಾದಿರಾಜಸೂರಿಯು ನ್ಯಾಯವಿನಿಶ್ಚಯಾಲಂಕಾರದಲ್ಲಿ ಹೀಗೆ ಹೇಳಿದ್ದಾರೆ—ಎಲ್ಲ ಕಡೆಗೂ ದುರ್ನಯರೂಪೀ ಅಂಧಕಾರವು ಪಸರಿಸಿದೆ ಅದರಿಂದ ತತ್ತ್ವಲೋಕದಲ್ಲಿ ಏನೂ ತಿಳಿಯದಂತಾಗಿದೆ ಆ ಹಿತಕಾರಿ ವಸ್ತುಗಳು—ಪ್ರಯೋಜನಕಾರಿಯಾದ ಜೀವಾದಿ ಪದಾರ್ಥಗಳು—ಶ್ರೀ ಸಮಂತಭದ್ರರ ವಚನಗಳೆಂಬ ರತ್ನದ ದೀಪಗಳಿಂದ ಚಿರಕಾಲ ಸ್ಪಷ್ಟವಾಗಿ ಪ್ರಕಾಶಿತಗೊಳ್ಳಲಿ!—

ವಿಸ್ತೀರ್ಣ-ದುರ್ನಯಮಯ-ಪ್ರಬಲಾಂಧಕಾರ-ದುರ್ಬೋಧತತ್ತ್ವಮಿಹ ವಸ್ತು ಹಿತಾವಬದ್ಧಮ್ ।
ವ್ಯಕ್ತೀಕೃತಂ ಭವತು ನಃ ಸುಚಿರಂ ಸಮಂತಾತ್ ಸಾಮಂತಭದ್ರ-ವಚನ-ಸ್ಫುಟ-ರತ್ನದೀಪೈಃ ॥

(ಆ) ವೀರನಂದಿ ಆಚಾರ್ಯರು ಚಂದ್ರಪ್ರಭಚರಿತ್ರದಲ್ಲಿ ಸಮಂತಭದ್ರರನ್ನು ಕುರಿತು ಹೀಗೆ ಹೇಳಿದ್ದಾರೆ—"ಗುಣಗಳಿಂದ ಕೂಡಿದ—ನೂಲಿನ ಎಳೆಗಳಿಂದ ಹೆಣೆಯಲ್ಪಟ್ಟ—ನಿರ್ಮಲ ಗೋಲಾಕಾರದ ಮುತ್ತುಗಳಿಂದ ಯುಕ್ತ ಹಾಗೂ ಉತ್ತಮ ಪುರುಷರ ಕೊರಳಾಭರಣವಾದಂಥ—ಶ್ರೇಷ್ಠ ಮುತ್ತಿನ ಮಾಲೆಯನ್ನು—ಸಂಪಾದಿಸುವದು ಅಷ್ಟು ಕಠಿನವಲ್ಲ ಆದರೆ ಸಮಂತಭದ್ರರ ವಾಣಿಯನ್ನು ಹೊಂದುವದು ಕಠಿನವಾಗಿದೆ ಯಾಕಂದರೆ ಇದನ್ನು ಬಹಳಷ್ಟು ತಿಳಿದುಕೊಂಡು ಹೃದಯಂಗಮಮಾಡಿಕೊಳ್ಳಬೇಕಾಗುತ್ತದೆ ಇದು ಸದ್‌ಗುಣಗಳಿಗಾಗಿ ಇದೆ. ನಿರ್ಮಲ ವೃತ್ತ-(ವೃತ್ತಾಂತ, ಚರಿತ್ರ, ಆಚಾರ, ವಿಧಾನ ಹಾಗೂ ಛಂದ) ರೂಪೀ ಮುಕ್ತಾಫಲಗಳಿಂದ ಕೂಡಿದೆ ಅಲ್ಲದೆ ದೊಡ್ಡ ದೊಡ್ಡ ಆಚಾರ್ಯರೂ ವಿದ್ವಾಂಸರೂ ಇದನ್ನು ತಮ್ಮ ಕಂಠಕ್ಕೆ ಅಲಂಕಾರವೆಂದು ಸ್ವೀಕರಿಸಿದ್ದಾರೆ ಅವರು ನಿತ್ಯವೂ ಅದನ್ನು ಪಠಿಸುವುದರಲ್ಲಿಯೂ ಉಚ್ಚರಿಸುವುದರಲ್ಲಿಯೂ ತಮ್ಮ ಗೌರವವಿದೆಯೆಂದು ಭಾವಿಸುತ್ತಾರೆ, ಭಾಗ್ಯವಿದೆಯೆಂದು ತಿಳಿಯುತ್ತಾರೆ ಅರ್ಥಾತ್ ಸಮಂತಭದ್ರರ ವಾಣಿಯು ತೀರ ದುರ್ಲಭವಾಗಿದೆ ಅವರ ಸಾತಿಶಯ ವಚನದ ಲಾಭವು ಬಹು ಭಾಗ್ಯದಿಂದಲೂ ಪರಿಶ್ರಮದಿಂದಲೂ ಲಭಿಸುತ್ತದೆ"—

ಗುಣಾನ್ವಿತಾ ನಿರ್ಮಲವೃತ್ತಮೌಕ್ತಿಕಾ ನರೋತ್ತಮೈಃ ಕಂಠವಿಭೂಷಣೀಕೃತಾ ।
ನ ಹಾರಯಷ್ಟಿಃ ಪರಮೇವ ದುರ್ಲಭಾ ಸಮಂತಭದ್ರಾದಿಭವಾ ಚ ಭಾರತೀ ॥

(ಇ) ನರೇಂದ್ರಸೇನಾಚಾರ್ಯರು ಸಿದ್ಧಾಂತಸಾರಸಂಗ್ರಹದಲ್ಲಿ 'ಪ್ರಾಣಿಗಳು ಈ ಭವ ಪ್ರಪಂಚದಲ್ಲಿ ಮನುಷ್ಯತ್ವವನ್ನು ಹೊಂದುವುದು ಎಷ್ಟು ಅಪರೂಪವಾಗಿರುವುದೋ ಅಷ್ಟೇ ಸಮಂತಭದ್ರರ ನಿರ್ದೋಷ ವಚನಗಳನ್ನು ಪಡೆಯುವುದು ದುರ್ಲಭವಾಗಿದೆ. ಅದನ್ನು ಹೊಂದಿದವನು ಸೌಭಾಗ್ಯಶಾಲಿಯಾಗಿದ್ದಾನೆ.'—

ಶ್ರೀಮತ್ಸಮಂತಭದ್ರಸ್ಯ ದೇವಸ್ಯಾಪಿ ವಚೋಽನಘಮ್ ।
ಪ್ರಾಣಿನಾ ದುರ್ಲಭಂ ಯದ್ವನ್ಮಾನುಷತ್ವಂ ತಥಾ ಪುನಃ ॥

ಈ ಮೇಲಿನ ಆಚಾರ್ಯರ ಹಾಗೂ ಗ್ರಂಥಕರ್ತರ ಉಲ್ಲೇಖಗಳನ್ನು ನೋಡಿದಲ್ಲಿ ಪ್ರಾಚೀನ ಜೈನಾಚಾರ್ಯರಲ್ಲಿ ಸಮಂತಭದ್ರರಿಗೆ ಇದ್ದ ಸ್ಥಾನದ ಕಲ್ಪನೆಯು ಸಹಜವಾಗಿ ಆಗುವಂತಿದೆ. ಇವರನ್ನು ಪ್ರಾಚೀನ ಸಂಸ್ಕೃತ ವಾಙ್ಮಯಕಾರರಷ್ಟೇ ಸ್ತುತಿಸಿದ್ದಾರೆಂದಲ್ಲ ಈಗಿನ ದೇಶೀಯ ಭಾಷಾ ಪಂಡಿತರೂ ಸಹ ಮುಕ್ತ ಕಂಠದಿಂದ ಅವರನ್ನು ಹೊಗಳಿದ್ದುಂಟು ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಸಮಂತಭದ್ರರ ಕೀರ್ತಿಯ ಕಹಳೆಯು ಕಿವಿಗೆ ಬೀಳದ ಸಂಗತಿಯೇನಲ್ಲ. ಮಹಾಕವಿಯೂ ನಾಡೋಜನೂ ಆದ ಆದಿಪಂಪನು ತನ್ನ 'ಆದಿಪುರಾಣ'ದಲ್ಲಿ ಸಮಂತಭದ್ರರನ್ನು

[1] ವೀರಸೇವಾ ಮಂದಿರದ 'ಸತ್ಸಾಧು ಸ್ಮರಣ ಮಂಗಲ ಪಾಠ'ದಲ್ಲಿ ಹಿಂದೀ ಅನುವಾದ ಸಹ ಪ್ರಕಟವಾಗಿದೆ

"ಶ್ರೀಮತ್ ಸಮಂತಭದ್ರ ಸ್ವಾಮಿಗಳ ಜಗತ್ ಪ್ರಸಿದ್ಧ ವದಂಗಳೀಗೆ ಶಾಶ್ವತವದಮಂ" ಎಂದು ಆದರದಿಂದ ಸ್ಮರಿಸುತ್ತಾನೆ ಅದರಂತೆ ಅಭಿನವ ಪಂಪನೆಂದು ಹೆಸರಾದ ನಾಗಚಂದ್ರನು ತನ್ನ 'ಮಲ್ಲಿನಾಥ ಪುರಾಣ'ದಲ್ಲಿ .. "ಸಮಂತಭದ್ರ । ಖ್ಯಾತರ ವದವಾಂಸು ಕಿಡಿಸುಗಘವಾಂಸುಗಳಂ" ಎಂದು ನೆನೆದದುಂಟು ಹಾಗೆಯೇ ಅಗ್ಗಳನೂ ಕೂಡ ತನ್ನ 'ಚಂದ್ರಪ್ರಭ ಪುರಾಣ'ದಲ್ಲಿ "ಸಮನಿಕೆ ಮನ್ಮಾನಸದೊಳ್ । ಸಮಂತಭದ್ರಾಂಘ್ರಿನಖರಕಾಂತಿಜಳಂ " ಎಂದು ಸಮಂತಭದ್ರರನ್ನು ಕೊಂಡಾಡಿದ್ದಾನೆ ಅದರಂತೆಯೇ ಜನ್ನನು ತನ್ನ 'ಅನಂತನಾದ ಪುರಾಣ'ದಲ್ಲಿ "ಗಣಧರರೋ ಸ್ವಾಮಿಗಳೋ ಗುಣದಿಂದಾಮಱಿಯೆ ಮೆಱೆಗೆ ಶುದ್ಧರೆಮೆಮ್ಮಂ । ಕಣಿವುಗೆ ಸಮಂತಭದ್ರರ ಆಖ್ಯಾನಂಗಳ್ ॥" ಎಂದು ಸಮಂತಭದ್ರರ ಮಹಿಮೆಯನ್ನು ಹೇಳಿದ್ದಾನೆ ಮಹಾಕವಿ ಕಮಲಭವನಂತೂ 'ಶಾಂತೀಶ್ವರ ಪುರಾಣ'ದಲ್ಲಿ 'ಭವಹರ ಸಮಂತಭದ್ರ'ರೆಂದು ಎತ್ತಿ ಹೇಳಿ, ಅವರ ಕಾರುಣ್ಯ ಸಾಗರದಲ್ಲಿ ತನ್ನ ಚಿತ್ತಮರಾಳವು ಅವಿರತವಾಗಿರಲೆಂದು ನೆನೆದಿದ್ದಾನೆ ಲೋಕೋಕ್ತಿ ಚತುರನೆನಿಸಿದ ನಯಸೇನ ಮುನಿಯು 'ಧರ್ಮಾಮೃತ'ದಲ್ಲಿ 'ಶ್ರೀಮತ್ ಸಮಂತಭದ್ರ ಸ್ವಾಮಿಗಳ . ವದಂಗಳೀಗೆ ಬೋಧೋದಯಮಂ" ಎಂದು ಪ್ರಾರ್ಥಿಸಿದ್ದಾನೆ ಕರ್ಣಪಾರ್ಯನಂತೂ ತನ್ನ 'ನೇಮಿನಾಥ ಪುರಾಣ'ದಲ್ಲಿ ಸಮಂತಭದ್ರರನ್ನು ಕುಮತಗಳೆಂಬ ಪರ್ವತಕ್ಕೆ ವಜ್ರ ಸಮಾನನೆಂದು ಹೇಳುತ್ತ 'ಸಂದ ಸಮಂತಭದ್ರಯತಿಪೋತ್ತಮರಂ ಕುಮತಾದ್ರಿ ವಜ್ರರಂ ಮಂದರಧೈರ್ಯರಂ ಸುಗುಣಭದ್ರರಂ ' ಎಂದಿತ್ಯಾದಿಯಾಗಿ ನುತಿಸಿದ್ದಾನೆ ಆಚಣ್ಣನು ತನ್ನ 'ವರ್ಧಮಾನ ಪುರಾಣ'ದಲ್ಲಿ ಸಮಂತಭದ್ರರ ವಿಶೇಷ ಗುಣಗಳನ್ನು ಹೇಳುತ್ತ—ಹೀಗೆ ಕೀರ್ತಿಸಿದ್ದಾನೆ

> ಕೃತಜಿನಮಾರ್ಗವಾರಿಜವಿನಿದ್ರನನುಜ್ಜ್ವಳ ಕೀರ್ತಿಭದ್ರನಂ
> ವಿತತ ದಯೂನಮುದ್ರನಶೇಷ ಜನಸ್ತುತ ಶೀಲಮುದ್ರನಂ ।
> ಗತಮಕರಧ್ವಜೇಭರಿಪುರೌದ್ರನನಪ್ರತಿಮಾಂಕರಾದ್ರನಂ
> ಯತಿಪ ಸಮಂತಭದ್ರನಿಳಾವಳೆಯಂ ನಲವಿಂದೆ ಕೀರ್ತಿಕುಂ ॥

ಈ ರೀತಿಯಾಗಿ ಕನ್ನಡ ಕವಿಶ್ರೇಷ್ಠರು ಸಮಂತಬದ್ರರ ಗುಣಗಳನ್ನು ಕೊಂಡಾಡಿ ತಮ್ಮ ಗುಣಗ್ರಾಹಕತೆ-ಯನ್ನು ವ್ಯಕ್ತಪಡಿಸಿದ್ದಾರೆ ಅಲ್ಲದೆ ಸಮಂತಭದ್ರರ ಮಹೋನ್ನತಿಯನ್ನು ಪ್ರದರ್ಶಿಸಿದ್ದಾರೆ ಕನ್ನಡ ವಾಙ್ಮಯದಲ್ಲಿ ಜೈನ ಪರಂಪರೆಯ ಹಲವು ಕಥೆಗಳೂ ಇತಿಹಾಸಗಳೂ ಅನೇಕ ರಾಜರ ಚರಿತ್ರೆಗಳೂ ಸೇರಿದಂಥ ಪ್ರಸಿದ್ಧ ಗದ್ಯ ಗ್ರಂಥವೆಂದು ದೇವಚಂದ್ರನ 'ರಾಜಾವಳೀ ಕಥೆ'ಯು ಹೆಸರಾಗಿದೆ ಇದು ಕ್ರಿ ಶ ೧೯ಶತಕದಲ್ಲಿಯೇ ನಿರ್ಮಾಣವಾದ ಗ್ರಂಥವು. ಇದರಲ್ಲಿ ಸಮಂತಭದ್ರನ ಚರಿತ್ರೆಯನ್ನು ಹೀಗೆ ಕೊಡಲಾಗಿದೆ—

"ಕಾಂಚೀಪುರಿಯೊಳು ಶಿವಕೋಟಿ ಮಹಾರಾಜನೆಂಬಾತನನುಜಂ ಶಿವಾಯನಂ ಬೆರಸು ರಾಜ್ಯಂಗೆಯ್ಯುತ್ತಿ ಕೋಟಿಲಿಂಗ ಸ್ಥಾಪನೆಗೆಯ್ದು ಅವಱೊಳು ಭೀಮಲಿಂಗದ ಗುಡಿಯೊಳು ದಿನಪೊಂದಕ್ಕೆ ದ್ವಾದಶಖಂಡುಗ ತಂಡುಲದ ಅನ್ನವಂ ವಿನಿಯೋಗಂ ಮಾಡಿಸುತ್ತಿರ್ಪನವಿತ್ತ ಭೀಮರಥೀ ಕೃಷ್ಣವೇಣೀ ತೊಱೆಗಳ ಮಧ್ಯವಿಷಯದಲ್ಲಿರುವ ಉತ್ಕಲಿಕಾ ಗ್ರಾಮದೊಳುದ್ಭವಿಸಿದ ಸಮಂತಭದ್ರಾಚಾರ್ಯರೆಂಬ ಯತಿಪತಿಗಳು ಮಣಿವಕ ಹಳ್ಳಿಯೊಳನಶನಾದಿ-ತಪದಿಂ ಕ್ರಿಯಾಯುಕ್ತರಾಗಿರಲೊಂದು ಕಾರಣಮಾಗೆ ಭಸ್ಮಕವ್ಯಾಧಿ ಪುಟ್ಟಿಯದಕ್ಕೆ ಪ್ರತೀಕಾರವಿಲ್ಲದುದರಿಂ

> ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಷ್ಪ್ರತೀಕಾರೇ ।
> ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ॥

ಸ್ವಗುರುವ ಸಮೀಪವನೆಯ್ದಿ—ಎಂದು ಸಲ್ಲೇಖನವಂ ಬೇಡುವುದುಂ ಗುರುಗಳೆಂದರ್—ನಿಮ್ಮಿಂದಂ ಮುಂದೆ ಧರ್ಮೋದ್ಧಾರಮುಪ್ಪದಱಿಂದೆಲ್ಲಿಯಾನುಂ ತೃಪ್ತಿಯಪ್ಪಂತು ಭುಂಜಿಸಿ ರೋಗೋಪಶಮಮಾಗೆ ಪುನರ್ದೀಕ್ಷೆ—ಗೊಳ್ಳುದೆಂಬುದುಂ ಕಾಂಚೀಪುರಮನೆಯ್ದಿ ಶಿವಕೋಟಿ ಮಹಾರಾಜನಂ ಕಂಡಾಶೀರ್ವಾದಂಗುಡಲ್ ಅವರ ಶರೀರದ ಭದ್ರಾಕಾರಮಂ ವಾಗ್ಜಾಲಮಂ ನೋಡಿ ಆಶ್ಚರ್ಯಮಾಗೆ ಶಿವನೆಂದೇ ಬಗೆದು ನಮಸ್ಕರಿಸೆ, ನೀಂ ಮಾಳ್ಪ ಧರ್ಮ-ವೇನೆಂಬುದುಂ ತನ್ನ ಶಿವಭಕ್ತಿ ಶಿವಾಚಾರಮಂ ಕೋಟಿ ಲಿಂಗಾರಾಧನೆಯಂ ಭೀಮಲಿಂಗಕ್ಕೆ ಬಿಟ್ಟಹ ಪಡಿತರಮಂ, ಪೇೞೆ, ನಿನ್ನ ದರ್ಮನುನಾಕುಱೆಸುಂ ಶಿವಾರ್ಪಣಂ ಮಾಳ್ಪೆನೆಂದು ಪನ್ನೆರಡು ಖಂಡುಗದಕ್ಕಿಯನ್ನಕ್ಕೆ ತಕ್ಕ ವ್ಯಂಜನ ಪದಾರ್ಥವನಿಕ್ಕಿಸಿ ಕವಾಟಬಂಧಮುಂಮಾಡಿ ಪೋಗವೇೞ್ದು ತಾನುಮಾಭಕ್ತಮೆಲ್ಲಮನೊಂದುಗುಟುಱಿಸುವಂತೆ

ತೆನ್ನುದರಾಗಿಗಾಹುತಿಗೊಟ್ಟು ತಣಿಪಿ ಕದಹಂ ತೆಱೆಯಲತ್ಯಾಶ್ಚರ್ಯಂಬಟ್ಟು ಮಱುದಿವಸಂ ರಾತ್ರಿಯೊಳದಾ೯ಂಶ-
ದೊಳೊಂದಂಶಮುಱಿದೊಡೆ ಇದೇ ಕುಱಿದುದೆಂದು ಬೆಸಗೊಳೆ, ದೇವರ್ ಪ್ರಸಾದಶೇಷಾನ್ನಮನಿರಿಸಿದಪೆಂದೊಡಂ,
ಬೆಳಗಿನೊಳು ನಾಲ್ಕಱೊಳೊಂದಂಶಮುಳಿಯೆ ಪರೀಕ್ಷಿಸಲಾರಯ್ದು ನೋಡಿ ತಿಳಿದು ಐದನೆಯ ದಿವಸಂ ಚತುರಂಗ
ಬಲಂ ಬೆರಸರಸಂ ಮೂವಳಸುತ್ತಿ ಬಾಗಿಲಂ ತೆಱೆವುದೆಂದು ಕಲಕಲರವಂ ಪೊಣ್ಮೆ ತದುಪಸರ್ಗಂ ಪಿಂಗುಪನ್ನಮಾಹಾರ
ಶರೀರ ನಿವೃತ್ತಿಗೆಯ್ದು ಸರ್ವಜ್ಞನಂ ವಸ್ತುಸ್ತವಾದಿ ತ್ರಿವಿಧ ಸ್ತೋತ್ರಮನೇಕಚಿತ್ರತ್ರಿಂ ವೃಷಭಾದಿ ಇಪ್ಪತ್ತು ನಾಲ್ವರ್ಗಂ
ನಾನಾ ಜಾತಿವೃತ್ತ ಪದ್ಯಂಗಳಿಂ ಪೇಱಲು ತೊಡಗಿಯಷ್ಟಮ ತೀರ್ಥಕರ ಚಂದ್ರಪ್ರಭ ಸ್ವಾಮಿಗೈದುಸ್ತುತಿಯುಂ ಪೇೞ್ದು
ಭೀಮಲಿಂಗಮನೀಕ್ಷಿಸುವುದುಂ, ಜಿನಶಾಸನದೇವಿಯಿಂದ ಲಿಂಗದೊಳೆ ಮೂಱು ಪುರುಷ ಪ್ರಮಾಣದ ಸುವರ್ಣಮಯ
ಚಂದ್ರಲಾಂಛನಮಪ್ಪರ್ಹದ್ಭಟ್ಟಾರಕಪ್ರತಿಮೆ ಯಕ್ಷಯಕ್ಷೀಪ್ರತಿಮೆಯಿಂದಷ್ಟಮಹಾಪ್ರಾತಿಹಾರ್ಯದೊಡನೆ ಜಾಜ್ವಲ್ಯ-
ಮಾನಮಾಗೆ ಸೂರ್ಯೋದಯಮಾದಂತೆಯುದ್ಭವಿಸಿ ತೋಱುವುದುಂ; ಮುನೀಶ್ವರಂ ಬಾಗಿಲಂ ತೆಱೆದುಱಿದ
ವೀತರಾಗನನುತಿಗೆಯ್ಯುತ್ತೆನಿಂದಿರ್ಪುದುಂ, ಆ ಮಾಹಾತ್ಮ್ಯಕ್ಕೆ ಅತ್ಯಾಶ್ಚರ್ಯಮಾಗೆ ಶಿವಕೋಟಿ ಮಹಾರಾಜಂ
ಭವ್ಯನಪ್ಪುದಱಿಂ ನಿಜಾನುಜಂ ಬೆರಸಾಮುನಿಮುಖ್ಯರ ಶ್ರೀಪಾದಕ್ಕಂ ಪೊಡೆವಟ್ಟಿರ್ಪುದುಂ, ಮಹಾವೀರ ವರ್ಧಮಾನ
ಪರ್ಯಂತಂ ನುತಿಗೆಯ್ದು ಕೈಯೆತ್ತಿಕೊಂಡು ಪರನೆ ಆ ಸದ್ಧರ್ಮ ಸ್ವರೂಪಮಂ ಸವಿಸ್ತರಂ ಕೇಳ್ದು ಸಂಸಾರ ಶರೀರ
ಭೋಗನಿರ್ವೇಗದಿಂ ಶ್ರೀಕಂಠನೆಂಬ ಸುತಂಗೆ ರಾಜ್ಯಮನಿತ್ತು ಶಿವಾಯನಂಗೂಡಿ ಆ ಮುನಿಪರರಲ್ಲಿಯೇ ಜಿನ-
ದೀಕ್ಷೆಯನಾಂತು ಶಿವಕೋಟ್ಯಾಚಾರ್ಯರಾಗಿ ರತ್ನಮಾಲಾದ್ಯನೇಕ ಶಾಸ್ತ್ರಪ್ರವರ್ತಕರಾದರ್ ಆಬಾವಿ ತೀರ್ಥಕರರಪ್ಪ
ಸಮಂತಭದ್ರ ಸ್ವಾಮಿಗಳು ಪುನರ್ದೀಕ್ಷೆಗೊಂಡು ತಪಸ್ಸಾಮರ್ಥ್ಯದಿಂದ ಚತುರಂಗುಲಚಾರಣತ್ವಮಂ ಪಡೆದು
ರತ್ನಕರಂಡಕಾದಿ ಜಿನಾಗಮ ಪುರಾಣಮಂ ಪೇೞ್ದು ಸ್ಯಾದ್ವಾದವಾದಿಗಳಾಗಿ ಸಮಾಧಿ ಪಡೆದರು."

ಇದರಿಂದ ಸಮಂತಭದ್ರರು ಮಣುವಕ ಹಳ್ಳಿಯಲ್ಲಿ ತಪಸ್ಸು ಮಾಡಿದಂತೆ ತಿಳಿಯುತ್ತದೆ. ಕರ್ನಾಟಕ ದೇಶದಲ್ಲಿಯೂ ಕೆಲವು ಕಾಲ ವಾಸಮಾಡಿರಬಹುದಾಗಿದ. ಇವರು ಕನ್ನಡ ಬಾಷೆಯಲ್ಲಿಯೂ ಗ್ರಂಥಗಳನ್ನು ರಚಿಸಿದ್ದರೋ ಇಲ್ಲವೋ ಎಂಬುದೇನೂ ನಿಶ್ಚಯವಾಗಿ ತಿಳಿಯುವದಿಲ್ಲ ಇವರ ಸಂಸ್ಕೃತ ಗ್ರಂಥಗಳಿಗೆ ಹಳಗನ್ನಡ ವ್ಯಾಖ್ಯಾನಗಳು ಮಾತ್ರ ದೊರೆತಿವೆ.

ಇನ್ನು ಸಮಂತಭದ್ರರ ವಿವಿಧ ಮುಖ ಯೋಗ್ಯತೆ ಹಾಗೂ ಪರಿಚಯವನ್ನು ವ್ಯಕ್ತಪಡಿಸುವ ಇನ್ನೊಂದು ಶ್ಲೋಕವು ಇತ್ತೀಚೆಗೆ ಉಪಲಬ್ಧವಾಗಿದೆ. ದಿಲ್ಲಿಯ ಪಂಚಾಯತ ಮಂದಿರದಲ್ಲಿ ಲಭಿಸಿದ "ಸ್ವಯಂಭೂಸ್ತೋತ್ರ"ದ ಹಳೆಯ ಪ್ರತಿಯೊಂದರಲ್ಲಿ ಆ ಶ್ಲೋಕವಿದೆ. ಅದನ್ನು ಶ್ರೀ ಜುಗಲಕಿಶೋರ ಮುಖ್ತಾರರು ಸಂಶೋಧಿಸಿ ಪ್ರಕಟಿಸಿದ್ದಾರೆ ಆ ಪದ್ಯ ಹೀಗಿದೆ—

ಆಚಾರ್ಯೋಽಹಂ ಕವಿರಹಮಹಂ ವಾದಿರಾಟ್ ಪಂಡಿತೋಽಹಂ
ದೈವಜ್ಞೋಽಹಂ ಭಿಷಗಹಮಹಂ ಮಾಂತ್ರಿಕಸ್ತಾಂತ್ರಿಕೋಽಹಂ ।
ರಾಜನ್ನಸ್ಯಾಂ ಜಲಧಿವಲಯಾಮೇಖಲಾಯಾಮಿಲಾಯಾಮ್
ಆಜ್ಞಾಸಿದ್ಧಃ ಕಿಮಿತಿ ಬಹುನಾ ಸಿದ್ಧಸಾರಸ್ವತೋಽಹಂ ॥

ಇದು ಬಹು ಮಹತ್ವದ ಪದ್ಯವಾಗಿದೆ ಇದರಲ್ಲಿ ಸಮಂತಭದ್ರರ ಪರಿಚಯ ವಿಷಯಕ್ಕೆ ಹತ್ತು ವಿಶೇಷಣಗಳನ್ನು ಕೊಡಲಾಗಿದೆ. ಅವು ಹೀಗಿವೆ—(೧) ಆಚಾರ್ಯ, (೨) ಕವಿ, (೩) ವಾದಿರಾಟ್, (೪) ಪಂಡಿತ (ಗಮಕ), (೫) ದೈವಜ್ಞ (ಜ್ಯೋತಿರ್ವಿದ್), (೬) ಭಿಷಕ್ (ವೈದ್ಯ), (೭) ಮಾಂತ್ರಿಕ (ಮಂತ್ರ ವಿಶೇಷಜ್ಞ), (೮) ತಾಂತ್ರಿಕ (ತಂತ್ರ ವಿಶೇಷಜ್ಞ), (೯) ಆಜ್ಞಾಸಿದ್ಧ, (೧೦) ಸಿದ್ಧಸಾರಸ್ವತ ಇಲ್ಲಿ ಹೇಳಿದ ಮೊದಲಿನ ಮೂರು ವಿಶೇಷಣಗಳು—ಆಚಾರ್ಯ, ಕವಿ ಮತ್ತು ವಾದಿರಾಟ್—ಈ ಮೊದಲೇ ಎಲ್ಲರಿಗೂ ಪರಿಚಿತವಾಗಿವೆ ಅನೇಕ ಶಿಲಾಲೇಖಗಳಲ್ಲಿಯೂ ಪೂರ್ವಾಚಾರ್ಯರ ಗ್ರಂಥಗಳಲ್ಲಿಯೂ ಇವುಗಳ ಉಲ್ಲೇಖವಿದೆ. ಇನ್ನು 'ಪಂಡಿತ' ಎನ್ನುವ ವಿಶೇಷಣವು ಇಂದು 'ಕವಿ' ಎಂಬ ವಿಶೇಷಣದಂತೆ ಸಾಮಾನ್ಯವೆಂದು ಕಾಣುತ್ತಿದ್ದರೂ ಆ ಕಾಲಕ್ಕೆ ಅದಕ್ಕೊಂದು ವಿಶೇಷ ಮಹತ್ವವಿತ್ತು ಇಷ್ಟೇ ಅಲ್ಲ, ಅದನ್ನು 'ಗಮಕ' ಶಾಸ್ತ್ರದ ವಿದ್ವಾಂಸರಿಗೆ ಮಾತ್ರ ಕೊಡಲಾಗುತ್ತಿತ್ತು ಇಲ್ಲಿ ಅದು ಅವರ ಗಮಕತ್ವ ಗುಣವನ್ನು ಎತ್ತಿ ಹೇಳುವದಕ್ಕಾಗಿಯೇ ಪ್ರಯೋಗಿಸಲ್ಪಟ್ಟಿದೆ ಇನ್ನುಳಿದ ವಿಶೇಷಣಗಳು ಈ ಪದ್ಯದಿಂದ ಹೊಸದಾಗಿಯೇ ಪ್ರಕಟಗೊಂಡಂತಾಯಿತು ಇವುಗಳಿಂದ ಸಮಂತಭದ್ರರು ಜ್ಯೋತಿಷ, ವೈದ್ಯಕ,

ಮಂತ್ರ ಮತ್ತು ತಂತ್ರ ವಿಷಯಗಳಲ್ಲಿಯೂ ನಿಪುಣರಾಗಿದ್ದರೆಂಬುದು ಗೊತ್ತಾಗುತ್ತದೆ. ಬೇರೆ ಗ್ರಂಥ ಹಾಗೂ ಶಿಲಾಲೇಖಗಳಲ್ಲಿ ಇವರಿಗೆ 'ಸ್ವಮಂತ್ರವಚನ-ವ್ಯಾಹೂತ-ಚಂದ್ರಪ್ರಭಃ' ಎಂದು ವಿಶೇಷಣ ವಾಕ್ಯವನ್ನು ಬಳಸಲಾಗಿದೆ. ಅಲ್ಲದೆ ಇದೇ ರತ್ನಕರಂಡದಲ್ಲಿ ಅಂಗಹೀನ ಸಮ್ಯಗ್ದರ್ಶನದ ಅಶಕ್ತತೆಯನ್ನು ಸೂಚಿಸುವಾಗಲೂ ನ್ಯೂನಾಕ್ಷರ ಮಂತ್ರದ ಅಸಮರ್ಥತೆಯ ಉದಾಹರಣೆಯನ್ನೂ ಸ್ವತಃ ಸಮಂತಭದ್ರರೇ ಕೊಟ್ಟಿದ್ದಾರೆ ಇವೆಲ್ಲವುಗಳನ್ನು ನಿರೀಕ್ಷಿಸಿದರೆ ಇವರು ಮಂತ್ರ ವಿಶೇಜ್ಞರೂ ಮಂತ್ರವಾದಿಗಳೂ ಆಗಿದ್ದರೆಂದು ಕಂಡು ಬರುತ್ತದೆ ಇದಕ್ಕೆ 'ರಾಜಾವಳಿ'ಯೊಳಗಿನ ಕಥೆಯಿಂದಲೂ ಪುಷ್ಟಿಯು ದೊರೆಯುತ್ತದೆ ಇದರಂತೆಯೇ ಒಂಭತ್ತನೆಯ ಶತಕದಲ್ಲಿ ಆಗಿ ಹೋದ ವಿದ್ವಾಂಸನಾದ ಉಗ್ರಾದಿತ್ಯಾಚಾರ್ಯನು ತನ್ನ 'ಕಲ್ಯಾಣಕಾರಕ'ವೆಂಬ ವೈದ್ಯಕ ಗ್ರಂಥದಲ್ಲಿ 'ಅಷ್ಟಾಂಗಮಪ್ಯಖಿಲಮತ್ರ ಸಮಂತಭದ್ರೈಃ ಪ್ರೋಕ್ತಂ ಸವಿಸ್ತರವಚೋವಿಭವೈರ್ವಿಶೇಷಾತ್' ಎಂದು ಮೊದಲಾಗಿ (೨೦-೮೬) ಹೇಳಿದ ಪದ್ಯಗಳಿಂದ ಸಮಂತಭದ್ರರು ಅಷ್ಟಾಂಗ ವೈದ್ಯಕ-ವಿಷಯದಲ್ಲಿಯೂ ಗ್ರಂಥ ರಚಿಸಿದ್ದರೆಂಬುದು ಕಂಡು ಬರುತ್ತದೆ ಇದರಿಂದ ಇವರಿಗೆ 'ಭಿಷಕ್' ಎಂಬ ವಿಶೇಷಣವೂ ಸಯುಕ್ತಿಕವಾಗಿದೆಯೆಂಬುದು ಗೊತ್ತಾಗುತ್ತದೆ ಇನ್ನುಳಿದ 'ಆಜ್ಞಾಸಿದ್ಧ' ಮತ್ತು 'ಸಿದ್ಧಸಾರಸ್ವತ' ಎಂಬ ಕೊನೆಯ ಎರಡು ವಿಶೇಷಣಗಳು ಸ್ವಾಮಿ ಸಮಂತಭದ್ರರ ಅಸಾಧಾರಣ ವ್ಯಕ್ತಿತ್ವವನ್ನು ನಮ್ಮ ಕಣ್ಣೆದುರು ತಂದು ನಿಲ್ಲಿಸುತ್ತವೆ ಸ್ವತಃ ಸಮಂತಭದ್ರರೇ ನುಡಿಯುತ್ತಾರೆ 'ಎಲೈ ರಾಜನೇ! ನಾನು ಈ ಸಮುದ್ರದಿಂದ ಸುತ್ತಲ್ಪಟ್ಟ ಪೃಥ್ವಿಯ ಮೇಲೆ 'ಆಜ್ಞಾಸಿದ್ಧ'ನಾಗಿದ್ದೇನೆ, ಅಂದರೆ ನಾನು ಮಾಡಿದ ಆಜ್ಞೆಯು ನಡೆಯುತ್ತದೆ, ಹಾಗೆಯೇ ಸರಸ್ವತಿಯನ್ನೂ ಸಾಧ್ಯಮಾಡಿಕೊಂಡಿರುವೆ' ಅವರ ಇಂಥ ವಚನ ಸಿದ್ಧಿಯ ಪ್ರತೀಕಗಳು ಅವರ ವಾದ ಪ್ರಸಂಗದೊಳಗಿನ ವಿಜಯಗಳೇ ಆಗಿವೆಯೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ ಇವರ ಅರ್ಹದ್ಭಕ್ತಿ, ಲೋಕಹಿತದ ಭಾವನೆ, ವಿವಿಧ ವಿಷಯಗಳ ಮೇಲಿನ ಪ್ರಭುತ್ವಗಳಿಂದ ಇವರು ಭವಿಷ್ಯತ್ ಕಾಲದಲ್ಲಿ ಆಗುವ ಈ ಭಾರತ ವರ್ಷದ 'ತೀರ್ಥಂಕರ'ರಲ್ಲಿ ಸಮಾವಿಷ್ಟರಾಗುತ್ತಾರೆಂದು ನಂಬಲಾಗಿದೆ ಅದರಂತೆ ಅನೇಕ ಕಡೆಗೆ ಉಲ್ಲೇಖಗಳೂ ದೊರೆಯುತ್ತವೆ [1] ಹಾಗೆಯೇ ಇವರು 'ಚಾರಣಋದ್ಧಿ'ಯನ್ನು ಪಡೆದವರಿದ್ದರೆಂದೂ ಗೊತ್ತಾಗುತ್ತದೆ ಇವರಿಗೆ 'ಸ್ವಾಮೀ'[2] ಎಂಬ ಪದವಂತೂ ಗೌರವ ಸೂಚಕವಾಗಿ ಅರ್ಪಿಸಲಾಗಿದೆ ಇದಂತೂ ಅವರ ಹೆಸರಿನ ಒಂದು ಅಂಗವಾಗಿಯೇ ಹೋಗಿದೆ ಅದರಿಂದ ವಿದ್ಯಾನಂದ, ವಾದಿರಾಜ, ಪಂಡಿತ ಆಶಾಧರರಂಥ ವಿದ್ವಾಂಸರು ಅನೇಕ ಸ್ಥಳಗಳಲ್ಲಿ ಇವರ ಹೆಸರಿನ ಉಲ್ಲೇಖವನ್ನು ಮಾಡುವಾಗ ಕೇವಲ 'ಸ್ವಾಮೀ' ಎಂದಿಷ್ಟೇ ಸಹ ಮಾಡಿದ್ದುಂಟು ನಿಜವಾಗಿಯೂ ಸಮಂತಭದ್ರರು ವಿದ್ವಾಂಸರ ಸ್ವಾಮಿಗಳಾಗಿದ್ದಾರೆ, ತ್ಯಾಗಿಗಳಿಗೂ ತಪಸ್ವಿಗಳಿಗೂ ಸ್ವಾಮಿಗಳಾಗಿದ್ದಾರೆ. ಇಂಥ ಮಹಾನ್ ಆಚಾರ್ಯ ಪುರುಷರು ಕ್ರಿ ಶ ಮೂರನೆಯ ನಾಲ್ಕನೆಯ ಶತಮಾನದಲ್ಲಿ ಜನಿಸಿ ಭರತಖಂಡವನ್ನು ಭೂಷಣ ಗೊಳಿಸಿದ್ದಾರೆ, ಭಾರತದ ಗೌರವವನ್ನು ಹೆಚ್ಚಿಸಿದ್ದಾರೆ ಈಗ ಪ್ರಚಲಿತವಾಗಿರುವ 'ಸರ್ವೋದಯ' ಕಲ್ಪನೆಯ ಮೂಲ ಜನಕರು ಸ್ವಾಮೀ ಸಮಂತಭದ್ರರೇ ಈ ಶಬ್ದದ ಪ್ರಯೋಗವನ್ನು ಅವರು ತಮ್ಮ ಯುಕ್ತ್ಯನು-ಶಾಸನದಲ್ಲಿ ಈ ರೀತಿಯಾಗಿ ಮಾಡಿದ್ದಾರೆ ಸರ್ವ ಪ್ರಾಣಿಗಳ ಹಿತವನ್ನು ಗುರಿಯಿಟ್ಟು ವಿಚಾರ ಮಾಡುವ ಪ್ರಣಾಲಿಯಾದ ಅನೇಕಾಂತ ದೃಷ್ಟಿಯೇ ಸರ್ವೋದಯ ತೀರ್ಥವು

ಸರ್ವಾನ್ತವತ್ತದ್ಗುಣಮುಖ್ಯಕಲ್ಪಂ ಸರ್ವಾನ್ತಶೂನ್ಯಂ ಚ ಮಿಥೋನಪೇಕ್ಷಂ ।
ಸರ್ವಾಪದಾಮನ್ತಕರಂ ನಿರನ್ತಂ ಸರ್ವೋದಯಂ ತೀರ್ಥಮಿದಂ ತವೈವಂ ॥ ೬೨ ॥

ಅದಕ್ಕಾಗಿಯೇ ಶುಭಚಂದ್ರಾಚಾರ್ಯರು ತಮ್ಮ 'ಪಾಂಡವ ಪುರಾಣ'ದಲ್ಲಿ ಸಮಂತಭದ್ರರನ್ನು ಕುರಿತು ಹೀಗೆ ನುಡಿದದ್ದು ಯಥಾರ್ಥವಾಗಿದೆ—

ಸಮಂತಭದ್ರೋ ಭದ್ರಾರ್ಥೋ ಭಾತು ಭಾರತಭೂಷಣಃ ।
ದೇವಾಗಮೇನ ಯೇನಾತ್ರ ವ್ಯಕ್ತೋ ದೇವಾಗಮಃ ಕೃತಃ ॥

---

1 'ಸ್ವಾಮೀ ಸಮಂತಭದ್ರ'—'ಭಾವಿತೀರ್ಥಂಕರತ್ವ' ಪ್ರಕರಣ ಪು ೬೨.
2 'ಸ್ವಾಮೀ ಸಮಂತಭದ್ರ'—'ಗುಣಾದಿಪರಿಚಯ' ಪ್ರಕರಣ ಪು ೩೪.

## ಸಮಂತಭದ್ರರ ಕೃತಿಗಳು

ಸ್ವಾಮೀ ಸಮಂತಭದ್ರಾಚಾರ್ಯರು ಅನೇಕ ಕೃತಿಗಳನ್ನು ರಚಿಸಿ ಭಾರತೀಯ ಸಾಹಿತ್ಯದೇವಿಯನ್ನು ಅಲಂಕರಿಸಿದ್ದಾರೆ ಅವರು ರಚಿಸಿದ ಗ್ರಂಥಗಳಲ್ಲಿ (೧) ಆಪ್ತಮೀಮಾಂಸಾ (ದೇವಾಗಮ), (೨) ಯುಕ್ತ್ಯನುಶಾಸನ (ವೀರಜಿನಸ್ತೋತ್ರ), (೩) ಸ್ವಯಂಭೂಸ್ತೋತ್ರ, (೪) ಜಿನಸ್ತುತಿ—ಶತಕ, (೫) ರತ್ನಕರಂಡಕ-ಶ್ರಾವಕಾಚಾರ, (೬) ಜೀವಸಿದ್ಧಿ, (೭) ತತ್ತ್ವಾನುಶಾಸನ, (೮) ಪ್ರಾಕೃತ ವ್ಯಾಕರಣ, (೯) ಪ್ರಮಾಣ ಪದಾರ್ಥ, (೧೦) ಕರ್ಮ ಪ್ರಾಭೃತ ಟೀಕಾ, (೧೧) ಗಂಧಹಸ್ತಿಮಹಾಭಾಷ್ಯ ಇತ್ಯಾದಿಗಳಾಗಿವೆಯೆಂದು ತಿಳಿಯುತ್ತದೆ. ಇವುಗಳಲ್ಲಿ ಎಲ್ಲ ಗ್ರಂಥಗಳೂ ಇಂದು ಉಪಲಬ್ಧವಿಲ್ಲ ಕೆಲವು ಗ್ರಂಥಗಳು ಮಾತ್ರ ದೊರೆತಿವೆ ಇವುಗಳಲ್ಲಿ 'ಆಪ್ತಮೀಮಾಂಸಾ' ಗ್ರಂಥವು ಇವರು ಭಗವಾನ್ ಉಮಾಸ್ವಾಮಿಕೃತ 'ತತ್ತ್ವಾರ್ಥಸೂತ್ರ'ಕ್ಕೆ ಬರೆದ 'ಗಂಧಹಸ್ತಿಮಹಾಭಾಷ್ಯ' ಎಂಬ ಮಹಾಗ್ರಂಥಕ್ಕೆ ಮಂಗಲಾಚರಣವೆಂದು ರಚಿಸಿದ್ದಾಗಿದೆ. ಇದರಲ್ಲಿ ಆಪ್ತನೆಂದರೆ ಯಾರು?—ಎಂಬುದನ್ನು ಆಚಾರ್ಯರು ಬಹು ಕೌಶಲ್ಯದಿಂದ ನಿರ್ಣಯಿಸಿದ್ದಾರೆ. ಆದರಿಂದಲೇ ಇದಕ್ಕೆ 'ಆಪ್ತಮೀಮಾಂಸಾ' ಎಂದು ಹೆಸರಾಗಿದೆ. ಈ ಗ್ರಂಥದ ಮೊದಲ ಸೂತ್ರದ ಮೊದಲ ಪದವು 'ದೇವಾಗಮ' ಎಂಬುದರಿಂದ 'ದೇವಾಗಮ ಸ್ತೋತ್ರ'ವೆಂದೂ ಇದಕ್ಕೆ ಹೆಸರಾಗಿದೆ. ಇಡೀ 'ಗಂಧಹಸ್ತಿಮಹಾಭಾಷ್ಯ'ವು ೮೪೦೦೦ ಶ್ಲೋಕಗಳ ಬೃಹದ್ ಗ್ರಂಥವೆಂದು ತಿಳಿಯುತ್ತದೆ ಆದರೆ ಅದು ಉಪಲಬ್ಧವಿಲ್ಲ ಇನ್ನು 'ಯುಕ್ತ್ಯನುಶಾಸನ'ವು ವೀರ ಜಿನನ ಸ್ತುತಿಯಾಗಿದೆ. ಇದನ್ನು 'ಆಪ್ತಮೀಮಾಂಸೆ'ಯ ನಂತರವೇ ಆಚಾರ್ಯರು ರಚಿಸಿದಂತೆ ತಿಳಿಯುತ್ತದೆ ಮೊದಲು 'ಸರ್ವಜ್ಞ' ಎಂಬ ಹೆಸರಿಗೆ ತಕ್ಕವನಾದ ಆಪ್ತನ ಲಕ್ಷಣಗಳನ್ನು ಹೇಳಿ, ಅಂಥ ಲಕ್ಷಣಯುಕ್ತ ವೀರಪ್ರಭುವನ್ನು ಇದರಲ್ಲಿ ಸ್ತುತಿಸಿರುವುದು ಕ್ರಮಪ್ರಾಪ್ತವಾಗಿದೆ. ದೇವಾಗಮದ ೧೧೪ ಶ್ಲೋಕಗಳಲ್ಲಿ ಆಪ್ತನ ಲಕ್ಷಣವನ್ನು ತರ್ಕಪೂರ್ಣವಾಗಿ ಚಿತ್ರಿಸಿ, ಈ ಯುಕ್ತ್ಯನುಶಾಸನದ ೬೪ ಸೂತ್ರಗಳಲ್ಲಿ ಭಗವಂತನನ್ನು ಯುಕ್ತಿಯುಕ್ತವಾಗಿ ಸ್ತುತಿಸಿದ್ದಾರೆ. ಭಾರತೀಯ ತತ್ತ್ವಜ್ಞಾನದ ದೃಷ್ಟಿಯಿಂದ ಈ ಗ್ರಂಥಕ್ಕೆ ಬಹಳ ಶ್ರೇಷ್ಠವಾದ ಸ್ಥಾನವಿದೆ ಇದು ಸ್ತುತಿಪರ ಗ್ರಂಥವಾದರೂ ಜೈನ ದಾರ್ಶನಿಕ ವಿಚಾರಗಳನ್ನು ವಿವೇಚಿಸುವ ಕೃತಿಯಾಗಿದೆ. ಇದರಂತೆಯೇ ಸಮಂತಭದ್ರಾಚಾರ್ಯರ ಇನ್ನೆರಡು ಸ್ತೋತ್ರಗ್ರಂಥಗಳೆಂದು ಹೆಸರಾದ "ಸ್ವಯಂಭೂಸ್ತೋತ್ರ", 'ಜಿನಶತಕ'ಗಳೂ ಸಹ ಅಧ್ಯಾತ್ಮ ಗ್ರಂಥಗಳೇ ಆಗಿವೆ. 'ಸ್ವಯಂಭೂಸ್ತೋತ್ರ'ವು ಸಹ ೧೪೩ ಸೂತ್ರಗಳಿಂದ ಕೂಡಿದ ೨೪ ತೀರ್ಥಂಕರರ—ಸ್ವಯಂಭೂರೂಪವನ್ನು ಹೊಂದಿದ ವ್ಯಕ್ತಿಗಳ—ಸ್ತುತಿಯಾಗಿದೆ. ಆದರೆ ಇದರಲ್ಲಿ ಸಮಂತಭದ್ರ ದೃಷ್ಟಿಯಿಂದ—ಅನೇಕಾಂತ ದೃಷ್ಟಿಯಿಂದ—ಸ್ವಯಂಭೂ ಸ್ಥಿತಿಯ ಸ್ವರೂಪವನ್ನು ಆಚಾರ್ಯರು ನಿರ್ಣಯಿಸಿದ್ದಾರೆ ಅಲ್ಲದೆ ಭಾರತೀಯ ಅಧ್ಯಾತ್ಮ ಸಾಧನೆಯಲ್ಲಿ ಭಕ್ತಿ, ಜ್ಞಾನ, ಕರ್ಮಗಳೆಂದು ಹೆಸರಾದ ಅಂಗಗಳನ್ನೆಲ್ಲ ಈ ಗ್ರಂಥದಲ್ಲಿ ಅಳವಡಿಸಿ ವ್ಯಕ್ತಪಡಿಸಿದ್ದಾರೆ ಆದರಿಂದ ಇದೊಂದು ಸಾಧಕರ ಕೈಪಿಡಿಯೆಂದೆ ಜೈನ ವಾಙ್ಮಯದಲ್ಲಿ ಪ್ರಸಿದ್ಧವಾಗಿದೆ. ಹೀಗೆ ಸಮಂತಭದ್ರರ ಪ್ರತಿಯೊಂದು ಗ್ರಂಥವೂ ಸಹ ಒಂದೊಂದು ವೈಶಿಷ್ಟ್ಯಗಳಿಂದ ಕೂಡಿದ ಶ್ರೇಷ್ಠ ಕೃತಿಗಳೇ ಆಗಿವೆ ಇವುಗಳಿಂದ ಭಾರತೀಯ ಅಧ್ಯಾತ್ಮ ವಿದ್ಯೆಯಲ್ಲಿ ಒಂದು ಅಪೂರ್ವ ಮಾರ್ಗವು ಸುವ್ಯಕ್ತವಾಗಿದೆ ಆದರಿಂದ ಸಮಂತಭದ್ರರನ್ನು ಜೈನ ಪರಂಪರೆಯಲ್ಲಿ ಮುಂದಿನ ಕಾಲದ ತೀರ್ಥಂಕರರೆಂದು ಗಣಿಸಲಾಗಿದೆ ಅವರ ಗ್ರಂಥಗಳು ಜನರಿಗೆ ಆ ಸ್ಥಾನವನ್ನು ಒದಗಿಸಿಕೊಟ್ಟಿವೆ

## ಸ್ವಾಮೀ ಸಮಂತಭದ್ರರೂ, ರತ್ನಕರಂಡಕವೂ

ಭಾರತ ಭೂಷಣರಾದಂಥ ಈ ಸ್ವಾಮೀ ಸಮಂತಭದ್ರರು ಮಹಾ ವಿದ್ವಾಂಸರು. 'ದೇವಾಗಮ' (ಆಪ್ತಮೀಮಾಂಸಾ)ದಂಥ ಅದ್ವಿತೀಯ ಹಾಗೂ ಅಪೂರ್ವ ತಾರ್ಕಿಕ ಮತ್ತು ತಾತ್ತ್ವಿಕ ಗ್ರಂಥವನ್ನು ರಚಿಸಿದವರು. ಇಂಥ ಹಿರಿಯ ಆಚಾರ್ಯರು ಈ 'ರತ್ನಕರಂಡ'ವನ್ನು ರಚಿಸಿದರೆಂದು ಕೆಲವರ ಅಭಿಪ್ರಾಯ [illegible] 'ಸಮಂತಭದ್ರ' ಎಂಬ ಹೆಸರಿನ ಇನ್ನೊಬ್ಬ ವಿದ್ವಾಂಸರು ಇದನ್ನು ರಚಿಸಿದರೆಂದೂ, ಇವರಿಂದ ಇದು [illegible] ಅಲ್ಲ—ಎನ್ನುವರು ಆದರೆ ಹೀಗೆ ಹೇಳುವವರ ವಾದಕ್ಕಾಗಲಿ, ಸಿದ್ಧಾಂತಕ್ಕಾಗಲಿ [illegible] ಇಲ್ಲಿಯ ವರೆಗೆ ಮುಂದೆ ಬಂದಿಲ್ಲ. ಆದರೆ ಕೆಲವು ಕಲ್ಪನೆಗಳನ್ನು ಮಾತ್ರ ಕಟ್ಟಲಾಗುತ್ತದೆ [illegible]

ಪರಂಪರೆಯು ಇನ್ನು ಮುಂದಯೂ ನಡೆಯಕೂಡದೆಂದು ಇಲ್ಲಿ ಕೆಲವು ಪ್ರಮಾಣಗಳನ್ನು ಕೊಟ್ಟು 'ರತ್ನಕರಂಡ' ವು ಸ್ವಾಮಿ ಸಮಂತಭದ್ರರ ಕೃತಿಯೇ ಆಗಿದೆಯೆಂಬುದನ್ನು ನಿದರ್ಶನಕ್ಕೆ ತರಲಾಗಿದೆ—

(೧) ಐತಿಹಾಸಿಕ ದೃಷ್ಟಿಯಿಂದ ವಿಚಾರಿಸುವಾಗ 'ಸಮಂತಭದ್ರ' ಎಂಬ ಹೆಸರಿನ ಮತ್ತೆ ಮೂರು ನಾಲ್ಕು ಜನ ವಿದ್ವಾಂಸರು ಆಗಿ ಹೋದುದು ತಿಳಿಯುತ್ತದೆ ಆದರೆ ಇವರಲ್ಲಿ ಯಾರಿಗೂ 'ಸ್ವಾಮಿ' ಎಂಬ ಗೌರವ ಸೂಚಕ ಪದವಿಯು ಇರಲಿಲ್ಲ ಅವರಲ್ಲಿ ಒಬ್ಬರಂತೂ ಲಘು ಸಮಂತಭದ್ರರೆಂದು ಹೆಸರಾಗಿದ್ದಾರೆ ಅವರು 'ಅಷ್ಟಸಹಸ್ರೀ' ಯ ಮೇಲೆ 'ವಿಷಮಪದತಾತ್ಪರ್ಯ ಟೀಕಾ' ಎಂಬ ಹೆಸರಿನ ವೃತ್ತಿಯನ್ನು—ಟಿಪ್ಪಣಿಯನ್ನು—ಬರೆದಿದ್ದಾರೆ ಈ ವಿದ್ವಾಂಸರು ಸ್ವತಃ ತಮಗೆ 'ಲಘು ಸಮಂತಭದ್ರ' ರೆಂದು ಕರೆದು ಕೊಂಡಿದ್ದಾರೆ —

ದೇವಂ ಸ್ವಾಮಿನಮಮಲಂ ವಿದ್ಯಾನಂದಂ ಪ್ರಣಮ್ಯ ನಿಜಭಕ್ತ್ಯಾ ।
ವಿವೃಣೋಮ್ಯಷ್ಟಸಹಸ್ರೀ ವಿಷಮಪದಂ ಲಘು ಸಮಂತಭದ್ರೋಹಮ್ ॥

ಇನ್ನು ಚಿಕ್ಕ ಸಮಂತಭದ್ರ ಎಂಬ ಹೆಸರೊಂದು ಕೇಳುತ್ತದೆ ಆರಾದೊಳಗಿನ ಜೈನಸಿದ್ಧಾಂತ ಭವನದ ಪುಸ್ತಕ ಸೂಚಿಯಲ್ಲಿ 'ಚಿಕ್ಕ ಸಮಂತಭದ್ರ ಸ್ತೋತ್ರ' ಎಂಬ ಗ್ರಂಥದ ಹೆಸರಿದೆ ಆ ಸ್ತೋತ್ರ ಗ್ರಂಥವನ್ನು 'ಜೈನಸಿದ್ಧಾಂತ ಭಾಸ್ಕರ' ದಲ್ಲಿ [1] 'ಒಂದು ಐತಿಹಾಸಿಕ ಸ್ತುತಿ' ಎಂಬ ಹೆಸರಿನಲ್ಲಿ ಪ್ರಕಟಿಸಲಾಗಿದೆ ಆ ಸ್ತೋತ್ರವನ್ನು ರಚಿಸಿದವನಿಗೆ 'ಮಾಘನಂದಿವ್ರತಿ' ಎಂದು ಹೆಸರು ಇದೆ ಈ ಮಾಘನಂದಿವ್ರತಿಗೇ ಚಿಕ್ಕ ಸಮಂತಭದ್ರನೆಂದು ಇನ್ನೊಂದು ಹೆಸರು ಇರಬೇಕು. ಇನ್ನು ಚಿಕ್ಕ ಸಮಂತಭದ್ರ ಮತ್ತು ಲಘು ಸಮಂತಭದ್ರರು ಒಬ್ಬನೇ ವ್ಯಕ್ತಿಯಾಗಿರುವ ಸಂಭವವೂ ಇದೆ ಅವನಿಗೆ ಮಾಘನಂದಿವ್ರತಿ ಎಂದೂ ಹೆಸರು ಇವನು ಆಚಾರ್ಯ ಅಮರ ಕೀರ್ತಿಯ ಶಿಷ್ಯನೂ ಆಗಿದ್ದನು ಇವನ 'ಐತಿಹಾಸಿಕ ಸ್ತುತಿ' ಯ ಆದಿ—ಅಂತಗಳಲ್ಲಿ 'ಅಮರ' ಪದದ ಉಲ್ಲೇಖವೂ ಇದೆ ಈ ವಿದ್ವಾಂಸನು ಕ್ರಿ ಶ ೧೫ ನೆಯ ಶತಮಾನದಲ್ಲಿ ಬಾಳಿದವನಾಗಿದ್ದಾನೆ ಯಾಕಂದರೆ ಮಾಘನಂದಿವ್ರತಿಯ ಶಿಷ್ಯನೂ ಹಾಗೂ ಅಮರಕೀರ್ತಿಯ ಪ್ರಶಿಷ್ಯನೂ ಆದಂಥ ಭೋಗರಾಜನು ಕ್ರಿ ಶ ೧೪೫೯ ರ ಸುಮಾರಿಗೆ ಶಾಂತಿನಾಥ ತೀರ್ಥಂಕರರ ಮೂರ್ತಿಯನ್ನು ಪ್ರತಿಷ್ಠಿಸಿದನು [2] ಆ ಮೂರ್ತಿಯ ಮೇಲೆ ಕೆತ್ತಿದ ಲೇಖನವು ಇದಕ್ಕೆ ಪ್ರಮಾಣವಾಗಿದೆ

ಕಡೂರ ಜಿಲ್ಲೆಯ ಕೊಪ್ಪ ತಾಲೂಕಿನ ಎಡೆಹಳ್ಳಿಯ ಜೈನಬಸ್ತಿಯಲ್ಲಿ ದೊರೆತ ತಾಮ್ರ ಶಾಸನದಲ್ಲಿ 'ಗೇರುಸೊಪ್ಪೆ, ಸಮಂತಭದ್ರ—ದೇವ' ರ [3] ಉಲ್ಲೇಖವಿದೆ ಈ ಗೇರುಸೊಪ್ಪೆಯು ಕನ್ನಡನಾಡಿನೊಳಗಿನ ಒಂದು ಪ್ರಸಿದ್ಧ ಸ್ಥಾನವಾಗಿದೆ ಈ ಸಮಂತಭದ್ರನ ಕಾಲವು ಕ್ರಿ ಶ ೧೫–೧೬ ನೆಯ ಶತಮಾನವಾಗಿದೆ

ಇನ್ನೊಬ್ಬ ಸಮಂತಭದ್ರನ ಉಲ್ಲೇಖವು ಶಿವಮೊಗ್ಗಾ ಜಿಲ್ಲೆಯ ನಾಗರ ತಾಲೂಕಿನ ಶಿಲಾಲೇಖ ನಂ. ೫೫ ರಲ್ಲಿ ಬರುತ್ತದೆ [4] ಈ ಶಿಲಾಲೇಖವು ತುಳು, ಕೊಂಕಣ ಮೊದಲಾದ ಪ್ರಾಂತಗಳ ರಾಜನಾದ ದೇವರಾಯನ ಕಾಲದ್ದಾಗಿದೆ ಅದಕ್ಕಾಗಿ ಮಿ ಲೆವಿಸ ರಾಯಿಸ ಸಾಹೇಬನು ಇದನ್ನು ಕ್ರಿ ಶ ೧೫೬೦ ರಲ್ಲಿ ಬರೆಯಲಾಯಿತೆಂದು ಹೇಳುತ್ತಾನೆ ಇದರಿಂದ ಅಭಿನವ ಸಮಂತಭದ್ರನ ಕಾಲವು ಸಹಜವಾಗಿ ತಿಳಿದು ಬರುವಂತಿದೆ.

ಇನ್ನು ಐದನೆಯವನು ಸಮಂತಭದ್ರ ಭಟ್ಟಾರಕನು ಇವನು 'ಅಭಿನವ ಸೋಮಸೇನ' ಭಟ್ಟಾರಕನ ಪಟ್ಟ ಶಿಷ್ಯನಾದ 'ಜಿನಸೇನ' ಭಟ್ಟಾರಕರ ಪಟ್ಟವನ್ನು ಅಲಂಕರಿಸಿದವನಾಗಿದ್ದಾನೆಂದು ಜೈನಸಿದ್ಧಾಂತಭಾಸ್ಕರದಲ್ಲಿ ಪ್ರಕಟವಾದ ಸೇನ ಸಂಘದ ಪಟ್ಟಾವಲಿಯಿಂದ ತಿಳಿಯುತ್ತದೆ ಈ ಅಭಿನವ ಸೋಮಸೇನನು ಗುಣಭದ್ರ ಭಟ್ಟಾರಕನ ಪಟ್ಟಶಿಷ್ಯನಾಗಿದ್ದನು ಇವನು ರಚಿಸಿದ 'ಧರ್ಮರಸಿಕ' ಎಂಬ ಹೆಸರಿನ 'ತ್ರೈವರ್ಣಿಕಾಚಾರ'ವೆಂಬ ಗ್ರಂಥವೊಂದು ಎಲ್ಲೆಡೆಗೂ ಪ್ರಸಿದ್ಧವಾಗಿದೆ ಈ ತ್ರೈವರ್ಣಿಕಾಚಾರವು ಸುಮಾರು ಕ್ರಿ. ಶ. ೧೬೨೪ ರಲ್ಲಿ ಬರೆದು ಮುಗಿಸಲ್ಪಟ್ಟಿದೆ

---

1 ಭಾಗ ೧, ಕಿರಣ ೪

2 'ಸಾವುದ ಇಂಡಿಯನ್ ಜೈನಿಝಂ' ಭಾಗ ೨, ಪುಟ ೫೬

3 ಕ್ರಿ ಶ ೧೯೦೧ ರಲ್ಲಿ ಪ್ರಕಟವಾದ 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟ ೬, ಕೊಪ್ಪ ತಾಲೂಕಿನ ಲೇಖಗಳು

4 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟ ೮.

ಈ ಗ್ರಂಥ ರಚಿಸಿದ ಅಭಿನವ ನೋಮಸೇನನ ಪ್ರಶಿಷ್ಯನಾದ ಈ ಸಮಂತಭದ್ರ ಭಟ್ಟಾರಕನಂತೂ ಕ್ರಿ. ಶ. ೧೮ ನೆಯ ಶತಮಾನದ ವ್ಯಕ್ತಿಯಾಗಿದ್ದಾನೆ.

ಆರನೆಯ ಸಮಂತಭದ್ರನು ಗೃಹಸ್ಥನಾಗಿದ್ದನು. ಇವನು ಕ್ರಿ ಶ. ೧೮ ನೆಯ ಶತಮಾನದ ವ್ಯಕ್ತಿಯು 'ಪ್ರತಿಷ್ಠಾ ತಿಲಕ'ವನ್ನು ರಚಿಸಿದ ಗೃಹಸ್ಥಾಚಾರ್ಯ ನೇಮಿಚಂದ್ರನ ತಮ್ಮನ ಮಗನಾಗಿದ್ದಾನೆ ಇವನು ಸ್ವಾಮೀ ಸಮಂತಭದ್ರರ ಸಾಹಿತ್ಯ ರಸದ ಪ್ರೇಮಿಯಾಗಿದ್ದನು. ಇವನು 'ಪೂಜಾವಿಧಿ' ಎಂಬ ಗ್ರಂಥವನ್ನು ರಚಿಸಿರಬೇಕೆಂದು ತಿಳಿಯುತ್ತದೆ.

(೨) ರತ್ನಕರಂಡವನ್ನು ರಚಿಸಿದ ಸಮಂತಭದ್ರರಿಗೆ 'ಲಘು', 'ಚಿಕ್ಕ', 'ಗೇರುಸೊಪ್ಪೆ', 'ಅಭಿನವ' ಇಲ್ಲವೆ 'ಭಟ್ಟಾರಕ' ಎಂಬ ಯಾವ ವಿಶೇಷಣವೂ ಇಲ್ಲ ಅಲ್ಲದೆ ಯಾವ ಗ್ರಂಥದಲ್ಲಿಯೂ ಅವರಿಗೆ 'ಮಾಘನಂದಿ' ಎಂಬ ಇನ್ನೊಂದು ಹೆಸರಿನ ಸೂಚನೆಯೂ ಇಲ್ಲ ಮೇಲಾಗಿ 'ರತ್ನಕರಂಡ'ದ ಪ್ರತಿಯೊಂದು ಸಂಧಿಯಲ್ಲಿಯೂ—ಟೀಕಾ ಗ್ರಂಥಗಳಲ್ಲಿಯೂ ಸಹ—'ಸ್ವಾಮೀ' ಎಂಬ ಗೌರವಾರ್ಥದ ಪದವನ್ನು ಪ್ರಯೋಗಿಸಲಾಗಿದೆ. ಈ ಪದವು 'ದೇವಾಗಮ' ಕರ್ತೃವಾದ ಸಮಂತಭದ್ರರಿಗೇನೇ ಅನ್ವಯಿಸುತ್ತದೆ ಅದು ಅವರ ಅಸಾಧಾರಣ ವ್ಯಕ್ತಿತ್ವದ ದ್ಯೋತಕವಾಗಿದೆ. ಇವರನ್ನು ಸ್ಮರಿಸುವಾಗ ದೊಡ್ಡ ದೊಡ್ಡ ಆಚಾರ್ಯರೂ ವಿದ್ವಾಂಸರೂ ಸಹ 'ಸ್ವಾಮೀ' ಎಂಬ ವಿಶೇಷಣದ ಜೊತೆಯಲ್ಲಿಯೇ ಸ್ಮರಣ ಮಾಡಿದ್ದಾರೆ ಬಹಳಷ್ಟು ರೂಢಿಯಿಂದ ಈ ವಿಶೇಷಣವು ಅವರ ಹೆಸರಿನ ಒಂದು ಅಂಗವೇ ಆದಂತಾಗಿದೆ. ಅದರಿಂದ ಕೆಲವು ಜನ ವಿದ್ವಾಂಸರಂತೂ ಇವರನ್ನು ನೆನೆಯುವಾಗ ಕೇವಲ 'ಸ್ವಾಮೀ' ಎಂದಿಷ್ಟೇ ಕೂಡ ನೆನೆಯುವದುಂಟು[1] ಹೀಗಾಗಿ ಸಮಂತಭದ್ರರ ಕೀರ್ತಿಯು 'ಸ್ವಾಮೀ' ಎಂಬ ಹೆಸರಿನಿಂದಲೂ ಸಾಕಷ್ಟು ಪಸರಿಸಿದುದು ಕಂಡು ಬರುತ್ತದೆ. ಇಂಥ ಸಂಗತಿಗಳಿರುವಾಗ 'ರತ್ನಕರಂಡ'ವು ಇನ್ನೊಬ್ಬ ಸಮಂತಭದ್ರರದೆಂದು ಹೇಳಲಿಕ್ಕೆ ಆಗುವದಿಲ್ಲ. ಇದು 'ಆಪ್ತಮೀಮಾಂಸೆ' ಎಂಬ ಹೆಸರಿನ 'ದೇವಾಗಮ'ವನ್ನು ನಿರೂಪಿಸಿದ ಸ್ವಾಮೀ ಸಮಂತಭದ್ರರ ಕೃತಿಯೇ ಆಗಿದೆ

(೩) ಹಿಂದೆ ಉಲ್ಲೇಖಿಸಿದ ದೇವಸೇನನ 'ರಾಜಾವಳೀ' ಕಥೆಯಲ್ಲಂತೂ ಸ್ವಾಮೀ ಸಮಂತಭದ್ರರು "ರತ್ನಕರಂಡಾದಿ ಜಿನಾಗಮ ಪುರಾಣಮಂ ಪೇಳಿ ಸಮಾಧಿ ಪಡೆದರು" ಎಂದು ಸ್ಪಷ್ಟವಾಗಿ ಉಲ್ಲೇಖವೇ ಇದೆ.

(೪) ಕ್ರಿ. ಶ ೧೩-೧೪ ನೆಯ ಶತಮಾನದ ವಿದ್ವಾಂಸರಾದ ಪಂಡಿತ ಆಶಾಧರರು ಅನಗಾರಧರ್ಮಾಮೃತ ಮತ್ತು ಸಾಗಾರಧರ್ಮಾಮೃತಗಳಿಗೆ ತಾವೇ ಟೀಕೆಯನ್ನು ಬರೆಯುತ್ತ 'ಭವ್ಯಕುಮುದಚಂದ್ರಿಕಾ'ದಲ್ಲಿ ಅನೇಕ ಸ್ಥಾನದಲ್ಲಿ ಸ್ವಾಮೀ ಸಮಂತಭದ್ರರ ಪೂರ್ಣ ಹೆಸರನ್ನು ಇಲ್ಲವೆ 'ಸ್ವಾಮೀ' ಎಂಬ ಸಂಕ್ಷಿಪ್ತ ಹೆಸರನ್ನು ಹೇಳಿ, 'ರತ್ನಕರಂಡ' ದ ಹಲವು ಸೂತ್ರಗಳನ್ನು ಉದಾಹರಿಸಿದ್ದಾರೆ. ಇಷ್ಟೇ ಅಲ್ಲ, ಅವರು 'ರತ್ನಕರಂಡ'ವನ್ನು—ಉಪಾಸಕಾಧ್ಯಯನದ ಗ್ರಂಥವಿದು—ಆಗಮ ಗ್ರಂಥವೆಂದು ಪ್ರತಿಪಾದಿಸಿದ್ದಾರೆ. ಮೇಲಾಗಿ ತನ್ನ ಗ್ರಂಥದಲ್ಲಿ ಮೂಢತೆಯನ್ನು ನಿರ್ಣಯಿಸುವಾಗ ಅಮೃತಚಂದ್ರಾಚಾರ್ಯರು ತಮ್ಮ 'ಪುರುಷಾರ್ಥಸಿದ್ಧ್ಯುಪಾಯ'ದಲ್ಲಿ ಸ್ವಾಮೀ ಸಮಂತಭದ್ರರ 'ಭಯಾಶಾಸ್ನೇಹಲೋಭಾಚ್ಚ' ಇತ್ಯಾದಿ ಪದ್ಯಗಳ ಆಧಾರವನ್ನು ಸ್ವೀಕರಿಸಿದ್ದಾರೆಂದು ಸೂಚಿಸಿದ್ದಾರೆ. ಇದರಿಂದ 'ಪುರುಷಾರ್ಥಸಿದ್ಧ್ಯುಪಾಯ'ದಂಥ ಮಾನನೀಯ ಗ್ರಂಥಕ್ಕೂ 'ರತ್ನಕರಂಡ'ವು ಪ್ರಮಾಣ ಗ್ರಂಥವೆನಿಸಿತ್ತೆಂದು ತಿಳಿಯುತ್ತದೆ ಅಲ್ಲದೆ ಈ ಗ್ರಂಥವು ಹೆಚ್ಚು ಪ್ರಾಚೀನವಿದೆಯೆಂಬುದಂತೂ ಸ್ಪಷ್ಟವೇ ಆಗುತ್ತದೆ.

(೫) ಕ್ರಿ ಶ ೧೩ ನೆಯ ಶತಮಾನದ ಆರಂಭದಲ್ಲಿ ಪದ್ಮಪ್ರಭಮಲಧಾರಿ ದೇವನು ಆಗಿದ್ದಾನ ಅವನು 'ನಿಯಮಸಾರ'ದ ಟೀಕೆಯನ್ನು ಬರೆದಿದ್ದಾನೆ. ಅದರಲ್ಲಿ ಅವನು "ತಥಾಚೋಕ್ತಂ ಶ್ರೀ ಸಮಂತಭದ್ರ ಸ್ವಾಮಿಭಿಃ", 'ಉಕ್ತಂ ಚೋಪಾಸಕಾಧ್ಯಯನೇ' ಈ ವಾಕ್ಯಗಳನ್ನು ಹೇಳಿ 'ರತ್ನಕರಂಡ'ದ 'ಅನ್ಯೂನಮನತಿರಿಕ್ತ'

---

[1] 'ಸ್ವಾಮಿನಶ್ಚರಿತಂ ತಸ್ಯ'

—ವಾದಿರಾಜಕೃತ, ಪಾರ್ಶ್ವನಾಥ ಚರಿತ ಪದ್ಯ ೧೭.

'ತದುಕ್ತಂ ಸ್ವಾಮಿಭಿರೇವ'

—ವಿದ್ಯಾನಂದ ಕೃತ, ಅಷ್ಟಸ್ರೀ

'ಸ್ವಾಮ್ಯುಕ್ತಾಷ್ಟಮೂಲಗುಣಪಕ್ಷೇ', 'ಇತೀ ಸ್ವಾಮಿಮತೇನ ದರ್ಶನಿಕೋ ಭವೇತ್' ಇತ್ಯಾದಿ

—ಆಶಾಧರ ಕೃತ ಸಾಗಾರಧರ್ಮಾಮೃತ.

ಮತ್ತು 'ಆಲೋಚ್ಯ ಸರ್ವಮೇನಃ' ಎಂಬ ಹೆಸರಿನ ಎರಡು ಪದ್ಯಗಳನ್ನು ಉಲ್ಲೇಖಿಸಿದ್ದಾನೆ ಅದರಿಂದ ಇಂದಿಗೆ ಎಂಟುನೂರು ವರ್ಷಗಳ ಪೂರ್ವದಲ್ಲಿಯೂ ಸಹ 'ರತ್ನಕರಂಡ'ವು ಸ್ವಾಮೀ ಸಮಂತಭದ್ರರ ಕೃತಿಯೆಂದು ಎಲ್ಲೆಡೆಗೂ ಪ್ರಚಾರದಲ್ಲಿ ಇತ್ತೆಂದು ತಿಳಿಯುತ್ತದೆ.

(೬) ಕ್ರಿಸ್ತ ಹತ್ತನೆಯ ಶತಮಾನದ ಕೃತಿಯಾದ ಚಾವುಂಡರಾಯನ 'ಚಾರಿತ್ರಸಾರ'ದಲ್ಲಿ 'ರತ್ನಕರಂಡ'ದ 'ಸಮ್ಯಗ್ದರ್ಶನ ಶುದ್ಧಾಃ' ಎಂಬಿತ್ಯಾದಿ ಸೂತ್ರಗಳನ್ನು ಉದಹರಿಸಲಾಗಿದೆ ಅಲ್ಲದೆ 'ಚಾರಿತ್ರಸಾರ'ದ ಹಲವೆಡೆಯಲ್ಲಿ 'ರತ್ನಕರಂಡ'ದ ಭಾಷೆ, ಪದ, ಪ್ರಯೋಗಗಳ ಪ್ರಭಾವವನ್ನು ಕಾಣುತ್ತೇವೆ ಅಂಥ ಒಂದೆರಡು ಉದಾಹರಣೆಗಳನ್ನು[1] ಗಮನಿಸುವುದರಿಂದಲೂ ರತ್ನಕರಂಡದ ಶ್ರೇಷ್ಠತೆ ಹಾಗೂ ಪ್ರಾಚೀನತೆಗಳು ಕಂಡು ಬರುತ್ತವೆ. 'ಚಾರಿತ್ರಸಾರ'ವೂ ಸಹ ನಾಲ್ಕಾರು ಮಾನನೀಯ ಗ್ರಂಥಗಳಲ್ಲಿ ಒಂದಾಗಿದೆಯೆಂಬುದನ್ನು ನಾವಿಲ್ಲಿ ಗಮನಿಸಬೇಕು ಇನ್ನು ಪ್ರಾಚೀನ ಕಾಲದ ಆಗಮ ಗ್ರಂಥಗಳನ್ನು ನಿರೀಕ್ಷಿಸುತ್ತ ಸಾಗಿದರೆ ಆರನೆಯ ಶತಮಾನದ ಆಚಾರ್ಯ ಪೂಜ್ಯಪಾದರ 'ಸರ್ವಾರ್ಥಸಿದ್ಧಿ'ಯ ಮೇಲೆಯೂ ಕೂಡ ಸಮಂತಭದ್ರರ ಈ ಗ್ರಂಥದ ಪ್ರಭಾವವನ್ನು ಕಾಣುತ್ತೇವೆ[2] ಸಿದ್ಧಸೇನನು ತನ್ನ 'ನ್ಯಾಯಾವತಾರ'ದಲ್ಲಿಯೂ 'ರತ್ನಕರಂಡ'ದ 'ಆಪ್ತೋಪಜ್ಞ' ಎಂಬ ಪದ್ಯವನ್ನು ಉದ್ಧರಿಸಿದ್ದುಂಟು ಇವೆಲ್ಲವುಗಳಿಂದ 'ರತ್ನಕರಂಡ'ವು ಪ್ರಾಚೀನ ಗ್ರಂಥವೆಂದು ಸ್ಪಷ್ಟವಾಗುತ್ತದೆ

(೭) ವಾದಿರಾಜಸೂರಿ ಎಂಬ ಆಚಾರ್ಯರು ತಮ್ಮ ''ಪಾರ್ಶ್ವನಾಥ ಚರಿತ' ಎಂಬ ಗ್ರಂಥವನ್ನು ಶಕಸಂವತ್ ೯೪೭ರಲ್ಲಿ ಬರೆದು ಮುಗಿಸಿದರು ಅವರು ಆ ಗ್ರಂಥದಲ್ಲಿ ಸಮಂತಭದ್ರರ ವಿಷಯಕ್ಕೆ ಹೇಳುತ್ತ "ಆ ಸ್ವಾಮಿಯ ಚರಿತ್ರವು ಯಾವುದಕ್ಕಾಗಿ ವಿಸ್ಮಯಕಾರಕವಾಗಿಲ್ಲ? ಅವರು ತಮ್ಮ 'ದೇವಾಗಮ' ಎಂಬ ಪ್ರವಚನದಿಂದ ಈ ಕಾಲದಲ್ಲಿಯೂ ಸಹ ಸರ್ವಜ್ಞತ್ವವನ್ನು ಪ್ರದರ್ಶಿಸಿದ್ದಾರೆ ಅದೇ ಯೋಗೀಂದ್ರನೇ—ಸಮಂತಭದ್ರನೇ—ಭವ್ಯ ಜನರಿಗೆ ಅಕ್ಷಯ ಸುಖಕ್ಕೆ ಕಾರಣವಾದ ಧರ್ಮರತ್ನಗಳ ಕರಂಡವೆನಿಸುವಂಥ 'ರತ್ನಕರಂಡ' ಎಂಬ ಹೆಸರಿನ ಧರ್ಮಶಾಸ್ತ್ರವನ್ನು ನೀಡಿದ್ದಾರೆ"[3] —ಎಂದು ಹೇಳಿದ್ದಾರೆ ಇದರಿಂದಂತೂ 'ದೇವಾಗಮ'ವನ್ನು ರಚಿಸಿದ ಸಮಂತಭದ್ರ ಸ್ವಾಮಿಗಳೇ 'ರತ್ನಕರಂಡ'ವನ್ನೂ ನಿರ್ಮಿಸಿದ್ದಾರೆಂಬುದು ಅತ್ಯಂತ ಸ್ಪಷ್ಟವಾಗುತ್ತದೆ ಇನ್ನಾವ ಆಧುನಿಕ ಸಮಂತಭದ್ರನೂ ಇದನ್ನು ರಚಿಸಿಲ್ಲ ಇನ್ನು ಸ್ವತಃ ಗ್ರಂಥದೊಳಗಿನ ಯಾವ ಮಾತೂ ಇಂಥ ಸಂಶಯಕ್ಕೆ ಪುಷ್ಟಿಯನ್ನು ಕೊಡುತ್ತಿಲ್ಲ 'ರತ್ನಕರಂಡ'ವು ವಿಷಯದ ಸರಲತೆ, ಸುಭಗತೆ ಇವುಗಳ ದೃಷ್ಟಿಯಿಂದ ಬಹಳಷ್ಟು ಪ್ರೌಢ, ಗಂಭೀರ, ಉಚ್ಚ ಮತ್ತು ಕ್ರಮಬದ್ಧವಾಗಿದೆ ಇಂಥ ಗ್ರಂಥವನ್ನು ಸ್ವಾಮೀ ಸಮಂತಭದ್ರರ ಕೃತಿಯೆಂದು ಸ್ವೀಕರಿಸುವದರಲ್ಲಿ ಯಾವ ಆತಂಕವೂ ಇಲ್ಲ ಮೇಲಾಗಿ ಈ ಗ್ರಂಥದಲ್ಲಿ ಅವರ ಉಳಿದ ಕೃತಿಗಳಿಗೆ ವಿರುದ್ಧವೆನಿಸುವ ಯಾವ ಅಭಿಪ್ರಾಯಗಳೂ ಸಹ ಕಂಡು ಬರುವದಿಲ್ಲ. ಅಲ್ಲದೆ ಜೈನ ಸಿದ್ಧಾಂತಕ್ಕೆ ಪ್ರತಿಕೂಲ ವಿಷಯ ಸಹ ಯಾವುದೂ ಕಂಡು ಬರುವದಿಲ್ಲ ಇನ್ನಾವ ಕಾರಣದಿಂದಲೂ ಅಷ್ಟು ಪ್ರಾಚೀನ ಕಾಲದಲ್ಲಿಯೇ ಈ ಗ್ರಂಥವನ್ನು

---

[1] ಸಮ್ಯಗ್ದರ್ಶನಶುದ್ಧಃ ಸಂಸಾರಶರೀರಭೋಗನಿರ್ವಿಣ್ಣಃ ।
ಪಂಚಗುರುಚರಣಶರಣೋ ದರ್ಶನಿಕಸ್ತತ್ತ್ವಪಥಗೃಹ್ಯಃ ॥ —ರತ್ನಕರಂಡ

'ದರ್ಶನಿಕಃ ಸಂಸಾರಶರೀರಭೋಗನಿರ್ವಿಣ್ಣಃ ಪಂಚಗುರುಚರಣಭಕ್ತಃ ಸಮ್ಯಗ್ದರ್ಶನಶುದ್ಧಶ್ಚ ಭವತಿ' । —ಚಾರಿತ್ರಸಾರ.

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ ।
ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ॥ —ರತ್ನಕರಂಡ.

'ಉಪಸರ್ಗೇ ದುರ್ಭಿಕ್ಷೇ ಜರಸಿ ನಿಃಪ್ರತೀಕಾರ ರುಜಾಯಾಂ ಧರ್ಮಾರ್ಥಂ ತನುತ್ಯಜನಂ ಸಲ್ಲೇಖನಾ' । —ಚಾರಿತ್ರಸಾರ.

[2] ಶ್ರೀ ಜುಗಲಕಿಶೋರ ಮುಖ್ತಾರರ 'ಸರ್ವಾರ್ಥಸಿದ್ಧಿಪರ ಸಮಂತಭದ್ರಕಾ ಪ್ರಭಾವ' ಲೇಖನ ನೋಡಬಹುದು ('ಅನೇಕಾಂತ' ವರ್ಷ ೫, ಕಿರಣ ೧೦–೧೧, ಪುಟ ೧೦೩–೧೦೪)

[3] 'ಸ್ವಾಮಿನಶ್ಚರಿತಂ ತಸ್ಯ ಕಸ್ಯ ನೋ ವಿಸ್ಮಯಾವಹಂ' ।
ದೇವಾಗಮೇನ ಸರ್ವಜ್ಞೋ ಯೇನಾದ್ಯಾಪಿ ಪ್ರದರ್ಶ್ಯತೇ ॥

* * * * * * * *

ತ್ಯಾಗೀ ಸ ಏವ ಯೋಗೀಂದ್ರೋ ಯೇನಾಕ್ಷಯ್ಯಸುಖಾವಹಂ ।
'ಅರ್ಥಿನೇ ಭವ್ಯಸಾರ್ಥಾಯ ದಿಷ್ಟೋ ರತ್ನಕರಂಡಕಃ' ॥ —ಪಾರ್ಶ್ವನಾಥ ಚರಿತ.

ಯಾರಾದರೂ ರಚಿಸಿ ಸಮಂತಭದ್ರರ ಹೆಸರಿನಿಂದ ಪ್ರಚಾರ ಪಡಿಸಿರಬೇಕೆನ್ನುವ ಅನುಮಾನವೂ ಹುಟ್ಟುವದಿಲ್ಲ ಎಂದಿನಿಂದಲೂ ಅನೇಕ ಆಚಾರ್ಯರೂ ವಿದ್ವಾಂಸರೂ ಈ ಗ್ರಂಥವನ್ನು ಸಮಂತಭದ್ರ ಸ್ವಾಮಿಗಳೇ ರಚಿಸಿರುವರೆಂದು ನಂಬುತ್ತ ಬಂದಿದ್ದಾರೆ. ಹೀಗೆಲ್ಲ ಇರುವದರಿಂದ 'ರತ್ನಕರಂಡ' ವು ಸ್ವಾಮಿ ಸಮಂತಭದ್ರರ ಕೃತಿ ಅಲ್ಲ ಎನ್ನುವುದಕ್ಕೆ ಯಾವ ಅವಕಾಶವೂ ಉಳಿಯುವದಿಲ್ಲ.

## ರತ್ನಕರಂಡ—ಶ್ರಾವಕಾಚಾರ

ಸ್ವಾಮಿ ಸಮಂತಭದ್ರಾಚಾರ್ಯರಿಂದ ನಿರೂಪಿಸಲ್ಪಟ್ಟ ಈ ಗ್ರಂಥದಲ್ಲಿ ಶ್ರಾವಕರ ಆಚಾರಗಳನ್ನು ವಿವರಿಸಲಾಗಿದೆ. ಅದರಿಂದ ಈ ಗ್ರಂಥಕ್ಕೆ 'ಶ್ರಾವಕಾಚಾರ' ಎಂಬ ಹೆಸರು ಸಾರ್ಥಕವಾಗಿದೆ ಇಷ್ಟೇ ಅಲ್ಲ, ಸಂಸ್ಕೃತ ಭಾಷೆಯಲ್ಲಿ ಶ್ರಾವಕಾಚಾರವನ್ನು ವಿವರಿಸುವ ಇನ್ನೊಂದು ಯಾವ ಗ್ರಂಥವೂ—ಇಷ್ಟು ಪ್ರಾಚೀನವೂ ಪರಿಪೂರ್ಣವೂ ಆದದ್ದು—ಇದೂ ವರೆಗೆ ದೊರಕಿಲ್ಲ. ಶ್ರೀ ಕುಂದಕುಂದಾಚಾರ್ಯರ 'ಚಾರಿತ್ರಪಾಹುಡ'ವಾಗಲಿ, ಶ್ರೀ ಉಮಾಸ್ವಾತಿಯವರ 'ತತ್ತ್ವಾರ್ಥಸೂತ್ರ'ವಾಗಲಿ ಶ್ರಾವಕರ ಕೆಲವು ಆಚಾರಗಳನ್ನು ಉಲ್ಲೇಖಿಸುತ್ತವಾದರೂ ವಿವರವನ್ನು ಪೂರೈಸುವದಿಲ್ಲ 'ಚಾರಿತ್ರಪಾಹುಡ'ವು ಸಂಯಮಾಚಾರವನ್ನು ಪ್ರತಿಪಾದಿಸಿ, ಹನ್ನೊಂದು ಪ್ರತಿಮೆ ಹಾಗೂ ಹನ್ನೆರಡು ವ್ರತಗಳ ಹೆಸರುಗಳನ್ನು ಮಾತ್ರ ಉಲ್ಲೇಖಿಸುತ್ತದೆ ಅದರಲ್ಲಿ ಉಳಿದ ವಿವರಣೆಗಳೇನೂ ಇಲ್ಲ 'ತತ್ತ್ವಾರ್ಥ ಸೂತ್ರ'ವು ಮಾತ್ರ ವ್ರತಗಳ ಅತಿಚಾರ ಹೇಳಿ ದಿಗ್ವ್ರತದ ಲಕ್ಷಣ ಹಾಗೂ ಅನರ್ಥದಂಡದ ಭೇದಾದಿಗಳನ್ನು ಹೇಳದೆ ಹೋಗುತ್ತದೆ ಅಹಿಂಸಾದಿಗಳ ಲಕ್ಷಣಗಳನ್ನು ಹೇಳಿದ್ದರೂ ಶ್ರಾವಕರನ್ನು ಗಮನದಲ್ಲಿಟ್ಟುಕೊಂಡು ಹೇಳಲಿಲ್ಲ ಸಲ್ಲೇಖನದ ಸ್ವರೂಪ ಮತ್ತು ವಿಧಿ-ವಿಧಾನಾದಿಗಳನ್ನಂತೂ ಅದರಲ್ಲಿ ವಿವರಿಸಲಿಲ್ಲ ಅದರಿಂದ ಇದೂ ಪೂರ್ಣ ಶ್ರಾವಕಾಚಾರವನ್ನು ಒದಗಿಸುವದಿಲ್ಲ ಇನ್ನು ಪ್ರಸಿದ್ಧವಾಗಿರುವ ಪುರುಷಾರ್ಥಸಿದ್ಧ್ಯುಪಾಯ, ಚಾರಿತ್ರಸಾರ, ಸೋಮದೇವ ಉಪಾಸಕಾಧ್ಯಯನ, ಅಮಿತಗತಿ–ಉಪಾಸಕಾಚಾರ, ವಸುನಂದಿ ಶ್ರಾವಕಾಚಾರ, ಸಾಗಾರ ಧರ್ಮಾಮೃತ, ಲಾಟೀ ಸಂಹಿತಾ ಮೊದಲಾದ ಗ್ರಂಥಗಳು ಇರುತ್ತವೆ ಆದರೆ ಅವೆಲ್ಲವೂ ಈ ಸ್ವಾಮಿ–ಸಮಂತಭದ್ರರ ತರುವಾಯದ ಕಾಲದಲ್ಲಿ ರಚಿತವಾದ ಗ್ರಂಥಗಳಾಗಿವೆ ಅದಕ್ಕಾಗಿ ಉಪಲಬ್ಧ ಜೈನ ಸಾಹಿತ್ಯದಲ್ಲಿ ಇದು ಮೊಟ್ಟ ಮೊದಲಿನ 'ಶ್ರಾವಕಾಚಾರ' ಗ್ರಂಥವಾಗಿದೆ ಇದು ಚಿಕ್ಕದ್ದಾದರೂ ಇದರಲ್ಲಿ ಸಂಗ್ರಹಿಸಿದ ಒಳ್ಳೆಯ ಲಕ್ಷಣಗಳುಳ್ಳ ಧರ್ಮ ರತ್ನಗಳು ಅತ್ಯಂತ ಅಪಮೌಲ್ಯವಾಗಿವೆ ಅದರಿಂದ ಟೀಕಾಕಾರರಾದವರೂ ವಾದಿರಾಜರಂಥ ಆಚಾರ್ಯರೂ 'ಕರಂಡಕ'ವೆಂದು ಇದನ್ನು ಉಲ್ಲೇಖಿಸಿದ್ದಾರೆ ನಿಜವಾಗಿಯೂ ಇದು 'ರತ್ನಕರಂಡ'ವೇ ಆಗಿದೆ. ಸ್ವತಃ ಸಮಂತಭದ್ರರೂ ಸಹ ಇದನ್ನು 'ರತ್ನಕರಂಡ'ವೆಂದು ಸೂಚಿಸಿದ್ದಾರೆ (ಸೂತ್ರ–೧೪೯) ಈ ಗ್ರಂಥವು ಆಕಾರದಲ್ಲಿ ಚಿಕ್ಕದ್ದಾದರೂ ಗುಣದಿಂದ ಬಹಳ ಹಿರಿಯದಾಗಿದೆ ಟೀಕಾಕಾರರಾದ ಪ್ರಭಾಚಂದ್ರಾಚಾರ್ಯರಂತೂ ಅಖಿಲ ಸಾಗಾರಮಾರ್ಗ 'ಗೃಹಸ್ಥಧರ್ಮ'ವನ್ನು ಪ್ರಕಟಗೊಳಿಸುವ ನಿರ್ಮಲ 'ಸೂರ್ಯ'ವೆಂದು ಈ ಗ್ರಂಥವನ್ನು ಕೊಂಡಾಡಿದ್ದಾರೆ. ಅದರಂತೆ ಶ್ರೀ ವಾದಿರಾಜಸೂರಿಯೂ 'ಅಕ್ಷಯ್ಯಸುಖಾವಹ' ವಿಶೇಷಣದ ಜೊತೆಯಲ್ಲಿ ಇದನ್ನೂ ಉಲ್ಲೇಖಿಸಿದ್ದಾನೆ. ಈ ಶ್ರಾವಕಾಚಾರ ಎಂಬ ಹೆಸರಿನ 'ಸಮೀಚೀನ ಧರ್ಮ'ಶಾಸ್ತ್ರವು ಜೀವಿಗಳನ್ನು ಸಂಸಾರದ ದುಃಖದಿಂದ ಮುಕ್ತಗೊಳಿಸಿ ಉತ್ತಮ ಸುಖದಲ್ಲಿ ಸ್ಥಾಪಿಸುವಂಥದ್ದಾಗಿದೆ

ಈ ಗ್ರಂಥದಲ್ಲಿ ಪ್ರತಿಪಾದಿಸಿದ ಧರ್ಮವು ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರರೂಪವಾಗಿದೆ. ಅಲ್ಲದೆ ಇದೇ ಕ್ರಮದಿಂದ ಆರಾಧನೀಯವೂ ಆಗಿದೆ ಇದಕ್ಕೆ ವಿಪರೀತವಾದ ದರ್ಶನಾದಿಗಳ ಸ್ಥಿತಿಯು—ಸಮ್ಯಕ್ ರೂಪವಾಗಿರದೆ ಮಿಥ್ಯಾರೂಪವಾದಂಥವು—ಅಧರ್ಮವೆನಿಸುತ್ತದೆ ಇದೇ ಸಂಸಾರ ಪರಿಭ್ರಮಣಕ್ಕೆ ಕಾರಣವಾಗಿದೆ

ಈ ಶ್ರಾವಕಾಚಾರದ ಮೊದಲನೆಯದೆನಿಸುವ ದರ್ಶನಾಧಿಕಾರದಲ್ಲಿ—ನಲವತ್ತೊಂದು ಸೂತ್ರಗಳಲ್ಲಿ—ಸತ್ಯಾರ್ಥದಲ್ಲಿ ಆಪ್ತ, ಆಗಮ, ತಪೋಭೃತ್ (ಗುರು) ಗಳ ಸ್ವರೂಪವೇನು?–ಎಂಬುದನ್ನು ವಿವರಿಸಿ ಯೋಗ್ಯರಾದವರಲ್ಲಿ ಮೂರು ಮೂಢತೆಗಳಿಲ್ಲದೆಯೂ ಅಷ್ಟಮದ ರಹಿತವಾಗಿಯೂ ಅಷ್ಟಾಂಗ ಸಹಿತವಾಗಿಯೂ ಶ್ರದ್ಧೆಯನ್ನು ಇಡುವದಕ್ಕೆ ಸಮ್ಯಗ್ದರ್ಶನವೆಂದು ಹೇಳಲಾಗಿದೆ. ಇದನ್ನು ಪ್ರತಿಪಾದಿಸುವಾಗ, ಆಪ್ತ–ಆಗಮ–ತಪಸ್ವಿಗಳ ಲಕ್ಷಣ, ಲೋಕ–ದೇವ–ಪಾಖಂಡಿ ಮೂಢತೆಗಳ ಸ್ವರೂಪ, ಜ್ಞಾನಾದಿ ಎಂಟು ಮದಗಳ ಹೆಸರು, ನಿಃಶಂಕಿತವೇ ಮೊದಲಾದ ಎಂಟು ಅಂಗಗಳ ಮಹತ್ವಪೂರ್ಣ ಲಕ್ಷಣಗಳನ್ನು ವಿವರಿಸಿದೆ. ಇದರ ಜೊತೆಗೇನೇ ವೀತರಾಗಿಯಾದ ಭಗವಂತನ ಉಪದೇಶವು ಹೇಗೆ ಹಿತೋಪದೇಶವಾಗುತ್ತದೆ, ಅಂಗಹೀನ ಸಮ್ಯಗ್‌ದರ್ಶನವು ಜನ್ಮಸಂತತಿಯನ್ನು ನಾಶಮಾಡಲಿಕ್ಕೆ ಹೇಗೆ

ಅಸಮರ್ಥವಾಗುತ್ತದೆ, ಅಲ್ಪ ಜ್ಞಾನಿಯಾದವನು ಶ್ರೇಷ್ಠ ಧರ್ಮಾತ್ಮರನ್ನು ಅನಾದರಮಾಡುವುದರಿಂದ ಧರ್ಮಕ್ಕೆ ಹಾನಿಯು ಹೇಗೆ ಒದಗುತ್ತದೆ?—ಇತ್ಯಾದಿ ಸಂಗತಿಗಳ ಸ್ಪಷ್ಟೀಕರಣವೂ ಇದೆ ಅಲ್ಲದೆ ಸಮ್ಯಗ್ದರ್ಶನದ ಮಹಿಮೆಯನ್ನು ವಿಸ್ತಾರವಾಗಿ ವರ್ಣಿಸಲಾಗಿದೆ—(೧) ಸಮ್ಯಗ್ದರ್ಶನಯುಕ್ತ ಚಾಂಡಾಲನನ್ನೂ 'ದೇವ'ನೆಂದು ತಿಳಿಯಲಿಕ್ಕೆ ಬೇಕು (೨) ಶುದ್ಧ ಸಮ್ಯಗ್ದೃಷ್ಟಿ ಜೀವವು ಭಯ, ಆಶಾ, ಸ್ನೇಹ, ಹಾಗೂ ಲೋಭದಿಂದ ಕುದೇವ, ಕುಶಾಸ್ತ್ರ, ಕುಲಿಂಗಿ (ಕುಗುರು) ಗಳಿಗೆ ಪ್ರಣಾಮ ಹಾಗೂ ವಿನಯಗಳನ್ನು ಮಾಡುವದಿಲ್ಲ. (೩) ಜ್ಞಾನ ಮತ್ತು ಚಾರಿತ್ರಗಳಿಗಿಂತಲೂ ಹೆಚ್ಚಾಗಿ ಸಮ್ಯಗ್ದರ್ಶನವು ಮುಖ್ಯವಾಗಿ-ಉಪಾಸನೀಯವಾಗಿದೆ ಇದರ ಹೊರತಾಗಿ ಜ್ಞಾನ ಹಾಗೂ ಚಾರಿತ್ರಗಳ ಉತ್ಪತ್ತಿ, ಸ್ಥಿತಿ, ವೃದ್ಧಿ ಮತ್ತು ಫಲೋದಯಗಳು—ಬೀಜವಿಲ್ಲದೆ ವೃಕ್ಷವು ಹೇಗೆ ಉಂಟಾಗಲಾರದೋ ಹಾಗೆ—ಇರಲಾರವು (೪) ನಿರ್ಮೋಹಿ (ಸಮ್ಯಗ್ದೃಷ್ಟಿ) ಗೃಹಸ್ಥನು ಮೋಕ್ಷಮಾರ್ಗಿ-ಯಾಗಿರುತ್ತಾನೆ ಅದೇ ಮೋಹಿಯಾದ (ಮಿಥ್ಯಾದೃಷ್ಟಿ) ಮುನಿಯು ಮೋಕ್ಷಮಾರ್ಗಿಯಾಗಿರುವದಿಲ್ಲ ಅದರಿಂದ ಮೋಹೀಮುನಿಗಿಂತಲೂ ನಿರ್ಮೋಹಿಯಾದ ಗೃಹಸ್ಥನು ಶ್ರೇಷ್ಠನಾಗಿದ್ದಾನೆ (೫) ಸಮ್ಯಗ್ದರ್ಶನದಿಂದ ಶುದ್ಧವಾದ ಜೀವವು ಅವ್ರತಿಯಾಗಿದ್ದರೂ ಸಹ, ನಾರಕ, ತಿರ್ಯಂಚ, ನಪುಂಸಕ ಮತ್ತು ಸ್ತ್ರೀ ಪರ್ಯಾಯಗಳನ್ನು ಧಾರಣ ಮಾಡುವದಿಲ್ಲ, ದುಷ್ಕುಲದಲ್ಲಿಯೂ ಜನ್ಮ ತಕ್ಕೊಳ್ಳುವದಿಲ್ಲ. ವಿಕೃತಾಂಗ-ಅಲ್ಪಾಯು ಆಗುವದಿಲ್ಲ, ದಾರಿದ್ರ್ಯವನ್ನೂ ಹೊಂದುವದಿಲ್ಲ

ಎರಡನೆಯದಾದ ಜ್ಞಾನಾಧಿಕಾರದಲ್ಲಿ (೪೨ರಿಂದ ೪೬ ಸೂತ್ರ ಪೂರ್ಣ ಐದು ಸೂತ್ರಗಳಲ್ಲಿ) ಸಮ್ಯಗ್-ಜ್ಞಾನದ ಲಕ್ಷಣವನ್ನು ಹೇಳಿ, ಅದರ ವಿಷಯವೆನಿಸುವ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗದ ಸಾಮಾನ್ಯ ಸ್ವರೂಪವನ್ನು ಕೊಡಲಾಗಿದೆ.

ಮೂರನೆಯದಾದ ಚಾರಿತ್ರಾಧಿಕಾರದಲ್ಲಿ (೪೭ರಿಂದ ೧೨೧ ಸೂತ್ರಗಳ ವರೆಗೆ ಎಪ್ಪತ್ತೈದು ಸೂತ್ರಗಳಲ್ಲಿ) ಸಮ್ಯಕ್‌ಚಾರಿತ್ರದ ಸ್ವರೂಪವನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ ಸಮ್ಯಕ್‌ಚಾರಿತ್ರವನ್ನು ಧಾರಣಮಾಡುವುದಕ್ಕೆ ಬೇಕಾಗುವ ಪಾತ್ರತೆ ಮತ್ತು ಆವಶ್ಯಕತೆಗಳನ್ನು ವರ್ಣಿಸುತ್ತ ಹಿಂಸೆ, ಅಸತ್ಯ, ಚೌರ್ಯ, ಮೈಥುನ, ಸೇವೆ ಮತ್ತು ಪರಿಗ್ರಹರೂಪ ಪಾಪ ಪ್ರಣಾಲಿಗಳನ್ನು ತ್ಯಜಿಸಬೇಕೆಂದು ಹೇಳಲಾಗಿದೆ. ಅದರಲ್ಲಿಯೂ ಚಾರಿತ್ರದಲ್ಲಿ 'ಸಕಲ' ಮತ್ತು 'ವಿಕಲ'ಗಳೆಂದು ಎರಡು ಭಾಗಗಳನ್ನು ಮಾಡಿ, ಸಕಲಚಾರಿತ್ರವು ಮುನಿಗಳಿಗೆ ಸಾಧ್ಯವೆಂದೂ ವಿಕಲ ಚಾರಿತ್ರವು ಪರಿಗ್ರಹ ಧಾರಣ ಮಾಡುವ ಗೃಹಸ್ಥನಿಗೆ ಆಚರಣೀಯವೆಂದೂ ಸೂಚಿಸಿದೆ ಆ ಮೇಲೆ ಗೃಹಸ್ಥನ ವಿಕಲ ಚಾರಿತ್ರದಲ್ಲಿ ಹನ್ನೆರಡು ಭೇದಗಳನ್ನು ಮಾಡಲಾಗಿದೆ ಇವುಗಳಲ್ಲಿ ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತಗಳು ಸಮಾವೇಶಗೊಳ್ಳುತ್ತವೆ. ಇವುಗಳ ತರುವಾಯ ಹಿಂಸೆ, ಅಸತ್ಯ, ಚೌರ್ಯ, ಕಾಮಸೇವನೆ, ಪರಿಗ್ರಹಗಳೆಂಬ ಐದು ಪಾಪಗಳನ್ನು ಸ್ಥೂಲ ರೂಪದಿಂದ ತ್ಯಾಗ ಮಾಡುವದಕ್ಕೆ 'ಅಣುವ್ರತ'ವೆಂದು ಹೇಳಲಾಗಿದೆ ಈ ಅಣುವ್ರತಗಳ ಸ್ವರೂಪ ಅವುಗಳ ಐದೈದು ಅತಿಚಾರಗಳ ಸಹಿತ ವರ್ಣಿಸಲಾಗಿದೆ. ಮೇಲಾಗಿ ಮದ್ಯ, ಮಾಂಸ, ಮಧುಗಳ ತ್ಯಾಗ ಸಹಿತ ಪಂಚಾಣುವ್ರತಗಳು ಗೃಹಸ್ಥನ 'ಅಷ್ಟ ಮೂಲಗುಣ' ಗಳೆಂದು ಸೂಚಿಸಲಾಗಿದೆ. ಹಾಗೆಯೇ ಮುಂದರಿದು ದಿಗ್ವ್ರತ, ಅನರ್ಥದಂಡ ವ್ರತ ಮತ್ತು ಭೋಗೋಪಭೋಗ ಪರಿಮಾಣಗಳೆಂಬ ಮೂರು ಗುಣವ್ರತಗಳನ್ನು ಅವುಗಳ ಐದೈದು ಅತಿಚಾರಗಳ ಸಹಿತ ವಿವರಿಸಿದೆ ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯಾ ಎಂದು ಅನರ್ಥದಂಡದ ಐದು ಭೇದಗಳನ್ನೂ ವರ್ಣಿಸಲಾಗಿದೆ ತರುವಾಯ ಭೋಗೋಪಭೋಗಗಳ ವ್ಯಾಖ್ಯೆಯನ್ನು ಮಾಡಿ ಕೆಲವೊಂದು ವಿಶೇಷ ತ್ಯಾಗದ ವಿಧಾನವನ್ನೂ ವ್ರತದ ಲಕ್ಷಣ ಮತ್ತು ಯಮ ನಿಯಮಗಳ ಸ್ವರೂಪವನ್ನೂ ಕೊಡಲಾಗಿದೆ ಆ ಮೇಲೆ ದೇಶಾವಕಾಶಿಕ, ಸಾಮಾಯಿಕ, ಪ್ರೋಷಧೋಪವಾಸ ಮತ್ತು ವೈಯ್ಯಾವೃತ್ಯವೆಂಬ ಹೆಸರಿನ ನಾಲ್ಕು ಶಿಕ್ಷಾವ್ರತಗಳನ್ನು ಅವುಗಳ ಐದೈದು ಅತಿಚಾರಗಳ ಸಹಿತ ವರ್ಣನೆಯನ್ನು ಮಾಡಿದೆ ಸಾಮಾಯಿಕ ಮತ್ತು ಪ್ರೋಷಧೋಪವಾಸಗಳನ್ನು ಹೇಳುವಾಗ ಕೆಲವು ವಿಶೇಷ ಕರ್ತವ್ಯಗಳನ್ನೂ ಉಲ್ಲೇಖಿಸಲಾಗಿದೆ ಸಾಮಾಯಿಕದ ಸಮಯದಲ್ಲಿ ಗೃಹಸ್ಥನು 'ಚೇಲೋಪಸೃಷ್ಟಮುನಿ' ಎನಿಸುವನೆಂದು ಹೇಳಿದೆ. ವೈಯ್ಯಾವೃತ್ಯದಲ್ಲಿ ಸಂಯಮಿಗೆ ದಾನ ಕೊಡುವುದೂ ದೇವಾಧಿದೇವನ ಪೂಜೆಯನ್ನು ಮಾಡುವುದೂ ಸೇರಿಹೋಗಿದೆ ದಾನದಲ್ಲಿ ಆಹಾರ, ಔಷಧ, ಉಪಕರಣ, ವಾಸಸ್ಥಾನಗಳೆಂದು ನಾಲ್ಕು ಭೇದಗಳನ್ನು ಮಾಡಲಾಗಿದೆ,

ಇನ್ನು ಕೊನೆಯ ಅಧಿಕಾರದ ೨೯ ಸೂತ್ರಗಳಲ್ಲಿ (೧೨೨ ರಿಂದ ೧೫೦) ಸಲ್ಲೇಖನಾ ವ್ರತವನ್ನು (ಸಮಾಧಿ ಮರಣ) ಹೇಗೆ ಆಚರಿಸಬೇಕೆಂಬುದನ್ನು ಹೇಳಿ, ಅದರ ಸ್ವರೂಪ ಹಾಗೂ ಆವಶ್ಯಕತೆಗಳನ್ನು ವಿವರಿಸಿದೆ. ಧರ್ಮದ ಫಲವನ್ನು ವಿವರಿಸುತ್ತ ನಿಃಶ್ರೇಯಸ ಹಾಗೂ ಅಭ್ಯುದಯ ಸುಖಗಳನ್ನೂ ಅವುಗಳ ಸ್ವರೂಪವನ್ನೂ ಸ್ವಲ್ಪದರಲ್ಲಿ ಹೇಳಲಾಗಿದೆ ಮುಂದೆ ಶ್ರಾವಕರ ಹನ್ನೊಂದು ಪದಗಳನ್ನು ನಿರ್ದೇಶಿಸಲಾಗಿದೆ ಅವುಗಳಿಗೆ 'ಪ್ರತಿಮಾ' ಎಂದೂ ಹೆಸರು ಇವುಗಳಲ್ಲಿ ಉತ್ತರೋತ್ತರ ಪ್ರತಿಮೆಗಳು ಪೂರ್ವವರ್ತಿ ಪ್ರತಿಮೆಗಳ ಸಮಗ್ರ ಗುಣಗಳನ್ನು ಹೊಂದಿಯೇ ಪ್ರಾಪ್ತವಾಗುತ್ತವೆಂದು ಸೂಚಿಸಲಾಗಿದೆ ಈ ಪ್ರಕಾರ ಕ್ರಮದಿಂದ ವಿಶುದ್ಧಿಯನ್ನು ಹೊಂದಲಾಗುತ್ತದೆ ಈ ಪ್ರತಿಮೆಗಳಲ್ಲಿ ಆರನೆಯದು 'ರಾತ್ರಿಭೋಜನ ತ್ಯಾಗ' ಎಂಬುದಾಗಿದೆ.

ಈ ಪ್ರಕಾರ ಈ ಶಾಸ್ತ್ರದಲ್ಲಿ ಶ್ರಾವಕರು ಆಚರಿಸಲಿಕ್ಕೆ ಯೋಗ್ಯವಾದ ಧರ್ಮದ ವರ್ಣನೆಯು ಇದೆ. ಅದು ಬಹಳ ಹೃದಯಸ್ಪರ್ಶಿಯೂ ಸಮೀಚೀನವೂ ಸುಖದಾಯಕವೂ ಪ್ರಾಮಾಣಿಕವೂ ಆಗಿದೆ. ಅದಕ್ಕಾಗಿ ಪ್ರತಿಯೊಬ್ಬ ಸ್ತ್ರೀ ಪುರುಷರು ಇದರ ಮನನವನ್ನೂ ಅಧ್ಯಯನವನ್ನೂ ಅವಶ್ಯವಾಗಿ ಮಾಡಲಿಕ್ಕೆ ಬೇಕು ಅದಕ್ಕನುಸರಿಸಿ ಆಚರಣೆಯನ್ನೂ ಇಟ್ಟುಕೊಂಡ ಜೀವಗಳ ಕಲ್ಯಾಣವಾಗುವುದರಲ್ಲಿ ಸಂದೇಹವಿಲ್ಲ ಅದರೊಡನೆ ಅಂಥ ಆತ್ಮಗಳ ಉನ್ನತಿ ಹಾಗೂ ಸ್ವಯಂಪೂರ್ಣತೆಗಳೂ ಸಿದ್ಧಿಸುತ್ತವೆ ಈ ಗ್ರಂಥದ ಭಾಷೆಯೂ ಸಹ ಮಧುರ, ಪ್ರೌಢ ಹಾಗೂ ಅರ್ಥ ಗೌರವದಿಂದ ಕೂಡಿದ್ದಾಗಿದೆ. ನಿಜವಾಗಿಯೂ ಇದು ಧರ್ಮ ಗ್ರಂಥಗಳ ಒಂದು 'ರತ್ನಕರಂಡ' ವೇ ಆಗಿದೆ

## ಆಯತವರ್ಮನ ಕನ್ನಡ ರತ್ನಕರಂಡಕ

ಆಯತವರ್ಮನ ರತ್ನಕರಂಡಕವು ಸ್ವಾಮೀ ಸಮಂತಭದ್ರರ ರತ್ನಕರಂಡದ ಕೇವಲ ಕನ್ನಡ ಅನುವಾದ ಗ್ರಂಥವಲ್ಲ, ಟೀಕಾಗ್ರಂಥವಂತೂ ಅಲ್ಲವೇ ಅಲ್ಲ. ಇದು ಸಮಂತಭದ್ರರ ಮೂಲ ಕೃತಿಯನ್ನು ಅನುಸರಿಸಿ ಕನ್ನಡದಲ್ಲಿ ಬರೆದ ಗ್ರಂಥವಾಗಿದೆ ಜೈನ ಕವಿಯಾದ ಈ ಆಯತವರ್ಮನು ಸುಮಾರು ಕ್ರಿ ಶ ೧೪೦೦ ರಲ್ಲಿ ಇದ್ದನೆಂದು ತಿಳಿಯುತ್ತದೆ [1] ಇವನು ವರ್ಧಮಾನ ಸಿದ್ಧಾಂತದೇವನ ಶಿಷ್ಯನು ಇದಕ್ಕಿಂತ ಹೆಚ್ಚಾಗಿ ಇವನ ಗ್ರಂಥದಿಂದ ಇನ್ನಾವ ಸಂಗತಿಯೂ ತಿಳಿದು ಬರುವದಿಲ್ಲ ಇವನ ಕಾಲವನ್ನು ನಿಶ್ಚಯಿಸಲಿಕ್ಕೂ ಸಹ ಸರಿಯಾದ ಆಧಾರಗಳಿಲ್ಲ ಇನ್ನು ನಮಗೆ ದೊರೆತ ಕನ್ನಡ ರತ್ನಕರಂಡಕವು ಚಂಪೂ ಗ್ರಂಥವಾಗಿದೆ. ಇದರಲ್ಲಿ ಸಮ್ಯಗ್ದರ್ಶನ ಸ್ವರೂಪ ನಿರೂಪಣ, ಸಮ್ಯಗ್‌ಜ್ಞಾನ ಸ್ವರೂಪ ನಿರೂಪಣ, ಸಮ್ಯಕ್‌ಚಾರಿತ್ರ ಸ್ವರೂಪ ನಿರೂಪಣ ಎಂದು ಮೂರು ಪರಿಚ್ಛೇದಗಳಿವೆ ಗ್ರಂಥಾವತಾರದಲ್ಲಿ ಚತುರ್ವಿಂಶತಿ ಜಿನಸ್ತುತಿಯಿದೆ ಗ್ರಂಥಾಂತ್ಯದ ಗದ್ಯವು ಹೀಗಿದೆ—"ಇದು ಭಗವದರ್ಹತ್ಪರಮೇಶ್ವರ ಪರಮಭಟ್ಟಾರಕ ವೀತರಾಗ ಸರ್ವಜ್ಞ ವದನ ವನಜ ಸಮುದ್ಗತ ಸದಸದಾತ್ಮಕ ಪರಮತತ್ತ್ವ ಭಾವನಾಭಾವಿತಸ್ವಾಂತ ಶ್ರೀವರ್ಧಮಾನ ಸಿದ್ಧಾಂತದೇವ ಚರಣ ಸರಸೀರುಹ ಸ್ಮರಣ ಪರಿಣತಾಂತಃಕರಣ ಕುಶೇಶಯ ಶ್ರೀಮದಾಯತವರ್ಮ ವಿರಚಿತಮಪ್ಪ ರತ್ನಕರಂಡಕದೊಳ್". ಇದರಿಂದಲೂ ಹೆಚ್ಚಿನ ವಿಷಯಗಳೇನೂ ತಿಳಿಯುವದಿಲ್ಲ. ಈಗ ಲಭಿಸಿದ ಗ್ರಂಥವು ಅಸಮಗ್ರವಾಗಿದೆ ಈ ಪ್ರತಿಯಲ್ಲಿ ಅಲ್ಲಲ್ಲಿ ಪದ್ಯ, ವಾಕ್ಯಗಳು ಹೋಗಿವೆ ಬೇರೊಂದು ಪ್ರತಿಯು ಸಿಗುವ ವರೆಗೆ ಇದನ್ನು ಪೂರ್ಣಗೊಳಿಸಿ ಶುದ್ಧರೂಪದಲ್ಲಿ ಪ್ರಕಟಗೊಳಿಸುವುದು ಸಾಧ್ಯವಿಲ್ಲ. ಆದರಿಂದ ಇದ್ದುದನ್ನೇ ನಮಗೆ ಶಕ್ಯವಿದ್ದಷ್ಟು ಸರಿಗೊಳಿಸಿ ಈ ಗ್ರಂಥದಲ್ಲಿ ಅಡಿ ಟಿಪ್ಪಣಿಯ ರೂಪದಲ್ಲಿ ಕೊಡಲಾಗಿದೆ. ಹೀಗೆ ಮಾಡುವಾಗ ಸಮಂತಭದ್ರರ ಮೂಲ ಸೂತ್ರಗಳಿಗೆ ಅನ್ವಯಿಸುವಷ್ಟಷ್ಟೇ ಭಾಗಗಳನ್ನಾಗಿ ವಿಭಾಗಿಸಿಕೊಂಡು ಆಯಾ ಸೂತ್ರಗಳಿಗೆ ಅಡಿ ಟಿಪ್ಪಣಿಯೆಂದು ಸೇರಿಸಲಾಗಿದೆ ಇದರಿಂದ ಆಯತವರ್ಮನ ಕೃತಿಯನ್ನು ಸಮಂತಭದ್ರರ ಕೃತಿಯೊಡನೆ ತುಲನಾತ್ಮಕವಾಗಿ ಅಭ್ಯಾಸ ಮಾಡಲಿಕ್ಕೆ ಅಭ್ಯಾಸುಗಳಿಗೆ ಅನುಕೂಲವಾಗುವದೆಂದು ನಂಬಿದ್ದೇವೆ ಈ ಆಯತವರ್ಮನ ಕೃತಿಯು ಇದೇ ಮೊದಲ ಸಲ ಒಂದೇ ಪ್ರತಿಯ ಆಧಾರದಿಂದ ಪ್ರಕಟವಾಗುತ್ತಿರುವುದರಿಂದ ಅನೇಕ ಕೊರತೆಗಳು ಇಲ್ಲಿ ಉಳಿಯುವುದು ಸ್ವಾಭಾವಿಕವಾಗಿದೆ. ಗ್ರಂಥ ಸಂಶೋಧನೆಗೆ ಬೇಕಾಗುವ ಬೇರೆ ಪ್ರತಿಗಳಾಗಲಿ, ಇತರ ಸಾಧನಗಳಾಗಲಿ ಉಪಲಬ್ಧವಾಗುವ ವರೆಗೆ ಇಷ್ಟರಿಂದಲೇ ನಾವು ಸಮಾಧಾನವನ್ನು

---

[1] ಕವಿಚರಿತ್ರೆ, ಭಾಗ ೧; ಪುಟ ೪೪೦,

ಹೊಂದಬೇಕಾಗಿದೆ. ಆದರೆ ಮುಂದೆ ಅಭ್ಯಾಸ ಮಾಡುವ ಅಪೇಕ್ಷೆಯುಳ್ಳವರಿಗೆ ಇದೊಂದು ಸಾಧನವಾದೀತೆಂದು ಭಾವಿಸಿದ್ದೇವೆ. ನಮ್ಮಿಂದ ಇವರಲ್ಲಿ ಏನಾದರೂ ದೋಷಗಳು ಉಳಿದಿದ್ದರೆ ವಿದ್ವಾಂಸರು ಅವುಗಳನ್ನು ತೋರಿಸಬೇಕು. ಮುಂದಿನ ಆವೃತ್ತಿಯಲ್ಲಿ ನಾವು ಸಾಭಾರ ಸುಧಾರಣೆ ಮಾಡುವೆವು.

## ಪಂಡಿತ ಸದಾಸುಖರೂ, ಅವರ ಹಿಂದೀ ವಚನಿಕೆಯೂ

ರತ್ನಕರಂಡ-ಶ್ರಾವಕಾಚಾರವನ್ನು ಕುರಿತು ಪಂ. ಸದಾಸುಖರು ರಚಿಸಿದ ವಚನಿಕೆಯು ಉತ್ತರ-ದಕ್ಷಿಣ ಭಾರತದಲ್ಲೆಲ್ಲ ಬಹು ಪ್ರಚಾರದಲ್ಲಿದೆ. ಸಾಮಾನ್ಯ ತಿಳುವಳಿಕೆಯ ಶ್ರಾವಕರಿಗೆ ಇದು ಸ್ವಾಧ್ಯಾಯಕ್ಕೆ ತೀರ ಉಪಯುಕ್ತವಾದ ಗ್ರಂಥವಾಗಿದೆ. ಪಂ. ಸದಾಸುಖರು ಜಯಪುರ ನಿವಾಸಿಗಳು. ಇವರು ಕ್ರಿ. ಶ. ೧೭೯೫ರಲ್ಲಿ ಜನಿಸಿದರು. ಇವರ ತಂದೆ ಶ್ರೀ ದುಲೀಚಂದ ಕಾಶಲೀವಾಲ ಎಂಬವರು. ಇವರ ಮನೆತನವು 'ಡೆಡಾಕಾ' ರಾಜವಂಶಕ್ಕೆ ಸೇರಿದುದರಿಂದ 'ಡೆಡಾಕಾ' ಮನೆತನದವರೆಂದೂ ಇವರನ್ನು ಜನರು ಗುರುತಿಸುತ್ತಾರೆ.[1] ಜಯಪುರದೊಳಗಿನ ಇತರ ಮನೆ ಹಾಗೂ ಚೈತ್ಯಾಲಯಗಳನ್ನು ಇಂದು ಕಂಡರೂ ಸಹ ಆ ಮನೆತನದ ಸಂಪನ್ನಸ್ಥಿತಿ ಹಾಗೂ ಧರ್ಮಪ್ರೇಮಗಳ ಕಲ್ಪನೆಯು ಸಹಜ ಬರುವಂತಿದೆ. ಇಂಥ ಧರ್ಮಪ್ರೇಮಿ ಮನೆತನದಲ್ಲಿ ಜನಿಸಿದುದರಿಂದ ಚಿಕ್ಕಂದಿನಿಂದಲೂ ಸದಾಸುಖರ ಒಲವು ಜೈನ ಶಾಸ್ತ್ರಗಳ ಅಭ್ಯಾಸ, ಮನನಗಳ ಕಡೆಗೆ ಇತ್ತು. ಅಂತಲೇ ಇವರ ಮುಂದಿನ ಆಯುಷ್ಯವೆಲ್ಲ ಜಿನವಾಣಿಯ ಸೇವೆಯಲ್ಲಿಯೇ ಸವೆಯಿತು.[2] ಇವರ ಶಾಸ್ತ್ರಾಭ್ಯಾಸವೆಲ್ಲ ಸ್ವರ್ಗೀಯ ಪಂ. ಮನ್ನಾಲಾಲ ಸಾಂಗಾ ಇವರ ಹತ್ತರ ಆಯಿತು. ಅದರಿಂದ ಇವರ ಬರವಣಿಗೆಯಲ್ಲೆಲ್ಲ ಪಂ. ಮನ್ನಾಲಾಲ ಹಾಗೂ ಮನ್ನಾಲಾಲರ ಗುರು ಪಂ. ಜಯಚಂದ ಛಾವಡಾ ಇವರ ಪ್ರಭಾವವು ಕಂಡು ಬರುತ್ತದೆ. ಸದಾಸುಖರ ತಂದೆ-ಅಜ್ಜಂದಿರು 'ವೀಸಪಂಥ'ದ ಆಮ್ನಾಯಕ್ಕೆ ಸೇರಿದವರು. ಆದರೆ ಇವರು ಮಾತ್ರ 'ತೇರಾಪಂಥ'ದ ಅನುಯಾಯಿಗಳಾದರು. ಅದರ ಪ್ರಭಾವವು ರತ್ನಕರಂಡ-ಶ್ರಾವಕಾಚಾರದ ವಚನಿಕೆಯಲ್ಲಿ ಕಂಡು ಬರುತ್ತದೆ. ಅಲ್ಲದೆ ಅಲ್ಲಲ್ಲಿ ಅವರು ತಮ್ಮ ವಿಚಾರಗಳನ್ನೂ ಸ್ಪಷ್ಟಗೊಳಿಸಿದ್ದಾರೆ.

ಪಂ. ಸದಾಸುಖರು ಮನೆಯನ್ನು ತ್ಯಾಗ ಮಾಡಿದ ಸನ್ಯಾಸಿಗಳೇನಲ್ಲ. ಅವರು ಗೃಹಸ್ಥರಾದ ಒಳ್ಳೆಯ ಶ್ರಾವಕರು. ಆದರೂ ತ್ಯಾಗಿಗಳಂತೆ ಅವರ ಜೀವನವಿತ್ತು. ಜೈನಾಗಮದ ಯಥಾರ್ಥ ತಿಳುವಳಿಕೆಯಿಂದ ಅವರಿಗೊಂದು ಆತ್ಮಿಕ ಆನಂದವಿತ್ತು. ತಿಂಗಳಿಗೆ ತಮಗೆ ಬರುವ ಹತ್ತು ರೂಪಾಯಿಗಳಲ್ಲಿಯೇ ಜೀವನವನ್ನು ಒಳ್ಳೆಯ ರೀತಿಯಿಂದ ಕಳೆಯುತ್ತಿದ್ದರು. ಆ ಹಣವು ಜಯಪುರ ಮಹಾರಾಜರ ವೈಯಕ್ತಿಕ ಪೆಟ್ಟಿಗೆಯೊಳಗಿಂದ ಇವರಿಗೆ ಸಿಗುತ್ತಿತ್ತು. ಪಂಡಿತರು ಮುಂಜಾನೆ ಎರಡು ಜಿನಮಂದಿರಗಳಲ್ಲಿಯೂ ಸಾಯಂಕಾಲ ಒಂದು ಜಿನಮಂದಿರದಲ್ಲಿಯೂ ಶಾಸ್ತ್ರವನ್ನು ಹೇಳುತ್ತಿದ್ದರು. ಇವರು ಶಾಸ್ತ್ರವನ್ನು ಬಹು ಚೆನ್ನಾಗಿ ವಿವರಿಸಿ ಹೇಳುತ್ತಿದ್ದರು. ಇವರ ಪ್ರವಚನದಲ್ಲಿ ಯಾವ ಸಂಶಯವೂ ಶ್ರೋತೃಗಳಿಗೆ ಉಳಿಯುತ್ತಿರಲಿಲ್ಲ. ತಮ್ಮ ಸದುಪದೇಶದಿಂದ ಹಲವು ಜನರ ಮಿಥ್ಯಾತ್ವವನ್ನು ಇವರು ನಷ್ಟಗೊಳಿಸಿದರು. ಅನೇಕರ ಭ್ರಾಂತ ಕಲ್ಪನೆಯನ್ನು ಕಳೆದು ಸದ್ಧರ್ಮದಲ್ಲಿ ಶ್ರದ್ಧೆಯು ಜನಿಸುವಂತೆ ಮಾಡಿದರು. ಇವರ ಶಿಷ್ಯತ್ವವನ್ನು ಅನೇಕಜನ ಪಂಡಿತರೂ ಸಿರಿವಂತರೂ ಸಹ ಸ್ವೀಕರಿಸಿದ್ದರು. ಇವರ ಶಿಷ್ಯರಲ್ಲೊಬ್ಬರಾದ ಪಂ. ಪಾರಸದಾಸ ನಿಗೋತ್ಯ ಎಂಬವರು ತಾವು ಬರೆದ 'ಜ್ಞಾನ ಸೂರ್ಯೋದಯ' ನಾಟಕದಲ್ಲಿ ಇವರ ಗುಣಗಳಿಗೆ ಮುಗ್ಧರಾಗಿ ತುಂಬ ಕೊಂಡಾಡಿದ್ದಾರೆ. ಅವರು ಸದಾಸುಖರನ್ನು 'ಗುಣಸಾಗರ', 'ಆಗಮದಲ್ಲಿ ಸೂಕ್ಷ್ಮ ದೃಷ್ಟಿಯುಳ್ಳವ', 'ಅನೋಪಮ ಜ್ಞಾನದಾನಿ' ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿದ್ದಾರೆ. ಇವರ ಕೀರ್ತಿಯು ಜಯಪುರದಲ್ಲಿ ಅಷ್ಟೇ ಇತ್ತೆಂದಲ್ಲ. ನಾಡಿನ ವಿವಿಧ ಭಾಗಗಳಲ್ಲಿಯೂ ಇವರ ಕೀರ್ತಿಯು ಪಸರಿಸಿದ್ದಿತು. ಅನೇಕ

---

1 "ಡೆಡರಾಜ ಥೇ ಬಂಸಮಾಹಿ ಇತ ಕಿಂಚಿತ ಜ್ಞಾತಾ । ದುಲೀಚಂದಕಾ ಪುತ್ರ ಕಾಸಲೀವಾಲ ವಿಖ್ಯಾತಾ ॥
ನಾಮ ಸದಾಸುಖ ಕಹೇ, ಆತ್ಮ ಸುಖಕಾ ಬಹು ಇಚ್ಛುಕ । ಸೋ ಜಿನವಾನಿಪ್ರಸಾದ ವಿಷಯತೆ ಭಯೆ ನಿರಿಚ್ಛುಕ ॥
—ಅರ್ಥಪ್ರಕಾಶಿಕಾ, ಹಿಂದಿ ಟೀಕಾ"

2 "ಹೇ ಜಿನವಾಣೀ ಭಗವತೀ ಭುಕ್ತಿ ಮುಕ್ತಿ ದಾತಾರ । ತೇರೆ ಸೇವನತೈ ರಹ್ಯೆ ಸುಖಮಯ ನಿತ ಅವಿಕಾರ ॥
ಅಡಸಟ ಬರಸಜು ಆಯುಕೆ ಬೀತೆ ತುಝ ಆಧಾರ । ಶೇಷ ಆಯು ತವ ಶರಣತೈ ಜಾಹುಯಹೀ ಮಮಸಾರ ॥
—ರತ್ನಕರಂಡ-ಶ್ರಾವಕಾಚಾರ ವಚನಿಕಾ"

ಜೈನ ವಿದ್ವಾಂಸರ ಪರಿಚಯವೂ ಇವರಿಗೆ ಇತ್ತು. ಅನೇಕ ಜನರು ಇವರಿಂದ ಮಾರ್ಗದರ್ಶನ ಪಡೆಯುವದಕ್ಕಾಗಿ ಜಯಪುರಕ್ಕೆ ಬರುತ್ತಿದ್ದರು. ತಾವು ಬರೆದ ಗ್ರಂಥಗಳನ್ನೂ ತಿದ್ದಿಸಿಕೊಳ್ಳುತ್ತಿದ್ದರು ಆರಾಡೋಳಗಿನ ಶ್ರೀ ಕೀರ್ತಿಚಂದ್ರ ಅಗ್ರಸಾಲರ ಸುಪುತ್ರರಾದ ಪರಮೇಷ್ಠಿಸಹಾಯ ಎಂಬವರು 'ತತ್ತ್ವಾರ್ಥ ಸೂತ್ರ'ಕ್ಕೆ 'ಅರ್ಥಪ್ರಕಾಶಿಕಾ' ಎಂಬ ಹೆಸರಿನ ಟೀಕಾಗ್ರಂಥ ಒಂದನ್ನು ಐದು ಸಾವಿರ ಶ್ಲೋಕಗಳಲ್ಲಿ ಬರೆದು, ಅವಲೋಕನಕ್ಕಾಗಿ ಸದಾಸುಖರ ಕಡೆಗೆ ಕಳಿಸಿದರು. ಅದನ್ನು ಇವರು ತಿದ್ದಿ, ಸರಿಪಡಿಸಿ ಹನ್ನೊಂದು ಸಾವಿರ ಶ್ಲೋಕದಷ್ಟು ವಿಸ್ತರಿಸಿ ಕಳಿಸಿದರು. ಹೀಗೆ ಇವರ ಸಾಹಿತ್ಯ ಸೇವೆಯು ನಿರಪೇಕ್ಷ ರೀತಿಯಿಂದ ಅವ್ಯಾಹತವಾಗಿ ನಡೆಯುತ್ತಲಿತ್ತು ಇವರು ದಿನದ ಎಂಟು ಪ್ರಹರಗಳಲ್ಲಿ ಆರು ಪ್ರಹರಗಳನ್ನು ಜ್ಞಾನದಾನದಲ್ಲಿಯೇ ಕಳೆಯುತ್ತಿದ್ದರು.

ಪಂಡಿತ ಸದಾಸುಖರು ಕ್ರಿ. ಶ. ೧೮೫೦ ರಲ್ಲಿ ಶಿವಕೋಟಿ ಆಚಾರ್ಯರ ಪ್ರಾಕೃತ ಭಗವತೀ ಆರಾಧನೆಯನ್ನು ವಿವರಿಸಿ ಹೇಳುತ್ತಿದ್ದರು ಆಗ ಶಾಸ್ತ್ರ ಸಭೆಯಲ್ಲಿದ್ದ ಹಲವು ಜನರು ಅದನ್ನು ಸುಲಭ ಹಿಂದಿಯಲ್ಲಿ ಅನುವದಿಸಿದರೆ ಎಲ್ಲರಿಗೂ ಉಪಯೋಗವಾಗುವದೆಂದು ಸೂಚಿಸಿದರು. ಅದರಂತೆ ಇವರು ಮುಂದೆ ಎರಡು ವರ್ಷಗಳಲ್ಲಿಯೇ ಹಿಂದೀ ಟೀಕಾ ಸಹಿತ ಈ ಗ್ರಂಥವನ್ನು ಬರೆದು ಮುಗಿಸಿದರು. ಅನಂತರ ಕ್ರಿ ಶ ೧೮೫೨ ರಲ್ಲಿ ಇವರು 'ತತ್ತ್ವಾರ್ಥಸೂತ್ರ ವಚನಿಕಾ' (ಲಘು) ಎಂಬುದನ್ನೂ ಬರೆದರು ತರುವಾಯ ಒಂದರ ಮೇಲೆ ಒಂದರಂತೆ ಇವರ ಕೃತಿ ರಚನೆಯು ನಡೆಯಿತು "ನಾಟಕ ಸಮಯಸಾರ"ವನ್ನು ಕ್ರಿ. ಶ. ೧೮೫೭ ರಲ್ಲಿ, "ಅಕಲಂಕಾಷ್ಟಕ ವಚನಿಕಾ" ಎಂಬುದನ್ನು ಕ್ರಿ. ಶ ೧೮೬೩ ರಲ್ಲಿ, 'ರತ್ನಕರಂಡ-ಶ್ರಾವಕಾಚಾರ'ದ ಈ ವಿಸ್ತೃತ ವ್ಯಾಖ್ಯಾನವನ್ನು ಕ್ರಿ. ಶ ೧೮೬೧ ರಲ್ಲಿ "ಮೃತ್ಯು ಮಹೋತ್ಸವ" (ಈ ರತ್ನಕರಂಡದಲ್ಲಿ ಸಮಾವೇಶ ಗೊಳಿಸಿದೆ) ಎಂಬುದನ್ನು ಸಹ ಅದೇ ವರ್ಷದಲ್ಲಿ ರಚಿಸಿ ಮುಗಿಸಿದರು. ಮೂರಿನ ವರ್ಷದಲ್ಲಿ "ನಿತ್ಯನಿಯಮ ಪೂಜಾ" ಎಂಬ ಕೃತಿಯನ್ನು ನಿರ್ಮಿಸಿದರು. ಹೀಗೆ ಅವರ ಕೃತಿ ರಚನೆಯು ಅವ್ಯಾಹತವಾಗಿ ಸಾಗಿದೆ

ಪಂ. ಸದಾಸುಖರು ಸುಮಾರು ಅರವತ್ತೆಂಟು ವರ್ಷ ವಯಸ್ಸಿನ ವರೆಗೆ ಗ್ರಂಥಗಳನ್ನು ರಚಿಸುತ್ತಲೇ ಇದ್ದರು ಆ ಇಳಿ ವಯಸ್ಸಿನಲ್ಲಿ ಇವರಿಗೆ ಇದ್ದ-ಒಬ್ಬನೇ ಒಬ್ಬ ಮಗನಾದ—ಗಣೇಶಲಾಲ ಎಂಬವನು ತೀರಿಕೊಂಡನು. ಈ ಪುತ್ರ ವಿಯೋಗದ ದುಃಖದಿಂದ ಇವರು ತೀರ ಹಣ್ಣಾದರು. ಇದನ್ನು ಕಂಡು, ಇವರ ಶಿಷ್ಯರಲ್ಲಿ ಒಬ್ಬರಾದ ಅಜಮೀರದ ಶ್ರೀಮಾನ್ ಮೂಲಚಂದ ಸೋನಿ ಇವರು ಜಯಪುರಕ್ಕೆ ಬಂದು ಸದಾಸುಖರನ್ನು ಅಜಮೀರಕ್ಕೇನೇ ಇರಲಿಕ್ಕೆ ಕರೆದುಕೊಂಡು ಹೋದರು. ಅಲ್ಲಿ ಎರಡು ವರ್ಷಗಳ ವರೆಗೆ ಇವರು ಸ್ವಲ್ಪ ಸಮಾಧಾನದಿಂದ ಕಾಲ ಕಳೆದರು ಆದರೂ ದೇಹ ಸೋತಿತು ಮನಸ್ಸು ಮೊದಲಿನಂತೆ ಪ್ರಫುಲ್ಲಗೊಳ್ಳಲಿಲ್ಲ. ದಿನ ದಿನಕ್ಕೆ ಸೊರಗ ಹತ್ತಿದರು. ಇದರಿಂದ ಇವರ ಶಿಷ್ಯರೆಲ್ಲ ಗುರುವಿನ ಸನ್ನಿಧಿಯಲ್ಲಿ ನೇರಿದರು. ಜಯಪುರದಿಂದ ಸಂಘೀ ಪನ್ನಾಲಾಲ, ಮೋತಿಲಾಲ ಸೇರ ಮೊದಲಾದವರೂ ಆಗಮಿಸಿದರು ಅವರಿಗೆಲ್ಲ ಪಂ ಸದಾಸುಖರು ತಮ್ಮ ಕೊನೆಯ ಇಚ್ಛೆಯನ್ನು ಆಡಿ ತೋರಿಸಿದರು—"ತಾನು ಹಾಗೂ ತನ್ನ ಪೂರ್ವದಲ್ಲಿ ಆಗಿ ಹೋದ ಪಂ ಟೋಡರಮಲ್ಲ, ದೌಲತರಾಮ, ಜಯಚಂದ ಮೊದಲಾದವರು ಪರಿಶ್ರಮ ಪೂರ್ವಕವಾಗಿ ರಚಿಸಿದ ಸಾಹಿತ್ಯವನ್ನು ಪ್ರಚುರ ಗೊಳಿಸಬೇಕು. ದೇಶದಲ್ಲೆಲ್ಲ ಈ ಶಾಸ್ತ್ರ ಗ್ರಂಥಗಳ ಪ್ರಚಾರವಾಗುವಂತೆ ಮಾಡಬೇಕು ಅಲ್ಲದೆ ಜಯಪುರದಲ್ಲಿ ಪ್ರಾಕೃತ, ಸಂಸ್ಕೃತಗಳ ಅಭ್ಯಾಸಕ್ಕಾಗಿ ಪಾಠಶಾಲೆಯೊಂದನ್ನು ನಡೆಯಿಸಬೇಕು "ತಮ್ಮ ಗುರುದೇವರ ಈ ಅಪೇಕ್ಷೆಯಂತೆ ಅವರ ಶಿಷ್ಯರಲ್ಲಿ ಸಂಘೀಯವರು ಜಯಪುರದಲ್ಲಿ ಸರಸ್ವತೀ ಕಾರ್ಯಾಲಯವನ್ನು ಸ್ಥಾಪಿಸಿ ಶಾಸ್ತ್ರ ಪ್ರಚಾರದ ಕಾರ್ಯದಲ್ಲಿ ತೊಡಗಿದರು ಸ್ವ. ಧನ್ನಾಲಾಲರವರೂ ಸಂಸ್ಕೃತ ಪಾಠಶಾಲೆಯ ಸ್ಥಾಪನೆಯ ಕೆಲಸವನ್ನು ಕೈಕೊಂಡರು ಈ ಪಾಠಶಾಲೆಯೇ ಈಗ ಬೆಳೆದು ಜಯಪುರದ "ದಿ ಜೈನ ಸಂಸ್ಕೃತ ಕಾಲೇಜ"ವಾಗಿ ನಮ್ಮೆದುರಿಗೆ ನಿಂತಿದೆ ಪಂಡಿತ ಸದಾಸುಖರು ಮಾತ್ರ ಕ್ರಿ. ಶ. ೧೮೬೬-೬೭ ರಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ, ಬಹಳ ಸಾವಧಾನತೆಯಲ್ಲಿ ಸಮಾಧಿ ಪೂರ್ವಕ ಮರಣವನ್ನು ಹೊಂದಿದರು ಅವರು ದೇಹರೂಪದಿಂದ ಕಣ್ಮರೆಯಾದರೂ ಕೀರ್ತಿರೂಪದಿಂದ, ಕೃತಿರೂಪ ನಮ್ಮೆಲ್ಲರಿಗೂ ಮಾರ್ಗದರ್ಶಕರಾಗಿ ಇಂದಿಗೂ ಉಳಿದಿದ್ದಾರೆ, ಎಂದಿಗೂ ಉಳಿಯಬಲ್ಲರು

ಪಂ. ಸದಾಸುಖರ ರತ್ನಕರಂಡ-ಶ್ರಾವಕಾಚಾರದ ವಚನಿಕೆಯನ್ನು ಸಂಪೂರ್ಣವಾಗಿ ಕನ್ನಡಿಸಿ ಈ ಗ್ರಂಥದಲ್ಲಿ ಕೊಡಲಾಗಿದೆ. ಆದರೂ ಈ ವಚನಿಕೆಯ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳುವ ಅವಶ್ಯ

ಕತೆಯೂ ಇಲ್ಲಿದೆ  ಮೂಲ ಸಮಂತಭದ್ರರ ಗ್ರಂಥದಲ್ಲಿ ಏಳು ಪರಿಚ್ಛೇದಗಳಿವೆ. ಸದಾಸುಖರು ತಮ್ಮ ವಚನಿಕೆಯಲ್ಲಿ ನಾಲ್ಕು ಪರಿಚ್ಛೇದಗಳನ್ನಾಗಿ ಗ್ರಂಥವನ್ನು ವಿಭಾಗಿಸಿಕೊಂಡಿದ್ದಾರೆ  ಅಲ್ಲಲ್ಲಿ ಪುನರುಕ್ತಿಯೂ ಕಂಡು ಬರುತ್ತದೆ  ಆದರೆ ಈ ಗ್ರಂಥವು ಸಾಮಾನ್ಯ ವಾಚಕರಿಗಾಗಿ ಬರೆಯಲ್ಪಟ್ಟುದರಿಂದ ಅದು ವಿಹಿತವೇ ಎನಿಸೀತೆಂದು ಭಾವಿಸಲಾಗಿದೆ  ಇನ್ನು ಪಂಡಿತರು ತೇರಾಪಂಥದ ಕಟ್ಟುನಿಟ್ಟಾದ ಅಭಿಮಾನಿಗಳಾಗಿದ್ದರು  ಸಮಂತಭದ್ರರ ಮೂಲ ಗ್ರಂಥದಲ್ಲಿ 'ತೇರಾಪಂಥ' ಅಥವಾ 'ಬೀಸಪಂಥ' ದ ಉಲ್ಲೇಖವೇ ಇಲ್ಲ  ಈ ಪಂಥಭೇದಗಳು ಇತ್ತೀಚಿಗಿನ ಇನ್ನೂರು ಮುನ್ನೂರು ವರ್ಷಗಳಲ್ಲಿ ನಿರ್ಮಾಣಗೊಂಡವುಗಳಾಗಿವ  ಈ ವಚನಿಕೆಯಲ್ಲಿ ಇವರು ತಮ್ಮ ಪಂಥದ ಅತಿ ಅಭಿಮಾನದಿಂದ ಜಿನಶಾಸನದ ರಕ್ಷಕರೆನಿಸುವ ಕ್ಷೇತ್ರಪಾಲ, ಪದ್ಮಾವತಿಯರೇ ಮೊದಲಾದ ದೇವದೇವತೆಗಳ ಪೂಜೆಯನ್ನು ಅತಿ ಕಠೋರ ರೀತಿಯಿಂದ ಅಲ್ಲಗಳೆದಿದ್ದಾರೆ  ಅದರಂತೆ ಪೂಜೆಯ ವಿಷಯದಲ್ಲಿಯೂ ಇವರು ವ್ಯಕ್ತಪಡಿಸಿದ ಅಭಿಪ್ರಾಯವು ಈ ಭಾಗದಲ್ಲಿ ಸರ್ವಮಾನ್ಯವೆನಿಸುವ ಸಂಭವವಿಲ್ಲ  ನಿಜವಾಗಿ ನೋಡಿದರೆ ಕ್ಷೇತ್ರಪಾಲ ಮೊದಲಾದ ದೇವರು ಜಿನಭಕ್ತರಾದುದರಿಂದ ಸಮ್ಯಗ್ದೃಷ್ಟಿಗಳೆಂದೆನ್ನಿಸಿಕೊಳ್ಳುತ್ತಾರೆ  ಸಮ್ಯಗ್ದೃಷ್ಟಿ ಪುರುಷರಿಗೆ ಆದರ ಸತ್ಕಾರಗಳನ್ನು ಮಾಡಿದಂತೆ ಕ್ಷೇತ್ರಪಾಲಾದಿಗಳ ಪೂಜೆಯನ್ನು ಮಾಡುವುದರಲ್ಲಿ ದೋಷವಾದರೂ ಏನಿದೆ? ವೀತರಾಗಿಯಾದ ಸರ್ವಜ್ಞ, ದೇವಾಧಿದೇವ ಭಗವಂತನ ಸಮಾನರೇ ಈ ಕ್ಷೇತ್ರಪಾಲರೆಂದು ಭಾವಿಸಿ ಪೂಜಿಸುವುದು ಮಾತ್ರ ತಪ್ಪಾದೀತು  ಆದರೆ ಇವರು 'ಕುದೇವ' ರೆಂದು ಹೇಳಿ ಪೂಜೆಗೇ ಅನರ್ಹರೆನ್ನುವುದು ಅಷ್ಟು ಸರಿಯಾಗಲಿ-ಕ್ಕಿಲ್ಲ  ಇಂಥ ಕೆಲವು ಮಾತುಗಳು ಪಂಡಿತರ ಪಂಥಾಭಿಮಾನದಿಂದ ರತ್ನಕರಂಡಕ–ಶ್ರಾವಕಾಚಾರದ ವಚನಿಕೆಯಲ್ಲಿ ಸೇರಿದ್ದರೂ ಉಳಿದ ಭಾಗವೆಲ್ಲ ಬಹು ಸುಂದರವಾದ ವಿವರಣೆಯಿಂದ ಕೂಡಿದ ಗ್ರಂಥವಾಗಿದೆ  ಜನಸಾಮಾನ್ಯರೆಲ್ಲ ಓದಿ ಅರ್ಥವನ್ನು ತಿಳಿದುಕೊಳ್ಳಬಹುದಾಗಿದೆ  ಧರ್ಮವನ್ನು ಆಚರಿಸಲಿಕ್ಕೆ ತಕ್ಕ ತಿಳುವಳಿಕೆಯನ್ನು ಕೊಡುವ ಅಪೂರ್ವ ಗ್ರಂಥವಾಗಿದೆ

ಇಂಥ ಶ್ರೇಷ್ಠ ಗ್ರಂಥವನ್ನು ಕನ್ನಡಿಸಿ ಕೊಡುತ್ತಿರುವುದು ಇದೇ ಮೊದಲನೆಯ ಸಲವಾಗಿದೆ  ಅದರಲ್ಲೂ ಈ ಕನ್ನಡ ಗ್ರಂಥವು ಪಂ ಸದಾಸುಖರ ಹಿಂದೀ ವಚನಿಕೆಯ ಕೇವಲ ಕನ್ನಡ ಅನುವಾದವಲ್ಲ  ಸಮಂತಭದ್ರರ ಸಮಸ್ತ ಕೃತಿಗಳನ್ನು ಅಭ್ಯಸಿಸಿ ರತ್ನಕರಂಡದ ಮೇಲೆ 'ಸಮೀಚೀನ ಧರ್ಮಶಾಸ್ತ್ರ' ವೆಂಬ ಹೆಸರಿನಿಂದ ಶ್ರೀ ಜುಗಲಕಿಶೋರ ಮುಖ್ತಾರರು ಇತ್ತೀಚಿಗೆ ರಚಿಸಿದ ಗ್ರಂಥದ ಸಾರವೂ ಇದರಲ್ಲಿ ಸಮಾವೇಶವಾಗಿದೆ  ಅದರಂತೆ ಕನ್ನಡದೊಳಗಿನ ಶ್ರೇಷ್ಠ ಜೈನ ಕಾವ್ಯದೊಳಗಿನ ಉಚಿತ ಪದ್ಯಗಳನ್ನು ಆಯ್ದು ಅಲ್ಲಲ್ಲಿ ಕೊಡಲಾಗಿದೆ  ಮೇಲಾಗಿ ಆಯತವರ್ಮನ 'ರತ್ನಕರಂಡಕ' ಹಾಗೂ ಡಾ ಹೀರಾಲಾಲ ಜೈನರ 'ತತ್ತ್ವ-ಸಮುಚ್ಚಯ' ಮೊದಲಾದವುಗಳನ್ನೆಲ್ಲ ಸಂಪಾದಿಸಿ ಹಾಗೂ ಅನುವದಿಸಿ ಈ ಕನ್ನಡ ಗ್ರಂಥದಲ್ಲಿ ಕೊಟ್ಟಿದೆ. ಅದರಿಂದ ಈ ಗ್ರಂಥದ ವ್ಯಾಪ್ತಿಯೂ ಉಪಯುಕ್ತತೆಯೂ ಹೆಚ್ಚಿದೆ  ಅದಕ್ಕೆಲ್ಲಿ ಡಾ ಉಪಾಧ್ಯೆಯವರ ಗ್ರಂಥ ಸಂಪಾದನೆಯಲ್ಲಿಯ ಪಕ್ವ ದೃಷ್ಟಿಯೇ ಕಾರಣವಾಗಿದೆ  ಅವರ ಸಹಯೋಗ, ಸಹಾನುಭೂತಿ, ಸತತ ಪರಿಶ್ರಮಗಳಿಲ್ಲದಿದ್ದರೆ ಇಂಥ ಗ್ರಂಥವು ಕನ್ನಡ ಭಾಷೆಯಲ್ಲಿ ಪ್ರಕಟವಾಗುವುದೇ ಸಾಧ್ಯವಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದಾಗಿದೆ

ಸ್ವಾಮಿ ಸಮಂತಭದ್ರರ ವಿಷಯದಲ್ಲಿಯೂ ರತ್ನಕರಂಡಕ–ಶ್ರಾವಕಾಚಾರದ ವಿಷಯದಲ್ಲಿಯೂ ಇನ್ನೂ ಹೆಚ್ಚಿಗೆ ತಿಳಿದುಕೊಳ್ಳಬೇಕೆನ್ನುವವರೂ ಸೂಕ್ಷ್ಮ ಅಭ್ಯಾಸ ಮಾಡುವ ಇಚ್ಛೆಯುಳ್ಳವರೂ 'ಸಮೀಚೀನ ಧರ್ಮ-ಶಾಸ್ತ್ರ' ದ ಪ್ರಸ್ತಾವನೆಯನ್ನು ಮತ್ತು ಮಾಣಿಕಚಂದ್ರ ದಿ ಜೈನ ಗ್ರಂಥಮಾಲ, ಮುಂಬಯಿಯಿಂದ ಪ್ರಸಿದ್ಧವಾದ ರತ್ನಕರಂಡಕದಲ್ಲಿಯ ಪಂ ಜುಗಲಕಿಶೋರಜಿಯವರ ವಿದ್ವತ್ಪೂರ್ಣ (ಸ್ವಾಮೀ ಸಮಂತಭದ್ರ) ಪ್ರಬಂಧವನ್ನು ಅವಲೋಕಿಸಬಹುದು  ಆ ಗ್ರಂದದಿಂದಲೂ ಇನ್ನುಳಿದ ಗ್ರಂಥಗಳಿಂದಲೂ ತಕ್ಕಷ್ಟು ವಿಷಯಗಳನ್ನು ಸಂಪಾದಿಸಿ ಈ ಪ್ರಸ್ತಾವನೆಯಲ್ಲಿ ನಿರೂಪಿಸಲಾಗಿದೆ  ಈ ಶ್ರೀಮಾನ ಪಂ ಜುಗಲಕಿಶೋರ ಇವರಿಗೆ ನಾವು ಬಹಳ ಕೃತಜ್ಞ-ರಾಗಿದ್ದೇವೆ  ಗ್ರಂಥ ವಿಸ್ತಾರದ ಭಯದಿಂದ—ಸಮಗ್ರತೆಯ ಕಡೆಗೆ ಗಮನವಿಟ್ಟಿದ್ದರೂ—ಸ್ಥೂಲರೂಪದಲ್ಲಿಯೇ ಇಲ್ಲಿ ವಿವೇಚಿಸಲಾಗಿದೆ  ಇದರಿಂದ ಸಮಂತಭದ್ರರ ಕೃತಿಗಳ ಬಗ್ಗೆ ಕನ್ನಡಿಗರಲ್ಲಿ ಕುತೂಹಲ ನಿರ್ಮಾಣವಾದೀತು, ಕನ್ನಡ ನಾಡಿನಲ್ಲಿ ಈ ಆಚಾರ್ಯರ ಗ್ರಂಥಗಳ ಸ್ವಾಧ್ಯಾಯ ಹೆಚ್ಚೀತು—ಎಂದು ನಾವು ನಂಬಿದ್ದೇವೆ  ನಮ್ಮ ಈ ನಂಬುಗೆಯನ್ನು ಕನ್ನಡಿಗರು ಸಫಲಗೊಳಿಸುವರೆಂದು ಹಾರೈಸುತ್ತೇವೆ

ಶಾಂತಿಸೇವಾ ಸದನ ಸೇಡಬಾಳ<br>ಅನಂತಚತುರ್ದಶಿ<br>೧೩—೯—೧೯೫೫

—ಮಿರ್ಜಿ ಅಣ್ಣಾರಾಯ,

# ರತ್ನಕರಂಡ—ಶ್ರಾವಕಾಚಾರದ ವಿಷಯಾನುಕ್ರಮಣಿಕೆ

ಪರ್ಯಂಕಾಸನದಲ್ಲಿ ನಿಶ್ಚಲವಾಗಿ ಕೂಡಬೇಕು ೨೩೨, ಸಾಮಾಯಿಕದ ಹೊತ್ತಿನಲ್ಲಿ ಚಿಂತನದ ಪ್ರಕಾರ ೨೩೨, ಅನುಪ್ರೇಕ್ಷೆ ಮತ್ತು ಹದಿನಾರು ಕಾರಣ ಭಾವನೆಗಳ ಚಿಂತನೆ ೨೩೨, ದಿನಾಲು ಪಾಪ ಪುಣ್ಯಗಳ ಲೆಕ್ಕ ನೋಡಬೇಕು ೨೩೩, ಪಾಪಕ್ರಿಯೆಗಳಿಗೆ ಪಶ್ಚಾತ್ತಾಪ ಪಡಬೇಕು ೨೩೩, ತ್ರಸಸ್ಥಾವರ ಹಿಂಸೆಗಳ ಬಗ್ಗೆ ಪಶ್ಚಾತ್ತಾಪ ೨೩೩, ಅಸತ್ಯ ವಚನಕ್ಕೆ ಪಶ್ಚಾತ್ತಾಪ ೨೩೪, ಪರವಸ್ತುವನ್ನು ಎತ್ತಿ ಹಾಕಿದುದಕ್ಕೆ ಪಶ್ಚಾತ್ತಾಪ ೨೩೪, ಪರಸ್ತ್ರೀ ದೋಷದ ಆಲೋಚನೆ ೨೩೫, ಪರಿಗ್ರಹ ಆಲೋಚನೆ ೨೩೫, ಸಾಮಾಯಿಕ ಮಾಡುವ ಗೃಹಸ್ಥನು ಹೇಗೆ ಕಾಣುವನು? ೨೩೬, ಪರೀಷಹ ಪ್ರಾಪ್ತವಾದಲ್ಲಿ ಹೇಗಿರಬೇಕು? ೨೩೭. ಸಂಸಾರ ಮತ್ತು ಮೋಕ್ಷ ಸ್ವರೂಪಗಳ ಚಿಂತನೆ ೨೩೮, ಸಾಮಾಯಿಕದ ಮಹಾತ್ಮ್ಯ ೨೩೯, ಸಾಮಾಯಿಕದ ಅತಿಚಾರಗಳು ೨೪೦, ಪ್ರೋಷಧೋಪವಾಸ ವ್ರತದ ವರ್ಣನೆ ೨೪೧, ಉಪವಾಸದ ದಿನ ತ್ಯಾಜ್ಯ ಸಂಗತಿಗಳು ೨೪೩, ಉಪವಾಸದ ದಿನವನ್ನು ಕಳೆಯುವ ರೀತಿ ೨೪೪, ಉಪವಾಸವೆಂದರೇನು? ೨೪೫, ಉಪವಾಸದ ಅತಿಚಾರ ೨೪೬, ಅತಿಥಿಸಂವಿಭಾಗ ಶಿಕ್ಷಾವ್ರತ ೨೪೭, ದಿಗಂಬರ ಮುನಿಯ ಸ್ವರೂಪ ೨೪೮, ಶರೀರವು ತಪದ ಸಾಧನವಾಗಿದೆ ೨೪೯ ಅಂತರಾಯವಿಲ್ಲದಂತೆ ಆಹಾರ ತಕ್ಕೊಳ್ಳಬೇಕು ೨೪೯, ದಾನದ ಪ್ರತಿಫಲವನ್ನು ಇಚ್ಛಿಸಬಾರದು ೨೪೯, ವೈಯಾವೃತ್ಯದ ವಿಶೇಷ ಸ್ವರೂಪ ೨೫೦, ವೈಯಾವೃತ್ಯದಲ್ಲಿ ಆಹಾರದಾನದ ಸ್ಥಾನ ೨೫೧, ದಾತೃವಿನ ಇತರ ಗುಣಗಳು ೨೫೪, ಗೃಹ ಹಾಗೂ ಧನದ ಸಫಲತೆ ೨೫೫, ಸತ್ಪಾತ್ರದಲ್ಲಿ ದಾನಮಾಡಬೇಕು ೨೫೬, ಕೆಟ್ಟದಾನವನ್ನು ಮಾಡಕೂಡದು ೨೫೬, ಗೋದಾನ ಮಾಡಬಾರದು ೨೫೭, ಒಳ್ಳೆಯ ದಾನದ ಫಲ ೨೫೮, ದಾನದ ಪ್ರಭಾವ ೨೫೯, ತೀರ್ಥಂಗ ಇತ್ಯಾದಿ ೨೬೧, ಭೋಗ ಭೂಮಿಯೊಳಗಿನ ಯುಗಲೋತ್ಪತ್ತಿ ೨೬೨, ಶ್ರಾವಕರ ಮೂರು ವರ್ಗಗಳು ೨೬೩, ನಾಲ್ಕು ಪ್ರಕಾರದ ದಾನಗಳು ೨೬೩, ದಾನವಿಚಾರ ೨೬೪, ಆಹಾರದಾನ ೨೬೫, ಔಷಧದಾನ ೨೬೬, ಜ್ಞಾನದಾನ ೨೬೬, ವಸತಿ ಗೃಹದಾನ ೨೬೬, ಮುನಿ, ಆರ್ಯಿಕಾ ಮತ್ತು ಕ್ಷುಲ್ಲಕರಿಗೆ ದಾನಕೊಡಬೇಕು ೨೬೮, ಕುಟುಂಬ, ಸಂಪತ್ತಿ ಮತ್ತು ವೈಭವಗಳು ನಶ್ವರವಾಗಿವೆ ೨೬೮, ನಶ್ವರ ಸಂಪತ್ತಿಯ ಅಭಿಮಾನ ಹಿಡಿಯ ಬೇಡಿರಿ ೨೬೯, ಉತ್ಪನ್ನದೊಳಗಿನ ಹತ್ತನೆಯ ಭಾಗವನ್ನಾದರೂ ಧರ್ಮಕ್ಕೆ ಕೊಡಿರಿ ೨೬೯, ಸ್ವಧರ್ಮಿಯರನ್ನು ಪಾಲಿಸಬೇಕು ೨೭೦, ವೃದ್ಧ ಹಾಗೂ ನಿರಾಶ್ರಿತರಿಗೆ ಆಶ್ರಯ ಕೊಡಬೇಕು ೨೭೦, ಜ್ಞಾನದಾನದ ಅನುಕೂಲತೆಯನ್ನು ಒದಗಿಸಬೇಕು ೨೭೧. ಔಷಧದಾನ ೨೭೧, ಅಭಯದಾನ ೨೭೧, ಸ್ವಂತಕ್ಕೂ ಇತರರಿಗೂ ದಾನ ನೀಡಬೇಕು ೨೭೨, ಮಧುರ ಭಾಷಣವೂ ಒಂದು ದಾನವೇ ಆಗಿದೆ ೨೭೨, ಕಟು ಭಾಷಣ ಮಾಡುವವರ ಮೇಲೆಯೂ ದಯೆಯನ್ನು ತೋರಬೇಕು ೨೭೨, ತಮ್ಮ ದ್ರವ್ಯದ ಉಪಯೋಗವನ್ನು ಪರೋಪಕಾರದಲ್ಲಿ ಮಾಡಬೇಕು ೨೭೨, ಚಂಚಲ ಲಕ್ಷ್ಮಿಯ ಅಭಿಮಾನ ಹಿಡಿಯಕೂಡದು ೨೭೩, ಲಕ್ಷ್ಮಿಯು ಪುಣ್ಯದ ಫಲವಾಗಿದೆ ೨೭೪, ಕೃಪಣನು ಲಕ್ಷ್ಮಿಯ ಭೋಗ ತಕ್ಕೊಳ್ಳುವದಿಲ್ಲ ೨೭೪, ದಾನದಿಂದ ಭೋಗ ಭೂಮಿಯಲ್ಲಿಯೂ ಸ್ವರ್ಗದಲ್ಲಿಯೂ ಜನ್ಮವಾಗುತ್ತದೆ ೨೭೫, ಕಲಿಕಾಲದೊಳಗಿನ ತ್ರೀಮಂತರ ವಿಚಾರಗಳು ೨೭೫ ಧನದ ಆಸಕ್ತಿಯ ಪರಿಣಾಮ ೨೭೭, ಸತ್ಪಾತ್ರದಾನದ ಫಲ ೨೭೭, ಕುಪಾತ್ರದ ಲಕ್ಷಣ ೨೭೭, ಜೈನರಲ್ಲಿಯ ಕುಪಾತ್ರ ೨೭೮, ಕುಭೋಗಭೂಮಿಯೊಳಗಿನ ಅವಸ್ಥೆ ೨೭೮, ಅಂತರ ದ್ವೀಪದೊಳಗಿನ ಮನುಷ್ಯರ ಸ್ವರೂಪ ೨೭೯, ದಯಾದಾನದ ಲಕ್ಷಣ ೨೮೦, ಅಪಾತ್ರದ ಲಕ್ಷಣ ೨೮೦, ದಾನವಿತ್ತ ಸುಪ್ರಸಿದ್ಧರು ೨೮೧, ದಾನದ ಅಚಿಂತ್ಯ ಪ್ರಭಾವ ೨೮೨, ಇಂದ್ರಿಯ ವಿಷಯಗಳು ದುಃಖವನ್ನು ಕೊಡುವಂಥವಿರುತ್ತವೆ ೨೮೨, ವೈಯಾವೃತ್ಯ ಮತ್ತು ಜಿನಪೂಜೆ ೨೮೩, ಪಾಪ-ಪುಣ್ಯಗಳು ಪರಿಣಾಮವನ್ನು ಅವಲಂಬಿಸಿವೆ ೨೮೫, ಪೂಜಿಸಲಿಕ್ಕೆ ಯೋಗ್ಯವಾದ ಒಂಬತ್ತು ಪ್ರತಿಮೆಗಳು ೨೮೬, ಪೂಜೆಯ ಪ್ರಕಾರ ೨೮೭. ಪೂಜೆಯ ಹೊತ್ತಿನಲ್ಲಿ ಏನು ಚಿಂತಿಸಬೇಕು? ೨೮೭ ಜೈನ ಧರ್ಮವು ಜಾತಿ ಕುಲಗಳನ್ನು ಅವಲಂಬಿಸಿಲ್ಲ ೨೮೮, ಸಚಿತ್ತ ಅಥವಾ ಅಚಿತ್ತ ದ್ರವ್ಯಗಳಿಂದ ಪೂಜಿಸಬೇಕು ೨೮೮, ತ್ರಸಜೀವದ ರಕ್ಷಣೆಯು ಅವಶ್ಯವಾಗಿದೆ ೨೮೯, ರಾತ್ರಿಯಲ್ಲಿ ಪೂಜೆ ಮಾಡಬಾರದು ೨೮೯, ಸ್ಥಾಪನೆಯನ್ನು ಮಾಡುವ ಅವಶ್ಯಕತೆಯಿಲ್ಲ ೨೯೦, ಸ್ಥಾಪನೆಯ ನಿರರ್ಥಕತೆ ೨೯೦, ಸರಿಸಮಾನ ಆಕಾರವಿಲ್ಲದ ಪ್ರತಿಮೆಗಳಲ್ಲಿ ಸ್ಥಾಪನೆಯ ಹುಚ್ಚು ೨೯೧, ಒಬ್ಬನೇ ತೀರ್ಥಂಕರನನ್ನು ಸಾವಿರ ಹೆಸರುಗಳಿಂದ ಸ್ತುತಿಸಲಾಗುತ್ತಿದೆ ೨೯೧, ಪೂಜೆಯ ಐದು ಪ್ರಕಾರಗಳು ೨೯೨, ಅಕೃತ್ರಿಮ ಚೈತ್ಯಾಲಯಗಳು ೨೯೨, ಜಿನಾಲಯದ ಸ್ವರೂಪ ೨೯೩, ಜಿನಮಂದಿರಗಳ ಬಾಹ್ಯ ಪರಿಕರ ೨೯೩, ಗರ್ಭಗೃಹದ ರಚನೆ ೨೯೪, ಮಂದಿರಗಳ ಚಿಕ್ಕ ದ್ವಾರಗಳ ವರ್ಣನೆ ೨೯೪, ಮುಖಮಂಟಪದ ವರ್ಣನೆ ೨೯೪, ಸ್ತೂಪ ಮತ್ತು ಚೈತ್ಯ ವೃಕ್ಷದ ವರ್ಣನೆ ೨೯೫, ತೋರಣದ ವರ್ಣನೆ ೨೯೫, ಧ್ವಜದ ವರ್ಣನೆ ೨೯೬, ಜಿನ ಪೂಜೆಯನ್ನು ಮಾಡಿ ಸುಖಿಗಳಾದವರು ೨೯೭, ಕಪ್ಪೆಯ ಕಥೆ ೨೯೭, ಜಿನ ಪೂಜೆಯ ಮಹತ್ವ ೨೯೯, ವೈಯಾವೃತ್ಯದ ಅತಿಚಾರಗಳು ೩೦೦.

## ೪. ಭಾವನಾಧಿಕಾರ— ೩೦೨—೪೧೫

ಭೂಮಿಕೆ ೩೦೨, ಅಹಿಂಸಾವ್ರತದ ಭಾವನೆ ೩೦೨, ಸತ್ಯವ್ರತದ ಭಾವನೆ ೩೦೩, ಅಚೌರ್ಯವ್ರತದ ಭಾವನೆ ೩೦೪, ಬ್ರಹ್ಮಚರ್ಯ ವ್ರತದ ಭಾವನೆ ೩೦೪, ಪರಿಗ್ರಹ ಪರಿಮಾಣದ ಭಾವನೆ ೩೦೪, ಹಿಂಸಕ ಪರಿಣಾಮದ ಭಾವನೆ ೩೦೪, ಅಹಿಂಸೆಯ ಮಹಿಮೆ ೩೦೫, ಅಸತ್ಯ ಪರಿಣಾಮ ೩೦೫, ಸತ್ಯವಚನದ ಪ್ರಭಾವ ೩೦೬, ಕಳ್ಳತನದ ದೋಷ ೩೦೬, ಪರಸ್ತ್ರೀ ತ್ಯಾಗ ೩೦೭, ಪರಿಗ್ರಹದ ಮಮತೆಯ ಪರಿಣಾಮ ೩೦೭, ಪಂಚಾಣುವ್ರತದ ದೋಷಗಳು ೧೦೭, ಸ್ಪರ್ಶನ ಇಂದ್ರಿಯದ ದುಃಖ ೩೦೮, ನಾಲ್ಕು ಭಾವನೆಗಳ ಚಿಂತನೆ ೩೦೯, ಜಗತ್ತು ಮತ್ತು ಶರೀರ ಇವುಗಳ ಸ್ವರೂಪದ ವಿಚಾರ ೩೧೦, ಸಂಸಾರ ಪರಿವರ್ತನದ ಭಯ ೩೧೦, ಶರೀರದ ಸ್ವರೂಪ ೩೧೧, ಹದಿನಾರು ಕಾರಣ ಭಾವನೆಗಳು ೩೧೧, ದರ್ಶನ ವಿಶುದ್ಧಿ ಅದರ ಅಂಗಗಳ ಸ್ವರೂಪ ೩೧೪, ನಿಃಶಂಕಿತ ಅಂಗ ೩೧೫, ನಿಃಕಾಂಕ್ಷಿತ ಅಂಗ ೩೧೬, ನಿರ್ವಿಚಿಕಿತ್ಸಾ ಅಂಗ ೩೧೬, ಅಮೂಢದೃಷ್ಟಿ ೩೧೭, ಉಪಗೂಹನ ೩೧೭, ಸ್ಥಿತೀಕರಣ ೩೧೭, ವಾತ್ಸಲ್ಯ ೩೧೮, ಪ್ರಭಾವನಾ ಅಂಗ ೩೧೮, ಮೂರು ಮೂಢತೆಗಳು ೩೧೮, ಆರು ಅನಾಯತನಗಳು ೩೧೯, ಜಾತಿಮದ ೩೨೦, ಕುಲಮದ ೩೨೦, ಐಶ್ವರ್ಯಮದ ೩೨೦, ರೂಪಮದ ೩೨೧, ಜ್ಞಾನಮದ ೩೨೧, ತಪಮದ ೩೨೧, ಬಲಮದ ೩೨೧, ವಿಜ್ಞಾನಮದ ೩೨೧ ವಿನಯ ಸಂಪನ್ನತೆ ೩೨೨, ಐದು ವಿನಯಗಳು ೩೨೨, ವಿನಯಗಳಿಂದಾಗುವ ಲಾಭ-ಹಾನಿ ೩೨೩, ಯಾರಲ್ಲಿ

---

ಶ್ರೀ ವೀತರಾಗಾಯ ನಮಃ

ಸ್ವಾಮಿ ಸಮಂತಭದ್ರಾಚಾರ್ಯ ವಿರಚಿತ

# ರತ್ನಕರಂಡಕ-ಶ್ರಾವಕಾಚಾರ

ಪಂ ಸದಾಸುಖಜಿಯವರ ಹಿಂದೀ ವಚನಿಕೆಯ

ಕನ್ನಡ ಅನುವಾದಾದಿ ಸಹಿತ

# ಮಂಗಲಾಚರಣ

**ನಮಃ ಶ್ರೀವರ್ಧಮಾನಾಯ ನಿರ್ಧೂತಕಲಿಲಾತ್ಮನೆ ।**

**ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೆ ॥ ೧ ॥**

ಅನ್ವಯಾರ್ಥ—(ಯದ್ವಿದ್ಯಾ) ಯಾರ ಜ್ಞಾನವು ಅಂದರೆ ಕೇವಲ ಜ್ಞಾನವು (ಸಾಲೋಕಾನಾಂ) ಅಲೋಕಾಕಾಶ ಸಹಿತ (ತ್ರಿಲೋಕಾನಾಂ) ಮೂರು ಲೋಕಗಳನ್ನು (ದರ್ಪಣಾಯತೆ) ಕನ್ನಡಿಯಂತೆ ಪ್ರತಿಬಿಂಬಿಸುವುದೋ ಆ (ನಿರ್ಧೂತಕಲಿಲಾತ್ಮನೆ) ಜ್ಞಾನಾವರಣಾದಿ ಕರ್ಮಮಲಗಳನ್ನು ತೊಳೆದುಕೊಂಡಂದ (ಶ್ರೀವರ್ಧಮಾನಾಯ) ಅಂತರಂಗ, ಬಹಿರಂಗ ಲಕ್ಷ್ಮಿಯಿಂದ ಕೂಡಿದ ಶ್ರೀವರ್ಧಮಾನಸ್ವಾಮಿಗೆ (ನಮಃ) ನಮಸ್ಕಾರವು.[1]

ಅರ್ಥ—ಶ್ರೀವರ್ಧಮಾನ ತೀರ್ಥಂಕರರಿಗೆ ನನ್ನ ನಮಸ್ಕಾರವು. ಈ ಶ್ರೀವರ್ಧಮಾನ ಯಾರು? ಶ್ರೀ ಎಂದರೆ ಅಂತರಂಗ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖ ಈ ಅನಂತ ಚತುಷ್ಟಯಸ್ವರೂಪಿಯೂ ಅವಿನಾಶಿಯೂ ಆದ ಲಕ್ಷ್ಮಿಯು. ಇಂದ್ರಾದಿಗಳಿಂದ ವಂದನೀಯವಾದ ಸಮವಸರಣಾದಿಗಳು ಬಹಿರಂಗ ಲಕ್ಷ್ಮಿಯು ಈ ಅಂತರ್ಬಾಹ್ಯ ಲಕ್ಷ್ಮಿಯ ಯೋಗದಿಂದ ವೃದ್ಧಿಯನ್ನೂ ಹೊಂದುವವರು ಯಾರೋ ಅವರು ಶ್ರೀ ವರ್ಧಮಾನರೆನ್ನಿಸಿಕೊಳ್ಳುವರು ಅಥವಾ ಯಾರ ಕೇವಲಜ್ಞಾನವು ಪರಮಾತಿಶಯವನ್ನು ಹೊಂದಿರುವುದೋ ಅವರು ಶ್ರೀವರ್ಧಮಾನರು ಇಲ್ಲಿ 'ಅವ-ಸಮಂತಾತ್' ಅಂದರೆ ಸಂಪೂರ್ಣ ಪ್ರಕಾರದಿಂದ ಋದ್ಧ ಎಂದು ಹೇಳಲಾಗುವುದು ಈ ವಿಗ್ರಹದಲ್ಲಿ 'ಅವಾಪ್ಯೋರಲೋಪಃ' ಎಂಬ ಸೂತ್ರಕ್ಕೆ ಅನುಸರಿಸಿ ಅಕಾರವು ಲೋಪವಾಗಿದೆ. ಇರಲಿ, ಈಗ ಆ ವರ್ಧಮಾನರು ಎಂಥವರೆಂಬುದನ್ನು ನೋಡೋಣ ಅವನು ನಿರ್ಧೂತ ಕಲಿಲಾತ್ಮನಿರುವನು. ಅಂದರೆ ಆತ್ಮನಿಂದ ಕಲಿಲ—ಜ್ಞಾನಾವರಣಾದಿ ಪಾಪಮಲವನ್ನು—ನಿರ್ಧೂತ—ನಷ್ಟಗೊಳಿಸಿದಂಥವನಾಗಿದ್ದಾನೆ ಹಾಗೆಯೇ ಕೇವಲಜ್ಞಾನಲಕ್ಷಣದಿಂದ ಕೂಡಿದ ಅವನ ವಿದ್ಯೆಯು ಅಲೋಕಾಕಾಶ ಸಹಿತ ಎಲ್ಲ ಮೂರು ಲೋಕಗಳನ್ನು ಕನ್ನಡಿಯಂತೆ ಪ್ರಕಾಶದಲ್ಲಿ ನಿಲ್ಲಿಸುವುದು

ವಿಶೇಷಾರ್ಥ—ಶ್ರೀವರ್ಧಮಾನರ ಕೇವಲಜ್ಞಾನರೂಪದಲ್ಲಿರುವ ವಿದ್ಯೆಯು ಒಂದು ಅಮೂಲ್ಯ ಕನ್ನಡಿಯಂತಿದೆ ಅದರಲ್ಲಿ ಆರು ದ್ರವ್ಯಗಳ (ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಮತ್ತು ಕಾಲ) ಸಮುದಾಯವೆನಿಸುವ ಈ ಲೋಕವು ತನ್ನ ಭೂತ, ಭವಿಷ್ಯ ಮತ್ತು ವರ್ತಮಾನ ಕಾಲಗಳ ಎಲ್ಲ ಅನಂತಾನಂತ ಪರ್ಯಾಯಗಳ ಸಹಿತ ಪ್ರತಿಬಿಂಬಿತವಾಗಿರುವುದು. ಅವರ ಆತ್ಮವು ಸರ್ವವಿಧದ ಕರ್ಮಮಲದಿಂದ ಅಲಿಪ್ತವಾಗಿದೆ. ಇಂತಹ ಶ್ರೀವರ್ಧಮಾನನಿಗೆ—ದೇವಾಧಿದೇವನೂ ಅಂತಿಮತೀರ್ಥಂಕರನೂ ಆದವನಿಗೆ—ಆವರಣ ಕಷಾಯಾದಿ-ಮಲರಹಿತ ಸಮ್ಯಗ್ದರ್ಶನವು ತಮಗೆ ಪ್ರಾಪ್ತವಾಗಲೆಂದು ಆಚಾರ್ಯ ಸಮಂತಭದ್ರರು ನಮಸ್ಕಾರ ಮಾಡಿದ್ದಾರೆ ['ವರ್ಧಮಾನ'ವೆಂಬುದು ಈ ಯುಗದ ಆರ್ಹತ-ಮತಪ್ರವರ್ತಕ ಅಥವಾ ಜೈನಧರ್ಮದ ಕೊನೆಯ ತೀರ್ಥಂಕರರ ಶುಭಕರವಾದ ಹೆಸರಾಗಿದೆ. ಇವರಿಗೆ ವೀರ, ಮಹಾವೀರ, ಸನ್ಮತಿ ಎಂದೂ ಕರೆಯಲಾಗುವುದು ಇವರು ಗರ್ಭದಲ್ಲಿ ಅವತರಿಸಿದಂದಿನಿಂದ ಇವರ ತಂದೆ ತಾಯಂದಿರ ಧನ, ಧಾನ್ಯ, ರಾಜ್ಯ, ರಾಷ್ಟ್ರ, ಬಲ, ಕೋಷ, ಕುಟುಂಬ ಹಾಗೆಯೇ ಇನ್ನೂ ಅನೇಕ ಪ್ರಕಾರದ ವಿಭೂತಿಗಳೂ ಸಹ ಅತ್ಯಂತ ವೃದ್ಧಿಯನ್ನು ಹೊಂದಿದವು. ಅದರಿಂದ ಇವರ ಹೆಸರನ್ನು

---

[1] ಆಯತವರ್ಮನು ತನ್ನ ಕನ್ನಡ ರತ್ನಕರಂಡಕದ ಆರಂಭದಲ್ಲಿ ಈ ಪ್ರಕಾರ ಚತುರ್ವಿಂಶತಿ ಜಿನರನ್ನು ಸ್ತುತಿಸಿದ್ದುಂಟು.

ಶ್ರೀವೃಷಭಜಿನೇಂದ್ರಾದಿ ಮಹಾವೀರಜಿನಾಂತ್ಯವಾದ ಜಿನಪತಿಗ । ಳ್ಭವ್ಯಾಳಿಗೆ ಚತುರ್ವಿಂಶತಿದೇವರ್ದಯೆಗೆಯ್ದು ವಿಮಳ ರತ್ನತ್ರಯಮಂ ॥ ೧ ॥

'ವರ್ಧಮಾನ' ಎಂದು ಇಡುವದನ್ನು ಮೊದಲೇ ನಿಶ್ಚಯಿಸಲಾಗಿತ್ತೆಂದು ಹೇಳಲಾಗುತ್ತಿದೆ[1] ಆ ಮೇಲೆ ಇಂದ್ರನು ಕೊಟ್ಟ 'ವೀರ' ಎಂಬ ಹೆಸರಿನ ಜೊತೆಗೆ ಈ 'ವರ್ಧಮಾನ'ವೆಂಬುದೂ ಜನ್ಮನಾಮವಾಗಿ ಉಳಿದುಬಂದಿತು[2] ಇನ್ನು 'ಶ್ರೀ' ಎಂಬುದು ಹೆಸರಿನ ಒಂದು ಭಾಗವಾಗಿರದೆ ವಿಶೇಷಣವಾಗಿದೆ ಅದು ಅವರ 'ಶ್ರೀ'ಯುತತ್ವವನ್ನು ಸೂಚಿಸುತ್ತದೆ. ಅದಕ್ಕಾಗಿ 'ಶ್ರೀವರ್ಧಮಾನಾಯ' ಎಂಬ ಪದವನ್ನು ವಿಗ್ರಹಮಾಡಿ ಅರ್ಥಮಾಡಲಾಗಿದೆ 'ಶ್ರೀಮತೇ ವರ್ಧಮಾನಾಯ'-ಶ್ರೀಮಾನ್, ಶ್ರೀಸಂಪನ್ನ ವರ್ಧಮಾನ—ಎಂಬ ಅರ್ಥದಲ್ಲಿ ಸ್ವತಃ ಸಮಂತಭದ್ರರು ತಮ್ಮ 'ಸ್ತುತಿವಿದ್ಯಾ' ಅಥವಾ 'ಜಿನಶತಕ' ಎಂಬ ಸ್ತೋತ್ರದಲ್ಲಿ ಪ್ರಯೋಗಿಸಿದ್ದಾರೆ[3] ಇದರಿಂದ ಗ್ರಂಥಕಾರರಿಗೆ 'ವರ್ಧಮಾನ'ವೆಂಬ ಹೆಸರನ್ನೇ ಸೂಚಿಸಬೇಕಾಗಿದೆ ಎಂಬುದು ಗೊತ್ತಾಗುತ್ತದೆ, 'ಶ್ರೀವರ್ಧಮಾನ'ನೆಂದಲ್ಲ ಸಮಂತಭದ್ರರಿಗಿಂತ ಪೂರ್ವದಲ್ಲಿ ಆಗಿಹೋದ ಆಚಾರ್ಯ ಕುಂದಕುಂದರೂ ಸಹ ತಮ್ಮ 'ಪ್ರವಚನಸಾರ'ದ ಆರಂಭದಲ್ಲಿ 'ಪಣಮಾಮಿ ವಡ್ಢಮಾಣಂ' ಎಂಬ ವಾಕ್ಯದಿಂದ 'ವರ್ಧಮಾನ' ಎಂಬ ಹೆಸರನ್ನೇ ಸೂಚಿಸಿದ್ದಾರೆ ಇವೆಲ್ಲವುಗಳನ್ನು ಗಮನಿಸಿದಲ್ಲಿ 'ಶ್ರೀ' ಎಂಬುದು ಇಲ್ಲಿ ವಿಶೇಷಣವೇ ಇರುತ್ತದೆಂದು ನಿಶ್ಚಿತನಾಗುತ್ತದೆ

'ಶ್ರೀ' ಶಬ್ದವು ಲಕ್ಷ್ಮೀ, ಧನಾದಿ ಸಂಪತ್ತಿ, ವಿಭೂತಿ, ವಾಗ್ದೇವೀ—ಸರಸ್ವತೀ—ವಾಣೀ—ಭಾರತೀ—ಶೋಭಾ, ಪ್ರಭಾ, ಉಚ್ಚಸ್ಥಿತಿ, ಮಹಾನತಾ, ದಿವ್ಯಶಕ್ತಿ, ಗುಣೋತ್ಕರ್ಷ ಮತ್ತು ಆದರಸತ್ಕಾರಾದಿ ಅನೇಕ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ[4] ಅದನ್ನು ಯಾವ ವಿಶೇಷಣದ ಜೊತೆಗೆ ಜೋಡಿಸಲಾಗುತ್ತದೆಯೋ ಅದರ ಸ್ಥಿತಿಗೆ ಅನುಸರಿಸಿ, ಇದರ ಅರ್ಥದಲ್ಲಿಯೂ ಹೆಚ್ಚುಕಡಿಮೆಗಳುಂಟಾಗುತ್ತವೆ ಇಲ್ಲಿ ಜಿನ, ಆಪ್ತ, ಭಗವಾನ್ ವರ್ಧಮಾನರಿಗಾಗಿ ಈ ಪದವನ್ನು ವಿಶೇಷಣ ರೂಪದಲ್ಲಿ ಪ್ರಯೋಗಿಸಲಾಗಿದೆ ಅದರಿಂದ 'ಶ್ರೀ' ಪದವು ಭಗವಂತನ ವಚನಶ್ರೀಯನ್ನು—ಭಾರತೀ ವಿಭೂತಿಯನ್ನು—ಪ್ರದರ್ಶಿಸುತ್ತದೆ, ದಿವ್ಯವಾಣಿಯ ದ್ಯೋತಕವಾಗಿದೆ ಇದೇ ಸಮಂತಭದ್ರರು ತಮ್ಮ 'ಸ್ವಯಂಭೂಸ್ತೋತ್ರ'ದಲ್ಲಿ ಭಗವಂತನ ಜೀವನ್ಮುಕ್ತಾವಸ್ಥೆ—ಅರ್ಹಂತಪದ-ಯನ್ನು ವರ್ಣಿಸುವಾಗ ಸರ್ವಜ್ಞಲಕ್ಷ್ಮಿಯಿಂದ ಪ್ರದೀಪ್ತವಾದ 'ಸರಸ್ವತೀ' ಎಂದು ಉಲ್ಲೇಖಿಸಿದ್ದಾರೆ[5] ಜೊತೆಗೇನೇ ಆ ದಿವ್ಯವಾಣಿಯು ಮುಖಾಂತರ ತತ್ತ್ವಾರ್ಥದ ವಿವರಣೆಯು—ಸಮ್ಯಗ್ವರ್ಣನೆಯು—ಆಗುವುದರಿಂದ ಅದಕ್ಕೆ 'ಕೀರ್ತಿ' ಎಂಬ ಹೆಸರನ್ನೂ ಕೊಟ್ಟಿದ್ದಾರೆ ಮತ್ತು ವರ್ಧಮಾನ ಸ್ವಾಮಿಯ ಮಹತಿಯು ಕೀರ್ತಿಯು ಯುಕ್ತಿಶಾಸ್ತ್ರಾವಿರೋಧಿನೀ ದಿವ್ಯವಾಣಿಯ ಮುಖಾಂತರ ಭೂಮಿಯ ಮೇಲೆಲ್ಲ ವರ್ಧಿಸಿತು—ವಿಸ್ತಾರವನ್ನು ಹೊಂದಿತು[6] ಎಂದೂ ಹೇಳಿದ್ದಾರೆ ಈ ಆರ್ಹಂತ್ಯಲಕ್ಷ್ಮಿಯಿಂದ ಆಪ್ತಭಗವಾನ್‌ನು ದೇವ-ಮನುಷ್ಯಾದಿಗಳ ಮಹತ್ವಪೂರ್ಣ ಸಮವಸರಣ ಸಭೆಯಲ್ಲಿ ಶೋಭೆಯನ್ನು ಹೊಂದುತ್ತಾನೆ[7] ಅವನ ಈ ದಿವ್ಯವಾಣಿಯು ಪ್ರಧಾನ

---

[1] ಜಪ್ಪಭಿಇಂ ಚ ಣಂ ಏಸ ದಾರಏ ಕುಚ್ಛಿಂಸಿ ಗಬ್ಭತ್ತಾಏ ವಕ್ಕಂತೆ ತಪ್ಪಭಿಇಂ ಚ ಣಂ ಅಹ್ಮೆ ಹಿರಣ್ಣೇಣಂ ವಡ್ಢಾಮೊ ಸುವಣ್ಣೇಣಂ ಧಣೇಣಂ ಧನ್ನೇಣಂ ರಜ್ಜೇಣಂ ರಟ್ಠೇಣಂ ಬಲೇಣಂ ವಾಹಣೇಣಂ ಕೋಸೇಣಂ ಕುಟ್ಠಾಗಾರೇಣಂ ಪುರೇಣಂ ಅಂತೆಉರೇಣಂ ಜಣವಏಣಂ ಜಾವ ಸಏಣಂ ವಡ್ಢಾಮೊ ವಿಪುಲಧಣ-ಕಣಗ-ರಯಣ-ಮಣಿ-ಮುತ್ತಿಯ-ಸಂಖ-ಸಿಲಪ್ಪವಾಲರತ್ತರಯಣಮಾಇಏಣಂ ಸಂತ-ಸಾರಸಾವಇಜ್ಜೇಣಂ ಪೀಇ-ಸಕ್ಕಾರೇಣಂ ಅಈವ ಅಈವ ವಡ್ಢಾಮೊ, ತಂ ಜಯಾ ಣಂ ಅಹ್ಮಂ ಏಸ ದಾರಏ ಜಾಏ ಭವಿಸ್ಸಇ ತಯಾ ಣಂ ಅಹ್ಮೆ ಏಯಸ್ಸ ದಾರಗಸ್ಸ ಏಯಾಣುರೂವಂ ಗುಣ್ಣಂ ಗುಣನಿಪ್ಪಣ್ಣಂ ನಾಮಧೆಜ್ಜಂ ಕರಿಸ್ಸಾಮೋ ವಡ್ಢಮಾಣೊ ತ್ತಿ ॥ ೯೦ ॥ —ಕಲ್ಪಸೂತ್ರ

[2] ಅಲಂ ತದಿತಿ ತಂ ಚಕ್ರಾತ್ಮ ವಿಬೂಷ್ಯೋದ್ಯದ್‌ವಿಭೂಷಣಃ ।
ವೀರಃ ಶ್ರೀವರ್ಧಮಾನಸ್ತೇಷ್ವಿತ್ಯಾಖ್ಯಾ-ದ್ವಿತಯಂ ವ್ಯಧಾತ್ ॥ —ಉತ್ತರಪುರಾಣ, ಪರ್ವ ೭೪, ೨೭೬

[3] ಶ್ರೀಮತೆ ವರ್ಧಮಾನಾಯ ನಮೋ ನಮಿತವಿದ್ವಿಷೆ" —ಜಿನಶತಕ ೧೧೨

[4] ಶ್ರೀರ್ಲಕ್ಷ್ಮೀ-ಭಾರತೀ-ಶೋಭಾ ಪ್ರಭಾಸು ಸರಲದ್ರುಮೆ ।
ವೇಶ-ತ್ರಿವರ್ಗ-ಸಂಪತ್ತಾ ಶೇಷಾಪಕರಣೇ ಮತೌ ॥" —ವಿಶ್ವಲೋಚನ, ಶ್ರೀಧರಃ
ಶ್ರೀರ್ಲಕ್ಷ್ಮ್ಯಾಂ ಮತೌ ಗಿರಿ । ಶೋಭಾತ್ರಿವರ್ಗಸಂಪತ್ಯೋಃ " —ಅಭಿಧಾನಸಂಗ್ರಹ, ಹೇಮಚಂದ್ರ

[5] ಬಭಾರ ಪದ್ಮಾಂ ಚ ಸರಸ್ವತೀಂ ಚ ಭವಾನ್ಪುರಸ್ತಾತ್ ಪ್ರತಿಮುಕ್ತಿಲಕ್ಷ್ಮ್ಯಾಃ ।
ಸರಸ್ವತೀಮೇವ ಸಮಗ್ರಶೋಭಾಂ ಸರ್ವಜ್ಞಲಕ್ಷ್ಮೀ-ಜ್ವಲಿತಾಂ ವಿಮುಕ್ತಃ ॥ ೨೭ ॥ —ಸ್ವಯಂಭೂಸ್ತೋತ್ರ

[6] ಕೀರ್ತ್ಯಾ ಮಹತ್ಯಾ ಭುವಿ ವರ್ಧಮಾನಂ ತ್ವಾಂ ವರ್ಧಮಾನಂ ಸ್ತುತಿಗೋಚರತ್ವಮ್ ।
ವಿನೀಷವಃ ಸ್ಮೋ ವಯಮದ್ಯ ವೀರಂ ವಿಶೀರ್ಣ-ದೋಷಾಶಯ-ಪಾಶಬಂಧಮ್ ॥ —ಯುಕ್ತ್ಯನುಶಾಸನ ॥

[7] ಆರ್ಹಂತ್ಯಲಕ್ಷ್ಮ್ಯಾಃ ಪುನರಾತ್ಮತಂತ್ರೋ ದೇವಾಸುರೋದಾರಸಭೇ ರರಾಜ ॥ —ಸ್ವಯಂಭೂಸ್ತೋತ್ರ ೭೪

ಅಂಗವಾಗಿದೆ  ಇದರಿಂದಲೇ ಶಾಸನತೀರ್ಥ ಅಥವಾ ಆಗಮತೀರ್ಥದ ಪ್ರವರ್ತನವಾಗುತ್ತದೆ. ಅದರ ಪ್ರವರ್ತಕನೆಂದೇ ಭಗವಂತನನ್ನು ಶಾಸ್ತಾ, ತೀರ್ಥಂಕರ, ಆಗಮೇಶಿ ಎಂದು ಹೇಳುತ್ತಾರೆ. ಇನ್ನೆರಡು ಪ್ರಮುಖ ಅಂಗಗಳಲ್ಲಿ ನಿರ್ದೋಷತ್ವ ಮತ್ತು ಸರ್ವಜ್ಞತ್ವಗಳು ಸಮಾವೇಶವಾಗುತ್ತವೆ  ಇವುಗಳನ್ನು ಈ ಮಂಗಲಪದ್ಯದಲ್ಲಿ 'ನಿರ್ಧೂತಕಲಿಲಾತ್ಮನೆ' ಮೊದಲಾದ ಪದಗಳಿಂದ ಉಲ್ಲೇಖಿಸಲಾಗಿದೆ  ವರ್ಧಮಾನನ ಮೂರೂ ವೈಶಿಷ್ಟ್ಯಗಳಲ್ಲಿ ಧರ್ಮತೀರ್ಥಪ್ರವರ್ತನೆಗೆ ದಿವ್ಯವಾಣಿಯೇ ಕಾರಣವಾಗಿದೆ  ಅದನ್ನು 'ಶ್ರೀ' ಶಬ್ದದ ಮುಖಾಂತರ ವ್ಯಕ್ತಗೊಳಿಸಲಾಗಿದೆ—ಎಂಬುದು ಇನ್ನೂ ಸ್ಪಷ್ಟಗೊಳ್ಳುತ್ತದೆ  ಇದೇ ಶಾಸ್ತ್ರದ ಐದನೆಯ ಸೂತ್ರದಲ್ಲಿ ಆಪ್ತನ ಲಕ್ಷಣಗಳನ್ನು ಹೇಳುವಾಗ ಉತ್ಸನ್ನದೋಷ, ಸರ್ವಜ್ಞ, ಆಗಮೇಶಿ ಎಂದು ಹೇಳಿದೆ  ಅವು ಈ ವರ್ಧಮಾನರನ್ನು ಲಕ್ಷ್ಯದಲ್ಲಿ ಇಟ್ಟುಕೊಂಡೇ ಆಚಾರ್ಯರು ಹೇಳಿದ್ದಾರೆ. ಅದರಂತೆ 'ಯುಕ್ತ್ಯಾನುಶಾಸನ'ದ ಪ್ರಥಮ ಪದ್ಯದಲ್ಲಿಯೂ ಸಹ ವರ್ಧಮಾನರ ಸ್ತುತಿಯನ್ನು ಮಾಡುವಾಗಲೂ ಇದೇ ಮೂರು ವಿಶೇಷಣಗಳನ್ನು ಪ್ರಯೋಗಿಸಿದ್ದುಂಟು. ಅಲ್ಲಿ 'ವಿಶೀರ್ಣ-ದೋಷಾಶಯಪಾಶ-ಬಂಧಮ್' ಎಂಬ ಪದಗಳಿಂದ ಈ ಗುಣತ್ರಯವನ್ನು ನಿರ್ದೇಶಿಸಲಾಗಿದೆ. ಈ ಧರ್ಮಶಾಸ್ತ್ರದಲ್ಲಿ—ರತ್ನಕರಂಡ—ಎಲ್ಲಿಡೆಗೂ ಪಾಪವನ್ನು ದೂರಗೊಳಿಸಲಿಕ್ಕೆ ಬೋಧಿಸಿದೆ  ಆ ಬೋಧೆಯು ವರ್ಧಮಾನ ತೀರ್ಥಂಕರರ ಉಪದೇಶದಂತೆ ಸಾಗಿದ್ದಾಗಿದೆ  ಅದು ತೀರ್ಥಂಕರರ ಧರ್ಮಶಾಸನವಾಗಿದೆ  ಈಗಲೂ ಆ ಧರ್ಮವು ಜನಜೀವನದಲ್ಲಿ ಜೀವಂತವಾಗಿದೆ  ಆದರಿಂದ ಈ ಧರ್ಮಶಾಸ್ತ್ರದ ಆದಿಯಲ್ಲಿ ಅವರನ್ನು ಸ್ಮರಿಸುವುದು ಸಾರ್ಥಕವಾಗಿದೆ, ಯುಕ್ತಿಯುಕ್ತವಾಗಿದೆ  ಅದರಲ್ಲೂ ಇಲ್ಲಿ ಅವರು 'ನಿರ್ಧೂತಕಲಿಲಾತ್ಮಾ' ಎಂದು ಹೇಳಿದ್ದು ಇನ್ನೂ ಸಾರ್ಥಕವಾಗಿದೆ  ತಾನೇ ಪಾಪಮಲವನ್ನು ಕಳೆದುಕೊಳ್ಳದವ ಇನ್ನೊಬ್ಬರಿಗೆ ಪಾಪವನ್ನು ಕಳೆದುಕೊಳ್ಳಲಿಕ್ಕೆ ಬೋಧಿಸುವುದಾದರೂ ಹೇಗೆ? ಆದರೆ ವರ್ಧಮಾನರು ಅಂಥವರಲ್ಲವೆಂದು ಇಲ್ಲಿ ಸೂಚಿಸಿದುದು ಸಮಂತಭದ್ರರ ಬುದ್ಧಿಮತ್ತೆಯನ್ನು ವ್ಯಕ್ತಪಡಿಸುತ್ತಿದೆ. ಅದರಿಂದ ಇಲ್ಲಿಯ ಒಂದೊಂದು ಪದಕ್ಕೂ ಮಹತ್ವವಿದೆ, ವೈಶಿಷ್ಟ್ಯವಿದೆ

'ಕಲಿಲ' ಎಂಬ ಪದವು ಕಲ್ಮಷ, ಪಾಪ ಮತ್ತು ದುರಿತ ಎಂಬ ಅರ್ಥಗಳಲ್ಲಿದೆ. 'ನಿರ್ಧೂತಕಲಿಲಾತ್ಮನೆ' ಎನ್ನುವ ಪದದಿಂದ ವರ್ಧಮಾನ ಜಿನೇಂದ್ರರು ಘಾತಿಕರ್ಮಗಳಿಂದ ರಹಿತರೆಂದು ವ್ಯಕ್ತಪಡಿಸಿದ್ದಾರೆ  ಶ್ರೀ ಕುಂದಕುಂದಾಚಾರ್ಯರು ಸಹ ತಮ್ಮ 'ಪ್ರವಚನಸಾರ'ದ ಆರಂಭದಲ್ಲಿ ವರ್ಧಮಾನರನ್ನು 'ಧೋದಘಾಇಕಮ್ಮ-ಮಲಂ' ಎಂದು ಇದೇ ಅರ್ಥದಲ್ಲಿ ಹೇಳಿದ್ದುಂಟು  ಇನ್ನು ಇದೇ ಸಮಂತಭದ್ರರು ಕೂಡ 'ಸ್ವಯಂಭೂ ಸ್ತೋತ್ರ'ದ ಪಾರ್ಶ್ವಜಿನಸ್ತವನದಲ್ಲಿ ಅವರನ್ನು 'ವಿಧೂತಕಲ್ಮಷಂ' ಎಂದೂ ಹೇಳಿದ್ದಾರೆ.

ಇನ್ನು 'ಲೋಕ'ವೆಂಬ ಪದವು ಜೈನಾಗಮದ ಪ್ರಕಾರ ಊರ್ಧ್ವ, ಮಧ್ಯ, ಅಧೋ ಲೋಕಗಳನ್ನು ಸೂಚಿಸುತ್ತದೆ  ಇವು ಮೂರಕ್ಕೂ ಸೇರಿ 'ತ್ರಿಲೋಕ'ವೆಂದು ಸಂಜ್ಞೆಯಿದೆ. ಈ ಮೂರೂ ಲೋಕದ ಹೊರಗೆ ಇರುವ ಕ್ಷೇತ್ರಕ್ಕೆ 'ಅಲೋಕ'ವೆಂದು ಹೆಸರು  ಈ ಲೋಕ, ಅಲೋಕಗಳನ್ನುಳಿದು ವಿಶ್ವದಲ್ಲಿ ತಿಳಿದು-ಕೊಳ್ಳುವಂಥದೇನೂ ಇಲ್ಲ  ಈ ಲೋಕಾಲೋಕವನ್ನೆಲ್ಲ ಭಗವಂತರು ಅರಿತುಕೊಂಡದ್ದರಿಂದ ಅವರ ಜ್ಞಾನದ ಸೀಮೆಯ ಹೊರಗೆ ತಿಳಿದುಕೊಳ್ಳುವಂಥದೇನೂ ಉಳಿದಿಲ್ಲ. ಅದರಿಂದಲೇ ಅವರು ಸರ್ವಜ್ಞರು. ಇಲ್ಲಿ ಶ್ರೀ ಕುಂದಕುಂದಾಚಾರ್ಯರು 'ಪ್ರವಚನಸಾರ'ದಲ್ಲಿ ಹೇಳಿದ ಮಾತುಗಳನ್ನೂ ಗಮನಿಸಬೇಕು. ಅವರು 'ಆತ್ಮನು ಜ್ಞಾನಪ್ರಮಾಣನಾಗಿದ್ದಾನೆ'—ಎಂದು ಹೇಳಿದ್ದಾರೆ.[1] ಜ್ಞಾನಕ್ಕಿಂತ ದೊಡ್ಡವನಾಗಲಿ, ಚಿಕ್ಕವನಾಗಲಿ ಆತ್ಮನು ಇಲ್ಲ. ಜ್ಞಾನಕ್ಕಿಂತ ಆತ್ಮನು ಪ್ರಮಾಣದಲ್ಲಿ ದೊಡ್ಡವನೆಂದು ಹೇಳಿದರೆ ಜ್ಞಾನಕ್ಕಿಂತ ಹಿರಿದಾದ ಆ ಭಾಗವು ಜ್ಞಾನಶೂನ್ಯ ಅಥವಾ ಜಡವೆನಿಸಬಹುದು  ಜ್ಞಾನಕ್ಕಿಂತ ಆತ್ಮನು ಚಿಕ್ಕವನೆಂದರೆ ಅವನ ಆ ಆತ್ಮಪ್ರದೇಶ-ವನ್ನುಳಿದು ಹೊರಗೆ ಇರುವ ಜ್ಞಾನವು ಏನನ್ನು ಆಶ್ರಯಿಸಿ ನಿಲ್ಲುವುದು? ಗುಣಿ (ದ್ರವ್ಯ)ಯನ್ನು ಆಶ್ರಯಿಸಿಯೇ ಗುಣವು ಇರತಕ್ಕದು  ಈ ಮಾತನ್ನು ಶ್ರೀ ಉಮಾಸ್ವಾಮಿ ಆಚಾರ್ಯರೂ 'ತತ್ತ್ವಾರ್ಥಸೂತ್ರ'ದಲ್ಲಿ 'ದ್ರವ್ಯಾಶ್ರಯಾ ನಿರ್ಗುಣಾ ಗುಣಾಃ' ಎಂದು ಗುಣದ ಲಕ್ಷಣವನ್ನು ಹೇಳುತ್ತ ಸಮರ್ಥಿಸಿದ್ದಾರೆ. ಇದರಿಂದ

---

1 ಆದಾ ಣಾಣಪಮಾಣಂ ಣಾಣಂ ಣೇಯಪ್ಪಮಾಣಮುದ್ದಿಟ್ಠಂ ।
ಣೇಯಂ ಲೋಯಾಲೋಯಂ ತಹ್ಮಾ ಣಾಣಂ ತು ಸವ್ವಗಯಂ ॥  —ಪ್ರವಚನಸಾರ ೧ ೨೩

ಆತ್ಮನು ಜ್ಞಾನಸ್ವರೂಪಿಯು ಎಂದಾಗ ಅವನು ಜ್ಞಾನಕ್ಕಿಂತ ಹಿರಿಯನೂ ಅಲ್ಲ, ಕಿರಿಯನೂ ಅಲ್ಲ—ಜ್ಞಾನ ಪ್ರಮಾಣನು—ಎಂಬ ಸಂಗತಿಯು ಧ್ವನಿತಗೊಳ್ಳುತ್ತದೆ ಈ ದಿಮ್ಯಧ್ವನಿಗೆ ಯಾವ ಬಾಧೆಯೂ ಇಲ್ಲ.

ಆತ್ಮವು ಜ್ಞಾನಪ್ರಮಾಣವಾಗಿದೆ ಮತ್ತು ಜ್ಞಾನವು ಜ್ಞೇಯಪ್ರಮಾಣವಾಗುವುದರಿಂದ ಅದು ಲೋಕಾಲೋಕಪ್ರಮಾಣವಾಗಿದೆ ಹಾಗೆಯೇ ಸರ್ವವ್ಯಾಪಿಯೂ ಆಗಿದೆ. ಈಗ ಆತ್ಮವೂ ಸರ್ವವ್ಯಾಪಿ ಎಂಬುದು ಸ್ಪಷ್ಟವಾಯಿತು ಇದರಿಂದ ಆತ್ಮವು ತನ್ನ ಜ್ಞಾನಗುಣಸಹಿತ ಸರ್ವವ್ಯಾಪಕವಾಗಿ ಲೋಕಾಲೋಕ ವನ್ನು ತಿಳಿಯುತ್ತದೆಂಬ ಸಂಗತಿಯು ನಿಷ್ಕರ್ಷಗೊಳ್ಳುತ್ತದೆ ಅದಕ್ಕಾಗಿಯೇ ಶ್ರೀ ವರ್ಧಮಾನ ಸ್ವಾಮಿಯು ಲೋಕ-ಅಲೋಕವನ್ನೆಲ್ಲ ತಿಳಿಯುವುದರಿಂದ 'ಸರ್ವಜ್ಞ'ನೆನಿಸುತ್ತಾನೆ. ಮತ್ತು ಅವನು ಸರ್ವವ್ಯಾಪಿಯಾಗಿಯೇ ಅವನ್ನೆಲ್ಲ ತಿಳಿಯುತ್ತಾನೆ. ಆದರೆ ಆತ್ಮನು ಯಾವಾಗಲೂ ಸ್ವಾತ್ಮ-ಪ್ರದೇಶದಲ್ಲಿ ಸ್ಥಿರವಾಗಿರುತ್ತಾನೆ. ಸಂಸಾರಾ-ವಸ್ಥೆಯಲ್ಲಿ ಆತ್ಮನ ಯಾವ ಪ್ರದೇಶವೂ ಮೂರೋತ್ತರರೂಪ ಆತ್ಮ-ದೇಹದಿಂದ ಹೊರಗೆ ಹೋಗುವದಿಲ್ಲ. ಮತ್ತು ಮುಕ್ತಾವಸ್ಥೆಯಲ್ಲಿ ಶರೀರದ ಸಂಬಂಧವು ಸದಾ ಬಿಟ್ಟುಹೋಗಿರುತ್ತದೆ ಆಗ ಆತ್ಮಪ್ರದೇಶವು ಬಹುತರ ಚರಮದೇಹದ ಆಕಾರವನ್ನು ಹೊಂದಿ ಲೋಕದ ಅಗ್ರಭಾಗದಲ್ಲಿ ಹೋಗಿ ನಿಲ್ಲುತ್ತದೆ ಅಲ್ಲಿಂದ ತಿರುಗಿ ಯಾವ ಕಾಲಕ್ಕೂ ಯಾವ ಪ್ರದೇಶಕ್ಕೂ ಅದು ಸ್ವಾತ್ಮನಿಂದ ಹೊರಹೊರಟು, ಅನ್ಯ ಪದಾರ್ಥದಲ್ಲಿ ಸೇರುವದಿಲ್ಲ. ಇದರಿಂದಲೇ ಇಂಥ ಶುದ್ಧಾತ್ಮರಿಗೆ—ಮುಕ್ತಾತ್ಮರಿಗೆ—'ಸ್ವಾತ್ಮಸ್ಥಿತ'ವೆಂದು ಹೇಳಲಾಗಿದೆ ಮತ್ತು ಪ್ರದೇಶದ ದೃಷ್ಟಿಯಿಂದ ಸರ್ವವ್ಯಾಪಕವೆಂದು ಮನ್ನಿಸಲಾಗಿಲ್ಲ, ಆದರೆ ಜೊತೆಗೇನೇ 'ಸರ್ವಗತ'ವೆಂದೂ ಹೇಳಲಾಗಿದೆ[1] ಅಂದಮೇಲೆ ಈ ಸರ್ವಗತತ್ವದ ರಹಸ್ಯವಾದರೂ ಏನು? ಮುಕ್ತಾತ್ಮನ ಜ್ಞಾನವು ಒಂದೇ ಸ್ಥಾನದಲ್ಲಿದ್ದು, ಜಗತ್ತಿನ ಎಲ್ಲ ಪದಾರ್ಥಗಳನ್ನು—ಯುಗವತ್—ಹೇಗೆ ತಿಳಿಯುತ್ತದೆ? ಇದೊಂದು ಅರ್ಥಪೂರ್ಣವಾದ ಸಂಗತಿಯಾಗಿದೆ ಇದನ್ನು ಸ್ವಾಮಿ ಸಮಂತಭದ್ರಾಚಾರ್ಯರು 'ಯದ್ವಿದ್ಯಾ ದರ್ಪಣಾಯತೆ' ಎಂಬ ಪದಗಳ ಮುಖಾಂತರ ಸ್ವಲ್ಪದರಲ್ಲಿ ಸ್ವಾರಸ್ಯತರವಾಗಿ ಸ್ಪಷ್ಟಗೊಳಿಸಿದ್ದಾರೆ ಇಲ್ಲಿ ಕನ್ನಡಿಗೆ ಶುದ್ಧಾತ್ಮನ ಜ್ಞಾನವನ್ನು ಹೋಲಿಸಿದ್ದು ಬಹು ಅರ್ಥಪೂರ್ಣವಾಗಿದೆ ಕನ್ನಡಿಯು ತಾನಿದ್ದಲ್ಲಿಯೇ ಇರುವುದು, ಪದಾರ್ಥಗಳೂ ಕೂಡ ಇದ್ದಲ್ಲಿಯೇ ಇರುತ್ತವೆ. ಆದರೆ ಅವುಗಳ ಪ್ರತಿಬಿಂಬವು ಕನ್ನಡಿಯಲ್ಲಿ ಮೂಡುತ್ತದೆ ಇದಕ್ಕೆ ಕನ್ನಡಿ ಹಾಗೂ ಪದಾರ್ಥಗಳು ಇವುಗಳಲ್ಲಿ ಯಾವುದೂ ಇಚ್ಛಿಸುವ ಕಾರಣವಿಲ್ಲ ಅದು ಪದಾರ್ಥಧರ್ಮದಿಂದಲೇ ನಡೆಯುತ್ತದೆ, ವಸ್ತು ಸ್ವಭಾವವೇ ಆಗಿದೆ ಇದೇ ಪ್ರಕಾರ ವಸ್ತುಸ್ವಭಾವದಿಂದಲೇ ಶುದ್ಧಾತ್ಮನಾದ ಕೇವಲಿಯ ಕೇವಲಜ್ಞಾನರೂಪ ಕನ್ನಡಿಯಲ್ಲಿ ಅಲೋಕಸಹಿತ ಎಲ್ಲ ಪದಾರ್ಥಗಳೂ ಪ್ರತಿಬಿಂಬಿತವಾಗುತ್ತವೆ ಈ ದೃಷ್ಟಿಯಿಂದ ಅವನ ಆ ನಿರ್ಮಲಜ್ಞಾನವು ಆತ್ಮಪ್ರದೇಶದ ಅಪೇಕ್ಷೆಯಿಂದ ಸರ್ವಗತವಾಗದೆಯೂ ಸರ್ವಗತವೆಂದು ಹೇಳಲ್ಪಡುತ್ತದೆ. ಅದರಂತೆ ಕೇವಲಿಯೂ ಸಹ ಸ್ವಾತ್ಮಸ್ಥಿತನಾಗಿದ್ದು ಸರ್ವಗತನೆನಿಸುತ್ತಾನೆ ಇದರಲ್ಲಿ ವಿರೋಧದ ಸಂಗತಿಗಳು ಯಾವುವೂ ಇಲ್ಲ ಶ್ರೀ ವರ್ಧಮಾನ ಸ್ವಾಮಿಯು ಪ್ರದೇಶದ ಅಪೇಕ್ಷೆಯಿಂದ ಸರ್ವವ್ಯಾಪಕನಾಗದೆ ಇದ್ದರೂ ಸ್ವಾತ್ಮಸ್ಥಿತನಾಗಿದ್ದು, ಸರ್ವಪದಾರ್ಥಗಳನ್ನು ತಿಳಿಯುವುದರಲ್ಲಿ—ಪ್ರತಿಭಾಸಿತಗೊಳಿಸುವುದರಲ್ಲಿ— ಯಾವ ಬಾಧೆಯೂ ಉಂಟಾಗುವದಿಲ್ಲ

ಇಲ್ಲಿ ಒಂದು ಪ್ರಶ್ನೆಯನ್ನು ಮಾಡಲಾಗುತ್ತದೆ ಕನ್ನಡಿಯು ಎದುರಿಗಿದ್ದ ಸ್ಥೂಲಪದಾರ್ಥಗಳನ್ನು ಮಾತ್ರ ಪ್ರತಿಬಿಂಬಿಸುತ್ತದೆ ಉಳಿದ ಕಡೆಗೆ ಇದ್ದ ವಸ್ತುಗಳನ್ನು ಅದು ಪ್ರತಿಬಿಂಬಿಸುವದಿಲ್ಲ ಅದರಂತೆ ಅದು ಭೂತ-ಭವಿಷ್ಯತ್‌ಕಾಲದ ಪದಾರ್ಥಗಳನ್ನೂ ಸೂಕ್ಷ್ಮ ವಸ್ತುಗಳನ್ನೂ ಪ್ರತಿಭಾಸಿಸುವದಿಲ್ಲ ದೂರವಿದ್ದ ಪದಾರ್ಥ ಗಳನ್ನೆಲ್ಲವನ್ನೂ ಸಹ ಅದು ಪ್ರತಿಫಲಿಸುವದಿಲ್ಲ ಅಂದಮೇಲೆ ಇಂಥ ಕನ್ನಡಿಗೆ ಸಮಾನವಾದ ಜ್ಞಾನವು—ಕೇವಲ ಅಥವಾ ಭಗವಾನ್ ಮಹಾವೀರರ ಜ್ಞಾನವು—ಅಲೋಕಸಹಿತ ಮೂರೂ ಲೋಕಗಳನ್ನೂ ಸರ್ವ ಪದಾರ್ಥಗಳನ್ನೂ ಯುಗವತ್ ಹೇಗೆ ಪ್ರತಿಭಾಸಿತಗೊಳಿಸುತ್ತದೆ? ಇದು ಸಾಧ್ಯವಿಲ್ಲದಿದ್ದರೆ ಸರ್ವಜ್ಞತೆಯು ಹೇಗೆ ಸಿದ್ಧಿಸುತ್ತದೆ? ಮತ್ತು 'ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೆ' ಎಂಬ ವಿಶೇಷಣವು ಶ್ರೀ ವರ್ಧಮಾನಸ್ವಾಮಿಗೆ ಹೇಗೆ ಸಮರ್ಪಕವೆನಿಸುವುದು?

---

1 ಸ್ವಾತ್ಮಸ್ಥಿತಃ ಸರ್ವಗತಃ ಸಮಸ್ತವ್ಯಾಪಾರವೇದೀ ವಿನಿವೃತ್ತಸಂಗಃ । —ಧನಂಜಯಕೃತ 'ವಿಷಾಪಹಾರ ಸ್ತೋತ್ರ'

ಇದಕ್ಕೆ ಉತ್ತರವಿಷ್ಟೆ ಜ್ಞಾನವು ಉಪಮೇಯ, ಕನ್ನಡಿಯು ಉಪಮಾನವು. ಈ ಉಪಮಾನದಿಂದ ಜ್ಞಾನದ ಸ್ಥೂಲ ಕಲ್ಪನೆಯಾದರೂ ಉಂಟಾಗಲೆಂದು ಆಚಾರ್ಯರ ಉದ್ದೇಶವಾಗಿದೆ ಅದನ್ನುಳಿದು ಕನ್ನಡಿಯ ಎಲ್ಲ ಗುಣಗಳೂ ಜ್ಞಾನದಲ್ಲಿವೆ, ಕನ್ನಡಿಯೇ ಜ್ಞಾನವೆಂದು ಭ್ರಮಿಸುವುದು ತಪ್ಪಾಗುವುದು. ಕಮಲಮುಖಿ ಎಂದಾಗ ಕಮಲದಂತೆ ಮುಖವು ಸುಂದರವೆಂದಿಷ್ಟೆ ಅರ್ಥ ಹೊರತಾಗಿ ಮುಖಕ್ಕೂ ಕಮಲದಂತೆ ಎಲೆಗಳಿದ್ದುವೆಂದು ಭಾವಿಸಕೂಡದು ಹಾಗೆಯೇ ಇಲ್ಲಿ ಜ್ಞಾನ ಮತ್ತು ಕನ್ನಡಿಗಳೆರಡೂ ವಸ್ತುನಿರಪೇಕ್ಷ ಹಾಗೂ ತಮ್ಮ ತಮ್ಮ ಸ್ಥಳಗಳಲ್ಲಿಯೇ ಇದ್ದು ಈ ಕಾರ್ಯವನ್ನು—ಪದಾರ್ಥಗಳನ್ನು ಪ್ರತಿಭಾಸಿತಗೊಳಿಸುವದನ್ನು—ಮಾಡುತ್ತವೆಂಬ ಭಾವವನ್ನು ಮಾತ್ರ ಗ್ರಹಿಸಬೇಕು

ಇದಲ್ಲದೆ ಈಗ ಭೌತಿಕ ವಸ್ತುವೆನಿಸುವ ಈ ಕನ್ನಡಿಯಲ್ಲಿಯೂ ಸಹ ವಿವಿಧ ಪ್ರಕಾರಗಳು ಇವೆ. ಎಕ್ಸರೇ, ದೂರದರ್ಶಕ ಯಂತ್ರ, ಫೋಟೊಗ್ರಾಫಿಯೊಳಗಿನ ಕನ್ನಡಿ ಮೊದಲಾದವುಗಳು ವಿವಿಧ ಹಾಗೂ ವಿಶಿಷ್ಟಗುಣಗಳುಳ್ಳವು-ಗಳಾಗಿವೆ ವಿಜ್ಞಾನಯುಗದ ಈ ಪ್ರಗತಿಗಳನ್ನು ಗಮನಿಸಿದಾಗ ಕೇವಲಜ್ಞಾನದ ಆ ಅನುಪಮ ಶಕ್ತಿಗಾಗಿ ನಾವು ಆಶ್ಚರ್ಯಹೊಂದುವ ಕಾರಣವೇ ಉಳಿಯುವದಿಲ್ಲ ಇದಲ್ಲದೆ ಸ್ಮೃತಿ-ಜ್ಞಾನ-ದರ್ಪಣದಲ್ಲಿ ಸಾವಿರಾರು ಮೈಲು ದೂರದ ಹಾಗೂ ಹತ್ತಿಪ್ಪತ್ತು ವರ್ಷಗಳ ಮೊದಲಿನ ಘಟನೆಗಳೂ ಆಕೃತಿಗಳೂ ಸ್ಪಷ್ಟವಾಗಿ ಹೊಳೆಯುತ್ತವೆ ಇನ್ನೂ ಜಾತಿ-ಸ್ಮರಣವೆಂಬ ಕನ್ನಡಿಯಂತೂ ಪೂರ್ವಜನ್ಮಗಳನ್ನೆಲ್ಲವನ್ನೂ ಭೂತಕಾಲದಲ್ಲಿ ಸಾವಿರಾರು ಮೈಲುಗಳ ಆಚೆಗೆ ನಡೆದ ಘಟನೆಗಳನ್ನೂ ಪ್ರತಿಫಲಿಸುತ್ತದೆ ಇದೇ ಪ್ರಕಾರ ನಿಮಿತ್ತಾದಿ ಶ್ರುತಜ್ಞಾನದ ಮುಖಾಂತರ ಚಂದ್ರ-ಸೂರ್ಯ-ಗ್ರಹಣಗಳಂಥ ಭವಿಷ್ಯತ್ಕಾಲದ ಘಟನೆಗಳ ನಿಜವಾದ ತಿಳುವಳಿಕೆಯೂ ಆಗುತ್ತದೆ. ಭೌತಿಕ ಕನ್ನಡಿಯಲ್ಲಿಯ ಇಂದಿನ ಪ್ರಗತಿಯೇ ಇಷ್ಟಾಗಿದೆ ಸ್ಮೃತಿಯೇ ಮೊದಲಾದ ಕ್ಷಾಯೋಪಶಮಿಕ ಜ್ಞಾನದ ಕನ್ನಡಿಯ ಗುಣಗಳೂ ಹೀಗಿರುವಾಗ ಕೇವಲಜ್ಞಾನದಂಥ ಅಲೌಕಿಕ ಕನ್ನಡಿಯ ಗುಣಗಳು ಹೇಗಿರಬೇಡ? ಆ ಸರ್ವಾತಿಶಯಗಳಿಂದ ಕೂಡಿದ ಜ್ಞಾನದರ್ಪಣದಲ್ಲಿ ಅಲೋಕಸಹಿತ ಮೂರೂ ಲೋಕಗಳ ಸರ್ವಪದಾರ್ಥಗಳೂ ಪ್ರತಿಭಾಸಿತಗೊಳ್ಳುತ್ತವೆ. 'ಜ್ಞೇಯ'ವೆಂದು ಹೇಳುವಂಥ—ಅದು ವರ್ತಮಾನವಿರಲಿ ಅಥವಾ ಅವರ್ತಮಾನವಿರಲಿ—ಎಲ್ಲವೂ ಆ ಜ್ಞಾನದ ವಸ್ತುವಾಗಿರುತ್ತವೆ ಅದು ಪೂರ್ಣ ವಿಕಸಿತಗೊಂಡ ಜ್ಞಾನವು ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯವೆಂಬ ಹೆಸರಿನ ನಾಲ್ಕು ಘಾತಿಕರ್ಮಗಳನ್ನು ನಷ್ಟಗೊಳಿಸಿರುತ್ತದೆ ಇದರಿಂದ ಆತ್ಮನ ಅಪ್ರತಿಹತ ಶಕ್ತಿಯುಳ್ಳ ಜ್ಞಾನಜ್ಯೋತಿಯು ಉದಯಹೊಂದಿರುತ್ತದೆ ಆಗ ಲೋಕಾಲೋಕಗಳ ಸಮಸ್ತ ಜ್ಞೇಯ ಪದಾರ್ಥ-ಗಳನ್ನು ತನ್ನ ವಿಷಯಮಾಡಿಕೊಳ್ಳುವುದರಿಂದ ಅದನ್ನು ಯಾವುದೂ ಹಿಂದಿರುಗಿಸಲಾರದು.

ಈ ಕೇವಲಜ್ಞಾನಶಕ್ತಿಯನ್ನು ಇನ್ನಿಷ್ಟು ಸ್ಪಷ್ಟಗೊಳಿಸುತ್ತ ಶ್ರೀ ವಿದ್ಯಾನಂದಸ್ವಾಮಿಗಳು ತಮ್ಮ 'ಅಷ್ಟಸಹಸ್ರಿ'ಯಲ್ಲಿ—ಸಮಂತಭದ್ರರ 'ಆಪ್ತಮೀಮಾಂಸಾ' ಗ್ರಂಥದ ಟೀಕೆಯಲ್ಲಿ—ಹೀಗೆ ವಿವರಿಸಿದ್ದಾರೆ.[1] ಸುಡುವ ಸ್ವಭಾವದ ಅಗ್ನಿ, ಉರುವಲ, ಸುಡುವ ಕ್ರಿಯೆಗೆ ಪ್ರತಿಬಂಧ ಇಲ್ಲದೆ ಇರುವುದು—ಇವು ಮೂರೂ ಒದಗಿದಾಗ ಸುಡುವ ಕಾರ್ಯವು ನಡೆಯದೆ ನಿಲ್ಲುವದಿಲ್ಲ ಅದರಂತೆಯೇ ಅಪ್ರತಿಹತ ಶಕ್ತಿಯುಳ್ಳ ಜ್ಞಾನ-ಜ್ಯೋತಿಯನ್ನು ಧರಿಸುವ ಕೇವಲಜ್ಞಾನಿಯು ಇದ್ದಾಗ ಅವನ ಅರಿವಿಗೆ ಅಳವಡದ ವಸ್ತುವೇ ಉಳಿಯುವದಿಲ್ಲ

ಇನ್ನು ಶ್ರೀ ವರ್ಧಮಾನಸ್ವಾಮಿಯ ಜ್ಞಾನದರ್ಪಣದಲ್ಲಿ ಅಲೋಕಸಹಿತ ಮೂರೂ ಲೋಕಗಳ ಸರ್ವ ವಸ್ತುಗಳು ಪ್ರತಿಭಾಸಿತವಾಗುವವೆಂಬ ಸಂಗತಿಯಲ್ಲಿ ಯಾವ ಬಾಧೆಯೂ ಉಳಿಯಲಿಲ್ಲ. ಯಾಕೆಂದರೆ ಅವನು ಘಾತಿಕರ್ಮಮಲವನ್ನು ದೂರಮಾಡಿ, ನಿರ್ಧೂತಕಲಿಲಾತ್ಮನಾಗಿದ್ದಾನೆ. ಅದಕ್ಕಾಗಿಯೇ ಈ 'ನಿರ್ಧೂತ ಕಲಿಲಾತ್ಮ' ಎಂಬ ವಿಶೇಷಣವನ್ನು ಮುಂಚಿತವಾಗಿ ಆಚಾರ್ಯರು ಪ್ರಯೋಗಿಸಿದ್ದಾರೆ ಅಲ್ಲದೆ ಅವನ ಆ ನಿರ್ಧೂತ ಕಲಿಲಾತ್ಮತ್ವವು—ಈ ಗುಣವಿಶೇಷವು—ನಮಗೆ ಗೋಚರವಾಗುವುದು ಅವನ ಯುಕ್ತಿಶಾಸ್ತ್ರ ಅವಿರೋಧಿನಿಯಾದ ದಿವ್ಯವಾಣಿಯಿಂದ[2] ಅದಕ್ಕಾಗಿ ಆ ಭಾರತೀ-ವಿಭೂತಿ-ಸಂಸೂಚಕ 'ಶ್ರೀ' ವಿಶೇಷಣವನ್ನೂ ಸೂತ್ರದಲ್ಲಿ ಅದಕ್ಕೂ ಮೊದಲಲ್ಲಿ ಇಟ್ಟಿರುತ್ತಾರೆ.

---

[1] ಜ್ಞೋ ಜ್ಞೇಯೇ ಕಥಮಜ್ಞಃ ಸ್ಯಾದಸತಿ ಪ್ರತಿಬಂಧನೇ । ದಾಹ್ಯೇಽಗ್ನಿರ್ದಾಹಕೋ ನ ಸ್ಯಾದಸತಿ ಪ್ರತಿಬಂಧನೇ ॥

[2] ಈ ವಿಷಯದಲ್ಲಿ ವಿಶೇಷವಾದ ಸ್ಪಷ್ಟೀಕರಣವನ್ನು ಸ್ವತಃ ಸ್ವಾಮೀ ಸಮಂತಭದ್ರರು ತಮ್ಮ 'ಆಪ್ತಮೀಮಾಂಸಾ' (ದೇವಾಗಮ) ಗ್ರಂಥದಲ್ಲಿ 'ಸ ತ್ವಮೇವಾಸಿ ನಿರ್ದೋಷೋ ಯುಕ್ತಿಶಾಸ್ತ್ರಾವಿರೋಧಿವಾಕ್' ಎಂಬಲ್ಲಿ ಮಾಡಿದ್ದಾರೆ

ಇದನ್ನೆಲ್ಲ ಗಮನಿಸಿದಾಗ ಈ ಮಂಗಲಾಚರಣ ಪದ್ಯವು ಶ್ರೀ ಸ್ವಾಮಿ ಸಮಂತಭದ್ರರ ಪೂರ್ಣ ಅನುಚಿಂತನ, ಅನುಭಾವ, ಅನುಭೂತಿಗಳ ಪರಿಣಾಮವಾಗಿದೆಯೆಂಬುದು ಹೊಳೆಯುತ್ತದೆ. ಅಂತಲೇ ಆ ದಿವ್ಯ ಸ್ವರೂಪರಾದ ಶ್ರೀ ವರ್ಧಮಾನಸ್ವಾಮಿಯ ಸನ್ನಿಧಿಯಲ್ಲಿ ಆಚಾರ್ಯರು 'ನಮಃ' ಎಂದು ಮೊದಲಲ್ಲಿಯೇ ಹೇಳಿ, ಆ ದಿವ್ಯಾತ್ಮರ ಉಪಕೃತಿಯನ್ನು ಸ್ಮರಿಸಿದ್ದಾರಲ್ಲದೆ, ತಮ್ಮ ಅಹಂಕಾರವನ್ನೂ ತ್ಯಜಿಸಿದ್ದಾರೆ. ಶ್ರೀ ಸಮಂತಭದ್ರಾಚಾರ್ಯರು ಸ್ತುತಿ, ಸ್ತೋತ್ರಗಳಿಂದ—ಆಪ್ತಪುರುಷನ ಸ್ತವನದಿಂದ—ಗುಣಸ್ಮರಣದಿಂದ—ಕುಶಲ ಪರಿಣಾಮವೂ ಪುಣ್ಯಪ್ರದವಾದ ಶುಭಭಾವವೂ ಉಂಟಾಗುತ್ತವೆಂದು ಭಾವಿಸಿದವರಿದ್ದರು[1] ಅವರು ಪ್ರಾರ್ಥನೆಯಿಂದ ಶ್ರೇಯೋಮಾರ್ಗವು ಸುಲಭರೀತಿಯಿಂದ ಸ್ವಾಧೀನವಾಗುವದೆಂದು ಸ್ವಯಂಭೂಸ್ತೋತ್ರದಲ್ಲಿ ಪ್ರತಿಪಾದಿಸಿದ್ದಾರೆ ಮೇಲಾಗಿ ಅವರು ತಮ್ಮ 'ಸ್ತುತಿವಿದ್ಯೆ'—ಜಿನಶತಕ—ಯ ಗುರಿಯು ಪಾಪವನ್ನು ಗೆಲ್ಲುವುದು 'ಆಗಸಾಂ ಜಯೆ' ಎಂದೂ ಹೇಳಿದ್ದಾರೆ.[2] ಇಂಥ ಸ್ತುತಿಗಳಿಂದ ಆತ್ಮಸಂತೋಷ, ಆತ್ಮೋತ್ಕರ್ಷಗಳುಂಟಾಗುತ್ತವೆಂದು ನಂಬಿ, ಅವುಗಳನ್ನು ಇನ್ನೊಬ್ಬರೂ ಅನುಭವಿಸಲೆಂದು ಸಮಂತಭದ್ರರು ಇಚ್ಛಿಸುತ್ತಿದ್ದರು. ಅದಕ್ಕಂತಲೇ ಈ ಮಂಗಲಾಚರಣವನ್ನು ಗ್ರಂಥದ ಅಂಗವೆಂದು ನಿಬದ್ಧಗೊಳಿಸಿದ್ದಾರೆ ಇದರಿಂದ ತಾವು ಭಗವಾನ್ ಮಹಾವೀರ ತೀರ್ಥಂಕರರನ್ನು ಹೇಗೆ ಕಂಡಿದ್ದಾರೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ ಅನ್ಯರು ಕಾಣಲಿಕ್ಕೆ ಸುನಿಶ್ಚಿತ ದೃಷ್ಟಿಯನ್ನೂ ನೀಡಿದ್ದಾರೆ. ಅಲ್ಲದೆ ತೀರ್ಥಂಕರರಲ್ಲಿರುವ ತಮ್ಮ ಶ್ರದ್ಧೆ, ಭಕ್ತಿ, ಗುಣಜ್ಞತೆ ಮತ್ತು ಗುಣಪ್ರೀತಿಗಳನ್ನು ಬಹು ಸುಂದರವಾಗಿ ಪ್ರದರ್ಶಿಸಿದ್ದಾರೆ ಸಮೀಚೀನ ಧರ್ಮಶಾಸ್ತ್ರ]

ಪರಮಶ್ರೀವೀರಭಟ್ಟಾರಕನಮಿತದಯಾಧಾರಕಂ ವಿಶ್ವವಿದ್ಯಾ-
ಭರಣಂ ನಿಶ್ಶೇಷಭವ್ಯೋದ್ಧರಣನಖಿಲಲೋಕೈಕಪೂತಂ ಪ್ರಣೂತಂ ।
ಸ್ಮರದೂರಂ ನಿರ್ವಿಕಾರಂ ಸಮವಸರಣಕಾಂತಂ ಯಶಃಶ್ರೀನಿತಾಂತಂ
ನಿರವದ್ಯಂ ಹೃದ್ಯನಸ್ಮದ್ಗುರು ಗುಣಗುರುನಮ್ರಾಮರೇಂದ್ರಂ [ಜಿನೇಂದ್ರಂ]

—ಆಚಣ್ಣ—ವರ್ಧಮಾನ ಪುರಾಣಂ ೧೬-೧೨

## ದ ರ್ಶ ನಾ ಧಿ ಕಾ ರ

ಧರ್ಮದ ಸ್ವರೂಪವನ್ನು ಹೇಳಲಿಕ್ಕೆಂದು ಪ್ರತಿಜ್ಞಾರೂಪ ಸೂತ್ರವನ್ನು ಹೇಳುತ್ತಾರೆ—

ದೇಶಯಾಮಿ ಸಮೀಚೀನಂ ಧರ್ಮಂ ಕರ್ಮನಿಬರ್ಹಣಮ್ ।
ಸಂಸಾರದುಃಖತಃ ಸತ್ವಾನ್ಯೋ ಧರತ್ಯುತ್ತಮೇ ಸುಖೇ ॥ ೨ ॥

ಅನ್ವಯಾರ್ಥ—(ಯಃ) ಯಾವುದು (ಸತ್ವಾನ್) ಜೀವಗಳನ್ನು (ಸಂಸಾರದುಃಖತಃ) ಸಂಸಾರ ದುಃಖದಿಂದ-ಬಿಡಿಸಿ-(ಉತ್ತಮೇ) ಒಳ್ಳೆಯ (ಸುಖೇ) ಸುಖದಲ್ಲಿ (ಧರತಿ) ನಿಲ್ಲಿಸುತ್ತದೆಯೋ (ತಂ) ಆ (ಕರ್ಮನಿಬರ್ಹಣಂ) ಕರ್ಮವನ್ನು ನಾಶಗೊಳಿಸುವ (ಸಮೀಚೀನಂ) ಯಥಾರ್ಥವಾದ (ಧರ್ಮಂ) ಧರ್ಮವನ್ನು (ದೇಶಯಾಮಿ) ನಾನು ಉಪದೇಶಿಸುವೆ[3]

ಅರ್ಥ—ನಾನು (ಸಮಂತಭದ್ರಾಚಾರ್ಯ) ಈ ಗ್ರಂಥದಲ್ಲಿ ಐದು ವಿಧದ ಪರಿವರ್ತನವನ್ನು ಹೊಂದುವ ಸಂಸಾರದೊಳಗಿನ ದುಃಖದಿಂದ ಪ್ರಾಣಿಗಳನ್ನು ಬಿಡಿಸಿ, ಸ್ವರ್ಗ ಮತ್ತು ಮೋಕ್ಷದಂಥ ಉತ್ತಮ ಪ್ರಕಾರದ ಸುಖವನ್ನು

---

[1] "ಸ್ತುತಿಃ ಸ್ತೋತುಃ ಸಾಧೋಃ" ಸೂ ೧೧೬ —ಸ್ವಯಂಭೂಸ್ತೋತ್ರ

[2] ಸ್ತುತಿವಿದ್ಯಾ ಪದ್ಯ ೧

[3] ಆಯತವರ್ಮನು ತನ್ನ ರತ್ನಕರಂಡಕದ ಆರಂಭದಲ್ಲಿ ಹೀಗೆ ಪ್ರತಿಜ್ಞೆ ಮಾಡಿದ್ದಾನೆ—

ವಚನ—ಅಂತು ಮಂಗಳಾರ್ಥವಿಶಿಷ್ಟದೇವತಾನಮಸ್ಕಾರಂಗೆಯ್ದು ಧರ್ಮವ್ಯಾಸಾರ್ಥಂ ಭವ್ಯಪ್ರಾಣಿಗಳ್ಗೆ ಹಿತಮಪ್ಪುದಂ ಪರಮಾಗಮಮುಂ ರತ್ನಕರಂಡಕಮೆಂಬ ಗ್ರಂಥಮುಂ ಸಾಗಾರಾನಗಾರರುಗಳಿಗೆ ಧರ್ಮಸ್ವರೂಪಮುಂ ನಾನರಿವ ತೆರದಿಂ ಕಿರಿದಂ ಪೇಳ್ವೆನದೆಂತೆಂದೊಡೆ—

ದೊರಕಿಸಿಕೊಡುವಂಥ ಧರ್ಮದ ಉಪದೇಶ ಮಾಡುವೆ ಆ ಧರ್ಮವು ಸಮೀಚೀನವಾಗಿದೆ ಸಮೀಚೀನ ಧರ್ಮವೆಂದರೆ ವಾದಿ ಪ್ರತಿವಾದಿಗಳಿಂದ ಪ್ರತ್ಯಕ್ಷ ಹಾಗು ಅನುಮಾನಾದಿಗಳಿಂದ ಎಂದೂ ಬಾಧೆಯನ್ನು ಹೊಂದದಂಥದು ಅದರಿಂದಲೇ ಅದು ಉತ್ತಮವಾಗಿದೆ ಅಲ್ಲದೆ ಅದು ಕರ್ಮಬಂಧನವನ್ನು ನಾಶಮಾಡುವಂಥದ್ದೂ ಆಗಿದೆ

**ವಿಶೇಷಾರ್ಥ—ಧರ್ಮ ಕ್ರಯ, ಸೇವೆಗಳಿಗೆ ದೊರೆಯದು.** ಲೋಕದಲ್ಲಿ ಎಲ್ಲರ ಬಾಯಲ್ಲೂ ಧರ್ಮವೆಂಬ ಪದವಿದೆ. ಆದರೆ ಅದರ ಅರ್ಥವು ಬಹಳ ಅರ್ಥಪೂರ್ಣವಾಗಿದೆ ನರಕಾದಿ ಚತುರ್ಗತಿಗಳಲ್ಲಿ ಪರಿಭ್ರಮಣ ಮಾಡುವ ಆತ್ಮನಿಗೆ ಆಯಾ ಗತಿಗಳಲ್ಲಿ ಅನಿವಾರ್ಯವಾದ ಕೆಲವು ದುಃಖಗಳು ಒದಗುತ್ತವೆ. ಆ ದುಃಖಗಳಿಂದ ಆತ್ಮನನ್ನು ಮುಕ್ತಗೊಳಿಸಿ, ಅವಿನಾಶಿಯೂ ಅತೀಂದ್ರಿಯ ಅನುಪಮ ಆತ್ಮಿಕವೆನಿಸುವ ಮೋಕ್ಷ ಸುಖವು ಯಾವುದರಿಂದ ಒದಗುತ್ತದೆಯೋ ಅದಕ್ಕೆ ಧರ್ಮವೆಂದು ಹೇಳಬೇಕು. ಇಂಥ ಧರ್ಮವು ಪೇಟೆಯಲ್ಲಿ ಎಲ್ಲಿಯೂ ಮಾರಾಟಕ್ಕೆ ಇರುವದಿಲ್ಲ ಧರ್ಮವನ್ನು ಮಾರುವ ಒಂದು ಅಂಗಡಿಯು ಇದ್ದರೆ ಈ ಕಾಲದಲ್ಲಿ ಜನರು ಬೇಕಾದಷ್ಟು ದುಡ್ಡು ಕೊಟ್ಟು, ತುಂಬ ಪ್ರಯತ್ನಿಸಿ, ಆದರದಿಂದ ಅದನ್ನು ಕೊಳ್ಳುತ್ತಿದ್ದರು ಅದರಂತೆ ಯಾರ ಸೇವೆಯನ್ನಾಗಲಿ, ನೌಕರಿಯನ್ನಾಗಲಿ ಮಾಡಿ ಅದನ್ನು ಪಡೆಯುವಂತಿದ್ದರೆ ತಮ್ಮ ಸೇವೆಯಿಂದ ಅಂಥವರ ಚಿತ್ತವನ್ನು ಪ್ರಸನ್ನಗೊಳಿಸಿ ಅದನ್ನು ಸಂಪಾದಿಸುತ್ತಿದ್ದರು. ಆದರೆ ಈ ಪ್ರಕಾರದ ಧರ್ಮವನ್ನು ಯಾರೂ ಯಾರಿಗೂ ಕೊಡಲಾರರು, ತಕ್ಕೊಳ್ಳಲಾರರು. ದೇವಸ್ಥಾನ, ಪರ್ವತ, ಜಲ, ಅಗ್ನಿ, ದೇವಮೂರ್ತಿ ಮತ್ತು ತೀರ್ಥಾದಿಗಳಲ್ಲಿ ಧರ್ಮವನ್ನು ಇಟ್ಟಿದಿಲ್ಲ. ಅಲ್ಲಿ ಹೋಗಿ ತರುತ್ತೇವೆನ್ನುವಂತಿಲ್ಲ ಭಯಂಕರ ವ್ರತ ಉಪವಾಸಾದಿಗಳಿಂದಲೂ ತಪಶ್ಚರ್ಯೆಯಿಂದಲೂ ಶರೀರವನ್ನು ಒಣಗಿಸಿದರೂ ಸೊರಗಿಸಿದರೂ ಅದು ದೊರೆಯುವದಿಲ್ಲ. ಅಲ್ಲದೆ ಮಂದಿರದಲ್ಲಿ ದೊಡ್ಡ ದೊಡ್ಡ ಬೆಲೆಯ ಉಪಕರಣಗಳನ್ನು ಕೊಂಡು ಇಟ್ಟರೂ, ಮಂಡಲಗಳನ್ನು ಕೊರೆದು ಪೂಜೆ ವಿಧಾನಗಳನ್ನು ಮಾಡಿಸಿದರೂ, ಮನೆಯನ್ನು ಬಿಟ್ಟು ಸ್ಮಶಾನದಲ್ಲಿ ವಾಸಿಸಿದರೂ, ಪರಮೇಶ್ವರನ ಜಪ-ಜಾಪ್ಯಗಳನ್ನು ಮಾಡಿಸಿದರೂ, ಹಗಲಿರುಳು ಭಗವಂತನ ನಾಮಸ್ಮರಣದಿಂದ ಜಗತ್ತನ್ನೆಲ್ಲ ದುಮುದುಮಿಸಿ ಬಿಟ್ಟರೂ ಧರ್ಮದ ಪ್ರಾಪ್ತಿಯು ಆಗುವದಿಲ್ಲ. ಧರ್ಮವು ಆತ್ಮನ ಸ್ವಭಾವವಾಗಿದೆ. ಅದರಿಂದ ಮೊದಲು ಪರವಸ್ತುಗಳ ಮೇಲಿನ ಆತ್ಮ ಬುದ್ಧಿಯನ್ನು ತ್ಯಜಿಸಲಿಕ್ಕೆ ಬೇಕು. [ಧನ ಕನಕಾದಿ ವಸ್ತುಗಳೂ ಸತಿ ಸುತ ಬಾಂಧವಾದಿಗಳೂ ಪರವಸ್ತುಗಳಲ್ಲದೆ ನಮ್ಮ ಜನ್ಮದೊಡನೆ ಜೊತೆಯಾಗಿ ಬಂದ ಈ ಶರೀರವೂ ಕೂಡ ಪರವಸ್ತುವೆನಿಸುತ್ತದೆ ಇನ್ನೊಂದು ಹೆಜ್ಜೆ ಮುಂದೆ ಹೋಗಿ ಹೇಳಬೇಕಾದರೆ ಜನ್ಮ ಜನ್ಮಾಂತರಗಳಲ್ಲಿಯೂ ಕೂಡ ಬೆನ್ನು ಹತ್ತಿ ಬರುವ ಕರ್ಮವೂ ಸಹ ಆತ್ಮನಿಗೆ ಪರವಸ್ತುವಾಗಿದೆ ] ಇಂಥ ಪರ ವಸ್ತುಗಳನ್ನು ಆತ್ಮನೆಂದು ತಿಳಿದುಕೊಳ್ಳುವ ಬುದ್ಧಿಯನ್ನು ತೊರೆದು, ತನ್ನ ಜ್ಞಾನದರ್ಶನ ಸ್ವಭಾವದಲ್ಲಿಯೇ ಶ್ರದ್ಧೆಯನ್ನಿಟ್ಟು, ಅದನ್ನೇ ಅನುಭವಿಸಿ, ಆತ್ಮಜ್ಞಾನದ ಸ್ವಭಾವದಲ್ಲಿಯೇ ತನ್ಮಯನಾಗುವುದು ಧರ್ಮವೆನಿಸುತ್ತದೆ ಆತ್ಮನಲ್ಲಿ ಉತ್ತಮ ಕ್ಷಮಾ, ಮಾರ್ದವಾದಿ ನಿಜ ಸ್ವಭಾವಗಳು ಪ್ರಕಟವಾದಾಗ, ರತ್ನತ್ರಯಗಳು [ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ] ಲಭಿಸಿದಾಗ, ಮತ್ತು ಎಲ್ಲ ಜೀವಗಳ ಮೇಲೆ ದಯೆಯನ್ನು ಮಾಡಬೇಕೆಂಬ ವಿಚಾರವು ಜನಿಸಿದಾಗ, ಆತ್ಮವು ತನ್ನಷ್ಟಕ್ಕೆ ತಾನೇ ಧರ್ಮರೂಪವನ್ನು ಹೊಂದುವುದು ಪರ ದ್ರವ್ಯ ಕ್ಷೇತ್ರ ಕಾಲಾದಿಗಳೆಲ್ಲ ನಿಮಿತ್ತ ಮಾತ್ರವಾಗಿವೆ.

**ವೀತರಾಗತ್ವದಿಂದಲೇ ಧರ್ಮ.** ಮೊದಲು ಆತ್ಮನು ತನ್ನ ರಾಗದ್ವೇಷರೂಪ ಪರಿಣತಿಯನ್ನು ತೊರೆದು ವೀತರಾಗನಾಗಬೇಕು ಆಗ ಈ ಮಂದಿರ, ಪ್ರತಿಮೆ, ತೀರ್ಥ, ದಾನ, ಜಪ, ತಪ ಮೊದಲಾದ ಸರ್ವ ವಸ್ತುಗಳೂ ಅದಕ್ಕೆ ಧರ್ಮವಾಗಿ ಸೇರುತ್ತವೆ ಆದರೆ ಎಲ್ಲಿಯವರೆಗೆ ಆತ್ಮನಿಗೆ ವೀತರಾಗತ್ವವು ಉಂಟಾಗುವದಿಲ್ಲವೋ, ಆತ್ಮನ ರಾಗದ್ವೇಷಗಳು ನಷ್ಟವಾಗುವುದಿಲ್ಲವೋ, ಅಲ್ಲಿಯವರೆಗೆ ಅದಕ್ಕೆ ಎಲ್ಲಿಯೂ ಧರ್ಮವು ಲಭಿಸಲಾರದು. ಇನ್ನು ಆತ್ಮನಲ್ಲಿ ಶುಭರಾಗವಿದ್ದಾಗ ಪುಣ್ಯಬಂಧವಾಗುತ್ತದೆ, ಅಶುಭ ರಾಗ, ದ್ವೇಷ, ಮೋಹಗಳಿದ್ದಾಗ ಪಾಪಬಂಧವಾಗುತ್ತದೆ ಎಲ್ಲಿ ನಿಜವಾದ ಶ್ರದ್ಧೆ, ಜ್ಞಾನ ಮತ್ತು ಆಚರಣೆಗಳಿರುವವೋ ಅಲ್ಲಿ ಧರ್ಮವಿದೆ. ಅದಕ್ಕೆ ಬಂಧದ ಅವಸ್ಥೆಯು ಮೂಲದಲ್ಲಿಯೇ ಇಲ್ಲ. ಬಂಧವಿಲ್ಲದಿರುವುದೇ ಉತ್ತಮ ಸುಖವಾಗಿದೆ ಇಂದ ಉತ್ತಮ ಸುಖಕ್ಕೆ ಆತ್ಮನ ಸ್ವಭಾವರೂಪವಾದ ಧರ್ಮವೇ ಕಾರಣವಾಗಿದೆ

[ಈ ಸೂತ್ರದಲ್ಲಿ ಆಚಾರ್ಯರು ಧರ್ಮದ ಸ್ವರೂಪವನ್ನು ವಿವರಿಸುವ ಪ್ರತಿಜ್ಞೆಯನ್ನು ಮಾಡುತ್ತಾರೆ. ಆ ಧರ್ಮಕ್ಕೆ ಮೊದಲನೆಯದೂ ಮುಖ್ಯವಾದುದೂ ಆದ ವಿಶೇಷಣವು 'ಸಮೀಚೀನ' ಎಂಬುದಾಗಿದೆ ಎರಡನೆಯದು

'ಕರ್ಮನಿಬರ್ಹಣ', ಮತ್ತು ಮೂರನೆಯದು 'ದುಃಖದಿಂದ ಉತ್ತಮ–ಸುಖದಲ್ಲಿ ನಿಲ್ಲಿಸುವಂಥದು' ಎಂಬುದಾಗಿದೆ ಇವುಗಳಲ್ಲಿ ಮೊದಲನೆಯದು ನಿರ್ದೇಶ್ಯಧರ್ಮದ ಪ್ರಕೃತಿಯ ದ್ಯೋತಕವಾಗಿದೆ ಉಳಿದ ಎರಡು ವಿಶೇಷಣಗಳು ಅದರ ಅನುಷ್ಠಾನ–ಫಲದ ನಿರೂಪಣೆಯನ್ನು ಸಾಮಾನ್ಯ–ಸಂಗ್ರಹವಾಗಿ ಮಾಡುವಂಥವಾಗಿವೆ

ಇಲ್ಲಿ 'ಕರ್ಮ' ಪದಕ್ಕೆ ಯಾವ ವಿಶೇಷಣವೂ ಇಲ್ಲ ಅದರಿಂದ ಇದು ಭಾವ ಹಾಗೂ ದ್ರವ್ಯ ಕರ್ಮಗಳೆರಡನ್ನೂ ಸೂಚಿಸುತ್ತದೆ ಸಮಗ್ರ ಕರ್ಮವನ್ನು ಧರ್ಮವು ನಷ್ಟಗೊಳಿಸುವಂಥದಾಗಿದೆ ಅದರಿಂದ ಧರ್ಮವು ಕರ್ಮಬಂಧನಕ್ಕೆ ಕಾರಣವಾಗಿರದೆ ಕರ್ಮಬಂಧನದಿಂದ ಬಿಡುಗಡೆ ಮಾಡುವಂಥದಾಗಿದೆ ಈ ಬಿಡುಗಡೆಯು ಸುಖದಲ್ಲಿ ಒಯ್ದು ನಿಲ್ಲಿಸುತ್ತದೆ ಬಂಧನದಲ್ಲಿ ಸುಖವಿಲ್ಲ, ದುಃಖವೇ ದುಃಖವಿದೆ ಈ 'ಕರ್ಮನಿಬರ್ಹಣ'ದ ಪ್ರತಿಷ್ಠೆಯ ಮೇಲೆಯೇ ಆತ್ಮವು ಉತ್ತಮ ಸುಖದಲ್ಲಿ ನಿಲ್ಲುವ ಸ್ಥಿತಿಯು ಉಂಟಾಗುವದಿರುತ್ತದೆ ಅದರಿಂದ ಆ ವಿಶೇಷಣವನ್ನು ತರುವಾಯ ಇಡಲಾಗಿದೆ.

ಸುಖವು ಎಲ್ಲ ಜೀವಗಳ ಧ್ಯೇಯವಾಗಿದೆ ಅದು ಧರ್ಮದಿಂದ ಪ್ರಾಪ್ತವಾಗುತ್ತದೆ ಧರ್ಮವು ಸುಖದ ಸಾಧನವಾಗಿದೆ ಸಾಧನವು ಎಂದೂ ಸಾಧ್ಯಕ್ಕೆ ವಿರೋಧವಾಗಿರುವದಿಲ್ಲ ಅದಕ್ಕಾಗಿ ಧರ್ಮದಿಂದ ಎಂದೂ ದುಃಖವುಂಟಾಗಲಾರದು ಅದು ಯಾವಾಗಲೂ ದುಃಖದಿಂದ ಮುಕ್ತಗೊಳಿಸುವಂಥದಾಗಿದೆ ಈ ಮಾತನ್ನು ಎತ್ತಿ ಭಗವದ್ ಗುಣಭದ್ರಾಚಾರ್ಯರು ತಮ್ಮ 'ಆತ್ಮಾನುಶಾಸನ'ದಲ್ಲಿ ತಮ್ಮ ಸುಖಕ್ಕೆ ಅಡ್ಡಿಯಾಗುವದೆಂದು ಹೆದರಿ ಧರ್ಮವನ್ನು ತ್ಯಜಿಸಕೂಡದೆಂದು ಹೇಳಿದ್ದಾರೆ[1]

ಇನ್ನು ಧರ್ಮದಿಂದ ನಡೆಯುವಾಗಲೂ ಸಹ ಅನೇಕ ಸಲ ದುಃಖವು ಉಂಟಾಗುತ್ತದೆ ಅದಕ್ಕೆ ಧರ್ಮವು ಕಾರಣವಲ್ಲ, ಪೂರ್ವಕೃತ ಕರ್ಮವೇ ಕಾರಣವಾಗಿರುತ್ತದೆ 'ಧರ್ಮ' ಶಬ್ದದ ಉತ್ಪತ್ತಿ ಅಥವಾ ನಿರುಕ್ತಿಗಳಲ್ಲಿರುವ ಅರ್ಥವೂ ಇದನ್ನೇ ಸೂಚಿಸುತ್ತದೆ. ಈ ಅರ್ಥವನ್ನು ಸ್ವೀಕರಿಸಿಯೇ ಮೂರನೆಯ ವಿಶೇಷಣವನ್ನು ಸೃಜಿಸಲಾಗಿದೆ ಇದರಲ್ಲಿ ಸುಖಕ್ಕೆ 'ಉತ್ತಮ' ಎಂಬ ವಿಶೇಷಣವನ್ನೂ ಇಡಲಾಗಿದೆ ಧರ್ಮದಿಂದ ಉತ್ತಮ ಸುಖದ—ಶಿವಸುಖದ ಅಥವಾ ಅಬಾಧಿತ ಸುಖದ—ಪ್ರಾಪ್ತಿಯು ಆಗುತ್ತದೆ. ಅಂದಮೇಲೆ ಸಾಧಾರಣ ಸುಖದ ಬೆಲೆಯೇನು? ಅದಂತೂ ಧರ್ಮದಿಂದ ಸಹಜವಾಗಿಯೇ ದೊರೆಯುತ್ತದೆ ಸಂಸಾರದೊಳಗಿನ ದುಃಖಗಳಿಂದ ಬಿಡುಗಡೆ ಹೊಂದುವದೆಂದರೆ ಸಾಂಸಾರಿಕ ಉತ್ತಮ ಸುಖವನ್ನು ಹೊಂದುವದೆಂದೇ ಅರ್ಥವು ಧರ್ಮವು ಇದಕ್ಕೆ ಬಾಧಕವಾಗುವದಿಲ್ಲ ಈ ದೃಷ್ಟಿಯಿಂದ ಧರ್ಮವು ಸಂಸಾರದ ಉತ್ತಮ ಸುಖದ ಸಾಧನವೂ ಆಗಿದೆ ಇದನ್ನು ಈ ಗ್ರಂಥದಲ್ಲಿ 'ಅಭ್ಯುದಯ' ಪದದಿಂದ ಉಲ್ಲೇಖಿಸಲಾಗಿದೆ[2] ಹೀಗೇ ಇನ್ನೊಬ್ಬ ಆಚಾರ್ಯರು 'ಧರ್ಮಃ ಸರ್ವಸುಖಾಕರೋ ಹಿತಕರೋ' ಇತ್ಯಾದಿ ವಾಕ್ಯಗಳಿಂದ ಧರ್ಮವನ್ನು ಕೊಂಡಾಡಿದ್ದಾರೆ ಸ್ವತಃ ಸಮಂತಭದ್ರರೂ ಈ ಗ್ರಂಥದ ಕೊನೆಯಲ್ಲಿ "ಯಾರು ತಮ್ಮ ಆತ್ಮವನ್ನು ಈ ರತ್ನತ್ರಯ ಧರ್ಮರೂಪದಲ್ಲಿ ಪರಿಣತಗೊಳಿಸುವರೋ ಅವರಿಗೆ ಮೂರುಲೋಕಗಳಲ್ಲಿ 'ಸರ್ವಾರ್ಥಸಿದ್ಧಿ'ಯು ಸ್ವಯಂವರದಲ್ಲಿ ತಾನಾಗಿಯೇ ವರಿಸುತ್ತಾಳೆ ಅಂದರೆ ಅವರ ಎಲ್ಲಾ ಪ್ರಯೋಜನಗಳೂ ಅನಾಯಾಸವಾಗಿ ಸಿದ್ಧಿಸುತ್ತವೆ" ಅದರಿಂದ ಧರ್ಮದಿಂದ ಸುಖದಲ್ಲಿ ಬಾಧೆ ಬರುವದೆಂದು ತಿಳಿಯುವುದು ತೀರ ತಪ್ಪಾಗಿದೆ

ನಿಜವಾಗಿಯೂ ಪರತಂತ್ರಾದಿಗಳ ಅಭಾವದಲ್ಲಿಯೇ ಉತ್ತಮ ಸುಖವಿದೆ ಇದು ಶಿವಸುಖವೆನಿಸುತ್ತದೆ ಇದನ್ನು ಸಮಂತಭದ್ರರು 'ಶುದ್ಧಸುಖ'ವೆಂದು ಹೇಳಿದ್ದಾರೆ[3] ಈ ಸುಖವನ್ನು ದೊರಕಿಸುವುದೇ ಧರ್ಮದ ಮುಖ್ಯ ಗುರಿಯಾಗಿದೆ ಇಂದ್ರಿಯಭೋಗವೇ ಮೊದಲಾದ ಸುಖಗಳು ಬಾಧೆಯುಳ್ಳವೂ ಪರಾಶ್ರಿತವೂ ನಾಶವಾಗುವಂಥವೂ ಬಂಧಹೇತುವುಳ್ಳವುಗಳಾಗಿದ್ದು ದುಃಖಮಿಶ್ರಿತವಾಗಿವೆ[4] ಕುಂದಕುಂದಾಚಾರ್ಯರು ಹೇಳುವಂತೆ ವಾಸ್ತವಿಕವಾಗಿ

---

1 ಧರ್ಮಃ ಸುಖಸ್ಯ ಹೇತುರ್ಹೇತುರ್ನ ವಿರೋಧಕಃ ಸ್ವಕಾರ್ಯಸ್ಯ ।
ತಸ್ಮಾತ್ ಸುಖಭಂಗಭಿಯಾ ಮಾಭೂರ್ಧರ್ಮಸ್ಯ ವಿಮುಖಸ್ತ್ವಮ್ ॥ —ಆತ್ಮಾನುಶಾಸನ ೨೦

2 ೧೩೦, ೧೩೫ನೆಯ ಸೂತ್ರಗಳನ್ನು ನೋಡಿರಿ

3 ನಿರ್ವಾಣಂ ಶುದ್ಧಸುಖಂ ನಿಃಶ್ರೇಯಸಮಿಷ್ಯತೇ ನಿತ್ಯಮ್ ॥ —೧೩೧

4 ಸಪರಂ ಬಾಧಾಸಹಿಯಂ ವಿಚ್ಛಿಣ್ಣಂ ಬಂಧಕಾರಣಂ ವಿಸಮಂ ।
ಜಂ ಇಂದಿಯೇಹಿಂ ಲದ್ಧಂ ತಂ ಸೋಕ್ಖಂ ದುಕ್ಖಮೇವ ತಹಾ ॥ —ಪ್ರವಚನಸಾರ.

ಇವು ದುಃಖಗಳೇ ಆಗಿವೆ. ಸ್ವತಃ ಸಮಂತಭದ್ರರೂ ಸಹ ಇಂಥ ಇಂದ್ರಿಯಸುಖಗಳನ್ನು ಪಾಪದ ಬೀಜಗಳೆಂದು ಸೂಚಿಸಿದ್ದಾರೆ. ಧರ್ಮಾತ್ಮರು ಇಂಥ ಸುಖದ ಅಪೇಕ್ಷೆಯನ್ನೂ ಮಾಡುವದಿಲ್ಲವೆಂದಿದ್ದಾರೆ.[1] ಸಂಸಾರದ ಸುಖದಲ್ಲಿಯೇ ಎಲ್ಲವೂ ಇದೆಯೆಂದು ಭಾವಿಸಿದವರು ನಿಜವಾಗಿಯೂ ತಮ್ಮನ್ನು ತಾವು ತಿಳಿದುಕೊಂಡಿಲ್ಲ.

ಇನ್ನು ಈ ಸೂತ್ರದಲ್ಲಿ 'ಸತ್ತ್ವಾನ್' ಎಂಬ ಪದಕ್ಕೂ ಯಾವ ವಿಶೇಷಣವೂ ಇಲ್ಲ. ಅದರಿಂದ ಧರ್ಮವು ಎಲ್ಲ ಜೀವಿಗಳಿಗೂ ಸುಖದಲ್ಲಿ ನಿಲ್ಲಿಸಬಲ್ಲುದೆಂಬ ಅರ್ಥವು ಸೂಚಿತವಾಗುತ್ತದೆ. ಧರ್ಮವು ಯಾವ ಜಾತಿ ವರ್ಗಗಳಿಗಾಗಿ ಮಾತ್ರವೇ ಇಲ್ಲ. ಎಲ್ಲ ಜೀವಿಗಳಿಗೂ ಅವವುಗಳ ಧರ್ಮಾಚರಣೆಯ ಪ್ರಮಾಣದಲ್ಲಿ ಅದು ಸುಖದಲ್ಲಿಡುತ್ತದೆ. ಅದರಿಂದ ಧರ್ಮವೂ ಎಲ್ಲ ಜೀವಿಗಳಿಗೂ ಬಂಧುವಾಗಿದೆಯೆಂದು ಈ ಗ್ರಂಥಕಾರರು ಹೇಳುತ್ತಾರೆ.[2] ಯಾವ ಆತ್ಮವು ತನ್ನತನದಿಂದ ಎಷ್ಟು ಚ್ಯುತವಾಗುತ್ತದೆಯೋ ಅದು ಅಷ್ಟು 'ಪತಿತ'ವಾದಂತೆ. ಧರ್ಮವು ಜೀವವನ್ನು ಸ್ವಸ್ವರೂಪದಲ್ಲಿ ನಿಲ್ಲಿಸುವಂಥದ್ದಾಗಿದೆ. ಅದರಿಂದ ಅದಕ್ಕೆ 'ಪತಿತೋದ್ಧಾರಕ' ಎಂಬ ಹೆಸರು ಸಾರ್ಥಕವಾಗಿದೆ. ಬಾವಿಯಲ್ಲಿ ಬಿದ್ದ ಪ್ರಾಣಿಯು ಹಗ್ಗವನ್ನು ಹಿಡಿದು ಮೇಲೆ ಏರುವಂತೆ ಸಂಸಾರದುಃಖದಲ್ಲಿ ಮುಳುಗಿದ ಜೀವಗಳೂ ಸಹ ಧರ್ಮದ ಆಧಾರದಿಂದ ಮೇಲೆದ್ದು ಬರುತ್ತವೆ.[3] ಅತಿಹೀನನೆಂಬವರೂ ಸಹ ಈ ಲೋಕದಲ್ಲಿಯೇ ಅತ್ಯುಚ್ಚ ಸ್ಥಿತಿಗೂ ಏರಬಲ್ಲರೆಂದು ಸಮಂತಭದ್ರರು ಹೇಳುತ್ತಾರೆ.[4] ಧರ್ಮದಿಂದ ನಾಯಿ ಹಂದಿಗಳೂ ಚಾಂಡಾಲರೂ ಸಹ ಉದ್ಧಾರವಾದ ಸಂಗತಿಯನ್ನು ಇದೇ ಗ್ರಂಥದಲ್ಲಿ ಮುಂದೆ ಉಲ್ಲೇಖಿಸಲಾಗಿದೆ.[5] ಧರ್ಮದ ಸಂಯೋಗದಿಂದ ಅಪವಿತ್ರವಾದ ದೇಹವೂ ಸಹ ಪ್ರೀತಿಗೆ ಪಾತ್ರವಾಗುತ್ತದೆ. ಇವೆಲ್ಲ ಮಾತುಗಳು ಸಮಂತಭದ್ರರ ಉದಾರವಾದ ಧರ್ಮದ ಕಲ್ಪನೆಯನ್ನೂ ಧರ್ಮಮರ್ಮಜ್ಞತೆ, ಧರ್ಮಾಧಿಕಾರಗಳನ್ನೂ ಸೂಚಿಸುತ್ತವೆ. ಇವುಗಳನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡೇ ಅವರು ವಿಶೇಷಣ ರಹಿತವಾದ 'ಸತ್ತ್ವಾನ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ಇನ್ನು 'ಸಮೀಚೀನ' ವಿಶೇಷಣದ ವಿಷಯವು ಉಳಿಯಿತು. ಧರ್ಮದ ಸಮೀಚೀನತೆಯು ಅದರ ಯಥಾರ್ಥ ಗುಣವಾಗಿದೆ. ಯಥಾರ್ಥವಾದ ಧರ್ಮವು ಸಮೀಚೀನವಾಗಿದೆ. ಧರ್ಮದ ಈ ಯಥಾರ್ಥತೆಯು ಧರ್ಮದ ಪ್ರಾಚೀನತೆ, ಅರ್ವಾಚೀನತೆಗಳನ್ನು ಅವಲಂಬಿಸಿಲ್ಲ. ಪ್ರಾಚೀನವಾದುದು ಅಯಥಾರ್ಥವೂ ಆಗಿರಬಹುದು. ಅರ್ವಾಚೀನವಾದುದು ಯಥಾರ್ಥವೂ ಇರಬಹುದಾಗಿದೆ. ಅನಾದಿ ಮಿಥ್ಯಾತ್ವವು ಪ್ರಾಚೀನವಾಗಿದ್ದರೂ ಅಯಥಾರ್ಥವಲ್ಲವೆ? ಸಮ್ಯಕ್ತ್ವವು ಇಂದೇ ಜನಿಸಿದ್ದರೂ ಅದು ಯಥಾರ್ಥವೆನಿಸುತ್ತದೆ. ಧರ್ಮದ ಯಥಾರ್ಥತೆಯು ಸಿದ್ಧಿಸಬೇಕಾದರೆ ಅದು ಕರ್ಮಗಳನ್ನು ನಾಶಗೊಳಿಸಬೇಕು, ಜೀವಗಳನ್ನು ಸಂಸಾರ ದುಃಖದಿಂದ ಮುಕ್ತಗೊಳಿಸಿ, ಉತ್ತಮ ಸುಖದಲ್ಲಿ ನಿಲ್ಲಿಸಬೇಕು. ಇವೆರಡು ಯಥಾರ್ಥಧರ್ಮದ ಒರೆಗಲ್ಲಾಗಿವೆ. ಅದರಿಂದ ಧರ್ಮದ ಸತ್ಯಸ್ವರೂಪವು–ಸಮೀಚೀನತ್ವವು–ಯಥಾರ್ಥತೆಯು–ಯಾವಾಗಲೂ ನಾಲ್ಕು ಸಂಗತಿಗಳನ್ನು ಅವಲಂಬಿಸಿರುತ್ತದೆ. ಅವುಗಳನ್ನು ದ್ರವ್ಯ–ಕ್ಷೇತ್ರ–ಕಾಲ–ಭಾವಗಳೆಂದು ಹೇಳಲಾಗಿದೆ. ಇವುಗಳಲ್ಲಿ ಒಂದು ವ್ಯತ್ಯಾಸಹೊಂದಿದರೂ ಸಹ ಧರ್ಮದ ಯಥಾರ್ಥತೆಗೆ ಬಾಧೆಯುಂಟಾಗುತ್ತದೆ. ವಸ್ತುವಿನ ಲಕ್ಷಣ ಕೆಡುತ್ತದೆ. ಇಷ್ಟೇ ಅಲ್ಲ, ವಸ್ತುವು ಅವಸ್ತುವಾಗಿ ಹೋಗುತ್ತದೆ.[6] ಗ್ರಾಹ್ಯವಾದ ವಸ್ತುವು ಅಗ್ರಾಹ್ಯವೆನಿಸುತ್ತದೆ. ಆದರಿಂದ ಧರ್ಮದ ಒಂದು ರೂಪವು ಗೃಹಸ್ಥನಿಗೆ ಸಮೀಚೀನವಾದರೆ ಮುನಿಗೆ ಆಗಲಿಕ್ಕಿಲ್ಲ, ಒಂದು ಕಾಲದಲ್ಲಿ ಯಥಾರ್ಥವಾದರೆ, ಇನ್ನೊಂದು ಋತುವಿನಲ್ಲಿ ಯಥಾರ್ಥವಾಗಲಿಕ್ಕಿಲ್ಲ, ಒಂದು ಪ್ರದೇಶದಲ್ಲಿ ಸತ್ಯವೆನಿಸಿದರೆ, ಇನ್ನೊಂದೆಡೆಗೆ ಎನಿಸಲಿಕ್ಕಿಲ್ಲ; ಒಂದು ಮನಸ್ಥಿತಿಯಲ್ಲಿ ಯೋಗ್ಯವೆನಿಸಿದ್ದು ಇನ್ನೊಂದವಸ್ಥೆಯಲ್ಲಿ ಅಯೋಗ್ಯವೆನಿಸೀತು. ಅದರಿಂದ ಧರ್ಮದ ಯಥಾರ್ಥತೆಯು ನಿರ್ಣಯವು ಬಹುಸೂಕ್ಷ್ಮವಾಗಿದೆ.

---

[1] ಇದೇ ಗ್ರಂಥದಲ್ಲಿ ೧೨ರಿಂದ ಮುಂದಿನ ಸೂತ್ರ

[2] ಪಾಪಮರಾತಿರ್ಧರ್ಮೋ ಬಂಧುರ್ಜೀವಸ್ಯ ಚೇತಿ ನಿಶ್ಚಿನ್ವನ್ । ೧೪೮ —ರತ್ನಕರಂಡಕ

[3] ಸಂಸಾರ ವಿಷ ಕೂಪಃ ಸಲಿಲಾನಿ ವಿಪತ್ತಿ-ಜನ್ಮ-ದುಃಖಾನಿ ।
ಇಹ ಧರ್ಮ ಏವ ರಜ್ಜುಸ್ತಸ್ಮಾದುದ್ಧರತಿ ನಿರ್ಮಗ್ನಾನ್ ॥ —ಪುರಾತನ

[4] ಯೋ ಲೋಕೆ ತ್ವಾಂ ನತಃ ಸೋಽತಿಹೀನೋಽಪ್ಯತಿಗುರುರ್ಯತಃ —ಸ್ತುತಿವಿದ್ಯಾ ೮೨

[5] ಇದೇ ಗ್ರಂಥದಲ್ಲಿಯ ೨೮-೨೯ನೆಯ ಸೂತ್ರ

[6] ವಸ್ತ್ವೇವಾವಸ್ತುತಾಂ ಯಾತಿ ಪ್ರಕ್ರಿಯಾಯಾ ವಿಪರ್ಯಯಾತ್ । —ದೇವಾಗಮ

ಅದನ್ನು ನಿರ್ಣಯಿಸಿ ಹೇಳುವುದು ಕಷ್ಟಕರವಾಗಿದೆ ಅದಕ್ಕಾಗಿ ಸಾವಧಾನ ಪುರುಷನ ವಿವೇಕದ ಮೇಲೆಯೇ ಅದನ್ನು ಒಪ್ಪಿಸಲಾಗುವುದು ಆದರೂ ಧರ್ಮದ ವಿವಿಧ ಅಂಗಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು, ಸೂತ್ರರೂಪದಲ್ಲಿ ಈ ಗ್ರಂಥದಲ್ಲಿ ಸಮೀಚೀನ ಧರ್ಮಸ್ವರೂಪವನ್ನು ವಿವರಿಸಲಿಕ್ಕೆ ಯತ್ನಿಸಿದೆ ಅದರಲ್ಲಿ ಯಾವ ಧರ್ಮ, ಯಾರಿಗೆ, ಯಾವ ದೃಷ್ಟಿಯಿಂದ, ಎಂಥ ಪರಿಸ್ಥಿತಿಯಲ್ಲಿ, ಅದಾವರೂಪದಲ್ಲಿ ಗ್ರಾಹ್ಯವಾಗುತ್ತದೆ—ಎಂಬುದನ್ನು ಸೂಚಿಸಿದೆ ಇವೆಲ್ಲ ಧರ್ಮದ ಸಮೀಚೀನತೆಯ ದ್ಯೋತಕವಾಗಿವ ಇದನ್ನು ವ್ಯವಹಾರದಲ್ಲಿ ತರಲಿಕ್ಕೆ ಸ್ಯಾದ್‌ದೃಷ್ಟಿ-ಸತರ್ಕದೃಷ್ಟಿ-ಯ ಅವಶ್ಯಕತೆಯಿದೆ ಸತ್-ದೃಷ್ಟಿಯಿಲ್ಲದ-ವಿವೇಕವಿಹೀನ-ಧರ್ಮಾಚರಣೆಯಲ್ಲಿ ಸಮೀಚೀನತೆಯು ಇರಲಾರದು

ಈ ಗ್ರಂಥವು ಒಂದೇ ಒಂದು ಧರ್ಮ-ದೇಶನಾ ಅಥವಾ ಧರ್ಮ-ಶಾಸನಕ್ಕಾಗಿ ನಿರ್ಮಾಣವಾದುದರಿಂದ 'ಧರ್ಮ-ಶಾಸ್ತ್ರ' ಪದಕ್ಕೆ ಯೋಗ್ಯವಾಗಿದೆ. ಮೇಲಾಗಿ ಇದರಲ್ಲಿ ವರ್ಣಿಸಿದ ಧರ್ಮದ ಕೊನೆಯ ಗುರಿಯು ಅಕ್ಷಯ ಸುಖಪ್ರಾಪ್ತಿಯಾಗಿದೆ ಅದರಿಂದ ಇದಕ್ಕೆ ಆಚಾರ್ಯ ವಾದಿರಾಜಸೂರಿಯು-ವಿಕ್ರಮ ಸಂ ೧೧ ಶತಮಾನದವರು—ತನ್ನ 'ಪಾರ್ಶ್ವನಾಥ ಚರಿತೆ'ಯಲ್ಲಿ[1] ಸಮಂತಭದ್ರರನ್ನು ಸ್ತುತಿಸುವಾಗ 'ಅಕ್ಷಯ್ಯಸುಖಾವಹಃ'ವೆಂದೂ ಹೇಳಿದ್ದಾನೆ ಅದರಿಂದ ಇದು 'ಸುಖ-ಶಾಸ್ತ್ರ' ಮೂಡಿಸಿದೆ

ಸೂತ್ರದಲ್ಲಿ ಪ್ರತಿಜ್ಞಾವಾಕ್ಯರೂಪದಲ್ಲಿ 'ದೇಶಯಾಮಿ ಸಮೀಚೀನಂ ಧರ್ಮಂ' ಎಂದು ಹೇಳಿರುವುದರಿಂದ ಇದಕ್ಕೆ 'ಸಮೀಚೀನ ಧರ್ಮಶಾಸ್ತ್ರ' ಎಂದು ಹೇಳಬಹುದು ಅದರಂತೆ ಗ್ರಂಥದ ಕೊನೆಯ ಕಾರಿಕೆಯೊಂದರಲ್ಲಿ 'ಯೇನ ಸ್ವಯಂ ವೀತಕಲಂಕವಿದ್ಯಾ-ದೃಷ್ಟಿಕ್ರಿಯಾ-ರತ್ನಕರಂಡಭಾವಂ ನೀತಃ' ಎಂದೂ ಹೇಳಿರುವುದರಿಂದ ರತ್ನತ್ರಯಗಳನ್ನು ರಕ್ಷಿಸುವ ಕರಂಡಕ-ಪೆಟ್ಟಿಗೆ-ಯಂತಿರುವ ಈ ಶಾಸ್ತ್ರಕ್ಕೆ 'ರತ್ನಕರಂಡಕ' ಎಂದೂ ಹೆಸರಿದೆ. ಸಮಂತಭದ್ರರ ಉಳಿದ ಗ್ರಂಥಗಳಿಗೂ ಸಹ ಹೀಗೆ ಎರಡೆರಡು ಹೆಸರುಗಳಿದ್ದುದನ್ನು ನಾವು ಕಾಣುತ್ತೇವೆ. ಅವರ 'ದೇವಾಗಮ'ವು 'ಆಪ್ತಮೀಮಾಂಸಾ' ಎಂದೂ 'ಜಿನಶತಕ'ವು 'ಸ್ತುತಿ-ವಿದ್ಯಾ' ಎಂದೂ 'ಸ್ವಯಂಭೂ-ಸ್ತೋತ್ರ'ವು 'ಸಮಂತಭದ್ರ-ಸ್ತೋತ್ರ'ವೆಂದೂ ಹೆಸರಾಗಿವೆ ಇವುಗಳ ಉಲ್ಲೇಖವು ಆಯಾ ಗ್ರಂಥಗಳ ಆದಿ-ಅಂತ್ಯ ಪದ್ಯಗಳಲ್ಲಿ ದೊರೆಯುತ್ತದೆ ಸ ಥ]

ಜಿತಕರ್ಮಂ ಸಮುಪಾತ್ತತತ್ತ್ವಚಯಮರ್ಮಂ ಶುದ್ಧರತ್ನತ್ರಯೀ-
ಧೃತಭರ್ಮಂ ಕುಮತಾಪಳೀಶಿಶಿರಘರ್ಮಂ ಸಾಧುಸಂದೋಹ ಸಂ ।
ವೃತವರ್ಮಂ ವಿನಮದ್ವಿನೇಯಜನಶರ್ಮಂ ಮೋಕ್ಷಲಕ್ಷ್ಮೀಪ್ರಿಯೋ-
ಚಿತನರ್ಮಂ ನಮಗಾರ್ಮಮಕ್ಕೆ ಜಿನಧರ್ಮಂ ಜನ್ಮಪಾರಂಬರಂ ॥

—ಅಗ್ಗಳದೇವ-ಚಂದ್ರಪ್ರಭ ಪುರಾಣಂ ೧ ೮

ಆತ್ಮನ ಸ್ವಭಾವರೂಪ ಧರ್ಮವನ್ನು ಹೇಳಲೆಂದು ಸೂತ್ರ ಹೇಳುತ್ತಾರೆ—

ಸದ್‌ದೃಷ್ಟಿಜ್ಞಾನವೃತ್ತಾನಿ ಧರ್ಮಂ ಧರ್ಮೇಶ್ವರಾ ವಿದುಃ ।
ಯದೀಯಪ್ರತ್ಯನೀಕಾನಿ ಭವಂತಿ ಭವಪದ್ಧತಿಃ ॥ ೩ ॥

ಅನ್ವಯಾರ್ಥ—(ಧರ್ಮೇಶ್ವರಾಃ) ಧರ್ಮದ ಒಡೆಯರು ಅರಿಹಂತರು (ಸದ್‌ದೃಷ್ಟಿಜ್ಞಾನವೃತ್ತಾನಿ) ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರಗಳಿಗೆ (ಧರ್ಮಂ) ಧರ್ಮವೆಂದೂ (ವಿದುಃ) ಅನ್ನುತ್ತಾರೆ (ಯದೀಯ ಪ್ರತ್ಯನೀಕಾನಿ) ಇದಕ್ಕೆ ವಿಪರೀತವಾಗಿರುವ—ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರಗಳು—(ಭವಪದ್ಧತಿಃ) ಸಂಸಾರವನ್ನು ಬೆಳೆಯಿಸುವಂಥವು (ಭವಂತಿ) ಇವೆ[2]

---

[1] ತ್ಯಾಗೀ ಸ ಏವ ಯೋಗೀಂದ್ರೋ ಯೇನಾಕ್ಷಯ್ಯಸುಖಾವಹಃ ।
ಅರ್ಥಿನೇ ಭವ್ಯಸಾರ್ಥಾಯ ದಿಷ್ಟೋ ರತ್ನಕರಂಡಕಃ ॥ ೧೯ ॥ —ಪಾರ್ಶ್ವನಾಥ ಚರಿತೆ

[2] ಆಯತಪವರ್ಮನು ಹೇಳಿದ್ದು ಹೀಗೆ—ಸಮ್ಯಗ್ದರ್ಶನ ಜ್ಞಾನ ಚಾರಿತ್ರಾಣಿ ಧರ್ಮಾಃ—ಎಂಬುದು ಸರ್ವಜ್ಞಭಾಷಿತಂ ।
ಕಂದ ॥ ತತ್ತ್ವದ ರುಚಿ ಸಮ್ಯಕ್ತ್ವಂ । ತತ್ತ್ವಂಗಳನೊಳ್ಪಿತಾಗಿಯರಿವುದು ಬೋಧಂ ॥
ತತ್ತ್ವಂ ತನ್ನೊಳ್ಮಿರಿದಿರೆ । ಸತ್ತ್ವಂಗಳ ನೋಪಿ ಕಾವುದದುವೆ ಚರಿತ್ರಂ ॥ ೨ ॥

ಅರ್ಥ—ಧರ್ಮದ ಈಶ್ವರನೆನಿಸುವ ತೀರ್ಥಂಕರ ಪರಮದೇವನು ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರಗಳಿಗೆ ಧರ್ಮವೆಂದು ಹೇಳಿದ್ದಾನೆ. ಇವುಗಳಿಗೆ ವಿರುದ್ಧವಾದ ಮಿಥ್ಯಾದರ್ಶನ, ಮಿಥ್ಯಾಜ್ಞಾನ ಮತ್ತು ಮಿಥ್ಯಾಚಾರಿತ್ರ ಇವೂ ಮೂರಿವೆ. ಇವುಗಳಿಂದ ಸಂಸಾರ ಪರಿಭ್ರಮಣವು ಉಂಟಾಗುತ್ತದೆ.

ವಿಶೇಷಾರ್ಥ—ಸ್ವಪರದ್ರವ್ಯಗಳ ಯಥಾರ್ಥಜ್ಞಾನವಾಗುವುದರಿಂದ ಸಂಸಾರದಲ್ಲಿ ಸುತ್ತುವುದು ನಷ್ಟವಾಗಿ, ಉತ್ತಮ ಸುಖವನ್ನು ಒದಗಿಸುವ ಧರ್ಮವು ಪ್ರಾಪ್ತವಾಗುತ್ತದೆ ಇದಕ್ಕೆ ವಿಪರೀತವಾಗಿ ಸ್ವಪರ ದ್ರವ್ಯಗಳ ಅಸತ್ಯಾರ್ಥ ಜ್ಞಾನ, ಶ್ರದ್ಧೆ ಮತ್ತು ಚಾರಿತ್ರ ಇವು ಸಂಸಾರದೊಳಗಿನ ಭೀಕರ ದುಃಖದಲ್ಲಿ ಮುಳುಗಿಸುವಂಥವು ಇವೆ. ಇದನ್ನು ವೀತರಾಗ ಭಗವಂತರು ಹೇಳುವರು. ಇದು ನಮ್ಮ ನಿಮ್ಮಂಥ ಸಾಮಾನ್ಯರ ಮಾತೇನೂ ಅಲ್ಲ

[ಇಲ್ಲಿ ಮೂಲದಲ್ಲಿ ಪ್ರಯೋಗಿಸಿದ 'ಸತ್' ಎಂಬ ಶಬ್ದದ ಸಂಬಂಧವು ಮುಂದಿನ ದೃಷ್ಟಿ, ಜ್ಞಾನ, ವೃತ್ತ ಈ ಮೂರರ ಜೊತೆಯಲ್ಲಿಯೂ ಇದೆ ಮತ್ತು ಅದರ ಪ್ರಯೋಗವು ಸಮ್ಯಕ್, ಶುದ್ಧ, ಸಮೀಚೀನ ಮತ್ತು ವೀತಕಲಂಕ (ನಿರ್ದೋಷ) ಎಂಬ ಅರ್ಥದಲ್ಲಿದೆ ಇದು 'ಶ್ರದ್ಧಾನಂ ಪರಮಾರ್ಥಾನಾಂ' 'ಭಯಾಶಾಸ್ನೇಹಲೋಭಾಚ್ಚ', 'ಪ್ರಥಮಾನುಯೋಗಮರ್ಥಾ', 'ಯೇನ ಸ್ವಯಂ ವೀತಕಲಂಕವಿದ್ಯಾ' ಮೊದಲಾದ ಸೂತ್ರಗಳಿಂದ ಪ್ರಕಟವಾಗುತ್ತದೆ[1] ಇನ್ನು 'ಹಿಂಸಾಽನೃತಚೌರ್ಯೇಭ್ಯೋ' ಎಂಬ ಕಾರಿಕೆಯಲ್ಲಿ ಪ್ರಯೋಗಿಸಿದ 'ಸಂಜ್ಞಸ್ಯ' ಎಂಬ ಪದದ 'ಸಂ' ಕೂಡ ಇದೇ ಅರ್ಥದಲ್ಲಿದೆ ಅದಕ್ಕಾಗಿಯೇ 'ಸ್ವಯಂಭೂ ಸ್ತೋತ್ರ'ದಲ್ಲಿ 'ಸಮಂಜಸ' ದಂಥ[2] ಶಬ್ದವನ್ನು ಪ್ರಯೋಗಿಸಲಾಗಿದೆ

'ದೃಷ್ಟಿ'ಗೆ ದರ್ಶನ ಹಾಗು ಶ್ರದ್ಧಾನ, 'ಜ್ಞಾನ'ಕ್ಕೆ ಬೋಧ ಹಾಗು ವಿದ್ಯಾ; 'ವೃತ್ತ' ಎಂಬುದಕ್ಕೆ ಚಾರಿತ್ರ, ಚರಣ, ಕ್ರಿಯಾ ಎಂಬ ಹೆಸರುಗಳಿಂದಲೂ ಈ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ[3] ಇದೇ ಪ್ರಕಾರ 'ಸದ್‌ದೃಷ್ಟಿ'ಗೆ ಸಮ್ಯಗ್ದರ್ಶನವಲ್ಲದೆ ಸಮ್ಯಕ್ತ್ವ, ನಿರ್ಮೋಹವೆಂದೂ 'ಸತ್‌ಜ್ಞಾನ'ಕ್ಕೆ 'ತಥಾಮತಿ' ಎಂಬ ಹೆಸರನ್ನೂ ಕೊಡಲಾಗಿದೆ[4] ಅದರೊಡನೆ 'ಸ್ತುತಿವಿದ್ಯಾ'ದಲ್ಲಿ ಈ ಗ್ರಂಥಕಾರರು ಸದ್‌ದೃಷ್ಟಿಗೆ 'ಸುಶ್ರದ್ಧಾ' ಎಂದೂ[5] 'ಸ್ವಯಂಭೂಸ್ತೋತ್ರ'ದಲ್ಲಿ 'ಸದ್‌ವೃತ್ತ'ಕ್ಕೆ 'ಉಪೇಕ್ಷಾ'[6] ಎಂದೂ ಪ್ರಯೋಗಿಸಿದ್ದಾರೆ. ಅದರಿಂದ ಇವು ಆಯಾಯ ಪದಗಳ ಪರ್ಯಾಯ ಪದಗಳೆಂದು ತಿಳಿಯಲಿಕ್ಕೆ ಬೇಕು.

ಇದರಲ್ಲಿ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರಗಳಿಗೆ 'ಧರ್ಮ'ವೆಂದು ಹೇಳಿದೆ ಇದು ಜೀವಾತ್ಮನ ಧರ್ಮದ ತ್ರಿಕಾಲಾಬಾಧಿತ ಸಾಮಾನ್ಯ ಲಕ್ಷಣವಾಗಿದೆ ಅಂದರೆ ಅದರ ಮೂಲಸ್ವರೂಪವಾಗಿದೆ ಇದಕ್ಕೇನೇ 'ರತ್ನತ್ರಯ' ಧರ್ಮವೆಂದೂ ಹೇಳಲಾಗುವದು ಇವೇ ಮೂರು ರತ್ನಗಳ ಸ್ವರೂಪ ಪ್ರತಿಪಾದನೆಯ ದೃಷ್ಟಿಯಿಂದ ಆಧಾರ ಗ್ರಂಥವಾಗಿರುವುದರಿಂದಲೂ ಈ ರತ್ನತ್ರಯಗಳ ರಕ್ಷಣೆಯ ಉಪಾಯವನ್ನು ಸೂಚಿಸುವುದರಿಂದಲೂ ಇದು 'ರತ್ನಕರಂಡಕ'ವೆಂಬ ಸಾರ್ಥಕನಾಮವನ್ನು ಹೊಂದುತ್ತದೆ ಧರ್ಮದ ಈ ಲಕ್ಷಣವು ಆಪ್ತ ಪುರುಷರಿಂದ—ತೀರ್ಥಂಕರ ಮೊದಲಾದವರಿಂದ—ಪ್ರತಿಪಾದಿಸಲ್ಪಟ್ಟಿದೆ. ಅದರಿಂದ ಅದು ಪ್ರಾಚೀನವಾಗಿದೆ. ಈ ರೀತಿ ಸ್ವಾಮಿಜಿಯವರು ಈ ವಿಷಯದ ತಮ್ಮ ಕರ್ತೃತ್ವವನ್ನು ನಿಷೇಧಿಸುತ್ತಾರೆ.

ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರಗಳು ಧರ್ಮವೆಂದು ಹೇಳಿದಾಗ ಮಿಥ್ಯಾದರ್ಶನ, ಮಿಥ್ಯಾಜ್ಞಾನ ಮತ್ತು ಮಿಥ್ಯಾಚಾರಿತ್ರಗಳು 'ಅಧರ್ಮ'ವೆಂಬುದು ಸ್ಪಷ್ಟವೇ ಆಗುತ್ತದೆ. ಅಧರ್ಮವು

---

[1] ಇದೇ ಗ್ರಂಥದಲ್ಲಿ ೪, ೩೦, ೪೩, ೧೪೯ ಸೂತ್ರ.

[2] "ಸಮಂಜಸ-ಜ್ಞಾನ-ವಿಭೂತಿ-ಚಕ್ಷುಷಾ" ॥ ೧ ॥

[3] ಸೂತ್ರ ೪, ೨೧, ೩೧ ಇತ್ಯಾದಿ, ೩೨, ೪೩, ೪೬ ಇತ್ಯಾದಿ; ೪೯, ೫೦, ೧೪೯ ಇತ್ಯಾದಿ.

[4] ಸೂತ್ರ ೩೨, ೩೪, ೪೪

[5] 'ಸುಶ್ರದ್ಧಾ ಮಮ ತೆ ಮತೆ' ಪದ್ಯ ೧೧೪.

[6] ಮೋಹರೂಪೋ ರಿಪುಃ ಪಾಪಃ ಕಷಾಯಭಟಸಾಧನಃ ।
ದೃಷ್ಟಿ-ಸಂವಿದುಪೇಕ್ಷಾಸ್ತ್ರೈಸ್ತ್ವಯಾ ಧೀರ ಪರಾಜಿತಃ ॥ ೯೦ ॥

ಪಾಪದ ಮೂಲರೂಪವಾಗಿದೆ. ಇದಕ್ಕೆ ಈ ಗ್ರಂಥದಲ್ಲಿ 'ಪಾಪ', 'ಕಿಲ್ಬಿಷ'ಗಳೆಂದೂ ಉಲ್ಲೇಖಿಸ-ಲಾಗಿದೆ[1] ಅಲ್ಲದೆ ಇವಕ್ಕೆ 'ಭವಪದ್ಧತಿ' ಎಂದು ಹೇಳಿದಾಗ ರತ್ನತ್ರಯಗಳಿಂದ 'ಮೋಕ್ಷಪದ್ಧತಿ'—ಮೋಕ್ಷ ಮಾರ್ಗ—ರೂಪುಗೊಂಡಿದೆಯೆಂದು ಸ್ಪಷ್ಟವಾಗುತ್ತದೆ ಇದು ಸಂಸಾರ ದುಃಖದಿಂದ ಮುಕ್ತಗೊಳಿಸಿ, ಉತ್ತಮ ಸುಖದಲ್ಲಿ ನಿಲ್ಲಿಸುವಂಥದ್ದಾಗಿದೆ ಯಾಕಂದರೆ 'ಮೋಕ್ಷ'ವು 'ಭವ'ದ ವಿಪರೀತ–ಪ್ರತ್ಯನೀಕ–ವಾಗಿದೆ[2] ಇದನ್ನು ಗ್ರಂಥಕಾರರು ಸ್ಪಷ್ಟವಾಗಿ ಹೇಳಿದ್ದಾರೆ ಇದನ್ನೇ 'ತತ್ತ್ವಾರ್ಥಸೂತ್ರ'ದಲ್ಲಿ[3] ಉಮಾಸ್ವಾತಿಯವರೂ ಸ್ಪಷ್ಟಪಡಿಸಿದ್ದಾರೆ ಮತ್ತು ಇದೇ ಮಾತನ್ನು ಶ್ರೀ ಪ್ರಭಾಚಂದ್ರಾಚಾರ್ಯರು ತಮ್ಮ ತತ್ತ್ವಾರ್ಥಸೂತ್ರದಲ್ಲಿ 'ಸದ್‌ದೃಷ್ಟಿ-ಜ್ಞಾನವೃತ್ತಾತ್ಮಾ ಮೋಕ್ಷಮಾರ್ಗಃ ಸನಾತನಃ' ಹಾಗು 'ಸಮ್ಯಗ್ದರ್ಶನಾವಗಮವೃತ್ತಾನಿ ಮೋಕ್ಷಹೇತುಃ' ಈ ಮಂಗಲಕರವಾದ ಸೂತ್ರವಾಕ್ಯಗಳಲ್ಲಿ ಪ್ರತಿಪಾದಿಸಿದ್ದಾರೆ ಈ ರತ್ನತ್ರಯರೂಪ ಧರ್ಮಕ್ಕೆ ಸ್ವಾಮಿ ಸಮಂತಭದ್ರರು 'ಮೋಕ್ಷಮಾರ್ಗ'ವೆಂದಲ್ಲದೆ 'ಸನ್ಮಾರ್ಗ', 'ಶುದ್ಧಮಾರ್ಗ'ವೆಂದೂ ಅಂದಿದ್ದಾರೆ ಮತ್ತು ಶುದ್ಧ ಸುಖಾತ್ಮಕವಾದ ಮೋಕ್ಷಕ್ಕೆ ಶಿವ, ನಿರ್ವಾಣ, ನಿಃಶ್ರೇಯಸ ಎಂದು ಹೆಸರುಗಳನ್ನು ಕೊಟ್ಟು, 'ಶಿವಮಾರ್ಗ', 'ನಿರ್ವಾಣ ಮಾರ್ಗ', 'ನಿಃಶ್ರೇಯಸಮಾರ್ಗ'ವೆಂದೂ ಇದಕ್ಕೇನೆ ಬೇರೆ ಹೆಸರುಗಳನ್ನು ಸೂಚಿಸಿದ್ದಾರೆ[4] ಜೊತೆಗೆ 'ಬ್ರಹ್ಮಪಥ'ವೆಂದೂ ಈ ಆಚಾರ್ಯರು 'ಯುಕ್ತ್ಯನುಶಾಸನ'ದಲ್ಲಿ ಇದಕ್ಕೇ ಸೂಚಿಸಿರುವರು[5] ಅದು ಉಮಾಸ್ವಾಮಿಗಳ 'ಮೋಕ್ಷಮಾರ್ಗಸ್ಯ ನೇತಾರಂ' ಎಂಬ ಪದವನ್ನು ನೆನಪಿಗೆ ತರುತ್ತದೆ ಇದೇ ನಿಜವಾದ ಜಿನಶಾಸನವಾಗಿದೆ,[6] ಜೈನಮಾರ್ಗವಾಗಿದೆ, ವಾಸ್ತವಿಕವಾದ ಸುಖಮಾರ್ಗವಾಗಿದೆ ಇದನ್ನುಳಿದ ಮಿಥ್ಯಾದರ್ಶನಾದಿಗಳಿಗೆ ಕುಮಾರ್ಗ, ಮಿಥ್ಯಾಮಾರ್ಗ, ಕಾಪಥ ಮತ್ತು ದುಃಖಮಾರ್ಗವೆಂದು ತಿಳಿಯಬೇಕು 'ಕಾಪಥ' ಶಬ್ದದ ಸ್ಪಷ್ಟ ಪ್ರಯೋಗವಿದೆ ಮತ್ತು ಅದಕ್ಕೆ 'ದುಃಖಾನಾಂ ಪಥಿ' ಎಂದು ಹೇಳಿ, ಇದನ್ನು ದುಃಖಮಾರ್ಗವೆಂದೂ ಸೂಚಿಸಲಾಗಿದೆ ಒಂಭತ್ತನಯು ಸೂತ್ರದಲ್ಲಿಯೂ 'ಕಾಪಥಘಟ್ಟನಂ' ಎಂಬ ಪದದಿಂದ ಇದೇ ಕುಮಾರ್ಗದ ನಿರ್ದೇಶ ಮಾಡಲಾಗಿದೆ. ಆಗಮದಲ್ಲಿ ಇದನ್ನು ಖಂಡಿಸುವ ವಿಧಾನದ ವಿವರಣೆಯೂ ಇದೆ

ಇದೇ ಸಮ್ಯಗ್ದರ್ಶನಾದಿ ರೂಪದಲ್ಲಿರುವ ಧರ್ಮಕ್ಕೇನೇ ಈ ಗ್ರಂಥದ ಎರಡನೆಯ ಸೂತ್ರದಲ್ಲಿ 'ಕರ್ಮನಿಬರ್ಹಣ' ಎಂದು ಹೇಳಲಾಗಿದೆ ಈ ಧರ್ಮಕ್ಕೆ ಮುಖ್ಯವಾಗಿ ನಿಶ್ಚಯ ಮತ್ತು ವ್ಯವಹಾರ ಎಂದು ಎರಡು ಭೇದಗಳಿವೆ ಇವುಗಳಿಗೇನೇ ಮುಖ್ಯ ಹಾಗು ಉಪಚಾರ ಎಂದೂ ಹೇಳಲಾಗುವುದು ಇವುಗಳಲ್ಲಿ ವ್ಯವಹಾರ ಧರ್ಮವು ನಿಶ್ಚಯಕ್ಕೆ ಪೋಷಕವಾಗಿಯೂ ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾಗಿಯೂ ಇರುತ್ತದೆ ನಿಶ್ಚಯಧರ್ಮವು ಸಾಕ್ಷಾತ್ ಮೋಕ್ಷದ ಹೇತುವಾಗಿದೆ ಮತ್ತು ಇದರ ಆರಾಧನೆಯು ಎರಡು ಪ್ರಕಾರದಿಂದ ಆಗುತ್ತದೆ ಒಂದು ಸಕಲರೂಪ, ಇನ್ನೊಂದು ವಿಕಲರೂಪ ವಿಕಲರೂಪದ ಆರಾಧನೆಯು ಗೃಹಸ್ಥರಿಂದ ನಡೆಯುತ್ತದೆ. ಸಕಲರೂಪವು ಮುನಿಗಳಿಗೆ ಸಿದ್ಧಿಸುತ್ತದೆ ವಿಕಲರೂಪದಲ್ಲಿ—ಏಕದೇಶ ಅಥವಾ ಆಂಶಿಕ—ರತ್ನತ್ರಯದ ಆರಾಧನೆಯನ್ನು ಮಾಡುವವರಿಗೆ ಶುಭರಾಗದಿಂದ ಜನಿಸುವ ಪುಣ್ಯಬಂಧವು ಸಂಭವಿಸುತ್ತದೆ ಅದು ಮೋಕ್ಷಸಾಧನೆಗೆ ಸಹಾಯಕವೂ ಆಗುತ್ತದೆ ಅದರಿಂದ ಅದನ್ನು ಮೋಕ್ಷೋಪಾಯವೆಂದೇ ಸ್ವೀಕರಿಸಲಾಗಿದೆ, ಬಂಧಕಾರಣವೆಂದಲ್ಲ[7] ಅದರಿಂದಲೇ ಈ ಗ್ರಂಥದಲ್ಲಿ ಮುಖ್ಯವಾಗಿ ಗೃಹಸ್ಥರಿಗೆ ಮತ್ತು ಅವರಿಗೆ ಹೆಚ್ಚು ಉಪಯುಕ್ತವಾದ ವ್ಯವಹಾರತ್ರಯವನ್ನು ಗುರಿಯನ್ನಾಗಿಟ್ಟುಕೊಂಡು ವಿವರಿಸಿದೆ ಸಮೀಚೀನ ಧರ್ಮ ಮತ್ತು

---

1 ಸೂತ್ರ ೨೭, ೨೯, ೪೯, ೧೪೮

2 ಮೋಕ್ಷಸ್ತದ್ವಿಪರೀತಾತ್ಮಾ । ಸೂತ್ರ ೧೦೪

3 ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಾಣಿ ಮೋಕ್ಷಮಾರ್ಗಃ ॥ ೧ ॥

4 ಸೂತ್ರ ೧೧, ೧೫, ೩೧, ೩೩, ೪೧, ೧೩೧

5 'ಬ್ರಹ್ಮಪಥಸ್ಯ ನೇತಾ' ಕಾರಿಕಾ ೪

6 ಈ ಹೆಸರಿನಿಂದ ಈ ಮಾರ್ಗದ ಉಲ್ಲೇಖವು ಸೂತ್ರ ೧೭ ಹಾಗು ೭೮ರಲ್ಲಿ ಬಂದಿದೆ.

7 ಅಸಮಗ್ರಂ ಭಾವಯತೋ ರತ್ನತ್ರಯಮಸ್ತಿ ಕರ್ಮಬಂಧೋ ಯಃ ।
ಸವಿಪಕ್ಷಕೃತೋಽವಶ್ಯಂ ಮೋಕ್ಷೋಪಾಯೋ ನ ಬಂಧನೋಪಾಯಃ" ॥ ೨೧೧ ॥ —ಪುರುಷಾರ್ಥ ಸಿದ್ಧ್ಯುಪಾಯ

ಅದರ ಅಂಗೋಪಾಂಗದ ಫಲಗಳನ್ನು ವರ್ಣಿಸುತ್ತ ಅದರಲ್ಲಿ ನಿಃಶ್ರೇಯಸದ ಸುಖವನ್ನಲ್ಲದೆ ಅಭ್ಯುದಯ ಸುಖ ಅಥವಾ ಲೌಕಿಕ ಸುಖಸಮೃದ್ಧಿಯನ್ನು ಹೆಚ್ಚಾಗಿ ವರ್ಣಿಸಲಾಗಿದೆ

ಈಗ ಇಲ್ಲಿ, ಇನ್ನೊಂದು ಪ್ರಶ್ನೆಯೂ ಏಳುವುದು. ಧರ್ಮದ ಅಧಿನಾಯಕರು ವಸ್ತುಸ್ವಭಾವಕ್ಕೆ ಧರ್ಮ ಎಂದು ಹೇಳಿದ್ದಾರೆ[1] ಅಲ್ಲದೆ ಚಾರಿತ್ರಕ್ಕೂ ಧರ್ಮವೆಂದು ಸಾರಿದ್ದಾರೆ[2] ಇನ್ನು ಅಹಿಂಸೆಯು ಪರಮ ಧರ್ಮವೆಂದೂ, ದಯೆಯೇ ಧರ್ಮದ ಮೂಲವೆಂದೂ ಪ್ರತಿಪಾದಿಸಿದ್ದಾರೆ ಮತ್ತು ಉತ್ತಮ ಕ್ಷಮಾ ಮೊದಲಾದ ದಶಲಕ್ಷಣ ಧರ್ಮವನ್ನು ವಿಶೇಷ ರೀತಿಯಿಂದ ವರ್ಣಿಸಿದ್ದಾರೆ[3] ಆದರೆ ಇಲ್ಲಿ ಕೇವಲ ರತ್ನತ್ರಯ ಧರ್ಮವನ್ನಷ್ಟೇ ಏಕೆ ಧರ್ಮರೂಪದಿಂದ ಗ್ರಹಿಸಲಾಗಿದೆ? ಏನು ಎರಡನೆಯ ಧರ್ಮಗಳು ಇಲ್ಲವೆ? ಅವುಗಳಲ್ಲಿಯೂ ಇದರಲ್ಲಿಯೂ ಬಹಳ ಅಂತರವಿದೆಯೆ? ಇವುಗಳಿಗೆ ಉತ್ತರವೆಂದು ಇಲ್ಲಿ ಕೆಲವು ಮಾತುಗಳನ್ನು ಹೇಳಬಹುದಾಗಿದೆ ನಿಜವಾಗಿ 'ವಸ್ತುಸ್ವಭಾವ'ಕ್ಕೇನೇ ಧರ್ಮವೆಂದು ಹೆಸರಿದೆ ಆದರೆ ದೃಷ್ಟಿ, ಶೈಲಿ, ಅವಶ್ಯಕತೆಯೇ ಮೊದಲಾದ ಭೇದಗಳಿಂದ ವಿವರಣದಲ್ಲಿ ಅಂತರವು ಉಂಟಾಗುತ್ತದೆ. ಸಂಗ್ರಹರೂಪದಲ್ಲಿ ಅಪೇಕ್ಷಿಸುವ ಶಿಷ್ಯರಿಗೆ ಸಂಗ್ರಹವಾಗಿಯೂ ವಿಸ್ತೃತವಾಗಿ ಅಪೇಕ್ಷಿಸುವವರಿಗೆ ವಿಸ್ತಾರವಾಗಿಯೂ ಹೇಳಲಾಗುತ್ತಿದೆ ಕೆಲವರಿಗೆ ಧರ್ಮದ ಒಂದಂಗವನ್ನು ಹೇಳಿದರೆ ಸಾಕು ಕೆಲವರಿಗೆ ಸರ್ವಾಂಗಗಳ ವಿವರಣೆಯು ಬೇಕಾಗುತ್ತದೆ ಒಬ್ಬರಿಗೆ ಸಾಮಾನ್ಯ ರೂಪದಲ್ಲಾದರೆ ಇನ್ನೊಬ್ಬರಿಗೆ ವಿಶೇಷ ರೂಪದ ಅವಶ್ಯಕತೆ ಇರುತ್ತದೆ. ಹೀಗೆ ವಿವಿಧ ದೃಷ್ಟಿಯಿಂದ ಧರ್ಮದ ವಿವೇಚನೆಯು ನಡೆಯುತ್ತದೆ ಧರ್ಮದ 'ವಸ್ತುಸ್ವಭಾವ' ಲಕ್ಷಣವನ್ನು ವಸ್ತುಗಳನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡು ಹೇಳಲಾಗಿದೆ ಅದರಲ್ಲಿ ಜಡ, ಚೇತನ ಪದಾರ್ಥಗಳೆಲ್ಲ ಸಮಾವೇಶವಾಗುತ್ತವೆ ಅದು ಪೂರ್ಣ ಧರ್ಮದ ತೀರ ಸಂಗ್ರಹರೂಪದಲ್ಲಿ ನಿರ್ದೇಶ ಮಾಡಿದ್ದಾಗಿದೆ. ಈ ಗ್ರಂಥದಲ್ಲಿ ಜಡಪದಾರ್ಥಗಳ ಧರ್ಮಕಥನವು ಸಮಾವೇಶವಾಗಿಲ್ಲ. ಇದನ್ನು 'ಸತ್ವಾನ್' ಪದಪ್ರಯೋಗದಿಂದ ಜೀವಾತ್ಮನ ಸ್ವಭಾವ ಧರ್ಮವು ವಿವಕ್ಷಿತವಾಗಿದೆ. ಅದು ಅತಿ ಸಂಕ್ಷೇಪವೂ ಅಲ್ಲ, ಅತಿ ವಿಸ್ತಾರವೂ ಅಲ್ಲದಂತೆ ಸಮ್ಯಗ್ದರ್ಶನ-ಜ್ಞಾನ-ಚಾರಿತ್ರರೂಪವಾಗಿದೆ ಇದರ ಸಮ್ಯಕ್ ಚಾರಿತ್ರ ಅಂಗದಲ್ಲಿ 'ಚಾರಿತ್ತಂ ಖಲು ಧಮ್ಮೋ' ಎಂಬುದರ ವಾಚ್ಯ ಚಾರಿತ್ರವು ಬಂದುಹೋಗುತ್ತದೆ. ಯಾಕೆಂದರೆ ಅದು ಸಮ್ಯಕ್ ಚಾರಿತ್ರವಿದೆ ಮತ್ತು ಸಮ್ಯಗ್‌ಜ್ಞಾನವಿಲ್ಲದೆ ಸಮ್ಯಕ್‌ಚಾರಿತ್ರವು ಸಂಭವಿಸುವದಿಲ್ಲ ಅಲ್ಲದೆ ಸಮ್ಯಗ್‌ಜ್ಞಾನವು ಸಮ್ಯಗ್ದರ್ಶನವಿಲ್ಲದೆ ಆಗುವದಿಲ್ಲ ಅದರಿಂದ ಸಮ್ಯಕ್‌ಚಾರಿತ್ರವನ್ನಷ್ಟು ಹೇಳಿದರೂ ಅಲ್ಲಿ ಜ್ಞಾನದರ್ಶನಗಳು ಸಮಾವೇಶಗೊಳ್ಳುತ್ತವೆ. ಸ್ವತಃ ಕುಂದಕುಂದಾಚಾರ್ಯರು 'ಪ್ರವಚನಸಾರ'ದಲ್ಲಿ 'ಜೀವಸ್ಸ ಚರಿತ್ತಾದೋ ದಂಸಣಣಾಣಪ್ಪಹಾಣಾದೋ' ಈ ವಾಕ್ಯದಿಂದ ಚಾರಿತ್ರಕ್ಕೆ 'ದರ್ಶನ-ಜ್ಞಾನ-ಪ್ರಧಾನ'ವೆಂಬ ವಿಶೇಷಣವನ್ನು ಕೊಟ್ಟು, ಇದನ್ನು ಇನ್ನೂ ಸ್ಪಷ್ಟಗೊಳಿಸಿದ್ದಾರೆ ಅಹಿಂಸೆಯು ಚಾರಿತ್ರದ ಪ್ರಧಾನ ಅಂಗವಾಗಿರುವುದರಿಂದ ಪರಮಧರ್ಮ-ವೆನಿಸುತ್ತದೆ. 'ದಯಾ' ಎಂಬುದು ಅದರ ಸುಗಂಧವಾಗಿದೆ ಎರಡರಲ್ಲಿ ಒಂದು ನಿವೃತ್ತಿರೂಪ ಇನ್ನೊಂದು ಪ್ರವೃತ್ತಿರೂಪವಾಗಿದೆ ಇದೇ ಪ್ರಕಾರ ದಶಲಕ್ಷಣ ಧರ್ಮದ ಸಮಾವೇಶವೂ ರತ್ನತ್ರಯ ಧರ್ಮದಲ್ಲಿಯೇ ಆಗುತ್ತದೆ ಇದಕ್ಕೆ ಪ್ರಬಲ ಪ್ರಮಾಣವು 'ತತ್ತ್ವಾರ್ಥಸೂತ್ರ'ವೇ ಆಗಿದೆ. ಅದರಲ್ಲಿ ಉಮಾಸ್ವಾತಿಯವರು ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗಳಿಗೆ 'ಮೋಕ್ಷಮಾರ್ಗ'ವೆಂದು ಹೇಳಿ, ಅದನ್ನು ವಿವೇಚಿಸುತ್ತ ಸಂವರಾಧಿಕಾರದಲ್ಲಿ ದಶಲಕ್ಷಣ ಧರ್ಮದ ಸೂತ್ರವನ್ನು ಇಟ್ಟಿದ್ದಾರೆ ಇದರಿಂದ ಈ ದಶಲಕ್ಷಣ ಧರ್ಮವೆಲ್ಲ ರತ್ನತ್ರಯ ಧರ್ಮದ ವಿಕಸಿತ ರೂಪವೇ ಆಗಿದೆಯೆಂಬುದು ಸ್ಪಷ್ಟವಾಗುತ್ತದೆ ಇಷ್ಟಾದಮೇಲೆ ಸಂಶಯಕ್ಕೆ ಇನ್ನು ಯಾವ ಸ್ಥಾನವೂ ಉಳಿಯುವದಿಲ್ಲ ಅಲ್ಲದೆ ಈ ರತ್ನಕರಂಡದೊಳಗಿನ ಧರ್ಮದ ಈ ರೂಪವು ಬಹಳ ಸುವ್ಯವಸ್ಥಿತವೂ ಮಾರ್ಮಿಕವೂ ಆಗಿದ್ದು, ಧ್ಯೇಯಕ್ಕೆ ಅನುರೂಪವಾಗಿದೆಯೆಂದು ತೋರುತ್ತದೆ ಸ ಧ.]

---

[1] "ಧಮ್ಮೋ ವತ್ಥುಸಹಾವೋ ।" —ಕಾರ್ತಿಕೇಯಾನುಪ್ರೇಕ್ಷಾ ೪೭೮

[2] ಚಾರಿತ್ತಂ ಖಲು ಧಮ್ಮೋ ಧಮ್ಮೋ ಜೋ ಸೋ ಸಮೋ ತ್ತಿ ಣಿದ್ದಿಟ್ಠೋ ।
ಮೋಹಕ್ಖೋಹವಿಹೀಣೋ ಪರಿಣಾಮೋ ಅಪ್ಪಣೋ ಹು ಸಮೋ ॥ ೭ ॥ —ಪ್ರವಚನಸಾರ

[3] ಉತ್ತಮಕ್ಷಮಾ-ಮಾರ್ದವಾರ್ಜವ-ಸತ್ಯ-ಶೌಚ ಸಂಯಮ-ತಪಸ್ತ್ಯಾಗಾಕಿಂಚನ್ಯ-ಬ್ರಹ್ಮಚರ್ಯಾಣಿ ಧರ್ಮಃ ।
—ತತ್ತ್ವಾರ್ಥಸೂತ್ರ ೯-೬.

ನಂಬುವುದೇಳು ತತ್ತ್ವಮನದುತ್ತಮದೃಷ್ಟಿ ತದರ್ಥಮಂ ನಯಾ-
ರ್ಥಂ ಬರೆ ನೋಡಿ ಭೇದಿವುದದುತ್ತಮ ಬೋಧಮಹಿಂಸೆಯಲ್ಲಿ ಮಾ- ।
ರ್ಗಂ ಬಿಡದಿರ್ಪುದುತ್ತಮ ಚರಿತ್ರಮಿವಿಂತು ಮಣಿತ್ರಯಂ ತದೀ-
ಯಾಂಬುಧಿ ಯಾವುದುತ್ತಮತವಂಗಳಲಾ ಅಪರಾಜಿತೇಶ್ವರಾ ॥

—ರತ್ನಾಕರ–ಅಪರಾಜಿತೇಶ್ವರ ಶತಕ ೨

ಮೊದಲು ಸಮ್ಯಗ್ದರ್ಶನದ ಲಕ್ಷಣ ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

ಶ್ರದ್ಧಾನಂ ಪರಮಾರ್ಥಾನಾಮಾಪ್ತಾಗಮತಪೋಭೃತಾಮ್ ।
ತ್ರಿಮೂಢಾಪೋಢಮಷ್ಟಾಂಗಂ ಸಮ್ಯಗ್ದರ್ಶನಮಸ್ಮಯಮ್ ॥ ೪ ॥

ಅನ್ವಯಾರ್ಥ—(ಪರಮಾರ್ಥಾನಾಂ) ನಿಜವಾದ (ಆಪ್ತಾಗಮತಪೋಭೃತಾಂ) ದೇವ, ಶಾಸ್ತ್ರ, ಗುರುಗಳಲ್ಲಿ (ತ್ರಿಮೂಢಾಪೋಢಂ) ಮೂರು ಪ್ರಕಾರದ ಮೂಢತೆಗಳಿಲ್ಲದಂತೆ (ಅಷ್ಟಾಂಗ) ಎಂಟು ಅಂಗಗಳಿಂದ ಕೂಡಿದ (ಅಸ್ಮಯಂ) ಗರ್ವರಹಿತ (ಶ್ರದ್ಧಾನಂ) ಶ್ರದ್ಧೆಯನ್ನು ಇಡುವುದಕ್ಕೆ (ಸಮ್ಯಗ್ದರ್ಶನಂ) ಸಮ್ಯಗ್ದರ್ಶನವೆಂದು ಹೇಳಲಾಗಿದೆ [1]

ಅರ್ಥ—ಸತ್ಯಾರ್ಥದ ಪ್ರಕಾರ ದೇವ, ಗುರು, ಶಾಸ್ತ್ರ ಇವುಗಳ ಮೇಲೆ ಶ್ರದ್ಧೆಯನ್ನು ಇಡುವುದಕ್ಕೆ ಸಮ್ಯಗ್ದರ್ಶನವೆನ್ನುವರು. ಆಪ್ತನೆಂದರೆ ದೇವ ಇವನು ಎಲ್ಲ ಪದಾರ್ಥಗಳನ್ನೂ ತಿಳಿದು, ಅವುಗಳ ಸತ್ಯಸ್ವರೂಪವನ್ನು ಪ್ರಕಟಮಾಡುವಂಥವನಿರುತ್ತಾನೆ ಆಗಮವೆಂದರೆ ಶಾಸ್ತ್ರ ಇದು ಆಪ್ತನಿಂದ ಉಪದೇಶಿಸಲ್ಪಟ್ಟ ಪದಾರ್ಥವನ್ನು ಶಬ್ದರೂಪದಲ್ಲಿ ರಚಿಸಿದಂಥದ್ದಾಗಿದೆ ಆಪ್ತನು ವಿವರಿಸಿದ ಆಗಮಗಳಿಗನುಸರಿಸಿ, ಆಚರಣಗಳುಳ್ಳವನು ಗುರುವೆನಿಸುವನು ಅಸತ್ಯ ದೇವ, ಗುರು, ಶಾಸ್ತ್ರಗಳ ಮೇಲೆ ಶ್ರದ್ಧೆಯನ್ನು ಇಡುವುದು ಸಮ್ಯಗ್ದರ್ಶನವಲ್ಲ ಸಮ್ಯಗ್ದರ್ಶನವು ಎಂಟು ಅಂಗಗಳಿಂದ ಕೂಡಿದುದೂ ಮತ್ತು ಮೂರು ಮೂಢತೆಗಳೂ ಹಾಗೂ ಎಂಟು ಮದಗಳು ಇವು ಇಲ್ಲದುದೂ ಇರುತ್ತದೆ ಇವುಗಳ ವರ್ಣನೆಯು ಮುಂದೆ ಕ್ರಮದಿಂದ ಬರುತ್ತದೆ

ವಿಶೇಷಾರ್ಥ—ಸತ್ಯಾರ್ಥ ದೇವ, ಗುರು, ಶಾಸ್ತ್ರಗಳ ಮೇಲೆ ಮೂರು ಮೂಢತೆ ಹಾಗೂ ಎಂಟು ಪ್ರಕಾರದ ಮದಗಳಿಲ್ಲದೆಯೂ ಅಷ್ಟಾಂಗಯುಕ್ತವೂ ಆದ ಶ್ರದ್ಧೆಯನ್ನು ಇಡುವುದಕ್ಕೆ ಸಮ್ಯಗ್ದರ್ಶನವೆನ್ನುವರು ಶಾಸ್ತ್ರಗಳಲ್ಲಿ ಅನೇಕ ಕಡೆಗೆ ಏಳು ತತ್ತ್ವ, ಒಂಭತ್ತು ಪದಾರ್ಥಗಳ ಮೇಲೆ ಶ್ರದ್ಧೆಯನ್ನಿಡುವುದೇ ಸಮ್ಯಗ್ದರ್ಶನವೆಂದು ಹೇಳಿದೆ. ಆದರೆ ಇಲ್ಲಿ ಸಮ್ಯಗ್ದರ್ಶನದ ಲಕ್ಷಣವನ್ನು ಬೇರೆ ವಿಧದಲ್ಲಿ ಹೇಳಿದರಲ್ಲ ಎಂದು ಸಂಶಯವೂ ಉಂಟಾಗಬಹುದು ಅದಕ್ಕೂ ಸಮಾಧಾನವಿದೆ ನಿರ್ದೋಷ ಹಾಗೂ ನಿರ್ಬಾಧ ಶಾಸ್ತ್ರದ ಉಪದೇಶವಿಲ್ಲದೆ ಏಳು ತತ್ತ್ವಗಳ ಮೇಲೆ ಶ್ರದ್ಧೆಯನ್ನು ಹೇಗೆ ಇಡುವುದು? ಇನ್ನು ನಿರ್ದೋಷ ಆಪ್ತನನ್ನುಳಿದು ಸತ್ಯಾರ್ಥವುಳ್ಳ ಆಗಮವು ಪ್ರಕಟವಾಗುವದಾದರೂ ಹೇಗೆ? ಅದಕ್ಕಾಗಿ ತತ್ತ್ವ ಶ್ರದ್ಧಾನದ ಮೂಲ ಕಾರಣನು ಸತ್ಯಾರ್ಥ ಆಪ್ತನಾಗಿದ್ದಾನೆ

[ಇಲ್ಲಿ 'ಶ್ರದ್ಧಾನ' ಎಂಬ ಪದದಲ್ಲಿರುವ ಅಭಿಪ್ರಾಯವು ಶ್ರದ್ಧೆ, ರುಚಿ, ಪ್ರತೀತಿ, ಪ್ರತ್ಯಯ (ವಿಶ್ವಾಸ), ನಿಶ್ಚಯ, ಅನುರಾಗ, ಸಾದರಮಾನ್ಯತಾ, ಗುಣಪ್ರೀತಿ, ಪ್ರತಿಪತ್ತಿ (ಸೇವಾ, ಸತ್ಕಾರ) ಮತ್ತು ಭಕ್ತಿ ಮೊದಲಾದ ಶಬ್ದಗಳ ಆಶಯಕ್ಕ ಸರಿ ಹೋಲುತ್ತದೆ ಇವುಗಳಲ್ಲಿಯ ಶ್ರದ್ಧೆ, ರುಚಿ, ಗುಣಪ್ರೀತಿ, ಪ್ರತಿಪತ್ತಿ ಮತ್ತು ಭಕ್ತಿಗಳಂಥ ಕೆಲವು ಶಬ್ದಗಳನ್ನಂತೂ ಸಮಂತಭದ್ರರು ಇದೇ ಗ್ರಂಥದಲ್ಲಿ ಸಮ್ಯಗ್ದರ್ಶನದ ಅಂಗ ಹಾಗೂ ಫಲದ ವರ್ಣನೆಯನ್ನು

---

1 ಆಯತವರ್ಮನು ಈ ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ ಮೋಕ್ಷಪುರ ಪ್ರಾಸಾದಾರೋಹಣಕ್ಕೆಂದು ಮಾಡಿದ ಸೋಪಾನ-ಪಙ್ಕ್ತಿಗಳಂತಿರ್ದ ತ್ರಿರತ್ನಂಗಳೊಳಲ್ಲಿ ಜ್ಞಾನಚಾರಿತ್ರಂಗಳ್ಗೆ ವೃಕ್ಷಕ್ಕೆ ಮೂಲಮುಂ ಪ್ರಾಸಾದಕ್ಕಧಿಷ್ಠಾನಮುಮಿರ್ಪಂತೆ ಪ್ರಧಾನಮಾಗುತ್ತಿರ್ದ ಸಮ್ಯಗ್ದರ್ಶನಮೆಂಬುದೆಂತಪ್ಪುದೆಂದೊಡೆ ।

ಕಂದ ॥ ಮದಮೆಂಟು ಮೂರು ಮೂಢಂ । ಪದಿದಾರಾಯತನ ಸೇವೆಗೆಯ್ವುದೆ ಮೆಳವಿಂ ॥
ಲ್ಲದುದೆಂಟಂಗಮನುಳ್ಳುದು । ವಿದಿತಂ ವಿಮಲಂ ವಿಶುದ್ಧಮಿದು ಸಮ್ಯಕ್ತ್ವಂ ॥ ೩ ॥

ನಾಡುವಾಗ ಪ್ರಯೋಗಿಸಿಯೂ ಇದ್ದಾರೆ.[1] ಇನ್ನು ಉಳಿದ ಪದಗಳ ಪ್ರಯೋಗವು ಬೇರೆ ಕಡೆಗೆ ಪ್ರಾಚೀನ ಸಾಹಿತ್ಯದಲ್ಲಿ ನೋಡಲಿಕ್ಕೆ ಸಿಗುತ್ತವೆ. ನಿರ್ದಿಷ್ಟವಾದ ಆಪ್ತ-ಆಗಮ-ತಪಸ್ವಿಗಳ ವಚನಗಳಲ್ಲಿ ಹೃತ್ಪೂರ್ವಕವಾಗಿ ವಿಶ್ವಾಸವಿಡುವುದೇ ಶ್ರದ್ಧಾನವಾಗಿದೆ. ಇದರ ಫಲಿತಾರ್ಥವು, ಅವಕ್ಕೆ ಅನುಕೂಲವಾದ ವರ್ತನದ ಉತ್ಕಂಠತೆಗಾಗಿ ಉಂಟಾದ ಪರಿಣಾಮವಾಗಿದೆ. ಅವರಿಂದ ಪ್ರತಿಪಾದಿಸಲ್ಪಟ್ಟ ತತ್ತ್ವೋಪದೇಶವನ್ನು ಸತ್ಯವೆಂದು ನಂಬಿ, ಅದಕ್ಕನು-ಸರಿಸಿ ಅಥವಾ ಅವರ ಆದೇಶದಂತೆ ನಡೆಯುವ ಭಾವಕ್ಕೇನೇ ಇಲ್ಲಿ 'ಶ್ರದ್ಧಾನ'ವೆಂದು ಹೇಳಲಾಗಿದೆ.

ಇನ್ನು ಈ ಆಪ್ತ, ಆಗಮ, ತಪಸ್ವಿಗಳು ಅಧ್ಯಾತ್ಮ ಅಥವಾ ಮೋಕ್ಷದ ವಿಷಯದಲ್ಲಿ ಇರುವರೆಂಬುದನ್ನು ಇಲ್ಲಿ 'ಪರಮಾರ್ಥ' ಎಂಬ ವಿಶೇಷಣದಿಂದ ಸ್ಪಷ್ಟಗೊಳಿಸಲಾಗಿದೆ. ಅದರಿಂದ ಅವರು ಲೌಕಿಕ ವಿಷಯಕ್ಕೆ ಸಂಬಂಧಿಸಿ-ದವರೆನಿಸುವದಿಲ್ಲ. ಆದರೆ ಲೌಕಿಕ ವಿಷಯದಲ್ಲಿಯೂ ಆಪ್ತ, ಶಾಸ್ತ್ರ, ಗುರುಗಳೆಂಬವರು ಇರುತ್ತಾರೆ. ಇವರು ಯಾವ ವಿಷಯದಲ್ಲಿ ತಜ್ಞರಿರುತ್ತಾರೆಯೋ ಆ ವಿಷಯದಲ್ಲಿ ಮಾತ್ರ ಆಪ್ತರೆನಿಸುತ್ತಾರೆ. ವಿಶ್ವಸನೀಯ (Trustworthy, Reliable), ಪ್ರಮಾಣಪುರುಷ (Guarantee) ಮತ್ತು ದಕ್ಷ ಹಾಗೂ ಪಟು (Skilful, clever) ಇವರಿಗೂ ಆಪ್ತರೆಂದು ಹೇಳಲಾಗುವುದು.[2] ಇಂಥ ಆಪ್ತರು ಲೌಕಿಕ ವಿಷಯದಲ್ಲಿ ಅನೇಕರಾಗುತ್ತಾರೆ. ಇನ್ನು ಆಪ್ತರ ವಾಕ್ಯವು 'ಆಗಮ'ವೆನಿಸುತ್ತದೆ. ಆಗಮ ಎಂಬ ಪದವು ಶಾಸ್ತ್ರಗಳಿಗೆ ಮಾತ್ರ ಅನ್ವಯಿಸುತ್ತದೆ.[3] ಸ್ವತಃ ಈ ಗ್ರಂಥಕಾರರೂ ಶಾಸ್ತ್ರ ಶಬ್ದದ ಮುಖಾಂತರ ಈ ಗ್ರಂಥದಲ್ಲಿಯೂ ಇನ್ನುಳಿದ ಕಡೆಗೂ ಆಗಮವೆಂಬೀ ಅರ್ಥವನ್ನು ವ್ಯಕ್ತಗೊಳಿಸಿದ್ದಾರೆ.[4] ಲೌಕಿಕ ವಿಷಯದಲ್ಲಿ ಅನೇಕ ಶಾಸ್ತ್ರಗಳಿರುತ್ತವೆ. ಉದಾಹರಣೆಗೆಂದು ವೈದ್ಯಕಶಾಸ್ತ್ರ, ಜ್ಯೋತಿಷಶಾಸ್ತ್ರ, ಶಬ್ದಶಾಸ್ತ್ರ, ಗಣಿತಶಾಸ್ತ್ರ, ಮಂತ್ರಶಾಸ್ತ್ರ, ಛಂದಃಶಾಸ್ತ್ರ, ಅಲಂಕಾರಶಾಸ್ತ್ರ, ನಿಮಿತ್ತಶಾಸ್ತ್ರ, ಅರ್ಥಶಾಸ್ತ್ರ, ಭೂಗರ್ಭಶಾಸ್ತ್ರ ಮೊದಲಾದವುಗಳನ್ನು ಗಮನಿಸಬಹುದು. ಇದೇ ಪ್ರಕಾರ ಅನೇಕ ವಿದ್ಯೆ, ಕಲೆ ಹಾಗೂ ಲೌಕಿಕ ಶಾಸ್ತ್ರಗಳನ್ನು ಕಲಿಸುವ ಗುರುಗಳೂ ಜಗತ್ತಿನಲ್ಲಿ ಪ್ರಸಿದ್ಧವೇ ಆಗಿದ್ದಾರೆ. ಅದರಂತೆ ಲೌಕಿಕ ವಿಷಯದ ಸಿದ್ಧಿಗಾಗಿ ಅನೇಕ ಪ್ರಕಾರದ ತಪವನ್ನು ಆಚರಿಸುವ ತಪಸ್ವಿಗಳೂ ನೋಡಲಿಕ್ಕೆ ದೊರೆಯುತ್ತಾರೆ. ಈ ಕಾಲದಲ್ಲಿ ಅದ್ಭುತವಾದ ಸಂಶೋಧನಗಳನ್ನು ನಡೆಯಿಸುವ ವೈಜ್ಞಾನಿಕರು ಹಲವರು ತಪಸ್ವಿಗಳಂತಿದ್ದಾರೆ. 'ಪರಮಾರ್ಥ' ಎಂಬ ವಿಶೇಷಣದಿಂದ ಈ ಎಲ್ಲ ಲೌಕಿಕ ಆಪ್ತಾದಿಗಳಿಂದ ಇಲ್ಲಿಯ ಆಪ್ತರನ್ನು ಭಿನ್ನಗೊಳಿಸಲಾಗಿದೆ. ಜೊತೆಗೇನೇ ಪರಮಾರ್ಥದ ಅರ್ಥವು ಯಥಾರ್ಥ-ಸತ್ಯಾರ್ಥ-ಎಂದಿರುವದರಿಂದಲೂ ಆಪ್ತಾದಿಗಳು ಯಥಾರ್ಥ-ಒಳ್ಳೆಯವರು ಇರಬೇಕೆಂದೂ ಪ್ರತಿಪಾದಿಸಲಾಗಿದೆ. ಅವರು ಅಯಥಾರ್ಥರಿದ್ದು ಉಪಯೋಗವಿಲ್ಲ. ಯಾಕೆಂದರೆ ಜಗತ್ತಿನಲ್ಲಿ ಪರಮಾರ್ಥ ವಿಷಯವನ್ನೆನಿಸುವ, ಆತ್ಮ ಧರ್ಮದ ವಿಪರೀತ ವಿಷಯಗಳನ್ನು ಉಪದೇಶಿಸುವ ಆಪ್ತರಂತೆನಿಸುವವರು ನೋಡಲಿಕ್ಕೆ ಸಿಕ್ಕುತ್ತಾರೆ. ಇವರಿಗೆ ಆಪ್ತಾಭಾಸ, ಆಗಮಾಭಾಸ ಎಂದು ಹೇಳಬೇಕು. ಸ್ವತಃ ಈ ಸಮಂತಭದ್ರಾಚಾರ್ಯರು ತಮ್ಮ 'ಆಪ್ತಮೀಮಾಂಸಾ'ದಲ್ಲಿ ಇಂಥವರನ್ನು ಅನಾಪ್ತರೆಂದು ಸಿದ್ಧಗೊಳಿಸಿದ್ದಾರೆ.[5] ಈ ವಿಶೇಷಣದಿಂದ ಅವೆಲ್ಲವುಗಳ ನಿರಸನವಾಗಿ ವಿಚ್ಛಿನ್ನತೆಯು ಸ್ಥಾಪಿಸಲ್ಪಡುತ್ತದೆ. ಇದೇ ಈ ವಿಶೇಷಣ ಪದದ-ಪರಮಾರ್ಥಾನಾಂ-ಪ್ರಯೋಗದ ಮುಖ್ಯ ಉದ್ದೇಶವಾಗಿದೆ. ಇದನ್ನು ಸ್ಪಷ್ಟಗೊಳಿಸಲಿಕ್ಕಾಗಿಯೇ ಗ್ರಂಥದಲ್ಲಿ ಈ ವಾಕ್ಯದ ತರುವಾಯವೂ ಸಹ ಪರಮಾರ್ಥ ಸ್ವರೂಪದ ಆಪ್ತಾದಿಗಳ ಯಥಾರ್ಥ ವರ್ಣನೆಯನ್ನು ಕೊಡಲಾಗಿದೆ.

ಪರಮಾರ್ಥ ಆಪ್ತ ಮೊದಲಾದವರಲ್ಲಿ ಶ್ರದ್ಧೆಯನ್ನಿಡುವುದು-ಅವರ ಭಕ್ತಿಯನ್ನು ಮಾಡುವುದು-ನಿಜವಾದ ಅರ್ಥದಲ್ಲಿ ಸಮ್ಯಗ್ದರ್ಶನದ-ಸಮ್ಯಕ್ತ್ವದ-ಕಾರಣವಾಗಿದೆ. ಅದು ಸ್ವತಃ ಸಮ್ಯಗ್ದರ್ಶನವಲ್ಲ. ಇಲ್ಲಿ ಕಾರಣದಲ್ಲಿ

---

[1] ಸೂತ್ರ ೨೨, ೧೨, ೧೩, ೧೭, ೩೭, ೬೨, ನೋಡಿರಿ.

[2] ವಾಮನ ಶಿವರಾಮ ಆಪ್ಟೆಯವರ 'ಸಂಸ್ಕೃತ ಇಂಗ್ಲೀಷ ಡಿಕ್ಷನರಿ' ಮತ್ತು 'ಇಂಗ್ಲೀಷ ಸಂಸ್ಕೃತ ಡಿಕ್ಷನರಿ'ಗಳನ್ನು ನೋಡಿರಿ.

[3] "ಆಗಮಃ ಶಾಸ್ತ್ರ ಆಗತೌ" (ವಿಶ್ವಲೋಚನ); "ಆಗಮಸ್ತ್ವಾಗತೌ ಶಾಸ್ತ್ರೇ" (ಮೇದಿನೀ [illegible]), "ಆಗಮ ಶಾಸ್ತ್ರವಾರ್ತೇ" (ಶಬ್ದಕಲ್ಪದ್ರುಮ)

[4] ಈ ಗ್ರಂಥದಲ್ಲಿ ಸೂತ್ರ ೯. ಹಾಗೂ 'ಆಪ್ತಮೀಮಾಂಸಾ'ದಲ್ಲಿಯ ಈ ವಾಕ್ಯ— "[illegible] ಶಾಸ್ತ್ರಾವಿರೋಧಿವಾಕ್" । ೬ ।

[5] ತ್ವನ್ಮತಾಮೃತಬಾಹ್ಯಾನಾಂ ಸರ್ವಥೈಕಾಂತವಾದಿನಾಮ್ ।
ಆಪ್ತಾಭಿಮಾನದಗ್ಧಾನಾಂ ಸ್ವೇಷ್ಟಂ ದೃಷ್ಟೇನ ಬಾಧ್ಯತೇ ॥ ೭ ॥

ಕಾರ್ಯದ ಉಪಚಾರವಿದೆ[1] ಮತ್ತು ಇದರಿಂದ-ದರ್ಶನದ ಈ ಸ್ವರೂಪದ ಕಥನದಿಂದ-ಒಂದು ಪ್ರಕಾರದ ಭಕ್ತಿ ಯೋಗವನ್ನು ಸಮಾವೇಶ ಮಾಡಲಾಗಿದೆ ಈ ಗ್ರಂಥದಲ್ಲಿಯೂ ಸಮ್ಯಗ್ದರ್ಶನದ ಮಹಿಮೆಯನ್ನು ವರ್ಣಿಸುತ್ತ,

"ಅಮರಾಪ್ಸರಸಾಂ ಪರಿಷದಿ ಚಿರಂ ರಮಂತೇ ಜಿನೇಂದ್ರಭಕ್ತಾಃ ಸ್ವರ್ಗೇ" ॥ ೩೭ ॥

"ಲಬ್ಧ್ವಾ ಶಿವಂ ಚ ಜಿನಭಕ್ತಿರುಪೈತಿ ಭವ್ಯಃ" ॥ ೪೧ ॥

ಈ ವಾಕ್ಯಗಳನ್ನು ಹೇಳುವುದರಿಂದಲೂ ಭಕ್ತಿಯೋಗದ ಉಲ್ಲೇಖವು ಸ್ಪಷ್ಟವಾಗಿದೆ ಇದಲ್ಲದೆ ದರ್ಶನ ಪ್ರತಿಮೆಯ ಸ್ವರೂಪವನ್ನು ಹೇಳುವಾಗ (ಸೂತ್ರ ೧೩೭) ಸಮ್ಯಗ್ದೃಷ್ಟಿಗಾಗಿ 'ಪಂಚಗುರುಚರಣಶರಣ'—ಪಂಚ ಪರಮೇಷ್ಠಿಗಳ ಪಾದಗಳೊಂದೇ ಶರಣ—ಎಂಬ ವಿಶೇಷಣವನ್ನು ಉಪಯೋಗಿಸಲಾಗಿದೆ ಮೇಲಾಗಿ ಗ್ರಂಥದ ಕೊನೆಯ ಕಾರಿಕೆ ಯಲ್ಲಿಯೂ ದೃಷ್ಟಿಲಕ್ಷ್ಮೀ—ಸಮ್ಯಗ್ದರ್ಶನ ಸಂಪತ್ತಿ—ಯನ್ನು 'ಜಿನಪದಪದ್ಮಪ್ರೇಕ್ಷಣೀ' ಎಂದು ಹೇಳಲಾಗಿದೆ. ಇವೆಲ್ಲ ಇದೇ ಸಂಗತಿಯ ದ್ಯೋತಕವಾಗಿವೆ ಇನ್ನು ಪಂಚಪರಮೇಷ್ಠಿಗಳಲ್ಲಿ ಸಿದ್ಧ ಹಾಗು ಅರ್ಹಂತರು ಮಾತ್ರ 'ಆಪ್ತ'ರೆನಿಸುತ್ತಾರೆ. ಉಳಿದ ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಈ ಮೂವರನ್ನು 'ತಪಸ್ವೀ' ಶಬ್ದದಿಂದ ಸೂಚಿಸಲಾಗಿದೆ. ಇದಲ್ಲದೆ ಈ ಪದ್ಯದಲ್ಲಿ ವರ್ಣಿಸಿದ ಸಮ್ಯಗ್ದರ್ಶನದ ಲಕ್ಷಣವು ಸರಾಗ ಸಮ್ಯಕ್ತ್ವದ್ದಾಗಿದೆ, ವೀತರಾಗ ಸಮ್ಯಕ್ತ್ವದಲ್ಲ[2] ಅದರಿಂದ ಇದರಲ್ಲಿ ಭಕ್ತಿಯೋಗದ ಸಮಾವೇಶವಾಗುವುದು ಏನೂ ಅಸ್ವಾಭಾವಿಕವೂ ಅಲ್ಲ ಭಕ್ತಿಗೆ ಸಮ್ಯಕ್ತ್ವದ ಗುಣವೆಂದು ಸ್ಪಷ್ಟವಾಗಿ ಹೇಳಿದೆ ಸಂವೇಗ, ನಿರ್ವೇದ, ನಿಂದಾ, ಗರ್ಹಾ, ಉಪಶಮ, ಭಕ್ತಿ, ವಾತ್ಸಲ್ಯ ಮತ್ತು ಅನುಕಂಪಾ ಇವು ಸಮ್ಯಕ್ತ್ವದ ಎಂಟು ಗುಣಗಳಾಗಿವೆ[3] 'ಪಂಚಾಧ್ಯಾಯಿ' ಮತ್ತು 'ಲಾಟೀ ಸಂಹಿತೆ'ಗಳಲ್ಲೂ ಸಹ ಇದನ್ನು ವಿವರಿಸುತ್ತ ಅರ್ಹದ್‌ಭಕ್ತಿ ಹಾಗು ವಾತ್ಸಲ್ಯ ಎಂಬ ಗುಣಗಳನ್ನು ಸಂವೇಗ ಲಕ್ಷಣವೆಂಬ ಗುಣದ ಲಕ್ಷಣಗಳೆಂದು ಹೇಳಿ ಸಮ್ಯಕ್ತ್ವದ ಉಪಲಕ್ಷಣಗಳೆಂದು ಪ್ರತಿಪಾದಿಸಲಾಗಿದೆ[4] ಅಲ್ಲದೆ ಇವು ಸಂವೇಗ ಗುಣವಿಲ್ಲದೆ ಉಂಟಾಗುವದಿಲ್ಲವೆಂದೂ ಹೇಳಿದೆ. ಅವುಗಳ ಅಸ್ತಿತ್ವದಲ್ಲಿಯೇ ಸಂವೇಗ-ಗುಣದ ಇರುವಿಕೆಯನ್ನು ತಿಳಿಯಲಾಗುತ್ತಿದೆ

ಇದೇ ಪ್ರಕಾರ ನಿಂದೆ ಮತ್ತು ಗರ್ಹಾಗುಣಗಳನ್ನೂ ಸಮ್ಯಕ್ತ್ವದ ಉಪಲಕ್ಷಣವೆಂದು ಹೇಳಿದೆ ಯಾಕಂದರೆ ಅವು ಉಪಶಮ-ಪ್ರಶಮ-ಗುಣದ ಲಕ್ಷಣವಾಗಿವೆ, ವ್ಯಂಜಕವಾಗಿವೆ[5] ಅರ್ಥಾತ್ ಉಪಶಮ, ಸಂವೇಗ, ಅನುಕಂಪಾ ಮತ್ತು ಆಸ್ತಿಕ್ಯ ಈ ನಾಲ್ಕು ಗುಣಗಳು ಸಮ್ಯಗ್ದರ್ಶನದ ಲಕ್ಷಣವಾಗಿವೆ ಅರ್ಹದ್‌ಭಕ್ತಿ, ವಾತ್ಸಲ್ಯ, ನಿಂದಾ ಮತ್ತು ಗರ್ಹಾ ಈ ನಾಲ್ಕು ಗುಣಗಳು ಅದರ ಉಪಲಕ್ಷಣವಾಗಿವೆ ಇದರಿಂದಲೂ 'ಭಕ್ತಿ'ಯು ಸಮ್ಯಗ್ದರ್ಶನದ ಗುಣವೆಂದು ನಿಶ್ಚಿತವಾಗುತ್ತದೆ

ಇಲ್ಲಿ ಆಪ್ತ ಮೊದಲಾದವರಲ್ಲಿ ಇಡುವ ಶ್ರದ್ಧೆಗೆ ಸಮ್ಯಗ್ದರ್ಶನವೆಂದು ಹೇಳಿದೆಯಷ್ಟೆ ಆ ಸಮ್ಯಗ್ದರ್ಶನಕ್ಕೆ 'ಅಷ್ಟಾಂಗ', 'ತ್ರಿಮೂಢಾಪೋಢ', 'ಅಸ್ಮಯಂ' ಎಂದು ಮೂರು ವಿಶೇಷಣ ಪದಗಳನ್ನು ಪ್ರಯೋಗಿಸಲಾಗಿದೆ. ಇದರಿಂದ, ಇಲ್ಲಿ ಹೇಳಿದ ವಿಶಿಷ್ಟವಾದ ಸಮ್ಯಗ್ದರ್ಶನಕ್ಕೆ ಎಂಟು ಅಂಗಗಳು ಇರುತ್ತವೆ, ಅಲ್ಲದೆ ಅದು ಮೂರು ಮೂಢತೆ ಹಾಗೂ ಎಂಟು ಮದಗಳಿಂದ ರಹಿತವಾಗಿರುತ್ತದೆ —ಎಂಬುದು ಸ್ಪಷ್ಟವಾಗುತ್ತದೆ ಸ ಧ ]

---

1 ಇತರಸ್ಯ ತು ವ್ಯವಹಾರನಯಸ್ಯ ಸಮ್ಯಕ್ತ್ವಂ ಸಮ್ಯಕ್ತ್ವಹೇತುರಪಿ ಅರ್ಹಚ್ಛಾಸನ ಪ್ರೀತ್ಯಾದಿಕಾರಣೇ ಕಾರ್ಯೋಪಚಾರಾತ್ । ಏತದಪಿ ಶುದ್ಧಚೇತಸಾಂ ಪಾರಂಪರ್ಯೇಣಾಪವರ್ಗಹೇತುರಿತಿ ।" —'ಶ್ರಾವಕಪ್ರಜ್ಞಪ್ತಿ'ಯಲ್ಲಿ ಹರಿಭದ್ರಸೂರಿ

2 ಸ ದ್ವೇಧಾ ಸರಾಗವೀತರಾಗವಿಷಯಭೇದಾತ್ । —ಸರ್ವಾರ್ಥಸಿದ್ಧಿ ಅ ೧, ಸೂ. ೨

3 ಸಂವೇಓ ಣಿವ್ವೇಓ ಣಿಂದಣಗರುಹಾ ಯ ಉವಸಮೋ ಭತ್ತೀ ।
ವಚ್ಛಲ್ಲಂ ಅಣುಕಂಪಾ ಅಟ್ಠಗುಣಾ ಹುಂತಿ ಸಮ್ಮತ್ತೇ ॥ ೪೯ ॥ —ವಸುನಂದಿ ಶ್ರಾವಕಾಚಾರ

4 'ಯದಾ ಸಮ್ಯಕ್ತ್ವಭಾವಸ್ಯ ಸಂವೇಗೋ ಲಕ್ಷಣಂ ಗುಣಃ ।
ಸ ಚೋಪಲಕ್ಷ್ಯತೇ ಭಕ್ತ್ಯಾ ವಾತ್ಸಲ್ಯೇನಾಥವಾರ್ಹತಾಮ್ ॥
ಭಕ್ತಿರ್ವಾ ನಾಮ ವಾತ್ಸಲ್ಯಂ ನ ಸ್ಯಾತ್ಸಂವೇಗಮಂತರಾ ।
ಸಂವೇಗೋ ಹಿ ದೃಶೋ ಲಕ್ಷ್ಮ ದ್ವಾವೇತಾವುಪಲಕ್ಷಣೌ' ॥

5 ಪಂಚಾಧ್ಯಾಯಿ, ಉತ್ತರಾರ್ಧ ೪೬೭ರಿಂದ ೪೭೬ ಪದ್ಯಗಳನ್ನು ನೋಡಿರಿ. ಹಾಗೆಯೇ ಲಾಟೀಸಂಹಿತಾ, ಮೂರನೆಯ ಸರ್ಗ ೧೧೦ರಿಂದ ೧೧೮ ವರೆಗಿನ ಪದ್ಯಗಳನ್ನು ನೋಡಿರಿ

ತತ್ತ್ವಪ್ರೀತಿ ಮನಕ್ಕೆ ಪುಟ್ಟಲದು ಸಮ್ಯಗ್ದರ್ಶನಂ ಮತ್ತಮಾ-
ತತ್ತ್ವಾರ್ಥಂಗಳನೊಲ್ದು ಭೇದಿಪುದು ಸಮ್ಯಗ್ಜ್ಞಾನಮಾ ಬೋಧದಿಂ ।
ನತ್ತ್ವಂಗಳ್ಕಿಡದಂತುಟೋವಿ ನಡೆಯಲ್ಸಮ್ಯಕ್ಚರಿತ್ರಂ ಸುರ-
ತ್ನತ್ರಯಂ ಮೂರಿವು ಮುಕ್ತಿಗೆಂದರುಪಿದೈ ರತ್ನಾಕರಾಧೀಶ್ವರಾ ॥

—ರತ್ನಾಕರ — ರತ್ನಾಕರ ಶತಕ ೨.

ಆಪ್ತನ ಲಕ್ಷಣ ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

## ಆಪ್ತನ ಲಕ್ಷಣ

**ಆಪ್ತೇನೋಚ್ಛಿನ್ನದೋಷೇಣ ಸರ್ವಜ್ಞೇನಾಗಮೇಶಿನಾ ।**
**ಭವಿತವ್ಯಂ ನಿಯೋಗೇನ ನಾನ್ಯಥಾ ಹ್ಯಾಪ್ತತಾ ಭವೇತ್ ॥ ೫ ॥**[1]

ಅನ್ವಯಾರ್ಥ—(ನಿಯೋಗೇನ) ನಿಶ್ಚಯದಿಂದ (ಉಚ್ಛಿನ್ನದೋಷೇಣ) ನಿರ್ದೋಷತ್ವ (ಸರ್ವಜ್ಞೇನ) ಸರ್ವಜ್ಞತ್ವ (ಆಗಮೇಶಿನಾ) ಹಿತೋಪದೇಶಿತ್ವ—ಇವುಗಳ ಯೋಗದಿಂದಲೇ—(ಆಪ್ತೇನ) ಆಪ್ತತ್ವವು (ಭವಿತವ್ಯಂ) ಉಂಟಾಗುತ್ತದೆ. (ಹಿ) ಯಾಕೆಂದರೆ (ಅನ್ಯಥಾ) ಬೇರೆ ಪ್ರಕಾರದಿಂದ (ಆಪ್ತತಾ) ಆಪ್ತತ್ವವು (ನ ಭವೇತ್) ಪ್ರಾಪ್ತವಾಗುವದಿಲ್ಲ

ಅರ್ಥ—ಎಲ್ಲ ದೋಷಗಳಿಂದ ದೂರನಾದಂದವನೂ ಸರ್ವ ಪದಾರ್ಥಗಳನ್ನು ತಿಳಿಯುವಂದವನೂ ಆಗಿದ್ದು, ಆಗಮದ ಒಡೆಯನಾದವನಿಗೇನೇ ಆಪ್ತತ್ವ ಇರುವುದು ಯೋಗ್ಯವಾಗಿದೆ ನಿರ್ದೋಷತ್ವ, ಸರ್ವಜ್ಞತ್ವ ಮತ್ತು ಆಗಮೇಶಿತ್ವ ಇವು ಮೂರು ಗುಣಗಳಿಲ್ಲದೆ ಆಪ್ತತ್ವವು ಉಂಟಾಗುವದಿಲ್ಲ.

ವಿಶೇಷಾರ್ಥ—ನಿರ್ದೋಷತ್ವ. ಧರ್ಮದ ಮೂಲ ಕರ್ತೃವು ಭಗವಾನ್ ಆಪ್ತನಾಗಿದ್ದಾನೆ ಅವನಲ್ಲಿ ಮೂರು ಗುಣಗಳು ಅತ್ಯವಶ್ಯವಾಗಿ ಇವೆ ಅವುಗಳಲ್ಲಿ ಮೊದಲನೆಯದು ನಿರ್ದೋಷತ್ವವು. ಇದು ಹಸಿವೆ, ನೀರಡಿಕೆ ಮೊದಲಾದ ಹದಿನೆಂಟು ದೋಷಗಳನ್ನು ನಾಶಮಾಡುವುದರಿಂದ ಉತ್ಪನ್ನವಾಗುತ್ತದೆ. ಭೂತ-ಭವಿಷ್ಯ-ವರ್ತಮಾನ ಕಾಲಗಳಲ್ಲಿರುವ ಸಂಪೂರ್ಣ ಗುಣ ಮತ್ತು ಪರ್ಯಾಯ, ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಈ ಆರು ದ್ರವ್ಯಗಳ ಅನಂತ ರೂಪಗಳನ್ನು ಒಂದೇ ಕಾಲದಲ್ಲಿ ಪ್ರತ್ಯಕ್ಷ ತಿಳಿದುಕೊಳ್ಳುವದರಿಂದ ಸರ್ವಜ್ಞತ್ವವು ಪ್ರಾಪ್ತವಾಗುತ್ತದೆ ಇದು ಆಪ್ತನ ಎರಡನೆಯ ಗುಣವಾಗಿದೆ. ಪರಮಹಿತವನ್ನು ಬೋಧಿಸುವ ಶಾಸ್ತ್ರಗಳ ಮೂಲ ಕರ್ತೃವೆಂದು ಆಗಮದ ಈಶ್ವರನೆಂದು ಮೂರನೆಯ ಗುಣವೂ ಇದೆ. ಈ ಮೂರು ಅಸಾಧಾರಣ ಗುಣಗಳನ್ನು ಧರಿಸಿದವನಿಗೇ ದೇವ ಎನ್ನುವರು ಇವನ್ನುಳಿದು ಇನ್ನೂ ಅನೇಕ ಗುಣಗಳಿದ್ದರೂ ದೇವತ್ವವು ಲಭಿಸಲಾರದು ತಾನೇ ಅನೇಕ ದೋಷಗಳಿಂದ ಕೂಡಿದವನು ಇನ್ನೊಬ್ಬರನ್ನು ಹೇಗೆ ನಿರ್ದೋಷಗೊಳಿಸುವನು?

ಸರ್ವಜ್ಞತ್ವ—ಹಸಿವು, ನೀರಡಿಕೆ, ಇಚ್ಛೆ, ಸಿಟ್ಟುಗಳಿಂದ ತೊಂದರೆಗೆ ಒಳಗಾಗುವಂಥವನು ದುಃಖಿಯಾ-ಗಿರಲಿಕ್ಕೇಬೇಕು ಇಂದವನ ಹತ್ತರ ಈಶ್ವರತ್ವ ಹೇಗೆ ಇದ್ದೀತು? ಹೆದರಬಡಕನು ಯಾವಾಗಲೂ ತನ್ನ ರಕ್ಷಣೆಗಾಗಿ ಶಸ್ತ್ರಾದಿಗಳನ್ನು ಹತ್ತರ ಇಟ್ಟುಕೊಳ್ಳುವನು ಅವನಿಗೆ ವೈರಿಗಳಿರುತ್ತಾರೆ ಅದರಿಂದ ಅವನ ಮನಸ್ಸಿನಲ್ಲಿ ಯಾವಾಗಲೂ ವ್ಯಾಕುಲತೆಯು ಇರುತ್ತದೆ ಅವನು ನಿರಾಕುಲನಿರುವುದು ಹೇಗೆ ಸಾಧ್ಯವಿದೆ? ಯಾವನಿಗೆ ಹಗಲಿರುಳೂ

---

[1] ವಚನ— ಆಯತವರ್ಮನು ಹೇಳುವದು ಹೀಗೆ. ಆ ಸಮ್ಯಕ್ತ್ವಂ ನಿಸರ್ಗದಿಂದಮಧಿಗಮದಿಂದಮುಕ್ಕುಮಲ್ಲಿಯೆಂಟಂಗ-ಮೆಂಬುವಾವುವೆಂದೊಡೆ—ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆಯೆಂದಕ್ಕುಮವರೊಳು ನಿಶ್ಶಂಕೆಯೆಂಬ ಮೊದಲಂಗದ ಲಕ್ಷಣಮೆಂತೆನೆ ಅಲ್ಲಿ ಆಪ್ತಾಗಮತಪಸ್ವಿಗಳಂ ನಂಬಿ ಸಂಕಿಸದುದೆಯಕ್ಕುಂ ಅಲ್ಲಿಯಾಪ್ತನೆಂತಪ್ಪನೆಂದೊಡೆ—

ಕಂದ ॥ ಮದರಾಗದ್ವೇಷಂಗಳು । ಮೊದಲಾಗೊಡೆಯದಶಾಷ್ಟ ದೋಷಂಗಳು ಮಿ- ॥
ಲ್ಲದನಾಪ್ತಂ ಪರಮಾತ್ಮಂ । ತ್ರಿದಶೇಂದ್ರಸ್ತುತ್ಯನಕ್ಷಯಂ ಸರ್ವಜ್ಞಂ ॥ ೪ ॥

ಈರ್ಷೆ, ದ್ವೇಷ, ಚಿಂತೆಗಳು ಬೆನ್ನುಹತ್ತಿರುವವೋ ಅವನು ಹೇಗೆ ಸುಖಿಯಾಗಿರುವನು? ಕಾಮಾಸಕ್ತನಾದಂಥವನು ಯಾವಾಗಲೂ ಪರವಶನಾಗಿರುವಂಥವನೇ  ಅವನಿಗೆ ಸ್ವತಂತ್ರತೆಯು ಇರುವದಿಲ್ಲ  ಅಂದಮೇಲೆ ಪರಾಧೀನನಿರುವ ಪುರುಷನು ಯಥಾರ್ಥವನ್ನು ನುಡಿಯುವವನಾಗುವುದು ಸಾಧ್ಯವಿದೆಯೆ? ಎಂದೂ ಇಲ್ಲ  ಇದರಂತೆಯೇ ಗರ್ವ, ನಿದ್ರೆಗಳ ವಶನಾದವನೂ ಸತ್ಯವನ್ನು ನುಡಿಯುವಂಥವನಾಗನು  ಇಂಥವನ ಹಿಂದೆ ಜನ್ಮ ಮರಣದ ಚಕ್ರವು ಹತ್ತಿರುತ್ತದೆ  ಅವನು ಸಂಸಾರಿಯಾಗಿರುವನು  ಇವನಿಗೆ ಆಪ್ತತ್ವವು ಶೋಭಿಸಲಾರದು  ಯಾವನು ಸಂಪೂರ್ಣವಾಗಿ ನಿರ್ದೋಷನಾಗಿರುವನೋ ಅವನಿಗೆ ಸತ್ಯಾರ್ಥವುಳ್ಳ ಆಪ್ತನೆಂಬ ಸಂಜ್ಞೆಯನ್ನು ಕೊಡಲಿಕ್ಕೆ ಬರುತ್ತದೆ  ರಾಗ ದ್ವೇಷಗಳುಳ್ಳವರು ಯಾವಾಗಲೂ ತಮ್ಮ ಹಾಗೂ ಇತರರ ರಾಗದ್ವೇಷಗಳು ಹೆಚ್ಚುವಂತೆಯೇ ಹೇಳುವವರಾಗಿರುತ್ತಾರೆ ಅದಕ್ಕಾಗಿ ಜಗತ್ತಿನಲ್ಲಿ ಯಾರಾದರೂ ಯಥಾರ್ಥವಾದುದನ್ನು ಹೇಳುವಂಥವರಿದ್ದರೆ ಅವರು ವೀತರಾಗ ಪರಮೇಷ್ಠಿಗಳೇ ಆಗಿದ್ದಾರೆ  ಆ ವೀತರಾಗನು ಸರ್ವಜ್ಞನಿರಲಿಕ್ಕೇ ಬೇಕು  ಅವನಲ್ಲಿ ನಾವು ಸರ್ವಜ್ಞತ್ವವನ್ನು ಸ್ವೀಕರಿಸದೆ ಹೋದಲ್ಲಿ ಕೇವಲ ಇಂದ್ರಿಯಜನ್ಯ ಜ್ಞಾನದ ಯೋಗದಿಂದ—ಇಂದ್ರಿಯಗಳ ಸಹಾಯದಿಂದ ಪ್ರಾಪ್ತವಾಗುವ ಜ್ಞಾನದಿಂದ—ಪೂರ್ವಕಾಲದಲ್ಲಿ ಆಗಿಹೋದ ರಾಮ-ರಾವಣರನ್ನು ಹೇಗೆ ತಿಳಿದುಕೊಳ್ಳುವನು? ದೂರವಿರುವ ಮೇರು ಕುಲಾಚಲವನ್ನು—ಪರ್ವತವನ್ನು ಹೇಗೆ ತಿಳಿಯುವನು? ಇಂದ್ರಿಯಗಳಿಂದ ಹುಟ್ಟುವ ಜ್ಞಾನವು ತನ್ನ ಎದುರಿಗೆ ಇರುವ ಸ್ಥೂಲಪದಾರ್ಥಗಳಷ್ಟನ್ನೂ ಸಹ ಪೂರ್ಣವಾಗಿ ತಿಳಿಯಲಾರದು  ಸಂಸಾರದಲ್ಲಿ ಜೀವ, ಪುದ್ಗಲ, ಕಾಲಾದಿ ದ್ರವ್ಯಗಳು ಅನಂತವಾಗಿವೆ  ಅವು ಒಂದೇ ಕಾಲದಲ್ಲಿ ತಮ್ಮ ಭಿನ್ನಭಿನ್ನ ಸ್ವರೂಪದಲ್ಲಿ ಪರಿವರ್ತನೆ ಹೊಂದುತ್ತಿರುತ್ತವೆ ಒಂದು ಸಮಯದಲ್ಲಿ ಅನಂತ ಪದಾರ್ಥದ ವಿವಿಧ ಅನಂತ ಪರಿಣತಿಗಳು ಉಂಟಾಗುತ್ತವೆ  ಅಂದಮೇಲೆ ಇಂಥ ಪದಾರ್ಥಗಳನ್ನು ಇಂದ್ರಿಯಜನ್ಯ ಜ್ಞಾನವು ಹೇಗೆ ತಿಳಿಯಲಿಕ್ಕೆ ಸಾಧ್ಯವಿದೆ? ಇಂದ್ರಿಯಜನಿತ ಜ್ಞಾನವು ಒಂದು ಕ್ರಮದಲ್ಲಿರುವ ಸ್ಥೂಲ ಪುದ್ಗಲದ ಅನೇಕ ಸಮಯದಲ್ಲಿ ಆಗುವ ಒಂದು ಪರ್ಯಾಯವನ್ನು ಮಾತ್ರ ತಿಳಿಯುತ್ತದೆ. ಅನೇಕ ಪದಾರ್ಥಗಳ ಅನೇಕ ಪರ್ಯಾಯಗಳಿವೆ  ಇವುಗಳಲ್ಲಿ ಒಂದು ಪರ್ಯಾಯವನ್ನೇ ಪೂರ್ಣ ತಿಳಿಯಲಾರದಷ್ಟು ಅಸಮರ್ಥವಿರುವ ಜ್ಞಾನವು ಮೊದಲು ಕಳೆದುಹೋದ ಅನಂತಕಾಲದಲ್ಲಿ ಮುಂಬರುವ ಅನಂತಕಾಲದಲ್ಲಿಯೂ ಉಂಟಾಗುವ ಅನಂತಾನಂತ ಪರಿಣತಿಗಳನ್ನೆಲ್ಲ ಹೇಗೆ ತಿಳಿಯಲಿಕ್ಕೆ ಸಾಧ್ಯವಿದೆ? ಇವನ್ನೆಲ್ಲ ಗಮನಿಸಿದಲ್ಲಿ ಮೂರೂ ಕಾಲದ, ಸಮಸ್ತ ದ್ರವ್ಯಗಳ ಪರಿಣತಿಯನ್ನೂ ಏಕಕಾಲದಲ್ಲಿ ತಿಳಿಯುವ ಸಾಮರ್ಥ್ಯವು ಆ ಒಬ್ಬ ಸರ್ವಜ್ಞನಿಗೇ ಇರುವುದು ಸಾಧ್ಯವಿದೆ  ಇಂಥವನೇ ಆಪ್ತತ್ವಕ್ಕೆ ಯೋಗ್ಯ ಅಧಿಕಾರಿಯೆನಿಸುವನು

**ಪರಮ ಹಿತೋಪದೇಶಿ**—ಇದಲ್ಲದೆ ಪರಮ ಹಿತೋಪದೇಶಿಯಾದವನೇ ಆಪ್ತನೆನಿಸುತ್ತಾನೆ  ಒಟ್ಟಿನಲ್ಲಿ ಮೇಲಿನ ಮೂರೂ ಗುಣಗಳು ಒಬ್ಬನಲ್ಲಿಯೇ ಇದ್ದಾಗ ಅವನು ದೇವನೆನಿಸುತ್ತಾನೆ  ಆದರೂ ಅರಿಹಂತನು ದೇವ ಮನುಷ್ಯನು  ಅಂದರೂ ಅವನು ಜ್ಞಾನಾವರಣವೇ ಮೊದಲಾದ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿರುವುದರಿಂದ ಪ್ರಕಟವಾದ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖರೂಪ ಈ ತನ್ನ ನಿಜಸ್ವಭಾವದಲ್ಲಿ ಅವನು ತನ್ಮಯನಾಗಿರುತ್ತಾನೆ  ಕರ್ಮವನ್ನು ಗೆದ್ದುದರಿಂದ ಅವನ ಶರೀರಕ್ಕೆ ಅನುಪಮ ತೇಜವು ಉಂಟಾಗಿರುತ್ತದೆ ಅವನು ಅನಂತ ಸುಖದಲ್ಲಿ ರಮಮಾಣನಾಗಿರುತ್ತಾನೆ  ಇಂದ್ರಾದಿ ಮೊದಲಾದ ದೇವತೆಗಳು ನಿತ್ಯವೂ ಅವನ ಸ್ತುತಿಯನ್ನು ಮಾಡುತ್ತಾರೆ  ಅನಂತ ಜ್ಞಾನದರ್ಶನ ಈ ಸ್ವಭಾವದಿಂದ ಅವನು ಸರ್ವ ಲೋಕಾಲೋಕಗಳಲ್ಲಿ ವ್ಯಾಪಿಸಿರುತ್ತಾನೆ  ಉಳಿದ ದೇವಮನುಷ್ಯರಿಗಿಂತ ಅಸಾಧಾರಣ ಆತ್ಮಸ್ವರೂಪವು ಪ್ರಾಪ್ತವಾಗಿರುವುದರಿಂದ ಅವನು ಬಹಳ ದೈದೀಪ್ಯಮಾನವಾಗಿ ಕಾಣುತ್ತಾನೆ  ಅದಕ್ಕಂತಲೇ ಮನುಷ್ಯ ಪರ್ಯಾಯದಲ್ಲಿಯೇ ಆತನು ಅನಂತ ಜ್ಞಾನ-ಸುಖ-ವೀರ್ಯಾದಿ ಗುಣಗಳಿಂದ ಕೂಡಿರುವದರಿಂದ ದೇವಾದಿದೇವನೆನಿಸಿದ್ದಾನೆ  ಆಪ್ತನು ಮೂರು ಗುಣಗಳಿಂದಲೇ ಕೂಡಿರುವ ಕಾರಣವೇನು?—ಎಂದೂ ಕೆಲವರು ಪ್ರಶ್ನೆಯನ್ನು ಮಾಡಬಹುದು  ಆತನಲ್ಲಿ ನಿರ್ದೋಷತ್ವವು ಒಂದು ಮಾತ್ರ ಇದ್ದರೆ ಉಳಿದ ಗುಣಗಳು ಎಲ್ಲವೂ ಬರುತ್ತಿರಲಿಲ್ಲವೆ? ಇದಕ್ಕೆ ಉತ್ತರ ಹೀಗಿದೆ—ಆಪ್ತನ ಲಕ್ಷಣವೆಂದು ನಿರ್ದೋಷತ್ವ ಒಂದನ್ನೇ ಸ್ವೀಕರಿಸಿದರೆ ಆಕಾಶ, ಧರ್ಮ, ಅಧರ್ಮ, ಪುದ್ಗಲ, ಕಾಲಾದಿಗಳಲ್ಲಿಯೂ ಕೂಡ ನಿರ್ದೋಷತ್ವವಿದೆಯಲ್ಲ! ಈ ಪದಾರ್ಥಗಳು ಅಚೇತನವಾಗಿರುವುದರಿಂದ ಅವುಗಳಲ್ಲಿ ರಾಗ-ದ್ವೇಷಗಳಿಲ್ಲ  ಅಂದಮೇಲೆ ಆ ಅಚೇತನ ಪದಾರ್ಥಗಳಿಗೂ ದೇವನೆಂದು ಹೇಳಬೇಕಾದೀತು  ಅದರಿಂದ ನಿರ್ದೋಷನಿದ್ದೂ ಸರ್ವಜ್ಞನಾಗಿರುವವನೇ ಆಪ್ತನೆಂದು ತಿಳಿಯಲಿಕ್ಕೆ ಬೇಕು  ನಿರ್ದೋಷತ್ವ ಮತ್ತು ಸರ್ವಜ್ಞತ್ವ

ಗಳಿರಡೇ ಆಪ್ತನ ಗುಣವೆಂದು ಮನ್ನಿಸಿದರೆ ಸಿದ್ಧಪರಮಾತ್ಮನಲ್ಲಿಯೂ ಆಪ್ತತ್ವವು ಉಂಟಾಗುತ್ತದೆ ಆಗ ಸತ್ಯಾರ್ಥದ ಉಪದೇಶದ ಅಭಾವವಾಗುತ್ತದೆ ಸಿದ್ಧ ಭಗವಾನ್‌ರು ಉಪದೇಶ ಮಾಡುವದಿಲ್ಲ. ಅದಕ್ಕಾಗಿ ನಿರ್ದೋಷತ್ವ, ಸರ್ವಜ್ಞತ್ವ, ಪರಮಹಿತೋಪದೇಶಿತ್ವ, ಈ ಮೂರೂ ಗುಣಗಳಿಂದ ಕೂಡಿದ ದೇವಾಧಿದೇವ ಪರಮ ಔದಾರಿಕ ಶರೀರವನ್ನು ಧರಿಸುವವನು ಭಗವಾನ್ ಸರ್ವಜ್ಞ ವೀತರಾಗ ಅರಿಹಂತ ದೇವನೇ ದೇವನಾಗಿದ್ದಾನೆ. ಇದನ್ನು ಮನ್ನಿಸಬೇಕಾಗುತ್ತದೆ ಯಾವ ಹದಿನೆಂಟು ದೋಷಗಳನ್ನು ನಷ್ಟಗೊಳಿಸಿ, ಅರಿಹಂತದೇವನು ದೇವತ್ವವನ್ನು ಪಡೆದನೋ ಅವುಗಳನ್ನು ಮುಂದೆ ವಿವರಿಸಲಾಗಿದೆ

[ಇಲ್ಲಿ ಆಪ್ತನ ಮೂರೂ ಲಕ್ಷಣಗಳನ್ನು ಹೇಳಲಾಗಿದೆ ಅವು ನಿರ್ದೋಷತ್ವ, ಸರ್ವಜ್ಞತ್ವ, ಆಗಮೇಶಿತ್ವಗಳೆಂದಿವೆ ಇವುಗಳಲ್ಲಿ ಒಂದರ ಕೊರತೆಯಾದರೂ ಆಪ್ತತ್ವವು ಉಂಟಾಗುವದಿಲ್ಲ ಇವಲ್ಲದೆ ಇನ್ನುಳಿದ ಗುಣಗಳ ಕಥನವು ಆಪ್ತನ ಸ್ವರೂಪವನ್ನು ವಿವರಿಸಲಿಕ್ಕೆಂದು ಇರುತ್ತದೆ ಇರಲಿ, ಈ ಲಕ್ಷಣಗಳಲ್ಲಿ ನಿರ್ದೋಷತ್ವವು ಇಲ್ಲದಿದ್ದರೆ ಸರ್ವಜ್ಞತ್ವವು ಪ್ರಾಪ್ತವಾಗುವದಿಲ್ಲ. ಸರ್ವಜ್ಞತ್ವವಿಲ್ಲದೆ ಆಗಮೇಶಿತ್ವವು ಸಂಭವಿಸುವದಿಲ್ಲ ದೋಷಕ್ಕೆ ಕಾರಣವಾದ ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳು ನಷ್ಟವಾದಾಗಲೇ ನಿರ್ದೋಷತ್ವವು ಪ್ರಾಪ್ತವಾಗುತ್ತದ ಈ ಕರ್ಮಗಳು ದೊಡ್ಡ ಪರ್ವತಗಳಂತೆ ಇವೆ 'ತತ್ತ್ವಾರ್ಥ ಸೂತ್ರ'ದ ಮಂಗಲಾಚರಣದಲ್ಲಿಯಂತೂ ಆಪ್ತನನ್ನು 'ಭೇತ್ತಾರಂ ಕರ್ಮಭೂಭೃತಾಂ' ಎಂಬ ಪದಗಳಿಂದ ವರ್ಣಿಸಲಾಗಿದೆ. ಅದರಂತೆಯೇ ಸರ್ವಜ್ಞನನ್ನು 'ವಿಶ್ವತತ್ತ್ವಾನಾಂ ಜ್ಞಾತಾ' ಎಂದು ಹೇಳಿದೆ ಆಗಮೇಶಿಯನ್ನು 'ಮೋಕ್ಷಮಾರ್ಗಸ್ಯ ನೇತಾ' ಎಂದು ಕರೆದಿದೆ ಆಪ್ತನ ಈ ಮೂರೂ ಗುಣಗಳ ವರ್ಣನೆಯನ್ನು ಯುಕ್ತಿಪೂರ್ವಕವಾಗಿಯೂ ಮನೋಹರವಾಗಿಯೂ ಶ್ರೀ ವಿದ್ಯಾನಂದ ಆಚಾರ್ಯರು ತಮ್ಮ 'ಆಪ್ತಪರೀಕ್ಷಾ'ದಲ್ಲಿ ಮಾಡಿದ್ದಾರೆ. ಇದರಿಂದ ಈಶತ್ವದ ಕಲ್ಪನೆಯೂ ಪೂರ್ಣವಾಗಿ ಬರುವುದು ಈ ಆಪ್ತನ ಲಕ್ಷಣಗಳಿಗಾಗಿ ಸಮಂತಭದ್ರರ 'ಆಪ್ತಮೀಮಾಂಸಾ' ಹಾಗೂ ಅದರ ಮೇಲೆ ಅಕಲಂಕನು ಬರೆದ 'ಅಷ್ಟಶತೀ' ಮತ್ತು ವಿದ್ಯಾನಂದನು ಬರೆದ 'ಅಷ್ಟಸಹಸ್ರೀ' ಎಂಬ ಮಹತ್ವಪೂರ್ಣವಾದ ಟೀಕಾಗ್ರಂಥಗಳನ್ನೂ ನೋಡಬೇಕು ಸ. ಧ]

ಪದಿನೆಂಟು ದೋಷದಿಂ ಪಿಂಗಿದನಂತಚತುಷ್ಟಯಾತ್ಮಕಂ ತಾನಾಪ್ತಂ ।
ವಿದಿತಾಗಮಪಾದೇವನ ವದನಸುಧಾಸೂತಿಕೌಮುದೀವಾಕ್ಪ್ರಸರಂ ॥

—ಜನ್ನ—ಅನಂತನಾಥಪುರಾಣಂ ೩–೫೬

ಹದಿನೆಂಟು ದೋಷಗಳ ಹೆಸರನ್ನು ಹೇಳಲಿಕ್ಕೆ ಸೂತ್ರ ಹೇಳುತ್ತಾರೆ—

ಕ್ಷುತ್ಪಿಪಾಸಾಜರಾತಂಕಜನ್ಮಾಂತಕಭಯಸ್ಮಯಾಃ ।
ನ ರಾಗದ್ವೇಷಮೋಹಾಶ್ಚ ಯಸ್ಯಾಪ್ತಃ ಸ ಪ್ರಕೀರ್ತ್ಯತೇ ॥ ೬ ॥

ಅನ್ವಯಾರ್ಥ—(ಕ್ಷುತ್ಪಿಪಾಸಾಜರಾತಂಕಜನ್ಮಾಂತಕಭಯಸ್ಮಯಾಃ) ಹಸಿವು, ನೀರಡಿಕೆ, ಮುಪ್ಪು, ರೋಗ, ಹುಟ್ಟು, ಸಾವು, ಅಂಜಿಕೆ, ಗರ್ವ (ರಾಗ–ದ್ವೇಷ–ಮೋಹಾಃ) ರಾಗ, ದ್ವೇಷ, ಮೋಹ (ಚ) ಇತ್ಯಾದಿ—ಚಿಂತೆ, ಅರತಿ, ನಿದ್ದೆ, ಆಶ್ಚರ್ಯ, ದುಃಖ, ಬೆವರು, ಶೋಕ—(ಯಸ್ಯ) ಯಾರಿಗೆ (ನ ಸಂತಿ) ಇಲ್ಲವೋ (ಸಃ) ಅವರು—ಆಪ್ತ—(ಪ್ರಕೀರ್ತ್ಯತೆ) ಎನಿಸಿಕೊಳ್ಳುವರು.

ಅರ್ಥ—೧ ಕ್ಷುತ್–ಕ್ಷುಧಾ–ಹಸಿವು, ೨ ಪಿಪಾಸಾ–ನೀರಡಿಕೆ, ೩ ಜರಾ–ಮುಪ್ಪು, ೪ ಆತಂಕ–ಬೇನೆ, ೫ ಜನ್ಮ–ಹುಟ್ಟು–ಕರ್ಮೋದಯದಿಂದ ಚತುರ್ಗತಿಯಲ್ಲಿ ಜನಿಸುವುದು, ೬. ಅಂತಕ–ಸಾವು, ೭. ಭಯ–ಅಂಜಿಕೆ, ಈ ಅಂಜಿಕೆಯು ಏಳು ಪ್ರಕಾರದ್ದಿದೆ—ಇಹಲೋಕದ ಭೀತಿ, ಪರಲೋಕದ ಭೀತಿ, ಮೃತ್ಯುಭೀತಿ, ವೇದನೆಯ ಭೀತಿ, ಅರಕ್ಷಾಭೀತಿ, ಅಗುಪ್ತಿಭೀತಿ ಮತ್ತು ಅಕಸ್ಮಾತ್ ಭೀತಿ, ೮. ಸ್ಮಯ–ಮದ, ಸೊಕ್ಕು ಇವು ಎಂಟು ವಿಧವಾಗಿವೆ—[ಜ್ಞಾನಮದ, ಪೂಜಾಮದ, ಜಾತಿಮದ, ಕುಲಮದ, ಬಲಮದ, ಐಶ್ವರ್ಯಮದ,

ತಪೋಮದ, ಶರೀರಮದ] ೯ ರಾಗ, ೧೦ ದ್ವೇಷ, ೧೧ ಮೋಹ ಇನ್ನು ಚ ಶಬ್ದದಿಂದ ೧೨ ಚಿಂತೆ, ೧೩. ರತಿ, ೧೪ ನಿದ್ರೆ, ೧೫ ವಿಸ್ಮಯ, ೧೬ ವಿಷಾದ, ೧೭ ಸ್ವೇದ-ಬೆವರು ಮತ್ತು ೧೮ ಖೇದ-ವ್ಯಾಕುಲತೆ ಇವುಗಳನ್ನು ತಿಳಿದುಕೊಳ್ಳುವುದು ಈ ಹದಿನೆಂಟು ದೋಷಗಳು ಯಾರಲ್ಲಿ ಇಲ್ಲವೋ ಅವರಿಗೆ ಆಪ್ತರೆನ್ನಬೇಕು [1]

[ಈಗ ಆಪ್ತನ ನಿರ್ದೋಷತ್ವವನ್ನು ವಿವರಿಸುತ್ತ ಅವನಲ್ಲಿ ಇರಬಾರದಂಥ ಹದಿನೆಂಟು ದೋಷಗಳನ್ನು ಆಚಾರ್ಯರು ಇಲ್ಲಿ ಉಲ್ಲೇಖಿಸಿದ್ದಾರೆ ಅವುಗಳಲ್ಲಿ ಹನ್ನೊಂದರ ಹೆಸರುಗಳನ್ನಂತೂ ಸ್ಪಷ್ಟವಾಗಿ ಹೇಳಿದ್ದಾರೆ ಉಳಿದ ಚಿಂತಾ, ಅರತಿ, ನಿದ್ರಾ, ವಿಸ್ಮಯ, ವಿಷಾದ, ಸ್ವೇದ ಮತ್ತು ಖೇದಗಳನ್ನು 'ಚ' ಶಬ್ದದಿಂದ ಸಮುಚ್ಚಯ ಗೊಳಿಸಿದ್ದಾರೆ ಈ ದೋಷಗಳುಳ್ಳ ಯಾವನೂ ಆಪ್ತನೆಂದು ಹೊಗಳಿಸಿಕೊಳ್ಳಲಾರನು ಈ ದೃಷ್ಟಿಯಿಂದಲೇ ಇಲ್ಲಿ 'ಪ್ರಕೀರ್ತ್ಯತೆ' ಎಂಬ ಪದವನ್ನು ಪ್ರಯೋಗಿಸಿರಬೇಕು. ಇಲ್ಲದಿದ್ದರೆ 'ಪ್ರದೋಷಮುಕ್' ಎಂದಿರಬಹುದಾಗಿತ್ತು

ಶ್ವೇತಾಂಬರ ಸಂಪ್ರದಾಯದಲ್ಲಿ ೧ ವೀರ್ಯಾಂತರಾಯ, ೨ ಭೋಗಾಂತರಾಯ, ೩. ಉಪ ಭೋಗಾಂತರಾಯ, ೪ ದಾನಾಂತರಾಯ, ೫ ಲಾಭಾಂತರಾಯ, ೬ ನಿದ್ರಾ, ೭ ಭಯ, ೮ ಅಜ್ಞಾನ, ೯ ಜುಗುಪ್ಸಾ, ೧೦ ಹಾಸ್ಯ, ೧೧ ರತಿ, ೧೨ ಅರತಿ, ೧೩ ರಾಗ, ೧೪ ದ್ವೇಷ, ೧೫ ಅವಿರತಿ, ೧೬ ಕಾಮ, ೧೭. ಶೋಕ, ೧೮ ಮಿಥ್ಯಾತ್ವ[2]—ಎಂದಿವೆ ಇವುಗಳಲ್ಲಿಯ ಯಾವ ದೋಷವನ್ನೂ ಸಹ ದಿಗಂಬರ ಸಂಪ್ರದಾಯ ದಲ್ಲಿಯೂ ಗುಣವೆಂದು ಭಾವಿಸುವದಿಲ್ಲ ಕೆಲವು ದೋಷಗಳ ಹೆಸರುಗಳಂತೂ ಇಬ್ಬರಲ್ಲಿಯೂ ಸಮಾನವಾಗಿವೆ ಉಳಿದವುಗಳಲ್ಲಿ ಅಂತರಾಯ ಕರ್ಮದ ಅಭಾವದಲ್ಲಿ ಮೊದಲಿನ ಐದು ಅಂತರಾಯ ದೋಷಗಳು ಸಮಾವೇಶ ಗೊಳ್ಳುತ್ತವೆ ಇದರಂತೆಯೇ ಜ್ಞಾನಾವರಣ ಕರ್ಮದ ಅಭಾವದಲ್ಲಿ ಅಜ್ಞಾನದೋಷವೂ ದರ್ಶನಮೋಹ ಮತ್ತು ಚಾರಿತ್ರ ಮೋಹಗಳ ಅಭಾವದಲ್ಲಿ ಮಿಥ್ಯಾತ್ವ, ಶೋಕ, ಕಾಮ, ಅವಿರತಿ, ರತಿ, ಹಾಸ್ಯ, ಜುಗುಪ್ಸೆಗಳ ಅಭಾವವಿದೆ ಇನ್ನು ಶ್ವೇತಾಂಬರರು ಆಪ್ತನಲ್ಲಿ ಹಸಿವು, ನೀರಡಿಕೆ, ಬೇನೆಗಳಂಥ ದೋಷಗಳು ಇರಬಹುದೆನ್ನುತ್ತಾರೆ ಇದು ಅವರ ಸಿದ್ಧಾಂತಭೇದವನ್ನು ಅವಲಂಬಿಸಿದೆ ದಿಗಂಬರ ದೃಷ್ಟಿಯು ಆಪ್ತನ ವಿಶಿಷ್ಟತೆಯನ್ನು ಹೇಳುವದಕ್ಕಾಗಿಯೇ ಸಮಂತಭದ್ರರು ಈ ಸೂತ್ರವನ್ನು ರಚಿಸಿರಬೇಕು. ಸ ಧ]

**ವಿಶೇಷಾರ್ಥ—ಶ್ವೇತಾಂಬರ ಮತದಿಗ್ದರ್ಶನ.** ಇಲ್ಲಿ ಶ್ವೇತಾಂಬರ ಪಂಥದ ಪುರುಷನು ಒಂದು ಪ್ರಶ್ನೆಯನ್ನು ಎತ್ತಬಹುದು ದಿಗಂಬರ ಮತದ ಅನುಯಾಯಿಗಳು ಕೇವಲಿಗಳಾದ ಭಗವಂತನಲ್ಲಿ ಹಸಿವು, ನೀರಡಿಕೆಗಳು ಇಲ್ಲವೆಂದು ಸ್ವೀಕರಿಸುವಿರಿ ಇದರ ಮೇಲಿಂದ ಕೇವಲಿಗಳಿಗೆ ಆಹಾರವನ್ನು ತಕ್ಕೊಳ್ಳಲಿಕ್ಕೆ ಬರುವದಿಲ್ಲ ಅಂದಮೇಲೆ ಅವರ ಶರೀರವು ಹೇಗೆ ತಾಳುವುದು? ನೀವಂತೂ ಅವನ ಶರೀರವು ಇರುವುದೆಂದು ಮನ್ನಿಸುವಿರಿ ಇದರ ಮೇಲಿಂದ ಅವನು ಆಹಾರ ತಕ್ಕೊಳ್ಳುತ್ತಿರಲಿಕ್ಕೇ ಬೇಕು ಇದು ಸಿದ್ಧವಾಗುವುದು ನಮ್ಮ ಶರೀರವು ಆಹಾರವಿಲ್ಲದೆ ಹೇಗೆ ಇರುವದಿಲ್ಲವೋ ಅದೇ ಪ್ರಕಾರ ಕೇವಲಿಗಳ ಶರೀರವಾದರೂ ಆಹಾರವಿಲ್ಲದೆ ಇರಲು ಸಾಧ್ಯವಿಲ್ಲ ಯಾವ ದೃಷ್ಟಿಯಿಂದ ನೀವು ಶರೀರದ ಸ್ಥಿತಿಯನ್ನು ಒಪ್ಪುವಿರೋ ಅದೇ ದೃಷ್ಟಿಯಿಂದ ಆಹಾರದ ಇರುವಿಕೆಯನ್ನೂ ಒಪ್ಪುವ ಅವಶ್ಯಕತೆಯು ಇದೆ

**ಉತ್ತರ—ಕವಲಾಹಾರದ ನಿರಾಕರಣ.** ಇದರ ಸಮಾಧಾನ ಹೀಗಿದೆ. ನಿಮಗೆ ಕೇವಲಿಗೆ ಆಹಾರವಿದೆಯೆಂದು ಮಾತ್ರ ಸಾಧಿಸುವದಿದೆಯೊ? ಇಲ್ಲವೆ ಕವಲಾಹಾರವನ್ನು ಸಿದ್ಧಮಾಡುವದಿದೆಯೊ? ಕೇವಲಿಗಳೂ ಆಹಾರವನ್ನು ಸ್ವೀಕರಿಸುವರೆಂಬುದನ್ನು ಕೇವಲ ಸಿದ್ಧಮಾಡುವದಿದ್ದಲ್ಲಿ 'ಸಯೋಗ ಕೇವಲಿಯ ವರೆಗೆ ಎಲ್ಲ ಜೀವಗಳೂ ಆಹಾರಕವಾಗಿವೆ' ಎಂಬುದು ಆಗಮವಾಕ್ಯವಾಗಿದೆ ಇನ್ನು ಏಕೇಂದ್ರಿಯದಿಂದ ಸಯೋಗ ಕೇವಲಿ ವರೆಗೆ ಪ್ರತಿಯೊಂದು ಜೀವವು ಪ್ರತ್ಯೇಕ ಸಮಯದಲ್ಲಿ ಸಿದ್ಧರಾಶಿಯ ಅನಂತಭಾಗದಷ್ಟು ಅಭವ್ಯರಾಶಿಯಿಂದ ಅನಂತಪಟ ಕರ್ಮಪರಮಾಣುಗಳನ್ನು ಗ್ರಹಣ ಮಾಡುತ್ತಿರುತ್ತದೆ ಈ ದೃಷ್ಟಿಯಿಂದ ಕೇವಲಿಯು ಆಹಾರ

---

1 ಆಯತವರ್ಮನ ವಚನಿಕೆ ಈ ರೀತಿಯಾಗಿದೆ--ಇಂತು ಕ್ಷುಧೆಯುಂ. ತೃಷೆಯುಂ, ಭಯಮುಂ, ದ್ವೇಷಮುಂ ರಾಗಮುಂ, ಮೋಹಮುಂ, ಚಿಂತೆಯುಂ, ಜರೆಯುಂ, ರುಜೆಯುಂ, ಮರಣಮುಂ, ಸ್ವೇದಮುಂ ಖೇದಮುಂ, ಮದಮುಂ, ರತಿಯುಂ, ವಿಸ್ಮಯಮುಂ, ಜನನಮುಂ, ನಿದ್ರೆಯುಂ, ವಿಷಾದಮುಮೆಂಬೀ ಪದಿನೆಂಟು ದೋಷಮಿಲ್ಲದೊಂ .

2 ಶ್ವೇತಾಂಬರ ಸಂಪ್ರದಾಯದ 'ವಿವೇಕವಿಲಾಸ' 'ಜೈನತತ್ತ್ವಾದರ್ಶ'ಗಳನ್ನು ನೋಡಿರಿ

ತಕ್ಕೊಳ್ಳುವನೆಂದೂ ನಾವು ಸ್ವೀಕರಿಸುತ್ತೇವೆ. ನೀವು ಮಾತ್ರ ಕೇವಲಿಗಳೂ ಕೂಡ ಜನಸಾಮಾನ್ಯರಂತೆ ಆಹಾರವನ್ನು ತುತ್ತುಮಾಡಿ, ಬಾಯಲ್ಲಿ ಹಾಕಿಕೊಂಡು ನುರಿಸಿ ತಿನ್ನುವರೆಂದು—ಕವಲಾಹಾರ ಮಾಡುವರೆಂದು—ತಿಳಿದಿರುವಿರಿ. ಕವಲಾಹಾರದ ವಿನಹ ದೇಹದ ಸ್ಥಿತಿಯು ಉಳಿಯಲಾರದೆನ್ನುವದಕ್ಕೆ ನಮ್ಮ ಉತ್ತರ ಹೀಗಿದೆ ದೇವನ ಶರೀರವು ಕವಲಾಹಾರವಿಲ್ಲದೆ ಸಾವಿರಾರು ವರ್ಷ ಹೇಗೆ ನಿಲ್ಲಲಿಕ್ಕೆ ಸಾಧ್ಯವಿದೆ ಎಂಬುದನ್ನು ನೀವು ಹೇಳಲಿಕ್ಕೆ ಶಕ್ಯವಿದೆಯೆ? ದೇವ ಕವಲಾಹಾರಿಯಲ್ಲ; ಅವನಿಗೆ ಶರೀರವಿದೆ. ಎನ್ನುವ ನಿಮ್ಮ ಹೇತುವು ವ್ಯಭಿಚಾರಿ—ತಪ್ಪು—ಆಗಿದೆ. ದೇವನಿಗೆ ಮಾನಸಿಕ ಆಹಾರವಿದೆ. ಅವನಿಗೆ ಆಹಾರದ ಇಚ್ಛೆಯಾದೊಡನೆ ಅವನ ಕಂಠದಲ್ಲಿ ಅಮೃತವು ಒಸರ ಹತ್ತುವುದು. ಅದರಿಂದ ಅವನಿಗೆ ತೃಪ್ತಿಯುಂಟಾಗುತ್ತದೆ. ಯಾವ ಪ್ರಕಾರ ನಾಲ್ಕು ಪ್ರಕಾರದ ದೇವತೆಗಳ ಶರೀರವು ಕವಲಾಹಾರವಿಲ್ಲದೆ ಕೇವಲ ಮಾನಸಿಕ ಆಹಾರದಿಂದಲೇ ತಾಳಲಿಕ್ಕೆ ಶಕ್ಯವಿದೆಯೋ ಅದೇ ಪ್ರಕಾರ ಕರ್ಮನೋಕರ್ಮ ವರ್ಗಣಗಳ ಆಹಾರದಿಂದ ಕೇವಲೀ ಭಗವಂತರ ಶರೀರವು ಬಾಳಿರುವುದು ಶಕ್ಯವಿದೆ. ಮತ್ತೂ ನೀವು ಅನ್ನಬಹುದು ಕೇವಲಿಯು ನಮ್ಮಂತೆಯೇ ಮನುಷ್ಯ ದೇಹದಲ್ಲಿ ಇರುವನು. ಅದರಿಂದ ನಮ್ಮಂತೆಯೇ ಅವನ ಶರೀರವಾದರೂ ಕವಲಾಹಾರದಿಂದಲೇ ಇರಲಿಕ್ಕೇಬೇಕು ಇದನ್ನು ಸ್ವೀಕರಿಸುವುದರಿಂದ ನಮ್ಮ ಶರೀರ ದಂತೆಯೇ ಕೇವಲಿಗಳ ದೇಹಕ್ಕೂ ಬೆವರು, ದುಃಖ, ಉಪಸರ್ಗ, ಪರೀಷಹ ಮೊದಲಾದವುಗಳನ್ನು ಮನ್ನಿಸ ಬೇಕಾಗುತ್ತದೆ. ಇದು ಕೇವಲಿಗಳ ಅತಿಶಯದ ಪ್ರಭಾವದಿಂದ ಆಗುವದಿಲ್ಲವೆಂದು ನೀವು ಅನ್ನುವದಾದಲ್ಲಿ ಊಟದ ಅಭಾವರೂಪ ಅತಿಶಯವನ್ನು ಯಾಕೆ ಸ್ವೀಕರಿಸಬಾರದು? ನಮ್ಮ ಶರೀರದ ಮೇಲಿಂದಲೇ ಕೇವಲಿಗಳ ದೇಹದ ಪರೀಕ್ಷೆಯನ್ನು ಮಾಡುವದಾದರೆ ನಮಗೆ ಇರುವಂತೆ ಇಂದ್ರಿಯಜನ್ಯ ಜ್ಞಾನವು ಅವರಿಗೂ ಇದೆಯೆಂದು ಸ್ವೀಕರಿಸಬೇಕಾದೀತು. ನೋಡುವುದು, ಕೇಳುವುದು, ರುಚಿನೋಡುವುದು, ವಿಚಾರಿಸುವುದು ಮೊದಲಾದವುಗಳು ಇಂದ್ರಿಯಗಳಿಂದ ನಡೆಯುತ್ತವೆ. ಅಂದಮೇಲೆ ಕೇವಲ ಜ್ಞಾನವು ಅತೀಂದ್ರಿಯವಾಗಿದೆ ಎನ್ನುವುದು ಸುಳ್ಳೆಂದಾಗುತ್ತದೆ. ಅಂದಮೇಲೆ ಸರ್ವಜ್ಞತ್ವದ ಅಭಾವವೂ ಉಂಟಾಗುತ್ತದೆ ಈಗ ನೀವು ಜ್ಞಾನವು ಸಮಾನವಿದ್ದರೆ ಏನಾಯಿತು?—ಎಂದೂ ಕೇಳಬಹುದು ಕೇವಲಿಗಂತೂ ಅತೀಂದ್ರಿಯ ಜ್ಞಾನವು ಇದ್ದೇ ಇದೆ. ಅಂದಮೇಲೆ ದೇಹವು ಅವರಿಗೂ ನಮಗೂ ಸಮಾನವಿದ್ದರೇನಾಯಿತು? ಅವರ ಶರೀರವು ಕವಲಾಹಾರವಿಲ್ಲದೆ ಇರಬಲ್ಲುದೆಂಬುದನ್ನು ಸ್ವೀಕರಿಸ-ಲಿಕ್ಕಾದರೂ ಅಡ್ಡಿಯೇನಿದೆ? ಇನ್ನುಮೇಲೆಯೂ ನೀವು ಹೀಗನ್ನಬಹುದು ಕೇವಲಿಗೆ ವೇದನೀಯ ಕರ್ಮದ ಸದ್ಭಾವವಿರುವುದರಿಂದ ತಿನ್ನುವ ಇಚ್ಛೆಯು ಉಂಟಾಗುತ್ತದೆ. ಅದರಿಂದ ಅವರು ಕವಲಾಹಾರ ತಕ್ಕೊಳ್ಳಲಿಕ್ಕೆ ಪ್ರವರ್ತಿಸುತ್ತಾರೆ. ಆದರೆ ವೇದನೀಯ ಕರ್ಮವು ಮೋಹನೀಯ ಕರ್ಮದ ಸಹಾಯದಿಂದ ಹಸಿವನ್ನುಂಟು ಮಾಡಲಿಕ್ಕೆ ಸಮರ್ಥವಾಗುತ್ತದೆ. ಅದೊಂದೇ ಈ ಕಾರ್ಯವನ್ನು ಮಾಡಲಿಕ್ಕೆ ಸಮರ್ಥವಿಲ್ಲ ಹಸಿವೆಂದರೆ ಊಟದ ಇಚ್ಛೆ ಇಚ್ಛೆಯು ಮೋಹನೀಯ ಕರ್ಮದ ಕಾರ್ಯವಾಗಿದೆ ಅಂದಮೇಲೆ ಮೋಹಕರ್ಮವೇ ನಷ್ಟವಾದಂಥ ಕೇವಲೀ ಭಗವಂತರಿಗೆ ಇಚ್ಛೆಯು ಯಾವುದರಿಂದ ಹುಟ್ಟುವುದು? ಒಂದುವೇಳೆ ಮೋಹನೀಯ ಕರ್ಮವಿಲ್ಲದೆಯೂ ಇಚ್ಛೆಯು ಉತ್ಪನ್ನವಾಗುತ್ತದೆಂದು ಸ್ವೀಕರಿಸಿದರೆ ಸುಂದರ ಸ್ತ್ರೀಯನ್ನು ನೋಡಿದಾಗ ಅವಳನ್ನು ಉಪಭೋಗಿಸುವ ಇಚ್ಛೆಯೂ ಅವನಿಗೆ ಉಂಟಾದೀತೆಂದು ಸ್ವೀಕರಿಸಬೇಕಾದೀತು ಇಲ್ಲವೆ ಸುಂದರ ವಸ್ತ್ರಾಭರಣ, ಹಾಸಿಗೆ ಮೊದಲಾದ ಪದಾರ್ಥಗಳ ಭೋಗೋಪಭೋಗಗಳನ್ನು ಅನುಭವಿಸುವ ಇಚ್ಛೆಯು ಉತ್ಪನ್ನವಾಗುವ ಪ್ರಸಂಗ ಬಂದಲ್ಲಿ ವೀತರಾಗತ್ವವು ಹೇಳ ಹೆಸರಿಲ್ಲದೆ ನಷ್ಟವಾಗುತ್ತದೆ. ಎಲ್ಲಿ ಇಚ್ಛೆಯು ಉತ್ಪನ್ನವಾಗುವುದೋ ಅಲ್ಲಿ ವೀತರಾಗವು ಉಳಿಯಲಾರದು. ಅಂತಲೇ ಮೇಲಿನ ನಿಮ್ಮ ಅಭಿಪ್ರಾಯವು ಯೋಗ್ಯವಾಗಿಲ್ಲ.

ಈಗ ತಿರುಗಿ ಶ್ವೇತಾಂಬರ ಸಂಪ್ರದಾಯಕ್ಕೆ ನಮ್ಮ ಪ್ರಶ್ನೆಯು ಹೀಗಿದೆ ಕೇವಲಿಗಳು ಆಹಾರ ತಕ್ಕೊಳ್ಳುವರೆಂದು ಹೇಳುವಿರಿ, ಆದರೆ ಅದರ ಕ್ರಮವು ಹೇಗಿದೆ? ದಿನಕ್ಕೆ ಒಮ್ಮೆಯೋ ಅನೇಕ ಸಲವೋ? ಅಥವಾ ತಿಂಗಳಲ್ಲಿ ಒಮ್ಮೆಯೋ, ಎರಡು, ಮೂರು, ನಾಲ್ಕು ಸಲವೋ? ನೀವು ನಿಮ್ಮ ತಿಳುವಳಿಕೆಯ ಪ್ರಕಾರ ಯಾವ ಕ್ರಮವನ್ನು ನಿಶ್ಚಯಿಸಿರುವಿರಿ? ಅದನ್ನು ಹೇಳಿರಿ ನೀವು ಯಾವ ಅಳತೆಯಿಂದ ಕೇವಲಿಗಳ ಆಹಾರಪದ್ಧತಿಯನ್ನು ಸೂಚಿಸುವಿರೋ ಅದೇ ಪ್ರಮಾಣದಲ್ಲಿ ಕೇವಲಿಗಳ ಶಕ್ತಿಯೂ ನಿಂತಿತೆಂದರೆ ಮುಂದೆಯೂ ಶಕ್ತಿಯು ಕಡಿಮೆಯಾದಾಗ ಪುನಃ ಊಟಮಾಡುವ ಅವಶ್ಯಕತೆಯುಂಟಾಗುವುದು. ಆಗ ಭೋಜನವನ್ನು ಆಶ್ರಯಿಸಿ, ಅವರ ಬಲವು ನಿಂತಂತಾಯಿತು. ಅಂದಮೇಲೆ ಕೇವಲಿಗಳಿಗೆ ಅನಂತ ಬಲವಿದೆಯೆಂದು ಹೇಳುವುದು ಸುಳ್ಳಾಯಿತು.

ಗೃಹಸ್ಥರಿಗೆ ಮೋಕ್ಷವಿಲ್ಲ. ಕೇವಲಿಯು ತನ್ನ ಹಸಿವನ್ನು ಶಾಂತಮಾಡಿಕೊಳ್ಳುವದಕ್ಕಾಗಿ ಅನ್ನದ ಸ್ವಾದವನ್ನು ತಕ್ಕೊಳ್ಳುವನೆಂದು ನಿಮ್ಮ ಒಂದು ಅಭಿಪ್ರಾಯವಾಗಿದೆ ಅದಕ್ಕೆ ನಮ್ಮದೊಂದು ಪ್ರಶ್ನೆಯಿದೆ ಕೇವಲಿಯು ಆಹಾರದ ಸ್ವಾದವನ್ನು ರಸನೇಂದ್ರಿಯದಿಂದ ತಕ್ಕೊಳ್ಳುವನೋ ಅಥವಾ ಕೇವಲ ಜ್ಞಾನದಿಂದಲೋ? ಕೇವಲ ಜ್ಞಾನದಿಂದ ಸ್ವಾದವನ್ನು ತಕ್ಕೊಳ್ಳುತ್ತಿದ್ದರೆ ದೂರಪ್ರದೇಶದಲ್ಲಿರುವ ಅನ್ನದ ಸ್ವಾದವನ್ನೂ ಸಹ ಅವರಿಗೆ ತಕ್ಕೊಳ್ಳಲಿಕ್ಕೆ ಬಂದೀತು ಅಂದಮೇಲೆ ಕೇವಲ ಜ್ಞಾನಿಗಳಿಗೆ ಕವಲಾಹಾರದ ಪ್ರಯೋಜನವೇನು? ಇನ್ನು ರಸನೇಂದ್ರಿಯದಿಂದಲೇ ಅನ್ನದ ಸ್ವಾದವನ್ನು ತಕ್ಕೊಳ್ಳುವರೆಂದು ಮನ್ನಿಸುವದಾದರೆ ಮತಿಜ್ಞಾನದ ಪ್ರಸಂಗವು ಉಂಟಾಗುತ್ತದೆ ಹೇಗೆಂದರೆ ಇಂದ್ರಿಯಗಳಿಂದ ನೋಡುವುದು, ಕೇಳುವುದು, ರುಚಿನೋಡುವುದು, ಮುಟ್ಟುವುದು, ವಿಚಾರಮಾಡುವುದು ಇವುಗಳಿಗೆ ಮತಿಜ್ಞಾನವೆನ್ನುವರು ಇದೂ ಇರಲಿ ನೀವೆನ್ನುವುದು, ಸರ್ವಜ್ಞತ್ವ ಮತ್ತು ಕವಲಾಹಾರಗಳಲ್ಲಿ ವಿರೋಧವಿಲ್ಲೆಂದು ಯಾಕಂದರೆ ಯಾವಪ್ರಕಾರ ಆಹಾರವನ್ನು ಸ್ವೀಕರಿಸುವ ಮನುಷ್ಯನಿಗೆ ಜ್ಞಾನವು ಕಡಿಮೆಯೇ ಇರುತ್ತದೆಂದು ಹೇಳಲಿಕ್ಕೆ ಬರುವದಿಲ್ಲವೋ ಅದೇ ಪ್ರಕಾರ ಕವಲಾಹಾರವನ್ನು ತಕ್ಕೊಳ್ಳುವ ಭಗವಂತನಿಗೆ ಸರ್ವಜ್ಞತ್ವವಾಗಲಿ, ಕೇವಲ ಜ್ಞಾನವಾಗಲಿ ಇಲ್ಲವೆಂದು ಅನ್ನಲಿಕ್ಕೆ ಬರುವದಿಲ್ಲ ಇದಕ್ಕೆ ನಾವು ಈಗ ಹೀಗೆ ಕೇಳಬೇಕಾಗುತ್ತದೆ ದ್ರವ್ಯ, ಆಭರಣ, ವಾಹನ, ಕಾಮ ಮತ್ತು ವಿಷಯೋಪಭೋಗ ಇವುಗಳಲ್ಲಿಯೂ ಸರ್ವಜ್ಞತ್ವಕ್ಕೆ ವಿರೋಧವು ಉಂಟಾಗುವದಿಲ್ಲ ತಮ್ಮ ಮೇಲಿನ ಹೇಳಿಕೆಯ ಪ್ರಕಾರ ಸರ್ವಜ್ಞತ್ವವು ಇರುವಾಗಲೂ ಇವೂ ಇರಲಿಕ್ಕೆ ಅಡ್ಡಿಯಿಲ್ಲ ಈಗ ನೀವು ಸರ್ವಜ್ಞರಿಗೆ ಮೋಹ ಉದಯದ ಅಭಾವವಿದೆಯೆಂದು ಹೇಳಬಹುದು. ಅದಕ್ಕಾಗಿ ದ್ರವ್ಯ, ವಸ್ತ್ರಾಭರಣಗಳ ಇಚ್ಛೆಯು ಅವನಿಗೆ ಆಗುವದಿಲ್ಲ ಅಸಾತಾವೇದನೀಯ ಕರ್ಮದ ಉದಯವು ಅಸ್ತಿತ್ವದಲ್ಲಿರುವಾಗ ಭೋಜನದ ಇಚ್ಛೆಯೇ ಮಾತ್ರ ಹೇಗಾಗುತ್ತದೆ ಆಯಾ ಕರ್ಮಗಳ ಶಕ್ತಿಯು ಭಿನ್ನ ಭಿನ್ನವಾಗಿರುವುದೆಂಬುದನ್ನು ತಾವಂತೂ ತಿಳಿದಿರಲಿಕ್ಕೆ ಸಾಕು ಎಲ್ಲ ಕರ್ಮಗಳ ಶಕ್ತಿಯು ಒಂದೇ ವಿಧವಾಗಿದ್ದರೆ ಅವುಗಳಲ್ಲಿ ವಿವಿಧ ಪ್ರಕಾರಗಳು ಇರುತ್ತಿರಲಿಲ್ಲ. ಇದಕ್ಕೆ ನಮ್ಮ ಉತ್ತರವಿಷ್ಟೆ. ನೀವು ಮೋಹದ ಅಭಾವವನ್ನು ಮನ್ನಿಸುತ್ತೀರಿ. ಆ ಕಾರಣದಿಂದ ತುತ್ತನ್ನು ಎತ್ತಿ ಬಾಯಲ್ಲಿ ಹಾಕಿಕೊಳ್ಳುವುದು, ಅದನ್ನು ಸುರಿಸುವುದು, ನುಂಗುವುದು ಇವೇ ಮೊದಲಾದ ಇಚ್ಛೆಗಳು ಯಾತರಿಂದ ಹುಟ್ಟಿದುವು? ಒಂದುವೇಳೆ ಅಂತರಾಯ ಕರ್ಮದ ಅಭಾವವು ಭೋಗೋಪ-ಭೋಗ ಕಾಮಸೇವನೆಯೇ ಮೊದಲಾದವುಗಳ ಗ್ರಹಣವನ್ನು ಅದು ಏಕೆ ಮಾಡಿಸಲಾರದು? ಇವುಗಳನ್ನು ಸ್ವೀಕರಿಸುವುದರಿಂದ ವ್ರತಭಂಗವಾಗುತ್ತದ. ದೀಕ್ಷೆಯ ಭಂಗವೂ ಆಗುತ್ತದೆ ಸಾಧುತ್ವವು ನಷ್ಟವಾಗುತ್ತದೆ ಆದರೆ ಆಹಾರ ತಕ್ಕೊಳ್ಳುವುದರಿಂದ ವ್ರತ ಮತ್ತು ದೀಕ್ಷೆಗಳು ಭಂಗವಾಗುವದಿಲ್ಲ ಇಷ್ಟೇ ಅಲ್ಲ, ಸಾಧುವಿನ ಧರ್ಮಕ್ಕೆ ಕಾರಣವಾಗುವಂಥ ದೇಹದ ಸ್ಥಿತಿಯು ಉಳಿಯಲಿಕ್ಕೆ ಸಾಧ್ಯವಿದೆ ಹೀಗೆನ್ನುವದಾದಲ್ಲಿ ನಿಮ್ಮ ಮತದೊಳಗೆ ವ್ರತಗಳನ್ನು ಸ್ವೀಕರಿಸುವುದರಿಂದಲೂ ದೀಕ್ಷೆಯನ್ನು ತಕ್ಕೊಳ್ಳುವುದರಿಂದಲೂ ಕೇವಲ ಜ್ಞಾನವು ಆಗುವದೆಂಬ ನಿಯಮವೇ ಇಲ್ಲವೆಂದಂತಾಯಿತು ಮಲ್ಲಿ ಕುಮಾರಿಗೆ ಗೃಹಸ್ಥಾವಸ್ಥೆಯಲ್ಲಿಯೇ ಕೇವಲ ಜ್ಞಾನವಾಯಿತೆಂದು ನೀವೆನ್ನುವಿರಿ ಭರತ ಚಕ್ರವರ್ತಿಗೆ ಆರು ಖಂಡಗಳ ರಾಜ್ಯವನ್ನು ಉಪಭೋಗಿಸುತ್ತಿರುವಾಗ ಕನ್ನಡಿಯ ಮನೆಯಲ್ಲಿ ಕೇವಲ ಜ್ಞಾನವಾಯಿತು ಮರುದೇವಿಯು ಆನೆಯನ್ನೇರಿದಳು, ಪುತ್ರಶೋಕವನ್ನು ಮಾಡುತ್ತಿದ್ದಳು, ಅಂಥ ಸಂದರ್ಭದಲ್ಲಿಯೇ ಅವಳಿಗೆ ಕೇವಲ ಜ್ಞಾನವಾಯಿತು ಬಿದರಿನ ಮೇಲೆ ಏರಿದ ನಟನಿಗೆ ಕೇವಲ ಜ್ಞಾನವಾಯಿತು ಇನ್ನೊಬ್ಬರ ಆಶ್ರಯದಲ್ಲಿದ್ದ ದಾಸಿಗೆ ಕೇವಲ ಜ್ಞಾನವಾಯಿತು ಗೃಹಸ್ಥ, ಸ್ತ್ರೀ, ಅನ್ಯಧರ್ಮದ ಯಾವನೋ ವೇಷಧಾರಿ, ಸನ್ಯಾಸಿ, ತ್ರಿಶೂಲಧಾರಿ, ಫಕೀರ, ಜಟಾಧಾರಿ, ಮುಂಡನ ಮಾಡಿಕೊಂಡವ, ಹುಲಿ-ಚಿಗರೆಗಳ ಚರ್ಮವನ್ನು ಧರಿಸುವವರು, ಹೆಚ್ಚಿಗೇನು ಯಾರು ಬೇಕಾದವರಿಗೆ ನಿಮ್ಮ ಧರ್ಮದಲ್ಲಿ ಮೋಕ್ಷಪ್ರಾಪ್ತಿಯು ಸಹಜವಾಗಿದೆ ಸಂಪೂರ್ಣ ಪ್ರಾಣಿಮಾತ್ರರಿಗೆಲ್ಲ—ಅವನು ನಾವಲಿಗನಿರಲಿ, ಕಟುಕನಿರಲಿ, ಅಗಸನಿರಲಿ, ಚಾಂಡಾಲನಿರಲಿ, ಯಾರೇ ಇರಲಿ ಅವನಿಗೆ—ಮೋಕ್ಷವಿದೆಯೆಂದು ನಿಮ್ಮ ಮತವಾಗಿದೆ. ಹೃಷೀಕೇಶನೆಂಬ ಚಾಂಡಾಲನಿಗೆ ಕೇವಲ ಜ್ಞಾನವಾಗಿ ಮುಕ್ತಿ ಲಭಿಸಿತೆಂದು ನೀವು ಬರೆದು ಇಟ್ಟಿರುವಿರಿ ನಿಮಗೆ ವ್ರತ, ದೀಕ್ಷೆ, ಆಚರಣೆ ಇವೇ ಮೊದಲಾದ ಸಂಗತಿಗಳ ಅವಶ್ಯಕತೆ ಹಾಗೂ ಪ್ರಯೋಜನಗಳು ಮೂಲದಲ್ಲಿಯೇ ಇಲ್ಲ ನಿಮ್ಮಲ್ಲಿ ಗೃಹಸ್ಥನಿಗೆ ಮೊದಲು ಕೇವಲ ಜ್ಞಾನವಾಗುತ್ತದೆ, ತರುವಾಯ ಅವನು ದೀಕ್ಷೆಯನ್ನು ತಕ್ಕೊಳ್ಳಬೇಕಾಗುವುದು, ಆಗ ಯತಿಪದವು ಪ್ರಾಪ್ತವಾಗುವುದು—ಹೀಗೆ ವರ್ಣನೆಯಿದೆ ಸರ್ವಜ್ಞತ್ವವು ಪ್ರಾಪ್ತವಾದ ನಂತರ ಹಿಂದಿನಿಂದ ದೀಕ್ಷೆ

ಕೊಡುವದರಿಂದ ಯಾವ ಪ್ರಯೋಜನವನ್ನು ಸಾಧಿಸುವಿರಿ ಯಾರಿಗೆ ಗೊತ್ತು? ಗೃಹಸ್ಥನಿಗೂ ಅನ್ಯ ಕುಲಿಂಗಿಗೂ ವೇಷಧಾರಿಗೂ ಮೋಕ್ಷವಾದ ಮೇಲೆ ನಿಮ್ಮ ಆ ದೀಕ್ಷಾಗ್ರಹಣ, ಘುಖಪಟ್ಟ ಬಂಧನ, ದಂಡಗ್ರಹಣ, ಬೋಧಿ ಪಾತ್ರಗ್ರಹಣ ಇವೆಲ್ಲ ನಿರರ್ಥಕವಾದಾವು—ಇದಕ್ಕೆ ದಾರಿಯೇನು? ಇದೇ ಪ್ರಕಾರ ಒಂದಲ್ಲ, ಸಾವಿರಾರು ದೋಷಗಳು ನಿಮ್ಮ ಮನಸ್ಸಿನಲ್ಲಿ ಕಂಡುಬರುತ್ತವೆ ಇಷ್ಟಾಗಿಯೂ ನೀವು ಹೇಳುವಿರಿ. ಅಸಾತಾವೇದನೀಯ ಕರ್ಮದ ಉದಯ ದಿಂದ ಕೇವಲಿಗೆ ಹಸಿವು, ನೀರಡಿಕೆ, ಮಲ-ಮೂತ್ರಾದಿ ದೋಷಗಳು ಉತ್ಪನ್ನವಾಗುವವು. ಈ ಉದೀರಣತೆಯ ವ್ಯುಚ್ಛಿತ್ತಿಯು (ನಾಶವು) ಆರನೆಯ ಗುಣಸ್ಥಾನದಲ್ಲಿ ಆಗುತ್ತದೆ ಅದಕ್ಕಾಗಿ ಏಳನೆಯ ಗುಣಸ್ಥಾನದಿಂದ ಮುಂದೆ ಹಸಿವು ಮೊದಲಾದ ವೇದನೆಗಳ ಅಭಾವವಿರುತ್ತವೆ

**ಅಸಾತಾ ವೇದನೀಯವು ಹಸಿವನ್ನು ಹುಟ್ಟಿಸುವದಿಲ್ಲ.** ಮುನಿಶ್ರೇಷ್ಠನು ಅಪ್ರಮತ್ತ ಗುಣ ಸ್ಥಾನದಲ್ಲಿ ಅತಿಶಯವಾಗಿ ತನ್ನ ಇಂದ್ರಿಯಗಳನ್ನು ಅಧೋಮುಖಗೊಳಿಸುತ್ತಿರುವಾಗ (ಅಧಃಕರಣ) ಆರಂಭದಲ್ಲಿ ನಾಲ್ಕು ಅವಶ್ಯಕತೆಗಳನ್ನು ಅವನು ಪೂರೈಸಿಕೊಳ್ಳಬೇಕಾಗುತ್ತದೆ. ಮೊಟ್ಟಮೊದಲು ಅವನ ಪರಿಣಾಮವು ಪ್ರತಿ ಯೊಂದು ಸಮಯ-ಸಮಯಕ್ಕೂ ಅನಂತಪರಿಯಿಂದ ಶುದ್ಧವಾಗುತ್ತ ಹೋಗುತ್ತದೆ ತರುವಾಯ ಸ್ಥಿತಿಬಂಧವು ಅವತರಿಸಲಿಕ್ಕೆ ಹತ್ತುವುದು. ಅಂದರೆ ಸ್ಥಿತಿಬಂಧವು ಕಡಿಮೆ ಕಡಿಮೆ ಆಗುತ್ತ ಹೋಗುವುದು ಮತ್ತು ಸಾತಾ ವೇದನೀಯವೇ ಮೊದಲಾದ ಪುಣ್ಯ ಪ್ರಕೃತಿಗಳಲ್ಲಿ ಅನಂತಪಟ್ಟು ರಸದ ವೃದ್ಧಿಯಾಗುತ್ತದೆ. ಅದರಂತೆಯೇ ಅಸಾತಾದಿ ಅಶುಭ ಪ್ರಕೃತಿಗಳ ರಸವು ಅನಂತಪಟ್ಟು ಕಡಿಮೆಯಾಗುತ್ತ ಹೋಗುತ್ತದೆ ಆಗ ಪಾಪಕರ್ಮದ ಶಕ್ತಿಯು ವಿಷದಂತೆ, ಹಾಲಾಹಲದಂತೆ ತೀವ್ರ ಹಾಗೂ ತೀವ್ರತರವಾಗಿರುವಂಥದ್ದು, ಅದು ಸಷ್ಟವಾಗಿ ಅದು ಬೇವಿನಂತೆ, ಮಜ್ಜಿಗೆ ಮೊಸರುಗಳಂತೆ ಸೌಮ್ಯವಾಗುತ್ತವೆ, ಮಂದ ಮಂದತರವಾಗುತ್ತದೆ ಇಷ್ಟಾದ ಮೇಲೆ ಅಪೂರ್ವಕರಣ ಗುಣಸ್ಥಾನದಲ್ಲಿ (೧) ಗುಣಶ್ರೇಣಿಯ ನಿರ್ಜರಾ, (೨) ಗುಣ ಸಂಕ್ರಮಣ, (೩) ಸ್ಥಿತಿ ಖಂಡನ, (೪) ಅನುಭಾಗ ಖಂಡನ—ಈ ನಾಲ್ಕು ಆವಶ್ಯಕಗಳು ಉಂಟಾಗುತ್ತವೆ ಈ ಅಧಃಕರಣ ಮತ್ತು ಅಪೂರ್ವಕರಣ-ದೊಳಗಿನ ಪರಿಣಾಮದ ಪ್ರಭಾವದಿಂದ ಅಸಾತಾದಿ ಅಪ್ರಶಸ್ತ ಪ್ರಕೃತಿಯು ರಸವನ್ನು ಅಸಂಖ್ಯಾತಸಲ ಅನಂತದಿಂದ ವಿಭಾಗಮಾಡಲು ಆ ರಸದ ಶಕ್ತಿಯು ತೀರ ಕುಗ್ಗಿಹೋಗುತ್ತದೆ ಅಂಥ ನಿಃಸತ್ವ ಅಸಾತಾರಸವು ಘಾತಿಕರ್ಮದ ಸಹಾಯವು ಇಲ್ಲದಂತಾಗಲು ಅದು ಹಸಿವೆ ಎಂಬ ತೊಂದರೆಯನ್ನು ಹುಟ್ಟಿಸಲಿಕ್ಕೆ ಸಮರ್ಥವಾಗುವದಿಲ್ಲ

ಈ ವಿಷಯದಲ್ಲಿ [ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರು ತಮ್ಮ] 'ಗೊಮ್ಮಟಸಾರ'ದಲ್ಲಿ ಹೀಗೆ ಹೇಳಿದ್ದಾರೆ

ಸಮಯಟ್ಠಿದಿಗೋ ಬಂಧೋ ಸಾದಸ್ಸುದಯಪ್ಪಗೋ ಜದೋ ತಸ್ಸ ।<br>
ತೇಣಾಸಾದಸ್ಸುದಓ ಸಾದಸರೂವೇಣ ಪರಿಣಮದಿ ॥ ೧ ॥<br>
ಎದೇಣ ಕಾರಣೇಣ ದು ಸಾದಸ್ಸೇವ ದು ಣಿರಂತರೋ ಉದಓ ।<br>
ತೇಣಾಸಾದಣಿಮಿತ್ತಾ ಪರೀಸಹಾ ಜಿಣವರೇ ಣತ್ಥಿ ॥ ೨ ॥<br>
ಣಟ್ಠಾ ಯ ರಾಯದೋಸಾ ಇಂದಿಯಣಾಣಂ ಚ ಕೇವಲಮ್ಮಿ ಜದೋ ।<br>
ತೇಣ ದು ಸಾದಾಸಾದಜ-ಸುಹದುಕ್ಖಂ ಣತ್ಥಿ ಇಂದಿಯಜಂ ॥ ೩ ॥

ಅರ್ಥ—ಮೊದಲು ಕಟ್ಟಿದಂಥ ಅಸಾತಾವೇದನೀಯ ಕರ್ಮಕ್ಕೆ ಅಸಂಖ್ಯಸಲ ಅನಂತದಿಂದ ಭಾಗಿಸಲು ಆ ಕರ್ಮದೊಳಗಿನ ಫಲಕೊಡುವ ಶಕ್ತಿಯು ತೀರ ಮಂದವಾಗುತ್ತದೆ ಅದರಿಂದ ಹೊಸ ಅಸಾತಾ ಕರ್ಮವು ಕಟ್ಟುವದಿಲ್ಲ ಆ ಕಾರಣದಿಂದ ಏಳನೆಯ ಗುಣಸ್ಥಾನದಿಂದ ಸಾತಾವೇದನೀಯ ಕರ್ಮದ ನವೀನ ಬಂಧವಾಗುತ್ತದೆ, ಅಸಾತಾಕರ್ಮದ ಬಂಧವಾಗುವದಿಲ್ಲ ಕೇವಲಿಗೆ ಸಾತಾಕರ್ಮದ ಬಂಧವಾಗುವದಾದರೂ ಅದು ಒಂದು ಸಮಯ ಮಾತ್ರ ಇರುತ್ತದ ಆದರೂ ಅದರ ಉದಯವು ನಿರಂತರವಾಗಿರುವುದರಿಂದ ಅಸಾತಾಕರ್ಮದ ಉದಯವೂ ಕೂಡ ಸಾತಾಸ್ವರೂಪದಲ್ಲಿ ಉದಯಹೊಂದುತ್ತದೆ

ಭಾವಾರ್ಥ—ಭಗವಂತನಿಗೆ ಯಾವಾಗಲೂ ಸಾತಾಕರ್ಮದ ಉದಯವಿರುತ್ತದೆ ಅದು ಶಕ್ಯವಿದ್ದಷ್ಟು ಸುಖದ ವೃದ್ಧಿಯನ್ನು ಮಾಡುವ ಕಾರ್ಯ ಮಾಡುತ್ತಿರುತ್ತದೆ ಇತ್ತಕಡೆಗೆ ಅಸಾತಾವೇದನೀಯ ಕರ್ಮವು ಹೆಚ್ಚು ಹೆಚ್ಚು ನಿಃಸತ್ವವಾಗುತ್ತ ಹೋಗುತ್ತದೆ ವಿಸ್ತಾರವಾದ ಸಮುದ್ರದಲ್ಲಿ ಬಿದ್ದ ಒಂದು ಹನಿ ವಿಷವು ತನ್ನ ಶಕ್ತಿಯನ್ನು

ಕಳೆದುಕೊಳ್ಳುವುದು, ಅದು ಸಾಗರವನ್ನೆಲ್ಲ ವಿಷವನ್ನಾಗಿ ಮಾಡಲಾರದು ಅದರಂತೆಯೇ ಅನಂತಸುಖವಾಗಿ ಸುಖೋತ್ಪಾದನೆಯನ್ನು ಮಾಡುವ ಸಾತಾಕರ್ಮವು ಉದಯಾವಸ್ಥೆಯಲ್ಲಿರುವಾಗ ಅಸಾತಾಕರ್ಮದ ನಿಃಸತ್ವ ಹಾಗೂ ಸ್ವಲ್ಪ ಉದಯವು ಪ್ರಭುವಿಗೆ ಹಸಿವೆಯ ವೇದನೆಯನ್ನು ಉತ್ಪನ್ನಮಾಡಲಿಕ್ಕೆ ಸಮರ್ಥವಾಗುವದಿಲ್ಲ. ಅಂತೆಲೇ ಅಸಾತಾಕರ್ಮದ ಉದಯದಿಂದ ಉತ್ಪನ್ನವಾಗುವ ಕಷ್ಟನಷ್ಟಗಳು ಜಿನೇಂದ್ರನಿಗೆ ಇಲ್ಲ ಭಗವಂತನ ರಾಗ–ದ್ವೇಷಗಳು ನಷ್ಟವಾಗಿರುತ್ತವೆ, ಇಂದ್ರಿಯಜನ್ಯ ಜ್ಞಾನದ ಅಭಾವವಿರುತ್ತದೆ, ಆ ಕಾರಣದಿಂದ ಸಾತಾ ಹಾಗೂ ಅಸಾತಾ ಕರ್ಮಗಳ ಉದಯದಿಂದ ಉಂಟಾಗುವ ಇಂದ್ರಿಯಜನ್ಯ ಸುಖ–ದುಃಖಗಳೂ ಅವನಿಗೆ ಇರುವದಿಲ್ಲ ಅತಿ ಮಂದವಾಗಿರುವ ಅಸಾತಾವೇದನೀಯ ಕರ್ಮವೂ ತನ್ನ ಕಾರ್ಯಮಾಡಲು ಸಮರ್ಥವಾಗುವದಿಲ್ಲ ಇದಕ್ಕೆ ಕಾರಣವಿಲ್ಲದಿಲ್ಲ ಮಂದವಾಗಿ ಉದಯರೂಪದಲ್ಲಿರುವ ಸಂಜ್ವಲನ ಕಷಾಯವು ಅಪ್ರಮತ್ತವೇ ಮೊದಲಾದ ಗುಣಸ್ಥಾನಗಳಲ್ಲಿ ಪ್ರಮಾದವನ್ನು ಉತ್ಪನ್ನಮಾಡಲು ಶಕ್ತವಾಗುವದಿಲ್ಲ ಒಂಭತ್ತನೆಯ ಗುಣಸ್ಥಾನವು ವೇದದ ಮಂದ ಉದಯವುಳ್ಳ ಸ್ಥಾನವಾಗಿದೆ ಅಲ್ಲಿ ಅತಿ ತೀವ್ರ ವೇದದ ಉದಯದಿಂದ ಉತ್ಪನ್ನವಾದ ಮೈಥುನ ಸಂಜ್ಞೆಯೂ ಕೂಡ ಉಂಟಾಗುವದಿಲ್ಲ ಇನ್ನು ಹನ್ನೆರಡನೆಯ ಗುಣಸ್ಥಾನದ ಕೊನೆಯ ಎರಡು ಸಮಯಗಳಲ್ಲಿ ನಿದ್ರಾಪ್ರಚಲವು ಉದಯಹೊಂದುವದಾದರೂ ಅದು ಉದೀರಣೆಯನ್ನುಳಿದು ನಿದ್ರೆಯನ್ನು ತರಲು ಸಮರ್ಥವಾಗುವದಿಲ್ಲ ಆದರೆ ಜಾಗೃದಾವಸ್ಥೆಯಲ್ಲಿ ಇರದ ಹೊರತಾಗಿ, ಆತ್ಮಾನುಭವರೂಪದ ಧ್ಯಾನವನ್ನು ಅದು ಆಗಗೊಡುವದಿಲ್ಲ ಅಸಾತಾ ಕರ್ಮವು ಉದೀರಣೆಯ ಹೊರತಾಗಿ ಹಸಿವು ನೀರಡಿಕೆಗಳನ್ನು ಉತ್ಪನ್ನಮಾಡಲು ಶಕ್ತವಾಗುವದಿಲ್ಲ. ಇಷ್ಟು ವಿವರಣೆಯಿಂದ ಸಮಾಧಾನವಾಗದಿದ್ದರೆ ಇನ್ನೂ ಹೇಳಲಾಗುವುದು ಅಪ್ರಮತ್ತರೆನಿಸುವ ಸಾಧುಗಳು ಕೇವಲ ಆಹಾರದ ಇಚ್ಛೆಯನ್ನು ಮಾಡಿದರೂ ಪ್ರಮತ್ತರೆನಿಸುತ್ತಾರೆ ಅಂದಮೇಲೆ ಊಟಮಾಡುವ ನಿಮ್ಮ ಕೇವಲಿಗಳಿಗೆ ಪ್ರಮತ್ತತ್ವ ಪ್ರಾಪ್ತಿಯಾಗದೆ ಉಳಿಯುವುದು ಬಹಳ ಆಶ್ಚರ್ಯಕರವಾಗಿದೆ ಕೇವಲೀ ಭಗವಂತನು ಮೂರು ಲೋಕದೊಳಗಿನ ಎಲ್ಲ ಚರಾಚರ ವಸ್ತುಗಳನ್ನು ಪ್ರಕಟವಾಗಿ ಕಾಣುವರಾದುದರಿಂದ ಅವರಿಗೆ ಹೊಡೆಯುವುದು, ಕೊಲ್ಲುವುದು, ಕಡಿಯುವುದು, ಒಡೆಯುವುದು, ಸುಡುವುದು, ಮದ್ಯ, ಮಾಂಸ ಮೊದಲಾದ ಅಶುಚಿ ಪದಾರ್ಥಗಳೂ ಕಾಣುತ್ತಿರುತ್ತವೆ ಹೀಗಿದ್ದೂ ಅವರು ಊಟವನ್ನು ಹೇಗೆ ಮಾಡಿಯಾರು? ಅಲ್ಪ ಶಕ್ತಿಯುಳ್ಳ ಗೃಹಸ್ಥರೂ ಸಹ ಮೇಲೆ ಹೇಳಿದ ನಿಂದ್ಯ ಸಂಗತಿಗಳನ್ನು ನೋಡಿ, ಅಂತರಾಯವನ್ನು ಸ್ವೀಕರಿಸುವರು ಕೂಡಲೆ ಊಟವನ್ನು ಬಿಡುವರು ಅಂದಮೇಲೆ ಕೇವಲಿಯು ಅಂತರಾಯವನ್ನು ಪಾಲಿಸದಿದ್ದರೆ ಸಾಮಾನ್ಯ ಗೃಹಸ್ಥರಿಗಿಂತ ಹೆಚ್ಚಾಗಿ ಆಹಾರದ ಮೇಲೆ ಆಸಕ್ತಿಯು ಅವರಿಗೆ ಇದ್ದಂತಾಯಿತು ಅದೇ ಪ್ರಮಾಣದಿಂದ ಶಕ್ತಿಯೂ ಕಡಿಮೆ ಇರಬೇಕಾಯಿತು. ಇದನ್ನೆಲ್ಲ ಮನ್ನಿಸಬೇಕಾದಿತು ಹಾಗಾದರೆ ಅವರ ಅನಂತ ಶಕ್ತಿಯು ಎಲ್ಲಿ ಉಳಿಯುವುದು? ಯಾರಿಗೆ ಹಸಿವೆಯು ವೇದನೆಯು ಇರುವುದೋ ಅವರಿಗೆ ಅನಂತಸುಖವಾದರೂ ಎಲ್ಲಿಯದು? ಹಸಿವೆಯಂಥ ಪ್ರಬಲ ವೇದನೆಯು ಜಗತ್ತಿನಲ್ಲಿ ಇನ್ನೊಂದಿಲ್ಲ ಈ ವೇದನೆಯು ಸರ್ವಜ್ಞರಿಗೂ ಇರುವದೆಂದು ಸ್ವೀಕರಿಸಿದರೆ ಅನಂತವೀರ್ಯ ಮತ್ತು ಅನಂತ ಸುಖಗಳು ಅಲ್ಲಿ ಇರಲಾರವು ವಿಚಾರಮಾಡುವ, ಮುನಿಶ್ರೇಷ್ಠರಿಗೂ ಕೂಡ ತಪಸ್ಸಿನ ಪ್ರಭಾವದಿಂದ ಪ್ರಬಲ ಋದ್ಧಿಗಳು ಪ್ರಾಪ್ತವಾಗುತ್ತವೆ ಆ ಋದ್ಧಿಗಳಿಂದ ಮನುಷ್ಯರಿಗೆ ಅತರ್ಕ್ಯವಾದ ಕಾರ್ಯಗಳನ್ನೂ ಕೂಡ ಅವರಿಗೆ ಮಾಡಲಿಕ್ಕೆ ಬರುತ್ತದೆ ಇಂಥ ಸಾಮರ್ಥ್ಯವು ಋದ್ಧಿಧಾರಿಗಳಾದ ಮುನಿಗಳಲ್ಲಿಯೇ ಇರುತ್ತಿರವಾಗ ಅನಂತವೀರ್ಯವುಳ್ಳ ಸರ್ವಜ್ಞರೆಂದು ವಿಶೇಷವಾಗಿ ಹೇಳುವ ಆ ಭಗವಂತನಲ್ಲಿ ಯಃಕಶ್ಚಿತ್‌ವೆನಿಸುವ, ಆಹಾರವಿಲ್ಲದೆ ದೇಹವನ್ನಿಟ್ಟುಕೊಳ್ಳುವ ಸಾಮರ್ಥ್ಯವು ಇಲ್ಲವೆಂದು ಪ್ರತಿಪಾದಿಸುವುದು ತೀರ ಅಯೋಗ್ಯವಾಗಿದೆ ಜನಸಾಮಾನ್ಯರಂತೆ ಸರ್ವಜ್ಞನಿಗೂ, ಆಹಾರ, ನಿದ್ರಾ, ದುಃಖ, ಸ್ವೇದ(ಬೆವರು), ರೋಗ, ಮಲ, ಮೂತ್ರಗಳು ಇರುವವೆಂದು ತಿಳಿದರೆ ಸಾಮಾನ್ಯ ಆತ್ಮಕ್ಕೂ ಪರಮಾತ್ಮಕ್ಕೂ ಅಂತರವೇನು ಉಳಿಯಿತು? ಬದುಕುವುದು ಕೇವಲ ಆಹಾರವನ್ನೇ ಅವಲಂಬಿಸಿಲ್ಲ ಅದು ಆಯುಕರ್ಮದ ಉದಯವನ್ನು ಅವಲಂಬಿಸಿದೆ ಹೇಗೆಂದರೆ –

ಣೋಕಮ್ಮಕಮ್ಮಹಾರೋ ಕವಲಾಹಾರೋ ಯ ಲೆಪ್ಪಮಾಹಾರೋ ।
ಉಜ್ಜಮಣೋ ವಿ ಕಮಸೋ ಆಹಾರೋ ಛವ್ವಿಹೋ ಭಣಿಓ ॥
ಣೋಕಮ್ಮಂ ತಿತ್ಥಯರೇ ಕಮ್ಮಂ ಣಾರೇಯ ಮಾಣಸೋ ಅಮರೇ ।
ಕವಲಾಹಾರೋ ಣರಪಸು ಉಜ್ಜೋ ಪಕ್ಖೀ ಯ ಇಗಿ ಲೇವೋ ॥

ಅರ್ಥ—ಆಹಾರವು ಆರು ಪ್ರಕಾರವಾಗಿದೆ  ಕರ್ಮ ಆಹಾರ, ನೋಕರ್ಮ ಆಹಾರ, ಕವಲಾಹಾರ, ಲೇಪಾಹಾರ, ಉಜ್ಜಾಹಾರ ಮತ್ತು ಮಾನಸಿಕ ಆಹಾರ. ಭಗವಾನ್ ಅರಿಹಂತರಿಗೆ ಅನ್ಯಜೀವಗಳಿಗೆ ಇಲ್ಲದಂಥ ಶುಭ ಹಾಗೂ ಸೂಕ್ಷ್ಮ ನೋಕರ್ಮ ವರ್ಗಣಾಗಳ ಗ್ರಹಣವೇ ಆಹಾರವಾಗಿದೆ  ನರಕದೊಳಗಿನ ಜೀವಗಳಿಗೆ ಕರ್ಮ ಭೋಗವೇ ಆಹಾರವಾಗಿರುವುದು  ನಾಲ್ಕೂ ಪ್ರಕಾರದ ದೇವರಿಗೆ ಮಾನಸಿಕ ಆಹಾರವು ಇರುತ್ತದೆ  ಅಂದರೆ ಮನಸ್ಸಿನಲ್ಲಿ ಇಚ್ಛೆಯುಂಟಾದ ಕೂಡಲೇ ಕಂಠದಲ್ಲಿ ಅಮೃತವು ಒಸರಹತ್ತುವುದು  ಅದರಿಂದ ಅವರ ತೃಪ್ತಿಯು ಆಗುತ್ತದೆ  ಮನುಷ್ಯರಿಗೂ ಪಶುಗಳಿಗೂ ಕವಲಾಹಾರವಿದೆ. ಪಕ್ಷಿಗಳು ತತ್ತಿಯಲ್ಲಿರುವಾಗ ತಾಯಿಯ ಹೊಟ್ಟೆಯಿಂದ ಮುಕ್ತವಾಗಿರುತ್ತವೆ  ಅದೇ ಓಜಾಹಾರವು. ಏಕೇಂದ್ರಿಯ ಪೃಥ್ವಿಯೇ ಮೊದಲಾದವುಗಳಿಗೆ ಲೇಪವೇ ಆಹಾರವಾಗಿರುತ್ತದೆ  ಅಂದರೆ ಪೃಥ್ವೀ, ನೀರು ಮೊದಲಾದವುಗಳ ಸ್ಪರ್ಶವೇ ಅವುಗಳ ಆಹಾರವಾಗಿದೆ.

ಭೋಗ ಭೂಮಿಯಲ್ಲಿ ಔದಾರಿಕ ದೇಹವನ್ನು ಧರಿಸುವ ಮನುಷ್ಯನ ಶರೀರವು ಮೂರು ಹರದಾರಿಯಷ್ಟು ಪ್ರಮಾಣವುಳ್ಳದಾದರೂ ಅವರ ಕೇವಲ ಒಂದು ನೆಲ್ಲಿಯ ಕಾಯಿಯಷ್ಟು ಆಹಾರವನ್ನು ಮೂರು ದಿನಕ್ಕೊಮ್ಮೆ ಸ್ವೀಕರಿಸುವರು. ಇದರಿಂದ ಕವಲಾಹಾರದಿಂದಲೇ ಶರೀರವು ನಿಲ್ಲುತ್ತದೆಂದು ಹೇಳಲಿಕ್ಕೆ ಆಗುವದಿಲ್ಲ  ಹಾಗೆ ನಿಯಮವೂ ಕಂಡು ಬರುವುದಿಲ್ಲ  ಕೇವಲ ಆಹಾರಕ ಈ ಶಬ್ದದಿಂದಲೇ ಕವಲಾಹಾರವೆಂದು ಅರ್ಥ ಮಾಡುವದಾದಲ್ಲಿ, ಸಯೋಗಿ ಶಬ್ದಕ್ಕೆ ಮನಸ್ಸಿನ ಅಸ್ತಿತ್ವ, ಪ್ರಾಣವದಕ್ಕೆ ಪಂಚೇಂದ್ರಿಯಗಳ ಅಸ್ತಿತ್ವ, ಶುಕ್ಲಲೇಶ್ಯೆಗೆ ಕಷಾಯಗಳ ಅಸ್ತಿತ್ವವನ್ನು ಸ್ವೀಕರಿಸಬೇಕಾದೀತು  ಜಿನೇಶ್ವರನಿಗೆ ಹನ್ನೊಂದು ಪರೀಷಹಗಳಿವೆ  ಅವು ಔಪಚಾರಿಕವಾಗಿವೆ  ಯಾಕಂದರೆ ವೇದನೀಯ ಕರ್ಮವು ವಿದ್ಯಮಾನವಾಗಿರುವುದರಿಂದ ಅವು ಇರುತ್ತವೆ  ಇಷ್ಟೇ ಅವುಗಳ ಅರ್ಥವನ್ನು ಸ್ವೀಕರಿಸಬೇಕು. ಮಂತ್ರ ಇಲ್ಲವೆ ಔಷಧಗಳಿಂದ ವಿಷದ ಶಕ್ತಿಯನ್ನು ಇಲ್ಲದಂತೆ ಮಾಡಲು, ಅದು ಪ್ರಾಣಹರಣಮಾಡಲಿಕ್ಕೆ ಸಮರ್ಥವಾಗುವದಿಲ್ಲ  ಹಾಗೆಯೇ ಶಕ್ತಿವಿಹೀನವಾದ ವೇದನೀಯಕರ್ಮವು ಭಗವಂತನಿಗೆ ಹಸಿವನ್ನುಂಟುಮಾಡಲು ಶಕ್ತವಾಗುವದಿಲ್ಲ. ಅದರಿಂದ ಮಣಿ, ಮಂತ್ರ, ಔಷಧಿ, ವಿದ್ಯಾ ಮತ್ತು ಬುದ್ಧಿ ಮೊದಲಾದ ಪದಾರ್ಥಗಳಲ್ಲಿ ಅತರ್ಕ್ಯ ಶಕ್ತಿಯು ಇದೆ.

ಶ್ವೇತಾಂಬರ ಮತಾವಲಂಬಿಗಳು ಕಲ್ಪಿತ ಸೂತ್ರಗಳನ್ನು ರಚಿಸಿ, ಅನೇಕ ಪ್ರಕಾರದ ಅಸಂಭಾವ್ಯ ರಚನೆಗಳನ್ನು ಮಾಡಿದ್ದಾರೆ  ಅವುಗಳಲ್ಲಿಯ ಕೆಲವು ಉದಾಹರಣೆಗಳನ್ನು ನೋಡೋಣ.

**ಕಲ್ಪಿತ ಸೂತ್ರದೊಳಗಿನ ಅಸಂಭಾವ್ಯ ರಚನೆಗಳು.** ಗೋಶಾಲನೆಂಬ ಒಬ್ಬ ಗಾರುಡಿಗನಿದ್ದನು ಅವನು ಮಹಾವೀರ ಸ್ವಾಮಿಯ ಹತ್ತರ ದೀಕ್ಷೆಯನ್ನು ತಕ್ಕೊಂಡನು  ಮುಂದೆ ಅವನಿಗೆ ವಿದ್ಯೆಯ ಅತಿ ಗರ್ವವು ಬಂತು  ಅವನು ಮಹಾವೀರ ಸ್ವಾಮಿಯೊಡನೆ ವಾದವಿವಾದ ಮಾಡಿದನು. ಅದರಲ್ಲಿ ಅವನು ಸೋತನು ಅದಕ್ಕಾಗಿ ಅವನಿಗೆ ಬಹಳ ಸಿಟ್ಟು ಬಂದಿತು  ಆ ಆವೇಶದಲ್ಲಿ ಅವನು ಭಗವಂತನ ಮೇಲೆ ಸಮವಸರಣದಲ್ಲಿ ಒಂದು ತೇಜೋಲೇಶ್ಯೆಯನ್ನು (ಅಗ್ನಿ) ಬಿಟ್ಟನು  ಆ ಸಮವಸರಣದಲ್ಲಿ ಇಬ್ಬರು ಮುನಿಗಳು ಸಿಂಹಾಸನದ ಕೆಳಗೆ ಸುಟ್ಟು ಹೋದರು  ಇಷ್ಟೇ ಅಲ್ಲ, ತೈಜಸ ಬುದ್ಧಿಯಿಂದ ಉತ್ಪನ್ನವಾದ ಆ ಅಗ್ನಿ ಜ್ವಾಲೆಯು ಭಗವಂತನ ವರೆಗೂ ಹೋಗಿ ತಲುಪಿತು  ಆ ಜ್ವಾಲೆಯಿಂದ ಭಗವಂತನಿಗೆ ಅತಿಶಯ ಉಪಸರ್ಗವಾಯಿತು. ಅಗ್ನಿಯ ಉಷ್ಣತೆಯಿಂದ ಭಗವಂತನಿಗೆ ಆಮಾತಿಸಾರದ ಬೇನೆಯುಂಟಾಯಿತು  ಅದು ಆರು ತಿಂಗಳವರೆಗೂ ನಿಂತಿತು  ಇದನ್ನು ಮುಂದೆ ಭಗವಂತನು ತನ್ನ ಕೇವಲ ಜ್ಞಾನದಿಂದ ತಿಳಿದು, ತನ್ನ ಶಿಷ್ಯನಿಗೆ ಹೇಳಿದನು—"ಒಬ್ಬ ಶೆಟ್ಟಿಯ ಮನೆಗೆ ಹೋಗಿ, ಒಂದು ಪಕ್ಷಿಯ ಮಾಂಸವನ್ನು ಮಾತ್ರ ತಕ್ಕೊಂಡು ಬಾ. ಅದನ್ನು ತಿನ್ನುವುದರಿಂದ ನನ್ನ ರೋಗ ಹೋದೀತು" ಹೀಗೆ ಹೇಳಿ ಅದನ್ನು ತರಿಸಿ ತಿಂದನು  ಮತ್ತು ರೋಗದಿಂದ ಮುಕ್ತನಾದನು  ಆಗ ಭಗವಂತನು "ನಾನು ವಿಚಾರಿಸದೆ ಇಂಥ ಕುಪಾತ್ರನಿಗೆ ದೀಕ್ಷೆ ಕೊಟ್ಟೆನಲ್ಲ!" ಎಂದನು  ಈ ಪ್ರಕಾರ ಕೇವಲಿಗಳ ಮೇಲೆ ಸುಳ್ಳು ತಪ್ಪನ್ನು ಹೊರಿಸಲಾಗಿದೆ. ಹಾಗೆಯೇ ಹುಟ್ಟುವಾಗಲೇ ವೀರ ಜಿನೇಂದ್ರನಿಗೆ ಮೂರು ಜ್ಞಾನಗಳು ಇದ್ದುವು  ಆ ಜಿನೇಂದ್ರನು ಪಾಠ ಶಾಲೆಯಲ್ಲಿ ಕಲಿತನು. ತೀರ್ಥಂಕರ ದೀಕ್ಷೆಯನ್ನು ತಕ್ಕೊಳ್ಳುವಾಗ ನಗ್ನನಿರುವನು  ಆದರೆ ಹಿಂದಿನಿಂದ ಅವನ ಹೆಗಲಮೇಲೆ ಇಂದ್ರನು ಅರಿವೆಯನ್ನು ಒಗೆಯುವನು. ಆಗ ಅದನ್ನು ಅವನು ಸ್ವೀಕರಿಸುವನು  ಜಿನೇಶ್ವರನ ವಾಣಿಯು ನಿಷ್ಫಲವಾಯಿತು  ಗಣಧರರ ಹೊರತಾಗಿ ಅದನ್ನು ಯಾರೂ ಒಪ್ಪಲಿಲ್ಲ  ಆದಿನಾಥನು ಯುಗಲದ ಜೊತೆಯಾಗಿದ್ದಾನೆ ಯಾವುದೋ ಒಂದು ಯುಗಲವು ಮರಣಹೊಂದಲು ಆ ಯುಗಲದ ಹೆಂಡತಿಯು—ಸುನಂದಾ—ವಿಧವೆಯಾಗಿದ್ದಳು ಅವಳ ಕೂಡ ವೃಷಭದೇವನು ಪುನರ್ವಿವಾಹ ಮಾಡಿಕೊಂಡನು.

ಮಹಾವೀರ ಜಿನನು ಮೊದಲು ದೇವಾನಂದಾ ಎಂಬ ಹೆಸರಿನ ಬ್ರಾಹ್ಮಣಸ್ತ್ರೀಯ ಗರ್ಭದಲ್ಲಿ ಅವತರಿಸಿದನು ಅಲ್ಲಿ ಅವನು ಎಂಭತ್ತು ದಿವಸಗಳ ವರೆಗೆ ಇದ್ದನು ಆ ಮೇಲೆ ಇಂದ್ರನು ಇಂಥ ನೀಚ ಕುಲದಲ್ಲಿ ಭಗವಂತನು ಹುಟ್ಟುವುದು ಯೋಗ್ಯವಲ್ಲೆಂದು ವಿಚಾರಮಾಡಿದನು [1] ಅಲ್ಲದೆ ದೇವತೆಗಳಿಗೆ ಆಜ್ಞೆಮಾಡಿದನು. "ನೀವು ಭಗವಂತನನ್ನು ದೇವಾನಂದೆಯ ಗರ್ಭದಿಂದ ತೆಗೆದು ಸಿದ್ಧಾರ್ಥನ ರಾಣಿಯಾದ ತ್ರಿಶಲೆಯ ಗರ್ಭದಲ್ಲಿ ತಂದು ಇಡಿರಿ" ಇಂದ್ರನ ಆಜ್ಞೆಯ ಪ್ರಕಾರ ದೇವತೆಗಳು ಹಾಗೆ ಮಾಡಿದರು ಇತ್ಯಾದಿ ಜೀವವು ತನ್ನ ಶುಭಾಶುಭ ಕರ್ಮಕ್ಕನುಸರಿಸಿ ಉಚ್ಚ-ನೀಚ ಕುಲಗಳಲ್ಲಿ ಜನ್ಮವನ್ನು ತಕ್ಕೊಳ್ಳುವುದು. ಅದನ್ನು ದೇವಾದಿಗಳು ಹೇಗೆ ಬದಲು ಮಾಡಬಲ್ಲರು? ಆದರೆ ಮಿಥ್ಯಾದರ್ಶನದ ಉದಯವಾದ ಮನುಷ್ಯನು ಏನೇನು ವರ್ಣಿಸಿಯಾನೆಂಬುದರ ನಿಯಮವಿಲ್ಲ

ಅವರು ಇನ್ನೂ ಎಂಥ ವಿರೋಧ ಸಂಗತಿಗಳನ್ನು ಬರೆಯುವರೆಂಬುದನ್ನು ನೋಡುವ ತೀರ್ಥಂಕರ ಕೇವಲಿಗಳಿಗೆ ಸಾಮಾನ್ಯ ಕೇವಲಿಗಳು ನಮಸ್ಕಾರ ಮಾಡುತ್ತಾರೆ ಬಾಹುಬಲಿಯು ವೃಷಭದೇವರಿಗೆ ನಮಸ್ಕಾರ ಮಾಡಿದನೆಂದು ಹೇಳುವುದು ತಪ್ಪೆನಿಸುವುದು ಏಳನೆಯ ಗುಣಸ್ಥಾನದಿಂದ ವಂದ್ಯವಂದಕ ಭಾವವಿಲ್ಲ ಎಲ್ಲಿ ಆತ್ಮಸ್ವಭಾವದ ಅನುಭವವಿರುವುದೋ ಅಲ್ಲಿ ಇಂಥ ಭಾವ ಎಲ್ಲಿಂದ ಇದ್ದೀತು? ಯಾವನು ಕೃತಕೃತ್ಯನೋ, ಸರ್ವಜ್ಞನೋ ಅಂಥ ದೇವನಿಗೆ ಅನ್ಯರಿಗೆ ನಮಸ್ಕಾರಮಾಡುವುದರಿಂದ ಪ್ರಯೋಜನವೇನು? 'ವಂದನ ಮಾಡಲಿಕ್ಕೆ ಯೋಗ್ಯನಾದ ಪರಮೇಷ್ಠಿ' ಮತ್ತು 'ವಂದನ ಮಾಡುವ ನಾನು'—ಎಂಬ ಭಾವವು ಆರನೆಯ ಗುಣಸ್ಥಾನದ ವರೆಗೆ ಇರುತ್ತದೆ ಇದಲ್ಲದೆ ಸ್ಕಂಧಕನ ಪ್ರಸಂಗ ಒಂದನ್ನು ಶ್ವೇತಾಂಬರರು ಹೇಳುತ್ತಾರೆ ಸ್ಕಂಧಕನೆಂಬವನು ತ್ರಿಶೂಲ ಧಾರಿಯಾದ ಸಾಧುವು. ಅವನು ಭಗವಾನ್ ಮಹಾವೀರನ ಕಡೆಗೆ ಒಮ್ಮೆ ಬರುತ್ತಿದ್ದನು ಭಗವಂತನು ದೂರವಿರು ವಾಗಲೇ ಅವನನ್ನು ಕಂಡನು ಕೂಡಲೆ ತಮ್ಮ ಹತ್ತರ ಇರುವ ಗಣಧರನಿಗೆ ಹೇಳಿದನು. "ಎದುರಿಗೆ ಆ ಸ್ಕಂದಕನೆಂಬ ಸನ್ಯಾಸಿಯು ಬರುತ್ತಿದ್ದಾನೆ ಅವನು ಬಹಳ ಒಲಿಷ್ಠನಿದ್ದಾನೆ ನಿಮಗೂ ಅವನಿಗೂ ಹೊಂದಿಕೆಯಾದೀತು ನೀವು ಅವನ ಎದುರಿಗೆ ಹೋಗಿ ಅವನನ್ನು ಕರೆದುಕೊಂಡು ಬನ್ನಿರಿ" ಭಗವಂತನ ಈ ಸೂಚನೆಯ ಪ್ರಕಾರ ಗೌತಮ ಗಣಧರನು ಬಹಳ ಭಕ್ತಿಯಿಂದ ಎದ್ದು ಹೋಗಿ ಅವನನ್ನು ಕರೆದುಕೊಂಡು ಬಂದನು. ಅಲ್ಲದೆ ಆದರ ಸತ್ಕಾರವನ್ನೂ ಮಾಡಿದನು. ಅವ್ರತ ಸಮ್ಯಗ್ದೃಷ್ಟಿಯೂ ಕೂಡ ಕುಲಿಂಗೀ ಸಾಧುವಿನ ಸನ್ಮಾನ ಮಾಡುವದಿಲ್ಲ ಅಂದಮೇಲೆ ಮಹಾವ್ರತಿಯಾದ ಗಣಧರನು ಹೇಗೆ ಮಾಡಿಯಾನು?

ಸ್ತ್ರೀಗೆ ಐದನೆಯ ಗುಣಸ್ಥಾನದ ಹೊರತಾಗಿ ಮುಂದಿನ ಗುಣಸ್ಥಾನಗಳು ಆಗುವದಿಲ್ಲ ಮೊದಲಿನ ಮೂರು ಸಂಹನನಗಳು ಇಲ್ಲ ಅಹಮಿಂದ್ರ—ಲೋಕ—ಪ್ರಾಪ್ತಿಯೂ ಇಲ್ಲ ಅವಳು ಏಳನೆಯ ನರಕದಲ್ಲಿ ಹೋಗುವದಿಲ್ಲ ಇಂಥ ಸ್ತ್ರೀಯರಿಗೆ ಮುಕ್ತಿಯಾಗುತ್ತದೆಂದು ಹೇಗೆ ಅನ್ನಲಿಕ್ಕೆ ಬಂದೀತು ಮಲ್ಲಿನಾಥ ತೀರ್ಥಂಕರರನ್ನು ಅವರು ಸ್ತ್ರೀ ಎಂದು ತಿಳಿದಿದ್ದಾರೆ ಇಷ್ಟೇ ಅಲ್ಲದೆ ಅವಳ ಪ್ರತಿಮೆಯನ್ನು ಪುರುಷರೂಪದಲ್ಲಿ ಮಾಡಿ ಅವರು ಪೂಜಿಸುತ್ತಾರೆ ಇದು ಹೇಗೆ?

ಇನ್ನೊಂದು ಸಂಗತಿ ಭೋಗ ಭೂಮಿಜನೊಬ್ಬನು ಹರಿ ಕ್ಷೇತ್ರದಲ್ಲಿದ್ದನು ಅವನ ಶರೀರವು ಎರಡು ಹರದಾರಿ ಎತ್ತರವಿತ್ತು ಅವನನ್ನು, ಅವನ ಪೂರ್ವಜನ್ಮದ ಶತ್ರು ಒಬ್ಬನು ಹರಣಮಾಡಿ ತಂದನು ಅವನ ಎರಡು ಹರದಾರಿ ಇರುವ ಶರೀರವನ್ನು ಚಿಕ್ಕ ಆಕಾರದ್ದನ್ನಾಗಿ ಮಾಡಿದನು ಅಲ್ಲದೆ ಭರತಕ್ಷೇತ್ರದೊಳಗಿನ ಮಧುರೆಯಲ್ಲಿ ರಾಜ್ಯವನ್ನು ಕೊಟ್ಟನು ಅವನಿಗೆ ಮಾಂಸಭಕ್ಷಣ ಮಾಡಲಿಕ್ಕೆ ಹಚ್ಚಿ ನರಕಕ್ಕೆ ಕಳಿಸಿದನು ಇವನಿಂದ ಹರಿವಂಶದ ಉತ್ಪತ್ತಿಯಾಯಿತೆಂದು ಇವರು ಸ್ವೀಕರಿಸುತ್ತಾರೆ ಇಂಥ ಕಲ್ಪನೆಗೆ ಯಾವ ಮರ್ಯಾದೆಯೂ ಉಳಿಯುವುದಿಲ್ಲ ಎರಡು ಹರದಾರಿ ಇರುವ ದೇಹವನ್ನು ಹೇಗೆ ಚಿಕ್ಕದನ್ನಾಗಿ ಮಾಡಿದನು? ಅವನನ್ನು ಮೇಲಿನಿಂದ ಕಡಿದನೋ ಕೆಳಗಿನಿಂದ ಕಡಿದನೋ? ಇದರ ಉತ್ತರವನ್ನು ಅವರಿಗೆ ಕೊಡಲಿಕ್ಕೆ ಬರುವದಿಲ್ಲ ಅದಿರಲಿ, ಭೋಗ ಭೂಮಿಯೊಳಗಿನ ಎಲ್ಲ ಜೀವಗಳೂ ದೇವ ಗತಿಯಲ್ಲಿ ಹುಟ್ಟುತ್ತವೆ ಅಲ್ಲಿಯ ಸ್ತ್ರೀಪುರುಷರ ಉತ್ಪತ್ತಿಯ

---

1 ಶ್ವೇತಾಂಬರರು ಬ್ರಾಹ್ಮಣರು ನೀಚ ಕುಲದವರೆಂದು ಹೇಳಿದ್ದಾರೆ ಹೇಮಚಂದ್ರಕೃತ 'ತ್ರಿಷಷ್ಟಿ ಶಲಾಕಾ-ಪುರುಷ ಚರಿತ್ರ' ಸರ್ಗ ೧೦

ಪ್ರಮಾಣವು ನಿಶ್ಚಯವಾದದ್ದು ಇರುತ್ತದೆ. ತಂದೆ ತಾಯಂದಿರ ಮರಣವಾಗುವ ಪೂರ್ವದಲ್ಲಿ ಅವರ ಉತ್ಪತ್ತಿಯು ಆಗುತ್ತಿರುತ್ತದೆ—ಎಂದು ಅವರು ಸ್ವೀಕರಿಸಿದ್ದಾರೆ. ಆದರೆ ಈ ಪ್ರಕಾರ ಅನಂತಕಾಲವು ಹೋದ ತರುವಾಯ ಒಂದೊಂದೇ ಜೀವಗಳು ಕಡಿಮೆಯಾಗುತ್ತ ಹೋಗುವವೆಂದು ಅವರು ಅನ್ನುವರು ಇದರಿಂದ ಭೋಗ ಭೂಮಿಯು ಬರಿದಾದೀತು. ಇದರ ಮಾರ್ಗವೇನು? ಹೀಗಾಗುವುದು ಅಶಕ್ಯ ಆದರೆ ಮಿಥ್ಯಾದೃಷ್ಟಿ ಪುರುಷರ ಬುದ್ಧಿಗೆ ಕೊನೆಯೆಂಬುದಿಲ್ಲ ಅವರು ಹೇಗೆ ಬೇಕಾದ ಹಾಗೆ ಮಾತಾಡಬಹುದು, ಬರೆದಿಡಲೂಬಹುದು.

ಆರು ದ್ರವ್ಯಗಳ ವರ್ಣನ ಮಾಡುವುದು ಆದರೆ ಅದರಲ್ಲಿ ಕಾಲವೆಂಬ ದ್ರವ್ಯವೇ ಇಲ್ಲ ಯಾವಾಗಲೂ ಬದಲಾಗುತ್ತಿರುವ ಸಮಯ, ಘಳಿಗೆಗಳಿಗೇ ಕಾಲವೆಂದು ಹೇಳಿದ್ದಾರೆ

ಸಾಧುವಿನ ನಿಂದೆ ಮಾಡುವವನನ್ನು ಹೊಡೆಯುವದರಲ್ಲಿ ಪಾಪವಿಲ್ಲ ದೇವ, ಗುರು, ಧರ್ಮಗಳ ದ್ರೋಹ ಮಾಡುವವನು ಚಕ್ರವರ್ತಿಯು ಇದ್ದರೂ ಕೂಡ ಅವನ ಸೈನ್ಯದ ನಾಶವನ್ನು ಸಾಧುಗಳು ಮಾಡಬೇಕು ಇದರಲ್ಲಿ ಅವರಿಗೆ ಪಾಪವಿಲ್ಲ. ತಮ್ಮಲ್ಲಿ ಬುದ್ಧಿಯೇ ಮೊದಲಾದ ಸಾಮರ್ಥ್ಯಗಳಿರುವಾಗ ಅಂಥವರನ್ನೂ ಹೊಡೆಯದೆ ಬಿಟ್ಟರೆ ಅಂಥ ಸನ್ಯಾಸಿಗೆ ಅನಂತ ಸಂಸಾರಿಯೆಂದೆನ್ನಬೇಕು—ಹೀಗೆ ಅವರ ಪ್ರತಿಪಾದನವಿದೆ. ಇಂಥ ಪಾಪಿಯಾದ ಸಾಧುವಿಗೆ ಸಾಮ್ಯಭಾವವಾದರೂ ಎಲ್ಲಿಯದು? ವೀತರಾಗತ್ವವಾದರೂ ಎಲ್ಲಿಯದು?

ಹೀಗೆ ಅಸಂಬದ್ಧವಾಗಿ ಬರೆದು, ದೊಡ್ಡ ದೊಡ್ಡ ಶೀಲವಂತರಿಗೂ ದೋಷವನ್ನು ಆರೋಪಿಸಿ, ತಾವು ಮಾತ್ರ ನಿರ್ದೋಷಿಗಳಾಗಿದ್ದಾರೆ. ಇದನ್ನೆಲ್ಲ ಪ್ರತಿಪಾದನ ಮಾಡಿದ್ದಾರೆ. ಭರತ ಚಕ್ರವರ್ತಿಯು ತನ್ನ ತಂಗಿಯಾದ ಬ್ರಾಹ್ಮಿಯೊಡನೆ ಲಗ್ನಮಾಡಿಕೊಂಡನು ದ್ರೌಪದಿಗೆ ಐವರು ಪತಿಯಂದಿರಿದ್ದರು. ಆದರೂ ಅವಳು ಸಾಧ್ವಿಯಾಗಿದ್ದಳು ಐವರು ಗಂಡಂದಿರಿದ್ದರೂ ಅವಳು ಸಾಧ್ವಿಯಾದುದು ಹೇಗೆ? ಹೀಗೆ ಕೇಳಿದವರಿಗೆ ಅವರು ಪ್ರತ್ಯುತ್ತರಕೊಡುವುದು ಹೀಗೆ ಇದೆ —ಒಬ್ಬ ರಾಜನು ನೂರಾರು ಸ್ತ್ರೀಯರನ್ನು ಲಗ್ನವಾದರೆ ಅವನು ಶೀಲವಾನ್ ನಲ್ಲವೆ? ಪುರುಷನು ಹಲವು ಜನ ನಿಯಮಿತ ಸ್ತ್ರೀಯರ ಸಂಬಂಧವನ್ನು ಇಟ್ಟರೆ–ಹಾಗೆ ನಿಯಮಮಾಡಿಕೊಂಡಿದ್ದರೆ–ಅವನ ಶೀಲವು ನಷ್ಟವಾಗುವದಿಲ್ಲ ಅದೇ ಪ್ರಕಾರ ಸ್ತ್ರೀಯೂ ಕೂಡ ಕೆಲವು ನಿಯಮಿತ ಪುರುಷರ ಸಂಗದಲ್ಲಿರುವ ನಿಯಮಮಾಡಿದರೆ ಅವಳ ಶೀಲವ್ರತವೂ ನಷ್ಟವಾದಂತೆ ಆಗುವುದಿಲ್ಲ

ದೇವ ಮತ್ತು ಮಾನವರಲ್ಲಿ ಕಾಮ ಸೇವನೆಯು ಆಗುವುದು ಸಾಧ್ಯವಿದೆಯೆಂದೂ ಇವರು ಹೇಳುವರು. ಆದರೆ ವೈಕ್ರಿಯಿಕ ದೇಹ ಧಾರಣಮಾಡುವ ದೇವರಲ್ಲಿಯೂ ಸಪ್ತ ಧಾತುವಿನಿಂದ ಕೂಡಿದ ಮಾನವನ ಈ ಮಲಿನ ದೇಹಕ್ಕೂ ಸಂಯೋಗವಾಗುವದಿಲ್ಲ ಇದನ್ನು ಯಾರು ವಿಚಾರಿಸುವರು? ಒಬ್ಬ ಸಾಧುವು ಆಹಾರವನ್ನು ತಕ್ಕೊಂಡ ಮೇಲೆ ಉಳಿದ ಅನ್ನವನ್ನು ಉಪೋಷಣಮಾಡಿದ ಇನ್ನೊಬ್ಬ ಸಾಧುವು ತನ್ನ ಗುರುವಿನ ಅನುಮತಿಯ ಪ್ರಕಾರ ಸ್ವೀಕರಿಸಿದರೆ ವ್ರತಭಂಗದ ದೋಷವು ಬರಲಾರದು. ಉಪವಾಸದಲ್ಲಿ ಔಷಧವನ್ನು ತಿನ್ನುವುದರಿಂದ ಉಪವಾಸ ಭಂಗವಾಗುವುದಿಲ್ಲ ಸಮವಸರಣದಲ್ಲಿ ಜಿನೇಶ್ವರರು ನಗ್ನರೂಪದಲ್ಲಿಯೇ ಕುಳಿತಿರುತ್ತಾರೆ, ಆದರೆ ಅವರು ವಸ್ತ್ರವನ್ನು ಧರಿಸಿದವರಂತೆ ಕಾಣುತ್ತಾರೆ ಸಾಧುಗಳೂ ಯತಿಗಳೂ ಕಟ್ಟಿಗೆ, ಪಾತ್ರ, ವಸ್ತ್ರ ಮೊದಲಾದ ಹದಿನಾಲ್ಕು ಉಪಕರಣಗಳನ್ನು ಇಟ್ಟುಕೊಳ್ಳುವುದು ಧರ್ಮವಾಗಿದೆ. ಚಾಂಡಾಲರಿಗೂ ಮುಕ್ತಿಯಾಗುತ್ತದೆ ಮಹಾವೀರರ ಸಮವಸರಣದಲ್ಲಿ ಸೂರ್ಯಚಂದ್ರರು ತಮ್ಮ ತಮ್ಮ ವಿಮಾನಗಳೊಡನೆ ಬಂದಿದ್ದರು (ಇದು ಶಾಶ್ವತ ಗತಿಯ ಮರ್ಯಾದೆಯ ಭಂಗವಿದೆ) ಸಾಧುವಿನ ಮನಸ್ಸು ಕಾಮವೇದನೆಯಿಂದ ಚಂಚಲವಾದರೆ ತಮ್ಮ ಸ್ತ್ರೀಯರನ್ನು ಕೊಟ್ಟು ಆ ವೇದನೆಯನ್ನು ಶಾಂತಗೊಳಿಸಬೇಕು ಗಂಗಾದೇವಿಯೊಡನೆ ಭರತ ಚಕ್ರವರ್ತಿಯು ೫೫ ಸಾವಿರ ವರ್ಷಗಳ ವರೆಗೆ ಕಾಮಸೇವನೆಯನ್ನು ಮಾಡಿದನು. ಭೋಗ ಭೂಮಿಯೊಳಗಿನ ಯುಗಲಗಳೂ ಮಲ–ಮೂತ್ರಧಾರಿಗಳಾಗಿದ್ದಾರೆ ಅವರ ಮರಣವಾದಾಗ ಅವರ ಮೂರು ಹರದಾರಿ ಪ್ರಮಾಣದ ಶರೀರವನ್ನು ದೇವತೆಗಳು ಎತ್ತಿ ಒಯ್ಯುತ್ತಾರೆ. ಭೇರುಂಡ ಎಂಬ ಪಕ್ಷಿಗೆ ಅದನ್ನು ತಿನ್ನಿಸುತ್ತಾರೆ ಯಾದವರೇ ಮೊದಲಾದ ಕ್ಷತ್ರಿಯರು ಮಾಂಸವನ್ನು ತಿನ್ನುತ್ತಿದ್ದರು. ಗೌತಮಗಣಧರನು ಆನಂದನೆಂಬ ಶ್ರಾವಕನ ಮನೆಯಲ್ಲಿ ಕುಶಲವೃತ್ತವನ್ನು ಕೇಳಿಕೊಳ್ಳಲಿಕ್ಕೆ ಹೋದಾಗ ಸುಳ್ಳು ಮಾತಾಡಿದನು ಮಹಾವೀರ ತೀರ್ಥಂಕರರು ಜನಿಸುವಾಗಲೇ ಮೇರು ಪರ್ವತವನ್ನು ನಡುಗಿಸಿದರು ತೊಗಲಿನ ಚೀಲದಲ್ಲಿಟ್ಟ ನೀರು ಹಾಗೂ ತುಪ್ಪಗಳು ಪವಿತ್ರವಾಗಿರುತ್ತವೆ ಈ ಪ್ರಕಾರ ಸಾವಿರಾರು ಅನರ್ಥಕಾರಕ ಮತ್ತು ವಿಪರೀತ ವಿಷಯಗಳನ್ನು ಪ್ರತಿಪಾದಿಸಲಾಗಿದೆ ಇವುಗಳಿಗಾಗಿ ಕಲ್ಪಿತ ಸೂತ್ರಗಳನ್ನು ರಚಿಸಲಾಗಿದೆ ಅವುಗಳ ವರ್ಣನೆ ಇಲ್ಲಿ

ಅನಾದಿ ಕಾಲದಿಂದಲೂ ಇದ್ದಾನೆ ಅವನ ಅಂತವು ಎಂದೂ ಆಗಲಾರದು. ಅದರಿಂದ ಅವನೇ ಅನಾದಿಮಧ್ಯಾಂತ-ನಾಗಿದ್ದಾನೆ 'ಜೀವಕ್ಕೆ ಜನ್ಮ ಮರಣದ ಚಕ್ರವು ಎಂದೂ ತಪ್ಪಲಾರದು. ಜೀವವು ಕೆಲವು ಕಾಲ ಮುಕ್ತನಾದರೂ ತಿರುಗಿ ಸಂಸಾರದಲ್ಲಿ ಬರತಕ್ಕದ್ದೇ ಅದರ ಹೊರತಾಗಿ ಗತಿಯಿಲ್ಲ ಜೀವ ಬೇರೆ, ಜ್ಞಾನಾದಿ ಗುಣಗಳು ಬೇರೆ. ಆ ಗುಣಗಳು ಜೀವನಿಗೆ ಹಿಂದಿನಿಂದ ಪ್ರಾಪ್ತವಾಗುತ್ತವೆ'—ಇದನ್ನು ಇಂಥ ಅನೇಕ ಸಿದ್ಧಾಂತಗಳನ್ನು ಒಪ್ಪುವವರಿಗೆ ಅನಾದಿ ಮಧ್ಯಾಂತದ ಕಲ್ಪನೆಯಾದರೂ ಹೇಗೆ ಬಂದೀತು? ಅವನು ಪ್ರಾಪ್ತನಾಗುವದಾದರೂ ಹೇಗೆ?

ಸಾರ್ವ—ಯಾರ ವಚನ ಹಾಗೂ ಶರೀರಗಳ ಉಪಯೋಗವು ಲೋಕದಲ್ಲಿಯ ಎಲ್ಲ ಜೀವಿಗಳ ಸಲುವಾಗಿ ಇದೆಯೋ ಅವನಿಗೇ ಸಾರ್ವನೆಂದು ಹೇಳಲಾಗುವುದು ಕಾಮ, ಕ್ರೋಧ, ಯುದ್ಧ ಮೊದಲಾದ ಹಿಂಸಾ ಪ್ರಧಾನ ಪಾಪಕರ್ಮಗಳನ್ನು ಮಾಡಿ, ತನ್ನ ಹಾಗೂ ಅನ್ಯರ ಅಹಿತಕ್ಕಾಗಿ ಪ್ರವೃತ್ತರಾಗುವರೋ. ಅನ್ಯರನ್ನೂ ಪ್ರವೃತ್ತಿಸುವರೋ ಅಂಥವರಿಗೆ ಸಾರ್ವರೆಂದು ಹೆಸರನ್ನು ಕೊಡಲಿಕ್ಕೆ ಬರುವದಿಲ್ಲ

ಈ ಪ್ರಕಾರ ಎಂಟು ವಿಶೇಷಣಗಳಿಂದ ಯುಕ್ತನಾದ ಶಾಸಕನೇ ಆಪ್ತನು ಅವನ ಅಸಾಧಾರಣ ಲಕ್ಷಣ ಹೇಳಿದೆ. ಶಾಸ್ತಾ ಶಬ್ದದ ಉತ್ಪತ್ತಿಯೂ ಹೀಗಿದೆ 'ಶಾಸ್ತೀತಿ ಶಾಸ್ತಾ' ಅಂದರೆ ಆಸನ್ನ ಭವ್ಯನೂ ಮುಮುಕ್ಷುವೂ ಆದ ಶಿಷ್ಯನಿಗೆ ಅವನ ಹಿತವಾಗುವಂಥ ಉಪದೇಶವನ್ನು (ಶಾಸ್ತ್ರ) ಮಾಡುವಂಥವನು ಶಾಸ್ತಾ ಎನಿಸುವನು.

ಇವನು ತನ್ನ ಉಪದೇಶದಿಂದ ಅನೇಕ ಜೀವಿಗಳಿಗೆ ಸ್ವರ್ಗ, ಮುಕ್ತಿ ಮೊದಲಾದುವುಗಳನ್ನು ಹೊಂದುವಂತೆ ಮಾಡುತ್ತಾನೆ ಅದರಿಂದ ಪ್ರಸಿದ್ಧಿ, ಸನ್ಮಾನ ಮೊದಲಾದುವುಗಳನ್ನು ಅವನು ಇಚ್ಛಿಸುವುದಿಲ್ಲ

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯಕಿರಣಸುಜ್ಞಾನಪ್ರಕಾಶ ।
ಸುರರ ಮಕುಟಮಣಿರಂಜಿತಚರಣಾಬ್ಜ ಶರಣಾಗು ಪ್ರಥಮ ಜಿನೇಶ ॥
ಸಿದ್ಧರ ಸತತವಿಶುದ್ಧರ ಬೋಧಸಮೃದ್ಧರ ನೆನೆದು ನಾನೀಗ ।
ಸಿದ್ಧರಸದೊಳು ಲೋಹವನದ್ದಿದಂತಾತ್ಮ ಸಿದ್ಧಿಯ ಪಡೆವೆನಿನ್ನೇನು ॥

—ರತ್ನಾಕರ–ಭರತೇಶವೈಭವ ೧ ೧,೨

ಸರ್ವಜ್ಞನ ಉಪದೇಶವು ನಿಃಸ್ವಾರ್ಥವಾಗಿರುತ್ತದೆಂಬುದಕ್ಕೆ ಇನ್ನು ಸೂತ್ರ ಹೇಳುತ್ತಾರೆ—

ಅನಾತ್ಮಾರ್ಥಂ ವಿನಾ ರಾಗೈಃ ಶಾಸ್ತಾ ಶಾಸ್ತಿ ಸತೋ ಹಿತಮ್ ।
ಧ್ವನನ್ ಶಿಲ್ಪಿಕರಸ್ಪರ್ಶಾನ್ಮುರಜಃ ಕಿಮಪೇಕ್ಷತೇ ॥ ೮ ॥[1]

ಅನ್ವಯಾರ್ಥ—(ಶಾಸ್ತಾ) ಹಿತೋಪದೇಶಕನು (ಅನಾತ್ಮಾರ್ಥಂ) ನಿಃಸ್ವಾರ್ಥ ಬುದ್ಧಿಯಿಂದ (ವಿನಾ ರಾಗೈಃ) ರಾಗಾದಿ ಭಾವಗಳಿಲ್ಲದೆ (ಸತಃ) ಭವ್ಯಜೀವಗಳಿಗೆ (ಹಿತಂ) ಕಲ್ಯಾಣದ ಮಾರ್ಗವನ್ನು (ಶಾಸ್ತಿ) ಉಪದೇಶಿಸುತ್ತಾನೆ (ಶಿಲ್ಪಿಕರಸ್ಪರ್ಶಾತ್) ಕಲಾವಿದನ–ವಾದ್ಯಗಾರನ–ಕರಸ್ಪರ್ಶದಿಂದ (ಧ್ವನನ್) ಧ್ವನಿಗೈಯುವ (ಮುರಜಃ) ಮೃದಂಗವು (ಕಿಂ ಅಪೇಕ್ಷತೇ?) ಏನನ್ನು ಅಪೇಕ್ಷಿಸುವುದು?

ಅರ್ಥ—ಶಾಸ್ತಾ ಎಂದರೆ ಧರ್ಮೋಪದೇಶಮಾಡುವ ಅರಿಹಂತ ಭಗವಾನನು ಅವನು ತನ್ನ ಖ್ಯಾತಿ ಲಾಭ, ಪೂಜೆ ಮೊದಲಾದ ಪ್ರಯೋಜನಗಳ ಅಪೇಕ್ಷೆಯನ್ನು ಇಟ್ಟುಕೊಂಡು, ಉಪದೇಶ ಮಾಡುವದಿಲ್ಲ ಶಿಷ್ಯರ ಮೇಲೆ ಪ್ರೇಮ(ರಾಗಭಾವ)ವನ್ನೂ ಕೂಡ ಅವನು ಇಡುವದಿಲ್ಲ ಸತ್ಪುರುಷರಿಗೆ ಕಲ್ಯಾಣ ಮಾಡುವಂಥ ಉಪದೇಶ ಮಾಡುತ್ತಾನೆ ಬಾರಿಸುವವನ ಹಸ್ತಸ್ಪರ್ಶದಿಂದ ನಾನಾವಿಧ ರಾಗವನ್ನು ಮಾಡುವ ಮೃದಂಗವು ಯಾರ ಅಪೇಕ್ಷೆಯನ್ನೂ ಕೂಡ ಮಾಡುವದಿಲ್ಲವಷ್ಟೆ?

---

[1] ಆಯತವರ್ಮನು ಹೇಳುವದು ಹೀಗೆ . . ಕರಸ್ಪರ್ಶನದತ್ತಣಿಂದ ಮುಳಿಯುತ್ತಿರ್ದ್ದ ಪಳಹಮೆಂತು ನಿರಪೇಕ್ಷೆಯಿಂ ಧ್ವನಿಯನಿತ್ತಪುದಂತೆ ನಿರಪೇಕ್ಷೆಯಿಂ ರಾಗದ್ವೇಷವಿಲ್ಲದೆಯಾಗಮಮನಾಪ್ತ ಭವ್ಯರ್ಗೆಯುಮಂ ಸಲಿಸಲಾರದೆ ವಿಷಯ ಬಾದಾದಿಕತ್ವದಿಂದಾರಾನು ಮುಟ್ಟುಕಟ್ಟಿಕೊಂಡು ತಮ್ಮ ನೆಗಳ್ತೆಗನುಸಾರಿಯಾಗಿ ಮಾಡಿಕೊಂಡ ಕಾಳ್ಗಬ್ಬಂಗಳೆ

[ಮೃದಂಗಕ್ಕೆ ವಾದನಕಾರನ ಕೈಯು ತಗಲುವುದರಿಂದ ಧ್ವನಿಯು ಹುಟ್ಟುತ್ತದೆ ಅದರಲ್ಲಿ ಮೃದಂಗದ ಅಪೇಕ್ಷೆಯಾಗಲಿ, ಹಿತವಾಗಲಿ, ರಾಗಾದಿ ಭಾವಗಳಾಗಲಿ ಇರುವದಿಲ್ಲ ಸ್ವಭಾವಕ್ಕನುಸರಿಸಿ, ಪರೋಪಕಾರಕ್ಕಾಗಿ ವಾದ್ಯದ ಧ್ವನಿಯು ಹುಟ್ಟುತ್ತದೆ ಇದರಂತೆಯೇ ವೀತರಾಗನಾದ ಆಪ್ತನ ಹಿತೋಪದೇಶವೂ ಸಹ—ಆಗಮ ಪ್ರಣಯನವು—ನಡೆಯುತ್ತದೆ ಅದು 'ತೀರ್ಥಂಕರಪ್ರಕೃತಿ' ನಾಮಕರ್ಮದ ಉದಯರೂಪದ ನಿಮಿತ್ತವನ್ನು ಹೊಂದಿಯೂ ಭವ್ಯಜೀವಗಳ ಪುಣ್ಯೋದಯ ಹಾಗೂ ಪ್ರಶ್ನಾನುರೋಧಕ್ಕೆ ವಶವಾಗಿಯೂ ಪ್ರವೃತ್ತಿಸುತ್ತದೆ. ಸ ಧ]

ವಿಶೇಷಾರ್ಥ—ಸಂಸಾರದಲ್ಲಿ ನಡೆಯುವ ಕಾರ್ಯಗಳ ಮೂಲವೆಲ್ಲ ಕರ್ತೃವಿನ ಅನೇಕ ಅಪೇಕ್ಷೆಗಳನ್ನು ಅವಲಂಬಿಸಿದೆ. ಕೆಲವರು ತಮ್ಮ ಸ್ವಾಭಿಮಾನದ ಹೆಚ್ಚಳಕ್ಕಾಗಿ, ಇನ್ನು ಕೆಲವರು ತಮ್ಮ ಹೊಗಳಿಕೆಯಾಗಲೆಂದು, ಮತ್ತೆ ಹಲವರು ತಮಗೆ ಅಪೂರ್ವ ಲಾಭ ಲಭಿಸಲೆಂದು ಇವೇ ಮೊದಲಾದ ಹೇತುಗಳನ್ನು ಇಟ್ಟುಕೊಂಡೇ ಕಾರ್ಯಗಳನ್ನು ಮಾಡುತ್ತಾರೆ ಆದರೆ ಭಗವಾನ್ ಅರಿಹಂತನು ಮಾತ್ರ ತನಗೆ ಯಾವ ಪ್ರಯೋಜನವಿಲ್ಲದಿದ್ದರೂ ಕೇವಲ ಜಗತ್ತಿನೊಳಗಿನ ಎಲ್ಲ ಜೀವಿಗಳ ಕಲ್ಯಾಣವಾಗಬೇಕೆಂದು ಉಪದೇಶಿಸುತ್ತಿರುತ್ತಾನೆ. ಮೋಡವು ಲೋಕದ ಕಡೆಯಿಂದ ಯಾವ ಪ್ರಯೋಜನವನ್ನೂ ಪಡೆಯುವ ಅಪೇಕ್ಷೆಯಿಲ್ಲದೆ ಮಳೆಯನ್ನು ಸುರಿಸುತ್ತದೆ ಅದೇ ಪ್ರಕಾರ ಭಗವಂತನಾದ ಆಪ್ತನೂ ಲೋಕದ ಪುಣ್ಯದ ನಿಮಿತ್ತದಿಂದಾಗಿ ಪುಣ್ಯಪ್ರದೇಶದಲ್ಲಿ ವಿಹಾರಮಾಡುತ್ತ ಧರ್ಮರೂಪ ಅಮೃತವನ್ನು ಉಪದೇಶರೂಪದಿಂದ ಸುರಿಸುತ್ತ ಇರುವನು ಇದು ಯೋಗ್ಯವೇ ಆಗಿದೆ. ಯಾಕೆಂದರೆ ಸತ್ಪುರುಷರ ಆಚರಣೆಯು ಪರೋಪಕಾರಕ್ಕಾಗಿಯೇ ಇರುತ್ತದೆಂಬ ನಿಯಮವಿದೆ. ಕಲ್ಪವೃಕ್ಷ, ಧಾನ್ಯ, ಮಾವಿನ ಗಿಡಗಳು ಲೋಕೋಪಕಾರಕ್ಕಾಗಿಯೇ ಫಲಗಳನ್ನು ಬಿಡುತ್ತವೆ, ಪರ್ವತಗಳು ಅನೇಕ ಪ್ರಕಾರದ ಬೆಲೆಯುಳ್ಳ ರತ್ನಗಳನ್ನು ವೃಕ್ಷ ಮತ್ತು ನೀರುಗಳನ್ನು ತಮ್ಮ ಇಚ್ಛೆ ಇಲ್ಲದಿದ್ದರೂ ಸಹ ಜಗತ್ತಿನ ಮೇಲಿನ ಉಪಕಾರಕ್ಕಾಗಿ ಧರಿಸಿರುತ್ತವೆ, ಸಮುದ್ರವು ರತ್ನಗಳನ್ನೂ, ಆಕಳು ಹಾಲನ್ನೂ, ಇದೇ ಉದ್ದೇಶದಿಂದ ತಮ್ಮ ಹೊಟ್ಟೆಯಲ್ಲಿ ಇಟ್ಟುಕೊಂಡಿರುತ್ತವೆ, ದಾನಶೂರನು ಪರೋಪಕಾರಕ್ಕಾಗಿಯೇ ಧನವನ್ನು ಸಂಗ್ರಹಿಸಿರುವನು, ಇದೇ ಪ್ರಕಾರ ಸತ್ಪುರುಷರು ಪರೋಪಕಾರಕ್ಕಾಗಿಯೇ ತಮ್ಮ ವಾಣಿಯನ್ನು ವ್ಯಯಮಾಡುತ್ತಾರೆ ಲೋಕದಲ್ಲಿ ಉಪಕಾರಮಾಡುವ ವಸ್ತುಗಳು ಎಷ್ಟಿವೆಯೋ ಅವೆಲ್ಲ ಇಚ್ಛೆಯನ್ನೂ ಮಾಡದೆಯೂ ಜನತೆಗೆ ತಮ್ಮ ತಮ್ಮ ಪುಣ್ಯ ಪ್ರಭಾವದಿಂದ ಪ್ರಕಟವಾಗುತ್ತವೆ. ಅದರಂತೆ ಭಗವಾನ್ ಆಪ್ತನೂ ಕೂಡ ಇಚ್ಛೆಯಿಲ್ಲದೆಯೇ ಲೋಕದ ಮೇಲೆ ಶ್ರೇಷ್ಠತರವಾದ ಉಪಕಾರವನ್ನು ಮಾಡುವ ನಿಮಿತ್ತದಿಂದ ಧರ್ಮರೂಪವಾದ ಹಿತೋಪದೇಶವನ್ನು ಮಾಡುತ್ತಾನೆ

ಶ್ರುತಮಂ ನೋಳ್ಪ ತದರ್ಥಮಂ ತಿಳಿವ ತನ್ಮರ್ಯಾದೆಯೋಳ್ಪೋಪ ಸು-
ವ್ರತಮಂ ಪಾಲಿಪ ಕಾಮಮಂ ತುಳಿವ ಮಾಯಾಜಾಡ್ಯಮಂ ಝೂಡಿಪು- ।
ನ್ನತಕಾರುಣ್ಯದೊಳಾಳ್ವ ಜೀವಹಿತಮಂ ಪೇಳ್ವಾತನೇ ಮದ್ಗುರು-
ಶ್ರುತಯೋಗೀಶ್ವರನೆಂದು ನಾಳಿನ ಶಿವಂ ರತ್ನಾಕರಾಧೀಶ್ವರಾ ॥ —ರತ್ನಾಕರ-ರತ್ನಾಕರಶತಕ ೧೦೭

ಇನ್ನು ಮುಂದೆ ಆಗಮದ ಸ್ವರೂಪವನ್ನು ಹೇಳುತ್ತಾರೆ—

ಆಪ್ತೋಪಜ್ಞಮನುಲ್ಲಂಘ್ಯಮದೃಷ್ಟೇಷ್ಟವಿರೋಧಕಮ್ ।
ತತ್ತ್ವೋಪದೇಶಕೃತ್ ಸಾರ್ವಂ ಶಾಸ್ತ್ರಂ ಕಾಪಥಘಟ್ಟನಮ್ ॥ ೯ ॥ 1

ಅನ್ವಯಾರ್ಥ—(ಆಪ್ತೋಪಜ್ಞಂ) ಸರ್ವಜ್ಞನು ಹೇಳಿದ್ದು (ಅನುಲ್ಲಂಘ್ಯಂ) ವಾದಿ ಜನಗಳಿಂದ ಖಂಡಿಸಲಿಕ್ಕೆ ಆಗದ್ದು (ಅದೃಷ್ಟೇಷ್ಟವಿರೋಧಕಮ್) ಪ್ರತ್ಯಕ್ಷ ಪ್ರಮಾಣಗಳಿಂದ ಬಾಧೆಯು ಬಾರದಂಥದು (ತತ್ತ್ವೋಪದೇಶಕೃತ್) ತತ್ತ್ವಗಳ ಉಪದೇಶವುಳ್ಳುದು (ಸಾರ್ವಂ) ಎಲ್ಲರ ಹಿತಮಾಡುವಂಥದು (ಕಾಪಥಘಟ್ಟನಂ) ಕುಮಾರ್ಗವನ್ನು ನಾಶಮಾಡುವಂಥದು (ಶಾಸ್ತ್ರಂ) ಶಾಸ್ತ್ರವು (ಸ್ಯಾತ್) ಎನಿಸುತ್ತದೆ

---

1 ಆಯತವರ್ಮನು ಹೇಳುವದು ಹೀಗೆ ಇನ್ನಾಗಮಲಕ್ಷಣಮೆಂತೆನೆ—ಅವಿರುದ್ಧದಮಾಪ್ತವಚನಂ ಪ್ರವಿಮಲಮನುಲ್ಲಂಘ್ಯೆ [೦] . ಅಂತು ಪೂರ್ವಾಪರವಿರುದ್ಧವಿಲ್ಲದುದುಂ ತ್ರೈಲೋಕ್ಯಹಿತಮುಮಹಿಂಸಾಲಕ್ಷಣಮುಂ, ಸತ್ಯಾಧಿಷ್ಠಿತಮುಂ, ದಯಾಮೂಲಮುಂ, ಅಲಂಘ್ಯಮುಂ

ಅರ್ಥ— ವೀತರಾಗಿಯಾದ ಸರ್ವಜ್ಞದೇವನು ಉಪದೇಶಿಸಿದ್ದು ಶಾಸ್ತ್ರವೆನಿಸುತ್ತದೆ. ಇದರ ಲಕ್ಷಣಗಳು ಹೀಗಿರುತ್ತವೆ —ಇದು ಯಾವ ವಾದಿ ಪ್ರತಿವಾದಿಗಳಿಂದಲೂ ಉಲ್ಲಂಘಿಸಲು ಬರುವದಿಲ್ಲ ಪ್ರತ್ಯಕ್ಷ ಅನುಮಾನಾದಿ-ಗಳಿಂದ ಇದರಲ್ಲಿ ದೋಷಗಳು ಉತ್ಪನ್ನವಾಗುವದಿಲ್ಲ ತತ್ತ್ವವೆಂದರೆ ವಸ್ತುವು; ಈ ವಸ್ತುವನ್ನು ಹೇಗಿದೆಯೋ ಹಾಗೆ ಈ ಶಾಸ್ತ್ರವು ವರ್ಣಿಸುತ್ತದೆ ಇದನ್ನು ಕೇಳುವುದರಿಂದ ಎಲ್ಲ ಜೀವಗಳಿಗೆ ಹಿತವಾಗುತ್ತದೆ ಇದು ಮಿಥ್ಯಾಮಾರ್ಗವನ್ನು ನಿರಾಕರಿಸುತ್ತಿದೆ

ವಿಶೇಷಾರ್ಥ—ಶಾಸ್ತ್ರಚಿಕಿತ್ಸೆ. ಶಾಸ್ತ್ರದ ಲಕ್ಷಣವನ್ನು ಮೇಲೆ ಹೇಳಿದೆ ಆ ಪ್ರಕಾರ ವರ್ಣನೆಯು ಯಾವುದರಲ್ಲಿದೆಯೋ ಅದು ಶಾಸ್ತ್ರವೆನ್ನಲು ಅಡ್ಡಿಯಿಲ್ಲ. ಸದ್ಯಕ್ಕೆ ಕಾಲದೋಷದಿಂದ ಮಿಥ್ಯಾಮಾರ್ಗವನ್ನು ಬೋಧಿಸುವ ಹಲವು ಜೀವಗಳು ಉತ್ಪನ್ನವಾಗಿವೆ ಪ್ರತಿಯೊಬ್ಬರು ತಮ್ಮ ತಮ್ಮ ಮತಗಳನ್ನು ಪ್ರಸ್ಥಾಪಿಸಲಿಕ್ಕೂ ತಮ್ಮ ವಿಷಯಕಷಾಯ-ಪುಷ್ಟಗೊಳಿಸಲಿಕ್ಕೂ ಅನೇಕ ಪ್ರಕಾರದ ಸುಳ್ಳು ಶಾಸ್ತ್ರಗಳನ್ನು ರಚಿಸಿ, ಸತ್ಯಧರ್ಮದಿಂದ ಜನರನ್ನು ಪರಾಙ್ಮುಖಗೊಳಿಸಿದ್ದಾರೆ ಎಲ್ಲರೂ ತಮ್ಮ ಧರ್ಮಶಾಸ್ತ್ರಗಳು ತಮ್ಮ ಪರಂಪರೆಗೆ ಅನುಸರಿಸಿ ಇವೆಯೆಂದು ಪ್ರಾಚೀನವಾಗಿವೆಯೆಂದು ವರ್ಣಿಸಿದ್ದಾರೆ. ಶಾಸ್ತ್ರವನ್ನುಳಿದು ಇಂದು ಯಾವ ಧರ್ಮವೂ ಪ್ರಚಲಿತವಾಗಿಲ್ಲ ಬ್ರಾಹ್ಮಣರಂತೂ ವೇದ, ಸ್ಮೃತಿ, ಪುರಾಣಗಳಲ್ಲಿ ಹಿಂಸೆಗೆ ಪ್ರಾಧಾನ್ಯತೆಯನ್ನು ಕೊಡುತ್ತಾರೆ, ಮತ್ತು ಅಶ್ವಮೇಧ, ನರಮೇಧಗಳಂಥ ಯಜ್ಞಮಾಡುವುದರಲ್ಲಿಯೂ ಜಲಚರ, ಸ್ಥಲಚರ ಪ್ರಾಣಿಗಳ ಹಿಂಸೆ ಮಾಡುವುದರಲ್ಲಿಯೂ ಧರ್ಮವಿದೆಯೆಂದು ಪ್ರತಿಪಾದಿಸಿದ್ದಾರೆ ಭವಾನಿ, ಭೈರವ, ಮರಗವ್ವ ಮೊದಲಾದ ದೇವ-ದೇವತೆಗಳು ಕುರಿ ಆಡುಗಳ ವಧೆಯಿಂದ ತೃಪ್ತಿಯನ್ನು ಹೊಂದುತ್ತವೆ ದೇವತೆಗಳಿಗೂ ವ್ಯಂತರಾದಿ ಪಿತೃಗಳಿಗೂ ಮಾಂಸದ ಪಿಂಡವನ್ನು ಅರ್ಪಿಸುವುದರಿಂದ ಧರ್ಮವಾಗುತ್ತದೆ ದೇವತೆಗಳು ಮಾಂಸಾಹಾರಿಗಳಿರುವರು ರಾಜನು ಬೇಟೆಯಾಡುವುದು ಅವನ ಧರ್ಮವಾಗಿದೆ. ಇವೇ ಮೊದಲಾದ ಸಂಗತಿಗಳನ್ನು ತಮ್ಮ ಧರ್ಮಗ್ರಂಥಗಳಲ್ಲಿ ಬರೆದು ಇಟ್ಟಿದ್ದಾರೆ. ಅದರಂತೆ ಜನರಲ್ಲಿ ಪ್ರವೃತ್ತಿಯನ್ನೂ ಉಂಟುಮಾಡಿದ್ದಾರೆ. ಜನರಲ್ಲಿ ಪ್ರವೃತ್ತಿಯೂ ಹಾಗಿದೆ ಹರಿ, ಹರ, ಬ್ರಹ್ಮ ಇವರು ಪರಮೇಶ್ವರರೆಂದು ವರ್ಣಿಸುವುದು ಹರಿಯು ಗೋಪಿಕೆಯರಲ್ಲಿ ಆಸಕ್ತನಾಗಿರುವುದು; ಅವನು ಕೊಳಲು ಊದಿ ನೃತ್ಯ ಕ್ರೀಡೆಯನ್ನು ಮಾಡುವುದು, ಗೋವರ್ಧನವನ್ನು ನಾಶಮಾಡಿ ಅಲ್ಲಿ ಸ್ತ್ರೀಯರನ್ನು ಹರಣಮಾಡುವುದೇ ಮೊದಲಾದ ಸಂಗತಿಗಳನ್ನು ಕಥಾರೂಪದಲ್ಲಿ ಬರೆದು ಇಟ್ಟಿರುವರು. ಅವುಗಳನ್ನು ಎಲ್ಲ ಜನರೂ ಸತ್ಯವೆಂದು ಮನ್ನಿಸುವುದು–ಇದು ಆಶ್ಚರ್ಯಕರವಾಗಿದೆ

ಹರನೆಂದರೆ ಮಹಾದೇವ. ಇವನ ಅರ್ಧ ಶರೀರ ಸ್ತ್ರೀಯರದು, ಇನ್ನರ್ಧ ಶರೀರ ಪುರುಷನದು. ಅವನು ತನ್ನ ಪೂರ್ಣ ಶರೀರಕ್ಕೆ ಭಸ್ಮವನ್ನು ಬಳಿದುಕೊಳ್ಳುತ್ತಾನೆ. ವಿವಿಧ ಪ್ರಕಾರದ ಕೊಲೆ ಮಾಡುತ್ತಾನೆ, ಶಾಪವನ್ನೂ ಕೊಡುತ್ತಾನೆ ತ್ರಿಶೂಲಾದಿಗಳನ್ನು ಧರಿಸಿ ಲೋಕದ ಸಂಹಾರಮಾಡುವನು—ಈ ಎಲ್ಲ ಮಾತುಗಳನ್ನು ಶಾಸ್ತ್ರದಲ್ಲಿ ಬರೆದು ಇಟ್ಟಿದ್ದಾರೆ. ಅದರಿಂದಲೇ ಅವು ಸತ್ಯವೆಂದು ಜನರು ನಂಬುತ್ತಾರೆ ಇದಕ್ಕೂ ಆಶ್ಚರ್ಯದ ಸಂಗತಿಯು ಒಂದಿದೆ ಮಹಾದೇವನ ಲಿಂಗವು ಪಾರ್ವತಿಯ ಯೋನಿಯಲ್ಲಿದೆ ಎಂದು ಕಲ್ಪಿಸಿದ್ದಾರೆ ಅದರ ಮೇಲೆ ಯಾವಾಗಲೂ ನೀರನ್ನು ಸುರಿಸುತ್ತಿರಬೇಕು, ಬಿಲ್ವ ಪತ್ರವನ್ನು ಏರಿಸಬೇಕು, ಧತ್ತೂರಿಯ ಹೂವುಗಳನ್ನೂ ಮುಂದೆ ಹಾಕಬೇಕು, ಈ ಪ್ರಕಾರ ಜನರು ಪ್ರವೃತ್ತರಾಗಲಿಕ್ಕೆಂದು ಶಾಸ್ತ್ರಗಳಲ್ಲಿ ಬರೆದಿಟ್ಟಿದ್ದಾರೆ ಧರ್ಮವೆಂಬುದನ್ನು ವಿಚಾರವಿಲ್ಲದೆ ನಂಬುವ ಜನರು ಇವೆಲ್ಲ ಸಂಗತಿಗಳನ್ನು ಧರ್ಮವೆಂದು ನಂಬಿ ನಡೆಯುತ್ತಾರೆ ಇದಕ್ಕಿಂತ ಹೆಚ್ಚಿನದು ಇನ್ನೇನಿರಬೇಕು?

ಬ್ರಹ್ಮದೇವನು ಎಲ್ಲ ಸೃಷ್ಟಿಯನ್ನು ನಿರ್ಮಿಸಿದವನಾದುದರಿಂದ ಅವನು ಸರ್ವರಿಗೂ ತಂದೆಯು ಅವನು ಕಾಮವಾಸನೆಗೆ ಒಳಗಾಗಿ, ತನ್ನ ಮಗಳೊಡನೆ ಭೋಗಮಾಡಿ ಭ್ರಷ್ಟನಾದನು. ಉರ್ವಶಿ ಎಂಬ ಹೆಸರಿನ ಅಪ್ಸರೆ ಒಬ್ಬಳು ಇದ್ದಳು. ಅವಳ ಚೆಲುವಿಕೆಗೆ ಮೋಹಿತನಾಗಿ ಬ್ರಹ್ಮನು ನಾಲ್ಕು ಸಾವಿರ ವರ್ಷ ತಾನು ಮಾಡಿದ ತಪದ ಬಲದಿಂದ ನಾಲ್ಕು ಮುಖಗಳನ್ನೂ ಧರಿಸಿ ಊರ್ವಶಿಯ ರೂಪವನ್ನು ನೋಡುವಂಥವನಾದನು. ಇದರಿಂದ ಅವನ ತಪಶ್ಚರಣವು ಇಲ್ಲದಂತಾಯಿತು. ಊರ್ವಶಿಯು ಅವನಿಗೆ ಶಾಪಕೊಟ್ಟಳು ಈ ಪ್ರಕಾರ ಚಮತ್ಕಾರಿಕವೂ ನೀತಿಗೆ ಪ್ರತ್ಯಕ್ಷವಿರೋಧವೂ ಆದ ವರ್ಣನೆಯು ಇವರ ಗ್ರಂಥಗಳಲ್ಲಿ ಇದೆ.

ಜಗತ್ತಿನ ರಚನೆಯನ್ನು ಮಾಡುವ ಹಾಗೂ ಅದನ್ನು ರಕ್ಷಿಸುವ ಭಗವಾನ್ ನಾರಾಯಣನು ಕಚ್ಛಪ ಮತ್ಸ್ಯ ಮೊದಲಾದ ಅನೇಕ ಅವತಾರಗಳನ್ನು ಧರಿಸಿ ದಾನವರ ಸಂಹಾರ ಮಾಡಿದನು. ಮಾರುತಿಯನ್ನು ಮಂಗ, ಗಣಪತಿಯನ್ನು ಆನೆಯನ್ನಾಗಿ ಮಾಡಿ, ಗಣಪತಿಯು ಇಲಿಯ ಮೇಲೆ ಕುಳಿತಿದ್ದಾನೆ, ಉಂಡಿಗಳನ್ನು ತಿನ್ನುತ್ತಾನೆಂದು ವರ್ಣಿಸಲಾಗಿದೆ. ಇಂಥ ವರ್ಣನೆಗಳು ಅವರ ಪುರಾಣಗಳಲ್ಲಿ ಇವೆ ಪ್ರಾಣಿವಧೆ ಮಾಡವುದರಲ್ಲಿ, ಪ್ರಾಣಿಗಳನ್ನು ಕೊಂದು ದೇವರಿಗೆ ಬಲಿಕೊಡುವುದರಲ್ಲಿ, ಅವರನ್ನು ತೃಪ್ತಗೊಳಿಸುವುದರಲ್ಲಿ, ಬಾವಿ ಕೆರೆಗಳನ್ನು ಕಟ್ಟಿಸುವುದರಲ್ಲಿ ದೊಡ್ಡ ಧರ್ಮವಿದೆಯೆಂದು ಹೇಳಿದೆ ಇಂಥ ಅನೇಕ ಅಸಂಬದ್ಧ ಸಂಗತಿಗಳನ್ನು ಬ್ರಾಹ್ಮಣರು ಶಾಸ್ತ್ರಗಳಲ್ಲಿ ಬರೆದಿದ್ದಾರೆ ಶ್ವೇತಾಂಬರರಂತೂ ಅನೇಕ ಕಲ್ಪಿತ ಸೂತ್ರಗಳನ್ನು ರಚಿಸಿ, ಎಲ್ಲ ಶಾಸ್ತ್ರಗಳನ್ನು ಭ್ರಷ್ಟಮಾಡಿ ಬಿಟ್ಟಿದ್ದಾರೆ ಅದಿರಲಿ ನಮ್ಮಲ್ಲಿಯೇ ಕೆಲಜನ ವೇಷಧಾರಿ ಸಾಧುಗಳು ಕುಲದೇವಿಯ ಪೂಜೆ, ಕ್ಷೇತ್ರಪಾಲ[1] ವ್ಯಂತರಾದಿ ದೇವತೆಗಳ ಆರಾಧನೆ, ಪದ್ಮಾವತಿ, ಚಕ್ರೇಶ್ವರಿ ಮೊದಲಾದ ದೇವರ ಪೂಜೆ, ಇವೇ ಮೊದಲಾದ ಮಿಥ್ಯಾ ವಿವರಣೆಗಳನ್ನು ಕೊಟ್ಟು, ಶಾಸ್ತ್ರಗಳನ್ನು ತುಂಬಿ ಬಿಟ್ಟಿದ್ದಾರೆ ಇವಲ್ಲದೆ ಅನ್ಯಮ್ಲೇಂಚ್ಛ ಜನರು ರಚಿಸಿದ ಅನೇಕ ವಿಷಯಗಳೂ ಇವೆ ಶಾಸ್ತ್ರದ ಹೊರತಾಗಿ ಮಿಥ್ಯಾ ಕಲ್ಪನೆಗಳ ಪ್ರಸಾರವಾದರೂ ಹೇಗಾದೀತು! ಇಂಥ ಶಾಸ್ತ್ರಗಳ ಬಲದ ಮೇಲೆ ಅನೇಕ ಪ್ರಕಾರದ ಮಿಥ್ಯಾ ಧರ್ಮಗಳ ಪ್ರಸಾರವು ಅವಲಂಬಿಸಿರುತ್ತದೆ ಅದಕ್ಕಾಗಿ ಪ್ರತಿಯೊಬ್ಬ ಮನುಷ್ಯನೂ ಇಂಥ ಸಂದರ್ಭದಲ್ಲಿ ಪರೀಕ್ಷಕ ದೃಷ್ಟಿಯನ್ನು ಇಟ್ಟುಕೊಂಡು, ಆ ನಂತರ ಶಾಸ್ತ್ರವನ್ನು ಪ್ರಮಾಣವೆಂದು ಮನ್ನಿಸಬೇಕು.

ಒಳ್ಳೆಯ ಶಾಸ್ತ್ರ—ಹಿಂದೆ ಹೇಳಿದ ಆರು ಲಕ್ಷಣಗಳು ಯಾವ ಶಾಸ್ತ್ರಕ್ಕೆ ಅನ್ವಯಿಸುವವೋ ಅದಕ್ಕೆ ಒಳ್ಳೆಯ ಶಾಸ್ತ್ರವೆನ್ನಬೇಕು. ಮೊಟ್ಟ ಮೊದಲು ಶಾಸ್ತ್ರವೆಂಬುದು ಸರ್ವಜ್ಞ ವೀತರಾಗನಿಂದ ಹೇಳಿದ್ದಿರಬೇಕು. ಸರ್ವಜ್ಞನ ಹೊರತಾಗಿ ಇನ್ನುಳಿದವರು ಯಾರೂ ತಮ್ಮ ಇಂದ್ರಿಯಜನ್ಯಜ್ಞಾನದಿಂದ ಜೀವ, ಅಜೀವ ಮೊದಲಾದ ಅತೀಂದ್ರಿಯ ಅಮೂರ್ತಿಕ ಪದಾರ್ಥಗಳ ಯಥಾರ್ಥ ನಿರೂಪಣೆಯನ್ನು ಮಾಡುವುದು ಸಾಧ್ಯವಿಲ್ಲ ಅದರಂತೆ ಪಾಪ-ಪುಣ್ಯ ಮೊದಲಾದ ಅದೃಷ್ಟ ಪದಾರ್ಥ ಮತ್ತು ಪರಮಾಣುವಿನಂಥ ಸೂಕ್ಷ್ಮ ಪದಾರ್ಥಗಳನ್ನು ತಿಳಿಯಲಿಕ್ಕೂ ಅನ್ಯರಿಗೆ ಶಕ್ಯವಿಲ್ಲ ದೂರ ಇರುವ ಮೇರು ಕುಲಾಚಲಾದಿ ಪರ್ವತಗಳ ಯಥಾರ್ಥ ವರ್ಣನ ಮಾಡಲಿಕ್ಕೂ ಸಮರ್ಥರಾಗಲಾರರು ಅದರಂತೆಯೇ ಜೀವಾದಿ ದ್ರವ್ಯಗಳ ಅನಂತ ಪರ್ಯಾಯಗಳು ಆಗಿ ಹೋಗಿವೆ, ಮುಂದೆಯೂ ಆಗುತ್ತವೆ, ಮೇಲಾಗಿ ಅನಂತ ವಸ್ತುಗಳ ಅನಂತ ಗುಣ ಹಾಗೂ ಪರ್ಯಾಯಗಳಿವೆ ಇವೆಲ್ಲವುಗಳನ್ನು ಒಂದೇ ಕಾಲಕ್ಕ ಸರ್ವಜ್ಞನ ಹೊರತಾಗಿ, ಮರ್ಯಾದಿತ ಇಂದ್ರಿಯಜನ್ಯ ಜ್ಞಾನವುಳ್ಳ ಅನ್ಯರು ಹೇಗೆ ತಿಳಿದಾರು? ಅದರಿಂದ ಸರ್ವಜ್ಞನ ಹೊರತಾಗಿ ಇತರರಿಗೆ ಯಥಾರ್ಥ ಶಾಸ್ತ್ರವನ್ನು ನಿರೂಪಿಸಲಿಕ್ಕೆ ಬರುವುದು ಸಂಭವನೀಯವಾಗಿಲ್ಲ ಸತ್ಯಾರ್ಥ ನಿರೂಪಣೆಯು ಕೇವಲ ಸರ್ವಜ್ಞನಲ್ಲಿಯೇ ಸಂಭವಿಸುವುದು ರಾಗದ್ವೇಷವಿದ್ದವರಿಗೆ, ಅಭಿಮಾನ ತಮ್ಮಲ್ಲಿ ಹೆಚ್ಚಬೇಕೆಂಬ ಇಚ್ಛೆ ಇದ್ದವರಿಗೆ, ವಿಷಯದ ಲೋಭವಿದ್ದವರಿಗೆ, ಜಗತ್ತಿನಲ್ಲಿ ಪ್ರಸಿದ್ಧಿಯನ್ನೂ ಹೊಂದಬೇಕೆಂಬ ಆಶೆ ಇದ್ದವರಿಗೆ ಸತ್ಯವನ್ನು ಹೇಳಲಿಕ್ಕೆ ಬರುವುದು ಅಶಕ್ಯವಾಗಿದೆ ಇದರಿಂದ ಸರ್ವಜ್ಞನೂ ವೀತರಾಗನೂ ಆದಂಥ ಭಗವಾನನು ನಿರೂಪಿಸಿದ ಶಾಸ್ತ್ರಕ್ಕೇನೇ ಪ್ರಾಮಾಣಿಕತೆಯು ದೊರೆಯುತ್ತದೆ ಯಾವ ಶಾಸ್ತ್ರದಲ್ಲಿ ವಾದಿ ಪ್ರತಿವಾದಿ-ಗಳಿಂದ ದೋಷಗಳನ್ನು ತೋರಿಸಲಿಕ್ಕೆ ಬರುವುದೋ ಆ ಶಾಸ್ತ್ರವನ್ನು ಪ್ರಮಾಣವೆಂದು ತಿಳಿಯಲಿಕ್ಕೆ ಆಗದು ಆದರೆ ವಾದಿ ಪ್ರತಿವಾದಿಗಳಿಂದ ಉಲ್ಲಂಘಿಸಲಿಕ್ಕೆ ಆಗದಂಥದೂ ಪ್ರತ್ಯಕ್ಷ ಹಾಗೂ ಅನುಭವ ಪ್ರಮಾಣಗಳಿಂದ ಬಾಧೆ ಬಾರದಂಥದೂ ಆದುದೇ ನಿಜವಾದ ಶಾಸ್ತ್ರವೆಂದು ತಿಳಿಯಬೇಕು ಯಾವುದರಲ್ಲಿ ಅಂಥ ದೋಷಗಳು ಇರುವವೋ ಅದು ಶಾಸ್ತ್ರವಲ್ಲ

ಮಿಥ್ಯಾಶಾಸ್ತ್ರಗಳ ಲಕ್ಷಣ ಹೀಗಿದೆ—ಭಾವಗಳ ನಿರ್ಣಯವಿರುವದಿಲ್ಲ. ಹೇಯ-ಉಪಾದೇಯ, ಕೃತ್ಯ-ಅಕೃತ್ಯ, ದೇವ-ಕುದೇವ, ಧರ್ಮ-ಅಧರ್ಮ, ಹಿತ-ಅಹಿತ, ಗ್ರಾಹ್ಯ-ಅಗ್ರಾಹ್ಯ, ಭಕ್ಷ್ಯ-ಅಭಕ್ಷ್ಯ, ಮೊದಲಾದ ವಸ್ತುಗಳ ನಿಜವಾದ ಸ್ವರೂಪವನ್ನು ತೋರಿಸಿ, ವಿಷಯದ ಒಂದು ನಿರ್ಣಯಕ್ಕೆ ಬರುವದಿಲ್ಲ. ಅರ್ಥವಿಲ್ಲದ ಶಬ್ದಾಡಂಬರವನ್ನು ಹೆಚ್ಚುಮಾಡಿ, ಕೇವಲ ಜನರ ಮನರಂಜನೆಯನ್ನು ಮಾಡುವ ಹೇತು ಉಳ್ಳದಿರುವುದು.

---

1 ಕ್ಷೇತ್ರಪಾಲಾದಿ ದೇವ ಹಾಗೂ ಪದ್ಮಾವತಿ ಮೊದಲಾದ ದೇವತೆಗಳು ಶಾಸನಭಕ್ತರೂ ಸಮ್ಯಕ್ತ್ವಿಗಳೂ ಇರುವುದರಿಂದ ಅವರನ್ನು ಯೋಗ್ಯರೀತಿಯಲ್ಲಿ ಆದರಿಸುವದರಲ್ಲಿ ಮಿಥ್ಯಾತ್ವವಿಲ್ಲ

ಅಸತ್ಯ ಕಥೆ, ದೇಶ ಕಥೆ, ರಾಜ ಕಥೆ, ಕಳ್ಳರ ಕಥೆ, ಸ್ತ್ರೀ ಕಥೆ, ಕಾಮ ಕಥೆ ಮೊದಲಾದ ಸಂಸಾರದಲ್ಲಿ ಮಾನವನನ್ನು ಮಗ್ನಮಾಡುವಂಥ ವಿಕಥೆಗಳೇ ತುಂಬಿರುತ್ತವೆ ಆತ್ಮನು ಸಂಸಾರದಿಂದ ವಿರಕ್ತನಾಗಿ, ತನ್ನ ಸ್ವರೂಪವನ್ನು ತಿಳಿದು, ಸಂಸಾರದೊಳಗಿಂದ ಈಸಿ ಪಾರಾಗಿ ಹೋಗಲಿಕ್ಕೆ ಬರುವಂಥ ವರ್ಣನೆಗಳು ಇರುವದಿಲ್ಲ. ಪ್ರಾಣಿಮಾತ್ರರ ಹಿಂಸೆಯನ್ನು ಮಾಡಬೇಕೆಂದು ಹೇಳಿರುತ್ತದೆ ಮಾಂಸಭಕ್ಷಣ, ಜಲ-ಸ್ಥಲ-ಆಕಾಶಗಾಮಿ ಜೀವಗಳ ಸಂಹಾರದ ವಿಧಾನ, ಜಾರಣ, ಮಾರಣ ಉಚ್ಚಾಟನ, ಪರಧನಹರಣ, ಸಂಗ್ರಾಮ, ವಶೀಕರಣ, ಗ್ರಾಮವಿಧ್ವಂಸನ ಉಪಾಯಗಳನ್ನು ವರ್ಣಿಸಿರುತ್ತದೆ. ಶೃಂಗಾರಯುತ ರಸಾದಿಗಳನ್ನು ವರ್ಣಿಸಿ, ಕುಮಾರ್ಗದ ಕಡೆಗೆ ಪ್ರವೃತ್ತಿಯನ್ನುಂಟುಮಾಡುತ್ತದೆ ಜೂಜು, ಮದ್ಯಮಾಂಸಾದಿ ವ್ಯಸನಗಳ ಕಡೆಗೆ ತನ್ನ ವಾಚಾಳಿತನದಿಂದ ಪ್ರವೃತ್ತಗೊಳಿಸುತ್ತದೆ. ಅನಂತ ಸಂಸಾರದಲ್ಲಿ ಮುಳುಗಿಸುವಂಥ ರಾಗ, ದ್ವೇಷ, ವಿಷಯ, ಕಷಾಯಗಳುಳ್ಳ ದೇವರ ಸೇವೆ ಮಾಡಲಿಕ್ಕೆ ಉಪದೇಶಿಸುತ್ತದೆ. ಪಾಖಂಡಿಗಳೂ ವೇಷಧಾರಿಗಳೂ ಆದ ಸಾಧುಗಳ ಸೇವೆ ಮಾಡಲಿಕ್ಕೆ ಹೇಳುತ್ತದೆ.

ಜನಸಾಮಾನ್ಯರು ನಿಜವಾದ ಶಾಸ್ತ್ರ ಯಾವುದೆಂದು ಕಂಡುಹಿಡಿಯುವಾಗ ಇಷ್ಟನ್ನಾದರೂ ಲಕ್ಷ್ಯದಲ್ಲಿ ಇಡಬೇಕು. ವೀತರಾಗ ಸರ್ವಜ್ಞದೇವನು ನಿರೂಪಿಸಿದ ಶಾಸ್ತ್ರದಲ್ಲಿ ರಾಗದ್ವೇಷಾದಿ ವಿಷಯ ಕಷಾಯಗಳ ಅಭಾವವಿರುತ್ತದೆ. ಎಲ್ಲ ಜೀವಗಳ ಮೇಲೆ ದಯೆಯಿರಬೇಕೆಂದೂ ಬೋಧಿಸಿರುತ್ತದೆ ಇವೆರಡೂ ಲಕ್ಷಣಗಳು ಇಲ್ಲದವು ನಿಜವಾದ ಶಾಸ್ತ್ರಗಳಲ್ಲ. ಅಂಥ ಕುಶಾಸ್ತ್ರಗಳು ಎಲ್ಲರ ಹಿತವನ್ನು ಸಾಧಿಸಲಾರವು. ಅದರಿಂದ ಅವು 'ಸಾರ್ವ' ಎಂಬ ಹೆಸರಿಗೆ ತಕ್ಕವುಗಳಲ್ಲ ಜೀವಾದಿ ತತ್ತ್ವಗಳ ವರ್ಣನೆಯನ್ನು ಮಾಡಿ, ಎಲ್ಲರ ಹಿತವು ಸಾಧಿಸುವಂಥ ತತ್ತ್ವೋಪದೇಶವುಳ್ಳದ್ದೇ ನಿಜವಾದ ಶಾಸ್ತ್ರವು. ಇದು ಕುಮಾರ್ಗದ ನಿವಾರಣೆಯನ್ನು ಹೇಗೆ ಮಾಡಬೇಕು? ಸ್ವರ್ಗ-ಮೋಕ್ಷಗಳ ಉಪಾಯವೇನು? ಇನ್ನೇ ಮೊದಲಾದವುಗಳನ್ನು ಹೇಳುತ್ತದೆ. ಅಂತಲೇ ಇದಕ್ಕೆ 'ಕಾಪಥಘಟ್ಟನ' ಎಂಬ ವಿಶೇಷಣವು ಸಾರ್ಥಕವಾಗಿದೆ. ಹೀಗೆ ಆಗಮದ ಲಕ್ಷಣವಿದೆ

[ಇಲ್ಲಿ ಆಗಮಗಳಿಗೆ—ಶಾಸ್ತ್ರಕ್ಕೆ—ಆರು ವಿಶೇಷಣಗಳನ್ನು ಹೇಳಲಾಗಿದೆ. ಅವುಗಳಲ್ಲಿ 'ಆಪ್ತೋಪಜ್ಞ' ಎಂಬುದು ಮುಖ್ಯವಾಗಿದೆ. ಆಪ್ತನಿಂದ ಮೊಟ್ಟಮೊದಲು ಉಪದೇಶಿಸಲ್ಪಟ್ಟುದೇ ಆಗಮವು. ಅದೇ ನಿಜವಾದ ಶಾಸ್ತ್ರವು ಆದರೆ ಜಗತ್ತಿನಲ್ಲಿ ಅನೇಕರು ತಮ್ಮ ಗುರುಗಳಿಗೆಲ್ಲ ಆಪ್ತರೆಂದೂ ಸರ್ವಜ್ಞರೆಂದೂ ವಿಶೇಷಭಕ್ತಿಯಿಂದ ಹೇಳುವದುಂಟು ಅಂಥ ಗುರುಗಳೆಲ್ಲ ಬೋಧಿಸಿದ್ದು ಆಗಮವೇ ಹೇಗೆ? ಎಂಬ ಪ್ರಶ್ನೆಯೂ ಉಂಟಾಗುವುದು. ಇಂಥ ಸಮಸ್ಯೆಯನ್ನು ಸಮರ್ಪಕವಾಗಿ ಬಿಡಿಸಲಿಕ್ಕೆಂದೇ ಆಚಾರ್ಯರು ಮುಂದಿನ ಐದು ವಿಶೇಷಣಗಳನ್ನು ಆಗಮದ ವಿಷಯದಲ್ಲಿ ಹೇಳಿದ್ದಾರೆ ಆ ಐದೂ ಗುಣಗಳ ಒರೆಗಲ್ಲಿಗೆ ನಿಲ್ಲುವಂಥದೇ ನಿಜವಾದ ಶಾಸ್ತ್ರವೆನಿಸುತ್ತದೆ. ಇವುಗಳಲ್ಲಿ ಒಂದು ಗುಣವು ಕಡಿಮೆಯಿದ್ದರೂ ಅದು ಶಾಸ್ತ್ರವೆನಿಸದು. ಉದಾಹರಣೆಗಾಗಿ ಪ್ರತ್ಯಕ್ಷಾದಿಗಳಿಗೆ ವಿಪರೀತವಾದುದು ಆಪ್ತನು ಉಪದೇಶಿಸಿದ ಆಗಮವೆನಿಸದು. ಸ ಧ.]

> ರಾಗದ್ವೇಷನಿಬಂಧಮಪ್ಪ ಕೃತಿಯಂ ನಿರ್ಬಂಧದಿಂ ಬಂಧಮಿಂ-
> ಬಾಗರ್ಥಂ ಪೊಸತಾನೆ ಪೇಳ್ದ ಖಿಲಮಂ ರಾಗಾವಿಲಂ ಮಾಳ್ಪವಿ- ।
> ದ್ಯಾಗರ್ವಗ್ರಹಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋ-
> ದ್ಯೋಗಕ್ಲೇಶಿತರಾಗಿ ಬಿತ್ತಿಬೆಳೆವಂತಕ್ಕುಂ ವಿಷೋದ್ಯಾನಮಂ ॥
>
> —ನಾಗಚಂದ್ರ-ರಾಮಚಂದ್ರಚರಿತ ಪುರಾಣಂ ೧-೩೪.

ಈಗ ತಪಸ್ವಿ ಅಂದರೆ ಸನ್ಮಾರ್ಗಗುರುವಿನ ಸ್ವರೂಪವನ್ನು ಹೇಳುತ್ತಾರೆ—

> **ವಿಷಯಾಶಾವಶಾತೀತೋ ನಿರಾರಂಭೋಽಪರಿಗ್ರಹಃ ।**
> **ಜ್ಞಾನಧ್ಯಾನತಪೋರಕ್ತಸ್ತಪಸ್ವೀ ಸ ಪ್ರಶಸ್ಯತೇ ॥ ೧೦ ॥**

ಅನ್ವಯಾರ್ಥ—(ಯಃ) ಯಾರು (ವಿಷಯಾಶಾವಶಾತೀತಃ) ವಿಷಯೋಪಭೋಗದಿಂದ ಅಲಿಪ್ತ (ನಿರಾರಂಭಃ) ಆರಂಭರಹಿತ (ಅಪರಿಗ್ರಹಃ) ಪರಿಗ್ರಹವಿಲ್ಲದ (ಜ್ಞಾನ-ಧ್ಯಾನ-ತಪೋರಕ್ತಃ) ಜ್ಞಾನ, ಧ್ಯಾನ, ತಪಗಳಲ್ಲಿ ಮಗ್ನನಾದಂಥ (ಸಃ) ಅವರು (ತಪಸ್ವೀ) ಗುರು (ಪ್ರಶಸ್ಯತೇ)—ಎಂದು—ಸ್ತುತಿಗೆ ತಕ್ಕವರು.

ಅರ್ಥ—ಪಂಚೇಂದ್ರಿಯಗಳ ವಿಷಯಗಳ ಇಚ್ಛೆಯನ್ನು ನಾಶಮಾಡಿದಂಥವನು, ಷಟ್‌ಕಾಯಧಾರಿ ಜೀವಗಳ ಘಾತವನ್ನು ಮಾಡುವ ಆರಂಭವನ್ನು ತ್ಯಾಗಮಾಡಿದವನು, ಅಂತರಂಗ ಮತ್ತು ಬಹಿರಂಗ ಪರಿಗ್ರಹಗಳನ್ನೂ ಸಂಪೂರ್ಣವಾಗಿ ತ್ಯಾಗಮಾಡಿದವನು ಹಾಗು ಜ್ಞಾನ, ಧ್ಯಾನ ತಪಶ್ಚರಣಗಳಲ್ಲಿ ಮಗ್ನನಾಗಿರುವಂಥವನು ಪ್ರಶಂಸೆಗೆ ಯೋಗ್ಯವೆನಿಸುವ ಗುರುವೆನಿಸುತ್ತಾನೆ.[1]

[ಇಲ್ಲಿ ತಪಸ್ವಿಗೆ 'ವಿಷಯಾಶಾವಶಾತೀತ'ವೇ ಮೊದಲಾದ ನಾಲ್ಕು ವಿಶೇಷಣಗಳನ್ನು ಹೇಳಲಾಗಿದೆ. ಅವೂ ಬಹಳ ಮಹತ್ವವುಳ್ಳವುಗಳಾಗಿವೆ ಇವುಗಳಿಂದ ಸಮ್ಯಗ್ದರ್ಶನದ ವಿಷಯವೆನಿಸುವ ಪರಮಾರ್ಥದೃಷ್ಟಿಯುಳ್ಳ ತಪಸ್ವಿಯ ಆ ಸಮಗ್ರಚಿತ್ರವು ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತದೆ ಇಲ್ಲಿಯ ವಿಶೇಷಣಗಳ ಕ್ರಮವೂ ಸಹ ಮಹತ್ವಪೂರ್ಣವಾಗಿದೆ. ಎಲ್ಲಕ್ಕೂ ಮೊದಲು ತಪಸ್ವಿಯು ವಿಷಯ ತೃಷ್ಣೆಯಿಂದ ಬಿಡುಗಡೆ ಹೊಂದುವುದು ಮಹತ್ವದ್ದಿದೆ. ಅದು ಪರಮಾವಶ್ಯಕವೂ ಆಗಿದೆ ಯಾರು ಇಂದ್ರಿಯ ವಿಷಯದ ತೃಷ್ಣೆಯ ಬಲೆಯಲ್ಲಿ ಸಿಕ್ಕಿರುವರೋ ಅವರು ನಿರಾರಂಭಿಗಳಾಗಲಾರರು ನಿರಾರಂಭಿಗಳಾಗದವರು ಅಪರಿಗ್ರಹಿಗಳಾಗಲು ಸಾಧ್ಯವಿಲ್ಲ. ಪರಿಗ್ರಹಗಳನ್ನು ತ್ಯಜಿಸದೆ, ಅವುಗಳ ಚಿಂತೆ, ಮಮತೆಗಳಲ್ಲಿಯೇ ಮುಳುಗಿದವರು ಉತ್ತಮ ರತ್ನವೆನಿಸಿಕೊಳ್ಳುವಂಥ ಜ್ಞಾನ, ಧ್ಯಾನ, ತಪಗಳ ಒಡೆಯರಾಗಲಾರರು. ಮತ್ತು ಅವುಗಳ ಸಾಧನೆಯಲ್ಲಿಯೂ ಲೀನನಾಗಿರಲಾರರು ಅಲ್ಲದೆ ಸತ್‌ಶ್ರದ್ಧೆಗೆ ಅವರು ಪಾತ್ರರೂ ಆಗಲಾರರು ಅಂಥವರ ಮೇಲೆ ವಿಶ್ವಾಸವಿಟ್ಟು, ಯಾವ ಧರ್ಮದ ಅನುಷ್ಠಾನವನ್ನೂ ಸಮೀಚೀನ ರೀತಿಯಿಂದ ಮಾಡಲಿಕ್ಕೆ ಆಗುವದಿಲ್ಲ. ಇಂಥ ಸಾಧುಗಳು ಕಲ್ಲಿನ ನೌಕೆಯಿದ್ದಂತೆ. ತಾವೂ ಮುಳುಗುತ್ತಾರೆ, ಆಶ್ರಿತರನ್ನೂ ಮುಳುಗಿಸುತ್ತಾರೆ

ಧ್ಯಾನ ಮತ್ತು ಸ್ವಾಧ್ಯಾಯಗಳು ಅಂತರಂಗ ತಪದ ಭೇದಗಳಾಗಿವೆ. ಆದರೆ ಅವುಗಳ ಮಹತ್ವವನ್ನು ವ್ಯಕ್ತಪಡಿಸುವದಕ್ಕಾಗಿ ಇಲ್ಲಿ ಸ್ವತಂತ್ರವಾಗಿ ಉಲ್ಲೇಖಿಸಿದೆ ಇವೆರಡನ್ನೂ ಒಳ್ಳೆಯ ರೀತಿಯಿಂದ ಸಾಧಿಸಿದ ಹೊರತಾಗಿ, ಯಾವನೂ ಶ್ರಮಣ ಸಾಧುವೆನಿಸಲಾರನು ಶ್ರೇಷ್ಠ ತಪಸ್ವಿಯೂ ಆಗಲಾರನು ಎಲ್ಲ ತಪಸ್ಸಿನ ಕೊನೆಯ ಗುರಿಯು ಧ್ಯಾನ ಮತ್ತು ಜ್ಞಾನ ಸಾಧನೆಗಳಾಗಿವೆ ಸ ಧ]

ವಿಶೇಷಾರ್ಥ—ನಾಲಿಗೆಯು ರುಚಿಗೆ ಅಧೀನನಾಗಿ ಅನೇಕ ಪ್ರಕಾರದ ರಸಗಳ ಸವಿಯನ್ನು ಸ್ವೀಕರಿಸುವುದರಲ್ಲಿ ಯಾವಾಗಲೂ ಆಸಕ್ತನಾಗಿರುವಂಥವನು ಒಳ್ಳೆಯ ಗುರುವೆನಿಸನು. ಕರ್ಣೇಂದ್ರಿಯಗಳಿಗೆ ವಶನಾಗಿ ತನ್ನ ಸ್ತುತಿಯನ್ನೇ ಕೇಳಬೇಕೆಂಬ ಇಚ್ಛೆಯುಳ್ಳವನೂ ಸದ್ಗುರುವಲ್ಲ ಮನವೆಂಬ ಇಂದ್ರಿಯದ ಅಧೀನನಾಗಿ, ಜ್ಞಾನದ ಅಭಿಮಾನ ಹುಟ್ಟಿದವನೂ ವೀತರಾಗ ಧರ್ಮದ ಕಡೆಗೆ ಹೊರಳಿಸುವ ಗುರುವಲ್ಲ ಕಣ್ಣಿನಿಂದ ಮನೋಹರ ರೂಪ, ಹೂದೋಟ, ರಾಜಮಂದಿರ, ವಸ್ತ್ರಾಲಂಕಾರಗಳನ್ನು ನೋಡಬೇಕೆಂಬ ಇಚ್ಛೆಗೆ ಅಧೀನನಾದವನು ಮೋಕ್ಷಮಾರ್ಗವನ್ನು ತೋರಿಸುವ ಗುರುವೆನಿಸುವದಿಲ್ಲ ಮೆತ್ತಗಿನ ಹಾಸಿಗೆಯ ಮೇಲೆ ಮಲಗಬೇಕು, ಎತ್ತರವಾದ ಆಸನದ ಮೇಲೆ ಕೂಡ್ರಬೇಕು, ಸುಗಂಧ ದ್ರವ್ಯಗಳನ್ನು ಮೈಗೆ ಹಚ್ಚಿಕೊಳ್ಳಬೇಕು, ವಸ್ತ್ರಾಭರಣಗಳಿಂದ ದೇಹವನ್ನು ಅಲಂಕರಿಸಿಕೊಳ್ಳಬೇಕು, ವಿಷಯದ ಉಪಭೋಗವನ್ನು ಬಹಳಷ್ಟು—ತನ್ನ ಇಚ್ಛೆಗೆ ಬಂದಂತೆ—ಮಾಡಬೇಕು. ಇವೇ ಮೊದಲಾದ ಇಚ್ಛೆಗಳುಳ್ಳವರು ಎರಡನೆಯವರನ್ನು ವಿಷಯ ವಾಸನೆಯಿಂದ ಪರಾಙ್ಮುಖಗೊಳಿಸಿ, ವೀತರಾಗ ಧರ್ಮದ ಕಡೆಗೆ ಪ್ರವೃತ್ತರನ್ನೂ ಮಾಡುವುದು ಸಾಧ್ಯವಿಲ್ಲ ಅವರು ತಮ್ಮಂತೆಯೇ ಸರಾಗಮಾರ್ಗದಲ್ಲಿ ಪ್ರವೃತ್ತಿಯನ್ನುಂಟುಮಾಡಿ, ಸಂಸಾರ ಸಮುದ್ರದಲ್ಲಿ ಮುಳುಗಿಸಿಬಿಟ್ಟಾರು ಅದರಿಂದ ಯಾರಿಗೆ ವಿಷಯದ ವಾಸನೆ ಇಲ್ಲವೋ ಅವನೇ ಗುರುವು ವಂದನೀಯನಾಗಿದ್ದಾನೆ ವಿಷಯಗಳಲ್ಲಿ ಆಸಕ್ತಿ ಇರುವವನಿಗೆ ಆತ್ಮಜ್ಞಾನವಿರುವದಿಲ್ಲ.

---

1 ಆಯತವರ್ಮನು ಹೇಳುವದು ಹೀಗೆ ಇನ್ನು ತಪಸ್ವಿಯಂತಪ್ಪನೆಂದೊಡೆ—

ಕಂದ ॥ ಬ್ರತಮೆ ಧನಮಾಗಿ ಸಮಿತಿಯೆನುತ ಭೂಷಣಮಾಗಿ ಮೂರು ಗುಪ್ತಿಗಳೆಸೆವು- ।
ನ್ನತ ಭೋಗಮಾಗಿ ನೆಗಳ್ವನೆ ಯತಿಪತಿಯೆನಿಕುಂ ಜಿನೇಂದ್ರಭಾಷಿತದಿಂದಂ ॥ ೬ ॥

ವಚನ—ಇಂತು ಬ್ರತಸಮಿತಿಗುಪ್ತಿಸಹಿತನುಂ ತ್ರಿದಂಡ ತ್ರಿಶಲ್ಯ ತ್ರಿಗಾರವ ತ್ರಿಮೂಢರಹಿತನುಂ, ದ್ವಾದಶವಿಧ ತಪೋನುಷ್ಠಾನನುಂ, ತ್ರಯೋದಶವಿಧಚಾರಿತ್ರಸಮೇತನುಂ, ದಶಧರ್ಮಧಾಮನುಂ, ಛತ್ರದಂತೆ ತನ್ನುಮಂ ತನ್ನ ಪೊರ್ದಿದರುಮಂ ಸಂಸಾರಾರ್ಣವಮಂ ಕಳಿಪಲಾರ್ಪನುಮೆಂದಿಂತಪ್ಪ ಗುಣಂಗಳೊಳ್ಕೂಡಿದೊಂ ತಪಸ್ವಿ ಉಳಿದರು ಪಾಷಂಡಿಗಳು, ತಪಸ್ವಿಗಳಲ್ಲವರು ಕೊಂಡುದುಪದೇಶಮಲ್ತು ಭಯಲೋಕ ಕಾಂಕ್ಷೆಯಂ ಗೆಯ್ವತಪಮುಂ ತಪಮಲ್ಲೆಂದು ನಿಶ್ಚೈಸಿ

ಅಂತಲೇ ಅಂಥವರಿಗೆ ಶಾಸ್ತ್ರದಲ್ಲಿ 'ಬಹಿರಾತ್ಮಾ' ಎಂದು ಅಂದಿದ್ದಾರೆ ಅವನು ಗುರು ಹೇಗಾದಾನು? ತ್ರಸಸ್ಥಾವರ ಜೀವಗಳ ಘಾತಮಾಡುವ ಕಾರ್ಯವನ್ನು ಯಾವನು ಬಿಟ್ಟಿಲ್ಲವೋ ಅವನಿಗೆ ಪಾಪದ ಅಂಜಿಕೆ ಇಲ್ಲವೆಂದೇ ಹೇಳಲಿಕ್ಕ ಬೇಕು ಅಂದಮೇಲೆ ಅಂಥ ಪಾಪಿಷ್ಠನಿಗೆ ಗುರುಪದವನ್ನು ಹೇಗೆ ಕೊಡಲಿಕ್ಕೆ ಬಂದೀತು? ಹದಿನಾಲ್ಕು ಪ್ರಕಾರದ ಅಂತರಂಗ ಪರಿಗ್ರಹ ಮತ್ತು ಹತ್ತು ಪ್ರಕಾರದ ಬಾಹ್ಯ ಪರಿಗ್ರಹ ಧಾರಣಮಾಡುವ ಪುರುಷನಿಗೆ ಗುರುವೆನ್ನಲಿಕ್ಕೆ ಬರಲಾರದು

**ಹದಿನಾಲ್ಕು ಅಂತರಂಗ ಪರಿಗ್ರಹಗಳು**—ಪರಿಗ್ರಹಗಳನ್ನು ಧರಿಸಿದಂಥ ಮನುಷ್ಯನು ಸ್ವತಃ ತಾನೇ ಸಂಸಾರದಲ್ಲಿ ಮುಳುಗಿ ಹೋಗಿರುವನು ಅಂದಮೇಲೆ ಅವನು ಅನ್ಯ ಜೀವಿಗಳ ಉದ್ಧಾರ ಹೇಗೆ ಮಾಡಲು ಸಾಧ್ಯವಿದೆ? ೧ ಮಿಥ್ಯಾತ್ವ, ೨ ಸ್ತ್ರೀ-ಪುರುಷ ನಪುಂಸಕ ವೇದ, ೩ ರಾಗ, ೪. ದ್ವೇಷ, ೫. ಹಾಸ್ಯ, ೬. ರತಿ, ೭. ಅರತಿ, ೮. ಶೋಕ, ೯ ಭಯ, ೧೦ ಜುಗುಪ್ಸೆ, ೧೧. ಕ್ರೋಧ, ೧೨. ಮಾನ, ೧೩. ಮಾಯಾ, ೧೪. ಲೋಭ ಇವು ಅಂತರಂಗ ಪರಿಗ್ರಹಗಳಾಗಿವೆ [ಕೆಲವು ಗ್ರಂಥಗಳಲ್ಲಿ ರಾಗ, ದ್ವೇಷಗಳನ್ನು ಭಿನ್ನವೆಂದು ಸ್ವೀಕರಿಸದೆ ಕ್ರೋಧ, ಲೋಭಗಳಲ್ಲಿಯೇ ಸಮಾವೇಶ ಮಾಡಿದ್ದಾರೆ] ಈ ಪರಿಗ್ರಹಗಳ ಸ್ವರೂಪವು ಹೀಗಿದೆ

೧. **ಮಿಥ್ಯಾತ್ವ**—ಮಾನವನು ತನ್ನ ಶರೀರ, ಶರೀರದ ಹೆಸರು, ಶರೀರದ ರೂಪು, ಪರ್ಯಾಯಗಳಿಗೆ ಒಳಪಟ್ಟು ದೇಹದ ಆಧಾರದಿಂದ ಇರುವಂಥ ಜಾತಿ, ಕುಲ, ರಾಜ್ಯ, ಧನ, ಕುಟುಂಬ, ಯಶ, ಅಪಯಶ, ಉಚ್ಚ-ನೀಚತ್ವ, ದಾರಿದ್ರ್ಯ, ಮನ್ನಣೆ, ಕೀರ್ತಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ವರ್ಣಗಳು, ಒಡೆಯ, ಆಳು, ಯತಿತ್ವ, ಗೃಹಸ್ಥತ್ವ ಇವೆಲ್ಲ ಅವಸ್ಥೆಗಳು ಅನೇಕ ಪ್ರಕಾರದ ಕರ್ಮಗಳಿಂದ ಉತ್ಪನ್ನವಾಗುವಂಥವು ಇರುತ್ತವೆ. ಇದನ್ನು ನಾವು ಪ್ರತ್ಯಕ್ಷ ತಿಳಿದಿದ್ದೇವೆ, ನೋಡಿದ್ದೇವೆ, ಕೇಳಿದ್ದೇವೆ ಅದರಂತೆಯೇ ಇವೆಲ್ಲ ನಮ್ಮ ನಿಜವಾದ ರೂಪಗಳಲ್ಲ—ಎಂಬ ಅನುಭವವೂ ಇದೆ. ಆದರೂ ಅನಾದಿಕಾಲದಿಂದಲೂ ಮಿಥ್ಯಾತ್ವ ಕರ್ಮದ ಉದಯದಿಂದ ನಮ್ಮ ಮನಸ್ಸಿನ ಮೇಲೆ ಒಂದು ದೃಢ ಸಂಸ್ಕಾರವಿದೆ ಈ ಪರದ್ರವ್ಯಗಳೆಲ್ಲ ನಾಶವಾಗುವುದರಿಂದ ನಮ್ಮ ನಾಶವಾಗುತ್ತದೆ, ಈ ನಮ್ಮ ತಿಳುವಳಿಕೆಯು ಬದಲಾಗುವುದಿಲ್ಲ ಪರ ದ್ರವ್ಯಗಳ ಉಚ್ಚ-ಹೀನತ್ವಗಳ ಮೂಲಕ ನಮ್ಮ ಸ್ಥಿತಿಯೂ ಹಾಗೇ ಆಗುತ್ತದೆ ನಮಗೂ ಉಚ್ಚ-ನೀಚತ್ವಗಳು ಒದಗುತ್ತವೆಂದು ತಿಳಿದು, ನಮ್ಮ ದೇಹವೇ ನಮ್ಮ ಆತ್ಮವಿದೆಯೆಂದು ನಮಗೆ ಭಾಸವಾಗುತ್ತದೆ ಇವೆಲ್ಲ ವಸ್ತುಗಳು ಆತ್ಮ ಸ್ವರೂಪಕ್ಕೆ ಸಂಬಂಧಿಸಿದವಲ್ಲ ಪರಸ್ವರೂಪಿಗಳೂ ನಾಶವಾಗುವಂಥವೂ ಇರುತ್ತವೆ ಹೀಗೆ ನಾವು ಬಾಯಿಂದ ಹೇಳುತ್ತಿದ್ದರೂ, ಅಂತರಂಗದಲ್ಲಿ ಅವುಗಳ ಸಂಯೋಗ ವಿಯೋಗಗಳಿಂದ ನಮ್ಮ ಪರಿಣಾಮವು ಸುಖದುಃಖಾತ್ಮಕವಾಗುತ್ತದೆ ಇದಕ್ಕೇನೇ ಮಿಥ್ಯಾತ್ವ ಪರಿಗ್ರಹವೆನ್ನುವರು

೨. **ವೇದ**—ಸ್ತ್ರೀ-ಪುರುಷ ನಪುಂಸಕರೊಡನೆ ಕಾಮ ಕ್ರೀಡೆಯನ್ನು ಮಾಡಬೇಕು—ಎಂಬ ಅಂತರಂಗ ವಿಕಾರವು ಉತ್ಪನ್ನವಾಗುವಿಕೆಯೇ ವೇದ ಪರಿಗ್ರಹವಾಗಿದೆ

೩. **ರಾಗ**—ದೇಹ, ಧನ, ಸ್ತ್ರೀ, ಪುತ್ರಾದಿ ಪರದ್ರವ್ಯಗಳ ಮೇಲೆ ಪ್ರೀತಿಯು ಉತ್ಪನ್ನವಾಗುವುದಕ್ಕೆ ರಾಗ ಪರಿಗ್ರಹವೆನ್ನುತ್ತಾರೆ

೪. **ದ್ವೇಷ**—ಅನ್ಯರ ಐಶ್ವರ್ಯ, ಯೌವನ, ಧನ, ಕೀರ್ತಿ, ರಾಜ್ಯ, ವೈಭವ ಮೊದಲಾದುವುಗಳನ್ನು ನೋಡಿ, ಅವು ತನಗೆ ಇಲ್ಲವೆಂದು ಮನಸ್ಸಿನಲ್ಲಿ ಕಡಕಣಿಸಿಕೊಳ್ಳುವುದೇ ದ್ವೇಷ ಪರಿಗ್ರಹವಾಗಿದೆ

೫. **ಹಾಸ್ಯ**—ನಗೆಯ ಪರಿಣಾಮವಾಗುವುದೇ ಹಾಸ್ಯ ಪರಿಗ್ರಹವಾಗಿದೆ

೬. **ಭಯ**—ನನಗೆ ಪಾಪ ಬಂದೀತು, ಯಾರ ಅಗಲುವಿಕೆಯಾದರೂ ಉಂಟಾದೀತು, ನೋವು ಉತ್ಪನ್ನವಾದೀತು—ಎಂದು ಹೆದರುವುದೇ ಭಯ ಪರಿಗ್ರಹವೆನಿಸುವುದು

೭. **ರತಿ**—ತಮಗೆ ಸೇರುವ ಪದಾರ್ಥದ ಮೇಲೆ ಪ್ರೇಮ ಮಾಡುವುದೇ ರತಿ ಪರಿಗ್ರಹವಾಗಿದೆ

೮. **ಅರತಿ**—ತಮಗೆ ಸೇರದಂಥ ಪದಾರ್ಥದ ಮೇಲೆ ಪ್ರೇಮಮಾಡದೆ ಇರುವುದು ಅರತಿ ಪರಿಗ್ರಹವೆನಿಸುತ್ತದೆ

೯. **ಶೋಕ**—ತನಗೆ ಬೇಕಾದ ಪದಾರ್ಥದ ವಿಯೋಗವಾದಲ್ಲಿ ಉಂಟಾಗುವ ಕ್ಲೇಶಪರಿಣಾಮವು ಶೋಕ ಪರಿಗ್ರಹವೆನಿಸುತ್ತದೆ

೧೧. ಜುಗುಪ್ಸೆ—ಹೇಸಿಕೆ ಬರುವಂಥ ಪದಾರ್ಥದ ನೆನಪು ಮಾಡುವುದರಿಂದಲೂ ಅದನ್ನು ಸ್ಪರ್ಶ ಮಾಡುವುದರಿಂದಲೂ ನಮ್ಮ ಪರಿಣಾಮದಲ್ಲಿ ಉಂಟಾಗುವ ಗ್ಲಾನಿಗೆ ಜುಗುಪ್ಸೆ ಎನ್ನುವರು ಅಲ್ಲದೆ ಎರಡನೆಯವರ ಉತ್ಕರ್ಷವನ್ನು ನೋಡಲಿಕ್ಕೆ ಆಗದ ವೃತ್ತಿಗೂ ಜುಗುಪ್ಸೆ ಎನ್ನುವರು

೧೧. ಕ್ರೋಧ—ತನ್ನ ಪರಿಣಾಮದಲ್ಲಿ ಕ್ರೋಧ ಉತ್ಪನ್ನವಾಗುವುದಕ್ಕೆ ಕ್ರೋಧ ಪರಿಗ್ರಹವೆನ್ನುವರು.

೧೨. ಮಾನ—ಉಚ್ಚ ಜಾತಿ, ಕುಲ, ತಪ, ರೂಪ, ವಿಜ್ಞಾನ, ಐಶ್ವರ್ಯ, ಬಲ ಮೊದಲಾದುವುಗಳ ಗರ್ವದಿಂದ ತಾನು ಸ್ವತಃ ಉಚ್ಚನೆಂದೂ ಉಳಿದವರು ನೀಚರೆಂದೂ ತಿಳಿಯುವದು ಅಲ್ಲದೆ ತನ್ನ ಪರಿಣಾಮವನ್ನು ಕಠೋರ ಮಾಡಿಕೊಳ್ಳುವುದು ಮಾನ ಪರಿಗ್ರಹವೆಂದು ತಿಳಿಯಬೇಕು

೧೩. ಮಾಯಾ—ಮನಸ್ಸಿನಲ್ಲಿ ಯಾವಾಗಲೂ ಕಪಟವನ್ನು ಇಟ್ಟುಕೊಳ್ಳುವುದು. ಅಂದರೆ ತನ್ನ ಮನಸ್ಸಿನಲ್ಲಿ ಇರುವುದೊಂದು ಹೊರಗೆ ಇನ್ನೊಂದನ್ನು ವ್ಯಕ್ತಮಾಡಿ ತೋರಿಸುವುದಕ್ಕೆ ಮಾಯಾ ಪರಿಗ್ರಹವೆನ್ನುತ್ತಾರೆ.

೧೪. ಲೋಭ—ಪರದ್ರವ್ಯದ ಇಚ್ಛೆಮಾಡುವ ಪರಿಣಾಮವಾಗುವುದೇ ಲೋಭ ಪರಿಗ್ರಹವು

ಈ ಪ್ರಕಾರ ಸಂಸಾರಕ್ಕೆ ಮೂಲ ಕಾರಣವೂ ಆತ್ಮವನ್ನು ಘಾತಮಾಡುವಂಥವೂ ತೀವ್ರ ಬಂಧಕ್ಕೆ ಕಾರಣವಾದಂಥವೂ ಆದ ಈ ಹದಿನಾಲ್ಕು ಅಂತರಂಗಪರಿಗ್ರಹಗಳು ಇವೆ

ಬಾಹ್ಯ ಪರಿಗ್ರಹಗಳು—ಇದೇ ಪ್ರಕಾರ ಕ್ಷೇತ್ರ, ವಾಸ್ತು, ಹಿರಣ್ಯ, ಸುವರ್ಣ, ಧನ, ಧಾನ್ಯ, ದಾಸೀ, ದಾಸ, ಕುಪ್ಯ ಮತ್ತು ಭಾಂಡವೆಂಬ ಹತ್ತು ಪ್ರಕಾರದ ಬಾಹ್ಯಪರಿಗ್ರಹಗಳು ಇವೆ ಈ ಅಂತರ್‌ಬಾಹ್ಯ—ಇಪ್ಪತ್ತು ನಾಲ್ಕು—ಪರಿಗ್ರಹಗಳನ್ನು ತ್ಯಾಗಮಾಡಿದ ನಿರ್ಗ್ರಂಥ ಮುನಿಗಳಿಗೇ ಗುರುತ್ವವು ಉಂಟಾಗುತ್ತದೆ ಸಂಯಮಿಯಾಗಿಯೂ ಯಾರಲ್ಲಿ ಅಂತರ್‌ಬಾಹ್ಯಪರಿಗ್ರಹಗಳಿಂದ ಮನವು ಮಲಿನವಾಗಿರುವುದೋ ಅಂಥವರಿಗೆ ಗುರುವೆಂದು ಅನ್ನಲಿಕ್ಕೆ ಬರುವದಿಲ್ಲ ಯಾರು ಹಗಲಿರುಳೂ ಏಳುವಾಗ, ಕೂಡುವಾಗ, ಮಲಗುವಾಗ, ಊಟಮಾಡುವಾಗ ಕೂಡ ಜ್ಞಾನಧ್ಯಾನದಲ್ಲಿಯೂ ಧರ್ಮಧ್ಯಾನದಲ್ಲಿಯೂ ಇಚ್ಛಾನಿರೋಧವಾಗುವಂಥ ತಪಶ್ಚರ್ಯೆಯಲ್ಲಿಯೂ ಲೀನನಾಗಿರುವರೋ ಅವರೇ ಪ್ರಶಂಸೆಗೆ ತಕ್ಕ ಗುರುಗಳು ಅವರೇ ಮಾನ್ಯರು, ಪೂಜ್ಯರು, ವಂದ್ಯರು ಈ ಗುಣಗಳಿಲ್ಲದ ಇತರರಿಗೆ ಸಮ್ಯಗ್ದೃಷ್ಟಿಯುಳ್ಳ ಪುರುಷನು ವಂದಿಸುವದಿಲ್ಲ ಕೆಲವೊಂದು ಕಡೆಗೆ "ಜ್ಞಾನಧ್ಯಾನತಪೋರತ್ನಃ" ಎಂದೂ ಪಾಠವಿದೆ ಇದರ ಅರ್ಥವು ಜ್ಞಾನ, ಧ್ಯಾನ, ಮತ್ತು ತಪ ಈ ರತ್ನಗಳು ಯಾರಲ್ಲಿ ಇವೆಯೋ ಅವರೇ ಗುರುವೆಂದು ಇರಬೇಕು ಈ ಪ್ರಕಾರ ದೇವಗುರುಶಾಸ್ತ್ರಗಳಲ್ಲಿ ಶ್ರದ್ಧೆಯನ್ನು ಇಡುವುದು ಸಮ್ಯಗ್‌ದರ್ಶನದ ಲಕ್ಷಣವೆಂದು ತಿಳಿಯಬೇಕು.

ಪಗೆ ಕರ್ಮಂ ಪೆಱಪಲ್ಲವೆಂದಘಕುಲಪ್ರಧ್ವಂಸನೋಪಾಯಮಂ
ಬಗೆಯುತ್ತುಂ ಸಮಸಂದ ಮೂಲಗುಣಮಿರ್ಪತ್ತೆಂಟುಮಮಂ ತಾಳ್ದಿ ಸಂ- ।
ಬುಗೆಯಿಂ ಮಿಕ್ಕಱಿವಿಂ ಸದಾಚರಿತದಿಂ ಸನ್ಮಾರ್ಗದಿಂ ಸಲ್ವ ಸಾ-
ಧುಗಳೆಮ್ಮಂ ದಯೆಯಿಂದೆ ಬೋಧಿಸುತಮಿರ್ಕೆಂದುಂ ಜಿನೇಂದ್ರೋಕ್ತಿಯಿಂ ॥

—ಶಾಂತಿನಾಥ–ಸುಕುಮಾರಚರಿತಂ ೧-೭.

ಈಗ ಸಮ್ಯಗ್ದರ್ಶನದ ನಿಃಶಂಕಿತ ಗುಣದ ಲಕ್ಷಣ ಹೇಳುತ್ತಾರೆ—

ಇದಮೇವೇದೃಶಮೇವ ತತ್ತ್ವಂ ನಾನ್ಯನ್ನ ಚಾನ್ಯಥಾ ।
ಇತ್ಯಕಂಪಾಯಸಾಂಭೋವತ್ಸನ್ಮಾರ್ಗೇಽಸಂಶಯಾ ರುಚಿಃ ॥ ೧೧ ॥

ಅನ್ವಯಾರ್ಥ—(ತತ್ತ್ವಂ) ತತ್ತ್ವವು (ಇದಂ ಏವ) ಇದೇ ಇದೆ (ಈದೃಶಂ ಏವ) ಇದೇ ಪ್ರಕಾರ ಇದೆ. (ಅನ್ಯತ್ ನ) ಎರಡನೆಯದು ಇಲ್ಲ, (ಅನ್ಯಥಾ ನ) ಎರಡನೆಯ ಪ್ರಕಾರದ್ದೂ ಇಲ್ಲ, (ಇತಿ) ಈ ಪ್ರಕಾರ (ಆಯಸಾಂಭೋವತ್) ಖಡ್ಗದ ಧಾರೆಯ ನೀರಿನಂತೆ (ಸನ್ಮಾರ್ಗೇ) ಮೋಕ್ಷ ಮಾರ್ಗದಲ್ಲಿ (ರುಚಿಃ) ಶ್ರದ್ಧೆಯು—ಇರುವುದಕ್ಕೆ—(ಅಸಂಶಯಾ) ನಿಃಶಂಕಿತ ಅಂಗವೆನಿಸುತ್ತದೆ.

ಅರ್ಥ—ಇದಂ ಎಂದರೆ ಮೇಲೆ ಹೇಳಿದ ಆಪ್ತ, ಆಗಮ, ಗುರುವಿನ ಲಕ್ಷಣ ಇದೇ ತತ್ತ್ವವಾಗಿದೆ, ಮತ್ತು ಅದು ಸತ್ಯವಾಗಿದೆ. ಈದೃಶಂ ಎಂದರೆ ಇದೇ ಪ್ರಕಾರದ್ದಿದೆ, ಬೇರೆ ಪ್ರಕಾರದ್ದು ಇಲ್ಲ. ಈ ರೀತಿ ನಿಷ್ಕಂಪ ಖಡ್ಗದ ಧಾರೆಯ ನೀರಿನಂತೆ ಸನ್ಮಾರ್ಗದಲ್ಲಿ ಸಂಶಯರಹಿತ ರುಚಿ ಅಂದರೆ ಶ್ರದ್ಧೆ ಇರಬೇಕು. ಇದಕ್ಕೆ ನಿಃಶಂಕಿತ ಗುಣವೆನ್ನುವರು.[1]

[ಇಲ್ಲಿ 'ತತ್ತ್ವಂ' ಎಂಬ ಪದವು ಯಾವ ವಿಶೇಷಣವೂ ಇಲ್ಲದೆ ಸಾಮಾನ್ಯರೂಪದಲ್ಲಿ ಉಪಯೋಗಿಸಲ್ಪಟ್ಟಿದ್ದರೂ ಅದೂ 'ಸನ್ಮಾರ್ಗೆ' ಎಂಬ ಪದಕ್ಕೆ ಸಂಬಂಧಿಸಿ ಒಂದುದರಿಂದ ಅದರ ಸಂಬಂಧವು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್‌ಚಾರಿತ್ರರೂಪ ಸನ್ಮಾರ್ಗದ ವಿಷಯದ ತತ್ತ್ವಕ್ಕೆ ಅನ್ವಯಿಸುತ್ತದೆ. ಇದರಲ್ಲಿ ಎಲ್ಲವೂ ಉಪಯುಕ್ತವಾದ ತತ್ತ್ವಸಮೂಹವು ಸಮಾವಿಷ್ಟವಾಗುತ್ತದೆ. ಅದರಿಂದ ಸಮ್ಯಗ್ದರ್ಶನಾದಿಗಳಲ್ಲಿಯೂ ಸಮ್ಯಗ್ದರ್ಶನ ಮೊದಲಾದವುಗಳ ವಿಷಯಗಳಾದ ಆಪ್ತ-ಆಗಮ-ತಪಸ್ವಿಗಳಲ್ಲಿಯೂ ಜೀವಾ-ಜೀವಾದಿ ತತ್ತ್ವಗಳಲ್ಲಿಯೂ ಸಂದೇಹವೇ ಇಲ್ಲದ ಪೂರ್ಣ ಶ್ರದ್ಧೆಯು ಇರುವುದೇ ಈ ಅಂಗದ ವಿಷಯವಾಗಿದೆ ಇದರಲ್ಲಿ ಅನಿಶ್ಚಯವಾದಂಥ ಯಾವ ಸಂಗತಿಯೂ ಇಲ್ಲ ಇದರಿಂದ 'ತತ್ತ್ವವು ಇದೇ ಆಗಿದೆ; ಹೀಗೆಯೇ ಇದೆ, ಬೇರೆ ಪ್ರಕಾರ ಇಲ್ಲ, ಬೇರೆಯೂ ಇಲ್ಲ' ಎಂಬ ಸುನಿಶ್ಚಿತ ಹಾಗೂ ವಿಚಲಿತ ಶ್ರದ್ಧೆಯನ್ನು ವ್ಯಕ್ತಪಡಿಸುವ ಸಂಗತಿಯು ಈ ಅಂಗದ ಸ್ವರೂಪದ ವಿಷಯದಲ್ಲಿ ಇಲ್ಲಿ ಹೇಳಲ್ಪಟ್ಟಿದೆ.

ಇನ್ನು ಸಮಂತಭದ್ರಾಚಾರ್ಯರು ಬೇರೆ ಕಡೆಗೆ 'ಏಕಾಂತದೃಷ್ಟಿಪ್ರತಿಷೇಧಿ ತತ್ತ್ವಂ' 'ತತ್ತ್ವಂ ತ್ವನೇಕಾಂತಮಶೇಷರೂಪಂ' ಎಂದು ಹೇಳಿದ್ದಾರೆ ಇಲ್ಲಿ ತತ್ತ್ವದ ಏಕಾಂತಿಕ ಸ್ವರೂಪವನ್ನು ಹೇಗೆ ಹೇಳುತ್ತಾರೆ? ಎಂಬ ಸಂಶಯವನ್ನು ಯಾರೂ ಎತ್ತುವ ಕಾರಣವಿಲ್ಲ ಯಾಕಂದರೆ ತನ್ನ ವಿಷಯದ ಸುನಿಶ್ಚಿತ ಸ್ವರೂಪವನ್ನು ವ್ಯಕ್ತಪಡಿಸಲಿಕ್ಕೆಂದು ಬಂದ 'ಏವ' ಎಂಬ ಪದದಿಂದ ಸಂಪೂರ್ಣ ಏಕಾಂತದ ಪ್ರಸಂಗವು ಉಂಟಾಗಲಾರದು ಅದು ವಾಕ್ಯದ ಸುಸಂಘಟಿತತನಕ್ಕಾಗಿ ಇದೆ ಅದಕ್ಕಾಗಿಯೇ ಅದನ್ನು 'ಇದಂ', 'ಈದೃಶಂ' ಎಂಬ ಶಬ್ದಗಳ ಜೊತೆಯಲ್ಲಿ ಗ್ರಂಥಕಾರರು ಪ್ರಯೋಗಿಸಿದ್ದಾರೆ ಅದರಿಂದ ಇಲ್ಲಿ ಯಾವ ಅಸಂಗತತೆಯೂ ಇಲ್ಲ ಸ ಧ ]

ವಿಶೇಷಾರ್ಥ—ಜಗತ್ತಿನಲ್ಲಿ ಗದೆ, ಚಕ್ರ, ತ್ರಿಶೂಲಗಳೇ ಮೊದಲಾದ ಅನೇಕ ಆಯುಧಗಳನ್ನು ಹಿಡಿದು, ಸ್ತ್ರೀಯರಲ್ಲಿ ಆಸಕ್ತರಾಗಿ, ಕ್ರೋಧ, ಮಾನ, ಮಾಯಾ, ಲೋಭಗಳಿಂದ ಅನೇಕ ಪ್ರಕಾರದ ಕರ್ತವ್ಯಗಳನ್ನು ಮಾಡಿ ತೋರಿಸುವ ಇಚ್ಛೆಯುಳ್ಳವರಿಗೆ ದೇವರೆಂದು ಎನ್ನುವರು ಅದರಂತೆಯೇ ಹಿಂಸೆಮಾಡುವುದರಲ್ಲಿ ಧರ್ಮವಿದೆ, ಕಾಮ-ಕ್ರೋಧಾದಿಗಳು ಉತ್ಪನ್ನವಾಗುವುದರಿಂದ ಧರ್ಮದ ಹಾನಿಯಾಗುವದಿಲ್ಲ, ಮೊದಲಾದ ಸಂಗತಿಗಳನ್ನು ನಿರೂಪಿಸುವ ಆಗಮಗಳಿಗೆ ಶಾಸ್ತ್ರವೆನ್ನುವರು. ಹಾಗೆಯೇ ಅನೇಕ ವೇಷಗಳನ್ನು ಧರಿಸುವ ಪಾಖಂಡಿ, ಕ್ರೋಧೀ, ಲೋಭೀ, ಅಭಿಮಾನಿ ಪುರುಷರಿಗೆ ಗುರುವೆನ್ನುವರು ನಿಜವಾಗಿ ನೋಡಿದರೆ ಇವರು ದೇವರಲ್ಲ, ಗುರುಗಳಲ್ಲ. ಅದು ಶಾಸ್ತ್ರವೂ ಅಲ್ಲ ಹೀಗೆ ನಿಜವಾಗಿ ಶ್ರದ್ಧೆಯನ್ನು ಇಟ್ಟವರ ಮನಸ್ಸು, ಮೋಸಗಾರರು ಹೂಡಿದ ಮಾಟ ಮಾಯಗಳಿಗೂ ಯುಕ್ತಿ ಪ್ರಯುಕ್ತಿಗಳಿಗೂ ಮಂತ್ರ ತಂತ್ರಗಳಿಗೂ ಮುಗ್ಧವಾಗುವದಿಲ್ಲ, ಚಂಚಲವೂ ಆಗುವದಿಲ್ಲ. ಖಡ್ಗದ ಧಾರೆಯ ನೀರು ಹೇಗೆ ಹವೆಯಿಂದ ಚಂಚಲವಾಗುವುದಿಲ್ಲವೋ ಹಾಗೆಯೇ ಇದು ಇದೆ. ಮಿಥ್ಯಾದೃಷ್ಟಿಯುಳ್ಳ ಜನರ ವಚನವೆಂಬ ಹವೆಯಿಂದ ಸಮ್ಯಗ್ದೃಷ್ಟಿ ಪುರುಷನ ಪರಿಣಾಮವು ಸತ್ಯಾರ್ಥ ದೇವ-ಶಾಸ್ತ್ರ ಗುರು ಮತ್ತು ಧರ್ಮದ ಸ್ವರೂಪದ ವಿಷಯದಲ್ಲಿ ಸಂಶಯಗೊಳ್ಳುವುದಿಲ್ಲ. ಇಂಥ ವ್ಯಕ್ತಿಗಳಿಗೇ ನಿಃಶಂಕಿತಗುಣವುಳ್ಳ ಸಮ್ಯಕ್ತ್ವಿ ಪುರುಷರೆಂದು ತಿಳಿಯಬೇಕು

ಏಳು ಭಯಗಳು—ಆತ್ಮ ತತ್ತ್ವದ ನಿರ್ದೋಷ ಸ್ವರೂಪವನ್ನು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಸ್ವಾನುಭವದಿಂದ ಅರಿತು, ಆತ್ಮ ಬೇರೆ, ಶರೀರ ಬೇರೆ ಎಂದು ತಿಳಿದುಕೊಂಡ ಸಮ್ಯಗ್ದೃಷ್ಟಿ ಪುರುಷನಿಗೆ ಏಳು ಪ್ರಕಾರದ

---

1 ಆಯತವರ್ಮನು ಹೇಳುವದು ಹೀಗೆ

ಕಂದ ॥ ಇದು ದೈವವಿಂತುಟಾಗಮವಿಂದುತಪವೆಂದರಿದು ನಂಬಿ ತಳರದೆ ಮನಮಂ ।
ಪದಿನಾರೆಡೆಗೆ ಸಪ್ರುತ್ತಿರದೆ ನಿಲ್ವುದು ನಿರಾಕುಳಂ ನಿಶ್ಶಂಕೆ ॥ ೭ ॥

ವಚನ—ಇಂತಾಪ್ತಾಗಮತಪಸ್ವಿಗಳ ನಿರರ್ಗಳೆಯೆಂದು ನಂಬಿ ಕಬ್ಬುನಮುಂಡನೀರವೋಲಿರ್ಪ್ಪುರುವಣ್ಣದಿಪ್ಪುದು ನಿಶ್ಶಂಕೆ ॥

ಭಯುಗಳು ಇರುವದಿಲ್ಲ ಇಂಥವರಿಗೆ ನಿಃಶಂಕಿತ ಗುಣವು ಪ್ರಾಪ್ತವಾಗುತ್ತದೆ ಈ ಏಳು ಭಯಗಳ ಹೆಸರುಗಳು ಹೀಗಿವೆ ಇಹಲೋಕಭಯ, ಪರಲೋಕಭಯ, ಮರಣಭಯ, ವೇದನಾಭಯ, ಅರಕ್ಷಕಭಯ, ಅಗುಪ್ತಿಭಯ ಮತ್ತು ಅಕಸ್ಮಾತ್ ಭಯ.

(೧) ತನ್ನ ಮಕ್ಕಳು-ಮರಿಗಳು ನಾಶವಾದಾವು, ತನ್ನ ಬಾಳುವೆ ನಾಶವಾದೀತು—ಇವೇ ಮೊದಲಾದ ವಿಚಾರಗಳು ಮನಸ್ಸಿನಲ್ಲಿ ಬರುವುದಕ್ಕೆ ಇಹಲೋಕಭಯವೆನ್ನುತ್ತಾರೆ ಎಲ್ಲ ಸಂಸಾರೀ ಜೀವಿಗಳಿಗೂ ಇದು ಇರುತ್ತದೆ

(೨) ಪರಲೋಕದಲ್ಲಿ ನನಗೆ ಯಾವ ಗತಿಯು ಆದೀತು, ಯಾವ ಯೋನಿಯಲ್ಲಿ ನಾನು ಹುಟ್ಟೇನು, ಅಲ್ಲಿ ಸುಖ-ದುಃಖಗಳು ಹೇಗೆ ಹೇಗೆ ಸಿಕ್ಕಾವು—ಇಂಥ ವಿಚಾರಗಳು ಮನಸ್ಸಿನಲ್ಲಿ ಬಂದು, ಹೆದರಿಕೆಯು ಹುಟ್ಟುವುದು ಪರಲೋಕಭಯವಾಗಿದೆ

(೩) ಸಾಯುವಾಗ ನನಗೆ ಎಷ್ಟು ದುಃಖವಾದೀತು, ನನ್ನ ಸಾವು ಎಲ್ಲಿ ಆದೀತು, ಇದಾರಿಗೆ ಗೊತ್ತು—ಈ ಪ್ರಕಾರದ ಅಂಜಿಕೆಯು ಮನಸ್ಸಿನಲ್ಲಿ ಉಂಟಾಗುವುದಕ್ಕೆ ಮರಣಭಯವೆನ್ನುವರು

(೪) ನನಗೆ ಬೇನೆ ಬಂದರೆ ಅನೇಕ ಪ್ರಕಾರದ ನೋವುಗಳು ಆದಾವಲ್ಲ—ಎಂದು ವಿಚಾರ ಬಂದು ಹೆದರುವುದು ವೇದನಾಭಯವಾಗಿದೆ

(೫) ಸಂಕಟ ಬಂದಾಗ ನಮ್ಮನ್ನು ರಕ್ಷಿಸುವವರು ಯಾರೂ ಇಲ್ಲ ಇನ್ನೇನು ಮಾಡಬೇಕು?—ಎಂದು ವಿಚಾರವು ಹುಟ್ಟುವುದೇ ಅರಕ್ಷಕಭಯವೆನಿಸುತ್ತದೆ

(೬) ನಮ್ಮ ವಸ್ತುವನ್ನು ಯಾರಾದರೂ ಕದ್ದು ಒಯ್ಯಬಹುದೇನು? ಹೀಗೆ ವಿಚಾರವು ಮನದಲ್ಲಿ ಉತ್ಪನ್ನ-ವಾಗುವುದು ಅಗುಪ್ತಿಭಯವಾಗಿದೆ

(೭) ಅಕಸ್ಮಾತ್ ಏನಾದರೊಂದು ರೋಗವು ಬಂದೀತೇ? ಎಂದು ವಿಚಾರವು ಉತ್ಪನ್ನವಾಗಿ ಮನಸ್ಸಿನಲ್ಲಿ ಹೆದರಿಕೆಯು ಉಂಟಾಗುವದು ಅಕಸ್ಮಾತ್‌ಭಯವೆನಿಸುತ್ತದೆ

ಸ್ವಪರ ವಸ್ತುವಿನೊಳಗಿನ ನಿಜವಾದ ಭೇದವನ್ನು ತಿಳಿಯುವ ಸಮ್ಯಗ್ದೃಷ್ಟಿಯುಳ್ಳ ಪುರುಷನಿಗೆ ಈ ಏಳು ಭಯಗಳು ಉತ್ಪನ್ನವಾಗುವದಿಲ್ಲ ಈ ದೇಹದಲ್ಲಿ ಕಾಲ್ಬೆರಳಿನಿಂದ ತಲೆಯವರೆಗೂ ಎಲ್ಲ ಕಡೆಗೆ ಜ್ಞಾನವು ತುಂಬಿದೆ-ಯೆಂಬುದನ್ನು ಅವನು ವಿಚಾರಿಸುತ್ತಾನೆ ಇದೇ ನಮ್ಮ ಧನವು ಈ ಜ್ಞಾನ ಭಾವದ ಹೊರತಾಗಿ ಇನ್ನಾವ ಒಂದು ಪರಮಾಣುವು ಕೂಡ ನಮ್ಮದಾಗಿಲ್ಲ ದೇಹ ಹಾಗೂ ದೇಹಕ್ಕೆ ಸಂಬಂಧಿಸಿದ ಸ್ತ್ರೀ, ಪುತ್ರ, ಮಿತ್ರ, ಧನ, ರಾಜ್ಯೈಶ್ವರ್ಯ, ಮೊದಲಾದುವುಗಳೆಲ್ಲ ನನ್ನಿಂದ ಭಿನ್ನವಾಗಿವೆ ಸಂಯೋಗದಿಂದ ಇವುಗಳ ಉತ್ಪತ್ತಿಯಾಗಿದೆ ಇವುಗಳಿಗೂ ನಮಗೂ ಏನು ಸಂಬಂಧ? ಸಂಸಾರದಲ್ಲಿ ಇಂಥ ಸಂಬಂಧಗಳು ಅನಂತಾನಂತವಾಗಿ, ಅವುಗಳ ವಿಯೋಗವಾದುದುಂಟು ಯಾವುದರ ಸಂಯೋಗವಾಗಿದೆಯೋ ಅದರ ವಿಯೋಗವು ನಿಶ್ಚಯವಾಗಿಯೂ ಆಗತಕ್ಕುದೇ ಇರುತ್ತದೆ ಯಾವುದು ಹುಟ್ಟಿದೆಯೋ; ಅದಕ್ಕೆ ಮರಣೆಂಬುದು ನಿಶ್ಚಿತವಾದದ್ದು ನಾನು ಜ್ಞಾನರೂಪಿಯಾದ ಆತ್ಮನು ಹುಟ್ಟಿದವನಲ್ಲ ಅದಕ್ಕಾಗಿ ನನ್ನ ನಾಶವೂ ಆಗುವಂತಿಲ್ಲ ಈ ಪ್ರಕಾರ ಯಾರು ದೃಢವಾಗಿ ನಂಬಿರುವರೋ ಅವರಿಗೆ ಶರೀರವು ನಷ್ಟವಾದೀತೆಂಬ ದುಃಖವು ಉಂಟಾಗುವದಿಲ್ಲ ಅಲ್ಲದೆ ಹತ್ತು ಪ್ರಕಾರದ ಪರಿಗ್ರಹಗಳ ವಿಯೋಗದ ಭಯವೂ ಮೂಲದಲ್ಲಿ ಇರಲಾರದು ಅದರಿಂದಲೇ ಇಹಲೋಕದ ಭಯವು ಇಲ್ಲದಂಥ ಸಮ್ಯಗ್ದೃಷ್ಟಿಯು ನಿಃಶಂಕಿತನೆನಿಸುತ್ತಾನೆ ಅರಕ್ಷಕ ಭಯವೂ ಸಮಗ್ದೃಷ್ಟಿ ಪುರುಷನಿಗೆ ಇರುವದಿಲ್ಲ ಯಾಕೆಂದರೆ ಜಗತ್ತಿನಲ್ಲಿ ಸತ್ತೆಯ ಅವಸ್ಥೆಯಲ್ಲಿರುವ ಪದಾರ್ಥಕ್ಕೆ ಮೂರು ಕಾಲದಲ್ಲಿಯೂ ನಾಶವೆಂಬುವದು ಇಲ್ಲ ಜ್ಞಾನಸ್ವರೂಪಿಯಾದ ಆತ್ಮನು ಸ್ವಯಂಸಿದ್ಧ ಅಸಹಾಯಕನೇ ಇದ್ದಾನೆ ಅವನನ್ನು ರಕ್ಷಿಸುವವನೂ ನಷ್ಟಗೊಳಿಸುವವನೂ ಯಾವನೂ ಇಲ್ಲ ಈ ಪ್ರಕಾರ ಅವನದು ದೃಢ ನಿಶ್ಚಯವಾಗಿರುತ್ತದೆ, ಯಾವುದನ್ನು ಯಾರಾದರೂ ನಾಶ ಮಾಡುವುದು ಸಾಧ್ಯವಿದೆಯೋ ಅದನ್ನು ರಕ್ಷಿಸಲಿಕ್ಕೂ ಯಾರಾದರೂ ಬೇಕೆ ಆಗುತ್ತಾರೆ. ಸಮ್ಯಗ್ದೃಷ್ಟಿ ಪುರುಷನು ಅವಿನಾಶಿ ಸ್ವರೂಪದ ಅನುಭವವನ್ನು ಹೊಂದುತ್ತಿರುವುದರಿಂದ ಅರಕ್ಷಾಭಯ ರಹಿತ ನಿಃಶಂಕನಿರುವನು ಸಮ್ಯಗ್ದೃಷ್ಟಿ ಪುರುಷನಿಗೆ ಅಗುಪ್ತಿ ಭಯವು ಇರುವದಿಲ್ಲ ಧನವಂತರಿಗೆ ತಮ್ಮ ಹಣದ ಸುರಕ್ಷಿತತೆಗಾಗಿ ತಿಜೋರಿಯು ಬೇಕಾಗುತ್ತದೆ ತಿಜೋರಿಯು ಇಲ್ಲವಾದಲ್ಲಿ ತನ್ನ ಹಣವು ಹೋದೀತಲ್ಲ ಎಂದು ಅವನು ಹೆದರುವನು. ಆದರೆ ಸಮ್ಯಗ್ದೃಷ್ಟಿ ಪುರುಷನ ಧನವು ಅಪಹರಿಸಲಿಕ್ಕೆ ಬರುವಂಥದಿರುವದಿಲ್ಲ ಅದರಿಂದ ಅವನಿಗೆ ಕಳ್ಳರ ಹೆದರಿಕೆಯು ಇಲ್ಲ ವಸ್ತುವಿನ ಸ್ವರೂಪವು

ಅದು ನಿಜಸ್ವರೂಪದಲ್ಲಿದ್ದ ಧನವು ಅದು ತನ್ನ ಸ್ವರೂಪದಲ್ಲಿಯೇ ಇರುತ್ತದೆ ಅದು ತನ್ನ ಹೊರಗ ಎಲ್ಲಿಯೂ ಇಲ್ಲ. ಅಂದರೆ ಚೈತನ್ಯ ಸ್ವರೂಪಿಯಾದ ನಾನೆಂಬ ಆತ್ಮನು ಅವನ ಚೈತನ್ಯ ಸ್ವರೂಪವು ನನ್ನ ಹತ್ತರವೇ ಇದೆ ಅದರಲ್ಲಿ ಅನ್ಯರ ಪ್ರವೇಶವೇ ಇಲ್ಲ. ಈ ಅನಂತ ಜ್ಞಾನದರ್ಶನವು ನನ್ನ ಸ್ವರೂಪವಾಗಿದೆ ಇದೇ ನನ್ನ ಅಪ್ರಮಾಣವೂ ಅವಿನಾಶಿಯೂ ಆದ ಧನವು ಇದಕ್ಕೆ ಕಳ್ಳರ ಭಯವೂ ಇಲ್ಲ. ಕಳ್ಳರು ಇದನ್ನು ಕದಿಯಲಿಕ್ಕೆ ಸಾಧ್ಯವಿಲ್ಲ. ಹೀಗೆಲ್ಲ ಅವನಿಗೆ ನಿಶ್ಚಿತಜ್ಞಾನವಿರುತ್ತದೆ ಅಂತಲೇ ಸಮ್ಯಗ್ದೃಷ್ಟಿ ಪುರುಷನಿಗೆ ಅಗುಪ್ತಿಭಯವು ಇಲ್ಲ. ಅದಕ್ಕಾಗಿ ಅವನು ನಿಃಶಂಕನಿರುತ್ತಾನೆ.

ಅವನಿಗೆ ಆಕಸ್ಮಿಕ ಭಯವೂ ಇಲ್ಲ. ಅವನಿಗೆ ಯಾವಾಗಲೂ ಆತ್ಮವು ಶುದ್ಧ, ದೃಷ್ಟಾ, ಅಚಲ, ಅನಾದಿ, ಅನಂತ, ಸ್ವಭಾವಸಿದ್ಧ, ಅಲಕ್ಷ್ಯ, ಚೈತನ್ಯ ಪ್ರಕಾಶರೂಪ ಸುಖದ ಸ್ಥಾನವಿದೆ. ಹೀಗೆ ನಿಶ್ಚಿತ ಜ್ಞಾನ ಹಾಗೂ ವಿಶ್ವಾಸಗಳು ಇದ್ದುದರಿಂದ ಅದರಲ್ಲಿ ಅಕಸ್ಮಿಕವಾಗಿ ಏನೂ ಸಂಭವಿಸಲಾರವು, ಎಂಬುದಾಗಿ ಅವನ ದೃಢಭಾವವಿರುತ್ತದೆ ಅಂತಲೇ ಅವನು ನಿಃಶಂಕನಿದ್ದಾನೆ ಯಾರಿಗೆ ಸಮ್ಯಗ್ದರ್ಶನವು ಇರುತ್ತದೆಯೋ ಅವರ ಪರಿಣಾಮದಲ್ಲಿ ಈ ಏಳು ಭಯಗಳು ಉತ್ಪನ್ನವಾಗುವದಿಲ್ಲ. ಪದಾರ್ಥಗಳ ಸತ್ಯಸ್ವರೂಪವನ್ನು ತಿಳಿಯದ ಹೊರತಾಗಿ ಆತ್ಮವು ಸಪ್ತ ಭಯರಹಿತವಾಗುವದಿಲ್ಲ ಸಮ್ಯಗ್ದೃಷ್ಟಿ ಪುರುಷನು ಅಹಿಂಸೆಯೇ ಧರ್ಮವೆಂದು ತಿಳಿಯುತ್ತಾನೆ. ಜೀವದ ಘಾತವನ್ನು ಮಾಡುವ ಯಜ್ಞಯಾಗಾದಿ ಕರ್ಮಗಳಿಂದ ಎಂದೂ ಧರ್ಮವಾಗುವದಿಲ್ಲ; ಇವುಗಳಿಂದ ಧರ್ಮವಾದೀತೆಂಬ ಕಲ್ಪನೆಯನ್ನೂ ಅವನು ಕಲ್ಪನೆಯಲ್ಲಿಯೂ ಎಂದೂ ತರುವದಿಲ್ಲ ಅದರಿಂದ ಅವನು ನಿಃಶಂಕಗುಣವನ್ನು ಧರಿಸಿರುತ್ತಾನೆ ಈ ಪ್ರಕಾರ ನಿಃಶಂಕಿತ ಅಂಗದ ಲಕ್ಷಣವಿರುತ್ತದೆ.

ಅಱಿವು ನೆಗಟ್ಟಿಯೆಂಬುಭಯ ಕಾಂಡಮೆ ಮುಕ್ತಿಪಥಕ್ಕೆ ಹೇತುವೆಂ-
ದಱಿವುವರನ್ಯರಂತವರೊಳೇನೊ ಜಿನಾಗಮಮಂತುಟಲ್ತು ವಿ- ।
ಕ್ಕಱಿವಿನ ಮಿಕ್ಕನಂಬುಗೆಯ ಮಿಕ್ಕ ನೆಗಟ್ಟಿಯ ಕೂಟದಿಂದ ಮಾ-
ದಱಿವನಿತರ್ಕಮಾನೆಱಗಿ ಪೊರ್ದುವೆನಕ್ಕಪವರ್ಗಮಾರ್ಗಮಂ ॥

—ರನ್ನ–ಅಜಿತಪುರಾಣತಿಲಕಂ ೧–೯

ಈಗ ನಿಃಕಾಂಕ್ಷಿತ ಗುಣದ ಲಕ್ಷಣ ಹೇಳುತ್ತಾರೆ—

ಕರ್ಮಪರವಶೇ ಸಾಂತೇ ದುಃಖೈರಂತರಿತೋದಯೇ ।
ಪಾಪಬೀಜೇ ಸುಖೇಽನಾಸ್ಥಾ ಶ್ರದ್ಧಾನಾಕಾಂಕ್ಷಣಾ ಸ್ಮೃತಾ ॥ ೧೨ ॥

ಅನ್ವಯಾರ್ಥ—(ಕರ್ಮಪರವಶೇ) ಕರ್ಮದ ಸ್ವಾಧೀನವಿದ್ದ (ಸಾಂತೇ) ನಾಶವಾಗುವಂಥ (ದುಃಖೈಃ ಅಂತರಿತೋದಯೇ) ಒಳಗೆ ದುಃಖವು ಉತ್ಪನ್ನವಾಗುವಂಥ (ಪಾಪಬೀಜೇ) ಪಾಪದ ಬೀಜವಾದಂಥ (ಸುಖೇ)—ಇಂಥ ಸುಖದಲ್ಲಿ (ಅನಾಸ್ಥಾ) ಇಚ್ಛೆ ಇಲ್ಲದಿರುವ (ಶ್ರದ್ಧಾ) ಶ್ರದ್ಧೆಯೇ (ಅನಾಕಾಂಕ್ಷಣಾ) ನಿಷ್ಕಾಂಕ್ಷಿತ ಅಂಗ (ಸ್ಮೃತಾ) ಆಗಿದೆ.[1]

---

[1] ಆಯತವರ್ಮನು ಹೇಳುವದು ಹೀಗೆ ಇನ್ನೆರಡನೆಯ ನಿಷ್ಕಾಂಕ್ಷಿ ಎಂಬಂಗದ ಲಕ್ಷಣಮೆಂತೆನೆ—
ಕಂದ ॥ ಸ್ಥಿರಮಪ್ಪುವಲ್ಲಪಾಸ್ರವ । ಕರವಪ್ಪುವು ವಸ್ತುಕುಂದ ಕುಂದವುವೆಂದಿಂ- ।
ದ್ರರಮರ್ತ್ಯರ ಭೋಗಂಗಳ ನೆಲೆಯುದುದವನೋಲ್ದು ಬಯಸದದು ನಿಷ್ಕಾಂಕ್ಷೆ ॥
ವಚನ—ಸುಕಾಲದೊಳು ಸುಕ್ಷೇತ್ರದೊಳು ಬಿತ್ತನಿಕ್ಕಿ ರಕ್ಷಿಸುತ್ತಿರ್ದ ಸಗೆಪಾತರ್ಮಿಜೆ ಬೆಳೆಗೆನ್ನದೆಯುಂ ಬೆಳೆವಂತೆ ತಾಂ ಪಾಪಭೀರುವಾಗಿಯೂಳ್ಳಿ ತಪ್ಪನೆಗಳ್ತಿಯೊಳ್ಳಿಗಳುತ್ತಮಿಂದ್ರಾದಿಭೋಗಂಗಳಂ ಬಯಸದೆಯುಮಪ್ಪ ತಪಂಗೆ ತಾನೆ ಇದಿರ್ಪುಗುವುದರಿಂ ಬಯಸಬೆ.ದವು ಶಾಶ್ವತಸುಖವಲ್ಲಪ್ಪ ಸದ್ದೃಷ್ಟಿಯಿಂ ಬಯಸೆ ಪಡುವ ವಸ್ತು ಮೋಕ್ಷ-ಸುಖಕ್ಕೇನುಂ ದೊರೆಯಲ್ಲವು ಮೋಕ್ಷಸುಖಮಂ ಹೇಳ್ವಡೆ ತ್ರಿಲೋಕೋದರವರ್ತಿಗಳಪ್ಪ ಇಂದ್ರಾದಿ ಪ್ರೈಖಪ್ಪ ವೊಂದು ರಾಶಿಯಂ ಮಾಡಿಯದಂ ತ್ರಿಗುಣಂಗೆಯ್ದು ಮತ್ತದನಂತಗುಣಂಗೆಯ್ದೊಡಂ ಸಿದ್ಧರೊಂದು ಕ್ಷಣದ ಸುಖಕ್ಕೆ ಸಮನಲ್ಲದನರಿಯದೆ ದರ್ಶನಚಾರಿತ್ರ ಮೋಹನೀಯ ಕರ್ಮದಿಂದೆನಗೆ ಪುಕ್ಕಲು ಪಲವಕ್ಕೆ . . . . ವಾಸುದೇವ ಚಕ್ರವರ್ತಿತ್ವಾದಿ ಪರಲೋಕ ಸುಖಮುಮಂ ಸಂಸಾರವರ್ಧನೀಯಮುಮಂ ಬಯಸಿ ನಿದಾನಪೂರ್ವಕಮಪ್ಪ ಸುಖಕ್ಕಳಿಪಿ ಮುಕ್ತಿಸಾಧನಮಪ್ಪ . . ಅದಮಿಂ ಬಯಸದುದು ನಿಷ್ಕಾಂಕ್ಷೆಯೆಂಬುದು

**ಅರ್ಥ**—ಕರ್ಮದ ಸ್ವಾಧೀನದಲ್ಲಿದ್ದು, ಕೊನೆಗೆ ನಾಶವಾಗುವಂಥದ್ದೂ, ಉದಯಕಾಲದಲ್ಲಿ ದುಃಖ ಮಿಶ್ರಿತವಾಗಿರತಕ್ಕದ್ದೂ, ಪಾಪದ ಬೀಜದಂತೆ ಇರುವಂಥದ್ದೂ ಆದ ಸುಖವು ಅನಿತ್ಯವಾಗಿರುತ್ತದೆ ಹೀಗೆ ಅನಿತ್ಯತ್ವದ ಶ್ರದ್ಧೆಯನ್ನು ಇಡುವುದೇ ನಿಃಕಾಂಕ್ಷಿತ ಗುಣವೆನಿಸುತ್ತದೆ.

[ಸಂಸಾರದೊಳಗಿನ ವಿಷಯಸುಖಗಳಿಗೆ ಕರ್ಮಪರವಶ ಮೊದಲಾದ ವಿಶೇಷಣಗಳನ್ನು ಹೇಳಿದ್ದು ಬಹಳ ಯೋಗ್ಯವಾಗಿದೆ ಅವುಗಳಿಂದ ಆ ಸುಖಗಳು ನಿಃಸಾರವೆಂದು ಸ್ಪಷ್ಟವಾಗುತ್ತದೆ ಈ ದೃಷ್ಟಿಯಿಂದ ಸುಖವನ್ನು ಭೋಗಿಸುವವನಲ್ಲಿ ಆಸ್ಥೆ, ಆಸಕ್ತಿ, ಇಚ್ಛೆ, ರುಚಿ, ಶ್ರದ್ಧೆಗಳು ಇರುವದಿಲ್ಲ ಅದರಿಂದ ಸಮ್ಯಗ್ದೃಷ್ಟಿಯುಳ್ಳವರ ಕಾರ್ಯಗಳು ಆಕುಲತೆಯಿಲ್ಲದೆ ನಡೆಯುತ್ತವೆ ಇನ್ನು ವಿಷಯಸುಖದ ನಿಜವಾದ ಸ್ವರೂಪವನ್ನು ಅರಿಯದವರು ತೃಷ್ಣೆಯುಳ್ಳವರಾಗುತ್ತಾರೆ ಅವರು ವಿಕಾರದ ಬೆನ್ನು ಹತ್ತಿರುತ್ತಾರೆ ಸ ಥ]

**ವಿಶೇಷಾರ್ಥ—ಅನಾಕಾಂಕ್ಷೆ.** ಇಂದ್ರಿಯಗಳಿಂದ ಉಂಟಾಗುವ ಸುಖವು ನಿಜವಾದ ಸುಖವಲ್ಲ ಈ ಸಂಗತಿಯ ತಿಳುವಳಿಕೆಯು ನಿಶ್ಚಿತವಾಗಿರುವುದು ಅನಾಕಾಂಕ್ಷೆಯೆಂಬ ಸಮ್ಯಕ್ತ್ವದ ಎರಡನೆಯ ಅಂಗವಾಗಿದೆ ಇದನ್ನು ಭಗವಂತನು ಹೇಳಿದ್ದಾನೆ ಇಂದ್ರಿಯಜನ್ಯಸುಖವು ಪರವಶವನ್ನುಂಟುಮಾಡುವದು ಅದು ಸ್ವಾಧೀನವಲ್ಲ ಅದು ಪುಣ್ಯಕರ್ಮದ ಆಧೀನವಾಗಿದೆ ಪುಣ್ಯಕರ್ಮದ ಉದಯವಿಲ್ಲದೆ, ಕೋಟ್ಯವಧಿ ಉಪಾಯಗಳನ್ನು ಮಾಡಿದರೂ ಪುರುಷಾರ್ಥವನ್ನು ಪ್ರದರ್ಶಿಸಿದರೂ ಅದು ಪ್ರಾಪ್ತವಾಗದು ಪುಣ್ಯಕರ್ಮದ ಸಹಾಯದ ಹೊರತಾಗಿ ಬೇಕೆನಿಸುವ ವಸ್ತುಗಳೂ ದೊರೆಯುವದಿಲ್ಲ ಒಂದು ವೇಳೆ ಪುಣ್ಯದ ಉದಯದಿಂದ ಸುಖವು ಸಿಕ್ಕರೂ ಆ ಸುಖವು ಮರ್ಯಾದಿತ-ವಾಗಿರುತ್ತದೆ. ಅದು ಕೆಲವು ದಿವಸ ಇದ್ದು, ಕೊನೆಗೆ ಇಲ್ಲದಂತೆ ಆಗುತ್ತದೆ ಅಂದಮೇಲೆ ಇಂಥ ಪರಾಧೀನವಾಗಿದ್ದ ಸುಖವನ್ನು ಎಷ್ಟು ಹೊತ್ತು ಭೋಗಿಸಲಿಕ್ಕೆ ಆದೀತು? ಇಂದ್ರಿಯಗಳಿಂದ ಹುಟ್ಟುವ ಸುಖವು ಇಷ್ಟ ವಿಷಯದ ಸ್ವಾಧೀನವಿದೆ ಇಷ್ಟ ಸಮಾಗಮವು ನಾಶವಂತವಾಗಿದೆ ಅದು ಇಂದ್ರಧನುಷ್ಯದಂತೆ ಕ್ಷಣಭಂಗುರವಾಗಿದೆ, ಪರಾಧೀನವೂ ಆಗಿದೆ. ಇಂದ್ರಿಯಜನ್ಯ ಸುಖವು ಶರೀರದ ಆರೋಗ್ಯ, ಧನ, ಸ್ತ್ರೀ-ಪುತ್ರ, ಆಯುಷ್ಯ, ಉಪಕರಣ, ಕ್ಷೇತ್ರ, ಕಾಲ, ಇಂದ್ರಿಯ, ಇಂದ್ರಿಯಗಳ ವಿಷಯ ಹೀಗೆ ಅನೇಕ ಪರಪದಾರ್ಥಗಳ ಮೇಲೆ ಅವಲಂಬಿಸಿ ಇರುತ್ತದೆ ಅದು ನಿಶ್ಚಯವಾಗಿಯೂ ಇಲ್ಲದಂತೆ ಆಗುವಂಥದಿರುತ್ತದೆ ಅಂದಮೇಲೆ ಇಂಥ ಪರಾಧೀನ ಸುಖವನ್ನು ಎಷ್ಟು ಕಾಲದ ವರೆಗೆ ಭೋಗಿಸಲಿಕ್ಕೆ ಆದೀತು? ಇದರ ವಿಚಾರವನ್ನು ಪ್ರತಿಯೊಬ್ಬರೂ ಮಾಡಲಿಕ್ಕೆ ಬೇಕು ಇಂದ್ರಿಯಜನ್ಯ ಸುಖವು ಅವಶ್ಯವಾಗಿ ವಿನಾಶಿಯಾಗಿದ್ದು, ಅದರಲ್ಲಿ ನಿರ್ವಿಘ್ನತೆಯಾದರೂ ಇದೆಯೇ? ಇಲ್ಲ, ಅದರಲ್ಲಿಯೂ ಅನೇಕ ವಿಘ್ನಗಳು ಉತ್ಪನ್ನವಾಗುತ್ತವೆ ಒಮ್ಮೆ ರೋಗ-ರುಜಿನಗಳು ಹುಟ್ಟುವವು, ಇನ್ನೊಮ್ಮೆ ಸ್ತ್ರೀಪುತ್ರರ ವಿಯೋಗ ಉಂಟಾಗುತ್ತದೆ ಮತ್ತೊಮ್ಮೆ ಅಸಹನೀಯವಾದ ಅಪಮಾನವಾಗುತ್ತದೆ ಮಗುದೊಮ್ಮೆ ದುಡ್ಡು ಹಾಳಾಗುತ್ತದೆ ಅದೊಮ್ಮೆ ಅನಿಷ್ಟ ಸಂಯೋಗವಾಗುತ್ತದೆ ಹೀಗೆ ಇಂದ್ರಿಯಜನ್ಯ ಸುಖದಲ್ಲಿ ಅನೇಕ ಪ್ರಕಾರದ ದುಃಖಗಳು ಬಂದು ಎದುರು ನಿಲ್ಲುತ್ತವೆ ವಿಷಯಸುಖವು ಪಾಪದ ಬೀಜವಾಗಿದೆ ಇದರಲ್ಲಿ ಮಗ್ನವಾಗಿ ಹೋಗುವುದರಿಂದ ಮೊದಲು ತನ್ನ ತನದ ಅರಿವಂತೂ ಹಾರಿಹೋಗುತ್ತದೆ ಅಲ್ಲದೆ ದೊಡ್ಡ ಪ್ರಮಾಣದ 'ಆರಂಭ'ಮಾಡುವ ಪ್ರವೃತ್ತಿಯೂ ಉಂಟಾಗುತ್ತದೆ, ಇದೊಂದು ಬೇರೆಯೇ ಅನ್ಯಾಯದಿಂದ ವಿಷಯಗಳನ್ನು ಸೇವಿಸುವ ಬುದ್ಧಿಯಂತೂ ಕಟ್ಟಿಟ್ಟದ್ದೇ. ಇದರಿಂದ ಪಾಪಬಂಧ-ವಂತೂ ಆಗಿಯೇ ಆಗುವದು ಅದಕ್ಕಾಗಿ ಈ ಇಂದ್ರಿಯಜನ್ಯ ಸುಖವು ನರಕ ತಿರ್ಯಂಚಾದಿ ಗತಿಗಳಲ್ಲಿ ಪರಿಭ್ರಮಣ ಮಾಡಿಸುವಂಥ ಪಾಪಬಂಧನದ ಬೀಜವಾಗಿದೆ ಹೀಗೆ ಆಚಾರ್ಯರು ಮೇಲಿಂದ ಮೇಲೆ ಹೇಳಿದ್ದಾರೆ, ಎಚ್ಚರಿಕೆ ಕೊಟ್ಟು ಹೇಳಿದ್ದಾರೆ ಈ ಪ್ರಕಾರದ ಪರಾಧೀನವೂ ಕೊನೆಯುಳ್ಳುದೂ ದುಃಖದಿಂದ ಕೂಡಿದುದೂ ಆದ ಸುಖವು ಇಂದ್ರಿಯಜನ್ಯ ಸುಖವಾಗಿದೆ ಅದು ಸಮ್ಯಗ್ದೃಷ್ಟಿ ಪುರುಷನ ದೃಷ್ಟಿಯಿಂದ ನಿಜವಾದ ಸುಖವಲ್ಲ ಅದಕ್ಕಂತಲೇ ಆ ಸುಖದಲ್ಲಿ ಆಸ್ಥೆಯು ಅವನಿಗೆ ಉತ್ಪನ್ನವಾಗುವದಿಲ್ಲ ಆಸ್ಥೆ ಇಲ್ಲದಿದ್ದಲ್ಲಿ ಇಚ್ಛೆಯಾದರೂ ಹೇಗೆ ಹುಟ್ಟೀತು? ಒಟ್ಟಿನ ಮೇಲೆ ಸಮ್ಯಗ್ದೃಷ್ಟಿಗೆ ಆತ್ಮಾನುಭವವಿರುತ್ತದೆ ಅದರಿಂದ ಆತ್ಮನ ಸ್ವಭಾವವೆನಿಸುವ ಅತೀಂದ್ರಿಯ ಅನಂತ ಜ್ಞಾನ, ನಿರಾಕುಲಾತ್ಮಕ ಅವಿನಾಶಿ ಸುಖ ಇವುಗಳ ಅನುಭವವು ಅವನಿಗೆ ಇರುತ್ತದೆ ಸಂಸಾರದಲ್ಲಿ ಇಂದ್ರಿಯಾಧೀನವಿದ್ದ ಸುಖವು ನಿಜವಾದ ಸುಖವಾಗಿರದೆ ಸುಖದ ಆಭಾಸಮಾತ್ರ ಆಗಿರುತ್ತದೆ ನಿಜವಾದ ಸುಖವಲ್ಲ ತಿರುಗಿ ವೇದನೆಯನ್ನು ಉತ್ಪನ್ನಮಾಡುವದಕ್ಕೆ ಕಾರಣವಾಗಿರುತ್ತದೆ ಯಾರಿಗೆ ಹಸಿವು ಆಗಿರುವುದೋ ಅವರು ಊಟವನ್ನು ಮಾಡಿ ತೃಪ್ತಿಯನ್ನು ಹೊಂದಬಹುದಾಗಿದೆ ನೀರಡಿಕೆಯಾದವನು ತಣ್ಣಗಿನ ನೀರನ್ನು ಕುಡಿದು ತೃಪ್ತಿಯನ್ನು ಹೊಂದಿಯಾನು

ಚಳಿಯು ಹತ್ತುವಂಥವನು ಉಣ್ಣೆಯ ವಸ್ತ್ರವನ್ನಾಗಲಿ, ಇನ್ನಾವುದಾದರೂ ಬೆಚ್ಚಗಿನ ಅರಿವೆಯನ್ನಾಗಲಿ ಹೊತ್ತುಕೊಂಡು ತನ್ನ ಚಳಿಯನ್ನು ಕಳೆದು ಕೊಂಡಾನು; ಹಾಗೆ ಇಚ್ಛೆಯನ್ನು ಮಾಡಿಯಾನು ಮೈಯಲ್ಲಿ ಉಷ್ಣತೆಯಾಗುವಂಥವನು ತಂಗಾಳಿಯ ಝುಳಕನ್ನು ಬಯಸಬಹುದು ಒಟ್ಟಿನಲ್ಲಿ ಯಾರಿಗೆ ವೇದನೆಯು ಆಗುವುದೋ ಅವರು ಅದರ ನಿವಾರಣೆಗಾಗಿ ಉಪಾಯವನ್ನು ಮಾಡಬಹುದು ಅದನ್ನುಳಿದು ಆ ಉಪಾಯಗಳ ಅವಶ್ಯಕತೆಯು ಇತರರಿಗೆ ಏನಿದೆ? ಕಣ್ಣಿನ ರೋಗವಿಲ್ಲದೆ ಆ ಕಣ್ಣಿನ ಔಷಧವನ್ನು ಯಾರು ಹಾಕಿಕೊಳ್ಳುವರು? ಕಿವಿಯ ರೋಗವಿಲ್ಲದೆ ಕಿವಿಯಲ್ಲಿ ಆಡಿನ ಮೂತ್ರವನ್ನಾಗಲಿ, ಎಣ್ಣೆಯನ್ನಾಗಲಿ ಯಾರು ಹಾಕಿಕೊಳ್ಳುವರು? ಚಳಿಜ್ವರ ಇಲ್ಲದ ಹೊರತಾಗಿ ಬೆಂಕಿಯ ಉಷ್ಣತೆಯನ್ನಾಗಲಿ, ಸೂರ್ಯನ ಬಿಸಿಲನ್ನಾಗಲಿ, ಯಾರು ಆದರದಿಂದ ಸ್ವೀಕರಿಸುವರು? ಅರ್ಧಾಂಗವಾಯು ರೋಗವಿಲ್ಲದೆ ಯಾರು ತಮ್ಮ ಮೈಗೆ ದುರ್ಗಂಧ ತೈಲವನ್ನು ಹಚ್ಚಿಸಿಕೊಂಡು ತಿಕ್ಕಿಕೊಳ್ಳುವರು?

**ಭಾವಾರ್ಥ**—ಸಂಸಾರದಲ್ಲಿ ಐದೂ ಇಂದ್ರಿಯಗಳಿಗೆ ಯಾವ ಕಾಲಕ್ಕೆ ತೀವ್ರ ಇಚ್ಛೆಯು ಉತ್ಪನ್ನವಾಗುವುದೋ ಆಗ ವಿಷಯಗಳನ್ನು ಉಪಭೋಗಿಸುವ ಅಪೇಕ್ಷೆಯು ಉತ್ಪನ್ನವಾಗುತ್ತದೆ ವಿಷಯೋಪಭೋಗವು ಹುಟ್ಟಿದ ವೇದನೆಯನ್ನು ಕೆಲ ಕಾಲ ಮಾತ್ರ ಶಾಂತಗೊಳಿಸಿ, ಪುನಃ ಹೆಚ್ಚಿಗೆ ತೊಂದರೆಯನ್ನು ಕೊಡುತ್ತದೆ ಅದರಿಂದ ವಿಷಯದ ಉಪಭೋಗದಿಂದ ಉಂಟಾಗುವ ಸುಖವು ನಿಜವಾದ ಸುಖವಾಗಿರದೆ ದುಃಖವೇ ಆಗಿರುತ್ತದೆ.

**ಆಶೆಯು ದುಃಖಕ್ಕೆ ಕಾರಣವಾಗಿದೆ**—ಬಾಹ್ಯ ಶರೀರ ಇಂದ್ರಿಯಾದಿಗಳಿಗೇನೇ ಆತ್ಮವೆಂದು ತಿಳಿಯುವವರಿಗೆ ಬಹಿರಾತ್ಮ ಎಂದು ಶಾಸ್ತ್ರಗಳಲ್ಲಿ ಹೇಳಿವೆ ಇಂಥ ಜೀವಗಳು ಮಾತ್ರ ವಿಷಯಗಳ ಭೋಗದಿಂದ ವೇದನೆಯನ್ನು ಕಡಿಮೆಮಾಡಿಕೊಳ್ಳುವ ಉಪಾಯಕ್ಕೇ ಸುಖವೆಂದು ಮನ್ನಿಸುತ್ತವೆ ಆದರೆ ಹೀಗೆ ತಿಳಿದು ಕೊಳ್ಳುವುದು ಅವರ ಮೋಹಕರ್ಮದಿಂದ ಹುಟ್ಟಿದ ಭ್ರಮವಾಗಿದೆ. ಯಾವುದರಿಂದ ಮೂಲದಲ್ಲಿ ವೇದನೆಯೇ ಉಂಟಾಗದೋ ಅಂಥ ನಿರಾಕುಲತೆಯು ಯಾವುದರಲ್ಲಿರುವುದೋ ಅದಕ್ಕೇನೇ ಸುಖವೆನ್ನಬೇಕು ಇದು ವಿಷಯದ ಸ್ವಾಧೀನದಲ್ಲಿದೆ—ಎಂದು ತಿಳಿದುಕೊಳ್ಳುವುದು ಭ್ರಮವಾಗಿದೆ ಸಮ್ಯಗದೃಷ್ಟಿ ಪುರುಷನಿಗೆ ಅಹಮಿಂದ್ರಲೋಕದ ಸುಖವೂ ಕೂಡ ಪರಾಧೀನವು, ಆಕುಲತೆಯಿಂದ ಕೂಡಿದುದೂ, ವಿನಾಶಿತವೂ ಇದೆ ಎಂದು ಎನಿಸುತ್ತದೆ ಅದಕ್ಕಾಗಿ ಅವನಿಗೆ ಇಂದ್ರಿಯ ಜನಿತ ಸುಖದ ಇಚ್ಛೆಯ ಉತ್ಪತ್ತಿಯು ಎಂದೂ ಆಗುವದಿಲ್ಲ ಈ ಜನ್ಮದಲ್ಲಿ ತಮಗೆ ಧನ ಸಂಪತ್ತಿ, ಐಶ್ವರ್ಯ ಮೊದಲಾದುವುಗಳು ಪ್ರಾಪ್ತವಾಗಬೇಕು ಎಂಬ ಇಚ್ಛೆಯನ್ನಂತೂ ಅವನು ಮಾಡುವುದೇ ಇಲ್ಲ. ಇಷ್ಟೇ ಅಲ್ಲ, ಪರಲೋಕದಲ್ಲಿಯೂ ಕೂಡ ತನಗೆ ಇಂದ್ರಪದವಿ, ಚಕ್ರವರ್ತಿತ್ವಗಳೇ ಮೊದಲಾದುವು ಪ್ರಾಪ್ತವಾಗಬೇಕೆಂದು ವಿಚಾರವನ್ನು ಕೂಡ ಮನಸ್ಸಿನಲ್ಲಿ ತರುವದಿಲ್ಲ. ಇಂದ್ರಿಯಗಳ ವಿಷಯವು ಅಲ್ಪಕಾಲ ಮಾತ್ರ ನಿಲ್ಲುವಂಥದಿರುತ್ತದೆ. ವಿಷಯೋಪಭೋಗದಿಂದ ಭವಿಷ್ಯತ್ ಕಾಲದಲ್ಲಿ ಅಸಂಖ್ಯಾತ ಕಾಲದ ವರೆಗೆ ನರಕದ ದುಃಖವೂ, ಅನಂತ ಕಾಲದ ವರೆಗೆ ಪಶುಯೋನಿಯೊಳಗಿನ ದುಃಖವೂ, ಮಹಾದರಿದ್ರ ನೀಚಕುಲದಲ್ಲಿಯೂ ಜನ್ಮ ಇವೇ ಮೊದಲಾದ ಮನುಷ್ಯಯೋನಿಯೊಳಗಿನ ದುಃಖಗಳು ಪ್ರಾಪ್ತವಾಗುತ್ತವೆ. ಸಂಸಾರದಲ್ಲಿ ಆಶೆ ಮತ್ತು ಸಂಶಯಗಳು—ಈ ಎರಡು ವಿಕಾರಗಳು—ಮೋಹಕರ್ಮದ ಉದಯದಿಂದ ಜೀವಕ್ಕೆ ಯಾವಾಗಲೂ ಉತ್ಪನ್ನವಾಗುತ್ತಿರುತ್ತವೆ ಇವುಗಳಲ್ಲಿ ಆಶೆಯನ್ನು ಮಾಡುತ್ತ ನಿಂತರೆ ಯಾವುದೂ ಪ್ರಾಪ್ತವಾಗುವದಿಲ್ಲ ಆ ಕಾರಣ ಎಲ್ಲ ಜೀವಗಳು ಒಂದೇ ಸವನೆ ತಮಗೆ ಧನ ದೊರೆಯಬೇಕು, ದೇಹಕ್ಕೆ ಆರೋಗ್ಯ ಸಿಗಬೇಕು, ಕುಟುಂಬದ ಉನ್ನತಿಯಾಗಬೇಕು, ಇಂದ್ರಿಯಗಳ ಶಕ್ತಿಗಳು ಬೆಳೆಯಬೇಕು, ಜಗತ್ತಿನಲ್ಲಿ ತನ್ನ ಪ್ರತಿಷ್ಠೆಯು ಹೆಚ್ಚಬೇಕು ಇವೇ ಮೊದಲಾದುವುಗಳ ಆಶೆಯನ್ನು ಮಾಡುತ್ತಿರುತ್ತವೆ ಆದರೆ ಕೇವಲ ಆಶೆಯನ್ನು ಮಾಡುವುದರಿಂದ ಇವೆಲ್ಲ ದೊರೆಯುವದಿಲ್ಲ. ಆಶೆಯ ಬೆನ್ನು ಹತ್ತುವುದರಿಂದಲೇ ಜೀವಗಳಿಗೆ ಯಾವಾಗಲೂ ಪಾಪ ಹಾಗೂ ಅಂತರಾಯ ಕರ್ಮಗಳ ತೀವ್ರ ಬಂಧವಾಗುತ್ತದೆ.

**ಸಂತೋಷವೇ ಸುಖ**—ಅನೇಕ ಜೀವಿಗಳು ಭೋಗದ ಅಭಿಲಾಷೆಯಿಂದ ವ್ರತ, ದಾನ, ಶೀಲ, ತಪ, ಸಂಯಮ ಮೊದಲಾದುವುಗಳನ್ನು ಮಾಡುತ್ತಿರುತ್ತಾರೆ. ಆದರೆ ಮನಸ್ಸಿನಲ್ಲಿ ಇಚ್ಛೆಯೊಂದನ್ನು ಹಿಡಿದು, ಮಾಡಿದ ಈ ವ್ರತಾದಿಗಳಿಂದ ಪುಣ್ಯವು ತನ್ನದಾಗುವದಿಲ್ಲ ಯಾವ ಇಚ್ಛೆಯನ್ನೂ ಇಟ್ಟುಕೊಳ್ಳದೆ ಸತ್ಕರ್ಮಗಳನ್ನು ಮಾಡುವವರಿಗೆ ಪುಣ್ಯವು ಲಭಿಸುತ್ತದೆ. ಇಲ್ಲವೆ ತನ್ನ ಶುಭಾ-ಶುಭ ಕರ್ಮದ ಉದಯಕ್ಕೆ ಅನುಸರಿಸಿ, ಉಂಟಾದ ಸ್ಥಿತಿಯಲ್ಲಿ ಸಂತೋಷದಿಂದ ಇದ್ದು, ವ್ಯಾಕುಲನಾಗದೆ, ಹೆಚ್ಚಿನ ಸುಖಗಳನ್ನು ಅಪೇಕ್ಷಿಸದೆ ಇರುವವರಿಗೆ ಪುಣ್ಯವು ಪ್ರಾಪ್ತವಾಗುತ್ತದೆ ಎಲ್ಲ ಜೀವಿಗಳಿಗೂ ತಮಗೆ ಮರಣ, ವಿಯೋಗ, ಪರಾಧೀನತೆ, ಅಪಮಾನ, ಧನದ ನಾಶ, ರೋಗ

ಮೊದಲಾದವುಗಳು ಆಗಬಾರದೆಂದು ಎನಿಸುತ್ತದೆ ಒಂದು ವೇಳೆ ಅವು ಉಂಟಾದವೆಂದು ಸಂಶಯ ತಾಳಿ, ಭಯ-ಭೀತಿಯಾಗಿರುತ್ತವೆ ಆದರೆ ಮರಣ, ವಿಯೋಗ, ಧನಹಾನಿ, ಅಪಮಾನ, ಬಲಹಾನಿ, ರೋಗವೇದನಾ ಮೊದಲಾದವು ಪೂರ್ವಜನ್ಮಕೃತ ಪಾಪಬಂಧದಿಂದ ಉಂಟಾಗುತ್ತವೆ. ಅವುಗಳನ್ನು ನಾಶಮಾಡುವ ಸಾಮರ್ಥ್ಯವು ಇಂದ್ರ, ಮಂತ್ರ, ತಂತ್ರ, ಔಷಧ ಅಥವಾ ಸ್ವತಃ ಜಿನೇಂದ್ರರಲ್ಲಿಯೂ ಇಲ್ಲ. ಯಾಕೆಂದರೆ ಮರಣವು ಆಯು ಕರ್ಮದ ನಾಶದಿಂದ ಆಗುತ್ತದೆ ಅಂತರಾಯ ಕರ್ಮದ ಉದಯದಿಂದ ತಾನು ಬಯಸಿದಷ್ಟು ಧನವು ಪ್ರಾಪ್ತವಾಗುವದಿಲ್ಲ, ಕಡಿಮೆ ಧನವು ಬರುತ್ತದೆ ಅಸಾತಾಕರ್ಮದ ಉದಯದಿಂದ ರೋಗವುಂಟಾಗುತ್ತದೆ ಈ ಸ್ಥಿತಿಗಳೆಲ್ಲ ಕರ್ಮಗಳಿಂದ ಪ್ರಾಪ್ತ-ವಾಗುತ್ತವೆ. ಕರ್ಮದ ಸ್ಥಿತಿಯನ್ನು ಇಲ್ಲದಂತೆ ಮಾಡಲೂ ಅವುಗಳನ್ನು ಹೊಸದಾಗಿ ಹುಟ್ಟಿಸಲೂ ಅದರಂತೆ ಬದಲು ಮಾಡಲಿಕ್ಕೂ ಯಾವ ದೇವ, ದಾನವ, ಇಂದ್ರ, ಜಿನೇಂದ್ರಾದಿಗಳಿಗೂ ಸಾಧ್ಯವಿಲ್ಲ ಅದಕ್ಕವರು ಸಮರ್ಥರೂ ಇಲ್ಲ ನಮ್ಮ ಪರಿಣಾಮದಿಂದ ನಮಗೆ ಕಟ್ಟಿದ ಕರ್ಮವು ಕ್ಷಯಿಸಲಿಕ್ಕೆ ನಮ್ಮವೇ ಆದ ಕ್ಷಮಾ, ದಯಾ, ಸಂತೋಷ, ತಪಶ್ಚರ್ಯಾದಿ ಪರಿಣಾಮಗಳೇ ಅವಶ್ಯಕವಾಗಿವೆ. ಅನ್ಯ ಮಾರ್ಗದಿಂದ ಆಗುವುದು ಶಕ್ಯವಿಲ್ಲ ಇಂಥ ದೃಢ ನಿಶ್ಚಯವು ನಿರಪೇಕ್ಷ ಸಮ್ಯಗ್ದೃಷ್ಟಿ ಪುರುಷನಿಗೆ ಉಂಟಾಗುತ್ತದೆ

**ಒಂದು ಸಂಶಯ**—ಎಲ್ಲ ಪರಿಗ್ರಹಗಳನ್ನು ತ್ಯಾಗಮಾಡಿದಂಥ ಸಾಧುಗಳಿಗೂ ಅದರಂತೆ ತ್ಯಾಗಿ ಗೃಹಸ್ಥರಿಗೂ ಈ ಪ್ರಕಾರದ ನಿಃಶಂಕತ್ವ ಮತ್ತು ನಿರಪೇಕ್ಷತ್ವಗಳು ಇರುವ ಸಂಭವವಿದೆ ಆದರೆ ನಮ್ಮಂಥ ಅವ್ರತೀ ಸಾಮಾನ್ಯ ಗೃಹಸ್ಥರಿಗೆ ಅಂಥ ಅವಸ್ಥೆಯು ಹೇಗೆ ಶಕ್ಯವಿದೆ? ಅವ್ರತಸಮ್ಯಗ್ದೃಷ್ಟಿ ಗೃಹಸ್ಥನಿಗೆ ಭೋಗದ ಇಚ್ಛೆ ಇದ್ದರೆ ವ್ಯಾಪಾರ, ಉದ್ಯೋಗ, ಸೇವಾವೃತ್ತಿಯೇ ಮೊದಲಾದವುಗಳನ್ನು ಸ್ವೀಕರಿಸಿದಾಗ ಲಾಭವಾಗಬೇಕೆಂಬ ಇಚ್ಛೆಯು ಇರತಕ್ಕದ್ದೇ ತಮ್ಮ ಕುಟುಂಬ ಹಾಗೂ ಧನದ ವೃದ್ಧಿಯಾಗಬೇಕೆಂಬ ಇಚ್ಛೆಯು ಆಗುವುದು ಸ್ವಾಭಾವಿಕವಾಗಿದೆ ಅದೇ ರೀತಿ, ರೋಗವು ಹುಟ್ಟೀತೋ ಹೇಗೆ? ಮನೆತನದೊಳಗಿನ ಯಾವ ಪುರುಷನ ವಿಯೋಗವಾದೀತೋ ಹೇಗೆ? ತಮ್ಮ ಜೀವನಸಾಧನೆಗಳು ನಷ್ಟವಾಗಬಹುದೇ ಹೇಗೆ? ನಮ್ಮ ದ್ರವ್ಯವು ನಾಶವಾಗುವುದೋ ಹೇಗೆ ಇಂಥ ಅನೇಕ ಸಂಶಯಗಳೂ ಅವರಿಗೆ ಯಾವಾಗಲೂ ಹುಟ್ಟುತ್ತಿರುತ್ತವೆ ಇಂಥ ಸ್ಥಿತಿಯಲ್ಲಿ ಅವನ ನಿಃಶಂಕ ಭಾವ ಮತ್ತು ನಿಃಕಾಂಕ್ಷಿತ ಭಾವಗಳು ಹೇಗೆ ತಾಳಿ, ಬಾಳುವುದು ಸಾಧ್ಯವಿದೆ? ನೀವು ಈ ಎರಡು ಗುಣಗಳ ಹೊರತಾಗಿ ಸಮ್ಯಕ್ತ್ವವು ಇರುವುದು ಶಕ್ಯವಿಲ್ಲೆಂದು ಹೇಳುವಿರಿ? ಅಂದ ಮೇಲೆ ಅವ್ರತಸಮ್ಯಗ್ದೃಷ್ಟಿಗೆ ಸಮ್ಯಕ್ತ್ವ ಉಂಟಾಗುವದೆಂದು ಅನ್ನುವುದು ಹೇಗೆ ಸಂಭಾವ್ಯವಿದೆ?

**ಸಮಾಧಾನ**—ಸಮ್ಯಕ್ತ್ವವು ಮಿಥ್ಯಾತ್ವ ಹಾಗೂ ಅನಂತಾನುಬಂಧಿ ಕಷಾಯಗಳು ನಷ್ಟವಾಗಲು ಉತ್ಪನ್ನವಾಗುತ್ತಿರುತ್ತದೆ ಅವ್ರತಸಮ್ಯಗ್ದೃಷ್ಟಿ ಪುರುಷನಿಗೆ ಇವೆರಡೂ ಇಲ್ಲವಾಗುವುದರಿಂದ ನಿಜವಾದ ಅರ್ಥದಲ್ಲಿ ಆತ್ಮತತ್ತ್ವದ ಹಾಗೂ ಪರತತ್ತ್ವದ ಶ್ರದ್ಧೆಯು ಪ್ರಕಟವಾಗುತ್ತದೆ, ಅನಂತಾನುಬಂಧೀ ಕಷಾಯದ ಅಭಾವದಿಂದ ರಾಗಭಾವದ ಅಭಾವವಾಗುತ್ತದೆ ಇದರಿಂದ ಜ್ಞಾನ ಮತ್ತು ಶ್ರದ್ಧೆಗಳಲ್ಲಿರುವ ವಿಪರೀತತೆಯು ಇಲ್ಲದಂತಾಗುತ್ತದೆ ಈ ಜ್ಞಾನ ಶ್ರದ್ಧೆಗಳಲ್ಲಿಯ ಏಕಮುಖತೆಯಿಂದ ಇಹಲೋಕ, ಪರಲೋಕಾದಿ ಏಳು ಭಯಗಳು ಅವರಿಗೆ ಹುಟ್ಟುವದಿಲ್ಲ ಈ ಭಯಗಳು ಇಲ್ಲದಂಥವನು ತಮ್ಮ ಆತ್ಮದ ಅಖಂಡ, ಅವಿನಾಶಿತ್ವ, ಟಂಕೋತ್ಕೀರ್ಣ ಜ್ಞಾನ ದರ್ಶನ ಸ್ವಭಾವಗಳಲ್ಲಿ ಶ್ರದ್ಧೆಯನ್ನು ಇಡುವನು ಅಲ್ಲದೆ ಪರವಸ್ತುಗಳ ಮೇಲಿನ ಇಚ್ಛೆಯು ಇಲ್ಲದಂತೆ ಆಗಿರುವುದರಿಂದ ಎಲ್ಲ ಇಂದ್ರಿಯಗಳ ವಿಷಯಗಳ ಮೇಲಿಂದಲೂ ಅವನ ಇಚ್ಛೆಯೂ ನಷ್ಟವಾಗುತ್ತದೆ ಮೇಲಾಗಿ ಸ್ವರ್ಗಲೋಕದಲ್ಲಿ ಹುಟ್ಟಿದ ಇಂದ್ರ ಅಹಮಿಂದ್ರರ ವಿಷಯಭೋಗಗಳೂ ಕೂಡ ವಿಷದಂತೆ ದಾಹವನ್ನು ಉತ್ಪನ್ನಮಾಡುವವೆಂದು ತಿಳಿಯುತ್ತಾನೆ ಅದು ಪ್ರಾಪ್ತವಾಗಬೇಕೆಂದು ಅವನು ಇಚ್ಛೆಯನ್ನೂ ಮಾಡುವದಿಲ್ಲ ತನ್ನ ಆತ್ಮದ ಆಧೀನದಲ್ಲಿರುವ, ವ್ಯಾಕುಲತೆ ಇಲ್ಲ-ದುದೂ ಅವಿನಾಶಿಯೂ ಆದ ಜ್ಞಾನಾನಂದಕ್ಕೇನೇ ಸುಖವೆಂದು ತಿಳಿಯುವ ಕಡೆಗೆ ಪ್ರವೃತ್ತಿಯು ಉಂಟಾಗುತ್ತದೆ ತನ್ನ ದೇಹ, ಧನ, ಸಂಪತ್ತಿ, ಐಶ್ವರ್ಯ ಮೊದಲಾದವುಗಳೆಲ್ಲ ಕರ್ಮದಿಂದಲೇ ಹುಟ್ಟುವಂಥವಿರುತ್ತವೆ. ಅಲ್ಲದೆ ಪರಾಧೀನವೂ ನಾಶವಾಗುವಂಥವೂ ದುಃಖವನ್ನು ಹುಟ್ಟಿಸುವಂಥವೂ ಇರುತ್ತವೆ ಇದನ್ನು ತಿಳಿದು 'ಇವೆಲ್ಲ ತನ್ನವಿರುತ್ತವೆ' ಎಂಬ ಸುಳ್ಳು ಸಂಕಲ್ಪವನ್ನು ಅವನು ಮನಸ್ಸಿನಲ್ಲಿ ತರುವದಿಲ್ಲ. ಅದಕ್ಕೆಂತಲೇ ಅನಂತಾನುಬಂಧೀ ಕಷಾಯಗಳ ಉದಯದಿಂದ ಹುಟ್ಟುವ ಸುಳ್ಳು ಭಯ, ಸಂಶಯ, ಪರವಸ್ತುವಿನ ಮೇಲಿನ ಇಚ್ಛೆ ಇವೇ ಮೊದಲಾದವುಗಳು ಅವ್ರತ ಸಮ್ಯಗ್ದೃಷ್ಟಿ ಪುರುಷನಿಗೆ ಉಂಟಾಗುವದಿಲ್ಲ ಆದರೆ ಅಪ್ರತ್ಯಾಖ್ಯಾನಾವರಣ

ಕಷಾಯ, ಪ್ರತ್ಯಾಖ್ಯಾನಾವರಣ ಕಷಾಯ, ಸಂಜ್ವಲನ ಕಷಾಯ ಇವು ಹನ್ನೆರಡು ಮತ್ತು ಹಾಸ್ಯ, ರತಿ, ಅರತಿ, ಭಯ, ಶೋಕ, ಜುಗುಪ್ಸಾ, ಸ್ತ್ರೀವೇದ, ಪುರುಷವೇದ, ನಪುಂಸಕವೇದ ಇವು ಒಂಬತ್ತು, ಹೀಗೆ ಒಟ್ಟಿಗೆ ನೇರಿ ಇಪ್ಪತ್ತೊಂದು ಕಷಾಯಗಳ ಉದಯವು ಅವನಿಗೆ ತೀವ್ರವಾಗಿರುತ್ತದೆ ಅದರಿಂದ ಅವನಿಗೆ ವಿಷಯಗಳನ್ನು ತ್ಯಜಿಸಬೇಕೆಂಬ ಇಚ್ಛೆಯು ತೀವ್ರವಾಗಿದ್ದರೂ ಇಂದ್ರಿಯಗಳ ಸ್ವಾಧೀನವಿಲ್ಲದುದರಿಂದ ತ್ಯಾಗಮಾಡುವದಾಗುವದಿಲ್ಲ. ಆದರೂ ಅವನು ವಿಷಯಗಳ ದುಃಖರೂಪವನ್ನು ತಿಳಿಯುತ್ತಾನೆ, ಆದರೆ ಸದ್ಯಕ್ಕೆ—ವರ್ತಮಾನಕಾಲದಲ್ಲಿ—ಆಗುವ ವಿಷಯಗಳ ವೇದನೆಯನ್ನು ಸಹನಮಾಡುವ ಸಾಮರ್ಥ್ಯವು ಇರುವದಿಲ್ಲ ರೋಗಿಗೆ ಕಹಿಯಾದ ಔಷಧವನ್ನು ಕುಡಿಯುವ ಇಚ್ಛೆಯು ಮನಃಪೂರ್ವಕವಾಗಿ ಇರದಿದ್ದರೂ ಕೂಡ ಜ್ವರದ ವೇದನೆಯಿಂದ ನೊಂದು ಅವನು ಆ ಕಹಿ ಔಷಧವನ್ನೂ ಸಹ ಬಹು ಆದರದಿಂದ ಕುಡಿಯುತ್ತಾನೆ ಆದರೆ ಮನಸ್ಸಿನಲ್ಲಿ ಈ ಕಹಿ ಔಷಧವನ್ನು ಕುಡಿಯುವುದು ಕಷ್ಟದಾಯಕವೆಂದು ತಿಳಿದಿರುತ್ತಾನೆ ಅಲ್ಲದೆ ಇಂಥ ಕಹಿ ಔಷಧವನ್ನು ಕುಡಿಯುವ ಪ್ರಸಂಗವು ಇನ್ನೊಮ್ಮೆ ಬರಕೂಡದೆಂದು ಆಶಿಸುವನು. ಮೇಲಾಗಿ ಈಗ ಬಂದ ಈ ಪ್ರಸಂಗವು ಬೇಗನೇ ಮುಗಿದುಹೋಗಲಿ ಎಂದು ಪ್ರಾರ್ಥಿಸುವನು ಇವನಂತೆಯೇ ಅವ್ರತಸಮ್ಯಗ್ದೃಷ್ಟಿಯೂ ವಿಷಯೋಪಭೋಗಗಳನ್ನು ಒಳ್ಳೆಯವೆಂದು ಯಾವಾಗಲೂ ತಿಳಿಯುವದಿಲ್ಲ ಆದರೆ ಅವುಗಳನ್ನು ಭೋಗಿಸದ ಹೊರತಾಗಿ ಅವನ ಪರಿಣಾಮವು ಸ್ಥಿರವಾಗಿ ಉಳಿಯುವದಿಲ್ಲ. ಕಷಾಯಗಳ ಪ್ರಭಾವವು ಸಹನಾತೀತವಾಗಿರುವುದರಿಂದ ಇಂದ್ರಿಯಗಳ ತೊಂದರೆಯನ್ನು ಅವನಿಂದ ಸಹಿಸಲಿಕ್ಕೆ ಆಗುವದಿಲ್ಲ. ಇದರಿಂದ ಅವನು ವೇದನೆಗೆ ಅಧೀನನಾಗಿ ವಿಷಯಗಳನ್ನು ಇಚ್ಛಿಸುತ್ತಾನೆ ಅಪೂರ್ಣ ಸಂಹನನ, ಸಹಾಯಕರು ಯಾರೂ ಇರುವದಿಲ್ಲ, ಕಷಾಯಗಳ ಉದಯವನ್ನು ಸಹಿಸುವ ಶಕ್ತಿಯು ನಾಲದು ಹೀಗಾಗಿರುತ್ತದೆ. ಇವನ ಅವಸ್ಥೆಯನ್ನು ನಾವು ಸೆರೆಯಾಳಿಗೆ ಹೋಲಿಸಬಹುದಾಗಿದೆ ಸೆರೆಯಾಳಿಗೆ ಇಚ್ಛೆಯಿಲ್ಲ-ದಿದ್ದರೂ ಸಹ ಪರಾಧೀನತೆಯಿಂದಾಗಿ ತಾನಿರುವ ಕೋಣೆಯನ್ನು ಉಡುಗಿ, ಧೂಳು ಝಾಡಿಸಿಕೊಂಡು ಇರಬೇಕಾಗುತ್ತದೆ; ಸ್ವಚ್ಛವಾಗಿ ಇಟ್ಟುಕೊಳ್ಳಬೇಕಾಗುತ್ತದೆ ಇದೇ ರೀತಿ ಸಮ್ಯಗ್ದೃಷ್ಟಿಯು ಈ ಶರೀರವು ಒಂದು ಸೆರೆಮನೆಯೆಂದು ತಿಳಿದು, ಹಸಿವು ನೀರಡಿಕೆ ಮೊದಲಾದ ವೇದನೆಗಳನ್ನು ಸಹನಮಾಡುವ ಸಾಮರ್ಥ್ಯವು ಇಲ್ಲದುದಕ್ಕೆ ತನ್ನ ದೇಹವನ್ನು ಪೋಷಿಸುತ್ತಾ ಇರುತ್ತಾನೆ ಹೀಗೆ ಮಾಡುವಾಗ ದೇಹವು ತನ್ನದೆಂದು ಅವನೆಂದೂ ಭಾವಿಸುವುದಿಲ್ಲ ತಾನೇ ಶರೀರವೆಂದೂ ತಿಳಿಯುವದಿಲ್ಲ ತತ್ಕಾಲದ ವೇದನೆಯ ಹೆದರಿಕೆಯು ಅವ್ರತ ಸಮ್ಯಗ್ದೃಷ್ಟಿಗೆ ಇರುತ್ತದೆ ಈ ಹೆದರಿಕೆಯನ್ನು ಕಳೆದುಕೊಳ್ಳುವ ಮಟ್ಟಿಗೇನೇ ವಿಷಯದ ಇಚ್ಛೆಯು ಅವನಿಗೆ ಆಗುತ್ತಿರುತ್ತದೆ ಕರ್ಮೋದಯದ ಜಾಳಿಗೆಯಲ್ಲಿ ಅವನು ಸಿಕ್ಕಿದ್ದರಿಂದ ಅದರೊಳಗಿಂದ ಬಿಡಿಸಿಕೊಳ್ಳುವ ಇಚ್ಛೆಯು ಅವನಿಗೆ ಇರುತ್ತದೆ ಆದರೂ ಅಪ್ರತ್ಯಾಖ್ಯಾನಾದಿ ಕಷಾಯಗಳ ಉದಯದಿಂದ ವ್ರತ ಮೊದಲಾದವುಗಳನ್ನು ಸ್ವೀಕರಿಸಬೇಕೆಂಬ ಇಚ್ಛೆಯಿದ್ದರೂ ಅವುಗಳನ್ನು ಅವನಿಗೆ ಸ್ವೀಕರಿಸಲಿಕ್ಕೆ ಆಗುವದಿಲ್ಲ ಉದಯದ ಅವಸ್ಥೆಯು ಅವನ ಶಕ್ತಿಮೀರಿರುತ್ತದೆ. ಸಂಸಾರೀ ಜೀವಗಳು ಅನಾದಿ ಕಾಲದಿಂದಲೂ ಈ ಜಾಳಿಗೆಯೊಳಗಿಂದ ಹೊರಡಲು ಶಕ್ಯವಾಗುವದಿಲ್ಲ ಶರೀರದ ಸಂಬಂಧವು ಕಟ್ಟಿಹೋದುದರಿಂದ ಬಾಳುವದಕ್ಕಾಗಿ ಊಟ, ಅರಿವೆ, ಹೊದಿಕೆಗಳ ಇಚ್ಛೆಯು ಹುಟ್ಟುತ್ತಿರುತ್ತದೆ. ಇದೇ ಪ್ರಕಾರ ಅಪ್ರತ್ಯಾಖ್ಯಾನ ಕಷಾಯದ ಉದಯದಿಂದ ಜಗತ್ತಿನಲ್ಲಿ ತನ್ನ ಕೀರ್ತಿಯಾಗಬೇಕು, ತನಗೆ ಮಾನ ಮರ್ಯಾದೆಗಳು ಸಿಗಬೇಕು, ತನ್ನ ಜೀವನ ಸಾಧನೆಗಳಿಗೂ ಧನ, ಐಶ್ವರ್ಯಾದಿ-ಗಳಿಗೂ ಹಾನಿ ತಟ್ಟಕೂಡದು, ಇಂದ್ರಿಯಗಳ ಸಂತಾಪವನ್ನು ಸಹನಮಾಡುವ ಶಕ್ತಿಯು ಇಲ್ಲದುದರಿಂದ ವಿಷಯ ಸೇವನೆಯ ಇಚ್ಛೆಯಾಗುತ್ತದೆ, ಅದು ಆಗಕೂಡದು, ರಾಗಭಾವವು ಕಡಿಮೆಯಾಗಬೇಕು, ಕಷಾಯವು ಕಡಿಮೆಯಾಗ-ದಿದ್ದರೆ ಅದರಿಂದ ಮುಂದೆ ಬಹಳಷ್ಟು ದುಃಖವಾದೀತು, ಅದೂ ಇಲ್ಲದಂತೆ ಆಗಬೇಕು—ಇವೆಲ್ಲ ಅವನಿಗೆ ಅನಿಸುತ್ತಿರುತ್ತವೆ ರಾಜ್ಯಭೋಗ, ಸಂಪತ್ತುಗಳು ನಿಜವಾದ ಸುಖವನ್ನು ಕೊಡುವಂಥವಿರುತ್ತವೆಂದು ತಿಳಿದು ಅವುಗಳನ್ನು ಅವನು ಇಚ್ಛಿಸುವದಿಲ್ಲ ಅದರಿಂದಲೇ ಅವನಿಗೆ ನಿಃಕಾಂಕ್ಷಿತ ಅಂಗದ ಪಾಲನವಾಗುತ್ತದೆ

ಮೆಯ್ಯೊಳಗೆನ್ನೆಗಂ ಮಮತೆಯುಂಟವನನ್ನೆಗಮುಗ್ರಕಾಲನಾ
ಕೆಯ್ಯೊಳಗಿರ್ದ ಪಕ್ಕಿ ವಿಷಯಂಗಳ ಮೆಚ್ಚಿದವಂ ವಿಷಾಗ್ನಿಯೊಳ್ ।
ಜುಯ್ಯನೆ ಬೆಂದವಂ ಬಹು ಕಷಾಯಮನೊತ್ತಿ ಕಳಲ್ಚದಾತನ-
ಯ್ಯಯ್ಯೊ! ಮುಳುಂಗಿದಂ ನರಕದೋಳ್ ಅಪರಾಜಿತೇಶ್ವರಾ ॥ —ರತ್ನಾಕರ-ಅಪರಾಜಿತೇಶ್ವರಶತಕ ೧೫.

ಈಗ ನಿರ್ವಿಚಿಕಿತ್ಸಾ ಅಂಗದ ಸ್ವರೂಪ ಹೇಳುತ್ತಾರೆ—

ಸ್ವಭಾವತೋಽಶುಚೌ ಕಾಯೇ ರತ್ನತ್ರಯಪವಿತ್ರಿತೇ ।
ನಿರ್ಜುಗುಪ್ಸಾಗುಣಪ್ರೀತಿರ್ಮತಾ ನಿರ್ವಿಚಿಕಿತ್ಸತಾ ॥ ೧೩ ॥

ಅನ್ವಯಾರ್ಥ—(ಸ್ವಭಾವತಃ) ಮೂಲದಲ್ಲಿಯೇ (ಅಶುಚೌ) ಅಶುದ್ಧ ಆದರೆ (ರತ್ನತ್ರಯ ಪವಿತ್ರಿತೇ ಕಾಯೇ) ರತ್ನತ್ರಯದಿಂದ ಪವಿತ್ರವಾದ ಶರೀರದ ವಿಷಯದಲ್ಲಿ (ನಿರ್ಜುಗುಪ್ಸಾ) ಹೀನ ಹೇಸಿಕೆಯ ಭಾವವಿಲ್ಲದೆ (ಗುಣಪ್ರೀತಿಃ) ಗುಣದ ವಿಷಯದಲ್ಲಿ ಪ್ರೇಮಬುದ್ಧಿಯು (ನಿರ್ವಿಚಿಕಿತ್ಸತಾ) ನಿರ್ವಿಚಿಕಿತ್ಸತೆಯು (ಮತಾ) ಎನಿಸುವುದು.

ಅರ್ಥ—ಶರೀರವು ಸ್ವಭಾವತಃ ಅಶುದ್ಧವಿದೆ ಆದರೆ ರತ್ನತ್ರಯಗಳಿಂದ ಪವಿತ್ರವಾಗಿದೆ ಮುಕ್ತಿಯನ್ನು ಸಂಪಾದಿಸಲಿಕ್ಕೆ ಸಾಧನರೂಪವಾಗಿದೆ ಅದರಿಂದ ಅದನ್ನು ತಿರಸ್ಕಾರ ಮಾಡದೆ, ಅದರ ವಿಶಿಷ್ಟಗುಣಗಳನ್ನು ನೆನೆದು ಅದನ್ನು ಪ್ರೀತಿಸಬೇಕು ಹೀಗೆ ಮಾಡುವುದೇ ನಿರ್ವಿಚಿಕಿತ್ಸೆ ಅಂಗವೆನಿಸುತ್ತದೆ [1]

ವಿಶೇಷಾರ್ಥ—ಈ ಶರೀರವು ಏಳು ಧಾತುಗಳಿಂದ ನಿರ್ಮಾಣವಾಗಿದೆ, ಮಲ ಮೂತ್ರಗಳಿಂದ ತುಂಬಿದ್ದು ಇರುತ್ತದೆ ಅದಕ್ಕಾಗಿಯೇ ಸ್ವಭಾವತಃ ಅಶುದ್ಧವಾಗಿದೆ ಆದರೂ ಮನುಷ್ಯ ಪರ್ಯಾಯದಲ್ಲಿ ಅಂಥ ಶರೀರಕ್ಕೆ ರತ್ನತ್ರಯಗಳು ಪ್ರಾಪ್ತವಾಗುತ್ತವೆ ಅದಕ್ಕಾಗಿ ಶರೀರವು ಪವಿತ್ರವಾಗಿದೆ [ಇಲ್ಲಿ ಮುಖ್ಯವಾಗಿ ನಮ್ಮ ಮನಸ್ಸನ್ನು ಸೆಳೆಯುವಂಥ ಎರಡು ಸಂಗತಿಗಳು ಉಲ್ಲೇಖಗೊಂಡಿವೆ ಅಪವಿತ್ರತೆಯ ದೃಷ್ಟಿಯಿಂದ ಮಾನವ ಮಾನವರ ಶರೀರ-ಗಳಲ್ಲಿ ಯಾವ ಅಂತರವೂ ಇಲ್ಲ ಎಲ್ಲರ ಶರೀರವೂ ರಕ್ತ, ಮಾಂಸ, ಮಜ್ಜಾ ಮತ್ತು ಮಲಾದಿಗಳಿಂದ ಕೂಡಿದೆ ಇನ್ನೊಂದು ಮಾತು ಸ್ವಭಾವದಿಂದ ಅಪವಿತ್ರವಾದ ಶರೀರವೂ ಸಹ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್‌ಚಾರಿತ್ರ-ಗಳೆಂಬ ಈ ಮೂರು ರತ್ನಗಳಿಂದ—ಈ ಗುಣಗಳ ಯೋಗದಿಂದ—ಪವಿತ್ರವಾಗಿದೆ ಇಂಥ ಪವಿತ್ರಗುಣಗಳನ್ನು ಧಾರಣಮಾಡಿದಂಥ ಆತ್ಮನು ಯಾವ ಶರೀರದಲ್ಲಿರುವನೋ ಆ ಶರೀರದ ಕುರೂಪತೆ ಹಾಗೂ ಹೊಲಸುಗಳನ್ನು ಉಚ್ಚ ನೀಚ ಕುಲ ಜಾತಿಗಳನ್ನು ಗಮನದಲ್ಲಿಟ್ಟು ಕೀಳವೆಂದು ಭಾವಿಸಿದಲ್ಲಿ—ಗುಣಗಳನ್ನು ಪ್ರೀತಿಸಬೇಕೆಂಬುದನ್ನು ಮರೆತಲ್ಲಿ—ಅಂಥವನು ವಿಕಾರ ದೃಷ್ಟಿಯಿಂದ ಕೂಡಿದವನಾಗುತ್ತಾನೆ. ಅವನು ನಿರ್ವಿಚಿಕಿತ್ಸಾ ಅಂಗಕ್ಕೆ ಪಾತ್ರ-ನಾಗುವದಿಲ್ಲ. ರತ್ನತ್ರಯ ಗುಣಗಳನ್ನು ಧರಿಸಿದ ಮಹಾತ್ಮರನ್ನು ಅವರ ಶರೀರದ ಅಪವಿತ್ರತೆಯನ್ನೂ ಜಾತಿ ವರ್ಗಗಳ ವಿಶೇಷತೆಯನ್ನೂ ಗಮನಿಸಿ, ಹೀನವೆಂದು ಭಾವಿಸಲಿಕ್ಕೆ ನಿರ್ವಿಚಿಕಿತ್ಸಾ ಅಂಗವನ್ನು ಧರಿಸಿಧವನು ಎಂದೂ ಪ್ರವೃತ್ತ-ನಾಗುವದಿಲ್ಲ ಸ. ಧ] ಅಂತಲೇ ರತ್ನತ್ರಯಗಳನ್ನು ಧರಿಸಿದವನ ಶರೀರದಲ್ಲಿ ಒಮ್ಮೊಮ್ಮೆ ರೋಗವು ಉತ್ಪನ್ನವಾದರೆ ಅದರಿಂದ ದುರ್ಗಂಧವಾಸ ಬಂದರೆ ಮನದಲ್ಲಿ ಅವನನ್ನು ಕೀಳನೆಂದು ತಿಳಿಯಕೂಡದು ಹೀಗೆಯೇ ಮುಪ್ಪಿನ ತನದಿಂದ ದೇಹವು ಒಣಗಿ, ಚರ್ಮವು ಮುದ್ದೆ ಮುದ್ದೆಯಾಗಿ ವಿರೂಪವಾಗಿ ಕಂಡರೂ ತಪಶ್ಚರ್ಯದಿಂದ ಕ್ಷೀಣವಾಗಿ ಸೊರಗಿದ್ದರೂ ಅದರಿಂದ ಮನಸ್ಸಿನಲ್ಲಿ ನಾವು ಗ್ಲಾನಿಯನ್ನು ತರಕೂಡದು ಅಂಥ ಶರೀರದ ರತ್ನತ್ರಯದ ಗುಣಗಳ ಮೇಲೆ ಪ್ರೀತಿಯನ್ನಿಡುವುದು ನಿರ್ವಿಚಿಕಿತ್ಸಾ ಅಂಗವೆನಿಸುವುದು

ಸಮ್ಯಗ್ದೃಷ್ಟಿ ಪುರುಷನು ವಸ್ತುವಿನ ಯಥಾರ್ಥ ಸ್ವರೂಪವನ್ನು ತಿಳಿಯುವಂಥವನಿರುತ್ತಾನೆ ಅವನು ಪುದ್ಗಲದ ಅನೇಕ ಸ್ವಭಾವ—ಮಲ, ಮೂತ್ರ, ರಕ್ತ, ಮಾಂಸ ಮೊದಲಾದುವುಗಳಿಂದ ವ್ಯಾಪಿಸಿದ ಮಾನವನ ಶರೀರ ಇಲ್ಲವೆ ತಿರ್ಯಂಚ ಮಲಿನ ದೇಹವನ್ನು ಕಂಡು ಅಥವಾ ಅದರ ವರ್ಣನೆಯನ್ನು ಕೇಳಿ, ಅದರ ವಿಷಯದಲ್ಲಿ ತಿರಸ್ಕಾರ ಭಾವವನ್ನು ತಳೆಯುವದಿಲ್ಲ. ಹಸಿವು, ನೀರಡಿಕೆ, ಬೇನೆ, ಬಡತನ ಮೊದಲಾದುವುಗಳಿಂದ ದುಃಖಿತನಾಗುವುದು, ಬಂಧಿತ-ನಾಗಿಸೆರೆ ಮನೆಯಲ್ಲಿ ವಾಸಿಸುವುದು, ಕೀಳುಕುಲದಲ್ಲಿ ಹುಟ್ಟುವುದು, ಕೆಟ್ಟ ಆಹಾರವನ್ನು ತಿನ್ನುವ ಪ್ರಸಂಗ ಒದಗುವುದು, ಒಳ್ಳೆಯ ಬಟ್ಟೆಬರೆಗಳು ತೊಡಲಿಕ್ಕೆ ಸಿಗದಿರುವುದು, ಪ್ರಮಾಣಬದ್ಧವಾದ ಅವಯವಗಳಿರದೆ ಕುರೂಪತೆಯು

---

[1] ಆಯತವರ್ಮನು ಹೇಳುವುದು ಹೀಗೆ ಗುಣವಿಲ್ಲದವು ಗುಣಮುಳ್ಳವಂ ಪೊರ್ದಿಯುವುಂ ಗುಣಕ್ಕೆ ಕಾರಣಮಾದುವೆಂತೀ-ಗಳು ತೊಡವುಕಾರಣವಾಗಿನೆ(?) ಣಾಂ ಪುಷ್ಪಕಾರಣಮಾಗಿ ನಾರುಂ, ಅಮೃತಕಾರಣಮಾಗಿ ಭಾಜನಮುಂ ಪೂಜ್ಯಮಾದ-ಪುವಂತೆ ಶುಚಿಯಲ್ಲದ ಶರೀರಂ ಶುಚಿಯಪ್ಪಾತ್ಮನಂ ಪೊರ್ದಿ ಪೂಜ್ಯಮಾದುದರಿಂ ರತ್ನತ್ರಯದಿಂ ಪಸದನಂಗೊಳಿಸಪಟ್ಟ ಚಾತುರ್ವರ್ಣದ ಶರೀರಂಗಳು ಪೂಜ್ಯಂಗಳೆ ಅಂತವರ್ಗಗಳ ಥ(?) ದ್ಯಾಗದಿಗಳ್ಗ [ಪೇಸು] ವಾತಂ ತನ್ನ ಗುಣಂಗಳ್ಗೆ ಪೇಸಿದನಕ್ಕುಮೆಂತೆಂದೊಡೆ ಗುಣಂಗಳ್ಗುಣಗಳ ಮ್ಮೆಯ್ಯೊಳಿಪ್ಪುವಾಕಾಶದೊಳಿರವಪ್ಪುದರಿಂ ಪೆಸದುದು ನಿರ್ವಿಚಿಕಿತ್ಸೆ

ಉಂಟಾಗುವುದು—ಇವೆಲ್ಲ ಕರ್ಮದ ಉದಯದಿಂದ ಉಂಟಾಗುತ್ತವೆ ಸಮ್ಯಗ್ದೃಷ್ಟಿ ಪುರುಷನು ಇವೆಲ್ಲ ಕರ್ಮೋ-ದಯದಿಂದ ನಿರ್ಮಾಣವಾಗುತ್ತವೆಂದು ತಿಳಿದು, ಮನದಲ್ಲಿ ಇವುಗಳ ವಿಷಯದಲ್ಲಿ ಕೊರತೆಯನ್ನು ಭಾವಿಸಿ, ದುಃಖಿಯಾಗುವದಿಲ್ಲ ಇತರ ಜೀವಗಳು ಕಷಾಯಗಳ ಸ್ವಾಧೀನವಾಗಿ, ಅನೇಕ ಪ್ರಕಾರದ ನಿಂದ್ಯ ಕಾರ್ಯಗಳನ್ನು ಮಾಡುವದನ್ನು ಕಂಡು, ಅವನು ತನ್ನ ಪರಿಣಾಮವನ್ನು ಕೆಡಿಸಿಕೊಳ್ಳುವದಿಲ್ಲ ಇದರಿಂದ ನಿರ್ವಿಚಿಕಿತ್ಸಕ ಅಂಗವು ಸಿದ್ಧಿಸುವುದು ಹೊಲಸು ಸ್ಥಳ, ಹೊಲಸು ಊರು, ಹೊಲಸು ಮನೆ ಮೊದಲಾದವುಗಳನ್ನು ನೋಡಿ, ಮನಸ್ಸಿನಲ್ಲಿ ಮಿಃಖಿಸುವದಿಲ್ಲ ಅದರಂತೆಯೇ ಕತ್ತಲೆ, ಮಳೆ, ಚಳಿ, ಬಿಸಿಲು ಮೊದಲಾದ ಕಾಲದ ವೇದನೆಗಳು ಪ್ರಾಪ್ತವಾದಾಗಲೂ ನೊಂದುಕೊಳ್ಳುವದಿಲ್ಲ. ಅದರಂತೆ ರೋಗ ಹುಟ್ಟಿತು, ಬಡತನ ಬಂತು, ಅಗಲುವಿಕೆ ಉಂಟಾಯಿತು, ಅಶುಭ ಕರ್ಮದ ಉದಯದಿಂದ ದುಃಖ ಒದಗಿತು ಎಂದು ಅವನು ತನ್ನ ಪರಿಣಾಮವನ್ನು ಕೆಡಿಸಿಕೊಳ್ಳುವದಿಲ್ಲ ಪೂರ್ವಕೃತ ಕರ್ಮದ—ಬಂಧದ—ಫಲವನ್ನು ತಾನೇ ಭೋಗಿಸಿಯೇ ತೀರಬೇಕಾಗುವುದು ಅಶುಭ ಕರ್ಮದ ಫಲವು ಹೀಗೆಯೇ ಇರುತ್ತದೆ. ಇವನ್ನೆಲ್ಲ ತಿಳಿದು ಅವನು ತನ್ನ ಪರಿಣಾಮದಲ್ಲಿ ವ್ಯತ್ಯಾಸವಾಗಗೊಡುವದಿಲ್ಲ ಇಂಥ ಪುರುಷನಿಗೇ ನಿರ್ವಿಚಿಕಿತ್ಸಕ ಅಂಗವು ಪ್ರಾಪ್ತವಾಗುತ್ತದೆ ಅವನಲ್ಲಿ ದಯೆ, ಸೇವೆ, ವಾತ್ಸಲ್ಯ, ಸ್ಥಿತಿಕರಣ ಮೊದಲಾದ ಗುಣಗಳು ಪ್ರಕಟವಾಗುತ್ತವೆ.

> "ದೇಹದನಿತ್ಯಮಪ್ಪ ನಿಲವಂ ಬಾವಿಸಿ, ಅನಾಮಯಮಂ
> ಪ್ರಿಯಮನಮಳ ರತ್ನತ್ರಯಮಂ ಸಾಧಿಸುವೆಂ"
> ಮಣಿಭೂಷಣಭರದಿಂ ತನು । ಕಿಣಮಪ್ಪುದದೇಕೆ ನಿನ್ನ ನಿರ್ಮಲಗುಣ ಭೂ- ॥
> ಷಣಮಂ ದಯೆಗೆಯ್‌ವಡೆವೆಂ । ಪ್ರಣಯಮನಪವರ್ಗಲಕ್ಷ್ಮಿಗದಱಿಂದರ್ಹಾ ॥
>
> ನಾಗಚಂದ್ರ—ಮಲ್ಲಿನಾಥ ಪುರಾಣ ೧೦-೧೨೩

ಇನ್ನು ಅಮೂಢದೃಷ್ಟಿ ಅಂಗದ ಲಕ್ಷಣ ಹೇಳುತ್ತಾರೆ—

> ಕಾಪಥೇ ಪಥಿ ದುಃಖಾನಾಂ ಕಾಪಥಸ್ಥೇಽಪ್ಯಸಂಮತಿಃ ।
> ಅಸಂಪೃಕ್ತಿರನುತ್ಕೀರ್ತಿರಮೂಢಾ ದೃಷ್ಟಿರುಚ್ಯತೇ ॥ ೧೪ ॥

ಅನ್ವಯಾರ್ಥ—(ದುಃಖಾನಾಂ ಪಥಿ) ದುಃಖದ ಮಾರ್ಗವಾಗಿರುವ (ಕಾಪಥೇ) ಮಿಥ್ಯಾ ಮಾರ್ಗದ ವಿಷಯದಲ್ಲಿ (ಕಾಪಥಸ್ಥೇಽಪಿ) ಮಿಥ್ಯಾಮಾರ್ಗದಲ್ಲಿ ನಡೆಯುವ ಜನರ ವಿಷಯದಲ್ಲಿಯೂ ಸಹ, (ಅಸಂಮತಿಃ) ಮನಸ್ಸಿನಿಂದ ಸಮ್ಮತಿಯನ್ನು ಕೊಡದೆ ಇರುವುದು, (ಅಸಂಪೃಕ್ತಿಃ) ಶರೀರದಿಂದ ಸತ್ಕಾರವನ್ನು ಮಾಡದೆ ಇರುವುದು ಮತ್ತು ಆದರವನ್ನು ತೋರಿಸದೆ ಇರುವುದು (ಅನುತ್ಕೀರ್ತಿಃ) ವಚನದಿಂದ ಸ್ತುತಿಯನ್ನು ಮಾಡದೆ ಇರುವುದೂ (ಅಮೂಢದೃಷ್ಟಿಃ) ಅಮೂಢ ದೃಷ್ಟಿಯು (ಉಚ್ಯತೇ) ಎನಿಸುತ್ತದೆ ಇಲ್ಲವೆ ಹೀಗೆ ಈ ಅಂಗದ ಲಕ್ಷಣ ಹೇಳಲಾಗಿದೆ [1]

[1] ಆಯತವರ್ಮನು ಹೇಳುವದು ಹೀಗೆ ಇನ್ನಮೂಢದದೃಷ್ಟಿಯೆಂಬ ನಾಲ್ಕನೆಯಂಗದ ಲಕ್ಷಣವೆಂತೆಂದೊಡೆ—
ಕಂದ ॥ ಜಾತುಗರ್ತಿ ಸಂಸೃತಿಗಂ ಹೇತುಗಳಾಗಿರ್ದ ಪಂಚ ಮಿಥ್ಯಾತ್ವದೊಳಂ ।
ಪ್ರೀತಿಯವಾಗಿಸದಿರ್ಪುದು ಭೂತಳದೊಳಮೂಢವೆಂಬ ನಂಬುಗೆಯಕ್ಕುಂ ॥ ೧೦ ॥
ಆ ಪಂಚ ಮಿಥ್ಯಾತ್ವಂಗಳಾವುವೆಂದೊಡೆ ಏಕಾಂತಪಕ್ಷಮನೆ ಪಿಡಿದು ಶರೀರೇಂದ್ರಿಯಬುದ್ಧಿಗಳು ಕಾರಣದಿಂ ಲಕ್ಷಣದಿಂ ನಿಲ್ಪವಲ್ಲೆಂದು ಕುಹೇತುಕುದೃಷ್ಟಾಂತರಂಗಳಂ ತೋರಿ ಮೂಢಜನಂಗಳಂ ಮೋಹಿಸುವ ಬೌದ್ಧನೇಕಾಂತಮಿಥ್ಯಾತ್ವಮುಮಂ, ಯಜ್ಞವಿಧಿಯೊಳಂ ಮಹಳಪಕ್ಷದೊಳಂ ಪಿತೃಕಾರ್ಯದೊಳಂ ವಿವಾಹೋತ್ಸವದೊಳಂ ಪಶು ಮೊದಲಾಗೊಡೆಯ ಪ್ರಾಣಿಗಳಂ ಕೊಂದವಶ್ಯಂ ತಿನಲಕ್ಕುಮಲ್ಲಿ ಸತ್ತ ಪ್ರಾಣಿಗಳುಂ ಕೊಂದವರ್ಗಳುಂ ಸ್ವರ್ಗಕ್ಕೆ ಪೋಪರೆಂಬ ಬ್ರಾಹ್ಮಣನ ವಿಪರೀತ ಮಿಥ್ಯಾತ್ವದೊಳಂ ಪರಿತೊಂದು ನೆಗಳ್ತೆಯುಂ ಬೇಡ, ವಿನಯಮೋಕ್ಷಮೆಂಬ ತಾಪಸನ ವಿನಯಮಿಥ್ಯಾತ್ವದೊಳಂ ವಸ್ತುಗಳೊಂದುಮನುಂಟಿಲ್ಲೆಂದು ನಿಲಿಸಲರಿಯದೆ ಸಂದೇಹಂ ಬಹುಕಿರ್ಪಿಂದ್ರದರ್ಶನಿಕನ ಸಂದೇಹ ಮಿಥ್ಯಾತ್ವದೊಳಂ, ಅಜ್ಞಾನಮೆ ಮುಕ್ತಿಪಥಮೆಂಬ ಮಸ್ಕರಿಪೂರ-ಣನಜ್ಞಾನಮಿಥ್ಯಾತ್ವದೊಳಮೆಂದಕ್ಕುಮವಂ ನಂಬಿದುಮವಂ ನಂಬಿದವನೊಳು ಕೂಡದುದುಮವನಂ ಪೊಗಳದುದು ಮನೆ ದೈವಂಗಳುಮನನ್ಯಲಿಂಗಿಗಳುಮಂ ಭಯದಿಂದ ಮಾನುಂ ಆಸೆಯಿಂದ ಮಾನುಂ ಕೂರ್ಮೆಯಿಂದ ಮಾನುಂ ಲೌಕಿಕದಿಂದ ಮಾನುಂ ಅವಂಗೆ ಪೊಡಮಡದುದುಂ ವಿನಯುಂ ಗೆಯ್ಯದುದುಮಿದಮೂಢದೃಷ್ಟಿತ್ವಮೆಂಬುದಕ್ಕು

ಅರ್ಥ—ದುಃಖದಾಯಕವಾಗಿರುವ ಸುಳ್ಳು ಮಾರ್ಗದ ವಿಷಯಕ್ಕೂ ಆ ಅಸತ್ಯ ಮಾರ್ಗದಲ್ಲಿರುವ ಜನರ ವಿಷಯಕ್ಕೂ ಮನಃಪೂರ್ವಕವಾಗಿ ಪ್ರಮಾಣತೆಯನ್ನು ಮಾಡದೆ ಇರುವುದು, ದೇಹದಿಂದ ಸತ್ಕಾರ, ಪ್ರಶಂಸೆಗಳನ್ನು ಮಾಡದೆ ಇರುವುದು, ವಚನದಿಂದ ಸ್ತುತಿ ಮಾಡದಿರುವುದು—ಇವುಗಳಿಗೆ ಅಮೂಢದೃಷ್ಟಿ ಅಂಗವೆನ್ನುವರು [ಇಲ್ಲಿ ದುಃಖಕ್ಕೆ ಕಾರಣವಾಗಿರುವ ಸುಳ್ಳುಮಾರ್ಗ—ಕುಮಾರ್ಗ—ದಲ್ಲಿ ಮಿಥ್ಯಾದರ್ಶನ, ಮಿಥ್ಯಾಜ್ಞಾನ ಮತ್ತು ಮಿಥ್ಯಾ-ಚಾರಿತ್ರಗಳು ಸಮಾವೇಶವಾಗುತ್ತವೆ ಇವುಗಳಿಗೆ ಈ ಗ್ರಂಥದ ಮೂರನೆಯ ಭಾಗದಲ್ಲಿ 'ಭವಂತಿ ಭವ-ಪದ್ಧತಿಃ' ಎಂಬ ವಾಕ್ಯದಿಂದ ಸಂಸಾರ ದುಃಖದ ಹೇತುವೆಂದು ಸೂಚಿಸಿದ್ದಾರೆ ಇಂಥ ಕುಮಾರ್ಗವನ್ನೂ ಕುಮಾರ್ಗದಿಂದ ನಡೆಯುವವರನ್ನೂ ಮನ-ವಚನ-ಕಾಯಗಳಿಂದ ಅನುಮೋದಿಸಕೂಡದು ಆದರೂ ಈ ಅಮೂಢದೃಷ್ಟಿ ಅಂಗವನ್ನು ಒಂದು ಉದಾಹರಣೆಯಿಂದ ಇನ್ನಿಷ್ಟು ಸ್ಪಷ್ಟಗೊಳಿಸಬಹುದಾಗಿದೆ ಒಬ್ಬ ವ್ಯಕ್ತಿಯು ನಾವು 'ಕುಮಾರ್ಗ'ವೆಂದು ತಿಳಿಯುವ ಧರ್ಮದವನಾಗಿದ್ದಾನೆ ಆದರೆ ಅವನು ರಾಜ್ಯದ ಸಂರಕ್ಷಣ ಮಂತ್ರಿಯಾಗಿದ್ದು ಒಳ್ಳೇ ದಕ್ಷತೆಯಿಂದ ಕಾರ್ಯಮಾಡುತ್ತಾನೆ. ಇಂಥವನನ್ನು ಅವನ ಕಾರ್ಯಕ್ಕಾಗಿ ಪ್ರಶಂಸಿಸುವುದು ಸಮ್ಯಗ್ದೃಷ್ಟಿಗೆ ಬಾಧಕವಾಗುವುದಿಲ್ಲ. ಕುಮಾರ್ಗಸ್ಥಿತನನ್ನು ಅವನ ಆ ಕುಮಾರ್ಗ ಸ್ಥಿತಿಯ ದೃಷ್ಟಿಯಲ್ಲಿ ಮಾತ್ರ ಪ್ರೋತ್ಸಾಹಿಸಕೂಡದು ಹಾಗೆ ಮಾಡಿದ್ದಲ್ಲಿ ಕುಮಾರ್ಗವನ್ನೂ ನಾವು ಹೊಗಳಿದಂತೆ ಆಗುತ್ತದೆ ಆಗ ಅಮೂಢದೃಷ್ಟಿಯ ರಕ್ಷಣೆಯಾಗುವದಿಲ್ಲ. —ಸ ಧ]

ವಿಶೇಷಾರ್ಥ—ಸಂಸಾರದಲ್ಲಿ ಜೀವಗಳು ಮಿಥ್ಯಾತ್ವದ ಪ್ರಭಾವದಿಂದ ರಾಗದ್ವೇಷಗಳುಳ್ಳ ದೇವ-ದೇವತೆಗಳ ಪೂಜೆ, ಪ್ರಭಾವನೆಗಳನ್ನು ಕಂಡು, ಹೊಗಳಲಿಕ್ಕೆ ಆರಂಭಿಸುತ್ತವೆ ಓರ್ವನು ದೇವಿಗೆ ಜೀವದ ಬಲಿಕೊಡು-ವವರನ್ನು ಸ್ತುತಿಸುತ್ತಾನೆ; ಹತ್ತು ವಿಧದ ಕೆಟ್ಟ ದಾನಗಳನ್ನೆಲ್ಲ ಒಳ್ಳೆಯವೆಂದು ತಿಳಿಯುತ್ತಾನೆ, ಯಜ್ಞ, ಹೋಮ, ಮಂತ್ರ, ತಂತ್ರ, ಜಾರಣ, ಮಾರಣ, ಉಚ್ಚಾಟಣಾದಿ ಕರ್ಮಗಳ ಪ್ರಶಂಸೆಯನ್ನು ಮಾಡುವನು, ಗಡ್ಡೆ, ಗೆಣಸು, ಎಲೆ, ಹೂವು ಮೊದಲಾದುವುಗಳನ್ನು ತಿಂದು ತಪಸ್ಸನ್ನು ಮಾಡುವವರನ್ನು ಉಚ್ಚವೆಂದು ತಿಳಿದು, ಅವರನ್ನು ಹೊಗಳುತ್ತಾನೆ; ಪಂಚಾಗ್ನಿಯಿಂದ ಶರೀರವನ್ನು ಕ್ಷೀಣಗೊಳಿಸುವ ತಪಸ್ವಿಗೂ ಹುಲಿದೊಗಲವನ್ನುಟ್ಟು ಭಸ್ಮ ಬಳಿದುಕೊಳ್ಳುವವರಿಗೂ ಮೇಲೆ ಕೈಮಾಡಿ ತಪ ಮಾಡುವವರಿಗೂ ದೊಡ್ಡವರೆಂದು ತಿಳಿದು ಸ್ತುತಿ ಮಾಡುತ್ತಾನೆ, ಕಸುಗೆಂಪು, ಬಿಳಿಯ ವಸ್ತ್ರಗಳನ್ನು ಧರಿಸಿದ ಸಾಧುಗಳನ್ನೂ ಅವರ ಮಾರ್ಗಗಳನ್ನೂ ಹೊಗಳುತ್ತಾನೆ ಕೆಟ್ಟ ದೇವರು, ಕೆಟ್ಟ ತೀರ್ಥಗಳಿಗೂ ರಾಗ, ದ್ವೇಷ, ಮೋಹಗಳುಳ್ಳವರೂ ಕೊಂಕುಭಾವವುಳ್ಳವರೂ ಶಸ್ತ್ರಗಳನ್ನು ಧರಿಸಿದವರೂ ಆದ ದೇವರಿಗೆ ಪೂಜ್ಯವೆಂದು ಕೆಲವರು ತಿಳಿಯುತ್ತಾರೆ ಯಕ್ಷಿಣಿ,[1] ಪದ್ಮಾವತಿ, ಕ್ಷೇತ್ರಪಾಲ ಮೊದಲಾದವರು ಧನವನ್ನು ಕೊಡುವಂಥವರಿದ್ದಾರೆ, ಬೇನೆಗಳನ್ನು ಇಲ್ಲದಂತೆ ಮಾಡುವ ಸಾಮರ್ಥ್ಯವು ಇವರಲ್ಲಿದೆ,—ಎಂದು ಸ್ವೀಕರಿಸುವರು. ಕ್ಷೇತ್ರಪಾಲ, ಪದ್ಮಾವತಿ, ಚಕ್ರೇಶ್ವರಿ ಮೊದಲಾದವರು ಜಿನಶಾಸನವನ್ನು ರಕ್ಷಣ ಮಾಡುವವರಿದ್ದಾರೆಂದು ಅವರ ಪೂಜೆಯನ್ನು ಮಾಡುತ್ತಾರೆ ದೇವರು ಕವಲಾಹಾರಿಗಳಾಗಿದ್ದಾರೆಂದು ತಿಳಿದು ಅವರಿಗೆ ಎಣ್ಣೆ, ಸುಗಂಧ ದ್ರವ್ಯ, ಉಂಡಿ, ಹೂವಿನ ಹಾರಗಳನ್ನು ಕೊಟ್ಟು

---

1 ಜಿನಶಾಸನದ ದೇವದೇವತೆಗಳು ಸಮ್ಯಗ್ದೃಷ್ಟಿಗಳಾಗಿರುತ್ತಾರೆ ಭಗವಂತನ ಸಮವಸರಣದಲ್ಲಿ ಅವರು ಪ್ರಭುವಿನ ಸರ್ವ-ಶ್ರೇಷ್ಠ ಐಹಿಕ ಮಹತ್ವವನ್ನು ಪ್ರದರ್ಶಿಸುವದಕ್ಕಾಗಿ, ಗೊತ್ತುಮಾಡಿದ ಸ್ಥಳದಲ್ಲಿ ನಿಂತು, ಭಗವಂತನ ವಿಷಯದಲ್ಲಿ ಪೂಜ್ಯ ಭಾವವನ್ನೂ ನಮ್ರತೆಯನ್ನೂ ಪ್ರಕಟಿಸುತ್ತಿರುತ್ತಾರೆ. ಸಮವಸರಣದಲ್ಲಿ ಪ್ರಭಾವನೆಯ ದೃಷ್ಟಿಯಿಂದ ಇಂದ್ರನಂಥ ಬಹಳ ಐಶ್ವರ್ಯವುಳ್ಳ ದೇವನೂ ಸಹ ಭಗವಂತನ ಎದುರಿನಲ್ಲಿ ತನ್ನ ವೈಭವ ಐಶ್ವರ್ಯಗಳು ತುಚ್ಛವೆಂದು ತಿಳಿದು, ಜಿನಶಾಸನದ ಪ್ರಭಾವನೆಯನ್ನು ಪ್ರಕಟಮಾಡುತ್ತಾನೆ ಇಂಥವರಿಗೆ ಅವರ ಯೋಗ್ಯತೆಗೆ ತಕ್ಕಂತೆ ದೇವರೆಂದು ಮನ್ನಿಸಿದರೆ ಮಿಥ್ಯಾತ್ವದ ದೋಷ ಉಂಟಾಗದೆಂದು ಪೂರ್ವಾಚಾರ್ಯರು ಹೇಳಿದ್ದಾರೆ ಇವರು ನಿಜವಾದ ದೇವರಲ್ಲ ದೇವರ ದೇವರು ಜಿನೇಂದ್ರನು ಆದರಿಂದ ಅವನಿಗೆ ದೇವಾಧಿದೇವನೆಂದು ಹೆಸರಿದೆ ಸ್ವರ್ಗದೊಳಗಿನ ದೇವರಿಗೆ ಅವರ ಪೂರ್ವಪುಣ್ಯಕ್ಕನುಸರಿಸಿ ಋದ್ಧಿಗಳು ಲಭಿಸಿರುತ್ತವೆ ಆದರಿಂದ ಅವರು ಒಮ್ಮೊಮ್ಮೆ ಯಾವನಾದರೂ ಒಬ್ಬ ಪುಣ್ಯ ಪುರುಷನ ಪುಣ್ಯೋದಯದಿಂದ ಅವನ ದುಃಖವನ್ನು ನಿವಾರಿಸಲಿಕ್ಕೂ ಸಮರ್ಥರಾಗಿರುತ್ತಾರೆ ಇಂಥ ಕಥೆಗಳು ಪ್ರಥಮಾನುಯೋಗದ ಗ್ರಂಥಗಳಲ್ಲಿ ಇವೆ ಆ ಗ್ರಂಥಗಳು ಋಷಿ ಪ್ರಣೀತವಾಗಿರುವುದರಿಂದ ಅಪ್ರಮಾಣವೆಂದು ಹೇಳಲಿಕ್ಕೆ ಬರುವದಿಲ್ಲ. ಇಂದ್ರಾದಿ-ದೇವತೆಗಳನ್ನು ಅವರವರ ಯೋಗ್ಯತೆಯ ಪ್ರಮಾಣದಲ್ಲಿ ಧರ್ಮಪ್ರಭಾವನೆಯ ಕಾಲದಲ್ಲಿ ಸನ್ಮಾನಿಸಲಾಗುತ್ತದೆ ಇದನ್ನು ಕಂಡು, ಅವರನ್ನೂ ದೇವಾಧಿದೇವನಂತೆ ಪೂಜಿಸುವರೆಂದು ತಿಳಿಯಕೂಡದು ಮೂಢರು ಅಜ್ಞಾನದಿಂದ ಹಾಗೆ ತಿಳಿಯುತ್ತಿರಲೂಬಹುದು ಅಂಥವರಿಗೆ ನಿಜವಾದ ದೇವನ ಸ್ವರೂಪವನ್ನೂ ಪೂಜಾ ಸನ್ಮಾನಗಳ ಅರ್ಥವನ್ನೂ ಚೆನ್ನಾಗಿ ತಿಳಿಸಿಕೊಡಬೇಕು

ಸಂತುಷ್ಟಗೊಳಿಸುತ್ತಾರೆ, ಅಲ್ಲದೆ ದೇವನ ಮುಂದೆ ಎದ್ದು ನಿಂತು ಹೀಗೆ ಪ್ರಾರ್ಥಿಸುತ್ತಾರೆ. "ದೇವಾ, ನನ್ನ ಇಂಥದೊಂದು ಕೆಲಸ ಸಿದ್ಧಿಸಿದರೆ ನಿನಗೆ ಬಂಗಾರದ ಛತ್ರವನ್ನು ಮಾಡೇನು; ನಿನ್ನ ಸಲುವಾಗಿ ಮಂದಿರವನ್ನು ಕಟ್ಟಿಸುವೆ; ನಿನ್ನ ಮುಂದೆ ರೂಪಾಯಿಗಳ ರಾಶಿಯನ್ನೇ ಹಾಕುವೆ, ನಿನಗೆ ಪ್ರಾಣಿಗಳ ಬಲಿಕೊಡುವೆ, ಮಣಗಟ್ಟಲೆ ಉಂಡಿಗಳನ್ನು ಮಾಡಿಸಿ, ನಿನ್ನ ಮುಂದೆ ಏರಿಸೇನು, ನನ್ನ ಮಗುವು ಜೀವಂತ ಉಳಿದರೆ ಅವನ ಜಡೆ ಕಾಯುವೆ, ಅಲ್ಲದೆ ನಿನ್ನ ಎದುರಿಗೆ ಬಂದು ಅವುಗಳನ್ನು ಕತ್ತರಿಸುವೆ." ಹೀಗೆ ಬೇಡಿಕೊಳ್ಳುವುದು—ಮುಡುವು ಕಟ್ಟುಡುವುದು—ಇವೆಲ್ಲ ಮಿಥ್ಯಾತ್ವದ ಉದಯದ ಪ್ರಭಾವಗಳಾಗಿವೆ ಎಲ್ಲಿ ಜೀವದ ಹಿಂಸೆಯಾಗುವುದೋ ಅಲ್ಲಿ ಭಯಂಕರ ಪಾಪದ ಬಂಧವಾಗುವುದು. ಆ ಹಿಂಸೆಯು ದೇವನಿಮಿತ್ತವಾಗಿರಲಿ, ಗುರುವಿನ ನಿಮಿತ್ತವಾಗಿರಲಿ, ಅದರಿಂದ ಸಂಸಾರ ಸಮುದ್ರದಲ್ಲಿ ಮುಳುಗಬೇಕಾಗುವುದು ನಿಶ್ಚಯ. ಯಾರೂ ದೇವರ ಹೆದರಿಕೆಯಿಂದ, ಲೋಭದಿಂದ, ನಾಚಿಕೆಯಿಂದ ಹಿಂಸೆಯಾಗುವಂಥ ಕಾರ್ಯದಲ್ಲಿ ಎಂದೂ ಪ್ರವರ್ತಿಸಕೂಡದು ದಯೆಯುಳ್ಳವರನ್ನು ದೇವರು ರಕ್ಷಣೆಮಾಡಿಯಾನು ಯಾಕೆಂದರೆ ಅವರು ಯಾರ ಅಪರಾಧವನ್ನು ಮಾಡುವದಿಲ್ಲ, ಯಾರ ಕೂಡ ವೈರವನ್ನು ಸಾಧಿಸಲಾರರು, ಇಂಥವರಿಗೆ ದೇವನೂ ಸಹ ಕಷ್ಟವನ್ನು ಕೊಡಲು ಸಮರ್ಥನಾಗುವದಿಲ್ಲ ರಾಗ, ದ್ವೇಷ, ಖಡ್ಗಾದಿಗಳನ್ನು ಧರಿಸುವ ದೇವರು ಸ್ವತಃ ದುಃಖಿಗಳಾಗಿರುತ್ತಾರೆ; ಹೆದರಿಕೆಯುಳ್ಳವರೂ ದುರ್ಬಲರೂ ಆಗಿರುತ್ತಾರೆ. ಅವರು ಸಮರ್ಥರಾಗಿದ್ದರೆ—ಅವರಿಗೆ ಯಾರ ಅಂಜಿಕೆಯೂ ಇರದಿದ್ದರೆ—ಅವರು ತಮ್ಮ ಕೈಯಲ್ಲಿ ಶಸ್ತ್ರಗಳನ್ನು ಏಕೆ ಹಿಡಿಯುತ್ತಿದ್ದರು? ಯಾರಿಗೆ ಹಸಿವು ಇರುವುದೋ ಅವರೇ ಊಟದ ಅಪೇಕ್ಷೆಯನ್ನು ಮಾಡುವರು. ಒಟ್ಟಾರೆ ಮಿಥ್ಯಾದೃಷ್ಟಿಗಳು ಹೇಳಿದ ವ್ರತ, ಉಪವಾಸ, ಭಕ್ತಿ, ದಾನ ಮೊದಲಾದುವುಗಳನ್ನು ನಡೆಯಿಸುವವರನ್ನು ಮನ-ವಚನ-ಕಾಯಗಳಿಂದ ಹೊಗಳ ಕೂಡದು ದೇವ-ಕುದೇವ, ಧರ್ಮ-ಅಧರ್ಮ, ಗುರು-ಕುಗುರು, ಪಾಪ-ಪುಣ್ಯ, ಭಕ್ಷ್ಯ-ಅಭಕ್ಷ್ಯ, ತ್ಯಾಜ್ಯಾತ್ಯಾಜ್ಯ, ಆರಾಧ್ಯ-ಅನಾರಾಧ್ಯ, ಕಾರ್ಯ-ಅಕಾರ್ಯ, ಯುಕ್ತಿ-ಕುಯುಕ್ತಿ, ಸ್ವೀಕರಿಸಲಿಕ್ಕೆ ಯೋಗ್ಯ-ಸ್ವೀಕರಿಸಲಿಕ್ಕೆ ಅಯೋಗ್ಯ, ಹೇಳುವಂಥದು-ಹೇಳಬಾರದಂಥದು ಇವೇ ಮೊದಲಾದ ಎಲ್ಲ ವಿಷಯಗಳನ್ನು ಸರ್ವಜ್ಞನೂ ವೀತರಾಗಿಯೂ ಆದ ಭಗವಂತನು ಹೇಳಿದ ಶಾಸ್ತ್ರಗಳ ಮುಖಾಂತರ ನಿರ್ಣಯಿಸಬೇಕು. ಅದರಲ್ಲಿಯೂ ಪಕ್ಷಪಾತವನ್ನು ಬಿಟ್ಟಿರಬೇಕು. ಮೂಢತೆಯನ್ನು ತ್ಯಜಿಸಿರಬೇಕು ಮೇಲಾಗಿ ವ್ಯವಹಾರ ಹಾಗೂ ಪರಮಾರ್ಥಗಳಲ್ಲಿ ವಿರೋಧವು ಬರದಂತೆ ಶ್ರದ್ಧೆಯನ್ನು ಇಡುವುದೇ ಅಮೂಢದೃಷ್ಟಿತ್ವವಾಗಿದೆ.

ಕ್ಷಮೆ ಮಾಳ್ಪಂತೆ ವಿರೋಧಮೇಂ ಕುಡುವುದೇ ಸಂತೋಷಮಂ ತತ್ತ್ವ ಶಾ-
ಸ್ತ್ರಮೆ ಮಾಳ್ಪಂತೆ ಕುಶಾಸ್ತ್ರಮೇಂ ಕುಡುವುದೇ ಸುಜ್ಞಾನಮಂ ಮೋಕ್ಷರಾ- ।
ಜ್ಯಮೆ ಮಾಳ್ಪಂತೆ ಚತುಃಸ್ಥಳಂ ಕುಡುವುದೇ ಸಿದ್ಧತ್ವಮಂ ನಿಮ್ಮ ಧ-
ರ್ಮಮೆ ಕಾವಂತೆನಗನ್ಯರೇಂ ಪೊರೆವರೇ ರತ್ನಾಕರಾಧೀಶ್ವರಾ ॥

—ರತ್ನಾಕರ-ರತ್ನಾಕರ ಶತಕ ೧೨೨.

ಇನ್ನು ಉಪಗೂಹನ ಅಂಗದ ಲಕ್ಷಣ ಹೇಳುತ್ತಾರೆ—

ಸ್ವಯಂ ಶುದ್ಧಸ್ಯ ಮಾರ್ಗಸ್ಯ ಬಾಲಾಶಕ್ತಜನಾಶ್ರಯಾಮ್ ।
ವಾಚ್ಯತಾಂ ಯತ್ಪ್ರಮಾರ್ಜಂತಿ ತದ್ವದಂತ್ಯುಪಗೂಹನಮ್ ॥ ೧೫ ॥

ಅನ್ವಯಾರ್ಥ—(ಸ್ವಯಂ ಶುದ್ಧಸ್ಯ) ಸ್ವತಃ ಶುದ್ಧ (ಮಾರ್ಗಸ್ಯ) ಮೋಕ್ಷಮಾರ್ಗದಲ್ಲಿ (ಬಾಲಾಶಕ್ತ-ಜನಾಶ್ರಯಾಂ) ಅಜ್ಞಾನಿಗಳೂ ಮತ್ತು ಅಶಕ್ತರೂ ಆದ ಜನರ ಆಚರಣೆಯಿಂದ ಆಗುವ (ವಾಚ್ಯತಾ) ನಿಂದೆಯನ್ನು (ಯತ್ ಪ್ರಮಾರ್ಜಂತಿ) ಯಾವದು ದೂರಮಾಡುವದೋ (ತದ್) ಅದು (ಉಪಗೂಹನಂ) ಉಪಗೂಹನವು (ವದಂತಿ) ಎಂದು ಹೇಳುತ್ತಾರೆ

ಅರ್ಥ—ಸ್ವತಃ ಶುದ್ಧವಾಗಿರುವ ಮೋಕ್ಷ ಮಾರ್ಗದಲ್ಲಿ ಅಜ್ಞಾನಿಗಳೂ ಅಶಕ್ತರೂ ಆದ ಜನರು ಇರುವುದರಿಂದ ಆ ಮಾರ್ಗದ ನಿಂದೆಯು ಆಗುತ್ತಿದ್ದರೆ ಅದನ್ನು ದೂರಮಾಡುವುದಕ್ಕೆ ಉಪಗೂಹನವೆನ್ನುತ್ತಾರೆ.

[ಇಲ್ಲಿ ಎರಡು ಮಾತುಗಳನ್ನು ನಾವು ಮುಖ್ಯವಾಗಿ ಗಮನಿಸಬೇಕು ಮೊದಲನೆಯದು, ನಿಂದೆಗೆ ಒಳಗಾದ ಧರ್ಮ-ಮಾರ್ಗವು ಸ್ವತಃ ಶುದ್ಧವಾಗಿರಬೇಕು, ಅಶುದ್ಧವಾಗಿರಕೂಡದು ವಸ್ತುತಃ ಅಶುದ್ಧವಿರುವ ಧರ್ಮಮಾರ್ಗದ ನಿಂದೆಯನ್ನು ಪರಿಮಾರ್ಜನ ಮಾಡುವ ಅವಶ್ಯಕತೆಯೇ ಇಲ್ಲಿ ಇಲ್ಲ ಎಂಥ ದೊಡ್ಡ ಸಂತನಿರಲಿ, ಸಾಧುವಿರಲಿ ಅವನು ಆಚರಿಸುವ ಧರ್ಮಮಾರ್ಗದ ಶುದ್ಧತೆಯನ್ನು ನೋಡುವುದು ಮೊದಲ ಕರ್ತವ್ಯವಾಗಿದೆ ಎರಡನೆಯದು, ನಿಂದೆಯು ಅಜ್ಞಾನಿ ಹಾಗೂ ಅಶಕ್ತ ಜನರ ಆಶ್ರಯವನ್ನು ಹೊಂದಿ ಹಬ್ಬಿರಬೇಕು ಶುದ್ಧಮಾರ್ಗವನ್ನು ಅನುಸರಿಸದ ಧೂರ್ತರು ತಿಳಿದೂ ತಿಳಿದು ನಿಂದೆಯನ್ನು ಆರಂಭಿಸಿದ್ದರೆ ಅದರ ಪರಿಮಾರ್ಜನೆಯ ಸಂಬಂಧವೂ ಇಲ್ಲಿ ಇಲ್ಲ ಶುದ್ಧಮಾರ್ಗದಲ್ಲಿ ನಡೆಯುವವರಂತೆ ಸೋಗು ಹಾಕಿದವರನ್ನು ನಾವು ಹೆದರಿ ಹಾಗೆಯೇ ಬಿಡಕೂಡದು ಅವರನ್ನು ಪ್ರೋತ್ಸಾಹಿಸಕೂಡದು ಅವರ ಆಚರಣೆಯು ಧರ್ಮದ ದೋಷವಲ್ಲ ಆಯಾ ವ್ಯಕ್ತಿಗಳ ದೋಷದಿಂದ ಉಂಟಾಗಿರುತ್ತದೆ ಅದರಿಂದ ಅದನ್ನು ಬಯಲಿಗೆ ಎಳೆಯಲಿಕ್ಕೆಬೇಕು ಅಲ್ಲದೆ ಸಾಮಾನ್ಯ ಜನರಿಗೆ 'ಅವರು ಯೋಗ್ಯ ಧರ್ಮಮಾರ್ಗದ ಅನುಯಾಯಿಗಳಲ್ಲ, ಕಪಟವೇಷಿಗಳಿದ್ದಾರೆ' ಎಂಬುದನ್ನು ಸ್ಪಷ್ಟಗೊಳಿಸಬೇಕು. ಇದರಿಂದ ಸಮ್ಯಗ್ದರ್ಶನದ ಈ ಅಂಗದಲ್ಲಿ ಏನೂ ಬಾಧೆಯುಂಟಾಗದು. ಸ ಧ ][1]

**ವಿಶೇಷಾರ್ಥ**—**ಸ್ವಧರ್ಮೀಯರ ದೋಷಗಳನ್ನು ಪ್ರಕಟಗೊಳಿಸಕೂಡದು.** ಜಿನೇಂದ್ರ ಭಗ-ವಂತನು ಉಪದೇಶಿಸಿದ ಹತ್ತು ಲಕ್ಷಣಗಳಿಂದ ಕೂಡಿದ ಧರ್ಮವು ಅನಾದಿನಿಧನವಾಗಿದೆ. ಜಗತ್ತಿನೊಳಗಿನ ಎಲ್ಲ ಜೀವಿಗಳ ಮೇಲೆ ಉಪಕಾರಮಾಡುವಂಥದಿದೆ ಎಲ್ಲ ದೃಷ್ಟಿಯಿಂದಲೂ ನಿರ್ದೋಷವಾಗಿದೆ ಇದರಿಂದ ಯಾರ ಅಹಿತವೂ ಆಗುವದಿಲ್ಲ ಇದರಲ್ಲಿ ಯಾರೂ ತೊಂದರೆಯನ್ನುಂಟು ಮಾಡಲಿಕ್ಕೂ ಸಮರ್ಥರಾಗುವದಿಲ್ಲ. ಇಂಥ ಧರ್ಮದಲ್ಲಿ ಒಂದು ವ್ಯಕ್ತಿಯ ಅಜ್ಞಾನದಿಂದ ಇಲ್ಲವೆ ಅಶಕ್ತತೆಯಿಂದ ಉಂಟಾದ ದೋಷವು ಮೂಲಧರ್ಮದ ನಿಂದೆಗೇ ಕಾರಣವಾದರೆ ಅದನ್ನು ಆಚ್ಛಾದಿಸುವದು ಉಪಗೂಹನ ಅಂಗವಾಗಿದೆ ಅದರಂತೆ ಅಶಕ್ತತೆ ಹಾಗೂ ಅಜ್ಞಾನಗಳು ಆ ವ್ಯಕ್ತಿಯಲ್ಲಿ ನಿಜವೇ ಆಗಿದ್ದರೆ ಅವನನ್ನು ಸಂರಕ್ಷಿಸುವುದೂ ಅವನ ದೋಷಗಳನ್ನು ಎತ್ತಿ ತೋರಿಸಿ ಅಪಹಾಸ್ಯಕ್ಕೆ ಗುರಿಮಾಡದೆ ಇರುವುದೂ ಉಪಗೂಹನದ ಲಕ್ಷಣವಾಗಿದೆ ಅಜ್ಞಾನದಿಂದ ಸಂಭವಿಸಿದ ದೋಷವನ್ನು ಅನ್ಯರು ಕೇಳಿ ಧರ್ಮದ ನಿಂದೆಯನ್ನು ಮಾಡಬಹುದು ಮತ್ತು ಒಬ್ಬ ಅಜ್ಞಾನಿಯು ಮಾಡಿದ ತಪ್ಪಿನಿಂದ ಎಲ್ಲ ಒಳ್ಳೆಯ ಧರ್ಮಿಷ್ಠ ಜನರ ಮೇಲೆಯೂ ಆರೋಪ ಬಂದೀತು ಅಲ್ಲದೆ ಜೈನ ಧರ್ಮದಲ್ಲಿ ಎಷ್ಟು ಜನ ತಪಸ್ವಿಗಳು, ಸಾಧುಗಳು, ವ್ರತಿಗಳು ಇದ್ದಾರೆಯೋ ಅವರೆಲ್ಲರೂ ಪಾಖಂಡಿಗಳು, ವೇಷಧಾರಿಗಳು, ಅಯೋಗ್ಯ ಮಾರ್ಗದಿಂದ ನಡೆಯುವವರು ಇದ್ದಾರೆಂದು ತಪ್ಪನ್ನು ಹೊರಿಸಬಹುದಾಗಿದೆ. ಹೀಗೆ ಒಬ್ಬನ ದೋಷವನ್ನು ಕಂಡು ಎಲ್ಲ ಧಾರ್ಮಿಕ ಪುರುಷರೂ ದೋಷಾರೋಪಕ್ಕೆ ಒಳಗಾಗುತ್ತಾರೆ ಅದಕ್ಕಾಗಿ ಧರ್ಮರಕ್ಷಕ ಪುರುಷರು ತಮ್ಮ ಧರ್ಮದ ಮೇಲೆ ದೋಷಬರುವದೆಂದು ಎನಿಸಿದಾಗ ಅದನ್ನು ಧರ್ಮಪ್ರೀತಿಯಿಂದ ಬೈಲಿಗೆ ತರದೆ, ಅಲ್ಲಿಯೇ ಮುಚ್ಚಬೇಕು ಯಾವ ಪ್ರಕಾರ ತಾಯಿಯು ಮಕ್ಕಳ ಮೇಲಿನ ಪ್ರೀತಿಯಿಂದ ಅವರ ತಪ್ಪನ್ನು—ನಿಂದ್ಯಕೃತಿಯನ್ನು—ಬೈಲಿಗೆಳೆಯದೆ ತನ್ನ ಮನಸ್ಸಿನಲ್ಲಿಯೇ ಇಟ್ಟುಕೊಂಡು ಮುಚ್ಚಿ ಬಿಡುವಳೋ ಅದರಂತೆ ಧರ್ಮಾತ್ಮಕ ಪ್ರೇಮವು ಧರ್ಮದ ಮೇಲೆ ಇರಬೇಕು ತಮ್ಮ ಸಹ ಧರ್ಮೀಯ ಬಂಧುಗಳಿಂದ ಅಜ್ಞಾನದಿಂದಲೂ ಕರ್ಮದ ಪ್ರಬಲ ಉದಯದಿಂದಲೂ ವ್ರತ, ಶೀಲ, ತಪಶ್ಚರ್ಯಗಳಲ್ಲಿ ದೋಷವು ಉತ್ಪನ್ನವಾದರೆ ಅದನ್ನು ಬೈಲಿಗೆ ತರಕೂಡದು ಅಲ್ಲದೆ ಸಮ್ಯಗ್ದೃಷ್ಟಿ ಪುರುಷನ ಸ್ವಭಾವವೂ ಹೀಗಿರುತ್ತದೆ ಅವನು ಎರಡನೆಯವರ ದೋಷಗಳನ್ನು ಪ್ರಕಟ ಮಾಡಲಾರನು ಯಾರ ಮೇಲೆಯೂ ಅಪವಾದವನ್ನು ತರಕೂಡದು ಹಾಗೆಯೇ ಸ್ವತಃ ಮಾಡಿದ ಒಳ್ಳೆಯ ಕೆಲಸಗಳನ್ನೂ ಪ್ರಕಟಗೊಳಿಸ-ಬಾರದು ತನ್ನ ಸ್ತುತಿ ಹಾಗೂ ಅನ್ಯರ ನಿಂದೆಗಳನ್ನು ಮಾಡಕೂಡದು; ತಿರುಗಿ ಅವನು ಅನ್ಯ ಜೀವಿಗಳ ದೋಷಗಳನ್ನು ಕಂಡು, ಮುಂದಿನ ವಿಚಾರಗಳನ್ನು ಮನಸ್ಸಿನಲ್ಲಿ ತರಬೇಕು

ಅನ್ಯರ ದೋಷಗಳನ್ನು ಕಂಡು ಏನು ವಿಚಾರ ಮಾಡಬೇಕು? "ಸಂಸಾರದಲ್ಲಿ ಜೀವವು ಅನಾದಿಕಾಲ-ದಿಂದಲೂ ಕರ್ಮದ ಆಧೀನದಲ್ಲಿದೆ ಅದರಿಂದ ಮೋಹನೀಯ ಕರ್ಮದ ಉದಯವಿದ್ದಾಗ ಜ್ಞಾನಾವರಣ, ದರ್ಶನಾವರಣ

---

1 ಆಯತವರ್ಮನು ಹೇಳುವದು ಹೀಗೆ ಇನ್ನುಪಗೂಹನವೆಂಬಯ್ದನೆಯಂಗಲಕ್ಷಣವೆಂತೆನೆ—ಮೋಹೋದಯದಿಂ ಕ್ಷುತ್ಪಿಪಾಸಾದಿ ಬಾದೆಗೆ ಚಳಿತು ವೃತ್ತಿಯೊಳು ನೆಗಳ್ತೆಯುದಂ ಕಂಡು ಕೆಲರಂ ನಷ್ಟರೆಂದು ಪೊರಕುಟ್ಟುತಿರೆಯುದಂ ತಾಂ ಮಾರ್ಕೊಂಡಂ ಅಧರ್ಮ ಪುರುಷರ್ಕಳ ನೀಚತ್ವಮಂ ಪ್ರಕಟಿಸದೆ ಮುಚ್ಚಿ ಕಳೆವುದು ಉಪಗೂಹನಮೆಂಬುದಕ್ಕು

ಕರ್ಮಗಳು ಉದಯವಾದಾಗ ಅಂಥ ವ್ಯಕ್ತಿಯ ಆಚರಣೆಯು ದೋಷಯುಕ್ತವಾದೀತು; ಅವನಿಂದ ತಪ್ಪುಗಳೂ ಆಗಬಹುದು ಇದರಲ್ಲಿ ಆಶ್ಚರ್ಯವೆನಿಸಿಕೊಳ್ಳುವಂಥದೇನಿದೆ? ಜೀವವನ್ನು ಕಾಮ, ಕ್ರೋಧ, ಮೋಹ ಮೊದಲಾದವುಗಳು ಯಾವಾಗಲೂ ಮೋಸಗೊಳಿಸುತ್ತವೆ, ಭ್ರಷ್ಟಗೊಳಿಸುತ್ತವೆ, ಕಷ್ಟವನ್ನೂ ಕೊಡುತ್ತವೆ ನಾವು ಸಹ ಸಂಸಾರದಲ್ಲಿ ರಾಗದ್ವೇಷಗಳ ಆಧೀನರಾಗಿ ಯಾವ ಅನರ್ಥವನ್ನು ಮಾಡಿಲ್ಲ? ಎಲ್ಲವನ್ನೂ ಮಾಡಿದ್ದೇವೆ ಇದೀಗ ಜಿನೇಂದ್ರನ ಪರಮಾಗಮಕ್ಕೆ ಶರಣು ಹೋದುದರಿಂದ ಗುಣ–ದೋಷಗಳಲ್ಲಿಯ ಭೇದವನ್ನು ತಿಳಿಯ ಹತ್ತಿದ್ದೇವೆ. ಆದರೂ ಅನಾದಿಕಾಲದ ಕಷಾಯಗಳ ಸಂಸ್ಕಾರದಿಂದ ಅನೇಕ ಪ್ರಕಾರದ ದೋಷಗಳ ಸದ್ಭಾವವು ನಮ್ಮಲ್ಲಿ ಇದ್ದೇ ಇದೆ ಇದನ್ನು ನೆನೆದು, ಅನ್ಯ ಜೀವಿಗಳಲ್ಲಿ ಕರ್ಮದ ಉದಯದಿಂದ, ಪರಾಧೀನತೆಯಿಂದ ಹುಟ್ಟಿ ದೋಷಗಳನ್ನು ನೋಡಿ, ಅವುಗಳ ವಿಷಯದಲ್ಲಿ ಕರುಣೆಯೇ ಹುಟ್ಟಲಿಕ್ಕೆ ಬೇಕು ಸಂಸಾರಿಜೀವಗಳು ವಿಷಯ–ಕಷಾಯಗಳ ವಶವಾಗಿರುವುದರಿಂದ ಪರಾಧೀನವಾಗಿರುತ್ತವೆ ಈ ವಿಷಯ–ಕಷಾಯಗಳು ಮಾನವನ ಜ್ಞಾನವನ್ನು ಕೆಡಿಸಿ, ಅನೇಕ ಪ್ರಕಾರವಾಗಿ ಕುಣಿಸುತ್ತವೆ, ಆತ್ಮದ ಅರಿವನ್ನು ಮರೆಯಿಸುತ್ತವೆ. ಅದಕ್ಕಾಗಿ ಅಜ್ಞಾನಿಗಳಿಂದ ಆಗುವ ದೋಷಗಳನ್ನು ನಾವು ಬಯಲಿಗೆ ತರಕೂಡದು.

> ಪುಸಿಯ ವರಾಂಗನಾರತದ ಮದ್ಯದ ಮಾಂಸದ ಮಯ್ಗೆ ಜಿಲ್ದ ಮ-
> ರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ ।
> ಪೊಸಯಿಸಿ ಜೀವನಿಲ್ಲ ಮೋಕ್ಷಯಿಲ್ಲಜಿನಿಲ್ಲ ಪರತ್ರೆಯಿಲ್ಲೆನ-
> ಲ್ಕಸಕಳಿಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ ॥
>
> —ಪಂಪ–ಆದಿಪುರಾಣಂ ೨-೧೧.

ಈಗ ಸ್ಥಿತೀಕರಣ ಅಂಗದ ಲಕ್ಷಣ ಹೇಳುತ್ತಾರೆ—

> ದರ್ಶನಾಚ್ಚರಣಾದ್ವಾಪಿ ಚಲತಾಂ ಧರ್ಮವತ್ಸಲೈಃ ।
> ಪ್ರತ್ಯವಸ್ಥಾಪನಂ ಪ್ರಾಜ್ಞೈಃ ಸ್ಥಿತೀಕರಣಮುಚ್ಯತೇ ॥ ೧೬ ॥

ಅನ್ವಯಾರ್ಥ—(ದರ್ಶನಾತ್ ಚರಣಾತ್ ವಾ ಅಪಿ) ಸಮ್ಯಗ್ದರ್ಶನ ಅಥವಾ ಸಮ್ಯಕ್ ಚಾರಿತ್ರಗಳಿಂದ (ಚಲತಾಂ) ಚ್ಯುತಿಯನ್ನು ಹೊಂದುವಂಥವರನ್ನು (ಧರ್ಮವತ್ಸಲೈಃ) ಧರ್ಮದ ಮೇಲೆ ಪ್ರೀತಿಯಿದ್ದ ಜನರು (ಪ್ರತ್ಯವಸ್ಥಾಪನಂ) ತಿರುಗಿ ಸ್ಥಿರಗೊಳಿಸಬೇಕು. (ಪ್ರಾಜ್ಞೈಃ) ಬಲ್ಲವರಿಂದ ಇದು (ಸ್ಥಿತೀಕರಣಂ) ಸ್ಥಿತೀಕರಣ ಅಂಗವೆಂದು (ಉಚ್ಯತೇ) ಹೇಳಲಾಗಿದೆ [1]

ಅರ್ಥ—ಸಮ್ಯಗ್ದರ್ಶನ ಹಾಗೂ ಸಮ್ಯಕ್ ಚಾರಿತ್ರಗಳಿಂದ ಚ್ಯುತನಾಗುತ್ತಿರುವ ಪ್ರಾಣಿಯನ್ನು ಧರ್ಮದ ಮೇಲೆ ಪ್ರೀತಿಯುಳ್ಳ ಬಲ್ಲವರು ಉಪದೇಶ ಮೊದಲಾದವುಗಳ ಮುಖಾಂತರ ಸತ್ಯಾರ್ಥದಲ್ಲಿ ಶ್ರದ್ಧೆಯನ್ನೂ ಚಾರಿತ್ರದಲ್ಲಿ ಸ್ಥಿರತ್ವವನ್ನು ಹೊಂದುವಂತೆ ಮಾಡುವುದು. ಇದೇ ಸ್ಥಿತೀಕರಣ ಅಂಗವಾಗಿದೆ. [ಧರ್ಮದ ಮೂರು ಅಂಗಗಳಲ್ಲಿ ಇಲ್ಲಿ ಸಮ್ಯಗ್ದರ್ಶನ, ಸಮ್ಯಕ್ ಚಾರಿತ್ರಗಳ ವಿಷಯವನ್ನಷ್ಟೇ ಎತ್ತಿ ಹೇಳಲಾಗಿದೆ. ಸಮ್ಯಕ್‌ಜ್ಞಾನದಿಂದ ಚ್ಯುತರಾಗುವವರ ವಿಷಯ ಎತ್ತಲಿಲ್ಲ. ಇದು ಯಾಕೆ? ಸಮ್ಯಗ್ದರ್ಶನ ಹಾಗೂ ಸಮ್ಯಕ್ ಜ್ಞಾನಗಳು ಒಂದನ್ನು ಬಿಟ್ಟು ಒಂದು ಇರಲಾರವು. ಅಲ್ಲದೆ ಸಮ್ಯಕ್ ಜ್ಞಾನಕ್ಕೆ ಸಮ್ಯಗ್ದರ್ಶನವು ಕಾರಣವಾಗಿರುತ್ತದೆ. ಇವುಗಳ ಸಂಬಂಧವು ಕಾರ್ಯಕಾರಣ ಭಾವದ್ದಿರುತ್ತದ. ದರ್ಶನದಿಂದ ಚಲಿತಚಿತ್ತನಾದಂಥವನು ಜ್ಞಾನದಿಂದಲೂ ಚ್ಯುತಿಯನ್ನು ಹೊಂದುತ್ತಾನೆ. ಅದರಿಂದ ಅದನ್ನು ಸ್ವತಂತ್ರವಾಗಿ ಉಲ್ಲೇಖಿಸುವ ಅವಶ್ಯಕತೆಯಿಲ್ಲ ಆದರೂ 'ಅಪಿ' ಎಂಬ ಶಬ್ದ ಪ್ರಯೋಗದಿಂದ ಗೌಣರೂಪದಲ್ಲಿ ಅದನ್ನು ಸೂಚಿಸಿರುವರೆಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ.

---

[1] ಆಯತವರ್ಮನು ಹೇಳುವದು ಹೀಗೆ
ಲೌಕಿಕದವರ್ಗಳ ಪ್ರೇರಣೆಯಿಂದಮಾನುಂ ಇಂದ್ರಿಯಪ್ರೇರಣೆಯಿಂದಮಾನುಂ ಸಮ್ಯಕ್ಚಾರಿತ್ರದತ್ತಣಿಂದಲ್ಲಾಡುತ್ತಿರ್ದನಪ್ಪುವಾದಿ ದ್ವಾದಶಾನುಪ್ರೇಕ್ಷೆಯುಮಂ ಪಂಚವಿಧ್ಯಾತ್ಮವುಮಂ ತೋರಿ ಇದಿನ್ನವೆಂಬುದನರಿಯುತ್ತಿರ್ದ್ದ ಪಡೆಯಲ್ಬಾರದ ರತ್ನಮಂ ಪಡೆದು ಮಹಾಸಮುದ್ರದೂಳಿಕ್ಕಿ ಕೆಡಿಸುವಂತೆ ನೀನೆಂತಾನುಂ ಪಡೆಯಲ್ಬಾರದ ಮನುಜತ್ವದೊಳು ತ್ರೈಲೋಕ್ಯ ದುರ್ಲಭಮಪ್ಪ ಸಮ್ಯಕ್ಚಾರಿತ್ರಂ ದೊರೆಕೊಳ್ವುದಂ ಕೆಡಿಸಿಯೆಂದಿಂಗೆ ಪಡೆಯಲಾರ್ಪೆಯೆಂದು ಹೇತು ದೃಷ್ಟಾಂತರಂಗಳಂ ತೋರಿ ತನ್ನ ಬಲ್ಲಂದದೊಳು ಪ್ರಾಣಿಯಂ ಮಗುಳೆ ಧರ್ಮಕ್ಕೆ ತಪ್ಪುದು ಸ್ಥಿತಿಕರಣಮೆಂಬಗುಣಂ,

ಇದಲ್ಲದೆ ಈ ಅಂಗದ ಒಡೆಯನೆನ್ನಿಸಿಕೊಳ್ಳುವವನನ್ನು 'ಧರ್ಮವತ್ಸಲ' ಮತ್ತು 'ಪ್ರಾಜ್ಞ' ಎಂಬ ಎರಡು ವಿಶೇಷಣಗಳಿಂದ ವರ್ಣಿಸಲಾಗಿದೆ. ಈ ಎರಡು ಗುಣಗಳಿಲ್ಲದ ಸ್ಥಿತೀಕರಣದ ಕಾರ್ಯವೇ ಆಗುವದಿಲ್ಲ. ಧರ್ಮವತ್ಸಲತೆಯು ಇಲ್ಲದಿದ್ದರೆ ಧರ್ಮದಿಂದ ಚ್ಯುತನಾಗುವವನನ್ನು ತಿರುಗಿ ಧರ್ಮದಲ್ಲಿ ನಿಲ್ಲಿಸುವ ಪ್ರೇರಣೆಯೇ ಹುಟ್ಟುವದಿಲ್ಲ. ಪ್ರಾಜ್ಞತಾ ಎಂದರೆ ದಕ್ಷತೆಯು ಇದು ಇಲ್ಲದಿದ್ದರೆ ಹುಟ್ಟಿದ ಪ್ರೇರಣೆಯು ಕಾರ್ಯರೂಪದಲ್ಲಿ ಸಫಲತೆಯನ್ನು ಹೊಂದುವದಿಲ್ಲ. ಅದಕ್ಕಾಗಿ ಧರ್ಮದಿಂದ ವಿಮುಖನಾದವನು ಯಾವ ಕಾರಣದಿಂದ ವಿಮುಖನಾಗಿದ್ದಾನೆ. ಅವನನ್ನು ತಿರುಗಿ ಧರ್ಮಮಾರ್ಗದಲ್ಲಿ ನಡೆಯಿಸಬೇಕಾದರೆ ಯಾವ ರೀತಿಯನ್ನು ಅನುಸರಿಸಬೇಕು. ಈ ಎಲ್ಲ ವಿಚಾರಗಳನ್ನು ತಿಳಿಯಲಿಕ್ಕೆ ಸ್ಥಿತೀಕರಣ ಅಂಗಧಾರಿಗೆ ಪ್ರಾಜ್ಞತೆಯು ಅವಶ್ಯಕತೆಯಿದೆ. ಸ ಪ.]

ವಿಶೇಷಾರ್ಥ—ಧರ್ಮಚ್ಯುತನಾಗುವ ಪುರುಷನಿಗೆ ಉಪದೇಶ—ಅವ್ರತ ಸಮ್ಯಗ್ದೃಷ್ಟಿಯಾಗಲಿ, ವ್ರತಿಕನಾಗಲಿ ಹಲವು ಕಾರಣಗಳಿಂದ ಧರ್ಮಶ್ರದ್ಧೆಯನ್ನು ಕಳೆದುಕೊಳ್ಳುವ ಸಂಭವವಿದೆ. ಅವುಗಳಲ್ಲಿ ಬೇನೆಯಿಂದಾಗುವ ವೇದನೆ, ಅತಿ ಬಡತನ, ಪ್ರಿಯಜನರ ವಿಯೋಗ ಇವೇ ಮೊದಲಾದವುಗಳು ಅವನ ಪರಿಣಾಮವನ್ನು ಕೆಡಿಸುತ್ತವೆ. ಇಂಥವನನ್ನು ಧರ್ಮದ ಮೇಲೆ ಪ್ರೀತಿ ಇದ್ದವರೂ ಜ್ಞಾನಿಗಳೂ ತಮ್ಮ ಉಪದೇಶದಿಂದ ಧರ್ಮದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವದಕ್ಕೂ ಧರ್ಮಮಾರ್ಗವನ್ನು ಅವನು ಬಿಡದಂತೆ ಯತ್ನಿಸುವದಕ್ಕೂ ಸ್ಥಿತೀಕರಣವೆನ್ನುವರು. ಅವನಿಗೆ ಹೀಗೆ ಉಪದೇಶ ಮಾಡಬೇಕು. "ಎಲೈ ಧರ್ಮದಿಂದ ನಡೆಯಬೇಕೆಂಬ ಅಪೇಕ್ಷೆಯುಳ್ಳ ಪುರುಷನೆ, ನಿನಗೆ ಈ ಮಾನವ ಜನ್ಮ, ಅದರಲ್ಲೂ ಈ ಧರ್ಮಪ್ರೀತಿ, ಉತ್ತಮಕುಲ, ಇಂದ್ರಿಯಗಳ ಶಕ್ತಿ, ಧರ್ಮದ ಲಾಭ ಇವೆಲ್ಲ ಸಾಧನಗಳು ದೈವಯೋಗದಿಂದ ಲಭಿಸಿವೆ. ಈ ದೇಹವು ನಷ್ಟವಾದ ಮೇಲೆ ಇಂಥ ಅಮೂಲ್ಯಸಾಧನಗಳು ನಿನಗೆ ಅನಂತ ಜನ್ಮಗಳು ಕಳೆದರೂ ದೊರೆಯುವಂತಿಲ್ಲ. ಈಗ ನಿನ್ನ ಪೂರ್ವ ಕರ್ಮೋದಯದಿಂದ ಉಂಟಾದ ಬೇನೆ, ದುಃಖ, ಅಗಲುವಿಕೆ, ಬಡತನ ಮೊದಲಾದ ತೊಂದರೆಗಳಿಂದ ಗಾಬರಿಗೊಂಡು ನಿನ್ನ ಪರಿಣಾಮವನ್ನು ಕೆಡಿಸಿಕೊಳ್ಳುವದು ತರವಲ್ಲ. ದುಃಖಿಸುವದರಿಂದ ಕರ್ಮದ ಬಂಧವು ಹೆಚ್ಚಾದೀತು. ಗಾಬರಿಯಾಗಿ ಬಂದ ದುಃಖವನ್ನು ಅನುಭೋಗಿಸಿದರೂ ಕರ್ಮವು ಬಿಡಲಾರದು. ಧೈರ್ಯದಿಂದ ಭೋಗಿಸಿದರೂ ಕರ್ಮ ಬಿಡದು. ಅದಕ್ಕಾಗಿ ದುರ್ಗತಿಗೆ ಕಾರಣವಾದ ಹೆದರಿಕೆಯನ್ನು ಬಿಟ್ಟು ಧೈರ್ಯದಿಂದ ವರ್ತಿಸು. ಮನುಷ್ಯ ಜನ್ಮದಲ್ಲಿ ಒಂದು ಧೈರ್ಯದಿಂದಲೂ ಸಂತೋಷವೃತ್ತಿಯಿಂದಲೂ ಧರ್ಮವನ್ನು ಸೇವಿಸಿ ಆತ್ಮನ ಉದ್ಧಾರವನ್ನು ಮಾಡುವದೇ ಪುರುಷಾರ್ಥವಾಗಿದೆ. ಎಲಾ! ಮನುಷ್ಯನ ದೇಹವಂತೂ ರೋಗದ ಮನೆಯಾಗಿದೆ. ಇದರಲ್ಲಿ ರೋಗವು ಹುಟ್ಟಿದರೆ ಆಶ್ಚರ್ಯವೇನು? ಇಂಥ ವೇಳೆಯಲ್ಲಿ ಧರ್ಮಕ್ಕೆ ಶರಣುಹೋಗುವದೇ ಯೋಗ್ಯವಾಗಿದೆ. ರೋಗವು ಉತ್ಪನ್ನವಾಗತಕ್ಕುದೇ ಸಂಯೋಗವು ವಿಯೋಗದಿಂದ ಕೂಡಿದುದೇ ಇದೆ. ಯಾವ ಪುರುಷನಿಗೆ ಈ ಸಂಸಾರದಲ್ಲಿ ದುಃಖ ಬಂದಿಲ್ಲ? ಯಾವ ಪ್ರಾಣಿಗೂ ಸಂಸಾರದಲ್ಲಿ ಸುಖವಿಲ್ಲೆಂಬ ನಿಯಮವನ್ನು ನೆನೆದು, ಸಂಕಟದಲ್ಲಿ ನೀನು ಧೈರ್ಯವನ್ನು ಬಿಡದೆ ಕೇವಲ ಧರ್ಮವನ್ನು ನಂಬಿ ಇರು. ಹುಟ್ಟಿದ ವಸ್ತುವಿಗೆ ನಾಶವು ನಿಶ್ಚಿತವಾದದ್ದು. ನಮ್ಮ ಶರೀರದಿಂದಲೂ ಕೆಲವು ಕಾಲದಲ್ಲಿ ನಾವು ಅಗಲುತ್ತೇವೆಂಬುದು ನಿಶ್ಚಿತವಾಗಿಯೇ ಇದೆ. ಅಂದಮೇಲೆ ಉಳಿದ ಪದಾರ್ಥಗಳು ತಮ್ಮ ತಮ್ಮ ಕರ್ಮದ ಸ್ವಾಧೀನ ಇರುವದರಿಂದ ಹುಟ್ಟಿದವು ಮತ್ತು ಇಲ್ಲದಂತವು. ಇದರಲ್ಲಿ ಆನಂದ, ದುಃಖಗಳನ್ನು ಹೊಂದುವುದು ಕರ್ಮಕಟ್ಟುವದಕ್ಕೆ ಕಾರಣವಾಗಿದೆ. ಈ ಪಂಚಮ ಕಾಲವಿಭಾಗವಾದ ದುಃಷಮಾ ಕಾಲದಲ್ಲಿ ಮಾನವನಿಗೆ ಅಲ್ಪ ಆಯುಷ್ಯ ಹಾಗೂ ಸ್ವಲ್ಪ ಬುದ್ಧಿಯು ಇರುತ್ತದೆ. ಅವನು ಕಷಾಯಗಳ ದಾಸನಾಗಿರುವನು. ಅವನಿಗೆ ವಿಷಯದ ಲಾಲಸೆಯು ತೀವ್ರವಾಗಿರುತ್ತದೆ. ಬುದ್ಧಿಯಲ್ಲಿ ಮಂದತೆ, ರೋಗ ಹುಟ್ಟುವಿಕೆ, ವಿಶೇಷವಾದ ಕರ್ಷ ಮೊದಲಾದುವುಗಳನ್ನು ಸಂಗಡ ಕಟ್ಟಿಕೊಂಡೇ ಹುಟ್ಟಿರುತ್ತಾನೆ. ಇಂಥ ಕಾಲದಲ್ಲಿ ಸಮ್ಯಗ್ಜ್ಞಾನವನ್ನು ಸಂಪಾದಿಸಿ, ಕರ್ಮವನ್ನು ಗೆಲ್ಲುವ ಉಪಾಯ ಕೈಕೊಳ್ಳುವುದು ಯೋಗ್ಯವಾಗಿದೆ."

ಯಾರಾದರೂ ಬೇನೆ ಬಿದ್ದವರಿದ್ದರೆ ಅವರಿಗೆ ಔಷಧ ಕೊಡಬೇಕು. ಅವರಿಗೆ ತಿನ್ನುಣ್ಣುವದಕ್ಕೂ ನೀರು, ಪಥ್ಯಗಳಿಗೂ ವ್ಯವಸ್ಥೆಯನ್ನು ಮಾಡಿಕೊಡಬೇಕು. ಯಾವಾಗಲೂ ಅವರಿಗೆ ಹನ್ನೆರಡು ಭಾವನೆಗಳ ಸ್ಮರಣೆಯನ್ನು ಕೊಡುತ್ತ ಇರಬೇಕು. ಅವರ ಸೇವೆ, ಆರೈಕೆಗಳನ್ನು ಮಾಡುತ್ತ ಇರಬೇಕು. ಮಲ-ಮೂತ್ರಗಳನ್ನು ತೆಗೆಯುತ್ತ ಇರಬೇಕು. ಈ ಪ್ರಕಾರ ಅನೇಕ ಉಪಾಯಗಳಿಂದ ಅವರ ಪರಿಣಾಮವು ಧರ್ಮದ ವಿಷಯದಲ್ಲಿ ದೃಢವಾಗಿರುವಂತೆ ಪ್ರಯತ್ನಮಾಡಬೇಕು. ಇದೇ ಸ್ಥಿತೀಕರಣ ಅಂಗವಾಗಿದೆ.

**ವ್ರತಭಂಗಮಾಡಲಿಕ್ಕೆ ಕೊಡಬಾರದು**—ಒಬ್ಬೊಬ್ಬರಿಗೆ ರೋಗದ ವೇದನೆಯು ತೀರ ಹೆಚ್ಚಾಗುವುದು ಆಗ ಅವರು ಧೈರ್ಯಕಳೆಕೊಳ್ಳುವರು. ವ್ರತಭಂಗಮಾಡುವ ಮನಸ್ಸಿನಲ್ಲಿರುವರು. ಹಗಲು ರಾತ್ರಿ ಎನ್ನದೆ ಬೇಕಾದಾಗ ಊಟವನ್ನು ಬೇಡುವರು. ತಿನ್ನಕೂಡದಂಥ ವಸ್ತುಗಳನ್ನೂ ತ್ಯಾಗ ಮಾಡಿದ ಜೀನಸುಗಳನ್ನೂ ತಿನ್ನುವ ಇಚ್ಛೆಯನ್ನು ವ್ಯಕ್ತಮಾಡುವರು. ಅಂಥ ವೇಳೆಯಲ್ಲಿ ದಯಾಭಾವದಿಂದ ಕೂಡಿ, ಮಧುರ ಸ್ವರದಿಂದ ಅವರಿಗೆ ಉಪದೇಶ ಮಾಡಬೇಕು. ಅದರಿಂದ ಅವರ ತಪ್ಪು ಅವರಿಗೆ ತಿಳಿದು ಬರಬೇಕು. ಅಲ್ಲದೆ ತಿರುಗಿ ಅಂಥ ವಸ್ತುಗಳನ್ನು ಅವರಿಗೆ ಬೇಡುವ ಇಚ್ಛೆಯಾಗಬಾರದು.

ಇದೇ ಪ್ರಕಾರ ಬಡವರಿಗೆ ನಮ್ಮ ಶಕ್ತಿಗೆ ಅನುಸರಿಸಿ ಆಹಾರವನ್ನೂ ಅರಿವೆ ಅಂಚಡಿಗಳನ್ನೂ ಹೊದಿಕೆಯನ್ನೂ ನಿಲ್ಲಲಿಕ್ಕೆ ಸ್ಥಳವನ್ನೂ ಕೊಡಬೇಕು ಪಾತ್ರೆಗಳಿಲ್ಲದವರಿಗೆ ಪಾತ್ರೆ, ಜೀವನ ಸಾಧನೆಗಳ ಕೊರತೆ ಇದ್ದವರಿಗೆ ಅವುಗಳನ್ನು ಪೂರೈಸಿ, ಅವರನ್ನು ಗೌರವದಿಂದ ಕಂಡು, ಅವರು ಸ್ವಧರ್ಮದಲ್ಲಿ ಸ್ಥಿರವಾಗಿ ನಿಲ್ಲುವಂತೆ ದಾನ, ಸನ್ಮಾನಾದಿಗಳಿಂದ ಉಪಾಯ ಯೋಜಿಸಬೇಕು. ಇದೂ ಸ್ಥಿತೀಕರಣದಲ್ಲಿ ಸಮಾವೇಶವಾಗುತ್ತದೆ.

**ತನ್ನ ಮೇಲೆ ಪ್ರಸಂಗ ಬಂದಾಗಲೂ ವಿಚಾರಮಾಡಬೇಕು**—ಒಂದೊಂದು ಸಂದರ್ಭದಲ್ಲಿ ತಾನು ಸ್ವಂತ ನೀತಿ ಮಾರ್ಗದಿಂದ ಭ್ರಷ್ಟನಾಗುವ ಸಂಭವ ಕಂಡುಬರುತ್ತದೆ ಇಲ್ಲವೆ ಕಾಮ, ಸೊಕ್ಕು, ಆಶೆ ಮೊದಲಾದವುಗಳ ವಶವಾಗಿ, ವಿಷಯಗಳಲ್ಲಿ ಮಗ್ನವಾಗುವಂತೆ ಆಗುತ್ತದೆ ನಾವು ಅನ್ಯಾಯದಿಂದ ಎರಡನೆಯವರ ಧನವನ್ನು ಎತ್ತಿ ಹಾಕಲಿಕ್ಕೆ ಹವಣಿಸುತ್ತೇವೆ ಕೆಲವು ಸಲ ಸಂತೋಷವೃತ್ತಿಯನ್ನು ಕಳೆದುಕೊಂಡು, ಅನೇಕ ಪ್ರಕಾರದ ಪರಿಗ್ರಹ-ಗಳನ್ನು ಇಟ್ಟುಕೊಳ್ಳಬೇಕೆಂಬ ತೀವ್ರ ಇಚ್ಛೆಯಾಗುತ್ತದೆ. ಮತ್ತೊಮ್ಮೆ ನಾವು ಆರ್ತಧ್ಯಾನಿಗಳಾಗಿ, ವಿಯೋಗದಿಂದ ಬಹು ದುಃಖಿತರಾಗುತ್ತೇವೆ. ಬಡತನದಿಂದ ನಮಗೆ ದೀನ ಅವಸ್ಥೆಯು ಉಂಟಾಗುತ್ತದೆ. ಉತ್ಸಾಹ ಇಲ್ಲದಂತಾಗಿ ನೋಡಿದಲ್ಲೆಲ್ಲ ದುಃಖವೇ ದುಃಖ ಕಂಡುಬಂದು ಆಕುಲತೆಯು ಬೆಳೆಯುತ್ತದೆ. ಸಂಸಾರದಲ್ಲಿ ಇಂಥ ಅನೇಕ ಸಂದರ್ಭಗಳು ಒದಗುತ್ತವೆ ಆಗ ನಾವು ಅಧ್ಯಾತ್ಮ ಶಾಸ್ತ್ರದ ಸ್ವಾಧ್ಯಾಯಮಾಡಿ, ಹನ್ನೆರಡು ಭಾವನೆಗಳನ್ನು ಮನದಲ್ಲಿ ಚಿಂತಿಸಬೇಕು ನಮ್ಮ ಆತ್ಮನ ಸ್ವಭಾವವು ಅಜರಾಮರ, ಅವಿನಾಶಿ, ಏಕಾಕಿ, ಅನ್ಯದ್ರವ್ಯಗಳ ಸ್ವಭಾವರಹಿತವಾಗಿಯೆಂದು ಮನದಟ್ಟುಮಾಡಿಕೊಂಡು, ಧರ್ಮದಿಂದ ವಿಮುಖನಾಗಕೂಡದು ಅಸಾತಾದಿಕರ್ಮ, ಅಂತರಾಯಕರ್ಮ ಅಲ್ಲದೆ ಇತರ ಕರ್ಮಗಳ ಉದಯವು ಸಹ ನಮ್ಮಿಂದ ಭಿನ್ನವಾಗಿವೆ ಆತ್ಮನಿಗೂ ಅವುಗಳಿಗೂ ಏನೂ ಸಂಬಂಧವಿಲ್ಲ. ಕರ್ಮದ ಉದಯದಿಂದ ನಮ್ಮ ಮೂಲ ಸ್ವಭಾವವನ್ನು ಚಂಚಲವಾಗಗೊಡಬಾರದು. ಇದಕ್ಕೂ ಸ್ಥಿತೀಕರಣ ಅಂಗವೆನ್ನುವರು.

ಬೋಧನಿರಾಕೃತಿಯಿಂ ಭವಬಾಧಾಪೀಡಿತ ಶರೀರಿಯಾದ್ಯೆ ಗುರು ಸಂ- ।
ಬೋಧನೆಯಿಂ ನಿನ್ನಂ ಪ್ರತಿಬೋಧಿಸಲಾಂ ಬಂದೆನಗ್ನಿಭೂತಿಯನಱವೋ ॥

—ಶಾಂತಿನಾಥ–ಸುಕುಮಾರ ಚರಿತಂ ೫–೨೬

ಭೂರಿಮತಂಗಳಂ ತಿಳಿವುದುಂ ಪಲರಂ ಮತಿಮೀರಿ ಧರ್ಮದೊಳ್
ನೇರಿವುದುಂ ಮಹೋಗ್ರತಪದೊಳ್ಪಟುವಪ್ಪುದುಮಾತ್ಮನಂ ಮನೋ- ।
ರಾಗದೊಳೀಕ್ಷಿಸುತ್ತೆ ಭವಬಂಧಮನಿಕ್ಕುವ ಬುದ್ಧಿ ಸುಮ್ಮನೆ
ಬಾರದರ್ಕೆ ನಿಮ್ಮ ಕರುಣೋನ್ನತಿ ಬೇಕಪರಾಜಿತೇಶ್ವರಾ ॥

—ರತ್ನಾಕರ–ಅಪರಾಜಿತ ಶತಕ ೨೪.

ವಾತ್ಸಲ್ಯ ಎಂಬ ಹೆಸರಿನ ಸಮ್ಯಕ್ತ್ವದ ಏಳನೆಯ ಅಂಗದ ಸ್ವರೂಪವನ್ನು ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

ಸ್ವಯೂಥ್ಯಾನ್‌ಪ್ರತಿ ಸದ್ಭಾವಸನಾಥಾಪೇತಕೈತವಾ ।
ಪ್ರತಿಪತ್ತಿರ್ಯಥಾಯೋಗ್ಯಂ ವಾತ್ಸಲ್ಯಮಭಿಲಪ್ಯತೇ ॥ ೧೭ ॥

ಅನ್ವಯಾರ್ಥ—(ಅಪೇತಕೈತವಾ) ಕಪಟಭಾವವಿಲ್ಲದೆ (ಸದ್ಭಾವಸನಾಥಾ) ಒಳ್ಳೆಯ ಭಾವನೆಯಿಂದ (ಸ್ವಯೂಥ್ಯಾನ್ ಪ್ರತಿ) ಧರ್ಮಬಂಧುವಿಗೆ (ಯಥಾಯೋಗ್ಯಂ) ಯೋಗ್ಯತೆಗೆ ತಕ್ಕಂತೆ (ಪ್ರತಿಪತ್ತಿಃ) ಆದರ ಸತ್ಕಾರ ಮಾಡುವುದು (ವಾತ್ಸಲ್ಯ) ವಾತ್ಸಲ್ಯ ಅಂಗ (ಅಭಿಲಪ್ಯತೇ) ಎಂದು ಹೇಳಿದೆ.

ಅರ್ಥ—ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳಿಂದ ಕೂಡಿದ ಧರ್ಮವನ್ನು ಸ್ವೀಕರಿಸಿದಂಥ ಜನಸಮೂಹಕ್ಕೇನೇ ಧರ್ಮಾತ್ಮರು ತಮ್ಮ ಸಮೂಹವೆಂದು ತಿಳಿಯುತ್ತಾರೆ ಆ ಸಮೂಹದಲ್ಲಿ ಇರುವ ಮುನಿ, ಆರ್ಯಿಕಾ, ಶ್ರಾವಕ ಶ್ರಾವಿಕಾ ಮತ್ತು ಅವ್ರತಸಮ್ಯಗ್ದೃಷ್ಟಿ ಇವರನ್ನು ನಿಃಷ್ಕಪಟಿಗಳಾಗಿ ಶುದ್ಧಭಾವದಿಂದ ಯೋಗ್ಯತೆಗೆ ಅನುಸಾರವಾಗಿ ಆದರ ಸತ್ಕಾರವನ್ನು ಮಾಡಬೇಕು ಈ ಆದರ ಸತ್ಕಾರದಲ್ಲಿ ಅನೇಕ ಕ್ರಿಯೆಗಳು ಸಮಾವೇಶವಾಗುತ್ತವೆ ಅಂಥವುಗಳಲ್ಲಿ ಮಾದರಿಗಾಗಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗುವುದು ಅವರನ್ನು ಕಂಡು ಎದ್ದು ನಿಲ್ಲುವುದು, ಎದುರಿಗೆ ಹೋಗಿ ಕರೆದುಕೊಂಡು ಬರುವುದು, ನಮಸ್ಕಾರ ಮಾಡುವುದು, ಅವರಲ್ಲಿರುವ ಗುಣಗಳನ್ನು ಹೊಗಳುವುದು, ಕೈಜೋಡಿಸುವುದು, ಆಜ್ಞೆಯನ್ನು ಪೂರ್ಣಪಾಲಿಸುವುದು, ವಂದ್ಯವೆಂದು ತಿಳಿಯುವುದು, ಪೂಜೆಯನ್ನು ಮಾಡುವುದು, ಸ್ತುತಿಯನ್ನು ಮಾಡುವುದು, ಅವರನ್ನು ಉಚ್ಚಸ್ಥಾನದಲ್ಲಿ ಕೂಡಿಸಿ ತಾನು ಕೆಳಗೆ ಕೂಡುವುದು, ಬಡವರಿಗ ಒಂದು ದ್ರವ್ಯದ ನಿಧಿಯು ಸಿಕ್ಕಾಗ ಆಗುವಂಥ ಆನಂದವನ್ನು ಧರ್ಮಬಂಧುಗಳನ್ನು ಕಂಡಾಗ ಹೊಂದುವುದು, ಅವರ ಮೇಲೆ ಬಹಳ ಪ್ರೀತಿಯನ್ನು ಮಾಡುವುದು, ಯೋಗ್ಯಕಾಲದಲ್ಲಿ ಅವರಿಗೆ ಊಟವನ್ನೂ ಕುಡಿಯಲು ನೀರು ಮೊದಲಾದವುಗಳನ್ನು ಕೊಡುವುದು, ಇರಲಿಕ್ಕೆ ಸ್ಥಳ ಹಾಗೂ ಉಪಕರಣಗಳನ್ನು ಒದಗಿಸುವುದು, ಅವರ ಸೇವೆಯನ್ನು ಮಾಡುವುದು, ಅದರಲ್ಲಿ ಆನಂದವನ್ನೂ ಧನ್ಯತೆಯನ್ನೂ ಹೊಂದುವುದು—ಇವೆಲ್ಲ ವಾತ್ಸಲ್ಯ ಅಂಗದಲ್ಲಿ ಸಮಾವೇಶವಾಗುತ್ತವೆ ಇಂಥ ಆಚರಣೆಗೇನೇ ವಾತ್ಸಲ್ಯ ಅಂಗವೆಂದು ಹೇಳಲಾಗುವುದು. [ಈ ಅಂಗದ ಸಾರ್ಥಕತೆಯ ವಿಷಯದಲ್ಲಿ ಮುಖ್ಯವಾಗಿ ಮೂರು ಮಾತುಗಳನ್ನು ನಾವು ಲಕ್ಷ್ಯದಲ್ಲಿಡಬೇಕು (೧) ನಾವು ಮಾಡುವ ಧರ್ಮಬಂಧುವಿನ ಆದರ ಸತ್ಕಾರವು ಸದ್ಭಾವನೆಯಿಂದ ಕೂಡಿರಬೇಕು ಅಂದರೆ ಲೌಕಿಕ ದೃಷ್ಟಿಯಿಂದ ಯಾವ ಲಾಭದ ಆಶೆಯನ್ನೂ ಇಟ್ಟುಕೊಳ್ಳದೆ, ಕೇವಲ ಧರ್ಮಪ್ರೇಮದಿಂದ ಪ್ರೇರಿತರಾಗಿ ಈ ಆದರ ಸತ್ಕಾರಗಳನ್ನು ಮಾಡಬೇಕು (೨) ಇದರಲ್ಲಿ ಕಪಟ, ಮೋಸ, ಡಾಂಭಿಕತನಗಳು ಇರಕೂಡದು (೩) ಗುಣ, ಶೀಲ, ಪದಗಳಿಗೆ ಅನುಸರಿಸಿ ಆ ಆದರ ಸತ್ಕಾರಗಳು ಇರಬೇಕು ಹೆಚ್ಚು ಗುಣವಂತನಾಗಿದ್ದರೂ ಬಡವನಿರುವನೆಂದು ಸಾಮಾನ್ಯ ರೀತಿಯಲ್ಲಿ ಸತ್ಕಾರವೂ, ಗುಣದಿಂದ ಕಡಿಮೆ ಇದ್ದರೂ ಧನಿಕನಿರುವನೆಂದು ಹೆಚ್ಚಿನ ಆದರವೂ ಸಲ್ಲಕೂಡದು ಹೀಗಿರುವುದಕ್ಕೇನೇ ಯಥಾಯೋಗ್ಯವೆಂದು ಹೇಳಲಾಗಿದೆ ಸ ಧ ][1]

ವಿಶೇಷಾರ್ಥ—ಯಾವ ಪುರುಷನಿಗೆ ಅಹಿಂಸಾಧರ್ಮದ ಮೇಲೆ ಪ್ರೀತಿ ಇರುವುದೋ ಅವನು ಹಿಂಸಾದಿ ಕೃತಿಗಳಲ್ಲಿ ತಿರಸ್ಕಾರವನ್ನು ತೋರಿಸುವನು ಅಲ್ಲದೆ ಹಿಂಸಾರಹಿತ ಕಾರ್ಯವನ್ನು ಬಹಳ ಪ್ರೀತಿಯಿಂದ ಮಾಡುವನು ಅವನು ಸತ್ಯ ವಚನವನ್ನಾಡುವನು ಮೇಲಾಗಿ ಸತ್ಯವನ್ನು ನುಡಿಯುವವರ ಮೇಲೆಯೂ ಸತ್ಯಧರ್ಮವನ್ನು ನಿರೂಪಿಸುವವರ ಮೇಲೆಯೂ ಪ್ರೇಮವನ್ನು ಮಾಡುವನು ಅಲ್ಲದೆ ಪರದ್ರವ್ಯ, ಪರಸ್ತ್ರೀಯರನ್ನು ತ್ಯಾಗಮಾಡುತ್ತಾನೆ ಇಂಥವನಿಗೇ ವಾತ್ಸಲ್ಯ ಅಂಗದ ಪ್ರಾಪ್ತಿಯು ಶಕ್ಯವಿದೆ ಹಾಗೆಯೇ ದಶಲಕ್ಷಣ ಧರ್ಮದಲ್ಲಿಯೂ ಅವುಗಳನ್ನು ಧರಿಸುವವರಲ್ಲಿಯೂ ಪ್ರೀತಿಯನ್ನಿಡುವವರಿಗೂ ವಾತ್ಸಲ್ಯ ಅಂಗವು ಸಿದ್ಧಿಸುವುದು ಧರ್ಮದ ಮೇಲೆ ಪ್ರೀತಿಯು ಇರುವುದರಿಂದ ತ್ಯಾಗಿಯೂ ಸಂಯಮಿಯೂ ಆದ ಪುರುಷನನ್ನು ನೋಡಿದ ಕೂಡಲೆ ಬಹಳ ಆದರದಿಂದ ಅವರೊಡನೆ ಪ್ರೀತಿಯ ಮಾತುಗಳನ್ನು ಆಡುತ್ತಾನೆ, ಆದರವನ್ನು ತೋರಿಸುವ ಪ್ರವೃತ್ತಿಯೂ ಉಂಟಾಗುತ್ತದೆ ಇಂಥವನಿಗೂ ವಾತ್ಸಲ್ಯ ಅಂಗದ ಪ್ರಾಪ್ತಿಯು ಆಗುತ್ತದೆ

ಮಿಥ್ಯಾಧರ್ಮ ಹಾಗೂ ಆ ಧರ್ಮಾನುಯಾಯಿಗಳನ್ನು ದ್ವೇಷಿಸಕೂಡದು. ಸಮ್ಯಗ್ದೃಷ್ಟಿಯುಳ್ಳ ವ್ಯಕ್ತಿಯು ತನ್ನ ಅಂತರಂಗದಲ್ಲಿ ಶುದ್ಧ ಜ್ಞಾನದರ್ಶನಗಳಲ್ಲಿ ಶ್ರದ್ಧೆಯನ್ನು ಇಡುತ್ತಾನೆ ಹೊರಗೆ ಉತ್ತಮ ಕ್ಷಮಾ,

---

1 ಆಯತವರ್ಮನು ಹೇಳುವದು ಹೀಗೆ

ಕಂದ ॥ ಚಾತುರ್ವರ್ಣಂಗಳುಮಂ ಪ್ರೀತಿಯನಿದಿರೇಳ್ದು ಕಂಡು ಧರ್ಮಸಹಾಯ- ।
ಮಾರ್ಗತೆಂ ಸೀಮೆಮಗೆಂಬುದು ಭೂತಳದೊಳು ನೆಗಳ್ದ ಧರ್ಮವಾತ್ಸಲ್ಯಗುಣಂ ॥ ೧೩ ॥

ಅದೆಂತೆಂದೊಡೆ–ಬಡವಂ ವಿರೂಪಿ ಪರದೇಶದಾರಿಗನೆನ್ನದೆ ಸಧರ್ಮಿಗಳಂ ಕಂಡಾಗಳೆಳೆಗಂ ಯಾರೆಂ (?) ತು ರಾಗಿಸುವುದುಮಿವರೊಳು ವಿದ್ಯೆಯಂ ಕಲ್ಪಿಸೀತನೆನಗೆ ಪತ್ತೆಂಟು ಪಣಮಂ ಕಡಂಗೊಡಗೂ ಮೇಸಾನುಮಂ ಬಾರ್ತೆಗೆಯುಮೆಂಬ ಮಿಥ್ಯಾವಿನಯಮಂ ಪತ್ತುವಿಟ್ಟು ಧರ್ಮವಿನಯಾದಿ ಚಾತುರ್ವರ್ಣಂಗಳನವರವರ್ಗೆ ತಕ್ಕಂತು ಮನ್ನಿಸುವುದು ಧರ್ಮವಾತ್ಸಲ್ಯಮೆಂಬೀಳನೆಯಂಗದ ಸ್ವರೂಪ

ಮಾರ್ದವ ಮೊದಲಾದವುಗಳನ್ನು ಧರಿಸಿದ ಜನರನ್ನು ಪ್ರೀತಿಸುತ್ತಾನೆ ಜಿನ ಮಂದಿರಾದಿಗಳಲ್ಲಿ ಅನುರಾಗವಿರುತ್ತದೆ. ಆದರೆ ಅವನು ಮಿಥ್ಯಾಧರ್ಮವನ್ನೂ ಆ ಧರ್ಮದ ಅನುಯಾಯಿಗಳನ್ನೂ ಎಂದೂ ದ್ವೇಷಿಸುವದಿಲ್ಲ. ಯಾಕಂದರೆ ಭಗವಾನ್ ಕುಂದಕುಂದಾಚಾರ್ಯರ 'ಪ್ರವಚನಸಾರ'ದಂಥ ಸಿದ್ಧಾಂತ ಗ್ರಂಥಗಳಲ್ಲಿ ರಾಗ, ದ್ವೇಷ, ಮೋಹಗಳು ಕರ್ಮಬಂಧಕ್ಕೆ ಕಾರಣಗಳೆಂದು ಹೇಳಿದೆ ಇವುಗಳಲ್ಲಿ ಮೋಹವಂತೂ ಮಿಥ್ಯಾತ್ವವಾಗಿದೆ ದ್ವೇಷವಂತೂ ಅಶುಭ ಭಾವನೆಯಾಗಿದೆ ಜೀವವು ಸಂಸಾರದಲ್ಲಿ ಪರಿಭ್ರಮಣಮಾಡುವದಕ್ಕೆ ಮುಖ್ಯವಾಗಿ ಪಾಪಕರ್ಮದ ಬಂಧವೇ ಕಾರಣವಾಗಿದೆ. ಅದಕ್ಕಾಗಿ ಅದನ್ನು ತ್ಯಜಿಸಬೇಕು ಇನ್ನು ರಾಗಭಾವವು ಎರಡು ಪ್ರಕಾರದ್ದಿದೆ ಒಂದು ಶುಭ, ಇನ್ನೊಂದು ಅಶುಭ ಇವುಗಳಲ್ಲಿ ಅರಿಹಂತರೇ ಮೊದಲಾದ ಪಂಚಪರಮೇಷ್ಠಿಗಳಲ್ಲೂ ದಶಲಕ್ಷಣ ಧರ್ಮದಲ್ಲೂ ಸ್ಯಾದ್ವಾದ ರೂಪದಲ್ಲಿರುವ ಜಿನಶಾಸ್ತ್ರದಲ್ಲಿಯೂ ವೀತರಾಗ ಭಗವಂತನ ಪ್ರತಿಬಿಂಬದಲ್ಲಿಯೂ ಅಂದ ಪ್ರತಿಬಿಂಬವಿರುವ ಮಂದಿರದಲ್ಲಿಯೂ ಅನುರಾಗವಿರುವುದು ಶುಭಭಾವನೆಯಾಗಿದೆ ಇದರಿಂದ ಸ್ವರ್ಗಾದಿಗಳು ಲಭಿಸುವ ಪುಣ್ಯಬಂಧವು ಆಗುತ್ತದೆ ಅದು ಪರಂಪರೆಯಿಂದ ಮೋಕ್ಷಕ್ಕೂ ಕಾರಣವಿದೆ ಇನ್ನು ವಿಷಯ, ಕಷಾಯ, ಮಿಥ್ಯಾಧರ್ಮ, ಮಿಥ್ಯಾದೃಷ್ಟಿ ಪುರುಷ, ಪರಿಗ್ರಹ ಮೊದಲಾದ ಐದು ಪಾಪಕ್ರಿಯೆಗಳು, ಇವೆಲ್ಲವುಗಳ ಮೇಲಿನ ಅನುರಾಗವೂ ಮೋಹ ದ್ವೇಷಗಳೂ ನರಕನಿಗೋದಾದಿಗಳಲ್ಲಿ ಅನಂತಕಾಲದ ವರೆಗೆ ಪರಿಭ್ರಮಣ ಮಾಡಿಸಲಿಕ್ಕೆ ಕಾರಣವಾಗಿವೆ ಅಂತಲೇ ಸಮ್ಯಗ್ದೃಷ್ಟಿ ಪುರುಷನು ಇನ್ನುಳಿದ ಅಜ್ಞಾನಿ, ಮಿಥ್ಯಾದೃಷ್ಟಿ, ಪಾತಕಿಯೇ ಮೊದಲಾದವರ ವಿಷಯದಲ್ಲಿ ದ್ವೇಷ ಭಾವವನ್ನು ತಳೆಯುವದಿಲ್ಲ

ಸಮ್ಯಗ್ದೃಷ್ಟಿ ಪುರುಷನ ತಟಸ್ಥ ವೃತ್ತಿ—ಸಂಸಾರೀ ಜೀವವು ಮಿಥ್ಯಾತ್ವಕರ್ಮಕ್ಕೆ ಆಧೀನವಾಗಿರುವುದರಿಂದಲೂ ಜ್ಞಾನಾವರಣಾದಿ ಕರ್ಮಗಳ ಉದಯದಿಂದಲೂ ಆತ್ಮ ತತ್ತ್ವವನ್ನು ಮರೆತು ಬಿಟ್ಟಿದೆ, ಅಂದರೆ ಅದಕ್ಕೆ ಅಜ್ಞಾನ ಅವಸ್ಥೆಯು ಪ್ರಾಪ್ತವಾಗಿದೆ ಇಂಥದರ ವೈರತ್ವಮಾಡಿ ಏನು ಉಪಯೋಗ? ವಿಪರೀತ ಬುದ್ಧಿಯಿಂದಲೇ ಅದಕ್ಕೆ ಅತ್ಯಂತ ಹಾನಿಯಾಗಹತ್ತಿದೆ. ಇದನ್ನರಿತ ಸಮ್ಯಗ್ದೃಷ್ಟಿಯು ಅವುಗಳ ಮೇಲೆ ದಯಾಭಾವವನ್ನೇ ತಾಳುತ್ತಾನೆ ಅಲ್ಲದೆ ಅವುಗಳ ವಿಷಯದಲ್ಲಿ ರಾಗ-ದ್ವೇಷಗಳಿಲ್ಲದ ಮಾಧ್ಯಸ್ಥ ಭಾವವನ್ನೇ (ತಟಸ್ಥವೃತ್ತಿ) ಧರಿಸುತ್ತಾನೆ. [ನಿತ್ಯವೂ ಮಾಡುವ 'ಸಾಮಾಯಿಕ'ವಾದರೂ 'ಮಾಧ್ಯಸ್ಥಭಾವಂ ವಿಪರೀತವೃತ್ತೌ, ಸದಾ ಮಮಾತ್ಮಾ ವಿದಧಾತು ದೇವ' ಎಂಬುದನ್ನು ದಿನವೂ ಮೂರೂ ಕಾಲದಲ್ಲಿ ನೆನಪಿಗೆ ತಂದುಕೊಡುತ್ತದೆ.] ಸಮ್ಯಗ್ದೃಷ್ಟಿ ಪುರುಷನು ವಸ್ತುವಿನ ನಿಜವಾದ ಸ್ವಭಾವವನ್ನು ತಿಳಿದಿರುತ್ತಾನೆ ಅದರಿಂದ ಎಲ್ಲ ಜೀವಿಗಳನ್ನೂ ಕರುಣೆಯಿಂದ ಕಾಣುತ್ತಾನೆ. ಸರ್ವ ಜೀವಿಗಳ ಮೇಲಿನ ವೈರತ್ವವನ್ನು ಬಿಡುತ್ತಾನೆ ಯಾವ ಜೀವದ ಘಾತ-ಪಾತ, ಅಪಮಾನ, ಹಾನಿಗಳನ್ನೂ ಮೂಲದಲ್ಲಿಯೇ ಮಾಡುವದಿಲ್ಲ. ಮಿಥ್ಯಾದೃಷ್ಟಿಗಳು ಕಟ್ಟಿದ ಮಂದಿರ, ಮಠಗಳನ್ನು ದ್ವೇಷಭಾವದಿಂದ ಕೆಡಿಸಬೇಕೆಂದು ಎಂದೂ ಇಚ್ಛೆಯನ್ನು ಮಾಡುವದಿಲ್ಲ ರಾಗಭಾವವುಳ್ಳ ದೇವ ಮೂರ್ತಿ, ಕ್ರೂರ ದೇವತೆಗಳ ಮೂರ್ತಿ, ಅನ್ಯಮತದ ದೇವ ದೇವತೆಗಳು ಇರುವ ಸ್ಥಾನವನ್ನು ಕೂಡ ಅವನೆಂದೂ ವೈರಭಾವದಿಂದ ಕಾಣುವದಿಲ್ಲ ಸ್ಥಾನಗಳೂ ಮೂರ್ತಿಗಳೂ ಅನೇಕ ಜನರಿಂದ ಅವರವರ ಅಭಿಪ್ರಾಯಕ್ಕೆ ತಕ್ಕಂತೆ ಪೂಜಿಸಲಿಕ್ಕೆ ಇರುತ್ತವೆ. ಅವರ ಅಭಿಪ್ರಾಯವನ್ನೂ ಅನ್ಯರು ಅಲ್ಲಗಳೆಯಲಿಕ್ಕೂ ತಿರುಗಿಸಲಿಕ್ಕೂ ಬರುವದಿಲ್ಲವಷ್ಟೆ? ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದ ಪ್ರಕಾರ ಮೂರ್ತಿಗಳನ್ನು ಸ್ಥಾಪಿಸುತ್ತ ಇರುತ್ತಾರೆ ಅವರಿಗೆ ಒಳ್ಳೆಯ ಇಲ್ಲವೆ ಕೆಟ್ಟ ಉಪದೇಶವು ದೊರೆತಂತೆ ಅವರು ನಡೆಯುತ್ತಾರೆ, ಅದರಲ್ಲಿ ಅವರದೇನು ತಪ್ಪು? ಕೆಡಕಾದರೂ ಏನಿದೆ? ಸಮ್ಯಗ್ದೃಷ್ಟಿ ಪುರುಷನು ವಸ್ತುವಿನ ಯಥಾರ್ಥ ಸ್ವರೂಪವನ್ನು ತಿಳಿದಿರುವುದರಿಂದ ಎಲ್ಲರ ಕೂಡ ಸಮಭಾವವನ್ನಿಟ್ಟು ನಡೆಯುವನು ಯಾರೊಡನೆಯೂ ಸಹ ಎಲೋ-ತಲೋ ಎಂಬ ಅಪಮಾನಾಸ್ಪದ ವಾಕ್ಯಗಳಿಂದ ಮಾತನಾಡುವದಿಲ್ಲ ಅವನು ಅನ್ಯಧರ್ಮದ ಜನರು ಸ್ಥಾಪಿಸಿದ ಮೂರ್ತಿ ಹಾಗೂ ಮಂದಿರಗಳ ವಿಷಯದಲ್ಲಿ ಅವಿನಯದ ಮಾತುಗಳನ್ನಾಗಲೀ ಅವಾಚ್ಯ ಶಬ್ದಗಳನ್ನಾಗಲೀ, ಮುಖದಿಂದ ಎಂದೂ ಉಚ್ಚರಿಸುವದಿಲ್ಲ ಎಲ್ಲ ಜೀವಗಳಲ್ಲಿ ಮೈತ್ರೀಭಾವವನ್ನು ಇಡುವಂಥ ಸಮ್ಯಗ್ದೃಷ್ಟಿಪುರುಷನು ಅಚೇತನವಾದಂದ ನೆಲ, ಕಲ್ಲು, ಮನೆ, ಬೇರೆಯವರ ವಿಶ್ರಾಂತಿಸ್ಥಳ, ಇವುಗಳ ವಿಷಯದಲ್ಲಿ ಕನಸಿನಲ್ಲಿಯೂ ಸಹ ವೈರಭಾವವನ್ನು ತಳೆಯುವದಿಲ್ಲ

ಸಮ್ಯಗ್ದೃಷ್ಟಿ ಪುರುಷನ ಭಾವನೆ—ಇಷ್ಟೇ ಅಲ್ಲ, ಬಲಿಷ್ಠರಾದ ದುಷ್ಟರು ಸಮ್ಯಗ್ದೃಷ್ಟಿಪುರುಷನ ಸಂಪತ್ತು, ಸ್ಥಳ, ಜೀವನದ ಸಾಧನೆಗಳೇ ಮೊದಲಾದವುಗಳನ್ನು ನಾಶ ಮಾಡಿದರೂ ಅಂಥವರ ವೈರವನ್ನು ಕೂಡ

ಅವನು ಮಾಡುವದಿಲ್ಲ ತನ್ನ ಕುಟುಂಬದೊಳಗಿನ ಮನುಷ್ಯರ ಘಾತ ಮಾಡಿದರೂ ಸ್ವತಃ ತನ್ನ ಪ್ರಾಣವನ್ನೇ ತಕ್ಕೊಂಡರೂ ಕೂಡ ಅವರಲ್ಲಿ ವೈರ ಭಾವವನ್ನು ತಾಳುವದಿಲ್ಲ ಅಂಥ ಸಂದರ್ಭದಲ್ಲಿ ಅವನು ಹೀಗೆ ವಿಚಾರ ಮಾಡುತ್ತಾನೆ—"ಏನೋ ನನ್ನ ಪೂರ್ವಕರ್ಮದ ಪ್ರಬಲ ಶಕ್ತಿಯ ಉದಯವಿರುವುದರಿಂದ ಆ ಪೂರ್ವ ಜನ್ಮದ ವೈರವನ್ನು ನೆನೆದು ಈ ಬಲಾಢ್ಯವೈರಿಯು ಹುಟ್ಟಿಕೊಂಡಿದ್ದಾನೆ ಇವನೊಡನೆ ಈಗ ತನ್ನ ಶಕ್ತಿಯನ್ನೆಲ್ಲ ವ್ಯಯಮಾಡಿ, ನಾಮ ಅಂದರೆ ಪ್ರಿಯವಚನ, ದಾನ ಅಂದರೆ ಧನಸಹಾಯ ಮಾಡುವುದು, ದಂಡ ಅಂದರೆ ತನ್ನ ಶಿಕ್ಷೆಗೆ ಅನುಸರಿಸಿ ಶಾಸನ ಮೊದಲಾದ ಉಪಾಯಗಳನ್ನು ಯೋಜಿಸಿವುದು—ಇವೆಲ್ಲವುಗಳಿಂದ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವ."[1] ಇಷ್ಟು ಮಾಡಿಯೂ ಕೂಡ ಅವನು ಕೇಳದಿದ್ದರೆ ತಾನೇ ಸ್ವತಃ ಮತ್ತೆ ಹೀಗೆ ವಿಚಾರಿಸುತ್ತಾನೆ—"ನನ್ನ ಕರ್ಮದ ಉದಯವು ಇವನನ್ನು ನನಗಿಂತ ಬಲವಂತನನ್ನಾಗಿ ಮಾಡಿದೆ, ನನ್ನನ್ನು ದುರ್ಬಲಗೊಳಿಸಿ, ಶಿಕ್ಷೆಗೆ ಒಳಪಡಿಸಿತು ಈಗ ನಾನು ಯಾರ ಕೂಡ ವೈರಮಾಡಲಿ? ನಾನೀಗ ನನ್ನ ಮೂಲ ವೈರಿಯಾದ ಕರ್ಮವೇ ಯಾವುದರಿಂದ ಇಲ್ಲ-ವಾಗುವುದೋ ಅಂಥ ಸಮಭಾವವನ್ನು ಸ್ವೀಕರಿಸಿ, ಕರ್ಮದ ಮೇಲೆ ವಿಜಯವನ್ನು ಸಂಪಾದಿಸುವೆ ಇತರರ ಕೂಡ ವಿರೋಧಮಾಡಿ, ವ್ಯರ್ಥ ಕರ್ಮವನ್ನು ಕಟ್ಟಿಕೊಳ್ಳಲಾರೆ" ಅಂತಲೇ ಸಮ್ಯಗ್ದೃಷ್ಟಿ ಪುರುಷನ ಪ್ರೀತಿಯು ಎಲ್ಲ ಜೀವಿಗಳ ಮೇಲೆಯೂ ಸಮಾನವಾಗಿರುತ್ತದೆ ಅವನು ಯಾರನ್ನೂ ವಿರೋಧಿಸುವದಿಲ್ಲ

ಮುನಿವ್ರತವನ್ನು ಧರಿಸಿದ ಸಮ್ಯಗ್ದೃಷ್ಟಿ ಪುರುಷನ ವಾತ್ಸಲ್ಯ ಭಾವನೆ—ಒಬ್ಬ ದುಷ್ಟಜೀವಿಯು ಧರ್ಮದೊಡನೆಯೇ ವಿರೋಧ ಮಾಡಿ, ಮಂದಿರ ಹಾಗೂ ಪ್ರತಿಮೆಗಳಿಗೆ ವಿಘ್ನವನ್ನು ಒಡ್ಡುವನು ಅಂಥವನಿಗೆ ಮುನಿಯು ತನ್ನ ಶಕ್ತಿಗೆ ಅನುಸರಿಸಿ ಪ್ರತಿಬಂಧವನ್ನು ಮಾಡಿಯೂ ಅವನು ಕೇಳದಿದ್ದರೆ ಇವನು ಹೀಗೆ ವಿಚಾರ ಮಾಡುತ್ತಾನೆ—"ಕಾಲನಿಮಿತ್ತದಿಂದ ಧರ್ಮದ ಘಾತ ಮಾಡುವಂಥವರು ಜನಿಸಿ ತಮ್ಮ ವೈರವನ್ನು ಸಾಧಿಸುತ್ತಿದ್ದಾರೆ ಅವನು ಬಲಿಷ್ಠನೂ ಇದ್ದಾನೆ ಅದರಿಂದ ಅವನು ಸುಮ್ಮನಿರುವವನಲ್ಲ ನಮ್ಮ ಉತ್ತಮ ಕ್ಷಮೆ ಮೊದಲಾದವುಗಳನ್ನೂ ಸಮ್ಯಗ್‌ಜ್ಞಾನ, ಶ್ರದ್ಧೆ ಮೊದಲಾದ ಪರಿಣಾಮಗಳನ್ನೂ ಘಾತ ಮಾಡಲಿಕ್ಕೆ ಯಾರೂ ಸಮರ್ಥರಿಲ್ಲ ಅನೇಕ ದುಷ್ಟ ಜನರು ಯಾವಾಗಲೂ ಮಂದಿರ ಮೊದಲಾದವುಗಳನ್ನು ನಾಶಮಾಡುತ್ತಲೇ ಇರುತ್ತಾರೆ ಧರ್ಮನಿರತರು ಅವುಗಳನ್ನು ಆಗಾಗ ಮತ್ತೆ ಮತ್ತೆ ನಿರ್ಮಿಸುತ್ತ ಇರುವರು ಕಾಲ ನಿಮಿತ್ತದಿಂದ ಅನೇಕ ದುಷ್ಟ ಜೀವಗಳು ಹುಟ್ಟುತ್ತವೆ ಅವನ್ನು ಪ್ರತಿಬಂಧಿಸುವರಾರು? ಭವಿತವ್ಯ ಬಲಿಷ್ಠವಾಗಿದೆ ಒಳ್ಳೆಯದಾಗುವದಿದ್ದರೆ ಬಲವುಳ್ಳ ಮಿಥ್ಯಾದೃಷ್ಟಿ ಜೀವಗಳು ಜನಿಸುವದಿಲ್ಲ ನಮಗಂತೂ ಪರಮ ವೀತರಾಗತ್ವವೇ ಶರಣು ಹೋಗಲಿಕ್ಕೆ ತಕ್ಕುದಾಗಿದೆ" ಈ ಪ್ರಕಾರ ವಾತ್ಸಲ್ಯ ಅಂಗದ ವರ್ಣನ ಮಾಡಲಾಗಿದೆ

ದಿನಬೇಜೆಯಾಗದೆ ಪರಮಾತ್ಮರತರಾದ ಮುನಿಗಳಿಗನ್ನ ದಾನವನು ।
ಮನಮುಟ್ಟಿ ಮಾಡುವ ಭಾಗ್ಯವೆಂಬುದನಾವ ಮನುಜ ಪಡೆಯಬಹುದೆಂಬಾ ॥
ತಗ್ಗು ಸೋಪಾನದೊಳಿಳಿವಾಗ ಮುನಿಗಳ್ಗೆ ಜೊಗ್ಗನೆ ಕೈಲಾಗುಗೊಡುವಾ ।
ಉಗ್ಗಡದೇರುಸೋಪಾನದೊಳವರಕೈಯೊಗ್ಗಿ ಹಿಡಿದು ಮೇಲೆ ನೆಗೆವಾ ॥
ಧರ್ಮಗುಣಕೆ ಸೋತು ಹೋಗಳಬೇಕಾದುದು ತಾನೇ ಧರ್ಮಶೀಲರ ಜಾತಿ ಚಿಹ್ನ ।
ಧರ್ಮಸಾಮ್ರಾಜ್ಯವನಾಳೆಂದು ಸುರರಾಡಿದರ್ಮತ್ತೆ ಬಯಲಾದರೊಡನೆ ॥

—ರತ್ನಾಕರ–ಭರತೇಶವೈಭವ, ಮುನಿಭುಕ್ತಿ ಸಂಧಿ ೪೦–೬೮–೧೯

---

1 ಈ ಉಪದೇಶವು ಎಲ್ಲವನ್ನೂ ಪರಿತ್ಯಜಿಸಿ, ಮುನಿವ್ರತವನ್ನು ಸ್ವೀಕರಿಸುವವರಿಗಾಗಿ ಇದೆ ಏಕದೇಶ ವ್ರತಧಾರಿ ಪುರುಷನಿಗೆ ಐದನೆಯ ಗುಣಸ್ಥಾನದ ವರೆಗೆ ಅನ್ಯಾಯದ ಪ್ರತೀಕಾರವನ್ನು ಯುದ್ಧಮಾಡಿಯೂ ಕೂಡ ಮಾಡಲಿಕ್ಕೆ ಬರುತ್ತದೆ ಆರಂಭೀ ಹಾಗೂ ವಿರೋಧೀ ಹಿಂಸೆಯ ತ್ಯಾಗವು ಅವನಿಗೆ ಇರುವುದಿಲ್ಲ

ಪ್ರಭಾವನಾ ಎಂಬ ಎಂಟನೆಯ ಅಂಗದ ಲಕ್ಷಣವನ್ನು ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

ಅಜ್ಞಾನತಿಮಿರವ್ಯಾಪ್ತಿಮಪಾಕೃತ್ಯ ಯಥಾಯಥಮ್ ।
ಜಿನಶಾಸನಮಾಹಾತ್ಮ್ಯಪ್ರಕಾಶಃ ಸ್ಯಾತ್ಪ್ರಭಾವನಾ ॥ ೧೮ ॥

ಅನ್ವಯಾರ್ಥ—(ಅಜ್ಞಾನತಿಮಿರವ್ಯಾಪ್ತಿಂ) ಅಜ್ಞಾನವೆಂಬ ಕತ್ತಲೆಯು ಹಬ್ಬಿದ್ದನ್ನು (ಅಪಾಕೃತ್ಯ) ದೂರಮಾಡಿ (ಯಥಾಯಥಂ) ಶಕ್ತಿಗನುಸರಿಸಿ (ಜಿನಶಾಸನಮಾಹಾತ್ಮ್ಯಪ್ರಕಾಶಃ) ಜೈನಧರ್ಮದ ಮಹಾತ್ಮ್ಯವನ್ನು ಪ್ರಕಟಗೊಳಿಸುವುದು (ಪ್ರಭಾವನಾ) ಪ್ರಭಾವನೆ (ಸ್ಯಾತ್) ಆಗಿದೆ.

ಅರ್ಥ—ಸಂಸಾರೀ ಜೀವಿಗಳ ಹೃದಯದಲ್ಲಿ ಅನ್ಯಧರ್ಮದ ದಾನ, ಪೂಜೆ ಮೊದಲಾದ ವಿಧಿಗಳ ವಿಷಯದಲ್ಲಿ ಅಜ್ಞಾನರೂಪದ ಕತ್ತಲೆಯು ವ್ಯಾಪಿಸಿರುತ್ತದೆ ಅದನ್ನು ತಮ್ಮ ತಮ್ಮ ಶಕ್ತಿಗೆ ಅನುಸರಿಸಿ ಅಭಿಷೇಕ, ದಾನ, ಪೂಜೆ ಮೊದಲಾದ ವಿಧಿಗಳಿಂದಲೂ ಮಂತ್ರತಂತ್ರಗಳ ರೀತಿ ನೀತಿಗಳಿಂದಲೂ ಸತ್ಯಧರ್ಮವನ್ನು ಪ್ರಕಟಗೊಳಿಸಿ ಇಲ್ಲದಂತೆ ಮಾಡಬೇಕು. ಅದರಂತೆ ಜೈನ ಆಗಮಗಳ ಮಹತ್ವವನ್ನು ಪ್ರಕಟಮಾಡಬೇಕು. ಇವೆಲ್ಲವುಗಳಿಗೆ ಪ್ರಭಾವನೆ ಎನ್ನುವರು. [ಇಲ್ಲಿ ಜಿನಶಾಸನವೆಂದರೆ ಜಿನೇಂದ್ರ ಭಗವಂತರು ಉಪದೇಶಿಸಿದ ಆಗಮವೆಂದು ಅರ್ಥ. ಇದರ ಮಹಾತ್ಮ್ಯವು, ಅದರಲ್ಲಿ ವಿವರಿಸಿದ ಅನೇಕಾಂತ ದೃಷ್ಟಿಕೋಣವುಳ್ಳ ತತ್ತ್ವಜ್ಞಾನ, ಅಹಿಂಸಾ-ಮೂಲವಾದ ಸದಾಚಾರ, ಕರ್ಮವನ್ನು ನಿರ್ಮೂಲಗೊಳಿಸುವ ತಪೋವಿಧಾನ ಇವುಗಳಲ್ಲಿದೆ ಜಿನಶಾಸನದ ಈ ಮಹಾತ್ಮ್ಯವನ್ನು ಪ್ರಕಟಗೊಳಿಸುವುದಕ್ಕೆ—ಜನತೆಯ ಹೃದಯದಲ್ಲಿ ಬಿಂಬಿಸುವದಕ್ಕೇ—ಇಲ್ಲಿ 'ಪ್ರಭಾವನಾ' ಎಂದು ಹೇಳಲಾಗಿದೆ. ಜನರಲ್ಲಿ ಎಲ್ಲೆಡೆಗೂ ಹಬ್ಬಿದ ಅಜ್ಞಾನವನ್ನು ಯೋಗ್ಯರೀತಿಯಿಂದ ಇಲ್ಲದಂತೆ ಮಾಡಿದಾಗಲೇ ಪ್ರಭಾವನೆಯು ಸಾಧ್ಯವಿದೆ. ಇದಕ್ಕಾಗಿ ಸಾತಿಶಯ ಜ್ಞಾನದ ಪ್ರಕಾಶವು ಅವಶ್ಯವಾಗಿದೆ ಇದರಿಂದ ಅತಿಶಯ ಜ್ಞಾನದಿಂದ ಜನಮನದ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವುದೇ 'ಪ್ರಭಾವನೆ'ಯೆಂದು ಸ್ಪಷ್ಟವಾಗುತ್ತದೆ ಇನ್ನು ತಮ್ಮ ಸಿರಿ ಸಂಪತ್ತುಗಳನ್ನು ಪ್ರದರ್ಶಿಸುವದಕ್ಕಾಗಿಯೂ ಬಲವರಾಕ್ರಮಗಳನ್ನು ಮೆರೆಯಿಸುವ ಡಾಂಭಿಕ ಕ್ರಿಯೆ-ಗಾಗಿಯೂ ವಿಭೂತಿ ಪೂಜೆಗಾಗಿ ದೊಡ್ಡ ದೊಡ್ಡ ಮೆರವಣಿಗೆಗಳನ್ನು ತೆಗೆಯುವುದಕ್ಕೂ ನಿಜವಾದ ಅರ್ಥದಲ್ಲಿ ಪ್ರಭಾವನೆಯೆಂದು ಹೇಳಲಿಕ್ಕೆ ಆಗುವದಿಲ್ಲ. ಆದರೆ ಅಂಥ ಉತ್ಸವಾದಿಗಳು ವಾಸ್ತವಿಕವಾಗಿ ನಿಜವಾದ ಪ್ರಭಾವನೆಯ ಉದ್ದೇಶದಿಂದ ಏರ್ಪಟ್ಟಿದ್ದರೆ ಮಾತ್ರ ಪ್ರಭಾವನೆಯೆನಿಸಿಕೊಳ್ಳಬಲ್ಲವು ಮೆರವಣಿಗೆಯ ಯೋಜನೆಯಲ್ಲಿ ಅಜ್ಞಾನವನ್ನು ದೂರಗೊಳಿಸುವ ಗುರಿಯು ಇದ್ದರೆ ಅದೂ ಸಾರ್ಥಕ ಪ್ರಭಾವನೆಯಾದೀತು ಈಗ ಇನ್ನೂ ಒಂದು ಸಂಗತಿಯು ಸ್ಪಷ್ಟವಾಗುತ್ತದೆ. ಪ್ರಭಾವನೆಯಲ್ಲಿ ಯಾರ ಒತ್ತಾಯ ಆಗ್ರಹಗಳು ಇರುವದಿಲ್ಲ ಅದು ಸ್ವಾಭಾವಿಕ, ಸಯುಕ್ತಿಕ, ಪ್ರೇಮಮಯ ವ್ಯವಹಾರವಾಗಿದೆ. ಸ. ಧ.][1]

ವಿಶೇಷಾರ್ಥ—ತೀರ ಪ್ರಾಚೀನ ಕಾಲದಿಂದಲೂ ಸಂಸಾರದಲ್ಲಿರುವ ಜೀವಗಳು ಸರ್ವಜ್ಞನೂ ವೀತ-ರಾಗನೂ ಆದ ಭಗವಂತನು ಉಪದೇಶಿಸಿದ ಧರ್ಮವನ್ನು ತಿಳಿಯುತ್ತ ಇಲ್ಲ. ನಾನಾರು? ನನ್ನ ಸ್ವರೂಪವೇನು? ಇಲ್ಲಿ ಹುಟ್ಟುವ ಪೂರ್ವದಲ್ಲಿ ನಾನೆಲ್ಲಿದ್ದೆ? ಏನಿದ್ದೆ? ನನ್ನನ್ನು ಇಲ್ಲಿ ತಂದವರು ಯಾರು? ಹಗಲಿರುಳೂ ನನ್ನ ಆಯುಷ್ಯವು ಕಡಿಮೆಯಾಗುತ್ತ ನಡೆದಿದೆ, ಈಗ ನಾನೇನು ಮಾಡಬೇಕು? ನನ್ನ ಹಿತ ಯಾವುದರಲ್ಲಿದೆ? ಆರಾಧಿಸಲು ಯೋಗ್ಯರಾದವರು ಯಾರು? ಜೀವಕ್ಕೆ ಅನೇಕ ಪ್ರಕಾರದ ಸುಖ-ದುಃಖಗಳು ಯಾತರಿಂದ ಉಂಟಾಗುತ್ತವೆ? ದೇವ, ಗುರು, ಧರ್ಮಗಳ ಸ್ವರೂಪವೇನು? ಬದುಕುವಿಕೆ ಸಾಯುವಿಕೆ ಎಂದರೇನು? ಯಾವುದನ್ನು ತಿನ್ನಬೇಕು? ಯಾವುದನ್ನು ತಿನ್ನಕೂಡದು?

---

[1] ಆಯತವರ್ಮನು ಹೇಳುವದು ಹೀಗೆ.

ಕಂದ ॥ ಇದು ಮಿಥ್ಯಾತ್ವಂ ಸಮ್ಯಕ್ತ್ವಗುಣಮಿದುವೆಂದು ಜೈನಶಾಸನ ಮಂ ನಿ- ।
ರ್ಮದದಿಂ ಬೆಳಗುವುದಮಳಿನಮಿದು ತಾಂ ಧರ್ಮಪ್ರಭಾವವೆಂಟನೆಯಂಗಂ ॥ ೧೮ ॥

ಗದ್ಯ—ಅದೆಂತೆಂದೊಡೆ—ಪ್ರಾಣಿಗಳ್ಗೆ ಲೋಕಾಪವಾದವಾದನೇಕ ಕುಮಾರ್ಗಸಮಯಂಗಳ ಪೊಲ್ಲಮೆಯುಮಂ ವಿರುದ್ಧ-ಮುಮಂ ಬೆಳ್ಪನಮುಮಂ ತೋರಿಯಜ್ಞಾನಮುಮಂ ಪಿಂಗಿಸಿ, ತೀರ್ಥಕರಪರಮಕಲ್ಯಾಣವಿಭೂತಿಯುಮಂ ಚಕ್ರವರ್ತಿ ಬಲದೇವ ವಾಸುದೇವ ಪ್ರಭೃತಿ ರಾಜರ್ಕಳ ಪುಣ್ಯ ಪ್ರಭಾವಮುಮಂ ಜೀವಭೇದ ಕರ್ಮಭೇದಂಗಳ ನಯಪ್ರಮಾಣದಿಂದ ತಂದು ನಿರಿಸುವ ಸ್ವರೂಪಮುಮಂ ನಿರೂಪಿಸುವ ಶ್ರೀಧರ್ಮಮಾಹಾತ್ಮ್ಯಮುಮಂ ಧರ್ಮಪ್ರಭಾವ

ಈ ಪರ್ಯಾಯದಲ್ಲಿ ನನಗೆ ಏನು ಮಾಡಲಿಕ್ಕೆ ಬರುವಂತಿದೆ? ನನ್ನವರು ಯಾರಿದ್ದಾರೆ? ನಾನು ಏನಿದ್ದೇನೆ?—ಇವೆಲ್ಲ ಪ್ರಶ್ನೆಗಳ ವಿಚಾರವನ್ನು ಬಹುಜನರು ಮಾಡುವದಿಲ್ಲ. ಈ ಜೀವವು ಮೋಹಕರ್ಮದ ಉದಯದಿಂದ ಆವರಿಸಿದ ಅಜ್ಞಾನದ ಕತ್ತಲೆಯಲ್ಲಿ ಮುಳುಗಿಹೋಗಿದೆ ಇಂಥ ಜೀವದ ಅಜ್ಞಾನರೂಪೀ ಕತ್ತಲೆಯನ್ನು ಸ್ಯಾದ್ವಾದ ರೂಪದಲ್ಲಿ ಉಪದೇಶಿಸಿರುವ ಪರಮಾಗಮದ ಪ್ರಕಾಶದಿಂದ ಇಲ್ಲದಂತೆ ಮಾಡಬೇಕು ಸ್ವ–ಪರ ಸ್ವರೂಪದ ಜ್ಞಾನವನ್ನು ಮಾಡಿಕೊಡಬೇಕು ಇದಕ್ಕೇನೇ ಪ್ರಭಾವನಾ ಅಂಗವೆನ್ನುವರು

ಇನ್ನು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ ಚಾರಿತ್ರಗಳ ಯೋಗದಿಂದ ಆತ್ಮನ ಪ್ರಭಾವವನ್ನು ಪ್ರಕಟಮಾಡುವುದೂ ಪ್ರಭಾವನೆ ಎನಿಸುತ್ತದೆ ದಾನ, ತಪಶ್ಚರ್ಯೆ, ಶೀಲ, ಸಂಯಮ, ನಿರ್ಲೋಭತೆ, ವಿನಯ, ಪ್ರಿಯವಚನ, ಜಿನೇಂದ್ರ ಪೂಜೆ, ಗುಣಪ್ರಕಟಣ ಮೊದಲಾದವುಗಳ ಮುಖಾಂತರ ಜಿನಧರ್ಮದ ಪ್ರಭಾವವನ್ನು ಬೀರುವುದಕ್ಕೂ ಪ್ರಭಾವನೆಯೆಂದು ಹೇಳಬೇಕು

**ಪ್ರಭಾವನಾ ಅಂಗದ ಸಲುವಾಗಿ ಜೈನರ ನಡತೆಯು ಹೇಗಿರಬೇಕು?** ತಮ್ಮ ನಿರ್ಮಲ ಪರಿಣಾಮದಿಂದ ಉತ್ತಮದಾನ ಮಾಡುವುದು, ಒಳ್ಳೆಯ ತಪಸ್ಸನ್ನು ಆಚರಿಸುವುದು, ಭಿಕ್ಷೆ ಬೇಡದೆ ಬಾಳುವುದು, ಹೀಗಿದ್ದವರನ್ನು ಕಂಡು, ಮಿಥ್ಯಾದೃಷ್ಟಿ ಜೀವಗಳೂ ಕೂಡ ಅವರನ್ನು ಹೀಗೆ ಸ್ತುತಿಸುತ್ತವೆ—“ಓ! ಜೈನರು ವಾತ್ಸಲ್ಯಪೂರ್ವಕ ದಾನ ಕೊಡುವುದರಲ್ಲಿ ಬಹಳ ಶೂರರಿದ್ದಾರೆ ಇಂಥ ನಿರೀಚ್ಛೆಯಿಂದ ಕಠಿಣ ತಪಸ್ಸನ್ನು ಮಾಡುವುದು ಜೈನರನ್ನುಳಿದು ಇನ್ನಾರಿಗೂ ಸಾಧ್ಯವಿಲ್ಲ ಅವರು ಜೀವಹೋದರೂ ಸಹ ವ್ರತಗಳನ್ನು ಮುರಿಯುವದಿಲ್ಲ ಅವರ ಅಹಿಂಸಾ ವ್ರತವೂ ಜೋರಾಗಿದೆ ಪ್ರಾಣವನ್ನು ಕಳೆದುಕೊಳ್ಳುವ ಪ್ರಸಂಗಬಂದರೂ ಮನದಲ್ಲಿ ಪೂರ್ವಯೋಜನೆಮಾಡಿ, ಅವರು ಎಂದೂ ಜೀವಹಿಂಸೆಯನ್ನು ಮಾಡುವದಿಲ್ಲ. ಜೈನರಲ್ಲಿ ಸುಳ್ಳುಮಾತಾಡುವುದು, ಕಳವು ಮಾಡುವುದು, ಎರಡನೆಯವರ ಹೆಂಗಸರನ್ನು ಉಪಭೋಗಿಸುವುದು, ಪ್ರಮಾಣಮೀರಿ ಹೆಚ್ಚಿನ ಪರಿಗ್ರಹಗಳನ್ನು ಇಟ್ಟುಕೊಳ್ಳುವುದು—ಈ ಐದು ಮಹಾ ಪಾತಕಗಳನ್ನು ತ್ಯಾಗಮಾಡಿದ್ದು ಕಂಡುಬರುತ್ತದೆ ಈ ಜನರು ಅನೀತಿಯಿಂದ ವಿಮುಖರಾಗಿದ್ದಾರೆ ತಿನ್ನಬಾರದಂದದನ್ನೂ ತಿನ್ನುವದಿಲ್ಲ ಹೊತ್ತಿರುವಾಗಲೇ ತಿನ್ನುವ ಪದಾರ್ಥವನ್ನು ಚೆನ್ನಾಗಿ ನೋಡಿ, ಶೋಧಿಸಿ ತಿನ್ನುವರು. ಇವರಲ್ಲಿ ವಿನಯ, ಪ್ರಿಯವಚನಗಳು ತುಂಬಿರುತ್ತವೆ. ಈ ಗುಣಗಳಿಂದ ಅವರು ಎಲ್ಲರಿಗೂ ಆನಂದವನ್ನುಂಟುಮಾಡುವರು ಇವರಲ್ಲಿರುವಂಥ ಕ್ಷಮಾಗುಣವು ಇನ್ನಾರಲ್ಲಿಯೂ ಕಂಡುಬರುವದಿಲ್ಲ ಅವರು ತಮ್ಮ ಇಷ್ಟದೇವತೆಯ ಮೇಲೆ ನಿರ್ವ್ಯಾಜಪ್ರೇಮ ಮಾಡುವವರಾಗಿದ್ದಾರೆ ಅವರು ತಮ್ಮ ಶಾಸ್ತ್ರದ ಆಜ್ಞೆಯನ್ನು ಸಂಪೂರ್ಣ ವಂದ್ಯವೆಂದು ಮನ್ನಿಸುತ್ತಾರೆ ಈ ಸಮಾಜದಲ್ಲಿ ವಿದ್ವಾಂಸರೂ ಉಜ್ವಲ ಆಚರಣೆಯುಳ್ಳವರೂ ಬಹುಸಂಖ್ಯೆಯಲ್ಲಿದ್ದಾರೆ ಅವರು ಯಾರ ವೈರವನ್ನೂ ಸಂಪಾದಿಸದೆ, ಎಲ್ಲರ ಕೂಡ ಮಿತ್ರತ್ವದಿಂದ ಇರುವರು ಇಂಥ ಆಶ್ಚರ್ಯಗಳನ್ನು ಉತ್ಪನ್ನಮಾಡುವ ಧರ್ಮವು ಇದರಿಂದಲೇ ಶಕ್ಯವಿದೆ.” ಈ ಪ್ರಕಾರ ಬೇರೆ ಧರ್ಮದ ಜನರಿಂದ—ಯಾರ ನಿಮಿತ್ತದಿಂದ ನಮ್ಮ ಧರ್ಮದ ಪ್ರಶಂಸೆಯು ನಡೆಯುವುದೋ ಆ ಜನರಿಂದ—ಧರ್ಮಪ್ರಭಾವನೆಯು ಆಗುತ್ತದೆ

**ಸಮ್ಯಗ್ದೃಷ್ಟಿ ಪುರುಷನು ಅನ್ಯಾಯದಿಂದ ಧನವನ್ನು ಸಂಪಾದಿಸುವದಿಲ್ಲ**—ಸಮ್ಯಗ್ದೃಷ್ಟಿಯು ಅನ್ಯಾಯದಿಂದ ಧನವನ್ನು ಸಂಪಾದಿಸಬೇಕೆಂದು ಎಂದಿಗೂ ಇಚ್ಛಿಸುವದಿಲ್ಲ ಅದರಂತೆ ಅನ್ಯಾಯದಿಂದ ವಿಷಯೋಪಭೋಗವನ್ನು ಮಾಡುವ ವಿಚಾರವನ್ನು ಕನಸಿನಲ್ಲಿಯೂ ಸಹ ತರುವದಿಲ್ಲ ತನ್ನ ನಿಮಿತ್ತದಿಂದ ಜಿನಧರ್ಮದ ನಿಂದೆಯಾಗುವಂತೆ ಆದರೆ ತನ್ನ ಇಹಪರಲೋಕದ ನಾಶಮಾಡುವ ಹಾಗೆ ಆಯಿತೆಂದು ತಿಳಿಯುತ್ತಾನೆ ಸಮ್ಯಗ್ದೃಷ್ಟಿಯು ತನ್ನ ಕುಲಕ್ಕೂ ಧರ್ಮಕ್ಕೂ ಸಹಧರ್ಮಿಯರಿಗೂ ಮತ್ತು ದಾನಶೀಲವ್ರತಗಳಿಗೂ ಅಪವಾದ ಬರದಂತೆ ವರ್ತಿಸುತ್ತಾನೆ. ಅವನಿಗೆ ತನ್ನ ನಿಮಿತ್ತದಿಂದ ಧರ್ಮದ ನಿಂದೆಯಾಗುವುದು ಬಹಳ ಹೆದರಿಕೆಯನ್ನು ಹುಟ್ಟಿಸುತ್ತದೆ ಯಾವುದರಿಂದ ಧರ್ಮದ ಹೊಗಳಿಕೆಯೂ ಉಜ್ವಲತೆಯೂ ಪ್ರಕಟವಾಗುವುದೋ ಅದಕ್ಕನುಕೂಲವಾದ ಆಚರಣೆಯೇ ಅವನದು ದಿನಾಲು ಇರುತ್ತದೆ ಇಂಥ ಪುರುಷನಿಗೇ ಪ್ರಭಾವನಾ ಎಂಬ ಹೆಸರಿನ ಸಮ್ಯಕ್ತ್ವದ ಎಂಟನೆಯ ಅಂಗವು ಪ್ರಾಪ್ತವಾಗುತ್ತದೆ

ಈ ಪ್ರಕಾರ ಸಮ್ಯಗ್ದರ್ಶನದ ಎಂಟು ಅಂಗಗಳ ವರ್ಣನೆಯನ್ನು ಸಂಗ್ರಹ ರೂಪದಲ್ಲಿ ಮಾಡಿದೆ. ಇಂಥ ಎಂಟು ಅಂಗಗಳ ಸಮೂಹರೂಪವಾದ ಗುಣವೇ ಸಮ್ಯಗ್ದರ್ಶನವು ಅವಯವಗಳನ್ನುಳಿದು ಪೂರ್ಣ ವಸ್ತುವು ಬೇರೆಯಾಗಿರುವದಿಲ್ಲ ಅಂಗಗಳ ಸಮೂಹವುಳ್ಳುದೇ ಅಂಗಿ ಎನಿಸುತ್ತದೆ ಈ ಅಂಗದ ಪ್ರತಿಪಕ್ಷ (ದೋಷ)

ವೆನಿಸುವ ಸಂಶಯ, ಆಶೆ, ಮಲಿನತೆ, ಮೂಢತೆ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನೆಗಳಾಗಿವೆ. ಅವುಗಳನ್ನು ನಮ್ಮ ವೃತ್ತಿಯಲ್ಲಿ ಸಮಾವೇಶಮಾಡಿಕೊಂಡು ಧರ್ಮವನ್ನು ನಿಂದೆಗೆ ಪಾತ್ರಮಾಡಕೂಡದು.

ಮುನಿಯೆನಲುವೇಡ ಶ್ರಾವಕನೆನವೇಡ ಮನೋಜ್ಞೆಯಂ ಪ್ರಭಾವನೆಯಂ ನೆ- ।
ಟ್ಟನೆ ಮಾಡವೇೞ್ಪಿದಲ್ಲದೊಡನಂತ ಸುಖನಿಳಯನಾಗಲಾಱಿಂ ಕಡೆಯೊಳ್ ॥
ಜಿನಧರ್ಮದ ಪೆಂಪಂ ಮೇದಿನಿಗಱಿವುವ ತೆಱದಿನಸುರರಾ ಮುನಿಪದಕೆೞ- ।
ಕನದೊಡನೊಡನೆ ತಗುಳ್ದೊಯ್ಯನೆ ರಾಗಂಬೆರಸು ಧಾತ್ರಿಯಂ ಬಲವಂದರ್ ॥

—ನಯಸೇನ–ಧರ್ಮಾಮೃತ ೯–೪,೨೪೦

ನಿಃಶಂಕಿತವೇ ಮೊದಲಾದ ಅಂಗಗಳನ್ನು ಪಾಲಿಸಿದ್ದರಿಂದ ಹೆಸರಾದ ವ್ಯಕ್ತಿಗಳ ಹೆಸರುಗಳನ್ನು ಈ ಎರಡು ಶ್ಲೋಕಗಳಲ್ಲಿ ಹೇಳಿದೆ—

ತಾವದಂಜನಚೋರೋಽಂಗೇ ತತೋಽನಂತಮತೀ ಸ್ಮೃತಾ ।
ಉದ್ದಾಯನಸ್ತೃತೀಯೇಽಪಿ ತುರೀಯೇ ರೇವತೀ ಮತಾ ॥ ೧೯ ॥

ತತೋ ಜಿನೇಂದ್ರಭಕ್ತೋಽನ್ಯೋ ವಾರಿಷೇಣಸ್ತತಃ ಪರಃ[1] ।
ವಿಷ್ಣುಶ್ಚ ವಜ್ರನಾಮಾ ಚ ಶೇಷಯೋರ್ಲಕ್ಷ್ಯತಾಂ ಗತಾಃ ॥ ೨೦ ॥

ಅನ್ವಯಾರ್ಥ—(ತಾವತ್ ಅಂಗೇ) ಮೊದಲನೆಯ ಅಂಗದಲ್ಲಿ (ಅಂಜನಚೋರಃ) ಅಂಜನ ಎಂಬ ಕಳ್ಳನನ್ನು (ಸ್ಮೃತಃ) ತಿಳಿಯಬೇಕು. (ತತಃ) ಎರಡನೆಯ ಅಂಗದಲ್ಲಿ (ಅನಂತಮತೀ) ಅನಂತಮತಿಯು (ಸ್ಮೃತಾ) ಪ್ರಸಿದ್ಧವಾಗಿದ್ದಾಳೆ. (ತೃತೀಯೇ) ಮೂರನೆಯ ಅಂಗದಲ್ಲಿ (ಉದ್ದಾಯನಃ) ಉದ್ದಾಯನನು (ಲಕ್ಷ್ಯತಾಂ ಗತಃ) ಗಮನಿಸತಕ್ಕವನಾಗಿದ್ದಾನೆ (ತುರೀಯೇ) ನಾಲ್ಕನೆಯ ಅಂಗದಲ್ಲಿ (ರೇವತೀ ಮತಾ) ರೇವತಿಯು ಉದಾಹರಣೆಯಾಗಿದ್ದಾಳೆ. (ತತಃ ಅನ್ಯಃ ಜಿನೇಂದ್ರಭಕ್ತಃ ಲಕ್ಷ್ಯತಾಂ ಗತಃ) ಐದನೆಯ ಅಂಗದಲ್ಲಿ ಜಿನೇಂದ್ರ ಭಕ್ತನು ಹೆಸರಾಗಿದ್ದಾನೆ. (ತತಃ ಪರಃ ವಾರಿಷೇಣಃ) ಆರನೆಯ ಅಂಗದಲ್ಲಿ ವಾರಿಷೇಣನು ಪ್ರಸಿದ್ಧಿಗೆ ಬಂದಿದ್ದಾನೆ. (ವಿಷ್ಣುಶ್ಚ ವಜ್ರನಾಮಾ) ವಿಷ್ಣುಕುಮಾರ ಮತ್ತು ವಜ್ರಕುಮಾರ ಇವರು (ಶೇಷಯೋಃ ಲಕ್ಷ್ಯತಾಂ ಗತಾಃ) ಇನ್ನುಳಿದ ಏಳನೆಯ ಮತ್ತು ಎಂಟನೆಯ ಅಂಗಗಳಿಗೆ ಮಾದರಿಯಾಗಿದ್ದಾರೆ[2]

ಅರ್ಥ—ಮೊದಲನೆಯ ನಿಃಶಂಕಿತ ಅಂಗದಲ್ಲಿ ಅಂಜನ ಎಂಬ ಕಳ್ಳನೂ, ಎರಡನೆಯ ನಿಃಕಾಂಕ್ಷಿತ ಅಂಗದಲ್ಲಿ ಅನಂತಮತಿಯೂ, ಮೂರನೆಯ ನಿರ್ವಿಚಿಕಿತ್ಸಾ ಅಂಗದಲ್ಲಿ ಉದ್ದಾಯನ ರಾಜನೂ ಹೆಸರಾಗಿದ್ದಾರೆ. ಅದರಂತೆ ನಾಲ್ಕನೆಯ ಅಮೂಢದೃಷ್ಟಿ ಅಂಗದಲ್ಲಿ ರೇವತೀರಾಣಿಯೂ, ಐದನೆಯ ಉಪಗೂಹನ ಅಂಗದಲ್ಲಿ ಜಿನೇಂದ್ರ ಭಕ್ತನೆಂಬ ಶೆಟ್ಟಿಯೂ ಪ್ರಸಿದ್ಧರೆನಿಸಿದ್ದಾರೆ ಆರನೆಯದಾದ ಸ್ಥಿತೀಕರಣ ಅಂಗದಲ್ಲಿ ವಾರಿಷೇಣನೂ, ಏಳನೆಯದಾದ ವಾತ್ಸಲ್ಯ ಅಂಗದಲ್ಲಿ ವಿಷ್ಣುಕುಮಾರನೂ, ಎಂಟನೆಯ ಪ್ರಭಾವನಾ ಅಂಗದಲ್ಲಿ ವಜ್ರಕುಮಾರನೆಂಬ ಪುರುಷನೂ ಪ್ರಖ್ಯಾತಿಯನ್ನು ಪಡೆದಿದ್ದಾರೆ ಇವರ ಕಥೆಗಳನ್ನು ಪ್ರಥಮಾನುಯೋಗ ಗ್ರಂಥಗಳಲ್ಲಿ ವರ್ಣಿಸಲಾಗಿದೆ ಅವುಗಳನ್ನು ಅಲ್ಲಿ ಓದಿ ತಿಳಿದುಕೊಳ್ಳಬೇಕು[3]

---

[1] 'ಪರಂ' ಎಂದೂ ಪಾಠಾಂತರವಿದೆ.

[2] ಆಯತವರ್ಮನ ಹೇಳುವದು ಹೀಗೆ ಅಂಜನಚೋರನುಮನಂತಮತಿಕುಮಾರಿಯುಮೊದ್ದಾಯನಮಹಾರಾಜನುಂ ರೇವತಿ ಮಹಾದೇವಿಯುಂ ಜಿನೇಂದ್ರಭಕ್ತನುಂ ವಾರಿಷೇಣನುಂ ವಜ್ರ . ಕೊಳು ಕೇಳ್ದು ದರ್ಶನಶುದ್ಧರಪ್ಪುದುದೆಂಟಂಗಮುಂ ನೆರೆಯುಳ (?) ದರ್ಶನಂ ನಿರ್ವೃತಿಯನೆಯ್ದಿಸಲಾರ್ತುದಂ

[3] ಈ ಎರಡು ಪದ್ಯಗಳು ಪ್ರಕ್ಷಿಪ್ತ ಪದ್ಯಗಳಲ್ಲಿ ಸಮಾವೇಶವಾಗುತ್ತವೆಂದು ಪಂ ಪನ್ನಾಲಾಲಜಿ ಬಾಕಲೀವಾಲರ ಅಭಿಪ್ರಾಯ-ವಾಗಿದೆ ಹೆಚ್ಚಿನ ವಿವರಣಕ್ಕಾಗಿ ಶ್ರೀ ಜುಗಲಕಿಶೋರ ಮುಖ್ತಾರರ 'ಸಮೀಚೀನ ಧರ್ಮಶಾಸ್ತ್ರ' ಪ್ರಸ್ತಾವನಾ ಪುಟ ೩೯ರಿಂದ ಮುಂದೆ ನೋಡಬಹುದಾಗಿದ

ಅಂಗಹೀನ ಸಮ್ಯಗ್ದರ್ಶನವು ಸಂಸಾರ ಬಂಧನವನ್ನು ನಾಶ ಮಾಡಲು ಅಸಮರ್ಥವಾಗಿದೆ.

- ಇದನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ—

ನಾಂಗಹೀನಮಲಂ ಛೇತ್ತುಂ ದರ್ಶನಂ ಜನ್ಮಸಂತತಿಮ್ ।
ನ ಹಿ ಮಂತ್ರೋಽಕ್ಷರನ್ಯೂನೋ ನಿಹಂತಿ ವಿಷವೇದನಾಮ್ ॥ ೨೧ ॥

ಅನ್ವಯಾರ್ಥ—(ಯಥಾ) ಯಾವ ಪ್ರಕಾರ (ಅಕ್ಷರನ್ಯೂನಃ) ಒಂದಕ್ಷರದಿಂದಲೂ ಕೊರತೆ ಇರುವಂಥದ್ದು (ಮಂತ್ರಃ) ಮಂತ್ರವು (ವಿಷವೇದನಾಂ) ವಿಷದ ಬಾಧೆಯನ್ನು-ನೋವನ್ನು-(ನ ನಿಹಂತಿ) ನಾಶ ಮಾಡಲಾರದು (ತಥಾ) ಅದೇ ಪ್ರಕಾರ (ಅಂಗಹೀನಂ) ಅಂಗ ಹೀನವಾದಂಥ—ಯಾವುದಾದರೂ ಒಂದು ಅಂಗವನ್ನು ಪಾಲಿಸದಿದ್ದಂಥ—ಅಪೂರ್ಣವಾದ ಸಮ್ಯಗ್ದರ್ಶನವು (ದರ್ಶನಂ) ದರ್ಶನವು (ಜನ್ಮಸಂತತಿಂ) ಜನ್ಮಮರಣದ ಚಕ್ರವನ್ನು—ಭವ ಪ್ರಪಂಚವನ್ನು—ಸಂಸಾರ ಸಂತತಿಯನ್ನು (ಛೇತ್ತುಂ) ನಾಶಮಾಡಲಿಕ್ಕೆ (ಅಲಂ ನ) ಸಮರ್ಥವಾಗಲಾರದು

ಅರ್ಥ—ಯಾವ ಪ್ರಕಾರ ಅಕ್ಷರಗಳು ಕಡಿಮೆಯಾಗಿರುವ ಮಂತ್ರದಿಂದ ವಿಷದ ವೇದನೆಯು ಇಲ್ಲದಂತೆ ಆಗುವದಿಲ್ಲವೋ ಅದೇ ಪ್ರಕಾರ ಅಂಗಹೀನ ಸಮ್ಯಗ್ದರ್ಶನವು ಹುಟ್ಟು ಸಾವುಗಳಿಂದ ಕೂಡಿದ ಸಂಸಾರವನ್ನು ನಾಶಮಾಡಲು ಸಮರ್ಥವಾಗಲಾರದು [ಹಾವು ಕಡಿದು ವಿಷವು ಮೈಯೆಲ್ಲ ವ್ಯಾಪಿಸಿದಾಗ ಅದರ ವೇದನೆಯನ್ನು ಕಡಿಮೆ ಮಾಡಲಿಕ್ಕೆ ಪೂರ್ಣಾಕ್ಷರದ ಮಂತ್ರದ ಅವಶ್ಯಕತೆ ಇರುತ್ತದೆ ತಪ್ಪು ಹಾಗೂ ಕಡಿಮೆ ಅಕ್ಷರಗಳಿರುವ ಮಂತ್ರವು ನಿರುಪಯುಕ್ತವಾಗಿರುತ್ತದೆ ಅದರಂತೆ ಸಮ್ಯಗ್ದರ್ಶನದ ಒಂದು ಅಂಗ ಮಾತ್ರ ಇಲ್ಲದಿದ್ದರೂ ಕೂಡ ಅದು ವಿಕಲಾಂಗವೆನಿಸಿಕೊಳ್ಳುತ್ತದೆ ಅದರಿಂದ ನಾಕಷ್ಟು ಫಲವು ಲಭಿಸುವದಿಲ್ಲ ಇಷ್ಟೇ ಅಲ್ಲ, ಅದು ಭವ ಬಂಧನದಿಂದ ಮುಕ್ತಗೊಳಿಸಲಿಕ್ಕೆ ಯೋಗ್ಯ ಸಾಧನವೂ ಎನಿಸಲಾರದು ಸ ಧ ][1]

ವಿಶೇಷಾರ್ಥ—ಅಕ್ಷರಗಳ ಅಪೂರ್ಣತೆಯಿಂದ ಮಂತ್ರವು ಯಾವ ಪ್ರಕಾರ ವಿಷವನ್ನು ನಷ್ಟಗೊಳಿಸಲಿಕ್ಕೆ ಅಸಮರ್ಥವಾಗುತ್ತದೆಯೋ, ಅದೇ ಪ್ರಕಾರ ಸಮ್ಯಗ್ದರ್ಶನದ ಒಂದೂ ಅಂಗವು ಇಲ್ಲದವರ ಸಂಸಾರದ ಅಭಾವವು ಆಗದು

ಮೂಢತೆಯ ಸ್ವರೂಪ—ಇನ್ನು ಮುಂದೆ ಸಮ್ಯಕ್ತ್ವವನ್ನು ತಿಳಿದುಕೊಳ್ಳುವ ಅವಶ್ಯಕತೆಯಿದೆ ಅದರಿಂದ ಸಮ್ಯಗ್ದರ್ಶನವನ್ನು ಶುದ್ಧಗೊಳಿಸಿಕೊಳ್ಳಲಿಕ್ಕ ಬರುತ್ತದೆ

ಅವುಗಳಲ್ಲಿ ಲೋಕಮೂಢತೆಯ ಸ್ವರೂಪವನ್ನು ಇಲ್ಲಿ ಮೊದಲು ಹೇಳುತ್ತಾರೆ—

ಆಪಗಾಸಾಗರಸ್ನಾನಮುಚ್ಚಯಃ ಸಿಕತಾಶ್ಮನಾಮ್ ।
ಗಿರಿಪಾತೋಽಗ್ನಿಪಾತಶ್ಚ ಲೋಕಮೂಢಂ ನಿಗದ್ಯತೇ ॥ ೨೨ ॥

ಅನ್ವಯಾರ್ಥ—(ಆಪಗಾಸಾಗರಸ್ನಾನಂ) 'ಧರ್ಮವೆಂದು ತಿಳಿದು' ನದಿ ಹಾಗೂ ಸಮುದ್ರಗಳಲ್ಲಿ ಸ್ನಾನಮಾಡುವದು (ಸಿಕತಾಶ್ಮನಾಂ ಉಚ್ಚಯಃ) ಉಸುಬು, ಕಲ್ಲುಗಳ ರಾಶಿಗಳನ್ನು ಮಾಡುವದು (ಗಿರಿಪಾತಃ)

---

1 ವಚನ—ಆಯತವರ್ಮನು ಹೇಳುವದು ಹೀಗೆ ಇಂತೆಂಟಂಗವುಂ ನೆರೆಯುಳ್ಳ ಸಮ್ಯಕ್ತ್ವಂ ದ್ರವ್ಯಕ್ಷೇತ್ರ ಕಾಲ ಭವ ಭಾವ ಭೇದದಿಂದಿರ್ದಿರ್ಪ್ಪಂ ಪವಿಧ . . [ಒಂದಂಗವಿಲ್ಲದೊಡಕ್ಷರಂಗುಂದಿದ ಮಂತ್ರಮೆಂತು ವಿಷವೇದನೆಯುಮಂ ಕಿಡಿಸಲಾರದಂತೆ ಸಂಸಾರಮಂ ಕಿಡಿಸಲಾರದು

ಗುಡ್ಡದ ಮೇಲಿಂದ ಬೀಳುವುದು, (ಅಗ್ನಿಪಾತಃ) ಬೆಂಕಿಯಲ್ಲಿ ಬಿದ್ದು ಆಹುತಿಯಾಗುವುದು (ಲೋಕಮೂಢಂ) ಲೋಕ-ಮೂಢತೆಯು (ನಿಗದ್ಯತೇ) ಎಂದು ಹೇಳಲಾಗುತ್ತದೆ [1]

ಅರ್ಥ—ಮಿಥ್ಯಾಮಾರ್ಗದಲ್ಲಿ ಬಾಳುತ್ತಿರುವ ಜನರ ಕ್ರಿಯೆಗಳನ್ನು ನೋಡಿ, ಗಂಗಾ-ಭಾಗೀರಥಿ-ಯಮುನಾ ಮೊದಲಾದ ನದಿಗಳಲ್ಲಿ ಸ್ನಾನಮಾಡುವುದರಿಂದಲೂ ಸಮುದ್ರ ಸ್ನಾನಮಾಡುವುದರಿಂದಲೂ ಧರ್ಮ ಸಂಭವಿಸುತ್ತದೆ, ಪುಣ್ಯವು ಪ್ರಾಪ್ತವಾಗುತ್ತದೆ ಎಂದು ತಿಳಿಯುವುದು ಲೋಕಮೂಢತೆಯಾಗಿದೆ. ಇವುಗಳಂತೆಯೇ ಉಸುಬಿನ ರಾಶಿ ಮಾಡುವುದರಿಂದಲೂ, ಕಲ್ಲುಗಳ ಗುಂಪನ್ನು ಒಟ್ಟುವುದರಿಂದಲೂ, ಪರ್ವತಗಳ ಮೇಲಿಂದ ಜಿಗಿಯುವುದರಿಂದಲೂ, ಅಗ್ನಿಯಲ್ಲಿ ಪ್ರವೇಶಿಸುವುದರಿಂದಲೂ ಧರ್ಮವಾಗುವದೆಂದು ಭಾವಿಸುವುದೂ ಇದೇ ಮೂಢತೆಯಲ್ಲಿ ಸಮಾವೇಶವಾಗುತ್ತವೆ ಇಂಥ ಆಚರಣೆಯುಳ್ಳವರಿಗೆ ಲೋಕಮೂಢರೆನ್ನುವರು ಈ ಮೂಢತೆಯು ಇಲ್ಲದಿದ್ದರೆ ಸಮ್ಯಗ್ದರ್ಶನವು ಪ್ರಾಪ್ತವಾಗುತ್ತದೆ. [ಇಲ್ಲಿ ಲೋಕಮೂಢತೆಯ ಕೆಲವು ಮಾದರಿಗಳನ್ನು ಮಾತ್ರ ಸೂಚಿಸಿದೆ ಇನ್ನೂ ಅನೇಕ ಮಾದರಿಯ ಲೋಕಮೂಢತೆಗಳು ಉಂಟು.[2] ಧಾರ್ಮಿಕ ಉದ್ದೇಶವಿಲ್ಲದೆ ಸಾಮಾನ್ಯವಾಗಿ ನದಿ ಸಮುದ್ರ-ಗಳಲ್ಲಿ ಸ್ನಾನಮಾಡುವದಾಗಲಿ, ಮನೆಗೆ ಬೆಂಕಿ ಹತ್ತಿದಾಗ ಒಳಗೆ ಸಿಕ್ಕುವರನ್ನು ಉಳಿಸಲಿಕ್ಕೆ ಹೋಗಿ, ಅಗ್ನಿಯಲ್ಲಿ ಸುಟ್ಟುಕೊಂಡುದಾಗಲಿ, ಲೋಕಮೂಢತೆಯಲ್ಲಿ ಸಮಾವೇಶವಾಗುವದಿಲ್ಲ. ಸ ಧ ]

ವಿಶೇಷಾರ್ಥ—ಶರೀರದ ಅಶುದ್ಧತೆ. ಜನರಲ್ಲಿ ಅನೇಕ ಮೂಢ ಪ್ರವೃತ್ತಿಗಳು ಇವೆ. ಅವುಗಳಿಗೆ ಮಿಥ್ಯಾತ್ವದ ಉದಯ, ದೇಶಕಾಲಗಳ ಭಿನ್ನತೆ, ಪರಮಾರ್ಥದ ವಿಚಾರವಿಲ್ಲದಿರುವುದು—ಇವೇ ಮುಖ್ಯ ಕಾರಣ-ಗಳಾಗಿವೆ ಮೂಢ ನಂಬಿಗೆಗಳಿಂದಲೂ ಆಚಾರಗಳಿಂದಲೂ ಧರ್ಮವು ಪ್ರಾಪ್ತವಾಗುತ್ತದೆ, ಪವಿತ್ರತೆಯು ಉತ್ಪನ್ನವಾಗುತ್ತದೆ, ಲಾಭವು ದೊರಕುತ್ತದೆ, ವಿಯೋಗದ ದುಃಖವು ಉಂಟಾಗಲಾರದು, ಆಯುಷ್ಯವು ಬೆಳೆಯುವುದು-ಇವೇ ಮೊದಲಾದ ಕಲ್ಪನೆಗಳು ರೂಢವಾಗಿವೆ ಇವುಗಳಿಗೇ ಲೋಕ ಮೂಢತೆ ಎನ್ನಲಾಗುವುದು.

ಇವು ಅಜ್ಞಾನಗಳಿಂದ ಹುಟ್ಟುತ್ತವೆ ಅದಕ್ಕಾಗಿ ಇವುಗಳನ್ನು ಬಿಟ್ಟು, ತಮ್ಮ ವಿಚಾರದ ಪದ್ಧತಿ-ಯನ್ನು ಮಾಡಿಕೊಳ್ಳಲಿಕ್ಕೆಬೇಕು. ಅನೇಕ ಏಕಾಂತವಾದಿ ಜನರು, ನದಿಗಳಲ್ಲಿ ಸ್ನಾನಮಾಡುವುದರಿಂದ ಪವಿತ್ರತೆಯು ಉಂಟಾಗುತ್ತದೆಂದು ತಿಳಿದಿದ್ದಾರೆ. ಜ್ಞಾನಿಗಳು ಈ ವಿಷಯದಲ್ಲಿ ಹೀಗೆ ವಿಚಾರಿಸಬೇಕು—"ಆತ್ಮವು

---

[1] ಆಯತವರ್ಮನು ಹೇಳುವದು ಹೀಗೆ ಮೂರು ಮೂಢಂಗಳಾವುವೆಂದೊಡೆ— ಲೋಕಮೂಢಮೆಂದುಂ ದೇವತಾ ಮೂಢ-ಮೆಂದುಂ ಪಾಷಂಡಿ ಮೂಢಮೆಂದುಂ ದೇವತಾ ಮೂಢಮೆಂಬುದಕ್ಕೇದಿಲ್ಲ, ಶಾಸ್ತ್ರವಿಲ್ಲ, ಪುರಾಣವಿಲ್ಲಗಳ ಪರಿಯೋಚಿತರಾಗಿ ಯೋರೊರ್ವರನೊಂದಂ ತಂತಮ್ಮ ಪಡಪು ಕಾರಣವಾಗಿ ಧಾಳಿಯುಂ ಗಟ್ಟಿಕ್ಕಿಕೊಂಡು ಪೇಳ್ದುದನೆ ನೋಃಪುದುಂ ಕುಡವೇಳ್ದುದನೆ ಕುಡುವುದುಂ ಅವರೆಂಬುದನೆ ಎಂಬುದುಂ . ಪುಸಿ ನನ್ನಿಯೆಂದರಿಯದವು ಪುಲ್ತಿ ॥

ಕಂದ ॥ ನದಿವಾರ್ಧಿಗಳಂ ಮೀವುದುಮುದಿರದೆ ಶಾಸ್ತ್ರಾಗ್ನಿ ಗಿರಿ ನದಿಗಳು ಮಂ ಪಾ ।
ಯ್ವುದುಮಿಂತು ಲೋಕಮೂಢಂಮುದದಿಂದಂ ರಾಶಿಮಾಳ್ಪುದುಂ ಕಲ್ಗಳಂ ॥

ವಚನ—ಕೆರೆ ತೊರೆ ಭಾವಿ ಕೊಳಂ ಕುಂಡಮೆಂಬಿವು ಮೊದಲಾಗೊಡೆಯವಂ ಮಿಂದೊಡೆ ಪುಣ್ಯಮೆಂದು ಲೋಕವಾದ-ಮವರೊಳು ಪುಣ್ಯಮಪ್ಪೊಡೆಯಲ್ಲಿಯೆ ಪುಟ್ಟಿಯಲ್ಲಿಯೆ ಸಾವ ಮತ್ಸ್ಯಮಕರ ಮಂಡೂಕಾದಿಗಳೆಲ್ಲಂ ಪುಣ್ಯಂಗೆಯ್ಯೇಳೇಳ್ಕುಮ-ಲ್ಲೆಂದೆಯಪ್ಪೊಡೆ ಮನ್ನಿನ ನುಡಿ ಪುಸಿಯಕ್ಕುಂ. ಮತ್ತಂ ಕಸ್ತಗಿರಿ ನದಂಗಳಂ ಪಾಯ್ದು ಸತ್ತಂಗೆ ಪುಣ್ಯಮೆಂಬಡೆ ರಣದೊಳು ಕೈದು ವಿನೊಳು ಸತ್ತವರ್ಗೆ ಮರೆ (?) ಸಾವ ಮೃಗಂಗಳ್ಗಂ ಕಾಳ್ಗಿಚ್ಚಿನೊಳ್ಸಾವ ಮೃಗಂಗಳ್ಗಂ ಸರಿಯನೇರಿ ಜಗುಳ್ದು ಸಾವ್ವದುಂ ಕೊರಿಯೊಳ್ಪಲಿಸಲಾರದೆ ಸಾವುದುಂ ಪರುಳೊಳ್ಕುಳುಗಿ ಸಾವ್ವದುಂ ಇಂತೀಯಂದದೊಳ್ಸತ್ತ ಪ್ರಾಣಿಗಳೆಲ್ಲಂ ಪುಣ್ಯವಾಗಲೆ ವೇಳ್ಕುಮಂತೇಕೆ ಪುಣ್ಯಮಕ್ಕುಮೆಯಾಗದೆಂಬಡೆ ಮುನ್ನಿನ ನುಡಿದ ನುಡಿ ಪುಸಿಯಕ್ಕು ಯೆಣ್ಣೆಯಕ್ಕೆಂದು ಮಳಲಂ ಬೆಳಪಡಂ ಜಿಣ್ಣೆಯಕ್ಕೆಂದು ನಿರ್ಗಡೆವೊಡಮಾಗದಂತೆ ಪೊಲ್ಪುಣ್ಯಕ್ಕೆ ಕಾರಣಮಲ್ಲದುವಂ ನೆಗಳ್ದೊಡೆ ನಿಷ್ಫಲಮುಂ ಕ್ಲೇಶಮುಮ ಸವಾದಿ-ಗಳುಂ ಸಂಸಾರವರ್ಧನಂಗಳು ಮಕ್ಕುಮದಲ್ಲದೆಯುಂ ಲೋಕದೊಳಂತಪ್ಪ ಸಾವುಗಳೊಳ್ಸತ್ತವರ್ಗೆ ಸಂಪ್ರೆರ್ಗಳಿಃಯುಪುಡೆ ಪೆಳ್ಗಮಲ್ಲಿ ಪಾಪಮಲ್ಲದೆ ಪುಣ್ಯಮಿಲ್ಲೆಂಬುದು ಮತ್ತಂ ಪಿಶರಗೂಡಿದಪ್ಪರಃ ತಪ್ಪದೆ ಪೆರಪ್ಪಳ ಪುಟ್ಟಿ ಬಳಕ ಕ್ಕೆಯೊರ್ದಂಗೆ ಕೊಳಪುಯ್ವರ್ಮನೆಯಲಿರ್ದಡೆಯು . ಸಮ್ಯಗ್ದೃಷ್ಟಿಗಾಗದು.

[2] ಈ ಶ್ಲೋಕಗಳಲ್ಲಿಯೂ ಕೆಲವು ಲೋಕಮೂಢತೆಗೆ ಉದಾಹರಣೆಗಳಿವೆ—

ಸೂರ್ಯಾರ್ಘೋ ಗ್ರಹಣ-ಸ್ನಾನಂ ಸಂಕ್ರಾಂತೌ ದ್ರವಿಣ-ವ್ಯಯಃ ।
ಸಂಧ್ಯಾಸೇವಾಗ್ನಿಸತ್ಕಾರೋ ದೇಹ-ಗೇಹಾರ್ಚನಾ-ವಿಧಿಃ ॥ ೧ ॥
ಗೋಪೃಷ್ಠಾಂತ ನಮಸ್ಕಾರಸ್ತನ್ಮೂತ್ರಸ್ಯ ನಿಷೇವಣಂ ।
ರತ್ನ-ವಾಹನ-ಭೂ-ವೃಕ್ಷ-ಶಸ್ತ್ರ-ಶೈಲಾದಿ ಸೇವನಮ್ ॥ ೨ ॥ —ಸ. ಧ ಪುಟ ೫೦

ಅಮೂರ್ತಿಕವಾಗಿದೆ ಅದಕ್ಕೆ ಸ್ನಾನದ ಸಂಬಂಧವು ಉಂಟಾಗುವದಿಲ್ಲ ಶರೀರವಂತೂ ತೀರ ಅಪವಿತ್ರವಾಗಿದೆ, ಈ ದೇಹದ ಸಂಯೋಗದಿಂದ ಚಂದನ, ಗಂಗಾಜಲ, ಹೂವು ಮೊದಲಾದ ಪದಾರ್ಥಗಳು ಮುಟ್ಟಲಿಕ್ಕೂ ಅಯೋಗ್ಯವಾಗುತ್ತವೆ ದೇಹವು ಎಲುವು, ಮಾಂಸ, ರಕ್ತ, ಕೀವು, ತೊಗಲು ಮೊದಲಾದ ಅಶುದ್ಧ ಸಾಮಗ್ರಿಗಳಿಂದ ರೂಪುಗೊಂಡದ್ದು ಇದೆ ಹಲವು ಪ್ರಕಾರದ ದುರ್ಗಂಧದಿಂದ ಕೂಡಿದ ರೊಜ್ಜು, ಮಲ–ಮೂತ್ರಾದಿ ಅಶುದ್ಧ ದ್ರವ್ಯಗಳಿಂದ ತುಂಬಿದೆ ಇಂಥ ಶರೀರದ ಮುಖದ ಕಡೆಗೆ ನೋಡಿದರೆ ಹೇಸಿಕೆಯು ಬಂದೀತು ಈ ಪ್ರಕಾರದ ಲಾಲಾರಸ ಮೊದಲಾದವುಗಳೂ ಹರಿಯುತ್ತಿರುತ್ತವೆ ಅವುಗಳಲ್ಲಿ ಯಾವಾಗಲೂ ಹಲ್ಲಿನೊಳಗಿನ ಹೊಲಸು ನಾಲಿಗೆಯೊಳಗಿನ ಹೊಲಸು ಹರಿಯುತ್ತಿರುತ್ತವೆ ಕಣ್ಣಿನೊಳಗಿಂದ ಜಿಗುಟಾದ ಹೊಲಸುನಾರುವ ಹಳದಿ ವರ್ಣದ ಕೀವು–ಪಿಚ್ಚು–ಸೋರುತ್ತ ಇರುತ್ತದೆ ಕಿವಿಗಳಿಂದಲೂ ಅನೇಕ ಪ್ರಕಾರದ ಹೊಲಸು ರಸಗಳು ಸೋರುತ್ತಿರುವವು ಮೂಗಿನೊಳಗಿಂದ ನೋಡಿದರೇನೇ ಹೇಸಿಕೆ ಬರುವಂಥ ಸಿಂಬಳವು ಸದಾ ಸುರಿಯುತ್ತಿರುತ್ತದೆ ಗುದದ್ವಾರದಿಂದ ಮಲ, ಅಂವ, ಕೃಮಿ ಮೊದಲಾದವು ನಿರಂತರ ಹೊರಬೀಳುತ್ತವೆ ಶರೀರದ ಎಲ್ಲ ಭಾಗಗಳಲ್ಲಿಯೂ ರೋಮ ರಂಧ್ರಗಳಿಂದ ಹೊಲಸು ಬೆವರವು ನಿತ್ಯ ಹೊರಬೀಳುವುದು ಈ ಪ್ರಕಾರ ಒಂಭತ್ತು ದ್ವಾರಗಳಿಂದಲೂ ಯಾವ ಶರೀರದೊಳಗಿಂದ ಹಗಲಿರುಳೂ ಮಲವು ಹರಿಯುತ್ತಿರುವದೋ ಅಂಥ ಶರೀರವು ಸ್ನಾನದಿಂದ ಶುದ್ಧವಾಗುತ್ತದೆ, ಪವಿತ್ರವಾಗುತ್ತದೆ—ಎಂದು ಹೇಳಲಿಕ್ಕೆ ಬರುವದಿಲ್ಲ ಮಣ್ಣಿನಿಂದ ಮಾಡಿದ್ದೂ ಹೊಲಸಿನಿಂದ ತುಂಬಿದುದೂ ನಾಲ್ಕು ಕಡೆಯಿಂದ ಮಲದಿಂದ ಆವರಿಸಿದ ಗಡಿಗೆಯನ್ನು ಹೊರಗಿನಿಂದ ನೀರು ಹಾಕಿ ಎಷ್ಟು ತೊಳೆದರೂ ಸ್ವಚ್ಛವಾದೀತೆ? ಇಲ್ಲ ಅದರಂತೆ ಈ ಶರೀರವೂ ಸಹ ಹೊರಗಿನ ಸ್ನಾನ–ಪಾನಗಳಿಂದ ಸ್ವಚ್ಛವಾಗದು. ಜಗತ್ತಿನಲ್ಲಿ ವ್ಯವಹಾರದೊಳಗೆ ಯಾವ ವಸ್ತು ಹಾಗೂ ಸ್ಥಳಗಳು ಅಶುದ್ಧವೆಂದೂ ಅಪವಿತ್ರವೆಂದು ಪರಿಗಣಿಸಲಾಗುವುದೋ ಅವೆಲ್ಲ ಶರೀರದ ಸಂಬಂಧದಿಂದಲೇ ಅಪವಿತ್ರವಾಗಿವೆ ಒಂದು ಸ್ಥಳವು ತೊಗಲು ಬೀಳುವುದರಿಂದ ಅಪವಿತ್ರವಾಗುತ್ತದೆ, ಇನ್ನೊಂದು ಕೂದಲನ್ನು ಒಗೆಯುವುದರಿಂದ, ಮತ್ತೊಂದು ಎಂಜಲು ಬೀಳುವುದರಿಂದ ಅಪವಿತ್ರವೆನಿಸುತ್ತದೆ ಹಲವು ವಸ್ತುಗಳು ರಕ್ತ, ಮಾಂಸ, ಕೀವು, ಎಲುವು, ಮಜ್ಜಾ, ಮಲ–ಮೂತ್ರ, ಉಗುಳು, ಹುಗುಳು, ಸಿಂಬಳ ಮೊದಲಾದವುಗಳ ಸ್ಪರ್ಶದಿಂದ ಅಪವಿತ್ರವಾಗುತ್ತವೆ ಇನ್ನು ಕೆಲವು ಸ್ನಾನದ ನೀರಿನ ಹಣಿಗಳು ಸಿಡಿಯುವುದರಿಂದ ಅಪವಿತ್ರವಾಗುತ್ತವೆಂದು ಕೇಳುತ್ತೇವೆ, ನೋಡುತ್ತೇವೆ ಇದರಿಂದ ಶರೀರದ ಸಂಬಂಧವಿಲ್ಲದೆ ಯಾವ ವಸ್ತುವೂ ಅಶುದ್ಧವಾಗುವದಿಲ್ಲವೆಂದು ತಿಳಿಯುತ್ತದೆ ಇಂಥ ಅಮಂಗಲ ದೇಹವು ಸ್ನಾನದಿಂದ ಹೇಗೆ ಶುದ್ಧವಾದೀತು? ನೀರಿನಿಂದ ಕೇವಲ ದೇಹದ ಮೇಲೆ ಕೆಲವೊಂದು ಹೊಲಸು ಕೂತದ್ದನ್ನು ತೊಳೆಯಬಹುದು ಅರಿವೆಗೆ ಹತ್ತಿದ ಕಲೆಯನ್ನು ಕಳೆಯಲೂಬಹುದು ಆದರೆ ಶರೀರವನ್ನೆಲ್ಲ ನಿರ್ಮಲಮಾಡಲಿಕ್ಕೆ ಆಗದು ಇದ್ದಲಿಯನ್ನು ಮೇಲಿನಿಂದ ಎಷ್ಟು ಸಲ ತೊಳೆಯುತ್ತ ಹೋದರೂ ಅದರಿಂದ ಕಪ್ಪೇ ಹೊರಡುತ್ತದೆ ಅದರಂತೆ ಶರೀರವನ್ನು ನಾವು ಎಷ್ಟು ಸಲ ತೊಳೆಯುತ್ತ ಹೋಗುವೆವೋ ಅಷ್ಟು ಸಲ ಮಲಿನತೆಯೇ ಪ್ರಕಟವಾಗುತ್ತ ಹೋಗುತ್ತದೆ ಆದರಿಂದ ಸ್ನಾನದಿಂದ ಶರೀರವು ಪವಿತ್ರವಾಗುವದೆಂಬ ವಿಚಾರವು ಮಿಥ್ಯಾತ್ವವಾಗಿದೆ

ನೀರಿನ ಅಶುದ್ಧತೆ—ಜಗತ್ತಿನಲ್ಲಿ ನೀರಿನಂಥ ಅಪವಿತ್ರ ವಸ್ತುವು ಇಲ್ಲ ಯಾಕಂದರೆ ಅದರಲ್ಲಿ ಕಪ್ಪೆ, ಆನೆ, ಮೀನು, ಹಾವು, ಇಲಿ ಮೊದಲಾದ ಜೀವಗಳು ಯಾವಾಗಲೂ ಸಾಯುತ್ತಲೇ ಇರುತ್ತವೆ ಅವುಗಳ ಎಲುವು, ಮಾಂಸ, ಕೀವುಗಳೆಲ್ಲ ಅದರಲ್ಲಿಯೇ ಬೀಳುವುವು ಅನೇಕ ತ್ರಸ ಜೀವಿಗಳ ಘಾತವು ನೀರಿನಲ್ಲಿಯೇ ಆಗುತ್ತಿರುತ್ತದೆ ಇಂಥ ನಿಂದ್ಯವೂ ಅಪವಿತ್ರವೂ ಆದ ನೀರಿನ ಸ್ಪರ್ಶದಿಂದ ದೇಹವು ಹೇಗೆ ಪವಿತ್ರವಾದೀತು? ಗಂಗಾ ಮೊದಲಾದ ನದಿಗಳಂತೂ ಸಾವಿರಾರು ಮನುಷ್ಯರ ಹೆಣಗಳಿಂದಲೂ ರಕ್ತ, ಮಾಂಸ, ಮಲ–ಮೂತ್ರಾದಿಗಳಿಂದಲೂ ಹೊಲಸಾಗಿರುತ್ತವೆ ಇಂಥ ಗಂಗೆಯ ನೀರು ಇನ್ನೊಬ್ಬರನ್ನು ಪವಿತ್ರಗೊಳಿಸುವ ಬಗೆ ಹೇಗೆ? ತನ್ನಲ್ಲಿ ಬಿದ್ದ ಪದಾರ್ಥಗಳನ್ನು ಪವಿತ್ರಗೊಳಿಸುವ ಸಾಮರ್ಥ್ಯವು ಮೊದಲು ಅದಕ್ಕೆ ಇಲ್ಲ ಅದರಲ್ಲಿ ಕೇವಲ ಮೇಲಿನ ಹೊಲಸನ್ನು ತೊಳೆಯುವ ಶಕ್ತಿಯು ಇರುತ್ತದೆ ಅದರಿಂದ ಮನಸ್ಸಿನ ಗ್ಲಾನಿಯು ಮಾತ್ರ ಇಲ್ಲದಂತಾಗುತ್ತದೆ. ಅದರಿಂದ ಪಾವಿತ್ರ್ಯವು ಉಂಟಾಗುವದೆಂದು ತಿಳಿಯುವುದು, ಸ್ನಾನದಲ್ಲಿ ಧರ್ಮವಿದೆ ಎಂದು ಭಾವಿಸುವುದು ಇವೇ ಮೊದಲಾದವುಗಳು ಮಿಥ್ಯಾತ್ವವಾಗಿವೆ ನಿಜವಾಗಿ ಗಂಗಾಸ್ನಾನದಿಂದ ಪಾವಿತ್ರ್ಯವು ಉಂಟಾಗುತ್ತಿದ್ದರೆ, ಸ್ನಾನದಲ್ಲಿಯೇ ಧರ್ಮವಿದ್ದರೆ, ಅದರಿಂದಲೇ ಮುಕ್ತಿಯು ಆಗುವದಿದ್ದರೆ ಹಗಲಿರುಳೂ ನೀರಿನಲ್ಲಿರುವ ಮಡಿವಾಳ (ಅಗಸ) ಕಂಬಾರ (ಮೀನುಗಾರ)

ಮೊದಲಾದ ಎಲ್ಲ ಜೀವಗಳು ಪವಿತ್ರವೆನಿಸಿ ಅವರಿಗೆ ಮುಕ್ತಿಯು ದೊರೆಯಬೇಕಾದೀತು. ಆಗ ಉಳಿದ ದಾನ, ಪೂಜೆ, ಪ್ರಭಾವನೆಗಳು ನಿರುಪಯುಕ್ತವೆಂದು ಎನಿಸಿಯಾವು ಮಿಥ್ಯಾತ್ವದ ಪ್ರಭಾವದಿಂದ ಜನರಲ್ಲಿ ಮೂರ್ಖತನದ ತಿಳುವಳಿಕೆಗಳು ಉಂಟಾಗುತ್ತವೆ.

ಶಾಸ್ತ್ರಕಾರರು ಎಂಟು ಪ್ರಕಾರದ ಲೌಕಿಕ ಶುದ್ಧಿಗಳನ್ನು ಹೇಳಿದ್ದಾರೆ ಅವುಗಳಿಂದ ವ್ಯವಹಾರ, ಆಚಾರ, ಕುಲಾಚಾರ ಮೊದಲಾದವುಗಳು ಶುದ್ಧವಾಗುತ್ತ ಇರುತ್ತವೆ ಆದರೆ ಅದರಿಂದ ಶರೀರವು ಪವಿತ್ರವಾಗುವದಿಲ್ಲ. ನಮ್ಮ ಮನಸ್ಸಿನೊಳಗಿನ ಗ್ಲಾನಿಯು ಸ್ನಾನದಿಂದ ಇಲ್ಲದಂತಾಗಬೇಕು—ಇಷ್ಟೇ ಅವರ ಹೇತುವು ಇರುತ್ತದೆ ಇದೇ ವಿಚಾರವನ್ನು ಶ್ರೀ ಅಕಲಂಕ ಆಚಾರ್ಯರು ತಮ್ಮ 'ರಾಜವಾರ್ತಿಕ'ದಲ್ಲಿ ಅಶುಚಿ ಭಾವನೆಯನ್ನು ವಿವರಿಸುವಾಗ ಹೇಳಿದ್ದಾರೆ.

ವ್ಯಾವಹಾರಿಕ ಶುದ್ಧತೆಯ ಪ್ರಕಾರಗಳು—ಶುದ್ಧತೆಯು ಎರಡು ವಿಧವಾಗಿದೆ ಒಂದು ಲೌಕಿಕ, ಇನ್ನೊಂದು ಅಲೌಕಿಕ ಇದಕ್ಕೆ ಲೋಕೋತ್ತರವೆಂದೂ ಹೆಸರು. ಕರ್ಮಮಲವನ್ನು ಕಳೆದುಕೊಂಡ ಆತ್ಮನು ತನ್ನ ಸ್ವಭಾವದಲ್ಲಿ ತಾನು ಸ್ಥಿರವಾಗಿ ನಿಲ್ಲುವುದು ಅಲೌಕಿಕ ಶುದ್ಧಿಯೆನಿಸುತ್ತದೆ ಇದು ಸಮ್ಯಗ್ದರ್ಶನದಿಂದ ಸಾಧ್ಯವಿದೆ. ಇನ್ನು ಲೌಕಿಕ ಶುದ್ಧಿಯು ಎಂಟು ಪ್ರಕಾರದ್ದಿದೆ. (೧) ಕಾಲಶೌಚ, (೨) ಅಗ್ನಿಶೌಚ, (೩) ಭಸ್ಮಶೌಚ, (೪) ಮೃತ್ತಿಕಾಶೌಚ, (೫) ಗೋಮಯಶೌಚ, (೬) ಜಲಶೌಚ, (೭) ಪವನಶೌಚ, ಮತ್ತು (೮) ಜ್ಞಾನಶೌಚ ಈ ಎಂಟು ಶುದ್ಧಿಗಳು ವ್ಯವಹಾರದೃಷ್ಟಿಯಿಂದ ಶರೀರವನ್ನು ಶುದ್ಧಗೊಳಿಸುತ್ತವೆ ಅದರಿಂದ ಇವುಗಳನ್ನು ಅವಶ್ಯವಾಗಿ ಮಾಡಬೇಕಾಗುವುದು. ಈ ಲೌಕಿಕ ವ್ಯವಹಾರವನ್ನು ಬಿಟ್ಟಿದ್ದಾದರೆ ಅನರ್ಥವು ಸಂಭವಿಸೀತು. ಮಾಂಸ ತಿನ್ನುವವರ ಇಲ್ಲವೆ ಮಾಂಸ ಮಾರುವವರ ನಿಕಟ ಸಹವಾಸ ಇರಕೂಡದು. ಯಾಕಂದರೆ ಅವರ ಸಹವಾಸದಿಂದ ಮಾಂಸ ಭಕ್ಷಣದ ಬಗ್ಗೆ ನಮ್ಮಲ್ಲಿರುವ ತಿರಸ್ಕಾರವು ಕಡಿಮೆಯಾಗುತ್ತದೆ ಆಗ ಅಹಿಂಸೆಯ ಬಗ್ಗೆ ನಮ್ಮಲ್ಲಿರುವ ಗಾಢವಾದ ಸಂಸ್ಕಾರವು ತನ್ನಿಂದ ತಾನೇ ಸಡಿಲುಗೊಳ್ಳುತ್ತ ಹೋಗುತ್ತದೆ ಅದರಿಂದ ಆತ್ಮಕಲ್ಯಾಣವನ್ನು ಸಾಧಿಸುವದಕ್ಕೆ ಬೇಕಾಗುವ ಅಹಿಂಸೆಯ ನಿಷ್ಠೆಯು ಇಲ್ಲದಂತಾಗುತ್ತದೆ. ಅದಕ್ಕಾಗಿ ಬಾಹ್ಯಶುದ್ಧಿಯೊಳಗೆ ಅನಾದರವನ್ನು ತೋರಿಸ-ಕೂಡದು ಕೆಲವೊಂದು ವಸ್ತುಗಳು ಕೆಲವು ಕಾಲ ಹೋದ ತರುವಾಯ ಶುದ್ಧವಾಗುತ್ತವೆಂದು ಸ್ವೀಕರಿಸಲಾಗಿದೆ. ಹಡೆಗಾದ-ರಜಸ್ವಲೆಯಾದ-ಸ್ತ್ರೀಯು ಮೂರುದಿನಗಳನ್ನು ಕಳೆದ ಮೇಲೆ ಶುದ್ಧಳಾಗುತ್ತಾಳೆ. ಆದರೆ ಶರೀರವು ಎಷ್ಟು ಕಾಲ ಹೋದರೂ ಶುದ್ಧವಾಗುವದಿಲ್ಲ ಎಂಜಲದ ಪಾತ್ರೆಗಳನ್ನು ಬೂದಿಯನ್ನು ಹಚ್ಚಿ ತಿಕ್ಕಿದರೆ ಶುದ್ಧವಾಗುವವೆಂದು ತಿಳಿಯಲಾಗುತ್ತದೆ. ಆದರೆ ಶರೀರಕ್ಕೆ ಭಸ್ಮವನ್ನು ಹಚ್ಚಿದರೂ ಶುದ್ಧವಾಗದು ಅನೇಕ ಧಾತುಗಳ ಪಾತ್ರೆಗಳು ಶೂದ್ರರು ಮುಟ್ಟುವುದರಿಂದ ಅಪವಿತ್ರವಾಗುವವೆಂಬ ತಿಳುವಳಿಕೆ ಅವುಗಳನ್ನೂ ಕೂಡ ಅಗ್ನಿಯಲ್ಲಿ ಹಾಕಿ, ಸಂಸ್ಕರಿಸಿ, ಶುದ್ಧಿಗೊಳಿಸಿಕೊಳ್ಳಬಹುದೆಂದು ಒಪ್ಪುತ್ತಾರೆ ಆದರೆ ಶರೀರವು ಅಗ್ನಿಸಂಸ್ಕಾರದಿಂದಲೂ ಪವಿತ್ರವಾಗಲಾರದು ಮಲ-ಮೂತ್ರಗಳ ಸ್ಪರ್ಶವು ಮಣ್ಣನ್ನು ಹಚ್ಚುವುದರಿಂದ ಕಳೆದುಹೋಗುತ್ತದೆ. ಆದರೆ ಶರೀರಕ್ಕೆ ಮಣ್ಣು ಹಚ್ಚಿ ತೊಳೆದರೆ ಅದು ಶುದ್ಧವಾಗದು ಆಕಳ ಮಲದಿಂದ ಭೂಮಿಯು ಶುದ್ಧವಾಗುತ್ತದೆಂದು ಹೇಳುತ್ತಾರೆ ಅದೇ ಮಲವು ದೇಹವನ್ನು ಶುದ್ಧಗೊಳಿಸಿದ ಸಂಗತಿಯು ಎಲ್ಲಿಯೂ ಕೇಳಲಿಕ್ಕೆ ಸಿಗುವದಿಲ್ಲ ಕೆಸರು ಮೈಗೆ ಹತ್ತಿದಾಗ, ಅಸ್ಪೃಶ್ಯರು ಮುಟ್ಟಿದಾಗ ಸ್ನಾನದಿಂದ ಶುದ್ಧವಾಗಲಿಕ್ಕೆ ಬರುತ್ತವೆಂದು ಸ್ವೀಕರಿಸಲಾಗುವುದು. ಆದರೆ ಶರೀರವು ಸ್ನಾನದಿಂದ ಶುದ್ಧವಾಗದು ಸ್ನಾನಮಾಡಿದ ತರುವಾಯವೂ ಚಂದನ, ಹೂವು ಮೊದಲಾದ ಪವಿತ್ರ ವಸ್ತುಗಳನ್ನು ಶರೀರವು ಸ್ಪರ್ಶಮಾಡುವುದರಿಂದ ಅವೂ ಅಪವಿತ್ರವಾಗುತ್ತವೆ, ಮಲಿನಗೊಳ್ಳುತ್ತವೆ ಕೆಲವರು ನೆಲ, ಕಲ್ಲು, ಕಪಾಟ, ಕಟ್ಟಿಗೆ ಮೊದಲಾದವುಗಳು ಗಾಳಿಯಿಂದ ಶುದ್ಧವಾಗುವವೆಂದು ಸ್ವೀಕರಿಸುತ್ತಾರೆ. ಆದರೆ ಶರೀರವು ಗಾಳಿಯಿಂದ ಶುದ್ಧವಾಗದು. ಕೆಲವು ವಸ್ತುಗಳ ವಿಷಯದಲ್ಲಿ ನಮ್ಮ ತಿಳುವಳಿಕೆಯಲ್ಲಿಯೇ ಮೂಲದಲ್ಲಿ ಶುದ್ಧತೆ ಇರುತ್ತದೆ. ಅದರಿಂದ ಅವುಗಳನ್ನು ಪವಿತ್ರವೆಂದು ಭಾವಿಸಲಾಗುತ್ತದೆ ಹಾಗೆ ಶರೀರದ ವಿಷಯದ ಜ್ಞಾನದಲ್ಲಿ ಶುದ್ಧತ್ವದ ಸಂಕಲ್ಪವಂತೂ ಎಂದೂ ಉಂಟಾಗುವದಿಲ್ಲ. ಅದಕ್ಕಾಗಿ ಎಂಟು ಪ್ರಕಾರದ ಕೇವಲ ಲೌಕಿಕ ಶುದ್ಧಿಗಳಿಂದಲೇ ಶರೀರವು ಶುದ್ಧವಾಗುವದಿಲ್ಲ ಲೌಕಿಕ ಶುದ್ಧಿಯು ಬರೀ ಮಾನಸಿಕ ಗ್ಲಾನಿಯನ್ನು ಇಲ್ಲದಂತೆ ಮಾಡುವದಕ್ಕೆ ಇರುತ್ತವೆ. ವ್ಯವಹಾರದಲ್ಲಿ ನಿರ್ಮಲತನದಿಂದ ನಡತೆಯಲ್ಲಿ ಉಚ್ಚತೆಯು ಕಂಡುಬರುತ್ತದೆ ಆದರೆ ಅದರಿಂದ ಶರೀರವು ಶುದ್ಧವಾಗುವದಿಲ್ಲ. ದೇಹವು ಇದು ಎಲ್ಲ ರೀತಿಯಿಂದಲೂ ಅಶುದ್ಧವೇ ಇದೆ ಹೀಗಿದ್ದರೂ ಒಂದು ಜೀವವು ಪರಧನ, ಪರಸ್ತ್ರೀಯರನ್ನು

ಇಚ್ಛಿಸದೆ ಇದ್ದರೆ, ಯಾವ ಜೀವದ ಘಾತವನ್ನೂ ಮಾಡದೆ ಇದ್ದರೆ ಆ ಜೀವದ ದೇಹವು ಎಲುವು ಮಾಂಸಗಳಿಂದಲೇ ತುಂಬಿ ಹೊಲಸಾಗಿದ್ದರೂ ಕೂಡ ದೇವತೆಗಳಿಂದಲೂ ಪೂಜ್ಯವೆನಿಸಿ, ಮಹಾಪವಿತ್ರವೆಂದು ತಿಳಿಯಲಾಗುತ್ತದೆ ಈ ದೇಹವನ್ನು ಪವಿತ್ರಗೊಳಿಸಲಿಕ್ಕೆ ಇದಕ್ಕಿಂತ ಬೇರೆ ಉಪಾಯವೇ ಇಲ್ಲ ಶ್ರೀಪದ್ಮನಂದಿ ಆಚಾರ್ಯರು ದಿಗಂಬರ ಮುನಿಗಳು ಈ ವಿಷಯದಲ್ಲಿ ಹೀಗೆ ಹೇಳಿದ್ದಾರೆ—"ಸುವಾಸನದಿಂದ ಕೂಡಿದ ಹೂವಿನ ಹಾರ, ಚಂದನ ಮೊದಲಾದ ಪವಿತ್ರ ವಸ್ತುಗಳು ದೇಹದ ಸಾಂನಿಧ್ಯದಿಂದ ಮುಟ್ಟಬಾರದಂಥವುಗಳಾಗಿ ಹೋಗುತ್ತವೆ. ಅಲ್ಲದೆ ಶರೀರವು ಮಲ-ಮೂತ್ರ, ಉಗುಳು, ರಕ್ತ-ಮಾಂಸ, ಕೀವು, ಎಲುವು, ತೊಗಲುಗಳಿಂದ ನಿರ್ಮಾಣವಾಗಿದ್ದು, ತೀರ ದುರ್ಗಂಧವುಳ್ಳ ಅಶುದ್ಧ ವಸ್ತುಗಳು ಇರುವ ಸಂಕೇತಗೃಹವೇ ಎನಿಸಿದೆ " ಇಂಥ ಮಾನವ ದೇಹವು ನೀರಿನ ಸ್ನಾನದಿಂದ ಶುದ್ಧವಾಗದು. ಆತ್ಮವು ಸ್ವಾಭಾವಿಕವಾಗಿಯೇ ಅತ್ಯಂತ ಪವಿತ್ರವಾಗಿದೆ ಅಮೂರ್ತಿಕವಾಗಿದೆ. ಅದಕ್ಕೆ ನೀರು ಹತ್ತುವುದೇ ಇಲ್ಲ ಇಂಥ ಪವಿತ್ರವಿರುವ ಆತ್ಮಕ್ಕೆ ಸ್ನಾನದ ಅವಶ್ಯಕತೆಯಿಲ್ಲ ಶರೀರವು ತನ್ನ ಮೂಲ ಸ್ವಭಾವದಲ್ಲಿಯೇ ಅಶುದ್ಧವಾಗಿದೆ ಅದು ಸ್ನಾನದಿಂದ ಎಂದೂ ಶುದ್ಧವಾಗುವುದು ಸಾಧ್ಯವಿಲ್ಲ ಆದುದರಿಂದ ಎರಡೂ ಪ್ರಕಾರದಿಂದ ಸ್ನಾನವು ನಿರುಪಯೋಗಿಯೆಂದು ನಿಶ್ಚಿತವಾಗುತ್ತದೆ ಇಷ್ಟಾಗಿಯೂ ಯಾರಿಗೆ ಸ್ನಾನಮಾಡುವ ಹಟವೇ ಇದೆಯೋ ಅವರಿಗೆ ಪೃಥ್ವೀಕಾಯ, ಜಲಕಾಯಾದಿ ತ್ರಸ ಜೀವಗಳ ಘಾತವಾಗುವುದರಿಂದ ಪಾಪವು ಕಟ್ಟುತ್ತದೆ ಅಂಥ ವ್ಯಕ್ತಿಯ ರಾಗಾದಿ ಭಾವಗಳು ಬೆಳೆಯುತ್ತವೆ ಗೃಹಸ್ಥರಿಗೆ ಸ್ನಾನಮಾಡದೆ ನಡೆಯುವದಿಲ್ಲ. ಇದೂ ನಿಜವಿದೆ. ಆದರೆ ಅಜ್ಞಾನೀ ಮನುಷ್ಯನು ಸ್ನಾನದಲ್ಲಿ ಧರ್ಮವಿದೆಯೆಂದು ಭಾವಿಸುತ್ತಾನೆ. ಅದರಿಂದ ಪವಿತ್ರತೆಯು ಉಂಟಾಗುತ್ತದೆಂದು ತಿಳಿಯುತ್ತಾನೆ ಈ ಮಿಥ್ಯಾಬುದ್ಧಿಯನ್ನು ಅವನು ಬಿಡಬೇಕು ಇದನ್ನಷ್ಟು ಅವನು ತಿಳಿದುಕೊಂಡರೂ ಸಹ ಸ್ನಾನದಲ್ಲಿ ಧರ್ಮವಿಲ್ಲ, ಅದರಿಂದ ದೇಹವು ಪವಿತ್ರವಾಗುವದಿಲ್ಲ ಎಂಬುದಾದರೂ ಗೊತ್ತಾದೀತು. ಹೀಗಿದ್ದರೂ ಸ್ನಾನವಿಲ್ಲದ ಗೃಹಸ್ಥನ ಎಲ್ಲ ವ್ಯವಹಾರಗಳೂ ದೂಷಣೆಗೆ ಪಾತ್ರವಾಗುತ್ತವೆ. ಅದರಿಂದ ಅವನಿಗೆ ಪರಮಾರ್ಥದ ಶುದ್ಧತೆಯನ್ನು ಮಾಡಿಕೊಳ್ಳಲಿಕ್ಕೆ ಬರುವದಿಲ್ಲ ಅಂದರೂ ಸ್ನಾನದಿಂದ ಶರೀರದ ಮೇಲಿನ ಪ್ರೀತಿಯು ಹೆಚ್ಚುತ್ತದೆ; ಅದರಿಂದ ಹಿಂಸೆಯಾಗುತ್ತದೆ, ಇವೇ ಮೊದಲಾದ ವಿಚಾರಗಳು ಗೊತ್ತಾಗುವುದರಿಂದ ಅವನು ಉಪಯೋಗವಿಲ್ಲದೆ, ವಿನಾಕಾರಣ ವ್ಯರ್ಥ ನೀರನ್ನಾದರೂ ಉಪಯೋಗಮಾಡದೆ ಇರುತ್ತಾನೆ

ಸ್ವಪರ ಭೇದರೂಪ ವಿವೇಕವೇ ನಿಜವಾದ ಸ್ನಾನವು. ಜೀವಕ್ಕೆ ಭವಗಳು ಅಸಂಖ್ಯ ಇಂಥ ಕೋಟಿ ಭವಗಳಲ್ಲಿ ಸಂಚಯಮಾಡಿದ ಪಾಪವೆಂಬ ಹೊಲಸಿನಿಂದ ಮನಸ್ಸಿನಲ್ಲಿ ಮಿಥ್ಯಾತ್ವವು ಉತ್ಪನ್ನವಾಗುತ್ತದೆ ಈ ಮಿಥ್ಯಾತ್ವವು ತಾನಾವುದು, ಪರ ಯಾವುದು ಎಂಬುದರ ಯಥಾರ್ಥ ಜ್ಞಾನದಿಂದ ನಷ್ಟವಾಗುತ್ತದೆ. ಇಂಥ ಸ್ವಪರ ವಿವೇಕವೇ ಸತ್ಪುರುಷರ ನಿಜವಾದ ಸ್ನಾನವಾಗಿದೆ ಇದನ್ನುಳಿದು ಬೇರೆ ನೀರು ಮೊದಲಾದವುಗಳಿಂದ ಮಾಡುವ ಸ್ನಾನವು ಜೀವಗಳ ಘಾತವನ್ನು ಮಾಡುವಂಥದ್ದು ಅರ್ಥಾತ್ ಪಾಪವನ್ನು ಉತ್ಪನ್ನಮಾಡುವಂಥದ್ದಾಗಿದೆ. ಅದಕ್ಕಂತಲೇ ಈ ಸ್ನಾನದಿಂದ ಧರ್ಮವು ಸಂಭವಿಸುವದಿಲ್ಲ ಇದೇ ಕಾರಣಕ್ಕಾಗಿ ಸ್ವಭಾವತಃ ಅಶುದ್ಧವಾಗಿರುವ ಶರೀರವು ಸ್ನಾನದಿಂದ ಎಂದೂ ಪವಿತ್ರವಾಗುವದಿಲ್ಲ ಭವ್ಯ ಜೀವಿಗಳು ತಮ್ಮ ಸ್ವಂತದ ಶುದ್ಧಿಯಾಗಲಿಕ್ಕೆಂದು ಪರಮಾತ್ಮ ತೀರ್ಥದಲ್ಲಿ ಯಾವಾಗಲೂ ಮುಳುಗಿರಬೇಕು ದುಃಖದಿಂದ ವ್ಯಾಕುಲಗೊಂಡು ಗಂಗಾ–ಯಮುನಾ ನದಿಗಳ ಕಡೆಗೆ ಓಡಕೂಡದು ಈ ಪರಮಾತ್ಮ ತೀರ್ಥದಲ್ಲಿ ಸಮ್ಯಗ್‌ಜ್ಞಾನವೆಂಬುದು ನಿರ್ಮಲ ಜಲವಾಗಿದೆ ಹೊಳೆಯುವ ಸಮ್ಯಗ್ದ-ರ್ಶನವೇ ಇದರಲ್ಲಿಯ ತೆರೆಗಳು ಇದರಲ್ಲಿಯ ನೀರು ಎಂದೂ ನಾಶವಾಗದ ಅಳತೆಯಿಲ್ಲದ ಸುಖದಿಂದ ತಂಪು ಆಗಿರುತ್ತದೆ ಅದಕ್ಕಾಗಿ ಎಲ್ಲ ಪಾಪಗಳನ್ನು ನಾಶಗೊಳಿಸುವ ಪರಮಾತ್ಮ ತೀರ್ಥದಲ್ಲಿ ಹಾರಿಕೆಯನ್ನು ಹೊಡೆಯಬೇಕು ಜಗತ್ತಿನೊಳಗಿನ ಪಾಪಿ ಜನರು ನಿರ್ಮಲ ತತ್ತ್ವದಿಂದ ಕೂಡಿದ ನಿಶ್ಚಯರೂಪದ ಕೆರೆಯನ್ನು (ಧ್ರಹ) ಕಂಡಿಲ್ಲ, ಜ್ಞಾನರೂಪೀ ರತ್ನದಿಂದ ತುಂಬಿದ ಸಮುದ್ರವನ್ನೂ ನೋಡಿಲ್ಲ, ಸಮತೆಯೆಂಬ ಹೆಸರಿನ ನದಿಯೂ ಅವರಿಗೆ ದೊರೆತಿಲ್ಲ. ಅಂತಲೇ ಆ ಜನರು ಪಾಪವನ್ನು ನಾಶಗೊಳಿಸುವ ನಿಜವಾದ ತೀರ್ಥವನ್ನು ಬಿಟ್ಟು, ಲೌಕಿಕ ತೀರ್ಥಗಳಾದ ಗಂಗಾ ಮೊದಲಾದ ನದಿಗಳಲ್ಲಿ ಸ್ನಾನಮಾಡಿ, ಆನಂದವನ್ನು ಹೊಂದುತ್ತಾರೆ ಲೌಕಿಕ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಸಂಸಾರದೊಳಗಿಂದ ಪಾರಾಗಲಿಕ್ಕೆ ಬರುವದಿಲ್ಲ. ಒಟ್ಟಿನ ಮೇಲೆ ಯಾವ ಮೂರ್ಖರಿಗೆ ತತ್ತ್ವನಿಶ್ಚಯರೂಪದ ಕೆರೆಯೂ, ಜ್ಞಾನರೂಪದ ಸಮುದ್ರವೂ, ಸಮತಾರೂಪದ ನದಿಯೂ ನೋಡಲಿಕ್ಕೆ ಸಿಕ್ಕಿಲ್ಲವೋ ಅವರು ಗಂಗಾ-ಯಮುನಾದಿ ತೀರ್ಥಗಳಂತೆ ತೋರುವ ಸ್ಥಳಗಳಿಗೆ ಹೋಗಲಿಕ್ಕೆ ಒದ್ದಾಡುತ್ತ ಇರುತ್ತಾರೆ ಅವರೇ

ಒಂದುವೇಳೆ ತತ್ತ್ವನಿಶ್ಚಯ, ಜ್ಞಾನ, ಸಮತೆಗಳನ್ನು ಕಂಡದ್ದಾದರೆ ಅವರಲ್ಲಿಯೇ ಮುಳುಗಿಹೋಗಿ, ಮಿಥ್ಯಾತ್ವ ಕಷಾಯರೂಪದ ಮಲವನ್ನು ನಾಶಗೊಳಿಸಿ, ಸ್ವತಃ ನಿರ್ಮಲರಾಗುತ್ತಾರೆ ಅಶುದ್ಧವಾದ ಮಾನವನ ಶರೀರವು ಸಾಕ್ಷಾತ್ ಶುದ್ಧವಾಗುವಂಥ ಯಾವ ತೀರ್ಥವಾಗಲಿ, ಜಲವಾಗಲಿ, ದ್ರವ್ಯವಾಗಲಿ ಮೂರುಲೋಕದಲ್ಲಿಯೇ ಇಲ್ಲ. ಈ ಶರೀರವು ಬೇನೆ ಬೇಸರಿಕೆ, ಮುಪ್ಪು ಮರಣಗಳಿಂದ ವ್ಯಾಪಿಸಿದುದು. ಯಾವಾಗಲೂ ಸಂತಾಪವನ್ನು ಹುಟ್ಟಿಸು-ವಂಥದು. ಸತ್ಪುರುಷರಿಗೆ ಇದರ ಸಂಸರ್ಗವು ಸಹನವಾಗುವದಿಲ್ಲ. ಎಲ್ಲ ತೀರ್ಥ ಜಲಗಳಿಂದ ನಿತ್ಯವೂ ಇದಕ್ಕೆ ಸ್ನಾನಹಾಕಿ, ಚಂದನ ಕರ್ಪೂರಾದಿ ಸುಗಂಧ ದ್ರವ್ಯಗಳಲ್ಲಿ ಮುಳುಗಿಸಿ ಇಟ್ಟರೂ ಈ ಶರೀರವು ಶುದ್ಧವಾಗುವದಿಲ್ಲ. ಇದಕ್ಕೆ ಸುಗಂಧ ಉಂಟಾಗುವದಿಲ್ಲ. ಇದನ್ನು ಜೋಕೆ ಮಾಡುತ್ತಿರುವಾಗಲೇ ನಷ್ಟವಾಗಿ ಹೋಗುತ್ತದೆ. ನದಿಯಲ್ಲಿ ಸ್ನಾನಮಾಡುವುದರಿಂದ ಶುದ್ಧವಾಗುವದೆಂದರೆ ಯಾವಾಗಲೂ ನೀರಿನಲ್ಲಿಯೇ ಇರುವ ಕೋಟ್ಯವಧಿ ಮೀನು, ಮೊಸಳೆ ಮೊದಲಾದ ಪ್ರಾಣಿಗಳೂ, ಬಲೆಗಾರರೇ ಮೊದಲಾದವರೂ ಶುದ್ಧವಾದುದು ಕಂಡುಬರುವದಿಲ್ಲ. ಆದರಿಂದ ಈ ಲೋಕ ಮೂಢತೆಯನ್ನು ಬಿಡುವುದೇ ಯೋಗ್ಯವಾಗಿದೆ [1]

ಗೃಹಸ್ಥ ಧರ್ಮದಲ್ಲಿ ಶುದ್ಧಿಯು ಅವಶ್ಯವಾಗಿದೆ. ಸ್ನಾನಮಾಡುವದರಿಂದ ಪವಿತ್ರತೆ ಉಂಟಾಗು-ವದಿಲ್ಲ; ಸ್ನಾನದಿಂದ ಧರ್ಮವೂ ಸಂಭವಿಸುವದಿಲ್ಲ—ಎಂದು ಮೊದಲಾಗಿ ಮೇಲೆ ಹೇಳಿತು. ಆದರೆ ಗೃಹಸ್ಥಾಶ್ರಮದಲ್ಲಿ ಮುನಿಗಳಂತೆ ಸ್ನಾನಮಾಡುವದನ್ನು ಬಿಡುವುದು ಯೋಗ್ಯವಲ್ಲ. ಯಾಕೆಂದರೆ ಪಾಪೀ ಜೀವಿಗಳನ್ನು ನಾವು ಮುಟ್ಟಿ, ಸ್ನಾನಮಾಡದೆ ಇದ್ದರೆ ನಮ್ಮ ಮನಸ್ಸಿನ ಗ್ಲಾನಿಯು ಇಲ್ಲದಂತೆ ಆಗುವದಿಲ್ಲ. ಆ ಜನರ ಕೂಡ ಊಟ ಉಡಿಗೆಗಳ ವ್ಯವಹಾರವನ್ನು ಸರಾಗವಾಗಿ ಮಾಡತೊಡಗಿದರೆ ವ್ಯವಹಾರಧರ್ಮವು ನಷ್ಟವಾಗುತ್ತದೆ. ಜೈನರ ಆಚಾರವು ವ್ಯವಹಾರವನ್ನು ಬಿಟ್ಟು ಇರುವದಿಲ್ಲ. ಯಾವಾಗಲೂ ಹಿಂಸಾದಿ ಪಾಪಕೃತ್ಯಗಳನ್ನೇ ಮಾಡಿ, ಅದರಿಂದ ಬದುಕುವ ಚಾಂಡಾಲ, ಕಟುಕರು, ಹೊಲೆಯರು, ಕೊಲೆಗಡುಕರು, ಭಿಲ್ಲರು, ಬೇಡರು, ಮ್ಲೇಚ್ಛರು ಇವರ ನೆರಳು ಬಿದ್ದರೂ ಕೂಡ ಮಲಿನತೆಯನ್ನು ಮನ್ನಿಸುತ್ತೇವೆ. ಅಂದ ಮೇಲೆ ಇವರ ಸ್ಪರ್ಶವಾದ ಮೇಲೆ ಸ್ನಾನವನ್ನೇಕೆ ಮಾಡಬಾರದು? ಅವಶ್ಯವಾಗಿ ಸ್ನಾನಮಾಡಿ, ಪರಮಾತ್ಮನ ಧ್ಯಾನವನ್ನೂ ಕೂಡ ಮಾಡಲಿಕ್ಕ ಬೇಕು ಅವರ ಸಹವಾಸದಿಂದ ನಮ್ಮ ಬುದ್ಧಿಯು ಮಲಿನವಾಗುತ್ತದೆ. ಯಾವ ಜನರು ವೇಶ್ಯೆಯ ಮುಖದ ಚುಂಬನದಲ್ಲಿ ಸುಖವಿದೆಯೆಂದು ಭಾವಿಸುವರೋ ಅವರ ಬುದ್ಧಿಯು ಸತ್ಕರ್ಮದಿಂದ ಪರಾವೃತ್ತವಾಗಿದೆಯೆಂದು ತಿಳಿಯಬೇಕು. ಜೀವವಧೆಯನ್ನು ಮಾಡುವಂಥ ಪ್ರಾಣಿಗಳು ನಾಯಿ, ಬೆಕ್ಕು, ಕಾಗೆ ಇತ್ಯಾದಿ. ಇವು ಊಟಮಾಡುವ ಸ್ಥಳಕ್ಕೆ ಹೋಗಿ ಅನ್ನಕ್ಕೆ ಸ್ಪರ್ಶಮಾಡಿದ್ದಾದರೆ ಆ ಪದಾರ್ಥಗಳನ್ನು ತಿನ್ನುವದನ್ನೇ ಬಿಡುವುದು ಯೋಗ್ಯವಾಗಿದೆ. ಇಂಥ ಪ್ರಾಣಿಗಳು ನಮ್ಮನ್ನು ಮುಟ್ಟಿದಾಗ ಸ್ನಾನಮಾಡದೆ ಊಟ, ಸ್ವಾಧ್ಯಾಯಗಳನ್ನು ಮಾಡಿದರೆ ಹೀನಾಚಾರವೆನಿಸುತ್ತದೆ. ಪಾಪದ ಗ್ಲಾನಿಯು ನಷ್ಟವಾಗುವದಿಲ್ಲ. ಕುಲಾಚಾರದಲ್ಲಿ ಭೇದವು ಉಳಿಯುವದಿಲ್ಲ. ಸ್ತ್ರೀಯರ ಸಂಭೋಗವನ್ನು ಮಾಡಿದಾಗ ಅನೇಕ ಜೀವಿಗಳ ಹಿಂಸೆಯಾಗುತ್ತದೆ. ಅಶುದ್ಧವಾದ ಅವಯವಗಳ ಸಂಘರ್ಷದಿಂದ, ರಕ್ತವೀರ್ಯಾದಿಗಳ ಬಾಹ್ಯ ಸ್ಪರ್ಶದಿಂದ, ತೀವ್ರವಾದ ರಾಗಭಾವವು ಉತ್ಪನ್ನವಾಗುವುದರಿಂದ ಆತ್ಮನ ಪರಿಣಾಮವು ಮಲಿನವಾಗುತ್ತದೆ ಇದನ್ನು ಸಂಪೂರ್ಣವಾಗಿ ತ್ಯಾಗಮಾಡಿದರಂತೂ ಉತ್ತಮವೇ ಇದೆ. ಆದರೆ ಹಾಗೆ ಮಾಡಲಿಕ್ಕೆ ಆಗದಿದ್ದರೆ ಆ ಪಾಪ ಕಾರ್ಯದ ವಿಷಯಕ್ಕೆ ಮನಸ್ಸಿನಲ್ಲಿ ನೋವನ್ನಾದರೂ ತಾಳಬೇಕು. ನಾವು ಅಶುದ್ಧವಾಗಿದ್ದೇವೆ, ನಿಂದ್ಯವಾದ ಕಾರ್ಯಮಾಡಿದ್ದೇವೆ—ಎಂದರಿತು ಸ್ನಾನವನ್ನಾದರೂ ಮಾಡಬೇಕು. ಹೊರಗಿನ ಶುದ್ಧಿಗಾಗಿ ಸ್ನಾನವು ಅವಶ್ಯವಾಗಿದೆ ಅದನ್ನು ಮಾಡದ ಹೊರತಾಗಿ ಗ್ರಂಥಾದಿಗಳನ್ನೂ ಮಂದಿರದೊಳಗಿನ ಉಪಕರಣಗಳನ್ನೂ ಮುಟ್ಟಕೂಡದು.

ಇನ್ನು ಶರೀರದಲ್ಲಿ ರಕ್ತ–ಮಾಂಸ–ಎಲುವು–ತೊಗಲು–ಕೂದಲು–ಮಲ–ಮೂತ್ರ ಮೊದಲಾದವುಗಳು ತುಂಬಿವೆ ಆದರೆ ಹೊರಗೆ ಇವೇ ವಸ್ತುಗಳು ನಮ್ಮ ಶರೀರಕ್ಕೆ ಸ್ಪರ್ಶವಾದಾಗ ತೊಳೆಯಲಿಕ್ಕೇ ಬೇಕಲ್ಲವೆ? ತೊಳೆದುಕೊಂಡು ಆ ಮಲಗಳನ್ನು ಕಳೆದುಕೊಳ್ಳುವುದೇ ಯೋಗ್ಯವಾಗಿದೆ. ಕೂದಲುಗಳು ಶರೀರದಿಂದ ದೂರವಾಗಲು ಅವು ಸ್ಪರ್ಶಮಾಡಲಿಕ್ಕೆ ಯೋಗ್ಯವಾಗಿ ಉಳಿಯುವದಿಲ್ಲ ಅವು ನಮ್ಮ ಕೈಗಳಿಗೆ ಸೋಕಿದರೂ ಕೂಡ

[1] ಈ ವರ್ಣನೆಯು ಮನೆಯನ್ನು ಬಿಟ್ಟ ಮಹಾವ್ರತಿಕರಾದ ಮುನಿಗಳ ಅಪೇಕ್ಷೆಯಿಂದ ಶರೀರದ ಮೇಲಿನ ಆಸಕ್ತಿಯು ಕಡಿಮೆಯಾಗುವ ದೃಷ್ಟಿಯಿಂದ ಮಾಡಲಾಗಿದೆ.

ಕೂಡಲೆ ಕೈಗಳನ್ನು ತೊಳೆದುಕೊಳ್ಳಲಿಕ್ಕೆಬೇಕು ಇಂಥ ಅಶುದ್ಧ ವಸ್ತುವಿನ ಗ್ಲಾನಿಯನ್ನು ನಾವು ಸ್ವೀಕರಿಸದಿದ್ದರೆ ನೀಚರಾದ ಚಾಂಡಾಲ, ಕಟುಕ ಮೊದಲಾದವರಲ್ಲಿಯೂ ನಮ್ಮಲ್ಲಿಯೂ ಭೇದವೇನು ಉಳಿದಂತಾಯಿತು? ಅವರ ಹಾಗೂ ನಮ್ಮ ಆಚರಣೆಯಲ್ಲಿ ಭೇದವು ಉಳಿಯದಿದ್ದರೆ ಎಲ್ಲ ಜಾತಿಯ ವ್ಯವಹಾರಗಳು ಇಲ್ಲದಂತಾಗಿ, ಉತ್ತಮ ಕುಲ ಮತ್ತು ನೀಚಕುಲ ಇವೆರಡರ ಆಚಾರವೂ ಸಮಾನವೆಂದು ತಿಳಿಯಲ್ಪಡಬಹುದು ವ್ಯಾವಹಾರಿಕ ಆಚಾರಗಳು ಕೆಡುವುದರಿಂದ ಧರ್ಮ ಮಾರ್ಗವೂ ಭ್ರಷ್ಟವಾಗಿ ಹೋದೀತು ನಿಂದ್ಯಕರ್ಮವನ್ನು ಮಾಡುವದಕ್ಕೆ ನಾಚಿಕೆ ಪಡದೆ ಹೋದಾಗ ಕುಲ ಪರಂಪರೆಯೂ ಕೆಟ್ಟು ಹೋದೀತು ಪಾಪದ ಬಂಧವಾದೀತು. ಪರಮಾರ್ಥದ ಪಾವಿತ್ರ್ಯವು ವ್ಯಾವಹಾರಿಕ ಪಾವಿತ್ರ್ಯ ಮತ್ತು ಶುದ್ಧತೆ ಇದ್ದರೇನೇ ಸಿದ್ಧಿಸುವುದು ಯಾರ ಊಟ, ತಿನಿಸು, ಕುಡಿಯುವುದು, ಮುಟ್ಟುವುದು, ಸಂಗತಿ ಮೊದಲಾದವುಗಳ ಪ್ರವೃತ್ತಿಯಲ್ಲಿ ಮಲಿನತೆಯು ಇದ್ದರೆ ಅವರ ಧರ್ಮವೂ ಕೂಡ ಮಲಿನವಾಗುವುದು ಜೈನರು ಚಾಂಡಾಲ, ಭಿಲ್ಲ, ಮ್ಲೇಚ್ಛ ಮೊದಲಾದ ಜನರ ಶರೀರದ ನೆರಳೂ ಕೂಡ ಅಪವಿತ್ರವೆಂದು ಭಾವಿಸುತ್ತಾರೆ ಇನ್ನು ಅಗಸ, ಕಟುಕ, ಕುಂಬಾರ ಮೊದಲಾದ ಜನರು ಹಿಂಸೆಯನ್ನು ಮಾಡುವಂಥವರಾಗಿದ್ದಾರೆ ಅಂತಲೇ ಇಂಥವರ ಸ್ಪರ್ಶವನ್ನು ಮಾಡುವದಿಲ್ಲ ಮುನಿ ಶ್ರೇಷ್ಠರಿಗೆ ನೀಚ ಜಾತಿಯವರ ಸ್ಪರ್ಶವಾದರೆ ಅವರು ದಂಡಸ್ನಾನ ಮಾಡುವರು ಅಲ್ಲದೆ ಆ ದಿವಸ ಉಪವಾಸವನ್ನೂ ಮಾಡುವರು ತಿಳಿಯದೆ ಮುನಿಗಳು ಒಮ್ಮೊಮ್ಮೆ ನೀಚಕುಲದ ಮನುಷ್ಯರ ಮನೆಯಲ್ಲಿ ಪ್ರವೇಶಮಾಡಿದರೆ ಆ ದಿವಸ ತಮ್ಮ ಭೋಜನದ ಅಂತರಾಯವಾಯಿತೆಂದು ತಿಳಿಯುವರು. ಇದೇ ಪ್ರಕಾರ ಮದ್ಯ, ಮಾಂಸ, ಶರೀರಕ್ಕೆ ಘಾಯವಾಗಿ ರಕ್ತ ಹರಿಯುವುದು, ಊಟಮಾಡುವಾಗ ಹೆಣವನ್ನು ನೋಡಿದರೂ ಮುನಿಗಳು ಅಂತರಾಯವಾಯಿತೆಂದು ತಿಳಿದು ಊಟವನ್ನು ಬಿಡುವರು. ಜೈನ ಶ್ರಾವಕರು ಎಲುವು, ತೊಗಲು, ಕೂದಲು, ಉಣ್ಣೆ, ಕವಡಿ ಇವುಗಳ ಸ್ಪರ್ಶವಾದಾಗ ಊಟವನ್ನು ಬಿಡಬೇಕು ಅವರು ಊಟಕ್ಕೆ ಕೂಡುವ ಪೂರ್ವದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು, ಶುದ್ಧ ಭೂಮಿಯ ಮೇಲೆ ಶುದ್ಧವಾದ ಊಟವನ್ನು ಮಾಡುವುದೇ ಯೋಗ್ಯವಾಗಿದೆ ಸಾರಾಂಶವೇನೆಂದರೆ ನೀಚರು ಮುಟ್ಟಿದಂಥ ಅನ್ನವನ್ನು ಊಟ ಮಾಡಕೂಡದು

**ದೇವಪೂಜೆಯೇ ಮೊದಲಾದವುಗಳಿಗಾಗಿ ಸ್ನಾನವು ಅವಶ್ಯವಿದೆ**—ಜಿನೇಶ್ವರನ ಪೂಜೆಯನ್ನು ಮಾಡುವ ಪೂರ್ವದಲ್ಲಿ ಸ್ನಾನವನ್ನು ಮಾಡುವುದು ಯೋಗ್ಯವಾಗಿದೆ ಯಾಕೆಂದರೆ ಸ್ನಾನವನ್ನು ಮಾಡಿಯೇ ದೇವರನ್ನು ಮುಟ್ಟಬೇಕು ಹಾಗೂ ಪೂಜೆಯನ್ನು ಮಾಡಬೇಕು-ಎಂಬ ನಿಯಮವಿದೆ ಸ್ನಾನದಿಂದ ಶುದ್ಧತೆ ಆಗದಿದ್ದರೂ ಸಹ ಜಳಕಮಾಡಿಯೇ ದೇವರ ಉಪಕರಣಗಳನ್ನು ಮುಟ್ಟಬೇಕು ಮಡಿಯಿಂದ ದ್ರವ್ಯಗಳನ್ನು ಏರಿಸುವುದು—ಇವುಗಳಿಗೆ ದೇವವಿನಯವೆಂದು ಹೇಳಿದೆ ವಿನಯವೂ ಆರಾಧನೆಯಾಗಿದೆ ಜಿನಮಂದಿರದೊಳಗಿನ ಉಪಕರಣಗಳ ವಿಷಯದಲ್ಲಿ ನಾವು ಈ ವಿನಯವನ್ನು ವ್ಯಕ್ತಪಡಿಸುತ್ತೇವೆ ಅಂದಮೇಲೆ ಜಿನವಾಣಿಯ ಪೂಜೆಯನ್ನು ಯಾವ ಪದಾರ್ಥಗಳಿಂದ ಮಾಡುವದಿರುತ್ತದೆಯೋ ಆ ದ್ರವ್ಯಗಳನ್ನು ಸ್ನಾನಮಾಡಿ, ಕೈಗಳನ್ನು ತೊಳೆದುಕೊಂಡು ಹಿಡಿಯುವುದೂ ಒಂದು ವಿನಯವಾಗಿದೆ ಅದರಂತೆ ಕೈಕಾಲುಗಳನ್ನು ತೊಳೆದುಕೊಂಡು, ಜಿನಮಂದಿರದಲ್ಲಿ ಪ್ರವೇಶಿಸುವುದೂ ಈ ವಿನಯ-ಗಳಲ್ಲಿಯೇ ಸಮಾವೇಶವಾಗುತ್ತದೆ. ಪಾಪ ಮಲದ ಶುದ್ಧಿಯಾಗಬೇಕೆಂದು ಭಗವಂತನು ಶಾಸ್ತ್ರದಲ್ಲಿ ಎಂಟು ಪ್ರಕಾರದ ಲೌಕಿಕ ಶುದ್ಧಿಗಳನ್ನು ವರ್ಣಿಸಿದ್ದಾನೆ ಅವುಗಳನ್ನು ಆಚರಿಸದಿದ್ದರೆ ಮನುಷ್ಯ ಪ್ರಾಣಿಯು ಪರಮಾರ್ಥ ಧರ್ಮದಿಂದ ಚ್ಯುತನಾಗುತ್ತಾನೆ ಮುನಿಶ್ರೇಷ್ಠರ ದೇಹವು ರತ್ನತ್ರಯಗಳ ಪ್ರಭಾವದಿಂದ ಪವಿತ್ರವಾಗಿರುತ್ತದೆ ಆದರೂ ಬಾಹ್ಯ ಶುದ್ಧಿಗಾಗಿ ಅವರು ಹತ್ತಿರ ಕಮಂಡಲನ್ನು ಇಟ್ಟುಕೊಳ್ಳಬೇಕಾಗುತ್ತದೆ ಕೈಕಾಲುಗಳನ್ನು ತೊಳೆದುಕೊಂಡು ಅವರು ಸ್ವಾಧ್ಯಾಯವನ್ನು ಮಾಡುತ್ತಾರೆ ತೀರ ಸ್ವಲ್ಪ ನೀರನ್ನು ಉಪಯೋಗಿಸಿ, ತಮ್ಮ ಪಾದಗಳನ್ನು ತೊಳೆಯಿಸಿ-ಕೊಂಡು, ಊಟಮಾಡುತ್ತಾರೆ ಅವರು ವ್ಯಾವಹಾರಿಕ ಆಚರಣೆಯನ್ನು ಬಿಡುವದಿಲ್ಲ ಭಗವಂತನು ಉಪದೇಶಿಸಿದ ಈ ಜೈನ ಧರ್ಮವು ಅನೇಕಾಂತ ಸ್ವರೂಪದಲ್ಲಿದ್ದು, ಇದರಲ್ಲಿ ನಿಶ್ಚಯ ಹಾಗೂ ವ್ಯವಹಾರಗಳೆರಡಕ್ಕೂ ಬಾಧೆ ಬರದಂತೆ ಇರುತ್ತದೆ ಜಿನಧರ್ಮವು ಎಲ್ಲೆಲ್ಲಿಯೂ ಏಕಾಂತ ಸ್ವರೂಪದಲ್ಲಿ ಇಲ್ಲ ಲೌಕಿಕ ಶುದ್ಧತೆಯನ್ನು ಪಾಲಿಸದಿದ್ದರೆ ಅದರಿಂದ ಧರ್ಮದ ನಿಂದೆಯಾಗುತ್ತದೆ ಕುಲದ ನಿಂದೆಯೂ ಆಗುತ್ತದೆ ಅದರಿಂದ ನಮ್ಮ ಆತ್ಮಕ್ಕೆ ವಿಕಾರದ ಮಲಿನತ್ವವು ಉಂಟಾಗುತ್ತದೆ. ಮೈಥುನವನ್ನು ಮಾಡಿದವರೂ, ಹೆಣವನ್ನು ಸುಟ್ಟು ಬಂದವರೂ, ಕಪ್ಪ (ಕ್ಷೌರ) ಮಾಡಿಸಿಕೊಂಡವರೂ ಅವಶ್ಯವಾಗಿ ಸ್ನಾನವನ್ನು ಮಾಡಲೇಬೇಕು ಇದರಂತೆಯೇ ಚಾಂಡಾಲ, ಮ್ಲೇಚ್ಛರನ್ನು ಮುಟ್ಟಿದಾಗ, ಸತ್ತ

ವಂಚೇಂದ್ರಿಯ ಪ್ರಾಣಿಗಳನ್ನು ಹಿಡಿದಾಗ, ಕಡೆಗಾದ ಸ್ತ್ರೀಯರ ಸ್ಪರ್ಶವಾದಾಗ ಇನ್ನೂ ಅನೇಕ ಅಶುದ್ಧ ಪದಾರ್ಥಗಳ ಸಂಪರ್ಕ ಉಂಟಾದಾಗ ಸ್ನಾನದ ಅವಶ್ಯಕತೆಯು ಇದೆ. ಎಲುವು, ಮಾಂಸ, ರಕ್ತಗಳು ಯಾವ ಅವಯವಗಳಿಗೆ ಸ್ಪರ್ಶವಾಗಿರುವವೋ ಅವುಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳಬೇಕು. ಈ ಎಂಟು ಪ್ರಕಾರದ ಲೌಕಿಕ ಶುದ್ಧಿಗಳು ಅನಾದಿ ಕಾಲದಿಂದಲೂ ನಡೆಯುತ್ತ ಬಂದಿವೆ ಅದರಿಂದ ಶಾಸ್ತ್ರದ ಆಜ್ಞೆ ಎಂದು ತಿಳಿದು, ಆ ಪ್ರಕಾರ ನಡೆಯು-ವುದರಲ್ಲಿಯೇ ನಮ್ಮ ಹಿತವಿದೆ.

ದೇಹದ ಮಲಗಳು ಒಂದಕ್ಕಿಂತ ಒಂದು ಅಶುದ್ಧ ಹೆಚ್ಚಾಗಿವೆ. ಕಿವಿಯೊಳಗಿನ ಹೊಲಸಿಗಿಂತ ಕಣ್ಣಿನೊಳಗಿನ ಹೊಲಸು ಹೆಚ್ಚು ಅಶುದ್ಧವಾಗಿದೆ ಇದರಂತೆಯೇ ಮೂಗು, ಮುಖಗಳಲ್ಲಿಯ ಹೊಲಸು ಇನ್ನೂ ಅಶುದ್ಧವಾಗಿದೆ. ಇವುಗಳಿಗಿಂತಲೂ ಮೂತ್ರ, ಮಲಗಳು ಬಹಳ ಅಶುದ್ಧವೆಂದು ಜಗತ್ತಿನಲ್ಲಿ ತಿಳಿಯಲಾಗುತ್ತದೆ. ಈ ಎಲ್ಲ ಹೊಲಸುಗಳನ್ನು ಹೊಲಸಿನ ದೃಷ್ಟಿಯಿಂದ ಸಮಾನವೆಂದು ತಿಳಿಯಕೂಡದು ದ್ರವ್ಯಾರ್ಥಿಕ ನಯದಿಂದ ಎಲ್ಲ ಪುದ್ಗಲಗಳೂ ಒಂದೇ ಜಾತಿಯಲ್ಲಿ ಸಮಾವೇಶವಾಗುತ್ತವೆ ಆದರೂ ಅದರಲ್ಲಿ ಭೇದಗಳು ಇವೆ ಎಲುವು, ಮಾಂಸ, ರಕ್ತ, ಮಲ, ಮೂತ್ರಾದಿಗಳ ಕೊನೆಯ ಪರಿಣಾಮವು ಪೃಥ್ವೀರೂಪ ಇಲ್ಲವೆ ಜಲರೂಪವಾಗುತ್ತದೆ ಅದರಂತೆ ಪೃಥ್ವೀಜಲಾದಿಗಳಿಂದಲೇ ರಕ್ತ, ಮಾಂಸಗಳೂ ನಿರ್ಮಾಣವಾಗುತ್ತವೆ ಆದರೆ ಇವುಗಳ ರೂಪಗಳಲ್ಲಿ-ಪರ್ಯಾಯ-ಬಹಳ ಅಂತರವಿದೆ. ದ್ರವ್ಯ ಹಾಗೂ ಪರ್ಯಾಯಗಳನ್ನು ಒಂದೇ ಎಂದು ತಿಳಿಯುವುದರಿಂದ ವ್ಯವಹಾರ ಮತ್ತು ಪರಮಾರ್ಥಗಳೆರಡೂ ಲೋಪಹೊಂದುತ್ತವೆ ಅದಕ್ಕಾಗಿ ದ್ರವ್ಯಕ್ಕೂ ಪರ್ಯಾಯಕ್ಕೂ ಕೆಲವು ನಲ ಏಕತ್ವವನ್ನು ಇನ್ನು ಕೆಲವುಗಳಲ್ಲಿ ಅನೇಕತ್ವವನ್ನೂ ಸ್ವೀಕರಿಸುವುದು ಯೋಗ್ಯವಾಗಿದೆ.

ಉಸುಬಿನ ರಾಶಿಯನ್ನು ಮಾಡುವುದಕ್ಕೂ ಪರ್ವತದ ಮೇಲಿಂದ ಬೀಳುವುದಕ್ಕೂ, ಸತಿ ಹೋಗುವುದಕ್ಕೂ ಪಂಚಾಗ್ನಿತಪಶ್ಚರಣಕ್ಕೂ ಧರ್ಮವೆಂದು ತಿಳಿಯುವುದು ಲೋಕಮೂಢತೆ ಎನಿಸುವುದು ಇದೇ ಪ್ರಕಾರ ಇನ್ನೂ ಅನೇಕ ಲೋಕಮೂಢತೆಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ ಗ್ರಹಣವೊಂದು ಸೂತಕವೆಂದು ತಿಳಿದು, ಸ್ನಾನ ಮೊದಲಾದವುಗಳನ್ನು ಮಾಡಿ, ಚಾಂಡಾಲರಿಗೆ ದಾನಕೊಡುವುದು, ಸಂಕ್ರಮಣದಲ್ಲಿ ದಾನಮಾಡುವುದು; ಬಾವಿಯ ಪೂಜೆಮಾಡುವುದು, ಆಲ, ಬಸರಿ ಮೊದಲಾದ ಗಿಡಗಳನ್ನು ಪೂಜಿಸುವುದು, ರೂಪಾಯಿಯೇ ಮೊದಲಾದ ನಾಣ್ಯಗಳನ್ನು ಪೂಜಿಸುವುದು, ಲಕ್ಷ್ಮಿಯ ಪೂಜೆಮಾಡುವುದು, ಸತ್ತಂಥ ಪೂರ್ವಜರನ್ನು ಪೂಜಿಸುವುದು, ಮೃತಾತ್ಮರನ್ನು ತೃಪ್ತಗೊಳಿಸುವದಕ್ಕಾಗಿ ತರ್ಪಣಕೊಡುವುದು, ಶ್ರಾದ್ಧಮಾಡುವುದು; ಗೊಂದಲಹಾಕುವುದು; ಗಂಗೆಯ ನೀರು ಶುದ್ಧವೆಂದು ತಿಳಿಯುವುದು, ಪಶುಗಳ ಆಕಾರಕ್ಕೇ ದೇವರೆಂದು ತಿಳಿಯುವುದು; ಬಾವಿ ಕೆರೆಗಳನ್ನು ಕಟ್ಟಿಸುವದಕ್ಕೆ ಧರ್ಮವೆನ್ನುವುದು, ಹೂದೋಟಗಳನ್ನು ನಿರ್ಮಿಸುವುದರಲ್ಲಿ ಧರ್ಮವಿದೆಯೆಂದು ಭಾವಿಸುವುದು, ಮೃತ್ಯುಂಜಯ ಜಪಮಾಡಿಸುವುದರಿಂದ ತನ್ನ ಸಾವು ತಪ್ಪುವದೆಂದು ನಂಬುವುದು, ಗ್ರಹಗಳ ದಾನ ಕೊಡುವುದರಿಂದ ತನ್ನ ದುಃಖವು ಇಲ್ಲದಂತಾಗುವುದೆಂದು ತಿಳಿಯುವುದು—ಇವೆಲ್ಲ ಕ್ರಿಯೆಗಳು ಲೋಕಮೂಢತೆಯಲ್ಲಿ ಸಮಾವೇಶವಾಗುತ್ತವೆ ಅದರಿಂದ ಯೋಗ್ಯ–ಅಯೋಗ್ಯ, ಸತ್ಯ–ಅಸತ್ಯ, ಹಿತ–ಅಹಿತ, ಆರಾಧ್ಯ–ಅನಾರಾಧ್ಯ ಇವುಗಳ ವಿಚಾರವನ್ನು ಮಾಡದೆ, ಜನರು ಮೊದಲಿನಿಂದ ಆಚರಿಸುತ್ತ ಬಂದಿರುವರೆಂದು ನಾವೂ ಅಜ್ಞಾನಿಗಳಂತೆ ಆಚರಿಸುತ್ತ ಹೋಗುವುದು ಲೋಕಮೂಢತೆಯ ಲಕ್ಷಣವಾಗಿದೆ. ಅನೇಕರು ಜೈನರೆನ್ನಿಸಿಕೊಳ್ಳುತ್ತಿದ್ದರೂ ಪರಮಾಗಮದ ಆಜ್ಞೆಯನ್ನು ತಿಳಿದಿರುವುದಿಲ್ಲ ಆದುದರಿಂದ ವೇಷಧಾರೀ ಜನರು ನಿರ್ಮಿಸಿದ ಕ್ರಿಯಾಕಾಂಡಗಳನ್ನು ಆಚರಿಸುತ್ತಾರೆ ಅಲ್ಲದೆ ತೀರ್ಥಂಕರಾದಿ ಜನರಿಗೆ ತರ್ಪಣಕೊಡುವುದು, ತಮ್ಮ ತಂದೆ, ಅಜ್ಜಂದಿರಿಗೆ ತರ್ಪಣ ಸಲ್ಲಿಸುವುದು, ಯಕ್ಷಾದಿಗಳಿಗೆ ಹೋಮವನ್ನು ಮಾಡುವುದು—ಇವೇ ಮೊದಲಾದವುಗಳಲ್ಲಿ ತಮ್ಮ ಕಲ್ಯಾಣವಿದೆಯೆಂದು ತಿಳಿಯುತ್ತಾರೆ. ಆದರೆ ಇದು ಲೋಕಮೂಢತೆಯಾಗಿದೆ ಹಲವರು ಸ್ನಾನಮಾಡಿ ಅಡಿಗೆ ಮಾಡುವುದರಲ್ಲಿಯೂ ಜಳಕಮಾಡಿ ಊಟಮಾಡುವುದರಲ್ಲಿಯೂ ಅದರಂತೆ ತೊಯ್ದ–ಹಸಿಯ–ಅರಿವೆಯನ್ನುಟ್ಟುಕೊಂಡು ಉಣ್ಣುವುದ-ರಲ್ಲಿಯೂ ಪಾವಿತ್ರ್ಯತೆ ಇದೆಯೆಂದು ತಿಳಿಯುತ್ತಾರೆ. ಅಲ್ಲದೆ ಅದು ಶುದ್ಧತೆಯೆಂದು ಭಾವಿಸಿ ಶ್ರೇಷ್ಠ ಧರ್ಮಾಚರಣೆಯಾಗುವದೆಂದು ನಂಬುವರು. ಆದರೆ ಇವರಿಗೆ ಯಾವುದನ್ನು ತಿನ್ನಬೇಕು, ಏನನ್ನು ತಿನ್ನಕೂಡದು ಎಂಬುದರ ಜ್ಞಾನವೇ ಮೂಲದಲ್ಲಿರುವದಿಲ್ಲ, ಹಿಂಸೆಯ ವಿಚಾರವಿರುವದಿಲ್ಲ ಇವೆಲ್ಲ ಮಿಥ್ಯಾತ್ವದ ಉದಯದಿಂದ ಲೋಕಮೂಢತೆ ಎನ್ನಿಸಿಕೊಳ್ಳುತ್ತವೆ

ಮೂಢತೆಯಂ ಬಿಟ್ಟು ವೆಱಿರ್ ಮಾಡುವ ಡೊಂಬಿಂಗೆ ಬೇಗಮೆಱಿಗದೆ ಮೂರ್ಖರ್ ।
ಮಾಡುವುದಂ ಲೇಸೆನ್ನದೆ ಕೊಡುವುದಾರಯ್ದು ಮೂಢದೃಷ್ಟಿಯೊಳಱಿವಂ ॥

—ನಯಸೇನ-ಧರ್ಮಾಮೃತ ೫-೩.

ಧುರದೊಳ್ ಕಮ್ಮರಿಯೊಳ್ ಮದೋರ್ವಿರುಹದೊಳ್ ನಪ್ತಾರ್ಚಿಯೊಳ್ ನೀರ್ಗಳೊಳ್
ಭರದಿಂ ದೇಹಮನಿಕ್ಕಿಯುಬ್ಬುಗದೆ ಮಿಥ್ಯಾತೀರ್ಥಮಂ ಮಿಂದುಮಾ- ।
ದರದಿಂ ದುಷ್ಕರ ವೇಱಿಕ್ಕಿಯೊಳ್ ನೆಗಟ್ದು ಮತ್ಯಾನಂದದಿಂದೆಯ್ದುವೆಂ
ಸುರಲೋಕಂಗಳನೆಂಬ ಗಾವಿಲನವಂ ತಾಂ ಲೋಕಮೂಢಂ ನೃಪಾ ॥

—ಧರ್ಮಾಮೃತ ೫-೨೫೧.

ದೇವತಾ ಮೂಢತೆಯ ಲಕ್ಷಣ ಹೇಳುತ್ತಾರೆ—

ವರೋಪಲಿಪ್ಸಯಾಶಾವಾನ್ ರಾಗದ್ವೇಷಮಲೀಮಸಾಃ ।
ದೇವತಾ ಯದುಪಾಸೀತ ದೇವತಾಮೂಢಮುಚ್ಯತೇ ॥ ೨೩ ॥[1]

ಅನ್ವಯಾರ್ಥ—(ಆಶಾವಾನ್) ಐಹಿಕ ಸುಖದ ಆಶೆಯನ್ನು ಮಾಡುವವನು (ವರೋಪಲಿಪ್ಸಯಾ) ವರವನ್ನು ಪಡೆಯುವ ಇಚ್ಛೆಯಿಂದ (ರಾಗದ್ವೇಷಮಲೀಮಸಾಃ) ರಾಗದ್ವೇಷಗಳಿಂದ ಕೂಡಿ ಮಲಿನವಾದಂಥ (ದೇವತಾಃ) ದೇವತೆಯ (ಯತ್) ಯಾವ (ಉಪಾಸೀತ) ಪೂಜೆಯನ್ನು ಮಾಡುವನೋ (ತತ್) ಅದು (ದೇವಮೂಢಂ) ದೇವತಾ ಮೂಢತೆಯು (ಉಚ್ಯತೇ) ಎನಿಸುತ್ತದೆ.

ಅರ್ಥ—ಯಾವ ಮನುಷ್ಯನು ವರ ಪ್ರಾಪ್ತಿಯ ಲೋಭಕ್ಕೆ ಒಳಗಾಗಿ ರಾಗದ್ವೇಷಗಳಿಂದ ಕೂಡಿದ ದೇವತೆಯ ಉಪಾಸನೆಯನ್ನು ಮಾಡುವನೋ ಅವನು ದೇವಮೂಢನೆನಿಸುತ್ತಾನೆ [ಇಲ್ಲಿ 'ರಾಗದ್ವೇಷ ಮಲೀಮಸಾಃ' ಎಂದು ದೇವತ್ವಕ್ಕೆ ವಿಶೇಷಣವನ್ನು ಸೂಚಿಸಿದೆ. ಈ ರಾಗ-ದ್ವೇಷದ ಸೂಚನೆಯಿಂದ ಕಾಮ-ಕ್ರೋಧ-ಮಾನ-ಮಾಯಾ-ಲೋಭ-ಮೋಹ-ಭಯ ಮೊದಲಾದ ಎಲ್ಲ ದೋಷಗಳೂ ಸಮಾವೇಶಗೊಳ್ಳುತ್ತವೆ. ಈ ದೋಷಗಳಿಂದ ಕೂಡಿದ ವ್ಯಕ್ತಿಯು ದೇವನೆನಿಸಿಕೊಳ್ಳಲಾರನು. ಹಿಂದೆ ಈ ಗ್ರಂಥದಲ್ಲಿ 'ಆಪ್ತ'ನ ಲಕ್ಷಣವನ್ನು ವಿವರಿಸಿದೆ ಆ ತನ್ನ ಶುದ್ಧ ಸ್ವರೂಪದಲ್ಲಿ ತಾನಿರುವವನೇ ದೇವನೆನಿಸುತ್ತಾನೆ. ಅವನನ್ನುಳಿದು ದೇವತ್ವವಿಲ್ಲದ ವ್ಯಕ್ತಿಯನ್ನು ದೇವನೆಂದು ಪೂಜಿಸುವುದೇ ದೇವಮೂಢತೆಯಾಗಿದೆ. ಸ ಧ]

---

[1] ಆಯತವರ್ಮನು ಹೇಳುವದು ಹೀಗೆ ದೇವತಾ ಮೂಢವಾವುದೆಂದೊಡೆ—ಜ್ಯೋತಿಷ್ಕ ವ್ಯಂತರ ಚಂದ್ರಾದಿತ್ಯರ್ಕಳೆಂಬ ಸಂಸಾರಿ ದೇವರ್ಕಳುಂ ನೆಲಂ ನೀರ್ಕಿಚ್ಚು ಪಳ್ಳಿಗಡು (?) ಬಳ್ಳಿ ಮರಂ ಪೊದರೆಂಬ ಸಂಚಸ್ಥಾವರಂ . ಬೆಸಕೆಯ್ವ ಮುಟ್ಟಿಂದಿವು ಮೊದಲಾಗೊಡೆಯವು ಚೇತನಂಗಳೆಂದಕ್ಕುವುವು ದೆಯ್ವಂಗಳೆಂದೆರಗುವುದುಂ ಪೊಡವಡುವುದುಂ ದೇವತಾ-ಮೂಢತ್ವಮೆಂದಕ್ಕುಮೆಂತೆಂದೊಡೆ—ವಿಷ್ಣು ದೇವನಾದೊಡೆ ಗೋವುಗಾದಂ ದೂಡುವೋದಂ ದಾನಂ ಬೇಡಿದಂ ಸಾರಥಿಯಾದಂ ಗೋವುಳಿತಿಯೊಳ್ಕಿಟ್ಟಂ ದಶಾವತಾರಂ ಬಂದನೆಂಬುದೇಕೆ? ರುದ್ರಂ ದೇವನಪ್ಪೊಡೆ ತ್ರಿಪುರಮಂ ಸುಟ್ಟನಂಧಕಾಸುರನಂ ಕೊಂದಂ ದಾರುವನ ಕ್ರೀಡೆಯಾಡಿದಂ ತೊಗಲಂ ಪೊದೆದ ನೆಲ್ವಂ ತೊಟ್ಟಂ ಕಪಾಲದೊಳುಂಡಂ ಡಮರುಗಮಂ ಪೊಡೆದೆಳ್ದಾಡಿದಂ ಜಾಹ್ನವಿಯೊಳ್ಬಿರ್ದಂ ಶಾಪಂ ಬೆತ್ತಂ ಬ್ರಹ್ಮೇತಿವೋದನೆಂಬುದೇಕೆ? ಬ್ರಹ್ಮಂ ದೇವನಪ್ಪೊಡೆ ಊರ್ವಶಿಯೊಳ್ಕರೆವಾಳ್ದಂ ಮಹೇಶ್ವರಂಗೆ ಪುಸಿನುಡಿದಂ ಶಾಪಂ ಬೆತ್ತಂ ಅಂತರಿಕ್ಷೆಯೊಳ್ಪುದುಹಳ್ದಂ ತಪದಿಂ ಭಗ್ನನಾದಂ ತನ್ನ ಸುತೆಯೊಳ್ಬೊಲ್ಲಕೆಯ್ವನೆಂಬುದೇಕೆ? ಬುದ್ಧಂ ದೇವನಪ್ಪೊಡೆ ತಜ್ಜನನಿಯನೆ ಕೊಂದು ಪುಟ್ಟಿದನಾತ್ಮವಧೆಗೆಯ್ದು ಕೊಂಡನೆಂಬುದೇಕೆ?—ಇಂತಿವರೆಲ್ಲರು ದೇವರಪ್ಪಡೆ ಈ ಲೋಕದೊಳು ಕೊಲುವನುಂ ಪುಸಿವನುಂ ಕಳವನುಂ ಪರಸ್ತ್ರೀಗಮನಂಗೆಯ್ವನುಂ ಊರ್ಗಳಂ ಸುಡುವನುಂ ಮದ್ಯಮಾಂಸಾಸಿಗಳು-ವೆಂಬಿವರ್ಮೊದಲಾಗೊಡೆಯ ಪಾಪಿಗಳೆಲ್ಲಂ ದೇವರ್ಕಳಾಗಲಿ ವೇಳ್ಕುಂ ಆದಿತ್ಯಂ ದೇವನಪ್ಪಡೆ ಕಾಶ್ಯಪಂಗೆ ಪುಟ್ಟಿದಂ ಅಸುರ-ರೊಡನೆ ಕಾದಿದಂ ಕೊಡಗನುಂಗಿಯೋಡಿ ಇಂದ್ರನ ಮರೆಯಂ ಪೊಕ್ಕು ಬರ್ದುಕಿದನೆಂಬುದೇಕೆ? ಅಂತಾತರ್ವಾರ್ಗಂ ಪುಟ್ಟುವನುಂ ಕಾದುವನು ನೋಡುವನು ಮಲ್ಲಂ ಚತುರ್ವಿಧ ದೇವನಿಕಾಯದೊಳಗಣ ಜ್ಯೋತಿಷ್ಕದೇವಂ ಮತ್ತಮಗ್ನಿಯುಂ ದೇವನೆಂಬೆಯ-ಪ್ಪೊಡೆ ಪಾಂಡುರೋಗಮೆಂಬ ತುತ್ತಮಾದಡರ್ಜುನನಂ ದಾನಂ ಬೇಡಿಕೊಂಡು ಖಾಂಡವ ವನದ ಸರ್ವೌಷಧಿಗಳೆಂಬ ವೃಕ್ಷಗಳ ರಸಮನುಂಡು ಬದುಕಿದನೆಂಬುದೇಕೆ? ಮತ್ತಂ ನೆಲನೀರ್ಮೊದಲಾಗೊಡೆಯುವಂ ದೈವಯೆಂಬಡೆಯವನೆ ಉಣ್ಬುದುಂ ಕುಡಿವುದುಂ ಕೊರೆವುದುಮೇಕೆ? ಪಶುವೊದಲಾಗೊಡೆಯುವಂ ಕರೆವುದುಮುಳುವುದುಂ ಕಟ್ಟುವುದುಂ ಬಯ್ವುದುವೇಕೆ? ಬಲವಂದು ಪೊಡವಡುತಿರವೇಡಾ ಇಂತೀ ದೇವತಾ ಮೂಢತ್ವಮಿಲ್ಲದುದು ಸಮ್ಯಕ್ತ್ವಂ

ವಿಶೇಷಾರ್ಥ—ಈ ಜಗತ್ತಿನಲ್ಲಿ ಸಂಸಾರೀ ಜೀವಿಗಳಿಗೆ ರಾಜ್ಯ, ಸಂಪತ್ತು, ಐಶ್ವರ್ಯ, ಸ್ತ್ರೀ, ಪುತ್ರ, ವಸ್ತ್ರ, ಆಭರಣ, ವಾಹನ ಮೊದಲಾದ ಪದಾರ್ಥಗಳ ಇಚ್ಛೆಯು ಯಾವಾಗಲೂ ಉತ್ಪನ್ನವಾಗುತ್ತಿರುತ್ತದೆ ಈ ವಸ್ತುಗಳು ತನಗೆ ಸಿಗಬೇಕೆಂಬ ಉದ್ದೇಶದಿಂದ ರಾಗ, ದ್ವೇಷ, ಮೋಹಗಳುಳ್ಳ ದೇವರ ಸೇವೆಯನ್ನು ಮಾಡುತ್ತಾನೆ. ಹೀಗೆ ಮಾಡುವುದಕ್ಕೆ ದೇವಮೂಢತೆ ಎಂದು ಹೇಳಲಾಗಿದೆ ನಿಜವಾದ ಸಂಗತಿಯನ್ನು ಈಗ ನೋಡೋಣ.— ರಾಜ್ಯ, ಸುಖ, ಸಂಪತ್ತುಗಳೆಲ್ಲ ಸಾತಾವೇದನೀಯ ಕರ್ಮದ ಉದಯದಿಂದ ದೊರೆಯುತ್ತವೆ. ಈ ಕರ್ಮವನ್ನು ಯಾರೂ ಯಾರಿಗೂ ಕೊಡಲು ಸಾಧ್ಯವಿಲ್ಲ. ಲಾಭಾಂತರಾಯಕರ್ಮದ ಕ್ಷಯೋಪಶಮದಿಂದ ಲಾಭವಾಗುತ್ತದೆ ಭೋಗೋಪಭೋಗಗಳ ಸಾಮಾಗ್ರಿಯು ಭೋಗೋಪಭೋಗ ಎಂಬ ಹೆಸರಿನ ಅಂತರಾಯ ಕರ್ಮದ ಕ್ಷಯೋಪ-ಶಮದಿಂದ ದೊರೆಯುತ್ತದೆ. ವಸ್ತುಸ್ಥಿತಿಯು ಹೀಗಿರುವಾಗ, ನಾವು ನಮ್ಮ ಪರಿಣಾಮದಿಂದ ಯಾವ ಕರ್ಮವನ್ನು ಕಟ್ಟಿಕೊಂಡಿರುವೆವೋ ಅದರ ಫಲವನ್ನು ಕೊಡುವುದೂ ತಪ್ಪಿಸುವುದೂ ಯಾವ ದೇವ ದೇವತೆಯ ಕೈಯಲ್ಲೂ ಇಲ್ಲ. ಕುಲವು ಬೆಳೆಯಲೆಂದು ಅನೇಕರು ಹಗಲಿರುಳೂ ಕುಲದೇವತೆಯ ಪೂಜೆಯನ್ನು ಮಾಡುತ್ತಿರುವಾಗಲೂ ಹಲವರ ವಂಶಗಳು ನಾಶವಾದದ್ದುಂಟು. ಧನ ಸಂಪಾದನೆಗಾಗಿ ಲಕ್ಷ್ಮಿಯ ಪೂಜೆಯನ್ನು–ರೂಪಾಯಿ ನಾಣ್ಯಗಳ ಪೂಜೆಯನ್ನು–ಭಕ್ತಿಯಿಂದ ಮಾಡುವಂಥವರೂ ಹಲವರು ಬಡವರಾದುದುಂಟು. ಶೀತಲಾದೇವಿಯ–ಎಲ್ಲರನ್ನೂ ಸಮಾಧಾನದಿಂದ ಇಟ್ಟು ಸಂರಕ್ಷಿಸುವ ಶಕ್ತಿಯುಳ್ಳ ದೇವಿಯೆಂಬ ಕಲ್ಪಿಸಿದ ದೇವತೆ–ಪೂಜೆ, ಸ್ತುತಿಗಳನ್ನು ಮಾಡುತ್ತ ಇದ್ದರೂ ಅಂಥವರ ಮಗ, ಮಗಳು ಮೊದಲಾದವರು ಸತ್ತದ್ದನ್ನು ಕಾಣುವೆವು. ಪೂರ್ವಜರನ್ನು ಆದರಿಸುತ್ತಿರುವವರೂ ಕೂಡ ರೋಗದಿಂದ ನರಳುತ್ತಿರುವರು

ಜನರು ಸಂಕಟದಲ್ಲಿ ಸಹಾಯಮಾಡುವವರೆಂದು ವ್ಯಂತರ, ಕ್ಷೇತ್ರಪಾಲ ಮೊದಲಾದವರನ್ನು ತಿಳಿಯುವರು. ಇದು ಆ ಜನರ ಮಿಥ್ಯಾತ್ವದ ಪ್ರಭಾವವಾಗಿದೆ ಚಕ್ರೇಶ್ವರೀ, ಪದ್ಮಾವತಿ ಈ ದೇವತೆಯರು ಶಸ್ತ್ರವನ್ನು ಹಿಡಿದು, ಜಿನಶಾಸನವನ್ನು ರಕ್ಷಿಸುವರೆಂದು ಹಲವರು ಹೇಳುವರು. ಅಲ್ಲದೆ ಸೇವಕರನ್ನು ರಕ್ಷಿಸುವಂಥ ದೇವತೆ ಹಾಗೂ ಯಕ್ಷರು ಪ್ರತಿಯೊಬ್ಬ ತೀರ್ಥಂಕರರಿಗೂ ಒಬ್ಬೊಬ್ಬರಿದ್ದಾರೆಂದು ಹೇಳುವರು ಇವರ ಆರಾಧನೆ ಮತ್ತು ಪೂಜೆಯನ್ನು ಮಾಡುವದರಿಂದ ಧರ್ಮದ ರಕ್ಷಣೆಯಾಗುತ್ತದೆ ಈ ದೇವರು ಧರ್ಮಾತ್ಮರ ರಕ್ಷಣೆಯನ್ನು ಮಾಡುವರು. ಆದರಿಂದ ಈ ದೇವತೆಗಳ ಹಾಗೂ ಯಕ್ಷರ ಸ್ತುತಿ ಮತ್ತು ಪೂಜೆಗಳನ್ನು ಮಾಡುವುದು ಯೋಗ್ಯವಿದೆ.

ವ್ಯಂತರ ದೇವ ದೇವಿಯರು ಪೂಜನೀಯರಲ್ಲ—ಈ ದೇವತೆಗಳು ತೀರ್ಥಂಕರರ ಭಕ್ತರು ಎಲ್ಲ ಕಾರ್ಯಗಳನ್ನೂ ಸಿದ್ಧಿಮಾಡಿಕೊಡುವವರು. ಇವರಿಲ್ಲದಿದ್ದರೆ ಧರ್ಮದ ರಕ್ಷಣೆಯನ್ನು ಯಾರು ಮಾಡುವರು? ಅದಕ್ಕಾಗಿ ಮಂದಿರದಲ್ಲಿ ಇಂಥ ದೇವತೆಗಳಿಗೆ ನಾಲ್ಕು ಇಲ್ಲವೆ ಮೂವತ್ತೆರಡು ಭುಜಗಳು ಇರುತ್ತವೆ ಆ ಕೈಗಳಲ್ಲಿ ಅನೇಕ ವಿಧದ ಖಡ್ಗಗಳಿವೆ. ತಲೆಯ ಮೇಲೆ ಪಾರ್ಶ್ವನಾಥ ಸ್ವಾಮಿಯ ಪ್ರತಿಬಿಂಬವಿರುತ್ತದೆ. ಹಲವು ಹೆಡೆಯ ಹಾವು ಇರುವುದು. ಇಂಥ ಮೂರ್ತಿಗಳನ್ನು ಜನರು ಅತಿಶಯ ಭಕ್ತಿಯಿಂದ ಪೂಜಿಸುವರು. ಆದರೆ ಈ ವಿಷಯದಲ್ಲಿ ಪರಮಾಗಮದ ಆಧಾರದಿಂದ ನಿರ್ಣಯಮಾಡಿಕೊಳ್ಳಿರಿ. ಮೂಢ ಜನರು ಹೇಳುವದನ್ನು ಸ್ವೀಕರಿಸಬೇಡಿರಿ. ಈ ವಿಷಯದಲ್ಲಿ ವಿಚಾರಮಾಡಿದರೆ ಹೀಗೆ ಕಂಡು ಬರುತ್ತದೆ. ಭವನವಾಸಿ, ವ್ಯಂತರ ಮತ್ತು ಜ್ಯೋತಿಷ ದೇವರಲ್ಲಿ ಮಿಥ್ಯಾದೃಷ್ಟಿಯವರೇ ಹುಟ್ಟುತ್ತಾರೆ. ಸಮ್ಯಗ್ದೃಷ್ಟಿ ಜೀವಗಳು ಈ ಭವನತ್ರಿಕಗಳಲ್ಲಿ ಜನಿಸುವದಿಲ್ಲ ಅವರು ಸ್ತ್ರೀ ರೂಪದಲ್ಲಿ ಹುಟ್ಟುವುದೇ ಇಲ್ಲ. ಪದ್ಮಾವತೀ, ಚಕ್ರೇಶ್ವರೀ ಈ ದೇವತೆಗಳು ಭವನವಾಸಿನಿಯರಿದ್ದು, ಸ್ತ್ರೀ ಪರ್ಯಾಯದಲ್ಲಿದ್ದಾರೆ ಮತ್ತು ಕ್ಷೇತ್ರಪಾಲ, ಯಕ್ಷ ಇವರು ವ್ಯಂತರವಾಸಿ ಇದ್ದಾರೆ. ಈ ಸ್ಥಳಗಳಲ್ಲಿ ಸಮ್ಯಗ್ದೃಷ್ಟಿ ಜೀವಗಳ ಉತ್ಪತ್ತಿಯು ಇಲ್ಲ ಇಂದಲ್ಲಿ ಯಾವಾಗಲೂ ಮಿಥ್ಯಾದೃಷ್ಟಿ ಜೀವಗಳೇ ಜನಿಸುತ್ತವೆ. ಹೀಗೆ ಪರಮಾಗಮದಲ್ಲಿ ಹೇಳಿದೆ. ಇವರಿಗೆ ಜಿನಧರ್ಮದ ಮೇಲೆ ಪ್ರೀತಿಯಿದೆ ಎಂದು ಹೇಳಬೇಕಾದರೆ ಇವರು ಉಳಿದ ಜಿನಧರ್ಮಾನುಯಾಯಿಗಳಿಂದ ಪೂಜೆ, ಸ್ತುತಿಗಳು ನಡೆಯಲೆಂಬ ಇಚ್ಛೆ ಇರಕೂಡದು. ಜೈನರಿದ್ದವರು ತಾವು ಅವ್ರತಿಗಳೆಂದು ತಿಳಿದೂ ಕೂಡ ಸಮ್ಯಗ್ದೃಷ್ಟಿ ಜೀವಗಳಿಂದ ತಮ್ಮ ಪೂಜೆಯನ್ನು ಹೇಗೆ ಮಾಡಿಸಿಕೊಂಡಾರು? ಸಮಾನ ಧರ್ಮಿಗಳಾದ ಜೀವರು ಯಾರ ಹೇಳಿಕೆಯನ್ನೂ ಅಪೇಕ್ಷಿಸದೆ ಪರಸ್ಪರ ಉಪಕಾರವನ್ನು ಮಾಡುತ್ತ ಇರುತ್ತಾರೆ ಅದೂ ಇರಲಿ ಭಗವಂತನ ಪ್ರತಿಬಿಂಬವನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು, ಭಗವಂತನ ಭಕ್ತರ ಕಡೆಯಿಂದ ತನ್ನ ಪೂಜೆಯನ್ನು ಹೇಗೆ ಮಾಡಿಕೊಂಡಾನು? ಅಂಥವನು ಧರ್ಮಾತ್ಮನಾದರೂ ಹೇಗೆ? ಇಷ್ಟು ಅವಿನಯವು

ಧರ್ಮವಾನ್ ಪುರುಷನ ಕಡೆಯಿಂದ ಎಂದೂ ಆಗಲಾರದು ಇದಲ್ಲದೆ ಈ ದೇವ-ದೇವತೆಗಳು ವಿವಿಧ ಪ್ರಕಾರದ ಆಯುಧಗಳನ್ನು ಹಿಡಿದುಕೊಂಡಿದ್ದು, ನಮ್ಮ ಉಜ್ವಲವಾದಂಥ ವೀತರಾಗ ಧರ್ಮಪ್ರವೃತ್ತಿಯ ವಿಡಂಬನೆಯನ್ನು ಮಾಡಿದಂತಾಗಿದೆ ಶಸ್ತ್ರಗಳನ್ನು ಧರಿಸುವವರಲ್ಲಿ ಸಾಮರ್ಥ್ಯವು ಕಡಿಮೆಯಾಗಿರುತ್ತದೆ ಜಿನ ಶಾಸನವನ್ನು ರಕ್ಷಣ ಮಾಡುವ ಒಬ್ಬೊಬ್ಬ ದೇವಿಯರೇ ಇದ್ದಾರೆಂದು ಮೇಲೆ ಹೇಳಿದೆ ಆದರೆ ಭಗವಂತನ ಶಾಸನದ ಸೇವಕರು ಸೌಧರ್ಮ ಇಂದ್ರನಿಂದಲೂ ಲೆಕ್ಕವಿಲ್ಲದಷ್ಟು ದೇವದೇವಿಯರಿದ್ದಾರೆ ಹೃತ್‌ಪೂರ್ವಕವಾಗಿ ಸತ್ಯ ಧರ್ಮವನ್ನು ಸ್ವೀಕರಿಸಿದಾಗ ಮೊದಲು ಕಟ್ಟಿದ ಅಶುಭ ಕರ್ಮವು ನಿರ್ಜರವಾಗುತ್ತದೆ ಅಂಥವರಿಗೆ ಎಲ್ಲ ಪುದ್ಗಲ ಸಮೂಹವು ಅಚೇತನವಿದ್ದೂ ಕೂಡ ಅದೇ ದೇವತಾಸ್ವರೂಪವನ್ನು ಹೊಂದಿ ಸಹಾಯಮಾಡಲು ಸಿದ್ಧವಾಗುತ್ತದೆ, ಉಪಕಾರಮಾಡಲೂ ಸಮರ್ಥವಾಗುತ್ತದೆ ಇಂಥ ಧರ್ಮವಂತ ಪುರುಷನಿಗೆ ಉಳಿದ ದೇವ ಹಾಗೂ ಮನುಷ್ಯರು ಉಪಕಾರ ಮಾಡುವುದರಲ್ಲಿ ಆಶ್ಚರ್ಯವೇನು? ಇದಕ್ಕೆ ಶಾಸ್ತ್ರದಲ್ಲಿಯೂ ಅನೇಕ ಉದಾಹರಣೆಗಳಿವೆ ಶೀಲವಂತರೂ ಧ್ಯಾನಿಗಳೂ ಆದ ಪುರುಷರ ಮೇಲೆ ಬಂದ ಸಂಕಟಕಾಲದಲ್ಲಿ ಧರ್ಮದ ಪ್ರಸಾದದಿಂದ ದೇವರ ಆಸನಗಳೂ ಕೂಡ ನಡುಗುತ್ತವೆ ಆಗ ಅವರು ಪ್ರತ್ಯಕ್ಷ ಬಂದು ಆ ಸಂಕಟದಿಂದ ತಪಸ್ವಿಗಳನ್ನು ಮುಕ್ತಗೊಳಿಸಿದ್ದುಂಟು ಆಗ ದೇವರು ಅನೇಕ ಪ್ರಕಾರದ ರತ್ನಗಳಿಂದ ಪೂಜಿಸಿದ್ದೂ ಉಂಟು. ಆದರೆ ಧರ್ಮವಾನ್ ಪುರುಷರು ಇಂಥ ದೇವತೆಗಳನ್ನು ಪೂಜಿಸಿದ ಕಥೆಗಳು ಶಾಸ್ತ್ರದಲ್ಲಿ ಎಲ್ಲಿಯೂ ನೋಡಲಿಕ್ಕೆ ಸಿಕ್ಕುವದಿಲ್ಲ ಇನ್ನು ಪದ್ಮಾವತೀ, ಚಕ್ರೇಶ್ವರೀ ಮೊದಲಾದ ದೇವತೆಗಳ ಕಥೆಗಳೂ ಅನೇಕ ಇವೆ ಅವುಗಳಲ್ಲಿ ಆ ದೇವತೆಗಳು ಶೀಲವತಿಯರೂ ವ್ರತಿಕರೂ ಆದ ಸ್ತ್ರೀಯರ ಸಂಕಟಗಳನ್ನು ಇಲ್ಲದಂತೆ ಮಾಡಿ, ಅವರ ಪೂಜೆಯನ್ನು ಮಾಡಿದ ಸಂಗತಿಗಳು ದೊರೆಯುತ್ತವೆ ಇಂಥ ಹಿರಿಯ ಪುಣ್ಯವಂತ ಸ್ತ್ರೀಯರು ಆ ದೇವತೆಗಳ ಪೂಜೆಯನ್ನು ಮಾಡಿದ ಸಂಗತಿಯು ಎಲ್ಲಿಯೂ ದೊರೆಯುವದಿಲ್ಲ ಶ್ರೀ ಕಾರ್ತಿಕೇಯ ಸ್ವಾಮಿಗಳು ಹೀಗೆ ಹೇಳಿದ್ದಾರೆ—

ಣ ಯ ಕೋವಿ ದೇದಿ ಲಚ್ಛೀ ಣ ಕೋವಿ ಜೀವಸ್ಸ ಕುಣದಿ ಉವಯಾರಂ ।
ಉವಯಾರಂ ಅವಯಾರಂ ಕಮ್ಮಂ ಪಿ ಸುಹಾಸುಹಂ ಕುಣದಿ ॥ ೩೧೯ ॥
ಭತ್ತೀಎ ಪುಜ್ಜಮಾಣೋ ವಿಂತರದೇವೋ ವಿ ದೇದಿ ಜದಿ ಲಚ್ಛೀ ।
ತೋ ಕಿಂ ಧಮ್ಮಂ ಕೀರದಿ ಏವಂ ಚಿಂತೇದಿ ಸದ್ದಿಟ್ಠೀ ॥ ೩೨೦ ॥

**ಅರ್ಥ**—ಪಾಪ ಪುಣ್ಯಗಳನ್ನುಳಿದು ಯಾರೂ ಜೀವಕ್ಕೆ ಸುಖ-ದುಃಖಗಳನ್ನು ನೀಡಲಾರರು. ಜೀವಕ್ಕೆ ಯಾರೂ ಸಂಪತ್ತನ್ನು ಕೊಡುವದಿಲ್ಲ ಅದರ ಮೇಲೆ ಯಾರೂ ಉಪಕಾರವನ್ನೂ ಅಪಕಾರವನ್ನೂ ಸಹ ಮಾಡಲಾರರು ಜಗತ್ತಿನಲ್ಲಿ ನಮಗೆ ಕಂಡು ಬರುವ ಉಪಕಾರ ಅಪಕಾರಗಳೆಲ್ಲವೂ ನಮ್ಮ ನಮ್ಮ ಕರ್ಮದ ಫಲಗಳಾಗಿವೆ ಅಂದರೆ ಶುಭಾಶುಭ ಕ್ರಿಯೆಯ ಫಲಗಳಾಗಿವೆ ಭಕ್ತಿಪೂರ್ವಕವಾಗಿ ವ್ಯಂತರ ದೇವರ ಪೂಜೆ ಮಾಡುವುದರಿಂದ ಲಕ್ಷ್ಮಿಯು ಲಭಿಸುತ್ತದೆಂದರೆ ಉಳಿದ ದಾನ, ಪೂಜೆ, ಶೀಲ, ಸಂಯಮ, ತಪ, ಧ್ಯಾನ, ಅಧ್ಯಯನ ಮೊದಲಾದ ಕ್ರಿಯೆಗಳಿಗೆ ಧರ್ಮವೆಂದು ಏಕೆ ಅನ್ನಬೇಕು? ಭಕ್ತಿಯಿಂದ ಪೂಜಿಸಿದರೆ ಕೆಟ್ಟ ದೇವರೆಲ್ಲ ಸಂಸಾರದೊಳಗಿನ ಎಲ್ಲ ಕಾರ್ಯಗಳನ್ನು ಸಿದ್ಧಮಾಡಿಕೊಡುತ್ತಿದ್ದರೆ ಕರ್ಮವೆಂಬ ವಸ್ತುವೇ ಇರುತ್ತಿರಲಿಲ್ಲ ಎಲ್ಲ ಸುಖವು ವ್ಯಂತರ-ದೇವಾದಿಗಳ ಮುಖಾಂತರ ಸಿಗುವದಾದಲ್ಲಿ ಧರ್ಮಾಚರಣೆಯ ಅವಶ್ಯಕತೆಯಾದರೂ ಏನಿದೆ?

**ಭಾವಾರ್ಥ**—ಜಗತ್ತಿನಲ್ಲಿ ನಮಗೆ ದೇವ, ರಾಕ್ಷಸ, ದೇವತೆ, ಮನುಷ್ಯ, ಒಡೆಯ, ತಂದೆ, ತಾಯಿ, ಅಣ್ಣ-ತಮ್ಮಂದಿರು, ಮಿತ್ರ, ಸ್ತ್ರೀ, ಪುತ್ರ, ತಿರ್ಯಂಚ ಮೊದಲಾದವುಗಳಿಂದಲೂ ಅದರಂತೆ ಅನೇಕ ಔಷಧಾದಿ ವನಸ್ಪತಿಗಳಿಂದಲೂ ಉಪಕಾರ ಅಪಕಾರಗಳಾದಂತೆ ಕಂಡುಬರುತ್ತದೆ ಆದರೆ ಅದು ನಿಜವಿರುವದಿಲ್ಲ ಅದು ನಮ್ಮ ನಮ್ಮ ಶುಭ-ಅಶುಭ ಅಥವಾ ಪುಣ್ಯ-ಪಾಪ ಕರ್ಮಗಳ ಉದಯದ ಆಧೀನವಿರುತ್ತದೆ ಈ ಎಲ್ಲ ಪದಾರ್ಥಗಳು ಹೊರಗಿನ ನಿಮಿತ್ತ ಮಾತ್ರ ಆಗಿವೆ ನಾವು ಒಬ್ಬರಿಗೆ ಹಿತಮಾಡಬೇಕು, ಉಪಕಾರ ಮಾಡಬೇಕು, ಎಂದು ಏನಾದರೂ ಮಾಡುತ್ತಿರುವಾಗ ಅದರಿಂದ ಅವರಿಗೆ ಒಮ್ಮೊಮ್ಮೆ ಅಪಕಾರವಾಗುವುದೇ ಕಂಡು ಬರುತ್ತದೆ ಆದ್ದರಿಂದ ಮುಖ್ಯ ಕಾರಣವು ಪುಣ್ಯಪಾಪ ರೂಪದ ಕರ್ಮವೇ ಇರುತ್ತದೆಂದು ಗೊತ್ತಾಗುತ್ತದೆ. ಶಾಸ್ತ್ರಗಳಲ್ಲಿಯೂ ಇಂಥ ಕತೆಗಳು

ಅನೇಕವಾಗಿವೆ ಚಾಂಡಾಲನು ಅಹಿಂಸಾ ವ್ರತವನ್ನು ಸ್ವೀಕರಿಸಿದ್ದನು ಆ ವ್ರತದ ಪ್ರಭಾವದಿಂದ ದೇವರು ಅವನನ್ನು ಸಿಂಹಾಸನದ ಮೇಲೆ ಕೂಡಿಸಿ ಪೂಜಿಸಿದರು. ನೀಲಿ ಎಂಬವಳಿಗೆ ಶೀಲ ವ್ರತದ ಪ್ರಭಾವದಿಂದ ದೇವತೆಗಳು ಸಹಾಯ ಮಾಡಿದರು ಸೀತೆಗೆ ಶೀಲದ ಪ್ರಭಾವದಿಂದ ಅಗ್ನಿ ಕುಂಡವು ಜಲಮಯವಾಯಿತು ಸುದರ್ಶನ ಸೆಟ್ಟಿಗೆ ಉಂಟಾದ ಉಪಸರ್ಗವನ್ನು ದೇವರು ಇಲ್ಲದಂತೆ ಮಾಡಿದರು. ಅನೇಕರಿಗೆ ದೇವತೆಗಳು ಸಹಾಯಮಾಡಿದರು, ಉಪಸರ್ಗ ಇಲ್ಲದಂತೆ ಮಾಡಿದರು ದೇವತೆಗಳ ಆಸನಗಳು ನಡುಗಲು ಅವರು ಆಯಾ ಸ್ಥಳಗಳಿಗೆ ಧಾವಿಸಿ, ಸಂಕಟಗಳಿಂದ ಸಜ್ಜನರನ್ನು ಮುಕ್ತಗೊಳಿಸುತ್ತ ಬಂದರು. ಇಂಥ ಅನೇಕ ಕಥೆಗಳು ಪ್ರಸಿದ್ಧವಾಗಿವೆ

**ಆದಿ ಭಗವಂತನಿಗೆ ಆರು ತಿಂಗಳು ಆಹಾರವು ಸಿಗಲಿಲ್ಲ.** ಭಗವಾನ್ ಆದಿನಾಥ ತೀರ್ಥಂಕರರಿಗೆ ಆರು ತಿಂಗಳವರೆಗೆ ಆಹಾರದ ಅಂತರಾಯವು ಸಂಭವಿಸಿತು. ಆ ಅವಧಿಯಲ್ಲಿ ಯಾವ ದೇವರಾದರೂ ಬಂದು ಯಾರಿಗಾದರೂ ಆಹಾರದ ವಿಧಿಯನ್ನು ಏಕೆ ಹೇಳಿಕೊಡಲಿಲ್ಲ? ಭಗವಂತನು ಗರ್ಭದಲ್ಲಿ ಬರುವ ಪೂರ್ವದಲ್ಲಿ ಆರು ತಿಂಗಳವರೆಗೆ ಇಂದ್ರಾದಿ ದೇವತೆಗಳು ಸೇವೆಯಲ್ಲಿ ತತ್ಪರವಾಗಿದ್ದರು ಹುಟ್ಟಿದ ಮೇಲೆಯೂ ಭಗವಂತನ ಸಲುವಾಗಿ ವಸ್ತ್ರಾಭರಣಗಳನ್ನು ಸ್ವರ್ಗದಿಂದ ಇಂದ್ರನು ತಂದು, ಅವನ ದೇಹವನ್ನು ಸಿಂಗರಿಸಿದನು. ಇಂಥ ಆ ದೇವೇಂದ್ರನಿಗೆ ಭಗವಂತನು ದೀಕ್ಷೆ ತಕ್ಕೊಂಡ ಮೇಲೆ ಆಹಾರವು ಆರು ತಿಂಗಳ ವರೆಗೆ ಸಿಗಲಿಲ್ಲವೆಂದು ಏನಾದರೂ ಉಪಾಯವು ಹೇಗೆ ಹೊಳೆಯಲಿಲ್ಲ? ಭಗವಂತನು ತನ್ನ ಭರತ, ಬಾಹುಬಲಿ ಮೊದಲಾದ ನೂರುಜನ ಮಕ್ಕಳಿಗೂ ಬ್ರಾಹ್ಮಿ, ಸುಂದರಿ ಎಂಬ ಹೆಣ್ಣು ಮಕ್ಕಳಿಗೂ ಮುನಿ ಹಾಗೂ ಶ್ರಾವಕಧರ್ಮಗಳನ್ನು ಕಲಿಸಿದ್ದನು ಅವರಿಗೂ ಕೂಡ ಭಗವಂತನು ಆಹಾರಕ್ಕಾಗಿ ಆರು ತಿಂಗಳ ವಿಹಾರ ಮಾಡುವಾಗ, ಅಂತರಾಯದಿಂದ ಆಹಾರವು ಲಭಿಸದೆ ಇದ್ದಾಗ, ತಾವು ಹೋಗಿ ಅಂತರಾಯವಾಗದಂತೆ ಊಟಕ್ಕೆ ಹಾಕಬೇಕೆಂಬ ವಿಚಾರವು ಸುಳಿಯಲಿಲ್ಲ. ಇವೆಲ್ಲವುಗಳನ್ನು ಗಮನಿಸಿದರೆ ಅಂತರಾಯ ಕರ್ಮದ ಉದಯವು ಮಂದವಿಲ್ಲದ ಹೊರತಾಗಿ ಯಾರಿಂದಲೂ ಏನೂ ಸಹಾಯ-ವಾಗುವದಿಲ್ಲ—ಎಂಬುದೇ ನಿಶ್ಚಯವಾಗುತ್ತದೆ.

**ಯುಧಿಷ್ಠಿರ ಮೊದಲಾದವರ ಉಪಸರ್ಗವನ್ನು ಯಾರೂ ದೂರ ಮಾಡಲಿಲ್ಲ.** ಇನ್ನೊಂದು ಉದಾಹರಣೆಯನ್ನು ನೋಡೋಣ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವರು ವೀತರಾಗತ್ವವನ್ನು ಧರಿಸಿ, ವನದಲ್ಲಿ ಧ್ಯಾನ, ತಪಸ್ಸುಗಳನ್ನು ಮಾಡುತ್ತಿದ್ದರು. ಆಗ ದುಷ್ಟ ವೈರಿಗಳು ಬಂದು ಅವರ ಕೊರಳಲ್ಲಿ ಕಾಯ್ದ ಕಬ್ಬಿಣದ ಆಭರಣಗಳನ್ನು ಹಾಕಿದರು ಅದರಿಂದ ಅವರ ಶರೀರಗಳು ಸುಟ್ಟುಹೋದವು ಆ ವೇಳೆಯಲ್ಲಿ ಅವರಿಗೆ ಯಾವ ದೇವರೂ ಸಹಾಯಕ್ಕೆ ಬರಲಿಲ್ಲ ಸುಕುಮಾರ ಮುನಿಶ್ರೇಷ್ಠನನ್ನು ಶಾಲಿನಿಯು (ಹೆಣ್ಣು ನರಿ) ತನ್ನ ಮರಿ ಸಹಿತ ಮೂರು ದಿನಗಳ ವರೆಗೆ ತಿಂದಿತು. ಆ ಕಾಲಕ್ಕೆ ಯಾವ ದೇವತೆಯೂ ಸಹಾಯಕ್ಕೆ ಬರಲಿಲ್ಲ ಸುಕುಮಾರನ ತಾಯಿಗೆ ಮಗನ ಮೇಲೆ ಬಹುಪ್ರೀತಿ. ಅವನು ದೀಕ್ಷೆ ತಕ್ಕೊಂಡಾಗಿನಿಂದಲೂ ಅವಳು ಒಂದೇ ಸಮನೆ ಶೋಕಿಸು-ತ್ತಿದ್ದಳು ಆದರೆ ಅವಳು ತನ್ನ ಮಗನ ಸ್ಥಿತಿಯು ಏನಾಗಿರಬೇಕೆಂಬುದನ್ನೂ ಕೂಡ ತಿರುಗಿ ಲಕ್ಷ್ಯಕ್ಕೆ ತರಲಿಲ್ಲ ಐದು ನೂರು ಮುನಿಗಳನ್ನು ಗಾಣದಲ್ಲಿ ಹಾಕಿ, ಹಿಂಡಿ ತೆಗೆದಾಗ ದೇವತೆಗಳು ಎಲ್ಲಿ ಹೋಗಿದ್ದರು? ಪದ್ಮನೆಂಬ ಹೆಸರಿನ ಬಲಭದ್ರ ಮತ್ತು ಕೃಷ್ಣ ಎಂಬ ಹೆಸರಿನ ನಾರಾಯಣ, ಇವರ ಸೇವೆಯನ್ನು ಸಾವಿರಾರು ಜನ ದೇವತೆಗಳು ಮಾಡುತ್ತಿದ್ದರು. ಆದರೆ ಅವರ ಪುಣ್ಯವು ತೀರಿದಾಗ, ಹೀನಕರ್ಮದ ಉದಯವು ಆದಾಗ ಅವರಿಗೆ ನೀರು ಹಾಕಲು ಒಬ್ಬ ಮನುಷ್ಯನೂ ಕೂಡ ಹತ್ತರ ಉಳಿಯಲಿಲ್ಲ ಸುದರ್ಶನ ಚಕ್ರದಿಂದಲೂ ಸಾಯದಂಥ ಕೃಷ್ಣನು ಒಬ್ಬ ಬೇಡನ ಬಾಣದಿಂದ ಮರಣಹೊಂದಿದನು ಇದೇ ಪ್ರಕಾರ ಅನೇಕ ಧ್ಯಾನಿ, ತಪಸ್ವಿ, ವ್ರತಿ, ಸಂಯಮಿಗಳು ಭಯಂಕರವಾದ ಉಪಸರ್ಗಗಳನ್ನೂ ಸಹನಮಾಡಿದರು. ಅವರಿಗಂತೂ ಯಾವ ದೇವರೂ ನೆರವಿಗೆ ಬರಲಿಲ್ಲ. ಉಳಿದವರಿಗೆ ಮಾತ್ರ ಸಹಾಯಕ್ಕೆ ಬಂದರು ಇದರಿಂದ ಒಂದು ಸಿದ್ಧಾಂತಕ್ಕೆ ಬರಬಹುದಾಗಿದೆ—ಅಶುಭ ಕರ್ಮದ ಉದಯವು ಮಂದವಾದಾಗ ಶುಭಕರ್ಮೋದಯವು ಉಂಟಾದಾಗ ಮಾತ್ರ ಯಾರಾದರೂ ಸಹಾಯಕ್ಕೆ ಬರುತ್ತಾರೆ ಉಳಿದ ವೇಳೆಯಲ್ಲಿ ದೇವಾದಿಗಳಾರೂ ಸಹಾಯಕ್ಕೆ ಬರುವದಿಲ್ಲ ಪಾಪಕರ್ಮದ ಉದಯವಿದ್ದಾಗ ಅನ್ಯಪದಾರ್ಥಗಳು ಒತ್ತಟ್ಟಿಗಿರಲಿ, ನಮ್ಮ ದೇಹವೂ ಸಹ ನಮಗೆ ವೈರಿಯಾಗುತ್ತದೆ. ಖರದೂಷಣನ ಪುತ್ರನಾದ ಶಂಬುಕುಮಾರನು ಹನ್ನೆರಡು ವರ್ಷಗಳ ವರೆಗೆ ಕಠೋರ ತಪವನ್ನು ಆಚರಿಸಿದನು ಅವನ ಸುತ್ತಲೂ ಬಿದಿರು ಮೆಳೆಯು ಕೂಡ ಬೆಳೆಯಿತು ಆಗ ಸೂರ್ಯಹಾಸ ಎಂಬ ಖಡ್ಗವು ಪ್ರಾಪ್ತವಾಯಿತು. ಆದರೆ ಆ ಶಕ್ತಿಯು ಸಹಜವಾಗಿ ಲಕ್ಷ್ಮಣನಿಗೆ

ದೊರೆಯಿತು ಇಷ್ಟೇ ಅಲ್ಲ, ಲಕ್ಷ್ಮಣನ ಸಹಜ ಕೃತಿಯಿಂದ ಆ ಖಡ್ಗವು ಶಂಬೂಕನ ತಲೆಯನ್ನೇ ಕತ್ತರಿಸಿತು ತನ್ನ ಹಿತಕ್ಕಾಗಿ ಸಾಧನೆಮಾಡಿದ ವಿದ್ಯೆಯು ಅವನನ್ನೇ ಘಾತಮಾಡಿತು ಇದರಿಂದ ಪೂರ್ವಕರ್ಮದ ಉದಯದಿಂದ ಅನೇಕ ಉಪಕಾರ ಅಪಕಾರಗಳು ಆಗುತ್ತವೆಂದು ಗೊತ್ತಾಗುತ್ತದೆ. ಯಾವ ದೇವತೆಯ ಆರಾಧನೆಯನ್ನು ಮಾಡಿದರೂ ದುಡ್ಡು, ಜೀವನದ ಉಪಕರಣ, ಸ್ತ್ರೀ, ಪುತ್ರ ಮೊದಲಾದವುಗಳು ಪ್ರಾಪ್ತವಾಗುವದಿಲ್ಲ

**ಪುಣ್ಯವೇ ಸಂಕಟವನ್ನು ನಷ್ಟಗೊಳಿಸುವಂಥದ್ದಿರುತ್ತದೆ.** ಈಗಿನ ಅನೇಕ ಜನ ರಾಜರು ದೇವ, ದೇವಿ, ಪೀರ, ಪೈಗಂಬರ, ಸ್ವಾಮಿ, ಫಕೀರ ಮೊದಲಾದ ಎಲ್ಲ ಧರ್ಮದ ಜನರಿಗೆ ಉಪಜೀವನದ ಸಾಧನಗಳನ್ನು ಒದಗಿಸಿದ್ದಾರೆ ಇದರಂತೆ ವೇದ-ಪುರಾಣಗಳನ್ನು ಪಠಣಮಾಡುವವರಿಗೂ ಯಜ್ಞ-ಯಾಗಾದಿ ಕರ್ಮಗಳನ್ನು ಮಾಡುವ ಬ್ರಾಹ್ಮಣರಿಗೂ ಸಹ ಭೂಮಿ ಮೊದಲಾದವುಗಳನ್ನು ಕೊಟ್ಟು ಅವರ ಜೀವನವು ವ್ಯವಸ್ಥಿತ ರೀತಿಯಿಂದ ಸಾಗುವಂತೆ ಮಾಡಿದ್ದಾರೆ. ಅಲ್ಲದೆ ಅಂಥವರಿಗೆ ದೊಡ್ಡ ಪ್ರಮಾಣದಲ್ಲಿ ಆದರ ಸತ್ಕಾರಗಳನ್ನು ಮಾಡಿ, ಲಕ್ಷಗಟ್ಟಲೆ ರೂಪಾಯಿ-ಗಳನ್ನು ದಾನವೆಂದು ಕೊಡುತ್ತಿದ್ದಾರೆ ಈ ಪ್ರಕಾರ ದೊಡ್ಡ ಪೂಜೆಗಳೂ ಬಲಿದಾನಗಳೂ ದೇವರಿಗೆ ಮುಟ್ಟುತ್ತಿದ್ದೂ ಕೂಡ ಅನೇಕರಿಗೆ ಆದಿಭೌತಿಕ ಸಂಕಟಗಳು ಪ್ರಾಪ್ತವಾಗುತ್ತಲೇ ಇವೆ. ಅವುಗಳನ್ನು ಇಲ್ಲದಂತೆ ಮಾಡುವ ಸಾಮರ್ಥ್ಯವು ಯಾವ ದೇವತೆಯ ಹತ್ತರವೂ ಇಲ್ಲ ಇಂಥ ಸ್ಥಿತಿಯನ್ನು ಪ್ರತ್ಯಕ್ಷ ಕಾಣುತ್ತಲಿದ್ದೂ ಕೂಡ ಅವರಿಗೆ ಈ ವಿಷಯದ ನಿಜವಾದ ಜ್ಞಾನವು ಇನ್ನೂ ಆಗುತ್ತ ಇಲ್ಲ. ಮಿಥ್ಯಾ ದೇವ ದೇವತೆಯರ ಪೂಜೆಯನ್ನು ಮಾಡುವವರೆಲ್ಲ ದೇವಮೂಢರಾಗಿದ್ದಾರೆ. ಮಂತ್ರಸಾಧನೆ, ವಿದ್ಯಾರಾಧನೆ, ದೇವಪೂಜೆ ಇವೆಲ್ಲ ನಮ್ಮ ಪುಣ್ಯಪಾಪಗಳಿಗೆ ಅನುಕೂಲವಿದ್ದು, ಆ ಪ್ರಕಾರ ಫಲವನ್ನು ಕೊಡುತ್ತವೆ. ಅದರಿಂದ ಸುಖವನ್ನು ಸಂಪಾದಿಸಬೇಕೆಂಬ ಇಚ್ಛೆಯುಳ್ಳವರು ಕ್ಷಮಾ, ದಯಾ, ಸಂತೋಷ, ನಿರಿಚ್ಛೆ, ಮಂದ ಕಷಾಯ, ವೀತರಾಗ ಭಾವಗಳನ್ನು ಧರಿಸಿ, ಒಂದು ಸತ್ಯಧರ್ಮದ ಆರಾಧನೆಯನ್ನೇ ಮಾಡಬೇಕು. ಉಳಿದ ಮಾರ್ಗದಿಂದ ಸುಖದ ಇಚ್ಛೆಯನ್ನು ಮಾಡಿ, ವ್ಯರ್ಥ ಪಾಪಬಂಧವನ್ನು ಮಾಡಿಕೊಳ್ಳಬಾರದು. ಒಂದು ವೇಳೆ ದೇವರ ಸಮಾಗಮವು ಇರಲೇಬೇಕು ಎಂಬ ಇಚ್ಛೆಯನ್ನು ಯಾರಾದರೂ ಮಾಡುವದಾದರೆ ಅವರು ಸಮ್ಯಗ್ದೃಷ್ಟಿ ಸೌಧರ್ಮೇಂದ್ರ ಮತ್ತು ಶಚೀ-ಇಂದ್ರಾಣೀ ಅಲ್ಲದೆ ಲೌಕಾಂತಿಕ ದೇವರ ಸಮಾಗಮವನ್ನು ಪ್ರಾಪ್ತಮಾಡಿಕೊಳ್ಳುವ ಇಚ್ಛೆಯನ್ನಾದರೂ ಮಾಡಬೇಕು ಉಳಿದ ನೀಚ ದೇವರ ಆರಾಧನೆಯನ್ನು ಮಾಡಿ, ಏನು ಸಾಧ್ಯವಾಗುವದಿದೆ?

**ಕ್ಷೇತ್ರಪಾಲರು ಪೂಜನೀಯರಲ್ಲ.** ಅಜ್ಞಾನೀ ಜನರು ಜೀನೇಶ್ವರನ ಪೂಜೆಯನ್ನು ಮಾಡುವಾಗ ಮೊದಲು ಕ್ಷೇತ್ರಪಾಲನ ಪೂಜೆಯನ್ನು ಮಾಡುತ್ತಾರೆ[1] ಅವರಿಗೆ ಮೊದಲು ಮೂರುಲೋಕಕ್ಕೆ ಪೂಜ್ಯನಾದ ಭಗವಂತನ ಪೂಜೆಯನ್ನು ಮಾಡುವದನ್ನು ಬಿಟ್ಟು, ಕ್ಷೇತ್ರಪಾಲನ ಪೂಜೆಮಾಡುವುದರಿಂದ ಏನು ಪ್ರಯೋಜನ? ಎಂದು ಯಾರಾದರೂ ಕೇಳಿದರೆ ಅವರು ಹೀಗೆ ಉತ್ತರ ಕೊಡುತ್ತಾರೆ— ರಾಜದರ್ಶನಕ್ಕೆ ಹೋಗುವಾಗ ಮೊದಲು ದ್ವಾರಪಾಲಕನನ್ನು ಒಲಿಸಿಕೊಳ್ಳಬೇಕು ಆಗ ರಾಜದರ್ಶನವಾಗುತ್ತದೆ ಅದರಂತೆ ಭಗವಂತನ ಪೂಜೆಯನ್ನು ಮಾಡುವ ಪೂರ್ವದಲ್ಲಿ ಕ್ಷೇತ್ರಪಾಲಕನನ್ನು ಪೂಜಿಸಬೇಕಾಗುತ್ತದೆ. ಕ್ಷೇತ್ರಪಾಲನನ್ನು ಉಳಿದು ಭಗವಂತನ ಕಡೆಗೆ

---

1 ಕ್ಷೇತ್ರಪಾಲಾದಿಗಳ ಪೂಜೆಯನ್ನು ಮಾಡುವುದು ಅಂದರೆ ಅವರನ್ನು ಅರಹಂತ ದೇವರಿಗೆ ಸಮಾನವೆಂದು ತಿಳಿದು ಪೂಜಿಸುವುದು —ಹೀಗೆ ಗ್ರಂಥಕರ್ತರ ಅಭಿಪ್ರಾಯವೆಂದು ತಿಳಿದು ಇಲ್ಲಿ ಅಲ್ಲಗಳೆಯಲಾಗಿದೆ ಆದರೆ ಸಮವಸರಣದಲ್ಲಿ ರಚನೆ ಹೇಗಿರುವುದೋ ಹಾಗೆಯೇ ಜಿನಮಂದಿರದಲ್ಲಿಯೂ ಇರಬೇಕು ಜಿನಮಂದಿರವು ಸಮವಸರಣದ ಪ್ರತಿಬಿಂಬವಾಗಿದೆ. ಇಲ್ಲಿಯ ರಚನೆಯು ಸಾಮಾನ್ಯ ಜನರಿಗೆ ಪ್ರಭಾವ ಬೀರುವಂತೆ ಇದ್ದು, ಧರ್ಮದ ಪ್ರೇಮ ಹಾಗೂ ಐಶ್ವರ್ಯಗಳ ಕಲ್ಪನೆಯು ಅವರಿಗೆ ಆಗಿ, ಅವರು ಧರ್ಮೋನ್ಮುಖರಾಗಬೇಕು ಇದೇ ಹೇತುವಿನಿಂದ ಜಿನಮಂದಿರಗಳನ್ನು ನಿರ್ಮಿಸಲಾಗಿರುತ್ತದೆ ಇಲ್ಲಿ ಪೂಜೆ ಎಂಬುದರ ಅರ್ಥವು ಸನ್ಮಾನವೆಂದೇ ಇಟ್ಟುಕೊಳ್ಳಬೇಕು. ಅನೇಕ ಆಚಾರ್ಯರು ಪ್ರತಿಷ್ಠೆಯೇ ಮೊದಲಾದ ಕಾರ್ಯ-ಗಳಲ್ಲಿ ಕ್ಷೇತ್ರಪಾಲನನ್ನು ಆಹ್ವಾನಿಸಿ, ಅವರ ಸನ್ಮಾನದರ್ಶಕ ಚಿಹ್ನವೆಂದು ಅರ್ಘ್ಯವನ್ನು ಕೊಡುತ್ತಾರೆ ಕ್ಷೇತ್ರಪಾಲನ ಹಾಗೂ ಭಗವಂತನ ಅರ್ಘ್ಯಮಂತ್ರಗಳಲ್ಲಿಯೂ ಅಂತರವಿದೆ ಕ್ಷೇತ್ರಪಾಲನಿಗೆ 'ಇದಂ ಜಲಂ ಚಂದನಂ ಅಕ್ಷತಂ ಚರುಂ ಪುಷ್ಪಂ ಫಲಂ ಅರ್ಘ್ಯಂ ಗೃಹಾಣ' ಎಂದು ಹೇಳಲಾಗಿದೆ ಆದರೆ ಭಗವಂತನ ಅರ್ಘ್ಯದಲ್ಲಿ 'ಇದಂ ಅರ್ಘ್ಯಂ ನಿರ್ವಪಾಮಿ ಸ್ವಾಹಾ' ಎಂದು ಅರ್ಪಿಸಲಾಗಿದೆ ಇದರಿಂದ ಇಬ್ಬರ ಯೋಗ್ಯತೆಯನ್ನು ಸಮಾನವೆಂದು ತಿಳಿದಿಲ್ಲವೆಂದು ಸ್ಪಷ್ಟವಾಗುತ್ತದೆ ಕೆಲವು ಮೂಢ ಜನರು ಕ್ಷೇತ್ರಪಾಲ ಹಾಗೂ ಅರಹಂತರನ್ನು ಸಮಾನವೆಂದು ಭಾವಿಸಿದ್ದರೆ ಅದು ಅವರ ಅಜ್ಞಾನವೆಂದು ತಿಳಿಯಬೇಕು ಅಲ್ಲದೆ ಅವರಿಗೆ ಬಲ್ಲವರು ಸತ್ಯಮಾರ್ಗವನ್ನೂ ತೋರಿಸಬೇಕು ಇದು ಜ್ಞಾನಿಗಳ ಕರ್ತವ್ಯವಾಗಿದೆ

ಪೂಜೆಯನ್ನು ತಲುಪಿಸುವವರು ಯಾರು? ಭಗವಂತನು ಮೋಕ್ಷದಲ್ಲಿ ಇರುವನೆಂಬ ವಿಚಾರವು ಆ ಮೂಢರಿಗೆ ಬರುವದಿಲ್ಲ. ಆ ಭಗವಂತನ ಪರಮಾತ್ಮ ಸ್ವರೂಪವನ್ನು ಈ ಮಿಥ್ಯಾದೃಷ್ಟಿ, ಅಜ್ಞಾನಿ ಕ್ಷೇತ್ರಪಾಲರು ಹೇಗೆ ತಿಳಿಯಲಿಕ್ಕೆ ಸಾಧ್ಯವಿದೆ? ಅವನ ಭೆಟ್ಟಿಯನ್ನಾದರೂ ಹೇಗೆ ಮಾಡಿಸಿಯಾನು? ಮತ್ತು ಅವನು ಸಂಕಟದ ನಾಶವನ್ನಾದರೂ ಹೇಗೆ ಮಾಡಬಲ್ಲನು? ಯಾರಿಗೆ ತಮ್ಮ ವಿಘ್ನಗಳನ್ನು ತಮಗೆ ನಷ್ಟಗೊಳಿಸಿಕೊಳ್ಳಲಿಕ್ಕೆ ಬರುವದಿಲ್ಲವೋ ಅವರಿಗೆ ಅನ್ಯರ ವಿಘ್ನಗಳನ್ನು ಇಲ್ಲದಂತೆ ಮಾಡುವುದು ಹೇಗೆ ಸಾಧ್ಯವಿದೆ? ವಿಚಾರವಿಲ್ಲದ ಜನರು ಕ್ಷೇತ್ರಪಾಲನ ಇಲ್ಲದ-ಸಲ್ಲದ ಕಲ್ಪನೆಯನ್ನು ಕಟ್ಟಿ ಭಗವಂತನ ಮಂದಿರದಲ್ಲಿ ಅವನನ್ನು ಸ್ಥಾಪಿಸಿದ್ದಾರೆ ಕ್ಷೇತ್ರಪಾಲನ ಸ್ವರೂಪವನ್ನು ನೋಡಿದರೆ ಅವನ ಕೈಯಲ್ಲಿ ಮಾನವನ ರುಂಡವಿದೆ ಇನ್ನೊಂದು ಕೈಯಲ್ಲಿ ಖಡ್ಗವಿದೆ. ಅಲ್ಲದೆ ಗದೆ ಮೊದಲಾದ ಶಸ್ತ್ರಗಳನ್ನು ಹಿಡಿದು, ನಾಯಿಯ ಮೇಲೆ ಕುಳಿತಿದ್ದಾನೆ. ಬೆಲ್ಲ ಎಣ್ಣೆಗಳನ್ನು ತಿನ್ನುವುದರಿಂದ ಅವನಿಗೆ ಸಂತೋಷವಾಗುತ್ತದೆ ಇದನ್ನೆಲ್ಲ ಹೇಳಿ, ಜನರ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಿದ್ದಾರೆ ಅದರಿಂದ ಮೂರ್ಖರು ಅವನ ಸ್ತುತಿ-ಪೂಜೆಗಳನ್ನು ಮಾಡುವರು ಇವೆಲ್ಲ ಮಿಥ್ಯಾದರ್ಶನ ಹಾಗೂ ಕುಜ್ಞಾನಗಳ ಪ್ರಭಾವವಾಗಿವೆ ಶ್ರೀ ಪಾರ್ಶ್ವನಾಥನ ಪ್ರತಿಮೆಯನ್ನು ಹಾವಿನ ಹೆಡೆಯ ಛತ್ರವಿಲ್ಲದೆ ನಿರ್ಮಿಸುವುದೇ ಇಲ್ಲ. ಸಮವಸರಣದಲ್ಲಿ ಭಗವಂತನ ತಲೆಯ ಮೇಲೆ ಧರಣೇಂದ್ರನು ತನ್ನ ಹೆಡೆಯನ್ನು ಹಿಡಿದುಕೊಂಡು ನಿಲ್ಲುವ ಸಂಭವವಿಲ್ಲ ಧರಣೇಂದ್ರನು ಶ್ರೀಪಾರ್ಶ್ವನಾಥನು ತಪಸ್ಸನ್ನು ಮಾಡುವಾಗ ಅವನ ಮೇಲೆ ಹೆಡೆಯ ನೆರಳನ್ನು ಹಿಡಿದಿದ್ದನು ಆ ನಂತರ ಅವನು ಎಲ್ಲಿಯೂ ಭಗವಂತನ ಸಲುವಾಗಿ ಸೇವೆಮಾಡಿದ್ದು ಕಂಡುಬರುವದಿಲ್ಲ. ಹಾಗೆ ವರ್ಣನೆಗಳೂ ಸಿಕ್ಕುವದಿಲ್ಲ ಪಾರ್ಶ್ವ ಜಿನೇಂದ್ರನು ಅರಿಹಂತನಾದನು ಇಂದ್ರನ ಆಜ್ಞೆಯಂತೆ ಕುಬೇರನು ಸಮವಸರಣವನ್ನು ರಚಿಸಿದನು. ಅದರಲ್ಲಿ ಭಗವಂತನು ಮಸ್ತಕದ ಮೇಲೆ ಹಾವಿನ ಹೆಡೆಯ ಹಂದರಸಹಿತ ವಿರಾಜಮಾನನಾದನೆಂದು ಎಲ್ಲಿಯೂ ವರ್ಣಿಸಿಲ್ಲ ನಾಲ್ಕು ಪ್ರಕಾರದ ದೇವರು, ಮನುಷ್ಯ, ತಿರ್ಯಂಚ ಜೀವಗಳು ಅಲ್ಲಿಗೆ ಬಂದು, ಧರ್ಮವನ್ನು ಕೇಳುತ್ತಾರೆ ಸ್ತುತಿ ವಂದನೆಗಳನ್ನು ಸಲ್ಲಿಸುತ್ತಾರೆ. ಆ ಸ್ಥಳದಲ್ಲಿ ಅರಿಹಂತನ ಬಿಂಬವನ್ನು ಹಾವಿನ ಹೆಡೆ ಸಹಿತ ಸ್ಥಾಪಿಸುವುದು ಹೇಗೆ ಸಂಭವಿಸುತ್ತದೆ? ವೀತರಾಗ ಮುದ್ರೆಯು ಹೀಗೆ ಇರಲಿಕ್ಕೆ ಸಾಧ್ಯವಿಲ್ಲ ಆದರೆ ಕಾಲಕ್ರಮದಲ್ಲಿ ಧರಣೇಂದ್ರನ ಪೂಜೆ ಪ್ರಭಾವಗಳನ್ನು ಹೆಚ್ಚಿಸುವದಕ್ಕಾಗಿ ವಿಪರೀತ ಕಲ್ಪನೆಯನ್ನು ರಚಿಸಿದರು. ಇದನ್ನು ಇಲ್ಲದಂತೆ ಮಾಡುವವರಾರು? ಕಲ್ಲಿನ ಸರ್ವಾಂಗ ಸುಂದರ ಮೂರ್ತಿಗಳನ್ನು ರಚಿಸುವಾಗ ಕಿವಿಗಳಿಗೂ ತಲೆಗೂ ಆಧಾರವಿರಲೆಂದು ಹೆಗಲಿಗೆ ಕಿವಿಗಳನ್ನು ಜೋಡಿಸುವಂತೆ ರಚಿಸುವರು ಇದರ ಮೂಲ ಉದ್ದೇಶವನ್ನು ಅರ್ಥಮಾಡಿಕೊಳ್ಳದೆ ಅನೇಕ ಧಾತುಗಳಿಂದ ನಿರ್ಮಿಸಿದ ಮೂರ್ತಿಗಳ ಕಿವಿಗಳನ್ನೂ ಸಹ ಹೆಗಲಿಗೆ ಹತ್ತುವಂತೆ ಮಾಡಿಬಿಡುತ್ತಾರೆ ಇವೆಲ್ಲ ಕಣ್ಣೆದುರಿಗೇ ನಡೆಯುವ ಅವಿಚಾರದ ಕೃತ್ಯಗಳಾಗಿವೆ. ಇದೇ ಪ್ರಕಾರ ಅರಿಹಂತನ ತಲೆಯ ಮೇಲೆ ಹೆಡೆಯ ಆಕಾರವನ್ನು ಕೆಲವರು ಮಾಡಿದ್ದನ್ನು ನೋಡಿ, ಅದನ್ನೇ ಮುಂದಿನ ಹಲವರು ಅನುಸರಿಸುತ್ತ ಬಂದು, ಒಂದು ಪರಂಪರೆಯೇ ಉಂಟಾಗಿದೆ ಹೆಡೆಯ ಹಂದರವನ್ನು ಭಗವಂತನ ಮೇಲೆ ನಿರ್ಮಿಸಲಾಗಿದೆಯೆಂದು ಧರಣೇಂದ್ರನನ್ನು ಪೂಜ್ಯನೆಂದು ತಿಳಿಯುವುದು ಮೂರ್ಖತನ ವಾಗಿದೆ ಇದರಂತೆ ಅನೇಕ ಪ್ರಕಾರದ ದೇವಮೂಢತೆಗಳು ಇವೆ ಗಣಪತಿ, ಹನುಮಂತ, ಯೋನಿ-ಲಿಂಗ, ಚತುರ್ಮುಖ, ಷಣ್ಮುಖ ಇವರಲ್ಲಿ ಮೂಲದಲ್ಲಿಯೇ ದೇವತ್ವವಿಲ್ಲ, ಇವರನ್ನೂ ತಿರ್ಯಂಚ ಸ್ವರೂಪವನ್ನೂ ಆಲ, ಬನರಿ ಮೊದಲಾದ ವೃಕ್ಷಗಳನ್ನೂ ದೇವರೆಂದು ಮನ್ನಿಸುವುದು ಇವೇ ಮೊದಲಾದವುಗಳೆಲ್ಲ ದೇವಮೂಢತೆಯಲ್ಲಿ ಸಮಾವೇಶವಾಗುತ್ತವೆ

ಅನಲನನರ್ಕನಂ ಶಶಿಯನಿಂದ್ರನನಂತಕನಂ ಮರಂಗಳಂ
ವಸಥಿಯನುರ್ವಿಯಂ ಮಡಕೆಯಂ ತೊರೆಯಂ ಕೆರೆಯಂ ಗೃಹಂಗಳಂ ।
ಜನನಿಯನಯ್ಯನಂ ಪಶುಪಸೆತ್ತುಗಳಂ ಕುಲದೈವಮೆಂದು ಮೆ-
ಲ್ಲನೆ ಪೊಡಮಟ್ಟು ಪೂಜಿಸುವ ಗಾಂಪನೆ ದೈವವಿಮೂಢನುರ್ವಿಯೊಳ್ ॥

—ನಯಸೇನ-ಧರ್ಮಾಮೃತಂ ೫-೨೪೮

ಇನ್ನು ಪಾಖಂಡೀ ಮೂಢತನವನ್ನು ವಿವರಿಸುತ್ತಾರೆ—

ಸಗ್ರಂಥಾರಂಭಹಿಂಸಾನಾಂ ಸಂಸಾರಾವರ್ತವರ್ತಿನಾಮ್ ।
ಪಾಖಂಡಿನಾಂ ಪುರಸ್ಕಾರೋ ಜ್ಞೇಯಂ ಪಾಖಂಡಿಮೋಹನಮ್ ॥ ೨೪ ॥[1]

ಅನ್ವಯಾರ್ಥ—(ಸಗ್ರಂಥಾರಂಭಹಿಂಸಾನಾಂ) ಪರಿಗ್ರಹ, ಆರಂಭ ಮತ್ತು ಹಿಂಸೆಗಳಿಂದ ಕೂಡಿದ (ಸಂಸಾರಾವರ್ತವರ್ತಿನಾಮ್) ಸಂಸಾರವೆಂಬ ತಿರುಗಣಿಯಲ್ಲಿ ಸುತ್ತುತ್ತಿರುವಂಥ (ಪಾಖಂಡಿನಾಂ) ಪಾಖಂಡೀ ಸಾಧುವಿನ (ಪುರಸ್ಕಾರಃ) ಪೂಜೆ, ಆದರ ಸತ್ಕಾರಗಳನ್ನು ಮಾಡುವದು (ಪಾಖಂಡಿಮೋಹನಮ್) ಪಾಖಂಡಿ ಮೂಢತೆಯು (ಜ್ಞೇಯಂ) ಎಂದು ತಿಳಿಯುವುದು

ಅರ್ಥ—ಪರಿಗ್ರಹವನ್ನು ಇಟ್ಟುಕೊಂಡು, ಆರಂಭ ಹಾಗೂ ಹಿಂಸೆಗಳನ್ನು ಮಾಡುವಂಥವನೂ ಸಂಸಾರದಲ್ಲಿ ಪರಿಭ್ರಮಣ ಮಾಡುವವನೂ ಆದ ಮಿಥ್ಯಾದೃಷ್ಟಿ ಸಾಧುವನ್ನು (ನಿಜವಾದ ಸಾಧುವೆಂದು ತಿಳಿದು) ಪೂಜಿಸುವುದು ಪಾಖಂಡೀ ಮೂಢತೆಯೆನಿಸುತ್ತದೆ [ಇಲ್ಲಿ 'ಪಾಖಂಡಿನ್' ಎಂಬ ಪದವನ್ನು ಇತ್ತೀಚೆಗೆ ರೂಢಿಯಲ್ಲಿರುವ ಧೂರ್ತ, ಡಾಂಭಿಕ, ಕಪಟಿ ಮೊದಲಾದ ವಿಕೃತ ಅರ್ಥಗಳಲ್ಲಿ ಪ್ರಯೋಗಿಸಿರುವದಿಲ್ಲ ಅದರ ಮೂಲ ಅರ್ಥದಲ್ಲಿ ಉಪಯೋಗಿಸಲಾಗಿದೆ 'ಪಾಪಂ ಖಂಡಯತೀತಿ ಪಾಖಂಡೀ' ಈ ನಿರುಕ್ತದ ಅರ್ಥವು 'ಸತ್ಸಾಧು' ಎಂದಿದೆ ಎಂದರೆ ಇವನು ಪಾಪವನ್ನು ಖಂಡನ ಮಾಡುವಂಥವನೆಂದು ಪಾಖಂಡಿಗೆ ಪ್ರಾಚೀನವಾದ ಮೂಲ ಅರ್ಥವಿದೆ. ಇದೇ ಅರ್ಥದಲ್ಲಿ 'ಪಾಖಂಡಿನ್' ಪದವು ಭಗವನ್ ಕುಂದಕುಂದಾಚಾರ್ಯರ 'ಸಮಯಸಾರ'ದಲ್ಲಿಯೂ ಪ್ರಯೋಗಿಸಲಾಗಿದೆ[2] ಇಲ್ಲದೆ ಇನ್ನೂ ಅನೇಕ ಪ್ರಾಚೀನ ಗ್ರಂಥಗಳಲ್ಲಿಯೂ ಈ ಮೂಲ ಅರ್ಥದಲ್ಲಿಯೇ ಈ ಪದವನ್ನು ಉಪಯೋಗಿಸಲಾಗಿದೆ ಈ ಶ್ಲೋಕದಲ್ಲಿ 'ಪಾಖಂಡಿನಾಂ' ಎಂಬ ಪದಕ್ಕೆ ಎರಡು ವಿಶೇಷಣಗಳಿವೆ. ಒಂದು 'ಸಗ್ರಂಥಾರಂಭ ಹಿಂಸಾನಾಂ' ಎಂದು, ಇನ್ನೊಂದು 'ಸಂಸಾರಾವರ್ತವರ್ತಿನಾಂ' ಎಂಬುದು. ಈ ವಿಶೇಷಣ ಮೊದಲಾದವುಗಳಿಂದ ಇಲ್ಲಿಯ ಭಾವವು ಪರಿಗ್ರಹ, ಆರಂಭ, ಹಿಂಸಾದಿಗಳಿಂದ ಕೂಡಿದವನೂ ಸಂಸಾರದಲ್ಲಿ ಇರುವಂಥವನೂ ಆದ ಸಾಧುವು ವಾಸ್ತವಿಕವಾಗಿ ಪಾಖಂಡಿ (ಪಾಪವನ್ನು ಖಂಡನ ಮಾಡುವಂಥ) ನಿಜವಾದ ಸಾಧುವಲ್ಲ ಇಂಥವನನ್ನು ಸತ್‌ಸಾಧುವೆಂದು ತಿಳಿದು ಮನ್ನಿಸುವುದು ಪಾಖಂಡಿಮೂಢವೆನಿಸುತ್ತದೆ ಇದೇ ಗ್ರಂಥದಲ್ಲಿ ನಿಜವಾದ ಸಾಧುವಿನ ಲಕ್ಷಣವನ್ನು 'ವಿಷಯಾಶಾವಶಾತೀತೋ ನಿರಾರಂಭೋಽಪರಿಗ್ರಹಃ' ಇತ್ಯಾದಿ ವಿವರಗಳಿಂದ ಸೂಚಿಸಲಾಗಿದೆ ಇನ್ನು ಪಾಖಂಡಿಯ ಸ್ವರೂಪದ ವಿಷಯಕ್ಕಿರುವ ಅಜ್ಞಾನವು ಒಂದು ತರದ ದರ್ಶನಮೋಹವನ್ನು ಸೂಚಿಸುತ್ತದೆ ಇಂಥ ದರ್ಶನ ಮೋಹದಿಂದ ಕೂಡಿದವನು ಸಮ್ಯಗ್ದೃಷ್ಟಿಯೆನಿಸುವದಿಲ್ಲ ಸ ಧ ]

ವಿಶೇಷಾರ್ಥ—ಜಿನಧರ್ಮದಲ್ಲಿ ಶ್ರದ್ಧೆಯೂ ಜ್ಞಾನವೂ ಮೂಲದಲ್ಲಿ ಇಲ್ಲದ ಅನೇಕ ಜನ ವೇಷಧಾರಿ ಸಾಧುಗಳು ಇರುತ್ತಾರೆ. ಅವರು ತಮ್ಮಷ್ಟಕ್ಕೆ ತಾವು ಶ್ರೇಷ್ಠರೆಂದು ತಿಳಿಯುತ್ತಾರೆ ಜಗತ್ತಿನಲ್ಲಿ ಜನರ ಕಡೆಯಿಂದ ತಮಗೆ ಆದರ ಸತ್ಕಾರಗಳು ಆಗಬೇಕೆಂದು ಇಚ್ಛಿಸುತ್ತಾರೆ ಇಂಥವರು ಪರಿಗ್ರಹವಿಟ್ಟು ಒಕ್ಕಲತನವೇ ಮೊದಲಾದ ಉದ್ಯೋಗಗಳನ್ನು ಮಾಡುವರು ಯಜ್ಞ ಮೊದಲಾದವುಗಳಲ್ಲಿ ಹಿಂಸೆಯನ್ನೂ ಮಾಡುವರು ಇಂದ್ರಿಯಗಳ ವಿಷಯದ ಮೇಲೆ ಪ್ರೀತಿಯನ್ನಿಡುವಂಥ ಸಂಸಾರಿಗಳೂ ಅಸಂಯಮಿಗಳೂ ಅಜ್ಞಾನಿಗಳೂ ಆದಂಥ ಜನರ ಕೂಡ

---

1 ಆಯತವರ್ಮನು ಹೇಳುವದು ಹೀಗೆ ಪಾಷಂಡಿಮೂಢವೆಂಬುದಂತೆಂದೊಡೆ—
ಕಂದ ॥ ವ್ರತಹೀನರಾಗಿ ಸಂಸೃತಿಲತೆಯೊಳು ತೊಡರ್ದಿರ್ದುನಮೆವ ಪಾಷಂಡಿಗಳಂ ॥
ಸತತಂ ಪೂಜಿಪಡರ್ಪನ್ಮತದೊಳು ಪಾಷಂಡಿ ಮೂಢವೆಂಬರ್ವಿಬುಧರ್ ॥ ೧೭ ॥
ವಚನ—ಅಂತಾ ಪಾಷಂಡಿಗಳಾರೆಂದೊಡೆ ಕೋಲೆಯುಂ ಪುಸಿಯುಂ ಡಂಬಡಿಂಬ ರಾಗದ್ವೇಷ ಮಿಥ್ಯಾತ್ವಂಗಳು-ಮೆಂದಿವು ಮೊದಲಾಗೊಡೆಯ ರಾಗ ದ್ವೇಷಂಗಳೊಳ್ಕೂಡಿದಾಗವುದೊಳಾಪ್ತ ನಿನ್ನನೆಂದರಿ [ದು] . . ಅಜ್ಞಾನಿ ಜನಂಗಳ ಮೋಹನೀಯೇಂದ್ರಿಯ ಸುಖಂಗಳಂ ಬಯಸಿ ನಿದಾನಪೂರ್ವಕಂ ದಂಡಮುಂ ಜಡೆಜಟಾವಲ್ಕಲ . . ಪಟಾ ನೀಲಪಟಾ ಶ್ವೇತಪಟಾ ಹಂಸ ಪರಮಹಂಸ ಪ್ರಭೃತಿ ಪಾಷಂಡಿಗಳಂ ಕೊಂಡಾಡುವುದುಂ ಕಾಲಂ ಕೆರ್ಚುವುದುಂ ಭಕ್ತಿಗೆಯ್ವುದುಂ ಪಾಷಂಡಿಮೂಢವೆಂಬುದಕ್ಕುಮಿಂತೀ ತ್ರೀಮೂಢಂಗಳು ಮಿಲ್ಲದಾತಂ ಸಮ್ಯಗ್ದೃಷ್ಟಿಯಕ್ಕುಂ
2 "ಪಾಖಂಡೀ-ಲಿಂಗಾಣಿ ವ ಗಿಹಲಿಂಗಾಣಿ ವ ಬಹುಪ್ಪಯಾರಾಣಿ" —ಸಮಯಸಾರ ೪೦೮.

ಹರಟೆಯನ್ನು ಹೊಡೆಯುವುದರಲ್ಲಿ ತಮ್ಮ ದೊಡ್ಡಸ್ತಿಕೆಯನ್ನು ಅಭಿಮಾನವನ್ನೂ ಪ್ರದರ್ಶಿಸುತ್ತಾರೆ ತಮ್ಮಷ್ಟಕ್ಕೆ ತಾವೇ ಆಚಾರ್ಯರೆಂದೂ ಪೂಜ್ಯ ಸಾಧುಗಳೆಂದೂ ಅನ್ನಿಸಿಕೊಳ್ಳುತ್ತಾರೆ. ಶೃಂಗಾರ ಶಾಸ್ತ್ರ, ಯುದ್ಧ ಶಾಸ್ತ್ರ, ಹಿಂಸೆಗೆ ಕಾರಣವಾಗಿರುವ ಆರಂಭಶಾಸ್ತ್ರ, ರಾಗದ್ವೇಷಗಳನ್ನು ಬೆಳೆಯಿಸುವ ಶಾಸ್ತ್ರ ಇವೇ ಮೊದಲಾದ ಶಾಸ್ತ್ರಗಳಿಗೆ ಸ್ವತಃ ಮಹಂತರಾಗಿ ಉಪದೇಶ ಮಾಡಲಿಕ್ಕೆ ತೊಡಗುತ್ತಾರೆ ಇಂಥ ಜನರಿಗೆ ಅನೇಕ ಪ್ರಕಾರದ ಸವಿಯಾದ ಊಟದ ಇಚ್ಛೆ ಇರುವುದರಿಂದ, ಅದಕ್ಕೆ ಅವರು ಲೋಲುಪರಾಗಿರುವುದರಿಂದ ಕಾಮವಿಕಾರದ ಕಥೆಗಳನ್ನು ಹೇಳುವುದರಲ್ಲಿ ಆನಂದವೆನಿಸುತ್ತದೆ. ಅದಕ್ಕಾಗಿ ಅವರು ಆ ರೀತಿಯಲ್ಲಿ ಪರಿಗ್ರಹವನ್ನು ಬೆಳೆಯಿಸಿಕೊಳ್ಳುವದಕ್ಕಾಗಿ ಯಾವಾಗಲೂ ಅದೇ ಪ್ರಕಾರದ ದುರ್ಧ್ಯಾನವನ್ನು ಮಾಡುತ್ತಿರುತ್ತಾರೆ. ಜನರು ತನ್ನನ್ನು ಪೂಜ್ಯನೆಂದು ತಿಳಿದು, ನಮಸ್ಕಾರ ಮಾಡಲೆಂದು ಇಚ್ಛಿಸುತ್ತಾರೆ ಇವರು ಅಲ್ಲದ ಸಲ್ಲದ ಕಥೆಗಳನ್ನು ಹೇಳುತ್ತಾರೆ, ವಿಷಯಗಳನ್ನು ಸೇವಿಸುತ್ತಾರೆ, ಮಂತ್ರ, ತಂತ್ರ, ಜಪ, ಹೋಮ, ಮಾರಣ, ಉಚ್ಚಾಟಣ, ವಶೀಕರಣಗಳಂಥ ನಿಂದ್ಯ ಆಚರಣೆಯನ್ನು ಇಟ್ಟು-ಕೊಳ್ಳುವರು. ಅದರಲ್ಲಿ ತತ್ಪರರೂ ಇರುತ್ತಾರೆ ಇವರೆಲ್ಲ ನಿಜವಾದ ಸಾಧುಗಳಲ್ಲ. ಇಂಥ ಜನರ ಮಾತಿನ ಮೇಲೆ ವಿಶ್ವಾಸವಿಡುವುದು, ಅವರ ಸತ್ಕಾರಮಾಡುವುದು, ಅವರು ಹೇಳಿದ ಧರ್ಮಕಾರ್ಯವು ಶ್ರೇಷ್ಠವೆಂದು ತಿಳಿಯುವುದು— ಇವೆಲ್ಲ ಪಾಖಂಡಿ ಮೂಢತೆ ಎನಿಸುತ್ತವೆ.

> ಧರ್ಮೋಪದೇಶವಿಲ್ಲದೆ ಕರ್ಮವನುಪಶಮಿಪ ಚರಿತವಿಲ್ಲದೆ ದುಃಖ- ।
> ಕ್ಕಾರ್ಮವೆನಿಸಿರ್ದ ಲೌಕಿಕ ಧರ್ಮದೊಳೆಸಗುವನೆ ಸಮಯಮೂಢಂ ನೃಪತೀ ॥
> ವರವೀವುದೆಂದು ದೈವಮ ನೆರೆವವನುಂ ದೈವಮಿಗಳೀವುದು ಪುಸಿಯೇ ।
> ಪರಮಾರ್ಥವೆಂದು ನಂಬುವ ನರನುಂ ಭೂತಾಲ ಸಮಯಮೂಢನೆನಿಕ್ಕುಂ ॥
>
> —ಧರ್ಮಾಮೃತಂ-೫-೩೪೨, ೪೩.

ಈಗ ಎಂಟು ಮದಗಳ ವಿಷಯಕ್ಕೆ ಹೇಳುತ್ತಾರೆ—

> ಜ್ಞಾನಂ ಪೂಜಾಂ ಕುಲಂ ಜಾತಿಂ ಬಲಮೃದ್ಧಿಂ ತಪೋ ವಪುಃ ।
> ಅಷ್ಟಾವಾಶ್ರಿತ್ಯ ಮಾನಿತ್ವಂ ಸ್ಮಯಮಾಹುರ್ಗತಸ್ಮಯಾಃ ॥ ೨೫ ॥[1]

ಅನ್ವಯಾರ್ಥ—(ಜ್ಞಾನಂ) ಜ್ಞಾನವು (ಪೂಜಾಂ) ಪೂಜೆ, ಆದರ ಸತ್ಕಾರಗಳು (ಕುಲಂ) ಕುಲವು (ಜಾತಿಂ) ಜಾತಿಯು (ಬಲಂ) ಶಕ್ತಿಯು (ಋದ್ಧಿಂ) ಅಣಿಮಾದಿ ಎಂಟು ಋದ್ಧಿಗಳು ಅಥವಾ ಲೌಕಿಕ ಪುತ್ರ-ಪೌತ್ರಾದಿ ಸಂಪತ್ತಿಗಳು, (ತಪಃ) ತಪಸ್ಸು (ವಪುಃ) ಶರೀರ ಸೌಂದರ್ಯವು ಇವು (ಅಷ್ಟೌ) ಎಂಟು ಸಂಗತಿಗಳನ್ನು (ಆಶ್ರಿತ್ಯ) ಆಶ್ರಯಿಸಿ (ಮಾನಿತ್ವಮ್) ಗರ್ವ—ಅಭಿಮಾನಗಳನ್ನು ಮಾಡುವುದಕ್ಕೆ-(ಗತಸ್ಮಯಾಃ) ಆಪ್ತಪುರುಷರು ಮದವೆಂದು ಹೇಳುತ್ತಾರೆ

---

[1] ಆಯತವರ್ಮನು ಹೇಳುವದು ಹೀಗೆ

ಕಂದ ॥ ಮದವೆಂಬುದು ಮಿಥ್ಯಾತ್ವದ ಮೊದಲದು ತಾನೆಂಟು ಬೇದಮಕ್ಕುಂ ತನ್ನೊ- ।
ಳ್ಪುದಿತಮವೆಂಟುಂ ಪೋದಡೆ ಮದವಿರಹಿತ ದರ್ಶನೀಕನೆನಿಕುಂ ಪುರುಷಂ ॥ ೧೯ ॥

ಆ ಎಂಟು ಮದಂಗಳಾವುವೆಂದೊಡೆ— ಅರಿತಮುಂ ಪೂಜೆಯುಂ ಕುಲಮಂ ಜಾತಿಯುಂ ಸತ್ವಮುಂ ಶ್ರೀಯುಸ್ಸುಂ ತಪಮುಂ ರೂಪಮೆಂದಕ್ಕುಮಲ್ಲಿಯು ಜ್ಞಾನಾವರಣೀಯಕ್ಷಯೋಪ [ಶ] ಮದೊಳು ತನಗಾದಲ್ಪಜ್ಞಾನಮಂ ಕಂಡೆಲ್ಲರಿಂ ನಾನೆ ಶಾಸ್ತ್ರಜ್ಞನೆ ನಾನಾಗಮಿಕನೆಂಬಹುಶ್ರುತನೆಂಬುದರಿತದ ಮದಂ, ಲಾಭಾಂತರಾಯಕ್ಷಯೋಪಶಮದೂಳು ತನಗಾದಮನ್ನಣೆಯುಂ ಕಂಡು ಲೋಕದೊಳೆನ್ನಂತು ಪೂಜ್ಯರುಂ ಮಾನ್ಯರುಮಿಲ್ಲೆಂಬುದು ಪೂಜೆಯ ಮದಂ, ತಂದೆಯುದೆಶೆಯಿಂ ಬಂದನ್ವಯ ಶುದ್ಧಿಯಂ ಕಂಡೆನ್ನಂತು ಕುಲಜರಾರುಮಿಲ್ಲೆಂಬುದು ಕುಲದ ಮದಂ, ತಾಯದೆಶೆಯಿಂ ಬಂದನ್ವಯ ಶುದ್ಧಿಯಂ ಕಂಡಾನೆ ಶುದ್ಧ ಜಾತಿಯ-ನೆಂಬುದು ಜಾತಿ ಮದಂ, ವೀರ್ಯಾಂತರಾಯಕ್ಷಯೋಪ ಶಮದೊಳು ತನಗಾದ ವೀರ್ಯಮಂ ಕಂಡು ಆರಿಂದಮಾನೆ ಸತ್ವಾಧಿಕ-ನೆಂಬುದು ಸತ್ವದ ಮದಂ, ಲಾಭಾಂತರಾಯ ಕ್ಷಯೋಪಶಮದೊಳು ತನಗಾದ ಶ್ರೀಸಂಪತ್ತಂ ಕಂಡೆನಗೆ ಸಮಾನರು ಲೋಕದೊಳು ಶ್ರೀಮಂತರಾರುಮಿಲ್ಲೆಂಬುದು ಶ್ರೀಯದಮದಂ, ಶುಭನಾಮ ಕರ್ಮದೊಳ್ತನಗಾದ ಚೆಲ್ವಂ ಕಂಡೆನ್ನಂತು ಚೆಲ್ವರಿಲ್ಲೆಂಬುದು ರೂಪಿನಮದಂ—ಇತೀಯೆಂಟು ಮದಂಗಳಿಲ್ಲದೊಂ ಸಮ್ಯಗ್ದೃಷ್ಟಿಯಕ್ಕುಂ.

ಅರ್ಥ—ಜ್ಞಾನ, ಪೂಜೆ, ಕುಲ, ಜಾತಿ, ಬಲ, ಐಶ್ವರ್ಯ, ತಪ ಮತ್ತು ಶರೀರ ಈ ಎಂಟು ಪದಾರ್ಥ-ಗಳನ್ನು ಅವಲಂಬಿಸಿ ಮಾನವನಲ್ಲಿ ಸೊಕ್ಕು ಉಂಟಾಗುತ್ತದೆ ಇವುಗಳಿಗೆ ಎಂಟು ಮದಗಳೆಂದು ಗಣಧರರು ಹೇಳಿದ್ದಾರೆ. [ಇಲ್ಲಿ ಆಶ್ರಯದ ಭೇದದಿಂದ ಮದವು ಎಂಟು ವಿಧವಾಗುತ್ತದೆಂದು ಹೇಳಿದೆ. ಈ ಜ್ಞಾನಮದ ಮೊದಲಾದವುಗಳು ಮದದ ಸ್ಥೂಲ ಭೇದಗಳಾಗಿವೆ ಇವುಗಳಲ್ಲಿ ಸೂಕ್ಷ್ಮ ಭೇದಗಳೂ ಅನೇಕವಾಗುತ್ತವೆ. ಜ್ಞಾನಮದದ ವಿಷಯ ಒಂದನ್ನು ತಕ್ಕೊಂಡರೂ ಸಿದ್ಧಾಂತ, ನ್ಯಾಯ, ವ್ಯಾಕರಣ, ಛಂದ, ಅಲಂಕಾರ, ಗಣಿತ, ನಿಮಿತ್ತ, ವೈದ್ಯಕ, ಜ್ಯೋತಿಷ, ಮಂತ್ರ–ತಂತ್ರ, ಭೂ–ಗರ್ಭ, ಶಿಲ್ಪ–ಕಲಾ, ವ್ಯೋಮವಿದ್ಯಾ ಮತ್ತು ಪದಾರ್ಥ ವಿಜ್ಞಾನ ಹೀಗೆ ಅನೇಕವಾಗಿವೆ. ಇದರಲ್ಲಿ ಯಾವುದೊಂದನ್ನೇ ಆಶ್ರಯಿಸಿ ಗರ್ವಮಾಡಿದರೂ ಅದು ಆ ವಿಷಯದ ಜ್ಞಾನಮದವಾದಂತಾಯಿತು ಬಲದಲ್ಲಿ ಮನೋಬಲ, ವಚನಬಲ, ಕಾಯಬಲ, ಧನಬಲ, ಜನಬಲ, ಸೇನಾಬಲ, ಅಸ್ತ್ರಬಲ, ಶಸ್ತ್ರಬಲ, ಮಿತ್ರಬಲ, ಅಧಿಕಾರಬಲ ಇಂಥವುಗಳೆಲ್ಲ ಸಮಾವೇಶವಾಗುತ್ತವೆ ಇವು ಬಲಮದಗಳಾಗಿವೆ. ಇದೇ ಪ್ರಕಾರ ಋದ್ಧಿ ಮೊದಲಾದವುಗಳಲ್ಲಿ ನೂರಾರು ಭೇದಗಳಾಗುತ್ತವೆ ಮದ–ಮಾನ–ಅಹಂಕಾರ ಎಂಬುದು ಆತ್ಮನ ಅಧೋಗತಿಗೆ ಕಾರಣವಾಗಿದೆ. ಅದರಿಂದ ಇದು ಸಮ್ಯಗ್ದರ್ಶನದ ಜೊತೆಯಲ್ಲಿ ಇರಲಾರದು ಯಾಕೆಂದರೆ ಆತ್ಮನ ಉನ್ನತಿ ಹಾಗೂ ವಿಕಾಸಕ್ಕೆ ಸಮ್ಯಗ್ದರ್ಶನವು ಕಾರಣವಾಗಿದೆ ಸ ಧ]

**ವಿಶೇಷಾರ್ಥ—ಜ್ಞಾನಮದ.** ಜ್ಞಾನದ ಗರ್ವ, ಪೂಜೆಯ ಗರ್ವ, ಕುಲದ ಗರ್ವ, ಜಾತಿಯ ಗರ್ವ, ಬಲದ ಗರ್ವ, ಐಶ್ವರ್ಯದ ಗರ್ವ, ತಪದ ಗರ್ವ, ಶರೀರದ ಗರ್ವ—ಈ ಎಂಟು ವಿಧದ ಗರ್ವಗಳನ್ನು ಸಮ್ಯಗ್ದೃಷ್ಟಿ ಪುರುಷನು ಮಾಡುವದಿಲ್ಲ ಇವುಗಳಲ್ಲಿ ಒಂದೇ ಪ್ರಕಾರದ ಸೊಕ್ಕು ಇದ್ದರೂ ಅವರಿಗೆ ಸಮ್ಯಕ್ತ್ವವಿರುವುದು ಸಾಧ್ಯವಿಲ್ಲ ಸಮ್ಯಗ್ದೃಷ್ಟಿ ಪುರುಷರು ಜ್ಞಾನಮದದ ವಿಷಯದಲ್ಲಿ ತಮ್ಮ ಮನಸ್ಸಿನಲ್ಲಿ ಹೀಗೆ ವಿಚಾರಿಸುತ್ತಾರೆ— "ಎಲೈ ಆತ್ಮನೇ, ನಿನಗೆ ಇಂದ್ರಿಯಗಳಿಂದ ಉತ್ಪನ್ನವಾದಂಥ ಜ್ಞಾನವು ಪ್ರಾಪ್ತವಾಗಿದೆ ಇದರ ಗರ್ವವನ್ನು ಏನೆಂದು ಮಾಡುವಿ? ಎಲೆ, ಈ ಜ್ಞಾನವು ಜ್ಞಾನಾವರಣದ ಕ್ಷಯೋಪಶಮದ ಸ್ವಾಧೀನವಿರುತ್ತದೆ ಅಲ್ಲದೆ ನಾಶವಾಗುವಂಥದೂ ಇರುತ್ತದೆ. ಇದು ಇಂದ್ರಿಯಗಳ ಹಾಗೂ ವಾತ–ಪಿತ್ತ–ಕಫಾದಿಗಳ ಸ್ವಾಧೀನವಿದೆ ಇದು ಯಾವಾಗ ನಾಶವಾದೀ-ತೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ ಅಂದ ಮೇಲೆ ಇದರ ಗರ್ವವೇಕೆ? ಇಂದ್ರಿಯಗಳು ನಷ್ಟವಾದಾಗ ನಿನ್ನ ಆ ಜ್ಞಾನವೂ ಇಲ್ಲದಂತಾಗುತ್ತದೆ ವಾತ–ಪಿತ್ತ–ಕಫಾದಿಗಳು ಹೆಚ್ಚುಕಡಿಮೆಯಾದಂತೆ ನಿನ್ನ ಈ ಜ್ಞಾನವೂ ವಿಪರೀತವಾಗಿ ಹೋಗುತ್ತದೆ ಈ ಇಂದ್ರಿಯಗಳಿಂದ ಹುಟ್ಟುವ ಜ್ಞಾನವು ಪರ್ಯಾಯಗಳ ಸಂಗಡವೇ ಇಲ್ಲದಂತೆ ಆಗುವಂಥದ್ದಿರುತ್ತದೆ. ಏ, ನೀನು ಅನೇಕ ಸಲ ಏಕೇಂದ್ರಿಯ ಜೀವವಾಗಿದ್ದಿ, ಆಗ ನಿನಗೆ ಉಳಿದ ನಾಲ್ಕು ಇಂದ್ರಿಯಗಳು ಇರಲಿಲ್ಲ ಏಕೇಂದ್ರಿಯವಾಗಿದ್ದಾಗ ಜಡರೂಪದಲ್ಲಿದ್ದು, ಕಲ್ಲು, ಧೂಳುಗಳಂಥ ಪೃಥ್ವೀಸ್ವರೂಪವಾಗಿರುವಾಗ ಅಜ್ಞಾನಿಯಾಗಿಯೇ ಅಸಂಖ್ಯಾತ ಕಾಲವನ್ನು ಕಳೆದಿರುವೆ ಅನೇಕ ಸಲ ವಿಕಲತ್ರಯದಲ್ಲಿಯೂ ಜನಿಸಿರುವೆ ಆಗ ನಿನಗೆ ಹಿತಾಹಿತದ ಜ್ಞಾನವೂ ಇರಲಿಲ್ಲ ಹಲವು ಸಲ ನಾಯಿ, ಹುಲಿ, ಹಾವು ಮೊದಲಾದ ಯೋನಿಗಳಲ್ಲಿ ಜನ್ಮ ತಕ್ಕೊಂಡು ಸುತ್ತಿರುವಿ. ನಿಗೋದದಲ್ಲಿಯಂತೂ ಅಕ್ಷರದ ಅನಂತಾಂಶದಷ್ಟು ಜ್ಞಾನ ಮಾತ್ರ ಇತ್ತು ಮಿಥ್ಯಾತ್ವದ ಪ್ರಭಾವದಿಂದ ಆತ್ಮಜ್ಞಾನವು ಆಗಲಿಲ್ಲವೆಂದು, ಅಲ್ಲಿಂದ ಪುನಃ ಏಕೇಂದ್ರಿಯ ಯೋನಿಯಲ್ಲಿ ಹುಟ್ಟಿ, ಅನಂತಕಾಲದವರೆಗೆ ಸುತ್ತಬೇಕಾಯಿತು ಮನುಷ್ಯಯೋನಿಯಲ್ಲಿ ಜನಿಸಿದರೂ ಕೂಡ ತೀರ ಕಡಿಮೆ ಜನರಿಗೆ ಯಥಾರ್ಥ ಜ್ಞಾನವು ಉಂಟಾಗುತ್ತದೆ ಆ ವೇಳೆಯಲ್ಲಿ ಅನೇಕರು ನೀಚಕರ್ಮಮಾಡುವುದರಲ್ಲಿ ನಿಮಗ್ನರಾಗಿರುತ್ತಾರೆ ಹಲವು ಜನರಂತೂ ನೀರಿನಲ್ಲಿರುವ ಜೀವಗಳನ್ನೂ ಭೂಮಿಯ ಮೇಲೆ ತಿರುಗಾಡುವ ಪ್ರಾಣಿಗಳನ್ನೂ ಮುಗಿಲಿನಲ್ಲಿ ಹಾರಾಡುವ ಪಕ್ಷಿಗಳನ್ನೂ ಹಿಡಿಯುವದಕ್ಕಾಗಿಯೂ ಕಟ್ಟುವದಕ್ಕಾಗಿಯೂ ಅನೇಕ ಯುಕ್ತಿಪ್ರಯುಕ್ತಿಗಳಿಂದ ಯಂತ್ರಗಳನ್ನು ರಚಿಸುವದರಲ್ಲಿ ತಮ್ಮ ಬುದ್ಧಿ ಚಾತುರ್ಯವನ್ನು ವ್ಯಯಗೊಳಿಸುತ್ತಾರೆ ಹಲವರು ವಿವಿಧ ಪ್ರಕಾರದ ಖಡ್ಗ, ಕೋವಿ, ತೋಫು, ಬಾಣ ಮೊದಲಾದ ಪರಪೀಡೆಯನ್ನುಂಟುಮಾಡುವ ಶಸ್ತ್ರಾಸ್ತ್ರಗಳನ್ನು ಸಿದ್ಧಗೊಳಿಸುವುದರಲ್ಲಿ ಪ್ರಾವೀಣ್ಯವನ್ನು ಸಂಪಾದಿಸುತ್ತಾರೆ ತಮ್ಮ ಬುದ್ಧಿವಿಕಾಸದ ಬಲದ ಮೇಲೆ ಉನ್ಮತ್ತರಾಗಿ ಸಾವಿರಾರು ಊರು, ದೇಶ ಇವನ್ನು ಹಾಳುಮಾಡುವುದರಲ್ಲಿ ಧನ್ಯತೆಯನ್ನು ಅನುಭವಿಸುತ್ತಾರೆ. ಬೇರೆ ಕೆಲವರು ಹುಲಿ, ಸಿಂಹ, ಹಂದಿ ಮೊದಲಾದ ಪ್ರಾಣಿಗಳನ್ನು ಬೇಟೆಯಾಡುವುದರಲ್ಲಿ ಪ್ರೌಢಿಮೆಯುಳ್ಳವರು–ಚಪಲತೆಯುಳ್ಳವರು–ಎನಿಸುತ್ತಾರೆ ಹಲವರು ಜ್ಞಾನವನ್ನು ಸಂಪಾದಿಸಿ, ಜನರ ಧನವನ್ನು ಎತ್ತಿ ಹಾಕುವುದರಲ್ಲಿಯೂ ಒಂದು ಯೋಜನೆಯನ್ನಿಟ್ಟುಕೊಂಡು ಕಳವು ದರೋಡೆಗಳನ್ನು

ಮಾಡುವುದರಲ್ಲಿಯೂ ತಮ್ಮ ಸಾಹಸವನ್ನು ಪ್ರದರ್ಶಿಸುತ್ತಾರೆ  ಇನ್ನುಳಿದವರು ತಮಗೆ ಹೆಚ್ಚಿಗೆ ಜ್ಞಾನವಿದೆಯೆಂದು ಭಾವುಕ ಜನರನ್ನು ತಿರಸ್ಕರಿಸುತ್ತಾರೆ  ಅಲ್ಲದೆ ಸುಳ್ಳನ್ನು ಸತ್ಯ, ಸತ್ಯವನ್ನು ಸುಳ್ಳು ಮಾಡುವುದರಲ್ಲಿ ತಮ್ಮ ಚಾತುರ್ಯವನ್ನು ಪ್ರಕಟಮಾಡುತ್ತಾರೆ  ಅದರಂತೆ ಧನ ಹಾಗೂ ಪ್ರಾಣವನ್ನು ಹರಣಮಾಡುವುದರಲ್ಲಿ ಬುದ್ಧಿ-ಮತ್ತೆಯನ್ನೂ ಉಪಯೋಗಿಸುತ್ತಾರೆ. ಮತ್ತೆ ಕೆಲವರು ರತ್ನ–ಪಾಷಾಣ–ಧಾತು ಮೊದಲಾದ ಪದಾರ್ಥಗಳಿಂದ ಅನೇಕ ವಸ್ತುಗಳನ್ನು ಮಾಡಿಸುವುದರಲ್ಲಿಯೂ ಹಲವಾರು ಚಿತ್ರ, ವಸ್ತ್ರ, ಹೊದಿಕೆ, ಅರಮಂದಿರ ಮೊದಲಾದವುಗಳನ್ನು ನಿರ್ಮಿಸುವುದರಲ್ಲಿಯೂ ಪ್ರಾವೀಣ್ಯವನ್ನು ಸಂಪಾದಿಸುತ್ತಾರೆ  ಇನ್ನುಳಿದವರು ತಮ್ಮ ವಿಶೇಷ ಜ್ಞಾನದಿಂದ ಅನೇಕ ಪ್ರಕಾರದ ಶೃಂಗಾರ, ಯುದ್ಧ, ವೈದ್ಯಕ ಶಾಸ್ತ್ರಗಳನ್ನು ರಚಿಸಿ, ರಾಜ ಮಹಾರಾಜರನ್ನು ಸಂತೋಷಗೊಳಿಸುವುದರಲ್ಲಿ ಮಗ್ನರಾಗಿರುತ್ತಾರೆ. ಅಲ್ಲದೆ ಅನೇಕ ಛಂದ, ಅಲಂಕಾರ, ವ್ಯಾಕರಣವಿದ್ಯೆ, ಏಕಾಂತಿಕನ್ಯಾಯವಿದ್ಯೆ, ಪುರಾಣ, ಕ್ರಿಯಾಕಾಂಡ ಮೊದಲಾದ ಶಾಸ್ತ್ರಗಳನ್ನು ವಿವರಣಮಾಡಿ, ಆತ್ಮಜ್ಞಾನವಿಲ್ಲದಂಥ ಮಿಥ್ಯಾಜ್ಞಾನದ ಪ್ರಚಾರಮಾಡುತ್ತಾರೆ  ಕೆಲವರು ವೀತರಾಗ ಧರ್ಮವನ್ನು ಧರಿಸಿಯೂ ಕೂಡ ಮಿಥ್ಯಾತ್ವದ ಉದಯವು ಬಹಳ ತೀವ್ರವಾಗಿರುವುದರಿಂದ ಸತ್ಯಾರ್ಥದ ಜ್ಞಾನ ಮತ್ತು ಶ್ರದ್ಧೆಯನ್ನು ಸಂಪಾದಿಸಲು ಅಸಮರ್ಥರಾಗಿರುತ್ತಾರೆ. ಹೀಗಿದ್ದೂ ತಮ್ಮ ಹೇಳಿಕೆಯನ್ನು–ಅಭಿಮಾನವನ್ನು–ಕೊನೆಗೆ ಮುಟ್ಟಿಸುವದಕ್ಕಾಗಿ ಸೂತ್ರದಲ್ಲಿ ಹೇಳಿದ ಮಾರ್ಗದ ವಿರುದ್ಧ ಮಾರ್ಗವನ್ನು ಪ್ರವೃತ್ತಿಸಿ, ತಮ್ಮನ್ನು ಕೃತಾರ್ಥರೆಂದು ತಿಳಿಯುತ್ತಾರೆ  ಈ ಪ್ರಕಾರ ವಿಶೇಷ ಜ್ಞಾನವು ಪ್ರಾಪ್ತವಾಗಿಯೂ ಮಿಥ್ಯಾತ್ವದ ಪ್ರಭಾವದಿಂದ ಹೆಚ್ಚು ಹೆಚ್ಚಾಗಿ ಬಂಧನಕ್ಕೆ ಒಳಗಾಗಿ ನೀನು ಇಲ್ಲಿಯವರೆಗೆ ನಿನ್ನ ಅಹಿತವನ್ನೇ ಮಾಡಿಕೊಂಡೆ  ಈಗ ಸದ್ಗುರುವಿನ ಉಪದೇಶವು ಲಭಿಸಿದೆ  ಅದಕ್ಕಾಗಿ ನೀನು ಜ್ಞಾನದ ಗರ್ವವನ್ನು ಮಾಡಬೇಡ  ನಿನ್ನ ಸ್ವಭಾವವು ನಿಜವಾಗಿಯೂ ಲೋಕಾಲೋಕಗಳನ್ನು ತಿಳಿಯುವಂಥದಿರುತ್ತದೆ  ಕರ್ಮದ ಕ್ಷಯೋಪಶಮದಿಂದ ಉಂಟಾದದ್ದೂ, ಇಂದ್ರಿಯಗಳ ಸ್ವಾಧೀನವೂ ಇರುವಂಥ ಅಲ್ಪಜ್ಞಾನದ ವಿಷಯದಲ್ಲಿ ಗರ್ವಮಾಡುವುದರಲ್ಲಿ ಏನು ಅರ್ಥವಿದೆ? ಒಬ್ಬ ಪ್ರಬಲ ಶತ್ರುವು ಬಂದು, ಚಕ್ರವರ್ತಿಯನ್ನು ಬಂಧನದಲ್ಲಿ ಇಟ್ಟನಂತೆ  ಅಲ್ಲದೆ ಅನೇಕ ನಿಃಸತ್ವ ಆಹಾರವನ್ನು ಕೊಟ್ಟು, ವಿವಿಧ ರೀತಿಯಿಂದ ತೊಂದರೆಯನ್ನೂ ಕೊಟ್ಟನು  ಮುಂದೆ ಒಮ್ಮೆ ಸವಿಯಾದ ಆಹಾರವನ್ನು ಕೊಡಬೇಕೆಂದು ಆಜ್ಞೆಯನ್ನು ಹೊರಡಿಸಿದನು  ಇದರಿಂದ ಆ ಚಕ್ರವರ್ತಿಯು ತನಗೆ ಸವಿಯಾದ ಆಹಾರವು ಸಿಕ್ಕಿತೆಂದು ಆನಂದ ಪಡಬೇಕೆ?"

ಜ್ಞಾನದ ಉಪಯೋಗವನ್ನು ಒಳ್ಳೆಯ ಗ್ರಂಥ ರಚಿಸುವದರಲ್ಲಿ ಮಾಡಬೇಕು. ಇದೇ ಪ್ರಕಾರ ಆತ್ಮನೇ ನಿನ್ನನ್ನು, ನಿನ್ನ ಅನಂತಜ್ಞಾನ ಸ್ವರೂಪವಾದ ಕೇವಲ ಜ್ಞಾನವನ್ನು ಕರ್ಮದಿಂದ ಕಟ್ಟಿ, ಸೆರೆಮನೆಯಲ್ಲಿ ಪರಾಧೀನತೆಯಲ್ಲಿಡಲಾಗಿದೆ, ಈಗ ಇಂದ್ರಿಯಗಳ ಮುಖಾಂತರ ಸ್ವಲ್ಪ ಜ್ಞಾನವು ಪ್ರಾಪ್ತವಾಗಿದೆ  ಆದರೆ ಗರ್ವ ಪಡುವಂಥದು ಏನು ಸಿಕ್ಕಿದೆ? ಈ ಇಂದ್ರಿಯಜನ್ಯ ಜ್ಞಾನವು ನಾಶವಾಗುವಂಥದೂ ಪರಾಧೀನವೂ ಇದೆ  ಪರ್ಯಾಯದ ಕೂಡ ಅವಶ್ಯವಾಗಿ ನಷ್ಟವಾಗುವಂಥದ್ದಿದೆ  ಈ ಮನುಷ್ಯ ಪರ್ಯಾಯದಲ್ಲಿಯೂ ಸಹ ರೋಗ, ಮುಪ್ಪು, ಇಂದ್ರಿಯಗಳ ಅಶಕ್ತತೆ, ದುಷ್ಟರ ಸಂಗತಿ, ವಿಷಯ ಕಷಾಯದ ಹೆಚ್ಚಳ ಇವೇ ಮೊದಲಾದವುಗಳಿಂದ ಒಂದರ್ಧ ಕ್ಷಣದಲ್ಲಿ ಯಾವಾಗ ನಾಶಹೊಂದೀತೆಂಬುದರ ಭರವಸೆಯೂ ಇಲ್ಲ  ಅದಕ್ಕಾಗಿ ಈ ಪ್ರಕಾರದ ನಶ್ವರ ಜ್ಞಾನವು ಪ್ರಾಪ್ತವಾದದ್ದಕ್ಕಾಗಿ ನೀನು ಗರ್ವವನ್ನು ಪಡೆಯಬಾರದು  ಇದರಿಂದ ನಿನ್ನ ಎಲ್ಲ ಗುಣವು ನಷ್ಟವಾಗಿ ನೀನು ಏಕೇಂದ್ರಿಯದಲ್ಲಿ ಹೋಗಿ ಬೀಳುವೆ  ಈ ಕಾಲದಲ್ಲಿ ನಿನಗೆ ಸ್ವಲ್ಪ ಜ್ಞಾನವು ಲಭಿಸಿದೆ  ಅದರಿಂದ ಧರ್ಮದ ಚರ್ಚೆಯನ್ನು ಮಾಡುವ ಶಕ್ತಿಯು ಬಂದಿದೆ  ಕೆಲವು ಶ್ಲೋಕ, ಕಾವ್ಯ, ಛಂದ, ವಚನ ಮೊದಲಾದವುಗಳ ರಚನೆಯನ್ನು ಹೊಸದಾಗಿ ಮಾಡಲಿಕ್ಕೂ ನೀನು ಸಮರ್ಥನಾಗಿರಬೇಕು  ಸಿದ್ಧಾಂತದ ಮರ್ಮವನ್ನು ತಿಳಿದುಕೊಳ್ಳುವುದು ಸಾಧ್ಯವಾದೀತು  ಆದರೆ ಇಷ್ಟರಿಂದ ಗರ್ವಪಡುವುದು ಯೋಗ್ಯವಲ್ಲ  ಪೂರ್ವಕಾಲದಲ್ಲಿ ದೊಡ್ಡ ದೊಡ್ಡ ಜ್ಞಾನಿಗಳೂ ವೀತರಾಗಿಗಳೂ ಆದ ಆಚಾರ್ಯರು ರಚಿಸಿದ ಗ್ರಂಥಗಳ ಕಡೆಗೆ ನೋಡು  ಶ್ರೀಅಕಲಂಕ ದೇವನು ಲಘೀಯಸ್ತ್ರಯೀ, ಬೃಹತ್ರಯೀ, ಚೂಲಿಕಾ ಮೊದಲಾದ ಏಳು ಗ್ರಂಥಗಳನ್ನು ರಚಿಸಿದ್ದಾನೆ  ಅವುಗಳಲ್ಲಿ ಪ್ರವೇಶಿಸುವದಕ್ಕಾಗಿ ಮಾಣಿಕ್ಯ ನಂದಿಯೆಂಬ ಮುನಿಶ್ರೇಷ್ಠರು ಪರೀಕ್ಷಾಮುಖ ಎಂಬ ಗ್ರಂಥವನ್ನು ನಿರ್ಮಿಸಿದರು. ಅದರ ಮೇಲೆ ಪ್ರಮೇಯ-ಕಮಲ ಮಾರ್ತಂಡ ಎಂಬ ಹೆಸರಿನ ಹನ್ನೆರಡು ಸಾವಿರ ಪದ್ಯಗಳ ಟೀಕಾಗ್ರಂಥವೊಂದನ್ನು ಶ್ರೀಪ್ರಭಾಚಂದ್ರಾಚಾರ್ಯರು ರಚಿಸಿದರು. ಲಘೀಯಸ್ತ್ರಯದ ಮೇಲೆಯೂ ಪ್ರಭಾಚಂದ್ರನೇ ನ್ಯಾಯಕುಮುದ ಚಂದ್ರ ಎಂಬ ಹದಿನಾರು ಸಾವಿರ

ಶ್ಲೋಕಗಳ ಟೀಕಾಗ್ರಂಥ ಒಂದನ್ನು ರಚಿಸಿದ್ದಾನೆ ತತ್ತ್ವಾರ್ಥ ಸೂತ್ರದ ಮೇಲೆ ಗಂಧಹಸ್ತಿಮಹಾಭಾಷ್ಯ ಎಂಬ ಹೆಸರಿನ ಎಂಬತ್ತುನಾಲ್ಕು ಸಾವಿರ ಪದ್ಯಗಳ ಗ್ರಂಥವೊಂದು ನಿರ್ಮಾಣವಾಗಿತ್ತು ಅದೀಗ ಉಪಲಬ್ಧವಿಲ್ಲ ಆದರೆ ಅದರ ಮಂಗಲಾಚರಣವೆಂದು ಪ್ರಸಿದ್ಧವಾದ ದೇವಾಗಮ ಸ್ತೋತ್ರವು ಮಾತ್ರ ಉಪಲಬ್ಧವಿದ ಅದರ ಮೇಲೆ ವಿದ್ಯಾನಂದ ಸ್ವಾಮಿಯು ಎಂಟು ಸಾವಿರ ಶ್ಲೋಕಗಳಲ್ಲಿ ಅಷ್ಟಸಹಸ್ರೀ ಎಂಬ ಗ್ರಂಥದ ರಚನೆಯನ್ನು ಮಾಡಿದ್ದಾನೆ ಅಕಲಂಕದೇವನು ರಾಜವಾರ್ತಿಕವನ್ನು ಬರೆದಿದ್ದಾನೆ ಅದರ ಮೇಲೆ ವಿದ್ಯಾನಂದ ಸ್ವಾಮಿಯು ಹದಿನೆಂಟು ಸಾವಿರ ಶ್ಲೋಕಗಳಲ್ಲಿ ಶ್ಲೋಕವಾರ್ತಿಕವನ್ನು ರಚಿಸಿದ್ದಾನೆ. ಆಪ್ತಪರೀಕ್ಷೆಯೊಳಗಿನ ನಿರ್ಬಾಧ ಪ್ರತಿಪಾದನ ಶಕ್ತಿಯನ್ನು ನೋಡಿ, ದೊಡ್ಡ ದೊಡ್ಡ ವಿದ್ವಾಂಸರ ಗರ್ವವು ಇಲ್ಲದಂತಾಗುತ್ತದೆ ಇದೇ ಪ್ರಕಾರ ನಾಟಕತ್ರಯ, ಸಾರತ್ರಯ ಮೊದಲಾದ ಅನೇಕ ಸ್ಯಾದ್ವಾದ ಪ್ರತಿಪಾದಕ ಗ್ರಂಥಗಳನ್ನು ನೋಡಿಯೂ ಕೂಡ ನಿನಗೆ ನಿನ್ನ ಜ್ಞಾನದ ವಿಷಯದಲ್ಲಿ ಗರ್ವವು ಉಂಟಾಗಿದ್ದರೆ ಆಶ್ಚರ್ಯದ ಸಂಗತಿಯಾಗಿದೆ ಈಗ ಶ್ರುತಜ್ಞಾನಾವರಣದ ಕ್ಷಯೋಪಶಮನದಿಂದ ಒಂದು ವೇಳೆ ಸ್ವಲ್ಪ ಜ್ಞಾನವು ನಿನಗೆ ದೊರೆತಿರಬೇಕು ಅದನ್ನು ಅಲಭ್ಯ-ಲಾಭವೆಂದು ತಿಳಿ ಆತ್ಮನನ್ನು ವಿಷಯಗಳಿಂದಲೂ ಅಭಿಮಾನ ಮೊದಲಾದ ಕಷಾಯಗಳಿಂದಲೂ ವಿಮುಖಗೊಳಿಸು ಶ್ರೇಷ್ಠವಾದ ಸಮಭಾವವನ್ನು ಧರಿಸು ಅದರಿಂದ ಸಂಸಾರದ ಪರಿಭ್ರಮಣವು ಇಲ್ಲದಂತೆ ಮಾಡಿಕೊಳ್ಳಲು ಯತ್ನಿಸು ಜ್ಞಾನದ ಗರ್ವವನ್ನು ಹೊಂದಿ, ಆತ್ಮನನ್ನು ಅನಂತ ಸಂಸಾರದಲ್ಲಿ ಮುಳುಗಿಸಬೇಡ '

**ಪೂಜಾಮದ.** ಇನ್ನೊಂದು ಪೂಜ್ಯತ್ವದ ಗರ್ವವು ತನಗೆ ಮಾನ-ಮರ್ಯಾದೆಗಳು ದೊರಕಿದವೆಂಬ ವಿಷಯದಲ್ಲಿ ಹಲವರಿಗೆ ಸೊಕ್ಕು ಬರುತ್ತದೆ ಇಂಥ ಸೊಕ್ಕನ್ನು ಸಮ್ಯಗ್ದೃಷ್ಟಿಯು ಮಾಡುವದಿಲ್ಲ ಯಾಕೆಂದರೆ ರಾಜ್ಯ, ಐಶ್ವರ್ಯ ಮೊದಲಾದವುಗಳು ಆತ್ಮನ ಸ್ವಭಾವಗಳಲ್ಲ ಅವು ಕರ್ಮದಿಂದ ಹುಟ್ಟಿ ನಾಶಹೊಂದುವ ಅವಸ್ಥೆಗೆ ಮುಟ್ಟು-ವಂಥವಿರುತ್ತವೆ ಪರಾಧೀನವಾಗಿದ್ದು ದುರ್ಗತಿಗೂ ಕಾರಣವಾಗಿವೆ ನಮ್ಮ ಐಶ್ವರ್ಯವು ಅನಂತಚತುಷ್ಟಯ ಸ್ವರೂಪಿಯೂ ಅಕ್ಷಯವೂ ಅವಿನಾಶಿಯೂ ಅಖಂಡ ಸುಖಸ್ವರೂಪಿಯೂ ಅನಂತಜ್ಞಾನದರ್ಶನ ಸ್ವರೂಪಿಯೂ ಅನಂತಶಕ್ತಿಸ್ವರೂಪಿಯೂ ಇದೆ ಕರ್ಮದಿಂದ ಹುಟ್ಟಿ, ಆತ್ಮನಿಗೆ ದುಃಖಕೊಟ್ಟು, ದುರ್ಗತಿಗೆ ಮುಟ್ಟಿಸುವಂಥ ಈ ಐಹಿಕ ಐಶ್ವರ್ಯಗಳು ಆತ್ಮನ ನಿಜವಾದ ವಸ್ತುಗಳಲ್ಲ ಇವು ಆತ್ಮನ ಸ್ವಸ್ವರೂಪವನ್ನು–ತನ್ನತನವನ್ನು–ಮರೆಯಿಸುವಂದವಾಗಿವೆ ಇವು ಜಗಳಕ್ಕೆ ಮೂಲವು, ವೈರತ್ವಕ್ಕೆ ಕಾರಣವು, ಕ್ಷಣದಲ್ಲಿ ನಾಶಹೊಂದುವಂಥವು, ಪರಮಾತ್ಮನ ಸ್ವರೂಪವನ್ನು ಮರೆಯಿಸುವಂಥವು, ಬಹಳ ಕಳವಳವನ್ನುಂಟುಮಾಡುವಂಥವು, ದುಃಖರೂಪವುಳ್ಳವೂ ಇರುತ್ತವೆ ಇವು ಅನೇಕ ಜೀವಗಳ ಘಾತಮಾಡುವಂದವಿವೆ ಬಹು ದೊಡ್ಡ ಆರಂಭದಲ್ಲಿಯೂ ಪರಿಗ್ರಹದಲ್ಲಿಯೂ ತೊಡಕಿಸಿ, ನರಕಕ್ಕೆ ಮುಟ್ಟಿಸುವಂಥವುಗಳಾಗಿವೆ ಇಂಥ ಐಶ್ವರ್ಯವು ದೊರೆಯುವುದರಿಂದ ನಮ್ಮ ದೊಡ್ಡಸ್ತಿಕೆಯು ಎಷ್ಟು ದಿನ ಬಾಳೀತು? ಜಗತ್ತಿನಲ್ಲಿ ದ್ರವ್ಯಲೋಭಿಗಳೂ ಅಜ್ಞಾನಿಗಳೂ ಆದ ಜನರು ನಮ್ಮನ್ನು ದೊಡ್ಡವರೆಂದು ತಿಳಿದು ಸನ್ಮಾನಿಸುವರು ಆದರೆ ರಾಜ್ಯ, ಸಂಪತ್ತುಗಳ ಮೇಲೆ ನಮ್ಮ ಒಡೆತನವು ಎಷ್ಟು ದಿವಸ ಇದ್ದೀತು? ಮೃತ್ಯುವು ಸಮೀಪಕ್ಕೆ ಬರಹತ್ತಿತು ನಮ್ಮಂಥ ಲೆಕ್ಕವಿಲ್ಲದಷ್ಟು ಜೀವಿಗಳು ದ್ರವ್ಯದ ಪ್ರೀತಿಯಿಂದ ಇಲ್ಲಿಯವರೆಗೆ ಆತ್ಮವಿಚಾರವನ್ನು ಮಾಡದೆ, ಪ್ರಪಂಚದೊಳ-ಗಿಂದ ಇಲ್ಲದಂತಾಗಿ ಹೋಗಿವೆ ಐಶ್ವರ್ಯವು ಕರ್ಮದಿಂದ ನಿರ್ಮಾಣವಾಗಿದ್ದು, ಅನ್ಯವಸ್ತುವಿನ ಸಂಯೋಗದಿಂದ ದೊರಕುತ್ತಿರುತ್ತದೆ ಅದಕ್ಕಾಗಿ ದಾನ, ಸನ್ಮಾನ, ಶೀಲ, ಸಂಯಮ, ಎರಡನೆಯ ಜೀವಗಳ ಮೇಲೆ ಉಪಕಾರ ಮೊದಲಾದವುಗಳನ್ನು ಮಾಡಿ, ಆ ಐಶ್ವರ್ಯದ ಉಪಯೋಗ ಮಾಡುವುದು ಪ್ರಶಂಸನೀಯವಾಗಿದೆ ಸಂಪತ್ತು ಬಂದಾಗ ಅದರ ವಿಷಯದಲ್ಲಿ ದುರಭಿಮಾನ ಪಡದೆ, ಶಾಂತ ಹಾಗೂ ಸಮಬುದ್ಧಿಗಳನ್ನು ಇಟ್ಟುಕೊಂಡು, ಯಾವಾಗಲೂ ವಿನಯದಿಂದ ವರ್ತಿಸಬೇಕು ಅಂದರೆ ಅದರಿಂದ ಸದ್ಗತಿಯು ದೊರೆಯುತ್ತದೆ ಅಂಥವನ ಸಂಪತ್ತು ಶುಭಗತಿಗೆ ಕಾರಣವಾಗುವುದು ಇದಕ್ಕೆ ವಿರುದ್ಧ ರೀತಿಯಲ್ಲಿ ಮಿಥ್ಯಾದರ್ಶನದಿಂದ ಹುಟ್ಟಿದ ಮಿಥ್ಯಾಭಾವವು ಜೀವಕ್ಕೆ ಅದರ ಸ್ವತಃ ಸ್ಥಿತಿಯನ್ನೇ ಮರೆಯಿಸಿ ಬಿಡುತ್ತದೆ ಐಶ್ವರ್ಯದ ಸೊಕ್ಕನ್ನು ಹುಟ್ಟಿಸುತ್ತದೆ ನರಕಕ್ಕೂ ಒಯ್ದು ಮುಟ್ಟಿಸುತ್ತದೆ ಇದನ್ನೆಲ್ಲ ತಿಳಿದ ಸಮ್ಯಗ್ದೃಷ್ಟಿ ಜೀವವು ತನ್ನ ಪೂಜೆ ಮತ್ತು ಐಶ್ವರ್ಯಗಳನ್ನು ಕುರಿತು ಗರ್ವವನ್ನೂ ಮಾಡುವದಿಲ್ಲ. ಅಲ್ಲದೆ ಉಳಿದ ಜೀವಿಗಳಿಗೆ ಅಶುಭಕರ್ಮದ ಉದಯದಿಂದ ದಾರಿದ್ರ್ಯವು ಬಂದಾಗ ತಿರಸ್ಕಾರ ಭಾವದಿಂದ ಅವರನ್ನೂ ಕಾಣುವದಿಲ್ಲ, ಅಪಮಾನವನ್ನೂ ಮಾಡುವದಿಲ್ಲ ತಿರುಗಿ ಅವರ ವಿಷಯದಲ್ಲಿ ಕರುಣೆಯನ್ನೇ ತಾಳುತ್ತಾನೆ

**ಕುಲಮದ.** ಸಮ್ಯಗ್ದೃಷ್ಟಿ ಜೀವವು ಕುಲದ ಬಗ್ಗೆ ಗರ್ವಪಡುವದಿಲ್ಲ ಅವನು ಕುಲದ ವಿಷಯದಲ್ಲಿ ಹೀಗೆ ವಿಚಾರಿಸುತ್ತಾನೆ "ತಂದೆಯ ವಂಶಕ್ಕೆ ಕುಲವೆನ್ನುವರು ಆತ್ಮನನ್ನು ಯಾರೂ ಹುಟ್ಟಿಸಿಲ್ಲ. ಅವನು ಜ್ಞಾನ ಸ್ವರೂಪಿಯಾಗಿದ್ದಾನೆ. ಅಂದಮೇಲೆ ಜ್ಞಾನಸ್ವರೂಪಿಯಾದ ನನಗೆ ಕುಲವೆಲ್ಲಿಯದು? ತಿಳಿಯುವುದು ಮತ್ತು ನೋಡುವುದೇ ನನ್ನ ಕುಲವಾಗಿದೆ ಅನಾದಿಕಾಲದಿಂದ ಕರ್ಮದ ಸ್ವಾಧೀನನಾಗಿರುವ ನನಗೆ ಈ ಅವಸ್ಥೆಯಲ್ಲಿ ಉತ್ತಮ ಕುಲವೊಂದು ಪ್ರಾಪ್ತವಾಗಿದ್ದರೆ ಏನಾಯಿತು? ಅದರ ಗರ್ವಮಾಡುವುದರಲ್ಲಿ ಅರ್ಥವೇನಿದೆ? ಪೂರ್ವಜನ್ಮದಲ್ಲಿ ಅನೇಕವೇಳೆ ನಾನು ನರಕದಲ್ಲಿ ಹುಟ್ಟಿದ್ದೆ. ಹಲವುಸಲ ಹುಲಿ, ಸಿಂಹ, ಹಾವು ಮೊದಲಾದ ಕುಲಗಳಲ್ಲಿ ಜನಿಸಿದ್ದೆ ಅನೇಕಸಲ ಕತ್ತೆ, ಕುದುರೆ, ಒಂಟೆ, ಹಂದಿ, ಕುರಿ ಮೊದಲಾದವುಗಳ ಕುಲಗಳಲ್ಲಿಯೂ ಹುಟ್ಟಿರುವೆ ಅನಂತಸಲ ಮ್ಲೇಚ್ಛ, ಬೇಡ, ಚಾಂಡಾಲ, ಸಮಗಾರ, ಬಲೆಗಾರ, ಕಟುಕ, ನಾವಲಿಗ, ಅಗಸ, ಗಾಣಿಗ, ತಳವಾರ, ಕಂಬಾರ, ಬಾಡಿಗ ಮೊದಲಾದ ಕುಲಗಳಲ್ಲಿ ಜನ್ಮಿಸಿರುವೆ ಹಲವುಸಲ ಬಡವನಾಗಿ ಹುಟ್ಟಿರುವೆ ಈಗ ಕೆಲವು ಶುಭಕರ್ಮದ ಉದಯದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಕುಲದಲ್ಲಿ ಸುದೈವದಿಂದ ಜನ್ಮವಾಗಿದೆ ಅಂದಮೇಲೆ ಕರ್ಮದಿಂದ ಉತ್ಪನ್ನವಾಗುವ ಕುಲದ ಬಗ್ಗೆ ಅಭಿಮಾನ ಪಡುವುದು ಅಜ್ಞಾನವಾಗಿದೆ ಈ ಕುಲದಲ್ಲಿ ನಾನು ಎಷ್ಟುದಿನ ಇರುವವನಾಗಿದ್ದೇನೆ? ಅನಾದಿಕಾಲದಿಂದಲೂ ಈ ಕುಲದಲ್ಲಿ ಅಥವಾ ಈ ಜಾತಿಯಲ್ಲಿ ನಾನು ವಾಸಿಸುತ್ತಿರಲಿಲ್ಲ ಇದೀಗ ಹೊಸದಾಗಿ ಹುಟ್ಟಿರುವೆ. ಅಲ್ಲದೆ ಬೇಗನೇ ಇಲ್ಲಿಂದ ನಷ್ಟವಾಗಿ ಬೇರೆ ಕಡೆಗೆ ನನ್ನ ಪಾಪ-ಪುಣ್ಯಗಳಿಗೆ ಅನುಸರಿಸಿ, ಜನ್ಮವನ್ನು ತಕ್ಕೊಳ್ಳಲೇಬೇಕಾಗುತ್ತದೆ. ಸದ್ಯಕ್ಕೆ ಉತ್ತಮಕುಲದಲ್ಲಿ ಹುಟ್ಟಿರುವ ಅದಕ್ಕಾಗಿಯಾದರೂ ಮೋಕ್ಷಮಾರ್ಗವನ್ನು ದೊರಕಿಸಿಕೊಡುವ ಸಮ್ಯಗ್ದರ್ಶನವನ್ನು ಸಂಪಾದಿಸಿಕೊಳ್ಳುವೆ ನೀಚ ಆಚರಣೆಯನ್ನು ಬಿಟ್ಟರೇನೇ ಈ ಉತ್ತಮಕುಲದಲ್ಲಿ ಹುಟ್ಟಿದುದು ಸಾರ್ಥಕವಾಗುತ್ತದೆ " ಸತ್ಪುರುಷರು ಯಾವಾಗಲೂ ಈ ವಿಚಾರವನ್ನು ಮನಸ್ಸಿನಲ್ಲಿ ತರಬೇಕು ಪುಣ್ಯೋದಯದಿಂದ ನಮ್ಮ ಜನ್ಮವು ಒಳ್ಳೆಯ ಕುಲದಲ್ಲಿ ಆಗಿದೆ ಅದಕ್ಕಾಗಿ ನೀಚಕುಲದ ಮನುಷ್ಯರಂತೆ ತಿನ್ನಬಾರದುದನ್ನು ತಿನ್ನುವುದು ಯೋಗ್ಯವಲ್ಲ ಜಗಳ, ಹಟ, ಕೊಲ್ಲುವುದು, ಹೊಡೆಯುವುದು, ಬೈಯು-ವುದು, ಕೆಟ್ಟ ಶಬ್ದಗಳನ್ನು ಉಚ್ಚರಿಸುವುದು ಇವೇ ಮೊದಲಾದವುಗಳನ್ನು ಮಾಡಕೂಡದು. ಹಾಗೆಯೇ ನಗೆಚಾಟಿಕೆ, ಸುಳ್ಳು ಮಾತಾಡುವುದು, ತೊಂದರೆಕೊಡುವುದು, ಕಪಟತನ ಇವೂ ನಮಗೆ ತಕ್ಕವಲ್ಲ. ಜೂಜು, ವೇಶ್ಯಾಗಮನ, ಅನ್ಯರ ಧನವನ್ನು ಎತ್ತಿಹಾಕುವದು, ಹೇಸಿಕೆಲಸಗಳನ್ನು ಮಾಡಿ ತನ್ನ ಬಾಳುವೆಯನ್ನು ಸಾಗಿಸುವುದು ಯೋಗ್ಯವಲ್ಲ ಉತ್ತಮ ಕುಲದಲ್ಲಿ ಹುಟ್ಟಿಯೂ ಕೂಡ ನಾವು ಈ ನಿಂದ್ಯ ಕೆಲಸಗಳನ್ನು ಮಾಡಿದ್ದಾದರೆ ಜಗತ್ತಿನಲ್ಲಿ ನಮ್ಮನ್ನು ಜನರು ತಿರಸ್ಕರಿಸುವರು. ಇವೆಲ್ಲ ಕಾರಣಗಳಿಗಾಗಿ ಸಮ್ಯಗ್ದೃಷ್ಟಿ ಪುರುಷನು ಕುಲದ ಗರ್ವವನ್ನು ಮಾಡುವದಿಲ್ಲ.

**ಜಾತಿಮದ.** ಇದೇ ಪ್ರಕಾರ ಸತ್ಪುರುಷರು ಜಾತಿಯ ಗರ್ವವನ್ನೂ ಕೂಡ ಮಾಡುವದಿಲ್ಲ ತಾಯಿಯ ವಂಶಕ್ಕೆ ಜಾತಿ ಎಂದು ಹೆಸರು. ಬಲ್ಲವರು ಹೀಗೆ ವಿಚಾರ ಮಾಡುವರು "ಅನೇಕ ಸಲ ನಾವು ನೀಚ ಜಾತಿಯಲ್ಲಿ ಹುಟ್ಟಿದ್ದೇವೆ. ಈಗ ಒಮ್ಮೆ ಮಾತ್ರ ನಾವು ಉತ್ತಮ ಜಾತಿಯಲ್ಲಿ ಜನಿಸಿದ್ದೇವೆ ನಮಗೆ ಹಲವು ಸಲ ನೀಚ ಜಾತಿ, ಕೆಲವು ಸಲ ಶ್ರೇಷ್ಠ ಜಾತಿಗಳು ಪ್ರಾಪ್ತವಾಗಿವೆ ಈಗ ಉಚ್ಚಜಾತಿಯು ಲಭಿಸಿದ್ದರೆ ಅದರಲ್ಲಿ ಗರ್ವಪಡುವಂಥದೇನಿದೆ? ಅನೇಕ ಸಲ ನಿಗೋದದಲ್ಲಿ ಜನ್ಮಿಸಿದ್ದೇವೆ ನಾಯಿ, ಬೆಕ್ಕು, ಚಾಂಡಾಳಿಣಿ, ಭಿಲ್ಲಿಣಿ, ಸಮಗಾರತಿ, ವೇಶ್ಯೆ ಮೊದಲಾದವರ ಗರ್ಭದಲ್ಲಿಯೂ ಅನಂತಸಾರೆ ಜನ್ಮವನ್ನು ತಕ್ಕೊಂಡಿದ್ದೇವೆ ಅಂದ ಮೇಲೆ ನೀಚ ಜಾತಿಯಲ್ಲಿ ಹುಟ್ಟಿದವರ ಬಗ್ಗೆ ತಿರಸ್ಕಾರ ಮಾಡುವುದು ಯೋಗ್ಯವಲ್ಲ ಒಳ್ಳೆಯ ಜಾತಿಯ ತಾಯಿಯ ಹೊಟ್ಟೆಯಿಂದ ಹುಟ್ಟಿದುದಕ್ಕೆ ನಾವು ಉನ್ಮತ್ತರೇಕೆ ಆಗಬೇಕು? ಜಾತಿಯು ಪಾಪಪುಣ್ಯಕರ್ಮಗಳ ಫಲವಾಗಿದೆ ಈ ಕರ್ಮವು ತನ್ನ ರಸವನ್ನು ಕೊಡದ್ದು, ಇಲ್ಲದಂತೆ ಆದೀತು. ಜಾತಿಕುಲಗಳಲ್ಲಿ ಎಷ್ಟು ದಿನ ಸ್ಥಿರವಾಗಿ ನಿಲ್ಲಲಿಕ್ಕೆ ಬಂದೀತು ಇದನ್ನು ವಿಚಾರಮಾಡಬೇಕು. ಅದು ನಾಶವಂತವೂ ಕರ್ಮಾಧೀನವೂ ಎಂದು ತಿಳಿಯಬೇಕು ಉತ್ತಮ ಶೀಲವಂತನಾಗಿರುವುದಕ್ಕೂ ಕ್ಷಮೆಯನ್ನು ಧರಿಸುವುದಕ್ಕೂ ಸ್ವಾಧ್ಯಾಯ ಮಾಡುವುದಕ್ಕೂ ತನ್ನ ಉತ್ತಮ ಜಾತಿಯನ್ನು ಉಪಯೋಗಮಾಡಿಕೊಳ್ಳಬೇಕು ಇದರಂತೆ ಪರೋಪಕಾರ, ದಾನ, ಆದರ–ಸತ್ಕಾರ, ವಿನಯಗಳಲ್ಲಿ ಜಾತಿಯ ಉಚ್ಚತೆಯನ್ನು ಸಫಲಮಾಡಿಕೊಳ್ಳಬೇಕು "

**ಬಲದ ಗರ್ವ.** ಶಕ್ತಿಯ ವಿಷಯದಲ್ಲಿಯೂ ಸಮ್ಯಗ್ದೃಷ್ಟಿ ಜೀವಗಳಿಗೆ ಗರ್ವವು ಉತ್ಪನ್ನವಾಗುವದಿಲ್ಲ, ಅವರು ಹೀಗೆ ವಿಚಾರಮಾಡುತ್ತಾರೆ. "ನನ್ನ ಆತ್ಮವು ಅನಂತಶಕ್ತಿಯುಳ್ಳದ್ದಿದೆ ಆದರೆ ಕರ್ಮವೆಂಬ ಬಲಿಷ್ಠ

ವೈರಿಯು ಅದರ ಶಕ್ತಿಯನ್ನು ಅಡಗಿಸಿದ್ದಾನೆ. ಏಕೇಂದ್ರಿಯ ಮತ್ತು ವಿಕಲತ್ರಯಾದಿ ಅವಸ್ಥೆಗಳಲ್ಲಿ ನೂಕಿದ್ದಾನೆ. ಎಲ್ಲರೂ ಅದನ್ನು ಕಾಲಿನಿಂದ ತುಳಿಯುವಂತೆ ಜಗತ್ತಿನಲ್ಲಿ ಕ್ಷುಲ್ಲಕ ಸ್ಥಿತಿಗೆ ಒಯ್ದುಬಿಟ್ಟಿದ್ದಾನೆ ಈಗ ಮಾನವ ಶರೀರವನ್ನು ಧರಿಸಿರುವೆ ಸ್ವಲ್ಪ ವೀರ್ಯಾಂತರಾಯ ಕರ್ಮದ ಕ್ಷಯೋಪಶಮವಾಗಿದೆ. ಆಹಾರದಿಂದಲೂ ತುಸು ಶಕ್ತಿ ಬಂದಿದೆ. ಈ ಶರೀರದ ಆಧಾರದಿಂದ ಇರುವ ಪರಾಧೀನವಾದಂಥ ಈ ಬಲವನ್ನು ನಾನು ತಪಸ್ಸುಮಾಡಿ, ಕರ್ಮನಾಶಮಾಡುವುದರಲ್ಲಿ ಉಪಯೋಗಮಾಡಿಕೊಳ್ಳಬೇಕು. ಅಂದರೆ ಅದು ಲಭಿಸಿದುದು ಸಾರ್ಥಕವಾದೀತೆಂದು ತಿಳಿಯಬೇಕು ಶಕ್ತಿಯು ಪ್ರಾಪ್ತವಾಗಿದೆ. ಅಂದಮೇಲೆ ವ್ರತ, ಉಪವಾಸ, ಶೀಲ, ಸಂಯಮ, ಧ್ಯಾನ, ಕಾಯೋತ್ಸರ್ಗ, ತಪ ಇವೇ ಮೊದಲಾದವುಗಳಿಂದ ಆತ್ಮಲಾಭವನ್ನು ಮಾಡಿಕೊಳ್ಳೋಣ ಕರ್ಮದ ಪ್ರಬಲ ಉದಯದಿಂದ ಆಗುವ ಉಪಸರ್ಗಗಳಿಂದ ಚಂಚಲಚಿತ್ತರಾಗುವದಿಲ್ಲೆಂದು ನಿಶ್ಚಯಮಾಡುವ ಬೇನೆ, ಬಡತನ ಮೊದಲಾದ ಏಟುಗಳಿಂದ—ಕರ್ಮದ ಪೆಟ್ಟುಗಳಿಂದ—ಹೆದರದಂತೆ ಇರಲು ಯತ್ನಿಸೋಣ. ನಮ್ಮ ಶರೀರದಲ್ಲಿ ಶಕ್ತಿ ಇರುವುದರಿಂದ ಯಾರ ಹತ್ತರ ಏನೂ ಬೇಡದೆ ಇರುವುದು, ಇಷ್ಟಾದರೆ ನಮಗೆ ಬಲವಿದ್ದುದು ಸಾರ್ಥಕವಾಯಿತು. ಇದೇ ಪ್ರಕಾರ ದೀನ ದರಿದ್ರರೂ ಅಸಮರ್ಥರೂ ಆದ ಜನರು ಕೆಟ್ಟ ಮಾತುಗಳನ್ನು ಆಡಿದ್ದು ಕೇಳಿಯೂ ಕ್ಷಮೆಯನ್ನು ತಾಳಬೇಕು ಅಂದರೆ ನಮ್ಮ ಆತ್ಮದ ವಿಶುದ್ಧತೆಯ ಪ್ರಭಾವದಿಂದ ಗೆಲ್ಲಲಿಕ್ಕೆ ಕಠಿಣವಾದ ಕರ್ಮವನ್ನೂ ಗೆದ್ದು, ಕ್ರಮದಿಂದ ನಮ್ಮಲ್ಲಿ ಅನಂತವೀರ್ಯವನ್ನು ಪ್ರಕಟಗೊಳಿಸಿಕೊಳ್ಳುವೆವು. ಅದರಿಂದ ನಮಗೆ ಅವಿನಾಶಿಯಾದ ಮುಕ್ತಿ ಪದವನ್ನು ಪಡೆದುಕೊಳ್ಳಲಿಕ್ಕೆ ಬರುತ್ತದೆ ಹೀಗೆ ಮಾಡದೆ ಶರೀರದಲ್ಲಿ ಶಕ್ತಿಯು ಇದೆಯೆಂದು ಶಕ್ತಿಹೀನರ ಘಾತಮಾಡುವುದು, ಬಲವಿಲ್ಲದವರ ಧನ, ಹೆಣ್ಣು, ಮನೆ ಮೊದಲಾದವುಗಳನ್ನು ಎತ್ತಿಹಾಕುವುದು, ಅವರ ಅಪಮಾನ ಹಾಗೂ ತಿರಸ್ಕಾರಗಳನ್ನು ಮಾಡುವುದು, ಇವುಗಳನ್ನು ಮಾಡುತ್ತಹೋದರೆ ಸಿಂಹ, ಹುಲಿ, ಹಾವು ಮೊದಲಾದ ದುಷ್ಟ ತಿರ್ಯಂಚ ಜೀವಗಳಂತೆಯೇ ಪರಜೀವದ ಘಾತಮಾಡುವುದರಲ್ಲಿ ನಮಗೆ ಶಕ್ತಿಯು ಇದ್ದಂತೆ ಆದೀತು. ಇದರಿಂದ ಬಹಳ ಕಾಲದ ವರೆಗೆ ನರಕ ತಿರ್ಯಂಚ ಯೋನಿಗಳಲ್ಲಿದ್ದು ಅನಂತ ದುಃಖವನ್ನು ಭೋಗಿಸಬೇಕಾದೀತು. ಅಲ್ಲದೆ ನಿಗೋದದಲ್ಲಿ ಅನಂತಕಾಲದ ವರೆಗೆ ಸುತ್ತಾಡಬೇಕಾದೀತು ಅಂತಲೇ ಬಲದ ಗರ್ವಮಾಡುವುದರಿಂದ ಆತ್ಮನ ಘಾತವಾಗುತ್ತದೆ ಇದರಂತೆ ಇತರ ಪದಾರ್ಥಗಳಿಂದ ಆಗುವದಿಲ್ಲ. ಇದನ್ನರಿತು ಶಕ್ತಿಯ ವಿಷಯದಲ್ಲಿ ಸೊಕ್ಕಿಗೆ ಬರಬೇಡ, ಗರ್ವಪಡಬೇಡ "

ಋದ್ಧಿಮದ. ಋದ್ಧಿ ಎಂದರೆ ಸಿರಿಸಂಪತ್ತುಗಳು ಅವು ಲಭಿಸಿದಾಗ ಜ್ಞಾನಿಗಳು ಅವುಗಳ ವಿಷಯದಲ್ಲಿ ಗರ್ವಪಡುವದಿಲ್ಲ ಸಮ್ಯಗ್ದೃಷ್ಟಿ ಪುರುಷರಿಗಂತೂ ಧನ, ಸಂಪತ್ತು ಮೊದಲಾದವುಗಳು ಪರಿಗ್ರಹವೆನಿಸುತ್ತವೆ. ಅಲ್ಲದೆ ಅವು ಅವರ ತಲೆಯ ಮೇಲೊಂದು ಭಾರವೆನಿಸುತ್ತವೆ. ಎಲ್ಲ ಪರಿಗ್ರಹಗಳ ತ್ಯಾಗಮಾಡಿ, ಆತ್ಮ ಧನವನ್ನು ಮಾತ್ರ ಸಂರಕ್ಷಿಸುವ ಸಂದರ್ಭವು ಯಾವಾಗ ಬಂದೀತು ಎಂಬುದರ ಚಿಂತೆಯು ಅವರಿಗೆ ಹತ್ತಿರುತ್ತದೆ. ಪರಿಗ್ರಹ ಹಾಗೂ ಸಂಪತ್ತುಗಳು ಆತ್ಮನಿಗೆ ಬಹುಬಿಗಿಯಾದ ಕಟ್ಟುಗಳಾಗಿವೆ ಇವುಗಳಿಂದ ರಾಗ-ದ್ವೇಷ, ಸಂತಾಪ, ಕ್ಲೇಶ, ಶೋಕ ಮೊದಲಾದ ಹಾನಿಗಳು ಉಂಟಾಗುತ್ತವೆ ಗರ್ವವು ಉತ್ಪನ್ನವಾಗುತ್ತದೆ ಅನೇಕ ಪ್ರಕಾರದ ಪಾಪ ಕ್ರಿಯೆಗಳನ್ನು ಆರಂಭಿಸಬೇಕೆಂಬ ಇಚ್ಛೆಯು ಆಗುತ್ತದೆ ಈ ಪರಿಗ್ರಹವು ದುಃಖರೂಪದ ದುರ್ಗತಿಯ ಬೀಜವಿದೆ ಸುಂಬಳದಲ್ಲಿ ತೊಡಕಿದ ನೊಣವು ಹೇಗೆ ಬಿಡುಗಡೆಯನ್ನು ಹೊಂದುವುದು ಸುಲಭ ಸಾಧ್ಯವಿಲ್ಲವೋ, ಸ್ವತಃ ಪಾರಾಗುವುದು ಕಷ್ಟವೋ, ಹಾಗೆಯೇ ಧನದ ಸಂಪರ್ಕವು ಇರುತ್ತದೆ. ಕೆಸರಿನಲ್ಲಿ ಸಿಕ್ಕ ಮುಪ್ಪಿನ ಎತ್ತು, ಕೆಸರಿನ ಮಡುವಿನಲ್ಲಿ ಹುಗಿದ ಆನೆಗಳು ಹೇಗೆ ಹೊರಬೀಳಲಾರವೋ ಹಾಗೆಯೇ ಪರಿಗ್ರಹ ಪಂಕದಿಂದ ಮಾನವ ಕೂಡಲೆ ಹೊರಬೀಳಲಾರನು ಧನ, ಸತಿ, ಸುತ, ಪರಿವಾರಗಳೆಂಬ ಕೆಸರೇ ಅಂಥದು ಅದರಿಂದ ಹೊರಬೀಳಬೇಕೆಂಬ ಇಚ್ಛೆಯು ಇರುತ್ತದೆ. ಆದರೆ ಅಶಕ್ತತೆಯಿಂದಲೂ ರಾಗಾದಿಗಳ ಪ್ರಬಲ ಉದಯದಿಂದಲೂ ಮುಂದಿನ ಸ್ಥಿತಿಯನ್ನು ನೀಗಿಸಿಕೊಳ್ಳುವುದು ಕಠಿಣವೆಂದು ಎನಿಸುವುದರಿಂದಲೂ ಭೀತಿಯುಂಟಾಗುತ್ತದೆ ಅದರಿಂದ ಮಾನವನು ಸಂಸಾರದಿಂದ ಬಿಡುಗಡೆ ಹೊಂದುವುದು ಸುಲಭಸಾಧ್ಯವಿಲ್ಲ

ಈ ಪ್ರಕಾರ ಸಂಪತ್ತನ್ನು ತಿರಸ್ಕರಿಸುವ ಸಮ್ಯಗ್ದೃಷ್ಟಿಯು ಐಶ್ವರ್ಯದ ಗರ್ವವನ್ನು ಎಂದೂ ಮಾಡಲಾರನು ಅವನು ಧನವೆಂದರೇನೇ ಮೊದಲು ಹೆದರಿ ದೂರ ಸರಿಯುತ್ತಾನೆ ಅದು ಪರಾಧೀನವೂ ನಷ್ಟವಾಗುವಂಥದೂ ದುಃಖದಾಯಕವೂ ಆಗಿದೆ ಎಂದು ತಿಳಿದಿರುತ್ತಾನೆ ಅವನು ಸಂಪತ್ತಿನ ಸುಯೋಗವು ತನಗೆ

ಆದುದಕ್ಕೇ ನಾಚುತ್ತಿರುತ್ತಾನೆ. ಅವಿನಾಶಿಯಾದ ಅಖಂಡ ಸುಖದ ಮೋಕ್ಷ ಲಕ್ಷ್ಮಿಯನ್ನು ಸಂಪಾದಿಸುವ ಸಂದರ್ಭ ಇದ್ದಾಗಲೂ ಈ ಅಹಿತ ಹಾಗೂ ನಷ್ಟಗೊಳ್ಳುವ ಧನಲಕ್ಷ್ಮಿಯನ್ನು ತ್ಯಾಗಮಾಡುವ ಇಚ್ಛೆ ಆಗದಲ್ಲ. ಇದಕ್ಕಾಗಿಯೇ ಅವನು ಅತ್ಯಂತ ದುಃಖಪಡುತ್ತಾನೆ.

ತಪದ ಮದ. ಸಮ್ಯಗ್ದೃಷ್ಟಿ ಜೀವಿಗೆ ತಪದ ಗರ್ವವೂ ಕೂಡ ಇರುವದಿಲ್ಲ. ಗರ್ವವು ತಪವನ್ನು ನಾಶಮಾಡುವಂಥದಿದೆ. ತಪದ ಪ್ರಭಾವದಿಂದ ಎಂಟು ಪ್ರಕಾರದ ಕರ್ಮಗಳೆಂಬ ವೈರಿಗಳನ್ನು ನಾಶಮಾಡಿ, ಪರಮಾತ್ಮ ಪದವನ್ನು ಪಡೆದವರು ಧನ್ಯರೇ ಸರಿ ನಾನು ಸಂಸಾರದಲ್ಲಿ ಆಸಕ್ತನಾಗಿದ್ದು, ನನ್ನ ಇಂದ್ರಿಯಗಳನ್ನು ವಿಷಯದಿಂದ ಒಂದು ಕ್ಷಣವೂ ಕೂಡ ಪರಾವೃತ್ತಗೊಳಿಸಲು ನಾನು ಸಮರ್ಥನಾಗಿಲ್ಲ ನಾನು ಕಾಮವಿಕಾರವನ್ನು ಗೆದ್ದಿಲ್ಲ ನಿದ್ರೆ, ತಪ್ಪು, ಆಲಸ್ಯಗಳನ್ನು ಕಡಿಮೆಮಾಡಿಲ್ಲ ಇಚ್ಛೆಯ ಪ್ರತಿಬಂಧವನ್ನು ನಾನೆಂದೂ ಮಾಡಲಿಲ್ಲ. ನನ್ನ ಪರ್ಯಾಯಗಳ ಮೇಲಿನ ಲಾಲಸೆಯೂ ಕಡಿಮೆಯಾಗಿಲ್ಲ ನನ್ನ ಬದುಕುವ ಇಚ್ಛೆಯು ಇನ್ನೂ ತೀರಿಲ್ಲ. ಸಾವಿನ ಭಯವು ದೂರವಾಗಿಲ್ಲ ನಿಂದೆ, ಸ್ತುತಿ, ಲಾಭ, ಹಾನಿಗಳ ಬಗ್ಗೆ ಸಮಭಾವವು ಎಂದೂ ಹುಟ್ಟಿಲ್ಲ ಇಂಥ ಸ್ಥಿತಿಯಲ್ಲಿ ತಪವೆಂದರೆ ಎಂಥದು? ಕರ್ಮವನ್ನು ಗೆದ್ದು, ಶುದ್ಧ ಆತ್ಮನ ಸ್ಥಿತಿಗೆ ಒಯ್ಯುವುದೇ ತಪವಾಗಿದೆ ಇಂಥ ತಪವೂ ವೀತರಾಗಭಾವವೂ ಯಾರಿಗೆ ನಿಜವಾಗಿ ಪ್ರಾಪ್ತವಾಗಿರುವವೋ ಅವರು ಧನ್ಯರು. ಇಂಥ ವಿಚಾರಗಳುಳ್ಳ ಸಮ್ಯಗ್ದೃಷ್ಟಿ ಪುರುಷನಿಗೆ ತನ್ನ ತಪದ ವಿಷಯದಲ್ಲಿ ಎಂದೂ ಗರ್ವವು ಉಂಟಾಗುವದಿಲ್ಲ.

ರೂಪಮದ. ಜ್ಞಾನಿಯಾದವನಿಗೆ ಶರೀರ ಸೌಂದರ್ಯದ ವಿಷಯಕ್ಕೆ ಗರ್ವವು ಇರುವದಿಲ್ಲ. ಯಾಕಂದರೆ ಸಮ್ಯಗ್ದೃಷ್ಟಿ ಪುರುಷನು ತನ್ನ ರೂಪವು ಜ್ಞಾನಮಯವೆಂದು ಕಾಣುತ್ತಾನೆ ಜ್ಞಾನಸ್ವರೂಪಿಯಾದ ಯಾವ ನನ್ನ ರೂಪದಲ್ಲಿ ಎಲ್ಲ ವಸ್ತುಗಳ ಸತ್ಯರೂಪವನ್ನು ಕಾಣಲಿಕ್ಕೆ ಬರುವುದೋ ಅದೇ ನನ್ನ ನಿಜವಾದ ರೂಪವು. ತೊಗಲಿನಿಂದ ಸುತ್ತಲ್ಪಟ್ಟ ಈ ಶರೀರದ ಸೌಂದರ್ಯವು ರೂಪವಲ್ಲ ದೇಹದ ಚೆಲುವಿಕೆಯು ಒಂದೊಂದು ಕ್ಷಣದಲ್ಲಿಯೇ ನಷ್ಟವಾಗುವಂಥದಿದೆ ಒಂದು ದಿನ ಊಟಮಾಡದಿದ್ದರೆ ಇದು ಬಾಡುತ್ತದೆ, ವಿರೂಪವಾಗಿಯೂ ಕಾಣುತ್ತದೆ ಶರೀರ ಸೌಂದರ್ಯವು ನಾಶವಂತವಾಗಿದೆ. ಮುಪ್ಪು ಪ್ರಾಪ್ತವಾದಾಗ ಇದೇ ದೇಹವು ಹೆದರಿಕೆ ಬರುವಂತೆ ತೋರುತ್ತದೆ ರೋಗವುಂಟಾದರೆ ಈ ಶರೀರದ ಕಡೆಗೆ ಯಾರೂ ಹೊರಳಿಯೂ ಕೂಡ ನೋಡುವದಿಲ್ಲ, ಇದನ್ನು ಮುಟ್ಟುವದಿಲ್ಲ ಬಡತನ ಬಂದಾಗಲೂ ಕೂಡ ಹಾಗೆಯೇ. ಇಂಥ ಸೌಂದರ್ಯದ ವಿಷಯದಲ್ಲಿ, ಯಾವ ಜ್ಞಾನಿ ಪುರುಷನು ಗರ್ವವನ್ನು ಮಾಡಿಯಾನು? ಕುರುಡು, ಡೂಗು, ಕಿವುಡ, ಕುಂಟ, ದೊಡ್ಡ ಹೊಟ್ಟೆ, ಓರೆಮುಖ ಮೊದಲಾದವುಗಳು ಉಂಟಾಗುವುದರಿಂದ ಒಂದು ಕ್ಷಣದಲ್ಲಿಯೇ ನಮ್ಮ ಸೌಂದರ್ಯವು ವಿದ್ರೂಪವಾಗುವಂಥದಿರುತ್ತದೆ

ಈ ರೂಪದ ಗರ್ವವನ್ನು ಮಾಡುವುದು ಅನರ್ಥಕರವಾಗಿದೆ ಸುಂದರ ರೂಪು ಲಭಿಸಿದ್ದರೆ ನಮ್ಮ ಶೀಲವು ಮಲಿನವಾಗದಂತೆ ಕಾಪಾಡಿಕೊಳ್ಳಬೇಕು ಅದರಂತೆ ಬಡವ, ದುಃಖಿತ, ರೋಗಿ, ಅಂಗಹೀನ, ಕುರೂಪಿ, ಹೊಲಸು ಮನುಷ್ಯರನ್ನು ಕಂಡು ತಿರಸ್ಕಾರಮಾಡಕೂಡದು ಅವರಿಗೆ ನೋವನ್ನು ಉಂಟುಮಾಡಬಾರದು ಸಂಸಾರದಲ್ಲಿ ಸುತ್ತುತ್ತಿರುವಾಗ ನಮಗೆ ಮನುಷ್ಯ ಹಾಗೂ ತಿರ್ಯಂಚಯೋನಿಗಳಲ್ಲಿ ಸೌಂದರ್ಯದಂತೆ ಕುರೂಪತೆಯೂ ಅನೇಕ ಸಲ ಪ್ರಾಪ್ತವಾಗಿದೆ ಅದರಿಂದ ರೂಪದ ಗರ್ವಮಾಡುವುದು ಯೋಗ್ಯವಲ್ಲ

ಈ ಪ್ರಕಾರ ಸಮ್ಯಗ್ದರ್ಶನವನ್ನು ನಾಶಮಾಡುವ ಎಂಟು ಪ್ರಕಾರದ ಮದಗಳು ನಮ್ಮ ಸಮೀಪಕ್ಕೂ ಬಾರದಂತೆ ಇರಬೇಕು. ಹೀಗೆ ಮಾಡುವುದೇ ಯೋಗ್ಯವಾಗಿದೆ

ಅವಿಚಲಮಪ್ಪ ಲಕ್ಷ್ಮಿ, ವಿವಿಧೋತ್ಕರ ಹೃದ್ಯಮೆನಿಪ್ಪ ವಿದ್ಯೆ, ನೋ-
ಕ್ಷಪರನುರಾಗಮಂ ಪಡೆವ ರೂಪು, ಮನೋಹರಮಪ್ಪ ಯೌವನಂ ।
ಭುವನತಳಪ್ರಸಿದ್ಧಮೆನಿಪನ್ವಯಮ್ ಆ ನೃಪನಲ್ಲಿ ತೋರಪಾ-
ರವು ಮದಮಂ, ವಿವೇಕಪರಿಪೂರ್ಣನನೇನಿಪುವೀರಲಾರ್ಪುವೇ ॥

—ನಾಗಚಂದ್ರ-ಮಲ್ಲಿನಾಥ ಪುರಾಣಂ

ಇನ್ನು ಮುಂದೆ ಸೊಕ್ಕಿನಿಂದ ಸ್ವಮರೆತು, ಧಾರ್ಮಿಕ ಪುರುಷನ ತಿರಸ್ಕಾರ ಮಾಡುವಂಥವರಿಗೆ
ದೋಷವು ತಟ್ಟುತ್ತದೆಂಬುದನ್ನು ಹೇಳುತ್ತಾರೆ—

ಸ್ಮಯೇನ ಯೋಽನ್ಯಾನತ್ಯೇತಿ ಧರ್ಮಸ್ಥಾನ್ ಗರ್ವಿತಾಶಯಃ ।
ಸೋಽತ್ಯೇತಿ ಧರ್ಮಮಾತ್ಮೀಯಂ ನ ಧರ್ಮೋ ಧಾರ್ಮಿಕೈರ್ವಿನಾ ॥ ೨೬ ॥[1]

ಅನ್ವಯಾರ್ಥ—(ಯಃ) ಯಾವನು (ಗರ್ವಿತಾಶಯಃ) ಗರ್ವಿಷ್ಠನು (ಸ್ಮಯೇನ) ಗರ್ವದಿಂದ (ಅನ್ಯಾನ್) ಎರಡನೆಯ (ಧರ್ಮಸ್ಥಾನ್) ಧಾರ್ಮಿಕರನ್ನು (ಅತ್ಯೇತಿ) ತಿರಸ್ಕಾರದಿಂದ ಕಾಣುವನೋ (ಸಃ) ಅವನು (ಆತ್ಮೀಯಂ) ತನ್ನ ಸ್ವಂತ (ಧರ್ಮಂ) ಧರ್ಮದ (ಅತ್ಯೇತಿ) ತಿರಸ್ಕಾರ ಮಾಡಿಕೊಳ್ಳುತ್ತಾನೆ (ಧರ್ಮಃ) ಧರ್ಮವು (ಧಾರ್ಮಿಕೈಃ ವಿನಾ) ಧಾರ್ಮಿಕ ಜನರ ಹೊರತಾಗಿ (ನ'ಭವತಿ') ಬಾಳಿ ನಿಲ್ಲುವದಿಲ್ಲ

ಅರ್ಥ—ಗರ್ವಿಷ್ಠ ಪುರುಷನು ಉಳಿದ ಧರ್ಮನಿಷ್ಠ ಪುರುಷರ ತಿರಸ್ಕಾರ ಮಾಡಿದರೆ ತಾನು ತನ್ನ ಧರ್ಮವನ್ನೇ ತಿರಸ್ಕರಿಸಿಕೊಂಡಂತೆ ಆಗುತ್ತದೆಂದು ತಿಳಿಯಬೇಕು ಯಾಕಂದರೆ ಧರ್ಮಾತ್ಮರನ್ನುಳಿದು ಧರ್ಮವು ಇರಲಾರದು [ಅಹಂಕಾರದಿಂದ ಕುರುಡರಾದವರು ಕೆಲವು ಧಾರ್ಮಿಕ ವ್ಯಕ್ತಿಗಳ ಕುಲ, ಜಾತಿ, ವಂಶಗಳು ತಮಗಿಂತ ಕಡಿಮೆ ತರಗತಿಯವೆಂದು ತಿಳಿಯುತ್ತಾರೆ, ತಿರಸ್ಕಾರವನ್ನೂ ಮಾಡುತ್ತಾರೆ, ಅಲ್ಲದೆ ಅಂಥವರ ಬಡತನ, ಅಶಕ್ತತೆ, ಕುಲ, ಜಾತಿ, ಸಂಸ್ಕೃತಿಗಳನ್ನು ಎತ್ತಿ ಅವಮಾನಗೊಳಿಸುತ್ತಾರೆ ಅವರಿಗೆ ಕೆಲವು ಧರ್ಮಾಚರಣೆಯ ಅಧಿಕಾರವೇ ಇಲ್ಲವೆಂದು, ಧರ್ಮಾಚರಣೆಯಲ್ಲಿ ಅಡ್ಡಿ ಆತಂಕಗಳನ್ನು ಒಡ್ಡುತ್ತಾರೆ ಇಂಥವರು ತಮ್ಮ ಧರ್ಮವನ್ನೇ ತಿರಸ್ಕರಿಸಿದಂತೆ ಇದರ ಫಲವು ಅವರ ಧರ್ಮದ ಸ್ಥಿತಿಯೇ ಕೆಡುತ್ತದೆ ಮುಂದಿನ ಕಾಲದಲ್ಲಿ ತಮಗಾಗಿಯೂ ಆ ಧರ್ಮವನ್ನು ಕಾಯ್ದುಕೊಳ್ಳುವುದು ಕಠಿಣವಾಗುತ್ತದೆ ಈ ಸೊಕ್ಕಿನ ಬೆಳವಣಿಗೆಯಿಂದ ಆಗುವ ದೊಡ್ಡ ಹಾನಿಯು ಇದಾಗಿದೆ ಅದರಿಂದ ಸಮ್ಯಗ್ದೃಷ್ಟಿಯುಳ್ಳವರು ಆತ್ಮಪತನಕ್ಕೆ ಕಾರಣವಾಗಿರುವ ಈ ದೋಷದಿಂದ ದೂರವಿರಬೇಕು ನ ಧ ]

ವಿಶೇಷಾರ್ಥ—ಗರ್ವಿಷ್ಠ ಪುರುಷನ ವಿಚಾರ ಪರಂಪರೆ. ಸುದೈವದಿಂದ ಜಗತ್ತಿನಲ್ಲಿ ಧನ, ಐಶ್ವರ್ಯ, ಅಧಿಕಾರಗಳು ದೊರೆಯುತ್ತವೆ ಇವು ಲಭಿಸಿದಾಗ ಆ ಮನುಷ್ಯನಿಗೆ ಗರ್ವವು ಉಂಟಾಗುತ್ತದೆ ಅಂಥ ಸಂದರ್ಭದಲ್ಲಿ ದೇವ, ಗುರು, ಧರ್ಮಗಳ ವಿಷಯದಲ್ಲಿ ವಿನಯದಿಂದ ವರ್ತಿಸಬೇಕೆಂಬ ಮಾತೂ ಕೂಡ ಅವನಿಗೆ ಮರೆತುಹೋಗುತ್ತದೆ ಗರ್ವಿಷ್ಠಪುರುಷರ ಮನಸ್ಸಿನಲ್ಲಿ ಹೀಗೆ ವಿಚಾರಗಳು ಬರುತ್ತವೆ "ದೇವಾಲಯವೆಂದರೆ ಅದೇನು ದೊಡ್ಡ ಮಾತು! ಇಂಥ ದೇವಾಲಯಗಳನ್ನು ನಾನು ನೂರಾರು ಕಟ್ಟಿಸೇನು ಇದನ್ನೂ ನಾನೇ ಕಟ್ಟಿಸಿರುವೆ. ತಪಸ್ವಿಗಳೂ ತ್ಯಾಗಿಗಳೂ ಇದ್ದ ಜನರು ನನ್ನ ಆಧೀನದಲ್ಲಿಯೇ ಇದ್ದಂತೆ ಇದ್ದಾರೆ. ಯಾಕಂದರೆ ಅವರಿಗೆ ಅರಿವೆ ಅಂಚಡಿ, ಹೊದಿಕೆ, ಆಹಾರ ಮೊದಲಾದವುಗಳನ್ನು ನಾನೇ ಪೂರೈಸುತ್ತೇನೆ ಅದರಿಂದಲೇ ಅವರು ಬದುಕುತ್ತಾರೆ. ಇಂದಿನ ಧರ್ಮದ ಅಸ್ತಿತ್ವವೂ ಕೂಡ ದುಡ್ಡು ಖರ್ಚು ಮಾಡುವದನ್ನು ಅವಲಂಬಿಸಿದೆ. ದೇವರ ಪೂಜೆ ಪ್ರಭಾವನೆಗಳೂ ಸಹ ಬಹಳ ದುಡ್ಡು ಖರ್ಚು ಮಾಡುವದರಿಂದ ಆಗುತ್ತವೆ" ಇಂಥ ವಿಚಾರಗಳಿಂದ ಅವನು ದೇವ, ಗುರು, ಧರ್ಮಗಳ ಅವಜ್ಞೆಯನ್ನು ಮಾಡಲಿಕ್ಕೆ ಆರಂಭಿಸುತ್ತಾನೆ ಇದೇ ಪ್ರಕಾರ ಅಭಿಮಾನದ ಭರದಲ್ಲಿ ಅನೇಕ ರೀತಿಯ ಪಾಪಾಚರಣೆಗಳನ್ನು ಮಾಡುತ್ತ ಇದ್ದೂ ಕೂಡ ಪೂಜೆ ಪ್ರಭಾವನೆಗಳಲ್ಲಿ ಸ್ವಲ್ಪ ದ್ರವ್ಯವನ್ನು ಖರ್ಚು ಮಾಡುವುದರಿಂದ ತನಗೆ ದೊಡ್ಡಸ್ತನವು ಸಿಗುವದೆಂದು ತಿಳಿಯುತ್ತಾನೆ ಐಶ್ವರ್ಯದಲ್ಲಿ ಗುಂಗನಾಗಿರುವುದರಿಂದ ಅವನಿಗೆ ಹೀಗೆ ಎನಿಸುತ್ತದೆ "ದ್ರವ್ಯವೇ ಶ್ರೇಷ್ಠವಾಗಿದೆ ಯಾಕಂದರೆ ಸಿರಿವಂತರ ಮನೆಯಲ್ಲಿ ದೊಡ್ಡ ದೊಡ್ಡ ಜ್ಞಾನಿಗಳೂ ಶಾಸ್ತ್ರವಿದರೂ ಕವಿಗಳೂ ಯಾವಾಗಲೂ ಬಂದು, ದುಡ್ಡನ್ನು ದೊರಕಿಸುವ ಆಶೆಯಿಂದ ಶಾಸ್ತ್ರವನ್ನು

---

1 ಆಯತವರ್ಮನು ಹೇಳುವದು ಹೀಗೆ

ಕಂದ ॥ ಮದವೆಂಬುದು ಮಿಥ್ಯಾತ್ವದ ಮೊದಲದು ಜೀವಂಗೆ ಪಗೆವನದರಿಂದೆನಸುಂ ।
ವಿದಿತವಿವು [ಧನ ಕುಲಜಾತಿ ಮದಗಳ್] ವಿರಹಿತ ದರ್ಶನಿಕನೆನಿಕುಂ ಪುರುಷಂ ॥ ೨೦ ॥

ವಚನ—ಮದವೆಂಬುದು ಜೀವಂಗೆ ಪಗೆವನದರಿಂದೆಲ್ಲಾಗುಣಂಗಳು ಕೆಡುವಂತಾ ಮಾನಗರ್ವ ಪಾವಕನಂ ವಿನಯವೆಂಬ ಜಲವರ್ಷದಿಂ ಗೆಲ್ವುದು

ಹೇಳುತ್ತಿರುತ್ತಾರೆ ಇದೇ ಪ್ರಕಾರ ಹಲವು ಜನ ಚತುರ ಕಲಾವಂತರೂ ಬರುತ್ತಾರೆ. ಪೂಜೆ, ಪ್ರಭಾವನೆ, ಭಜನಗಳನ್ನು ಮಾಡುವವರು ಸಿರಿವಂತರ ಆಶ್ರಯಕ್ಕೆ ನಿಂತು, ಅವರ ಹಿಂದೆ ಹಿಂದೆಯೇ ಸುಳಿದು, ತಮ್ಮ ಹಾಡುಗಳನ್ನು ಕೇಳುವಂತೆ ಮಾಡುತ್ತಾರೆ. ಒಂದು, ಎರಡು, ಮೂರು ಉಪವಾಸಗಳನ್ನು ಮಾಡುವ ವ್ರತವನ್ನು ಸ್ವೀಕರಿಸಿದ ತಪಸ್ವಿಗಳೂ ತ್ಯಾಗಿಗಳೂ ಕೂಡ ಸಿರಿವಂತರ ಮನೆಯಲ್ಲಿ ಆಹಾರ ಸ್ವೀಕರಿಸುವುದಕ್ಕೆ ಬರುತ್ತಿರುತ್ತಾರೆ ಮಂತ್ರ, ಜಪ ಮೊದಲಾದವುಗಳನ್ನೂ ಸಹ ಶ್ರೀಮಂತರಿಗೆ ಸುಖವಾಗಲೆಂದು ಮಾಡಲಾಗುತ್ತದೆ ಇದರ ಮೇಲಿಂದ ಎಲ್ಲ ಗುಣಗಳು ದ್ರವ್ಯದ ಸ್ವಾಧೀನವಾಗಿವೆ." ಹೀಗೆ ಐಶ್ವರ್ಯದಿಂದ ನಾವು ಶ್ರೇಷ್ಠರು, ಕೃತ-ಕೃತ್ಯರು, ನಮಗೆ ಯಾವುದರ ಅಗತ್ಯವೂ ಇಲ್ಲ ಎಂದು ಭಾವಿಸಿ ಸಾವುಕಾರರು ಧರ್ಮವಂತ ಪುರುಷನನ್ನು ಅಪಮಾನಗೊಳಿಸುತ್ತಾರೆ, ಅವನಿಗೆ ಮಹತ್ವವನ್ನು ಕೊಡುವದಿಲ್ಲ ಇಂಥವರು ಆತ್ಮಜ್ಞಾನಿ, ಪರಮಾರ್ಥಿ, ಪರಮ ಸಂತೋಷವನ್ನು ಧರಿಸಿದ ಪುರುಷರ ಕಡೆಗೆ ಮೂಲದಲ್ಲಿಯೇ ನೋಡುವದಿಲ್ಲ. ಸತ್ಪುರುಷರಿಗೆ ಚಕ್ರವರ್ತಿಯ ವೈಭವ ಇಷ್ಟೇ ಅಲ್ಲ, ಸ್ವರ್ಗದೊಳಗಿನ ಇಂದ್ರನ ಸಂಪತ್ತಿಯೂ ಕೂಡ ತುಚ್ಛ ಮತ್ತು ದುಃಖಮಯವೆನಿಸುತ್ತದೆ. ಅಂಥವರು ಸಿರಿವಂತರ ಸಹವಾಸವನ್ನು ಕನಸಿನಲ್ಲಿಯೂ ಕೂಡ ಬಯಸುವದಿಲ್ಲ. ಜಗತ್ತಿನೊಳಗಿನ ಅಲ್ಪ ಪುಣ್ಯವಂತರು ನಿರ್ಧನರು ತಮ್ಮ ಮನೆತನ ಕುಟುಂಬಗಳ ರಕ್ಷಣೆಗೆ ನೆರವಾದಾರೆಂದು ಶ್ರೀಮಂತರ ಆಶ್ರಯಕ್ಕೆ ಬರುತ್ತಾರೆ. ಅವರು ತಮ್ಮ ಸ್ವಾಭಿಮಾನವನ್ನು ತ್ಯಜಿಸಿರುತ್ತಾರೆ; ಧನವಂತರು ದಯಾಳುಗಳೂ ಉಪಕಾರಿಗಳೂ ಇರಬೇಕೆಂದು ನಂಬಿರುತ್ತಾರೆ. ಅಲ್ಲದೆ ಸಾವುಕಾರರು ಧರ್ಮವನ್ನೂ ಧರ್ಮಿಷ್ಠರನ್ನೂ ಪ್ರೀತಿಸಿ ಅದರಿಂದ ಪುಣ್ಯವನ್ನು ಸಂಪಾದಿಸುವಂಥವರು ಇರಬೇಕು ಎಂದು ತಿಳಿದು ಅವರ ಬಾಗಿಲಿಗೆ ಬರುತ್ತಾರೆ ಆದರೆ ಶ್ರೀಮಂತರಿಗೆ ದ್ರವ್ಯದ ಮದವು ಬಹಳಷ್ಟು ಏರಿರುತ್ತದೆ ಅವರಿಗೆ ತಮ್ಮ ಎದುರಿಗೆ ಯಾರು ಬಂದಿರುವರೆಂಬುದೂ ಕಾಣುವದಿಲ್ಲ ಅಂದಮೇಲೆ ದಾನಕೊಡುವ ಮಾತಂತೂ ದೂರವೇ ಉಳಿಯಿತು. ಅಂದಮೇಲೆ ಉಪಕಾರವನ್ನಾದರೂ ಯಾರು ಮಾಡುವರು? ತಿರುಗಿ ಅವರು ಕಠಿಣ ಹೃದಯಿಗಳಾಗುತ್ತಾರೆ. ಜಗತ್ತಿನಲ್ಲಿ ತಮ್ಮ ಮಾನವು ಕಡಿಮೆಯಾಗಬಾರದು, ಕಡಿಮೆತನವು ಯಾತರಲ್ಲಿಯೂ ಬರಕೂಡದೆಂದು ಪ್ರಸಂಗ ಬಂದಾಗ ಅವರು ಪ್ರಾಣವನ್ನೂ ಕೂಡ ಕೊಡುವರು. ಈ ಅತಿಶಯ ಮಮತ್ವ ಹಾಗೂ ಜೀನತನಗಳ ಪ್ರಭಾವದಿಂದ ನರಕ, ತಿರ್ಯಂಚಾದಿ ಗತಿಗಳಲ್ಲಿ ಅವರು ಅನಂತಕಾಲದ ವರೆಗೆ ಸುತ್ತುತ್ತ ಇರಬೇಕಾಗುವುದು.

ನಿಗರ್ವಿ ಪುರುಷನ ವಿಚಾರ ಪರಂಪರೆ. ಸಿರಿ, ಸಂಪತ್ತುಗಳೆಲ್ಲ ಇದ್ದೂ ನಿಗರ್ವಿಯಾದ ಮನುಷ್ಯನು ಹೀಗೆ ವಿಚಾರಿಸುತ್ತಾನೆ "ಈ ಧನ, ಐಶ್ವರ್ಯ, ಸಂಪತ್ತಿಗಳು ನಮ್ಮವಲ್ಲ. ಇವು ನಮ್ಮ ಸ್ವರೂಪವೂ ಅಲ್ಲ. ಪೂರ್ವದಲ್ಲಿ ಮಾಡಿದ ಒಂದು ಪುಣ್ಯ ಕರ್ಮವು ಈಗ ಉದಯಕ್ಕೆ ಬಂದಿದೆ. ಇದು ನಾಶವಾಗುವಂಥ ಸಂಪತ್ತಿಯು. ಆದಕ್ಕಾಗಿ ಇದರಿಂದ ಯಾರಿಗಾದರೂ ಉಪಯೋಗವಾಗುವಂಥ ಕಾರ್ಯವನ್ನು ಮಾಡೋಣ ಬಡವರಿಗೆ ಆಗುವಂಥ ದುಃಖವನ್ನು ಇಲ್ಲದಂತೆ ಮಾಡುವ. ಕರುಣೆಯಿಂದ ದುಃಖಿತ ಜೀವಿಗಳಿಗೆ ಉಪಕಾರಮಾಡುವದರಲ್ಲಿ ಇದರ ವ್ಯಯಮಾಡೋಣ. ಜಿನಧರ್ಮದ ಮೇಲೆ ಶ್ರದ್ಧೆಯಿದ್ದ ಯಾವನಾದರೂ ಜ್ಞಾನೀ ಪುರುಷನು ಬಡವನಿದ್ದರೆ ಅವನಿಗೆ ಧನಸಹಾಯವನ್ನು ಮಾಡಿ, ಅವನ ನೋವನ್ನು ಕಡಿಮೆ ಮಾಡೋಣ. ಎಲ್ಲಾ ಜೀವಿಗಳೂ ದ್ರವ್ಯದ ಆಶೆಯನ್ನು ಮಾಡುತ್ತ ಇರುತ್ತವೆ ನಾನೇ ಬಡವನಿದ್ದಿದ್ದರೆ ನನ್ನಿಂದ ಉಪಕಾರವಾಗಲೆಂದು ಯಾರು ಬಯಸುತ್ತಿದ್ದರು? ಈಗ ನನ್ನ ಶುಭ ಕರ್ಮವು ಉದಯಕ್ಕೆ ಬಂದು ಫಲ ಕೊಡುತ್ತಲಿದೆ. ಅಂದ ಮೇಲೆ ನನ್ನ ಆಶ್ರಯಕ್ಕೆ ನಿಂತ ಜನರ ಉದರಪೋಷಣೆಯನ್ನು ನಾನು ಮಾಡುವೆ ಬಾಲಕ, ವೃದ್ಧ, ರೋಗಿ, ಅನಾಥ, ವಿಧವಾ, ಅಶಕ್ತ ಇಂಥವರಿಗೆ ಉಪಕಾರಮಾಡುವುದರಿಂದ ನನಗೆ ಧನವು ಲಭಿಸಿದ್ದೂ ಸಾರ್ಥಕವಾಗುವುದು. ಇವಲ್ಲದೆ ಇನ್ನೂ ಅನೇಕ ಕೆಲಸಗಳಿವೆ. ಅವುಗಳಲ್ಲಿ ಜಿನಧರ್ಮದ ಪರಂಪರೆಯು ಮುಂದೆ ಬಹು ದಿನಗಳ ವರೆಗೆ ನಡೆಯುವಂಥ ಕಾರ್ಯಗಳಿಗೆ ನನ್ನ ಧನವು ವ್ಯಯವಾಗಬೇಕು. ಅಲ್ಲದೆ ಜ್ಞಾನಾಭ್ಯಾಸವು ನಡೆಯುವದಕ್ಕೆ ಅದರಂತೆ ನಿತ್ಯಪೂಜೆ, ಧ್ಯಾನ, ಅಧ್ಯಯನ, ತಪ, ಶೀಲ ಇವೇ ಮೊದಲಾದ—ಸಂಸಾರದೊಳಗಿಂದ ಜನರನ್ನು ಉದ್ಧರಿಸುವ ಕಾರ್ಯದಲ್ಲಿ ಪ್ರವೃತ್ತಿಯನ್ನುಂಟುಮಾಡುವ—ಕಾರ್ಯಗಳಿಗೆ ದುಡ್ಡಿನ ಉಪಯೋಗವಾಗಬೇಕು. ಹೀಗಾದರೇನೇ ಧನವು ಲಭಿಸಿದ್ದು ಸಾರ್ಥಕವಾಯಿತು, ಲಾಭದಾಯಕವೂ ಆಯಿತು ಈ ದ್ರವ್ಯವನ್ನು ಪರೋಪಕಾರದಲ್ಲಿ ಉಪಯೋಗಿಸದಿದ್ದರೆ ನಷ್ಟವಾಗುವ ಗುಣವುಳ್ಳ ದ್ರವ್ಯವಂತೂ ಹೇಗೂ ನಾಶವಾಗ ತಕ್ಕದ್ದೇ ಯಾರ ಸಂಗಡವೂ ಈ ಧನವು ಇಲ್ಲಿಯ ವರೆಗೂ ಪರಲೋಕಕ್ಕೆ ಹೋದುದಿಲ್ಲ ಸಂಪತ್ತಿಯ ಉಪಯೋಗವನ್ನು ದಾನಕೊಡುವದರಲ್ಲಿ ಮಾಡದಿದ್ದರೆ ಕೇವಲ ಪಾಪ ಹಾಗೂ

ದುರ್ಧ್ಯಾನಗಳು ಉತ್ಪನ್ನವಾಗುತ್ತವೆ ಅದರಿಂದ ಸಂಸಾರ ಸಮುದ್ರದಲ್ಲಿ ಮುಳುಗಬೇಕಾಗುತ್ತದೆ ಸಂಪತ್ತಿಯು ಪ್ರಾಪ್ತವಾಗಿದ್ದರೆ ದಾನ ಮಾಡುವುದೇ ಅದರ ನಿಜವಾದ ಫಲವು ಹಲವು ಜನರು ಪೂರ್ವಜನ್ಮದಲ್ಲಿ ದಾನ ಮಾಡಿಲ್ಲವೆಂದು ತಿಳಿದು, ಈ ಜನ್ಮದಲ್ಲಿ ಮನೆ ಮನೆ ತಿರುಗಿದರೂ ಹೊಟ್ಟೆ ತುಂಬದಂಥ ಪರಿಸ್ಥಿತಿಯು ಉಂಟಾಗಿದೆ ಮೈಮುಚ್ಚುವಷ್ಟು ಅರಿವೆಯೂ ಅವರಿಗೆ ದೊರೆಯುವದಿಲ್ಲ ಅವರು ಬಡವರಾಗಿ, ದೀನರಾಗಿ ಅನ್ಯರ ಎಂಜಲದ ಆಶೆಯನ್ನೂ ಮಾಡುತ್ತ ತಿರುಗುತ್ತಾರೆ ಇದೆಲ್ಲ ದಾನಮಾಡಿದ ಹಾಗೂ ಜೀನತನದ ಫಲವಾಗಿದೆ ಹೆಚ್ಚಿಗೇನು? ಅವರಿಗೆ ಮನುಷ್ಯರ ಹಾಗೂ ಪಶುಗಳ ಸೇವೆಯನ್ನು ಮಾಡಿದರೂ ಹೊಟ್ಟೆ ತುಂಬ ಅನ್ನವು ಸಿಗುವದಿಲ್ಲ ದಾನ-ಮಾಡದ ಹೊರತಾಗಿ ಮುಂದೆ ಸಂಪತ್ತಿಯು ಲಭಿಸಲಾರದು. ಸಂಪತ್ತಿಯನ್ನು ದಾನ-ಧರ್ಮಗಳಲ್ಲಿ ತೊಡಗಿಸಿದರೇನೇ ಅದು ದೊರಕಿದುದಕ್ಕೆ ಸಫಲವಾದಂತಾಯಿತು ಸತ್ತ ಮೇಲೆ ಸಂಪತ್ತಿಯು ಪರಲೋಕಕ್ಕೆ ಸಂಗಡ ಬರಲಾರದು ಎಲ್ಲಿ ಇಟ್ಟಿರುವೆವೋ ಅಲ್ಲಿಯೇ ಇರುವುದು ಅದಕ್ಕಾಗಿ ಯಾವುದಾದರೂ ಒಂದು ಜೀವಕ್ಕೆ ಉಪಕಾರಮಾಡಲಿಕ್ಕೆ ವ್ಯಯವಾದ ಧನವೇ ನಮ್ಮದೆಂದು ತಿಳಿಯಬೇಕು ಅದರಿಂದಲೇ ಮುಂದೆ ನಮಗೆ ಏನಾದರೂ ಉಪಕಾರವಾದೀತು." ಈ ಪ್ರಕಾರ ಸಮ್ಯಗ್ದೃಷ್ಟಿ ಪುರುಷನು ವಿಚಾರಮಾಡುತ್ತಾನೆ ಅಲ್ಲದೆ ತನ್ನ ಸಂಪತ್ತಿಯನ್ನು ಪರೋಪಕಾರದಲ್ಲಿ ಖರ್ಚುಮಾಡಲಿಕ್ಕೆ ಅವನು ಯಾವಾಗಲೂ ಸಿದ್ಧನಿರುತ್ತಾನೆ

**ಸಂಪತ್ತಿಯು ಸದುಪಯೋಗಮಾಡಬೇಕು.** ಧರ್ಮಿಷ್ಠ ಪುರುಷನಿಗೆ ಸಂಪತ್ತಿಯು ಸ್ವೀಕಾರ ಮಾಡುವದಕ್ಕೆ ತಕ್ಕುದಲ್ಲ. ಯಾಕಂದರೆ ಅದರಿಂದ ಮೋಹವು ಹುಟ್ಟಿ, ಆತ್ಮನಿಗೆ ಭ್ರಮೆಯುಂಟಾಗುತ್ತದೆ. ಅದರಿಂದ ಜ್ಞಾನೀ ಪುರುಷರು ಅದನ್ನು ತಮ್ಮ ಹತ್ತರ ಇಟ್ಟುಕೊಳ್ಳುವದಿಲ್ಲ ಆದರೂ ಯಾರಿಗೆ ಚಾರಿತ್ರಮೋಹದ ಉದಯದಿಂದ ರಾಗ ಭಾವವು ಕಡಿಮೆಯಾಗುವದಿಲ್ಲವೋ ಅವರು ತಮ್ಮ ಸಂಪತ್ತಿಯನ್ನು ಅನ್ಯರಿಗೆ ಉಪಕಾರಮಾಡುವದರಲ್ಲಿ ಅವಶ್ಯವಾಗಿ ಖರ್ಚುಮಾಡಬೇಕು. 'ಬಹಳ ಕಷ್ಟಮಾಡಿ, ಬೆವರು ಸುರಿಸಿ, ಸಂಪಾದಿಸಿದ ಸಂಪತ್ತನ್ನು ಒಳ್ಳೆಯ ಕಾರ್ಯದಲ್ಲಿ ಉಪಯೋಗಮಾಡದೆ, ಅದನ್ನು ಎಲ್ಲಿಯೋ ಇಟ್ಟು ಸತ್ತುಹೋಗುವುದರಿಂದ ನಮಗೇನು ಹಿತವಾಗುವದಿದೆ?" ಈ ಪ್ರಕಾರ ಪಾಪಕ್ಕೆ ಹೆದರುವವರು ವಿಚಾರಮಾಡುತ್ತಾರೆ ಅಲ್ಲದೆ ಬಡವರೂ ಬೇನೆ ಬಿದ್ದವರೂ ದುಃಖಿಗಳೂ ಇದ್ದರೆ ಅವರನ್ನು ಕಂಡೂ ಕಾಣದಂತೆ ಇವರು ಇರುವದಿಲ್ಲ ತಮ್ಮ ಶಕ್ತಿಗೆ ಅನುಸರಿಸಿ ಅವರಿಗೆ ಧನಸಹಾಯ ಮಾಡಿ, ಅವರ ದುಃಖವನ್ನು ಇಲ್ಲದಂತೆ ಮಾಡುತ್ತಾರೆ. ಇದೂ ಅಲ್ಲದೆ ಅವರು, ತಮ್ಮ ಧನವನ್ನು ಶುಭಕಾರ್ಯದಲ್ಲಿ ಖರ್ಚುಮಾಡುವವರನ್ನು ಕಂಡು, ಸ್ವತಃ ಆನಂದವನ್ನೂ ಹೊಂದುತ್ತಾರೆ ಅಂಥವರ ಧರ್ಮಸಾಧನೆಯಲ್ಲಿ ತಾವೂ ಸಹಕರಿಸಿ, ತಮ್ಮ ಧನವನ್ನೂ ಅದರಲ್ಲಿ ಸೇರಿಸಿ, ಅದರ ಯೋಗ್ಯ ಉಪಯೋಗವಾಗುವಂತೆ ಮಾಡುತ್ತಾರೆ. ಅದರಲ್ಲಿ ಅವರಿಗೆ ಸಂತೋಷವಿರುತ್ತದೆ. ಇಂದವರಿಗೇ ಸಂಪತ್ತಿಯು ಪ್ರಾಪ್ತವಾದುದು ಸಾರ್ಥಕವಾಯಿತೆಂದು ತಿಳಿಯಬೇಕು ದಾನಿಗಳಿಗೇನೇ ಪರಲೋಕದಲ್ಲಿ ದೇವರ ಐಶ್ವರ್ಯ, ಚಕ್ರವರ್ತಿಯ ಸಂಪತ್ತುಗಳು ಲಭಿಸುತ್ತವೆ.

> ಕುಲಮದಮೊಂದು ರೂಪಮದಮೊಂದು ವಯೋಮದಮೊಂದು ತನ್ನದೋ-
> ರ್ಬಲಮದಮೊಂದು ಜಾತಿಮದಮೊಂದು ಕಲಾಮದಮೊಂದು ದೇವತಾ ।
> ಬಲಮದಮೊಂದು ರಾಜ್ಯಮದಮೊಂದಿನಿತಲ್ಲದೆ ಬೇಜ಼ ಁಗಮು-
> ಗ್ಗಲಿಸಿದ ದೋಷದೃಷ್ಟಿವಿಷಯಾತುರರೇಂ ಗಡ ಮುಂದುಗಾಣ್ಬರೇ ।
>
> —ನಾಗಚಂದ್ರ-ರಾಮಚಂದ್ರಚರಿತ ಪುರಾಣ ೯-೧೪

ಸಂಪತ್ತಿಯ ವಿಷಯದಲ್ಲಿ ಪ್ರೇಮವಿದ್ದವರಿಗೆ ಅದರ ಸ್ವರೂಪವನ್ನು ತಿಳಿಸುವದಕ್ಕಾಗಿ ಆಚಾರ್ಯರು ಸೂತ್ರವನ್ನು ಹೇಳುತ್ತಾರೆ—

**ಯದಿ ಪಾಪನಿರೋಧೋಽನ್ಯಸಂಪದಾ ಕಿಂ ಪ್ರಯೋಜನಂ ।**
**ಅಥ ಪಾಪಾಸ್ರವೋಽಸ್ತ್ಯನ್ಯಸಂಪದಾ ಕಿಂ ಪ್ರಯೋಜನಂ ॥ ೨೭ ॥**

**ಅನ್ವಯಾರ್ಥ**— (ಯದಿ) ಒಂದು ವೇಳೆ (ಪಾಪನಿರೋಧಃ) ಪಾಪದ ಆಗಮನಕ್ಕೆ ತಡೆಯು (ಅಸ್ತಿ) ಇದ್ದರೆ (ಅನ್ಯಸಂಪದಾ) ಉಳಿದ ಸಂಪತ್ತುಗಳಿಂದ (ಕಿಂ ಪ್ರಯೋಜನಂ) ಏನು ಉಪಯೋಗವಿದೆ? (ಯದಿ) ಒಂದು

ವೇಳೆ (ಪಾಪಾಸ್ರವಃ) ಪಾಪದ ಆಗಮನವು (ಅಸ್ತಿ) ಇದ್ದರೆ (ಅನ್ಯಸಂಪದಾ) ಎರಡನೆಯ ಸಂಪತ್ತಿನಿಂದ (ಕಿಂ ಪ್ರಯೋಜನಂ) ಏನು ಉಪಯೋಗವಿದೆ?

ಅರ್ಥ—ನನ್ನಲ್ಲಿ ಜ್ಞಾನಾವರಣಾದಿ ಅಶುಭ ಪಾಪಕರ್ಮ ಪ್ರಕೃತಿಯ ಆಗಮನವು ನಿಂತುಹೋಗಿದ್ದರೆ ಇತರ ಸಂಪತ್ತು ನನಗೆ ಯಾತಕ್ಕೆ ಬೇಕು? ಅದರಿಂದ ನನಗೆ ಪ್ರಯೋಜನವಾದರೂ ಏನು? ಒಂದು ವೇಳೆ ನನಗೆ ಪಾಪಬಂಧವೇ ಆಗುತ್ತ ಇದ್ದರೆ ಸಂಪತ್ತಿಯು ಇದ್ದೂ ಕೂಡ ಏನು ಮಾಡುವುದು? [ಪಾಪದ ನಿರೋಧ ಇದ್ದವರೇ ಧರ್ಮಾತ್ಮರು. ಇದರಲ್ಲಿ ಧರ್ಮಸಂಪತ್ತಿ, ಪುಣ್ಯವಿಭೂತಿಮತ್ತ್ವಗಳಿರುತ್ತವೆ ಅವುಗಳ ಮುಂದೆ ಕುಲ, ಜಾತಿ, ಸಂಪತ್ತುಗಳು ಏನೂ ಬೆಲೆಯಿಲ್ಲದವುಗಳಾಗಿವೆ. ಅವರ ಅಂತರಂಗದಲ್ಲಿ ಸದ್ಭಾವವೆಂಬ ವಿಶಿಷ್ಟತರದ ಸಂಪತ್ತಿಯು ಇರುತ್ತದೆ ಅದರಿಂದ ಇವರು ತಿರಸ್ಕಾರಕ್ಕೆ ಪಾತ್ರರಲ್ಲ ಇದರಂತೆಯೇ ಪಾಪಕರ್ಮದ ಆಸ್ರವವು ಯಾರಿಗೆ ಇದೆಯೋ ಅವರು ಪಾಪಿಷ್ಠರು ಅವರ ಕುಲ, ಜಾತಿ, ಸಂಪತ್ತುಗಳು ಎಷ್ಟು ಶ್ರೇಷ್ಠವಿದ್ದರೂ ಅವು ನಿರುಪಯುಕ್ತ-ವಾಗಿವೆ ಅಲ್ಲದೆ ಅವು ಅವರ ಪಾಪವು ಹೆಚ್ಚುವದರಿಂದ ಬೇಗನೇ ನಷ್ಟವೂ ಆಗಿ ಹೋಗಬಹುದು ಅವರ ದುರ್ಗತಿಯ ಗಮನವನ್ನೂ ಅವು ತಡೆಯಲಾರವು ಇಂಥ ಸಂಪತ್ತಿಯನ್ನು ನೋಡಿ, ಗರ್ವವನ್ನು ಮಾಡುವುದು ಮೂರ್ಖತೆಯಾಗಿದೆ ಈ ರಹಸ್ಯವನ್ನು ತಿಳಿದವರು ಕುಲ, ಜಾತಿ, ಐಶ್ವರ್ಯಗಳಿಂದ ಹೀನರಿದ್ದ ಸಮ್ಯಗ್ದೃಷ್ಟಿ ಪುರುಷರನ್ನು ಎಂದೂ ತಿರಸ್ಕರಿಸಲಾರರು. ಸ. ಧ ]

ವಿಶೇಷಾರ್ಥ—ಪಾಪನಿರೋಧವು ಆಗುತ್ತಿದ್ದರೆ ಸಂಪತ್ತಿಯ ಉಪಯೋಗವೇನು?—ಜೀವನದಲ್ಲಿ ಸಂಯಮಿಯಾಗಿ ಪಾಪವು ಉತ್ಪನ್ನವಾಗುವ ಕಾರಣವನ್ನೇ ಇಲ್ಲದಂತೆ ಮಾಡಬೇಕು. ಅಂದರೆ ಇಂದ್ರಿಯಗಳಿಗೆ ವಿಷಯವಾಗಿರುವ ಉಳಿದ ಸಂಪತ್ತಿಗಳು ರಾಜ್ಯ, ವೈಭವ ಮೊದಲಾದವುಗಳು—ತನಗೆ ದೊರಕಲಿಲ್ಲವೆಂದು ದುಃಖಪಡಲಿಕ್ಕೆ ಕಾರಣವೇ ಉಳಿಯುವದಿಲ್ಲ ಯಾಕಂದರೆ ಆಸ್ರವದ ನಿರೋಧವನ್ನೇ ನಾವು ಮಾಡಿರುವುದರಿಂದ ನಮಗೆ ಕ್ರಮದಿಂದ ಸ್ವರ್ಗದೊಳಗಿನ ಅಹಮಿಂದ್ರನ ಐಶ್ವರ್ಯವು ದೊರೆಯುತ್ತದೆ. ಮೇಲಾಗಿ ನಿರ್ವಾಣ ಸಂಪಾದನೆಯೂ ಮುಂದೆ ಆಗುವದಿದೆ ಅವುಗಳ ಮುಂದೆ ಈ ಕ್ಷಣಭಂಗುರವೂ ದುಃಖಮಯವೂ ಆದ ಐಹಿಕ ಸಂಪತ್ತಿನ ಬೆಲೆ ಏನು? ಜೀವವು ಪಾಪದ ಆಸ್ರವವನ್ನೇ ತಡೆದಾಗ ಅದಕ್ಕೆ ಅತ್ಯಂತ ಶ್ರೇಷ್ಠವಾದ ನಿರ್ವಾಣ ಸಂಪತ್ತು ದೊರೆಯುತ್ತದೆ ಇನ್ನು ಅನ್ಯಾಯ, ಅನೀತಿ, ಕಪಟ, ಕಳವು, ಮೋಸ ಮೊದಲಾದ ಕಾರ್ಯಗಳಿಂದ ಪಾಪಾಸ್ರವವು ಒಂದೇಸವನೆ ಆಗುತ್ತಿದ್ದರೆ—ಅದರಿಂದ ಬಹಳಷ್ಟು ಧನವು ಕೂಡಬೀಳುತ್ತಿದ್ದರೂ—ಅದರ ಉಪಯೋಗವಾದರೂ ಏನು? ಅಂಥವನಿಗೆ ಈ ಲೋಕವನ್ನು ಬಿಟ್ಟು ಬೇಗನೆ ಹೋಗಬೇಕಾಗುವುದು. ಆಗ ಅವನು ತನ್ನ ಕೆಟ್ಟಕೆಲಸದ ಫಲದಿಂದ ಕೂಡಲೆ ನರಕದಲ್ಲಿ ಹುಟ್ಟಬೇಕಾದೀತು. ಅದಕ್ಕಾಗಿ ಸಮ್ಯಗ್ದೃಷ್ಟಿ ಜೀವವು ಪಾಪಕರ್ಮದ ಆಸ್ರವಕ್ಕೆ ಬಹಳಷ್ಟು ಹೆದರುತ್ತಾನೆ ಅವನು ಪಾಪದ ಆಸ್ರವವು ನಿಂತು ತನಗೊಂದು ದೊಡ್ಡ ಐಶ್ವರ್ಯವೇ ಸಿಕ್ಕಿತೆಂದು ತಿಳಿಯುತ್ತಾನೆ. ಸಂಸಾರದೊಳಗಿನ ಸಂಪತ್ತು ಪರಾಧೀನವೂ ದುಃಖದಾಯಕವೂ ಎಂದು ತಿಳಿದು, ಅದು ಪ್ರಾಪ್ತವಾಗಲೆಂದು ಅವನೆಂದೂ ಇಚ್ಛೆಮಾಡುವದಿಲ್ಲ. ಆದರೂ ಅದು ಲಾಭಾಂತರಾಯ ಹಾಗೂ ಭೋಗಾಂತರಾಯ ಕರ್ಮಗಳ ಕ್ಷಯೋಪಶಮದಿಂದ ಧನವು ಅವನಿಗೆ ಪ್ರಾಪ್ತವಾಗಿರುತ್ತದೆ. ಆದರೆ ಅದು ನಾಶವಂತವೂ ಮತ್ತು ಬಂಧಕಾರಕವೂ ಇದೆ ಎಂದು ತಿಳಿದು ಅದರಲ್ಲಿ ಆಸಕ್ತನಾಗಿರುವದಿಲ್ಲ ಅದು ಸಧ್ಯದ ಕಾಲದಲ್ಲಿ ಸ್ವಲ್ಪ ದುಃಖವನ್ನು ಇಲ್ಲದಂತೆ ಮಾಡುವಂಥದಿದೆ. ಇಷ್ಟನ್ನು ಅರಿತು ಅದರ ಸಲುವಾಗಿ ಅವನು ಉದಾಸೀನನಾಗಿರುತ್ತಾನೆ. ಕಹಿಯಾದ ಔಷಧದಂತೆ ಅದನ್ನು ಉಪಭೋಗಿಸುತ್ತಾನೆ ಸಂಪತ್ತಿಯೇ ನಮ್ಮ ಕಲ್ಯಾಣಕಾರಿಯು, ಅದನ್ನುಳಿದು ಇನ್ನೇನೂ ಇಲ್ಲ, ಅದನ್ನು ಸಂಪಾದಿಸಲಿಕ್ಕೇ ಬೇಕು—ಎಂಬ ವಿಚಾರದಿಂದ ಮೂಲದಲ್ಲಿ ಸಮ್ಯಗ್ದೃಷ್ಟಿಯು ಎಂದೂ ಧನವನ್ನು ಅಪೇಕ್ಷಿಸುವದಿಲ್ಲ

ಆರು ಅನಾಯತನಗಳು—ಧರ್ಮದ ಸ್ಥಾನವು ಯಾವುದು ಅಲ್ಲವೋ ಅದು 'ಅನಾಯತನ'ವು. ಈ ಅನಾಯತನದಿಂದ ನಮ್ಮ ಹಿತವು ಎಂದೂ ಸಾಧಿಸದು ಇಂಥ ಅನಾಯತನಗಳು ಆರು ಇವೆ ಅವು ಹೀಗೆ—ಕುದೇವ, ಕುಗುರು, ಕುಶಾಸ್ತ್ರ, ಕೆಟ್ಟದೇವರಲ್ಲಿ ಶ್ರದ್ಧೆ ಇಡುವದು, ಕೆಟ್ಟ ಗುರುವಿನ ಸೇವೆ ಮಾಡುವದು, ಕೆಟ್ಟ ಶಾಸ್ತ್ರವನ್ನು ಅಭ್ಯಾಸ ಮಾಡುವದು. ಇವು ಮಿಥ್ಯಾತ್ವದ ಆರು ಪ್ರಕಾರಗಳಾಗಿವೆ ಇವುಗಳ ಸ್ವರೂಪವು ಸಂಗ್ರಹಶ್ಲೋಕದಲ್ಲಿ ಹೀಗಿದೆ.

ಕುದೇವ—ಸರ್ವಜ್ಞತ್ವ ಮತ್ತು ವೀತರಾಗತ್ವ ಇಲ್ಲದುದು ದೇವರಲ್ಲ ಕಾಮ, ಕ್ರೋಧಗಳಿಂದ ಕೂಡಿದವರು ದೇವರಲ್ಲ ಅದರಂತೆ ಕಳ್ಳ, ಜಾರರ ನಿರೋಧಣೆ, ಊಟದ ಆಶ, ಮಾಂಸ ತಿನ್ನುವ ಇಚ್ಛೆ, ಸಿಟ್ಟು ಆದಿಗಳು ಇದ್ದವ, ತನ್ನ ಪೂಜೆ ಬಯಸುತ್ತಿರುವವ, ಜೀವಗಳ ಘಾತಮಾಡುವವ, ತನ್ನ ಭಕ್ತರ ಮೇಲೆ ಉಪಕಾರ ಮಾಡುವವ, ಭಕ್ತರಲ್ಲದವರನ್ನು ನಾಶಗೊಳಿಸುವವ, ಇಂಥವನನ್ನು ಅನೇಕ ಜನರು ಮೂಢಭಾವನೆಯಿಂದ ಪೂಜಿಸುತ್ತಾರೆ. ಇವನು ದೇವತ್ವದ ಆಯತನ (ಸ್ಥಾನ)ವಲ್ಲ ಅಂದರೆ ಇವನು ನಿಜವಾದ ದೇವನಲ್ಲ ಅಂದವನಿಗೆ ನಿಜವಾದ ದೇವನೆನ್ನುವುದು ಇಲ್ಲದ ಅವನಲ್ಲಿ ದೇವಬುದ್ಧಿಯನ್ನು ಇಡುವುದು ಮಿಥ್ಯಾತ್ವವೆನಿಸುತ್ತದೆ

ಕುಗುರು—ವ್ರತ, ಸಂಯಮ ಮೊದಲಾದ ಗುಣಗಳು ಮೂಲದಲ್ಲಿ ಯಾರಲ್ಲಿ ಇಲ್ಲವೋ ಅವನು ಗುರುವಲ್ಲ ಅವನು ಅನೇಕ ಪ್ರಕಾರದ ಸುಳ್ಳು ವೇಷಗಳನ್ನು ಧರಿಸಿ, ಜಗತ್ತನ್ನು ಮೋಸಗೊಳಿಸುವುದರಲ್ಲಿ ತತ್ಪರನಾಗಿರುತ್ತಾನೆ ಇಂಥವರಲ್ಲಿ ವ್ರತ, ತ್ಯಾಗ, ವಿದ್ಯೆ, ಧ್ಯಾನ, ಪರಿಗ್ರಹತ್ಯಾಗ ಕ್ರಿಯೆಗಳನ್ನು ಕಂಡು, ಕೆಲವರು ಪೂಜಿಸುತ್ತಾರೆ. ಅಲ್ಲದೆ ಆ ಗುರುವಿನ ಮಂತ್ರ, ತಂತ್ರ, ಜ್ಯೋತಿಷ, ಶಕುನ, ಇಂದ್ರಜಾಲವೇ ಮೊದಲಾದ ವಿದ್ಯೆಗಳನ್ನು ಕಂಡು, ಮೂರ್ಖರು ಪೂಜಿಸುತ್ತಾರೆ. ಜಿನೇಶ್ವರನ ಆಜ್ಞೆಯನ್ನು ಮೀರಿ, ಇಂಥ ವೇಷಧಾರಿ ಮನುಷ್ಯನನ್ನು ಗುರುವೆಂದು ಭಾವಿಸುವುದು ಮಿಥ್ಯಾತ್ವವಾಗಿದೆ.

ಕುಶಾಸ್ತ್ರ—ಅಸತ್ಯ ಹಾಗೂ ಹಿಂಸೆಗಳನ್ನು ಪ್ರೋತ್ಸಾಹಿಸುವ ಶಾಸ್ತ್ರವು ಕುಶಾಸ್ತ್ರವು. ಅದನ್ನು ಕೇಳುವುದರಿಂದ ಓದುವುದರಿಂದ ಆತ್ಮಹಿತವು ಆಗುವದಿಲ್ಲ. ಅದರಿಂದ ಅದು ಸಮ್ಯಗ್ಜ್ಞಾನದ ಆಯತನವಾಗುವದಿಲ್ಲ. ಇದರಂತೆಯೇ ಕುದೇವ, ಕುಗುರು, ಕುಶಾಸ್ತ್ರ ಇವುಗಳನ್ನು ಸೇವಿಸುವ ಮೂರು, ಈ ಆರು ಸಂಗತಿಗಳಿಂದ ನಮ್ಮ ಕಲ್ಯಾಣವು ಆಗುವದಿಲ್ಲ. ಅಂತಲೇ ಸಮ್ಯಗ್ದೃಷ್ಟಿ ಪುರುಷನು ಅವುಗಳ ಪ್ರಶಂಸೆಯನ್ನು ಮಾಡುವದಿಲ್ಲ

ಸಮ್ಯಗ್ದರ್ಶನದ ಇಪ್ಪತ್ತೈದು ದೋಷಗಳು—ಹೀಗೆ ಸಮ್ಯಗ್ದರ್ಶನವನ್ನು ಘಾತಮಾಡುವ ಇಪ್ಪತ್ತೈದು ದೋಷಗಳಿವೆ ಅವುಗಳ ವಿವರ ಹೀಗಿದೆ—೩ ಮೂಢತೆಗಳು, ೮ ಮದಗಳು, ೮ ಶಂಕೆಯಾದಿಗಳು, ೬ ಅನಾಯತನಗಳು ಈ ದೋಷಗಳಿಲ್ಲದಂತೆ ವ್ಯವಹಾರ ಸಮ್ಯಗ್ದರ್ಶನವನ್ನು ಧರಿಸಬೇಕು ಮುಂದೆ ಅದರಿಂದ ನಿಶ್ಚಯ ಸಮ್ಯಗ್ದರ್ಶನವನ್ನು ಪ್ರಾಪ್ತಮಾಡಿಕೊಳ್ಳಲಿಕ್ಕೆ ಬರುತ್ತದೆ ಈ ಇಪ್ಪತ್ತೈದು ದೋಷಗಳಿಲ್ಲದೆ ಯಾವನು ಆತ್ಮದಲ್ಲಿ ಶ್ರದ್ಧೆಯನ್ನು ಇಡುವನೋ ಅವನಿಗೆ ನಿಶ್ಚಯ ಸಮ್ಯಗ್ದರ್ಶನವು ಆಗುವದು ಇದು ನಿಯಮವಿದೆ ಯಾರ ಬಾಹ್ಯದೋಷಗಳು ಇಲ್ಲದಂತೆ ಆಗುವದಿಲ್ಲವೋ ಅವರ ಅಂತರಂಗ ಸಮ್ಯಗ್ದರ್ಶನವೂ ಶುದ್ಧವಾಗುವುದಿಲ್ಲ ಸಮ್ಯಕ್ತ್ವದ ಭೇದಗಳಾವುವು ಮತ್ತು ಅದರ ಉತ್ಪತ್ತಿ ಹೇಗೆ ಆಗುತ್ತದೆ, ನೋಡೋಣ

ಸಮ್ಯಕ್ತ್ವದ ಪ್ರಕಾರಗಳು—ಸಮ್ಯಕ್ತ್ವವು ಮೂರು ವಿಧವಾಗಿದೆ (೧) ಉಪಶಮ ಸಮ್ಯಕ್ತ್ವ (೨) ಕ್ಷಯೋಪಶಮ ಸಮ್ಯಕ್ತ್ವ, (೩) ಕ್ಷಾಯಿಕ ಸಮ್ಯಕ್ತ್ವ. ಸಂಸಾರೀ ಜೀವಗಳು ಅನಾದಿಕಾಲದಿಂದಲೂ ಎಂಟು ಪ್ರಕಾರದ ಕರ್ಮಗಳಿಂದ ಬಂಧಿಸಲ್ಪಟ್ಟಿವೆ ಅವುಗಳಲ್ಲಿ ಮೋಹನೀಯ ಕರ್ಮದ ದರ್ಶನ ಮೋಹನೀಯವೆಂಬ ಭೇದವು ಒಂದಿದೆ ಈ ದರ್ಶನ ಮೋಹನೀಯದಲ್ಲಿ ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ ಮತ್ತು ಸಮ್ಯಕ್ ಪ್ರಕೃತಿ ಮಿಥ್ಯಾತ್ವ ಎಂದು ಮೂರು ಭೇದಗಳು ಇರುತ್ತವೆ. ಇನ್ನು ಚಾರಿತ್ರ ಮೋಹನೀಯ ಕರ್ಮದ ಭೇದಗಳು—ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭ—ಎಂದು ನಾಲ್ಕು ಭೇದಗಳಿವೆ ಒಟ್ಟಿಗೆ ಇವು ಏಳು ಸಮ್ಯಕ್ತ್ವವನ್ನು ನಷ್ಟಗೊಳಿಸುವ ಕರ್ಮ ಪ್ರಕೃತಿಗಳಾಗಿವೆ ಈ ಏಳು ಪ್ರಕೃತಿಗಳನ್ನು ಸಮಾಧಾನ ಹಾಗೂ ಶಾಂತಗೊಳಿಸುವುದರಿಂದ ಉಪಶಮ ಸಮ್ಯಕ್ತ್ವವು ಪ್ರಾಪ್ತವಾಗುತ್ತದೆ. ಹಾಗೆಯೇ ಈ ಪ್ರಕೃತಿಗಳನ್ನು ನಷ್ಟಗೊಳಿಸುವುದರಿಂದ ಕ್ಷಾಯಿಕಸಮ್ಯಕ್ತ್ವವೂ, ಕ್ಷಯೋಪಶಮನಮಾಡುವುದರಿಂದ ಕ್ಷಾಯೋಪಶಮಿಕ ಸಮ್ಯಕ್ತ್ವವೂ ಉಂಟಾಗುತ್ತದೆ. ಈ ಕ್ಷಾಯೋಪಶಮಿಕ ಸಮ್ಯಕ್ತ್ವಕ್ಕೆ ವೇದಕ ಸಮ್ಯಕ್ತ್ವವೆಂದೂ ಹೇಳುವರು. ಅನಾದಿಕಾಲದಿಂದಲೂ ಮಿಥ್ಯಾದೃಷ್ಟಿಯಾಗಿದ್ದ ಜೀವಕ್ಕೆ ಮೊದಲು ಉಪಶಮಸಮ್ಯಕ್ತ್ವವು ಉಂಟಾಗುತ್ತದೆ ಮಿಥ್ಯಾದೃಷ್ಟಿ ಜೀವದ ಮಿಥ್ಯಾತ್ವವು ಮೊದಲು ನಷ್ಟವಾಗಬೇಕು ಆ ಮೇಲೆ ಸಮ್ಯಕ್ತ್ವವು ಪ್ರಾಪ್ತವಾಗುತ್ತದೆ ಇದಕ್ಕೆ ಪ್ರಥಮೋಪಶಮ ಸಮ್ಯಕ್ತ್ವವೆಂದಿದ್ದಾರೆ ಉಪಶಮಶ್ರೇಣಿಯ ಪ್ರಾರಂಭದಲ್ಲಿ ಕ್ಷಯೋಪಶಮ ಸಮ್ಯಕ್ತ್ವದಿಂದ ಯಾವ ಉಪಶಮ ಸಮ್ಯಕ್ತ್ವವು ಉಂಟಾಗುತ್ತದೆಯೋ ಅದು ದ್ವಿತೀಯೋಪಶಮ ಸಮ್ಯಕ್ತ್ವವಾಗಿದೆ. ಮಿಥ್ಯಾದೃಷ್ಟಿ

ಜೀವಕ್ಕೆ ಮಿಥ್ಯಾತ್ವ ಗುಣಸ್ಥಾನದಿಂದ ಉಪಶಮ ಸಮ್ಯಕ್ತ್ವವು ಹೇಗೆ ಹುಟ್ಟುತ್ತದೆಂಬುದನ್ನು ಶ್ರೀಸಿದ್ಧಾಂತಚಕ್ರವರ್ತಿ ನೇಮಿಚಂದ್ರಾಚಾರ್ಯರ "ಲಬ್ಧಿಸಾರ" ಗ್ರಂಥದ ಆಧಾರದಿಂದ ಸ್ವಲ್ಪಮಟ್ಟಿಗೆ ಇಲ್ಲಿ ವಿಚಾರಿಸೋಣ

ಸಮ್ಯಕ್ತ್ವವು ಯಾರಿಗೆ ಉತ್ಪನ್ನವಾಗುತ್ತದೆ?—ಸಮ್ಯಗ್ದರ್ಶನವು ನಾಲ್ಕು ಗತಿಗಳಲ್ಲಿ ಅನಾದಿ ಮಿಥ್ಯಾದೃಷ್ಟಿ ಮತ್ತು ಸಾದಿ ಮಿಥ್ಯಾದೃಷ್ಟಿ ಜೀವಗಳಿಗೆ ಉತ್ಪನ್ನವಾಗುತ್ತದೆ ಆದರೆ ಅದು ಮನಸ್ಸು ಇರುವ ಜೀವಗಳಿಗೇನೇ (ಸಂಜ್ಞೀ ಜೀವ) ಹುಟ್ಟುತ್ತದೆ ಮನಸಿಲ್ಲದ ಜೀವಗಳಿಗೆ (ಅಸಂಜ್ಞೀ ಜೀವ) ಅದು ಜನಿಸಲಾರದು ಅದರಂತೆ ಪರ್ಯಾಪ್ತ ಜೀವಗಳಿಗೆ ಮಾತ್ರ ಸಮ್ಯಗ್ದರ್ಶನವು ಉಂಟಾಗುತ್ತದೆ ಅಪರ್ಯಾಪ್ತ ಜೀವಗಳಿಗೆ ಆಗುವದಿಲ್ಲ ಮಂದಕಷಾಯಿ ಜೀವಿಗೇನೇ ಹುಟ್ಟುತ್ತದೆ, ತೀವ್ರಕಷಾಯಿಗಳಿಗೆ ಅದು ಉತ್ಪನ್ನವಾಗುವದಿಲ್ಲ. ಭವ್ಯರಿಗೆ ಸಮ್ಯಗ್ದರ್ಶನವು ಹುಟ್ಟುತ್ತದೆ. ಅಭವ್ಯರಿಗೆ ಇಲ್ಲ. ಗುಣ-ದೋಷಗಳನ್ನು ವಿಚಾರಿಸುವ ಹಾಗೂ ಜ್ಞಾನದ ಉಪಯೋಗ ಮಾಡುವ ಶಕ್ತಿಯಿದ್ದ ಜೀವಕ್ಕೇನೆ (ಸಾಕಾರೋಪಯೋಗಯುಕ್ತ) ಸಮ್ಯಗ್ದರ್ಶನವು ಹುಟ್ಟುತ್ತದೆ. ದರ್ಶನೋಪಯೋಗೀ ಜೀವಕ್ಕೆ ಆಗುವದಿಲ್ಲ. ಜಾಗೃತ ಅವಸ್ಥೆಯಲ್ಲಿ ಉತ್ಪನ್ನವಾಗುತ್ತದೆ, ನಿದ್ರಾವಸ್ಥೆಯಲ್ಲಿ ಆಗಲಾರದು. ಸಮ್ಮೂರ್ಛನ ಜೀವಕ್ಕೆ ಉಂಟಾಗುವದಿಲ್ಲ

ಲಬ್ಧಿಯ ಭೇದ—ಐದನೆಯ ಕರಣ ಲಬ್ಧಿಯೊಳಗಿನ ಉತ್ಕೃಷ್ಟವಾದಂಥ ಅನಿವೃತ್ತಿಕರಣದ ಕೊನೆಯ ಸಮಯದಲ್ಲಿ ಪ್ರಥಮೋಪಶಮ ಸಮ್ಯಕ್ತ್ವವು ಪ್ರಕಟವಾಗುತ್ತದೆ ಕ್ಷಾಯೋಪಶಮ, ವಿಶುದ್ಧಿ, ದೇಶನಾ, ಪ್ರಾಯೋಗ್ಯ, ಕರಣ ಎಂಬ ಐದು ಲಬ್ಧಿಗಳಿವೆ. ಇವು ಇಲ್ಲದ ಹೊರತಾಗಿ ಸಮ್ಯಕ್ತ್ವವು ಜನಿಸುವದಿಲ್ಲ. ಇವುಗಳಲ್ಲಿ ಮೊದಲಿನನಾಲ್ಕು ಲಬ್ಧಿಗಳು ಸಂಸಾರದಲ್ಲಿಯ ಭವ್ಯ, ಒಮ್ಮೊಮ್ಮೆ ಅಭವ್ಯ ಜೀವಗಳಿಗೂ ಸಹ ಉತ್ಪನ್ನವಾಗುತ್ತವೆ ಆದರೆ ಕರಣಲಬ್ಧಿಯು ಮಾತ್ರ ಸಮ್ಯಕ್ತ್ವ ಹಾಗೂ ಚಾರಿತ್ರಗಳು ಯಾರಿಗೆ ಪ್ರಾಪ್ತವಾಗುವವಿದುತ್ತವೆಯೋ ಅವರಿಗೇನೇ ಉಂಟಾಗುತ್ತದೆ

ಕ್ಷಯೋಪಶಮ ಲಬ್ಧಿ. ಕ್ಷಯೋಪಶಮ ಲಬ್ಧಿಯ ಸ್ವರೂಪವು ಹೀಗಿದೆ. ಜೀವಕ್ಕೆ ಕರ್ಮದ ಸಂಯೋಗವು ಅನೇಕ ಪ್ರಕಾರವಾಗಿದೆ ಅವುಗಳಲ್ಲಿ ಒಂದು ಕಾಲವು ಇಂತದಿದೆ. ಎಂಟು ಕರ್ಮಗಳಲ್ಲಿಯ ಜ್ಞಾನಾವರಣಾದಿ ಕರ್ಮಗಳು-ಎಲ್ಲ ಅಪ್ರಶಸ್ತ ಪ್ರಕೃತಿಗಳು-ತಮ್ಮ ಶಕ್ತಿಯು (ಅನುಭಾಗ) ಪ್ರತಿಯೊಂದು ಸಮಯದಲ್ಲಿಯೂ (ಕಾಲದ ಒಂದು ಸೂಕ್ಷ್ಮಭಾಗ) ಅನಂತಪಟ್ಟು ಕಡಿಮೆ ಕಡಿಮೆ ಆಗುತ್ತ ಉದಯಕ್ಕೆ ಬರುತ್ತವೆ ಆ ಕಾಲವೇ ಜೀವಕ್ಕೆ ಕ್ಷಯೋಪಶಮ ಲಬ್ಧಿಯು ಪ್ರಾಪ್ತವಾಗುವ ಕಾಲವಾಗಿದೆ. ಸರ್ವಘಾತಿಸ್ಪರ್ಧಕದ ಉದಯವಿಲ್ಲದೆ ಕ್ಷಯ, (-ಕರ್ಮವು ಉದಯ ಹೊಂದಿಯೂ ಫಲ ಕೊಡದಿರುವುದು-) ದೇಶ ಘಾತಿಸ್ಪರ್ಧಕದ ಉದಯ[1] ಮತ್ತು ಮುಂದಿನ ಕಾಲದಲ್ಲಿಯ ಎಲ್ಲ ಘಾತಿಸ್ಪರ್ಧಕದ ಸತ್ವ (ಅಸ್ತಿತ್ವ) ಇರುವುದು ಉಪಶಮವೆನಿಸುತ್ತದೆ. ಇಂಥ ಸಂಯೋಗಕ್ಕೆ ಕ್ಷಯೋಪಶಮ ಲಬ್ಧಿ ಎನ್ನುವರು

ವಿಶುದ್ಧಿ ಲಬ್ಧಿ. ಮೊಟ್ಟ ಮೊದಲು ಆದ ಕ್ಷಯೋಪಶಮ ಲಬ್ಧಿಯ ಪ್ರಭಾವದಿಂದ ಜೀವಕ್ಕೆ ಸಾತಾವೇದನೀಯವೇ ಮೊದಲಾದ ಶುಭ ಪ್ರಕೃತಿಗಳ ಬಂಧವು ಉಂಟಾಗುತ್ತದೆ ಇದಕ್ಕೆ ಧರ್ಮಪ್ರೇಮವೆಂಬ ಶುಭ ಪರಿಣಾಮವು ಕಾರಣವಾಗಿರುತ್ತದೆ ಈ ಧರ್ಮ ಪ್ರೇಮವು ಪ್ರಾಪ್ತವಾಗುವದು ವಿಶುದ್ಧಿ ಲಬ್ಧಿಯಾಗಿದೆ ಅಶುಭ ಕರ್ಮವು ತನ್ನ ರಸವನ್ನು ಕೊಟ್ಟು ತಾನು ಇಲ್ಲದಂತಾಗುತ್ತದೆ. ಆ ಮೇಲೆ ಜೀವದ ಸಂಕ್ಲೇಶ ಪರಿಣಾಮವು ಇಲ್ಲದಂತಾದಾಗ ವಿಶುದ್ಧ ಪರಿಣಾಮದ ಪ್ರಾಪ್ತಿಯು ಆಗುತ್ತಿರುತ್ತದೆ.

ದೇಶನಾ ಲಬ್ಧಿ. ಷಡ್ದ್ರವ್ಯ, ನವಪದಾರ್ಥಗಳನ್ನು ಉಪದೇಶಿಸುವಂಥ ಆಚಾರ್ಯರು ದೊರೆಯು-ವುದು, ಅವರ ಉಪದೇಶವನ್ನು ಕೇಳಲಿಕ್ಕೆ ಸಿಗುವುದು; ಅವರು ಉಪದೇಶಿಸಿದ ಧರ್ಮ ತತ್ತ್ವವನ್ನು ತಿಳಿದುಕೊಂಡು, ಧರಿಸುವ ಶಕ್ತಿ ಇರುವುದು; ಇವೆಲ್ಲ ಇರುವುದು ದೇಶನಾ ಲಬ್ಧಿ ಎನಿಸುತ್ತದೆ.

ನರಕದಲ್ಲಿ ಯಾರೂ ಉಪದೇಶ ಮಾಡುವವರು ಇರುವದಿಲ್ಲ ಅಲ್ಲಿಯೂ ಕೂಡ ಜೀವಗಳಿಗೆ ಪೂರ್ವಜನ್ಮದಲ್ಲಿ ಸ್ವೀಕರಿಸಿದ ತತ್ತ್ವಾರ್ಥದ ಸಂಸ್ಕಾರದಿಂದ ಸಮ್ಯಗ್ದರ್ಶನವು ಉಂಟಾಗುತ್ತದೆ

---

[1] ಪುದ್ಗಲಾಯುಕ ಶಕ್ತಿಯ ಅವಿಭಾಗಿಯಾದ ಅಂಶಕ್ಕೆ ಅವಿಭಾಗ ಪ್ರತಿಚ್ಛೇದವೆನ್ನುವರು. ಇಂಥ ಸಮಾನ ಶಕ್ತಿಯನ್ನು ಧರಿಸಿರುವ ಪ್ರತಿಯೊಂದು ಕರ್ಮ ಪರಮಾಣುವಿಗೆ ವರ್ಗವೆನ್ನುವರು ವರ್ಗಣೆಗಳ ಸಮೂಹಕ್ಕೆ ಸ್ಪರ್ಧಕ ಎಂಬ ಸಂಜ್ಞೆಯಿದೆ.

**ಪ್ರಾಯೋಗ್ಯ ಲಬ್ಧಿ.** ಮೇಲೆ ಹೇಳಿದ ಮೂರು ಲಬ್ಧಿಗಳ ಮುಖಾಂತರ ಆ ಜೀವವು ಪ್ರತಿಯೊಂದು ಕ್ಷಣದಲ್ಲಿಯೂ ವಿಶುದ್ಧವಾಗುತ್ತ ಹೋಗುತ್ತದೆ ಅದರಿಂದ ವಿಶುದ್ಧ ಪರಿಣಾಮವು ವೃದ್ಧಿಗೊಳ್ಳುತ್ತ ಹೋಗುತ್ತದೆ ಮುಂದೆ ಆಯು ಕರ್ಮ ಒಂದನ್ನುಳಿದು ಉಳಿದ ಏಳು ಕರ್ಮಗಳ ಅಂತಃಕೋಡಾಕೋಡಿಸಾಗರ ಮಾತ್ರ ಸ್ಥಿತಿಯು ಶಿಲ್ಲಕ ಉಳಿಯುತ್ತದೆ ಆಗ ಮೊದಲಿದ್ದ ಕರ್ಮ ಸ್ಥಿತಿಯನ್ನು (ಒಂದು ಕೋಟಾಕೋಟಿಗಿಂತಲೂ ಹೆಚ್ಚು ಸಾಗರದ) ಒಂದು ಕಾಂಡಕದಿಂದ[1] ಭಾಗಿಸಿದರೆ ಬರುವ ಕಾಂಡಕ ದ್ರವ್ಯಕ್ಕೆ ಹಿಂದೆ ಉಳಿದ ಸ್ಥಿತಿಯನ್ನು ಸೇರಿಸಲಾಗುತ್ತದೆ ಘಾತಿಕರ್ಮದ ರಸವು ಬಳ್ಳಿಯ ರೂಪದಿಂದ ಅಂತರೂಪದಿಂದ ಉಳಿಯುತ್ತದೆ ಶೈಲಸ್ಥಿತಿ ರೂಪದಲ್ಲಿ ನಿಲ್ಲುವದಿಲ್ಲ ಆ ಘಾತಿ ಕರ್ಮದ ರಸವು ಬೇವಿನಂತೆ ಕಹಿ ಇರುತ್ತದೆ, ಆದರೆ ಅದರ ಹಾಲಾಹಲ ವಿಷ ಸ್ವರೂಪವು ಉಳಿಯುವದಿಲ್ಲ ಮೊದಲು ಇದ್ದ ರಸಕ್ಕೆ (ಅನುಭಾಗ) ಅನಂತದಿಂದ ಭಾಗಿಸಬೇಕು ಬಹಳ ಭಾಗವು ಮಾತ್ರ ರಸವು ನಿಂತದ್ದಾದರೆ ಅದನ್ನೂ ನಾಶಗೊಳಿಸಬೇಕು ಆ ಮೇಲೆ ಉಳಿದ ಒಂದು ಭಾಗ ಮಾತ್ರ ರಸವನ್ನು ಆ ಜೀವವು ಅನುಭವ ತಕ್ಕೊಳ್ಳುತ್ತ ಇರುವುದು ಈ ಪ್ರಕಾರ ಕರ್ಮವನ್ನು ಕ್ರಮ ಕ್ರಮದಿಂದ ಕಡಿಮೆ ಮಾಡುವ ವಿಧಿಗೆ ಪ್ರಾಯೋಗ್ಯ ಲಬ್ಧಿ ಎನ್ನುವರು ಇದು ಭವ್ಯ ಹಾಗೂ ಅಭವ್ಯರಿಗೆ ಒಂದೇ ಸವನೆ ಆಗುತ್ತದೆ ಸಂಕ್ಲೇಶ ಪರಿಣಾಮಿ, ಸಂಜ್ಞಿ, ಪಂಚೇಂದ್ರಿಯ, ಪರ್ಯಾಪ್ತ ಜೀವಕ್ಕೆ ಉಂಟಾಗುವ ಉತ್ಕೃಷ್ಟ ಸ್ಥಿತಿ ಬಂಧ ಮತ್ತು ಉತ್ಕೃಷ್ಟ ಅನುಭಾಗ

**ಬಂಧಾಪಸರಣ.** ಪ್ರದೇಶದ ಸತ್ವ–ಅಸ್ತಿತ್ವವಿದ್ದಾಗ ಪ್ರಥಮೋಪಶಮ ಸಮ್ಯಕ್ತ್ವವು ಪ್ರಾಪ್ತ-ವಾಗುವದಿಲ್ಲ ಹಾಗೆಯೇ ವಿಶುದ್ಧ ಕ್ಷಪಕಶ್ರೇಣಿಯಲ್ಲಿ ಸಂಭವಿಸುವ ಸ್ಥಿತಿಬಂಧ ಮತ್ತು ಜಘನ್ಯ ಸ್ಥಿತಿ ಅನುಭಾಗ-ಪ್ರದೇಶದ ಸತ್ವವು ಅಸ್ತಿತ್ವದಲ್ಲಿದ್ದಾಗಲೂ ಪ್ರಥಮೋಪಶಮ ಸಮ್ಯಕ್ತ್ವದ ಪ್ರಾಪ್ತಿಯು ಆಗುವದಿಲ್ಲ ಪ್ರಥಮೋಪಶಮ ಸಮ್ಯಕ್ತ್ವದ ಸನ್ಮುಖವಾದ ಮಿಥ್ಯಾದೃಷ್ಟಿ ಜೀವವು, ತನ್ನ ವಿಶುದ್ಧತೆಯನ್ನು ಬೆಳೆಯಿಸುತ್ತ, ಆಯು ಕರ್ಮದ ಹೊರತಾಗಿ ಉಳಿದ ಏಳು ಕರ್ಮಗಳ ಸ್ಥಿತಿಬಂಧ ಪ್ರಾಯೋಗ ಲಬ್ಧಿಯ ಪ್ರಥಮ ಸಮಯದಿಂದ ಮೊದಲಿನ ಸ್ಥಿತಿಯ ಸಂಖ್ಯಾತದಷ್ಟು ಭಾಗವು ಅಂತಃಕೊಡಾಕೋಡಿಸಾಗರ ಸ್ಥಿತಿಬಂಧದ ಪಲ್ಯದ ಸಂಖ್ಯಾತದಷ್ಟು ಭಾಗಕ್ಕೆ ಸರಿಯಾಗಿ ಕಡಿಮೆಯಾಗುವ ಸ್ಥಿತಿಬಂಧವು ಅಂತರ್‌ಮುಹೂರ್ತದ ವರೆಗೆ ಸಮಾನ ಸ್ವರೂಪದಲ್ಲಿ ಇರುತ್ತದೆ ಆ ಮೇಲೆ ಅದಕ್ಕಿಂತಲೂ ಪಲ್ಯದ ಅಸಂಖ್ಯಾತ ಭಾಗವು ಮಾತ್ರ ಕಡಿಮೆಯಾಗುತ್ತ ಹೋಗುವ ಸ್ಥಿತಿಬಂಧವು ಅಂತರ್-ಮುಹೂರ್ತದ ವರೆಗೆ ಸಮಾನ ರೂಪದಲ್ಲಿರುತ್ತದೆ ಈ ಕ್ರಮದಿಂದ ಸಂಖ್ಯಾತ ಸ್ಥಿತಿಬಂಧದ ಅಪಸರಣದ ಯೋಗದಿಂದ ಭಿನ್ನವಾದ–ಬೇರೆಯಾದ–ನೂರು ಸಾಗರದಷ್ಟು ಕಡಿಮೆಯಾದಾಗ ಎರಡನೆಯ ಬಂಧಾಪಸರಣವು ಉಂಟಾಗುತ್ತದೆ ಈ ಪ್ರಕಾರ ಸ್ಥಿತಿಬಂಧವು ಕಡಿಮೆಯಾಗುತ್ತಿದ್ದಾಗ ಒಂದು ಸ್ಥಾನವೂ ಆಗುತ್ತದೆ ಹೀಗೆ ಪ್ರಕೃತಿಬಂಧದ ಅಪಸರಣದ ಸ್ಥಾನಗಳು ಮೂವತ್ತು-ನಾಲ್ಕು ಇವೆ ಇಲ್ಲಿ ಭಿನ್ನತ್ವ–ಪೃಥಕ್ತ್ವ–ಎಂದರೆ ಏಳು ಅಥವಾ ಎಂಟು ಸಂಖ್ಯೆಯೆಂದು ತಿಳಿಯಬೇಕು ಇದರ ಮೇಲಿಂದ 'ಪೃಥಕ್ತ್ವ ನೂರು ಸಾಗರ' ಎಂದು ಹೇಳಿದಾಗ ಏಳುನೂರು ಅಥವಾ ಎಂಟುನೂರು ಸಾಗರವೆಂದು ತಿಳಿಯಬೇಕು. ಇಲ್ಲಿ ಯಾವ ಯಾವ ಪ್ರಕೃತಿಯು, ಪ್ರಥಮೋಪಶಮ ಸಮ್ಯಕ್ತ್ವದ ವರೆಗೆ ಹೇಗೆ ಹೇಗೆ ಬಂಧವಾಗುವದಿಲ್ಲವೋ ಎಂಬುದರ ವಿಚಾರವನ್ನು ಮಾಡುವದಕ್ಕೆ

---

[1] ಕರ್ಮದ ಸ್ಥಿತಿಯನ್ನು ಇಲ್ಲವೆ ರಸವನ್ನು (ಅನುಭಾಗ) ಕಡಿಮೆ ಮಾಡಲಿಕ್ಕೆ ಯಾವ ಕ್ರಿಯೆಯನ್ನು ಮಾಡಲಿಕ್ಕೆ ಬೇಕಾಗುತ್ತದೆಯೋ ಅದಕ್ಕೆ ಕಾಂಡಕವೆನ್ನುವರು ಸ್ಥಿತಿಯನ್ನು ಕಡಿಮೆಮಾಡುವಂಥದು ಸ್ಥಿತಿಕಾಂಡಕವು ಅನುಭಾಗವನ್ನು ಕಡಿಮೆಮಾಡುವಂಥದು ಅನುಭಾಗಕಾಂಡಕವು ಇದಕ್ಕೇನೇ ಸ್ಥಿತಿಖಂಡ, ಅನುಭಾಗಖಂಡವೆಂದೂ ಹೇಳುವರು ಇದರ ವಿವರ ಹೀಗಿದೆ—ಯಾವಾಗ ಒಂದು ಕರ್ಮದ ಸ್ಥಿತಿಯು ದೊಡ್ಡದಿರುವುದೋ ಆಗ ಅದು ಉದಯಕ್ಕೆ ಬರಬೇಕಾದರೆ ಯೋಗ್ಯ ನಿಷೇಕಗಳೂ ಕೂಡ ಹಲವು ಇರುತ್ತವೆ ಆ ಹಲವು ನಿಷೇಕಗಳಲ್ಲಿ ಕೆಲವನ್ನು ನಷ್ಟಗೊಳಿಸುವುದಕ್ಕಾಗಿ ಅವುಗಳ ಎಲ್ಲ ಪರಮಾಣುಗಳಲ್ಲಿ ಕೆಲವರ ಗತಿಯ (ಅವಶಿಷ್ಟ) ಸ್ಥಿತಿಯು ಹಾಗೂ ಆವಲೀ ಪ್ರಮಾಣದ ಮೇಲಿನ (ಉಪರಿತನ) ನಿಷೇಕಗಳನ್ನು ಬಿಟ್ಟು, ಉಳಿದ ನಿಷೇಕಗಳಲ್ಲಿ ಕೂಡಿಸಬೇಕಾಗುತ್ತದೆ ಈ ಪ್ರಕಾರ ಮೇಲಿನ ಎಷ್ಟು ನಿಷೇಕಗಳನ್ನು ನಷ್ಟಪಡಿಸಲಾಗುವುದೋ ಅಷ್ಟರ ಇರುವಿಕೆಯು ಕಡಿಮೆಯಾಗುತ್ತದೆ ಇದಕ್ಕೇನೇ ಸ್ಥಿತಿಕಾಂಡಕವೆನ್ನುವರು ಅನುಭಾಗದ ಕಾಂಡಕದಲ್ಲಿಯೂ ಇದರಂತೆಯೇ ಲೆಖ್ಖವಿದೆ ಅಂದರೆ ಇವುಗಳಿಗೂ ಸಹ ಬಹಳಷ್ಟು ಅನುಭಾಗದಿಂದ ಕೂಡಿದ ಮೇಲಿನ ಸ್ಪರ್ಧಕದ ಪರಮಾಣುಗಳನ್ನು ಕಡಿಮೆ ಅನುಭಾಗವುಳ್ಳ ಕೆಳಗಿನ ಸ್ಪರ್ಧಕದಲ್ಲಿ ಕೂಡಿಸಬೇಕಾಗುತ್ತದೆ. ಅಂದರೆ ಒಂದು ಅನುಭಾಗ ಕಾಂಡಕವಾಗುತ್ತದೆ.

ಬಂಧಾಪಸರಣವೆನ್ನುವರು ಈಗ ಮೂವತ್ತು–ನಾಲ್ಕು ಬಂಧಾಪಸರಣಗಳನ್ನು ವಿವರಿಸಿದರೆ ಗ್ರಂಥದ ವಿಸ್ತಾರವು ಬಹಳವಾಗುವದು ಹೆಚ್ಚಿಗೆ ತಿಳಿಯಬೇಕೆಂಬ ಇಚ್ಛೆ ಇದ್ದವರು 'ಲಬ್ಧಿಸಾರ' ಗ್ರಂಥವನ್ನು ನೋಡಬಹುದು.

ಕರಣಲಬ್ಧಿ. ಐದನೆಯದಾದ ಕರಣಲಬ್ಧಿಯು ಭವ್ಯಜೀವರಿಗೇನೇ ಉಂಟಾಗುತ್ತದೆ. ಅಭವ್ಯರಿಗೆ ಆಗುವದಿಲ್ಲ. ಈ ಲಬ್ಧಿಯಲ್ಲಿ ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣ ಎಂದು ಮೂರು ಪ್ರಕಾರದ ಪರಿಣಾಮಗಳು (ಕರಣಗಳು) ಸಂಭವಿಸುತ್ತವೆ. ಇಲ್ಲಿ 'ಕರಣ' ಎಂಬುದರ ಅರ್ಥವು 'ಕಷಾಯವು ಮಂದವಾಗುವುದರಿಂದ ಆಗುವ ಆತ್ಮನ ಶುದ್ಧ ಪರಿಣಾಮ'ವೆಂದಿದೆ ಅನಿವೃತ್ತಿಕರಣದ ಕಾಲವು ಅಲ್ಪ ಅಂತರ್‌ಮುಹೂರ್ತವಿದೆ. ಅದಕ್ಕಿಂತಲೂ ಸಂಖ್ಯಾತವಟ್ಟು ಹೆಚ್ಚು ಅಪೂರ್ವಕರಣದ ಕಾಲವಿದೆ ಅದಕ್ಕಿಂತಲೂ ಸಂಖ್ಯಾತವಟ್ಟು ಹೆಚ್ಚು ಅಧಃಪ್ರವೃತ್ತಿಕರಣದ ಕಾಲವಿದೆ. ಆದರೆ ಇದೂ ಅಂತರ್‌ಮುಹೂರ್ತ ಪ್ರಮಾಣವೇ ಆಗಿದೆ ಯಾಕಂದರೆ ಅಂತರ್‌ಮೂಹೂರ್ತದಲ್ಲಿಯೂ ಅಸಂಖ್ಯಾತ ಭೇದಗಳಿವೆ

ಅಧಃಪ್ರವೃತ್ತಿಕರಣ—ಈ ಅಧಃಪ್ರವೃತ್ತಿಕರಣದ ಕಾಲದಲ್ಲಿ ಭೂತ, ಭವಿಷತ್, ವರ್ತಮಾನ ಈ ಮೂರು ಕಾಲದಲ್ಲಿರುವ ಅನೇಕ ಜೀವಗಳ ವಿಶುದ್ಧ ಪರಿಣಾಮವು ಅಸಂಖ್ಯಾತ ಲೋಕಪ್ರಮಾಣವಾಗುತ್ತಿರುತ್ತದೆ ಈ ಪರಿಣಾಮವು ಅಧಃಪ್ರವೃತ್ತಿಕರಣದ ಸಮಯವು ಎಷ್ಟು ಇರುವುದೋ ಅಷ್ಟರಲ್ಲಿ ಸಮಾನವೃದ್ಧಿಯ ಅಪೇಕ್ಷೆಯಿಂದ ಸಮಯ ಸಮಯಕ್ಕೂ ಬೆಳೆಯುತ್ತಿರುತ್ತದೆ. ಈ ಕರಣದಲ್ಲಿ ಕೆಳಗಿನ ಸಮಯದೊಳಗಿನ ಪರಿಣಾಮದ ಸಂಖ್ಯೆಯೂ ವಿಶುದ್ಧತೆಯೂ ಮೇಲಿನ ಸಮಯದೊಳಗಿನ ಜೀವದ ಪರಿಣಾಮಕ್ಕೆ ಹೊಂದುತ್ತದೆ. ಅಂತಲೇ ಇದಕ್ಕೆ ಅಧಃ ಪ್ರವೃತ್ತಿಕರಣವೆಂದು ಹೆಸರಿದೆ ಈ ಪರಿಣಾಮದ ಸಂಖ್ಯೆ ಹಾಗೂ ವಿಶುದ್ಧತೆಗಳನ್ನು ಲೌಕಿಕ ದೃಷ್ಟಾಂತಗಳಿಂದಲೂ ಅಲೌಕಿಕ ಸಂದೃಷ್ಟಿಯಿಂದಲೂ 'ಲಬ್ಧಿಸಾರ'ದಲ್ಲಿ ವರ್ಣಿಸಲಾಗಿದೆ ಅದರಂತೆಯೇ ಇದರ ವಿಷಯವು ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರ "ಗೊಮ್ಮಟಸಾರ"ದಲ್ಲಿಯೂ ವಿವರವಾಗಿ ವರ್ಣಿಸಿದೆ ಅಧಃಪ್ರವೃತ್ತಿಕರಣದ ಪರಿಣಾಮದ ಪ್ರಭಾವದಿಂದ ನಾಲ್ಕು ಆವಶ್ಯಕಗಳು ಉಂಟಾಗುತ್ತವೆ (೧) ಪ್ರತಿಯೊಂದು ಸಮಯದಲ್ಲಿಯೂ ಅನಂತಪಟ್ಟು ವಿಶುದ್ಧತೆಯು ಬೆಳೆಯುತ್ತ ಹೋಗುವುದು. (೨) ಮೊದಲು ಎಷ್ಟು ಪ್ರಮಾಣದಲ್ಲಿ ಕರ್ಮದ ಸ್ಥಿತಿಬಂಧವು ಆಗುತ್ತಿತ್ತೋ ಅದಕ್ಕಿಂತ ಕಡಿಮೆ ಕಡಿಮೆ ಪ್ರಮಾಣದಲ್ಲಿ ಸ್ಥಿತಿಬಂಧವಾಗುತ್ತ ಹೋಗುವುದು ಇದಕ್ಕೆ ಸ್ಥಿತಿಬಂಧಾಪ-ಸರಣವೆಂದೂ ಹೇಳುವರು (೩) ಸಾತಾವೇದನೀಯವೇ ಮೊದಲಾದ ಪ್ರಶಸ್ತ ಕರ್ಮದ ಯಾವ ಪ್ರಕೃತಿಗಳು ಇರುವವೋ ಅವುಗಳ ಪ್ರತಿಯೊಂದು ಸಮಯಕ್ಕೂ ಬೆಳೆಯುವ ಬೆಲ್ಲ, ಜೇನ, ಸಕ್ಕರೆ, ಅಮೃತ ಈ ಪ್ರಕಾರ ನಾಲ್ಕು ಸ್ಥಾನದ ಅನುಭಾಗ ಬಂಧವಾಗುವುದು (೪) ಅಸಾತಾವೇದನೀಯವೇ ಮೊದಲಾದ ಅಪ್ರಶಸ್ತ ಕರ್ಮಪ್ರಕೃತಿಗಳು ಅನಂತಪಟ್ಟು ಕಡಿಮೆಯಾಗುತ್ತ ಬೇವು-ಕಾಂಜೀರಗಳಂತೆ ಎರಡು ಸ್ಥಾನೀಯ ಅನುಭಾಗ ಬಂಧವಾಗುವುದು ವಿಷ ಹಾಲಾಹಲರೂಪವಾಗದೆ ಇರುವುದು. ಹೀಗೆ ನಾಲ್ಕು ಆವಶ್ಯಕಗಳಿವೆ.

ಅಪೂರ್ವಕರಣ—ಅಧಃಪ್ರವೃತ್ತಿಕರಣದ ಅಂತರ್‌ಮುಹೂರ್ತಕಾಲವು ಕಳೆಯಿತೆಂದರೆ ಎರಡನೆಯದಾದ ಅಪೂರ್ವಕರಣವು ಉಂಟಾಗುತ್ತದೆ. ಅಧಃಕರಣದ ಪರಿಣಾಮಕ್ಕಿಂತಲೂ ಅಪೂರ್ವಕರಣದ ಪರಿಣಾಮವು ಅಸಂಖ್ಯಾತ ಲೋಕಪಟ್ಟಿನಷ್ಟು ಹೆಚ್ಚಿಗೆ ಇರುತ್ತದೆ ಇದನ್ನು ಅನೇಕ ಜೀವಗಳ ಅಪೇಕ್ಷೆಯಿಂದ ಹೇಳಿದೆ. ಒಂದು ಜೀವದ ದೃಷ್ಟಿಯಿಂದ ಒಂದು ಸಮಯದಲ್ಲಿ ಒಂದೇ ಪರಿಣಾಮವು ಉಂಟಾಗುತ್ತದೆ. ಒಂದು ಜೀವದ ಅಪೇಕ್ಷೆಯಿಂದ ಅಪೂರ್ವಕರಣದ ಎಷ್ಟು ಅಂತರ್‌ಮುಹೂರ್ತ ಕಾಲದೊಳಗಿನ ಸಮಯಗಳಿರುವವೋ ಅಷ್ಟು ಪರಿಣಾಮಗಳಿವೆ. ಇದೇ ಪ್ರಕಾರ ಅಧಃಕರಣದ ಒಂದು ಜೀವದ ಒಂದು ಸಮಯದಲ್ಲಿ ಒಂದೇ ಪರಿಣಾಮವಿರುತ್ತದೆ. ಅನೇಕ ಜೀವಗಳ ಅಪೇಕ್ಷೆಯಿಂದ ಒಂದು ಸಮಯಕ್ಕೆ ಯೋಗ್ಯ ಅಸಂಖ್ಯಾತ ಪರಿಣಾಮಗಳು ಇರುತ್ತವೆ. ಆ ಅಪೂರ್ವಕರಣದ ಪರಿಣಾಮಗಳೂ ಕೂಡ ಪ್ರತಿಯೊಂದು ಸಮಯದಲ್ಲಿ ಸಮಾನ-ಸದೃಶ-ಬೆಳವಣಿಗೆಯನ್ನು ಹೊಂದಿ ಹೆಚ್ಚಾಗುತ್ತವೆ. ಈ ಅಪೂರ್ವಕರಣದ ಪರಿಣಾಮವು ಕೆಳಗಿನ ಸಮಯಕ್ಕೆ ಸಂಬಂಧಿಸಿದ ಪರಿಣಾಮಕ್ಕೆ ಸಮಾನವಾಗಿರುವದಿಲ್ಲ. ಮೊದಲನೆಯ ಸಮಯದ ಶ್ರೇಷ್ಠ ವಿಶುದ್ಧತೆಗಿಂತಲೂ ದ್ವಿತೀಯ ಸಮಯದ ಜಘನ್ಯ ವಿಶುದ್ಧತೆಯೂ ಕೂಡ ಅನಂತಪಟ್ಟು ಹೆಚ್ಚಿಗೆ ಇರುತ್ತದೆ. ಇಂಥ ಪರಿಣಾಮಗಳಿಗೆ ಅಪೂರ್ವತೆಯು ಇರುತ್ತದೆ. ಅದರಿಂದಲೇ ಎರಡನೆಯ ಪರಿಣಾಮಕ್ಕೆ (ಕರಣ) ಅಪೂರ್ವಕರಣವೆಂದು ಹೇಳಲಾಗಿದೆ ಅಪೂರ್ವಕರಣದ ಮೊದಲನೆಯ ಸಮಯದಿಂದ—ಅಂತೂ ಸಮಯದ ಕೊನೆಯವರೆಗೆ—ಜಘನ್ಯದಿಂದ ಉತ್ಕೃಷ್ಟ ಮತ್ತು ಪೂರ್ವ-

ಸಮಯದ ಉತ್ಕೃಷ್ಟದಿಂದ ಉತ್ತರ ಸಮಯದ ಜಘನ್ಯ ಈ ಪರಿಣಾಮವು ಕ್ರಮದಿಂದ ಅನಂತಪಟ್ಟು ಶುದ್ಧವಾಗುತ್ತ ಹೋಗುವುದರಿಂದ ಅದು ಹಾವಿನ ನಡಿಗೆಯಂತೆ ಹೆಚ್ಚುಕಡಿಮೆಯಾಗುತ್ತ ಇರುತ್ತದೆ ಇಲ್ಲಿ ಅನುಕೃಷ್ಟಿ (ಪೂರ್ವ ಹಾಗೂ ಉತ್ತರ ಪರಿಣಾಮಗಳ ಸಮಾನತೆ) ಇಲ್ಲ ಅಪೂರ್ವಕರಣದ ಮೊದಲನೆಯ ಸಮಯದಿಂದ ಇಲ್ಲಿಯ ವರೆಗೆ ಸಮ್ಯಕ್ತ್ವಮೋಹಿನಿ, ಮಿಶ್ರಮೋಹಿನಿಯ ಪೂರ್ಣಕಾಲದಲ್ಲಿ ಗುಣಸಂಕ್ರಮಣದ ಯೋಗದಿಂದ ಮಿಥ್ಯಾತ್ವಕ್ಕೆ ಸಮ್ಯಕ್ತ್ವಮೋಹಿನಿ, ಮಿಶ್ರಮೋಹಿನೀರೂಪ ಪರಿಣಮವೀಪರ್ಯಂತದ ಅಂತ ಸಮಯದ ವರೆಗೆ ಗುಣಶ್ರೇಣಿ, ಗುಣಸಂಕ್ರಮಣ, ಸ್ಥಿತಿಖಂಡನ, ಅನುಭಾಗಖಂಡನ ಈ ನಾಲ್ಕು ಆವಶ್ಯಕಗಳು ಆಗುತ್ತವೆ ಸ್ಥಿತಿಬಂಧಾಪಸರಣವು ಅಧಃಕರಣದ ಪ್ರಥಮ ಸಮಯದಿಂದ ಗುಣಸಂಕ್ರಮಣದ ಕಾಲವು ಪೂರ್ಣವಾಗುವ ವರೆಗೆ ಆಗುತ್ತ ಇರುತ್ತದೆ. ಇನ್ನು ಪ್ರಾಯೋಗ್ಯಲಬ್ಧಿಯಿಂದಲೂ ಸ್ಥಿತಿಬಂಧಾಪಸರಣವು ಆಗುತ್ತಿರುತ್ತದೆ ಆದರೆ ಪ್ರಾಯೋಗ್ಯಲಬ್ಧಿಯಲ್ಲಿ ಸಮ್ಯಕ್ತ್ವವು ಉಂಟಾಗುವ ನಿಶ್ಚಯವಿಲ್ಲದುದರಿಂದ ಅದನ್ನು ಗ್ರಹಿಸಿಲ್ಲ ಸ್ಥಿತಿಬಂಧಾಪಸರಣದ ಕಾಲವೂ ಸ್ಥಿತಿ ಕಾಂಡಕೋತ್ಕರಣದ ಕಾಲವೂ ಸಮಾನ ಅಂತರ್ಮುಹೂರ್ತವಾಗುತ್ತವೆ ಇಲ್ಲಿ ಮೊದಲು ಕಟ್ಟಿದ ಹಾಗೂ ಸತ್ತೆಯಲ್ಲಿರುವ ಕರ್ಮಪರಮಾಣುರೂಪ ದ್ರವ್ಯವನ್ನು ಅದರೊಳಗಿಂದ ತೆಗೆಯಬೇಕು ಅದನ್ನು ಗುಣಶ್ರೇಣಿಯಲ್ಲಿ ಕೊಡಬೇಕು ಮತ್ತು ಗುಣಶ್ರೇಣಿಯ ಕಾಲದೊಳಗಿನ ಪ್ರತಿಯೊಂದು ಸಮಯದಲ್ಲಿ ಅಸಂಖ್ಯಾತಪಟ್ಟಿನಂತೆ ಸಾಲಾಗಿ ನಿರ್ಜರೆಯಾಗುತ್ತ ಹೋದರೆ ಅದಕ್ಕೆ ಗುಣಶ್ರೇಣಿ ನಿರ್ಜರಾ ಎನ್ನುವರು ಪ್ರತಿಯೊಂದು ಸಮಯದಲ್ಲಿ ಗುಣಾಕಾರದ ಕ್ರಮದಿಂದ ಅನುಕ್ರಮದಿಂದ ವಿವಕ್ಷಿತ ಪ್ರಕೃತಿಯ ಪರಮಾಣುವು ಬದಲಾಗಿ ಎರಡನೆಯ ಪ್ರಕೃತಿಸ್ವರೂಪವನ್ನು ಹೊಂದುವುದಕ್ಕೆ ಗುಣಸಂಕ್ರಮಣವೆನ್ನುವರು ಮೊದಲು ಕಟ್ಟಿದ ಹಾಗೂ ಸತ್ತೆಯಲ್ಲಿ ಇದ್ದ ಕರ್ಮಪ್ರಕೃತಿಯ ಸ್ಥಿತಿಯನ್ನು ಕಡಿಮೆಮಾಡುವದಕ್ಕೆ ಸ್ಥಿತಿಖಂಡನವೆನ್ನುವರು ಮೊದಲು ಕಟ್ಟಿದ ಮತ್ತು ಸತ್ತೆಯಲ್ಲಿರುವ ಅಶುಭ ಪ್ರಕೃತಿಯ ಅನುಭಾಗವನ್ನು ಕಡಿಮೆಮಾಡುವುದು ಅನುಭಾಗ ಖಂಡನ ಎನಿಸುತ್ತದೆ. ಹೀಗೆ ನಾಲ್ಕು ಕಾರ್ಯಗಳು ಅಪೂರ್ವಕರಣದಲ್ಲಿ ಅವಶ್ಯವಾಗಿ ಆಗುತ್ತವೆ ಅಪೂರ್ವಕರಣದ ಪ್ರಥಮ ಸಮಯದಲ್ಲಿ ಪ್ರಶಸ್ತ ಹಾಗೂ ಅಪ್ರಶಸ್ತ ಪ್ರಕೃತಿಯ ಯಾವ ಅನುಭಾಗ ಸತ್ವವು ಇರುತ್ತದೋ ಅದರ ಅನಂತನೆಯ ಪಟ್ಟು ಅಪೂರ್ವಕರಣದ ಅಂತ ಸಮಯದಲ್ಲಿ ಪ್ರಶಸ್ತ ಪ್ರಕೃತಿಯ ಸತ್ವವು ಬೆಳೆಯುತ್ತದೆ, ಮತ್ತು ಅಪ್ರಶಸ್ತ ಪ್ರಕೃತಿಯದು ಕಡಿಮೆಯಾಗುತ್ತದೆ ಅಪೂರ್ವಕರಣದ ಪ್ರಥಮ ಸಮಯಕ್ಕೆ ಸಂಬಂಧಿಸಿದ ಪ್ರಶಸ್ತ ಮತ್ತು ಅಪ್ರಶಸ್ತ ಪ್ರಕೃತಿಯ ಯಾವ ಅನುಭಾಗ ಸತ್ವವಿದೆಯೋ ಅದರೊಳಗಿಂದ ಕೊನೆಯ ಸಮಯದಲ್ಲಿ ಪ್ರಶಸ್ತ ಪ್ರಕೃತಿಯ ಸತ್ವವು ಅನಂತಪಟ್ಟು ಬೆಳೆಯುತ್ತದೆ ಅಪ್ರಶಸ್ತ ಪ್ರಕೃತಿಯದು ಅನಂತಪಟ್ಟು ಕಡಿಮೆಯಾಗುತ್ತದೆ ಇಲ್ಲಿ ಪ್ರತಿಯೊಂದು ಸಮಯದಲ್ಲಿ ಅನಂತಪಟ್ಟು ವಿಶುದ್ಧತೆಯು ಆಗುತ್ತ ಇರುತ್ತದೆ ಅದರಿಂದ ಪ್ರಶಸ್ತ ಪ್ರಕೃತಿಯ ಅನಂತಪಟ್ಟು ಅನುಭಾಗ ಕಾಂಡಕದ ಮಹಾತ್ಮೆಯಿಂದ ಅಪ್ರಶಸ್ತ ಪ್ರಕೃತಿಯ ಅನಂತನಯ ಭಾಗದಷ್ಟು ಅನುಭಾಗವು ಅಂತ ಸಮಯದಲ್ಲಿ ಸಂಭವಿಸುತ್ತದೆ ಈ ಸ್ಥಿತಿಖಂಡಾದಿ ವಿಧಾನಗಳ ವರ್ಣನೆಯು ಅತಿಶಯ ವಿಸ್ತಾರವಾಗಿ 'ಲಬ್ಧಿಸಾರ' ಗ್ರಂಥದಲ್ಲಿ ಬಂದಿದೆ ಅಲ್ಲಿ ನೋಡಬಹುದು ಇಲ್ಲಿ ಸಂದರ್ಭಕ್ಕೆ ತಕ್ಕಷ್ಟು ಸಂಗ್ರಹವಾಗಿ ಹೇಳಿದೆ ಇದೇ ಪ್ರಕಾರ ಅಪೂರ್ವಕರಣದಲ್ಲಿ ಹೇಳಿದ ಸ್ಥಿತಿಖಂಡಾದಿ ಕಾರ್ಯ ವಿಶೇಷವು ಅನಿವೃತ್ತಿಕರಣದಲ್ಲಿಯೂ ನಡೆಯುತ್ತದೆ ಆದರೆ ಅದರಲ್ಲಿ ಸ್ವಲ್ಪ ವ್ಯತ್ಯಾಸವಿದೆ ಸಮಾನ ಸಮಯದಲ್ಲಿರುವ ವಿವಿಧ ಜೀವದ ಪರಿಣಾಮವು ಸಮಾನವಾಗಿರುತ್ತದೆ. ಯಾಕೆಂದರೆ ಅನುವೃತ್ತಿಕರಣದ ಅಂತರ್ಮುಹೂರ್ತದ ಎಷ್ಟು ಸಮಯಗಳಿರುವವೋ ಅಷ್ಟೇ ಅನಿವೃತ್ತಿಕರಣದ ಪರಿಣಾಮಗಳಿವೆ ಅಂತಲೇ ಪ್ರತಿಯೊಂದು ಸಮಯದಲ್ಲಿಯೂ ಒಂದೊಂದು ಪರಿಣಾಮವಿದೆಯೆಂದು ಹೇಳಲಾಗಿದೆ ಇಲ್ಲಿ ಸ್ಥಿತಿಖಂಡ ಮತ್ತು ಅನುಭಾಗ ಖಂಡದ ಪ್ರಾರಂಭವು ಬೇರೊಂದು ಮಾದರಿಯಲ್ಲಿ ಆಗುತ್ತಿರುತ್ತದೆ ಯಾಕೆಂದರೆ ಅಪೂರ್ವಕರಣ ಸ್ಥಿತಿಖಂಡಾದಿ ಪರಿಣಾಮಗಳಲ್ಲಿ ಏನು ಆಗುತ್ತದೋ ಅದು ಅಂತ ಸಮಯದಲ್ಲಿಯೇ ಸಮಾಪ್ತಿಯಾಗುತ್ತದೆ ಇಲ್ಲಿ ಅಂತರಕರಣಾದಿ ವಿಧಿ ಯಾವುದು" ಎಂಬುದರ ವರ್ಣನೆಯನ್ನು ಮಾಡಲಿಕ್ಕೆ ಯತ್ನಿಸಿಲ್ಲ ಗ್ರಂಥವು ವಿಸ್ತಾರವಾಗುವದೆಂದು ಇಲ್ಲಿ ಹೇಳಿಲ್ಲ ಅದನ್ನು 'ಲಬ್ಧಿಸಾರ' ಗ್ರಂಥದಲ್ಲಿ ನೋಡಬೇಕು

ಅನಿವೃತ್ತಿಕರಣ—ಅನಿವೃತ್ತಿಕರಣದ ಅಂತರ ಸಮಯದಲ್ಲಿ ದರ್ಶನ ಮೋಹನೀಯ ಮತ್ತು ಅನಂತಾನು ಬಂಧೀ ನಾಲ್ಕರಪ್ರಕೃತಿ–ಸ್ಥಿತಿ–ಅನುಭಾಗದ ಸಂಪೂರ್ಣ ಉದಯ ಹೊಂದುವ ಯೋಗ್ಯತೆಯು ಇರುವದಿಲ್ಲ ಅದರಿಂದ ಆ ಕರ್ಮದ ಉಪಶಮವಾಗುತ್ತದೆ ಮತ್ತು ಅದರಿಂದ ತತ್ತ್ವಾರ್ಥದಲ್ಲಿ ಶ್ರದ್ಧೆಯುಳ್ಳ ಸಮ್ಯಗ್ದರ್ಶನವು ಹುಟ್ಟುತ್ತದೆ

ಅದಕ್ಕಾಗಿ ಇದಕ್ಕೆ ಉಪಶಮ ಸಮ್ಯಗ್ದೃಷ್ಟಿ ಎನ್ನುವರು. ಇದನ್ನು ಇಲ್ಲಿ ಹೇಳುವದರಿಂದ ಮುಖ್ಯ ಪ್ರಯೋಜನವಿದೆ ಅಂತಲೇ ಆ ಜೀವವು ಮೊದಲನೆಯ ಸಮಯದಲ್ಲಿ, ಎರಡನೆಯ ಸ್ಥಿತಿಯೊಳಗೆ ಇರುವ ಮಿಥ್ಯಾತ್ವ ದ್ರವ್ಯದ ಸ್ಥಿತಿಕಾಂಡಕ ಮತ್ತು ಅನುಭಾಗ ಕಾಂಡಕಗಳನ್ನು ಘಾತಿಸದೆ ಗುಣಪರಿವರ್ತನೆಯ ಭಾಗಕೊಟ್ಟು, ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ, ಸಮ್ಯಕ್ತ್ವಗಳೆಂಬ ಮೂರು ಪ್ರಕಾರಗಳಲ್ಲಿ ರೂಪಾಂತರವನ್ನುಂಟು ಮಾಡುತ್ತದೆ

ಸಾರಾಂಶ—ಅನಾದಿಕಾಲದ ದರ್ಶನ ಮೋಹನೀಯ ಕರ್ಮವು ಒಂದೇ ಪ್ರಕಾರದ್ದು ಇರುತ್ತದೆ ಆ ದ್ರವ್ಯವು ಕರಣದ-ಪರಿಣಾಮದ-ಪ್ರಭಾವದಿಂದ ಮೂರು ಪ್ರಕಾರದ ಶಕ್ತಿಯನ್ನು ಧರಿಸಿ ಬೇರೆ ಬೇರೆಯಾಗುತ್ತದೆ ಈ ಪ್ರಕಾರ ಮಿಥ್ಯಾದೃಷ್ಟಿಗೆ ಸಮ್ಯಕ್ತ್ವವಾಗಲಿಕ್ಕೆ ಕಾರಣವೆನಿಸುವ ಐದು ಲಬ್ಧಿಯ ಸ್ವರೂಪವನ್ನು ಸ್ವಲ್ಪದರಲ್ಲಿ ಹೇಳಲಾಯಿತು

ವೇದಕ ಸಮ್ಯಕ್ತ್ವ. ಉಪಶಮ ಸಮ್ಯಕ್ತ್ವದ ಜಘನ್ಯ ಮತ್ತು ಉತ್ಕೃಷ್ಟ ಕಾಲವು ಅಂತರ್-ಮುಹೂರ್ತವಾಗಿದೆ ಈ ಕಾಲವು ಪೂರ್ಣವಾದ ತರುವಾಯ ನಿಯಮದಿಂದ ದರ್ಶನ ಮೋಹನೀಯ ಕರ್ಮದ ಮೂರು ಪ್ರಕೃತಿಯೊಳಗಿಂದ ಒಂದೊಂದರ ಉದಯವಾಗುತ್ತದೆ ಈ ಸಂದರ್ಭದಲ್ಲಿ ಸಮ್ಯಕ್ತ್ವ ಮೋಹನೀಯ ಕರ್ಮದ ಉದಯವಿದ್ದರೆ ಮಾತ್ರ ಉಪಶಮ ಸಮ್ಯಕ್ತ್ವವು ಬಿಟ್ಟು, ಜೀವಕ್ಕೆ ವೇದಕ ಸಮ್ಯಕ್ತ್ವವು ಉಂಟಾಗುತ್ತದೆ ಸಮ್ಯಕ್ತ್ವ ಮೋಹನೀಯದ ಉದಯದಿಂದ ವೇದಕ ಸಮ್ಯಗ್ದೃಷ್ಟಿಯು ಚಂಚಲವೂ ದೋಷಯುಕ್ತವೂ ಹೊಲಸೂ ಆದ ತತ್ತ್ವಗಳಲ್ಲಿ ಶ್ರದ್ಧೆಯನ್ನು ಇಡುತ್ತಾನೆ. ಸಮ್ಯಕ್ತ್ವ ಮೋಹನೀಯದ ಉದಯದಿಂದ ಆ ಶ್ರದ್ಧೆಯಲ್ಲಿ ಚಂಚಲತ್ವ ಅಥವಾ ಇತರ ದೋಷ (ಅತಿಚಾರ) ಉತ್ಪನ್ನವಾಗುತ್ತವೆ. ಇಲ್ಲವೆ ಶ್ರದ್ಧೆಯಲ್ಲಿ ಶಿಥಿಲತ್ವವೂ ಪ್ರಾಪ್ತವಾಗುತ್ತದೆ ಈ ವೇದಕ ಸಮ್ಯಕ್ತ್ವಕ್ಕೇನೇ ಕ್ಷಯೋಪಶಮ ಸಮ್ಯಕ್ತ್ವ ಎಂದು ಹೆಸರಿದೆ ಯಾಕಂದರೆ ದರ್ಶನ ಮೋಹನೀಯದ ಸರ್ವಘಾತೀ ಸ್ಪರ್ಧಕದ ಉದಯವು ಇಲ್ಲದಂತೆ ಆಗುವುದೇ ಕ್ಷಯವು. ಇನ್ನು ದೇಶ ಘಾತಿ ಸ್ಪರ್ಧಕದ ಉದಯ, ಮತ್ತು ಆ ಸಮ್ಯಕ್ತ್ವ ಮೋಹನೀಯದ ಸದ್ಯಕ್ಕಿನ ಸಮಯವನ್ನುಳಿದು ಮೇಲಿನ ಇತರ ನಿಷೇಕದ ಉದಯವು ಆಗದೆ ಅದು ಸತ್ತೆಯಲ್ಲಿ ಅಸ್ತಿತ್ವದಲ್ಲಿರುವ ಕರ್ಮದ ಸ್ಥಿತಿಗೆ ಕ್ಷಯೋಪಶಮ ಸಮ್ಯಕ್ತ್ವ-ವೆನ್ನಬೇಕು ಇದಕ್ಕೇನೇ ಸಮ್ಯಕ್ತ್ವ ಪ್ರಕೃತಿಯ ಉದಯದ ವೇದನವು-ಅನುಭವನವು-ಆಗುತ್ತದೆಂದೇ ವೇದಕ ಸಮ್ಯಕ್ತ್ವವೆಂದೂ ಹೇಳುವರು ಈ ಉಪಶಮ ಸಮ್ಯಕ್ತ್ವದ ಅಂತರ್ಮುಹೂರ್ತ ಕಾಲವು ದಾಟಿದ ತರುವಾಯ ಒಂದು ವೇಳೆ ಸಮ್ಯಕ್ ಮಿಥ್ಯಾತ್ವದ ಉದಯವಾದದ್ದಾದರೆ ಆ ಜೀವವು ಮಿಶ್ರವೆಂಬ ಮೂರನೆಯ ಗುಣಸ್ಥಾನದಲ್ಲಿ ನಿಲ್ಲುವುದು ಇದರಿಂದ ಆ ಜೀವಕ್ಕೆ ತತ್ತ್ವ ಅತತ್ತ್ವ ಈ ಎರಡರಲ್ಲೂ ಮಿಶ್ರ ಶ್ರದ್ಧೆಯು ಉಂಟಾಗುತ್ತದೆ ಆಗ ಮಿಥ್ಯಾತ್ವದ ಉದಯವಾದರೆ ಮಿಥ್ಯಾದೃಷ್ಟಿಯೆನಿಸುತ್ತಾನೆ, ವಿಪರೀತ ಶ್ರದ್ಧೆಯುಳ್ಳವನಾಗುತ್ತಾನೆ. ಜ್ವರವು ಬಂದಂಥ ಮನುಷ್ಯನಿಗೆ ಯಾವ ಪ್ರಕಾರ ಊಟದ ರುಚಿಯು ಇರುವದಿಲ್ಲವೋ ಅದೇ ಪ್ರಕಾರ ಮಿಥ್ಯಾದೃಷ್ಟಿ ಜೀವಕ್ಕೆ ಅನೇಕಾಂತರೂಪ ವಸ್ತುವಿನ ಸತ್ಯಾರ್ಥತತ್ತ್ವದಲ್ಲಿ ರುಚಿಯು ಇಲ್ಲದಂತಾಗುತ್ತದೆ ಈ ಪ್ರಕಾರ ರತ್ನತ್ರಯ ರೂಪದ ಮೋಕ್ಷಮಾರ್ಗ ಮತ್ತು ದಶಲಕ್ಷಣಯುಕ್ತ ದಯಾಧರ್ಮ ಇವುಗಳ ರುಚಿಯು ಉತ್ಪನ್ನವಾಗುವದಿಲ್ಲ. ಉಪಶಮ ಸಮ್ಯಕ್ತ್ವದ ಅಂತರ್ಮುಹೂರ್ತ ಕಾಲದಲ್ಲಿ ಒಮ್ಮೆ ಜಘನ್ಯ ಒಂದು ಸಮಯ ಮತ್ತು ಉತ್ಕೃಷ್ಟ ಆರು ಆವಲಿಗಳು ಶಿಲ್ಲಕ ಉಳಿದಿದ್ದು, ಅನಂತಾನು ಬಂಧೀ ಕ್ರೋಧ, ಮಾನ, ಮಾಯಾ, ಲೋಭಗಳಲ್ಲಿ ಒಂದರ ಉದಯವೂ ಪ್ರಾಪ್ತವಾದರೂ ಆ ಜೀವನು ಸಮ್ಯಕ್ತ್ವದಿಂದ ಬೇರೆಯಾಗಿ ಸಾಸಾದನವೆಂಬ ಹೆಸರಿನ ಎರಡನೆಯ ಗುಣಸ್ಥಾನದಲ್ಲಿ ಬರುತ್ತಾನೆ ಆ ಸಾಸಾದನ ಗುಣಸ್ಥಾನದಲ್ಲಿ ಜಘನ್ಯ ಒಂದು ಸಮಯ ಮತ್ತು ಉತ್ಕೃಷ್ಟ ಆರು ಆವಲಿಯ ವರೆಗೆ ಇದ್ದು, ನಿಯಮದಿಂದ ಮಿಥ್ಯಾದೃಷ್ಟಿಯಾಗುತ್ತಾನೆ ಉಪಶಮ ಸಮ್ಯಕ್ತ್ವದ ಅಂತರ್ಮುಹೂರ್ತ ಕಾಲವು ಪೂರ್ಣವಾದ ತರುವಾಯ ಅದು ನಾಲ್ಕು ಮಾರ್ಗಗಳಲ್ಲಿ ರೂಪಾಂತರ ಹೊಂದುತ್ತದೆ (೧) ಸಮ್ಯಕ್ತ್ವ ಮೋಹನೀಯ ಉದಯವಾದರೆ ಅದು ಕ್ಷಯೋಪಶಮ ಸಮ್ಯಕ್ತ್ವಿಯಾದೀತು (೨) ಮಿಶ್ರ ಪ್ರಕೃತಿಯ ಉದಯವಾದಲ್ಲಿ ಮಿಶ್ರಗುಣ ಸ್ಥಾನದಲ್ಲಿ ಇರುವಂಥದಾಗುವದು (೩) ಮಿಥ್ಯಾತ್ವದ ಉದಯವು ಪ್ರಾಪ್ತವಾದರೆ ನಿಯಮದಿಂದ ಮಿಥ್ಯಾದೃಷ್ಟಿಯಾಗುವದು (೪) ಅನಂತಾನುಬಂಧಿ ಕಷಾಯಗಳಲ್ಲಿಯ ಯಾವದಾದರೊಂದು ಉದಯ ಹೊಂದಿದರೆ ಸಾಸಾದನ ಗುಣಸ್ಥಾನದಲ್ಲಿ ಸ್ವಲ್ಪ ಹೊತ್ತು ಇದ್ದು, ತರುವಾಯ ಮಿಥ್ಯಾದೃಷ್ಟಿಯಾದೀತು.

ಕ್ಷಾಯಿಕ ಸಮ್ಯಕ್ತ್ವ. ಇನ್ನು ಕ್ಷಾಯಿಕ ಸಮ್ಯಕ್ತ್ವವು ಹೇಗೆ ಉತ್ಪನ್ನವಾಗುತ್ತದೆಂಬುದನ್ನು ಸ್ವಲ್ಪದರಲ್ಲಿ ಹೇಳುವೆ ದರ್ಶನ ಮೋಹನೀಯದ ಕ್ಷಯದಿಂದ ಕ್ಷಾಯಿಕ ಸಮ್ಯಕ್ತ್ವವು ಉಂಟಾಗುತ್ತದೆ ದರ್ಶನ

ಮೋಹವನ್ನು ಇಲ್ಲದಂತೆ ಮಾಡುವದರ ಆರಂಭವು ಕರ್ಮಭೂಮಿಯೊಳಗಿನ ಮನುಷ್ಯರ ಕಡೆಯಿಂದಲೇ ಸಾಧ್ಯವಿದೆ. ಭೋಗಭೂಮಿಯೊಳಗಿನ ಜನರಿಗೂ ಎಲ್ಲ ಪ್ರಕಾರದ ದೇವ, ನರ, ತಿರ್ಯಂಚ ಜೀವಿಗಳಿಗೂ ಕ್ಷಾಯಿಕ ಸಮ್ಯಕ್ತ್ವವನ್ನು ಸಂಪಾದಿಸಲಿಕ್ಕೆ ಬರುವದಿಲ್ಲ ಕರ್ಮಭೂಮಿಯಲ್ಲಿಯೂ ಕೂಡ ತೀರ್ಥಂಕರ, ಕೇವಲಿ, ಶ್ರುತಕೇವಲಿಗಳ ಚರಣಸಾಂನಿಧ್ಯವು ಲಭಿಸಿದವರಿಗೇನೇ ದರ್ಶನಮೋಹನೀಯಕರ್ಮ ನಾಶಗೊಳಿಸಲು ಆರಂಭಮಾಡಲು ಸಾಧ್ಯವಾಗುತ್ತದೆ ಶ್ರುತಕೇವಲಿಯ ಹತ್ತರ ಸತತ ನಿಲ್ಲದ ಹೊರತಾಗಿ ಅಂಥ ಪರಿಣಾಮವಿಶುದ್ಧಿಯು ಆಗುವದಿಲ್ಲ. ಈ ಸ್ಥಿತ್ಯಂತರದಲ್ಲಿರುವಾಗ ಅಧಃಕರಣದ ಪ್ರಥಮ ಸಮಯದಿಂದ ಮುಂದಿನ ಮಿಥ್ಯಾತ್ವದ ಮತ್ತು ಮಿಶ್ರಮೋಹನೀಯ ಕರ್ಮವು ಸಮ್ಯಕ್ತ್ವ ಪ್ರಕೃತಿರೂಪದಲ್ಲಿ ಸಂಕ್ರಮಣ ಹೊಂದುವವರೆಗೆ–ಇದಕ್ಕೆ ಅಂತರ್‌ಮುಹೂರ್ತಕಾಲ ಹಿಡಿಯುವುದು–ಈ ಅವಧಿಗೆ ದರ್ಶನ ಮೋಹನಿಯ ಕರ್ಮದ ಕ್ಷಪಣದ (ಇಲ್ಲದಂತೆ ಆಗುವ) ಆರಂಭ ಕಾಲವೆನ್ನಬೇಕು ಈ ಆರಂಭ ಕಾಲದ ಮುಂದಿನ ಸಮಯದಿಂದ ಕ್ಷಾಯಿಕಸಮ್ಯಕ್ತ್ವವನ್ನು ಸ್ವೀಕರಿಸುವ ಸಮಯದ ಮೊದಲು (ಸಾಧಕತ್ತ್ವ) ನಿಷ್ಠಾವಕನು ಸಮ್ಯಗ್ದರ್ಶನವನ್ನು ಪೂರ್ಣಗೊಳಿಸುತ್ತಾನೆ ಯಾವ ಸ್ಥಳದಲ್ಲಿ ಕ್ಷಪಣವನ್ನು ಆರಂಭಿಸಿರುವನೋ ಅಂಥ ಆ ಕರ್ಮಭೂಮಿಯ ಮನುಷ್ಯನು ನಿಷ್ಠಾವಕನಾಗುತ್ತಾನೆ ಅಲ್ಲದೆ ಸೌಧರ್ಮಾದಿ ಸ್ವರ್ಗ, ಕಲ್ಪಾತೀತ ಅಹಮಿಂದ್ರ, ಭೋಗಭೂಮಿಯೊಳಗಿನ ಮನುಷ್ಯ ಮತ್ತು ತಿರ್ಯಂಚ, ಧಮ್ಮಾ ಎಂಬ ಹೆಸರಿನ ನರಕ–ಪೃಥ್ವಿ ಇವೆಲ್ಲ ಸ್ಥಳಗಳಲ್ಲಿಯೂ ನಿಷ್ಠಾವಕ ಇರುವುದು ಸಾಧ್ಯವಿದೆ ಯಾಕಂದರೆ ಮೊದಲು ಆಯುಃಕರ್ಮವು ಕಟ್ಟಿದಂಥ ಕೃತಕೃತ್ಯನಾದ ವೇದಕ ಸಮ್ಯಗ್ದೃಷ್ಟಿಯು ಸತ್ತು, ನಾಲ್ಕೂ ಗತಿಗಳಲ್ಲಿ ಹುಟ್ಟುತ್ತಿರುತ್ತಾನೆ. ಆ ಸ್ಥಳದಲ್ಲಿ ಅವನು ತನ್ನ ಕ್ಷಪಣವನ್ನು ಪೂರ್ಣಗೊಳಿಸುತ್ತಾನೆ

ಇನ್ನು ಅನಂತಾನುಬಂಧಿ ಕ್ರೋಧ-ಮಾನ-ಮಾಯಾ-ಲೋಭ, ಮಿಥ್ಯಾತ್ವ, ಸಮ್ಯಕ್‌ಮಿಥ್ಯಾತ್ವ, ಸಮ್ಯಕ್ತ್ವ ಇವು ಏಳು ಪ್ರಕೃತಿಗಳ ನಾಶದ ಕ್ರಮವು ಹೀಗಿದೆ ವೇದಕ ಸಮ್ಯಗ್ದೃಷ್ಟಿ ಜೀವವು ಅಸಂಯತ, ದೇಶಸಂಯತ, ಪ್ರಮತ್ತ ಅಥವಾ ಅಪ್ರಮತ್ತ ಈ ನಾಲ್ಕರಲ್ಲಿ ಒಂದು ಗುಣಸ್ಥಾನದಲ್ಲಿ ಇರಬೇಕು ಆ ಮೊದಲೇ ಮೂರು ಕರಣಗಳ ವಿಧಿಯನ್ನು ಮಾಡಿರಬೇಕು ಅದರ ಫಲದಿಂದ ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭಗಳ ಉದಯದ ಸೀಮೆಯಲ್ಲಿ ಇರುವ ನಿಷೇಕಗಳನ್ನು ಇಲ್ಲದಂತೆ ಮಾಡಿರಬೇಕು ಅಲ್ಲದೆ ಉದಯದ ಸೀಮೆಯ ಹೊರಗೂ ಇರುವ ಸರ್ವ ನಿಷೇಕಗಳನ್ನೂ ವಿಸಂಯೋಜನಗೊಳಿಸಿರಬೇಕು ಮೇಲಾಗಿ ಅನಿವೃತ್ತಿಕರಣದ ಅಂತಸಮಯದಲ್ಲಿ ಎಲ್ಲ ಅನಂತಾನುಬಂಧಿ ದ್ರವ್ಯದ ಹನ್ನೆರಡು ಕಷಾಯ ಮತ್ತೂ ಒಂಬತ್ತು ನೋಕಷಾಯ ರೂಪದಲ್ಲಿ ಪರಿಣಮಿಸಿರಬೇಕು. (ಇದೂ ಅನಂತಾನುಬಂಧಿಯ ವಿಸಂಯೋಜನೆಯಾಗಿದೆ ಇದರಲ್ಲಿಯೂ ಗುಣಶ್ರೇಣಿ, ಸ್ಥಿತಿಕಾಂಡ ಮೊದಲಾದ ಅನೇಕ ವಿಧಿಗಳಿವೆ) ಈ ಪ್ರಕಾರ ವಿಸಂಯೋಜನಗೊಳಿಸಿದ ತರುವಾಯ ಅಂತರ್ ಮುಹೂರ್ತಕಾಲದ ವರೆಗೆ ವಿಶ್ರಾಂತಿಯನ್ನು ತಕ್ಕೊಳ್ಳಬೇಕು ಅಂದರೆ ಎರಡನೆಯ ಕ್ರಿಯೆಯನ್ನು ಮಾಡಕೂಡದು. ಮೂರು ಅಧಃಕರಣದ ಯೋಗದಿಂದ ಅನಿವೃತ್ತಿಕರಣದ ಕಾಲದಲ್ಲಿ ಮಿಥ್ಯಾತ್ವ, ಸಮ್ಯಕ್‌ಮಿಥ್ಯಾತ್ವ, ಸಮ್ಯಕ್ತ್ವಗಳನ್ನು ಕ್ರಮದಿಂದ ನಾಶಗೊಳಿಸಬೇಕು ಆಗ ಅವನ ಆ ಪರಿಣಾಮಶುದ್ಧಿಯ ಸಾಮರ್ಥ್ಯದಿಂದ ಯಾವ ಯಾವ ಕರ್ಮಗಳು —ಅವುಗಳ ಸ್ಥಿತಿ ಅನುಭಾಗಗಳು—ನಾಶಹೊಂದುವವೋ ಅವುಗಳ ವರ್ಣನೆಯನ್ನು 'ಲಬ್ಧಿಸಾರ' ಗ್ರಂಥದಲ್ಲಿ ನೋಡಬೇಕು ಒಟ್ಟಿನಲ್ಲಿ ಈ ಮೇಲೆ ಹೇಳಿದ ಏಳು ಪ್ರಕೃತಿಗಳನ್ನು ನಾಶಗೊಳಿಸುವುದರಿಂದ ಕ್ಷಾಯಿಕ ಸಮ್ಯಕ್ತ್ವ-ಯಾಗಲಿಕ್ಕೆ ಬರುತ್ತದೆ ಈ ಪ್ರಕಾರ ಸಮ್ಯಕ್ತ್ವದ ಮೂರು ಪ್ರಕಾರಗಳ ವರ್ಣನೆಯು ಸಂಗ್ರಹರೂಪದಲ್ಲಿ ಹೀಗಿರುತ್ತದೆ

**ಸಮ್ಯಕ್ತ್ವದ ಎಂಟು ಗುಣಗಳು.** ಸಮ್ಯಗ್ದೃಷ್ಟಿ ಪುರುಷನಲ್ಲಿ ಬೇರೆ ಎಂಟು ಗುಣಗಳು ಪ್ರಕಟ-ವಾಗುತ್ತವೆ ಅದರಿಂದ ಸ್ವತಃ ನಮಗೆ ಸಮ್ಯಕ್ತ್ವವು ಉತ್ಪನ್ನವಾದುದು ತಿಳಿಯುತ್ತದೆ ಇನ್ನೊಬ್ಬರಿಗೆ ಉತ್ಪನ್ನವಾದುದೂ ಸಹ ಈ ಗುಣಗಳಿಂದ ಕಂಡುಬರುತ್ತದೆ ಆ ಎಂಟುಗುಣಗಳು ಹೀಗಿವೆ—ಸಂವೇಗ, ನಿರ್ವೇದ, ಆತ್ಮನಿಂದೆ, ಗರ್ಹಾ, ಉಪಶಮ, ಭಕ್ತಿ, ವಾತ್ಸಲ್ಯ, ಮತ್ತು ಅನುಕಂಪಾ ಈ ಗುಣಗಳು ಎಲ್ಲಿ ಕಂಡು ಬರುವವೋ ಅಲ್ಲಿ ಸಮ್ಯಕ್ತ್ವವು ಇದೆ ಎಂದು ತಿಳಿಯಬೇಕು

**೧. ಸಂವೇಗ.** ಧರ್ಮದ ಮೇಲಿನ ಪ್ರೀತಿಗೆ ಸಂವೇಗವೆನ್ನುವರು ಸಂಸಾರದಲ್ಲಿ ಸುತ್ತುತ್ತಿರುವಂಥ ಜೀವಿಗಳಿಗೆ ಯಾವಾಗಲೂ ಶರೀರದ ಮೇಲೆ ಅತ್ಯಂತ ಪ್ರೀತಿಯಿರುತ್ತದೆ ಅವರ ಇಚ್ಛೆಯು ಶರೀರವು ಸ್ವಚ್ಛವಿರಬೇಕು, ಪುಷ್ಟವಿರಬೇಕು ಎಂದಿರುತ್ತದೆ ಹೀಗಿರುವದಕ್ಕಾಗಿ ತಿನ್ನಬಾರದುದನ್ನು ತಿನ್ನುವುದರಲ್ಲಿ ಅವರಿಗೆ ಆನಂದವಾಗುತ್ತದೆ.

ಅನ್ಯಾಯದ ಆಚರಣೆಯಿಂದ ದೊರಕಿಸಿದ ದ್ರವ್ಯದಿಂದ ನಿರ್ಮಿಸಿದ ಅಲಂಕಾರಗಳಿಂದ ತಮ್ಮ ಶರೀರವನ್ನು ಸಿಂಗರಿಸಿಕೊಳ್ಳಬೇಕೆಂದು ಅವರಿಗೆ ಅನಿಸುತ್ತದೆ. ಪಾಪಕೃತ್ಯದೊಡನೆ ಸಂಬಂಧವಿಡುವುದರಲ್ಲಿ ಅವರಿಗೆ ಹರ್ಷವಾಗುತ್ತದೆ ಕಳವು ಹಾದರದ ಕಥೆಗಳನ್ನು—ವಿಕಥೆ—ಹೇಳುವುದರಲ್ಲಿಯೂ ಕೇಳುವುದರಲ್ಲಿಯೂ ಅವರಿಗೆ ಆನಂದವಾಗುತ್ತದೆ ಸ್ತ್ರೀ, ಪುತ್ರ, ಧನ, ಐಶ್ವರ್ಯ, ನಗರ, ದೇಶ, ರಾಜ್ಯ ಮೊದಲಾದ ಪದಾರ್ಥಗಳ ಮೇಲೆ ಅತ್ಯಂತ ಪ್ರೀತಿಯನ್ನು ಇಟ್ಟಿರುತ್ತಾರೆ. ಇದಕ್ಕೆ ವಿರುದ್ಧವಾದ ಪ್ರವೃತ್ತಿಯು ಸಮ್ಯಗ್ದೃಷ್ಟಿಯದು ಇರುತ್ತದೆ ಅವನು ಶರೀರಾದಿಗಳಲ್ಲಿ ಮಮತ್ವವನ್ನು ಇಡುವದಿಲ್ಲ ದಶಲಕ್ಷಣ ಧರ್ಮದ ಮೇಲೆ ಪ್ರೀತಿಯನ್ನು ಇಡುತ್ತಾನೆ. ಅವರ ಪ್ರವೃತ್ತಿಯು ಯಾವಾಗಲೂ ಧರ್ಮಕಥೆಗಳನ್ನು ಕೇಳಬೇಕು, ಧರ್ಮಾತ್ಮರೊಡನೆ ಚರ್ಚಿಸಬೇಕು, ಧರ್ಮದ ಮಂದಿರಗಳನ್ನು ಸ್ಥಾಪಿಸಬೇಕು—ಎಂದಿರುತ್ತದೆ ಇಂಥ ಪ್ರವೃತ್ತಿಗಳಿಗೇನೇ ಸಂವೇಗಗುಣವೆನ್ನುವರು ಈ ಗುಣವು ಸಮ್ಯಗ್ದೃಷ್ಟಿ ಪುರುಷನಿಗೆ ಇರುತ್ತದೆ

೨. ನಿರ್ವೇದ. ಐದು ವಿಧದಲ್ಲಿ ಪರಿವರ್ತನ ಹೊಂದುವ ಸಂಸಾರದಿಂದ ವಿರಕ್ತಹೊಂದಬೇಕು. ಅದರಂತೆ ಕೃತಘ್ನವಾದ ಶರೀರ, ದುರ್ಗತಿಗೆ ಒಯ್ಯುವ ಈ ಇಂದ್ರಿಯಭೋಗಗಳಿಂದಲೂ ವಿರಕ್ತಿಯನ್ನು ಹೊಂದುವುದು. ಇವೆಲ್ಲ ಗುಣಗಳಿಗೆ ನಿರ್ವೇದವೆನ್ನುವರು.

೩. ಆತ್ಮನಿಂದೆ. ತಮ್ಮ ತಪ್ಪಿಗಾಗಿ, ಅಸಂಯಮ ಭಾವದಿಂದಾಗಿ ಸಂಸಾರದ ಪಾಪಕ್ರಿಯೆಗಳಲ್ಲಿ ಮಗ್ನನಾಗಿರುವ, ಪ್ರವೃತ್ತಿಯ ವಿಷಯಲ್ಲಿ ಯಾವಾಗಲೂ ನಿಂದೆಮಾಡಿಕೊಳ್ಳುತ್ತಾ ಇರುವುದು. ಹಾಗೆಯೇ ದುರ್ಲಭವಾದ ಈ ಮಾನವ ಜನ್ಮದಲ್ಲಿ ಜನಿಸಿಯೂ ಕೂಡ ತನ್ನ ಪ್ರತಿಯೊಂದು ಕ್ಷಣವೂ ಧರ್ಮದ ಹೊರತಾಗಿ ಉಳಿದ ವಿಚಾರದಲ್ಲಿ ವ್ಯರ್ಥಹೋಗುವುದರಿಂದಲೂ ಅವನಿಗೆ ಅನರ್ಥಕಾರಕವೆನಿಸುತ್ತದೆ ಈ ಪ್ರಕಾರ ತನ್ನಿಂದ ಆಗುವ ದೋಷಗಳ ವಿಚಾರಮಾಡಿ, ತನ್ನ ಮನಸ್ಸಿನಲ್ಲಿ ಅವುಗಳ ಬಗ್ಗೆ ತನ್ನ ನಿಂದೆಯನ್ನು ಮಾಡಿಕೊಳ್ಳುವುದು ಆತ್ಮನಿಂದೆ ಎನಿಸುವದು.

೪. ಗರ್ಹಾ. ತನ್ನ ಗುರುವಿನ ಹತ್ತರ ಇಲ್ಲವೆ ತನ್ನ ಸಹಧರ್ಮಿಗಳ ಹತ್ತರ ನಮ್ರತೆಯಿಂದ ತಾನು ಮಾಡಿದ ಪಾಪವನ್ನು ನಿವೇದಿಸುವುದು ಇದು ಗರ್ಹಾ ಎಂಬ ಹೆಸರಿನ ಗುಣವಾಗಿದೆ.

೫. ಉಪಶಮ. ಕ್ರೋಧ, ಮಾನ, ಮಾಯಾ, ಲೋಭಗಳು ಸಮ್ಯಗ್ದೃಷ್ಟಿ ಪುರುಷನಲ್ಲಿ ಮಂದವಂತೂ ಆಗಿರುತ್ತವೆ ಅವನು ರಾಗ, ದ್ವೇಷ, ಕಾಮ, ಉನ್ಮಾದ, ವೈರ ಮೊದಲಾದವುಗಳು ತನ್ನನ್ನು ನಾಶಮಾಡುವಂಥ-ವಿರುತ್ತವೆ—ಎಂದು ತಿಳಿದು ಅವುಗಳನ್ನು ತ್ಯಾಗಮಾಡುವ ವಿಷಯದಲ್ಲಿ ತತ್ಪರನಿರುತ್ತಾನೆ. ಇಂಥ ಸಮ್ಯಗ್ದೃಷ್ಟಿ ಪುರುಷನಿಗೆ ಉಪಶಮ ಗುಣವು ಪ್ರಾಪ್ತವಾಗುತ್ತದೆ.

೬. ಭಕ್ತಿ. ಪಂಚಪರಮೇಷ್ಠಿ, ಜಿನವಾಣಿ, ಜಿನೇಂದ್ರನ ಪ್ರತಿಬಿಂಬ ಇವುಗಳಲ್ಲಿಯೂ ದಶಲಕ್ಷಣ ಧರ್ಮವನ್ನು ಆಚರಿಸುವ ಧರ್ಮಿಷ್ಠ ಪುರುಷರಲ್ಲಿಯೂ ತಪಸ್ವಿಗಳಲ್ಲಿಯೂ ಇರುವ ಅನೇಕ ಗುಣಗಳನ್ನು ಪ್ರೀತಿಸುವುದು. ಇದಕ್ಕೆ ಭಕ್ತಿ ಎನ್ನುವರು

೭. ವಾತ್ಸಲ್ಯ. ಧರ್ಮವಂತ ಜೀವರಲ್ಲಿ ಪ್ರೀತಿಯನ್ನು ಮಾಡುವುದು. ಬಡವರಿಗೆ ದುಡ್ಡನ್ನು ನೋಡಿ ಹೇಗೆ ಆನಂದವಾಗುತ್ತದೆಯೋ ಹಾಗೆಯೇ ಧರ್ಮಿಷ್ಠನೂ ಸಮ್ಯಗ್ದೃಷ್ಟಿಯೂ ಆದ ಪುರುಷನನ್ನು ನೋಡಿ ಆನಂದವಾಗಬೇಕು ಅದರಂತೆ ಸಮ್ಯಗ್‌ಜ್ಞಾನಿಯು ಬೋಧಿಸಿದ ಧರ್ಮ ಪ್ರವಚನವನ್ನು ಕೇಳಿಯೂ ಸಂತೋಷ-ವಾಗಬೇಕು ಇದು ಸಮ್ಯಗ್ದೃಷ್ಟಿ ಪುರುಷನ ಏಳನೆಯ ಗುಣವಾದ ವಾತ್ಸಲ್ಯವಾಗಿದೆ.

೮. ಅನುಕಂಪಾ. ಸಮ್ಯಗ್ದೃಷ್ಟಿ ಪುರುಷನ ಮನಸ್ಸಿನಲ್ಲಿ ಷಟ್‌ಕಾಯ ಜೀವಗಳ ವಿಷಯದಲ್ಲಿ ದಯೆಯಂತೂ ಇರುತ್ತದೆ. ಆದರೆ ಎರಡನೆಯವರ ದುಃಖವನ್ನು ಕಂಡು, ಅದು ತನಗೇ ಆಗುತ್ತಿದೆ ಎಂದು ಅನುಭಾವಿಸಿ, ಆ ಪರದುಃಖವನ್ನು ಇಲ್ಲದಂತೆ ಮಾಡುವ ಪ್ರೇರಣೆಯು ಯಾವುದರಿಂದ ಉಂಟಾಗುತ್ತದೆಯೋ ಅದಕ್ಕೆ ಅನುಕಂಪಾ ಎನ್ನುವರು.

ಈ ಪ್ರಕಾರ ಲೆಕ್ಕವಿಲ್ಲದಷ್ಟು ಒಳ್ಳೆಯ ಪರಿಣಾಮಗಳು ಸಮ್ಯಗ್ದೃಷ್ಟಿ ಪುರುಷನಿಗೆ ತನ್ನಿಂದ ತಾನೇ ಪ್ರಕಟವಾಗುತ್ತವೆ ಸತ್ಯಾರ್ಥದ ಜ್ಞಾನವೂ ಪ್ರಕಟವಾದಂಥವರ ಎಲ್ಲ ಒಳ-ಹೊರಗಿನ ಕ್ರಿಯೆಗಳಲ್ಲಿ ಸದ್ಗುಣವು ತಾನೇ ತಾನಾಗಿ ಒಡಮೂಡುತ್ತದೆ ಅವರ ಕ್ರಿಯೆಗಳೆಲ್ಲ ಸದ್ಗುಣದಲ್ಲಿಯೇ ರೂಪಾಂತರ ಹೊಂದಿರುತ್ತವೆ

ಸೋದರರೊಳ್ ಸೋದರರಂಕಾದಿಸುವುದು, ಸುತನ ತಂದೆಯೆಡೆಯೊಳ್ ಬಿಡದು-
ತ್ಪಾದಿಸುವುದು ಕೋಪಮನ್, ಅಳವೀದೊರೆತೆನೆ ತೊಡವುದೆಂತು ರಾಜ್ಯಶ್ರೀಯೋಳ್ ।
ಪಾತಕಿಯೊಳ್ ಲಕ್ಷ್ಮಿಯೊಳತಿಕಾತರಕಾಪುರುಷಗಣನೆಯೊಳ್ ನೆರೆಯಲ್ಕಿಂ-
ತೀತನೆ ಬಗೆಗಾಂ ಪುರುತನು ಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ ॥

— ಪಂಪ-ಆದಿಪುರಾಣ-೧೪, ೧೨೨-೨೩

ಸಮ್ಯಗ್ದರ್ಶನವುಳ್ಳ ಜೀವವು ಎಲ್ಲರಲ್ಲಿ ಹಿರಿಯದೆಂದು ತೋರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ—

ಸಮ್ಯಗ್ದರ್ಶನಸಂಪನ್ನಮಪಿ ಮಾತಂಗದೇಹಜಮ್ ।
ದೇವಾ ದೇವಂ ವಿದುರ್ಭಸ್ಮಗೂಢಾಂಗಾರಾಂತರೌಜಸಮ್ ॥ ೨೮ ॥

ಅನ್ವಯಾರ್ಥ—(ದೇವಾಃ) ದೇವರು (ಸಮ್ಯಗ್ದರ್ಶನಸಂಪನ್ನಂ) ಸಮ್ಯಗ್ದರ್ಶನವನ್ನು ಹೊಂದಿದ (ಮಾತಂಗದೇಹಜಂ ಅಪಿ) ತಲೆಹೊಡೆಯುವವರ ವಂಶದವನೂ ಸಹ (ಭಸ್ಮಗೂಢಾಂಗಾರಾಂತರೌಜಸಂ) ಬೂದಿಯಲ್ಲಿ ಮುಚ್ಚಿದ ಬೆಂಕಿಯ ಪ್ರಕಾಶದಂತೆ (ದೇವಂ) ಪೂಜಿಸಲಿಕ್ಕೆ ತಕ್ಕವನು (ವಿದುಃ) ಎನ್ನುವರು

ಅರ್ಥ—ಚಂಡಾಲರ ಹೊಟ್ಟೆಯಿಂದ ಹುಟ್ಟಿದವನಿದ್ದರೂ ಕೂಡ ಸಮ್ಯಗ್ದರ್ಶನದಿಂದ ಕೂಡಿದವನಿದ್ದರೆ ಅವನು 'ದೇವ'ನೆನಿಸುತ್ತಾನೆ ಹೀಗೆ ಗಣಧರ ಮೊದಲಾದವರು ತಿಳಿಯುತ್ತಾರೆ ಇದಕ್ಕೆ ಉದಾಹರಣೆಯೆಂದು ಬೂದಿಯಿಂದ ಮುಚ್ಚಿದ ಕೆಂಡವು ಇದ್ದರೂ ಅದು ಪ್ರಕಾಶಯುಕ್ತವಿರುತ್ತದೆಯೆಂಬುದನ್ನು ಗಮನಿಸಬೇಕು [ಇಲ್ಲಿ 'ಮಾತಂಗದೇಹಜಮ್' ಎಂಬ ಪದವು ಬಹಳ ಮಹತ್ವದ್ದಿದೆ ಮಾನವರಲ್ಲಿ ಚಾಂಡಾಲರ ಕೆಲಸವನ್ನು ಮಾಡುವವನು ಕೇವಲ ಚಾಂಡಾಲನೇ ಅಲ್ಲ ಆ ಚಾಂಡಾಲನೂ ಕೂಡ ಸಮ್ಯಗ್ದರ್ಶನವೇ ಮೊದಲಾದ ಧರ್ಮಕ್ಕೆ ಪಾತ್ರನಿರುತ್ತಾನೆ ಅವನು ಆ ಧರ್ಮದಿಂದ ಕೂಡಿದ್ದರೆ 'ದೇವ'ನೆನಿಸಿಕೊಳ್ಳಲೂ ಯೋಗ್ಯನಾಗುತ್ತಾನೆ. ಅವನು ಚಾಂಡಾಲರ ದೇಹದಿಂದ ಹುಟ್ಟಿದುದರಿಂದ ಜನ್ಮ ಇಲ್ಲವೆ ಜಾತಿಯಿಂದ ಮಾತ್ರ ಚಾಂಡಾಲನು ಧರ್ಮದಿಂದ ಅಲ್ಲ ಈ ಮಾತು ಸ್ಪಷ್ಟವಾಗುತ್ತದೆ ಸ ಧ ]

ವಿಶೇಷಾರ್ಥ—ಸಮ್ಯಗ್ದರ್ಶನ ಗುಣದಿಂದಲೇ ಶರೀರವು ವಂದ್ಯವಾಗುತ್ತದೆ ಯಾರಿಗೆ ಸಮ್ಯಗ್ದರ್ಶನವು ಲಭಿಸಿರುವುದೋ ಅವನು ಚಾಂಡಾಲನಿದ್ದರೂ ಅವನಿಗೆ ಭಗವಾನ್ ಗಣಧರರು ದೇವ ಎಂದು ಹೇಳಿದ್ದಾರೆ ಈ ಎಲುವು ಮಾಂಸಗಳಿಂದ ಕೂಡಿದ ದೇಹವು ಚಾಂಡಾಲನಿಂದ ಹುಟ್ಟಿದುದರಿಂದ ಆ ದೇಹವು ಚಾಂಡಾಲವಿದ್ದೀತು. ಸಮ್ಯಗ್ದರ್ಶನವನ್ನು ಪಡೆದ ಅವನ ಆತ್ಮವು ದಿವ್ಯಗುಣದಿಂದ ಪ್ರಕಾಶಮಾನವಾಗಿದೆ ಅಂತಲೇ ಅವನ ಶರೀರಕ್ಕೆ ಉತ್ತಮ ಗುಣದ ಪ್ರಭಾವದಿಂದ 'ದೇವ' ಎಂದು ಹೇಳಲಾಗಿದೆ ಯಾವ ಪ್ರಕಾರ ಬೂದಿಯಿಂದ ಮುಚ್ಚಿದ ಬೆಂಕಿಯೂ ಒಳಗೆ ಹೊಳೆಯುತ್ತಿರುತ್ತದೆಯೋ ಹಾಗೆಯೇ ಆ ಹೊಲಸು ದೇಹದಲ್ಲಿದ್ದ ಆತ್ಮವೂ ಕೂಡ ಸಮ್ಯಗ್ದರ್ಶನ ಗುಣದಿಂದ ದಿವ್ಯವಾಗಿರುತ್ತದೆ, ತೇಜಃಪುಂಜವಾಗಿರುತ್ತದೆ ಸಮ್ಯಗ್ದೃಷ್ಟಿ ಪುರುಷನ ಮಹಿಮೆಯು ನಮಗೆ ಸೇರುತ್ತದೆಂದು ಹೀಗೆ ಹೇಳಿಲ್ಲವೆಂದೂ ಶ್ರೀ ಸಮಂತಭದ್ರಾಚಾರ್ಯರು ಸೂಚಿಸಿದ್ದಾರೆ. ಆದರೆ ಭಗವಂತನ ಹನ್ನೆರಡು ಅಂಗಗಳುಳ್ಳ ಜಿನವಾಣಿಯಲ್ಲಿಯೂ ಸಹ ಗಣಧರ ದೇವರು ಸ್ವತಃ ಸಮ್ಯಗ್ದೃಷ್ಟಿಯುಳ್ಳ ಚಾಂಡಾಲನಿಗೆ ದೇವನೆಂದಿದ್ದಾರೆ ಈ ಶರೀರವು ಮಲ-ಮೂತ್ರಗಳಿಂದ ತುಂಬಿದೆ ಎಲುವು ಮಾಂಸಗಳು ತೊಗಲಿನಿಂದ ಮುಚ್ಚಿವೆ. ಇದರ ಒಂಭತ್ತು ದ್ವಾರಗಳಿಂದ ಯಾವಾಗಲೂ ದುರ್ಗಂಧವಾದ ಮಲವು ಹೊರಬೀಳುತ್ತಿರುತ್ತದೆ ಸಾಧುವಿಗೆ ಇಂಥ ಹೊಲಸು ದೇಹವಿದ್ದರೂ ಕೂಡ ಅದು ರತ್ನತ್ರಯಗಳ ಪ್ರಭಾವದಿಂದ ಇಂದ್ರಾದಿ ದೇವತೆಗಳಿಗೆ ದರ್ಶನಮಾಡಲಿಕ್ಕೆ ಯೋಗ್ಯ-ವಾಗಿರುತ್ತದೆ ಅದರಂತೆ ಸ್ತುತಿ, ವಂದನೆಗಳನ್ನು ಮಾಡಲಿಕ್ಕೂ ಯೋಗ್ಯವಾಗುತ್ತದೆ. ಗುಣವಿಲ್ಲದಿದ್ದರೆ ತೊಗಲಿನಿಂದ ಮುಚ್ಚಿದ ಕಫ-ಮಲಗಳಿಂದ ತುಂಬಿದ ಈ ಹೊಲಸು ದೇಹಕ್ಕೆ ಯಾರು ನಮಸ್ಕಾರಮಾಡುತ್ತಿದ್ದರು? ಅದನ್ನು ಯಾರು

ಪೂಜಿಸುತ್ತಿದ್ದರು? ಅದರ ಕಡೆಗೆ ನೋಡುತ್ತಿದ್ದರಾದರೂ ಯಾರು? ಒಟ್ಟಾರೆ ಸಮ್ಯಗ್ದರ್ಶನವೇ ಮೊದಲಾದ ಗುಣಗಳಿಂದಲೇ ಈ ಶರೀರವು ವಂದನೀಯವಾಗಿದೆ, ಪೂಜನೀಯವಾಗಿದೆ

ಎನಿತೊಡಲಂ ತಾಳ್ದಿದುದಿಲ್ಲೆನಿತೊಡಲಂ ಬಿಸುಟುದಿಲ್ಲ, ವಿಷಯಾನಳನಿಂ-
ದೆನಿತೆನಿತಂ ಮಱುಗಿದುದಿಲ್ಲನಂತ ಸಂಸಾರಗಹನದೊಳ್ ಜೀವಂಗಳ್ ।
ಜನನೀಜನಕಸಹೋದರ ವನಿತಾಸುತಪುತ್ರಮಿತ್ರಸಂಬಂಧಮದೆಂ-
ತೆನಿತೆನಿತು ಭವದೊಳಾಯ್ತಿಲ್ಲೆನಿತೆನಿತಂ ನೆನೆವುದೆನಿತನವಧರಿಸುವುದೋ ॥

—ಪಂಪ–ಆದಿಪುರಾಣ ೯, ೫೩–೫೪.

ಧರ್ಮಾಧರ್ಮದ ಫಲ—

ಶ್ವಾಪಿ ದೇವೋऽಪಿ ದೇವಃ ಶ್ವಾ ಜಾಯತೇ ಧರ್ಮಕಿಲ್ಬಿಷಾತ್ ।
ಕಾಪಿ ನಾಮ ಭವೇದನ್ಯಾ ಸಂಪದ್ಧರ್ಮಾಚ್ಛರೀರಿಣಾಮ್ ॥ ೨೯ ॥

ಅನ್ವಯಾರ್ಥ—(ಧರ್ಮ) ಧರ್ಮದಿಂದ (ಶ್ವಾ ಅಪಿ) ನಾಯಿಯೂ ಕೂಡ (ದೇವಃ) ದೇವನು (ಕಿಲ್ಬಿಷಾತ್) ಅಧರ್ಮದಿಂದ, ಪಾಪದಿಂದ, ಮಲದಿಂದ (ದೇವಃ ಅಪಿ) ದೇವರೂ ಕೂಡ (ಶ್ವಾ) ನಾಯಿಯು (ಜಾಯತೇ) ಆಗುತ್ತಾನೆ (ಶರೀರಿಣಾಂ) ದೇಹವನ್ನು ಧರಿಸಿದವರಿಗೆ (ಕಾಪಿ ನಾಮ) ನಿಜವಾಗಿಯೂ ವರ್ಣಿಸಲಿಕ್ಕೆ ಬಾರದಂಥ (ಧರ್ಮಾತ್ ಅನ್ಯಾ) ಧರ್ಮಕ್ಕಿಂತ ಬೇರೆಯಾದ (ಸಂಪತ್) ಸಂಪತ್ತಿಯು (ಭವೇತ್) ಏನಿದೆ!

ಅರ್ಥ—ಧರ್ಮದ ಪ್ರಭಾವದಿಂದ ನಾಯಿಯು ಸ್ವರ್ಗದಲ್ಲಿ ದೇವನಾಗಿ ಹುಟ್ಟುತ್ತದೆ. ಪಾಪದ ಪ್ರಭಾವದಿಂದ ಸ್ವರ್ಗದೊಳಗಿನ–ಮಹಾನ್ ಋದ್ಧಿಗಳನ್ನು ಪಡೆದ–ದೇವನೂ ಕೂಡ ಭೂಮಿಯ ಮೇಲೆ ನಾಯಿಯಾಗಿ ಹುಟ್ಟುತ್ತಾನೆ ಧರ್ಮದ ಪ್ರಭಾವದಿಂದ ಪ್ರತಿಯೊಂದು ಪ್ರಾಣಿಗೂ ಅವರ್ಣನೀಯವಾದಂಥ ಅಹಮಿಂದ್ರನ ಸಂಪತ್ತೂ ಅವಿನಾಶಿಯಾದ ಮುಕ್ತಿಯ ಸಂಪತ್ತೂ ಲಭಿಸುತ್ತವೆ [ಧರ್ಮ ಹಾಗೂ ಧರ್ಮದ ಫಲವನ್ನು ಪಡೆಯುವ ಅಧಿಕಾರವು ದೇವ, ಮಾನವ ಇವರಿಗೆ ಇಷ್ಟೇ ಇಲ್ಲ ನಾಯಿಯಂಥ ತಿರ್ಯಂಚ ಪ್ರಾಣಿಗೂ ಆ ಅಧಿಕಾರವಿದೆ—ಎಂದು ಆಚಾರ್ಯರು ಇಲ್ಲಿ ಸ್ಪಷ್ಟಗೊಳಿಸಿದ್ದಾರೆ ಹೀಗಿರುವಾಗ ಕುಲ, ಜಾತಿ, ಬಡತನಗಳನ್ನು ಮುಂದೆಮಾಡಿ, ಧರ್ಮಾತ್ಮರನ್ನು ಎಂದೂ ತಿರಸ್ಕರಿಸಲಿಕ್ಕೆ ಬರುವದಿಲ್ಲವೆಂದು ಇಲ್ಲಿ ಆಚಾರ್ಯರು ಘೋಷಿಸಿದ್ದಾರೆ ಸ ಧ.]

ವಿಶೇಷಾರ್ಥ—ಮಿಥ್ಯಾತ್ವದ ಪ್ರಭಾವದಿಂದ ಎರಡನೆಯ ಸ್ವರ್ಗದ ವರೆಗೆ ಇರುವ ದೇವರೂ ಕೂಡ ಏಕೇಂದ್ರಿಯ ಜೀವಿಗಳಾಗಿ ಬಂದು ಜನಿಸುತ್ತಾರೆ, ಮತ್ತು ಅನಂತಾನಂತ ಕಾಲದ ವರೆಗೂ ತ್ರಸ, ಸ್ಥಾವರ ಜೀವಿಗಳಲ್ಲಿ ಸುತ್ತುತ್ತ ತಿರುಗುತ್ತಾರೆ ಹನ್ನೆರಡನೆಯ ಸ್ವರ್ಗದ ವರೆಗಿನ ದೇವರೂ ಮಿಥ್ಯಾತ್ವದ ಪ್ರಭಾವದಿಂದ ಪಂಚೇಂದ್ರಿಯ ತಿರ್ಯಂಚರಲ್ಲಿ ಬಂದು ಹುಟ್ಟುತ್ತಾರೆ ಅಂತಲೇ ಈ ಮಿಥ್ಯಾಭಾವವು ಬಹಳ ಅನರ್ಥವನ್ನು ಮಾಡುವಂಥದಿದೆ. ಇದನ್ನು ತಿಳಿದು ಸಮ್ಯಕ್ತ್ವವನ್ನು ಸಂಪಾದಿಸಿಕೊಳ್ಳುವ ಯತ್ನಮಾಡುವದು ಯೋಗ್ಯವಾಗಿದೆ

ನೆಲವನಗೆದು ರಾಶಿಮಾಡಿ ಶೋಧಿಸಿ ಮಣ್ಣಿನೊಳು ಚಿನ್ನವೊಂದನೆ ಹಿಡಿವಾ
ಧಲಗಾರನಂತಾರು ವಸ್ತುವನರಿದಾತ್ಮ ಕಲೆಯ ಪಿಡಿವುದೀಗ ಕಾರ್ಯ ।
ಮೊದಲೊಮ್ಮೆ ಪಾಪಕೃತ್ಯವಬಿಟ್ಟು ಪುಣ್ಯಕೃತ್ಯದೊಳು ನಿಲ್ವುದು ನಿಂದಮೇಲೆ
ಅದನು ಸುಧ್ಯಾನದೊಳಗೆ ನಿಂದು ಬಿಟ್ಟುಮಾಳ್ಪುದು ಧ್ಯಾನವನೆ ಮುಕ್ತಿಯಹುದು ॥

—ರತ್ನಾಕರ–ಭರತೇಶವೈಭವ–ತತ್ವಾರ್ಥಸಂಧಿ ೧೯–೧೨೨

ಕುದೇವರಿಗೆ ವಂದನೆಮಾಡುವುದು ಯೋಗ್ಯವಲ್ಲ—

ಭಯಾಶಾಸ್ನೇಹಲೋಭಾಚ್ಚ ಕುದೇವಾಗಮಲಿಂಗಿನಾಮ್ ।
ಪ್ರಣಾಮಂ ವಿನಯಂ ಚೈವ ನ ಕುರ್ಯುಃ ಶುದ್ಧದೃಷ್ಟಯಃ ॥ ೩೦ ॥[1]

ಅನ್ವಯಾರ್ಥ—(ಶುದ್ಧದೃಷ್ಟಯಃ) ಶುದ್ಧದೃಷ್ಟಿಯುಳ್ಳವರು, ಸಮ್ಯಗ್ದರ್ಶನವುಳ್ಳವರು (ಭಯಾಶಾ-ಸ್ನೇಹಲೋಭಾತ್) ಭಯ, ಆಶೆ, ಸ್ನೇಹ ಮತ್ತು ಲೋಭಗಳಿಂದ (ಕುದೇವಾಗಮಲಿಂಗಿನಾಂ) ಕೆಟ್ಟ ದೇವರು, ಕೆಟ್ಟಶಾಸ್ತ್ರ, ಕೆಟ್ಟಗುರುಗಳಿಗೆ (ಪ್ರಣಾಮಂ) ನಮಸ್ಕಾರ (ಚ) ಮತ್ತು (ವಿನಯಂ ಏವ) ವಿನಯವನ್ನು ಕೂಡ (ನ ಕುರ್ಯುಃ) ಮಾಡಕೂಡದು

ಅರ್ಥ—ಸಮ್ಯಗ್ದೃಷ್ಟಿ ಪುರುಷನು ಅಂಜಿಕೆ, ಆಶೆ, ಸ್ನೇಹ, ಲೋಭ ಮೊದಲಾದವುಗಳಿಂದ ಕುದೇವ, ಕುಗುರು, ಕುಶಾಸ್ತ್ರ ಇವುಗಳಿಗೆ ನಮಸ್ಕಾರ ಮಾಡಕೂಡದು ಅವುಗಳ ಸತ್ಕಾರವನ್ನು ಮಾಡಬಾರದು [ಕುದೇವಾದಿ-ಗಳಿಗೆ ನಮಸ್ಕಾರ ಮಾಡುವುದರಿಂದ ನಮ್ಮ ಸಮ್ಯಗ್ದರ್ಶನಕ್ಕೆ ಮಲಿನತೆಯು ಉಂಟಾಗುತ್ತದೆ ನಮ್ಮ ಆಚರಣೆಯನ್ನು ಕಂಡು, ಎರಡನೆಯವರು—ಸಮ್ಯಗ್ದರ್ಶನದಿಂದ ನಡೆಯುವವರೂ `ಎಡವುತ್ತಾರೆ ಮೊದಲೇ ಸಮ್ಯಗ್ದರ್ಶನದಿಂದ ಚಂಚಲರಾದವರಂತೂ ತಿರುಗಿ ಸದ್ಧರ್ಮದಲ್ಲಿ ಸ್ಥಿರಗೊಳ್ಳುವದಿಲ್ಲ ಹೀಗೆ ಸಿಕ್ಕ ಸಿಕ್ಕ ದೇವಗುರು ಮೊದಲಾದವರಿಗೆ ವಂದನ, ವಿನಯಗಳನ್ನು ತೋರಿಸುವವರು ಅಮೂಢರಲ್ಲ ಎನ್ನುವದಕ್ಕೆ ಪ್ರಮಾಣಗಳು ಏನೂ ಇರುವದಿಲ್ಲ. ಇವೆಲ್ಲ ಸಂಗತಿಗಳನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು ಸಮ್ಯಗ್ದರ್ಶನದಲ್ಲಿಯ ಚಂಚಲತೆ, ಮಲಿನತೆ, ಶಿಥಿಲತೆಗಳನ್ನು ದೂರ ಮಾಡುವದಕ್ಕಾಗಿ, ಕೆಟ್ಟಧರ್ಮದ ದೇವ, ಗುರು, ಶಾಸ್ತ್ರಗಳನ್ನು ಮನ್ನಿಸಕೂಡದೆಂದು ಹೇಳಲಾಗಿದೆ. ಆದರೆ ಲೋಕ ವ್ಯವಹಾರದ ದೃಷ್ಟಿಯಿಂದ ತಂದೆ, ತಾಯಿ, ರಾಜ, ಮೇಲಧಿಕಾರಿ ಮೊದಲಾದವರಿಗೆ ವಂದಿಸಲಿಕ್ಕೆ ಆಚಾರ್ಯರ ಈ ಮಾತುಗಳು ಅಡ್ಡಿ ಬರುವದಿಲ್ಲ ಅವರಿಗೆ ನಮಸ್ಕಾರ ಮಾಡುವದರಿಂದ ದರ್ಶನದಲ್ಲಿ ಮಲಿನತೆಯೂ ಉಂಟಾಗುವದಿಲ್ಲ. ಯಾಕೆಂದರೆ ಅವರು ದಾರ್ಶನಿಕ ದೃಷ್ಟಿಯಿಂದ ದೇವ, ಗುರು ಮೊದಲಾದವುಗಳಲ್ಲಿ ಸಮಾವೇಶವಾಗುವದಿಲ್ಲ ಅದರಿಂದ ಸಾಮಾಜಿಕ ಜೀವನದಲ್ಲಿ ಶಿಷ್ಟಾಚಾರವೆಂದು ವಂದನೆ, ವಿನಯಗಳನ್ನು ವ್ಯಕ್ತವಡಿಸಲಿಕ್ಕೆ ಯಾವ ವ್ಯತ್ಯಯವೂ ಇರುವದಿಲ್ಲ ಸ ಧ]

ವಿಶೇಷಾರ್ಥ—ಕುದೇವ ಕುಶಾಸ್ತ್ರಗಳಿಗೆ ನಮಸ್ಕಾರ ಮಾಡಬಾರದು. ಕಾಮ, ಕ್ರೋಧ, ಭಯ, ಇಚ್ಛೆ, ಹಸಿವು, ನೀರಡಿಕೆ, ವೈರ, ಸೊಕ್ಕು, ಮೋಹ, ನಿದ್ದೆ, ಆನಂದ, ದುಃಖ, ಹುಟ್ಟು, ಸಾವು ಈ ದೋಷಗಳಿರುವಂಥ ದೇವರು ಕುದೇವರಾಗಿದ್ದಾರೆ. ಇವರ ಪ್ರಭಾವವೂ ಈ ಪಂಚಮ ಕಾಲದಲ್ಲಿ–ದುಃಷಮ–ದುಃಖಮುಳ್ಳ ಕಾಲಖಂಡ–ಬಹಳ ಹೆಚ್ಚಾಗಿದೆ ಸರ್ವಜ್ಞ ವೀತರಾಗ ದೇವನೊಬ್ಬನನ್ನು ಬಿಟ್ಟರೆ ಎಲ್ಲ ದೇವರೂ ಕುದೇವರಾಗಿದ್ದಾರೆ ಹಿಂಸೆಯನ್ನು ಪೋಷಿಸುವಂಥವೂ, ರಾಗದ್ವೇಷಗಳುಳ್ಳ ಮೂಢ ಜನರು ಪ್ರಕಟಗೊಳಿಸಿದಂಥವೂ ಪೂರ್ವಾಪರ ವಿರೋಧದಿಂದ ತುಂಬಿದಂಥವೂ ವಿಷಯ ಕಷಾಯಾದಿಗಳನ್ನು ಪುಷ್ಟಿಗೊಳಿಸುವಂಥವೂ, ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ ದೂಷಿತವಾದಂಥವುಗಳು ಕೆಟ್ಟ ಶಾಸ್ತ್ರಗಳೆನಿಸುತ್ತವೆ ಇದರಂತೆ ಒಳ್ಳೆಯ ಗುರುವಿನ ಲಕ್ಷಣಗಳು ಹೀಗಿವೆ —ಅವನು ಹಿಂಸೆಯೇ ಮೊದಲಾದ ಐದು ಪಾಪಗಳನ್ನು ತ್ಯಾಗಮಾಡಿರುವನು, ಆರಂಭ ಪರಿಗ್ರಹವಿಲ್ಲದವನು, ದೇಹದ ವಿಷಯದಲ್ಲಿ ನಿರ್ಮಮತ್ವನಾದವನು, ಉತ್ತಮ ಕ್ಷಮೆಯೇ ಮೊದಲಾದ ಹತ್ತು ಲಕ್ಷಣಗಳುಳ್ಳ ಧರ್ಮವನ್ನು ಧರಿಸಿದವನು, ದೋಷವನ್ನು ಕಳೆದುಕೊಂಡು ಅಯಾಚಕವೃತ್ತಿಯನ್ನು ಧರಿಸಿದವನು, ದೀನತೆ ಇಲ್ಲದವನು, ನಿರ್ಜನ ಸ್ಥಾನದಲ್ಲಿ ಇರುವಂಥವನು, ಧ್ಯಾನ ಅಧ್ಯಯನಗಳಲ್ಲಿ ಯಾವಾಗಲೂ ಪ್ರವೃತ್ತಿಯುಳ್ಳವನು; ಐದು ಇಂದ್ರಿಯಗಳ ವಿಷಯಪನ್ನು ತ್ಯಜಿಸಿದವನು, ಷಟ್‌ಕಾಯ ಜೀವಗಳ ಘಾತವನ್ನು ತ್ಯಾಗಮಾಡಿದವನು, ಮೌನದಿಂದ ಅನ್ಯರಿಂದ ದೊರೆತ ಅನ್ನವನ್ನು—ಸರಸ–ನೀರಸವೆರಡನ್ನೂ ಸಮಾನವೆಂದು ಭಾವಿಸಿ, ತನಗಾಗಿಯೇ ಮಾಡದೆ ಇದ್ದಂದದನ್ನು

---

1 ಆಯತವರ್ಮನು ಹೇಳುವದು ಹೀಗೆ ಅನಾಯತನ ಸೇವೆಗಳಾರುಮಾವುವೆಂದೊಡೆ—ಮಿಥ್ಯಾಲಯಂಗಳಂ ಮಾಡಿಸುವುದು-ಮವಂ ನೋಡಿ ಮೆಚ್ಚುವುದುಂ ಮಿಥ್ಯಾದೈವಂಗಳಂ ಸ್ತುತಿಸುವುದುಂ ಮಿಥ್ಯಾಜ್ಞಾನಿಗಳಂ ಕೊಂಡು ಕೊನೆವುದುಂ ಕಲ್ಪಿಸುವುದುಂ ನಿನ್ನಂತು ಶಾಸ್ತ್ರಜ್ಞರೊಳರೆಯಂಬುದು ಕೀರ್ತಿಸುವುದುಮೆಂದಕ್ಕುಮಿದಂ ಭಯಾಶಾಸ್ನೇಹಲೌಕಿಕಾರ್ಥದಿಂದ ಮುನ್ನೆಗಳ್ದನಪ್ಪ ಸದೃಷ್ಟಿಯುಕ್ಕು

ರತ್ನತ್ರಯಕ್ಕೆ ಸಹಾಯಭೂತವೆಂದು, ಶರೀರ ರಕ್ಷಣೆಮಾಡುವ ಹೇತುವಿನಿಂದ—ಒಮ್ಮೆ ಮಾತ್ರ ದಿನದಲ್ಲಿ ಊಟಮಾಡುವ ನಗ್ನಮುನೀಶ್ವರನು ಸದ್ಗುರುವೆನಿಸುತ್ತಾನೆ. ಇವರಂತೆ ಒಂದೇ ವಸ್ತ್ರವನ್ನು ಧರಿಸುವಂಥವನೂ, ಕೌಪೀನಧಾರೀ ಕ್ಷುಲ್ಲಕನೂ, ಒಂದೇ ವಸ್ತ್ರವನ್ನು ಧರಿಸುವ ಅರ್ಜಿಕೆಯೂ ಒಳ್ಳೆಯ ಗುರುತ್ವವುಳ್ಳವರು. ಇವರಲ್ಲದೆ ಉಳಿದ ವೇಷಗಳುಳ್ಳ ಎಲ್ಲರೂ ಕುಲಿಂಗಿಗಳು ಎನಿಸುತ್ತಾರೆ ಇಂಥವರಿಗೆ ಸಮ್ಯಗ್ದೃಷ್ಟಿ ಪುರುಷರು ನಮಸ್ಕಾರಮಾಡುವದಿಲ್ಲ

**ಯಾವ ಅಂಜಿಕೆಯಿಂದಲೂ ನಮಸ್ಕರಿಸಕೂಡದು.** ಇದೇ ಪ್ರಕಾರ ಸಮ್ಯಗ್ದೃಷ್ಟಿ ಪುರುಷನು ಅಂಜಿಕೆಯಿಂದ ಕುದೇವರಿಗೆ ನಮಸ್ಕಾರಮಾಡುವದಿಲ್ಲ ಆ ಹೆದರಿಕೆ ಇಂಥದು—ಈ ದೇವರಿಗೆ ನಾವಿರಾರು ಜನರು ಮತ್ತು ರಾಜರು ನಮಸ್ಕರಿಸುತ್ತಾರೆ. ಇವನಿಗೆ ನಾನು ನಮಸ್ಕಾರಮಾಡದ್ದಿದರೆ ಸಿಟ್ಟಿಗೆ ಬಂದು, ಅವನು ನನ್ನನ್ನು ನಾಶಮಾಡಬಹುದು. ನನ್ನ ಹೆಂಡರು ಮಕ್ಕಳ ಘಾತಮಾಡಿಯಾನು. ಈ ದೇವರನ್ನು ದ್ವೇಷಿಸುವುದರಿಂದಲೇ ನನ್ನ ಶರೀರದಲ್ಲಿ ಈ ರೋಗವು ಉತ್ಪನ್ನವಾಗಿಲ್ಲವಷ್ಟೆ! ಇಂಥ ದುಃಖವು ಆ ದ್ವೇಷದಿಂದಲೇ ಉಂಟಾಗಿರಬೇಕಲ್ಲ! ದ್ವೇಷದಿಂದ ಆ ದೇವರು ನನ್ನನ್ನು ನಾಶಮಾಡಬಹುದು ಈ ದೇಶದಲ್ಲಿ ನಿಲ್ಲುವ ಎಲ್ಲ ಜನರು ಈ ದೇವರ ಪೂಜೆಯನ್ನು ಮಾಡುತ್ತಾರೆ. ನನ್ನ ಮನೆತನದ ಅಜ್ಜ, ಮುತ್ತಜ್ಜ, ಅಜ್ಜಿ, ಮಾವ, ಅಣ್ಣ–ತಮ್ಮಂದಿರೆಲ್ಲರೂ ಈ ದೇವರನ್ನು ಪೂಜಿಸುತ್ತ ಬಂದಿದ್ದಾರೆ. ಈಗ ನಾನು ಪರಂಪರೆಯಿಂದ ನಡೆಯುತ್ತಾ ಬಂದ ಈ ದೇವರ ಪೂಜೆಯನ್ನು ಮಾಡುವದನ್ನು ಬಿಟ್ಟರೆ ಈಗ ನನ್ನ ಮನೆಯು ಮಕ್ಕಳು ಮರಿಗಳಿಂದ ತುಂಬಿದೆ, ಸಂಪತ್ತೂ ಇದೆ, ಇದರಲ್ಲಿ ಯಾರಾದರೂ ಸಾಯ-ಬಹುದೊ? ಧನವು ನಾಶವಾದೀತೆ? ಅದನ್ನು ಕಂಡು ಉಳಿದ ಜನರು ನನ್ನನ್ನೂ ದೂಷಿಸಿಯಾರು. ನನಗೆ ಬಹಳ ದುಃಖವಾದೀತು. ಈ ದೇವರು ತನ್ನನ್ನು ಮನ್ನಿಸದವರನ್ನು ಕುರುಡರನ್ನಾಗಿ ಮಾಡಿದ್ದಾನೆಂದು ಹಲವು ಜನರು ಹೇಳುತ್ತಾರೆ. ಈ ದೇವರ ಪೂಜೆ, ಮುಡಿಪು, ಸತ್ಕಾರ ಮೊದಲಾದವುಗಳನ್ನೂ ಮಾಡುವುದರಿಂದ ಇಲ್ಲಿಯ ವರೆಗೆ ಹಲವು ಜನರ ಅನೇಕ ರೋಗಗಳು ಇಲ್ಲದಂತಾಗಿವೆ. ಇವನು ಜಗನ್ನಾಥ ಸ್ವಾಮಿಯು ಇವನ ಊರಲ್ಲಿ–ಪುರಿಯಲ್ಲಿ–ನಾವಲಿಗ, ಅಗಸ, ಕಟುಕ, ಸಮಗಾರ ಮೊದಲಾದವರೆಲ್ಲ ಸೇರಿ, ಎಂಜಲವನ್ನೂ ತಿನ್ನುತ್ತಾರೆ ಹಾಗೆ ಮಾಡದಿದ್ದರೆ ಅವನು ಅವರಿಗೆ ಬಿಳುಪು, ತೊನ್ನು ರೋಗಗಳನ್ನು ಉತ್ಪನ್ನಮಾಡುವ ಹೆದರಿಕೆಯನ್ನೂ ಹಾಕುತ್ತಾನೆ ಇವನ ಪೂಜೆಯಿಂದ ಕುರುಡರಿಗೆ ಕಣ್ಣುಗಳೂ ಬಡವರಿಗೆ ಸಂಪತ್ತಿಯೂ ಲಭಿಸಿವೆ ಇವನನ್ನು ನಿಂದಿಸುವವರ ಸಂಪತ್ತಿಯು ನಷ್ಟವಾಗಿದೆ. ಹಿಂದಿನ ಕಾಲದಲ್ಲಿ ಶನೀಶ್ವರನು ವಿಕ್ರಮಾದಿತ್ಯರಾಜನನ್ನು ಸಂಕಟದಲ್ಲಿ ಕೆಡವಿದ್ದನು. ಈ ಪ್ರಕಾರ ಅನೇಕ ದೇವತೆಗಳು, ಭೈರವರು, ಹನುಮಂತ, ಗಣಪತಿ, ದುರ್ಗಾ, ಚಂಡಿ, ಸೂರ್ಯ ಮೊದಲಾದವರ ಭಯವು ಉಂಟಾಗಿ ಸಮ್ಯಗ್ದೃಷ್ಟಿ ಪುರುಷನು ಅಂಥವರಿಗೆ ನಮಸ್ಕರಿಸುವದಿಲ್ಲ ಅಲ್ಲದೆ ಅವರ ವಿನಯ–ಸತ್ಕಾರಗಳನ್ನೂ ಮಾಡುವದಿಲ್ಲ. ಅದರಂತೆಯೇ ತನಗೆ ಮಕ್ಕಳು ಆಗಬೇಕು ದುಡ್ಡು ಸಿಗಬೇಕು, ರಾಜ್ಯವೇ ದೊರೆಯಬೇಕು—ಇಂಥ ಆಶೆಗಳಿಂದಲೂ ಅವನು ವಂದಿಸುವದಿಲ್ಲ. ಈ ದೇವರ ಕೃಪಾದೃಷ್ಟಿ ನಮ್ಮ ಮೇಲೆ ಇದೆ, ಸಂಕಟ ಬಂದಾಗ ಈ ದೇವರು ನಮ್ಮನ್ನು ರಕ್ಷಿಸುತ್ತಾರೆ ಹೀಗೆ ತಿಳಿದುಕೊಂಡೂ ಕೂಡ ಸಮ್ಯಗ್ದೃಷ್ಟಿಯು ನಮಸ್ಕಾರಮಾಡುವದಿಲ್ಲ ಲೋಭದಿಂದಲೂ ಸಹ ಕುದೇವರ ಸತ್ಕಾರ, ನಮಸ್ಕಾರಗಳನ್ನು ಸಮ್ಯಕ್ತ್ವಿಯು ಮಾಡುವದಿಲ್ಲ ಈ ದೇವರ ಪೂಜೆ ಮಾಡುವದನ್ನು ಆರಂಭಿಸಿದಾಗಿನಿಂದಲೂ ನನಗೆ ಒಂದೇ ಸವನೆ ಲಾಭವಾಗುತ್ತ ನಡೆದಿದೆ ನನಗೆ ದೊಡ್ಡಸ್ತಿಕೆಯು ಸಿಗುತ್ತ ಬಂದಿದೆ ಇಂಥ ಲಾಭಗಳಿಗೆ ದೇವತೆಗಳು ಕಾರಣವೆಂದು ಸಂಕಲ್ಪಮಾಡಿ, ಸಮ್ಯಗ್ದೃಷ್ಟಿಯು ಕುದೇವರಿಗೆ ನಮಸ್ಕಾರಮಾಡುವದಿಲ್ಲ. ರಾಜ, ತಂದೆತಾಯಿ, ಹೆಂಡತಿ, ಜನರು ಇವರ ಯಾರ ಹೆದರಿಕೆಯಿಂದಲೂ ಕುದೇವರ ಪೂಜೆಯನ್ನು ಅವನು ಮಾಡುವದಿಲ್ಲ. ಇದೇ ಪ್ರಕಾರ, ಯಾವ ಶಾಸ್ತ್ರವು ರಾಗ-ದ್ವೇಷ, ಹಿಂಸೆಗಳಿಗೆ ಪುಷ್ಟಿಯನ್ನು ಕೊಡುವುದೋ ಅದನ್ನು ಸಮ್ಯಗ್ದೃಷ್ಟಿಯು ಮನ್ನಿಸುವದಿಲ್ಲ ಶೃಂಗಾರ, ಯುದ್ಧ, ಸ್ತ್ರೀಯರನ್ನು ವರ್ಣಿಸುವುದು ಕುಶಾಸ್ತ್ರವು ವಸ್ತುವಿನ ಸ್ವರೂಪವನ್ನು ಏಕಾಂತಿಕ ದೃಷ್ಟಿಯಿಂದ ವರ್ಣಿಸುವಂಥವು, ಮಂತ್ರ, ತಂತ್ರ, ಯಂತ್ರ, ವಶೀಕರಣ, ಮಾರಣ, ಉಚ್ಚಾಟನ ಮೊದಲಾದ ಸಾಧನೆಗಳನ್ನು ವರ್ಣಿಸುವುದು. ಕುದೇವ, ಕುಧರ್ಮಗಳ ಆರಾಧನೆ-ಯನ್ನು ಹೇಳುವಂಥದು, ಸಂಸಾರದಲ್ಲಿ ನಮ್ಮನ್ನು ಸುತ್ತಿಸುವಂಥದು ಕುಶಾಸ್ತ್ರವಾಗಿರುತ್ತದೆ ಇಂಥವುಗಳಿಗೆ ಸಮ್ಯಗ್ದೃಷ್ಟಿ ಪುರುಷನು ವಂದಿಸುವದಿಲ್ಲ ಅವುಗಳ ಸತ್ಕಾರವನ್ನೂ ಮಾಡುವದಿಲ್ಲ ಅವುಗಳ ರಚನೆಯು ಚೆನ್ನಾಗಿದೆ—ಎಂದು ಹೊಗಳುವುದೂ ಇಲ್ಲ. ತಿರುಗಿ ಅಂಥ ಶಾಸ್ತ್ರಗ್ರಂಥಗಳ ವಾಚನದಿಂದ ಜೀವಗಳು ಸಂಸಾರದಲ್ಲಿ ಪರಿಭ್ರಮಣಮಾಡುವವೆಂದು, ಓದಕೂಡದೆಂದೂ, ಪ್ರಚಾರಮಾಡುವನು. ಆಶೆ, ಭಯ, ಸ್ನೇಹ, ಲೋಭಗಳಿಗೆ

ಒಳಗಾಗಿ ಸುಳ್ಳು ಆಗಮಗಳ ಪ್ರಕಾಶನವನ್ನೂ ಕೂಡ ಅವನು ಮಾಡುವದಿಲ್ಲ ನಮ್ಮ ತಂದೆತಾಯಿಗಳು ಇಂಥ ಶಾಸ್ತ್ರಗಳಿಂದ ಬಹಳಷ್ಟು ಧನ ಸಂಪಾದಿಸಿದ್ದಾರೆ ನಾವೂ ಹಾಗೆಯೇ ಮಾಡಿ ದುಡ್ಡನ್ನು ದೊರಕಿಸಬೇಕು ಜಗತ್ತಿನಲ್ಲಿ ನಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಬೇಕು ವಿದ್ವತ್ತೆಯ ಬಲದ ಮೇಲೆ ರಾಜಾದಿಗಳನ್ನು ನಮ್ಮ ಸೇವಕರನ್ನಾಗಿ ಮಾಡಿಕೊಳ್ಳಬೇಕು—ಇವೆಲ್ಲ ಲೋಭಗಳಿಗಾಗಿ ಸಮ್ಯಗ್ದೃಷ್ಟಿಯು ಕುಶಾಸ್ತ್ರಗಳನ್ನು ಸೇವಿಸುವದಿಲ್ಲ ಈ ಕ್ರಮವನ್ನು ನಾನು ಮುಂದರಿಸದಿದ್ದರೆ ನನ್ನ ಉಪಜೀವನದ ಸಾಧನವೇ ಇಲ್ಲದಂತಾದೀತು, ಎಲ್ಲ ಜನರಲ್ಲಿ ಇದ್ದ ನನ್ನ ಮರ್ಯಾದೆಯೂ ಕಡಿಮೆಯಾದೀತು—ಈ ಹೆದರಿಕೆಯಿಂದಲೂ ಸಮ್ಯಗ್ದೃಷ್ಟಿಯು ಕುಶಾಸ್ತ್ರವನ್ನು ಮನ್ನಿಸುವದಿಲ್ಲ, ಉಪಯೋಗಿಸುವದಿಲ್ಲ ಇಂಥ ಗ್ರಂಥಗಳನ್ನು ಓದುವುದರಿಂದ ಮನರಂಜನವಾಗುತ್ತದೆ, ವೇಳೆ ಕಳೆಯುತ್ತದೆ—ಇಂಥ ತಿಳುವಳಿಕೆಯಿಂದಲೂ ಸಮ್ಯಗ್ದೃಷ್ಟಿಯು ಕುಶಾಸ್ತ್ರಗಳ ಆರಾಧನೆಯನ್ನು ಮಾಡುವದಿಲ್ಲ ಯಾವ ಆಶೆಯಿಂದಲೂ ಸಮ್ಯಗ್ದೃಷ್ಟಿಯು ಕುಶಾಸ್ತ್ರವನ್ನು ಸೇವಿಸುವದಿಲ್ಲ ಕುಶಾಸ್ತ್ರದ ಅಧ್ಯಯನ ಒಂದನ್ನು ಮಾಡುವುದರಿಂದ ಒಂದು ದೇವತೆಯು ವಶವಾಗುವುದು, ಒಂದು ವಿದ್ಯೆಯು ಪ್ರಾಪ್ತವಾದೀತು, ಅದರಿಂದ ಏನಾದರೂ ಲೌಕಿಕ ಹಿತಗಳನ್ನು ಸಾಧಿಸಲಿಕ್ಕೆ ಆದೀತು—ಇಂಥ ಆಶೆಯಿಂದಲೂ ಸಮ್ಯಗ್ದೃಷ್ಟಿಯು ಕುಶಾಸ್ತ್ರಗಳ ಪ್ರಶಂಸೆ ಹಾಗೂ ವಂದನೆಗಳನ್ನು ಮಾಡುವದಿಲ್ಲ ಸಮ್ಯಗ್ದೃಷ್ಟಿ ಪುರುಷನು ಕುಲಕ್ಷಣಗಳುಳ್ಳ ಸಾಧುಗಳಿಗೆ ಭಯ, ಲೋಭ, ಗೆಳೆತನ, ಸ್ನೇಹಗಳಿಗೆ ಒಳಗಾಗಿ ಎಂದೂ ವಂದಿಸುವದಿಲ್ಲ. ಅಲ್ಲದೆ ಅವರನ್ನು ಹೊಗಳುವದಿಲ್ಲ ಈ ಸಾಧುವು ದೊಡ್ಡ ತಪಸ್ವಿಯು, ಇವನಿಗೆ ಅನೇಕ ವಿದ್ಯೆಗಳು ಸಾಧ್ಯವಾಗಿವೆ, ರಾಜನ ಮೇಲೆಯೂ ಇವನ ವರ್ಚಸ್ಸು ಇದೆ, ಎಲ್ಲರೂ ಇವನನ್ನು ಪೂಜ್ಯನೆನ್ನುವರು, ಇವನಿಗೆ ಜಾರಣ, ಮಾರಣ, ಉಚ್ಚಾಟನಾದಿ ವಿದ್ಯೆಗಳು ಬರುತ್ತವೆ, ಇವನಿಗೆ ಅನೇಕ ಮಂತ್ರಶಕ್ತಿ-ಗಳಿವೆ, ಇವುಗಳಿಂದ ಇವನು ನನಗೆ ಏನಾದರೂ ಹಾನಿಯನ್ನುಂಟುಮಾಡಬಹುದು ತೊಂದರೆಯನ್ನೂ ಕೊಡಬಹುದು. ಹೀಗೆ ತಿಳಿದು, ಸಮ್ಯಕ್ತ್ವಿಯು ವೇಷಧಾರಿಯಾದ ಸಾಧುವಿಗೆ ಎಂದೂ ನಮಸ್ಕಾರ ಮಾಡುವದಿಲ್ಲ ಅಲ್ಲದೆ ಅಂಥ ಸಾಧುವಿನಿಂದ ತನಗೆ ಏನಾದರೂ ವಿದ್ಯೆಯನ್ನು ಸಾಧಿಸುವದಿದೆ, ಅದು ಬಹಳ ಮಹತ್ವಪೂರ್ಣವಾಗಿದೆ, ಇವನ ಮಾತನ್ನು ರಾಜನೂ ಕೇಳುವನು, ಇವನಿಂದ ನಮ್ಮ ಕೆಲವು ಕೆಲಸಗಳನ್ನು ಮಾಡಿಕೊಳ್ಳುವದಿದೆ—ಇಂಥ ಆಸೆಗಳಿಂದಲೂ ಸಮ್ಯಗ್ದೃಷ್ಟಿ ಪುರುಷನು ವಂದಿಸುವದಿಲ್ಲ 'ಈ ಸಾಧುವು ನನಗೊಂದು ರಸಾಯನವನ್ನು ಕೊಡುವೆನೆಂದಿರುವನು, ಔಷಧದ ಮಾಹಿತಿಯನ್ನು ಹೇಳುವೆನೆಂದಿರುವನು, ನ್ಯಾಯ ಹಾಗೂ ಜ್ಯೋತಿಷ ವಿದ್ಯೆಗಳನ್ನು ಕಲಿಯುವದಿದೆ, ಅದಕ್ಕಾಗಿ ಅವನ ಸೇವೆಯನ್ನು ಮಾಡೋಣ' ಇವೇ ಮೊದಲಾದ ಲೋಭಗಳಿಂದಲೂ ವಿಷಯಾರಂಭಿಯೂ ಪರಿಗ್ರಹಧಾರಿಯೂ ಆದ ಸುಳ್ಳು ಸಾಧುವಿಗೆ ಸಮ್ಯಗ್ದೃಷ್ಟಿಯು ನಮಸ್ಕಾರಮಾಡುವದಿಲ್ಲ, ಅವನನ್ನು ಹೊಗಳುವದಿಲ್ಲ, ಅವನಿಗೆ ಸತ್ಯವಾದಿ ಎನ್ನುವದಿಲ್ಲ ಅವನು ಧರ್ಮವಂತನೆಂದೂ ತಿಳಿಯುವದಿಲ್ಲ.

ಇನ್ನು ಒಂದು ಸಂಶಯವನ್ನು ಕೆಲವರು ಎತ್ತಬಹುದು ನಮ್ಮ ಇಚ್ಛೆ ಇಲ್ಲದಿದ್ದರೂ ಬಲಿಷ್ಠರಾದ ಯಾರಾದರೂ ನಮ್ಮಿಂದ ನಮಸ್ಕಾರ ಮಾಡಲಿಕ್ಕೆ ಆಗ್ರಹದಿಂದ ಹಚ್ಚಿದರೆ ಏನು ಮಾಡುವುದು? ಇದಕ್ಕೂ ಒಂದು ಸಮಾಧಾನವಿದೆ ಎರಡನೆಯವರು ಒತ್ತಾಯದಿಂದ ನಮಸ್ಕಾರ ಮಾಡಲಿಕ್ಕೆ ಹಚ್ಚಿದರೆ ನಮ್ಮ ಶ್ರದ್ಧೆಯೇನೂ ಕೆಡುವದಿಲ್ಲ ಯಾವಾಗ ನಾವು ಸ್ವತಃ ಮನಃಪೂರ್ವಕವಾಗಿ ಅಂಜಿಕೆ, ಆಶೆ, ಸ್ನೇಹ, ಲೋಭಗಳಿಂದ ನಮಸ್ಕಾರ ಮಾಡುತ್ತೇವೆಯೋ ಆಗಲೇ ನಮ್ಮ ಶ್ರದ್ಧೆಯು ಕೆಡುತ್ತದೆ ಒತ್ತಾಯದಿಂದ ಒಬ್ಬ ದುಷ್ಟನು ವ್ರತಿಕನ ಬಾಯಲ್ಲಿ ಅವನು ತಿನ್ನಲಾರದಂಥ ವಸ್ತುವನ್ನು ಹಾಕಿದರೆ ಅದರಿಂದ ಅವನ ವ್ರತಕ್ಕೆ ಭಂಗವು ಬರುವದಿಲ್ಲ ಅನ್ಯಮತದ ಶಾಸ್ತ್ರಗಳನ್ನು ಓದುವಾಗ ಅದರಲ್ಲಿ ಬಂದ ದೇವತೆಗಳ ಸ್ತುತಿಯನ್ನು ಓದಿದ ಮಾತ್ರಕ್ಕೆ ಆ ದೇವತೆಗಳನ್ನು ಸ್ತುತಿಸಿದಂತೆ ಆಗಲಿಲ್ಲ. ಸಮ್ಯಗ್ದರ್ಶನವು ಆತ್ಮನ ಪರಿಣಾಮವಾಗಿದೆ ಆ ಪರಿಣಾಮದಿಂದ ಒಂದು ವೇಳೆ ಆ ಕುದೇವರು ಸೇವೆಗೆ ತಕ್ಕವರು ಎಂದೆನಿಸಿ, ಸ್ತುತಿ ಮಾಡಿದರೆ, ಅದರಿಂದ ನಮ್ಮ ಕಲ್ಯಾಣವಿದೆಯೆಂದು ಭಾವಿಸಿದರೆ ಮಾತ್ರ ಸಮ್ಯಕ್ತ್ವದ ಅಭಾವವಾಯಿತೆಂದು ಅನ್ನಲಿಕ್ಕೆ ಬಂದೀತು. ಕೇವಲ ಎರಡನೆಯವರ ಧರ್ಮಗ್ರಂಥಗಳಲ್ಲಿಯ ಸ್ತುತಿ-ಸ್ತೋತ್ರಗಳನ್ನು ಓದಿದರೆ ಸಮ್ಯಕ್ತ್ವವೂ ನಷ್ಟವಾಗುವದಿಲ್ಲ

ಒಬ್ಬ ಶ್ರಾವಕನು ರಾಜ್ಯಾಧಿಕಾರಿಗೆ ಭೆಟ್ಟಿಯಾಗುತ್ತಾನೆ ಅವನು ಕೇಳಿದ ಸಂಗತಿಗಳಿಗೆ ಉತ್ತರ-ಕೊಡುತ್ತಾನೆ ಅವನ ಮುಂದೆ ಕೈಜೋಡಿಸಿ ನಿಂತು ವಿನಂತಿಯನ್ನೂ ಮಾಡಿಕೊಳ್ಳುತ್ತಾನೆ ಇದರಿಂದ ಸಮ್ಯಕ್ತ್ವಕ್ಕೆ ಕೊರತೆಯುಂಟಾಗುವದಿಲ್ಲ ಆದರೆ ಚಾರಿತ್ರವನ್ನು ಸ್ವೀಕರಿಸಿದ ಗೃಹಸ್ಥರೂ ಸಾಧುಗಳೂ ಮಾತ್ರ ಅಂಥ ಅಧಿಕಾರಿಯ

ಮುಂದೆಯೂ ಕೈಜೋಡಿಸುವದಿಲ್ಲ. ಇಷ್ಟೇ ಅಲ್ಲ, ಅವರು ಶರೀರವನ್ನು ಹಲವು ತುಂಡುಗಳನ್ನು ಮಾಡಿದರೂ ಸಹ ಧರ್ಮಕಾರ್ಯದ ಹೊರತಾಗಿ ಅನ್ಯಮಾತುಗಳನ್ನು ಮುಖದಿಂದ ಉಚ್ಚರಿಸುವುದೂ ಇಲ್ಲ ಸಾಧುಗಳೂ ಸಹ ತಮಗೆ ನಮಸ್ಕಾರಮಾಡಬೇಕು ಎಂಬ ಇಚ್ಛೆಯು ದುಷ್ಟ ಮನುಷ್ಯರಿಗೂ ಮ್ಲೇಂಛ ಅರಸರಿಗೂ ಇತರ ಮಹಾಪಾಪಿಗಳಿಗೂ ಸಹ ಎನಿಸುವುದಿಲ್ಲ ಸಂಯಮಿಗಳು ರಾಜ, ಚಕ್ರವರ್ತಿ, ತಾಯಿ, ತಂದೆ, ವಿದ್ಯಾಗುರು ಇವರಿಗೂ ನಮಸ್ಕಾರವನ್ನು ಮಾಡುವದಿಲ್ಲ ಸಂಯಮಿಯು ದ್ವಿಜನ್ಮನಾಗಿದ್ದಾನೆ. ಅವ್ರತ ಸಮ್ಯಗ್ದೃಷ್ಟಿಯೂ ಸಹ ಮೇಲೆ ಹೇಳಿದ ಹೆದರಿಕೆ, ಲೋಭ, ಆಶೆ, ಸ್ನೇಹಗಳಿಂದ ಕುದೇವ, ಕುಗುರು, ಕುಧರ್ಮಗಳಿಗೆ ನಮಸ್ಕಾರ ಮಾಡುವದಿಲ್ಲ ವ್ಯವಹಾರಕ್ಕೆ ಸಬಂಧಿಸಿದ ಕಾರ್ಯ-ಪ್ರಯೋಜನಗಳಲ್ಲಿ ಯೋಗ್ಯವಾದ ಆದರ ಸತ್ಕಾರಗಳನ್ನು ಮಾತ್ರ ಅಂಥವರಿಗೆ ಮಾಡುತ್ತಾನೆ ಯಾರಾದರೂ ಅನ್ಯಾಯದಿಂದ ಒತ್ತಾಯಮಾಡಿದರೆ ದೇಶತ್ಯಾಗ ಮಾಡಬೇಕು ಜೀವನ ಸಾಧನಗಳನ್ನು ಬಿಡಬೇಕು ಧನವನ್ನು ಬಿಡಬೇಕು. ಆದರೆ ಕುಧರ್ಮದ ಸೇವೆಯನ್ನೂ ಕುದೇವರ ಆರಾಧನೆಯನ್ನೂ ಮಾಡಬಾರದು.

ನೋಡಿಸಿ ಸೋಡುವಂ ಕರೆದು ಕಿಡಿಗೆರಿಂ ಮನೆದೆಯ್ವಮೆಲ್ಲಮಂ
ಹಾಡಿಸುವಂ ಬಳಿಕ್ಕವರ ಕಾಟದ ಕೋಟಲೆಗಂಜಿ ಬೇಗದಿಂ ।
ಬೇಡಿದನಿಕ್ಕುವಂ ಹರಸುವಂ ಮನದಿಚ್ಛೆಗನಪ್ಪಬಾರ್ತೆಗೆ-
ಟ್ಟೋಡುವ ನಿರರ್ಥಕಂ ಬಸದಿವೊಕ್ಕು ಜೊಗುಳ್ವಡೆ ಜೈನನಕ್ಕುಮೇ ॥

—ಶ್ರೀಮಾಘನಂದಿ—ಶಾಸ್ತ್ರಸಾರ ಸಮುಚ್ಚಯ—ಚರಣಾನುಯೋಗ ೮೬.

ಸಮ್ಯಗ್ದರ್ಶನದ ಶ್ರೇಷ್ಠತೆ—



ದರ್ಶನಂ ಜ್ಞಾನಚಾರಿತ್ರಾತ್ ಸಾಧಿಮಾನಮುಪಾಶ್ನುತೇ ।
ದರ್ಶನಂ ಕರ್ಣಧಾರಂ ತನ್ಮೋಕ್ಷಮಾರ್ಗೇ ಪ್ರಚಕ್ಷ್ಯತೇ ॥ ೩೧ ॥ [1]

ಅನ್ವಯಾರ್ಥ—(ದರ್ಶನಂ) ಸಮ್ಯಗ್ದರ್ಶನವು (ಜ್ಞಾನಚಾರಿತ್ರಾತ್) ಸಮ್ಯಕ್‌ಜ್ಞಾನ ಸಮ್ಯಕ್‌ಚಾರಿತ್ರ-ಗಳಿಗಿಂತಲೂ (ಸಾಧಿಮಾನಂ) ಶ್ರೇಷ್ಠತೆಯನ್ನು (ಉಪಾಶ್ನುತೇ) ಹೊಂದುತ್ತದೆ. (ತತ್) ಅಂತಲೇ (ದರ್ಶನಂ) ಸಮ್ಯಗ್ದರ್ಶನವು (ಮೋಕ್ಷಮಾರ್ಗೇ) ಮೋಕ್ಷಮಾರ್ಗದಲ್ಲಿ (ಕರ್ಣಧಾರಂ) ಮುಖ್ಯವು (ಪ್ರಚಕ್ಷ್ಯತೇ) ಎಂದು ಹೇಳಿದೆ.

ಅರ್ಥ—ಜ್ಞಾನ ಮತ್ತು ಚಾರಿತ್ರಗಳಿಗಿಂತಲೂ ದರ್ಶನವು ಶ್ರೇಷ್ಠವಾಗಿದೆ ಮೋಕ್ಷಮಾರ್ಗದಲ್ಲಿ ಇದೊಂದು ನಾವಿಕ (ಕರ್ಣಧಾರ) ನಿದ್ದಂತೆ. ಸಮುದ್ರದಲ್ಲಿ ನಾವಿಕರು ಹಡಗವನ್ನು ನಡೆಯಿಸುತ್ತಾರೆ. ಅದೇ ಪ್ರಕಾರ ಸಂಸಾರ ಸಮುದ್ರದಲ್ಲಿ ರತ್ನತ್ರಯವೆಂಬ ಹಡಗವನ್ನು ನಡೆಯಿಸುವುದಕ್ಕೆ ಸಮ್ಯಗ್ದರ್ಶನವು ನಾವಿಕನಂತಿರುತ್ತದೆ [2] ಅಂತಲೇ ಇದಕ್ಕೆ ಕರ್ಣಧಾರವೆಂದಿದ್ದಾರೆ ಅಂತೂ ರತ್ನತ್ರಯಗಳಲ್ಲಿ ಸಮ್ಯಗ್ದರ್ಶನವು ಅತಿ ಉತ್ಕೃಷ್ಟವಾಗಿದೆ

ನಂಬುವುದೇಳು ತತ್ತ್ವಮನದುತ್ತಮದೃಷ್ಟಿ ತದರ್ಥಮುಂ ನಯಾ-
ರ್ಥಂಬರೆ ಸೋಡಿ ಭೇದಿವುದುತ್ತಮ ಬೋಧಮಹಿಂಸೆಯಲ್ಲಿ ಮಾ- ।
ರ್ಗಂ ಬಿಡದಿರ್ಪುದುತ್ತಮ ಚರಿತ್ರಮಿವಿಂತು ಮಣಿತ್ರಯಂ ತದೀ-
ಯಾಂಬುಧಿ ಯಾವುದುತ್ತಮ ತಪಂಗಳಲಾ ಅಪರಾಜಿತೇಶ್ವರಾ ॥

—ರತ್ನಾಕರ-ಅಪರಾಜಿತೇಶ್ವರ ಶತಕ ೨

---

[1] ಆಯತವರ್ಮನ ವಚನವು ಹೀಗೆ ಎಂಟಂಗಂಗಳಿಗಿತರಮಪ್ಪಯೆಂಟು ದೋಷದೊಳು ಮೂರು ಮೂಢಂಗಳುಮಾರನಾಯ-ತನ ಸೇವೆಗಳುಮೆಂಟುಮದಂಗಳುಮೆಂದಿಪ್ಪತ್ತೈದುಮಳಗಳಿಂ ನಿರವಶೇಷಂ ಪಿಂಗಿದೊಡೆ ನಿರ್ಮಳಮಪ್ಪ ಸಮ್ಯಕ್ತ್ವಮೆಂಬುದಕ್ಕುಂ, ಅಂತಪ್ಪ ಸಮ್ಯಕ್ತ್ವಂ ಮೋಕ್ಷದ ಬಟ್ಟೆಗೆ ಕೂವ ಕಂಬಿಗನಾದುದೆಂತೆಂದೊಡೆ—ಸಿದ್ಧರೆಂಟುಗುಣಂಗಳೆಂಬ ರತ್ನಂಗಳಂ ಬಯಸಿ ಮೋಕ್ಷಪುರಮೆಂಬ ರತ್ನದ್ವೀಪಕ್ಕೆ ಪೋಗಲ್ವೇಡಿ ಭವ್ಯನೆಂಬ ಪರದಂ ಸಂಸಾರ ಸಮುದ್ರದೊಳು ತನ್ನ ಶರೀರಮೆಂಬ ಬೈತ್ರಮನೇರಿ ಜ್ಞಾನಚಾರಿತ್ರಂಗಳೆಂಬ ಬೈತ್ರಚೋದಕರಂ ನಡಸಿವೇಳ್ದು ನಡೆವ ಬೈತ್ರಕ್ಕೆ ಕ್ರೋಧಮಾನಮಾಯಾಲೋಭಂಗಳೆಂಬ ಮತ್ಸ್ಯಾದಿ-ಗಳಿಂದದಕ್ಕೆ ಕೇಡಪ್ಪುದಂ ದೂರದೊಳೆಂ ಸಮ್ಯಕ್ತ್ವಮಂ ಕೂವಕಂಬಿಗನಂ ಮಾಡಿದೊಡದು ನಿಮಿಷಾರ್ಧದಿಂದ ತನ್ನೀಪ್ಸಿತ ಕಾರ್ಯಮಂ ಮಿಸುಸೂತ್ರಮಂ ಮಾಡಿಕೊಟ್ಟುದು

[2] ಭವಾಬ್ಧೌ ಭವ್ಯಸಾರ್ಥಸ್ಯ ನಿರ್ವಾಣದ್ವೀಪಯಾಯಿನಃ ।
ಚಾರಿತ್ರಯಾನಪಾತ್ರಸ್ಯ ಕರ್ಣಧಾರೋ ಹಿ ದರ್ಶನಮ್ ॥ —ಚಾರಿತ್ರಸಾರ,

ಸಮ್ಯಗ್ದರ್ಶನವು ರತ್ನತ್ರಯಗಳಿಗೆ ಮೂಲವೆಂದು ಹೇಳುವದಕ್ಕೆ ಸೂತ್ರವನ್ನು ಹೇಳುತ್ತಾರೆ—

ವಿದ್ಯಾವೃತ್ತಸ್ಯ ಸಂಭೂತಿಸ್ಥಿತಿವೃದ್ಧಿಫಲೋದಯಾಃ ।
ನ ಸಂತ್ಯಸತಿ ಸಮ್ಯಕ್ತ್ವೇ ಬೀಜಾಭಾವೇ ತರೋರಿವ ॥ ೩೨ ॥ [1]

ಅನ್ವಯಾರ್ಥ—(ಬೀಜಾಭಾವೇ) ಬೀಜವಿಲ್ಲದ (ತರೋಃ ಇವ) ಗಿಡದ ಹಾಗೆ (ಸಮ್ಯಕ್ತ್ವೇ) ಸಮ್ಯಕ್ತ್ವ (ಅಸತಿ) ಇಲ್ಲದೆ (ವಿಧ್ಯಾವೃತ್ತಸ್ಯ) ಜ್ಞಾನ ಮತ್ತು ಚಾರಿತ್ರದ (ಸಂಭೂತಿಸ್ಥಿತಿವೃದ್ಧಿಫಲೋದಯಾಃ) ಹುಟ್ಟುವಿಕೆ, ಇರುವಿಕೆ, ಬೆಳೆಯುವಿಕೆ, ಫಲವನ್ನು ಕೊಡುವಿಕೆ ಇವು (ನ ಸಂತಿ) ಆಗುವದಿಲ್ಲ

ಅರ್ಥ—ಬೀಜವಿಲ್ಲದೆ ವೃಕ್ಷವು ಹೇಗೆ ಹುಟ್ಟುವದಿಲ್ಲವೋ ಹಾಗೆ ವಿದ್ಯೆ (ಜ್ಞಾನ) ಮತ್ತು ವೃತ್ತ (ಚಾರಿತ್ರ) ಇವುಗಳ ಉತ್ಪತ್ತಿ, ಸ್ಥಿತಿ, ವೃದ್ಧಿ ಹಾಗು ಫಲಪ್ರಾಪ್ತಿಗಳೂ ಸಮ್ಯಕ್ತ್ವವಿಲ್ಲದೆ ಆಗುವದಿಲ್ಲ. [ಇಲ್ಲಿ 'ಸಮ್ಯಕ್ತ್ವ' ಎಂದರೆ ಸಮ್ಯಗ್ದರ್ಶನವೆಂಬ ಅರ್ಥವನ್ನು ಸ್ವೀಕರಿಸಲಾಗಿದೆ ಸಮ್ಯಕ್‌ಜ್ಞಾನ-ಚಾರಿತ್ರಗಳಿಗೆ ಸಮ್ಯಗ್‌ದರ್ಶನವು ಮೂಲ ಕಾರಣವಾಗಿದೆ ಸಮ್ಯಗ್‌ದರ್ಶನದ ಸತ್ತೆಯು ಇರುವ ವರೆಗೇನೇ ಜ್ಞಾನ ಚಾರಿತ್ರಗಳು ಸಮ್ಯಕ್-ಸ್ಥಿತಿಯಲ್ಲಿರುತ್ತವೆ ಅಲ್ಲದೆ ಉನ್ನತಶೀಲವಾಗಿಯೂ ನಿಜವಾದ ಫಲವನ್ನೂ ಕೊಡುವಂಥವೂ ಆಗಿರುತ್ತವೆ ಸಮ್ಯಗ್ದರ್ಶನದ ಸತ್ತೆಯು ಇಲ್ಲವಾದರೆ ಅವುಗಳಲ್ಲಿ ವಿಕಾರತೆಯುಂಟಾಗುತ್ತದೆ. ಫಲದಾಯಕ ಶಕ್ತಿಯು ನಷ್ಟವಾಗುತ್ತದೆ. ಆಗ ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರಗಳಲ್ಲಿ ಪರಿಣತವಾಗುತ್ತವೆ ತಾವು ತಿಳಿದ ಮಿಥ್ಯವನ್ನೇ ಸತ್ಯವೆಂದು ತಿಳಿದು ವರ್ತಿಸಲುಗುತ್ತದೆ ಅದಕ್ಕೆ ಸಮ್ಯಗ್ದರ್ಶನಕ್ಕೆ ಮಹತ್ವವನ್ನು ಕೊಡಲಾಗಿದೆ ಸ. ಧ]

ವಿಶೇಷಾರ್ಥ—ಬೀಜವು ಇಲ್ಲದಿದ್ದರೆ ಗಿಡವು ಹೇಗೆ ಹುಟ್ಟುವುದು? ಗಿಡವೇ ಉತ್ಪನ್ನವಾಗದಿದ್ದರೆ ಬಳವಣಿಗೆ ಏತರದು? ಇರುವಿಕೆ ಎಲ್ಲಿಯದು? ಫಲವಾದರೂ ಎಲ್ಲಿಂದ ಬಂದೀತು? ಹಾಗೆಯೇ ಸಮ್ಯಗ್ದರ್ಶನವೇ ಇಲ್ಲದಿದ್ದರೆ ಜ್ಞಾನ, ಚಾರಿತ್ರಗಳು ಎಲ್ಲಿಂದ ಬರುವವು? ಸಮ್ಯಕ್ತ್ವವಿಲ್ಲದ ಜ್ಞಾನವು ಕುಜ್ಞಾನವು, ಚಾರಿತ್ರವು ಕುಚಾರಿತ್ರವು ಸಮ್ಯಕ್ತ್ವವಿಲ್ಲದೆ ಜ್ಞಾನ ಮತ್ತು ಚಾರಿತ್ರಗಳು ಉತ್ಪನ್ನವಾಗುವುದು ಶಕ್ಯವಿಲ್ಲ ಅಂದ ಮೇಲೆ ಅವುಗಳ ಸ್ಥಿತಿ ವೃದ್ಧಿಗಳು ಎಲ್ಲಿಯವು? ಅದರಂತೆಯೇ ಜ್ಞಾನ ಮತ್ತು ಚಾರಿತ್ರದ ಫಲವಾದ ಸರ್ವಜ್ಞತ್ವವೂ ಪರಮಾತ್ಮ ಸ್ವರೂಪವೂ ಲಭಿಸುವುದು ಎಲ್ಲಿಯದು? ಸಮ್ಯಕ್ತ್ವವಿಲ್ಲದೆ ಸತ್ಯದ ಮೇಲೆ ಶ್ರದ್ಧೆಯೂ ಜ್ಞಾನ, ಚಾರಿತ್ರಗಳೂ ಎಂದೂ ಉಂಟಾಗಲಾರವು ಪರಮಪೂಜ್ಯ ಗುಣಭದ್ರಾಚಾರ್ಯರು ತಮ್ಮ "ಆತ್ಮಾನುಶಾಸನ" ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ

ಶಮಬೋಧವೃತ್ತತಪಸಾಂ ಪಾಷಾಣಸ್ಯೇವ ಗೌರವಂ ಪುಂಸಃ ।
ಪೂಜ್ಯಂ ಮಹಾಮಣೇರಿವ ತದೇವ ಸಮ್ಯಕ್ತ್ವ ಸಂಯುಕ್ತಮ್ ॥

ಅರ್ಥ—ಶಮವೆಂದರೆ ಕಷಾಯಗಳ ಮಂದತೆಯು. ಬೋಧವೆಂದರೆ ಹಲವು ಶಾಸ್ತ್ರಗಳ ಉದಾತ್ತ ಜ್ಞಾನವು ವ್ರತವೆಂದರೆ ಹದಿಮೂರು ಪ್ರಕಾರದ ಕಠಿಣ ಆಚರಣೆಯು ತಪವೆಂದರೆ ಹನ್ನೆರಡು ಪ್ರಕಾರದ ಘೋರ ತಪಸ್ಸು ಶಾಂತಿ, ಜ್ಞಾನ, ಚಾರಿತ್ರ ಮತ್ತು ತಪಗಳ ಮಹತ್ವ, ಈ ನಾಲ್ಕು ಸಂಗತಿಗಳು ಹೊಂದಿಕೊಂಡು ಇರುವುದು ಬಹು ಕಠಿಣ ಸಾಧ್ಯವಾದುದು ಇವುಗಳನ್ನು ಯಾರಾದರೂ ಸಾಧಿಸಲಿಕ್ಕೆ ಯತ್ನಿಸಿದರೆ ಅದು ಕಲ್ಲಿನಂತೆ ಜಡವಾದುದೇ ಎನಿಸೀತು ಆದರೆ ಅವೇ ಕ್ರಿಯೆಗಳು–ಶಮ, ಜ್ಞಾನ, ಚಾರಿತ್ರ, ತಪ–ಸಮ್ಯಕ್ತ್ವದಿಂದ ಕೂಡಿದ್ದರೆ ಚಿಂತಾಮಣಿ ರತ್ನದಂತೆ ಅವುಗಳ ಪೂಜ್ಯತೆಯು ಜಗತ್ತಿನಲ್ಲಿ ಹೆಚ್ಚೀತು ಜಗತ್ತಿನಲ್ಲಿ ಬೆಲೆಯುಳ್ಳ ರತ್ನಗಳೂ ಕೂಡ ಒಂದು ಪ್ರಕಾರದ ಕಲ್ಲುಗಳೇ ಆಗಿವೆ ಆದರೆ ಕಲ್ಲು ಮತ್ತು ರತ್ನಗಳ ಕಾಂತಿಯಲ್ಲಿ ಬಹಳ ಅಂತರವಿದೆ ಎಲ್ಲ ಹರಳುಗಳೂ ಸಮಾನವಾಗಿಲ್ಲ ಒಂದು ಕರೇ ಕಲ್ಲಿಗೆ ಯಾರೂ ಒಂದು ಕವಡಿಯನ್ನೂ ಕೂಡ ಕೊಡಲಾರರು ಅದೇ ಪದ್ಮರಾಗಮಣಿ ಇಲ್ಲವೆ ಹಿರಾ ಇದೊಂದು ಕಣದಷ್ಟು ಇದ್ದರೂ ಸಹ ಅದರ ಬೆಲೆಯು ಲಕ್ಷಾವಧಿ ರೂಪಾಯಿಗಳಷ್ಟು ಆದೀತು ಅದರಿಂದ ನಮ್ಮ ಮಕ್ಕಳು ಮೊಮ್ಮಕ್ಕಳುಗಳ ಬಡತನವೂ ಇಲ್ಲದಂತೆ ಆದೀತು ಇದೇ ಪ್ರಕಾರ ಸಮ್ಯಕ್ತ್ವದಿಂದ ಕೂಡಿದ ಶಾಂತಿ, ಜ್ಞಾನ, ಚಾರಿತ್ರ, ತಪಗಳು ಸ್ವಲ್ಪವೇ ಇದ್ದರೂ ಸಹ ಆ ಜೀವವೂ

1 ಆಯತವರ್ಮನ ವಚನವು ಹೀಗೆ ತಾ ಸಮ್ಯಕ್ತ್ವದತ್ತಣಿಂ ಜ್ಞಾನಚಾರಿತ್ರಂಗಳು ಪೆಂಪಸೆಯುದ್ಭವುಮದಿಲ್ಲದೊಡವರ ಪುಟ್ಟುಗೆಯುಂ ಪೆರ್ಚುಗೆಯುಂ ಫಲದೇಳ್ಗೆಯುಂ ಬಿತ್ತಿಲ್ಲದ ಮರದವೊಲಕ್ಕು ಮದರಿಂ ಸಮ್ಯಕ್ತ್ವವೆ ಪ್ರಧಾನಂ.

ಕಲ್ಪವಾಸಿ ಇಂದ್ರಾದಿ ದೇವತೆಗಳಲ್ಲಿ ಹೋಗಿ ಸಮಾವೇಶಗೊಳ್ಳುವ ಪಾತ್ರತೆಯನ್ನು ಹೊಂದುತ್ತದೆ. ಅಲ್ಲದೆ ಅದು ಕ್ರಮದಿಂದ ತನ್ನ ಜನ್ಮ-ಮರಣಗಳನ್ನೂ ನಾಶಮಾಡಿಕೊಂಡು, ಮುಕ್ತಿಯನ್ನೂ ಕೂಡ ಸಂಪಾದಿಸುತ್ತದೆ. ಆದರೆ ಮೂಲದಲ್ಲಿ ಸಮ್ಯಕ್ತ್ವವೇ ಇಲ್ಲದೆ ಬಹಳಷ್ಟು ಶಮಭಾವ, ಹನ್ನೊಂದು ಅಂಗಗಳ ಜ್ಞಾನ, ಅತ್ಯಂತ ನಿರ್ಮಲ ಚಾರಿತ್ರ, ಕಠಿಣ ತಪಸ್ಸುಗಳಿದ್ದರೆ ಅವುಗಳಿಂದ ಕಷಾಯದ ಮಂದತೆಯು ಉಂಟಾಗುತ್ತದೆ. ಅದರ ಫಲವೆಂದೂ ಭವನವಾಸಿ, ವ್ಯಂತರ, ಜ್ಯೋತಿಷವಾಸಿ ದೇವರಾಗಿಯೂ ಅಲ್ಪ ಋದ್ಧಿಗಳನ್ನು ಧರಿಸಿರುವ ಕಲ್ಪವಾಸಿ ದೇವರಲ್ಲಿಯೂ ಹೋಗಿ ಹುಟ್ಟುವುದು ಸಾಧ್ಯವಿದೆ ಆದರೆ ಮತ್ತೆ ಚತುರ್ಗತಿಗಳಲ್ಲಿ ಭ್ರಮಣ ಮಾಡಬೇಕಾಗುತ್ತದೆ. ಅದರಿಂದಲೇ ಸಮ್ಯಕ್ತ್ವಸಹಿತ ಶಮ, ಬೋಧ, ಚಾರಿತ್ರ ಮತ್ತು ತಪಗಳನ್ನು ಸ್ವೀಕರಿಸುವದರಲ್ಲಿ ಜೀವದ ನಿಜವಾದ ಕಲ್ಯಾಣವಿದೆ.

ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವ ಸೌಖ್ಯಮಂ
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳಭೇದಮಾದ ಕೊಂ- ।
ಡಾಟದನಂತಸೌಖ್ಯಮನೆ ಮುಚ್ಚಿದ ಮರ್ಚುಗೆಯೊಳ್ ತೊಡರ್ಚು ಮಾ-
ರಾಟದೆ ನಿನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ ॥

—ನಾಗಚಂದ್ರ-ಮಲ್ಲಿನಾಥಪುರಾಣ.

ಇಲ್ಲಿ ಒಂದು ಪ್ರಶ್ನೆಯು ಉದ್ಭವಿಸುತ್ತದೆ ಸಮ್ಯಕ್ತ್ವವಿಲ್ಲದೆ ಕೇವಲ ಚಾರಿತ್ರ ಮತ್ತು ತಪಶ್ಚರ್ಯೆಗಳುಳ್ಳ ಮುನಿಯು ಆರಂಭಾದಿಗಳಲ್ಲಿ ಮಗ್ನನಾಗಿರುವ ಗೃಹಸ್ಥನಕಿಂತ ಒಳ್ಳೆಯವನಲ್ಲವೆ?—ಎಂದು ಈ ಸಂಶಯಕ್ಕೆ ಸಮಾಧಾನವನ್ನು ಸೂಚಿಸಲಿಕ್ಕೆಂದೇ ಮುಂದಿನ ಶ್ಲೋಕವನ್ನು ಹೇಳಿದ್ದಾರೆ.

**ಮೋಹೀ ಮುನಿಗಿಂತ ನಿರ್ಮೋಹೀ ಗೃಹಸ್ಥನು ಶ್ರೇಷ್ಠ—**

**ಗೃಹಸ್ಥೋ ಮೋಕ್ಷಮಾರ್ಗಸ್ಥೋ ನಿರ್ಮೋಹೋ ನೈವ ಮೋಹವಾನ್ ।**
**ಅನಗಾರೋ,[1] ಗೃಹೀ ಶ್ರೇಯಾನ್ ನಿರ್ಮೋಹೋ ಮೋಹಿನೋ ಮುನೇಃ ॥ ೩೩ ॥[2]**

ಅನ್ವಯಾರ್ಥ—(ನಿರ್ಮೋಹಃ) ಮೋಹವಿಲ್ಲದ (ಗೃಹಸ್ಥಃ) ಶ್ರಾವಕನು (ಮೋಕ್ಷಮಾರ್ಗಸ್ಥಃ) ಮೋಕ್ಷಮಾರ್ಗದಲ್ಲಿ ಸ್ಥಿರವಾಗಿರುತ್ತಾನೆ. ಆದರೆ (ಮೋಹವಾನ್) ಮೋಹವುಳ್ಳವನು (ಅನಗಾರಃ ಏವ) ಮುನಿಯು ಇದ್ದರೂ ಕೂಡ (ನ) ಮೋಕ್ಷ ಮಾರ್ಗದಲ್ಲಿ ಸ್ಥಿರನಾಗಿರುವದಿಲ್ಲ. ಅಂತಲೇ (ಮೋಹಿನಃ) ಮೋಹವುಳ್ಳ (ಮುನೇಃ) ಮುನಿಯಕಿಂತ (ನಿರ್ಮೋಹಃ) ಮೋಹರಹಿತ (ಗೃಹೀ) ಗೃಹಸ್ಥನು, ಶ್ರಾವಕನು (ಶ್ರೇಯಾನ್) ಶ್ರೇಷ್ಠನಿರುತ್ತಾನೆ

ಅರ್ಥ—ಮೋಹವನ್ನು ಬಿಟ್ಟ ಗೃಹಸ್ಥನು ಮೋಕ್ಷಮಾರ್ಗದಲ್ಲಿ ಇರಲಿಕ್ಕೆ ತಕ್ಕವನಾಗುತ್ತಾನೆ. ಆದರೆ ಮೋಹವುಳ್ಳ ಮುನಿಯು ಮೋಕ್ಷಮಾರ್ಗದಲ್ಲಿ ನಿಲ್ಲಲು ಯೋಗ್ಯನಾಗುವದಿಲ್ಲ. ಇದರ ಮೇಲಿಂದ ಮೋಹವುಳ್ಳ ಮುನಿಗಿಂತ ಮೋಹವಿಲ್ಲದ ಗೃಹಸ್ಥನು ಶ್ರೇಷ್ಠನಾಗಿದ್ದಾನೆ. (ಮನೆಯನ್ನು ಬಿಟ್ಟ ಮುನಿಯ ಯೋಗ್ಯತೆಯು ಗೃಹಸ್ಥನಿಗಿಂತ ಎಲ್ಲೆಡೆಗೂ ಹೆಚ್ಚಿಗೆ ಇರುತ್ತದೆ ಆದರೆ ಸಮ್ಯಕ್ತ್ವವಿಲ್ಲದ ಮುನಿಗಿಂತ ಸಮ್ಯಗ್ದರ್ಶನ-ವುಳ್ಳ ಶ್ರಾವಕನು ಜೈನಾಗಮಗಳ ದೃಷ್ಟಿಯಿಂದ ಶ್ರೇಷ್ಠನೆನಿಸುತ್ತಾನೆ ಇನ್ನು ಗೃಹಸ್ಥ ಅವಸ್ಥೆಯಲ್ಲಿ ಎಲ್ಲ ಜಾತಿಯ ಎಲ್ಲ ವರ್ಗದ ಜನರೂ ಸಮಾವೇಶವಾಗುತ್ತಾರೆ. ಅಲ್ಲದೆ ಚಾಂಡಾಲನ ಪುತ್ರನೂ ಕೂಡ ಸಮ್ಯಗ್ದರ್ಶನಕ್ಕೆ

---

1 ಅನಗಾರೀ ಎಂದೂ ಪಾಠಾಂತರವಿದೆ

2 ಆಯತವರ್ಮನು ಹೇಳುವದು ಹೀಗೆ ಬೂದಿಯಿಂ ಮರಿಸೆ ಪಟ್ಟ ಕೆಂಡಂಬೊಲಂತರಂಗದ ಬೆಳಗನೊಡೆಯನಂ ಸಮ್ಯಗ್ದರ್ಶನ ಶುದ್ಧನಪ್ಪ ಮನುಜನಂ ದೇವನೆಂದು ದೇವರ್ಕಳು ಪೊಗಳ್ವರು ಮತ್ತಂ ಸಮ್ಯಕ್ತ್ವವಿಲ್ಲದುಭಯಲೋಕದ ಕಾಂಕ್ಷೆಯಿಂ ತಪಂಗೆಯ್ವ ಋಷಿಯಂ ನೋಡಲು ಸಮ್ಯಗ್ದೃಷ್ಟಿಯಪ್ಪ ಗೃಹಸ್ಥನೊಳ್ಳಿತೆಂಬುದು ಮುನಿವಚನಂ.

ಪಾತ್ರನಿರುವನೆಂದು ಹೇಳಿದೆ (ಸೂತ್ರ ೨೮) ಹೀನ ಕುಲದ ಸಮ್ಯಗ್ದೃಷ್ಟಿ ಶ್ರಾವಕನೂ ಸಹ ಉಚ್ಚಕುಲದ ಸಮ್ಯಗ್ದೃಷ್ಟಿಯಿಲ್ಲದ ಜ್ಞಾನಿಯಾದ ಮುನಿಗಿಂತ ಶ್ರೇಷ್ಠನಿರುತ್ತಾನೆ ಈ ದೃಷ್ಟಿಯಿಂದಲೂ ಸಮ್ಯಗ್ಜ್ಞಾನ, ಚಾರಿತ್ರಗಳಿಗಿಂತ ಸಮ್ಯಗ್ದರ್ಶನವು ಉತ್ಕೃಷ್ಟವೆಂದು ಸ್ಪಷ್ಟವಾಗುತ್ತದೆ. ಸ. ಧ ]

**ವಿಶೇಷಾರ್ಥ**— ಮಿಥ್ಯಾತ್ವದಿಂದ ಅನಂತ ಸಂಸಾರದಲ್ಲಿ ಸುತ್ತಬೇಕಾಗುವುದು. ಮೋಹವೆಂದರೆ ಮಿಥ್ಯಾತ್ವ ಅದು ಇಲ್ಲದ ಅವ್ರತ ಸಮ್ಯಗ್ದೃಷ್ಟಿ ಶ್ರಾವಕನೂ ಸಹ ಮೋಕ್ಷಮಾರ್ಗದಲ್ಲಿ ಇದ್ದವನೆನಿಸುತ್ತಾನೆ ಅವನು ಏಳೆಂಟು ಜನ್ಮಗಳಲ್ಲಿ ದೇವನಾಗಿ ಜನಿಸಬಹುದು. ಮನುಷ್ಯನಾಗಿಯೂ ಕಳೆಯಬಹುದು ಆದರೆ ನಿಯಮ ಪೂರ್ವಕವಾಗಿ ಅವನು ಮೋಕ್ಷಕ್ಕೆ ಹೋದಾನು ಇನ್ನು ಮಿಥ್ಯಾತ್ವವುಳ್ಳವನು ವ್ರತಗಳನ್ನು ಸ್ವೀಕರಿಸಿ, ಮುನಿಪದವನ್ನು ಹೊಂದಿದರೂ ಕೂಡ ಅವನು ಮರಣಹೊಂದಿ, ಈ ಮೂರು ಲೋಕಗಳಲ್ಲಿ ಹುಟ್ಟಿ, ಸಂಸಾರದಲ್ಲಿಯೇ ಸುತ್ತುತ್ತ ಇರುವನು ಶ್ರೀ ಕುಂದಕುಂದಾಚಾರ್ಯರು ತಮ್ಮ "ದರ್ಶನ ಪಾಹುಡ"ದಲ್ಲಿ ಹೀಗೆ ಹೇಳಿದ್ದಾರೆ—

ದಂಸಣಭಟ್ಠಾ ಭಟ್ಠಾ ದಂಸಣಭಟ್ಠಾಣ ಣತ್ಥಿ ಣಿವ್ವಾಣಂ ।
ಸಿಜ್ಝಂತಿ ಚರಿಯಭಟ್ಠಾ ದಂಸಣಭಟ್ಠಾ ಣ ಸಿಜ್ಝಂತಿ ॥ ೧ ॥

ಸಮ್ಮತ್ತರಯಣಭಟ್ಠಾ ಜಾಣಂತಾ ಬಹುವಿಹಾಣ ಸತ್ಥಾಣಂ ।
ಆರಾಹಣಾವಿರಹಿಯಾ ಭಮಂತಿ ತತ್ಥೇವ ತತ್ಥೇವ ॥ ೨ ॥

ಸಮ್ಮತ್ತವಿರಹಿಯಾಣಂ ಸುಟ್ಠು ವಿ ಉಗ್ಗಂ ತವಂ ಚರಂತಾಣಂ ।
ಣ ಲಹಂತಿ ಬೋಹಿಲಾಹಂ ಅವಿ ವಾಸಸಹಸ್ಸಕೋಡೀಹಿಂ ॥ ೩ ॥

ಜೇ ದಂಸಣೇಸು ಭಟ್ಠಾ ಣಾಣೇ ಭಟ್ಠಾ ಚರಿತ್ತಭಟ್ಠಾ ಯ ।
ಎದೇ ಭಟ್ಠವಿಭಟ್ಠಾ ಸೇಸೇ ವಿ ಜಣಂ ವಿಣಾಸಂತಿ ॥ ೪ ॥

ಜಹ ಮೂಲಮ್ಮಿ ವಿಣಟ್ಠೇ ದುಮಸ್ಸ ಪರಿವಾರ ಣತ್ಥಿ ಪರಿವಡ್ಢೀ ।
ತಹ ಜಿಣದಂಸಣಭಟ್ಠಾ ಮೂಲವಿಣಟ್ಠಾ ಣ ಸಿಜ್ಝಂತಿ ॥ ೫ ॥

ಜೇ ದಂಸಣೇಸು ಭಟ್ಠಾ ಪಾಏ ಪಾಡಂತಿ ದಂಸಣಧರಾಣಂ ।
ತೇ ಹುಂತಿ ಲಲ್ಲಮೂಯಾ ಬೋಹೀ ಪುಣ ದುಲ್ಲಹಾ ಹೋದಿ ॥ ೬ ॥

ಜೇ ವಿ ಪಡಂತಿ ಯ ತೇಸಿಂ ಜಾಣಂತಾ ಲಜ್ಜಗಾರವಭಯೇಣ ।
ತೇಸಿಂ ಪಿ ಣತ್ಥಿ ಬೋಹೀ ಪಾವಂ ಅಣುಮೋದಮಾಣಾಣಂ ॥ ೭ ॥

ಜಿಣವಯಣಮೋಸಹಮಿಣಂ ವಿಸಯಸುಹವಿರೇಯಣಂ ಅಮಿಯಭೂದಂ ।
ಜರಮರಣವಾಹಿವೇಯಣಖಯಯರಣಂ ಸವ್ವದುಕ್ಖಾಣಂ ॥ ೮ ॥

ಎಕ್ಕಂ ಜಿಣಸ್ಸ ರೂವಂ ಬೀಯಂ ಉಕ್ಕಸ್ಸಸಾವಯಾಣಂ ಚ ।
ಅವರಟ್ಠಿಯಾಣ ತಿದಯಂ ಚಉತ್ಥ ಪುಣ ಲಿಂಗ ದಂಸಣೇ ಣತ್ಥಿ ॥ ೯ ॥

ಜಂ ಸಕ್ಕಂ ತಂ ಕೀರಇ ಜಂ ಚ ಣ ಸಕ್ಕೇಇ ತಂ ಚ ಸದ್ದಹಣ ।
ಕೇವಲಜಿಣೇಹಿ ಭಣಿಯಂ ಸದ್ದಹಮಾಣಸ್ಸ ಸಮ್ಮತ್ತಂ ॥ ೧೦ ॥

ಣವಿ ದೇಹೋ ವಂದಿಜ್ಜಇ ಣವಿ ಯ ಕುಲೋ ಣವಿ ಯ ಜಾಇಸಂಪಣ್ಣೋ ।
ಕೋ ವಂದಮಿ ಗುಣಹೀಣೋ ಣ ಹು ಸವಣೋ ಣ ಸಾವಓ ಹೋಇ ॥ ೧೧ ॥

**ಅರ್ಥ**—ಸಮ್ಯಗ್ದರ್ಶನದಿಂದ ಭ್ರಷ್ಟನಾದವನು ಎಲ್ಲ ದೃಷ್ಟಿಯಿಂದಲೂ ಭ್ರಷ್ಟನಿರುತ್ತಾನೆ. ಯಾಕೆಂದರೆ ಸಮ್ಯಗ್ದರ್ಶನದಿಂದ ಚ್ಯುತನಾದವನಿಗೆ ಅನಂತಕಾಲಗಳು ಕಳೆದರೂ ಕೂಡ ಮೋಕ್ಷವು ದೊರೆಯುವದಿಲ್ಲ. ಸಮ್ಯಗ್ದರ್ಶನವನ್ನು ಕಳೆದುಕೊಳ್ಳದೆ ಚಾರಿತ್ರದಿಂದ ಭ್ರಷ್ಟನಾದರೆ ಮಾತ್ರ ಮೂರನೆಯ ಭವದಲ್ಲಿ ನಿರ್ವಾಣವನ್ನು ಹೊಂದುತ್ತಾನೆ ಆದರೆ ಸಮ್ಯಕ್ತ್ವವೇ ಇಲ್ಲದಂತಾದರೆ ಅನಂತಭವಗಳು ಉರುಳಿದರೂ ಸಹ ಸಂಸಾರ ಪರಿಭ್ರಮಣದಿಂದ

ಅವನು ಮುಕ್ತನಾಗುವದಿಲ್ಲ ॥ ೧ ॥ ಯಾರಲ್ಲಿ ಸಮ್ಯಕ್ತ್ವರೂಪದ ರತ್ನವು ಇಲ್ಲದಂತಾಗಿರುವುದೋ ಅವನು ಅನೇಕ ಶಾಸ್ತ್ರಗಳನ್ನು ಬಲ್ಲವನಿದ್ದರೂ ಅವನಿಗೆ ನಾಲ್ಕು ಆರಾಧನೆಗಳು—ಜ್ಞಾನ, ದರ್ಶನ, ಚಾರಿತ್ರ, ತಪ—ಇಲ್ಲದುದರಿಂದ ಸಂಸಾರದಲ್ಲಿಯೇ ಸುತ್ತಬೇಕಾಗುವದು ॥ ೨ ॥ ಸಮ್ಯಕ್ತ್ವದ ಕಡೆಗೆ ಬೆನ್ನು ತಿರುಗಿಸಿದವನು ಮುಂದೆ ನಾಗಿ, ಸಾವಿರ ಇಲ್ಲವೆ ಕೋಟಿಗಟ್ಟಲೆ ವರ್ಷ ಉಗ್ರ ತಪಸ್ಸನ್ನು ಮಾಡಿದರೂ ಅವನಿಗೆ ರತ್ನತ್ರಯದ ಲಾಭವಾಗುವದಿಲ್ಲ ॥ ೩ ॥ ಸಮ್ಯಗ್ದರ್ಶನವಿಲ್ಲದವನ ಜ್ಞಾನವೂ ವಿಪರೀತವಾಗಿರುತ್ತದೆ ಅದರಿಂದ ಅದು ಭ್ರಷ್ಟವೇ ಆಗಿರುತ್ತದೆ. ಒಂದು ವೇಳೆ ಅವರ ಆಚರಣೆಯೂ ಕೆಟ್ಟಿದ್ದರೆ ಅವನು ಕೆಟ್ಟರೊಳಗೆ ಕೆಟ್ಟನೆಂದು ತಿಳಿಯಬೇಕು ಅಂಥವನು ಯಾರ ಸಂಗತಿಯನ್ನು ಮಾಡುವನೋ ಅವನ ಧರ್ಮವೂ ಕೂಡ ಇಲ್ಲದಂತಾಗಿ ಅವನೂ ಸಹ ನಾಶಹೊಂದುತ್ತಾನೆ ॥ ೪ ॥ ಗಿಡಕ್ಕೆ ಬೇರವೇ ಇಲ್ಲದಂತಾದರೆ ಅದಕ್ಕೆ ಟೊಂಗೆ, ಎಲೆ, ಹೂವು, ಹಣ್ಣು ಮೊದಲಾದವುಗಳ ಬೆಳವಣಿಗೆಯು ಎಲ್ಲಿಂದ ಆದೀತು? ಇದರಂತೆಯೇ ಸಮ್ಯಗ್ದರ್ಶನದಿಂದ ಚ್ಯುತನಾದವನು ಬೇರನ್ನೇ ಕತ್ತರಿಸಿಕೊಂಡಂತೆ ಇದೆ ಅಂದಮೇಲೆ ಅವನಿಗೆ ಜ್ಞಾನ-ಚಾರಿತ್ರಗಳ ಸಿದ್ಧಿಯು ಎಲ್ಲಿಯದು ಆದೀತು? ॥ ೫ ॥ ತಾವು ಸಮ್ಯಗ್ದರ್ಶನದಿಂದ ಭ್ರಷ್ಟರಿದ್ದು, ಇನ್ನೊಬ್ಬ ಸಮ್ಯಗ್ದರ್ಶನವುಳ್ಳವನಿಂದ ನಮಸ್ಕಾರಮಾಡಿಸಿಕೊಳ್ಳಬೇಕೆಂದು ಅಪೇಕ್ಷಿಸಿದರೆ ಅಂಥವರು ಪರಲೋಕದಲ್ಲಿ ಕುಂಟ, ಮೂಕ, ಕಿವುಡರಾಗಿ ಜನಿಸುತ್ತಾರೆ ಒಟ್ಟಾರೆ ತಾನು ಸ್ವತಃ ಸಮ್ಯಗ್ದರ್ಶನದಿಂದ ಚ್ಯುತನಾಗಿದ್ದು, ಇನ್ನೊಬ್ಬ ಸಮ್ಯಕ್ತ್ವಿ ಪುರುಷನಿಂದ ವಂದಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳವನು ಹಲವು ದಿನಗಳ ವರೆಗೆ ಏಕೇಂದ್ರಿಯ ಜೀವವಾಗಿ ಸಂಸಾರದಲ್ಲಿ ಸುತ್ತುತ್ತಲಿರುವನು ॥ ೬ ॥ ಕೆಲವು ಜನರು ನಾಚಿಕೆ, ಭಯ, ಡೌಲು, ದೊಡ್ಡಸ್ತನಗಳು ಬೆಳೆಯಬೇಕೆಂದು ಮಿಥ್ಯಾದೃಷ್ಟಿಗೆ ನಮಸ್ಕಾರ ಮಾಡುತ್ತಾರೆ ಅವರು ಮಿಥ್ಯಾತ್ವಕ್ಕೆ ಅನುಮೋದನ ಕೊಟ್ಟದ್ದರಿಂದ ರತ್ನತ್ರಯಗಳು ಅವರಿಗೆ ಲಭಿಸುವುದು ಕಠಿಣವಾಗುತ್ತದೆ ॥ ೭ ॥ ಸಮ್ಯಗ್ದೃಷ್ಟಿಪುರುಷನಿಗೆ ಜಿನೇಶ್ವರನ ವಚನವು ಒಂದೇ ಅಮೃತದಂಥ ಔಷಧವಿದೆ. ಅದು ವಿಷಯಸುಖವೆಂಬ ಆಮಾಂಶವನ್ನು ವಿರೇಚನಗೊಳಿಸುವಂಥದಿದೆ. ಇದೇ ಔಷಧದಿಂದ ಹುಟ್ಟು—ಮುಪ್ಪು—ಸಾವು ಮೊದಲಾದ ನೋವುಗಳೂ ಸಂಸಾರದೊಳಗಿನ ಎಲ್ಲ ದುಃಖಗಳೂ ನಾಶ ಹೊಂದುತ್ತವೆ ಇದರ ಭಾವವು ಇಷ್ಟೆ —ಸಮ್ಯಗ್ದೃಷ್ಟಿ ಪುರುಷನ ಮನಸ್ಸು ದೃಢವಾಗಿರುತ್ತದೆ. ಅವನು ಜನ್ಮ-ಜರಾ-ಮರಣಾದಿ ದುಃಖಗಳನ್ನು ಇಲ್ಲದಂತೆ ಮಾಡುವ ಶಕ್ತಿಯು ಜಿನೇಶ್ವರನ ವಾಣಿಯೊಂದರಲ್ಲಿಯೇ ಇರುತ್ತದೆಂದು ನಿಶ್ಚಿತವಾಗಿ ತಿಳಿದಿರುತ್ತಾನೆ ಈ ಜಿನವಾಣಿಯನ್ನುಳಿದು ಇನ್ನಾವುದೂ ಅನಂತಕಾಲದಿಂದ ಬೆನ್ನುಹತ್ತಿದ ಆಮಾಂಶರೂಪೀ ಸಂಗ್ರಹಣಿಯನ್ನೂ ನಾಶಗೊಳಿಸಿ, ಜ್ಞಾನ-ಸುಖ ಮೊದಲಾದ ಅವಯವಗಳಿಗೆ ಅಮೃತದಂತೆ ಪುಷ್ಟಿಯನ್ನೂ ಒದಗಿಸುವ ಶಕ್ತಿಯು ಇಲ್ಲ ॥ ೮ ॥ ಯಾರು ಎಲ್ಲ ವಸ್ತ್ರಗಳನ್ನು ತ್ಯಾಗಮಾಡಿ, ನಗ್ನರೂಪವನ್ನು ಧರಿಸಿರುವರೋ ಆ ಜಿನೇಶ್ವರನ ಒಂದು ಲಕ್ಷಣ (ಲಿಂಗ), ಮತ್ತು ಯಾರು ಒಂದು ಕೌಪೀನ (ಲಂಗೋಟಿ) ಮತ್ತು ಅಪೂರ್ಣ ವಸ್ತ್ರಗಳನ್ನು ಧರಿಸಿರುವರೋ ಆ ಉತ್ಕೃಷ್ಟ ಶ್ರಾವಕರ ಇನ್ನೊಂದು ಚಿಹ್ನ (ಲಿಂಗ), ಇದರಂತೆಯೇ ಅರ್ಜಿಕೆಯದು ಇನ್ನೊಂದು ಲಿಂಗವು ಈ ಮೂರನ್ನುಳಿದು ಬೇರೆ ಲಿಂಗವನ್ನು ಜಿನಮತದಲ್ಲಿ ಸ್ವೀಕರಿಸಿಲ್ಲ. ಬೇರೆ ಯಾವ ಗುರುತು ಇದ್ದರೂ ಸಹ ಅದು ಜಿನಧರ್ಮದಿಂದ ಬಾಹ್ಯವಾದದ್ದೆಂದು ತಿಳಿದು, ನಮಸ್ಕರಿಸಲಿಕ್ಕೆ ಯೋಗ್ಯವಾಗಿಲ್ಲ. ॥ ೯ ॥ ಜಿನೇಶ್ವರನ ಆಜ್ಞೆಯನ್ನು ಪಾಲಿಸುವ ಸಾಮರ್ಥ್ಯವುಳ್ಳವರು ವ್ರತ, ತಪಸ್ಸು ಮೊದಲಾದವುಗಳನ್ನು ಶಕ್ಯವಿದ್ದರೆ ಆಚರಿಸಬೇಕು ಯಾರಿಗೆ ಅವುಗಳನ್ನು ಮಾಡಲಿಕ್ಕೆ ಸಾಮರ್ಥ್ಯವಿಲ್ಲವೋ ಅವರು ಅವುಗಳ ಮೇಲೆ ಶ್ರದ್ಧೆಯನ್ನು ಇಡಬೇಕು ಶ್ರದ್ಧೆಯನ್ನು ಇಡುವ ಜೀವಕ್ಕೆ ಕೇವಲೀ ಜೀನೇಶ್ವರರು ಸಮ್ಯಕ್ತ್ವಿಗಳೆಂದು ಹೇಳಿದ್ದಾರೆ ॥ ೧೦ ॥ ಸಮ್ಯಗ್ದೃಷ್ಟಿ ಪುರುಷನು ರತ್ನತ್ರಯಗಳಿಲ್ಲದಂದ ಶರೀರ, ಜಾತಿ, ಕುಲ ಹಾಗೂ ಸಮ್ಯಗ್ದರ್ಶನ ರಹಿತ ಶ್ರಾವಕ ಮತ್ತು ಮುನಿ ಇವರಲ್ಲಿ ಯಾರನ್ನೂ ವಂದನೀಯರೆಂದು ತಿಳಿಯುವದಿಲ್ಲ. ರತ್ನತ್ರಯಗಳ ಪ್ರಭಾವದಿಂದ ದೇಹ, ಕುಲ, ಜಾತಿಗಳೆಲ್ಲ ಯೋಗ್ಯವಾಗುತ್ತವೆ

ಜಿನವಚನರಸಾಮೃತದೊಳ್ ಮನದೆರಕಂ ನಚ್ಚುಮೆಚ್ಚು ನೆಲಪೊಲಮೆಂಬೀ-
ವಿನುತಶ್ರದ್ಧಾನಾರ್ಥಮನೂನಸೌಖ್ಯಕ್ಕೆ ಬೀಜಮಂ ತಾನುಸಿರ್ಗುಂ ।
ಸಮ್ಯಕ್ತ್ವಮೇ ಪರಮಪದಂ ಸಮ್ಯಕ್ತ್ವಮೇ ಸಕಲಸುಖದ ನಿಲಯಂ ಮತ್ತಂ
ಸಮ್ಯಕ್ತ್ವಮೇ ಮುಕ್ತಿಪಥಂ ಸಮ್ಯಕ್ತ್ವದಿ ಕೂಡಿನೆಗಳ್ದ ತಪಮದು ಸಫಲಂ ॥

—ಮಾಘನಂದಿ–ಶಾಸ್ತ್ರಸಾರ ಸಮುಚ್ಚಯ

ಇನ್ನು ಮುಂದೆ ಜೀವಗಳ ಮೇಲೆ ಎಲ್ಲಕ್ಕೂ ಹೆಚ್ಚಿನ ಉಪಕಾರವನ್ನು ಯಾರು ಮಾಡುತ್ತಾರೆ? ಅದರಂತೆ ಅಪಕಾರವನ್ನು ಯಾರು ಮಾಡುತ್ತಾರೆ? ಇವುಗಳನ್ನು ವಿವರಿಸಲಿಕ್ಕೆ ಸೂತ್ರವನ್ನು ಹೇಳುತ್ತಾರೆ

**ಶ್ರೇಯಾಶ್ರೇಯದ ನಿಶ್ಚಿತ ನಿಯಮ—**

**ನ ಸಮ್ಯಕ್ತ್ವಸಮಂ ಕಿಂಚಿತ್ತ್ರೈಕಾಲ್ಯೇ ತ್ರಿಜಗತ್ಯಪಿ ।**
**ಶ್ರೇಯೋಽಶ್ರೇಯಶ್ಚ ಮಿಥ್ಯಾತ್ವಸಮಂ ನಾನ್ಯತ್ತನೂಭೃತಾಮ್ ॥ ೩೪ ॥** [1]

**ಅನ್ವಯಾರ್ಥ**—(ತ್ರೈಕಾಲ್ಯೇ) ಮೂರೂ ಕಾಲಗಳಲ್ಲಿ (ತ್ರಿಜಗತ್ಯಪಿ) ಮೂರು ಲೋಕಗಳಲ್ಲಿಯೂ ಕೂಡ (ತನುಭೃತಾಂ) ಜೀವಗಳಿಗೆ (ಸಮ್ಯಕ್ತ್ವಸಮಂ) ಸಮ್ಯಕ್ತ್ವದಂಥ (ಅನ್ಯತ್) ಎರಡನೆಯದು (ಕಿಂಚಿತ್) ಸ್ವಲ್ಪವೂ ಸಹ (ಶ್ರೇಯಃ ನ) ಶ್ರೇಯಸ್ಕರವು [ಉಪಕಾರವು] ಇಲ್ಲ (ಚ) ಮತ್ತು (ಮಿಥ್ಯಾತ್ವಸಮಂ) ಮಿಥ್ಯಾತ್ವಕ್ಕೆ ಸರಿಯಾದಂಥ (ಅಶ್ರೇಯ) ಹಾನಿಯನ್ನುಂಟುಮಾಡುವಂಥದೂ (ನ) ಇಲ್ಲ

**ಅರ್ಥ**—ಸರ್ವ ಪ್ರಾಣಿಗಳ ಹಿತವನ್ನು ಸಾಧಿಸುವಂಥ ಸಾಮರ್ಥ್ಯವು ಸಮ್ಯಕ್ತ್ವವನ್ನುಳಿದು ಮೂರು ಲೋಕದಲ್ಲಿಯೂ ಭೂತ-ಭವಿಷ್ಯ-ವರ್ತಮಾನ ಕಾಲಗಳಲ್ಲಿಯೂ ಇನ್ನಾವುದಕ್ಕೂ ಇಲ್ಲ. ಹಾಗೆಯೇ ಮಿಥ್ಯಾತ್ವದಂಥ ಅಕಲ್ಯಾಣಕಾರಿಯೂ ಇನ್ನೊಂದು ಪದಾರ್ಥವಿಲ್ಲ [ಇಲ್ಲಿ ಮೂರೂ ಲೋಕ ಮತ್ತು ಮೂರೂ ಕಾಲಗಳ ದೃಷ್ಟಿಯಿಂದ ಜೀವಗಳ ಹಿತಾಹಿತಗಳನ್ನು ವಿಚಾರಿಸಿ, ಸಮ್ಯಗ್ದರ್ಶನವೇ ಎಲ್ಲಕ್ಕೂ ಹೆಚ್ಚಿನ ಹಿತಕಾರಕವೆಂದು ಹೇಳಲಾಗಿದೆ. ಮಿಥ್ಯಾತ್ವವು ಎಲ್ಲಕ್ಕೂ ಹೆಚ್ಚಿಗೆ ಅಹಿತಕಾರಿಯೆಂದೂ ಪ್ರತಿಪಾದಿಸಿದೆ. ಇದರಿಂದ ಸಮ್ಯಗ್ದರ್ಶನದ ಶ್ರೇಷ್ಠತೆಯೂ ಮಹತ್ವವೂ ಇನ್ನಿಷ್ಟು ಸ್ಪಷ್ಟವಾಗುತ್ತದೆ ಸ. ಧ]

**ವಿಶೇಷಾರ್ಥ**–ಸಮ್ಯಕ್ತ್ವದ ಮಹಿಮೆ. ಅನಂತಕಾಲ ಉರುಳಿತು ಈ ವರ್ತಮಾನ ಕಾಲದೊಳಗಿನ ಒಂದು ಸಮಯ ಮತ್ತು ಮುಂದೆ ಬರುವ ಅನಂತಕಾಲ ಈ ಮೂರೂ ಕಾಲಗಳಲ್ಲಿ ಹಾಗೂ ಕೆಳಗಿನ ಲೋಕ, ಅನೇಕ ದ್ವೀಪ ಸಮುದ್ರಗಳಿಂದ ಕೂಡಿದ ಈ ಮಧ್ಯಲೋಕ, ಸ್ವರ್ಗವೇ ಮೊದಲಾದ ಮೇಲಿನ ಲೋಕಗಳು ಈ ಮೂರೂ ಲೋಕಗಳಲ್ಲಿ ಜೀವಗಳ ಮೇಲೆ ಸರ್ವೋತ್ಕೃಷ್ಟ ರೀತಿಯಲ್ಲಿ ಉಪಕಾರ ಮಾಡುವಂಥದು ಸಮ್ಯಕ್ತ್ವವಾಗಿದೆ. ಅದನ್ನು ಉಳಿದು ಬೇರೆ ಇನ್ನಾವುದೂ ಇಲ್ಲ, ಇರಲಿಕ್ಕೂ ಸಾಧ್ಯವಿಲ್ಲ ಸಮ್ಯಕ್ತ್ವಕ್ಕೆ ಸಮನಾದ ಉಪಕಾರವನ್ನು ಜೀವಿಗಳಿಗೆ ಮೂರು ಲೋಕದಲ್ಲಿರುವ, ಇದ್ದ, ಮುಂದೆ ಇರಬಹುದಾದ ಇಂದ್ರ, ಅಹಮಿಂದ್ರ, ಭುವನೇಂದ್ರ, ಚಕ್ರವರ್ತಿ, ನಾರಾಯಣ, ಬಲಭದ್ರ, ಸಾಕ್ಷಾತ್ ತೀರ್ಥಂಕರರೂ ಸಹ ಮಾಡಲಿಕ್ಕೆ ಸಮರ್ಥರಾಗಲಾರರು. ಅಂದಮೇಲೆ ಅಚೇತನಗಳಾದ ಮಣಿ, ಮಂತ್ರ, ಔಷಧ ಮೊದಲಾದ ದ್ರವ್ಯಗಳು ಏನನ್ನು ಮಾಡಿಯಾವು? ಇದೇ ಪ್ರಕಾರ ಜೀವಗಳಿಗೆ ಮಿಥ್ಯಾತ್ವವು ಮಾಡುವಂಥ ಅಪಕಾರವನ್ನು ಮೂರೂ ಕಾಲದಲ್ಲಿ ಮೂರೂ ಲೋಕದಲ್ಲಿ ಚೇತನಾಚೇತನ ಪದಾರ್ಥ-ಗಳಲ್ಲಿ ಯಾವುದರಿಂದಲೂ ಮಾಡಲಿಕ್ಕೆ ಸಾಧ್ಯವಿಲ್ಲ ಅಂಥ ಶಕ್ತಿಯುಳ್ಳ ಪದಾರ್ಥವು ಯಾವುದೂ ಇಲ್ಲ ಇದ್ದಿಲ್ಲ ಮುಂದೆ ಉತ್ಪನ್ನವಾಗುವುದೂ ಇಲ್ಲ. ಅದರಿಂದ ಮಿಥ್ಯಾತ್ವದ ತ್ಯಾಗವಾಗುವಂತೆಯೇ ದಿನಾಲು ನಾವು ಪ್ರಯತ್ನಿಸಬೇಕು ಸಂಸಾರದೊಳಗಿನ ಎಲ್ಲ ದುಃಖಗಳನ್ನು ಇಲ್ಲದಂತೆ ಮಾಡಿ, ಆತ್ಮಕಲ್ಯಾಣದ ಪರಮೋಚ್ಚ ಸ್ಥಿತಿಗೆ ಮುಟ್ಟಿಸುವಂಥ ಶಕ್ತಿಯು ಸಮ್ಯಕ್ತ್ವ ಒಂದರಲ್ಲಿಯೇ ಇದೆ. ಅದಕ್ಕಾಗಿ ಅದನ್ನು ಸಂಪಾದಿಸುವ ಉದ್ಯೋಗವನ್ನು ನಾವು ಮಾಡಬೇಕು.

ಉದಯಿಸಿದುದು ಪರಭವ್ಯನ ಹೃದಯದೊಳಘತಿಮಿರತರಣಿ ಸಕಲಾಭಿಮತ- ।
ಪ್ರದ ಚಿಂತಾಮಣಿತವಿಲಿಲ್ಲದ ಸಂವೇಗಾದಿ ಗುಣದ ಕಣಿ ಸಮ್ಯಕ್ತ್ವಂ ॥
ಕಿಡೆ ಸಮ್ಯಕ್ತ್ವಂ ಮಣ್ಗುಡನೊಡೆದಂದಂ ಚರಿತಮಳಿಯೆ ಹಾಟಕಕುಂಭಂ ।
ಪುಡಿಯಾದ ಭಂಗಿಯದರಿಂ ಕೆಡಿಸದೆ ದರ್ಶನಮಸೋವಿ ನಡೆವುದು ಭವ್ಯಂ ॥

ಶ್ರೀಮಾಘನಂದಿ—ಶಾಸ್ತ್ರಸಾರ ಸಮುಚ್ಚಯ ಟೀಕು–ಚರಣಾನುಯೋಗ.

---

1 ಆಯತಪರ್ಮನು ಹೇಳುವದು ಹೀಗೆ ತ್ರಿಲೋಕದೊಳಂ ತ್ರಿಕಾಲದೊಳಂ ಸಮ್ಯಕ್ತ್ವದಿಂ ಬಿಟ್ಟು ಹಿತಮಪ್ಪವಸ್ತು ಪೆರತಿಲ್ಲಂ

ಸಮ್ಯಗ್ದರ್ಶನದ ಪ್ರಭಾವ—

ಸಮ್ಯಗ್ದರ್ಶನಶುದ್ಧಾ ನಾರಕತಿರ್ಯಙ್ನಪುಂಸಕಸ್ತ್ರೀತ್ವಾನಿ ।
ದುಷ್ಕುಲವಿಕೃತಾಲ್ಪಾಯುರ್ದರಿದ್ರತಾಂ ಚ ವ್ರಜಂತಿ ನಾಪ್ಯವ್ರತಿಕಾಃ ॥ ೩೫ ॥ [1]

ಅನ್ವಯಾರ್ಥ—(ಸಮ್ಯಗ್ದರ್ಶನಶುದ್ಧಾ) ಶುದ್ಧವಾದ ಸಮ್ಯಗ್ದರ್ಶನವುಳ್ಳ ಜೀವವು (ಅವ್ರತಿಕಾಃ ಅಪಿ) ವ್ರತಿಕನಿರದಿದ್ದರೂ ಸಹ (ನಾರಕತಿರ್ಯಕ್-ನಪುಂಸಕ-ಸ್ತ್ರೀತ್ವಾನಿ) ನರಕ, ತಿರ್ಯಂಚ, ನಪುಂಸಕತ್ವ ಮತ್ತು ಸ್ತ್ರೀತ್ವ (ದುಷ್ಕುಲವಿಕೃತಾಲ್ಪಾಯುಃ ದರಿದ್ರತಾಂ ಚ) ನೀಚ ಕುಲದಲ್ಲಿ ಹುಟ್ಟುವುದು, ಅವಯವಗಳು ಕುರೂಪವಾಗಿರುವುದು, ಕಡಿಮೆ ಆಯುಷ್ಯವಿರುವುದು, ಬಡತನ ಇರುವುದು ಮೊದಲಾದವುಗಳು ಅವನಿಗೆ (ನ ವ್ರಜಂತಿ) ಉಂಟಾಗುವದಿಲ್ಲ.

ಅರ್ಥ—ಯಾರ ಸಮ್ಯಗ್ದರ್ಶನವು ಶುದ್ಧವಿರುವುದೋ ಅವರು ವ್ರತಗಳನ್ನು ಧರಿಸಿರದಿದ್ದರೂ ಸಹ ಅವರಿಗೆ ನರಕಗತಿ, ತಿರ್ಯಂಚಗತಿ, ನಪುಂಸಕತ್ವ, ಸ್ತ್ರೀತ್ವ, ಕೆಟ್ಟಕುಲ, ಕುರೂಪ, ಆಯುಷ್ಯದ ಕೊರತೆ ಮತ್ತು ಬಡತನಗಳು ಉಂಟಾಗುವದಿಲ್ಲ [ಇಲ್ಲಿಯ ವಿಷಯದ ಸಂಬಂಧವೂ ಕೇವಲ ಸಮ್ಯಗ್ದರ್ಶನದ ಮಹತ್ವವನ್ನು ಹೇಳುವಷ್ಟು ಮಾತ್ರ ಇಲ್ಲ, ಇದು ಜೈನ ಸೈದ್ಧಾಂತಿಕ ದೃಷ್ಟಿಯನ್ನೂ ಒಳಗೊಂಡಿದೆ. ಶ್ರೀ ಚಾಮುಂಡರಾಯನು ತನ್ನ "ಚಾರಿತ್ರಸಾರ"ದಲ್ಲಿ ರತ್ನಕರಂಡದ ಈ ಸೂತ್ರವನ್ನು ಉದ್ಧರಿಸುವಾಗ ಇಲ್ಲಿಯ ವಿಷಯದ ಸಂಬಂಧವು 'ಅಬದ್ಧಾಯುಷ್ಯ ವಿಷಯಿ' ಎಂದು ಸೂಚಿಸಿ, ಮುಂದೆ ವಿವರಿಸುತ್ತಾನೆ.[2] ಸಮ್ಯಗ್ದರ್ಶನದ ಉತ್ಪತ್ತಿಯ ಪೂರ್ವದಲ್ಲಿ ಇಲ್ಲವೆ ಅದರ ಸತ್ತೆಯು ಆರಂಭವಾಗುವ ಮೊದಲು ನರಕ, ತಿರ್ಯಂಚ ಈ ಆಯುಕರ್ಮಗಳು ಕಟ್ಟಿದ್ದರೆ ಅವುಗಳ ವಿಷಯದಲ್ಲಿ ಈ ಸೂತ್ರದ ಅರ್ಥವು ಅನ್ವಯಿಸುವದಿಲ್ಲ ಅಂಥ ಜೀವಗಳು ಮರಣಹೊಂದಿ, ನರಕ ತಿರ್ಯಾಂಚಗತಿಗಳನ್ನು ಹೊಂದಿಯೇ ತೀರುತ್ತವೆ ಇನ್ನು 'ಬದ್ಧಾಯುಷ್ಯ'ವಾದ ತರುವಾಯ ಸಮ್ಯಗ್ದರ್ಶನವು ಜನಿಸಿದ್ದರೆ ಅದರ ಪ್ರಭಾವದಿಂದ ಅವುಗಳ ಗತಿಗಳಲ್ಲಿಯೇ ಅವಶ್ಯ ಸುಧಾರಣೆಯಾದೀತು ಏಳನೆಯ ನರಕದಲ್ಲಿ ಜನ್ಮಿಸುವ ಜೀವವು ಮೊದಲನೆಯ ನರಕದಲ್ಲಿ ಹುಟ್ಟಬಹುದು ಆದರೆ ನರಕಾಯುವು ತಪ್ಪದು. ಯಾಕಂದರೆ ಯಾವದೇ ಪ್ರಕಾರದ ಆಯು ಕರ್ಮವು ಕಟ್ಟಿದ ಮೇಲೆ ಅದನ್ನು ಭೋಗಿಸದೆ ಬಿಡುಗಡೆಯನ್ನು ಹೊಂದದು ಅದು ಪರಸ್ಥಾನ-ಸಂಕ್ರಮಣವನ್ನೂ ಹೊಂದುವದಿಲ್ಲ ಸಮ್ಯಗ್ದರ್ಶನದಿಂದ ನರಕಾಯುವಿನಲ್ಲಿ ಹೇಗೆ ಸುಧಾರಣೆಯು ಆಗುವುದೋ ಹಾಗೆಯೇ ಸ್ಥಾವರ, ವಿಕಲತ್ರಯಾದಿ ರೂಪ ತಿರ್ಯಂಚಾಯುವಿನ ಬಂಧವುಳ್ಳ ಸ್ಥಾವರ, ವಿಕಲತ್ರಯ ಪರ್ಯಾಯಗಳನ್ನು ಧರಿಸದೆ ತಿರ್ಯಂಚಗಳಲ್ಲಿ ಸಂಜ್ಞೀ-ಪಂಚೇಂದ್ರಿಯ ಪುಲ್ಲಿಂಗ ಪರ್ಯಾಯವನ್ನು ಮಾತ್ರ ಧಾರಣ ಮಾಡುವಂಥವು ಆಗಬಹುದು ಇದೇ ಪ್ರಕಾರ ಪೂರ್ವಬದ್ಧ ದೇವ, ಮನುಷ್ಯ ಆಯುಗಳ ಪರ್ಯಾಯಗಳಲ್ಲಿಯೂ ಸಹ ಸಮ್ಯಗ್ದರ್ಶನದ ಪ್ರಭಾವದಿಂದ ಹೆಚ್ಚಿನ ಸಂಕ್ರಮಣವು ಸಾಧಿಸಬಹುದು. ಸ ಧ]

ವಿಶೇಷಾರ್ಥ—ಅವ್ರತ ಸಮ್ಯಗ್ದೃಷ್ಟಿ ಜೀವಿಗೆ ಮುಂದೆ ಕಾಣಿಸಿದ ನಲವತ್ತೊಂದು ಕರ್ಮ ಪ್ರಕೃತಿಗಳು ಕಟ್ಟುವದಿಲ್ಲವೆಂಬ ನಿಯಮವು ಇದೆ. ಆ ಕರ್ಮ ಪ್ರಕೃತಿಗಳು—(೧) ಮಿಥ್ಯಾತ್ವ, (೨) ಹುಂಡಕ ಸಂಸ್ಥಾನ, (೩) ನಪುಂಸಕ ವೇದ, (೪) ಅಸಂಪ್ರಾಪ್ತಾಸೃಪಾಟಿಕಾ ಸಂಹನನ, (೫) ಏಕೇಂದ್ರಿಯ, (೬) ಸ್ಥಾವರ, (೭) ಆತಾಪ, (೮) ಸೂಕ್ಷ್ಮತ್ವ, (೯) ಅಪರ್ಯಾಪ್ತ, (೧೦) ದ್ವೀಂದ್ರಿಯ, (೧೧) ತ್ರೀಂದ್ರಿಯ, (೧೨) ಚತುರಿಂದ್ರಿಯ,

---

[1] ಆಯುತಪವರ್ಮನು ಹೇಳುವದು ಹೀಗೆ. ಇಂತಪ್ಪ ಸಮ್ಯಕ್ತ್ವಮನೊಡೆಯುವರ್ಗಳು ವ್ರತಹೀನರಾಗದೆ ನಡೆದಿಂತಪ್ಪಯೆಡೆಗಳೊಳು ಪುಟ್ಟರೆಂದೊಡೆ—
ಕಂದ ॥ ನಾರಕ ತಿರ್ಯಗ್ಯೋನಕ ನಾರೀತ್ವಂ ವಿಕೃತ ರೂಪುಮಲ್ಪಾಯುಷ್ಯಂ ।
ದಾರಿದ್ರ್ಯಂ ದುಷ್ಕುಲ ಮವಿಚಾರ ಕುದೇಶಂಗಳಲ್ಲಿ ಪುಟ್ಟುವವರಲ್ಲರ್ ॥
ವಚನ—ಅಂತು ಶರ್ಕರಾ ಪ್ರಭಾದಿ ಸಪ್ತ ನರಕಂಗಳೊಳುಮೇಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯಗಳೊಳಂ, ನಪುಂಸಕವೇದದೊಳಂ, ಎಲ್ಲಾ ಸ್ತ್ರೀತ್ವದೊಳಂ, ಮೂಕಾಂಧಬಧಿರ ಕುಬ್ಜ ಪಂಗು ಪುಟ್ಟತಿ ಕುತ್ಸಿತದೊಳಮಪ್ಪಾಯುಷ್ಯದೊಳಂ, ಬಡತನದೊಳಂ ಚಾಂಡಾಲ ಶುರುಕಾದಿ ದುಷ್ಕುಲಂಗಳೊಳಂ ಮ್ಲೇಚ್ಛಖಂಡಾದಿ ಕುಬಾದಿ ಪರವಿದೇಶಂಗಳೊಳಂ, ಷಣ್ಣವತಿ ದ್ವೀಪಾಂತರ ವರ್ತಿಗಳಪ್ಪ ಏಕಪಾದ ಲಂಬಕರ್ಣ ಶ್ವಾನಮುಖ ಗವಾಸ್ಯಾದಿ ಕುಮಾನುಷತ್ವದೊಳಂ . . .
[2] ದುರ್ಗತಾವಾಯುಷೋ ಬಂಧೇ ಸಮ್ಯಕ್ತ್ವಂ ಯಸ್ಯ ಜಾಯತೇ ।
ಗತಿಚ್ಛೇದೋ ನ ತಸ್ಯಾಸ್ತಿ ತದಾಪ್ಯಲ್ಪತರಾ ಸ್ಥಿತಿಃ ॥ —ಚಾರಿತ್ರಸಾರ

(೧೩) ಸಾಧಾರಣ, (೧೪) ನರಕಗತಿ, (೧೫) ನರಕಗತ್ಯಾನುಪೂರ್ವಿ, (೧೬) ನರಕಾಯು ಈ ಹದಿನಾರು ಪ್ರಕೃತಿಗಳ ಬಂಧವು ಮಿಥ್ಯಾತ್ವದ ಪರಿಣಾಮದಿಂದಲೇ ಆಗುತ್ತದೆ. ಅನಂತಾನುಬಂಧಿಯ ಪ್ರಭಾವದಿಂದ ಕಟ್ಟುವ ಇಪ್ಪತ್ತೈದು ಕರ್ಮಪ್ರಕೃತಿಗಳು ಇರುತ್ತವೆ ಅವು ಹೀಗಿವೆ—(೧) ಅನಂತಾನು ಬಂಧಿ ಕ್ರೋಧ, (೨) ಮಾನ, (೩) ಮಾಯಾ, (೪) ಲೋಭ, (೫) ಸ್ತ್ಯಾನಗೃದ್ಧಿ, (೬) ನಿದ್ರಾನಿದ್ರಾ, (೭) ಪ್ರಚಲಾಪ್ರಚಲಾ, (೮) ದುರ್ಭಗ, (೯) ದುಃಸ್ವರ, (೧೦) ಅನಾದೇಯ, (೧೧) ನ್ಯಗ್ರೋಧ ಪರಿಮಂಡಲ ಸಂಸ್ಥಾನ, (೧೨) ಸ್ವಾತಿಸಂಸ್ಥಾನ, (೧೩) ಕುಬ್ಜಕ ಸಂಸ್ಥಾನ, (೧೪) ವಾಮನ ಸಂಸ್ಥಾನ, (೧೫) ವಜ್ರನಾರಾಚ ಸಂಹನನ, (೧೬) ನಾರಾಚ ಸಂಹನನ, (೧೭) ಅರ್ಧನಾರಾಚ ಸಂಹನನ, (೧೮) ಕೀಲಕ ಸಂಹನನ, (೧೯) ಅಪ್ರಶಸ್ತವಿಹಾಯೋಗತಿ, (೨೦) ಸ್ತ್ರೀಪರ್ಯಾಯ, (೨೧) ನೀಚಗೋತ್ರ, (೨೨) ತಿರ್ಯಗ್ಗತಿ, (೨೩) ತಿರ್ಯಗ್ಗತ್ಯಾನುಪೂರ್ವಿ, (೨೪) ತಿರ್ಯಂಚಾಯು, (೨೫) ಉದ್ಯೋತ ಈ ಇಪ್ಪತ್ತೈದು ಹಾಗೂ ಮೇಲೆ ಹೇಳಿದ ಹದಿನಾರು ಕೂಡಿ ನಲವತ್ತೊಂದು ಕರ್ಮಪ್ರಕೃಗಳು ಮಿಥ್ಯಾದೃಷ್ಟಿ ಜೀವಕ್ಕೇನೇ ಕಟ್ಟುತ್ತವೆ ಅವ್ರತ ಸಮ್ಯಗ್ದೃಷ್ಟಿ ಪುರುಷನಿಗೆ ಮಿಥ್ಯಾತ್ವ ಹಾಗೂ ಅನಂತಾನುಬಂಧೀ ಇವು ಇಲ್ಲದೆ ಇರುವುದರಿಂದ ಈ ನಲವತ್ತೊಂದು ಪ್ರಕೃತಿಗಳು ಹೊಸದಾಗಿ ಕಟ್ಟುವದಿಲ್ಲ ಸಮ್ಯಕ್ತ್ವದ ಪ್ರಭಾವದಿಂದ ಮಿಥ್ಯಾತ್ವ ಅವಸ್ಥೆಯಲ್ಲಿ ಕಟ್ಟಿ ಹೋದ ಪ್ರಕೃತಿಗಳ ನಾಶವಾಗುತ್ತದೆ. ಆದರೆ ಆಯುರ್ ಬಂಧವು ನಾಶವಾಗುವದಿಲ್ಲ. ಆದರೂ ಸಮ್ಯಕ್ತ್ವದ ಪ್ರಭಾವವು ಬಹಳವಾಗಿದೆ ಮೊದಲು ಏಳನೆಯ ನರಕದ ಆಯುವು ಕಟ್ಟಿದ್ದರೂ ಆ ಮೇಲೆ ಸಮ್ಯಕ್ತ್ವವು ಉಂಟಾದರೆ ಅವನು ಮೊದಲನೆಯ ನರಕದಲ್ಲಿಯೇ ಹುಟ್ಟುತ್ತಾನೆ ಎರಡನೆಯ ಮೂರನೆಯ ನರಕಗಳಿಗೂ ಸಹ ಹೋಗುವದಿಲ್ಲ. ತಿರ್ಯಂಚ ಯೋನಿಯಲ್ಲಿ ನಿಗೋದಿ ಏಕೇಂದ್ರಿಯ ಜೀವದ ಆಯುಷ್ಯವು ಕಟ್ಟಿ ಹೋಗಿದ್ದರೆ ಸಮ್ಯಕ್ತ್ವದ ಪ್ರಭಾವದಿಂದ ಉತ್ತಮ ಭೋಗಭೂಮಿಯಲ್ಲಿ ಪಂಚೇಂದ್ರಿಯಗಳುಳ್ಳ ತಿರ್ಯಂಚಯೋನಿಯಲ್ಲಿ ಜನ್ಮಧರಿಸಬಹುದು ಅದು ಕರ್ಮಭೂಮಿಯೊಳಗಿನ ಏಕೇಂದ್ರಿಯವೇ ಮೊದಲಾದ ಜೀವವಾಗಲಿಕ್ಕಿಲ್ಲ. ಮೊದಲೇ ಲಬ್ಧ್ಯಪರ್ಯಾಪ್ತಕ ಮನುಷ್ಯನ ಆಯುಷ್ಯವು ಕಟ್ಟಿಹೋಗಿದ್ದರೆ ಸಮ್ಯಕ್ತ್ವದ ಪ್ರಭಾವದಿಂದ ಉತ್ತಮ ಭೋಗ-ಭೂಮಿಯಲ್ಲಿ ಮಾನವನಾಗಿ ಹುಟ್ಟಿಯಾನು ಮೊದಲು ವ್ಯಂತರಾದಿ ದೇವಾಯುಷ್ಯವು ಬಂಧಿಸಿದ್ದರೆ ಸಮ್ಯಕ್ತ್ವದ ಮಹಿಮೆಯಿಂದ ಮಹರ್ದ್ಧಿಕದೇವನಾಗಿ ಜನ್ಮವೆತ್ತಬಹುದು ಉಳಿದ ಭವನತ್ರಿಕ ದೇವರಲ್ಲಿ ಅಥವಾ ನಾಲ್ಕು ದೇವರ ಸ್ತ್ರೀಪರ್ಯಾಯದಲ್ಲಿ, ಎಲ್ಲ ಮಾನವ ಸ್ತ್ರೀಯರಲ್ಲಿ, ಪಶುವಿನ ಸ್ತ್ರೀಜಾತಿಯಲ್ಲಿ ಅವನು ಹುಟ್ಟಲಾರನು ಹಾಗೆಯೇ ಅವನು ನೀಚ ಕುಲದಲ್ಲಿಯೂ ದರಿದ್ರ, ಅಲ್ಪಾಯುಷಿಯಾಗಿಯೂ ಹುಟ್ಟಲಾರನು ಹೀಗೆ ಸಮ್ಯಕ್ತ್ವದ ಪ್ರಭಾವವು ಇದೆ

ವಿದಿತಂ ದರ್ಶನಮುಳ್ಳವಂಗೆ ಭವನಜ್ಯೋತಿಷ್ಕರಾವ್ಯಂತರಾ-
ಸ್ಪದಮಲ್ಪಾಯುಮನಂಗತಾಪಮಬಲತ್ವಂ ನಿರ್ಧನತ್ವಂ ದುರಾ- ।
ಸ್ಪದಭೋಗಾವನಿಜತ್ವಮುಗ್ರ ನರಕಂ ತಾವಾಗವೆಂದೆಂದು ಲೋ-
ಕದೊಳಾರ್ಬಣ್ಣಿಪರಣ್ಣ ದರ್ಶನದೊಳಾದೈಶ್ವರ್ಯಮಂ ಸ್ಥೈರ್ಯಮಂ ॥

—ನಯಸೇನ–ಧರ್ಮಾಮೃತ ೧–೩೧

ಸಮ್ಯಗ್ದರ್ಶನದ ಫಲ—

**ಓಜಸ್ತೇಜೋವಿದ್ಯಾವೀರ್ಯಯಶೋವೃದ್ಧಿವಿಜಯವಿಭವಸನಾಥಾಃ ।**
**ಮಹಾಕುಲಾ ಮಹಾರ್ಥಾ ಮಾನವತಿಲಕಾ ಭವಂತಿ ದರ್ಶನಪೂತಾಃ ॥ ೩೬ ॥**

ಅನ್ವಯಾರ್ಥ—(ದರ್ಶನಪೂತಾಃ) ಸಮ್ಯಗ್ದರ್ಶನದಿಂದ ಪವಿತ್ರವಾದಂತಹ ಜೀವನು (ಓಜಸ್ತೇ-ಜೋವಿದ್ಯಾವೀರ್ಯಯಶೋವೃದ್ಧಿವಿಜಯವಿಭವಸನಾಥಾಃ) ಉತ್ಸಾಹ, ಕಾಂತಿ, ವಿದ್ಯೆ, ಶಕ್ತಿ, ಕೀರ್ತಿ, ಅಭ್ಯುದಯ, ವಿಜಯ ಮತ್ತು ವೈಭವ ಇವುಗಳಿಂದ ಕೂಡಿದ (ಮಹಾಕುಲಾಃ) ಉಚ್ಚಕುಲದಲ್ಲಿ ಹುಟ್ಟುವ (ಮಹಾರ್ಥಾಃ) ದೊಡ್ಡ ಪುರುಷಾರ್ಥವನ್ನು ಸಾಧಿಸುವ (ಮಾನವತಿಲಕಾಃ) ಮನುಷ್ಯರಲ್ಲಿ ಶ್ರೇಷ್ಠನು (ಭವಂತಿ) ಆಗುತ್ತಾನೆ

---

1 ಆಯತವರ್ಮನು ಹೇಳುವದು ಹೀಗೆ
ಕಂದ ॥ ಭೂನುತ ಸಮ್ಯಕ್ತ್ವಂ ತಾಂ ಮಾನವ ತಿಳಕಂಗೆ ಸಯ್ಪುಸಿಂ ಸಮನಿಸಿದಂ- ।
ದೀನೆಗಳ್ದ ಸಪ್ತಪರಮಸ್ಥಾನಂಗಳನೆಯ್ದುಗುಂ ಮನೋಮುದದಿಂದಂ ॥

ಅರ್ಥ—ಸಮ್ಯಗ್ದರ್ಶನದಿಂದ ಪವಿತ್ರವಾದ ಜೀವವು ಪರಾಕ್ರಮಿ, ತೇಜಸ್ವಿ, ವಿದ್ವಾಂಸ, ಶಕ್ತಿವಂತ, ಕೀರ್ತಿವಂತ, ವೈಭವದ ಏಳ್ಗೆಯುಳ್ಳ, ಗೆಲುವನ್ನು ಸಂಪಾದಿಸುವ, ದೊಡ್ಡ ಕುಲದಲ್ಲಿ ಹುಟ್ಟುವ, ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸುವ ಮತ್ತು ಎಲ್ಲ ಮನುಷ್ಯರಲ್ಲಿ ಶ್ರೇಷ್ಠ ರತ್ನದಂತೆ ಶೋಭಿಸುವಂಥದ್ದು ಆಗುತ್ತದೆ. [ಸಮ್ಯಗ್ದರ್ಶನದಿಂದ ವ್ಯಕ್ತಿಯ ಕೆಟ್ಟ ಕುಲ, ಬಡತನಗಳಷ್ಟೇ–ಹಿಂದಿನ ಸೂತ್ರತದಲ್ಲಿ ಹೇಳಿದ–ಹೋಗುವದಿಲ್ಲ. ಅವನು ಓಜಸ್ತೇಜಾದಿಗುಣಗಳಿಂದ ತುಂಬಿದ ಆದರ್ಶಜೀವವೇ ಆಗುತ್ತಾನೆ. ಆದರೆ ಇದು 'ಅಬದ್ಧಾಯುಷ್ಕ'ರಿಗೆ ಮಾತ್ರ ಸಾಧ್ಯವಿದೆ ಮುಂದಿನ ಐದು ಸೂತ್ರಗಳಲ್ಲಿ ಬರುವ ಸಮ್ಯಕ್ತ್ವದ ಫಲಗಳೆಲ್ಲ 'ಅಬದ್ಧಾಯುಷ್ಕ'ರಿಗೇನೇ ಸಂಭವಿಸುತ್ತವೆ. ಸ. ಧ ]

ಸಮುರಿತ ಸರ್ವಲಕ್ಷಣಮೊಡಂಬಡೆ ಪೂರ್ಣಸುಧಾಂಶುಶೋಭೆಯಂ
ಸಮಱೆ ಶರೀರಕಾಂತಿ ಪೊರೆವೆತ್ತಮಳ್ವಾಸಿನ ಪಕ್ಕದಾಣದಿಂ ।
ಸಮನಿಸಿ ದಿವ್ಯರಾಮ ಮಣಿಭೂಷಣ ವಸ್ತ್ರಲೇಪನಾದಿ ತ-
ಳ್ತಮರ್ದಹಮಿಂದ್ರಣದ . . . . . ಪುಣ್ಯಮದೇನಗಣ್ಯಮೋ ॥

—ಮಧುರಕವಿ–ಧರ್ಮನಾಥಪುರಾಣ ೫–೧೩೭.

ದೇವ ವೈಭವ ಪ್ರಾಪ್ತಿ—

ಅಷ್ಟಗುಣಪುಷ್ಟಿತುಷ್ಟಾ ದೃಷ್ಟಿವಿಶಿಷ್ಟಾಃ ಪ್ರಕೃಷ್ಟಶೋಭಾಜುಷ್ಟಾ ।
ಅಮರಾಪ್ಸರಸಾಂ ಪರಿಷದಿ ಚಿರಂ ರಮಂತೇ ಜಿನೇಂದ್ರಭಕ್ತಾಃ ಸ್ವರ್ಗೇ ॥ ೩೭ ॥ [1]

ಅನ್ವಯಾರ್ಥ—(ದೃಷ್ಟಿವಿಶಿಷ್ಟಾಃ) ಸಮ್ಯಗ್ದರ್ಶನವೆಂಬ ವಿಶಿಷ್ಟದೃಷ್ಟಿಯುಳ್ಳವನು (ಜಿನೇಂದ್ರಭಕ್ತಾಃ) ಜಿನೇಶ್ವರನ ಭಕ್ತನಾದವನು (ಅಷ್ಟಗುಣಪುಷ್ಟಿತುಷ್ಟಾಃ) ಅಣಿಮಾ, ಮಹಿಮಾ ಮೊದಲಾದ ಎಂಟು ಗುಣಗಳ ಹಾಗೂ ಅವಯವಗಳ ಪರಿಪೂರ್ಣತೆಯಿಂದ ಸಂತುಷ್ಟನಾದವನು (ಪ್ರಕೃಷ್ಟಶೋಭಾಜುಷ್ಟಾ) ಅತ್ಯುತ್ಕೃಷ್ಟ ಶೋಭೆಯಿಂದ ಕೂಡಿದವನು ಆಗಿ, (ಅಮರಾಪ್ಸರಸಾಂ) ದೇವ–ದೇವಾಂಗನೆಯರ (ಪರಿಷದಿ) ಸಭೆಯಲ್ಲಿ (ಚಿರಂ) ಯಾವಾಗಲೂ (ರಮಂತೆ) ಕ್ರೀಡೆಮಾಡುತ್ತಾನೆ

ಅರ್ಥ—ಸಮ್ಯಕ್ತ್ವದಿಂದ ಕೂಡಿದ ಜಿನೇಂದ್ರಭಕ್ತನು ಸ್ವರ್ಗದಲ್ಲಿ ಹುಟ್ಟಿ ದೇವ–ದೇವಾಂಗನೆಯರ ಸಭೆಯಲ್ಲಿ ಯಾವಾಗಲೂ ಕ್ರೀಡೆಯನ್ನು ಮಾಡುತ್ತಾ ಇರುವನು. ಅವನಿಗೆ ಎಂಟು ಋದ್ಧಿಗಳೂ, ಪುಷ್ಟವೂ ನಿರೋಗಿಯೂ ಆದ ಶರೀರವೂ ಲಭಿಸಿರುವುದರಿಂದ ಬಹುಕಾಲದ ವರೆಗೆ ಆನಂದದಿಂದ ಇರುತ್ತಾನೆ. ಅವನಿಗೆ ಅಣಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಗರಿಮಾ, ಲಘಿಮಾ, ಈಶತ್ವ, ವಶಿತ್ವ—ಈ ಎಂಟು ಗುಣಗಳು ಪ್ರಾಪ್ತವಾಗಿರುತ್ತವೆ. ಅವನ ಶರೀರ ಮತ್ತು ಅವಯವಗಳು ಅತ್ಯಂತ ಸುಂದರವಿರುತ್ತವೆ. ಸದಾ ಪುಷ್ಟವೂ ಆಗಿರುತ್ತವೆ [ಜಿನೇಂದ್ರಭಕ್ತನೂ

[1] ಆಯತವರ್ಮನ ವಚನ ಈ ಪ್ರಕಾರ . . ದೇಶ ಕುಲ ಜಾತಿ ಶುದ್ಧತ್ವದಿಂ ಕುಲದೀಪಕನೆನಿಸಿ, ಸದ್ಗೃಷ್ಟಿಗಳ್ಗೆ ಪುಟ್ಟು ವುದುಂ ಸಜ್ಜಾತಿತ್ವಂ ಕ್ರಮದಿಂ ವೃದ್ಧಿಗೆ ಸಂದು . ಬಾಳ್ವುದು ಸದ್ಗೃಹಸ್ಥತ್ವಂ, ಸದ್ಗೃಹಸ್ಥತ್ವಕ್ಕೆ ಪೇಸಿ ಸಂಸಾರ ಶರೀರ ಭೋಗ ನಿರ್ವೇಗ ಪರಾಯಣನಾಗಿ ತನ್ನ ಸಂತತಿಗೆ ಸಕಲ ದತ್ತಿಯನಿತ್ತು, ತನ್ನ ಪದವಿಯೊಳ್ನಿರಿಸಿ ದಿವ್ಯ ತಪೋಧನರ ಪಾದಮೂಲ-ದೊಳು ಜಾತರೂಪಮಂ ತಾಳ್ದಿ ಬಾಹ್ಯಾಭ್ಯಂತರಮಪ್ಪುತ್ಕೃಷ್ಟದೊಳ್ನಿಗಳ್ದೇಕಾದಶಾಂಗಧಾರಿಯಾಗಿ ಷೋಡಶ ಭಾವನೆಗಳಂ ಭಾವಿಸಿ ತೀರ್ಥಂಕರ ಪುಣ್ಯನಾಮಮಂ ಕಟ್ಟಿ ಬುದ್ಧಿ ಋದ್ಧಿ, ತಪೋ ಋದ್ಧಿ, ವೈಕುರ್ವಣ ಋದ್ಧಿ, ಔಷಧಿ ಋದ್ಧಿ, ರಸ ಋದ್ಧಿ, ಬಲ ಋದ್ಧಿ, ಅಕ್ಷೀಣ ಋದ್ಧಿಯೆಂಬ ಸಪ್ತ ಋದ್ಧಿಗಳೊಳು ನೆಗಳ್ದು ದೀಕ್ಷೆ ಶಿಕ್ಷೆ ಗಣ ಪೋಷಣೆ ಆತ್ಮ ಸಂಸ್ಕಾರ ಸಲ್ಲೇಖನೆಯೆಂಬಿವರಿಂ ಕಾಲಮಂ ಕಳೆಸಿಯುತ್ತಮಾರ್ಥ ಕಾಲದೊಳು ಚತುರ್ವಿದಾರಾಧನಾ ಪುರಸ್ಸರನಾಗಿ ಸಮಾಧಿಯಿಂ ಪ್ರಾಣಪರಿತ್ಯಾಗಂಗೆಯ್ದುದು ಪ್ರವ್ರಜ್ಯತ್ವಂ ತತ್ಫಲದೊಳು ಪುಟ್ಟಿ ನಿಜಾಂಬರ ಭೂಷಣಮಾಲ್ಯಗಳೆಸೆಯೆ ರೋಚಿಸುವ ದಿವ್ಯಶರೀರಮನೊಡೆಯನು ಮಸೇಕ ರತ್ನಾಕರೋಪಮ ಪ್ರಮಿತ ಜೀವನುಮಾಗೆ ಮನಸಾಪ್ಯತಾಹಾರನುಮಾಗಿ ಶುಭಲಕ್ಷಣಲಕ್ಷಿತನುಮವಧಿಜ್ಞಾನಿಯು ಮಣಿಮಾ, ಗರಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವವೆಂಬಷ್ಟಗುಣ ಮಣಿಭೂಷಿತನು ಮಾಗಿ ಪ್ರತೀಂದ್ರ ಸಾಮಾನಿಕತ್ರಯಸ್ತ್ರಿಂಶ ಪಾರಿಷದಾತ್ಮರಕ್ಷಲೋಕ ಪಾಲಾನೀಕ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಕರೆಂಬ ಪತ್ತು ತೆರದ ದೇವರ್ಕಳು ತನ್ನ ಬಳೆಸಿಯೋಲಯಿಸುತ್ತಿರೆ ದೇವಲೋಕದೊಳ್ತನ್ನ ಮಾತೆ ಮಾತಾಗಿಪ್ಪುದದೆ ಐಂದ್ರತ್ವಂ.

ಸಮ್ಯಗ್ದೃಷ್ಟಿಯೂ ಆದ ಜೀವವು ಮರಣಹೊಂದಿ ಸ್ವರ್ಗದಲ್ಲಿ ಶ್ರೇಷ್ಠ ದೇವನಾಗಿಯೇ ಹುಟ್ಟುವದು. ಅವನು ಭವನತ್ರಿಕದಲ್ಲಿ—ಭವನವಾಸಿ, ವ್ಯಂತರ, ಜ್ಯೋತಿಷ್ಕ—ಜನ್ಮಿಸುವದಿಲ್ಲ. ದೇವೇಂದ್ರನ ಪದವನ್ನೂ ಸಹ ಅವನು ಪಡೆಯುವನು. ಅದರಿಂದ ವಿಶಿಷ್ಟ ಶಕ್ತಿಗಳನ್ನು ಪಡೆದು, ಸದಾ ಸಂತುಷ್ಟನಾಗಿರುವನು ಸ. ಧ ]

ವಿಶೇಷಾರ್ಥ—ಅವ್ರತ ಸಮ್ಯಗ್ದೃಷ್ಟಿಯು ಸ್ವರ್ಗದಲ್ಲಿ ದೇವನಾಗುತ್ತಾನೆ ಅವನು ಉಳಿದ ಮಿಥ್ಯಾತ್ವೀ ದೇವರಂತೆ ಪುಣ್ಯಹೀನನು ಇರುವದಿಲ್ಲ ಅವನು ಇಂದ್ರನಂತೆ ವೈಭವ, ಕಾಂತಿ, ಜ್ಞಾನ ಮತ್ತು ಸುಖ ಭೋಗಿಸುವಂಥ ಮಹರ್ದ್ಧಿಕ, ಸಾಮಾನಿಕ, ತ್ರಯಸ್ತ್ರಿಂಶ ದೇವನಾಗುತ್ತಾನೆ ಇಲ್ಲವಾದರೆ ಲೋಕಪಾಲ ದೇವರಲ್ಲಿ ಹುಟ್ಟುತ್ತಾನೆ. ಅನೇಕ ದೇವರಿಗೆ ಅಣಿಮಾ, ಮಹಿಮಾದಿ ಋದ್ಧಿಗಳೂ, ಶರೀರದ ಕಾಂತಿಯೂ, ಆಭರಣ, ವಿಮಾನ, ವಿಕ್ರಿಯಾಗಳು ಪ್ರಾಪ್ತವಾಗಲಾರವು ಇಂಥ ಉತ್ಕೃಷ್ಟ ವಿಭೂತಿಗಳು ಸಮ್ಯಕ್ತ್ವವುಳ್ಳ ದೇವನಿಗೇನೇ ಅಲ್ಲಿ ಉತ್ಪನ್ನವಾಗುತ್ತವೆ. ಅವನು ಅಸಂಖ್ಯಾತ ಕಾಲದವರೆಗೆ ಕೋಟ್ಯಾವಧಿ ಅಪ್ಸರೆಯರ ಸಭೆಯಲ್ಲಿ ಕ್ರೀಡಿಸುತ್ತ ತನ್ನ ಕಾಲವನ್ನು ಆನಂದದಲ್ಲಿ ಕಳೆಯುತ್ತಾನೆ

ನರರೊಳ್ಪುಟ್ಟಿ ನರೇಂದ್ರನಾದ ದಿನದೊಳ್ಸದ್ಧರ್ಮಮಂ ನನ್ಮುನೀ-
ಶ್ವರರಂ ಭವ್ಯರನೊಲ್ದು ಮನ್ನಿಸಿಯನಾಥರ್ಗಾಶ್ರಿತರ್ಗೀವುತಂ ।
ಪರಿವಾರ ಪ್ರಜೆಗಳ್ಗೆ ತಾಯ ತೆರದಿಂದೋವುತ್ತಮಿರ್ಪಂ ಧರಾ-
ವರನಿಂದಾ ಬರ್ದಿಲಕ್ಕೆ ನಾಳಿನವನ್ಕೆ ರತ್ನಾಕರಾಧೀಶ್ವರಾ ॥

—ರತ್ನಾಕರ—ರತ್ನಾಕರ ಶತಕ–೮೩

ಸ್ವರ್ಗದಲ್ಲಿ ಬಹುಕಾಲದ ವರೆಗೆ ಇಂದ್ರಿಯಜನಿತ ಸುಖಗಳನ್ನು ಭೋಗಿಸಿದ ತರುವಾಯ ಅವನು ಮನುಷ್ಯಲೋಕದಲ್ಲಿ ಹುಟ್ಟಿದಾಗ ಹೇಗಿರುತ್ತಾನೆಂದು ಹೇಳಲಿಕ್ಕೆ ಸೂತ್ರ ರಚಿಸುತ್ತಾರೆ

ಸಮ್ಯಗ್ದೃಷ್ಟಿಯು ಚಕ್ರವರ್ತಿಯಾಗುವನು—

**ನವನಿಧಿಸಪ್ತದ್ವಯರತ್ನಾಧೀಶಾಃ ಸರ್ವಭೂಮಿಪತಯಶ್ಚಕ್ರಮ್ ।**
**ವರ್ತಯಿತುಂ ಪ್ರಭವಂತಿ ಸ್ಪಷ್ಟದೃಶಃ ಕ್ಷತ್ರಮೌಲಿಶೇಖರಚರಣಾಃ ॥ ೩೮ ॥** [1]

**ಅನ್ವಯಾರ್ಥ**—(ಸ್ಪಷ್ಟದೃಶಾಃ) ನಿರ್ಮಲ—ಸ್ಪಷ್ಟ—ಸಮ್ಯಕ್ತ್ವವುಳ್ಳ ಜೀವನು (ನವನಿಧಿ) ಒಂಬತ್ತು ನಿಧಿಗಳು (ಸಪ್ತದ್ವಯ ರತ್ನಾಧೀಶಾಃ) ಹದಿನಾಲ್ಕು ರತ್ನಗಳ ಅಧಿಪತಿಯು (ಸರ್ವಭೂಮಿಪತಯಃ) ಎಲ್ಲ ಭೂಮಿಯ ಒಡೆಯನು (ಕ್ಷತ್ರಮೌಲಿಶೇಖರಚರಣಾಃ) ಕ್ಷತ್ರಿಯ ಅರಸರ ಕಿರೀಟಗಳಿಂದ ಶೋಭಿಸುವ ಪಾದಗಳುಳ್ಳವನೂ (ಚಕ್ರ) ಚಕ್ರರತ್ನವನ್ನು (ವರ್ತಯಿತುಂ) ನಡೆಯಸಲಿಕ್ಕೆ (ಪ್ರಭವಂತಿ) ಸಮರ್ಥನೂ ಆಗುತ್ತಾನೆ

---

1 ಆಯುತವರ್ಮನ ವಚನ ಹೀಗೆ. ಮರ್ತ್ಯ ಲೋಕದೊಳು ಸೂಸೆಂಬಂತೆ ತ್ರಿಜ್ಞಾನಧಾರಿಯಾಗಿ ಪುಟ್ಟಿ ಸುರೇಂದ್ರ ವಂದ್ಯನಾಗಿ ಗರ್ಭಾವತರಣ ಜನ್ಮಾಭಿಷೇಕ ಕಲ್ಯಾಣಮನೆಯ್ದಿ ನಿತ್ಯತ್ವಂ ನಿಸ್ವೇದತ್ವಂ ನಿರ್ಮಲತ್ವಂ ಕ್ಷೀರಗೌರರುಧಿರತ್ವಂ ಸಮಚತುರಸ್ರತ್ವಂ ಆದಿಸಂಹನನತ್ವಂ ಸುರೂಪತ್ವಂ ಸುರಭಿಗಂಧತ್ವಂ ಶುಭಲಕ್ಷಣತ್ವಂ ಅಪ್ರಮಿತ ವೀರ್ಯತ್ವಂ ಪ್ರಿಯಹಿತವಾದಿತ್ವ-ಮೆಂಬ ಸ್ವಭಾವಾತಿಶಯಂಗಳು ಪತ್ತುಮೊಡನೊಡನೆ ಪುಟ್ಟಿ ಕುಮಾರತ್ವದಿಂ ಕೆಲವು ಕಾಲಂ ಸಲೆ ರಾಜ್ಯ ಕಾಲದೊಳು ಷಟ್ಖಂಡಾಧಿಪತಿಯಾಗಿ ಕಾಳ ಮಹಾಕಾಳ ಪಾಂಡಕ ಮಾಳವಕ ಶಂಖ ನೈಸರ್ಪ ಪದ್ಮ ಪಿಂಗಳ ಸರ್ವರತ್ನಗಳೆಂಬ ನವನಿಧಿಗಳುಂ ಚಕ್ರ ಛತ್ರಾಸಿದಂಡ ಚಿಂತಾಮಣಿ ಚರ್ಮಕಾಂಕಿಣಿಯೆಂಬೇಳುಮಜೀವರತ್ನಂಗಳುಂ ಗೃಹಪತಿ ಸೇನಾಪತಿ ಸ್ತ್ರೀ ಗಜ ಹಯ ತಕ್ಷಕ ಪುರೋಹಿತಮೆಂಬೇಳು ಜೀವರತ್ನಂಗಳುಂ ಮೂವತ್ತಿಚ್ಛಾಸಿರ ಮಕುಟಬದ್ಧರ್ಗಂ ಪದಿನಾರು ಸಾಸಿರ ಗಣಬದ್ಧ ದೇವರ್ಗಂ · ದೇವ ವಿದ್ಯಾಧರರ್ಗಮಧಿಪನಾಗಿ ಸಾಮ್ರಾಜ್ಯಸುಖಮ-ನನುಭವಿಸುವುದು ಚಕ್ರವರ್ತಿತ್ವಂ

ಅರ್ಥ—ನಿರ್ಮಲ ಸಮ್ಯಗ್ದರ್ಶನವು ಪ್ರಾಪ್ತವಾದವನು—ಸ್ವರ್ಗದೊಳಗಿನ ತನ್ನ ಆಯುಷ್ಯವು ಪೂರ್ಣವಾದ ತರುವಾಯ—ಮನುಷ್ಯಲೋಕದಲ್ಲಿ ಒಂಭತ್ತು ನಿಧಿ[1] ಹದಿನಾಲ್ಕು ರತ್ನಗಳಿಗೆ ಒಡೆಯನಾಗುತ್ತಾನೆ. ಸಂಪೂರ್ಣ ಭರತಕ್ಷೇತ್ರದೊಳಗಿನ ಮೂವತ್ತೆರಡೂ ಸಾವಿರ ದೇಶಗಳಿಗೆ ಅಧಿಪತಿಯಾಗುತ್ತಾನೆ. ಮುಕುಟಗಳುಳ್ಳ ಅರಸರ ತಲೆಯ ಮೇಲಿನ ಕಿರೀಟದ ಮೇಲೆ ಅವನ ಚರಣಗಳು ಶೋಭಿಸುತ್ತವೆ. [ಇಲ್ಲಿ ಸಮ್ಯಗ್ದರ್ಶನದಿಂದ ಪ್ರಾಪ್ತವಾಗುವ ಇನ್ನೊಂದು ವೈಶಿಷ್ಟ್ಯವನ್ನು ಹೇಳಲಾಗಿದೆ ಅದು ಚಕ್ರವರ್ತಿಪದವಾಗಿದೆ. ಸಮ್ಯಗ್ದೃಷ್ಟಿಯುಳ್ಳವನು ನಾರಾಯಣ, ಬಲಭದ್ರನಾಗಿಯೂ ಜನಿಸುವನು ಆದರೆ ಚಕ್ರವರ್ತಿಪದವನ್ನು ಹೊಂದಲಿಕ್ಕೂ ಸಮರ್ಥನಾಗಿರುತ್ತಾನೆ ಸ. ಥ.]

ಭಾವಾರ್ಥ—ಸಮ್ಯಕ್ತ್ವದ ಪ್ರಭಾವದಿಂದ ಸ್ವರ್ಗದಿಂದ ಮನುಷ್ಯಲೋಕಕ್ಕೆ ಬಂದು ಜನಿಸಿದ ಜೀವವು ಒಂಭತ್ತು ನಿಧಿಗಳಿಗೂ ಹದಿನಾಲ್ಕು ರತ್ನಗಳಿಗೂ ಒಡೆಯನಾಗುತ್ತದೆ ಎಲ್ಲ ರಾಜರ ಮೇಲೆ ಅಧಿಕಾರವನ್ನು ನಡೆಯಿಸುವಂಥ ಚಕ್ರವರ್ತಿ ಪದವು ದೊರೆಯುತ್ತದೆ.

ವರಚಕ್ರವರ್ತಿಪದವಿಗಮುರುಗೀರ್ವಾಣಾಧಿಪತಿಯ ಸದ್ವಿಭವಕ್ಕಂ ।
ಪರಮಾರ್ಹಂತ್ಯಪದಕ್ಕಂ ಪರಮಾರ್ಥಂ ಶುದ್ಧದರ್ಶನಂ ಮೊತ್ತಮೊದಲ್ ॥

—ನಯಸೇನ–ಧರ್ಮಾಮೃತ ೧–೬೮.

ಸಮ್ಯಕ್ತ್ವದ ಪ್ರಭಾವದಿಂದ ಜೀವವು ತೀರ್ಥಂಕರವಾಗುವಿಕೆ—

ಅಮರಾಸುರನರಪತಿಭಿರ್ಯಮಧರಪತಿಭಿಶ್ಚ ನೂತಪಾದಾಂಭೋಜಾಃ ।
ದೃಷ್ಟ್ವಾ ಸುನಿಶ್ಚಿತಾರ್ಥಾ ವೃಷಚಕ್ರಧರಾ ಭವಂತಿ ಲೋಕಶರಣ್ಯಾಃ ॥ ೩೯ ॥ [2]

ಅನ್ವಯಾರ್ಥ—(ದೃಷ್ಟ್ವಾ) ಸಮ್ಯಗ್ದರ್ಶನದಿಂದ (ಅಮರಾಸುರನರಪತಿಭಿಃ) ದೇವೇಂದ್ರ, ಅಸುರೇಂದ್ರ ಮತ್ತು ಚಕ್ರವರ್ತಿಗಳಿಂದ (ಚ) ಮತ್ತು (ಯಮಧರಪತಿಭಿಃ) ಗಣಧರರಿಂದ (ನೂತಪಾದಾಂಭೋಜಾಃ) ಸ್ತುತಿಸಲ್ಪಟ್ಟ ಪಾದಕಮಲಗಳುಳ್ಳ (ಸುನಿಶ್ಚಿತಾರ್ಥಾಃ) ನಾಲ್ಕೂ ಪುರುಷಾರ್ಥಗಳನ್ನೂ ಪೂರ್ಣರೂಪದಿಂದ ಸಾಧನಮಾಡಿಕೊಂಡಂಥ (ಲೋಕಶರಣ್ಯಾಃ) ಜನರಿಗೆ ಶರಣುಬರಲಿಕ್ಕೆ ತಕ್ಕ (ವೃಷಚಕ್ರಧರಾಃ) ಧರ್ಮಚಕ್ರವನ್ನು ಧರಿಸಿದಂಥ ಅರ್ಥಾತ್ ತೀರ್ಥಂಕರರು (ಭವಂತಿ) ಆಗುತ್ತಾರೆ.

---

[1] ರಕ್ಷಿತ-ಯಕ್ಷ-ಸಹಸ್ರಾಃ ಕಾಲ-ಮಹಾಕಾಲ-ಪಾಂಡು-ಮಾಣವ ಶಂಖಾಃ ।
ನೈಸರ್ಪ-ಪದ್ಮ-ಪಿಂಗಲ-ನಾನಾರತ್ನಾಶ್ಚ ನವನಿಧಯಃ ॥
ಋತುಯೋಗ್ಯ-ವಸ್ತು-ಭಾಜನ-ಧಾನ್ಯಾಯುಧ-ತೂರ್ಯ-ಹರ್ಮ್ಯ-ವಸ್ತ್ರಾಣಿ ।
ಆಭರಣ-ರತ್ನನಿಕರಾನ್ ಕ್ರಮೇಣ ನಿಧಯಃ ಪ್ರಯಚ್ಛಂತಿ ॥
ಅ ಚಕ್ರಂ ಛತ್ರಮಸಿರ್ದಂಡೊ ಮಣಿಶ್ಚರ್ಮ ಚ ಕಾಕಿಣೀ ।
ಗೃಹ-ಸೇನಾ-ಪತೀ ತಕ್ಷ-ಪುರೋಧಾಶ್ವ-ಗಜ-ಸ್ತ್ರಿಯಃ ॥

[2] ಆಯತವರ್ಮನು ಹೇಳುವುದು ಹೀಗೆ. ತದ್ರಾಜ್ಯ ವೈರಾಗ್ಯಪರನುತ್ಪನ್ನ ಬೋಧನಾಗೆ ಛದ್ಮಸ್ಥ ಕಾಲಮಂ ಕಳಿಪಿ ಶುಕ್ಲಧ್ಯಾನದಿಂ ಘಾತಿ ಚತುಷ್ಟಯಮಂ ಕೆಡಿಸಿ ಜ್ಞಾನಾವರಣೀಯದ ಕೇಡಿನೊಳನಂತಜ್ಞಾನಮುಂ ದರ್ಶನಾವರಣೀಯದ ಕೇಡಿನೊಳನಂತದರ್ಶನಮುಂ ದರ್ಶನಮೋಹನೀಯದ ಕೇಡಿನೊಳು ಕ್ಷಾಯಿಕಸಮ್ಯಕ್ತ್ವಮುಂ ಚಾರಿತ್ರ ಮೋಹನೀಯದ ಕೇಡಿನೊಳಾದ ಯಥಾಖ್ಯಾತ ಚಾರಿತ್ರಮುಂ ದಾನಾಂತರಾಯದ ಕೇಡಿನೊಳು ಷಡ್ಜೀವನಿಕಾಯವತ್ಸಲತ್ವಮುಂ ಲಾಭಾಂತರಾಯದ ಕೇಡಿನೊಳು ತ್ರೈಲೋಕ್ಯಸಾಮ್ರಾಜ್ಯಮುಂ ಭೋಗಾಂತರಾಯದ ಕೇಡಿನೊಳು ಪುಷ್ಪವೃಷ್ಟಿಯುಂ ಉಪಭೋಗಾಂತರಾಯದ ಕೇಡಿನೊಳು

ಕಂದ ॥ ದ್ವಾದಶ ಯೋಜನ ವಿಸ್ತೃತಿ ಮಾ[ಯಾ?]ದಂ ಚಲ್ವಲ್ಲಿಗಯ್ದು ಸಾಸಿರದಂಡಂ ।
ಪೋದೆಡೆಯೊಳಭ್ರಪಥದೊಳು ಮೇದಿನಿ ನೆಲಸಿದುದು ಸಮವಸರಣಂ ಹರಿಯಿಂ ॥

ವಚನ—ಅಂತು ದೇವೇಂದ್ರ ನಿರ್ಮಿತಮುಮಿಂದ್ರನೀಲಮಯಮುಮುಂ ಸಮವೃತ್ತಮುಂ ದೇದಿಷ್ಯಮಾನಮುಪ್ಪುದರ ಬಹಿರ್ಭಾಗದೊಳು ನಾಲ್ಕುಂ ದೆಸೆಯೊಳೊಳು ಇಪ್ಪತ್ತಿಪ್ಪತ್ತು ಸಾಸಿರ ಸೋಪಾನಂಗಳೊಳಂ ನೂರು ನೂರು ಗೆಯ್ದು ಮಕರ ತೋರಣಂಗಳೊಳ ಮಧ್ಯಂತರದೊಳು ನೂರು ಗೆಯ್ದು ರತ್ನತೋರಣಗಳಿಂದಂ ನಾಲ್ಕು ನಾಲ್ಕು ಬಾಗಿಲ್ಗಳೊಳು, ಹೇಮಮಯಂಗಳೊಳು ನಾನಾರತ್ನಖಚಿತಂಗಳುಂ ಜ್ಯೋತಿಷ್ಕೇಂದ್ರರಕ್ಷಿತಂಗಳುಮತಿರಮಣೀಯಂಗಳುಮಪ್ಪ ನಾಲ್ಕು ನಾಲ್ಕು ಬಾಗಿಲ್ವಾಡಗಳಿಂದಮಿಂದ್ರ

ಅರ್ಥ—ದೇವೇಂದ್ರ, ಅಸುರೇಂದ್ರ, ಚಕ್ರವರ್ತಿ, ಗಣಧರ ಇವರ ಸ್ತುತಿಗೆ ಪಾತ್ರವಾದಂಥ ಪಾದ ಕಮಲಗಳುಳ್ಳವನು, ಜೀವಾದಿ ದ್ರವ್ಯಗಳ ಯಥಾರ್ಥ ನಿರ್ಣಯಮಾಡಿದವನು, ಸಂಸಾರೀ ಜೀವಗಳನ್ನು ಕರ್ಮದಿಂದ ಹುಟ್ಟಿದ ದುಃಖದಿಂದ ರಕ್ಷಿಸುವಂಥವನು, ಧರ್ಮಚಕ್ರವನ್ನು ಧರಿಸಿದಂಥವನು ಆದ ತೀರ್ಥಂಕರನು ಸಮ್ಯಗ್ದರ್ಶನದ ಮಹಾತ್ಮೆಯಿಂದ ಆಗುತ್ತಾನೆ [ಇದು ಸಮ್ಯಗ್ದರ್ಶನದಿಂದ ಪ್ರಾಪ್ತವಾಗುವ ನಾಲ್ಕನೆಯ ವಿಶಿಷ್ಟ ಅವಸ್ಥೆಯಾಗಿದೆ ಸ ಧ]

---

ಧನುರ್ವರ್ಣಮಪ್ಪ ಧೂಳೀ ಪ್ರಾಕಾರಮಾದಮಾನುವೊಪ್ಪುವದಲ್ಲಿಂದೊಳಗೆಯಯ್ದುಗೆಯ್ದು ಪ್ರಾಸಾದಂಗಳ ನಡೆಯಿಟ್ಟೊಪ್ಪುದೊಂದೊಂದು ಬಸದಿಗಳಿಂದಂ, ತ್ರಿಸ್ರಂ, ಚತುರಸ್ರಂ ಮೊದಲಾಗೊಡೆಯ ವಾಪಿ ಶತಂಗಳಿಂದಂ ಸೊಗಯಿಸೆ ತ್ರಿಶಾಲ ಪರಿವೇಷ್ಟಿತಂಗಳುಂ ತ್ರಿಪೀಠಾಗ್ರಸ್ಥಿತಂಗಳುಮಪ್ಪ ನಾಲ್ಕು ಮಾನಸ್ತಂಭಂಗಳಿಂದಮೊಪ್ಪುವ ಪ್ರಾಸಾದ ಚೈತ್ಯ ಭೂಮಿಯಕ್ಕು ಅಲ್ಲಿಂದೊಳಗೆ ರಜತಮಯಂಗಳುಂ ' ಜ್ಯೋತಿರಿಂದ್ರರಕ್ಷಿತಂಗಳುಮಪ್ಪ ನಾಲ್ಕುಂ ಬಾಗಿಲ್ವಾಡಂಗಳುಮಪ್ಪುದರಿಂದೆಸೆವ ಹೇಮವರ್ಣದ ವೇದಿಕೆಯಿಂದೊಳಗೆ ಸ್ವಚ್ಛ ಜಲಂಗಳಿಂದತಿವಿಧ ನಾನಾವಿಧಜಲಚರಂಗಳಿಂದಂ ಕೊಳರ್ವಕ್ಕಿಗಳಿಂದಂ ಸೋಪಾನ ಪಂಕ್ತಿಗಳಿಂದಂ ಕಮಳಗಳಿಂದಂ ರಮಣೀಯತರಮಾಗಿ ಖಾತಿಕಾ ಭೂಮಿಯೊಪ್ಪುಗುಮಲ್ಲಿಂದೊಳಗೆ ಪುನ್ನಾಗ ನಾಗವಕುಳ ತಿಲಕಾದಿ ವೃಕ್ಷಂಗಳಿಂದ ಮತ್ತಂ ನಾನಾವಿಧ ಲತೆಗಳಿಂದಂ ಲತಾಭವನಂಗಳಿಂದಂ ಸುರಮಿಥುನ ಶತಭವಂಗಳಿಂದ . ವಲ್ಲಿವವನಂ ಪಾಂಡುಕವನಮಂ ನೇಳಿಸಿ ತೋರ್ಪುದಲ್ಲಿಂದೊಳಗೆ ರಜತಮಯಂಗಳುಂ ಯಕ್ಷೇಂದ್ರ ರಕ್ಷಿತಂಗಳುಮಪ್ಪ ನಾಲ್ಕುಂ ಗೋಪುರ ದ್ವಾರಗಳಿಂದಂ ಶೋಭಿಸುವ ಹೇಮಚ್ಛಾಯ ಪ್ರಾಸಾದದಿಂದೊಳಗೆ ಪ್ರದಕ್ಷಿಣಮಾಗಿ ನಾಲ್ಕುಂ [ದಸೆಯೊಳು] ದೇವಲೋಕದ ಬನಂಗಳೇನೆಸಿದಪುವೊ ॥

ಅಂತೆನಿಸಿದ ನಾಲ್ಕುಂ ಬನಂಗಳಿಂದಂ ನಾಲ್ಕು ದೆಸೆಗಳೊಳಬಿಮುಖಮಾಗಿ ಅಷ್ಟಮಹಾಪ್ರಾತಿಹಾರ್ಯ . ಪಾನಂಗಳಿಂದಂ ಕೃತಕಗಿರಿಗಳಿಂದಂ ಪುಳಿನಸ್ಥಳಗಳಿಂದಂ ಲತಾಭವನಂಗಳಿಂದಂ ಬಹುಪ್ರಕಾರಧ್ವಜಗಳಿಂದಂ ಮಹಾವೀಥಿಗಳಿಂದಂ ವೀಥಿಗಳಿರ್ಕೆಲಂಗಳೊ [ಳು] ಮುಂದೊಂದು ಪೆಕ್ಕಣಂಗಳೊಳು ಮೂವತ್ತಿರ್ವರ್ದಿವ್ಯಕನ್ನೆಯರ್ನರ್ತಿಸುವರ್ ಅಂತಪ್ಪ ಮೂರು ಮೂರು ನೆಲೆಯವೆರಡು ನಾಟ್ಯಶಾಲೆಗಳಿಂ ನಾಟ್ಯಶಾಲೆಗಳ ಸಮೀಪದೊಳು ಚತುರಸ್ರಂಗಳಪ್ಪ ಧೂಪ ಘಟಂಗಳಿಂದಂ ಉಪವನಭೂಮಿಯುಪಮೆಗಳಿದುವಲ್ಲಿಂದೊಳಗೆ ರಜತಮಯಂಗಳು ಯಕ್ಷೇಂದ್ರರಕ್ಷಿತಂಗಳುಮಪ್ಪ ನಾಲ್ಕು ಗೋಪುರ ದ್ವಾರಂಗಳಿಂದೆಸೆವ ಹೇಮವರ್ಣಧ್ವಜವೇದಿಕೆಯಿಂದೊಳಗೆ ಸಿಂಹಧ್ವಜಂ ವೃಷಭಧ್ವಜಂ ಮಯೂರಧ್ವಜಂ ಮಾಲಾಧ್ವಜಂ ಅಂಬರಧ್ವಜಂ ಪದ್ಮಧ್ವಜಂ ಚಕ್ರಧ್ವಜಂ ಅಹಿಧ್ವಜಂ ಗಜಧ್ವಜಗಳೆಂಬ ಪತ್ತುಕುಲದ ಒಂದೊಂದು ಕುಲದವು ನೂರೆಂಟಾಗೆ ನಾಲ್ಕುಂ ದೆಶೆಯೊಳು ಸುವರ್ಣಸ್ತಂಭಸ್ಥಿತಂಗಳಪ್ಪ ನಾಲ್ಸಾಸಿರದ ಮುನ್ನೂರಿಪ್ಪತ್ತು ಸಂಖ್ಯೆಯ ಮಹಾಧ್ವಜಂಗಳಿಂದಂ ನಾಲ್ಕು ಲಕ್ಷೆಯುಮರುವತ್ತಾರು ಸಾಸಿರದೈನೂರರುವತ್ತು ಕ್ಷುಲ್ಲಕ ಧ್ವಜಂಗಳಿಂದಂ ಧ್ವಜಭೂಮಿ ಸಾಮಾನ್ಯಮಲ್ಲಿದೊಪ್ಪುವುದಲ್ಲಿಂದೊಳಗೆ ರಜತಮಯಂಗಳುಂ ಧರಣೇಂದ್ರರಕ್ಷಿತಂಗಳುಮಪ್ಪ ನಾಲ್ಕುಂ ಗೋಪುರ ದ್ವಾರಗಳಿಂದೊಪ್ಪುವಜರ್ಜುನವರ್ಣದ ಪ್ರಾಸಾದದಿಂದೊಳಗೆ

ಕಂದ ॥ ದೇವಕುರುಉತ್ತರಕುರುಗಳ ದೇವಕ್ಷಿತಿಜದೊಳೆಲ್ಲಮಿವಕೊಂದು ನಿಳಿಂ ।
ಪಾವನಿಜಕ್ಕೆಣೆಯಿಲ್ಲೆನೆ ದೇವಕ್ಷಿತಿಜಾವನಿತಳಂ ಸೊಗಯಿಸುಗುಂ ॥

ವಚನ—ಅಂತೆನಿಸಿದ ಕಲ್ಪವೃಕ್ಷದ ಭೂಮಿಮತ್ತಂ ಹೇಮಾದೊಳವನಂಗಳಿಂದಂ ಲತಾಭವನಂಗಳಿಂದಂ ತ್ರಿಸಾಲಪರಿವೇಷ್ಟಿತಂಗಳಿಂದಂ ತ್ರಿಪೀಠಾಗ್ರಸ್ಥಿತಂಗಳಪ್ಪ ಸಿದ್ಧವೃಕ್ಷಗಳಿಂದಂ ಚೈತ್ಯವೃಕ್ಷಗಳಿಂದಂ ಮತ್ತಂ ಮಹಾವೀದಿಗಳಿರ್ಕೆಲದೊಳು ಮುಂಪೇಳ್ದಂತೆ ಎರಡು ನಾಟ್ಯಶಾಲೆಗಳಿಂದಂ ಧೂಪಘಟಗಳಿಂದೊಪ್ಪುವುದಲ್ಲಿಂದೊಳಗೆ ರಜತಮಯಂಗಳುಂ ಧರಣೇಂದ್ರರಕ್ಷಿತಂಗಳುಮಪ್ಪ ನಾಲ್ಕುಂ ಗೋಪುರ ದ್ವಾರಂಗಳಿಂ ರಂಜಿಸುವ ಹೇಮವರ್ಣದ ವೇದಿಕೆಯಿಂದೊಳಗೆ ಕಿನ್ನರ ಕಿಂಪುರುಷ ಗರುಡ ಗಾಂಧರ್ವಾದಿ ವ್ಯಂತರದೇವ ಮಿಥುನಗೇಯಂಗಳಿಂದಂ ಪೆರವು ಮಾಟ ಪೊಸ ವಿನೋದಂಗಳಿಂದಂ ಜನ್ಮಾಭಿಷೇಕಗಳಿಂದಮೆಸೆವ ಬಹುಪ್ರಕಾರ ಮಣಿಮಯ ಭವನಂಗಳಂ ಮತ್ತಂ ಮಹಾವೀದಿಗಳ ನಡುವೆ ಜಿನಪ್ರತಿಮೆಗಳಿಂದಂ ಕಿಕ್ಕಿರಿಗಿರಿದ ನೂರು ತೋರಣಂಗಳ ನಡೆಯಿಟ್ಟೊಪ್ಪುವೊಂಬತ್ತುಂ ಸ್ತೂಪಗಳು ಅಲ್ಲಿಂದೊಳಗೆ ಇಂದ್ರನೀಲ ಮಾಣಿಕ್ಯಮಯಮುಂ ಕಲ್ಪೇಂದ್ರರಕ್ಷಿತಂಗಳುಮಪ್ಪ ನಾಲ್ಕು ಗೋಪುರಂಗಳಿಂದೊಪ್ಪುವ ಶುದ್ಧಸ್ಫಟಿಕಮಯ ಪ್ರಾಕಾರದೊಳಗೆ ಲಕ್ಷ್ಮೀಮಂಟಪಮಕ್ಕು ಪದಿನಾರು ಸ್ಫಟಿಕದ ಕೇಗ್ಗಲಿಂದಲೆತಬಿಡದೆ ರಚಿಸಿದ ಗಳಂ ಮುಗಿದು ಗಣಧರ ದೇವರು ಪೂರ್ವಧರರುಂ ವಿಕ್ರಿಯರ್ಧಿ ಸಂಪನ್ನರುಂ ಅವಧಿ ಜ್ಞಾನಿಗಳುಂ ಮನಃ ಪರ್ಯಯ ಜ್ಞಾನಿಗಳುಂ ವಾದಿಗಳುಂ ಇರ್ಪವರ ಕೆಲದೊಳು ಮಹಾವೀದಿಯಕ್ಕುಮಲ್ಲಿಂ ಕೆಲದೊಳು ಜ್ಯೋತಿಷ್ಕದೇವಿಯರಿರ್ಪ್ಪರವರ ಕೆಲದೊಳು ವ್ಯಂತರ ದೇವಿಯರಿರ್ಪ್ಪರವರ ಕೆಲದೊಳು ಭವನವಾಸಿಗದೇವಿಯರಿರ್ಪ ರವರ ಕೆಲದೊಳು . . . ವ್ಯಂತರ ದೇವರಿಪ್ಪರು ಮಹಾವೀದಿಯಕ್ಕುಮಲ್ಲಿಂ ಕೆಲದೊಳು ಕಲ್ಪವಾಸಿಗದೇವರಿಪ್ಪರುಮಲ್ಲಿಂ ಕೆಲದೊಳು ಚಕ್ರವರ್ತ್ಯಾದಿ ಮನುಷ್ಯರಿಪ್ಪರಲ್ಲಿಂ ಕೆಲದೊಳು ಸಿಂಹಾದಿತಿರ್ಯಕ್ಸಮೂಹಮಿರ್ಕುಂ ಅಲ್ಲಿಂ ಕೆಲದೊಳು ಮಹಾವೀದಿಯಕ್ಕುಮಿಂತೀ ದ್ವಾದಶಗಣ ಪರಿವೇಷ್ಟಿತಂಗಳಿಂದೊಪ್ಪುವುದು ಭೂಮಿಯಕ್ಕು ಮಲ್ಲಿಂದೊಳಗೆ ಇಂದ್ರನೀಲ ಮಾಣಿಕ್ಯ ಮಯಮುಂ ಕಲ್ಪೇಂದ್ರ ರಕ್ಷಿತಂಗಳು ಮಪ್ಪ ನಾಲು ಗೋಪುರ ದ್ವಾರಂಗಳಿಂದೆಸೆವ ಸ್ಫಟಿಕಮಯ ವೇದಿಕೆಯಿಂದೊಳಗೆ

ಕಂದ ॥ ಕ್ರಮದಿಂ ಪೀಠಂಗಳು ಮೂರಮಳಿನ ವೈಡೂರ್ಯ ಹೇಮವರ ಸರ್ವಸೌ ರ- ।
ತ್ನಮದಂಟುಂ ನಾಲ್ಕುಂ . ಸಮಂತು ನಾಲ್ಕುಂ ಶರಾಸನೋಚ್ಛ್ರಿತದಿಂದಂ ॥

ವಚನ—ಅಲ್ಲಿ ನಾಲ್ಕುಂ ದೆಶೆಗಳೊಳಂ ಧರ್ಮಚಕ್ರಮುಂ ಪೊತ್ತಿರ್ಪ ಯಕ್ಷರ್ಕಳಿಂದಂ ಸಲಿಲ ಗಂಧಾಕ್ಷತ ದಾಮ ಚರು ದೀಪ ಧೂಪ ಫಲ ವಸ್ತ್ರಾಭರಣ ಚಾಮರದರ್ಪಣ ಸರ್ವರತ್ನ ಮುಕ್ತಾಫಲ ಹೇಮರಜತಾಷ್ಟದರ್ಶನಾಲಂ ಕೃತದಿಂದಂ ಪ್ರಥಮಪೀಠಮುಳವಲ್ಲ-

ಭಾವಾರ್ಥ—ಸಮ್ಯಗ್ದೃಷ್ಟಿಯು ತೀರ್ಥಂಕರನಾಗಿ ಅನೇಕ ಜೀವಿಗಳ ಸಂಸಾರ ದುಃಖವನ್ನು ನಾಶ ಮಾಡುತ್ತಾನೆ ಧರ್ಮಚಕ್ರವನ್ನು ಪ್ರವರ್ತಿಸುತ್ತಾನೆ. ಅವನಿಗೆ ಇಂದ್ರಾದಿಗಳು ಯಾವಾಗಲೂ ವಂದಿಸುತ್ತಾರೆ ಅವನೇ ಜೀವಗಳ ಪರಮ ರಕ್ಷಕನಾಗಿದ್ದಾನೆ

ಇಂದ್ರರ್ ಬಂದೆಱಗುವರಹಮಿಂದ್ರರ್ ತಮ್ಮಿರ್ದ ನೆಲೆಯೊಳಿರ್ದೆಱಗುವರ- ।
ಗ್ನೀಂದ್ರರ್ ನೊಡರಿಂದೆಱಗುವರೇನ್ದ್ರವ್ಯದ ಭಾವದರ್ಶನಾವಿಧಿ ಪಿರಿದೋ! ॥

—ಪೊನ್ನ-ಶಾಂತಿಪುರಾಣ ೧೧-೪೭.

---

ದೊಪ್ಪುಗುಮಲ್ಲಿಂದಂ ಮೇಲೆ ಚಕ್ರ ಗಜ ವೃಷಭ ಮಯೂರ ಮಾಳಾಂಬರ ಗರುಡ ಹಂಸ ನಾಮಧೇಯಂಗಳಪ್ಪೆಂಟು ವಿಕಲ್ಪದ ಧ್ವಜಂಗಳಿಂದಂ ಮುಂಪೇಳ್ದ ಚರ್ಚನೆಗಳಿಂದಂ ದ್ವಿತಿಯ ಪೀಠ ತಳಂಗಳಿಂದಂ ನಿಳಿಂಪಾಧಿಪತಿಗಂ ಪೊಗಳಲಳುಂಬಮೆನಿಸಿಪುದಲ್ಲಿಂ ಮೇಲೆ ತೃತೀಯ ಪೀಠದೊಳರುನೂರುದಂಡ ವಿಸ್ತಾರದೊಳುಮನಿತೆ ಪ್ರಮಾಣಮಾಯಾಮದೊಳಂ ಸಾತಿರೇಕ ಮೊಂಬೈನೂರು ದಂಡೋಚ್ಛ್ರೇದದೊಳಂ ನೆರೆದೊಪ್ಪುವ ಗಂಧಕುಟಿಯಿರ್ಕುಮದು ತ್ರಿಭುವನಸ್ವಾಮಿಯ ನಿವಾಸನೆನಿಕುಮಲ್ಲಿ—

ಕಂದ ॥ ಶ್ರೀಮದಶೋಕಂ ದುಂದುಭಿ ಪೂಮಳೆ ಕೊಡೆ ಭಾಷೆ ವಿಷ್ಟರಂ ಬಾವಳಯಂ ।
ಚಾಮರಮೆಂದಿವು ಲೋಕ ಶಿಖಾಮಣಿಯ ಜಗಕ್ಕೆ ನಾಥನೆನಿಸುವ ಚಿಹ್ನಂ ॥

ವಚನ—ಬಿನಿಸಿದಷ್ಟ ಮಹಾಪ್ರಾತಿಹಾರ್ಯದೊಳ್ಕೂಡಿ ತ್ರಿಭುವನೈಕವಲ್ಲಭನಿರ್ಕುಮಂತು ಮತ್ತಂ ಪ್ರಾಸಾದವೇದಿಕೆಗಳು ತನ್ನೀಥಂ ದೇಹಪ್ರಮಾಣಕ್ಕೆ ಚತುರ್ಗುಣಂಗಳಕ್ಕುಂ ತೋರಣಂಗಳು ಪ್ರಾಸಾದಕ್ಕೆನಿತಾನು ಮುದ್ಧಿದವಕ್ಕುಂ. ಪ್ರಾಸಾದ ವೇದಿಕೆಗಳೆಲ್ಲಂ ಧ್ವಜಂಗಳು ಮದ್ದಳೆಗಳೆಲ್ಲ ಸರಿಗಳಕ್ಕುಂ ಮೊದಲು ಮೆಲು ಸಮಾನಮನುಳ್ಳುವು ವೇದಿಕೆಗಳುಮೆಗಸಿಯ ವಾದವು ಪ್ರಾಸಾದಂಗಳುಂ ಚೈತ್ಯ ಗೋಪುರ, ಚೈತ್ಯ ವೃಕ್ಷ, ಸಿದ್ಧವೃಕ್ಷ, ಸ್ತೂಪೆ, ಶ್ರೀಮಂಡಪ, ಮಾನಸ್ತಂಭ ಧ್ವಜಂಗಳೆಂದಿವೆಲ್ಲಂ ದ್ವಾದಶಗುಣ ಪ್ರಮಾಣಮಕ್ಕುಂ ಮತ್ತಂ ಬಾಹ್ಯಶಾಲೆಯಿಂ ಕೊಟ್ಟಿಬ್ಯಂತರದ ಸ್ಫಟಿಕದ ಶಿಲೆವರಂ ಮಹಾವೀದಿಯಿರ್ಕೆಲಂಗಳೊಳಂ ನೀಳ್ದು ನಿಂದಿವು ವೀಧಿಯ ವಿಸ್ತಾರವೊಂದುಗಾವುದಮಕ್ಕುಂ ಮತ್ತಂ ಸಮಸ್ತಗೋಪುರ ದ್ವಾರಂಗಳೊಳಗಣ ಜಗಲಿಗಳೊಳಗಣ- ಮೊಂದೊಂದು ನೂರೆಂಟುಮಾಗೆ . ಕಾಳಮಹಾಕಾಳಾದಿ ನವನಿಧಿಗಳುಂ ಬಿಜ್ಜಣಿಗೆ ಚಾಮರಂ, ಛತ್ರ, ದರ್ಪಣ, ಧ್ವಜ, ಭೃಂಗಾರ, ಸುಪ್ರತಿಷ್ಠ ಕಳಶಂಗಳೆಂಬಷ್ಟ ಮಂಗಳಂಗಳುಮೆಸೆದೊಪ್ಪುವುದಿವು ನಾಲ್ಕುಮೊಂದು ಯೋಜನಮಕ್ಕುಮವರಿಂದೊಳ. ಗಣಾರ್ಧಯೋಜನ ಭೂಮಿಯೊಳುಮಯ್ನೂರು ಧನುವಿಸ್ತಾರಮಕ್ಕುಮದೊಂದಂ ದ್ವಿಗುಣಿಸೆ ದ್ವಾದಶಯೋಜನ ವಿಸ್ತಾರಮಕ್ಕು- ಮಿಂತೀ ಶ್ರೀಯೊಳ್ಕೂಡಿದ ಸಮವಸರಣದೊಳು

ಕಂದ ॥ ತೃಷೆ ನಿದ್ರೆಮುಳಿಸೊಸಗೆ ಸೇದೆ ಮರುಳಂ ವಿಷಾದಮುಪ್ಪನ್ಚೆತಂದು— ।
ವ್ಯಸನಂ ರುಜೆ ಮರಣಂ ಬಯಮಸಮಾನಂ ಚಿಂತೆಯೆಂಬಿವರ್ಗಮಭಾವಂ ॥

ವಚನ—ಎಂಬಿವನುಳ್ಳ ಸಮವಸರಣ ವಿಭೂತಿ ಉಪಭೋಗಾಂತರಾಯದ ಕೇಡಿನೊಳಕ್ಕುಂ ಮತ್ತಂ ವೀರ್ಯಾಂತರಾಯದ ಕೇಡಿನೊಳು ಅನಂತವೀರ್ಯಂಗಳಕ್ಕು. ಇಂತು ಘಾತಿಗಳ ಕೇಡಿನೊಳ್ಪತ್ತಂ ಗವ್ಯೂತಿಶತಚತುಷ್ಟಯ ಸುಭಿಕ್ಷತೆಯುಂ ಗಗನಗಮನಮುಮಪ್ರಾಣಿವಧಮುಂ ಭುಕ್ತಿವಿರಹಿತಮುಮುಪಸರ್ಗಾಭಾವಮುಂ ಚತುರಾಸ್ಯತ್ವಮುಂ ಸರ್ವವಿದ್ಯೈಶ್ವರ್ಯಮುಂ ಅಚ್ಛಾಯತ್ವಮುಮಪಕ್ಷ್ಮಸ್ಪಂದನಮುಂ ಸಮಪ್ರಸಿದ್ಧನಖಕೇಶತ್ವಮುಮೆಂಬ ಕ್ಷಾಯಿಕಾತಿಶಯವಿಶೇಷಂಗಳ್ಪತ್ತಂ. ಮತ್ತಂ ಸರ್ವಾರ್ಧಮಾಗದಿಯ ಭಾಷೆಯುಂ, ಸಮಸ್ತ ಪ್ರಾಣಿಗಳೆಲ್ಲಂ ತಮ್ಮ ತಮ್ಮ ವಿಷಯಂಗಳೊಳು ವೈರಮನುಳಿದು ಮಿತ್ರಬಾವಮನಾಗಿ- ಸಿರ್ಪುದುಂ, ಆರುಂ ಋತುಗಳ ತರುಗಳುಮಂ ಲತಾವಳ್ಳಿಗಳೆಲ್ಲಂ ತಂತಮ್ಮ ಕಾಲಮಲ್ಲದೊಮ್ಮೊದಲೊಳೆಯಂಕುರಿತ ಕೋರಕಿತ ಕುಸುಮಿತ ಫಳಭರಿತಂಗಳಾಗಿ ತೋರ್ಪುದುಂ, ದರ್ಪಣತಳ ಸದೃಶ ರತ್ನಮಯ ಭೂಷಣ ತಳಮುಂ, ಸುರಭಿಗಂಧಾ- ನಿಳನುಂ, ಸಕಳಭುವನಜನಾನಂದಮುಂ, ಮರುತ್ಕುಮಾರರುಪಶಮಿಸೆ ಬಿಟ್ಟದೊಳಕಂಟಕತೃಣಕಾಷ್ಠಂಗಳನೊಂದು ಯೋಜ- ನಾಂತರ ಭೂಭಾಗಮುಂ, ಸ್ತನಿತಕುಮಾರಕೃತ ಬಂಧುರ ಗಂಧೋದಕ ವೃಷ್ಟಿಯುಮಡಿಯಿಡುವೆಡೆಗೆಲ್ಲಂ ಮುಂದೇಳು ಪಿಂತೇಳು ಗೆಯ್ದಷ್ಟಸಹಸ್ರಪತ್ರಾಂಬುಜಂಗಳುಂ, ಫಳಭಾರಂಗಳಿಂ ನಮ್ರಂಗಳಾಗಿ ಶೋಭಿಸುವ ಶಾಲಿವ್ರೀಹ್ಯಾದಿ ಸಮಸ್ತ ಸಸ್ಯಂಗಳೊಪ್ಪಿ ಶರತ್ಸಮಯಸರಿತ್ಸಲಿಲವಿಮಲವಿಯತ್ತಲದಿಗಂತರಾಳಂಗಳುಂ, ಸುರವೃಂದಾರಕ ಪರಸ್ಪರಾಹ್ವಾನನು ಮುಂದೆ ನಡೆಪಧರ್ಮಚಕ್ರಾ [ದಿ] . . ಪದಿನಾಲ್ಕತಿಶಯವಿಶೇಷಂಗಳು ಮತ್ತಮಿಂತು ಸ್ವಾಭಾವಿಕ ಕ್ಷಾಯಿಕ ದೈವಿಕ ಕೃತದಿಂ ಚೌಗಚತುಸ್ತ್ರಿಂಶದತಿಶಯ ವಿಶೇಷದೊಳು ಕೂಡಿ . ಪ್ರಭಾಮಂಡಲದಿಂ ಸಹಸ್ರಾರ್ಕತೇಜಂಬೊಲ್ಬೆಳಗೆ ಚತುರ್ನಿಕಾಯಾಮರರು ಜಯಜಯನಿನಾದದಿಂ ಕೀರ್ತಿಸೆ ತ್ರೈಲೋಕ್ಯ ಸಾಮ್ರಾಜ್ಯದೊಳಿರ್ದು ಕೇವಲಬೋಧೋತ್ಪತ್ತಿಕಲ್ಯಾಣಮನೆಯ್ದುವುದು ನರಪಾರ್ಥಿವ್ಯಂ ಮುನ್ನೆ ಘಾತಿಗಳ ಕೇಡಿನೊಳು ದಗ್ಧರಜ್ಜುಸಮಾನಮಾಗಿರ್ದ ಪಾತಿಚತುಷ್ಟಯಮುಮಾಯುಷ್ಯದೊಳು ಸಮಾನಮಾಗದೊಡೆ ದಂಡ. ಕವಾಟ, ಪ್ರತರ, ಲೋಕಪೂರಣೆಗಳೆಂಬ ಸಮುದ್ಘಾಟಂಗಳಂ ಮಾಡಿ ಯೋಗನಿರೋಧಂಗೆಯ್ದು ನಿರವಶೇಷಂ ಕೆಡಿಸಿ, ಪರಿನಿರ್ವಾಣಕಲ್ಯಾಣಮನೆಯ್ದಿಯೊಂದೆ ಸಮಯದೊಳೆ ಲೋಕಾಗ್ರದೊಳ್ನೆಲೆಗೊಂಡು ಕ್ಷಾಯಿಕಸಮ್ಯಕ್ತ್ವಮುಮನಂತಜ್ಞಾನ ಮುಮನಂತದರ್ಶನಮುಮನಂತವೀರ್ಯಮುಮಂ, ಸೂಕ್ಷ್ಮತ್ವಮುಮಂ, ಅವಗಾಹನತ್ವಮುಂ, ಅಗುರುಲಘುತ್ವಮುಮಂ, ಅವ್ಯಾಬಾಧತ್ವಮುಮೆಂಬ ಸಿದ್ಧರೆಂಟು ಸಂತತಿಯುಂ.

ಸಮ್ಯಗ್ದೃಷ್ಟಿ ಪುರುಷನಿಗೇ ಮೋಕ್ಷವಾಗುತ್ತದೆ—

ಶಿವಮಜರಮರುಜಮಕ್ಷಯಮವ್ಯಾಬಾಧಂ ವಿಶೋಕಭಯಶಂಕಮ್ ।
ಕಾಷ್ಠಾಗತಸುಖವಿದ್ಯಾವಿಭವಂ ವಿಮಲಂ ಭಜಂತಿ ದರ್ಶನಶರಣಾಃ ॥ ೪೦ ॥ [1]

ಅನ್ವಯಾರ್ಥ—(ದರ್ಶನಶರಣಾಃ) ಸಮ್ಯಗ್ದರ್ಶನಕ್ಕೆ ಶರಣುಹೋದ ಜೀವವು (ಅಜರಂ) ಮುಪ್ಪು ಇಲ್ಲದುದು (ಅರುಜಂ) ರೋಗವಿಲ್ಲದುದು (ಅಕ್ಷಯಂ) ನಾಶವಿಲ್ಲದುದು (ಅವ್ಯಾಬಾಧಂ) ಬಾಧೆ ಇಲ್ಲದುದು (ಕಾಷ್ಠಾಗತಸುಖವಿದ್ಯಾವಿಭವಂ) ಉತ್ಕೃಷ್ಟವಾದಂಥ ಸುಖ, ಜ್ಞಾನ, ವೈಭವಗಳಿಂದ ಕೂಡಿದ್ದು (ವಿಮಲಂ) ಕರ್ಮಮಲವಿಲ್ಲದುದು ಆದ (ಶಿವಂ) ಮೋಕ್ಷಪದವನ್ನು–ಶಿವಪದವನ್ನು–(ಭಜಂತಿ) ಹೊಂದುತ್ತದೆ

ಅರ್ಥ—ಕರ್ಮಮಲವಿಲ್ಲದಂಥ ಅರ್ಥಾತ್ ವಿಮಲ, ಮುಪ್ಪು–ರೋಗಗಳಿಲ್ಲದ, ಜ್ಞಾನ–ದರ್ಶನ–ಸುಖ–ವೀರ್ಯಗಳೆಂಬ ಅನಂತಚತುಷ್ಟಯಗಳಿಂದ ಕೂಡಿದ ಅಂದರೆ ಅಕ್ಷಯ, ನಿರ್ಬಾಧ, ಸುಖ, ವಿದ್ಯೆ ಮತ್ತು ವೈಭವಗಳ ಕೊನೆಯ ಸೀಮೆಯಾದಂಥ ಮೋಕ್ಷವು ಸಮ್ಯಗ್ದರ್ಶನದಿಂದ ರಕ್ಷಿತವಾದಂಥ ಜೀವಗಳಿಗೇ ದೊರೆಯುತ್ತದೆ [ಸಮ್ಯಗ್ದರ್ಶನದ ಅನನ್ಯ ಉಪಾಸಕನು ಎಷ್ಟು ಭವಗಳನ್ನು ಸುತ್ತಿದರೂ ಕೊನೆಗೆ ಮುಕ್ತಿಯನ್ನು ಹೊಂದಿಯೇ ತೀರುವನೆಂದು ಇಲ್ಲಿ ಹೇಳಿದೆ ಅದರೊಡನೆ ಮುಕ್ತಿಪದದ ಲಕ್ಷಣದ ಕಲ್ಪನೆಯೂ ಈ ಸೂತ್ರದಿಂದ ನಮಗಾಗುತ್ತದೆ. ಅದು ಸುಖ ಹಾಗೂ ಜ್ಞಾನವಿಭೂತಿಯ ಚರಮಸೀಮೆಯಾಗಿದೆ ಇಂಥ ಅವಸ್ಥೆಯನ್ನು ಹೊಂದುವದಕ್ಕಾಗಿ ಬಲಭದ್ರ, ವಾಸುದೇವ, ಚಕ್ರವರ್ತಿ, ತೀರ್ಥಂಕರರೇ ಆಗಬೇಕೆಂದೇನಿಲ್ಲ. ಕೇವಲ ಸಮ್ಯಕ್ತ್ವಧಾರಿಯಾದರೆ ಸಾಕು. ಸ ಥ]

ಸಮ್ಯಕ್ತ್ವ ಸಂಜಾತಮಾದ ಸಮಯಂ ಬಿಡಿದು ಸಮ್ಯಕ್ತ್ವ ಸಮುಪೇತಮಪ್ಪ ಸುಜ್ಞಾನದಿಂ ।
ಸಮ್ಯಕ್ತ್ವಯುತ ಸಂಯಮವನೆ ಕೈಕೊಂಡು ಸಲೆ ಸೌಖ್ಯಸಂಪದವಡೆಯದೆ ॥
ಸೌಮ್ಯವಲ್ಲದ ಸೌಖ್ಯಮಿಪ ಸಂಸಾರಮೇ ಸ್ವಾಮ್ಯಮೆಂದಾ ಸಕಲ ಭೋಗೋಪಭೋಗಕ್ಕೆ ।
ಕಾಮ್ಯಾರ್ಥಿಯಾದ ವರ ಮಾತುಗೇಳ್ದಿಚ್ಛಾಪಿಯೆನಬಹುದೆ ಭೂಪಾಲಕಾ ॥

—ಮಂಗರಸ–ಸಮ್ಯಕ್ತ್ವಕೌಮುದಿ ೧೨–೩೫.

ಈ ಪ್ರಕಾರ ಸಮ್ಯಕ್ತ್ವದ ಪ್ರಭಾವದ ವರ್ಣನೆಯನ್ನು ಮಾಡಿ, ದರ್ಶನಾಧಿಕಾರವನ್ನು ಮುಗಿಸುವಾಗ ದರ್ಶನದ ಮಹಿಮೆಯನ್ನು ಹೇಳಿ, ಉಪಸಂಹಾರ ಮಾಡುತ್ತಾರೆ—

ದೇವೇಂದ್ರಚಕ್ರಮಹಿಮಾನಮಮೇಯಮಾನಂ
ರಾಜೇಂದ್ರಚಕ್ರಮವನೀಂದ್ರಶಿರೋಽರ್ಚನೀಯಮ್ ।
ಧರ್ಮೇಂದ್ರಚಕ್ರಮಧರೀಕೃತಸರ್ವಲೋಕಂ
ಲಬ್ಧ್ವಾ ಶಿವಂ ಚ ಜಿನಭಕ್ತಿರುಪೈತಿ ಭವ್ಯಃ ॥ ೪೧ ॥ [2]

ಅನ್ವಯಾರ್ಥ—(ಜಿನಭಕ್ತಿಃ ಭವ್ಯಃ) ಜಿನೇಂದ್ರನ ಭಕ್ತಿಯನ್ನು ಮಾಡುವ ಭವ್ಯ ಜೀವವು (ಅಮೇಯಮಾನಂ) ಅಪರಿಮಿತವಾದಂಥ (ದೇವೇಂದ್ರಚಕ್ರಮಹಿಮಾನಂ) ದೇವೇಂದ್ರನ ವಿಭೂತಿಯನ್ನು (ಅವನೀಂದ್ರ-

---

1 ಆಯತವರ್ಮನು ಹೇಳುವದು ಹೀಗೆ

ವಚನ—ಅಂತು ದ್ವಾದಶಗಣಕ್ಕಂ ಮುಕ್ತಿಮಾರ್ಗಮನುಪದೇಶಂಗೆಯ್ವುತ್ತಂ ತೃತೀಯಪೀಠಾಗ್ರಸ್ಥಿತ ಗಂಧಕುಟ್ಯಭ್ಯಂತರ ಮಧ್ಯಸ್ಥಿತ ಸಿಂಹಾಸನಮಾಗೆ ಛತ್ರತ್ರಯಂಗಳೆಸೆಯೆ ತ್ರಿದಶದುಂದುಭಿಮೊಳಗೆ ಯಕ್ಷೇಂದ್ರರ್ಕಳು ಚಾಮರಮನಿಕ್ಕೆ ಸುರಪತಿ ಸುರಭಿ ಪುಷ್ಪವರ್ಷಮಂ ಸುರಿಯೆ ಅಶೋಕವೃಕ್ಷಂ ರಮಣೀಯಮಾಗೆ ಅಗುರುಲಘುತ್ವಮುಮವ್ಯಾಬಾಧತ್ವಮುಮೆಂಬ ಸಿದ್ಧರೆಂಟು ಗುಣಂಗಳಂ ತಾಳ್ದಿ ಮೋಕ್ಷಲಕ್ಷ್ಮಿಯೊಳ್ಕೂಡಿರ್ಪುದು, ನಿರ್ವಾಣಮಿಂತು ಪೀಠಿಕಾದಿ ಸಪ್ತೋಚಿತ ಮಂತ್ರಾನ್ವಿತ ಸಪ್ತ ಪರಮಸ್ಥಾನಂಗಳನೆಯ್ದಿಸುವ ಸಮ್ಯಕ್ತ್ವಮಹಾತ್ಮ್ಯಮಂ ಸೆಗಳ್ವುದು ಸಮ್ಯಕ್ತ್ವದಿಂ ಬಿಟ್ಟು ದೇಹಿಗೆ ಶರಣಾರುಮಿಲ್ಲಂ

2 ಆಯತವರ್ಮನ ವಿವರ ಹೀಗೆ

ಕಂದ ॥ ಬ್ರತಮಿಲ್ಲದೊಡಂ ಕೂಡುಗುಮತುಳಸುಖಾಸ್ಪದಮನೆಂದೊಡಿನ್ನೇಂ ಪೊಗಳ್ವೆಂ ।
ಶತಮುಖಗನುರಾಗದೆ ಪಣಿಪತಿಯುಂ ಸಮ್ಯಕ್ತ್ವದೊಂ[ದು] ವಿಪುಲೋನ್ನತಿಯಿಂ ।

ಇದು ಭಗವದರ್ಹತ್ಪರಮ ಭಟ್ಟಾರಕ ವೀತರಾಗ ಸರ್ವಜ್ಞವದನ ವನಜ ಸಮುದ್ಗತ ಸದಸದಾತ್ಮಕಪರಮತತ್ವ ಭಾವನಾ ಭಾವಿತ ಸ್ವಾಂತ ಶ್ರೀವರ್ಧಮಾನಸಿದ್ಧಾಂತದೇವರ ಚರಣ ಸರಸಿರುಹ ಸ್ಮರಣ ಪರಿಣತಾಂತಃ ಕರಣ ಕುಶೇಶಯ ಶ್ರೀಮದಾಯತವರ್ಮ ವಿರಚಿತಮಪ್ಪ ರತ್ನಕರಂಡಕದೊಳು ಸಮ್ಯಗ್ದರ್ಶನಸ್ವರೂಪನಿರೂಪಣಂ ಪ್ರಥಮಪರಿಚ್ಛೇದಂ ನಿಜಪರಮಾತ್ಮಗೆ ಶರಣು.

ಶಿರೋರ್ಚನೀಯಮ್) ರಾಜರ ತಲೆಗಳಿಂದ ಪೂಜೆಗೊಳ್ಳುವಂಥ (ರಾಜೇಂದ್ರಚಕ್ರಂ) ಚಕ್ರವರ್ತಿಯ ಚಕ್ರರತ್ನವನ್ನು (ಚ) ಮತ್ತು (ಅಧರೀಕೃತಸರ್ವಲೋಕಂ) ಎಲ್ಲ ಲೋಕದ ಜನರಿಂದ ನಮಸ್ಕರಿಸಿಕೊಳ್ಳುವಂಥ (ಧರ್ಮಚಕ್ರಂ) ತೀರ್ಥಂಕರರ ಧರ್ಮಚಕ್ರವನ್ನು (ಲಬ್ಧ್ವಾ) ಸಂಪಾದಿಸಿಕೊಂಡು ಕೊನೆಗೆ (ಶಿವಂ) ಮುಕ್ತಿಯನ್ನು ಉಪೈತಿ ಹೊಂದುವದು.

ಅರ್ಥ—ಜಿನಭಕ್ತಿಯಲ್ಲಿ ತತ್ಪರನಾದ ಭವ್ಯ ಜೀವವು ಇಂದ್ರಪದದ ಲೆಕ್ಕವಿಲ್ಲದಷ್ಟು ವೈಭವವನ್ನೂ ಭೂಮಿಗೆ ಒಡೆಯನಾದ ರಾಜನ ಸುಖಭೋಗಗಳನ್ನೂ ಎಲ್ಲ ಲೋಕಗಳಲ್ಲಿಯೂ ಶ್ರೇಷ್ಠವಾದಂಥ ತೀರ್ಥಂಕರ ಪದವನ್ನೂ ಪಡೆಯುತ್ತದೆ ಅಲ್ಲದೆ ಕೊನೆಗೆ ಮೋಕ್ಷವನ್ನೂ ಹೊಂದುತ್ತದೆ [ಸಾಮಾನ್ಯವಾಗಿ ನೋಡುವವರಿಗೆ ಈ ಉಪಸಂಹಾರಾತ್ಮಕ ಶ್ಲೋಕದಲ್ಲಿ ಹಿಂದಿನ ನಾಲ್ಕು ಸೂತ್ರಗಳ ಭಾವವನ್ನು ಸಂಗ್ರಹಿಸಿ ಹೇಳಿದಂತೆ ತೋರೀತು ಆದರೆ ಆಳವಾಗಿ ವಿಚಾರಿಸಿದಲ್ಲಿ ಇದು ಪುನರುಕ್ತಿ ಮಾತ್ರವಲ್ಲ ಎಂದೂ ಕಂಡುಬರುತ್ತದೆ. ಈ ಶ್ಲೋಕದ 'ಲಬ್ಧ್ವಾ' ಮತ್ತು 'ಚ' ಎಂಬ ಪದಪ್ರಯೋಗಗಳು ವಿಶಿಷ್ಟ ಉದ್ದೇಶದಿಂದ ಬಂದವುಗಳಾಗಿವೆ ಸಮ್ಯಗ್ದೃಷ್ಟಿ ಜೀವವು ಕ್ರಮದಿಂದ ದೇವೇಂದ್ರ, ಚಕ್ರವರ್ತಿ, ತೀರ್ಥಂಕರ ಈ ಮೂರೂ ಅವಸ್ಥೆಗಳನ್ನು ಹೊಂದಿ, ಮುಕ್ತಿಯನ್ನು ಪಡೆಯುತ್ತದೆ. ಇದು ಹಿಂದಿನ ಸೂತ್ರಗಳಲ್ಲಿ ಹೇಳಿದುದಕ್ಕಿಂತ ವಿಶಿಷ್ಟವಾದ ಅವಸ್ಥೆಯಾಗಿದೆ. ಈ ಅವಸರ್ಪಿಣಿ ಕಾಲದಲ್ಲಿ ಇಂಥ ಅತಿಶಯವಾದ ಪುಣ್ಯವನ್ನು ಸಂಪಾದಿಸಿದ ಸಮ್ಯಗ್ದೃಷ್ಟಿ ಜೀವಗಳು ಭರತಖಂಡದಲ್ಲಿ ಮೂವರು ಮಾತ್ರ ಆಗಿ ಹೋಗಿದ್ದಾರೆ ಅವರು ಶಾಂತಿನಾಥ, ಕುಂಥುನಾಥ ಮತ್ತು ಅರನಾಥ. ಇವರು ಮನುಷ್ಯ ಪರ್ಯಾಯದಲ್ಲಿಯೇ ಚಕ್ರವರ್ತಿಪದ ಹಾಗೂ ತೀರ್ಥಂಕರ ಪದಗಳನ್ನೂ ಪಡೆದರು ಅಲ್ಲದೆ ಇವರು ದೇವೇಂದ್ರನ ಪದದಿಂದ ಭೂಮಿಯ ಮೇಲೆ ಚಕ್ರವರ್ತಿಯಾಗಿ ಅವತರಿಸಿದ್ದರು ಕೊನೆಗೆ ಮುಕ್ತಿಯನ್ನೂ ಹೊಂದಿದರೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಅದರಿಂದ ಸಮ್ಯಗ್ದೃಷ್ಟಿಯ ಫಲಗಳಲ್ಲಿ ಇದೊಂದು ವಿಶಿಷ್ಟವಾದ ಫಲವನ್ನು ಸೂಚಿಸುವ ಸೂತ್ರವಾಗಿದೆ. ಸಮ್ಯಗ್ದರ್ಶನದ ವಿಶಿಷ್ಟತಮ ಮಹಾತ್ಮ್ಯವನ್ನು ಪ್ರದರ್ಶಿಸುತ್ತದೆ ಸ ಧ.]

ಭಾವಾರ್ಥ—ಜಿನವೆಂದರೆ ಪರಮಾತ್ಮಸ್ವರೂಪ ಭಕ್ತಿಯೆಂದರೆ ಆ ಸ್ವರೂಪದಲ್ಲಿ ಅನುರಾಗ. ಪರಮ ಆತ್ಮ ಸ್ವರೂಪದಲ್ಲಿ ಅನುರಾಗವಿದ್ದ ಸಮ್ಯಗ್ದೃಷ್ಟಿ ಜೀವಕ್ಕೆ ಭವ್ಯಾತ್ಮ ಎಂದು ಹೆಸರು ಈ ಗುಣವು ಇದ್ದ ಮಾನವನು ಮರಣದ ತರುವಾಯ ದೇವೇಂದ್ರಪದವನ್ನು ಹೊಂದುತ್ತಾನೆ ದೇವೇಂದ್ರಪದವು ಸ್ವರ್ಗಲೋಕದಲ್ಲಿ ಶ್ರೇಷ್ಠವಾದ ಸ್ಥಾನವು. ಅವನಿಗೆ ಲೆಕ್ಕವಿಲ್ಲದಷ್ಟು ಬುದ್ಧಿ, ಶಕ್ತಿ, ಸುಖ ಮತ್ತು ವೈಭವಗಳು ಅಲ್ಲಿ ಪ್ರಾಪ್ತವಾಗುತ್ತವೆ. ಅಲ್ಲಿಂದ ಮನುಷ್ಯಜನ್ಮಕ್ಕೆ ಬಂದರೂ ಮೂವತ್ತೆರಡು ಸಾವಿರ ರಾಜರು—ಮುಕುಟಧಾರಿಗಳು—ವಂದಿಸುವಂಥ ಚಕ್ರವರ್ತಿಪದವನ್ನು ಹೊಂದುತ್ತಾನೆ. ಪುನಃ ಸ್ವರ್ಗದಲ್ಲಿ ಅಹಮಿಂದ್ರನ ಸ್ಥಾನವು ದೊರೆಯುತ್ತದೆ. ಕೊನೆಗೆ ಎಲ್ಲ ಮೂರೂ ಲೋಕಕ್ಕೆ ಪೂಜ್ಯವೆನಿಸುವಂಥ ತೀರ್ಥಂಕರಪದವೂ ಸಹ ಲಭಿಸುತ್ತದೆ. ಅಲ್ಲದೆ ಮೋಕ್ಷವೂ ಪ್ರಾಪ್ತವಾಗುತ್ತದೆ

ಉಪಸಂಹಾರ—ಈ ಪ್ರಕಾರ ದರ್ಶನಮೋಹನೀಯ ಕರ್ಮವು ನಾಶವಾಗಲು ಸತ್ಯಾರ್ಥದಲ್ಲಿ ಶ್ರದ್ಧೆ ಹಾಗೂ ಜ್ಞಾನಗಳು ಹುಟ್ಟುತ್ತವೆ ಅನಂತಾನುಬಂಧೀ ಕರ್ಮವು ಇಲ್ಲದಂತೆ ಆಗಲು ಸ್ವರೂಪಾಚರಣ ಚಾರಿತ್ರವು ಪ್ರಕಟವಾಗುತ್ತದೆ ಇಂದವನಿಗೆ ಇನ್ನು ಅಪ್ರತ್ಯಾಖ್ಯಾನಾವರಣ ಕರ್ಮದ ಉದಯದಿಂದ ದೇಶಚಾರಿತ್ರವನ್ನು ಧಾರಣಮಾಡಲಿಕ್ಕೆ ಆಗುವದಿಲ್ಲ ಪ್ರತ್ಯಾಖ್ಯಾನದ ಉದಯದಿಂದ ಸಕಲ ಚಾರಿತ್ರವನ್ನು ಸ್ವೀಕರಿಸಲಿಕ್ಕೆ ಆಗದು. ಆದರೂ ಅವನಿಗೆ ದೇಹಾದಿಗಳೆಂಬ ಪರದ್ರವ್ಯ ಮತ್ತು ರಾಗ-ದ್ವೇಷಾದಿ ಕರ್ಮದಿಂದ ಉಂಟಾಗುವ ಪರಭಾವ ಇವುಗಳಲ್ಲಿಯ ಭೇದಜ್ಞಾನವು ಆಗಿರುತ್ತದೆ ಅವನು ತನ್ನ ಜ್ಞಾನ-ದರ್ಶನ ಸ್ವಭಾವದಲ್ಲಿಯೇ ಆತ್ಮಬುದ್ಧಿಯನ್ನು ಧರಿಸಿರುತ್ತಾನೆ ಪರ್ಯಾಯಗಳ ಮೇಲಿನ ಮಮತ್ವದ ವಿಚಾರವನ್ನು ಮನದಲ್ಲಿಯೂ ತರುವದಿಲ್ಲ ಅದಕ್ಕಾಗಿ ಅವನು ಯಾವಾಗಲೂ ಹೀಗೆ ವಿಚಾರಿಸುತ್ತಿರುತ್ತಾನೆ. "ಎಲೈ ಆತ್ಮನೇ, ನೀನು ಭಗವಂತನು ಪ್ರತಿಪಾದಿಸಿದ ಪರಮಾಗಮಕ್ಕೆ ಶರಣು ಹೋಗು. ಜ್ಞಾನ ದೃಷ್ಟಿಯಿಂದ ನೋಡು ಅಂದರೆ ಈ ಎಂಟು ಪ್ರಕಾರದ ಸ್ಪರ್ಶ, ಐದು ಪ್ರಕಾರದ ರಸ, ಎರಡು ಪ್ರಕಾರದ ಗಂಧ, ಐದು ಪ್ರಕಾರದ ವರ್ಣ, ಇವು ಆತ್ಮನ ಸ್ವರೂಪವಲ್ಲ, ಪುದ್ಗಲದ ಸ್ವರೂಪವೆಂಬುದು ನಿನಗೆ ಗೊತ್ತಾಗುವದು. ಕ್ರೋಧ, ಮಾನ, ಮಾಯಾ, ಲೋಭ ಇವು ಕೂಡ ನಿನ್ನ ಸ್ವರೂಪವಾಗಿರದೆ ಕರ್ಮದ ಉದಯದಿಂದ ಹುಟ್ಟಿದ ವಿಕಾರಗಳಾಗಿವೆ ಇದೇ ಪ್ರಕಾರ, ಹರ್ಷ, ವಿಷಾದ, ಮದ,

ಮೋಹ, ಶೋಕ, ಭಯ, ಗ್ಲಾನಿ ಮೊದಲಾದವುಗಳು ಕರ್ಮದಿಂದ ಉತ್ಪನ್ನವಾದ ವಿಕಾರಗಳಾಗಿವೆ ಅವು ನಿನ್ನ ಸ್ವರೂಪದಿಂದ ಬೇರೆಯಾಗಿವೆ ನರಕ, ತಿರ್ಯಂಚ, ಮನುಷ್ಯ, ದೇವ ಈ ಅವಸ್ಥೆಗಳೂ ಕರ್ಮೋದಯಗಳಿಂದ ಉತ್ಪನ್ನವಾಗುವಂಥವಿರುತ್ತವೆ. ಅಂತೂ ನಾಶವಾಗುವಂಥವು ಇರುತ್ತವೆ ನಾನು ಕೆಂಪೂ ಇಲ್ಲ, ಕಪ್ಪೂ ಇಲ್ಲ ರಾಜನಿಲ್ಲ, ರಜಕನಿಲ್ಲ ಬಲವಂತನಿಲ್ಲ, ನಿರ್ಬಲನಿಲ್ಲ. ಸ್ವಾಮಿಯೂ ಅಲ್ಲ, ಸೇವಕನೂ ಅಲ್ಲ ಸುಂದರನೂ ಅಲ್ಲ, ಕುರೂಪಿಯೂ ಅಲ್ಲ ಪುಣ್ಯವಂತನಲ್ಲ, ಪಾಪಿಷ್ಠನೂ ಅಲ್ಲ ಸಿರಿವಂತನಲ್ಲ, ಬಡವನೂ ಅಲ್ಲ ಬ್ರಾಹ್ಮಣನಲ್ಲ, ಕ್ಷತ್ರಿಯನೂ ಅಲ್ಲ ವೈಶ್ಯನಲ್ಲ, ಶೂದ್ರನೂ ಅಲ್ಲ ಸ್ತ್ರೀ ಅಲ್ಲ, ಪುರುಷನೂ ಅಲ್ಲ, ನಪುಂಸಕನೂ ಅಲ್ಲ ಸ್ಥೂಲನಲ್ಲ, ಸೊರಗಿದವನೂ ಅಲ್ಲ ಉಚ್ಚನೂ ಅಲ್ಲ, ನೀಚನೂ ಅಲ್ಲ ಕುಲವಂತನಲ್ಲ, ಕುಲಹೀನನಲ್ಲ ಪಂಡಿತನಲ್ಲ, ಮೂರ್ಖನೂ ಅಲ್ಲ ನಾನು ದಾತನಲ್ಲ, ಯಾಚಕನೂ ಅಲ್ಲ ಗುರುವಲ್ಲ, ಶಿಷ್ಯನೂ ಅಲ್ಲ ದೇಹವಲ್ಲ, ಮನವಲ್ಲ, ಇಂದ್ರಿಯವಲ್ಲ,—ಇವೆಲ್ಲ ಕರ್ಮೋದಯದಿಂದ ಪುದ್ಗಲಕ್ಕೆ ಒದಗುವ ವಿಕಾರಗಳಾಗಿವೆ ನಾನು ಕೇವಲ ಜ್ಞಾತಾ ಹಾಗೂ ದೃಷ್ಟಾ ಆಗಿರುವೆನು ಇವೆಲ್ಲ ರೂಪಗಳು ಆತ್ಮನಿಗೆ ಸಂಬಂಧಿಸಿದವುಗಳಲ್ಲ, ಪುದ್ಗಲದ ವೇಷಗಳಾಗಿವೆ ಈ ಜಗತ್ತು ನನ್ನದಲ್ಲ ಈ ದೇಶ, ಈ ಪಟ್ಟಣಗಳೆಂಬಿವೆಲ್ಲ ಪರದ್ರವ್ಯಗಳಾಗಿವೆ ಕರ್ಮವು ಇಲ್ಲಿ ನನ್ನನ್ನು ತಂದು ಬಿಟ್ಟಿದೆ ಈಗ ನಾನು ಯಾವ ದೇಶವನ್ನು ಯಾವ ಕ್ಷೇತ್ರವನ್ನು ನನ್ನದೆಂದು ಹೇಳಲಿ! ಮಿಥ್ಯಾದೃಷ್ಟಿಯು ಪರಕೃತಪರ್ಯಾಯಗಳು ತನ್ನವೆಂದು ತಿಳಿಯುತ್ತಾನೆ. ಅವನಿಗೆ ದೇಹ, ಕುಲ, ಧನ, ರಾಜ್ಯ, ಐಶ್ವರ್ಯ, ಮನೆ, ಹೆಂಡತಿ, ಪಟ್ಟಣ, ಕುಟುಂಬ ಇವೇ ಮೊದಲಾದವುಗಳಲ್ಲಿ ತನ್ನತನವು ತೋರುತ್ತದೆ, ಭಾಸವಾಗುತ್ತದೆ. ಈ ವಸ್ತುಗಳು ನಾಶವಾಗುವದರಿಂದಲೂ ಹೆಚ್ಚಾಗುವುದರಿಂದಲೂ ತನಗೆ ಹಾನಿ–ವೃದ್ಧಿಗಳಾಗುವವೆಂದು ತಿಳಿಯುತ್ತಾನೆ ನಾನು ದೊಡ್ಡವನಾದೆ, ನಾನು ಸತ್ತೆ, ನಾನು ಬದುಕಿದೆ, ನನ್ನ ಅಪಮಾನವಾಯಿತು, ನನ್ನದೆಲ್ಲವೂ ಹೋಯಿತು, ನಾನು ಸುಖಿಯಾದೆ—ಇವೇ ಮೊದಲಾದ ಸಂಕಲ್ಪಗಳನ್ನು ಪರವಸ್ತುವಿನಲ್ಲಿ ಮಾಡುವನು. ಇದರಿಂದ ಆರ್ತ, ರೌದ್ರಧ್ಯಾನಗಳು ಪ್ರಾಪ್ತವಾಗುತ್ತವೆ ಅವುಗಳಿಂದ ದುರ್ಗತಿಗೆ ಹೋಗಿ, ಸಂಸಾರದಲ್ಲಿಯೇ ಸುತ್ತುತ್ತಿರಬೇಕಾಗುವದು ಮಿಥ್ಯಾದೃಷ್ಟಿ ಜೀವಕ್ಕೆ ಜಿನಧರ್ಮದ ಸ್ವಲ್ಪ ಜ್ಞಾನವಾದೊಡನೆ ತನ್ನ ಸ್ವಂತ ಕಪೋಲ-ಕಲ್ಪಿತ ವಿಷಯಗಳನ್ನು ಅದಕ್ಕೆ ಸೇರಿಸಿ, ಜನರಿಗೆ ಭ್ರಮವು ಹುಟ್ಟುವಂತೆ ಅನೇಕ ಯುಕ್ತಿಗಳನ್ನು ಯೋಜಿಸಿ, ಮೂಢ ಜನರ ಮುಂದೆ ತನ್ನ ವಿದ್ವತ್ತೆಯ ಹಿರಿಮೆಯನ್ನು ಪ್ರದರ್ಶಿಸುತ್ತಾನೆ, ಆಗಮಕ್ಕೆ ವಿರುದ್ಧವಾದ ಅನೇಕ ಉಪದೇಶಗಳನ್ನು ಮಾಡುತ್ತಾನೆ ಸ್ವಧರ್ಮಕ್ಕೆ ಕೃತಘ್ನನಾಗಿ ಜಿನಶಾಸ್ತ್ರದ ನಿಂದೆಯನ್ನು ಮಾಡುತ್ತಾನೆ. ತನಗಿಂತಲೂ ಹೆಚ್ಚಿಗೆ ಜ್ಞಾನವಿರುವ ವಿದ್ವಾಂಸರ ನಿಂದೆಯನ್ನು ಮಾಡುತ್ತಾನೆ ದುರಭಿಮಾನಿಗಳಾದ ನಾಲ್ಕು ಜನರು ಅವನ ಮಾತಿಗೆ ಮನ್ನಣೆಯನ್ನು ಕೊಟ್ಟರೆ ತೀರಿತು, ಅವನಿಗೆ ತನ್ನ ಜಾಣತನದ ಅಭಿಮಾನವು ನೆತ್ತಿಗೇರುತ್ತದೆ. ಆಗ ಸ್ಯಾದ್ವಾದ ಸ್ವರೂಪಿಯಾದ ಜಿನವಾಣಿಯ ವಿರುದ್ಧ ಏಕಾಂತ ರೂಪದಲ್ಲಿ ತತ್ತ್ವವನ್ನು ಪ್ರತಿಪಾದಿಸಲಿಕ್ಕೆ ಹತ್ತುವನು ಇದರಿಂದ ಅನೇಕ ಪ್ರಕಾರದ ವಿಸಂಗತ ವಾದಗಳೂ ಕಲಹಗಳೂ ಉತ್ಪನ್ನವಾಗುತ್ತವೆ. ಇವರಲ್ಲದೆ ಇನ್ನೂ ಅನೇಕ ಪ್ರಕಾರದ ಮಿಥ್ಯಾದೃಷ್ಟಿಗಳೂ ಇದ್ದಾರೆ ಅವರು ಹೊರಗಿನ ಸ್ವಲ್ಪ ತ್ಯಾಗ ಮಾಡುವುದರಲ್ಲಿಯೂ ಸ್ನಾನಾದಿ ಬಾಹ್ಯ ಕ್ರಿಯೆಗಳಲ್ಲಿಯೇ ಧರ್ಮವಿದೆಯೆಂದೂ ತಿಳಿಯುತ್ತಾರೆ. ಅನ್ಯದೇವರಿಗೆ ವಂದನೆ ಮಾಡದೆ ಇರುವುದರಲ್ಲಿಯೇ ತಮ್ಮ ಮಹಾಧರ್ಮನಿಷ್ಠೆಯು ವ್ಯಕ್ತವಾಗುತ್ತದೆಂದು ತಿಳಿದು, ಉಳಿದ ಜೀವಗಳ ನಿಂದೆಯನ್ನೂ ತಮ್ಮ ಹೊಗಳಿಕೆಯನ್ನೂ ಮಾಡಿಕೊಳ್ಳುತ್ತಾರೆ ಅವರು ಅನ್ಯಾಯದಿಂದ ಬಾಳುವುದರಲ್ಲಿಯೂ ಹಿಂಸೆಯೇ ಮೊದಲಾದ ಆರಂಭಿಕ ಕ್ರಿಯೆ-ಗಳನ್ನು ಮಾಡುವುದರಲ್ಲಿಯೂ ನಿರತರಿರುತ್ತಾರೆ. ಅವರು ಯಾವಾಗಲೂ ಅನ್ಯಧರ್ಮೀಯರ ಛಿದ್ರಗಳನ್ನು ನೋಡುತ್ತ ತಿರುಗುತ್ತಾರೆ. ನಿರ್ದೋಷನಾದ ಪುರುಷನ ಮೇಲೆಯೂ ಸುಳ್ಳು ಸುಳ್ಳೇ ದೋಷಗಳನ್ನು ಹೊರಿಸುತ್ತಾರೆ ಸೊಕ್ಕಿನಿಂದ ಉನ್ಮತ್ತರಾಗಿ ತಾವೇ ಶ್ರೇಷ್ಠರೆಂದು ತಿಳಿಯುತ್ತಾರೆ ಅನ್ಯರನ್ನು ನೀಚ, ಅಜ್ಞಾನಿ, ಭ್ರಷ್ಟರೆಂದು ತಿಳಿಯುವ ಕಡೆಗೆ ಅವರ ಪ್ರವೃತ್ತಿಯಿರುತ್ತದೆ. ಹೀಗೆ ಈ ಪಾಪಿಗಳು ತಮ್ಮ ಸ್ತುತಿಯಿಂದ ಉಬ್ಬಿದಂತೆ ಸ್ವೇಚ್ಛಾಚಾರಿಗಳು ಆಗುತ್ತಾರೆ ತಮ್ಮ ಸ್ವರೂಪದ ಶುದ್ಧತೆಯ ಕಡೆಗೆ ಮೂಲದಲ್ಲಿಯೇ ಲಕ್ಷ್ಯವಿರುವದಿಲ್ಲ ಇವರು ತಮ್ಮ ಮನ ಬಂದಂತೆ ಅನೇಕ ಪ್ರಕಾರದ ಸುಳ್ಳು ಉಪದೇಶಗಳನ್ನು ಬಾಲಕ ಜನರಿಗೆ ಮಾಡಿ, ಅವರನ್ನು ಬುದ್ಧಿಭ್ರಷ್ಟ ಮಾಡುತ್ತಾರೆ ತಾವು ಕುದೇವ, ಕುಗುರುಗಳಿಗೆ ನಮಸ್ಕಾರ ಮಾಡುವದನ್ನು ತ್ಯಾಗಮಾಡಿ, ಅನ್ಯ ದೇವರ ನಿಂದೆಯನ್ನು ಮಾಡುತ್ತಾರೆ. ದೊಡ್ಡ ಸಭೆಗಳಲ್ಲಿ ಅನ್ಯ ಧರ್ಮದ ಸಾಧುಗಳನ್ನು ನಿಂದಿಸಿ, ತಾವೆ

ಸಮ್ಯಗ್ದೃಷ್ಟಿಯಾಗಿದ್ದೇವೆಂದು ಜನತೆಗೆ ಭಾಸವಾಗುವಂತೆ ಮಾಡುತ್ತಾರೆ. ಅಲ್ಲದೆ ಜನರು ಯಾವಾಗಲೂ ತನಗೆ ದೊಡ್ಡವನೆನ್ನಲಿ-ಎಂದು ಪ್ರಯತ್ನಿಸುತ್ತ ಇರುತ್ತಾರೆ ಕುಗುರು, ಕುದೇವರಿಗೆ ಪಶು, ನಾರಕಿ, ಮತ್ತು ಭೋಗಭೂಮಿಯೊಳಗಿನ ಜನರೂ ಸಹ ನಮಸ್ಕಾರ ಮಾಡುವದಿಲ್ಲ, ಪೂಜೆಯನ್ನೂ ಮಾಡುವದಿಲ್ಲ ಕೇವಲ ನಮಸ್ಕಾರ, ಪೂಜೆಗಳನ್ನು ಮಾಡದೆ ಇರುವುದರಿಂದಲೇ ಯಾರಾದರೂ ಸಮ್ಯಗ್ದೃಷ್ಟಿಯಾಗುತ್ತಿದ್ದರೆ ಎಲ್ಲ ನರಕ, ತಿರ್ಯಂಚ, ಮಾನವರು ಸಮ್ಯಗ್ದೃಷ್ಟಿಗಳಾಗುತ್ತಿದ್ದರು ಆದರೆ ನಿಜವಾದ ಸ್ಥಿತಿಯು ಹಾಗಿಲ್ಲ ಜಗತ್ತಿನೊಳಗಿನ ಎಲ್ಲ ಮಿಥ್ಯಾದೃಷ್ಟಿ ಜೀವಗಳ ಹಾಗೂ ದೇವರ ನಿಂದೆ ಮಾಡುವುದರಿಂದ ಸಮ್ಯಕ್ತ್ವವು ಪ್ರಾಪ್ತವಾಗುವದಿಲ್ಲ. ಜಗತ್ತಿನ ನಿಂದೆ ಮಾಡುವವನೂ ಪಾಪಿಗಳ ವೈರ ಮಾಡುವವನೂ ನಿಶ್ಚಿತವಾಗಿ ದುರ್ಗತಿಗೆ ಹೋಗುತ್ತಾನೆ ಅನಾದಿ ಕಾಲದಿಂದಲೂ ಜೀವದ ಮಿಥ್ಯಾಪ್ರವೃತ್ತಿಯು ಆಗುತ್ತಲೇ ಬಂದಿದೆ ಸಮ್ಯಗ್ದೃಷ್ಟಿಯುಳ್ಳವರು ಇಂಥ ಜೀವಗಳ ಕಡೆಗೆ ಕರುಣೆಯಿಂದ ನೋಡಿ, ಅವರ ವಿಷಯದಲ್ಲಿ ಸಮಭಾವವನ್ನು ತಾಳಿದ್ದಾರೆ ಇದರಿಂದ ಸಮ್ಯಗ್ದರ್ಶನವೆಂಬುದು ಆತ್ಮನ ಮೇಲಿನ ಸತ್ಯ ಶ್ರದ್ಧೆಯ ಮೇಲೆ ಅವಲಂಬಿಸಿರುತ್ತದೆಂದು ಗೊತ್ತಾಗುವದು ಆ ಸತ್ಯ ಶ್ರದ್ಧೆಯು ಜ್ಞಾನ ಹಾಗೂ ವಿನಯಗಳಿಂದ ಕೂಡಿದ ಸ್ಯಾದ್ವಾದ ಪರಮಾಗಮದ ಅಭ್ಯಾಸದಿಂದ ದೊರೆಯುತ್ತಿರುತ್ತದೆ "

ಈ ಪ್ರಕಾರ ಶ್ರೀ ಸಮಂತಭದ್ರಸ್ವಾಮಿಗಳು ರಚಿಸಿದ ರತ್ನಕರಂಡ ಶ್ರಾವಕಾಚಾರದ ಮೂಲಸೂತ್ರವುಳ್ಳ ಗ್ರಂಥದಲ್ಲಿ ಪಂಡಿತ ಸದಾಸುಖಜಿಯವರ ಹಿಂದೀ ಭಾಷೆಯ ಅರ್ಥವನ್ನು ಅನುಸರಿಸಿ, ಕನ್ನಡ ಭಾಷೆಯೊಳಗೆ ವಿವರಿಸಿದ ಈ ಗ್ರಂಥದಲ್ಲಿ "ಸಮ್ಯಗ್ದರ್ಶನದ ಸ್ವರೂಪ ವರ್ಣನ" ಎಂಬ ಅಧ್ಯಾಯವು ಸಮಾಪ್ತವಾಯಿತು

ಹರಿಯಾದ್ಯೈ ದೇವನಾದ್ಯೈ ಖಚರ ರಮಣನಾದ್ಯೈ ಮರುಸ್ಮಾಖ್ಯನಾದ್ಯೈ
ಹರಿಷೇಣಾಭಿಖ್ಯನಾದ್ಯೈ ತ್ರಿದಿವಜನಿತನಾದ್ಯೈ ಸುಚಕ್ರೇಶನಾದ್ಯೈ ।
ಸುರನಾದ್ಯೈ ನಂದನಾದ್ಯೈ ಕ್ಷಿತಿತಳಪತಿಯಾದ್ಯೈ ನಿಳಿಂಪೇಶನಾದ್ಯೈ
ವರವೀರ ಸ್ವಾಮಿಯಾದ್ಯೈ ಬಟೀಕ ಶಿವಗತಿ ಶ್ರೀಶನಾದ್ಯೈ ಮಹಾತ್ಮಾ ॥

—ಆಚಣ್ಣ-ವರ್ಧಮಾನಪುರಾಣಮ್ ೧೬-೭೭.

# ಜ್ಞಾನಾಧಿಕಾರ

ಸಮ್ಯಗ್ಜ್ಞಾನದ ಸ್ವರೂಪ—

ಅನ್ಯೂನಮನತಿರಿಕ್ತಂ ಯಾಥಾತಥ್ಯಂ ವಿನಾ ಚ ವಿಪರೀತಾತ್ ।
ನಿಃಸಂದೇಹಂ ವೇದ ಯದಾಹುಸ್ತಜ್ಞಾನಮಾಗಮಿನಃ ॥ ೪೨ ॥

ಅನ್ವಯಾರ್ಥ—(ಯತ್) ಯಾವದು (ಅನ್ಯೂನಂ) ಕೊರತೆ ಇಲ್ಲದುದು (ಅನತಿರಿಕ್ತಂ) ಹೆಚ್ಚಿಗೂ ಇಲ್ಲದುದು (ವಿಪರೀತಾತ್ ವಿನಾ) ವಿಪರೀತವಿಲ್ಲದುದು (ಯಾಥಾತಥ್ಯಂ) ಹೇಗಿರುವುದೋ ಹಾಗೆ (ನಿಃಸಂದೇಹಂ) ಸಂಶಯವಿಲ್ಲದ ಹಾಗೆ ಇರುವ—(ವೇದ) ಅರಿಯುವದು (ತತ್) ಅದಕ್ಕೆ (ಆಗಮಿನಃ) ಆಗಮಶಾಸ್ತ್ರಗಳನ್ನು ಬಲ್ಲವರು (ಜ್ಞಾನಂ) ಸಮ್ಯಗ್ಜ್ಞಾನ—ಎಂದು (ಆಹುಃ) ಎನ್ನುವರು

ಅರ್ಥ—ವಸ್ತುವಿನ ಸ್ವರೂಪವನ್ನು ಪೂರ್ಣವಾಗಿ ತಿಳಿದಿರಬೇಕು, ಅಪೂರ್ಣವಾಗಿ ತಿಳಿದಿರಕೂಡದು; ವಸ್ತುವಿನ ಸ್ವರೂಪವನ್ನು ಇರುವುದಕ್ಕಿಂತ ಹೆಚ್ಚಿಗೂ ತಿಳಿದಿರಬಾರದು, ವಸ್ತುವಿನ ಸತ್ಯಸ್ವರೂಪವು ಹೇಗಿರುವುದೋ

---

[1] ಆಯತವರ್ಮನು ಹೇಳುವದು ಹೀಗೆ

ಕಂದ ॥ ಕುಂದುಂ ಪೆರ್ಚುಂ ಪೆರತೊಂದ[೦] ದವು ಮಣವಿಲ್ಲದುಳ್ಳಗುಣದೋಷಮುಮ-
ಳ್ಳಂದದೆ ಪೇಳ್ವುದು ನಿಶ್ಚಯಮೆಂದುಂ ಸಂಜ್ಞಾನವೆಂದು ಪೇಳ್ವರ್ವಿಬುಧರು ॥

ಅದೆಂತೆಂದೊಡೆ ಈ ೨ನೆಯ ಅಧ್ಯಾಯದೊಳು ಸಮ್ಯಗ್ಜ್ಞಾನಸ್ವರೂಪಮಂ ನಿರೂಪಿಸುಗುಮದು ವಿಕಲ್ಪದಿಂ ಮತಿಶ್ರುತಾವಧಿ ಮನಃಪರ್ಯಯ ಕೇವಲಜ್ಞಾನವೆಂದು ಪಂಚವಿಧಮಲ್ಲಿ ಶ್ರುತಜ್ಞಾನದ ವಿಕಲ್ಪಸೆ ಕಿರಿದನರಿಪುವೆನವಾವುವೆಂದೊಡೆ —ಪ್ರಥಮಾನುಯೋಗಂ, ಕರಣಾನುಯೋಗಂ, ಚರಣಾನುಯೋಗಂ, ದ್ರವ್ಯಾನುಯೋಗಮೆಂಬ ಅನುಯೋಗಂ ನಾಲ್ಕು

ಹಾಗೆಯೇ ತಿಳಿದಿರುವುದು, ವಿಪರೀತವಾಗಿಯೂ ತಿಳಿಯಕೂಡದು; ಸಂಶಯ ರಹಿತವಾಗಿರಬೇಕು—ಈ ಎಲ್ಲ ಗುಣಗಳಿಂದ ಕೂಡಿದ ಜ್ಞಾನಕ್ಕೆ ಆಗಮಗಳನ್ನು ತಿಳಿದಂಥ ಗಣಧರ ಮೊದಲಾದವರು ಸಮ್ಯಗ್‌ಜ್ಞಾನವೆಂದು ಹೇಳಿದ್ದಾರೆ [ಇಲ್ಲಿ ಸಮ್ಯಗ್‌ಜ್ಞಾನವನ್ನು ಆಚಾರ್ಯರೂ 'ಅನ್ಯೂನಂ', 'ಅನತಿರಿಕ್ತಂ', 'ವಿಪರೀತಾದ್ವಿನಾ' ಮತ್ತು 'ನಿಃಸಂದೇಹಂ' ಎಂಬ ನಾಲ್ಕು ವಿಶೇಷಣಗಳಿಂದ ಸ್ಪಷ್ಟಪಡಿಸಲು ಯತ್ನಿಸಿದ್ದಾರೆ ಇದಕ್ಕೆ ಪ್ರಭಾಚಂದ್ರಾಚಾರ್ಯರು ಅರ್ಥವನ್ನು ವಿವರಿಸುತ್ತ ಹೀಗೆ ಹೇಳಿದ್ದಾರೆ—'ಜೀವಾದಿ ವಸ್ತುಗಳ ಸ್ವರೂಪದಲ್ಲಿ ಸಂಪೂರ್ಣವಾಗಿ ನಿತ್ಯತ್ವವಾಗಲಿ, ಕ್ಷಣಿಕತ್ವವಾಗಲಿ ಇರುವದಿಲ್ಲ ಈ ಧರ್ಮಗಳು ಹಾಗೆ ಇರುತ್ತವೆಂದು ಕಲ್ಪಿಸಿ, ಆಯಾ ವಸ್ತುಗಳ ರೂಪವನ್ನು ತಿಳಿಯುವುದು ವಸ್ತುಸ್ಥಿತಿಗೆ ವಿಪರೀತವಾಗಿ ತಿಳಿದುಕೊಂಡಂತೆ ಆಗುವದು. ಅದರಿಂದ ಸಮ್ಯಗ್‌ಜ್ಞಾನವೆಂಬುದು ಕೊರತೆ, ಹೆಚ್ಚಳ, ವಿಪರೀತತೆ, ಸಂಶಯಗಳು ಇಲ್ಲದಂಥದ್ದಿರುತ್ತದೆ ಶ್ರುತಜ್ಞಾನದ ಈ ರೂಪವು ಕೇವಲಜ್ಞಾನದಂತೆಯೇ ಪದಾರ್ಥದ ಸ್ವರೂಪವನ್ನು ಅವಿಕಲರೂಪದಲ್ಲಿ ಪ್ರಕಟಪಡಿಸುವ ಸಾಮರ್ಥ್ಯವನ್ನು ಪಡೆಯುವ ಸಂಭವವಿದೆ ಅದನ್ನು ಸ್ವಾಮಿ ಸಮಂತಭದ್ರರು ತಮ್ಮ 'ದೇವಾಗಮ'ದಲ್ಲಿ ಸ್ಪಷ್ಟಗೊಳಿಸಿದ್ದಾರೆ—"ಸ್ಯಾದ್ವಾದ ರೂಪದಲ್ಲಿರುವ ಶ್ರುತಜ್ಞಾನವು ಮತ್ತು ಕೇವಲ ಜ್ಞಾನವು ಇವೆರಡೂ ಸರ್ವತತ್ತ್ವಗಳನ್ನು ಪ್ರಕಟಪಡಿಸುವ ಸಾಮರ್ಥ್ಯವುಳ್ಳವು ಇರುತ್ತವೆ ಆದರೆ ಒಂದು ಸಾಕ್ಷಾತ್‌ರೂಪದಲ್ಲಿ ಇನ್ನೊಂದು ಅಸಾಕ್ಷಾತ್‌ರೂಪದಲ್ಲಿ (ಪ್ರತ್ಯಕ್ಷ ಮತ್ತು ಪರೋಕ್ಷ) ಪ್ರಕಟಪಡಿಸುತ್ತವೆ. ಇಷ್ಟೇ ಅಂತರವಿದೆ"[1] ಈ ಸ್ವರೂಪದಲ್ಲಿರುವ ಸಮ್ಯಜ್ಞಾನವನ್ನು ಈ ರತ್ನಕರಂಡದಲ್ಲಿ ಧರ್ಮದ ಅಂಗವೆಂದು ಸ್ವೀಕರಿಸಲಾಗಿದೆ. ಸ ಥ ]

ವಿಶೇಷಾರ್ಥ—ವಿಪರೀತ ಜ್ಞಾನ. ಯಾವ ಜ್ಞಾನವು ವಸ್ತುವಿನ ಸ್ವರೂಪವನ್ನು ಅಪೂರ್ಣವಾಗಿ ತಿಳಿಯುತ್ತದೆಯೋ ಆ ಜ್ಞಾನವು ಮಿಥ್ಯಾಜ್ಞಾನವೆನಿಸುತ್ತದೆ. ಉದಾಹರಣೆಗಾಗಿ, ಆತ್ಮನ ಸ್ವಭಾವವೂ ಅನಂತಜ್ಞಾನ ಸ್ವರೂಪವುಳ್ಳದು ಇದ್ದೂ ನಾವು ಅದನ್ನು ಇಂದ್ರಿಯಗಳಿಂದ ಹುಟ್ಟುವ ಮತಿಜ್ಞಾನ ಮಾತ್ರ ಉಳ್ಳದೆಂದು ತಿಳಿಯುವುದು ಮಿಥ್ಯಾಜ್ಞಾನವಾಗಿದೆ. ಇದು ಕೊರತೆಯಿಂದ ಕೂಡಿದ ಜ್ಞಾನವಾದುದರಿಂದ ಮಿಥ್ಯವೆನಿಸುತ್ತದೆ ಇದರಂತೆ ವಸ್ತುವಿನ ಸ್ವರೂಪವನ್ನು ಇದ್ದುದಕ್ಕಿಂತ ಹೆಚ್ಚಿಗೆ ಇದೆಯೆಂದು ತಿಳಿಯುವುದೂ ಮಿಥ್ಯಾಜ್ಞಾನವೆನಿಸುತ್ತದೆ ಅದು ಹೀಗೆ—ಆತ್ಮನ ಸ್ವಭಾವವು ಜ್ಞಾನ–ದರ್ಶನ–ಸುಖ–ಸತ್ತಾತ್ಮಕವಾಗಿದೆ ಅಮೂರ್ತಿಕವೂ ಇದೆ. ಇದಿಷ್ಟನ್ನು ತಿಳಿಯುವದಲ್ಲದೆ ಆತ್ಮನಲ್ಲಿ ಪುದ್ಗಲದ ಗುಣಗಳಾದ ರೂಪ, ರಸ, ಗಂಧ, ವರ್ಣ ಮೊದಲಾದವುಗಳೂ ಮೂರ್ತಿಕ ಸ್ಥಿತಿಯೂ ಇದೆಯೆಂದು ತಿಳಿದುಕೊಳ್ಳುವುದು—ಅಧಿಕ ಜ್ಞಾನವಾಗಿದೆ—ಮಿಥ್ಯಾಜ್ಞಾನವಾಗಿದೆ ಶಿಂಪಿಯ ಹೊಳಪು ಹಾಗೂ ಬಿಳಿಯ ವರ್ಣಗಳನ್ನು ನೋಡಿ, ಅದನ್ನು ಬೆಳ್ಳಿಯೆಂದು ತಿಳಿಕೊಳ್ಳುವುದು, ವಿಪರೀತ ಜ್ಞಾನವಾಗಿದ್ದು, ಮಿಥ್ಯಾಜ್ಞಾನವೆನಿಸುತ್ತದೆ. ಅದು ಬೆಳ್ಳಿಯೋ ಶಿಂಪಿಯೋ ಎಂಬ ಸಂಶಯಪಡುತ್ತ, ಯಾವ ನಿಶ್ಚಿತ ತಿಳುವಳಿಕೆಗೂ ಬಾರದೆ ಇರುವುದು ಸಂಶಯಜ್ಞಾನವಾಗಿದೆ ಇದೂ ಮಿಥ್ಯಾಜ್ಞಾನವಾಗಿದೆ ಈ ಪ್ರಕಾರ ವಸ್ತುವಿನ ಸ್ವರೂಪವನ್ನು ಕಡಿಮೆ, ಹೆಚ್ಚು, ವಿರೋಧ ಮತ್ತು ಸಂಶಯರೂಪಗಳಲ್ಲಿ ತಿಳಿಯುವುದು ಮಿಥ್ಯಾಜ್ಞಾನವಾಗಿದೆ

ಸಮ್ಯಗ್‌ಜ್ಞಾನ. ವಸ್ತುವಿನ ಸ್ವರೂಪವು ಹೇಗಿರುತ್ತದೋ ಹಾಗೆಯೇ ತಿಳಿದುಕೊಳ್ಳುವುದಕ್ಕೆ ಸಮ್ಯಗ್‌ಜ್ಞಾನವೆನ್ನುವರು ಹೇಗೆ ಹದಿನಾರೆಂಬ ಸಂಖ್ಯೆಗೆ ಐದರಿಂದ ಗುಣಿಸಲು ಎಂಬತ್ತು ಆಗುವುದೋ ಹಾಗೆ ಅದಕ್ಕ ಎಪ್ಪತ್ತೆಂಟು ಎನ್ನುವುದು ಕಡಿಮೆಯಾಗಿ ತಿಳಿದುಕೊಳ್ಳುವಿಕೆಯಾಗಿದೆ. ಎಂಬತ್ತೆರಡು ಎನ್ನುವುದು ಹೆಚ್ಚಿಗೆ ತಿಳಿದುಕೊಂಡಂತೆ ಇನ್ನು ಎಂಬತ್ತಕ್ಕೆ ಹದಿನಾರೆಂದು ತಿಳಿಯುವುದು ವಿಪರೀತ ಜ್ಞಾನವಾಗಿದೆ ಇನ್ನು ಹದಿನಾರಕ್ಕೆ ಐದರಿಂದ ಗುಣಿಸಿದರೆ ಎಂಬತ್ತಾಗುವುದೋ, ಇಲ್ಲವೋ ಏನೋ—ಎಂದು ಭಾವಿಸುವುದು ಸಂಶಯಜ್ಞಾನವಾಗಿದೆ ಈ ಪ್ರಕಾರ ಕಡಿಮೆ, ಹೆಚ್ಚು, ವಿರುದ್ಧ, ಸಂಶಯದಿಂದ ಕೂಡಿದ—ಈ ನಾಲ್ಕು ಪ್ರಕಾರದ ಜ್ಞಾನಕ್ಕೆ ಮಿಥ್ಯಾಜ್ಞಾನವೆನ್ನುವರು. ಇನ್ನು ಯಾವ ಜ್ಞಾನವೂ ವಸ್ತುವಿನ ಸ್ವರೂಪವನ್ನು ಕಡಿಮೆಯಾಗಿ ತಿಳಿದುಕೊಳ್ಳುವದಿಲ್ಲ, ಹೆಚ್ಚಾಗಿಯೂ ತಿಳಿದುಕೊಳ್ಳುವದಿಲ್ಲ, ವಿರುದ್ಧವೂ ತಿಳಿದುಕೊಳ್ಳುವದಿಲ್ಲ, ಸಂಶಯಾತ್ಮಕವಾಗಿಯೂ ಇರುವದಿಲ್ಲ, ಅಂಥ ಜ್ಞಾನವು ವಸ್ತುವಿನ ಸ್ವರೂಪವು ಹೇಗಿರುವುದೋ ಹಾಗೆ ಸಂಶಯರಹಿತವಾಗಿ ಅರಿತುಕೊಳ್ಳುವುದು—ಅದಕ್ಕೆ ಸಮ್ಯಗ್‌ಜ್ಞಾನವೆನ್ನುವರು

---

1 ಸ್ಯಾದ್ವಾದ–ಕೇವಲಜ್ಞಾನೇ ಸರ್ವ-ತತ್ತ್ವ-ಪ್ರಕಾಶನೇ ।
ಭೇದಃ ಸಾಕ್ಷಾದಸಾಕ್ಷಾಚ್ಚ ಹ್ಯವಸ್ತ್ವನ್ಯತಮಂ ಭವೇತ್ ॥ —ದೇವಾಗಮ ೧೦೫

ನಿಜಪಂ ತಪ್ಪದೆ ನೋಡುವ ನಿಜಮಂ ಪಲ್ಲಟಿಸುವರಿವ ತದ್ವಯ ಸಹಿತಂ ।
ನಿಜದೊಳ್ ಚರಿಯಿಪ ಪರಿಣತಿ ವೃಜಿನಘ್ನಂ ಶುದ್ಧ ದರ್ಶನಂ ತಾನೆನಿಕುಂ ॥
—ಶ್ರೀಮಾಘನಂದಿ-ಶಾಸ್ತ್ರಸಾರಸಮುಚ್ಚಯ ಟೀಕು-ಚರಣಾನುಯೋಗ ೪೭.

ವಿಷಯಭೇದದಿಂದ ಆಗುವ ಸಮ್ಯಗ್ಜ್ಞಾನದ ನಾಲ್ಕು ಮುಖ್ಯ ಭೇದಗಳನ್ನು ಮುಂದೆ ಕ್ರಮದಿಂದ ವರ್ಣಿಸಿದ್ದಾರೆ.

ಪ್ರಥಮಾನುಯೋಗದ ಸ್ವರೂಪ ಹೇಳುತ್ತಾರೆ—

ಪ್ರಥಮಾನುಯೋಗಮರ್ಥಾಖ್ಯಾನಂ ಚರಿತಂ ಪುರಾಣಮಪಿ ಪುಣ್ಯಮ್ ।
ಬೋಧಿಸಮಾಧಿನಿಧಾನಂ ಬೋಧತಿ ಬೋಧಃ ಸಮೀಚೀನಃ ॥ ೪೩ ॥ [1]

ಅನ್ವಯಾರ್ಥ—(ಸಮೀಚೀನಃ ಬೋಧಃ) ಸಮ್ಯಗ್ಜ್ಞಾನವು (ಅರ್ಥಾಖ್ಯಾನಂ) ಧರ್ಮವೇ ಮೊದಲಾದ ನಾಲ್ಕು ಪುರುಷಾರ್ಥಗಳ ನಿರೂಪಣೆಯು ಯಾವುದರಲ್ಲಿದೆಯೋ ಆ (ಚರಿತಂ) ಚರಿತ್ರವನ್ನು (ಪುರಾಣಂ) ಪುರಾಣವನ್ನು (ಅಪಿ) ಹಾಗೆಯೇ (ಪುಣ್ಯಂ) ಪುಣ್ಯದಾಯಕವಾದ (ಬೋಧಿ ಸಮಾಧಿನಿಧಾನಂ) ರತ್ನತ್ರಯ ಮತ್ತು ಧರ್ಮಶುಕ್ಲ ಧ್ಯಾನ ಇವುಗಳ ತವರುಮನೆಯಾದಂಥ (ಪ್ರಥಮಾನುಯೋಗಂ) ಪ್ರಥಮಾನುಯೋಗ ಶಾಸ್ತ್ರವನ್ನು ತಿಳಿಯುತ್ತದೆ.

ಅರ್ಥ—ಸಮ್ಯಗ್ಜ್ಞಾನವು ಪ್ರಥಮಾನುಯೋಗವನ್ನು ತಿಳಿದುಕೊಂಡಿರುತ್ತದೆ. ಅದರಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಈ ನಾಲ್ಕು ಪುರುಷಾರ್ಥಗಳ ವರ್ಣನೆಯು ಇರುತ್ತದೆ. ಅಲ್ಲದೆ ಒಬ್ಬೊಬ್ಬರ ಚರಿತ್ರೆಗಳೂ ಅರವತ್ತು ಮೂರು ಶಲಾಕಾಪುರುಷರ ಕಥೆಗಳೂ ಅದರಲ್ಲಿ ಇವೆ. ಅಂತಲೇ ಅವುಗಳಿಗೆ ಪುರಾಣ ಎಂದು ಹೆಸರಿದೆ. ಸಮ್ಯಗ್ದರ್ಶನಾದಿಗಳು ಯಾರಿಗೆ ಲಭಿಸಿಲ್ಲವೋ ಅವರಿಗೆ ಅವು ಪ್ರಾಪ್ತವಾಗುವುದಕ್ಕೆ ಬೋಧಿ ಎನ್ನುವರು. ಇನ್ನು ಪ್ರಾಪ್ತವಾದ ಸಮ್ಯಗ್ದರ್ಶನವೇ ಮೊದಲಾದ ಗುಣಗಳು ಪೂರ್ಣತೆಯನ್ನು ಹೊಂದುವುದೇ ಸಮಾಧಿಯಾಗಿದೆ. ಇಂಥ ಬೋಧಿ ಸಮಾಧಿಗಳೆರಡಕ್ಕೂ—ರತ್ನತ್ರಯಗಳ ಉತ್ಪತ್ತಿ ಹಾಗೂ ಪೂರ್ಣತೆಗಳೆರಡಕ್ಕೂ—ಪ್ರಥಮಾನುಯೋಗವು ಸ್ಥಾನವಾಗಿದೆ ಅಂತಲೇ ಅದಕ್ಕೆ ಬೋಧಿ—ಸಮಾಧಿಗಳ ನಿಧಾನವೆಂದು ಹೇಳಿದೆ ಇನ್ನು ಪುಣ್ಯವು ಪ್ರಾಪ್ತವಾಗುವುದಕ್ಕೆ ಕಾರಣವಾಗಿರುವುದರಿಂದ ಅದಕ್ಕೆ ಪುಣ್ಯ ಎಂದು ಸಂಜ್ಞೆಯು ಇರುತ್ತದೆ. ಈ ಪ್ರಕಾರದ ಪ್ರಥಮಾನುಯೋಗವನ್ನು ಸಮ್ಯಗ್ಜ್ಞಾನವು ಅರಿತಿರುತ್ತದೆ. [ಇಲ್ಲಿ ಅನುಯೋಗ ಪದದ ಹಿಂದೆ ಪ್ರಯೋಗಿಸಿರುವ

---

[1] ಆಯುತಪವರ್ಮನು ಹೇಳುವದು ಹೀಗೆ ಅವರೊಳು ಪ್ರಥಮಾನುಯೋಗಮಾವುದೆಂದೊಡೆ—
ಕಂದ ॥ ಶ್ರೀನಿಳಯಮೆನಿಪಂ ಸಮ್ಯಗ್ಜ್ಞಾನಂ ಪ್ರಥಮಾನುಯೋಗಮುಮುಳಂ ತ್ರಿವಿಧಂ ।
ತಾನಕ್ಕುಂ ನೆಗಳ್ದರ್ಥಾಖ್ಯಾನಂ ಚರಿತಂ ಪುರಾಣಮೆಂದೀ ಕ್ರಮದಿಂ ॥
ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಕೈಕೊಂಡುದು ಮೊದಲಾಗಿ ಯಶೋಧರಂ, ಧನ್ಯಕುಮಾರಂ, ಸುಕುಮಾರಂ, ಮೊದಲಾಗೊಡೆಯ ಭವ್ಯರುಂ ಸ್ವರ್ಗಸುಖಮನೆಯ್ದಿ ಸುಖಮನ್ನಿವರಂ ಪೇಳ್ದುದರ್ಥಾಖ್ಯಾನಮೆಂಬುದಕ್ಕುಂ. ಧರ್ಮಮಂ ಕೈಕೊಂಡಭವಂ ಮೊದಲಾಗಿ ಬಾಹುಬಲಿ, ಮೇಘೇಶ್ವರಂ, ಮೊದಲಾಗೊಡೆಯವರ್ಗಳಂ ನಿರ್ವಾಣ ಮನ್ನೆಯ್ದುವನ್ನೆಗಂ ಪೇಳ್ವುದು ಚರಿತಮೆಂಬುದಕ್ಕುಂ ರತ್ನತ್ರಯಂ ದೊರೆಕೊಂಡಭವಂ ಮೊದಲಾಗಿ. ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ. ಅನಂತ. ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನ . . ಕರದೊಳು ಪುಟ್ಟುವ ಭರತ, ಸಗರ, ಮಘವ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ. ಹರಿಷೇಣ, ಜಯಸೇನ, ಬ್ರಹ್ಮದತ್ತರೆಂಬ ದ್ವಾದಶ ಚಕ್ರವರ್ತಿಗಳ ಶ್ರೀಸಂಪತ್ತಿಯುಮಂ, ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿಷೇಣ. ನಂದಿಮಿತ್ರ, ರಾಮ, ಪದ್ಮರೆಂಬ ನವಬಲದೇವರುಂ, ತ್ರಿಪಿ[ಪೃ?]ಷ್ಟ, ದ್ವಿಪಿ[ಪೃ?]ಷ್ಟ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುರುಷಪುಂಡರೀಕ, ಪುರುಷದತ್ತ, ನಾರಾಯಣ, ಕೃಷ್ಣರೆಂಬೊಂಬತ್ತು ವಾಸುದೇವರುಂ, ಅಶ್ವಗ್ರೀವ, ತಾರಕ, ಮೇರಕ. ನಿಶುಂಭ, ಮಧು-ಕೈಟಭ, ಬಲಿ, ಪ್ರಹರಣ, ರಾವಣ, ಜರಾಸಂಧರೆಂಬೊಂಬದಿಬರುಂ ಪ್ರತಿವಾಸುದೇವರುಮೆಂಬಿವರ್ಗಳ ವಿಭೂತಿಗಳಂ, ಅವರ್ಗಳೆಯ್ದುವ ಸ್ಥಾನಕಮುಮಂ, ಸವಿಸ್ತರಂ ಪೇಳ್ವುದು ಪುರಾಣಮೆಂಬುದಕ್ಕುಮಿಂತಿವಂ ಸವಿಸ್ತರಮಾಗರಿವುದು ಪ್ರಥಮಾನುಯೋಗಮೆಂಬ ಶ್ರುತಜ್ಞಾನಂ

'ಪ್ರಥಮ' ಎಂಬ ಪದವು ಸಂಖ್ಯೆಯ ಇಲ್ಲವೆ ಕ್ರಮದ ನಿದರ್ಶನವಾಗಿರದೆ ಪ್ರಧಾನತೆಯ ಸೂಚಕವಾಗಿದೆ ಇದು ಎಲ್ಲ ಅನುಯೋಗಗಳಲ್ಲಿ ಮಹತ್ವದ್ದಾಗಿದೆ. ಯಾಕೆಂದರೆ ಉಳಿದ ಅನುಯೋಗಗಳಲ್ಲಿಯ ಹಲವು ವಿಷಯಗಳು ಇದರಲ್ಲಿ ಬಂದು ಹೋಗುತ್ತವೆ ಕಥೆಯ ರೂಪದಲ್ಲಿ ಇರುವುದರಿಂದ ಮಕ್ಕಳಿಗೂ, ಮುದುಕರಿಗೂ ಸಹ ತಿಳಿಯುತ್ತದೆ ಇಲ್ಲಿಯ ಕಥೆಗಳನ್ನು ಕೇಳಿ, ಅಲ್ಲಿಯ ಪುಣ್ಯ ಪ್ರಸಂಗಗಳೊಡನೆ ಒಂದಾಗಿ ಹೋಗುವುದರಿಂದ ಧರ್ಮಧ್ಯಾನ, ಶುಕ್ಲಧ್ಯಾನಗಳಂಥ ಸಜೀವ ಸಮಾಧಿಗೆ ಪ್ರೇರಣೆಯು ಒದಗುತ್ತದೆ ಆ ಪುಣ್ಯ ಕಥೆಗಳ ಅನುಭೂತಿಯಿಂದ ಪುಣ್ಯಪ್ರದ ಕಾರ್ಯಗಳಲ್ಲಿ ಮನುಷ್ಯನು ಪ್ರವೃತ್ತನಾಗುತ್ತಾನೆ ಆತ್ಮವಿಕಾಸದ ಮಾರ್ಗಕ್ಕೆ ಹತ್ತುತ್ತಾನೆ ಈ ಅನುಯೋಗಕ್ಕೆ 'ಧರ್ಮಕಥಾನುಯೋಗ' ಎಂದೂ ಕೆಲವು ಕಡೆಗೆ ಹೇಳಿದೆ ಇಲ್ಲಿಯ 'ಅರ್ಥಾಖ್ಯಾನ' ಎಂಬ ಪದಕ್ಕೆ ಪ್ರಭಾಚಂದ್ರಾಚಾರ್ಯರು, 'ಇವು ಅರ್ಥಪೂರ್ಣವಾದ ಕಥೆಗಳು, ಕಲ್ಪಿತ ಕಥೆಗಳಲ್ಲ ' ಎಂದೂ ಅರ್ಥವನ್ನು ವಿವರಿಸಿದ್ದಾರೆ ಅಲ್ಲದೆ ಪರಮಾರ್ಥರೂಪವಾದ ಸತ್ ವಿಷಯವನ್ನು ಪ್ರತಿಪಾದಿಸುವಂಥವಿವೆ [1] ಸ ಧ ]

ವಿಶೇಷಾರ್ಥ—ಧರ್ಮವೆಂದರೇನು? ಧರ್ಮದ ಫಲಸ್ವರೂಪಗಳಾದ ಧನಸಂಪತ್ತು ಮೊದಲಾದ ಅರ್ಥಗಳು—ಪಂಚೇಂದ್ರಿಯಗಳ ವಿಷಯವು ಕಾಮ, ಸಂಸಾರದಿಂದ ಬಿಡುಗಡೆ ಹೊಂದುವುದು ಮೋಕ್ಷ—ಇವುಗಳ ವರ್ಣನೆಯಿದೆ ಒಬ್ಬ ಪುರುಷನ ವರ್ಣನೆಗೆ ಚರಿತ್ರವೆನ್ನುವರು ಅರವತ್ತು ಮೂವರು ಮಹಾಪುರುಷರು—ತ್ರಿಷಷ್ಟಿ ಶಲಾಕಾಪುರುಷರು—ಇವರ ಕಥೆಗಳಿಗೆ ಪುರಾಣವೆನ್ನುವರು ಇವುಗಳನ್ನು ಹೇಳುವವರಿಗೂ ಕೇಳುವವರಿಗೂ ಪುಣ್ಯವು ಪ್ರಾಪ್ತವಾಗುವುದರಿಂದ 'ಪುಣ್ಯರೂಪ'ವೆಂದು ಇವುಗಳಿಗೆ ಹೆಸರಿದೆ ನಾಲ್ಕು ಆರಾಧನೆಗಳ ಪ್ರಾಪ್ತಿಯಾಗಿ ಅವು ಪರಿಪೂರ್ಣವಾಗುವುದಕ್ಕೆ ಈ ಪ್ರಥಮಾನುಯೋಗವು ಸಾಧನವಾಗಿದೆ ಅದರಿಂದ ಇದನ್ನು ಸಮ್ಯಗ್ಜ್ಞಾನವೆಂದೇ ತಿಳಿಯಬೇಕು.

> ನಿಯತಂ ಚತುರನುಯೋಗಪ್ರಯೋಗಪೂರ್ವಾನುಯೋಗಸಾಗರವೀಚೀ- ।
> ಚಯದಿಂ ಪೊಱಪೊಣ್ಮಿದುದತಿಶಯ ಸುಕಥಾಸೂತ್ರರತ್ನರಶ್ಮಿಕಳಾಪಂ ॥
>
> — ಶಾಂತಿನಾಥ-ಸುಕುಮಾರ ಚರಿತಂ ೧-೬೩

ಇನ್ನು ಕರಣಾನುಯೋಗದ ಮಹತ್ವವನ್ನು ಹೇಳುತ್ತಾರೆ—

> **ಲೋಕಾಲೋಕವಿಭಕ್ತೇರ್ಯುಗಪರಿವೃತ್ತೇಶ್ಚತುರ್ಗತೀನಾಂ ಚ ।**
> **ಆದರ್ಶಮಿವ ತಥಾಮತಿರವೈತಿ ಕರಣಾನುಯೋಗಂ ಚ ॥ ೪೪ ॥** [2]

ಅನ್ವಯಾರ್ಥ—(ತಥಾ) ಅದೇ ಪ್ರಕಾರ (ಮತಿಃ) ಸಮ್ಯಗ್ಜ್ಞಾನವು (ಲೋಕಾಲೋಕವಿಭಕ್ತೇಃ) ಲೋಕ ಮತ್ತು ಅಲೋಕಗಳ ಭೇದವನ್ನು (ಯುಗಪರಿವೃತ್ತೇಃ) ಆರು ಕಾಲಗಳ ಪರಿವರ್ತನವನ್ನು (ಚತುರ್ಗತೀನಾಂ) ನಾಲ್ಕು ಗತಿಗಳನ್ನೂ (ಆದರ್ಶಂ ಇವ) ಕನ್ನಡಿಯಂತೆ ಸ್ಪಷ್ಟಗೊಳಿಸುವ (ಕರಣಾನುಯೋಗಂ) ಕರಣಾನುಯೋಗವೆಂಬ ಆಗಮವಿಭಾಗವನ್ನು (ಅವೈತಿ) ತಿಳಿಯುತ್ತದೆ

---

1 "ತಸ್ಯ ಪ್ರಕಲ್ಪಿತತ್ವ-ವ್ಯವಚ್ಛೇದಾರ್ಥಮರ್ಥಾಖ್ಯಾನಮಿತಿ ವಿಶೇಷಣಂ, ಅರ್ಥಸ್ಯ ಪರಮಾರ್ಥಸ್ಯ ಸತೋ ವಿಷಯಸ್ಯಾಖ್ಯಾನಂ ಯತ್ರ ಯೇನ ವಾ ತಂ"

2 ಆಯತವರ್ಮನು ಹೇಳುವದು ಹೀಗೆ

ಕಂದ ॥ ಯುಗ ಪರಿವರ್ತಮುಮಂ ನಾಲ್ಕು [ಂ] ಗತಿಯು [ಗಳು] ಮಂ ಲೋಕಮುಮನಲೋಕಮುಮಂ ।
ಅಗಣಿತಗುಣಮಪ್ಪರಿತಂ ಬಗೆವಡೆ ಕರಣಾನುಯೋಗಮಂಪಡೆಯಾರ್ಗಂ ॥

ವಚನ—ಅದೆಂತೆಂದೊಡೆತ್ತಂ ನೋಳ್ಪಡಂ ಅನಂತಮಪ್ಪಾಕಾಶಮಧ್ಯಪ್ರದೇಶದೊಳು ಚತುರ್ದಶರಜ್ಜೂತ್ಸೇಧಮುಂ ಸಪ್ತೈಕ ಪಂಚೈಕರಜ್ಜುವಿಸ್ತಾರಮುಂ, ವಾತತ್ರಯವೇಷ್ಟಿತಮುಂ, ಷಡ್ದ್ರವ್ಯಸಂಕೀರ್ಣಮುಮನಾದ್ಯನಿಧನಮುಮಕೃತ್ರಿಮಮುಮ-ಧೋಮಧ್ಯೋರ್ಧ್ವಭೇದವಿಭಿನ್ನಮುಂ, ವೇತ್ರಾಸನ ಝಲ್ಲರೀ ಮೃದಂಗ ಸಮಾನಮುಮಪ್ಪ ಲೋಕದಧೋಭಾಗದೊಳಧೋಲೋಕ-ಮೆಂಬುದಕ್ಕುಮಲ್ಲಿ ಲೋಕದ ಕಡೆಗಳಂ ಮುಟ್ಟಿ ರತ್ನಪ್ರಭೆಯುಮಲ್ಲಿದೊಂದು ರಜ್ಜುಪೋದಲ್ಲಿ ಶರ್ಕರಾಪ್ರಭೆಯುಂ, ವಾಲುಕಾಪ್ರಭೆಯುಂ, ಪಂಕಪ್ರಭೆಯುಂ, ಧೂಮಪ್ರಭೆಯುಂ, ತಮಃಪ್ರಭೆಯುಂ, ಮಹಾತಮಃಪ್ರಭೆಗಳಂಬೇಳುಂ ನರಕ ಭೂಮಿಗಳಕ್ಕುಮವರೊಳು—ರತ್ನಪ್ರಭೆಯೊಂದು ಲಕ್ಕೆಯುಮೆಣ್ಬಾಸಿರ ಯೋಜನಮುಂದಮಪ್ಪುದವರೊಳು ಮೂವತ್ತೆರಡುಲಕ್ಕೆ

ಅರ್ಥ—ಮತಿ ಅಂದರೆ ಸಮ್ಯಗ್‌ಜ್ಞಾನವು ಇದು ಕರಣಾನುಯೋಗವನ್ನು ತಿಳಿದುಕೊಂಡಿರುತ್ತದೆ ಕರಣಾನುಯೋಗದಲ್ಲಿ ಲೋಕ-ಅಲೋಕಗಳ ವಿಭಾಗವನ್ನು ವಿವರಿಸಿದೆ, ಉತ್ಸರ್ಪಿಣಿಯ ಆರು ಅವಸರ್ಪಿಣಿಯ ಆರು, ಈ ಕಾಲ ವಿಭಾಗದಲ್ಲಿ ಆಗುವ ಪರಿವರ್ತನಗಳನ್ನು ವರ್ಣಿಸಿದೆ, ನಾಲ್ಕೂ ಗತಿಗಳಲ್ಲಿ ಆಗುವ ಪರಿಭ್ರಮಣಗಳನ್ನೆಲ್ಲ ಕನ್ನಡಿಯಂತೆ ಸ್ಪಷ್ಟವಾಗಿ ಪ್ರತಿಬಿಂಬಿಸಿ ತೋರಿಸಲಾಗಿದೆ. [ಇಲ್ಲಿ ಕರಣಾನುಯೋಗವನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ (೧) ಲೋಕಾಲೋಕ ವಿಭಾಜನ, (೨) ಯುಗಪರಿವರ್ತನ, (೩) ಚತುರ್ಗತಿಗಳ ವಿಭಾಗ. ಇನ್ನು 'ಲೋಕ'ವೆಂಬುದು ೩೪೩ ರಜ್ಜುವಿನ ಅಳತೆಯಲ್ಲಿದೆ ಅದರಲ್ಲಿ ಊರ್ಧ್ವ, ಮಧ್ಯ, ಅಧೋಲೋಕ-ಗಳೆಂಬ ಮೂರು ಭಾಗಗಳಿವೆ ಇದರೊಳಗೆ ಜೀವಾದಿ ಪದಾರ್ಥಗಳು ಇವೆ. ಲೋಕಬಾಹ್ಯವಾದ ಅನಂತಶುದ್ಧ

---

ನರಕ ಬಿಲಂಗಳಕ್ಕುಂ. ಕೆಳಗಣವುಂ ಕ್ರಮದೊಳ್ ಮೂವತ್ತೆರಡುವಿಪ್ಪತ್ತೆಂಟುವಿಪ್ಪತ್ತುನಾಲ್ಕುವಿಪ್ಪತ್ತುಂ ಪದಿನಾರು-ಮೆಂಟುಂ ಸಾಸಿರ ಯೋಜನಂಗಳ ಮಂದ ಭೂಮಿಗಳೊಳ್ಮೊವತ್ತುವಿಪ್ಪತ್ತೈದುಂ ಪದಿನೈದುಂ ಪತ್ತುಂ ಮೂರುಂವೈದು ಗುಂದಿದೊಂದು ಲಕ್ಕೆಗಳುಮೈದುಂ ನರಕ ಬಿಲಂಗಳಕ್ಕುಮಾಬಿಲಂಗಳಿಂದ್ರಕ ಶ್ರೇಢಿ ಬದ್ಧ ಪ್ರಕೀರ್ಣಕಂಗಳೆಂದು ತ್ರಿವಿಧಮಕ್ಕುಂ ಮೇಗಣ ನಾಲ್ಕೈದರ ಮೇಗಣ ಮೂರುಭಾಗಮಕ್ಕುಗ್ರನರಕಂಗಳತ್ಯುಷ್ಣಂಗಳು, ಕೆಳಗಣ ನರಕಂಗಳತ್ಯಂತ ಶೀತಂಗಳಂತವೆಲ್ಲ-ಮತಿದುರ್ಗಂಧಂಗಳತಿ ಭಯಂಕರಂಗಳಕ್ಕಂತ ತಮಂಗಳಂತಪ್ಪ

ಕಂದ ॥ ನರಕದ ಜೀವಂಗಳ ಚಾಳ್ಕರಪುರಿದೆಮೆಯಿಕ್ಕುವನಿತು ಬೇಗಮುಮಂ ಮಾ- ।
ಣ್ಬೆರದೊರೋರ್ವರ ನಸುವೆಯೊಳರೆವುದು ಮೊದಲಾಗಿ ಮಾಳ್ಪರಾ ಮರಣಾಂತಂ ॥

ವಚನ—ಅದೆಂತೆಂದೊಡೆ ಜೀವಂಗಳ್ಪೋಗಿ ನರಕ ಬಿಲಂಗಳ ಮೇಗಣ ಕೆಲಂಗಳೊಳು ನೆಲವುಗಳಂತೆ ನೇಲುತ್ತಂ, ಜೇನಪುಟ್ಟಿಯುಮನೋಷ್ಟಮುಖಗಳನನುಕರಿಸಿದ್ದುರ್ಗದುಗಿನ ಕಾಯಂ ಮಗುಳ್ಚಿಕ್ಕಿದಂತಪ್ಪಯೋನಿಗಳೊಳ್ಪಲಸಿಯುಂತ-ಮೂರ್ಛೂರ್ಶ . . ಮುಮನೊಡೆಯರಾಗಿಯಲ್ಲಿರ್ದು ತಲೆಕೆಳಗಾಗಿ ಒಟ್ಟಿದ ಕೈದುಗಳ ಕರ್ಪೊನ್ನು ಶಿಲೆಗಳ ಮೇಲೆ ನುಚ್ಚುನೂರಾಗಿ ಬಿಳ್ದುಚರಲಾರದೆ ನೆಲನಂ ಕಚ್ಚಿ ಪಟ್ಟಿರ್ದ ನಾರಕರಂ ಪುರಾಣನಾರಕರ್ಕಂಡು ಪರಿತಂದು ಪಿಡಿದುಕೊಂಡು ಗೊಂಕೆಯಂ ನುಲಿದು ಕರಗಸದೊಳ್ಪೋಳ್ದು ಕತ್ತಿಗೆಯೋಳ್ಸೀಳ್ದು ಈಳಿಗೆಯೊಳರಿದು ಕಾವಲಿಯೊಳ್ಹುರಿದು ಕಿವಿಯುಗಿದುಂ ಚೈರಂಡರಿದು ಗಾಣದೊಳ್ ಪಿಳಿದು ಸಣ್ಣಿಗೆಯೊಳ್ ಸಣ್ಣಿಸಿಯಾಗಳಾಗದೆ ಒಡಲಂ ಕೊರಿದೋಡುವ ನಾರಕರ ಬೆನ್ನಂ ಕಗುಳ್ದು ವೈತರಣಿಯೆಂಬ ಕಾಯ್ದ ಲೋಹದ ತೊರೆಯನೀಸಿಸೆಯಲ್ಲಿ ಬೆಂದು ಚೀಕರಿವೋಗೆ ಮಗುಳೆ ಓಡುವರಂ ಕೂಟಶಾಲ್ಮಲಿ ವೃಕ್ಷಂಗಳನಡರವೇಳ್ದಿಂದಿರು ಬಳಿಯಂ ಉರ್ಜಿಯಸಿಪತ್ರನಂದನವನಮಂ ಪುಗಿಸಿ ಸಿಂಹವ್ಯಾಘ್ರಾದಿ ಕೋಳ್ಮೃಗಗಳಂತೆ ಬಂದು ಗರ್ಜಿಸಿಯಂದೋರೊರ್ವರ ವೈರಕಾರಣಮಂ ಮೂದಲಿಸುತ್ತಂ ನಾಯಿ ನಾಯ್ತಿಂಬಂತೆ ಅವನನಿವನಿರಿದುಮಿವನ-ನವನಿರಿದಿಂತು ಅನೇಕ ದುಃಖ ಶತಸಹಸ್ರಂಗಳಿಂದೋರೋರ್ವರಂ ಸಣ್ಣಿಗೆಯೊಳ್ಸಣ್ಣಿಸಿದೊಡಂ ಸಾವರಲ್ಲಿಂದುತ್ಕೃಷ್ಟದಿಂದೊಂದು ಮೂರುಂ, ಏಳುಂ, ಪತ್ತುಂ, ಪದಿನೇಳುಂ, ಇಪ್ಪತ್ತೆರಡುಂ, ಮೂವತ್ತಮೂರು ಸಾಗರೋಪಮಂಗಳ್ವರೆಗಂ, ಪ್ರಥಮ ನಾರಕರ್ಗೆ ಜಘನ್ಯಸ್ಥಿತಿ ಪತ್ತು ಸಾವಿರ ವರ್ಷಂ ಕೆಳ [ಗ?]ಣವರ್ಗೆ ಮೇಗಣವರುತ್ಕೃಷ್ಟಮೆ ಜಘನ್ಯಂ ದೇಹೋತ್ಸೇಧಂ ಮೊದಲ ನಾರಕರ್ಗೇಳು ಬಿಲ್ಲು ಮೂರು ಮೊಳನು ಮೂರಂಗುಳಮುಮಕ್ಕು, ಕೆಳಗಣವರ್ಗೆ ದ್ವಿಗುಣ ದ್ವಿಗುಣಮಕ್ಕುಂ ಸಪ್ತಮ ಪೃಥ್ವಿಯ ಕೆಳಗೊಂದು ರಜ್ಜುಪ್ರಮಾಣಂ ಲೋಕಾಕಾಶಮಕ್ಕುಂ ಮತ್ತಂ ಲೋಕದ ಮಧ್ಯಮ ಭಾಗದೊಳು ಜಂಬೂದ್ವೀಪಂ ಮೊದಲಾಗಿ

ಕಂದ ॥ ಎರಡುವರೆ ಸಮುದ್ರೋಪಮಮನಿ (?) ತನಿತು ಸಂಖ್ಯೆಯಿಂದೊಂದೊಂದಂ ।
ಪರಿವೇಷ್ಟಿಸಿ ನಿಂದವು ಸಾಗರಮುಂ ದ್ವೀಪಮುಮನಾಕುಳಂ ಜಿನಮತದೊಳ್ ॥

ವಚನ—ಅಂತಾದ್ವೀಪಸಮುದ್ರಮೊಂದೊಂದಕ್ಕೆ ದ್ವಿಗುಣದ್ವಿಗುಣಂ ವಿಸ್ತಾರಂಗಳಕ್ಕುಮವರ ನಡುವೆ ಮೇರುನಾಭಿಯೊಂದು ಲಕ್ಷ ವಿಸ್ತಾರದಿಂ ಜಂಬೂದ್ವೀಪಮಿರ್ಕುಮವರೊಳು ಭಾರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯ, ಐರಾವತಂಗಳೇಳು ಜನಪದಂಗಳಕ್ಕುಮವು ಹೇಮಾರ್ಜುನ ತಪನೀಯ ವೈಡೂರ್ಯ ರಜತ ಹೇಮಮಯಂಗಳಕ್ಕುಮವರ ಮೇಲೆ ಪದ್ಮ, ಮಹಾಪದ್ಮ, ತಿಗಿಂಛ, ಕೇಸರಿ, ಮಹಾಪುಂಡರೀಕ, ಪುಂಡರೀಕಂಗಳಾರು ಕೊಳಂಗಳಕ್ಕುಂ ಮೊದಲ ಕೊಳಂ ಸಾಸಿರ ಯೋಜನಂ ನೀಳ್ದುಮೈನೂರು ಯೋಜನಮಗಲಮುಂ ಪತ್ತುಂ ಯೋಜನದ ಗುಣ್ಪುಮಕ್ಕುಮದರ . . ಯಕ್ಕುಂ ಪದ್ಮೆಗೆ ಮಹಾಪದ್ಮೆಗೆ ದ್ವಿಗುಣಮದಕ್ಕೆ ಗಿಂಡೆ ದ್ವಿಗುಣಮಕ್ಕುಂ, ತಾವರೆಗಳು ಪಂತೆಯಕ್ಕುಮಳಿದುದಮುವರೊಳು ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ . . ಕೋಣಂಗಳೊಲ್ಪುಟ್ಟಿ ಗಂಗೆ, ಸಿಂಧು, ರೋಹಿತೆ, ರೋಹಿತಾಸ್ಯೆ, ಹರಿತೆ, ಹರಿಕಾಂತೆ, ಸೀತೆ, ಸಿತೋದೆ, ನಾರಿ, ನರಕಾಂತೆ, ಸುವರ್ಣಕೂಲೆ, ರೂಪ್ಯಕೂಲೆ, ರಕ್ತೆ, ರಕ್ತೋದೆಗಳೆಂಬ ಚತುರ್ದಶ ಮಹಾನದಿಗಳುಂ ನಾಡುಗಳ ನಡುವೆ ಪರಿದು ಮೂಡಣ ಪಡುವಣ ಸಮುದ್ರಂಗಳಂ ಕೂಡಿದವು ಭರತದಗಲಮುಯ್ನೂರು-ಯಿಪ್ಪತ್ತಾರು ಯೋಜನಮುಂ ಯೋಜನದ ಪತ್ತೊಂಭತ್ತನೆ ಬಾಗೆಯೊಳಾರು ಭಾಗೆಯುಮಕ್ಕುಮದಕ್ಕೆ ವಿದೇಹಂಬರಂ ವರ್ಷಧರಂಗಳುಂ ದ್ವಿಗುಣಂ ದ್ವಿಗುಣಂಗಳಕ್ಕು ವಿದೇಹಂಬರಂ ಬಡಗವುಂ ತೆಂಕಣ ಸಮಾನಮಕ್ಕುಂ ಭರತೈರಾವತಂಗಳ್-ಉತ್ಸರ್ಪಿಣಿಯವಸರ್ಪಿಣಿಗಳೆಂದು ಎರಡು ಯುಗಂ ವರ್ತಿಸುಗುಮವರೊಳೊಂದೊಂದರೊಳಂ ಸುಷಮಸುಷಮ, ಸುಷಮ, ಸುಷಮ-ದುಷಮ, ದುಷಮಸುಷಮ, ದುಷಮ, ಅತಿದುಷಮಮೆಂದಾರುಗೆಯ್ದು ಕಾಲಂ ನೆಗಳ್ದುಮಲ್ಲಿ ಸುಷಮ ಸುಷಮಂ ನಾಲ್ಕು ಕೋಟಾಕೋಟಿ ಸಾಗರೋಪಮಕಾಲಂ ವರ್ತಿಸುಗುಮುಂದಿನ ಮೊದಲ ಮನುಷ್ಯರು ಷಟ್ಸಹಸ್ರಚಾಪೋತ್ಸೇ-ಧರುಂ ತ್ರಿಪಲ್ಯೋಪಮ ಜೀವಿಗಳುಮುದಯಾದಿತ್ಯವರ್ಣರುಂ ದಶವಿಧಕಲ್ಪಕುಜಂಗಳತ್ತು ಪಭೋಗಭೋಗಮನನುಭವಿಸುವರು.

ಆಕಾಶಕ್ಕೆ 'ಅಲೋಕ'ವೆಂದು ಹೆಸರು ಈ ಲೋಕ ಅಲೋಕಗಳ ವಿಭಾಗ ಹೇಗೆ? ಅವುಗಳ ಕ್ಷೇತ್ರವೆಷ್ಟು? ಇವೇ ಮೊದಲಾದ ವಿಷಯಗಳು ಕರಣಾನುಯೋಗದಲ್ಲಿ ಬಂದಿವೆ ಇನ್ನು ಎರಡನೆಯ ವಿಭಾಗದಲ್ಲಿ ಕಾಲಪರಿವರ್ತನದಿಂದ ಸುಖ–ದುಃಖಗಳಲ್ಲಿ ಆಗುವ ಏರಿಳಿವುಗಳ ವರ್ಣನೆಯು ಇದೆ ಇನ್ನು ಗತಿವಿಭಾಗದ ವಿವರದಲ್ಲಿ ದೇವ, ನರಕ, ಮನುಷ್ಯ, ತಿರ್ಯಂಚ ಗತಿಗಳ ಸ್ವರೂಪ ಹಾಗೂ ಸ್ಥಿತಿಗಳ ವರ್ಣನೆಯಿದೆ ಈ ಕರಣಾನುಯೋಗಕ್ಕೆ ಗಣಿತಾನುಯೋಗವೆಂದೂ ಹೆಸರಿದೆ. ಭಾವಶ್ರುತರೂಪವಾದ ಸಮ್ಯಗ್ಜ್ಞಾನವು ಕರಣಾನುಯೋಗಶಾಸ್ತ್ರವನ್ನು ತಿಳಿದಿರುತ್ತದೆ. ಸ. ಧ ]

---

ಸುಷಮಂ ೩ ಕೋಟಾಕೋಟಿ ಸಾಗರೋಪಮಕಾಲಂ ವರ್ತಿಸುಗುಮಂದಿನಾರ್ಯರ್ಚತುಸ್ಸಹಸ್ರದಂಡೋತ್ಸೇಧರುಂ ದ್ವಿಪಲ್ಯೋಪಮ ಜೀವಿಗಳುಂ ಪೂರ್ಣಚಂದ್ರವರ್ಣರುಮಪ್ಪರು ಸುಷಮದುಷಮಮೆರಡು ಕೋಟಾಕೋಟೀ ಸಾಗರೋಪಮ ಕಾಲಂ ವರ್ತಿಸುಗುಮಂದಿನಾರ್ಯರ್ದ್ವಿಸಹಸ್ರಚಾಪೋತ್ಸೇಧರುಂ ಏಕ ಪಲ್ಯೋಪಮ ಜೀವಿಗಳು ಪ್ರಿಯಂಗು ಶ್ಯಾಮವರ್ಣರಪ್ಪರೀಮೂರು ಭೋಗಭೂಮಿಗಳುಂ. ದುಷಮಸುಷಮಂ ನಾಲ್ವತ್ತೆರಡು ಸಾಸಿರ ವರ್ಷಂಗುಂದಿದೊಂದು ಕೋಟಾಕೋಟಿ ಸಾಗರೋಪಮಕಾಲಂ ವರ್ತಿಸುಗುಮಲ್ಲಿಮುನ್ನಂ ಮನುಗಳ್ಪುಟ್ಟಿ ಷಟ್ಕರ್ಮಗಳಂ ನೆಗಳ್ಚುವ ಕ್ರಮದಿಂ ತ್ರಿಷಷ್ಟಿಶಲಾಕಾಪುರುಷರ್ಪುಟ್ಟುವರಂದಿನ ಮನಷ್ಯರು ಪೂರ್ವಕೋಟಿ ಜೀವಂಗಳುಂ ಪಂಚಶತಶರಾಸನೋತ್ಸೇಧರುಂ ವಿಂಶತ್ಯುತ್ತರ ಶತವರ್ಷಾಯುಷ್ಯರುಂ ರೂಕ್ಷವರ್ಣರುಂ ಹೀನತ್ವಂ ಆಚಾರ ವ್ರತಶೀಲಶೌರ್ಯಾದಿಧೈರ್ಯಾದಿಗಳನೊಡೆಯರತಿದುಷ್ಷಮ ಮಿಪ್ಪತ್ತೊಂದು ಸಾಸಿರ ವರ್ಷಂ ವರ್ತಿಸುಗುಮಂದಿನ ಮನುಷ್ಯರುಂ ಧೂಮಶ್ಯಾಮರುಮಪ್ಪರು. ಅಂದು ಧರ್ಮಮ ಮರಸು ಕಿಚ್ಚುಂ ಕೆಡೆ ಜೀವಂಗಳು . . ಇಪ್ಪತ್ತುಮವಸ್ಥೆಗಳಿಂದಾಪತ್ತುವಡುತ್ತಂಕೆ ನಾಲ್ಕು ದುಃಖದೊಳಂ ಬೇವುತ್ತಶುಭಧ್ಯಾನದೆ ಸಾವುತ್ತಂ ಪುಟ್ಟುತ್ತಮಿರ್ಪರಾ ನೀಚರ್ಕಳ್ ॥ ೩೭ ॥

ಅಂತು ನಮೆದುಂ ಪೋಗಿ . . . . . . ಕಾಲದೊಳಂ ಕ್ರಮದಿಂದಾಯುರುತ್ಸೇಧಂಗಳುಂ ಗುಣಂಗಳುಂ ಸತ್ಯಶೌಚಾಚಾರಾದಿಗಳುಂ ವೃದ್ಧಿಗೆ ಸಲುತ್ತಂ ಪೋಕುಮುಳಿದ ಭೂಮಿಗಳನವಸ್ಥಿತಂಗಳು ಹ್ಯಮವತ, ಹರಿವರ್ಷ, ದೈವಕುರು, ಉತ್ತರಕುರುಗಳೊಳ್ಪುಟ್ಟಿದ ವರ್ಗಳೊಂದೊಂದುಮೆರಡು ಮೂರು ಪಳಿತೋಪಮಂ ಬಾಳ್ವರಾ ಭೂಮಿಗಳು ಜಘನ್ಯ ಮಧ್ಯಮೋತ್ತಮ ಭೂಮಿಗಳಕ್ಕುಂ ಬಡಗವುಮಂತೆಯಕ್ಕುಂ ವಿದೇಹದೊಳು ಮೂವತ್ತೆರಡು ನಾಡುಗಳಕ್ಕುಮವಾವೆಂದೊಡೆ ಕಚ್ಛೆ, ಸುಕಚ್ಛೆ, ಮಹಾಕಚ್ಛೆ, ಕಚ್ಛಕಾವತಿ, ಆವರ್ತೆ, ಲಾಂಗಲಾವರ್ತೆ, ಪುಷ್ಕಳೆ, ಪುಷ್ಕಳಾವರ್ತೆಯಂದೆಂಟು ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯವು ವತ್ಸೆ, ಸುವತ್ಸೆ, ಮಹಾವತ್ಸೆ, ವತ್ಸಕಾವತಿ, ರಮ್ಯೆ, ಸುರಮ್ಯೆ, ರಮಣೀಯೆ, ಮಂಗಳಾವತಿಯೆಂದು ಈ ಯೆಂಟು ತೆಂಕಣ ತಡಿಯವು ಪದ್ಮೆ, ಸುಪದ್ಮೆ, ಮಹಾಪದ್ಮೆ, ಪದ್ಮಕಾವತಿ, ಸಂಖ್ಯೆ, ನಳಿನಿ, ಕುಮುದೆ, ಸರಿತೆಯಾದೀಯೆಂಟುಮಪರವಿದೇಹದ ಸೀತೋದಾ ನದಿಯ ತೆಂಕಣ ತಡಿಯವು. ವಪ್ರೆ, ಸುವಪ್ರೆ, ವಪ್ರಕಾವತಿ, ಗಂಧೆ, ಸುಗಂಧೆ, ಗಂಧಿಳೆ, ಗಂಧಮಾಳಿನಿಯಂದೀಯೆಂಟುಂ ಬಡಗಣತಡಿಯವು ಅವನೆಡೆವರ್ಚಿಪತ್ತು ಕ್ಷಾರಾದ್ರಿಗಳುಂ ಪನ್ನೆರಡು ವಿಭಂಗ ನದಿಗಳಿಕರ್ಂ ಷಟ್ಖಂಡಂಗಳಂ ವಿಭಾಗಿಸಿ ಪರಿದುಮರುವತ್ತುನಾಲ್ಕು ಕೊಂಡಜನದಿಗಳಿಕರ್ಮವಿಂತಿ ಜಂಬೂದ್ವೀಪಮದಂ ಬಳಸಿ ಲವಣೋದಧಿಯಿಕ್ಕ್ಯಮದಂ ಸುತ್ತಿ ಧಾತಕೀಷಂಡಮಿರ್ಕುಮದರೊಳೆರಡುಮಂ . ಡೆಯುಕ್ಕುಮದಂ ಸುತ್ತಿರ್ದ ಕಾಳೋದಕೋದಧಿಯೆಂಬಳಸಿ ಪುಷ್ಕರಾರ್ಧಮುಮಾಯಂದಮೆಯಕ್ಕುಮದಂ ಸುತ್ತಿರ್ದ ಮಾನುಷೋತ್ತರ ಪರ್ವತದಿಂದೊಳಗೆಯೆ ಮನುಷ್ಯರಿರ್ಪರ. ಇಂತೀಯೆರಡುವರೆ ದ್ವೀಪದೊಳಮೆಂಟು ನೂರೆಪ್ಪತ್ತು . ಕರ್ಮಭೂಮಿಗಳುಳಿದುವೆಲ್ಲಂ ಭೋಗಭೂಮಿಗಳಕ್ಕುಂ ವಿದೇಹದವರ್ಗಳು ಪಂಚಶತಶರಾಸನೋತ್ಸೇಧರುಂ ಪುಬ್ಬಕೋಟಿ ಪರಮಾಯುಷ್ಯರುಮಪ್ಪರಲ್ಲಿ ತೀರ್ಥಕರ ಪರಮದೇವರುಂ ಕೇವಳಿಗಳುಂ . . ಸಂಪನ್ನರಪ್ಪ ದಿವ್ಯತಪೋಧನರುಂ ಚಕ್ರವರ್ತಿ, ಬಲದೇವ, ವಾಸುದೇವ, ಕಾಮದೇವರ್ಕಳುಮೆಂದುಂ ಕುಂದುವರಲ್ಲ ಮತ್ತಂ ಶೀಲವಂತೆಯರಪ್ಪ ಸ್ತ್ರೀಯರುಂ ಪೆರರುಂ ಪುಣ್ಯವಂತೆಯರುಂ ಶುಚಿಗಳುಂ ಕುಲಜರುಂ . ಸಂತುಷ್ಟಿಗಳಾಗಿ ಪೂರ್ವಾರ್ಜಿತ ಪುಣ್ಯಮನನುಭವಿಸುತ್ತಂ ಪುಣ್ಯಂಗಳಂ ನೆರಪಿ ಸುಗತಿಗಳ್ಗೆ ಸಲ್ವರ್ಮತ್ತಂ. ಷಣ್ಣವತಿ ದ್ವೀಪಂಗಳೊಳಂ ಮ್ಲೇಚ್ಛ ಕ್ಷೇತ್ರಂಗಳೊಳಂ ಭರತೈರಾವತಂಗಳೊಳಂ ಕೆಲನ್ನೀಚ ಕುಲಂಗಳೊಳು . . . ಪೆರರ್ಬಾಯಂಡಂ ಜೀಯಂದು ಒಸಿರ್ಗಂ ಬಾಯ್ಗಂ ಪಡೆಯದ ಮದ್ಯಮಾಂಸಂಗಳನೆ ಸೇವಿಸಿ ಮುನ್ನಿನ ಪಾಪಮನನುಭವಿಸುತ್ತ ಮತ್ತಂ ಪಾಪಂಗಳ ನೆರಪಿ ದುರ್ಗತಿಗಳ್ಗೆ ಸಲ್ವರು . ನಮೆಯುತ್ತಂ ಪಾಪಂಗಳಂ ನೆರಪಿ ದುರ್ಗತಿಗಳ್ಗೆ ಸಲ್ವರ್ಮತ್ತಂ ಕೆಲರ್ಸತ್ಕುಲಂಗಳೊಳ್ಪುಟ್ಟಿಯುಂ ದಾರಿದ್ರ್ಯಾಭಿಭೂತರುಂ ಮಹಾಜಾತಪ್ರಚೇತನರುಂ . . . . . . ಪೆರರ ಮನೆಗಳಂ ಪೊಕ್ಕಯ್ಯಾಯೆಂದು ಬಿಕ್ಷಮಂ ಬೇಡಿ ಇಕ್ಕದಡೆ ಬಯ್ದು ದುಃಖಂ ಬಟ್ಟಾರ್ತ ರೌದ್ರಧ್ಯಾನದೊಳೆ ಸತ್ತು ದುರ್ಗತಿಗಳ್ಗೆ ಸಲ್ವರ್ಮತ್ತಂ ಕೆಲಂಬರ್ . . . . ವಿದ್ಯಾತ್ವಾಂಧಂಗಳೊಳ್ಬಿರ್ದು ಶ್ರೀಯಮದಂಗಳೊಳ್ಕಾಣದೆ ಸಪ್ತವ್ಯಸನಂಗಳೊಳ್ನೆಗಳ್ದು ಧರ್ಮಕ್ಕೆ ಪ್ರತಿಕೂಲರಾಗಿ ಪಾಪಂಗಳಂ ನೆರಪಿ ದುರ್ಗತಿಗಳ್ಗೆ ಸಲ್ವರಿಂತು.

ವಚನ—ಮತ್ತಂ ಲವಣಕಾಳೋದಕ ಸಮುದ್ರಂಗಳೊಳಗಣ ಷಣ್ಣವತಿದ್ವೀಪಂಗಳು ಕುಭೋಗಭೂಮಿಗಳೆಂಬವಕ್ಕುಮವರೊಳು ಕುಪಾತ್ರ ದಾನದ ಫಲದಿಂದಂ ಬಂದು . ಚಕ್ಕುಲಿಕರ್ಣರುಂ, ಕರ್ಣಾಚ್ಛಾದನರುಂ, ಲಂಬಕರ್ಣರುಂ, ಶಶಕರ್ಣರುಂ, ಸಿಂಹಮುಖರುಂ, ಅಶ್ವಮುಖರುಂ, ಶ್ವಾನಮುಖರುಂ, ಕಪಿಮುಖರುಂ ಮೀನಮುಖರುಂ, ಕಾಳಮುಖರುಂ, ತಗರಮುಖರುಂ. ಗೋಮುಖರುಂ, ಮೇಘಮುಖರುಂ, ಮಿಂಚಿನ ಮುಖರುಂ, ಕನ್ನಡಿಯ ಮುಖರುಂ, ಗಜಮುಖರುಮಾಗಿ ಕುಮಾನುಷ್ಯರುಮಾಗಿ ಪುಟ್ಟಿ ಕುಭೋಗಂಗಳನನುಭವಿಸುವರ್ಮತ್ತಂ ಮಾನುಷೋತ್ತರ ಪರ್ವತದಿಂದ ಪೊರಗೆಯೆಲ್ಲಮರಿಂ ಕಡೆಯ

ವಿಶೇಷಾರ್ಥ—ಕರಣಾನುಯೋಗವು ಒಂದು ಕನ್ನಡಿಯಂತೆ ಇದೆ ಅದರಲ್ಲಿ ಆರುದ್ರವ್ಯಗಳ ಸಮೂಹ ಸ್ವರೂಪದಲ್ಲಿರುವ ಲೋಕವೂ ಕೇವಲ ಆಕಾಶ ದ್ರವ್ಯವಾಗಿರುವ ಅಲೋಕವೂ ಸ್ಪಷ್ಟವಾಗಿ ಪ್ರತಿಬಿಂಬಿಸುತ್ತವೆ. ಅಲ್ಲದೆ ಅವು ತಮ್ಮ ತಮ್ಮ ಗುಣ, ಪರ್ಯಾಯಗಳನ್ನೂ ಕೂಡ ಅಲ್ಲಿ ಒಡಮೂಡಿಸಿರುತ್ತವೆ. ಆರೂ ಕಾಲಗಳ ನಿಮಿತ್ತದಿಂದ ಜೀವ ಪುದ್ಗಲಗಳ ಸ್ಥಿತಿಗಳಲ್ಲಿ ಸ್ಥಿತ್ಯಂತರವು ಹೇಗಾಗುತ್ತವೆಂಬುದರ ಚಿತ್ರವೂ ಈ ಕನ್ನಡಿಯಲ್ಲಿ ಮೂಡಿರುತ್ತದೆ ಅಲ್ಲದೆ ನಾಲ್ಕೂಗತಿಗಳ ಸ್ವರೂಪವು ಪ್ರಕಟವಾಗುವಂತೆ ಮೂಡುತ್ತವೆ. ಇಂಥ ಕರಣಾನುಯೋಗ ಕನ್ನಡಿ ಇದೆ ಇದನ್ನು ನಿಜವಾದ ಸಮ್ಯಗ್‌ಜ್ಞಾನವೇ ತಿಳಿಯಲಿಕ್ಕೆ ಸಾಧ್ಯವಿದೆ

---

ಸ್ವಯಂಭೂರಮಣ ದ್ವೀಪಮನರ್ಧಿಸಿ ಬಳಸಿನಿಂದ ಸ್ವಯಂಪ್ರಭಪರ್ವತಂಬರಂ ತಿರ್ಯಗ್ಭೋಗಭೂಮಿಯಕ್ಕುಮಲ್ಲಿಯ ತಿರ್ಯಗ್ಜೀವಂಗಳು ಕ್ಷೇತ್ರಸ್ವಭಾವದಿಂ ಪರಸ್ಪರವಿರೋಧಂಗಳಿಲ್ಲದೆ ಮೆಲ್ಲಿದಪ್ಪ ಪುಲ್ಗಳನೆ ಮೇದು, ತಣ್ಣಿದಪ್ಪ ನೀರ್ಗಳಂ ಕುಡಿದು ಸುಖದಿಂದೊಂದು ಪಳಿತೋಪಮಂ ಬಾಳ್ದು, ದೇವಗತಿಯೊಳ್ಪುಟ್ಟುಗುಮಲ್ಲಿ ಏಕೇಂದ್ರಿಯಪಂಚೇಂದ್ರಿಯಗಳಲ್ಲದೆ ವಿಕಲೇಂದ್ರಿಯಂಗಳ್ಪುಟ್ಟವು ಸ್ವಯಂಭೂರಮಣಸಮುದ್ರದ ಮಹಾಮತ್ಸ್ಯಂಗಳ್ಸಾಸಿರ ಯೋಜನ ದೀರ್ಘಂ ನದೀಮುಖದೊಳು ಐನೂರು ಯೋಜನ ನೀಳಂ ಕಾಳೋದದಿಯವು ಮೂವತ್ತಾರು ಯೋಜನಂ ನದೀಮುಖದೊಳು ಪದಿನೆಂಟು ಯೋಜನಂ, ನದಿ ಮುಖದವು ಒಂಭತ್ತು ಯೋಜನಂ ಸಿಡಿಯವಕ್ಕುಳಿದ ಸಮುದ್ರದಲ್ಲಿ ಜಲಚರಂಗಳ್ಪುಟ್ಟವು ಸ್ವಯಂಪ್ರಭ ಪರ್ವತದಿಂ ಪೊರಗೆ ತಿರ್ಯಕ್ಕರ್ಮಭೂಮಿಯಕ್ಕು ಅಲ್ಲಿಯುಂ ಮನುಷ್ಯಕ್ಷೇತ್ರದ ಕರ್ಮಭೂಮಿಗಳೊಳಂ . ಪುಟ್ಟುಗುಂ ಏಕೇಂದ್ರಿ-ಯಂಗಳೇಂದೀ ಮಹಿಯೊಳಂ ಪುಟ್ಟುಗುಂ. ಮನುಷ್ಯರ್ಗಂ ತಿರ್ಯಂಚರ್ಗಮುತ್ಕೃಷ್ಟ ಸ್ಥಿತಿಮೂರು ಪಳಿತೋಪಮುಂ ಜಘನ್ಯ ಸ್ಥಿತಿಯಂತರ್ಮುಹೂರ್ತಮಕ್ಕುಂ ತಿರ್ಯಗ್ಗತಿಯ ಜೀವಂಗಳು ಪುಡವಿಕಾಯ, ಅಪ್ಪುಕಾಯ, ತೇಜಃಕಾಯ . . ಮಯ್ಯಾಗಿ ಪುಟ್ಟಿ ತದ್ವರ್ಣ ತದ್ಗಂಧ ತದ್ರಸ ತತ್ಸ್ಪರ್ಶನಂಗಳಾಗಿ ಪೆರವು ಜೀವಂಗಳಿಂ ಮಳೆಯುಂ ಪರಗೆಯುಂ (?) ಪುಟ್ಟಿಸೆಯು-ಮನೇಕ ದುಃಖಂಗಳನೆಯ್ದಿ ದುರ್ಗತಿಗಳ್ಗೆ ಸಲ್ವುವು ಈ ಪುಡವಿಕಾಯಂಗಳು ಸೀರೆ ಮೆಯ್ಯಾಗಿ ಪುಟ್ಟಿ ತದ್ವರ್ಣ, ತದ್ಗಂಧ, ತದ್ರಸ, ತತ್ಸ್ಪರ್ಶನಂಗಳಾಗಿ ಪುಟ್ಟಿ ತಾಸೆಯುಂ ತದಡೆಯುಂ, ನುಳುಕೆಯು (?) ಮನೇಕ ದುಖಂಗಳನೆಯ್ದಿ ದುರ್ಗತಿಗಳ್ಗೆ ಸಲ್ವವು ಅಪ್ಪುಕಾಯಂ ಕಿಚ್ಚಿಮೆಯ್ಯಾಗಿ ಪುಟ್ಟಿ ತದ್ವರ್ಣ, ತದ್ಗಂಧ, ತದ್ರಸ, ತತ್ಸ್ಪರ್ಶನಂಗಳಾಗಿ ಇರುಪೆಯುಂ ನಡಿಪೆಯುಂ ನೀರ್ಗಳಂ ಪೊಯ್ಯುಯುಮನೇಕ ದುಃಖಂಗಳನೆಯ್ದಿ ದುರ್ಗತಿಗಳ್ಗೆ ಸಲ್ವವು ತೇಜಃಕಾಯಂ ಘಾಳಿಯೆ ಮೆಯ್ಯಾಗಿ ಪುಟ್ಟಿ, ತದ್ವರ್ಣ, ತದ್ಗಂಧ, ತದ್ರಸ, ತತ್ಸ್ಪರ್ಶನಂಗಳಾಗಿ ಕಾಲ್ಗಳಂತಾಗೆಯುಂ ಮರಗಳಂತಾಗೆಯುಂ ಅನೇಕ ದುಃಖಂಗಳ ನೆಯ್ದು ದುರ್ಗತಿಗೆ ಸಲ್ವುವು ವಾತಕಾಯಂಗಳು ಗಿಡಂ ಬಳ್ಳಿ ಮರಂ ಪೊದರೆಂಬವಾಗಿ ಪುಟ್ಟಿ ಮನೆಗಳ್ಗಂದುಂಟಿಗೆಲೆಂದುಂ (?) ತಿನಲೆಂದುಂ ಕರಿಮೆಯುಂ ಕೂರಿಯುಮೆಯುಂ ಮುರಿಯೆಯುಂ ಪರಿಯೆಯುಂ ಕೆತ್ತಿಯು ಕಡಿಯೆಯುಂ ಕಡಿಯೆಯುಂ ಸೀಳೆಯುಂ ಪೋಳೆಯುಂ ಇಂತನೇಕ ದುಃಖಂಗಳ ನೆಯ್ದಿ ದುರ್ಗತಿಗಳ್ಗೆ ಸಲ್ವುವು ವನಸ್ಪತಿ ಕಾಯಂಗಳು ಕ್ರಿಮಿಷಮಂ ಖಪ್ಪುನಾಯಿನೊಳಲಿ (?) ಮೊದಲಾಗೊಡೆಯವಾಗಿ ಪೆರವು ಜೀವಂಗಳ ಘಟ್ಟಣೆಯಿಂದಂ ಲೋವಿಸರದವೇಲಿ ಬಂಡಿವರಿದಂತೊರ್ವೊದಲೊಳಿ ಸತ್ತು, ದುರ್ಗತಿಗಳ್ಗೆ ಸಲ್ವುವು ದ್ವೀಂದ್ರಿಯಂಗಳು ಇರುವೆ, ತಗುಣೆ, ಜೇಳು, ಮೊರಲೆ ಮೊದಲಾಗೊಡೆಯವಾಗಿ ಪುಟ್ಟಿ ಕೆಲವು ಜೀವಂಗಳ ಪಾದಾಭಿಘಾತಂಗಳೊಳು ಪುಡಿ ಪುಡಿಯಾಗಿ ಸತ್ತು ದುರ್ಗತಿಗಳ್ಗೆ ಸಲ್ವುವು ತ್ರೀಂದ್ರಿಯಂಗಳು ಭ್ರಮರ ಮಾಕ್ಷಿಕ ಪತಂಗಾದಿಗಳಾಗಿ ಪೆರವು ಜೀವಂಗಳ ಘಟ್ಟಣೆಯಿಂ ಸತ್ತು ದುರ್ಗತಿಗಳ್ಗೆ ಸಲ್ವುವು ಚತುರಿಂದ್ರಿಯಂಗಳುಮಿಂತು

ಕಂದ ॥ ಶುಕ ಪಶು ಮೃಗಾದಿ ತಿರ್ಯಕ್ತ್ರಕರಂಗಳು ಸಹಜ ಮಾನುಷಾಂಗ ಬವಾಗಂ- ।
ತುಕ ದುಃಖಂಗಳ ನಿಂತಾವಕಾಲಮುಬೇವುತಿಪ್ಪವಘವಶದಿಂದಂ ॥ ೩೯ ॥

ಅದೆಂತೆಂದೊಡೆ ತಿರ್ಯಕ್ಪಂಚೇಂದ್ರಿಯಂಗಳು ಜಲಚರಂ, ಸ್ಥಳಚರಂ, ಖಗಚರಂಗಳೆಂದು ಮೂರುಪ್ರಕಾರಮಲ್ಲಿ ಜಳಚರಂ-ಗಳು ಮತ್ಸ್ಯ ಮಕರ ಮಂಡೂಕಾದಿಗಳಾಗಿ ಪುಟ್ಟಿ ಜಾಲಗಾರರ್ಬಲೆಗಳನಿಕ್ಕೆಯುಂ ಕೊಲೆಯುಂ ತಮ್ಮೊಳೊಂದೊಂದರಿತಿಂದು ನಮೆದು ಪೊಗೆದು ಆರ್ತರೌದ್ರಧ್ಯಾನದೊಳ ಸತ್ತು ದುರ್ಗತಿಗಳ್ಗೆ ಸಲ್ವವು ಮತ್ತಂ ಸ್ಥಳಚರಂಗಳು ಸರ್ಪಮೂಷಕನಡುಹಿತಿ ಪುಲ್ಲೆ ಸಾರಂಗಂ ಮೊಲ ನಾಯಿ ಸಿಂಗಂ ಸೀಳ್ನಾಯ ಕುದುರೆ, ಎತ್ತು, ಕತ್ತೆ, ಕೋಣನೆಂದಿವು ಮೊದಲಾಗೊಡೆಯವಾಗಿ ಪುಟ್ಟಿ ಪಸಿವಿಂದಂ ತೃಷೆಯಿಂದಂ ಬಿಸಿಲಿಂದಂ ಬೆಂಕಿಯಿಂದಂ ಶೀತದಿಂದಂ ವಾತದಿಂದಂ ಮಳೆಯಿಂದಂ . . . ಸರ್ಪಂ ಮೊದಲಾ-ಗೊಡೆಯವು ಸೆರೆಯೊಳಿಕ್ಕಿ ದಂಡಿಸೆಯುಂ ಬೇಡರ್ಮಸಗಿ ಪಾರೆಯಂಬಿಂನೆಲಂಗೊಳಲಿಸೆಯುಂ ನಾಯಗಳಂ ಬಿಟ್ಟು ಬೆನ್ನಟ್ಟಿಯಿರಿ-ಯೆಯುಂ ಕಾಳ್ಗಿಚ್ಚುಸುಡೆಯುಂ ಬೊಬ್ಬಿರಿದಾರ್ದುಬೆನ್ನಟ್ಟಿಯುಂ ಕಾಳ್ಮೃಗಂಗಳ್ಗಂ . . . . . ಪರಿಯಲಾರದೆ ಗೋಳಿಟ್ಟು ಸತ್ತು ದುರ್ಗತಿಗಳ್ಗೆ ಸಲ್ವವು ಮತ್ತಂ ಕುದುರೆ ಮೊದಲಾಗೊಡೆಯವುಮಂ ಮಿಣಿಗಳಿಂದಂ ನೇಣುಗಳಿಂದಂ ಬಿಗಿಯೆಯುಂ ಕಟ್ಟಿಯುಂ ಕೊಡಲಿಗಳಿಂದಂ ಕೋಲ್ಗಳಿಂದಂ ಚಮ್ಮಟಿಗೆಗಳಿಂದಂ ಬರಿಯೆಲ್ವುಗಳ್ಮುರುವನ್ನಂ ಪೆಟ್ಟಿಯುಂ ಕೆಳಗಿಟ್ಟೇರಿಯುಂ (?) ಬೆಂಗಳೊಳು ನಾಳಿವೋಪಂನ್ನಂ ನಿಟ್ಟೆಲುಗಳುಡಿವನ್ನಂ ಪಿಡಿಪಿಡಿದು ಪೇರೆಯುಂ ಪಗ್ಗವಿಟ್ಟು ಪರಿಯಿಸೆಯುಂ ಪಡುವ ಪೊತ್ತರೊಳು ಪಡಲು ಮುಣ್ಣ ಪೊತ್ತರೊಳುಣ್ಣಲುಂ, ಮೇವಪೊತ್ತರೊಳ್ಮೇಯದನುಗೊಲೆವಡುತ್ತಂ ಕಾಲಮಂ ಕಳಿಪಿ ನಮೆದು ಪೊಗೆದು ದುರ್ಗತಿಗಳ್ಗೆ ಸಲ್ವವು ಮತ್ತಂ ಖಚರಂಗಳು ಶುಕ, ಬಕ, ಕಾರಂಡ, ಬೇರುಂಡಾದಿಗಳಾಗಿ ಪುಟ್ಟಿ ತಮ್ಮ ಗರ್ಭದೊಳು ನೆಲಸಿದಂದಿಂತೊಡಗಿ ಸಾವನೇವರೆಗಂ ಕ್ಷುತ್ಪಿಪಾಸಾದಿ ದುಃಖಶತಸಹಸ್ರಗಳ ನೆಯ್ದುತ್ತಂ ತಮತಮಗೆ ಪೆರವು ಪ್ರಾಣಿಗಳಿಯಾಹಾರ ಮಾಗಿಯುಂ ಬಹುಪ್ರಕಾರ ದೋಷಂಗಳಂ ನೆರಪಿ ನಮೆದು ಸತ್ತು ದುರ್ಗತಿಗಳ್ಗೆ ಸಲ್ವವು

ಭುವನಾಕಾರಮದೆಂತುಟೆಂದೆನಲನಂತಂ ನೋಡಲೆತ್ತಿತ್ತ ಮಾ-
ದ ವಿಯನ್ಮಂಡಲ ಮಧ್ಯದೊಳ್ ಸಹಜದಿಂ ನೌಸ್ಥಿತ್ಯಮಂ ಪೆತ್ತು ಕ- ।
ರ್ಮವಶಭ್ರಾಂತದುರಂತ ಜಂತುನಿವಹವ್ಯಾಕೀರ್ಣಗರ್ಭಂ ಜಿನ-
ಪ್ರವರಾದ್ಯಾಂತರ ಬೋಧದೊಳ್ ನೆಲಸಿ ನಿಂದಿರ್ದತ್ತು ನಿರ್ವ್ಯಾಕುಳಂ ॥

—ಕರ್ಣಪಾರ್ಯ—ನೇಮಿನಾಥ ಪುರಾಣ ೧—೪೩.

---

ಇಂತುಮೇಕೇಂದ್ರಿಯಾದಿ ಜೀವಂಗಳ ಪುತ್ಕೃಷ್ಟಾವಗಾಹನವುಮನಾಯುಷ್ಯಂಗಳುಮಂ ಪೇಳ್ವನಲ್ಲಿ ಏಕೇಂದ್ರಿಯ ಜಾತಿಯೊಳು ತಾವರೆಯ ನೀಳಂ ಕ್ರೋಶಾಧಿಕಂ ಸಹಸ್ರಯೋಜನಂ ದ್ವೀಂದ್ರಿಯ ಜಾತಿಯೊಳು ಶಂಖಂ ಪನ್ನೆರಡು ಯೋಜನಂ ತ್ರೀಂದ್ರಿಯ ಜಾತಿಯೊಳು ತೆಂದೆಳುಮೂರುಕ್ರೋಶಂ ಚತುರಿಂದ್ರಿಯ ಜಾತಿಯೊಳು ತುಂಬಿಯೊಂದು ಯೋಜನಂ ಪಂಚೇಂದ್ರಿಯಂ ಜಾತಿಯೊಳು ಮತ್ಸ್ಯಂ ಸಹಸ್ರಯೋಜನ ನೀಳಮಗಲಮಯ್ನೂರುಯೋಜನಂ, ಉತ್ಸೇಧಮಿನ್ನೂರೈವತ್ತೆಲ್ಲಂ ಸ್ವಯಂಭೂರಮಣ ದ್ವೀಪದೊಳುಮಾಸಮುದ್ರದೊಳಮಕ್ಕುಂ ಶುದ್ಧಪೃಥ್ವಿಕಾಯದಾಯುಷ್ಯಂ ಪನ್ನಿಚ್ಛಾಸಿರವರ್ಷಂಬರ ಪೃಥ್ವಿಕಾಯದಾಯುಷ್ಯಂ ಇಪ್ಪತ್ತಿಚ್ಛಾಸಿರವರ್ಷಂ ಅಪ್ಪುಕಾಯದಾಯುಷ್ಯಮೇಳುಸಾಸಿರ ವರ್ಷಂ, ತೇಜಃಕಾಯದಾಯುಷ್ಯಂ ಮೂರುದಿನಂ, ವಾಯುಕಾಯಕ್ಕೆ ಮೂರುಸಾಸಿರ ವರ್ಷಂ, ವನಸ್ಪತಿಕಾಯಕ್ಕೆ ಪತ್ತುಸಾಸಿರ ವರ್ಷಂ, ದ್ವೀಂದ್ರಿಯಂಗಳ್ಗೆ ಪನ್ನೆರಡು ವರ್ಷಂ ತ್ರೀಂದ್ರಿಯಂಗಳ್ಗೆ ನಾಲ್ವತ್ತೊಂಭತ್ತು ದಿನಂ, ಚತುರಿಂದ್ರಿಯಂಗಳಾರುತಿಂಗಳು, ಮತ್ಸ್ಯಂಗಳ್ಗೆ ಪೂರ್ವಕೋಟಿವರ್ಷಂ, ಸರೀಸೃಪಂಗೆ ಒಂಭತ್ತುಪೂರ್ವಾಂಗಂ, ಪಕ್ಷಿಗಳ್ಗೆ ಪತ್ತಿಚ್ಛಾಸಿರ ವರ್ಷಂ, ಇಂತಿನೆಲ್ಲಂ ಮೊದಲಾಗೊಡೆಯ ತಿರ್ಯಗ್ಜಾತಿಗಳೆಲ್ಲಕ್ಕಂ ಜಘನ್ಯಾಯುಷ್ಯ ಮಂತರ್ಮುಹೂರ್ತಮಕ್ಕುಂ. ಸೂಕ್ಷ್ಮನಿಗೋದ ಪರ್ಯಾಪ್ತಕನಪ್ಪುದರಿಂ ಪುಟ್ಟಿದ ಮೂರನೆ ಸಮಯದ ಘನಾಂಗುಳಾಸಂಖ್ಯಾತ ಭಾಗಂ ಸರ್ವಜಘನ್ಯಾವಗಹನೆಯಕ್ಕುಂ

ಕಂದ ॥ ದೇವ ಚತುರ್ನಿಕಾಯರ್ಭಾವನರುಂ ಬ್ಯಂತರರ್ಕಳುಂ ಜ್ಯೋತಿಷ್ಕರು ।
ಭೂವಿದಿತವನುಜರೆಂದಿಂತೀವಿಧದಿಂತಿಪ್ಪರಾಗಮೋಚಿತದಿಂದಂ ॥ ೪೦ ॥

ವಚನ—ಅಲ್ಲಿ ಮೊದಲ ಮೂರು ತೆರದಲಿಸ್ಸಮಿ ಕಡಯ ರಪ್ಪರು ಅಸುರ ನಾಗ ವಿದ್ಯುತ್ಸುಪರ್ಣ ಅಗ್ನಿವಾತ-ಸ್ತನಿತೋದಧಿದ್ವೀಪದಿಕ್ಕುಮಾರರೆಂದು ಭವನವಾಸಿಗರ್ಪತ್ತು ವಿಕಲ್ಪಮಪ್ಪರಲ್ಲಿಯೋಮೊಂದು ಕುಲದೊಳಿರ್ವರಿರ್ವರ್ಚಮರ ವೈರೋಚನಾದಿಗಳಿಂದ್ರರಪ್ಪರವರ ಬವನಂಗಳು ರತ್ನ ಯಪ್ಪತ್ತೆರಡು ಲಕ್ಕೆಯುಮಕ್ಕುಮಲ್ಲಿಯ ಕೃತ್ರಿಮ ಚೈತ್ಯಾಲಯಂಗಳುಮನಿತೆಯಕ್ಕುಂ ಕಿನ್ನರ ಕಿಂಪುರುಷ ಗರುಡ ಗಾಂಧರ್ವ ಯಕ್ಷ ರಾಕ್ಷಸ ಭೂತ ಪಿಶಾಚರೆಂದು ಬೆಂತರ ದೇವರೆಂಟು ವಿಕಲ್ಪಮಪ್ಪರಲ್ಲಿ ಮೊದಲು ನಾಲ್ಕುಂ ಕುಲದವರ್ಗಳುಂ ಪತ್ತು ಪತ್ತುಂ ತೆರನಪ್ಪರುಳಿದವರ್ಗಳು ಪನ್ನೆರಡುಮೇಳು ಪದಿನಾಲ್ಕುಂ ತೆರನಪ್ಪರಂತವರೊಳಿರ್ವರಿರ್ವರ್ಕಿಂಪುರುಷ ಕಿನ್ನರಾದಿಗಳಿಂದ್ರರಪ್ಪರಕರ ಪೊಳಲ್ಗಳಂ ಜನಕ ವಜ್ರಧಾತುಕಾದಿ ದ್ವೀಪಂಗಳೆಂಟರೊಳಕ್ಕುಮುಳಿದಬ್ಯಂತರಿಗರ ನಿಳಯಂಗಳು ಭವನಮೆಂದುಂ ಬವನಪುರಮೆಂದುಂಮಾವಾಸಮೆಂದುಂ ಮೂರು ಪ್ರಕಾರಮಪ್ಪುದುಮಲ್ಲಿ ಬವನಂಗಳು ಚಿತ್ರಾವನಿಯೊಳಕ್ಕುಂ ಭವನಪುರಂಗಳು ದ್ವೀಪಸಮುದ್ರಂಗಳೊಳಕ್ಕುಮಾವಾಸಂಗಳು ಕೋಣಂಗಳೊಳಂತರುಗಳೊಳಮಕ್ಕುಮಿಂತು ವ್ಯಂತರಕುಟಂಗಳು ಎಲ್ಲಂ ಅಸಂಖ್ಯಾತಗಳಕ್ಕುಮವರೊಳಕೃತ್ರಿಮ ಚೈತ್ಯಾ ಲಯಂಗಳುಮನಿತೆಯಕ್ಕುಂ ಚಂದ್ರಾದಿತ್ಯಗ್ರಹನಕ್ಷತ್ರಪ್ರಕೀರ್ಣತಾರೆಗಳೆಂದು ಜ್ಯೋತಿಷ್ಕರೈದು ವಿಕಲ್ಪಮಕ್ಕುಮಲ್ಲಿ ಚಂದ್ರಾ-ದಿತ್ಯರಿಂದ್ರರಪ್ಪರಂತವರ್ಗಳಿ ಚಿತ್ರೆಯೆಂಬ ಭೂಮಿಯಿಂ ಮೇಲೆ ಏಳುನೂರುತೊಂಬತ್ತು ಯೋಜನಂ ಬಂದಲ್ಲಿ ನೂರಿಪತ್ತು ಯೋಜನಮಂದಮಪ್ಪುದು

ರಜ್ಜುವಿನ ವಿಸ್ತಾರಮಪ್ಪ ಜ್ಯೋತಿರ್ಲೋಕಮಿಕ್ಕುಮವರ್ಸಿಯಿಸುವರ್ಗಳ ವಿಮಾನಂಗಳು ಮೇರುವಂ ಪ್ರದಕ್ಷಿಣಮಾಗೆ ಮನುಷ್ಯಲೋಕದೊಳಾಗಳುಂ ಚರಿಯಿಸುತ್ತಿರ್ಪವವರಗಮನಾಗಮನದಕ್ತಣಿಂದಮೆ ಮುಹೂರ್ತ ದಿವಸ ಪಕ್ಷಮಾಸ ಸಂವತ್ಸರಾದಿ ಕಾಲಂಗಳನರಿಯಲಕ್ಕುಂ ಮಾನುಷೋತ್ತರ ಪರ್ವತದಿಂದ ವಿಮಾನಂಗಳು ಚರಿಯಿಸುವವಲ್ಲಿಮಂತವೆಲ್ಲಮಸಂಖ್ಯಾತಮಕ್ಕು-ಮಲ್ಲಿಯ ಕೃತ್ರಿಮ ಚೈತಾಲಯಂಗಳುಮನಿತೆಯಕ್ಕುಂ ಲೋಕದೂರ್ಧ್ವಭಾಗದೊಳು ಮೇರುವಿನ ಚೂಳಿಕೆಯಿಂ ಮೇಲೆ ವಿಮಾನವಾಸಿಗರ್ಪರಂತಾ ವೈಮಾನಿಕರ್ಗಳು ಕಲ್ಪೋತ್ಪನ್ನರೆಂದುಂ ಕಲ್ಪಾತೀತರೆಂದಿತ್ತರನಪ್ಪರಲ್ಲಿ ಇಂದ್ರಾಪೇಕ್ಷೆಯಿಂ ಕಲ್ಪಂಗಳ್ಪ-ನ್ನೆರಡಕ್ಕುಂ ಕಲ್ಪಾಪೇಕ್ಷೆಯಿಂ ಪದಿನಾರುಮಕ್ಕುಮಲ್ಲಿ ವಸಿಯಿಸುವವರ್ಗಳು ಸೌಧರ್ಮೇಶಾನಸನತ್ಕುಮಾರ ಮಾಹೇಂದ್ರ ಬ್ರಹ್ಮಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಆರಣ ಅಚ್ಯುತರೆಂಬಿವರ್ಕಲೋತ್ಪನ್ನ ರಲ್ಲಿಯೋರ್ವರಿಂದ್ರರ್ಗೆ ಪ್ರತೀಂದ್ರ ಸಾಮಾನಿಕ ತ್ರಯಃತ್ರಿಂಶತ್ಪಾರಿಷದಾತ್ಮರಕ್ಷ ಲೋಕಪಾಲಾನೀಕ ಪ್ರಕೀರ್ಣತಾಭಿಯೋಗ್ಯ ಕಿಲ್ಬಿಷಕರೆಂಬ ಪತ್ತುಂ ತೆರದ ದೇವರ್ಬೆಸಕೆಯ್ವರ್ಭವನವಾಸಿಗರ್ಗಮನಿಬರೆಯಪ್ಪರು ಬ್ಯಂತರಜ್ಯೋತ್ಯಿಷ್ಕರೊಳು ತ್ರಯಃ ತ್ರಿಂಶರುಂ ಲೋಕಪಾಲರುಮಿಲ್ಲರಿಳಿದ ದೇವರುಮಪ್ಪರೀಶಾನಕಲ್ಪಂಬರಂ ಕಾಯಪ್ರವೀಚಾರರಲ್ಲಿಂದಂ ಮೇಲೆ ಸ್ಪರ್ಶನ ಪ್ರವೀಚಾರರುಂ, ರೂಪಪ್ರವೀಚಾರರುಂ, ಶಬ್ದಪ್ರವೀಚಾರರುಂ, ಮನಃಪ್ರವೀಚಾರರುಂ, ಅಹಮಿಂದ್ರರುನಿಷ್ಪ್ರವೀಚಾರರು ಅದೆಂತೆಂದೊಡೆ—ಸನತ್ಕುಮಾರ ಮಾಹೇಂದ್ರದವರು ಸ್ಪರ್ಶನಪ್ರವೀಚಾರರು, ಬ್ರಹ್ಮಬ್ರಹ್ಮೋತ್ತರ ಲಾಂತವ ಕಾಪಿಷ್ಠದವರು ರೂಪಪ್ರವೀಚಾರರು, ಶುಕ್ರಮಹಾಶುಕ್ರಶತಾರಸಹಸ್ರಾರದವರು ಶಬ್ದಪ್ರವೀಚಾರರು, ಆನತ ಪ್ರಾಣತ ಆರಣ ಅಚ್ಯುತದವರು ಮನಃಪ್ರವೀಚಾರರು, ಅಲ್ಲಿಂದ ಮೇಲೆ ಅಹಮಿಂದ್ರರೆಲ್ಲರು ಅಪ್ರವೀಚಾರರು ನವಗ್ರೈವೇಯಕದವರು ನವಾನುದ್ದಿಶೆಯ ಪಂಚಾಣುತ್ತರೆಯವರ್ಗಳು ಕಲ್ಪಾತೀತರವರ್ಗಳಹಮಿಂದ್ರರಪ್ಪರಂತವರ್ಗಳ ವಿಮಾನಂಗಳೆಲ್ಲಮಿಂದ್ರಕಶ್ರೇಣೀಬದ್ಧಪ್ರಕೀರ್ಣ-

ಈಗ ಚರಣಾನುಯೋಗದ ಸ್ವರೂಪವನ್ನು ವಿವರಿಸಲಿಕ್ಕೆ ಸೂತ್ರ ಹೇಳುತ್ತಾರೆ—

ಗೃಹಮೇಧ್ಯನಗಾರಾಣಾಂ ಚಾರಿತ್ರೋತ್ಪತ್ತಿವೃದ್ಧಿರಕ್ಷಾಂಗಮ್ ।
ಚರಣಾನುಯೋಗಸಮಯಂ ಸಮ್ಯಗ್ಜ್ಞಾನಂ ವಿಜಾನಾತಿ ॥ ೪೫ ॥ [3]

ಅನ್ವಯಾರ್ಥ—(ಸಮ್ಯಗ್ಜ್ಞಾನಂ) ಸಮ್ಯಗ್ಜ್ಞಾನವು (ಗೃಹಮೇಧ್ಯನಗಾರಾಣಾಂ) ಗೃಹಸ್ಥ ಹಾಗೂ ಮುನಿಯ (ಚಾರಿತ್ರೋತ್ಪತ್ತಿವೃದ್ಧಿರಕ್ಷಾಂಗಂ) ಚಾರಿತ್ರದ ಹುಟ್ಟು, ಬೆಳವಣಿಗೆ ಮತ್ತು ರಕ್ಷಣ ಇವುಗಳಿಗೆ ಕಾರಣವಾದ (ಚರಣಾನುಯೋಗಂ) ಚರಣಾನುಯೋಗ (ಸಮಯಂ) ಶಾಸ್ತ್ರವನ್ನು (ವಿಜಾನಾತಿ) ತಿಳಿಯುತ್ತದೆ

---

ಕಂಗಳೆಂದು ತ್ರಿವಿಧಮಕ್ಕುಮವರ ಸಂಖ್ಯೆಯಲ್ಲಿಮೆಣ್ಬತ್ತುನಾಲ್ಕು ಲಕ್ಕೆಯುಂ ತೊಂಭತ್ತೇಳು ಸಾಸಿರದಿಪ್ಪತ್ತಮೂರಕ್ಕುಮಲ್ಲಿಯ-ಕೃತ್ರಿಮ ಚೈತ್ಯಾಲಯಂಗಳುಮನಿತೆಯಕ್ಕುಮಿಂತು ಸೌಧರ್ಮೇಶಾನಂಗಳಿಂ ಮೇಲೆ ಆಯುಷ್ಯಂಗಳುಂ, ಪ್ರಭಾವಂಗಳುಂ, ಸುಖಂಗಳುಂ, ಲೇಶ್ಯಂಗಳುಂ, ಶುದ್ಧಿಕೆಗಳುಮಿಂದ್ರಿಯ ವಿಷಯಂಗಳುಮವಧಿ ವಿಷಯಂಗಳುಮಣಿಮಾದಿ ಗುಣಂಗಳುಂ ಪೆರ್ಚುತ್ತಂ ಪೋಕುಂ ಗತಿಗಳುಂ ಶರೀರಂಗಳುಂ ಪರೀಷಹಂಗಳುಂ ಮಾನಕಷಾಯಂಗಳುಂ ಕುಂದುತ್ತಂ ಪೋಕುಂ. ನವಗ್ರೈವೇಯಕದಿಂದತ್ತಲೆ ಕಲ್ಪಂಗಳಕ್ಕುಂ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬ ಲೌಕಾಂತಿಕ-ದೇವರುಂ ಬ್ರಹ್ಮಕಲ್ಪದೊಳು ವಸಿಯಿಸುವರವರ್ಗಳುಂ ತೆಂಕಣೆಣ್ಬರಿಂದ್ರರಿಬ್ಬರುಂ ಶಚಿ ಮಹಾದೇವಿಯುಂ, ಶಕ್ರನ-ಲೋಕಪಾಲರುಂ ಸರ್ವಾರ್ದಸಿದ್ಧಿಯ ದೇವರುಂ ಯೆಂದಿವರ್ಗಳೆಯ್ದೆ ಪಡೆದ ಭವದೊಳು ಕರ್ಮಕ್ಷಯಂ ಗೆಯ್ವರು ಅಸುರ-ರ್ಗೊಂದು ಸಾಗರೋಪಮಂ ನಾಗಕುಮಾರರ್ಗೆ ಮೂರು ಪಳಿತೋಪಮಂ ದ್ವೀಪಕುಮಾರ್ಗೆರಡು ಪಳಿತೋಪಮಂ ಉಳಿದ ವರ್ಗಲ್ಲಿಂಮೊಂದುವರೆ ಪಳಿತೋಪಮಂ ಉತ್ಕೃಷ್ಟಸ್ಥಿತಿ ಪತ್ತುಸಾಸಿರವರ್ಷಂ ಜಘನ್ಯಸ್ಥಿತಿಯಕ್ಕುಂ ವ್ಯಂತರ ದೇವರ್ಗೊಂದು ಪಳಿತೋಪಮಂ ಜಘನ್ಯಸ್ಥಿತಿ ದಶಸಾಸಿರ ವರ್ಷಂ, ಜ್ಯೋತಿಷ್ಕರ್ಗೆ ಸಾತಿರೇಕವೊಂದು ಪಲ್ಯಂ ಜಘನ್ಯಸ್ಥಿತಿ ಪಳಿತೋಪಮದಷ್ಟಮ ಭಾಗಂ ॥

ಸೌಧರ್ಮೇಶಾನದೊಳು ಎರಡು ಸಾಗರೋಪಮಂ ಜಘನ್ಯಂ ಸಾತಿರೇಕವೊಂದು ಪಳಿತೋಪಮಂ ಮೇಗಣವರ್ಗೆ ಕೆಳಗಣವ-ರುತ್ಕೃಷ್ಟಮೆ ಜಘನ್ಯಾಯುಷ್ಯಂ ಸನತ್ಕುಮಾರ ಮಾಹೇಂದ್ರದೊಳು ಸಪ್ತಸಾಗರೋಪಮಂ ಬ್ರಹ್ಮಬ್ರಹ್ಮೋತ್ತರದೊಳು ಪತ್ತುಂ, ಲಾಂತವ ಕಾಪಿಷ್ಠದೊಳು ಪದಿನಾಲ್ಕು, ಶುಕ್ರಮಹಾಶುಕ್ರದೊಳು ಪದಿನಾರು, ಶತಾರ ಸಹಸ್ರಾರದೊಳ್ಪದಿನೆಂಟು, ಆನತ ಪ್ರಾಣತದೊಳಿಪ್ಪತ್ತು, ಆರಣಾಚ್ಯುತದೊಳಿಪ್ಪತ್ತೆರಡು, ಗ್ರೈವೇಯಕವೊಂಭತ್ತರೊಳುಮೊಂದೊಂದೆಯಧಿಕಂ ಅನುದ್ದಿಶ-ದೊಳ್ಮೂವತ್ತೆರಡು, ಸರ್ವಾರ್ದಸಿದ್ಧಿಯೊಳ್ಮೂವತ್ತಮೂರು ಸಾಗರೋಪಮಮುತ್ಕೃಷ್ಟಾಯುಷ್ಯಮಕ್ಕುಂ ಲೌಕಾಂತಿಕ ದೇವರ್ಗೆಂಟು ಸಾಗರೋಪಮಮೀಗತಿಯೊಳು ದರ್ಶನ, ಜ್ಞಾನ, ಚಾರಿತ್ರದೊಳ್ಪುದ್ಧರಪ್ಪರವರ್ಗಳು ಮಹರ್ದ್ಧಿಕ ಸ್ಥಾನದೊಳ್ಪುಟ್ಟಿ ದಶಪ್ರಕಾರದ ದೇವರುಂ ಬಂದು ಬಳಸಿಯುಮಿರ್ದೋಲಗಿಸುತ್ತಿರೆ ಸುರಲೋಕದ ಸುಖದೊಳ್ಕೂಡಿ ಮುಳುಗಾಡುತ್ತಿರ್ಪ ಸದ್ದೃಷ್ಟಿಗಳು ಮೊದಲು ಮೂರು ಮಮರಾ . . ಜ್ಞಾನಿಗ ಮಿದ್ಯಾದೃಷ್ಟಿಗಳಪ್ಪವರ್ಗಗಳು ವಾಹನ ಕಿಲ್ಬಿಷಿಕ ದೇವರಾಗಿ ಪುಟ್ಟಿ ಮನೋದುಃಖಮನನುಭವಿಸುತ್ತಮಿಪ್ಪರು ॥

. ಗತಿಯೊಳು ದುಃಖಮುಂಟು ಮತ್ತಂ ಪ್ರದಮ ನರಕದ ಮೇಗಣೆಂದ್ರಕಮುಂ ಮನುಷ್ಯ ಕ್ಷೇತ್ರಮುಂ ಸಿದ್ಧ ಕ್ಷೇತ್ರಮುಂ ಋತುವಿಮಾನಮುಂ ಸಮವಿಸ್ತಾರಂಗಳು ಏಳನೆಯ ನರಕದಿಂದ್ರಕಮುಂ (?) ಜಂಬೂದ್ವೀಪಮುಂ, ಸರ್ವಾರ್ಧ ಸಿದ್ಧಿಯುಂ ಸಮವಿಸ್ತಾರಂಗಳಾ ಸರ್ವಾರ್ದಸಿದ್ಧಿಯಿಂ ಮೇಲೆ ಪನ್ನೆರಡು ಯೋಜನಂ ಪೋದಲ್ಲಿ ಸಿದ್ಧಕ್ಷೇತ್ರಮಿರ್ಕುಂ ॥

ಕಂದ ॥ ಅದನೆಯ್ದುವರನವರತಂ ಮುದದಿಂ ರತ್ನತ್ರಯಂಗಳಂ ನಿರ್ಮದದಿಂ ।
ಹೃದಯದೊಳು ತಾಳ್ದ ಜಳಮಲ್ಲದೆ ಸಲೆಯಾರಾಧಿಸುತಮಿರ್ಪ ಮಹಾತ್ಮರು ॥ ೪೩ ॥

ವಚನ—ಇಂತು ಲೋಕವಿಭಾಗಮುಂ, ಚತುರ್ಗತಿ ಸ್ವರೂಪಮುಂ, ಯುಗಂಗಳಮಗುಳ್ಕೆಯುಮಂ, ಪೇಳ್ಗುಂ ಕರಣಾನು-ಯೋಗಮೆಂಬ ಸಮ್ಯಗ್ಜ್ಞಾನಂ ॥

[3] ಆಯತವರ್ಮನು ಹೇಳುವದು ಹೀಗೆ

ಕಂದ ॥ ಸಾಗಾರಧರ್ಮಮುಮನಾಕುಳದಿಂ ಸಂ ॥
ವೇಗಪರರ್ಗರಿಪುಗುಮಿಂಬಾಗಿರೆ ಚರಣಾನುಯೋಗಮೆಂಬೀ ಜ್ಞಾನಂ ॥ ೪೪ ॥

ವಚನ—ಅಲ್ಲಿ ಸಾಗಾರಧರ್ಮಮುಮಂ ಪ್ರತಿಪಾಲಿಸುವರ್ಗಳು ಪನ್ನೊಂದು ವಿಕಲ್ಪಮಕ್ಕುಮವರಾರೆಂದೊಡೆ ದರ್ಶನಿಕ, ವ್ರತಿಕ, ಸಾಮಾಯಿಕ, ಪ್ರೋಷಧೋಪವಾಸಿ, ಸಚಿತ್ತವಿರತ, ರಾತ್ರಿಭುಕ್ತವಿರತ, ಬ್ರಹ್ಮಚಾರಿ, ಆರಂಭನಿವೃತ್ತ, ಪರಿಗ್ರಹ ನಿವೃತ್ತ, ಅನುಮತಿವಿರತ, ಉದ್ದಿಷ್ಟವಿರತನೆಂಬರಲ್ಲಿ ದ್ವಾದಶಾಂಗಾಂಗದೊಳು ಚತುರ್ದಶಪೂರ್ವಾಂಗದೊಳೊಂದಕ್ಷರ ಮನಪ್ಪಡಂ, ಸಂಶಯಂ ಬಡದನುಂ ಮುನ್ನ ಪೇಳ್ದಪ್ರತ್ಯೈದು ಮಳಂಗಳಂ ಪಿಂಗಿದನುಂ, ಸಂಸಾರ ಶರೀರಭೋಗ ವೈರಾಗ್ಯಪರನುಂ, ಸಪ್ತವ್ಯಸನವಿವರ್ಜಿತನುಂ ಪಂಚಪರಮೇಷ್ಠಿಗಳ ಪಾದಂಗಳ ಶರಣರಾಗೊಡೆಯನುಮಪ್ಪ ದರ್ಶನಿಕಂ ದರ್ಶನಿಕನೆಂಬ ಮೊದಲ ಶ್ರಾವಕಂ ಸಮ್ಯಕ್ತ್ವಪೂರ್ವಕಮಪ್ಪ ಬ್ರತಪಂಚಕದೊಳಂ ಶೀಲಸಪ್ತಕದೊಳಮನತಿಚಾರದಿಂ ನೆಗಳ್ವನುಂ ಶಲ್ಯತ್ರಯ ರಹಿತನುಮಪ್ಪದೇಶವಿರತಂ ಬ್ರತಿಕನೆಂಬೆರಡನೆಯ ಶ್ರಾವಕಂ. ದ್ವಾದಶಾವರ್ತನೆಗಳುಮಂ ನಾಲ್ಕು ಪ್ರಾಣಾಯಾಮಂಗಳುಮಂ ಏರಂಡಿತಮಂತ್ರಶುದ್ಧಿಯುಮನೊಡೆಯನಾಗಿ ತ್ರಿಸಂಧ್ಯೆಯೊಳಂ ತ್ರೀಲೋಕಗುರುವಂ ಬಂದಿಸುವಂ ಸಾಮಾಯಿಕನೆಂಬ

ಅರ್ಥ—ಯಾರ ಬುದ್ಧಿಯು ಗೃಹಕಾರ್ಯದಲ್ಲಿ ಆಸಕ್ತವಾಗಿರುವುದೋ ಅವರಿಗೆ ಗೃಹಸ್ಥರೆಂದು ಹೆಸರು ಮನೆಯನ್ನು ತ್ಯಾಗಮಾಡಿ, ವಿರಕ್ತರೆನಿಸಿದವರು ಅನಗಾರರು. ಇವರಿಗೆ ಯತಿ ಎಂದೂ ಹೆಸರಿದೆ. ಇವರ ಚಾರಿತ್ರವೆಂದರೆ ಉತ್ತಮ ಆಚರಣೆಯು ಇದರ ಉತ್ಪತ್ತಿ, ವೃದ್ಧಿ, ರಕ್ಷಣೆಗಳನ್ನು ಕಾರಣ ಸಹಿತಚರಣಾನುಯೋಗವು ವಿವರಿಸುತ್ತದೆ ಇದನ್ನು ಸಮ್ಯಗ್ಜ್ಞಾನವು ತಿಳಿದಿರುತ್ತದೆ [ಕೈವಲ್ಯಕ್ಕೆ ಅನುಕೂಲವಾದ ಆಚಾರ ಶಾಸ್ತ್ರಾದಿಗಳ ರೂಪದಲ್ಲಿ ಇರುವ ದ್ರವ್ಯ–ಶ್ರುತ–ವನ್ನು ಭಾವಶ್ರುತವೆನಿಸುವ ಸಮ್ಯಗ್ಜ್ಞಾನವು ಒಳಗೊಂಡಿರುತ್ತದೆ. ಕೇವಲಿಗಳಿಂದ ಪ್ರಣೀತವಾದ ಚಾರಿತ್ರಶಾಸ್ತ್ರವನ್ನು ಸಂಪೂರ್ಣವಾಗಿ ಅರಿಯುವುದು ಸಮ್ಯಗ್ಜ್ಞಾನವಾಗಿದೆ. ಸ ಧ]

---

ಮೂರನೆಯ ಶ್ರಾವಕಂ ತನ್ನ ಶಕ್ತಿಯಂ ಮರಸದೆ ತಿಂಗಳ್ತಿಂಗಳ್ಪರ್ವ ದಿನಂಗಳೊಳಮುಪವಾಸಂಗೆಯ್ವಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕಂ ದಯೆಕಾರಣಮಾಗಿಮಾವವಳ ಶಾಖಾಶಾಖಾಶರೀರ ಕಂದ ಪ್ರಸೂನ ಬೀಜಾದಿಗಳಪ್ಪ ಪಸಿಯ ವಸ್ತುಗಳಂ ಕೊಳ್ಳೆನೆಂದು ಪರಿಹರಿಸುವಾತಂ ಸಚಿತ್ತವಿರತನೆಂಬೈದನೆಯ ಶ್ರಾವಕಂ ಜೀವಂಗಳೊಳಪ್ಪನುಕಂಪೆಯಿಂ ಪ್ರಾಣಿಸಮ್ಮಿಶ್ರಮಪ್ಪಾಹಾರಮಂ ಇರುಳುಣ್ಣೆನೆಂದು ಅನ್ನಂ, ಪಾನಂ, ಖಾದ್ಯಂ, ಲೇಹ್ಯಯೆಂಬ ಚತುರ್ವಿಧಾಹಾರಮನಿರುಳುಣ್ಣೆನೆಂದು ಸತಿಗೆಯ್ದು ದಿವಬ್ರಹ್ಮಚರ್ಯದಿಂ ನೆಗಳ್ದಾತಂ ರಾತ್ರಿಭುಕ್ತಿವಿರತನೆಂಬಾರನೆಯ ಶ್ರಾವಕಂ ರಸ, ರುಧಿರ, ಮಾಂಸ, ಮೇಧೋಸ್ಥಿ ಮಜ್ಜ ಶುಕ್ರಂಗಳೆಂಬ ಸಪ್ತಧಾತುಗಳೊಳು ಮಾಡಿದಶುಚಿಗೃಹಮುಂ ವಾತಪಿತ್ತ ಶ್ಲೇಷ್ಮದೋಷ ಸಮೇತಂ ಕ್ರಿಮಿಕುಳ ಸಂಭವಮಮೇಧ್ಯ ಪೂರ್ಣಭಗ್ನ ಭಾಜನ ಸದೃಶಮುಮನಸತ್ಯಮುಮತಿ ದುರ್ಗಂಧಮು . . ಟ್ಟಿಂ, ದುರ್ಯಶಕ್ಕೆ ಗುರಿಯುಮಪ್ಪುದಿಂತಪ್ಪುದಂ ಕಾಣುತಿರ್ದ್ದೀ ಶರೀರದೊಳು ಚೀ ಕಷ್ಟಂ ರಾಗರತಿಗಳವೆಪ್ಪುವಲ್ಲದೆಯುಂ ಸ್ಪರ್ಶನೇಂದ್ರಿಯಾಸಕ್ತನಾಗಿಯೆ ಆರಿ ತನ್ನಂ ತಾನೆ ಕಟ್ಟಿಸಿಕೊಂಡು ದುಃಖಮನೆಯ್ದಿತಂತಲ್ಲದೆಯುಂ ಪಾಪಹೇತುವಪ್ಪುದೆಂದು ಆ ಬ್ರಹ್ಮಕ್ರೀಡೆಯಂ ಮನೋವಚನ ಕಾಯಶುದ್ಧಿಯಿಂ ಪತ್ತುವಿಟ್ಟು ಬ್ರಹ್ಮಚರ್ಯ ವ್ರತದೊಳ್ನೆಗಳ್ದ ಮಹಾತ್ಮಂ ಬ್ರಹ್ಮಚಾರಿಯೆಂಬೇಳನೆಯ ಶ್ರಾವಕಂ ॥

ಕಂದ ॥ ಅಸಮಾಧಿಕರಂ ದುಷ್ಕರ್ಮಸಹಾಯಂ ಜೀವಘಾತ ಹೇತುವಿವಾರಂ ।
ಘೆಸಣಿಯು ಸದ್ವೇವೋದಯ ಅಸಿಮಸಿ ಕೃಷಿ ವಾಣಿಜ್ಯ ಶಿಲ್ಪಿ ಪಶುಪಾಲ್ಯಂಗಳ್ ॥ ೪೪ ॥

ವಚನ—ಎಂದು ಷಟ್ಕರ್ಮಮುಮಂ ಪರಿಹರಿಸಿ ನಿರಾರಂಭನಾಗಿ ನೆಗಳ್ದ ಪುರುಷನಾತಂಬ ನಿವೃತ್ತನೆಂಬೆಂಟನೆಯ ಶ್ರಾವಕಂ. ಆರ್ತರೌದ್ರಧ್ಯಾನ ಹೇತುಗಳಿವೆ ಬಾರ್ತೆಯಂದು ತನ್ನ ಮುನ್ನೆರೆ ಮಾಡಿ ಪರಿಹರಿಸಿದ ಕ್ಷೇತ್ರ ವಾಸ್ತು ಹಿರಣ್ಯ ಧನ ಧಾನ್ಯ ದ್ವಿಪದ ಚತುಷ್ಪದ ಯಾನ ಶಯನಾಸನ ಕುಪ್ಯ ಭಾಂಡಂಗಳೆಂಬ ಪೊರಗಣ ಪತ್ತುಂ ಪರಿಗ್ರಹದೊಳಂ ಮಮತ್ವಮನಾಗಿಸದೆ ನಿರ್ಮಮತ್ವನುಂ ಸ್ವಸ್ಥಚಿತ್ತನುಂ ಸಂತೋಷಪರನುಮಾಗಿರ್ಪ ಮಹಾಪುರುಷಂ ಪರಿಮಿತಪರಿಗ್ರಹನೆನಿಪ್ಪೊಂಬತ್ತನೆಯ ಶ್ರಾವಕಂ. ಷಟ್ಕರ್ಮದೊಳವಿಾಬವಕ್ಕೆ ಬಾರ್ತೆಯಪ್ಪ ಬೆಸಂಗಳೊಳಂ ಪೆರನ್ನಿರ್ಮಗೆ ಮಾಡಿದಪ್ಪೆವೆಂದು ಮಾಳ್ಪನ್ನಪಾನಾದಿಗಳಂ ಬೆಸದೊಳಲೊಡಂಬಡದ ಪುರುಷನನುಮತಿವಿರತನೆಂಬ ಪತ್ತನೆಯ ಶ್ರಾವಕಂ ಗೃಹಮಂ ಮತ್ತೆ ಬಿಟ್ಟು ಮುನಿನಿಕಟಮಂ ಪೊರ್ದಿ ಕರ್ಪಟಾರ್ಧಮನುಟ್ಟು ಶಿರೋಮುಂಡನಾಗಿ ವ್ರತಂಗಳನೇರಿಸಿಕೊಂಡು ಭೈಕ್ಷಮಂ ಕೊಂಡು ಕುಳ್ಳಿರ್ದು, ಪಾಣಿ ಪಾತ್ರದೊಳುಂಡು, ರಾತ್ರಿಪ್ರತಿಮೆಯುಂ ಕುಕ್ಕುಟಾಸನಂ ಮೊದಲಾಗೊಡೆಯ ವುಪವಾಸಂಗಳುಮಂ ಮಾಡಿ ತಪಂಗೆಯ್ವ ಮಹಾಪುರುಷನುದ್ದಿಷ್ಟವಿರತನೆಂಬ ಪನ್ನೊಂದನೆಯ ಶ್ರಾವಕಂ ಇಂತಿವರೊಳಗೆ

ಕಂದ ॥ ಮೊದಲೊಳ್ಷಘನ್ಯರರುವರ್ವಿದಿತಂ ಮಧ್ಯದೊಳೆ ಮಧ್ಯಮಮೂವರ್ನಿ- ।
ರ್ಮದರುತ್ಕೃಷ್ಟರ್ತುದಿಯೊಳು ಸದಮಳರಿರ್ವರ್ಜಿನೇಂದ್ರಮತದೊಳು ಹಿತದೊಳು ॥ ೪೫ ॥

ವಚನ—ಮತ್ತಮುತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಮೆಂಬ ದಶಲಾಕ್ಷಣಿಕ ಧರ್ಮಮುಂ ಋಷಿಧರ್ಮಮಕ್ಕುಂ ಪಂಚಮಹಾವ್ರತ, ಪಂಚಸಮಿತಿ, ಪಂಚೇಂದ್ರಿಯನಿಗ್ರಹಂ ಷಡಾವಶ್ಯಕಕ್ರಿಯೆ, ಭೂಶಯ್ಯೆ, ಅಸ್ನಾನ, ಅಚೇಲತ್ವಂ, ಕೇಶಲುಂಚನಂ, ಸ್ಥಿತಿಭುಕ್ತಂ ಅದಂತಪ್ರಮಾರ್ಜನಮೇಕ ಭುಕ್ತಮೆಂಬಿಪ್ಪತ್ತೆಂಟು ಮೂಲ ಗುಣಂಗಳಕ್ಕುಮಲ್ಲಿಮಹಿಂಸಾ ವ್ರತಮುಮಂ ಪ್ರಯತ್ನದಿಂದೋವುದು ಮೊದಲ ಮೂಲಗುಣಂ ರಾಗದಿಂದ ಮಾನುಂ ದ್ವೇಷದಿಂದ ಮಾನುಂ ಮರೆದಪ್ಪದಂ ಪುಸಿಯನುಡಿಯದುದೆರಡನೆಯ ಮೂಲಗುಣಂ ತನ್ನ ಸಂಯಮಕ್ಕೆ ಯೋಗ್ಯಮಪ್ಪ ವಸ್ತುಗಳಾದೊಡಂ ಪೆರರರಿಯದುದಂ ಪರಿಹರಿ . ಮೂಲಗುಣಂ ದೇವ ಮನುಷ್ಯ ತಿರ್ಯಗ ಚೇತನ ಸ್ತ್ರೀಯರ್ಕಳಂ ಪ್ರೊಲ್ಲದ . . ಮಯಮನರೆನಗೊಡ ಹುಟ್ಟಿದರ ಸಮಾನವೆಂದು ಪರಿಹರಿಸುವುದು ನಾಲ್ಕನೆಯ ಮೂಲಗುಣಂ ಜ್ಞಾನ ಸಂಯಮ ಶೌಚೋಪಕರಣಮುಳಿಯೆಯಳಿದಭ್ಯಂತರ ಬಾಹ್ಯಪರಿಗ್ರಹಂಗಳಂ ಪರಿತ್ಯಾಗಂಗೆಯ್ವುದಯ್ದನೆಯ ಮೂಲಗುಣಂ ಷಟ್ಚತ್ವಾರಿಂಶದ್ದೋಷವರ್ಜಿತಮಾಗಿಯನ್ನಪಾನಾದಿಗಳಂ ಕೊಳ್ವುದೆಂಟನೆಯ ಮೂಲಗುಣಂ ಉಪಕರಣಂಗಳಂ ದೃಷ್ಟಿಪ್ರತಿಲೇಖನಂ ಮಾಡಿಕೊಂಬುದೊಂಬತ್ತನೆಯ ಮೂಲಗುಣಂ ಕಾಯಮಲಂ ಮೊದಲಾಗೋಡೆಯವಂ ನಿರ್ಜಂತುಕ ಪ್ರದೇಶದೊಳ್ಬಿಸುಪ್ಪುಮ ಪತ್ತನೆಯ ಮೂಲಗುಣಂ ಕರ್ಕಶಮೃದು, ಗುರುಲಘು, ಸ್ನಿಗ್ಧರೂಪ, ಶೀತೋಷ್ಣಂಗಳೆಂಬೆಂಟುಂ ಸ್ಪರ್ಶನೇಂದ್ರಿಯ ವಿಷಯಂಗಳೊಳಂ ತಿಕ್ತ ಕಟು ಕಷಾಯಾಮ್ಲ ಮಧುರಮೆಂಬಯ್ದುಂ ರಸನೇಂದ್ರಿಯ ವಿಷಯಂಗಳೊಳಂ, ಸುರಭಿ ದುರುಭಿಯೆಂಬೆರಡುಂ ಘ್ರಾಣೇಂದ್ರಿಯ ವಿಷಯಂದದೊಳಂ ಶ್ವೇತ ಪೀತ ಹರಿತ ವಾರುಣ ಕೃಷ್ಣಮೆಂಬಯ್ದುಂ ಚಕ್ಷುರಿಂದ್ರಿಯ ವಿಷಯಂಗಳೊಳಂ, ಷಡ್ಜ ಋಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬೇಳುಂ ಶ್ರೋತ್ರೇಂದ್ರಿಯ ವಿಷಯಂಗಳೊಳಂ ಮನೋಜ್ಞಂಗಳಪ್ಪವರೊಳು ರಾಗಮುಂ ದ್ವೇಷಮುಮಂ ಪತ್ತುವಿಡುವುದು ಪದಿನೈದನೆಯ ಮೂಲಗುಣಂ. ಸಾವಿನೊಳಂ ಬಾಳ್ಕೆಯೊಳಂ ಪಡೆದುದರೊಳಂ ಪಡೆಯದುದರೊಳಂ ಸಮತ್ವಮನುಳ್ಳುದು ಪದಿನಾರನೆಯ ಮೂಲಗುಣಂ

ವಿಶೇಷಾರ್ಥ—ಮುನಿ ಹಾಗೂ ಗೃಹಸ್ಥರ ನಿರ್ದೋಷ ಆಚರಣೆಯನ್ನೂ ಅದರ ಉತ್ಪತ್ತಿ, ಅದರಲ್ಲಿ ಪ್ರತಿದಿನ ಆಗುವ ಬೆಳವಣಿಗೆ, ಅದನ್ನು ಸ್ವೀಕರಿಸಿದವರು ರಕ್ಷಿಸುವ ಬಗೆ ಹಾಗೂ ಇವುಗಳಿಗೆ ಕಾರಣ ಮೊದಲಾದವುಗಳನ್ನು ಚರಣಾನುಯೋಗವು ಒಳಗೊಂಡಿದೆ.

ವಿದಿತಂ ದರ್ಶನದಿಂ ವ್ರತಪ್ರತತಿಯಿಂ ಸಾಮ್ಯೈತದಿಂ ಪ್ರೋಷಧಾ-
ಸ್ಪದ ಸಚ್ಚಿತ್ತ ನಿವೃತ್ತಿಯಿಂ ವಿಗತರಾತ್ರ್ಯಾಹಾರದಿಂ ಬ್ರಹ್ಮಚ- ।
ರ್ಯದಿನಾರಂಭವರಿಗ್ರಹಾಸ್ಪೃಹತೆಯಿಂ ಸಂದೊಂ ವ್ರತಂದಾಳ್ದಿ ಸ-
ಮ್ಮದದಿಂ ಶ್ರಾವಕಧರ್ಮಮಂ ಗುಣಮಹಾರತ್ನಾವಣಂ ಗೋವಣಂ ॥

ಕರ್ಣಪಾರ್ಯ—ನೇಮಿನಾಥಪುರಾಣಂ ೧–೩೬

ಇನ್ನು ದ್ರವ್ಯಾನುಯೋಗದ ಸ್ವರೂಪವನ್ನು ವಿವರಿಸುತ್ತಾರೆ—

**ಜೀವಾಜೀವಸುತತ್ತ್ವೇ ಪುಣ್ಯಾಪುಣ್ಯೇ ಚ ಬಂಧಮೋಕ್ಷೌ ಚ ।**
**ದ್ರವ್ಯಾನುಯೋಗದೀಪಃ ಶ್ರುತವಿದ್ಯಾಲೋಕಮಾತನುತೇ ॥ ೪೬ ॥ ***

ಅನ್ವಯಾರ್ಥ—(ದ್ರವ್ಯಾನುಯೋಗದೀಪಃ) ದ್ರವ್ಯಾನುಯೋಗವೆಂಬ ದೀಪವು (ಜೀವಾಜೀವಸುತತ್ತ್ವೇ) ಜೀವ ಅಜೀವ ಈ ನಿಜವಾದ ತತ್ತ್ವಗಳನ್ನು (ಪುಣ್ಯಾಪುಣ್ಯೇ) ಪುಣ್ಯ ಮತ್ತು ಪಾಪಗಳನ್ನೂ (ಚ) ಮತ್ತು (ಬಂಧ-ಮೋಕ್ಷೌ) ಬಂಧ ಹಾಗೂ ಮೋಕ್ಷಗಳನ್ನು (ಶ್ರುತವಿದ್ಯಾಲೋಕಂ) ಭಾವಶ್ರುತ ಜ್ಞಾನ ರೂಪ ಪ್ರಕಾಶವು ಹೇಗೆ ಉತ್ಪನ್ನವಾಗುವುದೋ ಆ ರೀತಿಯಿಂದ (ಆತನುತೇ) ವಿಸ್ತಾರಗೊಳಿಸುತ್ತದೆ, ಪ್ರಕಾಶದಲ್ಲಿ ತರುತ್ತದೆ.

---

ಚತುರ್ವಿಂಶತಿಸ್ತವನಂ ಪದಿನೇಳನೆಯ ಮೂಲಗುಣಂ ವಂದನೆ ಪದಿನೆಂಟನೆಯ ಮೂಲಗುಣಂ. ಪ್ರತಿಕ್ರಮಣಂ ಪತ್ತೊಂಭತ್ತನೆಯ ಮೂಲಗುಣಂ ಪ್ರತ್ಯಾಖ್ಯಾನಮಿಪ್ಪತ್ತನೆಯ ಮೂಲಗುಣಂ ವ್ಯುತ್ಸರ್ಗಮಿಪ್ಪತ್ತೊಂದನೆಯ ಮೂಲಗುಣಂ. ಪಾಸು, ಕವುಂದಿ, ಮಂಚಂ ಮೊದಲಾಗೊಡೆಯವವರೊಳು ಪಡದುದು ಮಿಪ್ಪತ್ತೆರಡನೆಯ ಮೂಲಗುಣಂ. ಶೀತೋದಕಮನಕ್ಕೆ ಉಷ್ಣೋದಕಮನಕ್ಕೆ ಮೀಯದುದು ಮಿಪ್ಪತ್ತುಮೂರನೆಯ ಮೂಲಗುಣಂ ಉಪವಾಸಂಗೆಯ್ದು ಪ್ರತಿಕ್ರಮಣಂಗೇಳ್ವುದುಮಿತ್ತಿಂಗಳ್ಗೊಮ್ಮೆ-ಲೋಚುಮಂ ಮಾಳ್ಪುದು ಮಿಪ್ಪತ್ನಾಲ್ಕನೆಯ ಮೂಲಗುಣಂ ಆರ್ತಧ್ಯಾನರೌದ್ರದಿಂ ನಿಂದಿರ್ದೆಯುಣ್ಬುದಿಪ್ಪತ್ತಾರನೆಯ ಮೂಲಗುಣದಕ್ಕುಗುವೆರ್ದಲಾಗೊಡೆಯುವರೊಳು ಪಲ್ಲಯುದ್ದದುಮಿಪ್ಪತ್ತೇಳನೆಯ ಮೂಲಗುಣಂ ಮುನ್ನಿನ ದಿವಸ ಮುಟ್ಟುಪದಮಾದೂಡಮಾಲಾಬ . ಯದೆ ಮೊರ್ಮೆಯುಣ್ಬುದಿಪ್ಪತ್ತೆಂಟನೆಯ ಮೂಲಗುಣಂ

ಕಂದ ॥ ಇಂತಿವು ಮೂಲಗುಣಂಗಳ್ಮಂತಣ ಉತ್ತರಗುಣಂಗಳಿವನಲ್ಪಮಹಾಂ- ।
ಡಿಂಕಿಸದೆ ನೆನಪವಣೆನಾಚಾರಂಗಳಂ ಸವಿಸ್ತರಮರಿಪವೂ ॥

ವಚನ . . . ದಂಶಮಶಕನಾಗ್ನಾರತಿಸ್ತ್ರೀಚರ್ಯಾನಿಷದ್ಯಂ ಶಯ್ಯ ಕ್ರೋಶ ವಧಯಾಚನಾಲಾಭ ರೋಗ ತೃಣ ಸ್ಪರ್ಶಮಲಸತ್ಕಾರ ಪುರಸ್ಕಾರ ಪ್ರಜ್ಞಾ ಜ್ಞಾನಾದರ್ಶನಮೆಂಬ ದ್ವಾವಿಂಶತಿ ಪರೀಷಹಜಯಮುಮನಶನಾದಿ ದ್ವಾದಶವಿಧ ತಪ-ಮುಮೆಂದಕ್ಕುಮಿಂತು ಶ್ರಾವಕ ಧರ್ಮಮಂ ಋಷಿಧರ್ಮಮುಂ ಸವಿಸ್ತರಮಾಗೆ ಚರಣಾನುಯೋಗಮೆಂಬ ಸಮ್ಯಗ್ಜ್ಞಾನ-ಮರಿಪುಗುಂ ॥

* ಆಯ್ಚಪಾರ್ಯನು ಹೇಳುವದು ಹೀಗೆ.

ಕಂದ ॥ ಜೀವಾದಿ ಸುತತ್ತ್ವಂಗಳನಾವಗಮೊಳುಮನವಾಕುಳಂ ಪ್ರಾಣಿಹಿತಂ ॥
ಭೂವಿದಿತಮರಿಪುಗುಂ ಸದ್ಭಾವದ್ರವ್ಯಾನುಯೋಗಮೆಂಬೀ ಜ್ಞಾನಂ ॥ ೪೬ ॥

ವಚನ—ಅದೆಂತೆಂದೊಡೆ—ಜೀವತತ್ತ್ವಮಜೀವತತ್ತ್ವ, ಆಸ್ರವತತ್ತ್ವ, ಬಂಧತತ್ತ್ವ, ಸಂವರತತ್ತ್ವ, ನಿರ್ಜರತತ್ತ್ವ, ಮೋಕ್ಷ ತತ್ತ್ವಮೆಂದು ಸಪ್ತತತ್ತ್ವಂಗಳಕ್ಕುಮಲ್ಲಿ ಜೀವನನಾದ್ಯನಿಧನಸ್ವಭಾವನುಂ, ಸುಕೃತದುಃಕೃತಕರ್ಮೋಪಾರ್ಜನನುಂ, ತತ್ಫಲ ಭೋಜನನುಂ, ಸ್ವತನುಪ್ರಮಾಣನುಂ, ಅನಂತಜ್ಞಾನಾದಿಗುಣೋಪೇತನುಮುತ್ಪಾದವ್ಯಯಧ್ರೌವ್ಯಾತ್ಮಕನುಮೂರ್ಧ್ವಗತಿ ಸ್ವಭಾವನು-ಮವಿನಾಶಿಯುಂ ಸಂವರಣ ವಿಸರ್ಪಣ ಶೀಲನುಮಪ್ಪುದಾ ಜೀವಕ್ಕುಪಯೋಗಲಕ್ಷಣಂ ಜ್ಞಾನದರ್ಶನ ಭೇದದಿಂ ದ್ವಿವಿಧಮಕ್ಕುಮಲ್ಲಿ ಜ್ಞಾನೋಪಯೋಗಂ, ಮತಿಜ್ಞಾನ, ಶ್ರುತಜ್ಞಾನಮವಧಿಜ್ಞಾನ, ಮನಃಪರ್ಯಯಜ್ಞಾನ, ಕೇವಲಜ್ಞಾನ ಮತ್ತಂ ಜ್ಞಾನಮಕ್ಕುಂ. ಮತಿಜ್ಞಾನಂ ಮುನ್ನೂರರುವತ್ತಾರು ವಿಕಲ್ಪಮಕ್ಕುಂ ಶ್ರುತಮನೇಕವಿಕಲ್ಪಂ ದ್ವಾದಶವಿಧಮವಧಿ ದೇವನಾರಕರಂ ಕುರುತ್ತಿಪ್ಪುದುಳಿದ ಮನುಷ್ಯತಿರ್ಯಗ್ಜೀವಂಗಳಿ ಕ್ಷಯೋಪಶಮಕಾರಣಮಾಗಿಯಾರು ವಿಕಲ್ಪಮಕ್ಕುಂ ಮನಃಪರ್ಯಯಮೆರಡು ವಿಕಲ್ಪಮಕ್ಕುಮದು ವಿಶೋಧಿಯೊಳ್ಪುಟ್ಟುಗುಂ ಕೇವಳಮೊಂದು ವಿಕಲ್ಪಮದು ಘಾತಿಗಳ ಕೇಡಿ-ನೊಳ್ಪುಟ್ಟುಗುಂ ಮತಿ-ಶ್ರುತಂಗಳು ಪರೋಕ್ಷಜ್ಞಾನಂಗಳೀವವು ಪ್ರತ್ಯಕ್ಷ ಜ್ಞಾನಂಗಳು. ಮತಿ-ಶ್ರುತಂಗಳು ಪ್ರಸ್ಥದ ಕೇವಲ

ಅರ್ಥ—ದ್ರವ್ಯಾನುಯೋಗವೆಂಬ ದೀಪವು ಜೀವ-ಅಜೀವ, ಪುಣ್ಯ-ಪಾಪ, ಬಂಧ-ಮೋಕ್ಷ ಇವುಗಳಲ್ಲಿ ಜ್ಞಾನದ ಪ್ರಕಾಶವನ್ನು ಹೆಚ್ಚಿಸುತ್ತದೆ [ಇದು ದ್ರವ್ಯಶ್ರುತದ ಕಾರ್ಯವಾಗಿದೆ. ಈ ಕಾರ್ಯದಿಂದ ಭಾವಶ್ರುತದ ಪ್ರಕಾಶವು ವಿಸ್ತಾರಗೊಳ್ಳುತ್ತದೆ ಆದರಿಂದ ದ್ರವ್ಯಾನುಯೋಗವನ್ನು ತಿಳಿಯುವುದೂ ಸಮ್ಯಗ್ಜ್ಞಾನವಾಗಿದೆ ಒಂಭತ್ತು ತತ್ತ್ವಗಳ ವಿಸ್ತಾರವಾದ ವಿವರವು ದ್ರವ್ಯಾಗಮಗಳಲ್ಲಿ ಬರುತ್ತದೆ 'ತತ್ತ್ವಾರ್ಥಸೂತ್ರ'ದಂಥ ಗ್ರಂಥವು ದ್ರವ್ಯಾಗಮನ—ದ್ರವ್ಯಾನುಯೋಗದ—ಶಾಸ್ತ್ರವೆನಿಸುತ್ತದೆ, ಅಂಥವುಗಳಲ್ಲಿ ದ್ರವ್ಯಸ್ವರೂಪವನ್ನು ತಿಳಿಯಬಹುದು ಸ ಥ]

---

ಪರ್ಯಾಯಂಗಳನರಿಪುಗುಮವಧಿ ಪುದ್ಗಲಂಗಳನರಿಪುಗುಂ ಮನಃಪರ್ಯಾಯಮನನ್ತಿಮ ಭಾಗಮನರಿವುಗುಂ ಕೇವಲಂ ಸರ್ವದ್ರವ್ಯ ಪರ್ಯಾಯಂಗಳುಮಂ ಕ್ರಮಕರಣವ್ಯವಧಾನರಹಿತಮಾಗಿಯರಿಪುಗುಮಿಂತೀಜ್ಞಾನದರ್ಶನಂಗಳನೇಕಲಕ್ಷಣಮಾಗೊಡೆಯುದು ಜೀವನನಾ ಜೀವನನೆ ಅನೇಕತೆರದಿಂದಮುದಲಕ್ಷಿಸಲಪ್ಪುದೆಂದೊಡೆ ಉಪಶಮಿಕಭಾವಂ, ಕ್ಷಾಯಿಕಭಾವಂ, ಕ್ಷಯೋಪಶಮಿಕಭಾವಮೌದಯಿಕ ಭಾವಂ, ಪರಿಣಾಮಿಕ ಭಾವಮೆಂದೀಯಯ್ದು ಭಾವಂಗಳಿಂದಮುಪಲಕ್ಷಿಸಲಕ್ಕುಂ ॥

ಕಂದ ॥ ಯತಿಪತಿಮತದಿಂದೆರಡೊಂಭತುಪದಿನೆಂಟಿಪ್ಪತ್ತೊಂದು ಮೂರೆಂದಕ್ಕುಂ ।
ಸತತಂ ನಿಶ್ಚಯದಿಂದಂ ಪ್ರತೀಕದಿಂ ಸಂದಭಾಗಮಯ್ದರ ಭೇದಂ ॥ ೪೮ ॥

ವಚನ—ಉಪಶಮನುಮುಪ ಮುಪಶಮಭಾವದ ವಿಕಲ್ಪಂ, ಕ್ಷಾಯಿಕಸಮ್ಯಕ್ತ್ವಚಾರಿತ್ರಂ, ಕೇವಲಜ್ಞಾನ ಚಾರಿತ್ರ ಕೇವಲದರ್ಶನ ದಾನಲಾಭ ಭೋಗೋಪಭೋಗ ವೀರ್ಯಮೆಂದಿಯೊಂಭತ್ತುಂ ಕ್ಷಾಯಿಕ ಭಾವದ ವಿಕಲ್ಪಂ ವೇದಕಸಮ್ಯಕ್ತ್ವಂ, ಸಾಗಾರನಗಾರ ಚಾರಿತ್ರಂ, ಸಂಯಮ . ಶ್ರುತಜ್ಞಾನಂ, ವಿಭಂಗಜ್ಞಾನಂ ಚಕ್ಷುರಚಕ್ಷುರವಧಿದರ್ಶನಂ, ದಾನಲಾಭ ಭೋಗೋಪಭೋಗ ವೀರ್ಯಮೇಂದೀ ಪದಿನೆಂಟುಂ ಕ್ಷಯೋಪಶಮ ಭಾವದವಿಕಲ್ಪಂ ನರಕತಿರ್ಯಙ್ಮರ್ತ್ಯದೇವಗತಿ ಕ್ರೋಧಂ, ಮಾನಮಾಯಾ ಲೋಭ ಕಷಾಯ ಸ್ತ್ರೀಪುನ್ನಪುಂಸಕ ಲಿಂಗ ಮಿಥ್ಯಾದರ್ಶನಜ್ಞಾನ ಸಂಯಮಾ ಸಿದ್ಧತ್ವಂ, ಕೃಷ್ಣನೀಲ ಕಪೋತ ಪೀತ ಪದ್ಮ ಶುಕ್ಲ ಲೇಶ್ಯೆಯೆಂದೀಯಿಪ್ಪತ್ತೊಂದುಮೌದಯಿಕ ಭಾವದ ವಿಕಲ್ಪಂ ಜೀವನುಂ ಭವ್ಯನಭವ್ಯನುಂ ದೂರಭವ್ಯನುಮೆಂದುಂ ಮೂರತೆರ ಪರಿಣಾಮಿಕ ಭಾವವಿಕಲ್ಪಮಿಂತೀಯಯ್ದು ಭಾವಂಗಳಿಂದಮುಪಲಕ್ಷಿಸಲ್ಪಟ್ಟ ಜೀವಂ ಸಂಸಾರಿ ಮುಕ್ತನೆಂದಿತ್ತೆರನಕ್ಕುಂ ಸಂಸಾರಿ ಜೀವಂ ತ್ರಸಸ್ಥಾವರಮೆಂದಿತ್ತೆರನಕ್ಕುಂ. ಪೃಥಿವ್ಯಪ್ತೇಜೋವಾಯುವನಸ್ಪತಿಯೆಂದಿವು ಸ್ಥಾವರಂಗಳ್. ದ್ವೀಂದ್ರಿಯಾದಿಗಳು ತ್ರಸಂಗಳು ಸ್ಪರ್ಶನ, ರಸನ, ಘ್ರಾಣಚಕ್ಷುಶ್ರೋತ್ರಮಿಂದ್ರಿಯಂಗಳಯ್ದುಮಲ್ಲಿ ಪಂಚಸ್ಥಾವರಕ್ಕಂ ಸ್ಪರ್ಶನಮೊಂದೆಯಕ್ಕುಂ ಕ್ರಿಮಿಪಿಪೀಲಿಕಾದಿ ಭ್ರಮರಮನುಷ್ಯಾದಿಗಳೊಂದೊಂದೆಯಧಿಕಮಕ್ಕುಂ ಸಂಜ್ಞಿಯುಮ ಸಂಜ್ಞಿಯುಮೆಂದು ಪಂಚೇಂದ್ರಿಯಮಿತ್ತೆರನಕ್ಕುಂ

ಕಂದ ॥ ಜಿನಮತದಿಂದಾಹಾರಂ ತನುಮಿಂದ್ರಿಯಮಂತೆ ಬಳಿಕಮುಚ್ಛ್ವಾಸಂ ಪಾ- ।
ಙ್ಮನಮೆಂದಕ್ಕುಂ ಪರ್ಯಾಪ್ತಿ ನಿಶ್ಚಿತಂ ಷಟ್ಪ್ರಕಾರದಿಂ ಜೀವಂಗೆ ॥ ೪೯ ॥

ವಚನ—ಅಲ್ಲಿ ಏಕೇಂದ್ರಿಯಕ್ಕೆ ನಾಲ್ಕು, ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಅಸಂಜ್ಞಪಂಚೇಂದ್ರಿಯಕಯ್ದು, ಸಂಜ್ಞಾರು ಪರ್ಯಾಯಮಕ್ಕುಂ, ಮತ್ತಂ ಪಂಚೇಂದ್ರಿಯ ಪ್ರಾಣಂ, ಮನೋಬಳ, ವಾಗ್ಬಳ, ಕಾಯಬಳಪ್ರಾಣಂ, ಉಛ್ವಾಸ ನಿಶ್ವಾಸ ಪ್ರಾಣಮಾಯುರ್ಪ್ರಾಣಮೆಂದು ದಶಪ್ರಾಣಮಕ್ಕುಮಲ್ಲಿ ಏಕೇಂದ್ರಿಯಕ್ಕೆ ನಾಲ್ಕು, ದ್ವೀಂದ್ರಿಯಕ್ಕಾರು, ತ್ರೀಂದ್ರಿಯಾದಿಗಳ್ಗೆ ಮೊಂದೊಂದೆಯಧಿಕಂ, ಸಂಜ್ಞಿಗೆ ಪತ್ತು ಪ್ರಾಣಮಕ್ಕುಂ. ಆಹಾರಭಯ ಮೈಥುನ ಪರಿಗ್ರಹಮೆಂದು ನಾಲ್ಕುಂ ಸಂಜ್ಞೆಯಕ್ಕುಂ, ಅವು ಸಂಸಾರಿಗಳೆಲ್ಲಂ ಸಾಮಾನ್ಯಂಗಳು ಜೀವಶರೀರದಿಂ ಪೋಪಾಗಳು ಋಜುವಕ್ರಮೆಂದೆರಡು ಗತಿಯಂ ಸಲ್ಗುಮಲ್ಲಿ ಸಂಸಾರಿಯೆರಡು ಗತಿಯೊಳಂ ಸಲ್ಗುಂ, ಮುಕ್ತಂ ಋಜುಗತಿಯೊಳ್ಸಲ್ಗುಂ, ವಕ್ರಗತಿಯೊಳು ಕಾರ್ಮಣಕಾಯಯೋಗಮಕ್ಕುಂ. ಋಜುಗತಿಯೊಳು ನೋಕರ್ಮಮಿಶ್ರಕಾಯಯೋಗಮೆಂದು ಸಮಯದೊಳು ಸಯಿತೆ ಸಲ್ವುವು ಋಜುಗತಿಯಕ್ಕುಂ? ಒಂದೆರಡುಂ ಮೂರು ಸಮಯದೊಳ್ ಕಿಂಕಿಸವುದು ವಿಗ್ರಹಗತಿಯಕ್ಕುಮವರೊಳು ನೋಕರ್ಮದಾನಮಾಗದು ಜೀವಂ ಗತ್ಯಂತರಕ್ಕೆ ಸಲ್ವಾಗಳು ಮಹಾದೆಸೆಗಳಲ್ಲದೆ ವಿದ್ದೆಸೆಗೆ ಸಲ್ಲದದರಿಂದೆರಡು ಗತಿಯಂ ಬೇಡಿತ್ತು ಸಚಿತ್ತಮಚಿತ್ತ ಮಿಶ್ರ ಶೀತೋಷ್ಣಮಿಶ್ರ ಸಂವೃತ . ಮೂರ್ಛನಂಗಳುಂ ಗರ್ಭಜಂಗಳುಮಾಗಿ ಪುಟ್ಟುಗುಂ ಜರಾಯುಜಾಂಡಜ ಪೋತಂಗಳುಂ ದೇವನಾರಕರುಪಪಾತಜಂಗಳುಳಿದವೆಲ್ಲಂ ಸಂಮೂರ್ಛನಂಗಳುನಂತು ಪುಟ್ಟಿದುವ . . . ಪ್ರಾಣಿಗಳ ಮನಾದಿ ಸಂಬಂಧಿಗಳಕ್ಕುಂ. ಮನುಷ್ಯ ತಿರ್ಯಗ್ಜಾತಿಗಳ್ಗೆ ಮಾಹಾರಿಕ ಶರೀರಮಕ್ಕುಂ ದೇವನಾರಕರ್ಗೆ ವೈಕ್ರಿಯಕ ಶರೀರಮಕ್ಕುಂ ವೃದ್ಧಿಪ್ರಾಪ್ತರ್ಗೆ ವೈಕ್ರಿಯಕ ಶರೀರಮಕ್ಕು ತೈಜಸಮುಮಕ್ಕುಂ ಮತ್ತಂ ಸಂಯತಂಗೆಯಾಹಾರಿಕ ಶರೀರಮಕ್ಕುಂಮಾ ಶರೀರಂಗಳು ಮೂರು ಲಿಂಗಮಂ ತಾಳ್ದಿದುವಲ್ಲ ನಾರಕರ ಸಂಮೂರ್ಛನೆಗೆ ನಪುಂಸಕ ಲಿಂಗಮಕ್ಕುಂ ದೇವರ್ಗಂ ಪುಂಸ್ತ್ರೀ ಲಿಂಗಂಗಳಕ್ಕುಮುಳಿದವರ್ಗಂ ಮೂರುಲಿಂಗಮಕ್ಕುಂ.

ಕಂದ ॥ ಚರಮಾಂಗನಮಲನಕ್ಷಯನರ್ಹತ್ಪರಮೇಷ್ಠಿ ಬೆಸಸಿದಂದದಿ ।
ಸುರರುಂ ನರಕೋದ್ಭವರುಂ ಚರಮಾಂಗಶರೀರಮನಪವರ್ತ್ಯಾಯುಷ್ಕರ್ ॥ ೫೦ ॥

ವಚನ—ಜೀವಂ ಪುದ್ಗಲ ಧರ್ಮಾಧರ್ಮಾಕಾಶ ಕಾಲಂಗಳೆಂಬಿವು ಷಡ್ದ್ರವ್ಯಂಗಳು ಪುದ್ಗಲಾದಿಯಯ್ದು ಅಜೀವಂಗಳು ಜೀವ ದ್ರವ್ಯಂಗಳುಮೆನೆಪಡುಗುಮಲ್ಲಿ ಕಾಲಮನುಳಿಪಿಯುಳಿದುದಯ್ದುಮಸ್ತಿಕಾಯಮೆನೆ ಪಡುಗುಂ. ಪುದ್ಗಲಂ ರೂಪದ್ರವ್ಯಮುಳಿದುವರೂಪಿಗಳು ಸ್ಪರ್ಶನಮುಂ, ರಸನಮುಂ, ಗಂಧಮುಂ, ವರ್ಣಮುಂ, ಪುದ್ಗಲ ದ್ರವ್ಯದ ಲಕ್ಷಣಂ. ಶಬ್ದಮುಂ, ಬಂಧಮುಂ, ಸೂಕ್ಷ್ಮಮುಂ, ಸ್ಥೂಲಮುಂ, ಸಂಸ್ಥಾನಮುಂ, ಬೇದಮುಂ, ತಮಮು, ಛಾಯಮು, ಆತಪಮು,

ವಿಶೇಷಾರ್ಥ—ದ್ರವ್ಯಾನುಯೋಗವೆಂಬ ದೀಪವು ಜೀವ ಮತ್ತು ಅಜೀವ ಈ ಉತ್ತಮ ತತ್ವಗಳ ಸ್ವರೂಪವನ್ನು ಕರ್ಮಬಂಧ ಹಾಗೂ ಸಂವರಗಳನ್ನೂ ಪ್ರಕಟಗೊಳಿಸಿ, ಆತ್ಮದಲ್ಲಿ ಇವುಗಳ ಸತ್ಯಸ್ವರೂಪದ ಅರಿವನ್ನು ಮೂಡಿಸುವಂಥ ದಿವ್ಯದೀಪವಾಗಿದೆ

ಈ ಪ್ರಕಾರ ನಾಲ್ಕು ಅನುಯೋಗರೂಪ ಶ್ರುತಜ್ಞಾನದ ವರ್ಣನೆಯನ್ನು ಮಾಡಲಾಯಿತು. ಇವುಗಳಲ್ಲಿ ಜ್ಞಾನದ ಇಪ್ಪತ್ತು ಭೇದ, ಅಂಗ, ಪೂರ್ವಗಳ ಸ್ವರೂಪಗಳನ್ನು ವರ್ಣಿಸಿದರೆ ಇನ್ನೂ ವಿಸ್ತಾರವಾಗುತ್ತದೆ. ಅದರಿಂದ ಆಯಾ ವಿಷಯದ ಗ್ರಂಥಗಳಲ್ಲಿ ಅವುಗಳನ್ನು ನೋಡಿಕೊಳ್ಳಬೇಕು.

---

ಮುದ್ಯೋತಮುಮೆಂದಿಸರನುಳ್ಳುದು ಪುದ್ಗಲ ಗುಣಂಗಳು ಶರೀರಮುಂ, ನುಡಿಯುಂ. ಮನಮುಂ, ಉಚ್ಛ್ವಾಸ ನಿಶ್ವಾಸಮುಂ, ಸುಖಮುಂ, ದುಃಖಮುಂ, ಬಾಳ್ಕೆಯುಂ, ಸಾವುಮೆಂದಿವಕ್ಕೆ ಕಾರಣಮಪ್ಪುವು ಧರ್ಮಾಧರ್ಮಕಾಲಂಗಳು ಗತಿಯುಂ ಸ್ಥಿತಿಯುಂ ವರ್ತನೆಯುಮವಗಹನಮುಮೆಂದಿವಕ್ಕೆ ಕಾರಣಮಪ್ಪುವು ಆಕಾಶಮನುಳಿಪಿಯುಳಿದ ದ್ರವ್ಯಂಗಳೆಲ್ಲಂ ಲೋಕಾಕಾಶದೊಳೆಯಕ್ಕುಂ

ಕಂದ ॥ ಮನಸಿಜರಿಪು ಸರ್ವಜ್ಞಂ ಜಿನಪತಿ ತೀರ್ಥಕರು ಬೆಸಸಿದಾಗಮದೊಳ್ತಾಂ ।
• ಮನವಚನಕಾಯಮೆಂದಿವರನೆಗಳ್ತೆಗೆಯಿಂದಮಾಸ್ರವಂ ತಾನಕ್ಕುಂ ॥

ಅದು ಸಾಮಾನ್ಯದಿಂ ಶುಭಯೋಗದೊಳು ಪುಣ್ಯಾಸ್ರವಮಕ್ಕುಮಶುಭಯೋಗದೊಳು ಪಾಪಾಸ್ರವಮಕ್ಕುಂ. ವಿಶೇಷದಿಂದೆಂಟು ಕರ್ಮಂಗಳಂ ಬೇರೆವೇರೆ (?) ಕಾರಣಮಾವುದೆಂದೊಡೆ—ಗುಣವಂತರ್ಗೆ ಮುಳಿವುದು, ಓರ್ವರಲ್ಲಿ ಓದುಗಲ್ತು ಅವರಂ ಮರಸಿ ಮತ್ತೋರ್ವರಲ್ಲಿ ಓದಿದೆನೆಂಬುದಂ, ಜ್ಞಾನಿಗಳೊಳು ಮತ್ಸರಮುಮೆಂದಿಂಗಂತರಾಯಮುಂ ಮಾಳ್ಪುದು, ದಾತ್ಯಗಳನ್ನೇಳಿಸಿ ನುಡಿವುದು, ಆಗಮಂಗಳನೋದುವರ್ಗೆ ಚಿತ್ತಸ್ಖಲನೆಯುಂ ಮಾಳ್ಪುದುಮೆಂದಿವು ಜ್ಞಾನದರ್ಶನಾವರಣೀಯಕ್ಕಾಸ್ರವಕಾರಣಂಗಳು ದುಃಖಮುಂ, ಶೋಕಮುಂ, ತಾಪಮುಮಾಕ್ರಂದನಮುಮೆಂದಿವಂ ತನಗೆ ಮಾಳ್ಪುದುಂ, ಪೆರರ್ಗೆ ಮಾಳ್ಪುದು ಸಾತಾವೇದನೀಯ ಕಾರಣಂಗಳು, ಪ್ರಾಣಿಗಳೊಳು ಕಾರುಣ್ಯಮುಂ, ಗುಣಿಗಳೊಳು ಭಕ್ತಿಯುಂ, ದಾನಮುಂ, ಪೂಜೆಯುಂ, ಸರಾಗಸಂಯಮಾದಿ ಗುಣಂಗಳುಂ ಕ್ಷಮೆಯುಂ ಶೌಚಮುಮೆಂದಿವು ಸಾತಾವೇದನೀಯಕ್ಕಾಸ್ರವಕಾರಣ ಕೇವಳಿಗಳುಮನಾಗ . . . . ದೇವ. ರ್ಕ್ಕಳು . ದರ್ಶನಮೋಹನೀಯಕ್ಕಾಸ್ರವಕಾರಣಂ, ಕ್ರೋಧಮಾನಮೋಹಮೆಂದಿವರುದಯದೊಳು ಪುಟ್ಟಿದ ತೀವ್ರ ಪರಿಣಾಮಂ ಚಾರಿತ್ರಮೋಹನೀಯಕ್ಕಾಸ್ರವಕಾರಣಂ.

ಕಂದ ॥ ಪಿರಿದಪ್ಪ ಪರಿಗ್ರಹಮುಂ ಪಿರಿದಪ್ಪಾರಂಭಮುಂ ಜಿನೇಶ್ವರಮತದಿಂ ।
ನರಕಾಯುಷ್ಯಕ್ಕಾಸ್ರವಕರಂಗಳೆಂದರಿಯೆ ತಿಳಿಪುವರ್ಮುನಿಪರ್ಕ್ಕಳ್ ॥ ೫೨ ॥

ವಚನ—ಮಾಯಾಶಲ್ಯಂಗಳು ತಿರಿಕಾಯುಷ್ಯಕ್ಕಾಸ್ರವಕಾರಣಂಗಳು ಮನೋವಚನಕಾಯಕುಟಿಲತೆಯು ಶುಭಕರ್ಮಕ್ಕಾಸ್ರವಕಾರಣಂ . . . . ಅವರಲ್ಲಿ ಋಜುತ್ವಂ ಶುಭನಾಮಕರ್ಮಕ್ಕಾಸ್ರವಕಾರಣಂ, ದರ್ಶನಶುದ್ಧತೆಯುಂ, ವಿನಯ ಸಂಪನ್ನತೆಯುಂ, ಶೀಲಬ್ರತಂಗಳನತಿಚಾರಮುಮನವರತಸ್ವಾಧ್ಯಾಯಮುಂ, ಧರ್ಮಾನುರಾಗಮುಂ, ಶಕ್ತಿಯಂ ಮರಸದ ತ್ಯಾಗಮುಂ, ಶಕ್ತಿಯಂ ಮರಸದ ತಪಮುಂ, ಸಾಧುಗಳ್ಗೆ ಸಮಾಧಿಯುಂ ಕುಡುವುದುಂ, ವೈಯ್ಯಾವೃತ್ಯಂಗೆಯ್ವುದುಂ, ದೇವರೊಳಮಾಚಾರ್ಯರೊಳಮಾಗಮದೊಳಮಚಲಭಕ್ತಿಯುಂ, ಷಡಾವಶ್ಯಕಂಗಳ ಕುಂದಿಸದುದುಂ, ಮಾರ್ಗಪ್ರಭಾವನಮುಂ, ಧರ್ಮವಾತ್ಸಲ್ಯಮುಮೆಂದೀ ಷೋಡಶ ಭಾವನೆಗಳು ತೀರ್ಥಕರನಾಮಕರ್ಮಕ್ಕಾಸ್ರವ ಕಾರಣಂ ತನ್ನಂ ತಾನೆ ಪೊಗಳ್ವುದುಂ, ಪೆರರಂ ಪಳಿವುದುಂ, ತನ್ನ ಮೈಯ್ಯೊಳಿಲ್ಲದ ಗುಣಂಗಳಂ ಪುಟ್ಟಿಸುವುದುಂ, ಪೆರರ ಮೈಯ್ಯೊಳುಳ್ಳ ಗುಣಂಗಳಂ ಮರಸುವುದುಂ ನೀಚೈರ್ಗೋತ್ರಕ್ಕಾಸ್ರವಕಾರಣಂ. ಸ್ವರ್ಗಾಪವರ್ಗಹೇತುಗಳಪ್ಪ ನೆಗಳ್ತೆಗಳ್ಗೆ ವಿಘ್ನಂ ಮಾಡುವುದುಮಂತರಾಯ ಕರ್ಮಕ್ಕಾಸ್ರವ ಕಾರಣಂ

ಕಂದ ॥ ಯಮದರ ಮತದಿಂ ಮಿಥ್ಯಾತ್ವಮುಮಬ್ರತಮುಂ ಪ್ರಮಾದಮುಂ ಸಂಪ ಕಷಾ- ।
ಯಮುಮತ್ತೆ ಕಾ . ದ್ರಮೆಂದಿವು ನಿಯತಂ ಬಂಧಕ್ಕೆ ಕಾರಣಮಿವ್ವೆದುಂ ॥

ವಚನ—ಕಷಾಯಂಗಳತ್ತ ಮಾಡಿದ ಜೀವಂ ಕರ್ಮಂಗಳ್ಗೆ ಯೋಗ್ಯಮಪ್ಪ ಪುದ್ಗಲಂಗಳಂ ತೆಗೆದುಳ್ಪುದು ಬಂಧಮಂತದು ಪ್ರಕೃತಿಸ್ಥಿತಿಅನುಭಾಗಪ್ರದೇಶಬೇದದಿಂ ಚತುರ್ವಿಧಮಕ್ಕುಮವರೊಳು ಜ್ಞಾನಾವರಣೀಯಂ, ದರ್ಶನಾವರಣೀಯಂ, ವೇದನೀಯಂ, ಮೋಹನೀಯಂ, ಆಯುಷ್ಯ, ನಾಮ, ಗೋತ್ರಮಂತರಾಯಮೆಂದಿವರ ಬಂಧಮೆಂಬುದು ಒಂದು ಸಮಯದೊಳ್ಕಟ್ಟಿದ ಕರ್ಮಮಾತ್ರ ಪ್ರದೇಶದಿಂದೆನ್ನೆವರಮಿಕ್ಕುಮದು ಸ್ಥಿತಿಬಂಧಮೆಂಬುದು ಮೊದಲ ಮೂರುಂ ಕರ್ಮಕ್ಕಮಂತರಾಯ ಕಮುತ್ಕೃಷ್ಟಸ್ಥಿತಿ ಮೂವತ್ತು ಕೋಟಾಕೋಟಿ ಸಾಗರೋಪಮ ಕಾಲಮೆಪ್ಪತ್ತು ಮೋಹನೀಯಕ್ಕೆ, ಇಪ್ಪತ್ತು ನಾಮ ಗೋತ್ರಂಗಳಿಗೆ, ಮೂವತ್ತಮೂರು ಸಾಗರೋಪಮಮಾಯುಷ್ಯಕ್ಕೆ, ಜಘನಸ್ಥಿತಿವೇದನೀಯಕ್ಕೆ ಪನ್ನೆರಡು ಮುಹೂರ್ತಂ, ನಾಮಗೋತ್ರಕ್ಕೆಂಟು ಮುಳಿದದಕ್ಕೆಲ್ಲಮಂತರ್ಮುಹೂರ್ತಮಕ್ಕುಮಿಂತೀದುಸ್ಥಿತಿ ಬಂಧಮೆಂಬುದು ಕರ್ಮಂಗಳ ತೀಬ್ರಶಕ್ತಿ ಬಂಧಮನುಬಾಗಬಂಧಮೆಂಬುದಕ್ಕುಂ

ಶ್ರೀ ಸಮಂತಭದ್ರಾಚಾರ್ಯರು ವಿರಚಿಸಿದ ರತ್ನಕರಂಡ-ಶ್ರಾವಕಾಚಾರದ ಮೂಲ ಸೂತ್ರಗಳಿಗೆ ಪಂಡಿತ ಸದಾಸುಖಜಿಯವರು ಬರೆದ ಹಿಂದಿ ಅರ್ಥವನ್ನು ಅನುಸರಿಸಿ, ಈ ಕನ್ನಡ ಗ್ರಂಥವನ್ನು ರಚಿಸಲಾಗಿದೆ ಈ ಕನ್ನಡ ಗ್ರಂಥದಲ್ಲಿ ಸಮ್ಯಗ್ಜ್ಞಾನದ ಸ್ವರೂಪ ವರ್ಣನ ಎಂಬ ಎರಡನೆಯ ಅಧ್ಯಾಯವು ಮುಗಿಯಿತು.

ಮೂಜಗವೆಂಬ ಗೇಹದೊಳೆ ತುಂಬಿದ ವಸ್ತುಗಳಾರು ಕಾಯವ್ಯ-
ದೋಜೆಯ ತತ್ತ್ವವೇಳು ನವಭೇದಪದಾರ್ಥಮಿವಂ ತಪಸ್ವಿ ಸಂ- ।
ಯೋಜಿಸಿ ಕೂಡೆ ಕೂಡೆ ಪರಿಭಾವಿಸಿ ತನ್ನನೆ ಕಾಣ್ಬುದರ್ಕೆ ಜೇ-
ತೋಜಯನಾಗಬೇಕು ಮೊದಲೆಂದೆಯಲಾ ಅಪರಾಜಿತೇಶ್ವರಾ ॥

—ರತ್ನಾಕರ—ಅಪರಾಜಿತಶತಕ-೩.

---

ಕಂದ ॥ [ವರ-ಗುಪ್ತಿ] ಸಮಿತಿಧರ್ಮಂ ನಿರುತಮನುಪ್ರೇಕ್ಷೆಗಳಪರಿಷಹ ಜಯಮುಂ ।
ನಿರುಪಮ ಚರಿತ್ರಮೆಂದಿವು ದೊರೆಕೊಳೆ ಕರ್ಮಾಸ್ರವಕ್ಕೆ ಸಂವರೆಯಕ್ಕುಂ ॥ ೫೪ ॥

ಅಷ್ಟವಿಧ ಕರ್ಮಂಗಳೆಂಬ ಪೊನಲ್ಗಳಂ ತನಂಗವೆಂಬ ಕೋಣನಂ ಪುಗಲಿಯ್ಯದ ತ್ರಿಗುಪ್ತಿಗಳಿಂದಂ, ಪಂಚಸಮಿತಿಗಳಿಂದಂ, ದಶಧರ್ಮಂಗಳಿಂದಂ, ದ್ವಾದಶಾನುಪ್ರೇಕ್ಷೆಗಳಿಂದಂ, ದ್ವಾವಿಂಶತಿಪರೀಷಹಜಯಂಗಳಿಂದಂ, ಪಂಚಾಚಾರಂಗಳಿಂದಂ ತಗೆವುದು ಸಂವರೆಯಕ್ಕುಂ ತಪದಿಂ ನಿರ್ಜರೆಯಕ್ಕುಂ ಆ ತಪಮುಂ ಬಾಹ್ಯಾಭ್ಯಂತರಭೇದದಿಂ ದ್ವಿವಿಧಮಕ್ಕುಮಲ್ಲಿ ಬಾಹ್ಯತಪಮನ ಶನಮುಮವಮೋದರ್ಯಮುಂ, ವೃತ್ತಿಪರಿಸಂಖ್ಯಾನಮುಂ, ರಸಪರಿತ್ಯಾಗಮುಂ, ವಿವಿಕ್ತಶಯನಾಶನಂ, ಕಾಯಕ್ಲೇಶಮುಮೆಂದಕ್ಕುಂ ಪ್ರಾಯಶ್ಚಿತ್ತದ ವಿಕಲ್ಪಂ ಜ್ಞಾನ ದರ್ಶನ ಚಾರಿತ್ರೋಪಚಾರವಿನಯಂಗಳುಮೆಂಬನಾಲ್ಕುಂ. ವಿನಯಮೆಂಬ ತಪದ ವಿಕಲ್ಪಂ ಆಚಾರ್ಯೋಪಾಧ್ಯಾಯ ತಪಸ್ವಿಸೈವಿನಯವೈಯ್ಯಾವೃತ್ಯ ಸ್ವಾಧ್ಯಾಯ ಧ್ಯಾನವ್ಯುತ್ಸರ್ಗಮೆಂದೀಯಾರುಂ ಅಭ್ಯಂತರ ತಪಂಗಳಲ್ಲಿ ಆಲೋಚನೆ, ಪ್ರತಿಕ್ರಮಣ, ತದುಭಯ, ವಿವೇಕ, ವ್ಯುತ್ಸರ್ಗ, ತಪಶ್ಛೇದ, ಪರಿಹಾರೋಪಸ್ಥಾಪನೆಯೆಂಬಿಯೊಂಭತ್ತುಂ ಪ್ರಾಯಶ್ಚಿತ್ತದ ವಿಕಲ್ಪಂ ಜ್ಞಾನ ದರ್ಶನ ಚಾರಿತ್ರೋಪಚಾರ ವಿನಯಂಗಳುಮೆಂಬ ನಾಲ್ಕುಂ ವಿನಯಮೆಂಬ ತಪದ ವಿಕಲ್ಪಂ ಆಚಾರ್ಯೋಪಾಧ್ಯಾಯ ತಪಸ್ವಿ ಶೈಕ್ಷ ಜ್ಞಾನ ಗಣ ಕುಲ ಸಂಘ ಸಾಧು ಮನೋಜ್ಞರೆಂಬ ಪದದಿಂ ವೈಯಾವೃತ್ಯಮಂ ಮಾಳ್ಪುದು ವೈಯಾವೃತ್ಯಮೆಂಬ ತಪದ ವಿಕಲ್ಪಂ ವಾಚನಾಪೃಚ್ಛನಾನುಪ್ರೇಕ್ಷಾಮ್ನಾಯಧರ್ಮಕಥನಮೆಂದು ಸ್ವಾಧ್ಯಾಯಮಯ್ದು ತೆರನಕ್ಕುಂ. ಬಾಹ್ಯಾಭ್ಯಂತರಕೋಪಾದಿಗಳೆರಡುಮನುಳಿವುದು ವ್ಯುತ್ಸರ್ಗಮೆಂಬ ತಪಂ. ಉತ್ತಮ ಸಂಹನನ ನೊಡೆಯಂಗೆ ಕಿರಿದಪ್ಪಂತರ್ಮುಹೂರ್ತದಿಂ ತೊಡಗಿ ಪಿರಿದಪ್ಪಂತರ್ಮುಹೂರ್ತಂಬರಗಮೊಂದು ವಸ್ತುವಿನ ಮೇಲೆ ಮನಮಂತಗವುದು ಧ್ಯಾನಮೆಂಬುದು ವಿಕಲ್ಪದಿಂದಾರ್ತರೌದ್ರಧರ್ಮಶುಕ್ಲಮೆಂದು ಚತುರ್ವಿಧಮಕ್ಕುಮಲ್ಲಿ ಮುಂತಣೆರಡುಮಶುಭ ಧ್ಯಾನಂ ಪತ್ತುವಿಟ್ಟುಮುಂತಣೆರಡುಂ ಶುಭಧ್ಯಾನದೊಳು ಕೂಡಿರ್ಪುದು ಧ್ಯಾನಮೆಂಬ ತಪಮಕ್ಕುಂ ಇಷ್ಟವಿಯೋಗಮನಿಷ್ಟ ಸಂಯೋಗಜಂ, ಲಾಭಜಮಲಾಭಜಮೆಂದಾರ್ತಧ್ಯಾನಂ ಚತುರ್ವಿಧಮಕ್ಕುಮದು ಮಿಥ್ಯಾದೃಷ್ಟಿಯುಂ ಅಸಂಯತ ಸಮ್ಯಗ್ದೃಷ್ಟಿ ವರಮಕ್ಕುಂ. ಪೆಸಸಂಯಮತರುಂ, ಪ್ರಮತ್ತಸಂಯಮತರೆಂದೀರ್ವರೆಗಮಕ್ಕುಂ

ಕಂದ ॥ ಕೊಂಡೆಸೆವುದುಮನ್ಯತಡೊಳಾನಂದಂ ಮಾಡುವುದು ಸ[ಂ]ಯ[ಮ]ದೊಳು ಸಂತಸಾ

. . . . . . . .

ವಚನ . . ಮಿಥ್ಯಾದೃಷ್ಟಿಯಿಂ ತೊಡಗಿಯಪ್ಪ ಸಂಯತರ್ನಾಲ್ವರುಂ, ಸಂಯತಾಸಂಯಮತರುಮೆಂದಿವರ್ವರೆ. . ಆಜ್ಞಾವಿಚಯಮಪಾಯವಿಚಯಂ, ವಿಪಾಕವಿಚಯಂ, ಸಂಸ್ಥಾನವಿಚಯಮೆಂದೀ ನಾಲ್ಕುಂ ಧರ್ಮದ ಧ್ಯಾನಮಿಂತಿವು ಅವಿರತ ಸಮ್ಯಗ್ದೃಷ್ಟಿಯಿಂದ ಪ್ರಮತ್ತಗುಣಸ್ಥಾನಂಬರಮಕ್ಕುಂ ಪೃಥಕ್ತ್ವವಿತರ್ಕವೀಚಾರಂ, ಏಕತ್ವವಿತರ್ಕವೀಚಾರಂ, ಸೂಕ್ಷ್ಮ-ಕ್ರಿಯಾಪ್ರತಿಪಾತಿವ್ಯುಪರತಕ್ರಿಯಾನಿವರ್ತಿಯೆಂದೀ ನಾಲ್ಕುಂ ಶುಕ್ಲಧ್ಯಾನಮಲ್ಲಿ ಮೊದಲೆರಡುಂ ಪೂರ್ವವಿದರ್ಗಕ್ಕುಂ ಮುಂದಣೆರಡುಂ ಕೇವಳಿಗಳಕ್ಕುಮಿಂತೀ ಧರ್ಮಶುಕ್ಲ ಧ್ಯಾನಂಗಳಿಂದೇಕಾದೇಶನಿರ್ಜರೆಗಳಕ್ಕುಮವಾವುದೆಂದೊಡೆ—ಸಮ್ಯಗ್ದೃಷ್ಟಿ ಶ್ರಾವಕವಿರತಾನಂತವಿಯೋಜಕದರ್ಶನಮೋಹಕ್ಷಪಕೋಪಶಮಕೋಪಶಾಂತಮೋಹ ಕ್ಷಪಣ ಸ್ವಸ್ಥಾನ ಜಿನಯೋಗ ನಿರೋಧ ಜಿನರೆಂದೀ ಪನ್ನೊರ್ವರ್ಗಂ ಸಮ್ಯಗ್ದೃಷ್ಟಿಯಾದಿಯಾಗಿಯೋರ್ವರನೊಡಲೋರ್ವರ ಸಂಖ್ಯಾತಗುಣರೆಯಕ್ಕುಂ ಘಾತಿ ಚತುಷ್ಟಯದ ಕೇಡಿನೋಳು ಔದಯಿಕಕ್ಷಯೋಪಶಮಕೋಪಶಮಿಕ ಭಾವಂಗಳ ಭವ್ಯತ್ವದ ಕೇಡಿನೊಳಂ ಮೋಕ್ಷಮಕ್ಕು-ಮಾಕ್ಷಣದೊಳು ಜೀವಮೂರ್ಧ್ವಗತಿಸ್ವಭಾವನಪ್ಪುದರಿಂ ಲೋಕಾಗ್ರದೊಳ್ನಿಲಸುಗುಂ

ಕಂದ ॥ ಅದು ನಿಶ್ರೇಯಸ ಸುಖದೆಡೆಯದು ನಿರ್ಭಯಮಂತದುಂ ನಿರಾಕುಳಮನಘಂ ।
ವಿದಿತಮದನಂತ ಮನುಪಮಮದ ಮೋಘದ ಜನ್ಮಮಮಲಮಬ್ಯಾಬಾಧಂ ॥ ೫೬ ॥

ಅಂತು ಜೀವಾದಿ ಸಪ್ತಂ ತತ್ವಂಗಳುಮಂ, ದ್ರವ್ಯಾನುಯೋಗಮೆಂಬ ಸಮ್ಯಗ್ಜ್ಞಾನಮರಿಪುಗುಂ

ಕಂದ ॥ ಅನುಯೋಗಂಗಳು ನಾಲ್ಕುಮನನವರತಂ ಪೇಳ್ವ ತಿಳುಪುವರಿಪುವರ್ಮದದಿಂ ।
ಮನದೊಳು ಭಾವಿತಭವ್ಯಂಗನುಪಮನವಲಬ್ಧಿಗಳು ಚಿರಂ ದೊರೆಕೊಳ್ಗುಂ ॥ ೫೭ ॥

ಇದು ಭಗವದರ್ಹತ್ಪರಮೇಶ್ವರಪರಮಭಟ್ಟಾರಕವೀತರಾಗಸರ್ವಜ್ಞವದನವನಜಸಮುದ್ಗತ ಸದಸದಾತ್ಮಕ ಪರಮ ತತ್ವಭಾವನಾ ಭಾವಿತ ಸ್ವಾಂತ ಶ್ರೀವರ್ಧಮಾನಸಿದ್ಧಾಂತದೇವಚರಣಸರಸೀರುಹಸ್ಮರಣಪರೀತಾಂತಃಕರಣ ಕುಶೇಸಯಂ ಶ್ರೀಮದಾಯತವರ್ಮ ನಿರ್ಮಿತಮಪ್ಪ ರತ್ನಕರಂಡಕದೊಳು ಸಮ್ಯಗ್ಜ್ಞಾನಸ್ವರೂಪನಿರೂಪಣಂ ದ್ವಿತೀಯಪರಿಚ್ಛೇದಃ ।

# ಚಾರಿತ್ರಾಧಿಕಾರ

ಇನ್ನು ಮೇಲೆ ಆಚಾರ್ಯರು ಸಮ್ಯಕ್‌ಚಾರಿತ್ರ ಎಂಬ ಹೆಸರಿನ ಮೂರನೆಯ ಅಧಿಕಾರದ ವರ್ಣನೆಯನ್ನು ಮಾಡುತ್ತಾರೆ. ಅದರಲ್ಲಿ ಚಾರಿತ್ರದ ಲಕ್ಷಣವನ್ನು ಕುರಿತು ಸೂತ್ರವನ್ನು ಹೇಳುತ್ತಾರೆ

ಚಾರಿತ್ರದ ಲಕ್ಷಣವು ಹೀಗೆ—

ಮೋಹತಿಮಿರಾಪಹರಣೇ ದರ್ಶನಲಾಭಾದವಾಪ್ತಸಂಜ್ಞಾನಃ ।
ರಾಗದ್ವೇಷನಿವೃತ್ತ್ಯೈ ಚರಣಂ ಪ್ರತಿಪದ್ಯತೇ ಸಾಧುಃ ॥ ೪೭ ॥ [1]

ಅನ್ವಯಾರ್ಥ–(ಮೋಹತಿಮಿರಾಪಹರಣೇ) ದರ್ಶನ ಮೋಹವೆಂಬ ಕತ್ತಲೆಯು ನಾಶವಾಗಲು (ದರ್ಶನ-ಲಾಭಾದವಾಪ್ತಸಂಜ್ಞಾನಃ) ಸಮ್ಯಗ್ದರ್ಶನದ ಲಾಭದಿಂದ ದೊರಕಿದ ಸಮ್ಯಗ್‌ಜ್ಞಾನವುಳ್ಳ (ಸಾಧುಃ) ಭವ್ಯಪುರುಷನು (ರಾಗದ್ವೇಷನಿವೃತ್ತ್ಯೈ) ರಾಗದ್ವೇಷಗಳನ್ನು ಕಳೆದುಕೊಳ್ಳುವದಕ್ಕಾಗಿ (ಚರಣಂ) ಚಾರಿತ್ರವನ್ನು (ಪ್ರತಿಪದ್ಯತೇ) ಸ್ವೀಕರಿಸುತ್ತಾನೆ.

ಅರ್ಥ—ದರ್ಶನಮೋಹ ರೂಪೀ ಅಂಧಕಾರವು ಇಲ್ಲದಂತೆ ಆಗಿ ಸಮ್ಯಗ್ದರ್ಶನದ ಪ್ರಾಪ್ತಿಯಾಗುತ್ತದೆ ಆ ಸಮ್ಯಗ್ದರ್ಶನದಿಂದ ಅವರ ಜ್ಞಾನವೂ ಸಮ್ಯಕ್ತ್ವವುಳ್ಳದಾಗುತ್ತದೆ. ಇಂಥ ಸಾಧುಗಳು ತಮ್ಮ ರಾಗದ್ವೇಷಾದಿ ಭಾವನೆಗಳನ್ನು ನಷ್ಟಪಡಿಸುವದಕ್ಕಾಗಿ ಚಾರಿತ್ರವನ್ನು ಅಂಗೀಕರಿಸುತ್ತಾರೆ. [ಇಲ್ಲಿ 'ದರ್ಶನ' ಮತ್ತು 'ಚರಣ' ಈ ಎರಡು ಪದಗಳಿಗೆ ಯಾವ ವಿಶೇಷಣಗಳನ್ನೂ ಹೇಳಿಲ್ಲ. ಆದರೂ ಪೂರ್ವಸಂದರ್ಭ ಹಾಗೂ ಗ್ರಂಥದ ಸ್ವರೂಪ-ಗಳನ್ನು ಗಮನಿಸಿ, ಈ ಪದಗಳಿಗೆ ಸಮ್ಯಗ್ದರ್ಶನ ಮತ್ತು ಸಮ್ಯಕ್‌ಚಾರಿತ್ರಗಳೆಂದೇ ಅರ್ಥಮಾಡಬೇಕಾಗುತ್ತದೆ ಇನ್ನು ಈ ಸೂತ್ರದಲ್ಲಿ ಆಚಾರ್ಯರು ಸಮ್ಯಕ್‌ಚಾರಿತ್ರವನ್ನೂ ಯಾಕೆ ಸ್ವೀಕರಿಸಬೇಕು? ಅದರ ಉದ್ದೇಶವೇನು? ಅದನ್ನು ಸ್ವೀಕರಿಸುವ ಪಾತ್ರತೆಯು ಯಾರಲ್ಲಿ ಉಂಟಾಗುತ್ತದೆ?—ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರರೂಪದಲ್ಲಿ ವಿವರವನ್ನು ಒದಗಿಸಿದ್ದಾರೆ ಇದನ್ನೇ ಇನ್ನೂ ಒಂದು ರೀತಿಯಲ್ಲಿ ಹೇಳುವದಾದರೆ ಆತ್ಮನಲ್ಲಿ ಸಮ್ಯಕ್‌ಚಾರಿತ್ರವು ಹೇಗೆ ಹುಟ್ಟುತ್ತದೆ—ಎಂಬುದರ ಕ್ರಮ ಮತ್ತು ವಿಕಾಸವನ್ನು ಸೂಚಿಸಿದ್ದಾರೆನ್ನಬೇಕು. ಮೊದಲು ವ್ಯಕ್ತಿಯು ತನ್ನ ಮೋಹವನ್ನು ನಷ್ಟಪಡಿಸಿಕೊಳ್ಳಬೇಕು ಅದರಿಂದ ಸಮ್ಯಗ್ದರ್ಶನವು ಉಂಟಾಗುವದು. ಅದು ಸಮ್ಯಗ್‌ಜ್ಞಾನ-ವನ್ನು ಒದಗಿಸುತ್ತದೆ. ಸಮ್ಯಗ್‌ಜ್ಞಾನವು ಪ್ರಾಪ್ತವಾದ ಮೇಲೆ ಸಾಧಕನು ತನ್ನ ರಾಗ-ದ್ವೇಷ ಭಾವನೆಗಳನ್ನು ನಷ್ಟಪಡಿಸಿಕೊಳ್ಳುವದಕ್ಕಾಗಿ ಸಮ್ಯಕ್‌ಚಾರಿತ್ರವನ್ನು ಅವಲಂಬಿಸುತ್ತಾನೆ ಮೋಹವು ಎಷ್ಟರ ಮಟ್ಟಿಗೆ ನಷ್ಟವಾಗು-ವುದೋ ಅಷ್ಟರಮಟ್ಟಿಗೆ ಆಯಾ ವ್ಯಕ್ತಿಗಳ ದರ್ಶನವು ಶುದ್ಧವಾಗುತ್ತ ಹೋಗುತ್ತದೆ. ದರ್ಶನವಿಶುದ್ಧಿಯ ಪ್ರಮಾಣವನ್ನು ಅನುಸರಿಸಿಯೇ ಜ್ಞಾನವೂ ಕೂಡ ಸಮ್ಯಕ್ ರೂಪವನ್ನು ಹೊಂದಿರುತ್ತದೆ ಹೀಗೆ ಮೋಹ ತಿಮಿರವನ್ನು ನಷ್ಟಗೊಳಿಸುವುದೇ ರತ್ನತ್ರಯ ಧರ್ಮದ ಆದಿ ಬೀಜವಿದ್ದಂತಿದೆ. ಅದಕ್ಕಾಗಿಯೇ ಆಚಾರ್ಯರು ಮೋಹಬೀಜವನ್ನು ನಷ್ಟಗೊಳಿಸಲಿಕ್ಕೆ ಬಹಳ ಮಹತ್ವಕೊಟ್ಟಿದ್ದಾರೆ[2] ಸ ಧ.]

ವಿಶೇಷಾರ್ಥ—ಅನಾದಿಕಾಲದಿಂದ ದರ್ಶನಮೋಹನೀಯ ಕರ್ಮದ ಉದಯವೆಂಬ ಅಂಧಕಾರದಿಂದ ಸಂಸಾರೀ ಜೀವದ ಜ್ಞಾನರೂಪೀ ಕಣ್ಣಿನ ಮೇಲೆ ಪರೆಯು ಆವರಿಸಿದೆ. ಆ ಮೋಹರೂಪೀ ಅಂಧಕಾರದಿಂದ ನಾವು ಮತ್ತು ಇತರರು ಎಂಬ ಭೇದವು ಇಲ್ಲದಂತೆ ಆಗಲು, ಈ ಜೀವವು ನಾಲ್ಕೂ ಗತಿಯಲ್ಲಿ ಉಂಟಾಗುವ ಅವಸ್ಥೆಗಳನ್ನು

---

[1] ಆಯತಪರ್ವಣ ವಿವರ ಹೀಗೆ—ಸಮ್ಯಕ್ಚಾರಿತ್ರಾಧಿಕಾರ.
ಶ್ರೀವೀತರಾಗಾಯನಮಃ । ನಮಃ ಸಿದ್ಧೇಭ್ಯಃ ॥
ಕಂದ ॥ ದರ್ಶನಮೋಹಕ್ಷಯದಿಂ ದರ್ಶನಸಂಶುದ್ಧನಪ್ಪ ಸಂಜ್ಞಾನಿಯುಮಂ ।
ಪರಿಹರಿಸಲೆಂದು ಕೊಳ್ಗೆಂ ಚರಿತ್ರಮಂ ಸಂದರಾಗಮುದ್ವೇಷಮುಮಂ ॥ ೫೪ ॥

[2] ಇದೇ ಗ್ರಂಥದ 'ವಿದ್ಯಾ-ವೃತ್ತಸ್ಯ ಸಂಭೂತಿ' ಎಂದು ಆರಂಭವಾಗುವ ೩೨ನೆಯ ಸೂತ್ರವನ್ನು ನೋಡಬಹುದು

ತನ್ನ ಸ್ವರೂಪವೆಂದು ತಿಳಿದು, ಅನಂತಕಾಲದಿಂದಲೂ ಭ್ರಮಿಸುತ್ತಲಿದೆ ಇಂಥವುಗಳಲ್ಲಿ ಯಾವುದಾದರೊಂದು ಜೀವಕ್ಕೆ ಕರಣಲಬ್ಧಿಯೇ ಮೊದಲಾದ ಸಾಮಗ್ರಿಯು ಸಿಕ್ಕಿರಲು, ದರ್ಶನಮೋಹನೀಯ ಕರ್ಮದ ಉಪಶಮ, ಕ್ಷಯ ಅಥವಾ ಕ್ಷಯೋಪಶಮವೂ ಆಗಿ ಸಮ್ಯಗ್ದರ್ಶನವು ಪ್ರಾಪ್ತವಾಗುತ್ತದೆ ಆ ಕಾಲಕ್ಕೆ ಅದರ ಮಿಥ್ಯಾತ್ವದ ಅಭಾವವಾಗುತ್ತದೆ ಅಂದಿನಿಂದ ಆ ಜೀವದ ಜ್ಞಾನವೂ ಕೂಡ ಸಮ್ಯಕ್ತ್ವ ಸ್ಥಿತಿಯನ್ನು ಪಡೆಯುತ್ತದೆ ಇಂಥ ಸ್ಥಿತಿಯು ಪ್ರಾಪ್ತವಾದ ಮೇಲೆ ಸಮ್ಯಗ್‌ಜ್ಞಾನಿಯಾದ ಸಜ್ಜನ ಪುರುಷನು ತನ್ನ ರಾಗ-ದ್ವೇಷಗಳೂ ಇಲ್ಲದಂತೆ ಆಗಬೇಕೆಂದು ಚಾರಿತ್ರವನ್ನು ಸ್ವೀಕರಿಸುತ್ತಾನೆ

ಹುಟ್ಟಿದ ಯೋನಿ ಮೆಟ್ಟಿದ ನೆಲಂ ನೆರೆಕೊಳ್ಳದಾಹಾರಮೋರ್ಮೆಯುಂ
ಮುಟ್ಟಿದ ಭಾವಮೋದದಭವಂ ಪೆರತಿಲ್ಲೆನೆ ದುರ್ಮೋಹದಿಂ ।
ತಿಟ್ಟನೆ ಬಂದು ನೀಂ ತಿರಿಯದಕ್ಕಟ ನಿನ್ನ ನಿಜ ಸ್ವರೂಪಮಂ
ನೆಟ್ಟನೆ ನೋಡಿ ಕೂಡಿ ಪಡೆ ನಿತ್ಯನಿರಂಜನಮೋಕ್ಷಲಕ್ಷ್ಮಿಯಂ ॥

—ಶ್ರೀಮಾಘನಂದಿ–ಶಾಸ್ತ್ರಸಾರಸಮುಚ್ಚಯ ಟೀಕೆ, ಚರಣಾನುಯೋಗ–೫೭

ರಾಗದ್ವೇಷಗಳು ಇಲ್ಲದಂತೆ ಆಗಲು ಹಿಂಸಾದಿಗಳ ಅಭಾವವೂ ಆಗುತ್ತದೆ ಈ ನಿಯಮವನ್ನು ಸ್ಪಷ್ಟಪಡಿಸಲಿಕ್ಕೆ ಸೂತ್ರವನ್ನು ಹೇಳುತ್ತಾರೆ

ಚಾರಿತ್ರದ ಜನ್ಮ–

ರಾಗದ್ವೇಷನಿವೃತ್ತೇರ್ಹಿಂಸಾದಿನಿವರ್ತನಾ ಕೃತಾ ಭವತಿ ।
ಅನಪೇಕ್ಷಿತಾರ್ಥವೃತ್ತಿಃ ಕಃ ಪುರುಷಃ ಸೇವತೆ ನೃಪತೀನ್ ॥ ೪೮ ॥[1]

ಅನ್ವಯಾರ್ಥ—(ರಾಗದ್ವೇಷನಿವೃತ್ತೇಃ) ರಾಗದ್ವೇಷಗಳು ಇಲ್ಲದಂತೆ ಆಗಲು (ಹಿಂಸಾದಿನಿವರ್ತನಾ) ಹಿಂಸೆಯೇ ಮೊದಲಾದ ಐದು ಪಾಪಗಳ ನಿವೃತ್ತಿಯನ್ನು (ಕೃತಾ) ಮಾಡಿದಂತೆ (ಭವತಿ) ಆಗುತ್ತದೆ (ಅನಪೇಕ್ಷಿತಾರ್ಥವೃತ್ತಿಃ) ಫಲವನ್ನು ಅಪೇಕ್ಷಿಸದಂಥ (ಕಃ ಪುರುಷಃ) ಯಾವ ಪುರುಷನು (ನೃಪತೀನ್) ರಾಜನ (ಸೇವತೆ) ಸೇವೆಯನ್ನು ಮಾಡುವನು?

ಅರ್ಥ—ರಾಗದ್ವೇಷಗಳು ನಷ್ಟವಾದರೆ ಹಿಂಸೆಯೇ ಮೊದಲಾದ ಐದು ಪಾಪಗಳೂ ಇಲ್ಲದಂತೆ ಆಗುತ್ತವೆ. ಈ ಐದೂ ಪಾಪಗಳ ಅಭಾವವೇ ಸಮ್ಯಕ್‌ಚಾರಿತ್ರವೆನಿಸುತ್ತದೆ ಯಾರಿಗೆ ಯಾವ ಅಪೇಕ್ಷೆಯೂ ಇಲ್ಲವೋ, ಅಂಥ ವ್ಯಕ್ತಿಯು ರಾಜನ ಸೇವೆಯನ್ನು ಮಾಡಲಿಕ್ಕೆ ಯಾಕೆ ಇಚ್ಛಿಸುತ್ತಾನೆ? [ಧನದ ಅಪೇಕ್ಷೆಯಿಂದ ಸೇವಕನು ರಾಜನ ಸೇವೆಯನ್ನು ಮಾಡುತ್ತಾನೆ ಅದರಂತೆಯೇ ಅಹಿಂಸಾದಿ ವ್ರತಗಳ ಆಚರಣೆಯೂ ಕೂಡ ರಾಗದ್ವೇಷ ನಿವೃತ್ತಿಯೆಂಬ ಫಲವನ್ನು ಅಪೇಕ್ಷಿಸುವದಕ್ಕಾಗಿ ಇರುತ್ತದೆ ಇದನ್ನು ಪೂರ್ಣ ಲಕ್ಷ್ಯದಲ್ಲಿಡಬೇಕು. ನಾವು ಅಹಿಂಸಾದಿ ವ್ರತಗಳನ್ನೂ—ವಿವಿಧ ನೋಂಪಿಗಳನ್ನೂ ಮಾಡುತ್ತ ಇದ್ದು, ರಾಗ-ದ್ವೇಷಗಳನ್ನು ಹೊಂದುತ್ತ ಇದ್ದರೆ ನಮ್ಮ

---

[1] ಆಯತವರ್ಮನ ವಿವರ ಹೀಗೆ

ವಚನ — ಅದೆಂತೆಂದೊಡೆ–ಮೂರನೆಯಧ್ಯಾಯದೊಳು ಸಮ್ಯಕ್ಚಾರಿತ್ರ ಸ್ವರೂಪಮಂ ಪೇಳ್ದು ಮಪಾವುವೆಂದೊಡೆ–ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಪ್ರಕೃತಿಯೆಂಬ ಸಪ್ತ ಪ್ರಕೃತಿಗಳ ಕೆಡಿಸಿ, ಸಮ್ಯಗ್ದೃಷ್ಟಿಯಪ್ಪ ಸಮ್ಯಜ್ಞಾನಿಗಳ ವೇದಕೋಪಶಮರಾಗಂ ರಾಗದ್ವೇಷಂಗಳೊಳಪಾಗಿರ್ಕುಮವಂ ಪರಿಹರಿಸುವುದು ಕಾರಣಮಾಗಿ ಚಾರಿತ್ರಮಂ ಕೈಕೊಂಡು ರಾಗದ್ವೇಷಾದಿಗಳು ಮಾಣ್ದಡೆ ಹಿಂಸಾದಿ ದೋಷಂಗಳುಮಾವುವುವು ಕಾರಣಮಾಗಿಯೆ ಪಾಪಾಸ್ರವಮಪ್ಪುರಿಂದೆಂತಿಂಗಳರ್ಥಂ, ಬಾರ್ತೆಯಿಲ್ಲದಂಗೋಲಗಮುಂ, ಬಾರ್ತೆಯಿಲ್ಲೆಂಬಂತೆ ರಾಗದ್ವೇಷಂಗಳಿಲ್ಲದಂಗೆ ಪ್ರಾಣಿ ಪ್ರಾಣವ್ಯಪರೋಪಣಮುಮಸದಭಿದಾನಮುಮದತ್ತಾದಾನಮುಮಬ್ರಹ್ಮಮುಂ, ಮೂರ್ಛೆಯುಂ ಬಾರ್ತೆಯಲ್ಲಂತೇ ಪಂಚ ಮಹಾಪಾತಕಮುಂ ಪುಗಲಿಲ್ಲದುದು ಚಾರಿತ್ರಮೆಂಬುದಕ್ಕುಂ

ವ್ರತಉದ್ಯಾಪನಗಳು ಸರಿಯಾಗಿಲ್ಲವೆಂದು ತಿಳಿಯಬೇಕು ವ್ರತಿಕನ ಲಕ್ಷಣವು ರಾಗದ್ವೇಷಗಳನ್ನು ಕಳೆದು-ಕೊಳ್ಳುವುದರ ಕಡೆಗೆ ಇರದಿದ್ದರೆ ಅವನ ವ್ರತೋಪವಾಸಗಳೆಲ್ಲ ಒಣಡೌಲಿನವೆಂದು ಹೇಳಬೇಕು. ವ್ಯರ್ಥವೆಂದು ತಿಳಿಯಬೇಕು.]

ವಿಶೇಷಾರ್ಥ—ಯಾರಿಗೆ ದ್ರವ್ಯವನ್ನು ಸಂಪಾದಿಸುವ ಇಚ್ಛೆಯು ಮೂಲದಲ್ಲಿಯೇ ಇಲ್ಲವೋ ಅವನು ರಾಜನ ಸೇವೆಯನ್ನಾದರೂ ಏಕೆ ಮಾಡುತ್ತಾನೆ? ಎಂದೂ ಮಾಡಲಾರನು. ರಾಜನ ಸೇವೆಯು ಅತಿ ಕಷ್ಟದಾಯಕ-ವಾದುದು. ಅಂಥದನ್ನು ಸ್ವೀಕರಿಸುವಂಥವನಿಗೆ ಪ್ರಬಲವಾದ ಧನಾಶೆ ಇರಬೇಕು, ಭೋಗೋಪಭೋಗಗಳನ್ನು ಹೊಂದುವ ಇಚ್ಛೆಯಿರಬೇಕು, ದೊಡ್ಡಸ್ತನವನ್ನು ಗಳಿಸುವ ಅಪೇಕ್ಷೆ ಇರಬೇಕು ಇಂಥವನೇ ಸೇವೆಯಲ್ಲಿ ತೊಡಗುವನು ಯಾವ ಅಪೇಕ್ಷೆಯೇ ಇಲ್ಲದಂಥವನೂ ಇದನ್ನು ಮಾಡಲಾರನು ಅದೇ ಪ್ರಕಾರ ರಾಗ ದ್ವೇಷಗಳ ಅಭಾವವಾದಂಥವನು ಹಿಂಸೆಯೇ ಮೊದಲಾದ ಐದು ಪಾಪಗಳನ್ನೂ ಮಾಡಲಾರನು.

ಅತಿನಿಸ್ಸಾರಮಿದೆಲ್ಲಮೆಂದಱಿದುಮೆನ್ನೊಳ್ ಮತ್ತೆ ಸಂಸಾರ ಮು-
ಹ್ಯತೆ ಮತ್ತಾಪ್ತಕಳತ್ರಪುತ್ರಜನಮೋಹಂ ಮತ್ತೆ ರಾಜ್ಯಾಂಗ ಸಂ- ।
ಗತಿ ಮತ್ತಿಷ್ಟಸುಖೋಪಭೋಗರತಿ ಮತ್ತರ್ಥಾರ್ಜನಾಪೇಕ್ಷೆ ಮ-
ತ್ತೆ ತದಾನುಗ್ರಹನಿಗ್ರಹಕ್ರಿಯೆ ಗಡೇಂ ಚೀ ಕಷ್ಟಮೀಚೇಷ್ಟಿತಂ ॥

—ಗುಣವರ್ಮ–ಪುಷ್ಪದಂತಪುರಾಣ ೧೩–೩೭.

ಇದೇ ವಿಷಯವನ್ನು ಹೆಚ್ಚಿಗೆ ವಿವೇಚಿಸುತ್ತಾರೆ

ಚಾರಿತ್ರದ ಲಕ್ಷಣ—

ಹಿಂಸಾನೃತಚೌರ್ಯೇಭ್ಯೋ ಮೈಥುನಸೇವಾಪರಿಗ್ರಹಾಭ್ಯಾಂ ಚ ।
ಪಾಪಪ್ರಣಾಲಿಕಾಭ್ಯೋ ವಿರತಿಃ ಸಂಜ್ಞಸ್ಯ ಚಾರಿತ್ರಮ್ ॥ ೪೯ ॥

ಅನ್ವಯಾರ್ಥ—(ಪಾಪಪ್ರಣಾಲಿಕಾಭ್ಯೋ) ಪಾಪದ ನಲಿಕೆಯಂತಿರುವ ಅರ್ಥಾತ್ ಪಾಪಾಸ್ರವಕ್ಕೆ ಕಾರಣವಾಗಿರುವ (ಹಿಂಸಾನೃತಚೌರ್ಯೇಭ್ಯೋ) ಹಿಂಸೆ, ಅಸತ್ಯ, ಕಳವುಗಳಿಂದಲೂ (ಚ) ಅದರಂತೆಯೇ (ಮೈಥುನಸೇವಾಪರಿಗ್ರಹಾಭ್ಯಾಂ) ಭೋಗ ಮತ್ತು ಪರಿಗ್ರಹಗಳಿಂದ (ವಿರತಿಃ) ವಿರಕ್ತನಾಗುವುದು (ಸಂಜ್ಞಸ್ಯ) ಸುಜ್ಞ ಪುರುಷನ (ಚಾರಿತ್ರಮ್) ನಡತೆಯು ಅಂದರೆ ಸಮ್ಯಕ್ ಚಾರಿತ್ರವು (ಅಸ್ತಿ) ಇರುತ್ತದೆ

ಅರ್ಥ—ಹಿಂಸೆ, ಅಸತ್ಯ, ಕಳವು, ಮೈಥುನಸೇವನ ಮತ್ತು ಪರಿಗ್ರಹ ಇವು ಪಾಪ ಬರುವ ದ್ವಾರಗಳಾಗಿವೆ. ಇವುಗಳಿಂದ ದೂರವಾಗಿರುವುದು ಸಮ್ಯಗ್‌ಜ್ಞಾನಿ ಪುರುಷನ ಚಾರಿತ್ರವಾಗಿದೆ [ಇಲ್ಲಿ ಸಮ್ಯಕ್ ಚಾರಿತ್ರವುಳ್ಳವರನ್ನು 'ಸಂಜ್ಞಸ್ಯ' ಎಂಬ ಪದದಿಂದ ಸೂಚಿಸಲಾಗಿದೆ ಇದರಿಂದ ಸಮ್ಯಜ್ಞಾನಿಗೇನೇ ಸಮ್ಯಕ್ ಚಾರಿತ್ರ ಇರುವುದು ಸಾಧ್ಯವೆಂದು ಸ್ಪಷ್ಟವಾಗುತ್ತದೆ ಚಾರಿತ್ರದ ವಿಷಯದಲ್ಲಿ ಕೆಲವು ಆಚಾರಗಳನ್ನು ಅಳವಡಿಸಿ-ಕೊಂಡಮಾತ್ರಕ್ಕೆ-ಸಮ್ಯಗ್‌ಜ್ಞಾನವಿಲ್ಲದೆ-ಅದು ಸಮ್ಯಕ್ ಚಾರಿತ್ರವೆನಿಸಿಕೊಳ್ಳಲಾರದು. ಸ. ದ.]

ವಿಶೇಷಾರ್ಥ—ಸಂಪೂರ್ಣ ಬಾಹ್ಯ ಪ್ರವೃತ್ತಿಯಿಂದ ಪರಾಙ್ಮುಖನಾಗುವುದರಿಂದ ಪರಮವೀತ-ರಾಗತ್ವವು ಪ್ರಾಪ್ತವಾಗುತ್ತದೆ. ಇದರ ಪ್ರಭಾವದಿಂದ ಶ್ರೇಷ್ಠವಾದ ಸಮಭಾವವು ಉಂಟಾಗುತ್ತದೆ ಅಲ್ಲದೆ ತನ್ನ ಜ್ಞಾಯಕ ಸ್ವಭಾವದಲ್ಲಿ ಸ್ಥಿರವಾಗಿ ಉಳಿಯಲಿಕ್ಕೆ ಬರುತ್ತದೆ ಇದಕ್ಕೇನೇ ಸ್ವರೂಪಾಚರಣವೆಂಬ ಹೆಸರಿನ ಸಮ್ಯಕ್ ಚಾರಿತ್ರ ಅಥವಾ ನಿಶ್ಚಯ-ಚಾರಿತ್ರ ಎನ್ನುವರು ಇದು ಐದೂ ಪಾಪಗಳನ್ನು ತ್ಯಜಿಸಿದ ಮೇಲೆ, ಅಂತರಂಗ–ಬಹಿರಂಗ ಪ್ರವೃತ್ತಿಯ ನಿರ್ಮಲತೆಯು ಯಾವುದರಿಂದ ಉಂಟಾಗುತ್ತದೆಯೋ ಆ ವ್ಯವಹಾರ-ಚಾರಿತ್ರವಿಲ್ಲದೆ

ಪ್ರಾಪ್ತವಾಗುವದಿಲ್ಲ. ಅದಕ್ಕಾಗಿಯೇ ಹಿಂಸೆಯೇ[1] ಮೊದಲಾದ ಐದು ಪಾಪಗಳನ್ನು ತ್ಯಾಗಮಾಡುವುದು ಅವಶ್ಯವಾಗಿದೆ.

ಕೊಲಲುಂ ಪುಸಿಯಲುಮಾಗದು ಸಲಲಾಗದುಪೆಱರ ಪೆಂಡಿರೊಳ್ ಕಳವನಣಂ
ಕಳಲಾಗದು ತೀರದುದಕ್ಕಲಪೆಱಲಾಗದು ಪರತ್ರೆಯುಂ ಬಯಸುವವಂ ।
ಇವು ಮೊತ್ತಮೊದಲಣುವ್ರತಮಿವುಮಸುಳದೆ ನಡೆದೊಡೈಹಿಕಾಮುತ್ರಿಕಮೆಂ
ಬಿವಱೊಳ್ ಸಮಸುಖಿಯಪ್ಪಂ ಭವಭವದೊಳ್ ದುಃಖಿಯಪ್ಪನಿವುಮಸುಳ್ದಾತಂ ॥

—ಜನ್ನ–ಯಶೋಧರ ಚರಿತೆ–ನಾಲ್ಕನೆಯ ಅವತಾರ ೨೨,೨೩.

ಇನ್ನು ಚಾರಿತ್ರದ ವಿವಿಧ ಪ್ರಕಾರಗಳನ್ನು ಹೇಳುತ್ತಾರೆ–

ಸಕಲಂ ವಿಕಲಂ ಚರಣಂ ತತ್ಸಕಲಂ ಸರ್ವಸಂಗವಿರತಾನಾಮ್ ।
ಅನಗಾರಾಣಾಂ ವಿಕಲಂ ಸಾಗಾರಾಣಾಂ ಸಸಂಗಾನಾಮ್ ॥ ೫೦ ॥ [2]

ಅನ್ವಯಾರ್ಥ—(ತತ್) ಆ (ಚರಣಂ) ಚಾರಿತ್ರವು (ಸಕಲಂ ವಿಕಲಂ) ಸಕಲ ಮತ್ತು ವಿಕಲವೆಂದು ಎರಡು ರೂಪವಿದೆ. (ಸರ್ವಸಂಗವಿರತಾನಾಮ್) ಎಲ್ಲ ಪರಿಗ್ರಹಗಳಿಂದ ವಿರಕ್ತನಾಗಿರುವ (ಅನಗಾರಾಣಾಂ) ಮುನಿಯ—ನಡತೆಯು (ಸಕಲಂ) ಸಕಲ ಚಾರಿತ್ರವೆನಿಸುತ್ತದೆ (ತು) ಮತ್ತು (ಸಸಂಗಾನಾಮ್) ಪರಿಗ್ರಹ ಸಹಿತ ಇರುವಂಥ (ಸಾಗಾರಾಣಾಂ) ಗೃಹಸ್ಥರ ನಡತೆಯು (ವಿಕಲಂ) ವಿಕಲಚಾರಿತ್ರವೆನಿಸುತ್ತದೆ

ಅರ್ಥ—ಆ ಚಾರಿತ್ರವು ಸಕಲಚಾರಿತ್ರ ಮತ್ತು ವಿಕಲಚಾರಿತ್ರ ಎಂಬ ಸ್ವರೂಪದಿಂದ ಎರಡು ಪ್ರಕಾರವಾಗಿದೆ ಸರ್ವಸಂಗವನ್ನು ತ್ಯಜಿಸಿದ ಅಂದರೆ ಅಂತರಂಗ, ಬಾಹ್ಯ ಎಲ್ಲ ಪರಿಗ್ರಹಗಳಿಂದ ವಿರಕ್ತನಾದ ಮುನಿಯು. ಇವನು ಅನಗಾರನು ಇವನಿಗೆ ಇಂಥವೇ ಮನೆ—ಮಠಗಳೆಂದು ವಾಸಕ್ಕೆ ನಿಶ್ಚಿತವಾದ ಸ್ಥಳಗಳು ಇರುವದಿಲ್ಲ ಇವನು ಪರಮ ದಯಾಳುವು. ವನಗಳಲ್ಲಿ ಸಂಚರಿಸುವಂಥವನು ಇವನು ನಿರಾಲಂಬಿಯು, ಜ್ಞಾನಿಯು. ಇಂಥ ಮುನಿಶ್ರೇಷ್ಠನ ನಡತೆಯು ಸಕಲ ಚಾರಿತ್ರವಾಗಿದೆ ಹೆಂಡತಿ, ಮಗ, ಧನ-ಧಾನ್ಯ ಮೊದಲಾದ ಪರಿಗ್ರಹ ಸಹಿತ ಮನೆಯಲ್ಲಿ ವಾಸಿಸುವಂಥವನೂ ಜಿನೇಂದ್ರನ ವಚನಗಳಲ್ಲಿ ಶ್ರದ್ಧೆಯನ್ನು ಇಡುವಂಥವನೂ ನ್ಯಾಯಮಾರ್ಗವನ್ನು ಮೀರದೆ ತನ್ನ ಉಪಜೀವನವನ್ನು ಸಾಗಿಸುವಂದವನೂ ಜ್ಞಾನಿಯೂ ಆದ ಗೃಹಸ್ಥನು ಆಚರಿಸುವ ನಡತೆಯು ವಿಕಲ ಚಾರಿತ್ರವೆನಿಸುತ್ತದೆ. [ಸಕಲ ಮತ್ತು ವಿಕಲ ಚಾರಿತ್ರದ ಆಧಾರಗಳು ವಿರಕ್ತಿ ಹಾಗೂ ಅವಿರಕ್ತಿಗಳೇ ಆಗಿವೆ. ಮನೆಯನ್ನು ಬಿಡುವುದು ಅಥವಾ ಮನೆಯಲ್ಲಿ ಇರುವುದು ಮುಖ್ಯವಲ್ಲ ಮನೆಯನ್ನು ಬಿಟ್ಟ ಮಾತ್ರಕ್ಕೆ ಮಹಾವ್ರತಿಯೂ ಸಕಲ ಸಂಯಮಿಯೂ ಆಗುವದಿಲ್ಲ ಸಕಲಸಂಗವಿರಕ್ತನಾಗಿದ್ದೂ ಮನೆಯಲ್ಲಿ ವಾಸಿಸುವಂಥವನೂ ಸಹ ಒಮ್ಮೊಮ್ಮೆ ಸಂಪೂರ್ಣ ವಿಕಲಚಾರಿತ್ರಿ—ಅಣುವ್ರತಿ—ಎನಿಸುವುದಿಲ್ಲ. ಅವನು ಆ ಸ್ಥಿತಿಯಲ್ಲಿಯೂ ಮಹಾ ವ್ರತಗಳ ಕಡೆಗೆ ಸಾಗುತ್ತಿರುತ್ತಾನೆ. ಅದಕ್ಕಾಗಿಯೇ ಸಮಂತಭದ್ರರು ಸಾಮಾಯಿಕದಲ್ಲಿರುವ ಗೃಹಸ್ಥನಿಗೆ 'ಯತಿ

---

1 ಹಿಂಸೆ—ಪ್ರಾಣಾತಿಪಾತ, ಪ್ರಾಣವ್ಯಪರೋಪಣ, ಪ್ರಾಣಘಾತ, ವಧ, ಹತಿ ಈ ಪರ್ಯಾಯ ಪದಗಳಿಗಾಗಿ ೫೨, ೫೩, ೫೪, ೭೨, ೭೫ರಿಂದ ೭೮, ೮೪ ಸೂತ್ರಗಳನ್ನು ನೋಡಬಹುದು

ಅನೃತ—ವಿತಥ, ಅಲೀಕ, ಮೃಷಾ ಪಲಿತಾರ್ಥದ ರೂಪದಲ್ಲಿ ಅಸತ್ಯ ಇವುಗಳಿಗಾಗಿ ಸೂತ್ರ ೫೨, ೫೫, ೫೬ ನೋಡಬಹುದು

ಚೌರ್ಯ—ಸ್ತೇಯ ಸೂತ್ರ ೫೨, ೫೭

ಮೈಥುನ ಸೇವಾ—ಕಾಮ, ಸ್ಮರ, ಅಬ್ರಹ್ಮ ಸೂತ್ರ ೫೨, ೬೦, ೧೪೩

ಪರಿಗ್ರಹ—ಸಂಗ, ಮೂರ್ಛಾ (ಮಮತ್ವಪರಿಣಾಮ), ಇಚ್ಛಾ ಸೂತ್ರ ೫೦, ೬೧

ಇಲ್ಲಿಯ ಆಯಾವರ್ಗದ ಪದಗಳು ಅದೇ ಅರ್ಥದ ಪರ್ಯಾಯ ಪದಗಳೆಂದು ತಿಳಿಯಬೇಕು

2 ಆಯತವರ್ಮನು ಹೇಳುವದು ಹೀಗೆ

ಅದು ಸಾಗಾರಾನಗಾರಬೇದದಿಂ ದ್ವಿಪ್ರಕಾರಮಕ್ಕು ಸಾಗಾರಿಯಕ್ಕನಗಾರಿಯಕ್ಕೆ ಶಲ್ಯತ್ರಯ ವಿರಹಿತಂ ಬ್ರತಿಯಕ್ಕುಂ.

ಕಂದ ॥ ವಿಕಳಂ ಚರಿತ್ರಮೆಂತಿದು ಸಕಳಂ ತಾನೆಂದುಯುಗಳಮಕ್ಕುಂ ವಿಕಲಂ ॥
ಸಕಲಂ ಶ್ರಾವಕಕತಿಗಾ ಸಕಲಂ ಸಕಲಾವನಿಮುನೀಂದ್ರೌಘಕ್ಕಂ ॥ ೫೬ ॥

ಭಾವವನ್ನು ಹೊಂದಿದ ಮುನಿ' ಎಂದು ಹೇಳಿದ್ದಾರೆ[1] ಅಲ್ಲದೆ ಮೋಹವುಳ್ಳ ಮುನಿಗಿಂತ ನಿರ್ಮೋಹಿಯಾದ ಗೃಹಸ್ಥನು ಶ್ರೇಷ್ಠನೆಂದು ಹೇಳಿದ್ದಾರೆ.[2] ಸ ಧ ]

ವಿಶೇಷಾರ್ಥ—ಮನೆ ಕುಟುಂಬಗಳನ್ನು ತ್ಯಾಗಮಾಡಿ, ಶರೀರದ ಮೇಲೆ ಮಮತೆಯನ್ನು ಇಡದಂಥ ಸಾಧುವು ಸಕಲ ಚಾರಿತ್ರವುಳ್ಳವನು ಮತ್ತು ಮನೆ ಮಠಗಳುಳ್ಳ—ಧನ ಕನಕಗಳಿಂದ ಕೂಡಿದ ಗೃಹಸ್ಥನು ವಿಕಲಚಾರಿತ್ರವುಳ್ಳವನು. ಮುನಿಯ ಆಚರಣೆಯು ಸಕಲಚಾರಿತ್ರವು, ಗೃಹಸ್ಥನ ನಡತೆಯು ವಿಕಲಚಾರಿತ್ರವೆನಿಸುತ್ತದೆ.

ಮುಕ್ತಿಯೊಳಲ್ಲದಿಲ್ಲ ಸುಖವಂತಹ ಕರ್ಮವಿನಾಶವಿಲ್ಲದೆ
ವ್ಯಕ್ತಿಗೆ ಬಾರದಾ ದುರಿತನಾಶಕೆ ದೀಕ್ಷೆಯೆ ಬೇಕು ಮೋಹದಾ- ।
ಶಕ್ತಿಯೊಳಿರ್ದವಂಗೆ ರುಚಿದೋರದು ದೀಕ್ಷೆಯದರ್ಕೆ ನಿಮ್ಮ ಸ-
ದ್ಭಕ್ತಿಯೆ ಬೀಜಮೊಯ್ಯನದನೀವುದುಮಂದರರಾಜಿತೇಶ್ವರಾ ॥

ರತ್ನಾಕರ—ಅಪರಾಜಿತಶತಕ. ೩೨.

ಇನ್ನು ವಿಕಲಚಾರಿತ್ರದ ಪ್ರಕಾರಗಳನ್ನು ಹೇಳುತ್ತಾರೆ—

ಗೃಹಿಣಾಂ ತ್ರೇಧಾ ತಿಷ್ಠತ್ಯಣುಗುಣಶಿಕ್ಷಾವ್ರತಾತ್ಮಕಂ ಚರಣಮ್ ।
ಪಂಚತ್ರಿಚತುರ್ಭೇದಂ ತ್ರಯಂ ಯಥಾಸಂಖ್ಯಮಾಖ್ಯಾತಮ್ ॥ ೫೧ ॥ [3]

ಅನ್ವಯಾರ್ಥ—(ಗೃಹಿಣಾಂ) ಗೃಹಸ್ಥನ (ಚರಣಂ) ಚಾರಿತ್ರವು (ಅಣುಗುಣಶಿಕ್ಷಾವ್ರತಾತ್ಮಕಂ) ಅಣುವ್ರತ, ಗುಣವ್ರತ ಮತ್ತು ಶಿಕ್ಷಾವ್ರತಗಳಿಂದ ಕೂಡಿದ (ತ್ರೇಧಾ) ಮೂರು ಪ್ರಕಾರವು (ತಿಷ್ಠತಿ) ಆಗಿದೆ. (ತ್ರಯಂ) ಈ ಮೂರರಲ್ಲಿ (ಯಥಾಸಂಖ್ಯಂ) ಅನುಕ್ರಮದಿಂದ(ಪಂಚತ್ರಿ–ಚತುರ್ಭೇದಂ) ಐದು, ಮೂರು, ನಾಲ್ಕು ಭೇದಗಳನ್ನು (ಆಖ್ಯಾತಮ್) ಹೇಳಲಾಗಿದೆ

ಅರ್ಥ—ಗೃಹಸ್ಥನ ಚಾರಿತ್ರವು ಅಣುವ್ರತ, ಗುಣವ್ರತ, ಶಿಕ್ಷಾವ್ರತಗಳೆಂಬ ಮೂರು ವಿಧವಾಗಿದೆ. ಇವುಗಳಲ್ಲಿ ಕ್ರಮದಿಂದ ಐದು, ಮೂರು ಮತ್ತು ನಾಲ್ಕು ಉಪಭೇದಗಳು ಇವೆ. [ಇಲ್ಲಿ ಗೃಹಸ್ಥನ ಆಚರಣೆಯಲ್ಲಿ ಇರಬೇಕೆಂದು ಹೇಳಿರುವ ಐದು ಅಣುವ್ರತಗಳು ಚಾರಿತ್ರದ ಉತ್ಪತ್ತಿಗೆ ಅವಶ್ಯಕವಾದ ಕಾರಣಗಳಾಗಿವೆ. ಮೂರು ಪ್ರಕಾರದ ಗುಣವ್ರತಗಳು ಚಾರಿತ್ರದ ಬೆಳವಣಿಗೆಗೆ ಅವಶ್ಯವಾಗಿ ಬೇಕು ನಾಲ್ಕು ಪ್ರಕಾರದ ಶಿಕ್ಷಾವ್ರತಗಳು ಚಾರಿತ್ರದ ರಕ್ಷಣೆಯ ಅಂಗಗಳಾಗಿವೆ. ಹೀಗೆ ಈ ಮೂರು ವಿಧಗಳಿಂದ ಸಮ್ಯಕ್‌ಚಾರಿತ್ರವು ರೂಪುಗೊಳ್ಳುತ್ತದೆ. ಸ ಧ ]

ವಿಶೇಷಾರ್ಥ—ಮನೆ, ಮಕ್ಕಳು, ಮಡದಿಯರನ್ನು ಬಿಡಲಿಕ್ಕೆ ಸಮರ್ಥನಾಗದವನು–ಸಮ್ಯಗ್ದೃಷ್ಟಿಯುಳ್ಳವನು–ಮನೆಯಲ್ಲಿದ್ದುಕೊಂಡೇ ಐದು ಅಣುವ್ರತ, ಮೂರು ಗುಣವ್ರತ, ನಾಲ್ಕು ಶಿಕ್ಷಾವ್ರತಗಳನ್ನು ಸ್ವೀಕರಿಸಿ ಬಾಳಬೇಕು ಇದರಿಂದಲೂ ಚಾರಿತ್ರದ ಪಾಲನೆಯಾಗುತ್ತದೆ

---

[1] ಸೂತ್ರ ೧೦೨;

[2] ಸೂತ್ರ ೩೩, ವಿವರಗಳಿಗಾಗಿ ನೋಡಬಹುದು.

[3] ಆಯತವರ್ಮನು ಹೇಳುವದು ಹೀಗೆ—

ವಚನ—ಅಕ್ಕ್ಮಮಲ್ಲಿ ಸಕಲಚಾರಿತ್ರಮೆಂಬುದು ಪಾಪಕ್ರಿಯಾನಿವೃತ್ತಿಯಿಂದಾದುದನಗಾರಧರ್ಮದೊಳ್ಪ್ರ ವಿಕಳ ಚಾರಿತ್ರ- ಮೆಂಬುದು ಕ್ರಿಯೆಗಳೊಳು ಕೆಲವರ ನಿವೃತ್ತಿಯತ್ಪಣಿಂದಾದುದದಾವುದೆಂದೊಡೆ ಗೃಹಸ್ಥನಪ್ಪಾತಂಗೆಯಣುಗುಣ ಶಿಕ್ಷಾಬ್ರತಂಗ- ಳೆಂಬುವು ತಮ್ಮೊಳಂ ಪ್ರತ್ಯೇಕಮನುಕ್ರಮದಿಂ, ಪಂಚ, ತ್ರಿಚತುರ್ಭೇದಂಗಳಾಗಿ ದ್ವಾದಶ ವಿದಂಗಳಕ್ಕುಂ

ಕೊಲೆ ಹುಸಿ ಕಳವು ಪರಾಂಗನೆಯತಿಕಾಂಕ್ಷೆ ತೊಲಗಿದೊಡಣುವ್ರತವೈದು ।
ಎಲೆ ಬಪ್ಪ ಗುಣವ್ರತ ಶಿಕ್ಷಾವ್ರತಗಳ ಸುಲಲಿತವೆಸೆ ಪೇಳುವೆನು ॥
ಪಿಡಿದಪ್ಪ ದಿಗ್ವ್ರತ ಭೋಗೋಪಭೋಗದ ಪರಿಮಾಣ ಕೆಂದಳ ಖಡ್ಗ ।,
ಪರಶ್ವಂಕುಲಾದಿಯನರ್ಥದಂಡಂಗಳೊಳ್ ವಿರತಿ ಮೂರಿವು ಗುಣವ್ರತವು ॥
ವಿನುತದೇಶಾವಕಾಸಿಕ ಸಾಮಾಯಿಕ ಪನತರ ಪ್ರೋಷಧನಿಯಮ ।
ಅನುಪಮ ವೈಯಾವೃತ್ಯಮೆಂಬಿವು ನಾಲ್ಕು ಜನನುತ ಶಿಕ್ಷಾವ್ರತವು ॥
ಸಾಗಾರಧರ್ಮವೆಂಬುದು ಕೇಳಿದು ಭವಸಾಗರಕಿಕ್ಕಿದನಾವೆ ।
ನಾಗೇಂದ್ರ ಪೊಗಳುವೊಡರಿದೆಂದನುಯೋಗಿರಾಗಿಸಲಂದು ಭೂಭುಜರು ॥

—ಬಾಹುಬಲಿಕವಿ-ನಾಗಕುಮಾರಚರಿತಂ ೩೮-೪೪, ೪೫, ೪೬, ೪೭

ಈಗ ಅಣುವ್ರತಗಳ ಬಗ್ಗೆ ವಿವರಿಸುತ್ತಾರೆ—

ಪ್ರಾಣಾತಿಪಾತವಿತಥವ್ಯಾಹಾರಸ್ತೇಯಕಾಮಮೂರ್ಛೇಭ್ಯಃ । [1]
ಸ್ಥೂಲೇಭ್ಯಃ ಪಾಪೇಭ್ಯೋ ವ್ಯುಪರಮಣಮಣುವ್ರತಂ ಭವತಿ ॥ ೫೨ ॥ [2]

ಅನ್ವಯಾರ್ಥ— (ಸ್ಥೂಲೇಭ್ಯಃ) ಸ್ಥೂಲವಾಗಿ (ಪ್ರಾಣಾತಿಪಾತವಿತಥವ್ಯಾಹಾರಸ್ತೇಯಕಾಮಮೂರ್ಛೇಭ್ಯಃ) ಹಿಂಸೆ, ಅಸತ್ಯ, ಕಳವು, ಕೆಟ್ಟನಡತೆ, ಪರಿಗ್ರಹ ಈ (ಪಾಪೇಭ್ಯಃ) ಪಾಪಗಳಿಂದ (ಯತ್) ಯಾವುದು (ವ್ಯುಪರಮಣಂ) ವಿರಕ್ತವಾಗುವುದೋ (ತತ್) ಅದು (ಅಣುವ್ರತಂ) ಅಣುವ್ರತವು (ಭವತಿ) ಆಗುತ್ತದೆ

ಅರ್ಥ—ಪ್ರಾಣದ ಅತಿಪಾತ ಅಂದರೆ ವಿಯೋಗಮಾಡುವುದು ಅರ್ಥಾತ್ ಪ್ರಾಣಾತಿಪಾತವೆಂದರೆ ಹಿಂಸೆಯು; ವಿತಥ ಅಂದರೆ ಅಸತ್ಯ, ವ್ಯಾಹಾರವೆಂದರೆ ಮಾತನಾಡುವುದು, ವಿತಥವ್ಯಾಹಾರವೆಂದರೆ ಸುಳ್ಳು ಮಾತನಾಡುವುದು, ಸ್ತೇಯವೆಂದರೆ ಕಳವು, ಕಾಮವೆಂದರೆ ಮೈಥುನವು, ಮೂರ್ಛೆಯೆಂದರೆ ಪರಿಗ್ರಹವು-ಹೀಗೆ ಐದು ಪಾಪಗಳು ಇರುತ್ತವೆ ಇವುಗಳಿಂದ ಸ್ಥೂಲರೂಪದಿಂದ ವಿರಕ್ತನಾಗುವುದೆಂದರೆ ಅಣುವ್ರತವೆನಿಸುತ್ತದೆ [ಇಲ್ಲಿ ಐದು ಪಾಪಗಳನ್ನು ಸ್ಥೂಲರೂಪದಿಂದ ತ್ಯಜಿಸಲಿಕ್ಕೆ ಹೇಳಿದೆ ಸ್ಥೂಲರೂಪದಿಂದ ತ್ಯಜಿಸುವುದು 'ಅಣುವ್ರತ'ವೆಂದರೆ ಇವುಗಳ ತ್ಯಾಗದಲ್ಲಿ ಸೂಕ್ಷ್ಮರೂಪವೂ ಒಂದು ಇದೆ ಎಂದು ಸ್ಪಷ್ಟವಾಗುತ್ತದೆ ಈ 'ಸ್ಥೂಲ', 'ಸೂಕ್ಷ್ಮ' ಎಂದು ವ್ರತಗಳನ್ನು ಮುಂದೆ ೬೫ನೆಯ ಸೂತ್ರದಲ್ಲಿ ಆಚಾರ್ಯರು ವಿಂಗಡಿಸಿದ್ದೂ ಉಂಟು. ಅಲ್ಲದೆ ೬೭ನೆಯ ಸೂತ್ರದಲ್ಲಿ ಸ್ಥೂಲ ಪಾಪವನ್ನು ಅಕೃತವೆಂದೂ ಹೇಳಿದೆ ೬೪, ೭೦ನೆಯ ಸೂತ್ರಗಳಲ್ಲಿ ಸೂಕ್ಷ್ಮಪಾಪವನ್ನು 'ಅಣುಪಾಪ' ಎಂದು ಹೇಳಲಾಗಿದೆ ಇದರಿಂದ 'ಅಣು' ಮತ್ತು 'ಕೃಶ' ಎಂಬ ಪದಗಳು ಸೂಕ್ಷ್ಮ ಎಂಬ ಅರ್ಥವನ್ನು ಹೇಳುತ್ತಿವೆ ಎಂದು ಗೊತ್ತಾಗುತ್ತದೆ ಸೂಕ್ಷ್ಮರೂಪದಿಂದ ಈ ಪಂಚಪಾಪಗಳಿಂದ ನಿವೃತ್ತಿಯನ್ನು ಹೊಂದುವುದೇ 'ಮಹಾವ್ರತ'ವೆನಿಸುತ್ತದೆ. ಈ ಮಾತನ್ನು ೭೦, ೭೨, ೯೫ನೆಯ ಸೂತ್ರಗಳಲ್ಲಿ ವಿವರಿಸಲಾಗಿದೆ

ಇದಲ್ಲದೆ ಇಲ್ಲಿ 'ಪಾಪ' ಎಂದು ಹೇಳಿದ್ದನ್ನು ಹಿಂದೆ ಸೂತ್ರ ೪೯ರಲ್ಲಿ ಚಾರಿತ್ರದ ಲಕ್ಷಣವನ್ನು ಹೇಳುವಾಗ 'ಪಾಪಪ್ರಣಾಲಿಕಾ' ಎಂದು ಹೇಳಿದೆ. ಆದರಿಂದ ಇಲ್ಲಿ ಪಾಪದ ಕಾರಣಗಳಿಗೇನೆ 'ಪಾಪ'ವೆಂದು ಹೇಳಿದಂತಾಯಿತು ನಿಜವಾಗಿಯೂ ಪಾಪವು ಮೋಹನೀಯವೇ ಮೊದಲಾದ ಕರ್ಮಗಳ ಅಪ್ರಶಸ್ತ ಪ್ರಕೃತಿಗಳು ಆತ್ಮ ಪ್ರದೇಶದಲ್ಲಿ ಆಸ್ರವವಾಗುವುದು, ಬಂಧಿಸುವುದು ಇವೆಲ್ಲ ಕಾರ್ಯಗಳು ಹಿಂಸಾದಿರೂಪ ಪರಿಣತಿಯಿಂದ ಆಗುತ್ತವೆ ಅದರಿಂದಲೇ ಇವುಗಳಿಗೆ 'ಪಾಪಪ್ರಣಾಲಿಕಾ' ಎಂದು ಕರೆದಿದೆ. ಸ್ವತಃ ಸಮಂತಭದ್ರಾಚಾರ್ಯರು ತಮ್ಮ ಸ್ವಯಂಭೂಸ್ತೋತ್ರದಲ್ಲಿ

---

1 'ಮೂರ್ಛಾರ್ದ್ಭ್ಯಃ' ಹೀಗೆಯೂ ಪಾಠಾಂತರವಿದ

2 ಆಯತವರ್ಮನು ಹೇಳುವದು ಹೀಗೆ—

ಅಲ್ಲಿ ಪಿರಿದಪ್ಪ ಕೊಲೆಯುಂ, ಪಿರಿದಪ್ಪ ಪುಸಿಯುಂ, ಪಿರಿದಪ್ಪ ಕಳವುಂ, ಪಿರಿದಪ್ಪ ಕಾಮಮುಂ, ಪಿರಿದಪ್ಪ ಮೂರ್ಛೆಯುಂ ಯೆಂದೀ ಪಂಚಮಹಾಪಾತಕಂಗಳುಮಂ ಪರಿಹರಿಸುವುದು ಕಾರಣವಾಗಿಯಣುವ್ರತಂಗಳಕ್ಕುಂ.

'ಮೋಹರೂಪೋ ರಿಪುಃ ಪಾಪಃ ಕಷಾಯಭಟಸಾಧನಃ' ಈ ವಾಕ್ಯದಿಂದ 'ಮೋಹ'ವನ್ನು ಅದರ ಕ್ರೋಧಾದಿ-ಕಷಾಯ-ಭಟಸಹಿತ ಪಾಪವೆಂದು ಹೇಳಿದ್ದಾರೆ. ಹಾಗೆಯೇ 'ದೇವಾಗಮ' (೯೫ನೆಯ ಪದ್ಯ) ಹಾಗೂ ಇದೇ ಗ್ರಂಥದಲ್ಲಿ (೩೭ನೆಯ ಸೂತ್ರ) 'ಪಾಪಾಸ್ರವ' ಎಂಬ ಶಬ್ದದ ಪ್ರಯೋಗದಿಂದ ಕರ್ಮದ ದರ್ಶನ ಮೋಹನೀಯಾದಿ ರೂಪ ಅಶುಭ ಪ್ರಕೃತಿಗಳಿಗೂ 'ಪಾಪ'ವೆಂದು ಸೂಚಿಸಿದ್ದಾರೆ ತತ್ತ್ವಾರ್ಥಸೂತ್ರದಲ್ಲಿ ಶ್ರೀಗೃಧ್ರಪಿಚ್ಛಾಚಾರ್ಯರೂ ಸಹ 'ಅತೋಽನ್ಯತ್ಪಾಪಂ' ಈ ಸೂತ್ರದ ಮುಖಾಂತರ ಸಾತಾವೇದನೀಯ, ಶುಭ ಆಯು, ಶುಭ ನಾಮ ಮತ್ತು ಶುಭ ಗೋತ್ರಗಳನ್ನು ಬಿಟ್ಟು, ಉಳಿದ ಕರ್ಮಪ್ರಕೃತಿಗಳನ್ನು 'ಪಾಪ'ವೆಂದು ಹೇಳಿದ್ದಾರೆ. ಉಳಿದ ಪ್ರಾಚೀನ ಆಚಾರ್ಯರ ಗ್ರಂಥಗಳಲ್ಲಿಯೂ ಹೀಗೆಯೇ ಹೇಳಲಾಗಿದೆ. ಎಲ್ಲಿಯೇ ಇರಲಿ, ಹಿಂಸಾದಿಗಳನ್ನು ಪಾಪವೆಂದು ಹೇಳುವಲ್ಲಿ ಕಾರಣದಲ್ಲಿ ಕಾರ್ಯದ ದೃಷ್ಟಿಯು ಸಮಾವೇಶವಾಗಿದೆ-ಎಂದು ತಿಳಿಯಬೇಕು ಸ ಧ.]

ವಿಶೇಷಾರ್ಥ—ಸಂಕಲ್ಪ ಪೂರ್ವಕ-ಮನಸ್ಸಿನಲ್ಲಿ ಯೋಜನೆ ಮಾಡಿಕೊಂಡು-ತ್ರಸಜೀವಿಗಳ ಹಿಂಸೆ-ಯನ್ನು ಮಾಡದೆ ಇರುವುದು ಸ್ಥೂಲ ಹಿಂಸೆಯ ತ್ಯಾಗವೆನಿಸುತ್ತದೆ ಯಾವ ಮಾತಿನಿಂದ ಅನ್ಯಜೀವಗಳ ಘಾತ, ಧರ್ಮದ ನಾಶ, ಅನ್ಯರಿಂದ ಅಪವಾದ, ಜಗಳ, ದುಃಖ, ಅಂಜಿಕೆ ಮೊದಲಾದವುಗಳು ಉತ್ಪನ್ನವಾಗುತ್ತವೋ ಆ ಪ್ರಕಾರದ ವಚನಗಳನ್ನು ತ್ಯಜಿಸುವುದು ಸ್ಥೂಲ ಅಸತ್ಯತ್ಯಾಗವೆನಿಸುವುದು ಇಲ್ಲಿ ಮಾತನಾಡುವವನು ಸಿಟ್ಟು, ಅಭಿಮಾನ, ಆಶೆಗಳಿಗೆ ವಶನಾಗಿ ಮಾತನಾಡಕೂಡದೆಂದೂ ನಿಯಮವಿದೆ. ತಮ್ಮ ವಸ್ತು, ಧನ ಮೊದಲಾದವುಗಳನ್ನು ಅವರು ಕೊಡದೆ ತಕ್ಕೊಳ್ಳಕೂಡದು. ಇದಕ್ಕೆ ಸ್ಥೂಲಚೌರ್ಯತ್ಯಾಗವೆನ್ನುವರು. ತನ್ನ ಮದುವೆಯಾದ ಹೆಂಡತಿಯ ಹೊರತಾಗಿ, ಎರಡನೆಯ ಯಾವದೇ ಸ್ತ್ರೀ ವಿಷಯದಲ್ಲಿ ಕಾಮದ ಇಚ್ಛೆಯುಂಟಾಗದಂತೆ ಇರುವುದಕ್ಕೆ ಸ್ಥೂಲಕಾಮತ್ಯಾಗ ವ್ರತವೆನ್ನುವರು. ಹತ್ತು ಪ್ರಕಾರದ ಪರಿಗ್ರಹಗಳಲ್ಲಿ ಒಂದು ಪ್ರಮಾಣವನ್ನು ಇಟ್ಟುಕೊಂಡು, ಅವುಗಳಿಗಿಂತ ಹೆಚ್ಚಿನ ಪರಿಗ್ರಹಗಳ ತ್ಯಾಗ ಮಾಡುವದಕ್ಕೆ ಸ್ಥೂಲಪರಿಗ್ರಹತ್ಯಾಗವೆನ್ನುವರು ಈ ಪ್ರಕಾರ ಇವು ಐದು ಪಾಪಗಳು ಬರುವ ದ್ವಾರಗಳಾಗಿವೆ ಇವುಗಳನ್ನು ತ್ಯಾಗ ಮಾಡುವುದು ಅಣುವ್ರತವಾಗಿದೆ

> ಕೊಲ್ಲದುದು ಪುಸಿಯದುದು ಕಳವಿಲ್ಲದುದುಂ ತ್ರಿಕರಣತ್ವದಿಂ ಪಾದರದೊಳು ।
> ಸಲ್ಲದುದು ಕಾಂಕ್ಷೆಯೊಳ್ ತರಿಸಲ್ಲದುದೆಂದಯ್ದಣುಬ್ರತಂ ಜಿನಮತದೊಳ್ ॥

—ಶಾಂತಿನಾಥಕವಿ-ಸುಕುಮಾರ ಚರಿತಂ ೫-೪೦.

ಇನ್ನು ಅಣುವ್ರತಗಳಲ್ಲಿ ಅಹಿಂಸೆಯನ್ನು ಕುರಿತು ವಿವರಿಸುತ್ತಾರೆ—

> ಸಂಕಲ್ಪಾತ್ಕೃತಕಾರಿತಮನನಾದ್ಯೋಗತ್ರಯಸ್ಯ ಚರಸತ್ತ್ವಾನ್ ।
> ನ ಹಿನಸ್ತಿ ಯತ್ತದಾಹುಃ ಸ್ಥೂಲವಧಾದ್ವಿರಮಣಂ ನಿಪುಣಾಃ ॥ ೫೩ ॥ [1]

ಅನ್ವಯಾರ್ಥ—(ಯೋಗತ್ರಯಸ್ಯ) ಮನ, ವಚನ, ಕಾಯ ಈ ಮೂರು ಯೋಗಗಳಿಂದ (ಕೃತಕಾರಿತ-ಮನನಾತ್) ಕೃತ, ಕಾರಿತ ಮತ್ತು ಅನುಮೋದನ ರೂಪದಲ್ಲಿ (ಸಂಕಲ್ಪಾತ್) ಯೋಜನಾಪೂರ್ವಕವಾಗಿ (ಚರಸತ್ತ್ವಾನ್) ತ್ರಸ ಜೀವಗಳನ್ನು (ನ ಹಿನಸ್ತಿ) ಘಾತಮಾಡದೆ ಇರುವುದು (ತತ್) ಅದಕ್ಕೆ (ನಿಪುಣಾಃ) ವ್ರತಗಳ ವಿಚಾರದಲ್ಲಿ ಬಲ್ಲವರಾದಂಥವರು (ಸ್ಥೂಲವಧಾದ್ವಿರಮಣಂ) ಸ್ಥೂಲ ಹಿಂಸೆಯಿಂದ ವಿರಕ್ತನಾಗುವುದು ಅಥವಾ ಅಹಿಂಸಾಣು-ವ್ರತವೆಂದು (ಆಹುಃ) ಹೇಳುತ್ತಾರೆ.

---

[1] ಆಯತವರ್ಮನು ಹೇಳುವದು ಹೀಗೆ—

ಕಂದ ॥ ಕೃತಕಾರಿತಾನುಮೋದಂ ಮತಿಯೊಳು ಕಾಯದೊಳು ವಚನದೊಳುವಿಲ್ಲದೆ ಜೀವ- ।
ತತಿಗಳ ತ್ರಸಮಂ ಸನ್ನುತದಿಂದೋವುದು ಪಿರಿಯ ಕೊಲೆಯ ನಿವೃತ್ತಿ ॥

ವಚನ—ಎಸಗಿ ಮಸಗಿ ಪರಿವ ಪಾರುವ ಪ್ರಾಣಿಗಳಂ, ದೇವತೆಕಾರಣಮಾಗಿಯುಂ, ಸಂಟಕಾರಣಮಾಗಿಯುಂ, ಪಿತಕಾರಣ ಮಾಗಿಯುಂ, ಮಂತ್ರಂ ಕಾರಣಮಾಗಿಯುಂ, ಔಷದಂ ಕಾರಣಮಾಗಿಯುಂ, ಭಯಂ ಕಾರಣಮಾಗಿಯುಂ, ವಿನೋದಂ ಕಾರಣ ಮಾಗಿಯುಂ, ಮನೋವಚನ ಕಾಯಂಗಳಿಂ ಕೊಲ್ಲದುದುಂ, ಕೊಲಿಸದುದುಂ, ಕೊಲೆಗೊಡಂಬಡದುದುಮಿದು ಮೊದಲಣುಬ್ರತ

ಅರ್ಥ — ಮನವಚನಕಾಯಗಳಿಂದ-ಮನಸ್ಸು-ಮಾತು-ಶರೀರಗಳಿಂದ-ಕೃತ-ಕಾರಿತ-ಅನುಮೋದನ ರೂಪಗಳಲ್ಲಿ-ಮಾಡಿ, ಮಾಡಿಸಿ, ಒಪ್ಪಿ-ಬುದ್ಧಿಪೂರ್ವಕವಾಗಿ ಚರಪ್ರಾಣಿಗಳ-ಎರಡು ಇಂದ್ರಿಯಗಳೇ ಮೊದಲಾದ ತ್ರಸ ಜೀವಿಗಳ-ಘಾತ ಮಾಡದೆ ಇರುವದಕ್ಕೆ ಗಣಧರದೇವರಂಥವರು-ವ್ರತಗಳ ವಿಷಯದಲ್ಲಿ ತಿಳಿದವರು-ಸ್ಥೂಲ ಹಿಂಸಾವಿರಕ್ತಿಯೆಂದು ಹೇಳಿದ್ದಾರೆ. [ಇಲ್ಲಿ 'ಸಂಕಲ್ಪಾತ್' ಎಂಬ ಪದವು 'ತತ್ತ್ವಾರ್ಥಸೂತ್ರ'ದಲ್ಲಿಯ 'ಪ್ರಮತ್ತ-ಯೋಗಾತ್' ಮತ್ತು 'ಪುರುಷಾರ್ಥಸಿದ್ಧ್ಯುಪಾಯ'ದಲ್ಲಿಯ 'ಕಷಾಯಯೋಗಾತ್' ಪದಗಳ ಪ್ರಯೋಗವು ಯಾವ ಅರ್ಥದಲ್ಲಿ[1] ಇರುವುದೋ ಆ ಅರ್ಥದಲ್ಲಿ ಬಂದಿದೆ. ಈ ಪದವು ಆರಂಭಾದಿಗಳಿಂದ ಹುಟ್ಟುವ ತ್ರಸಹಿಂಸೆಯನ್ನುಳಿದು, ವ್ರತಿಯ ಶುದ್ಧ, ಸ್ವತಂತ್ರ ಇಚ್ಛೆಯ ಪ್ರದರ್ಶಕವಾಗಿದೆ ಅಲ್ಲದೆ ಸಂಕಲ್ಪವಿಲ್ಲದೆ ಆಗುವ ಹಿಂಸೆಯು ಹಿಂಸೆಯಾಗ-ದೆಂದೂ ಈ ಪದವು ಸೂಚಿಸುತ್ತದೆ, ಅದೂ ತ್ರಸಜೀವಿಗಳ ಹಿಂಸೆಯಲ್ಲಿ ಮಾತ್ರ ಇದು ಸರಿಯಾಗಿದೆ ಕಾರಣವು ಇಲ್ಲದಿರುವಾಗ ಅದರಿಂದ ಹುಟ್ಟುವ ಕಾರ್ಯವೂ ಇಲ್ಲದಂತಾಗುವದು. ಮತ್ತು 'ಸಂಕಲ್ಪಾತ್' ಎಂಬ ಪದವನ್ನು ಮುಂದಿನ 'ಸತ್ಯಾಣುವ್ರತ'ವೇ ಮೊದಲಾದ ವ್ರತಗಳ ಲಕ್ಷಣಗಳ ವಿವರದಲ್ಲಿಯೂ ಇದೇ ಅರ್ಥದಲ್ಲಿ ಸ್ವೀಕರಿಸ ಬೇಕಾಗುವುದು.

ಶುದ್ಧ-ಸ್ವೇಚ್ಛೆ ಅಥವಾ ಸ್ವತಂತ್ರ ಇಚ್ಛೆ ಎಂಬುದು ಸಂಕಲ್ಪದ ಪ್ರಾಣವಾಗಿದೆ ಅದಕ್ಕಾಗಿ ಇಂಥ ಇಚ್ಛೆಯಿಲ್ಲದೆ, ತನ್ನ ಪ್ರಾಣ, ಧನ, ಜನ, ಪ್ರತಿಷ್ಠೆ ಹಾಗೂ ಶೀಲಾದಿಗಳನ್ನು ರಕ್ಷಿಸಿಕೊಳ್ಳುವದಕ್ಕಾಗಿ ವಿರೋಧೀ ಹಿಂಸೆಯನ್ನು ಮಾಡಬೇಕಾದಲ್ಲಿ ಅದು ಈ ವ್ರತಕ್ಕೆ ಹೊರಗಿನ ವಿಷಯವಾಗಿದೆ ಈ ಪ್ರಕಾರ ಆರಂಭೀ ಮತ್ತು ವಿರೋಧೀ ಹಿಂಸೆಗಳು-ತ್ರಸ ಜೀವಿಗಳ ಹಿಂಸೆಗಳು-ಈ ಸಂಕಲ್ಪೀ ತ್ರಸಹಿಂಸೆಯ ತ್ಯಾಗದಲ್ಲಿ ಸಮಾವೇಶ ವಾಗುವದಿಲ್ಲ ಒಕ್ಕಲತನ ವ್ಯಾಪಾರ ಉದ್ಯಮಗಳಲ್ಲಿ ಆಗುವ ಆರಂಭೀಹಿಂಸೆಯು ಉದ್ದೇಶ ಪೂರ್ವಕವಾಗಿ ಆಗುವದಿಲ್ಲ ವಿರೋಧೀ ಹಿಂಸೆಯೂ ಕೂಡ ಸ್ವೇಚ್ಛೆಯಿಂದ ಆಗುವಂಥದಲ್ಲ ಅದರಿಂದ ಇವುಗಳ ತ್ಯಾಗವು ಈ ವ್ರತದ ಮರ್ಯಾದೆಯಲ್ಲಿ ಬರುವದಿಲ್ಲ ಗೃಹಸ್ಥನ ಜೀವನದಲ್ಲಿ ಈ ಹಿಂಸೆಗಳನ್ನು ತ್ಯಜಿಸಿದರೆ ಬಾಳುವುದೇ ಸಾಧ್ಯವಿಲ್ಲವಷ್ಟೆ

ಇಲ್ಲಿ 'ಹಿನಸ್ತಿ' ಪದದ ಅರ್ಥದ ವಿಷಯದಲ್ಲಿಯೂ ಒಂದು ಮಾತನ್ನು ಗಮನಿಸಬೇಕು ಹಿಂದೆ ಹಿಂಸೆಯ ಪರ್ಯಾಯ ಹೆಸರುಗಳಲ್ಲಿ 'ಪ್ರಾಣಾತಿಪಾತ'ವನ್ನು ಗಮನಿಸಿದಲ್ಲಿ ಪ್ರಾಣಘಾತವನ್ನು ಮಾಡುವುದು-ಶರೀರದಿಂದ ಪ್ರಾಣವು ತೊಲಗುವಂತೆ ಮಾಡುವುದು-ಹಿಂಸೆಯ ಸ್ಥೂಲರೂಪವೆನಿಸುತ್ತದೆ ಆದರೆ ಇಲ್ಲಿಯ ಅರ್ಥದ ಸೂಕ್ಷ್ಮತೆಯು ಮುಂದಿನ ಶ್ಲೋಕಗಳಲ್ಲಿಯ 'ಅತಿಚಾರ'ಗಳನ್ನು ಅವಲೋಕಿಸುವದರಿಂದ ಸ್ಪಷ್ಟವಾಗುತ್ತದೆ ಸ ಧ]

ವಿಶೇಷಾರ್ಥ—ಸಮ್ಯಗ್ದರ್ಶನವು ಪ್ರಾಪ್ತವಾದ ಜೀವದ ಪರಿಣಾಮವು ಕೋಮಲವಾಗಿದ್ದು, ದಯೆ-ಯಿಂದ ಕೂಡಿರುತ್ತದೆ ಕೆಲವು ಜೀವಗಳಿಗೆ ಹಿಂಸೆಯ ಭಯವು ಉತ್ಪನ್ನವಾಗುತ್ತದೆ ಅದರಿಂದ ಅವರು ಆ ಹಿಂಸೆಯನ್ನು ತ್ಯಜಿಸಲು ಸಿದ್ಧರಾಗಿರುತ್ತಾರೆ ಇಂಥವರಿಗೆ ಏಕೇಂದ್ರಿಯ ಮೊದಲಾದ ಪೃಥ್ವೀಕಾಯಾದಿಕ ಜೀವಗಳ ಹಿಂಸೆಯನ್ನು ತ್ಯಾಗ ಮಾಡುವದಾಗುವದಿಲ್ಲ ಮನೆ, ಹೆಂಡರು ಮಕ್ಕಳನ್ನು ತ್ಯಾಗಮಾಡಿದ ಯೋಗಿ ಶ್ರೇಷ್ಠರಿಗೆ ಮಾತ್ರ ತ್ರಸ ಹಾಗೂ ಸ್ಥಾವರ ಈ ಎರಡೂ ಪ್ರಕಾರದ ಜೀವಗಳ ಹಿಂಸೆಯನ್ನು ತ್ಯಾಗಮಾಡಲಿಕ್ಕೆ ಸಾಧ್ಯವಿದೆ ಗೃಹಸ್ಥನಿಗೆ ಮನೆ, ಕುಟುಂಬಗಳ ಮೇಲೆ ಮಮತೆಯು ಇರುತ್ತದೆ ಅದರಂತೆ ಪ್ರತ್ಯಾಖ್ಯಾನಾವರಣ ಕರ್ಮದ ಉದಯವು ಸತ್ತೆಯಲ್ಲಿರುವುದರಿಂದ ಆ ಮಮತೆಯು ಕಡಿಮೆಯಾಗಿರುವದಿಲ್ಲ ಅದಕ್ಕಾಗಿ ಇಂಥ ಜೀವಗಳಿಗಾಗಿ, ತ್ರಸ ಜೀವಗಳ ಸಂಕಲ್ಪೀ ಹಿಂಸೆಯನ್ನು ತ್ಯಾಗಮಾಡುವುದರಿಂದ ಅವರಿಗೆ ಅಹಿಂಸಾ ಅಣುವ್ರತವು ಸಂಭವಿಸುತ್ತದೆಂದು ಭಗವಂತರು ಹೇಳಿದ್ದಾರೆ

ಸಂಕಲ್ಪೀ ಹಿಂಸಾ—ಸಂಕಲ್ಪೀ ಹಿಂಸೆಯ ತ್ಯಾಗವೆಂದರೇನು? ದಯಾಳು ಗೃಹಸ್ಥನು ಉದ್ದೇಶ-ಪೂರ್ವಕವಾಗಿ ತ್ರಸ ಜೀವಗಳ ಘಾತವನ್ನು ಮಾಡುವದಿಲ್ಲ ಅಲ್ಲದೆ ಘಾತ ಮಾಡುವವರನ್ನೂ ಮನ-ವಚನ-ಕಾಯಗಳಿಂದ ಪ್ರಶಂಸೆಮಾಡುವದಿಲ್ಲ ಯಾವುದಾದರೊಂದು ದುಷ್ಟ ಪ್ರಾಣಿಯು ಈರ್ಷೆ ಇಲ್ಲವೆ ದ್ವೇಷದಿಂದ

---

1 ಪ್ರಮತ್ತಯೋಗಾತ್ಪ್ರಾಣವ್ಯಪರೋಪಣಂ ಹಿಂಸಾ । —ತಾತ್ತ್ವಾರ್ಥ ಸೂ ೭-೧೩

ಯತ್ಖಲು ಕಷಾಯಯೋಗಾತ್ಪ್ರಾಣಾನಾಂ ದ್ರವ್ಯ-ಭಾವ-ರೂಪಾಣಾಂ ।
ವ್ಯಪರೋಪಣಸ್ಯ ಕರಣಂ ಸುನಿಶ್ಚಿತಾ ಭವತಿ ಸಾ ಹಿಂಸಾ ॥ —ಪುರುಷಾರ್ಥ, ೪೩

ಅವನ ಘಾತವನ್ನು ಮಾಡಲು ಇಚ್ಛಿಸಿದ್ದರೂ ಅವನ ಜೀವನೋಪಕರಣಗಳನ್ನು ಕೆಡಿಸುವ ಹೊಂಚನ್ನು ಹಾಕಿದ್ದರೂ ಕೂಡ ಅವನು ಅವರಿಗೆ ಹಾನಿಯನ್ನು ಉಂಟುಮಾಡುವ ಇಚ್ಛೆಯನ್ನು ಮಾಡುವದಿಲ್ಲ ಯಾರಾದರೂ ಬಹಳಷ್ಟು ದ್ರವ್ಯಕೊಟ್ಟು, ಕೊಡುವೆವೆಂಬ ಆಶೆಯನ್ನು ಹಚ್ಚಿ, ಒಂದು ಜೀವದ ಘಾತ ಮಾಡಲಿಕ್ಕೆ ಹೇಳಿದರೆ ಅವನು ಒಂದು ಚಿಕ್ಕ ಇರುವೆ, ಹುಳ ಇವನ್ನೂ ಸಹ ಕೊಲ್ಲಲಾರನು ಹೇತು ಪೂರ್ವಕವಾಗಿ ಕೊಲ್ಲುವ ಇಚ್ಛೆಯನ್ನೂ ಮಾಡಲಾರನು ಒಂದು ಜೀವದ ಬಲಿ ಕೊಡುವುದರಿಂದ ತನ್ನ ಆಪತ್ತಿಯು ದೂರವಾಗುತ್ತದೆ, ತನ್ನ ಪ್ರಾಣವು ಉಳಿಯುತ್ತದೆ, ರೋಗವು ಇಲ್ಲದಂತಾಗುತ್ತದೆ ಎಂದರೂ ಸಹ ಅವನು ತ್ರಸ ಜೀವದ ಘಾತವನ್ನು ಮಾಡಲಾರನು. ಹಿಂಸೆಯಾದೀತಲ್ಲ!—ಎಂದು ಅವನಿಗೆ ಅತ್ಯಂತ ಭೀತಿ ಇರುತ್ತದೆ. ಗೃಹಸ್ಥರಿಗೆ ಆರಂಬಾದಿ ಕ್ರಿಯೆಗಳಲ್ಲಿ ತ್ರಸ ಜೀವದ ಘಾತವಾಗುತ್ತದೆ ಇದು ನಿಜವಿದ್ದರೂ ಆತನು ಯಾವುದಾದರೂ ಜೀವದ ಆಹಾರ, ಔಷಧ, ದೇವತಾರ್ಚನ ಇವುಗಳಿಗೆಂದು ಘಾತವನ್ನು ಮಾಡಲಾರನು ಇಂಥ ಹಿಂಸೆಗಳ ತ್ಯಾಗವನ್ನು ಮಾಡುವದು ಅವನಿಗೆ ಸಾಧ್ಯವಿದೆ. ಅವನಿಗೆ ಆರಂಭೀ ಹಿಂಸೆಯ ತ್ಯಾಗವು ಆಗದು ಅಂತಲೇ ದಯಾಪೂರ್ಣ ಧರ್ಮಕ್ಕೆ ವಿರೋಧವು ಬಾರದಂತೆ ಅವನು ಆರಂಭಾದಿ ಕಾರ್ಯಗಳನ್ನು ಮಾಡಬೇಕು. ಅವುಗಳನ್ನು ಮಾಡುವಾಗ ಸಾವಧಾನತೆಯನ್ನು ಸಾಕಷ್ಟು ವಹಿಸುವುದರಲ್ಲಿ ಯಾವ ಆಲಸ್ಯವನ್ನೂ ಮಾಡಕೂಡದು.

ಗೃಹಸ್ಥಾವಸ್ಥೆಯಲ್ಲಿ ಹಿಂಸೆಯಾಗುತ್ತದೆ. ಗೃಹಸ್ಥಾವಸ್ಥೆಯಲ್ಲಿ ಒಲೆ ಹೊತ್ತಿಸುವುದು, ಬೀಸುವುದು, ಕುಟ್ಟುವುದು, ಸಾರಿಸುವುದು, ನೀರು ಚೆಲ್ಲುವುದು, ದುಡ್ಡು ಸಂಪಾದಿಸುವುದು—ಈ ಆರು ಕರ್ಮಗಳನ್ನಂತೂ ದಿನಾಲು ಮಾಡಬೇಕಾತ್ತದೆ. ಇವಲ್ಲದೆ ನಿತ್ಯ ಇನ್ನೂ ಅನೇಕ ಆವಶ್ಯಕ ಕ್ರಿಯೆಗಳನ್ನೂ ಮಾಡಬೇಕಾಗುತ್ತದೆ ಉದಾಹರಣೆಗೆಂದು ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು —ತಮ್ಮ ಮಕ್ಕಳ ಮದುವೆ ಮಾಡುವುದು, ಮನೆ ಕಟ್ಟಿಸುವುದು, ಅದನ್ನು ಝಾಡಿಸುವುದು, ಸಾರಿಸುವುದು, ಸ್ವಚ್ಛ ಇಡುವುದು, ರಾತ್ರಿ ಎಲ್ಲಿಯಾದರೂ ಹೋಗಿ ಬರುವುದು, ಕಲ್ಲು, ಕಟ್ಟಿಗೆ, ಧಾತು ಮೊದಲಾದವುಗಳನ್ನು ಒಡೆಯುವುದು, ಕಡಿಯುವುದು, ಹಾಸಿಗೆಯನ್ನು ಹಾಸುವುದು, ಇಟ್ಟು ಎತ್ತುವುದು, ಪಾತ್ರೆಗಳನ್ನು ಅಪ್ಪಳಿಸುವುದು, ದೀಪ ಉರಿಸುವುದು—ಇವೇ ಮೊದಲಾದ ಎಲ್ಲ ಕಾರ್ಯಗಳಲ್ಲಿ ಹಿಂಸೆಯು ಸಂಭವಿಸುತ್ತದೆ. ಬಂಡಿ-ರಥಗಳಲ್ಲಿ ಕೂತು ಹೋಗುವುದು, ಆನೆ-ಕುದುರೆಗಳ ಮೇಲೆ ಕೂಡುವುದು, ಎಮ್ಮೆ-ಆಕಳುಗಳನ್ನು ಸಾಕುವದು, ಇವುಗಳಲ್ಲಿ ತ್ರಸಜೀವಗಳ ಘಾತವು ಆಗುತ್ತದೆ ಮಂದಿರ-ದೇವಾಲಯ-ಕಟ್ಟಿಸುವುದು, ದಾನ ಕೊಡುವುದು, ಪೂಜೆಮಾಡುವುದು ಇವುಗಳಲ್ಲಿಯೂ ಆರಂಭವು ಇದ್ದೇ ಇದೆ. ಇಂಥ ಅವಸ್ಥೆಯಲ್ಲಿ ಗೃಹಸ್ಥನಿಗೆ ತ್ರಸ ಹಿಂಸೆಯನ್ನು ಸಂಪೂರ್ಣವಾಗಿ ತ್ಯಾಗಮಾಡುವುದು ಸಾಧ್ಯವಿದೆಯೆ?

ಅದು ಹೇತುಪೂರ್ವಕವಾದ ಹಿಂಸೆಯಲ್ಲ. ಗೃಹಸ್ಥನ ಪರಿಣಾಮವು ಮೇಲಿನ ಕ್ರಿಯೆಗಳನ್ನು ಮಾಡುವಾಗ ಮುಖ್ಯವಾಗಿ ಜೀವಗಳ ಘಾತಮಾಡುವುದು ಇರುವದಿಲ್ಲ ಅವನು ಜೀವದ ಘಾತವಾಗಲೆಂದು ಆ ಕಾರ್ಯಗಳನ್ನು ಮಾಡುತ್ತಿರುವದಿಲ್ಲ ಈ ಕಾರ್ಯಗಳನ್ನು ಮಾಡುತ್ತಿರುವಾಗ ಜೀವಗಳ ವಧೆಯಾದರೆ ನೆಟ್ಟಗೆ ಎಂದೂ ಅವನು ಮನಸ್ಸಿನಲ್ಲಿ ತರುವದಿಲ್ಲ ಅವನಿಗೆ ಜೀವಗಳ ವಧೆಯಾದೀತಲ್ಲ ಎಂಬ ಹೆದರಿಕೆಯು ಮನಸ್ಸಿನಲ್ಲಿ ಇರುತ್ತದೆ ಅದನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಅವನು ಆರಂಭಾದಿಕ್ರಿಯೆಗಳನ್ನು ಮಾಡುತ್ತಿರುತ್ತಾನೆ ಜೀವಗಳನ್ನು ಕೊಲ್ಲುವದಕ್ಕಾಗಿಯೇ ಅವನು ಆರಂಭಾದಿ ಕಾರ್ಯಗಳಲ್ಲಿ ಪ್ರವೃತ್ತಿಸುವದಿಲ್ಲ. ಜೀವಗಳನ್ನು ಕೊಲ್ಲುವ ಉದ್ದೇಶವೂ ಅವನದಾಗಿರುವದಿಲ್ಲ ಇಂಥ ಅವಸ್ಥೆಯಲ್ಲಿ ಅವನಿಗೆ ಪಾಪಬಂಧವಾಗುವದಿಲ್ಲ. ಯಾಕಂದರೆ ಜೀವಗಳು ತಮ್ಮ ಆಯು ಕರ್ಮಕ್ಕೆ ಅನುಸರಿಸಿ, ಹುಟ್ಟುತ್ತವೆ ಮತ್ತು ಸಾಯುತ್ತವೆ. ಅವುಗಳ ಜನನ, ಜೀವನ, ಮರಣಗಳು ನಮ್ಮ ಆಧೀನವಿಲ್ಲ. ನಾವು ಎಷ್ಟು ಆರಂಭಮಾಡುವೆವೋ ಅಷ್ಟು ದಯೆಯಿಂದ ಪ್ರೇರಿತರಾಗಿ, ಯತ್ನಪೂರ್ವಕವಾಗಿ ಕಾರ್ಯವೆಸಗುತ್ತೇವೆ. ಹೀಗೆ ಕಾರ್ಯಮಾಡುವವರಿಗೆ ಹಿಂಸೆಯಾಗುವದಿಲ್ಲ ಕರ್ಮಬಂಧವೂ ಆಗುವದಿಲ್ಲ—ಎಂದು ಭಗವಂತನು ಪರಮಾಗಮದಲ್ಲಿ ಹೇಳಿದ್ದಾನೆ. ಈ ಸಂಪೂರ್ಣಲೋಕವು ಜೀವಗಳಿಂದ ತುಂಬಿದ್ದಿದೆ. ಅವುಗಳ ಸಾವು-ಬಾಳುಗಳು ಅವವುಗಳ ಕರ್ಮಾನುಸಾರ ಸಾಗಿರುತ್ತವೆ. ನಮ್ಮ ಸಂಕಲ್ಪವಿಲ್ಲದೆ ಹಿಂಸೆ-ಅಹಿಂಸೆಗಳ ಸಂಬಂಧವು ನಮಗೆ ಹತ್ತುವದಿಲ್ಲ

ಹಿಂಸೆಯು ಪರಿಣಾಮವನ್ನು ಅವಲಂಬಿಸಿದೆ. ಹಿಂಸೆ ಅಹಿಂಸೆಗಳೂ ಸಹ ನಮ್ಮ ಪರಿಣಾಮವನ್ನು ಅವಲಂಬಿಸಿವೆ. ಮುನಿಗಳು ನಡೆಯುವಾಗ ಮುಂದೆ ನಾಲ್ಕು ಮೊಳ ಮಾರ್ಗವನ್ನು ನೋಡುತ್ತ ನಡೆಯುವರು.

ಅವರು ಹೆಜ್ಜೆ ಎತ್ತಿಡುವಷ್ಟರಲ್ಲಿ ಹೊರಗಿನಿಂದ ಒಂದು ಜೀವವು ಜಿಗಿದು ಬಂದು, ಅವರ ಪಾದ ಕೆಳಗೆ ಸಿಕ್ಕು ಸಾಯಬಹುದು ಅದಕ್ಕೆ ಮುನಿಗಳು ಹೊಣೆಗಾರರಲ್ಲ ಯಾಕಂದರೆ ಮುನಿಯು ಈರ್ಯಾಸಮಿತಿಗೆ ಅನುಸರಿಸಿ ಗಮನ ಮಾಡುತ್ತಿರುವಾಗ ಅವನಿಗೆ ಹಿಂಸೆಯ ಬಂಧವು ಆಗುವದಿಲ್ಲ ಶುದ್ಧವಿರುವ ಆಹಾರವನ್ನು ನಿರೀಕ್ಷಿಸುತ್ತ ಉಣ್ಣುತ್ತಿರುವಾಗ ಅದರಲ್ಲಿ ಅಕಸ್ಮಾತ್ ಒಂದು ಜೀವವು ಬಂದುಬಿದ್ದರೆ ಅದರಲ್ಲಿ ಆ ಮುನಿಯ ಹೊಣೆಗಾರಿಗೆ ಏನಿದೆ? ಅವನ ದೋಷವಾದರೂ ಏನು? ಅವನು ಪ್ರಮಾದದಿಂದ ಆಹಾರವನ್ನು ಶೋಧಿಸಿ ತಕ್ಕೊಳ್ಳುವುದರಲ್ಲಿ ಆಲಸ್ಯವನ್ನು ಮಾಡಿದ್ದರೆ ಅವನಿಗೆ ದೋಷವು ತಗಲುವುದು ಇದೇ ಪ್ರಕಾರ ಶ್ರಾವಕನೂ ಸಹ ಪ್ರಮಾದವನ್ನು ಮಾಡದೆ ಬಹು ಜಾಗರೂಕತಯಿಂದ ನಡೆಯುತ್ತಿದ್ದರೆ ಅವನಿಗೆ ಹಿಂಸೆಯ ದೋಷವು ಹತ್ತುವದಿಲ್ಲ

**ನಿತ್ಯ ಕ್ರಿಯೆಗಳನ್ನು ಸಾವಧಾನತೆಯಿಂದ ಮಾಡಬೇಕು.** ಹಗಲು ಒಲೆಯನ್ನು ನೋಡಿ, ಸ್ವಚ್ಛ ಮಾಡಿ, ಉರುವಲದಲ್ಲಿ ಹುಳಹುಪ್ಪಡಿಗಳು ಇಲ್ಲವೆಂಬುದನ್ನು ಮನದಟ್ಟು ಮಾಡಿಕೊಂಡು, ಬೆಂಕಿಯನ್ನು ಹೊತ್ತಿಸ-ಬೇಕು ಹಾಗೆಯೇ ಬೀಸುವ ಕಲ್ಲನ್ನು ಉಡುಗಿ, ಸ್ವಚ್ಛಮಾಡಿ, ಧಾನ್ಯದಲ್ಲಿ ಕ್ರಿಮಿ–ಕೀಟಕಗಳು ಇರದಂತೆ ನೋಡಿಕೊಂಡು, ಆ ಮೇಲೆ ಅದನ್ನು ಬೀಸಿ ಹಿಟ್ಟು ಮಾಡಬೇಕು ಇವೇ ಮೊದಲಾದ ಕ್ರಿಯೆಗಳನ್ನು ಯಥಾಯೋಗ್ಯ ಮಾಡುತ್ತಿರುವಾಗ ಅದರಲ್ಲಿ ಅಪ್ಪಿ–ತಪ್ಪಿ ಹಿಂಸೆಯು ಒಂದು ವೇಳೆ ಆದರೂ ಕೂಡ ಅದರ ದೋಷವು ಅವರ ಕಡೆಗೆ ಬರುವದಿಲ್ಲ! ಶ್ರಾವಕನು ಮಲಿನವಾದ ಹಾಗೂ ಹಳಸಿದ ಅನ್ನವನ್ನು ತಿನ್ನುವದಿಲ್ಲ, ಹಾಗೆಯೇ ಸ್ಥಳವನ್ನು ಸ್ವಚ್ಛ ಮಾಡುವದಿದ್ದರೂ ಸಹ ಹಗಲು ಹೊತ್ತಿನಲ್ಲಿ ಮೃದುವಾದ ಕುಂಚದಿಂದ ಸವರಿ ಸ್ವಚ್ಛಮಾಡಬೇಕು. ಶ್ರಾವಕನು ಇತರ ಪ್ರಾಣಿಗಳಿಗೆ ತೊಂದರೆಯಾಗದಂತೆ ಕಸಬರಿಗೆಯಿಂದ ಮೆಲ್ಲ-ಮೆಲ್ಲನೆ ಉಡುಗಿ ತೆಗೆಯುವನು. ನೀರನ್ನು ಎರಡು ಪದರು ಮಾಡಿದ ಅರಿವೆಯಿಂದ ಯತ್ನಪೂರ್ವಕವಾಗಿ ಶೋಧಿಸಿ ಉಪಯೋಗಿಸುವನು

**ಅನ್ಯಾಯದಿಂದ ಧನವನ್ನು ಸಂಪಾದಿಸಕೂಡದು.** ಅವನು ದ್ರವ್ಯವನ್ನು ಸಂಪಾದಿಸುವಾಗಲೂ ಅನ್ಯಾಯವನ್ನು ಮಾಡುವದಿಲ್ಲ ತನ್ನ ಕುಲಾಚಾರಕ್ಕೆ ಅನುಸರಿಸಿ ಕಾರ್ಯವನ್ನು ಮಾಡುವನು ತನ್ನ ಸಾಮರ್ಥ್ಯಕ್ಕೆ ಅನುಸರಿಸಿ ದ್ರವ್ಯವನ್ನು ಬಯಸುವನು, ಸಂಪಾದಿಸುವನು ದ್ರವ್ಯ ಸಂಪಾದಿಸುವಾಗ ಜಗತ್ತಿನಲ್ಲಿ ತನ್ನ ಅಪಕೀರ್ತಿಯಾಗುವಂತೆಯೂ ತನ್ನ ಧರ್ಮದಲ್ಲಿ ದೋಷವು ಉಂಟಾಗುವಂತೆಯೂ ವರ್ತಿಸಿ, ಅವನೆಂದೂ ಧನವನ್ನು ಸಂಗ್ರಹಿಸುವದಿಲ್ಲ, ಸಂಪಾದಿಸುವದಿಲ್ಲ ಅವನು ಅಸಿ–ಮಷಿ–ಕೃಷಿ–ವಿದ್ಯಾ–ವಾಣಿಜ್ಯ ಮತ್ತು ಶಿಲ್ಪ ಈ ಆರು ಕರ್ಮಗಳನ್ನು ಮಾಡುವಾಗಲೂ ಸಹ ಮೇಲೆ ಹೇಳಿದ ದೃಷ್ಟಿಯಿಂದಲೇ ಮಾಡುವದರಲ್ಲಿ ಮಗ್ನನಾಗುತ್ತಾನೆ. ಶ್ರಾವಕ ವ್ರತವನ್ನು ನಾಲ್ಕೂ ವರ್ಣದವರು ಧರಿಸಲಿಕ್ಕೆ ಬರುತ್ತದೆ ತಮ್ಮ ಉಪಜೀವಿಕೆಯು ನಿರ್ಮಲವೂ ಮೂಲದಲ್ಲಿ ಹಿಂಸೆಯಾಗದಂತೆಯೂ ಇರುವ ಸಾಧನಗಳಿಂದ ಸಾಗಿದ್ದರೆ ಸಾಕು ಇಲ್ಲದ ಸಲ್ಲದ ನಿಂದ್ಯ ಕರ್ಮಗಳನ್ನು ಮಾಡಿ, ಲೋಭದ ಆಧೀನನಾಗಿ, ಪಾಪರೂಪದ ಅನೇಕ ಕಾರ್ಯಗಳನ್ನೂ ಮಾಡಿ, ಜೀವನವನ್ನು ನಡೆಯಿಸಕೂಡದು, ಬೇರೆ ಯಾವುದರಿಂದಲೂ ತಮ್ಮ ಜೀವನವು ಸಾಗುವಂತೆ ಇರದಿದ್ದರೆ ಸಹ ಪಾಪದ ಹೆದರಿಕೆಯನ್ನು ಇಟ್ಟುಕೊಂಡು, ನ್ಯಾಯದಿಂದ ಬಾಳುವೆಯನ್ನು ನಡೆಯಿಸುವ ನಿಶ್ಚಯದಿಂದ ಯಾವಾಗಲೂ ಚಂಚಲನಾಗಕೂಡದು

**ಕ್ಷತ್ರಿಯರು ದುರ್ಬಲರ ರಕ್ಷಣೆಯನ್ನು ಮಾಡಬೇಕು.** ತಾವು ಕ್ಷತ್ರಿಯ ಕುಲದಲ್ಲಿ ಹುಟ್ಟಿದವರು ಇದ್ದರೆ ಅವರು ಕ್ಷತ್ರಿಯರ ನ್ಯಾಯವಾದ ಕರ್ಮವನ್ನು ಮಾಡಬೇಕು ಅದನ್ನು ಮೀರಿ, ದೀನ-ದುರ್ಬಲರ ಘಾತವನ್ನು ಮಾಡಕೂಡದು ಕ್ಷತ್ರಿಯರ ಕರ್ಮವು ದೀನ ಹಾಗೂ ಅನಾಥರನ್ನು ರಕ್ಷಿಸುವದಾಗಿದೆ. ಕೈಯಲ್ಲಿ ಆಯುಧವಿಲ್ಲದ ಪುರುಷನನ್ನು ಕ್ಷತ್ರಿಯರು ಕೊಲ್ಲಕೂಡದು ನೆಲಕ್ಕೆ ಬಿದ್ದವರ ಮೇಲೆ ಪೆಟ್ಟು ಹಾಕತಕ್ಕದ್ದಲ್ಲ ಬೆನ್ನು ತಿರುವಿ ಓಡುವವರನ್ನು ದೀನರಾದವರನ್ನೂ ಹೊಡೆಯತಕ್ಕದ್ದಲ್ಲ ಧನವನ್ನು ಅಪಹರಿಸುವದಕ್ಕಾಗಿ ತನ್ನ ಶಕ್ತಿಯಿಂದ ಸಾವಿರಾರು ಜೀವಗಳ ಘಾತವನ್ನು ಮಾಡಕೂಡದು ಅಭಿಮಾನ, ವೈರಗಳಿಂದಲೂ ಯಾರ ಘಾತವನ್ನೂ ಮಾಡಬಾರದು ತಮ್ಮ ಘಾತವನ್ನು ಮಾಡಲಿಕ್ಕೆ ಬರುವವರನ್ನೂ ದುರ್ಬಲರ ಮೇಲೆ ಕೈಯೆತ್ತುವವರನ್ನೂ ಶಸ್ತ್ರದಿಂದ ವಿರೋಧಿಸಲಿಕ್ಕೆ ಅಡ್ಡಿಯಿಲ್ಲ ಕೇವಲ ಶಸ್ತ್ರಗಳೇ ಜೀವನ ಸಾಧನವಾಗಿರುವ ವೀರರು, ಸ್ವಾಮಿಕಾರ್ಯಕ್ಕಾಗಿ, ಧರ್ಮಕ್ಕಾಗಿ ಶಸ್ತ್ರವನ್ನು ಧರಿಸಬೇಕು ಅದರಂತೆ ಅನಾಥರ ಒಡೆಯನೂ ರಾಜನೂ ಶಸ್ತ್ರಧರಿಸಲಿಕ್ಕೆ ಪ್ರತಿಬಂಧಕವಿಲ್ಲ ಶಸ್ತ್ರಗಳನ್ನು ಧರಿಸಿ ಸೇವಾಕಾರ್ಯವನ್ನು ಮಾಡುವದಿರದಿದ್ದರೆ, ಪ್ರಜಾಪಾಲನೆಯು ತನ್ನ ಕಡೆಗೆ ಇರದಿದ್ದರೆ

ಅಂಥವನು ಶಸ್ತ್ರವನ್ನು ಹಿಡಿಯುವ ಅವಶ್ಯಕತೆಯಿಲ್ಲ ಅವನು ಸ್ವರಕ್ಷಣೆಗೆಂದೂ ಇತರ ಕಾರ್ಯಗಳಿಗಾಗಿಯೂ ಶಸ್ತ್ರಗಳನ್ನು ಇಟ್ಟುಕೊಳ್ಳಬಾರದು

ಒಕ್ಕಲಿಗರು ಕಡಿಮೆ ಹಿಂಸೆಯಾಗುವುದರ ಕಡೆಗೆ ಗಮನವೀಯಬೇಕು. ಬರೆಯುವ ಉದ್ಯೋಗವನ್ನು ಮಾಡುವವನು-ತನ್ನ ಬಾಳಿಗಾಗಿ ಅದನ್ನೇ ಸಾಧನವನ್ನು ಮಾಡಿಕೊಂಡವನು-ಕಪಟ ವೃತ್ತಿಯನ್ನೂ ಬಿಟ್ಟು ತನ್ನ ಒಡೆಯನ ಸೇವೆಯನ್ನು ಮಾಡಬೇಕು. ಒಕ್ಕಲಿಗರು, ಮಾಲಿಗಾರರೂ ಇವರೇ ಮೊದಲಾದವರು ಬೇರೆಯಾವುದೂ ಉಪಜೀವನದ ಸಾಧನವಿಲ್ಲದವರೂ ಭೂಮಿಯನ್ನು ಉತ್ತು ಬಿತ್ತಿ ಬಾಳುವೆಯನ್ನು ಸಾಗಿಸಬಹುದು. ಆದರೆ ಅದನ್ನು ಮಾಡುವಾಗ ದಯಾಧರ್ಮದ ತ್ಯಾಗವನ್ನು ಮಾಡಬಾರದು ಮೊದಲಿನಿಂದಲೂ ಉಪಜೀವಿಕೆಗಾಗಿ ಒಕ್ಕಲತನವನ್ನು ಮಾಡುತ್ತ ಬಂದವರು ಅದರಲ್ಲಿಯೂ ಮರ್ಯಾದೆಯನ್ನು ಇಟ್ಟುಕೊಂಡು, ಅದಕ್ಕಿಂತಲೂ ಹೆಚ್ಚಿಗೆ ಒಕ್ಕಲತನವನ್ನು ಮಾಡಲಾರೆವೆಂದು ನಿಶ್ಚಯಮಾಡಬೇಕು ಮಾಡುತ್ತಿರುವ ಒಕ್ಕಲತನದ ಸಲುವಾಗಿಯೂ ಹೆಚ್ಚಿಗೆ ತೃಷ್ಣೆಮೋಹಗಳನ್ನು ಇಡಕೂಡದು. ಅದರಲ್ಲಿಯೂ ಇಚ್ಛೆಯನ್ನು ಕಡಿಮೆಮಾಡುತ್ತ ಹೋಗಬೇಕು ಉಪಾಯ-ವಿಲ್ಲದೆ ಈ ಉದ್ಯೋಗ ಮಾಡುತ್ತಿರುವೆ, ಇದರಲ್ಲಿ ಹಿಂಸೆ ಬಹಳ ಆಗುತ್ತದೆ, ಪಾಪಬಂಧವೂ ಹೆಚ್ಚಿಗೆ ಇದೆ, ಎರಡನೆಯ ಸಾಧನವು ನನಗೆ ಬಾಳಲಿಕ್ಕೆ ಇದ್ದಿದ್ದರೆ ನಾನೆಂದೂ ಇದನ್ನು ಮಾಡುತ್ತಿರಲಿಲ್ಲ, ಹೀಗೆ ಮನಸ್ಸಿನಲ್ಲಿ ತನ್ನ ಆತ್ಮನಿಂದೆಯನ್ನು ಮಾಡಿಕೊಳ್ಳುತ್ತ ಒಕ್ಕಲತನವನ್ನು ಮಾಡಬೇಕು ಒಕ್ಕಲತನದಲ್ಲಿ ಯಾವಾಗಲೂ ಬಹಳಷ್ಟು ನೀರನ್ನು ಸೋಸದೆ ಉಪಯೋಗಿಸಬೇಕಾಗುತ್ತದೆ. ಆದರೂ ಒಕ್ಕಲಿಗನು ತನ್ನ ಉಪಯೋಗಕ್ಕಾಗಿ ಒಂದು ಹನಿಯನ್ನೂ ಸಹ ನೀರನ್ನು ಸೋಸದೆ ಉಪಯೋಗಿಸಬಾರದು. ಅದಕ್ಕೆ ಯಾರಾದರೂ ಹೀಗೆ ಅನ್ನಬಹುದು—"ನೀವು ನಿಮ್ಮ ಹೊಲದಲ್ಲಿ ನಿತ್ಯವೂ ಹಲವು ಗಿಡಗಂಟೆಗಳನ್ನು ಕಡಿಯಬಹುದು, ಬೆಳೆಯನ್ನು ಕೊಯ್ಯಬಹುದು ಆದರೆ ಅನ್ಯರು ಹಣವನ್ನು ಕೊಟ್ಟು, ತಮ್ಮ ಹೊಲದೊಳಗಿನ ಗಿಡ ಹಾಗೂ ಬೆಳೆಗಳನ್ನು ತೆಗೆಯಲು ಹೇಳಿ"ದರೆ ಅದನ್ನು ಮಾಡಬಾರದು ಲೋಭದಿಂದ ಅಂದ ಕಾರ್ಯಗಳನ್ನು ಕೈಕೊಳ್ಳಕೂಡದು ಒಕ್ಕಲತನ ಮಾಡುವಾಗ ಅನೇಕ ಜೀವಗಳು ಸಾಯುತ್ತವೆ. ಆದರೆ ಜೀವಗಳನ್ನು ವಧೆಮಾಡುವ ಉದ್ದೇಶವು ಅಲ್ಲಿ ಇರುವದಿಲ್ಲ ತನ್ನ ಜೀವನವು ಸಾಗಬೇಕೆಂದಿಷ್ಟೇ ಉದ್ದೇಶವಿರುತ್ತದೆ ಹೀಗಿದ್ದರೂ ಕೂಡ ಯಾರಾದರೂ ನೂರಾರು ರೂಪಾಯಿಗಳನ್ನು ಕೊಡುವೆನೆಂದು ಹೇಳಿದ ಮಾತ್ರಕ್ಕೆ ಲೋಭದಿಂದ ಪಾಪ ಕೃತ್ಯವನ್ನು ಮಾಡುವದಕ್ಕೆ ಪ್ರವೃತ್ತರಾಗಕೂಡದು ಯಾಕೆಂದರೆ ಒಂದು ಸಣ್ಣ ಇರುವೆಗೂ ಸಹ ದುಃಖವಾಗಕೂಡದು-ಇಷ್ಟು ಯಾರ ಮನದಲ್ಲಿ ದಯೆಯು ಉತ್ಪನ್ನವಾಗಿರುವುದೋ ಅವರು ಒಕ್ಕಲತನವನ್ನೇ ಮಾಡುವದಿಲ್ಲ

ವಿದ್ಯಾಬಲದ ಮೇಲೆ ಉಪಜೀವಿಕೆಯನ್ನು ಮಾಡುವ ಬ್ರಾಹ್ಮಣರು ಮಿಥ್ಯಾತ್ವವನ್ನು ಬೆಳೆಯಿಸುವ-ಹಿಂಸೆಗೆ ಪುಷ್ಟಿಯನ್ನು ಕೊಟ್ಟು ರಾಗದ್ವೇಷಗಳನ್ನು ಬೆಳೆಯಿಸುವ-ವಿದ್ಯೆಯನ್ನು ಕಲಿಸಕೂಡದು ನಿರ್ದೋಷ ವಿದ್ಯೆಯನ್ನು ಕಲಿಸುವುದೇ ಅವರ ಧರ್ಮವಾಗಿದೆ.

ಶ್ರಾವಕರು ಹೆಚ್ಚು ಹಿಂಸೆ ಆಗದಂತೆ, ಹೆಚ್ಚು ಸುಳ್ಳನ್ನೂ ಮಾತಾಡದಂತೆ ಇರುವ ವ್ಯಾಪಾರವನ್ನು ಮಾಡಬೇಕು ಅದು ಹೆಚ್ಚು ಪ್ರಾಮಾಣಿಕತೆ ಹಾಗೂ ನ್ಯಾಯಗಳಿಂದ ಕೂಡಿದ ವ್ಯವಹಾರವು ಇರಬೇಕು ಅದರಲ್ಲಿ ಸಂತೋಷವೃತ್ತಿಯನ್ನು ಧರಿಸಬೇಕು ತೀವ್ರ ಲೋಭವನ್ನು ತ್ಯಜಿಸಬೇಕು ದಯಾಧರ್ಮದ ಮಾರ್ಗವನ್ನು ಉಲ್ಲಂಘನ ಮಾಡಬಾರದು. ನ್ಯಾಯಪರವಾದ ನಡತೆಯ ಭಾವನೆಯನ್ನು ಮನದಲ್ಲಿ ಸ್ಥಿರವಾಗಿ ಇಟ್ಟು, ವ್ಯವಹಾರ ಸಾಗಿಸಬೇಕು

ಶಿಲ್ಪ ಕರ್ಮವನ್ನು ಮಾಡುವ ಶೂದ್ರರಿಗೂ ಸಹ ಶ್ರಾವಕರ ವ್ರತಗಳನ್ನು ಸ್ವೀಕರಿಸಲಿಕ್ಕೆ ಬರುತ್ತದೆ. ಅವನು ಅತಿ ನಿಂದ್ಯವಾಗಿರುವ ಕರ್ಮಗಳನ್ನು ತ್ಯಜಿಸಬೇಕು, ಅವುಗಳಲ್ಲಿಯೂ ಯಾವುದನ್ನು ಬಿಡಲಿಕ್ಕೆ ಬರುವದಿಲ್ಲವೋ ಅಂಥದರಲ್ಲಿ ಬಹಳಷ್ಟು ಹಿಂಸೆಯಾಗುವದನ್ನಾದರೂ ಬಿಡಬೇಕು. ಮನಸ್ಸಿನಲ್ಲಿ ಯಾವಾಗಲೂ ದಯೆಯನ್ನು ಸ್ಥಿರವಾಗಿ ಇಟ್ಟುಕೊಳ್ಳಬೇಕು. ಉದ್ದೇಶ ಪೂರ್ವಕವಾಗಿ ಜೀವಗಳ ವಧೆಯು ಆಗುತ್ತದೆ-ಎಂದು ಕಂಡುಬಂದಲ್ಲಿ ಅದನ್ನು ಮಾಡಬಾರದು ದೇವರ ಮಂದಿರ ಕಟ್ಟುವಾಗ, ಪೂಜೆಯನ್ನು ಮಾಡುವಾಗ, ದಾನ ಕೊಡುವಾಗ, ಯಾವಾಗಲೂ ಎಚ್ಚರಿಕೆಯನ್ನು ವಹಿಸಿ, ಕೇವಲ ಧರ್ಮ ಸಾಧನೆಗಾಗಿಯೇ ಈ ಕರ್ಮಗಳನ್ನು ಮಾಡಬೇಕು, ಹಾಗೆಯೇ ಮನಸ್ಸಿನಲ್ಲಿಯೂ ಭಾವಿಸಿರಬೇಕು

ಹಿಂಸೋತ್ಪತ್ತಿಯ ಲಕ್ಷಣಗಳು ಈ ರೀತಿಯಾಗಿವೆ—

ಯತ್ಖಲು ಕಷಾಯಯೋಗಾತ್ಪ್ರಾಣಾನಾಂ ದ್ರವ್ಯಭಾವರೂಪಾಣಾಮ್ ।
ವ್ಯಪರೋಪಣಸ್ಯ ಕರಣಂ ಸುನಿಶ್ಚಿತಾ ಭವತಿ ಸಾ ಹಿಂಸಾ ॥ ೪೩ ॥

ಅರ್ಥ—ಕಷಾಯಗಳ ಸಂಯೋಗದಿಂದ (ರಾಗದ್ವೇಷಗಳಿಂದ) ಇಂದ್ರಿಯ, ಶರೀರ ಮೊದಲಾದ ದ್ರವ್ಯ ಪ್ರಾಣ ಮತ್ತು ಜ್ಞಾನ, ದರ್ಶನ ಮೊದಲಾದ ಭಾವಪ್ರಾಣ ಇವುಗಳ ವಿಯೋಗಗೊಳಿಸುವುದೇ ನಿಶ್ಚಿತವಾಗಿ ಹಿಂಸೆಯೆಂದು ತಿಳಿಯಬೇಕು.

ಭಾವಾರ್ಥ—ರಾಗ-ದ್ವೇಷ ಮೊದಲಾದ ಕಷಾಯಗಳಿಗೆ ವಶವಾಗಿ ದ್ರವ್ಯ ಪ್ರಾಣ ಮತ್ತು ಭಾವ ಪ್ರಾಣಗಳ ವಿಯೋಗ ಮಾಡುವುದು ನಿಜವಾದ ಹಿಂಸೆಯೆನಿಸುವುದು. ಕಷಾಯವಿಲ್ಲದಂಥವರ ಕಡೆಯಿಂದ ಪ್ರಾಣಿಗಳು ಮರಣ ಹೊಂದಿದರೂ ಸಹ ಅವರಿಗೆ ಹಿಂಸೆಯ ಪಾಪವು ತಟ್ಟುವದಿಲ್ಲ ಅಮೃತಚಂದ್ರಾಚಾರ್ಯರು ಹೇಳುತ್ತಾರೆ—

ಅಪ್ರಾದುರ್ಭಾವಃ ಖಲು ರಾಗಾದೀನಾಂ ಭವತ್ಯಹಿಂಸೇತಿ ।
ತೇಷಾಮೇವೋತ್ಪತ್ತಿರ್ಹಿಂಸೇತಿ ಜಿನಾಗಮಸ್ಯ ಸಂಕ್ಷೇಪಃ ॥ ೪೪ ॥

ಅರ್ಥ—ರಾಗದ್ವೇಷಾದಿ ವಿಕಾರಗಳು ಆತ್ಮನಲ್ಲಿ ಹುಟ್ಟದೆ ಇರುವುದು ಅಹಿಂಸೆಯು, ವಿಕಾರಗಳ ಉತ್ಪತ್ತಿಯು ಹಿಂಸೆಯು—ಹೀಗೆ ಜೈನ ಶಾಸ್ತ್ರಗಳ ಸಾರಾಂಶವಿದೆ. ಬಾಹ್ಯದಲ್ಲಿ ಪ್ರಾಣಿಗಳ ಹಿಂಸೆಯಾಗಲಿ, ಆಗದೆ ಇರಲಿ, ನಮ್ಮ ಮನಸ್ಸಿನಲ್ಲಿ ರಾಗದ್ವೇಷಗಳು ಹುಟ್ಟಿದ ಕೂಡಲೇ ಭಾವ ಪ್ರಾಣದ-ಶುದ್ಧ ವಿಚಾರದ-ಘಾತವಾಗುತ್ತದೆ ಅದರಿಂದ ಆತ್ಮಹಿಂಸೆಯು ಆಗುತ್ತದೆ ಆತ್ಮಹಿಂಸೆಯು ಆದವರಿಗೆ ಪರಹಿಂಸೆಯು ನಿಶ್ಚಯವಾಗಿಯೂ ಆಗುವುದು.

ಯುಕ್ತಾಚರಣಸ್ಯ ಸತೋ ರಾಗಾದ್ಯಾವೇಶಮಂತರೇಣಾಪಿ ।
ನ ಹಿ ಭವತಿ ಜಾತು ಹಿಂಸಾ ಪ್ರಾಣವ್ಯಪರೋಪಣಾದೇವ ॥ ೪೫ ॥

ಅರ್ಥ—ಯೋಗ್ಯ ಆಚರಣೆಯುಳ್ಳ ಸತ್ಪುರುಷನಲ್ಲಿ ರಾಗದ್ವೇಷಾದಿ ಕಷಾಯಗಳು ಜನಿಸದೆ ಇದ್ದಾಗ ಅವನಿಂದ ಪ್ರಾಣಘಾತವಾದರೂ ಸಹ ಹಿಂಸೆಯು ಸಂಭವಿಸುವದಿಲ್ಲ

ಭಾವಾರ್ಥ—ಪ್ರಯತ್ನ ಪೂರ್ವಕವಾಗಿ ದಯಾಭಾವವನ್ನು ಧರಿಸಿಕೊಂಡು, ಜಾಗರೂಕತೆಯಿಂದ ಬಾಳುವ ವ್ಯಕ್ತಿಯ ಕೈಯಿಂದ ಅಪ್ಪಿ ತಪ್ಪಿ ಜೀವದ ಘಾತವು ಆದರೂ ಅದರಿಂದ ಹಿಂಸೆಯ ಬಂಧವೂ ಆಗುವದಿಲ್ಲ

ವ್ಯುತ್ಥಾನಾವಸ್ಥಾಯಾಂ ರಾಗಾದೀನಾಂ ವಶಪ್ರವೃತ್ತಾಯಾಮ್ ।
ಮ್ರಿಯತಾಂ ಜೀವೋ ಮಾ ವಾ ಧಾವತ್ಯಗ್ರೇ ಧ್ರುವಂ ಹಿಂಸಾ ॥ ೪೬ ॥

ಅರ್ಥ—ರಾಗದ್ವೇಷಗಳಿಗೆ ಅಧೀನರಾಗಿ ಎಚ್ಚರಿಕೆಯಿಲ್ಲದೆ ಹೋಗುವುದು, ಬರುವುದು, ಏಳುವುದು, ಕೂಡುವುದು, ಇಡುವುದು ಮೊದಲಾದ ಕ್ರಿಯೆಗಳನ್ನು ಮಾಡಲಾಗುತ್ತದೆ. ಆ ಕ್ರಿಯೆಗಳನ್ನು ಮಾಡುವಾಗ ಜೀವದ ಘಾತವಾಗಲಿ, ಆಗದೆ ಇರಲಿ, ಹಿಂಸೆಯು ನಿಶ್ಚಯವಾಗಿ ಮುಂದೆ ಓಡುತ್ತಿರುತ್ತದೆ—ಎಂದು ತಿಳಿಯಬೇಕು

ಭಾವಾರ್ಥ—ಎಚ್ಚರಿಕೆಯಿಂದ ಕ್ರಿಯೆಗಳನ್ನು ಮಾಡದೆ ಇರುವಾಗ—ಆ ಕ್ರಿಯೆಗಳ ವಿಷಯದಲ್ಲಿ ಜಾಗರೂಕತೆಯಿಲ್ಲದಾಗ—ಜೀವಗಳ ಮರಣವು ಅವುಗಳ ಆಯುಷ್ಯಕ್ಕೆ ಅನುಸರಿಸಿ ಆಗಲಿ, ಆಗದೆ ಇರಲಿ, ಅಂಥವರ ಪರಿಣಾಮವು ನಿರ್ದಯವಾಗಿರುವುದರಿಂದ ಅವರಿಗೆ ಹಿಂಸೆಯ ಬಂಧವು ಆಗಿಯೇ ತೀರುತ್ತದೆ.

ಯಸ್ಮಾತ್ಸಕಷಾಯಃ ಸನ್‌ಹಂತ್ಯಾತ್ಮಾ ಪ್ರಥಮಮಾತ್ಮನಾತ್ಮಾನಮ್ ।
ಪಶ್ಚಾಜ್ಜಾಯೇತ ನ ವಾ ಹಿಂಸಾ ಪ್ರಾಣ್ಯಂತರಾಣಾಂ ತು ॥ ೪೭ ॥

ಅರ್ಥ—ಆತ್ಮನಲ್ಲಿ ಕಷಾಯದ ಉತ್ಪತ್ತಿಯಾದೊಡನೆ ಮೊದಲು ಅದು ತನ್ನ ಸತ್ ಪರಿಣಾಮದ ಘಾತವನ್ನು ಮಾಡಿಕೊಳ್ಳುತ್ತದೆ. ಆ ಮೇಲೆ ಅದರಿಂದ ಇತರ ಪ್ರಾಣಿಗಳ ಘಾತವಾಗಲಿ ಅಥವಾ ಬಿಡಲಿ.

ಭಾವಾರ್ಥ—ಆತ್ಮವು ಕಷಾಯದಿಂದ ಕೂಡಿದೊಡನೆಯೇ ಅದರ ಜ್ಞಾನಾನಂದ ವೀತರಾಗ ಸ್ವರೂಪದ ಘಾತವಾಗಿ ಬಿಡುತ್ತದೆ ತರುವಾಯ ಹೊರಗಿನ ಜೀವದ ಘಾತವು ಆದರೇನು? ಆಗದಿದ್ದರೆ ಏನು? ಎರಡೂ ಒಂದೇ ಆಗಿದೆ

ಹಿಂಸಾಯಾಮವಿರಮಣಂ ಹಿಂಸಾಪರಿಣಮನಮಪಿ ಭವತಿ ಹಿಂಸಾ ।
ತಸ್ಮಾತ್ಪ್ರಮತ್ತಯೋಗೇ ಪ್ರಾಣವ್ಯಪರೋಪಣಂ ನಿತ್ಯಮ್ ॥ ೪೮ ॥

ಅರ್ಥ—ಹಿಂಸೆಯ ವಿಷಯದಲ್ಲಿ ವಿರಕ್ತನಾಗದೆ ಇರುವುದು ಮತ್ತು ಹಿಂಸೆಯಲ್ಲಿ ಪ್ರವೃತ್ತನಾಗುವುದು ಇವೆರಡಕ್ಕೂ ಹಿಂಸೆಯೆಂದೇ ಹೇಳಲಾಗಿದೆ ಇದರಿಂದ ಯಾವಾಗಲೂ ಪ್ರಮತ್ತಯೋಗದಿಂದಲೇ ಹಿಂಸೆಯು ಆಗುತ್ತದೆಂದು ನಿಶ್ಚಿತವಾದಂತಾಯಿತು

ಭಾವಾರ್ಥ—ತನ್ನ ಹಾಗೂ ಅನ್ಯರ ಘಾತವಾದೀತು—ಎಂಬುದರ ಬಗ್ಗೆ ಎಚ್ಚರ ತಕ್ಕೊಳ್ಳದೆ ಮನ-ವಚನ-ಕಾಯದ ಪ್ರವೃತ್ತಿಯನ್ನು ಮಾಡುವುದಕ್ಕೆ ಪ್ರಮತ್ತಯೋಗವೆನ್ನುವರು. ಎಲ್ಲಿ ಪ್ರಮತ್ತ ಯೋಗವು ಇರುವುದೋ ಅಲ್ಲಿ ಹಿಂಸೆಯು ನಿಶ್ಚಿತವಾದದ್ದು. ಹಿಂಸೆಯನ್ನು ಮಾಡುವದಿಲ್ಲ, ಆದರೆ ಹಿಂಸೆಯಿಂದ ವಿರಕ್ತನಾಗಿ ಅದರ ತ್ಯಾಗವನ್ನೂ ಮಾಡುವದಿಲ್ಲ; ಇಂಥವನು ಮಲಗಿದ ಬೆಕ್ಕಿನಂತೆ ಯಾವಾಗಲೂ ಹಿಂಸಕನೆನಿಸುತ್ತಾನೆ. ನಿತ್ಯವೂ ಹಿಂಸೆ ಮಾಡುವವನಂತೂ ಹಿಂಸಕನೇ ಇರುವನು. ಹಿಂಸೆಯನ್ನು ಮಾಡುವವ ಹಾಗೂ ಹಿಂಸೆಯನ್ನು ಮಾಡದೆಯೂ ಅದನ್ನು ತ್ಯಜಿಸದವ ಇವರಿಬ್ಬರ ಪರಿಣಾಮಗಳು ಸಮಾನವಾಗಿಯೇ ಇರುತ್ತವೆ. ಅವನಿಗೆ ಹಿಂಸೆಯ ಬಾಹ್ಯನಿಮಿತ್ತವು ಒದಗಲಿ ಅಥವಾ ಒದಗದೆ ಇರಲಿ.

ಸೂಕ್ಷ್ಮಾಪಿ ನ ಖಲು ಹಿಂಸಾ ಪರವಸ್ತುನಿಬಂಧನಾ ಭವತಿ ಪುಂಸಃ ।
ಹಿಂಸಾಯತನನಿವೃತ್ತಿಃ ಪರಿಣಾಮವಿಶುದ್ಧಯೇ ತದಪಿ ಕಾರ್ಯಾ ॥ ೪೯ ॥

ಅರ್ಥ—ಸೂಕ್ಷ್ಮ ಹಿಂಸೆಗೂ ಸಹ ಅನ್ಯವಸ್ತುವು ಕಾರಣವಲ್ಲ ಮನುಷ್ಯನ ಪರಿಣಾಮವು ಹಿಂಸಾ-ರೂಪವಾದುದರಿಂದಲೇ ಹಿಂಸೆಯು ಹೊರಗೆ ಸಂಭವಿಸಿರುತ್ತದೆ. ಬಾಹ್ಯ ಹಿಂಸೆಯಿಂದ—ಬಾಹ್ಯ ವಸ್ತುವಿನ ನಿಮಿತ್ತದಿಂದ—ಸೂಕ್ಷ್ಮ ಹಿಂಸೆಯು ಆಗದೆ ಹೋಗಿದ್ದರೆ ಹೊರಗಿನ ವಸ್ತುಗಳ ತ್ಯಾಗ-ವ್ರತ-ಸಂಯಮಗಳನ್ನಾದರೂ ಏಕೆ ಮಾಡಬೇಕು? ಹೀಗೆ ಕೆಲವರು ಸಂಶಯಗಳನ್ನೂ ಎತ್ತಬಹುದು ಅದಕ್ಕೆ ಸಮಾಧಾನವು ಹೀಗೆ ಇದೆ—ಮನಸ್ಸಿನಲ್ಲಿ ವಿಚಾರ ಬಂದಾಗಲೇ ಹಿಂಸೆ ಸಂಭವಿಸುವದೆಂಬ ಸಂಗತಿಯು ನಿಜವಿದೆ. ಆದರೆ ಆ ಜೀವವು ಹಿಂಸೆಯಾಗುವಂಥ ಸ್ಥಳದಲ್ಲಿ ಹೋಗಿ ನಿಂತ ಮೇಲೆ ಹಿಂಸೆಯಾಗದೆ ಹೇಗೆ ನಿಂತೀತು? ಪರಿಣಾಮದ ಶುದ್ಧತ್ವವು ಉಳಿಯಬೇಕೆಂದು, ಎಲ್ಲಿ ಹಿಂಸೆಯು ಸಂಭವಿಸುವುದೋ ಅಂಥ ಎಲ್ಲ ಸ್ಥಾನಗಳನ್ನೂ ಊಟ, ಕುಡಿಯುವಿಕೆ, ಮಾತು, ವಿಚಾರ, ಆಸನ ಮೊದಲಾದವುಗಳನ್ನೂ ತ್ಯಾಗ ಮಾಡುವುದು ಯೋಗ್ಯವಾಗಿದೆ

ನಿಶ್ಚಯಮಬುದ್ಧ್ಯಮಾನೋ ಯೋ ನಿಶ್ಚಯತಸ್ತಮೇವ ಸಂಶ್ರಯತೇ ।
ನಾಶಯತಿ ಕರಣಚರಣಂ ಸ ಬಹಿಃಕರಣಾಲಸೋ ಬಾಲಃ ॥ ೫೦ ॥[1]

ಅರ್ಥ—ಮೊದಲು ನಿಶ್ಚಯನಯದ ಸ್ವರೂಪವನ್ನು ತಿಳಿಯಬೇಕು. ಅದು ಶುದ್ಧ ಆತ್ಮವು ವಿಷಯ ಕಷಾಯಗಳಿಂದ ಅಲಿಪ್ತವಾಗಿರುತ್ತದೆಂದು ಇರುತ್ತದೆ. ಇದನ್ನು ತಿಳಿದುಕೊಳ್ಳದೆ ಯಾರೇ ಆಗಲಿ "ನಮ್ಮ ಪರಿಣಾಮವು ಕಷಾಯ ರಹಿತವಿದೆ ನಮ್ಮ ಎಲ್ಲ ಪ್ರವೃತ್ತಿಗಳಲ್ಲಿಯೂ ಹಿಂಸೆಯು ಆಗುವುದೇ ಇಲ್ಲ." ಎಂಬ ವಿಚಾರಗಳಿಂದ ಧಾರಾಳವಾಗಿ, ಬೇಕಾದ ಹಾಗೆ ನಡೆಯುವರು ಅಂಥವರ ಮನಸ್ಸಿನಲ್ಲಿ ಹೊರಗಿನ ಆಚರಣೆಯ ವಿಷಯದಲ್ಲಿ ಆದರವು ಉಳಿದಿರುವದಿಲ್ಲ. ಆದರಿಂದ ಅವರು ಇಂದ್ರಿಯಗಳ ಹಾಗೂ ಆಚರಣೆಯ ವಿಷಯದ ನಿಯಮ ನಿರ್ಬಂಧಗಳನ್ನು ನಾಶಮಾಡುವಂಥವರಾಗುತ್ತಾರೆ.

ಪ್ರತ್ಯಕ್ಷ ಹಿಂಸೆಯನ್ನು ಮಾಡದೆಯೂ ಹಿಂಸೆಯ ಬಂಧವಾಗುತ್ತದೆ. ವ್ಯಕ್ತಿಯ ಪರಿಣಾಮವು ಮೂಲದಲ್ಲಿ ರಾಗ-ದ್ವೇಷ ರಹಿತವಾಗಿದ್ದರೆ ಅವನು ಅಯೋಗ್ಯವಾದಂಥ ಭೋಜನ-ಪಾನಾದಿ ಪರಿಗ್ರಹಗಳ ಆರಂಭದಲ್ಲಿ ಪ್ರವೃತ್ತನಾಗುವದಿಲ್ಲ. ಹಿಂಸೆಯಿಂದ ವಿರಕ್ತನಾದವನು ಹಿಂಸೆಯು ಉತ್ಪನ್ನವಾಗುವಂಥ ಕಾರಣಗಳನ್ನೂ ಕೂಡ ತ್ಯಾಗಮಾಡುತ್ತಾನೆ. ಶ್ರೀ ಅಮೃತಚಂದ್ರಾಚಾರ್ಯರ 'ಪುರುಷಾರ್ಥ-ಸಿದ್ಧ್ಯುಪಾಯ'ದಲ್ಲಿ ಹೀಗೆ ಹೇಳಿದೆ ಕೆಲವರು ಹಿಂಸೆಯನ್ನು ಏನೂ ಮಾಡದೆಯೂ ಕೂಡ ಹಿಂಸೆಯಲ್ಲಿ ಪಾಲುಗಾರರಾಗುತ್ತಾರೆ. ಶಸ್ತ್ರಗಳನ್ನು

---

[1] ಈ ಪದ್ಯಗಳನ್ನು "ಪುರುಷಾರ್ಥ ಸಿದ್ಧ್ಯುಪಾಯ"ದಿಂದ ಎತ್ತಿಕೊಡಲಾಗಿದೆ

ಸಿದ್ಧಗೊಳಿಸುವ ಕಂಬಾರರು, ಅವುಗಳನ್ನು ಹದನಗೊಳಿಸುವ ಕಲೆಯನ್ನು ಬಲ್ಲವರು, ಪ್ರತ್ಯಕ್ಷ ಹಿಂಸೆಯನ್ನಂತೂ ಮಾಡುವದಿಲ್ಲ ಆದರೆ ಮೀನವು ಜಾಳಿಗೆಯಲ್ಲಿ ಬೀಳಲಿಕ್ಕೆ ಅಕ್ಕಿಯ ಕಾಳು ಹೇಗೆ ನಿಮಿತ್ತವಾಗುತ್ತದೊ ಹಾಗೆ—ತಂದುಲ ಮತ್ಸ್ಯನ್ಯಾಯ—ಅವರಿಗೆ ಹಿಂಸೆಯ ಫಲವು ಪ್ರಾಪ್ತವಾಗುತ್ತದೆ ಕೆಲವರು ಪ್ರತ್ಯಕ್ಷ ಹಿಂಸೆಯನ್ನು ಮಾಡುತ್ತಿದ್ದರೂ ಅವರಿಗೆ ಅದರ ಫಲವು ದೊರೆಯುವದಿಲ್ಲ ಜಿನಮಂದಿರವನ್ನು ಕಟ್ಟುವಂಥ ಶ್ರಾವಕನಿಗೆ—ಅದರಲ್ಲಿ ಅವನು ಸಾವಧಾನ ಪೂರ್ವಕವಾಗಿದ್ದು, ಹಿಂಸಾಭಾವದಿಂದ ನಿವೃತ್ತನಾಗಿದ್ದು, ಪ್ರವೃತ್ತಿಸುತ್ತಿದ್ದ ಶ್ರಾವಕನಿಗೆ—ಅದರಲ್ಲಿ ಪ್ರತ್ಯಕ್ಷ ತ್ರಸಜೀವಿಗಳ ಹಿಂಸೆಯು ಆಗುತ್ತಿದ್ದರೂ ಆ ಹಿಂಸೆಯ ಫಲವು ಅವನಿಗೆ ಪ್ರಾಪ್ತವಾಗುವದಿಲ್ಲ ಕೆಲವರು ಮಾಡಿದ ಹಿಂಸೆಯು ಅಲ್ಪವಿರುತ್ತದೆ, ಆದರೆ ಅವರ ಪರಿಣಾಮವು ತೀವ್ರವಾಗಿರುತ್ತದೆ ಅದರಿಂದ ಆ ಅಲ್ಪ ಹಿಂಸೆಯ ಫಲವನ್ನೂ ಕೂಡ ಅವರು ತೀವ್ರವಾಗಿ ಭೋಗಿಸಬೇಕಾಗುತ್ತದೆ ಹಲವು ಜನರು ನೇರಿ, ಒಂದು ಹಿಂಸೆಯ ಕಾರ್ಯವನ್ನು ಮಾಡಿದರೆಂದು ತಿಳಿಯುವ ಆದರೆ ಆ ಹಿಂಸೆಯ ಫಲವು ಎಲ್ಲರಿಗೂ ಸಮಾನವಾಗಿ ಲಭಿಸುವದಿಲ್ಲ ಆ ಸಮೂಹದಲ್ಲಿ, ಹಿಂಸೆಯನ್ನು ಮಾಡುವಾಗ ಯಾರ ಪರಿಣಾಮವು ತೀವ್ರವಾಗಿರುತ್ತದೆಯೋ ಅವರಿಗೆ ತೀವ್ರಫಲವು, ಯಾರ ಪರಿಣಾಮವು ಮಂದ, ಮಧ್ಯಮವಾಗಿರುತ್ತವೆಯೋ ಅವುಗಳಿಗನುಸರಿಸಿ ಆ ಫಲಗಳೂ ಮಂದ, ಮಧ್ಯಮಗಳಾಗುತ್ತವೆ. ಕೆಲವರಿಗೆ ಹಿಂಸೆಯ ಕಾರ್ಯವು ಇನ್ನೂ ಮುಂದೆ ಆಗುವದಿದ್ದರೂ ಮೊದಲೇ ಹಿಂಸೆಯ ಪರಿಣಾಮವು ಅವರಲ್ಲಿ ಆದುದರಿಂದ ಅದರ ಫಲವು ಉದಯಕ್ಕೆ ಬಂದು, ರಸವನ್ನು ಕೊಡುತ್ತದೆ ಕೆಲವರಿಗಂತೂ ಹಿಂಸೆಯನ್ನು ಮಾಡುತ್ತಿರುವಾಗಲೇ ಅದರ ಫಲವು ಪ್ರಾಪ್ತವಾಗುತ್ತದೆ. ಒಬ್ಬನು ಇನ್ನೊಬ್ಬನನ್ನು ಕೊಲ್ಲುವಾಗ ಆ ಸಾಯುವ ವ್ಯಕ್ತಿಯ ಏಟಿನಿಂದ ಇವನೂ ಸಾಯುವ-ದುಂಟು ಕೆಲವರಿಗೆ ಮೊದಲು ಮಾಡಿದ ಹಿಂಸೆಯ ಫಲವು ಹಿಂದಿನಿಂದ ಪ್ರಾಪ್ತವಾಗುತ್ತದೆ ಕೆಲವರು ಹಿಂಸೆಗೆ ತೊಡಗುತ್ತಾರೆ. ಆದರೆ ಅವರಿಂದ ಕೆಲವೊಂದು ಕಾರಣಗಳಿಂದ ಹಿಂಸೆಯು ಆಗುವದಿಲ್ಲ ಅಂದರೂ ಅವರಿಗೆ ಹಿಂಸೆಯ ಫಲವು ಪ್ರಾಪ್ತವಾಗಿಯೇ ತೀರುತ್ತದೆ ಒಬ್ಬನು ಇನ್ನೊಬ್ಬನ ಪ್ರಾಣತಕ್ಕೊಳ್ಳುವ ಹಂಚಿಕೆಯನ್ನು ಹಾಕಿರುತ್ತಾನೆ. ಆದರೆ ಅದು ಸಾಧಿಸುವದಿಲ್ಲ. ಅಂದರೂ ಕೊಲೆಯು ಯಾರದು ಆಗುವದಿತ್ತೋ ಅವರಿಗೆ ಈ ಸಂಗತಿಯು ತಿಳಿದು, ಅವರು ತಿರುಗಿ ಇವನ ಪ್ರಾಣವನ್ನೇ ತಕ್ಕೊಂಡು ಬಿಡುತ್ತಾರೆ ಹಿಂಸೆ ಮಾಡುವವನು ಒಬ್ಬನು ಅದರ ಫಲವನ್ನು ಭೋಗಿಸುವವರು ಅನೇಕರು ಇಂಥ ಅವಸ್ಥೆಯೂ ಪ್ರಾಪ್ತವಾಗುತ್ತದೆ ಕಳ್ಳನನ್ನು ವಧೆ ಮಾಡುವ ಚಾಂಡಾಲನು ಒಬ್ಬನಾದರೆ ಅದನ್ನು ನೋಡುವ ಮೋಜುಗಾರ ಜನರು ಹಲವರಿರುತ್ತಾರೆ ಇಂಥಲ್ಲಿ ಒಬ್ಬ ಚಾಂಡಾಲನಿಗೂ ಹಲವು ಜನ ನೋಡುವವರಿಗೂ ಪಾಪಬಂಧವು ಆಗುತ್ತದೆ. ಯುದ್ಧದಲ್ಲಿ ಹಿಂಸೆಯನ್ನು ಮಾಡುವ ಅನೇಕ ಯೋಧರು ಇರುತ್ತಾರೆ. ಆದರೆ ಅದರ ಫಲವನ್ನು ರಾಜನೊಬ್ಬನು ಮಾತ್ರ ಭೋಗಿಸುತ್ತಾನೆ. ಒಂದು ಹಿಂಸಾ ಕೃತ್ಯದಿಂದ ಒಬ್ಬರಿಗೆ ಹಿಂಸೆಯ ಫಲವು ದೊರೆಯುತ್ತಿದ್ದರೆ ಅದೇ ಕೃತಿಯಿಂದ ಇನ್ನೊಬ್ಬರಿಗೆ ಅಹಿಂಸೆಯ ಫಲವು ಪ್ರಾಪ್ತವಾಗು-ತ್ತದೆ ಒಬ್ಬನು ಒಂದು ಜೀವವನ್ನು ಸಂರಕ್ಷಿಸಲು ಯತ್ನಿಸಿರುತ್ತಾನೆ. ಅವನ ಪ್ರಯತ್ನವನ್ನು ಮೀರಿ, ಆ ಜೀವವು ಮರಣಹೊಂದುತ್ತದೆ ಆದರೂ ಅವನು ಅದನ್ನು ರಕ್ಷಿಸಲಿಕ್ಕೆ ಪ್ರಯತ್ನಿಸಿದುದರಿಂದ ಆ ದಯಾಭಾವದ ಪರಿಣಾಮವಾಗಿ ಅವನಿಗೆ ಅಹಿಂಸೆಯ ಫಲವು ದೊರೆಯುತ್ತದೆ ಇನ್ನೊಬ್ಬನ ಭಾವವು ಒಬ್ಬನ ಘಾತಮಾಡಬೇಕೆಂದು ಇರುತ್ತದೆ, ಸಂಕಟದಲ್ಲಿಯೂ ಹಾಕಬೇಕೆಂದಿರುತ್ತದೆ, ಆದರೆ ಆ ವ್ಯಕ್ತಿಯ ಪುಣ್ಯೋದಯದಿಂದ ಇವನಿಂದ ಅವನಿಗೆ ಯಾವ ಸಂಕಟವೂ ಪ್ರಾಪ್ತವಾಗುವದಿಲ್ಲ, ಮರಣವೂ ಒದಗುವದಿಲ್ಲ ತಿರುಗಿ ಬಹಳಷ್ಟು ಲಾಭವಾಯಿತು. ಇದರಲ್ಲಿ ಆ ಘಾತಮಾಡುವ ಇಚ್ಛೆಯುಳ್ಳವನಿಗಂತೂ ಪಾಪಬಂಧವು ಆಗಿಯೇ ತಿರುತ್ತದೆ ಮೊದಲಿನವನ ಪರಿಣಾಮವು ಯಾರಿಗೂ ದುಃಖಕೊಡುವದಿರಲಿಲ್ಲ ಸುಖವನ್ನು ಮಾಡಬೇಕೆಂದು, ರಕ್ಷಿಸಬೇಕೆಂದು ಅವನ ಮನಃಪೂರ್ವಕ ಪ್ರಯತ್ನವಿರುತ್ತದೆ. ಆದರೂ ಇದರಿಂದ ಆ ಸಂರಕ್ಷಿತ ವ್ಯಕ್ತಿಗೆ ದುಃಖವಾದರೂ ಸತ್ತರೂ ಕೂಡ ಸಂರಕ್ಷಕನ ಇಚ್ಛೆಯು ಸುಖವಾಗಲಿ ಎಂದೇ ಇರುವುದರಿಂದ ಪುಣ್ಯಬಂಧವಾಗುತ್ತದೆ

ಇದೇ ಪ್ರಕಾರ, ಜೈನಧರ್ಮವು ಅನೇಕ ದೃಷ್ಟಿಯಿಂದ ವಿಚಾರಮಾಡುತ್ತದೆ. ಇದನ್ನು ಏಕಾಂತ ದೃಷ್ಟಿಯುಳ್ಳವನೂ ಮಿಥ್ಯಾತ್ವಿಯೂ ಆದವನು ತಿಳಿದುಕೊಳ್ಳುವುದು ಕಠಿಣವಿದೆ ಅದಕ್ಕಾಗಿ ಅನೇಕಾಂತ ನಯ ಸಮೂಹವನ್ನು ತಿಳಿದ ಗುರುವಿಗೇನೇ ಶರಣುಹೋಗಲಿಕ್ಕೆ ಬೇಕು. ಭಗವಂತನ ಈ ನಯಚಕ್ರವು ಬಹಳ ತೀಕ್ಷ್ಣವಾಗಿದೆ, ದುರಾಗ್ರಹಿಯೂ ಮಿಥ್ಯಾದೃಷ್ಟಿಯೂ ಆದ ಅನೇಕ ಯುಕ್ತಿವಾದಗಳನ್ನು ನೂರಾರು ತುಂಡುತುಂಡಾಗಿ ಮಾಡಿ ಚೆಲ್ಲುವಂಥದಿರುತ್ತದೆ ಅದಕ್ಕಾಗಿ ಜ್ಞಾನಿಗಳೇ! ವೀತರಾಗ ಭಗವಂತನ ಆಜ್ಞೆಯ ಪ್ರಕಾರ, ಮೊಟ್ಟಮೊದಲು

ನೀವು ಹಿಂಸೆಗೆ ಯೋಗ್ಯವಾದಂಥ ಜೀವದ ಸ್ಥಾನಗಳಾದ ಇಂದ್ರಿಯ ಹಾಗೂ ಶರೀರಗಳ ಜ್ಞಾನವನ್ನು ಮಾಡಿಕೊಳ್ಳಿರಿ. ಹಿಂಸೆಯನ್ನು ಮಾಡಿಸುವಂಥ ಪರಿಣಾಮವು ಯಾವ ಯಾವುವರಿಂದ ಉತ್ಪನ್ನವಾಗುತ್ತದೋ ಅದನ್ನೆಲ್ಲ ತಿಳಿದುಕೊಳ್ಳಿರಿ. ಹಿಂಸೆಯ ಸ್ವರೂಪವನ್ನೂ ತಿಳಿಯಿರಿ. ಹಿಂಸೆಯ ಫಲವು ಏನೇನು ಪ್ರಾಪ್ತವಾದೀತೆಂಬುದನ್ನೂ ವಿಚಾರಮಾಡಿರಿ. ಈ ಪ್ರಕಾರ ಹಿಂಸೆಮಾಡುವವ, ಹಿಂಸೆಗೆ ಒಳಗಾಗುವಂಥದು, ಹಿಂಸೆ ಹಾಗೂ ಹಿಂಸೆಯ ಫಲ ಈ ನಾಲ್ಕನ್ನೂ ಮೊದಲು ಬಹು ಪರಿಶ್ರಮದಿಂದ ಕಷ್ಟಪಟ್ಟು ಚೆನ್ನಾಗಿ ತಿಳಿದುಕೊಳ್ಳಬೇಕು. ಆ ಮೇಲೆ ದೇಶಕಾಲಕ್ಕನುಸರಿಸಿ, ತನ್ನ ಪರಿಣಾಮದ ವಿಚಾರಮಾಡಿ, ಅದು ತನ್ನಿಂದ ಸಾಧ್ಯವೋ ಅಸಾಧ್ಯವೋ ಎಂಬುದನ್ನು ಲಕ್ಷಿಸಿ, ತನ್ನ ಶಕ್ತಿಯನ್ನು ಅಡಗಿಸಿ ಇಟ್ಟುಕೊಳ್ಳದೆ, ಗೃಹಸ್ಥಾಶ್ರಮದಲ್ಲಿ ತನ್ನ ಯೋಗ್ಯತೆಗೆ ಅನುಸಾರವಾಗಿ ಹಿಂಸೆಯನ್ನು ತ್ಯಜಿಸಬೇಕು. ಎಲ್ಲ ಕೆಲಸಗಳನ್ನು ಮಾಡುವಾಗ ದಯಾಭಾವದಿಂದ ಕೂಡಿದವರಾಗಿ, ಬಹಳ ಸಾವಧಾನತೆಯಿಂದ ವರ್ತಿಸಬೇಕು. ಐದು ಪ್ರಕಾರದ ಸ್ಥಾವರ ಜೀವಗಳ ಹಿಂಸೆಯನ್ನು ಶಕ್ಯವಿದ್ದಷ್ಟು ಕಡಿಮೆಮಾಡಿ, ದಯಾಳುಗಳಾಗಿರಿ. ಈ ಪ್ರಕಾರ ಅಹಿಂಸಾಣುವ್ರತದ ಲಕ್ಷಣ ಹೇಳಿದೆ.

ಸಂಕಲ್ಪಹಿಂಸೆಯೊಂದಜಿೂಳಾನ್ ಕಂಡೆಂ ಭವದ ದುಃಖಮುಂಡೆಂ ನೀನ್ ನಿಃ- ।
ಶಂಕತೆಯನಿನಿತುದೇಹಿಗಳಂ ಕೊಂದಪೆ ನರಕದೊಳ್ ನಿವಾರಣೆವಡೆದಯ್ ॥

— ಜನ್ನ–ಯಶೋಧರಚರಿತೆ–ನಾಲ್ಕನೆಯ ಅವತಾರ ೬೧.

ಕೊಲೆಯಂ ಮಾಣ್ಕೊಲ್ವರೊಳ್ಕೂಡದಿರು ಕೊಲಿಸದಿರ್ ಜೀವಸಂಘಾತಮಂ ನಿ-
ರ್ಮಳಸದ್ಧರ್ಮಾನುರಾಗೋನ್ನತ ವಿನುತದಯಾಮೂಲ ಸಮ್ಯಕ್ತ್ವಮಂ ನಿ- ।
ಶ್ಚಳಮಿಂಬಿಂ ತಾಳ್ದು ನೀನೆಂದೆನಗಭಿಮತಮಂ ಪೇಳ್ದನಾ ಕೀರ್ತಿಲಕ್ಷ್ಮೀ-
ನಿಳಯಂ ಯೋಗೀಂದ್ರಹಂಸಂ ಪರಮಜಿನಮತಾಂಬೋಜಿನೀರಾಜಹಂಸಂ ॥

— ಶಾಂತಿನಾಥ–ಸುಕುಮಾರಚರಿತಂ ೬–೫೪.

ಇನ್ನು ಅಹಿಂಸಾವ್ರತದ ಐದು ಅತಿಚಾರಗಳನ್ನು ವಿವರಿಸುತ್ತಾರೆ—

ಛೇದನಬಂಧನಪೀಡನಮತಿಭಾರಾರೋಪಣಂ ವ್ಯತೀಚಾರಾಃ ।
ಆಹಾರವಾರಣಾಪಿ ಚ ಸ್ಥೂಲವಧಾದ್ವ್ಯುಪರತೇಃ ಪಂಚ ॥ ೫೪ ॥ [1]

ಅನ್ವಯಾರ್ಥ—(ಛೇದನಬಂಧನಪೀಡನಂ) ಕಡಿಯುವುದು, ಕಟ್ಟುವುದು, ಕಷ್ಟಕೊಡುವುದು. (ಅತಿಭಾರಾರೋಪಣಂ) ಹೆಚ್ಚು ಭಾರವನ್ನು ಹೇರುವುದು (ಅಪಿ ಚ) ಅದರಂತೆಯೇ (ಆಹಾರವಾರಣಾ) ಆಹಾರಕ್ಕೆ ತಡೆಯನ್ನು ಒಡ್ಡುವುದು ಇವು (ಪಂಚ) ಐದು (ಸ್ಥೂಲವಧಾದ್ವ್ಯುಪರತೇಃ) ಸ್ಥೂಲಹಿಂಸೆಯ ತ್ಯಾಗದ ಅಂದರೆ ಅಹಿಂಸಾಣುವ್ರತದ (ವ್ಯತೀಚಾರಾಃ) ಅತಿಚಾರಗಳು (ಸಂತಿ) ಇರುತ್ತವೆ

ಅರ್ಥ—ಛೇದನವೆಂದರೆ ಮನುಷ್ಯನ ಇಲ್ಲವೆ ತಿರ್ಯಂಚ ಪ್ರಾಣಿಯ ಕಿವಿ, ಮೂಗು ಮೊದಲಾದ ಅವಯವಗಳನ್ನು ಕೊಯ್ಯುವುದು. ಇದು ಛೇದನವೆಂಬ ಮೊದಲನೆಯ ಅತಿಚಾರವಾಗಿದೆ ಮನುಷ್ಯನನ್ನು ಹಗ್ಗ ಮೊದಲಾದವುಗಳಿಂದ ಕಟ್ಟಿ ಒಗೆಯುವುದು, ಸೆರೆಮನೆಯಲ್ಲಿ ಇಡುವುದು, ತಿರ್ಯಂಚ ಪ್ರಾಣಿಗಳನ್ನು ಸ್ಥಿರವಾಗಿ ಕಟ್ಟಿಹಾಕುವುದು, ಪಕ್ಷಿಗಳನ್ನು ಪಂಜರದಲ್ಲಿ ಹಾಕಿ ಇಡುವುದು, ಇವೆಲ್ಲ ಬಂಧನ ಎಂಬ ಎರಡನೆಯ ಅತಿಚಾರದಲ್ಲಿ

[1] ಆಯತವರ್ಮನು ಹೇಳುವದು ಹೀಗೆ—

ಅದಕ್ಕೆ ಛೇದನ, ಬಂಧನ, ಪೀಡನ, ಅತಿಭಾರಾರೋಪಣಾನ್ನಪಾನನಿರೋಧಂಗಳೆಂಬಯ್ದು ಅತಿಚಾರಮಕ್ಕುಂ ಅವರಾಗ ಲೀಯುಮದು ಕೊಲ್ಲದಬ್ರತವೆಂಬ ಕೊತ್ತು ಮೊದಲಾಗೊಡೆಯ ಜೀವ ಕಿವಿ ಮೂಗು ಮೊದಲಾಗೊಡೆಯವಯವಂಗಳಂ ಪೋಳ್ವುದು. ಛೇದನಂ, ಸಂಕಲೆನೇಣ್ಮೊದಲಾಗೊಡೆಯುವರೊಳು ಬಂಧಿಸುವುದು ಬಂಧನಂ, ಬಡಿಗೆ ಚಮ್ಮಟಿಗೆ ಮೊದಲಾಗೊಡೆಯ ವರೊಳ್ ಪಿಡಿಸುವುದುಂ ಪೀಡನಂ, ಅಳವಿಯುಲ್ಲದೆ ಹೊರೆಯಂ ಹೇರಿಸುವುದು [illegible] . . . ಕೊಲಿಸಿಂಗೊಳ್ವುದನ್ನು ಪಾಪಸಿರೋಧವೆಂಬುದಕ್ಕುಂ

ಸಮಾವೇಶವಾಗುತ್ತವೆ ಮನುಷ್ಯರಿಗೂ ತಿರ್ಯಂಚ ಪ್ರಾಣಿಗಳಿಗೂ ಒದೆಯುವುದು, ಗುದ್ದುವುದು, ಕಟ್ಟಿಗೆ, ಬಾರುಕೋಲುಗಳಿಂದ ಹೊಡೆಯುವುದು ಮೂರನೆಯದಾದ ಪೀಡನಾತಿಚಾರವಾಗಿದೆ ಮಾನವನ ಮೇಲೆಯೂ ಪಶುಗಳ ಮೇಲೆಯೂ ಅವುಗಳಿಗೆ ಹೊರಲಾರದಂಥ ಭಾರ ಹೊರಿಸುವುದು. ಅದರಂತೆ ಬಂಡಿ, ಟಾಂಗಾ ಮೊದಲಾದವುಗಳಲ್ಲಿ ಅವು ಎಳೆಯುವದಕ್ಕಿಂತ ಹೆಚ್ಚಿಗೆ ಸಾಮಾನುಗಳನ್ನು ಹೇರುವುದು ಇದು ನಾಲ್ಕನೆಯದಾದ ಅತಿಭಾರಾರೋಪಣವೆಂಬ ಅತಿಚಾರವಾಗಿದೆ ಮನುಷ್ಯನಿಗೂ ಪ್ರಾಣಿಗಳಿಗೂ ತಿನ್ನುವುದಕ್ಕೂ ಕುಡಿಯುವದಕ್ಕೂ ಪ್ರತಿಬಂಧಮಾಡುವುದು ಐದನೆಯದಾದ ಆಹಾರವಾರಣ ಅತಿಚಾರವೆನಿಸುವುದು ಇದಕ್ಕೆ ಅನ್ನಪಾನನಿರೋಧನಾತಿ-ಚಾರವೆನ್ನಬೇಕು ಈ ಪ್ರಕಾರ ಸ್ಥೂಲಹಿಂಸೆಯ ತ್ಯಾಗದ ಐದು ಅತಿಚಾರ—ದೋಷಗಳು—ಇರುತ್ತವೆ ಇವುಗಳನ್ನು ಗೃಹಸ್ಥನು ಬಿಡುವದು ಯೋಗ್ಯವಾಗಿದೆ [ಇಲ್ಲಿ ಮೇರೆಯನ್ನು ಮೀರುವುದು—ಸೀಮೋಲ್ಲಂಘನ ಮಾಡುವುದು—ದೋಷವೆನಿಸುತ್ತದೆ ಈ ಅರ್ಥದಲ್ಲಿ 'ವ್ಯತೀಚಾರ' ಎಂಬ ಪದವನ್ನು ಪ್ರಯೋಗಿಸಲಾಗಿದೆ ಈ ಗ್ರಂಥದಲ್ಲಿ ಇದೇ ಅರ್ಥವನ್ನು ಕೊಡುವ ವ್ಯತಿಕ್ರಮ, ವ್ಯತೀಪಾತ, ವಿಕ್ಷೇಪ, ಅತಿಕ್ರಮಣ, ಅತ್ಯಾಶಿ, ವ್ಯತೀತ, ಅತ್ಯಯ, ಅತಿಗಮ, ವ್ಯತಿಲಂಘನ, ಅತಿಚಾರ ಎಂಬ ಪದಗಳನ್ನೂ ಮುಂದೆ ಪ್ರಯೋಗಿಸಲಾಗಿದೆ [1] ಈ ಎಲ್ಲ ಪದಗಳು ಸಮಾನ ಅರ್ಥವುಳ್ಳವುಗಳಾಗಿವೆ ಸ ಧ]

> ಅತಿಭಾರಾರೋಹಣಮುದ್ಗತಬಂಧಚ್ಛೇದಮನ್ನಪಾನನಿರೋಧಂ ।
> ಕೃತಪೀಡೆಯಿಂದೆ ಹಿಂಸಾವ್ರತಕ್ಕೆ ಪಂಚಪ್ರಕಾರಮಿಂತತಿಚಾರಂ ॥
>
> —ಶಾಂತಿನಾಥ–ಸುಕುಮಾರ ಚರಿತಂ ೬–೧೩.

ಇನ್ನು ಸತ್ಯಾಣುವ್ರತದ ಲಕ್ಷಣ ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

> **ಸ್ಥೂಲಮಲೀಕಂ ನ ವದತಿ ನ ಪರಾನ್ ವಾದಯತಿ ಸತ್ಯಮಪಿ ವಿಪದೇ ।**
> **ಯತ್ತದ್ವದಂತಿ ಸಂತಃ ಸ್ಥೂಲಮೃಷಾವಾದವೈರಮಣಮ್ ॥ ೫೫ ॥** [2]

**ಅನ್ವಯಾರ್ಥ**—(ಯತ್) ಯಾರು (ಸ್ಥೂಲಂ) ಸ್ಥೂಲರೂಪದಲ್ಲಿ (ಅಲೀಕಂ) ಅಸತ್ಯವನ್ನು (ನ ವದತಿ) ಮಾತಾಡುವದಿಲ್ಲವೋ, (ಪರಾನ್) ಎರಡನೆಯವದರಿಂದ (ನ ವಾದಯತಿ) ಮಾತನಾಡಿಸುವದಿಲ್ಲವೋ ಮತ್ತು (ವಿಪದೇ) ಸಂಕಟ ಸಮಯದಲ್ಲಿ (ಸತ್ಯಮಪಿ) ಸತ್ಯವನ್ನು ಸಹ (ನ ವದತಿ) ಮಾತಾಡುವದಿಲ್ಲ ಮತ್ತು (ಪರಾನ್) ಎರಡನೆಯವರಿಂದ (ನ ವಾದಯತಿ) ಮಾತನಾಡಿಸುವದಿಲ್ಲ (ತತ್) ಅದು–ಆ ನಡತೆಯನ್ನು–(ಸಂತಃ) ಸಂತರು–ಸಾಧು ಪುರುಷರು–(ಸ್ಥೂಲಮೃಷಾವಾದವೈರಮಣಂ) ಸ್ಥೂಲ ಅಸತ್ಯ ವಿರತ ಅಥವಾ ಸತ್ಯಾಣುವ್ರತ ಎಂದು (ವದಂತಿ) ಹೇಳುತ್ತಾರೆ

**ಅರ್ಥ**—ಯಾರು ಸ್ಥೂಲವಾಗಿ ಅಸತ್ಯವನ್ನು ಮಾತಾಡುವದಿಲ್ಲವೋ, ಎರಡನೆಯವರಿಂದ ಮಾತಾಡಿಸು-ವುದಿಲ್ಲವೋ ಮತ್ತು ಯಾವುದನ್ನು ಮಾತನಾಡುವುದರಿಂದ ತನಗೂ ಹಾಗೂ ಇತರರಿಗೂ ಸಂಕಟವು ಒದಗುವದೊ ಅಂಥ ಸತ್ಯವನ್ನೂ ಸಹ ಮಾತನಾಡುವದಿಲ್ಲ ಮತ್ತು ಮಾತನಾಡಿಸುವದಿಲ್ಲವೋ ಅವರು ಆಚರಿಸುವ ಈ ನಿಯಮಕ್ಕೆ ಸತ್ಪುರುಷರು ಸ್ಥೂಲ ಅಸತ್ಯದ ತ್ಯಾಗ ಎನ್ನುವರು ಇದಕ್ಕೇನೇ ಸತ್ಯಾಣುವ್ರತವೆಂದು ಹೆಸರಿದೆ. [ಇಲ್ಲಿ

---

1 ಕ್ರಮದಿಂದ ನೋಡಿರಿ—ಸೂತ್ರ ಸಂಖ್ಯೆ ೫೬, ೫೮, ೬೨, ೬೩, ೭೩, ೮೧, ೯೬, ೧೦೫, ೧೧೦, ೧೨೯

2 ಆಯತವರ್ಮನು ಹೇಳುವದು ಹೀಗೆ—

ಪುಸಿನುಡಿಯುದುದುಂ ನುಡಿಯಿಸದುದುಮೊಡಂಬಡದುದುಮದಿಕ ।

ಪುಸಿನುಡಿಯುಂ ಪೆಂಪೊಡರಿಸೆ ತಾನದು ಮುನಿಗಳ ನುಡಿಯಂ ಬರಿದಪ್ಪ ಪುಸಿಯು ತೊರದಿಯುಕ್ಕುಂ ॥

ವಚನ—ಕ್ರೋಧದಿಂದಮಾನುಂ, ಲೋಭದಿಂದಮಾನುಂ, ದ್ವೇಷದಿಂದಮಾನುಂ, ಮಾಯೆಯಿಂದಮಾನುಂ, ಮದದಿಂದ ಮಾನುಂ, ಪ್ರಾಣಿಗಳ್ಗೆ ಸಾವುಮಂ, ನೋವುಮಂ, ನಗೆಯುಮಂ ಮಾಳ್ಪ ಪುಸಿಗಳಂ ನುಡಿಯದುದುಂ, ನುಡಿಯಿಸದುದು-ಮೊಡಂಬಡದುದುಮುಕ್ಕುಮೆರಡನೆಯಣುವ್ರತಂ

'ಸ್ಥೂಲಮಲೀಕಂ' ಸ್ಥೂಲ ಅಸತ್ಯ-ದೊಡ್ಡ ಸುಳ್ಳು-ಎಂದು ಆಚಾರ್ಯರು ಹೇಳಿದ್ದಾರೆ ಇದು ದೊಡ್ಡ ಸುಳ್ಳು ಏಕೆ? ಎಂಬುದಕ್ಕೆ ವಿವರವು ಇಲ್ಲಿ ದೊರೆಯುವದಿಲ್ಲ. ಆದರೆ ಅವುಗಳನ್ನು ಮಾತಾಡಬಾರದು, ಮಾತನಾಡಿಸಲೂ ಬಾರದೆಂದು ಸ್ಪಷ್ಟವಾಗಿ ಹೇಳಲಾಗಿದೆ. ಅದರಿಂದ ಇಲ್ಲಿ ವ್ಯವಹಾರದಲ್ಲಿ ಹೆಚ್ಚಾಗಿ ಯಾವ ಸಂಗತಿಗಳು ದೊಡ್ಡ ದೊಡ್ಡ ಸುಳ್ಳು ಮಾತುಗಳು ಎನಿಸುತ್ತವೆಯೋ ಅವುಗಳನ್ನೆಲ್ಲ ಇದರಲ್ಲಿ ಸಮಾವೇಶ ಮಾಡಬೇಕಾಗುತ್ತದೆ. ಮಾದರಿಗಾಗಿ ಒಂದೆರಡನ್ನು ಉದಾಹರಿಸಬಹುದಾಗಿದೆ ಸತ್ಯ ಮಾತನಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ, ಬುದ್ಧಿ ಪೂರ್ವಕವಾಗಿ ಸುಳ್ಳು ಸಾಕ್ಷಿಯನ್ನು ಹೇಳುವುದು, ಮಧ್ಯಸ್ಥನಾಗಿಯೂ ನ್ಯಾಯಾಧೀಶನಾಗಿಯೂ ಅಸತ್ಯರೂಪದ ನಿರ್ಣಯ ಕೊಡುವುದು, ಧರ್ಮೋಪದೇಶಕನೆಂದು ಸಾರಿ, ಅಧರ್ಮವನ್ನು ಬೋಧಿಸುವುದು-ಇಂಥ ಆಚರಣೆಗಳು ದೊಡ್ಡ ದೊಡ್ಡ ಸುಳ್ಳುಗಳಲ್ಲಿ ಸಮಾವೇಶವಾಗುತ್ತವೆ. ಇನ್ನು ತಿಳುವಳಿಕೆ ಇಲ್ಲದೆಯೂ ವಿಸ್ಮರವಿನಿಂದಲೂ ಒಂದು ಮಾತು ಬಾಯಿಂದ ಹೋದರೆ ಅದು ಸ್ಥೂಲ-ಮೃಷಾವಾದ-ದೊಡ್ಡ ಸುಳ್ಳುಗಾರಿಕೆ-ಎನಿಸುವದಿಲ್ಲ. ಇಲ್ಲಿಯೂ ಅಹಿಂಸಾಣುವ್ರತದ ಲಕ್ಷಣದಲ್ಲಿ ಹೇಳಿದ 'ಸಂಕಲ್ಪಾತ್' ಎಂಬ ಪದದ ಅರ್ಥವು ಹಿನ್ನೆಲೆಯಾಗಿ ಇದೆ. ಅದರಿಂದ ಯಾರಿಗೂ ಹಾನಿಮಾಡದ ವಿಶೇಷ ಉದ್ದೇಶವಿಲ್ಲದ ಅಸತ್ಯ ವಚನಗಳೂ-ಸಾಧಾರಣ ಸುಳ್ಳು ಮಾತುಗಳು-ಮೃಷಾವಾದದಲ್ಲಿ ಸಮಾವೇಶವಾಗುವದಿಲ್ಲ. ಇನ್ನು ಮಾತಿನಂತೆ ಬರಹದ ಮೂಲಕ ಅಸತ್ಯವನ್ನು ಬಳಸುವುದು ಮೃಷಾವಾದದಲ್ಲಿಯೇ ಬರುತ್ತದೆ

ಇಲ್ಲಿ ಆಪತ್ತನ್ನುಂಟುಮಾಡುವಂಥ ಸತ್ಯವನ್ನೂ ಹೇಳಕೂಡದೆಂದು ವಿಧಿಸಿದೆ. ಈ ಮಾತನ್ನು ಮುಖ್ಯ-ವಾಗಿ ಗಮನಿಸಬೇಕು. ಇದರಿಂದ ಎಲ್ಲೆಡೆಗೂ ಅಹಿಂಸೆಗೇನೇ ಪ್ರಾಧಾನ್ಯವಿದೆಯೆಂಬುದು ಸ್ಪಷ್ಟವಾಗುತ್ತದೆ ಈ ವ್ರತಕ್ಕೂ ಕೂಡ ಅಹಿಂಸಾವ್ರತವೇ ಆತ್ಮವಾಗಿದೆ. ಈ ವಿಚಾರವು ಮುಂದಿನ ವ್ರತಗಳಲ್ಲೂ ಕೂಡ ಧ್ವನಿತಗೊಳ್ಳುತ್ತ ಹೋಗಿದೆ ಸ. ಧ ]

ವಿಶೇಷಾರ್ಥ—ಸ್ಥೂಲ ಅಸತ್ಯವನ್ನು ತ್ಯಾಗ ಮಾಡಿದವನು-ಸತ್ಯಾಣುವ್ರತವನ್ನು ಧರಿಸಿದವನು-ಕ್ರೋಧ, ಮಾನ, ಮಾಯಾ ಮತ್ತು ಲೋಭಗಳ ವಶನಾಗಿ ಒಂದು ಜೀವದ ಘಾತವಾಗುವಂತೆಯೂ ಒಬ್ಬರ ಮೇಲೆ ಸಂಕಟ ಬರುವಂತೆಯೂ ಇನ್ನೊಬ್ಬರಿಗೆ ಕಲಂಕ ಹತ್ತುವಂತೆಯೂ ಮಾತಾಡುವುದು ನಿಂದ್ಯವಾಗಿದೆ. ಇದೇ ಪ್ರಕಾರ ತಮ್ಮ ಮಾತಿನಿಂದ ಕೇಳುವವರಲ್ಲಿ ಮಿಥ್ಯಾಶ್ರದ್ಧೆಯು ಹುಟ್ಟುವಂತೆಯೂ ಅವರು ಧರ್ಮದಿಂದ ವಿಮುಖರಾಗುವಂತೆಯೂ ವ್ರತ ಸಂಯಮಗಳನ್ನು ತ್ಯಜಿಸುವಂತೆಯೂ ಶಿಥಿಲಾಚಾರಿಗಳಾಗುವಂತೆಯೂ ಶ್ರದ್ಧೆಯು ಕೆಡುವಂತೆಯೂ ಆಗುವ ಹಾಗೆ ಎಂದೂ ಮಾತನಾಡಕೂಡದು ನಮ್ಮ ಮಾತಿನಿಂದ ಜಗಳ ಹಾಗೂ ಅಬದ್ಧವಾದಗಳು ಹುಟ್ಟುವಂತೆ ಇರಬಾರದು. ಅದರಂತೆ ವಿಷಯಾನುರಾಗವು ಹೆಚ್ಚುವಿಕೆ, ದೊಡ್ಡ ಆರಂಭ ಮಾಡುವ ಪ್ರವೃತ್ತಿಯುಂಟಾಗುವಿಕೆ, ಅನ್ಯರಿಗೆ ಆರ್ತಧ್ಯಾನವು ಉತ್ಪನ್ನವಾಗುವಿಕೆ, ಕಾಮವಾಸನೆಯು ಹುಟ್ಟುವಿಕೆ, ಎರಡನೆಯವರ ಲಾಭದಲ್ಲಿ ಅಡ್ಡಿಯನ್ನು ಒದಗಿಸುವಿಕೆ, ಎರಡನೆಯವರ ಜೀವನ ಸಾಧನೆಯು ನಷ್ಟಗೊಳ್ಳುವಿಕೆಯು, ತನ್ನ ಹಾಗೂ ಅನ್ಯರ ಅಪಕೀರ್ತಿಯು ಆಗುವಿಕೆ-ಇವೇ ಮೊದಲಾದವುಗಳು ಸಂಭವಿಸುವಂಥ ಮಾತುಗಳನ್ನು ಎಂದೂ ತನ್ನ ಬಾಯಿಂದ ಉಚ್ಚರಿಸಕೂಡದು. ಇನ್ನು ತನ್ನೊಡನೆ ಅನ್ಯರ ಸಂಬಂಧವನ್ನು ಕೆಡಿಸುವಂಥ, ಎರಡನೆಯವರ ಮೇಲೆ ಆಪತ್ತಿಯು ಬರುವಂದ, ಅನರ್ಥವಾಗುವಂದ, ದುಃಖ ಒದಗುವಂಥ, ಮರ್ಮಭೇದಕವಾದಂದ, ರಾಜದಂಡವಾಗುವಂಥ, ದ್ರವ್ಯಹಾನಿ-ಯಾಗುವಂಥ, ಸತ್ಯವಚನವಿದ್ದರೂ ಅದನ್ನು ಅಸತ್ಯವೆಂದು ತಿಳಿದು, ಯಾವಾಗಲೂ ಮಾತನಾಡಬಾರದು ಇದರಂತೆಯೇ ತನ್ನ ಬಾಯಿಂದ ಬೈಗಳು, ಹೇಸಿಕೆ ಬರುವಂಥ ಪದಗಳು, ಹೀನ ಕುಲದವರು ಉಚ್ಚರಿಸುವ ಶಬ್ದಗಳು, ಮನಸ್ಸಿಗೆ ಹತ್ತುವಂಥ ಮಾತುಗಳು, ಅನ್ಯರ ಅಪಮಾನವಾಗುವ ವಚನಗಳು, ತಿರಸ್ಕಾರ ಭಾವವುಳ್ಳ ಉಕ್ತಿಗಳು, ಅಹಂಕಾರದ ನುಡಿಗಳು-ಇಂಥವುಗಳನ್ನು ಎಂದೂ ಹೊರಡಿಸಕೂಡದು. ಮಾತನಾಡುವುದೇ ಆದರೆ ಜಿನಸೂತ್ರಕ್ಕೆ ಅನುಸರಿಸಿ ಮಾತನಾಡಬೇಕು. ಅದರಿಂದ ಅನ್ಯರ ಹಾಗೂ ತನ್ನ ಹಿತವಾಗಿರಬೇಕು ಅದು ಸರಳ, ಸ್ಪಷ್ಟ ಮತ್ತು ಸಂಗ್ರಹರೂಪದಲ್ಲಿರಬೇಕು ಮೇಲಾಗಿ ಪ್ರಾಮಾಣಿಕವಾಗಿದ್ದು, ಸಂತೋಷಕರವಾಗಿರಬೇಕು; ಧರ್ಮವನ್ನು ಪ್ರಕಟಗೊಳಿಸುವಂತಿರಬೇಕು. ಇದೇ ಪ್ರಕಾರ ನ್ಯಾಯದಿಂದ ತನ್ನ ಉಪಜೀವಿಕೆಯನ್ನು ಸಾಗಿಸುವ ಹಾಗೂ ಅನಿಂದ್ಯ ವಚನಗಳನ್ನಷ್ಟೇ ಆಡುವ ಗೃಹಸ್ಥನಿಗೆ ಅಸತ್ಯತ್ಯಾಗವೆಂಬ ಎರಡನೆಯ ಅಣುವ್ರತವು ಸಂಭವಿಸುತ್ತದೆ.

ಉಳ್ಳುದನಿಲ್ಲೆಂದೀತಂ ಕಳ್ಳಂ ನುಡಿದಂತೆ ಪುಸಿದ ಪಾಪದ ಫಲದಿಂ-
ದೆಲ್ಲಿಯು ನಿಲ್ಲದೆ ತಾಂ ತಳುವಿಲ್ಲದೆ ಕಣ್ಣೊಡೆದು ದುಃಖಭಾಜನನಾದಂ ।
ವಸುಮತಿಯೊಳ್ ವಿಬುಧರ್ ಭಾವಿಸುವೊಡೆ ನರಕಕ್ಕೆ ಪೋಪ ಪೆರ್ದಾರಿಮಹಾ-
ವ್ಯಸನಕ್ಕೆ ಮೂಮುಟಿಪೊಡೆ ಪುಸಿಯಿಂದಂ ಬಿಟ್ಟು ಪಾತಕಂ ಪೆಟತೊಳವೇ ॥

ನಯಸೇನ-ಧರ್ಮಾಮೃತಂ-೧೧-೧೮೦, ೧೮೧

ಈಗ ಸತ್ಯಾನುವ್ರತದ ಐದು ಅತಿಚಾರಗಳನ್ನು ಹೇಳಲಿಕ್ಕೆ ಸೂತ್ರವನ್ನು ಹೇಳುತ್ತಾರೆ—

ಪರಿವಾದರಹೋಭ್ಯಾಖ್ಯಾ ಪೈಶೂನ್ಯಂ ಕೂಟಲೇಖಕರಣಂ ಚ ।
ನ್ಯಾಸಾಪಹಾರಿತಾಪಿ ಚ ವ್ಯತಿಕ್ರಮಾಃ ಪಂಚ ಸತ್ಯಸ್ಯ ॥ ೫೬ ॥ 1

ಅನ್ವಯಾರ್ಥ—(ಪರಿವಾದ) ನಿಂದೆ-ಬೈಗಳು-ಅವಾಚ್ಯಶಬ್ದ ನುಡಿಯುವದು (ರಹೋಭ್ಯಾಖ್ಯಾ) ಗುಪ್ತ-ವಾಗಿರತಕ್ಕದ್ದನ್ನು ಪ್ರಕಟಿಸುವುದು, (ಪೈಶೂನ್ಯಂ) ಚಾಡಿಹೇಳುವುದು, (ಕೂಟಲೇಖಕರಣಂ) ಮೋಸದ ಬರಹ-ಗಳನ್ನು ಸಿದ್ಧಗೊಳಿಸುವುದು—ಸುಳ್ಳು ಕಾಗದಪತ್ರಗಳನ್ನು ನಿರ್ಮಾಣಮಾಡುವುದು. (ಅಪಿ ಚ) ಇದರಂತೆಯೇ (ನ್ಯಾಸಾಪಹಾರಿತಾ) ಇಡಗಂಟು, ಅಡವು ಮೊದಲಾದ ಇಟ್ಟ ವಸ್ತು, ಧನ ಇತ್ಯಾದಿಗಳನ್ನು ಎತ್ತಿಹಾಕುವುದು. ಇವು (ಪಂಚ) ಐದು (ಸತ್ಯಸ್ಯ) ಸತ್ಯದ-ಸತ್ಯಾಣುವ್ರತದ-(ವ್ಯತಿಕ್ರಮಾಃ) ಅತಿಚಾರಗಳು ಇರುತ್ತವೆ

ಅರ್ಥ—ಬಯ್ಯುವುದು-ನಿಂದಿಸುವುದು, ಮುಚ್ಚಿಡಬೇಕಾದುದನ್ನು ಪ್ರಕಟಿಸುವುದು, ಚಾಡಿಹೇಳುವುದು, ಸುಳ್ಳು ಕಾಗದ ಪತ್ರಗಳನ್ನು ನಿರ್ಮಾಣಮಾಡುವುದು, ಇಡಗಂಟು-ಅಡವು ಇಟ್ಟ ವಸ್ತುಗಳನ್ನು ಎತ್ತಿ ಹಾಕುವುದು—ಇವು ಐದು ಸತ್ಯಾಣುವ್ರತದ ಅತಿಚಾರಗಳಾಗಿವೆ. [ಇಲ್ಲಿ ಉಲ್ಲೇಖಿಸಲ್ಪಟ್ಟ ಐದು ಅತಿಚಾರಗಳಲ್ಲಿ 'ಪರಿವಾದ' ಮತ್ತು 'ಪೈಶೂನ್ಯ'ಗಳ ಸ್ಥಾನದಲ್ಲಿ 'ತತ್ತ್ವಾರ್ಥಸೂತ್ರ'ಕಾರನಾದ ಶ್ರೀ ಉಮಾಸ್ವಾಮಿಯು 'ಮಿಥ್ಯೋಪದೇಶ' ಹಾಗೂ 'ಸಾಕಾರಮಂತ್ರಭೇದ'ಗಳೆಂಬ ಹೆಸರುಗಳನ್ನು ಸೂಚಿಸಿದ್ದಾನೆ. ಆದರೆ ಈ ಹೆಸರುಗಳು ಮೇಲ್ಕಾಣಿಸಿದ ಅತಿಚಾರಗಳ ಪರ್ಯಾಯನಾಮಗಳೆನಿಸುವದಿಲ್ಲ. ಇಷ್ಟೇ ಅಲ್ಲ, ಆಚಾರ್ಯರಲ್ಲಿ ಪರಸ್ಪರ ಭಿನ್ನ ಶಾಸನ ದೃಷ್ಟಿಗಳನ್ನು ಇದು ಪ್ರಕಟಿಸುತ್ತದೆ ಅಲ್ಲದೆ ಹೆಚ್ಚಿನ ಎರಡು ಅತಿಚಾರಗಳನ್ನೂ ಇದು ಸೂಚಿಸುತ್ತದೆ. ಹೀಗಿದ್ದರೂ ರತ್ನಕರಂಡಕದ ಟೀಕೆಯನ್ನು ಬರೆಯುತ್ತ ಶ್ರೀ ಪ್ರಭಾಚಂದ್ರಾಚಾರ್ಯನು 'ಪರಿವಾದ'ವನ್ನು 'ಮಿಥ್ಯೋಪದೇಶ'ವೆಂದೂ 'ಪೈಶೂನ್ಯ'ವನ್ನು 'ಸಾಕಾರಮಂತ್ರಭೇದ'ವೆಂದೂ ಗ್ರಹಿಸಿ ವ್ಯಾಖ್ಯಾನ ಮಾಡಿದ್ದಾರೆ. ಅದರೊಡನೆ ಈ ಹೆಸರುಗಳನ್ನೂ ಸ್ಪಷ್ಟವಾಗಿ ಕಾಣಿಸಿದ್ದಾರೆ 2 ಇದು ವಿಚಾರಣೀಯವಾಗಿದೆ ಯಾಕಂದರೆ ಪರವಾದದ ಪ್ರಸಿದ್ಧ ಅರ್ಥವು ನಿಂದಾಗರ್ಹಾ-ಅಪವಾದ (Blame, abuse) ಎಂದು ಆಗುತ್ತದೆ 3 ಪೈಶೂನ್ಯ ಶಬ್ದವು ಚಾಡಿಹೇಳು-ಹಿಂದೆಮಾತಾಡು-ಹಿಂದೆಹೇಳು

---

1 ಆಯತವರ್ಮನು ಹೇಳುವದು ಹೀಗೆ—

ಅದಕ್ಕೆ ಪರಿವಾದಂ ಸ್ತ್ರೀಪುರುಷರ್ಮೊದಲಾದೊಡೆಯವರೇಕಾಂತದ ನುಡಿಗಳಂ ಪ್ರಕಟಂ ಮಾಡದಿರ್ಪುದು ರಹೋಭ್ಯಾ-ಖ್ಯಾನಂ. ಪೆರರನ್ನರಿಂನರೆಂದು ರಚ್ಚೆಯೊಳು ಬೀದಿಯೊಳು ಪಿಸುಣ್ನುಡಿಯುತಿಪ್ಪುದು ಪೈಶೂನ್ಯಂ ತನ್ನದೊಂದು ಕಾರ್ಯಕ್ಕೆ ಪೆರರಂ ನಂಟರಲ್ಲಿಗವರಂ ಪೆಸರಂ ಕರೆದು ಕಳ್ಳೋಲೆಯನಟ್ಟುವುದು ಕೂಟಲೇಖಕ್ರಿಯೆ ಬಯಿಕೆಗೊಟ್ಟಾತಂ ಮರದು ಪಿರಿದಂ ಕೊಟ್ಟು ಕಿರಿದಂ ಬೇಡಿದನೀತನೆ ಕೊಟ್ಟುಳಿದುದಂ ಬಂಚಿಸುವುದು ನ್ಯಾಸಾಪಹಾರಂ.

2 ಪರಿವಾದೋ ಮಿಥ್ಯೋಪದೇಶೋಽಭ್ಯುದಯನಿಃಶ್ರೇಯಸಾರ್ಥೇಷು ಕ್ರಿಯಾವಿಶೇಷೇಷ್ವನ್ಯಸ್ಯಾನ್ಯಥಾ ಪ್ರವರ್ತನಮಿತ್ಯರ್ಥಃ ।
. . . ಪೈಶೂನ್ಯಂ ಅಂಗವಿಕಾರ-ಭ್ರೂ-ವಿಕ್ಷೇಪಾದಿಭಿಃ ಪರಾಭಿಪ್ರಾಯಂ ಜ್ಞಾತ್ವಾ ಅಸೂಯಾದಿನಾ ತತ್ಪ್ರಕಟನಂ ಸಾಕಾರ-ಮಂತ್ರಭೇದ ಇತ್ಯರ್ಥಃ ॥

3 ಪರಿವಾದಸ್ತು ನಿಂದಾಯಾಂ ವೀಣಾವಾದನವಸ್ತುನಿ । (ಹೇಮಚಂದ್ರಃ)

ಅವರ್ಣಾಕ್ಷೇಪನಿರ್ವಾದಪರೀವಾದಾಪವಾದವತ್ ಉಪಕ್ರೋಶೋ ಜುಗುಪ್ಸಾ ಚ ಕುತ್ಸಾ
ನಿಂದಾ ಚ ಗರ್ಹಣೇ ॥ —ಅಮರಃ

ಪರಿಸರ್ವತೋ ದೋಷೋಲ್ಲೇಖೇನ ವಾದಃ ಕಥನಂ ಅಪವಾದಃ । —ಶಬ್ದಕಲ್ಪದ್ರುಮಃ

ಪರಿವಾದ.—I Blame, Censure, Detraction, Abuse, II Scandal —V S Apte

(Backbiting) ಎಂಬ ಅರ್ಥವನ್ನು ಕೊಡುತ್ತದೆ  ಸೋಮದೇವಸೂರಿಯು ಈ ವ್ರತದ ಅತಿಚಾರಗಳನ್ನು ಹೇಳುವಾಗ ಮಂತ್ರಭೇದ ಮತ್ತು ಪೈಶೂನ್ಯಗಳನ್ನು ಬೇರೆ ಬೇರೆ ಅತಿಚಾರಗಳ ರೂಪದಲ್ಲಿ ಉಲ್ಲೇಖಿಸಿದ್ದಾನೆ.[1] ಇದರಿಂದ ಇವೆರಡೂ ಒಂದೇ ಅಲ್ಲವೆಂಬುದು ಸ್ಪಷ್ಟವಾಗುತ್ತದೆ  ಇಂಥ ಸ್ಥಿತಿಯೇ ಪರಿವಾದ ಮತ್ತು ಮಿಥ್ಯೋಪದೇಶಗಳಲ್ಲಿದೆ  ಪಂಡಿತ ಆಶಾಧರರು ಪರಿವಾದ ಮತ್ತು ಪೈಶೂನ್ಯಗಳನ್ನು ಬಿಟ್ಟು ಮಿಥ್ಯೋಪದೇಶ ಹಾಗೂ ಮಂತ್ರಭೇದಗಳನ್ನು ಅತಿಚಾರ ರೂಪದಲ್ಲಿ ಸ್ವೀಕರಿಸಿದ್ದಾರೆ. ತಮ್ಮ 'ಸಾಗಾರಧರ್ಮಾಮೃತ'ದಲ್ಲಿ ಈ ಸೂತ್ರವನ್ನು ಉದ್ಧರಿಸುತ್ತ ಇದಕ್ಕೆ 'ಅತಿಚಾರಾಂತರವಚನ'ವೆಂದೂ ಸೂಚಿಸಿದ್ದಾರೆ. ಇದರಿಂದಲೂ ಪರಿವಾದ ಮತ್ತು ಪೈಶೂನ್ಯವೆಂಬ ಹೆಸರಿನ ಅತಿಚಾರಗಳು ಮಿಥ್ಯೋಪದೇಶಾದಿಗಳಿಂದ ಭಿನ್ನವೆಂದು ಗೊತ್ತಾಗುತ್ತದೆ. ಮತ್ತು ಅವು ಆಚಾರ್ಯ ಸಮಂತಭದ್ರರ ಶಾಸನದೊಡನೆ ಸಂಬಂಧಿಸಿದವುಗಳಾಗಿವೆ. ಉಳಿದ ಮೂರೂ ಅತಿಚಾರಗಳು ಎರಡೂ ಗ್ರಂಥಗಳಲ್ಲಿ ಸಮಾನವಾಗಿವೆ  ಸ. ಧ.]

ವಿಶೇಷಾರ್ಥ—ಪರಿವಾದವೆಂಬುದು ಸುಳ್ಳುಪದೇಶವಾಗಿದೆ  ಸ್ವರ್ಗಮೋಕ್ಷಕ್ಕೆ ಕಾರಣವಾಗದಂಥ ಸುಳ್ಳು ಚಾರಿತ್ರವನ್ನು ಉಪದೇಶಮಾಡುವುದು ಪರಿವಾದ ಎಂಬ ಹೆಸರಿನ ಅತಿಚಾರವಾಗಿದೆ. ರಹೋಭ್ಯಾಖ್ಯಾ ಎಂಬುದು ಗುಪ್ತ ಸಂಗತಿಯನ್ನು ಪ್ರಸಿದ್ಧಮಾಡುವದನ್ನು ಸೂಚಿಸುತ್ತದೆ  ಯಾರಾದರೂ ತಮ್ಮ ಗುಪ್ತ ಸಂಗತಿಯೊಂದನ್ನು ನಮಗೆ ಹೇಳಿದ್ದರೆ ಅದನ್ನು ನಾವು ಇನ್ನೊಬ್ಬರಿಗೆ ಹೇಳುವುದು, ಅದನ್ನು ಪ್ರಚಾರಮಾಡುವುದು, ಮತ್ತು ಸ್ತ್ರೀಪುರುಷರ ಏಕಾಂತದೊಳಗಿನ ಕ್ರಿಯೆಯನ್ನು ಕಂಡು ಅನ್ಯರಿಗೆ ಹೇಳುವುದು, ಅವರ ಮಾತುಗಳನ್ನು ಕೇಳಿ ಇನ್ನೊಬ್ಬರಿಗೆ ಹೇಳುವುದು, ಇವೇ ಮೊದಲಾದವುಗಳಿಗೆ ರಹೋಭ್ಯಾಖ್ಯಾತಿಚಾರಗಳೆಂದು ಹೇಳುವರು. ಪೈಶೂನ್ಯವೆಂದರೆ ಚಾಡೀ ಹೇಳುವುದು. ಒಬ್ಬರ ಕೊರತೆಗಳನ್ನು ತಿಳಿದುಕೊಂಡು, ಅವರನ್ನು ತೊಂದರೆಯಲ್ಲಿ ಹಾಕುವದಕ್ಕೆ ಇನ್ನೊಬ್ಬರಿಗೆ ಅವುಗಳನ್ನೆಲ್ಲ ಹೇಳುವುದು ಪೈಶೂನ್ಯಾತಿಚಾರವಾಗಿದೆ  ಕೂಟಲೇಖಕರಣವೆಂದರೆ ಸುಳ್ಳುಕಾಗದ ಪತ್ರಗಳನ್ನೂ ಆಯುವ್ಯಯ ಲೆಖ್ಖವನ್ನೂ ಬರೆಯುವುದು ಹಾಗೂ ಬರೆಯಿಸುವದು. ಅಲ್ಲದೆ ಒಬ್ಬ ಸಜ್ಜನನನ್ನು ಅಪವಾದ ಹೊರಿಸಿ, ಅವನನ್ನು ಜನರಲ್ಲಿ ಲೇಖನ ಮೊದಲಾದವುಗಳಿಂದ ಅಪಮಾನಗೊಳಿಸುವುದು  ಮಾತಿನಿಂದಲೂ ಇಂಥ ಅಪಪ್ರಚಾರಮಾಡುವುದು. ಇನ್ನು ನ್ಯಾಸಾಪಹಾರವೆಂದರೆ ಇಡುಗಂಟನ್ನು ಎತ್ತಿಹಾಕುವುದು. ಯಾರಾದರೂ ನಮ್ಮ ಹತ್ತರ ವಿಶ್ವಾಸದಿಂದ ದ್ರವ್ಯ, ಆಭರಣ, ಬೆಲೆಯುಳ್ಳ ಅರಿವೆ ಮೊದಲಾದವುಗಳನ್ನು ಇಟ್ಟು, ತಿರುಗಿ ಬೇಡುವಾಗ ಮರೆತು ಕಡಿಮೆ ಬೇಡಿದರೆ ಅಷ್ಟನ್ನೇ ಕೊಟ್ಟು ಉಳಿದವುಗಳನ್ನು ಕೊಡದೆ ಇರುವುದು. ಇದು ನ್ಯಾಸಾಪಹಾರ ಅತಿಚಾರ-ದೋಷವೆನಿಸುತ್ತದೆ  ಈ ಪ್ರಕಾರ ಸ್ಥೂಲಅಸತ್ಯತ್ಯಾಗ ಅಣುವ್ರತಕ್ಕೆ ಇವು ಐದು ಅತಿಚಾರಗಳು ಇರುತ್ತವೆ  ಇವುಗಳನ್ನು ಕಳೆದುಕೊಂಡಷ್ಟು ವ್ರತವು ಶುದ್ಧವಾಗುತ್ತದೆ

ಕಠಿಣ ಸಾಧ್ಯವಾದ ಮಾನವ ಜನ್ಮದ ಮಹತಿ. ಈ ವಿಷಯದಲ್ಲಿ ವ್ರತಿಕರು ತಮ್ಮ ಮನಸ್ಸಿನಲ್ಲಿ ಯಾವಾಗಲೂ ಮುಂದಿನ ವಿಚಾರಗಳನ್ನು ತರುತ್ತ ಇರಬೇಕು  "ಈ ಜೀವವು ಅನಾದಿ–ಅನಂತ ಕಾಲದಿಂದ ನಿಗೋದದಲ್ಲಿ ವಾಸಮಾಡಿದ್ದಾಗಿದೆ. ಕರ್ಮಧರ್ಮಸಂಯೋಗದಿಂದ ಅಲ್ಲಿಂದ ಬಿಡುಗಡೆ ಹೊಂದಿದೆ. ತರುವಾಯ ಪಂಚಸ್ಥಾವರ ಜೀವಗಳಲ್ಲಿ ಲೆಕ್ಕವಿಲ್ಲದಷ್ಟು ವರ್ಷ ಪರಿಭ್ರಮಣ ಮಾಡಿತು. ತಿರುಗಿ ನಿಗೋದದಲ್ಲಿ ಹೋಗಿ ಅನಂತಾನಂತ ಕಾಲ ಸುತ್ತಾಡಿದೆ  ಹಲವು ಸಲ ಏಕೇಂದ್ರಿಯ ಜೀವಗಳಲ್ಲಿ ಜನ್ಮತಕ್ಕೊಂಡಿದೆ. ಅಲ್ಲಿ ಇದಕ್ಕೆ ನಾಲಿಗೆ ಎಂಬ ಇಂದ್ರಿಯವೇ ಇರಲಿಲ್ಲ  ಮುಂದೆ ಎರಡಿಂದ್ರಿಯ, ಮೂರು ಇಂದ್ರಿಯ, ನಾಲ್ಕಿಂದ್ರಿಯ, ಸಂಜ್ಞಿ, ಅಸಂಜ್ಞಿ ಪಂಚೇಂದ್ರಿಯಗಳಲ್ಲಿ ಹುಟ್ಟಿ, ನಾಲಿಗೆಯು ಪ್ರಾಪ್ತವಾದರೂ ಶಬ್ದದ ಉಚ್ಚಾರ ಮಾಡುವದಕ್ಕೂ ಕೇಳಲಿಕ್ಕೂ ಸಾಮರ್ಥ್ಯವಿರಲಿಲ್ಲ. ಅನಂತಾನಂತ ಕಾಲವು ಕಳೆದ ತರುವಾಯ ಮಾನವ ಜನ್ಮವು ಪ್ರಾಪ್ತವಾಯಿತು  ಮಾತನಾಡುವ ಶಕ್ತಿಯು ಲಭಿಸಿತು  ಆದರೆ ನೀಚ ಕುಲದಲ್ಲಿ ಜನಿಸಿದುದರಿಂದ ಅಯೋಗ್ಯವಾದ ಹಿಂಸೆಯ ಮಾತುಗಳು, ಅಸತ್ಯ ನುಡಿಗಳು, ತನಗೂ ಅನ್ಯರಿಗೂ ಸಂತಾಪ ಹುಟ್ಟುವ ಭಾಷೆಗಳು ಇವೇ ಮೊದಲಾದವುಗಳನ್ನು ಬಾಯಿಂದ ಆಡಿ, ಈ ಜೀವವು ಬಹಳಷ್ಟು ಪಾಪವನ್ನು ಕಟ್ಟಿಕೊಂಡಿತು. ಅದರಿಂದ ದುರ್ಗತಿಗೂ ಹೋಗಬೇಕಾಯಿತು. ಈ ಪ್ರಕಾರ

---

[1] "ಮಂತ್ರಭೇದಃ ಪರೀವಾದಃ ಪೈಶೂನ್ಯಂ ಕೂಟಲೇಖನಮ್ ।
ಮುಧಾ ಸಾಕ್ಷಿಪದೋಕ್ತಿಶ್ಚ ಸತ್ಯಸ್ಯೈತೇ ವಿಘಾತಕಾಃ ॥"  —ಸೋಮದೇವಸೂರಿ.

ತನ್ನ ಮಾತಿನಿಂದ ತನ್ನ ಘಾತವನ್ನೇ ಮಾಡಿಕೊಂಡಿತು. ಇರಲಿ! ಆದದ್ದು ಆಗಿ ಹೋಯಿತು! ಈಗ ಯಾವುದೋ ಪೂರ್ವ ಪುಣ್ಯದಿಂದ ಮನುಷ್ಯ ಜನ್ಮವು ಪ್ರಾಪ್ತವಾಗಿದೆ ಅದಕ್ಕಾಗಿ ಒಳ್ಳೆಯ ಹಾಗೂ ಸವಿಯಾದ ಮಾತುಗಳನ್ನು ಆಡಲಿಕ್ಕೆ ಪ್ರಯತ್ನಮಾಡಬೇಕು ಉಣ್ಣುವುದು-ಕುಡಿಯುವುದು, ನೋಡುವುದು-ಭೋಗಿಸುವುದು, ಕೇಳುವುದು-ಮಾಡುವುದು ಮೊದಲಾದವುಗಳನ್ನು ನಾಯಿ, ಬೆಕ್ಕುಗಳೂ ಕೂಡ ಮಾಡುತ್ತವೆ. ಯಾಕೆಂದರೆ ಕಣ್ಣು, ಮೂಗು, ಕಿವಿ, ಬಾಯಿ ಮೊದಲಾದ ಇಂದ್ರಿಯಗಳು ಎಲ್ಲ ಪ್ರಾಣಿಗಳಿಗೂ ಇವೆ ಈ ಕೆಲಸಗಳನ್ನು ನಾವೂ ಮಾಡಿದೆವೆಂದಾಗ ಏನೂ ವಿಶೇಷ ಮಾಡಿದಂತಾಗಲಿಲ್ಲ

**ಮಾತಿನ ಮಹತ್ವ**— ಮಾನವ ಜನ್ಮದಲ್ಲಿ ಏನಾದರೂ ಶ್ರೇಷ್ಠವಾಗಿದ್ದರೆ ಅದು ಮಾತುಗಾರಿಕೆಯಾಗಿದೆ. ಯಾರು ಮಾತನ್ನರಿಯುವದಿಲ್ಲವೋ ಅವರು ತಮ್ಮ ಆಯುಷ್ಯವನ್ನೇ ಹಾಳು ಮಾಡಿಕೊಂಡರೆಂದು ತಿಳಿಯಬೇಕು. ಅದಕ್ಕಂತಲೇ 'ಮಾತು ಬಲ್ಲವ ಮಾಣಿಕ ತಂದ, ಮಾತರಿಯದವ ಜಗಳ ತಂದ' ಎಂದು ಹೇಳುವರು. 'ಮಾತೊಂದು ಜ್ಯೋತಿ' ಎಂದು ಹಿರಿಯರ ನುಡಿಗಳಿವೆ. ಪಶುಯೋನಿಯಲ್ಲಿ ವಚನಗಳನ್ನು ಉಚ್ಚರಿಸುವ ಶಕ್ತಿಯು ಇರುವದಿಲ್ಲ. ಅದರಿಂದ ಆತ್ಮನ ಅನೇಕ ಗುಣ-ದೋಷಗಳು ಸ್ಫುಟಗೊಳ್ಳುವದಿಲ್ಲ ಪಂಡಿತ-ಮೂರ್ಖ, ಧರ್ಮಾತ್ಮಾ-ಪಾಪಿ, ರಾಜ-ರಜಕ, ಕುಲೀನ-ಅಕುಲೀನ, ಸದಾಚಾರಿ-ಹೀನಾಚಾರಿ, ಸಂತುಷ್ಟ-ಲೋಭಿ, ಧರ್ಮವಾಸನಾಯುಕ್ತ-ಧರ್ಮವಾಸನಾರಹಿತ, ಸಮ್ಯಗ್ದೃಷ್ಟಿ-ಮಿಥ್ಯಾದೃಷ್ಟಿ, ಸಂಸ್ಕೃತ-ಅಸಂಸ್ಕೃತ, ಒಳ್ಳೆಯ ಗೆಳೆತನದಿಂದ ರಾಜಸಭೆಯಲ್ಲಿರುವವ-ಗ್ರಾಮ್ಯ ಜನರ ಸಂಗತಿಯಿಂದ ಹಳ್ಳಿಯಲ್ಲಿರುವವ, ವ್ಯವಹಾರ ಚತುರ-ವ್ಯವಹಾರ ತಿಳಿಯದವ, ಹಸ್ತ ಕೌಶಲ್ಯ ಬಲ್ಲವ-ಹಸ್ತ ಕೌಶಲ್ಯ ಅರಿಯದವ, ಉದ್ಯೋಗಿ-ಆಲಸಿ, ಶೂರ-ಅಂಜುಬುರುಕ, ದಾನವೀರ-ಜಿಪುಣ, ದಯವಂತ-ನಿರ್ದಯಿ, ಮಹಂತ-ದೀನ, ಕ್ಷಮಾಶೀಲ-ಕ್ರೋಧವುಳ್ಳವ, ವಿನಯಶೀಲ-ಮದೋನ್ಮತ್ತ, ಸರಳ-ಕಪಟಿ, ವಕ್ರಪರಿಣಾಮಿ ಇವೇ ಮೊದಲಾದ ವ್ಯವಹಾರಗಳು ಪಶುಯೋನಿಯಲ್ಲಿ ಆಗುವದಿಲ್ಲ. ಅಂತಲೇ ಮಾನವ ಜನ್ಮದ ಸಫಲತೆಯನ್ನು ಮಾಡಿಕೊಳ್ಳುವ ಇಚ್ಛೆಯಿದ್ದರೆ ದುರ್ಲಭವಾದ ಸತ್ಯವಚನವನ್ನು ನುಡಿಯುವ ನಿಶ್ಚಯ ಮಾಡಿರಿ."

**ಸತ್ಯದ ಮಹಿಮೆ**— ವಚನಗಳ ಮುಖಾಂತರ ಸತ್ಯಾರ್ಥವನ್ನು ಸಾರಿಯೇ ಭಗವಾನ್ ಅರಹಂತನು ಮೂರು ಲೋಕಗಳಿಂದ ವಂದನೀಯನೆನಿಸಿದನು. ಅವನು ಎಲ್ಲ ಜಗತ್ತಿಗೂ ಮೋಕ್ಷಮಾರ್ಗವನ್ನು ತೋರಿಸಿದ್ದಾನೆ ವಚನದ ಪ್ರಭಾವದಿಂದಲೇ ಅನೇಕ ಜೀವಗಳ ಮಿಥ್ಯಾತ್ವಾದಿ ಮಲವನ್ನು ಇಲ್ಲದಂತೆ ಮಾಡಿ, ಅಜರವೂ ಅಮರವೂ ಆದ ಮೋಕ್ಷಪದದ ಪ್ರಾಪ್ತಿಯನ್ನು ಭಗವಂತನು ಮಾಡಿಕೊಟ್ಟಿರುವನು ಪಂಚಪರಮೇಷ್ಠಿಗಳಲ್ಲಿಯೂ ಕೂಡ ವಚನರೂಪದ ಉಪಕಾರದಿಂದಲೇ ಅರಿಹಂತರಿಗೆ ಪ್ರಥಮ ಸ್ಥಾನವು ಪ್ರಾಪ್ತವಾಗಿದೆ ನಾವು ಅವರಿಗೇ ಮೊದಲು ವಂದಿಸುತ್ತೇವೆ. ಜ್ಞಾನಿಯೂ ವೀತರಾಗಿಯೂ ಆದವರ ವಚನದಿಂದ ಸ್ವರ್ಗ, ನರಕವೇ ಮೊದಲಾದ ಮೂರು ಲೋಕಗಳ ಪ್ರತ್ಯಕ್ಷ ಜ್ಞಾನವು ಆಗುತ್ತದೆ. ಮಾತಿನೊಳಗಿನ ಸತ್ಯನಿಷ್ಠೆಯ ಪ್ರಭಾವದಿಂದ ಈ ಪಂಚಮ ಕಾಲದಲ್ಲಿ ಧರ್ಮಪ್ರವೃತ್ತಿಯು ಇನ್ನೂ ಕಂಡು ಬರುತ್ತದೆ

**ಮಧುರ ಮಾತಿಗೆ ಕ್ರಯ ಕೊಡಬೇಕಾಗಿಲ್ಲ.** ಉಜ್ವಲ, ವಿನಯಶೀಲ, ಪ್ರಿಯವಾದಂಥ ವಚನ ರೂಪ ಪುದ್ಗಲ ಪರಮಾಣುಗಳಿಂದ ಈ ಮೂರು ಲೋಕವೆಲ್ಲ ತುಂಬಿ ಹೋಗಿದೆ ಇಂಥ ಮಾತುಗಳನ್ನು ಆಡಲಿಕ್ಕೆ ಯಾವ ಬೆಲೆಯನ್ನೂ ಕೊಡಬೇಕಾಗಿಲ್ಲ. ಯಾರಾದರೂ ಏನಾದರೂ ಕೇಳಿದರೆ ಅವರಿಗೆ ಸವಿಯಾದ ಮಾತಿನಲ್ಲಿ ಉತ್ತರ ಕೊಡುವುದರಿಂದ ನಮ್ಮ ದೇಹಕ್ಕೆ ವೇದನೆ ಏನೂ ಆಗುವದಿಲ್ಲ ನಮ್ಮ ನಾಲಿಗೆ, ಕುತ್ತಿಗೆ, ಬಾಯಿಯ ಒಳಭಾಗಗಳು ಸವಿ ಮಾತಿನಿಂದ ಸವೆದು ಹೋದುದನ್ನು ನಾವೆಲ್ಲಿಯೂ ಕೇಳಿಲ್ಲ ಅಂದ ಮೇಲೆ ಎಲ್ಲ ಪ್ರಾಣಿಗಳಿಗೂ ಹಿತವಾಗುವಂಥ ಸವಿಮಾತುಗಳನ್ನು ಏಕೆ ಮಾತಾಡಬಾರದು? ಇದಕ್ಕೆ ಉತ್ತರವೆಂದು ಯಾವಾಗಲೂ ಕೆಟ್ಟ ನುಡಿಗಳನ್ನು ಆಡಿ, ತಮ್ಮ ವಾಣಿಯನ್ನು ಭ್ರಷ್ಟಮಾಡಗೊಡಲಿಕ್ಕೆ ಬಂದೀತೇನು?

**ಅಸತ್ಯದ ಪ್ರಚಾರದಿಂದಲೇ ಮಿಥ್ಯಾತ್ವವು ಹೆಚ್ಚುತ್ತದೆ.** ಅಸತ್ಯ ವಚನದ ಪ್ರಭಾವದಿಂದಲೇ ಮಿಥ್ಯಾದೇವರ ಆರಾಧನೆಯೂ ವೇದ ಮೊದಲಾದ ಗ್ರಂಥಗಳಲ್ಲಿಯ ಯಜ್ಞಯಾಗ ಮೊದಲಾದವುಗಳು ಮಾಂಸ ಭಕ್ಷಣವೇ ಮೊದಲಾದ ಕೆಟ್ಟ ಕೆಲಸಗಳನ್ನು ಮಾಡುವ ಪ್ರವೃತ್ತಿಯೂ ಉಂಟಾಗುತ್ತವೆ ಸುಳ್ಳು ಶಾಸ್ತ್ರಗಳ ರಚನೆ, ಅನೇಕ ಪ್ರಕಾರದ ಅಸತ್ಯ ಮತಗಳು, ನರಕ-ತಿರ್ಯಂಚಾದಿ ಯೋನಿಗಳಲ್ಲಿ ಸುತ್ತುವುದು, ಅದಕ್ಕೆ ಕಾರಣವಾದ ಆಚಾರ-ವಿಚಾರ, ಇವೆಲ್ಲ ಅಸತ್ಯ ವಚನಗಳ ಪ್ರಚಾರದಿಂದಲೇ ಪ್ರಚಲಿತವಾಗಿವೆ ಹೆಚ್ಚಿಗೇನು? ಇದೇ ಅಸತ್ಯ

ವಚನದಿಂದ ನಮ್ಮ ಮನೆಯಲ್ಲಿಯೂ ಕೂಡ ಅನೇಕ ಪ್ರಕಾರದ ಜಗಳ, ವಿತಂಡವಾದ, ಪರಸ್ಪರವೈರ, ಕೊಲ್ಲುವುದು, ಹೊಡೆಯುವುದು, ಸಿಟ್ಟು, ಹೆದರಿಕೆ, ಸಂತಾಪ, ಅಪಮಾನ ಮೊದಲಾದವುಗಳು ಉತ್ಪನ್ನವಾದುದು ಪ್ರತ್ಯಕ್ಷ ಕಂಡುಬರುತ್ತದೆ ಒಟ್ಟಿನಲ್ಲಿ ಅಪ್ರತೀತಿ ಅಥವಾ ಅವಿಶ್ವಾಸ ಮತ್ತು ದುಃಖ ಇವುಗಳಿಗೆ ಮೂಲ ಕಾರಣವು ಅಸತ್ಯ ವಚನವೇ ಆಗಿದೆ. ಅಸತ್ಯ ವಚನದ ಪ್ರಭಾವದಿಂದಲೇ ನೀಚ ಕುಲದಲ್ಲಿ ಹುಟ್ಟಿ, ಮೇಲಿಂದ ಮೇಲೆ ಕೆಟ್ಟ ವಚನಗಳನ್ನು ಆಡುವ ಪ್ರಸಂಗ ಒದಗುತ್ತದೆ ಇದರಿಂದಲೇ ಮುಂದೆ ಅನೇಕ ಜನ್ಮಗಳಲ್ಲಿ ಬಡತನ, ಮೂಕತನ, ಕಿವುಡತನ, ದೀನತನ ಮೊದಲಾದವುಗಳು ಪ್ರಾಪ್ತವಾಗುತ್ತವೆ. ಅಸತ್ಯ ವಚನವು ಎಲ್ಲ ದುಃಖಗಳಿಗೂ ಮೂಲವೆಂದು ತಿಳಿದು, ಕೂಡಲೇ ಬಿಟ್ಟುಕೊಡಬೇಕು

ಸತ್ಯ ವಚನದ ಪ್ರಭಾವದಿಂದ ಜಗದಲ್ಲಿ ಮಾನ್ಯತೆಯು ಹೆಚ್ಚುತ್ತದೆ. ಇಷ್ಟೇ ಅಲ್ಲ, ಕ್ರಮದಿಂದ ಎಲ್ಲ ದೇವ ಮನುಷ್ಯರ ಮೇಲೆಯೂ ಆಜ್ಞೆ ಮಾಡುವಂಥ ಇಂದ್ರ, ಚಕ್ರವರ್ತಿ ಪದಗಳೂ ಸಹ ಲಭಿಸುತ್ತವೆ. ಅದಕ್ಕೂ ಮುಂದೆ ಹೋದಾಗ ಸಂಪೂರ್ಣ ಶ್ರುತಜ್ಞಾನದ ಜ್ಞಾನವುಳ್ಳ ಗಣಧರ ಪದವಿಯೂ ಸಹ ಸತ್ಯದ ಪ್ರಭಾವದಿಂದಲೇ ದೊರೆಯುತ್ತದೆ ಅದರಿಂದ ಅಸತ್ಯದ ತ್ಯಾಗ ಮಾಡುವುದರಲ್ಲಿಯೇ ಜೀವದ ಪರಮ ಕಲ್ಯಾಣವಿದೆ. ಈ ವಿಷಯದಲ್ಲಿ ಶ್ರೀ ಅಮೃತಚಂದ್ರಸೂರಿಯವರು ತಮ್ಮ 'ಪುರುಷಾರ್ಥಸಿದ್ಧ್ಯುಪಾಯ'ದಲ್ಲಿ ಹೀಗೆ ಹೇಳಿದ್ದಾರೆ.

> ಹೇತೌ ಪ್ರಮತ್ತಯೋಗೇ ನಿರ್ದಿಷ್ಟೇ ಸಕಲವಿತಥವಚನಾನಾಮ್ ।
> ಹೇಯಾನುಷ್ಠಾನಾದೇರನುವದನಂ ಭವತಿ ನಾಸತ್ಯಮ್ ॥ ೧೦೦ ॥
> ಭೋಗೋಪಭೋಗಸಾಧನಮಾತ್ರಂ ಸಾವದ್ಯಮಕ್ಷಮಾ ಮೋಕ್ತುಮ್ ।
> ಯೇ ತೇಪಿ ಶೇಷಮನೃತಂ ಸಮಸ್ತಮಪಿ ನಿತ್ಯಮೇವ ಮುಂಚಂತು ॥ ೧೦೧ ॥

ಅರ್ಥ—ಭಗವಂತನು ಎಲ್ಲ ಅಸತ್ಯವಚನಗಳಿಗೂ ಪ್ರಮತ್ತಯೋಗವೇ ಕಾರಣವೆಂದು ಹೇಳಿದ್ದಾನೆ. ಕಷಾಯದ ಆಧೀನನಾಗಿ, ಮಾತನಾಡುವುದಕ್ಕೆ ಪ್ರಮತ್ತಯೋಗವೆನ್ನುವರು. ಬಿಡಬೇಕಾದ ಪದಾರ್ಥಗಳಿಗೆ ತ್ಯಾಜ್ಯವೆಂದೂ ಸ್ವೀಕರಿಸಬೇಕಾದ ವ್ರತಾದಿ ಪದಾರ್ಥಗಳಿಗೆ ಗ್ರಾಹ್ಯವೆಂದೂ ಅನ್ನುವುದು ಅಸತ್ಯವಚನವಾಗದು. ಗೃಹಸ್ಥರು ತಮ್ಮ ಭೋಗೋಪಭೋಗದ ಸಾಧನಗಳಿಗೆ ಸಂಬಂಧಿಸಿದ ಮಾತುಗಳಲ್ಲಿ ಅಲ್ಪ ಸ್ವಲ್ಪ ದೋಷಗಳಾಗುವ-ದನ್ನು ತ್ಯಾಗಮಾಡುವದಕ್ಕೆ ಸಾಧ್ಯವಾಗಲಿಕ್ಕಿಲ್ಲ ಆದರೆ ನಿರರ್ಥಕವಾಗಿ ಪಾಪಬಂಧವಾಗುವಂಥ ಉಳಿದ ಎಲ್ಲ ಅಸತ್ಯ ವಚನಗಳನ್ನಾದರೂ ತ್ಯಜಿಸಬೇಕು

ಭಾವಾರ್ಥ—ಗೃಹಸ್ಥರು ವ್ಯವಹಾರಮಾಡುತ್ತಿರುವಾಗ ತನ್ನ ಭೋಗೋಪಭೋಗಗಳ ಸಾಧನೆಗಳನ್ನು ಸಂಪಾದಿಸುವದಕ್ಕಾಗಿ ದೋಷಪೂರ್ಣವಾದ ಮಾತುಗಳನ್ನೂ ಆಡುತ್ತಾರೆ ಅವರಿಗೆ ಇವುಗಳನ್ನು ಪೂರ್ಣ ತ್ಯಾಗ ಮಾಡಲಿಕ್ಕೆ ಬರಲಿಕ್ಕಿಲ್ಲ. ಆದರೆ ಇದರಿಂದ ಪಾಪಬಂಧವಿದೆಯೆಂಬ ತಿಳುವಳಿಕೆಯನ್ನು ಇಟ್ಟುಕೊಂಡು, ಶಕ್ಯವಾದಷ್ಟು ದೋಷಪೂರ್ಣ ಮಾತುಗಳನ್ನು ಆಡುವ ಪ್ರಸಂಗದಿಂದ ದೂರವಿರಲಿಕ್ಕೆ ಯತ್ನಿಸಬೇಕು ಹಾಗೆಯೇ ಉಳಿದ ಬಹು ಆರಂಭ, ಬಹು ಪರಿಗ್ರಹ, ದುರ್ಧ್ಯಾನ, ಸ್ವಪರಸಂತಾಪಕಾರಕ, ಈ ಪ್ರಕಾರದ ನಿಂದ್ಯ ಹಾಗೂ ಸದೋಷ ಭಾಷಣದ ತ್ಯಾಗವನ್ನಾದರೂ ಅವಶ್ಯ ಮಾಡಲಿಕ್ಕೆ ಬೇಕು ಈ ಪ್ರಕಾರ ಸ್ಥೂಲ ಅಸತ್ಯ ತ್ಯಾಗ ಎಂಬ ಹೆಸರಿನ ಎರಡನೆಯ ಅಣುವ್ರತದ ಸ್ವರೂಪವಿದೆ

> ನಾನಾ ಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋಭ್ಯಾ-
> ಖ್ಯಾನಂ ನ್ಯಾಸಾಪಹಾರಕ್ರಮಮನುಗತಿಯಿಂ ಕೂಟಲೇಖಕ್ರಿಯಾ ವಿ- ।
> ಜ್ಞಾನಂ ಸತ್ಯವ್ರತಕ್ಕಿಂತಿವು ಪರಿವಿಡಿಯಿಂದಯ್ದತೀಚಾರಮಕ್ಕುಂ
> ಜೈನೇಂದ್ರಶ್ರೀಮತಾನುಕ್ರಮವಿರಚನೆಯಿಂ ನಂಬು ನೀನಂಬುಜಾಕ್ಷೀ ॥

—ಶಾಂತಿನಾಥ-ಸುಕುಮಾರ ಚರಿತಂ ೬-೧೪.

ಮೂರನೆಯದಾದ ಸ್ಥೂಲ ಚೌರ್ಯತ್ಯಾಗ ಅಣುವ್ರತದ ವಿವರಣೆಗಾಗಿ ಸೂತ್ರ ಹೇಳುತ್ತಾರೆ–

ನಿಹಿತಂ ವಾ ಪತಿತಂ ವಾ ಸುವಿಸ್ಮೃತಂ ವಾ ಪರಸ್ವಮವಿಸೃಷ್ಟಮ್ ।
ನ ಹರತಿ ಯನ್ನ ಚ ದತ್ತೇ ತದಕೃಶಚೌರ್ಯಾದುಪಾರಮಣಮ್ ॥ ೫೭ ॥ [1]

ಅನ್ವಯಾರ್ಥ—(ಯತ್) ಯಾವುದು (ನಿಹಿತಂ) ಇಟ್ಟದ್ದು (ಪತಿತಂ) ಬಿದ್ದದ್ದು (ಸುವಿಸ್ಮೃತಂ) ಮರೆತದ್ದು (ವಾ) ಅದವಾ (ಅವಿಸೃಷ್ಟಂ) ಕೊಡದೆ ಇದ್ದದ್ದು (ಪರಸ್ವಂ) ಎರಡನೆಯವರ ದ್ರವ್ಯವು–ಇರುವುದೋ ಅದನ್ನು—(ನ ಹರತಿ) ಹರಣಮಾಡದೆ ಇರುವುದು (ಚ) ಮತ್ತು (ನ ದತ್ತೇ) ಎರಡನೆಯವರಿಗೆ ಕೊಡದೆ ಇರುವುದು (ತತ್) ಅದು (ಅಕೃಶಚೌರ್ಯಾತ್) ಸ್ಥೂಲ ಕಳವಿನಿಂದ (ಉಪರಮಣಂ) ವಿರಕ್ತನಾಗುವುದು—ಎನಿಸುತ್ತದೆ.

ಅರ್ಥ—ಕೆಳಗೆ ಕಾಣಿಸಿದ ರೀತಿಯಿಂದ ಬಂದ ದ್ರವ್ಯವನ್ನು—ಅದು ಸ್ವಲ್ಪವಿರಲಿ, ಹೆಚ್ಚಿರಲಿ–ತಾನು ತಕ್ಕೊಳ್ಳಕೂಡದು, ಅನ್ಯರಿಗೂ ತಾನು ಕೊಡಬಾರದು ಯಾರಾದರೂ ಹುಗಿದಿಟ್ಟ ದ್ರವ್ಯ, ದೇವಾಲಯದಲ್ಲಿಯ ಧನ, ಮನೆಯಲ್ಲಿ ಯಾರಾದರೂ ಇಟ್ಟ ದ್ರವ್ಯ, ಅಂಥ ದ್ರವ್ಯ ಹೊರಗೆ ಎಲ್ಲಿ ಇಟ್ಟಿದ್ದರೂ ಸಹ, ನಮ್ಮ ಹತ್ತಿರ ಅನಾಮತವೆಂದು ಇಟ್ಟ ಸಂಪತ್ತು, ನಮ್ಮ ಹಾಗೂ ಅನ್ಯರ ಮನೆಯಲ್ಲಿ ನಮಗೆ ತಿಳಿಯದಂತೆ ಯಾರಾದರೂ ಇಟ್ಟು ಹೋದ ಪದಾರ್ಥ, ಊರು–ದಾರಿ–ವನ–ಅಡವಿಗಳಲ್ಲಿ ಒಗೆದುಹೋದ ಜೀನಸು, ನಮ್ಮಲ್ಲಿ ಅನ್ಯರು ಇಟ್ಟು ಮರೆತ ದ್ರವ್ಯ, ಲೆಕ್ಕದಲ್ಲಿ ಕಣ್ಣು ತಪ್ಪಿ ಯಾರಾದರೂ ಕಡಿಮೆ ಬೇಡುವ ದುಡ್ಡು, ನಮ್ಮ ಮನೆಯಲ್ಲಿ ಯಾರಾದರೂ ಮರೆತು ಹೋದ ಜೀನಸು, ಕೊಡ-ಕೊಳ್ಳುವಾಗ ಎಣಿಸಲಿಕ್ಕೆ ತಪ್ಪಿ ಉಳಿದಂಥ ರೂಪಾಯಿ, ಮೊಹರು, ಆಭರಣ, ಅರಿವೆ ಇತ್ಯಾದಿ ದ್ರವ್ಯಗಳು. ಇಂಥ ಸಂದರ್ಭಗಳಲ್ಲಿ ಪ್ರಾಮಾಣಿಕವಾಗಿ ನಡೆಯುವುದಕ್ಕೆ ಸ್ಥೂಲ ಚೌರ್ಯತ್ಯಾಗ ಅಣುವ್ರತವೆನ್ನುವರು

ವಿಶೇಷ ವಿಚಾರ—[ಇಲ್ಲಿ 'ಪರಸ್ವಂ' ಮತ್ತು ಅದರ ವಿಶೇಷಣವಾದ 'ಅವಿಸೃಷ್ಟಂ' ಹಾಗೂ 'ಹರತಿ' ಕ್ರಿಯಾಪದಗಳನ್ನು ನಾವು ಮುಖ್ಯವಾಗಿ ಗಮನಿಸಬೇಕು 'ಪರಸ್ವ'ವೆಂದರೆ ಅನ್ಯರ ಒಡವೆ, ಸಂಪತ್ತು ಇದಕ್ಕೆ ಪರಧನ, ಪರದ್ರವ್ಯಗಳೆಂದೂ ಹೆಸರು. ಒಂದು ಪದಾರ್ಥವು ಆ ಕಾಲದಲ್ಲಿ ಯಾರು ಅದರ ಒಡೆಯರಾಗಿರುತ್ತಾರೆಯೋ ಅವರ ಆಜ್ಞೆ, ಇಚ್ಛೆ, ಅನುಮತಿಗಳಿಲ್ಲದೆ ತಕ್ಕೊಳ್ಳುವುದಕ್ಕೆ 'ಅವಿಸೃಷ್ಟ' ಎಂದು ಹೇಳಲಾಗುತ್ತದೆ. ಇದಕ್ಕೆ 'ಅದತ್ತ'ವೆಂದೂ ಹೇಳಲಾಗುವದು. ಇದರಲ್ಲಿ ವ್ಯಕ್ತ, ಅವ್ಯಕ್ತ ಸಾಮಾನುಗಳೆರಡೂ ಸಮಾವೇಶವಾಗುತ್ತವೆ. 'ಹರತಿ' ಎಂಬ ಕ್ರಿಯಾಪದವು ಎತ್ತಿಹಾಕುವುದು, ಅನೀತಿಯಿಂದ ಗ್ರಹಿಸುವುದು–ಎಂಬುದನ್ನು ಹೇಳುತ್ತದೆ ಇದೇ ದೃಷ್ಟಿಯಿಂದ ಮುಂದಿನ 'ದತ್ತೆ' ಎಂಬ ಕ್ರಿಯಾಪದವು ಅನಧಿಕೃತ ರೀತಿಯಿಂದ ಕೊಟ್ಟಿದ್ದೆಂದು ಅರ್ಥವುಳ್ಳದ್ದಾಗಿದೆ. ಇದರಿಂದ ಒಡೆಯರಿಲ್ಲದ, ಆ ಕಾಲಕ್ಕೆ ಅದರ ಒಡೆತನವು ಪ್ರತ್ಯಕ್ಷ, ಅಪ್ರತ್ಯಕ್ಷ ರೀತಿಯಿಂದ ಯಾರಿಗೂ ಸಲ್ಲದಿದ್ದರೆ, ಒಡೆಯರ ಅಪೇಕ್ಷೆಯನ್ನು ತಿಳಿಯುವುದು ಸಾಧ್ಯವಿಲ್ಲದಿದ್ದರೆ ಅಂಥ ಧನವನ್ನು ತಕ್ಕೊಳ್ಳಲಿಕ್ಕೆ ಅಡ್ಡಿಯಿಲ್ಲವೆಂದು ತೋರುತ್ತದೆ. ಯಾರೂ ನಮಗೆ ಕೊಡದಿದ್ದರೂ ಉತ್ತರಾಧಿಕಾರದ ಸಂಬಂಧದಿಂದ ಬರುವ ಧನವನ್ನು ಸ್ವೀಕರಿಸಲಿಕ್ಕೆ ಈ ವ್ರತವು ಅಡ್ಡಿಯಾಗುವದಿಲ್ಲ ಅದರಂತೆ ನಮ್ಮ ಮನೆ, ಹಿತ್ತಲು ಮೊದಲಾದ ಸ್ಥಳಗಳಲ್ಲಿ ಅಗಿಯುವಾಗ ಹತ್ತಿದ ದ್ರವ್ಯವನ್ನು ತಕ್ಕೊಳ್ಳಲಿಕ್ಕೆ ಯಾವ ಅಡ್ಡಿಯೂ ಇಲ್ಲ ಅದರ ಒಡೆತನವು ಆಯಾ ಸ್ಥಳದ ಒಡೆಯರಿಗೇ ಸಲ್ಲುತ್ತದೆ

ಇಲ್ಲಿ ಸ್ಥೂಲ ಚೌರ್ಯತ್ಯಾಗದ ವಿಷಯದಲ್ಲಿ ಇನ್ನೊಂದು ಮಾತನ್ನು ತಿಳಿಯುವ ಅವಶ್ಯಕತೆಯಿದೆ. ತೀರ ಅತ್ಯಲ್ಪ ಬೆಲೆಯ ಜೀನಸನ್ನು ಅದರ ಒಡೆಯನ ಅಪ್ಪಣೆಯಿಲ್ಲದೆ ಸ್ವೀಕರಿಸಲಿಕ್ಕೆ ಅಡ್ಡಿಯಿಲ್ಲ ಕೈಯನ್ನು ಶುದ್ಧಗೊಳಿಸಿಕೊಳ್ಳಲಿಕ್ಕೆ ಇನ್ನೊಬ್ಬರ ನೆಲದ ಮಣ್ಣನ್ನು ತಕ್ಕೊಳ್ಳುವುದು, ಬಾವಿಯೊಳಗಿನ ನೀರನ್ನು ಕೇಳದೆ ಕುಡಿಯುವುದು, ಹಲ್ಲುಗಳನ್ನು ತಿಕ್ಕಲಿಕ್ಕೆ ಇನ್ನೊಬ್ಬರ ಗಿಡದ ಕಡ್ಡಿಯನ್ನು ತೆಗೆಯುವುದು–ಇಂಥ ಸಂಗತಿಗಳು ಕೊಡದೆ ತಕ್ಕೊಳ್ಳುವುದಿಲ್ಲ ಎಂಬ ವ್ರತಕ್ಕೆ ವಿಹಿತವೆನಿಸುವುದಿಲ್ಲ. ಇನ್ನು ನಮ್ಮ ಸಂಕಲ್ಪವಿರದೆ ಅನ್ಯರ ವಸ್ತುವು ನಮ್ಮಲ್ಲಿ ಬಂದು ಬಿಟ್ಟರೆ

---

1 ಆಯತವರ್ಮನು ವಿವರಿಸುವದು ಹೀಗೆ—

ಕಂದ ॥ ಪರಧನಮಂ ಪೆರರಿಂದಂ ಪರಿಹರಿಸಲ್ಪಡದುದಂ ಪೆರಗ್ಗೆ ೕಯದುದಾ- ।
ದರದಿಂ ತಾಂ ಕೊಳ್ಳದುದುಂ ಸಿರುತಂ ಪಿರಿದಪ್ಪ ಕಳವನೊಲ್ಲದ ನಿಯಮಂ ॥

ವಚನ—ಕೆಯ್ಯೊಳಾಮಂ ಬಟ್ಟೆಯೊಳಾನುಂ ಪೆರರ ಕೆಸವರಮಂ ಬೀಳ್ಪಟ್ಟುದುಮಂ ಮರದುದುಮಂ ಪೋದುದುಮಂ ಮೇಣ್ ಕಂಡದಂ ತಾಂ ಕೊಳ್ಳದುದುಂ, ಪೆರರ್ಗೆ ಕುಡದುದುವೊಡಂಬಡದುದುಂ ಮೂರನೆಯಣುಬ್ರತಂ

ಅವಕಲ್ಕು ವ್ರತದ ಬಾಧೆಯಿಲ್ಲ. ಅಹಿಂಸಾಣುವ್ರತದ ವಿವರಣೆಯಲ್ಲಿ 'ಸಂಕಲ್ಪಾತ್' ಎಂದು ಪ್ರಯೋಗಿಸಿದ ಪದದ ಪುನರಾವೃತ್ತಿಯು ಇಲ್ಲಿಯೂ ಆಗುತ್ತದೆ. ಸ. ಧ.] ಈ ವಿಷಯದಲ್ಲಿ ಶ್ರೀ ಕಾರ್ತಿಕೇಯಸ್ವಾಮಿಗಳು ಹೀಗೆ ಹೇಳಿದ್ದಾರೆ—

ಜೋ ಬಹುಮುಲ್ಲಂ ವತ್ಥುಂ ಅಪ್ಪಮುಲ್ಲೇಣ ಣೇವ ಗಿಣ್ಹೇದಿ ।
ವೀಸರಿಯಂ ಪಿ ಣ ಗಿಣ್ಹದಿ ಲಾಹೇ ಥೋವೇ ಹಿ ತೂಸೇದಿ ॥ ೩೩೫ ॥

ಅರ್ಥ—ಸ್ಥೂಲ ಕಳ್ಳತನದ ತ್ಯಾಗ ಮಾಡಿದಂಥವರು ಹೆಚ್ಚು ಬೆಲೆಯುಳ್ಳ ವಸ್ತುವನ್ನು ಅಲ್ಪ ಬೆಲೆಯಲ್ಲಿ ಕೊಳ್ಳಕೂಡದು. ಯಾವ ವಸ್ತುವನ್ನು ಪೇಟೆಯಲ್ಲಿ ಒಯ್ದು ಮಾರಿದಾಗ ಒಂದು ರೂಪಾಯಿ ಇಪ್ಪತ್ತೈದು ನಯೆಪೈಸೆ ಬರುವುದೋ ಅದನ್ನು ನಮ್ಮ ಕಡೆಗೆ ತಂದಾಗ ನಾವು ಲೋಭಿಗಳಾಗಿ ಒಂದು ರೂಪಾಯಿಗೇನೇ ಕೊಳ್ಳಬಾರದು. ಹೀಗೆ ಕೊಂಡರೆ ಅಲ್ಪ ಬೆಲೆಯಲ್ಲಿ ವಸ್ತುವನ್ನು ಕೊಂಡಂತೆ ಆಗುತ್ತದೆ. ಎರಡನೆಯವರು ಮರೆತ ವಸ್ತುವನ್ನೂ ತಾನು ತಕ್ಕೊಳ್ಳಕೂಡದು ಅಜ್ಞಾನಿಯೂ ಬಡವನೂ ಆದವನ ವಸ್ತುವು ಸ್ವಲ್ಪ ಬೆಲೆಯಲ್ಲಿ ದೊರೆಯಬಹುದೆಂಬ-ದೊರೆತರೆ ಒಳ್ಳೆಯದೆಂಬ-ವಿಚಾರವನ್ನು ಸಹ ಮನಸ್ಸಿನಲ್ಲಿ ತರಬಾರದು. ಅಲ್ಪ ಲಾಭದಲ್ಲಿಯೇ ಸಂತೋಷವುಳ್ಳವನಾಗಬೇಕು.

ಭಾವಾರ್ಥ—ವ್ಯಾಪಾರದಲ್ಲಿ ಸ್ವಲ್ಪ ಲಾಭವಾದರೂ ಸಹ ಸಂತೋಷವೃತ್ತಿಯುಳ್ಳವರಾಗಬೇಕು. ಹೆಚ್ಚಿನ ಆಸೆಯನ್ನು ಇಡಬಾರದು. ಈ ರೀತಿಯಿಂದ ನಡೆಯುವವರಿಗೆ ಸ್ಥೂಲಚೌರ್ಯತ್ಯಾಗ ಅಣುವ್ರತವು ಸಿದ್ಧಿಸುತ್ತದೆ.

ಊರಡವಿ ಬಟ್ಟೆ ಬೆಟ್ಟಂ ಮೊದಲಾದವರೊಳು ಬಿರ್ದುದು ಕೆಟ್ಟುದು ಮೊದಲಾದ ।
ಪೆರರೊಡವೆಯಂ ಕೊಳ್ಳದುದು ಕಳಲಾಗದೆಂಬ ಮೂರನೇ ಅಣುವ್ರತವಕ್ಕುಂ ॥

—ಶ್ರೀಮಾಘನಂದಿ-ಶಾಸ್ತ್ರಸಾರ ಸಮುಚ್ಚಯ, ಪುಟ ೧೪೨.

ಸ್ಥೂಲಚೌರ್ಯತ್ಯಾಗ ಅಣುವ್ರತದ ಅತಿಚಾರಗಳನ್ನು ಹೇಳಲಿಕ್ಕೆ ಸೂತ್ರ ಹೇಳುತ್ತಾರೆ—

**ಚೌರಪ್ರಯೋಗಚೌರಾರ್ಥಾದಾನವಿಲೋಪಸದೃಶಸನ್ಮಿಶ್ರಾಃ ।**
**ಹೀನಾಧಿಕವಿನಿಮಾನಂ ಪಂಚಾಸ್ತೇಯೇ ವ್ಯತೀಚಾರಾಃ[1] ॥ ೫೮ ॥ [2]**

ಅನ್ವಯಾರ್ಥ—(ಚೌರಪ್ರಯೋಗ) ಕಳ್ಳರನ್ನು ಕಳವಿನ ಕೆಲಸದಲ್ಲಿ ಸ್ವತಃ ಪ್ರವೃತ್ತಿಸುವುದು, ಇನ್ನೊಬ್ಬರ ಮುಖಾಂತರ ಪ್ರೋತ್ಸಾಹಿಸ ಹಚ್ಚುವುದು, ಕಳ್ಳರ ಕಳವುತನವನ್ನು ಹೊಗಳುವುದು, ಚೌರ್ಯ ಕಾರ್ಯದಲ್ಲಿ ಸಹಾಯಕನಾಗುವುದು. (ಚೌರಾರ್ಥಾದಾನ) ಗೊತ್ತಿದ್ದೂ ಕಳವಿನ ಜೀನಸನ್ನು ಕೊಳ್ಳುವುದು (ವಿಲೋಪ) ಅನ್ಯರ ಸಂಪತ್ತಿಯನ್ನು ನಷ್ಟಗೊಳಿಸುವುದು-ಬೆಂಕಿ ಹಚ್ಚುವುದು-ವಿಷ ಹಾಕುವುದು-ರಾಜ್ಯದ ಆರ್ಥಿಕ ಕಾನೂನುಗಳನ್ನು ಮುರಿಯುವುದು (ಸದೃಶಸನ್ಮಿಶ್ರ) ಒಂದೇ ಮಾದರಿಯ ಪದಾರ್ಥಗಳನ್ನು ಕೂಡಿಸಿ ಮಾರುವುದು—

---

[1] 'ವ್ಯತೀಪಾತಾಃ' ಎಂದೂ ಪಾಠಾಂತರವಿದೆ.

[2] ಆಯತವರ್ಮನು ಹೇಳುವದು ಹೀಗೆ—

ಅದಕ್ಕೆ ಚೋರಪ್ರಯೋಗ, ಚೌರಾರ್ಥಾದಾನ, ವಿಲೋಪನಂ, ಪ್ರತಿರೂಪಕ ವ್ಯವಹಾರಂ, ಹೀನಾಧಿಕಮಾನೋನ್ಮಾನಮೆಂ-ದತಿಚಾರಮಕ್ಕುಂ ಅವನಾಗಲಿಯ್ಯದುದು ಕಳೆದ ಬ್ರತಮೆಂಬುದಕ್ಕುಮಲ್ಲಿ ಕಳ್ಳರೊಳು ಬೆರಸುವುದುಮವರ್ಗೆ ಬಿಯ್ಯಮಂ ಕೊಟ್ಟವಗೆ ಕಳ್ದೀಯುವೆಂಬುದುಮವರೊಳು ನಂಟತನಂಗೊಳ್ವುದುಂ ಚೋರಪ್ರಯೋಗಂ. ಆಂ ಪ್ರಯೋಗಿಸಿದೆನುಮಿಲ್ಲೆ ಮೊದಂ-ಬಟ್ಟನುಮಿಲ್ಲೆನಲ್ಲೆಂದು ಕಳ್ದು ತಂದು ಕಳ್ಳನೊಡವೆಯಂ ಕೊಳ್ವುದು, ಚೋರಾರ್ಥದಾನಂ. ಪೆರರ ಕಸವರಂಗಳಂ ಸೂರೆಗೊಳ್ವುದು ವಿಲೋಪನಂ. ಕುಪ್ಪದೊಳೆಣ್ಣೆಯನುಪ್ಪಿನೊಳ್ಗಲಂ ಪೊನ್ನೊಳು ಬೆಳ್ಳಿಯಂ ಬೆರಸಿ ಮತ್ತಮನೇಕ ಕೃತ್ರಿಮಂಗಳಂ ಮಾಡಿ ವ್ಯವಹರಿಸುವುದು ಪ್ರತಿರೂಪ ವ್ಯವಹಾರಂ ಅಳೆವುದು ಮಾನಂ ತೂಗುವುದುನ್ಮಾನಂ ಮತ್ತಾಯೆರಡರೊಳಂ ತಾಂ ಬರಿದ-ರೊಳ್ಕೊಂಡು, ಕಿರಿದರೊಳ್ಕೊಡುವುದು ಹೀನಾಧಿಕಮಾನೋನ್ಮಾನಂ.

ಹೆಚ್ಚಿನ ದರದ ಜೀನಸಿನಲ್ಲಿ ಕಡಿಮೆ ಬೆಲೆಯ ಸಾಮಾನು ಕೂಡಿಸಿ, ಹೆಚ್ಚಿನ ದರದಿಂದ ಮಾರುವುದು-ಅನುಚಿತವಾ ಲಾಭವನ್ನು ಎತ್ತಿಹಾಕುವುದು (ಹೀನಾಧಿಕವಿನಿಮಾನಂ) ಕೊಡ-ಕೊಳ್ಳುವ ಮಾಪು, ತಕ್ಕಡಿ, ಕಲ್ಲು, ಗಜ ಮೊದಲಾದವುಗಳನ್ನು ಪ್ರಮಾಣ ಮೀರಿ ಇಟ್ಟು, ಲಾಭ ಮಾಡಿಕೊಳ್ಳುವುದು. ಹೀಗೆ (ಪಂಚ) ಐದು (ಅಸ್ತೇಯ) ಅಚೌರ್ಯಾಣುವ್ರತದ (ವ್ಯತೀಚಾರಃ) ಅತಿಚಾರಗಳು ಇರುತ್ತವೆ.

ಅರ್ಥ—ಅಚೌರ್ಯಾಣುವ್ರತದ ಅತಿಚಾರಗಳು ಚೌರಪ್ರಯೋಗ, ಚೌರಾರ್ಥದಾನ, ವಿಲೋಪ, ಸದೃಶಸನ್ಮಿಶ್ರ, ಹೀನಾಧಿಕವಿನಿಮಾನಗಳೆಂದು ಐದು ಇವೆ.

ಚೌರಪ್ರಯೋಗ—ತಾನು ಸ್ವತಃ ಕಳವು ಮಾಡದೆ ಇನ್ನೊಬ್ಬರಿಂದ ಮಾಡಿಸವುದು, ಕಳ್ಳರಿಗೆ ಮಾರ್ಗದರ್ಶನ ಮಾಡುವುದು, ತುಡುಗು ಮಾಡಲಿಕ್ಕೆ ಪ್ರೇರಿಸುವುದು ಇವೆಲ್ಲ ಚೌರಪ್ರಯೋಗ ಅತಿಚಾರ-ವೆನಿಸುತ್ತವೆ.

ಚೌರಾರ್ಥಾದಾನ—ಕಳ್ಳರು ತಂದ ದ್ರವ್ಯವನ್ನು ಸ್ವೀಕರಿಸುವುದು ಇದು ಚೌರಾರ್ಥಾದಾನ ಅತಿಚಾರವಾಗಿದೆ.

ವಿಲೋಪ—ಯೋಗ್ಯ ಹಾಗೂ ನ್ಯಾಯ ಮಾರ್ಗಗಳನ್ನು ಬಿಟ್ಟು, ಅನ್ಯ ಮಾರ್ಗದಿಂದ ದ್ರವ್ಯವನ್ನು ಸ್ವೀಕರಿಸುವುದು. ರಾಜ್ಯದ ಆಡಳಿತೆಯು ಯಾವ ಜೀನಸಿನ ಮೇಲೆ ನಿರ್ಬಂಧ ಹಾಕಿರುವುದೋ ಅದನ್ನು ತಾನು ತರಿಸುವುದು. ಕಳ್ಳ ಪೇಟೆಯಲ್ಲಿ ವ್ಯಾಪಾರ ಮಾಡುವುದು. ಕಾನೂನಿನ ಉಲ್ಲಂಘನ ಮಾಡುವುದು ಇವೆಲ್ಲ ವಿಲೋಪ ಅತಿಚಾರವೆನಿಸುತ್ತವೆ

ಸದೃಶಸನ್ಮಿಶ್ರ—ಹೆಚ್ಚು ಬೆಲೆಯುಳ್ಳ ವಸ್ತುವಿನಲ್ಲಿ ಕಡಿಮೆ ಬೆಲೆಯ ಜೀನಸನ್ನು ಕೂಡಿಸಿ ಮಾರುವುದು ತುಪ್ಪದಲ್ಲಿ ಎಣ್ಣೆಯನ್ನು ಕೂಡಿಸುವುದು, ಸುವರ್ಣದಲ್ಲಿ ತಾಮ್ರವನ್ನು ಸೇರಿಸಿ ಮಾರುವುದು ಇವೆಲ್ಲ ಈ ಅತಿಚಾರದಲ್ಲಿ ಬರುತ್ತವೆ

ಹೀನಾಧಿಕವಿನಿಮಾನ—ತೂಕಮಾಡುವ ತಕ್ಕಡಿ, ಕಲ್ಲುಗಳನ್ನು ಸರಿಯಾದವುಗಳನ್ನು ಇಡದೆ ಇರುವುದು ಜೀನಸನ್ನು ಕೊಳ್ಳುವಾಗ ಹೆಚ್ಚಿಗೆ ಬರಬೇಕು, ಮಾರುವಾಗ ಕಡಿಮೆ ಹೋಗಿರಬೇಕು-ಈ ಪ್ರಕಾರದ ವ್ಯವಹಾರ ಇಡುವುದು ಇದು ಹೀನಾಧಿಕವಿನಿಮಾನವೆನಿಸುತ್ತದೆ

ಈ ಪ್ರಕಾರ ಈ ವ್ರತದ ಐದು ದೋಷಗಳು ಇರುತ್ತವೆ ಇವುಗಳನ್ನು ತ್ಯಜಿಸುವುದರಿಂದ ಅಚೌರ್ಯ ವ್ರತವು ನಿರ್ಮಲವಾಗುತ್ತದೆ ಜಗತ್ತಿನಲ್ಲಿ ಕಳವಿನಂದ ದೊಡ್ಡ ಅಪರಾಧವು ಯಾವುದೂ ಇಲ್ಲ ಇದರಿಂದ ಕುಲ ಹಾಗೂ ಧರ್ಮದ ನಾಶವಾಗಿ ಅಪಕೀರ್ತಿಯು ಬರುತ್ತದೆ ಕಳ್ಳತನದಿಂದ ಸಂಪಾದಿಸಿದ ಧನವೂ ಕೂಡ ಪರಸ್ತ್ರೀ ಭೋಗ ಮೊದಲಾದ ವ್ಯಸನಗಳಲ್ಲಿಯೇ ಹಾಳಾಗಿ ಹೋಗುತ್ತದೆ ಇಲ್ಲವೆ ಅದನ್ನು ಯಾರಲ್ಲಿ ಇಟ್ಟಿರುವಿರೋ ಅವರೇ ಎತ್ತಿಹಾಕುವರು. ಕಳವುಮಾಡಿ ಸಂಪಾದಿಸಿದ ದುಡ್ಡಿನಿಂದ ಸಂತೋಷವಾಗುವದಿಲ್ಲ ಪರಿಣಾಮದಲ್ಲಿ ಯಾವಾಗಲೂ ಆಕುಲತೆಯು ಇರುತ್ತದೆ ಎಂದಾದರೂ ಕಳ್ಳತನವು ಬೈಲಿಗೆ ಬಂದರೆ ಶಿಕ್ಷೆಯನ್ನು ಭೋಗಿಸಲೇ ಬೇಕಾಗುವುದು. ಜನರೂ ಹೊಡೆದೂ ಬಡೆದೂ ಅನೇಕ ಪ್ರಕಾರದ ದುಃಖವನ್ನು ಕೊಡುತ್ತಾರೆ ಅಂದ ಮೇಲೆ ಈ ಲೋಕದಲ್ಲಿ ಸೆರೆಮನೆವಾಸ, ಹೊಡೆತ, ತನ್ನ ಎಲ್ಲ ಸಂಪತ್ತಿಯಿಂದಲೂ ದೂರವಾಗುವಿಕೆ, ಕೈಮೂಗು ಮೊದಲಾದವುಗಳನ್ನು ಕಡಿಸಿಕೊಳ್ಳುವಿಕೆ ಇವೇ ಮೊದಲಾದವುಗಳು ಕಳ್ಳತನದ ಪರಿಣಾಮಗಳಾಗಿವೆ. ಪರಲೋಕದಲ್ಲಿಯೂ ನರಕವೇ ಮೊದಲಾದ ಗತಿಗಳಲ್ಲಿ ಅನೇಕ ಕಾಲ ಪರಿಭ್ರಮಣ ಮಾಡಬೇಕಾಗುವುದು

[ಇಲ್ಲಿ ಉಲ್ಲೇಖಿಸಿದ ಅತಿಚಾರಗಳಲ್ಲಿ ನಾಲ್ಕನೆಯದಾದ 'ಸದೃಶಸನ್ಮಿಶ್ರ'ವೆಂಬ ಹೆಸರಿನ ಅತಿಚಾರವನ್ನು 'ತತ್ತ್ವಾರ್ಥಸೂತ್ರ'ಕಾರನು 'ಪ್ರತಿರೂಪಕವ್ಯವಹಾರ'ವೆಂದು ಹೇಳಿದ್ದಾನೆ ಇದಕ್ಕೆ 'ಸರ್ವಾರ್ಥಸಿದ್ಧಿ'ಕಾರನು 'ಕೃತ್ರಿಮ ಸುವರ್ಣನೇ ಮೊದಲಾದವುಗಳ ಮುಖಾಂತರ ವಂಚನೆಯುಳ್ಳ ವ್ಯವಹಾರ'ವೆಂದು ಸೂಚಿಸಿದ್ದಾನೆ ಇವುಗಳಲ್ಲಿ 'ಸದೃಶಸನ್ಮಿಶ್ರ'ವೆಂಬುದು ತನ್ನ ವಿಷಯದಲ್ಲಿ ಹೆಚ್ಚು ಸ್ಪಷ್ಟವೂ ವ್ಯಾಪಕ ಅರ್ಥಪೂರ್ಣವೂ ಆಗಿದೆ. ಇನ್ನು 'ವಿಲೋಪ' ಎಂಬ ಮೂರನೆಯ ಅತಿಚಾರವು 'ತತ್ತ್ವಾರ್ಥ ಸೂತ್ರ'ದಲ್ಲಿ ಹೇಳಿದ 'ವಿರುದ್ಧ-ರಾಜ್ಯಾತಿಕ್ರಮ' ಎಂಬ ಹೆಸರಿನ ಅತಿಚಾರದಿಂದ ಬಹಳ ಭಿನ್ನವೂ ಹೆಚ್ಚು ವಿಷಯ ಗರ್ಭಿತವೂ ಆಗಿದೆ 'ವಿರುದ್ಧ-ರಾಜ್ಯಾತಿಕ್ರಮ' ಎಂಬುದು 'ಸರ್ವಾರ್ಥಸಿದ್ಧಿ'ಕಾರನ ವಿವರಣೆಯ ಪ್ರಕಾರ 'ಕಡಿಮೆ' ಬೆಲೆಯಲ್ಲಿ ದೊರಕಿದ ವಸ್ತುವನ್ನು ಇಲ್ಲಿ ಹೆಚ್ಚು

ಬೆಲೆಯುಳ್ಳದ್ದನ್ನಾಗಿ ಮಾಡುವುದು'[1] ಎಂದಾಗುತ್ತದೆ. ಅಂದರೆ ಇನ್ನೊಂದು ರಾಜ್ಯದಲ್ಲಿ ಕಡಿಮೆ ಬೆಲೆಗೆ ಸಿಗುವ ಜೀನಸನ್ನು ತಂದು, ತಮ್ಮ ರಾಜ್ಯದಲ್ಲಿ ಹೆಚ್ಚು ಕ್ರಯ ತಕ್ಕೊಂಡು ಮಾರಲಿಕ್ಕೆ ಪ್ರಯತ್ನಿಸುವುದು ಇದರಿಂದ ತಮ್ಮ ರಾಜ್ಯದೊಳಗಿನ ಜನರನ್ನು ಆ ವಸ್ತುವಿನ ಉಪಯೋಗದಿಂದ ವಂಚಿತರನ್ನಾಗಿ ಮಾಡಿದಂತೆ ಆಗುತ್ತದೆ ಆದರಿಂದ ಇದೂ ಒಂದು ಅಪಹರಣವಾಗಿದೆ 'ವಿಲೋಪ' ಎಂಬ ಪದದಲ್ಲಿ ಇತರ ಪ್ರಕಾರದ ಅಪಹರಣಗಳೂ ಸಹ ಸಮಾವೇಶವಾಗುತ್ತವೆ. ಪ್ರಭಾಚಂದ್ರಾಚಾರ್ಯನು 'ವಿಲೋಪ' ಎಂಬ ಪದದ ಅರ್ಥವನ್ನು ವಿವರಿಸುತ್ತ ವಿರುದ್ಧ ರಾಜ್ಯಾತಿಕ್ರಮವೆಂದೂ ಹೇಳಿದ್ದಾನೆ. ಆದರೆ 'ವಿಲೋಪ'ವು 'ವಿರುದ್ಧರಾಜ್ಯಾತಿಕ್ರಮ' ಎಂಬುದರ ಯಾವ ಪರ್ಯಾಯ ಪದವೂ ಆಗಿಲ್ಲ ]

ಹೀನಾಧಿಕವಿನಿಮಾನಂ ಸ್ತೇನಾ[ಹೃತ]ದಾನ ಸದೃಶ ಮಿಶ್ರವಿಲೋಪ- ।
ಸ್ತೇನ ಪ್ರಯೋಗಮೆಂದಿವುಂ ತಾನಸ್ತೇಯ ವ್ರತಕ್ಕತಿಕ್ರಮಮಕ್ಕುಂ ॥

— ಶಾಂತಿನಾಥ—ಸುಕುಮಾರಚರಿತಂ ೬-೧೫.

ಈಗ ಸ್ಥೂಲಬ್ರಹ್ಮಚರ್ಯಾಣುವ್ರತದ ಲಕ್ಷಣ ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

**ನ ಚ[2] ಪರದಾರಾನ್ ಗಚ್ಛತಿ ನ ಪರಾನ್ ಗಮಯತಿ ಚ ಪಾಪಭೀತೇರ್ಯತ್ ।**
**ಸಾ ಪರದಾರನಿವೃತ್ತಿಃ ಸ್ವದಾರಸಂತೋಷನಾಮಾಪಿ ॥ ೫೯ ॥[3]**

ಅನ್ವಯಾರ್ಥ—(ಯತ್) ಯಾವುದು (ಪಾಪಭೀತೇಃ) ಪಾಪದ ಹೆದರಿಕೆಯಿಂದ (ಪರದಾರಾನ್) ಎರಡನೆಯವರ ಸ್ತ್ರೀಯನ್ನು (ನ ಗಚ್ಛತಿ) ಭೋಗಮಾಡದೆ ಇರುವುದು (ಚ) ಮತ್ತು (ಪರಾನ್) ಎರಡನೆಯವರನ್ನು (ನ ಗಮಯತಿ) ಭೋಗಿಸಲಿಕ್ಕೆ ಹಚ್ಚದಿರುವುದು (ಸಾ) ಅದು (ಪರದಾರನಿವೃತ್ತಿಃ) ಪರಸ್ತ್ರೀತ್ಯಾಗ (ಅಪಿ) ಅಥವಾ (ಸ್ವದಾರಸಂತೋಷ) ತನ್ನ ಹೆಂಡತಿಯಲ್ಲಿಯೇ ಸಮಾಧಾನ ಹೊಂದುವುದು—ಎಂಬ—(ನಾಮ) ಹೆಸರಿನ—ಅಣುವ್ರತವಾಗಿದೆ.

ಅರ್ಥ—ಪಾಪದ ಹೆದರಿಕೆಯಿಂದ ಪರಸ್ತ್ರೀಯ ಕಡೆಗೆ ಹೋಗದೆ ಇರುವುದು, ಎರಡನೆಯವರೂ ಹೋಗಲು ಪ್ರೇರಿಸದೆ ಇರುವುದು,—ಇದಕ್ಕೆ ಪರಸ್ತ್ರೀತ್ಯಾಗ ಅಥವಾ ಸ್ವಸ್ತ್ರೀಸಂತೋಷ ಎಂದು ಹೇಳುವರು ಇದು ನಾಲ್ಕನೆಯ ಅಣುವ್ರತವಾಗಿದೆ [ಇಲ್ಲಿ ಈ ವ್ರತಕ್ಕೆ ಎರಡು ಹೆಸರುಗಳನ್ನು ಕೊಡಲಾಗಿದೆ. ಒಂದು 'ಪರದಾರನಿವೃತ್ತಿ' ಇನ್ನೊಂದು 'ಸ್ವದಾರಸಂತೋಷ'. ಇವುಗಳಲ್ಲಿ ಒಂದು ನಿಷೇಧವನ್ನು ವ್ಯಕ್ತಪಡಿಸಿದರೆ ಇನ್ನೊಂದು ನಿರ್ಬಂಧವನ್ನು ಹಾಕುತ್ತದೆ. ಆದರೆ ಎರಡರ ಭಾವವು ಒಂದೇ ಆಗಿದೆ ಬ್ರಹ್ಮಚರ್ಯಾಣುವ್ರತದ ದೃಷ್ಟಿಯಿಂದ ಎರಡರಲ್ಲಿಯೂ ಏನೂ ಅಂತರವಿಲ್ಲ 'ಸ್ವದಾರಸಂತೋಷ'—ತನ್ನ ಹೆಂಡತಿಯನ್ನು ಭೋಗಿಸುವುದರಲ್ಲಿಯೇ ಸಂತೋಷಗೊಂಡಿರುವುದು—ಎಂಬ ಅರ್ಥವು ಸ್ಪಷ್ಟವಾಗಿಯೇ ಇದೆ ಇನ್ನು 'ಪರದಾರನಿವೃತ್ತಿ' ಎಂಬುದಕ್ಕೆ ಅನ್ಯರ ಹೆಂಡರನ್ನೂ ಮಾತ್ರ ತ್ಯಜಿಸುವುದು ಅಂದರೆ ವಿಧವೆಯರನ್ನು, ವೇಶ್ಯೆಯರನ್ನು, ಕನ್ಯೆಯರನ್ನು ಭೋಗಿಸಬಹುದು ಎಂದು ಅರ್ಥವನ್ನು ಮಾಡಕೂಡದು 'ಪರದಾರ' ಎಂದರೆ ತನ್ನ ಹೆಂಡತಿಯನ್ನುಳಿದು ಎಲ್ಲ ಸ್ತ್ರೀಯರೂ ಎಂದರ್ಥವಿದೆ.

---

[1] ಉಚಿತನ್ಯಾಯಾದನ್ಯೇನ ಪ್ರಕಾರೇಣ ದಾನಗ್ರಹಣಮತಿಕ್ರಮಃ । ವಿರುದ್ಧಂ ರಾಜ್ಯಂ ವಿರುದ್ಧರಾಜ್ಯಂ, ವಿರುದ್ಧರಾಜ್ಯೇಽತಿಕ್ರಮಃ ವಿರುದ್ಧರಾಜ್ಯಾತಿಕ್ರಮಃ । ತತ್ರ ಹ್ಯಲ್ಪಮೂಲ್ಯಲಭ್ಯಾನಿ ಮಹಾರ್ಘ್ಯಾಣಿ ದ್ರವ್ಯಾಣೀತಿ ಪ್ರಯತ್ನಃ ॥ —ಸರ್ವಾರ್ಥಸಿದ್ಧಿಃ

[2] ತು ಎಂದೂ ಪಾಠಾಂತರವಿದೆ.

[3] ಆಯ್ಚತವರ್ಮನು ಹೇಳುವದು ಹೀಗೆ—

ಕಂದ ॥ ಪರದಾರಗಮನಮಂ ಪರಿಹರಿಸೆಯೆ ಮನವಚನಕಾಯದಿಂದಂ ಪುರುಷಂ ।
ಪರಮಾಗಮದೊಳು ನೆಟ್ಟನೆ ಪರದಾರನಿವೃತ್ತಿಯೆಂಬಣುಬ್ರತಮಕ್ಕುಂ ॥

ವಚನ—ಕೃತಕಾರಿತಾನುಮೋದವಿಲ್ಲದೆ ಪರಸ್ತ್ರೀಯರನೊಡಪಟ್ಟಿದರುಂ . . [ಎಂದು] ಭಾವಿಸುವುದು ನಾಲ್ಕನೆಯಣು- ಬ್ರತಮಕ್ಕುಂ

ಹಾಗೆ ಅರ್ಥಮಾಡಿದಾಗಲೇ 'ಪರದಾರನಿವೃತ್ತಿ' ಮತ್ತು 'ಸ್ವದಾರಸಂತೋಷ' ಎಂಬ ಪದಪುಂಜಗಳು ಸಮಾನಾರ್ಥಕ-ವಾಗುತ್ತವೆ ಇಲ್ಲದಿದ್ದರೆ ಸಮಾನಾಧಿಕರಣವು ಉಳಿಯುವದಿಲ್ಲ ಸ ಧ ]

ವಿಶೇಷಾರ್ಥ—ಪುರುಷನು ತನ್ನ ಜಾತಿ, ಕುಲದ ಸ್ತ್ರೀಯನ್ನು ದೇವ–ಗುರು–ಪಂಚರ ಸಾಕ್ಷಿಯಿಂದ ವಿವಾಹವಾಗಿರುತ್ತಾನೆಯೋ ಅವಳ ಭೋಗದಲ್ಲಿ ಮಾತ್ರ ಸಂತೋಷ ಹೊಂದಿರಬೇಕು, ಅನ್ಯ ಸ್ತ್ರೀಯರಲ್ಲಿ ಭೋಗೋಪಭೋಗದ ಇಚ್ಛೆಯನ್ನು ಮಾಡಕೂಡದು, ಈ ನಿಯಮಕ್ಕೆ ಅನುಸರಿಸಿ ನಡೆಯುವವನಿಗೆ ಪರಸ್ತ್ರೀತ್ಯಾಗ ವ್ರತವುಳ್ಳವನೆಂದು ಅನ್ನಬೇಕು ಅವನು ಪರಸ್ತ್ರೀ, ವೇಶ್ಯೆ, ದಾಸಿ, ಕನ್ಯೆ, ಕುಟಿಲೆ ಮೊದಲಾದ ಸ್ತ್ರೀಯರನ್ನೂ ಭೋಗಿಸುವದಿಲ್ಲ. ಅಲ್ಲದೆ ಯಾವ ಸ್ತ್ರೀಯೊಡನೆಯೂ ಕಾಮಸೇವನೆಯ ಇಚ್ಛೆಯಿಂದ ಮಾತನಾಡುವದಿಲ್ಲ. ಆ ವಾಸನೆಯಿಂದ ಮುಟ್ಟುವದಿಲ್ಲ, ನೋಡುವದಿಲ್ಲ. ಇಂಥ ಪುರುಷನಿಗೇನೇ ಸ್ವದಾರಸಂತೋಷಿ ಇಲ್ಲವೆ ಪರಸ್ತ್ರೀತ್ಯಾಗಿ ಎಂದು ಅನ್ನಬೇಕು

ಪರವಧುಗಾಸೆಗೆಯ್ವ ನರನುಂ ಕುಲವೆಂದಿರನೊಲ್ಲದಿರ್ಪ ನಿ-
ಷ್ಠುರನುಮುದಾರನಲ್ಲದರನುಂ ನೆರೆಯಂ ಪಗೆಗೊಳ್ವಗಾಂಪನುಂ ।
ಗುರುಪನವಜ್ಞೆಗೆಯ್ವ ರುಷಿಯುಂ ಪದಪಿಲ್ಲದ ದಾನಿಯುಂ ಜಿನೇ-
ಶ್ವರಪದಸೇವೆಯಿಲ್ಲದವನುಂ ನೆಱೆರಂಜಿಸಲಾಱರುರ್ವಿಯೊಳ್ ॥

—ನಯಸೇನ–ಧರ್ಮಾಮೃತಂ–೧೩–೧೩೬.

ಸ್ವದಾರಸಂತೋಷ ಎಂಬ ಅಣುವ್ರತದ ಐದು ಅತಿಚಾರಗಳನ್ನು ಹೇಳುತ್ತಾರೆ—

ಅನ್ಯವಿವಾಹಾಕರಣಾನಂಗಕ್ರೀಡಾವಿಟತ್ವವಿಪುಲತೃಷಃ ।
ಇತ್ವರಿಕಾಗಮನಂ ಚಾಸ್ಮರಸ್ಯ ಪಂಚ ವ್ಯತೀಚಾರಾಃ ॥ ೬೦ ॥[1]

ಅನ್ವಯಾರ್ಥ—(ಅನ್ಯವಿವಾಹಾಕರಣ) ಎರಡನೆಯವರ ವಿವಾಹವನ್ನು ಮಾಡುವುದು, (ಅನಂಗಕ್ರೀಡಾ) ನಿರ್ದಿಷ್ಟ ಅವಯವಗಳನ್ನುಳಿದು ಅನ್ಯ ಶರೀರದ ಭಾಗದಲ್ಲಿ ಕಾಮಕ್ರೀಡೆಯನ್ನು ಮಾಡುವುದು, (ವಿಟತ್ವ) ಬೀಭತ್ಸಕರವಾದ ಮಾತು ಹಾಗು ದೇಹದ ಚೇಷ್ಟೆಗಳನ್ನು ವ್ಯಕ್ತಗೊಳಿಸುವುದು, (ವಿಪುಲತೃಷಃ) ಕಾಮದ ತೀವ್ರ ಆಸಕ್ತಿಯನ್ನು ಹೊಂದುವುದು, (ಚ) ಮತ್ತು (ಇತ್ವರಿಕಾಗಮನಂ) ವ್ಯಭಿಚಾರೀ ಸ್ವಸ್ತ್ರೀಯನ್ನು ಸೇವಿಸುವುದು—ಇವು–(ಪಂಚ) ಐದು (ಅಸ್ಮರಸ್ಯ) ಬ್ರಹ್ಮಚರ್ಯಾಣುವ್ರತದ (ವ್ಯತೀಚಾರಾಃ) ಅತಿಚಾರಗಳು—ಇರುತ್ತವ

ಅರ್ಥ—ಅನ್ಯವಿವಾಹಾಕರಣ, ಅನಂಗಕ್ರೀಡಾ, ವಿಟತ್ವ, ವಿಪುಲತೃಷಾ ಮತ್ತು ಇತ್ವರಿಕಾಗಮನ ಎಂಬ ಐದು ಸ್ಥೂಲ ಬ್ರಹ್ಮಚರ್ಯವ್ರತದ ಅತಿಚಾರ—ದೋಷಗಳಾಗಿವೆ

[ಇಲ್ಲಿ 'ಅನ್ಯವಿವಾಹಾಕರಣ', 'ಅನಂಗಕ್ರೀಡಾ' ಮತ್ತು 'ಇತ್ವರಿಕಾಗಮನ' ಈ ಮೂರರ ಅರ್ಥವನ್ನು ಸ್ವಲ್ಪ ವಿವರಿಸಬೇಕು. ಅನ್ಯವಿವಾಹಾಕರಣದಲ್ಲಿ ಅನ್ಯ+ವಿವಾಹ+ಆಕರಣ ಎಂಬ ಮೂರು ಶಬ್ದಗಳು ಇವೆ. 'ಅನ್ಯ' ಎಂಬ ಶಬ್ದವು ತನ್ನ ಕುಟುಂಬ ಹಾಗೂ ಆಶ್ರಿತ ಜನರನ್ನುಳಿದು ಹೊರಗಿನವರನ್ನೂ ಸೂಚಿಸುತ್ತದೆ. 'ಆಕರಣ'ವು ಮನ–ವಚನ–ಕಾಯಗಳನ್ನು ಒಳಗೊಂಡಿದೆ ತನಗೆ ಸಂಬಂಧವಿಲ್ಲದವರ ವಿವಾಹದಲ್ಲಿ ತ್ರಿಕರಣ ಪೂರ್ವಕ ತೊಡಗಕೂಡದೆಂದು ಹೇಳಿದಂತಾಗುವುದು ಅಂಥವರ ವಿವಾಹದ ವಿಷಯದಲ್ಲಿ ಮಾತನಾಡಲಿಕ್ಕೂ ಆ ಮದುವೆಗಳಿಗೆ ಹೋಗಲಿಕ್ಕೂ ಈ ವ್ರತದಿಂದ ಯಾವ ಅಡ್ಡಿಯೂ ಆಗುವದಿಲ್ಲ. 'ಅನಂಗಕ್ರೀಡೆ'ಯು ಹಸ್ತಮೈಥುನ

---

1 ಆಯತವರ್ಮನು ಹೇಳುವದು ಹೀಗೆ—

ಅನ್ಯವಿವಾಹಾಕರಣಂ, ಅನಂಗಕ್ರೀಡೆ, ವಿಟತ್ವಂ, ವಿಪುಳತೃಷೆ ಇತ್ವರಿಕಾಗಮನಮೆಂದಯ್ದತಿಚಾರಂಗಳಕ್ಕುಮವನಾಗಲೀ-ಯದುದು ಸ್ವದಾರಸಂತೋಷಮೆಂಬುದಕ್ಕುಮಲ್ಲಿ ಪೆರರ್ಗೆ ಮದುವೆಯಂ ಮಾಳ್ಪುದು ಅನ್ಯವಿವಾಹಕರಣಂ ಯೋನಿಸ್ಥಾನ-ಮಲ್ಲದೆ ಮತ್ತೊಂದೆಡೆಯೊಳ್ಸಲಿಸುವ ವಿಕಾರಮನಂಗಕ್ರೀಡೆ ಚುಂಬನ ತಾಡನಾದಿ ವಿಟವೃತ್ತಿಗಳೊಳು ಮನಂಗೆಯ್ವುದು ವಿಟತ್ವಂ ಆಗಳು ಕಾಮರಾಗದೊಳಿರ್ಪುದುಂ ತಣಿವಿಲ್ಲದುದುಂ ವಿಪುಲತೃಷೆ ಬಿಸುಡಗಾರ್ತಿ, ಸೂಳೆ, ರಂಡೆ, ಕೊಡಗೂಸು, ತೊತ್ತು, ಲಿಂಗಿ, ದೇವತೆ, ತಿರ್ಯಗ್ಜಾತಿ, ಕೀಲ್ಗಾರೆಯೆಂಬಿವರ್ಮೊದಲಾಗೊಡೆಯ ಸ್ತ್ರೀಯರೊಳು ಸಲ್ವುದು ಇತ್ವರಿಕಾಗಮನಂ.

ಮೊದಲಾದ ಅಪ್ರಾಕೃತಿಕ ಕಾಮಸೇವನೆಯನ್ನು ನಿಷೇಧಿಸುವ ಅರ್ಥದಲ್ಲಿದೆ. 'ಇತ್ವರಿಕಾ' ಎಂಬ ಪದವು ಸ್ವಸ್ತ್ರೀ ಎಂಬ ಅರ್ಥವನ್ನು ಕೊಡುತ್ತದೆ ಪರಸ್ತ್ರೀಗಮನವನ್ನಂತೂ ಮೂಲದಲ್ಲಿ ಈ ವ್ರತದಲ್ಲಿ ನಿಷೇಧಿಸಿಯೇ ಇದೆ. ಈ ಅತಿಚಾರದಲ್ಲಿ ವ್ಯಭಿಚಾರಿಯೂ ಕುಲಟೆಯೂ ಆದ ಸ್ವಸ್ತ್ರೀ ಸೇವನೆಯನ್ನೂ ತ್ಯಜಿಸಲಿಕ್ಕೆ 'ಇತ್ವರಿಕಾಗಮನ' ಎಂಬುದರಿಂದ ಹೇಳಿದೆ ಸ. ಧ ]

ಅನ್ಯವಿವಾಹಾಕರಣ—ತನ್ನ ಮಗ ಹಾಗೂ ಮಗಳು ಇವರನ್ನು ಬಿಟ್ಟು, ಉಳಿದವರ ವಿವಾಹವನ್ನು ಮಾಡುವದು

ಅನಂಗಕ್ರೀಡಾ—ಕಾಮಸೇವನೆ ಮಾಡುವ ಅವಯುವಗಳನ್ನುಳಿದು ಬೇರೆ ಅವಯುವಗಳಿಂದ ಕಾಮ ಕ್ರೀಡೆಯನ್ನು ಮಾಡುವುದು.

ವಿಟತ್ವ—ನಪುಂಸಕನಿಗೆ ಸ್ತ್ರೀಯ ಉಡಿಗೆ ತೊಡಿಗೆಗಳನ್ನು ತೊಡಿಸಿ, ಅವನಿಂದ ಆಗುವ ಅಂಗವಿನ್ಯಾಸ ಗಳನ್ನು ಕಂಡು ಸಂತೋಷಹೊಂದುವದು ಇಂಥ ಕ್ರಿಯೆಗಳನ್ನು ಮಾಡಿಸುವ ವಿಷಯದಲ್ಲಿ ಮನ-ವಚನ-ಕಾಯಗಳಿಂದ ಪ್ರವೃತ್ತಿಯನ್ನು ಇಡುವುದು.

ವಿಪುಲತೃಷಾ—ಕಾಮಭೋಗದ ತೀವ್ರ ಇಚ್ಛೆಯನ್ನು ಮಾಡುವುದು.

ಇತ್ವರಿಕಾಗಮನ—ವ್ಯಭಿಚಾರಿಯಾದ ಸ್ತ್ರೀಯರ ಕೂಡ ಸಹವಾಸ ಮಾಡುವುದು. ಅವರ ಮನೆಗೆ ತಾನು ಹೋಗುವುದು, ತನ್ನ ಮನೆಗೆ ಅವರನ್ನು ಕರೆಯಿಸುವುದು, ಅವಳೊಡನೆ ಕೊಡಕೊಳ್ಳುವ ವ್ಯವಹಾರವಿಡುವುದು, ಅವಳ ಕೂಡ ಮಾತನಾಡುವ ಸಂದರ್ಭವನ್ನು ಮೇಲಿಂದ ಮೇಲೆ ತಂದುಕೊಳ್ಳುವುದು, ಅವಳ ರೂಪವನ್ನು ನಿರೀಕ್ಷಿಸುವುದು.

ಈ ಪ್ರಕಾರ ಐದು ದೋಷಗಳನ್ನು ತ್ಯಜಿಸಲಿಕ್ಕೆ ಬೇಕು. ದೇವಾದಿಗಳಿಂದಲೂ ಪೂಜ್ಯವೆನಿಸುವ ಬ್ರಹ್ಮಚರ್ಯವ್ರತದ ರಕ್ಷಣೆಯನ್ನು ಮಾಡುವದಕ್ಕಾಗಿ ತನ್ನ ಮದುವೆಯಾದ ಸ್ತ್ರೀಯನ್ನುಳಿದು ಇತರ—ತಾಯಿ–ತಂಗಿ–ಮಗಳು–ಸೊಸೆ–ಮೊದಲಾದ ಸ್ತ್ರೀಯರ ಹತ್ತರವೂ ಸಹ ಏಕಾಂತ ಸ್ಥಳದಲ್ಲಿ ಕೂಡಬಾರದು. ಅನ್ಯ ಹೆಂಗಸರ ಮುಖದ ಕಡೆಗೆ ಒಂದೇ ಸವನೆ ದೃಷ್ಟಿಯನ್ನು ಇಟ್ಟು ನೋಡಕೂಡದು.

> ಪರವೈವಾಹಿತ್ವರಿಕಾಪರಿಹರಿತಾಗಮನಮಪರಿಹರಿತಾಗಮನಂ ।
> ಸ್ಮರಕೇಳಿಮದನತೀವ್ರಾತುರತೆ ಚತುರ್ಥವ್ರತಕ್ಕತಿಕ್ರಮಮಕ್ಕುಂ ॥

—ಶಾಂತಿನಾಥ-ಸುಕುಮಾರ ಚರಿತಂ ೬-೧೬.

ಇನ್ನು ಪರಿಗ್ರಹಪರಿಮಾಣವ್ರತದ ಲಕ್ಷಣ ಹೇಳುವದಕ್ಕಾಗಿ ಸೂತ್ರ ರಚಿಸುತ್ತಾರೆ—

> ಧನಧಾನ್ಯಾದಿಗ್ರಂಥಂ ಪರಿಮಾಯ ತತೋಽಧಿಕೇಷು ನಿಸ್ಪೃಹತಾ ।
> ಪರಿಮಿತಪರಿಗ್ರಹಃ ಸ್ಯಾದಿಚ್ಛಾಪರಿಮಾಣನಾಮಾಪಿ ॥ ೬೧ ॥ [1]

ಅನ್ವಯಾರ್ಥ—(ಧನಧಾನ್ಯಾದಿಗ್ರಂಥಂ) ಧನ, ಧಾನ್ಯ, ಮೊದಲಾದ ಪರಿಗ್ರಹಗಳ (ಪರಿಮಾಯ) ಪ್ರಮಾಣವನ್ನು ನಿರ್ಧರಿಸಿ (ತತಃ ಅಧಿಕೇಷು) ಅದಕ್ಕಿಂತ ಹೆಚ್ಚಿನದರಲ್ಲಿ (ನಿಸ್ಪೃಹತಾ) ಇಚ್ಛೆಯನ್ನು ಇಡದೆ ಇರುವುದಕ್ಕೆ (ಪರಿಮಿತಪರಿಗ್ರಹಃ) ಪರಿಗ್ರಹ ಪರಿಮಾಣವ್ರತವೆನ್ನುವರು (ಅಪಿ) ಅಥವಾ (ಸ್ಯಾತ್) ಇದಕ್ಕೇನೇ (ಇಚ್ಛಾಪರಿಮಾಣನಾಮ) ಇಚ್ಛಾಪರಿಮಾಣವ್ರತವೆಂದೂ ಹೆಸರಿದೆ.

---

[1] ಆಯುತವರ್ಣನ ವಿವರ ಈ ಪ್ರಕಾರವಾಗಿದೆ.

ಕಂದ ॥ ಧನಧಾನ್ಯಾದಿಪರಿಗ್ರಹಮನವಂ ತಾಂ ಪತ್ತುಪಂ ಪವಣಾಡಿ ಬಳಿ- ।
ಕ್ಕನಿತರಿನದಿಕಮಪಾಸೊಲ್ಲೆನೆಂಬುದಿದು—ಮೆರೆಗೆಯ್ದ ಮೂರ್ಛೆಯ ನಿಯಮಂ ॥

ವಚನ—ಕ್ಷೇತ್ರ, ವಸ್ತು, ಹಿರಣ್ಯ, ಸುವರ್ಣ, ಧನ-ಧಾನ್ಯ, ದಾಸಿದಾಸ, ದ್ವಿಪದ, ಚತುಃಪದ, ಯಾನ, ಕುಪ್ಯ, ಭಾಂಡಂಗಳೆಂಬ ಪರಿಗ್ರಹಮುಮನಿನಿತಿಲ್ಲದೆ ಪರಿಗ್ರಹಿಸೆನೆಂದು ದೇವಗುರು ಸಾಕ್ಷಿಯೊಳು ಪರಿಮಾಣಂ ಮಾಡಿಯಾ [ಬಾ] ಳ್ವುದಯ್ದನೆಯಣುಬ್ರತಂ.

ಅರ್ಥ—ತನ್ನ ಸಂತೋಷಕ್ಕೆ ಅನುಸರಿಸಿ, ಧನ, ಧಾನ್ಯ, ದನ, ಕರ, ಆಳು, ಸೇವಕ, ಮನುಷ್ಯ, ಮನೆ, ಹೊಲ, ಅರಿವೆ, ಹೊದಿಕೆ ಮೊದಲಾದ ಪರಿಗ್ರಹಗಳ ಪ್ರಮಾಣಮಾಡಿ ಅದಕ್ಕಿಂತ ಹೆಚ್ಚಿನ ಪದಾರ್ಥಗಳ ವಿಷಯದಲ್ಲಿ ಇಚ್ಛೆಯನ್ನು ಇಡದೆ ಇರುವುದು ಪರಿಮಿತಪರಿಗ್ರಹ ಅಥವಾ ಇಚ್ಛಾಪರಿಮಾಣವ್ರತವೆನಿಸುತ್ತದೆ

[ಇಲ್ಲಿ ಹೇಳಿದ ಪರಿಗ್ರಹಗಳಿಗೆ ಬಾಹ್ಯಪರಿಗ್ರಹಗಳೆಂದು ಹೇಳಲಾಗುವುದು ಇವು ಹತ್ತುವಿಧವಾಗಿವೆ. 'ಪರಿಗ್ರಹತ್ಯಾಗ'ವೆಂಬ ಹತ್ತನೆಯ ಪ್ರತಿಮೆಯ ಸ್ವರೂಪವನ್ನು ವಿವರಿಸುವಾಗ 'ಬಾಹ್ಯೇಷು ದಶಸು ವಸ್ತುಷು' ಎಂದು ಹೇಳುವ ಮಾತಿನಿಂದ ಇದು ಸ್ಪಷ್ಟವಾಗುತ್ತದೆ ಈ ಹತ್ತು ಪ್ರಕಾರದ ಪರಿಗ್ರಹಗಳು ಕ್ಷೇತ್ರ, ವಾಸ್ತು, ಧನ, ಧಾನ್ಯ, ದಾಸ-ದಾಸಿಯರು, ಪಶುಗಳು, ಶಯನಾಸನ, ವಾಹನಗಳು, ವಸ್ತ್ರ ಮತ್ತು ಪಾತ್ರೆಗಳು[1] ಎಂದು ಇರುತ್ತವೆ ಸ ಧ]

ವಿಶೇಷಾರ್ಥ—ಯಾರ ಹತ್ತರವಾದರೂ ಸದ್ಯಕ್ಕೆ ಸ್ವಲ್ಪ ಪರಿಗ್ರಹವಿದ್ದರೆ ಅಂಥವರು ಇನ್ನಿಷ್ಟು ಪರಿಗ್ರಹದ ಇಚ್ಛೆಯನ್ನು ಇಟ್ಟುಕೊಂಡು, ಧನದ ಪ್ರಮಾಣ ಒಂದನ್ನು ನಿರ್ದಿಷ್ಟಗೊಳಿಸಿಕೊಂಡು, ಧರ್ಮಬುದ್ಧಿಯಿಂದ ಬಾಳಿದರೆ ಅವರಿಗೆ ವ್ರತಿಕರೆನ್ನಲಿಕ್ಕೆ ಬರುವುದು. ಆದರೆ ಅವರು ಅನ್ಯಾಯದಿಂದ ಧನವನ್ನು ಸಂಪಾದಿಸುವದಿಲ್ಲವೆಂದು ನಿಶ್ಚಯವಾಗಿ ಮನಸ್ಸಿನಲ್ಲಿ ನಿರ್ಣಯಿಸಲಿಕ್ಕೆ ಬೇಕು ಒಬ್ಬನ ಹತ್ತರ ಈಗ ನೂರು ರೂಪಾಯಿಗಳಿವೆ ಅವನು ಒಂದು ಸಾವಿರಕ್ಕಿಂತ ಹೆಚ್ಚಿಗೆ ಹಣವನ್ನು ಇಡುವದಿಲ್ಲವೆಂದು ನಿಶ್ಚಯಮಾಡುವುದು ವ್ರತವೆನಿಸುತ್ತದೆ. ಆದರೆ ಆ ಸಾವಿರ ರೂಪಾಯಿಗಳನ್ನು ಅನ್ಯಾಯದಿಂದ ಗ್ರಹಣಮಾಡಲಾರೆನೆಂಬ ಸಂಕಲ್ಪಮಾತ್ರ ಬೇಕು ಪರಿಗ್ರಹಪರಿಮಾಣವು ಇರದಿದ್ದರೆ ಪ್ರತಿಯೊಬ್ಬ ಮನುಷ್ಯನಿಗೂ ಆಶೆಯು ಹೆಚ್ಚಿ, ಪರಿಣಾಮವು ನಿರಂತರ ವಸ್ತುಗಳನ್ನೂ ಸಂಪಾದಿಸುವುದರ ಕಡೆಗೇನೇ ಹತ್ತುತ್ತದೆ ಅದರಿಂದ ಸಮಾಧಾನವು ಉಳಿಯುವದಿಲ್ಲ ಎಲ್ಲ ಪಾಪದ ಮೂಲವು ಪರಿಗ್ರಹವಾಗಿದೆ. ಎಲ್ಲ ಪ್ರಕಾರದ ದುರ್ಧ್ಯಾನಗಳೂ ಸಹ ಪರಿಗ್ರಹದಿಂದಲೇ ಜನಿಸುತ್ತವೆ ಭಗವಂತನು ಮೂರ್ಛೆಗೆ-ಮಮತೆಗೆ-ಪರಿಗ್ರಹವೆಂದಿದ್ದಾನೆ ಹೊತ್ತುಕೊಳ್ಳಲಿಕ್ಕ ಅರಿವೆ, ಇರಲಿಕ್ಕೆ ಗುಡಿಸಲು ಇಷ್ಟೂ ಪರಿಗ್ರಹವಿಲ್ಲದಂಥ ಮನುಷ್ಯನ ಅಂತರಂಗದಲ್ಲಿ ಪರವಸ್ತುಗಳನ್ನು ಸಂಪಾದಿಸುವ ತೀವ್ರ ಇಚ್ಛೆ ಇದ್ದಲ್ಲಿ ಅವನಿಗೆ ಪರಿಗ್ರಹಿ ಎಂದು ಹೇಳಲಾಗಿದೆ

ಪರಿಗ್ರಹದ ಭೇದಗಳು—ಪರಮಾಗಮದಲ್ಲಿ ಅಂತರಂಗ ಪರಿಗ್ರಹಗಳು ಹದಿನಾಲ್ಕು ಪ್ರಕಾರದವೆಂದು ಹೇಳಿದೆ ಅವು ಹೀಗಿವೆ—೧ ಮಿಥ್ಯಾತ್ವ, ೨ ವೇದ, ೩ ರಾಗ, ೪ ದ್ವೇಷ, ೫ ಕ್ರೋಧ, ೬ ಮಾನ, ೭ ಮಾಯಾ, ೮ ಲೋಭ, ೯ ಹಾಸ್ಯ, ೧೦ ರತಿ, ೧೧ ಅರತಿ, ೧೨ ಶೋಕ, ೧೩ ಭಯ, ೧೪ ಜುಗುಪ್ಸೆ

ಪರಿಗ್ರಹದ ಪ್ರಭಾವ—ಅನಾದಿ ಕಾಲದಿಂದಲೂ ದೇಹವೇ ಮೊದಲಾದ ಪರದ್ರವ್ಯದೊಳಗಿನ ಮಮತೆಯು ಕಡಿಮೆಯಾಗುವದಿಲ್ಲ. ಇದು ಮಿಥ್ಯಾತ್ವ ಪರಿಗ್ರಹವಾಗಿದೆ ಈ ಶರೀರವೆಂದರೆ ನಾನು, ಈ ಜಾತಿಯೆಂದರೆ ನಾನು, ಈ ಕುಲವೆಂದರೆ ನಾನು ಇತ್ಯಾದಿ ಪರದ್ರವ್ಯಗಳ ವಿಷಯದಲ್ಲಿ ಆತ್ಮಬುದ್ಧಿಯು ಅನಾದಿಕಾಲ-ದಿಂದಲೂ ಅಂಟಿಕೊಂಡು ಬಂದಿದೆ ಇದು ಮಿಥ್ಯಾತ್ವದ ಪ್ರಭಾವವಾಗಿದೆ ಇನ್ನು ಮೋಹಕರ್ಮದಿಂದ ರಾಗ-ದ್ವೇಷ-ಕ್ರೋಧಗಳು ಉತ್ಪನ್ನವಾಗುತ್ತವೆ ಈ ವಿಕಾರಗಳಲ್ಲಿಯೂ ಸಹ ಆತ್ಮತ್ವದ ಸಂಕಲ್ಪವೂ ಕೂಡ ಮಿಥ್ಯಾತ್ವವೇ ಆಗಿದೆ ಕಾಮವಿಕಾರದಿಂದ ಚಿತ್ತವು ಯಾವಾಗಲೂ ಸಂತಪ್ತವಾಗಿರುವುದು, ರಾಗ, ದ್ವೇಷ, ಕ್ರೋಧ, ಮಾನ, ಮಾಯಾ, ಲೋಭ, ಹಾಸ್ಯಾದಿಗಳು ನೋಕಷಾಯ ಮೊದಲಾದವುಗಳೂ ಆತ್ಮನಿಗೆ ಸಂಬಂಧಿಸಿದವುಗಳೆಂದು ಮನ್ನಿಸುವುದು ಅಂತರಂಗ ಪರಿಗ್ರಹವಾಗಿದೆ ಅಂತರಂಗ ಪರಿಗ್ರಹವಿಲ್ಲದವರಿಗೆ ಬಾಹ್ಯ ಪರಿಗ್ರಹದಲ್ಲಿ ಮಮತೆಯು ಹುಟ್ಟುವದಿಲ್ಲ ಎಲ್ಲ ಪ್ರಕಾರದ ಅನೀತಿಗಳು ಪರಿಗ್ರಹದ ಮೇಲಿನ ಮಮತೆಯಿಂದಲೇ ಉತ್ಪನ್ನವಾಗುತ್ತವೆ ಪರಿಗ್ರಹದ ಇಚ್ಛೆಯಿಂದ ಹಿಂಸೆಯನ್ನು ಮಾಡಬೇಕಾಗುತ್ತದೆ, ಸುಳ್ಳು ಮಾತನಾಡಬೇಕಾಗುತ್ತದೆ, ಕಳವುಮಾಡ-ಬೇಕಾಗುತ್ತದೆ, ವ್ಯಭಿಚಾರಮಾಡಬೇಕಾಗುತ್ತದೆ ಪರಿಗ್ರಹವನ್ನು ಬೆಳೆಯಿಸುವದಕ್ಕಾಗಿ ಪ್ರಸಂಗಬಂದರೆ ತನ್ನ ಪ್ರಾಣವನ್ನೂ ಮಾನವನು ಬಲಿಕೊಡುತ್ತಾನೆ ಅದರಂತೆ ಎರಡನೆಯವರ ಜೀವವನ್ನು ತೆಕ್ಕೊಳ್ಳಲಿಕ್ಕೂ ಸಿದ್ಧನಾಗುತ್ತಾನೆ. ಪರಿಗ್ರಹಗಳಿಗಾಗಿಯೇ ದೊಡ್ಡ ಪ್ರಮಾಣದಲ್ಲಿ ಸಿಟ್ಟೂ ಸಹ ಉತ್ಪನ್ನವಾಗುತ್ತದೆ ಪರಿಗ್ರಹದ ಪ್ರಭಾವದಿಂದ ಅವನಿಗೆ ದೊಡ್ಡ ಅಭಿಮಾನವೂ ಜನಿಸುತ್ತದೆ ಪರಿಗ್ರಹಗಳಿಗಾಗಿ ಅನೇಕ ಕಪಟ ಪ್ರಯೋಗಗಳನ್ನೂ ಮಾಡ ಬೇಕಾಗುತ್ತದೆ ಪರಿಗ್ರಹದ ಮೇಲಿನ ಮಮತೆಯಿಂದ ಮಹಾಲೋಭವೂ ಹೆಚ್ಚಿನ ಆರಂಭವನ್ನು ಮಾಡುವ

---

1 "ಕ್ಷೇತ್ರಂ ವಾಸ್ತು ಧನಂ ಧಾನ್ಯಂ, ದ್ವಿಪದಂ ಚ ಚತುಷ್ಪದಂ ಶಯ್ಯಾಸನಂ ಚ ಯಾನಂ ಚ ಕುಪ್ಯ ಭಾಂಡಮಿತಿ ದ್ವಯಂ ॥

ಇಚ್ಛೆಯೂ ಹುಟ್ಟುತ್ತವೆ ಒಟ್ಟಿನಲ್ಲಿ ಎಲ್ಲ ಕಷಾಯಗಳ ಮೂಲವು ಈ ಪರಿಗ್ರಹವಾಗಿದೆ ಅದರಿಂದ ಎಲ್ಲ ಪಾಪಗಳಿಂದ ಮುಕ್ತನಾಗುವ ಇಚ್ಛೆ ಇದ್ದರೆ ಪರಿಗ್ರಹಗಳಿಂದ ವಿರಕ್ತರಾಗಿರಿ. ಈ ವಿಷಯದಲ್ಲಿ ಶ್ರೀ ಕಾರ್ತಿಕೇಯ ಸ್ವಾಮಿಗಳು ಹೀಗೆ ಹೇಳಿದ್ದಾರೆ—

ಕೋ ಣ ವಸೋ ಇತ್ಥಿಜಣೇ ಕಸ್ಸ ಣ ಮಯಣೇಣ ಖಂಡಿಯಂ ಮಾಣಂ ।
ಕೋ ಇಂದಿಏಹಿಂ ಣ ಜಿಓ ಕೋ ಣ ಕಸಾಏಹಿಂ ಸಂತತ್ತೋ ॥ ೩೮೧ ॥
ಸೋ ಣ ವಸೋ ಇತ್ಥಿಜಣೇ ಸೋ ಣ ಜಿಓ ಇಂದಿಯೇಹಿಂ ಮೋಹೇಣ ।
ಜೋ ಣ ಯ ಗಿಣ್ಹದಿ ಗಂಥಂ ಅಬ್ಭಂತರಬಾಹಿರಂ ಸವ್ವಂ ॥ ೩೮೨ ॥
ಜೋ ಲೋಹಂ ಣಿಹಣಿತ್ತಾ ಸಂತೋಸರಸಾಯಣೇಣ ಸಂತುಟ್ಠೋ ।
ಣಿಹಣದಿ ತಿಣ್ಹಾ ದುಟ್ಠಾ ಮಣ್ಣಂತೋ ವಿಣಸ್ಸರಂ ಸವ್ವಂ ॥ ೩೩೯ ॥
ಜೋ ಪರಿಮಾಣಂ ಕುವ್ವದಿ ಧಣಧಣ್ಣಸುವಣ್ಣಖಿತ್ತಮಾಈಣಂ ।
ಉವಓಗಂ ಜಾಣಿತ್ತಾ ಅಣುವ್ವಯಂ ಪಂಚಮಂ ತಸ್ಸ ॥ ೩೪೦ ॥

ಅರ್ಥ—ಜಗತ್ತಿನಲ್ಲಿ ಸ್ತ್ರೀಯರ ವಶ ಯಾರು ಆಗಿಲ್ಲ? ಕಾಮವಿಕಾರವು ಯಾರ ಗರ್ವವನ್ನು ಖಂಡಿಸಿಲ್ಲ? ಇಂದ್ರಿಯಗಳು ಯಾರನ್ನು ಗೆದ್ದಿಲ್ಲ? ಕಷಾಯಗಳಿಂದ ಯಾರು ಸಂತ್ರಸ್ತರಾಗಿಲ್ಲ? ಎಲ್ಲ ಸಂಸಾರೀ ಜೀವಗಳು ಸ್ತ್ರೀಯರ ಆಧೀನವಾಗಿಯೇ ಇವೆ. ಕಾಮವಿಕಾರವು ಎಲ್ಲರ ಅಭಿಮಾನವನ್ನು ಇಲ್ಲದಂತೆ ಮಾಡಿದೆ. ಎಲ್ಲರು ಇಂದ್ರಿಯಗಳ ವಶವಾಗಿದ್ದಾರೆ ನಾಲ್ಕು ಪ್ರಕಾರದ ಕಷಾಯಗಳಿಂದ ಜೀವವು ಸುಟ್ಟು ಒದ್ದಾಡುತ್ತಲಿವೆ. ಯಾವ ಪುರುಷನು ಬಾಹ್ಯ ಅಭ್ಯಂತರ ಪರಿಗ್ರಹಗಳನ್ನು ತ್ಯಜಿಸಿರುವನೋ ಅವನು ಮಾತ್ರ ಸ್ತ್ರೀಯ ಅಧೀನನಾಗಿಲ್ಲ, ಇಂದ್ರಿಯಗಳು ಅವನನ್ನು ಆಳುತ್ತ ಇಲ್ಲ, ಕಾಮನಿಗೆ ಅವನನ್ನು ವಶಪಡಿಸಿಕೊಳ್ಳಲಿಕ್ಕೆ ಆಗಲಿಲ್ಲ, ಕಷಾಯಗಳಿಂದಲೂ ಅವನು ಸುಟ್ಟು ಭಸ್ಮವಾಗಿಲ್ಲ. ಯಾವ ಪುರುಷನು ಲೋಭವನ್ನು ಇಲ್ಲದಂತೆ ಮಾಡಿರುವನೋ ಅವನು ಸಂತೋಷವೆಂಬ ರಸಾಯನದಿಂದ ಆನಂದಗೊಂಡಿದ್ದಾನೆ ಅವನು ಎಲ್ಲ ಪ್ರಕಾರದ ಸಂಪತ್ತಿಯನ್ನು ನಾಶವಂತವೆಂದು ತಿಳಿಯುತ್ತಾನೆ ದುಷ್ಟ ತೃಷ್ಣೆಯನ್ನು ಬೆಳೆಯಗೊಡದೆ, ಧನ–ಧಾನ್ಯ–ಸುವರ್ಣ–ಕ್ಷೇತ್ರ ಮೊದಲಾದವುಗಳಲ್ಲಿ ತಮ್ಮ ಶಕ್ತಿಗೆ ಅನುಸರಿಸಿ, ಸೀಮೆಯನ್ನು ಕಟ್ಟಿಕೊಂಡು, ಬಾಳುತ್ತಾನೆ ಅದಕ್ಕಿಂತ ಹೆಚ್ಚಿನ ಪರಿಗ್ರಹವನ್ನು ಇಡುವದಿಲ್ಲ. ಅವನಿಗೆ ಪರಿಗ್ರಹ ಪರಿಮಾಣ ವ್ರತವು ಸಿದ್ಧಿಸುತ್ತದೆ

ಮೂರ್ಛೆಯೆಂದರೆ ಮಮತ್ವವು. ಶಾಸ್ತ್ರದಲ್ಲಿ ಮೂರ್ಛೆಗೆ ಪರಿಗ್ರಹವೆಂದು ಹೇಳಿದೆ. ಆ ಮೂರ್ಛೆಯು ಪರಪದಾರ್ಥಗಳಲ್ಲಿ ಮಮತ್ವವನ್ನು ಇಡುವುದರಿಂದ ಉಂಟಾಗುತ್ತದೆ ಪರವಸ್ತುವನ್ನು ತಾನೆಂದು ತಿಳಿದು, ಉತ್ಪನ್ನವಾಗುವಂಥ ರಾಗವು ಆತ್ಮನ ಜೀವನ-ಮರಣ, ಹಿತ ಅಹಿತ, ಯೋಗ್ಯ-ಅಯೋಗ್ಯ ಮೊದಲಾದ ವಿಚಾರಗಳನ್ನು ನಷ್ಟಗೊಳಿಸಿ, ಮೋಹದಿಂದ ಎಲ್ಲ ದ್ರವ್ಯದ ವಿಷಯದಲ್ಲಿ "ಇದು ನನ್ನದು, ಇದು ನನ್ನದು" ಎಂಬ ಪರಿಣಾಮವನ್ನು ಹುಟ್ಟಿಸುತ್ತದೆ. ಇಂಥ ಪರಿಣಾಮವು ಉತ್ಪನ್ನವಾಗುವುದೇ ಮೂರ್ಛೆಯು. ಇದಕ್ಕೇನೇ ಭಗವಂತನು ಪರಿಗ್ರಹವೆಂದು ಹೇಳಿದ್ದಾನೆ. ಬಾಹ್ಯಪರಿಗ್ರಹವು ಸ್ವಲ್ಪವಿದ್ದರೆ–ಏನೂ ಇಲ್ಲದಿದ್ದರೂ ಸಹ–ಅಂತರಂಗ ಪರಿಗ್ರಹವಿದ್ದಲ್ಲಿ ಅವನು ಪರಿಗ್ರಹಿಯೇ ಎನಿಸುವನು ಶ್ರೀ ಕಾರ್ತಿಕೇಯಸ್ವಾಮಿಗಳು ಹೀಗೆ ಹೇಳಿದ್ದಾರೆ—

ಬಾಹಿರಗಂಥವಿಹೀಣಾ ದಲಿದ್ದಮಣುಆ ಸಹಾವದೋ ಹುಂತಿ ।
ಅಬ್ಭಂತರಗಂಥಂ ಪುಣ ಣ ಸಕ್ಕದೇ ಕೋ ವಿ ಛಂಡೇದುಂ ॥ ೩೮೭ ॥

ಅರ್ಥ—ಬಡವರಿಗೆ ಬಾಹ್ಯ ಪರಿಗ್ರಹವು ಸ್ವಾಭಾವಿಕವಾಗಿ ಇರುವುದೇ ಇಲ್ಲ ಲಕ್ಷಾವಧಿ ಜನರಿಗೆ ಅವರ ಇಡೀ ಆಯುಷ್ಯದಲ್ಲಿಯೇ ತಾಮ್ರ–ಹಿತ್ತಾಳೆಗಳ ಪಾತ್ರೆಗಳು ದೊರೆಯುವದಿಲ್ಲ. ಇದನ್ನು ನಾವು ಪ್ರತ್ಯಕ್ಷ ಕಾಣುತ್ತೇವೆ. ಯಾರಿಗೆ ಜನ್ಮದಲ್ಲಿಯೇ ತುಪ್ಪದ ವಾಸನೆಯನ್ನು ನೋಡಲಿಕ್ಕೆ ಸಿಕ್ಕುವದಿಲ್ಲವೋ ಅವರಿಗೆ ಅದು ತಿನ್ನಲಿಕ್ಕೆ ಎಲ್ಲಿ ದೊರೆತೀತು? ಯಾರಿಗೆ ಅಂಗಿ, ಟೊಪ್ಪಿಗೆ, ರುಮಾಲುಗಳು ಧರಿಸಲಿಕ್ಕೆ ದೊರೆತಿಲ್ಲವೋ, ಯಾರಿಗೆ ಇಡೀ ಜನ್ಮದಲ್ಲಿ ಹೊಟ್ಟೆತುಂಬ ಅನ್ನವು ತಿನ್ನಲಿಕ್ಕೆ ಸಿಕ್ಕಿಲ್ಲವೋ, ಯಾರ ಮದುವೆಯಾಗಿಲ್ಲವೋ, ಯಾರಿಗೆ ನಾಲ್ಕಾರು ದಿನ ಸಾಲುವಷ್ಟು ಧಾನ್ಯವನ್ನು ಸಂಗ್ರಹ ಮಾಡಲಿಕ್ಕೆ ಆಗಿಲ್ಲವೋ, ಯಾರಿಗೆ ದುಡ್ಡೆರಡು ದುಡ್ಡುಗಳನ್ನು ಸಂಪಾದಿಸುವುದೇ

ಕಷ್ಟಕರವಾಗಿರುವುದೋ, ಅವರಿಗೆ ಬೆಳ್ಳಿ–ಬಂಗಾರಗಳ ದರ್ಶನವು ಎಂದಾದರೂ ಆಗಿರುವುದೋ ಇಲ್ಲವೋ ಸಂಶಯವೇನು ಇದರಲ್ಲಿ? ಇನ್ನು ಇರಲಿಕ್ಕೆ ಗುಡಿಸಲೂ ಇಲ್ಲದಂಥವರಿಗೂ ಸಹ ಅಂತರಂಗ ಮಮತೆಯು ಇಲ್ಲದಂತೆ ಆಗಿರುವದಿಲ್ಲ ಅದರಿಂದ ಅವರೆಲ್ಲರೂ ಮೂರ್ಛಾವಂತರು ಅರ್ಥಾತ್ ಪರಿಗ್ರಹಿಗಳು ಎನಿಸುತ್ತಾರೆ

**ಒಂದು ಸಂಶಯ**—ಮೂರ್ಛೆಗೆ ಪರಿಗ್ರಹ ಎಂದು ಹೇಳಿದಾಗ, ಹೊರಗಿನ ಧನ–ಧಾನ್ಯ–ವಸ್ತ್ರ–ಪ್ರಾವರಣ ಮೊದಲಾದವುಗಳಿಗೆ ಪರಿಗ್ರಹವೆನ್ನಲಿಕ್ಕೆ ಬರಲಾರದಲ್ಲ

**ಸಮಾಧಾನ**—ಬಾಹ್ಯ ಪರಿಗ್ರಹವು ಅಂತರಂಗ ಪರಿಗ್ರಹವನ್ನು ಹುಟ್ಟಿಸಲಿಕ್ಕೆ ಕಾರಣವಾಗುವದು. ಕಾಳು–ಕಡ್ಡಿ–ಅರಿವೆ–ಒಡವೆ ಮೊದಲಾದ ಬಾಹ್ಯ ಪರಿಗ್ರಹಗಳನ್ನು ನೋಡಿದ ಕೂಡಲೆ ಅವು ತನಗೆ ಪ್ರಾಪ್ತವಾಗಬೇಕೆಂದು ಮನಸ್ಸಿನಲ್ಲಿ ಇಚ್ಛೆಯು ಜನಿಸುತ್ತದೆ. ಆ ಇಚ್ಛೆಯನ್ನು ತಡೆದುಕೊಳ್ಳಲಿಕ್ಕೆ ಆಗದಿದ್ದರೆ ಆ ಮನುಷ್ಯನಿಂದ ಅವುಗಳನ್ನು ಸಂಪಾದಿಸುವದಕ್ಕಾಗಿ ಒಂದೇ ಸವನೆ ಪ್ರಯತ್ನವು ನಡೆಯುತ್ತದೆ ಅಂತಲೇ ಅವುಗಳಿಗೆ ಮೂರ್ಛೆಯ ಕಾರಣವೆಂದು ತಿಳಿಯಲಾಗಿದೆ, ಅದಕ್ಕಾಗಿ ಆ ಕಾರಣಗಳ–ಬಾಹ್ಯ ಪರಿಗ್ರಹಗಳ–ತ್ಯಾಗ ಮಾಡುವ ಅವಶ್ಯಕತೆ ಇದೆ

**ಪರಿಗ್ರಹವೆಂದರೆ ಹಿಂಸೆ.** ಭಗವಂತರು ಅಂತರ್–ಬಾಹ್ಯ ಪರಿಗ್ರಹಗಳೆರಡಕ್ಕೂ ಹಿಂಸೆಯೆಂದು ಹೇಳಿದ್ದಾರೆ ಎರಡೂ ಪರಿಗ್ರಹಗಳನ್ನು ತ್ಯಾಗಮಾಡುವುದರಲ್ಲಿ ಅಹಿಂಸೆಯಿದೆ ಎಂದೂ ಹೇಳಿದ್ದಾರೆ ಮಿಥ್ಯಾತ್ವ, ಕಷಾಯ, ಅಂತರಂಗ ಪರಿಗ್ರಹ ಇವು ಹಿಂಸೆಯ ಬೇರೆ ಪರ್ಯಾಯ ನಾಮಗಳಾಗಿವೆ. ಬಾಹ್ಯ ಪರಿಗ್ರಹಗಳಲ್ಲಿಯ ಮಮತ್ವವೂ ಹಿಂಸೆಯೇ ಆಗಿದೆ ಕೃಷ್ಣ, ನೀಲ, ಕಾಪೋತ ಮೊದಲಾದ ಲೇಶ್ಯೆಗಳ ಅಶುಭ ಪರಿಣಾಮವು, ಪರಿಗ್ರಹಗಳ ಮೇಲಿನ ಮಮತೆಯಿಂಲೇ ಉಂಟಾಗುತ್ತದೆ ದೊಡ್ಡ ದೊಡ್ಡ ಆರಂಭಗಳು ಸಹ ಪರಿಗ್ರಹಗಳ ಮೇಲಿನ ತೀವ್ರ ಪ್ರೀತಿಯ ಪರಿಣಾಮಗಳಾಗಿವೆ ಪರಿಣಾಮದಲ್ಲಿ ಶುದ್ಧತೆಯು ಕಷಾಯವು ಮಂದವಾಗುವುದರಿಂದ ಆಗುತ್ತದೆ. ಕಷಾಯದ ಮಂದತೆಯು ಪರಿಗ್ರಹದ ಅಭಾವದಿಂದ ಸಂಭವಿಸುತ್ತದೆ ಅಂತಲೇ ಪರಿಗ್ರಹದ ಮೇಲಿನ ಸಂಪೂರ್ಣ ಪ್ರೀತಿಯು ಇಲ್ಲದಂತೆ ಆಗುತ್ತಿದ್ದರಂತೂ ಒಳ್ಳೆಯದೇ ಹಾಗೆ ಆಗದೆ ಇದ್ದರೆ ಪರಿಗ್ರಹದ ಕೆಲವೊಂದು ಮರ್ಯಾದೆಯನ್ನಾದರೂ ಇಟ್ಟುಕೊಳ್ಳಬೇಕು ಪರಿಗ್ರಹವು ಸ್ವಲ್ಪ, ಇಚ್ಛೆಯು ಬಹಳವಿದ್ದರೂ-ಬಹಳ ಆಶೆ, ಬಯಕೆಗಳಿರುವದರಿಂದಲೇ ಆ ವಸ್ತುಗಳೇನೂ ಲಭಿಸುವದಿಲ್ಲ ಅಂತರಾಯ ಕರ್ಮದ ಕ್ಷಯೋಪಶಮ ಇದ್ದಷ್ಟೇ ಲಾಭವಾಗುವುದು ಹೆಚ್ಚಿಗೆ ಇಚ್ಛೆಯನ್ನು ಮಾಡಿದರೆ ಪಾಪ ಬಂಧವೇ ಆಗುವುದು ಅದರಿಂದ ಪಾಪಕ್ಕೆ ಕಾರಣವಾದ ಪರಿಗ್ರಹದ ಮಮತೆಯನ್ನು ತ್ಯಜಿಸಿ, ಸಿಕ್ಕಷ್ಟರಲ್ಲಿಯೇ ಸಂತೋಷವಾಗಿದ್ದು, ಬಾಳುವೆ ಮಾಡುವುದು ಯೋಗ್ಯವಾಗಿದೆ.

**ಗೃಹಸ್ಥರಿಗೆ ಪರಿಮಿತ ಪರಿಗ್ರಹವೇ ಉಚಿತ.** ಎಲ್ಲ ಪರಿಗ್ರಹಗಳನ್ನು ತ್ಯಾಗಮಾಡುವುದು ಉತ್ತಮ-ವಾದರೂ ಗೃಹಸ್ಥನಾಗಿರುವಾಗ ಧರ್ಮದಿಂದ ಬಾಳಲಿಕ್ಕೂ ತನ್ನ ಯೋಗ್ಯತೆಗೆ ಅನುಸರಿಸಿ ಕೆಲವು ಪರಿಗ್ರಹಗಳನ್ನು ಇಡದೆ ನಡೆಯುವದಿಲ್ಲ. ಗೃಹಸ್ಥನು ಏನೂ ಪರಿಗ್ರಹವನ್ನು ಇಡಬಾರದೆಂದರೆ ನಡೆಯದು ಅವನಿಗೆ ಅನೇಕ ಹೊಣೆಗಾರಿಕೆಗಳು ಇರುತ್ತವೆ. ಕಾಲ, ಅಕಾಲ, ದುಷ್ಕಾಲ, ರೋಗವುಂಟಾದಾಗ, ವಿಯೋಗ ಒದಗಿದಾಗ, ಮಕ್ಕಳ ಮದುವೆಗಳಾದಾಗ ಅವನಿಗೆ ಪರಿಗ್ರಹಗಳ ಅವಶ್ಯಕತೆ ಇರುತ್ತದೆ. ಆ ಕಾರ್ಯಗಳನ್ನೆಲ್ಲ ಅವನು ಮಾಡಬೇಕಾಗುತ್ತದೆ. ಅವುಗಳನ್ನು ಮಾಡದೆ ಇದ್ದರೆ ಅವನ ಮನಸ್ಸಿಗೆ ಸ್ಥಿರತೆಯು ಉಂಟಾಗುವದಿಲ್ಲ. ಮನಸ್ಸಿನ ಸ್ಥಿರತೆಯೇ ಇಲ್ಲದಂತಾದರೆ ಗೃಹಸ್ಥ ಧರ್ಮವನ್ನೂ ಸಹ ಅವನಿಗೆ ಆಚರಿಸಲಿಕ್ಕೆ ಆಗದು ಗೃಹಸ್ಥ ಧರ್ಮದ ರಕ್ಷಣೆಗಾಗಿ ಅವನಿಗೆ ಕೆಲವೊಂದು ಪರಿಗ್ರಹಗಳ ಅವಶ್ಯಕತೆಯಿದೆ ಅದಕ್ಕಾಗಿ ಅವನು ತನ್ನ ಹೊಟ್ಟೆಯನ್ನು ನ್ಯಾಯಮಾರ್ಗದಿಂದ ತುಂಬಿಕೊಳ್ಳುತ್ತಿರಬೇಕು.

ಸಾಧುವು ಸ್ವಲ್ಪ ಪರಿಗ್ರಹವನ್ನು ಇಟ್ಟರೂ ಸಹ ಇಹ–ಪರಲೋಕಗಳಲ್ಲಿ ಭ್ರಷ್ಟನೆನಿಸುತ್ತಾನೆ. ಗೃಹಸ್ಥನು ಪರಿಗ್ರಹವಿಡದಿದ್ದರೆ ಭ್ರಷ್ಟನಾಗುವನು. ಎಲ್ಲಿಯ ವರೆಗೆ ತಾನು ಗೃಹಸ್ಥಾಶ್ರಮದಲ್ಲಿ ಇರುವದಿದೆಯೋ ಅಲ್ಲಿಯ ವರೆಗೆ ಸ್ವಲ್ಪಿಲ್ಲ ಸ್ವಲ್ಪ ಪರಿಗ್ರಹವನ್ನು ಇಡದಿದ್ದರೆ ಅವನ ಮನಸ್ಸಿನ ಶಾಂತಿಯೇ ಉಳಿಯುವದಿಲ್ಲ. ಜೀವನ ಸಾಧನೆಯು ಇರದಿದ್ದರೆ ನಿರಾಧಾರ ಪುರುಷನ ಪರಿಣಾಮವು ಧರ್ಮಸೇವನದಲ್ಲಿ ಸ್ಥಿರವಾಗಿ ನಿಲ್ಲುವದಿಲ್ಲ. ಅದರಿಂದ ಪರಿಣಾಮದಲ್ಲಿ ವೇದನೆಯು ದುಃಖವು ಇಲ್ಲದಂತೆ ಆಗುವದಿಲ್ಲ ಹೊಟ್ಟೆಗೆ ಅನ್ನವು ಹುಟ್ಟುವಷ್ಟು ಕೆಲಸವನ್ನು ಮಾಡದಿದ್ದರೆ ಅವನಿಗೆ ಸ್ವಾಧ್ಯಾಯ ಪೂಜೆ ಮೊದಲಾದ ಶುಭ ಕಾರ್ಯಗಳನ್ನು ಮಾಡುವದಕ್ಕೆ ಉತ್ಸಾಹವು ಉಳಿಯುವದಿಲ್ಲ. ಹೊಟ್ಟೆಯ ಚಿಂತೆಯಿಂದ ವ್ಯಾಕುಲತೆಯು ಹೆಚ್ಚುತ್ತಹೋಗಿ, ಸಂತೋಷವು ಇಲ್ಲದಂತಾಗುತ್ತದೆ

ಬೇನೆಯು ಬಂದಾಗ, ಮುಪ್ಪು ಆವರಿಸಿದಾಗ, ಮಕ್ಕಳು-ಮರಿಗಳ ವಿಯೋಗ ಒದಗಿದಾಗ, ದ್ರವ್ಯವು ಇಲ್ಲದುದಕ್ಕೆ ಹಲವು ಸಂಕಟಗಳು ಒದಗಿದಾಗ, ಅನ್ನ ವಸ್ತ್ರಗಳ ಆಧಾರವಿಲ್ಲದೆ ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ ಮಾನವನ ಪರಿಣಾಮವು ಸ್ಥಿರವಾಗಿ ನಿಲ್ಲುವುದು ಸಾಧ್ಯವಿಲ್ಲ ದೇಹವು ಸುರಕ್ಷಿತವಿಲ್ಲದ ಹೊರತಾಗಿ ಅಣುವ್ರತ, ಶೀಲ ಮತ್ತು ಸಂಯಮ ಮೊದಲಾದ ಯಾವ ಧರ್ಮಸಾಧನೆಯೂ ಆಗಲಿಕ್ಕೆ ಸಾಧ್ಯವಿಲ್ಲ ಶರೀರದ ರಕ್ಷಣೆಯು ಬಾಳುವೆಯ ಸಾಧನೆಗಳಿಲ್ಲದೆ ಸಾಧ್ಯವಿಲ್ಲ ಅದಕ್ಕಾಗಿ ದೇಶಕಾಲಕ್ಕನುಸರಿಸಿ, ತನ್ನ ಸಾಮರ್ಥ್ಯವನ್ನು ನೋಡಿ, ಆ ಪ್ರಕಾರ ಉದ್ಯೋಗವನ್ನು ಕೈಕೊಳ್ಳಬೇಕು. ಅದಕ್ಕಾಗಿ ಬೇಕಾಗುವ ಅನ್ಯರ ಸಹಾಯವನ್ನು ಪಡೆಯಬೇಕು ನ್ಯಾಯ ಮಾರ್ಗದಿಂದ ಧನವನ್ನು ಸಂಪಾದಿಸುವ ಪ್ರಯತ್ನಮಾಡುತ್ತ ಇರಬೇಕು. ಆಗ ತನ್ನ ಪುಣ್ಯಕ್ಕೆ ಅನುಸರಿಸಿ, ಎಷ್ಟು ದೊರೆಯುವುದೋ ಅಷ್ಟರಲ್ಲಿ ಸಮಾಧಾನವನ್ನು ಹೊಂದಿ, ಧರ್ಮಸೇವನೆಯನ್ನು ಮಾಡುತ್ತಿರ-ಬೇಕು.

ಅಹಿಂಸೆ ಮತ್ತು ಸತ್ಯ ಈ ತಳಹದಿಯ ಮೇಲೆ ನಿಷ್ಠೆಯುಳ್ಳವರಾಗಬೇಕು ಅನ್ಯಾಯದಿಂದ ಪರದ್ರವ್ಯವನ್ನು ಹರಣಮಾಡುವ ಇಚ್ಛೆಯನ್ನು ಇಟ್ಟುಕೊಳ್ಳಬಾರದು. ತಾವು ಕಷ್ಟ ಸಹಿಸಿ ಉದ್ಯೋಗಮಾಡಬೇಕು. ಆಗ ನಿಶ್ಚಯವಾಗಿಯೂ ನಮ್ಮ ಸಲುವಾಗಿ ಜನರಲ್ಲಿ ವಿಶ್ವಾಸವು ಹುಟ್ಟುತ್ತದೆ. ಇದಕ್ಕಾಗಿ ವಿದ್ಯೆ ಮತ್ತು ಕಲೆಗಳನ್ನು ಸಂಪಾದಿಸಿ, ತಮ್ಮಲ್ಲಿ ಯೋಗ್ಯತೆಯನ್ನು ತಂದುಕೊಳ್ಳುವುದು ಅವಶ್ಯಕವಾಗಿದೆ. ಆ ಮೇಲೆ ತಮ್ಮ ಲಾಭಾಂತರಾಯ ಕರ್ಮದ ಕ್ಷಯೋಪಶಮಕ್ಕೆ ಅನುಸರಿಸಿ, ಎಷ್ಟು ಲಾಭಾಲಾಭವು ಬರುವುದೋ ಅಷ್ಟರಲ್ಲಿ ಸಂತುಷ್ಟನಾಗಿರಬೇಕು ಸ್ವಲ್ಪ ಲಾಭವಾದರೂ ಅಡ್ಡಿಯಿಲ್ಲ.

ಸಾಲ ಮಾಡಕೂಡದು. ಮನೆತನದೊಳಗಿನ ಮನುಷ್ಯರ ಪೋಷಣೆಯನ್ನು ನಿಮಗೆ ಲಾಭವಾಗುವ ಪ್ರಮಾಣದಲ್ಲಿಯೇ ಮಾಡಿರಿ. ಮನೆತನದ ವೆಚ್ಚಕ್ಕಾಗಿ ಸಾಲ ಮಾಡಕೂಡದು. ನಿಮಗೆ ಸಾಲದ ಹೆದರಿಕೆಯು ಬಹಳವಾಗಿರಲಿ. ಒಮ್ಮೆ ಸಾಲವಾದರೆ ಎಲ್ಲವನ್ನೂ ನಷ್ಟಗೊಳಿಸುತ್ತದೆ. ಸಾಲಗಾರನ ಧೈರ್ಯ, ಜಾಣತನ ಮೊದಲಾದ ಗುಣಗಳೆಲ್ಲ ಇಲ್ಲದಂತಾಗುತ್ತವೆ ಅವನು ದೀನನಾಗುತ್ತಾನೆ ಒಮ್ಮೆ ಪತ್ತನ್ನು ಕಳೆದುಕೊಂಡರೆ ಅವನ ಜೀವನವು ಸುಸೂತ್ರನಾಗುವದಕ್ಕೂ ಕಷ್ಟವಾಗುತ್ತದೆ ಅದಕ್ಕಾಗಿ ತಮ್ಮ ಉತ್ಪನ್ನ ನೋಡಿ, ಖರ್ಚುಮಾಡಬೇಕು. ಜಗತ್ತಿನಲ್ಲಿ ಇತರ ಪುಣ್ಯವಂತರಾದ ಶ್ರೀಮಂತರ ಜೀವನದ ಕಡೆಗೆ ನೋಡಿ, ನೀವೂ ಖರ್ಚುಮಾಡ ಹತ್ತಿದರೆ ಬಡವರಾಗಿ ಹೋಗಬೇಕಾದೀತು. ಅದರಿಂದ ಇಹ-ಪರಗಳೆರಡೂ ನಷ್ಟವಾಗುತ್ತವೆ

ದೊಡ್ಡಸ್ತನದ ಪೊಳ್ಳು ಅಭಿಮಾನವನ್ನು ಬಿಡಿರಿ. ಹಿರಿಯರಿಂದ ಬಂದ ಮನೆತನದ ಗೌರವ, ಪದ್ಧತಿಗಳೆಂಬ ಬಲೆಗೆ ಬೀಳಬೇಡಿರಿ ನಮ್ಮ ಪೂರ್ವಜರು ದೊಡ್ಡ ದೊಡ್ಡ ಕೆಲಸಗಳನ್ನು ಮಾಡಿರಬೇಕು ಅದರಲ್ಲಿ ನಾವು ಕೊರತೆಯನ್ನು ಹೇಗೆ ಮಾಡುವುದು? ನಾವೂ ಅಂಥ ಕಾರ್ಯವನ್ನು ಮಾಡದಿದ್ದರೆ ಲೋಕದಲ್ಲಿ ನಮ್ಮ ಹೆಸರು ಕೆಟ್ಟೀತು ಇಂಥ ವಿಚಾರಗಳನ್ನು ಎಂದೂ ಮನಸ್ಸಿನಲ್ಲಿ ತರಕೂಡದು ಯಾರ ಪುಣ್ಯವು ತೀರಿರುವುದೋ ಅವರ ದೊಡ್ಡಸ್ತನವೂ ಇಲ್ಲದಂತಾಗುತ್ತದೆ. ಮುಂದೆ ಸಂತೋಷ ವೃತ್ತಿಯನ್ನು ತಾಳಬೇಕು ಶೀಲವನ್ನು ಧರಿಸಬೇಕು. ವ್ರತಗಳನ್ನು ಸ್ವೀಕರಿಸಬೇಕು ಒದಗಿ ಬಂದ ದೈನ್ಯತೆಯನ್ನು ಇಲ್ಲದಂತೆ ಮಾಡಬೇಕು. ವಿಷಯಗಳ ಇಚ್ಛೆಯನ್ನು ಕಡಿಮೆಮಾಡಬೇಕು—ಇವುಗಳಲ್ಲಿಲ್ಲ ನಿಮ್ಮ ಹಿರಿಮೆಯಿದೆ, ಗೌರವವಿದೆ. ಇದರಿಂದಲೇ ಇಹ-ಪರಲೋಕಗಳಲ್ಲಿ ಸುಖವು ಲಭಿಸುವದಿದೆ ಪುಣ್ಯದ ಉದಯವು ಪ್ರಾಪ್ತವಾದಾಗ ಈ ಜೀವವು ಸ್ವರ್ಗದಲ್ಲಿ ಮಹಾ ಋದ್ಧಿಧಾರಿಯಾದ ದೇವಪದದಲ್ಲಿ ವಿರಾಜಮಾನವಾಗುತ್ತದೆ ಅದೇ ಪಾಪದ ಉದಯವು ಪ್ರಾಪ್ತವಾದಾಗ ನರಕದಲ್ಲಿ ಅಥವಾ ಏಕೇಂದ್ರಿಯಗಳಲ್ಲಿ ಹೋಗಿ ಇರಬೇಕಾಗುತ್ತದೆ ಪಾಪದ ಉದಯದಿಂದ ಮಾನವನು ರೋಗಿಯೂ ಬಡವನೂ ಆಗುತ್ತಾನೆ ಅದೇ ಉದಯವು ತೀವ್ರವಾಗಿದ್ದರೆ ಅವನು ತಿರ್ಯಂಚಯೋನಿಯಲ್ಲಿಯೂ ಹುಟ್ಟಬೇಕಾಗುತ್ತದೆ. ಬಹಳ ದೂರವೇಕೆ? ಇದೇ ಜನ್ಮದಲ್ಲಿ ರಾಜನು ರಜಕನಾದುದನ್ನು ನಾವು ಕಾಣುತ್ತೇವೆ ಇಂಥ ಸ್ಥಿತಿಯಲ್ಲಿ ನಿಮ್ಮ ದೊಡ್ಡಸ್ತನವು ಎಲ್ಲಿ ಉಳಿದೀತು? ನಿಮ್ಮ ಹತ್ತರ ಧನವು ಉಳಿಯಲಿಲ್ಲ; ಇದರ ವಿಚಾರ ಮಾಡದೆ ಕೈ ಸಡಿಲುಬಿಟ್ಟು, ದುಡ್ಡನ್ನು ಖರ್ಚುಮಾಡುತ್ತ ಹೋದರೆ ನೀವು ಬಡವರೂ ಸಾಲಗಾರರೂ ಆಗಿ, ನಿಮ್ಮ ಬೆಲೆಯು ಜನರಲ್ಲಿ ಇಲ್ಲದಂತೆ ಆದೀತು. ಎಲ್ಲ ಜನರು ನಿಮ್ಮ ನಿಂದೆಯನ್ನು ಮಾಡಲಿಕ್ಕೆ ಹತ್ತಿಯಾರು. ಅದರಿಂದ ನಿಮಗೆ ಬಹಳ ದುಃಖವೂ ಆದೀತು ಹಗಲಿರುಳೂ ಆರ್ತರೌದ್ರಧ್ಯಾನವನ್ನು ಮಾಡಿ ನೀವು ದುರ್ಗತಿಗೂ ಪಾತ್ರರಾದೀರಿ.

**ಗಳಿಕೆಗಿಂತ ಹೆಚ್ಚಿಗೆ ಖರ್ಚು ಮಾಡಬೇಡಿರಿ.** ಅದಕ್ಕಾಗಿ ನೀವು ನಿಮ್ಮ ಉತ್ಪನ್ನಕ್ಕಿಂತ ಹೆಚ್ಚು ಖರ್ಚು ಮಾಡಬೇಡಿರಿ. ಸ್ವಲ್ಪ ವೆಚ್ಚ ಮಾಡುವುದರಲ್ಲಿಯೇ ಚಾತುರ್ಯವಿದೆ, ಜಾಣತನವಿದೆ ಇದು ನಿಮ್ಮ ಲಕ್ಷ್ಯದಲ್ಲಿರಲಿ. ಉತ್ಪನ್ನಕ್ಕಿಂತ ವೆಚ್ಚವನ್ನು ಕಡಿಮೆಮಾಡುವುದರಲ್ಲಿಯೇ ಜಾಣತನವಿದೆ. ಇದೇ ಉತ್ತಮ ಧರ್ಮವಾಗಿದೆ ಗಳಿಸುವದಕ್ಕಿಂತ ಹೆಚ್ಚಿಗೆ ವ್ಯಯವನ್ನು ಮಾಡಿದರೆ ಬೇಗನೇ ಬಡವರಾಗಬಹುದು ನೀವು ಲೋಕದಲ್ಲಿ ಮೂರ್ಖರೆನಿಸುವಿರಿ ಸಾಲಗಾರರಾದ ಮೇಲೆ ಉತ್ತಮ ಕುಲದೊಳಗಿನ ಯೋಗ್ಯ ಆಚಾರ, ಆದರ ಸತ್ಕಾರ ಮೊದಲಾದವುಗಳು ಇಲ್ಲದಂತೆ ಆಗುತ್ತವೆ ಜನರು ಹೆಸರನ್ನು ಇಡ ಹತ್ತುವರು ನಿಮ್ಮ ಲಕ್ಷ್ಯವು ಧ್ಯಾನ, ಪೂಜನ, ಸ್ವಾಧ್ಯಾಯ, ಶುಭ ಚಿಂತನದಲ್ಲಿ ಒಂದು ಕ್ಷಣವೂ ಕೂಡ ನಿಲ್ಲಲಿಕ್ಕಿಲ್ಲ ಉತ್ಪನ್ನಕ್ಕಿಂತ ಕಡಿಮೆ ವೆಚ್ಚ ಮಾಡುವುದೇ ಗೃಹಸ್ಥನ ನಿಜವಾದ ಧರ್ಮವಾಗಿದೆ ಅಭಿಮಾನಕ್ಕೆ ವಶನಾಗಿ, ಹೆಚ್ಚು ವೆಚ್ಚವನ್ನು ಮಾಡುವ ಮನುಷ್ಯನು ಇತರರು ತನಗೆ ಕೊಡದೆ ಇದ್ದ ಧನವನ್ನು ಕಳ್ಳತನದ ದೃಷ್ಟಿಯಿಂದ ನೋಡಲಿಕ್ಕೆ ಹತ್ತುವನು, ಹಾಗೆ ಇಚ್ಛೆಯೇ ಉತ್ಪನ್ನವಾಗುತ್ತದೆ ಹಾಗೆಯೇ ಅನೇಕ ಪ್ರಕಾರದ ಅಸತ್ಯ ಕರ್ಮಗಳನ್ನು ಮಾಡಿಯೂ ಸುಳ್ಳು ಕಲ್ಪನೆಗಳನ್ನು ಹೂಡಿಯೂ ಯಾವುದಾದರೊಂದು ಪ್ರಕಾರದಿಂದ ಯಾರನ್ನಾದರೂ ಮೋಸಗೊಳಿಸಿ, ಪಾಪವೃತ್ತಿಯಿಂದ ದುಡ್ಡನ್ನು ಸಂಪಾದಿಸಬೇಕೆಂದು ಎನಿಸುತ್ತದೆ ಇದರಿಂದ ಸಂತೋಷ ವೃತ್ತಿಯು ಇಲ್ಲದಂತಾಗುತ್ತದೆ.

**ಒಂದು ಸಂಶಯ**— ಇದಕ್ಕೆ ಹೀಗೂ ಕೆಲವರು ಅನ್ನಬಹುದು ಜೀವನದ ಉಪಕರಣಗಳು ಹಾಗೂ ಲಾಭಗಳು ಪೂರ್ವಕರ್ಮದ ಸ್ವಾಧೀನ ಇರುತ್ತವೆ ಆದರೆ ಧರ್ಮದ ಸೇವೆಯನ್ನು ಮಾಡುವುದಾದರೂ ನಮ್ಮ ಕೈಯಲ್ಲಿ ಇದೆಯಲ್ಲವೆ? ನಮಗೆ ಲಾಭವು ದೊರೆಯದಿದ್ದರೂ ಅಡ್ಡಿಯಿಲ್ಲ, ನಾವು ಧರ್ಮಪರಾಙ್ಮುಖರಾಗಲಿಕ್ಕಿಲ್ಲ

**ಸಮಾಧಾನ**— ಇದಕ್ಕೆ ಹೀಗೆ ಉತ್ತರವಿದೆ. ಲಾಭ ಹಾಗೂ ಜೀವನ ಸಾಧನಗಳು ಪುಣ್ಯ ಕರ್ಮದ ಆಧೀನವಿದ್ದರೂ ಧರ್ಮವನ್ನು ಸ್ವೀಕರಿಸಲಿಕ್ಕೂ ಪುಣ್ಯದ ಅವಶ್ಯಕತೆಯಿದೆ. ಪುಣ್ಯವಿಲ್ಲದೆ ಧರ್ಮವು ನಮ್ಮಿಂದ ಆಗಲಾರದು ಧರ್ಮವೆಂದರೆ ಅಹಿಂಸೆ ಇದನ್ನು ಉತ್ತಮ ಕುಲದಲ್ಲಿ ಹುಟ್ಟಿದರೆ ಪಾಲಿಸಲಿಕ್ಕೆ ಬಂದೀತು ಚಂಡಾಲ, ಭಿಲ್ಲ ಮೊದಲಾದ ನೀಚ ಕುಲದಲ್ಲಿ ಜನ್ಮವೆತ್ತಿದರೆ ಅಹಿಂಸೆಯನ್ನು ನಡೆಯಿಸಲಿಕ್ಕೆ ಆಗದು ಒಳ್ಳೆಯ ಪ್ರದೇಶದಲ್ಲಿ ಹುಟ್ಟುವುದು, ಇಂದ್ರಿಯಗಳ ಪೂರ್ಣತ್ವವನ್ನು ಹೊಂದುವುದು, ರೋಗವಿಲ್ಲದ ಶರೀರವನ್ನು ಪಡೆಯುವುದು, ಒಳ್ಳೆಯ ಮಕ್ಕಳು ಹುಟ್ಟುವುದು, ಬಾಳುವೆಯ ಚಿಂತೆ ಇಲ್ಲದಿರುವುದು, ಧರ್ಮದ ಉಪದೇಶವು ಲಭಿಸುವುದು— ಇವೇ ಮೊದಲಾದ ಸಾಮುಗ್ರಿಗಳು ಪುಣ್ಯೋದಯವಿಲ್ಲದೆ ಸಹಜವಾಗಿ ಪ್ರಾಪ್ತವಾಗುವದಿಲ್ಲ ಯಾರಿಗೆ ಪೂರ್ವ ಪುಣ್ಯದ ಉದಯದಿಂದ ಹೊಟ್ಟೆ ತುಂಬಿಕೊಳ್ಳುವ ಚಿಂತೆ ಇಲ್ಲವೋ ಅವರಿಗೆ ಧರ್ಮದ ಆಚರಣೆಯನ್ನು ಸ್ಥಿರ ಮನಸ್ಸಿನಿಂದ ಮಾಡಲಿಕ್ಕೆ ಬಂದೀತು ಯಾರಿಗೆ ಎಲ್ಲ ಇಂದ್ರಿಯಗಳು ಪೂರ್ಣವಾಗಿದ್ದು, ಶರೀರವು ನಿರೋಗಿಯಾಗಿರುವುದೋ, ನ್ಯಾಯಾನ್ಯಾಯವನ್ನು ವಿಚಾರಿಸುವಷ್ಟು ಬುದ್ಧಿಯು ಇರುವುದೋ, ಧರ್ಮ–ಅಧರ್ಮ, ಯೋಗ್ಯ–ಅಯೋಗ್ಯ ಇದರ ವಿವೇಕವಿರುವುದೋ, ಅಪ್ರಿಯ ವಚನ, ಅವಿನಯ, ಪರದ್ರವ್ಯ, ಪರಸ್ತ್ರೀಯರಿಂದ ಪರಾಙ್ಮುಖತೆಯೂ ಮತ್ತು ಸತತ ಕಾರ್ಯಪ್ರವಣತೆಯೂ, ಧೈರ್ಯ, ಸಮಯಾನುಸಾರ ಭಾಷಣಮಾಡುವ ಶೈಲಿ ಮತ್ತು ಗುಣಗಳು ಇದ್ದವರಿಗೆ ದ್ರವ್ಯಲಾಭ ಹಾಗೂ ಧರ್ಮಲಾಭಗಳೆರಡೂ ಆಗುತ್ತವೆ. ಗುಣವಂತ, ನಿರ್ಲೋಭಿ, ಉದ್ಯೋಗಿ ಮತ್ತು ವಿನಯಶಾಲಿ ಪುರುಷನಿಗೆ ಜೀವನ ಸಾಧನೆಗಳು ದುರ್ಲಭವಾಗುವದಿಲ್ಲ. ಯಾರಿಗೆ ತಮ್ಮಲ್ಲಿಯ ಗುಣ ಹಾಗೂ ಪುರುಷಾರ್ಥದಲ್ಲಿ ವಿಶ್ವಾಸವಿರುತ್ತದೆಯೋ ಅವರಿಗೆ ಬಾಳುವೆಯ ಚಿಂತೆಯಂತೂ ಇರುವದಿಲ್ಲ ಲಾಭಾಂತರಾಯ ಕರ್ಮದ ಕ್ಷಯೋಪಶಮಕ್ಕೆ ಅನುಸರಿಸಿ ಬಹಳವಾಗಲಿ, ಕಡಿಮೆಯಾಗಲಿ ಉಪಜೀವನದ ಸಾಧನಗಳು ಇದ್ದೇ ಇರುತ್ತವೆ. ಆದರಿಂದ ಲಭಿಸಿದಷ್ಟರಲ್ಲಿಯೇ ಸಂತೋಷವನ್ನು ಹೊಂದಿ, ಹೆಚ್ಚಿಗೆ ಇಚ್ಛೆಯನ್ನು ಮಾಡದೆ, ಪರಿಗ್ರಹ ಪರಿಮಾಣ ವ್ರತವನ್ನು ಧರಿಸುವುದು ಯೋಗ್ಯವಾಗಿದೆ.

**ಅನೀತಿಯಿಂದ ನಡೆಯಬೇಡಿರಿ.** ಪುಣ್ಯೋದಯದಿಂದ ಜೀವನೋಪಕರಣಗಳು ದೊರೆತಾಗ ಅನೀತಿಯಿಂದ ನಡೆದು, ಅವುಗಳನ್ನು ಕಳೆದುಕೊಳ್ಳಬೇಡಿರಿ ಅವು ನಷ್ಟವಾಗುವುದರೊಡನೆ ಧರ್ಮವೂ ನಷ್ಟವಾಗುತ್ತದೆ. ನೀವು ನಿಮ್ಮ ಮನಸ್ಸಿನಿಂದ ನೀತಿಯನ್ನು ಬಿಡದಿದ್ದರಾಯಿತು; ನ್ಯಾಯದಿಂದ ನಡೆಯುವ ನಿರ್ಧಾರಮಾಡಿದರಾಯಿತು, ಆಗ ಸಹ ಅಸಾತಾಕರ್ಮದ ಉದಯದಿಂದ ಅಗ್ನಿಪ್ರಲಯ, ಜಲಪ್ರಲಯ, ಕಳವು, ರಾಜರ ಉಪದ್ರವವೇ ಮೊದಲಾದವುಗಳಿಂದ ನಿಮ್ಮ ಜೀವನಸಾಧನಗಳು ನಷ್ಟವಾಗಬಹುದು, ಆದರೆ ನಿಮ್ಮ ಧರ್ಮವು ನಷ್ಟವಾಗಲಾರದು,

ಲೋಕದಲ್ಲಿ ಅಪಕೀರ್ತಿಯಾಗದು. ಅದರಂತೆ ನಿಮ್ಮ ಮೇಲೆ ಇದ್ದ ಜನರ ವಿಶ್ವಾಸವೂ ನಷ್ಟವಾಗಲಿಕ್ಕಿಲ್ಲ ಅದಕ್ಕಾಗಿ ಕನಸಿನಲ್ಲಿಯೂ ಸಹ ಅನ್ಯಾಯದಿಂದ ದ್ರವ್ಯ ಗಳಿಸುವ ವಿಚಾರವನ್ನು ಮನದಲ್ಲಿ ತರಬೇಡಿರಿ ನ್ಯಾಯದಿಂದ ನಡೆಯುತ್ತಿರುವಾಗಲೂ ಪ್ರಬಲವಾದ ಲಾಭಾಂತರಾಯ ಕರ್ಮದ ಉದಯದಿಂದ ಒಂದು ವೇಳೆ ಲಾಭವು ಆಗದೆ ಹೋದರೂ ಸಹ ಮನಸ್ಸಿನ ಸಮತೆಯನ್ನು ಕಾಯ್ದುಕೊಳ್ಳಬೇಕು. ಅದರಲ್ಲಿ ಚಂಚಲವಾಗಗೊಡಬಾರದು

ಕರ್ಮದ ಶಕ್ತಿಯ ವಿಚಾರಮಾಡಿರಿ ಆಯುಃಕರ್ಮವು ಇನ್ನೂ ಉಳಿದಿದ್ದರೆ ಅದು ಆಹಾರ-ಸಾಮಗ್ರಿಯನ್ನು ತನ್ನಿಂದ ತಾನೇ ತಂದು ನೀಡೀತು ಕರ್ಮವು ಬಲಿಷ್ಠವಾಗಿದೆ. ಕಾಡಿನಲ್ಲಿರಲಿ, ವನದಲ್ಲಿರಲಿ, ಗುಡ್ಡದಲ್ಲಿರಲಿ, ನೀರಿನಲ್ಲಿರಲಿ, ನಗರದಲ್ಲಿರಲಿ-ಎಲ್ಲಿದ್ದರೂ ಅಂತರಾಯ ಕರ್ಮದ ಕ್ಷಯೋಪಶಮದ ಪ್ರಕಾರ ಎಲ್ಲರಿಗೂ ಲಾಭವಾಗಿಯೇ ತೀರುವುದು ಅನೇಕ ಜನರು ಪುಣ್ಯಕರ್ಮದ ಉದಯದಿಂದ ಹಲವು ಜನರಿಗೆ ಅನ್ನವನ್ನು ಕೊಟ್ಟು ತಾವು ಊಟ ಮಾಡುತ್ತಾರೆ ಕೆಲವರಿಗೆ ಅಂತರಾಯ ಕರ್ಮದ ಉದಯದಿಂದ ತಮ್ಮ ಸ್ವಂತದ ಹೊಟ್ಟೆಯನ್ನು ತುಂಬಿಕೊಳ್ಳುವಷ್ಟೂ ಅನ್ನವು ಲಭಿಸುವುದಿಲ್ಲ. ಹಲವರಿಗೆ ಅರ್ಧ ಹೊಟ್ಟೆಯಂದಿರುವಷ್ಟು, ಇನ್ನೂ ಕೆಲವರಿಗೆ ಒಂದು ದಿನ ನಾಲುವಷ್ಟು, ಅನೇಕರಿಗೆ ಎರಡು ದಿವಸಕ್ಕೆ ಒಮ್ಮೆ, ಹಲವರಿಗೆ ಮೂರು ದಿವಸಕ್ಕೆ ಒಮ್ಮೆ-ಅದೂ ಎಂಥದಾದರೂ ನೀರಸ ಅನ್ನವು ದೊರೆಯುವುದು! ಇಂಥ ಸ್ಥಿತಿಯಲ್ಲಿಯೂ ಧರ್ಮಾತ್ಮರು ತಮ್ಮ ಮನದ ಸಮತೆಯನ್ನು ಬಿಡುವದಿಲ್ಲ, ಬಿಡಕೂಡದು

ಸಂಕಟ ಕಾಲದಲ್ಲಿ ಮನಸ್ಸಿನ ಸಮತೆಯನ್ನು ಕಾಯ್ದುಕೊಳ್ಳಬೇಕು. ಆ ವೇಳೆಯಲ್ಲಿ ಹೀಗೆ ವಿಚಾರಮಾಡಬೇಕು "ಮೊದಲು ಎಂದಾದರೂ ಒಮ್ಮೆ ನಾವು ಪಶುಯೋನಿಯಲ್ಲಿ ಹುಟ್ಟಿದ್ದೆವು. ಆಗ ಎಂದಾದರೂ ಹೊಟ್ಟೆತುಂಬ ಊಟ ಸಿಕ್ಕಿತ್ತೇ? ಆ ಸ್ಥಿತಿಯಲ್ಲಿ ಹಸಿವು ನೀರಡಿಕೆಗಳ ವೇದನೆಯಿಂದ ಅನೇಕ ಸಲ ಸತ್ತಿರಬೇಕು ಈಗ ಧೈರ್ಯದಿಂದ ಇದ್ದು, ಅದರ ಸಹಾಯದಿಂದ ಧರ್ಮದಿಂದ ಚ್ಯುತನಾಗದಂತೆಯೂ ನೀತಿಯ ಶಿಖರದಿಂದ ಕೂದಲೆಳೆಯಷ್ಟೂ ಕದಲದಂತೆಯೂ ಪ್ರಯತ್ನಿಸುತ್ತಿರಬೇಕು "—ಈ ಪ್ರಕಾರ ಸಂಕಟ ಸ್ಥಿತಿಯಲ್ಲಿಯೂ ಯಾರ ಪರಿಣಾಮವು ದೃಢವಾಗಿ ಉಳಿಯುವುದೋ ಅವರಿಗೆ ಸ್ವರ್ಗಲೋಕದಲ್ಲಿ ಮಹರ್ದ್ಧಿಕ ದೇವರ ಪದವು ಪ್ರಾಪ್ತವಾಗುತ್ತದೆ

ಒಂದು ಸಂಶಯ—ಕೆಲವರು ಹೀಗೂ ಪ್ರಶ್ನೆಯನ್ನು ಹಾಕಬಹುದು ಒಂದು ವೇಳೆ ಸ್ವಂತದ ಪರಿಣಾಮವನ್ನು ಇಷ್ಟು ದೃಢವಾಗಿ ಇಟ್ಟುಕೊಳ್ಳಲಿಕ್ಕೆ ಬಂದೀತು. ಆದರೆ ಮನೆಯೊಳಗಿನ ಎಲ್ಲ ಮನುಷ್ಯರಿಗೂ ಹೀಗೆಯೇ ಎನಿಸುವುದು ಹೇಗೆ ಸಾಧ್ಯವಿದೆ?

ಸಮಾಧಾನ—ಅಂಥ ಕಾಲದಲ್ಲಿ ಸಂಸಾರದೊಳಗಿನ ಜನರಿಗೆ ಹೀಗೆ ಉಪದೇಶ ಮಾಡಬೇಕು: "ಎಲೈ ಬಾಂಧವರೆ, ನೀವು ಪೂರ್ವ ಜನ್ಮದಲ್ಲಿ ಯಾರಿಗೂ ದಾನ ಕೊಟ್ಟಿಲ್ಲ, ಪ್ರತೋಪವಾಸಗಳನ್ನು ಮಾಡಿಲ್ಲ, ಮನಸ್ಸಿಗೆ ಬಂದಂತೆ ನಡೆದು, ತಿನ್ನಬಾರದನ್ನೂ ತಿಂದಿರುವಿರಿ, ಅನ್ಯಾಯದಿಂದ ಎರಡನೆಯವರ ಧನವನ್ನು ಎತ್ತಿ ಹಾಕಿದ್ದಿರಿ, ಆ ಪಾಪದ ಉದಯದಿಂದ ಈಗ ಇಷ್ಟು ದರಿದ್ರರಾಗಿರುವಿರಿ ಹೊಟ್ಟೆಗೆ ಅನ್ನ ಅರಿವೆಗಳು ದೊರೆಯುವದಕ್ಕೂ ಕಷ್ಟವಾಗಿದೆ ಇದು ನೀವು ಮಾಡಿದ ಪಾಪದ ಫಲವಾಗಿದೆ ಈಗ ನೀವು ಉಳಿದ ಪುಣ್ಯವಂತ ಜನರ ಸುಖ ಸೌಲಭ್ಯಗಳನ್ನು ಐಶ್ವರ್ಯವನ್ನೂ ನೋಡಿ ದುಃಖಿತರಾದರೆ ಮುಂದೆ ಇದಕ್ಕಿಂತಲೂ ಹೆಚ್ಚಿಗೆ ಪಶುಗತಿಯೊಳಗಿನ ದುಃಖವನ್ನು ಅನುಭವಿಸಬೇಕಾದೀತು. ಅಲ್ಲದೆ ಕೋಟ್ಯಾವಧಿ ಜನ್ಮಗಳವರೆಗೆ ದಾರಿದ್ರ್ಯವು ಉತ್ಪನ್ನವಾಗುವಂಥ ಪಾಪವನ್ನು ಕಟ್ಟಿಕೊಳ್ಳಬೇಕಾದಿತು ಎರಡನೆಯವರ ಸಂಪತ್ತಿಯು ನಮಗೆ ದೊರೆಯಲಾರದು ಶೋಕ, ಕೆಟ್ಟ ಧ್ಯಾನ, ನೋವು ಮೊದಲಾದವುಗಳನ್ನು ಹೊಂದುವುದರಿಂದ ದುಃಖವು ಇಲ್ಲದಂತೆ ಆಗುವದಿಲ್ಲ. ತಿರುಗಿ ದುಃಖವೇ ಹೆಚ್ಚುವುದು. ಅಂತಲೇ ಸಂತೋಷವನ್ನು ಹೊಂದಿ, ಇಚ್ಛೆ ಇಲ್ಲದವರಾದರೆ ದುಃಖವೆನಿಸಲಿಕ್ಕಿಲ್ಲ ಎಲ್ಲ ಪಾಪ ಕರ್ಮದ ನಿರ್ಜರೆಯೂ ಆದೀತು ದೊಡ್ಡ ತಪಸ್ಸಿನಿಂದ ಆಗದಷ್ಟು ಪಾಪವು ಇದರಿಂದ ನಷ್ಟವಾಗುತ್ತದೆ. ಬಾಂಧವರೇ, ಈ ಕಾಲದಲ್ಲಿ ಅಲ್ಪ ಭೋಜನವು ಸಿಕ್ಕರೆ ಮನಸ್ಸಿಗೆ ಒಪ್ಪುವಂದ ವಸ್ತ್ರಾಭರಣಗಳು ದೊರೆಯದೆ ಶರೀರ ಮುಚ್ಚುವಷ್ಟು ಬಟ್ಟೆಗಳು ಲಭಿಸಿದರೆ-ಒಂದು ವೇಳೆ ಅವೂ ಸಿಗದಿದ್ದರೂ ಸಹ ನಿಮ್ಮ ಪರಿಣಾಮದಲ್ಲಿ ವ್ಯಾಕುಲತೆಯನ್ನು ಉತ್ಪನ್ನವಾಗಗೊಡಬೇಡಿರಿ. ಶಾಂತತೆಯಿಂದ ಇದ್ದರೆ ಈ ಸ್ಥಿತಿಯಲ್ಲಿಯೂ ಅದು ದೊಡ್ಡ ತಪಸ್ಸಾದೀತು. ಕರ್ಮವು ನಿಮ್ಮಲ್ಲಿ ಮಲವನ್ನು ಉತ್ಪನ್ನ ಮಾಡಿದೆ. ನಾನು ದೈವ ಮತ್ತು ಪುರುಷಾರ್ಥ ಈ ಎರಡರ ಅನುಕೂಲತೆಯಿಂದಲೂ ದ್ರವ್ಯವನ್ನು ಗಳಿಸುವ ಪ್ರಯತ್ನ ಮಾಡುತ್ತಲಿರುವೆ. ಇದರಲ್ಲಿ ಲಾಭಾಂತರಾಯದ ಕ್ಷಯೋಪಶಮವು ಇದ್ದಷ್ಟೇ

ಲಾಭವು ನ್ಯಾಯಮಾರ್ಗದಿಂದ ನನಗೆ ಲಭಿಸೀತು ಅದನ್ನಷ್ಟು ನಿಮ್ಮ ಹತ್ತಿರ ತಂದು ಕೊಡುವೆ ಅದರಲ್ಲಿ ನನ್ನ ಪಾಲಿಗೆ ಬಂದಷ್ಟು ನನಗೆ ಕೊಡಿರಿ ಉಳಿದದ್ದನ್ನು ನಿಮ್ಮಲ್ಲಿ ಹಂಚಿಕೊಳ್ಳಿರಿ ನಾನು ಈಗ ಭಗವಂತನು ಉಪದೇಶಿಸಿದ ಧರ್ಮವನ್ನು ಸ್ವೀಕರಿಸಿರುವೆ. ಅದಕ್ಕಾಗಿ ನಿಮ್ಮ ಸಲುವಾಗಿ ಅನ್ಯಾಯ, ಕಪಟ ಮೊದಲಾದ ಪಾಪಗಳನ್ನು ಮಾಡಿ ದ್ರವ್ಯವನ್ನು ಸಂಪಾದಿಸಲಾರೆ ನ್ಯಾಯನೀತಿಗಳಿಂದಲೂ ಯಾವುದರಿಂದ ಧರ್ಮಕ್ಕೆ ಬಾಧೆ ಬರುವದಿಲ್ಲವೋ ಆ ರೀತಿಯಿಂದ ಉದ್ಯೋಗ ಮಾಡಿ, ಧನವನ್ನು ಸಂಪಾದಿಸೇನು ನೀವೂ ನನ್ನ ಧರ್ಮವು ಕೆಡದಂತೆ ವರ್ತಿಸಿರಿ ನಿಮ್ಮ ಪುಣ್ಯ–ಪಾಪದ ಫಲಗಳನ್ನು ಭೋಗಿಸಿರಿ ವ್ಯಾಕುಲತೆಯನ್ನು ಬಿಟ್ಟು, ನಿನ್ನಷ್ಟರಲ್ಲಿ ಸಂತೋಷವನ್ನು ಹೊಂದಿ, ಸುಖದಿಂದ ಇರುವುದು " —ಈ ಪ್ರಕಾರ ನೀತಿ ಹಾಗೂ ಧರ್ಮಗಳ ಮೇಲೆ ದೃಢ ವಿಶ್ವಾಸವು ಯಾರಿಗೆ ಇರುವುದೋ ಅವರಿಗೇ ಸ್ಥೂಲ ಪರಿಗ್ರಹಪ್ರಮಾಣ ವ್ರತದ ಆಚರಣೆಯು ಸಂಭವಿಸುತ್ತದೆ ಯಾರು ಮನೆಯವರನ್ನು ಸಂರಕ್ಷಿಸುವದಕ್ಕಾಗಿ, ಪಾಪಕ್ರಿಯೆಯನ್ನು ಮಾಡಲಿಕ್ಕೆ ಪ್ರವೃತ್ತಿಸುವರೋ ಮತ್ತು ಅಸತ್ಯ, ಹಿಂಸೆ ಕಳವು ಇತ್ಯಾದಿ ಪಾಪಗಳನ್ನು ಸಂಪಾದಿಸುವರೋ ಅವರಿಗೆ ತೀವ್ರ ಪಾಪದ ಬಂಧವು ಆಗುತ್ತದೆ ಅದರಿಂದ ಅವರು ದುರ್ಗತಿಗೆ ಹೋಗುವರು ಅದಕ್ಕಾಗಿ ಉಳಿದ ನಿಮ್ಮ ಸ್ವಲ್ಪ ಆಯುಷ್ಯದಲ್ಲಾದರೂ ವ್ರತ, ಶೀಲ, ಸಂಯಮ ಮೊದಲಾದವುಗಳಲ್ಲಿ ನೀವು ಎಷ್ಟನ್ನು ಧಾರಣ ಮಾಡಿರುವಿರೋ ಅಷ್ಟನ್ನು ದೃಢವಾಗಿ ಕಾಯ್ದುಕೊಳ್ಳಲು ಪ್ರಯತ್ನಿಸಿರಿ

ಪಾಪವಿಲ್ಲದೆ ಧನವು ದೊರೆಯದು ಎಂಬ ಮಾತು ಸಟೆಯಾಗಿದೆ. ದ್ರವ್ಯವು ಪಾಪದಿಂದಲೇ ಲಭಿಸುವದೆಂದು ಹಲವರು ಹೇಳುತ್ತಾರೆ ಪಾಪಮಾಡದೆ ಅದು ಲಭಿಸುವದಿಲ್ಲ ಅಂದಮೇಲೆ ನಾವು ತ್ಯಾಗಿಗಳೂ ವ್ರತಿಕರೂ ಆದರೆ ಧನವು ಎಲ್ಲಿಂದ ಲಭಿಸೀತು? "ಪಾಪವಿಲ್ಲದೆ ಧನವು ದೊರೆಯದು ಎಂಬ ಹೇಳಿಕೆಯು" ಪೂರ್ಣ ಭ್ರಮವಾಗಿದೆ. ಒಮ್ಮೆ ಪಾಪದಿಂದಲೇ ಧನವು ದೊರೆಯುತ್ತದೆಂದು ಅನ್ನಬೇಕಾದರೆ ಜಗತ್ತಿನಲ್ಲಿ ಭಿಲ್ಲ, ಚಾಂಡಾಲ, ಕಳ್ಳ, ಕಾಕರರು, ಮನುಷ್ಯರ ಕೊಲೆ ಮಾಡುವವರು, ಊರನ್ನು ಸುಡುವವರು, ದಾರಿಕಾರರನ್ನು ಸುಲಿಯುವವರು—ಇಂಥವರು ಅನೇಕರು ಇದ್ದಾರೆ. ಇದೇ ಪ್ರಕಾರ ಎಲ್ಲ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಗಳಲ್ಲಿ ಪಾಪಕರ್ಮಗಳನ್ನು ಮಾಡುವ ಜೀವಗಳು ತುಂಬಿವೆ. ಅವರಲ್ಲಿ ಎಲ್ಲ ಪುರುಷ–ಸ್ತ್ರೀ–ಬಾಲಕರೂ ಸಹ ಹಿಂಸೆ, ಅಸತ್ಯ ಭಾಷಣ, ಕಳವುಗಳನ್ನು ಮಾಡಲಿಕ್ಕೆ ಸಿದ್ಧರಿದ್ದಾರೆ ಆದರೆ ಅವರೆಲ್ಲರಲ್ಲಿ ಧನವು ಏಕೆ ಇಲ್ಲ? ಇನ್ನು ಇಂಥವರಲ್ಲಿಯೂ ಕೆಲವರ ಹತ್ತರ ಧನವು ಇರುತ್ತದೆ ಅದಕ್ಕೆ ಕಾರಣವೂ ಇಲ್ಲದೆ ಇಲ್ಲ ಅವರು ಪೂರ್ವಜನ್ಮದಲ್ಲಿ ಕುಪಾತ್ರದಾನ ಮಾಡಿದ್ದಾರೆ, ಕೆಟ್ಟ ತಪಸ್ಸನ್ನು ಆಚರಿಸಿ, ಸುಳ್ಳು ಪುಣ್ಯವನ್ನು ಕಟ್ಟಿಕೊಂಡಿದ್ದಾರೆ, ಅದಕ್ಕಾಗಿ ಈ ಜನ್ಮದಲ್ಲಿ ಅವರಿಗೆ ಧನವು ಪ್ರಾಪ್ತವಾಗಿದೆ ಪುಣ್ಯಹೀನನಾದವನಿಗೆ ಏನೂ ಧನವು ಲಭಿಸಲಾರದು ಪೂರ್ವ ಪುಣ್ಯವು ಇಲ್ಲದೆ ಕೇವಲ ಪಾಪಕಾರ್ಯಗಳಿಂದ ಧನವು ಎಂದೂ ದೊರೆಯುವದಿಲ್ಲ. ಯಾರು ಪೂರ್ವಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿರುವರೋ ಅವರಿಗೆ ಈ ಜನ್ಮದಲ್ಲಿ ಕಳವು–ದರೋಡೆಗಳನ್ನು ಮಾಡದೆಯೂ ಸಹ ಸಂಪತ್ತಿಯು ಪ್ರಾಪ್ತವಾಗುತ್ತದೆ ಅವರು ರಾಜಕುಲದಲ್ಲಿ ಜನಿಸುವರು. ಕೋಟ್ಯಾಧೀಶರಾದ ಸಾವುಕಾರರ ಮನೆಯಲ್ಲಿ ಹುಟ್ಟುವರು. ಇವೆಲ್ಲ ಪೂರ್ವಪುಣ್ಯದ ಫಲಗಳಾಗಿವೆ. ಈ ಸುಳ್ಳುಪುಣ್ಯಗಳಿಂದ ಪ್ರಾಪ್ತವಾದ ಲಕ್ಷ್ಮಿಯನ್ನು ಉಪಭೋಗಿಸುವವರು ಕೊನೆಗೆ ನರಕ ತಿರ್ಯಂಚ ಯೋನಿಗಳಲ್ಲಿ ಅನಂತ ಕಾಲದ ವರೆಗೆ ಭ್ರಮಣ ಮಾಡಬೇಕಾಗುತ್ತದೆ

ಎನಿತು ಪರಿಗ್ರಹದ ತೊಡರ್ಪನಿತೆ ಮನೋದುಃಖಮೆಂಬುದಂ ತಾಂ ತನ್ನೊಳ್ ।
ನೆನೆದು ಪರಿಗ್ರಹಮಂ ತೆಱೆವನೆ ದೇಪಂ ಮುಕ್ತಿವನಿತೆಗಾತನೆ ಕಾಂತಂ ॥
ಬಿಡು ರಾಜ್ಯದ ಮೋಹಮನೆಡೆಯುಡುಗಡೆ ನೆನೆ ಜೈನಧರ್ಮಮಂ ಕಿಡುವಪರಿ- ।
ಗ್ರಹಯುಗಮಂ ಪಿಡಿಯದೆ ಬಿಡು ಪಡಿಮಾತೇಂ ಬಿಟ್ಟೊಡೆಯ್ದುವೈ ಶುಭಗತಿಯಂ ॥

—ನಯಸೇನ–ಧರ್ಮಾಮೃತಂ ೧೪–೫, ೩೪.

ಇನ್ನು ಪರಿಗ್ರಹಪ್ರಮಾಣವ್ರತದ ಐದು ಅತಿಚಾರಗಳನ್ನು ಹೇಳುತ್ತಾರೆ—

**ಅತಿವಾಹನಾತಿಸಂಗ್ರಹವಿಸ್ಮಯಲೋಭಾತಿಭಾರವಹನಾನಿ ।**
**ಪರಿಮಿತಪರಿಗ್ರಹಸ್ಯ ಚ ವಿಕ್ಷೇಪಾಃ ಪಂಚ ಲಕ್ಷ್ಯಂತೇ ॥ ೬೨ ॥**[1]

ಅನ್ವಯಾರ್ಥಃ—(ಪರಿಮಿತ ಪರಿಗ್ರಹಸ್ಯ) ಪರಿಗ್ರಹ-ಪ್ರಮಾಣಾಣುವ್ರತಕ್ಕೆ (ಚ) ಸಹ (ಅತಿವಾಹನ) ವಾಹನಗಳಿಂದ ಹೆಚ್ಚು ಕೆಲಸ ತಕ್ಕೊಳ್ಳುವುದು—ಲಾಭಕ್ಕಾಗಿ ಮಿತಿಯಿಲ್ಲದೆ ವಾಹನಗಳನ್ನು ನಡೆಯಿಸುವುದು. (ಅತಿಸಂಗ್ರಹ) ಬಹಳಷ್ಟು ಸಂಗ್ರಹಿಸಿಡುವುದು (ವಿಸ್ಮಯ)—ಅನ್ಯರಿಗೆ ಆದ ಲಾಭಾದಿಗಳನ್ನು ಕಂಡು-ವಿಸ್ಮಯ ಹೊಂದುವುದು (ಲೋಭ)—ವಿಶಿಷ್ಟ ಲಾಭವಾಗುತ್ತಿದ್ದರೂ ಹೆಚ್ಚಿಗೆ-ಲೋಭವಿಡುವುದು (ಅತಿಭಾರವಹನ) ಲೋಭಕ್ಕೆ ವಶವಾಗಿ ಯಾರ ಮೇಲಾದರೂ ಹೆಚ್ಚಿಗೆ ಭಾರ ಹೊರಿಸುವುದು. (ಪಂಚ)-ಇವು-ಐದು (ವಿಕ್ಷೇಪಾಃ) ಅತಿಚಾರಗಳನ್ನು (ಲಕ್ಷ್ಯಂತೆ) ನಿಶ್ಚಿತಗೊಳಿಸಲಾಗಿದೆ

ವಿಶೇಷಾರ್ಥ—[ಪರಿಗ್ರಹ ಪರಿಮಾಣ ವ್ರತವನ್ನು ಸ್ವೀಕರಿಸುವಾಗ ಸುಸಂಸ್ಕೃತವಾಗುವ ಮನೋ-ವೃತ್ತಿಯಲ್ಲಿ ಒಂದು ಪರಿವರ್ತನವಾಗಲಿಕ್ಕೆ ಬೇಕು ಅದು ಚೇತನ ಅಚೇತನ ಪದಾರ್ಥಗಳಿಂದ ಲಾಭವನ್ನು ಹೆಚ್ಚಿಗೆ ಪಡೆಯುವದಕ್ಕಾಗಿ, ಅವುಗಳ ಉಪಯೋಗಾದಿಗಳನ್ನು ಎಷ್ಟು ಮಾಡಬೇಕೋ ಅದಕ್ಕಿಂತ ಹೆಚ್ಚು ಮಾಡುವುದು—ನ್ಯಾಯನೀತಿಗಳ ಉಲ್ಲಂಘನವಮಾಡುವುದು—ಇಲ್ಲಿ 'ಅತಿ' ಶಬ್ದದ ವಾಚ್ಯಾರ್ಥವಾಗಿದೆ. ನ. ದ]

ಭಾವ—ಅತಿವಾಹನ, ಅತಿಸಂಗ್ರಹ, ವಿಸ್ಮಯ, ಲೋಭ, ಅತಿಭಾರವಹನ ಇವು ಐದನೆಯ ಅಣುವ್ರತವಾದ ಪರಿಗ್ರಹಪರಿಮಾಣದ ಐದು ಅತಿಚಾರಗಳಾಗಿವೆ.

(೧) ಒಂಟೆ, ಕುದುರೆ, ಎತ್ತು ಮೊದಲಾದ ತಿರ್ಯಂಚ ಜೀವಿಗಳನ್ನು ತಮ್ಮ ದಾಸ, ದಾಸಿ, ಸೇವಕ ಮೊದಲಾದವರನ್ನೂ ಅತಿ ಲೋಭಕ್ಕೆ ವಶವಾಗಿ ಹೆಚ್ಚಿಗೆ ನಡೆಯಿಸುವುದು ಅತಿವಾಹನಾತಿಚಾರವೆನಿಸುತ್ತದೆ.

(೨) ತಮಗೆ ಅವಶ್ಯವಿಲ್ಲದ ವಸ್ತುಗಳನ್ನು ಮನೆಯಲ್ಲಿ ಸಂಗ್ರಹಿಸುವುದು ಊಟದ ಪಾತ್ರೆ, ಅರಿವೆಗಳು ಸ್ವಲ್ಪವಿದ್ದರೂ ನಡೆಯಬಹುದಾಗಿದ್ದರೂ ಅವಶ್ಯಕತೆಗಿಂತ ಹೆಚ್ಚಿಗೆ ಸಂಗ್ರಹಿಸುವುದು ಇದರಂತೆಯೇ ಧಾನ್ಯ, ಔಷಧ, ಕಟ್ಟಿಗೆ, ಕಲ್ಲು ಮೊದಲಾದವುಗಳು ಸ್ವಲ್ಪವಿದ್ದರೂ ನಡೆದೀತಾದರೂ ಹೆಚ್ಚಿಗೆ ಇಟ್ಟುಕೊಳ್ಳುವುದು—ಇದು ಅತಿಸಂಗ್ರಹ ಅತಿಚಾರವೆನಿಸುತ್ತದೆ

(೩) ಎರಡನೆಯವರ ಅತುಲ ಸಂಪತ್ತಿ, ವಿಶೇಷ ಪರಿಗ್ರಹ, ವಿವಿಧ ದೇಶಗಳ ವಸ್ತುಗಳನ್ನು ನೋಡಿ, ಇಲ್ಲವೆ ವರ್ಣನೆಯನ್ನು ಕೇಳಿ, ಆಶ್ಚರ್ಯವನ್ನು ಹೊಂದುವುದು ವಿಸ್ಮಯಾತಿಚಾರವಾಗಿದೆ.

(೪) ವ್ಯಾಪಾರದಲ್ಲಿ, ಉದ್ಯೋಗದಲ್ಲಿ, ಸೇವೆಯಲ್ಲಿ, ಕಲೆ ಇತ್ಯಾದಿಗಳಲ್ಲಿ ತಮ್ಮ ಅಂತರಾಯ ಕರ್ಮದ ಕ್ಷಯೋಪಶಮಕ್ಕೆ ಅನುಸರಿಸಿ ಲಾಭವಾಗಿದ್ದರೂ ಅದರಿಂದ ಸಮಾಧಾನ ಹೊಂದದೆ ಇರುವುದು ಅತಿ ಲೋಭಾತಿಚಾರ-ವೆನಿಸುತ್ತದೆ

(೫) ಎತ್ತು, ಕುದುರೆಗಳ ಮೇಲೆ ಅವುಗಳ ಶಕ್ತಿಮೀರಿ ಭಾರ ಹೇರುವುದು ಅತಿಭಾರವಹನಾತಿಚಾರ-ವೆನಿಸುತ್ತದೆ.

ಪರಿಗ್ರಹ ಪ್ರಮಾಣವ್ರತವನ್ನು ಸ್ವೀಕರಿಸುವವರು ಈ ಐದು ದೋಷಗಳ ತ್ಯಾಗಮಾಡಬೇಕು ಈ ಪ್ರಕಾರ ಗೃಹಸ್ಥರು ಸ್ವೀಕರಿಸಲಿಕ್ಕೆ ಯೋಗ್ಯವಾದ ಐದು ಅಣುವ್ರತಗಳನ್ನು ಹೇಳಲಾಯಿತು.

---

[1] ಆಯತವರ್ಮನು ಹೇಳುವದು ಹೀಗೆ—

ಅದಕ್ಕೆಯತಿವಾಹನಾತಿಸಂಗ್ರಹವಿಸ್ಮಯಲೋಭಾತಿಭಾರವಾಹನಮೆಂದಯ್ದತಿಚಾರಮನಾಗಲಿಯ್ಯದುದು ಪರಿಮಾಣವ್ರತ-ಮೆಂಬುದಕ್ಕುಮಲ್ಲಿ ಎತ್ತು ಕತ್ತೆ ಮೊದಲಾಗೊಡೆಯವರೊಳು ಪಿರಿಯ ಶ್ರಮಮನರಿಯದೆ ನಿಲಿಸದೆಗೆಂಟೊಯ್ವುದು ಅತಿವಾಹನ ತನ್ನಗೆಯ್ದತಿಮಾನೋನ್ಮಾನದೊಳಲ್ಲದೆ ಸಂಗ್ರಹಿಸುವುದತಿಸಂಗ್ರಹಂ ಪೆರರ ಶ್ರೀಸಂಪತ್ತುಗಳಂ ಕಂಡು ಚೋದ್ಯಂಬಡುವುದು ವಿಸ್ಮಯಂ ಯೆನ್ನಮಾಡಿದ ಮೆರೆಯಲೊಂದು ವಿಸಮನಪ್ಪಡ ಭೂ ಪೋಗಲೀಯೆನೆಂದು ತಕ್ಕುದರೊಳು ಬಿಯ್ಯಂಗೆಯ್ದುರ್ಪದು ಲೋಭಂ ತನಗಳವಿಯಲ್ಲದುದಂ ತಾಳ್ದುವುದತಿಭಾರವಹನಂ.

ಇರೆ ಕುಪ್ಯನಿವೇಶನ ಧನಪರ ಧಾನ್ಯ ಕ್ಷೇತ್ರಮುಖ್ಯಮೆಂಬಿವು ಪವಣಿಂ- ।
ದಿರದೇಱಿಸುವುದು ಮತ್ತಂ ಪರಿಮಾಣಪರಿಗ್ರಹವ್ರತಕ್ಕತಿಚಾರಂ ॥

—ಶಾಂತಿನಾಥ—ಸುಕುಮಾರಚರಿತಂ ೬–೧೭

ಇನ್ನು ಅಣುವ್ರತದ ಫಲಗಳನ್ನು ಹೇಳಲಾಗುತ್ತದೆ—

ಪಂಚಾಣುವ್ರತನಿಧಯೋ ನಿರತಿಕ್ರಮಣಾಃ ಫಲಂತಿ ಸುರಲೋಕಮ್ ।
ಯತ್ರಾವಧಿರಷ್ಟಗುಣಾ ದಿವ್ಯಶರೀರಂ ಚ ಲಭ್ಯಂತೆ ॥ ೬೩ ॥[1]

ಅನ್ವಯಾರ್ಥ—(ನಿರತಿಕ್ರಮಣಾಃ) ಅತಿಚಾರ ರಹಿತವಾದ (ಪಂಚಾಣುವ್ರತನಿಧಯಃ) ಐದು ಅಣುವ್ರತಗಳೆಂಬ ನಿಧಿಯಿಂದ (ಸುರಲೋಕಂ) ದೇವಲೋಕವು (ಫಲಂತಿ) ಫಲವು ಲಭಿಸುತ್ತದೆ. (ಯತ್ರ) ಎಲ್ಲಿ (ಅವಧಿಃ) ಅವಧಿಜ್ಞಾನವು (ಅಷ್ಟಗುಣಾಃ) ಅಣಿಮಾದಿ ಎಂಟು ಋದ್ಧಿಗಳು (ಚ) ಮತ್ತು (ದಿವ್ಯಶರೀರಂ) ರಸ, ರಕ್ತ, ಮಾಂಸ ಮೊದಲಾದ ಏಳು ಧಾತುಗಳಿಲ್ಲದ ಸುಂದರ ಶರೀರವು (ಲಭ್ಯಂತೆ) ಪ್ರಾಪ್ತವಾಗುತ್ತದೆ

ಅರ್ಥ—ಅತಿಚಾರರಹಿತ ಐದು ಅಣುವ್ರತಗಳೆಂಬ ನಿಧಿಯಿಂದ ಸ್ವರ್ಗಲೋಕರೂಪದ ಫಲವು ಪ್ರಾಪ್ತವಾಗುತ್ತದೆ. ಅಲ್ಲಿ ಅವಧಿಜ್ಞಾನವೂ ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ–ಈ ಎಂಟು ಋದ್ಧಿ ಮತ್ತು ಧಾತು–ಉಪಧಾತುಗಳಿಲ್ಲದ ತೇಜಃಪುಂಜ ಶರೀರವು ಪ್ರಾಪ್ತವಾಗುತ್ತದೆ

[ಇಲ್ಲಿ 'ಅವಧಿಃ' ಎಂಬ ಪದದಿಂದ ಅವಧಿಜ್ಞಾನದ ಉಲ್ಲೇಖಮಾಡಲಾಗಿದೆ, ಆದರೆ ಇದು ಭವಪ್ರತ್ಯಯ ಅವಧಿಜ್ಞಾನವಾಗಿದೆ ಇದು ದೇವಲೋಕದಲ್ಲಿ ಜನ್ಮತಳೆದ ಕೂಡಲೇ ಉಂಟಾಗುವ ಅವಧಿಜ್ಞಾನವು ಆ ಭವದಲ್ಲಿ ಇರುವ ವರೆಗೂ ಆ ಜ್ಞಾನವು ಇರುತ್ತದೆ ಆದರಿಂದ ದೇಶಕಾಲಾದಿಗಳ ಅಂದರೆ ಪದಾರ್ಥಗಳ—ಒಂದು ಕಾಲ ಪರಿಮಿತಿಯ ಅವಸ್ಥೆಯಲ್ಲಿ—ಏಕದೇಶ ಸಾಕ್ಷಾತ್ (ದೇಶಪ್ರತ್ಯಕ್ಷ) ಜ್ಞಾನವಾಗುತ್ತದೆ ಈ ಅವಧಿಜ್ಞಾನವು 'ಸರ್ವಾವಧಿ' ಅಥವಾ 'ಪರಮಾವಧಿ' ಎನಿಸುವದಿಲ್ಲ ಇದು ತನ್ನ ವಿಷಯದಲ್ಲಿ ನಿರ್ಭ್ರಾಂತವಾಗಿರುತ್ತದೆ. ಇನ್ನು 'ಅಷ್ಟ ಗುಣಾಃ' ಎಂಬ ಪದದಿಂದ ಎಂಟು ಋದ್ಧಿಗಳ ಉಲ್ಲೇಖಮಾಡಲಾಗಿದೆ ಅವುಗಳನ್ನು ಆಗಮಾನುಸಾರ ಹೀಗೆ ವಿವರಿಸಬಹುದು. (೧) ಅಣಿಮಾ ಗುಣವೆಂಬ ಶಕ್ತಿ ವಿಶೇಷತ್ವದಿಂದ ದೊಡ್ಡದರಲ್ಲಿ ದೊಡ್ಡದಾದ ಶರೀರವನ್ನೂ ಸಹ ರೂಪದಲ್ಲಿ ಪರಿಣಿತಗೊಳಿಸಲಿಕ್ಕೆ ಸಾಧ್ಯವಿದೆ (೨) ಮಹಿಮಾಗುಣದಿಂದ ಸಣ್ಣದರಲ್ಲಿ ಸಣ್ಣದಾದ ಅಣುಪ್ರಮಾಣ ದೇಹವನ್ನೂ ಬಹುದೊಡ್ಡದನ್ನಾಗಿಯೂ ಮಾಡಲಿಕ್ಕೆ ಸಾಧ್ಯವಿದೆ (೩) ಲಘಿಮಾ ಗುಣವಿಶೇಷತೆಯಿಂದ ಬಹಳ ಭಾರವುಳ್ಳ ಶರೀರವನ್ನೂ ತೀರ ಹಗುರುಗೊಳಿಸಲು ಸಾಧ್ಯವಾಗುವುದು (೪) ಪ್ರಾಪ್ತಿ ಎಂಬ ಶಕ್ತಿಯಿಂದ ದೂರವಿರುವ ಪದಾರ್ಥಗಳನ್ನೂ ಕೈಯೊಳಗಿನ ನೆಲ್ಲಿಯಂತೆ ಸ್ಪರ್ಶಿಸಲಿಕ್ಕೆ ಬರುತ್ತದೆ. (೫) ಪ್ರಾಕಾಮ್ಯದಿಂದ ನೀರಿನಲ್ಲಿ ನೆಲದ ಮೇಲೆ ನಡೆದಂತೆಯೂ ನೆಲದ ಮೇಲೆ ನೀರಿನಲ್ಲಿ ಈಸಿದಂತೆಯೂ—ಉನ್ಮಜ್ಜನ–ನಿಮಜ್ಜನ ಮಾಡುತ್ತ–ಗಮನಮಾಡಲಿಕ್ಕೆ ಬರುತ್ತದೆ (೬) ಈಶಿತ್ವಗುಣದಿಂದ ಎಲ್ಲವುಗಳ ಒಡೆತನ ಪ್ರಾಪ್ತವಾಗುತ್ತದೆ (೭) ವಶಿತ್ವ ಗುಣದಿಂದ ಎಲ್ಲ ಸಂಸಾರೀ ಜೀವಗಳನ್ನು ವಶಮಾಡಿಕೊಳ್ಳಲಿಕ್ಕೆ ಬರುತ್ತದೆ (೮) ಗರಿಮಾ–ಕಾಮರೂಪಿತ್ವ–ವೆಂಬ ಗುಣದಿಂದ ಅನೇಕ ಪ್ರಕಾರದ ಇಚ್ಛಿತ ರೂಪವನ್ನು ಧರಿಸಲಿಕ್ಕೆ ಬರುತ್ತದೆ ಸ. ಧ]

ಭಾವಾರ್ಥ—ಅಣುವ್ರತವನ್ನು ಧರಿಸುವವರು ಮುಂದೆ ಮರಣದ ತರುವಾಯ ಸ್ವರ್ಗದಲ್ಲಿ ಮಹಾನ್ ಋದ್ಧಿಧಾರಿಗಳಾದ ದೇವರಾಗಿಯೇ ಜನಿಸುತ್ತಾರೆ ಎರಡನೆಯ ಪರ್ಯಾಯವು ಅವರಿಗೆ ಉಂಟಾಗುವದಿಲ್ಲ ಹೀಗೆ ನಿಯಮವಿದೆ ಆದಕ್ಕಾಗಿ ಅವರಿಗೆ ದಿವ್ಯ ಶರೀರವು ಪ್ರಾಪ್ತವಾಗಿ ಅಸಂಖ್ಯಾತ ವರ್ಷಗಳ ವರೆಗೆ ಸಾಕಷ್ಟು ಸುಖವನ್ನು ಭೋಗಿಸಲಿಕ್ಕೆ ಬರುತ್ತದೆ

---

1 ಆಯತವರ್ಮನು ಹೇಳುವದು ಹೀಗೆ

ಕಂದ ॥ ಇಂತೈದಣುವ್ರತಂಗಳೊಳಂತಾನತಿಚಾರವಿಲ್ಲದಂಸ್ಥಿರ ನಡೆವಾ- ।
ತಂ ತಡೆಯದೆ ಸುರಲೋಕದ ಕಾಂತೆಯರೊಳ್ದಿವ್ಯಭೋಗಮಂ ಭೋಗಿಸುಗುಂ ॥

ಕೊಲೆಯಂ ನೆಟ್ಟನೆ ಬಿಟ್ಟೊಡಕ್ಕುಮಧಿಕಾಯುಷ್ಯಂ ಸುಸತ್ಯಾತ್ತಿ[ರ್]ಯಿಂ-
ದಲಘೂದ್ಯದ್ಯಶಮಾ ಪ್ರಸನ್ನತರಮಪ್ಪಸ್ತೇಯದಿಂ ಸಂಪದಂ- ।
ಕುಲಟಾಸಂಗವಿಹೀನದಿಂ ಸೊಬಗು ಸಂದತ್ಯಾಗ್ರಹಂ ವಸ್ತು ಸಂ-
ಕುಲದೊಳ್ ಪಿಂಗಿರೆ ಪೂಜ್ಯರಾಜ್ಯಮೆನೆ ಸದ್ಧರ್ಮಂ ಬುಧಗ್ರಾರ್ಮವೋ ॥

—ಕರ್ಣಪಾರ್ಯ–ನೇಮಿನಾಥ ಪುರಾಣಂ ೧–೮೩.

ಐದು ಅಣುವ್ರತಗಳನ್ನು ನಡೆಯಿಸಿ, ಈ ಲೋಕದಲ್ಲಿ ಪ್ರಸಿದ್ಧರಾದವರ ಹೆಸರುಗಳನ್ನು ಹೇಳುತ್ತಾರೆ—

ಮಾತಂಗೋ ಧನದೇವಶ್ಚ ವಾರಿಷೇಣಸ್ತತಃ ಪರಃ[1] ।
ನೀಲೀ ಜಯಶ್ಚ ಸಂಪ್ರಾಪ್ತಾಃ ಪೂಜಾತಿಶಯಮುತ್ತಮಮ್ ॥ ೬೪ ॥[2]

ಅನ್ವಯಾರ್ಥಃ—(ಮಾತಂಗ) ಮಾತಂಗನು (ಚ) ಮತ್ತು (ಧನದೇವ) ಧನದೇವನು (ತತಃ ಪರಃ) ಆ ಮೇಲೆ (ವಾರಿಷೇಣಃ) ರಾಜ ಪುತ್ರನಾದ ವಾರಿಷೇಣನು (ಚ) ಹಾಗೆಯೇ (ನೀಲೀ) ನೀಲೀಕುಮಾರಿಕೆಯು (ಚ) ಮತ್ತು (ಜಯಃ) ಜಯವೆಂಬ ಹೆಸರಿನ ರಾಜಪುತ್ರನು.—ಇವರು (ಉತ್ತಮಂ) ಉತ್ತಮವಾದ (ಪೂಜಾತಿಶಯಂ) ಪೂಜ್ಯಪದವನ್ನು (ಸಂಪ್ರಾಪ್ತಾಃ) ಚೆನ್ನಾಗಿ ಹೊಂದಿದರು

ಅರ್ಥ—ಅಹಿಂಸಾಣುವ್ರತದಲ್ಲಿ ಮಾತಂಗನೆಂಬ ಮಾದಿಗನೂ, ಸತ್ಯಾಣುವ್ರತದಲ್ಲಿ ಧನದೇವನೆಂಬ ಹೆಸರಿನ ವ್ಯಾಪಾರಿಯೂ, ಅಚೌರ್ಯಾಣುವ್ರತದಲ್ಲಿ ವಾರಿಷೇಣನೆಂಬ ರಾಜಪುತ್ರನೂ, ಬ್ರಹ್ಮಚರ್ಯದಲ್ಲಿ ನೀಲಿ ಎಂಬ ಕುಮಾರಿಯೂ, ಪರಿಗ್ರಹಪ್ರಮಾಣವ್ರತದಲ್ಲಿ ಜಯಕುಮಾರ ಇವರು ಹೆಸರಾಗಿದ್ದಾರೆ ಈ ವ್ರತಗಳ ಆಚರಣೆಯಿಂದ ಇವರು ಜಗತ್ತಿನಲ್ಲಿ ಪೂಜನೀಯರೆನಿಸಿದ್ದಾರೆ. ಮತ್ತು ಅದೇ ಜನ್ಮದಲ್ಲಿಯೇ ದೇವರೂ ಸಹ ಅವರ ಸನ್ಮಾನ-ಮಾಡಿದ್ದಾರೆ. ವ್ರತದ ಪ್ರಭಾವದಿಂದ ಅನೇಕ ಭವ್ಯಜೀವಗಳು ಈ ಲೋಕದಲ್ಲಿ ಕೀರ್ತಿವಂತರಾಗಿ ದೇವಲೋಕಕ್ಕೆ ಹೋಗಿದ್ದಾರೆ. ಆದರೆ ಶಾಸ್ತ್ರದಲ್ಲಿ ಇವರ ಕಥೆಗಳು ಹೆಚ್ಚು ಪ್ರಸಿದ್ಧವಾಗಿವೆ

ಇನ್ನು ಪಂಚಪಾಪಗಳನ್ನು ಮಾಡಿ ದುಃಖಕ್ಕೆ ಈಡಾಗುವವರ ಹೆಸರುಗಳನ್ನು ಹೇಳುತ್ತಾರೆ—

ಧನಶ್ರೀಸತ್ಯಘೋಷೌ ಚ ತಾಪಸಾರಕ್ಷಕಾವಪಿ ।
ಉಪಾಖ್ಯೇಯಾಸ್ತಥಾ ಶ್ಮಶ್ರುನವನೀತೋ ಯಥಾಕ್ರಮಮ್ ॥ ೬೫ ॥[3]

ಅನ್ವಯಾರ್ಥ—(ಧನಶ್ರೀ) ದನಶ್ರೀ ಎಂಬ ಹೆಸರಿನ ಸ್ತ್ರೀಯು—ಒಬ್ಬ ಶೆಟ್ಟಿಯ ಹೆಂಡತಿಯು—(ಸತ್ಯಘೋಷೌ) ಸತ್ಯಘೋಷ ಅಥವಾ ಶ್ರೀಭೂತಿ ಎಂಬ ಪುರೋಹಿತನು (ಅಪಿ ಚ) ಇದರಂತೆಯೇ (ತಾಪಸ)

---

[1] 'ಪರಂ' ಎಂದೂ ಪಾಠಾಂತರವಿದೆ

[2] ಆಯತವರ್ಮನು ಹೇಳುವದು ಹೀಗೆ—

ವಚನ—ಅಂತನತಿಚಾರಂಗಳಪ್ಪ ಬ್ರತದಿಂದೆ ದೇವಲೋಕದೊಳ್ಪುಟ್ಟಿ ದಿವ್ಯಮೂರ್ತಿಯುಮವಧಿಜ್ಞಾನಿಯುಮಣಿಮಾದಿ ಗುಣೋಪೇತನುಂ, ಸುರಭಿ ನಿಶ್ವಾಸನುಂ, ಸಮಚತುರಸ್ರಸಂಸ್ಥಾನಶರೀರನುಂ, ಶುಭಲೇಶ್ಯಾ ಪರಿಣಾಮನುಂ, ದಶವಿಧಾಮರ ಪರಿವೇಷ್ಟಿತನುಮನೇಕ ಪಾರಾವಾರೋಪಮ ಜೀವಿತನುಮಾಗಿ, ದಿಬ್ಯಸುಖಮನನುಭವಿಸಿ ಪಾರಂಪರ್ಯಾಯದಿಂ ಕರ್ಮಕ್ಷಯಂ-ಗೆಯ್ದು, ಬ್ರತಂಗಳೊಳಲ್ಲಿಯೊಂದೊಂದು ಬ್ರತದ ಫಲದಿಂದಮೆ ಮಹಿಮೆಯನೆಯ್ದಿದ ಪುರುಷರೊಳವರಾರೆಂದೊಡೆ–ಕೊಲ್ಲದ ಬ್ರತದೊಳು ಮಾತಂಗನುಂ, ಹುಸಿಯದ ಬ್ರತದೊಳು ಧನದೇವನುಂ, ಕಳ್ಳದ ಬ್ರತದೊಳ್ವಾರಿಷೇಣನುಂ, ಪರದಾರನಿವೃತ್ತಿಯೊಳು ನೀಲಿಯೆಂಬಳುಂ, ಪರಿಗ್ರಹಪರಿಮಾಣದೊಳು ಜಯನೆಂಬನುಂ ಯಿಂತೀಲೋಕದೊಳಂಪೂಜ್ಯರುಂ, ಮಾನ್ಯರುಂ, ಸುಖಿಗಳು ಮಾದರವರವರ ಕಥೆಗಳಂ ಸೂತ್ರಂಗಳೊಳು ಕೇಳ್ವುದು

[3] ಆಯತವರ್ಮನು ಹೇಳುವದು ಹೀಗೆ—

ಇಂತೀ ಗುಣಂಗಳೊಳು ನೆಗಳಲಾರದೆ ಕೆಲರಜ್ಞಾನತೆಯಿಂ ಮೋಹನೀಯಕರ್ಮವರ್ತಿಗಳಾಗಿ ಮೆಯ್ಗೆ ಮೆಚ್ಚಿದಂತೆ ಜೀವಂಗಳ್ಗೆ ಕಾರುಣ್ಯವಿಲ್ಲದೆ ಕೊಲುವರುಂ, ಪುಸಿದುಂ, ಕಳ್ದುಂ ಪೆರರೊಡವೆಗಳಂ ಛಿದ್ರಿಸುವರುಂ, ಬಡಿವರುಂ, ಪಕ್ಕನಿಕ್ಕುವದುಂ, ಸೂರೆಗೆವರಿವುದುಂ, ಮತ್ತಮನೇಕ ಪ್ರಕಾರದಿಂ ವಂಚಿಸಿಕೊಳ್ವುದುಂ, ಪೆರರ ಪೆಂಡಿರ್ಗಾಡಿ[ಟ?]ಸುವುದುಂ, ಪೆರರ ಕಸರಪ್ಪೆನಿತಂ

ಒಬ್ಬ ತವಸ್ವಿಯು (ಆರಕ್ಷಕ) ನಗರಪಾಲಕ—ಕೊಟ್ಟಪಾಲ—ಕೊತವಾಲನು (ತಥಾ) ಹಾಗೆಯೇ (ಶ್ಮಶ್ರುನವನೀತಃ) ಶ್ಮಶ್ರುನವನೀತನೆಂಬವನು ಎಂದು (ಯಥಾಕ್ರಮಂ) ಅನುಕ್ರಮವಾಗಿ (ಉಪಾಖ್ಯೇಯಾಃ) ಹೇಳಲಾಗಿದೆ

ಅರ್ಥ—ಹಿಂಸೆಯಿಂದ ಧನಶ್ರೀಯೂ, ಅಸತ್ಯದಿಂದ ಸತ್ಯಘೋಷನೂ, ಕಳವುಮಾಡುವುದರಿಂದ ಒಬ್ಬ ತಪಸ್ವಿಯೂ, ವ್ಯಭಿಚಾರದಿಂದ ನಗರಪಾಲಕನೂ, ಪರಿಗ್ರಹದಿಂದ ಶ್ಮಶ್ರುನವನೀತನೂ ಈ ಲೋಕದಲ್ಲಿ ರಾಜನಿಂದ ಶಿಕ್ಷೆಯನ್ನು ಪಡೆದರು ಕೊನೆಗೆ ಇವರು ದುರ್ಗತಿಗೂ ಹೋದರು. 4

ಅಕಲಂಕವ್ರತಮುಳ್ಳೊಡೇನರಿದ ಸಮ್ಯಗ್ದರ್ಶನಂ ತನ್ನೊಳು-
ಳ್ಳಕೃತಾರ್ಥಂ ನರಕಂಬುಗಂ ತಿರಿಕನಾಗಂ ನಾರಿಯಾಗಂ ನಪುಂ- ।
ಸಕನಾಗಂ ಕುಲಹೀನನಾಗನೆಡೆಯಿಂದಲ್ಪಾಯುವಾಗಂ ದರಿ-
ದ್ರಕನಾಗಂ ವಿಕಲಾಂಗನಾಗನಿದು ಸಿದ್ಧಂ ನಂಬು ಭೂವಲ್ಲಭಾ ॥

—ಜನ್ನ–ಅನಂತನಾಥ ಪುರಾಣ ೩–೫೯.

ಇನ್ನು ಗೃಹಸ್ಥನ ಎಂಟು ಮೂಲಗುಣಗಳನ್ನು ಕುರಿತು ಸೂತ್ರ ಹೇಳುತ್ತಾರೆ—

ಮದ್ಯಮಾಂಸಮಧುತ್ಯಾಗೈಃ ಸಹಾಣುವ್ರತಪಂಚಕಮ್ ।
ಅಷ್ಟೌ ಮೂಲಗುಣಾನಾಹುರ್ಗೃಹಿಣಾಂ ಶ್ರಮಣೋತ್ತಮಾಃ ॥ ೬೬ ॥ 5

ಅನ್ವಯಾರ್ಥ—(ಶ್ರಮಣೋತ್ತಮಾಃ) ಜಿನೇಂದ್ರ ಭಗವಂತನು (ಮದ್ಯಮಾಂಸಮಧುತ್ಯಾಗೈಃ) ಮದಿರೆ–ಸೆರೆ–ಮಾಂಸ, ಜೇನುತುಪ್ಪ ಇವುಗಳ ತ್ಯಾಗ ಮತ್ತು (ಅಣುವ್ರತ ಪಂಚಕಮ್) ಅಣುವ್ರತಗಳು ಐದು (ಸಹ) ಸಹಿತ ಇವು—(ಅಷ್ಟೌ) ಎಂಟು (ಗೃಹಿಣಾಂ) ಗೃಹಸ್ಥನಿಗೆ (ಮೂಲಗುಣಾನ್) ಮೂಲಗುಣಗಳೆಂದು (ಆಹುಃ) ಅಂದಿದ್ದಾನೆ

ಅರ್ಥ—ಶ್ರಮಣೋತ್ತಮ ಅಂದರೆ ಜಿನೇಂದ್ರ ಭಗವಂತನು ಅದರಂತೆ ಗಣಧರ, ಶ್ರುತ ಕೇವಲಿಗಳು ಇವರೆಲ್ಲರೂ ಮದ್ಯ, ಮಾಂಸ, ಜೇನುತುಪ್ಪಗಳನ್ನು ತ್ಯಜಿಸಿ, ಐದೂ ಅಣುವ್ರತಗಳನ್ನು ಸ್ವೀಕರಿಸುವುದು ಗೃಹಸ್ಥನ ಎಂಟು ಮೂಲಗುಣಗಳಾಗಿವೆಯೆಂದು ಹೇಳಿದ್ದಾರೆ

[ಇಲ್ಲಿ 'ಗೃಹಿಣಾಂ' ಎಂಬ ಪದವು ಯಾವ ವಿಶೇಷಣವಿಲ್ಲದೆ, ಸಾಮಾನ್ಯ ರೂಪದಿಂದ ಉಪಯೋಗಿಸಲ್ಪಟ್ಟಿದೆ. ಆದರೆ ವಿಷಯದ ದೃಷ್ಟಿಯಿಂದ ಅದಕ್ಕೆ ವ್ರತೀಶ್ರಾವಕನೆಂದೇ ಅರ್ಥವಾಗುತ್ತದೆ. ಅವ್ರತಿಗಳಾದ ಗೃಹಸ್ಥರಿಗೆ ಅದು ಅನ್ವಯಿಸುವದಿಲ್ಲ ಜೈನ ಧರ್ಮದಲ್ಲಿ ಮಹಾವ್ರತಿಗಳಾದ ಮುನಿಗಳಿಗೆ ಮೂಲಗುಣ ಹಾಗೂ

---

ನೆರಪಿಯುಂ ತಣಿಯದೆ ತಕ್ಕುದಕ್ಕೊಂದು ಪೀಸವಮನಪ್ಪ[ಡಂ ಪ]ಡೆಯದೆಯಿನ್ನುಂ ಪಡೆವೆನೆಂದಿರುಳುಂ ಪಗಲುಮಾರ್ತಧ್ಯಾನದಿಂದಿರ್ಪವರುಂ, ಮದ್ಯಮಾಂಸಮಧುಸೇವನೆಗೆಯ್ವರುಮಿಂತಿವರೆಲ್ಲಮಿಹಲೋಕದೊಳೆ ಸಾವುಮಂ, ನೋವುಮಂ, ಕವರ್ತೆಯುಮಂ, ದಂಡಮುಮಂ, ಪೈಶೂನ್ಯಮುಮಂ, ಮಾನಮೆಯ್ದಿ ಬಳಿಯಂ ಮರುಭವದೊಳು ನರಕ ತಿರ್ಯಙ್ಮನುಷ್ಯ ಪ್ರೇತ ಪಿಶಾಚಂಗಳಾಗಿ, ದುಃಖಶತಸಹಸ್ರಂಗಳನೆಯ್ದಿ ಸಂಸಾರದೊಳು ಭ್ರಮಿಯಿಸುವರಲ್ಲದೆಯುಮಬ್ರತವೃತ್ತಿಯೊಳ್ನಿಗಳ್ದ ಧನಶ್ರೀ, ಸತ್ಯಘೋಷನುಂ, ತಾಪಸನುಂ, ಆರಕ್ಷಕನುಂ, ಶ್ಮಶ್ರುನವನೀತನು ಮೆಂದಿವರೊಂದೊಂದು ದೋಷದ ಫಲದಿಂದಮೆ ಇಹಪರಂಗಳೊಳ ಮೆಂತಪ್ಪದಂಡಣೆಗಳನೆಯ್ದಿದರೆಂಬುದನರುವರವರ ಕದೆಗಳೊಳು ಕೇಳ್ವುದು

ಕಂದ ॥ ಸಂಸಾರ ಕಾರಣಂಗಳು ಹಿಂಸಾರುಚಿಕಳವುಪುಸಿಪರಸ್ತ್ರೀಗಮನಂ ।
ಮಾಂಸಮಧುಮದ್ಯಸೇವನೆ ಸಂಸಯಮೆಂ ದುಃಖಕಾರಣಂಗಳಿವಿನಿತುಂ ॥

4 ೬೪, ೬೫ ಈ ಎರಡು ಪದ್ಯಗಳ ಶಬ್ದ ರಚನೆಯಿಂದ ಮಾತಂಗ ಮೊದಲಾದವರು ಯಾವುದರಲ್ಲಿ ಪ್ರಸಿದ್ಧರಾಗಿದ್ದರು, ಧನಶ್ರೀ ಮೊದಲಾದವರು ಯಾವುದರಲ್ಲಿ ಕುಪ್ರಸಿದ್ಧರಾಗಿದ್ದರು—ಎಂಬುದು ಸ್ಪಷ್ಟವಾಗುವದಿಲ್ಲ ಆದರೆ ಇವರ ಕಥೆಗಳು ಅಹಿಂಸೆ—ಹಿಂಸೆ ಮೊದಲಾದವುಗಳ ಸಂಬಂಧದಲ್ಲಿ ಅನೇಕ ಗ್ರಂಥಗಳಲ್ಲಿ ಪ್ರಸಿದ್ಧವಾಗಿವೆ

5 ಆಯತವರ್ಮನು ಹೇಳುವದು ಹೀಗೆ—

ವಚನ—ಅಯ್ದು ಪಾಲ್ಮರಂಗಳ್ ಮೊದಲಾಗೊಡೆಯವರೊಳು ದ್ವೀಂದ್ರಿಯಾದಿ ತ್ರಸಂಗಳೊಳವಪ್ಪುದರಿಂದಂ ಮದುಮದ್ಯ ಮಾಂಸದ ವಿಕಲ್ಪಂಗಳೆಂದು ಬಗೆವುದಂತು ಮದ್ಯಮಾಂಸಮದುಗಳ ನಿವೃತ್ತಿಯುಮಣುಬ್ರತಂಗಳಿಂದೀಯೆಂಟು ಗೃಹಸ್ಥಂಗೆ ಮೂಲಗುಣಮೆಂದಕ್ಕುಂ

ಉತ್ತರಗುಣಗಳಿರಬೇಕೆಂಬ ವಿಧಾನವಿದೆ. ಅದರಂತೆಯೇ ಅಣುವ್ರತಿಗಳಾದ ಶ್ರಾವಕರಿಗಾಗಿಯೂ ಮೂಲೋತ್ತರ ಗುಣಗಳ ವಿಧಾನವಿದೆ. ಯಾವ ವ್ರತ ನಿಯಮಾದಿಗಳನ್ನು ಆರಂಭದಲ್ಲಿಯೇ ಆಚರಿಸಬೇಕಾಗುತ್ತದೆಯೋ ಅವುಗಳನ್ನು ಮೂಲಗುಣಗಳೆಂದು ಕರೆಯಲಾಗುತ್ತದೆ ಈ ಮೂಲಗುಣಗಳ ಪಾಲನೆಯಿಂದಲೇ ಇತರ-ವ್ರತಗಳೂ ಉತ್ತರ ಗುಣಗಳೂ ಪೋಷಿಸಲ್ಪಡುತ್ತವೆ. ಮುಂದಿನ ಸಾಧನೆಯ ಅನುಷ್ಠಾನವೆಲ್ಲ ಮೂಲಗುಣಗಳನ್ನೇ ಅವಲಂಬಿಸಿದೆ. ವೃಕ್ಷಕ್ಕೆ ಬೇರು ಯಾವ ಪ್ರಕಾರ ಅನ್ನ ನೀರುಗಳನ್ನು ಒದಗಿಸಿ, ಭದ್ರವಾಗಿ ಕಾಪಾಡುತ್ತದೆಯೋ ಅದೇ ಪ್ರಕಾರ ಈ ಮೂಲಗುಣಗಳು ಮುಂದಿನ ಉತ್ತರ ಗುಣಗಳ ಸುಸ್ಥಿತಿಗೆ ಕಾರಣವಾಗಿರುತ್ತವೆ. ಈ ಮೂಲಗುಣಗಳು ಶ್ರಾವಕರಿಗೆ ಎಂಟು ಇರುತ್ತವೆ ಅವುಗಳಲ್ಲಿ ಐದು ಅಣುವ್ರತಗಳಾಗಿವೆ. ಅವುಗಳ ಸ್ವರೂಪಾದಿಗಳನ್ನು ಈ ಮೊದಲೇ ಹೇಳಲಾಗಿದೆ. ಇನ್ನುಳಿದ ಮೂರು ಮದ್ಯ, ಮಾಂಸ, ಜೇನುತುಪ್ಪಗಳ ತ್ಯಾಗರೂಪದಲ್ಲಿವೆ ಮದ್ಯವು ಮಾದಕ-ವಾಗಿದ್ದು, ಮನುಷ್ಯನ ಬುದ್ಧಿಯನ್ನು ಭ್ರಷ್ಟಗೊಳಿಸುತ್ತದೆ. ಅಲ್ಲದೆ ಉನ್ಮತ್ತ ಹಾಗೂ ಅನಾವಧಾನ ವೃತ್ತಿಯನ್ನು ನಿರ್ಮಿಸುತ್ತದೆ ಮದ್ಯ ತ್ಯಾಗದಲ್ಲಿ ಗ್ರಂಥಕಾರನ ದೃಷ್ಟಿಯು ಪ್ರಮಾದ ಪರಿಹರಣವುಳ್ಳದ್ದಾಗಿದೆ. ಇದೇ ಗ್ರಂಥದ ಇನ್ನೊಂದು ಸೂತ್ರದಲ್ಲಿ ಹೇಳಿದ "ಪ್ರಮಾದಪರಿಹೃತಯೆ ಮದ್ಯಂ ಚ ವರ್ಜನೀಯಂ" ಈ ವಾಕ್ಯದಿಂದ ಸ್ಪಷ್ಟವಾಗುತ್ತದೆ ಇನ್ನು ಮಾಂಸವು ಒಂದು ವಿಕೃತ ಪದಾರ್ಥವಾಗಿದೆ ಅದು ದ್ವೀಂದ್ರಿಯಾದಿ ತ್ರಾಸಜೀವಿಗಳ ರಸ-ರಕ್ತಾದಿಮಿಶ್ರಿತ ದೇಹದಿಂದ ಸಂಪಾದಿಸಿದ್ದಾಗಿದೆ ಅದರಲ್ಲಿ ಯಾವಾಗಲೂ ತ್ರಾಸಜೀವಗಳು ಜನಿಸುತ್ತಿರುತ್ತವೆ. ಮಾಂಸವು ಹಸಿಯಿರಲಿ, ಒಣಗಿರಲಿ, ರಸರೂಪದಲ್ಲಿರಲಿ ಅದರಲ್ಲಿ ಸೂಕ್ಷ್ಮ ಜಂತುಗಳು ಹುಟ್ಟುವುದು ನಿಲ್ಲುವದಿಲ್ಲ ಆದರಿಂದ ಮಾಂಸದ ತ್ಯಾಗದಲ್ಲಿ ತ್ರಸಹಿಂಸೆಯ ದೃಷ್ಟಿಯು ಸನ್ನಿಹಿತವಾಗಿದೆ. ಇನ್ನು ಜೇನುತುಪ್ಪವನ್ನಂತೂ ಜೇನ್ನೊಣಗಳಿಗೆ ತುಂಬ ಕೊಂದರೆಯನ್ನು ಕೊಟ್ಟೇ ಸಂಪಾದಿಸಬೇಕಾಗುತ್ತದೆ. ಅದನ್ನು ಮಾನವನಿಗಾಗಿ ಸಂಪಾದಿಸುವಾಗ ಅದರಲ್ಲಿ ಅನೇಕ ಜೇನ್ನೊಣಗಳ ರಕ್ತ, ಅವುಗಳ ತತ್ತಿಗಳ ರಸ ಮೊದಲಾದವೆಲ್ಲ ಕೂಡಿಹೋಗುತ್ತವೆ. ಆದರಿಂದಲೂ ಅದು ತ್ಯಾಜ್ಯ ಪದಾರ್ಥವಾಗಿದೆ ಈ ಪ್ರಕ್ರಿಯೆಯ ದೃಷ್ಟಿಯಿಂದಲೇ ಅದಕ್ಕೆ 'ಕ್ಷೌದ್ರಂ' ಎಂಬ ಸಂಜ್ಞೆಯನ್ನು ಕೊಡಲಾಗಿದೆ. ಇದರ ತ್ಯಾಗದಲ್ಲಿಯೂ ತ್ರಸಹಿಂಸೆಯ ಪರಿಹಾರದ ದೃಷ್ಟಿಯೇ ಇದೆ. ಅದು ಮುಂದಿನ ಸೂತ್ರದ 'ತ್ರಸಹತಿಪರಿಹರಣಾರ್ಥಂ ಪಿಶಿತಂ ಕ್ಷೌದ್ರಂ ಚ ವರ್ಜನೀಯಂ' ಎಂಬ ವಾಕ್ಯದಿಂದ ಸ್ಪಷ್ಟವಾಗುತ್ತದೆ.

ಇಲ್ಲಿ ಇದಲ್ಲದೆ ಇನ್ನೂ ಒಂದು ಮಾತನ್ನು ಗಮನಿಸುವ ಅವಶ್ಯಕತೆಯು ಇದೆ. ಅದು ಅಷ್ಟಮೂಲ ಗುಣಗಳಲ್ಲಿ ಐದು ಅಣುವ್ರತಗಳನ್ನು ಸಮಾವೇಶ ಮಾಡಿದುದಾಗಿದೆ. ಯಾಕಂದರೆ ಅಮೃತಚಂದ್ರ, ಸೋಮದೇವ ಮತ್ತು ದೇವಸೇನರಂಥ ಮುಂದಿನ ಕಾಲದ ಆಚಾರ್ಯರೂ ಕವಿರಾಜಮಲ್ಲನಂಥ ವಿದ್ವಾಂಸರೂ ತಮ್ಮ ತಮ್ಮ ಗ್ರಂಥಗಳಲ್ಲಿ[1] ಪಂಚಾಣುವ್ರತದ ಸ್ಥಾನದಲ್ಲಿ ಪಂಚ ಉದುಂಬರ ಫಲಗಳ ನಿರ್ದೇಶವಿದೆ. ಅದರಲ್ಲಿ ಆಲ, ಅತ್ತಿ, ಬಸರಿ ಮೊದಲಾದ ಫಲಗಳು ಸಮಾವೇಶವಾಗಿವೆ ಪಂಚಾಣು ವ್ರತಗಳೆಲ್ಲಿ, ಈ ಫಲಗಳ ತ್ಯಾಗವೆಲ್ಲಿ? ಎರಡರಲ್ಲಿಯೂ ನೆಲ-ಮುಗಿಲುಗಳಷ್ಟು ಅಂತರವಿದೆ. ನಿಜವಾಗಿ ನೋಡಿದರೆ ಈ ಉದುಂಬರ ಫಲಗಳ ತ್ಯಾಗವೂ ಸಹ ಮಾಂಸತ್ಯಾಗ-ದಲ್ಲಿಯೇ ಬಂದುಹೋಗುತ್ತದೆ. ಈ ಫಲಗಳಲ್ಲಿ ಉಲುಕಾಡುವ ಜೀವಗಳು ಪ್ರತ್ಯಕ್ಷವಾಗಿ ಕಾಣುತ್ತಿರುತ್ತವೆ. ಅವುಗಳನ್ನು ತಿನ್ನುವುದರಿಂದ ಮಾಂಸಭಕ್ಷಣದ ದೋಷವು ಸ್ಪಷ್ಟವಾಗಿದೆ. ಅದಕ್ಕಾಗಿಯೇ ಅವುಗಳನ್ನು ತಿನ್ನಕೂಡ-ದೆಂದು ನಿಷೇಧಿಸಲಾಗಿದೆ. ಮಾಂಸ ತಿನ್ನುವದನ್ನು ಬಿಟ್ಟವರು ಈ ಫಲಗಳನ್ನೂ ತಿನ್ನುವದಿಲ್ಲ ಇಂಥ ಸ್ಥಿತಿಯಲ್ಲಿ— ಮಾಂಸತ್ಯಾಗ ಎಂಬ ಹೆಸರಿನ ಮೂಲಗುಣವೊಂದು ಇದ್ದೂ ಸಹ ಪಂಚ ಉದುಂಬರ ಫಲಗಳ ತ್ಯಾಗಕ್ಕೆ ಅವುಗಳಲ್ಲಿ ಪರಸ್ಪರವಾದಂಥ ಯಾವ ವಿಶೇಷ ಭೇದವೂ ಇಲ್ಲ ಅದರಿಂದ ಪಂಚಾಣುವ್ರತಗಳನ್ನು ಮೂಲಗುಣಗಳಿಂದ ತೆಗೆದು ಹಾಕಿದುದು ವಿಲಕ್ಷಣವಾಗಿದೆ ಈ ರೀತಿಯ ಪರಿವರ್ತನವು ಸಾಧಾರಣ ರೀತಿಯ ಪರಿವರ್ತನವಲ್ಲ. ಈ ಪರಿವರ್ತನವು ಏನೋ ಒಂದು ವಿಶೇಷ ಅರ್ಥವುಳ್ಳದಿರಬೇಕು ಇದರಿಂದ ಮೂಲಗುಣದ ವಿಷಯವನ್ನು ಬಹು ಹಗುರುಗೊಳಿಸ-ಲಾಗಿದೆ. ಅಲ್ಲದೆ ಅದನ್ನು ವ್ಯಾಪಕಗೊಳಿಸಿ, ಅದರ ಕ್ಷೇತ್ರವನ್ನು ವಿಸ್ತರಿಸಲಾಗಿದೆ. ಏನೇ ಇದ್ದರೂ ಮೂಲ ಹಾಗು ಉತ್ತರ ಗುಣಗಳ ವಿಧಾನವು ವ್ರತಿಕರಿಗಾಗಿ ಇದೆ—ಎಂಬುದು ಗೊತ್ತಾಗುತ್ತದೆ. ಅಹಿಂಸಾದಿ ಪಂಚ

---

[1] ಪುರುಷಾರ್ಥಸಿದ್ಧ್ಯುಪಾಯ, ಯಶಸ್ತಿಲಕ, ಭಾವಸಂಗ್ರಹ ಮತ್ತು ಪಂಚಾಧ್ಯಾಯೀ ಹಾಗೂ ಲಾಟೀಸಂಹಿತಾ.

ವ್ರತಗಳನ್ನು ಪೂರ್ಣರೂಪದಿಂದ-ಸರ್ವದೇಶ-ಆಚರಿಸುವವರಿಗೆ ಮುನಿಗಳೆಂದು ಹೇಳುತ್ತಾರೆ ಇವರು ಮಹಾ-ವ್ರತಿಗಳು, ಯತಿಗಳು. ಅವೇ ವ್ರತಗಳನ್ನು ಸ್ಥೂಲರೂಪದಿಂದ-ಏಕದೇಶ-ಪಾಲಿಸುವವರಿಗೆ ಶ್ರಾವಕರೆನ್ನುವರು ಇವರು ದೇಶವ್ರತಿಗಳು, ದೇಶಯತಿಗಳು ಎನಿಸುತ್ತಾರೆ

ಮಹಾವ್ರತಿಗಳ ಇಪ್ಪತ್ತೆಂಟು ಮೂಲಗುಣಗಳಲ್ಲಿ ಅಹಿಂಸೆಯೇ ಮೊದಲಾದ ಐದು ವ್ರತಗಳ ವರ್ಣನೆ-ಯನ್ನು ಮಾಡಲಾಗಿದೆ ಅಂದಮೇಲೆ ದೇಶವ್ರತಿಗಳ ಮೂಲಗುಣಗಳಲ್ಲಿ ಐದು ಅಣುವ್ರತಗಳ ವಿಧಾನ ಮಾಡುವುದು ಸಮಂಜಸವಾಗಿದೆ ಅದಕ್ಕಾಗಿಯೇ ಸ್ವಾಮಿ ಸಮಂತಭದ್ರರು ಪಂಚಾಣುವ್ರತಗಳನ್ನು ಸ್ವೀಕರಿಸಿದ ಶ್ರಾವಕರಿಗೆ ಅಷ್ಟ ಮೂಲಗುಣಗಳನ್ನು ಹೇಳಿರುವುದು ಸಯುಕ್ತಿಕವಾಗಿದೆ ಆದರೆ ಮುಂದಿನ ಕಾಲದಲ್ಲಿ ಜೈನ ಗೃಹಸ್ಥರಲ್ಲಿ 'ನಾನು ಶ್ರಾವಕನು', 'ಅವನು ಮಾತ್ರ ಶ್ರಾವಕನಲ್ಲ' ಎನ್ನುವ ವಾದವು ಈ ಮೂಲಗುಣಗಳ ಪಾಲನೆಯ ಆಧಾರದ ಮೇಲೆ ಉಂಟಾಗಿರಬಹುದಾಗಿದೆ ಆಗ ಸಮಸ್ತ ಜೈನ ಶ್ರಾವಕರಲ್ಲಿ ಒಂದು ಐಕ್ಯವನ್ನು ಸ್ಥಾಪಿಸುವದಕ್ಕಾಗಿ ಈ ಮೂಲಗುಣಗಳಲ್ಲಿಯೂ ಆಚಾರ್ಯರು ಸ್ವಲ್ಪ ವ್ಯತ್ಯಾಸವನ್ನು ಮಾಡಿರಬಹುದಾಗಿದೆ. ಆಗ ವ್ರತಿಕರಿಗೂ ಅವ್ರತಿಕರಿಗೂ ಸಾಧಾರಣವಾಗುವಂಥ ಮೂಲಗುಣಗಳನ್ನು ಸ್ಥಿರಗೊಳಿಸಲಾಯಿತು ಹೀಗೆ ಮಾಡುವಾಗ ಪರಂಪರಾಗತವಾದ ಮೂಲಗುಣಗಳು ಎಂಟೆಂಬುದನ್ನು ಅಲ್ಲಗಳೆಯಲಿಕ್ಕೂ ಬರುವಂತಿರಲಿಲ್ಲ ಆ ಸಂಖ್ಯೆಯನ್ನು ಹೆಚ್ಚಿಸಲಿಕ್ಕೂ ಬರುವಂತಿರಲಿಲ್ಲ ಹೀಗಾಗಿ ಮೂಲಗುಣಗಳಲ್ಲಿ ಮದ್ಯ, ಮಾಂಸ, ಜೇನತುಪ್ಪಗಳ ತ್ಯಾಗ—ಈ ಮೂರು ಗುಣಗಳು ವ್ರತಿಕರಿಗೂ ಅವ್ರತಿಕರಿಗೂ ಸಮಾನವಾಗಿರುವುದರಿಂದ ಅವುಗಳಿಗೇನೇ ಐದು ಉದುಂಬರ ಫಲದ ತ್ಯಾಗವನ್ನು ಸೇರಿಸಿ, ಎಂಟು ಮೂಲಗಳ ಸಂಖ್ಯೆಯನ್ನು ಕಾಯ್ದುಕೊಂಡರು. ಈ ನವೀನವಾಗಿ ರೂಪುಗೊಳಿಸಿದ ಅಷ್ಟ ಮೂಲಗುಣಗಳು ವ್ರತಿ ಹಾಗೂ ಅವ್ರತಿಗಳಾದ ಶ್ರಾವಕರೆಲ್ಲರಿಗೂ ಸಾಧಾರಣವಾದುವೆಂಬುದು ಕವಿರಾಜಮಲ್ಲನ 'ಪಂಚಾಧ್ಯಾಯ' ಮತ್ತು 'ಲಾಟೀಸಂಹಿತೆ'ಗಳಿಂದ ಸ್ಪಷ್ಟವಾಗುತ್ತದೆ.[1] ಆದರೆ ಸ್ವಾಮಿ ಸಮಂತಭದ್ರರು ಹೇಳಿರುವ ಮೂಲಗುಣಗಳು ಮಾತ್ರ ವ್ರತಿಕ ಶ್ರಾವಕರಿಗಾಗಿಯೇ ಇವೆ ಅವರನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಹೇಳಲಾಗಿದೆ, ಅವ್ರತಿಗಳಿಗಾಗಿ ಇಲ್ಲ ಇದು ಎರಡರಲ್ಲಿರುವ ಭೇದವಾಗಿದೆ

ಇರಲಿ, ಈ ಪ್ರಕಾರ ಸರ್ವಸಾಧಾರಣ ಮೂಲಗುಣಗಳ ಸೃಷ್ಟಿಯಾದ ಮೇಲೆ ಈ ಗುಣಗಳನ್ನು ಧರಿಸುವ ಅವ್ರತಿಗಳೂ ಸಹ ಶ್ರಾವಕ ಮತ್ತು ದೇಶವ್ರತಿಗಳಲ್ಲಿ ಸಮಾವೇಶ ಹೊಂದುತ್ತಾರೆ ಸೋಮದೇವಸೂರಿಯಂತು 'ಯಶಸ್ತಿಲಕ'ದಲ್ಲಿ ಇವರೆಲ್ಲರನ್ನೂ 'ದೇಶಯತಿ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ ಆದರೂ ವಾಸ್ತವಿಕವಾಗಿ ಇವರು 'ಹೆಸರಿಗೆ ಮಾತ್ರ ಶ್ರಾವಕರು' ಎಂದು ತಿಳಿದುಕೊಳ್ಳಬೇಕು. ಎಂಟು ಪದಾರ್ಥಗಳನ್ನು ತ್ಯಜಿಸದವರು ಹೆಸರಿಗೂ ಕೂಡ ಶ್ರಾವಕರೆನಿಸುವದಿಲ್ಲವೆಂದು 'ಪಂಚಾಧ್ಯಾಯಿ'ಯಲ್ಲಿ ಹೇಳಿದೆ [2] ಇದೇ ಮಾತನ್ನು 'ಲಾಟೀಸಂಹಿತಾ' ಕೂಡ ಉದ್ಧರಿಸುತ್ತದೆ

ನಿಜವಾದ ಶ್ರಾವಕನೆನಿಸಬೇಕಾದಲ್ಲಿ ಅವನು ಐದು ಅಣುವ್ರತಗಳನ್ನು ಪಾಲಿಸಲಿಕ್ಕೇ ಬೇಕು ಇದನ್ನು 'ಶಿವಕೋಟಿ' ಆಚಾರ್ಯರು ತಮ್ಮ 'ರತ್ನಮಾಲಾ'ದಲ್ಲಿ ಸ್ಪಷ್ಟಗೊಳಿಸಿದ್ದಾರೆ [3] ಅವರು ಪಂಚಾಣುವ್ರತ ಪಾಲನೆ ಸಹಿತ ಮದ್ಯ, ಮಾಂಸ, ಮಧುಗಳನ್ನು ತ್ಯಾಗಮಾಡುವುದಕ್ಕೇನೇ 'ಅಷ್ಟಮೂಲಗುಣ'ಗಳೆಂದು ಹೇಳಿದ್ದಾರೆ ಅಲ್ಲದೆ ಐದು ಉದುಂಬರಗಳ ತ್ಯಾಗವುಳ್ಳ ಮೂಲಗುಣಗಳು ಬಾಲಕ, ಕೂಸು, ಮೂರ್ಖ, ಅಶಕ್ತರಿಗಾಗಿ ಇವೆಯೆಂದೂ ಸ್ಪಷ್ಟಗೊಳಿಸಿದ್ದಾರೆ. ಇದರಿಂದಂತೂ ಅವುಗಳ ಸಂಬಂಧವು ಅವ್ರತಿಗಳಿಗೆಂದು ನಿರ್ಣಯವಾಗುತ್ತದೆ

ಈ ಸಮಂತಭದ್ರಾಚಾರ್ಯರು ಪ್ರತಿಪಾದಿಸಿದ ಮೂಲಗುಣಗಳಲ್ಲಿ ಶ್ರೀಜಿನಸೇನ ಮತ್ತು ಅಮಿತ-ಗತಿಗಳಂಥ ಆಚಾರ್ಯರೂ ಸಹ ತಮ್ಮ ತಮ್ಮ ಪ್ರತಿಪಾದನ ರೀತಿಗೆ ಅನುಸರಿಸಿ, ಸ್ವಲ್ಪ ವ್ಯತ್ಯಾಸಮಾಡಿಕೊಂಡಿದ್ದಾರೆ ಅದರ ವಿವರವಾದ ವರ್ಣನೆಯನ್ನು ಬೇರೆ ಗ್ರಂಥಗಳಿಂದ ತಿಳಿದುಕೊಳ್ಳಬೇಕು [4] ಸ ಧ ]

---

1 "ತತ್ರ ಮೂಲಗುಣಾಶ್ಚಾಷ್ಟೌ ಗೃಹಿಣಾಂ ವ್ರತಧಾರಿಣಾಮ್ । ಕ್ವಚಿದವ್ರತಿನಾಂ ಯಸ್ಮಾತ್ ಸರ್ವಸಾಧಾರಣಾ ಇಮೇ ॥"

2 ಮದ್ಯಮಾಂಸಮಧುತ್ಯಾಗೀ ತ್ಯಕ್ತೋದುಂಬರಪಂಚಕಃ । ನಾಮತಃ ಶ್ರಾವಕಃ ಖ್ಯಾತೋ ನಾನ್ಯಥಾಪಿ ತಥಾ ಗೃಹೀ ॥

3 ಮದ್ಯಮಾಂಸಮಧುತ್ಯಾಗಸಂಯುಕ್ತಾಣುವ್ರತಾನಿ ನುಃ ।
ಅಷ್ಟೌ ಮೂಲಗುಣಾಃ ಪಂಚೋದುಂಬರಾಶ್ಚಾರ್ಭಕೇಷ್ವಪಿ ॥ ೧೯ ॥"

4 ವಿವರಕ್ಕಾಗಿ ಹಿಂದೀ ಭಾಷೆಯೊಳಗಿನ "ಜೈನಾಚಾರ್ಯೋಂಕಾ ಶಾಸನ ಭೇದ" ಎಂಬ ಗ್ರಂಥವನ್ನು ನೋಡಿರಿ.

ವಿಶೇಷಾರ್ಥ—ಶ್ರಾವಕರು ಮೂಲಗುಣಗಳನ್ನು ಅವಶ್ಯವಾಗಿ ಕಾಪಾಡಿಕೊಂಡಿರಬೇಕು. ಅವು ಹೀಗಿವೆ—

(೧) ಯಾರೂ ತ್ರಸ ಜೀವಿಗಳ ಘಾತವನ್ನು ಸಂಕಲ್ಪ ಪೂರ್ವಕವಾಗಿ ಮಾಡಕೂಡದು ಇದು ಅಹಿಂಸೆ ಎಂಬ ಹೆಸರಿನ ಮೊದಲನೆಯ ಮೂಲಗುಣವಾಗಿದೆ

(೨) ತನಗೂ ಅನ್ಯರಿಗೂ ದುಃಖವನ್ನು ಉತ್ಪನ್ನಮಾಡುವಂಥ ಮತ್ತು ಸತ್ಯದ ಮೇಲಿನ ಶ್ರದ್ಧೆ, ಜ್ಞಾನ ಹಾಗೂ ಸದಾಚಾರಗಳನ್ನು ನಷ್ಟಗೊಳಿಸುವಂಥ ಮಾತುಗಳನ್ನು ಮಾತಾಡುವದನ್ನು ತ್ಯಾಗಮಾಡಬೇಕು. ಇದು ಸತ್ಯವೆಂಬ ಎರಡನೆಯ ಮೂಲಗುಣವು.

(೩) ವಸ್ತುವಿನ ಒಡೆಯರು ಕೊಡದ ಹೊರತಾಗಿ ಇಟ್ಟಿದ್ದನ್ನು, ಬಿದ್ದುದನ್ನು, ಮರೆತುದನ್ನು ತಕ್ಕೊಳ್ಳಕೂಡದು. ಈ ರೀತಿಯಲ್ಲಿ ಸಿಗುವ ಪರಧನವನ್ನು ತ್ಯಾಗಮಾಡುವುದೇ ಅಚೌರ್ಯ ಎಂಬ ಹೆಸರಿನ ಮೂರನೆಯ ಮೂಲಗುಣವಾಗಿದೆ.

(೪) ತನ್ನ ಕುಲಕ್ಕೆ ಯೋಗ್ಯವಾದ ವಿವಾಹಿತ ಸ್ತ್ರೀಯನ್ನುಳಿದು ಇತರ ಸ್ತ್ರೀಯರ ವಿಷಯದಲ್ಲಿ ಕಾಮ ಭಾವವನ್ನು ಹೊಂದಕೂಡದು. ಇದು ಬ್ರಹ್ಮಚರ್ಯವೆಂಬ ನಾಲ್ಕನೆಯ ಮೂಲಗುಣವಾಗಿದೆ

(೫) ನ್ಯಾಯದಿಂದ ಸಂಪಾದಿಸಿದ ದ್ರವ್ಯಾದಿ ಪರಿಗ್ರಹಗಳಲ್ಲಿಯೂ ಒಂದು ಮರ್ಯಾದೆಯನ್ನು ಇಟ್ಟು-ಕೊಂಡು, ಅದಕ್ಕಿಂತ ಹೆಚ್ಚಿಗೆ ಇಡುವದನ್ನು ಬಿಡಬೇಕು. ಇದು ಪರಿಗ್ರಹಪ್ರಮಾಣ ಎಂಬ ಹೆಸರಿನ ಐದನೆಯ ಮೂಲಗುಣವಾಗಿದೆ.

(೬) ಯಾವುದರಿಂದ ತನ್ನ ಪರಿಣಾಮದಲ್ಲಿ ಮೋಹ, ಭ್ರಾಂತಿ, ಮದಗಳು ಉತ್ಪನ್ನವಾಗುತ್ತವೆಯೋ, ಹಿತಾಹಿತದ ವಿವೇಕವು ನಷ್ಟವಾಗುತ್ತದೆಯೋ ಅಂಥ ಮದ್ಯ ಸೇವಿಸುವದನ್ನು ಬಿಡುವದು ಆರನೆಯ ಮೂಲಗುಣವಾಗಿದೆ

(೭) ಎರಡು ಇಂದ್ರಿಯಗಳುಳ್ಳವೇ ಮೊದಲಾದ ಪ್ರಾಣಿಗಳ ಶರೀರದಿಂದ ಉತ್ಪನ್ನವಾಗುವ ಮಾಂಸವನ್ನು ತ್ಯಾಗಮಾಡುವದು ಏಳನೆಯ ಮೂಲಗುಣವಾಗಿದೆ.

(೮) ಜೇನ್ನೊಣಗಳು ಸಂಗ್ರಹಿಸಿದ ಜೇನತುಪ್ಪವನ್ನು ತಿನ್ನದೆ ಇರುವುದು ಎಂಟನೆಯ ಮೂಲಗುಣವಾಗಿದೆ.

ವ್ರತದ ತಳಹದಿ—ಯಾವ ಗೃಹಸ್ಥನು ಐದು ಪ್ರಕಾರದ ಪಾಪಗಳನ್ನೂ ಮದ್ಯ, ಮಾಂಸ, ಮಧು-ಗಳನ್ನೂ ತ್ಯಾಗಮಾಡುವದನ್ನು ನಿಶ್ಚಯ ಮಾಡಿರುವನೋ ಅವನು ಗುಣವೆಂಬ ಮಂದಿರದ ಭದ್ರ ತಳಹದಿಯನ್ನು ಹಾಕಿದನೆಂದು ತಿಳಿಯಬೇಕು. ಅನಾದಿಕಾಲದಿಂದ ಸಂಸಾರದಲ್ಲಿ ಜೀವವು ಸುತ್ತಲಿಕ್ಕೆ ಕಾರಣವು ಮಿಥ್ಯಾತ್ವ, ಅನ್ಯಾಯ, ಅಭಕ್ಷ್ಯಭಕ್ಷಣ ಇವೇ ಆಗಿವೆ. ಇವುಗಳ ಅಭಾವದಲ್ಲಿಯೇ ಅನೇಕ ಗುಣಗಳನ್ನು ಗ್ರಹಣಮಾಡುವ ಪಾತ್ರತೆಯು ಜೀವಕ್ಕೆ ಪ್ರಾಪ್ತವಾಗುತ್ತದೆ ಅದಕ್ಕಾಗಿ ಮೇಲಿನ ಎಂಟು ಗುಣಗಳನ್ನು ಸ್ವೀಕರಿಸುವ ಅವಶ್ಯಕತೆ ಇದೆ.

ಐದು ಉದುಂಬರ ಫಲಗಳ ತ್ಯಾಗ—ಇನ್ನುಳಿದ ಕೆಲವು ಗ್ರಂಥಗಳಲ್ಲಿ ಐದು ಉದುಂಬರ ಫಲಗಳನ್ನೂ ಮದ್ಯ, ಮಾಂಸ, ಮಧುಗಳನ್ನೂ ತ್ಯಾಗಮಾಡುವುದಕ್ಕೇನೇ ಎಂಟು ಮೂಲಗುಣಗಳೆಂದು ಹೇಳಿದ್ದಾರೆ. ಪಂಚ ಉದುಂಬರ ಫಲಗಳೆಂದು ಅತ್ತಿ, ಆಲ, ಬಸರಿ, ಬೋರಿ ಮತ್ತು ಅಂಜೂರು ಫಲಗಳು ಹೆಸರಾಗಿವೆ. ಈ ಹಣ್ಣು ಗಳಲ್ಲಿ ಬಹಳಷ್ಟು ತ್ರಸಜೀವಗಳು ಪ್ರತ್ಯಕ್ಷ ಕಂಡು ಬರುವುದರಿಂದ ಅವುಗಳನ್ನು ತಿನ್ನುವದೆಂದರೆ ಮಾಂಸವನ್ನು ತಿಂದಂತೆಯೇ ಆಗುತ್ತದೆ ಇವಲ್ಲದೆ ಇನ್ನೂ ಅನೇಕ ಫಲಗಳಿವೆ. ಅವುಗಳಲ್ಲಿಯೂ ಅನೇಕ ತ್ರಸಜೀವಿಗಳು ಸತ್ತುದನ್ನು ಕಾಣುತ್ತೇವೆ ಅಂಥ ಹಣ್ಣುಗಳನ್ನು ತಿನ್ನುವ ಇಚ್ಛೆಯು ಅಹಿಂಸಾವ್ರತದ ಉಪೇಕ್ಷೆಮಾಡಿದಂತೆಯೇ ಸರಿ ಇದು ನಾಲಿಗೆಯ ರುಚಿಯ ಲಾಲಸೆಯೂ ಆಗಿದೆ ಅದಕ್ಕಿಂತಲೂ ಅಜ್ಞಾನದಿಂದ ಅವುಗಳನ್ನು ಒಣಗಿಸಿ ತಿನ್ನುವುದಂತೂ ಲಾಲಸೆಯ ಪರಾಕಾಷ್ಠೆಯಾಗಿದೆ

ಮದ್ಯ ತ್ಯಾಗ—ಶೆರೆಯು ಮನಸ್ಸಿಗೆ ಮೋಹವನ್ನು ಉತ್ಪನ್ನ ಮಾಡುವಂಥದು ಅಲ್ಲದೆ ಅಚೇತನತ್ವವನ್ನು ತರುವಂಥದು. ಮನಸ್ಸಿಗೆ ಮೋಹವುಂಟಾದರೆ ಧರ್ಮವು ಮರೆತು ಹೋಗುತ್ತದೆ ಧರ್ಮವನ್ನು ಮರೆತವನು ಸಂಶಯವಿಲ್ಲದೆ ಹಿಂಸೆಯನ್ನು ಮಾಡಲಿಕ್ಕೆ ಸಿದ್ಧನಾಗುತ್ತಾನೆ. ಮನವನ್ನು ಉನ್ಮತ್ತಗೊಳಿಸಿ, ಸ್ವಸ್ವರೂಪದ ಸಾವಧಾನತೆ-ಯನ್ನು ಮರೆಯಿಸುವ ಮತ್ತು ವಿಷಯದಲ್ಲಿ ಆಸಕ್ತಿಯನ್ನುಂಟುಮಾಡುವ ವಸ್ತುವು ಮದ್ಯವಾಗಿದೆ ಇದು ಇಂದ್ರಿಯಗಳಲ್ಲಿ ವಾಸನೆಯನ್ನೂ ಹೆಚ್ಚಿಸುತ್ತದೆ. ಇದರಂತೆಯೇ ಗಾಂಜೀ ಸೇದುವುದು, ಅಫು ತಿನ್ನುವುದು ಅಲ್ಲದೆ

ಅಮಲು ಏರುವಂಥ ಯಾವುದೇ ಪದಾರ್ಥವನ್ನು ಸೇವಿಸುವುದು—ಇವುಗಳಿಂದ ಧರ್ಮಬುದ್ಧಿಯು ಉಳಿಯುವದಿಲ್ಲ ಯಾವಾಗಲೂ ತಿನ್ನಬಾರದಂಥ ವಸ್ತುಗಳನ್ನು ತಿನ್ನುವುದರಲ್ಲಿ ಅನುರಕ್ತನಾಗುವುದರಿಂದ ಬುದ್ಧಿಯ ನಿರ್ಮಲತೆಯೂ ಪರಮಾರ್ಥದ ವಿಚಾರವೂ ಇಲ್ಲದಂತೆ ಆಗುತ್ತವೆ ಅದರಿಂದ ಜಿನೇಶ್ವರನ ಆಜ್ಞೆಯನ್ನು ಪಾಲಿಸಬೇಕೆನ್ನುವವರು ಮದವೇರುವಂಥ ಎಲ್ಲ ಪದಾರ್ಥಗಳನ್ನೂ ಅವಶ್ಯವಾಗಿ ತ್ಯಜಿಸಬೇಕು ಗಾಂಜಿಯಲ್ಲಿಯೂ ಅನೇಕ ತ್ರಸಜೀವಿಗಳು ಹುಟ್ಟುತ್ತವೆ. ಮದ್ಯದಲ್ಲಿಯಂತೂ ಅವುಗಳಿಗೆ ಲೆಕ್ಕವೇ ಇಲ್ಲ. ಊಟಮಾಡುವಾಗ ಉತ್ತಮ ಕುಲದಲ್ಲಿ ಜನಿಸಿದವರಿಗೆ ಮದ್ಯದ ಒಂದು ಹಣಿಯು ದೃಷ್ಟಿಗೆ ಬಿದ್ದರೂ ಸಾಕು. ಅವರು ಊಟವನ್ನು ಬಿಟ್ಟು ಏಳುವರು ಮದ್ಯದ ಸ್ಪರ್ಶ-ವಾದರಂತೂ ಸ್ನಾನವನ್ನೇ ಮಾಡುವರು. ಶೆರೆ ಕುಡಿದು ಉನ್ಮತ್ತನಾದ ಮನುಷ್ಯನು ತಾಯಿಗೆ ಹೆಂಡತಿಯೆಂದೂ ಹೆಂಡತಿಗೆ ತಾಯಿಯೆಂದೂ ತಿಳಿದು ಅದರಂತೆ ವರ್ತಿಸಲಿಕ್ಕೆ ಸಿದ್ಧನಾಗುತ್ತಾನೆ ಹೆದರಿಕೆ, ನೋವು, ಸಿಟ್ಟು, ಇಚ್ಛೆ, ಆಶೆ, ನಗೆ, ದುಃಖ, ರತಿ, ಅರತಿ ಈ ಎಲ್ಲ ದೋಷಗಳು ಹಿಂಸೆಯಿಂದಲೇ ಉತ್ಪನ್ನವಾಗುತ್ತವೆ ಆದರೆ ಇವೆಲ್ಲ ಗುಣಗಳು ಶೆರೆಗುಡುಕನಲ್ಲಿಯೂ ಇರುತ್ತವೆ ಅದಕ್ಕಾಗಿ ಧರ್ಮವು ನಮ್ಮಲ್ಲಿರಬೇಕೆಂದು ಮದ್ಯಪಾನದ ತ್ಯಾಗ ಮಾಡುವುದು ಅವಶ್ಯವಾಗಿದೆ.

ಮಾಂಸತ್ಯಾಗ—ಮಾಂಸವು ಪ್ರಾಣಿಗಳ ವಧೆಯಿಂದ ದೊರೆಯುತ್ತದೆ ಅದನ್ನು ಪ್ರತ್ಯಕ್ಷ ನೋಡಿದ-ರಂತೂ ಬಹಳ ಹೇಸಿಕೆ ಬರುವಂತೆ ಇರುತ್ತದೆ ಮಾಂಸದ ಸ್ಪರ್ಶ, ದುರ್ಗಂಧ ಇವುಗಳ ಹೆಸರನ್ನು ಉಚ್ಚರಿಸಿದರೂ ಸಹ ಮೈ ನಡುಗುವಂಥ ಹೇಸಿಕೆಯು ಉಂಟಾಗುತ್ತದೆ ಧರ್ಮಾಚರಣದ ತಿರಸ್ಕಾರದಿಂದ ನರಕಕ್ಕೆ ಹೋಗುವಂಥವರೂ ದಯೆಯಿಲ್ಲದವರೂ ಮಾಂಸವನ್ನು ತಿನ್ನುತ್ತಾರೆ. ಇನ್ನು ತಾನಾಗಿಯೇ ಸತ್ತ ಎತ್ತು, ಕೋಣ, ಚಿಗರೆ ಮೊದಲಾದ ಪಶುಗಳ ಮಾಂಸದಲ್ಲಿ ಅನಂತ ಬಾದರ-ಸ್ಥೂಲ-ನಿಗೋದೀ ಜೀವಗಳೂ ಅಸಂಖ್ಯಾತ ತ್ರಸ ಜೀವಗಳೂ ಇರುತ್ತವೆ. ಅವೆಲ್ಲವುಗಳನ್ನು ತಿನ್ನುವುದರಿಂದ ಘಾತವಾಗುತ್ತದೆ ಹಸಿಯ ಮಾಂಸದಲ್ಲಿಯೂ ಕುದಿಸಿದ ಮಾಂಸದಲ್ಲಿಯೂ ಕೂಡ ಅನಂತ ಜೀವಗಳು ನಿರಂತರ ಹುಟ್ಟುತ್ತಿರುತ್ತವೆ ಇದೇ ಪ್ರಕಾರ ಪ್ರತಿಯೊಂದು ಸಮಯದಲ್ಲಿಯೂ—ಕಾಲದ ಒಂದು ತೀರ ಸೂಕ್ಷ್ಮಭಾಗ—ತ್ರಸ ಜಾತಿಯ ಜೀವಗಳು ಉತ್ಪನ್ನವಾಗುತ್ತಿರುತ್ತವೆ ಅದಕ್ಕಾಗಿ ಹಸಿ, ಕುದಿಸಿದ, ಬೇಯಿಸಿದ ಇಲ್ಲವೆ ಒಣಗಿಸಿದ ಮಾಂಸವನ್ನು ತಿನ್ನುವವನೂ ಮಾಂಸದ ತುಂಡನ್ನು ಮುಟ್ಟುವವನೂ ನಿರಂತರ ಸಂಚಯವಾಗುತ್ತಿರುವ ಸಾವಿರಾರು ಜೀವಗಳ ಘಾತಮಾಡುತ್ತಾನೆಂದು ತಿಳಿಯಬೇಕು. ಮಾಂಸವನ್ನು ತಿನ್ನುವವರಿಗೆ ದಯೆಯಿರುವದಿಲ್ಲ, ಆಚಾರವಿರುವದಿಲ್ಲ. ಅವರ ಜಾತಿ, ಕುಲ, ಧರ್ಮ, ದಯೆ, ಕ್ಷಮೆ ಇತ್ಯಾದಿ ಎಲ್ಲ ಗುಣಗಳೂ ಇಲ್ಲದಂತೆ ಆಗುತ್ತವೆ ಅದರಿಂದ ಅವನಿಗೆ ದುರ್ಗತಿಯು ನಿಶ್ಚಿತವಾದುದು. ಮಾಂಸ ತಿನ್ನುವದರಿಂದ ಧರ್ಮವು ಸಂಭವಿಸುತ್ತದೆ, ಮಾಂಸದಿಂದ ಪಿತೃಗಳೂ ದೇವತೆಗಳೂ ಸಂತುಷ್ಟರಾಗುತ್ತಾರೆ, ದೇವರು ಮಾಂಸಭಕ್ಷಣ ಮಾಡುವವರಿದ್ದಾರೆ, ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಮಾಂಸಪಿಂಡವನ್ನು ಊಟಕ್ಕೆ ಹಾಕುವದರಿಂದ ದೇವ ಹಾಗೂ ಪಿತೃಗಳು ತೃಪ್ತರಾಗುತ್ತಾರೆ ಇವೇ ಮೊದಲಾದ ವಿಚಾರಗಳನ್ನು ಶಾಸ್ತ್ರದಲ್ಲಿ ಬರೆದಿಡುವವರು ಮಹಾಪಾಪಿಗಳೂ ನಿರ್ದಯಿಗಳೂ ಆಗಿರುತ್ತಾರೆ. ಮಿಥ್ಯಾ ದರ್ಶನದ ಪ್ರಭಾವದಿಂದ ಅವರಿಗೆ ಇಂಥ ಬುದ್ಧಿಯು ಉತ್ಪನ್ನವಾಗುತ್ತಿರುತ್ತದೆ.

ಜೇನ ತುಪ್ಪದ ತ್ಯಾಗ—ಜೇನ-ತುಪ್ಪವನ್ನು ತಿನ್ನುವುದೂ ಮಹಾಪಾಪವಾಗಿದೆ ಜೇನತುಪ್ಪವು ಹೇಗೆ ಉತ್ಪನ್ನವಾಗುತ್ತದೆ? ಅದನ್ನು ಯಾರು ತರುವರು? ಜೇನತುಪ್ಪವು ಜೇನ್ನೊಣಗಳ ಎಂಜಲು ಆಗಿದೆ ಅದನ್ನು ಬೇಡರು, ಚಾಂಡಾಲರು, ಭಿಲ್ಲರು ಮೊದಲಾದವರು ಮಾರಲಿಕ್ಕೆ ತರುತ್ತಾರೆ. ಜೇನ ಹುಟ್ಟಿನೊಳಗಿಂದ-ಹೋಳಿಗೆ-ಯೊಳಗಿಂದ-ಅದನ್ನು ತೆಗೆಯುವಾಗ ಅದರ ರುಚಿಯನ್ನೂ ಅವರು ನೋಡಿರುತ್ತಾರೆ. ಆ ಕಾಲದಲ್ಲಿ ಅವರ ಉಗುಳು, ರೊಜ್ಜು, ಎಂಜಲುಗಳು ಅದರಲ್ಲಿ ಬೀಳುತ್ತವೆ ಅದರಿಂದ ಅದು ತಿನ್ನಲಿಕ್ಕ ಯೋಗ್ಯವಾಗಿಲ್ಲ ಜೇನತುಪ್ಪದಲ್ಲಿ ಯಾವಾಗಲೂ ಅನಂತ ಜೀವಗಳು ಹುಟ್ಟುತ್ತಿರುತ್ತವೆ ಜೇನ ಹುಟ್ಟನ್ನು ಹಿಂಡಿ, ತುಪ್ಪನ್ನು ತೆಗೆಯಲಾಗುತ್ತದೆ. ಇಂಥ ಜೇನ ತುಪ್ಪಕ್ಕೆ ಪವಿತ್ರವೆಂದು ತಿಳಿದು, ಅದಕ್ಕೆ ಪಂಚಾಮೃತವೆನ್ನುವುದು ಮತ್ತು ಅದು ಶುದ್ಧವಿದೆಯೆಂದು ಹೇಳುವುದು ಅತಿ ಶಬ್ದವಿಪರ್ಯಾಸವಾಗಿದೆ! ಜೇನತುಪ್ಪದ ಒಂದು ಹಣಿಯನ್ನು ಯಾರಾದರೂ ಔಷಧಕ್ಕಾಗಿ ಸೇವಿಸಿದರೂ ರೋಗ ದೂರವಾಗಲೆಂದು ಸ್ವೀಕರಿಸಿದರೂ ಅವರಿಗೆ ನರಕದೊಳಗಿನ ಭಯಂಕರ ದುಃಖವನ್ನು ಭೋಗಿಸಬೇಕಾಗುವದು ಅಲ್ಲದೆ ಲೆಕ್ಕವಿಲ್ಲದಷ್ಟು ಅಸಂಖ್ಯಾತವಿಷ್ಟೇ ಅಲ್ಲ—ಅನಂತ ಜನ್ಮಗಳ ವರೆಗೆ ರೋಗವು ಪ್ರಾಪ್ತವಾಗುತ್ತದೆ ಮದ್ಯ, ಮಾಂಸ, ಜೇನತುಪ್ಪ ಮತ್ತು ಬೆಣ್ಣೆ ಇವು ನಾಲ್ಕು ದೊಡ್ಡ ವಿಕೃತಿಗಳು ಆಗಿವೆ—ಹೀಗೆ

ಪರಮಾಗಮದಲ್ಲಿ ಹೇಳಿದೆ ಅಂತಲೇ ಜಿನಧರ್ಮವನ್ನು ಆಚರಿಸುವ ಇಚ್ಛೆಯುಳ್ಳವರು ಈ ನಾಲ್ಕು ವಸ್ತುಗಳನ್ನೂ ತ್ಯಾಗಮಾಡಲಿಕ್ಕೆ ಬೇಕಾಗುತ್ತದೆ ಅದಲ್ಲದೆ ಧರ್ಮಾಚರಣೆಯನ್ನು ಮಾಡುವ ಪಾತ್ರತೆಯು ಉಂಟಾಗುವದಿಲ್ಲ

ತ್ರಸ ಹಿಂಸಾ ತ್ಯಾಗ—ಧರ್ಮವು ಅಹಿಂಸಾ ರೂಪವಾಗಿದೆ ಈ ಮಾತನ್ನು ಜಿನೇಶ್ವರರಿಂದ ಮೇಲಿಂದ ಮೇಲೆ ಕೇಳುತ್ತಲಿದ್ದೂ ಸಹ ಯಾರಿಗೆ ಸ್ಥಾವರ ಹಿಂಸೆಯನ್ನು ತ್ಯಾಗ ಮಾಡಲಿಕ್ಕೆ ಆಗಿಲ್ಲವೋ ಅವರು ತ್ರಸ ಹಿಂಸೆಯನ್ನಾದರೂ ತ್ಯಾಗಮಾಡಲಿಕ್ಕೆಬೇಕು ಹಿಂಸೆಯ ತ್ಯಾಗವನ್ನು ಒಂಬತ್ತು ಪ್ರಕಾರದಿಂದ ಮಾಡಲಿಕ್ಕೆ ಬರುತ್ತದೆ ಮನಸ್ಸಿನಿಂದ ಹಿಂಸೆಯನ್ನು ಮಾಡಕೂಡದು, ಮಾಡಿಸಕೂಡದು, ಮಾಡುವವರಿಗೆ ಒಪ್ಪಿಗೆಯನ್ನು ಕೊಡಬಾರದು, ಮಾತಿನಿಂದ ಹಿಂಸೆಯನ್ನು ಮಾಡಕೂಡದು, ಮಾಡಿಸಕೂಡದು, ಮಾಡುವವರನ್ನು ಅನುಮೋದಿಸ-ಬಾರದು, ದೇಹದಿಂದ ಹಿಂಸೆಯನ್ನು ಮಾಡಕೂಡದು, ಮಾಡಿಸಲೂ ಬಾರದು, ಮಾಡುವದಕ್ಕೆ ಒಪ್ಪಿಗೆಯನ್ನೂ ಕೊಡಕೂಡದು ಈ ಪ್ರಕಾರ ಮನ–ವಚನ–ಕಾಯಗಳಿಂದ–ಕೃತ–ಕಾರಿತ–ಅನುಮೋದನಗಳ ಯೋಗದಿಂದ-ಹಿಂಸೆಯನ್ನು ತ್ಯಾಗಮಾಡಬೇಕು ಹೀಗೆ ಪೂರ್ಣವಾಗಿ ಒಂಭತ್ತು ವಿಧದಿಂದ ಹಿಂಸೆಯನ್ನು ತ್ಯಾಗ ಮಾಡುವದಕ್ಕೆ ಉತ್ಕೃಷ್ಟ ತ್ಯಾಗವೆನ್ನುತ್ತಾರೆ ಇದಕ್ಕೆ ಔತ್ಸರ್ಗಿಕ ತ್ಯಾಗವೆಂದೂ ಹೆಸರಿದೆ ಈ ಒಂಭತ್ತು ಪ್ರಕಾರವಲ್ಲದೆ ಬೇರೆ ವಿಧದ ತ್ಯಾಗಕ್ಕೆ ಅಪವಾದಿಕತ್ಯಾಗವೆಂದು ಹೇಳುತ್ತಾರೆ ಇದರಲ್ಲಿಯೂ ಅನೇಕ ಪ್ರಕಾರಗಳಿವೆ. ಅಹಿಂಸಾ ಧರ್ಮವು ಮೋಕ್ಷಕ್ಕೆ ಕಾರಣವು ಸಂಸಾರ ಪರಿಭ್ರಮಣದ ದುಃಖವೆಂಬ ರೋಗದಿಂದ ಸಂಪೂರ್ಣ ಮುಕ್ತಗೊಳಿಸಲಿಕ್ಕೆ ಇದು ಅಮೃತದಂತಿದೆ ಅದು ಪ್ರಾಪ್ತವಾಗಿದ್ದರೂ ಅಜ್ಞಾನಿಗಳಾದ ಮಿಥ್ಯಾದೃಷ್ಟಿಯುಳ್ಳವರ ಆಚರಣೆಯನ್ನು ನೋಡಿ, ತಾವು ಸದಸದ್ವಿಚಾರವನ್ನು ಕಳಕೊಳ್ಳಕೂಡದು. ಪ್ರಪಂಚದಲ್ಲಿ ಕರ್ಮದ ಪ್ರೇರಣೆಯಿಂದ ವಿವಿಧ ಹಾಗೂ ಭಿನ್ನ ವಿಚಾರ ಪದ್ಧತಿಯ ಜನರು ನೋಡಲಿಕ್ಕೆ ದೊರೆಯುತ್ತಾರೆ. ಅನೇಕರು ಹಿಂಸಕರು, ಅಭಕ್ಷ್ಯ ಭಕ್ಷಣ ಮಾಡುವವರು, ಕ್ರೋಧವುಳ್ಳವರು, ಅಭಿಮಾನಿಗಳು, ಮಾಯಾವಿಗಳು, ಲೋಭಿಗಳು, ಮಹಾಪರಿಗ್ರಹಿಗಳು, ಮಹಾ ಆರಂಭಿಗಳು ಮತ್ತು ಅನ್ಯ ಮಾರ್ಗಿಗಳು ಇದ್ದಾರೆ ಇವರೆಲ್ಲರ ಭಿನ್ನ ಭಿನ್ನ ಕೃತಿಗಳನ್ನು ಕಂಡು, ತಮ್ಮ ಚಿತ್ತವನ್ನು ಕೆಡಿಸಿಕೊಳ್ಳ-ಕೂಡದು ಮಿಥ್ಯಾತ್ವಕರ್ಮದ ಉದಯದಿಂದ ಅವರಿಗೆ ತಾವು ಯಾರು ಎಂಬುದರ ಮರೆವು ಉಂಟಾಗಿದೆ ಅದಕ್ಕಾಗಿ ನಾವು ಅವರ ವಿಷಯದಲ್ಲಿ ಮನಸ್ಸಿನಲ್ಲಿ ತಟಸ್ಥ ವೃತ್ತಿಯನ್ನು ಸ್ವೀಕರಿಸಬೇಕು ಜಿನೇಂದ್ರರು ಪ್ರತಿಪಾದಿಸಿದ ಧರ್ಮವು ಸೂಕ್ಷ್ಮವಾಗಿದೆ, ಅದರ ರಹಸ್ಯವನ್ನರಿಯದೆ ಯಾರಾದರೂ 'ಧರ್ಮದ ಸಲುವಾಗಿ ಹಿಂಸೆಯಾದರೆ ಅಡ್ಡಿಯಿಲ್ಲ, ಅದರಲ್ಲಿ ದೋಷವಿಲ್ಲ.'—ಎಂದು ಹೇಳಿದರೆಂದು ನಾವು ಹಿಂಸೆಯನ್ನು ಮಾಡಲಿಕ್ಕೆ ಪ್ರವೃತ್ತರಾಗಕೂಡದು.

**ದೇವ-ದೇವತೆಗಳ ಸಲುವಾಗಿ ಹಿಂಸೆಯನ್ನು ಮಾಡಕೂಡದು.** ಇನ್ನು ದೇವ-ಗುರು ಅಥವಾ ಇನ್ನಾರ ಸಲುವಾಗಿಯೇ ಆಗಲಿ ಮಾಡಿದ ಹಿಂಸೆಯಿಂದ ಪುಣ್ಯವು ಉತ್ಪನ್ನವಾಗಲಾರದು ಪಾಪವೇ ಸಂಭವಿಸುತ್ತದೆ ಧರ್ಮವೆಂದರೆ ಎಲ್ಲ ಪ್ರಾಣಿಗಳ ಮೇಲೆ ದಯೆ ಒಂದು ವೇಳೆ ದೇವ-ಗುರುಗಳ ಕಾರ್ಯದ ನಿಮಿತ್ತ ಮಾಡಿದ ಹಿಂಸೆಯಿಂದ ಧರ್ಮವು ನೆರವೇರುತ್ತದೆಂದು ಮನ್ನಿಸಿದರೆ, 'ಹಿಂಸೆಯು ಧರ್ಮವಲ್ಲ' ಎಂಬ ಜಿನವಾಣಿಯು ಅಸತ್ಯವೆಂದಾದೀತು ಹಿಂಸೆಯಿಂದ ಧರ್ಮವಾಗುತ್ತದೆಂಬ ತಪ್ಪು ತಿಳುವಳಿಕೆಯಿಂದ ಪ್ರಾಣಿಗಳ ಹಿಂಸೆಯನ್ನು ಮಾಡುವುದು ಯೋಗ್ಯವಲ್ಲ ಕಾತ್ಯಾಯನಿ, ಚಂಡಿಕಾ, ಭವಾನಿ, ದುರ್ಗಾ, ಪಾರ್ವತಿ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿರುವ ದೇವಿಯರಿಗೆ ಕುರಿ, ಕೋಣ ಮೊದಲಾದವುಗಳನ್ನು ಬಲಿ ಕೊಡುವುದರಿಂದ ಅವರು ಪ್ರಸನ್ನ-ರಾಗುತ್ತಾರೆಂದು ಹಿಂಸೆಮಾಡಿದರೆ ದೋಷವಿಲ್ಲ—ಎನ್ನುವ ಮಿಥ್ಯಾದೃಷ್ಟಿಗಳ ಮಾತಿಗೆ ಮರುಳಾಗಿ ತಾವು ತಮ್ಮ "ಅಹಿಂಸಾ ಪರಮೋ ಧರ್ಮಃ" ಎಂಬ ತತ್ತ್ವದಿಂದ ಪರಾಙ್ಮುಖರಾಗಕೂಡದು ದೇವಿಗೇನೇ ಸ್ವತಃ ಮಾಂಸ ತಿನ್ನಬೇಕೆಂದು ಎನ್ನಿಸುತ್ತಿದ್ದರೆ ಅವಳು ಕೈಯಲ್ಲಿ ಶಸ್ತ್ರ ಹಿಡಿದು, ಭಯಂಕರ ರೂಪವನ್ನು ಧರಿಸಿ ನಿಂತಿದ್ದಾಳೆ, ತನಗೆ ಬೇಕಾದ ಜೀವದ ವಧೆಯನ್ನು ಮಾಡಿ, ಮಾಂಸ ಭಕ್ಷಣ ಮಾಡಲಿಕ್ಕೆ ಅವಳಿಗೆ ಬರುವದಿಲ್ಲವೆ? ಹಾಗೆ ಮಾಡಲು ಬರುತ್ತಿದ್ದರೆ ಅವಳು ಆ ರೀತಿಯಿಂದ ಮಾಂಸವನ್ನೇಕೆ ತಿನ್ನುವದಿಲ್ಲ? ತನ್ನ ಭಕ್ತರ ಕೈಯಿಂದಲೇ ದೀನ–ಅನಾಥ ಹಾಗೂ ಭಯಭೀತ ಜೀವಗಳನ್ನು ಯಾಕೆ ಕೊಲ್ಲಿಸುವಳು? ತಾನು ಸ್ವತಃ ಹುಲಿ–ಸಿಂಹ ಮೊದಲಾದ ಭಯಂಕರ ಪ್ರಾಣಿಗಳನ್ನು ಕೊಂದು ಏಕೆ ತಿನ್ನುವದಿಲ್ಲ? ಇದು ಇರಲಿ, ತಾನು ಸ್ವತಃ ದೇವತೆ ಎನಿಸಿ—ದೊಡ್ಡ ಶಕ್ತಿಯನ್ನು ಧಾರಣ ಮಾಡುವ ವ್ಯಕ್ತಿ ಎನಿಸಿ—ಕಾಗೆ, ನಾಯಿ, ಭಿಲ್ಲ, ಬೇಡರಂತೆ ಹಸಿವೆಯಿಂದ ತ್ರಸ್ತಳಾಗಿ, ಮಾಂಸ ತಿನ್ನುವ ಇಚ್ಛೆಯನ್ನು ಮಾಡುತ್ತಾಳೆ, ಅಂದಮೇಲೆ ಇವಳಿಗೆ ದೇವತೆಯೆಂದು ಹೇಗೆ ಅನ್ನಬೇಕು? ಯಾವಳು ಸ್ವತಃ ದುಃಖಿಯೂ

ಮಾಂಸ ತಿನ್ನುವುದರಲ್ಲಿ ಆಸಕ್ತಳೂ ಆಗಿರುವಳೋ ಅವಳು ತನ್ನ ಭಕ್ತರಿಗೆ ಸುಖವನ್ನುಂಟುಮಾಡಲಿಕ್ಕೆ ಹೇಗೆ ಸಮರ್ಥ-ಳಾಗುವಳು? ಅತಿ ದುರ್ಗಂಧದಿಂದ ಕೂಡಿದ ತಿರ್ಯಂಚ ಜೀವಿಯ ಮಾಂಸವನ್ನು ತಿನ್ನಲಿಕ್ಕೆ ಇಚ್ಛಿಸುವ ಮಹಾ ಪಾಪಿಯಾದ ಜೀವಕ್ಕೆ ದೇವತ್ವವಾದರೂ ಹೇಗೆ ಇದ್ದೀತು? —ಇದರ ವಿಚಾರವನ್ನು ಸ್ವಲ್ಪವಾದರೂ ತಮ್ಮ ಮನಸ್ಸಿನಲ್ಲಿ ಮಾಡಬೇಕು ಪಾಪಿಗಳಾದ ಜನರು, ಸುಳ್ಳು ಶಾಸ್ತ್ರಗಳನ್ನು ರಚಿಸಿ, ತಾವು ಸ್ವತಃ ಮಾಂಸವನ್ನು ತಿನ್ನಬೇಕು, ಮತ್ತು ಮೂಢ ಜನರೂ ಸಹ ದೇವರ ಪ್ರಸಾದವೆಂದು ಮಾಂಸ ತಿನ್ನಲಿಕ್ಕೆ ಪ್ರವೃತ್ತರಾಗಬೇಕು—ಎಂದು ಈ ಎಲ್ಲ ವ್ಯೂಹವನ್ನು ರಚಿಸಲಾಗಿದೆ ಈ ಪ್ರಕಾರ ಭಾವುಕ ಜನರನ್ನು ಆ ಧೂರ್ತ ಜನರು—ತಮ್ಮ ಇಂದ್ರಿಯಗಳನ್ನು ಪುಷ್ಟಗೊಳಿಸುವ ಇಚ್ಛೆಯುಳ್ಳವರು—ಕಾರಣವಿಲ್ಲದೆ ನರಕದ ಮಾರ್ಗದ ಕಡೆಗೆ ಒಯ್ಯುತ್ತಿದ್ದಾರೆ

**ಭವನವಾಸೀ ದೇವರು ಕವಲಾಹಾರಿಗಳಲ್ಲ.** ಭಗವಾನ್ ಜಿನೇಶ್ವರರ ಪರಮಾಗಮದಲ್ಲಿ ಭವನವಾಸಿ, ವ್ಯಂತರ, ಜ್ಯೋತಿಷ ಮತ್ತು ಕಲ್ಪವಾಸಿ ಈ ನಾಲ್ಕು ಪ್ರಕಾರದ ದೇವರು ಮೂಲದಲ್ಲಿಯೇ ನಮ್ಮಂತೆ ಕವಲಾಹಾರವನ್ನು ಸ್ವೀಕರಿಸುವದಿಲ್ಲ, ಅವರು ಮಾನಸಿಕ ಆಹಾರವನ್ನು ತಕ್ಕೊಳ್ಳುತ್ತಾರೆ—ಎಂದು ಹೇಳಿದೆ ಅವರಿಗೆ ಹಸಿವೆಯ ಇಚ್ಛೆಯಾದಾಗ ಅವರ ಕಂಠದಲ್ಲಿ ಅಮೃತವು ಒಸರಲಿಕ್ಕೆ ಆರಂಭವಾಗುತ್ತದೆ ಅದರಿಂದ ಅವರಿಗೆ ಎಳ್ಳಷ್ಟೂ ಹಸಿವೆಯ ಬಾಧೆಯು ಉಳಿಯುವದಿಲ್ಲ ದೇವತೆಗಳ ಶರೀರವು ವೈಕ್ರಿಯಿಕವಾಗಿದ್ದು, ಅದು ಸಪ್ತಧಾತುಗಳಿಂದ ರಹಿತವಾಗಿರುತ್ತದೆ ಇಂಥ ದೇವತೆಗಳಿಗೆ ಮಾಂಸಭಕ್ಷಕರೆನ್ನುವದು ವಿಪರೀತ ಬುದ್ಧಿಯ ಲಕ್ಷಣವಾಗಿದೆ ಒಂದು ವೇಳೆ ದೇವರು ಮಾಂಸ ಭಕ್ಷಕರೆಂದು ಸ್ವೀಕರಿಸಿದರೆ ನಾಯಿ, ಹದ್ದು ಮೊದಲಾದ ಪಶು-ಪಕ್ಷಿಗಳಿಗಿಂತಲೂ ಅವರು ಕಡಿಮೆ ತರಗತಿಯವರೆನಿಸುತ್ತಾರೆ ಅದರಿಂದ ದೇವ-ದೇವತೆಗಳ ಸಲುವಾಗಿ ಹಿಂಸೆಯನ್ನು ಮಾಡುವುದು ಯೋಗ್ಯವಲ್ಲ

**ಮಾಂಸಭಕ್ಷಕನು ಗುರುವಲ್ಲ.** ಯಾರಾದರೂ ಮಾಂಸ ತಿನ್ನುವಂಥ ಗುರುಗಳಿದ್ದರೆ ಅವರಿಗೆ ಮಾಂಸದ ದಾನವನ್ನು ಮಾಡಕೂಡದು ಮಾಂಸಾದಿಗಳನ್ನು ತಿನ್ನುವವನೂ ಸೆರೆಯನ್ನು ಕುಡಿಯುವವನೂ ಆದಂಥ ಆ ಪಾಪಿಯು ಗುರುವು ಹೇಗಾಗುವನು? ಅವನು ಮಾಂಸಭಕ್ಷಣ ಮಾಡಿಸಿ, ನರಕಕ್ಕೆ ತಲುಪಿಸುವುದಕ್ಕೆ ಗುರುವಾದಂತಾಯಿತು ಇಂಥ ಗುರುವನ್ನು ಮುಟ್ಟುವುದರಿಂದ ಅಥವಾ ನೋಡುವುದರಿಂದಲೂ ಭಯಂಕರ ಪಾಪದ ಬಂಧವಾಗುವುದು

ಒಂದು ಪ್ರಶ್ನೆ—ನಾವು ಅನ್ನವನ್ನು ತಿನ್ನುವಾಗಲೂ ಸಾವಿರಾರು ಜೀವಗಳ ಘಾತವಾಗುವದುಂಟು ಅದಕ್ಕಿಂತ ಒಂದು ಪ್ರಾಣಿಯನ್ನು ಕೊಂದು ತಿನ್ನುವುದು ಒಳ್ಳೆಯದಲ್ಲವೆ?—ಹೀಗೆಯೂ ಕೆಲವರು ಕೇಳಬಹುದಾಗಿದೆ.

ಉತ್ತರ—ಏಕೇಂದ್ರಿಯ ಪ್ರತಿಯೊಂದು ವನಸ್ಪತಿ, ಪೃಥ್ವಿ, ಜಲ, ಅಗ್ನಿ ಮತ್ತು ಪವನ ಇವೆಲ್ಲ ಮೂರು ಲೋಕದಲ್ಲಿ ತುಂಬಿಕೊಂಡಿವೆ ಇವು ಎಲ್ಲ ಹಾಗೂ ವಿಕಲತ್ರಯ, ದೇವ, ಮನುಷ್ಯ, ತಿರ್ಯಂಚ ಇವನ್ನು ಸೇರಿಸಿದರೆ ಅವು ಅಸಂಖ್ಯಾತ ಪ್ರಮಾಣವಾಗಬಹುದು ಆದರೆ ಮನುಷ್ಯ ಇಲ್ಲವೆ ತಿರ್ಯಂಚ ಪ್ರಾಣಿಯ ಮಾಂಸದ ಒಂದು ಕಣದಲ್ಲಿಯೇ ಅನೇಕ ಬಾದರ ನಿಗೋದಿ ಜೀವಗಳು ತುಂಬಿವೆ ಅವು ಪ್ರಮಾಣದಲ್ಲಿ ಮೂರು ಲೋಕದಲ್ಲಿರುವ—ಮೇಲೆ ಹೇಳಿದ ಎಲ್ಲ ಪ್ರಾಣಿಗಳು, ಏಕೇಂದ್ರಿಯದಿಂದ ಪಂಚೇಂದ್ರಿಯ, ಮನುಷ್ಯ, ದೇವ, ನಾರಕಿ ಇವುಗಳನ್ನೆಲ್ಲ ಒತ್ತಟ್ಟಿಗೆ ಸೇರಿಸಿದರೂ ಸಹ ಅವುಗಳಿಗಿಂತ ಅನಂತಪಟ್ಟು ಹೆಚ್ಚಿಗೆ ಆಗುತ್ತವೆ ಇದನ್ನು ಸರ್ವಜ್ಞರಾದವರು ಪ್ರತ್ಯಕ್ಷ ಜ್ಞಾನದಿಂದ ಅವಲೋಕಿಸಿ ಪರಮಾಗಮದಲ್ಲಿ ಹೇಳಿದ್ದಾರೆ ಅನ್ನ-ನೀರುಗಳನ್ನು ಅಸಂಖ್ಯಾತ ವರ್ಷಗಳ ವರೆಗೆ ಸೇವಿಸುತ್ತಿದ್ದರೂ ಅದರಿಂದ ಆಗುವ ಏಕೇಂದ್ರಿಯ ಜೀವಗಳ ಹಿಂಸೆಗಿಂತಲೂ ಅನಂತಪಟ್ಟು ಹೆಚ್ಚು ಹಿಂಸೆಯು ಸೂಜಿಯ ಮೊನೆಯಷ್ಟು ಮಾಂಸವನ್ನು ತಿನ್ನುವುದರಿಂದ ಆಗುತ್ತದೆ. ಏಕೇಂದ್ರಿಯಗಳ ಹಿಂಸೆ ಹಾಗೂ ತ್ರಸ ಜೀವಗಳ ಹಿಂಸೆ ಇವೆರಡೂ ಸಮಾನವಾಗಿಲ್ಲ ಅವುಗಳ ದುಃಖದಲ್ಲಿಯೂ ಜ್ಞಾನದಲ್ಲಿಯೂ ಬಹಳ ಅಂತರವಿದೆ ಏಕೇಂದ್ರಿಯಗಳ ಶರೀರವು ರಸ, ರಕ್ತ, ಎಲುವು, ಮಾಂಸ, ಚರ್ಮಾದಿ ಧಾತುಗಳಿಂದ ರೂಪುಗೊಂಡುದಾಗಿಲ್ಲ ಇನ್ನೊಂದು ಮಾತು—ಮಾಂಸಭಕ್ಷಣ ಮಾಡುವುದರಿಂದ ಆಗುವಷ್ಟು ಮನಸ್ಸಿನ ಕಠೋರತೆ, ನಿರ್ದಯತೆಗಳು ಅನ್ನಭಕ್ಷಣ ಮಾಡುವುದರಿಂದ ಆಗುವದಿಲ್ಲ ತಮ್ಮ ಹೆಂಡತಿಯನ್ನು ಸ್ಪರ್ಶಮಾಡುವುದರಲ್ಲಿಯೂ ತಾಯಿ-ಅಕ್ಕ-ತಂಗಿಯಂದಿರನ್ನು ಸ್ಪರ್ಶಮಾಡುವುದರಲ್ಲಿಯೂ ಬಹು ದೊಡ್ಡ ಅಂತರವಿರುವಂತೆಯೇ ಮಾಂಸಾಹಾರ ಹಾಗೂ ಅನ್ನಾಹಾರಗಳಲ್ಲಿದೆ. ಒಟ್ಟಿನ ಮೇಲೆ ತ್ರಸಜೀವಗಳ ಘಾತ ಮಾಡುವುದರಲ್ಲಿ ಘೋರ ಪಾಪದ ಬಂಧವಾಗುತ್ತದೆ

**ಒಂದು ಸಂಶಯ**—ಹುಲಿ, ಸಿಂಹ, ಹಾವು ಮೊದಲಾದ ದುಷ್ಟ ಹಾಗೂ ಘಾತಕ ಪ್ರಾಣಿಗಳು ಇವೆ. ಅವುಗಳನ್ನು ಕೊಲ್ಲುವುದರಿಂದ ಅನೇಕ ಜೀವಗಳ ರಕ್ಷಣವಾಗುವಂತಿರುತ್ತದೆ. ಅಂದ ಮೇಲೆ ಅವುಗಳನ್ನು ಕೊಲ್ಲುವುದರಲ್ಲಿ ದೋಷವೇನಿದೆ?

**ಸಮಾಧಾನ**—ಮೇಲಿನ ತಿಳುವಳಿಕೆಯಿಂದ ಯಾವ ಪ್ರಾಣಿಯ ಹಿಂಸೆಯನ್ನು ಮಾಡಿದರೂ ಕೂಡ ಪಾಪವಿದೆ. ಅದಕ್ಕಾಗಿ ಹಿಂಸೆಯನ್ನು ಮಾಡುವುದರಲ್ಲಿ ಪ್ರವೃತ್ತರಾಗಬಾರದು. ವಿಚಾರಮಾಡಿರಿ. ನೀವು ಯಾವ ಯಾವ ಹಿಂಸಕ ಪ್ರಾಣಿಗಳ ಘಾತ ಮಾಡಬಹುದು ಹೇಳಿರಿ ನೋಡುವಾ. ಗುಬ್ಬಿ, ಕಾಗೆ, ಗಿಳಿ, ಮೈನಾ ಮೊದಲಾದ ಎಲ್ಲ ಪಕ್ಷಿಗಳೂ ಹಿಂಸಕವಾಗಿವೆ. ಹಾವು, ಚೇಳು, ಇರುವೆ, ಇಲಿ, ನಾಯಿ, ಬೆಕ್ಕು, ನರಿ ಮೊದಲಾದ ಎಲ್ಲ ತಿರ್ಯಂಚ ಮತ್ತು ಮನುಷ್ಯ ಸಹ ತಮ್ಮ ತಮ್ಮ ಪಾಪಕರ್ಮದ ಉದಯಕ್ಕನುಸರಿಸಿ ಹಿಂಸಕವೇ ಆಗುತ್ತವೆ. ಇವುಗಳಲ್ಲಿ ಯಾವುದನ್ನು, ಎಷ್ಟು ಜನರನ್ನು ನೀವು ಕೊಲ್ಲುವುದು ಶಕ್ಯವಿದೆ? ಇನ್ನೊಂದು ಮಾತು. ನೀವು ಎಲ್ಲ ಹಿಂಸಕ ಪ್ರಾಣಿಗಳನ್ನು ಕೊಲ್ಲುವ ವಿಚಾರವನ್ನು ಮನಸ್ಸಿನಲ್ಲಿ ನಿಶ್ಚಯಿಸಿದ ಮೇಲೆ ನೀವೂ ಮಹಾ ಹಿಂಸಕರಾಗಲಿಲ್ಲವೆ? ಅಂದಮೇಲೆ ನಿಮ್ಮಷ್ಟು ಪಾಪಿಗಳು ಯಾರು ಉಳಿದರು? ಅದಕ್ಕಾಗಿ ನೀವು ಹಿಂಸಕ ಪ್ರಾಣಿಗಳನ್ನು ಕೊಲ್ಲುತ್ತೇನೆಂಬ ವಿಚಾರವನ್ನೇ ಮನಸ್ಸಿನಲ್ಲಿ ತರಕೂಡದು. ಇದಕ್ಕಿಂತ ಹೆಚ್ಚಿಗೆ ವಿಚಾರಮಾಡಿದಲ್ಲಿ ಜೀವಗಳಿಗೆ ಹಿಂಸಕ ವೃತ್ತಿಯು ಹೇಗೆ ಉತ್ಪನ್ನವಾಯಿತು?—ಎಂಬ ಪ್ರಶ್ನೆಯು ನಿಮ್ಮ ಮನದಲ್ಲಿ ಮೂಡದೆ ಇರುವದಿಲ್ಲ. ಅದಕ್ಕೆ ಉತ್ತರವಿಷ್ಟೇ: ಪ್ರತಿಯೊಂದು ಪ್ರಾಣಿಯೂ ಪೂರ್ವದಲ್ಲಿ ಗಳಿಸಿದ ಕರ್ಮದ ಸ್ವಾಧೀನವಿದೆ. ಪಾಪದ ಪರಂಪರೆಯು ಅನಂತ ಕಾಲದಿಂದಲೂ ನಡೆಯುತ್ತ ಬಂದಿದೆ. ಅದನ್ನು ದೂರ ಮಾಡುವುದು ಯಾರಿಂದ ಸಾಧ್ಯವಿದೆ? ಪಾಪಿ ಜೀವಗಳನ್ನು ಯಾರು ನಿರ್ಮಾಣಮಾಡಿದರು? ಪುಣ್ಯವಂತರನ್ನಾದರೂ ಯಾರು ನಿರ್ಮಿಸಿದರು? ಇದೆಲ್ಲ ಕರ್ಮದ ವಿಚಿತ್ರತೆಯೇ ಆಗಿದೆ. ಕಾಲದ ಪ್ರಭಾವದಿಂದ ಪಾಪೀ ಜೀವಗಳಿಗೆ ಪಾಪದ ಫಲವನ್ನು ಕೊಡಲಿಕ್ಕೆಂದು ಅನೇಕ ಪಾಪೀ ಜೀವಗಳು ಉತ್ಪನ್ನವಾಗುತ್ತವೆ. ಅವುಗಳನ್ನು ಇಲ್ಲದಂತೆ ಮಾಡುವ ಸಾಮರ್ಥ್ಯವು ಯಾರಲ್ಲಿಯೂ ಇರುವದಿಲ್ಲ. ಈ ಎಲ್ಲ ಸಂಗತಿಗಳನ್ನು ವಿಚಾರಿಸಿ, ದಯಾಭಾವವನ್ನು ಧರಿಸುವದಕ್ಕೆ ಪ್ರಯತ್ನಿಸಬೇಕು. ಈ ಪಾಪಿಷ್ಠ ಜೀವವು ಬಹುದಿನ ಬದುಕಿದಲ್ಲಿ ಹಲವು ಪಾಪಕರ್ಮಗಳನ್ನು ಕಟ್ಟಿಕೊಳ್ಳುತ್ತದೆ, ಅದಕ್ಕಿಂತ ಅದನ್ನು ಕೊಂದು ಈ ಪರ್ಯಾಯದಿಂದ ಮುಕ್ತಗೊಳಿಸಿದಲ್ಲಿ ಅದರ ಪಾಪಬಂಧನಾದರೂ ಕಡಿಮೆಯಾದೀತು—ಎಂಬ ವಿಚಾರವನ್ನು ಮನಸ್ಸಿನಲ್ಲಿಯೂ ಸಹ ತರಬೇಡಿರಿ. ಅಲ್ಲದೆ ಇಂಥ ಕರುಣೆಯಿಂದ ಪಾಪಿಗಳನ್ನು ಕೊಲ್ಲಲಿಕ್ಕೆ ಉದ್ಯುಕ್ತರಾಗಬೇಡಿರಿ. ನೀವು ಎಲ್ಲರ ಮೇಲೆಯೂ ದಯೆಯನ್ನೇ ಇಡಿರಿ.

**ವೇದನಾಪೀಡಿತ ಜೀವವನ್ನು ಕೊಲ್ಲುವುದರಿಂದ ಅದು ದುಃಖ ಮುಕ್ತವಾಗುವದಿಲ್ಲ.**— ಈ ಜೀವವು ದುಃಖದಿಂದ ಬಹಳ ವ್ಯಾಕುಲವಾಗಿದೆ. ಈಗ ಸತ್ತರೆ ಈ ದುಃಖದಿಂದಾದರೂ ಮುಕ್ತವಾದೀತು—ಎಂಬ ಮಿಥ್ಯಾ ವಿಚಾರವನ್ನು ನೀವು ಮನಸ್ಸಿನಲ್ಲಿಯೂ ತರಬೇಡಿರಿ. ಒಂದು ವೇಳೆ ಆ ಜೀವವು ಮರಣ ಹೊಂದಿದರೂ ಸಹ ಅದರ ಈ ಪರ್ಯಾಯವು ಇಲ್ಲದಂತಾಯಿತು ಇಷ್ಟೇ. ಅದರ ಅಸಾತಾಕರ್ಮವು ಮಾತ್ರ ಇಲ್ಲದಂತೆ ಆಗಿಲ್ಲವಷ್ಟೇ? ಇಲ್ಲಿಂದ ಬಿಡುಗಡೆಯನ್ನು ಹೊಂದಿ ಅದು ತಿರ್ಯಂಚ ಇಲ್ಲವೆ ಮನುಷ್ಯ ಪರ್ಯಾಯವನ್ನು ಹೊಂದುವುದು. ಅಲ್ಲಿ ಇದಕ್ಕಿಂತ ಅನಂತಪಟ್ಟು ರೋಗ, ಬಡತನ, ಬೇಸರಿಕೆಗಳು ಪ್ರಾಪ್ತವಾಗಿ ಬಹಳಷ್ಟು ಕಾಲ ದುಃಖವನ್ನು ಭೋಗಿಸಬೇಕಾಗುತ್ತದೆ. ಹೆಚ್ಚಿಗೇನು ಹೇಳುವುದು?

**ಅಕಲ್ಪಿತ ಸಂಗತಿಗಳು ಸಂಭವಿಸಬಹುದು, ಆದರೆ ಹಿಂಸೆಯು ಧರ್ಮವೆಂದು ಎಂದೂ ಆಗಲಾರದು.** ಒಂದು ವೇಳೆ ಸೂರ್ಯನು ಪಶ್ಚಿಮಕ್ಕೆ ಹುಟ್ಟಿದರೂ, ಅಗ್ನಿಯು ತನ್ನ ಉಷ್ಣತೆಯನ್ನು ಕಳೆದ ಕೊಂಡರೂ, ಚಂದ್ರನ ಕಿರಣಗಳು ಕಾದೇರಿದರೂ ಈ ಪೃಥ್ವಿಯು ಕೆಳಗೆ ಮೇಲಾದರೂ, ಕಲ್ಲು ನೀರಿನಲ್ಲಿ ತೇಲುವಂತಾದರೂ, ಬೆಂಕಿಯಲ್ಲಿ ಕಮಲವು ಹುಟ್ಟಿದರೂ, ಸೂರ್ಯಾಸ್ತದ ಹೊತ್ತಿಗೆ ಸೂರ್ಯೋದಯವಾದರೂ, ಸರ್ಪದ ಮುಖದಿಂದ [illegible] ಕಲಹದಿಂದ ಕೀರ್ತಿಯು ಪ್ರಾಪ್ತವಾಗುವಂತಿದ್ದರೂ [illegible] ಆದರೂ, ಕಾಲಕೂಟ ವಿಷವನ್ನು ಸೇವಿಸಿದುದರಿಂದ ಆಯುಷ್ಯ [illegible], [illegible] ಪ್ರೀತಿಯು ಬೆಳೆದರೂ, ಇಂಥ ಅಸಂಭಾವ್ಯವೆಲ್ಲ ಸಂಭವಿಸಿದರೂ [illegible] ಉತ್ಪನ್ನವಾಗಿಲ್ಲ, ಆಗಲಾರದು [illegible]

**ಸಂಶಯ**—ಇನ್ನು ಜಿನಮಂದಿರಗಳನ್ನು ಕೆಲವರು ಶ್ರಾವಕರು ಕಟ್ಟಿಸುತ್ತಾರೆ, ಜಿನರ ಪೂಜೆಗಳನ್ನು ಮಾಡಿಸುತ್ತಾರೆ ಈ ಕ್ರಿಯೆಗಳನ್ನು ಮಾಡಿಸುವಾಗಲೂ ಆರಂಭೀ ಹಿಂಸೆಯು ಆಗುತ್ತದೆಂಬುದನ್ನು ನೀವು ಒಪ್ಪಲೇ ಬೇಕಾಗುತ್ತದೆ ಆರಂಭವೆಂಬುದರಲ್ಲಿ ಹಿಂಸೆಯು ಇದ್ದೇ ಇದೆ ಅದರಿಂದ ಜಿನಮಂದಿರಾದಿಗಳನ್ನು ನಿರ್ಮಿಸುವುದರಲ್ಲಿ ಧರ್ಮವಿದೆಯೆಂದು ಹೇಗೆ ನೀವು ಪ್ರತಿಪಾದಿಸುವಿರಿ?

**ಸಮಾಧಾನ—ಜಿನಮಂದಿರಗಳನ್ನು ಕಟ್ಟಿಸುವುದರಿಂದ ಪುಣ್ಯ ಸಂಚಯವಾಗುತ್ತದೆ.** ಇದಕ್ಕೆ ಉತ್ತರ ಹೀಗಿದೆ—ಆರಂಭಾದಿಗಳನ್ನು ತ್ಯಾಗಮಾಡಿದ ಗೃಹಸ್ಥನು-ಅವನ ಪರಿಣಾಮದಲ್ಲಿ ವೈರಾಗ್ಯವು ಉತ್ಪನ್ನವಾಗಿದ್ದರೆ ಧನೋಪಾರ್ಜನವೇ ಮೊದಲಾದ ಕಾರ್ಯಗಳಿಂದ ವಿರಕ್ತನಾಗಿದ್ದರೆ ಮಾತ್ರ ಅವನು ಜಿನಮಂದಿರಾದಿಗಳನ್ನು ನಿರ್ಮಿಸುವುದು ಸರಿಯಲ್ಲ ಇದು ನಮಗೂ ಒಪ್ಪಿಗೆಯಿದೆ ಆದರೆ ಯಾರ ಪ್ರೇಮವು ಧನ, ಪರಿಗ್ರಹ, ಆರಂಭಾದಿಗಳಿಂದ ಕಡಿಮೆಯಾಗಿಲ್ಲವೋ, ಯಾರ ಅಭಿಮಾನವು ಇನ್ನೂ ಇಲ್ಲದಂತೆ ಆಗಿಲ್ಲವೋ, ತಮ್ಮ ಜಾತಿ ಕುಲಾದಿಗಳಲ್ಲಿ ಶ್ರೇಷ್ಠತೆಯು ಲಭಿಸಬೇಕೆಂದು, ಕೀರ್ತಿಗಾಗಿಯೂ ಮತ್ತು ಉಪಭೋಗಕ್ಕಾಗಿಯೂ ಮನೆಮಂದಿರಾದಿಗಳನ್ನು ಕಟ್ಟಿಸುತ್ತಾರೆಯೋ, ಊರಜನರಿಗೆ ಊಟ ಉಪಚಾರಗಳನ್ನು ಮಾಡುತ್ತಾರೆಯೋ ಮದುವೆ ಮುಂಜಿವೆಗಳಲ್ಲಿ ಹೆಚ್ಚು ವೆಚ್ಚ ಮಾಡುತ್ತಾರೆಯೋ ಅವರಿಗೆ ಹೀಗೆ ಉಪದೇಶ ಮಾಡಬಹುದಾಗಿದೆ·—"ಎಲ್ಲೈ ನಿಮ್ಮ ಪ್ರೀತಿಯು ಆರಂಭಾದಿಗಳಿಂದ ಇನ್ನೂ ಕಡಿಮೆಯಾಗಿಲ್ಲ, ಆಗುವಂತೆ ತೋರುವದಿಲ್ಲ ಇದರಿಂದ ಪಾಪಬಂಧವಾಗುತ್ತದೆ, ಅಭಿಮಾನವು ಹೆಚ್ಚುತ್ತದೆ ಅದರಿಂದ ಇಂಥ ಆರಂಭದಲ್ಲಿ ತೊಡಗುವದಕ್ಕಿಂತ ನೀವು ಜಿನಮಂದಿರಗಳನ್ನು ಕಟ್ಟಿಸಿರಿ. ಅದರ ಪ್ರಭಾವದಿಂದ ನಿಮ್ಮ ಅಶುಭ ಅನುರಾಗವು ಕಡಿಮೆಯಾಗಿ ನಿಮ್ಮ ಪರಿಣಾಮವು ವೀತರಾಗತೆಯ ಕಡೆಗೆ ತಿರುಗೀತು ಅಹಿಂಸಾ ಧರ್ಮದ ಕಡೆಗೆ ಮನಸ್ಸಿನ ಪ್ರವೃತ್ತಿಯು ಆಗಾಗ ಹೆಚ್ಚುತ್ತಲೂ ಹೋದಿತು ಜಿನಮಂದಿರದಲ್ಲಿ ಅನೇಕರು ಸ್ವಾಧ್ಯಾಯ ಮಾಡುವರು ಶಾಸ್ತ್ರವನ್ನು ಕೇಳುವರು, ವೀತರಾಗ ಪ್ರಭುವಿನ ದರ್ಶನ ತಕ್ಕೊಳ್ಳುವರು, ಹದಿನಾರು ಕಾರಣ ಭಾವನೆಗಳನ್ನು ಭಾವಿಸಿ ಪಾಪದ ನಡತೆಯನ್ನು ಬಿಡಬಹುದು, ಶೀಲ, ಸಂಯಮ, ಧ್ಯಾನ ಮೊದಲಾದವುಗಳನ್ನು ಬೆಳೆಯಿಸಿಕೊಂಡು ಧರ್ಮದ ವೃದ್ಧಿಯನ್ನುಂಟುಮಾಡುವರು ಜಿನಮಂದಿರವು ಅಹಿಂಸಾ ಧರ್ಮದ ಆಯತನ–ಸ್ಥಾನ–ವಾಗಿದೆ ಜಿನಮಂದಿರದ ನಿಮಿತ್ತದಿಂದ ಅನೇಕರು ಪಾಪದ ಕೆಲಸಗಳನ್ನು ತೊರೆದು ಅಲ್ಲಿಗೆ ಬರುತ್ತಾರೆ, ಶಾಸ್ತ್ರವನ್ನು ಕೇಳುತ್ತಾರೆ ಇದರಿಂದ ಅವರಿಗೆ ತಾನು ಯಾರು? ಪರವು ಯಾವುದು?—ಎಂಬುದರ ಜ್ಞಾನವು ಲಭಿಸುತ್ತದೆ ಇದರಿಂದ ಮಿಥ್ಯಾದೇವ, ಮಿಥ್ಯಾಗುರು, ಮಿಥ್ಯಾಧರ್ಮಗಳ ಉಪಾಸನೆಯನ್ನು ಬಿಟ್ಟು, ಸರ್ವಜ್ಞ ವೀತರಾಗನ ಧರ್ಮದ ಕಡೆಗೆ ಜನರ ಪ್ರವೃತ್ತಿಯು ಉಂಟಾಗುತ್ತದೆ ಅದರಂತೆಯೇ ಹಿಂಸೆಯೇ ಮೊದಲಾದ ಐದು ಪಾಪಗಳಿಂದಲೂ ಏಳು ವ್ಯಸನಗಳಿಂದಲೂ ಅನ್ಯಾಯ, ಅಭಕ್ಷ್ಯಭಕ್ಷಣಗಳಿಂದ ವಿರಕ್ತಿಯು ಪ್ರಾಪ್ತವಾಗುತ್ತದೆ ವೀತರಾಗ ಭಗವಂತನ ಧ್ಯಾನದಲ್ಲಿ, ಪೂಜೆಯಲ್ಲಿ, ಕಾಯೋತ್ಸರ್ಗದಲ್ಲಿ, ಸಾಮಾಯಿಕ–ಸಂಯಮ–ಉಪವಾಸ–ಶೀಲ–ದಾನ–ವ್ರತಾದಿ ಭಾವನೆಗಳಲ್ಲಿ, ಅವುಗಳ ಕಾರ್ಯಾಚರಣೆಯಲ್ಲಿ ತಲ್ಲೀನತೆಯು ದೊರೆತು, ಮೋಕ್ಷ ಮಾರ್ಗದ ಕಡೆಗೆ ಪ್ರವೃತ್ತಿಯು ಆಗುತ್ತದೆ ಜಿನಮಂದಿರದ ನಿಮಿತ್ತವಿಲ್ಲದೆ ಮೋಕ್ಷ ಮಾರ್ಗದ ಪ್ರವೃತ್ತಿಯು ಆಗುವುದು ಸಾಧ್ಯವಿಲ್ಲ. ಅದರಿಂದ ಜಿನಮಂದಿರವನ್ನು ಕಟ್ಟಿಸಿದಂಥವನು ಅನೇಕ ಜೀವಗಳ ಮೇಲೆ ಉಪಕಾರ ಮಾಡಿದಂತೆ ಆಗುತ್ತದೆ ಇಷ್ಟೇ ಅಲ್ಲ, ತನ್ನ ಮೇಲೆಯೂ ಉಪಕಾರ ಮಾಡಿಕೊಂಡಂತೆ ಆಗುತ್ತದೆ. ಅದಕ್ಕಾಗಿ ಜಿನಮಂದಿರವನ್ನು ಕಟ್ಟಿಸುವಂಥವರು ಹೀಗೆ ವಿಚಾರ ಮಾಡುತ್ತಿರುತ್ತಾರೆ

**ಜಿನಮಂದಿರ ನಿರ್ಮಿಸುವವರ ಭಾವನೆ.** "ನಾನೀಗ ಜಿನಮಂದಿರವನ್ನು ಕಟ್ಟಿಸಿದ್ದೇನೆ. ಇನ್ನು ನಾನು ಜಗತ್ತಿನಲ್ಲಿ ಅನ್ಯಾಯದ ಮಾರ್ಗದಲ್ಲಿ ನಡೆದರೆ ಜನರು ನನ್ನನ್ನು ನಿಂದಿಸುತ್ತಾರೆ ಇನ್ನು ನಾನು ಸುಳ್ಳು ಹೇಗೆ ಮಾತನಾಡಲಿ? ತಿನ್ನಬಾರದುದನ್ನು ಹೇಗೆ ತಿನ್ನಲಿ? ವ್ಯಸನದಲ್ಲಿ ಹೇಗೆ ಪ್ರವೃತ್ತನಾಗಲಿ?" ಜಗಳಾಡುವುದು, ಬಯ್ಯುವುದು, ಲೋಕ ನಿಂದ್ಯಕಾರ್ಯ ಮಾಡುವುದು ಯೋಗ್ಯವಲ್ಲ ಜನತೆಗೆ ನಾಚಿ ಈ ಸಂಗತಿಗಳು ಇಲ್ಲದಂತಾಗುತ್ತವೆ. ಆದರೆ ಅವನಿಗೆ ಹೀಗೂ ವಿಚಾರವು ಹುಟ್ಟುತ್ತದೆ—"ಈ ಮಂದಿರದಲ್ಲಿ ನಾನಂತೂ ಸ್ವತಃ ದಿನಾಲೂ ಬರತಕ್ಕವನಲ್ಲ, ಆದರೆ ಉಳಿದವರು ಯಾರು ಬಂದಾರು?" ಈ ವಿಚಾರದಿಂದ ತಾನೇ ಮೊದಲು ಜಿನಮಂದಿರಕ್ಕೆ ಬರುವುದಕ್ಕೆ ಆರಂಭಿಸುತ್ತಾನೆ ಅದರಂತೆ ನಿತ್ಯ ಅಭಿಷೇಕ, ಪೂಜೆ, ಶಾಸ್ತ್ರಶ್ರವಣ, ಜಪಜಾಪ್ಯ, ವ್ರತಾಚರಣ, ಭಜನಾದಿ ಕ್ರಿಯೆಗಳನ್ನು ಮಾಡಲಿಕ್ಕೆ ಆರಂಭಿಸುತ್ತಾನೆ ಅದರಿಂದ ಅವನ ಶ್ರದ್ಧೆಯು ಧರ್ಮದಲ್ಲಿ ದೃಢಗೊಳ್ಳುತ್ತದೆ.

ಮೇಲಾಗಿ ಶಾಸ್ತ್ರ ಓದುವ, ಕೇಳುವ, ಧರ್ಮವನ್ನು ಪ್ರೀತಿಸುವ ಸುತ್ತಲಿನ ಸಹಧರ್ಮಿಗಳ ಮೇಲೆಯೂ ಧರ್ಮದ ಚರ್ಚೆಯನ್ನು ಮಾಡುವ ವಿದ್ವಾಂಸರ ಮೇಲೆಯೂ ಪ್ರೇಮವು ಬೆಳೆಯುತ್ತ ಹೋಗುತ್ತದೆ ಯಾರಾದರೂ ಶಾಸ್ತ್ರವನ್ನು ಓದುತ್ತಿದ್ದರೆ ಅದನ್ನು ನೋಡಿ, ಅವನಿಗೆ ಆನಂದವಾಗುತ್ತದೆ ಇಂದು ದೇವಸ್ಥಾನದಲ್ಲಿ ಯಾರ ಪೂಜೆಯಿದೆ, ಇಂದು ದರ್ಶನಕ್ಕೆ ಯಾರು ಯಾರು ಬಂದಿದ್ದರು, ಇಂದು ಧರ್ಮದ ವ್ಯಾಖ್ಯಾನವನ್ನು ಕೇಳಲಿಕ್ಕೆ ಯಾರು ಯಾರು ಕುಳಿತಿದ್ದರು, ಇಂದು ಯಾರು ಯಾರು ಉಪವಾಸವನ್ನು ಆಚರಿಸುವರು, ಈ ವರ್ಷದಲ್ಲಿ ಎರಡೆರಡು, ಮೂರು ಮೂರು ಉಪವಾಸಗಳನ್ನು ಯಾರು ಮಾಡಿದರು, ಪ್ರೋಷಧೋಪವಾಸ ಮಾಡುವವರು ಎಷ್ಟು ಜನ, ಜಾಗರಣ ಮಾಡಲಿಕ್ಕೆ ಎಷ್ಟು ಜನ ಮಂದಿರದಲ್ಲಿ ಬಂದಿದ್ದರು,—ಇವೇ ಮೊದಲಾದ ಸಂಗತಿಗಳು ಹಗಲಿರುಳೂ ಅವರ ಮನಸ್ಸಿನಲ್ಲಿ ಸುತ್ತುತ್ತ ಇರುತ್ತವೆ. ಇಂದು ದೇವಸ್ಥಾನದಲ್ಲಿ ಭಜನ, ಗಾಯನಗಳು ಬಹಳ ಚೆನ್ನಾಗಿ ಆದವು ಅದರಿಂದ ಬಹಳ ಆನಂದವಾಯಿತು. ಈ ಪ್ರಕಾರದ ಇಂಥ ಅನೇಕ ಧರ್ಮದ ಪ್ರವೃತ್ತಿಗಳನ್ನು ನೋಡಿ, ಅವನ ಆನಂದವು ದಿನ-ದಿನಕ್ಕೆ ಹೆಚ್ಚುತ್ತದೆ. ಎಲ್ಲ ಸಹಧರ್ಮಿಗಳ ಮೇಲೆ ಅವನ ವಾತ್ಸಲ್ಯವು ಪ್ರತಿದಿನಕ್ಕೂ ಬೆಳೆಯುತ್ತ ಹೋಗುವುದು ಸಾವಿರಾರು ಜನರಲ್ಲಿ ಅವನ ಪ್ರಭಾವವು ಪ್ರಕಟವಾದಂತೆ ಅವನ ಧರ್ಮಾನುರಾಗವೂ ವಿಸ್ತೃತವಾಗುತ್ತ ಹೋಗುತ್ತದೆ. ಇದೇ ಪ್ರಕಾರ ಗೃಹಸ್ಥಾಶ್ರಮದೊಳಗಿನ ವಿವಾಹಕಾರ್ಯದಲ್ಲಿ, ಅನೇಕ ಪ್ರಕಾರದ ಆಭರಣ, ವಸ್ತ್ರಗಳನ್ನು ಕೊಳ್ಳುವುದರಲ್ಲಿ, ತಾನು ನಿಲ್ಲುವ ಸ್ಥಳದಲ್ಲಿ ಮನೆಯನ್ನು ಕಟ್ಟುವಲ್ಲಿ, ವಿವಿಧ ಚಿತ್ರಗಳಿಂದ ತನ್ನ ಮನೆಯನ್ನು ಸಿಂಗರಿಸುವದರಲ್ಲಿ—ಇವೇ ಮೊದಲಾದ ಪಾಪಸಂಚಯ ಕಾರ್ಯದಲ್ಲಿ ಅವನ ಪ್ರವೃತ್ತಿಯು ಕಡಿಮೆಯಾಗುತ್ತ ಹೋಗುತ್ತದೆ. ಅವನು ಆಗ ವಿಚಾರಮಾಡುವುದು ಹೀಗೆ—"ಈ ಮನೆ ಮಠಗಳನ್ನು ತಕ್ಕೊಂಡು ಏನು ಮಾಡುವದಿದೆ? ಇವುಗಳನ್ನು ಯಾರಿಗೆ ತೋರಿಸುವದಿದೆ? ಇವೆಲ್ಲ ಪಾಪದ ಕಾರಣಗಳಾಗಿವೆ, ನಿಂದ್ಯವಾಗಿವೆ" —ಇಂದ ವಿರಕ್ತತೆಯು ಅವನಿಗೆ ಉತ್ಪನ್ನವಾಗುತ್ತದೆ ತಾನು ಮಾಡಿದ ಹಲವು ಪಾಪಕಾರ್ಯಗಳ ವಿಷಯದಲ್ಲಿ ಅವನಿಗೆ ಪಶ್ಚಾತ್ತಾಪವು ಉಂಟಾಗುತ್ತದೆ ಅಷ್ಟೇ ಧನವನ್ನು ತಾನು ಮಂದಿರದ ಉಪಯೋಗಕ್ಕೆ ವ್ಯಯಮಾಡಿದರೆ ಅನೇಕ ಜೀವಗಳ ಧರ್ಮಾನುರಾಗವು ಹೆಚ್ಚುತಿತ್ತು ಈ ವಿಚಾರದಿಂದ ಅವನು ತನ್ನ ಧನವನ್ನು ಮಂದಿರದಲ್ಲಿ ಸಿಂಹಾಸನ, ಛತ್ರ, ಚಾಮರ, ಭಾಮಂಡಲ, ಘಂಟೆ, ಸ್ಥಾಪನಾ, ಕಲಶ, ಧೂಪಾವಲಿ, ಸಮವಸರಣ ಮೊದಲಾದ ಬೆಳ್ಳಿ ಬಂಗಾರದ ಇಲ್ಲವೆ ತಾಮ್ರ ಹಿತ್ತಾಳೆಯ ಉಪಕರಣಗಳನ್ನು ನಿರ್ಮಿಸುವುದರಲ್ಲಿ ಖರ್ಚುಮಾಡುತ್ತಾನೆ ಇವರಿಂದ ಅವನ ಹಾಗೂ ಧರ್ಮಾತ್ಮರ ಅನುರಾಗವು ಧರ್ಮದ ಮೇಲೆ ಇನ್ನೂ ಹೆಚ್ಚುತ್ತದೆ ಈ ಉಪಕರಣಗಳು ಧರ್ಮವನ್ನು ಸೇವನಮಾಡ-ಬೇಕೆನ್ನುವ ಗೃಹಸ್ಥರಿಗೆ ಉಪಯೋಗವಾಗುತ್ತವೆ ಜಿನ ಮಂದಿರದಲ್ಲಿ ದ್ರವ್ಯವನ್ನು ವೆಚ್ಚಮಾಡಿದರೆ ಕೀರ್ತಿಯು ಆಗುವಂತೆ ಲಗ್ನಾದಿಕಾರ್ಯಗಳಲ್ಲಿ ವೆಚ್ಚಮಾಡಿದ ಧನದಿಂದ ಆಗುವದಿಲ್ಲ ಮಂದಿರವನ್ನು ಕಟ್ಟುವುದರಿಂದ ಎಲ್ಲ ಜನರು ಪೂಜೆ, ಪ್ರಭಾವನೆ, ದರ್ಶನ, ಧರ್ಮಶ್ರವಣ, ಶಾಸ್ತ್ರ ವಾಚನಗಳನ್ನು ಮಾಡಿ, ಬಹಳಷ್ಟು ಪುಣ್ಯವನ್ನು ಸಂಪಾದಿಸುತ್ತಾರೆ ಈ ಪ್ರಕಾರ ಕೇವಲ ವ್ಯವಹಾರದಲ್ಲಿ ಪ್ರವೃತ್ತರಾಗುವಂಥ ಜನರು ಒಂದು ವೇಳೆ ಮಂದಿರವನ್ನು ಕಟ್ಟಿಸಿದರೆ ಮೇಲೆ ವಿವರಿಸಿದಂತೆ ಅವರಲ್ಲಿ ಧರ್ಮದ ಅನುರಾಗವು ಹುಟ್ಟಿ, ಅವರ ಪರಿಣಾಮವು ಸುಧಾರಿಸುತ್ತ ಹೋಗುವುದು ಅವರ ಕಲ್ಯಾಣವೂ ಆಗುವುದು

ಸಂಶಯ—ಜಿನಮಂದಿರವನ್ನು ಕಟ್ಟಿಸಿ, ಅದರಲ್ಲಿ ಉಪಕರಣಗಳನ್ನು ಇಡುವುದರಿಂದ ಅನ್ಯ ಜೀವಗಳ ಮೇಲೆ ಉಪಕಾರವಾಗುವುದು ನಿಜ ಆದರೆ ಆ ಮಂದಿರವನ್ನು ಕಟ್ಟಿಸುವಾಗ ಷಟ್‌ಕಾಯ ಜೀವಗಳ ಧರ್ಮದ ಘಾತವಾಗುತ್ತದೆ, ಆ ಹಿಂಸೆಯು ಸಂಭವಿಸುತ್ತದೆ ಇದಕ್ಕೇನು ಮಾರ್ಗ?

ಸಮಾಧಾನ—ಹಿಂಸೆಯು, ನಮ್ಮ ಮನಸ್ಸಿನಲ್ಲಿ ಅನ್ಯರ ಘಾತಮಾಡುವ ವಿಚಾರ ಇದ್ದರೇನೇ ಆಗುತ್ತದೆ. ದೇವಸ್ಥಾನವನ್ನು ಕಟ್ಟುವಾಗ ನಾವು ಯಾರ ಘಾತವನ್ನು ಮಾಡಬೇಕೆಂಬ ಮನೋಭಾವವನ್ನು ಇಟ್ಟುಕೊಂಡಿರುವದಿಲ್ಲ ಅಲ್ಲದೆ ಅಹಿಂಸಾ ಧರ್ಮದ ಕಡೆಗೇನೇ ನಮ್ಮ ಹಾಗೂ ಅನ್ಯರ ಮನಸ್ಸು ಹತ್ತಬೇಕೆಂಬ ಇಚ್ಛೆಯು ಇರುತ್ತದೆ. ಯಾವ ಪ್ರಕಾರ, ಯತ್ನಾಚಾರ ಪೂರ್ವಕವಾಗಿ ಮುನೀಶ್ವರರಿಗೆ ಆಹಾರವನ್ನು ಕೊಡುವ ಗೃಹಸ್ಥನಿಗೆ ಹಿಂಸೆಯು ಸಂಭವಿಸುವದಿಲ್ಲವೋ, ಸಾಧುವಿನ ದರ್ಶನಕ್ಕಾಗಿ ಹೋಗುವಾಗಲೂ ಧರ್ಮಶ್ರವಣಕ್ಕೆಂದು ತೆರಳುವಾಗಲೂ ಗೃಹಸ್ಥನಿಗೆ ಹೇಗೆ ಹಿಂಸೆಯು ಸಂಭವಿಸುವದಿಲ್ಲವೋ, ಹಾಗೆಯೇ ಮಂದಿರಗಳನ್ನು ನಿರ್ಮಿಸುವವರಿಗೆ ಹಿಂಸೆಯು ಸಂಭವಿಸುವದಿಲ್ಲ ಇನ್ನು ನಡೆಯುವಾಗ ತಮ್ಮ ಮುಂದಿನ ಮಾರ್ಗದಲ್ಲಿ ಮೂರು-ಅರ್ಧ ಮೊಳ ಅಂತರದ ಮೇಲೆ

ದೃಷ್ಟಿಯಿಟ್ಟು ನಡೆಯುವ ಮುನೀಶ್ವರರಿಗೆ ಹಿಂಸೆಯು ಸಂಭವಿಸುವದಿಲ್ಲ, ದಿನಾಲು ಧರ್ಮೋಪದೇಶವನ್ನು ಮಾಡುವ ಮತ್ತು ಧರ್ಮಕಾರ್ಯಕ್ಕಾಗಿ ಹೋಗುವ, ಮಲಗುವ, ಆಹಾರ, ಉಪವಾಸ, ವಂದನೆ, ಕಾಯೋತ್ಸರ್ಗವೇ ಮೊದಲಾದ ಕ್ರಿಯೆಗಳನ್ನು ಮಾಡುವಾಗ, ತೀರ್ಥವಂದನೆ, ಗುರುವಂದನೆಗಳಿಗಾಗಿ ಹೋಗುವಾಗ ಮುನಿಗಳಿಗೆ ಈ ಎಲ್ಲ ಕಾರ್ಯಗಳಲ್ಲಿ ಹಿಂಸೆಯು ಆದರೂ ಹಿಂಸೆಯ ದೋಷವು ತಟ್ಟುವದಿಲ್ಲ ಇದೇ ಪ್ರಕಾರ ಮಂದಿರವನ್ನು ಕಟ್ಟುವಂಥವರ ಪರಿಣಾಮವು ಧರ್ಮಮಯವಾಗಿರುವುದರಿಂದ ಆಗ ಹಿಂಸೆಯ ದೋಷವು ತಗಲುವದಿಲ್ಲ ಸಂಪೂರ್ಣ ಆಕಾಶವೂ ಭೂಮಿಯೂ ಸೂಕ್ಷ್ಮ ಜೀವಗಳಿಂದ ತುಂಬಿಹೋಗಿದೆ ಇದರಲ್ಲಿ ಯಾರು ರಾಗ ದ್ವೇಷಗಳಿಗೆ ಅಧೀನರಾಗಿ, ದಯಾಭಾವವನ್ನು ಮನಸ್ಸಿನಲ್ಲಿ ಇಡದೆ ವರ್ತಿಸುವರೋ ಅವರಿಗೆ—ಅವರಿಂದ ಪ್ರತ್ಯಕ್ಷ ಜೀವಗಳ ವಧೆಯಾಗಲಿ, ಆಗದೆ ಇರಲಿ—ಹಿಂಸೆಯು ಆಗಿಯೇ ತೀರುತ್ತದೆ. ಹಿಂಸೆ ಹಾಗೂ ಅಹಿಂಸಾ ಬಾವಗಳು ಜೀವದ ಪರಿಣಾಮಗಳಾಗಿವೆ. ಅವು ಬಾಹ್ಯ ಜೀವಗಳ ಹಿಂಸೆಯಿಂದಲೇ ಹಿಂಸೆಯು ಸಂಭವಿಸುವದೆಂತಲ್ಲ ಅದು ನಮ್ಮ ಪರಿಣಾಮಕ್ಕೆ ಅನುಸರಿಸಿ ಸಂಭವಿಸುತ್ತದೆ ಅಂತಲೇ ನಮ್ಮ ಪರಿಣಾಮವನ್ನು ಯಾವಾಗಲೂ ದಯಾದ್ರ್ರವೂ ನಿರ್ಮಲವೂ ಇಡಲಿಕ್ಕೆ ಬೇಕು. ಈ ವಿಷಯದಲ್ಲಿ ಈ ಮೊದಲು ಅಹಿಂಸಾಣುವ್ರತದ ವರ್ಣನೆಯನ್ನು ಮಾಡುವಾಗ ನಾಕಷ್ಟು ವಿವರಿಸಿದೆ ಇಲ್ಲಿ ದೇವಮಂದಿರವನ್ನು ಕಟ್ಟುವವರ ವಿಷಯದಲ್ಲಿ ಮಾತ್ರ ವಿಚಾರಮಾಡತಕ್ಕದ್ದಿದೆ ಯಾರಿಗೆ ಮನೆ, ಬಂಗಲೆ, ಬಾವಿ, ತೋಟ ಮೊದಲಾದವುಗಳನ್ನು ನಿರ್ಮಿಸುವುದರಿಂದ ತಮ್ಮಿಂದ ಬಹಳಷ್ಟು ಹಿಂಸೆಯು ಸಂಭವಿಸುತ್ತದೆಂದು ಎಣಿಸುತ್ತದೆಯೋ ಅವರೇ ಜಿನಮಂದಿರವನ್ನು ಕಟ್ಟಲಿಕ್ಕೆ ಮುಂದೆ ಬರುತ್ತಾರೆ ಇವರ ಲೋಭವು ಕಡಿಮೆಯಾಗಿ, ಧನದ ಮೇಲಿನ ವ್ಯಾಮೋಹವೂ ಇಲ್ಲದಂತೆ ಆಗಿರುತ್ತದೆ ಪಾಪದ ಭಯವೂ ಉಂಟಾಗಿರುತ್ತದೆ ಆರಂಭದಲ್ಲಿ ಗೃಹಸ್ಥಾಶ್ರಮದೊಳಗೆ ವ್ಯಾಪಾರಾದಿ ಕಾರ್ಯಗಳಲ್ಲಿ ತಲ್ಲೀನನಾಗಿರುವುದರಿಂದ ಆಗ ಅವರಿಗೆ ಧರ್ಮದ ನೆನಪೂ ಸಹ ಆಗಿರುವದಿಲ್ಲ ಈಗ ಅವರ ಪರಿಣಾಮವು ದರ್ಮದ ಕಡೆಗೆ ಹೊರಳಿರುತ್ತದೆ ಅಂಥವನು ಮಂದಿರವನ್ನು ಕಟ್ಟುವ ಕೆಲಸವನ್ನು ಆರಂಭಿಸಿದರೆ ಅವನು ಕೆಲಸಮಾಡುವ ಜನರಿಗೆ ಮೇಲಿಂದ ಮೇಲೆ ಹೀಗೆ ಹೇಳುತ್ತಿರುತ್ತಾನೆ—"ಅಪ್ಪಗಳಿರಾ, ಇದು ಧರ್ಮದ ಕೆಲಸವಿದೆ ಬಹು ಎಚ್ಚರಿಕೆಯಿಂದ ಮಾಡಿರಿ ನಿಮಗೆ ಬೇಕಾಗುವ ನೀರನ್ನು ಎರಡು ಪದರಿನ ಅರಿವೆಯಿಂದ ಶೋಧಿಸಿ ತಕ್ಕೊಳ್ಳಿರಿ ಗಚ್ಚು, ಸುಣ್ಣಗಳನ್ನು ಎರಡು ದಿವಸಕ್ಕಿಂತ ಹೆಚ್ಚು ದಿನ ಶಿಲ್ಲಕ ಉಳಿಯುವಂತೆ ಸಿದ್ಧಮಾಡಿ ಇಟ್ಟುಕೊಳ್ಳಬೇಡಿರಿ ನೀವು ಅಲ್ಲಿಂದ ಇಲ್ಲಿ, ಇಲ್ಲಿಂದ ಅಲ್ಲಿ ಎತ್ತಿಡಬೇಕಾಗಿದ್ದ ಸಾಮಾನುಗಳನ್ನು ಹಗಲು ಹೊತ್ತಿನಲ್ಲಿಯೇ ಇಡಿರಿ ಪ್ರತಿಯೊಂದು ಕೆಲಸವನ್ನು ಮಾಡುವಾಗ ಪ್ರತಿಸಲವೂ ಆದರಿಂದ ಜೀವದ ವಧೆಯಾಗದಂತೆ ತುಂಬ ಎಚ್ಚರ ವಹಿಸಿರಿ" ಈ ಪ್ರಕಾರ ಆ ಗೃಹಸ್ಥನು ಮೇಲಿಂದ ಮೇಲೆ ಹೇಳುತ್ತಿರುವುದರಿಂದ ಅವನ ಪರಿಣಾಮವು ಆ ಕಾರ್ಯವನ್ನು ಮಾಡಿಸುವುದರಲ್ಲಿ ಹಿಂಸೆಯ ಕಡೆಗೆ ಇರುವದಿಲ್ಲ ವೆಂಬುದಂತೂ ಸ್ಪಷ್ಟವಾಗುತ್ತದೆ ಅವನ ಪರಿಣಾಮವು, ಈ ಕಾರ್ಯವನ್ನು ಮಾಡುವುದರಿಂದ ಇಮೊಂದು ಧರ್ಮದ ಸ್ಥಾನವು ಆದೀತು, ಇದರ ನಿಮಿತ್ತದಿಂದ ಅಖಂಡ ಅಹಿಂಸಾ ಧರ್ಮದ ಪ್ರವೃತ್ತಿಯು ಬೆಳೆದೀತು,—ಎಂದೇ ಇರುತ್ತದೆ ಮಂದಿರವಿದು ಧರ್ಮದ ದೊಡ್ಡ ಆಯತನವಾಗಿದೆ ಇದರಲ್ಲಿ ಮನೆಗೆ ಸಂಬಂಧಿಸಿದ ಅನೇಕ ಪಾಪದ ಹಿಂಸೆಯ ಕಾರ್ಯಗಳು ಇಲ್ಲದೆ ಇರುವುದರಿಂದ ಪರಿಣಾಮದ ಅವಸ್ಥೆಯೂ ಬದಲಾಗಿರುತ್ತದೆ ದೇವಸ್ಥಾನದಲ್ಲಿ ಕಾಲಿಡುವಾಗಲೇ ಈರ್ಯಾಪಥ ಸಮಿತಿಯನ್ನು ಪಾಲಿಸಿ ನಡೆಯಿರಿ ಇದು ಮಂದಿರವಿದೆ, ಇಲ್ಲಿ ಯಾರ ವಧೆಯೂ ಆಗಕೂಡದು,—ಇಂಥ ವಿಚಾರಗಳು ಮನಸಿನಲ್ಲಿ ಬರಲಿ ಜಿನಮಂದಿರದಲ್ಲಿ ಪ್ರವೇಶಿಸಿದಾಗ ಜೈನನಾಗಿದ್ದವನು ಊಟ, ನೀರು ಕುಡಿಯುವುದು, ವಿಕಥಾ (ಸ್ತ್ರೀಕಥಾ, ರಾಜಕಥಾ, ಚೋರಕಥಾ, ಭೋಜನಕಥಾ) ಬೈಗಳು–ನಿಂದೆ, ಮಲಗುವುದು, ಗಾಳಿ ಬೀಸಿಕೊಳ್ಳುವುದು, ವ್ಯಾಪಾರ ಇವುಗಳನ್ನೆಲ್ಲ ತ್ಯಾಗಮಾಡಲಿಕ್ಕೇ ಬೇಕು ಇವಲ್ಲದೆ ಪಾಪಬಂಧಕ್ಕೆ ಕಾರಣವಾಗುವಂಥ ಇನ್ನುಳಿದ ಸಂಗತಿಗಳನ್ನು ಕೂಡ ತ್ಯಜಿಸಲಿಕ್ಕೇ ಬೇಕು ಯಾಕೆಂದರೆ ಜಿನಮಂದಿರವು ಸರ್ವ ವಿಧದಿಂದಲೂ ಅಹಿಂಸಾಧರ್ಮದ ಪ್ರವರ್ತಕವಾಗಿದೆ ಈ ಸ್ಥಳದಲ್ಲಿ ಆರಂಭ ವಿಷಯ ಕಷಾಯಗಳು ಉದ್ರೇಕಗೊಳ್ಳುವಂಥ ಕ್ರಿಯೆಗಳನ್ನು ನಡೆಯಿಸಕೂಡದು

ವಿಮಳಾಣುಬ್ರತಪಂಚಕಮುಮಂತೆ ಮಧು ಮದ್ಯ ವಿವಿಧ ಮಾಂಸ ಪರಿತ್ಯಾಗ- ।
ಮುಮೆಂಬ ಮೂಲಗುಣಮೆಂಟುಮನಾ ಮುನಿಪುಂಗೆವಂ ಪ್ರಸಾದಂಗೆಯ್ದಂ ॥

—ಶಾಂತಿನಾಥ—ಸುಕುಮಾರಚರಿತಂ ೫-೪೨.

ಈ ಪ್ರಕಾರ ಮೂಲಗುಣದ ವರ್ಣನೆಯನ್ನು ಮಾಡಿ, ಇನ್ನು ಮುಂದೆ ಗುಣವ್ರತದ ಸ್ವರೂಪವನ್ನು ಹೇಳುತ್ತಾರೆ—

ದಿಗ್ವ್ರತಮನರ್ಥದಂಡವ್ರತಂ ಚ ಭೋಗೋಪಭೋಗಪರಿಮಾಣಮ್ ।
ಅನುಬೃಂಹಣಾದ್ಗುಣಾನಾಮಾಖ್ಯಾಂತಿ ಗುಣವ್ರತಾನ್ಯಾರ್ಯಾಃ ॥ ೬೭ ॥ [1]

ಅನ್ವಯಾರ್ಥ—(ಆರ್ಯಾಃ) ತೀರ್ಥಂಕರ ಮೊದಲಾದ ಹಿರಿಯರು (ದಿಗ್ವ್ರತಮನರ್ಥದಂಡವ್ರತಂ) ದಿಗ್ವ್ರತ, ಅನರ್ಥದಂಡವ್ರತ (ಚ) ಮತ್ತು (ಭೋಗೋಪಭೋಗಪರಿಮಾಣಮ್) ಭೋಗ ಉಪಭೋಗಗಳ ಮಿತಿಯ ವ್ರತ—ಇವು—(ಗುಣಾನಾಂ) ಎಂಟು ಮೂಲಗುಣಗಳನ್ನು (ಅನುಬೃಂಹಣಾತ್) ಬೆಳೆಯಿಸುವುದಕ್ಕೆ ಕಾರಣವಾಗಿರುವುದರಿಂದ (ಗುಣವ್ರತಾನಿ) ಗುಣವ್ರತಗಳೆಂದು (ಆಖ್ಯಾಂತಿ) ಹೇಳುತ್ತಾರೆ.

ಅರ್ಥ—ತೀರ್ಥಂಕರ ಭಗವಾನರೂ ಗಣಧರ ಮೊದಲಾದವರೂ ದಿಗ್ವ್ರತ, ಅನರ್ಥದಂಡ ವ್ರತ ಮತ್ತು ಭೋಗೋಪಭೋಗ ಪರಿಮಾಣ ಈ ಮೂರು ವ್ರತಗಳಿಗೆ ಗುಣವ್ರತಗಳೆಂದು ಹೇಳಿದ್ದಾರೆ ಈ ಮೂರು ವ್ರತಗಳು ಅಣುವ್ರತಗಳನ್ನು—ಗುಣಾಕಾರ ರೂಪದಿಂದ—ಬೆಳೆಯಿಸುವಂಥವು ಇವೆ ಅಂತಲೇ ಇವುಗಳಿಗೆ ಗುಣವ್ರತವೆಂದು ಸಂಜ್ಞೆಯಿದೆ [ಇಲ್ಲಿ 'ಗುಣವ್ರತಾನಿ' ಎಂಬ ಪದದಲ್ಲಿ ಪ್ರಯೋಗಿಸಿದ 'ಗುಣ' ಎಂಬ ಶಬ್ದವು ಸಾಮಾನ್ಯವಾಗಿ ಗುಣಗಳ (ಶಕ್ತಿಯ ಅಂಶಗಳ) ಅರ್ಥದಲ್ಲಿ ಇಲ್ಲ ಆದರೆ ಅದು ಗುಣಾಕಾರ ಅಥವಾ ವೃದ್ಧಿಯನ್ನು ಸೂಚಿಸುತ್ತದೆ ಇದೇ ಅರ್ಥವನ್ನು ಹೇತು ರೂಪದಲ್ಲಿ ಪ್ರಯೋಗಿಸಲ್ಪಟ್ಟ 'ಅನುಬೃಂಹಣಾತ್' ಪದದ ಮುಖಾಂತರ ವ್ಯಕ್ತಪಡಿಸಲಾಗಿದೆ ಸ ಧ ]

ವಿಶೇಷಾರ್ಥ—(೧) ಹತ್ತು ದಿಕ್ಕುಗಳಲ್ಲಿ ಹೋಗುವ ಮರ್ಯಾದೆಯನ್ನು ನಿಶ್ಚಿತಗೊಳಿಸುವುದಕ್ಕೆ ದಿಗ್ವ್ರತವೆನ್ನುವರು (೨) ಯಾವುದರಿಂದ ಯಾವ ಕಾರ್ಯವೂ ಸಿದ್ಧವಾಗದೆ ಇದ್ದು, ಪಾಪದ ಬಂಧವು ಮಾತ್ರ ಆಗುತ್ತಿರುತ್ತದೆ ಅದರಿಂದ ಕಾರಣವಿಲ್ಲದೆ ದುಃಖವನ್ನು ಭೋಗಿಸಬೇಕಾಗುತ್ತದೆ. ಇಂಥ ಕಾರ್ಯಗಳಿಗೆ ಅನರ್ಥ ದಂಡವೆನ್ನುವರು (೩) ಒಮ್ಮೆ ಮಾತ್ರ ಯಾವುದನ್ನು ಭೋಗಿಸಲಿಕ್ಕೆ ಬರುವುದೋ ಅದು ಭೋಗವು ಯಾವುದನ್ನು ತಿರುತಿರುಗಿ ಭೋಗಿಸಲಿಕ್ಕೆ ಬರುವುದೋ ಅದು ಉಪಭೋಗವು ಈ ಭೋಗೋಪಭೋಗಗಳ ಮರ್ಯಾದೆಯನ್ನು ಇಟ್ಟುಕೊಳ್ಳುವುದಕ್ಕೆ ಭೋಗೋಪಭೋಗ ಪರಿಮಾಣವ್ರತವೆನ್ನುವರು

ವ್ರತಿಕಂ ಪಂಚಾಣುವ್ರತತತಿ ಕೆಯ್ಗೆ ಕುಸಿ ಕಳವು ಪಾದರಂ ತೀರದುದು- ।
ಕ್ಕತಿ ಮೋಹಂ ಪಿಂಗೆಗುಣವ್ರತ ಶಿಕ್ಷಾವ್ರತಮುಸೇಟುಮಂ ತಳೆದಾತಂ ॥

ಜನ್ನ—ಅನಂತನಾಥ ಪುರಾಣಂ ೩–೬೦.

ಈಗ ದಿಗ್ವ್ರತದ ಲಕ್ಷಣವನ್ನು ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ—

ದಿಗ್ವಲಯಂ ಪರಿಗಣಿತಂ ಕೃತ್ವಾತೋಽಹಂ ಬಹಿರ್ನ ಯಾಸ್ಯಾಮಿ ।
ಇತಿ ಸಂಕಲ್ಪೋ ದಿಗ್ವ್ರತಮಾಮೃತ್ಯಣುಪಾಪವಿನಿವೃತ್ತ್ಯೈ ॥ ೬೮ ॥ [2]

ಅನ್ವಯಾರ್ಥ—(ಅಣುಪಾಪವಿನಿವೃತ್ತ್ಯೈ) ಸೂಕ್ಷ್ಮ ಪಾಪದ ನಿವೃತ್ತಿಗಾಗಿ (ದಿಗ್ವಲಯಂ ಪರಿಗಣಿತಂ ಕೃತ್ವಾ) ದಿಕ್ಕುಗಳ ಸೀಮೆಗಳನ್ನು ಮರ್ಯಾದಿತಗೊಳಿಸಿ (ಅತಃ ಬಹಿಃ) ಆ ಸೀಮೆಯ ಹೊರಗೆ (ಆಮೃತಿ) ಸಾಯುವ

[1] ಆಯತವರ್ಮನ ವಚನ ಹೀಗೆ—

ವಚನ—ಅದರಿಂ ಜೀವಿಗಳ್ಗೆ ಮಿಥ್ಯಾದರ್ಶನಂ ಸಂಯಮಕಷಾಯಂಗಳಿಂ ಬಿಟ್ಟು ಲೋಕದೊಳು ಪಗೆವರ್ಪೆರರಿಲ್ಲ ಮತ್ತಂ ಮೂಲಗುಣಂಗಳೆಂಟಕ್ಕುಮತಿಚಾರವಿಲ್ಲದೆ ಸ್ಥಿರಮಾಗಿ ತಾಳ್ದ ಶ್ರಾವಕಂ ಗುಣಬ್ರತತ್ರಯದೊಳುಮಂ, ಶಿಕ್ಷಾಬ್ರತ ಚತುಷ್ಕಮುಮೆಂಬುತ್ತರ ಗುಣಂಗಳೇಳುಮಂ ಕೈಕೊಳ್ಗೆ ನಾವುವೆಂದೊಡೆ ದಿಗ್ವಿರತಿ, ದೇಶವಿರತಿಯನರ್ಥದಂಡವಿರತಿ, ಭೋಗೋಪಭೋಗ ಪರಿಮಾಣಂ, ದೇಶಾವಕಾಶಿಕಂ ಸಾಮಾಯಿಕಂ, ಪ್ರೋಷಧೋಪವಾಸಂ, ವೈಯಾವೃತ್ಯಮೆಂಬುದಕ್ಕು ಮೂಲಗುಣಕ್ಕೆ ಪರಿರಕ್ಷಣಂಗಳಪ್ಪುದರಿಂ, ಸೂಕ್ಷ್ಮ ದೋಷ ಪರಿಹಾರಂಗಳಪ್ಪುದರಿಂ ಶೀಲ ಸಪ್ತಕಂಗಳಕ್ಕುಮವರೊಳು.

[2] ಆಯತವರ್ಮನ ಕಂದ ಹೀಗೆ—

ನಿರುತಂ ದೆಸೆಪತ್ತುಮನಾಂ ಪರಿಮಾಣಂ ಮಾಡಿ ಸಲ್ವೆನೊಲ್ವೆಂ ಪೊರಗಾ ।
ಮರಣಾಂತಮೆಂಬುದಿದು ದಿಗ್ವಿರತಿ ಬ್ರತಮೆಂದು ಪೇಳ್ದರಾಗಮಿಕರ್ಕಳು ॥

ವರೆಗೆ (ಅಹಂ) ನಾನು (ನ ಯಾಸ್ಯಾಮಿ) ಹೋಗುವದಿಲ್ಲ (ಇತಿ ಸಂಕಲ್ಪಃ) ಈ ಪ್ರಕಾರ ನಿಶ್ಚಯ ಮಾಡುವುದಕ್ಕೆ (ದಿಗ್ವ್ರತ) ದಿಗ್ವ್ರತವೆಂದು ಹೇಳುವರು

ಅರ್ಥ—ಹತ್ತೂ ದಿಕ್ಕುಗಳ ಪ್ರಮಾಣಮಾಡಿ, ಅವುಗಳ ಹೊರಗೆ ನಾನು ಹೋಗುವದಿಲ್ಲ ಮರ್ಯಾದಿತ ಕ್ಷೇತ್ರದ ಹೊರಗಿನ ಪಾಪವು ಸ್ವಲ್ಪವೂ ಸಹ ಹತ್ತಕೂಡದು—ಎಂದು ಸಾಯುವ ವರೆಗೆ ದಿಶೆಗಳ ಸೀಮೆಯ ಸಂಕಲ್ಪ ಮಾಡುವುದು ದಿಗ್ವ್ರತವೆನಿಸುತ್ತದೆ [ಇಲ್ಲಿ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಈ ನಾಲ್ಕು ಮುಖ್ಯ ದಿಕ್ಕುಗಳು ಹಾಗೂ ಅಗ್ನಿ, ನೈಋತ್ಯ, ವಾಯವ್ಯ, ಈಶಾನ್ಯ ಈ ನಾಲ್ಕು ಉಪದಿಕ್ಕುಗಳು ಅಲ್ಲದೆ ಊರ್ಧ್ವ ಮತ್ತು ಅಧೋ ದಿಸೆಗಳು ಕೂಡಿ ಹತ್ತು ದಿಕ್ಕುಗಳೆಂದು ಹೇಳಿದೆ ಇಲ್ಲಿ ಸಂಚರಿಸುವ ಸೀಮೆಯು ಮರ್ಯಾದಿತವಾಗಿದ್ದು, ಅದರ ಹೊರಗೆ ಯಾವಜ್ಜೀವವೂ ಹೋಗುವದಿಲ್ಲವೆಂದು ಸಂಕಲ್ಪ ಮಾಡಬೇಕೆಂಬುದೇ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯಾಗಿದೆ ಇಲ್ಲಿಯ ಸಂಕಲ್ಪವು ಅಲ್ಪ ಕಾಲದ ಮರ್ಯಾದೆಯಿಂದ ಕೂಡಿದುದಲ್ಲ ವ್ರತಿಕನು ಬದುಕಿರುವ ವರೆಗೂ ನಡೆಯಿಸುವಂಥದು ಅದೂ ಸಂಕಲ್ಪಪೂರ್ವಕವಾಗಿ ಅಂದರೆ ಮನ, ವಚನ, ಕಾಯಗಳಿಂದಲೂ ಆ ಮರ್ಯಾದೆಯು ಹೋಗಕೂಡದು 'ಬಹಿರ್ನ ಯಾಸ್ಯಾಮಿ' ಎಂಬ ಪದವು ಇದೇ ಅರ್ಥವನ್ನು ಸೂಚಿಸುತ್ತದೆ ಇಂಥ ವ್ರತಾಚರಣೆಯಿಂದ ಮರ್ಯಾದೆಯ ಹೊರಗಿನ ಕ್ಷೇತ್ರದೊಳಗಿನ ಸ್ಥೂಲ ಪಾಪವಿಷ್ಟೇ ಅಲ್ಲ, ಅಣುಪಾಪವೂ ಸಹ ನಿವೃತ್ತಿಯು ಆಗುತ್ತದೆ ಸ ಧ ]

ವಿಶೇಷಾರ್ಥ—ಗೃಹಸ್ಥರು ಮೊದಲು, ಯಾವ ದಿಕ್ಕಿನಲ್ಲಾದರೂ ಒಂದು ಮರ್ಯಾದೆಯನ್ನು ಮೀರಿ, ಹೊರಗೆ ಹೋಗಿ ವ್ಯಾಪಾರ ಉದ್ಯೋಗಗಳನ್ನು ಮಾಡುವ ಅವಶ್ಯಕತೆಯು ಉಂಟಾಗಲಿಕ್ಕಿಲ್ಲ ಅಥವಾ ಒಂದು ದಿಕ್ಕಿನಲ್ಲಿ ಈ ಕ್ಷೇತ್ರದ ಹೊರತಾಗಿ ಹೆಚ್ಚಿನ ಸೀಮೆಯಲ್ಲಿ ವ್ಯವಹಾರ ಮಾಡಬೇಕೋ ಮಾಡಬಾರದೋ ಎಂಬುದನ್ನು ಮನಸ್ಸಿನಲ್ಲಿಯೇ ವಿಚಾರಿಸಬೇಕು ಆ ಮೇಲೆ ಲೋಭವಿಲ್ಲದಂತೆ ಆಗಬೇಕು, ಅಹಿಂಸಾಧರ್ಮದ ವೃದ್ಧಿಯಾಗಬೇಕು ಈ ಧಾರ್ಮಿಕ ಭಾವನೆಯಿಂದ ತಾನು ಜೀವಿಸಿರುವ ವರೆಗೂ ಹತ್ತೂ ದಿಕ್ಕುಗಳಲ್ಲಿ ಮರ್ಯಾದೆಯನ್ನು ಕಲ್ಪಿಸಿಕೊಂಡು, ಅದರ ಹೊರಗೆ ಹೋಗುವ ಅಥವಾ ಆ ಹೊರಗಿನ ಕ್ಷೇತ್ರದಿಂದ ಯಾವನ್ನಾದರೂ ಕರೆಯಿಸುವ, ವಸ್ತುಗಳನ್ನು ಕಳಿಸುವ ಅಥವಾ ತರಿಸುವದನ್ನು ತ್ಯಾಗಮಾಡಬೇಕು ಈ ರೀತಿಯಿಂದ ಲೋಭವನ್ನು ಗೆಲ್ಲುವುದಕ್ಕೆ ದಿಗ್ವ್ರತವೆಂದು ಹೇಳುತ್ತಾರೆ

ಹತ್ತೂ ದಿಕ್ಕುಗಳಲ್ಲಿರುವ ಯಾವ ಯಾವ ದೇಶಗಳ ಕೂಡ ನಮಗೆ ವ್ಯವಹಾರ ಮಾಡಲಿಕ್ಕೆ ಶಕ್ಯವಿದೆ ಇದನ್ನು ಗೃಹಸ್ಥನು ಮೊದಲು ವಿಚಾರಮಾಡಬೇಕು ಅವುಗಳಲ್ಲಿ ಯಾವ ಕ್ಷೇತ್ರದ ಸಂಗಡ ನಮಗೆ ವಿಶೇಷ ಸಂಬಂಧ ಬಂದೀತು, ಎಷ್ಟು ದೇಶಗಳ ಕೂಡ ಹೆಚ್ಚಿಗೆ ಸಂಬಂಧ ಇಟ್ಟುಕೊಳ್ಳುವದಿದೆ ಎಂಬುದನ್ನು ವಿಚಾರಿಸಿ ದಿಗ್ವ್ರತದ ಮರ್ಯಾದೆಯನ್ನು ಹಾಕಿಕೊಳ್ಳಬೇಕು ಅಂದರೆ ಆ ಮರ್ಯಾದೆಯ ಹೊರಗಿನ ದೇಶಗಳ ಕೂಡ ಸಂಬಂಧವನ್ನು ಇಟ್ಟುಕೊಳ್ಳುವದಿಲ್ಲವೆಂದು ನಿಯಮಮಾಡಬೇಕು ಅಂದರೆ ನಿಯಮಿತ ಕ್ಷೇತ್ರದ ಹೊರಗಿನ ಜಗತ್ತಿನೊಳಗಿಂದ ಕಾರಣವಿಲ್ಲದೆ ಆಗುವ ಪಾಪಬಂಧವು ಇಲ್ಲದಂತಾಗುತ್ತದೆ ಈ ನಿಯಮವನ್ನು ಅಪರಿಮಿತ ಲೋಭಕ್ಕೆ ಮರ್ಯಾದೆಯನ್ನು ಹಾಕುವ ಸಲುವಾಗಿ ಮಾಡುವುದು ಯೋಗ್ಯವಾಗಿದೆ

ಇನ್ನು ದಿಕ್ಕುಗಳ ಮರ್ಯಾದೆಯನ್ನು ಹೇಗೆ ಮಾಡಬೇಕೆಂಬುದನ್ನು ಸೂಚಿಸಲಿಕ್ಕೆ ಸೂತ್ರವನ್ನು ಹೇಳುತ್ತಾರೆ—

ಮಕರಾಕರಸರಿದಟವೀಗಿರಿಜನಪದಯೋಜನಾನಿ ಮರ್ಯಾದಾಃ ।
ಪ್ರಾಹುರ್ದಿಶಾಂ ದಶಾನಾಂ ಪ್ರತಿಸಂಹಾರೇ ಪ್ರಸಿದ್ಧಾನಿ ॥ ೬೯ ॥[1]

ಅನ್ವಯಾರ್ಥ—(ದಶಾನಾಂ ದಿಶಾಂ) ಹತ್ತೂ ದಿಕ್ಕುಗಳಲ್ಲಿ (ಪ್ರತಿಸಂಹಾರೇ) ತ್ಯಾಗಮಾಡುವದಕ್ಕಾಗಿ (ಪ್ರಸಿದ್ಧಾನಿ) ಪ್ರಸಿದ್ಧವಾದ (ಮಕರಾಕರಸರಿದಟವೀಗಿರಿಜನಪದಯೋಜನಾನಿ) ಸಮುದ್ರ, ನದಿ, ವನ, ಪರ್ವತ, ದೇಶ, ಯೋಜನ ಈ (ಮರ್ಯಾದಾಃ) ಸೀಮೆಯನ್ನು (ಪ್ರಾಹುಃ) ಹೇಳಿದ್ದಾರೆ

---

1 ಆಯತವರ್ಮನ ವಚನ ಹೀಗೆ—ಪ್ರತ್ಯಾಖ್ಯಾನಮೆಂಬ ಕಷಾಯೋದಯದಿಂದಣುಬ್ರತ ಮಹಾಬ್ರತಕ್ಕೆ ಪರತಾಳದೆ ತನ್ನ ಶಕ್ತಿಗೆ ತಕ್ಕಂತಾಗಿಯುಂತಪ್ಪ ಸಮುದ್ರಮಂ, ತೊರೆಯುಮಡವಿಯುಂ ಪರ್ವತಮಂ, ದೇಶಮುಮಿನಿತು ಯೋಜನಮುಮೆಂದು ಪ್ರಮಾಣಿಸಿಯಲ್ಲಿಂ ಪೊರಗೆ ಯಾವಜ್ಜೀವಂ ಲೋಭದಿಂದಮುಕ್ಕೆ, ಲಾಭದಿಂದಮುಕ್ಕೆ, ಭಯದಿಂದಮುಕ್ಕೆ ಪೋಪೆನಲ್ಲೆಂದು ಕೈಕೊಳ್ವುದು ದಿಗ್ವಿರತಿಯೆಂಬ ಮೊದಲಗುಣಬ್ರತಂ

ಅರ್ಥ—ಹತ್ತು ದಿಕ್ಕುಗಳಲ್ಲಿ ಮರ್ಯಾದೆಯನ್ನು ಮಾಡಿಕೊಳ್ಳುವಾಗ ಪ್ರಸಿದ್ಧವಾಗಿರುವ ಸಮುದ್ರ, ನದಿ, ವನ, ಪರ್ವತ ದೇಶ ಮತ್ತು ಇಂತಿಷ್ಟು ಯೋಜನಗಳ ವರೆಗೆ ಎಂದು ಸೀಮೆಯನ್ನು ನಿರ್ಧರಿಸಿಕೊಳ್ಳಬೇಕು. ಅದರ ಹೊರಗಿನ ಸೀಮೆಯ ಕೂಡ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳಬಾರದು ಹೀಗೆ ನಿಯಮ ಮಾಡುವುದು. [ದಿಗ್ವ್ರತದ ಸಂಕಲ್ಪ ಮಾಡುವಾಗ ಯಾವುದಾದರೂ ಸ್ಪಷ್ಟವಾದ ಹಾಗೂ ಸೀಮಾರೇಷೆಯು ರಾಜಕಾರಣವೇ ಮೊದಲಾದವುಗಳಿಂದ ವ್ಯತ್ಯಾಸ ಹೊಂದದಂಥ ಕ್ಷೇತ್ರವನ್ನು ಗೊತ್ತುಪಡಿಸಿಕೊಳ್ಳಬೇಕು ಅಂದರೆ ವ್ರತಕ್ಕೆ ಬಾಧೆಯು ಉಂಟಾಗುವದಿಲ್ಲ ಸ. ಥ]

ದೆಸೆಗಳ್ಗೀ ಮೇರೆಯಿಂದಂ ಪೊಱಗೆ ನಡೆಯೆನಾನೆಂದು ಕೈಕೊಳ್ವುದುಂ ಸಂ-
ತೊಸದಿಂ ತಾಳ್ದಿರ್ದ ಶೇಷವ್ರಮಿವ ನಿಯಮಮುಂ ಮಂಡಳಾಗ್ರಾದ್ಯನರ್ಥ- ।
ಪ್ರಸರಾನ್ತ್ರೌಘಂಗಳೊಳ್ ತತ್ತ್ವಮಿತಮೆನಿಸಿ ಕೈಕೊಂಡುಮೊಲ್ದೀಯದಿರ್ಪೊಂ-
ದಸಮತ್ವೀಭಾವಮುಂ ಭಾವಿಪೊಡತಿಶಯಂಗಳ್ಗುಣಾಖ್ಯವ್ರತಂಗಳ್ ॥

—ಶಾಂತಿನಾಥ ಕವಿ—ಸುಕುಮಾರಚರಿತಂ—೬–೧೦

ಈಗ ದಿಗ್ವ್ರತದಿಂದ ಆಗುವ ಲಾಭವನ್ನು ಹೇಳುವದಕ್ಕಾಗಿ ಸೂತ್ರ ಹೇಳುತ್ತಾರೆ—

**ಅವಧೇರ್ಬಹಿರಣುಪಾಪಂ ಪ್ರತಿವಿರತೇರ್ದಿಗ್ವ್ರತಾನಿ ಧಾರಯತಾಮ್ ।**
**ಪಂಚಮಹಾವ್ರತಪರಿಣತಿಮಣುವ್ರತಾನಿ ಪ್ರಪದ್ಯಂತೆ ॥ ೭೦ ॥**[1]

ಅನ್ವಯಾರ್ಥ—(ಅವಧೇಃ ಬಹಿಃ) ಮರ್ಯಾದೆಯ ಹೊರಗೆ (ಅಣುಪಾಪಂ ಪ್ರತಿವಿರತೇಃ) ಸೂಕ್ಷ್ಮ ಪಾಪದ ತ್ಯಾಗವಾಗುವ ಕಾರಣದಿಂದ (ದಿಗ್ವ್ರತಾನಿ) ದಿಗ್ವ್ರತವನ್ನು (ಧಾರಯತಾಂ) ಧರಿಸುವವರ (ಅಣುವ್ರತಾನಿ) ಅಣುವ್ರತಗಳೂ ಸಹ (ಪಂಚಮಹಾವ್ರತಪರಿಣತಿಮ್) ಐದು ಮಹಾವ್ರತಗಳಷ್ಟು ಪ್ರಗತಿಯನ್ನು (ಪ್ರಪದ್ಯಂತೇ) ಹೊಂದುತ್ತವೆ, ಅಂದರೆ ಫಲದಾಯಕವಾಗುತ್ತವೆ

ಅರ್ಥ—ದಿಗ್ವ್ರತವನ್ನು ನಡೆಯಿಸುವವರಿಗೆ ಆಯಾ ಪ್ರದೇಶದ ಹೊರಗಿನ ಕ್ಷೇತ್ರದಿಂದ ಸ್ವಲ್ಪವೂ ಸಹ ಪಾಪಬಂಧವು ಆಗುವದಿಲ್ಲ ಇದರಿಂದ ಅವರ ಅಣುವ್ರತಗಳು ಮಹಾವ್ರತಗಳ ಸಮಾನವೆನಿಸುತ್ತವೆ [ಇದರಿಂದ ದಿಗ್ವ್ರತವು ಗುಣವ್ರತವಿದೆಯೆಂಬುದು ಸಹಜವಾಗಿ ಸ್ಪಷ್ಟವಾಗುತ್ತದೆ. ಯಾಕೆಂದರೆ ಮರ್ಯಾದಿತ ಕ್ಷೇತ್ರದ ಹೊರಗಿನ ಸೂಕ್ಷ್ಮ ಪಾಪದ ವಿರಕ್ತಿಯು ಆಗುವುದೇ ಇದಕ್ಕೆ ಕಾರಣವಾಗಿದೆ ಸ ಥ]

ವಿಶೇಷಾರ್ಥ—ಯಾವ ಗೃಹಸ್ಥನು ಹತ್ತು ದಿಸೆಗಳ ಮರ್ಯಾದೆಯನ್ನು ಇಟ್ಟುಕೊಂಡಿರುವನೋ ಅವನಿಗೆ ಆ ಪ್ರದೇಶದಲ್ಲಿ ಅಣುವ್ರತಗಳಂತೂ ಇದ್ದೇ ಇರುತ್ತವೆ ಆದರೆ ಮರ್ಯಾದಿತ ಕ್ಷೇತ್ರದ ಹೊರಗಿನ ಪ್ರದೇಶದಲ್ಲಿ ಸಂಭವಿಸುವ ತ್ರಸ–ಸ್ಥಾವರ ಹಿಂಸಾದಿಗಳಿಂದ ಒದಗುವ ಐದು ವಿಧದ ಪಾಪಗಳ ತ್ಯಾಗವುಂಟಾಗುವುದರಿಂದ ಅವನ್ನೆ ಅಣುವ್ರತಗಳು ಮಹಾವ್ರತಗಳಷ್ಟು ಮಹತ್ವದವು ಆಗುತ್ತವೆ

ಕೃತಕಾರಿತಾನುಮೋದದಿನತಿಸಾವದ್ಯಾದಿ ದೋಷಮಿಲ್ಲೆನಿಸಿದಣು- ।
ವ್ರತಮಂ ತಾಳ್ದಿದ ಮನುಜರ್ ಕೃತಾರ್ಥರಾಗರೆ ಜಗತ್ರಯಾಭ್ಯಂತರದೊಳ್ ॥

—ಶಾಂತಿನಾಥ ಕವಿ—ಸುಕುಮಾರಚರಿತಂ ೬–೪೪

---

[1] ಆಯತಪರ್ಯಾನ ವಚನ ಹೀಗೆ—
ಅದು ತಾಳ್ದಿದಾತಂ ತನ್ನ ಪರಿಪಾಡಿದ ಭೂಮಿಯಿಂದಂ ಪೊರಗೆ ಕೊಲೆ ಮೊದಲಾಗೊಡೆಯ ದೋಷಂಗಳು ಮನೊ ವಚನ ಕಾಯಂಗಿಯ್ಯನಪ್ಪುದರಿಂ, ಕೃತಕಾರಿತಾನುಮೋದಂಗಳಿಲ್ಲಪ್ಪುದರಿಂದಂ ಮಹಂವ್ರತಿಯೆನೆ ಪಡುಗುಂ,

ಮರ್ಯಾದೆಯ ಹೊರಗಿನ ಅಣುವ್ರತಗಳು ಮಹಾವ್ರತಗಳಂತೆಯೇ ಇರುತ್ತವೆಂದು ಏಕೆ ಹೇಳುವರು? ಸೀಮೆಯ ಆಚೆಗೆ ಹಿಂಸೆಯೇ ಸಂಭವಿಸುವದಿಲ್ಲ; ಆ ಕಾರಣ ಅವನಿಗೆ ಸಾಕ್ಷಾತ್ ಮಹಾವ್ರತಿ ಎಂದು ಏಕೆ ಅನ್ನಬಾರದು?— ಇದಕ್ಕೆ ಸಮಾಧಾನವನ್ನು ಹೇಳುವದಕ್ಕಾಗಿ ಈ ಸೂತ್ರ ಹೇಳಿದ್ದಾರೆ—

ಪ್ರತ್ಯಾಖ್ಯಾನತನುತ್ವಾನ್ಮಂದತರಾಶ್ಚರಣಮೋಹಪರಿಣಾಮಾಃ ।
ಸತ್ತ್ವೇನ ದುರವಧಾರಾ ಮಹಾವ್ರತಾಯ ಪ್ರಕಲ್ಪ್ಯಂತೇ ॥ ೭೧ ॥

ಅನ್ವಯಾರ್ಥ— (ಪ್ರತ್ಯಾಖ್ಯಾನತನುತ್ವಾತ್) ಪ್ರತ್ಯಾಖ್ಯಾನಾವರಣ–ಕ್ರೋಧ, ಮಾನ, ಮಾಯಾ, ಲೋಭ ಇವು ಮಂದವಾಗಿರುವುದರಿಂದ (ಮಂದತರಾಃ) ಅತ್ಯಂತ ಮಂದವಾಗಿರುವ (ಚಾರಿತ್ರಮೋಹಪರಿಣಾಮಾಃ) ಚಾರಿತ್ರಮೋಹನೀಯದ ಪರಿಣಾಮಗಳು (ಮಹಾವ್ರತಾಯ ಪ್ರಕಲ್ಪ್ಯಂತೇ) ಮಹಾವ್ರತದ ಕಲ್ಪನೆಯನ್ನು ಉತ್ಪನ್ನ ಮಾಡುತ್ತವೆ —ಅಂದರೆ ಮಹಾವ್ರತಗಳ ಹಾಗೆ ಕಾಣುತ್ತವೆ --ಅವು (ಪರಿಣಾಮಾಃ) ಪರಿಣಾಮದ (ಸತ್ತ್ವೇನ) ಅಸ್ತಿತ್ವದಿಂದ (ದುರವಧಾರಾಃ) ತಿಳಿದುಕೊಳ್ಳಲಿಕ್ಕ ಕಠಿಣವಾಗಿನ

ಅರ್ಥ—ಅಣುವ್ರತಿಯಾದ ಗೃಹಸ್ಥನಿಗೆ ಸಕಲ ಸಂಯಮವು ಉಂಟಾಗಲಿಕ್ಕೆ ವಿರೋಧ ಮಾಡುವ ಪ್ರತ್ಯಾಖ್ಯಾನಾವರಣ ಕರ್ಮದ ಉದಯವು ಮಂದವಾಗಿರುತ್ತದೆ ಅದರಿಂದ ಚಾರಿತ್ರ ಮೋಹದ ಪರಿಣಾಮವು ತೀರ ಮಂದತರವಾಗಿರುತ್ತದೆ ಅದು "ಸತ್ತ್ವೇನ ದುರವಧಾರ"ವಾಗಿದೆ ಅಂದರೆ ಅತಿ ಮಂದತ್ವದಿಂದ ಅದರ ಅಸ್ತಿತ್ವದ ತಿಳುವಳಿಕೆಯೂ ಸಹ ಉಂಟಾಗುವದಿಲ್ಲ ಅಂತಲೇ ಇಂಥ ಗೃಹಸ್ಥರ ವಿಷಯದಲ್ಲಿ ಮಹಾವ್ರತಿಗಳ ಕಲ್ಪನೆಯನ್ನು ಮಾಡಲಾಗುತ್ತದೆ ['ರಾಮ' ಎಂಬ ಶಬ್ದವು 'ರಾಮಚಂದ್ರ' ಎಂಬ ಪದದ ಅರ್ಥವನ್ನು ಹೇಗೆ ಸೂಚಿಸುತ್ತದೆಯೋ ಹಾಗೆಯೇ 'ಪ್ರತ್ಯಾಖ್ಯಾನ' ಎಂಬುದು ಇಲ್ಲಿ 'ಪ್ರತ್ಯಾಖ್ಯಾನಾವರಣ'ದ ಅರ್ಥವನ್ನು ಬೋಧಿಸುತ್ತದೆ ಹಿಂಸಾದಿಗಳಿಂದ ವಿರಕ್ತಿರೂಪದಲ್ಲಿರುವ ಸಂಯಮದ ಹೆಸರು ಪ್ರತ್ಯಾಖ್ಯಾನವೆಂದಿದೆ ಈ ಪ್ರತ್ಯಾಖ್ಯಾನವನ್ನು ಆವರಿಸುವಂಥ ನಾಲ್ಕು ಕರ್ಮ ಪ್ರಕೃತಿಗಳು—ಕ್ರೋಧ, ಮಾನ, ಮಾಯಾ, ಲೋಭ—ಇವೆ ಈ ಕರ್ಮಪ್ರಕೃತಿಗಳಿಗೆ 'ಪ್ರತ್ಯಾಖ್ಯಾನಾವರಣ' ಎಂದು ಹೇಳಲಾಗಿದೆ ಇವು ಮಂದವಾಗಿರುವಾಗ ಇವುಗಳಿಂದ ಪರಿಣಮಿಸುವ ಚಾರಿತ್ರವೂ ಮಂದವಾಗುವುದು ಸಹಜವಾಗಿದೆ ಸ ಥ.]

ವಿಶೇಷಾರ್ಥ—ಚಾರಿತ್ರಮೋಹನೀಯ ಕರ್ಮದ ಉದಯದ ಪರಿಣಾಮವು ಯಾವಾಗ ಸಂಜ್ವಲನ ಕಷಾಯ ರೂಪವಾಗುವುದೋ ಆಗ ಮಹಾವ್ರತವು ಸಂಭವಿಸುತ್ತದೆ ದೇಶವ್ರತವನ್ನು ಸ್ವೀಕರಿಸಿದ ಗೃಹಸ್ಥನಿಗೆ ಪ್ರತ್ಯಾಖ್ಯಾನಾವರಣಕರ್ಮದ ಉದಯವು ಅಸ್ತಿತ್ವದಲ್ಲಿ ಇದ್ದರೂ ಕೂಡ ಸಂಜ್ವಲನ ಕಷಾಯ ಪರಿಣಾಮವು ಮಂದವಾಗಲು ಶಕ್ಯವಿರುವದಿಲ್ಲ ಅಂತಲೇ ಗೃಹಸ್ಥಾವಸ್ಥೆಯಲ್ಲಿ ಸಂಪೂರ್ಣ ಪಾಪದ ತ್ಯಾಗವನ್ನು ಮಾಡಿದರೂ ಸಹ ಮಹಾವ್ರತವು ಸಾಧ್ಯವಾಗುವದಿಲ್ಲ ಆಗ ಕೇವಲ ಅಂಥವನಲ್ಲಿ ಮಹಾವ್ರತದ ಕಲ್ಪನೆಯನ್ನೇ ಮಾಡಬೇಕಾಗುತ್ತದೆ. ಮಹಾವ್ರತಗಳು ಪ್ರತ್ಯಾಖ್ಯಾನಾವರಣ ಕಷಾಯದ ಅಭಾವದಿಂದಲೇ ಸಿದ್ಧಿಸುವಂಥವಿರುತ್ತವೆ

ನಿಸ್ಸೊಳಗಾದ ಭಕ್ತಿಗಡ ನಿರ್ವೃತಿ ಬೇಕು ಗಡಂ ವಿಶುದ್ಧದಿಂ
ತನ್ನಿರವುಂ ಭವತ್ರತತಿ ಗಡಾಂತುದು ದೀಕ್ಷೆಗಡಂ ಬಳಿಕ್ಕ ಹೋ ।
ಸನ್ನಿಗಡಂ ಬಿಸಿಲ್ಗಡಂ ಭಯಂ ಗಡ ಬಾಯ್ಸವಿಯಾಸೆಯುಂ ಗಡಂ
ನನ್ನ ಮನೋವಿಕಾರತೆಯನಾಡುವೆನೇನಪರಾಜಿತೇಶ್ವರಾ ॥

—ರತ್ನಾಕರ—ಅಪರಾಜಿತೇಶ್ವರಶತಕ—೪೩

ಇನ್ನು ಮಹಾವ್ರತವು ಹೇಗೆ ಉತ್ಪನ್ನವಾಗುತ್ತದೆಂಬುದನ್ನು ಸೂಚಿಸಲಿಕ್ಕೆ ಸೂತ್ರವನ್ನು ರಚಿಸುತ್ತಾರೆ—

ಪಂಚಾನಾಂ ಪಾಪಾನಾಂ ಹಿಂಸಾದೀನಾಂ ಮನೋವಚಃಕಾಯೈಃ ।
ಕೃತಕಾರಿತಾನುಮೋದೈಸ್ತ್ಯಾಗಸ್ತು ಮಹಾವ್ರತಂ ಮಹತಾಮ್ ॥ ೭೨ ॥

ಅನ್ವಯಾರ್ಥ—(ಹಿಂಸಾದೀನಾಂ) ಹಿಂಸೆಯೇ ಮೊದಲಾದ (ಪಂಚಾನಾಂ) ಐದು (ಪಾಪಾನಾಂ) ಪಾಪಗಳನ್ನು (ಮನೋವಚಃಕಾಯೈಃ) ಮನಸ್ಸು, ಮಾತು, ಶರೀರಗಳಿಂದ (ತು) ಮತ್ತು (ಕೃತಕಾರಿತಾನುಮೋದೈಃ)

ಮಾಡುವುದು, ಮಾಡಿಸುವುದು, ಮಾಡಿದ್ದನ್ನು ಒಪ್ಪುವುದನ್ನು (ತ್ಯಾಗಃ) ತ್ಯಾಗಮಾಡುವುದು (ಮಹತಾ) ಶ್ರೇಷ್ಠ ಪುರುಷನ (ಮಹಾವ್ರತಂ) ಮಹಾವ್ರತವಾಗಿದೆ

ಅರ್ಥ—ಹಿಂಸೆಯೇ ಮೊದಲಾದ ಐದು ಪಾಪಗಳನ್ನು ಮನವಚನಕಾಯಗಳಿಂದಲೂ ಕೃತಕಾರಿತ ಅನುಮೋದನಗಳಿಂದಲೂ ತ್ಯಜಿಸಬೇಕು ಹೀಗೆ ಒಂಭತ್ತು ವಿಧದಿಂದಲೂ ತ್ಯಾಗಮಾಡುವುದೇ ಮಹಾಪುರುಷನ ಮಹಾವ್ರತವಾಗಿದೆ. [ಇಲ್ಲಿ ಪಾಪಗಳಿಗೆ 'ಸ್ಥೂಲ' ಎಂಬ ವಿಶೇಷಣವನ್ನು ಉಪಯೋಗಿಸಿಲ್ಲ ಅದರಿಂದ ಸ್ಥೂಲ ಸೂಕ್ಷ್ಮ ಪಾಪಗಳೆರಡನ್ನೂ ಪೂರ್ಣರೂಪದಿಂದ ತ್ಯಾಗಮಾಡಲಿಕ್ಕೆ ಇಲ್ಲಿ ಸೂಚಿಸಲಾಗಿದೆ ಐದು ಮಹಾವ್ರತಗಳ ಸಮೂಹವಿದೆ ಅವುಗಳನ್ನು ಧರಿಸುವವರೂ ಪಾಲಿಸುವವರೂ ಮಹಾನ್ ಆತ್ಮರಾಗಿರುತ್ತಾರೆ ಅಪರಿಗ್ರಹ ಮಹಾವ್ರತದಲ್ಲಿ ಬಾಹ್ಯ ಹಾಗೂ ಅಭ್ಯಂತರ ಪರಿಗ್ರಹಗಳೆರಡನ್ನೂ ತ್ಯಾಗಮಾಡಬೇಕಾಗುತ್ತದೆ ಅಂತರಂಗ ಪರಿಗ್ರಹದಲ್ಲಿ ಹದಿನಾಲ್ಕು ಪ್ರಕಾರಗಳಿವೆ ಅವು ರಾಗ, ದ್ವೇಷ, ಮೋಹ, ಕಾಮ, ಕ್ರೋಧ, ಮಾನ, ಮಾಯಾ, ಲೋಭ ಮತ್ತು ಭಯ ಮೊದಲಾದವುಗಳಾಗಿವೆ. ಈ ಎಲ್ಲ ಅಂತರಂಗ ಪರಿಗ್ರಹಗಳ ಪೂರ್ಣ ತ್ಯಾಗವು ಹನ್ನೆರಡನೆಯ ಗುಣಸ್ಥಾನದಲ್ಲಿ ಹೋದ ಮೇಲೆಯೇ ಆಗುತ್ತದೆ ಆ ಗುಣಸ್ಥಾನದಲ್ಲಿ ಮೋಹನೀಯ ಕರ್ಮವು ಅತ್ಯಂತ ಕ್ಷೀಣವಾಗಿ ಆತ್ಮವನ್ನು ಬಿಟ್ಟು ದೂರಹೋಗುತ್ತದೆ ಅದರ ಅಸ್ತಿತ್ವವೇ ಅಲ್ಲಿ ಉಳಿಯುವದಿಲ್ಲ ಈ ಎಲ್ಲ ಪರಿಗ್ರಹಗಳು ಮೋಹನೀಯ ಕರ್ಮದ ಪರಿಕರಗಳಾಗಿವೆ, ಪರಿವಾರಗಳಾಗಿವೆ. ಹೆಚ್ಚೇನು? ಅಂಗಗಳೇ ಎನಿಸುತ್ತವೆ ಇಂಥ ಸ್ಥಿತಿಯಲ್ಲಿರುವಾಗ ಮಹಾವ್ರತಗಳ ಪೂರ್ಣತೆಯೂ ಸಹ ಹನ್ನೆರಡನೆಯ ಗುಣಸ್ಥಾನದಲ್ಲಿ ಹೋದಾಗಲೇ ಆಗುವದು ಆದರೆ ಇದಕ್ಕಿಂತ ಮೊದಲಿನ ಆರನೆಯ ಮೊದಲಾದ ಗುಣಸ್ಥಾನದಲ್ಲಿರುವವರಿಗೆ ಮಹಾವ್ರತಿಗಳೆನ್ನುವುದು ಅವರ ಚಾರಿತ್ರಮೋಹದ ಪರಿಣಾಮವು 'ಸತ್ವೇನ ದುರವಧಾರ'ವಾಗಿರುವುದರಿಂದಲೇ. ಈ ಮಾತನ್ನು ಇದಕ್ಕೂ ಮೊದಲಿನ ಸೂತ್ರದಿಂದ ಆಚಾರ್ಯರು ಸ್ಪಷ್ಟಗೊಳಿಸಿದ್ದಾರೆ ಸ. ಧ]

> ಕೊಲಿಸುವ ಕೊಲ್ವ ಶಾರ್ದ್ಯಪರವಾಗಿಸುವಾಗುವ ಕೊಲ್ವಕಳ್ವರೊಳ್
> ಸಲೆ ಪುದುಗೊಳ್ವ ಪಾದರಮನಾಡಿಸುವಾಡುವ ಕಾಂಕ್ಷೆಯೊಳ್ ಮನಂ ।
> ಸಲಿಸುವ ಸಲ್ವ ಪಾಪಪರನುಂ ಶಠನುಂ ಖಳನುಂ ಕೃತಘ್ನನುಂ
> ಕಲುಷಿಯುಮಾಟ್ಟುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ ॥

—ಶಾಂತಿನಾಥ—ಸುಕುಮಾರಚರಿತಂ ೫–೪೪.

> ಕೊಲಲುಂ ಪುಸಿಯಲುಮಾಗದು ಸಲಲಾಗದು ಪೆರರ ಪೆಂಡಿರೊಳ್ ಕಳವನಣಂ ॥
> ಕಳಲಾಗದು ಕೀರದುದಕ್ಕಲವಜಿಲಾಗದು ಪರಸ್ತ್ರೀಯುಂ ಬಯಸುವವಂ ॥

ಜನ್ನ—ಯಶೋಧರ ಚರಿತೆ—ನಾಲ್ಕನೆಯ ಅವತಾರ ೨೨.

ದಿಗ್ವ್ರತದ ಅತಿಚಾರಗಳನ್ನು ಹೇಳಲಿಕ್ಕೆ ಸೂತ್ರವನ್ನು ಹೇಳಿದ್ದಾರೆ—

> ಊರ್ಧ್ವಾಧಸ್ತಾತ್ತಿರ್ಯಗ್ವ್ಯತಿಪಾತಾಃ ಕ್ಷೇತ್ರವೃದ್ಧಿರವಧೀನಾಮ್ ।
> ವಿಸ್ಮರಣಂ ದಿಗ್ವಿರತೇರತ್ಯಾಶಾಃ ಪಂಚ ಕಥ್ಯಂತೇ ॥ ೭೩ ॥

ಅನ್ವಯಾರ್ಥ—ಅಜ್ಞಾನ ಇಲ್ಲವೆ ಪ್ರಮಾದಕ್ಕೆ ವಶನಾಗಿ (ಊರ್ಧ್ವಾಧಸ್ತಾತ್ತಿರ್ಯಗ್ವ್ಯತಿಪಾತಾಃ) ಮೇಲಿನ, ಕೆಳಗಿನ, ದಿಕ್ಕು ಮತ್ತು ಉಪದಿಕ್ಕುಗಳ ಮರ್ಯಾದೆಯನ್ನು ಉಲ್ಲಂಘನ ಮಾಡುವುದು, (ಕ್ಷೇತ್ರವೃದ್ಧಿಃ)

[1] ಆಯತವರ್ಮನ ವಚನ ಹೀಗೆ—

ದಿಗ್ವಿರತಿವ್ರತಕ್ಕೆಯೂರ್ಧ್ವಾತಿಕ್ರಮಮಧೋತಿಕ್ರಮಂ, ತಿರ್ಯಗ್ಗತಿಕ್ರಮಂ, ಕ್ಷೇತ್ರವೃದ್ಧಿ, ವಿಸ್ಮರಣಮೆಂದಯ್ದತಿಚಾರ. ಮಕ್ಕುಮವನಾಗಳಿಯ್ಯದುದು ಮೊದಲ ಶೀಲವ್ರತಮಲ್ಲಿ ಕಾರ್ಯಕಾರಣದಿಂ ತನ್ನ ಮಾಡಿದ ಮೇರೆಯನತಿಕ್ರಮಿಸಿ ಬೆಟ್ಟು ಮೊದಲಾಗೊಡೆಯುವನೇರುವುದೂರ್ಧ್ವಾತಿಕ್ರಮಂ. ಬಾವಿ ಗುಹೆ ಮೊದಲಾದೆಡೆಯನಿಳಿವುದಧೋಗತಿಕ್ರಮಂ ನಾಡು ಬೀಡಡವಿನೆಲಂ ಮೊದಲಾಗೊಡೆಯುವಂ ನಡೆವುದು ತಿರ್ಯಗ್ಗತಿಕ್ರಮಂ ತನ್ನ ಕೈಕೊಂಡು ಪ್ರಮಾಣಿಸಿದ ಯೋಜನಂಗಳಲ್ಲದೆ ಪೆರಕೊಂದು ನಾಡು ಯೋಜನಂಗಳಂ ಪ್ರಮಾಣಂ ಮಾಡಿ ನಡೆವುದು ಕ್ಷೇತ್ರವೃದ್ಧಿ ಮೇರೆಮಾಡಿದ ನೆಲದ ಪ್ರಮಾಣಂ ಮರೆವುದು ವಿಸ್ಮರಣಂ.

ಕ್ಷೇತ್ರದ ಮರ್ಯಾದೆಯನ್ನು ಬೆಳೆಯಿಸುವುದು (ಅವಧೀನಾಂ ವಿಸ್ಮರಣಂ) ಮರ್ಯಾದೆಯನ್ನು ಮರೆತು ಹೋಗುವುದು- ಇವು ಐದು—(ದಿಗ್ವಿರತೇಃ) ದಿಗ್ವ್ರತದ (ಅತ್ಯಾಶಾಃ) ಅತಿಚಾರಗಳೆಂದು (ಮನ್ಯಂತೆ) ಸ್ವೀಕರಿಸಲಾಗುತ್ತದೆ

ಅರ್ಥ—ಅಜ್ಞಾನದಿಂದ ಇಲ್ಲವೆ ಪ್ರಮಾದದಿಂದ ನಿರ್ಧರಿಸಿದ ಮರ್ಯಾದೆಗಿಂತಲೂ ಹೆಚ್ಚಿನ ಎತ್ತರವಾದ ಪರ್ವತಾದಿಗಳನ್ನು ಏರುವುದು, ಬಾವಿ, ಕೆರೆ, ಖಣಿಗಳಲ್ಲಿ ಕೆಳಗೆ ಇಳಿಯುವುದು, ಉಪದಿಕ್ಕುಗಳಲ್ಲಿರುವ ಗುಹೆ ಮೊದಲಾದವುಗಳಲ್ಲಿ ಪ್ರವೇಶಮಾಡುವುದು, ಇಟ್ಟುಕೊಂಡ ಮರ್ಯಾದೆಯನ್ನು ಹೆಚ್ಚಿಸುವುದು, ಇಲ್ಲವೆ ಆ ಮರ್ಯಾದೆಯನ್ನೇ ಮರೆತುಬಿಡುವುದು—ಇವು ಐದು ದಿಗ್ವ್ರತದ ದೋಷಗಳೆಂದು ತಿಳಿಯಬೇಕು

[ಈ ದೋಷಗಳು ವ್ರತದ ಅತಿಚಾರಗಳೆಂದು ಹೇಳಿದೆ ವ್ರತಿಕನು—ಇವುಗಳನ್ನು—ಗೊತ್ತಿದ್ದು ಬುದ್ಧಿಪೂರ್ವಕವಾಗಿ ತಪ್ಪನ್ನು ಮಾಡುವದಿಲ್ಲ ಇವು ಅಜ್ಞಾನದಿಂದಲೂ ಮರೆವಿನಿಂದಲೂ ಸಂಭವಿಸುತ್ತವೆ ಹಾಗಿಲ್ಲದೆ ಬುದ್ಧಿಪೂರ್ವಕವಾಗಿ ತಪ್ಪು ಮಾಡಿದರೆ ಅದು ವ್ರತಭಂಗವೆನಿಸುತ್ತದೆ ಸ ಧ]

ಅತಿಶಯತರಮೆನಿಪ ಗುಣವ್ರತದೊಳ್ ದಿಗ್ವಿರತಿಗಕ್ಕುಮತಿಚಾರಮನಾ ।
ರತಮೂರ್ಧ್ವಾಧಃ ಸ್ತಿರ್ಯಗ್ವ್ಯತಿಕ್ರಮ ಕ್ಷೇತ್ರವೃದ್ಧಿ ವಿಸ್ಮರಣಂಗಳ್ ॥

ಶಾಂತಿನಾಥ—ಸುಕುಮಾರಚರಿತಂ—೬-೧೪

ಅನರ್ಥದಂಡತ್ಯಾಗ ವ್ರತದ ಲಕ್ಷಣವನ್ನು ಕೇಳಲಿಕ್ಕೆಂದು ಈ ಸೂತ್ರ ಹೇಳಿದ್ದಾರೆ—

ಅಭ್ಯಂತರಂ ದಿಗವಧೇರಪಾರ್ಥಕೇಭ್ಯಃ ಸಪಾಪಯೋಗೇಭ್ಯಃ ।
ವಿರಮಣಮನರ್ಥದಂಡವ್ರತಂ ವಿದುರ್ವ್ರತಧರಾಗ್ರಣ್ಯಃ ॥ ೭೪ ॥[1]

ಅನ್ವಯಾರ್ಥ—(ದಿಗವಧೇಃ) ದಿಕ್ಕುಗಳ ಮರ್ಯಾದೆಯ (ಅಭ್ಯಂತರಂ) ಒಳಗೆ (ಅಪಾರ್ಥಕೇಭ್ಯಃ) ಪ್ರಯೋಜನವಿಲ್ಲದೆ (ಸಪಾಪಯೋಗೇಭ್ಯಃ) ಪಾಪವುಳ್ಳ ಮನ, ವಚನ, ಕಾಯಗಳ ಪ್ರವೃತ್ತಿಯಿಂದ (ವಿರಮಣಂ) ವಿರಕ್ತನಾಗುವುದು (ಅನರ್ಥದಂಡವ್ರತಂ) ಅನರ್ಥದಂಡವ್ರತವೆಂದು (ವ್ರತಧರಾಗ್ರಣ್ಯಃ) ವ್ರತಗಳನ್ನು ಧರಿಸುವವರಲ್ಲಿ ಶ್ರೇಷ್ಠರಾದವರು—ತೀರ್ಥಂಕರ ಮೊದಲಾದವರು—(ವಿದುಃ) ಅನ್ನುತ್ತಾರೆ

ಅರ್ಥ—ದಿಕ್ಕುಗಳ ಯಾವ ಮರ್ಯಾದೆಯನ್ನು ಮಾಡಲಾಗಿರುವುದೋ ಅದರ ಒಳಗೆ ಕಾರಣವಿಲ್ಲದೆ ಮನ, ವಚನ, ಕಾಯಗಳ ಯೋಗದಿಂದ ಸಂಭವಿಸುವ ಪಾಪವನ್ನು ತ್ಯಾಗಮಾಡುವುದಕ್ಕೆ ಅನರ್ಥದಂಡವ್ರತವೆಂದು ತೀರ್ಥಂಕರ, ಗಣಧರ ಮೊದಲಾದವರು ಹೇಳಿದ್ದಾರೆ [ಇಲ್ಲಿ ಪಾಪಯೋಗದ ವಿಶೇಷಣವಾದ 'ಅಪಾರ್ಥಕ' (ಪ್ರಯೋಜನವಿಲ್ಲದ) ಎಂಬ ಪದದ ವಿಷಯದಲ್ಲಿ ಸ್ವಲ್ಪ ಗಮನವೀಯಬೇಕು ಮನ-ವಚನ-ಕಾಯಗಳ ಪಾಪಪ್ರವೃತ್ತಿಯು ಸ್ಥೂಲತ್ಯಾಗಕ್ಕೆ ಅನುರೂಪವಾಗಿದ್ದು, ಯಾವುದಾದರೂ ತನ್ನ ಉಪಯುಕ್ತ ಕಾರ್ಯಕ್ಕೆ ಆಗಿದ್ದರೆ ಅದಕ್ಕೆ ಯಾವ ಅಡ್ಡಿಯನ್ನೂ ಈ ವ್ರತವು ಹಾಕುವದಿಲ್ಲ ಅಂದ ಪಾಪಪ್ರವೃತ್ತಿಯನ್ನೂ ಸಹ ಗ್ರಹಿಸುವುದು ನಿರರ್ಥಕವೆನಿಸುತ್ತದೆ ಇನ್ನು ಯಾವ ಪ್ರಯೋಜನವೂ ಇಲ್ಲದೆ ಕೇವಲ ಪಾಪವನ್ನೇ ತರುವಂಥ ಪ್ರವೃತ್ತಿಯು ಇರಕೂಡದು ಪಾಪಯೋಗದ ಈ 'ಅಪಾರ್ಥಕ' ಎಂಬ ವಿಶೇಷಣವು ಅನರ್ಥದಂಡದ ಎಲ್ಲ ಭೇದಗಳಿಗೂ ಅನ್ವಯಿಸುತ್ತದೆ ಅವರ ಉಲ್ಲೇಖವನ್ನು ಮುಂದಿನ ಸೂತ್ರದಲ್ಲಿ ಮಾಡಿದೆ ಸ ಧ]

ವಿಶೇಷಾರ್ಥ—ಮರ್ಯಾದೆಯನ್ನು ಮಾಡಿದ ಮೇಲೆ, ತಿರುತಿರುಗಿ ಅದರಿಂದ ತನಗೆ ಪ್ರಯೋಜನ-ವಿಲ್ಲದಿದ್ದರೂ ಪಾಪದ ಬಂಧವಾಗಿ, ದುಃಖ ಭೋಗಿಸಬೇಕಾಗುವಂಥ ಕಾರ್ಯವನ್ನು ಮಾಡುತ್ತ ಇರುವುದು ಅನರ್ಥದಂಡವೆನಿಸುತ್ತದೆ ಇದನ್ನು ತ್ಯಾಗಮಾಡುವುದು ಯೋಗ್ಯವಾಗಿದೆ ಯಾಕಂದರೆ ಯಾವ ಕೆಲಸದಿಂದ ತನ್ನ ಯಾವ ವಿಷಯೋಪಭೋಗದ ಕಾರ್ಯವು ಸಾಧಿಸುವದಿಲ್ಲವೋ, ಏನೂ ಲಾಭವೂ ಆಗುವದಿಲ್ಲವೋ, ಕೀರ್ತಿಯೂ

---

[1] ಆಯತವರ್ಮನ ಕಂದ ಹೀಗೆ—
ಪರಿಮಾಣಿಸಿ ಪಾಪೆಸೆಗಳೊಳಿರಡನೆಯ ಸುಶೀಲಮಯ್ದನರ್ಥಕಮಂ ತಾಂ ।
ದುರಿತ ಸಹಿತಂಗಳಂ ಸಂಹರಿಸುಗುವಿದನರ್ಥದಂಡವಿರತಿಯನಿಯಮಂ ॥

ಬೆಳೆಯುವದಿಲ್ಲವೋ, ಧರ್ಮಸಾಧನೆಯೂ ಆಗುವದಿಲ್ಲವೋ—ತಿರುಗಿ ಪಾಪದ ಬಂಧವೇ ಆಗುತ್ತದೆಯೋ ಅಂಥ ಕಾರ್ಯವನ್ನು ಮಾಡದಿರುವುದು ಅನರ್ಥದಂಡತ್ಯಾಗವೆನಿಸುತ್ತದೆ ಇದನ್ನು ಆಚರಿಸದಿದ್ದರೆ ಕಾರಣವಿಲ್ಲದೆ ದುರ್ಗತಿಗೆ ಹೋಗಿ ದುಃಖವನ್ನು ಭೋಗಿಸಬೇಕಾಗುತ್ತದೆ.

ದುರಿತದೊಳಾರ್ತು ಕೂರ್ತೆನಗಿ ದುರ್ಮತಮಂ ಪಿಡಿದುರ್ಕಿ ನೊಕ್ಕಿನಿ-
ಷ್ಠುರನರಕಾಬ್ಧಿಯೊಳ್ ಕೆಡೆದು ದುಃಖಮನುಣ್ಬವರುರ್ವಿಯೊಳ್ ಪಲರ್ ।
ನಿರುಪಮಮಪ್ಪ ಜೈನಪದಸೇವನೆಯಿಂ ಸುರಲೋಕಕೆಯ್ದುವರ್
ಧರೆಯೊಳಪೂರ್ವಸುಜ್ಞರಿ ವಿಚಾರಿಸೆ ದುಷ್ಷಮಕಾಲದೇಳ್ಗೆಯೊಳ್ ॥

—ನಯಸೇನ—ಧರ್ಮಾಮೃತ—೧೪-೧೫೨

ಈ ಸೂತ್ರದಲ್ಲಿ ಅನರ್ಥದಂಡವ್ರತದ ಪ್ರಕಾರಗಳನ್ನು ಹೇಳುತ್ತಾರೆ—

ಪಾಪೋಪದೇಶಹಿಂಸಾದಾನಾಪಧ್ಯಾನದುಃಶ್ರುತೀಃ ಪಂಚ ।
ಪ್ರಾಹುಃ ಪ್ರಮಾದಚರ್ಯಾಮನರ್ಥದಂಡಾನದಂಡಧರಾಃ ॥ ೭೫ ॥[1]

ಅನ್ವಯಾರ್ಥ—(ಅದಂಡಧರಾಃ) ಮನ-ವಚನ-ಕಾಯಗಳ ಅಶುಭ ವ್ಯಾಪಾರವನ್ನು ಧರಿಸದಂಥ ಗಣಧರರೇ ಮೊದಲಾದ ದೇವರು (ಪಾಪೋಪದೇಶ) ಪಾಪಕರವಾದುದನ್ನು ಉಪದೇಶಿಸುವುದು, (ಹಿಂಸಾದಾನ) ಹಿಂಸೆಯು ಸಂಭವಿಸುವಂಥ ವಸ್ತುಗಳನ್ನು ದಾನಕೊಡುವುದು, (ಅಪಧ್ಯಾನ) ಕೆಟ್ಟ ವಿಚಾರವನ್ನು ಮಾಡುವುದು, (ದುಃಶ್ರುತಿ) ಸುಳ್ಳು ಶಾಸ್ತ್ರಗಳನ್ನು ಕೇಳುವುದು, (ಪ್ರಮಾದಚರ್ಯಾ) ರಾಗದ್ವೇಷಗಳಿಂದ ಕೂಡಿ ನಡೆಯುವುದು—ಇವು—(ಪಂಚ) ಐದು (ಅನರ್ಥ ದಂಡಾನ್) ಅನರ್ಥ ದಂಡವ್ರತದ—ಭೇದಗಳೆಂದು—(ಪ್ರಾಹುಃ) ಹೇಳುತ್ತಾರೆ.

ಅರ್ಥ—ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯಾ—ಹೀಗೆ ಐದು ಅನರ್ಥದಂಡದ ಭೇದಗಳೆಂದು ಗಣಧರ ಮೊದಲಾದವರು ಹೇಳಿದ್ದಾರೆ [ಇವುಗಳಿಂದ ವಿರಕ್ತನಾಗುವುದೇ ಮೊದಲಿನ ಸೂತ್ರದಲ್ಲಿ ಹೇಳಿದ ಪ್ರಕಾರ ವ್ರತವೆನಿಸುತ್ತದೆ ಸ ಧ]

ವಿಶೇಷಾರ್ಥ—ಮನ, ವಚನ, ಕಾಯಗಳ ಅಶುಭ ಪ್ರವೃತ್ತಿಗಳಿಗೆ ದಂಡವೆನ್ನುವರು ಈ ಅಶುಭ ಪ್ರವೃತ್ತಿಗಳೇ ದುರ್ಗತಿಗೆ ಒಯ್ದು, ಅನೇಕ ಪ್ರಕಾರದ ದುಃಖಗಳನ್ನು ಒದಗಿಸುತ್ತವೆ ಇಂಥ ಅಶುಭ ಪ್ರವೃತ್ತಿಗಳು ಗಣಧರ ದೇವರಿಗೆ ಇರುವದಿಲ್ಲ. ಅಂತಲೇ ಅವರಿಗೆ 'ಅದಂಡಧರ' ಎಂಬ ಸಂಜ್ಞೆಯು ಇದೆ

ಲೋಕಮಿದೆಲ್ಲವುಂ ಸ್ಮರಪಿಶಾಚವಿಜೃಂಭಿತಮಿಂದ್ರಜಾಲ ವಿ-
ದ್ಯಾಕಥನಂ ಯಮಾಸುರನ ದೀಪನದಾಹುತಿಯಲ್ಲಿ ಪಕ್ಷದಿಂ ।
ಶೋಕಮನಾರ್ಗೆ ಮಾಳ್ಪ ಸೊಲಿದಿರ್ಪನದಾರ್ಗೆ ಕನಲ್ವನಾರ್ಗನಲ್
ಮೂಕತೆಯುಂ ದಯೋಕ್ತಿಯೆರಡೇ ಹಿತಮಿನ್ನಪರಾಜಿತೇಶ್ವರಾ ॥

—ರತ್ನಾಕರ—ಅಪರಾಜಿತೇಶ್ವರ ಶತಕ—೫೫

---

[1] ಆಯುತವರ್ಮನ ವಚನ ಹೀಗೆ—

ಎಲ್ಲಾ ಕಾಲಮುಮಿನಿತಿನಿತು ಭೂಮಿಪ್ರಮಾಣದಿಂದತ್ತ ಪೋಗೆನೆಂದು ಪತ್ತುದೆಸೆಗಳುಂ ಪ್ರಮಾಣಿಸಿದ ಮೇರೆಯಿಂದೊಳ. ಗೆರಡನೆಯಣುಬ್ರತಿ ತನಗೆ ಬಾರ್ತೆಯಲ್ಲದುದಂ ಪಾಪಹೇತುಗಳಪ್ಪುದನಯನರ್ಥದಂಡಮುಮಂ ಪರಿಹರಿಸಿ ನಡೆದನಪಾವುವೆಂದೊಡೆ ಪಾಪೋಪದೇಶ, ಹಿಂಸಾದಾನಮಪಧ್ಯಾನಂ ದುಶ್ರುತಂ ಪ್ರಮಾದಚರ್ಯೆಯೆಂದಿಕ್ಕುಂ

ಇನ್ನು ಆಚಾರ್ಯರು ಪಾಪೋಪದೇಶದ ಸ್ವರೂಪವನ್ನು ವಿವರಿಸುವದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

ತಿರ್ಯಕ್‌ಕ್ಲೇಶವಣಿಜ್ಯಾಹಿಂಸಾರಂಭಪ್ರಲಂಭನಾದೀನಾಮ್ ।
ಪ್ರಸವಃ ಕಥಾಪ್ರಸಂಗಃ[1] ಸ್ಮರ್ತವ್ಯಃ ಪಾಪ ಉಪದೇಶಃ ॥ ೭೬ ॥[2]

ಅನ್ವಯಾರ್ಥ—(ತಿರ್ಯಕ್‌ಕ್ಲೇಶ) ತಿರ್ಯಂಚ ಪ್ರಾಣಿಗಳಿಗೆ ದುಃಖವನ್ನು ಕೊಡುವ (ವಾಣಿಜ್ಯ) ವ್ಯಾಪಾರ (ಹಿಂಸಾ) ಹಿಂಸೆ (ಆರಂಭ) ಕೃಷಿಯೇ ಮೊದಲಾದ ಆರಂಭಕ್ರಿಯೆ (ಪ್ರಲಂಭನ) ಮೋಸ (ಆದೀನಾಮ್) ಮೊದಲಾದವುಗಳಿಗೆ ಸಂಬಂಧಿಸಿದ (ಕಥಾಪ್ರಸಂಗಪ್ರಸವಃ) ಕಥೆಯ ಪ್ರಸಂಗಗಳನ್ನು ಉತ್ಪನ್ನಮಾಡುವಂಥದು (ಪಾಪಃ ಉಪದೇಶಃ) ಪಾಪದ ಉಪದೇಶವಾಗಿದೆ —ಎಂದು–(ಸ್ಮರ್ತವ್ಯಃ) ತಿಳಿಯಬೇಕು

ಅರ್ಥ—ಪಶುಪಕ್ಷಿಗಳಿಗೆ ದುಃಖ ಉತ್ಪನ್ನವಾಗುವಂಥ ಸಂಗತಿಯನ್ನು ಉಪದೇಶಿಸುವುದು, ಅವುಗಳ ವ್ಯಾಪಾರ ಮಾಡುವ ಕ್ರಮವನ್ನು ಬೋಧಿಸುವುದು, ಯಾವುದರಿಂದ ಹಿಂಸೆ ಹಾಗೂ ಆರಂಭವು ಉತ್ಪನ್ನವಾಗುವುದೋ ಅಂಥದನ್ನು ವಿವರಿಸಿ ಹೇಳುವುದು, ಕಪಟ ಮತ್ತು ಮೋಸಗಳನ್ನು ಕಲಿಸುವುದು—ಇವೆಲ್ಲವುಗಳಿಗೆ ಪಾಪೋಪದೇಶ-ವೆಂದು ಹೇಳಲಾಗುವುದು

[ಪ್ರಥಮಾನುಯೋಗವೇ ಮೊದಲಾದ ಶಾಸ್ತ್ರಗಳಲ್ಲಿ ಐತಿಹಾಸಿಕ ಹಾಗೂ ಚರಿತ್ರಾತ್ಮಕ ಅನೇಕ ಸತ್ಯ ಕಥೆಗಳು ಬಂದಿವೆ ಅಂಥವುಗಳನ್ನು ಉಪದೇಶಿಸಲಿಕ್ಕೆ ಇದರಿಂದ ಯಾವ ಪ್ರತಿಬಂಧವೂ ಉಂಟಾಗುವದಿಲ್ಲ ಆದರೆ (೧) ಇಂಥ ದೇಶದಲ್ಲಿ ದಾಸ ಹಾಗೂ ದಾಸಿಯರು ಬಹಳ ಕಡಿಮೆ ಬೆಲೆಗೆ ದೊರೆಯುತ್ತಾರೆ. ಅವರನ್ನು ಕೊಂಡು ಇಂದದೊಂದು ದೇಶಕ್ಕೆ ಒಯ್ದು ಮಾರಿದರೆ ಬಹಳ ಲಾಭವು ದೊರೆಯುತ್ತದೆ—ಇಂಥ ಅರ್ಥದ ಕಥೆಗಳನ್ನು ಹೇಳುವುದು 'ಕ್ಲೇಶ ವಾಣಿಜ್ಯ'ವೆಂಬ ಪಾಪೋಪದೇಶವೆನಿಸುತ್ತದೆ (೨) ಇದೇ ಪ್ರಕಾರ, ಇಂಥ ಒಂದು ಸ್ಥಳದಲ್ಲಿ ದನ ಕರುಗಳು ಕಡಿಮೆ ಕ್ರಯಕ್ಕೆ ದೊರೆಯುತ್ತವೆ ಅವುಗಳನ್ನು ಇಂಥಲ್ಲಿ ಒಯ್ದು ಮಾರುವುದರಿಂದ ಬಹಳ ಲಾಭವು ಲಭಿಸುತ್ತದೆ ಇಂಥ ಸಂಗತಿಯನ್ನು ವಿವರಿಸುವುದು ತಿರ್ಯಕ್ ವಾಣಿಜ್ಯಾತ್ಮಕ ಪಾಪೋಪದೇಶವೆನಿಸುತ್ತದೆ (೩) ಬೇಟೆಗಾರರು, ಬಲೆಗಾರರು ಇಂಥವರ ಮುಂದೆ ಇಂಥ ಅಡವಿ, ಅಂಥ ಜಲಾಶಯಗಳಲ್ಲಿ ಪಶು ಪಕ್ಷಿ–ಮೀನುಗಳು ಬಹಳಷ್ಟು ಇವೆಯೆಂದು ಹೇಳುವುದು ಹಿಂಸಾಕಥೆಯ ರೂಪದಲ್ಲಿ ಪಾಪೋಪದೇಶವೆಂಬ ಹೆಸರಿನ ಅನರ್ಥದಂಡವಾಗಿದೆ ಸ ಥ]

ವಿಶೇಷಾರ್ಥ—ತಿರ್ಯಂಚ ಪ್ರಾಣಿಗಳನ್ನು ಕೊಲ್ಲುವ ಉಪದೇಶ ಮಾಡುವುದು. ಇಂಥ ಪಶುಗಳಿಗೆ ಇಂಥಲ್ಲಿ ಹೊಡೆಯಿರಿ ಅದಕ್ಕೆ ಇಂಥಲ್ಲಿ ಬರೆಕೊಡಿರಿ. ಅದನ್ನು ದೊಡ್ಡಿಯಲ್ಲಿ ದಬ್ಬಿಬಿಡಿರಿ ಅದರ ಮರ್ಮಸ್ಥಳಕ್ಕೆ ಪೆಟ್ಟು ಹಾಕಿರಿ ಅದರ ಮೇಲೆ ಹೆಚ್ಚು ಭಾರ ಹೇರಿರಿ ಅದರ ಕಿವಿ ಮೂಗುಗಳನ್ನು ಕೊಯ್ಯಿರಿ ಆ ಪಕ್ಷಿಯನ್ನು ಹಿಡಿದು ಬಲೆಯಲ್ಲಿ ಹಾಕಿರಿ—ಇವೇ ಮೊದಲಾದ ಸಂಗತಿಗಳನ್ನು ಉಪದೇಶಿಸುವುದು ತಿರ್ಯಂಚ ಕ್ಲೇಶವೆಂಬ ಪಾಪೋಪದೇಶವಾಗಿದೆ

ಅನೇಕ ವಸ್ತುಗಳಲ್ಲಿ ಪಾಪವು ಉತ್ಪನ್ನವಾಗುವಂಥ ವ್ಯಾಪಾರವನ್ನು ಮಾಡಲಿಕ್ಕೆ ಬೋಧಿಸುವುದು, ಯಾವ ವ್ಯಾಪಾರಮಾಡುವುದರಿಂದ ಷಟ್‌ಕಾಯಜೀವದ ಹಿಂಸೆಯಾಗುವುದೋ ಅಂಥದನ್ನು ಉಪದೇಶಿಸುವುದಕ್ಕೆ ಹಿಂಸೋಪದೇಶವೆನ್ನುವರು.

---

1 'ಕಥಾ–ಪ್ರಸಂಗ–ಪ್ರಸವಃ' ಎಂದು ಪಾಠಾಂತರವಿದೆ

2 ಆಯತವರ್ಮನು ಹೇಳುವುದು ಹೀಗಿದೆ

ತಿರ್ಯಗ್ವಾಣಿಜ್ಯಂ, ಕ್ಲೇಶವಾಣಿಜ್ಯಂ, ಹಿಂಸೋಪದೇಶಮಾರಂಭಕೋಪದೇಶಮೆಂದು ಪಾಪೋಪದೇಶಂ ನಾಲ್ಕುಕ್ಕುಂ. ಅಲ್ಲಿ ಕರಿ ತುರಗ ಗೋಮಹಿಷ್ಯಾದಿ ತಿರ್ಯಗ್ಜಾತಿಗಳನೊಂದು ನಾಡವಂ ಮತ್ತೊಂದು ನಾಡಿಂಗೊಯ್ದು ಮಾರುವುದುಂ, ಪೆರರ್ಗ-ಪದೇಶಂಗೆಯ್ವುದುಂ, ತಿರ್ಯಗ್ವಾಣಿಜ್ಯಮಾಯುದದೊಳ್ ದಾಸಿ ದಾಸರಂ ಮಾರಿಯಾಡುವುದು ಕ್ಲೇಶವಾಣಿಜ್ಯಂ ಮಿಂಗುಲಿ, ಬೇಂಟೆಕಾರರ್ಮೊದಲಾಗೊಡೆಯವರ್ಗೆ ಪುಲ್ಲೆ ಮೊಲಂ ಪಂದಿಪಕ್ಷಿ ಜಾತಿ ಮೀಂ ಮೊದಲಾಗೊಡೆಯ ಜೀವಂಗಳುಮಿಂತಪ್ಪೆಡೆ-ಯೊಳೊಳವೆಂದು ಪೇಳ್ವುದುಂ, ಪೆರರ ಬಗೆಗಳಂ ಸೂಳೆ ಬಂಟರನಿಂತಪ್ಪೆಗಳೋರ್ವಪರೆಂದು ಪೇಳ್ವುದುಂ. ಶಸ್ತ್ರವಿದ್ಯೆ, ಧನುರ್ವಿದ್ಯೆಯೆಂದಿವಂ ಕಲಿಸುವುದು ಹಿಂಸೋಪದೇಶಂ ಬಿತ್ತುವ, ಉಳುವ, ಪರಗುವ ಪೆರವು ಸಾವದ್ಯ ಬಹಳಂಗಪ್ಪ ವ್ಯವಸಾಯಂಗಳು ವಂಚನೆ ಮೊದಲಾಗೊಡೆಯಕ್ಷುದ್ರಕಂಗಳುಮನುಪದೇಶಂ ಗೆಯ್ವುದಾರಂಭೋಪದೇಶಮಿಂತೀ ನಾಲ್ಕುಂ ಪಾಪೋಪದೇಶಮೆಂಬ ಮೊದಲನರ್ಥದಂಡಂ,

ತೋಟ ಪಟ್ಟಿಗಳನ್ನು ನಿರ್ಮಿಸುವುದು, ಮದುವೆ ಮಾಡುವುದು, ಪಾಪಾರಂಭದ ಉಪದೇಶಮಾಡುವುದು-ಇವೆಲ್ಲವುಗಳಿಗೆ ಆರಂಭೋಪದೇಶವೆನ್ನುವರು

ಕಪಟ ಹಾಗೂ ಮಾಯಾಚಾರಗಳಿಂದ ಜನರನ್ನು ಮೋಸಗೊಳಿಸುವುದು, ಮೋಸಗೊಳಿಸಲಿಕ್ಕೆ ಹೇಳು-ವುದು ಪ್ರಲಂಭನೋಪದೇಶವೆನಿಸುವುದು.

ಅನೇಕ ಪ್ರಕಾರದ ಪಾಪರೂಪದ ಉಪದೇಶದ ಕಥೆಗಳನ್ನು ಹೇಳಿ, ಪಾಪದ ಪ್ರೇರಣೆಯನ್ನು ಮಾಡುವುದು ಪಾಪೋಪದೇಶ ಅನರ್ಥದಂಡವಿದೆ

ಪ್ರಥಮ ಪಾಪೋಪದೇಶವು ನಾಲ್ಕು ಭೇದವು ಅತಿ ತಿರ್ಯಂಚ ವಾಣಿಜ್ಯಾ ।
ಅತಿಕ್ಲೇಶವಾಣಿಜ್ಯವಧಕೋಪದೇಶವು ಸತತ ಆರಂಭೋಪದೇಶ ॥
ತುರುಗಮಹಿಷಪಾದಿ ತಿರ್ಯಂಚ ಜೀವವ ಪರದೇಶಕೊಯ್ದು ಮಾರುವದು ।
ಪರರಿಗೆವುಪದೇಶಮಾಡುತಲಿಪ್ಪುದು ತಿರ್ಯಂಚ ವಾಣಿಜ್ಯದೋಷಾ ॥
ದಾಸಿದಾಸರ ಕ್ರಯವಿಕ್ರಯ ಮಾಳ್ಪುದು ಕ್ಲೇಶವಾಣಿಜ್ಯವಂದೆನಿಕ್ಕುಂ ।
ಆ ಸುರ ಬೇಂಟೆಕಾರರು ಬಲೆಗಾರರು ಲೇಸಾಗಿ ತನ್ನ ಕೇಳಿದರೆ ॥
ಹುಲ್ಲೆಯಾದಿ ಮೃಗ ಜಲಚರ ಪಕ್ಷಿಯು ಎಲ್ಲಿಹವೆಂದು ಕೇಳಿದರು ।
ಬಲ್ಲೆನಿತಪ್ಪಲ್ಲಿಯಿಹವೆಂದು ಪೇಳ್ವುದು ಅಲ್ಲಿಹಗಳರಸಿದರೇ ॥
ಇಂತಪ್ಪೆಡೆಯೊಳಿರ್ದಪವೆಂದು ಪೇಳ್ವುದು ಸಂತತ ಶಸ್ತ್ರಾಭ್ಯಾಸ ।
ಇಂತಿವು ಮೊದಲಾದವನುಪದೇಶಿವುದಂತಿಳಿ ಹಿಂಸೋಪದೇಶ ॥
ಗಿಡವ ಕಡಿದುವುಳುಹುವದು ಹರಗುವದನ್ನು ಒಡನೆ ಬಿತ್ತುವ ತೆರಗಳನು ।
ಎಡೆಯಾಡುವ ಸಚಿತ್ತಗಳಪ್ಪುವ ಬಿಡದೆ ತಾನೀಡಾಡುವದು ॥
ಪರರ ಪೊರಿಸಿ ಮಾಡುವುದು ರಾಗದ್ವೇಷಕಿರದೆ ಕಾರಣವನು ಮಾಳ್ಪ ।
ಹಿರಿದು ವಚನಗಳು ಮೊದಲಾದವನೆಲ್ಲ ನರಿವುದಾರಂಭೋಪದೇಶ ॥
ಪರರ ಗೃಹದ ವ್ಯಾಪಾರೋಪದೇಶವ ಪರರಿಗೆನ್ನೆಯಾದಿಗಳಾ ।
ಪರರಿಗೆ ಮಿಥ್ಯೋಪದೇಶಮಾಳ್ಪುದು ನೆಲಸಿದ ಪಾಪೋಪದೇಶ ॥

—ವಿಜಯಣ್ಣ—ದ್ವಾದಶಾನು ಪ್ರೇಕ್ಷೆ—ಧರ್ಮಾನುಪ್ರೇಕ್ಷೆ—೧೯-೩೭

ಶಾಸ್ತ್ರಂ ಬಂದೊಡೆ ಶಾಂತಿ ಸೈರಣೆ ನಿಗರ್ವಂ ನೀತಿ ಮೆಲ್ಪಾತು ಮು-
ಕ್ತಿಸ್ತ್ರೀಚಿಂತೆ ನಿಜಾತ್ಮಚಿಂತೆ ನಿಲವೇಳ್ಕಂತಲ್ಲದಾ ಶಾಸ್ತ್ರದಿಂ ।
ದುಸ್ತ್ರೀಚಿಂತನೆ ದುರ್ಮುಖಂ ಕಲಹಮುಂ ಗರ್ವಂ ಮನಂಗೊಂಡೊಡಾ
ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾದೀಶ್ವರಾ ॥

ರತ್ನಾಕರ-ರತ್ನಾಕರ ಶತಕ—೭೪

ಈಗ ಹಿಂಸಾದಾನ ಅನರ್ಥದಂಡದ ಸ್ವರೂಪವನ್ನು ವಿವರಿಸುತ್ತಾರೆ—

**ಪರಶುಕೃಪಾಣಖನಿತ್ರಜ್ವಲನಾಯುಧಶೃಂಗಶೃಂಖಲಾದೀನಾಂ ।**
**ವಧಹೇತೂನಾಂ ದಾನಂ ಹಿಂಸಾದಾನಂ ಬ್ರುವಂತಿ ಬುಧಾಃ ॥ ೭೭ ॥**[1]

ಅನ್ವಯಾರ್ಥ—(ಪರಶು) ಕೊಡಲಿ (ಕೃಪಾಣ) ಖಡ್ಗ, ಕತ್ತಿ (ಖನಿತ್ರ) ಗುದ್ದಲಿ (ಜ್ವಲನ) ಬೆಂಕಿ (ಆಯುಧ) ಶಸ್ತ್ರ (ಶೃಂಗ) ಕೋಡು (ಶೃಂಖಲಾ) ಸರಪಳಿ (ಆದೀನಾಂ) ಮೊದಲಾದವುಗಳನ್ನು (ಪಧಹೇತೂನಾಂ)

[1] ಆಯುತವರ್ಮನು ಹೇಳುವದು ಹೀಗೆ—

ಕಂದ ॥ ಬಲೆ ಬಡಿಕೊಡಲಿ ವಿಷಂ ಸಂಕಲೆಯಾಯುಧಮಗ್ನಿಯಾದಿಯಾಗುಳಿದುಟಮುಂ ।
ಕೊಲೆಯೊಳ್ಕೊಟ್ಟಿವನೀವುದು ಸಲೆ ಹಿಂಸಾದಾನವೆಂದು ಮುನಿಪರ್ಪೇಳ್ವರು ॥

ವಚನ—ಮತ್ತಂ ನಾಯಿ ಬೆಕ್ಕು ಕೋಳಿ ಮುಂಗುಲಿ ಪಂದಿ ಕೊಡಗಂಗಳೆಂದಿವದಾಳುದುಂ ಪೆರರ್ಗೆ ಕುಡುವುದುಂ ಹಿಂಸಾಗಂಡಮೆಂಬೆರಡನೆಯನರ್ಥ ದಂಡಂ

ದುಃಶ್ರುತಿ ಅನರ್ಥದಂಡದ ಸ್ವರೂಪವನ್ನು ಹೇಳುವದಕ್ಕಾಗಿ ಸೂತ್ರವನ್ನು ಹೇಳುತ್ತಾರೆ—

ಆರಂಭಸಂಗಸಾಹಸಮಿಥ್ಯಾತ್ವದ್ವೇಷರಾಗಮದಮದನೈಃ ।
ಚೇತಃ ಕಲುಷಯತಾಂ ಶ್ರುತಿರವಧೀನಾಂ ದುಃಶ್ರುತಿರ್ಭವತಿ ॥ ೭೯ ॥[1]

ಅನ್ವಯಾರ್ಥ—(ಆರಂಭ) ಒಕ್ಕಲತನವೇ ಮೊದಲಾದ ಕರ್ಮ (ಸಂಗ) ಧನಧಾನ್ಯಾದಿಗಳ ಇಚ್ಛೆ—ಪರಿಗ್ರಹ-(ಸಾಹಸ) ಶಕ್ತಿ ಮತ್ತು ನೀತಿಗಳ ವಿಚಾರಮಾಡದೆ ಒಮ್ಮೆಲೇ ಮಾಡುವ ಅಸತ್ಕಾರ್ಯ (ಮಿಥ್ಯಾತ್ವ) ಏಕಾಂತಾದಿ ರೂಪದಲ್ಲಿರುವ ಅಸತ್ಯ ಶ್ರದ್ಧೆ (ದ್ವೇಷ) ವೈರ (ರಾಗ) ಪ್ರೀತಿ (ಮದ) ಸೊಕ್ಕು (ಮದನೈಃ) ಕಾಮವಿಕಾರ ಇವುಗಳಿಂದ (ಚೇತಃ) ಅಂತಃಕರಣ (ಕಲುಷಯತಾಂ) ಕಲುಷಿತಗೊಳಿಸುವಂಥ (ಅವಧೀನಾಂ) ಶಾಸ್ತ್ರಗಳ (ಶ್ರುತಿಃ) ಕೇಳುವುದು (ದುಃಶ್ರುತಿಃ) ದುಃಶ್ರುತಿ ಎಂಬ ಹೆಸರಿನ ಅನರ್ಥದಂಡವು (ಭವತಿ) ಆಗುತ್ತದೆ

ಅರ್ಥ—ಆರಂಭವೆಂದರೆ ಅಸಿ, ಮಸಿ, ಕೃಷಿ, ವಿದ್ಯಾ, ವಾಣಿಜ್ಯ ಮತ್ತು ಶಿಲ್ಪ, ಸಂಗವೆಂದರೆ ಧನಧಾನ್ಯಾದಿ ಪರಿಗ್ರಹ, ಸಾಹಸವೆಂದರೆ ಆಶ್ಚರ್ಯವನ್ನು ಉತ್ಪನ್ನಮಾಡುವಂಥ ಶೌರ್ಯದ ಕೆಲಸಗಳು, ಮಿಥ್ಯಾತ್ವವೆಂದರೆ ಬ್ರಹ್ಮಾದ್ವೈತ, ಜ್ಞಾನಾದ್ವೈತ, ಕ್ಷಣಿಕ, ಯಾಜ್ಞಿಕ ಮೊದಲಾದ ವಿರುದ್ಧಾರ್ಥಗಳನ್ನು ಪ್ರತಿಪಾದಿಸುವ ಶಾಸ್ತ್ರಗಳು, ರಾಗವೆಂದರೆ ಆಸಕ್ತಿ, ದ್ವೇಷವೆಂದರೆ ವೈರ ಭಾವ, ಎಂಟು ಮದಗಳು, ಮದನವೆಂದರೆ ಕಾಮವೇದನೆಯಿಂದ ಉತ್ಪನ್ನ-ವಾಗುವ ವಿಕಾರ ಇವುಗಳ ಯೋಗದಿಂದ ಕಲುಷಿತಗೊಳಿಸುವಂಥ ಅವಧಿ ಎಂದರೆ ಶಾಸ್ತ್ರಗಳನ್ನು ಕೇಳುವುದು ದುಃಶ್ರುತಿ ಎಂಬ ಅನರ್ಥದಂಡವೆನಿಸಿಕೊಳ್ಳುತ್ತದೆ

[ಯಾವ ಶಾಸ್ತ್ರವು ವ್ಯರ್ಥವಾಗಿ ಆರಂಭ ಪರಿಗ್ರಹ ಮೊದಲಾದವುಗಳನ್ನು ಪ್ರೋತ್ತೇಜನಗೊಳಿಸಿ ಚಿತ್ತವನ್ನು ಕಲುಷಿತಮಾಡುವುದೋ ಅಂಥ ಶಾಸ್ತ್ರವನ್ನು ಕೇಳುವುದು ನಿರರ್ಥಕವಾಗಿದೆ, ಯಾಕೆಂದರೆ ಮನಸ್ಸು ಮಲಿನವಾಗುವು-ದರಿಂದ ಪ್ರಕಟರೂಪದಿಂದ ಯಾವ ಹಿಂಸಾದಿ ಕಾರ್ಯಗಳನು ಮಾಡದಿದ್ದರೂ ಸಹ ಸ್ವತಃ ಅದು ಪಾಪಬಂಧಕ್ಕೆ ಕಾರಣವಾಗಿದೆ ಅದರಿಂದ ಇಂಥ ಶಾಸ್ತ್ರಗಳನ್ನೂ ಕೇಳುವುದು ಮತ್ತು ಓದುವುದು ಇವೆರಡನ್ನೂ ಅನರ್ಥದಂಡದಲ್ಲಿ ಸಮಾವೇಶಗೊಳಿಸಲಾಗಿದೆ ಅನರ್ಥದಂಡ ವ್ರತವನ್ನು ಧಾರಣಮಾಡಿದವನು ಇಂಥ ಶಾಸ್ತ್ರಗಳನ್ನು ಕೇಳುವುದೇ ಮೊದಲಾದವುಗಳಿಂದ ದೂರವಿರಬೇಕು ಆದರೆ ಸಮರ್ಥನೂ ಗುಣದೋಷಗಳ ವಿವೇಚಕ ಶಕ್ತಿಯುಳ್ಳವನೂ ಪರೀಕ್ಷಕನಾದ ಪುರುಷನು ಅಂಥ ಗ್ರಂಥಗಳ ಹೃದಯವನ್ನು ತಿಳಿದುಕೊಳ್ಳುವದಕ್ಕಾಗಿಯೂ ಎರಡನೆಯವರಿಗೆ ಅವುಗಳ ಪರಿಚಯಮಾಡಿಕೊಡುವದಕ್ಕಾಗಿಯೂ ಓದಲಿಕ್ಕೆ ಯಾವ ಅಡ್ಡಿಯೂ ಇಲ್ಲ ಅವನು ಈ ವ್ರತಧಾರಕನಿದ್ದರೂ ಅವನು ದೋಷಕ್ಕೆ ಪಕ್ಕಾಗನು ಅವನಲ್ಲಿ ತನ್ನ ಚಿತ್ತವು ಮಲಿನಗೊಳ್ಳದಂತೆ ಕಾಯ್ದುಕೊಳ್ಳುವ ಸಾಮರ್ಥ್ಯವು ಇರುತ್ತದೆ ಸ. ಥ ]

ವಿಶೇಷಾರ್ಥ—ಮಿಥ್ಯಾತ್ವ ಮತ್ತು ರಾಗದ್ವೇಷಗಳನ್ನು ಉತ್ಪನ್ನಮಾಡುವಂಥ, ಪದಾರ್ಥಗಳ ವಿಪರೀತ ಸ್ವರೂಪವನ್ನು ಪ್ರದರ್ಶಿಸುವಂಥ ಶಾಸ್ತ್ರ ಹಾಗೂ ವಿಕಥೆಗಳು ಕೇಳುವುದು ದುಃಶ್ರುತಿ ಅನರ್ಥದಂಡವಾಗಿದೆ ಅದರಂತೆ ಶೃಂಗಾರ, ವೀರ ಹಾಸ್ಯಗಳನ್ನು ಪ್ರರೂಪಣಮಾಡುವ ಮತ್ತು ಜಾರಣ, ಮಾರಣ, ಉಚ್ಚಾಟಣ ಮತ್ತು ವಶೀಕರಣ ಮಾಡುವಂಥ ಕಾಮೋತ್ಪಾದಕ ಶಾಸ್ತ್ರಗಳನ್ನು ಕೇಳುವುದು, ಅಡವಿಯಲ್ಲಿರುವ ಸರ್ಪಾದಿಗಳ, ಭೂತಪ್ರೇತಗಳ ಮತ್ತು ರಸಾಕರ್ಮ ಇಂದ್ರಜಾಲ ರಸಾಯನ ಮತ್ತು ಮಾಯಾಕರ್ಮಗಳನ್ನು ವಿವರಿಸುವಂಥ, ಅಲ್ಲದೆ ಯಜ್ಞಯಾಗಾದಿ ಹಿಂಸೆಯನ್ನು ಪ್ರರೂಪಿಸುವ ದುಷ್ಟಶಾಸ್ತ್ರ, ದುಷ್ಟಕಥೆ, ದುಷ್ಟಚೇಷ್ಟೆ, ದುಷ್ಟರಾಗ, ದುಷ್ಟಕ್ರಿಯಾ ಮತ್ತು ದುಷ್ಟಕರ್ಮ ಇವುಗಳನ್ನು ಕೇಳುವುದು—ಇವೆಲ್ಲವುಗಳಿಗೂ ದುಃಶ್ರುತಿ ಅನರ್ಥದಂಡವೆನ್ನುವರು

---

1 ಆಯತವರ್ಮನ ವಿಚಾರ ಹೀಗಿದೆ

ವಚನ—ಕೊಲೆ, ಕಳವ, ಬ್ರಹ್ಮಡಂಬಡಿಂಬಹಾಸ್ಯ, ಕಾಮಕ್ರೋಧ ಮಾಯ ಮದ ಮಿಥ್ಯಾತ್ವಮೆಂದಿವು ಮೊದಲಾಗೊಡೆಯ ದೋಷಂಗಳೊಳ್ ಕೂಡಿದ ದುಷ್ಟ ಕಥೆಗಳುಮಂ, ಪೆರರಿರಿದ, ಮೆರೆದ, ಬಂಚಿಸಿದ, ಬಳಸಿದ, ಸುತ್ತಿದ, ಕೊಂದ, ಗೆಲ್ದ, ಪಾಡಿಸಿಂದಾಡಿಸಿದ, ಸೋಲದ, ಗೆಲ್ಲದ, ಪಡೆಯ ಮಾತುಗಳುಮಂ ರಾಗಿಸಿ ತಾಂ ಪೆರರ್ಗೆ ಪೇಳ್ವುದು ಮೊಲ್ದು ಕೇಳ್ವುದುಂ ದುಶ್ರುತಿಯೆಂಬ ನಾಲ್ಕನೆಯನರ್ಥದಂಡಂ.

ಪರಮನಗಲ್ಚುವಾದಿಹದೊಳಗ್ಗನೊಡರ್ಚುವ ಜಾರಚೋರವೀ-
ರರ ಕಥೆವೇಳ್ದಿಂವಮರ್ದ ಕರ್ವಿನ ಕೊಲೆಸೆ ಕೈಯೊಳಿರ್ದೊಡಂ ।
ಕರಮನುರಾಗದಿಂ ನವಿದೊಡಂ ಸುಖಮಂ ತನಗೀವ ದೇವತಾ
ಪರಮನೆ ಸಂದ ಸತ್ಕೃತಿಗಳಂ ಸಮೆದಂಗರಿದುಂಟೆ ಧಾತ್ರಿಯೊಳ್ ॥

—ಮಧುರ–ಧರ್ಮನಾಥ ಪುರಾಣಂ–೧–೩೨

ಇನ್ನು ಪ್ರಮಾದಚರ್ಯಾ ಅನರ್ಥದಂಡ ವ್ರತದ ಸ್ವರೂಪವನ್ನು ಹೇಳಲಾಗುತ್ತದೆ—

ಕ್ಷಿತಿಸಲಿಲದಹನಪವನಾರಂಭಂ ವಿಫಲಂ ವನಸ್ಪತಿಚ್ಛೇದನಮ್ ।
ಸರಣಂ ಸಾರಣಮಪಿ ಚ ಪ್ರಮಾದಚರ್ಯಾಂ ಪ್ರಭಾಷಂತೆ ॥ ೮೦ ॥[1]

ಅನ್ವಯಾರ್ಥ—(ವಿಫಲಂ) ಉಪಯುಕ್ತವಲ್ಲದ ಅಥವಾ ವಿನಾಕಾರಣ (ಕ್ಷಿತಿಸಲಿಲದಹನಪವನಾರಂಭಂ) ನೀರು, ಬೆಂಕಿ ಮತ್ತು ಗಾಳಿ ಇವುಗಳಲ್ಲಿ ಆರಂಭ ಕ್ರಿಯೆಯನ್ನು ನಡೆಯಿಸುವುದು (ವನಸ್ಪತಿಚ್ಛೇದಂ) ಗಿಡಗಳನ್ನು ಕಡಿಯುವುದು (ಸರಣಂ) ಪ್ರವಾಸಮಾಡುವುದು (ಚ) ಮತ್ತು (ಸಾರಣಂ ಅಪಿ) ಪ್ರವಾಸಮಾಡಿಸುವುದು—ಇವುಗಳಿಗೆ (ಪ್ರಮಾದಚರ್ಯಾ) ಪ್ರಮಾದಚರ್ಯಾ (ಪ್ರಭಾಷಂತೆ) ಎಂದು—ಹೇಳುವರು

ಅರ್ಥ—ನೆಲವನ್ನು ಅಗಿಯುವುದು, ಕಲ್ಲನ್ನು ಒಡೆಯುವುದು, ನೀರನ್ನು ಹೊಡೆಯುವುದು, ನೀರಿನಲ್ಲಿ ಮುಳುಗಿ ಕ್ರಿಯೆಯನ್ನು ಮಾಡುವುದು, ಉಪಯೋಗವಿಲ್ಲದೆ ಅಗ್ನಿಯನ್ನು ಉರಿಸುವುದು, ಅದನ್ನು ಹೆಚ್ಚು ಕಡಿಮೆ ಮಾಡುವುದು, ಗಾಳಿಯನ್ನು ಹಾಕಿ ಪ್ರಜ್ವಲಿತಗೊಳಿಸುವುದು, ಪ್ರಯೋಜನವಿಲ್ಲದೆ ಗಿಡಗಳನ್ನು ಕಡಿಯುವುದು, ಪ್ರಯೋಜನವಿಲ್ಲದೆ ಪ್ರವಾಸಮಾಡುವುದು, ಮಾಡಿಸುವುದು—ಇವೇ ಮೊದಲಾದ ಕ್ರಿಯೆಗಳನ್ನು ಮಾಡುವುದಕ್ಕೆ ಪ್ರಮಾದಚರ್ಯಾ ಅನರ್ಥದಂಡವೆಂದು ಹೇಳುವರು

[ಗೃಹಸ್ಥಾಶ್ರಮದ ಅವಶ್ಯಕತೆಗಳನ್ನು ಪೂರ್ಣಗೊಳಿಸುವದಕ್ಕಾಗಿ ಮಾಡಬೇಕಾದ ಒಕ್ಕಲತನ ಗಿಡಗಳನ್ನೂ ಕಡಿಯುವುದು, ಪ್ರವಾಸ ಮೊದಲಾದವುಗಳಿಗೆ ಈ ವ್ರತವು ಅಡ್ಡಿಯನ್ನು ಒಡ್ಡುವದಿಲ್ಲ. ಅದಕ್ಕಾಗಿಯೇ 'ವಿಫಲಂ' ಎಂಬ ಪದವನ್ನು ಆಚಾರ್ಯರು ಇಲ್ಲಿ ಪ್ರಯೋಗಿಸಿದ್ದಾರೆ. ನಿರುಪಯುಕ್ತ ಕ್ರಿಯೆಗಳಿಗೆ ಮಾತ್ರ ಇದು ಅನ್ವಯಿಸುತ್ತದೆ. ಸ. ಧ]

ವಿಶೇಷಾರ್ಥ—ಗೃಹಸ್ಥನಿಗೆ ಮನೆತನಸ್ಥನಾಗಿ ಬಾಳಬೇಕಾದಾಗ ಅನೇಕ ಪ್ರಕಾರದ ಪಾಪಕಾರ್ಯಗಳನ್ನು ಮಾಡಬೇಕಾಗುತ್ತದೆ

ಪಾಪಕ್ರಿಯೆಯ ಉಪದೇಶವನ್ನು ಅನ್ಯರಿಗೆ ಮಾಡಕೂಡದು. ಆ ಎಲ್ಲ ಪಾಪಾಚರಣೆಯನ್ನು ತ್ಯಾಗಮಾಡುವುದು ಉತ್ತಮವೇ ಆಗಿದೆ ಆದರೆ ಯಾರಿಗೆ ಹಾಗೆ ಇರಲಿಕ್ಕೆ ಸಾಧ್ಯವಿಲ್ಲವೋ ಅವರು ತಮಗೆ ಏನೂ ಪ್ರಯೋಜನವಿಲ್ಲದಂಥ ವಿನಾಕಾರಣವಾಗಿ ಸಂಭವಿಸುವ ಪಾಪಬಂಧದಿಂದ ಆದರೂ ದೂರವಿರಬೇಕು. ಯಾಕೆಂದರೆ ಆ ಪಾಪವು ಅಸಂಖ್ಯಾತ ಅನಂತಕಾಲದ ವರೆಗೆ ದುರ್ಗತಿಯನ್ನು ಭೋಗಿಸಲಿಕ್ಕೆ ಕಾರಣವಾಗುವಂಥ ನಿಂದ್ಯ ಕರ್ಮವಾಗಿದೆ ಯಾರಿಗೆ ಸದ್ಯಕ್ಕೆ ಉತ್ತಮಕುಲ, ಜಿನೇಂದ್ರ ಭಗವಾನರ ಉಪದೇಶ, ಉತ್ತಮ ಧರ್ಮ ಈ ಎಲ್ಲ ಅತಿದುರ್ಲಭ ಸಂಗತಿಗಳು ಪ್ರಾಪ್ತವಾಗಿರುವವೋ ಅವರು ಪ್ರಯೋಜನವಿಲ್ಲದೆ ಸಂಭವಿಸುವ ಪಾಪಬಂಧದ

---

[1] ಆಯುತವರ್ಮನು ಹೇಳುವದು ಹೀಗೆ

ವಚನ—ತನಗೆ ಪ್ರಯೋಜನವಲ್ಲದ ನೆಲನ ಘಟ್ಟಿಸುವದು ಮುಗುಳ್ಚುದುಂ ನೀರಂ ಕುಳುಕುವುದುಂ ಕದಡುವುದುಂ ಕಿಚ್ಚನುರಿಪುವುದುಂ ನಂದಿಸುವುದುಂ ಗಾಳಿಯಂ ಪುಟ್ಟಿಸುವುದುಂ ಪೊಯ್ಯುದುಂ ವನಸ್ಪತಿಗಳಂ ತರುವುದುಂ ಪೊಯ್ಯುದುಂ ಬಾಗಿಸಪರಿವುದುಂ ಪರಿಯಿಸುವುದುಂ ಮತ್ತಂ ಪೆರವುಮಿವು ಮೊದಲಾಗೊಡೆಯ ಸಾವದ್ಯಹೇತುಗಳಪ್ಪನರ್ಥದಂಡಂಗಳಂ ನೆಗಳ್ವುದು ಪ್ರಮಾದಚರ್ಯೆಯೆಂಬಯ್ದನೆಯನರ್ಥದಂಡಂ ಇಂತೀಯನರ್ಥದಂಡಂಗಳಂ ಪರಿಹರಿಸುವುದನರ್ಥದಂಡ ವಿರತಿಯುಂಬೆರಡನೆಯ ಗುಣವ್ರತಂ.

ಹೆದರಿಕೆಯನ್ನು ಇಟ್ಟುಕೊಳ್ಳಬೇಕು—ಇದು ಯೋಗ್ಯವಾಗಿದೆ  ಪಶುವಿನಂತೆ ವ್ಯರ್ಥ ಜನ್ಮವನ್ನು ಕಳೆಯುವುದು ಯೋಗ್ಯವಲ್ಲ  ಯಾರಿಗೆ ಸ್ವತಃ ಮನೆತನದ ಪಾಪವನ್ನು ತ್ಯಾಗಮಾಡಲಿಕ್ಕೆ ಆಗುವದಿಲ್ಲವೋ ಅವರು ಎರಡನೆ-ಯವರಿಗೆ—"ನನ್ನಂತೆಯೆ ಮಾಡುತ್ತ ಇರಬೇಕು  ನೀವು ಪಾಪಕಾರ್ಯಗಳನ್ನು ತ್ಯಜಿಸುವುದು ಬಹಳ ಕಠಿಣವಾಗಿದ" ಎಂದು ಉಪದೇಶವನ್ನಾದರೂ ಮಾಡಕೂಡದು  ಮನೆ ಮೊದಲಾದವುಗಳನ್ನು ನಿರ್ಮಿಸುವುದರಲ್ಲಿ ಅತಿಶಯ ಹಿಂಸೆಯು ಸಂಭವಿಸುತ್ತದೆ  ಅದರಿಂದ ಮನೆಯನ್ನು ಕಟ್ಟಿಸಲಿಕ್ಕೆ, ಅದನ್ನು ಸುಧಾರಿಸಲಿಕ್ಕೆ, ಬಣ್ಣ ಹಚ್ಚಲಿಕ್ಕೆ, ತೋಟ ಪಟ್ಟಿಗಳನ್ನು ಮಾಡಲಿಕ್ಕೆ, ಕಲ್ಲುಗಳನ್ನು ಒಡಿಸಲಿಕ್ಕೆ, ಬಾವಿಯನ್ನು ತೋಡಲಿಕ್ಕೆ, ಕೆರೆಯನ್ನು ನಿರ್ಮಿಸಲಿಕ್ಕೆ, ಅದಕ್ಕೆ ಒಡ್ಡುಹಾಕಲಿಕ್ಕೆ, ಕಾಲುವೆಯನ್ನು ತೋಡಿ ನೀರು ಪೂರೈಸುವದಕ್ಕೆ, ಅದರಂತೆ ಒಡ್ಡುಒಡೆಯಲಿಕ್ಕೆ, ನದಿಗೆ ಆನೆಕಟ್ಟು ಕಟ್ಟಲಿಕ್ಕೆ, ಕಟ್ಟಿದ ಮನೆ ತೋಟಗಳನ್ನು ಸುಡಲಿಕ್ಕೆ, ವನಗಳನ್ನು ನಾಶಗೊಳಿಸಲಿಕ್ಕೆ ಗಿಡಗಳನ್ನು ಕಡಿದು ಇದ್ದಿಲು ತಯಾರಿಸಲಿಕ್ಕೆ, ಹುಲ್ಲು ಕೊಯ್ಯಲಿಕ್ಕೆ, ಬೆಂಕಿ ಹಚ್ಚಲಿಕ್ಕೆ, ಮಿಥ್ಯಾದೇವರ ಗುಡಿ ಕಟ್ಟಿಸಲಿಕ್ಕೆ ಮತ್ತು ಅದನ್ನು ಕೆಡಿಸಲಿಕ್ಕೆ, ಮೂರ್ತಿಯನ್ನು ನಿರ್ಮಿಸಲಿಕ್ಕೆ ಹಾಗೂ ಒಡೆಯಲಿಕ್ಕೆ, ಒಕ್ಕಲತನ ಮಾಡಲಿಕ್ಕೆ, ಸುಂದರ ಮನೆಯನ್ನು ಕೆಡಿಸಲಿಕ್ಕೆ ಎಂದೂ ಉಪದೇಶ ಮಾಡಕೂಡದು  ಇದೇ ಪ್ರಕಾರ ಪಶುಗಳಿಗೆ ದುಃಖಕೊಡುವಂಥ ಹೊಡೆಯುವ, ಕಟ್ಟಿಹಾಕುವ, ಬರೆಕೊಡುವ ಮೂಗದಾರಹಾಕುವ ಇವೇ ಮೊದಲಾದ ಉಪದೇಶಗಳನ್ನೂ ಸಹ ಮಾಡಕೂಡದು  ತಿರ್ಯಂಚ ಹಾಗೂ ಮಾನವರ ಆಹಾರಕ್ಕೆ ಪ್ರತಿಬಂಧವನ್ನು ಒಡ್ಡುವುದು, ಅವುಗಳನ್ನು ಬಂಧನದಲ್ಲಿಡುವುದು, ಅವುಗಳನ್ನು ಸಂತತಿಯಿಂದ ವಿಯೋಗಗೊಳಿಸುವುದು, ಪಕ್ಷಿಗಳನ್ನು ಪಂಜರದಲ್ಲಿ ಇಡುವುದು, ಹಾವು, ತೋಳ, ಸಿಂಹ, ಹುಲಿ, ಇಲಿ, ಮುಂಗುಲಿ, ನಾಯಿ ಮೊದಲಾದ ಹಿಂಸಕ ಪ್ರಾಣಿಗಳ ಘಾತಮಾಡುವುದು, ಹೇನು, ಕೂರಿ, ತಗಣಿ, ಚಿಕ್ಕಾಡುಗಳನ್ನು ಕೊಲ್ಲುವುದು, ಮಂಚ, ಹೊರಸಲು, ಪಲ್ಲಂಗು, ತೊಟ್ಟಿಲುಗಳನ್ನೂ ಬಿಸಿಲಲ್ಲಿ ಇಡುವುದು, ದಾರಿಯ ಮೇಲೆ ನೀರನ್ನು ಹೂಯ್ಯುವುದು, ಜೀವಿಗಳನ್ನು ಹಿಡಿಯುವ ಯಂತ್ರಗಳನ್ನು ನಿರ್ಮಿಸುವುದು—ಇವೇ ಮೊದಲಾದ ಕಾರ್ಯಗಳನ್ನು ಮಾಡುವಂತೆ ಉಪದೇಶವನ್ನೂ ಈಯಬಾರದು  ಯಾವ ಶಾಸ್ತ್ರದಲ್ಲಿ ಮುಖ್ಯವಾಗಿ ಶೃಂಗಾರ ರಸವನ್ನು ವರ್ಣಿಸಿದೆಯೋ, ಯಾವುದರಲ್ಲಿ ಜಾರಣ, ಮಾರಣ, ಉಚ್ಚಾಟನ, ವಶೀಕರಣ, ಮಂತ್ರ, ತಂತ್ರ ಇಂದ್ರಜಾಲಾದಿ ಕಪಟ ವಿದ್ಯೆಗಳ ಉಪದೇಶವಿದೆಯೋ, ಯಾವುದರಲ್ಲಿ ರಸಾಯನ, ಭಸ್ಮಗಳ ವಿಧಿಯನ್ನು ವರ್ಣಿಸಿರುವುದೋ ಇಂಥ ಶಾಸ್ತ್ರಗಳ ಅಧ್ಯಯನ ಮಾಡಲಿಕ್ಕೆ ಹೇಳಕೂಡದು  ಅದರಂತೆ ಹಿಂಸೆಯನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಓದಲಿಕ್ಕೂ ಸೂಚಿಸಬಾರದು  ಅದರಂತೆ ತಿನ್ನಬಾರದುದನ್ನು ತಿನ್ನುವುದಕ್ಕೆ ರಾತ್ರಿಯಲ್ಲಿ ಊಟಮಾಡಲಿಕ್ಕೆ, ಸುಳ್ಳು ಮಾತನಾಡಲಿಕ್ಕೆ, ಚಾಡಿ ಹೇಳಲಿಕ್ಕೆ, ಕಳವುಮಾಡಲಿಕ್ಕೆ, ಸುಳ್ಳು ಸಾಕ್ಷಿ ನುಡಿಯಲಿಕ್ಕೆ, ವ್ಯಭಿಚಾರಮಾಡಲಿಕ್ಕೆ, ಮಹಾ ಆರಂಭಾದಿಗಳನ್ನು—ದೊಡ್ಡ ದೊಡ್ಡ ಉದ್ಯಮಗಳನ್ನು ಆರಂಭಿಸು-ವದಕ್ಕೆ—ಉತ್ಸವಮಾಡಲಿಕ್ಕೆ, ಮದ್ದು ಹಾರಿಸಲಿಕ್ಕೆ, ಉಪವನಗಳನ್ನು ಸಂದರ್ಶಿಸಲಿಕ್ಕೆ ಹೇಳಕೂಡದು  ಇದೇ ಪ್ರಕಾರ "ಈ ದೇಶಕ್ಕಿಂತ ಆ ದೇಶದಲ್ಲಿ ವ್ಯಾಪಾರ ಉದ್ಯೋಗಗಳು ಹೆಚ್ಚಾಗಿ ನಡೆಯುತ್ತವೆ  ಅಲ್ಲಿ ಹೋಗಿರಿ" ಹೀಗೆ ಉಪದೇಶವನ್ನೂ ಸಹ ಮಾಡಬಾರದು  ಪರಿಣಾಮದಲ್ಲಿ ದುರ್ಧ್ಯಾನವನ್ನು ಹುಟ್ಟಿಸಲಿಕ್ಕೆ ಕಾರಣವಾಗುವ ಆಟ, ನೃತ್ಯ, ನಾಟಕ ಮೊದಲಾದವುಗಳನ್ನು ನೋಡುವದಕ್ಕೂ ವ್ಯಭಿಚಾರಾದಿ ಕ್ರಿಯೆಗಳನ್ನು ಮಾಡಲಿಕ್ಕೂ ಪರಸ್ಪರದಲ್ಲಿ ಜಗಳ ಹಚ್ಚಲಿಕ್ಕೂ ಉಪದೇಶಮಾಡಕೂಡದು  ಯುದ್ಧಮಾಡಲಿಕ್ಕೂ ಎರಡನೆಯವರಿಗೆ ಒಯ್ಯಲಿಕ್ಕೂ ಅನ್ಯರ ಉಪಜೀವನದ ಸಾಧನಗಳನ್ನೂ ಕೆಡಿಸಲಿಕ್ಕೂ ಬೋಧಿಸಬಾರದು  ಕೆಟ್ಟ ಹಾಗೂ ಹೇಸಿಕೆ ಬರುವಂಥ ಹಾಡು, ಕುಣಿತ, ಬಾರಿಸುವಿಕೆ, ಜಗಳ, ಮಾತುಕತೆಗಳನ್ನು ನಡೆಯಿಸಲಿಕ್ಕೆ ಉಪದೇಶ ಮಾಡಬಾರದು

**ಪರದುಃಖದಾಯಕ ವ್ಯಾಪಾರವನ್ನು ಮಾಡಬಾರದು.** ಸ್ವದೇಶ ಅಥವಾ ಪರದೇಶಗಳಲ್ಲಿಯ ಹುಡುಗರು ಮನುಷ್ಯ ಮತ್ತು ಸ್ತ್ರೀಯರನ್ನು ಮೋಸಗೊಳಿಸಿ ತಂದು ಗುಲಾಮರೆಂದು ಮಾರುವುದಕ್ಕೆ ಕ್ಲೇಶವಾಣಿಜ್ಯ-ವೆಂದು ಹೇಳುವರು  ಆಕಳು, ಎಮ್ಮೆ, ಕುದುರೆ ಮೊದಲಾದವುಗಳನ್ನು ಇಂಥ ದೇಶದಲ್ಲಿ ಕೊಂಡು, ಇಂಥದೊಂದು ದೇಶದಲ್ಲಿ ಒಯ್ದು ಮಾರಿದರೆ ಬಹಳಷ್ಟು ಲಾಭವಾದೀತು–ಎಂದು ಉಪದೇಶ ಮಾಡುವುದಕ್ಕೆ ತಿರ್ಯಕ್ ವಾಣಿಜ್ಯ ವೆನ್ನುವರು  ಬೇಟೆಯಾಡುವವರಿಗೆ ಮತ್ತು ಜಾಲಗಾರರಿಗೆ "ಇಂಥ ದೇಶದಲ್ಲಿ ಚಿಗರೆ, ಹಂದಿ ಮೊದಲಾದವುಗಳು ಬಹಳಷ್ಟು ಇವೆ  ಅಲ್ಲಿ ಹೋದರೆ ನಿಮಗೆ ಬೇಟೆಗಳು ಹೆಚ್ಚಾಗಿ ದೊರೆಯಬಹುದು"–ಹೀಗೆ ಉಪದೇಶ ಮಾಡುವುದು ವಧವಾಣಿಜ್ಯವಾಗಿದೆ  ಒಕ್ಕಲತನ ಮಾಡುವವರಿಗೆ ಭೂಮಿಯನ್ನು ಅಗಿಯುವುದು ಮತ್ತು ಗಿಡಗಳನ್ನು

ಕಡಿಯುವುದು—ಈ ಉಪದೇಶ ಮಾಡುವದಕ್ಕೆ ಆರಂಭೋಪದೇಶವೆನ್ನುವರು ಇವೆಲ್ಲವೂ ಪಾಪೋಪದೇಶಗಳಾಗಿವೆ. ಇವುಗಳನ್ನು ತ್ಯಾಗಮಾಡುವುದು ಯೋಗ್ಯವಾಗಿದೆ. ತಂಬಾಕು ತಿನ್ನುವುದು, ತಂಬಾಕು ಸೇದುವುದು, ಗಾಂಜಿ ಸೇದುವದು, ಅಮಲೇರುವಂಥ ಪದಾರ್ಥಗಳನ್ನು ಸೇವಿಸುವುದು ಇವೆಲ್ಲ ದೊಡ್ಡ ಪಾಪವನ್ನು ಉತ್ಪನ್ನಮಾಡುವಂಥಾಗಿವೆ ಅದಕ್ಕಾಗಿ ಇವುಗಳ ಉಪದೇಶ ಮಾಡಕೂಡದು. ಒಳ್ಳೆಯ ಕುಲದಲ್ಲಿ ಹುಟ್ಟಿದವರು ತಂಬಾಕು ತಿನ್ನುವದು ಯೋಗ್ಯವಲ್ಲ. ತಂಬಾಕು ಸೇದುವದರಿಂದಲೂ ಅನೇಕ ದೋಷಗಳು ಸಂಭವಿಸುತ್ತವೆ ಹೊಗೆ ಹಾಗೂ ನೀರು ಇವುಗಳ ಸಂಯೋಗದಿಂದ ಗುಡಗುಡಿಯೊಳಗಿನ ನೀರಿನಲ್ಲಿ ತ್ರಸ ಜೀವಿಗಳ ಉತ್ಪತ್ತಿಯಾಗುತ್ತದೆ. ಆ ನೀರಿಗೆ ದುರ್ಗಂಧವು ಉಂಟಾಗುತ್ತದೆ ಅದನ್ನು ಎಲ್ಲಿ ಚಲ್ಲಿದರೂ ಆ ಸ್ಥಳದಲ್ಲಿಯ ಷಟ್‌ಕಾಯ ಜೀವಗಳ ಹಿಂಸೆಯಾಗುವುದು ಸುಣ್ಣ ಹಾಗೂ ಇಟ್ಟಂಗಿಗಳ ಭಟ್ಟಿಯನ್ನೂ ಸಿದ್ಧಗೊಳಿಸುವ ಉಪದೇಶವನ್ನು ಮಾಡಕೂಡದು ಅದರಲ್ಲಿ ಅತ್ಯಂತ ಪಾಪವು ಉತ್ಪನ್ನವಾಗುತ್ತದೆ ಹೀಗೆ ಗೊತ್ತಿದ್ದೂ ಅವುಗಳ ವ್ಯಾಪಾರ ಮಾಡಲಿಕ್ಕ ಬೋಧಿಸಬಾರದು ಬಂಡಿ, ಕುದುರೆ, ಎತ್ತು, ಆಕಳು, ಎಮ್ಮೆ ಮೊದಲಾದ ಪಶುಗಳನ್ನು ಸಾಕುವ ಉಪದೇಶವನ್ನೂ ಮಾಡಕೂಡದು ಯಾವನಾದರೂ ದಾನಿಯು ತಿರ್ಯಂಚ ಜೀವಗಳಿಗೆ ಅನ್ನ, ವಸ್ತ್ರ, ಧನಗಳನ್ನು ನೀಡುತ್ತ ಇದ್ದರೆ ಅದಕ್ಕೆ ಅಡ್ಡಿಯನ್ನುಂಟುಮಾಡಬಾರದು ಕುಪಾತ್ರದಾನದ ಬೋಧವನ್ನೂ ಮಾಡಕೂಡದು. ದಾನ ಕೊಡುವವರಿಗೆ ವಿಘ್ನವನ್ನು ಒಡ್ಡಬಾರದು ವ್ರತಭಂಗ ಮಾಡುವದಕ್ಕೆ ಹೇಳಕೂಡದು, ಈ ಪ್ರಕಾರ ಅನೇಕ ಸಂಗತಿಗಳು ಪಾಪವನ್ನೂ ಉತ್ಪನ್ನ ಮಾಡುವಂಥವು ಇವೆ ಅವುಗಳನ್ನು ಎಲ್ಲಿಯ ವರೆಗೆ ಬೋಧಿಸಬಹುದು? ಯಾವುದರಿಂದ ತಮ್ಮ ಧರ್ಮ, ಅರ್ಥ, ಕಾಮಗಳಲ್ಲಿ ಒಂದೂ ಕೂಡ ಸಿದ್ಧಿಸದೆ ಕೇವಲ ಪಾಪದ ಬಂಧವೇ ಆಗುವುದೋ ಅಂಥ ಉಪದೇಶವನ್ನು ಯಾರಿಗೂ ಮಾಡಕೂಡದು

**ಹಿಂಸಕ ಉಪಕರಣಗಳನ್ನು ಕೊಡಬಾರದು.** ಯಾವುದರಿಂದ ಹಿಂಸೆಯಾಗುವುದೋ ಅಂಥ ಉಪಕರಣಗಳನ್ನು ಲೋಭದಿಂದಾಗಲಿ, ಪ್ರೀತಿಯಿಂದಾಗಲಿ ಯಾರಿಗೂ ಕೊಡಬಾರದು ಅವುಗಳನ್ನು ಕೊಡುವುದರಿಂದ ಸ್ವಲ್ಪ ಲಾಭವಾಗುತ್ತಿದ್ದರೂ ಅವುಗಳಿಂದ ಬಹಳಷ್ಟು ಪಾಪವು ಸಂಭವಿಸುತ್ತದೆ ಯಾವ ಆಯುಧಗಳನ್ನು ಕೈಯಲ್ಲಿ ಹಿಡಿದ ಕೂಡಲೆ ಮನದಲ್ಲಿ ದುಷ್ಟ ವಿಚಾರಗಳು ಉತ್ಪನ್ನವಾಗುವವೋ ಅಂಥ ಖಡ್ಗ, ಬರ್ಚಿ, ಚೂರಿ, ಬಾಣ, ಬಿಲ್ಲು, ಬಂದೂಕು, ಕರಾರಿ ಮೊದಲಾದವುಗಳಲ್ಲಿ ಯಾವುದನ್ನೂ ಯಾರಿಗೂ ಕೊಡಬಾರದು ಭೂಮಿಯನ್ನು ಅಗಿಯಲಿಕ್ಕೆ ಉಪಯೋಗ ಬೀಳುವ ಆಯುಧಗಳಾದ ಗುದ್ದಲಿ, ಕುರ್ಜಿಗೆ, ಸಲಿಕೆ, ನೇಗಿಲು, ರೆಂಟೆ ಇವುಗಳನ್ನು ಯಾರಿಗೂ ಕೊಡಕೂಡದು. ಇವುಗಳಿಂದ ಭೂಮಿಯಲ್ಲಿರುವ ದೊಡ್ಡ ದೊಡ್ಡ ಹಾವು, ಚೋಳ, ಹುಳ, ಇಲಿ ಮೊದಲಾದವುಗಳು ಸಾಯುತ್ತವೆ. ಅಲ್ಲದೆ ಕೋಟ್ಯಾನಧಿ ಜೀವಿಗಳ ಹಿಂಸೆಯು ಆಗುತ್ತದೆ ಇದೇ ಪ್ರಕಾರ ಅನೇಕ ತ್ರಸ–ಸ್ಥಾವರ ಜೀವಗಳನ್ನು ಹೋಳಿ ಒಗೆಯುವಂಥ ಕೊಡಲಿ, ಕರಗಸ, ಕುಡಗೋಲು ಮೊದಲಾದ ಹಿಂಸಕ ಆಯುಧಗಳನ್ನು ಸಹ ಯಾರಿಗೂ ಕೊಡಬಾರದು ಮನುಷ್ಯ ಹಾಗೂ ತಿರ್ಯಂಚರನ್ನು ಹೊಡೆಯಲಿಕ್ಕೆ ಉಪಯೋಗ ಬೀಳುವ ಕಟ್ಟಿಗೆ, ಬಾರಕೋಲು, ತೊಗಲು, ಕಬ್ಬಿಣ ಸಲಾಖೆ ಇಂಥವುಗಳನ್ನೂ ಸಹ ಯಾರಿಗೂ ಕೊಡಬಾರದು ಹಾಗೆಯೇ ಬೆಂಕಿ, ವಿಷ, ಸರಪಳಿ, ಬಲೆ, ಪಿಂಜರ, ಜಾಳಿಗೆ, ಪಶು ಪಕ್ಷಿಗಳನ್ನು ಹಿಡಿಯುವ ಯಂತ್ರ ಇವುಗಳನ್ನೂ ಯಾರಿಗೂ ಕೊಡಬಾರದು. ನಾಯಿ, ಬೆಕ್ಕು, ಮೊದಲಾದ ಹಿಂಸಕ ಪ್ರಾಣಿಗಳನ್ನು ಸಾಕಬಾರದು ಗಿಳಿ, ಕೋಳಿ, ಪಾರಿವಾಳ, ಬುಲಬುಲ, ಮೈನಾ ಮೊದಲಾದ ಹಕ್ಕಿಗಳನ್ನು ಪಂಜರದಲ್ಲಿ ಹಾಕಿ ಇಡಬಾರದು. ಇವಲ್ಲದೆ ಇನ್ನುಳಿದ ಅನೇಕ ಪಾಪದ ಉಪಕರಣಗಳನ್ನು ಮನೆಯಲ್ಲಿ ಆದರೂ ಇಡಕೂಡದು ಯಾಕೆಂದರೆ ಅವು ಮನೆಯಲ್ಲಿ ಇರುವುದರಿಂದ ಒಮ್ಮಿಲ್ಲೊಮ್ಮೆ ತಪ್ಪಿಯಾದರೂ ಉಪಯೋಗಿಸುವ ಬುದ್ಧಿಯು ಉಂಟಾಗುವ ಸಂಭವವಿರುತ್ತದೆ

**ಯಾವ ವ್ಯಾಪಾರ ಮಾಡಬಾರದು?** ಕೆಳಗೆ ಕಾಣಿಸಿದ ವ್ಯವಹಾರ ಹಾಗೂ ವ್ಯಾಪಾರಗಳು ಬಹಳ ಪಾಪವನ್ನು ಉತ್ಪನ್ನ ಮಾಡುವಂದವು ಇರುತ್ತವೆ. ಅವುಗಳಲ್ಲಿ ಸ್ವಲ್ಪ ಲಾಭವಾಗುತ್ತಿದ್ದರೂ ಪಾಪದ ಭಯದಿಂದ ಅವುಗಳನ್ನು ತ್ಯಾಗಮಾಡುವುದು ಯೋಗ್ಯವಾಗಿದೆ ಅಂಥ ವ್ಯಾಪಾರಗಳು–ಕಬ್ಬಿಣ, ನೀಲಿ, ಮೇಣ, ಉಪ್ಪು, ಕಟ್ಟಿಗೆ, ಸಬಕಾರ, ಅರಗು, ತೊಗಲು, ಉಣ್ಣೆ, ಕೂದಲು, ಬೆಲ್ಲ, ಸಕ್ಕರೆ, ಅಕ್ಕಿ, ಖೋಡು, ಶಸ್ತ್ರ, ಮದ್ದು, ಬಳ್ಳೊಳ್ಳಿ, ಉಳ್ಳೇಗಡ್ಡಿ, ಬಲೆ, ಗಾಂಜಾ, ದಾಸಿ, ದಾಸ, ಈಳಿಗೆ, ತುಪ್ಪ, ಎಣ್ಣೆ, ಮಾವು, ಲಿಂಬಿಕಾಯಿ ಮೊದಲಾದ ವನಸ್ಪತಿ ಕಾಯಿಗಳು, ಭಂಗಿ, ತಂಬಾಕು, ಜರದಾ, ಎಳ್ಳು, ಹಿಂಡಿ, ಪಿಂಜರ, ಕುದುರೆ, ಒಂಟೆ, ಎತ್ತು, ಬಂಡಿ, ಇಟ್ಟಂಗಿ ಮೊದಲಾದ ವಸ್ತುಗಳನ್ನು ಕೊಡಕೊಳ್ಳುವುದರಿಂದಲೂ ಸಂಗ್ರಹಿಸುವುದರಿಂದಲೂ ಹಿಂಸೆಯಾಗುತ್ತದೆ. ಅದಕ್ಕಾಗಿ

ಇವುಗಳ ವ್ಯಾಪಾರ ಮಾಡಬಾರದು ಇವೆಲ್ಲವುಗಳನ್ನೂ ತ್ಯಾಗ ಮಾಡಲು ಶಕ್ಯವಿಲ್ಲದಿದ್ದರೆ ಅವುಗಳಲ್ಲೂ ಯಾವುದರಿಂದ ಹೆಚ್ಚಿಗೆ ಪಾಪವಾಗುವುದೋ ಅಂಥವುಗಳನ್ನು ಬಿಟ್ಟು ಬಿಡಬೇಕು. ಧಾನ್ಯ ಸಂಗ್ರಹ ಮಾಡುವ ಪ್ರಮಾಣವನ್ನು ಕಡಿಮೆ ಮಾಡಿ, ಉಳಿದೆಲ್ಲವುಗಳನ್ನೂ ತ್ಯಾಗ ಮಾಡಬೇಕು ಅನೇಕ ಸುಳ್ಳು ಜೀವನ ಸಾಧನ ಮಾರ್ಗಗಳಿರುತ್ತವೆ ಇವುಗಳಿಂದ ಬಹಳಷ್ಟು ಪಾಪ ಬಂಧವು ಆಗುತ್ತದೆ, ದುರ್ಗತಿಯು ಪ್ರಾಪ್ತವಾಗುತ್ತದೆ, ಇಂಥ ಜೀವನ ಸಾಧನಗಳನ್ನು ತ್ಯಾಗ ಮಾಡಬೇಕು ನಗರ ರಕ್ಷಕನ ಉದ್ಯೋಗ, ಅವನ ಕೈಕೆಳಗಿನ ಸೇವಕನ ಕೆಲಸ, ಅರಣ್ಯವನ್ನು ಕಡಿಯುವ ಕಾರ್ಯ, ಬಂಡಿ, ಕುದುರೆ, ಒಂಟೆ, ಎತ್ತು, ಇವುಗಳನ್ನು ಬಾಡಿಗೆಯಿಂದ ಕೊಡಿಸುವ ಕಾರ್ಯ ಹಾಗೂ ನಡುವಿನ ದಲಾಲಿಯ ಕೆಲಸ ಇವುಗಳನ್ನು ಮಾಡಕೂಡದು

ದಲಾಲಿಯ ಕೆಲಸದಲ್ಲಿ ತೊಡಗಿದ ಮನುಷ್ಯನು ಎತ್ತಿಗೆ ಹೆಗಲು ನೋವಾಗಿದೆ, ಅದರ ಮೂಗು ಕಟ್ಟಿ ಹೋಗಿದೆ, ಕುದುರೆಯ ಬೆನ್ನ ಮೇಲೆ ಹುಣ್ಣು ಆಗಿ ಅದರಲ್ಲಿ ಹುಳುಗಳು ಬಿದ್ದಿವೆ, ಅವರ ಕಾಲುಗಳು ಇಷ್ಟು ಹೊತ್ತಿನ ವರೆಗೆ ನಡೆದು ನೋವಾಗಿವೆ, ಪಶುವು ಮುದುಕ ಇಲ್ಲವೆ ರೋಗಿಯಾದುದರಿಂದ ಇದಕ್ಕೆ ಗಾಡಿಯು ಎಳೆಯಲಾರದು ಮೊದಲಾದ ವಿಚಾರಗಳನ್ನು ಮನಸ್ಸಿನಲ್ಲಿ ತರಲಾರನು. ಅವನು ಮಳೆಗಾಲದಲ್ಲಿಯೂ ಅವುಗಳ ಮೇಲೆ ಹೆಚ್ಚಿಗೆ ಭಾರವನ್ನು ಹಾಕಿ, ಬಂಡಿಯನ್ನು ಎಳೆಯಲಿಕ್ಕೆ ಹಚ್ಚುವನು ಅದರಿಂದ ಬಾಡಿಗೆಯಿಂದ ಉಪಜೀವಿಸುವ ಇಲ್ಲವೆ ಬಾಡಿಗೆದಾರರ ದಲಾಲಿಯಿಂದ ಜೀವನ ಸಾಗಿಸುವ ವ್ಯವಹಾರವು ಬಹಳಷ್ಟು ಪಾಪಬಂಧಕ್ಕೆ ಕಾರಣವಾಗಿದೆ.

ಲಂಚಕೊಡುವುದೂ ತಕ್ಕೊಳ್ಳುವುದೂ ಪಾಪವಾಗಿದೆ ಇದೇ ಪ್ರಕಾರ ಲೋಭವಶವಾಗಿ, ನಮಗೆ ಬಹಳ ದ್ರವ್ಯವು ದೊರೆಯುವದೆಂದು, ಯಾರಾದರೂ ಮುದುಕನ ಮದುವೆ ಮಾಡಲಿಕ್ಕೆ ಪ್ರೋತ್ಸಾಹಿಸಿದರೆ ಧನದ ಆಶೆಗಾಗಿ ಹಾಗೆ ಮಾಡಕೂಡದು ರಾಜ್ಯದ ಸುಂಕವನ್ನು ತಪ್ಪಿಸಿ ಯಾವ ವಸ್ತುವನ್ನು ತರಕೂಡದು ಇನ್ನೊಬ್ಬರ ಚಾಡಿಯನ್ನು ಹೇಳಬಾರದು. ಸುಳ್ಳು ಸಾಕ್ಷಿಯನ್ನೂ ಹೇಳಕೂಡದು ಯಾರಿಗೂ ಜಾಮೀನು ಆಗಬಾರದು ವೈದ್ಯ ವಿದ್ಯೆಯ ಉಪಯೋಗ ಮಾಡಿಕೊಂಡು ಹೊಟ್ಟೆಯನ್ನು ತುಂಬಿಕೊಳ್ಳಬಾರದು. ಮಂತ್ರ, ತಂತ್ರ, ಯಂತ್ರ, ಭೂತ, ಭೂತಾಟಿಕೆ, ಡಾಕಿಣೀ ಮೊದಲಾದ ಉಪಚಾರಗಳನ್ನು ಮಾಡಿ ದ್ರವ್ಯವನ್ನು ಸಂಪಾದಿಸ-ಕೂಡದು ರಸಾಯನಾದಿ ಕ್ರಿಯೆಗಳನ್ನು ಧೂರ್ತತನದಿಂದ ತೋರಿಸಿ, ಜನರನ್ನು ಮೋಸಗೊಳಿಸಬಾರದು. ಈ ಎಲ್ಲ ಕ್ರಿಯೆಗಳು ದುರ್ಗತಿಗೆ ಒಯ್ಯುವಂಥವು ಇರುತ್ತವೆ

ನೀಚ ಕೃತ್ಯಮಾಡುವವರಿಗೆ ಧನಸಹಾಯ ಮಾಡಕೂಡದು. ನೀಚ ಕೆಲಸಗಳನ್ನು ಮಾಡು-ವವರಿಗೆ ತಾನು ದ್ರವ್ಯವನ್ನು ಕೊಟ್ಟು ನೆರವು ನೀಡಬಾರದು. ಅಂಥವರಿಗೆ ಬಡ್ಡಿಯನ್ನು ತಕ್ಕೊಂಡೂ ಸಹ ಹಣವನ್ನು ಕೊಡಕೂಡದು ಅಂಥ ಬಡ್ಡಿಯಿಂದ ತಮ್ಮ ಉಪಜೀವನವನ್ನೂ ಸಾಗಿಸಬಾರದು. ಕಟ್ಟಿಗೆಯನ್ನು ಮಾರುವವ, ಸೆರೆಯನ್ನು ತಯಾರಿಸಿ ಮಾರುವಂಥವ, ಕಟುಕ, ಅಗಸ, ಚರ್ಮಕಾರ, ಇಟ್ಟಂಗಿಗಳನ್ನು ಸುಡುವವ, ಸುಣ್ಣವನ್ನು ಸಿದ್ಧಗೊಳಿಸುವವ, ಜೂಜು ಆಡುವವ, ಕಂಬಾರ, ಹುಲ್ಲು ಕೊಯ್ಯುವವ ಇವರೇ ಮೊದಲಾದವರಿಗೆ ಉದ್ಯೋಗ ನಡೆಯಿಸಲಿಕ್ಕೆ ಬಡ್ಡಿಯನ್ನು ತಕ್ಕೊಂಡು ಹಣವನ್ನು ಕೊಡಕೂಡದು ಮಾಂಸವನ್ನು ತಿನ್ನುವವರಿಗೂ ವೇಶ್ಯಾ-ಜೀವನವನ್ನು ಸಾಗಿಸುವವರಿಗೂ ಬಡ್ಡಿಯಿಂದ ಹಣವನ್ನು ಕೊಡಬಾರದು

ಇನ್ನೊಬ್ಬರ ದೋಷಗಳನ್ನು ನೋಡಬಾರದು. ತಮ್ಮ ಮನೆಯನ್ನು ಬಾಡಿಗೆಯಿಂದ ಕೊಡಬಾರದು. ಅಶುಭ ಪರಿಣಾಮವುಳ್ಳ, ಅನ್ಯಾಯ ಮಾರ್ಗಿಗಳ, ಮಾಂಸ ಭಕ್ಷಕರ, ಮದ್ಯಪಾನ ಮಾಡುವವರ, ವೇಶ್ಯಾಸಕ್ತರ, ಪರಸ್ತ್ರೀಲಂಪಟರ ಮತ್ತು ಅನ್ಯ ಧರ್ಮಾನುಯಾಯಿಗಳ ಮಿತ್ರತ್ವವನ್ನು ಮಾಡಕೂಡದು ಎರಡನೆಯವರ ದೋಷಗಳನ್ನು ಗ್ರಹಿಸಬಾರದು. ಅನ್ಯರ ಧನವನ್ನು ತಕ್ಕೊಳ್ಳುವ ಇಚ್ಛೆಯನ್ನು ಮಾಡಕೂಡದು. ಇನ್ನೊಬ್ಬರ ಸಂಪತ್ತಿಯನ್ನು ಕಂಡು ಆಶ್ಚರ್ಯಪಡಬಾರದು ತನ್ನ ದೈನ್ಯವನ್ನು ನೆನೆದು ಅದನ್ನು ಚಿಂತಿಸುತ್ತ ಕೂಡಬಾರದು ಎರಡನೆಯವರ ಸ್ತ್ರೀಯರ ಕಡೆಗೆ ಕಾಮಬುದ್ಧಿಯಿಂದ ನೋಡಕೂಡದು. ಇತರ ಮನುಷ್ಯ ತಿರ್ಯಂಚರಲ್ಲಿ ಕಲಹವನ್ನು ಹಚ್ಚಬಾರದು ಅನ್ಯರ ಪುತ್ರ–ಮಿತ್ರ–ಸ್ತ್ರೀ ಇವರ ವಿಯೋಗವಾಗಲಿ–ಎಂದು ಚಿಂತಿಸಕೂಡದು ಇನ್ನೊಬ್ಬರು ಒಳ್ಳೆಯ ಊಟ ಮತ್ತು ಬೆಲೆಯುಳ್ಳ ವಸ್ತ್ರ ಹೊದಿಕೆಗಳನ್ನು ಉಪಯೋಗಿಸುವರೆಂದು ನೋಡಿ, 'ಅದು ನಮಗಿಲ್ಲ'ವೆಂದು ಮನಸ್ಸಿನಲ್ಲಿ ದುಃಖಪಡಬಾರದು ತಮಗೆ ಬಡತನ, ರೋಗ, ವಿಯೋಗ ಪ್ರಾಪ್ತವಾದಾಗ ಪರಿಣಾಮದಲ್ಲಿ ದುಃಖ ಉತ್ಪನ್ನವಾಗಲು ಕೊಡಕೂಡದು ಶ್ರೀಮಂತರ ಕೂಡ ಈರ್ಷೆಯನ್ನು ಮಾಡಬಾರದು.

ಸಿಂಹ, ಹುಲಿಗಳ ಬೇಟೆಯನ್ನು ಆಡಬೇಕೆಂಬ ವಿಚಾರವನ್ನು ಮನದಲ್ಲಿ ತರಕೂಡದು. ಯುದ್ಧದಲ್ಲಿ ಇಂಥವರ ಸೋಲಾಗಲಿ ಎಂದು ಮನಸ್ಸಿನಲ್ಲಿ ಭಾವಿಸಕೂಡದು ಪರಸ್ತ್ರೀಯ ಸಂಸರ್ಗ ಮತ್ತು ಸಂಭಾಷಣೆಯನ್ನು ಮಾಡಬಾರದು. ವೇಶ್ಯೆಯರ ಹಾಡು, ಕುಣಿತ, ಹಾವಭಾವ, ವಿಲಾಸಗಳನ್ನು ನೋಡುವ ಇಚ್ಛೆಯನ್ನು ಮಾಡಬಾರದು ಬೈಗಳು, ಬೀಭತ್ಸ ನುಡಿಗಳನ್ನು ಕೇಳಕೂಡದು ನಟ-ನಾಟಕಾದಿಗಳ ಹಾಡುಗಳು ಮತ್ತು ಕೌತುಕ ಉತ್ಪನ್ನ ಮಾಡುವ ವಸ್ತುಗಳು ಪರಿಣಾಮವನ್ನು ಕೆಡಿಸುವದಕ್ಕೆ ಕಾರಣವಾಗುತ್ತವೆ ಅಂತಲೇ ಅವುಗಳನ್ನು ಕೇಳುವದನ್ನೂ ನೋಡುವದನ್ನೂ ತ್ಯಾಗಮಾತಬೇಕು ಬಡತನವು ಬಂದರೂ ನೀಚ ಪ್ರವೃತ್ತಿಯಿಂದ ಉಪಜೀವನವನ್ನು ನಡೆಯಿಸ ಕೂಡದು

ಜಿನಮಂದಿರದಲ್ಲಿ ವಿಕಥೆಗಳನ್ನು ಹೇಳಕೂಡದು. ಯಾರ ಹತ್ತಿರವೂ ಯಾಚನೆಯನ್ನು ಮಾಡ-ಬಾರದು ದೈನ್ಯವನ್ನು ತೋರಿಸಕೂಡದು ಬಡತನವು ಪ್ರಾಪ್ತವಾಯಿತೆಂದು ತಮ್ಮ ಸ್ವಭಾವದಲ್ಲಿ ವಿಕಾರವು ಉತ್ಪನ್ನವಾಗಗೊಡಬಾರದು ಕೀಳ ಕುಲದಲ್ಲಿ ಹುಟ್ಟಿದ ಜನರು ಮಾಡುವಂಥ ಕೆಲಸಗಳಾದ ಬಣ್ಣಕೊಡುವುದು, ಅನ್ಯರ ಅರಿವೆ ತೊಳೆಯುವುದು ಇಂಥ ನಿಂದ್ಯ ಕರ್ಮಗಳನ್ನು ತ್ಯಾಗ ಮಾಡಬೇಕು ಜಿನಾಲಯಗಳಂಥ ಪವಿತ್ರ ಧರ್ಮದ ಸ್ಥಳಗಳಲ್ಲಿ ಸ್ತ್ರೀ ಕಥಾ, ರಾಜಕಥಾ, ಕಳ್ಳರ ಕಥಾ ದೇಶದ ಕಥಾ-ಇವು ಪಾಪ ಬಂಧಕ್ಕೆ ಕಾರಣವಾದಂಥವು-ಗಳಾದುದರಿಂದ-ಇವುಗಳ ವಿಷಯದಲ್ಲಿ ಎಂದೂ ಮಾತನಾಡಕೂಡದು ಇದೇ ಪ್ರಕಾರ ಜಿನಮಂದಿರದಲ್ಲಿ ಸಾಲ-ಸೊತ್ತು, ಕೊಡ-ಕೊಳ್ಳುವಿಕೆ, ಮದುವೆ-ಮುಂಜಿಗಳ ಜಗಳ, ನ್ಯಾಯಾನ್ಯಾಯಗಳ ವಿವಾದ, ಜಾತಿ-ಕುಲಗಳ ವಾದಗಳನ್ನೂ ಎಂದೂ ಹೂಡಬಾರದು ಇಂಥ ಸಂಗತಿಗಳನ್ನು ಅಲ್ಲಿ ನಡೆಯಿಸುವುದರಿಂದ ಧರ್ಮಸ್ಥಾನದ ಮರ್ಯಾದೆಯನ್ನು ಭಂಗಮಾಡಿದ್ದಕ್ಕಾಗಿ ಕಟ್ಟುವ ನರಕ ನಿಗೋದಕ್ಕೆ ಕಾರಣವಾದ ಕರ್ಮವು ಪ್ರಾಪ್ತವಾಗುತ್ತದೆ ಅದಕ್ಕಾಗಿ ಧರ್ಮಾಯತನಗಳಲ್ಲಿ ಪಾಪವು ಹೆಚ್ಚಾಗುವಂಥ ಯಾವ ಕರ್ಮವೂ ಆಗದಂತೆ ಎಚ್ಚರಿಕೆಯನ್ನು ತಕೊಳ್ಳಬೇಕು. ಜಿನಮಂದಿರದಲ್ಲಿ ಊಟ-ತಿನಿಸು, ಎಲೆ-ಅಡಿಕೆ, ಗಂಧ-ಪುಷ್ಪಗಳ ಧಾರಣೆ, ಮಲಗುವುದು, ಉಚ್ಚಾಸನ, ವ್ಯಾಪಾರ, ವಿವಾಹ, ಜಗಳ, ಬೈಗಳು, ನಗೆಮಾತು, ಅವಿನಯ ಭಾಷಣ, ಆರಂಭ ಉತ್ಪನ್ನವಾಗುವಂಥ ಮಾತುಕತೆಗಳನ್ನೂ ಮಾಡಕೂಡದು ಸುಳ್ಳು ಶಾಸ್ತ್ರಗಳನ್ನು ಕೇಳಕೂಡದು ಇವುಗಳಿಂದ ವಿಷಯ ಲಾಲಸೆ ಮತ್ತು ಹಾಸ್ಯ, ಕೌತುಕ ಮತ್ತು ಕಾಮ ಪೀಡೆಗಳು ಜಾಗೃತಗೊಳ್ಳುತ್ತವೆ. ಊಟದ ಅನೇಕ ರುಚಿಗಳಲ್ಲಿ ಪ್ರೀತಿಯು ಉತ್ಪನ್ನವಾಗುವುದು ಸ್ತ್ರೀ-ಪುರುಷರ ಹಾಗೂ ಪಾಪಿ ದುರಾಚರಣರ ಮಾತುಗಳು, ಭೂತ-ಪ್ರೇತಗಳ ಸುಳ್ಳು ಕಥೆಗಳು, ಮುಖ್ಯವಾಗಿ ಹಿಂಸೆಯನ್ನೇ ಪ್ರತಿಪಾದಿಸುವ ವೇದ, ಸ್ಮೃತಿ ಮೊದಲಾದವುಗಳ ಕಥೆ, ಕಲ್ಪಿತ ಅನೇಕ ಕಾದಂಬರಿಗಳು, ಪಾರಸಿ ಗ್ರಂಥಗಳ ಆಧಾರದಿಂದ ಬರೆದ ಪ್ರಣಯ ಕಥೆಗಳು-ಇವೆಲ್ಲ ದುರ್ಧ್ಯಾನವನ್ನು ಉತ್ಪನ್ನ ಮಾಡುವಂದವು ಇರುತ್ತವೆ, ಇವುಗಳನ್ನು ಕೇಳಕೂಡದು ಮಹಾಭಾರತ, ರಾಮಾಯಣಗಳ ಕಲ್ಪಿತ ಕಥೆಗಳನ್ನೂ-ಸಹ ಕೇಳಬಾರದು ಕಷಾಯ ಉತ್ಪನ್ನ ಮಾಡುವಂಥ ಮುಂಗೋಪಿಯಾದವನ ಮಾತುಗಳನ್ನೂ, ಅಭಿಮಾನಿ ಪುರುಷನ ಗರ್ವದಿಂದ ತುಂಬಿದ ನುಡಿಗಳನ್ನೂ, ಮೋಸಗಾರನ ಕುಟಿಲ ವಚನಗಳನ್ನೂ, ಲೋಭಿಯ ಲೋಭವನ್ನು ಉತ್ಪನ್ನ ಮಾಡುವಂಥ ಸಂಭಾಷಣೆಯನ್ನೂ, ಮದ್ಯ ಮಾಂಸ ಮೊದಲಾದ ಅಭಕ್ಷ್ಯ ಭಕ್ಷಕನು ತಾನು ತಿನ್ನುವ ಪದಾರ್ಥಗಳ ರಸಸ್ವಾದವನ್ನು ವರ್ಣಿಸಿ ಹೇಳುವದನ್ನೂ ಸಹ ಕೇಳಬಾರದು. ಅದರಂತೆ ಮದ್ಯ, ಗಾಂಜಿ, ತಂಬಾಕುಗಳನ್ನು ಪ್ರಶಂಸೆ ಮಾಡುವ ಮಾತುಗಳನ್ನೂ ಕೇಳಕೂಡದು. ಧರ್ಮವಿಲ್ಲ, ಪರಲೋಕವಿಲ್ಲ, ಏನೂ ಇಲ್ಲ ಎಂದು ಪ್ರತಿಪಾದಿಸುವ ನಾಸ್ತಿಕರ ವಚನಗಳು ಪಾಪಬಂಧಕ್ಕೆ ಕಾರಣವೆಂದು ಅವುಗಳನ್ನೂ ಕೇಳಬಾರದು ಕಾರಣ-ವಿಲ್ಲದೆ ಆರಂಭ ಮಾಡಕೂಡದು ವಿಸಂವಾದ ನಡೆಯಿಸಬಾರದು

ಭೂಮಿಯ ಮೇಲೆ ಪದಾರ್ಥವನ್ನು ಇಡುವಾಗ ಹಾಗೂ ಎತ್ತುವಾಗ ಸಾವಧಾನತೆಯಿಂದ ಇರಬೇಕು. ಕಸಕಡ್ಡಿ, ಕೆಸರು, ಮುಳ್ಳು, ಹೊಲಸು, ಮಲ, ಮೂತ್ರ, ಉಗುಳು, ಕಫ, ಎಂಜಲು, ನೀರು, ಬೆಂಕಿ, ದೀಪ ಮೊದಲಾದ ಪದಾರ್ಥಗಳನ್ನು ಭೂಮಿಯನ್ನೂ ನೋಡದೆ ಅಕಸ್ಮಾತ್ ಇಡಕೂಡದು ಅವಸರದಿಂದ ಕಲ್ಲು, ಕಟ್ಟಿಗೆ, ಆಸನ, ಹಾಸಿಗೆ, ಪಲಂಗ, ಧಾತುವಿನ ಪಾತ್ರೆ, ಮಂಚ, ಮಸಿ, ವಸ್ತ್ರ ಮೊದಲಾದ ಪದಾರ್ಥಗಳನ್ನು ನೆಲವನ್ನು ತಿಕ್ಕುವಂತೆ ಮಾಡಿ, ಎತ್ತಬಾರದು. ಇಲ್ಲವೆ ಸರಿಸಕೂಡದು ಸರಿಸುವದರಿಂದ ವಿನಾಕರಣ ಅನೇಕ ಜೀವಿಗಳ ಹಿಂಸೆಯು ಆಗುತ್ತದೆ ಅದು ನಾವು ಮಾಡುವ ಕಾರ್ಯದಲ್ಲಿ ಸಾವಧಾನತೆಯನ್ನು ವಹಿಸದುದಕ್ಕೆ ಸಂಭವಿಸುತ್ತದೆ.

ಅದರಿಂದ ಯಾವಾಗಲೂ ಯಾವದೇ ವಸ್ತುವನ್ನು ಇಡುವಾಗಲೂ ತಕ್ಕೊಳ್ಳುವಾಗಲೂ ಯತ್ನಾಚಾರ ಪೂರ್ವಕ ಕ್ರಿಯೆಯನ್ನು ಮಾಡುವ ಎಚ್ಚರಿಕೆಯನ್ನು ವಹಿಸಬೇಕು ಕಾರಣವಿಲ್ಲದೆ ನೆಲವನ್ನು ಕರೆಯುತ್ತ ಕೂಡುವುದು, ಗಿಡದ ಕುಡಿಗಳನ್ನು ಕಡಿಯುವುದು, ಹಸರು ಹುಲ್ಲನ್ನು ಕಿತ್ತುವುದು, ಮುರಿಯುವುದು, ಕೆತ್ತುವುದು, ಗಿಡದ ಎಲೆ ಹಣ್ಣುಗಳನ್ನು ಹರಿಯುವುದು, ಸೀಳುವುದು, ನೀರು ಹೊಯ್ಯುವುದು—ಇವೇ ಮೊದಲಾದ ಕ್ರಿಯೆಗಳನ್ನು ಪಾಪದ ಹೆದರಿಕೆಯನ್ನು ಇಟ್ಟುಕೊಂಡು, ಮಾಡುವ ಎಚ್ಚರಿಕೆಯನ್ನು ವಹಿಸಬೇಕು ಮನೆತನದ ಜೀವನದಲ್ಲಿ ಎಷ್ಟು ವಸ್ತು, ಪಾತ್ರೆ ಮೊದಲಾದವುಗಳನ್ನು ತಾವು ಉಪಯೋಗಿಸುವದಿದೆಯೋ ಅವೆಲ್ಲವುಗಳನ್ನೂ ನೋಡಿ, ಚೆನ್ನಾಗಿ ನಿರೀಕ್ಷಿಸಿ, ಬಹಳ ಎಚ್ಚರಿಕೆಯಿಂದ ತಕ್ಕೊಳ್ಳಬೇಕು ಮತ್ತು ಇಡಬೇಕು. ಒಟ್ಟಾರೆ ಯಾವುದರಿಂದ, ತಮ್ಮಿಂದ ಹಿಂಸೆ-ಯಾಗುವದಿಲ್ಲವೋ—ಅರ್ಥಾತ್ ಯಾವ ಜೀವಕ್ಕೂ ದುಃಖವಾಗದಂತೆ—ತಮ್ಮ ಆಚರಣೆಯನ್ನೂ ಇಟ್ಟುಕೊಳ್ಳಬೇಕು.

**ಊಟದಲ್ಲಿಯೂ ವಚನದಲ್ಲಿಯೂ ಸಾವಧಾನತೆಯನ್ನು ವಹಿಸಬೇಕು.** ಊಟ, ನೀರು ಮೊದಲಾದವುಗಳನ್ನು ಕುಡಿಯುವಿಕೆ, ಔಷಧ, ಪಕ್ವಾನ್ನ ಇವುಗಳನ್ನೆಲ್ಲ ಚೆನ್ನಾಗಿ ನೋಡದ ಹೊರತಾಗಿ ತಿನ್ನಕೂಡದು. ಚೆನ್ನಾಗಿ ಪ್ರತ್ಯಕ್ಷ ನೋಡಿಯೇ ಸ್ವೀಕರಿಸಬೇಕು ಅವಸರದಿಂದಲೂ ಆಲಸ್ಯದಿಂದಲೂ ಪದಾರ್ಥಗಳನ್ನು ಪೂರ್ಣ ನೋಡದೆ ಊಟಮಾಡಬಾರದು ಹೋಗುವಾಗ, ಬರುವಾಗ ತಮ್ಮ ಕಾಲ ಕೆಳಗೆ ಕ್ರಿಮಿಗಳು ಸಿಕ್ಕಿ ಸಾಯದಂತೆ ನೆಲವನ್ನು ನೋಡುತ್ತ ನಡೆಯಬೇಕು ಸಾವಕಾಶ ನಡೆಯಬೇಕು ಇದರಿಂದ ದಯಾಭಾವದ ಪೋಷಣೆಯಾಗಿ, ತಮ್ಮ ಶರೀರವೂ ಸುರಕ್ಷಿತವಾಗಿರುತ್ತದೆ ಹಿತಾಹಿತದ ವಿಚಾರಮಾಡದೆ, ಪಾತ್ರಾಪಾತ್ರಗಳ ವಿಚಾರಮಾಡದೆ ಯಾವುದನ್ನೂ ಒಮ್ಮೆಲೇ ಮಾತನಾಡಕೂಡದು ಮಾತನಾಡುವ ಪ್ರಸಂಗವೇ ಬಂದಲ್ಲಿ ಅದರೊಳಗಿನ ಗುಣ-ದೋಷಗಳ ವಿಚಾರಮಾಡಿ, ಮಾತನಾಡಬೇಕು ತಮಗೆ ಯಾರಾದರೂ ಏನಾದರೂ ಕೇಳಿದರೂ ಅದಕ್ಕೆ ಒಮ್ಮೆಲೇ ಉತ್ತರ ಕೊಡಬಾರದು ಈ ವಿಷಯದಲ್ಲಿ ವಿಚಾರಮಾಡಿ ತಮಗೆ ಉತ್ತರಕೊಡುವೆನೆಂದು ಹೇಳಬೇಕು ತರುವಾಯ ತಮಗೆ ಅವಕಾಶವಿದ್ದಂತೆ ವಿಚಾರಿಸಿ, ನಿಶ್ಚಿತ ವೇಳೆಯಲ್ಲಿ ಧರ್ಮ, ಅರ್ಥ, ಕಾಮಗಳಿಗೆ ವಿರುದ್ಧವಾಗದಂತೆ ವಿನಯದಿಂದ ಅವರ ಪ್ರಶ್ನೆಗೆ ಉತ್ತರಕೊಡುವುದು ಅವಸರದಲ್ಲಿ ಉತ್ತರಕೊಡುವುದರಿಂದ ತಮ್ಮ ಬಾಯಿಂದ ಯಾವ ಶಬ್ದಗಳು ಹೊರಡಬಹುದೆಂಬುದರ ಭರವಸೆಯು ಇರುವದಿಲ್ಲ ಅಲ್ಲದೆ ಕಷಾಯದ ಉದಯದಿಂದ ಯೋಗ್ಯಾಯೋಗ್ಯದ ವಿಚಾರವೂ ಉಳಿಯುವದಿಲ್ಲ ಅದರಿಂದ ಮಾತನಾಡುವವರಿಗೆ ಪೂರ್ಣವಾಗಿ ಮಾತನಾಡಲಿಕ್ಕೆ ಕೊಡಬೇಕು, ಅದನ್ನು ಶಾಂತರೀತಿಯಿಂದ ಕೇಳಿಕೊಳ್ಳಬೇಕು, ಅವರ ಸಂಪೂರ್ಣ ಅಭಿಪ್ರಾಯವನ್ನು ಗ್ರಹಿಸಬೇಕು ಆ ಮೇಲೆ ಅದಕ್ಕೆ ಉತ್ತರಕೊಡಬೇಕು. ಯಾವಾಗಲೂ ಒಂದೇ ಮಾತಿನ ಹಟಹಿಡಿದು ಏಕಾಂತವಾದಿಯಾಗಕೂಡದು. ಇದರಿಂದಲೂ ಪಕ್ಷಪಾತಮಾಡುವುದರಿಂದಲೂ ದೋಷವು ಸಂಭವಿಸುತ್ತದೆ ಈ ಪ್ರಕಾರ ಇಹ-ಪರಲೋಕದ ಸುಖಕ್ಕಾಗಿ ಪ್ರಮಾದಚರ್ಯಾ ಎಂಬ ಹೆಸರಿನ ಅನರ್ಥದಂಡದ ತ್ಯಾಗಮಾಡಬೇಕು. ಅನರ್ಥದಂಡದಲ್ಲಿ ಯಾವ ಯಾವ ಸಂಗತಿಗಳು ಸಮಾವೇಶಗೊಳ್ಳುತ್ತವೆಂಬುದರ ಕಲ್ಪನೆಯು ಮೇಲಿನ ವಿವರಣೆಯಿಂದ ಸ್ವಲ್ಪ ಬರಬಹುದಾಗಿದೆ. ಅದರಿಂದ ಅಂಥ ಹಾಗೂ ಅದಕ್ಕೆ ಸಮಾನವಾಗಿರುವ—ನಿರರ್ಥಕವಾಗಿ ಸಂಭವಿಸುವ ಕ್ರಿಯೆಗಳನ್ನು ತ್ಯಾಗಮಾಡು-ವುದರಿಂದ ಮನುಷ್ಯನಿಗೆ ಅನರ್ಥದಂಡ ವ್ರತವು ಸಂಭವಿಸುತ್ತದೆ

**ಜೂಜಿನ ತ್ಯಾಗ.** ಅನರ್ಥದಂಡದಲ್ಲಿ ಜೂಜಾಡುವುದು ಎಲ್ಲಕ್ಕೂ ಹೆಚ್ಚಿಗೆ ಅನರ್ಥಕಾರಿಯಾಗಿದೆ. ಎಲ್ಲ ವ್ಯಸನಗಳಲ್ಲಿ ಜೂಜು ಮುಖ್ಯವಾಗಿದೆ. ಅದು ಎಲ್ಲ ಪಾಪಗಳ ಸಂಕೇತ ಸ್ಥಾನವು. ಇದರಿಂದ ಅತ್ಯಂತ ಸಂಕಟವು ಪ್ರಾಪ್ತವಾಗುತ್ತದೆ ಇದು ಎಲ್ಲ ಅನೀತಿಗಳಲ್ಲಿ ದೊಡ್ಡದಾಗಿದೆ ಇದರ ಪರಿಣಾಮವೂ ಬಹಳ ಕೆಡುಕಾಗಿದೆ ತಮ್ಮ ಸಂಪೂರ್ಣ ಮನೆಮಾರು, ಧನ ದೌಲತ್ತುಗಳನ್ನು ಹಾಳುಮಾಡಿಯೂ ಇನ್ನೊಬ್ಬರ ಧನವನ್ನು ಅಪಹರಿಸುವ ಇಚ್ಛೆಯೂ ಜೂಜಿನಿಂದ ಉತ್ಪನ್ನವಾಗುತ್ತದೆ ಜೂಜುಗಾರನಿಗೆ ಅತ್ಯಂತ ಲೋಭವು ಉತ್ಪನ್ನ-ವಾಗುತ್ತದೆ. ಅವನು ಹಗಲಿರುಳೂ ಯಾವುದೇ ರೀತಿಯಿಂದಲೇ ಆಗಲಿ, ಅನ್ಯರ ಧನವನ್ನು ಸಂಪಾದಿಸಬೇಕೆಂದು ಚಿಂತಿಸುತ್ತ ಇರುವನು ತನ್ನ ಧನ ಹೋದರೆ ಹೋಗಲಿ, ಅಪಕೀರ್ತಿ ಬಂದರೂ ಬರಲಿ, ಬಡತನ ಬಂದರೂ ಅಡ್ಡಿಯಿಲ್ಲ ಆದರೆ ನಾನು ಎರಡನೆಯವರ ಧನವನ್ನು ಗೆದ್ದೇ ತೀರಬೇಕು ಅಂದರೇನೇ ನನ್ನ ಜನ್ಮವು ಸಫಲ ವಾಗುವುದು ಇದೇ ಅವನ ವಿಚಾರವಾಗಿರುತ್ತದೆ ಲೋಭ ಕಷಾಯವು ತೀವ್ರವಾಗಿರುವುದು ದೊಡ್ಡ ಹಿಂಸೆಯಾಗಿದೆ. ಜೂಜಿನ ಪರಿಣಾಮವು ನಿರ್ದಯತೆಯಾಗಿದೆ. ಅವನು ಯಾವಾಗಲೂ ಎರಡನೆಯವರ ಹಾನಿಯನ್ನು ಬಯಸುವನು.

ಜೂಜಿನಲ್ಲಿ ಧನವು ಹೋಯಿತೆಂದರೆ ಅವನು ಕಳವುಮಾಡಲು ಪ್ರವೃತ್ತನಾಗುತ್ತಾನೆ. ಅವನು ಇಷ್ಟರಿಂದಲೇ ನಿಲ್ಲುವದಿಲ್ಲ ಅದಕ್ಕೂ ಮುಂದೆ ಅವನು ಸಾಗುವನು. ಕಳವು ಮಾಡಿಯೂ ತನಗೆ ಸಿಗಬೇಕಷ್ಟು ಧನವು ಸಿಗದಿದ್ದರೆ ಹೆಚ್ಚಿನ ಧನವನ್ನು ಪಡೆಯುವದಕ್ಕಾಗಿ ಅವನು ಮನುಷ್ಯರ ಕೊಲೆಯನ್ನೂ ಮಾಡುವನು. ಪರಸ್ಪರದಲ್ಲಿಯೂ ಜೂಜುಗಾರರು ದುಃಖವನ್ನು ಕೊಡುತ್ತಾರೆ. ತಮ್ಮ ತಮ್ಮಲ್ಲಿ ಹೊಡೆದಾಡುತ್ತಾರೆ. ತಮ್ಮೊಳಗೂ ಕಪಟತನದಿಂದ ನಡೆದು ಮೋಸಗೊಳಿಸುತ್ತಾರೆ ತಾವು ಪ್ರೀತಿಸುವವರಿಂದಲೂ ಕಪಟಾಚಾರದಿಂದ ಧನವನ್ನು ಅಪಹರಿಸುತ್ತಾರೆ. ಜೂಜು ಇದು ಕಪಟದ ಅಗ್ರಸ್ಥಾನವಾಗಿದೆ ಇದರಲ್ಲಿ ಸಾವಿರಾರು ಯುಕ್ತಿ-ಪ್ರಯುಕ್ತಿಗಳನ್ನು ಹೂಡಿ ಪರಸ್ಪರರನ್ನು ಮೋಸಗೊಳಿಸುವ ಕ್ರಮವು ಒಂದೇ ಸವನೆ ಚಕ್ರವಂತೆ ನಡೆದಿರುತ್ತದೆ ಜೂಜಿನ ವ್ಯಸನದಲ್ಲಿ ತಲ್ಲೀನನಾದ ಮನುಷ್ಯನು ತನ್ನ ಮಗ, ಹೆಂಡತಿ, ಮಗಳು ಇವರನ್ನು ಸಹ ಜಿದ್ದಿಗೆ ಹಚ್ಚುವನು, ಅದರಲ್ಲಿ ಸೋತರೆ ಮಗಳು, ಹೆಂಡತಿ, ಮಗನನ್ನು ಸಹ ಕೊಟ್ಟು ಬಿಡುವನು ಜೂಜುಗಾರನು ತನ್ನ ಮಗಳನ್ನು ಬಡವನೂ ವ್ಯಸನಿಯೂ ಆದಂಥವನಿಗೆ ಮದುವೆಮಾಡಿ ಕೊಡುವನು ಜೂಜಾಟದ ನಾದದಲ್ಲಿ ತನ್ನ ಮನೆಯನ್ನು ಒತ್ತೆಹಾಕುವನು; ಇಲ್ಲವೆ ಮಾರುವನು ಲಕ್ಷಾಧೀಶನಿದ್ದರೂ ಈ ವ್ಯಸನದಿಂದ ಭಿಕ್ಷುಕನಾಗುವನು ಇದರಿಂದ ಅವನಿಗೆ ಭಯಂಕರ ಆರ್ತ ರೌದ್ರಧ್ಯಾನವು ಸಂಭವಿಸುವವು. ಅಲ್ಲದೆ ಮರಣಾನಂತರ ದುರ್ಗತಿಯು ಪ್ರಾಪ್ತವಾಗುತ್ತದೆ ಒಂದು ವೇಳೆ ಜೂಜಿನಲ್ಲಿ ದುಡ್ಡು ಸಿಕ್ಕರೆ ತನ್ನ ಜಾಣತನದ ಬಲುವಾಗಿ ಗರ್ವಪಡುತ್ತಾನೆ ಅವನ ಧನವು ಕುಮಾರ್ಗದಲ್ಲಿಯೇ ವ್ಯಯವಾಗುವುದು. ಅವನು ಮಹಾರೌದ್ರ ಧ್ಯಾನ್ಯದ ಪಶಗೊಳ್ಳುವನು. ಸತ್ತಮೇಲೆ ಕುಯೋನಿಯಲ್ಲಿ ಭ್ರಮಣಮಾಡಬೇಕಾಗುತ್ತದೆ. ಜೂಜುಗಾರನು ಸೆರೆ ಸಿಂದಿಗಳನ್ನು ಕುಡಿಯುತ್ತಾನೆ ಗಾಂಜೆಯನ್ನು ಸೇದುತ್ತಾನೆ ವೇಶ್ಯಾಸಕ್ತನಾಗುವನು ಅವನ ದ್ರವ್ಯವು ಸತ್ಕಾರ್ಯ-ದಲ್ಲಿ ವ್ಯಯವಾಗುವದಿಲ್ಲ ಜೂಜುಗಾರನಿಗೆ ನ್ಯಾಯದಿಂದ ಧನವನ್ನು ಗಳಿಸಿ, ಜೀವಿಸಲಿಕ್ಕೆ ಬರುವದಿಲ್ಲ ಜೂಜುಗಾರನ ವಿಶ್ವಾಸವನ್ನು ಜಗತ್ತಿನಲ್ಲಿ ಯಾರೂ ಹಿಡಿಯುವದಿಲ್ಲ ಅವನ ಪತ್ತು ಇರುವದಿಲ್ಲ ಅವನಿಗೆ ಯಾರೂ ಹಣವನ್ನು ಕೊಡುವದಿಲ್ಲ ಜೂಜುಗಾರನು ಎಂದೂ ಸತ್ಯವನ್ನು ನುಡಿಯಲಾರನು ಅವನ ಮನಸ್ಸಿನಲ್ಲಿ ಎಂದೂ ಶುಭ ಪರಿಣಾಮವು ಉತ್ಪನ್ನವಾಗುವದಿಲ್ಲ. ತಮ್ಮ ಪೂರ್ವಾರ್ಜಿತ ಕರ್ಮಕ್ಕೆ ಅನುಸರಿಸಿ, ನ್ಯಾಯಮಾರ್ಗದಿಂದ ದೊರೆಯುವ ತನ್ನ ಧನಕ್ಕೆ ಅವನೆಂದೂ ಸಂತುಷ್ಟನಾಗಿರುವದಿಲ್ಲ ಅವನು ಒಬ್ಬನೇ ಸಿಕ್ಕ ಮನುಷ್ಯನನ್ನು ಹೊಡೆದು ಧನವನ್ನು ಅಪಹರಿಸುವನು. ತನ್ನ ಸಮೀಪದ ಆಪ್ತವರ್ಗದ ಜನರಿದ್ದರೂ ಸಹ ಅವರನ್ನು ಏಕಾಂತದಲ್ಲಿ ಸಂಧಿಸಿ, ಬೆದರಿಸಿ ಆಭರಣ ಮೊದಲಾದವುಗಳನ್ನು ಕಸಿದುಕೊಳ್ಳುತ್ತಾನೆ ಜೂಜುಗಾರನ ಮೇಲೆ ವಿಶ್ವಾಸವನ್ನು ಮೂರ್ಖ ಮನುಷ್ಯನೂ ಸಹ ಇಡುವದಿಲ್ಲ. ಪರಧನವನ್ನು ಸಂಪಾದಿಸಬೇಕೆಂಬ ತೀವ್ರ ಇಚ್ಛೆಯಿಂದ ಅವನು ಕುದೇವರಿಗೆ ಮುಡಿವು ಇಡುವನು, ವ್ರತವನ್ನು ಮಾಡುವನು ಮಿಥ್ಯಾಧರ್ಮವನ್ನು ಧಾರಣಮಾಡುವನು. ಸಂತೋಷ, ಶೀಲ, ನಿರಾಕುಲತೆ ಇವೇ ಮೊದಲಾದ ಸದ್ಗುಣಗಳನ್ನೂ ಸಹ ತ್ಯಜಿಸುವನು. ಅತಿ ಲೋಭದಿಂದ ಅವನ ಬುದ್ಧಿಯು ವಿಪರೀತವಾಗಿರುತ್ತದೆ ಪರಮಾರ್ಥದ ಅರಿವೂ ಸಹ ಅವನಿಗೆ ಉಳಿಯುವದಿಲ್ಲ ಧರ್ಮದ ಮೇಲೆ ಶ್ರದ್ಧೆಯು ಅವನ ಕನಸಿನಲ್ಲಿಯೂ ಹುಟ್ಟುವದಿಲ್ಲ ಈ ಪ್ರಕಾರ ಎಲ್ಲ ಪಾಪಗಳಿಗೆ ಮೂಲವಾದ ಜೂಜನ್ನು ತ್ಯಾಗಮಾಡಬೇಕು. ಕೋಟ್ಯಾವಧಿ ಉಪಾಯಗಳನ್ನೂ ಮಾಡಿದರೂ ಸಹ ಜೂಜುಗಾರನ ಬುದ್ಧಿಗೆ ಉಂಟಾದ ವಿಕಲ್ಪನೆಗಳು ದೂರವಾಗುವ-ದಿಲ್ಲ. ಅವನಿಗೆ ಪರಲೋಕದಲ್ಲಿ ದುರ್ಗತಿಯು ಪ್ರಾಪ್ತವಾಗುವುದರಲ್ಲಿ ಸಂಶಯವಿಲ್ಲ ಜೂಜುಗಾರನು ತನ್ನ ತೀವ್ರ ಲೋಭದಿಂದಾಗಿ ತನ್ನ ಆತ್ಮ ಘಾತವನ್ನು ಮಾಡಿಕೊಂಡಿರುವನೆಂದು ತಿಳಿಯಬೇಕು

ಗಂಜೀಫು ಇಸ್ಪೇಟು ಮೊದಲಾದ ಆಟಗಳೂ ಜೂಜು ಎನಿಸುತ್ತವೆ. ಅನೇಕ ಜನರು ಜಿದ್ದಿಗೆ ದುಡ್ಡನ್ನು ಇಟ್ಟು, ಗೆಲ್ಲುವುದನ್ನೂ ಸೋಲುವುದನ್ನೂ ಮಾಡುತ್ತ ಇರುತ್ತಾರೆ. ಮಾನವ ಜನ್ಮವನ್ನು ವ್ಯರ್ಥ ಕಳೆಯುವ ಅಜ್ಞಾನಿ ಜನರು ದುಡ್ಡನ್ನು ಹಚ್ಚಿ ಜೂಜನ್ನು ಆಡದಿದ್ದರೂ ಸಹ ಕ್ರೀಡೆಯೆಂದು ಪಗಡಿ, ಗಂಜೀಫು, ಇಸ್ಪೇಟು ಮೊದಲಾದವುಗಳನ್ನು ಆಡುತ್ತಾರೆ ಇವರಲ್ಲಿಯ ಸೋಲು-ಗೆಲವುಗಳಿಂದ ದುಃಖ ಸುಖಗಳನ್ನೂ ಅನುಭವಿಸುತ್ತಾರೆ, ಅಸೂಯೆ, ಈರ್ಷೆಗಳನ್ನೂ ತಾಳುತ್ತಾರೆ. ಇದರಿಂದ ಅವರಿಗೆ ರಾಗದ್ವೇಷಗಳೂ ಹರ್ಷ-ವಿಷಾದಗಳೂ ಬಹಳಷ್ಟು ಉತ್ಪನ್ನವಾಗುತ್ತವೆ. ಆಡುತ್ತಿರುವಾಗ ಅವರು ಅನೇಕ ಪ್ರಕಾರದ ಕಪಟಯುಕ್ತಿಗಳನ್ನು ಹೂಡುತ್ತಾರೆ ಆಡುತ್ತಾಡುತ್ತ ತಂದೆ ಮಕ್ಕಳೂ ಸಹ ತಮ್ಮ ತಮ್ಮಲ್ಲಿ ಜಗಳ ಆಡುತ್ತಾರೆ ಆಟಗಳಲ್ಲಿ ಸೋಲು ಗೆಲುವುಗಳಾದಂತೆ ಅವರ ಪರಿಣಾಮದಲ್ಲಿಯೂ ತೀವ್ರತ್ವವು ಉತ್ಪನ್ನವಾಗುತ್ತದೆ. ಇದೊಂದು ಬಹಳ ಕೆಟ್ಟ

ವ್ಯಸನವಾಗಿದೆ. ಇದಕ್ಕೆ ಆಧೀನನಾದವನ ವ್ಯವಹಾರ, ವ್ಯವಹಾರದೊಳಗಿನ ಬರವಣಿಗೆ, ಸೇವೆ ಮೊದಲಾದ ಎಲ್ಲ ಕಾರ್ಯಗಳೂ ದುರ್ಲಕ್ಷ್ಯವಾಗುವುದರಿಂದ ಕೆಟ್ಟುಹೋಗುತ್ತವೆ ಅಂದರೂ ಅವನು ಆಡುವದನ್ನು ಬಿಡುವದಿಲ್ಲ. ದ್ಯೂತಕ್ರೀಡೆಯನ್ನು ಆಡುವವನಿಗೆ ಎರಡನೆಯ ಯಾವ ಉದ್ಯೋಗವೂ ಬರುವದಿಲ್ಲ ಅವನ ಸಮೀಪದಲ್ಲಿ ಬಡತನವು ಬಂದು ನಿಂತಿದೆಯೆಂದು ತಿಳಿಯಬೇಕು ಜೂಜುಗಾರನು ನೀಚ ಜನರ ಸಂಗತಿಯನ್ನು ಮಾಡುವನು ಆ ವೇಳೆಯಲ್ಲಿ ಅವನ ಗುಣಾವಗುಣಗಳ ವಿಚಾರಮಾಡುವ ಶಕ್ತಿಯೂ ಸಹ ಇವನಲ್ಲಿ ಉಳಿಯುವದಿಲ್ಲ ಅಗಸರು, ನಾವಲಿಗರು, ಕಟುಕರು ಇವರು ಬಹುತರ ದ್ಯೂತಕ್ರೀಡೆಯಲ್ಲಿ ಮಗ್ನರಾದವರೇ ಹೆಚ್ಚಾಗಿರುತ್ತಾರೆ ಯಾರ ಶರೀರದಿಂದ ದುರ್ಗಂಧವು ಹೊರಸೂಸುತ್ತಿರುವುದೋ, ಯಾರ ಮೈಮೇಲಿಂದ ಪ್ರತ್ಯಕ್ಷ ಹೇನು, ಕೂರಿಗಳು ಉರುಳಿ ಬೀಳುತ್ತಿರುವವೋ ಅಂಥ ಹೊಲಸು ವ್ಯಕ್ತಿಯೊಡನೆ ಸಹ ಜೂಜುಗಾರನು ಆಟವಾಡುತ್ತ ಇರುತ್ತಾನೆ ಉಳಿದ ಅಧಮ ಜನರು ಎಲ್ಲಿ ಹೋಗಿ ಕೂಡುವರೊ ಅಲ್ಲಿ ಹೋಗಿ ಕೂಡುವನು ದಾರಿಯಿಂದ ಹೋಗುವಾಗಲೂ ಸಹ ಇಂಥ ಆಟಗಳು ಎಲ್ಲಿಯಾದರೂ ನಡೆದಿದ್ದರೆ ಅಲ್ಲಿಯೇ ನೋಡುತ್ತ ನಿಲ್ಲುವನು ಯಾರೂ ಕೂಡಲಿಕ್ಕೆ ಹೇಳದಿದ್ದರೂ ಅಲ್ಲಿ ಕೂಡಲಿಕ್ಕೆ ಸ್ಥಳವಿಲ್ಲದಿದ್ದರೂ ಸಹ ನಿಂತಲ್ಲಿಯೇ ನಿಂತು, ಉತ್ಸುಕತೆಯಿಂದ ನೋಡುತ್ತಿರುತ್ತಾನೆ ಅವನ ಈ ವ್ಯಸನದ ನಾದಿನಲ್ಲಿ ತಿನ್ನುಣ್ಣುವುದು, ಕೊಡ-ಕೊಳ್ಳುವುದು ಇವಾವುದರ ಕಡೆಗೆ ಲಕ್ಷ್ಯವೂ ಸಹ ಹರಿಯುವದಿಲ್ಲ, ಅವನು ಮಾಂಸಭಕ್ಷಕರೂ ನೀಚ ಕ್ರಿಯೆಗಳನ್ನು ಮಾಡುವವರೂ ಆದ ಜನರಲ್ಲಿ ಸಮಾವೇಶವಾಗಿ, ಸಮರಸಭಾವದಿಂದ ಇದ್ದು ಆಟವನ್ನು ನೋಡು-ತ್ತಿರುತ್ತಾನೆ ಪ್ರತ್ಯಕ್ಷ ತಂದೆ ತಾಯಂದಿರು ಸತ್ತರೂ ಸಹ ಅವನು ತನ್ನ ಆಟವನ್ನು ಬಿಟ್ಟು ಏಳುವದಿಲ್ಲ. ಇಂಥ ಅವನ ತೀವ್ರ ಪರಿಣಾಮದಿಂದ ಅವನಿಗೆ ನರಕ-ತಿರ್ಯಂಚ ಗತಿಗಳ ಬಂಧವೇ ಆಗುತ್ತದೆ. ಯಾವುದರಲ್ಲಿ ಏನೂ ಲಾಭವಾಗುವದಿಲ್ಲವೋ ಕಾರಣವಿಲ್ಲದೆ ಸುಳ್ಳು ವಾದ ವಿವಾದವನ್ನು ಹೂಡಬೇಕಾಗುತ್ತದೆಯೋ ಅಂಥ ಆಟಗಳನ್ನು ಆಡುವುದರಿಂದ ದ್ರವ್ಯದ ಲಾಭಾಲಾಭಗಳುಂಟಾಗುವ ಜೂಜಿನ ಆಟಗಳನ್ನೂ ಆಡುವವರಿಗಿಂತ ಹೆಚ್ಚಾಗಿ ತೀವ್ರ ಪಾಪಬಂಧವಾಗುತ್ತದೆ ನಿಜವಾಗಿಯೂ ಯಾವುದರಿಂದ ಅವನ ಧನ ಹಾನಿಯು ಆಗುತ್ತದೆಯೋ ಅವನು ಒಮ್ಮೊಮ್ಮೆ ಸ್ವಲ್ಪದರಲ್ಲಿ ಜಾಗೃತೆಯಾಗುವ ಸಂಭವವಿರುತ್ತದೆ ಆದರೆ ಯಾವುದರಿಂದ ಕೊಡಕೊಳ್ಳುವ ಸಂಬಂಧವು ಏನೂ ಬರುವದಿಲ್ಲವೋ ಅಂಥ ಆಟಗಳನ್ನು ಹಗಲಿರುಳೂ ಆಡುತ್ತ ಕಳೆಯಬಹುದಾಗಿದೆ ಈ ವ್ಯಸನದಿಂದಾಗಿ ಧರ್ಮದ ಹೆಸರು ಗೊತ್ತಿದ್ದರೂ ಅದು ಸವಿಯೆನಿಸುವದಿಲ್ಲ ಅವನ ಬುದ್ಧಿಯು ವಿಪರೀತವಾಗಿರುತ್ತದೆ ಅದರಿಂದ ಅವನಿಗೆ ಪಾಪಕ್ರಿಯೆ, ಅನ್ಯಾಯ, ಅಸತ್ಯ, ವಿಕಥೆ ಇವುಗಳಲ್ಲಿಯೇ ಮನರಂಜನೆಯಾಗುತ್ತದೆ ವಿಚಾರಮಾಡಿರಿ. ಈ ಮಾನವ ಜನ್ಮ, ಈ ಉತ್ತಮಕುಲ, ಈ ನಿರೋಗಿ ಶರೀರ ಮತ್ತು ಈ ಅಮೂಲ್ಯ ಧರ್ಮ ಇವು ಅನಂತಕಾಲ ಕಳೆದರೂ ಪ್ರಾಪ್ತವಾದುದಿಲ್ಲ ಏನೋ ಅಪೂರ್ವ ಪುಣ್ಯದಿಂದ ಇವೆಲ್ಲವುಗಳು ಕೂಡಿ ಬಂದಿವೆ ಅದರಿಂದ ಈ ಆಯುಷ್ಯದೊಳಗಿನ ಒಂದೊಂದು ಕ್ಷಣವೂ ಸಹ ಮಹತ್ವವುಳ್ಳವು ಅವು ಒಂದೊಂದಕ್ಕೂ ಕೋಟ್ಯಾವಧಿ ರೂಪಾಯಿ ಕೊಟ್ಟರೂ ತಿರುಗಿ ಲಭಿಸಲಾರದು ಇಂಥ ಸುಸಮಯವನ್ನು ಸಿದ್ಧಾಂತ ಶಾಸ್ತ್ರದ ಸ್ವಾಧ್ಯಾಯ, ಜೀವಾದಿ ದ್ರವ್ಯಗಳ ಚರ್ಚೆ, ಅನಿತ್ಯಾ ಶರಣಾದಿ ಹನ್ನೆರಡು ಭಾವನೆಗಳು, ಹದಿನಾರು ಕಾರಣ ಭಾವನೆಗಳು, ಪಂಚ ಪರಮಗುರುಗಳ ನಮಸ್ಕಾರಾತ್ಮಕ ಜಪ, ಅವರ ಸ್ಮರಣ—ಇಂಥ ಯೋಗಗಳಿಂದ ಸಫಲ ಮಾಡುವದನ್ನುಳಿದು, ಇಸ್ಪೀಟು, ಗಂಜೀಪು, ಬುದ್ಧಿಬಳ ಮೊದಲಾದ ಆಟಗಳಲ್ಲಿ ಸುಳ್ಳು ಸುಳ್ಳೇ ಕಾಲಹರಣ ಮಾಡಿದರೆ ಆಯುಷ್ಯವು ವ್ಯರ್ಥವಾಗಿ ಹೋಗುವುದು ಅಲ್ಲದೆ ಧರ್ಮ ಪರಾಙ್ಮುಖರಾಗಿ ಪಾಪವನ್ನು ಕಟ್ಟಿಕೊಂಡು, ಸತ್ತರೆ ನಿಮ್ಮ ಬಾಳುವೆಯು ವ್ಯರ್ಥವಾಗುವುದು ಈ ರೀತಿಯ ದುರ್ಮಾರ್ಗವನ್ನು ಪ್ರವೃತ್ತಗೊಳಿಸುವುದರಿಂದ ಅದರ ಫಲವಾದ ನರಕ ತಿರ್ಯಂಚಾದಿಗಳಲ್ಲಿ ಉತ್ಪನ್ನವಾಗಬೇಕಾಗು-ತ್ತದೆ ಅದನ್ನು ನೀವು ಭೋಗಿಸಬೇಕಾಗುತ್ತದೆ

ಭಗವಂತನು ಪರಮಾಗಮಗಳಲ್ಲಿ ಸಪ್ತವ್ಯಸನಗಳನ್ನು ಯಾವನು ತ್ಯಾಗಮಾಡಿರುವನೋ ಅವನೇ ಧರ್ಮಗ್ರಹಣ ಮಾಡಲಿಕ್ಕೆ ಯೋಗ್ಯನಾಗುತ್ತಾನೆ—ಎಂದು ಹೇಳಿದ್ದಾನೆ ಯಾರಿಗೆ ಈ ವ್ಯಸನಗಳು ಇರುತ್ತವೆಯೋ ಅವರ ಬುದ್ಧಿಯು ಸ್ಥಿರವಾಗಿ ಉಳಿಯುವದಿಲ್ಲ ಅವನು ಯಾವಾಗಲೂ ಪಾಪಕಾರ್ಯಗಳಲ್ಲಿ ನಿಮಗ್ನನಾಗಿರುತ್ತಾನೆ ಅವನ ವೇಳೆಯು ಹೋಗುತ್ತದೆ ಜಗತ್ತಿನಲ್ಲಿ ನ್ಯಾಯ ಅನ್ಯಾಯದಿಂದ ತನ್ನ ಬಾಳುವೆಯನ್ನು ನಾಗಿಸುವುದರಲ್ಲಿ ಅವನ ವೇಳೆಯು ಹೋಗುತ್ತದೆ ಜಗತ್ತಿನಲ್ಲಿ ನ್ಯಾಯ ಮಾರ್ಗದಿಂದ ನಡೆದು, ತನ್ನ ಕುಲಕ್ಕೆ ಯೋಗ್ಯವಾದಂಥ ಷಟ್ ಕರ್ಮಗಳಿಂದ ತನ್ನ ಉಪಜೀವನವನ್ನು ಮಾಡಬೇಕು. ಶುದ್ಧ ಆಹಾರ, ಸಾದಾ ಇರುವಿಕೆ, ನ್ಯಾಯವಾದ ವ್ಯವಹಾರ, ಪ್ರಯೋಜನವಿಲ್ಲದೆ ಅನ್ಯರ ಮನೆಗೆ ಹೋಗದಿರುವುದು,

ಪರಲೋಕ ಪ್ರಾಪ್ತಿಗಾಗಿ ಧರ್ಮಾರ್ಜನೆ ಇವೇ ಕಾರ್ಯಗಳು ಮುಖ್ಯವಾಗಿ ಗೃಹಸ್ಥರು ಮಾಡಲಿಕ್ಕೆ ಯೋಗ್ಯವಾಗಿವೆ. ಈ ಕಾರ್ಯಗಳನ್ನುಳಿದು ಅವನ ಇತರ ಪ್ರವೃತ್ತಿಗಳಿಗೆ ವ್ಯಸನಗಳೆಂದು ಹೇಳಬಹುದಾಗಿದೆ ದ್ಯೂತಕ್ರೀಡೆ, ಮಾಂಸಭಕ್ಷಣ, ಮದ್ಯಪಾನ, ವೇಶ್ಯಾಸೇವನ, ಬೇಟೆ, ಕಳವು, ಪರಸ್ತ್ರೀಗಮನ ಈ ಏಳು ವ್ಯಸನಗಳು ಮಹಾನ್ ಪಾಪಬಂಧಕ್ಕೆ ಕಾರಣವಾಗಿವೆ. ಇಂಥ ವ್ಯಸನಗಳ ಕಡೆಗೆ ಪ್ರವೃತ್ತಗೊಳ್ಳುವುದು ಬಹು ಸುಲಭವಾಗಿದೆ ಆದರೆ ಇವುಗಳಿಂದ ಅಲಿಪ್ತನಾಗಿರುವುದು ಬಹಳ ಕಠಿಣವಾಗಿದೆ ಈ ವ್ಯಸನಗಳಿಂದ ಕಟ್ಟಿದ ಪಾಪವು ಬೇಗನೆ ನಾಶವಾಗುವದಿಲ್ಲ ದ್ಯೂತವ್ಯಸನದ ವಿಷಯದಲ್ಲಿ ವರ್ಣನಮಾಡಿದ ಎಲ್ಲ ಸಂಗತಿಗಳೂ ಜಿದ್ದಿನ ವಿಷಯದಲ್ಲಿಯೂ ಸಮಾವೇಶವಾಗುತ್ತವೆ. ಇದಲ್ಲದೆ ಇತ್ತೀಚೆಗೆ—ಹತ್ತಿಪ್ಪತ್ತು ವರ್ಷಗಳಲ್ಲಿ—ಅನೇಕ ವಸ್ತುಗಳ 'ಸಟ್ಟಾ'ವ್ಯಾಪಾರವು ಆರಂಭವಾಗಿದೆ ಅವುಗಳಲ್ಲಿ ಮಾದಕ ಪದಾರ್ಥಗಳೂ ಇರುತ್ತವೆ ಈ 'ಸಟ್ಟಾ' ವ್ಯವಹಾರದಲ್ಲಿ ಕಡಿಮೆ ಶ್ರಮದಿಂದ ಹೆಚ್ಚು ಧನ ಸಂಪಾದಿಸುವ ಮನೋವೃತ್ತಿಯು ಇರುತ್ತದೆ ಈ ಮೋಹದಿಂದ ಮನಸ್ಸಿನೊಳಗಿನ ಸಂತೋಷ ವೃತ್ತಿಯು ಇಲ್ಲದಂತಾಗುತ್ತದೆ ಇದೂ ಜೂಜಿನಲ್ಲಿಯೇ ಸಮಾವೇಶವಾಗುತ್ತದೆ ಮದ್ಯ, ಮಾಂಸ, ಬೇಟೆಗಳಂತೂ ಜೈನರ ವಂಶದಲ್ಲಿ ಇಲ್ಲವೇ ಇಲ್ಲ, ಆದರೆ ಯಾರಿಗೆ ಈ ವ್ಯಸನ ಹತ್ತುವುದೋ ಅವರನ್ನು ಮಾತ್ರ ಪೂರ್ಣ ವಶಪಡಿಸಿಕೊಂಡು ಬಿಡುವದು

**ಅಭಕ್ಷ್ಯತ್ಯಾಗ.** ಇದಲ್ಲದೆ ಅಭಕ್ಷ್ಯ ಪದಾರ್ಥದ ಭಕ್ಷಣ ಮಾಡಕೂಡದು ಮೈಲಿಗೆಯಾದ ಅನ್ನದ ಊಟ, ತೊಗಲಿನ ಸ್ಪರ್ಶವಾದ ತುಪ್ಪ, ಎಣ್ಣೆ, ನೀರು ಮೊದಲಾದವುಗಳು, ರಾತ್ರಿಯಲ್ಲಿ ಊಟ—ಇವೆಲ್ಲ ಅಭಕ್ಷ್ಯ ದೋಷಗಳೇ ಇದ್ದಂತಿವೆ. ಅಂತಲೇ ಇವುಗಳನ್ನೂ ತ್ಯಜಿಸಬೇಕು. ಭಂಗಿ, ತಂಬಾಕು, ಅಫೂ, ಜರದಾ, ಹುಕ್ಕಾ ಇವೆಲ್ಲವುಗಳಿಂದ ಮನುಷ್ಯನು ಪರಾಧೀನನಾಗುವನು ಇವುಗಳಿಂದ ಜ್ಞಾನವು ನಷ್ಟವಾಗುತ್ತದೆ ಪರಮಾರ್ಥ ಬುದ್ಧಿಯು ಇಲ್ಲದಂತಾಗುತ್ತದೆ. ಆದರಿಂದ ಈ ಪದಾರ್ಥಗಳನ್ನು ಉಪಯೋಗಿಸುವುದು ಮದ್ಯ ಸೇವಿಸಿದಷ್ಟೇ ದೋಷಾರ್ಹವಾಗಿದೆ ಅದಕ್ಕಾಗಿ ಅವುಗಳ ತ್ಯಾಗಮಾಡಬೇಕು.

**ಬೇಟೆಯು ಪರ್ಯಾಯಗಳು.** ಅನ್ಯ ಜೀವಿಗಳ ಮೇಲೆ ದಯೆಯನ್ನು ಮಾಡದೆ ಅವುಗಳ ಉಪ ಜೀವಿಕೆಯನ್ನು ಕೆಡಿಸಿ ಬಿಡುವುದು, ಅವರ ದ್ರವ್ಯವನ್ನು ಎತ್ತಿಹಾಕುವುದು, ಅವರಿಗೆ ದೊಡ್ಡ ದಂಡ ಮಾಡಿಸುವುದು ಇವೆಲ್ಲ ಬೇಟೆಯಾಡಿದಂತೆ ಇವೆ. ಎರಡನೆಯವರ ಮಾನಭಂಗ ಮಾಡಿಸುವುದು, ಅವರ ಮನೆಯನ್ನು ಸುಲಿಯುವುದು ಇವೂ ಕೂಡ ಬೇಟೆಗಿಂತ ಹೆಚ್ಚಿನ ಕೆಟ್ಟ ಕಾರ್ಯಗಳಾಗಿವೆ ಅದಕ್ಕಾಗಿ ಇಂಥ ಕಾರ್ಯಗಳನ್ನು ಮಾಡಕೂಡದು

**ವೇಶ್ಯಾತ್ಯಾಗ.** ವೇಶ್ಯಾಗಮನ ಮಾಡುವವರ ಎಲ್ಲ ಕ್ರಿಯೆಗಳಲ್ಲಿಯೂ ಮನಸ್ಸು ಭ್ರಷ್ಟವಾಗಿರುತ್ತದೆ. ವೇಶ್ಯೆಯು, ಚಾಂಡಾಲ, ಭಿಲ್ಲ, ಹೊಲೆಯ, ಮ್ಲೇಚ್ಛ ಮೊದಲಾದ ಎಲ್ಲ ಜನರ ಕಡೆಯಿಂದ ಉಪಭೋಗಿಸಲ್ಪಡುತ್ತಾಳೆ. ವೇಶ್ಯೆಯು ಮದ್ಯ-ಮಾಂಸಗಳನ್ನು ನಿತ್ಯವೂ ಸೇವಿಸುತ್ತಾಳೆ ಇಂಥ ನೀಚವೂ ಅಧಮವೂ ದ್ರವ್ಯ ಲೋಭಿಯೂ ಆದ ವೇಶ್ಯೆಯ ಅಧರಪಾನವನ್ನು ಮಾಡುವವರ ಜಾತಿ, ಕುಲಾಚಾರಗಳೆಲ್ಲ ಭ್ರಷ್ಟವಾಗುತ್ತವೆ ಅದಕ್ಕಾಗಿ ವೇಶ್ಯೆಯನ್ನು ತ್ಯಜಿಸಬೇಕು ವೇಶ್ಯೆಯನ್ನು ಉಪಭೋಗಿಸುವವರಿಗೆ ಕಳವು, ಜೂಜು, ಮದ್ಯಪಾನ ಮೊದಲಾದ ಎಲ್ಲ ವ್ಯಸನಗಳು ಹತ್ತುತ್ತವೆ ಅವರ ಸಂಪೂರ್ಣ ದ್ರವ್ಯವು ಹಾನಿಗೆ ಒಳಗಾಗುತ್ತದೆ. ಅವರು ಧರ್ಮಪರಾಙ್ಮುಖರಾಗುವರು. ಅವರ ಬುದ್ಧಿಯು ವಿಭ್ರಮೆಗೊಳ್ಳುವುದು ಮಾಯಾಚಾರ, ಅಸತ್ಯ, ಕಪಟ ಮೊದಲಾದವುಗಳನ್ನು ಆಚರಿಸಲಿಕ್ಕೆ ಅವನು ತತ್ಪರನಿರುತ್ತಾನೆ ನಿಂದ್ಯ ಕರ್ಮದ ವಿಷಯದಲ್ಲಿ ಅವನಿಗೆ ಹೇಸಿಗೆ ಇರುವದಿಲ್ಲ. ಅವನಿಗೆ ನಾಚಿಕೆ ಇರುವದಿಲ್ಲ. ವೇಶ್ಯೆಯ ಸ್ವರೂಪ, ಅವಳ ನಡೆನುಡಿ, ಹಾವಭಾವ ಮೊದಲಾದವುಗಳನ್ನೂ ನೋಡುವುದರಲ್ಲಿಯೂ ನೆನೆಯು-ವುದರಲ್ಲಿಯೂ ಮಗ್ನನಾಗಿರುವನು ಅದರಲ್ಲಿಯೇ ಅವನ ಪ್ರೀತಿಯು ಹೆಚ್ಚುತ್ತದೆ. ಕುಲದ ಮರ್ಯಾದೆಯು ಏನೂ ಉಳಿಯುವದಿಲ್ಲ. ವೇಶ್ಯಾಸಕ್ತನು ಸುಂಬಳದಲ್ಲಿ ಸಿಕ್ಕ ನೊಣದಂತೆ ತನ್ನನ್ನು ತಾನು ಬಿಡಿಸಿಕೊಳ್ಳಲಿಕ್ಕೆ ಅಸಮರ್ಥನಾಗುತ್ತಾನೆ

**ಕಳವು.** ಕಳವುಮಾಡುವುದು ಕೂಡ ವ್ಯಸನವೇ ಆಗಿದೆ ಕಳ್ಳನಿಗೆ ಹಗಲಿರುಳೂ ಅನ್ಯರ ಹೆದರಿಕೆಯು ಇರುತ್ತದೆ ಉಳಿದವರಿಗೆ ಕಳ್ಳನ ಹೆದರಿಕೆಯು ಇರುತ್ತದೆ ತನ್ನ ಮಗನು ಕಳ್ಳನಿದ್ದರೆ ಸ್ವತಃ ತಾಯಿಗೂ ಸಹ ಅವನ ಅಂಜಿಕೆಯು ಇರುತ್ತದೆ. ಈ ಲೋಕದಲ್ಲಿ ಕಳ್ಳನ ಮಾನ, ಪ್ರತಿಷ್ಠೆ, ಗೌರವಗಳು ಇಲ್ಲದಂತೆ ಆಗುತ್ತವೆ ರಾಜನು ಕಳ್ಳನಿಗೆ ಕಠೋರ ಶಿಕ್ಷೆಯನ್ನೂ ಕೊಡುವನು ಕಳ್ಳನ ಕೈ, ಕಾಲು, ಕಿವಿ, ಮೂಗು ಮೊದಲಾದ ಅವಯವ

ಗಳನ್ನು ಕಡಿಯಲಾಗುತ್ತದೆ  ಕಳ್ಳನ ಪರಿಣಾಮವು ಯಾವಾಗಲೂ ಶಾಂತವಿರುವದಿಲ್ಲ. ಕಳ್ಳನಿಗೆ ಯೋಗ್ಯಾಯೋಗ್ಯ ಕೃತಿಯ ವಿಚಾರವೇ ಉಳಿಯುವದಿಲ್ಲ. ಅದರಿಂದ ಅವನಿಗೆ ಧರ್ಮಧ್ಯಾನ, ಸ್ವಾಧ್ಯಾಯ, ಧರ್ಮಕಥೆಗಳನ್ನು ಕೇಳುವುದು ಇವೇ ಮೊದಲಾದವುಗಳು ಏನೂ ಆಗುವದಿಲ್ಲ  ಒಂದು ವೇಳೆ ಅವನು ಶಾಸ್ತ್ರವನ್ನೂ ಕೇಳುತ್ತ ಇದ್ದರೂ ಅವನ ಮನಸ್ಸು ಪರದ್ರವ್ಯದ ಕಡೆಗೆ ಧಾವಿಸುತ್ತ ಇರುತ್ತದೆ  ಅವನಿಗೆ ಧರ್ಮದಲ್ಲಿ ಸ್ವಲ್ಪವೂ ಶ್ರದ್ಧೆ ಇರುವದಿಲ್ಲ. ಯಾರಿಗೆ ಜಿನಧರ್ಮದಲ್ಲಿ ಶ್ರದ್ಧೆಯು ಇರುವದೋ ಅವರಿಗೆ ಚಾರಿತ್ರಮೋಹನೀಯ ಕರ್ಮದ ಉದಯದಿಂದ ವ್ರತ, ತ್ಯಾಗ, ಸಂಯಮ ಮೊದಲಾದ ಕ್ರಿಯೆಗಳು ಸಂಭವಿಸದಿದ್ದರೂ ಸಹ ಅನ್ಯಾಯದಿಂದ ಧನವನ್ನೂ ಹೊಂದಬೇಕೆಂಬ ಅಪೇಕ್ಷೆಯು ಮಾತ್ರ ಇರುವದಿಲ್ಲ  ಕಳವುಮಾಡುವುದರಿಂದ ಇಹ-ಪರಲೋಕಗಳೆರಡೂ ಭ್ರಷ್ಟವಾಗುತ್ತವೆಂದು ತಿಳಿದು ಯಾರೂ ಪರಧನವನ್ನು ಅವರು ಕೊಡದೆ ಪಡೆಯುವ ಇಚ್ಛೆಯನ್ನು ಮಾಡಕೂಡದು

ಪರಸ್ತ್ರೀಸೇವನ. ಪರಸ್ತ್ರೀಸೇವನೆಯ ವ್ಯಸನವು ಎಲ್ಲ ಅನರ್ಥದ ಮೂಲವಾಗಿದೆ  ಪರನಾರೀ ಲಂಪಟನಿಗೆ ಇಹ-ಪರಲೋಕಗಳಲ್ಲಿ ಬರುವ ಸಂಕಟ, ಆಪತ್ತಿ, ಅಪಕೀರ್ತಿ, ಅಪಯಶ, ಮರಣ, ರೋಗ, ಅಪವಾದ, ಧನಹಾನಿ, ರಾಜದಂಡ, ಜಗತ್ತಿನ ವೈರ, ದುರ್ಗತಿ ಗಮನ, ಮಾರಣ, ತಾಡನ, ಸೆರೆಮನೆವಾಸ ಇವೇ ಮೊದಲಾದವುಗಳು ಪ್ರಾಪ್ತವಾಗುತ್ತವೆ  ಇವುಗಳ ವರ್ಣನೆಯನ್ನು ಮಾತಿನಿಂದ ಮಾಡುವುದು ಸಾಧ್ಯವಿಲ್ಲ

ಈ ಪ್ರಕಾರ ವರ್ಣಿಸಿದ ಏಳು ವ್ಯಸನಗಳಿಂದ ಅಲಿಪ್ತವಾಗಿರುವುದು ಯೋಗ್ಯವಾಗಿದೆ. ಇವುಗಳನ್ನು ತ್ಯಾಗಮಾಡಿದುದಕ್ಕಾಗಿ ನಮಗೆ ಯಾವ ಹಾನಿಯೂ ಆಗುವದಿಲ್ಲ. ಅಲ್ಲದೆ ಈ ವ್ಯಸನಗಳಿಂದ ದೂರ ಇದ್ದವನಿಗೆ ಎಲ್ಲ ದುಃಖಗಳೂ ಇಲ್ಲದಂತಾಗುತ್ತವೆ  ಅಪಕೀರ್ತಿಯು ನಷ್ಟವಾಗುತ್ತದೆ  ಅವನು ನರಕಾದಿ ದುಃಖಗಳಿಂದ ಮುಕ್ತನಾಗಿ ಸುಖವನ್ನು ಹೊಂದುತ್ತಾನೆ.

ತನಗೆ ಪ್ರಯೋಜನವಿಲ್ಲದೆ ನೆಲನೀರು ವನಸ್ಪತಿವಾಯು ತೇಜಗಳಾ ।
ಘನವಿನಾಶಮಾಳ್ಪುದು ಪ್ರಮಾದಚರ್ಯಮನರ್ಥದಂಡವ್ಯೆದನೆಯ ॥

—ವಿಜಯಣ್ಣ-ದ್ವಾದಶಾನುಪ್ರೇಕ್ಷೆ—ಧರ್ಮಾನುಪ್ರೇಕ್ಷೆ ೩೯.

ಈಗ ಅನರ್ಥದಂಡವ್ರತದ ಅತಿಚಾರಗಳನ್ನು ಸೂಚಿಸಲಿಕ್ಕೆ ಸೂತ್ರವನ್ನು ಹೇಳುತ್ತಾರೆ—

**ಕಂದರ್ಪಂ ಕೌತ್ಕುಚ್ಯಂ ಮೌಖರ್ಯಮತಿಪ್ರಸಾಧನಂ ಪಂಚ ।**
**ಅಸಮೀಕ್ಷ್ಯ ಚಾಧಿಕರಣಂ ವ್ಯತೀತಯೋಽನರ್ಥದಂಡಕೃದ್ವಿರತೇಃ ॥ ೮೧ ॥**[1]

ಅನ್ವಯಾರ್ಥ—(ಕಂದರ್ಪಂ) ಹಾಸ್ಯ ಮಿಶ್ರಿತ ಅಶಿಷ್ಟ ವಚನಗಳನ್ನು ಆಡುವದು. (ಕೌತ್ಕುಚ್ಯಂ) ನಗೆ ಹಾಗೂ ಬೀಭತ್ಸ ಮಾತುಗಳೊಡನೆ ಅಂಗಚೇಷ್ಟೆಯನ್ನು ಮಾಡುವುದು (ಮೌಖರ್ಯಂ) ದಿಟ್ಟತನದಿಂದ

---

1 ಆಯತವರ್ಮನು ಹೀಗೆ ಹೇಳಿದ್ದಾನೆ
ಕಂದ ॥ ಅತಿಚಾರಂ ಕಂದರ್ಪಂ ಸತತಂ ಕೌತ್ಕುಚ್ಯಮಂತೆ ಮೌಖರ್ಯಂ ಸ- ।
ನ್ನುತ ಪ್ರಸಾದನಮತಿನುತದಸಮೀಕ್ಷ್ಯಸಾಧಿಕರಣಮಿವಯ್ದುಂ ॥
ವಚನ—ಅಕ್ಕ್ಯಮನಾಗಲೀಯುದುದೆರಡನೆಯ ಶಿಕ್ಷಾವ್ರತಮಲ್ಲಿ ಸಬೆಗೆ ಯೋಗ್ಯಮಲ್ಲದ ನುಡಿಗಳಂ ನುಡಿವುದುಂ ಕಂದರ್ಪಂ, ಹಾಸದೊಳ್ಕೂಡಿ ನುಡಿವುತ್ತಂ ಕರಚರಣ ಭ್ರೂನಯನನಾಸಿಕಾದಿಗಳಿಂ ವಿಕಾರಸನ್ನೆಗಳಂ ತೋರಿನಲಿದಾಡುವುದು ಕೌತ್ಕುಚ್ಯಂ, ಹಾಸದೊಳ್ಕೂಡಿ ... ಮದ್ಯಪಂಬೊಲನರ್ಥಕ ವಚನಂಗಳಂ ಪಲವಂಗಳಪುವುದು ಮೌಖರ್ಯಂ, ಧೂಟಿಗತನದಿಂ ಮೆಯ್ಯನಾಗಳೆ ಸಮಳುತ್ತಂಮಿಪುರ್ದತಿ ಪ್ರಸಾಧನಂ, ಅರಯ್ಯದಧಿಕಂ ಗೆಯ್ವುದ ಸಮೀಕ್ಷ್ಯಾದಿಕರಣಂ  ಮನೋವಚನಕಾಯದಿಂ ತ್ರಿವಿಧಮಲ್ಲಿ ತನಗೆ ಕರಮೆಯಿಲ್ಲದೆ ನಿರರ್ಥಕ ಕಾವ್ಯಂ (?) ಮೊದಲಾಗೊಡೆಯವಂ ಚಿಂತಿಸುವುದು ಮನದಸಮೀಕ್ಷ್ಯಾಕರಣಂ  ನಿಃಫಲಮಪ್ಪ ಕಲ್ಪಗಬ್ಬಂಗಳಂ ಪೇಳ್ವುದುಂ ನಿಷ್ಠುರ ವಚನಂಗಳಂ ನುಡಿವುದುಂ ವಚನದಸಮೀಕ್ಷ್ಯಾಕಾರಣಂ  ಬಾರ್ತೆಯಲ್ಲದೆ ಪೋಗುತ್ತಂ ಬರುತ್ತಂ ಕುಳಿರುತ್ತಂ ನಿಂದಿರುತ್ತಂ ಸಚ್ಚಿತ್ತಂಗಳಪ್ಪುವನಚಿತ್ತಂಗಳಪ್ಪುವಂ ಪೆಱರೊಡನೆ ಪೋರ್ಕಳಿಯಿಕ್ಕುತಂ ಮೆಯ್ಯೋಸಿಸುತ್ತಂ ಬೊಟ್ಟುವೋರಿಸುತ್ತಂ ಇವು ಮೊದಲಾಗೊಡೆಯ ರಾಗದ್ವೇಷ ಹೇತುಗಳಪ್ಪುವಂ ಗೆಯ್ವುತ್ತಮಿರ್ಪುದು ಕಾಯದ ಸಮೀಕ್ಷ್ಯಾಕರಣಂ.

ವ್ಯರ್ಥ ಬಡಬಡಿಸುವುದು. (ಅತಿ ಪ್ರಸಾಧನಂ) ಅವಶ್ಯಕತೆಗಿಂತ ಹೆಚ್ಚಾಗಿ ಭೋಗೋಪಭೋಗದ ಸಾಮಗ್ರಿಗಳನ್ನೂ ಕೂಡ ಹಾಕುವುದು (ಚ) ಮತ್ತು (ಅಸಮೀಕ್ಷ್ಯ ಅಧಿಕರಣಂ) ವಿಚಾರಮಾಡದೆ ನಿರರ್ಥಕ ಕೆಲಸಮಾಡುತ್ತ ಇರುವದು. (ಪಂಚ)—ಇವು—ಐದು (ಅನರ್ಥದಂಡಕೃದ್ವಿರತೇಃ) ಅನರ್ಥದಂಡ ತ್ಯಾಗ ವ್ರತದ (ವ್ಯತೀತಯಃ) ಅತಿಚಾರಗಳು ಎನಿಸುತ್ತವೆ.

ಅರ್ಥ—ಕಂದರ್ಪ, ಕೌತ್ಕುಚ್ಯ, ಮೌಖರ್ಯ, ಅತಿಪ್ರಸಾಧನ, ಅಸಮೀಕ್ಷ್ಯಾಧಿಕರಣ ಇವು ಐದು ಅನರ್ಥದಂಡ ವ್ರತದ ಅತಿಚಾರಗಳಾಗಿವೆ [ಇಲ್ಲಿ 'ಅತಿಪ್ರಸಾಧನ' ಎಂಬ ಹೆಸರಿನಿಂದ ಉಲ್ಲೇಖಿಸಿದ ಅತಿಚಾರವು ಶ್ರೀ ಉಮಾಸ್ವಾಮಿಯವರು 'ತತ್ತ್ವಾರ್ಥಸೂತ್ರ'ದಲ್ಲಿ ಹೇಳಿದ 'ಉಪಭೋಗ-ಪರಿಭೋಗಾನರ್ಥಕ್ಯ' ಎಂಬ ಹೆಸರಿನ ಅತಿಚಾರಕ್ಕೆ ಸಮಾನವಾಗಿದ್ದು, ಅದರ ಸಂಕ್ಷಿಪ್ತ ಪರ್ಯಾಯನಾಮವಾಗಿದೆ ಸ ಧ]

ವಿಶೇಷಾರ್ಥ—(೧) ಚಾರಿತ್ರಮೋಹನೀಯ ಕರ್ಮದ ಉದಯದಿಂದ ಉತ್ಪನ್ನವಾಗುವ ವಿಶೇಷ ರಾಗಭಾವನೆಯಿಂದ ಕೂಡಿದ ಬೀಭತ್ಸ ವಚನಗಳನ್ನು ಆಡುವುದು ಕಂದರ್ಪವೆನಿಸುತ್ತದೆ (೨) ಅದೇ ಕರ್ಮದ ಉದಯದಿಂದ ಪ್ರಾಪ್ತವಾಗುವ ತೀವ್ರರಾಗದಿಂದ ಬೀಭತ್ಸ ಶಬ್ದಗಳನ್ನು ಉಚ್ಚರಿಸಿ, ಮನ-ವಚನ-ಕಾಯಗಳಿಂದ ನಿಂದ್ಯ ಕ್ರಿಯೆಗಳನ್ನು ಮಾಡುವದಕ್ಕೆ ಕೌತ್ಕುಚ್ಯವೆನ್ನುತ್ತಾರೆ (೩) ನಿರರ್ಥಕವಾಗಿ ಬಡಬಡ ಮಾತನಾಡುವುದಕ್ಕೆ ಮೌಖರ್ಯವೆನ್ನುವರು (೪) ಕಾರಣ ಹಾಗೂ ಆವಶ್ಯಕತೆಗಳು ಇಲ್ಲದೆ ಹೆಚ್ಚಿಗೆ ವಸ್ತುಗಳನ್ನು ಸಂಗ್ರಹಿಸುವುದು ಅತಿಪ್ರಸಾಧನ ಎನಿಸುವುದು (೫) ವಿನಾಕಾರಣ ಮನ-ವಚನ-ಕಾಯಗಳ ಪ್ರವೃತ್ತಿಮಾಡುತ್ತ ಇರುವುದಕ್ಕೆ ಅಸಮೀಕ್ಷ್ಯಾಧಿಕರಣವೆನ್ನುವರು ಇದರಲ್ಲಿ ಮೂರು ಪ್ರಕಾರಗಳು ಇರುತ್ತವೆ. ರಾಗ-ದ್ವೇಷಗಳನ್ನು ಹುಟ್ಟಿಸುವಂಥ ಕಾವ್ಯ, ಪದ್ಯ, ಹಾಡುಗಳನ್ನು ನೆನೆಯುವುದಕ್ಕೆ ಮನ ಅಸಮೀಕ್ಷ್ಯಾಧಿಕರಣವೆನ್ನುವರು ಅನ್ಯರ ಮನ, ವಚನ, ಕಾಯಗಳನ್ನು ಕೆಡಿಸುವಂಥ ಸುಳ್ಳು ಮಾತುಗಳನ್ನು ಹೇಳುವುದು ವಚನ ಅಸಮೀಕ್ಷ್ಯಾಧಿಕರಣ ಎನಿಸುವುದು ಏನೇನೂ ಪ್ರಯೋಜನವಿಲ್ಲದೆ ಹೋಗುವುದು, ಬರುವುದು, ಏಳುವುದು, ಕೂಡುವುದು, ಓಡುವುದು, ಬಡಿಯುವದು, ಬೀಸುವುದು, ಹಣ್ಣು-ಹೂವು-ಎಲೆಗಳನ್ನು ಹರಿಯುವುದು, ಒಡೆಯುವುದು, ಚೆಲ್ಲುವುದು—ಇವೇ ಮೊದಲಾದವುಗಳಿಗೆ ಕಾಯ ಅಸಮೀಕ್ಷ್ಯಾಧಿಕರಣ ಎನ್ನುವರು ಈ ಪ್ರಕಾರ ಅನರ್ಥದಂಡ ವ್ರತದ ಐದು ಅತಿಚಾರಗಳು ಇರುತ್ತವೆ ಅವುಗಳನ್ನು ಬಿಡಬೇಕು

> ವುದಿದ ಸಮೀಕ್ಷ್ಯಾದಿಕರಣ ಮುದಯಿಪ ಕಂದರ್ಪಮಂತೆ ಕೌತ್ಕುಚ್ಯಂ ಪೆ- ।
> ರ್ಚಿದ ಮೌಖರ್ಯಮನರ್ಥಕ್ಯದೊಳ್ ವ್ಯತಿಕ್ರಮಮತಿಪ್ರಸಾ[ಧ]ನ ಸಹಿತಂ ॥
>
> — ಶಾಂತಿನಾಥ-ಸುಕುಮಾರ ಚರಿತಂ ೯-೨೦

ಇನ್ನು ಮುಂದೆ ಭೋಗೋಪಭೋಗಪರಿಮಾಣವ್ರತದ ಸ್ವರೂಪವನ್ನು ಹೇಳುತ್ತಾರೆ—

> ಅಕ್ಷಾರ್ಥಾನಾಂ ಪರಿಸಂಖ್ಯಾನಂ ಭೋಗೋಪಭೋಗಪರಿಮಾಣಮ್ ।
> ಅರ್ಥವತಾಮಪ್ಯವಧೌ ರಾಗರತೀನಾಂ ತನೂಕೃತಯೆ ॥ ೮೨ ॥[1]

ಅನ್ವಯಾರ್ಥ—(ರಾಗರತೀನಾಂ) ರಾಗದ ಉದಯದಿಂದ ಆಗುವ ವಿಷಯದ ಆಸಕ್ತಿಯನ್ನು (ತನೂಕೃತಯೆ) ಕಡಿಮೆ ಮಾಡುವದಕ್ಕಾಗಿ (ಅವಧೌ ಅಪಿ)-ಪರಿಗ್ರಹ ಪರಿಮಾಣ ವ್ರತದ ಮರ್ಯಾದೆಯಲ್ಲಿಯೂ ಕೂಡ

---

[1] ಆಯುತಪವರ್ಮನ ವಿಚಾರ ಹೀಗಿದೆ.

ಕಂದ ॥ ಸಂದಕ್ಷಾರ್ಥಂಗಳನಿನಿತೆಂದು ಪವಕ್ಕಾಡಿರ್ಪುದರ್ಥವತಿಗಳ್ಗಿದು ನಿ- ।
ಸ್ಸಂದೇಹದಿನಕ್ಕುದು ತಾನೆಂದುಂ ಬೋಗೋಪಬೋಗಪರಿಮಿತನಿಯಮಂ ॥

ಪಚನ—ಅಯ್ದುಮಿಂದ್ರಿಯವಿಷಯಂಗಳೆಂ ದನ್ಯರಪ್ಪವರ್ಗಳಿಂದಿನಿತಲ್ಲದೊಲ್ಲೆನೆಂದು ಪವಣ್ಮಾಡಿ ನೆಗಳ್ವುದು ಬೋಗೋಪಭೋಗ ಪರಿಮಾಣಮೆಂಬುದು,

(ಅರ್ಥವತಾಂ) ಪ್ರಯೋಜನವುಳ್ಳ (ಅಕ್ಷಾರ್ಥಾನಾಂ) ಇಂದ್ರಿಯಗಳ ವಿಷಯಗಳನ್ನು (ಪರಿಸಂಖ್ಯಾನಂ) ಪ್ರಮಾಣದಲ್ಲಿ ಕಡಿಮೆ ಮಾಡುವುದು—ಇದಕ್ಕೆ—(ಭೋಗೋಪಭೋಗಪರಿಮಾಣಂ) ಭೋಗೋಪಭೋಗ ಪರಿಮಾಣವ್ರತವೆನ್ನುತ್ತಾರೆ.

ಅರ್ಥ—ಪರಿಗ್ರಹದ ಪರಿಮಾಣವನ್ನು ನಿಶ್ಚಯಮಾಡಿರುತ್ತದೆ ಆದರೆ ಅದರಲ್ಲಿಯೂ ಲಾಲಸೆಯೂ ಕಡಿಮೆಯಾಗಬೇಕೆಂದು ಪ್ರಯೋಜನವುಳ್ಳ ಇಂದ್ರಿಯಗಳ ವಿಷಯದಲ್ಲಿಯೂ ಸಹ ಕೆಲವೊಂದು ಮರ್ಯಾದೆಯನ್ನು ಮಾಡಿ ಇಟ್ಟುಕೊಳ್ಳಬೇಕಾಗುವುದು ಇದಕ್ಕೆ ಭೋಗೋಪಭೋಗ ಪರಿಮಾಣವ್ರತವೆನ್ನುವರು

[ಇಲ್ಲಿ 'ಅಕ್ಷಾರ್ಥಾನಾಂ' ಎಂಬ ಪದದಿಂದ, ಅಸಂಖ್ಯವೂ ಅನಂತವೂ ಆದ-ಸ್ಪರ್ಶನ, ರಸನೆ, ಘ್ರಾಣ, ಚಕ್ಷು ಮತ್ತು ಶ್ರೋತ್ರ ಈ ಐದೂ ಇಂದ್ರಿಯಗಳಿಗೆ-ವಿಷಯವೆನಿಸುವ ಎಲ್ಲ ಪದಾರ್ಥಗಳನ್ನು ಸೂಚಿಸಲಾಗಿದೆ ಇವುಗಳನ್ನು 'ಭೋಗರೂಪ' ಮತ್ತು 'ಉಪಭೋಗರೂಪ' ಎಂದು ಎರಡು ವಿಭಾಗವಾಗಿ ವಿಂಗಡಿಸಲಾಗಿದೆ ಅವುಗಳ ಸ್ವರೂಪವನ್ನು ಮುಂದಿನ ಸೂತ್ರದಲ್ಲಿ ವಿವರಿಸಿದೆ ಈ ಎರಡೂ ಪ್ರಕಾರದ ಪದಾರ್ಥಗಳಲ್ಲಿ, ಈ ವ್ರತವನ್ನು ಸ್ವೀಕರಿಸಿದ ವ್ರತಿಕನು ಎಷ್ಟು ಮಾತ್ರ ಭೋಗೋಪಭೋಗಕ್ಕೆಂದು ಗೊತ್ತುಮಾಡಿಕೊಂಡಿರುವನೋ ಅಷ್ಟು ಮಾತ್ರ ಅವನಿಗೆ ಸೇವ್ಯವೆನಿಸುತ್ತವೆ ಉಳಿದ ಪದಾರ್ಥಗಳೆಲ್ಲ ಅಸೇವ್ಯವೆನಿಸುತ್ತವೆ ಈ ಪ್ರಕಾರ ಸಂಯಮದಿಂದ ನಡೆಯುವುದರಿಂದ ಈ ವ್ರತಿಕನು ತನ್ನ ಅಹಿಂಸೆಯೇ ಮೊದಲಾದ ಮೂಲಗುಣಗಳಲ್ಲಿ ಬಹಳ ದೊಡ್ಡ ಬೆಳವಣಿಗೆಯನ್ನು ಹೊಂದಲಿಕ್ಕೆ ಸಮರ್ಥನಾಗುತ್ತಾನೆ ಇದರ ಉದ್ದೇಶವು ರಾಗಭಾವನೆಯನ್ನು ಕಡಿಮೆ ಮಾಡಲಿಕ್ಕೂ ಇಂದ್ರಿಯ ವಿಷಯದೊಳಗಿನ ಆಸಕ್ತಿಯನ್ನು ಇಲ್ಲದಂತೆ ಮಾಡುವದಕ್ಕೂ ಇರುತ್ತದೆ ಇದನ್ನು ನಾವು ಇಲ್ಲಿ ಮುಖ್ಯವಾಗಿ ಗಮನಿಸಬೇಕು ಈ ಉದ್ದೇಶವನ್ನು ಗಮನಿಸದೆ ಜನರಿಗೆ ತೋರಲೆಂದೂ ಹಿಂದಿನವರು ನಡೆಯುತ್ತ ಬಂದಿರುವರೆಂದೂ ಖ್ಯಾತಿ ಲಾಭ, ಪೂಜೆ-ಪ್ರತಿಷ್ಠೆಗಳಿಗೂ ವ್ರತವನ್ನು ಆಚರಿಸಿದರೆ ಅದು ಸಫಲತೆಯನ್ನು ಹೊಂದುವದಿಲ್ಲ

ಇನ್ನೊಂದು ಮಾತನ್ನು ಇಲ್ಲಿ ಗಮನಿಸಬೇಕು. ಪರಿಗ್ರಹಪರಿಮಾಣ ವ್ರತದಲ್ಲಿ ಸ್ವೀಕರಿಸಿದ ಪದಾರ್ಥಗಳನ್ನುಳಿದು ಇಂದ್ರಿಯಗಳ ವಿಷಯವೆನಿಸುವ ಇತರ ಪದಾರ್ಥಗಳೂ ದಿಗ್ವ್ರತದ ಸೀಮೆಯ ಹೊರಗೆ ಇರುವ ಬೇರೆ ಪದಾರ್ಥಗಳೂ ವ್ರತದ ದೃಷ್ಟಿಯಿಂದ ಮೊದಲೇ ತ್ಯಾಜ್ಯ ಅಥವಾ ಅಸೇವ್ಯವೆನಿಸುತ್ತವೆ. ಅಂದಮೇಲೆ ವ್ರತದ ಸೀಮೆಯೊಳಗೆ ಒರುವ ಪದಾರ್ಥಗಳಲ್ಲಿ ಕೆಲವನ್ನು ತನ್ನ ಭೋಗೋಪ-ಭೋಗಕ್ಕಾಗಿ ಆಯ್ದುಕೊಳ್ಳುವುದೇ ಇಲ್ಲಿ ಹೇಳುವುದರ ಮುಖ್ಯ ಭಾವವಾಗಿದೆ. ಅಂಥ ವಸ್ತುಗಳು ದಿಗ್ವ್ರತದಲ್ಲಿ ಗ್ರಹಣ ಮಾಡಿದ ಕ್ಷೇತ್ರ ಮರ್ಯಾದೆಯ ಹೊರಗೆ ಉತ್ಪನ್ನವಾದಂಥವೂ ಇರಬಹುದಾಗಿದೆ ಈ ಮಾತನ್ನು ಸ್ಪಷ್ಟಪಡಿಸುವದಕ್ಕಾಗಿಯೇ ಸೂತ್ರದಲ್ಲಿ 'ಅವಧೌ' ಎಂಬ ಪದದ ಪ್ರಯೋಗವಿದೆ ಸ ಥ]

ವಿಶೇಷಾರ್ಥ—ಸಂಸಾರಿ ಜೀವಿಗಳಿಗೆ ಇಂದ್ರಿಯಗಳ ವಿಷಯದ ಮೇಲೆ ಅತ್ಯಂತ ಪ್ರೀತಿಯು ಇರುತ್ತದೆ. ಅದರಿಂದ ವ್ರತ, ಸಂಯಮ, ದಯಾ, ಕ್ಷಮಾ ಮೊದಲಾದ ಅನೇಕ ಗುಣಗಳು ಅವರಿಗೆ ಪ್ರಾಪ್ತವಾಗುವದಿಲ್ಲ ಅಣುವ್ರತಗಳನ್ನು ಧಾರಣ ಮಾಡಿದ ಮನುಷ್ಯನು ಹಿಂಸೆ, ಅಸತ್ಯ, ಕಳವು, ಪರಸ್ತ್ರೀ ಸೇವನ, ಅಪರಿಮಾಣ ಪರಿಗ್ರಹ ಇವುಗಳಿಂದ ಉತ್ಪನ್ನವಾಗುವ ಅನ್ಯಾಯ, ವಿಷಯಗಳ ಮೇಲಿನ ಪ್ರೀತಿಯನ್ನು ಕಡಿಮೆ ಮಾಡಿರುತ್ತಾನೆ ಅದರಿಂದಲೇ ಅವನಿಗೆ 'ವ್ರತಿ' ಎಂಬ ಸಂಜ್ಞೆಯು ಪ್ರಾಪ್ತವಾಗಿರುತ್ತದೆ ನ್ಯಾಯ್ಯ ವಿಷಯವೂ ಕೂಡ ತೀವ್ರ ರಾಗಕ್ಕೆ ಕಾರಣವಾಗುತ್ತದೆ ಇದನ್ನರಿತು ಯಾರಿಗೆ ಆ ವಿಷಯದಲ್ಲಿಯೂ ಅರುಚಿಯು ಉತ್ಪನ್ನವಾಗಿರುವುದೋ ಅವರು ತಮ್ಮ ಆಸಕ್ತಿಯನ್ನು ಕಡಿಮೆ ಮಾಡಿಕೊಳ್ಳುವದಕ್ಕಾಗಿ ಪ್ರಯೋಜನವುಳ್ಳ ಇಂದ್ರಿಯಗಳ ವಿಷಯಗಳಲ್ಲಿಯೂ ಒಂದು ಪ್ರಮಾಣವನ್ನು ಇಟ್ಟುಕೊಂಡರೆ ಅದು ಭೋಗೋಪಭೋಗ ವ್ರತವೆನಿಸುತ್ತದೆ ವ್ರತಿಕನಾದ ಪುರುಷನಿಗೆ ಇಂದ್ರಿಯ ವಿಷಯದೊಳಗಿನ ನಿರರ್ಗಳ ಪ್ರವೃತ್ತಿಗೆ ತಡೆಯನ್ನು ಹಾಕಿ, ಭೋಗೋಪಭೋಗದ ಪ್ರಮಾಣ ಮಾಡುವುದರಿಂದ ಬಹಳಷ್ಟು ಸಂವರವು ಆಗುತ್ತದೆ ಅಂದರೆ ಸಂವರಕ್ಕೆ ಭೋಗೋಪಭೋಗದ ಪ್ರಮಾಣವೂ ಒಂದು ಕಾರಣವಾಗಿದೆ

ಪಿರಿದೆನಿಸುವ ಬಾಹ್ಯಾಭ್ಯಂತರಗಳೆಂಬೆರಡು ತೆರದ ಪರಿಗ್ರಹವಂ ।
ನಿರದೆ ತದ್ಯೋಗದಿ ತೊರೆದವ ಪರಿಗ್ರಹವಿರತನೊಂಬತ್ತನೆಯವನು ॥

—ಬಾಹುಬಲಿ-ನಾಗ ಕುಮಾರ ಚರಿತ್ರ-೨೮-೫೩

ಇನ್ನು ಭೋಗೋಪಭೋಗದ ಲಕ್ಷಣವನ್ನು ವಿವರಿಸುತ್ತಾರೆ—

ಭುಕ್ತ್ವಾ ಪರಿಹಾತವ್ಯೋ ಭೋಗೋ ಭುಕ್ತ್ವಾ ಪುನಶ್ಚ ಭೋಕ್ತವ್ಯಃ ।
ಉಪಭೋಗೋಽಶನವಸನಪ್ರಭೃತಿಃ ಪಾಂಚೇಂದ್ರಿಯೋ ವಿಷಯಃ ॥ ೮೩ ॥[1]

ಅನ್ವಯಾರ್ಥ—(ಅಶನವಸನಪ್ರಭೃತಿಃ) ಊಟ, ಅರಿವೆ ಮೊದಲಾದ (ಪಂಚೇಂದ್ರಿಯಃ ವಿಷಯಃ) ಪಂಚೇಂದ್ರಿಯಗಳ ವಿಷಯಗಳನ್ನು (ಭುಕ್ತ್ವಾ) ಭೋಗಿಸಿ (ಪರಿಹರ್ತವ್ಯಃ) ಬಿಟ್ಟು ಬಿಡುವುದು (ಭೋಗಃ) ಭೋಗವೆನಿಸುತ್ತದೆ. (ಚ) ಮತ್ತು (ಭುಕ್ತ್ವಾ) ಭೋಗಿಸಿ (ಪುನಃ) ಮತ್ತೆ—ತಿರುತಿರುಗಿ—(ಭೋಕ್ತವ್ಯಃ) ಭೋಗಿಸುವುದು (ಉಪಭೋಗಃ) ಉಪಭೋಗವೆನಿಸುತ್ತದೆ

ಅರ್ಥ—ಯಾವ ವಸ್ತುವನ್ನು ಒಂದು ಸಲ ಭೋಗಿಸಿದ ಮೇಲೆ ಅದು ತ್ಯಾಜ್ಯವಾಗುತ್ತದೆಯೋ ಅದಕ್ಕೆ ಭೋಗವೆನ್ನುವರು. ಇಂಥ ವಸ್ತುಗಳನ್ನು ಮತ್ತೊಮ್ಮೆ ಭೋಗಿಸಲಿಕ್ಕೆ ಬರುವದಿಲ್ಲ ಇನ್ನು ಕೆಲವು ವಸ್ತುಗಳನ್ನು ತಿರು-ತಿರುಗಿ ಭೋಗಿಸಲಿಕ್ಕೆ ಬರುತ್ತದೆ ಅವುಗಳಿಗೆ ಉಪಭೋಗ ವಸ್ತು ಎನ್ನುವರು ಅನ್ನ, ಪಾನ, ಪುಷ್ಪ, ಗಂಧ ಮೊದಲಾದ ಪಂಚೇಂದ್ರಿಯ ವಿಷಯಗಳು ಭೋಗವೆನಿಸುತ್ತವೆ ಮತ್ತು ಅರಿವೆ, ಆಭರಣ, ಮನೆ, ವಾಹನ ಮೊದಲಾದವು ಉಪಭೋಗ ವಸ್ತುಗಳಾಗಿವೆ [ಈ ಸೂತ್ರದಲ್ಲಿ ಭೋಗ ಹಾಗೂ ಉಪಭೋಗ ವಸ್ತುಗಳ ಲಕ್ಷಣವನ್ನು ಹೇಳಿ, ಒಂದೊಂದು ಉದಾಹರಣೆಯನ್ನು ಕೊಟ್ಟು ಸಮರ್ಥಿಸಲಾಗಿದೆ. ಉಳಿದ ವಸ್ತುಗಳನ್ನು 'ಪ್ರಭೃತಿ' ಎಂಬ ಶಬ್ದದಿಂದ ಇತ್ಯಾದಿ ಎಂಬ ಅರ್ಥದಲ್ಲಿ ಸೂಚಿಸಲಾಗಿದೆ ಅಲ್ಲದೆ 'ಪಂಚೇಂದ್ರಿಯ' ವಿಷಯ, ಎಂಬ ವಿಶೇಷಣದಿಂದ ಭೋಗ ಹಾಗೂ ಉಪಭೋಗ ವಸ್ತುಗಳು ಯಾವ ಒಂದೇ ಇಂದ್ರಿಯಕ್ಕೆ ಸಂಬಂಧಿಸಿರದೆ ಐದೂ ಇಂದ್ರಿಯಗಳಿಗೆ ಸಂಬಂಧಿಸಿದವುಗಳಾಗಿವೆ ಎಂಬುದನ್ನು ಸೂಚಿಸಿದ್ದಾರೆ ಅಂದರೆ ಎಲ್ಲ ಇಂದ್ರಿಯಗಳ ವಿಷಯವೂ ಯಥಾಸಾಧ್ಯ ಭೋಗೋಪಭೋಗಗಳಲ್ಲಿ ಸಮಾವೇಶವಾಗುತ್ತವೆ ಸ ಧ]

ವಿಶೇಷಾರ್ಥ—ಯಾವ ವಸ್ತುವನ್ನು ಒಮ್ಮೆ ಮಾತ್ರ ಭೋಗಿಸಲಿಕ್ಕೆ ಬರುವುದೋ ಪುನಃ ಭೋಗಿಸಲಿಕ್ಕೆ ಬರವದಿಲ್ಲವೋ ಅಂಥದಕ್ಕೆ ಭೋಗವೆನ್ನಬೇಕು ಯಾವುದನ್ನು ಮೇಲಿಂದ ಮೇಲೆ ಭೋಗಿಸಲಿಕ್ಕೆ ಬರುವುದೋ ಅದಕ್ಕೆ ಉಪಭೋಗವೆನ್ನಬೇಕು ಊಟವು ಅನೇಕ ಪಕ್ವಾನ್ನಗಳಿಂದ ಕೂಡಿ, ವಿವಿಧತೆಯುಳ್ಳುದಿದ್ದರೂ ಒಂದೇ ಸಲ ಅದನ್ನು ನಾವು ಭೋಗಿಸುವುದು ಸಾಧ್ಯವಿದೆ ಒಮ್ಮೆ ತಿಂದ ಅನ್ನವನ್ನು ಮತ್ತೊಮ್ಮೆ ಸೇವಿಸಲಿಕ್ಕೆ ಬರಲಾರದು ಇದೇ ಪ್ರಕಾರ ಕರ್ಪೂರ-ಚಂದನ ಮೊದಲಾದವುಗಳ ಲೇಪನವನ್ನು ಶರೀರಕ್ಕೆ ಹಚ್ಚಿಕೊಳ್ಳುವುದು, ಹೂವಿನ ಮಾಲೆಯನ್ನು ಕೊರಳಲ್ಲಿ ಹಾಕಿಕೊಳ್ಳುವುದು, ವಿವಿಧ ಸುಗಂಧದ ಎಣ್ಣೆಗಳನ್ನು ಉಪಯೋಗಿಸುವದು, ನಾಟಕ ಮೊದಲಾದ ಆಟಗಳನ್ನು ನೋಡುವುದು, ಇಂದ್ರಜಾಲದ ಆಟ, ಸ್ತುತಿ ಸ್ತೋತ್ರಗಳ ಶಬ್ದ ಕೇಳುವುದು, ಇವೇ ಮೊದಲಾದವುಗಳನ್ನು ಒಮ್ಮೆ ಮಾತ್ರ ಭೋಗಿಸುವುದು ಸಾಧ್ಯವಿದೆ ಇವು ಪಂಚೇಂದ್ರಿಯ ವಿಷಯದ ಭೋಗವನಿಸಿಕೊಳ್ಳುತ್ತವೆ ಮತ್ತು ವಸ್ತ್ರ, ಆಭರಣ, ಸ್ತ್ರೀ, ಸಿಂಹಾಸನ, ಮನೆ, ಪಲ್ಲಂಗ, ವಾದ್ಯ, ಚಿತ್ರ, ವಾಹನ ಮೊದಲಾದವುಗಳನ್ನು ಮೇಲಿಂದ ಮೇಲೆ ಉಪಯೋಗಿಸಲಿಕ್ಕೆ ಬರುತ್ತದೆ. ಅಂತಲೇ ಇವುಗಳಿಗೆ ಉಪಭೋಗವೆಂದು ಹೇಳಲಾಗುತ್ತದೆ ಇವೆರಡರಲ್ಲೂ ಒಂದು ಪ್ರಮಾಣವನ್ನು ನಿರ್ಧರಿಸಿಕೊಳ್ಳುವವರಿಗೇ ಈ ವ್ರತವು ಸಂಭವಿಸುತ್ತದೆ.

ಭೋಗಿಸಿ ಪರಿಹರಿಸುವದು ಭೋಗವಸ್ತು ಭೋಗಿಸಿದುದಮತ್ತೆ ಮರಳಿ ।
ಭೋಗಿಸುತಿರ್ಪುದುಪುಪಭೋಗವಸ್ತುಗಳಾಗುವವಾವಾವೆನಲು ॥
ಗಂಧಪುಷ್ಪತಾಂಬೂಲವನ್ನ ಪಾನಹೊಂದಿದ ಭೋಗವಸ್ತುಗಳು ।
ಸಂದ ಸ್ತ್ರೀವಸ್ತ್ರಾಭರಣವಾಹನಯಾನಯೆಂದಿವುಪುಪಭೋಗಗಳು ॥

ವಿಜಯಣ್ಣ—ದ್ವಾದಶಾನುಪ್ರೇಕ್ಷೆ—ಧರ್ಮಾನುಪ್ರೇಕ್ಷೆ—೪೬-೪೭.

---

[1] ಆಯತವರ್ಣನ ಗದ್ಯ ಹೀಗಿದೆ

ವಚನ—ಒಮ್ಮೆಯನುಭವಿಸಿ ಬಿಡುವ ಭೋಜನ ತಾಂಬೂಲಾದಿಗಳೆಲ್ಲಂ ಬೋಗಂ ಅನುಭವಿಸಿದುದನೆ ಪುಗುಳೆಯನುಭವಿಸಿ ಪಡುವ ವಸ್ತ್ರಭೂಷಣಾದಿಗಳೆಲ್ಲಮುಪಭೋಗಂ,

ಈಗ ಯಾವುದರ ಪ್ರಮಾಣಮಾಡುವುದು ಯೋಗ್ಯವಲ್ಲ, ಅದರೆ ಯಾವುದನ್ನು ಯಾವಜ್ಜೀವವೂ ತ್ಯಾಗಮಾಡಲಿಕ್ಕೆ ಬೇಕು ಇಂಥ ವಸ್ತುಗಳು ಯಾವವೆಂಬುದನ್ನು ಹೇಳುತ್ತಾರೆ—

ತ್ರಸಹತಿಪರಿಹರಣಾರ್ಥಂ ಕ್ಷೌದ್ರಂ ಪಿಶಿತಂ ಪ್ರಮಾದಪರಿಹೃತಯೇ ।
ಮದ್ಯಂ ಚ ವರ್ಜನೀಯಂ ಜಿನಚರಣೌ ಶರಣಮುಪಯಾತೈಃ ॥ ೬೬ ॥[1]

ಅನ್ವಯಾರ್ಥ—(ಜಿನಚರಣೌ ಶರಣಂ ಉಪಯಾತೈಃ) ಜಿನೇಂದ್ರ ಭಗವಂತನ ಚರಣಗಳಿಗೆ ಶರಣು ಹೋಗುವದರಿಂದ (ತ್ರಸಹತಿಪರಿಹರಣಾರ್ಥಂ) ತ್ರಸ ಜೀವಗಳ ಹಿಂಸೆಯ ನಿವಾರಣಾರ್ಥ (ಕ್ಷೌದ್ರಂ) ಜೇನು ತುಪ್ಪ (ಪಿಶಿತಂ) ಮಾಂಸ (ಚ) ಮತ್ತು (ಪ್ರಮಾದಪರಿಹೃತಯೆ) ಪ್ರಮಾದದ ನಾಶ ಮಾಡುವದಕ್ಕಾಗಿ (ಮದ್ಯಂ) ಸೆರೆಯು (ವರ್ಜನೀಯಂ) ಬಿಡಲಿಕ್ಕೆ ಯೋಗ್ಯವಾಗಿವೆ

ಅರ್ಥ—ಜಿನೇಂದ್ರ ಭಗವಂತನ ಚರಣಗಳಿಗೆ ಶರಣು ಹೋದ ಸಮ್ಯಗ್ದೃಷ್ಟಿ ಪುರುಷನು ತ್ರಸ ಹಿಂಸೆಯ ತ್ಯಾಗ ಮಾಡುವದಕ್ಕಾಗಿ ಜೇನು ತುಪ್ಪ, ಮಾಂಸಗಳನ್ನು ತಿನ್ನಕೂಡದು ಅದರಂತೆ ಹಿತಾಹಿತದ ವಿಚಾರವನ್ನು ನಷ್ಟಗೊಳಿಸುವ ಅಂದರೆ ಪ್ರಮಾದಚರ್ಯೆಗೆ ಕಾರಣವಾಗುವ ಮದ್ಯವನ್ನೂ ಕೂಡ ತ್ಯಾಗ ಮಾಡಬೇಕು [ಇಲ್ಲಿ 'ತ್ರಸಹತಿಪರಿಹರಣಾರ್ಥಂ' ಎಂಬ ಪದದಿಂದ ಮಾಂಸ ಮತ್ತು ಮಧುಗಳ ತ್ಯಾಗವನ್ನು ಸೂಚಿಸಲಾಗಿದೆ ಅದರಂತೆ 'ಪ್ರಮಾದಪರಿಹೃತಯೆ' ಎಂಬ ಪದದಿಂದ ಮದ್ಯತ್ಯಾಗದ ದೃಷ್ಟಿಯನ್ನು ಸ್ಪಷ್ಟಗೊಳಿಸಲಾಗಿದೆ ತ್ಯಾಗ ಮಾಡುವ ಈ ವಸ್ತುಗಳ ಸ್ವರೂಪ ಹಾಗೂ ಉಳಿದ ವಿಶೇಷ ಸಂಗತಿಗಳನ್ನು ಅಷ್ಟಮೂಲ ಗುಣಗಳನ್ನು ವಿವರಿಸುವಾಗ ಹೇಳಿದೆ (ಸೂತ್ರ ೬೬ ರಲ್ಲಿ) ಮತ್ತೆ ಇಲ್ಲಿ ಹೇಳುವ ಅವಶ್ಯಕತೆಯು ತೋರುವದಿಲ್ಲ ಸ ಧ]

ವಿಶೇಷಾರ್ಥ—ಭಗವಂತನ ಆಜ್ಞೆಯ ಪ್ರಕಾರ ನಡೆಯುವ ಪುರುಷನು ತನ್ನಿಂದ ತ್ರಸ ಜೀವದ ಹಿಂಸೆಯು ಆಗಬಾರದೆಂದು ಮಧು ಹಾಗೂ ಮಾಂಸಗಳನ್ನು ಅವಶ್ಯವಾಗಿ ತ್ಯಾಗಮಾಡಬೇಕು ಮತ್ತು ತನ್ನ ಆಚರಣೆಯಲ್ಲಿ ಎಚ್ಚರಗೇಡಿತನವು ಉಂಟಾಗಬಾರದೆಂದು ಮದ್ಯವನ್ನು ತ್ಯಜಿಸಬೇಕು ಯಾರು ಈ ಮೂರು ವಸ್ತುಗಳನ್ನು ತ್ಯಾಗ ಮಾಡುವದಿಲ್ಲವೋ ಅವರು ಜಿನಾಜ್ಞಾಪರಾಙ್ಮುಖರೆನಿಸುತ್ತಾರೆ ಇಷ್ಟೇ ಅಲ್ಲ, ಅವರು ಜೈನರೇ ಅಲ್ಲ

ಮಧು ಮಾಂಸ ಮದ್ಯ ತ್ರಯ ಪಂಚಪಾಲ್ಮರದೊಡವಿದ ಪಣ್ಗಳ ವಿರತಿ ।
ಅದು ತಾನೆ ಮೂಲಗುಣಗಳೆಂಬೆಂಟು ಕೇಳದರೊಳಂತರ್ಭೇದಗಳ ॥

—ಬಾಹುಬಲಿ–ನಾಗಕುಮಾರ ಚರಿತಂ ೨೮–೪೨

ಮದ್ಯ ಮಧು ಮಾಂಸಮೆಂಬಿವನಾದ್ಯಂತಂ ತೊಱೆವುದಾವತೆರದಿಂದಂ ನಾ– ।
ವದ್ಯ ಮಣ ಮಾಗದಿರ್ಪುದು ಸದ್ಯೋಗದೊಳಿರ್ಪುದಿದುವೆ ಪುಣ್ಯಮಗಣ್ಯಂ ॥

—ಶಾಂತಿನಾಥ–ಸುಕುಮಾರ ಚರಿತಂ–೫–೪೧.

---

1 ಆಯುತವರ್ಪನ ವಚನ ಹೀಗಿದೆ

ವಚನ—ಶ್ರಾವಕನಪ್ಪನ ಬೋಜ್ಯಮುಮನಪೇಯಮುಮಂ ಬಹುವಿಘಾತಮುಮನಿಷ್ಟಮುಮನನುಪಸೇವ್ಯಮುಮನೆಲ್ಲಾ ಕಾಲಂ ನಿವೃತ್ತಿಗೆಯ್ಯ ವೇಳ್ಪುದಲ್ಲಿಯು ಬೋಜ್ಯಮೆಂಬುದಲ್ಲಾ ಗುಣಮಂ ಕಿಡಿಸುವು ಮಾಂಸ ಮಧುಮದ್ಯಂಗಳವಂ ಪರಿಹರಿಸ ವೇಳ್ಪುದೇಕೆಂದೊಡೆ—ಜೀವಂಗಳಂ ಕೊಂದಡಲ್ಲದೆ ಮಾಂಸಮಧುಗಳಂ ಪಡೆಯಬಾರದದಲ್ಲದಯುಂ ಮಾಂಸದ ಭಕ್ಷಿಯಪ್ಪಂಗೆ ದಯಾಗುಣಮುಂ ಮಾನಸಿಕ್ಕೆಯುಮೊಕ್ಕಲ್ಪನಮುಂ ಪ್ರಭುತ್ವಮುಂ ಗತಿಯುಮಿಲ್ಲವನಂ ಕಂಡನರೆಲ್ಲಮವಜ್ಞೆಗೆಯ್ವರು ಲೋಕಕ್ಕೆ ಲಘುವಕ್ಕುಮಪೇಯಮೆಂಬುದೆಲ್ಲಾ ದೋಷಂಗಳಂ ಹೇತುವಪ್ಪ ಮದ್ಯಮಂ ತೊರೆಯವೇಳ್ಕುಮೇಕೆಂದೊಡೆ— ಮದ್ಯವನಪ್ಪೊಂಗೆ ಮೊರೆಯಿಲ್ಲರನಿಲ್ಲ ಸುಗತಿಯಿಲ್ಲ ನಾಣಿಲ್ಲ ತತ್ಕಾರ್ಯವಿಯಿಲ್ಲ ಕುಲವಿಲ್ಲ ಚಲವಿಲ್ಲ ಅವನಿಂದಂ ವರ್ಜಿಸಿ ಪಡುವ ದೋಷಂಗಳಾವುವಿಲ್ಲದೊಂಗೆ ಲೋಕಮೆಲ್ಲಂ ಪೇಸುಗುಂ ಸಹಪಂಕ್ತಿ ಸಹಬೋಜನಾದಿಗಳಂ ಯೋಗ್ಯವಲ್ಲಂ

ಇನ್ನು ತ್ಯಾಗವಮಾಡಲಿಕ್ಕೆ ಯೋಗ್ಯವಾದ ಪದಾರ್ಥಗಳ ಹೆಸರುಗಳನ್ನು ಹೇಳುತ್ತಾರೆ—

ಅಲ್ಪಫಲಬಹುವಿಘಾತಾನ್ಮೂಲಕಮಾರ್ದ್ರಾಣಿ ಶ್ರಂಗಬೇರಾಣಿ ।
ನವನೀತನಿಂಬಕುಸುಮಂ ಕೈತಕಮಿತ್ಯೇವಮವಹೇಯಮ್[1] ॥ ೮೫ ॥

ಯದನಿಷ್ಟಂ ತದ್ವ್ರತಯೇದ್ಯಚ್ಚಾನುಪಸೇವ್ಯಮೇತದಪಿ ಜಹ್ಯಾತ್ ।
ಅಭಿಸಂಧಿಕೃತಾ ವಿರತಿರ್ವಿಷಯಾದ್ಯೋಗ್ಯಾದ್ವ್ರತಂ ಭವತಿ ॥ ೮೬ ॥[2]

ಅನ್ವಯಾರ್ಥ—(ಅಲ್ಪಫಲಬಹುವಿಘಾತಾತ್) ಸ್ವಲ್ಪ ಲಾಭವಾಗುತ್ತಿದ್ದು, ಬಹಳಷ್ಟು ಜೀವಗಳ ಘಾತವಾಗುವುದರಿಂದ (ಆರ್ದ್ರಾಣಿ) ಹಸಿಯಾಗಿರುವ (ಶೃಂಗಬೇರಾಣಿ) ಶುಂಠಿ ಅಂದರೆ ಅಲ್ಲ-ಮತ್ತು-(ಮೂಲಕ) ಬೇರು (ನವನೀತನಿಂಬಕುಸುಮಂ) ಬೆಣ್ಣೆ, ಬೇವಿನ ಹೂವು (ಕೈತಕಂ) ಕೇದಗಿಯ ಗೊನೆ (ಇತಿ ಏವಂ) ಮೊದಲಾದವುಗಳೆಲ್ಲವೂ (ಅವಹೇಯಮ್) ತ್ಯಜಿಸಲಿಕ್ಕೆ ಯೋಗ್ಯವಾಗಿವೆ (ಯತ್ ಅನಿಷ್ಟಂ) ಯಾವು ಅನಿಷ್ಟ-ವಾಗಿರುವವೋ (ತತ್) ಅವುಗಳನ್ನು (ವ್ರತಯೇತ್) ಬಿಡುವುದು (ಚ) ಮತ್ತು (ಯತ್) ಯಾವದು (ಅನುಪಸೇವ್ಯಂ) ಸೇವಿಸಬಾರದಂಥದಿದೆಯೋ (ಏತದಪಿ) ಅದನ್ನು ಕೂಡ (ಜಹ್ಯಾತ್) ಬಿಡುವುದು (ಯೋಗ್ಯಾತ್ ವಿಷಯಾತ್) ಯೋಗ್ಯ ವಿಷಯಗಳಲ್ಲಿ (ಅಭಿಸಂಧಿಕೃತಾ) ಅಭಿಪ್ರಾಯ ಪೂರ್ವಕ ಮಾಡಿದ (ವಿರತಿಃ) ತ್ಯಾಗವು (ವ್ರತಂ) ವ್ರತವು (ಭವತಿ) ಎನಿಸುತ್ತದೆ

ಅರ್ಥ—ಕೆಲವೊಂದು ಪದಾರ್ಥಗಳನ್ನು ಸೇವಿಸುವದರಿಂದ ಫಲವು ಸ್ವಲ್ಪವಾಗಿದ್ದು, ಅನಂತ ಜೀವಗಳ ಘಾತವಾಗುತ್ತಿರುತ್ತದೆ ಇಂಥ ವಸ್ತುಗಳಲ್ಲಿ ಉಳ್ಳೇಗಡ್ಡಿ, ಬೇರುಗಳು, ಅಲ್ಲ ಮೊದಲಾದ ಕಂದಮೂಲಗಳು ಸಮಾವೇಶವಾಗುತ್ತವೆ. ಅಲ್ಲದೆ ಬೆಣ್ಣೆ, ಬೇವಿನ ಹೂವು ಮತ್ತು ಕೇದಗಿಯ ತೆನೆ ಮೊದಲಾದವುಗಳೂ ಅನಂತಕಾಯವೆನಿಸುತ್ತವೆ ಇವುಗಳನ್ನು ತ್ಯಜಿಸಬೇಕು. ಒಂದು ಶರೀರದಲ್ಲಿ ಅನಂತ ಜೀವಗಳು ಇರುವುದಕ್ಕೆ ಅನಂತಕಾಯವೆನ್ನುತ್ತಾರೆ ತಮ್ಮ ಪ್ರಕೃತಿಗೆ ಒಗ್ಗದಿದ್ದ ಪದಾರ್ಥಗಳನ್ನೂ ಸಹ ತಿನ್ನಕೂಡದು ಮತ್ತು ಸೇವಿಸಲಿಕ್ಕೆ ಅಯೋಗ್ಯವಾದ ಪದಾರ್ಥಗಳನ್ನು ಸಹ ತ್ಯಾಗಮಾಡಬೇಕು ಇನ್ನು ಅನಿಷ್ಟ ಹಾಗೂ ಸೇವಿಸಬಾರದಂಥ ವಸ್ತುಗಳನ್ನು ತ್ಯಾಗಮಾಡಿದ್ದರೂ ಕೂಡ ಅಭಿಪ್ರಾಯಪೂರ್ವಕವಾಗಿ ಅಂದರೆ ತಿಳುವಳಿಕೆಯಿಂದ ಯೋಗ್ಯ ವಿಷಯಗಳನ್ನೂ ತ್ಯಾಗ ಮಾಡಿದರೆ ಅದು ವ್ರತವೆನಿಸುತ್ತದೆ. [ಇಲ್ಲಿ 'ಮೂಲಕಂ' ಎಂಬ ಪದವು ಎಲ್ಲ ಬೇರುಗಳು ಎಂಬ ಅರ್ಥವನ್ನು ಸೂಚಿಸಲಿಕ್ಕೆ ಇದೆ ಅದರಿಂದ ಮುಲ್ಲಂಗಿ, ಗಜ್ಜರಿಗಳಂಥ ಗಡ್ಡೆಗಳಲ್ಲದೆ ಇತರ ವನಸ್ಪತಿಗಳ ಬೇರುಗಳೂ ಕೂಡ ಇಲ್ಲಿ ಸಮಾವೇಶವಾಗುತ್ತವೆ ಇನ್ನು 'ಶೃಂಗಬೇರಾಣಿ' ಎಂಬ ಪದದಿಂದ ಯಾವುದರ ಮೇಲೆ ಕೋಡುಗಳಂತೆ ಮುಳ್ಳು ಮುಳ್ಳುಗಳಿರುವವೋ–ಹಲಸು ಮೊದಲಾದವುಗಳು–ಅವು ತ್ಯಾಜ್ಯವೆಂದು ಹೇಳಿದೆ. ಅಲ್ಲದೆ ಹಳದಿ, ರಸವುಳ್ಳ ಹಲವು ಪದಾರ್ಥಗಳೂ ಸಮಾವೇಶಗೊಳ್ಳುತ್ತವೆ 'ಮೂಲಕ' ಹಾಗೂ 'ಶೃಂಗಬೇರಾಣಿ' ಪದಗಳ ಮಧ್ಯದಲ್ಲಿ ಇರುವ 'ಆರ್ದ್ರಾಣಿ' ಎಂಬ ಪದಕ್ಕಂತೂ ಬಹಳ ಮಹತ್ವವಿದೆ. ಆ ಶಬ್ದದಿಂದ ಎರಡೂ ಮಾದರಿಯ ಪದಾರ್ಥಗಳೆಂದು ಧ್ವನಿತವಾಗುತ್ತದೆ. ಮೇಲಾಗಿ ಹಸಿಯಾಗಿರುವ, ರಸ ತುಂಬಿದ ಎಲೆಗಳುಳ್ಳ, ಹಸರು ವನಸ್ಪತಿ-ಗಳೆಂದೂ ಈ ಪದವು ಸೂಚಿಸುತ್ತದೆ ಆದರೂ ಸ್ಪಷ್ಟಾರ್ಥದಲ್ಲಿ ಸಚಿತ್ತ (Living) ಹಾಗೂ ಅಪ್ರಾಸುಕ ಎಂಬ ಅರ್ಥದಲ್ಲಿದೆ. ರತ್ನಕರಂಡಕದ ಟೀಕೆಯಲ್ಲಿ ಪ್ರಭಾಚಂದ್ರಾಚಾರ್ಯರೂ ಸಹ ಈ ಪದದ ಅರ್ಥವನ್ನು 'ಅಪಕ್ವಾನಿ'

---

[1] ಆಯತವರ್ಮನು ಹೀಗೆ ಹೇಳುವನು

ವಚನ—ಬಹುವಿಘಾತವೆಂಬುದು ಪಿರಿದು ಸಾವದ್ಯದತ್ತಣಿಂದಮಪ್ಪ ಫಲಪ್ರಾಪ್ತಿಯಪ್ಪ ಮೂಲಂಗಿಯ ದಾಡುವಸಿಯುಲ್ಲ ನವನೀತಂ ನಿಂಬಕುಸುಮಂ ಕೇತಕೀ ಕುಸುಮ ಮೊದಲಾಗೊಡೆಯುವಂ ಪರಿತ್ಯಾಗಂ ಗೆಯ್ವುದುಂ.

[2] ಅನಿಷ್ಟವೆಂಬುದು ತನಗಿದು ಬೇಳ್ಕುಮೆನೆ ಪಡೆದ ಕ್ಷೇತ್ರ ವಾಸ್ತು ಹಿರಣ್ಯ ಸುವರ್ಣ ಧನಧಾನ್ಯ ದಾಸೀದಾಸ ಕುಪ್ಯ—ಭಾಂಡಂಗಳೆಂಬ ದಶವಿಧ ಪರಿಗ್ರಹಂಗಳಂ ತನಗೆ ಪ್ರಮಾಣಮಲ್ಲದುವಂ ನಿರಪೃತ್ತವಂ ತೊರೆವುದುಮನುಪಸೇವ್ಯಮೆಂಬುದು ಶಿಷ್ಟರಿಂ ಸೇವಿಸೆ ಪಡ ಒಬ್ಬದಸಿದ ಪುಟ್ಟಿಗೆ ದಂತದೊಳೆ ಶಂಖದ ಮಣಿ ಕಾಜಿನುಂಗುರಂ ಕಬ್ಬುಸದ ಕೆತಗಪೋದಿಪ್ಪ ಮೊದಲಾ-ಗೊಡೆಯ ಪೆರಮಂಟಪ ಸೇವಿಸೆ ಪಡೆದ ವಸ್ತುಗಳಂ ವರ್ಜಿಸುವದೇಕೆಂದೊಡೆ—ಅವನು ಸೇವಿಸುವಂಗೆ ಚತ್ತುರ್ಯದು . . . . ಪ್ರಘಾತ್ಮಮುಂ ಯಿಸೆಯುವಪ್ಪುದರಿಂ.

ಎಂದು ಕೊಟ್ಟಿದ್ದಾರೆ. ಅದೂ ಕೂಡ ಇದೇ ಅರ್ಥದ ದೃಷ್ಟಿಯಲ್ಲಿದೆ. ಯಾಕೆಂದರೆ ಕಂದ-ಮೂಲಾದಿಗಳನ್ನು ಅಗ್ನಿ ಮೊದಲಾದವುಗಳಿಂದ ಬೇಯಿಸಿ ಇಲ್ಲವೆ ಅನ್ಯ ರೀತಿಯಿಂದ ಅವುಗಳಲ್ಲಿ ಜೀವಗಳು ಇರದಂತೆ ಮಾಡದಿದ್ದರೆ ಅವು ಸಚಿತ್ತ ಹಾಗೂ ಅಪ್ರಾಸುಕ ಎನಿಸುತ್ತವೆ. ಪ್ರಾಸುಕ ಕಂದ-ಮೂಲಾದಿ ದ್ರವ್ಯಗಳು ಒಣಗಿದವುಗಳಿರುತ್ತವೆ. ಉಪ್ಪು ಕಾರಗಳಿಂದ ಕೂಡಿದವುಗಳಿರುತ್ತವೆ ತುಂಡು-ತುಂಡಾಗಿ ಮಾಡಿದವೂ ಸಹ ಇರುತ್ತವೆ ಈ ವಿಷಯದಲ್ಲಿ ಪ್ರಾಚೀನ ಪದ್ಯವೂ ಒಂದು ಹೀಗಿದೆ—

"ಸುಕ್ಕಂ ಪಕ್ಕಂ ತತ್ತಂ ಅಂಬಿಲಲವಣೇಣ ಮಿಸ್ಸಿಯಂ ದವ್ವಂ ।
ಜಂ ಜಂತೇಣ ಯ ಛಿಣ್ಣಂ ತಂ ಸವ್ವಂ ಫಾಸುಯಂ ಭಣಿಯಂ" ॥

ಮತ್ತು 'ಪ್ರಾಸುಕಸ್ಯ ಭಕ್ಷಣೋ ನೋ ಪಾಪಃ'—ಪ್ರಾಸುಕ ಪದಾರ್ಥವನ್ನು ತಿನ್ನುವುದರಲ್ಲಿ ಏನೂ ಪಾಪವಿಲ್ಲ-ಈ ಉಕ್ತಿಗೆ ಅನುಸರಿಸಿ ಪ್ರಾಸುಕ ಹಾಗೂ ಅಚಿತ್ತವಲ್ಲದ ವಸ್ತುಗಳೂ ಸಹ ತ್ಯಾಜ್ಯವಾಗಿವೆ ಇವುಗಳನ್ನು ತ್ಯಜಿಸಲಿಕ್ಕೆ ಇಲ್ಲಿ 'ಆದ್ರ್ರಾಣಿ' ಎಂಬ ಪದದಿಂದ ಸೂಚಿಸಲಾಗಿದೆ. ಬೆಣ್ಣೆಯಲ್ಲಿ ಅದು ಸಿದ್ಧವಾದ ಅಂತರ್ಮುಹೂರ್ತದ ತರುವಾಯವೇ ಸಮ್ಮೂರ್ಛನ ಜೀವಗಳ ಉತ್ಪತ್ತಿಯಾಗುತ್ತದೆ ಅದರಿಂದ ಆ ಕಾಲ ಮರ್ಯಾದೆಯನ್ನು ಮೀರಿದ ಬೆಣ್ಣೆಯೂ ಕೂಡ ಇಲ್ಲಿ ತ್ಯಾಜ್ಯವೆನಿಸುತ್ತದೆ. ಇನ್ನೂ ಜೀವ ಉತ್ಪತ್ತಿಯಾಗದ ಪೂರ್ವದಲ್ಲಿ ಅದನ್ನು ಸೇವಿಸುವುದರಲ್ಲಿ ದೋಷವಿಲ್ಲ ಬೇವಿನ ಹೂವು ಅನಂತಕಾಯವೂ, ಕೇದಗಿಯ ಗೊನೆಯು ಬಹಳಷ್ಟು ಜಂತುಗಳ ಯೋನೀಸ್ಥಾನವೂ ಆಗಿರುವುದು ಅದಕ್ಕಾಗಿ ಇವು ತ್ಯಾಜ್ಯವೆನಿಸಿವೆ ಇಲ್ಲಿ ಇನ್ನೂ ಒಂದು ಮಾತನ್ನು ಗಮನಿಸಬಹುದಾಗಿದೆ 'ಅಲ್ಪಫಲಬಹುವಿಘಾತಾತ್' ಎಂಬ ಪದದ ಮುಖಾಂತರ ತ್ಯಾಗದ ಹೇತುವನ್ನು ನಿರ್ದೇಶಿಸಲಾಗಿದೆ ಇದರಲ್ಲಿ 'ಅಲ್ಪಫಲ' ಮತ್ತು 'ಬಹುವಿಘಾತ' ಎಂಬ ಎರಡು ಅಂಗಗಳಿವೆ ಇವೆರಡೂ ಅಂಗಗಳು ಜೊತೆಯಾಗಿರದಿದ್ದರೆ ತ್ಯಾಗವು ಆಚರಣೀಯವೆಂದೇನೂ ಅಲ್ಲ ಹೇಗೆಂದರೆ ಬಹುಫಲ ಅಲ್ಪಘಾತ, ಬಹುಫಲ ಬಹುಘಾತ ಮತ್ತು ಅಲ್ಪಫಲ ಅಲ್ಪಘಾತ ಇರುವಲ್ಲಿ ಕಟ್ಟುನಿಟ್ಟಾಗಿ ತ್ಯಾಗವನ್ನು ಮಾಡಬೇಕೆಂದಿಲ್ಲ. ಇದೇ ಪ್ರಕಾರ ಪ್ರಾಸುಕ ಅವಸ್ಥೆಯಲ್ಲಿ ಏನೂ ಘಾತವಾಗದಂತೆ ಇದ್ದರೆ ಅಲ್ಲಿಯೂ ತ್ಯಾಗವು ಅವಶ್ಯಕವಿಲ್ಲ ಇನ್ನು ಸಂಕಲ್ಪಪೂರ್ವಕ ತ್ಯಾಗವನ್ನು ಮಾಡದೆ, ಅನಿಷ್ಟ ಹಾಗೂ ಅಸೇವ್ಯ ಪದಾರ್ಥಗಳನ್ನು ಸಹಜ ಸೇವಿಸದೆ ಇದ್ದರೆ ಈ ತ್ಯಾಗಕ್ಕೆ ವ್ರತದ ಫಲವೇನೂ ಲಭಿಸುವದಿಲ್ಲ ವ್ರತದ ಫಲವು ಪ್ರಾಪ್ತವಾಗಲಿಕ್ಕೆ ಸಂಕಲ್ಪಪೂರ್ವಕ ಅಥವಾ ಪ್ರತಿಜ್ಞಾಪೂರ್ವಕ ತ್ಯಾಗದ ಅವಶ್ಯಕತೆಯು ಇರುತ್ತದೆ ಅದಕ್ಕಾಗಿಯೇ ಆಚಾರ್ಯರು ಭೋಗೋಪಭೋಗದ ಪರಿಮಾಣದ ವಿಷಯವನ್ನು ಪ್ರಸ್ತಾಪಿಸುವಾಗ ಶ್ರಾವಕರಿಗೆ ಅನಿಷ್ಟಾದಿ ವಿಷಯಗಳನ್ನು ತ್ಯಾಗಮಾಡುವ ಕುರಿತು ಸೂಚಿಸಿದ್ದಾರೆ. ಸೇವಿಸಲು ಯೋಗ್ಯವಲ್ಲದ ವಸ್ತುಗಳಲ್ಲಿ ದೇಶ, ರಾಷ್ಟ್ರ, ಸಮಾಜ, ಸಂಪ್ರದಾಯ ಮೊದಲಾದವುಗಳ ದೃಷ್ಟಿಯಿಂದ ಅನೇಕ ವಸ್ತುಗಳು ಸಮಾವೇಶವಾಗುತ್ತವೆ. ಉದಾಹರಣೆಗಾಗಿ ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಸ್ತ್ರೀಯರು ತಮ್ಮ ಅಂಗಾಂಗಗಳೆಲ್ಲ-ಗುಹ್ಯಾಂಗಗಳು-ಕಾಣುವಂತೆ ಪಾರದರ್ಶಕವಾದ ವಸ್ತ್ರಗಳನ್ನು ಉಟ್ಟುಕೊಳ್ಳುವುದು ಅನುಪಸೇವ್ಯವೆನಿಸುತ್ತದೆ ಸ ಥ ]

ವಿಶೇಷಾರ್ಥ—ಅನಿಷ್ಟ ಪದಾರ್ಥ ತಿನ್ನಕೂಡದು. ಯಾವ ಪದಾರ್ಥವನ್ನು ತಿನ್ನುವುದರಿಂದ ಕೇವಲ ನಾಲಿಗೆಯ ರುಚಿಯಂಥ ಕ್ಷುಲ್ಲಕ ಫಲವು ಪ್ರಾಪ್ತವಾಗುವುದೋ, ಆ ಪದಾರ್ಥ ಒಂದು ಕೂದಲೆಳೆಯಷ್ಟು ಸೂಕ್ಷ್ಮ ಕಣವನ್ನು ತಿನ್ನುವುದರಿಂದ ಅನಂತಾನಂತ ಬಾದರ ಜೀವಗಳ ಘಾತವಾಗುತ್ತದೆ ಇಂಥ ಕಂದ ಮೂಲಾದಿ ಪದಾರ್ಥಗಳನ್ನೂ ಬೇವಿನ ಮತ್ತು ಕೇದಗಿಯ ಹೂವುಗಳನ್ನೂ ಭಕ್ಷಣ ಮಾಡುವದನ್ನು ತ್ಯಾಗಮಾಡಬೇಕು. ಇದೇ ಪ್ರಕಾರ ತ್ರಸಜೀವಗಳಿಂದ ತುಂಬಿದ ಬೇರೆ ಅನೇಕ ಹೂವುಗಳನ್ನೂ ನಾವು ಕಾಣುತ್ತೇವೆ ಅವುಗಳನ್ನೂ ಸಹ ತ್ಯಜಿಸಬೇಕು ಇನ್ನು ಅನೇಕ ಪದಾರ್ಥಗಳು ಶುದ್ಧವಾಗಿವೆ ಆದರೆ ಅವುಗಳನ್ನು ತಿನ್ನುವುದರಿಂದ ನಮ್ಮ ಶರೀರದಲ್ಲಿ ವೇದನೆಯು ಉತ್ಪನ್ನವಾಗುತ್ತದೆ, ಕಳೆಯು ಬರುತ್ತದೆ, ಹೊಟ್ಟೆಶೂಲಿಯು ಉಂಟಾಗುತ್ತದೆ, ವಾತ-ಪಿತ್ತ-ಕಫಾದಿಗಳು ಹೆಚ್ಚುತ್ತವೆ, ರಕ್ತದಲ್ಲಿ ವಿಕಾರವು ಉಂಟಾಗುತ್ತದೆ —ಇಂಥ ಪದಾರ್ಥಗಳನ್ನು ತಿನ್ನಕೂಡದು . ಇದೇ ಪ್ರಕಾರ ಇತರ ದುಃಖಗಳಿಗೆ ಕಾರಣವಾಗುವಂಥ ಬೇರೆ ಇಂದ್ರಿಯ ವಿಷಯಗಳಿಗೆ ಸಂಬಂಧಿಸಿದ ವಸ್ತುಗಳನ್ನೂ ಸಹ ಸೇವಿಸಕೂಡದು ಯಾರಿಗೆ ಅತ್ಯಂತ ಆಸಕ್ತಿಯುಂಟೋ, ಯಾರು ಇಂದ್ರಿಯ ಲಂಪಟರಿರುವರೋ ಅವರು ಅನಿಷ್ಟ ವಸ್ತುಗಳನ್ನು ತಿನ್ನದೆ ಇರುವದಿಲ್ಲ ತಮಗೆ ಅದರಿಂದ ತೀವ್ರ ನೋವು ಉಂಟಾಗಿ, ಒಮ್ಮೊಮ್ಮೆ ಮರಣವೂ ಸಂಭವಿಸುತ್ತದೆ ಎಂಬುದು

ಗೊತ್ತಿದ್ದೂ ಸಹ, ಆ ದುಃಖಕ್ಕೆ ಮಹತ್ವಕೊಡದೆ, ನಾಲಿಗೆಯ ರುಚಿಗಾಗಿ ಅನಿಷ್ಟ ಪದಾರ್ಥಗಳನ್ನು ಯಾವನು ತಿನ್ನುವನೋ ಅವನಿಗೆ ಇಂದ್ರಿಯಗಳ ತೀವ್ರ ಆಸಕ್ತಿಯಿಂದ ಬಹಳಷ್ಟು ಪಾಪಬಂಧವಾಗುತ್ತದೆ. ವಿವಿಧ ಪ್ರಕಾರದ ಊಟಗಳ ರುಚಿನೋಡುವುದರಲ್ಲಿ ಆಸಕ್ತಿಯಿರುವವರಿಗೂ ಅನಿಷ್ಟ ಪದಾರ್ಥಗಳನ್ನು ತಿನ್ನುವವರಿಗೂ ರೋಗಗಳು ಬೆಳೆಯುತ್ತವೆ. ಅಲ್ಲದೆ ಆರ್ತಧ್ಯಾನವು ಪ್ರಾಪ್ತವಾಗಿ ದುರ್ಗತಿಗೆ ಹೋಗಬೇಕಾಗುತ್ತದೆ ಅದಕ್ಕಾಗಿ ಅನಿಷ್ಟ ಪದಾರ್ಥಗಳನ್ನು ತಿನ್ನದೆ ಇರುವುದೇ ಉತ್ತಮವಾಗಿದೆ.

**ಸೇವಿಸಬಾರದಂಥ ಪದಾರ್ಥಗಳನ್ನು ತಿನ್ನಕೂಡದು.** ಅನೇಕ ಪದಾರ್ಥಗಳು ನಮ್ಮ ಕುಲ, ವ್ಯವಹಾರ ಮತ್ತು ಧರ್ಮಗಳನ್ನು ಮಲಿನಗೊಳಿಸುವಂಥವು ಇರುತ್ತವೆ. ಅವುಗಳನ್ನು ತಿನ್ನಕೂಡದು ಅವು ಸೇವಿಸಲಿಕ್ಕೆ ಯೋಗ್ಯವಿಲ್ಲೆಂದು ತಿಳಿಯಬೇಕು ಶಂಖ, ಹಸ್ತಿದಂತ, ಕೂದಲು, ಕಸ್ತೂರಿ ಇತ್ಯಾದಿ ಪದಾರ್ಥಗಳಿಂದ ಸ್ಪರ್ಶಿಸಲ್ಪಟ್ಟ ಅನ್ನವನ್ನು ಸೇವಿಸಕೂಡದು ಒಂಟೆ, ಕತ್ತೆಗಳ ಹಾಲು, ಗೋಮೂತ್ರ, ಕಫ, ಮಲಮೂತ್ರ, ರೊಜ್ಜು, ಎಂಜಲು ಮೊದಲಾದವುಗಳನ್ನು ಸೇವಿಸಬಾರದು ಮ್ಲೇಂಚ್ಛ, ಭಿಲ್ಲ, ಅಸ್ಪೃಶ್ಯ, ಶೂದ್ರ ಮೊದಲಾದವರು ಸ್ಪರ್ಶಮಾಡಿದ್ದೂ, ಅಶುದ್ಧ ಸ್ಥಳದಲ್ಲಿ ಬಿದ್ದಂಥಾದ್ದೂ, ತೊಗಲಿನಿಂದ ಸ್ಪರ್ಶವಾದದ್ದೂ, ನಾಯಿ ಬೆಕ್ಕು ಹಂದಿಗಳು ಮುಟ್ಟಿದ್ದೂ, ಮಾಂಸಭಕ್ಷಕರೂ ಸೆರೆಬಡಕರೂ ಸಿದ್ಧಗೊಳಿಸಿದ್ದೂ ಆದ ಇಂಥ ಯಾವ ಆಹಾರ ಪದಾರ್ಥವನ್ನೂ ಸೇವಿಸಬಾರದು ಲೋಕನಿಂದ್ಯವಾದ ಆಹಾರವನ್ನೂ ಸಹ ತಕ್ಕೊಳ್ಳಕೂಡದು ಇವೆಲ್ಲವುಗಳಿಗೆ ಸೇವಿಸಬಾರದಂಥ ಪದಾರ್ಥಗಳೆಂದು ಹೇಳಿದೆ

**ಹುಳಹತ್ತಿದ ಧಾನ್ಯ ತಿನ್ನಕೂಡದು.** ಹುಳಿತ ಧಾನ್ಯವು ತಿನ್ನಲಿಕ್ಕೆ ಯೋಗ್ಯವಲ್ಲ ಅವುಗಳನ್ನು ತಿನ್ನುವುದರಿಂದ ಬುದ್ಧಿಯಲ್ಲಿ ವಿಪರೀತ ವೃತ್ತಿಯು ಉಂಟಾಗುತ್ತದೆ. ಸನ್ಮಾರ್ಗ ಮತ್ತು ಧರ್ಮಗಳಿಂದ ಭ್ರಷ್ಟರಾಗ-ಬೇಕಾಗುತ್ತವೆ ಈ ವಿಷಯದಲ್ಲಿ ಶ್ರೀ ಅಕಲಂಕಾಚಾರ್ಯರು 'ರಾಜವಾರ್ತಿಕ'ದಲ್ಲಿ ಹೀಗೆ ಹೇಳಿದ್ದಾರೆ—ಭೋಗವು ಐದು ಪ್ರಕಾರದ್ದಿದೆ (೧) ತ್ರಸ ಜೀವದ ಘಾತವಾಗುವಂಥದು (೨) ಪ್ರಮಾದ ಹುಟ್ಟಿಸುವಂಥದು (೩) ಅನಿಷ್ಟ-ವಾದುದು. (೪) ಭೋಗಿಸಲಿಕ್ಕೆ ಯೋಗ್ಯವಲ್ಲದುದು (೫) ಬಹಳಷ್ಟು ಪಥ್ಯೆಯಾಗುವಂಥದು. ಈ ಐದು ಪ್ರಕಾರದ ಭೋಗಗಳನ್ನು ಬದುಕಿರುವ ವರೆಗೂ ತ್ಯಜಿಸಬೇಕು ಯಾರಿಗೆ ಇಡೀ ಆಯುಷ್ಯವೆಲ್ಲ ತ್ಯಾಗಮಾಡಲಿಕ್ಕೆ ಸಾಧ್ಯವಿಲ್ಲವೋ ಅವರು ಕಾಲದ ಮರ್ಯಾದೆಯನ್ನಾದರೂ ಇಟ್ಟುಕೊಂಡು ತ್ಯಜಿಸಬೇಕು. ಅನೇಕ ವಸ್ತುಗಳಲ್ಲಿ ತ್ರಸ ಜೀವದ ಘಾತವಾಗುತ್ತದೆ. ಹಲವು ಪದಾರ್ಥಗಳಲ್ಲಿ ಅನಂತ ಜೀವಗಳು ಒತ್ತಟ್ಟಿಗೆ ಇರುವುದರಿಂದ ಘಾತವಾಗುತ್ತದೆ ಹುಳಹತ್ತಿದ ಕಾಳಿನಲ್ಲಿ ತತ್ತಿ, ಕ್ರಿಮಿಗಳು ಬಹಳಷ್ಟು ಇರುತ್ತವೆ ಹುಳಿತ ಧಾನ್ಯದ ಅನ್ನವನ್ನು ಸೇವಿಸುವುದರಿಂದ ಅಳತೆಯಿಲ್ಲದಷ್ಟು ತ್ರಸ ಜೀವಗಳ ಘಾತವಾಗುತ್ತದೆ ಇನ್ನು ಧಾನ್ಯ ಸಂಗ್ರಹಮಾಡಿ ಇಡುವವರಿಗಂತೂ ಹುಳಿತ ಧಾನ್ಯದ ಆಹಾರದಿಂದ ಆಗುವ ಹಿಂಸೆಗಿಂತಲೂ ಹೆಚ್ಚಾಗಿ ಲೆಕ್ಕವಿಲ್ಲದಷ್ಟು ಪಾಪವು ಸಂಭವಿಸುವದು ಅದಕ್ಕಾಗಿ ಪಾಪಕ್ಕೆ ಹೆದರುವ ಜೈನ ಗೃಹಸ್ಥರು ಒಳ್ಳೆಯ ಹಾಗೂ ಶುದ್ಧವಾದ ಪದಾರ್ಥಗಳನ್ನು ಎರಡು ತಿಂಗಳು ಸಾಲುವಷ್ಟು ಮಾತ್ರ ಕೊಂಡುಕೊಳ್ಳಬೇಕು. ಅವು ತೀರಿದ ಮೇಲೆ ಅದೇ ಪ್ರಕಾರ ಹುಳ ಹತ್ತದಂಥ ಧಾನ್ಯವನ್ನು ಪರೀಕ್ಷಿಸಿ ಕೊಂಡುಕೊಳ್ಳಬೇಕು. ಸ್ವಲ್ಪ ಸ್ವಲ್ಪ ತಕ್ಕೊಳ್ಳುವುದರಿಂದ ಒಳ್ಳೆಯ ರೀತಿಯಿಂದ ನೋಡಲಿಕ್ಕೂ ಶೋಧಿಸಲಿಕ್ಕೂ ಬರುತ್ತದೆ. ತುಸು ಪ್ರಮಾಣದಲ್ಲಿರುವ ಧಾನ್ಯವನ್ನು ಲಕ್ಷಪೂರ್ವಕ ನಿರೀಕ್ಷಿಸಲಿಕ್ಕೆ ಬರುವದು ಚನ್ನಾಗಿ ಪರೀಕ್ಷಿಸಿ ಹುಳ ಹತ್ತದ ಧಾನ್ಯವನ್ನು ಮಾತ್ರ ತಕ್ಕೊಳ್ಳಬೇಕು ಹೆಚ್ಚು ಧಾನ್ಯದ ಸಂಗ್ರಹಮಾಡಿದರೆ ಅವುಗಳನ್ನು ಚೆನ್ನಾಗಿ ನೋಡಲೂ ಹಸನುಮಾಡಲೂ ಬರುವದಿಲ್ಲ ಅವುಗಳಿಗೆ ಹುಳವು ಹತ್ತಿದರೆ ಹೆಚ್ಚು ಹಾನಿಯಾದೀತೆಂದು ತಿರುಗಿ ಕೊಡಲಿಕ್ಕೂ ಬರುವದಿಲ್ಲ. ಅಂದ ಮೇಲೆ ಮೇಲಿಂದ ಮೇಲೆ ಆ ಪದಾರ್ಥಗಳಿಗೆ ಹೆಚ್ಚು ಹೆಚ್ಚಾಗಿ ಹುಳವು ಹತ್ತುತ್ತ ಹೋಗುತ್ತವೆ. ಅವುಗಳನ್ನು ನಾವು ತಿನ್ನದೆ ನಡೆಯುವದಿಲ್ಲ ಆದರಿಂದ ಆ ಪದಾರ್ಥಗಳನ್ನು ಮೇಲಿಂದ ಮೇಲೆ ನೋಡಬೇಕಾಗುತ್ತದೆ. ಅವುಗಳಲ್ಲಿ ಇರುವ ತತ್ತಿ, ಹುಳ ಮೊದಲಾದವುಗಳನ್ನು ಒರಿಸಿ, ತಿಕ್ಕಿ ಸ್ವಚ್ಛಮಾಡಬೇಕಾಗುತ್ತದೆ. ಅಂಥ ಕ್ರಿಮಿಗಳನ್ನು ತುಂಬಿ ಹೊರಗೆ ಓಣಿಯಲ್ಲಿ ಎಸೆಯಬೇಕಾಗುತ್ತದೆ ಅಲ್ಲಿ ಆ ಕ್ರಿಮಿಗಳು ಹಕ್ಕಿ ಪಕ್ಕಿಗಳ ಪಾಲಾಗುತ್ತವೆ. ಪಶುಗಳೂ ಮನುಷ್ಯರೂ ಅವುಗಳನ್ನು ತುಳಿದುಕೊಳ್ಳಬಹುದು ಅದರಿಂದ ಅವುಗಳ ಘಾತವಾಗುತ್ತದೆ ಈ ಪ್ರಕಾರ ದಿನಾಲು ಅಸಂಖ್ಯ ಜೀವಗಳ ಘಾತಮಾಡಿದ ಪಾತಕವನ್ನು ಪಡೆಯಬೇಕಾಗುತ್ತದೆ ಇನ್ನು ಒಮ್ಮೆ ಕಾಳಿನಲ್ಲಿ ಹುಳವು ಹುಟ್ಟಿದರೆ ತೀರಿತು. ಆ ಕ್ರಿಮಿಗಳು ದಿವಸ ದಿವಸಕ್ಕೆ ಮೊದಲಿಗಿಂತ ಎರಡು, ನಾಲ್ಕು, ನೂರು,

ಸಾವಿರ ಪಟ್ಟು ಹೆಚ್ಚಾಗುತ್ತ ಹೋಗುತ್ತವೆ ಅವೆಲ್ಲ ಮನೆಯಲ್ಲಿ, ಅಡುವ ಮನೆಯಲ್ಲಿ, ಗೋಡೆಯ ಮೇಲೆ, ಬಾಗಿಲ ಮೇಲೆ, ತಿನ್ನುಣ್ಣುವ ಪದಾರ್ಥಗಳಲ್ಲಿ ನೆಲದ ಮೇಲೆ, ಬೋದಿಗೆ ಜಂತೆ-ತೊಲೆಗಳಲ್ಲಿ ವ್ಯಾಪಿಸುತ್ತವೆ. ಅದಕ್ಕಾಗಿ ಲೋಭದಿಂದಾಗಲಿ, ಆಲಸ್ಯದಿಂದಾಗಲಿ ಇಲ್ಲವೆ ಅಭಿಮಾನದಿಂದಾಗಲಿ ಹೆಚ್ಚು ಧಾನ್ಯದ ಸಂಗ್ರಹವನ್ನು ಮಾಡಕೂಡದು

**ಭುರುಸುಬಂದ ಧಾನ್ಯ ಮತ್ತು ಕಾಲ ಮರ್ಯಾದೆ ಮೀರಿದ ಮಿಠಾಯಿಗಳು ತ್ಯಾಜ್ಯವಾಗಿವೆ.** ಉದ್ದು, ತೊಗರಿ, ಹೆಸರು, ಕಡಲೆ ಮೊದಲಾದ ಧಾನ್ಯಗಳ ಮೇಲೆ ಬಿಳಿಯ ಭುರುಸು ಬಂದರೆ ಅವುಗಳಲ್ಲಿ ತ್ರಸ ಜೀವಗಳು ಇರುವವೆಂದು ತಿಳಿದು ಅವುಗಳನ್ನು ತಿನ್ನಕೂಡದು ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಯಾವ ಪದಾರ್ಥಗಳಲ್ಲಿ ಕ್ರಿಮಿಗಳು ಹುಟ್ಟುತ್ತವೆಯೋ ಅಂಥ ಜೀನಸುಗಳ ಸಂಗ್ರಹ ಮಾಡಬಾರದು ನಗರದಲ್ಲಿ ಹಾಗೂ ಜನರು ವಾಸಿಸುವಲ್ಲಿ ಇದ್ದರೆ ಒಂದು ಲಾಭವಿದೆ ನಮಗೆ ನಾಲ್ಕಾರು ದಿನಗಳಿಗೆ ಹತ್ತುವಷ್ಟು ಧಾನ್ಯವನ್ನು—ನಿರ್ದೋಷ ಮತ್ತು ಹುಳವಿಲ್ಲದಂಥವುಗಳನ್ನು—ಹತ್ತೆಂಟು ಸ್ಥಳಗಳಲ್ಲಿ ವಿಚಾರಿಸಿ, ಪರೀಕ್ಷಿಸಿಕೊಂಡುಕೊಳ್ಳಲಿಕ್ಕೆ ಬರುತ್ತದೆ ಮಳೆಗಾಲದಲ್ಲಿ ಬೆಲ್ಲ, ಸಕ್ಕರೆಗಳಲ್ಲಿ ಹುಳ, ಇರುವೆಗಳು ಉತ್ಪನ್ನವಾಗುತ್ತವೆ ಸುಂಠಿ, ಅಜವಾನ, ಬಡಿಸೋಪು, ಯಾಲಕ್ಕಿ ಮತ್ತು ಅಡಿಕೆ ಮೊದಲಾದ ಪದಾರ್ಥಗಳಿಗೆ ಹುಳ ಹತ್ತುತ್ತವೆ ಮನುಕೆ, ಖೊಪ್ಪರಿ, ಖರ್ಜೂರು ಮೊದಲಾದವುಗಳಲ್ಲಿಯೂ ಅಳತೆ ಇಲ್ಲದಷ್ಟು ಜೀವಗಳು ಉತ್ಪನ್ನವಾಗುತ್ತವೆ ತಂಪು ಹವೆಯ ಸಂಯೋಗದಿಂದ ಬೆಲ್ಲದಲ್ಲಿ ಅನೇಕ ಕ್ರಿಮಿಗಳು ಹುಟ್ಟುತ್ತವೆ ಅರಿಸಿಣ, ಕೊತಂಬರಿಯ ಕಾಳು, ಮೆಣಸಿನಕಾಯಿ, ಅಮಸೋಲ ಇವುಗಳಲ್ಲಿಯೂ ಅನೇಕ ಜೀವಗಳು ಜನಿಸುತ್ತವೆ ಬಹಳ ದಿವಸ ಇಟ್ಟ ಉಂಡಿ, ಬರ್ಫಿ, ಜಿಲೇಬಿ ಮೊದಲಾದ ಮಿಠಾಯಿಗಳಲ್ಲಿಯೂ ಜೀವ ಉತ್ಪನ್ನವಾಗುತ್ತವೆ ಇವೆಲ್ಲ ಸಂಗತಿಗಳನ್ನೂ ನೆನೆದು ಯಾವಾಗಲೂ ವಸ್ತುಗಳ ಸಂಗ್ರಹವನ್ನು ಕಡಿಮೆಮಾಡಬೇಕು ನಿತ್ಯವೂ ಪ್ರತಿಯೊಂದು ಪದಾರ್ಥವನ್ನು ನೋಡಿ, ಶೋಧಿಸಿ, ತಕ್ಕೊಳ್ಳಬೇಕು ಈ ಪ್ರಕಾರ ಜಾಗ್ರತೆಯಿಂದ ಕ್ರಿಯೆಗಳನ್ನು ಮಾಡುವುದರಲ್ಲಿಯೇ ಅಹಿಂಸಾ ಧರ್ಮದ ಆಚರಣೆಯು ಸಾಧಿಸುತ್ತದೆ

**ಹಿಟ್ಟನ್ನು ಎಷ್ಟು ದಿವಸಗಳ ವರೆಗೆ ಉಪಯೋಗಿಸಬೇಕು?** ಹಿಟ್ಟನ್ನೂ ಕೂಡ ಮಳೆಗಾಲದಲ್ಲಿ ಮೂರು ದಿವಸ, ಚಳಿಗಾಲದಲ್ಲಿ ಏಳು ದಿವಸ, ಬೇಸಿಗೆಯಲ್ಲಿ ಐದು ದಿನಸ ಈ ಅವಧಿಯ ವರೆಗೆ ಮಾತ್ರ ಉಪಯೋಗಿಸಬೇಕು. ಆ ಮೇಲೆ ಅದನ್ನು ತಿನ್ನಕೂಡದು ಹಿಟ್ಟನ್ನು ಎಂದೂ ಸಂಗ್ರಹಿಸಿ ಇಡಬಾರದು ಅದರಲ್ಲಿ ಅನೇಕ ಜೀವಗಳು ಜನಿಸುತ್ತವೆ ಅಕ್ಕಿ ಬೇಳೆಗಳನ್ನು ಕುದಿಯಲಿಕ್ಕೆ ಹಾಕುವ ಪೂರ್ವದಲ್ಲಿ ಎರಡು ಮೂರು ಸಲ ಹಸನುಮಾಡಿ, ಶೋಧಿಸಿ ಕುದಿಸಬೇಕು ಪ್ರಶ್ನೋತ್ತರ ಶ್ರಾವಕಾಚಾರದಲ್ಲಿ 'ಸರ್ವಾಶನಂ ಚ ನ ಗ್ರಾಹ್ಯಂ ದಿನದ್ವಯಯುತಂ ಸರ್ವೈಃ ।' ಎಂಬಲ್ಲಿ ಎಲ್ಲ ಪ್ರಕಾರದ ಅನ್ನವು ಒಂದು ರಾತ್ರಿಯು ಕಳೆದ ತರುವಾಯ ಎರಡನೆಯ ರಾತ್ರಿಯೂ ಕಳೆದರೆ ಅದು ಅಭಕ್ಷ್ಯವಾಗುತ್ತದೆಂದು ಹೇಳಿದೆ. (ಆದರೆ ಈ ಶ್ಲೋಕದಲ್ಲಿ ಅಶನ ಶಬ್ದದ ಅರ್ಥವನ್ನು ಮಾಡುವಾಗ ಎರಡು ದಿವಸಗಳ ನಂತರದ ಅನ್ನವು ಅಭಕ್ಷ್ಯವಾಗುವದೆಂದು ಹೇಳಿದೆ ಆದರೆ ಇದು ಸರಿಯೆಂದು ತೋರುವದಿಲ್ಲ ಅನ್ನ, ಬೇಳೆ ಮೊದಲಾದ ಆಹಾರ ಪದಾರ್ಥಗಳು ಅವುಗಳನ್ನು ಮಾಡಿದ ಆರು ತಾಸುಗಳ ತರುವಾಯ ಹಳಸಲಿಕ್ಕೆ ಆರಂಭವಾಗುತ್ತವೆ. ಅದರಿಂದ ಅವು ಆರು ತಾಸುಗಳ ತರುವಾಯ ಅಭಕ್ಷ್ಯವೆನಿಸುತ್ತವೆ. ಶ್ರೀ ಸದಾಸುಖಜಿಯವರೂ ಇಂಥ ಅನ್ನದ ನಿಷೇಧವನ್ನು ಮುಂದೆ ಮಾಡಿದ್ದಾರೆ ಆದರೂ ಮೇಲಿನ ಪ್ರಶ್ನೋತ್ತರ ಮೂಲೆಯ ಶ್ಲೋಕದಿಂದ ತಪ್ಪು ಕಲ್ಪನೆಯನ್ನೂ ಮಾಡಿಕೊಂಡು, ಎರಡು ದಿನಗಳ ಅವಧಿಯೊಳಗಿನ ಅನ್ನವು ಭಕ್ಷ್ಯವೆಂದು ತಿಳಿಯಕೂಡದು) ಇದೇ ಪ್ರಕಾರ ಪುರಿ, ಶಿರಾ, ವಡೆ, ಇವುಗಳಲ್ಲಿ ನೀರಿನ ಸಂಸರ್ಗವಾದ ಪಕ್ವಾನ್ನಗಳ ಸಮಾವೇಶವೂ ಆಗುತ್ತದೆ ಇವುಗಳಲ್ಲಿ ನೀರಿನ ಹೋಳಿಗೆ, ಕರಜೀಕಾಯಿ ಮೊದಲಾದ ಪದಾರ್ಥಗಳೂ ತಿನ್ನಲಿಕ್ಕೆ ಯೋಗ್ಯವೆನಿಸುವದಿಲ್ಲ ಇವುಗಳಲ್ಲಿ ನೀರಿನ ಸಂಪರ್ಕವು ಹೆಚ್ಚಾಗಿ ಇರುವುದರಿಂದ ಅದರೊಳಗಿನ ರಸವು ಚಲಿಸುತ್ತಿರುತ್ತದೆ ಚಪಾತಿ, ಖಿಚಡಿ, ಕಾಯಿಪಲ್ಲೆ ಮೊದಲಾದವುಗಳನ್ನು ನಿನ್ನಿನವುಗಳನ್ನು ಇಂದು ತಿನ್ನಕೂಡದು ಆದರೆ ಮಾಡಿದ ದಿನವೂ ಸಹ ಅವು ಹಳಸಿದ್ದರೆ ತಿನ್ನಬಾರದು ರಾತ್ರಿಯಲ್ಲಿ ಸಿದ್ಧಗೊಳಿಸಿದ ಯಾವ ಅನ್ನವನ್ನೂ ಕೂಡ ಭಕ್ಷಣಮಾಡಬಾರದು.

**ಹಾಲುಮೊಸರುಗಳ ಉಪಯೋಗ**—ಮೊಸರನ್ನು ಹೆಪ್ಪು ಹಾಕಿದ ಮರುದಿನ ಮಾತ್ರ ತಿನ್ನಬೇಕು. ಎರಡನೆಯ ಸಲದ ಮೊಸರು ಮಜ್ಜಿಗೆಗಳನ್ನು ಕೂಡಿಸಿ ತಿನ್ನಬಾರದು ಅಂದರೆ ಊಟದ ಮುಂದೆ ತಿನ್ನಕೂಡದು

ತರುವಾಯ ಮನೆಯಲ್ಲಿ ಉಳಿದ ಸ್ವಲ್ಪ ಮೊಸರಿನಲ್ಲಿ ಮಜ್ಜಿಗೆಯನ್ನು ಕೂಡಿಸಿ ಇಟ್ಟು, ತಿರುಗಿ ಗಟ್ಟಿಯಾದ ಮೇಲೆ ಅದು ತಿನ್ನಲು ಯೋಗ್ಯವಲ್ಲ. ಇದನ್ನು ತಿನ್ನುವುದರಲ್ಲಿ ಹಿಂಸೆಯ ದೋಷವಿದೆ. ಯಾಕೆಂದರೆ ಈ ಮಿಶ್ರಪದಾರ್ಥವು ಬಾಯಲ್ಲಿ ಹೋದೊಡನೆಯೇ ಲಾಲಾರಸದ ಸಂಯೋಗದಿಂದ ಸಮ್ಮೂರ್ಛನ ಜೀವಗಳ ಉತ್ಪತ್ತಿಯು ಆಗುತ್ತದೆ ಹಾಲನ್ನು ಹಿಂಡಿದ ಕೂಡಲೆ ಎರಡು ಘಳಿಗೆಗಳ ಒಳಗೆ ಶೋಧಿಸಿ ಕಾಯಿಸಬೇಕು. ಎರಡು ಘಳಿಗೆಗಳ ನಂತರ ಅದರಲ್ಲಿ ಸಮ್ಮೂರ್ಛನ ತ್ರಸಜೀವಗಳ ಉತ್ಪತ್ತಿಯಾಗುತ್ತದೆ ಬೆಣ್ಣೆಯನ್ನು ಸಹ ಮಜ್ಜಿಗೆಯೊಳಗಿಂದ ತೆಗೆದ ತರುವಾಯ ಕೂಡಲೆ ಕಾಸಿ, ಅದರಿಂದ ತುಪ್ಪವನ್ನು ಸಿದ್ಧಗೊಳಿಸಬೇಕು. ಅದನ್ನು ಶೋಧಿಸಿ ತಿನ್ನಬೇಕು ತುಪ್ಪ, ಎಣ್ಣೆ, ನೀರು ಮೊದಲಾದವುಗಳನ್ನು ತೊಗಲಿನ ಚೀಲದಲ್ಲಿ ಇಟ್ಟಿದ್ದರೆ ಅವುಗಳನ್ನು ತಿನ್ನಕೂಡದು. ಯಾಕಂದರೆ ಅದರಲ್ಲಿ ಇಡುವುದರಿಂದ ಅಸಂಖ್ಯಾತ ಜೀವಗಳ ಉತ್ಪತ್ತಿಯಾಗುತ್ತದೆ ತೊಗಲಿನ ಚೀಲವನ್ನು ದನಗಳ ಚರ್ಮದಿಂದ ಮಾಡಿರುತ್ತಾರೆ ಅದರೊಳಗಿನ ಮಾಂಸ ಕೆದರಿ ತೆಗೆದು, ಬಡಿದು ಹದಗೊಳಿಸಿ ಇವುಗಳನ್ನು ನಿರ್ಮಿಸಿರುತ್ತಾರೆ ಇಂಥ ಚೀಲದೊಳಗಿನ ಎಣ್ಣೆ–ತುಪ್ಪಗಳನ್ನು ತಿನ್ನುವುದು ಮಾಂಸ ಭಕ್ಷಣ ಮಾಡಿದಂತೆಯೇ ಇರುತ್ತದೆ ಈ ತೊಗಲಿನ ಚೀಲಗಳ ಬಳಿಕೆಯು ಹಿಂದುಸ್ಥಾನದಲ್ಲಿ ಮುಸಲ್ಮಾನರ ರಾಜ್ಯಕಾಲದಿಂದ ಆರಂಭವಾಗಿದೆ ಒಂದಾನೊಂದು ಸ್ಥಳದಲ್ಲಿ ಚರ್ಮದ ಸ್ಪರ್ಶವಿಲ್ಲದ ತುಪ್ಪ, ಎಣ್ಣೆಗಳು ದೊರೆಯದೆ ಇದ್ದರೆ ಆ ಪದಾರ್ಥಗಳಿಲ್ಲದೆ ಉಣ್ಣಬೇಕು ಫಾಲ್ಗುಣ ತಿಂಗಳ ತರುವಾಯ ಎಳ್ಳು ಹಾಗೂ ಗುರೆಳ್ಳುಗಳಲ್ಲಿ ಬಹಳಷ್ಟು ತ್ರಸ ಜೀವಗಳು ಜನಿಸುತ್ತವೆ ಅದಕ್ಕಾಗಿ ಆ ತಿಂಗಳಾದ ಮೇಲೆ ಅವುಗಳನ್ನು ತಿನ್ನಕೂಡದು

ಯಾವುದಕ್ಕೂ ಶೋಧಿಸಿದ ನೀರನ್ನು ಉಪಯೋಗಿಸಬೇಕು. ನೀರನ್ನು, ಎರಡು ಪದರುಳ್ಳ ಅರಿವೆಯಿಂದ ಶೋಧಿಸಿ ಕುಡಿಯಬೇಕು. ಅದರಂತೆ ಎರಡನೆಯವರಿಗೂ ಸೋಸಿಯೇ ಕುಡಿಯಲಿಕ್ಕೆ ಕೊಡಬೇಕು. ಪಶುಗಳಿಗೂ ಸಹ ಸೋಸಿಯೇ ಕುಡಿಸಬೇಕು ಸೋಸದೆ ಇದ್ದ ನೀರಿನಿಂದ ಸ್ನಾನ, ಊಟ, ಅರಿವೆ ಒಗೆಯುವುದು ಇವೇ ಮೊದಲಾದ ಯಾವ ಕ್ರಿಯೆಯನ್ನೂ ಮಾಡಬಾರದು ನೀರಿನ ವಿಷಯದಲ್ಲಿ ಅತಿಶಯ ಜಾಗರೂಕತೆಯನ್ನು ವಹಿಸಿದರೇನೇ ದಯಾಧರ್ಮವನ್ನು ಪಾಲಿಸಿದಂತಾಗುತ್ತದೆ ಪಾತ್ರೆಯ ಮುಖದ ಮೂರುಪಟ್ಟು ಉದ್ದಗಲವುಳ್ಳ ಹಾಗೂ ಎರಡು ಪದರುಳ್ಳ ಹೊಸ ಅರಿವೆಯನ್ನೂ ತಕ್ಕೊಂಡು, ಅದರಿಂದ ನೀರನ್ನು ಎರಡನೆಯ ಪಾತ್ರೆಯಲ್ಲಿ ಸೋಸಬೇಕು. ಆ ಸೋಸರವಿಯನ್ನು ಬೇರೆ ನೀರಿನಲ್ಲಿ ತೊಳೆದು, ಮೊದಲು ನೀರು ತಂದಿದ್ದ ಜಲಾಶಯದಲ್ಲಿಯೇ ಒಯ್ದು, ಆ ನೀರನ್ನು ಹಾಕಬೇಕು ನೀರಿನ ವಿಷಯದಲ್ಲಿ ಇಷ್ಟು ಜಾಗೃತೆಯನ್ನು ವಹಿಸಿದರೆ ನಾವು ಜಲಕಾಯ ಜೀವಗಳ ಮೇಲೆ ದಯೆಮಾಡಿದೆವೆಂದು ಹೇಳಬಹುದಾಗಿದೆ ಗೃಹಸ್ಥರಿಗೆ ಈ ಮರ್ಯಾದೆಯನ್ನು ಬಿಟ್ಟು, ಹೆಚ್ಚಿನ ಎಚ್ಚರಿಕೆಯನ್ನು ವಹಿಸಲಿಕ್ಕೆ ಆಗದು. ಅಂತಲೇ ನೀರನ್ನು ಚೆಲ್ಲುವಾಗ ಹಾಗೂ ತಕ್ಕೊಳ್ಳುವಾಗ ಶೋಧಿಸುವ ಕ್ರಿಯೆಯನ್ನು ಸಾವಧಾನತೆಯಿಂದ ಮಾಡಬೇಕು ಶೋಧಿಸುವ ನೀರನ್ನು ಉಪಯೋಗಿಸುವ ಮರ್ಯಾದೆಯು ಎರಡು ಘಳಿಗೆ ಮಾತ್ರ ಇರುತ್ತದೆ ತರುವಾಯ ಅದನ್ನು ಉಪಯೋಗಿಸುವದಾದಲ್ಲಿ ಮತ್ತೆ ಸೋಸಬೇಕಾಗುತ್ತದೆ ಕಾಯಿಸಿದ ನೀರು ಮಾತ್ರ ಎರಡು ಪ್ರಹರ ಅಂದರೆ ಆರು ತಾಸುಗಳ ವರೆಗೆ ಪ್ರಾಸುಕ (ಶುದ್ಧ) ಇರುತ್ತದೆ ಕುದಿಯು ಬರುವವರೆಗೆ ಕಾಯಿಸಿದ ನೀರು ಎಂಟು ಪ್ರಹರಗಳ ವರೆಗೆ (ಒಂದು ಪೂರ್ಣ ದಿನ) ಶುದ್ಧವಿರುವುದು ಮುಂದೆ ಅದು ನಿರುಪಯೋಗಿಯಾಗುತ್ತದೆ.

ಅಭಕ್ಷ್ಯ ಫಲ ಮತ್ತು ಪುಷ್ಪ—ಹಲವು ಹಣ್ಣುಗಳಲ್ಲಿ ತ್ರಸಜೀವಗಳ ಘಾತವಾಗುವದೆಂದು ಅವುಗಳನ್ನು ತಿನ್ನಕೂಡದು. ಬೋರಿಯ ಹಣ್ಣು ಕೇವಲ ಕ್ರಿಮಿಗಳ ಮನೆಯಾಗಿದೆ. ಬೆಂಡಿಯ ಕಾಯಿಯಲ್ಲಿ ಅನೇಕ ಶತ್ತಿಗಳು—ಅಳಿಗಳು—ಉತ್ಪನ್ನವಾಗುತ್ತವೆ. ಬದನೀಕಾಯಿ, ಕಲ್ಲಂಗಡಿ, ಜಾಂಬಳಿಕಾಯಿ, ಅಂಜೂರ, ಆಳು (Peach), ಬಡವಾಲ (?), ಗೋಲ ಅಂಜೂರ, ಬಟಾಟಿ, ಅಪರಿಚಿತ ಹಣ್ಣು, ಹುಳಹತ್ತಿದ ಫಲ, ಚಲಿತರಸ, ಸೀತಾಫಲ, ಗಡ್ಡೆ–ಗೆಣಸುಗಳು, ಅಲ್ಲ, ಉಳ್ಳೇಗಡ್ಡಿ, ಬಳ್ಳೊಳ್ಳಿ, ಗಜ್ಜರಿ, ಹಾಲುಳ್ಳ ವೃಕ್ಷಗಳ ಹಣ್ಣುಗಳು, (ಅತ್ತಿ, ಆಲಗಳಂಥವು) ಕೇದಗಿ, ಕೇತಕಿ ಮೊದಲಾದ ಹೂವುಗಳು ಇವೆಲ್ಲವುಗಳಲ್ಲಿಯ ದೋಷಗಳು ಪ್ರತ್ಯಕ್ಷ ಇಲ್ಲವೆ ಶಾಸ್ತ್ರಗಳಿಂದ ಗೊತ್ತಾಗುವಂತೆ ಇರುತ್ತವೆ ಶಾಸ್ತ್ರದಲ್ಲಿ ಎರಡು ಪ್ರಕಾರದ ವನಸ್ಪತಿಗಳನ್ನು ವರ್ಣಿಸಲಾಗಿದೆ. ಒಂದು ಶರೀರದಲ್ಲಿ ಒಂದು ಜೀವವು ಇರುವಂಥ ವನಸ್ಪತಿಯು ಪ್ರತ್ಯೇಕವನಸ್ಪತಿ ಎನಿಸುತ್ತದೆ ಇನ್ನೊಂದು ಪ್ರಕಾರವೆಂದರೆ ಒಂದು ಶರೀರವಿದ್ದು ಅನಂತಾನಂತ ಜೀವವಿರುವಂಥ ವನಸ್ಪತಿಗಳಾಗಿವೆ. ಇವುಗಳಿಗೆ ಸಾಧಾರಣ ವನಸ್ಪತಿಗಳೆಂದು

ಹೆಸರು. ಸಾಧಾರಣ ವನಸ್ಪತಿಯನ್ನು ತಿನ್ನುವುದರಿಂದ ಅನಂತಾನಂತ ಜೀವಗಳ ಘಾತವಾಗುತ್ತದೆ. ಅಂತಲೇ ಅವುಗಳನ್ನು ತಿನ್ನದಿರುವುದು ಯೋಗ್ಯವಾಗಿದೆ.

ಸಾಧಾರಣ ವನಸ್ಪತಿ—ಯಾವ ವನಸ್ಪತಿಗಳಲ್ಲಿ ರೇಷೆಗಳು ಅಂದರೆ ಶಿರಗಳು ಪ್ರಕಟವಾಗಿ ತೋರುವ-ದಿಲ್ಲವೋ ಅದು ಸಾಧಾರಣ ವನಸ್ಪತಿಯು. ಈ ವನಸ್ಪತಿಯ ಮಧ್ಯದೊಳಗಿನ ರೇಷೆಯು ಸಂಪೂರ್ಣವಾಗಿ ಪ್ರಕಟವಾಗಿರುವದಿಲ್ಲ ಹರಿದರೆ ಸರಿಯಾಗಿ ಹರಿಯುವಂತೆ ಇದರ ಎಲೆಗಳು ಇರುತ್ತವೆ ಅಡ್ಡತಿಡ್ಡ ಓರೆ–ಕೋರೆ ಹರಿಯುವದಿಲ್ಲ ಈ ಎಲೆಗಳಲ್ಲಿ ಇನ್ನೂ ತಂತುಗಳು ಪ್ರಕಟವಾಗಿರುವದಿಲ್ಲ ಇಂಥವುಗಳಿಗೆ ಸಾಧಾರಣ ವನಸ್ಪತಿಗಳೆನ್ನಬೇಕು ಇವುಗಳ ಅಸಂಖ್ಯಾತ ಪ್ರದೇಶದಲ್ಲಿ ಅನಂತಾನಂತ ಜೀವಗಳಿರುತ್ತವೆ

ಪ್ರತ್ಯೇಕ ವನಸ್ಪತಿ—ಯಾವ ವನಸ್ಪತಿಯಲ್ಲಿ ಎಳೆ, ರೇಷೆ ಮೊದಲಾದವುಗಳು ಟಿಸಿಲು ಟಿಸಿಲು ಒಡೆದವುಗಳು ಇರುತ್ತವೆಯೋ ಅವುಗಳಿಗೆ ಪ್ರತ್ಯೇಕ ವನಸ್ಪತಿಗಳೆಂದು ಹೇಳಬೇಕು ಈ ವನಸ್ಪತಿಗಳ ತೊಪ್ಪಲು-ಗಳನ್ನು ಹರಿದರೆ ಅಡ್ಡ-ತಿಡ್ಡವಾಗಿ ಹರಿಯುತ್ತವೆ. ಕತ್ತರಿಯಿಂದ ಕತ್ತರಿಸಿದಂತೆ ನೆಟ್ಟಗೆ ಹರಿಯುವದಿಲ್ಲ ಅವುಗಳಲ್ಲಿ ತಂತು ರೇಷೆಗಳು ಕಾಣುವವು ಇವೆಲ್ಲ ಪ್ರತ್ಯೇಕ ವನಸ್ಪತಿಗಳು. ಅನೇಕ ವನಸ್ಪತಿಗಳು ಮೊದಲು ಸಾಧಾರಣವಾಗಿದ್ದು, ಅಂತರ್‌ಮುಹೂರ್ತದಲ್ಲಿ ಅವೇ ಪ್ರತ್ಯೇಕವಾಗುತ್ತವೆ. ಮತ್ತು ಕೆಲವು ಸಾಧಾರಣವಾಗಿಯೇ ಉಳಿಯುತ್ತವೆ ಎಲೆ, ಹೂವು, ಬೀಜ, ಚಿಗುರೆಲೆ ಇವುಗಳನ್ನೆಲ್ಲ ಸಾಧಾರಣ ಹಾಗೂ ಪ್ರತ್ಯಕ್ಷಗಳೆಂದು ತಿಳಿದುಕೊಳ್ಳಲಿಕ್ಕೆ ಇದೇ ನಿಯಮವೆನಿಸುತ್ತದೆ:—ಎಲೆಗಳು ನೆಟ್ಟಗೆ ಸೀಳುತ್ತಿದ್ದರೆ ಅವು ಸಾಧಾರಣ ವನಸ್ಪತಿಗಳು ಉಳಿದ ಎಲ್ಲ ವನಸ್ಪತಿಗಳೂ ಸಾಧಾರಣವಲ್ಲ ಬೀಜಗಳಲ್ಲಿ ಅಥವಾ ಕಾಳುಗಳಲ್ಲಿ ಸಮಾನವಾಗಿ ಎರಡು ಭಾಗಗಳು ಆಗುವ ವರೆಗೂ ಅವುಗಳ ಎಲೆಗಳಲ್ಲಿ ಇನ್ನೂ ರೇಷೆಗಳು ಮೂಡದ ವರೆಗೂ ಅವು ಸಾಧಾರಣ ವನಸ್ಪತಿಗಳೆನಿಸುತ್ತವೆ ಅವುಗಳನ್ನುಳಿದು ಬೇರೆ ವನಸ್ಪತಿಗಳು ಸಾಧಾರಣವೆನಿಸವು ಈ ಪ್ರಕಾರ ವನಸ್ಪತಿಗಳಲ್ಲಿ ಕೆಲವು ಸಾಧಾರಣ ಕೆಲವು ಪ್ರತ್ಯೇಕವೆನಿಸುತ್ತವೆ. ಅಂತಲೇ ಇಂಥ ವನಸ್ಪತಿಗಳನ್ನು ತಿನ್ನುವುದರಿಂದ ಅನೇಕ ತ್ರಸಜೀವಗಳ ಘಾತವಾಗುತ್ತದೆ ಜೈನಧರ್ಮದ ಪ್ರಕಾರ ಜೀವಿಸುವವರು ಪಾಪದ ಹೆದರಿಕೆಯಿಂದ ಹರಿತಕಾಯ ವನಸ್ಪತಿಗಳ ತ್ಯಾಗಮಾಡಬೇಕು

ಕಂದ–ಮೂಲಾದಿ ಅನಂತಕಾಯ ಪದಾರ್ಥಗಳನ್ನು ತ್ಯಾಗಮಾಡಬೇಕು. ಯಾರೂ ಜಿಹ್ವಾ-ಲಂಪಟರಾಗಕೂಡದು. ಯಾರಿಗೆ ಎಲ್ಲ ಪ್ರಕಾರದ ಹರಿತಕಾಯಗಳನ್ನು ತ್ಯಾಗಮಾಡಲಿಕ್ಕೆ ಆಗುವದಿಲ್ಲವೋ ಅವರು ಕಂದಮೂಲಾದಿ ಅನಂತಕಾಯಗಳನ್ನಾದರೂ ಜೀವಿಸಿರುವವರೆಗೂ ತ್ಯಾಗಮಾಡಬೇಕು. ಪಂಚೌದುಂಬರ ಫಲಗಳಲ್ಲಿ-ಯಂತೂ ಪ್ರತ್ಯಕ್ಷ ತ್ರಸಜೀವಗಳು ತುಂಬಿರುತ್ತವೆ. ಇದೇ ಪ್ರಕಾರ ಹಣ್ಣು, ಹೂವು, ಎಲೆಗಳಲ್ಲಿಯೂ ಜೀವಗಳು ತುಂಬಿಕೊಂಡಿದ್ದದ್ದು ಕಂಡುಬಂದೀತು ಇಂಥ ಎಲ್ಲ ಕಾಯಿಪಲ್ಲೆಗಳಲ್ಲಿ ತಮಗೆ ಯೋಗ್ಯವೆನಿಸಿದ ಹಂತ್ತೆಂಟು ವನಸ್ಪತಿಗಳನ್ನು ಆಯ್ದುಕೊಂಡು, ಉಳಿದವುಗಳನ್ನು ಸಂಪೂರ್ಣವಾಗಿ ತ್ಯಜಿಸಿಬಿಡಬೇಕು ಇವಲ್ಲದೆ ಎಲ್ಲ ವನಸ್ಪತಿಗಳು ಇಪ್ಪತ್ತೆಂಟು ಲಕ್ಷದಷ್ಟಿವೆ ಅವುಗಳ ಬಗ್ಗೆಯಾದರೂ ನಿಯಮಮಾಡಿಕೊಂಡು, ತಮ್ಮ ತಲೆಯ ಮೇಲಿನ ಪಾಪದ ಹೊರೆಯನ್ನು ಕಡಿಮೆಮಾಡಿಕೊಳ್ಳಬೇಕು. ಹರಿತಕಾಯಗಳ ಪ್ರಮಾಣ ಮಾಡಿ, ಉಳಿದವುಗಳನ್ನು ತ್ಯಾಗಮಾಡುವಂಥವರಿಗೆ ಕೋಟ್ಯಾವಧಿ ಅಭಕ್ಷ್ಯ ಭಕ್ಷಣದ ದೋಷದಿಂದ ಉಳಿದುಕೊಳ್ಳಲಿಕ್ಕೆ ಬರುತ್ತದೆ. ಹರಿತಕಾಯ-ಗಳಲ್ಲಿ ಯಾವ ಎಲೆಯೂ ತಿನ್ನಲಿಕ್ಕೆ ಯೋಗ್ಯವಾಗಿಲ್ಲ ತ್ರಸ ಜೀವಗಳ ಉತ್ಪತ್ತಿಯನ್ನು ತಡೆಯಲಿಕ್ಕೆ ಬರುವಂಥ ಹಲವು ಪದಾರ್ಥಗಳನ್ನು ತ್ಯಾಗಮಾಡಬೇಕು ತ್ಯಾಗಮಾಡದೆ ಸಹಜವಾಗಿ ಸೇವಿಸದೆ ಇದ್ದರಾಯಿತೆಂದು ಭಾವಿಸಿದರೆ ಅಸಂಯಮತ್ವದ ಆಸ್ರವವು ಸಂಭವಿಸುತ್ತದೆ ಅದಕ್ಕಾಗಿ ಹರಿತಕಾಯಗಳನ್ನು ಭಕ್ಷಣಮಾಡುವದರಲ್ಲಿ ನಿಯಮಮಾಡುವುದು ಅವಶ್ಯವಾಗಿದೆ ಎಂಬುದು ತಮಗೆ ಕಂಡುಬಂದಿರಲಿಕ್ಕೆ ಸಾಕು

ಭುರುಸುಬಂದ ಅನ್ನ ಹಾಗೂ ಅವುಲೇರುವ ಪದಾರ್ಥಗಳನ್ನು ತಿನ್ನಕೂಡದು. ಯಾವ ಅನ್ನದ ಮೇಲೆ ಭುರುಸು ಬಂದಿದೆಯೋ ಅದನ್ನು ತಿನ್ನಕೂಡದು. ಅಂಥ ಅನ್ನವು ಹಳಸಿರುತ್ತದೆ. ತಿನ್ನಲಿಕ್ಕೆ ಅಯೋಗ್ಯ-ವಾಗಿರುತ್ತದೆ. ಈ ಭುರುಸು ನೀಲಿ, ಹಸಿರು, ಕೆಂಪು ಮತ್ತು ಬಿಳಿಯ ಬಣ್ಣದ್ದಿರುತ್ತದೆ ಇವುಗಳಲ್ಲಿ ಯಾವ ಬಣ್ಣದ್ದಿದ್ದರೂ ಅದು ತಿನ್ನಲು ಯೋಗ್ಯವಲ್ಲ ಅದರಲ್ಲಿ ಜನಿಸಿದ ಅನಂತಕಾಯ ಜೀವಗಳ ಘಾತವಾಗುತ್ತದೆ. ನಾಲಿಗೆ ಹಾಗೂ ಮೋಹಕ್ಕೆ ಕಾರಣವೂ, ಪ್ರಮಾದವನ್ನು ಉತ್ಪನ್ನಮಾಡುವಂಥವೂ, ಜ್ಞಾನವನ್ನು ಕೆಡಿಸುವಂಥವೂ, ತಿನ್ನತಕ್ಕ ಭೋಗಿಸುವ ಇಂದ್ರಿಯಗಳನ್ನು ವಿಕಲಗೊಳಿಸುವಂಥವೂ ಆದ ಭಂಗಿ, ತಂಬಾಕು, ಹುಕ್ಕಾ, (ಗುಡಗುಡಿ)

ತಂಬಾಕು (ಜರದಾ), ಅಫು ಮೊದಲಾದ ಅಭಕ್ಷ್ಯ ವಸ್ತುಗಳನ್ನು ಸೇದುವದೂ ತಿನ್ನುವದೂ ಜಿನಧರ್ಮಾನುಯಾಯಿ ಪುರುಷರಿಗೆ ಯೋಗ್ಯವಲ್ಲ. ಈ ಅಮಲೇರುವ ಪದಾರ್ಥಗಳಿಂದ ಪರಾಧೀನತೆಯು ಪ್ರಾಪ್ತವಾಗುತ್ತದೆ. ಇವುಗಳಲ್ಲಿ ಅಫುವನ್ನು ತಿನ್ನುವ ಮನುಷ್ಯನಿಗಂತೂ ಆ ಕ್ಷಣಕ್ಕೆ ಅಫುವು ಸಿಗದಿದ್ದರೆ ಅವನ ಕಾಲುಗಳು ಭೂಮಿಯಿಂದ ಏಳುವ ಹಾಗೇ ಇಲ್ಲ. ಅದು ದೊರೆಯದಿದ್ದರೆ ದನಗಳ ಹಾಗೆ ಕಾಲುಗಳನ್ನು ಝಾಡಿಸುವನು. ನಿರ್ಲಜ್ಜನಾಗಿ ಬೇಕಾದವರ ಹತ್ತರ ಬೇಡ ಹತ್ತುವನು. ಅವನು ಕಣ್ಣೀರು ಸುರಿಸುವನು. ಅಫುವು ಸಿಕ್ಕೊಡನೆ ಅವನಿಗೆ ಉನ್ಮಾದವು ಹುಟ್ಟುತ್ತದೆ. ನಾಲಿಗೆ ತೃಷ್ಣೆಯು ಹೆಚ್ಚುವುದು. ಮತ್ತು ಸ್ವಾಧ್ಯಾಯ, ಧರ್ಮಶ್ರವಣ, ವ್ರತ, ಸಂಯಮ, ಉಪವಾಸಗಳನ್ನಂತೂ ಆಚರಿಸುವದು ಅಂಥವರಿಗೆ ಸಾಧ್ಯವಾಗುವದಿಲ್ಲ. ಅವರ ಬುದ್ಧಿಯು ಧರ್ಮಪರಾಙ್ಮುಖವಾಗಿದ್ದು, ಉತ್ತಮ ಆಚರಣೆಯಂತೂ ನಷ್ಟವಾಗಿ ಹೋಗುತ್ತದೆ. ಅದರಿಂದ ಅಫು ತಿನ್ನುವ ಚಟವು ಇಷ್ಟು ಪಾತುಕ ಇದೆ ಎಂದು ತಿಳಿದು, ಅದನ್ನು ತ್ಯಜಿಸಲೇ ಬೇಕು.

**ಗುಡಗುಡಿ ಸೇದಬಾರದು.** ಗುಡಗುಡಿ ಸೇದುವವರ ಅವಸ್ಥೆಯನ್ನು ನೋಡಿರಿ. ಗುಡಗುಡಿಯ ಹೊಲಸು ಸ್ಥಿತಿ, ದುರ್ಗಂಧ ಇವುಗಳಿಂದ ಗುಡಗುಡಿಯ ನೀರಿನಲ್ಲಿ ತಂಬಾಕು ಹಾಗೂ ಹೊಗೆಯ ಸಂಯೋಗದಿಂದ ಅನೇಕ ಜೀವಗಳ ಉತ್ಪತ್ತಿಯು ಆಗುತ್ತದೆ. ಆ ನೀರನ್ನು ಭೂಮಿಯ ಮೇಲೆ ಎಲ್ಲಿ ಚಲ್ಲಿದರೂ ಅಲ್ಲಿಯ ಷಟ್‌ಕಾಯ ಜೀವಗಳ ಹಾನಿಯಾಗುತ್ತದೆ ಸದಾಚಾರವುಳ್ಳವರು ಗುಡಗುಡಿಯನ್ನು ಸೇದುವವರ ಹತ್ತರ ಕೂಡುವದಿಲ್ಲ ಅವರ ದುರ್ಗಂಧವು ಅಸಹನೀಯವಾಗಿರುತ್ತದೆ. ಮೇಲಿಂದ ಮೇಲೆ ಗುಡಗುಡಿ ಸೇದುವವರ ಮನೆಯಲ್ಲಿ ಯಾವಾಗಲೂ ಬೆಂಕಿಯು ಹೊತ್ತಿಸಿದ್ದು ಇರುತ್ತದೆ ಗುಡಗುಡಿಯನ್ನು ನೀಚ ಜನರು ಸೇದಬೇಕು ಉತ್ತಮ ಪುರುಷರು ಸೇದುವದು ಯೋಗ್ಯವಲ್ಲ. ಹುಕ್ಕಾ ಸೇದುವವನಿಗೆ ಬಂಡಿ ಹೊಡೆಯುವವ, ಮೇಣೆ ಹೊರುವವರೇ ಮೊದಲಾದ ಜನರ ಸಂಗತಿಯು ಸೇರುತ್ತದೆ. ಒಳ್ಳೆಯ ಜನರ ಸಹವಾಸವು ಅವನಿಗೆ ರುಚಿಸುವದಿಲ್ಲ. ಗುಡಗುಡಿ ಸೇದುವ ವ್ಯಸನ ಇದ್ದವರಿಗೆ ಅದನ್ನು ಸೇದುವ ತಲಬು ಆದಾಗ ಅದು ಸಿಗದಿದ್ದರೆ ಎಂಥ ದುಷ್ಟ ಹಾಗೂ ಮಲಿನ ಜನರ ಕಡೆಯಿಂದಲೂ ಅದನ್ನು ಬೇಡಿ ತಂದು ಸೇದುವನು ಅದನ್ನು ಸೇದದ ಹೊರತಾಗಿ ಬಿಡುವದಿಲ್ಲ. ಮುಂದೆ ಮುಂದೆ ಅವನಿಗೆ ತಾನು ಗುಡಗುಡಿಯನ್ನು ಸೇದದಿದ್ದರೆ ತನಗೆ ಭಯಂಕರ ರೋಗವೇ ಆಗುವದೆಂದು ಭಾಸವಾಗುತ್ತದೆ. ಹೊಟ್ಟೆಯಲ್ಲಿ ಗಂಟು ತಿರುಗುವುದು, ಮಲಬದ್ಧತೆ ಉಂಟಾಗುವದು, ತಲೆ ಶೂಲಿಹಾಕುವದೆಂದು ಬಾಸವಾಗುವುದು. ಈ ಪ್ರಕಾರ ತಮ್ಮ ಕೃತಿಗಳಿಂದಲೇ ವ್ಯಸನಿ ಜನರು ಅನೇಕ ದೊಡ್ಡ ದೊಡ್ಡ ದುಃಖಗಳನ್ನೂ ತಮ್ಮ ಮೇಲೆ ಎಳೆದುಕೊಳ್ಳುತ್ತಾರೆ. ಅದಕ್ಕಾಗಿ ಅವರು ವ್ರತ, ಉಪವಾಸಾದಿ ಉತ್ತಮ ಕಾರ್ಯಗಳನ್ನು ಬಿಡಬೇಕೆನ್ನುತ್ತಾರೆ.

**ತಂಬಾಕದ ದುಷ್ಪರಿಣಾಮ**—ತಂಬಾಕವು ತೀರ ಅಶುದ್ಧ ದ್ರವ್ಯವಾಗಿದೆ. ಅದನ್ನು ಬಾಯಲ್ಲಿ ಹಿಡಿದು ಅನೇಕ ಜನರು ಮಲ-ಮೂತ್ರಗಳನ್ನು ವಿಸರ್ಜಿಸುವರು. ಇದನ್ನು ಬಹುತರ ವೀಳ್ಯದೆಲೆಯ ಕೂಡ ತಿನ್ನುವರು. ಒಮ್ಮೊಮ್ಮೆ ಎಲೆಗಳು ಸಿಗದಿದ್ದರೆ ಕೇವಲ ತಂಬಾಕವನ್ನೇ ಬಾಯಲ್ಲಿ ಹಿಡಿದು, ನುರಿಸದ ಹೊರತಾಗಿ ಅವರ ಜೀವಕ್ಕೆ ಸಮಾಧಾನವಾಗುವಂತಿಲ್ಲ. ಕೆಲವರು ರಾಜಮಾರ್ಗದಲ್ಲಿ ಹೋಗುವಾಗ ಸುಂದರ ವಸ್ತ್ರಾಭರಣಗಳನ್ನು ಧರಿಸಿ, ಬಾಯಲ್ಲಿ ಎಲೆ ಅಡಿಕೆಗಳನ್ನು ಹಾಕಿಕೊಂಡು, ತಂಬಾಕನ್ನು ತಿನ್ನುತ್ತ ದಾರಿಯಲ್ಲೆಲ್ಲ ಉಗುಳುತ್ತ ಹೋಗುವುದು ಹಿರಿತನವೆಂದು ತಿಳಿಯುತ್ತಾರೆ. ಅದರಲ್ಲಿ ಅವರಿಗೆ ಅಭಿಮಾನವೂ ಎನಿಸುತ್ತದೆ. ಆಗ ಅವರಿಗೆ ಆ ತಾಂಬೂಲದಲ್ಲಿ ಉಪಯೋಗಿಸಿದ ಸುಣ್ಣವು ಎಷ್ಟು ದಿನಗಳ ಹಿಂದಿನದಿದೆ? ಅದರಲ್ಲಿ ಹೊಲಸೆಷ್ಟು ಸೇರಿದೆ?—ಎಂಬವುಗಳ ವಿಚಾರವೂ ಸಹ ಇರುವದಿಲ್ಲ ನೀಚ ಜಾತಿಯ ಜನರು ಸ್ನಾನವನ್ನು ಮಾಡದೆ, ಹೊಲಸು ಮೈಯಿಂದ ಮೈಯನ್ನು ಕೆರೆದು ಕೊಳ್ಳುತ್ತ, ತಿನ್ನುವ ತಂಬಾಕ (ಜರದಾ) ವನ್ನು ತಯಾರಿಸುತ್ತಿರುತ್ತಾರೆ. ತಂಬಾಕು ತಿನ್ನುವ ಜನರು ಮನೆ, ಅಂಗಳ ಮೊದಲಾದ ಎಡೆಗಳಲ್ಲಿ ಸಿಕ್ಕ ಸಿಕ್ಕಲ್ಲಿ ಉಗುಳಿ ಹೊಲಸುಮಾಡುತ್ತಾರೆ ಮಾರ್ಗದಲ್ಲಿ ಹೋಗುವಾಗ ಪಶುವೂ ಸಹ ತನ್ನ ಬಾಯಿ-ಆಡಿಸುವದಿಲ್ಲ ಅಂದರೆ ಮೆಲಕಾಡಿಸುವದಿಲ್ಲ, ಆದರೆ ಈ ವ್ಯಸನದ ಮನುಷ್ಯನು ಪಶುವಿಗಿಂತಲೂ ಹೀನನಾಗಿ ದಾರಿಯಿಂದ ಹೋಗುವಾಗ ತಂಬಾಕು ತುಂಬಿಕೊಂಡು ಬಾಯಾಡಿಸುತ್ತಿರುತ್ತಾನೆ. ಅವನ ಬಾಯಿಂದ ದುರ್ಗಂಧವು ಹೊರಸೂಸುವದು ಅವನ ಜಗಳಿಸಿದ-ನುರಿಸಿದ—ತಂಬಾಕದ ಉಗುಳು ಎಲ್ಲೆಲ್ಲಿ ಸಿಡಿಯುವದೋ ಅಲ್ಲಿಯ ನೊಣ, ಇರುವೆ, ಗುಂಗಾಡು ಮತ್ತು ಕ್ರಿಮಿ ಮೊದಲಾದವುಗಳೆಲ್ಲ ಸಾಯುತ್ತವೆ ಅನೇಕ ಜೀವಗಳ ಹಾನಿಯಾಗುತ್ತದೆ. ಪಂಚ ಸ್ಥಾವರಗಳ ಘಾತವಾಗುತ್ತದೆ. ವ್ರತ, ಸಂಯಮ, ಉಪವಾಸ, ಸ್ವಾಧ್ಯಾಯ, ಜಪ-ಜಾಪ್ಯ,

ಶುಭಭಾವನೆ ಮೊದಲಾದವುಗಳು ಇಂಥ ಮನುಷ್ಯನಿಗೆ ಆಗಲಾರವು ತಂಬಾಕು ತಿನ್ನುವವರ ಬುದ್ಧಿಯು ಆತ್ಮಹಿತ ಮಾಡಿಕೊಳ್ಳುವುದರ ಕಡೆಗೆ ಹೊರಳುವದಿಲ್ಲ. ಅವರು ಸಂಯಮಿಗಳಾಗಿರಲು ಅಯೋಗ್ಯರಾಗಿರುತ್ತಾರೆ ಅವರಲ್ಲಿ ದಯಾ, ಕ್ಷಮಾ, ಶೀಲ, ಸಂತೋಷ, ಇಂದ್ರಿಯ ವಿಜಯ ಮೊದಲಾದ ಉತ್ತಮ ಗುಣಗಳು ಎಂದೂ ಉತ್ಪನ್ನ-ವಾಗಲಾರವು. ಅವರು ನಿತ್ಯವೂ ಪಾಪಕ್ರಿಯೆ ಮಾಯಾಚಾರ, ಕಪಟಕ್ರಿಯೆ ಇವುಗಳಲ್ಲಿಯೇ ತಲ್ಲೀನರಾಗಿರುತ್ತಾರೆ ಅನೇಕ ವ್ಯಸನಗಳ ಕಡೆಗೆ ಅವರ ಪ್ರವೃತ್ತಿ ಇರುತ್ತದೆ ತಂಬಾಕು ತಿನ್ನುವವರಿಗೆ ಅನ್ಯರ ಮುಂದೆ ಕೈ ನೀಡಲಿಕ್ಕೆ ನಾಚಿಕೆ ಎನಿಸುವದಿಲ್ಲ. ಅವನು ನೀಚ ಜನರನ್ನೂ ಸಹ ಪ್ರಾರ್ಥಿಸಿ, ತನಗೆ ಬೇಕಾದ ತಂಬಾಕನ್ನು ಪಡೆಯುವನು. ಮದ್ಯ ಮಾಂಸಗಳನ್ನು ಆಯಾ ಜನರು ಸೇವಿಸುವ ಕಾಲಕ್ಕೂ ಗುಡಗುಡಿಯನ್ನು ಸೇದುವ ಕಾಲಕ್ಕೂ ಅವರ ಹತ್ತಿರ ಹೋಗಿ 'ಸ್ವಲ್ಪ ತಂಬಾಕು ಕೊಡುವಿರಾ?' ಎಂದು ನಿರ್ಲಜ್ಜತೆಯಿಂದ ಬೇಡಿ, ಅವರ ಮುಂದೆ ಕೈಯೊಡ್ಡಿ ಬೇಡಿ ತಿನ್ನುವದಕ್ಕೂ ಅವರಿಗೆ ನಾಚಿಕೆ ಬರುವದಿಲ್ಲ. ಬೀಡಿಯನ್ನು ಸೇದುವವರೂ ಕೂಡ ಹೀಗೆಯೇ ನಿರ್ಲಜ್ಜರಾಗಿರುತ್ತಾರೆ ತಂಬಾಕು ತಿನ್ನುವವರನ್ನು ಸ್ವಲ್ಪ ಪರೀಕ್ಷಿಸಿ ನೋಡಿದರೆ ಅವರಲ್ಲಿ ಒಬ್ಬರೂ ಸಹ ಪರಮಾರ್ಥ ಬುದ್ಧಿಯುಳ್ಳವರೂ ಪರಲೋಕದ ಬಗ್ಗೆ ವಿಚಾರಮಾಡುವವರೂ ಲಭಿಸುವದಿಲ್ಲ ನಿರ್ಮಲ ಆಚರಣೆಯುಳ್ಳವರಂತೂ ಇಲ್ಲವೇ ಇಲ್ಲ ಈ ತಂಬಾಕು ತಿನ್ನುವುದರಿಂದ ಹೀನಾಚಾರದ ವೃದ್ಧಿಯಾಗುತ್ತದೆ ವ್ಯಸನಿಗಳ ಮನಃಸ್ಥಿತಿ ಹೀಗಿರುವುದೋ ಇಲ್ಲವೋ ನೀವೇ ಮನಸ್ಸಿನಲ್ಲಿ ವಿಚಾರಮಾಡಿ ನೋಡಿರಿ. ಇಂಥ ಅನುಭವವು ನಿಮ್ಮ ಮನಸ್ಸಿಗೆ ಬಂದಲ್ಲಿ ತಂಬಾಕು ತಿನ್ನುವದನ್ನು ತ್ಯಜಿಸಿರಿ ತಂಬಾಕದ ವ್ಯಸನು ಇದ್ದವನಿಗೆ ಒಂದು ದಿನ ತಂಬಾಕು ಸಿಗದಿದ್ದರೆ ತಳಮಳವು ಉಂಟಾಗುತ್ತದೆ, ಹೊಟ್ಟೆಯಲ್ಲಿ ನೋಯಿಸಹತ್ತುವದು, ಅನೇಕ ರೋಗಗಳು ಉತ್ಪನ್ನವಾಗುತ್ತವೆ ಒಟ್ಟಿನ ಮೇಲೆ ತಂಬಾಕು ತಿನ್ನುವದೆಂದರೆ ಅನೇಕ ಪ್ರಕಾರದ ದೊಡ್ಡ ದೊಡ್ಡ ರೋಗಗಳಿಗೆ ಆಮಂತ್ರಣ ಕೊಟ್ಟಂತೆಯೇ ಆಗುತ್ತದೆ. ಅದಕ್ಕಾಗಿ ಇದನ್ನು ತ್ಯಜಿಸಬೇಕು.

**ಗಾಂಜೀ ಸೇದಬಾರದು.** ಗಾಂಜಿಯನ್ನು ಸೇದುವುದೂ ಸಹ ನಮ್ಮ ದೊಡ್ಡಸ್ತನವನ್ನು ನಾಶ-ಮಾಡುವಂಥದೇ ಇದೆ ಗಾಂಜೀಬಡಕನ ಸಮಾಜದೊಳಗಿನ ಸ್ಥಾನವು ಕಡಿಮೆಯಾಗಿರುತ್ತದೆ. ಗಾಂಜಿಯಿಂದ ಗೋಟಾ ತಯಾರಿಸಿ ಕುಡಿಯುತ್ತಾರೆ ಅವನ ನಾಲಿಗೆಯ ಚಪಲತೆಯು ಹೆಚ್ಚುತ್ತ ಹೋಗುತ್ತದೆ ಅವನ ಇಂದ್ರಿಯಗಳು ಶಿಥಿಲಗೊಳ್ಳುತ್ತವೆ. ಪ್ರಮಾದ ಉತ್ಪನ್ನವಾಗುತ್ತದೆ ಬಹಳ ಹೊತ್ತು ನಿದ್ರೆಮಾಡಬೇಕು, ಬಹಳಷ್ಟು ಸವಿ ಸವಿ ಪದಾರ್ಥಗಳನ್ನು ತಿನ್ನಬೇಕು–ಹೀಗೆ ಇಚ್ಛೆಯು ಉತ್ಪನ್ನವಾಗುತ್ತದೆ ಅವನು ಪಾಪಿಷ್ಠವಾದ ಇಂದ್ರಿಯ ವಿಷಯಗಳ ಸ್ವಾಧೀನನಾಗುವನು ಅವನ ಜ್ಞಾನವು ಶಿಥಿಲಗೊಳ್ಳುತ್ತದೆ ಅವನು ವೈರವನ್ನು ಸಾಧಿಸುವಂಥವನಾಗುತ್ತಾನೆ ಗಾಂಜೀ ಸೇದುವವನಿಗೆ ಸವಿ ಸವಿ ಊಟ ಮಾಡಬೇಕೆಂದು ಅತಿಶಯ ಇಚ್ಛೆಯಾಗುತ್ತದೆ ಅಂಥ ಊಟ ಸಿಕ್ಕಿತೆಂದರೆ ತಾನು ಸುಖಿಯೆಂದು ಭಾವಿಸುತ್ತಾನೆ ಅವನಿಗೆ ಆತ್ಮಜ್ಞಾನ ಅಥವಾ ಧರ್ಮಜ್ಞಾನವು ಮೂಲದಲ್ಲಿಯೇ ಇರುವದಿಲ್ಲ. ಹೊರಗಿನ ಆಚರಣೆಗಳೂ ಸಹ ಭ್ರಷ್ಟವಾಗಿರುತ್ತವೆ ಗಾಂಜಿಯಲ್ಲಿ ಸಾವಿರಾರು ತ್ರಸ ಜೀವಗಳು ಉತ್ಪನ್ನವಾಗಿರುತ್ತವೆ. ಮಳೆಗಾಲದಲ್ಲಿಯಂತೂ ಅದರಲ್ಲಿ ಅಪರಿಮಿತ ತ್ರಸ ಜೀವಗಳ ಉತ್ಪತ್ತಿಯಾಗುತ್ತದೆ ಭಂಗಿ ಕುಡಿಯುವವರು ಸಿದ್ಧಗೊಳಿಸುವ ಭಂಗಿಯನ್ನು (ಗೋಟಾ) ಸೋಸದೆ ಹಾಗೆಯೇ ಕುಡಿಯುತ್ತಾರೆ

**ಅಫು ತಿನ್ನಕೂಡದು.** ಇದೇ ಪ್ರಕಾರ ಅಫು ತಿನ್ನುವುದು ಸಹ ಶರೀರಕ್ಕೆ ಅಪಾಯಕಾರಕವಾಗಿದೆ. ಅದರಿಂದ ಶರೀರದ ಆಕಾರವೂ ಸಹ ಕೆಟ್ಟು ಹೋಗುತ್ತದೆ ಅಲ್ಲದೆ ಸದಾಚಾರವು ನಷ್ಟವಾಗುತ್ತದೆ ಅಮಲು (ಪ್ಯಮರವು) ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರಗಳನ್ನು ಘಾತಮಾಡುವಂಥದಿದೆ ಈ ಎಲ್ಲ ಮಾರಕ ಪದಾರ್ಥಗಳು ಅನರ್ಥದಂಡದಲ್ಲಿ ಸಮಾವೇಶಗೊಳ್ಳುತ್ತವೆ, ವ್ಯಸನಗಳೆನಿಸುತ್ತವೆ ಮೇಲಾಗಿ ಇವೆಲ್ಲ ಅಭಕ್ಷ್ಯ ವಸ್ತುಗಳಾಗಿವೆ ಅದಕ್ಕಾಗಿ ಯಾರಿಗೆ ಮನುಷ್ಯಜನ್ಮವು ಪ್ರಾಪ್ತವಾಗಿರುವುದೋ ಅದರಲ್ಲೂ ಜಿನಧರ್ಮ, ಉತ್ತಮ ಕುಲಗಳು ಲಭಿಸಿರುವವೋ ಅವರಂತೂ ತಮ್ಮ ಜನ್ಮವನ್ನೂ ಸಾರ್ಥಕಗೊಳಿಸಿಕೊಳ್ಳಬೇಕಾದಲ್ಲಿ ಮೇಲೆ ವರ್ಣಿಸಿದ ವ್ಯಸನಗಳನ್ನೂ ಮಾದಕ ಪದಾರ್ಥಗಳನ್ನೂ ತ್ಯಜಿಸಬೇಕು.

**ರಾತ್ರಿಯಲ್ಲಿ ಊಟಮಾಡಬಾರದು**—ರಾತ್ರಿಯಲ್ಲಿ ಊಟ ಮಾಡುವದನ್ನೂ ಯಾಕೆ ತ್ಯಾಗ ಮಾಡಬೇಕೆಂಬುದರ ಬಗ್ಗೆಯೂ ಇಲ್ಲಿ ಸ್ವಲ್ಪ ವಿಚಾರ ಮಾಡೋಣ. ರಾತ್ರಿ ಭೋಜನ ಮಾಡುವವರಿಗ ಮೊಟ್ಟ ಮೊದಲು ಯತ್ನಾಚಾರಪೂರ್ವಕ ಕ್ರಿಯೆಯನ್ನು ಮಾಡಲಿಕ್ಕೆ ಬರುವದಿಲ್ಲ ಅದರಿಂದ ಅವರಿಗೆ ಜೀವ ಹಿಂಸೆಯಂತೂ

ಸಂಭವಿಸುತ್ತದೆ ಇರುಳು ಊಟಮಾಡುವ ಅನ್ನದಲ್ಲಿ ಕ್ರಿಮಿ, ಇರುವೆ, ನೊಣ, ಪಕ್ಕದ ಹುಳ ಮೊದಲಾದ ಜೀವಗಳು ಬಂದು ಬೀಳುತ್ತವೆ ದೀಪವನ್ನು ಹೊತ್ತಿಸಿ, ಅದರ ಸಮೀಪದಲ್ಲಿ ಊಟಕ್ಕೆ ಕುಳಿತರೆ ದೂರ ದೂರದ ಕ್ರಿಮಿಗಳೂ ಕೂಡ ಆ ಬೆಳಕಿಗೆ ಬಂದು ಸೇರುತ್ತವೆ. ತಿನ್ನುವ ಅನ್ನದಲ್ಲಿ ಬೀಳುತ್ತವೆ. ಜಿನಧರ್ಮಾನುಯಾಯಿಗಳು ರಾತ್ರಿ ಊಟಮಾಡುವ ಪದ್ಧತಿಯನ್ನು ತಮ್ಮಲ್ಲಿ ಇಟ್ಟುಕೊಂಡರೆ ತಮ್ಮ ಮುಂದಿನ ಪೀಳಿಗೆಯನ್ನು ಕೆಡಿಸಿದಂತೆ ಆಗುತ್ತದೆ ಜೈನರೂ ಸಹ ಅನ್ಯ ಜನರಂತೆ ರಾತ್ರಿಯಲ್ಲಿ ಒಲೆಯನ್ನು ಹೊತ್ತಿಸುವುದೂ ಅಡಿಗೆ ಮಾಡಿದ ಸ್ಥಳವನ್ನು ಸಾರಿಸುವುದೂ ತೊಳೆಯುವುದೂ ಮಾಡಹತ್ತಿದರೆ ಹಿಂಸೆಯಾಗುವ ಕೆಲಸಗಳನ್ನೂ ಮಾಡಲು ಸಿದ್ಧವಾದಂತಾಗುತ್ತದೆ. ಇದರಿಂದ ಪ್ರತ್ಯಕ್ಷವಾಗಿ ಅನಿವಾರ್ಯ ಹಿಂಸೆಯು ಆಗಿ ಅನೇಕ ಜೀವಗಳ ಘಾತವಾಗುತ್ತದೆ ಅಂದ ಮೇಲೆ ಇಂಥ ಕಾರ್ಯಗಳನ್ನು ಮಾಡುವವರಿಗೆ ಜೈನರೆಂಬ ಹೆಸರಾದರೂ ಹೇಗೆ ಶೋಭಿಸೀತು? ಇಂಥವರಿಂದ ಜೈನಧರ್ಮವಾದರೂ ಹೇಗೆ ಪಾಲಿಸಲ್ಪಟ್ಟೀತು? ಹಲವರು ಅನ್ನುವರು–ನಾವು ರಾತ್ರಿ ಅಡಿಗೆಯನ್ನು ಮಾಡುವದಿಲ್ಲ. ಆದರೆ ಒಣ ಪದಾರ್ಥಗಳಾದ ಫಲಾಹಾರದ ಸಾಮಾನುಗಳೆನಿಸುವ ಉಂಡಿ, ಪೇಡೆ, ಬರ್ಫಿ, ಜಿಲೇಬಿ, ಅವಲಕ್ಕಿ, ಹಾಲು ಮೊದಲಾದವುಗಳನ್ನು ಮಾತ್ರ ತಿನ್ನುತ್ತೇವೆ ಇದರಲ್ಲಿ ಆರಂಭ ಹಿಂಸೆಯಾಗುವದಿಲ್ಲವಷ್ಟೆ? ಇದಕ್ಕೆ ಉತ್ತರವಿಷ್ಟೇ–ಹಗಲು ಊಟಮಾಡುವದನ್ನು ಬಿಟ್ಟು, ರಾತ್ರಿಯಲ್ಲಿ ಉಣ್ಣುವವರಲ್ಲಿ ರಾಗಭಾವನೆಯು ಹುಟ್ಟುತ್ತದೆ ಊಟದ ವಿಷಯದಲ್ಲಿ ಮನದೊಳಗೆ ಇಷ್ಟೊಂದು ಉತ್ಕಟಭಾವನೆಯು ಜನಿಸುವುದೇ ಬಹು ದೊಡ್ಡ ಹಿಂಸೆಯಾಗಿದೆ. ಹೇಗೆಂದರೆ ಅನ್ನದ ತುತ್ತಿನ ವಿಷಯದಲ್ಲಿ ಇದ್ದ ಪ್ರೀತಿ ಹಾಗೂ ಮಾಂಸದ ತುತ್ತಿನ ವಿಷಯದ ಪ್ರೀತಿ ಇವೆರಡೂ ಪ್ರೀತಿಗಳು ಒಂದೇ ಪ್ರೀತಿ ಎಂಬ ಬಾವನೆಯೇ ಆಗಿದ್ದರೂ ಎರಡರಲ್ಲೂ ಮಹದಂತರವಿದೆ. ಅದರಂತೆಯೇ ಹಗಲು ಊಟದ ಅನುರಾಗವು ರಾತ್ರಿ ಭೋಜನದ ಅನುರಾಗದಂತಲ್ಲ, ರಾತ್ರಿಯಲ್ಲಿ ಊಟ ಮಾಡುವವರಿಗೆ ಪಶುಗಳಂತೆ ಹಿಂಸೆ–ಅಹಿಂಸೆಗಳ ವಿಚಾರವೇ ಉಳಿಯುವದಿಲ್ಲ ಅವರಿಂದ ವ್ರತ, ತಪಶ್ಚರಣಗಳು ನಡೆಯುವದಿಲ್ಲ. ಅನಾದಿ ಕಾಲದಿಂದಲೂ ವಿದೇಹ ಕ್ಷೇತ್ರದಲ್ಲಿಯೂ ಚತುರ್ಥಕಾಲದಿಂದ ಭಾರತದಲ್ಲಿಯೂ ಜೈನರು ಹಗಲಿನಲ್ಲಿಯೇ ಊಟ ಮಾಡುತ್ತ ಬಂದಿದ್ದಾರೆ. ಹಗಲು ಹೊತ್ತು ಒಮ್ಮೆ ಇಲ್ಲವೆ ಎರಡು ಸಲ ಊಟಮಾಡುವ ಕ್ರಮವು ಅವರಲ್ಲಿ ನಡೆಯುತ್ತ ಬಂದಿದೆ ಅವರು ರಾತ್ರಿಯಲ್ಲಿ ಊಟವನ್ನು ಎಂದೂ ಮಾಡುವದಿಲ್ಲ ಹೀಗಿದ್ದೂ ಕೂಡ ಅವರು ಈಗ ರಾತ್ರಿ ಊಟಮಾಡುವುದು, ರಾತ್ರಿ ಒಲೆ ಹೊತ್ತಿಸುವದನ್ನು ಆರಂಭಿಸುವುದು, ನೆಲವನ್ನು ಸಾರಿಸುವುದು, ನೀರು ಚೆಲ್ಲುವುದು, ಭೂಮಿಯ ಕಸವನ್ನು ಉಡುಗಿ ತೆಗೆಯುವುದು ಇವೆಲ್ಲ ಕ್ರಿಯೆಗಳನ್ನು ರಾತ್ರಿಯಲ್ಲಿ ಮಾಡಹತ್ತಿದರೆ ರಾತ್ರಿಯ ಎರಡು ಪ್ರಹರಗಳಾದರೂ ಉರುಳಿ ಹೋಗುತ್ತವೆ ಕಾಯಿಪಲ್ಲೆಗಳನ್ನು ಬೇಯಿಸಿ ಸಿದ್ಧಗೊಳಿಸುವುದು, ಗಂಡಸರಿಗೆ ಉಟಕ್ಕೆ ಹಾಕುವುದು, ಆ ಮೇಲೆ ಹೆಂಗಸರು ಹುಡುಗರು ಊಟಮಾಡುವುದು, ತರುವಾಯ ಆಳುಗಳು ಉಣ್ಣುವುದು, ಅದಾದ ನಂತರ ಪಾತ್ರೆಗಳನ್ನು ತೊಳೆಯುವುದು, ನೆಲಸ್ವಚ್ಛಮಾಡುವುದು ಇಷ್ಟೆಲ್ಲ ಆಗಲಿಕ್ಕೆ ಎರಡು ಪ್ರಹರಗಳು ಸಹಜ ಬೇಕಾಗುತ್ತವೆ. ಇವೆಲ್ಲ ಕ್ರಿಯೆಗಳನ್ನು ಮಾಡುವದರಲ್ಲಿ ಅನೇಕ ಜೀವಗಳ ಸಂಹಾರವಾದೀತು. ಇಂಥ ಸ್ಥಿತಿಯಲ್ಲಿ ಜೈನರು ಯತ್ನಾಚಾರಪೂರ್ವಕ ಕ್ರಿಯೆಗಳನ್ನು ಮಾಡಬೇಕೆಂದು ಆಚಾರ್ಯರು ಹೇಳಿದ್ದು ವ್ಯರ್ಥವಾಗುತ್ತದೆ ರಾತ್ರಿಯಲ್ಲಿ ಕ್ರಿಯೆಯನ್ನು ಮಾಡುವಾಗ ಕೀಡಿ, ಇರುವೆ, ಪಕ್ಕದ ಹುಳ ಮೊದಲಾದವುಗಳು ಹರಿವಾಣದಲ್ಲಿ ಬಂದು ಬೀಳುತ್ತವೆ, ಒಲೆಯಲ್ಲಿ ಬೀಳುತ್ತವೆ, ಕಾಯಿ–ಪಲ್ಲೆಯಲ್ಲಿ ಬೀಳುತ್ತವೆ ಮತ್ತು ನೀರು ತುಂಬಿ ಇಟ್ಟ ಪಾತ್ರೆಯಲ್ಲಿಯೂ ಬೀಳುತ್ತವೆ ದೀಪ ಹಾಗೂ ಒಲೆಯೊಳಗಿನ ಬೆಂಕಿಯ ನಿಮಿತ್ತದಿಂದ ನೊಣ, ಪಕ್ಕದ ಹುಳ ಮೊದಲಾದವುಗಳ ಹೋಮವು ನಿತ್ಯವೂ ಆಗುತ್ತಿರುತ್ತದೆ ಹಗಲೂ ಆರಂಭ ಮತ್ತು ರಾತ್ರಿಯಲ್ಲಿಯೂ ಘೋರ ಆರಂಭ ಈ ಯೋಗದಿಂದ ಘೋರವಾದ ಪಾಪಕ್ರಿಯೆಯು ಒಂದೇ ಸಮನೆ ನಡೆಯುತ್ತಿರುತ್ತದೆ ಈ ಪಾಪಕರ್ಮದ ಉದಯದಿಂದ ಮನೆತನದೊಳಗಿನ ಎಲ್ಲ ಜನರಿಗೂ ವಿವಿಧ ಸಂಕಟಗಳು ಪ್ರಾಪ್ತವಾಗುತ್ತವೆ ರಾತ್ರಿಯಲ್ಲಿಯೂ ಸಹ ಯಾರಿಗೆ ದೊಡ್ಡ ದೊಡ್ಡ ಉದ್ಯೋಗ ಇಲ್ಲವೆ ಕೂಲಿ ಇವುಗಳಿಂದ ಕ್ಷಣವೂ ಸಹ ಅವಕಾಶವು ಸಿಕ್ಕುದಿಲ್ಲವೋ ಅವರಿಗೆ ಧರ್ಮಸೇವನೆ, ಶಾಸ್ತ್ರಪಠಣ ತತ್ತ್ವಚರ್ಚೆ, ಶಂಕಾಸಮಾಧಾನ, ಸಾಮಾಯಿಕ, ಜಪಜಾಪ್ಯ ಶುಭಧ್ಯಾನ ಮೊದಲಾದ ಕ್ರಿಯೆಗಳು ಹೇಗೆ ಸಾಧಿಸಬಲ್ಲುವು? ಈ ಎಲ್ಲ ಕಾರಣಗಳಿಗಾಗಿ ಜಿನಧರ್ಮಕ್ಕನುಸರಿಸಿ ಜೀವನ ಸಾಗಿಸುವವರು ರಾತ್ರಿಯಲ್ಲಿ ಊಟವನ್ನು ಮಾಡುವದಿಲ್ಲ. ಇದು ಸನಾತನವೂ ಉತ್ತಮವೂ ಆದ ರೀತಿಯಾಗಿದ್ದು, ಇಂದಿನ ವರೆಗೂ ನಡೆಯುತ್ತ ಬಂದಿದೆ ಜೈನರು ಎಂದೂ ರಾತ್ರಿಯಲ್ಲಿ ಊಟ ಮಾಡುವದಿಲ್ಲವೆಂಬ ಪ್ರಸಿದ್ಧಿಯು ಇತರ ಜನರಲ್ಲಿಯೂ

ಇದೆ ಈ ಪ್ರಕಾರದ ಉತ್ತಮ ವರಂವರೆ, ತಮ್ಮ ಕೀರ್ತಿ, ಊಟದ ಶುದ್ಧತೆ ಇವುಗಳನ್ನು ಬಿಟ್ಟು, ಹಸಿವೆಯ ತಾವಕ್ಕೆ ಒಳಗಾಗಿ ಇರುಳು ಹಾಲು, ಪೇಡೆ, ಬರ್ಫಿ ಮೊದಲಾದ ಫಲಹಾರಗಳನ್ನೂ ಔಷಧ, ನೀರುಗಳನ್ನೂ ತಕ್ಕೊಳ್ಳುವವರು ತಮ್ಮ ಉತ್ತಮ ಜೈನತ್ವ, ಉತ್ತಮ ಆಚಾರ, ಉತ್ತಮ ಧರ್ಮಗಳಿಗೆ ಜಲಾಂಜಲಿಯನ್ನು ಕೊಟ್ಟರೆಂದು ತಿಳಿಯಬೇಕು ಇಂಥವರು ಸನ್ಮಾರ್ಗದಿಂದ ಭ್ರಷ್ಟರೂ ಉನ್ಮತ್ತರೂ ಎಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ ಇಂಥವರ ಒಳ–ಹೊರಗಿನ ಎಲ್ಲ ಕ್ರಿಯೆಗಳೂ ಅಧರ್ಮದ ಕಡೆಗೆ ಪ್ರವೃತ್ತಿಯನ್ನುಂಟು ಮಾಡುವಂಥವಿವೆ–ಎಂದು ತಿಳಿಯಬೇಕು.

**ಹಿಂಸಕ ಜನರ ಕೂಡ ಊಟೋಪಚಾರಗಳನ್ನು ಮಾಡಬಾರದು.** ನಿಜವಾದ ಜೈನರು ರಾತ್ರಿಯಲ್ಲಿ ಸಿದ್ಧಗೊಳಿಸಿದ ಅಡಿಗೆಯನ್ನು ಹಗಲಿನಲ್ಲಿಯೂ ಸಹ ಊಟಮಾಡಕೂಡದು. ಇದೇ ಪ್ರಕಾರ ಅವರು ಮಿಥ್ಯಾಧರ್ಮ ಧಾರಣಮಾಡಿದವರೂ ಮಾಂಸಾಹಾರಿಗಳೂ ಆದ ಜನರ ಸಂಗಡ ಸಹ ಭೋಜನಮಾಡಕೂಡದು. ನೀಚ ಜಾತಿಯವರ ಕೂಡ ಸ್ನೇಹವನ್ನೂ ಸಹ ಇಟ್ಟುಕೊಳ್ಳಬಾರದು ದೇವತೆಗೆ ಅರ್ಪಿಸಿದ ಅನ್ನವನ್ನು ತಿನ್ನಕೂಡದು. ಹಸ್ತಿದಂತದ ಬಳೆಗಳನ್ನು ಮುಂಗೈಯಲ್ಲಿ ಇಟ್ಟುಕೊಂಡು, ಇಲ್ಲವೆ ಉಣ್ಣೆಯ ವಸ್ತ್ರವನ್ನು ಧರಿಸಿ, ಸಿದ್ಧಗೊಳಿಸಿದ ಆಹಾರ ಪದಾರ್ಥ-ಗಳನ್ನು ಸೇವಿಸಬಾರದು ಮಾಂಸ ಭಕ್ಷಣಮಾಡುವವರ ಮನೆಯಲ್ಲಿ ತಾವು ಸ್ವತಃ ಅಡಿಗೆಯನ್ನು ಮಾಡಿಕೊಂಡೂ ಕೂಡ ಊಟಮಾಡಬಾರದು ನೀಚ ಜಾತಿಯವರ ಮನೆಯಲ್ಲಿ ಸಹ ಉಣ್ಣಕೂಡದು ಸುಗಂಧ ದ್ರವ್ಯವನ್ನು ಮಾರುವವರ (ಅತ್ತಾರ) ಮನೆಯ ಅರ್ಕ, ಸರಬತ್ತು ಮೊದಲಾದ ಯಾವ ಪದಾರ್ಥಗಳನ್ನೂ ಸೇವಿಸಬಾರದು.

**ಯಾವ ಅರ್ಕವನ್ನೂ ಸೇವನ ಮಾಡಕೂಡದು.** ಜಲಚರ, ಸ್ಥಲಚರ, ನಭಶ್ಚರ ಪಂಚೇಂದ್ರಿಯ ಮೊದಲಾದ ಜೀವಗಳ ಮಾಂಸದ ಅರ್ಕವನ್ನೂ ತೆಗೆಯಲಾಗುತ್ತದೆ ಅನೇಕ ಪ್ರಕಾರದ ರಸಗಳನ್ನೂ ಸಿದ್ಧಗೊಳಿಸಿ, ಅವುಗಳಿಗೆ ಅರ್ಕವೆಂದು ಹೆಸರನ್ನಿಡುವರು ಹಲವು ಜೀವಗಳ ತತ್ತಿಯೊಳಗಿನ ರಸವನ್ನು ತೆಗೆದು, ಬಾಟಲಿಯಲ್ಲಿ ತುಂಬಿಟ್ಟಿರುತ್ತಾರೆ ಅದಕ್ಕಾಗಿ ಯಾವ ಅರ್ಕವನ್ನು ಸಹ ಉಪಯೋಗಿಸಬಾರದು. ಸುಗಂಧ ದ್ರವ್ಯವನ್ನು ಮಾರುವವರು ಜೇನತುಪ್ಪ, ಸರಬತ್ತು, ಗೋಟಾ, ರಸಾಯನಗಳನ್ನೂ ಅನೇಕ ಜೀವಗಳ ಇಂದ್ರಿಯಗಳು, ನಾಲಿಗೆ, ರಕ್ತಾಶಯ ಒಣಮಾಂಸಗಳನ್ನೂ ಮಾರುತ್ತಿರುತ್ತಾರೆ. ಇಂಥ ನೀಚ ಪುರುಷರಲ್ಲಿಯ ಯಾವ ವಸ್ತುವೂ ಸಹ ಉತ್ತಮ ಕುಲದಲ್ಲಿ ಉತ್ಪನ್ನರಾದ ಮನುಷ್ಯರ ಬುದ್ಧಿಯನ್ನು ಭ್ರಷ್ಟಗೊಳಿಸುತ್ತದೆ ಮ್ಲೇಂಚ್ಛರು ಹಿಂದುಸ್ತಾನದೊಳಗಿನ ಎಲ್ಲ ಜನರಿಗೂ ತಮ್ಮ ಎಂಜಲನ್ನು ಸೇವಿಸ ಹಚ್ಚಿ, ಭ್ರಷ್ಟಮಾಡುವ ಸಲುವಾಗಿಯೋ ಏನೋ ಇಂಥ ಅಂಗಡಿಗಳನ್ನು ನಡೆಯಿಸಿರಬೇಕೆನಿಸುತ್ತದೆ ಕೋಟ್ಯಾವಧಿ ಮಾಂಸ ವ್ಯಾಪಾರಿಗಳ ಅಂಗಡಿಯಷ್ಟೇ ಒಬ್ಬ ಅತ್ತಾರನ (ನಿಷಿದ್ಧ ಔಷಧ ಮಾರುವವ) ಅಂಗಡಿಯಿರುತ್ತದೆಂದು ತಿಳಿಯಬೇಕು

**ಮದ್ಯ ಮಾಂಸಗಳಿಂದ ಕೂಡಿದ ಪಾಶ್ಚಾತ್ಯ ಔಷಧಗಳನ್ನು ತಕ್ಕೊಳ್ಳಬಾರದು.** ಈ ದೇಶದೊಳಗಿನ ರಾಜರು ಹಿಂದೂ ಧರ್ಮದ ರಕ್ಷಣೆಗಳಿಗಾಗಿ ೧೯೩೩ನೆಯ ಸಂವತ್ಸರದ ವರೆಗೆ ಅತ್ತರದ ಅಂಗಡಿಗಳನ್ನು ಇಲ್ಲಿ ಹಾಕಲಿಕ್ಕೆ ಕೊಡಲಿಲ್ಲ ಆದರೆ ಮುಂದೆ ಪಾಪ ಪ್ರವೃತ್ತಿಯು ಕಾಲವಶಾತ್ ಹೆಚ್ಚುತ್ತ ನಡೆಯಿತು ಈಗಂತೂ ಉತ್ತಮ ಕುಲದೊಳಗಿನ ಜನರೂ ಸಹ ಪಾಶ್ಚಾತ್ಯ ಪದ್ಧತಿಯ ಔಷಧ, ಅರ್ಕ, ಚುಚ್ಚುಮದ್ದು (ಇಂಜೆಕ್ಶನ್) ಮೊದಲಾದವು-ಗಳನ್ನು ಉಪಯೋಗಿಸುತ್ತಿದ್ದಾರೆ ಉಚ್ಚ ತರಗತಿಯ ಜನರು ಮ್ಲೇಂಚ್ಛರ ಎಂಜಲು, ಮಾಂಸ ಭಕ್ಷಣ ಮದಿರಾಪಾನ ಮೊದಲಾದವುಗಳನ್ನು ಮಾಡಹತ್ತಿದ್ದಾರೆ ಈಗ ಬ್ರಾಹ್ಮಣತ್ವ, ವೈಶತ್ವ, ಮಹಾಜನತ್ವಗಳು ಎಲ್ಲಿ ಉಳಿದವು? ಎಲ್ಲ ಕುಲಗಳೂ ಭ್ರಷ್ಟವಾಗಿವೆ ಈ ತಿನ್ನಬಾರದ ವಸ್ತುಗಳನ್ನು ತಿನ್ನುವುದರ ಪ್ರಭಾವದಿಂದ ಜನರ ಬುದ್ಧಿಯು ಸತ್ಯಧರ್ಮ ಪರಾಙ್ಮುಖವಾಗಿದೆ ಡಾಕ್ಟರರ ಔಷಧದಿಂದಲೇ ರೋಗವು ನೆಟ್ಟಗಾಗುವದೆಂಬ ನಿಯಮವಾದರೂ ಎಲ್ಲಿದೆ? ಇವರ ಕೆಟ್ಟ ಔಷಧಗಳನ್ನು ಕುಡಿದೂ ಕೂಡ ಧರ್ಮ ಭ್ರಷ್ಟರಾಗಿ ಅನೇಕ ಜನರು ಮರಣಹೊಂದುತ್ತಿರುವುದನ್ನು ನಾವು ಕಾಣುತ್ತೇವೆ. ಯಾರಿಗೆ ದುರ್ಗತಿಯ ಬಂಧವಾಗಿದೆಯೋ ಅವರಿಗೇ ಇವರ ಔಷಧಗಳಿಂದ ಸುಖವೆನಿಸುತ್ತಿದೆ—ಎಂದು ತಿಳಿಯಬೇಕು.

**ಅರವಿಂದ ರಾಜನ ಉದಾಹರಣ**—ಅರವಿಂದ ರಾಜನಿಗೆ ಒಮ್ಮೆ ದಾಹಜ್ವರವು ಉತ್ಪನ್ನವಾದವು ಅದಕ್ಕೆ ಅನೇಕ ಉಪಾಯಗಳನ್ನು ಮಾಡಲಾಯಿತು ಆದರೂ ಅದು ಇಲ್ಲದಂತೆ ಆಗಲಿಲ್ಲ ಕೊನೆಗೊಮ್ಮೆ ಅವನ ರಾಜವಾಡೆಯ ಮೇಲ್ಛಾಪಿನಲ್ಲಿ ಕಾದಾಡುವ ಪಲ್ಲಿಯ ರಕ್ತದ ಹನಿಯೊಂದು ಅವನ ಮೈಮೇಲೆ ಅಕಸ್ಮಾತ್ತಾಗಿ ಬೀಳಲು

ಅದರಿಂದ ಅವನಿಗ ಸಮಾಧಾನ ಆದಂತೆ ಎನಿಸಿತು. ಆಗ ಆ ದುಷ್ಟರಾಜನು ತನ್ನ ಮಕ್ಕಳಿಗೆ ಆಜ್ಞೆಯನ್ನೇ ಮಾಡಿದನು— ಒಂದು ರಕ್ತದ ಕುಂಡವನ್ನು ಮಾಡಿಕೊಡಿರಿ. ಅದರಲ್ಲಿ ನಾನು ಈಸಾಡುವೆ ಅದರಿಂದ ದಾಹಜ್ವರವು ಇಲ್ಲದಂತಾಗುವದು. ನನಗೆ ಸುಖವಾಗುವುದು ಆದರೆ ಮಕ್ಕಳು ಪಾಪಭೀರುಗಳು ಅವರು ಬಾವಿಯನ್ನು ತೋಡಿ, ಅದನ್ನು ರಕ್ತದಿಂದ ತುಂಬಲಿಕ್ಕೆ ಮನಸ್ಸು ಮಾಡಲಿಲ್ಲ. ತಂದೆಯ ಕಲ್ಪನೆಯನ್ನು ಕಳೆಯಲಿಕ್ಕೆ ಅರಗಿನ ರಸದಿಂದ ತುಂಬಿದ ಬಾವಿಯನ್ನು ಸಿದ್ಧಗೊಳಿಸಿದರು. ಅದು ರಕ್ತದ ಬಾವಿಯಂತೆಯೇ ಕಾಣುತ್ತಿದ್ದಿತು ಅದನ್ನು ನೋಡಿ, ಆನಂದದಿಂದ ಅರವಿಂದ ರಾಜನು ಅದರಲ್ಲಿ ಈಸಾಡಹತ್ತಿದನು. ದಿನಾಲು ಅದರಲ್ಲಿ ಕ್ರೀಡಿಸಹತ್ತಿದನು. ಮುಂದೆ ಅವನಿಗೆ ತನ್ನ ಮಕ್ಕಳು ಕಪಟ ಬುದ್ಧಿಯಿಂದ ರಕ್ತದ್ದೆಂದು ಹೇಳಿ, ಅರಗಿನ ರಸದ ಬಾವಿಯನ್ನು ನಿರ್ಮಿಸಿ ಕೊಟ್ಟಿದ್ದಾರೆಂದು ತಿಳಿಯಿತು ಆಗ ಅವನಿಗೆ ಬಹಳ ಸಿಟ್ಟುಬಂತು. ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು, ಮಗನನ್ನು ಕೊಲ್ಲಲೆಂದೇ ಕ್ರೋಧದಿಂದ ಧಾವಿಸ ಹತ್ತಿದನು. ಹೀಗೆ ಮೈಮೇಲೆ ಎಚ್ಚರಿಲ್ಲದೆ ಕ್ರೋಧವಶನಾಗಿ ಓಡುವಾಗ ರಾಜಮಾರ್ಗದಲ್ಲಿ ಎಡವಿಬಿದ್ದನು. ಆಗ ತನ್ನ ಕೈಯೊಳಗಿನ ಕತ್ತಿಗೇನೇ ತುತ್ತಾಗಿ ಮರಣಹೊಂದಿದನು. ನರಕಕ್ಕೂ ಹೋದನು. ಇದೇ ಪ್ರಕಾರ ಯಾರಿಗೆ ದುರ್ಗತಿಯು ಆಗುವದಿದಿಯೋ ಅವರಿಗೇ ಡಾಕ್ಟರರ ಔಷಧದಿಂದ ಗುಣವೆನಿಸೀತು. ಇಂಥವರ ಪ್ರವೃತ್ತಿಯೇ ಡಾಕ್ಟರರ ಔಷಧವನ್ನು ತಕ್ಕೊಳ್ಳುವುದರ ಕಡೆಗೆ ಆದೀತು ಅದಕ್ಕಾಗಿ ಪ್ರಾಣ ಹೋದರೂ ಚಿಂತೆಯಿಲ್ಲ! ಆರು ತಿಂಗಳ ಕೂಸಿಗೂ ಕೂಡ ಡಾಕ್ಟರರ ಔಷಧಕೊಡುವುದು ಒಳ್ಳೆಯದಲ್ಲ. ಒಮ್ಮೆ ಧರ್ಮದಿಂದ ಚ್ಯುತವಾದಲ್ಲಿ ಅನೇಕ ಜನ್ಮ, ಅನಂತಕಾಲ ಕಳೆದರೂ ಸಹ ತಿರುಗಿ ಧರ್ಮವು ಲಭಿಸಲಾರದು. ಅದರಿಂದ ಜಿನಧರ್ಮವನ್ನು ಧರಿಸಿದವರು ತಮ್ಮ ಶರೀರವು ನೂರಾರು ತುಂಡು ತುಂಡಾದರೂ ಸಹ ತಿನ್ನಬಾರದುದನ್ನು ತಿನ್ನುವುದು ಯೋಗ್ಯವಲ್ಲ.

**ಪೇಟೆಯೊಳಗಿನ ಹಿಟ್ಟನ್ನು ತಿನ್ನಬಾರದು.** ಪೇಟೆಯೊಳಗೆ ಅಂಗಡಿಯಲ್ಲಿ ಮಾರಲಿಕ್ಕೆ ಇಟ್ಟ ಹಿಟ್ಟನ್ನಂತೂ ಎಂದೂ ತಿನ್ನಕೂಡದು. ಅಂಗಡಿಕಾರರು ಆ ಹಿಟ್ಟನ್ನು ಚರ್ಮಕಾರರು, ಕಟುಕ ಮೊದಲಾದವರಿಂದ ಬೀಸಿಸಿ ಇಟ್ಟಿರುತ್ತಾರೆ. ಮೇಲಾಗಿ ಅದು ಅಂಥ ಜನರ ಕಡೆಗೇ ಸಿದ್ಧಗೊಳಿಸಿದ್ದು ದೊರೆಯುತ್ತದೆ ಅಂಗಡಿಕಾರರು ಅವರಿಂದ ಕೊಂಡಿರುತ್ತಾರೆ. ಬಹಳ ದಿನಗಳ ವರೆಗೆ ಇರುವುದರಿಂದ ಅದರಲ್ಲಿ ಅನಂತ ಜೀವಗಳು ಉತ್ಪನ್ನವಾಗಿರುತ್ತವೆ. ಇದೇ ಪ್ರಕಾರ ಅತಿಶಯ ಕೆಟ್ಟ ಹಾಗೂ ಹುಳಹತ್ತಿದ ಧಾನ್ಯಗಳನ್ನು ಕೊಂಡು, ಅಂಗಡಿಕಾರರು ಬೀಸಹಚ್ಚಿ, ಹಿಟ್ಟನ್ನು ತಯಾರಿಸುವರು ಅಸ್ಪೃಶ್ಯರು ಅಂಗಡಿಕಾರರಿಂದ ಆ ಹಿಟ್ಟನ್ನು ಕೊಳ್ಳುವಾಗ ಅದರಲ್ಲಿ ತಮ್ಮ ಕೈಯನ್ನು ಹಾಕಿ, ಎಂಥದಿದೆ ಎಂಬುದನ್ನೂ ನೋಡಿ ನೋಡಿ ಬಿಟ್ಟಿರುತ್ತಾರೆ ಒಂದೊಂದು ಸಲ ಮದುವೆಗಳಲ್ಲಿ ಅವರು ಒಯ್ದ ಹಿಟ್ಟನ್ನು ಹೆಚ್ಚಾಗಿ ಉಳಿಯಲು ತಿರುಗಿ ಅಂಗಡಿಕಾರರಿಗೆ ಮಾರಿರುತ್ತಾರೆ. ಅಂಗಡಿಕಾರರು ಅದನ್ನು ತಿರುಗಿ ತಮ್ಮ ಹಿಟ್ಟಿನ ಚೀಲದಲ್ಲಿ ಬೆರಸಿ, ಮಾರಲಿಕ್ಕೆ ಇಡುತ್ತಾರೆ. ಅದರಿಂದ ಅದು ತಿನ್ನಲಿಕ್ಕೆ ಯೋಗ್ಯವಲ್ಲ.

**ಬಾಡಿಗೆಯಿಂದ ಪಾತ್ರೆಗಳನ್ನು ತರಕೂಡದು.** ಧರ್ಮಶಾಲೆಯೊಳಗಿನ ಇಲ್ಲವೆ ಸಂಘ ಸಂಸ್ಥೆ-ಗಳಲ್ಲಿಯ ಅಥವಾ ಅಂಗಡಿಗಳಲ್ಲಿಯ ಕಬ್ಬಿಣ, ತಾಮ್ರ, ಹಿತ್ತಾಳೆ, ಕಾಚು ಮೊದಲಾದವುಗಳ ಪಾತ್ರೆಗಳನ್ನೂ ಅಡಿಗೆಗೂ ಊಟಕ್ಕೂ ಬಾಡಿಗೆಯಿಂದ ತರಕೂಡದು. ಅವುಗಳ ಒಡೆಯರು ಬಾಡಿಗೆಯ ಆಶೆಯಿಂದ ಮಾಂಸ ಭಕ್ಷಕರಿಗೂ ದುಷ್ಟರಿಗೂ ಸಹ ಅವುಗಳನ್ನು ಉಪಯೋಗಿಸಲಿಕ್ಕೆ ಕೊಟ್ಟಿರುತ್ತಾರೆ. ಯಾರಿಗೆ ತಮ್ಮ ಆಚರಣೆಯನ್ನು ಪವಿತ್ರವನ್ನಾಗಿ ಇಡುವದಿದೆಯೋ ಅವರು ಪ್ರವಾಸದಲ್ಲಿ ತಮ್ಮ ಸಂಗಡ ಒಂದೆರಡು ಅವಶ್ಯಕ ಪಾತ್ರೆಗಳನ್ನು ಇಟ್ಟುಕೊಂಡಿರಬೇಕು. ಎಲ್ಲಿ ಹೋದಲ್ಲಿ ಹೆಚ್ಚಿಗೆ ಹಣವನ್ನು ಕೊಟ್ಟಾದರೂ ತಾಜಾ ಹಾಗೂ ಶುದ್ಧ ಹಿಟ್ಟನ್ನು ಸಿದ್ಧಗೊಳಿಸಿಕೊಳ್ಳಬೇಕು ಬೀಸುವ ಸಾಧನವು (ಬೀಸುವ ಕಲ್ಲು) ದೊರೆಯದಿದ್ದಲ್ಲಿ ಅಕ್ಕಿಯ ಅನ್ನ, ಪಿಚಡಿ, ಗೋದಿಯ ಹುಗ್ಗಿ ಇಂಥವುಗಳನ್ನು ಮಾಡಿಕೊಂಡು ಊಟಮಾಡಬೇಕು.

**ಪೇಟೆಯೊಳಗಿನ ಬೆಂಡು-ಬತ್ತಾಸಗಳನ್ನು ತಿನ್ನಬಾರದು.** ಪೇಟೆಯೊಳಗಿನ ಬೆಂಡು ಬತ್ತಾಸ-ಗಳಲ್ಲಿ ಉಪಯೋಗಿಸಿದ ಎಣ್ಣೆ, ತುಪ್ಪಗಳಿಗೆ ಕಾಲಮರ್ಯಾದೆಯು ಇರುವದಿಲ್ಲ. ಆದುದರಿಂದ ಅವುಗಳನ್ನೂ ತಿನ್ನಕೂಡದು. ಲೋಭಿಗಳೂ ನಿಂದ್ಯ ಕರ್ಮ ಮಾಡುವವರೂ ಆದ ಜನರಿಗೆ ಆಚರಣೆಯು ಯಾವ ಮರ್ಯಾದೆಯೂ ಉಳಿಯುವದಿಲ್ಲ. ಅವರು ಗೋದಿಯ ಹಿಟ್ಟನ್ನು (ಮೈದಾ) ನೆನೆಯಲಿಕ್ಕೆ ಹಾಕುವರು. ಅದರಿಂದ ಅದು

ತಮ್ಮಲ್ಲಿಯ ರಾಗ-ದ್ವೇಷಗಳ ಅಂಶವು ಇಷ್ಟು ಕಡಿಮೆಯಾಗಿದೆ, ಸದ್ಯಕ್ಕೆ ಇದಕ್ಕಿಂತ ಹೆಚ್ಚಿಗೆ ಕಡಿಮೆಯಾಗುವುದು ಸಾಧ್ಯವಿಲ್ಲ. ಅದರಂತೆಯೇ ತಮ್ಮ ಸಾಮರ್ಥ್ಯವು ಈ ಪ್ರಕಾರದ ಸಂಯೋಗ, ದುಃಖ, ವಿಯೋಗಗಳು ಪ್ರಾಪ್ತವಾದಾಗ ಮಾತ್ರ ಸಹನಮಾಡುವಷ್ಟು ಇದೆ. ಅದಕ್ಕಿಂತ ಹೆಚ್ಚಿನ ದುಃಖವನ್ನು ಸಹನ ಮಾಡುವ ಸಾಮರ್ಥ್ಯವು ಇದೆಯೋ ಇಲ್ಲವೋ? ಈ ಎಲ್ಲ ಸಂಗತಿಗಳನ್ನು ವಿಚಾರಿಸಿ ವ್ರತಗಳನ್ನು ಸ್ವೀಕರಿಸಬೇಕು. ದೇಶದ ಪರಿಸ್ಥಿತಿಯು ತಮ್ಮ ನಿರ್ವಾಹಕ್ಕೆ ಯೋಗ್ಯವಾಗಿದೆಯೋ ಇಲ್ಲವೋ? ಕಾಲ, ಸಂದರ್ಭ, ಸಮಯಗಳು ಅನುಕೂಲವಾಗಿರುವವೋ ಇಲ್ಲವೋ? ತಮ್ಮ ಅವಸ್ಥೆಯು ವ್ರತಧಾರಣಮಾಡಲಿಕ್ಕೆ ಯೋಗ್ಯವಿದೆಯೋ ಇಲ್ಲವೋ? ತಮಗೆ ಪ್ರಸಂಗ ಬಂದಲ್ಲಿ ಯಾರಾದರೂ ಸಹಾಯಕರು ಇರುವರೇನು? ತಮ್ಮ ವ್ರತವನ್ನು ಕೆಡಿಸಲಿಕ್ಕೆ ಯಾರಾದರೂ ಕಾರಣರಾಗಬಹುದೇನು? ಇವೇ ಮೊದಲಾದ ಪ್ರಶ್ನೆಗಳ ವಿಚಾರವನ್ನು ಸಹ ಮಾಡಬೇಕು. ಶರೀರವು ನಿರೋಗಿಯಾಗಿರುವುದೇನು? ಶುದ್ಧ ಆಹಾರವು ಸಿಕ್ಕೀತೋ ಇಲ್ಲವೊ? ಭೋಜನ ಮೊದಲಾದವುಗಳು ತಮ್ಮ ಸ್ವಾಧೀನ ಇರುವವೋ ಅಥವಾ ಪರಾಧೀನವೋ? ಈ ಪ್ರಕಾರದ ವ್ರತವನ್ನು ಸ್ವೀಕಾರ ಮಾಡುವುದರಿಂದ ಇಲ್ಲವೆ ಇಂಥ ತ್ಯಾಗ ಮಾಡುವುದರಿಂದ ತನ್ನ ಸ್ತ್ರೀ-ಪುತ್ರ-ಒಡೆಯರೇ ಮೊದಲಾದ ಜನರಿಗೆ ದುಃಖವಾದೀತೋ ಹೇಗೆ? ತಾವು ವ್ರತಗ್ರಹಣ ಮಾಡಲಿಕ್ಕೆ ಸ್ವತಂತ್ರರೋ ಪರತಂತ್ರರೋ?— ಈ ಸಂಗತಿಗಳ ವಿಚಾರವನ್ನೂ ಕೂಡ ಮಾಡಿ, ಯಾವ ಯೋಗದಿಂದ ತಮ್ಮ ಪರಿಣಾಮವು ನಿರ್ಮಲವಿದ್ದು, ವ್ರತಗಳನ್ನೂ ಕಾಪಾಡಿಕೊಳ್ಳಲಿಕ್ಕೆ ಬರುವುದೋ ಅಂಥ ಮರ್ಯಾದಿತ ಕಾಲದವರೆಗೆ ಮಾತ್ರ ನಿಯಮರೂಪದಿಂದ ತ್ಯಾಗಮಾಡಬೇಕು. ಅಥವಾ ಯಮರೂಪ ಎಂದರೆ ಯಾವಜ್ಜೀವವೂ ತ್ಯಾಗಮಾಡಬೇಕು.

ಯಮರೂಪ ತ್ಯಾಗದ ಪದಾರ್ಥಗಳು— ಅನೇಕ ಪದಾರ್ಥಗಳು ಯಾವಜ್ಜೀವವೂ ತ್ಯಾಗಮಾಡುವಂಥವಿವೆ. ಅವು ಹೀಗಿವೆ— ಪ್ರತ್ಯಕ್ಷ ತ್ರಸಜೀವಿಗಳ ಘಾತವಾಗುವಂಥವು. ಅನಂತ ಜೀವಗಳ ಘಾತವಾಗಿ, ತಮ್ಮ ಕುಲದಲ್ಲಿ ಸೇವಿಸಲಿಕ್ಕೆ ಯೋಗ್ಯವಲ್ಲದ ಪದಾರ್ಥವು. ಪ್ರಮಾದವು ಮದಗಳು ಉತ್ಪನ್ನವಾಗುವಂಥವು. ಮದ್ಯ, ಮಾಂಸ, ಜೇನತುಪ್ಪ ಮತ್ತು ಬೆಣ್ಣೆ ಇವು ನಾಲ್ಕು ಮಹಾವಿಕೃತಿಯನ್ನು ಹೊಂದುವಂಥವು. ರಾತ್ರಿಯಲ್ಲಿ ಊಟ ಮಾಡುವಿಕೆ, ದ್ಯೂತ ಮೊದಲಾದ ಏಳು ವ್ಯಸನಗಳು, ಯಾರೂ ಕೊಡದೆ ಇದ್ದ ಅನ್ಯರ ದ್ರವ್ಯವನ್ನು ತಕ್ಕೊಳ್ಳುವಿಕೆ, ತ್ರಸ ಹಿಂಸೆ, ಸ್ಥೂಲ ಅಸತ್ಯ, ಅನ್ಯಾಯ ಪರಿಗ್ರಹ, ಸೋಸದೆ ಇದ್ದ ನೀರು, ಅನರ್ಥದಂಡ ಇವು ಯಾವಜ್ಜೀವ ತ್ಯಾಗಮಾಡಲಿಕ್ಕೆ ಯೋಗ್ಯವಾಗಿವೆ. ಇವುಗಳ ಬಗ್ಗೆ ನಿಯಮಮಾಡಲಿಕ್ಕೆ ಬರುವದಿಲ್ಲ. ಈ ಎಲ್ಲ ಕ್ರಿಯೆಗಳಿಂದ ಯಾವಾಗಲೂ ಪಾಪಬಂಧವಾಗುತ್ತದೆ. ಇವುಗಳನ್ನು ತ್ಯಾಗಮಾಡಲಾಗಿದೆಯೆಂದು ಶರೀರಕ್ಕೆ ಯಾವ ಪ್ರಕಾರದ ಕಷ್ಟವಾದೀತು ಎನ್ನುವ ಹಾಗಿಲ್ಲ. ಇಲ್ಲವೆ ದೊಡ್ಡ ಸಂಕಟ ಉಂಟಾದೀತು ಎನ್ನುವಂತೆಯೂ ಇಲ್ಲ; ಇವುಗಳನ್ನು ತ್ಯಜಿಸಲಿಕ್ಕೆ ಧನದ ಅವಶ್ಯಕತೆಯಿಲ್ಲ. ಶರೀರದಲ್ಲಿ ದೊಡ್ಡ ಶಕ್ತಿಯು ಇರಬೇಕೆಂದೂ ಇಲ್ಲ. ಒಡೆಯ ಅಥವಾ ಸ್ತ್ರೀ, ಮಿತ್ರ, ಪುತ್ರ, ಕುಟುಂಬದೊಳಗಿನ ಇತರ ಜನರ ಅವಶ್ಯಕತೆಯು ಇದೆ ಎಂದೇನೂ ಇಲ್ಲ. ಇವುಗಳನ್ನು ತ್ಯಜಿಸಲಿಕ್ಕೆ ಯಾರ ಸಲಹೆಯ ಅವಶ್ಯಕತೆಯೂ ಇಲ್ಲ. ಇವುಗಳನ್ನು ತ್ಯಜಿಸುವುದರಲ್ಲಿ ಶೀತ, ಉಷ್ಣ, ಹಸಿವು, ನೀರಡಿಕೆ ಮೊದಲಾದವುಗಳ ಬಾಧೆ ಇಲ್ಲವೆ ತೊಂದರೆಗಳನ್ನು ಸಹಿಸಬೇಕಾಗುವದಿಲ್ಲ. ಇವೆಲ್ಲವೂ ನಮ್ಮ ಸ್ವಾಧೀನವಾಗಿವೆ. ಇವುಗಳನ್ನು ತ್ಯಾಗಮಾಡುವುದರಿಂದ ಪರಿಣಾಮವು ಶುದ್ಧವಾಗಿದ್ದು, ಮನಸ್ಸಿಗೆ ಆನಂದವಾಗುತ್ತದೆ. ಅದಕ್ಕಾಗಿ ಇಂದ ದುರ್ಲಭ ಸಾಮಗ್ರಿಯು ಪ್ರಾಪ್ತವಾದಾಗ ಭೋಗೋಪಭೋಗದ ಪ್ರಮಾಣವನ್ನು ಇಟ್ಟುಕೊಳ್ಳುವುದು ಶ್ರೇಷ್ಠತಮ ಕರ್ತವ್ಯವಾಗಿದೆ.

ಸಂಕಟಕಾಲದಲ್ಲಿ ಗಾಬರಿಯಾಗಬೇಡ. ಪ್ರಬಲವಾದ ಕರ್ಮದ ಉದಯದಿಂದ ಮಾನವ ಪ್ರಾಣಿಗೆ ಒಮ್ಮೊಮ್ಮೆ ಪರದೇಶದಲ್ಲಿ ಪರಾಧೀನವಾಗಿ ನಿಲ್ಲುವ ಪ್ರಸಂಗವು ಒದಗಬಹುದು, ಭಯಂಕರ ರೋಗವು ಉತ್ಪನ್ನವಾದಾಗ ಪರಾಧೀನವಾಗಬೇಕಾದೀತು, ಮುಪ್ಪು ಬಂದಾಗ ಕೂಡ್ರುವದಕ್ಕೂ ಏಳುವದಕ್ಕೂ ಶರೀರದಲ್ಲಿ ಶಕ್ತಿಯು ಇಲ್ಲದೆ ಹೋಗಬಹುದು, ಪುತ್ರ, ಮಿತ್ರ, ಬಂಧುಗಳಲ್ಲಿ ಯಾರ ಸಹಾಯವೂ ದೊರಕದೆ ಹೋಗಬಹುದು, ಕಣ್ಣುಗಳು ಕುರುಡವಾಗಬಹುದು, ಕಿವಿಗಳು ಕೇಳದಂತೆ ಆಗಬಹುದು, ಬಹುದಿನಗಳ ವರೆಗೆ ಇರುವ ರೋಗವು ಪ್ರಾಪ್ತವಾದೀತು, ಸೆರೆಮನೆಯಲ್ಲಿ ದುಷ್ಟರ ಸ್ವಾಧೀನವಾಗಿ ಇರಬೇಕಾದೀತು, ದುಷ್ಟಜನರು ನಾವು ತಿನ್ನುವ ಶುದ್ಧ ಆಹಾರವನ್ನು ಕೆಡಿಸಲೂಬಹುದು. ಮತ್ತು ಒತ್ತಾಯದಿಂದ ತಮ್ಮ ಜೊತೆಯಲ್ಲಿ ಊಟಕ್ಕೆ ಹಾಕಿದರೂ ಸಹ ಅಂತರಂಗದಲ್ಲಿ ತಮ್ಮ ವ್ರತ, ಸಂಯಮದ ಪರಿಣಾಮವನ್ನು ಬಿಡಬಾರದು. ಬಹಿರಂಗದಲ್ಲಿ ಇಂದ ಸಂಕಟ ಸಮಯದಲ್ಲಿ

ಪಂಚ ನಮಸ್ಕಾರ ಮಂತ್ರದ ಜಪವನ್ನು ಆರಂಭಿಸಬೇಕು. ಅಂದರೆ ಅದು ಈ ಮಂತ್ರದ ಪ್ರಭಾವದಿಂದ ಶುದ್ಧವಾಗುತ್ತದೆ. ಹೊರಗಿನ ಶರೀರಾದಿಗಳು ಪವಿತ್ರವಿರಲಿ ಅಥವಾ ಅಪವಿತ್ರವಿರಲಿ, ಅದು ಮಲ–ಮೂತ್ರ, ರಕ್ತಗಳಿಂದ ತುಂಬಿರಲಿ, ಇಂಥ ಸ್ಥಿತಿಗೂ ಒಳಗಾಗದೆ ಯಾವ ಮನುಷ್ಯನು ಒಂದೇ ಸವನೆ ಪರಮಾತ್ಮನ ಧ್ಯಾನ ಮಾಡುವನೋ ಅವನು ಅಂತರಂಗ ಬಹಿರಂಗಗಳೆರಡರಲ್ಲಿಯೂ ಪವಿತ್ರವಾಗಿರುತ್ತಾನೆಂದು ತಿಳಿಯಬೇಕು. ಯಾಕಂದರೆ ಶರೀರವು ಏಳು ಧಾತು, ಮಲಮೂತ್ರಗಳಿಂದ ತುಂಬಿದ ರೋಗದ ಮನೆಯಾಗಿದೆ. ಇದು ಒಂದು ಕ್ಷಣದಲ್ಲಿ ಕುಷ್ಟ ರೋಗದಿಂದ ಆವರಿಸಬಹುದು ಇದರ ಮೇಲೆ ಸಾವಿರಾರು ಬೊಕ್ಕೆಗಳು ಏಳಬಹುದು. ಅದರೊಳಗಿಂದ ಮಲಮೂತ್ರ, ರಕ್ತ ಒಂದೇ ಸವನೆ ಸೋರಬಹುದು. ಇಂಥ ಅವಸ್ಥೆಯಲ್ಲಿ ವ್ಯವಹಾರ ಶುದ್ಧಿಯನ್ನು ಹೇಗೆ ಮಾಡಲಾದೀತು? ಮತ್ತು ನಿರ್ಧನನಾದ ಒಬ್ಬೊಂಟಿಗನಿಗೆ ಸಹಾಯವನ್ನಾದರೂ ಯಾರು ಮಾಡಿಯಾರು? ಅದರಿಂದ ಧರ್ಮಿಷ್ಠರಾದ ಪುರುಷರು ಅಶುಭ ಕರ್ಮದ ಉದಯದಿಂದ ಉಂಟಾಗುವ ಸಂಕಟ, ರೋಗ ಮೊದಲಾದವುಗಳಿಗೆ ಧೈರ್ಯದಿಂದ ಎದೆಗೊಡಬೇಕು. ಗಾಬರಿಯಾಗಿ ದುಃಖಮಾಡುತ್ತ ಕೂಡಬಾರದು. ಅಶುಭಕರ್ಮದ ಉದಯವು ಒಂದು ಪ್ರಕಾರದ ನಿರ್ಜರೆಯೇ ಇದೆ. ಇದನ್ನು ತಿಳಿದು, ಅಂತರಂಗದಲ್ಲಿ ಸಂಸಾರ–ದೇಹ–ಭೋಗಗಳ ಸ್ವರೂಪವನ್ನು ಚಿಂತಿಸುತ್ತಾ ಇರಬೇಕು. ಹನ್ನೆರಡು ಭಾವನೆಗಳ ಚಿಂತನೆಯಿಂದ ಕರ್ಮದ ಉದಯಕ್ಕಿಂತಲೂ ಆತ್ಮಸ್ವರೂಪವು ಬೇರೆಯಾಗಿದೆ ಎಂಬ ಅರಿವು ಉಂಟಾಗುತ್ತದೆ ಮತ್ತು ಆತ್ಮನು ಜ್ಞಾತಾ, ದ್ರಷ್ಟಾ ಇದ್ದು, ಶುದ್ಧನಿರುವನು—ಎಂದು ತಿಳಿಯಲಿಕ್ಕೆ ಹತ್ತುವದು. ರಾಗ, ದ್ವೇಷ, ಹರ್ಷ, ವಿಷಾದ, ಗ್ಲಾನಿ, ಭಯ, ಲೋಭ, ಮಮತೆ ಮೊದಲಾದ ಆತ್ಮನ ಮಲಗಳನ್ನು ತೊಳೆದೊಗೆದು, ತನ್ನನ್ನು ಶುದ್ಧವೆಂದು ಬಾವಿಸಬೇಕು ಅಂದರೆ ಅವರಿಗೆ ನಿಜವಾದ ಶುದ್ಧತೆಯು ಪ್ರಾಪ್ತವಾಗುತ್ತದೆ.

ಇನ್ನನಿಷ್ಟವೆಂಬುದೆಂತೆನೆ ಪೇಳುವೆ ತನ್ನಿಷ್ಟವಲ್ಲದಂತಪ್ಪ ।
ಉನ್ನತ ವಿಷಯ ಪರಿಗ್ರಹವೆಲ್ಲವ ಚೆನ್ನಾಗಿ ತೊರೆವುದು ತಾನೆ ॥
ಅನುಪಸೇವ್ಯವೆಂಬುದೆಂತೆನೆ ವ್ಯಾಧಿಗೆ ಅನೇಕ ಮೃಗಪಕ್ಷಿಗಳ ।
ತನುದಕಮಲಗಳಕೊಳ್ಳದೆ ವ್ರತಮಾಳ್ಪುದನುಪಸೇವ್ಯವೆಂಬುದಹುದು ॥
ತನಗಿಷ್ಟಮಪ್ಪ ಭೋಜನಶಯನಾಸನ ವನಿತೆ ವಸ್ತ್ರಾಭರಣಗಳಾ ।
ತನುವಿನುದ್ವರ್ತನೆ ಗಂಧಪುಷ್ಪವಾದಿ ಅನೇಕ ಭೋಗ ವಸ್ತುಗಳ ॥
ಅತಿರಾಗ ಕಾರಣವೆಂದು ತಿಳಿದು ನೀ ಸತತ ಧರ್ಮನಿಮಿತ್ತವಾಗೀ ।
ವ್ರತಮಾಳ್ಪುದು ಯಮನಿಯಮಾದಿಗಳಿಂದ ಸತತ ಸುಖವ ಬಯಸುವದೆ ॥

—ವಿಜಯಣ್ಣ—ದ್ವಾದಶಾನುಪ್ರೇಕ್ಷೆ—ಧರ್ಮಾನುಪ್ರೇಕ್ಷೆ—೭೪–೭೭

ಪರಗಿಣ್ಣು ಬೆಣ್ಣೆಯದತ್ತಾಪದಾನಂಗಳಿರುಳೂಟ ಪೂವಿನ ಶಾಖ ।
ನೋರೆಯುಣಂಬೆ ನೋಡಿಸದುದಕಾದಿಯೊಳ್ ವಿರತನವನು ದರ್ಶನಿಕ ॥

—ಬಾಹುಬಲಿ—ನಾಗಕುಮಾರ ಚರಿತಂ—೨೮, ೪೩

ಈಗ ಭೋಗೋಪಭೋಗಪರಿಮಾಣ ವ್ರತದ ಎರಡು ಭೇದಗಳನ್ನು ಹೇಳುತ್ತಾರೆ—

ನಿಯಮೋ ಯಮಶ್ಚ ವಿಹಿತೌ ದ್ವೇಧಾ ಭೋಗೋಪಭೋಗಸಂಹಾರೇ ।
ನಿಯಮಃ ಪರಿಮಿತಕಾಲೋ ಯಾವಜ್ಜೀವಂ ಯಮೋ ಧ್ರಿಯತೆ ॥ ೮೭ ॥[1]

ಅನ್ವಯಾರ್ಥ—(ಭೋಗೋಪಭೋಗ ಸಂಹಾರೇ) ಭೋಗೋಪಭೋಗದ ತ್ಯಾಗದಲ್ಲಿ (ನಿಯಮಃ) ನಿಯಮ (ಚ) ಮತ್ತು (ಯಮಃ) ಯಮ—ಹೀಗೆ—(ದ್ವೇಧಾ) ಎರಡು ವಿಧಗಳು (ವಿಹಿತೌ) ಹೇಳಲಾಗಿದೆ.

---

1 ಆಯತವರ್ಮನ ಪದ್ಯ ಹೀಗಿದೆ

ಕಂದ ॥ ನಿಯಮಮಂ ಯಮಮೆಂದೆರಡುಂ ನಿಯಮಮಂ ಪರಿಮಾಣಕಾಲಮಲ್ಲಿಯಂ ನಿ- ।
ಶ್ಚಯದಿಂ ಯಾವಜ್ಜೀವಂ ಭಯಾದಿ ದೋಷಾದಿ ವೀರಜಿನಪನ ಮತದಿಂ ॥

(ಪರಿಮಿತ ಕಾಲಃ)—ಯಾವ ತ್ಯಾಗದಲ್ಲಿ—ಕಾಲ ಮರ್ಯಾದೆಯು ಇರುವುದೋ ಅದು (ನಿಯಮಃ) ನಿಯಮ-ವೆನಿಸುತ್ತದೆ ಇನ್ನು ಯಾವ ತ್ಯಾಗವು—(ಯಾವಜ್ಜೀವಂ) ಬದುಕಿರುವ ವರೆಗೆ (ಧ್ರಿಯತೆ) ಧರಿಸಲ್ಪಡುವದೋ—ಅದು—(ಯಮಃ) ಯಮವೆನಿಸುತ್ತದೆ

ಅರ್ಥ—ಭಗವಂತನು ಭೋಗ ಮತ್ತು ಉಪಭೋಗಗಳನ್ನು ಕಡಿಮೆಮಾಡುವ ಸಲುವಾಗಿ ಯಮ ಹಾಗು ನಿಯಮ ಎಂಬ ಎರಡು ಪ್ರಕಾರದ ಭೋಗೋಪ-ಭೋಗ ಪರಿಮಾಣ ವ್ರತವನ್ನು ಹೇಳಿದ್ದಾನೆ. ಇದರಲ್ಲಿ ಕಾಲದ ಮರ್ಯಾದೆಯನ್ನು ಇಟ್ಟುಕೊಂಡು ಯಾವದಾದರೂ ಪದಾರ್ಥವನ್ನು ತ್ಯಾಗಮಾಡುವದಕ್ಕೆ ನಿಯಮ-ವೆನ್ನಲಾಗುವದು ಶರೀರದಲ್ಲಿ ಪ್ರಾಣವಿರುವ ವರೆಗೂ ಹಲವು ವಸ್ತುಗಳನ್ನು ತ್ಯಾಗಮಾಡುವದಕ್ಕೆ ಯಮವೆಂದು ಹೇಳಲಾಗಿದೆ. [ಇಲ್ಲಿ 'ಯಮ', 'ನಿಯಮ'ಗಳ ಬಗ್ಗೆ ಚೆನ್ನಾಗಿ ಸ್ಪಷ್ಟಗೊಳಿಸಲಾಗಿದೆ ಈ ಯಮ, ನಿಯಮಗಳ ಸಂಬಂಧವು ಕೇವಲ ಭೋಗೋಪಭೋಗ-ವ್ರತಕ್ಕೆ ಮಾತ್ರವೇ ಇಲ್ಲ. ಬೇರೆ ವ್ರತಗಳಿಗೂ ಇವು ಅನ್ವಯಿಸುತ್ತವೆ ಅದರಿಂದ ಇವುಗಳ ಲಕ್ಷಣವು ವ್ಯಾಪಕವಾಗಿದೆ. ಸ ಧ.]

ವಿಶೇಷಾರ್ಥ—ಒಮ್ಮೆ ಮಾತ್ರ ಭೋಗಿಸಲಿಕ್ಕೆ ಬರುವಂಥ ಆಹಾರ ಮೊದಲಾದ ಪದಾರ್ಥಗಳು ಭೋಗ ವಸ್ತುಗಳೆನಿಸುತ್ತವೆ. ಇನ್ನು ವಸ್ತ್ರ, ಆಭರಣಾದಿಗಳನ್ನು ಮೇಲಿಂದ ಮೇಲೆ ಉಪಭೋಗಿಸಲಿಕ್ಕೆ ಬರುವದರಿಂದ ಅವುಗಳಿಗೆ ಉಪಭೋಗ ವಸ್ತುಗಳೆಂದು ಹೇಳಲಾಗುವದು. ಈ ಭೋಗೋಪಭೋಗಗಳಲ್ಲಿ ಯಮ ನಿಯಮಗಳೆಂದು ಎರಡು ಪ್ರಕಾರಗಳಾಗುತ್ತವೆ. ಇವುಗಳೊಳಗಿನ ಯಾವ ಭೋಗೋಪಭೋಗಗಳನ್ನು ಒಂದು ಮುಹೂರ್ತ, ಎರಡು ಮುಹೂರ್ತ, ಒಂದು ಪ್ರಹರ, ಎರಡು ಪ್ರಹರ, ಒಂದು ದಿವಸ, ಎರಡು ದಿವಸ, ಐದು, ಹತ್ತು, ಹದಿನೈದು ದಿವಸ, ತಿಂಗಳೆರಡು ತಿಂಗಳು, ನಾಲ್ಕಾರು ತಿಂಗಳು, ವರ್ಷೆರಡು ವರ್ಷ ಈ ಪ್ರಕಾರ ಕಾಲದ ಮರ್ಯಾದೆಯನ್ನು ಮಾಡಿ, ತ್ಯಾಗಮಾಡಲಾಗುವುದೋ ಅಂಥವುಗಳಿಗೆ ನಿಯಮ ಪ್ರಮಾಣವೆನ್ನಲಾಗುವದು ಇಂಥವುಗಳಲ್ಲಿ ಹಲವು ವಸ್ತುಗಳು ನಮ್ಮ ನಿತ್ಯೋಪಯೋಗಿಯಾಗಿದ್ದು, ಶುದ್ಧವಿದ್ದೂ ಕೂಡ ಕೆಲವೊಂದು ಕಾಲಮರ್ಯಾದೆಯ ವರೆಗೆ ತ್ಯಾಗಮಾಡಬೇಕಾಗುವದು. ಇಲ್ಲದಿದ್ದರೆ ಯಾವ ವಸ್ತುಗಳನ್ನು ನಾವು ಸಹಜವಾಗಿ ಉಪಯೋಗಿಸುವದಿಲ್ಲವೋ ಅವು ನಮಗೆ ದೊರೆಯುವದೇ ಇಲ್ಲವೋ ಅಂಥವುಗಳನ್ನು ತ್ಯಾಗಮಾಡಿರುವೆನೆಂದು ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ ನಮಗೆ ಉಪಯುಕ್ತವಲ್ಲದುದೂ ನಮ್ಮ ಪರಿಣಾಮವನ್ನು ಕೆಡಿಸುವಂಥದೂ ಇದ್ದು, ಸದೋಷವಾಗಿರುವ ವಸ್ತುವನ್ನು ಯಾವಜ್ಜೀವವೂ ಯಮ ಪ್ರಮಾಣರೂಪ ತ್ಯಾಗಮಾಡಬೇಕು. ಇದು ಯೋಗ್ಯವಾಗಿದೆ.

ಈ ವ್ರತದಿಂದ ಲಾಭ—ಈ ಭೋಗೋಪಭೋಗಪ್ರಮಾಣ ವ್ರತದಿಂದ ಅನೇಕ ಪ್ರಕಾರದ ಪಾಪದ ಆಸ್ರವವು ಇಲ್ಲದಂತಾಗುತ್ತದೆ ಇಂದ್ರಿಯಗಳು ವಶವಾಗುತ್ತವೆ. ರಾಗಭಾವವು ಅತಿ ಮಂದವಾಗುತ್ತದೆ. ವ್ಯವಹಾರವು ಶುದ್ಧವಾಗುತ್ತದೆ. ಮನವು ವಶವಾಗುತ್ತದೆ. ವ್ಯವಹಾರ ಮತ್ತು ಪರಮಾರ್ಥಗಳೆರಡೂ ನಿರ್ಮಲವಾಗುತ್ತವೆ. ಆದುದರಿಂದ ಈ ವ್ರತವು ಆತ್ಮನ ಹಿತಮಾಡುವಂಥದಿದೆ—ಎಂದು ತೋರುತ್ತದೆ ವಿರುದ್ಧ ಭೋಗ ಇರುವಂಥವುಗಳ-ನ್ನಂತೂ ತ್ಯಜಿಸಲೇ ಬೇಕು. ಆದರೆ ಅವಿರುದ್ಧವಾಗಿರುವಂಥವುಗಳನ್ನೂ ಸಹ ತಮ್ಮ ಶಕ್ತಿಗೆ ಅನುಸರಿಸಿ, ದೇಶ ಕಾಲಗಳನ್ನು ಗಮನಿಸಿ, ಕೆಲವೊಂದು ದಿವಸ ಬಿಡಬೇಕು. ರಾತ್ರಿ ಕಾಲದ ಮರ್ಯಾದೆ ಮಾಡಿ, ಅದರೊಳಗಿಂದ ಪುನಃ ಒಂದು ಘಳಿಗೆ, ಎರಡು ಘಳಿಗೆ, ನಾಲ್ಕು ಘಳಿಗೆ ಎಂದು ಕಾಲಮರ್ಯಾದೆಯನ್ನು ಹಾಕಿಕೊಂಡು ತ್ಯಾಗಮಾಡುತ್ತ ಹೋದರೆ ಕರ್ಮದ ನಿರ್ಜರೆಯಾಗುತ್ತ ಹೋಗುವದು.

ಯಮವೆಂಬುದು ಯಾವಜ್ಜೀವ ಪರ್ಯಂತರ ಸುಮನದಿ ವ್ರತಮಾಡುವದು
ಕ್ರಮದಿಘಳಿಗೆ ಮುಹೂರ್ತಘ್ರುಾವದಿನತವೆ ಪಕ್ಷಮಾಸ ಋತುಗಳಾ ।
ಅಯನ ಸಂವತ್ಸರ ಮೊದಲಾಗಿ ಮೇರೆಯ ನಿಯತವಾಗಿ ಮಾಡಿ ವ್ರತವಾ
ಕ್ಷಯವಿಲ್ಲದೆ ನಡಸುತ್ತಿಹ ಶುಭಮನ ನಿಯಮವೆಂಬ ವ್ರತವಹುದು ॥

—ವಿಜಯಣ್ಣ—ದ್ವಾದಶಾನುಪ್ರೇಕ್ಷೆ—ಧರ್ಮಾನುಪ್ರೇಕ್ಷೆ—೭೮-೭೯

ಇದೇ ವ್ರತದ ವಿಷಯುದಲ್ಲಿ ಇನ್ನಿಷ್ಟು ವಿಶೇಷ ವಿವರಗಳನ್ನು ಈ ಸೂತ್ರದಲ್ಲಿ ಹೇಳಿದ್ದಾರೆ—

ಭೋಜನವಾಹನಶಯನಸ್ನಾನಪವಿತ್ರಾಂಗರಾಗಕುಸುಮೇಷು ।
ತಾಂಬೂಲವಸನಭೂಷಣಮನ್ಮಥಸಂಗೀತಗೀತೇಷು ॥ ೮೮ ॥ [1]

ಅನ್ವಯಾರ್ಥ—(ಭೋಜನ) ಊಟ (ವಾಹನ) ಕುಳಿತುಹೋಗುವ ಸಾಧನ (ಶಯನ) ಮಲಗಿಕೊಳ್ಳುವ ಹಾಸಿಗೆ, ಮಂಚ ಮೊದಲಾದವುಗಳು (ಸ್ನಾನ) ಮೈತೊಳೆದುಕೊಳ್ಳುವುದು (ಪವಿತ್ರಾಂಗರಾಗ) ಶರೀರವನ್ನು ಪವಿತ್ರಗೊಳಿಸುವೆವೆಂಬ ಭಾವದಿಂದ ದೇಹದ ಮೇಲೆ ಮಮತೆಯನ್ನು ಹುಟ್ಟಿಸುವಂಥ ಹಾಗೂ ಹೆಚ್ಚಿಸುವಂಥ—ಸುಗಂಧ ದ್ರವ್ಯಾದಿಗಳ ಲೇಪನ (ಕುಸುಮೇಷು) ಹೂವಿನ ಉಪಯೋಗದಲ್ಲಿ (ತಾಂಬೂಲ) ಎಲೆ ಅಡಿಕೆ ಮೊದಲಾದವುಗಳು (ವಸನ) ವಸ್ತ್ರ (ಭೂಷಣ) ಆಭರಣಗಳು (ಮನ್ಮಥ) ಕಾಮಭೋಗ (ಸಂಗೀತ) ಹಾಡುಗಾರಿಕೆ (ಗೀತೇಷು) ಗಾಯನದಲ್ಲಿ—ಒಂದು ಮರ್ಯಾದೆ ಬೇಕು

ಅರ್ಥ—ಭೋಗೋಪಭೋಗಪ್ರಮಾಣ ವ್ರತದಲ್ಲಿ ಪ್ರತಿದಿನವೂ ನಿಯಮಮಾಡುತ್ತ ಹೋಗಬೇಕು ನಾನು ಈ ಹೊತ್ತು ಒಮ್ಮೆ, ಎರಡು ಸಲ, ಮೂರು ಹೊತ್ತು, ನಾಲ್ಕು ಸಲ ಮಾತ್ರ ಆಹಾರ ತಕ್ಕೊಂಡೇನು, ಇದಕ್ಕಿಂತ ಹೆಚ್ಚು ಸಾರಿ ತಕ್ಕೊಳ್ಳಲಿಕ್ಕಿಲ್ಲ ಇಲ್ಲವೆ ಈ ಹೊತ್ತು ಒಂದು ಇಡೀ ದಿನದಲ್ಲಿ ಇದೊಂದೇ ಧಾನ್ಯದ ಅನ್ನ, ಇಷ್ಟೇ ರಸ, ಇವಿಷ್ಟೇ ಪ್ರಕಾರದ ಆಹಾರ ಸ್ವೀಕರಿಸುವೆ, ಹೆಚ್ಚಿನ ಜೀನಸುಗಳನ್ನು ತಿನ್ನುವದಿಲ್ಲ ವಾಹನವೆಂದರೆ ಆನೆ, ಕುದುರೆ, ಒಂಟೆ, ಪಲ್ಲಕ್ಕಿ, ರಥ, ಬಂಡಿ, ನಾವ, ಹಡಗು, ದೋಣಿ ಇವುಗಳ ಪ್ರಮಾಣವನ್ನಾದರೂ ನಿರ್ಣಯಿಸಿಕೊಳ್ಳಬೇಕು ಮಂಚ, ಗಾದಿಗಳ ಮೇಲೆ ಮಲಗಿಕೊಳ್ಳುವುದರ ಬಗ್ಗೆಯೂ ನಿಯಮಮಾಡಬೇಕು ನಾನು ಮಂಚದ ಮೇಲೆ ಮಲಗೇನು ಇಲ್ಲವೆ ನೆಲದ ಮೇಲೆ ಮಲಗೇನು, ಇಂದು ಒಮ್ಮೆ ಅಥವಾ ಎರಡೇ ಸಲ ಸ್ನಾನ ಮಾಡಿಯೇನು, ಇಲ್ಲವೆ ಇಂದು ಸ್ನಾನವನ್ನೇ ಮಾಡಲಿಕ್ಕಿಲ್ಲ ಪವಿತ್ರವಾದ ಸುಗಂಧ ದ್ರವ್ಯಗಳನ್ನು ಮೈಗೆ ಇಂದು ನಾನು ಹಚ್ಚಿಕೊಳ್ಳಲಿಕ್ಕಿಲ್ಲ ಇಲ್ಲವೆ ಇಂಥವುಗಳನ್ನು ಮಾತ್ರ ಲೇಪನಮಾಡಿಕೊಳ್ಳುವೆ ಹೂವು ಅಥವಾ ಹೂವಿನ ಹಾರಗಳನ್ನು, ಆಭರಣ ಮೊದಲಾದವುಗಳನ್ನೂ ಇಷ್ಟು ಮಾತ್ರ ಧರಿಸುವೆ, ಅಥವಾ ಧರಿಸುವದೇ ಇಲ್ಲ ತಾಂಬೂಲ, ಯಾಲಕ್ಕಿ, ಲವಂಗ, ಅಡಿಕೆ ಮೊದಲಾದವುಗಳನ್ನು ತಿನ್ನುವೆ, ಇವುಗಳಲ್ಲಿ ಒಂದೆರಡು ಜೀನಸುಗಳನ್ನು ಮಾತ್ರ ತಿನ್ನುವೆ, ಅಥವಾ ತಿನ್ನುವದೇ ಇಲ್ಲ ವಸ್ತ್ರಗಳ ಪ್ರಮಾಣವೆಂದರೆ ಇಂದು ಇಷ್ಟೇ ಅರಿವೆಗಳನ್ನು ಧರಿಸುವೆ, ಹೆಚ್ಚಿನ ಅರಿವೆಗಳನ್ನು ಉಪಯೋಗಿಸುವದಿಲ್ಲ ಕಾಮಸೇವನೆಯನ್ನು ಮಾಡುವುದು, ನೃತ್ಯವನ್ನು ನೋಡುವುದು, ಸ್ವತಃ ಹಾಡುವುದು, ಹಾಡುಗಳನ್ನು ಕೇಳುವುದು, ವೇಶ್ಯೆಯರಿಂದ ಗಾಯನ ಮಾಡಿಸುವದು, ಸಿಂಹಾಸನ, ಕುರ್ಚಿ, ಮಂಚ ಮೊದಲಾದವುಗಳ ಮೇಲೆ ಕೂಡ್ರುವುದು—ಇವೆಲ್ಲವುಗಳ ಬಗ್ಗೆ ನಿಯಮಮಾಡಬೇಕು ಈ ಪ್ರಕಾರ ನಿತ್ಯವೂ ನಮ್ಮ ಉಪಯೋಗದಲ್ಲಿ ಬರುವ ಭೋಗೋಪಭೋಗ ಪದಾರ್ಥಗಳ ನಿಯಮ ಮಾಡುವವರಿಗೆ ನಿತ್ಯವೂ ಅವರು ಊಟೋಪಚಾರಗಳನ್ನು ಹೊಂದುತ್ತಿದ್ದರೂ ಸಹ ಸಂವರವು ಪ್ರಾಪ್ತವಾಗುತ್ತದೆ

ಪಲತೆರದಿಂದಪ್ಪ ಭೋಗೋಪಭೋಗವ ನಲೆಯಿನಿತಿನಿತೆ ನಾಕೆಂದು ।
ಒಲವಿಂದ ಮಾಳ್ಪುದು ಭೋಗೋಪಭೋಗದ ಚೆಲುವುವ್ರತವು ತಾನಹುದು ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ–ಧರ್ಮಾನುಪ್ರೇಕ್ಷೆ ೪೮.

---

1 ಆಯುತವರ್ಮನ ವಿಚಾರ ಹೀಗಿದೆ

ವಚನ—ರಾಗಗತಿಗಳಂ ಕುಂದಿಸುವುದು ಕಾರಣಮಾಗಿ ಭೋಜನ ವಾಹನ ಶಯನ ಸ್ನಾನ ಸಚ್ಛಿತ್ತಾಂಗ ರಾಗ ಕುಸುಮ ತಾಂಬೂಲ ವಸನ ಭೂಷಣ ಮನ್ಮಥ ಸಂಗೀತ ಗೀತಾದಿಗಳು ನಿಯಮಂ ಯಮವೆಂದಿತ್ತೆರದಿಂ ತೊರೆಯೆ ಪಡುವುದು.

ಇನ್ನು ಭೋಗೋಪಭೋಗಪ್ರಮಾಣ ವ್ರತದ ವಿಷಯದಲ್ಲಿ ಕಾಲಮರ್ಯಾದೆಯನ್ನು ಹೇಳುತ್ತಾರೆ—

ಅದ್ಯ ದಿವಾ ರಜನೀ ವಾ ಪಕ್ಷೋ ಮಾಸಸ್ತಥರ್ತುರಯನಂ ವಾ ।
ಇತಿ ಕಾಲಪರಿಚ್ಛಿತ್ತ್ಯಾ ಪ್ರತ್ಯಾಖ್ಯಾನಂ ಭವೇನ್ನಿಯಮಃ ॥ ೮೯ ॥[1]

ಅನ್ವಯಾರ್ಥ—(ಅದ್ಯ) ಇಂದು (ದಿವಾ) ಹಗಲು (ರಜನೀ) ರಾತ್ರಿ (ಪಕ್ಷಃ) ಹದಿನೈದು ದಿನ (ಮಾಸಃ) ತಿಂಗಳು (ತಥಾ) ಹಾಗೆಯೇ (ಋತುಃ) ಎರಡು ತಿಂಗಳು (ವಾ) ಅಥವಾ (ಅಯನ) ಆರು ತಿಂಗಳು (ಇತಿ) ಈ ಪ್ರಕಾರ (ಕಾಲಪರಿಛಿತ್ತ್ಯಾ) ಕಾಲವಿಭಾಗವನ್ನು ಮರ್ಯಾದೆಗೆಂದು ಇಟ್ಟುಕೊಂಡು (ಪ್ರತ್ಯಾಖ್ಯಾನಂ) ತ್ಯಾಗ ಮಾಡುವುದು (ನಿಯಮಃ) ನಿಯಮ (ಭವೇತ್) ಆಗುತ್ತದೆ

ಅರ್ಥ—ಅದ್ಯ ಎಂದರೆ ಈ ಹೊತ್ತು ಒಂದು ಘಳಿಗೆ, ಒಂದು ಪ್ರಹರ, ಒಂದು ಮುಹೂರ್ತ, ದಿವಾ ಎಂದರೆ ಹಗಲು, ರಜನಿ ಎಂದರೆ ಇರುಳು, ಪಕ್ಷವೆಂದರೆ ಅರ್ಧ ತಿಂಗಳು, ಮಾಸವೆಂದರೆ ಒಂದು ತಿಂಗಳು, ಋತು ಎಂದರೆ ಎರಡು ತಿಂಗಳು, ಅಯನವೆಂದರೆ ಆರು ತಿಂಗಳು ಈ ಪ್ರಕಾರ ಕಾಲದ ಮರ್ಯಾದೆಯನ್ನು ನಿಶ್ಚಯಿಸಿಕೊಂಡು, ತ್ಯಾಗಮಾಡುವದಕ್ಕೆ ನಿಯಮವೆನ್ನುತ್ತಾರೆ

ವಿಶೇಷಾರ್ಥ—[ಇಲ್ಲಿಯ ಎರಡು ಶ್ಲೋಕಗಳಲ್ಲಿ ಭೋಗ ಹಾಗೂ ಉಪಭೋಗದಲ್ಲಿ ಬರುವ ಸಾಮಗ್ರಿಗಳನ್ನು ಚೆನ್ನಾಗಿ ವಿಂಗಡಿಸಿ ಹೇಳಿದೆ ಅಲ್ಲದೆ ಅದರ ಜೊತೆಗೇನೇ ಕಾಲ ಮರ್ಯಾದೆಯ ಸ್ಪಷ್ಟೀಕರಣವನ್ನೂ ಬಹು ಸುಂದರವಾಗಿ ಮಾಡಲಾಗಿದೆ ಇವೆರಡರಿಂದ ವ್ರತವನ್ನು ವ್ಯವಸ್ಥಿತಗೊಳಿಸುವುದರಲ್ಲಿ ಬಹಳಷ್ಟು ಸಹಾಯವಾಗುತ್ತದೆ. ಈ ವ್ರತವನ್ನು ಅಂಗೀಕರಿಸುವವರು ತಮ್ಮ ಅನುಕೂಲತೆಗೆ ಅನುಸರಿಸಿ, ಆವಶ್ಯಕತೆಯನ್ನೂ ಗಮನಿಸಿ, ಭೋಗೋಪಭೋಗ ಪದಾರ್ಥಗಳನ್ನು ಮತ್ತೂ ವಿಶೇಷವಾಗಿ ವರ್ಗೀಕರಣ ಮಾಡಿಕೊಳ್ಳಬಹುದಾಗಿದೆ ಅಲ್ಲದೆ ಕಾಲದ ಮರ್ಯಾದೆಯನ್ನೂ ಘಳಿಗೆ, ಘಂಟೆಗಳೇ ಮೊದಲಾದ ರೂಪದಲ್ಲಿ ವರ್ಗೀಕರಣ ಮಾಡಿಕೊಳ್ಳಲು ಬರುತ್ತದೆ. ಇಲ್ಲಿ ವ್ಯಾಪಕ ದೃಷ್ಟಿಯಿಂದ ಸ್ಥೂಲ ರೂಪದಲ್ಲಿ ಭೋಗೋಪಭೋಗದ ವಿಷಯಭೂತ ಪದಾರ್ಥಗಳ ವರ್ಗೀಕರಣವನ್ನೂ ಹಾಗೆಯೇ ಅವುಗಳ ಸೇವನದ ಕಾಲಮರ್ಯಾದೆಯನ್ನೂ ಚೆನ್ನಾಗಿ ಸೂಚಿಸಲಾಗಿದೆ. ನ ಧ]

ನುತಸಮ್ಯಕ್ತ್ವಮಣುವ್ರತಸ್ಥಿತಿ ಸಮಿತ್ವೀಭಾವನಂ ಪ್ರೋಷಧ- ।
ಬ್ರತಮೆಂದುಂ ಪಡಿಯೊಂದುಮುಮುಚಿಯೆನೆಂಬೀಪೂಣ್ಕೆ ಮಾಡೆಂ ಪಗತ್ ॥
ರತಿಯಂ ಸ್ತ್ರೀಯರೊಳೆಂಬುದೊಂದು ನಿಯಮಂ ಸದ್ಬ್ರಹ್ಮಚರ್ಯವ್ರತಂ ।
ಸತತಾರಂಭ ಪರಿಗ್ರಹಚ್ಯುತಿ ಪರಿತ್ಯಕ್ತಾನುಮೋದೋದಯಂ ॥ —ಆದಿಪಂಪ–ಆದಿಪುರಾಣ–೬–೮೦.

ಈ ಪ್ರಕಾರ ಭೋಗೋಪಭೋಗಪರಿಮಾಣ ವ್ರತದ ವರ್ಣನೆಯನ್ನು ಮಾಡಿ,

ಇನ್ನು ಮುಂದೆ ಈ ವ್ರತದ ಅತಿಚಾರವನ್ನು ಹೇಳುತ್ತಾರೆ—

ವಿಷಯವಿಷತೋನುಪೇಕ್ಷಾನುಸ್ಮೃತಿರತಿಲೌಲ್ಯಮತಿತೃಷಾನುಭವೌ ।
ಭೋಗೋಪಭೋಗಪರಿಮಾವ್ಯತಿಕ್ರಮಾಃ ಪಂಚ ಕಥ್ಯಂತೆ ॥ ೯೦ ॥[2]

ಅನ್ವಯಾರ್ಥ—(ವಿಷಯವಿಷತಃ) ವಿಷಯವೆಂಬ ವಿಷದ ಸಂಬಂಧದಲ್ಲಿ (ಅನುಪೇಕ್ಷಾ) ಆದರ ಬುದ್ಧಿಯನ್ನು ಇಡುವುದು (ಅನುಸ್ಮೃತಿ) ಹಿಂದೆ ಭೋಗಿಸಿದುದನ್ನು ನೆನೆಯುವದು (ಅತಿಲೌಲ್ಯಮ್) ಬಹಳಷ್ಟು

[1] ಆಯುಕವರ್ಮನ ಗದ್ಯ ಹೀಗಿದೆ

ವಚನ—ಇಂತಪ್ಪವನಿಂತಪ್ಪ ಪೊತ್ತರೊಳುಯಿಂತಪ್ಪ ದಿವಸರೊಳಿನಿತು ತಿಂಗಳೊಳಿನಿತು ವರ್ಷಂಗಳೊಳೀದು ಕಾಲಮಂ ಪವಣ್ಮಾಡಿ ತೊರೆವುದು ನಿಯಮಮೆಂಬುದು ಬಾಳ್ವನೇವರಮೆಂದು ತೊರೆಯುವುದು ಯಮಂ

[2] ಆಯುಕವರ್ಮನು ಹೇಳುವುದು ಹೀಗೆ

ಇಂತೀ ಭೋಗೋಪಭೋಗಪರಿಮಾಣಕ್ಕೆ ವಿಷಯವಿಷತೋನುಪೇಕ್ಷೆಯನುಸ್ಮೃತಿಯತಿಲೌಲ್ಯಮತಿತೃಷೆಯತ್ಯನುಭವಮೆಂದ ಯ್ದತಿಚಾರಮುಕ್ಕುಮವನಾಗಲಿಯ್ಕುದುದು ಭೋಗೋಪಭೋಗ ಪರಿಮಾಣಮೆಂಬ ಮೂರನೆಯ ಶೀಲಮಲ್ಲಿ—

ಕಂದ ॥ ವಿಷಯವಿಷತೋನುಪೇಕ್ಷೆ ಸವಿಷಯಂ ಪನ್ನಗವಿಷಯದಿಂ ಕಿರಿನಿರುತಂ ।
ವಿಷಮೆಂದೆನೀಕ್ಷಿಪುದು ವಿಷಯಂಗಳ ಪೊಲ್ಲದಪ್ಪ ವಿಷತನ್ಮಿಗಳಂ ॥

ವಚನ— .ವಿಷಯಂ ವಿಷಮಂಗಳ ಋಚಿಗಳೀ ನಿತ್ಯಂಗಳೀ ಬವದೊಳಪಾಯಮುಮಂ ಮರುದಪದೊಳು ದುಃಖಮುಂ ಮಾಳ್ಪುವೆಂದವರ ವಿಷತ್ವಮುಮಂ ನೋಡದನುಭವಿಸು ವಿಷಯ ವಿಷತೋನುಪೇಕ್ಷೆ ವಿಷಯಂಗಳೊಳಪ್ಪ ಬಳೆನೆಸವಿಯನುಸ್ಮೃತಿ ವಿಷಯಂಗಳೊಳಪ್ಪ ಪೆರುಗೆಯು ಮತಿಲೌಲ್ಯಂ ಪಿರಿದಪ್ಪ ಬಯಕೆ ತೃಷೆ ಪಿರಿದಪ್ಪನುಭವಮತ್ಯನುಭವಂ

ಲೋಲುವನಾಗಿರುವದು (ಅತಿತೃಷಾ) ಮುಂದೆ ಭೋಗಿಸುವ ವಿಷಯದಲ್ಲಿ ತೀರ ಹೆಚ್ಚಾಗಿ ಹಂಬಲವನ್ನಿಟ್ಟು ಕೊಳ್ಳುವುದು (ಅನುಭವಃ) ವಿಷಯೋಪಭೋಗವನ್ನು ಮಾಡದೆಯೂ ಅದನ್ನು ನೆನಸಿ ಮನದಲ್ಲಿ ಅನುಭವಿಸುವದು– ಇವು–(ಪಂಚ) ಐದು (ಭೋಗೋಪಭೋಗ ಪರಿಮಾ) ಭೋಗೋಪಭೋಗ ಪರಿಮಾಣದ (ವ್ಯತಿಕ್ರಮಾಃ) ಅತಿಚಾರಗಳನ್ನು (ಕಥ್ಯಂತೆ) ಹೇಳಲಾಗುತ್ತದೆ

ಅರ್ಥ—ವಿಷಯವು ಸಂತಾಪವನ್ನು ಹೆಚ್ಚಿಸುವಂಥದಿದೆ ಅದರ ನಿಮಿತ್ತದಿಂದ ಮರಣವೂ ಕೂಡ ಪ್ರಾಪ್ತವಾಗುತ್ತದೆ ಅಂತಲೇ ಪಂಚೇಂದ್ರಿಯಗಳ ವಿಷಯಕ್ಕೆ ವಿಷವೆಂದು ಹೇಳಲಾಗಿದೆ ಇವುಗಳಲ್ಲಿ ನಮ್ಮ ಪರಿಣಾಮದೊಳಗಿನ ರಾಗವು ಕಡಿಮೆಯಾಗದೆ ಇರುವುದಕ್ಕೆ ಅನುಪೇಕ್ಷಾ ಅತಿಚಾರವೆನ್ನುತ್ತಾರೆ ಮೊದಲು ಯಾವದಾದರೊಂದು ವಿಷಯವನ್ನು ಭೋಗಿಸಿದ್ದರೆ ಆ ಭೋಗದ ವಿವರಗಳನ್ನು ಮೇಲಿಂದ ಮೇಲೆ ಮನಸ್ಸಿನಲ್ಲಿ ಸ್ಮರಿಸುವುದಕ್ಕೆ ಅನುಸ್ಮೃತಿ ಅತಿಚಾರವೆನ್ನುವರು ವಿಷಯಗಳನ್ನು ಭೋಗಿಸುವಾಗ ಅತ್ಯಂತ ಆಸಕ್ತಿಯಿಂದ ಅದರಲ್ಲಿ ಮಗ್ನನಾಗಿ ಅನುಭವಿಸುವದಕ್ಕೆ ಅತಿ ಲೋಲುಪತೆ ಎಂಬ ಅತಿಚಾರವೆನಿಸುತ್ತದೆ ಭವಿಷ್ಯಕಾಲದಲ್ಲಿ ಭೋಗಿಸುವ ವಿಷಯಗಳಲ್ಲಿ ಅತ್ಯಂತ ಪ್ರಬಲ ಇಚ್ಛೆಯನ್ನೂ ಇಟ್ಟುಕೊಳ್ಳುವದಕ್ಕೆ ಅತಿತೃಷ್ಣಾ ಅತಿಚಾರವೆನಿಸುತ್ತದೆ. ಮತ್ತು ವಿಷಯಗಳನ್ನು ಭೋಗಿಸದೆಯೂ ಸಹ "ಅದೇನು, ಈಗ ಸಧ್ಯಕ್ಕೆ ಪ್ರತ್ಯಕ್ಷವಾಗಿ ತಾವು ವಿಷಯೋಪಭೋಗವನ್ನು ಮಾಡುತ್ತಲಿದ್ದೇವೆ"–ಎನ್ನುವಂತೆ ಪರಿಣಾಮ ಮಾಡಿಕೊಳ್ಳುವದಕ್ಕೆ ಅನುಭವಾತಿಚಾರವೆನ್ನುವರು ಈ ಪ್ರಕಾರ ಭೋಗೋಪಭೋಗ ಪರಿಮಾಣ ವ್ರತದ ಐದು ಅತಿಚಾರಗಳನ್ನು ಬಿಟ್ಟುಕೊಟ್ಟು, ವ್ರತವನ್ನು ಶುದ್ಧಗೊಳಿಸಬೇಕು.

ವಿಶೇಷಾರ್ಥ—[ಇಲ್ಲಿ ಕೊಟ್ಟ ಭೋಗೋಪಭೋಗ ಪರಿಮಾಣ ವ್ರತದ ಐದು ಅತಿಚಾರಗಳು ಶ್ರೀ ಉಮಾಸ್ವಾಮಿಯ 'ತತ್ತ್ವಾರ್ಥಸೂತ್ರ'ದೊಳಗೆ ಹೇಳಿದ ಅತಿಚಾರಗಳಿಂದ ಭಿನ್ನವಾಗಿವೆ ಅಲ್ಲದೆ ತಮ್ಮ ವಿಷಯದ ಜೊತೆಯಲ್ಲಿ ಬಹಳಷ್ಟು ಹೊಂದಿಕೆಯಾಗುವಂಥವೂ ಇವೆ 'ತತ್ತ್ವಾರ್ಥಸೂತ್ರ'ದಲ್ಲಿ ವಿವರಿಸಿದ ಅತಿಚಾರಗಳ ಸ್ವರೂಪ ಹೀಗಿದೆ–ಸಚಿತ್ತಾಹಾರ, ಸಚಿತ್ತಸಂಬಂಧಾಹಾರ, ಸಚಿತ್ತಸಮ್ಮಿಶ್ರಾಹಾರ, ಅಭಿಷಾವಾಹಾರ, ದುಃಪಕ್ವಾಹಾರ ಇವೆಲ್ಲ ಊಟ ಒಂದಕ್ಕೆ ಮಾತ್ರ ಸಂಬಂಧಿಸಿದವುಗಳಾಗಿವೆ ಭೋಗೋಪಭೋಗ ಪರಿಮಾಣ ವ್ರತದ ವಿಷಯವು ಕೇವಲ ಆಹಾರವೊಂದೇ ಆಗಿಲ್ಲ. ಐದೂ ಇಂದ್ರಿಯಗಳ ವಿಷಯಗಳಿಗೆ ಸಂಬಂಧಿಸಿದೆ ಮತ್ತು ಈ ವಿಷಯಗಳಲ್ಲಿ ಜಡ ಹಾಗೂ ಚೇತನಗಳೆರಡೂ ಸಮಾವೇಶವಾಗುತ್ತವೆ ಇಂಥ ಸ್ಥಿತಿಯಲ್ಲಿ 'ತತ್ತ್ವಾರ್ಥಸೂತ್ರ'ದಲ್ಲಿ ಬರುವ ಅತಿಚಾರಗಳು ಭೋಗೋಪಭೋಗ ಪರಿಮಾಣದ ವ್ಯಾಪಕ ದೃಷ್ಟಿಗೆ ಅನ್ವಯಿಸದೆ ಯಾವುದೋ ಒಂದು ಬೇರೆ ದೃಷ್ಟಿಯಿಂದ ನಿಬದ್ಧಗೊಂಡಿವೆಯೆಂದು ತಿಳಿಯಬೇಕಾಗುತ್ತದೆ ಈ ದೃಷ್ಟಿಯಿಂದ ಇಲ್ಲಿ ಇನ್ನೊಂದು ಮಾತನ್ನು ಸ್ಪಷ್ಟಗೊಳಿಸಲಾಗುತ್ತದೆ —ತತ್ತ್ವಾರ್ಥ ಸೂತ್ರಕಾರನು ಈ ವ್ರತವನ್ನು ಶಿಕ್ಷಾವ್ರತಗಳಲ್ಲಿ ಸಮಾವೇಶಗೊಳಿಸಿದ್ದಾನೆ, ಆದರೆ ಸ್ವಾಮಿ ಸಮಂತಭದ್ರರು ಇದನ್ನು ಗುಣವ್ರತಗಳಲ್ಲಿ ಸೇರಿಸಿದ್ದಾರೆ ಮತ್ತು ಶ್ರೀ ಉಮಾಸ್ವಾಮಿಯವರ ಪೂರ್ವಕಾಲದಲ್ಲಿ ಆಗಿ ಹೋದ ಶ್ರೀ ಕುಂದಾಕುಂದಚಾರ್ಯರೂ ಕೂಡ ಇದನ್ನು ಗುಣವ್ರತಗಳಲ್ಲಿ ಸಮಾವೇಶ-ಗೊಳಿಸಿದ್ದಾರೆ. ಇದು 'ಚಾರಿತ್ತಪಾಹುಡ'ದ ಕೆಳಗಿನ ಶ್ಲೋಕದಿಂದ ಸ್ಪಷ್ಟವಾಗುತ್ತದೆ—

ದಿಸವಿದಿಸಮಾಣ ಪಢಮಂ ಅಣತ್ಥದಂಡಸ್ಸ ವಜ್ಜಣಂ ಬಿದಿಯಂ ।
ಭೋಗೋಪಭೋಗಪರಿಮಾ ಇಯಮೇವ ಗುಣವ್ವಯಾ ತಿಣ್ಣಿ ॥ ೨೫ ॥

ಇದರಿಂದ ಭೋಗೋಪಭೋಗ ಪರಿಮಾಣ ವ್ರತವನ್ನು ಗುಣವ್ರತಗಳಲ್ಲಿ ಸಮಾವೇಶ ಮಾಡುವ ರೂಢಿಯು ಅತಿ ಪ್ರಾಚೀನವಾಗಿದೆಯೆಂಬುದು ಸಿದ್ಧವಾಗುತ್ತದೆ. ಸ ಥ ]

ಕ್ರಮದಿಂ ಸಚಿತ್ತಸಂಬಂಧಮಂತೆ ಸಮ್ಮಿಶ್ರಮಭಿಷವಂ ದುಃಪಕ್ವಾ- ।
-ನ್ನಮಿವಯ್ದುಮ್ನಂಗಳತಿಕ್ರಮಮಾ ಭೋಗೋಪಭೋಗಪರಿಮಿತಗತಿಯೊಳ್ ॥

—ಶಾಂತಿನಾಥ–ಸುಕುಮಾರಚರಿತಂ–೬–೨೪.

ಈ ಪ್ರಕಾರ ಶ್ರೀ ಸ್ವಾಮಿಸಮಂತಭದ್ರಾಚಾರ್ಯವಿರಚಿತ ರತ್ನಕರಂಡ ಶ್ರಾವಕಾಚಾರದ ಮೂಲ ಶ್ಲೋಕದ ವಿವರಣಾತ್ಮಕ ಟೀಕಾಗ್ರಂಥದಲ್ಲಿ ಈ ಮೂರನೆಯ ಅಧಿಕಾರವು ಮುಗಿಯಿತು

ಈಗ ನಾಲ್ಕು ಶಿಕ್ಷಾವ್ರತಗಳ ಸ್ವರೂಪವನ್ನು ನಿರೂಪಿಸಲಿಕ್ಕೆಂದು ಸೂತ್ರ ಹೇಳುತ್ತಾರೆ—

ದೇಶಾವಕಾಶಿಕಂ ವಾ ಸಾಮಯಿಕಂ ಪ್ರೋಷಧೋಪವಾಸೋ ವಾ ।
ವೈಯಾವೃತ್ಯಂ ಶಿಕ್ಷಾವ್ರತಾನಿ ಚತ್ವಾರಿ ಶಿಷ್ಟಾನಿ ॥ ೯೧ ॥

ಅನ್ವಯಾರ್ಥ—(ದೇಶಾವಕಾಶಿಕಂ) ದೇಶಗಳ ಮರ್ಯಾದೆಗೆ ಸಂಬಂಧಿಸಿದ್ದು (ವಾ) ಹಾಗೆಯೇ (ಸಾಮಯಿಕಂ) ಸಾಮಾಯಿಕ ಮಾಡುವುದು (ಪ್ರೋಷಧೋಪವಾಸಃ) ವಿಶಿಷ್ಟ ತಿಥಿಗಳಲ್ಲಿ ಉಪವಾಸಮಾಡುವುದು (ವಾ) ಮತ್ತು (ವೈಯಾವೃತ್ಯಂ) ಸೇವೆಮಾಡುವುದು (ಚತ್ವಾರಿ)—ಇವು—ನಾಲ್ಕು (ಶಿಕ್ಷಾವ್ರತಾನಿ) ಶಿಕ್ಷಾವ್ರತಗಳೆಂದು (ಶಿಷ್ಟಾನಿ) ಬಲ್ಲವರು ಹೇಳಿದ್ದಾರೆ.

ಅರ್ಥ—ದೇಶಾವಕಾಶಿಕ, ಸಾಮಯಿಕ, ಪ್ರೋಷಧೋಪವಾಸ, ಮತ್ತು ವೈಯಾವೃತ್ಯ ಇವು ನಾಲ್ಕು ಶಿಕ್ಷಾವ್ರತಗಳಿವೆ. [ಇಲ್ಲಿ ಉಲ್ಲೇಖಿಸಿದ ಶಿಕ್ಷಾವ್ರತದ ಹೆಸರುಗಳಲ್ಲಿ 'ದೇಶಾವಕಾಶಿಕ' ಎಂಬುದಕ್ಕೆ 'ತತ್ವಾರ್ಥ-ಸೂತ್ರ'ಕಾರನು 'ದೇಶವಿರತಿ' ಎಂಬ ಹೆಸರಿನಿಂದ ಗುಣವ್ರತದಲ್ಲಿ ಗ್ರಹಣಮಾಡಿದ್ದಾನೆ. ಅದರಂತೆ 'ವೈಯಾವೃತ್ಯ'ವನ್ನು ಸೂತ್ರಕಾರನು 'ಅತಿಥಿಸಂವಿಭಾಗ' ಎಂಬ ಹೆಸರಿನಿಂದ ಉಲ್ಲೇಖಿಸಿದ್ದಾನೆ ವೈಯಾವೃತ್ಯದಲ್ಲಿ ಅತಿದಿ ಸಂವಿಭಾಗಕ್ಕಿಂತ ಏನು ವೈಶಿಷ್ಟ್ಯವಿದೆಯೆಂಬುದನ್ನು ಮುಂದೆ ಸ್ಪಷ್ಟಮಾಡಲಾಗುವದು ಸ. ಧ]

ವಿಶೇಷಾರ್ಥ—ಈ ವ್ರತಗಳಿಂದ ಗೃಹಸ್ಥ ಅವಸ್ಥೆಯಲ್ಲಿ ಇದ್ದೂ ಸಹ ಮುನಿವ್ರತದ ಶಿಕ್ಷಣವು ಲಭಿಸುತ್ತದೆ ಅಂತಲೇ ಇವುಗಳಿಗೆ ಶಿಕ್ಷಾವ್ರತಗಳೆಂದು ಹೇಳಲಾಗಿದೆ.

ಸಮತಾ ಸದ್ಭಾವದಿಂ ಪೂಜಿಸಿ ಪರಮಜಿನಾರಾಧನಂಗೆಯ್ವುದುಂ ಸಂ-
ಯಮಿಗಳ್ಗುತ್ಕೃಷ್ಟದಿಂ ದಾನಮನತಿಮುದದಾರ್ತೀವುದುಂ ಪ್ರೋಷಧ ಪ್ರ- ।
ಕ್ರಮದಿಂ ಪರ್ವಂಗಳಂ ನೋಂಪುದುಮಭಿಮತ ಭೋಗೋಪಭೋಗಂಗಳಂ ತ-
ತ್ಪ್ರಮಿತಂ ಮಾಡಿಟ್ಟು ಕೈಕೊಂಡೆಸಗುವುದು ಮಿದಾರಯ್ಯೆ ಶಿಕ್ಷಾಬ್ರತಂಗಳ್ ॥

—ಶಾಂತಿನಾಥ-ಸುಕುಮಾರ ಚರಿತಂ ೬-೧೧.

ವಿನುತದೇಶಾವಕಾಸಿಕ ಸಾಮಾಯಿಕ ಘನತರ ಪ್ರೋಷಧನಿಯಮ ।
ಅನುಪಮ ವೈಯಾವೃತ್ಯಮೆಂಬಿವು ನಾಲ್ಕು ಜನನುತ ಶಿಕ್ಷಾವ್ರತವು ॥

—ಬಾಹುಬಲಿ-ನಾಗಕುಮಾರ ಚರಿತಂ ೨೮-೪೬.

ಇನ್ನು ದೇಶಾವಕಾಶಿಕ ವ್ರತದ ಲಕ್ಷಣವನ್ನು ಹೇಳುತ್ತಾರೆ—

ದೇಶಾವಕಾಶಿಕಂ ಸ್ಯಾತ್ಕಾಲಪರಿಚ್ಛೇದನೇನ ದೇಶಸ್ಯ ।
ಪ್ರತ್ಯಹಮಣುವ್ರತಾನಾಂ ಪ್ರತಿಸಂಹಾರೋ ವಿಶಾಲಸ್ಯ ॥ ೯೨ ॥[1]

ಅನ್ವಯಾರ್ಥ—(ವಿಶಾಲಸ್ಯ ದೇಶಸ್ಯ) ವಿಸ್ತಾರವಾದ ದೇಶದ (ಕಾಲಪರಿಚ್ಛೇದನೇನ) ಕಾಲಮರ್ಯಾದೆ-ಯನ್ನು ಮಾಡಿಕೊಂಡು (ಪ್ರತ್ಯಹಂ) ಪ್ರತಿ ದಿವಸ (ಪ್ರತಿಸಂಹಾರಃ) ತ್ಯಾಗಮಾಡುವದು—ಇದು—(ಅಣುವ್ರತಾನಾಂ) ಅಣುವ್ರತಗಳನ್ನು ಧರಿಸುವವರಿಗೆ (ದೇಶಾವಕಾಶಿಕಂ) ದೇಶಾವಕಾಶಿಕ ವ್ರತವು (ಸ್ಯಾತ್) ಆಗಿದೆ.

ಅರ್ಥ—ಅಣುವ್ರತಗಳನ್ನು ಧರಿಸುವವರು ಪ್ರತಿ ದಿವಸ ಕಾಲಮರ್ಯಾದೆಯನ್ನು ಹಾಕಿಕೊಂಡು, ವಿಸ್ತಾರವಾದ ಪ್ರದೇಶದ ಸೀಮೆಯನ್ನು ಕಡಿಮೆಮಾಡುತ್ತ ಹೋಗಬೇಕು ಇದು ದೇಶಾವಕಾಶಿಕ ವ್ರತವಾಗಿದೆ [ಈ ವ್ರತದಲ್ಲಿ ಎರಡು ಸಂಗತಿಗಳನ್ನು ನಾವು ಮುಖ್ಯವಾಗಿ ಗಮನಿಸಬೇಕು—(೧) ಕಾಲಮರ್ಯಾದೆಯ ದೃಷ್ಟಿಯಿಂದ ಪ್ರತಿದಿನ ಸ್ವೀಕರಿಸುವಂಥದು. ಅದರಿಂದ ಈ ವ್ರತದಲ್ಲಿ ಪ್ರತಿದಿನವೂ ಹೊಸತನವು ಪ್ರಾಪ್ತವಾಗುತ್ತದೆ. ಆದರೆ

[1] ಆಯತವರ್ಮನ ಕಂದ ಹೀಗಿದೆ

ಕಂದ ॥ ಕಾಲದ ಪವಣಿಂದೆಡೆಯುಂ ತ್ರೈಲೋಕ್ಯಸ್ವಾಮಿ ಬೆಸಸಿದಾಗಮದೊಳ್ತಾಂ ।
ಮೇಲಾಗಿ ಕುಂದಿಸುವುದು ಶೀಲಂ ದೇಶಾವಕಾಶಿಕಂ ಧ್ರುವಮುಕ್ಕುಂ ॥

ದಿಗ್ವ್ರತವು ಹಾಗಲ್ಲ, ಅದನ್ನು ಒಮ್ಮೆ ಮಾತ್ರ ಗ್ರಹಣಮಾಡಲಾಗುತ್ತದೆ ಅದು ಯಾವಜ್ಜೀವನ ಪರ್ಯಂತ ಇರುತ್ತದೆ. (೨) ದಿಗ್ವ್ರತದಲ್ಲಿ ಗ್ರಹಣಮಾಡಿದ ವಿಶಾಲ ದೇಶದ–ಅದರ ಕ್ಷೇತ್ರಾವಧಿಯ–ಮರ್ಯಾದೆಯನ್ನು ಈ ವ್ರತವು ಸಂಕುಚಿತಗೊಳಿಸುತ್ತದೆ ಮತ್ತು ಈ ಸಂಕುಚಿತಗೊಳಿಸುವಿಕೆಯು ಉತ್ತರೋತ್ತರ ಬೆಳೆಯುತ್ತ ಹೋಗುತ್ತದೆ. ದೇಶ ವ್ರತದಲ್ಲಿಯೂ ಸಹ ಈ ಉಪಸಂಹಾರಕ್ಕೆ ಅವಕಾಶವು ಇರುತ್ತದೆ. ಅಂದರೆ ಮೊದಲನೆಯ ದಿವಸ ಚಿಕ್ಕ ಪ್ರದೇಶವನ್ನು ಇಟ್ಟುಕೊಂಡು, ಕೆಲವೊಂದು ಸೀಮೆಯ–ದೇಶದ–ಮರ್ಯಾದೆಯನ್ನು ಹಾಕಿಕೊಳ್ಳಲಾಗುವದು. ಮರುದಿನ ಆ ಸೀಮೆಯಲ್ಲೂ ಕಡಿಮೆ ಮಾಡಲಿಕ್ಕೆ ಬರುತ್ತದೆ. (ಇಂದು ತಮ್ಮ ಊರ ಗಡಿಯ ಹೊರಗೆ ಹೋಗುವದಿಲ್ಲವೆಂದು ಪ್ರತಿಜ್ಞೆ ಮಾಡಿದ್ದರೆ ನಾಳೆ ಊರ ಅಗಸೆಯ ಹೊರಗೆ ಹೋಗಲಾರೆ ಎಂದು ನಿಯಮಮಾಡಲಿಕ್ಕೆ ಬರುತ್ತದೆ.) ಅದರಂತೆ ಮೊದಲ ದಿನ ನಿಶ್ಚಿತಗೊಳಿಸಿದ ಸೀಮೆಯಲ್ಲಿ ಕೆಲವು ದಿನಗಳ ವರೆಗೆ ಸಂಚರಿಸುವೆನೆಂದು ಗೊತ್ತುಮಾಡಿಕೊಂಡಿದ್ದರೂ ಆ ಕಾಲ ಮರ್ಯಾದೆಯನ್ನೂ ಕಡಿಮೆಮಾಡಿಕೊಳ್ಳಲಿಕ್ಕೆ ಬರುತ್ತದೆ ಆದರೆ ದಿಗ್ವ್ರತದಲ್ಲಿ ಇದು ಆಗುವದಿಲ್ಲ ಇವೆರಡೂ ವ್ರತಗಳಲ್ಲಿ ಇರುವ ಅಂತರವು ಇದೇ ಆಗಿದೆ ಸ. ಧ]

ವಿಶೇಷಾರ್ಥ—ದಿಗ್ವ್ರತದಲ್ಲಿ, ಈ ಮೊದಲು ಹತ್ತು ದಿಕ್ಕುಗಳಲ್ಲಿಯೂ ಒಂದು ಮರ್ಯಾದೆಯನ್ನು ನಿರ್ಣಯಿಸಿಕೊಂಡು, ಅದರ ಹೊರಗೆ ಹೋಗಿ ಬರುವದಕ್ಕೂ ಹೊರಗಿನ ಪದಾರ್ಥಗಳನ್ನು ತರುವದಕ್ಕೂ ಒಯ್ಯುವದಕ್ಕೂ ಪ್ರತಿಬಂಧವನ್ನು ಯಾವಜ್ಜೀವ ಪರ್ಯಂತವೂ ಸ್ವೀಕರಿಸಿರುತ್ತದೆ. ಈಗ ಅದರೊಳಗಿಂದ ಪ್ರತಿದಿನವೂ ಕೆಲವೊಂದು ಕ್ಷೇತ್ರ ಹಾಗೂ ಕಾಲಗಳ ಮರ್ಯಾದೆಯನ್ನು ಮಾಡಿ, ಕಡಿಮೆಮಾಡುತ್ತ ಹೋಗಲಿಕ್ಕೆ ಬರುತ್ತದೆ. ಹೀಗೆ ಮಾಡುವದಕ್ಕೆ ದೇಶಾವಕಾಶಿಕ ವ್ರತವೆನ್ನಲಾಗುತ್ತದೆ. ಹೇಗೆಂದರೆ ಪೂರ್ವದಿಕ್ಕಿನಲ್ಲಿ ಎರಡು ನೂರು ಮೈಲುಗಳ ಆಚೆಗೆ ಆಯುಷ್ಯ ಇರುವ ವರೆಗೆ ಹೋಗಲಾರೆ ಎಂದು ದಿಗ್ವ್ರತದಲ್ಲಿ ಪ್ರತಿಜ್ಞೆಮಾಡಲಾಗುತ್ತದೆ ಅದರೊಳಗಿಂದ ಈಗ ಪ್ರತಿದಿನ ಹತ್ತಿಪ್ಪತ್ತು ಮೈಲುಗಳಷ್ಟು ಪ್ರದೇಶ ಮರ್ಯಾದೆಯನ್ನು ಕಡಿಮೆಮಾಡುತ್ತ ಹೋಗಬಹುದಾಗಿದೆ. ಆ ಸಂಕುಚಿತಗೊಂಡ ಪ್ರದೇಶದಲ್ಲಿಯೇ ತಾವು ವ್ಯವಹರಿಸಬೇಕಾಗುತ್ತದೆ ಅದರ ಹೊರಗೆ ಹೋಗುವದಿರುವದಿಲ್ಲ ಹೀಗೆ ಹೋಗುಬರುವದಕ್ಕೂ ವ್ಯವಹಾರಕ್ಕೂ ಪ್ರದೇಶವನ್ನು ದಿನದಿನಕ್ಕೂ ಸಂಕುಚಿತಗೊಳಿಸುತ್ತ ಬರುವದಕ್ಕೆ ದೇಶಾವಕಾಶಿಕ ವ್ರತವೆನ್ನುವರು.

ದಶದಿಕ್ಕುಗಳ ಸಮೂಹವನೆಲ್ಲವವನೆದು ಪ್ರಮಾಣಿಸಿಕೊಂಡು ।
ಮಿಸುಕೆನಲ್ಲಿಂದ ಬಹಿಕ್ಷೇತ್ರಕೆಂಬಿವುಯೆಶವ ದಿಗ್ವ್ರತಮೆಂಬುದಹುದು ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ—ಧರ್ಮಾನುಪ್ರೇಕ್ಷೆ ೩

ಇನ್ನು ದೇಶಾವಕಾಶಿಕ ವ್ರತದೊಳಗಿನ ಕ್ಷೇತ್ರದ ಮರ್ಯಾದೆಯನ್ನು ಕುರಿತು ಹೇಳುತ್ತಾರೆ—

ಗೃಹಹಾರಿಗ್ರಾಮಾಣಾಂ ಕ್ಷೇತ್ರನದೀದಾವಯೋಜನಾನಾಂ ಚ ।
ದೇಶಾವಕಾಶಿಕಸ್ಯ ಸ್ಮರಂತಿ ಸೀಮ್ನಾಂ ತಪೋವೃದ್ಧಾಃ ॥ ೯೩ ॥[1]

ಅನ್ವಯಾರ್ಥ—(ತಪೋವೃದ್ಧಾಃ) ತಪಸ್ಸಿನಿಂದ ಮುದುಕರಾದವರು ಅರ್ಥಾತ್ ಗಣಧರ ಮೊದಲಾದವರು (ಗೃಹಹಾರಿಗ್ರಾಮಾಣಾಂ) ಮನೆ, ಉಪವನ, ಊರು (ಚ) ಮತ್ತು (ಕ್ಷೇತ್ರನದೀದಾವಯೋಜನಾನಾಂ) ಹೊಲ, ನದಿ, ವನ, ಯೋಜನ—ಇವು—(ದೇಶಾವಕಾಶಿಕಸ್ಯ) ದೇಶಾವಕಾಶಿಕ ವ್ರತದ (ಸೀಮಾಂ) ಮರ್ಯಾದೆಯೆಂದು ಇರುತ್ತವೆ—ಎಂದು—(ಸ್ಮರಂತಿ) ನೆನೆಯುತ್ತಾರೆ

ಅರ್ಥ—ತಪೋವೃದ್ಧರೆಂದರೆ ಗಣಧರ ಮೊದಲಾದ ದೇವರು ಮನೆ, ಉಪವನ, ಊರು, ಹೊಲ, ಹೊಳೆ, ಅರಣ್ಯ ಮತ್ತು ಯೋಜನ ಹೀಗೆ ದೇಶಾವಕಾಶಿಕ ವ್ರತದ ಮರ್ಯಾದೆಗಳಾಗುತ್ತವೆಂದು ಹೇಳಿದ್ದಾರೆ. ಈ ಸೀಮೆಯ ಹೊರಗೆ ಹೋಗುವದಿಲ್ಲೆಂದು ನಿಯಮ ಮಾಡಬೇಕು.

---

1 ಆಯತವರ್ಮನು ಹೇಳುವುದು ಹೀಗೆ

ವಚನ—ಅವು ಮುನ್ನಮಣುಬ್ರತೆಯಾಜೀವಂ ಪತ್ತುದೆಸೆಗಳುಮನಿನಿತು ಪ್ರಮಾಣದಿಂ ಪೊರಗೆ ಪೋಗೆನೆಂದು ದಿಗ್ವ್ರತದೊಳು ಪ್ರಮಾಣಿಸಿಮದರಿಂದೊಳಗೆ ಇಂತಪ್ಪ ಮನೆಯಂ ಕೇರಿಯನೂರಂ ದೇಶಮಂ ಕೆಯ್ಯಂ ತೊರೆಯಂ ಬನಮಂ ತೋಟಮುಮಡವಿಯ-ನಿನಿತು ಯೋಜನಂ

ವಿಶೇಷಾರ್ಥ—[ಇಲ್ಲಿ 'ಚ' ಶಬ್ದದ ಪ್ರಯೋಗದಿಂದ ಇನ್ನೂ ಕೆಲವು ಸೀಮೆಗಳ ಬಗ್ಗೆ ಸಂಕೇತಿಸಲಾಗಿದೆ ಅವುಗಳಲ್ಲಿ ಓಣಿ, ಆಳಿ, ಸರೋವರ, ಸೇತುವೆ, ವಿಶಿಷ್ಟ ಗಿಡ, ವಿಶೇಷ ವಸ್ತು, ಸೈನ್ಯ, ಜನಪದ, ರಾಜಧಾನಿ, ಪರ್ವತ ಮತ್ತು ಸಮುದ್ರ ಇಂಥ ವಸ್ತುಗಳೂ ನಹ ಸಮಾವೇಶವಾಗುತ್ತವೆ ಸ ಥ]

ಗಿರಿನಾಗರನದಿದೇಶಯೋಜನವಾದಿ ಮರ್ಯಾದೆಯ ಮಾಡಿಯಲ್ಲಿಂ ।
ಹೊರಗೆ ಕೆಲಸಮಾಡ ಹೇಳನು ಸೂಕ್ಷ್ಮದಿದುರಿತ ನಿವೃತ್ತಿನಿಮಿತ್ತಾ ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ–ಧರ್ಮಾನುಪ್ರೇಕ್ಷೆ–೭

ಈಗ ದೇಶಾವಕಾಶಿಕ ವ್ರತದಲ್ಲಿ ಕಾಲದ ಮರ್ಯಾದೆಯನ್ನು ಹೇಳುತ್ತಾರೆ—

ಸಂವತ್ಸರಮೃತುರಯನಂ ಮಾಸಚತುರ್ಮಾಸಪಕ್ಷಮೃಕ್ಷಂ ಚ ।
ದೇಶಾವಕಾಶಿಕಸ್ಯ ಪ್ರಾಹುಃ ಕಾಲಾವಧಿಂ ಪ್ರಾಜ್ಞಾಃ ॥ ೯೪ ॥[1]

ಅನ್ವಯಾರ್ಥ—(ಪ್ರಾಜ್ಞಾಃ) ಬಲ್ಲವರು ಎಂದರೆ ಗಣಧರಾದಿಗಳು (ಸಂವತ್ಸರಂ) ಒಂದು ವರುಷ (ಋತುಃ) ಎರಡು ತಿಂಗಳು (ಅಯನಂ) ಆರು ತಿಂಗಳು (ಮಾಸ) ತಿಂಗಳು (ಚಾತುರ್ಮಾಸ) ನಾಲ್ಕು ತಿಂಗಳು (ಪಕ್ಷಂ) ಹದಿನೈದು ದಿನ (ಚ) ಮತ್ತು (ಋಕ್ಷಂ) ನಕ್ಷತ್ರ–ಇವು–(ದೇಶಾವಕಾಶಿಕಸ್ಯ) ದೇಶಾವಕಾಶಿಕ ವ್ರತದ (ಕಾಲಾವಧಿಂ) ಕಾಲದ ಮರ್ಯಾದೆಯಾಗಿವೆ ಎಂದು (ಪ್ರಾಹುಃ) ಹೇಳಿದ್ದಾರೆ

ಅರ್ಥ—ವರ್ಷ, ಋತು, ಅಯನ, ತಿಂಗಳು, ನಾಲ್ಕು ತಿಂಗಳು, ಹದಿನೈದು ದಿನ, ಸೂರ್ಯ ನಕ್ಷತ್ರ ಅಥವಾ ದಿವಸ ನಕ್ಷತ್ರ ಈ ಪ್ರಕಾರ ದೇಶಾವಕಾಶಿಕ ವ್ರತದ ಕಾಲದ ಪ್ರಮಾಣವನ್ನು ಮಾಡಬೇಕು–ಎಂದು ಜ್ಞಾನಿಗಳು ಹೇಳಿದ್ದಾರೆ.

ವಿಶೇಷಾರ್ಥ—[ವರ್ಷವು ಬಹಳಷ್ಟು ಹನ್ನೆರಡು ತಿಂಗಳುಗಳಿಂದ ಕೂಡಿ ಆಗಿರುತ್ತದೆ ಕೆಲವೊಂದು ನಲ ಅಧಿಕ ಮಾಸವು ಸೇರಿದಾಗ ಹದಿಮೂರು ತಿಂಗಳುಗಳ ವರ್ಷವು ಇರುತ್ತದೆ ಋತುಗಳು ವರ್ಷಾ, ಶರದ, ಹೇಮಂತ, ಶಿಶಿರ, ವಸಂತ, ಗ್ರೀಷ್ಮ ಎಂದು ಆರು ಇರುತ್ತವೆ ಇವುಗಳಲ್ಲಿ ಪ್ರತಿಯೊಂದರ ಅವಧಿಯು ಶ್ರಾವಣ ಮಾಸದಿಂದ ಆರಂಭವಾಗಿ ಎರಡೆರಡು ತಿಂಗಳಷ್ಟು ಇರುತ್ತದೆ ದಕ್ಷಿಣಾಯನ, ಉತ್ತರಾಯಣಗಳೆಂದು ಅಯನಗಳು ಎರಡಾಗಿವೆ ಇವು ಸೂರ್ಯನ ದಕ್ಷಿಣ ಹಾಗೂ ಉತ್ತರ ಗಮನಗಳನ್ನನುಸರಿಸಿ ರೂಪುಗೊಂಡಿವೆ ಇವುಗಳ ಕಾಲಾವಧಿಯು ಪ್ರತಿಯೊಂದಕ್ಕೂ ಆರುತಿಂಗಳು ಇರುತ್ತದೆ ದಕ್ಷಿಣಾಯನದ ಪ್ರಾರಂಭವು ಬಹುತರ ಶ್ರಾವಣ ಮಾಸದಿಂದಲೂ ಉತ್ತರಾಯಣವು ಮಾಘ ಮಾಸದಿಂದಲೂ ಆಗುತ್ತದೆ ಇನ್ನು ಸಂಕ್ರಾಂತಿಯ ದೃಷ್ಟಿಯಿಂದಲೂ ಇವುಗಳನ್ನು ವಿಂಗಡಿಸುತ್ತಾರೆ ತಿಂಗಳುಗಳು ಶ್ರಾವಣ ಮೊದಲಾದ ಹನ್ನೆರಡು ಇವೆ ಇಂಗ್ಲಿಷ ಪದ್ಧತಿಯಿಂದ ಜಾನೆವರಿ ಇತ್ಯಾದಿಯಾಗಿ ತಿಂಗಳ ಹೆಸರುಗಳು ಇವೆ ಭಾರತೀಯ ತಿಂಗಳುಗಳ ಅವಧಿಯು ಸಾಮಾನ್ಯವಾಗಿ ಮೂವತ್ತು ದಿನಗಳದ್ದು ಇರುವದು. ಚಾತುರ್ಮಾಸದ ಪ್ರಾರಂಭವು ಶ್ರಾವಣದಿಂದ ಆಗುತ್ತದೆ ಕೃಷ್ಣ ಹಾಗೂ ಶುಕ್ಲ ಎಂದು ಎರಡು ಪಕ್ಷಗಳು ಇವೆ ಬಹುತರ ಇವು ಪ್ರತಿಯೊಂದೂ ಹದಿನೈದು ದಿನಗಳಷ್ಟು ಇರುತ್ತವೆ ನಕ್ಷತ್ರಗಳು ಅಶ್ವಿನಿ, ಭರಣಿ ಆದಿ ಅಭಿಜಿತ ಸಹಿತ ಇಪ್ಪತ್ತೆಂಟು ಇರುತ್ತವೆ ಇವುಗಳಲ್ಲಿ ಪ್ರತಿಯೊಂದರ ಉದಯಾಸ್ತಗಳ ನಡುವಿನ ಕಾಲಾವಧಿಯು ಆಯಾ ನಕ್ಷತ್ರಗಳ ಕಾಲಪರಿಮಾಣವಾಗಿದೆ ಇದೇ ಪ್ರಕಾರ ಇನ್ನೂ ಕೆಲವು ಕಾಲಮರ್ಯಾದೆಗಳು ಇವೆ. ದಿವಸ, ರಾತ್ರಿ, ಅರ್ಧ ದಿನ, ಅರ್ಧರಾತ್ರಿ, ಘಳಿಗೆ, ಘಂಟೆ, ಪ್ರಹರ ಮತ್ತು ಮಿನಿಟ ಮೊದಲಾದವುಗಳನ್ನು ಇಲ್ಲಿ ಮುಖ್ಯವಾಗಿ ಹೇಳಬಹುದಾಗಿದೆ. ಸ ಥ]

---

[1] ಆಯತವರ್ಮನು ಹೇಳುವದು ಹೀಗೆ

ವಚನ—ಅನಿತೊಂದು ವರ್ಷಮುಮಾರು ತಿಂಗಳಂ ಮಾಸಮುಂ ಪಕ್ಷಮುಂ ದಿವಸಮುಂ ರಾತ್ರಿಯುಂ ಜಾವಮುನೊಂದು ಕಾಲಮುಂ ಪವಣ್ಣಾಡಿಯುವಧಿನೆರವುನ್ನೆವುರಂ ಪುಗೆನೆಂಬುದು ದೇಶಾವಕಾಶಿಕಮೆಂಬ ನಾಲ್ಕನೆಯ ಶಿಕ್ಷಾವ್ರತಂ

ಕವಟಿದೆಯೊಳೇಂ ಪ್ರೇಷಣ ಶಬ್ದ ಪುದ್ಗಲಕ್ಷೇಪ ಸಮುದಿತಾನಯನಂ ತಾ- ।
ನವಚಾರಂಗಳ್ ರೂಪಾನುಪಾತಮುಂ ಪ್ರವಿಮಿತದೇಶನಿಯಮವ್ರತದೊಳ್ ॥

—ಶಾಂತಿನಾಥ-ಸುಕುಮಾರ ಚರಿತಂ ೬-೧೯

ಇಲ್ಲಿ ಸಾಮಾಯಿಕ ವ್ರತದ ಸ್ವರೂಪವನ್ನು ಹೇಳಲಿಕ್ಕೆಂದು ಸೂತ್ರವನ್ನು ರಚಿಸಲಾಗಿದೆ—

ಆಸಮಯಮುಕ್ತಿಮುಕ್ತಂ ಪಂಚಾಘಾನಾಮಶೇಷಭಾವೇನ ।
ಸರ್ವತ್ರ ಚ ಸಾಮಯಿಕಾಃ ಸಾಮಯಿಕಂ ನಾಮ ಶಂಸಂತಿ ॥ ೯೭ ॥[1]

ಅನ್ವಯಾರ್ಥ—(ಆಸಮಯಮುಕ್ತಿ) ಕೆಲವೊಂದು ನಿಯಮಿತ ಕಾಲದ ವರೆಗೆ (ಸರ್ವತ್ರ) ಎಲ್ಲ ಕಡೆಗೂ (ಪಂಚಾಘಾನಾಂ) ಐದು ಪಾಪಗಳನ್ನು (ಅಶೇಷಭಾವೇನ) ಸಂಪೂರ್ಣವಾಗಿ (ಮುಕ್ತಂ) ತ್ಯಾಗಮಾಡುವುದು—ಇದಕ್ಕೆ (ಸಾಮಯಿಕಾಃ) ಶಾಸ್ತ್ರವನ್ನು ಬಲ್ಲವರು ಅರ್ಥಾತ್ ಗಣಧರ ಮೊದಲಾದವರು (ಸಾಮಯಿಕ ನಾಮಂ) ಸಾಮಯಿಕ ಎಂಬ ಹೆಸರನ್ನು (ಶಂಸಂತಿ) ಕೊಟ್ಟಿದ್ದಾರೆ

ಅರ್ಥ—ಪರಮ ಶಾಂತ ಭಾವವನ್ನು ಹೊಂದಿದ ಗಣಧರದೇವರು ಸಾಮಾಯಿಕವೆಂಬ ಹೆಸರಿನ ವ್ರತವನ್ನು ಬಹಳ ವರ್ಣಿಸಿದ್ದಾರೆ ಅವರು ಎಲ್ಲ ಕಡೆಗೂ—ಮರ್ಯಾದೆ ಮಾಡಿದ ಮತ್ತು ಮರ್ಯಾದೆ ಮಾಡದ ಈ ಎರಡೂ ಕ್ಷೇತ್ರಗಳಲ್ಲಿ-ಮನ-ವಚನಕಾಯ, ಕೃತ, ಕಾರಿತ, ಅನುಮೋದನ ಇವೆಲ್ಲವುಗಳನ್ನುಳಿದು ಕೆಲವೊಂದು ಕಾಲದ ವರೆಗೆ ಸಂಪೂರ್ಣವಾಗಿ ಐದೂ ಪಾಪಗಳನ್ನು ತ್ಯಾಗಮಾಡುವದಕ್ಕೆ ಸಾಮಾಯಿಕವೆಂದು ಹೇಳಿದ್ದಾರೆ

ವಿಶೇಷಾರ್ಥ—[ಇಲ್ಲಿ ಸೂಚಿತ ಸಮಯದ ಸ್ವರೂಪವನ್ನು ಮುಂದಿನ ಕಾರಿಕೆಯಲ್ಲಿ ಸ್ಪಷ್ಟಗೊಳಿಸಲಾಗಿದೆ. ಆ ಸಮಯ ಇಲ್ಲವೆ ವಿಶಿಷ್ಟ ಆಚಾರದ ಅವಧಿಯ ವರೆಗೆ ಹಿಂಸಾದಿ ಪಂಚ ಪಾಪಗಳನ್ನು ಪೂರ್ಣರೂಪದಿಂದ ತ್ಯಾಗಮಾಡಲಿಕ್ಕೆ ಇಲ್ಲಿ ಹೇಳಿದೆ ಇದರಲ್ಲಿ ಪಾಪದ ಸ್ಥೂಲ ಹಾಗೂ ಸೂಕ್ಷ್ಮ ರೂಪಗಳೆರಡೂ ಸಮಾವೇಶಗೊಳ್ಳುತ್ತವೆ ಈ ತ್ಯಾಗವು ಕ್ಷೇತ್ರದ ದೃಷ್ಟಿಯಿಂದ ದೇಶಾವಕಾಶಿಕ ವ್ರತದ ಸೀಮೆಯ ಒಳಗೂ ಹೊರಗೂ ವ್ಯಾಪಿಸಿರುತ್ತದೆ. ಸ. ಧ.] ಕಾಲದ ಮರ್ಯಾದೆಯನ್ನು ಮಾಡಿ, ಸಂಪೂರ್ಣ ಪಾಪವನ್ನು ಕೆಲವೊಂದು ಕಾಲದ ವರೆಗೆ ತ್ಯಾಗಮಾಡುವುದು ಸಾಮಾಯಿಕವಾಗಿದೆ

ನಿಯತಂ ತ್ರಿಸಂಧ್ಯೆಯೊಳ್ ಸಮತೆಯಿನರುಹತ್ಪೂಜೆಯಿಂದಮಿಷ್ಟಾರ್ಥಂ ನಿ- ।
ಶ್ಚಯದಿಂ ಮೂಜಿನೆಯಂ ಸಾಮಯಿಕ ವ್ರತಧಾರಿ ಪೆಸರೊಳಂ ಸಾಮಯಿಕಂ ॥

—ಶಾಂತಿನಾಥ-ಸುಕುಮಾರ ಚರಿತಂ ೬-೨೮.

ಇಂತಿವನುಳ್ಳವ ವ್ರತಿಕನವನು ಪುಣ್ಯವಂತನತ್ಯಧಿಕನೂರ್ಜಿತನು ।
ಸಂತತ ಮಿಗೆ ತ್ರೈಕಾಲ್ಯವಂದನೆಯುಳ್ಳೊಡಂತವ ಸಾಮಾಯಿಕನು ॥

—ಬಾಹುಬಲಿ-ನಾಗಕುಮಾರ ಚರಿತಂ ೨೮-೪೮

1 ಆಯತವರ್ಮನ ಪದ್ಯ ಹೀಗಿದೆ

ಕಂದ ॥ ಅಳುಪಿಲ್ಲದೆ ಪಾಪಕ್ರಿಯೆಗಳೆಲ್ಲಮುಮನಂಗ ಪಾಪಂಗಳೊಳಂ ನಿ- ।
ರ್ಮಲಮಾಗೆ ಪತುವಿಡುವುದು ತಿಳಿದೊಡೆಯರ್ಗಕ್ಕುಮಿದುವ್ರತಂ ಸಾಮಾಯಿಕಂ ॥

ಈಗ ಸಾಮಾಯಿಕ ವ್ರತದೊಳಗಿನ ಆಸನವನ್ನು ಕುರಿತು ಹೇಳಲಾಗುತ್ತದೆ—

> ಮೂರ್ಧರುಹಮುಷ್ಟಿವಾಸೋ ಬಂಧಂ ಪರ್ಯಂಕಬಂಧನಂ ಚಾಪಿ ।
> ಸ್ಥಾನಮುಪವೇಶನಂ ವಾ ಸಮಯಂ ಜಾನಂತಿ ಸಮಯಜ್ಞಾಃ ॥ ೯೮ ॥[1]

ಅನ್ವಯಾರ್ಥ—(ಸಮಯಜ್ಞಾಃ) ಶಾಸ್ತ್ರಗಳನ್ನು ಬಲ್ಲವರು (ಮೂರ್ಧರುಹಮುಷ್ಟಿವಾಸೋ ಬಂಧಂ) ಜಂಡಿಕೆ, ಮುಷ್ಟಿ, ವಸ್ತ್ರಗಳಿಗೆ ಗಂಟುಹಾಕುವದು (ಪರ್ಯಂಕಬಂಧನಂ) ಪದ್ಮಾಸನವನ್ನು ಹಾಕುವದು (ಅಪಿ) ಮತ್ತು (ಸ್ಥಾನಂ) ಸ್ಥಾನ (ಉಪವೇಶನಂ) ಆಸನ–ಇವುಗಳಿಗೆ–(ಸಮಯಂ) ಸಮಯವೆಂದು (ಜಾನಂತಿ) ತಿಳಿಯುತ್ತಾರೆ

ಅರ್ಥ—ಸಾಮಾಯಿಕವನ್ನು ಮಾಡುವವರು ತಮ್ಮ ತಲೆಗೂದಲುಗಳು ಬಿಚ್ಚಿದ್ದರೆ ಕಟ್ಟಿಕೊಳ್ಳಬೇಕು ಕೈಮೇಲೆ ಕೈಯಿಟ್ಟು ಮುಷ್ಟಿ ಬಂಧಮಾಡಬೇಕು ಮೈಮೇಲಿನ ಅರಿವೆಗಳು ಸಡಿಲುಗೊಂಡಿದ್ದರೆ ಗಟ್ಟಿಯಾಗಿ ಗಂಟು ಹಾಕಿ ಕಟ್ಟಿಕೊಳ್ಳಬೇಕು ಪದ್ಮಾಸನ ಇಲ್ಲವೆ ಕಾಯೋತ್ಸರ್ಗಾಸನ ಹಾಕಬೇಕು ಸಾಮಾನ್ಯವಾಗಿ ಪದ್ಮಾಸನವೇ ಇರಬೇಕು ಇವು ಸಾಮಾಯಿಕದ ಚಿಹ್ನವಾಗಿವೆಯೆಂದು ಶಾಸ್ತ್ರಕಾರರು ಅನ್ನುತ್ತಾರೆ

ವಿಶೇಷಾರ್ಥ—['ಸಮಯ' ಶಬ್ದವು ಶಪಥ, ಆಚಾರ, ಸಿದ್ಧಾಂತ, ಕಾಲ, ನಿಯಮ, ಅವಸರ ಇವೇ ಮೊದಲಾದ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ[2] ಇಲ್ಲಿ ಅದನ್ನು ಆಚಾರವೆಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ ಈ ಸೂತ್ರದಲ್ಲಿ ಯಾವ ಆಚಾರಗಳ ಉಲ್ಲೇಖವಿದೆಯೋ, ಅವುಗಳಲ್ಲಿಯ ಯಾವದೇ ಪ್ರಕಾರದ ಆಚಾರದ ಅಥವಾ 'ವಾ' ಶಬ್ದದಿಂದ ಸೂಚಿಸಲ್ಪಡುವ ಅದಕ್ಕೆ ಸರಿಸಮಾನವಾದ ಬೇರೆ ಆಚಾರಗಳ ನಿಯಮ ತಕ್ಕೊಂಡು, ಎಲ್ಲಿಯ ವರೆಗೆ ಆ ನಿಯಮಗಳನ್ನು ಸ್ವೇಚ್ಛೆಯಿಂದ ಅಥವಾ ನಿಯಮಕ್ಕನುಸರಿಸಿ ನಡೆಯಿಸಲಾಗುವುದೋ ಅಲ್ಲಿಯ ವರೆಗಿನ ಸಮಯ (ಕಾಲಾವಧಿ) ದಲ್ಲಿ ಐದೂ ಪಾಪಗಳನ್ನು ಪೂರ್ಣರೂಪದಿಂದ—ಮನ–ವಚನ–ಕಾಯ ಮತ್ತು ಕೃತ–ಕಾರಿತ–ಅನುಮೋದನಗಳ ದ್ವಾರಾ—ಸರ್ವಥಾ ತ್ಯಾಗಮಾಡುವದೇ ಈ ಮೊದಲಿನ ಶ್ಲೋಕದಲ್ಲಿ ವರ್ಣಿಸಿದ ಸಾಮಾಯಿಕ ಶಿಕ್ಷಾವ್ರತದ ಧ್ಯೇಯವಾಗಿದೆ

ಇಲ್ಲಿ ಕೇಶಬಂಧಾದಿಕ ರೂಪದಲ್ಲಿ ಯಾವ ಆಚಾರಗಳ ಉಲ್ಲೇಖವಿದೆಯೋ ಅವು ಸಾಮಾಯಿಕದ ಕಾಲ ಮರ್ಯಾದೆಯ ಪ್ರಕಾರಗಳನ್ನು ಸೂಚಿಸುತ್ತವೆ ಉದಾಹರಣೆಗಾಗಿ ಪದ್ಮಾಸನ ಹಾಕಿ ಕುಳಿತುಕೊಳ್ಳುವುದು ಎಲ್ಲಿಯ ವರೆಗೆ ಅಸಹ್ಯ ಅಥವಾ ಕಷ್ಟಕಾರಕವೆನಿಸುವದಿಲ್ಲವೋ ಅಲ್ಲಿಯ ವರೆಗೆ ಅದನ್ನು ಬಿಡಕೂಡದು ಹಾಗೆ ಕೂಡುವದು ಅಸಹ್ಯವೆನಿಸಿದಾಗ ಅದನ್ನು ಬಿಡಬೇಕಾಗುವುದು ಸಾಮಾಯಿಕದ ಸಲುವಾಗಿ ಪದ್ಮಾಸನದಲ್ಲಿ ಕುಳಿತ ಮೇಲೆ ಹಾಗೆ ಕೂಡುವುದು ಕ್ಲೇಶಕಾರಕವೆನಿಸಿ ಆ ಪದ್ಮಾಸನದಿಂದ ಏಳುವ ವರೆಗಿನ ಕಾಲಾವಧಿಗೆ ಸಾಮಾಯಿಕ ವ್ರತದ ಕಾಲ ಮರ್ಯಾದೆ ಎನ್ನಲಾಗುವದು ಇದೇ ರೀತಿ ಉಳಿದ ಪ್ರಕಾರಗಳ ಸ್ಥಿತಿಯು ಇದೆ ಮತ್ತು ಇವೆಲ್ಲ ಘಳಿಗೆ, ಘಂಟೆ ಮೊದಲಾದ ಪರತಂತ್ರ ಕಾಲ ಮಾಪನ ರಹಿತವೂ ಸಾಮಾಯಿಕವನ್ನು ಮಾಡುವವರ ಸ್ವಾತಂತ್ರ್ಯದ ನಿದರ್ಶಕವೂ ಆಗಿವೆ, ಅಲ್ಲದೆ ಅತಿ ಪ್ರಾಚೀನ ಪದ್ಧತಿಗಳಾಗಿವೆ. ಇವುಗಳ ಪೂರ್ಣ ರೂಪರೇಷೆಯ ಬಹುಭಾಗವು ಇಂದು ಅಜ್ಞಾತ ಅವಸ್ಥೆಯಲ್ಲಿವೆ. ಸ ಧ.]

ಸಾಮಾಯಿಕ ಮಾಡುವವರು ಇಟ್ಟುಕೊಂಡ ಕಾಲಮರ್ಯಾದೆಯಲ್ಲಿ ಐದೂ ಪಾತಕಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿ, ಎದ್ದು ನಿಲ್ಲಬೇಕು ಇಲ್ಲವೆ ಪರ್ಯಂಕಾಸನದಲ್ಲಿ ಕುಳಿತಿರಬೇಕು ಪರ್ಯಂಕಾಸನದಲ್ಲಿ ತಮ್ಮ

---

[1] ಆಯತವರ್ಮನು ಸಾಮಾಯಿಕ ವ್ರತದ ಆಸನ ಹಾಗೂ ಸ್ಥಾನಗಳನ್ನು ಕುರಿತು ಹೇಳುವುದು ಹೀಗೆ—

ವಚನ—ಅದೆಂತೆಂದೊಡೆ ಕೇಶಬಂಧಂ ಮುಷ್ಟಿಬಂಧಂ ವಸ್ತ್ರಬಂಧವೆಂಬಿವಂ ಮನೆಯೊಳಾನುಂ ಬಸದಿಯೊಳಾನುಂ ಬನದೊಳಾನುಂ ನಿರ್ಜಂತುಕ ಪ್ರದೇಶದೊಳಾನುಂ ಪಲ್ಯಂಕಾಸನದೊಳಾನುಂ ಪ್ರತಿಮಾಯೋಗದೊಳಾನುಂ ನೆಲನುಂ ಪ್ರತಿಲೇಖಿಸಿ ಈರ್ಯಾಪಥಶುದ್ಧಿಗೆಯ್ದಾರ್ತ ರೌದ್ರಮಂ ಪತ್ತುವಿಟ್ಟು ಸಾಮಾಯಿಕಬ್ರತಮನೇರಿಸಿಕೊಂಡು ಷಡ್ಜೀವನಿಕಾಯಕ್ಕೆಲ್ಲ ಕ್ಷಮೆಯೆಂದು ರಾತ್ರಿ ಪ್ರತಿಮೆಯೊಳಿರ್ದು ತನ್ನ ಮರ್ಯಾದೆಯ ಪೊತ್ತೆಯ್ದುವನ್ನಂ ದೇವ ಮನುಷ್ಯ ತಿರ್ಯಕ್ ಸಚೇತನನ್ಕೋಪಸರ್ಗಂಗಳಾದಡಂ ಸ್ಥಿರಮನಸ್ಕನಾಗಿ ಸೈರಿಸಿ

[2] "ಸಮಯಃ ಶಪಥೇ ಭಾಷಾಸಂಪದೋಃ ಕಾಲಸಂವಿದೋಃ । ಸಿದ್ಧಾಂತಾಚಾರ–ಸಂಕೇತ–ನಿಯಮಾವಸರೇಷು ಚ ॥ ಕ್ರಿಯಾಧಿಕಾರೇ ನಿರ್ದೇಶೇ ಚ ।"—ಇತಿ ರಭಸಃ ॥

ಎಡಗೈ ಮೇಲೆ ಬಲಗೈಯನ್ನು ಇಡಬೇಕು. ತಮ್ಮ ತಲೆಗೂದಲನ್ನು ಕಟ್ಟಿಕೊಳ್ಳಬೇಕು ಮತ್ತು ಉಟ್ಟ ವಸ್ತ್ರವು ಕಳೆಯಬಾರದೆಂದು ಅದಕ್ಕೆ ಗಂಟುಹಾಕಬೇಕು.

ಕರಣಗಣಂ ಕುಸುಂಗಿರೆ ಮನಂ ಸೊಸಲಲ್ಲಿರೆ ಲೋಚನಂಗಳು-
ಳ್ಳಿರೆ ಮುಗುಳ್ದೊಂಬುವೆತ್ತಿರೆ ಕರದ್ವಯವಲ್ಲವಮಂಕದೊಳ್ ಮರ- ।
ಲ್ದಿರೆ ತನು ನಿಷ್ಪ್ರಕಂಪವಿರೆದಂತಚಯಂ ಸಮನಾಗಿ ತನ್ನೊಳೊಂ-
ದಿರೆ ಸಮಸಂದುದಾ ಪರಮಯೋಗಿಗೆ ಯೋಗನಿಯೋಗಭಾವನಂ ॥

—ಆದಿಪಂಪ-ಆದಿಪುರಾಣ ೧೦-೧೪.

ಇನ್ನು ಸಾಮಾಯಿಕಕ್ಕೆ ಯೋಗ್ಯ ಸ್ಥಾನವನ್ನು ಇಲ್ಲಿ ನಿರ್ದೇಶಿಸುತ್ತಾರೆ—

**ಏಕಾಂತೇ ಸಾಮಯಿಕಂ ನಿರ್ವ್ಯಾಕ್ಷೇಪೇ ವನೇಷು ವಾಸ್ತುಷು ಚ ।**
**ಚೈತ್ಯಾಲಯೇಷು ವಾಪಿ ಚ ಪರಿಚೇತವ್ಯಂ ಪ್ರಸನ್ನಧಿಯಾ ॥ ೯೯ ॥**

ಅನ್ವಯಾರ್ಥ—(ನಿರ್ವ್ಯಾಕ್ಷೇಪೆ) ತೊಂದರೆ ಇಲ್ಲದ (ಏಕಾಂತೇ) ಏಕಾಂತದಲ್ಲಿ (ಚ) ಹಾಗೆಯೇ (ವನೇಷು) ವನದಲ್ಲಿ (ವಾ) ಇಲ್ಲವೆ (ವಾಸ್ತುಷು) ಮನೆಯಲ್ಲಿ (ಚ) ಮತ್ತು (ಚೈತ್ಯಾಲಯೇಷು) ಚೈತ್ಯಾಲಯದಲ್ಲಿ (ಅಪಿ)-ಪರ್ವತ, ಗುಹೆ ಮೊದಲಾದ ಸ್ಥಳಗಳಲ್ಲಿ-ಸಹ (ಪ್ರಸನ್ನಧಿಯಾ) ಪ್ರಸನ್ನವಾದ ಮನಸ್ಸಿನಿಂದ (ಸಾಮಯಿಕಂ) ಸಾಮಾಯಿಕವನ್ನು (ಪರಿಚೇತವ್ಯಂ) ವಿಸ್ತರಿಸಬೇಕು

ಅರ್ಥ—ಸಾಮಾಯಿಕವನ್ನು ಏಕಾಂತವಾದ ಸ್ಥಳದಲ್ಲಿ, ನಿರುಪದ್ರವಾದ ಸ್ಥಾನದಲ್ಲಿ ಅದರಂತೆಯೇ ವನ, ಮನೆ, ದೇವಾಲಯಗಳಲ್ಲಿ ಮಾಡಬೇಕು. ಇಲ್ಲವೆ ಇತರ ಇಂಥ ಶಾಂತವಾತಾವರಣ ಇರುವ ಸ್ಥಳಗಳಲ್ಲಿ ಪ್ರಸನ್ನ ಮನಸ್ಸಿನಿಂದ ಮಾಡಬೇಕು [ಇಲ್ಲಿ 'ಏಕಾಂತೇ' ಮತ್ತು 'ನಿರ್ವ್ಯಾಕ್ಷೇಪೇ' ಈ ಎರಡು ಪದಗಳನ್ನು ವಿಶೇಷ ಲಕ್ಷ್ಯಪೂರ್ವಕವಾಗಿ ಗಮನಿಸಬೇಕು ಈ ಶಬ್ದಗಳು ಸೂಚಿಸುವ ಅರ್ಥವು ಹೀಗಿದೆ ಸಾಮಾಯಿಕದ ಸಲುವಾಗಿ ಮನೆ, ವನ ಇತ್ಯಾದಿ ಅನುಕೂಲವಾದ ಬೇಕಾದ ಸ್ಥಳವನ್ನು ನಿರ್ಧರಿಸಬಹುದು ಆದರೆ ಆ ಸ್ಥಾನವು ಜನರು ಹೋಗು-ಬರುವಂಥದೂ, ವಿವಿಧ ಸಪ್ಪಳ, ಗೊಂದಲಗಳು ಕೇಳಬಾರದಂಥದೂ ಇರಬೇಕು. ಅದರಂತೆ ಇಲಿ, ಗುಂಗಾಡು, ಇಣಚಿ ಮೊದಲಾದವುಗಳಿಂದಲೂ ತೊಂದರೆ ಒದಗುವಂಥದು ಇರಕೂಡದು ಇಷ್ಟೇ ಅಲ್ಲ, ನಿರಾಕುಲತೆಯಿಂದ ಸಾಮಾಯಿಕವನ್ನು ಮುಗಿಸಲಿಕ್ಕೆ ಯಾವ ತರದ ಅಡ್ಡಿ-ಆತಂಕಗಳು ಒದಗದಂಥದ್ದೂ ಇರಬೇಕು. ಇನ್ನು 'ಪ್ರಸನ್ನಧಿಯಾ' ಎಂಬ ಪದವು ಸಾಮಾಯಿಕ ಕ್ರಿಯೆಯು ಪ್ರಸನ್ನ ಚಿತ್ತದಿಂದಲೂ ಉತ್ಸಾಹದಿಂದ ನಡೆಯಬೇಕೆಂದು ಸೂಚಿಸುತ್ತದೆ ಹಾಗೆ ಮಾಡದೆ ಇದೊಂದು ನಿತ್ಯ ನಡೆಯಿಸಬೇಕಾದ ಕರ್ಮ, ಹೇಗಾದರೂ ಮಾಡಿ ಮುಗಿಸಿದರಾಯಿತು, ನಿಯಮ ತಕ್ಕೊಂಡಿದೆ ಎಂದು ಮಾಡುವುದು-ಎಂಬ ಭಾವನೆಯಿಂದ ಮಾಡಿದರೆ ಆ ಸಾಮಾಯಿಕದಿಂದ ಏನೂ ಲಾಭವಾಗುವದಿಲ್ಲ. ತಿರುಗಿ ಅನಾದರದ ದೋಷವು ತಗಲುತ್ತದೆ ಸ ಧ.]

ವಿಶೇಷಾರ್ಥ—ಯಾವ ಸ್ಥಳದಲ್ಲಿ ಮನಸ್ಸಿಗೆ ವಿಕ್ಷೇಪ, ಚಂಚಲತೆಗಳನ್ನು ಉತ್ಪನ್ನ ಮಾಡುವ ಸಾಮಾಗ್ರಿಗಳು ಇರುವದಿಲ್ಲವೋ ಅಂಥ ಸ್ಥಳವು ಸಾಮಾಯಿಕ ಮಾಡಲಿಕ್ಕೆ ಯೋಗ್ಯವಾಗಿದೆ ಅಲ್ಲದೆ ಆ ಸ್ಥಾನದಲ್ಲಿ ಮುಂದೆ ಕಾಣಿಸಿದ ತೊಂದರೆಗಳೂ ಇರಕೂಡದು-ಬಹಳಷ್ಟು ಅಸಂಯಮಿ ಜನರ ಹೋಗು-ಬರುವಿಕೆ, ಹಲವು ಜನರು ನೇರಿ, ವಾದವಿವಾದ ಮಾಡುತ್ತ ಗೊಂದಲ ಮಾಡುವಿಕೆ, ಸ್ತ್ರೀಯರೂ ನಪುಂಸಕರೂ ಬಂದು ಹೋಗುವಿಕೆ, ಸಮೀಪದಲ್ಲಿ ನೃತ್ಯ, ಗಾಯನ, ಹಾಡುವಿಕೆ ಬಾರಿಸುವಿಕೆಗಳು ನಡೆಯುವುದು, ಪಶು-ಪಕ್ಷಿಗಳಿಂದ ಉಪದ್ರವ-ವಾಗುವುದು, ಬಹಳ ಚಳಿಯಾಗುವುದು, ಬಹಳ ಉಷ್ಣತೆ ಇರುವುದು, ಬಿರುಗಾಳಿ ಬೀಸಿ ಧೂಳು ಏಳುವದು, ಮಳೆ ಬರುವ ಸಂಭವವಿರುವುದು, ಗುಂಗಾಡು, ಕ್ರಿಮಿಕೀಟಕ, ಇರುವೆ, ಗೊರಲಿ, ಜೇನ್ನೊಣ, ಹಾವು, ಚೇಳು ಮೊದಲಾದ ಪ್ರಾಣಿಗಳಿಂದ ಬಾಧೆ ಇರುವುದು, ಇಂಥ ಸ್ಥಳಗಳು ಸಾಮಾಯಿಕ ಮಾಡುವದಕ್ಕೆ ಯೋಗ್ಯ ಇರುವದಿಲ್ಲ ಅದು ಏಕಾಂತ ಸ್ಥಳವಿರಲಿ, ನಿರ್ಜನವನವಿರಲಿ, ಹಳೆಯ ತೋಟದೊಳಗಿನ ಮನೆಯಿರಲಿ, ಕೋಣೆಯಿರಲಿ, ದೇವಾಲಯವಿರಲಿ,

ಯಾವುದೋ ಧರ್ಮಾತ್ಮನ ಪ್ರೋಷಧೋಪವಾಸ ಮಾಡುವ ಸ್ಥಾನವಿರಲಿ ಇಂಥದಲ್ಲಿ ಪ್ರಸನ್ನ ಚಿತ್ತದಿಂದ ಸಾಮಾಯಿಕವನ್ನು ಮಾಡಬೇಕು.

ಗಿರಿಶಿಖರದೊಳು ನದೀತೀರದೊಳು ವನತರುಮೂಲಗಳೊಳ್ ತಪಿಸುತ ।
ವರಯೋಗ ನಿಷ್ಠೆಯೊಳಿರುತಿರ್ದ ಜಾಯಂಧರಿಯೋಗಿ ಧರೆಯೊಳೊಪ್ಪಿದನು ॥

—ಬಾಹುಬಲಿ–ನಾಗಕುಮಾರಚರಿತಂ–೩೩–೧೮೧.

ಇನ್ನು ಸಾಮಾಯಿಕದ ಉಳಿದ ಸಾಮಗ್ರಿಗಳನ್ನು ಸೂಚಿಸುವದಕ್ಕಾಗಿ ಸೂತ್ರವನ್ನು ಹೇಳುತ್ತಾರೆ—

ವ್ಯಾಪಾರವೈಮನಸ್ಯಾದ್ವಿನಿವೃತ್ತ್ಯಾಮಂತರಾತ್ಮವಿನಿವೃತ್ತ್ಯಾ ।
ಸಾಮಯಿಕಂ ಬಧ್ನೀಯಾದುಪವಾಸೇ ಚೈಕಭುಕ್ತೇ[1] ವಾ ॥ ೧೦೦ ॥[2]

ಸಾಮಯಿಕಂ ಪ್ರತಿದಿವಸಂ ಯಥಾವದಪ್ಯನಲಸೇನ ಚೇತವ್ಯಮ್ ।
ವ್ರತಪಂಚಕಪರಿಪೂರಣಕಾರಣಮವಧಾನಯುಕ್ತೇನ ॥ ೧೦೧ ॥

ಅನ್ವಯಾರ್ಥ—(ವ್ಯಾಪಾರವೈಮನಸ್ಯಾತ್)-ಆರಂಭಾದಿ ಕ್ರಿಯೆಗಳಲ್ಲಿ ಶಾರೀರಿಕ–ಚಟುವಟಿಕೆಗಳನ್ನು ಮತ್ತು ಮನಸ್ಸಿನ ವ್ಯಗ್ರತೆಯನ್ನು (ವಿನಿವೃತ್ತ್ಯಾಂ) ತ್ಯಾಗಮಾಡಿದ ಮೇಲೆ (ಅಂತರಾತ್ಮವಿನಿವೃತ್ತ್ಯಾ) ಮನಸ್ಸಿನ ವಿಕಲ್ಪವನ್ನು ದೂರಮಾಡಿ (ಉಪವಾಸೇ) ಉಪವಾಸದ ದಿವಸ (ವಾ) ಅಥವಾ (ಏಕಭುಕ್ತೇ ವಾ) ಒಪ್ಪತ್ತು ಊಟಮಾಡುವ ದಿವಸವೂ (ಸಾಮಯಿಕಂ) ಸಾಮಾಯಿಕವನ್ನು (ಬಧ್ನೀಯಾತ್) ಮಾಡಬೇಕು. (ಸಾಮಾಯಿಕಂ) ಸಾಮಾಯಿಕವು (ವ್ರತಪಂಚಕಪರಿಪೂರಣಕಾರಣಮ್) ಐದು ವ್ರತಗಳನ್ನು ಪೂರ್ಣಮಾಡಲಿಕ್ಕೆ ಕಾರಣವಾಗಿದೆ. ಅದಕ್ಕಾಗಿ—(ಪ್ರತಿದಿನಂ) ಪ್ರತಿದಿವಸ (ಅನಲಸೇನ) ಆಲಸ್ಯವಿಲ್ಲದೆ (ಅಪಿ) ಮತ್ತು (ಅವಧಾನಯುಕ್ತೇನ) ಏಕಾಗ್ರ ಚಿತ್ತದಿಂದ (ಯಥಾವತ್) ವಿಧಿಪೂರ್ವಕವಾಗಿ—ಇದನ್ನು—(ಚೇತವ್ಯಂ) ಆಚರಿಸಬೇಕು.

ಅರ್ಥ—ಶಾರೀರಿಕ ಚಟುವಟಿಕೆ ಮನದ ವ್ಯಗ್ರತೆಗಳನ್ನು ತಡೆದು, ಅಂತಃಕರಣದ ವಿಕಲ್ಪವನ್ನು ದೂರಮಾಡಿ, ಉಪವಾಸದ ದಿವಸ ಇಲ್ಲವೆ ಒಂದೇ ಹೊತ್ತು ಊಟಮಾಡುವ ದಿನ ಸಾಮಾಯಿಕವನ್ನು ಮಾಡಬೇಕು. ಆಲಸ್ಯವನ್ನು ಬಿಟ್ಟು ಪ್ರತಿ ದಿನವೂ ಮೇಲೆ ಹೇಳಿದ ಪ್ರಕಾರ ಅದನ್ನು ಬೆಳೆಯಿಸುತ್ತ ಹೋಗಬೇಕು ಯಾಕೆಂದರೆ ಅದು ಐದು ವ್ರತಗಳನ್ನು ಪರಿಪೂರ್ಣಗೊಳಿಸಲಿಕ್ಕೆ ಕಾರಣವಿರುತ್ತದೆ. [ಇಲ್ಲಿ ಸಾಮಾಯಿಕದ ದೃಢತ್ವದ ಕಾರಣಗಳನ್ನು ಸ್ಪಷ್ಟಗೊಳಿಸಲಾಗಿದೆ ಸಾಮಾಯಿಕದಲ್ಲಿ ದೃಢತೆಯು ಬಂದಾಗ ಶರೀರ ಹಾಗೂ ವಚನಗಳ ವ್ಯಾಪಾರವು ನಿಂತು-ಹೋಗುತ್ತದೆ. ಚಿತ್ತದ ಕಲುಷತೆಗಳು ಇಲ್ಲದಂತಾಗುತ್ತವೆ ಅಂತರಂಗದಲ್ಲಿಯ ಅನೇಕ ಪ್ರಕಾರದ ಸಂಕಲ್ಪ ವಿಕಲ್ಪಗಳು ದೂರವಾಗಿ, ಮನಸ್ಸಿನಲ್ಲಿಯೇ ನಡೆಯುವ ಮಾತು-ಕತೆಗಳು ಲುಪ್ತವಾಗುತ್ತವೆ. ಈ ಎಲ್ಲ ಸ್ಥಿತಿಯು ಒದಗಲಿಕ್ಕೆ ಮನಃಪೂರ್ವಕವಾಗಿ ಪೂರ್ಣ ಪ್ರಯತ್ನವು ಬೇಕು. ಇಂಥ ಪ್ರಯತ್ನಕ್ಕಾಗಿ ಉಪವಾಸದ ದಿನವು ಅತ್ಯುಪಯುಕ್ತವಾಗಿದೆ ಏಕಭುಕ್ತಿಯ ದಿನವೂ ಸಹ ಈ ಸಾಧನೆಗೆ ತಕ್ಕದ್ದಾಗಿದೆ ಆದರೂ ಸಾಮಾಯಿಕವನ್ನು ಉಪೋಷಣ ಹಾಗೂ ಏಕಭುಕ್ತಿಯ ದಿನಗಳಲ್ಲಿಯೇ ಆಚರಿಸಬೇಕೆಂದೇನೂ ಇಲ್ಲ. ಪ್ರತಿದಿನವೂ ಆಲಸ್ಯವಿಲ್ಲದೆ ಏಕಾಗ್ರ ಚಿತ್ತದಿಂದ ಮಾಡಬೇಕು. ಯಾಕೆಂದರೆ ಇದರಿಂದ ಅಪೂರ್ಣವಾಗಿರುವ ಅಹಿಂಸಾದಿ ವ್ರತಗಳು ಪೂರ್ಣಗೊಳ್ಳುತ್ತವೆ ಸ. ಧ.]

---

1 'ಚೈಕ ಭಕ್ತೆ' ಎಂಬ ಪಾಠಾಂತರವಿದೆ

2 ಆಯತವರ್ಮನು ಹೇಳುವದು ಹೀಗಿದೆ

ವಚನ—ಸಾಮಾಯಿಕಮೆಂಬುದದನುಪವಾಸದೊಳಂ ಚೈತ್ಯಭಕ್ತಿ ಮುನ್ನಪೇಳ್ದ ಕ್ರಮಮೆ ಮತ್ತಂ ಪನ್ನೆರಡಾವರ್ತನೆಗಳುಮಂ ನಾಲ್ಕು ತಲೆಯೆರಕಮುಂ ಬೇಳ್ಕುಮದೇಕೆಂದೊಡೆ ಕಾಯೋತ್ಸರ್ಗಂ ಕರೋಮಿ ಣಮೋ ಅರಹಂತಾಣಂ ಯೆಂಬಲ್ಲಿಗೆ ಮೂರು ಕೈತಿರುಪುಗೆಮೊಂದು ಪೊಡವಡುಗೆಯುಮಕ್ಕುಂ ಥೋಸಾಮಿ ಹಂ ಜಿಣವರೆಯೆಂದು ಕೈಯ್ಯನೆತ್ತಿಕೊಂಡಲ್ಲಿ ಮೂರಾವರ್ತನಮುಂ ಒಂದು ತಲೆಯೆರಕಮುಮಕ್ಕುಂ ಸಿದ್ಧಾ ಸಿದ್ಧಿಂ ಮಮ ದಿಸಂತು ಯೆಂಬಲ್ಲಿ ಮೂರಾವರ್ತನಮೊಂದು ತಲೆಯೆರಕಮುಕ್ಕುಮೀಯಂದದಿಂ ನಾಲ್ಕು ಕಾಯೋತ್ಸರ್ಗಮನಿರ್ದು ದೇವತಾಸ್ತವನಮಂ ನಿರ್ವರ್ತಿಸಿ ಗುರುಗಳಂ ಬಂಧಿಸಿ.

ವಿಶೇಷಾರ್ಥ — ಸಾಮಾಯಿಕ ಮಾಡುವಾಗ ಮನಸ್ಸಿನ ವಿಕಲ್ಪವನ್ನು ಬಿಡಬೇಕು. ಸಾಮಾಯಿಕ ಮಾಡುವ ವಿಷಯದಲ್ಲಿ ಸಿದ್ಧರಾದ ಶ್ರಾವಕರು ಸಂಪೂರ್ಣವಾಗಿ ಆರಂಭಾದಿ ಪಾಪಕ್ರಿಯೆಗಳನ್ನು ತ್ಯಾಗಮಾಡಬೇಕು .ಮನಸ್ಸಿನ ವಿಕಲ್ಪವನ್ನು ಬಿಟ್ಟು ಸಾಮಾಯಿಕ ಮಾಡಬೇಕು ಕೆಲವರು ಪರ್ವತಿಥಿಯ ನಿಮಿತ್ತದಿಂದ ಉಪವಾಸ ಮಾಡುವರು. ಹಲವರು ಒಪ್ಪತ್ತು ಊಟಮಾಡುವರು ಇಂಥ ದಿನಗಳಲ್ಲಿ ಕೆಲವರು ಸಾಮಾಯಿಕ ಮಾಡುವರು. ಇನ್ನು ಹಲವರು ಪ್ರತಿದಿನವೂ ಸಾಮಾಯಿಕ ಮಾಡುತ್ತಾರೆ ಧೀರ ಸ್ವಲ್ಪ ಜನರು ಮುಂಜಾನೆ, ಮಧ್ಯಾಹ್ನ, ಸಾಯಂಕಾಲ-ಗಳಲ್ಲಿ ಎರಡು ಘಳಿಗೆಯ ಕಾಲ ಮರ್ಯಾದೆಯನ್ನು ಇಟ್ಟುಕೊಂಡು, ಸಾಮಾಯಿಕವನ್ನು ಆಚರಿಸುತ್ತಾರೆ.

ಪರ್ಯಂಕಾಸನದಲ್ಲಿ ನಿಶ್ಚಲವಾಗಿ ಕೂಡಬೇಕು. ಸಾಮಾಯಿಕವನ್ನು ಏಕಾಂತ ಸ್ಥಳದಲ್ಲಿ ಮಾಡಬೇಕು. ಆಗ ನಿಶ್ಚಲವಾಗಿ ಪರ್ಯಂಕಾಸನದಲ್ಲಿ ಕುಳಿತಿರಬೇಕು. ಕಾಯೋತ್ಸರ್ಗಾಸನದಲ್ಲಿಯೂ (ಎದ್ದು ನಿಂತು) ಸಾಮಾಯಿಕ ಮಾಡಬಹುದಾಗಿದೆ. ಸಾಮಾಯಿಕ ಸ್ಥಿತಿಯಲ್ಲಿದ್ದಾಗ ಅಂಗೋಪಾಂಗಗಳು ಚಂಚಲವಾಗಕೂಡದು. ಕಟ್ಟಿಗೆಯಂತೆಯೂ ಅಚಲಮೂರ್ತಿಯಂತೆಯೂ ನಿಶ್ಚಲವಾಗಿರಬೇಕು ಹತ್ತು ದಿಕ್ಕುಗಳಲ್ಲಿ ದೃಷ್ಟಿಯನ್ನು ಹರಿಯಿಸ ಕೂಡದು ತನ್ನ ಅಂಗೋಪಾಂಗಗಳ ಕಡೆಗೂ ನೋಡಬಾರದು. ಯಾರ ಕೂಡ ಮಾತನಾಡಬಾರದು. ಪಂಚೇಂದ್ರಿಯಗಳ ವಿಷಯಗಳಿಂದ ಮನಸ್ಸನ್ನು ಸಂಪೂರ್ಣವಾಗಿ ಸಾವರಿಸಿಕೊಳ್ಳಬೇಕು. ಎಲ್ಲ ಚೇತನ, ಅಚೇತನ ಪದಾರ್ಥಗಳ ಮೇಲಿಂದ ರಾಗ, ದ್ವೇಷ, ಹರ್ಷ, ವಿಷಾದ, ವೈರ, ಸ್ನೇಹ, ಮೊದಲಾದವುಗಳನ್ನು ಬಿಡಬೇಕು ಆ ಕಾಲದಲ್ಲಿ ಎಲ್ಲ ಜೀವಗಳ ವಿಷಯಕ್ಕೆ ಮೈತ್ರೀ ಭಾವವನ್ನು ಇಡಬೇಕು ಉತ್ತಮ ಕ್ಷಮಾ ಧಾರಣಮಾಡಬೇಕು. ಮನಸ್ಸಿನಲ್ಲಿ ಮುಂದಿನ ವಿಚಾರಗಳನ್ನು ತರಬೇಕು.

ಸಾಮಾಯಿಕದ ಹೊತ್ತಿನಲ್ಲಿ ಚಿಂತನದ ಪ್ರಕಾರ—"ನಾನು ಎಲ್ಲ ಜೀವಗಳ ಮೇಲೆ ಕ್ಷಮೆಯನ್ನು ಧಾರಣಮಾಡುತ್ತೇನೆ. ಜಗತ್ತಿನೊಳಗಿನ ಯಾವ ಜೀವದ ಮೇಲೆಯೂ ನನ್ನ ವೈರವಿಲ್ಲ. ನಾನು ಸಂಪಾದಿಸಿದ ಕರ್ಮವೇ ನನಗೆ ವೈರಿಯಾಗಿದ್ದು, ನಾನು ಅಜ್ಞಾನದಿಂದ ಕ್ರೋಧ, ಲೋಭ, ಅಭಿಮಾನಗಳನ್ನು ಧರಿಸಿ, ಕಾರಣವಿಲ್ಲದೆ ವಿಪರೀತ ವಿಚಾರಗಳನ್ನು ಮನಸ್ಸಿನಲ್ಲಿ ತಂದೆನು ನನ್ನ ಅಭಿಮಾನಕ್ಕೆ ಪುಷ್ಟಿಯನ್ನು ಕೊಡದವರು, ನನ್ನ ಸ್ತುತಿಯನ್ನು ಮಾಡದವರು, ನನ್ನ ಕರ್ತವ್ಯವನ್ನು ಹೊಗಳದವರು, ನನಗೆ ಆದರ ಸತ್ಕಾರಮಾಡಿ, ಉಚ್ಚ ಆಸನ ಕೊಡದವರು, ನನ್ನ ದೋಷಗಳನ್ನು ಪ್ರಕಟ ಮಾಡಿದವರು, ನಾನು ಹೇಳಿದಂತೆ ನಡೆಯದವರು, ನನಗೆ ವಸ್ತ್ರ ಭೋಜನಾದಿಗಳನ್ನೂ ಧನ ಧಾನ್ಯಗಳನ್ನೂ ಸಿಗದಂತೆ ಮಾಡಿದವರು ಇಂಥವರೆಲ್ಲರನ್ನು ನಾನು ವೈರಿಗಳೆಂದು ತಿಳಿದೆನು ನನ್ನ ಕಷಾಯ ಬುದ್ಧಿಯಿಂದ ಉತ್ಪನ್ನವಾದ ವೈರ ಬುದ್ಧಿಯನ್ನು ಈಗ ಬಿಟ್ಟುಕೊಟ್ಟು, ನಾನು ಕ್ಷಮೆಯನ್ನು ಧಾರಣಮಾಡುತ್ತೇನೆ. ಮತ್ತು ಆ ಎಲ್ಲ ಜೀವಗಳೂ ಸಹ ಅಜ್ಞಾನದಿಂದ ಕಷಾಯಗಳ ಸ್ವಾಧೀನವಾದುದನ್ನು ತಿಳಿದು, ನನ್ನನ್ನು ಕ್ಷಮಿಸಬೇಕು ಈ ಪ್ರಕಾರ ವೈರ–ವಿರೋಧದ ಬುದ್ಧಿಯನ್ನು ಬಿಟ್ಟು, ನಾನು ಎಲ್ಲರ ವಿಷಯದಲ್ಲಿ ಸಾಮ್ಯಭಾವವನ್ನು ಧರಿಸಿ, ಸಾಮಾಯಿಕದ ಅಂಗೀಕಾರವನ್ನು ಮಾಡುವೆ. ನಾನು ಮಾಡಿಕೊಂಡ ಎರಡು ಘಳಿಗೆಯ (೪೮ ನಿಮಿಷಗಳ) ಅವಧಿಯಲ್ಲಿ ಮನ–ವಚನ–ಕಾಯಗಳಿಂದ ಎಲ್ಲ ಪಂಚೇಂದ್ರಿಯಗಳ ವಿಷಯ ಮತ್ತು ಆರಂಭಗಳನ್ನು ತ್ಯಾಗಮಾಡಿ ಪಂಚಪರಮೇಷ್ಠಿ-ಗಳ ಧ್ಯಾನಮಾಡುತ್ತ ಇರುವೆ " ಈ ಪ್ರಕಾರ ಸಾಮಾಯಿಕದ ವೇಳೆಯಲ್ಲಿ ಪ್ರತಿಜ್ಞೆಯನ್ನು ಮಾಡಿ, ಪಂಚನಮಸ್ಕಾರಗಳ ಅಕ್ಷರಗಳನ್ನು ಧ್ಯಾನಿಸುತ್ತ, ಅವರ ಗುಣಗಳನ್ನು ಸ್ಮರಿಸುತ್ತ, ಜಿನೇಶ್ವರನ ಪ್ರತಿಬಿಂಬದ ಚಿಂತನ ಮಾಡುತ್ತ ಇರಬೇಕು. ಮತ್ತು ತಮ್ಮ ಜ್ಞಾನ–ದರ್ಶನ–ಸ್ವಭಾವದಿಂದ ರಾಗ–ದ್ವೇಷಗಳು ಭಿನ್ನವಾಗಿವೆ. ಎನ್ನುವ ವಿಚಾರ ಮಾಡಬೇಕು

ಅನುಪ್ರೇಕ್ಷೆ ಮತ್ತು ಹದಿನಾರು ಕಾರಣ ಭಾವನೆಗಳ ಚಿಂತನೆ—ಹನ್ನೆರಡು ಅನುಪ್ರೇಕ್ಷೆ ಹಾಗೂ ಹದಿನಾರು ಕಾರಣ ಭಾವನೆಗಳನ್ನು ನೆನೆಯಬೇಕು. ನಾಲ್ಕು ಮಂಗಲ ಪದ, ನಾಲ್ಕು ಉತ್ತಮ ಪದ, ನಾಲ್ಕು ಶರಣ ಪದಗಳನ್ನು ಸ್ಮರಿಸಬೇಕು ಇಪ್ಪತ್ತುನಾಲ್ಕು ತೀರ್ಥಂಕರರನ್ನು ಸ್ತುತಿಸಬೇಕು ಪಂಚಗುರುಗಳ ಸ್ತವನಮಾಡಬೇಕು. ಆ ಸ್ತುತಿಗಳ ಅರ್ಥದ ಮೇಲೆ ಏಕಾಗ್ರತೆಯಿಂದ ವಿಚಾರಮಾಡಬೇಕು ಪ್ರತಿಕ್ರಮಣ ಮಾಡುತ್ತಿರುವಾಗ ಹಗಲೆಲ್ಲ ಸಂಭವಿಸಿದ ದೋಷಗಳನ್ನು ಸಂಜೆಗೆ ವಿಚಾರಮಾಡಬೇಕು ರಾತ್ರಿಯಲ್ಲಿ ಆದ ದೋಷಗಳನ್ನು ಪ್ರಾತಃಕಾಲದಲ್ಲಿ ವಿಚಾರಿಸಬೇಕು ಈ ಮಾನವ ಜನ್ಮವು ದುರ್ಲಭವಾದುದು ಅದರಲ್ಲೂ ಪರಮವೀತರಾಗ ಸರ್ವಜ್ಞನು ಉಪದೇಶಿಸಿದ ಧರ್ಮವು ಪ್ರಾಪ್ತವಾದುದು ಅತ್ಯಂತ ಮಹತ್ವವುಳ್ಳುದಾಗಿದೆ ಇವು ಅನಂತಕಾಲದಲ್ಲಿ ಈಗ ನನಗೆ ಪ್ರಾಪ್ತವಾಗಿವೆ

ಈ ವಿಷಯದಲ್ಲಿ ತಾನು ಧನ್ಯನೆಂದು ಭಾವಿಸಿ, ಇದರಲ್ಲಿಯ ಒಂದು ಪದವೂ ಸಹ ಧರ್ಮ ಚಿಂತನವಿಲ್ಲದೆ ವ್ಯರ್ಥಹೋಗ ಕೂಡದೆಂದು ಯಾವಾಗಲೂ ಮನಸ್ಸಿನಲ್ಲಿ ವಿಚಾರ ಮಾಡುತ್ತಿರಬೇಕು.

ದಿನಾಲು ಪಾಪಪುಣ್ಯಗಳ ಲೆಕ್ಕ ನೋಡಬೇಕು. ಇಂದು ಜಿನದರ್ಶನ, ಸ್ತವನ, ಪೂಜನ, ಧ್ಯಾನ, ಧಾರಣಾ, ಧರ್ಮಚಿಂತನ, ಸ್ವಾಧ್ಯಾಯ, ಸತ್ಪಾತ್ರದಾನ ಮೊದಲಾದ ಕ್ರಿಯೆಗಳಲ್ಲಿ ತನ್ನ ಹೊತ್ತು ಎಷ್ಟು ಹೋಯಿತು ಮತ್ತು ವ್ಯಾಪಾರಾರಂಭಕ್ರಿಯಾ, ಇಂದ್ರಿಯಗಳ ವಿಷಯ ಪೋಷಕಕ್ರಿಯಾ, ವ್ಯಾವಹಾರಿಕ ವಿಕಥಾ, ಪ್ರಮಾದ, ನಿದ್ರೆ, ಕಾಮಸೇವನ, ಭೋಜನ, ಪಾನ ಮೊದಲಾದ ಕ್ರಿಯೆಗಳಲ್ಲಿ ಎಷ್ಟು ಸಮಯ ಹೋಯಿತು? ಇದನ್ನು ತನ್ನ ಮನಸ್ಸಿನಲ್ಲಿ ವಿಚಾರಮಾಡುತ್ತಿರಬೇಕು ತನ್ನ ಮನ-ವಚನ-ಕಾಯಗಳ ಪ್ರವೃತ್ತಿಯು ರಾಗಾದಿಗಳಿಂದ ಕೂಡಿದ ಸಂಸಾರದ ಕಡೆಗೆ ಹೆಚ್ಚಾಗಿದೆಯೋ ಅಥವಾ ಪರಮಾರ್ಥದ ಕಡೆಗೆ ಹೆಚ್ಚಾಗಿದೆಯೋ ಎಂಬುದನ್ನು ನೋಡಬೇಕು ಈ ಪ್ರಕಾರ ಇಡೀ ದಿನ ತಾನು ಮಾಡಿದ ಕಾರ್ಯದ ಗುಣಾವಗುಣಗಳ ಅಳತೆಯನ್ನು ಸಾಯಂಕಾಲ ಮಾಡಬೇಕು. ರಾತ್ರಿಯಲ್ಲಿ ಸಂಭವಿಸಿದ ಕಾರ್ಯಗಳ ಚಿಂತನೆಯನ್ನು ಬೆಳಗಿನಲ್ಲಿ ಮಾಡಬೇಕು. ಯಾಕೆಂದರೆ ವ್ಯವಹಾರದಲ್ಲಿ ಯಾವಾಗಲೂ ನಾವು ಹೀಗೆ ನೋಡುತ್ತೇವೆ—ಯಾವನು ಐದು ರೂಪಾಯಿಗಳಷ್ಟು ಮೂಲಧನವನ್ನು ಹಾಕಿ, ಉದ್ಯೋಗವನ್ನು ಮಾಡುತ್ತಾನೋ ಅವನೂ ಸಹ ಪ್ರತಿದಿನ ಸಾಯಂಕಾಲದಲ್ಲಿ ತನ್ನ ವ್ಯವಹಾರದ ಲಾಭ-ಹಾನಿಗಳ ಲೆಕ್ಕವನ್ನು ನೋಡುತ್ತಾನೆ. ಅಂದ ಮೇಲೆ ಪೂರ್ವಪುಣ್ಯದ ಪ್ರಭಾವದಿಂದ ಈಗ ಮಾನವ ಜನ್ಮ ಲಭಿಸಿದೆ, ಉತ್ತಮ ಧರ್ಮ, ಸತ್ಸಂಗತಿ, ಇಂದ್ರಿಯ ಪರಿಪೂರ್ಣತೆಗಳೆಂಬ ಮೂಲಧನವು ಸಾಕಷ್ಟು ದೊರೆತಿದೆ. ಇಂಥ ಧನದಿಂದ ವ್ಯವಹಾರ ಮಾಡುವ ಜ್ಞಾನಿ ಪುರುಷನು ತನ್ನ ಆತ್ಮದ ಹಾನಿ ವೃದ್ಧಿಗಳನ್ನು ನೋಡದೆ ಹೇಗೆ ಇದ್ದಾನು? ಒಂದು ವೇಳೆ ಅವನು ತನ್ನ ಲಾಭ ಹಾನಿಗಳನ್ನು ನೋಡದೆ ಇದ್ದರೆ ಪರಲೋಕದಿಂದ ತಂದ ಅವನ ಧರ್ಮ ಧನವು ನಾಶವಾಗಿ ಹೋದೀತು. ಮತ್ತು ಅವನಿಗೆ ನರಕ ತಿರ್ಯಂಚಾದಿ ಅಥವಾ ನರಕ ನಿಗೋದಾದಿ ದುರ್ಗತಿಗಳಲ್ಲಿ ಬೀಳಬೇಕಾದೀತು ನಷ್ಟವನ್ನು ಹೊಂದಬೇಕಾಗುವದು ಅದಕ್ಕಾಗಿ ಧರ್ಮಧನದ ವೃದ್ಧಿಗಾಗಿ, ಒಂದು ದಿವಸದಲ್ಲಿ ಎರಡು ಸಲವಾದರೂ ತೀರ ಕಡಿಮೆಯೆಂದರೆ ಧರ್ಮಧನದ ಸಂರಕ್ಷಣದ ಎಚ್ಚರಿಕೆಯನ್ನು ತಕ್ಕೊಳ್ಳಲಿಕ್ಕೆ ಬೇಕು.

ಪಾಪಕ್ರಿಯೆಗಳಿಗೆ ಪಶ್ಚಾತ್ತಾಪ ಪಡಬೇಕು. ಕಷಾಯಗಳಿಂದ, ತನ್ನ ಮನ-ವಚನ-ಕಾಯಗಳ ಯೋಗದಿಂದ ದುಷ್ಟ ಪ್ರವೃತ್ತಿಯು ಆಗಿದ್ದರೆ ಅದರ ಸಲುವಾಗಿ ಮೇಲಿಂದ ಮೇಲೆ ತನ್ನ ನಿಂದೆಯನ್ನು ಮಾಡಿಕೊಳ್ಳುತ್ತಿರ-ಬೇಕು ಅದು ಹೇಗೆಂದರೆ—"ಅಯ್ಯಯ್ಯೋ ನಾನಿಂದು ಕೆಟ್ಟ ವಿಚಾರಗಳನ್ನು ಮಾಡಿದೆ ಶರೀರದಿಂದ ದುಷ್ಟ ಕ್ರಿಯೆಗಳನ್ನು ಮಾಡಿದೆ. ಮಾತಿನಲ್ಲಿ ನಿಂದ್ಯ ಹಾಗೂ ಬೀಭತ್ಸ ಶಬ್ದಗಳನ್ನು ಉಚ್ಚರಿಸಿದೆ. ಇವುಗಳ ಯೋಗದಿಂದ ಅಶುಭ ಕರ್ಮಗಳ ಬಂಧನವಾಯಿತು. ಧರ್ಮಕ್ಕೆ ದೋಷ ತಗುಲಿತು ನನ್ನ ಅಪಕೀರ್ತಿಯಾಯಿತು. ಆ ಕರ್ಮಗಳ ನೆನಪು ಆಗುವದರಿಂದ ನನಗೆ ಬಹಳ ಕೆಡಕೆನಿಸುತ್ತದೆ. ನನ್ನ ಹೃದಯವು ಪಶ್ಚಾತ್ತಾಪದಿಂದ ಸುಡುತ್ತಿದೆ. ಮೋಹಕರ್ಮವು ಬಹಳ ಬಲಿಷ್ಠವಾಗಿದೆ. ನನ್ನ ದುಷ್ಟ ಪರಿಣಾಮದಿಂದ ಪಾಪವು ಉತ್ಪನ್ನವಾಗುತ್ತದೆ ಅದರಿಂದ ನಾನು ದುರ್ಗತಿಗೆ ಹೋಗುತ್ತೇನೆ. ಇದರಿಂದ ಯಾವ ಪ್ರಯೋಜನವೂ ಸಿದ್ಧಿಗೆ ಹತ್ತುವದಿಲ್ಲ ಆಯುಷ್ಯವು ಕ್ಷಣಭಂಗುರವಾಗಿದೆ. ನಾನು ಮಾಡಿದ ಕರ್ಮವನ್ನು ನಾನೇ ಭೋಗಿಸಬೇಕಾಗುವದು ಇದನ್ನೆಲ್ಲ ನಾನು ತಿಳಿಯುತ್ತೇನೆ. ಇಷ್ಟೇ ಅಲ್ಲ, ನಾನು ಹಗಲಿರುಳೂ ಇವುಗಳ ದುಷ್ಪರಿಣಾಮಗಳ ಬಗ್ಗೆ ವಿಚಾರಮಾಡುತ್ತಲೇ ಇರುವೆ. ಆದರೂ ಸಹ ಇನ್ನೂ ನನ್ನ ಮನಸ್ಸಿನೊಳಗಿನ ಅನ್ಯಜೀವಗಳ ವಿಷಯದಲ್ಲಿರುವ ವೈರವು ಹೋಗಿಲ್ಲ; ವಿಷಯಗಳ ಮೇಲಿನ ಪ್ರೇಮವು ನಷ್ಟವಾಗಿಲ್ಲ ಇದು ಪ್ರಬಲವಾದ ಮೋಹದ ಪ್ರಭಾವವಾಗಿದೆ. ಈ ಮೋಹಕರ್ಮದ ನಾಶಮಾಡಿ, ಗೆದ್ದಂಥ ಪಂಚಪರಮೇಷ್ಠಿಗಳನ್ನು ನಾನು ಸ್ಮರಣಮಾಡುತ್ತೇನೆ. ಆ ಯೋಗದಿಂದ, ಮೋಹಕರ್ಮದಿಂದ ಉತ್ಪನ್ನವಾದ ರಾಗದ್ವೇಷಾದಿ ಭಾವ ಮತ್ತು ಕಾಮಾದಿ ವಿಕಾರ, ಕ್ರೋಧ, ಮಾನ, ಮಾಯಾ, ಲೋಭಾದಿಗಳು ಇಲ್ಲದಂತೆ ಆದಾವು. ಯಾವ ಪ್ರಕಾರ ಜಿನೇಂದ್ರ ದೇವನು ವೀತರಾಗತ್ವವನ್ನು ಸಂಪಾದಿಸಿಕೊಂಡಿರುವನೋ ಹಾಗೆಯೇ ನನಗೂ ಸಹ ಪ್ರಾಪ್ತವಾಗಲಿ. ಇದೇ ಅಭಿಪ್ರಾಯದಿಂದ ನಾನು ಶರೀರದ ಮೇಲಿನ ಮಮತ್ವವನ್ನು ಬಿಟ್ಟು, ಪಂಚಪರಮೇಷ್ಠಿಗಳ ಧ್ಯಾನ ಮಾಡುತ್ತಲಿರುವೆ.

ತ್ರಸಸ್ಥಾವರ ಹಿಂಸೆಗಳ ಬಗ್ಗೆ ಪಶ್ಚಾತ್ತಾಪ—ಈ ಮೊದಲಿನ ಕಾಲದಲ್ಲಿ ಅಜ್ಞಾನದಿಂದ ನೆಲವನ್ನು ಅಗಿಯುವುದೇ ಮೊದಲಾದ ಕ್ರಿಯೆಗಳಿಂದ ನಾನು ಪೃಥ್ವೀಕಾಯದ ಘಾತಮಾಡಿರಬೇಕು, ಸೋಸುವುದು, ಪೀಡಿಸುವುದು, ಜಳಕ ಮಾಡುವುದು ಇವೇ ಮೊದಲಾದ ಕ್ರಿಯೆಗಳಿಂದ ಜಲಕಾಯಿಕ ಜೀವಗಳ ಘಾತಮಾಡಿರಬೇಕು;

ಆರಿಸುವುದು, ಹೊತ್ತಿಸುವುದು, ಹೊಡೆಯುವುದು, ಇತ್ಯಾದಿ ಕ್ರಿಯೆಗಳಿಂದ ಅಗ್ನಿಕಾಯ ಜೀವಗಳ ಕೊಲೆಯಾಗಿರ-ಬೇಕು; ಬೀಸಣಿಕೆ ಮೊದಲಾದವುಗಳಿಂದ ಗಾಳಿ ಹಾಕಿಕೊಳ್ಳುವುದರಿಂದ ವಾಯುಕಾಯ ಜೀವಗಳ ಘಾತ ಮಾಡಿರಬೇಕು; ಗಡ್ಡೆ, ಬೇರು, ಟೊಂಗೆ, ಎಲೆ, ಹೂವು, ಹುಲ್ಲು, ಪತ್ರಿ, ಕಾಯಿ ಮೊದಲಾದವುಗಳನ್ನು ಹರಿದು ಇಲ್ಲವೆ ಗಿಡಗಂಟೆಗಳನ್ನು ಕಿತ್ತಿ ಕಡಿದು, ಕೊಯ್ದು, ಕುದಿಸಿ ಇತ್ಯಾದಿ ಕ್ರಿಯೆಗಳಿಂದ ವನಸ್ಪತಿಕಾಯ ಜೀವಗಳ ಹಿಂಸೆಯನ್ನು ಮಾಡಿರಬೇಕು; ಈ ಎಲ್ಲ ಕ್ರಿಯೆಗಳಿಂದ ಉತ್ಪನ್ನವಾದ ಪಾಪಕರ್ಮದ ನಾಶವು ಪರಮೇಷ್ಠಿಗಳ ಜಾಪ್ಯದ ಪ್ರಭಾವದಿಂದ ಆಗಲಿ; ಮತ್ತು ಆ ಪರಮೇಷ್ಠಿಯ ಧ್ಯಾನದ ಪ್ರಭಾವದಿಂದ ನನ್ನ ಪರಿಣಾಮವು ಷಟ್‌ಕಾಯ ಜೀವದ ಘಾತದಿಂದ ಪರಾಙ್ಮುಖವಾಗಿ ಸಂಯಮ ಭಾವದ ಪ್ರಾಪ್ತಿಯಾಗಲಿ ಹೀಗೆ ಚಿಂತನ ಮಾಡಬೇಕು ಇದೇ ಪ್ರಕಾರ "ನನ್ನ ಹೋಗು-ಬರುವ ಕ್ರಿಯೆಯಲ್ಲಿ, ಕೂಡ್ರುವುದರಲ್ಲಿ, ಏಳುವುದರಲ್ಲಿ, ಸಂಕೋಚ ವಿಸ್ತಾರಾದಿ ಕ್ರಿಯೆಗಳಲ್ಲಿ, ಊಟ ತಿನಿಸುಗಳಲ್ಲಿ, ಪದಾರ್ಥಗಳನ್ನು ಎತ್ತುವುದರಲ್ಲಿ, ಇಡುವುದರಲ್ಲಿ, ಒಲೆಯನ್ನು ಹೊತ್ತಿಸುವುದರಲ್ಲಿ, ನೆಲ ಸಾರಿಸುವುದರಲ್ಲಿ ನೀರು ಹೊಡೆಯುವುದೇ ಮೊದಲಾದ ಕ್ರಿಯೆಗಳಲ್ಲಿ, ಸೇವಾ, ಕೃಷಿ, ವಾಣಿಜ್ಯ, ಲೇಖನ, ಶಿಲ್ಪ ಮೊದಲಾದುಗಳಿಂದ ಉಪಜೀವನವನ್ನು ಸಾಗಿಸುವುದರಲ್ಲಿ, ಗಾಡಿ, ಕುದುರೆ ಮೊದಲಾದ ವಾಹನಗಳನ್ನು ಇಡುವುದರಲ್ಲಿ ನನ್ನ ಕಡೆಯಿಂದ ಯತ್ನಾಚಾರಪೂರ್ವಕ ಪ್ರವೃತ್ತಿಯು ಆಗದ್ದರಿಂದ ದ್ವೀಂದ್ರಿಯ, ತ್ರೀಂದ್ರಿಯ, ಪಂಚೇಂದ್ರಿಯ ಜೀವಗಳ ಕೊಲೆಯಾಗಿದ್ದೀತು. ಅದು ಮಿಥ್ಯೆಯಾಗಲಿ"

ಆರಂಭಾದಿಕ ವ್ಯವಹಾರಗಳಲ್ಲಿ ಅನೇಕ ಪ್ರಕಾರದ ಪಾಪಕ್ರಿಯೆಗಳಿಂದ ಕಲ್ಯಾಣವಾಗುವದಿಲ್ಲ ಸಂಸಾರ-ದಲ್ಲಿ ಭ್ರಮಣಮಾಡಬೇಕಾಗುತ್ತದೆ. ನರಕವು ಪ್ರಾಪ್ತವಾಗುತ್ತದೆ ಏಕೇಂದ್ರಿಯ ತಿರ್ಯಂಚ ಯೋನಿಯಲ್ಲಿ ಅನಂತಾನಂತ ಕಾಲದವರೆಗೆ ಹಸಿವು, ನೀರಡಿಕೆ, ಕೊಲೆ, ಪೆಟ್ಟು, ಕಟ್ಟುವಿಕೆ, ಕಡಿಯುವಿಕೆಯೇ ಮೊದಲಾದ ಬಾಧೆಗಳಿಗೆ ಒಳಗಾಗಿ, ಅನೇಕ ದುಃಖಗಳನ್ನು ಭೋಗಿಸಬೇಕಾಗುತ್ತದೆ. ಅದಕ್ಕಾಗಿ ಇಂಥ ಆರಂಭಾದಿಗಳಲ್ಲಿ ಸಂಭವಿಸುವ ಹಿಂಸೆಯಿಂದ ಉತ್ಪನ್ನವಾದ ಕರ್ಮದ ನಾಶವಾಗುವದಕ್ಕಾಗಿಯೂ ಮುಂದೆ ಆರಂಭೀ ಹಿಂಸೆಯು ಸಂಭವಿಸಬಾರದೆಂದೂ ಈಗ ನಾನು ಪಂಚ-ನಮಸ್ಕಾರಪದಗಳಿಗೆ ನಾನು ಶರಣುಹೋಗುತ್ತೇನೆ

ಅಸತ್ಯವಚನಕ್ಕೆ ಪಶ್ಚಾತ್ತಾಪ—ಅಜ್ಞಾನದಿಂದ ಅಥವಾ ಪ್ರಮಾದದಿಂದ ನಾನು ಅಸತ್ಯವಚನವನ್ನು ಉಚ್ಚರಿಸಿದೆ, ಬೈದೆ, ಬೀಭತ್ಸ ಭಾಷಣಮಾಡಿದೆ ಮನಸ್ಸಿಗೆ ಹತ್ತುವಂಥ ಮಾತನ್ನಾಡಿದೆ ಕರ್ಕಶ ಹಾಗೂ ಕಠೋರ ವಚನಗಳನ್ನು ಉಚ್ಚರಿಸಿದೆ. ಕೆಲವರಿಗೆ ಕಳವಿನ, ಹಲವರಿಗೆ ವ್ಯಭಿಚಾರದ ಕಲಂಕವನ್ನು ಹಚ್ಚಿದೆ ಧರ್ಮಾತ್ಮಾ, ಜ್ಞಾನಿ, ತಪಸ್ವಿ, ಶೀಲವಾನ್ ಪುರುಷರ ಮೇಲೆ ದೋಷಾರೋಪ ಮಾಡಿದೆ ಅವರ ನಿಂದೆಮಾಡಿದೆ. ದೇವ-ಗುರು-ಧರ್ಮಗಳನ್ನು ನಿಂದಿಸಿದೆ. ಮಿಥ್ಯಾಧರ್ಮವನ್ನು ಪೋಷಿಸಿದೆ ಹಿಂಸೆಯ ಪ್ರವೃತ್ತಿಯಾಗುವಂತೆ ಉಪದೇಶಮಾಡಿದೆ ಮಿಥ್ಯಾಧರ್ಮದ ಪ್ರಸಾರವಾಗಲೆಂದು ಪ್ರಯತ್ನಿಸಿದೆ. ಸ್ತ್ರೀಕಥೆ, ರಾಜಕಥೆ, ಭೋಜನಕಥೆ ದೇಶದ ಕಥೆ ಇತ್ಯಾದಿ ವಿಕಥೆಗಳನ್ನು ಹೇಳಿ, ಘೋರ ಪಾಪದ ಪ್ರತಿಪಾದನೆಯಲ್ಲಿ ನನ್ನ ವಾಣಿಯನ್ನು ವ್ಯಯಮಾಡಿದೆ ಈ ಎಲ್ಲ ಕಾರ್ಯಗಳ ಬಗ್ಗೆ ನಾನು ಈಗ ಪಶ್ಚಾತ್ತಾಪ ಪಡುವೆ ನಾನು ಘೋರಕರ್ಮಗಳನ್ನು ಕಟ್ಟಿಕೊಂಡಿರುವೆ ಅದರ ಫಲವು ನರಕದ ದುಃಖವಾಗಿದೆ, ಮತ್ತು ಪಶುಗತಿಯೊಳಗಿನ ದುಃಖವನ್ನು ಅನಂತಕಾಲದ ವರೆಗೆ ಭೋಗಿಸಬೇಕಾಗುವದು ಅಲ್ಲದೆ ಅನಂತಕಾಲದ ತನಕ ಕಿವುಡ, ಕುರುಡ, ಮೂಕ, ನೀಚ ಕುಲೋತ್ಪನ್ನನಾಗಿ ಬಡತನವನ್ನು ಭೋಗಿಸಬೇಕಾಗುವುದು. ಅದಕ್ಕಾಗಿ ಈಗಾದರೂ ಅಸತ್ಯ ಮತ್ತು ದುಷ್ಟ ವಚನಗಳನ್ನು ಮಾತನಾಡು-ವದನ್ನು ತ್ಯಜಿಸಿ ಪಾಪದ ನಾಶಮಾಡುವದಕ್ಕಾಗಿಯೂ ಇನ್ನು ಮುಂದೆ ಇಂಥ ದುಷ್ಟ ವಚನಗಳ ಪ್ರವೃತ್ತಿಯು ತಿರುಗಿ ಎಂದೂ ಆಗಬಾರದೆಂದು ಪಂಚನಮಸ್ಕಾರ ಪದಗಳಿಗೆ ಶರಣು ಹೋಗಿರುವೆ.

ಪರವಸ್ತುವನ್ನು ಎತ್ತಿಹಾಕಿದುದಕ್ಕೆ ಪಶ್ಚಾತ್ತಾಪ—ಅಜ್ಞಾನದಿಂದ ಅಥವಾ ಪ್ರಮಾದದಿಂದ ಈ ಮೊದಲು ನಾನು ಅನ್ಯರ ವಸ್ತುವನ್ನು ಅವರು ಕೊಡದೆಯೂ ತಕ್ಕೊಂಡಿರಬೇಕು, ಭೂಮಿಯ ಮೇಲೆ ಬಿದ್ದುದನ್ನು ಎತ್ತಿ ಹಾಕಿರಬಹುದು, ಯಾರಾದರೂ ಮರೆತುಹೋದ ದ್ರವ್ಯವನ್ನು ತಕ್ಕೊಳ್ಳುವ ಇಚ್ಛೆಯನ್ನು ಮಾಡಿರಬೇಕು, ಕಪಟತನದಿಂದ ಯಾರಿಗಾದರೂ ವಸ್ತುಗಳನ್ನು ಬಿಸಾಡಲು ಹೇಳಿರಬಹುದು, ಒತ್ತಾಯದಿಂದ ಇನ್ನೊಬ್ಬರ ದ್ರವ್ಯವನ್ನು ಇಟ್ಟುಕೊಂಡು, ತಿರುಗಿ ಅವರಿಗೆ ಕೊಡದೆ ಹೋಗಿರಬಹುದು, ಅವರ ದ್ರವ್ಯ ಅವರಿಗೆ ಕೊಡಲಿಕ್ಕೂ ನಾನು ಅನ್ಯರಿಗೆ ಬಹಳ ಕಷ್ಟಕೊಟ್ಟಿರಬೇಕು. ಸ್ವಂತ ಮನಸ್ಸನ್ನೂ ನೋಯಿಸಿಕೊಂಡಿರಬೇಕು, ಇದರಿಂದ ಘೋರ ಪಾಪದ

ಬಂಧವಾಗಿದೆ ಅದರ ಫಲವು ನರಕತಿರ್ಯಂಚಾದಿ ಗತಿಗಳಲ್ಲಿ ಅನಂತ ಕಾಲದ ವರೆಗೆ ಭ್ರಮಣ ಮತ್ತು ಬಡತನದಿಂದ ಬಳಲಿ ದುಃಖ ಭೋಗಿಸುವದು ಇವು ಪ್ರಾಪ್ತವಾಗಿವೆ. ಅದಕ್ಕಾಗಿ ಕಳವು ಮಾಡುವುದರಿಂದ ಪ್ರಾಪ್ತವಾದ ಕರ್ಮದ ನಾಶವಾಗಬೇಕೆಂದೂ ಇನ್ನು ಮುಂದೆ ನನಗೆ ಅವರು ಕೊಡದ ಹೊರತಾಗಿ ಪರಧನವನ್ನು ತೆಕ್ಕೊಳ್ಳುವ ಇಚ್ಛೆಯಾಗ-ಬಾರದೆಂದೂ ಪಂಚಪರಮೇಷ್ಠಿ ಪದಗಳ ಚಿಂತನಮಾಡಿ, ಅವರಿಗೆ ಶರಣು ಹೋಗುವೆ

**ಪರಸ್ತ್ರೀ ದೋಷದ ಆಲೋಚನೆ**—ಪರಸ್ತ್ರೀಯ ಸ್ವರೂಪ, ವಸ್ತ್ರಾಭರಣ, ಅಲಂಕಾರಾದಿಗಳ ಕಡೆಗೆ ರಾಗಭಾವದಿಂದ ನೋಡುವ ಇಚ್ಛೆಯನ್ನು ಮಾಡಿದುದರಿಂದಲೂ ಪ್ರತ್ಯಕ್ಷ ನೋಡುವುದರಿಂದಲೂ ಅವಳೊಡನೆ ಸಂಗಮಾಡುವುದರಿಂದಲೂ ಎಂಥ ಭಯಂಕರ ಪಾಪವನ್ನು ಸಂಪಾದಿಸಿದೆನೋ ಅದರ ಫಲವನ್ನು ಅನಂತಕಾಲದ ವರೆಗೆ ನರಕಗತಿಯಲ್ಲಿ ಕಾಮರೂಪದ ಅಗ್ನಿಯಿಂದ ದಗ್ಧವಾಗುವುದು, ಅಸಂಖ್ಯಾತ ಜನ್ಮಗಳಲ್ಲಿ ಕಾಮವೇದನೆಯಿಂದ ಪೀಡಿತರಾಗುವುದು, ದಾರಿದ್ರ್ಯಾದಿ ದುಃಖಗಳನ್ನು ಭೋಗಿಸುವುದು ಮತ್ತು ಅನೇಕ ಪ್ರಕಾರದ ರೋಗಗಳಿಂದ ಶರೀರವು ತುಂಬಿಕೊಂಡಿರುವುದು ಮೊದಲಾದವುಗಳು ಪ್ರಾಪ್ತವಾಗುವಂಥವಿವೆ ಅದಕ್ಕಾಗಿ ಪರಸ್ತ್ರೀಯರ ಇಚ್ಛೆಯಿಂದ ಉಂಟಾದ ಪಾಪಕರ್ಮದ ನಾಶಕ್ಕಾಗಿಯೂ ಇನ್ನು ಮುಂದೆ ಪರಸ್ತ್ರೀ ಭೋಗದ ಇಚ್ಛೆಯು ಆಗಕೂಡದೆಂದೂ ನಾನು ಪಂಚ ಪರಮಗುರುಗಳ ಪಂಚನಮಸ್ಕಾರ ಪದಗಳ ಧ್ಯಾನಮಾಡುವೆ.

**ಪರಿಗ್ರಹ ಆಲೋಚನೆ**—ನಾನು ಮಹಾ ಅಜ್ಞಾನಿ. ನನ್ನದು ಪರಿಗ್ರಹಗಳ ಮೇಲೆ ತೀರ ಮಮತೆ. ನಾನು ಶರೀರ ಮೊದಲಾದ ಪುದ್ಗಲಗಳನ್ನು ನನ್ನವೆಂದು ತಿಳಿದು, ಇವೇ ನನ್ನ ಸ್ವರೂಪವೆಂದು ಭಾವಿಸಿದೆ ರಾಗಾದಿಕ ಭಾವಗಳು ಮೋಹಕರ್ಮದ ಉದಯದಿಂದ ಉಂಟಾಗುತ್ತವೆ ಆದರೆ ಅವು ನನ್ನವೇ ಇವೆಯೆಂದು ತಿಳಿದೆ. ಪರದ್ರವ್ಯದ ಅತಿಶಯ ಆಸಕ್ತಿಯನ್ನು ಇಟ್ಟುಕೊಂಡು, ಧನಧಾನ್ಯ ಕುಟುಂಬಾದಿಗಳ ವೃದ್ಧಿಯು ಆಯಿತೆಂದರೆ ನನ್ನದೇ ವೃದ್ಧಿಯಾಯಿ-ತೆಂದು ಭಾವಿಸಿದೆ. ಆ ಪರಿಗ್ರಹಗಳ ನಾಶದಲ್ಲಿ ನನ್ನ ನಷ್ಟವಿದೆಯೆಂದು ತಿಳಿದೆ. ಈಗಲೂ ಕೂಡ ಮನೆ, ಸ್ಥಳ, ಸಂತೆ, ಉಪಜೀವನದ ಸಾಧನಗಳು, ಸ್ತ್ರೀ, ಪುತ್ರ, ಧನಧಾನ್ಯ, ಆಭರಣ, ವಸ್ತ್ರಾದಿ ಸಾವಿರಾರು ವಸ್ತುಗಳ ಮೇಲಿನ ಮೋಹವು ಇಲ್ಲದಂತೆ ಆಗಿಲ್ಲ ಅವು ಪರವಸ್ತುಗಳೆಂದು ತಿಳಿದೂ ಸಹ ನನ್ನವೇ ಇವೆ ಎಂಬ ವಿಪರೀತ ಬುದ್ಧಿಯು ಹೋಗಿಲ್ಲ ಆತ್ಮಜ್ಞಾನ, ಪರಜ್ಞಾನ, ಪಾಪ ಪುಣ್ಯದ ಜ್ಞಾನ, ಪರಲೋಕಜ್ಞಾನ ಇವು ಇಲ್ಲದಂತೆ ಆಗಿವೆ ಕುತ್ತಿಗೆಯಲ್ಲಿ ಜೀವ ಬಂದು ನಿಂತಿದ್ದರೂ ಪ್ರಾಣಪಕ್ಷಿಯು ಹಾರಿಹೋಗುವುದರಲ್ಲಿದ್ದರೂ ಮಮತೆಯು ಕಡಿಮೆಯಾಗದು. ಜಗತ್ತಿನಲ್ಲಿ ಪರಿಗ್ರಹಗಳನ್ನು ಯಾರೂ ತಮ್ಮ ಸಂಗಡ ಮರಣದ ನಂತರ ಒಯ್ದುದಿಲ್ಲ ಅದು ನಮ್ಮ ಸಂಗಡ ಬರುವಂಥದಿಲ್ಲ. ಇದನ್ನು ತಿಳಿದೂ ಸಹ ಅದನ್ನು ಪ್ರತಿದಿನ ಬೆಳೆಯಿಸುವ ಪ್ರಯತ್ನವು ನಡೆದೇ ಇದೆ ನಾನು ಸಾಯುವ ವರೆಗೂ ಅದು ಯತ್‌ಕಿಂಚಿತ್ತವೂ ಕಡಿಮೆ ಆಗಬಾರದೆಂದೂ ನನ್ನ ತೀವ್ರ ಇಚ್ಛೆ ಇದೆ. ಈ ಪರಿಗ್ರಹವೆಂಬ ದಾವಾಗ್ನಿಯನ್ನೂ ಸಂತೋಷವೆಂಬ ಜಲದಿಂದ ಆರಿಸುವ ಇಚ್ಛೆಯಿಲ್ಲ; ಸಂಪೂರ್ಣ ಪಾಪದ ಮೂಲವು ಪರಿಗ್ರಹದ ಇಚ್ಛೆಯೇ ಆಗಿದೆ ಮೂರ್ಖನಾದ ನಾನು ಇವುಗಳ ಸಂಗ್ರಹದ ತೀವ್ರ ಇಚ್ಛೆಯನ್ನು ಇಟ್ಟುಕೊಂಡುದರಿಂದ, ಅನಂತ ಕಾಲದಲ್ಲಿ ದುರ್ಲಭವಾದಂಥ ಮನುಷ್ಯ ಜನ್ಮದಲ್ಲಿ ಜಿನಧರ್ಮವು ಪ್ರಾಪ್ತವಾಗಿದ್ದೂ ಅದನ್ನು ಆಚರಣ ಮಾಡುವದನ್ನು ಮನಸ್ಸಿನಲ್ಲಿ ತಂದಿಲ್ಲ ಇದರಿಂದ ನರಕತಿರ್ಯಂಚಾದಿ ಗತಿಗಳ ದುಃಖವನ್ನು ಪ್ರಾಪ್ತಮಾಡಿಕೊಂಡೆ ಈಗ ಇದರ ಸಲುವಾಗಿ ನನಗೆ ಬಹಳ ಪಶ್ಚಾತ್ತಾಪವಾಗುತ್ತಲಿದೆ ಈ ಭಯಂಕರ ಪಾಪದ ನಾಶಮಾಡುವ ಉಪಾಯವು ಕೇವಲ ಪಂಚಪರಮೇಷ್ಠಿಗಳ ಚರಣ ಕಮಲಗಳಿಗೆ ಶರಣ ಹೋಗುವದನ್ನುಳಿದು ಬೇರಾವುದೂ ಉಳಿದಿಲ್ಲ ಮತ್ತು ಇನ್ನು ಮುಂದೆಯೂ ಸಹ ಪರಿಗ್ರಹಗಳಿಂದ ವಿರಕ್ತಿಯನ್ನು ಉತ್ಪನ್ನಮಾಡುವ ಬುದ್ಧಿಯನ್ನು ಕೊಡುವವನು ಭಗವಾನ್ ಪಂಚಪರಮೇಷ್ಠಿಯ ಹೊರತಾಗಿ ಇನ್ನೊಬ್ಬರಾರೂ ಸಮರ್ಥರಿಲ್ಲ ಈ ಎಲ್ಲ ಕಾರಣಗಳಿಗಾಗಿಯೂ ಪರಿಗ್ರಹಗಳು ನಾಶವಾಗಿ ಪರಮ ಸಂತೋಷವು ಪ್ರಾಪ್ತವಾಗಬೇಕೆಂದೂ ಪಂಚ-ನಮಸ್ಕಾರದ ಧ್ಯಾನವನ್ನು ಮಾಡಿ ಕಾಯೋತ್ಸರ್ಗ ಮಾಡುವೆ.

ಮನಮಿರೆ ಪೂರ್ವಿನಮೊದಲೊಳು ಮನದೊಳಗಿರೆ ವಾಯುಕರಣ ಕತಿಪಾಯುವಿನೋ-
ಳ್ಮನಿದಿರೆ ಪದ್ಮಾಸನದೊಳನುವಿರೆ ಏಕಾಗ್ರನಾತ್ಮಚಿಂತೆಯೊಳಿರ್ದಂ ।
ಹೊರ ಹೊರಗೆ ಸುಳಿವ ಮನಮಂ ನಿರಿಸುವುದೇ ನಾನು ಮೊಂದು ರೂಪಂ ಕುರುಪಿಂದೊಳಗಾ
ಕುರುಪುವನುಳಿದು ಬಳಿಕ್ಕಂನಿರಿಸುವುದು ನಿಜನಿರ್ವಿಕಲ್ಪ ನಿಜಚಿದ್ರೂಪಕದೊಳ್ ॥

—ಮಾಘನಂದಿ–ಶಾಸ್ತ್ರಸಾರ ಸಮುಚ್ಚಯ ಟೀಕು ಚರಣಾನುಯೋಗ ೨೧೭, ೧೮.

ಸಾಮಾಯಿಕ ಮಾಡುವಂಥ ಗೃಹಸ್ಥನು ಹೇಗೆ ಕಾಣುವನೆಂಬುದನ್ನು ಇಲ್ಲಿ ಹೇಳಿದೆ–

ಸಾಮಾಯಿಕೇ ನಾರಂಭಾಃ ಪರಿಗ್ರಹಾ ನೈವ ಸಂತಿ ಸರ್ವೇಽಪಿ ।
ಚೇಲೋಪಸೃಷ್ಟಮುನಿರಿವ ಗೃಹೀ ತದಾ ಯಾತಿ ಯತಿಭಾವಮ್[1] ॥ ೧೦೨ ॥

ಅನ್ವಯಾರ್ಥ—(ಸಾಮಾಯಿಕೇ) ಸಾಮಾಯಿಕದಲ್ಲಿ (ಸಾರಂಭಾಃ) ಒಕ್ಕಲತನ ಮೊದಲಾದ ಆರಂಭ ಸಹಿತ (ಸರ್ವೇಽಪಿ) ಎಲ್ಲ ಅಂತರಂಗ ಬಹಿರಂಗ ಪ್ರಕಾರದ (ಪರಿಗ್ರಹಾಃ) ಪರಿಗ್ರಹಗಳು (ನ ಏವ ಸಂತಿ) ಇರುವುದೇ ಇಲ್ಲ–ಅಂತಲೇ–(ತದಾ) ಆ ವೇಳೆಯಲ್ಲಿ (ಗೃಹೀ) ಗೃಹಸ್ಥನಿಗೆ (ಚೇಲೋಪಸೃಷ್ಟಮುನಿಃ ಇವ) ಅರಿವೆಯ ಉಪಸರ್ಗವು ಆದಂಥ ಮುನಿಯ ಹಾಗೆ (ಯತಿಭಾವಂ) ಮುನಿಯ ಭಾವವು (ಯಾತಿ) ಪ್ರಾಪ್ತವಾಗುತ್ತದೆ[2]

ಅರ್ಥ—ಗೃಹಸ್ಥನಿಗೆ ಸಾಮಾಯಿಕ ಮಾಡುವ ಕಾಲದಲ್ಲಿ ಎಲ್ಲ ಪ್ರಕಾರದ ಆರಂಭ ಮತ್ತು ಎಲ್ಲ ಪರಿಗ್ರಹಗಳ ತ್ಯಾಗವು ಇರುತ್ತದೆ ಅದಕ್ಕಾಗಿ ಅವನು ವಸ್ತ್ರವನ್ನು ಸುತ್ತಿಕೊಂಡ ಮುನಿಯ ಹಾಗೆ ಯತಿತ್ವವನ್ನು ಹೊಂದಿರುತ್ತಾನೆ. (ಅಂದರೆ ಮುನಿಗಳಿಗಿಂತ ವಸ್ತ್ರವು ಒಂದೇ ಇಂಥವರಿಗೆ ಹೆಚ್ಚಿಗೆ ಇರುತ್ತದೆ ಉಳಿದೆಲ್ಲ ಪರಿಣಾಮಗಳೂ ಸಮಾನವಾಗಿರುತ್ತವೆ )

[ಸಾಮಾಯಿಕದಲ್ಲಿ ಮಗ್ನನಾಗಿರುವ ಗೃಹಸ್ಥನ ಸ್ಥಿತಿಯು ಮುನಿಯ ಸಮಾನವಾಗಿರುತ್ತದೆ, ಇದನ್ನು ಇಲ್ಲಿ ಬಹು ಉತ್ತಮ ರೀತಿಯಿಂದ ಸ್ಪಷ್ಟಗೊಳಿಸಲಾಗಿದೆ. ಇದರಿಂದ ಈ ವ್ರತವನ್ನು ಸ್ವೀಕರಿಸಿದ ಶ್ರಾವಕನಿಗೆ ಎಷ್ಟೊಂದು ಮಹತ್ವವು ಪ್ರಾಪ್ತವಾಗುತ್ತದೆಂಬುದು ಗೊತ್ತಾಗುತ್ತದೆ ಅಂದ ಮೇಲೆ ಶ್ರಾವಕರು ಈ ವ್ರತದ ಆಚರಣೆಯನ್ನು ವಿಧಿ ಪ್ರಕಾರವಾಗಿ ಬಹಳ ಸಾವಧಾನತೆಯಿಂದಲೂ ತತ್ಪರತೆಯಿಂದಲೂ ಮಾಡಲಿಕ್ಕೆಬೇಕು. ಅದಕ್ಕಾಗಿ ಮುಂದಿನ ಸೂತ್ರದಲ್ಲಿ ಹೇಳಿದ ಸಂಗತಿಗಳ ಕಡೆಗೂ ಪೂರ್ಣ ಲಕ್ಷ್ಯಕೊಡಬೇಕಾಗುವದು ಅದರೊಡನೆಯೇ–ಬಹು ಜನರು ತಿಳಿದು ಕೊಳ್ಳುವಂತೆ–ಸಾಮಾಯಿಕವು ಕೇವಲ ಜಪ ಮಾಡುವದಿಷ್ಟೇ ಅಲ್ಲ. ಜಪ ಹಾಗೂ ಸಾಮಾಯಿಕಗಳಲ್ಲಿ ಅಂತರವಿದೆ ಇದು ಸಾಮಾಯಿಕ ಹಾಗೂ ಪ್ರತಿಕ್ರಮಣ ಪಾಠಗಳಲ್ಲಿ ಕಂಡುಬರುವ ಈ ಲಕ್ಷಣಾತ್ಮಕ ಪದ್ಯದಿಂದ ಇನ್ನೂ ಸ್ಪಷ್ಟವಾಗುತ್ತದೆ—

"ಸಮತಾ ಸರ್ವಭೂತೇಷು ಸಂಯಮಃ ಶುಭ–ಭಾವನಾ ।
ಆರ್ತ–ರೌದ್ರ–ಪರಿತ್ಯಾಗಸ್ತದ್ಧಿ ಸಾಮಾಯಿಕಂ ವ್ರತಮ್ ॥

ಎಲ್ಲ ಪ್ರಾಣಿಗಳ ಮೇಲೆ ಸಮತಾಭಾವ ಇರಬೇಕು ಯಾರ ವಿಷಯದಲ್ಲಿಯೂ ರಾಗ–ದ್ವೇಷಗಳ ವೈಷಮ್ಯವು ಇರಕೂಡದು ಇಂದ್ರಿಯ ಸಂಯಮ ಹಾಗೂ ಪ್ರಾಣಿ ಸಂಯಮಗಳ ರೂಪದಲ್ಲಿ ಪೂರ್ಣವಾಗಿ ಸಂಯಮ ಪಾಲನೆಯಾಗಬೇಕು ಯಾವತ್ತೂ ಶುಭ ಭಾವನೆಯಲ್ಲಿರಬೇಕು ಅಶುಭ ಭಾವನೆಗೆ ಸ್ವಲ್ಪವೂ ಸಹ ಅವಕಾಶವನ್ನು ಕೊಡಕೂಡದು ಮತ್ತು ಆರ್ತ ಹಾಗೂ ರೌದ್ರ ಧ್ಯಾನಗಳನ್ನಂತೂ ಪರಿತ್ಯಜಿಸಲಿಕ್ಕೇಬೇಕು. ಇಂಥ ಆಚರಣಕ್ಕಾಗಿ ಯಾವ ಜಪವನ್ನು ಮಾಡಲಾಗುತ್ತದೆಯೋ ಮತ್ತು ವಿಕಸಿತ ಆತ್ಮಗಳ ಸ್ಮರಣೆಯಿಂದ ತನ್ನನ್ನು ವಿಕಾಸೋನ್ಮುಖವಾಗಿ ಯಾವುದು ಮಾಡುತ್ತದೆಯೋ ಅದೇ ಸಾಮಾಯಿಕವೆನಿಸುತ್ತದೆ. ಸ ಥ]

ವಿಶೇಷಾರ್ಥ—ಸಾಮಾಯಿಕದ ಹೊತ್ತಿನಲ್ಲಿ ಗೃಹಸ್ಥನಿಗೆ ಆರಂಭ ಮತ್ತು ಪರಿಗ್ರಹಗಳು ಸಂಪೂರ್ಣವಾಗಿ ಇರುವದಿಲ್ಲ ಆದರೆ ಅವನು ಗೃಹಸ್ಥನಾಗಿರುವುದರಿಂದ ಕೇವಲ ಅರಿವೆಗಳು ಮೈಮೇಲೆ ಇರುತ್ತವೆ ಅಂತಲೇ ವಸ್ತ್ರ ಧಾರಣದ ಹೊರತಾಗಿ ಉಳಿದೆಲ್ಲ ವಿಷಯಗಳಲ್ಲಿಯೂ ಅವನು ಮುನಿಗಳಂತೆಯೇ ಇರುತ್ತಾನೆ. ಮುನಿಯು ನಗ್ನನಾಗಿರುತ್ತಾನೆ, ಇವನು ವಸ್ತ್ರ ಧಾರಣ ಮಾಡಿರುತ್ತಾನೆ ಇಷ್ಟೇ ಅಂತರವಿರುತ್ತದೆ. ಇಷ್ಟರಿಂದಲೇ ಆ ಗೃಹಸ್ಥನಿಗೆ ಸಾಕ್ಷಾತ್ ಮುನಿಯೆನ್ನಲಾಗುವದಿಲ್ಲ ಇಷ್ಟೇ

---

1 'ಮುನಿಭಾವಂ' ಎಂದೂ ಪಾಠಾಂತರವಿದೆ

2 ಆಯತವರ್ಮನು ಹೇಳುವುದು ಹೀಗೆ

ವಚನ—ನಿತ್ಯಭ್ರುಕಮನೇರಿಸಿಕೊಂಡು ಏನಾನುಮೊಂದಪಗ್ರಹಮಂ ಕೊಂಡಿಂತು ಯಥೋಕ್ತಂ ನೆಗಳ್ದ ಪುರುಷ ಪ್ರಸ್ತಾವದೊಳು ಸಕಲ ಸಾವದ್ಯ ವಿರಹಿತನಪ್ಪುದರಿಂದಂ ಪ್ರತ್ಯಾಖ್ಯಾನ ಕಷಾಯಮಾದನುಂ ಮಂದತೆಯುನೆಯ್ದುವುದತ್ತಣಿಂದಮಾತಂ ಋಷಿಯಂ ಪೋಲ್ತನಂ

ಕರಣಂಗಳು ಕುಸಿದಿರೆ ಮನವಿರೆ ನೊಸಲೊಳು ಲೋಚನಂಗಗುಳ್ಳಿರಿದುಗುಳ್ದೊ- ।
ಪ್ಪಿರೆ ದಸನಂದಸನದೊಳೊಂದಿರೆ ಮಂದರದಂತಾಚಾಲ್ಯದಂತಿರೆ ತನುವುಂ ॥
ಮಾಘನಂದಿ–ಶಾಸ್ತ್ರಸಾರ ಸಮುಚ್ಚಯ ಟೀಕು–ಚರಣಾನುಯೋಗ ೧೪೯.

ಈಗ ಇಂಥ ಪರಿಸ್ಥಿತಿಯಲ್ಲಿ ಉಪಸರ್ಗವು (ಪರೀಷಹ) ಪ್ರಾಪ್ತವಾದಲ್ಲಿ ಮುನಿಗಳಂತೆ ಧೈರ್ಯಧಾರಣಮಾಡಬೇಕು, ಹೆದರಬಾರದು ಎಂದು ಹೇಳುತ್ತಾರೆ—

**ಶೀತೋಷ್ಣದಂಶಮಶಕಪರೀಷಹಮುಪಸರ್ಗಮಪಿ ಚ ಮೌನಧರಾಃ ।**
**ಸಾಮಯಿಕಂ ಪ್ರತಿಪನ್ನಾ ಅಧಿಕುರ್ವೀರನ್ನಚಲಯೋಗಾಃ ॥ ೧೦೩ ॥**

ಅನ್ವಯಾರ್ಥ—(ಸಾಮಯಿಕಂ) ಸಾಮಾಯಿಕವನ್ನು (ಪ್ರತಿಪನ್ನಾ) ಸ್ವೀಕಾರ ಮಾಡಿದ ಪುರುಷನು (ಶೀತೋಷ್ಣದಂಶಮಶಕಪರೀಷಹಂ) ಶೀತ, ಉಷ್ಣ, ಸೊಳ್ಳೆಗಳ ಕಡಿತ ಮೊದಲಾದ ಪರೀಷಹಗಳನ್ನು (ಚ) ಮತ್ತು (ಉಪಸರ್ಗಂ ಅಪಿ) ಉಪಸರ್ಗವನ್ನೂ ಸಹ (ಮೌನಧರಾಃ) ಮೌನಧಾರಣಮಾಡಿದಂಥವನಾಗಿಯೂ (ಅಚಲಯೋಗಾಃ) ಅಚಲಯೋಗವನ್ನು ಸ್ವೀಕರಿಸಿದಂಥವನಾಗಿದ್ದೂ (ಅಧಿಕುರ್ವೀರನ್) ಸಹನಮಾಡಬೇಕು

ಅರ್ಥ—ಸಾಮಾಯಿಕ ಧಾರಣಮಾಡುವಂಥ ಗೃಹಸ್ಥನು, ಮನ–ವಚನ–ಕಾಯಗಳ ಯೋಗವನ್ನು ಸ್ಥಿರವಾಗಿಟ್ಟುಕೊಂಡು, ಮೌನವನ್ನು ಧರಿಸಿರುತ್ತಾನೆ, ಮತ್ತು ಚಳಿ, ಕಾವು, ಸೊಳ್ಳೆ, ನೊಣ, ಮೊದಲಾದವುಗಳಿಂದ ಆಗುವ ತೊಂದರೆಯನ್ನೂ ಯಾರಾದರೂ ಉಪಸರ್ಗ ಮಾಡಿದರೆ ಅದನ್ನೂ ಸಹನಮಾಡುತ್ತಾನೆ. [ಇಲ್ಲಿ, ಮೌನ ಪೂರ್ವಕವಾಗಿ ಸಾಮಾಯಿಕದಲ್ಲಿದ್ದಾಗ, ಆ ಸಾಮಾಯಿಕ ಕಾಲದಲ್ಲಿ ಒದಗಿದ ಉಪಸರ್ಗ ಹಾಗೂ ಪರೀಷಹಗಳನ್ನು ಸಮತಾಭಾವದಿಂದ ಸಹನಮಾಡಬೇಕು. ಅಲ್ಲದೆ ಅಚಲಯೋಗದ ಸಾಧನೆಯನ್ನೂ ಮಾಡಬೇಕು—ಎಂದು ಉಪದೇಶ-ಮಾಡಿದೆ. ಇದು ಮುನಿಯೋಗ್ಯ ಆಚರಣೆಯಾಗಿದೆ. ಅದಕ್ಕಾಗಿಯೇ ಆರಂಭ ಹಾಗೂ ಪರಿಗ್ರಹಗಳಿಂದ ವಿರಕ್ತನಾದಂಥ ಗೃಹಸ್ಥ ಸಾಧಕನಿಗೆ ಆ ಸಮಯದಲ್ಲಿ ಮುನಿಯೆಂದು ಹೇಳುವುದು—ಚೇಲೋಪಸೃಷ್ಟ ಮುನಿಯ ಉಪಮೆಯನ್ನು ಕೊಡುವುದು—ಉಪಯುಕ್ತವೂ ಆಗಿದೆ. ಸ ಧ.]

ವಿಶೇಷಾರ್ಥ—ಬೇಕಾದಂಥ ಚಳಿಯಿಂದ ಕೂಡಿದ ಗಾಳಿ, ಉಷ್ಣತೆ, ಮಳೆಗಳಿಂದ ಕಷ್ಟವಾದರೂ ಹುಲಿ, ಸಿಂಹ ಮತ್ತು ಶತ್ರುಗಳಿಂದ ಉಪಸರ್ಗವಾದರೂ ಅದನ್ನೆಲ್ಲ ಧೈರ್ಯದಿಂದ ಸಹನಮಾಡಬೇಕು. ಗಾಬರಿಯಾಗಕೂಡದು ಸಾಮ್ಯಭಾವ ಮತ್ತು ಮೌನಗಳನ್ನು ಬಿಡಕೂಡದು

ಬಾರದ ಜಾನಮಂ ಬರಿಸಿಕೊಂಬ ಸುಸಾಧುಜನಕ್ಕಿವಲ್ಲದೇ
ಘೋರತಪೋಧನಂ ಬಗೆವನೇ ಮಳೆ ಗಾಳಿ ಸಿಡಿಲ್ಬಿಸಿಲ್ಗಳಂ ।
ಸೀರುಡು ಪಾವು ಪೆರ್ಬುಲಿಗಳಂ ಪೆರರಿಟ್ಟುಪಸರ್ಗಮಂ ಮನೋ
ಧೀರದೆ ಗೆಲ್ದು ನಿತ್ಯಪದನಪ್ಪನಲಾ ಅಪರಾಜಿತೇಶ್ವರಾ ॥
ರಂಭೆಯೆ ಬಂದು ತಾಂ ಕೊರಲನಪ್ಪಿದೊಡಂ ಪುಳಕಂಗಳಾಗದೇ
ಕುಂಭಿ ಚಮೂರು ಬೃಂಹಿಸುತೆ ಗರ್ಜಿಸುತಂ ಬರೆ ಬಲ್ಪುಗುಂದದೇ ।
ಜೃಂಭಿಸಿ ಕಾಳುಗಿಚ್ಚು ಕವಿಯುತ್ತಿರೆ ಬುದ್ಧಿಕಲಂಕದೇ ಶಿಲಾ-
ಸ್ತಂಭವೆನಲ್ಕೆಯೆನ್ನೊಳಗೆ ನಿಲ್ಪೆನದೆಂದಪರಾಜಿತೇಶ್ವರಾ ॥
—ರತ್ನಾಕರ–ಅಪರಾಜಿತ ಶತಕ–೯೧–೯೨.

ಆರು ಕೆಲಂಬರದುರ್ವಚನಂಗಳತಾರದೆ ಮನಸಿಗೆ ಕ್ಷಮೆಯಿಂ ।
ಸೈರಿಸುತಿಹರು ತಾಡನ ಬಂಧನವಾದಿ ಘೋರೋಪಸರ್ಗಂಗಳನು ॥
ಹಿರಿದು ಪರೀಷಹ ಬಂದಡೆಯವು ನಾವು ನೆರಹಿದ ದುಃಕರ್ಮವೆಂದು ।
ಪರಮೋಪಶಮದಿಂದ ತಾಳುತಲಿಪ್ಪ ಸತ್ಪುರುಷರಿಗಹುದು ನಿರ್ಜರೆಯು ॥
—ವಿಜಯಣ್ಣ–ದ್ವಾದಶಾನುಪ್ರೇಕ್ಷೆ—ನಿರ್ಜರಾನುಪ್ರೇಕ್ಷೆ–೮–೯.

ಸಾಮಾಯಿಕವನ್ನು ಮಾಡುತ್ತಿರುವಾಗ ಸಂಸಾರ ಮತ್ತು ಮೋಕ್ಷಗಳ ಸ್ವರೂಪವನ್ನು ಕುರಿತು ಚಿಂತನಮಾಡಬೇಕು. ಅದು ಹೀಗಿದೆ—

ಅಶರಣಮಶುಭಮನಿತ್ಯಂ ದುಃಖಮನಾತ್ಮಾನಮಾವಸಾಮಿ ಭವಮ್ ।
ಮೋಕ್ಷಸ್ತದ್ವಿಪರೀತಾತ್ಮೇತಿ ಧ್ಯಾಯಂತು ಸಾಮಯಿಕೇ ॥ ೧೦೪ ॥[1]

ಅನ್ವಯಾರ್ಥ—(ಅಶರಣಂ) ಆಶ್ರಯಕ್ಕೆ ಯೋಗ್ಯವಲ್ಲದಂಥ (ಅಶುಭಂ) ಒಳಿತಲ್ಲದಂಥ (ಅನಿತ್ಯಂ) ಸ್ಥಿರವಲ್ಲದಂಥ (ದುಃಖಂ) ದುಃಖಮಯವಾದಂಥ (ಅನಾತ್ಮಾನಂ) ಆತ್ಮರೂಪವಾಗಿರದಂಥ (ಭವಂ) ಸಂಸಾರದಲ್ಲಿ (ಆವಸಾಮಿ)—ನಾನು—ವಾಸಿಸುತ್ತೇನೆ. (ಮೋಕ್ಷಃ) ಮೋಕ್ಷವು (ತದ್ವಿಪರೀತಾತ್) ಇದಕ್ಕೆ ವಿರೋಧವಾಗಿದೆ (ಇತಿ) ಈ ಪ್ರಕಾರ (ಸಾಮಯಿಕೇ) ಸಾಮಾಯಿಕದ ಹೊತ್ತಿನಲ್ಲಿ (ಧ್ಯಾಯಂತು) ವಿಚಾರ ಮಾಡಬೇಕು

ಅರ್ಥ—ಸಾಮಾಯಿಕ ಮಾಡುವವರು ಸಾಮಾಯಿಕದ ಹೊತ್ತಿನಲ್ಲಿ ಯಾರೂ ಇಲ್ಲಿ ರಕ್ಷಣ ಮಾಡುವವರು (ಶರಣ) ಇಲ್ಲ. ಇಂಥ ಪಾಪರೂಪಿಯೂ ನಾಶವಂತವೂ ದುಃಖದಾಯಕವೂ ಆತ್ಮಸ್ವರೂಪ ರಹಿತವೂ ಆದ ಸಂಸಾರದಲ್ಲಿ ನಾನು ಮಗ್ನನಾಗಿರುವೆ ಮೋಕ್ಷವು ಇದರ ವಿರುದ್ಧ ಸ್ವರೂಪದ್ದಾಗಿದೆ. ಈ ಪ್ರಕಾರ ವಿಚಾರಮಾಡಬೇಕು. [ಇಲ್ಲಿ ಹೇಳಿದ ಸಂಗತಿಗಳಿಂದ ಸಾಮಾಯಿಕವು ಕೇವಲ ಜಪವಲ್ಲವೆಂಬುದು ಇನ್ನೂ ಸ್ಪಷ್ಟವಾಗುತ್ತದೆ ಅದಕ್ಕಾಗಿ ಅರಹಂತಾದಿಗಳ ಹೆಸರನ್ನು ಅಥವಾ ಯಾವದಾದರೊಂದು ಮಂತ್ರವನ್ನು ಜಪಿಸುವದರಲ್ಲಿಯೇ ಸಾಮಾಯಿಕದ ಇತಿಶ್ರೀ ಇದೆಯೆಂದು ತಿಳಿಯುವುದು ದೊಡ್ಡ ಭ್ರಮೆಯಾಗಿದೆ ಈ ಭ್ರಮೆಯನ್ನು ಶಕ್ಯವಿದ್ದಷ್ಟು ಬೇಗನೆ ದೂರಮಾಡಲಿಕ್ಕೆ ಬೇಕು ಸ. ಥ ]

ವಿಶೇಷಾರ್ಥ—ಅಶರಣ—ಸಾಮಾಯಿಕ ಮಾಡುವಾಗ ಹೀಗೆ ವಿಚಾರಮಾಡಬೇಕು—ಚತುರ್ಗತಿ ಭ್ರಮಣರೂಪಿಯಾದ ಈ ಸಂಸಾರವು ಅಶರಣ ಇರುತ್ತದೆ ಇದರಲ್ಲಿ ಅನಂತಾನಂತ ಜನ್ಮ ಮರಣಗಳನ್ನು ಹೊಂದುತ್ತ ಇರುವಾಗ ಅನಂತಕಾಲ ಉರುಳಿಹೋಗಿದೆ ಎಲ್ಲ ಪರ್ಯಾಯಗಳಲ್ಲಿ ಹಸಿವು, ನೀರಡಿಕೆ, ಬೇನೆ, ಅಗಲುವಿಕೆ, ಹೊಡೆತ, ಕೊಲೆಗಳನ್ನು ಹೊಂದುತ್ತ ಇರುವಾಗ ಅವುಗಳಿಂದ ಮುಕ್ತಗೊಳಿಸುವವನು ಯಾವನೂ ದೊರಕಲಿಲ್ಲ. ಇದರಿಂದ ಸಂಸಾರ ದುಃಖದಿಂದ ರಕ್ಷಣಮಾಡುವವರು ಯಾರೂ ಇಲ್ಲವೆಂದು ನಿಶ್ಚಿತಗೊಳ್ಳುತ್ತದೆ.

ಅಶುಭ—ಸಂಸಾರವು ಹೇಗೆ ಅಶರಣವಾಗಿರುವುದೋ ಹಾಗೆಯೇ ಅಶುಭವೂ ಆಗಿದೆ ಅಶುಭ ಕರ್ಮದ ಬಂಧನದಿಂದ ದುಃಖವನ್ನು ಭೋಗಿಸ ಹಚ್ಚುವುದು, ಅಶುಭವಾದ ದೇಹವೆಂಬ ಪಂಜರದಲ್ಲಿ ಹಿಡಿದಿಡುವುದು, ಅಶುಭ ಕಷಾಯರೂಪೀ ಅಶುಭಭಾವದಲ್ಲಿ ಲೀನವಾಗಿರುವಂತೆ ಮಾಡಿ ಯಾವಾಗಲೂ ಅಶುಭವನ್ನೇ ಒದಗಿಸುವಂಥದು, ಅಶುಭವನ್ನೇ ಭೋಗಿಸ ಹಚ್ಚುವ ಈ ಸಂಸಾರವು ಜೀವಕ್ಕೆ ಅಶುಭಕರವೆಂದು ನಿಶ್ಚಿತವಾಗುತ್ತದೆ

---

1 ಆಯತವರ್ಮನು ಹೇಳುವದು ಹೀಗಿದೆ

ಕಂದ ॥ ಜಲಬುದ್ಬುದದಿಂ ಕ್ಷಣಿಕಂ ಜಳಧರ ನಿವಹಂಗಳಿಂದಮಧ್ರುವಮುಳ್ಳಂ ।
ಗಳ ರಂಜನೆಯಂತಚಿರಂ ಬಳಸಿದ ಬಂಧುಗಳು ಮೊದಲುಮೊಡವೆಯುಮೆಂತುಂ ॥

ಎಂದಧ್ರುವಮಂ ಭಾವಿಸಿ

ಕಂದ ॥ ಚತುರಂಗ ಬಲಮುಮಾಯುದ ತತಿಯುಂ ಬರವಿತ್ತದೆಯ್ವಮುಂ ಬಂಧುಗಳುಂ ।
ಕ್ಷಿತಿಯುಂ ನಿಜಭುಜವೀರ್ಯಮುಮತೀತಮಪ್ಪಂದು ಕಾಯಲಾರವು ನರರಂ ॥

ವಚನ—ಎಂದ ಶರಣಮುಮಂ ಮತ್ತಂ ಸುಖದುಃಖಜೀವಿತಮರಣಂಗಳೊಳಂ ಚತುರ್ಗತಿಗಳೊಳಂ ಜೀವನೊರ್ವನೆಯೆಂಬೇಕತ್ವಮುಮಂ ಸಮ್ಯಗ್ದರ್ಶನ ಚಾರಿತ್ರಂಗಳೊಳಿಯೆ ಉಳಿದ ವಸ್ತುವೆಲ್ಲಮನ್ಯಮೆಂಬನ್ಯತ್ವಮುಮಂ ಚತುರ್ಗತಿ ಸಂಸಾರಮುಮಂ ಷ್ಟಮೆಂದು ಸಂಸಾರ ಸ್ವರೂಪಮುಮಂ ದರ್ಮಾನುರಾಗದಿಂ ಲೋಕಸ್ವಭಾವಮುಮಂ ಮತ್ತಂ ವೈರಾಗ್ಯಾರ್ಥಂ

ಕಂದ ॥ ಒಡಲೆಂಬುದು ಮಜ್ಜದ ಪೆರ್ಮಡುಮದರೊಳು ಕೂಡಿದ ಪ್ರ್ಯಕಮಂ ಕೊಳೆಯಾಗಿ ।
ದೆಡೆಬಿಡದೆ ನವದ್ವಾರದ ಕಡೆಗೊಡವಿದ ಪೂತಿಗಂಧಮಲ . . . ರತಂ ॥

ವಚನ—ಎಂದು ಕಾಯಸ್ವಭಾವಮುಮಂ ಮತ್ತಮಾಸ್ರವ ಸಂವರ ನಿರ್ಜರಂ ದರ್ಮಬೋಧಿದುರ್ಲಭಮೆಂದಿವುಮಂ ಭಾವಿಸಿ ಶುದ್ಧಾಂತರಾಗನಪ್ಪುದು.

ಅನಿತ್ಯ—ಸಂಸಾರದಲ್ಲಿ ಅನಂತಕಾಲ ಪರಿಭ್ರಮಣಮಾಡುತ್ತ ಇರುವಾಗ ಅಕಸ್ಮಾತ್ ಉಚ್ಚ ಕುಲದಲ್ಲಿ ಜನ್ಮ, ಉತ್ತಮ ಕ್ಷೇತ್ರದಲ್ಲಿ ವಾಸ್ತವ್ಯ, ಇಂದ್ರಿಯ ಪರಿಪೂರ್ಣತೆ, ಸುಂದರ ರೂಪ, ಪ್ರಬಲ ಬುದ್ಧಿ, ಜಗತ್ತಿನಲ್ಲಿ ಪೂಜ್ಯತ್ವ, ರಾಜ್ಯಸಂಪತ್ತಿ, ಧನಪ್ರಾಪ್ತಿ, ಸದ್ಗುಣವುಳ್ಳ ಮಿತ್ರರ ಸಹವಾಸ, ಆಜ್ಞೆಯನ್ನು ಪಾಲಿಸುವ ಮಗ, ಸುಂದರ ಸತಿ, ಪಾಂಡಿತ್ಯ, ಶೌರ್ಯ, ಬಲ, ಆಜ್ಞಾ, ಐಶ್ವರ್ಯ, ಮನೋವಾಂಛಿತಭೋಗ ಮತ್ತು ನಿರೋಗ ಶರೀರಗಳು ಕರ್ಮೋದಯದಿಂದ ಜೀವಕ್ಕೆ ಪ್ರಾಪ್ತವಾಗಿದ್ದರೂ ಅವು ಕ್ಷಣಮಾತ್ರದಲ್ಲಿ ಮಿಂಚಿನಂತೆಯೂ ಇಂದ್ರ ಧನುಷ್ಯದಂತೆಯೂ ಇಲ್ಲದಂತೆ ಆಗುವಂಥವು ಇರುತ್ತವೆ ಅವು ತಿರುಗಿ ಅನಂತಾನಂತ ಕಾಲವಾದರೂ ಪ್ರಾಪ್ತವಾಗುವದಿಲ್ಲ. ಅಂತಲೇ ಸಂಸಾರವು ಅನಿತ್ಯವಾಗಿದೆಯೆಂಬುದು ಸತ್ಯವಾಗಿದೆ

ಎಲ್ಲ ಕಾಲದಲ್ಲಿಯೂ ಕರ್ಮಬಂಧನದಿಂದ ದೇಹವೆಂಬ ಪಂಜರದಲ್ಲಿ ಸಿಕ್ಕ ಜೀವವು, ಅನಂತಾನಂತ ಜನ್ಮ ಮರಣಾದಿಗಳಿಂದ ಕೂಡಿ ಅನಂತಕಾಲ ಕಳೆದಿದೆ ಆದರೂ ದುಃಖದಿಂದ ಮುಕ್ತವಾಗದು ಅಂತಲೇ ಈ ಸಂಸಾರವು ದುಃಖರೂಪವಾಗಿದೆ.

ಸಂಸಾರ ಪರಿಭ್ರಮಣವಿದು ಆತ್ಮಸ್ವರೂಪವಲ್ಲ. ಅದಕ್ಕಾಗಿ ಸಂಸಾರವು ಅನಾತ್ಮರೂಪವಾಗಿದೆ ಈ ಪ್ರಕಾರ ಸಾಮಾಯಿಕಮಾಡುವಂಥ ಗೃಹಸ್ಥನು ಸಂಸಾರದ ಚಿಂತನಮಾಡಬೇಕು.

ಮೋಕ್ಷದ ಸ್ವರೂಪ—ಸಂಸಾರದಲ್ಲಿ ಮಿಥ್ಯಾಜ್ಞಾನದ ಪ್ರಭಾವದಿಂದ ನನಗೆ ಅನಂತಕಾಲದಿಂದಲೂ ಸುತ್ತಾಡಬೇಕಾಯಿತು. ಇದರಿಂದ ಮುಕ್ತನಾಗುವುದೇ ಮೋಕ್ಷವಾಗಿದೆ ಅದು ಆತ್ಮ ಚಿಂತನೆಯನ್ನು ಸತತವಾಗಿ ಮಾಡುವುದರಿಂದ ಪ್ರಾಪ್ತವಾಗುವಂಥದಿದೆ ಅದು ಲಭಿಸಿದ ಮೇಲೆ ಅನಂತಾನಂತಕಾಲ ಉರುಳಿದರೂ ಪುನಃ ಸಂಸಾರದಲ್ಲಿ ಬರುವ ಕಾರಣವು ಉಳಿಯುವದಿಲ್ಲ ಮೋಕ್ಷವು ಶುಭವಿದೆ, ನಿತ್ಯವಾಗಿದೆ, ಅವಿನಾಶಿಯಾಗಿದೆ, ಅನಂತಾನಂತ ಕಾಲ ತಾಳುವಂಥದಿದೆ ಅಂದರೆ ಶಾಶ್ವತವಿದೆ ಅನಂತಜ್ಞಾನಾದಿ ಸ್ವರೂಪ ಮತ್ತು ಅನಾಕುಲತಾ ರೂಪವಿದೆ ಸ್ವಸ್ವರೂಪಾತ್ಮಕವಾಗಿದೆ, ಪರಸ್ವರೂಪದ್ದಲ್ಲ ಹೀಗೂ ಚಿಂತಿಸಬೇಕು.

ಸಾಮಾಯಿಕದ ಮಹಾತ್ಮ್ಯ—ಶಾಂತ ಪರಿಣಾಮವನ್ನು ಇಟ್ಟುಕೊಂಡು, ದಿನಾಲು ಎರಡು ಘಳಿಗೆ-ಗಳಷ್ಟು ಕಾಲ ಸಾಮಾಯಿಕವನ್ನು ಮಾಡಿದರೆ ದೊಡ್ಡ ದೊಡ್ಡ ಕರ್ಮಗಳ ನಿರ್ಜರೆಯಾಗುತ್ತದೆ ಈ ಸಾಮಾಯಿಕದ ಮಹಾತ್ಮ್ಯವನ್ನು ಇಂದ್ರನಿಗೂ ಸಹ ವರ್ಣಿಸಲಿಕ್ಕೆ ಬರುವದಿಲ್ಲ ಇದರ ಪ್ರಭಾವದಿಂದ ಅಭವ್ಯ ಜೀವವೂ ಕೂಡ ಸ್ವರ್ಗದೊಳಗಿನ ಅತ್ಯುಚ್ಚ ಗ್ರೈವೇಯಕದ ವರೆಗೆ ಹೋಗಿ ಹುಟ್ಟುತ್ತದೆ. ಸಾಮಾಯಿಕದಂಥ ಎರಡನೆಯ ಧರ್ಮವು ಆಗಿಲ್ಲ, ಆಗಲಾರದು. ಅಂತಲೇ ಇದನ್ನು ಅಂಗೀಕರಿಸುವುದರಲ್ಲಿ ಆತ್ಮನ ಹಿತವಿದೆ. ಯಾರಿಗೆ ಸಾಮಾಯಿಕ ಪಾಠವು ಮುಖೋದ್ಗತವಾಗಿ ಬರುವದಿಲ್ಲವೋ ಅವರು ತಮ್ಮ ಮನಸ್ಸನ್ನು ಏಕಾಗ್ರಗೊಳಿಸಿ, ನಿಶ್ಚಯವಾಗಿ ಸರ್ವ ಆರಂಭ ಪರಿಗ್ರಹಗಳನ್ನೂ ತ್ಯಾಗಮಾಡಬೇಕು. ಕೇವಲ ಪಂಚನಮಸ್ಕಾರ ಮಂತ್ರವನ್ನು ನಿರ್ವಿಕಾರ ಮನಸ್ಸಿನಿಂದ ಧ್ಯಾನಿಸ-ಬೇಕು ಹೀಗೆ ಎರಡು ಘಳಿಗೆ ಪೂರ್ಣ ಆಚರಿಸಿದರೂ ಸಹ ಅವರಿಗೂ ಕೂಡ ಮೇಲೆ ವರ್ಣಿಸಿದ ಫಲಪ್ರಾಪ್ತಿಯು ಆಗುವದಿದೆ.

ತನು ತಾನಲ್ಲೆನೆ ಬಾಹ್ಯರೂಪದ ಕಳತ್ರಂ ಪುತ್ರಗೋತ್ರೇಷ್ಟ ಮಿ-
ತ್ರನಿಕಾಯಂ ಬೞಿಪರ್ವುದಲ್ತು ಬೞಿಪರ್ಕರ್ಗಂ ಗೆಯ್ದ ಕರ್ಮದ್ವಯಂ ।
ತನಗಂತಾಯುಗ ಕರ್ಮದೊಳ್ ಸುಕೃತಕರ್ಮಂ ತಾನೆ ಮೋಕ್ಷೈಕ ಸಾ-
ಧನಮಕ್ಕುಂ ಸುಕೃತಂ ಶರೀರಿಗೆ ಶರಣ್ ಬೇಱುಂಟೆ ಸಂಭಾವಿಸಲ್ ॥
ಎನಿತಾನುಂ ಶುಚಿಯಪ್ಪ ನಿರ್ಮಲತರಾತ್ಮೋಪೇತಮಾಗಿರ್ದೊಡಂ
ತನುವಂ ಸೋಂಕಿದ ವಸ್ತುಗಳ್ ಬಗೆಪೊಡಸ್ಪೃಶ್ಯಂಗಳಂತಾಗಲಿಂ ।
ತನಲಂತುಂ ತನು ಸಾಜದಿಂದಶುಚಿಬೀಭತ್ಸಂ ತಟಿದ್ರೂಪವೀ-
ತನುವಂ ಮೋಕ್ಷಪಥಕ್ಕೆ ಸಲ್ವೆಸಕಮಂ ಕೈಕೊಳ್ವುದತ್ಯುತ್ತಮಂ ॥

—ಕಮಲಭವ-ಶಾಂತೀಶ್ವರ ಪುರಾಣಂ ೯—೪೨, ೪೩.

ಇನ್ನು ಸಾಮಾಯಿಕದ ಐದು ಅತಿಚಾರಗಳನ್ನು ಹೇಳುತ್ತಾರೆ—

ವಾಕ್ಕಾಯಮಾನಸಾನಾಂ ದುಃಪ್ರಣಿಧಾನಾನ್ಯನಾದರಾಸ್ಮರಣೇ ।
ಸಾಮಯಿಕಸ್ಯಾತಿಗಮಾ ವ್ಯಜ್ಯಂತೇ ಪಂಚ ಭಾವೇನ ॥ ೧೦೫ ॥[1]

ಅನ್ವಯಾರ್ಥ—(ವಾಕ್ಕಾಯಮಾನಸಾನಾಂ) ಮಾತು, ಮೈ, ಮನಸ್ಸು ಇವುಗಳ (ದುಷ್ಪ್ರಣಿಧಾನಾನಿ) ದುಷ್ಟ ಪ್ರವೃತ್ತಿಯಾಗುವುದು (ಅನಾದರಾಸ್ಮರಣೇ) ಅನಾದರ ಮಾಡುವುದು ಮತ್ತು ಮರೆಯುವುದು–ಇವು–(ಭಾವೇನ) ಪರಮಾರ್ಥದೃಷ್ಟಿಯಿಂದ (ಸಾಮಯಿಕಸ್ಯ) ಸಾಮಾಯಿಕದ (ಪಂಚ) ಐದು (ಅತಿಗಮಾಃ) ಅತಿಚಾರಗಳು–ಎಂದು–(ವ್ಯಜ್ಯಂತೇ) ಹೇಳಲಾಗಿವೆ

ಅರ್ಥ—ಸಾಮಾಯಿಕ ಮಾಡುತ್ತಿರುವಾಗ ಸಂಸಾರಕ್ಕೆ ಸಂಬಂಧಿಸಿದ ಕೆಲವೊಂದು ಸಂಗತಿಗಳನ್ನು ಕುರಿತು ಮಾತನಾಡುವುದರ ಕಡೆಗೆ ವಚನ ಪ್ರವೃತ್ತಿಯನ್ನು ಮಾಡುವುದು ವಚನದುಃಪ್ರಣಿಧಾನ ಅತಿಚಾರವೆನಿಸುತ್ತದೆ ಯಾವುದರಿಂದ ಸಂಯಮವು ಭ್ರಷ್ಟವಾಗುವುದೋ ಅಂಥ ಚಟುವಟಿಕೆಯನ್ನು ಶರೀರದಿಂದ ಮಾಡುವುದು ಕಾಯದುಃಪ್ರಣಿಧಾನ ಅತಿಚಾರವೆನಿಸುತ್ತದೆ. ಮನಸ್ಸಿನಲ್ಲಿ ಆರ್ತ–ರೌದ್ರ ಧ್ಯಾನಗಳ ವಿಚಾರವನ್ನು ತರುವುದು ಮನೋದುಃಪ್ರಣಿಧಾನ ಅತಿಚಾರವಾಗಿದೆ ಸಾಮಾಯಿಕವನ್ನು ನಿರುತ್ಸಾಹ ಅಥವಾ ಆದರವಿಲ್ಲದೆ ಮಾಡುವುದೇ ಅನಾದರ ಅತಿಚಾರವು. ಸಾಮಾಯಿಕ ಮಾಡುತ್ತಿರುವಾಗ ದೇವವಂದನೆಯೇ ಮೊದಲಾದ ಪಾಠಗಳನ್ನು ಮರೆತು ಬಿಡುವುದು, ಇಲ್ಲವೆ ಕಾಯೋತ್ಸರ್ಗಮಾಡುವದನ್ನೂ ಮರೆಯುವದು ಅಸ್ಮರಣಾತಿಚಾರವಾಗಿದೆ. ಹೀಗೆ ಐದು ಸಾಮಾಯಿಕ ಭಾವನೆಯ ಅತಿಚಾರ(ದೋಷ)ಗಳು ಇರುತ್ತವೆ

ವಿಶೇಷಾರ್ಥ—[ಸಾಮಾಯಿಕ ವ್ರತದ ಅನುಷ್ಠಾನವನ್ನು ಮನ–ವಚನ–ಕಾಯಗಳನ್ನು ಚೆನ್ನಾಗಿ ವಶದಲ್ಲಿಟ್ಟುಕೊಂಡು, ಬಹು ಸಾವಧಾನದಿಂದ ಉತ್ಸಾಹ ಹಾಗೂ ಏಕಾಗ್ರತಾಪೂರ್ವಕವಾಗಿ ಮಾಡಲಾಗುತ್ತದೆ. ಆದರೆ ದೈವಯೋಗದಿಂದ ಕ್ರೋಧಾದಿ ಕಷಾಯಗಳಿಂದ ಆವೇಶವು ಉತ್ಪನ್ನವಾಗಿ, ಆ ಆವೇಶದಲ್ಲಿ ಮನ–ವಚನ–ಕಾಯಗಳಿಂದ ಅನುಚಿತ ವರ್ತನವು ಆಗುವ ಸಂಭವವಿದೆ. ಉತ್ಸಾಹಭಂಗವಾಗುವ ಸಂಭವವೂ ಇದೆ. ತನ್ನ ವಿಷಯದಲ್ಲಿ ಏಕಾಗ್ರತೆಯು ನಿಲ್ಲದೆ ಇರುವ ಸಂದರ್ಭವೂ ಇರುತ್ತದೆ ಇವೆಲ್ಲ ಸ್ಥಿತಿಗಳು ಈ ವ್ರತದ ದೋಷಗಳಾಗಿವೆ ಉದಾಹರಣೆಗಾಗಿ ಒಬ್ಬ ಮನುಷ್ಯನು ಮೌನದಿಂದ ಸಾಮಾಯಿಕ ಮಾಡುತ್ತಿದ್ದಾನೆಂದು ತಿಳಿಯೋಣ ಆ ಕಾಲದಲ್ಲಿ ಅವನ ಎದುರಿಗೆ ಅಕಸ್ಮಾತ್ತಾಗಿ ಭಯಂಕರ ಹಾವು ಇಲ್ಲವೆ ಹುಲಿಯು ಬಂದಿತೆಂದು ಕಲ್ಪಿಸುವಾ. ಅದನ್ನು ನೋಡಿ, ಸಾಮಾಯಿಕಕ್ಕೆ ಕುಳಿತವನ ಮುಖದಿಂದ ಏನಾದರೂ ಶಬ್ದ ಹೊರಬೀಳುವುದು, ಶರೀರದ ಮೇಲೆ ಹೆದರಿಕೆಯಿಂದ ಮುಳ್ಳುಗಳೇಳುವುದು, ಆಸನವು ಅಸ್ಥಿರಗೊಳ್ಳುವುದು, ಮನಸ್ಸಿನಲ್ಲಿ ಹೆದರಿಕೆಯ ಸಂಚಾರವಾಗುವುದು, ಆ ಪ್ರಾಣಿಯ ವಿಷಯಕ್ಕೆ ದ್ವೇಷಭಾವನೆಯು ಜಾಗೃತಗೊಳ್ಳುವುದು ಮತ್ತು ಅನಿಷ್ಟ ಸಂಯೋಗಜ ಎಂಬ ಹೆಸರಿನ ಆರ್ತಧ್ಯಾನವು ಕೆಲವೊಂದು ಕ್ಷಣಗಳ ವರೆಗೆ ಮನಸ್ಸಿನಲ್ಲಿ ವ್ಯಾಪಿಸಿಬಿಡಬಹುದು—ಇವೆಲ್ಲ ಈ ವ್ರತಿಕನಿಗೆ ದೋಷರೂಪವಾಗಿವೆ.

ಪರಿಕಿಪೊಡಸ್ಮರಣಮನಾದರಂ ಮನೋವಾಕ್ಶರೀರದುಷ್ಪ್ರಣಿಧಾನಂ ।
ನಿರುಪಮ ಶಿಕ್ಷಾವ್ರತದೊಳ್ ನಿರುದ್ಧ ಸಾಮಾಯಿಕ ವ್ರತಕ್ಕತಿಚಾರಂ ॥

—ಶಾಂತಿನಾದ–ಸುಕುಮಾರ ಚರಿತಂ—೬–೫೧

---

1 ಆಯತವರ್ಮ ಹೇಳುವದು ಹೀಗೆ—

ವಚನ—ಸಾಮಾಯಿಕ ಬ್ರತಕ್ಕೆ ಮನೋದುಃಪ್ರಣಿದಾನಂ ವಾಕ್ ಪ್ರಣಿದಾನಂ ಕಾಯದುಃಪ್ರಣಿಧಾನಂ ಅನಾದರಣಮಸ್ಮರಣ ವೆಂಬಯ್ದತಿಚಾರವುಕ್ಕುಮವನಾಗಲೀಯದುದಂ ಸಾಮಾಯಿಕಮೆಂಬಿರಡನೆಯ ಶೀಲಬ್ರತಂ ತಾಂ ಕೊಟ್ಟ ಕೊಂಡ ನ್ನವ ಹಾರಾದಿಗಳಂ ನೆನೆವುತ್ತಿಪ್ಪುದು ಮನೋದುಃಪ್ರಣಿಧಾನಂ, ನುಡಿಯುತುಂ ನಡೆಯುತುಂ ಪಾಡುತುಂ ಕ್ರಿಯೆಯಂ ಪೇಳ್ವುದು ವಾಗ್ದುಃಪ್ರಣಿದಾನಂ, ತಲೆಯುಂ ಮೈಯುಂ ತುರಿಸುತ್ತುಮೆಡೆಯಾಡುತ್ತುಂ ಕ್ರಿಯೆಯುಂ ಪೇಳ್ವುದು ಕಾಯದುಃಪ್ರಣಿಧಾನಂ. ಅಗುಳಿಸುತ್ತುಂ ಮೈಯ್ಯಂ ಮುರಿಯುತ್ತುಂ ಕಣ್ಣನೊರಸುತ್ತವಿರ್ಪುದನಾದರಂ ಆಪ್ತಾಗಮಪದಾರ್ಥಂಗಳ ನೆನೆಯದೆ ಕ್ರಿಯೆಯಂ ನೋಡುವುದಸ್ಮರಣಂ

ಇನ್ನು ಪ್ರೋಷಧೋಪವಾಸ ವ್ರತದ ವರ್ಣನೆಯನ್ನು ಮಾಡುತ್ತಾರೆ—

ಪರ್ವಣ್ಯಷ್ಟಮ್ಯಾಂ ಚ ಜ್ಞಾತವ್ಯಃ ಪ್ರೋಷಧೋಪವಾಸಸ್ತು ।
ಚತುರಭ್ಯವಹಾರ್ಯಾಣಾಂ ಪ್ರತ್ಯಾಖ್ಯಾನಂ ಸದೇಚ್ಛಾಭಿಃ ॥ ೧೦೬ ॥[1]

ಅನ್ವಯಾರ್ಥ—(ಪರ್ವಣಿ) ಚತುರ್ದಶಿಗೆ (ಚ) ಮತ್ತು (ಅಷ್ಟಮ್ಯಾಂ) ಅಷ್ಟಮಿಗೆ (ಸದಾ) ಎಲ್ಲ ಕಾಲದಲ್ಲಿ (ಇಚ್ಛಾಭಿಃ)—ವ್ರತವನ್ನು ಧರಿಸುವ—ಇಚ್ಛೆಯುಳ್ಳವರು (ಚತುರಭ್ಯವಹಾರ್ಯಾಣಾಂ) ನಾಲ್ಕು ಪ್ರಕಾರದ ಆಹಾರವನ್ನು (ಪ್ರತ್ಯಾಖ್ಯಾನಂ) ತ್ಯಾಗಮಾಡುವದು (ಪ್ರೋಷಧೋಪವಾಸಃ) ಪ್ರೋಷಧೋಪವಾಸ ವ್ರತವಾಗಿದೆ—ಎಂದು—(ಜ್ಞಾತವ್ಯಃ) ತಿಳಿಯಬೇಕು

ಅರ್ಥ—ಪ್ರೋಷಧೋಪವಾಸವನ್ನು ಮಾಡುವ ಇಚ್ಛೆಯಿಂದ ಅಷ್ಟಮಿ ಹಾಗೂ ಚತುರ್ದಶಿ ಈ ಪರ್ವತಿಥಿಗಳ ದಿವಸಗಳಲ್ಲಿ—ಹಗಲು ಮತ್ತು ರಾತ್ರಿ—ನಾಲ್ಕು ಪ್ರಕಾರದ ಆಹಾರಗಳನ್ನು ತ್ಯಾಗಮಾಡುವುದು ಪ್ರೋಷಧೋಪವಾಸವೆನಿಸುತ್ತದೆ [ಸಾಮಾನ್ಯವಾಗಿ 'ಪರ್ವಣಿ' ಎಂಬ ಶಬ್ದವು ಹುಣ್ಣಿಮೆ ಎಂಬ ಅರ್ಥವಾಚಕವಿದೆ. ಆದರೂ ಅದು ಇಲ್ಲಿ ಚತುರ್ದಶಿ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಜೈನ ಪರಂಪರೆಯಲ್ಲಿ ಪ್ರತಿಯೊಂದು ತಿಂಗಳೊಳಗೆ ಎರಡು ಅಷ್ಟಮಿ, ಎರಡು ಚತುರ್ದಶಿಗಳೆಂದು ನಾಲ್ಕು ಪರ್ವತಿಥಿಗಳನ್ನು ಸ್ವೀಕರಿಸಲಾಗುತ್ತಿದೆ. ಮುಂದೆ ಪ್ರೋಷಧೋಪವಾಸ ಎಂಬ ಹೆಸರಿನ ಶ್ರಾವಕಪದದ (ಪ್ರತಿಮಾ) ಲಕ್ಷಣವನ್ನು ಹೇಳುವಾಗ ಪ್ರಯೋಗಿಸಿದ "ಪರ್ವದಿನೇಷು ಚತುರ್ಷ್ವಪಿ ಮಾಸೇ ಮಾಸೇ" ಎಂಬ ಉಕ್ತಿಯಿಂದಲೂ ಇದು ಸ್ಪಷ್ಟವಾಗುತ್ತದೆ ಪರ್ವಣಿ ಎಂಬುದನ್ನು ಹುಣ್ಣಿಮೆಯೆಂದು ಸ್ವೀಕರಿಸಿದಲ್ಲಿ ಪರ್ವತಿಥಿಗಳು ಒಂದು ತಿಂಗಳಲ್ಲಿ ಮೂರೇ—ಎರಡು ಅಷ್ಟಮಿ, ಒಂದು ಹುಣ್ಣಿಮೆ—ಆಗುತ್ತವೆ ಇಲ್ಲಿ 'ಪರ್ವಣಿ' ಶಬ್ದದಿಂದ ಅಷ್ಟಮಿಯಂತೆ ಎರಡೂ ಪಕ್ಷಗಳ ಎರಡು ಚತುರ್ದಶಿಗಳು ನಿರ್ದೇಶಗೊಂಡಿವೆ. ಶ್ರೀ ಪ್ರಭಾಚಂದ್ರಾಚಾರ್ಯರು ತಮ್ಮ ಟೀಕಾಗ್ರಂಥದಲ್ಲಿ 'ಪರ್ವಣಿ' ಪದದ ಅರ್ಥವನ್ನು 'ಚತುರ್ದಶ್ಯಾಂ' ಎಂದು ಕೊಟ್ಟಿದ್ದಾರೆ 'ಚತುರಭ್ಯವಹಾರ್ಯಾಣಾಂ' ಎಂಬ ಪದದ ಅರ್ಥವನ್ನು ಅನ್ನ, ಪಾನ, ತಿನಿಸು, ನೆಕ್ಕುವದು ಎಂದು ಮಾಡಲಾಗಿದೆ ಇದು ಆರನೆಯ ಶ್ರಾವಕಪದದ ಲಕ್ಷಣವನ್ನು ಹೇಳುವಾಗ ಬರುವ 'ಅನ್ನಂ ಪಾನಂ ಖಾದ್ಯಂ ಲೇಹ್ಯಂ ನಾಶ್ನಾತಿ ಯೋ ವಿಭಾವರ್ಯಾಮ್' ಎಂಬ ವಾಕ್ಯವನ್ನು ಆಧರಿಸಿದೆ

ಇಲ್ಲಿ, ಈ ವ್ರತದ ಲಕ್ಷಣದಲ್ಲಿ ಒಂದು ಮಾತನ್ನು ಮುಖ್ಯವಾಗಿ ಗಮನಿಸಬೇಕು. 'ಸದಿಚ್ಛಾಭಿಃ' ಎಂಬ ಪದದ ಪ್ರಯೋಗವು ಒಂದು ವಿಶೇಷ ಅರ್ಥವನ್ನು ಸೂಚಿಸುತ್ತದೆ ಉಪವಾಸವು ಶುಭ ಇಚ್ಛೆ ಅಥವಾ ಸತ್ ಸಂಕಲ್ಪದಿಂದ ಮಾಡಿದುದಾಗಿರಬೇಕು ಯಾವುದಾದರೊಂದು ಕೆಟ್ಟ ಭಾವನೆ, ಜನರಿಗೆ ತೋರಿಕೆ, ಡಂಭ ಇವೇ ಮೊದಲಾದ ಅಸತ್ ಉದ್ದೇಶಗಳನ್ನು ಇಟ್ಟುಕೊಂಡು ಉಪವಾಸವನ್ನು ಕೈಕೊಳ್ಳುವುದು ಉಚಿತವೆನಿಸದು ಅನ್ಯರ ಮೇಲೆ ತಮ್ಮ ಉಪವಾಸದ ಆಚರಣೆಯಿಂದ ಯಾವ ಪ್ರಕಾರದ ಅನುಚಿತ ಒತ್ತಾಯವನ್ನೂ ಹೇರಕೂಡದು ಸ ಧ ]

ವಿಶೇಷಾರ್ಥ—ಒಂದು ತಿಂಗಳಲ್ಲಿ ಎರಡು ಅಷ್ಟಮಿ ಮತ್ತು ಎರಡು ಚತುರ್ದಶಿ ಈ ನಾಲ್ಕು ಪರ್ವತಿಥಿಗಳು ಅನಾದಿಕಾಲದಿಂದಲೂ ನಡೆಯುತ್ತ ಬಂದಿವೆ ಈ ಪರ್ವತಿಥಿಗಳಲ್ಲಿ ಗೃಹಸ್ಥನು ವ್ರತ ಮತ್ತು ಸಂಯಮವನ್ನು ಧಾರಣಮಾಡಿರಬೇಕು ಧರ್ಮಾತ್ಮಾ ಹಾಗೂ ಸಂಯಮಿ ಜೀವಗಳು ಯಾವವು ಇರುವವೋ ಅವು ಯಾವಾಗಲೂ ವ್ರತಿಕವಾಗಿ ಇದ್ದೇ ಇರುತ್ತವೆ ಆದರೆ ಧರ್ಮದ ಮೇಲೆ ಪ್ರೀತಿಯನ್ನು ಮಾಡುವಂಥ ಗೃಹಸ್ಥನು ಒಂದು ತಿಂಗಳಲ್ಲಿ ನಾಲ್ಕು ದಿನವಾದರೂ ಸರ್ವ ಪಾಪಾರಂಭದ ತ್ಯಾಗ ಮಾಡಬೇಕು. ಇಂದ್ರಿಯದ ವಿಷಯಗಳನ್ನು ಒತ್ತಿ ಇಡಬೇಕು.

---

1 ಆಯತವರ್ಮನು ವಿವರಿಸುವದು ಹೀಗೆ

ಕಂದ ॥ ಸರ್ವಾಷ್ಟಮಿಗಳೊಳಂತು ಚತುರ್ವಿಧಾಹಾರಮಂ ಸ್ವಶಕ್ತಿಗಳಿಂದಂ ।
ನಿರ್ವಾಣಂ ತೊರೆವುದದುಂ ನಿರ್ವಿಘ್ನಂ ಪ್ರೋಷಧೋಪವಾಸಮೆನಿಕ್ಕುಂ ॥

ವಚನ—ಅದೆಂತೆಂದೊಡೆ ಶ್ರಾವಕಂ ತಿಂಗಳು ತಿಂಗಳು ನಾಲ್ಕು ಪರ್ವದಿನಂಗಳೊಳಂ ಪ್ರೋಷಧೋಪವಾಸಂ ಗೆಯ್ದು ಮಲ್ಲಿಯೊಂದೊಪ್ಪತ್ತುಣ್ಬುದು ಪ್ರೋಷಧೋಪವಾಸಂ ಪರ್ವದ ಮುನ್ನಿನ ದಿವಸಂ ಯಧಾಲಾಭದಿನುಂಡು ದೇವಗುರು ಸಾಕ್ಷಿಯೊಳು ಅನ್ನಂ ಪಾನಂ ಖಾದ್ಯಂ ಲೇಹ್ಯಮೆಂಬ ಚತುರ್ವಿಧಾಹಾರಮುಂ ತೊರೆವುದು ಪಾರಣೆಯ ದಿನದೊಳತಿಥಿ ಪೂಜಾಪೂರ್ವಕಂ ಪಾರಣೆಯಂ ಮಾಡುವುದುಪವಾಸಮೆಂದಕ್ಕು.

ವ್ರತ–ಶೀಲ–ಸಂಯಮ ಸಹಿತ ಉಪವಾಸವನ್ನು ಧರಿಸಬೇಕು ಮತ್ತು ನಾಲ್ಕು ಪ್ರಕಾರದ ಆಹಾರವನ್ನು ತ್ಯಾಗ ಮಾಡಬೇಕು ಈ ಪ್ರಕಾರ ನಡೆಯುವವರಿಗೆ ಪ್ರೋಷಧೋಪವಾಸ ವ್ರತವು ಸಂಭವಿಸುತ್ತದೆ

**ಪ್ರೋಷಧೋಪವಾಸದ ವಿಶೇಷ ವರ್ಣನೆ**—ಪ್ರೋಷಧೋಪವಾಸ ಧಾರಣಮಾಡುವವರು ಸಪ್ತಮಿ ಮತ್ತು ತ್ರಯೋದಶಿಯ ದಿವಸ ಮಧ್ಯಾಹ್ನದಲ್ಲಿ ಒಪ್ಪತ್ತು ಊಟ ಹಾಗೂ ನೀರು ಕುಡಿಯುವದನ್ನು ಮಾಡಿ, ಎಲ್ಲ ಪ್ರಕಾರದ ಆರಂಭದ ತ್ಯಾಗ ಮಾಡಬೇಕು ಅಂದರೆ ವ್ಯಾಪಾರ, ಕೊಡ-ಕೊಳ್ಳುವುದು, ಸೇವೆ, ನೌಕರಿ ಇವೇ ಮೊದಲಾದವುಗಳಿದ್ದರೂ ಅವುಗಳನ್ನು ಬಿಡಬೇಕು ಶರೀರದ ಮೇಲಿನ ಮಮತ್ವವನ್ನು ಕಡಿಮೆಮಾಡಬೇಕು. ಏಕಾಂತ ಸ್ಥಳದಲ್ಲಿ ಅಥವಾ ಜಿನಮಂದಿರದಲ್ಲಿ, ನಿರ್ಜನ ವನದಲ್ಲಿ, ಶೂನ್ಯ ಗೃಹ ಇಲ್ಲವೆ ಮಠಗಳಲ್ಲಿ ಹೋಗಬೇಕು ಆ ಸ್ಥಾನದಲ್ಲಿ ಸಂಪೂರ್ಣ ವಿಷಯ ಕಷಾಯಗಳ ತ್ಯಾಗ ಮಾಡಬೇಕು ಮನ–ವಚನ–ಕಾಯಗಳ ಪ್ರವೃತ್ತಿಯನ್ನು ತಡೆದು ಹಿಡಿದು ಧರ್ಮಧ್ಯಾನವನ್ನು ಮಾಡಬೇಕು ಇಲ್ಲವೆ ಸ್ವಾಧ್ಯಾಯವನ್ನು ಮಾಡುತ್ತ ಸಪ್ತಮಿ ಮತ್ತು ತ್ರಯೋದಶಿಯ ಅರ್ಧ ದಿವಸವನ್ನು ಕಳೆಯಬೇಕು ಪುನಃ ಸಾಯಂಕಾಲದಲ್ಲಿ ದೇವ ವಂದನೆ, ಸಾಮಾಯಿಕ ಮೊದಲಾದವುಗಳನ್ನು ಮಾಡಿ, ರಾತ್ರಿಯಲ್ಲಿ ಧರ್ಮಕಥೆ ಮತ್ತು ಜಿನೇಂದ್ರ ಸ್ತವನವನ್ನು ಮಾಡುತ್ತ ರಾತ್ರಿಯನ್ನು ಪೂರ್ಣವಾಗಿ ಕಳೆಯಬೇಕು ಸಂಪೂರ್ಣ ರಾತ್ರಿಯೆಲ್ಲ ಜಾಗರಣೆಯನ್ನು ಮಾಡುವುದು ಶಕ್ಯವಿಲ್ಲದಿದ್ದರೆ ಶುದ್ಧವಾದ ಹಾಸಿಗೆಯ ಮೇಲೆ (ಗಾದಿ ಮಂಚಗಳಲ್ಲ) ಸ್ವಲ್ಪ ಹೊತ್ತು ಪ್ರಮಾದವನ್ನು ಇಲ್ಲವಂತೆ ಮಾಡುವದಕ್ಕಾಗಿ, ಭಗವಂತನ ನಾಮಸ್ಮರಣೆಯನ್ನು ಅಂತಃಕರಣದಲ್ಲಿ ಮಾಡುತ್ತ ಒರಗಿರಬೇಕು ಅಷ್ಟಮಿ ಚತುರ್ದಶಿಗಳ ದಿನ ಪ್ರಾತಃಕಾಲದಲ್ಲಿ ಸಾಮಾಯಿಕ ವಂದನೆಗಳನ್ನು ಮಾಡಿ, ಪ್ರಾಸುಕ (ಶುದ್ಧ) ಅಷ್ಟ ದ್ರವ್ಯಗಳಿಂದ ಜಿನಪೂಜನ ಮತ್ತು ಸ್ವಾಧ್ಯಾಯ ಮಾಡಬೇಕು ಆ ಮೇಲೆ ಹನ್ನೆರಡು ಭಾವನೆಗಳನ್ನು ಭಾವಿಸುತ್ತ ಭಾವಿಸುತ್ತ ಧರ್ಮಧ್ಯಾನದಲ್ಲಿಯೇ ಆ ದಿವಸ ಹಾಗೂ ರಾತ್ರಿಯನ್ನು ಕಳೆಯಬೇಕು ನವಮಿ ಹಾಗೂ ಹುಣ್ಣಿಮೆಯ ಪ್ರಾತಃಕಾಲಗಳಲ್ಲಿ ಸರ್ವ ನಿತ್ಯ ನಿಯಮ-ಗಳನ್ನು ಮುಗಿಸಿ, ಪೂಜೆ, ನಮಸ್ಕಾರ, ಸ್ತುತಿಗಳನ್ನು ಮಾಡಬೇಕು ತರುವಾಯ ಉತ್ತಮ, ಮಧ್ಯಮ, ಕನಿಷ್ಠ ಇವುಗಳಲ್ಲಿ ಯಾವ ಪಾತ್ರವು ಲಭಿಸುವದೋ ಅಂಥ ಪಾತ್ರಕ್ಕೆ ಅನ್ನದಾನವನ್ನು ಮಾಡಬೇಕು ಆ ಮೇಲೆ ತಾನು ಉಪವಾಸವನ್ನು ಬಿಡಬೇಕು ಇದಕ್ಕೆ 'ಪಾರಣೆ'ಮಾಡುವದೆನ್ನುವರು ಈ ಪ್ರಕಾರ ಹದಿನಾರು ಪ್ರಹರಗಳನ್ನು ಧರ್ಮಧ್ಯಾನದಲ್ಲಿ ಯಾರು ಕಳೆಯುವರೋ ಅವರಿಗೆ ಉತ್ತಮ ಪ್ರೋಷಧೋಪವಾಸವು ಸಂಭವಿಸುತ್ತದೆ ಈ ವಿಷಯದಲ್ಲಿ ಶ್ರೀಕಾರ್ತಿಕೇಯ ಸ್ವಾಮಿಗಳು ಹೀಗೆ ಹೇಳಿದ್ದಾರೆ—ಅಷ್ಟಮಿ, ಚತುರ್ದಶಿಗಳ ದಿವಸ ಸ್ನಾನ, ವಿಲೇಪನ, ಆಭೂಷಣ, ಸ್ತ್ರೀಸಂಸರ್ಗ, ಪುಷ್ಪ, ಅತ್ತರ, ಧೂಪ, ದೀಪಾದಿಗಳನ್ನು ತ್ಯಾಗಮಾಡಿ, ಯಾವ ಜ್ಞಾನೀ ಜನನು ವೀತರಾಗತ್ವವೇ ಒಂದು ಸುಂದರ ಅಲಂಕಾರವೆಂದು ತಿಳಿದು ಅದನ್ನೇ ಧರಿಸಿ, ತಮ್ಮ ಶರೀರವನ್ನು ಚೆಂದಕಾಣುವಂತೆ ಮಾಡುತ್ತಾರೋ, ಎರಡೂ ಪರ್ವಗಳಲ್ಲಿ ಯಾವಾಗಲೂ ಉಪವಾಸ, ಒಂದು ಹೊತ್ತು ಊಟ, ನೀರಸ ಭೋಜನ ಇವುಗಳಲ್ಲಿ ಯಾವುದಾದರೊಂದನ್ನು ತಮ್ಮ ಶಕ್ತಿಗೆ ಅನುಸರಿಸಿ ಮಾಡುತ್ತಿರುವರೋ ಅವರಿಗೆ ಪ್ರೋಷಧೋಪವಾಸ ವ್ರತವು ಸಂಭವಿಸುತ್ತದೆ ಶ್ರೀ ಅಮಿತಗತಿಕೃತ ಶ್ರಾವಕಾಚಾರದಲ್ಲಿ ಪರ್ವತಿಥಿಯ ದಿವಸ ಉಪವಾಸ, ಅನುಪವಾಸ, ಏಕಭುಕ್ತ ಇರಬೇಕೆಂದು ಮೂರು ಪ್ರಕಾರಗಳನ್ನು ಹೇಳಿದೆ. ಅದರಲ್ಲಿ ನಾಲ್ಕು ಪ್ರಕಾರದ ಆಹಾರಗಳನ್ನು ತ್ಯಾಗಮಾಡುವದಕ್ಕೆ ಉಪವಾಸವೆಂದು ಹೇಳಲಾಗಿದೆ ಒಂದು ವೇಳೆ ಕೇವಲ ನೀರನ್ನು ಮಾತ್ರ ಕುಡಿಯುವುದು ಅನುಪವಾಸವೆನಿಸುತ್ತದೆ ಇನ್ನು ಒಂದು ವೇಳೆ ಅನ್ನ ಹಾಗೂ ನೀರುಗಳನ್ನು ಸ್ವೀಕರಿಸುವದಕ್ಕೆ ಏಕಭುಕ್ತ ಎಂಬ ಸಂಜ್ಞೆಯನ್ನು ಕೊಡಲಾಗಿದೆ ಇದರ ತಾತ್ಪರ್ಯವಿಷ್ಟೆ—ತನ್ನ ಶಕ್ತಿಯನ್ನು ಅಡಗಿಸಿ ಇಟ್ಟುಕೊಳ್ಳದೆ ಧರ್ಮದಲ್ಲಿ ತನ್ಮಯನಾಗಿ ಉಪವಾಸಮಾಡಬೇಕು ಮುಂದೆ ನಾಲ್ಕನೆಯ ಪ್ರೋಷಧ ಪ್ರತಿಮೆಯ ವರ್ಣನೆಯನ್ನು ಮಾಡುವದಿದೆ. ಆಗ ಷೋಡಶ ಪ್ರಹರದ ನಿಯಮವು ಆವಶ್ಯಕವಾಗಿದೆ ಸದ್ಯಕ್ಕೆ ಎರಡನೆಯ ಪ್ರತಿಮೆಯ ಶ್ರಾವಕನು ಯಥಾಶಕ್ತಿ ವ್ರತ, ತಪ, ಸಂಯಮಗಳನ್ನು ಧಾರಣಮಾಡಿ, ಪರ್ವತಿಥಿಗಳಲ್ಲಿ ಧರ್ಮಧ್ಯಾನದಲ್ಲಿ ಮನವನ್ನು ಲೀನಗೊಳಿಸುವ ರೂಢಿಯನ್ನು ಮಾಡಿದರೂ ಸಾಕು

ಓಽದೆನೆ ಪರ್ವತಿದಿಯೊಳುಪವಾಸವವರ ಬ್ರಹ್ಮಚರಿಯಸಮೇತ ।
ವಿರಚಿಪನವ ಪ್ರೋಷಧುಪವಾಸಿಕ ಗುಣಭರಿತ ದಯಾದಾನಪರನು ॥

—ಬಾಹುಬಲಿ–ನಾಗಕುಮಾರ ಚರಿತಂ ೨೪–೪೯.

ಅನಶನ ವಿಧಿಯಿಂ ತಿಂಗಳಿನ ನಾಲ್ಕು ಪರ್ವದೊಳಮಾಪ್ತಪೂಜಾವಿಧಿಯಿಂ ।
ಮನಮೊಸೆದಿರ್ಪಂ ನಾಲ್ಕನೆಯ ನೆಲೆಯವಂ ಪ್ರೋಷಧೋಪವಾಸಿಯೆನಿಕ್ಕುಂ ॥

—ಶಾಂತಿನಾಥ–ಸುಕುಮಾರ ಚರಿತಂ–೬–೨೯

ಉಪವಾಸ ಮಾಡುವ ದಿವಸ ಏನೇನು ತ್ಯಾಗಮಾಡಬೇಕೆಂಬುದನ್ನು ಹೇಳುತ್ತಾರೆ—

ಪಂಚಾನಾಂ ಪಾಪಾನಾಮಲಂಕ್ರಿಯಾರಂಭಗಂಧಪುಷ್ಪಾಣಾಮ್ ।
ಸ್ನಾನಾಂಜನನಸ್ಯಾನಾಮುಪವಾಸೇ ಪರಿಹೃತಿಂ ಕುರ್ಯಾತ್ ॥ ೧೦೭ ॥[1]

ಅನ್ವಯಾರ್ಥ—(ಉಪವಾಸೇ) ಉಪವಾಸದ ದಿವಸ (ಪಂಚಾನಾಂ ಪಾಪಾನಾಂ) ಹಿಂಸೆಯೇ ಮೊದಲಾದ ಐದು ಪಾಪಗಳನ್ನು (ಅಲಂಕ್ರಿಯಾರಂಭಗಂಧಪುಷ್ಪಾಣಾಮ್) ಶೃಂಗಾರ, ಆರಂಭ, ಗಂಧ, ಹೂವುಗಳನ್ನು (ಸ್ನಾನಾಂಜನನಸ್ಯಾನಾಂ) ಸ್ನಾನ, ಅಂಜನ, ನಸ್ಯಗಳನ್ನು (ಪರಿಹೃತಿಂ) ತ್ಯಾಗ (ಕುರ್ಯಾತ್) ಮಾಡಬೇಕು

ಅರ್ಥ—ಉಪವಾಸದ ದಿವಸ ಹಿಂಸೆಯೇ ಮೊದಲಾದ ಐದು ಪಾಪಗಳ ತ್ಯಾಗಮಾಡಬೇಕು ಅಲಂಕಾರ, ವಸ್ತ್ರಾಭರಣ, ನಟಣೆ, ಶೃಂಗಾರ, ಗೃಹಕಾರ್ಯಾರಂಭ, ಉಪಜೀವನದ ಕೆಲಸಗಳ ಆರಂಭ, ಸುಗಂಧ ದ್ರವ್ಯಗಳನ್ನು ಉಪಯೋಗಿಸುವುದು, ಅತ್ತರ–ಗುಲಾಬಗಳ ವಾಸ ತಕ್ಕೊಳ್ಳುವುದು, ಹೂವಿನ ವಾಸ ತಕ್ಕೊಳ್ಳುವುದು, ಸ್ನಾನ ಮಾಡುವುದು, ಕಣ್ಣುಗಳಿಗೆ ಸುರಮಾ, ಕಾಡಿಗೆ ಮೊದಲಾದವುಗಳನ್ನು ಹಚ್ಚಿಕೊಳ್ಳುವುದು, ನಸ್ಯ ಸೇದುವುದು, ವಾದ್ಯ-ಗಳನ್ನು ಬಾರಿಸುವುದು, ಗಾಯನ ಕೇಳುವುದು, ನಾಟಕ ನೋಡುವುದು ಮೊದಲಾದ ಕ್ರಿಯೆಗಳನ್ನೆಲ್ಲ ತ್ಯಾಗಮಾಡಬೇಕು. ಇದೇ ಪ್ರಕಾರ ಇನ್ನುಳಿದ ಪಂಚೇಂದ್ರಿಯಗಳ ವಿಷಯ ಭೋಗಗಳನ್ನೂ ತ್ಯಾಗಮಾಡಬೇಕು. ಯಾಕೆಂದರೆ ಉಪವಾಸವು ಇಂದ್ರಿಯಗಳ ಆಸಕ್ತಿಯನ್ನು ಕಡಿಮೆಮಾಡುವುದಕ್ಕಾಗಿ ಇರುತ್ತದೆ ಅಲ್ಲದೆ ವಿಷಯದ ಕಡೆಗೆ ಹರಿಯುವ ಪ್ರವೃತ್ತಿಯನ್ನು ತಡೆಯುವದಕ್ಕಾಗಿಯೂ ಕಾಮೇಚ್ಛೆಯನ್ನು ಕಡಿಮೆ ಮಾಡುವದಕ್ಕಾಗಿಯೂ ಉಪವಾಸವಿರುತ್ತದೆ ಮೇಲಾಗಿ ಪ್ರಮಾದ, ಆಲಸ್ಯ, ನಿದ್ರೆಗಳು ಬರಕೂಡದೆಂದೂ ಆರಂಭಾದಿಗಳಿಂದ ವಿರಕ್ತರಾಗಬೇಕೆಂದೂ ಪರೀಷಹಗಳನ್ನೂ ಸಹನ ಮಾಡುವ ಸಾಮರ್ಥ್ಯವು ಬರಬೇಕೆಂದೂ ಉಪವಾಸ ಮಾಡಲಾಗುತ್ತಿದೆ ಇದೂ ಅಲ್ಲದೆ ಧರ್ಮ ಮಾರ್ಗದಿಂದ ಚಲಿತನಾಗದಿರಲಿಕ್ಕೂ ಜಿಹ್ವೇಂದ್ರಿಯ ಮತ್ತು ಉಪಸ್ಥ ಇಂದ್ರಿಯಗಳನ್ನು ಒತ್ತಿ ಇಡಲಿಕ್ಕೆಂದೂ ಉಪವಾಸವು ಪೋಷಕವಿದೆ ಉಪವಾಸದಿಂದ ತನ್ನ ಹೊಗಳಿಕೆಯಾಗಬೇಕು, ಏನಾದರೂ ಲಾಭವಾಗಬೇಕು, ಪರಲೋಕದಲ್ಲಿ ರಾಜ್ಯಸಂಪತ್ತುಗಳು ದೊರೆಯಬೇಕು ಇವು ಉಪವಾಸ ಮಾಡುವ ಹೇತುಗಳಲ್ಲ. ಕೇವಲ ವಿಷಯಾನುರಾಗವು ಕಡಿಮೆಯಾಗಬೇಕೆಂಬುದೊಂದೇ ಉಪವಾಸದ ಉದ್ದೇಶವಾಗಿರಬೇಕು. ಉಪೋಷಣದಿಂದ ತಿನ್ನುಣ್ಣುವುದು, ಅನೇಕ ಪ್ರಕಾರದ ರಸಾಸ್ವಾದವನ್ನು ತಕ್ಕೊಳ್ಳುವುದು ಇವುಗಳಲ್ಲಿಯ ತೀವ್ರ ಇಚ್ಛೆಯು ಕಡಿಮೆಯಾಗುತ್ತದೆ. ನಿದ್ರೆಯು ಕಡಿಮೆಯಾಗುತ್ತದೆ. ಕಾಮವೇದನೆಯು ಇಲ್ಲದಂತಾಗುತ್ತದೆ ಉಪವಾಸದ ಇಂಥ ಅತುಲ ಪ್ರಭಾವವನ್ನು ತಿಳಿದು, ಅದನ್ನು ಆಚರಿಸುವುದಕ್ಕೆ ಪ್ರವೃತ್ತರಾಗಬೇಕು

ವಿಶೇಷಾರ್ಥ—[ಈ ಕಾರಿಕೆಯಲ್ಲಿ ಉಪವಾಸದ ದಿನ ಇಲ್ಲವೆ ಉಪವಾಸದ ಸಮಯದಲ್ಲಿ 'ಏನನ್ನು ಮಾಡಬಾರದು' ಎಂಬುದನ್ನೂ, ಮುಂದಿನ ಶ್ಲೋಕದಲ್ಲಿ ಯಾವುದನ್ನು ಆಚರಿಸಬೇಕೆಂಬುದನ್ನೂ ಹೇಳಿದೆ ಇವೆರಡು ಪದ್ಯಗಳಿಂದ ಉಪವಾಸದ ದೃಷ್ಟಿ ಹಾಗೂ ಆಚರಣೆಗಳನ್ನು ಸ್ಪಷ್ಟಗೊಳಿಸಲಾಗಿದೆ ಇದರಿಂದ ಈ ಉಪವಾಸವು ಧಾರ್ಮಿಕ ದೃಷ್ಟಿಯದಿದೆ ಎಂಬುದು ಸ್ಪಷ್ಟವಾಗುತ್ತದೆ. ಅದಕ್ಕಾಗಿ ಈ ಶ್ಲೋಕದಲ್ಲಿ ಐದು ಪಾಪಗಳನ್ನು, ತ್ಯಾಗ ಮಾಡುವ ಉಲ್ಲೇಖವು ಪ್ರಮುಖವಾಗಿದೆ. ಇದಕ್ಕೆ ಮೊದಲನೆಯ ಸ್ಥಾನ ಕೊಡಲಾಗಿದೆ ಮುಂದಿನ ಶ್ಲೋಕದಲ್ಲಿ

---

[1] ಆಯತವರ್ಮನ ವಚನ ಹೀಗಿದೆ

ವಚನ—ಉಪವಾಸಂಗೆಯ್ವಂದಿನ ದಿವಸಂ ಹಿಂಸಾದಿ ಪಂಚದೋಷಂಗಳುಮಂ ಕಯ್ತೆಯ್ವುದುಮಂ (?) ಷಟ್ಕರ್ಮಂಗಳುಮಂ ಗಂಧಮಾಲ್ಯಾದಿಗಳುಮಂ ಸ್ನಾನಾಂಜನಸ್ಯಂಗಳುಮಂ ಪರಿಹರಿಸಿ.

ಧರ್ಮಾಮೃತವನ್ನು ಬಹಳ ಉತ್ಸುಕತೆಯಿಂದ ಪಾನಮಾಡಲಿಕ್ಕೂ ಪಾನಮಾಡಿಸಲಿಕ್ಕೂ ಹೇಳಿದೆ ಅದೇ ಅಲ್ಲಿ ಪ್ರಮುಖವಾಗಿದೆ ಇದನ್ನುಳಿದು ಅನ್ಯ ಲೌಕಿಕ ದೃಷ್ಟಿಯಿಂದ–ತಮ್ಮ ಆರೋಗ್ಯ ಸುಧಾರಿಸುವದಕ್ಕಾಗಿ, ತನ್ನ ಅಭಿಪ್ರಾಯಕ್ಕೆ ಇನ್ನೊಬ್ಬರನ್ನೂ ತರವದಕ್ಕಾಗಿ ಸತ್ಯಾಗ್ರಹ ರೂಪದಿಂದ ಇತ್ಯಾದಿ ಕಾರಣಗಳಿಗಾಗಿ ಅಲಂಘನ, ಅನಶನವ್ರತಗಳನ್ನು—ಕೈಕೊಂಡರೆ ಅವು ಇಂಥ ಉಪವಾಸದಲ್ಲಿ ಸಮಾವೇಶವಾಗಲಾರವು. ಸ ಧ ]

ಸೂಸುವ ಪರಿಮಳ ತಳಿವ ಪನ್ನೀರಿಲ್ಲ ಬೀಸುವ ಚಮರವಿಲ್ಲಾಗ ।
ಬೀಸಣಿಗೆಯ ಗಾಳಿ ಪೀಳಿಯವಿಲ್ಲುಪವಾಸಿಗಳಿರ್ದರೊಪ್ಪದೊಳು ॥
ಕಾಮತಂತ್ರದ ನುಡಿಯಿಲ್ಲ ಭೋಗದೊಳಂದು ನಾಮಮಾತ್ರದ ನೆನಹಿಲ್ಲ ।
ಕ್ಷೇಮ ಭಾವನೆಯೊಳು ಮನದಣಿದಾ ಮೋಕ್ಷಗಾಮಿಗಳಿರ್ದರರ್ತಿಯೊಳು ॥

—ರತ್ನಾಕರ—ಭರತೇಶ ವೈಭವ—ತತ್ತ್ವೋಪದೇಶ—ಸಂಧಿ ೭–೮.

ಉಪವಾಸದ ದಿವಸವನ್ನು ಹೇಗೆ ಕಳೆಯಬೇಕೆಂಬುದನ್ನು ಈಗ ಹೇಳುತ್ತಾರೆ—

ಧರ್ಮಾಮೃತಂ ಸತೃಷ್ಣಃ ಶ್ರವಣಾಭ್ಯಾಂ ಪಿಬತು ಪಾಯಯೇದ್ವಾನ್ಯಾನ್ ।
ಜ್ಞಾನಧ್ಯಾನಪರೋ ವಾ ಭವತೂಪವಸನ್ನತಂದ್ರಾಲುಃ ॥ ೧೦೮ ॥[1]

ಅನ್ವಯಾರ್ಥ—(ಅತಂದ್ರಾಲುಃ) ಉದ್ಯಮಿಯಾದಂಥ (ಉಪವಸನ್) ಉಪವಾಸಕನು (ಸತೃಷ್ಣಃ) ಆಸ್ಥಾಪೂರ್ವಕವಾಗಿ (ಶ್ರವಣಾಭ್ಯಾಂ) ಕಿವಿಗಳ ಯೋಗದಿಂದ (ಧರ್ಮಾಮೃತಂ) ಧರ್ಮವೆಂಬ ಅಮೃತವನ್ನು (ಪಿಬತು) ಪಾನಮಾಡಬೇಕು, (ವಾ) ಅಥವಾ (ಅನ್ಯಾನ್) ಎರಡನೆಯವರಿಗೆ (ಪಾಯಯೇತ್) ಪಾನಮಾಡಿಸಬೇಕು, (ವಾ) ಅಥವಾ (ಜ್ಞಾನಧ್ಯಾನಪರಃ) ಜ್ಞಾನ ಹಾಗೂ ಧ್ಯಾನದಲ್ಲಿ ತತ್ಪರನು (ಭವತು) ಆಗಬೇಕು

ಅರ್ಥ—ಉಪೋಷಣ ಮಾಡುವವನು ಆ ದಿವಸ ಧರ್ಮ ಕಥೆಯನ್ನು ಶ್ರವಣ ಮಾಡಬೇಕು ಅದು ಅಭಿಲಾಷಾ ಪೂರ್ವಕವಾಗಿರಬೇಕು ಅಲ್ಲದೆ ಎರಡನೆಯವರಿಗೂ ಧರ್ಮಾಮೃತವನ್ನು ಪಾನಮಾಡಿಸಬೇಕು ನಿದ್ರೆ ಮತ್ತು ಆಲಸ್ಯಗಳನ್ನು ತೊರೆದು, ಜ್ಞಾನ ಸಂಪಾದನೆಯಲ್ಲಿಯೂ ಧ್ಯಾನಮಾಡುವುದರಲ್ಲಿಯೂ ತತ್ಪರನಾಗಿರಬೇಕು.

[ಇಲ್ಲಿ ಉಪವಾಸದ ದಿನದಲ್ಲಿ ಆಚರಿಸಬೇಕಾದ ಕರ್ತವ್ಯವನ್ನು ವಿಧಿಸುವಾಗ ಅಮೃತವನ್ನು ಕುಡಿಯುವುದು ಹಾಗೂ ಅನ್ಯರಿಗೆ ಕುಡಿಸುವುದು—ಎಂಬ ಮಾತು ಬಂದಿದೆ ಉಪವಾಸದಲ್ಲಿ ನಾಲ್ಕೂ ಪ್ರಕಾರದ ಆಹಾರಗಳನ್ನು ತ್ಯಾಗ ಮಾಡಿದಾಗ (–ಅದರಲ್ಲಿ ಕುಡಿಯುವುದೂ ಸೇರುತ್ತದೆ–ಅದರಿಂದ) ಪಾನವೂ ತ್ಯಾಜ್ಯವಾಗಿದೆ ಆದರೆ ಇಲ್ಲಿ ಹೇಳಿದ ಕುಡಿಯುವ ವಿಧಾನವು–ಮುಖದಿಂದಲ್ಲ—ಕಿವಿಯಿಂದಾಗಿದೆ ಅಲ್ಲದ ಕುಡಿಯುವಂಥ ಪದಾರ್ಥವು ಅಮೃತವಾಗಿದೆ, ಹಾಲು–ಮೊಸರು–ತುಪ್ಪದಂಥದಲ್ಲ ಅದೂ ಧರ್ಮರೂಪವಾಗಿದೆ ಇನ್ನು ಇಲ್ಲಿಯ ಧರ್ಮವೂ ಸಹ ಈ ಶಾಸ್ತ್ರದಲ್ಲಿ ಪ್ರತಿಪಾದಿಸಿದ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರರೂಪದ ಧರ್ಮವಾಗಿದೆ ಈ ಸದ್ಧರ್ಮಕ್ಕೇನೇ ಅಮೃತವೆಂದು ಹೇಳಲಾಗಿದೆ. ಇಂಥ ಧರ್ಮಾಮೃತವನ್ನು ಕುಡಿಯುವುದು ತ್ಯಾಜ್ಯವೆನಿಸುವದಿಲ್ಲ ಇದನ್ನಂತೂ ಬಹು ಉತ್ಸುಕತೆಯಿಂದ ಕುಡಿಯಲಿಕ್ಕೆ ಬೇಕು ಮತ್ತು ಎರಡನೆಯವರಿಗೂ ಕುಡಿಸಲಿಕ್ಕೆ ಬೇಕು ತೃಷ್ಣೆ ಎಂಬುದು ಬೇರೆ ಕಡೆಗಳಲ್ಲಿ ನಿಷೇಧವೆನಿಸುತ್ತದೆ ಅದೇ ತೃಷ್ಣೆಯು ಧರ್ಮಾಮೃತವನ್ನು ಕುಡಿಯುವುದರಲ್ಲಿಯೂ ಕುಡಿಸುವುದರಲ್ಲಿಯೂ ನಿಷೇಧವೆನಿಸಿಲ್ಲ, ವಿಧಾನವೆನಿಸಿದೆ ಇದನ್ನು ಸೂಚಿಸುವದಕ್ಕಾಗಿಯೇ 'ಸತೃಷ್ಣಃ' ಎಂಬ ಪದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ ಅಲ್ಲದೆ ಅದು ಉಪವಾಸ ಮಾಡುವವರಿಗೆ ವಿಶೇಷಣವಾಗಿದೆ ಸದ್ಧರ್ಮವು ವಾಸ್ತವಿಕವಾಗಿಯೂ ಒಳ್ಳೆಯ ಅಮೃತವಾಗಿದೆ. ಅದು ಜೀವಾತ್ಮನಿಗೆ ಸ್ಥಿರವಾದ ಸಂತುಷ್ಟಿಯನ್ನೂ ಶಾಂತಿಯನ್ನೂ ಒದಗಿಸುತ್ತದೆ. ಅದು ಅಮೃತತ್ವವನ್ನು ಅಥವಾ ಮುಕ್ತಿಯನ್ನು ನೀಡುತ್ತದೆ

---

1 ಆಯತವರ್ಮನು ಹೇಳುವದು ಹೀಗೆ

ವಚನ—ತನ್ನ ಮನೆಯೊಳಾನುಂ ಬಸದಿಯೊಳಾನುಂ ಆಹಾರಗಮುಪದಾರ್ಥಂಗಳಂ ಚಿಂತಿಸುತ್ತುಂ ಪೆರರ್ಗೆಪೇಳುತ್ತುಂ ಸಮತ್ವದೊಳಿಪ್ಪುದು ಪ್ರೋಷಧೋಪವಾಸವೆಂಬ ಶಿಕ್ಷಾವ್ರತಂ

ಧರ್ಮಾಮೃತವನ್ನು ಕುಡಿಯುವುದೂ ಕುಡಿಸುವುದೂ ಅಲ್ಲದೆ ಇಲ್ಲಿ ಉಪವಾಸದ ದಿವಸ ಇನ್ನೊಂದು ಅಗತ್ಯದ ಕರ್ತವ್ಯವನ್ನು ನಿರ್ದೇಶಿಸಲಾಗಿದೆ ಅದು 'ಜ್ಞಾನ ಧ್ಯಾನಗಳಲ್ಲಿ ತತ್ಪರರಾಗಿರುವುದು' ಅರ್ಥಾತ್ ಉಪವಾಸದ ದಿವಸ ಜ್ಞಾನ ಮತ್ತು ಧ್ಯಾನದ ಅಭ್ಯಾಸಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟು, ವೇಳೆಯನ್ನು ಕಳೆಯ-ಬೇಕೆಂದು ಹೇಳಿದೆ ಆ ದಿನ ವಿಶೇಷರೂಪದಿಂದ ಸ್ವಾಧ್ಯಾಯ ಹಾಗೂ ಆತ್ಮಧ್ಯಾನರೂಪ ಸಾಮಾಯಿಕದ ಸಾಧನೆಯಲ್ಲಿ ತೊಡಗಿರಬೇಕು ಸಾಮಾಯಿಕದ ಕಾರ್ಯವು ಉಪವಾಸ ಮತ್ತು ಏಕಭುಕ್ತಿಯ ದಿನ ಚೆನ್ನಾಗಿ ನಡೆಯುತ್ತದೆ ಇದನ್ನು ಈ ಮೊದಲೇ ಹೇಳಿದೆ ಈ ಎಲ್ಲ ಕರ್ತವ್ಯಗಳನ್ನು ಚೆನ್ನಾಗಿ ನೆರವೇರಿಸುವದಕ್ಕಾಗಿ ನಿದ್ರೆ ಹಾಗೂ ಆಲಸ್ಯಗಳ ಮೇಲೆ ವಿಜಯವನ್ನು ಸಂಪಾದಿಸುವದು ಬಹು ಅಗತ್ಯದ್ದಾಗಿದೆ. ಅದಕ್ಕಾಗಿಯೇ 'ಅತಂದ್ರಾಲುಃ' ಎಂಬ ವಿಶೇಷಣದ ಪ್ರಯೋಗವನ್ನು ಮಾಡಲಾಗಿದೆ ಅದಕ್ಕಾಗಿ ಇವುಗಳ ಮೇಲೆ ಯಾವಾಗಲೂ ದೃಷ್ಟಿಯನ್ನು ಇಡಬೇಕು ಸ ಧ.]

ವಿಶೇಷಾರ್ಥ—ಉಪವಾಸ ಮಾಡಿದ ದಿವಸ ಧರ್ಮ ಕಥೆಗಳನ್ನು ಶ್ರವಣ ಮಾಡಬೇಕು. ಇತರ ಧರ್ಮನಿಷ್ಠ ಜೀವಿಗಳಿಗೆ ಧರ್ಮಶ್ರವಣ ಮಾಡಿಸಬೇಕು ಜ್ಞಾನಾಭ್ಯಾಸವನ್ನು ಮಾಡುತ್ತ ಅದರಲ್ಲಿಯೇ ತನ್ಮಯವಾಗಿದ್ದು, ಆ ಇಡೀ ದಿನವನ್ನು ಕಳೆಯಬೇಕು ಆಲಸ್ಯದಲ್ಲಿಯೂ ನಿದ್ರೆಯಲ್ಲಿಯೂ ಕಳೆಯಕೂಡದು ಇಲ್ಲವೆ ಆರಂಭಾದಿ ಕ್ರಿಯೆಗಳಲ್ಲಿಯೂ ವಿಕಥೆಗಳಲ್ಲಿಯೂ ಹೊತ್ತನ್ನು ಕಳೆಯಬಾರದು

ಧರ್ಮಕಥಾರಸದೊಳಗುಪವಾಸದ ಪೆರ್ಮೆಗೆ ಕೊರಗದೊಪ್ಪಿದರು ।
ಘರ್ಮದ ಬಿಸಿಲಿಗೆ ಕೊರಗದೆ ತಾವರೆ ನಿರ್ಮಲ ಜಲದೊಳಿಪ್ಪಂತೆ ॥
ಮಂಡಿತದರ್ಭಾಸನದಲ್ಲಿ ಚಕ್ರೇಶ ಮಂಡಿಸಿ ಸತಿಯರು ತನ್ನ ।
ಪೆಂಡಿರೆಂದೆಣಿಸದೆಯಿವರಿಂದು ತವಸಿ ಪೆಣ್ಗಂಡವೆಂದೆಣಿಸಿ ನೋಡುವನು ॥
ಜ್ಞಾನಭಾಸ್ಕರ ಧರ್ಮಕಥೆಗೆ ನೆಗೆದು ನೋಡಿ ಯೇನಿರಾ ವ್ರತಸತಿಯರಿರಾ ।
ಹಾ ನಮ್ಮ ಸಂಸರ್ಗದಿಂದುಪವಾಸದ ಗ್ಲಾನಿಯಾದುದೆ ನಿಮಗೆಂದಾ ॥
ಉಪವಾಸದಿಂದೊಂದು ಗ್ಲಾನಿಯಿಲ್ಲೆಮಗೆ ನಿನ್ನುಪದೇಶವೊಂದ ಕೇಳ್ವಾಗ ।
ಉಪರಿಮಸ್ವರ್ಗಿಗಳುಣ್ಣದೆ ಸುಖಿಸುವಂತುಪಮಿಸುತದೆಯೆಂದರವರು ॥
ಅನಶನವೇನು ಪ್ರಯಾಸವಂತಿರಲಿ ಪಾವನ ಧರ್ಮಸಾರವನಿನ್ನು ।
ಅನುಪಡಿಸೆಲೆ ಪರ್ವದಿವಸದಾಚಾರ್ಯಯೆಂದನಿಮಿಷಾಕ್ಷಿಯರು ನುಡಿದರು ॥

—ರತ್ನಾಕರ—ಭರತೇಶ ವೈಭವ—ತತ್ವೋಪದೇಶಸಂಧಿ ೨೨–೨೪–೨೫–೨೬–೩೦

ಓದುವ ಪೇಳ್ವ ಕೇಳ್ವ ಪರಿಭಾವಿಪ ಬಲ್ಲನಿತಂ ಪರರ್ಗೆ ತಾ-
ನೋದಿಪ ಮೂರು ಸಂಜೆಗಳನಾರು ಸುಪರ್ವದಿನಂಗಳಂ ಸದಾ ।
ಸಾಧಿಸಿ ತಕ್ಕ ತತ್ಕ್ರಿಯೆಗಳಂ ನೆಗಳ್ದಂತುಟು ದಂದುಗಂಗಳಿಂ
ಪೋದೊಡೆ ಕಾಲಮೆಲ್ಲ ಶುಭಕಾಲವಲಾ ಅಪರಾಜಿತೇಶ್ವರಾ ॥

—ರತ್ನಾಕರ—ಅಪರಾಜಿತ ಶತಕ—೪೮.

ಇಲ್ಲಿ ಆಚಾರ್ಯರು ಉಪವಾಸವೆಂದರೇನೆಂಬುದನ್ನು ವಿವರಿಸುತ್ತಾರೆ—

ಚತುರಾಹಾರವಿಸರ್ಜನಮುಪವಾಸಃ ಪ್ರೋಷಧಃ ಸಕೃದ್ಭುಕ್ತಿಃ ।
ಸ ಪ್ರೋಷಧೋಪವಾಸೋ ಯದುಪೋಷ್ಯಾರಂಭಮಾಚರತಿ ॥ ೧೦೯ ॥

ಅನ್ವಯಾರ್ಥ—(ಚತುರಾಹಾರವಿಸರ್ಜನಮ್) ನಾಲ್ಕು ಪ್ರಕಾರದ ಆಹಾರದ ತ್ಯಾಗಮಾಡುವುದು (ಉಪವಾಸಃ) ಉಪವಾಸ-ಎನಿಸುತ್ತದೆ —(ಸಕೃತ್‌ಭುಕ್ತಿಃ) ಒಪ್ಪತ್ತು ಊಟಮಾಡುವುದು (ಪ್ರೋಷಧಃ) ಪ್ರೋಷಧ-ಎನಿಸುತ್ತದೆ —(ಉಪೋಷ್ಯ) ಉಪವಾಸಮಾಡಿ (ಯತ್) ಯಾವಾಗ (ಆರಂಭ) ಉಪವಾಸ ಬಿಡುವ ದಿನ ಅಂದರೆ ಪಾರಣೆಯ ದಿನ ಒಂದು ಹೊತ್ತು ಊಟ ಮಾಡುವುದನ್ನು (ಆಚರತಿ) ಆಚರಿಸುತ್ತಾರೋ (ಸಃ) ಅದು (ಪ್ರೋಷಧೋಪವಾಸಃ) ಪ್ರೋಷಧೋಪವಾಸವೆನಿಸುತ್ತದೆ

ಅರ್ಥ—ತಿನ್ನುವುದು, ಕುಡಿಯುವುದು, ರುಚಿನೋಡುವುದು ಮತ್ತು ನೆಕ್ಕುವುದು ಈ ನಾಲ್ಕು ಪ್ರಕಾರದ ಆಹಾರವನ್ನು ತ್ಯಾಗ ಮಾಡುವದಕ್ಕೆ ಉಪವಾಸವೆನ್ನುತ್ತಾರೆ ಉಪವಾಸದ ಮೊದಲನೆಯ ದಿನ ಹಾಗೂ ಉಪವಾಸ ಮಾಡಿದ ಮರುದಿನ ಒಂದೇ ಹೊತ್ತು ಊಟ ಮಾಡಿರುವುದಕ್ಕೆ ಪ್ರೋಷಧವೆನ್ನುತ್ತಾರೆ ಇದೇ ಪ್ರಕಾರ ಹದಿನಾರು ಪ್ರಹರಗಳ ವರೆಗೆ ಭೋಜನವೇ ಮೊದಲಾದ ಆರಂಭವನ್ನು ಸಂಪೂರ್ಣವಾಗಿ ತ್ಯಾಗಮಾಡಿ ಇರುವುದಕ್ಕೆ ಪ್ರೋಷಧೋಪವಾಸವೆನ್ನುವರು

ವಿಶೇಷಾರ್ಥ—[ಇಲ್ಲಿ 'ಪ್ರೋಷಧೋಪವಾಸಃ' ಪದದ ವಿಶ್ಲೇಷಣವನ್ನು ಮಾಡುತ್ತ 'ಪ್ರೋಷಧ' ಮತ್ತು 'ಉಪವಾಸ' ಎಂಬ ಹೆಸರಿನ ಎರಡೂ ಅಂಗಗಳನ್ನು ಭಿನ್ನ ಭಿನ್ನ ಲಕ್ಷಣ ಕೊಟ್ಟು ವಿವೇಚಿಸಿದ್ದಾರೆ. ಅಲ್ಲದೆ ಅಖಂಡ ಪದದ ಅರ್ಥವನ್ನೂ ಸ್ವತಂತ್ರ ರೂಪದಲ್ಲಿ ಹೇಳಿದ್ದಾರೆ (ಈ ಮೊದಲೇ ಪ್ರೋಷಧೋಪವಾಸದ ಲಕ್ಷಣವನ್ನು ೧೦೬ನೆಯ ಸೂತ್ರದಲ್ಲಿ ವಿವರಿಸಲಾಗಿದೆ ಅಲ್ಲಿಯ ಅರ್ಥಕ್ಕೆ ಈ ಸೂತ್ರದ ಅರ್ಥವು ವಿರುದ್ಧವಾಗಿದೆ ಇಷ್ಟೇ ಅಲ್ಲ, ಮುಂದೆ ಶ್ರಾವಕನ ನಾಲ್ಕನೆಯ ಸ್ಥಾನವನ್ನು ನಿರ್ದೇಶಿಸುವ ೧೪೦ನೆಯ ಸೂತ್ರದ ಅರ್ಥಕ್ಕೂ ವಿರೋಧವಾಗುತ್ತದೆ.) ಈ ಲಕ್ಷಣವನ್ನು ಪ್ರತಿಪಾದಿಸುವಾಗ 'ಪ್ರೋಷಧ' ಶಬ್ದವನ್ನು ಪರ್ವದ ಪರ್ಯಾಯ ಪದವೆಂದು ಹೇಳದೆ ಏಕಭುಕ್ತಿ ಎಂಬ ಅರ್ಥದಲ್ಲಿ ಸ್ವೀಕರಿಸಲಾಗಿದೆ. ಇದು ಹೆಚ್ಚು ವಿಚಾರ ಮಾಡತಕ್ಕ ವಿಷಯವಾಗಿದೆ ಸ ಥ]

ಮನಪೊಲ್ದಿರ್ಪುಪವಾಸವೊಂದು ದೊರೆವೆತ್ತಾಚಾಮ್ಲದೊಳ್ ಪಾರಣಾ-
ದಿನಮೊಂ[ದಂತು]ಪವಾಸಮೊಂಪಶನ[ದಿಂ]ದೊಂದಗ್ಗಳಂ ಪೆರ್ಚಿನೆ ।
ಟ್ಟನೆ ಪತ್ತೊಂಬತುನೂರತೊಂಬತುದಿನಂಗಳ್ಪೋದೊಡಾಚಾಮ್ಲವ-
ರ್ಧನಮೊಂದಕ್ಕುಮವಿಪ್ಪತಯ್ದು ನೆರೆದಂದಕುಂ ತದುದ್ಯಾಪನಂ ॥

—ಶಾಂತಿನಾಥ—ಸುಕುಮಾರ ಚರಿತಂ—೯–೧೭.

ಇನ್ನು ಉಪವಾಸದ ಐದು ಅತಿಚಾರಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ—

ಗ್ರಹಣವಿಸರ್ಗಾಸ್ತರಣಾನ್ಯದೃಷ್ಟಮೃಷ್ಟಾನ್ಯನಾದರಾಸ್ಮರಣೇ ।
ಯತ್ಪ್ರೋಷಧೋಪವಾಸೇ ವ್ಯತಿಲಂಘನಪಂಚಕಂ ತದಿದಮ್ ॥ ೧೧೦ ॥[1]

ಅನ್ವಯಾರ್ಥ—(ಯತ್) ಯಾವುದನ್ನು (ಅದೃಷ್ಟ ಮೃಷ್ಟಾನಿ) ನೋಡದೆ ಝಾಡಿಸದೆ (ಗ್ರಹಣವಿಸರ್ಗಾ-ಸ್ತರಣಾನಿ) ತಕ್ಕೊಳ್ಳುವುದು, ಒಗೆಯುವುದು, ಹಾಸಿಗೆ ಹಾಸುವುದು (ಅನಾದರಾಸ್ಮರಣೇ) ಅನಾದರ ಮಾಡುವುದು, ಮರೆಯುವುದು (ತತ್) ಅದು (ಇದಂ) ಇವು (ಪ್ರೋಷಧೋಪವಾಸವ್ಯತಿಲಂಘನಪಂಚಕಂ) ಪ್ರೋಷಧೋಪವಾಸದ ಐದು ಅತಿಚಾರಗಳಾಗಿವೆ .

ಅರ್ಥ—ಕಣ್ಣಿನಿಂದ ನೋಡದ ಹೊರತಾಗಿ, ಮೃದು ಉಪಕರಣಗಳನ್ನು ಶೋಧಿಸದ ಹೊರತಾಗಿ, ಪೂಜೆಯ ಹಾಗೂ ಸ್ವಾಧ್ಯಾಯದ ಉಪಕರಣಗಳನ್ನು ಗ್ರಹಣಮಾಡುವದು ಗ್ರಹಣಾತಿಚಾರವೆನಿಸುತ್ತದೆ ನೋಡದೆ, ನಿರೀಕ್ಷಿಸದೆ ಉಪಕರಣವನ್ನು ಇಡುವುದು ಇಲ್ಲವೆ ಶರೀರದ ಕೈಕಾಲುಗಳನ್ನು ಪಸರಿಸುವುದು ವಿಸರ್ಗಾತಿಚಾರವೆನಿಸುತ್ತದೆ

---

1 ಆಯತವರ್ಮನು ಹೇಳುವದು ಹಿ ಗೆ —

ವಚನ—ಅದಕ್ಕೆ ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸರ್ಗಮುಪ್ರತ್ಯವೇಕ್ಷಿತಾದಾನಂ ಸಂಸ್ಕಾರೋಪಕ್ರಮಣಂ ಅನಾದರಂ ಅಸ್ಮರಣಂ ಎಂದಯ್ದತಿಚಾರವುಕ್ಕುಮವನಾಗಲಿ.ಯುದುದು ಪ್ರೋಷಧೋಪವಾಸಮೆಂದಾರನೆಯ ಶಿಕ್ಷಾಬ್ರತವುಲ್ಲಿ ಪ್ರಾಣಿಗಳೊಳ-ವಿಲ್ಲಿಂಮ ನೋಡದೆ ಮೃದುದಪ್ಪುದರಿಂ_ ಪ್ರತಿಲೇಖಿಸದೆ ಕಾಯುಮಲಂ ಮೊದಲಾಗೊಡೆಯುವಂ ಬಿಸುರ್ಪುದಪ್ರತ್ಯವೇಕ್ಷಿತಾ ಪ್ರಮಾರ್ಜಿತೋತ್ಸರ್ಗಂ ಆಯೊಂದದೊಳೆ ಪುಸ್ತಕಾದ್ಯುಪಕರಣಂಗಳಂ ಕೊಳ್ಳುದಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನಂ ಆ ಪರ್ವ-ದೊಳ್ ಸಂಸ್ತಾರಮುಂ ಹಾಸುವುದು ಸಂಸ್ತಾರೋಪಕ್ರಮಣಂ ಅನೇಕ ಉಪವಾಸಂ ಗೆಯ್ದನೊಪೊ ವ್ಯಾಪಾರಮುಳ್ಳಪಪೇಕ್ಷ-ಭೇದಂ ಬಿಡುವುದನಾದರಂ ತನ್ನ ಕಯ್ದೊಂಡಪಗ್ರಹ ವಿಶೆ ಷಂಗಳಂ ಮರೆಮದಸ್ಮರಣಂ

ನೋಡದೆ ನೆಲವನ್ನು ಸವರದೆ ಹಾಸಿಗೆಯನ್ನು ಹಾಸುವದು ಆಸ್ತರಣಾತಿಚಾರವೆನಿಸುತ್ತದೆ. ಹೀಗೆ ಇವು ಮೂರು ಮತ್ತು ಉಪವಾಸದ ವಿಷಯದಲ್ಲಿ ಅನಾದರ ಮಾಡುವುದು, ಉಪವಾಸದ ಸಲುವಾಗಿ ಉತ್ಸಾಹವಿಲ್ಲದಿರುವುದು ಅನಾದರಾತಿಚಾರವೆಂಬುದೂ ಇದೆ ಇನ್ನು ಉಪವಾಸದ ದಿವಸ ಪಾರಕ್ರಿಯೆಗಳನ್ನು ಮರೆತುಬಿಡುವುದು ಅಸ್ಮರಣಾತಿಚಾರವೆನಿಸುತ್ತದೆ. ಹೀಗೆ ಐದು ಅತಿಚಾರಗಳಿವೆ ಇವುಗಳನ್ನು ತ್ಯಾಗಮಾಡಿ ವ್ರತವನ್ನು ಶುದ್ಧಗೊಳಿಸಬೇಕು

ವಿಶೇಷಾರ್ಥ—[ಇಲ್ಲಿ 'ಅದೃಷ್ಟಮೃಷ್ಟಾನಿ' ಪದವು 'ಗ್ರಹಣ-ವಿಸರ್ಗಾ-ಽಸ್ತರಣಾನಿ' ಎಂಬುದರ ವಿಶೇಷಣವಿದೆ. ಇದು ವಿಶೇಷ್ಯದ ಪ್ರತಿಯೊಂದು ಅಂಗಕ್ಕೂ ಅನ್ವಯಿಸುತ್ತದೆ ಇನ್ನು ಯಾವುದಕ್ಕಾಗಿ 'ತತ್ತ್ವಾರ್ಥ ಸೂತ್ರ'ದಲ್ಲಿ 'ಅಪ್ರತ್ಯವೇಕ್ಷಿತ' ಮತ್ತು 'ಅಪ್ರಮಾರ್ಜಿತ' ಶಬ್ದಗಳನ್ನು ಪ್ರಯೋಗಿಸಲಾಗಿದೆಯೋ ಅದೇ ಅರ್ಥದಲ್ಲಿ ಇಲ್ಲಿ ಈ ವಿಶೇಷಣವಿದೆ 'ಅದೃಷ್ಟಂ' ಅಂದರೆ ನೋಡದೆ ಇರುವುದು ಮತ್ತು 'ಅಮೃಷ್ಟ' ಅಂದರೆ ಅಪ್ರಮಾರ್ಜಿತವೆಂದು ಅರ್ಥಗಳಿವೆ ಉಪವಾಸದ ದಿವಸ ಯಾವುದೇ ವಸ್ತುವನ್ನು ತಕ್ಕೊಳ್ಳುವ ಇಡುವ ಸಂದರ್ಭಗಳಲ್ಲಿ ಎಲ್ಲಕ್ಕೂ ಮೊದಲು ನೋಡುವ ಅವಶ್ಯಕತೆ ಇದೆ ಯಾಕೆಂದರೆ ಆ ವಸ್ತುಗಳನ್ನು ಇಡುವುದರಿಂದಲೂ ತಕ್ಕೊಳ್ಳುವುದರಿಂದಲೂ ಯಾವ ಜೀವಗಳಿಗೂ ಬಾಧೆಯು ತಟ್ಟಕೂಡದು ಯಾವುದಾದರೊಂದು ಕ್ರಿಮಿ-ಕೀಟಕಗಳಿಗೆ ಬಾಧೆ ತಟ್ಟುವಂತೆ ಇದ್ದರೆ ಅದನ್ನು ಮೃದುವಸ್ತುವಿನಿಂದ ಮೆಲ್ಲಗೆ ದೂರ ಸರಿಸಬೇಕು ಇಂಥ ಸಾವಧಾನತೆಯನ್ನು ವಹಿಸುವ ಆವಶ್ಯಕತೆಯು ಈ ವ್ರತಿಕನಿಗೆ ಇರುತ್ತದೆ ಇನ್ನುಳಿದ 'ಅನಾದರ'ವು ಅನುತ್ಸಾಹವನ್ನೂ 'ಅಸ್ಮರಣ'ವು ಅನೈಕಾಗ್ರತೆಯನ್ನೂ ಸೂಚಿಸುತ್ತವೆ ಇವೆರಡಕ್ಕೂ ಅವಕಾಶವು ಸಿಗದಿದ್ದರೆ ಉಪವಾಸದ ಎಲ್ಲ ಕ್ರಿಯೆಗಳು ಉತ್ಸಾಹ ಹಾಗೂ ಏಕಾಗ್ರತೆಯಿಂದ ನೆರವೇರುತ್ತವೆ ಇದನ್ನು ಸಾಧಿಸುವದಕ್ಕಾಗಿ ಶಕ್ತಿ ಇದ್ದಷ್ಟೂ ಪ್ರಯತ್ನಿಸಬೇಕು. ಸ. ದ ]

> ನೋಡದೆ ಪ್ರತಿಲೇಪನೆಯಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂ- ।
> ಡಾಡದುದುಂ ನೆನೆಯದುದುಂ ಕೇಡಿನಿತುಂ ಪ್ರೋಷಧೋಪವಾಸವ್ರತದೊಳ್ ॥

—ಶಾಂತಿನಾಥ— ಸುಕುಮಾರಚರಿತಂ—೬-೨೩

ಇನ್ನು ವೈಯಾವೃತ್ಯ ಅಥವಾ ಅತಿಥಿಸಂವಿಭಾಗ ಶಿಕ್ಷಾವ್ರತವನ್ನು ಕುರಿತು ಹೇಳುತ್ತಾರೆ—

> ದಾನಂ ವೈಯಾವೃತ್ಯಂ ಧರ್ಮಾಯ ತಪೋಧನಾಯ ಗುಣನಿಧಯೇ ।
> ಅನಪೇಕ್ಷಿತೋಪಚಾರೋಪಕ್ರಿಯಮಗೃಹಾಯ ವಿಭವೇನ ॥ ೧೧೧ ॥[1]

ಅನ್ವಯಾರ್ಥ—(ಗುಣನಿಧಯೇ) ಒಳ್ಳೆಯ ಗುಣಗಳ ಸಮೂಹ ಉಳ್ಳವನಿಗೆ (ಅಗೃಹಾಯ) ಮನೆ ಇಲ್ಲದವನಿಗೆ (ತಪೋಧನಾಯ) ತಪಸ್ಸೇ ಧನವಾಗಿರುವಂಥವನಿಗೆ (ವಿಭವೇನ) ಯೋಗ್ಯತೆಗೆ ಅನುಸರಿಸಿ (ಧರ್ಮಾಯ) ಧರ್ಮದ ಸಲುವಾಗಿ (ಅನಪೇಕ್ಷಿತೋಪಚಾರೋಪಕ್ರಿಯಂ) ಪ್ರತ್ಯುಪಕಾರದ ಅಪೇಕ್ಷೆಯನ್ನು ಇಟ್ಟುಕೊಳ್ಳದೆ (ದಾನಂ) ದಾನಕೊಡುವುದು (ವೈಯಾವೃತ್ಯಂ) ವೈಯಾವೃತ್ಯವೆನಿಸುತ್ತದೆ

ಅರ್ಥ—ರತ್ನತ್ರಯಧಾರಿಯೂ ತಪಸ್ವಿಯೂ ಆದ ಮುನಿಗೆ ಧರ್ಮಪಾಲನೆಗೆಂದು ಶುದ್ಧ ಆಹಾರ ಕೊಡುವುದಕ್ಕೆ ವೈಯಾವೃತ್ಯವೆನ್ನುವರು ಯಾರಿಗೆ ದಾನಕೊಡಲಾಗುತ್ತದೆಯೋ ಅವರಿಂದ ಆ ದಾನದ ಪ್ರತಿಫಲವೆಂದು ಏನನ್ನೂ ಬಯಸಕೂಡದು ಮಂತ್ರ-ತಂತ್ರಾದಿಕಗಳ ಪ್ರತ್ಯುಪಕಾರವನ್ನೂ ಸಹ ಇಚ್ಛಿಸಬಾರದು

['ವೈಯಾವೃತ್ಯ'ವೆನಿಸಬೇಕಾದರೆ ದಾನವನ್ನು ಹೊಂದುವಂಥವನು ಮುಖ್ಯವಾಗಿ ಸಮ್ಯಗ್ದರ್ಶನವೇ ಮೊದಲಾದ ಗುಣಗಳ ನಿಧಿಯಾಗಿರಬೇಕು ಅವನು ಎಲ್ಲ ಶಾಸ್ತ್ರಗಳನ್ನು ಬಲ್ಲವನೂ ತಪಸ್ವಿಯೂ ಮನೆಯಿಲ್ಲದವನೂ

---

[1] ಆಯತವರ್ಮನ ಪದ್ಯ ಹೀಗಿದೆ

> ಕಂದ ॥ ತಪಮೆ ಧನವಾಗಿ ಶೀಲದ ಪುರುಷಂಗಾವುದೆಡರದಂ ಪಿಂಗಿಸುವೊಂ- ।
> ದುಪಕಾರಮದುನೆಯಕ್ಕೆಂದು ಪೇಳ್ವುದಾಗಮದೊಳಿಂತು ವೈಯಾವೃತ್ಯಂ ॥

ಆಗಿರಬೇಕು  ಅಲ್ಲದೆ ವಿಷಯ ವಾಸನೆ, ಆಶಾ ತೃಷ್ಣೆಗಳಿಂದ ಬಿಡುಗಡೆಯನ್ನು ಹೊಂದಿರಬೇಕು  ಆರಂಭ, ಪರಿಗ್ರಹಗಳಿಂದಲೂ ವಿರಕ್ತನಾಗಿರಬೇಕು  ಜ್ಞಾನ, ಧ್ಯಾನ, ತಪಗಳಲ್ಲಿ ಲೀನನಾಗಿರಬೇಕು. ಹೇಗೆಂದರೆ ಇದೇ ಶಾಸ್ತ್ರದ ೧೦ನೆಯ ಸೂತ್ರದಲ್ಲಿ ಹೇಳಿದ ತಪಸ್ವಿಯ ಲಕ್ಷಣಗಳುಳ್ಳವನಿರಬೇಕು  ಒಂದುವೇಳೆ ಗೌಣರೂಪದಲ್ಲಿ ಇನ್ನೊಂದು ಮಾದರಿಯ ವ್ಯಕ್ತಿಗಳಿಗೂ ದಾನಕೊಡಬಹುದಾಗಿದೆ  ಅದೂ ವೈಯಾವೃತ್ಯವೆನಿಸುತ್ತದೆ  ಆದರೆ ಆ ವ್ಯಕ್ತಿಯು ಮನೆಯನ್ನು ಬಿಟ್ಟಿರದಿದ್ದರೂ ಮನೆಯ ಜೀವನದ ವಿಷಯದಲ್ಲಿ ಉದಾಸನಾದಂಥವನಿರಬೇಕು  ಆರಂಭ ಪರಿಗ್ರಹಗಳಿಂದ ಪೂರ್ಣ ವಿರಕ್ತಿಯನ್ನು ಹೊಂದಿರದಿದ್ದರೂ ಒಕ್ಕಲತನ, ವ್ಯಾಪಾರ, ಕಾರಖಾನೆಗಳನ್ನು ನಡೆಯಿಸ-ಬಾರದು  ಅಲ್ಲದೆ ಅಂಥವರಲ್ಲಿ ನೌಕರಿಯನ್ನೂ ಮಾಡುತ್ತಿರಬಾರದು  ಕೇವಲ ತನಗೆ ಅವಶ್ಯವಿದ್ದಷ್ಟೇ ಪರಿಗ್ರಹಗಳನ್ನು ಇಟ್ಟುಕೊಂಡವನಿರಬೇಕು   ವಿಷಯಗಳಲ್ಲಿ ಆಸಕ್ತಿಯಿರದೆ ಸಂಯಮದಿಂದ ಜೀವನವನ್ನು ಕಳೆಯುತ್ತಿರಬೇಕು. ಮೇಲಾಗಿ ಜ್ಞಾನದ ಆರಾಧನೆ, ಶುಭ ಭಾವನೆಯ ಸಾಧನೆ, ನಿಸ್ವಾರ್ಥಭಾವದಿಂದ ಲೋಕಹಿತ, ಧಾರ್ಮಿಕ ಸಾಹಿತ್ಯದ ರಚನೆ—ಇವೇ ಮೊದಲಾದ ಕಾರ್ಯಗಳಲ್ಲಿ ಹಗಲಿರುಳೂ ತನ್ಮಯನಾಗಿರಬೇಕು  ಇನ್ನು ಈ ಸೂತ್ರದಲ್ಲಿಯ 'ಧರ್ಮಾಯ' ಮತ್ತು 'ಅನಪೇಕ್ಷಿತೋಪಚಾರೋಪಕ್ರಿಯಂ' ಎಂಬ ಎರಡು ಪದಗಳ ಕಡೆಗೆ ನಾವು ಹೆಚ್ಚು ಲಕ್ಷ್ಯ ಪೂರೈಸಬೇಕು. 'ಧರ್ಮಾಯ' ಎಂಬ ಪದವು ದಾನಾದಿಗಳಲ್ಲಿ ಧಾರ್ಮಿಕ ದೃಷ್ಟಿ ಇರಬೇಕೆಂಬುವನ್ನು ಸೂಚಿಸುತ್ತದೆ. ಅಲ್ಲದೆ ಯಾವ ಸಂಯಮಿಗೆ ನಾವು ದಾನಮಾಡುವೆವೋ ಆ ಸಂಯಮಿಯ ಧರ್ಮವನ್ನೂ ಅವನ ಮುಖಾಂತರ ನಮ್ಮ ಧರ್ಮವನ್ನೂ ರಕ್ಷಿಸುವದಕ್ಕಾಗಿ ಆ ದಾನವು ಇರಬೇಕು  ನಮ್ಮ ಯಾವುದಾದರೊಂದು ಲೌಕಿಕ ಉಪಯೋಗ, ಸಾಧನೆಗಳಿಗಾಗಿ ದಾನವು ಇರಬಾರದು  ಇದೇ ಮಾತನ್ನು ಇನ್ನಿಷ್ಟು ಸ್ಪಷ್ಟವಾಗಿ 'ಅನಪೇಕ್ಷಿತೋಪಚಾರೋಪಕ್ರಿಯಂ' ಎಂಬ ದಾನಕ್ಕೆ ವಿಶೇಷಣ ರೂಪದಲ್ಲಿ ಬಂದ ಪದವು ಸೂಚಿಸುತ್ತದೆ. ವೈಯಾವೃತ್ಯ ವ್ರತವನ್ನು ಸ್ವೀಕರಿಸಿದ ವ್ರತಿಕನ ದಾನಾದಿಕ್ರಿಯೆಗಳಿಂದ ಯಾವ ಸೇವಾಕಾರ್ಯವು ನಡೆದರೂ ಅದರ ಪ್ರತಿಫಲವೆಂದು ಯಾವ ಲೌಕಿಕ ಉಪಚಾರದ ಅಪೇಕ್ಷೆಯನ್ನೂ ಅವನು ಇಟ್ಟುಕೊಳ್ಳಕೂಡದು  ಹೀಗೆ ಏನಾದರೂ ಅಪೇಕ್ಷೆಯನ್ನೂ ಇಟ್ಟುಕೊಂಡು ವೈಯಾವೃತ್ಯ-ವನ್ನು ಮಾಡಿದ್ದರೆ ಅದು ವೈಯಾವೃತ್ಯ ವ್ರತವೆನಿಸುವದಿಲ್ಲ  ಸ ಧ ]

ವಿಶೇಷಾರ್ಥ—ಇಲ್ಲಿ ದಾನಕ್ಕೆ ವ್ಯಯಾವೃತ್ಯವೆಂದು ಹೇಳಲಾಗಿದೆ  ಯಾರದು ತಪವೇ ಧನವಾಗಿರು-ವುದೋ ಅರ್ಥಾತ್ ಇಚ್ಛಾನಿರೋಧಾದಿ ತಪಗಳಿಗೇನೇ ಯಾರು ಅವಿನಾಶಿ ಧನವೆಂದು ಒಪ್ಪಿರುತ್ತಾರೆಯೋ ಆ ವೀತರಾಗಿ ಸಾಧುವಿನ ಸೇವೆಯನ್ನು ಮಾಡಬೇಕು  ತಪದ ಹೊರತಾಗಿ ಕರ್ಮಮಲವನ್ನು ನಾಶಗೊಳಿಸುವುದು ಬೇರೊಂದಿಲ್ಲ  ಇದನ್ನುಳಿದು ಅವಿನಾಶಿಯಾದ ಮೋಕ್ಷವು ಪ್ರಾಪ್ತವಾಗುವದಿಲ್ಲ  ರಾಗಾದಿ ಕಷಾಯಗಳು ನನ್ನನ್ನೇ ನಾಶಗೊಳಿಸುವಂಥವು. ತಪವೆಂಬ ಧನವನ್ನು ಗ್ರಹಣಮಾಡಿ, ಸಂಸಾರದಲ್ಲಿ ಮುಳುಗಿಸುವ ಇನ್ನುಳಿದ ಜಡ, ಅಚೇತನ, ನಷ್ಟವಾಗುವಂಥ ಸುವರ್ಣಾದಿ ಧನವನ್ನು ತ್ಯಾಗಮಾಡಬೇಕು—ಎಂದು ಸಾಧು ನಂಬಿರುತ್ತಾನೆ. ಇಂಥ ತಪೋನಿಧಿ, ವೀತರಾಗ, ದಿಗಂಬರ ಯತಿಗೆ ದಾನಕೊಡುವ ದಾತನ ಹಾಗೂ ದಾನ ಸ್ವೀಕರಿಸುವ ಪಾತ್ರನ ಇವರಿಬ್ಬರ ಧರ್ಮಪ್ರವೃತ್ತಿಗಾಗಿ ಎಂದು ದಾನಕೊಡುವುದೇ ವೀತರಾಗೀ ಯತಿಯ ವೈಯಾವೃತ್ಯವಾಗಿದೆ.

ದಿಗಂಬರ ಮುನಿಯ ಸ್ವರೂಪ—ದಿಗಂಬರ ಯತಿಗಳು ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್-ಚಾರಿತ್ರಾದಿ ಅನೇಕ ಗುಣಗಳ ತವರುಮನೆಯಿದ್ದಂತೆ ಇರುವರು  ಅವರಿಗೆ ಅಂತರ್‌ಬಾಹ್ಯ ಪರಿಗ್ರಹಗಳು ಮೂಲದಲ್ಲಿಯೇ ಇರುವದಿಲ್ಲ  ಅವರಿಗೆ ಇರಲಿಕ್ಕೊಂದು ಮಠ, ಮನೆ, ಆಶ್ರಮಗಳೂ ಇರುವದಿಲ್ಲ. ಅವರು ಒಬ್ಬರೇ ಒಮ್ಮೊಮ್ಮೆ ಗುರುಗಳ ಸನ್ನಿಧಿಯಲ್ಲಿ, ಇನ್ನೊಮ್ಮೆ ವನದಲ್ಲಿ, ಮತ್ತೊಮ್ಮೆ ಪರ್ವತದ ಮೇಲಿನ ಗುಹೆಯಲ್ಲಿ, ಅದೊಮ್ಮೆ ಭಯಂಕರವಾದ ಅರಣ್ಯದಲ್ಲಿ ವಾಸಿಸುತ್ತಾರೆ. ಹಲವು ಸಲ ಅವರು ನದಿಯ ತೀರದಲ್ಲಿಯೂ ಇರುತ್ತಾರೆ  ಅವರ ಸಂಚಾರವು ಅನಿಯಮಿತವಾಗಿರುತ್ತದೆ  ಸಂಯಮವಿಲ್ಲದ ಶ್ರಾವಕರ ಸಹವಾಸವನ್ನು ಅವರು ಮಾಡಲಿಕ್ಕೆ ಇಚ್ಛಿಸುವದಿಲ್ಲ. ಅವರು ಆತ್ಮನ ಪರಿಶುದ್ಧತೆಯನ್ನು ಅಂದರೆ ವೀತರಾಗತ್ವವನ್ನು ಸಾಧಿಸುವ ಪ್ರಯತ್ನದಲ್ಲಿರುತ್ತಾರೆ. ಅವರಿಗೆ, ಲೌಕಿಕ ಜನರ ಕಡೆಯಿಂದ ಪೂಜೆ, ಚರ್ಚೆ, ಹೊಗಳಿಕೆ, ಮಾನ-ಮರ್ಯಾದೆಗಳು ದೊರೆಯಬೇಕೆಂದು ಅಪೇಕ್ಷೆಯು ಇರುವದೇ ಇಲ್ಲ  ಅಲ್ಲದೆ ಪರಲೋಕದೊಳಗಿನ ದೇವಲೋಕ ಲಭಿಸಲಿ, ಅಲ್ಲಿಯ ಭೋಗೋಪಭೋಗ, ಇಂದ್ರ ಪದವಿಗಳು ದೊರೆಯಲಿ, ಅಹಮಿಂದ್ರ ಪದದ ಐಶ್ವರ್ಯ ಪ್ರಾಪ್ತವಾಗಲಿ—ಈ ವಿಷಯಗಳ ಆಸಕ್ತಿ ಎಂದರೇನೇ ಯಾವಾಗಲೂ ಸಂತಾಪ ಉತ್ಪನ್ನಮಾಡುವ ಅಗ್ನಿಯೆಂದು ತಿಳಿದು ಅದರಿಂದ ಯಾವಾಗಲೂ ಅತ್ಯಂತ ದೂರವಿರುತ್ತಾರೆ. ಇಂದ್ರಿಯಗಳು

ವಿಷಯತೃಷ್ಣೆಯನ್ನು ಬೆಳೆಯಿಸುವಂಥವು ಇರುತ್ತವೆ ಅವುಗಳಿಂದ ನಿರಾಕುಲಸ್ವರೂಪದ ಆತ್ಮಸುಖದ ಪ್ರಾಪ್ತಿಯು ಆಗುವದಿಲ್ಲ ನಿಜವಾದ ಸುಖವು ಆತ್ಮನಿಷ್ಠವಾಗಿರುವುದರಿಂದ ಅವರು ದೇಹದ ವಿಷಯದಲ್ಲಿ ಮಮತ್ವವನ್ನು ಇಡುವದಿಲ್ಲ. ಅವರು ಯಾವಾಗಲೂ ಆತ್ಮ ಕಾರ್ಯವನ್ನು ಸಾಧಿಸುವ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ ಇಂದ ಸಾಧುಗಳ ವೈಯಾವೃತ್ಯವನ್ನು ಮಾಡುವ ಲಾಭವು ಪ್ರಾಪ್ತವಾಗುವುದು ಬಹಳ ಕಠಿಣವಾಗಿದೆ

ಶರೀರವು ತಪದ ಸಾಧನವಾಗಿದೆ. ಸಾಧುಗಳು ಶರೀರದ ಮೇಲಿನ ಮಮತ್ವವನ್ನು ಬಿಟ್ಟಿದ್ದರೂ ಅದು ರತ್ನತ್ರಯವನ್ನು ಸಂಪಾದಿಸಿ ಕೊಡಲು, ಸಹಾಯಕವಾಗಿದೆ ಎಂಬುದನ್ನು ತಿಳಿದಿರುತ್ತಾರೆ ಅದಕ್ಕಾಗಿ ದೇಹಕ್ಕೆ ಸರಸ-ನೀರಸ, ಹಸಿ-ಒಣ, ಮೆತ್ತನದು-ಬಿರಸು ಯಾವುದೇ ಪ್ರಕಾರದ ಆಹಾರ ಸಿಕ್ಕುವದನ್ನು ಕೊಟ್ಟು, ರತ್ನತ್ರಯದ ಸಾಧನವೆಂದು ಕೃತಜ್ಞ ದೇಹವನ್ನು ಅವರು ಸಂರಕ್ಷಣಮಾಡುತ್ತಾರೆ. ಅಕಾಲದಲ್ಲಿ ಈ ದೇಹವು ನಷ್ಟವಾದರೆ ಅದರಿಂದ ಮರಣೋತ್ತರದಲ್ಲಿ ದೇವಾದಿ ಪರ್ಯಾಯಗಳಲ್ಲಿ ಉತ್ಪನ್ನವಾಗಬೇಕಾದೀತು ಅಲ್ಲಿ ಅಸಂಖ್ಯಾತ ವರ್ಷಗಳ ವರೆಗೆ ಅಸಂಯಮಿಯಾಗಿದ್ದು, ಕರ್ಮಬಂಧವನ್ನು ಹರಿಯಲಿಕ್ಕೆ ಬಾರದಂತೆ ಇರುತ್ತದೆ ಅದಕ್ಕಾಗಿ ಈಗಲೇ ಆಹಾರಾದಿಗಳನ್ನು ತ್ಯಾಗಮಾಡಿ, ಈ ಶರೀರದ ನಾಶಮಾಡಿದರೆ ಕರ್ಮಮಯ (ಕಾರ್ಮಣ) ಶರೀರವು ನಷ್ಟವಾಗುವುದು ಅಷ್ಟರಲ್ಲಿಯೇ ಇದೆ! ದೇಹವು ನಷ್ಟವಾದರೆ ಪುನಃ ಹೊಸದು ಪ್ರಾಪ್ತವಾದೀತು ಅಂತಲೇ ಎಲ್ಲ ಶರೀರಗಳನ್ನು ಉತ್ಪನ್ನಮಾಡುವಂಥ ಕಾರ್ಮಣ ದೇಹದ ಬೀಜವನ್ನೇ ನಷ್ಟಗೊಳಿಸಬೇಕು ಆ ಬೀಜವನ್ನು ಸುಟ್ಟು ಒಗೆಯುವ ಯತ್ನದಲ್ಲಿರಬೇಕು.

ಅಂತರಾಯವಿಲ್ಲದಂತೆ ಆಹಾರ ತಕ್ಕೊಳ್ಳಬೇಕು. ಅದಕ್ಕಾಗಿ ಕಷಾಯವನ್ನು ಗೆಲ್ಲಬೇಕು. ವಿಷಯಗಳ ನಿಗ್ರಹ ಮಾಡಬೇಕು ನಲವತ್ತಾರು ದೋಷಗಳನ್ನು ತಪ್ಪಿಸಿ, ಮೂವತ್ತೆರಡು ಅಂತರಾಯಗಳು ಪಾಲಿಸಿ, ಹದಿನಾಲ್ಕು ಮಲಗಳನ್ನು ಪರಿಹರಿಸಿ, ತನ್ನ ಸಲುವಾಗಿಯೆಂದು ಮಾಡದಂಥ ಶುದ್ಧ ಆಹಾರವು ದೊರೆತರೇನೇ ತಿನ್ನಬೇಕು ಅರ್ಧ ಹೊಟ್ಟೆಯಷ್ಟು ಅನ್ನ, ಚತುರ್ಥಾಂಶ ಹೊಟ್ಟೆ ನೀರು, ಧ್ಯಾನಾಧ್ಯಯನ, ಕಾಯೋತ್ಸರ್ಗಾದಿ-ಗಳನ್ನು ಸುಖದಿಂದ ಮಾಡಲಿಕ್ಕೆ ಬರಬೇಕೆಂದು ಚತುರ್ಥಾಂಶ ಹೊಟ್ಟೆಯನ್ನು ತೆರವು ಇಟ್ಟು ಆಹಾರವನ್ನು ಗ್ರಹಣ ಮಾಡಬೇಕು ಊಟದ ಆಮಂತ್ರಣವನ್ನು ಸ್ವೀಕರಿಸಕೂಡದು ಯಾಚನೆಯನ್ನು ಮಾಡಬಾರದು ಕೈ ಹಾಗೂ ಕಣ್ಣುಗಳಿಂದ ಗುರುತುಮಾಡಬಾರದು. ಇಂಥ ಸಾಧುಗಳಿಗೆ ಆಹಾರಾದಿಗಳನ್ನು ದಾನಕೊಡುವುದಕ್ಕೆ ವೈಯಾವೃತ್ಯ ಎನ್ನುತ್ತಾರೆ

ದಾನದ ಪ್ರತಿಫಲವನ್ನು ಇಚ್ಛಿಸಬಾರದು. ದಾನವು ಅನಪೇಕ್ಷಿತೋಪಚಾರೋಪಕ್ರಿಯವಾಗಿರ ಬೇಕು ಪ್ರತ್ಯುಪಕಾರದ ಇಚ್ಛಾರಹಿತವೆಂದರೆ ಇದರಿಂದ ನಮ್ಮ ಮೇಲೆ ಸಾಧುವು ಏನಾದರೂ ಉಪಕಾರಮಾಡ-ಬಹುದೆಂಬ ಇಚ್ಛೆಯು ಮನಸ್ಸಿನಲ್ಲಿ ಇರಕೂಡದು ಉಪಕ್ರಿಯವೆಂದರೆ ಪ್ರಸನ್ನನಾಗಿ ನಮಗೆ ವಿದ್ಯೆ, ಮಂತ್ರ, ಔಷಧ ಮೊದಲಾದವುಗಳನ್ನು ಕೊಟ್ಟಾನು ಎಂಬ ಆಶೆಯು ಇರಬಾರದು. ಅದರಂತೆಯೇ ಮುನೀಶ್ವರರಿಗೆ ದಾನ ಕೊಡುವುದರಿಂದ ಊರಲ್ಲಿ ದಾನಶೂರನೆಂದು ನಮ್ಮ ಕೀರ್ತಿಯಾದೀತು, ದೊಡ್ಡ ಮಾನ ಮರ್ಯಾದೆಯನ್ನು ರಾಜನು ಮಾಡಿಯಾನು, ನಮ್ಮ ಮನೆಯಲ್ಲಿ ಕೊರತೆಯಿಲ್ಲದ ಧನವು ಉಂಟಾದೀತು, ಮೊದಲು ದಾನವಿತ್ತವರಿಗೆ ಸಂಪತ್ಪರ್ಯಾ-ಗಳು ಉಂಟಾಗಿವೆ, ಅದರಂತೆ ನನಗೂ ಲಾಭವಾದೀತು, ಇಂಥ ಅನೇಕ ವಿಕಲ್ಪ ಇಲ್ಲವೆ ಇಚ್ಛೆಗಳನ್ನು ಮನಸ್ಸಿನಲ್ಲಿ ತರದೆ ಕೇವಲ ರತ್ನತ್ರಯಗಳನ್ನು ಧಾರಣಮಾಡುವವರ ಮೇಲೆ ಭಕ್ತಿಯನ್ನು ಇಟ್ಟು ಅದರಿಂದ ತಾನು ಕೃತಜ್ಞನಾದೆನೆಂದು ಭಾವಿಸಿ, ಮನ-ವಚನ-ಕಾಯ ಮತ್ತು ಗೃಹಾಚಾರದ ಶಳದದಿಯೂ ಸಹ ಇಂದು ದಾನಕೊಡುವುದರಿಂದ ಕೃತಾರ್ಥ-ನಾಯಿತೆಂದು ತಿಳಿಯಬೇಕು, ಮತ್ತು ದಾನಕೊಡಬೇಕು ಬಹಳ ಆನಂದದಿಂದ ತಾನಿಂದು ಕೃತಕೃತ್ಯನಾದೆನೆಂದು ತಿಳಿಯಬೇಕು ಇದೇ ವೈಯಾವೃತ್ಯದ ಲಕ್ಷಣವಾಗಿದೆ.

ಮನೋಲ್ಲತಿ ಸತ್ಪಾತ್ರವಿದೆನಗಟಿಮತ ಪಲಮನೀಯುರ್ಕೆತ್ತಂದುದು ಸ. ।
ನ್ಮನಿರೂಪದಿಂದೀ ಕಲ್ಪಾನನೀರುಹನೊಸಿಸಿದ ದಾಗರಸಂಪ್ರಮದಿಂ ॥

ಶ್ರೀವನಸನಂದಿ-ಶಾಸ್ತ್ರಸಾರಸಮುಚ್ಚಯ ಟೀಕು-ಚರಣಾನುಯೋಗ ೧೧೪.

ಈಗ ವೈಯಾವೃತ್ಯದ ವಿಶೇಷ ಸ್ವರೂಪವನ್ನು ಹೇಳುತ್ತಾರೆ–

ವ್ಯಾಪತ್ತಿವ್ಯಪನೋದಃ ಪದಯೋಃ ಸಂವಾಹನಂ ಚ ಗುಣರಾಗಾತ್ ।
ವೈಯಾವೃತ್ಯಂ ಯಾವಾನುಪಗ್ರಹೋಽನ್ಯೋಽಪಿ ಸಂಯಮಿನಾಮ್ ॥ ೧೧೨ ॥

ಅನ್ವಯಾರ್ಥ—(ಗುಣರಾಗಾತ್) ಗುಣಪ್ರೀತಿಗಾಗಿ (ಸಂಯಮಿನಾಂ) ಸಂಯಮಿಗಳ (ವ್ಯಾಪತ್ತಿ-ವ್ಯಪನೋದಃ) ಆಪತ್ತಿಯನ್ನು ದೂರಮಾಡುವುದು (ಚ) ಮತ್ತು (ಪದಯೋಃ) ಪಾದಗಳನ್ನು—ಕಾಲುಗಳನ್ನು—(ಸಂವಾಹನಂ) ಒತ್ತುವುದು (ಅನ್ಯಃ ಅಪಿ) ಬೇರೆ ರೀತಿಯಿಂದ ಸಹ (ಯಾವಾನ್) ಎಷ್ಟು (ಉಪಗ್ರಹಃ) ಉಪಕಾರಕ-ವಾಗಿರುವವೋ—ಆ ಕೃತ್ಯಗಳೆಲ್ಲ—(ವೈಯಾವೃತ್ಯಂ) ವೈಯಾವೃತ್ಯವೆನಿಸುತ್ತವೆ

ಅರ್ಥ—ಸಂಯಮಿ ಪುರುಷರ ಗುಣಗಳ ಮೇಲೆ ಪ್ರೀತಿಯಿಟ್ಟು, ಅವರ ಸಂಕಟಗಳನ್ನು ಇಲ್ಲದಂತೆ ಮಾಡಬೇಕು ಅವರ ಕೈಕಾಲುಗಳನ್ನು ಒತ್ತುವುದು, ಇಂಥವೇ ಆದ ಉಪಕಾರಗಳನ್ನು ಮುನಿಗಳ ಮೇಲೆ ಎಷ್ಟು ಮಾಡಲಿಕ್ಕೆ ಸಾಧ್ಯವಿದೆಯೋ ಅಷ್ಟೆಲ್ಲವನ್ನೂ ಮಾಡುವುದಕ್ಕೆ ವೈಯಾವೃತ್ಯವೆನ್ನುವರು [ಇಲ್ಲಿ 'ಗುಣರಾಗಾತ್' ಮತ್ತು 'ಯಾವಾನುಪಗ್ರಹಃ' ಈ ಎರಡು ಪದಗಳಿಗೆ ಹೆಚ್ಚು ಮಹತ್ವವಿದೆ. 'ಗುಣರಾಗಾತ್' ಎಂಬ ಪದವು ಆ ಸಾಧುವಿನಲ್ಲಿರುವ ಗುಣಗಳ ಮೇಲಿನ ಪ್ರೀತಿಯಿಂದಲೇ ಅವನ ಸೇವೆಯನ್ನು ಮಾಡಲಿಕ್ಕೆ ಪ್ರವೃತ್ತರಾಗಬೇಕು ಅನ್ಯ ಲೌಕಿಕ ಲಾಭ ಹಾಗೂ ದೃಷ್ಟಿಗಳನ್ನು ಇಟ್ಟುಕೊಳ್ಳಕೂಡದೆಂದು ಇದು ಸೂಚಿಸುತ್ತದೆ 'ಯಾವಾನುಪಗ್ರಹಃ' ಎಂಬ ಪದದಲ್ಲಿ ಉಳಿದ ಎಲ್ಲ ಪ್ರಕಾರದ ಉಪಕಾರವು ಸಮಾವೇಶವಾಗುತ್ತದೆ ಸಹಾಯ, ಸಹಾನುಭೂತಿ, ಸಹಕಾರ, ಅನುಕೂಲವರ್ತನಗಳೆಲ್ಲ ಇದರಲ್ಲಿ ಸೇರಿ ಹೋಗುತ್ತವೆ ಇನ್ನು 'ಸಂಯಮಿನಾಂ' ಎಂಬ ಪದದ ಅರ್ಥವು ವ್ಯಾಪಕವಾಗಿದೆ ಇದಕ್ಕೆ ಶ್ರೀ ಪ್ರಭಾಚಂದ್ರಾಚಾರ್ಯರು 'ದೇಶ–ಸಕಲ–ಯತೀನಾಂ' ಎಂದು ಹೇಳಿದ್ದಾರೆ ಇದರಲ್ಲಿ ಸಕಲಸಂಯಮಿ ಮತ್ತು ದೇಶಸಂಯಮಿ ಈ ಎರಡೂ ಪ್ರಕಾರದ ಯತಿಗಳ ಸಮಾವೇಶವಾಗುತ್ತದೆ ಇವರಿಬ್ಬರಿಗೂ ನೆರವು ನೀಡುವುದು ವೈಯಾವೃತ್ಯವೆನಿಸುತ್ತದೆ ಈಗ ಒಬ್ಬ ಸಂಯಮಿಯು ಗ್ರಂಥವನ್ನು ನಿರ್ಮಿಸುವುದರಲ್ಲಿ ಮಗ್ನನಾಗಿರುವನೆಂದು ತಿಳಿಯೋಣ ಅವನಿಗೆ ಅವಶ್ಯಕವಾದ ಗ್ರಂಥಗಳನ್ನು ಒದಗಿಸುವುದು, ಗ್ರಂಥಕ್ಕೆ ಅವಶ್ಯಕವಾದ ವಿಷಯಗಳನ್ನು ಸಂಗ್ರಹಿಸಿ ಕೊಡುವುದು, ಸಂಶೋಧನೆಯಲ್ಲಿ ಸಹಾಯಮಾಡುವುದು, ಗ್ರಂಥ ಪ್ರಕಟಣೆ ಹಾಗೂ ಪ್ರಚಾರಗಳಿಗೆ ನೆರವು ನೀಡುವುದು ಇವೆಲ್ಲ ಸಹಾಯಗಳು ಆಹಾರ–ಔಷಧಾದಿಗಳಲ್ಲದಂಥ ಭಿನ್ನ ಉಪಗ್ರಹಗಳೆನಿಸುತ್ತವೆ ಇಂಥವುಗಳನ್ನು ಮಹಾರಾಜಾ ಅಮೋಘವರ್ಷನು ವೀರಸೇನ ಆಚಾರ್ಯರಿಗೂ ಕುಮಾರಪಾಲ ರಾಜನು ಹೇಮಚಂದ್ರಾಚಾರ್ಯರಿಗೂ ನೀಡಿದ್ದನು ಇವೆಲ್ಲ ವಿವಿಧ ವೈಯಾವೃತ್ಯಗಳೇ ಆಗಿವೆ ಇನ್ನು ಗ್ರಂಥಕಾರರು ನಾಲ್ಕನೆಯ ಶಿಕ್ಷಾವ್ರತವನ್ನು ಮಾತ್ರ 'ಅತಿಥಿ ಸಂವಿಭಾಗ'ರೂಪದಲ್ಲಿ ಇಡದೆ 'ವೈಯಾವೃತ್ಯ'ದ ರೂಪದಲ್ಲಿ ಇಟ್ಟಿದ್ದಾರೆ. ಇದಕ್ಕೆ ವಿಶಿಷ್ಟ ಮಹತ್ವವಿದೆ ಯಾಕಂದರೆ ಇದರಲ್ಲಿ ಕೇವಲ ದಾನ, ಅನ್ನದಾನಗಳಷ್ಟೇ ಸಮಾವೇಶಗೊಳ್ಳದೆ ವಿವಿಧ ಸಹಾಯಗಳೆಲ್ಲವೂ ಸೇರುತ್ತವೆ ಈ ವ್ರತಕ್ಕೆ 'ಅತಿಥಿ ಸಂವಿಭಾಗ'ವೆಂಬ ಹೆಸರನ್ನು ಕೊಟ್ಟಬೇರೆ ಗ್ರಂಥಗಳಲ್ಲಿ ಇಷ್ಟು ವಿಶಾಲ ಅರ್ಥವು ಲಭಿಸುವದಿಲ್ಲ ಸ. ಥ]

ವಿಶೇಷಾರ್ಥ—ಸಾಧುಗಳ ಮೇಲೆ ದೇವ, ಮನುಷ್ಯ, ತಿರ್ಯಂಚ ಅಥವಾ ಅಚೇತನ ಪದಾರ್ಥಗಳಿಂದ ಉಪಸರ್ಗವು ಪ್ರಾಪ್ತವಾದರೆ ಅದನ್ನು ತಮ್ಮ ಶಕ್ತಿಗೆ ಅನುಸರಿಸಿ ಇಲ್ಲದಂತೆ ಮಾಡಬೇಕು ಸಾಧುಗಳಿಗೆ ದಾರಿಯಲ್ಲಿ ಕಳ್ಳರು, ಭಿಲ್ಲರು ಮೊದಲಾದವರು ತೊಂದರೆ ಕೊಟ್ಟಿದ್ದರೆ ಅದರಿಂದ ಅವರಿಗೆ ದುಃಖವಾಗುತ್ತಿದ್ದರೆ ಆ ತೊಂದರೆಯು ನಿವಾರಣೆ ಮಾಡುವದಾಗಿ ಆಶ್ವಾಸನೆಕೊಡಬೇಕು, ಧೈರ್ಯಧಾರಣ ಮಾಡಲಿಕ್ಕೆ ಹೇಳಬೇಕು ನಡೆದು ಬಂದುದರಿಂದ ಅವರಕಾಲುಗಳು ನೋಯುತ್ತಿದ್ದರೆ ಒತ್ತುವುದು ಮುನಿಯು ರೋಗಿಯಾಗಿದ್ದರೆ ಅವರ ಸಂಯಮವು ಭ್ರಷ್ಟಗೊಳ್ಳದಂತೆ ಸ್ಥಳ, ಆಸನ, ಹಾಸಿಗೆಗಳನ್ನು, ಜಾಗರೂಕತೆಯಿಂದ ಸಿದ್ಧಗೊಳಿಸಬೇಕು, ಶುದ್ಧತೆಯನ್ನು ಕಾಯ್ದುಕೊಳ್ಳಬೇಕು ಜಪ್ಪಿಸಿ ಎಬ್ಬಿಸಬೇಕು, ಕೂಡ್ರಿಸಬೇಕು, ಮಲಗಿಸಬೇಕು, ಮಲಮೂತ್ರ ವಿಸರ್ಜನಾದಿಗಳನ್ನು ಮಾಡಿಸಬೇಕು. ಅಬುದ್ಧಿಪೂರ್ವಕವಾಗಿ ಮಲಮೂತ್ರವು ಅಯೋಗ್ಯ ಸ್ಥಳದಲ್ಲಿ ಅಥವಾ ವಾಸಸ್ಥಳದಲ್ಲಿ ಬಿದ್ದಿದ್ದರೆ ಅದನ್ನು ತೆಗೆದು, ನಿರ್ಜೀವ ಸ್ಥಳದಲ್ಲಿ ಒಯ್ದು ಒಗೆಯಬೇಕು. ಕಫ, ಮೂಗಿನೊಳಗಿನ ಹೊಲಸು, ಮೊದಲಾದವುಗಳನ್ನು ಒರಿಸಿ, ಅದನ್ನೂ ಯೋಗ್ಯ ಸ್ಥಳದಲ್ಲಿ ಚೆಲ್ಲಬೇಕು ಆಹಾರ, ಔಷಧ ಮೊದಲಾದವುಗಳನ್ನೂ ಸಂಯಮಿ ಪುರುಷರಿಗೆ

ಯೋಗ್ಯವಿದ್ದರೆ ಮಾತ್ರ ಯೋಗ್ಯಹೊತ್ತಿಗೆ ಕೊಟ್ಟು, ಅವರ ವೇದನೆಯನ್ನು ಇಲ್ಲದಂತೆ ಮಾಡಬೇಕು ವೇಳೆಯನ್ನು ನೋಡಿಕೊಂಡು, ಯೋಗ್ಯ ಹಾಗೂ ಬಾಧೆಯಿಲ್ಲದ ಪದಾರ್ಥವನ್ನೂ ತಿನ್ನಲಿಕ್ಕೆ ಕೊಡಬೇಕು ವೇದನೆಯಿಂದ ಚಿತ್ತವು ಚಂಚಲವಾಗಿದ್ದರೆ ಅದನ್ನು ಉಪದೇಶದಿಂದ ಸ್ಥಿರಗೊಳಿಸಬೇಕು ಧರ್ಮಕಥೆಯನ್ನೂ ಕೇಳುವಂತೆ ಮಾಡುವುದು, ಅವರ ಇಚ್ಛೆಯಂತೆ ನಡೆಯುವುದು, ಅವರ ಗುಣಗಳನ್ನು ಸ್ತುತಿಸುವುದು—ಇವೇ ಮೊದಲಾದ ಕಾರ್ಯಗಳಿಂದ ಅವರ ಗುಣಗಳ ವಿಷಯದಲ್ಲಿ ಪ್ರೀತಿಯನ್ನಿಟ್ಟು, ಉಪಕಾರ ಮಾಡುವುದು ವೈಯಾವೃತ್ಯವೆನಿಸುತ್ತದೆ

ಭೃತ್ಯನ ಮನೆಗೊಡೆಯನೆ ಬಂದರೊಡೆಯಗಾ ಭೃತ್ಯಮಾಡುವ ಸೇವೆಯಂತೆ ।
ಸತ್ಯನಾರಿಯರೊಡಗೂಡಿ ತಾಪಸರಿಗಾ ನಿತ್ಯಾರ್ಥಿ ಭಕ್ತಿಮಾಡಿದನು ॥
ಉನ್ನತಾಸನವನಿತ್ತು ಪಾದಪೂಜೆಯ ಮಾಡಿ ಹೊನ್ನುಪಕರಣವ ಹರಹಿ ।
ತನ್ನಬಲೆಯರು ತಾನೆಚ್ಚತ್ತು ಮುನಿಗಳಿಗನ್ನದಾನವನಿತ್ತರೊಸೆದು ॥

—ರತ್ನಾಕರ—ಭರತೇಶವೈಭವ—ಮುನಿಭುಕ್ತಿಸಂಧಿ—೮೨-೮೭

ಈಗ ವೈಯಾವೃತ್ಯದಲ್ಲಿ ಆಹಾರದಾನದ ಸಾಧನವೇನೆಂಬುದನ್ನು ವಿವರಿಸುತ್ತಾರೆ—

ನವಪುಣ್ಯೈಃ ಪ್ರತಿಪತ್ತಿಃ ಸಪ್ತಗುಣಸಮಾಹಿತೇನ ಶುದ್ಧೇನ ।
ಅಪಸೂನಾರಂಭಾಣಾಮಾರ್ಯಾಣಾಮಿಷ್ಯತೇ ದಾನಮ್ ॥ ೧೧೩ ॥[1]

ಅನ್ವಯಾರ್ಥ—(ಸಪ್ತಗುಣಸಮಾಹಿತೇನ) ಏಳು ಗುಣಗಳಿಂದ ಕೂಡಿದ (ಶುದ್ಧೇನ) ಶುದ್ಧ ಶ್ರಾವಕನು (ಅಪಸೂನಾರಂಭಾಣಾಂ) ಪಂಚಸೂನ ಮತ್ತು ಆರಂಭಗಳಿಲ್ಲದಂಥ (ಆರ್ಯಾಣಾಮ್) ಮುನಿಗೆ (ನವಪುಣ್ಯೈಃ) ನವಧಾ ಭಕ್ತಿಯಿಂದ (ಪ್ರತಿಪತ್ತಿಃ) ಆದರ ಸತ್ಕಾರ ಗೌರವಗಳನ್ನು ಮಾಡುವದಕ್ಕೆ (ದಾನಂ) ದಾನ-ಎಂದು-(ಇಷ್ಯತೆ) ಹೇಳಲಾಗಿದೆ.

ಅರ್ಥ—ಕುಟ್ಟುವುದು, ಬೀಸುವುದು, ಒಲೆ ಹೊತ್ತಿಸುವುದು, ನೀರು ತುಂಬುವುದು, ಪೊರಕೆಯಿಂದ ಕೇರುವುದು ಈ ಕ್ರಿಯೆಗಳಿಗೆ 'ಪಂಚಸೂನ' ಎನ್ನುವರು ಇವುಗಳನ್ನೂ ಒಕ್ಕಲತನ, ವ್ಯಾಪಾರಗಳನ್ನೂ ಯಾರು ತ್ಯಾಗ ಮಾಡಿರುವರೋ ಅಂಥ ಮುನಿಯ ಸೇವೆಯನ್ನು ಶ್ರಾವಕನು ಮಾಡಬೇಕು ಆ ಶ್ರಾವಕನು ದಾತೃವಿನ ಏಳು ಗುಣಗಳನ್ನೂ ಒಂಬತ್ತು ತರದ ಭಕ್ತಿಗಳನ್ನೂ ಹೊಂದಿರಬೇಕು ಆ ತನ್ನ ವಿಶಿಷ್ಟ ಗುಣಗಳಿಂದ ಕೂಡಿ ದಾನ ಕೊಡಬೇಕು [೧೧೧ನೆಯ ಸೂತ್ರದಲ್ಲಿ ಯಾವ ದಾನಕ್ಕೆ ವೈಯಾವೃತ್ಯವೆಂದು ಹೇಳಲಾಗಿದೆಯೋ ಆ ದಾನದ ಒಡೆಯ, ಸಾಧನ, ಪಾತ್ರಗಳನ್ನು ಕುರಿತು ಇಲ್ಲಿ ಹೇಳಲಾಗಿದೆ ದಾನದ ಒಡೆಯನು ದಾತೃವು ಅವನ ಏಳು ಗುಣಗಳು ಶ್ರದ್ಧೆ, ತುಷ್ಟಿ, ಭಕ್ತಿ, ವಿಜ್ಞಾನತೆ, ಅಲುಬ್ಧತೆ, ಕ್ಷಮೆ ಮತ್ತು ಶಕ್ತಿ ಎಂದಿರುತ್ತವೆ[2] ಈ ಗುಣಗಳಿಂದ ದಾತೃವಿನ ಅಂತಃ

---

[1] ಆಯತವರ್ಮನ ವಚನ ಹೀಗಿದೆ

ವಚನ—ಅಂತು ಶ್ರಾವಕಂಗೆ ಕೆಲೊರಲಸಾವೆಯೊಲೆಯುಸವಿದೆಯಂದಿಯಯ್ದು ಸೂನೆಗಳಿಂದಂ ಷಟ್ಕರ್ಮಂಗಳಿಂದಂ ಬಾಹ್ಯಾಭ್ಯಂತರಪರಿಗ್ರಹಗಳಿಂದಂ ಪಿಂಗಿದ ಋಷಿಗೆಯಶನಂ ಪಾನಂ ಖಾದ್ಯಂ ಲೇಹ್ಯಮೆಂಬ ಚತುರ್ವಿಧಾಹಾರಮುಮಂ ವಾತಪಿತ್ತ ಶ್ಲೇಷ್ಮಂಗಳಂ ಕಿಡಿಸುವೌಷಧಂಗಳುಮಂ ಜ್ಞಾನ ಶೌಚ ಸಂಯಮೋಪಕರಣಂಗಳುಮಂ ನಿರ್ಜಂತುಕಾವಾಸಮುಮಾವಾಸಮಂ ಕುಡುವನದುದಾನಮೆಂಬುದಕ್ಕುಂ ವಿಧಿವಿಶೇಷಂ ದ್ರವ್ಯವಿಶೇಷಂ ಪಾತ್ರವಿಶೇಷಂಗಳೆಂಬ ವಿಶೇಷಂಗಳತ್ತಣಿಂದಂ ಪಾತ್ರದಾನ ಕ್ರಮಾನುಗತಿಯಿಂ ಮೋಕ್ಷಹೇತುವೆಂದು ಬಗೆವುದಲ್ಲಿಯದಿರ್ಗೊಳ್ವುದುಚ್ಚಸ್ಥಾನದಲ್ಲಿಯಿರಿಸುವುದು ಪಾದಪ್ರಕ್ಷಾಳನಂ ಗೆಯ್ವುದು ಅಷ್ಟವಿಧಾರ್ಚನೆಗಳಿಂದರ್ಚಿಸುವುದು ಭಕ್ತಿಪೂರ್ವಕಂ ಬಂದಿಸುವುದು ಮನಶ್ಶುದ್ಧಿ ವಚನಶುದ್ಧಿ ಕಾಯಶುದ್ಧಿಯಾಹಾರಶುದ್ಧಿಯೆಂದಿವಂ ಪಡೆವುದುವಿಂತೀನವವಿಧ ಪುಣ್ಯಂಗಳುಂ ವಿಧಿವಿಶೇಷಂ ಯಮನಿಯಮ ಸ್ವಾಧ್ಯಾಯ ಸಾಧಾರಮಪ್ಪಾಸುಖಾಸನಂಗಳಿಂದರ್ಚಿಸುವುದುಂ ಆಹಾರೌಷಧೋಪಕರಣಂಗಳ ಆವಾಸಂಗಳಂ ಪಡೆವುದುಂ ದ್ರವ್ಯವಿಶೇಷಂ ಶ್ರದ್ಧಾ ಶಕ್ತಿರ್ಭಕ್ತಿ ವಿಜ್ಞಾನಂ ಅಲುಬ್ಧತೆ ದಯಾ ಕ್ಷಮೆಯೆಂಬ ಸಪ್ತಗುಣಂಗಳು ಮತ್ತಮುಚ್ಚರವಿಲ್ಲದುದುಂ ಪುರಡಿಲ್ಲದುದುಮಪ್ಪ ದಾನಗೆಯ್ವುದು

[2] "ಶ್ರದ್ಧಾ ತುಷ್ಟಿರ್ಭಕ್ತಿರ್ವಿಜ್ಞಾನಮಲುಬ್ಧತಾ ಕ್ಷಮಾ ಶಕ್ತಿಃ ।
ಯಸ್ಯೈತೇ ಸಪ್ತಗುಣಾಸ್ತಂ ದಾತಾರಂ ಪ್ರಶಂಸಂತಿ ॥" —ಟೀಕೆಯಲ್ಲಿ ಪ್ರಭಾಚಂದ್ರರಿಂದ ಉದ್ಧರಿಸಲ್ಪಟ್ಟದ್ದು

ಶುದ್ಧಿಯು ಆಗುತ್ತದೆ. ಇನ್ನು 'ಶುದ್ಧೇನ' ಪದದಿಂದ ಬಾಹ್ಯಶುದ್ಧಿಯ ಅಭಿಪ್ರಾಯವನ್ನು ಸೂಚಿಸಲಾಗಿದೆ ಇದರಲ್ಲಿ ಕೈಕಾಲು, ವಸ್ತ್ರಮೊದಲಾದವುಗಳ ಶುದ್ಧಿಯು ಸಮಾವೇಶವಾಗುತ್ತದೆ. ಇನ್ನು ದಾನದ ಸಾಧನದಲ್ಲಿ ಅದರ ವಿಧಿವಿಧಾನಗಳು ಬರುತ್ತವೆ ಇವು ಪುಣ್ಯೋಪಾರ್ಜನೆಯ ಹೇತುಗಳೆನಿಸುತ್ತವೆ ಅವುಗಳನ್ನು ಹೀಗೆ ಉಲ್ಲೇಖಿಸಲಾಗಿದೆ– (೧) ಪ್ರತಿಗ್ರಹಣ (೨) ಉಚ್ಚಸ್ಥಾಪನಾ (೩) ಪಾದಪ್ರಕ್ಷಾಲನ (೪) ಅರ್ಚನ (೫) ಪ್ರಣಾಮ (೬) ಮನಃಶುದ್ಧಿ (೭) ವಚನಶುದ್ಧಿ (೮) ಕಾಯಶುದ್ಧಿ (೯) ಏಷಣಾ ಶುದ್ಧಿ[1] ಇನ್ನು ದಾನ ಪಾತ್ರದ ವಿಷಯದಲ್ಲಿಯಂತೂ ಸೂನಗಳು ಮತ್ತು ಆರಂಭರಹಿತವಾಗಿರಬೇಕೆಂದು ಹೇಳಿದೆ ಆರಂಭದಲ್ಲಿ ಸೇವೆ, ಒಕ್ಕಲತನ, ವ್ಯಾಪಾರಾದಿಗಳು ಸಮಾವೇಶವಾಗುತ್ತವೆ ಇದು ಮುಂದೆ 'ಸೇವಾ–ಕೃಷಿ–ವಾಣಿಜ್ಯ–ಪ್ರಮುಖಾದಾರಂಭತೋ ವ್ಯಾಪಾರಮತಿ' ಇವೇ ಮೊದಲಾದ ೧೪೪ನೆಯ ಶ್ಲೋಕದಿಂದ ಪ್ರಕಟವಾಗುತ್ತದೆ ಮತ್ತು 'ಒಂದೆಡೆಗೇ' ಸೂನಾ ವಧದ ಸ್ಥಾನದ ಹೆಸರಾಗಿದೆ ತುಂಡರಿಸುವುದು, ಬೀಸುವುದು, ಕುದಿಸುವುದು, ನೀರು ತುಂಬುವುದು, ಕಸಹೊಡೆಯುವದು ಎಂಬ ಹೆಸರುಗಳಿಂದಲೂ ಸೂನಗಳು ಉಲ್ಲೇಖಗೊಂಡಿವೆ[2] ದಾನದ ಪಾತ್ರವು ಸೇವೆ, ಒಕ್ಕಲತನ, ವ್ಯಾಪಾರಗಳನ್ನು ಮಾಡಕೂಡದು, ಇಷ್ಟೇ ಅಲ್ಲ, ನೀರು ತುಂಬುವುದು, ಮೇಣೆ ಪಲ್ಲಕ್ಕಿಗಳನ್ನು ಹೊರುವುದು, ಬೀಸುವ ಗಿರಣಿಯನ್ನು ಇಡುವುದು, ಒಲೆಗೆ ಉರುವಲ ಹಾಕುವುದು–ಇವೇ ಮೊದಲಾದ ಕಾರ್ಯಗಳನ್ನು ಮಾಡಬಾರದೆಂದು ಸ್ಪಷ್ಟವಾಗುತ್ತದೆ ಇಂಥ ಯೋಗ್ಯತೆಯ ಪಾತ್ರಗಳು ಮುನಿಗಳು ಇಲ್ಲವೆ ಹನ್ನೊಂದನೆಯ ಪ್ರತಿಮಾಧಾರಕರಾದ ಕ್ಷುಲ್ಲಕರೂ ಐಲಕರೂ ಎನಿಸುತ್ತಾರೆ ಸ ಧ.]

**ವಿಶೇಷಾರ್ಥ**—ಮೂರು ತರದ ಪಾತ್ರಗಳಿಗೆ ದಾನವನ್ನು ಕೊಡಬೇಕು ಈ ಮೂವರಲ್ಲಿ ಮೇಲೆ ಹೇಳಿದ ಪಂಚಸೂನಗಳನ್ನು ತ್ಯಾಗಮಾಡಿದವನೂ ದ್ರವ್ಯೋಪಾರ್ಜನವೇ ಮೊದಲಾದ ಎಲ್ಲ ಆರಂಭಗಳನ್ನು ಬಿಟ್ಟವನೂ ಆದಂಥ ದಿಗಂಬರ ಸಾಧುವು ಉತ್ತಮ ಪಾತ್ರವೆನಿಸುತ್ತಾನೆ ವ್ರತವನ್ನು ಧರಿಸಿದ ಶ್ರಾವಕನು ಮಧ್ಯಮ ಪಾತ್ರವು ವ್ರತವಿಲ್ಲದವನಿದ್ದರೂ ಸಮ್ಯಕ್ತ್ವವುಳ್ಳ ಶ್ರಾವಕನು ಜಘನ್ಯ ಪಾತ್ರವು ಇನ್ನು ಉತ್ತಮ ಪಾತ್ರಕ್ಕೆ ದಾನಕೊಡುವ ಶ್ರಾವಕನಲ್ಲಿ ಏಳು ಗುಣಗಳು ಇರಬೇಕಾಗುತ್ತದೆ. ಅವು ಹೀಗಿವೆ—

(೧) ದಾತಾರನಿಗೆ ಇಹಲೋಕಕ್ಕೆ ಸಂಬಂಧಿಸಿದ ಪ್ರಸಿದ್ಧಿ, ಮಾನ್ಯತೆ, ಕೀರ್ತಿ, ರಾಜಸನ್ಮಾನ ಧನಧಾನ್ಯಗಳ ವೃದ್ಧಿ ಇವೇ ಮೊದಲಾದ ಫಲಗಳ ಅಪೇಕ್ಷೆ ಇರಕೂಡದು

(೨) ದಾನಕೊಡುವವನಿಗೆ ಸಿಟ್ಟು ಇರಬಾರದು. ಬೇಡುವವರು ಬಹಳ ಜನರಾದರು ಈಗ ಯಾರು ಯಾರಿಗೆ ಕೊಡಬೇಕು? ಎಂಬ ವಿಚಾರವನ್ನು ಮನಸ್ಸಿನಲ್ಲಿ ತರದೆ ಮುನಿ ಮತ್ತು ಶ್ರಾವಕರಿಗೆ ದಾನಕೊಡಬೇಕು.

(೩) ಮನಸ್ಸಿನಲ್ಲಿ ಕಪಟಭಾವ ಇಟ್ಟುಕೊಂಡು, ದಾನಕೊಡಬಾರದು. ಕಪಟವೆಂದರೆ ಮನಸ್ಸಿನಲ್ಲಿ ಇರುವುದೊಂದು ಬಾಯಿಂದ ಮಾತನಾಡುವುದು ಇನ್ನೊಂದು, ಮಾಡುವುದು ಮತ್ತೊಂದು ಜನರಿಗೆ ಮೇಲೆ ಬಹಳ ಭಕ್ತಿಯನ್ನು ತೋರಿಸುವುದು, ಒಳಗೆ ದಾನಕೊಡುವಾಗ ಬಹಳ ದುಃಖವಾಗುವದು ಇಂಥ ಪ್ರವೃತ್ತಿಯನ್ನೂ ಇಡಬಾರದು

(೪) ಇನ್ನುಳಿದ ದಾನಶೂರರೊಡನೆ ಈರ್ಷೆಯನ್ನು ಮಾಡಿ, ದಾನಕೊಡಬಾರದು "ಅವನು ಏನು ದಾನ ಮಾಡಿಯಾನು? ನಾನು ಮಾಡುವ ದಾನದ ಮುಂದೆ ಅವನದು ಕಳೆ ಹೀನವಾದೀತು " ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತರುವುದಕ್ಕೆ ಈರ್ಷಾ ಎನ್ನುವರು

(೫) ದಾನವನ್ನು ಕೊಟ್ಟು ದುಃಖಿಸಬಾರದು. ಸಮಾಜದಲ್ಲಿ ನನ್ನ ಸ್ಥಾನವು ಬಹಳ ದೊಡ್ಡದಾಗಿದೆ. ಈಗ ನಾನು ದಾನಕೊಡದಿದ್ದರೆ ಜನರಲ್ಲಿ ನನ್ನ ದೊಡ್ಡ ಅಪಕೀರ್ತಿಯಾದೀತು. ಎಂದು ಮನಸ್ಸಿನಲ್ಲಿ ಯೋಚಿಸಿ ದಾನಕೊಡಬಾರದು

(೬) ಮನಸ್ಸಿನಲ್ಲಿ ಆನಂದ (ಮುದಿತ ಬಾವ) ಹೊಂದಿ ದಾನಕೊಡಬೇಕು ಇಂದು ಉತ್ತಮ, ಮಧ್ಯಮ, ಜಘನ್ಯ ಈ ಪಾತ್ರಗಳಲ್ಲಿ ಯಾವುದಾದರೊಂದು ಪಾತ್ರಕ್ಕೆ ದಾನಕೊಡುವ ಯೋಗವು ನನಗೆ ಒದಗಲಿ. ಅವರಿಗೆ

---

1 "ಪಡಿಗಹಮುಚ್ಚಠಾಣಂ ಪಾದೋದಕಮಚ್ಚಣಂ ಚ ಪಣಮಂ ಚ ।
ಮಣವಯಣಕಾಯಸುದ್ಧೀ ಎಸಣಾಸುದ್ಧೀ ಯ ಣವವಿಹಂ ಪುಣ್ಣಂ ॥"

2 "ಖಂಡನೀ ಪೇಷಣೀ ಚುಲ್ಲೀ ಉದಕುಂಭೀ ಪ್ರಮಾರ್ಜನೀ ।
ಪಂಚಸೂನಾ ಗೃಹಸ್ಥಸ್ಯ ತೇನ ಮೋಕ್ಷಂ ನ ಗಚ್ಛತಿ ॥" —ಟೀಕೆಯಲ್ಲಿ ಪ್ರಭಾಚಂದ್ರರಿಂದ ಉದ್ಧೃತ

ನಿರ್ವಿಘ್ನತೆಯಿಂದ ಆಹಾರವು ದೊರೆಯಲಿ. ಇದರಿಂದ ನನಗೆ ಅಪೂರ್ವನಿಧಿ ಸಿಕ್ಕಂತೆ ಆಗುವದು—ಎಂಬ ವಿಚಾರ ಮನಸ್ಸಿನಲ್ಲಿ ತಂದು ದಾನಮಾಡಬೇಕು

(೭) ದಾನಕೊಟ್ಟುದರ ಬಗ್ಗೆ ಅಹಂಕಾರ ಪಡೆಯಬಾರದು ಇದು ನಿರಹಂಕಾರವೆಂಬ ಹೆಸರಿನ ಗುಣವಾಗಿದೆ

ಈ ಪ್ರಕಾರ ಪಾತ್ರದಾನ ಮಾಡುವಂಥ ಶ್ರಾವಕನ ಏಳು ಗುಣಗಳು ಇರುತ್ತವೆ ಇವನ್ನು ಶ್ರಾವಕನು ಪಾಲಿಸಲಿಕ್ಕೆ ಬೇಕು. ಸತ್ಪಾತ್ರಕ್ಕೆ ದಾನವನ್ನು ಕೊಡುವಾಗ ದಾನವನ್ನು ಪಡೆಯುವವನು ಮುನಿ, ಶ್ರಾವಕ ಅಥವಾ ಇನ್ನಾವಾನ ಯೋಗ್ಯತೆಯವನಿರುವನೋ ಅದಕ್ಕೆ ತಕ್ಕಂತೆ ಭಕ್ತಿಯನ್ನು ವ್ಯಕ್ತಪಡಿಸಬೇಕು ಆ ಒಂಭತ್ತು ಪ್ರಕಾರದ ಭಕ್ತಿಗಳು ಈ ಪ್ರಕಾರ ಇವೆ—

(೧) ಸಂಗ್ರಹ ಅಥವಾ ಪ್ರತಿಗ್ರಹ. ಮುನೀಶ್ವರ ಅಥವಾ ಕ್ಷುಲ್ಲಕ ಇವರಿಗೆ "ತಿಷ್ಠ ತಿಷ್ಠ" ಅಂದರೆ "ನಿಲ್ಲುವುದು ನಿಲ್ಲುವುದು" ಎಂದು ಮೂರು ಸಲ ಎನ್ನಬೇಕು. ಯಾರ ಮನಸ್ಸಿನಲ್ಲಿ ಅತಿಶಯ ಪೂಜ್ಯತ್ವವು ಇರುವದೋ ಅವರೇ ಹೀಗೆ ಅಂದಾರು ಆದರವು ಇಲ್ಲದಿದ್ದರೆ ಅನ್ನಲಿಕ್ಕಾಗದಷ್ಟೆ ಮುನಿ–ಕ್ಷುಲ್ಲಕರನ್ನುಳಿದು ಶ್ರಾವಕರೇ ಮೊದಲಾದ ಇತರ ಯೋಗ್ಯ ಪಾತ್ರವು ಮನೆಗೆ ಬಂದರೆ "ಬರಬೇಕು, ಕೂಡ್ರಬೇಕು ಸ್ವಾಮಿ" ಇವೇ ಮೊದಲಾದ ಆದರದ ಮಾತುಗಳನ್ನಾಡುವುದು ಇದಕ್ಕೆ ಸಂಗ್ರಹ ಅಥವಾ ಪ್ರತಿಗ್ರಹ ಎನ್ನುವರು.

(೨) ಉಚ್ಚಾಸನ ಕೊಡುವುದು. ತಮ್ಮ ಮನೆಗೆ ಬಂದವರಿಗೆ ಉಚ್ಚ ಸ್ಥಳದಲ್ಲಿ (ಮನೆ, ಮಂಚ, ಕುರ್ಚಿ) ಕೂಡ್ರಿಸುವುದು

(೩) ಪಾದಪ್ರಕ್ಷಾಲನ. ಶುದ್ಧ ನೀರಿನಿಂದ ಮುನಿ ಇಲ್ಲವೆ ಕ್ಷುಲ್ಲಕರ ಪಾದಗಳನ್ನು ತೊಳೆಯುವದು

(೪) ನಮಸ್ಕಾರ. ಮುನಿ ಇಲ್ಲವೆ ಶ್ರಾವಕ ಯಾರೇ ಇದ್ದರೂ ಅವರವರ ಯೋಗ್ಯತೆಗೆ ಅನುಸರಿಸಿ ನಮಸ್ಕರ ಮಾಡುವುದು

(೫) ಸ್ತವನ. ಪಾತ್ರಕ್ಕೂ ವೇಳೆಗೂ ಅನುಸರಿಸಿ ಯೋಗ್ಯ ಪೂಜೆ ಹಾಗೂ ಸ್ತುತಿಗಳನ್ನು ಮಾಡುವುದು. ಅಂದರೆ ಸ್ತುತಿಪರ ಮಾತುಗಳನ್ನು ಆಡುವುದು.

(೬) ಮನದ ಶುದ್ಧತೆ. ಆ ವೇಳೆಯಲ್ಲಿ ದಾನಿಯಾದ ಶ್ರಾವಕನು ಕೆಟ್ಟ ವಿಚಾರಗಳನ್ನು ಮನಸ್ಸಿನಲ್ಲಿ ತರಕೂಡದು.

(೭) ವಚನ ಶುದ್ಧತೆ. ಅಯೋಗ್ಯ ವಚನಗಳನ್ನು ಆಡದೆ ಇರುವುದು

(೮) ಕಾಯಶುದ್ಧಿ. ಯತ್ನಾಚಾರಪೂರ್ವಕ ನಡೆಯುವದು, ಕೂಡುವುದು, ಕ್ರಿಯೆಯನ್ನು ಮಾಡುವುದು

(೯) ಭೋಜನ ಶುದ್ಧಿ. ಪಾತ್ರಕ್ಕೆ ಯೋಗ್ಯವಾದ ನಿರ್ದೋಷ ಆಹಾರ ಕೊಡುವುದು ಇದಕ್ಕೆ ಏಷಣಾಶುದ್ಧಿ ಎಂದೂ ಹೇಳುವರು

ಈ ಪ್ರಕಾರ ಜಿನಸೂತ್ರಕ್ಕೆ ಅನುಸರಿಸಿ ಪಾತ್ರಕ್ಕೆ ಯೋಗ್ಯ ಮತ್ತು ದೇಶ ಕಾಲಗಳಿಗೆ ಹೊಂದುವಂತೆ ಆಹಾರಕೊಡಬೇಕು ಅದನ್ನು ಪಾತ್ರದ ಗುಣಗಳ ಮೇಲೆ ಪ್ರೀತಿಯನ್ನಿಟ್ಟು ಕೊಟ್ಟರೇನೇ ಅದು ಸಾರ್ಥಕವಾಗುತ್ತದೆ. ಇಲ್ಲದಿದ್ದರೆ ನಿಷ್ಫಲವಾಗುವದು. ಧರ್ಮಾತ್ಮರ ಮೇಲೆ ಧರ್ಮಪ್ರಿಯ ಮನುಷ್ಯರ ಪ್ರೀತಿಯು ಇದ್ದೇ ಇರುತ್ತದೆ. ಮುನೀಶ್ವರರಿಗೆ ಶ್ರಾವಕರನ್ನು ಈ ನವಧಾಭಕ್ತಿಯಿಂದ ಪರೀಕ್ಷಿಸಲು ಅವಕಾಶ ದೊರೆಯುತ್ತದೆ ಯಾರ ಮನಸ್ಸಿನಲ್ಲಿ ನವದಾ ಭಕ್ತಿಯು ಇಲ್ಲವೋ ಅವರಲ್ಲಿ ಧರ್ಮವಿಲ್ಲ. ಧರ್ಮ ರಹಿತ ಮಾನವರ ಮನೆಯಲ್ಲಿ ಮುನೀಶ್ವರರು ಎಂದೂ ಆಹಾರ ಸ್ವೀಕರಿಸುವದಿಲ್ಲ ಇದೇ ಪ್ರಕಾರ ಇತರ ಧರ್ಮವಾನ್ ಗೃಹಸ್ಥರೇ ಮೊದಲಾದವರೂ ಸಹ ಆದರಾತಿಥ್ಯದಿಂದ ಕರೆಯದ ಹೊರತಾಗಿ ಧರ್ಮದಲ್ಲಿ ಆದರವಿಲ್ಲದವರಲ್ಲಿ ದೀನವೃತ್ತಿಯನ್ನು ಧಾರಣಮಾಡಿ ಊಟವನ್ನು ಮಾಡುವದಿಲ್ಲ. ದೀನತ್ವದ ತ್ಯಾಗ ಮತ್ತು ಪರಮ ಸಂತೋಷ ಇವೇ ಜೈನತ್ವದ ದೊಡ್ಡ ಗುರುತುಗಳಾಗಿವೆ

ದಾನ ಕೊಡುವವನು ರಾಗದ್ವೇಷಗಳು ಉತ್ಪನ್ನವಾಗದ ರೀತಿಯಲ್ಲಿ ಅನ್ನ, ಔಷಧ, ಶಾಸ್ತ್ರ, ವಾಸಸ್ಥಳ, ವಸ್ತ್ರ ಮೊದಲಾದವುಗಳನ್ನು ದಾನಕೊಡಬೇಕು. ದಾನಕೊಡುವವರು ತಮ್ಮ ದ್ರವ್ಯವು ಯೋಗ್ಯ ಸ್ಥಳದಲ್ಲಿ ಉಪಯೋಗವಾಗುವುದೋ ಇಲ್ಲವೋ ಎಂಬುದನ್ನು ವಿಚಾರಮಾಡಬೇಕು ಅದರಿಂದ ಮೋಹ, ಕಾಮ, ಆಲಸ್ಯ ಮತ್ತು ಗರ್ವ ಮೊದಲಾದ ವಿಕಾರಗಳು ಉತ್ಪನ್ನವಾಗುವ ಸಂಭವವಿದ್ದರೆ ಅಂಥ ಪದಾರ್ಥಗಳ ಊಟವನ್ನು ಕೊಡಬಾರದು ಯಾವುದರಿಂದ ಸ್ವಾಧ್ಯಾಯ, ಧ್ಯಾನ ಮತ್ತು ತಪಶ್ಚರ್ಯ ಮೊದಲಾದವುಗಳನ್ನು ಮಾಡುವ

ಉತ್ಸಾಹವು ಬೆಳೆದೀತೊ ಅಂಥ ಪದಾರ್ಥಗಳನ್ನು ಕೊಡುವುದರಿಂದ ಮಾತ್ರ ಸಂಯಮಿ ಪುರುಷರ ಮನಸ್ಸಿನೊಳಗಿನ ಸಂಕ್ಲೇಶವು ದೂರವಾಗುತ್ತದೆ ಯಾವುದರಿಂದ ಮೋಹ, ಕಾಮ, ಆಲಸ್ಯ, ಚಿಂತೆ, ಅಸಂಯಮ, ಭಯ, ದುಃಖ, ಅಭಿಮಾನ ಮೊದಲಾದವುಗಳು ಉತ್ಪನ್ನವಾಗುವವೋ ಮತ್ತು ಗರ್ವವು ಬೆಳೆಯುವುದೋ ಅಂಥ ಪದಾರ್ಥಗಳು ದಾನ ಕೊಡಲಿಕ್ಕೆ ಯೋಗ್ಯವಲ್ಲ ಯಾವುದರಿಂದ ಸ್ವಾಧ್ಯಾಯ, ಧ್ಯಾನ, ತಪ, ಸಂತೋಷಾದಿಗಳ ವೃದ್ಧಿಯು ಆಗುವುದೋ ಅಂಥ ಪದಾರ್ಥಗಳನ್ನೇ ದಾನಕೊಡಬೇಕು ಆ ದಾನದಿಂದ ಪಾತ್ರದ ದುಃಖವು ಇಲ್ಲದಂತಾಗಬೇಕು, ಪರಿಣಾಮದಲ್ಲಿಯ ಸಂಕ್ಲೇಶವು ದೂರವಾಗಬೇಕು ಇಂಥ ದಾನಮಾಡುವುದು ಯೋಗ್ಯವಾಗಿದೆ

ದಾನದಲ್ಲಿ, ದಾನಕೊಡುವವ, ದಾನಕೊಡತಕ್ಕ ವಸ್ತು, ದಾನವನ್ನು ಹೊಂದುವಂಥ ಪಾತ್ರ, ದಾನದ ವಿಧಿ ಮತ್ತು ದಾನಮಾಡುವ ಕಾಲ ಎಂದು ಐದು ಪ್ರಕಾರಗಳು ಇರುತ್ತವೆ ಇವುಗಳಲ್ಲಿ ದಾನವನ್ನು ಕೊಡುವಂಥವನು–ದಾತೃವು–ಏಳು ಗುಣಗಳಿಂದ ಕೂಡಿದವನಿರಬೇಕು

(೧) ಭಕ್ತಿ. ಪಾತ್ರದೊಳಗಿನ ಗುಣಗಳನ್ನು ಗ್ರಹಣಮಾಡುವ ಬುದ್ಧಿಯು ಇರುವಿಕೆ ಮತ್ತು ಅದಕ್ಕಾಗಿ ಪ್ರಮಾದವನ್ನು ಮಾಡದೆ ಜ್ಞಾನವನ್ನು ಸಂಪಾದಿಸುವದು ಅಲ್ಲದೆ ತನ್ನ ಪರಿಣಾಮವನ್ನು ಯಾವಾಗಲೂ ಶಾಂತವಾಗಿಡಲಿಕ್ಕೆ ಪ್ರಯತ್ನಮಾಡುತ್ತ ಇರುವದು

(೨) ತುಷ್ಟಿಗುಣ. ದಾನವನ್ನು ಕೊಡುವದಕ್ಕಾಗಿ ಯಾರಿಗೆ ಅತಿಶಯವಾದ ಕಳವಳವು ಇರುವುದೋ ಅಂಥವರಿಗೆ ದಾನಕೊಡಲಿಕ್ಕೆ ಯೋಗ್ಯ ಪಾತ್ರವು ದೊರೆತಕೂಡಲೇ ಕಡು ಬಡವನಿಗೆ ವಿಪುಲ ಧನವು ಸಿಕ್ಕಂತೆ ಆನಂದವಾಗುತ್ತದೆ ಇಂಥ ಆನಂದ ಗುಣಕ್ಕೆ ದಾತೃವಿನ ತುಷ್ಟಿಗುಣವೆನ್ನುವರು

(೩) ಶ್ರದ್ಧಾ. ಸಾಧುಗಳಿಗೆ ದಾನ ಕೊಡುವುದೇ ಇಹಪರ ಲೋಕದ ಕಲ್ಯಾಣದ ಸಾಧನವಾಗಿದೆ ಎಂಬ ಸಂಪೂರ್ಣ ಶ್ರದ್ಧೆ ಇರುವುದು

(೪) ವಿಜ್ಞಾನ. ದ್ರವ್ಯ, ಕ್ಷೇತ್ರ, ಕಾಲ, ಭಾವ ಇವುಗಳ ಯೋಗ್ಯವಿಚಾರ ಮಾಡಿ ದಾನ ಕೊಡುವುದು

(೫) ಅಲೋಲುಪತ್ವ. ಸಂಸಾರಕ್ಕೆ ಸಂಬಂಧಿಸಿದ ಧನ, ರಾಜ್ಯ, ಐಶ್ವರ್ಯ, ವಿದ್ಯಾ, ಮಂತ್ರ, ಯಶ, ಕೀರ್ತಿ ಮೊದಲಾದ ಫಲಗಳ ಇಚ್ಛೆಯು ಇಲ್ಲದಿರುವುದು

(೬) ಸಾತ್ವಿಕ. ಶ್ರೀಮಂತ ಪುರುಷನಿಗೂ ಆಶ್ಚರ್ಯವು ಉತ್ಪನ್ನವಾಗುವ ಹಾಗೆ ದಾನವನ್ನೂ ಬಡವನು ಕೊಡುವದು ಸಾತ್ವಿಕಗುಣವಾಗಿದೆ

(೭) ಕ್ಷಮಾ. ಸಿಟ್ಟು ಬರುವಂಥ ಪ್ರಸಂಗವು ಒದಗಿ ಬಂದಿದ್ದರೂ ಯಾರ ಮೇಲೆಯೂ ಸಿಟ್ಟಾಗದೆ ಇರುವುದು

ದಾತೃವಿನ ಇತರ ಗುಣಗಳು—ಇದರ ಹೊರತಾಗಿ ಮುನಿ, ಶ್ರಾವಕ, ಅವ್ರತ ಸಮ್ಯಗ್ದೃಷ್ಟಿ ಈ ಮೂರು ಪ್ರಕಾರದ ಪಾತ್ರಗಳಿಗೆ ದಾನಕೊಡುವಂಥ ಉತ್ತಮ ದಾತೃವಿನ ಅನೇಕ ಗುಣಗಳು ಇರುತ್ತವೆ. ಅವನು ವಿನಯವಂತನಿರಬೇಕು ಉದ್ಧಟತನದಿಂದ ಕೊಟ್ಟದಾನವು ನಿಷ್ಫಲವಾಗುತ್ತದೆ ದಾನ ಕೊಡಲಿಕ್ಕೆ ಹತ್ತಿರ ಏನೂ ಇಲ್ಲದಿದ್ದರೂ ಸಹ ಕೇವಲ ವಿನಯವನ್ನು ತೋರಿಸುವುದರಲ್ಲಿಯೂ ಕೂಡ ದೊಡ್ಡ ದಾನತ್ವವಿದೆ ಯಾರದಾದರೂ ಸತ್ಕಾರ ಮಾಡುವುದು, ಅವರ ಕೂಡ ಮೃದುಭಾಷಣ ಮಾಡುವುದು, ಬಂದವರನ್ನು ಉಚ್ಚಾಸನದ ಮೇಲೆ ಕೂಡಿಸುವುದು, ಅವರ ಗುಣಗಳನ್ನು ಸ್ತುತಿಸುವುದು–ಇವೆಲ್ಲ ಸಹ ದೊಡ್ಡ ದಾನವೆನಿಸುತ್ತವೆ ಧರ್ಮದ ಮೇಲೆ ಪ್ರೀತಿಯಿರುವುದು, ದಾನದ ಕ್ರಮದ ಜ್ಞಾನವಿರುವುದು, ಯಾವ ವೇಳೆಯಲ್ಲಿ ದಾನ ಮಾಡಬೇಕೆಂಬುದು ತಿಳಿದಿರುವುದು, ಜಿನ ಶಾಸ್ತ್ರದ ವಿಷಯ ಗೊತ್ತಿರುವುದು, ವಿಷಯೋಪಭೋಗದ ಇಚ್ಛೆ ಇಲ್ಲದಿರುವುದು, ಎಲ್ಲ ಜೀವಗಳ ಮೇಲೆ ದಯೆ ಇಡುವುದು, ಇಡುವ ವಿಚಾರವು ಮನಸ್ಸಿನಲ್ಲಿರುವುದು, ರಾಗದ್ವೇಷಾದಿಗಳನ್ನು ಮಂದಗೊಳಿಸುತ್ತ ಹೋಗುವುದು, ಸಾರಾಸಾರ ವಿಚಾರ ಮಾಡುವುದು, ಸಮದರ್ಶಿಯಾಗಿರುವುದು, ಇಂದ್ರಿಯಗಳನ್ನು ಗೆಲ್ಲುವುದು ಪ್ರಾಪ್ತವಾದ ಪರೀಷಹಗಳಿಗೆ ಹೆದರದೆ ಇರುವುದು, ಮತ್ಸರ ಉತ್ಪನ್ನವಾಗಗೊಡದಿರುವುದು, ಸ್ವ ಮತ್ತು ಪರಮತಗಳ ಜ್ಞಾನ-ವಿರುವುದು, ಪ್ರಿಯ ಮಾತುಗಳನ್ನಾಡುವುದು, ಪ್ರತಿಕರ ಪವಿತ್ರ ಗುಣಗಳಿಂದ ಮನಸ್ಸಿಗೆ ಸಂತೋಷವುಂಟಾಗುವುದು, ಲೋಕವ್ಯವಹಾರ ಮತ್ತು ಪರಮಾರ್ಥ ಇವೆರಡನ್ನೂ ತಿಳಿಯುವುದು, ಸಮ್ಯಕ್ತ್ವ ಗುಣವನ್ನು ಧರಿಸುವುದು, ಅಹಂಕಾರಾದಿ ದುರ್ಗುಣಗಳನ್ನು ತ್ಯಾಗ ಮಾಡುವುದು, ವೈಯಾವೃತ್ಯ ಮಾಡುವ ವಿಷಯದಲ್ಲಿ ತತ್ಪರನಾಗಿರುವುದು,

ಇಂಥ ಅನೇಕ ಉತ್ತಮ ಗುಣಗಳು ದಾನ ಕೊಡುವವರಲ್ಲಿ ಇರುವುದು ಅವರಿಗೆ ಭೂಷಣಾಸ್ಪದವಾಗಿದೆ ಹಾಗೆಯೇ ಅವರ ಮನಸ್ಸಿನಲ್ಲಿ ಯಾವಾಗಲೂ ಮುಂದಿನ ವಿಚಾರಗಳು ಬರುತ್ತವೆ-"ನಮ್ಮ ದ್ರವ್ಯವು ವ್ರತಿಕರ ಸೇವೆಯಲ್ಲಿ ವೆಚ್ಚವಾಗಲಿ, ಸಹಧರ್ಮಿ ಪುರುಷರ ಮೇಲೆ ಉಪಕಾರ ಮಾಡುವುದರಲ್ಲಿ ಅದು ಸವೆಯಲಿ. ಯಾರಿಗೆ ದುಃಖವಾಗಿದೆಯೋ ಆ ದುಃಖವನ್ನು ನಿವಾರಿಸುವುದರಲ್ಲಿ ನನ್ನ ಧನವ್ಯಯವಾಗಲಿ ಧರ್ಮದ ವೃದ್ಧಿಗಾಗಿ ಅದರ ಉಪಯೋಗವಾಗಲಿ. ಇಂಥ ಸನ್ಮಾರ್ಗಗಳ ಕಡೆಗೆ ಉಪಯೋಗವಾಗುವ ದ್ರವ್ಯವೇ ನನ್ನದು. ಇತರ ಸಾಂಸಾರಿಕ ಕಾರ್ಯದಲ್ಲಿಯೂ ಮನೆಯೊಳಗಿನ ಜನರ ವಿಷಯ ಸುಖಗಳ ಪೋಷಣೆಗಾಗಿಯೂ ಯಾವ ಧನವು ವೆಚ್ಚವಾಗುವುದೋ ಅದು ಕೇವಲ ಕರ್ಮ ಬಂಧನಕ್ಕೆ ಕಾರಣವಾಗುತ್ತದೆ ಅದರಿಂದ ಅನಂತಕಾಲದ ವರೆಗೆ ಸಂಸಾರ ಸಮುದ್ರದಲ್ಲಿ ಸುತ್ತಬೇಕಾಗುತ್ತದೆ. ಕುಟುಂಬದೊಳಗಿನ ಮನುಷ್ಯರು-ನನ್ನ ಧನದ ಉಪಭೋಗವನ್ನು ಪಡೆಯುವಂಥವರು-ಅವರಿಗೆ ಋಣಿಯಾಗಿರುವೆ ಅವರ ಸಾಲವನ್ನೂ ಈಗ ನಾನು ತೀರಿಸುತ್ತಿರುವೆ. ಅವರು ಧನವನ್ನು ಹಂಚಿಕೊಳ್ಳುವವರೂ ಎತ್ತಿ ಒಯ್ಯುವಂಥವರೂ ಇದ್ದಾರೆ ಅಲ್ಲದೆ ರಾಗದ್ವೇಷಾದಿಗಳನ್ನು ಉತ್ಪನ್ನಮಾಡಿ, ವ್ರತ ಸಂಯಮಗಳನ್ನು ನಷ್ಟಗೊಳಿಸುವಂಥವರಿರುತ್ತಾರೆ ನನಗೆ ಪಾಪದ ಪ್ರೇರಣೆಯನ್ನುಂಟು ಮಾಡುವವರಾಗಿರುತ್ತಾರೆ ನಾನೂ ಅವರ ಸಂಯೋಗದಿಂದ ಬಹಳ ಗಾಢವಾದ ಅಜ್ಞಾನಾಂಧಕಾರದಲ್ಲಿ ಸಿಕ್ಕಿರುವೆ ಅವರ ಮೇಲಿನ ಸುಳ್ಳು ಪ್ರೇಮಕ್ಕೆ ಬಲಿಬಿದ್ದು, ಧರ್ಮ, ಅಧರ್ಮ, ನ್ಯಾಯ, ಅನ್ಯಾಯ, ಯಶ, ಅಪಯಶ, ಇವು ಏನೂ ನನಗೆ ತಿಳಿಯದಂತಾಗಿವೆ ಸ್ತ್ರೀ-ಪುತ್ರಾದಿಗಳ ವಿಷಯವಾಸನೆಯನ್ನು ಪುಷ್ಟಗೊಳಿಸುವದಕ್ಕಾಗಿ ಇತರ ದುರ್ಬಲ, ಭಾವುಕ, ಅಜ್ಞಾನೀ ಜೀವಗಳಿಂದ ದ್ರವ್ಯವನ್ನು ರಕ್ಕಸತನದಿಂದಲೂ ಕಳ್ಳತನದಿಂದಲೂ ಎತ್ತಿ ಹಾಕಬೇಕೆಂದು ನನಗೆ ಯಾವಾಗಲೂ ಎನಿಸುತ್ತಿದೆ. ಕುಟುಂಬವನ್ನು ಧನವಸ್ತ್ರಾಭರಣ-ಭೋಜನಾದಿಗಳಿಂದ ತೃಪ್ತಗೊಳಿಸುವದಕ್ಕಾಗಿ ಹಗಲಿರುಳೂ ಸುಳ್ಳು ಮಾತನಾಡುವುದು, ಕಳವು ಮಾಡುವುದು ಇವೇ ಮೊದಲಾದ ಕೃತ್ಯಗಳನ್ನು ಮಾಡುವ ಇಚ್ಛೆಯಾಗುವುದು. ಈಗ ಭಗವಾನ್ ವೀತರಾಗದೇವನು ಉಪದೇಶಿಸಿದ ಧರ್ಮವು ಲಭಿಸಿದೆ. ಇಂದ ಮೇಲೆ ಕುಟುಂಬ ಪೋಷಣೆಗಾಗಿ ಇಲ್ಲವೆ ಧನೋಪಾರ್ಜನೆಯನ್ನು ಮಾಡುವದಕ್ಕಾಗಿ ನಾನು ಅನ್ಯಾಯ ಮತ್ತು ಅನೀತಿಗಳಲ್ಲಿ ಪ್ರವೃತ್ತನಾಗಲಾರೆನು ನ್ಯಾಯ ಮಾರ್ಗದಿಂದ ಯಾವುದು ಲಭಿಸೀತೋ ಅಷ್ಟರಲ್ಲಿ ನನ್ನ ಕುಟುಂಬ ಹಾಗೂ ನನ್ನ ಉಪಜೀವಿಕೆಯನ್ನು ನಡೆಯಿಸುವೆನು. ಇಷ್ಟೇ ಅಲ್ಲ, ಆ ನ್ಯಾಯವಾದ ಉತ್ಪಾದನೆಯಿಂದ ದಾನದ ವಿಭಾಗವನ್ನೂ ಸಹ ತೆಗೆದು ಇಡುವೆನು. ಧನ, ಯೌವನ ಮತ್ತು ಆಯುಷ್ಯಗಳು ಕ್ಷಣ ಭಂಗುರವಾಗಿವೆ ನಿಶ್ಚಯವಾಗಿ ಒಂದು ದಿನ ಮರಣವು ಬರತಕ್ಕದ್ದೇ ಅದು ಆಕಸ್ಮಿಕವಾಗಿ ಬಂದೀತು ಆ ಕಾಲದಲ್ಲಿ ಧನ, ಸಂಪತ್ತು, ಕುಟುಂಬದೊಳಗಿನ ಮನುಷ್ಯರು ಮೊದಲಾದವರಾರೂ ಸಂಗಡ ಬರುವವರಿಲ್ಲ ಕೇವಲ ನಾನು ಗಳಿಸಿದಂಥ ದಾನ, ತಪ, ಶೀಲ, ಭಾವನಾ ಇವು ಉತ್ಪನ್ನಮಾಡಿದಂಥ ಪುಣ್ಯವೊಂದೇ ಪರಲೋಕದಲ್ಲಿ ಸಹಾಯ ಮಾಡಲಿಕ್ಕೆ ನನ್ನ ಸಂಗಡ ಬಂದಾವು ಈ ಸ್ಥಳದಲ್ಲಿ ಯಾವ ಸಾಮಗ್ರಿಗಳು ಪ್ರಾಪ್ತ-ವಾಗಿರುವವೋ ಅವೆಲ್ಲ ಪೂರ್ವ ಜನ್ಮದಲ್ಲಿ ದಾನ ಕೊಟ್ಟುದರ ಫಲಗಳಾಗಿರುತ್ತವೆ ಈಗ ದಾನ ಕೊಡುವುದರಲ್ಲಿಯೂ ಧರ್ಮವಾನ್ ಪುರುಷರ ಸೇವೆ ಮಾಡುವುದರಲ್ಲಿಯೂ ದುಃಖಿತ ಬುಭುಕ್ಷಿತರ ಮೇಲೆ ಉಪಕಾರ ಮಾಡುವುದರಲ್ಲಿಯೂ ನಾನು ಪ್ರವೃತ್ತನಾದರೆ ಪರಲೋಕದಲ್ಲಿ ಸರ್ವ ಸುಖದ ಪ್ರಾಪ್ತಿಯಾದೀತು, ಮೋಕ್ಷ ಮಾರ್ಗದ ಸಮ್ಯಗ್‌ಜ್ಞಾನಾದಿ ಸಾಮಗ್ರಿಗಳು ದೊರೆತಾವು.

ಗೃಹ ಹಾಗೂ ಧನದ ಸಫಲತೆ—ಮೊದಲು ಸತ್ಪಾತ್ರ ದಾನ ಮಾಡಿ, ಆ ಮೇಲೆ ಸ್ವತಃ ಊಟ ಮಾಡುವವನ ಜೀವನವು ಸಫಲವೆಂದು ತಿಳಿಯಬೇಕು ಸಾಮಾನ್ಯವಾಗಿ ಪಶುವೂ ಸಹ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುತ್ತಿರುತ್ತದೆ ಯಾರ ಮನೆಯಲ್ಲಿ ಸತ್ಪಾತ್ರದಾನವು ಕೊಡಲ್ಪಡುವುದೋ ಅದೇ ನಿಜವಾದ ಮನೆಯೆಂದು ತಿಳಿಯಬೇಕು ಪಶುಗಳಿಗೆ ನಿಲ್ಲಲಿಕ್ಕೆ ಹೋದರು, ಪಕ್ಷಿಗಳಿಗೆ ಗೂಡುಗಳು ಇರುತ್ತವೆ ಇಂದ ಮೇಲೆ ಮನುಷ್ಯರ ಮನೆಗಳಲ್ಲಿಯೂ ಪಶುಪಕ್ಷಿಗಳ ವಾಸಸ್ಥಳಗಳಲ್ಲಿಯೂ ಅಂತರವೇನು? ಸಮುದ್ರದಲ್ಲಿ ನೀರು ಮತ್ತು ರತ್ನಗಳೂ ಸಹ ಬಹಳಷ್ಟಿವೆ. ಆದರೆ ನೀರು ಬಹಳ ಉಪ್ಪು, ರತ್ನಗಳು ಮಹಾ ಮತ್ಸ್ಯಾದಿ ಪ್ರಾಣಿಗಳಿಂದ ವ್ಯಾಪಿಸಿದವೂ ಆಗಿವೆ. ಈ ದೃಷ್ಟಿಯಿಂದ ಅವು ವಿಪುಲವಿದ್ದೂ ಉಪಯೋಗವೇನು? ಅರ್ಥಾತ್ ಅವು ವಿಪುಲವಿದ್ದೂ ಹೇಗೆ ನಿಷ್ಫಲವೋ ಹಾಗೆಯೇ ಯಾವ ಗೃಹಸ್ಥನ ಹತ್ತರ ಬಹಳಷ್ಟು ಧನವಿದ್ದು ಕೂಡ ತನ್ನ ಸಮಾನ ಧರ್ಮೀಯ ಜನರ ಹಾಗೂ ದೀನ ಅನಾಥ ಜನರ ಸತ್ಕಾರ್ಯಕ್ಕಾಗಿ ಉಪಯೋಗವಾಗದಿದ್ದರೆ ಆ ಧನವು ವಿಪುಲವಾಗಿದ್ದರೂ ಏನು ಮಾಡುವುದು? ಅದು

ನಿಷ್ಫಲವೆಂದೇ ಅನ್ನಬೇಕಾದೀತು. ಅದು ಅವನ ಒಡೆತನದ್ದು ಅಲ್ಲ. ಅದು ಬೇರೆ ಇನ್ನಾವುದೋ ಪುಣ್ಯವಾನ್ ಜೀವದ ಉಪಯೋಗಕ್ಕೆ ಬೀಳುವಂಥದಿರಬೇಕು ಇವನು ಅದರ ರಕ್ಷಕನು ಮಾತ್ರ ಹಗಲಿರುಳೂ ಅವನ್ನು ಯಾರಾದರೂ ಒಯ್ಯುವರೋ ಹೇಗೆ ಎಂಬುದನ್ನಷ್ಟು ಇವನು ವಿಚಾರಿಸುವವನಾಗಿರುತ್ತಾನೆ ಯಾರ ಮನೆಯಲ್ಲಿ ಸುದೈವದಿಂದ ಸತ್ಪಾತ್ರವು ಪ್ರಾಪ್ತವಾಗಿದ್ದು, ದಾನ ಕೊಡುವ ಸಾಮಾಗ್ರಿಯೂ ಸಹ ಸಿದ್ಧವಾಗಿದ್ದು, ದಾನ ಕೊಡುವದಿಲ್ಲವೋ ಅವನ ಕೈಯಲ್ಲಿ ಚಿಂತಾಮಣಿ ರತ್ನವು ಪ್ರಾಪ್ತವಾಗಿದ್ದೂ ಅದು ನಷ್ಟಗೊಂಡಕೆಯೇ ಸರಿ ದ್ರವ್ಯವು ಲಭಿಸಿದ್ದೂ ಸಹ ಅದನ್ನು ಯಾರು ಸತ್ಪಾತ್ರದಾನದ ಕಡೆಗೆ ವ್ಯಯಮಾಡುವದಿಲ್ಲವೋ ಆ ಮೂರ್ಖರು ತಮ್ಮ ಆತ್ಮವನ್ನೇ ಮೋಸಗೊಳಿಸುತ್ತಿದ್ದಾರೆಂದು ತಿಳಿಯಬೇಕು

**ಸತ್ಪಾತ್ರದಲ್ಲಿ ದಾನಮಾಡಬೇಕು.** ಯಾರು ತಮ್ಮ ಧನವನ್ನು ದಾನ ಮಾಡುವುದರ ಕಡೆಗೆ ವ್ಯಯ ಮಾಡುವರೋ ಅವರೇ ಅದರ ಒಡೆಯರೆಂದು ತಿಳಿಯಬೇಕು ಯಾರ ಪರಿಣಾಮವು ಯಾವಾಗಲೂ ಸತ್ಪಾತ್ರದಾನ ಕೊಡುವದರ ಕಡೆಗೆ ಇರುತ್ತದೆಯೋ ಅವರಿಗೆ ಪ್ರತ್ಯಕ್ಷವಾಗಿ ದಾನ ಕೊಡುವ ಸಂದರ್ಭವು ಒದಗದಿದ್ದರೂ ಸಹ ಅವರು ನಿರಂತರ ದಾನ ಕೊಡುತ್ತಲೇ ಇರುವರೆಂದು ತಿಳಿಯಬೇಕು ದ್ರವ್ಯವು ತೀರ ಕಡಿಮೆ ಇರಲಿ ಅಥವಾ ಹೆಚ್ಚಾಗಿರಲಿ ಯಾರು ಅತಿಶಯ ಭಕ್ತಿಯಿಂದ ದಾನ ಕೊಡುವರೋ ಅವರೇ ದಾತೃಗಳು ಯಾರಿಗೆ ಭಕ್ತಿ ಇಲ್ಲವೋ ಅವರು ದಾನಿಗಳಲ್ಲ ವೇಳೆಯಿಲ್ಲದೆ ಅಕಾಲದಲ್ಲಿ ಯಾರು ದಾನ ಕೊಡುವರೋ ಅವರ ದಾನವು ಅಕಾಲದಲ್ಲಿ ಬಿತ್ತಿದ ಬೀಜದಂತೆ ನಿಷ್ಫಲವಾಗುತ್ತದೆ ಅಪಾತ್ರದಲ್ಲಿ ದಾನಕೊಟ್ಟವರ ದಾನವು ಸವಳು ಭೂಮಿಯಲ್ಲಿ ಬಿತ್ತಿದ ಬೀಜದಂತೆ ನಿರರ್ಥಕವಾಗಿದೆ ದುಷ್ಟರಿಗೆ ಕೊಟ್ಟದಾನವು ಹಾವಿಗೆ ಹಾಲು ಸಕ್ಕರೆಯನ್ನು ಕುಡಿಸಿದಂತಿದೆ ಆ ಸವಿಯಾದ ಹಾಲಿನಿಂದ ಉತ್ಪನ್ನವಾಗುವ ಘೋರ ವಿಷದಂತೆ ಸಂಸಾರದಲ್ಲಿಯ ಘೋರ ದುಃಖ, ಮರಣ ಮತ್ತು ಸಂತಾಪ-ವನ್ನುಂಟುಮಾಡುವಂತಹದಿದೆ ತಮ್ಮ ದೈವಾನುಸಾರ ಎಷ್ಟು ಧನವು ಸಿಗುವದೋ ಅದರೊಳಗಿಂದಲೇ ದಾನದ ವಿಭಾಗವನ್ನು ಬೇರೆ ತೆಗೆದಿಟ್ಟು, ಅದನ್ನು ವೆಚ್ಚಮಾಡುತ್ತ ಹೋಗಬೇಕು. ಆ ವೇಳೆಯಲ್ಲಿ, ನನ್ನ ಹತ್ತಿರ ಹೆಚ್ಚಿಗೆ ಹಣವಿದ್ದಿದ್ದರೆ ಹೆಚ್ಚಿಗೆ ಖರ್ಚು ಮಾಡುತ್ತಿದ್ದೆ–ಎಂಬ ವಿಚಾರವನ್ನು ಮನಸ್ಸಿನಲ್ಲಿ ತರಕೂಡದು ದಾನದ ಸಲುವಾಗಿ ಅಭಿಮಾನ ಹಿಡಿದು, ಹೆಚ್ಚಿನ ಧನದ ಇಚ್ಛೆಯನ್ನು ಮಾಡಬಾರದು ತಮ್ಮ ಲಾಭಾಂತರಾಯ ಕರ್ಮದ ಕ್ಷಯೋಪಶಮದಿಂದ ದೊರೆತಷ್ಟರಲ್ಲಿ ಸಂತುಷ್ಟರಾಗಿರಬೇಕು ಹೆಚ್ಚಿನದನ್ನು ಬಯಸದಿರುವುದೂ ದೊಡ್ಡದಾನವೇ ಆಗಿದೆ. ನ್ಯಾಯದಿಂದ ಸಂಪಾದಿಸಿದಂಥ ದನದಲ್ಲಿ ಕೆಲವೊಂದು ಭಾಗವನ್ನು ಯಾಚಕರಿಗೆ ಕೊಡುವುದರಲ್ಲಿಯೂ ಉಳಿದ ಧನವು ಮನೆಯ ಖರ್ಚಿಗೆ ಹಾಗೂ ಕೊಡಕೊಳ್ಳುವುದರಲ್ಲಿ ಒಂದು ವೇಳೆ ಉಪಯೋಗವಾದರೆ ಆ ಸಂಪಾದನೆಯು ಸಫಲವಾದಂತಾಯಿತು ಇಂಥ ಪರಿಣಾಮವು ದಾನಕೊಡುವವನಲ್ಲಿ ಯಾವಾಗಲೂ ಇರಬೇಕು ಕೊಡುವ ದಾನವನ್ನು ಆನಂದದಿಂದ ಕೊಡಬೇಕು ಅದನ್ನು ಸಿಟ್ಟಿನಿಂದ, ತಿರಸ್ಕಾರದಿಂದ, ನಿಂದೆಯಿಂದ, ಅಪಮಾನಗೊಳಿಸಿ ಕೊಟ್ಟರೆ ಅದರಿಂದ ದಾನಕೊಡುವವರಿಗೆ ಜಗತ್ತಿನಲ್ಲಿ ಅಪಕೀರ್ತಿಯಾಗುತ್ತದೆ ಅಲ್ಲದೆ ಕಲಹವೂ ಉತ್ಪನ್ನವಾಗುತ್ತದೆ ಪರಲೋಕದಲ್ಲಿ ಅಶುಭ ಕರ್ಮ ಫಲದ ರೂಪದಲ್ಲಿ ದಾರಿದ್ರ್ಯ ಮತ್ತು ಅಪಮಾನ ಮೊದಲಾದವುಗಳನ್ನು ಅನೇಕ ಜನ್ಮಗಳ ವರೆಗೆ ಭೋಗಿಸಬೇಕಾಗುತ್ತದೆ.

**ಕೆಟ್ಟದಾನವನ್ನು ಮಾಡಕೂಡದು.** ಯಾವುದು ಕೊಡುವದಕ್ಕೆ ಯೋಗ್ಯವಿಲ್ಲವೋ ಅದನ್ನು ಕೊಡುವುದು ಕುದಾನವೆನಿಸುತ್ತದೆ ಅದನ್ನು ಕೊಡುವುದು ಯೋಗ್ಯವಲ್ಲ ಭೂದಾನ ಮಾಡಬಾರದು. ಯಾಕೆಂದರೆ ರೆಂಟೆ, ಕುಂಟೆ, ಕೂಟೆ, ಕೂರಿಗೆ, ಗುದ್ದಲಿ, ಸಲಿಕೆಗಳಿಂದ ನಿತ್ಯವೂ ಭೂಮಿಯು ಅಗಿಯಲ್ಪಡುತ್ತದೆ ಆಗ ಅನಂತ ಜೀವಗಳ ಹಿಂಸೆಯಾಗುತ್ತದೆ ದೊಡ್ಡ ದೊಡ್ಡ ಪಂಚೇಂದ್ರಿಯ ಜೀವಗಳು, ಸರ್ಪ, ಇಲಿ ಮೊದಲಾದ ಪ್ರಾಣಿಗಳು ಧಾನ್ಯ ಫಲಗಳನ್ನು ನಾಶಮಾಡುವಂಥವಿರುತ್ತವೆಂದು ಅವುಗಳನ್ನು ಕೊಲ್ಲಬೇಕಾಗುತ್ತದೆ ಭೂಮಿಯ ಮೇಲಿನ ಪ್ರೀತಿಯಿಂದ ಅಣ್ಣತಮ್ಮಂದಿರು ತಮ್ಮ ತಮ್ಮಲ್ಲಿ ಹೊರಾಡಿ ಪ್ರಾಣವನ್ನೂ ಕಳಕೊಳ್ಳುತ್ತಾರೆ ಇಂಥ ತೀವ್ರ ರಾಗ–ದ್ವೇಷಗಳನ್ನು ಉತ್ಪನ್ನ ಮಾಡುವಂಥ ಭೂದಾನಕ್ಕೆ ಘೋರ ಪಾಪ ಬಂಧನವಿದೆಯೆಂದು ತಿಳಿದು, ಆ ದಾನವನ್ನು ಮಾಡಬಾರದು ಇದರಿಂದ ಪಾತ್ರದ ಅಂದರೆ ದಾನವನ್ನು ಪಡೆಯುಪವರ ನಾಶವಾಗುತ್ತದೆ ಅವನು ಕೊಲ್ಲಲ್ಪಡು-
ತ್ತಾನೆ ಅವನಿಗೆ ಯಾವಾಗಲೂ ಹೆದರಿಕೆ ಇರುತ್ತದೆ. ಇನ್ನು ಸುವರ್ಣದಾನದಿಂದ ಸಂಯಮದ ನಾಶವಾಗುತ್ತದೆ. ರಾಗ, ದ್ವೇಷ, ಕಾಮ, ಕ್ರೋಧ, ಲೋಭ, ಭಯ, ಮದ, ಮತ್ಸರ ಮೊದಲಾದವುಗಳು ಮೇಲಿಂದ ಮೇಲೆ ಅಧಿಕ

ಪ್ರಮಾಣದಲ್ಲಿ ಉತ್ಪನ್ನವಾಗುತ್ತವೆ. ಆತ್ಮ ಸ್ವರೂಪದ ಮರವು ಉಂಟಾಗುತ್ತದೆ. ಆದಕ್ಕಾಗಿ ವೀತರಾಗ ಧರ್ಮದ ಇಚ್ಛೆಯನ್ನು ಮಾಡುವ ಪುರುಷನು ಸುವರ್ಣ ದಾನವು ಪಾಪಕರವೆಂದು ತಿಳಿದು, ಆ ದಾನವನ್ನು ಮಾಡಕೂಡದು. ಕೋಟ್ಯಾವಧಿ ತ್ರಸ ಜೀವಿಗಳ ಉತ್ಪತ್ತಿಗೆ ಕಾರಣವೆನಿಸುವ ಎಳ್ಳನ್ನೂ ಸಹ ದಾನಮಾಡಬಾರದು. ಕಾಲಲ್ಲಿ ಹಾಕುವ ಜೋಡು, ಒಲೆ, ಮೊರ, ಕಸಬರಿಗೆ, ಕೊಡಲಿ, ಸಲಿಕೆ, ಹುಳಿತ ಧಾನ್ಯ, ಎಣ್ಣೆ, ದೀಪ, ಬೆಲ್ಲ, ಕಬ್ಬಿನ ರಸ ಮೊದಲಾದ ಪದಾರ್ಥಗಳನ್ನು ಉಪಯೋಗಿಸುವವರಲ್ಲಿಯೂ ಸಿದ್ಧಗೊಳಿಸುವದರಲ್ಲಿಯೂ ಅನೇಕ ಜೀವಗಳ ಹಿಂಸೆಯಾಗುತ್ತದೆ. ಅವುಗಳ ಮೇಲೆ ಅತ್ಯಂತ ಮೋಹವು ಉತ್ಪನ್ನವಾಗುತ್ತದೆ. ಈ ಪದಾರ್ಥವನ್ನು ಕೊಡು-ವುದರಿಂದ ಧರ್ಮವು ಸಂಭವಿಸುತ್ತದೆಂದು ವಿಚಾರಿಸಿ ಮಿಥ್ಯಾ ಮಾರ್ಗಿಗಳಾದ ಜನರು ದಾನ ಕೊಡುತ್ತಾರೆ. ಆದರೆ ಇವೆಲ್ಲವುಗಳಿಗೆ ಕುದಾನವೆಂದು ಹೇಳಲಾಗಿದೆ. ಇವು ಸಂಸಾರದ ಬಂಧನವನ್ನು ಬೆಳೆಯಿಸುವಂಥವು ಇರುತ್ತವೆ. ಕನ್ಯೆಯನ್ನು ದಾನ ಕೊಡುವುದೂ ಕುದಾನದಲ್ಲಿಯೇ ಬರುತ್ತದೆ. ಗೃಹಸ್ಥನಿಗೆ ಕನ್ಯಾದಾನ ಮಾಡದೆ ಹೇಗೆ ನಡೆಯಬೇಕು?–ಎಂದೂ ಹಲವರು ಪ್ರಶ್ನೆಯನ್ನು ಕೇಳಬಹುದು. ಇದು ನಿಜ. ಗೃಹಸ್ಥನು ತನ್ನ ಕನ್ಯೆಯ ವಿವಾಹವನ್ನು ಯೋಗ್ಯ ಕುಲದಲ್ಲಿ ಹುಟ್ಟಿದವನೂ ಜಿನಧರ್ಮಿಯೂ ವ್ಯವಹಾರ ಚತುರ ಮತ್ತು ಗುಣಸಂಪನ್ನನಾದ ವರನೊಡನೆ ಮಾಡಬೇಕು. ಆದರೆ ಕನ್ಯಾದಾನವನ್ನು ಮಾಡುವುದರಲ್ಲಿ ಧರ್ಮವಿದೆಯೆಂದು ತಿಳಿಯಕೂಡದು. ಜೈನರು ಕನ್ಯಾದಾನಕ್ಕೆ ಪಾಪವೆಂದು ತಿಳಿಯುತ್ತಾರೆ. ಯಾವ ಪ್ರಕಾರ ಗೃಹಕರ್ಮಗಳನ್ನೂ ಆರಂಭಿಸುವುದರಲ್ಲಿ ಅನೇಕ ಪಾಪಗಳ ಉತ್ಪತ್ತಿಯು ಇರುವುದೋ ಅದರಂತೆಯೇ ಕನ್ಯಾದಾನದಲ್ಲಿಯೂ ಸಂಭವಿಸುತ್ತದೆ. ಆದರೆ ಇದರ ಪಾಪವು ಬಹಳ ದೊಡ್ಡ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಇಲ್ಲದಂತೆ ಆಗುವದಿದೆ. ಉಳಿದ ಜನರು ಕನ್ಯಾದಾನವನ್ನು ಕೊಡುವುದರಲ್ಲಿ ಬಹಳ ಪುಣ್ಯವಿದೆಯೆಂದು ಭಾವಿಸುತ್ತಾರೆ. ಅವರು ಕನ್ಯಾದಾನದಿಂದ ಲಕ್ಷ ಯಜ್ಞ ಮಾಡಿದುದಕ್ಕಿಂತ ಹೆಚ್ಚಿಗೆ ಫಲವಿದೆಯೆಂದು ತಿಳಿಯುತ್ತಾರೆ. ಅಲ್ಲದೆ ಕೋಟ್ಯಾವಧಿ ಬ್ರಾಹ್ಮಣರಿಗೆ ಊಟ ಹಾಕಿದುದಕ್ಕಿಂತ ಹೆಚ್ಚಿನ ಪುಣ್ಯವು ಕನ್ಯಾದಲ್ಲಿದೆಯೆಂದೂ ಕೋಟಿ ಗೋದಾನವನ್ನೂ ಮಾಡಿದುದಕ್ಕಿಂತ ಹೆಚ್ಚಿನ ಫಲವು ಲಭಿಸುವದೆಂದೂ ಹೇಳುತ್ತಾರೆ. ಆದರೆ ಜೈನರು ಇದಕ್ಕೆ ಸಂಸಾರ ಪರಿಭ್ರಮಣಕ್ಕೆ ಕಾರಣವಾದ ಕುದಾನವೆನ್ನುವರು. ಇವಲ್ಲದೆ ಸಂಸಾರ ಸಮುದ್ರದಲ್ಲಿ - ಮುಳುಗಿಸುವಂಥ ಅನೇಕ ಮಿಥ್ಯಾದೃಷ್ಟಿ, ಲೋಭಿ, ವಿಷಯಲಂಪಟ ಜನರು ವರ್ಣಿಸಿದಂಥ ಕುದಾನಗಳಿವೆ. ಇವೆಲ್ಲವುಗಳನ್ನೂ ಜೈನ ಗೃಹಸ್ಥರು ಕೊಡಬಾರದು. ಅವುಗಳಲ್ಲಿ ಕೆಲವುಗಳ ಉದಾಹರಣೆಯನ್ನು ಮುಂದೆ ಕೊಡಲಾಗಿದೆ.

**ಗೋದಾನ ಮಾಡಬಾರದು.** ಬಂಗಾರದ ಆಕಳು, ಬೆಳ್ಳಿಯ ಆಕಳು, ಎಳ್ಳಿನ ಆಕಳು, ತುಪ್ಪದ ಆಕಳುಗಳನ್ನು ಸಿದ್ಧಗೊಳಿಸಿ, ಅನೇಕರು ದಾನಕೊಡುತ್ತಿರುತ್ತಾರೆ. ಈ ದಾನವನ್ನು ಸ್ವೀಕರಿಸುವಂಥವರು ತುಪ್ಪ ಹಾಗೂ ಎಳ್ಳಿನ ಆಕಳುಗಳನ್ನು ತಿನ್ನುತ್ತಾರೆ. ಬೆಳ್ಳಿ–ಬಂಗಾರಗಳ ಆಕಳುಗಳನ್ನು ಕಡಿದು, ಮುಸಿಯಲ್ಲಿಟ್ಟು ಕರಗಿಸುತ್ತಾನೆ. ಆಕಳ ಬಾಲದಲ್ಲಿ ಮೂವತ್ತು ಮೂರು ಕೋಟಿ ದೇವತೆಗಳು ಮತ್ತು ಅರವತ್ತೆಂಟು ತೀರ್ಥಗಳಿವೆ-ಯೆಂದು ಬ್ರಾಹ್ಮಣರು ಪ್ರತಿಪಾದಿಸುತ್ತಾರೆ. ಮಿಥ್ಯಾಧರ್ಮಿಗಳಾದ ಜನರು ದಾಸ ದಾಸಿಯರನ್ನೂ ದಾನವೆಂದು ಕೊಡುವರು. ಸಂಕ್ರಾಂತಿ, ಗ್ರಹಣ, ವ್ಯತಿಪಾತ ಮೊದಲಾದ ದಿವಸಗಳಲ್ಲಿ ದಾನಕೊಡುವರು. ಇವೆಲ್ಲ ಮಿಥ್ಯಾತ್ವವಾಗಿದೆ. ಮರಣ ಹೊಂದಿದ ಮನುಷ್ಯನ ತೃಪ್ತಿಗಾಗಿ ಬ್ರಾಹ್ಮಣರಿಗೆ ಊಟ ಹಾಕುವರು. ಬ್ರಾಹ್ಮಣರಿಗೆ ಊಟ ಹಾಕುವದರಿಂದ ಸತ್ತ ಮನುಷ್ಯನಿಗೆ ತೃಪ್ತಿಯು ಹೇಗಾದೀತು? ಮಕ್ಕಳು ದಾನವನ್ನು ಕೊಡುವುದು, ತಂದೆಯು ಪಾಪದಿಂದ ಮುಕ್ತ-ನಾಗುವುದು ಆಶ್ಚರ್ಯಕಾರಕವಾಗಿದೆ. ಕೆಲವು ದಿವಸಗಳ ಹಿಂದೆ ಸತ್ತ ಮನುಷ್ಯನ ಎಲುವುಗಳನ್ನು ಗಂಗೆಯಲ್ಲಿ ಒಯ್ದು ಒಗೆಯುವುದರಿಂದ ಸತ್ತವರಿಗೆ ಮೋಕ್ಷವು ಲಭಿಸುತ್ತದೆಂದು ಭಾವಿಸುತ್ತಾರೆ. ಗಯೆಯಲ್ಲಿ ಹೋಗಿ ಶ್ರಾದ್ಧ ಮಾಡುವುದರಿಂದ ಇಪ್ಪತ್ತೊಂದು ತಲೆಗಳ ಉದ್ಧಾರವಾಗುತ್ತದೆ. ಗಯೆಯಲ್ಲಿ ಪಿಂಡದಾನ ಮಾಡುವುದರಿಂದ ತನ್ನ ವಂಶದೊಳಗಿನ ಹಿಂದಿನ ಹತ್ತು ತಲೆಯ ಜನರು, ಮುಂದಿನ ಹತ್ತು ತಲೆಗಳ ಜನರು ಅಲ್ಲದೆ ತಾನು ಹೀಗೆ ಇಪ್ಪತ್ತೊಂದು ತಲೆಗಳ ಜನರು ಸಂಸಾರದೊಳಗೆ ಕುಗತಿಯೊಳಗೆ ಬಿದ್ದಂಥವರು ವೈಕುಂಠಕ್ಕೆ ಹೋಗಿ ವಾಸಿಸಹತ್ತುವರು. ಹಿರಿಯರು ಅಜ್ಜ, ಮುತ್ತಜ್ಜಂದಿರು, ಮಕ್ಕಳು ಮೊಮ್ಮಕ್ಕಳು ಬೇಕಾದಷ್ಟು ಪಾಪಕರ್ಮಗಳನ್ನು ಮಾಡಿದ್ದರೂ ಗಯೆಗೆ ಹೋಗಿ ಶ್ರಾದ್ಧಮಾಡಿದರೆ ನಾಳು, ಇಪ್ಪತ್ತೊಂದು ತಲೆಮಾರಿನ ಜನರೆಲ್ಲ ಮುಕ್ತರಾಗುವರು. ಆದರಿಂದ ಇವರಲ್ಲಿ ಯಾರೂ ಪಾಪದ ಭೀತಿಯನ್ನು ಇಟ್ಟುಕೊಳ್ಳುವ ಕಾರಣವಿಲ್ಲ. ಇಂಥ ವರ್ಣನೆಗಳು ಇತರರ ಗ್ರಂಥಗಳಲ್ಲಿ ನೋಡಲಿಕ್ಕೆ

ದೊರೆಯುತ್ತವೆ ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಮಾಂಸಪಿಂಡದ ಭೋಜನಮಾಡಿಸುವವರು ಮಾಂಸದಿಂದ ದೇವ-ದೇವತೆಗಳ ತೃಪ್ತಿಯು ಆಗುತ್ತದೆ ದುರ್ಗಾ, ಭವಾನಿ ಮೊದಲಾದ ದೇವತೆಗಳು ಜೀವಿಗಳ ಹಾಗೂ ಪಶು, ರಾಕ್ಷಸರ ರಕ್ತ ಕುಡಿಯುವುದರಿಂದ ತೃಪ್ತಿಯನ್ನು ಹೊಂದುತ್ತವೆ ದೇವತೆಗಳಿಗೆ ಕುರಿ, ಆಡು, ಕೋಳಿಗಳನ್ನು ಕೊಯ್ದು ಬಲಿದಾನ ಮಾಡುತ್ತಾರೆ ಈ ಪ್ರಕಾರ ಅನೇಕ ಪಾಪಕರ್ಮಗಳನ್ನು ಮಾಡುವುದರಿಂದ ಧರ್ಮದಂತೆ ನಡೆದಂತೆ ಆಗುವದೆಂದು ಜನರಲ್ಲಿ ಭ್ರಾಮಕ ಕಲ್ಪನೆಯು ಇರುತ್ತದೆ ಹಾಗೆ ಅಜ್ಞಾನಿಗಳಿಗೆ ಕಲ್ಪನೆಯನ್ನು ಮಾಡಿಕೊಡಲಾಗುವದು ಪಾಪೀ ಜನರು ಸುಳ್ಳು ಶಾಸ್ತ್ರಗಳನ್ನು ರಚಿಸಿ, ಮಾಂಸ ಭಕ್ಷಣದಂಥ ಘೋರ ಕರ್ಮಗಳನ್ನು ಮಾಡಿ, ಸ್ವತಃ ನರಕ ಮಾರ್ಗಕ್ಕೆ ಇಳಿಯುತ್ತಾರೆ ಅನ್ಯರನ್ನೂ ನರಕದ ದಾರಿಗೆ ಹಚ್ಚುತ್ತಾರೆ ಒಟ್ಟಿನಲ್ಲಿ ನಾಲಿಗೆಯ ರುಚಿಗೆ ಲೋಲುಪನಾಗುವುದರಿಂದ ಯಾವ ಘೋರ ಕರ್ಮವನ್ನು ಮಾಡುವುದೂ ಹಿಂದೆ ಉಳಿಯಲಿಲ್ಲ ಪಾಪಿಗಳು ಮನುಷ್ಯ ಜನ್ಮದಲ್ಲಿ ಬಂದೂ ಕೂಡ ನಾಯಿ, ನರಿ, ಹುಲಿಗಳ ಹಾಗೆ ದುಷ್ಟ ಆಚರಣೆಯನ್ನು ಮಾಡಿದ್ದಾರೆ ಅವರ ಶಾಸ್ತ್ರಗಳಲ್ಲಿ ಇಂಥ ಭಯಂಕರ ಪಾಪವು ಉತ್ಪನ್ನವಾಗುವಂಥ ಸಂಗತಿಗಳನ್ನು ವರ್ಣಿಸಿದ್ದಾರೆ. ಅಂತಲೇ ಅವರ ಹಾಗೂ ಮ್ಲೇಂಛರ ಧರ್ಮಗಳಲ್ಲಿ ಏನೂ ಅಂತರವಿಲ್ಲ ಈ ಅಕ್ಷರಗಳು ಮ್ಲೇಂಛರವು ಇವೆ ಇವು ವೇದದೊಳಗಿನ ಅಕ್ಷರಗಳು—ಎಂದು ಅಜ್ಞಾನಿ ಜನರಿಗೆ ಭಾಸವನ್ನುಂಟುಮಾಡಿ, ಬೇಟೆಯಾಡಲಿಕ್ಕೆ ಹಚ್ಚುವರು ಅದರಲ್ಲಿ ಧರ್ಮ-ವಿದೆಯೆಂದು ಹೇಳುವರು. ಯಾರ ದೇವರು ಕೊರಳಲ್ಲಿ ರುಂಡ ಮಾಲೆಯನ್ನು ಹಾಕಿಕೊಂಡು, ರಕ್ತ ಮಾಂಸಗಳನ್ನೂ ತಿನ್ನುವನೋ ಅಂಥ ದೇವರ ಸೇವೆಯನ್ನು ಮಾಡುವವರ ಪಾಪದ ವರ್ಣನೆಯನ್ನು ಎಷ್ಟೆಂದು ಹೇಳಬೇಕು? ಇಂಥ ಕುಪಾತ್ರಗಳಿಗೆ ದಾನಮಾಡುವುದರಿಂದ ಭಯಂಕರ ದುಃಖವು ಉತ್ಪನ್ನವಾಗದ ಹೊರತಾಗಿ ಹೋಗುವದಿಲ್ಲ. ಕುದಾನವನ್ನು ಕೊಡುವುದರಿಂದಲೂ ತಕ್ಕೊಳ್ಳುವುದರಿಂದಲೂ ನರಕ ಹಾಗೂ ತಿರ್ಯಂಚ ಗತಿಗಳಲ್ಲಿ ಅನೇಕ ಸಲ ಜನ್ಮ ಮರಣಗಳನ್ನು ಹೊಂದಬೇಕಾಗುತ್ತದೆ. ಅಲ್ಲದೆ ಪುನಃ ನಿಗೋದದಲ್ಲಿ, ಏಕೇಂದ್ರಿಯಗಳಲ್ಲಿ, ದ್ವೀಂದ್ರಿಯಗಳಲ್ಲಿ ಅನಂತಕಾಲದ ವರೆಗೆ ಅಸಂಖ್ಯಾತ ಪರಿವರ್ತನಗಳನ್ನು ಹೊಂದುತ್ತಿರಬೇಕಾಗುತ್ತದೆ ಇದನ್ನು ತಿಳಿದು, ಕುದಾನ ಮಾಡುವುದರಲ್ಲಿ ಪ್ರವೃತ್ತರಾಗ ಕೂಡದು

ನೆರೆದ ತ್ರಿಶಕ್ತಿ ಭಕ್ತಿದಲರಿದೌದಾರ್ಯ್ಯಂ ದಯಾಗುಣಂ ಕ್ಷಮೆ ಎಂಬಿಂ- ।
ತುರಗಿದ ಗುಣಮೇಳರೊಳಂ ನೆರೆದಿರ್ದದದಾವುದದುವೇ ದಾತೃವಿಶೇಷಂ ॥

—ಮಾಘನಂದಿ–ಶಾಸ್ತ್ರಸಾರ ಸಮುಚ್ಚಯ ಟೀಕು–ಚರಣಾನುಯೋಗ ೧೧೬

ಈಗ ಒಳ್ಳೆಯ ದಾನದಿಂದ ಪ್ರಾಪ್ತವಾಗುವ ಫಲವನ್ನು ಕುರಿತು ಹೇಳುತ್ತಾರೆ—

ಗೃಹಕರ್ಮಣಾಪಿ ನಿಚಿತಂ ಕರ್ಮ ವಿಮಾರ್ಷ್ಟಿ ಖಲು ಗೃಹವಿಮುಕ್ತಾನಾಮ್ ।
ಅತಿಥೀನಾಂ ಪ್ರತಿಪೂಜಾ ರುಧಿರಮಲಂ ಧಾವತೇ ವಾರೀ ॥ ೧೧೪ ॥

ಅನ್ವಯಾರ್ಥ—(ವಾರಿ) ನೀರು (ಅಲಂ) ನಿಶ್ಚಯವಾಗಿ (ರುಧಿರಂ) ರಕ್ತವನ್ನು (ಧಾವತೇ) ತೊಳೆಯುತ್ತದೆ. ಹಾಗೆಯೇ—(ಗೃಹವಿಮುಕ್ತಾನಾಂ) ಮನೆಯಿಂದ ಮುಕ್ತನಾದಂಥ (ಅತಿಥೀನಾಂ) ಅತಿಥಿಯ (ಪ್ರತಿಪೂಜಾ) ಪೂಜೆಯನ್ನು ಮಾಡುವುದರಿಂದ (ಖಲು) ನಿಶ್ಚಯವಾಗಿಯೂ (ಗೃಹಕರ್ಮಣಾಂ) ಮನೆಯೊಳಗಿನ ಆರಂಭಾದಿ ಕ್ರಿಯೆಗಳ ಯೋಗದಿಂದ (ನಿಚಿತಂ ಅಪಿ) ಸಂಗ್ರಹಗೊಂಡ (ಕರ್ಮ) ಕರ್ಮವು (ವಿಮಾರ್ಷ್ಟಿ) ನಷ್ಟಗೊಳ್ಳುತ್ತದೆ

ಅರ್ಥ—ಮನೆಯನ್ನು ತ್ಯಜಿಸಿದ ಅತಿಥಿಯೆಂದರೆ ಮುನಿ ಅವರ ಪ್ರತಿಪೂಜೆಯೆಂದರೆ ದಾನ, ಸನ್ಮಾನ, ಉಪಾಸನೆ ಮೊದಲಾದವುಗಳನ್ನು ಮಾಡುವುದು ಇದರಿಂದ ಗೃಹಸ್ಥನು ತನ್ನ ಷಟ್‌ಕರ್ಮಗಳಿಂದ ಸಂಚಿತಗೊಂಡ ಪಾಪ ಕರ್ಮರೂಪ ಮಲವನ್ನು ನಷ್ಟಗೊಳಿಸಿಕೊಳ್ಳಬಲ್ಲನು ಈ ಮುನಿಗಳಿಗಿತ್ತ ದಾನವು ದೇಹಕ್ಕೆ ಹತ್ತಿದ ರಕ್ತದ ಕಲೆಯನ್ನು ನೀರು ತೊಳೆದು ಸ್ವಚ್ಛಮಾಡುವಂತೆ ಗೃಹಸ್ಥನನ್ನು ಪಾಪಕರ್ಮಗಳಿಂದ ಮುಕ್ತಗೊಳಿಸುತ್ತದೆ. [ಇಲ್ಲಿ 'ಗೃಹವಿಮುಕ್ತಾನಾಂ ಅತಿಥೀನಾಂ' ಎಂಬ ಪದಗಳಿಂದ ಮನೆಯನ್ನು ತ್ಯಜಿಸಿದ ಸಾಧುವೆಂದು ಸೂಚಿಸಲಾಗಿದೆ ಹಿಂದಿನ ಸೂತ್ರಕ್ಕೆ ಅನುಸರಿಸಿ ಅವನು 'ತಪೋಧನ'ನಿರಬೇಕು ಆ ತಪಸ್ವಿಯ ಲಕ್ಷಣವನ್ನು ಹಿಂದೆ ಇದೇ ಗ್ರಂಥದ

೧೦ನೆಯ ಸೂತ್ರದಲ್ಲಿ ಸ್ಪಷ್ಟಗೊಳಿಸಲಾಗಿದೆ  ಅವನು ಸಮ್ಯಗ್ದರ್ಶನಾದಿ ಗುಣಗಳ ನಿಧಿಯಾಗಿರುತ್ತಾನೆ, ಸಂಯಮಿಯಾಗಿರುತ್ತಾನೆ  ಅವನ ಸಂಯಮವು ಇಂದ್ರಿಯ ಸಂಯಮ ಮತ್ತು ಪ್ರಾಣ ಸಂಯಮಗಳಿಂದ ಸಂಪನ್ನವಾಗಿರುತ್ತದೆ ಅಲ್ಲದೆ ಕಷಾಯಗಳ ದಮನದಿಂದ ಕೂಡಿದ್ದು, ಪಂಚಸೂನ ಮತ್ತು ಆರಂಭಗಳಿಂದ ಮುಕ್ತವಾಗಿರುತ್ತದೆ. ಇಂಥ ಸಂತರ ಶುದ್ಧ ವೈಯಾವೃತ್ತಿಯು ನಿಃಸಂದೇಹವಾಗಿ ಗೃಹಸ್ಥನ ಪಾಪಮಲವನ್ನು ತೊಳೆಯಲಿಕ್ಕೆ ಸಮರ್ಥವಾಗುತ್ತದೆ ಇನ್ನು ಯಾವ ಸಾಧುವು ಈ ಗುಣಗಳಿಲ್ಲದವನಿರುವನೋ—ಕಷಾಯಗಳಿಂದ ಪೀಡಿತನೂ ಡಂಭದಿಂದ ಕೂಡಿದವನೂ ಆಗಿರುವನೋ—ಅಂಥವನ ವೈಯಾವೃತ್ತಿಯನ್ನು ಮಾಡುವುದರಿಂದ ಇಂಥ ಫಲವು ಲಭಿಸುವದಿಲ್ಲ  ಅದು ಕಲ್ಲಿನ ನಾಕೆಯಿದ್ದಂತೆ ಇರುವುದು  ಅದು ತಾನು ಮುಳುಗುವುದಲ್ಲದೆ ಜೊತೆಯವರನ್ನೂ ಮುಳುಗಿಸುತ್ತದೆ  ಸ ಧ]

ವಿಶೇಷಾರ್ಥ—ಗೃಹಸ್ಥನಿಗೆ ಯಾವಾಗಲೂ ಆರಂಭಾದಿ ಕ್ರಿಯೆಗಳ ಯೋಗದಿಂದ ಪಾಪವು ಸಂಚಿತವಾಗುತ್ತಿರುತ್ತದೆ  ಆ ಪಾಪವನ್ನು ಇಲ್ಲದಂತೆ ಮಾಡಲಿಕ್ಕೆ ಮುನೀಶ್ವರನಿಗೆ ಕೊಟ್ಟ ದಾನವೇ ಸಮರ್ಥವಾಗಿದೆ ಮೈಗೆ ರಕ್ತವು ಹತ್ತಿದರೆ ಅದನ್ನು ರಕ್ತದಿಂದಲೇ ತೊಳೆದರೆ ಸ್ವಚ್ಛವಾಗುವದಿಲ್ಲ  ಅದು ನೀರಿನಿಂದ ತೊಳೆದರೆ ಹೋಗುತ್ತದೆ  ಹಾಗೆಯೇ ಮನೆಗೆಲಸದಲ್ಲಿ ಆರಂಭದಿಂದಲೂ ಉತ್ಪನ್ನವಾದಂಥ ಪಾಪವು ಗೃಹತ್ಯಾಗಿ ಸಾಧುವಿಗೆ ದಾನಕೊಡುವುದರಿಂದಲೇ ಇಲ್ಲದಂತಾಗುತ್ತದೆ

ಭುಕ್ತಿಯಿಂದಾ ಮುನಿಗಳ ತಣಿಸಿದನು ಸುಭಕ್ತಿಯಿಂ ನೆರೆ ತಣಿಪಿದನು ।
ಭುಕ್ತಿಭಕ್ತಿಗಳಿಂದ ಮುಕ್ತಿಪಥಕೆ ಪುಣ್ಯಭುಕ್ತಿಸನ್ನಹವ ಮಾಡಿದನು ॥
ಸಪ್ತವಿಧಗಳಿಂದ ನವವಿಧ ಪುಣ್ಯ ಸಂಪ್ರಾಪ್ತಿಯಿಂದುತ್ತಮಾನ್ನವನು ।
ತಪ್ತಕಾಂಚನವರ್ಣ ಕೊಡಲಾಗಿಕೊಂಡು ಸಂತೃಪ್ತಿಯಾದುದು ಮುನಿಗಳಿಗೆ ॥
ಅನ್ನವನೀವರೆಮಗೆ ಶಕ್ತಿಯುಂಟೆಹುದನ್ನವನಿತ್ತಪೆವೆನಲು ।
ಸನ್ನುತವ್ರತಿಕರಿಲ್ಲದರಿಂದಾಮುನಿರನ್ನರೊಲ್ಲರು ಭವ್ಯರತ್ನಾ ॥
ಭುಕ್ತಿಯನೀವರುಂಟಲ್ಲಲ್ಲಿ ಭೂಪರುಯುಕ್ತಿಯಿಲ್ಲುರೆ ಭಕ್ತಿಯಿಲ್ಲ ।
ಯುಕ್ತಿಭಕ್ತಿಯೊಳೊಡಗೂಡಿ ಭುಕ್ತಿಯನೀವಮುಕ್ತಿಸಾಧಕ ನೀನೆ ಚಕ್ರಿ ॥

—ರತ್ನಾಕರ–ಭರತೇಶ ವೈಭವ–ಮುನಿಭುಕ್ತಿಸಂಧಿ  ೯೭–೯೮–೧೧೫–೧೭

ಇನ್ನು ದಾನದ ಪ್ರಭಾವವನ್ನು ಹೇಳುತ್ತಾರೆ—

ಉಚ್ಚೈರ್ಗೋತ್ರಂ ಪ್ರಣತೇರ್ಭೋಗೋ ದಾನಾದುಪಾಸನಾತ್ಪೂಜಾ ।
ಭಕ್ತೇಃ ಸುಂದರರೂಪಂ ಸ್ತವನಾತ್ಕೀರ್ತಿಸ್ತಪೋನಿಧಿಷು ॥ ೧೧೫ ॥

ಅನ್ವಯಾರ್ಥ—(ತಪೋನಿಧಿಷು) ತಪಸ್ವಿಯಾದ ಮುನಿಗೆ (ಪ್ರಣತೇಃ) ನಮಸ್ಕಾರಮಾಡುವುದರಿಂದ (ಉಚ್ಚೈರ್ಗೋತ್ರಂ) ಉಚ್ಚಗೋತ್ರವು, (ದಾನಾತ್) ದಾನಕೊಡುವುದರಿಂದ (ಭೋಗಃ) ಭೋಗವು, (ಉಪಾಸನಾತ್) ಪೂಜೆಮಾಡುವುದರಿಂದ (ಪೂಜಾ) ಪೂಜ್ಯತ್ವವು, (ಭಕ್ತೇಃ) ಭಕ್ತಿಯಿಂದ (ಸುಂದರರೂಪಂ) ಸುಂದರ ರೂಪವು, (ಸ್ತವನಾತ್) ಸ್ತುತಿಮಾಡುವುದರಿಂದ (ಕೀರ್ತಿಃ) ಕೀರ್ತಿಯು (ಭವತಿ) ಆಗುತ್ತದೆ

ಅರ್ಥ—ತಪಸ್ವಿಯಾದ ಮುನಿಗೆ ನಮಸ್ಕಾರಮಾಡುವುದರಿಂದ ಉಚ್ಚಗೋತ್ರವು ಪ್ರಾಪ್ತವಾಗುತ್ತದೆ ಅವರಿಗೆ ದಾನಕೊಡುವುದರಿಂದ ಭೋಗಭೂಮಿಯ ಸುಖವು ಲಭಿಸುತ್ತದೆ  ಅವರ ಉಪಾಸನೆಯನ್ನು ಮಾಡುವುದರಿಂದ ನಮ್ಮ ಪೂಜೆಯು ಆಗುತ್ತದೆ  ಅವರ ಭಕ್ತಿಯಿಂದ ಸುಂದರ ರೂಪವು ಪ್ರಾಪ್ತವಾಗುತ್ತದೆ  ಅವರನ್ನು ಸ್ತುತಿಸುವುದರಿಂದ ನಮ್ಮ ಕೀರ್ತಿಯಾಗುತ್ತದೆ. [ಇಲ್ಲಿಯೂ ಕೂಡ 'ತಪೋನಿಧಿಷು' ಎಂಬ ಪದದಿಂದ ಒಳ್ಳೆಯ ತಪಸ್ವಿಯೆಂಬ ಮಾತನ್ನೇ ಸೂಚಿಸಲಾಗಿದೆ  ಇದೇ ಗ್ರಂಥದ ನಾಲ್ಕನೆಯ ಸೂತ್ರದಲ್ಲಿ ಇಂಥ ತಪಸ್ವಿಗೆ 'ಪರಮಾರ್ಥ' ಎಂಬ ವಿಶೇಷಣವನ್ನು ಪ್ರಯೋಗಿಸಲಾಗಿದೆ  ಆ ಯೋಗ್ಯತೆಯ ಸಾಧುಗಳ ವಂದನಾದಿಗಳಿಂದಲೇ ಈ ಶ್ಲೋಕದಲ್ಲಿ ವರ್ಣಿಸಿದ ಫಲವು ದೊರೆಯುತ್ತದೆ  ಉಳಿದ ಸಾಧುಗಳೆಂಬ ನಾಮಧಾರಿಗಳಿಗೆ ವಂದಿಸುವುದರಿಂದಲ್ಲ  ಸ ಧ]

ವಿಶೇಷಾರ್ಥ—ತಪೋನಿಧಾನ, ಪರಮ ಶಾಂತ ಭಾವವನ್ನು ಧಾರಣಮಾಡುವಂಥ, ಇಪ್ಪತ್ತೆರಡು ಪರೀಷಹಗಳನ್ನು ಸಹನಮಾಡುವ ಯೋಗ್ಯತೆಯುಳ್ಳ, ತಮ್ಮ ದೇಹದ ವಿಷಯದಲ್ಲಿ ಮಮತ್ವವನ್ನಿಡದ, ಪಂಚೇಂದ್ರಿಯ ವಿಷಯಗಳಿಂದ ಅತ್ಯಂತ ವಿರಕ್ತನಾದ, ಅಭಿಮಾನ–ಕಷಾಯ–ರಹಿತ, ಆತ್ಮವಿಶುದ್ಧತೆಯನ್ನು ಇಚ್ಛಿಸುವಂಥ ಉತ್ತಮ ಪಾತ್ರವೆನಿಸುವ ಮುನಿಗೆ ನಮಸ್ಕಾರಮಾಡುವುದರಿಂದ ಉಚ್ಚ ಗೋತ್ರವು ಲಭಿಸುತ್ತದೆ ಇದರ ಫಲವೆಂದು ಕ್ರಮದಿಂದ ಸ್ವರ್ಗಲೋಕದಲ್ಲಿ ಹುಟ್ಟುವಿಕೆ, ತೀರ್ಥಂಕರ ಕುಲದಲ್ಲಿ ಜನ್ಮ ಹೊಂದುವಿಕೆ, ಚಕ್ರವರ್ತಿಯ ವಂಶದಲ್ಲಿ ಜನಿಸುವಿಕೆ ಇವೇ ಮೊದಲಾದವುಗಳು ಪ್ರಾಪ್ತವಾಗಿ, ಕೊನೆಗೆ ಸರ್ವೋತ್ಕೃಷ್ಟವಾದ ಸಿದ್ಧ ಪದವಿಯು ದೊರೆಯುತ್ತದೆ ಉತ್ತಮ ಪಾತ್ರಕ್ಕೆ ದಾನಕೊಡುವುದರಿಂದ ಭೋಗ ಭೂಮಿಯ ಭೋಗವು, ದೇವಲೋಕದೊಳಗಿನ ಭೋಗವು, ರಾಜ್ಯವೈಭವದ ಭೋಗವು, ಅಹಮಿಂದ್ರ ಪದವಿಯೊಳಗಿನ ಭೋಗವು ಪ್ರಾಪ್ತವಾಗಿ, ಮುಂದೆ ತೀರ್ಥಂಕರ, ಚಕ್ರವರ್ತಿಪದಗಳು ಲಭಿಸುತ್ತವೆ ಕೊನೆಗೆ ನಿರ್ವಾಣದೊಳಗಿನ ಅನಂತ ಸುಖವು ಪ್ರಾಪ್ತವಾಗುತ್ತದೆ ಸಾಧುವಿನ ಉಪಾಸನಾ ಅಂದರೆ ಸೇವೆಮಾಡುವುದರಿಂದ ತ್ರೈಲೋಕ್ಯ ಪೂಜ್ಯ ಕೇವಲಿಯ ಪದವು ದೊರೆಯುತ್ತದೆ ಅವರ ಭಕ್ತಿಯನ್ನು ಮಾಡುವುದರಿಂದ ಸುಂದರ ರೂಪವು ಉಂಟಾಗುತ್ತದೆ

ಮಾಡಿದ ಪಾತ್ರದಾನವಿಭವಂ ವಿಭವಾಸ್ಪದ ಭೋಗಭೂಮಿಯೊಳ್
ಮಾಡಿ ನಿವಾಸಮಂ ವಸಧಮಂತೆ ವಿಭೂಷಣ ತೂರ್ಯಭಾಜನೋ- ।
ನ್ಮಿದಸುದೀಪ್ತಿ ದೀಪ್ತಿವರ ಭಾಜನ ಪಾನದಕಲ್ಪಭೂರುಹಂ
ಮಾಡಿ ಮನೋನುರಾಗದೊಡವಂ ಪ್ರಿಯವಾರವಧೂವಿರಾಜಿತಂ ॥

—ಮಾಘನಂದಿ—ಶಾಸ್ತ್ರಸಾರ ಸಮುಚ್ಚಯ ಟೀಕು–ಚರಣಾನುಯೋಗ ೧೨೩.

ಇಲ್ಲಿ ದಾನದ ಪ್ರಭಾವವನ್ನು ಇನ್ನಿಷ್ಟು ವಿವರಿಸಿ ಹೇಳುತ್ತಾರೆ—

ಕ್ಷಿತಿಗತಮಿವ ವಟಬೀಜಂ ಪಾತ್ರಗತಂ ದಾನಮಲ್ಪಮಪಿ ಕಾಲೇ ।
ಫಲತಿ ಚ್ಛಾಯಾವಿಭವಂ ಬಹುಫಲಮಿಷ್ಟಂ ಶರೀರಭೃತಾಮ್ ॥ ೧೧೬ ॥[1]

ಅನ್ವಯಾರ್ಥ—(ಶರೀರಭೃತಾಂ) ದೇಹಧಾರಿಗಳಿಗೆ (ಪಾತ್ರಗತಂ) ಸತ್ಪಾತ್ರಕ್ಕೆ ಕೊಟ್ಟ (ಅಲ್ಪಂ ಅಪೀದಾನಂ) ಸ್ವಲ್ಪವಾದ ದಾನವೂ ಸಹ (ಕಾಲೇ) ಯೋಗ್ಯ ಕಾಲದಲ್ಲಿ (ಕ್ಷಿತಿಗತಂ) ಭೂಮಿಯಲ್ಲಿ ಹಾಕಿದ (ವಟಬೀಜಂ) ವಟ ವೃಕ್ಷದ ಬೀಜವು (ಛಾಯಾವಿಭವಂ ಇವ) ನೆರಳಿನ ಹೆಚ್ಚಳವನ್ನು ಒದಗಿಸುವಂತೆ (ಇಷ್ಟಂ) ಮನೋವಾಂಛಿತ (ಬಹುಫಲಂ) ಬಹಳ ಫಲವನ್ನು (ಫಲತಿ) ನೀಡುತ್ತದೆ.

---

1 ಆಯತವರ್ಮನ ವಿವರಣೆಯು ಹೀಗಿದೆ.

ವಚನ—ಎನೆ ನೆಗಳ್ದ ಪಂಚಾಶ್ಚರ್ಯಂಗಳೊಳಪ್ಪದೃಷ್ಟಫಲಮುಮಂ ಸೌವರ್ಣವಸುಧಾರೆಯು ಮನಪೇಕ್ಷಿಸದುದುಮಿಂತೀ ಗುಣಂಗಳೊಳ್ಕೂಡಿದುದು ಪಾತ್ರವಿಶೇಷಂ ಯೆಂಬತ್ತನಾಲ್ಕು ಲಕ್ಕೆ ಗುಣಂಗಳುಂ ಪದಿನೆಣ್ಸಾಸಿರ ಶೀಲಂಗಳುಮೆಂದಿವರೊಳು ಗುಣಂಗಳೊಳ್ಕೂಡಿದುದು ಪಾತ್ರವಿಶೇಷಂ ಸತ್ಪಾತ್ರಕ್ಕೆ ಸಂದ ದಾನಮಲ್ಪಮಾಗಿಯುಮನಂತ ಫಲಮನೀಗುಮೆಂತೀಗಳಾ ಸಾಸವೆಯ ಕೂಡಿದುದು ಪಾತ್ರವಿಶೇಷಂ ಸತ್ಪಾತ್ರಕ್ಕೆ ಸಂದ ದಾನಮಲ್ಪಮಾಗಿಯುಮನಂತ ಫಲಮನೀಗುಮೆಂತೀಗಳಾ ಸಾಸವೆಯ ಚತುರ್ಭಾಗದೊಳೊಂದು ಭಾಗದನಿತಪ್ಪ ಆಲದ ಬಿತ್ತು ಸುಕ್ಷೇತ್ರಕ್ಕೆ ಸಂದು ಪಿರಿದಪ್ಪೊಂದು ನೆ[ಳ]ಲ ವಿಭವಮನಿತ್ತುದು ಚತುರ್ಭಾಗದೊಳೊಂದು ಭಾಗದನಿತಪ್ಪ ಆಲದ ಬಿತ್ತು ಸುಕ್ಷೇತ್ರಕ್ಕೆ ಸಂದು ಪಿರಿದಪ್ಪೊಂದು ನೆ[ಳ]ಲ ವಿಭವಮನಿತ್ತುದು ಕಿರಿದಾದೊಡಂ ಪಾತ್ರವಿಶೇಷಂ ದಾನಂ ಪಾರಂಪರ್ಯಾಯದಿಂ ಸಾಕ್ಷಾನ್ಮೋಕ್ಷಕ್ಕೆ ಕಾರಣಮೆಂಬುದು ವಾಕ್ಯಾರ್ಥಂ ಮತ್ತಂ ನೀರೆಂಬುದು ಪೆಸರಿಂದಂ ಗುಣದಿಂದಮೊಂದೆಯಯಾಗಿಯುವುದು ಕಾಯ್ದ ಕಬ್ಬುನಮಂ ಪೊರ್ದಿ ಮುನ್ನುಳ್ಳಿಯುಂ ಕೆಟ್ಟುದಾಗಿರೆ ತಾವರೆಯೆಲೆಯಂ ಪೊರ್ದಿ ಮುಕ್ತಾಫಲದಾಕಾರ ಮೆನಿಸಿತಾನಿರೆ ಸಿಪಂಪೊರ್ದಿ ಸಾಕ್ಷಾತ್ ಮುಕ್ತಾಫಲಮಾಯ್ತು ಆಗಿಯುಂ ಲಕ್ಕೆಯುಂ ಕೋಟಿಯುಂ ಬೆಲೆಕೆಯ್ದಪ್ಪುದಂತೆ ಪಾತ್ರದಾನಂ ಪಿರಿದಪ್ಪ ಫಲಮನೀಗುಂ ಅಪಾತ್ರಮಂ ಪೊರ್ದಿ ಮುನ್ನಿನ ಕಬ್ಬುನಮಂ ಪೊರ್ದಿದ ನೀರೆಂತು ಮುನ್ನುಳುಳ್ಳಿಯುಂ ಕೆಟ್ಟುವಂತೆಯಾ ಪಾತ್ರದಾನಂ ಜಘನ್ಯ ಮಧ್ಯಮೋತ್ತಮ ಬೇದದಿಂ ತ್ರಿವಿಧಮಕ್ಕುಮಲ್ಲಿಯುಸಂಯುತಸಮ್ಯಗ್ದೃಷ್ಟಿ ಜಘನ್ಯ ಪಾತ್ರಂ ಸಂತಾಸಂತಂ ಮಧ್ಯಮ। ಪಾತ್ರಂ ಸಂತನುತ್ತಮ- ಪಾತ್ರಂ ಉಳಿನೆನನಾಡಮೆನಿತು ತನ್ನಂ ಸಮದು ನಡದೊಡ ಇತಾಪಾತ್ರಂಗಳ್ಗೆ ಕೊಟ್ಟ ಸದೃಷ್ಟಿಗಳು ಸರ್ಗದೊಳ್ಪುಟ್ಟಿ ಕ್ರಮದಿಂ ಮುಕ್ತಿಗೆ ಸಲ್ಗುಂ ಮಿಥ್ಯಾದೃಷ್ಟಿಗಳು ಜಘನ್ಯ ಮಧ್ಯಮೋತ್ತಮ ಭೋಗಭೂಮಿಗಳೊಳ್ಪುಟುವರು

ಕಂದ ॥ ಆವರ್ಗಳ ನಾಲ್ಕತ್ತೊಂಬತ್ತು ದಿವಸದೊಳೆ ನವಯೌವ್ವನತ್ವಮುಂ ।
ವಿವಿಧಕಳಾ ನಿಪುಣತೆಯುಂ ನವಗಜಪತಿ ವೀರ್ಯಮುಂ ಸುದಾನದ ಫಲದಿಂ ।

ಅರ್ಥ—ಯೋಗ್ಯ ಕಾಲದಲ್ಲಿ ಸತ್ಪಾತ್ರಕ್ಕೆ ಕೊಟ್ಟ ಸ್ವಲ್ಪ ದಾನವೂ ಸಹ, ಒಳ್ಳೆಯ ಭೂಮಿಯಲ್ಲಿ ಸಕಾಲಕ್ಕೆ ನೆಟ್ಟ ಆಲದ ಬೀಜವು ವಿಸ್ತಾರವಾದ ನೆರಳನ್ನು ಕೊಡುವಂತೆ ಭೋಗೋಪಭೋಗದ ಸಂಪತ್ತಿಯ ರೂಪದಿಂದ-ಮಹಾತ್ಮ್ಯ, ಐಶ್ವರ್ಯ, ವೈಭವ ಮೊದಲಾದ—ಫಲಕೊಡುತ್ತದೆ. [ಇಲ್ಲಿ ನಮಸ್ಕಾರವೇ ಮೊದಲಾದ ಚಿಕ್ಕ ಚಿಕ್ಕ ಕಾರ್ಯಗಳ ಫಲವು ಹೇಗೆ ವಿಪುಲವಾಗಿ ದೊರೆಯುತ್ತದೆಂಬುದನ್ನು ಸ್ಪಷ್ಟಗೊಳಿಸುವದಕ್ಕಾಗಿ ಆಲದ ಬೀಜದ ಉದಾಹರಣೆಯನ್ನು ಕೊಡಲಾಗಿದೆ. ಇದರಿಂದ ಹಿಂದಿನ ಸೂತ್ರದಲ್ಲಿ ಯಾವ ಕಾರ್ಯಕ್ಕೆ ಯಾವ ಫಲವೆಂದು ನಿರ್ದೇಶಿಸಲಾಗಿದೆಯೋ ಅದರಲ್ಲಿ ಸಂದೇಹವು ಉಳಿಯುವದಿಲ್ಲ ಸತ್ಪಾತ್ರಗತವಾಗುವುದರಿಂದ ಆಯಾ ಕಾರ್ಯಗಳಲ್ಲಿ ಅಂದಂಥ ಫಲಗಳ ಶಕ್ತಿಯು ಉಂಟಾಗುತ್ತದೆ ಸ ಧ]

ವಿಶೇಷಾರ್ಥ—ಸತ್ಪಾತ್ರದಾನಕ್ಕೆ ಅಚಿಂತ್ಯ ಫಲವಿದೆ. ಇದರ ಪ್ರಭಾವದಿಂದ ಸಮ್ಯಕ್ತ್ವವು ಗ್ರಹಣವಾಗುತ್ತದೆ. ಸಮ್ಯಕ್ತ್ವವಿಲ್ಲದ ಮಿಥ್ಯಾದೃಷ್ಟಿಯೂ ಸಹ ಸತ್ಪಾತ್ರದಾನದ ಪ್ರಭಾವದಿಂದ ಉತ್ತಮ ಭೋಗ ಭೂಮಿಯಲ್ಲಿ ಮೂರು ಪಲ್ಯದ ಆಯುಷ್ಯ, ಮೂರುರು ಹರದಾರಿ ಉದ್ದವಾದ ಶರೀರ, ಸಮಚತುರಸ್ರ ಸಂಸ್ಥಾನ (ಅತ್ಯಂತ ಸುಂದರ ಶರೀರ), ಮಹಾನ್ ಬಲ, ಅತುಲ ಪರಾಕ್ರಮ ಮೊದಲಾದ ಗುಣಗಳ ಪ್ರಾಪ್ತಿಯಾಗುತ್ತದೆ ಆ ಸ್ಥಳದಲ್ಲಿ ಸ್ತ್ರೀ-ಪುರುಷರ ಜೋಡಿಯು ಒಮ್ಮೆಲೇ ಉತ್ಪನ್ನವಾಗುತ್ತದೆ. ಮೂರು ದಿನಗಳು ಉರುಳಿದ ಮೇಲೆ ಆಹಾರದ ಇಚ್ಛೆಯು ಉತ್ಪನ್ನವಾಗುತ್ತದೆ. ಆಗ ಬೋರಿಯ ಕಾಯಿಯಷ್ಟು ಆಹಾರವನ್ನು ತಕ್ಕೊಳ್ಳುವುದರಿಂದ ಹಸಿವೆಯು ಶಾಂತವಾಗುತ್ತದೆ ಹತ್ತು ಪ್ರಕಾರದ ಕಲ್ಪವೃಕ್ಷಗಳಿಂದ ಅವರಿಗೆ ಮನಸ್ಸಿನಲ್ಲಿ ಬಂದ ಭೋಗದ ಎಲ್ಲ ಸಾಮಗ್ರಿಗಳು ದೊರೆಯುತ್ತವೆ ಅಲ್ಲಿ ಶೀತೋಷ್ಣಗಳ ಬಾಧೆಯು ಸ್ವಲ್ಪವೂ ಆಗುವದಿಲ್ಲ ಬಿಸಿಲು ಮಳೆಗಳ ತಾಪವಿಲ್ಲ. ಹಗಲಿರುಳುಗಳ ಭೇದವಿಲ್ಲ. ಯಾವಾಗಲೂ ಪ್ರಕಾಶವಿರುತ್ತದೆ ಶೀತಲ, ಮಂದ, ಸುಗಂಧವಾದಂಥ ಗಾಳಿಯು ಯಾವಾಗಲೂ ಬೀಸುತ್ತಿರುತ್ತದೆ ಅಲ್ಲಿಯ ನೆಲದ ಮೇಲೆ ಕಲ್ಲು, ಹರಳು, ಹುಲ್ಲು, ಮುಳ್ಳು, ಕೆಸರು, ಮೊದಲಾದವುಗಳು ಇರುವದಿಲ್ಲ ಭೂಮಿಯು ಸ್ಫಟಿಕದಂತೆ ನಿರ್ಮಲವಾಗಿರುತ್ತದೆ ಯಾವಜ್ಜೀವವೂ ಶರೀರಕ್ಕೆ ರೋಗವು ಆಗುವದಿಲ್ಲ ಮುಪ್ಪಿನತನವಿಲ್ಲ. ಬೇರೆ ಯಾವ ದುಃಖವೂ ಇಲ್ಲ ಅಲ್ಲಿ ಒಡೆಯ ಸೇವಕ ಭಾವಗಳಿಲ್ಲ ಪರ ಚಕ್ರದ ಹೆದರಿಕೆ ಇಲ್ಲ ಷಟ್ ಕರ್ಮಗಳನ್ನು ಮಾಡಿ, ಉಪಜೀವನ ಸಾಗಿಸುವ ಅವಶ್ಯಕತೆಯಿಲ್ಲ ಅಲ್ಲಿದ್ದ ಹತ್ತು ಪ್ರಕಾರದ ಕಲ್ಪವೃಕ್ಷಗಳ ವಿವರ ಹೀಗಿದೆ—

(೧) ತೂರ್ಯಾಂಗ—ಈ ಜಾತಿಯ ಕಲ್ಪವೃಕ್ಷದಿಂದ ವೀಣೆ, ಕೊಳಲು, ಮೃದಂಗ, ಸತಾರ ಮೊದಲಾದ ಕರ್ಣಮಧುರ ವಾದ್ಯಗಳ ಪ್ರಾಪ್ತಿಯಾಗುತ್ತದೆ

---

ವಚನ—ಅಂತು ಪುಟ್ಟಿದ ನಾಲ್ವತ್ತೊಂಭತ್ತುಂ ದಿವಸದೊಳ್ ನವಯೌವ್ವನವಯಸರುಂ ಸಮಚತುರಸ್ರ ಸಂಸ್ಥಾನ ಶರೀರರುಂ ವಜ್ರಋಷಭನಾರಾಚಸಂಹನನರುಂ ಸಕಲಕಳಾಕುಶಲರುಂ ನವಸಾಗಸಾಹಸರುಂ ವಿಗತಮಾನಕಷಾಯರುಂ ವಿಗತಮಾತ್ಸರ್ಯರುಂ ದ್ವೀಪ ಸಮುದ್ರ ಭವನ ವಿಮಾನ ಬಾಣ ಗೋಪುರೇಂದು ಕೇತು ಶಂಖ ಪತಾಕಾ ಮುಸಲ ಹಯ ರವಿ ಶಶಿ ಸ್ವಸ್ತಿಕಾದಮ ಕೂರ್ಮದರ್ಪಸಿಂಹೇಭಪೋದ್ರಮತ್ಸ್ಯಚಂದ್ರಾಶಿ ಪರ್ಯಾಸನ ವರ್ಧಮಾನ ಶ್ರೀವತ್ಸ ಚಕ್ರಾನಳ ವಜ್ರ ಕುಕ್ಕೀಳವೆಂಬ ದ್ವಾತ್ರಿಂಶಲ್ಲಕ್ಷಣ ಲಕ್ಷಿತರುಮೇಕದ್ವಿತ್ರಿ ಪಲ್ಯೋಪಮ ಜೀವಗಳುಮೇಕದ್ವಿತ್ರಿ ದಿನಾಂತರಿತಾಳತಾಳತಾಕ್ಷ ಬದರೀಫಳ ಮಾತ್ರಾಹಾರರುಂ ವಿಗತ ಮಲಮೂತ್ರವಿನಿಹಾರರುಂ ನಿರುಜರುಂ ಅಶೋಕರುಂ ಅಜರರು . . . .

ಕಂದ ॥ [ವಿ] ದ್ಯಾಂಗ ಜ್ಯೋತಿಗ್ಗೃಹಕೋದ್ಯಾಂಬರವಿಪವಾಲ್ಯ ಭೂಷಾಂಗಂಪಾ- ।
ನಮಧ್ವಸನಾಂಗ ಕುಜಾಪದ್ಯ ಮಹಾಭೋಜನಾಂಗವೆಂದಿವು ಪತ್ತುಂ ॥

ವಚನ—ವಿಕಲ್ಪ ಕಲ್ಪವೃಕ್ಷಂಗಳಿನನಲ್ಪಭೋಗಂಗಳಂ ಜಘನ್ಯ ಮಧ್ಯಮೋತ್ತಮಂಗಳ ನನವರತ ಮನುಭವಿಸಿ ಸ್ವಭಾವದೊಳು ಮೃದುಗಳುಂ ಭದ್ರಶೀಲ ಗುಣಂಗಳುಮಪ್ಪುದರಿಂ ಮಿದುಸಂಗಳಿಪ್ಪೀಗಿ ಸ್ವರ್ಗದೊಳ್ಪುಟ್ಟುವರಿಂತುಂಟು ಪಾತ್ರದಾನದ ಮಹಾತ್ಮ್ಯಂ. ಅಪಾತ್ರದಾನದೊಳು ಕುಭೋಗಭೂಮಿಗಳೊಳನಿಷ್ಟೇಂದ್ರಿಯಮನೊಡೆಯರಾಗಿ ಪುಟ್ಟಿ ಕುಭೋಗಂಗಳನುಭವಿಸುವರ್ಪಾತ್ತಂ ಕೊಟ್ಟಂಗಂ ಉಭಯಲೋಕದೊಳಂ ಸಾವದ್ಯಮುಂ ದುಃಖಮುಂ ಪಾಪಮುಂ ರಾಗಮುಂ ದ್ವೇಷಮುಂ ಭಯಮುಂ ಲೋಭಮುಂ ತೃಷೆಯುಂ ಕಾಮಮುಂ ಕ್ರೋಧಮುಮೆಂದಿವು ಮೊದಲಾಗೊಡೆಯ ದೋಷಂಗಳಂ ಮಾಳ್ಪ ಕನಕಾಶ್ವತಿಲಾಗದಾಸೀ ದಾಸ ಮಹಿಷಗೃಹಕನ್ಯಕಿಕ ಬಳಧೇನುವೆಂದಿ ಪತ್ತುಂ ದಯಂಗಳಲ್ಲವವಂ ಕುಡುವಾತಂದಾತೃವುಮಲ್ಲಂ ಕೊಳ್ವಾತಂ ಪಾತ್ರಮಲ್ಲಂ ಇಂತಿವೆಲ್ಲಂ ಡಂಬಕರಾದಾನುಂ ತಮ್ಮ ಪಡೆಪುದಕಾರಣಮಾಗಿ ಇಂತೆಲ್ಲದಿವರ ಕಯ್ಯಲರ್ಥಮಂ ತೆಗೆಯಲು ತಮ್ಮ ವಿಷಯಂಗಳಂ ಸಲಿಸಲು ಬಾರದೆಂದು ತಂತಮ್ಮ ಕುಬುದ್ಧಿಗಳಿಂದಿಂತಿದಕ್ಕಿದು ಫಲಮೆಂದು ಕುಶಾಸ್ತ್ರಂಗಳಂ ಮಾಡಿ ಮೂಢ ಜನಂ ಮೋಹಿಸುವ ಧೂರ್ತಕಗಳಿಂ ಬಗೆಗೆ ವಂದಂದದಿಂ ಪೇಳ್ದುಕೊಳ್ವರು

(೨) ಪಾತ್ರಾಂಗ—ಈ ಜಾತಿಯ ಕಲ್ಪವೃಕ್ಷವು ರತ್ನ, ಸುವರ್ಣ ಮೊದಲಾದ ಅನೇಕ ಪ್ರಕಾರದ ಪಾತ್ರೆಗಳನ್ನು ಒದಗಿಸುತ್ತದೆ ಅಲ್ಲದೆ ಕನ್ನಡಿ, ಆಸನ, ಪಲ್ಲಂಗ ಮೊದಲಾದ ಉಪಕರಣಗಳನ್ನೂ ನೀಡುತ್ತದೆ.

(೩) ಭೂಷಣಾಂಗ—ಈ ಜಾತಿಯ ಕಲ್ಪವೃಕ್ಷವು ಅನೇಕ ಪ್ರಕಾರದ ಆಭರಣಗಳನ್ನು ಪೂರೈಸುತ್ತದೆ. ಶರೀರಕ್ಕೆ ಶೋಭಿಸುವ ರತ್ನ ಜಡಿತ ಕುಂಡಲ, ಕಂಠಹಾರ, ಸರಪಳಿ, ಕೈಗಡಗ ಇನ್ನಿತರ ಎಲ್ಲ ಆಭರಣಗಳನ್ನು ಕೊಡುತ್ತದೆ.

(೪) ಪಾನಾಂಗ—ಈ ಜಾತಿಯ ಕಲ್ಪವೃಕ್ಷದಿಂದ ಕುಡಿಯಲಿಕ್ಕೆ ಯೋಗ್ಯವೆನಿಸುವ, ಮಧುರ ಸುವಾಸದಿಂದ ಕೂಡಿದ ನೀರು ಮತ್ತು ಪೇಯ ಪದಾರ್ಥಗಳು ದೊರೆಯುತ್ತವೆ

(೫) ಆಹಾರಾಂಗ—ಈ ಹೆಸರಿನ ಕಲ್ಪವೃಕ್ಷವು ಅನೇಕ ಪ್ರಕಾರದ ಸ್ವಾದಿಷ್ಟ ಭೋಜನ ಪದಾರ್ಥಗಳನ್ನು ತಂದು ಕೊಡುತ್ತದೆ ಆದರೆ ಹಸಿವೆಯ ಬಾಧೆಯು ಇಲ್ಲದುದರಿಂದ ಅವುಗಳ ಅವಶ್ಯಕತೆಯು ವಿಶೇಷವೆನಿಸುವದಿಲ್ಲ ರೋಗವಿಲ್ಲದಿದ್ದರೆ ಔಷಧವನ್ನು ಯಾರು ತೆಕ್ಕೊಂಡಾರು? ಭೋಗಭೂಮಿಯಲ್ಲಿ ಹುಟ್ಟುವವರಿಗೆ ಕ್ಷುಧೆಯ ವೇದನೆಯು ಇರುವದಿಲ್ಲ ಅವರು ಮೂರು ದಿವಸಗಳ ತರುವಾಯ ಬೋರಿಯ ಬೀಜದಷ್ಟು ಆಹಾರವನ್ನು ಸ್ವೀಕರಿಸುವವರು.

(೬) ಗೃಹಾಂಗ—ಈ ಹೆಸರಿನ ಕಲ್ಪವೃಕ್ಷದಿಂದ ಅನೇಕ ಪ್ರಕಾರದ ರತ್ನಗಳ ಮನೆ, ಅರಮನೆಗಳಂಥವು ಪ್ರಾಪ್ತವಾಗುತ್ತವೆ

(೭) ಪುಷ್ಪಾಂಗ—ಈ ಜಾತಿಯ ಕಲ್ಪವೃಕ್ಷದಿಂದ ನಾನಾ ಪ್ರಕಾರದ ಕೋಮಲ ಮತ್ತು ಸುಗಂಧಿ ಹೂವಿನ ಅಲಂಕಾರಗಳು ಲಭಿಸುತ್ತವೆ

(೮) ಜ್ಯೋತಿರಂಗ—ಈ ಜಾತಿಯ ಕಲ್ಪವೃಕ್ಷವು ತನ್ನ ಪ್ರಕಾಶದ ಮುಂದೆ ಸೂರ್ಯಚಂದ್ರರ ಪ್ರಕಾಶವನ್ನು ಬೀಳಗೊಡುವದಿಲ್ಲ ಸೂರ್ಯನ ಪ್ರಕಾಶಕ್ಕಿಂತ ಇದರ ಪ್ರಕಾಶವು ಹೆಚ್ಚಿಗೆ ಇರುತ್ತದೆ ಅಂತಲೇ ಅಲ್ಲಿ ಹಗಲು-ರಾತ್ರಿಗಳ ಭೇದವಿರುವದಿಲ್ಲ.

(೯) ವಸ್ತ್ರಾಂಗ—ಈ ಜಾತಿಯ ಕಲ್ಪವೃಕ್ಷದಿಂದ ವಿವಿಧ ಪ್ರಕಾರದ ಮನೋವಾಂಛಿತ ಸುಂದರ ವಸ್ತ್ರ, ಹಾಸಿಗೆ, ಆಸನ ಮೊದಲಾದವುಗಳೆಲ್ಲ ದೊರೆಯುತ್ತವೆ

(೧೦) ದೀಪಾಂಗ—ಈ ಜಾತಿಯ ಕಲ್ಪವೃಕ್ಷವು ದೀಪಾವಳಿಯ ಶೋಭೆಯನ್ನುಂಟು ಮಾಡುತ್ತದೆ.

**ಭೋಗ ಭೂಮಿಯೊಳಗಿನ ಯುಗಲೋತ್ಪತ್ತಿ**—ಭೋಗಭೂಮಿಯೊಳಗಿನ ಸ್ತ್ರೀಪುರುಷರ ಜೋಡಿಗೆ ಮರಣಕಾಲದಲ್ಲಿ ಪುರುಷನಿಗೆ ಸೀನು, ಸ್ತ್ರೀಗೆ ಆಕಳಿಕೆ ಉಂಟಾಗುತ್ತವೆ ಆ ಕಾಲದಲ್ಲಿ ಅವರಿಗೆ ಒಂದು ಯುಗಲವು—ಒಬ್ಬ ಮಗ ಮತ್ತು ಒಬ್ಬ ಮಗಳು—ಒಮ್ಮೆಲೇ ಜನಿಸುತ್ತದೆ ತಮ್ಮ ಮಕ್ಕಳನ್ನು ನೋಡಲಿಕ್ಕೆ ತಂದೆ-ತಾಯಂದಿರು ಜೀವಂತವಿರುವದಿಲ್ಲ ಅಲ್ಲದೆ ಮಕ್ಕಳೂ ಸಹ ತಮ್ಮ ಜನನಿ-ಜನಕರನ್ನು ಕಾಣುವದಿಲ್ಲ ಅಂತಲೇ ಇವರಿಗೆ ವಿಯೋಗ ದುಃಖವಿಲ್ಲ ಮರಣಾನಂತರ ಅವರ ದೇಹವು ಶರದ್ ಋತುವಿನ ಮೋಡದಂತೆ ಕಣ್ಮರೆಯಾಗಿ ಹೋಗುತ್ತದೆ. ಯುಗಲವು ಉತ್ಪನ್ನವಾದ ಮೇಲೆ ಏಳು ದಿನಗಳ ವರೆಗೆ ಅವು ತಮ್ಮ ಹೆಬ್ಬೆರಳನ್ನು ಸೀಪುತ್ತಿರುತ್ತವೆ ಮುಂದೆ ಏಳು ದಿನಗಳ ವರೆಗೆ ಕೆಳಗೆ ಮೇಲೆ, ಬೋರಲು-ಅಂಗಾತ ಹೊರಳುತ್ತ ಇರುವವು. ಮುಂದಿನ ಏಳು ದಿನಗಳಲ್ಲಿ ಅಸ್ಥಿರವಾದಂಥ ಗಮನಮಾಡುತ್ತಿರುವವು ಆ ಮೇಲಿನ ಏಳು ದಿನಗಳಲ್ಲಿ ಪೂರ್ಣ ಯೌವನವು ಪ್ರಾಪ್ತವಾಗುತ್ತದೆ. ತರುವಾಯ ಏಳು ದಿನಗಳಲ್ಲಿ ಎಲ್ಲ ಶಾಸ್ತ್ರಕಲೆಗಳ ಚಾತುರ್ಯದಲ್ಲಿ ನಿಪುಣತೆಯು ಉಂಟಾಗುತ್ತದೆ. ಈ ಪ್ರಕಾರ ಏಳು ವಾರಗಳಲ್ಲಿ—ನಲವತ್ತೊಂಭತ್ತು ದಿನಗಳಲ್ಲಿ—ಆ ಯುಗಲವು ಪರಿಪೂರ್ಣವಾಗುವದು ಅನೇಕ ಪ್ರಕಾರದ ಪೃಥಕ್ ಹಾಗೂ ಅಪೃಥಕ್ ವಿಕ್ರಿಯೆಗಳಿಂದ ನಾನಾವಿಧ ಮಂದಿರಗಳಲ್ಲಿ ವಿಹಾರಮಾಡುತ್ತ ಪ್ರತಿಕ್ಷಣಕ್ಕೂ ದೊರೆಯುವ ವಿವಿಧ ಹೊಸ ಹೊಸ ಭೋಗ ಸಾಮಗ್ರಿಗಳನ್ನು ಉಪಭೋಗಿಸುತ್ತಾರೆ ಅನೇಕ ಪ್ರಕಾರದ ಕ್ರೀಡೆ, ರಾಗರಂಗಗಳಲ್ಲಿ ವಿಲಾಸ ಕ್ರಿಯೆಗಳೊಳಗೆ ಮೂರು ಪಲ್ಯ ಆಯುಷ್ಯವನ್ನು ಪೂರ್ಣಗೊಳಿಸುತ್ತಾರೆ ಮರಣದ ಕಾಲಕ್ಕೆ ಸೀನು ಮತ್ತು ಆಕಳಿಕೆಗಳ ನಿಮಿತ್ತದಿಂದ ಪ್ರಾಣತ್ಯಾಗ ಮಾಡುವರು. ಆ ಯುಗಲವು ಸಮ್ಯಗ್ದೃಷ್ಟಿ ಇದ್ದರೆ ಮಾತ್ರ ಸೌಧರ್ಮ ಮತ್ತು ಐಶಾನ ಸ್ವರ್ಗದಲ್ಲಿ ಉತ್ಪನ್ನವಾಗುತ್ತದೆ ಮಿಥ್ಯಾದೃಷ್ಟಿಯಾಗಿದ್ದರೆ ಸತ್ತಮೇಲೆ ಭವನವಾಸಿ, ವ್ಯಂತರ,

ಜ್ಯೋತಿಷ ದೇವರಲ್ಲಿ ಹುಟ್ಟುತ್ತದೆ. ಕಷಾಯದ ಪ್ರಭಾವವು ಮಂದವಾಗಿರುವುದರಿಂದ ದೇವ ಗತಿಯ ಹೊರತಾಗಿ ಬೇರೆ ಗತಿಯು ಅವರಿಗೆ ಪ್ರಾಪ್ತವಾಗುವದಿಲ್ಲ

ಶ್ರಾವಕರ ಮೂರು ವರ್ಗಗಳು—ಶ್ರಾವಕನು ಸಮ್ಯಗ್ದೃಷ್ಟಿಯಾಗಿದ್ದು, ಶ್ರಾವಕರ ವ್ರತಗಳನ್ನು ಧಾರಣ ಮಾಡಿದ್ದರೆ ಅವನು ಹದಿನಾರನೆಯ ಸ್ವರ್ಗದ ವರೆಗೆ ಮಹರ್ದ್ಧಿಕ ದೇವನಾಗಿಯೇ ಹುಟ್ಟುತ್ತಾನೆ ಆದರೆ ಅಂಥ ಶ್ರಾವಕನು ಸತ್ಪಾತ್ರದಾನವನ್ನು ಮಾಡಲೇ ಬೇಕು. ಪಾತ್ರಗಳಲ್ಲಿ ಉತ್ತಮ, ಮಧ್ಯಮ, ಜಘನ್ಯ ಎಂಬ ಮೂರು ಭೇದಗಳನ್ನು ಶಾಸ್ತ್ರದಲ್ಲಿ ಹೇಳಲಾಗಿದೆ. ಅವರಲ್ಲಿ ಮಹಾವ್ರತವನ್ನು ಧರಿಸಿ, ಇಪ್ಪತ್ತೆಂಟು ಮೂಲಗುಣ ಮತ್ತು ಉತ್ತರಗುಣಗಳನ್ನು ಪಾಲಿಸುವಂಥ ವೀತರಾಗಿಯೂ ಮಮತ್ವರಹಿತನೂ ಆದ ಸಾಧುವಿಗೆ ಉತ್ತಮ ಪಾತ್ರವೆನ್ನಲಾಗಿದೆ ಹನ್ನೊಂದು ಪ್ರತಿಮೆಗಳನ್ನು ಧರಿಸಿದ ಸಮ್ಯಗ್ದೃಷ್ಟಿ ಶ್ರಾವಕ ಮತ್ತು ಸ್ತ್ರೀ ಪರ್ಯಾಯದಲ್ಲಿ ತಮ್ಮ ಮರ್ಯಾದೆಯಂತೆ ವ್ರತಗಳನ್ನು ಧಾರಣ ಮಾಡುವ ಸ್ತ್ರೀ, ಒಂದು ವಸ್ತ್ರವನ್ನುಳಿದು ಇತರ ಪರಿಗ್ರಹಗಳನ್ನೆಲ್ಲ ತ್ಯಾಗಮಾಡಿ, ಅನ್ಯರ ಮನೆಯಲ್ಲಿ ಒಂದು ಹೊತ್ತು ಯಾಚನೆಯನ್ನು ಮಾಡದೆ ಮೌನ ಧರಿಸಿ ಭಿಕ್ಷಾ ಭೋಜನವನ್ನು ಮಾಡುವಂಥ ಮತ್ತು ಅರ್ಜಿಕೆಯರ ಸಮೂಹದಲ್ಲಿ ಇದ್ದು, ಧರ್ಮಧ್ಯಾನ ಮಾಡುತ್ತ ಮಹಾನ್ ತಪಶ್ಚರಣ ಮಾಡುವ ಅರ್ಜಿಕೆಯು, ಅಣುವ್ರತ ಹಾಗೂ ಸಮ್ಯಗ್ದರ್ಶನ ಧಾರಣ ಮಾಡುವಂಥ ಶ್ರಾವಿಕಾ ಇವರು ಮಧ್ಯಮ ಪಾತ್ರವೆಂದು ತಿಳಿಯಬೇಕು ವ್ರತರಹಿತರಿದ್ದೂ ಜಿನೇಂದ್ರ ಭಗವಾನ್‌ರ ವಚನಗಳ ಮೇಲೆ ನಂಬಿಗೆಯನ್ನು ಇಡುವಂಥ ಸಮ್ಯಗ್ದರ್ಶನ ಯುಕ್ತ ಪುರುಷನೂ ಸ್ತ್ರೀಯೂ ಜಘನ್ಯ ಪಾತ್ರಗಳೆನಿಸುತ್ತವೆ. ಈ ಮೂರು ಪ್ರಕಾರದ ಪಾತ್ರಗಳಿಗೆ ನಾಲ್ಕು ಪ್ರಕಾರದ ದಾನಕೊಡುವುದು, ಅವರ ಆದರಾತಿಥ್ಯ ಮಾಡುವದು, ಉಚ್ಚಸ್ಥಾನವನ್ನು ಕೊಡುವದು, ಅವರ ಯೋಗ್ಯತಾನುಸಾರ ಸ್ತುತಿಸುವದು, ಪೂಜಿಸುವದು, ಪ್ರಶಂಸಾಪರ ವಚನಗಳನ್ನಾಡುವದು, ಎದ್ದು ನಿಲ್ಲುವುದು, ಶ್ರೇಷ್ಠರೆಂದು ತಿಳಿಯುವುದು—ಇವೆಲ್ಲ ಕ್ರಿಯೆಗಳು ದಾನದಲ್ಲಿ ಸಮಾವೇಶವಾಗುತ್ತವೆ.

ಸುಕ್ಷೇತ್ರಮಾಗಿ ಕೆಲಸದಧ್ಯಕ್ಷತೆಯಂ ಪಡೆದು ಪದದೀ ಮಳೆಕೊಳಲದರೊಳ್ ।
ನಿಕ್ಷಿಪ್ತಮಾದ ಬೀಜಂ ಸಾಕ್ಷಾತ್ಫಲಮೆಂತುಟಂತೆ ತದ್ದಾನಫಲಂ ॥

—ಮಾಘನಂದಿ—ಶಾಸ್ತ್ರಸಾರ ಸಮುಚ್ಚಯ ಟೀಕು—ಚರಣಾನುಯೋಗ ೧೨೦

ಇನ್ನು ನಾಲ್ಕು ಪ್ರಕಾರದ ದಾನದ ವಿಷಯವನ್ನು ವಿವರಿಸುತ್ತಾರೆ—

**ಆಹಾರೌಷಧಯೋರಪ್ಯುಪಕರಣಾವಾಸಯೋಶ್ಚ ದಾನೇನ ।**
**ವೈಯಾವೃತ್ತ್ಯಂ ಬ್ರುವತೇ ಚತುರಾತ್ಮತ್ವೇನ ಚತುರಸ್ರಾಃ ॥ ೧೧೭ ॥** [1]

ಅನ್ವಯಾರ್ಥ—(ಚತುರಸ್ರಾಃ) ಚತುರರಾದವರು (ಆಹಾರೌಷಧಯೋಃ) ಆಹಾರ, ಔಷಧ (ಅಪಿ) ಮತ್ತು (ಉಪಕರಣಾವಾಸಯೋಃ) ಉಪಕರಣ, ಸ್ಥಾನ—ಇವುಗಳ—(ದಾನೇನ) ದಾನದಿಂದ (ಚತುರಾತ್ಮತ್ವೇನ) ನಾಲ್ಕು ಪ್ರಕಾರದ (ವೈಯಾವೃತ್ತ್ಯಂ) ವೈಯಾವೃತ್ಯವು—ಸಂಭವಿಸುತ್ತದೆ ಎಂದು—(ಬ್ರುವತೇ) ಹೇಳುತ್ತಾರೆ

ಅರ್ಥ—ಚತುರಸ್ರ ಎಂದರೆ ಪ್ರವೀಣರಾದಂಥ ಜ್ಞಾನವಂತ ಆಚಾರ್ಯರು ಆಹಾರ ದಾನ, ಔಷಧ ದಾನ, ಉಪಕರಣ ದಾನ, ವಸತಿಯ ದಾನಗಳೆಂದು ವೈಯಾವೃತ್ಯದ ನಾಲ್ಕು ಪ್ರಕಾರಗಳನ್ನು ವರ್ಣಿಸಿದ್ದಾರೆ [ಲೋಕದಲ್ಲಿ ಆಹಾರ ದಾನ, ಔಷಧ ದಾನ, ವಿದ್ಯಾ ದಾನ, ಅಭಯ ದಾನಗಳೆಂದು ನಾಲ್ಕು ಪ್ರಕಾರದ ದಾನಗಳು ಹೆಚ್ಚು ಪ್ರಸಿದ್ಧವಾಗಿವೆ. ಆದರೆ ಎಂಥ ತಪಸ್ವಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು, ಇಲ್ಲಿ ವೈಯಾವೃತ್ಯದ ರೂಪದಲ್ಲಿ ದಾನಗಳ

---

[1] ಆಯುತವರ್ಮನು ಹೇಳುವದು ಹೀಗಿದೆ—

ವಚನ—ಅದು ಕೊಟ್ಟಂಗಂ ಕೊಂಡಂಗಮುಭಯ ಲೋಕದೊಳು ಸಂತೋಷಮುಮಂ ಗುಣಮುಮಂ ತಪಮುಮಂ ದಯೆಯುಮಂ ಕ್ಷಮೆಯುಮಂ ಕ್ರೋಧಾದಿ ವರ್ಜನೀಯ್ಯಮುಮಂ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನಂಗಳ ಪೆರ್ಚುಗೆಯುಮಂ ಸ್ವರ್ಗಾಪವರ್ಗ ಸುಖಂಗಳುಮಂ ಮುನ್ನೆ ಪೇಳ್ದಾಹರಾರೌಷಧ ಉಪಕರಣಾದಿವಾಸಮೆಂದಿವು ಜೀವಕ್ಕೆ ಸುಖಂಗಳಂ ಮಾಳ್ಕುಂ

ವ್ಯವಸ್ಥೆಯನ್ನು ಮಾಡಲಾಗಿದೆಯೋ ಆ ದೃಷ್ಟಿಯಿಂದ ಈ ನಾಲ್ಕು ದಾನಗಳು ಹೆಚ್ಚು ಉಪಯುಕ್ತವಾಗಿವೆ ಉಪಕರಣ ದಾನದಲ್ಲಿ ಶಾಸ್ತ್ರ ದಾನವು ಸಮಾವೇಶಗೊಳ್ಳುವದರಿಂದ ವಿದ್ಯಾ ದಾನವು ಸಹಜವಾಗಿಯೇ ಸಂಭವಿಸುತ್ತದೆ ಮುನಿಗಳು ಭಯವನ್ನಂತೂ ಮೊದಲೇ ಗೆದ್ದಿರುತ್ತಾರೆ ಅದರಲ್ಲಿ ಏನಾದರೂ ಕೊರತೆಯು ಉಳಿದಿದ್ದರೆ ಅದು ಆಹಾರ ದಾನದಿಂದ ಪೂರ್ಣಗೊಳ್ಳುತ್ತದೆ ಸ. ದ]

ವಿಶೇಷಾರ್ಥ—ಗೃಹಸ್ಥರಿಗೆ ನಾಲ್ಕು ಪ್ರಕಾರದ ದಾನಗಳನ್ನು ಮಾಡಲಿಕ್ಕೆ ಆಚಾರ್ಯರು ಹೇಳಿದ್ದಾರೆ ಷಟ್‌ಕಾಯ ಜೀವಗಳ ಘಾತ ಮಾಡುವದನ್ನು ಕೃತಕಾರಿತಅನುಮೋದನಗಳಿಂದ ತ್ಯಾಗಮಾಡಿರುವದರಿಂದ ಮುಖ್ಯವಾಗಿ ಅಭಯ ದಾನವು ಅಂಶತಃ ಸಂಭವಿಸುವದು ಇದರ ವಿಶೇಷವಾಗಿ ಸಕಲಪರಿತ್ಯಾಗ ಮಾಡಿದಂಥ ಮುನಿಗೆ—ಅದೂ ನಿರ್ಗ್ರಂಥ ಸಾಧುವಿಗೆ—ಅಭಯದಾನವು ಸಾಧಿಸುತ್ತದೆ ಶ್ರಾವಕನಿಗೂ ತ್ರಸಜೀವಗಳ ಸಂಕಲ್ಪೀ ಹಿಂಸೆಯ ತ್ಯಾಗ ಮತ್ತು ವಿಷಯಗಳಿಂದ ಪರಾಙ್ಮುಖತೆ ಇರುವುದರಿಂದ ಸಾಧಿಸುತ್ತದೆ. ಈ ಪ್ರಕಾರ ಗೃಹಸ್ಥನು ತನ್ನ ಆಚಾರ, ವಿಚಾರ, ಸಂಪತ್ತಿ, ಐಶ್ವರ್ಯಗಳನ್ನು ನೋಡಿಕೊಂಡು, ನ್ಯಾಯಪೂರ್ವದಿಂದ ಪ್ರಾಪ್ತವಾಗುವಂಥ ವಿಷಯೋಪ-ಭೋಗವನ್ನು ಎಲ್ಲಿಯವರೆಗೆ ತ್ಯಾಗಮಾಡಲಿಕ್ಕೆ ಬರುವದಿಲ್ಲವೋ ಅಲ್ಲಿಯ ವರೆಗೆ ಆಹಾರಾದಿ ನಾಲ್ಕು ಪ್ರಕಾರದ ದಾನಗಳನ್ನು ಮಾಡಿ, ಪಾಪದ ನಾಶವನ್ನು ಮಾಡುತ್ತ ಇರಬೇಕು

ದಾನ ವಿಚಾರ—ಸಂಪತ್ತಿ, ಶರೀರ, ಆಯುಷ್ಯ ಮೊದಲಾದವುಗಳು ಅಸ್ಥಿರವಾಗಿವೆ ಅಂತಲೇ ದಾನ ಮಾಡುವದರಿಂದ ಗೃಹಸ್ಥನು ಪೂಜ್ಯನೆನಿಸುತ್ತಾನೆ. ಗೃಹಸ್ಥನಾಗಿದ್ದು, ದಾನಮಾಡದೆ, ಯಾವಾಗಲೂ ಪಾಪಾರಂಭವನ್ನೇ ಮಾಡುತ್ತ ಇದ್ದರೆ ಆ ಗೃಹಸ್ಥಾವಸ್ಥೆಯು ಆರಂಭದ ಭಾರದಿಂದ ಪಾಷಾಣದ ನಾವೆಯಂತೆ ಸಂಸಾರದ ಸಮುದ್ರದಲ್ಲಿ ಮುಳುಗಿಸುವಂಥದ್ದಾಗುತ್ತದೆ ಜ್ಞಾನಿಗಳಾದ ಪುರುಷರು ಹೀಗೆ ವಿಚಾರಮಾಡುತ್ತಾರೆ—'ನಾನು ಸಂಪಾದಿಸಿದ ದ್ರವ್ಯವು, ನನಗೆ ಹಿರಿಯರಿಂದ ಅನಾಯಾಸವಾಗಿ ದೊರೆತ ಸಂಪತ್ತು, ರಾಜ್ಯ, ಐಶ್ವರ್ಯ, ದೇಶ, ನಗರ, ವಸ್ತ್ರಾಭರಣ, ಸೇವಕ ಸಮೂಹ ಮೊದಲಾದ ಸಾಮಗ್ರಿಗಳು ವಿನಾ ಶ್ರಮಮಾಡದೆ ಲಭಿಸಿವೆ. ಅಂದಮೇಲೆ ಅವು ಪೂರ್ವ-ಜನ್ಮದಲ್ಲಿ ನಾನು ಮಾಡಿದ ದಾನ, ದೀನ-ದರಿದ್ರ-ದುಃಖಿಗಳ ಪಾಲನ ಪೋಷಣಗಳಿಂದ ಫಲರೂಪದಲ್ಲಿ ಈಗ ಪ್ರಾಪ್ತವಾಗಿವೆ. ನಾನು ಈ ಮೊದಲು ಅಸ್ಥಿರ ಧನವನ್ನು ಅಪಹರಿಸಬೇಕೆಂಬ ವಿಚಾರವನ್ನು ಕನಸಿನಲ್ಲಿಯೂ ತಂದಿಲ್ಲ ದೊರೆತಷ್ಟು ಧನದಲ್ಲಿ ಸಂತೋಷದಲ್ಲಿರುವೆ ವಿಷಯಗಳಿಂದ ವಿರಕ್ತನಾಗಿರುವೆ ಅಲ್ಲದೆ ಅವುಗಳ ಆಶೆಯನ್ನೂ ನಷ್ಟಗೊಳಿಸಿರುವೆ. ಇವೆಲ್ಲವುಗಳ ಫಲವು ಈ ಸಂಪತ್ತಾಗಿದೆ ಇಲ್ಲದೆ ದೀನ, ದುಃಖಿತ, ಅಸಹಾಯಕ, ರೋಗಿ, ಬಾಲ, ವೃದ್ಧ ಇವರ ಮೇಲೆ ದಯದೋರಿ ಉಪಕಾರ ಮಾಡಿದುದರ ಫಲವೆಂದು ಈ ಧನವು ಲಭಿಸಿದೆ ಈ ಧನದ ಸಂಯೋಗವು ಅಲ್ಪಕಾಲ ಇರುವಂಥದ್ದಾಗಿದೆ ಈ ಸಂಪತ್ತು ಪರಲೋಕಕ್ಕೆ ನನ್ನ ಸಂಗಡ ಬರುವಂಥದಲ್ಲ. ಇದು ನೆಲದಲ್ಲಿ ಹೂಗಿದ ಸ್ಥಳದಲ್ಲಿಯೇ ನಿಂತೀತು ಇಟ್ಟಲ್ಲಿಯಾದರೂ ಇಟ್ಟಲ್ಲಿಯೇ ನಿಂತೀತು ಇನ್ನಾರ ಹತ್ತಿರವಾದರೂ ಇದು ಗಂಟೊಂದು ಇಟ್ಟರೆ ಅವರಲ್ಲಿಯೇ ಉಳಿದು ಬಿಟ್ಟೀತು ಆ ಸಂಪತ್ತಿಗೆ ಸ್ತ್ರೀ, ಪುತ್ರ, ಕುಟುಂಬ, ಮಗಳು ಮೊದಲಾದವರು ಯಾರಾದರೂ ಹಕ್ಕುದಾರರಿದ್ದರೆ ಅವರು ಒಡೆಯರಾದಾರು. ಯಾರೂ ಹಕ್ಕುದಾರರು ದೊರೆಯದಿದ್ದರೆ ಆ ಧನವು ರಾಜನದಾದೀತು. ಇದರ ಸಂಬಂಧವನ್ನು ಬಿಡದಿದ್ದರೆ ಮಾತ್ರ ನಾನು ಅಕಸ್ಮಾತ್‌ವಾಗಿ ಸತ್ತು ದುರ್ಗತಿಗೆ ಹೋದೇನು. ನಾನು ಈ ಧನವನ್ನು ಅನೇಕ ಪ್ರಕಾರದ ಕಪಟತನವನ್ನು ಹೂಡಿ ಸಂಪಾದಿಸಿರುವೆ ಇದಕ್ಕಾಗಿ ಮಹಾನ್ ಪಾಪಾರಂಭ ಮಾಡಿರುವೆ. ದೇಶ-ವಿದೇಶಗಳನ್ನು ಸುತ್ತಿರುವೆ. ಪ್ರಾಣಕ್ಕಿಂತಲೂ ಹೆಚ್ಚಾಗಿ ಈ ಸಂಪತ್ತನ್ನು ಪ್ರೀತಿಸಿ ಕಷ್ಟದಿಂದ ಸಂರಕ್ಷಿಸಿರುವೆ ಈಗ ಇದರ ಉಪಯೋಗವನ್ನು ಪರಕ್ಕೋಸ್ಕರ ಮಾಡಬೇಕಾಗಿದೆ."

ಜಾಣನಾದ ಪುರುಷನು ಈ ವಿಚಾರಗಳನ್ನೂ ಮನಸ್ಸಿನಲ್ಲಿ ತರಬೇಕು ಜಗತ್ತಿನ ಚಕ್ರದ ಕಡೆಗೆ ನೋಡಬೇಕು ಲಕ್ಷಾವಧಿ ರೂಪಾಯಿಗಳ ಸಂಪತ್ತು ಹತ್ತಿರ ಇದ್ದವರಿಗೆ ಅದರ ಉಪಯೋಗವಾದರೂ ಲಭಿಸುವದೇ ನೋಡಬೇಕು ಲಕ್ಷಾವಧಿ ರೂಪಾಯಿಗಳ ಸಂಪತ್ತು ಹತ್ತಿರ ಇದ್ದವರಿಗೆ ಅದರ ಉಪಯೋಗವಾದರೂ ಲಭಿಸುವದೇ? ಉಪಭೋಗವಂತೂ ಇರಲಿ, ಪಾಪಕ್ಕೇನು ಅನ್ನದಷ್ಟು ಮಾತ್ರ ಲಭಿಸೀತು! ಇದರ ಧನ ತೃಷ್ಣೆಯು ಮಾತ್ರ ಬಹಳ ದೊಡ್ಡದು ಇರುತ್ತದೆ ಅದರಿಂದ ತನ್ನ ಧನವು ಯಾವ ಉಪಾಯದಿಂದ ಬೆಳೆದೀತು ಎನ್ನುವ ವಿಚಾರದಲ್ಲಿಯೇ ಅವನಿಗೆ ಹಗಲಿರುಳೂ ಸಮಾಧಾನವೆನಿಸುವದಿಲ್ಲ. ಇನ್ನೊಬ್ಬರ ಹಣದ ಕಡೆಗೆ ನೋಡುತ್ತ ಐವತ್ತು ಲಕ್ಷ ಧನವಾಯಿತು, ನನ್ನ ಹತ್ತಿರ ಕೇವಲ ಐದು ಲಕ್ಷ ಮಾತ್ರ! ಈಗ ಏನು ಮಾಡಲಿ! ನನ್ನ ಧನವನ್ನು ಹೇಗೆ ಬೆಳೆಸಲಿ!

ಏನು ಉಪಾಯ ಮಾಡಬೇಕು! ಯಾವುದರ ವ್ಯಾಪಾರ ಮಾಡಲಿ! ಯಾವ ರಾಜನ ಮನಸ್ಸನ್ನು ಪ್ರಸನ್ನಗೊಳಿಸಲಿ! ಯಾರ ಮಿತ್ರತ್ವ ಮಾಡಲಿ! ಯಾರ ಸಲಹೆಯಿಂದ ನನ್ನ ಧನವು ತತ್ಕಾಲದಲ್ಲಿ ಹೆಚ್ಚಾದೀತು? ನನಗೆ ಸ್ವಲ್ಪ ಸಂಬಳದಲ್ಲಿ ಬಹಳ ದುಡಿದು, ವಿಪುಲ ಧನವನ್ನು ದೊರಕಿಸಿಕೊಡುವಂಥ ಸೇವಕ ಸಿಗಬೇಕು ಈ ರೀತಿ ಸಾವಿರಾರು ಪ್ರಕಾರದ ವಿಕಲ್ಪಗಳನ್ನು ಮನಸ್ಸಿನಲ್ಲಿ ತರುತ್ತ ಸಂಸಾರೀ ಜೀವವು ತನಗೆ ದೊರೆತ ಸರ್ವ ಸಂಪತ್ತು ಮತ್ತು ಐಶ್ವರ್ಯಗಳ ಭೋಗವನ್ನು ತಕ್ಕೊಳ್ಳದೆಯೂ ಹಗಲಿರುಳೂ ಆರ್ತ ಪರಿಣಾಮದಿಂದ ತಳಮಳವನ್ನು ಹೊಂದುತ್ತ ಮರಣಕ್ಕೀಡಾಗುವದು ನರಕದೊಳಗಿನ ಭಯಂಕರ ಪಾಪದ ಭೋಗಿಯಾಗುತ್ತಾನೆ ಸಂಸಾರದಲ್ಲಿ ಅನೇಕ ದುಃಖಗಳನ್ನು ಭೋಗಿಸಿ ತೊಳಲುತ್ತಲೂ ಹಸಿವೆ, ನೀರಡಿಕೆ, ಬೇನೆ, ಬಡತನಗಳನ್ನು ಉಪಭೋಗಿಸುತ್ತಲೂ, ಅವನ ಅನಂತಕಾಲವು ಉರುಳುತ್ತದೆ ಇಂಥ ಕೆಟ್ಟ ಕಾಲದಲ್ಲಿ ಎಂದಾದರೊಮ್ಮೆ ಯಾರಾದರೊಬ್ಬರಿಗೆ ಮೋಹರೂಪದ ನಿದ್ರೆಯು ಉಪಶಮವಾದಲ್ಲಿ, ಜಿನವಚನದ ಮೇಲೆ ಶ್ರದ್ಧೆಯು ಕುಳಿತಿತೆಂದರೆ ಅಂಥವನು ಅದರ ಪ್ರಭಾವದಿಂದ ಜಾಗ್ರತನಾಗಿ ತನ್ನ ಹಿತದ ವಿಚಾರ ಮಾಡುತ್ತಾನೆ ಆಗ ಅವನಿಗೆ ನಾಲ್ಕು ಪ್ರಕಾರದ ದಾನವನ್ನು ಮಾಡಬೇಕೆಂಬ ಬುದ್ಧಿಯು ಹುಟ್ಟುತ್ತದೆ

ಆಹಾರ ದಾನ—ಎಲ್ಲ ದಾನಗಳಲ್ಲಿಯೂ ಆಹಾರ ದಾನವು ಶ್ರೇಷ್ಠವಾಗಿದೆ ಯಾಕಂದರೆ ಈ ಜೀವವು ಆಹಾರ ದಾನದಿಂದ ಬದುಕುತ್ತದೆ ಕೋಟಿಗಟ್ಟಲೆ ರೂಪಾಯಿಗಳ ಸುವರ್ಣದಾನವನ್ನು ಮಾಡಿದರೂ ಸಹ ಆಹಾರ ದಾನಕ್ಕೆ ಅದು ಸಮಾನವಾಗಲಾರದು ಆಹಾರ ದಾನದಿಂದಲೇ ದೇಹವು ತಾಳುತ್ತದೆ ದೇಹವಿದ್ದರೇನೇ ರತ್ನತ್ರಯ ಧರ್ಮದ ಪಾಲನವಾಗುತ್ತದೆ ರತ್ನತ್ರಯ ಧರ್ಮದಿಂದ ನಿರ್ವಾಣವು ಪ್ರಾಪ್ತವಾಗುತ್ತದೆ. ನಿರ್ವಾಣದಲ್ಲಿ ಅನಂತ-ಸುಖವಿದೆ ಅಂತಲೆ ನಿರೀಚ್ಛ ಸಾಧುಗಳ ಮೇಲೆ ಏನಾದರೂ ಉಪಕಾರ ಮಾಡುವದಿದ್ದರೆ ಅದು ಕೇವಲ ಆಹಾರ ದಾನದಿಂದಲೇ ಸಾಧ್ಯವಿದೆ ಸಾಧುವು ಆಹಾರದ ಹೊರತಾಗಿ ಬೇರೆ ಎಳ್ಳುಕಾಳಿನಷ್ಟು ವಸ್ತುವನ್ನು ಸ್ವೀಕರಿಸುವದಿಲ್ಲ ಆಹಾರವಿಲ್ಲದೆ ಶರೀರವು ತಾಳುವದಿಲ್ಲ ಆಹಾರವಿಲ್ಲದಿದ್ದರೆ ದೇಹದಲ್ಲಿ ಅನೇಕ ರೋಗಗಳು ಹುಟ್ಟುತ್ತವೆ ಆಹಾರವಿಲ್ಲದೆ ಜ್ಞಾನಾಭ್ಯಾಸವಾಗುವದಿಲ್ಲ ಆಹಾರವಿಲ್ಲದೆ ವ್ರತ, ಸಂಯಮ, ತಪ ಇವುಗಳಲ್ಲಿ ಒಂದನ್ನೂ ಪಾಲಿಸಲಿಕ್ಕೆ ಆಗುವದಿಲ್ಲ ಆಹಾರವಿಲ್ಲದೆ ಸಾಮಾಯಿಕ, ಪ್ರತಿಕ್ರಮಣ, ಕಾಯೋತ್ಸರ್ಗ, ಧ್ಯಾನ ಇವುಗಳಲ್ಲಿ ಒಂದೂ ಆಗಲಾರದು ಆಹಾರವನ್ನುಳಿದು ಪರಮಾಗಮದ ಉಪದೇಶವನ್ನೂ ಸಹ ಮಾಡಲಿಕ್ಕಾಗದು ಆಹಾರವಿಲ್ಲದಿದ್ದರೆ ಉಪದೇಶವನ್ನು ಗ್ರಹಣಮಾಡುವ ಶಕ್ತಿಯೂ ಉಳಿಯದು ಆಹಾರವಿಲ್ಲದೆ ಶರೀರದ ಕಾಂತಿಯು ನಿಲ್ಲುವದಿಲ್ಲ. ಆಹಾರವಿಲ್ಲದೆ ಕ್ಷಮಾ, ಶಾಂತಿ, ನೀತಿ, ಗತಿ, ರತಿ, ಉಕ್ತಿ, ಶಕ್ತಿ, ದ್ಯುತಿ, ಪ್ರೀತಿ, ಪ್ರತೀತಿ ಮೊದಲಾದವುಗಳೆಲ್ಲವೂ ಇಲ್ಲದಂತಾಗುತ್ತವೆ ಆಹಾರದ ಹೊರತಾಗಿ ಸಮಭಾವ, ಇಂದ್ರಿಯ ದಮನ, ಜೀವದಯಾ, ಮುನಿ-ಶ್ರಾವಕರ ಧರ್ಮಗಳು, ವಿನಯ ಪ್ರವೃತ್ತಿ, ನ್ಯಾಯ-ಪ್ರವೃತ್ತಿ, ತಪಃಪ್ರವೃತ್ತಿ, ಯಶಃಪ್ರವೃತ್ತಿ ಮೊದಲಾದವುಗಳೆಲ್ಲವೂ ನಷ್ಟಗೊಳ್ಳುತ್ತವೆ. ಆಹಾರವಿಲ್ಲದಿದ್ದರೆ ವಚನ ಪ್ರಾವೀಣ್ಯವೂ ಇಲ್ಲದಂತಾಗುತ್ತದೆ ಆಹಾರವಿಲ್ಲದ ಶರೀರದ ವರ್ಣವು ಕೂಡಾ ಕೆಟ್ಟುಹೋಗುತ್ತದೆ ಶರೀರ ಮತ್ತು ಮುಖಗಳಿಂದ ದುರ್ಗಂಧವಾಸವು ಬರುತ್ತದೆ ಆಹಾರವಿಲ್ಲದೆ ಶರೀರವು ಜೀರ್ಣವಾಗಿ ಹೋಗುತ್ತದೆ ಆಹಾರವನ್ನು ತ್ಯಜಿಸಿದಾಗ ಶರೀರದ ಚೇಷ್ಟೆಯು (ವ್ಯಾಪಾರ) ನಷ್ಟವಾಗುತ್ತ ಹೋಗುತ್ತದೆ ಆಹಾರವು ದೊರೆಯದಿದ್ದರೆ ಅನೇಕ ಜನರು ತಮ್ಮ ಪ್ರಾಣಪ್ರಿಯ ಪುತ್ರ ಪುತ್ರಿ ಮತ್ತು ಪ್ರಸಂಗ ಬಂದರೆ ಹೆಂಡತಿಯನ್ನೂ ಸಹ ಮಾರುತ್ತಾರೆ ಆಹಾರವಿಲ್ಲದಿದ್ದರೆ ಕಣ್ಣಿಗೆ ಕತ್ತಲೆಯು ಬರುವದು, ಕಿವಿಗಳು ಕಿವುಡಾಗುವವು, ಮೂಗಿಗೆ ವಾಸವು ಬರುವದಿಲ್ಲ, ಸ್ಪರ್ಶವು ತಿಳಿಯುವದಿಲ್ಲ ಆಹಾರವಿಲ್ಲದಿದ್ದರೆ ಮನುಷ್ಯನ ಚಟುವಟಿಕೆಯು ಇಲ್ಲದಂತಾಗಿ, ಅವನು ನಿಶ್ಚೇಷ್ಟನಾಗುತ್ತಾನೆ ಆಹಾರವಿಲ್ಲದಿದ್ದರೆ ಪ್ರಾಣವು ಇಲ್ಲದಂತಾಗುತ್ತದೆ. ಆಹಾರವಿಲ್ಲದಿದ್ದರೆ ಚಿಂತೆ, ಶೋಕ, ಭಯ, ಕ್ಲೇಶ, ಸಂತಾಪ ಮೊದಲಾದವುಗಳು ಹುಟ್ಟುತ್ತವೆ ಆಹಾರವು ದೊರೆಯದಿದ್ದರೆ ದೀನಾವಸ್ಥೆಯು ಪ್ರಾಪ್ತವಾಗುತ್ತವೆ ದೈನ್ಯವು ಪ್ರಾಪ್ತವಾದಂದ ಮನುಷ್ಯನಿಗೆ ಜಗತ್ತಿನಲ್ಲಿ ಬಹಳ ಅಪಮಾನವಾಗುತ್ತದೆ ಈ ಪ್ರಕಾರ ಘೋರ ದುಃಖ ಹಾಗೂ ದುರ್ಧ್ಯಾನಗಳನ್ನು ಇಲ್ಲದಂತೆ ಮಾಡುವ ಆಹಾರ ದಾನವನ್ನು ಯಾರು ಕೊಡುವರೋ ಅವರು ವ್ರತ ಸಂಯಮ ಮೊದಲಾದವುಗಳ ರಕ್ಷಣಮಾಡಿದಂತೆ ಹೇಳಿಗೇನು? ಅವರು ಎಲ್ಲ ರೋಗಗಳನ್ನೂ ಸಹ ಇಲ್ಲದಂತೆ ಮಾಡಿದರೆಂದು ಹೇಳಿದರೂ ಅತಿಶಯೋಕ್ತಿ ಎನಿಸಲಿಕ್ಕಿಲ್ಲ. ಅದಕ್ಕಾಗಿ ಆಹಾರ ದಾನದಂಥ ಉಪಕಾರವು ಇನ್ನೊಂದಿಲ್ಲ

ಔಷಧ ದಾನ— ಇನ್ನು ಎರಡನೆಯದಾದ ಔಷಧ ದಾನವು ಎಲ್ಲ ರೋಗಗಳನ್ನು ನಷ್ಟಮಾಡುವಂಥದ್ದು ಇರುವುದರಿಂದ ಶ್ರೇಷ್ಠವೆನಿಸಿದೆ ರೋಗದಿಂದ ವ್ರತ ಸಂಯಮಗಳು ಕೆಡುತ್ತವೆ ಸ್ವಾಧ್ಯಾಯ, ದಾನ ಮೊದಲಾದ ಎಲ್ಲ ಧರ್ಮಕಾರ್ಯಗಳು ಲೋಪ ಹೊಂದುತ್ತವೆ ರೋಗಿಯಾದ ಪುರುಷನಿಗೆ ಸಾಮಾಯಿಕಾದಿ ಆವಶ್ಯಕ ಕ್ರಿಯೆಗಳು ನಡೆಯುವದಿಲ್ಲ ರೋಗದಿಂದ ಯಾವಾಗಲೂ ಆರ್ತಧ್ಯಾನವು ಉಂಟಾಗುತ್ತದೆ ಅದರಿಂದ ಮರಣವೂ ಕೆಡುತ್ತದೆ ರೋಗಿಯ ದುಃಖವು ದಿನದಿನಕ್ಕೆ ಹೆಚ್ಚುತ್ತಿರುತ್ತದೆ. ರೋಗಿಯು ದುಃಖಾತಿಶಯದಿಂದ ಅಪಘಾತ ಮಾಡಿಕೊಳ್ಳಲು ಇಚ್ಛಿಸುತ್ತಾನೆ ರೋಗಿಯು ಪರಾಧೀನನಾಗುತ್ತಾನೆ ಅವನ ಮನ ಹಾಗೂ ಇಂದ್ರಿಯಗಳು ಚಂಚಲವಾಗುತ್ತವೆ ಅವನಿಗೆ ಏಳುವುದು, ಕೂಡುವುದು, ಮಲಗುವದು, ನಡೆಯುವದು ಬಹಳ ಕಠಿಣವಾಗುತ್ತದೆ ಪ್ರತಿಯೊಂದು ಸ್ಥಾನದ ಕೂಡ ವೇದನೆಯು ಹೆಚ್ಚುತ್ತ ಹೋಗುವುದು ಕ್ಷಣಮಾತ್ರವೂ ಅವನ ಮನಸ್ಸಿಗೆ ಸಮಾಧಾನವೆನಿಸುವದಿಲ್ಲ ಬಹಳ ಹೇಳುವದೇನು? ರೋಗಿಯಾದವನಿಗೆ ತಿನ್ನುವುದು, ಕುಡಿಯುವುದು, ಮಾತಾಡು-ವುದು, ಏಳುವುದು, ಕೂಡುವುದು, ಮಲಗುವುದು ಮೊದಲಾದ ಎಲ್ಲ ಕಾರ್ಯಗಳೂ ವಿಷಪ್ರಾಶನದಂತೆ ದುಃಖಕೊಡುವಂಥವಾಗುತ್ತವೆ ಅದಕ್ಕಾಗಿ ಪ್ರಾಸುಕ (ಶುದ್ಧ) ಔಷಧಗಳ ದಾನ ಮಾಡಿ, ರೋಗವಿಲ್ಲದಂತೆ ಮಾಡುವಂಥ ಉಪಕಾರ ಕಾರ್ಯವು ಬೇರೊಂದಿಲ್ಲ ರೋಗವು ಇಲ್ಲದಂತಾದರೆ ಆಹಾರ ತಕ್ಕೊಳ್ಳಲಿಕ್ಕೆ ಬರುತ್ತದೆ. ವ್ರತ, ತಪ, ಸಂಯಮ, ಧ್ಯಾನ, ಸ್ವಾಧ್ಯಾಯ, ಕಾಯೋತ್ಸರ್ಗ ಮೊದಲಾದವುಗಳನ್ನು ಮಾಡಲಿಕ್ಕೆ ಬರುತ್ತದೆಂದು ಔಷಧ ದಾನ ಮಾಡುವದು ಮಹತ್ಪುಣ್ಯದ ಕಾರ್ಯವಾಗಿದೆ

ಜ್ಞಾನ-ದಾನ— ಮೂರನೆಯದಾದ ಜ್ಞಾನದಾನಕ್ಕೆ ಸಮಾನವಾದ ಉಪಕಾರವು ಜಗತ್ತಿನಲ್ಲಿ ಬೇರೊಂದು ಇಲ್ಲದುದರಿಂದ ಅದು ಬಹಳ ಶ್ರೇಷ್ಠವಾಗಿದೆ ಜ್ಞಾನವಿಲ್ಲದಿದ್ದರೆ ಮನುಷ್ಯ ಜನ್ಮವು ಪಶುವಿನಂತೆ ಆಗುತ್ತದೆ ಜ್ಞಾನಾಭ್ಯಾಸದ ಹೊರತಾಗಿ ತನ್ನ ಹಾಗೂ ಇತರರಲ್ಲಿಯ ಭೇದವು ತಿಳಿಯುವದಿಲ್ಲ ಜ್ಞಾನವಿಲ್ಲದೆ ಇಹಲೋಕ ಪರಲೋಕಗಳ ತಿಳುವಳಿಕೆಯೂ ಆಗುವದಿಲ್ಲ ಧರ್ಮ ಯಾವುದು ಅಧರ್ಮ ಯಾವುದು, ಪಾಪ ಯಾವುದು, ಯೋಗ್ಯಾಯೋಗ್ಯ ಯಾವುದು ಇವುಗಳ ವಿಚಾರವನ್ನು ಜ್ಞಾನವಿಲ್ಲದೆ ಮಾಡಲಿಕ್ಕೆ ಬರುವದಿಲ್ಲ ದೇವ, ಕುದೇವ, ಗುರು, ಕುಗುರು ಇವರಲ್ಲಿಯ ಭೇದ ತಿಳಿಯಲಿಕ್ಕೂ ಜ್ಞಾನವೇ ಆಧಾರವು ಜ್ಞಾನವಿಲ್ಲದೆ ಮೋಕ್ಷ ಮಾರ್ಗವು ತಿಳಿಯುವದಿಲ್ಲ ಜ್ಞಾನವಿಲ್ಲದೆ ಮೋಕ್ಷವೂ ಇಲ್ಲ ಜ್ಞಾನರಹಿತ ಪುರುಷ ಮತ್ತು ಪಶುವಿನಲ್ಲಿ ಅಂತರವಿಲ್ಲ ಇಂದ್ರಿಯಗಳ ವಿಷಯವನ್ನು ಪುಷ್ಟಗೊಳಿಸುವುದು, ಕಾಮಸೇವನ ಮಾಡುವುದು ಇವನ್ನಂತೂ ಪಶುಗಳೂ ಕೂಡ ಮಾಡುತ್ತವೆ ಮನುಷ್ಯ ಜನ್ಮವಂತೂ ಜ್ಞಾನದಿಂದಲೇ ಪೂಜ್ಯವೆನಿಸುತ್ತದೆ ಅದರಿಂದ ಜ್ಞಾನ ದಾನವನ್ನು ಮಾಡಿದ ಮನುಷ್ಯನು ಎಲ್ಲ ದಾನವನ್ನು ಮಾಡಿದನೆಂದೇ ಹೇಳಬಹುದು ಜ್ಞಾನದಾನಮಾಡುವುದು ದೊಡ್ಡ ಉಪಕಾರವಾಗಿದೆ

ವಸತಿ ಗೃಹದ ದಾನ— ವಸತಿಕಾದಾನವೆಂದರೆ ಸ್ಥಾನ ದಾನವು ಯಾವ ಸ್ಥಳದಲ್ಲಿ ಶೀತ, ಉಷ್ಣ, ಮಳೆ, ಗಾಳಿಗಳ ಬಾಧೆಯಾಗದೆ ಧ್ಯಾನ-ಸ್ವಾಧ್ಯಾಯಗಳನ್ನು ಮಾಡಲಿಕ್ಕೆ ಬರುವುದೋ ಅಂಥ ಸ್ಥಳವನ್ನು ಸಿದ್ಧಗೊಳಿಸಿ ಅಥವಾ ಕಟ್ಟಿಸಿ ಕೊಡುವದಕ್ಕ ವಸತಿ ಗೃಹದಾನವೆನ್ನುವದು ಉತ್ತಮ ಪಾತ್ರವಾದಂಥ ದಿಗಂಬರ ಮುನಿಯ ಸಮಾಗಮವಂತೂ ಎಂದಾದರೊಮ್ಮೆ ಆಗುವಂಥದಿರುತ್ತದೆ ಜಗತ್ತಿನಲ್ಲಿ ಎಲ್ಲೆಲ್ಲೂ ಕಲ್ಲುಗಳು ತುಂಬಿವೆ. ಅವುಗಳೊಳಗಿಂದ ಚಿಂತಾಮಣಿ ರತ್ನದ ಪ್ರಾಪ್ತಿಯಂತೂ ಯಾರಾದರೊಬ್ಬರಿಗೆ ಆಗುತ್ತದೆ ಹಾಗೆಯೇ ವೀತರಾಗ ಸಾಧುವಿನ ಸಮಾಗಮವು ಬಹಳ ದುರ್ಲಭವಾಗಿದೆ ಅದೊಮ್ಮೆ ಇಂಥ ಸಮಾಗಮವು ಲಭಿಸಿದಲ್ಲಿ ಸಹ ಅವರ ಆಹಾರ ದಾನವು ತಮ್ಮ ಕೈಯಿಂದ ಆಗುವುದು ಕಠಿಣವಾಗಿದೆ ಆ ಆಹಾರವೂ ಕೂಡ ಮುನಿಯ ನಿಮಿತ್ತದಿಂದ ಮಾಡಿದ್ದು ಇರದೆ, ಹದಿನಾರು ಪ್ರಕಾರದ ಉದ್ಗಮ ದೋಷ, ಹದಿನಾರು ಉತ್ಪಾದನ ದೋಷ, ಹತ್ತು ಏಷಣಾದೋಷ, ಈ ಪ್ರಕಾರ ನಲವತ್ತೆರಡು ದೋಷಗಳು ಮತ್ತು ಪ್ರಮಾಣ ೧, ಸಂಯೋಜನ ೧, ಧೂಮ ೧, ಅಂಗಾರ ೧ ಹೀಗೆ ನಾಲ್ಕು ಸೇರಿ ನಲವತ್ತಾರು ದೋಷಗಳು ಇರದಂಥದ್ದಿರಬೇಕು ದಿಗಂಬರ ಸಾಧುಗಳು ನಲವತ್ತಾರು ದೋಷ, ಮೂವತ್ತೆರಡು ಅಂತರಾಯ, ಹದಿನಾಲ್ಕು ಮಲಗಳು ಇಲ್ಲದಂತೆ ದಿನದಲ್ಲಿ ಒಮ್ಮೆ ಮಾತ್ರ ಆಹಾರ ತಕ್ಕೊಳ್ಳುತ್ತಾರೆ. ಆಗ ಅರ್ಧಹೊಟ್ಟೆ ಅನ್ನದಿಂದ, ಉಳಿದದ್ದರಲ್ಲಿ ಅರ್ಧಹೊಟ್ಟೆ ನೀರಿನಿಂದ ತುಂಬುವಂತೆ ಆಹಾರ ತಕ್ಕೊಂಡು ಒಂದು ನಾಲ್ಕನೆಯಾಂಶ ಹೊಟ್ಟೆಯನ್ನು ತೆರವು ಕಾಯುತ್ತಾರೆ ಇದು ಪರಮಾಗಮದ ಆಜ್ಞೆಯಾಗಿದೆ ಒಮ್ಮೆ ಒಂದುಪವಾಸ, ಇನ್ನೊಮ್ಮೆ ಎರಡು ದಿನದ ಉಪವಾಸ, ಮತ್ತೊಮ್ಮೆ ಮೂರು ದಿನದ ಉಪವಾಸ, ಒಮ್ಮೊಮ್ಮೆ ನಾಲ್ಕು ದಿನದ

ಉಪವಾಸ, ಪಕ್ಷೋಪವಾಸ, ಮಾಸೋಪವಾಸಗಳನ್ನೂ ಮುನಿಗಳು ಮಾಡುತ್ತಾರೆ. ಭಿಕ್ಷೆಯ ಹೊತ್ತಿನಲ್ಲಿ ಅಯಾಚಕ ವೃತ್ತಿಯನ್ನು ಧಾರಣ ಮಾಡುವುದು, ನವಧಾ ಭಕ್ತಿಯಿಂದ ಅನ್ನವು ಲಭಿಸಿದರೇನೇ ಸ್ವೀಕಾರ ಮಾಡತಕ್ಕದು ಹೀಗೆ ದಂಡಕಗಳಿವೆ. ಈ ಪ್ರಕಾರ ಮುನಿಗೆ ಆಹಾರವು ಯಾವನಾದರೊಬ್ಬ ಪುಣ್ಯವಂತ ಪುರುಷನ ಮನೆಯಲ್ಲಿ ದೊರೆಯು-ವಂಥದು ಅಯಾಚಕ ವೃತ್ತಿಯುಳ್ಳ ಮೌನಿಯಾದ ಮುನಿಗೆ ಔಷಧ ದಾನಮಾಡುವ ಯೋಗವು ಕೂಡಿಬರುವುದು ಬಹಳ ಕಠಿಣವಿದೆ ಒಬ್ಬ ಗೃಹಸ್ಥನು ತನಗಾಗಿ ಶುದ್ಧ ಔಷಧವನ್ನು ಸಿದ್ಧಗೊಳಿಸಿದಾಗ ಅಕಸ್ಮಾತ್ ಮುನಿಗಳ ಸಮಾಗಮವು ಅವನ ಮನೆಗೆ ಆದಲ್ಲಿ ಆ ಸಾದುಗಳ ಮುಖಚರ್ಯೆಯ ಲಕ್ಷಣದ ಮೇಲಿಂದ ರೋಗವನ್ನು ಕಂಡು, ತನ್ನಲ್ಲಿರುವ ಔಷಧವು ಆ ರೋಗಕ್ಕೆ ತಕ್ಕುದಾಗಿದ್ದರೆ ಕೊಡಬೇಕು ಆದರೆ ಇಂಥ ಯೋಗವು ಕೂಡುವುದು ಕಠಿಣ-ವಾಗಿರುವುದರಿಂದ ಮುನಿಗಳಿಗೆ ಔಷಧ ದಾನವು ಸಿಗುವದಿಲ್ಲ. ಶಾಸ್ತ್ರದಾನ ಕೊಟ್ಟರೆ ಅದನ್ನು ಓದುವ ಇಚ್ಛೆಯಿದ್ದರೆ ಓದುವ ವರೆಗೆ ಮಾತ್ರ ಇಟ್ಟುಕೊಳ್ಳುತ್ತಾರೆ. ಮುಂದೆ ಅದನ್ನು ಚೈತ್ಯಾಲಯದಲ್ಲಿ ಇಟ್ಟು ಹೊರಟುಹೋಗಿ ಬಿಡುತ್ತಾರೆ ಮುನಿಗಳಿಗೆ ವಸತಿಗೃಹದ ದಾನವೂ ದುರ್ಲಭವಾಗಿದೆ ಯಾಕೆಂದರೆ ದಿಗಂಬರ ಸಾದುವು ಒಂದೇ ಸ್ಥಳದಲ್ಲಿ ನಿಲ್ಲುವದಿಲ್ಲ. ಒಮ್ಮೆ ಪರ್ವತದ ಗುಹೆಯಲ್ಲಿ, ಮತ್ತೊಮ್ಮೆ ಭಯಂಕರ ವನದಲ್ಲಿ, ಅದೊಮ್ಮೆ ನದಿಯ ತೀರದ ಉಸುಬಿನಲ್ಲಿ ಕುಳಿತು ಧ್ಯಾನ ಮಾಡುತ್ತಾನೆ. ಒಂದು ಹಳ್ಳಿಯಲ್ಲಿ ಆ ಊರ ವಸತಿಗೃಹದಲ್ಲಿ ಒಂದು ದಿನ ಮಾತ್ರ ನಿಲ್ಲುವನು. ದೊಡ್ಡ ಪಟ್ಟಣವಿದ್ದರೆ ಐದು ದಿವಸ ನಿಲ್ಲಬಹುದು. ಇನ್ನು ಮಳೆಗಾಲವಿದ್ದರೆ ಒತ್ತಟ್ಟಿಗೆ ನಾಲ್ಕು ತಿಂಗಳು ಇರಬೇಕಾಗುತ್ತದೆ. ಒಮ್ಮೊಮ್ಮೆ ಮುನಿಗಳು ಸಮಾಧಿ ಮರಣವನ್ನು ಹೊಂದುವ ಸಂದರ್ಭವಿದ್ದಲ್ಲಿ ಅವರ ಸನ್ನಿಧಿಯಲ್ಲಿ ಕೆಲವು ಕಾಲ ಮುನಿಗಳು ನಿಲ್ಲಬೇಕಾಗುತ್ತದೆ. ಇವುಗಳ ಹೊರತಾಗಿ ಜೈನ ಸಾಧುವು ಒಂದೇ ಸ್ಥಳದಲ್ಲಿ ನಿಲ್ಲುವದಿಲ್ಲ ಒಂದು ರಾತ್ರಿ ಇಲ್ಲವೆ ಎರಡು ರಾತ್ರಿ ಮಾತ್ರ ನಿರ್ದೋಷ ವಸತಿಗೃಹವಿದ್ದಲ್ಲಿ ನಿಲ್ಲುವರು ಆ ವಸತಿ ಸ್ಥಾನವೂ ಸಹ ಅವರಿಗಾಗಿಯೇ ನಿರ್ಮಿಸಿದುದಾಗಿರಬಾರದು ಅವರ ಎದುರಿಗೇ ಸ್ಥಳವನ್ನು ಉಡುಕಿ, ಸ್ವಚ್ಛಮಾಡ-ಕೂಡದು ಅವರ ಎದುರಿಗೆ ಅದನ್ನು ತೊಳೆಯುವದು ಕರ್ತವ್ಯವಲ್ಲ ಬೆಳಕು ಬರುವಂಥ ಬಾಗಿಲನನ್ನೂ ಸಹ ಅವರ ಎದುರಿಗೆ ತೆರೆಯಬಾರದು ಬಾಗಿಲು ಹಾಕಿದ್ದರೆ ಅವರ ಸಮಕ್ಷ ತೆಗೆಯಕೂಡದು ಸ್ಥಳವನ್ನು ಬಾಡಿಗೆಯಿಂದ ಅವರಿಗಾಗಿ ತಕ್ಕೊಳ್ಳಬಾರದು ತಮ್ಮ ಸ್ಥಳವನ್ನು ಇನ್ನೊಬ್ಬರಿಗೆ ನಿಲ್ಲಲಿಕ್ಕೆ ಕೊಟ್ಟು ಅದಕ್ಕೆ ಪ್ರತಿಯಾಗಿ ಅವರ ಗೃಹವನ್ನು ಮುನಿವಾಸಕ್ಕೆಂದು ತೆರವು ಮಾಡಿಸಬಾರದು. ಯಾಚನೆಯನ್ನು ಮಾಡಿಯೂ ರಾಜನ ಇಲ್ಲವೆ ರಾಜ್ಯದ ಅಧಿಕಾರಿಗಳ ಹೆದರಿಕೆಯನ್ನು ತೋರಿಸಿಯೂ ಮುನಿಗಳ ನಿವಾಸಕ್ಕೆಂದು ಸ್ಥಳವನ್ನು ಸಂಪಾದಿಸಿರಕೂಡದು ಇಂಥ ವಸತಿಗೃಹವಿದ್ದರೆ ಅಕಸ್ಮಾತ್ ಒಂದೆರಡು ದಿನಗಳ ಮಟ್ಟಿಗೆ ಮುನಿಗಳು ಅಲ್ಲಿ ವಾಸಮಾಡಿದರೆ ಮಾಡುವರು ಈ ಪ್ರಕಾರ ನಲವತ್ತಾರು ದೋಷಗಳಿಲ್ಲದ ವಸತಿಗೃಹವಿದ್ದರೆ ಇಲ್ಲವೆ ಬಯಲು ಪ್ರದೇಶದಲ್ಲಿ ಒಂದು ಮನೆಯು ಇದ್ದರೆ ಅಂಥಲ್ಲಿ ಒಂದೆರಡು ಇರುಳು ಸಾಧುಗಳು ಕಳೆಯಬಹುದು ಆದರೆ ಅಲ್ಲಿ ಅಸಂಯಮಿ ಜನರು ಬರುವ ಹೋಗುವ ಪರಿವಾರ ಇರಕೂಡದು ಸ್ತ್ರೀ ನಪುಂಸಕ ತಿರ್ಯಂಚ ಪ್ರಾಣಿಗಳ ಆಗಮನವಿರಬಾರದು ಅಲ್ಲಿ ಜೀವವಧೆಯಾಗು-ವಂತಿರಬಾರದು. ಮೇಲಾಗಿ ಕತ್ತಲೆಯೂ ಇರಕೂಡದು ಅನೇಕ ದೇಶಗಳಲ್ಲಿ ಸಂಚಾರ ಮಾಡುವಂಥವರಿಗೆ ವಸತಿಗೃಹದ ದಾನ ಮಾಡುವದು ಬಹಳ ಕಠಿಣವಾಗಿದೆ ಇಂಥ ಉತ್ತಮ ಪಾತ್ರಕ್ಕೆ ದಾನಕೊಡುವ ಪ್ರಸಂಗ ಒದಗುವುದೂ ಕಠಿಣವೇ ಸಧ್ಯಕ್ಕಿನ ಪಂಚಮ ಕಾಲದಲ್ಲಿ ವೀತರಾಗಿಯೂ ಭಾವ ಲಿಂಗಿಯೂ ಆದ ಸಾಧುಗಳು ಕ್ವಚಿತ್ತಾಗಿಯೇ ಎಲ್ಲಿಯಾದರೂ ಒಬ್ಬಿಬ್ಬರು ಇರತಕ್ಕವರು. ಇಂಥ ಸಾದುಗಳ ಸಮಾಗಮವಾಗುವುದು ಶಕ್ಯವಿಲ್ಲ ಚತುರ್ಥಕಾಲದಲ್ಲಿ ಇಂಥ ಪಾತ್ರಗಳ ಲಾಭವು ಮಹಾನ್ ಭಾಗ್ಯದಿಂದಲೇ ಆಗುತ್ತಿತ್ತು, ಆದರೆ ಆ ಕಾಲದಲ್ಲಿ ಈ ಕ್ಷೇತ್ರದಲ್ಲಿ ಉತ್ತಮ ಪಾತ್ರಗಳ ಸಂಖ್ಯೆಯಾದರೂ ಹೆಚ್ಚಿಗಿರುತ್ತಿತ್ತು. ಈಗ ಮಾತ್ರ ಈ ದುಃಷಮಾಕಾಲದಲ್ಲಿ ಯಥಾರ್ಥ ಧರ್ಮವನ್ನು ಪಾಲಿಸುವಂಥ ಪಾತ್ರವು ನೋಡಲಿಕ್ಕೂ ಸಿಗುವುದು ಕಠಿಣವಾಗಿದೆ ಧರ್ಮಭ್ರಷ್ಟ, ಲೋಭಿ, ಅಜ್ಞಾನಿಯೇ ಮೊದಲಾದ ಮುನಿಗಳು ಬೇಕಾದಷ್ಟು ನೋಡಲಿಕ್ಕೆ ಸಿಕ್ಕುತ್ತಾರೆ. ಆದರೆ ಅವರೆಲ್ಲರೂ ಅಪಾತ್ರ-ರಾಗಿದ್ದಾರೆ. ಈ ಕಾಲದಲ್ಲಿಯೂ ಜಿನಧರ್ಮದಲ್ಲಿ ಶ್ರದ್ಧೆಯು ಪೂರ್ಣವಾಗಿರುವ ಗೃಹಸ್ಥರು ಕೂಡ ಅಲ್ಲಿ ಇಲ್ಲಿ ಒಬ್ಬಿಬ್ಬರು ದೊರೆಯುತ್ತಾರೆ. ವೀತರಾಗ ಧರ್ಮವನ್ನು ಕೇಳಿ, ಕುಧರ್ಮದ ಆರಾಧನೆಯನ್ನು ಮಾಡುವವನ್ನು ಪರಿ-ತ್ಯಾಗಮಾಡಿರುವರೋ ಅವರೇ ಉತ್ತಮ ಪಾತ್ರರು ಅಹಿಂಸಾಧರ್ಮವನ್ನು ಧರಿಸಿ, ಜಿನವಚನದಿಂದ ಅಮೃತವನ್ನು ಕುಡಿದು, ಶೀಲ ಮತ್ತು ಸಂತೋಷವೃತ್ತಿಗಳನ್ನು ಪಾಲಣಮಾಡಿದಂಥ ತಪಸ್ವಿಗಳೇ ಉತ್ತಮಪಾತ್ರರೆನಿಸುತ್ತಾರೆ.

ಇವರನ್ನುಳಿದು ಇತರ ವೇಷಧಾರಿಗಳು ಬಹಳಷ್ಟಿದ್ದರೇನುಪಯೋಗ! ಯಾರಿಗೆ ಮುನಿಧರ್ಮ ಮತ್ತು ಶ್ರಾವಕ ಧರ್ಮದೊಳಗಿನ ಭೇದವು ತಿಳಿದಿಲ್ಲವೋ ಅವರಲ್ಲಿ ಸತ್ಪಾತ್ರದ ಯೋಗ್ಯತೆಯಾದರೂ ಎಲ್ಲಿಂದ ಬಂದೀತು? ಅವರಿಗೆ ಸಮ್ಯಗ್ದರ್ಶನ ಮೊದಲಾದವುಗಳ ಯಥಾರ್ಥ ಜ್ಞಾನವೂ ಸಹ ಇರುವದಿಲ್ಲ ಮಿಥ್ಯಾಜ್ಞಾನದ ಪ್ರಭಾವದಿಂದ ಆತ್ಮಜ್ಞಾನವು ಆಗುವದಿಲ್ಲ ಅಂತರಂಗದೊಳಗಿನ ಲೋಭವೃತ್ತಿಯಿಂದ ಸವಿಯಾದ ಊಟದ ಇಚ್ಛೆಯನ್ನು ಮಾಡುವವರು ಹಲವರು ಲಭಿಸುತ್ತಾರೆ ಅವರೆಲ್ಲರೂ ಅಪಾತ್ರರೆಂದು ತಿಳಿಯಬೇಕು

**ಮುನಿ, ಆರ್ಯಿಕಾ ಮತ್ತು ಕ್ಷುಲ್ಲಕರಿಗೆ ದಾನಕೊಡಬೇಕು.** ಈ ಕಾಲದಲ್ಲಿ-ಇದು ಕಲಿಕಾಲ- ಭಾವಲಿಂಗಿಯಾದ ಮುನೀಶ್ವರ, ಆರ್ಯಿಕಾ ಮತ್ತು ಕ್ಷುಲ್ಲಕ ಇವರ ಸಮಾಗಮವಂತೂ ಇಲ್ಲವೇ ಇಲ್ಲ ಆದರೆ ಚಿಂತಾಮಣಿ ರತ್ನದಂತೆ ಒಬ್ಬ ಭಾಗ್ಯವಾನ್ ಪುರುಷನಿಗೆ ಅಂಥ ಮುನಿಗಳಿಗೆ ದಾನಕೊಡುವ ಯೋಗವು ಒದಗಿದರೆ ಅವರಿಗೆ ಪವಿತ್ರ ಅನ್ನದ ಭೋಜನವನ್ನು ಕೊಡಬೇಕು ಆರ್ಯಿಕೆಯು ಆಗಮಿಸಿದಲ್ಲಿ ಒಂದು ಬಿಳಿಯ ವಸ್ತ್ರವನ್ನು ಕೊಡಬೇಕು ಅವಳು ಆ ವಸ್ತ್ರವನ್ನು ತಕ್ಕೊಂಡು ಹಳೆಯದನ್ನು ಅಲ್ಲಿಯೇ ಬಿಡಬೇಕು ಕ್ಷುಲ್ಲಕರಿಗೆ ಒಂದು ಕೌಪೀನ (ಲಂಗೋಟಿ) ಮತ್ತು ಅಪೂರ್ಣವಸ್ತ್ರ—ಯಾವುದರಿಂದ ಅವರಿಗೆ ತಮ್ಮ ದೇಹವನ್ನು ಪೂರ್ಣ ಮುಚ್ಚಿಕೊಳ್ಳ-ಲಿಕ್ಕೆ ಬರುವದಿಲ್ಲವೋ ಅಂಥ ವಸ್ತ್ರ-ವನ್ನು ಕೊಡಬೇಕು ಅದೂ ಕಡಿಮೆ ಬೆಲೆಯದಿರಬೇಕು ಅವರೂ ಸಹ ಹೊಸದು ಸಿಕ್ಕ ತರುವಾಯ ಹಳೆಯದನ್ನು ಅಲ್ಲಿಯೇ ಬಿಡಬೇಕು ಇವನ್ನಲ್ಲದೆ ಬೇರೆ ಏನನ್ನೂ ಸ್ವೀಕರಿಸಬಾರದು ತಾವು ಆಮಂತ್ರಣಕೊಡದೆ ಇಂಥ ಸತ್ಪಾತ್ರರು ಅಕಸ್ಮಾತ್ ತಮ್ಮ ಮನೆಗೆ ಬಂದರೆ ಗೃಹಸ್ಥರು ತಮ್ಮ ಸಲುವಾಗಿ ಮಾಡಿದ ಆಹಾರದೊಳಗಿಂದಲೇ ಅವರಿಗೂ ಕೊಡಬೇಕು ಹೀಗೆ ದಾನಕೊಡುವ ಪದ್ಧತಿಯು ಇರುವುದರಿಂದ ಗೃಹಸ್ಥನಿಗೆ ದಾನಕ್ಕೆಂದು ಬೇರೆ ಹೆಚ್ಚಿನ ವೆಚ್ಚವು ಬೀಳುವದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಧನವಂತ ಪುರುಷರು ತಮ್ಮ ದ್ರವ್ಯವನ್ನು ಯಾವ ಕಾರ್ಯಕ್ಕೆ ಉಪಯೋಗಿಸಿ ಸಫಲತೆಯನ್ನು ಹೊಂದಬೇಕು?—ಈ ಪ್ರಶ್ನೆಯು ಹುಟ್ಟುತ್ತದೆ ಆ ಧನವನ್ನು ಭೋಗೋಪಭೋಗದಲ್ಲಿ ಉಪಯೋಗಿಸಬೇಕೆ? ಆದರೆ ಭೋಗೋಪಭೋಗಗಳು ತೃಷ್ಣೆಯನ್ನು ಹೆಚ್ಚಿಸುವಂಥವು. ಇಂದ್ರಿಯಗಳನ್ನು ವಿಕಲಗೊಳಿಸುವಂಥವು ಮಹಾ ಪಾಪದಲ್ಲಿ ಪ್ರವರ್ತನಗೊಳಿಸುವಂಥವು ನರಕಗತಿಯನ್ನು ಒದಗಿಸುವಂಥವು. ನಮ್ಮ ಹಿತಾಹಿತ ಜ್ಞಾನವನ್ನು ಇಲ್ಲದಂತೆ ಮಾಡುವಂಥವು ಇನ್ನು ಮೋಹ ಮಮತೆಗಳಿಂದ ನಮ್ಮ ಮಕ್ಕಳು ಮರಿಗಳು ಆ ದ್ರವ್ಯದ ಒಡೆಯರು ತನ್ನಿಂದ ತಾನೇ ಆಗುತ್ತಾರೆ ಅದಕ್ಕಾಗಿ ಪಾಪಾಚರಣೆಯಿಂದಲೂ ದುರ್ಧ್ಯಾನದಿಂದ ಧರ್ಮವನ್ನು ವಿಧ್ವಂಸಗೊಳಿಸಿಯೂ ಸಂಪಾದಿಸಿದಂಥ ಸಂಪತ್ತಿಯಲ್ಲಿ ಅರ್ಧಭಾಗವನ್ನು ಧರ್ಮ, ದಯೆ, ಸತ್ಪಾತ್ರದಾನ ಇವುಗಳಲ್ಲಿ ವೆಚ್ಚಮಾಡಿ, ತಮ್ಮ ಹಿತವನ್ನು ಮಾಡಿಕೊಳ್ಳಬೇಕು.

**ಕುಟುಂಬ, ಸಂಪತ್ತಿ ಮತ್ತು ವೈಭವಗಳು ನಶ್ವರವಾಗಿವೆ.** ಇಲ್ಲಿಯ ಸಂಪತ್ತಿಯನ್ನು ಬಿಟ್ಟು, ಪರಲೋಕಕ್ಕೆ ಹೋದ ಹೊತ್ತಿನಲ್ಲಿ ಈ ಲೋಕದ ಮಕ್ಕಳು ಮೊಮ್ಮಕ್ಕಳನ್ನು ನೋಡಲಿಕ್ಕೆ ತಿರುಗಿ ಬಂದೀರೇನು? ಕುಟುಂಬದ ಸಂಬಂಧವು ನಿಮ್ಮೊಡನೆ ಈ ತೊಗಲಿನಿಂದ ಮುಚ್ಚಿದ ಮುಖ ಮೂಗುಗಳೊಡನೆ ಇದೆ ಈ ದೇಹವು ನಾಶವಾಗಿ, ಅದು ಮಣ್ಣಿನೊಡನೆ ನೇರಿ ಹೋಗುತ್ತದೆ ಕುಟುಂಬದೊಳಗಿನ ಜನರು ನಿಮ್ಮ ಎರಡನೆಯ ಪರ್ಯಾಯ-ವನ್ನು ನೋಡಲಿಕ್ಕೆ ಬರುವದಿಲ್ಲ ನೀವು ಅವರನ್ನು ನೋಡಲಿಕ್ಕೆ ಬರಲಾರಿರಿ ಯಾಕಂದರೆ ಯಾವ ಇಂದ್ರಿಯಗಳಿಂದ ನೀವು ಕುಟುಂಬವನ್ನು ತಿಳಿದುಕೊಳ್ಳುವಿರೋ ಅವು ಸುಟ್ಟುಹೋದುವು ಈಗ ನೀವು ನಿಮ್ಮ ಕುಟುಂಬವನ್ನು ಯಾತರಿಂದ ನೋಡುವವರು! ಮಕ್ಕಳೇ ಮೊದಲಾದ ಕುಟುಂಬಿಗಳ ಸಂಬಂಧವು ನಿಮ್ಮ ಮೈಮೇಲಿನ ಚರ್ಮದ ಕೂಡ ಇದೆ ಅದಕ್ಕೆ ನಿಮ್ಮ ಆತ್ಮದ ಅರಿವು ಇಲ್ಲ ಅಂದಮೇಲೆ ನಿಮ್ಮ ಚರ್ಮವು ಸುಟ್ಟು ಬೂದಿಯಾದ ಮೇಲೆ ನಿಮ್ಮೊಡನೆ ಸಂಬಂಧವಾದರೂ ಎಲ್ಲಿ ಉಳಿದೀತು! ಅಂತಲೇ, ಎಲೈ ಜ್ಞಾನಿ ಪುರುಷರಿರಾ ಜೀವನವು ಅಲ್ಪವಾಗಿದೆ. ಮಕ್ಕಳು ಮೊಮ್ಮಕ್ಕಳು ಮೊದಲಾದವರ ಸಂಬಂಧವೂ ಅಲ್ಪಕಾಲ ಉಳಿಯುವಂಥದಾಗಿದೆ ಸಂಸಾರದಲ್ಲಿ ನಮ್ಮನ್ನು ರಕ್ಷಿಸುವವರು ಯಾರೂ ಇಲ್ಲ ಕೇವಲ ಧರ್ಮ ಒಂದೇ ಶರಣು ಹೋಗಲಿಕ್ಕೆ ತಕ್ಕ ಸ್ಥಾನವಾಗಿದೆ. ಈ ದ್ರವ್ಯವು ನಿಮ್ಮದಲ್ಲ ಏನೋ ಕಾರಣದಿಂದ ಯಾವುದಾದರೊಂದು ಪುಣ್ಯಪ್ರಭಾವದಿಂದ-ಈಗ ಒಂದೆರಡು ದಿನ ಆ ಧನದ ಒಡೆಯರಾಗಿದ್ದರೂ ತಿರುಗಿ ನೀವು ಅವನ್ನು ತ್ಯಾಗಮಾಡಿ, ಅದಕ್ಕಾಗಿ ಸಾಯಲೂ ಬೇಕಾಗುತ್ತದೆ ಈ ದ್ರವ್ಯವು ಪರಲೋಕದಲ್ಲಿ ಸಂಗಡ ಬರುವಂಥದಲ್ಲ ಮಕ್ಕಳ ಮೇಲಿನ ಮಮತೆಯಿಂದ ಅನೇಕ ಪ್ರಕಾರದ ದುರಾಚಾರಗಳನ್ನು ಮಾಡಿ, ಯಾವ ದ್ರವ್ಯವನ್ನು ಯಾರಿಗಾಗಿ ಸಂಪಾದಿಸುತ್ತಿರುವಿರೋ ಆ ದ್ರವ್ಯ ಹಾಗೂ ಮಕ್ಕಳ ಮಮತ್ವಗಳು (ಪ್ರೇಮ)

ನಿಮ್ಮನ್ನು ಸಂಸಾರದಲ್ಲಿ ನೃತ್ಯಗೇಡಿಗಳನ್ನಾಗಿ ಮಾಡಿ, ನರಕಕ್ಕೆ ಮುಟ್ಟಿಸುತ್ತವೆ. ಅದಕ್ಕಾಗಿ ಅನೇಕ ಜನ್ಮಗಳಲ್ಲಿ ದರಿದ್ರರಾಗಿ ತಿರುಗಬೇಕಾದೀತು ಸಾವಿರಾರು ಜನರು ದಿನಾಲು 'ಅನ್ನ! ಅನ್ನ!!' ಎಂದು ಬಾಯ್ಬಿಟ್ಟು ಸಾಯುತ್ತಿದ್ದಾರೆ. ಬಡವರೂ ದೀನರೂ ಆಗಿ ಮನೆಮನೆಗೆ ಭಿಕ್ಷೆ ಬೇಡುತ್ತಲಿದ್ದಾರೆ. ಅವರ ಕಡೆಗೆ ಯಾರೂ ನೋಡುವದಿಲ್ಲ. ಅವರ ಹೇಳಿಕೆಯನ್ನು ಯಾರೂ ಕೇಳಿಕೊಳ್ಳುವದಿಲ್ಲ ಆದರೆ ಈ ಎಲ್ಲ ಪ್ರಭಾವವು ಅವರಿಗೆ ಈ ಮೊದಲು ಅನೇಕ ಜನ್ಮಗಳಲ್ಲಿ ಅವರು ದ್ರವ್ಯದ ಮೇಲೆ ಇಟ್ಟ ತೀವ್ರ ಮಮತ್ವದ ಫಲವಾಗಿದೆ. ನಿಮಗೆ ವೈಭವ, ಸಂಪತ್ತಿ, ರತ್ನ, ಸುವರ್ಣ, ಬೆಳ್ಳಿ ಮೊದಲಾದವುಗಳ ವೈಭವವು ಪ್ರಾಪ್ತವಾಗಿದೆ, ಅನೇಕ ಪ್ರಕಾರದ ಸುರಸ ಅನ್ನದ ಮಧುರ ಭೋಜನವು ನಿತ್ಯವೂ ಲಭಿಸುತ್ತಲಿದೆ, ರೂಪವತಿಯೂ ಶೀಲವಂತಳೂ ಮತ್ತು ಪ್ರೇಮರಸದಿಂದ ತುಂಬಿದ ಸ್ತ್ರೀಯ ಸಮಾಗಮ ದೊರಕಿದೆ; ಅಪ್ಪಣೆಯನ್ನು ಪಾಲಿಸುವ ಮಕ್ಕಳಿದ್ದಾರೆ; ಯಾವಾಗಲೂ ಒಡೆಯನ ಇಚ್ಛೆಯನ್ನು ಅರಿತು, ಹಿತವನ್ನು ಬಯಸುವ ಚತುರ ಸೇವಕರ ಲಾಭವಾಗಿದೆ; ದೊಡ್ಡ ದೊಡ್ಡ ಮನೆಗಳೂ ವಿಸ್ತಾರವಾದ ಬಂಗಲೆಗಳೂ ವಾಸಮಾಡಲಿಕ್ಕೆ ದೊರೆಯುತ್ತಿವೆ, ಇವಲ್ಲದೆ ಇನ್ನೂ ಅನೇಕ ಸುಖ-ಸಾಧನಗಳು ತಮಗೆ ಪ್ರಾಪ್ತವಾಗಿವೆ—ಇವೆಲ್ಲವೂ ನೀವು ಪೂರ್ವ ಜನ್ಮದಲ್ಲಿ ದಾನಕೊಟ್ಟುದರ ಫಲಗಳಾಗಿವೆ ದಾನದ ಪ್ರಭಾವದಿಂದ ಭೋಗಭೂಮಿಯಲ್ಲಿ ಜನ್ಮ, ಸ್ವರ್ಗದೊಳಗಿನ ವಿಮಾನಗಳ ಒಡೆತನಗಳು ಪ್ರಾಪ್ತವಾಗುತ್ತವೆ. ಆ ಸ್ಥಳದಲ್ಲಿ ಅಸಂಖ್ಯಾತ ಕಾಲದ ವರೆಗೆ ಸುಖವನ್ನು ಭೋಗಿಸಲಿಕ್ಕೆ ಬರುತ್ತದೆ. ಹೀಗಿದ್ದಾಗ ಇಹಲೋಕದಲ್ಲಿ ದೊರೆತ, ಸ್ವಲ್ಪ ಕಾಲ ತಾಳುವಂಥ, ದುಃಖದಾಯಕವಾದಂಥ ತುಚ್ಛ ಸಂಪತ್ತು ಮತ್ತು ಮಲಿನವಾದ ದೇಹದ ಮಹತ್ವವನ್ನಾದರೂ ಯಾಕೆ ಇಡಬೇಕು? ಈ ಸಂಪತ್ತು ನಿಮ್ಮ ಹತ್ತಿರ ಸ್ಥಿರವಾಗಿ ನಿಲ್ಲುವಂಥದಲ್ಲ ಈ ಲಕ್ಷ್ಮಿಯು ನಮ್ಮದಿದೆ. ನಮ್ಮ ಕುಲಪರಂಪರೆಯಿಂದ ನಡೆಯುತ್ತ ಬಂದುದಿದೆ ಇದು ನಮ್ಮಲ್ಲಿ ಇಲ್ಲದಂತೆ ಆಗುವಷ್ಟು ಮೂರ್ಖರು ನಾವಿನ್ನೂ ಆಗಿಲ್ಲ ಅಂತಲೇ ಇದು ನಮ್ಮ ಹತ್ತರ ಇದೆ ಇದೆಲ್ಲ ನಿಮಗೆ ಎನಿಸುತ್ತಿರಬೇಕು ಆದರೆ ಇದು ನಿಮ್ಮ ಭ್ರಮೆಯಾಗಿದೆ. ಈ ಭ್ರಮೆಗೆ ಕಾರಣವು ಮಿಥ್ಯಾದರ್ಶನವಾಗಿದೆ.

**ನಶ್ವರ ಸಂಪತ್ತಿಯ ಅಭಿಮಾನ ಹಿಡಿಯಬೇಡಿರಿ.** ಅನಂತಾನುಬಂಧಿ ಕಷಾಯದ ಉದಯದಿಂದ ನಿಮಗೆ ಅಭಿಮಾನವು ಉತ್ಪನ್ನವಾಗಿದೆ ಅದು ಸ್ವಲ್ಪ ದಿನಗಳಲ್ಲಿಯೇ ನಿಮ್ಮನ್ನು ನಾರಕಿಗಳನ್ನಾಗಿ ಮಾಡೀತು. ಅದಕ್ಕಾಗಿ ಎಲೈ ಸತ್ಪುರುಷರಿರಾ! ನಿಮಗೆ ಜಿನವಚನಗಳ ಮೇಲೆ ಶ್ರದ್ಧೆ ಇದ್ದರೆ, ಧರ್ಮದ ಮೇಲೆ ಪ್ರೀತಿ ಇದ್ದರೆ, ದುಃಖಿಗಳನ್ನು ನೋಡಿ ದಯೆಯು ಪ್ರಾಪ್ತವಾಗುತ್ತಿದ್ದರೆ ನೀವು ಮನಸ್ಸಿನಲ್ಲಿ ಸಮ್ಯಕ್ತ್ವವನ್ನು ಚಿಂತಿಸಿರಿ. ಅದು ಹೀಗಿದೆ—'ನಾವು ದ್ರವ್ಯದ ಮೇಲೆ ಮಮತ್ವನಿಟ್ಟು, ಮೊದಲಿನ ಧನವನ್ನು ಮಹಾ ಪ್ರಯಾಸದಿಂದ ರಕ್ಷಣಮಾಡಿದೆ. ಅಲ್ಲದೆ ಹೊಸದಾಗಿಯೂ ಹೆಚ್ಚಾಗಿ ಧನವನ್ನು ಸಂಪಾದಿಸಿದೆ. ಅದನ್ನು ಗಳಿಸುವದಕ್ಕಾಗಿ ಹಸಿವು, ನೀರಡಿಕೆ, ಛಳಿ, ಕಾವು ಮೊದಲಾದ ದುಃಖಗಳನ್ನು ಭೋಗಿಸಿದೆ ಅನೇಕ ಪ್ರಕಾರದ ವ್ಯಾಪಾರ, ರಾಜಸೇವೆ, ವಿದೇಶಗಮನ, ಸಮುದ್ರ ಪ್ರವೇಶ ಮೊದಲಾದ ಆರಂಭಗಳನ್ನು ಮಾಡಿದೆ. ಅಧರ್ಮಿಗಳಾದ ಮ್ಲೇಚ್ಛ ಜನರನ್ನು ಸಂತೋಷ-ಗೊಳಿಸುವದಕ್ಕಾಗಿ ನಿಂದ್ಯ ಕಾರ್ಯಗಳನ್ನು ಮಾಡಿದೆ. ಅನೇಕ ಪ್ರಕಾರದ ಪ್ರಯತ್ನಗಳನ್ನು ಮಾಡಿ, ಧನವನ್ನು ಸಂಪಾದಿಸಿದೆ. ಈಗ ಆಕಸ್ಮಾತ್ ಮರಣವು ಪ್ರಾಪ್ತವಾದರೆ ಈ ದ್ರವ್ಯದ ರಕ್ಷಣೆಯನ್ನು ಯಾರು ಮಾಡುವರು? ಈಗ ನಾವು ಅನ್ಯಾಯ, ಅನೀತಿ, ಪಾಪರೂಪ ವ್ಯಾಪಾರ, ಪಾಪೀ ಜನರ ಸೇವೆಗಳನ್ನು ಮಾಡಿ ಧನವನ್ನು ಗಳಿಸುವವನ್ನು ಅವಶ್ಯವಾಗಿ ಬೇಗನೆ ತ್ಯಾಗಮಾಡಲಿಕ್ಕೆ ಬೇಕು ನ್ಯಾಯದಿಂದ ದೊರೆಯುವ ಧನದಲ್ಲಿಯೂ ಮರ್ಯಾದೆಯನ್ನು ಇಟ್ಟುಕೊಂಡು ಇರಬೇಕಾಗುವದು. ಹಾಗೆಯೇ ಇಲ್ಲಿಯ ವರೆಗೆ ಅನ್ಯಾಯ, ಆಗ್ರಹ, ಸುಳ್ಳುಹೇಳುವಿಕೆ, ಮೋಸ-ಮಾಡುವಿಕೆ, ತಪ್ಪಿಸುವಿಕೆ, ಮನಸ್ಸನ್ನು ನೋಯಿಸುವಿಕೆ ಇವೇ ಮೊದಲಾದ ಯುಕ್ತಿಗಳನ್ನು ಹೂಡಿ ಸಂಪಾದಿಸಿದ ಧನವನ್ನು ಅವರವರಿಗೆ ತಿರುಗಿ ಸಲ್ಲಿಸಿ, ಅವರ ಹತ್ತರ ಕ್ಷಮೆಯನ್ನು ಕೇಳಬೇಕು.

**ಉತ್ಪನ್ನದೊಳಗಿನ ಹತ್ತನೆಯ ಭಾಗವನ್ನಾದರೂ ಧರ್ಮಕ್ಕೆ ಕೊಡಿರಿ.** ಇನ್ನು ತಮ್ಮ ದ್ರವ್ಯದೊಳಗಿನ ಕೆಲವೊಂದು ಭಾಗವನ್ನು ಧರ್ಮಕ್ಕಾಗಿಯೂ ಉಳಿದ ಭಾಗವನ್ನು ಮಕ್ಕಳು ಮರಿಗಳಿಗಾಗಿಯೂ ವಿಭಾಗಿಸಿ ಇಡಬೇಕು ಧರ್ಮಕ್ಕಾಗಿ ತೆಗೆದಿಟ್ಟ ಹಣದ ಭಾಗದಿಂದ ಪರೋಪಕಾರ, ದಾನ ಮೊದಲಾದವುಗಳಿಗಾಗಿ ವೆಚ್ಚ ಮಾಡಬೇಕು ತಾವು ಹೊಸದಾಗಿ ಸಂಪಾದಿಸುತ್ತಿರುವ ಧನದಲ್ಲಿ ಸಹ ನಾಲ್ಕನೆಯ, ಆರನೆಯ, ಎಂಟನೆಯ, ಹೀಗೆ ಕನಿಷ್ಠ ಪಕ್ಷಕ್ಕೆ ಹತ್ತನೆಯ ಭಾಗವನ್ನಾದರೂ ಪುಣ್ಯಕಾರ್ಯಗಳಿಗಾಗಿ ವೆಚ್ಚಮಾಡಬೇಕು ಆ ದಾನದ ವಿಭಾಗವನ್ನು ಸಂಕಟದಲ್ಲಿ ಸಿಕ್ಕ, ನಿರ್ಧನ, ದುಃಖಿ ಮೊದಲಾದ ಎಲ್ಲ ಜನರಿಗೂ ಮುಟ್ಟುವಂತೆ ವೆಚ್ಚಮಾಡಬೇಕು ದಾನಿಗೆ ತಮ್ಮ ಹೊಟ್ಟೆಗೇ

ನಾಲುವಷ್ಟು ಅನ್ನವು ದೊರೆಯುವದಿಲ್ಲವೋ ಬಹಳಷ್ಟು ಕಷ್ಟಪಟ್ಟಾಗ ಸ್ವಲ್ಪ ಧಾನ್ಯ ದೊರೆಯುವುದೋ ಅಂಥವರೂ ಸಹ ತಮ್ಮ ಆಹಾರ ದಾನ್ಯದೊಳಗಿನ ದಾನದ ವಿಭಾಗವನ್ನು ತೆಗೆದಿಡಬೇಕು ಅದನ್ನು ಹಸಿದವರಿಗೂ ದುಃಖಿತರಿಗೂ ಅರ್ಪಿಸಬೇಕು ದಾನವಿಲ್ಲದ ಮನೆಯು ಸ್ಮಶಾನವಿದ್ದಂತೆ ಆ ಮನೆಯೊಳಗಿನ ಮನುಷ್ಯರು ಹೆಣಗಳಿದ್ದಂತೆ. ಆ ಮನೆಯು ಧನದಲ್ಲಿ ಜೀವಿಸುವವರು ಹದ್ದುಗಳಿದ್ದಂತೆ, ಆ ಮನೆಯೊಡೆಯನ ಧನರೂಪೀ ಶರೀರದ ಮಾಂಸವನ್ನು ಮೇಲಿಂದ ಮೇಲೆ ತಮ್ಮ ಚುಂಚುವಿನಿಂದ ಚುಚ್ಚಿ ಚುಚ್ಚಿ ತಿನ್ನುತ್ತಿರುವಂತೆ—ಎಂದು ತಿಳಿಯಬೇಕು

ಸ್ವಧರ್ಮಿಯರನ್ನು ಪಾಲಿಸಬೇಕು. ಧನವಂತ ಗೃಹಸ್ಥನು ಜೈನರನ್ನು ಅನೇಕ ರೀತಿಯಿಂದ ಪಾಲನ ಮಾಡುತ್ತಾನೆ ಯಾರಾದರೂ ಧರ್ಮಾಚರಣೆಯಲ್ಲಿ ಶಿಥಿಲರಾಗಿದ್ದರೆ ಅವರನ್ನು ಸಿರಿವಂತ ಪುರುಷರು ಆದರದಿಂದ ಕಂಡು, ಸನ್ಮಾನಿಸಿ, ಸವಿನುಡಿಗಳಿಂದ ತಿದ್ದಿದರೆ ಅವರು ತಿರುಗಿ ಧರ್ಮಾಚರಣೆಯಲ್ಲಿ ದೃಢರಾಗುತ್ತಾರೆ. ಹಲವರು ಹೊಟ್ಟೆಗಿಲ್ಲದುದಕ್ಕೆ ಧರ್ಮದಿಂದ ಭ್ರಷ್ಟರಾಗುತ್ತಿರಬಹುದು. ಅಂಥವರಲ್ಲಿ ಕೆಲಸಮಾಡಲಿಕ್ಕೆ ಯೋಗ್ಯರಿದ್ದ-ವರಿಗೆ ಕೆಲಸಕೊಟ್ಟು, ನೌಕರಿ ಮಾಡುವಂಥವರಿಗೆ ನೌಕರಿಯನ್ನು ಕೊಟ್ಟು ಧರ್ಮದಲ್ಲಿ ಸ್ಥಿರಗೊಳಿಸಬೇಕು. ಹಲವರು ವ್ಯಾಪಾರ ಮಾಡಿ ಹಣಗಳಿಸುವ ಯೋಗ್ಯತೆ ಉಳ್ಳವರೂ ಇರಬಹುದು ಅವರಿಗೆ ದ್ರವ್ಯ ಸಹಾಯ ಮಾಡಿ, ಉದ್ಯೋಗಗಳಲ್ಲಿ ತೊಡಗಿಸಿ, ಹಲವರಿಗೆ ಧೈರ್ಯಕೊಟ್ಟು, ಉದರ ನಿರ್ವಾಹ ಮಾಡುವದನ್ನು ಕಲಿಸಬೇಕು ಕೆಲವರಿಗೆ ವ್ಯಾಪಾರ ಮಾಡಿಸಿ ದ್ರವ್ಯ ಉತ್ಪಾದಿಸಲಿಕ್ಕೆ ಹಚ್ಚಿಯೂ ಅನ್ಯರಿಗೆ ಹೇಳಿ ಹಚ್ಚಿಸಿಯೂ ಜೋಕೆ ಮಾಡಬೇಕು. ಅನೇಕರಿಗೆ ಸಲಹೆಕೊಟ್ಟು, ಯೋಗ್ಯ ಮಾರ್ಗದರ್ಶನ ಮಾಡಿ ಉದ್ಯೋಗಕ್ಕೆ ಹಚ್ಚಬೇಕು ಪುಣ್ಯವಂತ ಜನರ ಆಶ್ರಯವಿಲ್ಲದೆ ಮನುಷ್ಯನಿಗೆ ತನ್ನ ಕಾಲ ಮೇಲೆ ತಾನು ನಿಲ್ಲುವದು ಬಹಳ ಕಠಿಣವಿದೆ ಇಂಥ ಕೆಲಸಗಳಿಂದ ತನ್ನ ಧನವು ಇಲ್ಲದಂತಾದೀತೆಂಬ ಹೆದರಿಕೆಯನ್ನು ಇಟ್ಟುಕೊಳ್ಳಬಾರದು ತನ್ನ ಧರ್ಮ ಬಾಂಧವರ ಕೆಲಸದಲ್ಲಿ ಉಪಯೋಗ ಬೀಳುವ ಧನವೇ ತನ್ನದೆಂಬ ವಿಚಾರವನ್ನು ಮನಸ್ಸಿನಲ್ಲಿ ತರಬೇಕು. ಯಾವ ಧನವು ಈ ಪ್ರಕಾರ ತಮ್ಮ ಧರ್ಮ ಬಂಧುಗಳಿಗೆ ಉಪಯೋಗಕ್ಕೆ ಬರುವದಿಲ್ಲವೋ ಅದು ತಮ್ಮದಲ್ಲವೆಂದು ತಿಳಿಯಬೇಕು ಈ ಮೊದಲು ಅನೇಕ ದೊಡ್ಡ ದೊಡ್ಡ ಸಿರಿವಂತರೂ ಪ್ರತಿಷ್ಠಿತರೂ ಆಗಿ ಹೋಗಿದ್ದಾರೆ ಅವರ ಧನವು ಕರ್ಮೋದಯದಿಂದ ಇಲ್ಲದಂತಾಗಿದೆ. ಶ್ರೀಮಂತಿಕೆಯು ಆಪತ್ತಿಯಲ್ಲಿ ನಷ್ಟವಾಗಿದೆ ಉಪಜೀವನದ ಸಾಧನವು ಇಲ್ಲದಂತೆ ಆಯಿತು ಇಂಥವರಿಗೆ ಒಮ್ಮೊಮ್ಮೆ ತಿನ್ನುಣ್ಣುವದಕ್ಕೂ ಇರುವದಿಲ್ಲ. ಅಂಥವರಿಗೆ ಆಶ್ರಯವನ್ನು ಕೊಡಬೇಕು ಮನೆಯಲ್ಲಿ ದುಡಿಯುವ ಮನುಷ್ಯನು ಹಾಸಿಗೆ ಹಿಡಿಯಲು, ಅವನ ಹೆಂಡಿರು-ಮಕ್ಕಳಿಗೆ ಹೊಟ್ಟೆಗಿಲ್ಲದೆ ಹಸಿವಿನಿಂದ ಭಯಂಕರ ಕಷ್ಟವಾಗುವದು. ಈ ಜನರಿಗೆ ಕಷ್ಟ-ಕೂಲಿಗಳನ್ನು ಮಾಡುವದಾಗುವದಿಲ್ಲ. ಅವರಿಂದ ಶೀಘ್ರಗತಿಯ ಕೆಲಸವಾಗುವದಿಲ್ಲ. ದೊಡ್ಡ ಮನುಷ್ಯರೆಂದೂ ಯಾರೂ ಇಟ್ಟುಕೊಳ್ಳುವದಿಲ್ಲ ಆಭರಣ, ವಸ್ತ್ರ, ಪಾತ್ರ, ಮನೆಯೊಳಗಿನ ಇನ್ನಿತರ ಬೆಲೆಯುಳ್ಳ ಒಡವೆಗಳೆಲ್ಲವನ್ನೂ ಮಾರಿ ಇಲ್ಲಿಯ ವರೆಗೆ ಜೀವನ ನಡೆಯಿತು ಇನ್ನು ಯಾರಿಗೆ ಹೇಳಬೇಕು? ಏನು ಹಂಚಿಕೆ ಹಾಕಬೇಕು? ಇಂಥ ವಿವಂಚನೆಯಲ್ಲಿ ಬಿದ್ದ ಪ್ರತಿಷ್ಠಿತ ದುಃಖಿ ಪುರುಷನಿಗೆ ಜೀವನ ಸಾಧನೆಗಳನ್ನು ಒದಗಿಸಬೇಕು. ಗಾಬರಿಯಾದ ಮನುಷ್ಯನಿಗೆ ಸಹಾಯಮಾಡಿ, ದುಃಖ-ಸಮುದ್ರದೊಳಗಿಂದ ಮೇಲೆತ್ತಬೇಕು ಧರ್ಮದ ಕಡೆಗೆ ಅವನ ಲಕ್ಷ್ಯವನ್ನು ಸೆಳೆಯಬೇಕು ಸ್ವಲ್ಪ ಸ್ವಲ್ಪ ಆಶ್ರಯವನ್ನು ನೀಡಿ, ಅವರಿಗೆ ಸಹಾಯವನ್ನು ಮಾಡಬೇಕು ಅನ್ಯರಿಂದಲೂ ಮಾಡಿಸಬೇಕು

ವೃದ್ಧ ಹಾಗೂ ನಿರಾಶ್ರಿತರಿಗೆ ಆಶ್ರಯ ಕೊಡಬೇಕು. ಇದಲ್ಲದೆ ಯಾರಾದರೂ ಹೆಂಡರು-ಮಕ್ಕಳು ಇಲ್ಲದವರು ಇದ್ದರೆ ಅವರ ಲಕ್ಷ್ಯವನ್ನು ಧರ್ಮದ ಕಡೆಗೆ ಸೆಳೆದು, ಅವರ ಊಟ ಉಡಿಗೆಗಳ ಕೊರತೆಯಿಂದಾಗಿ ಆಗುವ ದುಃಖವನ್ನು ಇಲ್ಲದಂತೆ ಮಾಡಬೇಕು ಅನೇಕರು ಮುಪ್ಪಿನತನದಿಂದ ಉದ್ಯೋಗ ಮಾಡಲಿಕ್ಕೆ ಅಸಮರ್ಥರಿದ್ದಾರು. ಹಲವರು ಜಿನಧರ್ಮದ ಮೇಲೆ ಶ್ರದ್ಧೆಯು ಇದ್ದೂ ಸಹ ತಮ್ಮ ಇಂದ್ರಿಯಗಳ ಶಿಥಿಲತ್ವದಿಂದಲೂ ಶರೀರದಲ್ಲಿಯ ರೋಗದಿಂದಲೂ ಏನೂ ಕೆಲಸವನ್ನು ಮಾಡಲಿಕ್ಕಿಲ್ಲ ಇಂಥವರಿಗೆಲ್ಲ ಅನ್ಯರ ಸಹಾಯದ ಅವಶ್ಯಕತೆ ಇರುತ್ತದೆ ಅದಕ್ಕಾಗಿ ಸಿರಿವಂತರು ಇವರಿಗೆಲ್ಲ ಸಹಾಯ ಮಾಡಿ, ಧರ್ಮದಲ್ಲಿ ಸ್ಥಿರಗೊಳಿಸಬೇಕು ಈ ಕಾರ್ಯವು ಧನವಂತ-ರಿಂದಲೇ ಆಗುವಂಥದಿದೆ ಅನೇಕರಿಗೆ ಮಕ್ಕಳು ಮರಿಗಳು ಇಲ್ಲದುದಕ್ಕೆ ನಿರಾಶರಾಗಬೇಕಾದೀತು. ಅವರು ಧರ್ಮದ ಆಶ್ರಯವನ್ನು ಹೊಂದಬೇಕು. ಹಲವು ಜನ ಶ್ರಾವಿಕೆಯರು ದುರ್ದೈವದಿಂದ ವಿಧವೆಯರಾಗಲು, ಅವರಿಗೆ ಯಾವ ಆಧಾರವೂ ಇಲ್ಲದಿರಲು ಅನ್ನ ವಸ್ತ್ರದ ಕೊರತೆಯೂ ಉಂಟಾಗಬಹುದು ಆಗ ಅವರಿಗೆ ಊಟ-ಉಡಿಗೆಗಳ ವ್ಯವಸ್ಥೆ

ಮಾಡಿಕೊಟ್ಟು ಧರ್ಮಮಾರ್ಗದ ಕಡೆಗೆ ಹಚ್ಚಬೇಕು ಸಿರಿವಂತ ಪುರುಷರ ಸಹಾಯದಿಂದ ಬಡವರ ಸ್ವಧರ್ಮದ ಅವಲಂಬನವು ಸ್ಥಿರವಾಗಿ ನಿಲ್ಲುತ್ತದೆ ಅನೇಕರು ಅಣುವ್ರತಗಳನ್ನು ಧರಿಸುತ್ತಾರೆ. ಹಲವರು ಐದನೆಯ ಪ್ರತಿಮೆಯನ್ನು ಧಾರಣಮಾಡಿ ಸಚಿತ್ತ ವಸ್ತುಗಳನ್ನು ತಿನ್ನುವದನ್ನು ತ್ಯಾಗ ಮಾಡುತ್ತಾರೆ ಅನೇಕರು ಪರ್ವತಿಥಿಗಳಲ್ಲಿ ಉಪವಾಸ ಮಾಡಲಿಕ್ಕೆ ಆರಂಭಿಸುತ್ತಾರೆ. ಕೆಲವರು ನಿಯಮಿತ ಕಾಲ ಬ್ರಹ್ಮಚರ್ಯೆಯನ್ನೂ ಅನೇಕರು ಆಜನ್ಮ ಸ್ತ್ರೀ ತ್ಯಾಗದ ನಿಯಮವನ್ನೂ ಸ್ವೀಕರಿಸುತ್ತಾರೆ ಹಲವರು ಪರಿಗ್ರಹವನ್ನೂ ಪಾಪಕಾರ್ಯಗಳಿಗೆ ಅನುಮೋದನ ಕೊಡುವದನ್ನೂ ಉದ್ದಿಷ್ಟ ಆಹಾರವನ್ನೂ ತ್ಯಾಗಮಾಡುತ್ತಾರೆ. ಈ ಪ್ರಕಾರ ಶ್ರಾವಕರು ಹನ್ನೊಂದು ಪ್ರತಿಮೆಗಳನ್ನು ಧಾರಣ ಮಾಡುವುದರಿಂದ ದಾನ ಸ್ವೀಕರಿಸಲಿಕ್ಕೆ ಯೋಗ್ಯ ಪಾತ್ರರಾಗುತ್ತಾರೆ. ಸಿರಿವಂತ ಪುರುಷರ ಧರ್ಮದ ಕಡೆಗೆ ಇದ್ದ ಪ್ರವೃತ್ತಿಯನ್ನು ಕಂಡು, ಅನೇಕ ಜನರು ಅದೇ ಮಾರ್ಗದ ಅನುಕರಣ ಮಾಡುತ್ತಾರೆ.

**ಜ್ಞಾನ ದಾನದ ಅನುಕೂಲತೆಯನ್ನು ಒದಗಿಸಬೇಕು.** ಶ್ರೀಮಂತ ಜನರು ವಿದ್ಯಾಭ್ಯಾಸಮಾಡುವ ಸ್ಥಾನ—ಪಾಠ ಶಾಲಾ ಕಟ್ಟಡಗಳನ್ನು—ಸಿದ್ಧಗೊಳಿಸಬೇಕು ಅಲ್ಲಿ ಕಲಿಯುವಂಥ ವಿದ್ಯಾರ್ಥಿಗಳ ಉಪಜೀವನದ ವ್ಯವಸ್ಥೆಯನ್ನೂ ಮಾಡಬೇಕು ಅಲ್ಲಿ ವ್ಯಾಕರಣ, ನ್ಯಾಯ, ಕಾವ್ಯ, ಗಣಿತ, ತರ್ಕ, ಸಾಹಿತ್ಯ ಇತ್ಯಾದಿ ಅನೇಕ ವಿದ್ಯೆಗಳನ್ನು ಕಲಿಸುವ ವ್ಯವಸ್ಥೆಯು ಇರಬೇಕು ಇಂಥಲ್ಲಿ ಜೈನರ ನೂರಾರು ವಿದ್ಯಾರ್ಥಿಗಳು ಕಲಿತರೆ ಧರ್ಮ-ಪರಂಪರೆಯು ಬಾಳಿನಿಲ್ಲುವುದು ಅನೇಕರು ಬುದ್ಧಿವಂತರಿದ್ದರೂ ಅವರಿಗೆ ಉಪಜೀವನದ ಸಾಧನವು ಇಲ್ಲದಿರಬಹುದು. ಅವರಿಗೆ ಜೀವನಾವಶ್ಯಕ ಸಾಮಗ್ರಿಗಳನ್ನು ಒದಗಿಸಿದಲ್ಲಿ ಅವರು ನಿರಾಕುಲತೆಯನ್ನು ಹೊಂದಿ, ಧರ್ಮಪ್ರವೃತ್ತಿಯನ್ನು ಮುಂದರಿಸುತ್ತಾರೆ ಇದೇ ಪ್ರಕಾರ ಅನೇಕ ಗ್ರಂಥಗಳನ್ನು ಬರೆಯಿಸಿ, ವಿದ್ಯಾರ್ಥಿಗಳಿಗೂ ಓದುವವರಿಗೂ ಕೊಡಬೇಕು ಗ್ರಂಥ ಸಂಶೋಧನೆಗಾಗಿ ಯೋಗ್ಯರಿದ್ದ ಜನರಿಗೆ ನೆರವು ನೀಡಬೇಕು. ಜ್ಞಾನಾಭ್ಯಾಸಗಳನ್ನು ಪ್ರೀತಿಸಬೇಕು ತನ್ನ ಆತ್ಮವನ್ನು ಜ್ಞಾನಾಭ್ಯಾಸದಲ್ಲಿ ತೊಡಗಿಸಬೇಕು. ತನ್ನ ಮಕ್ಕಳನ್ನೂ ಮನೆಯವರನ್ನೂ ಜ್ಞಾನಾಭ್ಯಾಸಕ್ಕೆ ಹಚ್ಚಬೇಕು ಯಾವ ಯಾವ ಮಾರ್ಗದಿಂದ ಸಾಧ್ಯವೋ ಹಾಗೆ ಶಾಸ್ತ್ರಾಭ್ಯಾಸದ ರುಚಿಯನ್ನು ಜನರಲ್ಲಿ ಉಂಟುಮಾಡಬೇಕು. ಶಾಸ್ತ್ರದ ಜ್ಞಾನವಾಗುವುದರಿಂದ ಅನೇಕ ದುರಾಚಾರಗಳು ನಷ್ಟವಾಗುತ್ತವೆ.

**ಔಷಧ ದಾನ.** ಔಷಧವನ್ನು ದಾನಮಾಡುವುದರಲ್ಲಿ ಬಹಳ ಪುಣ್ಯವಿದೆ ಅನೇಕ ರೋಗಗಳನ್ನು ಇಲ್ಲದಂತೆ ಮಾಡುವಂಥ ಔಷಧಗಳನ್ನು ಸಿದ್ಧಗೊಳಿಸಿ ರೋಗಿಗಳಿಗೆ ಕೊಡುವ ವ್ಯವಸ್ಥೆಯನ್ನು ಮಾಡಬೇಕು. ನಿರ್ಧನ ಮನುಷ್ಯನಿಗೆ ಅನಾಯಾಸ ಸಿದ್ಧವಾದ ಔಷಧವು ದೊರೆತರೆ ಅವರಿಗೆ ಅದರ ಉಪಯೋಗವು ಬಹಳವಾಗಿ ಉಪಕಾರವು ಸಂಭವಿಸುತ್ತದೆ ಕೇವಲ ನಿರ್ಧನರಿಗಷ್ಟೇ ಅದರ ಉಪಯೋಗವಾಗದೆ ಸಿರಿವಂತರಿಗೂ ಸಹ ಆಗುತ್ತದೆ. ಬಡವರೂ ದುಃಖಿಗಳೂ ಆದಂಥ ಜನರಿಗೆ ಔಷಧಕೊಡುವುದರಲ್ಲಿ ಬಹಳ ಪುಣ್ಯವಿದೆ. ಸಭ್ಯರೂ ಬಡವರೂ ಆದವರಿಗೆ ಔಷಧವು ದೊರೆಯುವದಿಲ್ಲ ಅವರಿಗೆ ಯಾರೂ ಸಿದ್ಧಮಾಡಿ ಕೊಡುವದಿಲ್ಲ. ಒಂದು ವೇಳೆ ಸಿದ್ಧಮಾಡಿ ಕೊಡುವವರಿದ್ದರೂ ಔಷಧಕ್ಕೆ ಬೇಕಾಗುವ ಸಾಮಗ್ರಿಗಳನ್ನು ಒದಗಿಸುವದು ಆ ನಿರ್ಧನರಿಗೆ ಅಸಾಧ್ಯವಾದುದರಿಂದ ಸಿದ್ಧೌಷಧಿಗಳೇ ಅವರ ರೋಗನಿವಾರಣಕ್ಕೆ ತಕ್ಕವುಗಳೆನಿಸುತ್ತವೆ ರೋಗವಿಲ್ಲದಂತೆ ಮಾಡುವದಕ್ಕಿಂತ ಹೆಚ್ಚಿನ ಬೇರೆ ದಾನವೇ ಇಲ್ಲ.

**ಅಭಯದಾನ.** ಔಷಧ ದಾನದಂತೆ ಅಭಯದಾನವೂ ಸಹ ಶ್ರೇಷ್ಠವಾಗಿದೆ. ದರ್ಮಿಷ್ಠ ಜೀವಗಳಿಗೆ ನಿಲ್ಲಲಿಕ್ಕೂ ಅವರು ಧರ್ಮಸಾಧನೆಯನ್ನು ಮಾಡಲಿಕ್ಕೂ ತಮ್ಮ ಶಕ್ತಿಗೆ ಅನುಸರಿಸಿ ಧರ್ಮಶಾಲೆಗಳನ್ನು ಕಟ್ಟಿಸಿ ಕೊಡಬೇಕು. ತಮ್ಮ ಮನೆಯಲ್ಲಿ ಸ್ಥಳವಿದ್ದರೆ ಅಲ್ಲಿ ಅವರಿಗೆ ನಿಲ್ಲುವ ವ್ಯವಸ್ಥೆಯನ್ನು ಮಾಡಿಕೊಡಬೇಕು. ಯಾಕೆಂದರೆ ನಿಲ್ಲಲಿಕ್ಕೆ ಯೋಗ್ಯ ಸ್ಥಾನವು ದೊರೆಯದ ಹೊರತಾಗಿ ಧರ್ಮಸಾಧನೆಯನ್ನು ಮಾಡಲಿಕ್ಕೆ ಪರಿಣಾಮವು ಸ್ಥಿರವಾಗಿ ಉಳಿಯುವದಿಲ್ಲ. ಯಾರಾದರೂ ಸಹಧರ್ಮಿಗಳು, ದುಃಖಿಗಳು, ಪರದೇಶಿಗಳು ಅಕಸ್ಮಾತ್ತಾಗಿ ಬಂದರೆ ತಿಂಗಳೆರಡು ತಿಂಗಳು ಅವರ ಊಟದ ವ್ಯವಸ್ಥೆಯನ್ನು ಮಾಡಿಕೊಡಬೇಕು ಯಾತ್ರೆ, ಪ್ರವಾಸಗಳನ್ನು ಮಾಡುವಪದು ದಾರಿಯಲ್ಲಿ ದನವು ತೀರಿ, ಅವರು ಊರಿಗೆ ಹೋಗುವದು ಅಸಾಧ್ಯವಾಗಬಹುದು ಅವರ ದನವನ್ನು ಕಳ್ಳರು ಅಪಹರಿಸಿರಬಹುದು ಇಂಥವರು ಸ್ವಧರ್ಮಿಗಳೆಂದು ಸಹಾಯವನ್ನು ಅಪೇಕ್ಷಿಸಿ ಬಂದಲ್ಲಿ ಅವರು ಊರಿಗೆಹೋಗಿ ಮುಟ್ಟುವಷ್ಟು ಧನವನ್ನು ಒದಗಿಸಬೇಕು ಪರದೇಶಿಯಿದ್ದು, ರೋಗಿಯಾಗಿದ್ದರೆ ಅವನಿಗೆ ನಿಲ್ಲಲಿಕ್ಕೆ ಸ್ಥಳಕೊಟ್ಟು, ಔಷಧೋಪಚಾರಮಾಡಬೇಕು ಮೇಲಿಂದ ಮೇಲೆ ಅವರಿಗೆ ಧರ್ಮೋಪದೇಶಮಾಡುತ್ತ ಇರಬೇಕು ಅವರ ಸಮಾಚಾರವನ್ನು ನಿತ್ಯವೂ ತಿಳಿದುಕೊಳ್ಳುತ್ತಿರಬೇಕು. ಅವರ ವೈಯಾವೃತ್ಯವನ್ನು ಮಾಡಬೇಕು ನಿರ್ಧನ

ಮನುಷ್ಯರಿಂದ ಆಗದಂಥ ಇಂಥ ಔಷಧ ದಾನವನ್ನು ಸಿರಿವಂತರು ಅವಶ್ಯವಾಗಿ ಮಾಡಬೇಕು, ಮಾಡುತ್ತಿರಬೇಕು ಯಾತ ಪರಿಣಾಮದಲ್ಲಿ ಚಂಚಲತೆಯು ಪ್ರಾಪ್ತವಾಗಿರುವುದೋ, ರೋಗ, ವಿಯೋಗ ದುಃಖ, ಬಡತನಗಳಿಂದ ಯಾರು ಗಾಬರಿಯಾಗಿರುವರೋ ಅವರಿಗೆಲ್ಲ ಧರ್ಮೋಪದೇಶ ಮಾಡಿ, ಧೈರ್ಯಕೊಡಬೇಕು. ಇದು ಅಭಯದಾನವಾಗಿದೆ

**ಸ್ವಂತಕ್ಕೂ ಇತರರಿಗೂ ಜ್ಞಾನ ನೀಡಬೇಕು.** ಪ್ರತಿಯೊಬ್ಬರೂ ತಮ್ಮ ಆತ್ಮವನ್ನು ನಿರಂತರ ಜ್ಞಾನ ಸಮೃದ್ಧಗೊಳಿಸುತ್ತಿರಬೇಕು ಜ್ಞಾನವಂತರಿದ್ದರೆ ಅನೇಕ ಜೀವಿಗಳಿಗೆ ಧರ್ಮೋಪದೇಶವನ್ನು ಮಾಡಬೇಕು ಶಾಸ್ತ್ರಾರ್ಥವನ್ನು ತಿಳಿದಂಥ ಪುರುಷರು ದೊರೆತರೆ ಅದೊಂದು ಕಲ್ಪವೃಕ್ಷವೇ ತಮಗೆ ಲಭಿಸಿತೆಂದು ತಿಳಿದು, ಬಹಳ ಹರುಷದಿಂದ ಅವರಿಗೆ ಜೀವನ ಸಲಕರಣೆಗಳನ್ನು ಒದಗಿಸಬೇಕು ಅವರ ಕೂಡ ಅತಿಶಯ ನಮ್ರತೆಯಿಂದ ನಡೆದು ಆದರದಿಂದ ಧರ್ಮವನ್ನು ಗ್ರಹಣಮಾಡಬೇಕು ಧರ್ಮವೃದ್ಧಿಯಾಗಬೇಕೆಂದು ಜ್ಞಾನಿ ಪುರುಷರನ್ನು ಸನ್ಮಾನಿಸಿ, ಧರ್ಮೋಪದೇಶ, ತತ್ತ್ವನಿರ್ಣಯ, ಗುಣಸ್ಥಾನ, ಮಾರ್ಗಣಾ ಮೊದಲಾದವುಗಳ ಚರ್ಚೆಯನ್ನು ಮಾಡಬೇಕು, ಮಾಡಿಸಬೇಕು ಸಮ್ಯಗ್‌ಜ್ಞಾನದ ಪ್ರಭಾವನೆಯ ಪ್ರವೃತ್ತಿಯನ್ನು ಉಂಟುಮಾಡಬೇಕು ಯಾವ ಸೀಮೆಯಲ್ಲಿ ಧರ್ಮ ಪ್ರವೃತ್ತಿಯು ಶಿಥಿಲವಾಗಿರುವುದೋ ಅಲ್ಲಿ ಶಾಸ್ತ್ರಗಳನ್ನು ಬರೆಯಿಸಿ, ಭಾಷಾಂತರಗಳನ್ನು ಮಾಡಿಸಿ, ಯೋಗ್ಯ ಗ್ರಂಥಗಳನ್ನು ಕಳಿಸಿಕೊಡಬೇಕು ಜ್ಞಾನದಾನವನ್ನು ಎಲ್ಲ ಜನರಿಗೂ ಮಾಡುತ್ತ ಹೋಗಬೇಕು ಸಂಪತ್ತಿಯು ಪ್ರಾಪ್ತವಾದಾಗ ದಾನ, ಸನ್ಮಾನ, ಪ್ರಿಯ ವಚನಗಳಿಂದ ತನ್ನ ಮಿತ್ರ ಹಾಗೂ ಕುಟುಂಬದ ಜನರನ್ನು ಆನಂದಿತಗೊಳಿಸಬೇಕು ಸಂಪತ್ತಿಯು ಸಮಾಗಮ ಮತ್ತು ಆಯುಷ್ಯಗಳು ಕ್ಷಣಭಂಗುರವಾಗಿವೆ ಧನ, ದೇಹ, ವಚನಗಳಿಂದ ನಿತ್ಯವೂ ಅನ್ಯ ಜೀವಿಗಳ ಮೇಲೆ ಉಪಕಾರ ಮಾಡುತ್ತಿರುವುದೇ ಮನುಷ್ಯ ಜನ್ಮದೊಳಗಿನ ಶ್ರೇಷ್ಠ ಕರ್ತವ್ಯವಾಗಿದೆ.

**ಮಧುರ ಭಾಷಣವೂ ಒಂದು ದಾನವೇ ಆಗಿದೆ.** ನವಿಯಾದ ಮಾತುಗಳನ್ನಾಡುವುದು ಒಂದು ದೊಡ್ಡ ದಾನವಾಗಿದೆ ಶತ್ರುಗಳ ಮೇಲಿರುವ ವೈರತ್ವವನ್ನು ತ್ಯಜಿಸಿ, ಪ್ರಿಯವಚನಗಳಿಂದ ಅವರ ಕ್ಷಮೆ ಬೇಡುವುದೂ ಸಹ ದೊಡ್ಡ ದಾನವಾಗಿದೆ ತಮ್ಮ ದ್ರವ್ಯ, ಹೊಲ, ಮನೆಗಳನ್ನು ಕೊಟ್ಟೂ ಪ್ರಸಂಗ ಬಂದಾಗ ಅವರನ್ನು ಸಂತುಷ್ಟಗೊಳಿಸಬೇಕು ಆ ವಿಷಯದಲ್ಲಿ ಮನಸ್ಸಿನೊಳಗಿನ ವೈರವನ್ನು ಇಲ್ಲದಂತೆ ಮಾಡಬೇಕು. ಮತ್ತು ಅಭಿಮಾನವನ್ನು ನಷ್ಟಗೊಳಿಸಬೇಕು ಬಡವನಿದ್ದು ಕುಟುಂಬ ವತ್ಸಲನಿದ್ದರೆ ಅವನಿಗೆ ಶಕ್ತಿಗನುಸರಿಸಿ ದಾನಕೊಟ್ಟು ಸನ್ಮಾನಿಸಬೇಕು ತಮ್ಮ, ತಂಗಿ, ಮಗಳು ಇವರು ಬಡವರಿದ್ದರೆ ಅವರಿಗೆ ಮೇಲಿಂದ ಮೇಲೆ ಊಟ ಉಡಿಗೆಗಳನ್ನೂ ವಸ್ತ್ರಾಭರಣಗಳನ್ನೂ ಕೊಟ್ಟು ಸಂತೋಷವಾಗಿಡಬೇಕು ದಯಾಳು ಪುರುಷರು ಎರಡನೆಯವರ ದುಃಖವನ್ನು ದಾನ ಸನ್ಮಾನಾದಿಗಳಿಂದ ಇಲ್ಲದಂತೆ ಮಾಡುತ್ತಾರೆ ಅಂದ ಮೇಲೆ ಅಂಥ ಮನುಷ್ಯರು ತಮ್ಮ, ತಂಗಿ, ಅತ್ತಿ, ಮಗಳು, ಅಳಿಯ ಮೊದಲಾದ ತಮ್ಮ ಕುಟುಂಬದ ಭಾಗವೆನಿಸುವಂಥವರಿರುವರೋ ಆ ಜನರನ್ನಂತೂ ಎಂದೂ ದುಃಖಿಗಳನ್ನಾಗಿ ಇಡಬಾರದು

**ಕಟುಭಾಷಣ ಮಾಡುವವರ ಮೇಲೆಯೂ ದಯೆಯನ್ನು ತೋರಿಸಬೇಕು.** ಯಾರಾದರೂ ನಮ್ಮ ಹಾನಿಯನ್ನು ಮಾಡಿದ್ದರೂ ಅವರ ಕೂಡ ಸಹ ಕಟುವಚನಗಳನ್ನಾಡಬಾರದು. ಅವರಿಗನ್ನಬೇಕು—"ನೀವು ನಿಮ್ಮ ಪರಿಣಾಮದಲ್ಲಿ ಸಂತಾಪವಾಗಗೊಡಬೇಡಿರಿ. ಗೃಹಸ್ಥಾಶ್ರಮದಲ್ಲಿ ಲಾಭಾಲಾಭಗಳು ಕರ್ಮಾನುಸಾರವಾಗಿ ಆಗುತ್ತಿರುತ್ತವೆ. ಸುತ್ತಲಿದ್ದ ಎಲ್ಲ ಸಾಮಗ್ರಿಗಳೂ ನಾಶವಂತವಾಗಿವೆ. ನೀವು ನಿಮ್ಮ ಕಡೆಯಿಂದ ಶಕ್ಯವಿದ್ದಷ್ಟು ಪ್ರಯತ್ನಮಾಡಿಯೂ ಸದ್ಧೇತುವಿನಿಂದಲೂ ನಮ್ಮ ಕಾರ್ಯವು ಸುಧಾರಿಸಬೇಕೆಂದು ಪ್ರಯತ್ನ ಮಾಡುತ್ತಿದ್ದೀರಿ ಆದರೆ ನಮ್ಮ ಕರ್ಮಕ್ಕನುಸರಿಸಿ ಅದರಲ್ಲಿ ಯಶಸ್ಸು ಲಭಿಸದು ಅದರಿಂದ ಈ ವಿಷಯದಲ್ಲಿ ನೀವು ಕೆಡುಕು ಎಣಿಸಿಕೊಳ್ಳಬೇಡಿರಿ." ಇಂಥ ಮಧುರ ಮಾತುಗಳಿಂದ ಅವರನ್ನು ಸಂತುಷ್ಟಗೊಳಿಸಬೇಕು

**ತಮ್ಮ ದ್ರವ್ಯದ ಉಪಯೋಗವನ್ನು ಪರೋಪಕಾರದಲ್ಲಿ ಮಾಡಬೇಕು.** ನಮ್ಮ ದ್ರವ್ಯದಿಂದ ಯಾವವಾದರೊಂದು ಜೀವದ ಮೇಲೆ ಯಾವಾಗಲೂ ಉಪಕಾರವಾಗಬೇಕೆಂದು ಚಿಂತಿಸುತ್ತಿರಬೇಕು ಇತರ ಜನರು ತಮ್ಮ ಹಿತವನ್ನು ಮಾಡಲಿ, ಅಹಿತವನ್ನೇ ಮಾಡಲಿ ನಾವು ಮಾತ್ರ ಯಾವಾಗಲೂ ಉಪಕಾರ ಮಾಡುವ ವಿಷಯದಲ್ಲಿಯೇ ತತ್ಪರರಾಗಿರಬೇಕು ಇದೇ ಪ್ರಕಾರ ಯಾರಾದರೂ ಸೆರೆಮನೆಯಲ್ಲಿದ್ದರೆ, ಯಾರ ಮೇಲಾದರೂ ಸುಳ್ಳು ಸುಳ್ಳೇ ಆರೋಪ ಬಂದಿದ್ದರೆ ಅವರಿಗೆ ನಾವು ಸಹಾಯ ಮಾಡಿ ಬಿಡಿಸಲಿಕ್ಕೆ ಪ್ರಯತ್ನ ಮಾಡಬೇಕು ಯಾರಾದರೂ ನಮ್ಮ ಧನವನ್ನು ಕಳವು ಮಾಡಿದ್ದರೆ ಅವರ ಕೂಡ ಮಧುರ ವಚನಗಳನ್ನಾಡಿ, ಶಾಂತ ಭಾವದಿಂದ ಅವರಿಗೆ ತಿಳಿಸಿ ಹೇಳಿ,

ಪುರುಷರ ಹತ್ತಿರ ನಿಲ್ಲಲಿಕ್ಕೇ ಬೇಕು ಯಾರಾದರೂ ನೀಚರಿದ್ದರೆ ಅವರ ಲಕ್ಷ್ಮಿಯು ಹೋಗುವಂತಿದ್ದರೆ ಹೋದೀತು ನಾನು ಸುಖಿಯಾಗಿದ್ದೇನೆ ನನ್ನ ಮುಖಚರ್ಯೆಯ ಮೇಲೆ ಲಕ್ಷ್ಮಿಯ ತೇಜವು ಹೊಳೆಯುತ್ತಿದೆ ದರಿದ್ರ ಮನುಷ್ಯನ ಮುಖದ ಮೇಲೆ ತೇಜವಿರುವದಿಲ್ಲ ನಾನು ಸಜ್ಜನನಿದ್ದು, ಎಲ್ಲರಿಗೂ ಪ್ರೀತಿಯವನಾಗಿದ್ದೇನೆ ಅದಕ್ಕಾಗಿ ನನ್ನ ಲಕ್ಷ್ಮಿಯು ನಷ್ಟವಾಗಲಿಕ್ಕಿಲ್ಲ ಸರ್ವರಿಗೂ ಅಪ್ರಿಯರಿದ್ದರಿಂದ ಲಕ್ಷ್ಮಿಯು ದೂರ ಹೋಗುತ್ತಾಳೆ ನಾನು ದೊಡ್ಡ ಸಾಹಸಿಯೂ ಉದ್ಯೋಗಿಯೂ ಇರುವುದರಿಂದ ಹೊಸ ಹೊಸ ಉದ್ಯೋಗಗಳನ್ನು ನಿರ್ಮಾಣಮಾಡಿ ದ್ರವ್ಯವನ್ನು ಸಂಪಾದಿಸುತ್ತಿರುವೆ. ಆದರಿಂದ ಅದು ನನ್ನಲ್ಲಿಂದ ನಷ್ಟವಾಗುವ ಸಂಭವವಂತೂ ಮೂಲದಲ್ಲಿಯೇ ಇಲ್ಲ. ಆಲಸಿಯೂ ನಿರುದ್ಯೋಗಿಯೂ ಆದವರಿಂದ ಲಕ್ಷ್ಮಿಯು ನಷ್ಟವಾಗುತ್ತಿರುತ್ತಾಳೆ ಕೇವಲ ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತರುವುದು ಭ್ರಮವಾಗಿದೆ

**ಲಕ್ಷ್ಮಿಯು ಪುಣ್ಯದ ಫಲವಾಗಿದೆ.** ಲಕ್ಷ್ಮಿಯು ಪೂರ್ವದಲ್ಲಿ ಮಾಡಿದ ಪುಣ್ಯದ ದಾಸಿಯಾಗಿದ್ದಾಳೆ ಪುಣ್ಯ ಪರಮಾಣುವು ನಷ್ಟವಾದ ಕೂಡಲೆ ಅವಳು ನಷ್ಟವಾಗುತ್ತಾಳೆ ಜೀವದ ಪುಣ್ಯವು ಅಸ್ತವಾದ ಕೂಡಲೇ ಎಲ್ಲ ಲಕ್ಷ್ಮಿ, ಕಾಂತಿ, ಬುದ್ಧಿ, ಪ್ರೀತಿ, ಪ್ರತೀತಿ, ಮೊದಲಾದವುಗಳೆಲ್ಲ ಒಂದು ಕ್ಷಣದಲ್ಲಿ ಇಲ್ಲದಂತಾಗುತ್ತವೆ ಅಂತಲೇ ಲಕ್ಷ್ಮಿಯ ಉಪಯೋಗವನ್ನು ನ್ಯಾಯವಾದ ಭೋಗವನ್ನು ಭೋಗಿಸುವುದರಲ್ಲಿ ಮಾಡಿರಿ ಪರಿಣಾಮದಲ್ಲಿ ದಯಾ ಭಾವವನ್ನು ಇಟ್ಟು, ದುಃಖಿತರಿಗೂ ಹಸಿದವರಿಗೂ ದಾನಮಾಡಿರಿ ಲಕ್ಷ್ಮಿಯ ಸಂಬಂಧವು ನೀರಿನ ತೆರೆಗಳಂತೆ ಕ್ಷಣಭಂಗುರವಾಗಿದೆ ಆ ಮೇಲೆ ಇವಳ ವಿಯೋಗವು ನಿಶ್ಚಿತವಾದುದಿರುತ್ತದೆ ಯಾವನು ಯಾವಾಗಲೂ ಈ ಲಕ್ಷ್ಮಿಯನ್ನು ಸಂಗ್ರಹಿಸುವುದರಲ್ಲಿಯೇ ಮಗ್ನನಾಗಿರುವನೋ ಅವನು ಅದರ ಉಪಭೋಗವನ್ನೂ ತಕ್ಕೊಳ್ಳಲಾರನು ಸತ್ಪಾತ್ರಕ್ಕೆ ದಾನವನ್ನೂ ಮಾಡಲಾರನು ಅವನು ತನ್ನ ಆತ್ಮವನ್ನು ಮೋಸಗೊಳಿಸುತ್ತಿದ್ದಾನೆಂದು ತಿಳಿಯಬೇಕು. ಯಾಕಂದರೆ ಅವನು ಆಕಸ್ಮಾತ್ ಮರಣಹೊಂದಿದರೆ ದುರ್ಗತಿಗೆ ಹೋಗಬೇಕಾಗುವದು ಬಂದ ಮೇಲೆ ಮನುಷ್ಯ ಜನ್ಮವನ್ನು ಹೊಂದಿ ಏನು ಸಂಪಾದಿಸಿದಂತಾಯಿತು? ಯಾರು ಸಂಪತ್ತಿಯನ್ನು ಸಂಪಾದಿಸಿ ನೆಲದಲ್ಲಿ ಹುಗಿದು ಇಡುವರೋ ಅವರು ಅದನ್ನು ಕಲ್ಲಿನ ಸಮಾನವಾಗಿ ಮಾಡಿಬಿಡುತ್ತಾರೆ ಇದು ಅವರ ಲಕ್ಷ್ಯದಲ್ಲಿ ಬರುವದಿಲ್ಲ ನೆಲದಲ್ಲಿ ಅನೇಕ ಕಲ್ಲುಗಳು ಹೇಗೆ ಹುಗಿದಿರುತ್ತವೆಯೋ ಹಾಗೆಯೇ ಲಕ್ಷ್ಮಿಯೂ ಒಬ್ಬಳಾದಳು ಸಂಪತ್ತಿಯನ್ನು ದಾನ, ಭೋಗ, ಉಪಭೋಗ ಇವುಗಳ ಕಡೆಗೆ ಉಪಯೋಗಿಸದಿದ್ದರೆ ಆ ಮನುಷ್ಯನು ಸಿರಿವಂತನಿದ್ದರೂ ಬಡವನಿದ್ದಂತೆ. ಅಲ್ಲದೆ ಅವನ ಸ್ವಂತದ ಲಕ್ಷ್ಮಿಯೂ ಸಹ ಅನ್ಯರ ಲಕ್ಷ್ಮಿಯಾದಂತಾಯಿತು ಊರಲ್ಲಿ ಅನೇಕರ ಹತ್ತಿರ ಬಹಳಷ್ಟು ಧನವು ಇದ್ದೀತು, ನಮ್ಮ ನೆರೆಮನೆಯವರಲ್ಲಿಯೂ ಇದ್ದೀತು, ಆದರೆ ಅದರ ಉಪಯೋಗವು ನಮಗೇನು? ಅದನ್ನು ನಾವು ಕೇವಲ ನೋಡಬಹುದಿಷ್ಟೇ, ಭೋಗಿಸಲಾರೆವು ಇದೇ ಪ್ರಕಾರ, ಯಾರು ತಮ್ಮ ಲಕ್ಷ್ಮಿಯ ಭೋಗವನ್ನು ತಕ್ಕೊಳ್ಳುವದಿಲ್ಲವೋ ಅವರ ಸ್ಥಿತಿ ಇದೆ

**ಕೃಪಣನು ಲಕ್ಷ್ಮಿಯ ಭೋಗ ತಕ್ಕೊಳ್ಳುವದಿಲ್ಲ.** ದ್ರವ್ಯದ ಮೇಲೆ ಅತಿಶಯ ಪ್ರೇಮಮಾಡುವಂಥ ಪುರುಷನು ತನ್ನ ಹೊಟ್ಟೆಗೂ ಸಹ ಪೂರ್ಣ ತಿನ್ನುವದಿಲ್ಲ ಔಷಧ, ವಸ್ತ್ರ, ಪ್ರಾವರಣ, ಮನೆ ಇವೇ ಮೊದಲಾದ ಭೋಗೋಪಭೋಗ ಸಾಮಗ್ರಿಗಳ ಕೊರತೆಯಿಂದ ಯಾವಾಗಲೂ ದುಃಖವನ್ನು ಭೋಗಿಸುತ್ತಿರುತ್ತಾನೆ ಆದರೆ ಇದಕ್ಕಿಂತಲೂ ಹೆಚ್ಚು ದುಃಖವು ಅವನಿಗೆ ದುಡ್ಡನ್ನು ವೆಚ್ಚಮಾಡುವದರಲ್ಲಿ ಆಗುತ್ತಿರುತ್ತದೆ. ಅಂತಲೇ ಅವನು ದಿವಸಗಳನ್ನು ಕಷ್ಟದಲ್ಲಿ ಕಳೆಯುತ್ತಿರುತ್ತಾನೆ ಇಂಥ ಪುರುಷನು ರಾಜನ ಇಲ್ಲವೆ ತನ್ನ ಸಂಬಂಧಿಕರಾದ ಹೆಂಡರು, ಮಕ್ಕಳು, ಅಣ್ಣತಮ್ಮಂದಿರು ಇವರ ಹಿತವನ್ನು ಅನಾಯಾಸವಾಗಿ ಮಾಡಿಕೊಡುತ್ತಾನೆ ಆ ಮೂರ್ಖ ಮನುಷ್ಯನು ತನ್ನ ಬುದ್ಧಿಯನ್ನು ಅನೇಕ ಪ್ರಕಾರದಿಂದ ಉಪಯೋಗಿಸಿ, ಸಂಪತ್ತಿಯನ್ನು ಸಂಗ್ರಹಿಸಿ, ಆ ಸಂಗ್ರಹವನ್ನು ಹೆಚ್ಚಿಸುವ ಪ್ರಯತ್ನದಲ್ಲಿರುತ್ತಾನೆ ಅದು ಎಷ್ಟು ಬೆಳೆದರೂ ಅವನಿಗೆ ಸಂತೋಷವಿಲ್ಲ ತಿರುಗಿ ಅದನ್ನು ಹೆಚ್ಚಿಸುವದಕ್ಕಾಗಿ ಅನೇಕ ಪಾಪಾರಂಭಗಳನ್ನು ಮಾಡುತ್ತಾನೆ ಪಾಪಕ್ಕೆ ಹೆದರುವದಿಲ್ಲ ಹಗಲಿರುಳೂ ಧನ ಸಂಪಾದನೆಯ ವಿಕಲ್ಪಗಳನ್ನು ಮನಸ್ಸಿನಲ್ಲಿ ತರುತ್ತ ಅನೇಕ ರಾತ್ರಿಗಳನ್ನು ನಿದ್ರೆ ಇಲ್ಲದೆ ಕಳೆಯುತ್ತಾನೆ ಸೂರ್ಯೋದಯವಾದೊಡನೆಯೇ ಪುನಃ ಧನ ಸಂಪಾದನೆಯ ಉದ್ಯಮದಲ್ಲಿ ತೊಡಗುವನು ಕೊಡಕೊಳ್ಳುವ ವ್ಯವಹಾರದಲ್ಲಿ ಅನೇಕ ಪ್ರಕಾರದ ಸುಳ್ಳು ವಾದ–ವಿವಾದಗಳನ್ನು ಮಾಡುವುದರಲ್ಲಿ ಅವನಿಗೆ ತನ್ನ ಹೊಟ್ಟೆ ಹಸಿದುದರ ಎಚ್ಚರವೂ ಇರುವದಿಲ್ಲ ರಾತ್ರಿಯಲ್ಲಿ ಲೆಕ್ಕ–ಪತ್ರ, ಕೊಡಕೊಳ್ಳುವುದು, ಜಿನಸನ್ನು ಕೊಳ್ಳುವುದು–ಮಾರುವುದು ಇವುಗಳ ಚಿಂತೆಯಿಂದ ನಿದ್ರೆಯೇ

ಟರುವದಿಲ್ಲ. ಈ ಪ್ರಕಾರದ ಮೂಢ ಪುರುಷನು ಲಕ್ಷ್ಮಿಯೆಂಬ ತರುಣ ಸ್ತ್ರೀಯ ದಾಸನಾಗಿದ್ದು, ಅನೇಕ ಪ್ರಕಾರದ ಸಂಕಟಗಳನ್ನು ಭೋಗಿಸಿ ದುರ್ಗತಿಗೆ ಹೋಗುತ್ತಾನೆ

ದಾನದಿಂದ ಭೋಗಭೂಮಿಯಲ್ಲಿಯೂ ಸ್ವರ್ಗದಲ್ಲಿಯೂ ಜನ್ಮವಾಗುತ್ತದೆ. ಇನ್ನು ಯಾವನು ಬೆಳೆಯುತ್ತಿರುವ ತನ್ನ ಧನವನ್ನು ಯಾವಾಗಲೂ ಧರ್ಮಕಾರ್ಯದಲ್ಲಿ ಉಪಯೋಗಿಸುತ್ತಾನೆಯೋ ಅವನನ್ನು ಪಂಡಿತ ಪುರುಷರು ಸ್ತುತಿಸುತ್ತಾರೆ ಇಂದವರಿಗೇ ಲಕ್ಷ್ಮಿಯು ಲಭಿಸಿದುದು ಸಾರ್ಥಕವು ಈ ಪ್ರಕಾರ ವಿಚಾರಮಾಡಿ ಧರ್ಮನಿಷ್ಠರು ಬಡತನದಿಂದ ನೊಂದವರಿಗೂ ಸ್ತ್ರೀಯರಿಗೂ ಬಹಳ ಆದರದಿಂದಲೂ ಹರ್ಷದಿಂದ ದಾನಕೊಡುವರು. ಈ ದಾನಿಗಳಲ್ಲಿ ಪ್ರಸಿದ್ಧಿ, ಲಾಭ, ಪೂಜಾ, ಯಶ ಇವುಗಳ ಅಪೇಕ್ಷೆಯೂ ಇರುವದಿಲ್ಲ ದಾನ ಸ್ವೀಕರಿಸಿದವರಿಂದ ಪ್ರತ್ಯುಪಕಾರದ ಇಚ್ಛೆಯನ್ನೂ ಮಾಡುವದಿಲ್ಲ. ಅಂತಲೇ ಇವರ ಜೀವನವು ಸಫಲವಾಗುತ್ತದೆ. ಧನ, ಯೌವನ, ಜೀವನ ಇವು ಪ್ರತ್ಯಕ್ಷ ನೀರಿನ ಮೇಲಿನ ಗುಳ್ಳೆಯಂತೆ ಅಸ್ಥಿರವೆಂದು ನಮಗೆ ಕಂಡುಬರುತ್ತವೆ ಮೇಲಾಗಿ ದಾನದಿಂದ ಭೋಗಭೂಮಿಯ ಲಕ್ಷ್ಮಿಯನ್ನು ಅಸಂಖ್ಯಾತ ಕಾಲದ ವರೆಗೆ ಉಪಭೋಗಿಸಲಿಕ್ಕೆ ಬರುತ್ತದೆ ಹೀಗೆ ಶಾಸ್ತ್ರವು ವರ್ಣಿಸುತ್ತದೆ. ಅದಕ್ಕಾಗಿ ಯಾವಾಗಲೂ ನಾವು ದಾನ ಕೊಡಲಿಕ್ಕೆ ಪ್ರವೃತ್ತರಾಗಲಿಕ್ಕೆಬೇಕು ಇದು ಸ್ಪಷ್ಟವೇ ಇಗಿದೆ. ಇದರಲ್ಲಿ ಇನ್ನೂ ಒಂದು ವಿಶೇಷವಿದೆ. ಪೂರ್ವ ಜನ್ಮದಲ್ಲಿ ಸತ್ಪಾತ್ರಕ್ಕೆ ದಾನ ಕೊಟ್ಟವರು, ಸಮ್ಯಕ್ ತಪಶ್ಚರ್ಯೆಯನ್ನು ಮಾಡಿದವರು ಈ ದುಷ್ಷಮ–ಪಂಚಮ ಕಾಲದಲ್ಲಿ ಭರತ ಕ್ಷೇತ್ರದಲ್ಲಿ ಜನ್ಮ ತಕ್ಕೊಳ್ಳುವದಿಲ್ಲ ಈ ಕಾಲದಲ್ಲಿ ಇಲ್ಲಿ ಸಮ್ಯಗ್ದೃಷ್ಟಿಗಳು ಹುಟ್ಟುವದಿಲ್ಲ ದೇವಗತಿ, ನರಕಗತಿಗಳಿಂದ ಬರುವಂಥ ಸಮ್ಯಗ್ದೃಷ್ಟಿ ಜೀವಗಳು ವಿದೇಹ ಕ್ಷೇತ್ರದಲ್ಲಿ ಜನ್ಮವನ್ನು ತಕ್ಕೊಂಡಾರು ಮನುಷ್ಯ ತಿರ್ಯಂಚ ಗತಿಯೊಳಗಿನ ಸಮ್ಯಗ್ದೃಷ್ಟಿಗಳು ಸತ್ತು ಸ್ವರ್ಗದಲ್ಲಿ ಹುಟ್ಟಿಯಾರು ಈ ಸ್ಥಳದಲ್ಲಿ ಯಾರಾದರೂ ಪುಣ್ಯವಂತರಿದ್ದರೆ–ಅಂಥ ಜೀವಗಳಿಗೆ ಕಾಲಲಬ್ಧಿ ಮೊದಲಾದ ಸಾಮಗ್ರಿಗಳು ಲಭಿಸಿದರೆ ಮಾತ್ರ ಸಮ್ಯಕ್ತ್ವವು ಉತ್ಪನ್ನವಾಗುತ್ತದೆ ಪೂರ್ವ ಜನ್ಮದಲ್ಲಿ ಜಿನ ಧರ್ಮವನ್ನು ಪಾಲಿಸಿ, ಪುಣ್ಯ ಸಂಪಾದಿಸಿದಂದವರು ಸದ್ಯಕ್ಕೆ ಇಲ್ಲಿ ಜನ್ಮವನ್ನು ತಕ್ಕೊಳ್ಳುವದಿಲ್ಲ ಅಂತಲೇ ಜೈನ ಧರ್ಮದಲ್ಲಿ ಸದ್ಯಕ್ಕೆ ಕ್ಷತ್ರಿಯ ವಂಶದ ಮಹಾ ಪುರುಷರು ಉತ್ಪನ್ನವಾಗುವದಿಲ್ಲ ಅದರಂತೆಯೇ ಸಿರಿವಂತ ಪುರುಷರೂ ಸಹ ವಿಶೇಷವಾಗಿ ಕಂಡುಬರುವದಿಲ್ಲ.

ಜೈನ ಕುಲದಲ್ಲಿ ಯಾರಾದರೂ ಧನಾಢ್ಯರಿದ್ದರೆ ಅವರಿಗೆ ಧರ್ಮದ ಅಭಿರುಚಿಯು ಇಲ್ಲದೆ ಹೋಗುತ್ತದೆ ಅಂಥದರಲ್ಲಿಯೂ ಯಾವನಾದರೂ ಒಬ್ಬ ಪುಣ್ಯವಂತನಿಗೆ ಸತ್‌ಸಂಗತಿಯು ಪ್ರಾಪ್ತವಾಗಿ, ಜೈನ ಸಿದ್ಧಾಂತವನ್ನು ಕೇಳುವ ಲಾಭವು ದೊರೆತರೆ ಅವರು ಸ್ವಧರ್ಮದ ವಿಷಯದಲ್ಲಿ ಪ್ರೇಮವನ್ನು ಧರಿಸಿಯಾನು. ಈ ಕಾಲದಲ್ಲಿ ಜೈನ ಸಿರಿವಂತರಿದ್ದರೂ ಅವನು ಧರ್ಮವನ್ನು ತಿಳಿದವರಿರುವದು ವಿರಳ ಧರ್ಮವನ್ನು ಬಲ್ಲವರಿದ್ದರೆ ವ್ರತ, ಉಪೋಷಣ, ತ್ಯಾಗಗಳನ್ನು ಮಾಡುವವರು ತೀರ ವಿರಳ ಇಂಥವರಿದ್ದರೂ ದಾನ ರೂಪದಲ್ಲಿ ತನ್ನ ಧನವು ವೆಚ್ಚವಾಗಲಿ ಎಂದು ಅನ್ನುವವರು ಅತ್ಯಂತ ಅಪರೂಪವಾಗಿದ್ದಾರೆ ಲಕ್ಷಾವಧಿ ರೂಪಾಯಿಗಳ ಧನವನ್ನು ಇಲ್ಲಿಯೇ ಬಿಟ್ಟು ಅವರು ಮರಣ ಹೊಂದುವರು ಆದರೆ ಅದರಲ್ಲಿಯ ಅರ್ಧ ಅಥವಾ ಗಿರ್ಧ ಹಣವನ್ನಾದರೂ ದಾನದ ಕಡೆಗೆ ವೆಚ್ಚಮಾಡುವದಿಲ್ಲ

ಕಲಿಕಾಲದೊಳಗಿನ ಶ್ರೀಮಂತರ ವಿಚಾರಗಳು—ಕಲಿಕಾಲದೊಳಗಿನ ಶ್ರೀಮಂತ ಪುರುಷರಿಗೆ ಯಾವಾಗಲೂ ಸಿಟ್ಟು ಹೆಚ್ಚುತ್ತಲೇ ಹೋಗುವುದು ತಮ್ಮ ಪುರುಷಾರ್ಥದ ಬಗ್ಗೆ ಹೆಚ್ಚಿನ ಅಭಿಮಾನ ಇರುವುದು. ವತ್ಸಲತೆ (ಪ್ರೀತಿ) ಸಮೂಲವಾಗಿ ನಷ್ಟವಾಗುವುದು ಎರೆಡನೆಯವರು ಒಳ್ಳೆಯ ಕೆಲಸ ಮಾಡಿದರೆ ನೋಡಲಿಕ್ಕಾಗದು ಎಲ್ಲರ ಬುದ್ಧಿ ಹಾಗೂ ತಿಳುವಳಿಕೆಗಳು ಕಡಿಮೆಯಾಗಿರುವದು ದಯೆಯು ಇರುವದಿಲ್ಲ ಅನ್ಯ ಪುರುಷರನ್ನು ಅಪಮಾನಗೊಳಿಸುವ ಅಪಶಬ್ದ ಆಡುವುದು, ತಿರಸ್ಕಾರ ಮಾಡುವುದು–ಇದರಲ್ಲಿ ಹಿಂದೆ ಮುಂದೆ ನೋಡುವಂಥವರಲ್ಲ ಯಾರಾದರೂ ನೀತಿಯಿಂದ ಮಾತನಾಡುತ್ತಿದ್ದರೆ ಅವರಿಗೆ ಅಪಶಬ್ದಗಳನ್ನಾಡಿಯೂ ಕುಯುಕ್ತಿಗಳನ್ನು ಮಾಡಿಯೂ ಅವರ ವಿಚಾರಗಳನ್ನು ಖಂಡಿಸುವರು. ಧರ್ಮಾತ್ಮಾ ಪುರುಷರು ಹತ್ತರ ಬಂದು ವಿನಯದಿಂದ ಮಾತನಾಡಿದರೆ ಅವರಲ್ಲಿ ಏನಾದರೂ ಬೇಡುವ ಭಾವವಿದೆಯೆಂದು ಭಾವಿಸುವುದು ಇಲ್ಲದ ಸಂಶಯವನ್ನು ತಕ್ಕೊಳ್ಳುವುದು. ನಿರ್ವಾಂಛಕರೂ ಸಹಧರ್ಮಿಗಳೂ ಆದ ಜನರ ವಿಷಯದಲ್ಲಿ ದಯಪಡಿಸುವರು. ಯಾಕೆಂದರೆ ಅವರು ದುಡ್ಡು ವೆಚ್ಚ ಮಾಡಲಿಕ್ಕೆ ಹೇಳಿಯಾರಲ್ಲ ಮೇಲಿಂದ ಮೇಲೆ ಅಭಿಮಾನವು ಹೆಚ್ಚುತ್ತ ಹೋಗುವುದು ಸ್ವಭಾವವು ಬಹಳ ತಾಮಸಿಯಾಗುವುದು. ತಮ್ಮ ಕೆಲಸವು ತತ್ಕಾಲದಲ್ಲಿ ಆಗಬೇಕೆಂದು ಯಾವಾಗಲೂ ಇಚ್ಛೆಯನ್ನು ಮಾಡುವುದು.

ಸೇವಕರ ದುಃಖದ ಕಡೆಗೆ ಗಮನಕೊಡದೆ ತಮ್ಮ ಕೆಲಸವು ಹೇಗೆ ಸಾಧಿಸೀತೆಂಬುದರ ಕಡೆಗೇನೇ ಯಾವಾಗಲೂ
ಲಕ್ಷ್ಯವಿಟ್ಟು ನಡೆಯುವುದು ಎರಡನೆಯವರ ದುಃಖ ಹಾಗೂ ಪ್ರಯೋಜನಗಳನ್ನೂ ತುಚ್ಛವೆಂದು ತಿಳಿಯುವದು
ಸಂಪತ್ತಿಯು ಬೆಳೆದಂತೆ ವೆಚ್ಚವನ್ನೂ ಬೆಳೆಯಿಸುವುದು ವೆಚ್ಚದ ಬೆನ್ನು ಹತ್ತಿಯೇ ದುಃಖವು ಬೆಳೆಯುವುದು
ಅದರಿಂದಾಗಿ ಹಗಲಿರುಳೂ ವೆಚ್ಚವು ಹೇಗೆ ಕಡಿಮೆಯಾದೀತೆಂದು ಚಿಂತಿಸುವುದು ತಮ್ಮ ಭೋಗೋಪಭೋಗದ
ವಸ್ತುಗಳು ತಮಗೆ ಅರ್ಧ ಬೆಲೆಯಲ್ಲಿ ಸಿಗಬೇಕೆಂದು ಬಯಸುವುದು ಇಲ್ಲವೆ ತಾವು ಸಿರಿವಂತರೆಂದು ಜನರು ಹೆಚ್ಚು
ಬೆಲೆಯ ವಸ್ತುವನ್ನು ಅಲ್ಪ ಬೆಲೆಯಲ್ಲಿ ತಮಗೆ ಕೊಡಬೇಕೆಂದು ಇಚ್ಛಿಸುವುದು ಯಾರಾದರೂ ಕಳವಿನ ವಸ್ತುವನ್ನು
ತಂದು ಅಲ್ಪ ಬೆಲೆಯಲ್ಲಿ ತಮಗೆ ಕೊಟ್ಟರೆ ಬಹಳ ಸಂತೋಷವನ್ನು ಹೊಂದುವುದು ದ್ರವ್ಯದ ಸಂಚಯವಾಗು-
ತ್ತಿದ್ದರೂ ತೃಪ್ತಿಯಾಗದಿರುವುದು ಧನವಂತನಿದ್ದು ಪಾಪಿ ಇದ್ದರೂ ಕೂಡ ಅವನನ್ನು ಪ್ರೀತಿಸುವುದು ಇತರ
ಪುರುಷರು ಧನವಂತರಿದ್ದು ಪರಧರ್ಮದವರಿದ್ದರೆ—ಅವರಲ್ಲಿ ಸದ್‌ಬುದ್ಧಿ ಇದ್ದರೂ ಸಹ—ಒಳ್ಳೆಯವರೆಂದು
ಮನ್ನಿಸದಿರುವುದು ಧನವಂತರ ಹತ್ತಿರ ತಮ್ಮ ಔದಾರ್ಯದ ಮಾತುಗಳನ್ನು ಹೇಳುವುದು. ನಿರ್ಧನರ ಹತ್ತಿರ ತಮ್ಮ
ದುಃಖವನ್ನು ಹೇಳಿಕೊಳ್ಳುವುದು. ದುಃಖಿಗಳು ಭೆಟ್ಟಿಯಾದರೆ ಅವರ ಹತ್ತಿರ ತಮ್ಮ ದುಃಖಗಳನ್ನೇ ಹೇಳಿಕೊಳ್ಳುವುದು
ಇತರರ ಹಾಗೂ ದರಿದ್ರರ ಗೌರವವು ಕಡಿಮೆ ಎಂದು ತಿಳಿಯುವುದು ನಿರ್ಧನರಿಗೆ ತಮ್ಮ ವಸ್ತುವನ್ನು ಕೊಡುವ
ಪ್ರಸಂಗವು ಬಂದರೆ ಅವರ ಮೇಲೆ ದೊಡ್ಡ ಅವಿಶ್ವಾಸವನ್ನು ಪ್ರದರ್ಶಿಸುವದು ಬಡವರನ್ನು ಕಳ್ಳರು ಮತ್ತು
ಮೋಸಗಾರರೆಂದು ತಿಳಿಯುವುದು ತಾವು ಹಲವರ ಸರ್ವಸ್ವವನ್ನು ತಿಂದು ಹಾಕಿದ್ದರೂ ತಮ್ಮ ಸ್ವಂತದ ಬಗ್ಗೆ
ಡಾಂಭಿಕ ಮಾತುಗಳನ್ನಾಡುವುದು ತಮ್ಮ ಕರ್ತವ್ಯವನ್ನು ಯಾವಾಗಲೂ ಹೊಗಳಿಕೊಳ್ಳುತ್ತಿರುವುದು ಇನ್ನೊಬ್ಬರ
ಒಳ್ಳೆಯ ಕೆಲಸಕ್ಕೆ ಹೆಸರಿಡುತ್ತಾ ಹೋಗುವುದು ತಾನು ಸ್ವತಃ ನಿಸ್ಪೃಹನಿದ್ದೂ ಉಳಿದವರು ಅತ್ಯಂತ
ಲೋಭಿಗಳೆಂದು ಹೇಳುವುದು ತಾನು ಸ್ವತಃ ಅಜರ ಹಾಗೂ ಅಮರನೆಂದು ತಿಳಿಯುವುದು ತಾನು ಸ್ವತಃ
ನ್ಯಾಯಿಯೂ ಸರ್ವರಲ್ಲಿ ಶ್ರೇಷ್ಠನೂ ಇದ್ದು ಇತರ ಜನರು ರಂಕ ಇದಾರೆಂದು ಅನ್ನುವುದು ಆರಂಭ ಪರಿಗ್ರಹಗಳನ್ನು
ಬೆಳೆಯಿಸುತ್ತಿರುವಾಗ ಬೇಸರ ಪಡದೆ ಇರುವುದು ಮರಣದ ವರೆಗೆ ಸಂತೋಷವನ್ನು ಧಾರಣ ಮಾಡದೆ ಇರುವುದು
ಸುಳ್ಳು ಕೆಲಸಗಳನ್ನು ಮಾಡುವುದರಲ್ಲಿಯೂ ತಾನು ತರಬೇತಿಯನ್ನು ಹೊಂದಿರುವೆನೆಂದು ತಿಳಿಯುವುದು ಅತ್ಯಂತ
ಧೂರ್ತ, ಅತಿಶಯ ಕಪಟಿ, ಅಪ್ರತಿಮ ಸುಳ್ಳುಗಾರ ಮತ್ತು ತನ್ನ ಕೆಲಸವನ್ನು ಸಾಧಿಸಿಕೊಳ್ಳುವುದರಲ್ಲಿ
ಪ್ರವೀಣನಾದ ಪುರುಷನಿಗೆ ಪುರುಷಾರ್ಥಿಯೆಂದು ತಿಳಿಯುವುದು ಸತ್ಯವಾದಿಯೂ ಮರ್ಯಾದಿತ ಪ್ರವೃತ್ತಿಯಲ್ಲಿ
ನಿಲ್ಲುವಂಥ ನಿರಪೇಕ್ಷ ಮನುಷ್ಯನೂ ಆದಂಥವನಿಗೆ ಬುದ್ಧಿಹೀನನೆಂದು ತಿಳಿಯುವುದು. ಯಾವುದರಲ್ಲಿ ತಮ್ಮ
ಕಷಾಯಕ್ಕೆ ಪುಷ್ಟಿ ದೊರೆಯುವುದೋ, ತಮ್ಮ ಹೆಸರು ಪ್ರಸಿದ್ಧಿಗೆ ಬರುವುದೋ, ತಮ್ಮ ಅಭಿಮಾನವು ಹೆಚ್ಚುವುದೊ
ಅಂಥ ಮಂದಿರ, ತೋಟ, ಲಗ್ನಕಾರ್ಯ, ಯಾತ್ರೆ ಮೊದಲಾದವುಗಳಲ್ಲಿ ಅಪರಿಮಿತ ದ್ರವ್ಯವನ್ನು ವೆಚ್ಚಮಾಡುವುದು
ದೇವ-ಮಂದಿರವನ್ನು ಕಟ್ಟಿಸುವುದರಿಂದ ತಮ್ಮ ಮಾನ್ಯತೆಯು ಬೆಳೆದೀತೆಂದು ದುಡ್ಡನ್ನು ವೆಚ್ಚಮಾಡುವುದು
ಪಂಚರಲ್ಲಿ ಅಭಿಮಾನವನ್ನು ಕಾಯ್ದುಕೊಳ್ಳುವದಕ್ಕಾಗಿ ದ್ರವ್ಯವನ್ನು ವೆಚ್ಚಮಾಡುವುದು ಆದರೆ ಜೀರ್ಣವಾದ
ದೇವಸ್ಥಾನದ ಪುನರುದ್ಧಾರ ಮಾಡಲಿಕ್ಕೆ ಒಂದು ಪೈಯನ್ನೂ ವೆಚ್ಚಮಾಡದಿರುವುದು. ಬಡವ, ಹಸಿದವ ಇವರಿಗೆ
ಒಂದು ಪೈಯನ್ನೂ ಸಹ ಕೊಡಕೂಡದೆಂದು ನಿಶ್ಚಯಮಾಡಿಕೊಂಡಿರುವುದು ದುರ್ಬಲ, ದೀನ, ಅನಾಥ,
ವೃದ್ಧ, ರೋಗಿ, ವಿಧವಾ ಇವರ ಪಾಲನ ಮಾಡುವುದರಲ್ಲಿ ಒಂದು ಕವಡಿಯನ್ನೂ ಖರ್ಚುಮಾಡದೆ ಇರುವುದು.
ಬಡಬಗ್ಗರಿಗೆ ಕೊಟ್ಟ ದ್ರವ್ಯವು ಪುಕ್ಕಟೆ ಹೋಗುವದೆಂದು ತಿಳಿಯುವುದು ಮನೆಯೊಳಗಿನ ಎಲ್ಲ ಜನರಿಗೂ
ತನ್ನ ಸಮಾನವಾಗಿಯೇ ಊಟಕ್ಕೆ ಬಡಿಸಲಿಕ್ಕೆ ಬೇಕಾಗುವದೆಂದು ತನ್ನ ಸಲುವಾಗಿಯೂ ಪಕ್ವಾನ್ನಗಳನ್ನು
ಊಟಕ್ಕೆ ಮಾಡಿಸದಿರುವುದು ಬಹಳಷ್ಟು ಧರ್ಮಾತ್ಮರು, ಪಂಡಿತರು, ತಪಸ್ವಿಗಳು ನಮ್ಮ ಮನೆಗೇ ಬರುತ್ತಾರೆ
ಮತ್ತು ಅನೇಕರು ಬಂದಾರು, ಎಲ್ಲ ದೇಶೀ, ಪರದೇಶೀ ಗುಣವಂತ ಜೈನರಿಗೆಲ್ಲ ನನ್ನ ಮನೆಯೊಂದೇ ಆಶ್ರಯಸ್ಥಾನವು.
ನಾನೇ ದೊಡ್ಡ ದಾನಿಯು ಇಲ್ಲಿ ಎರಡನೆಯವರು ಯಾರಿದ್ದಾರೆ? ಹೀಗೆ ಅಭಿಮಾನ ಹಿಡಿಯುವುದು ಹಲವರು ತಮ್ಮ
ಮನೆಯ ಕೆಲಸಗಳನ್ನು ಮಾಡುವುದರಲ್ಲಿ ಮತ್ತು ಅವುಗಳನ್ನು ಸುಧಾರಿಸುವುದರಲ್ಲಿ ಮಗ್ನರಾಗಿದ್ದು, ಧರ್ಮಕಾರ್ಯ-
ದಲ್ಲಿಯೂ ಲಕ್ಷ್ಯಹಾಕುವವರನ್ನು ತಾವು ದ್ರವ್ಯದ ಮದದಿಂದ ದೊಡ್ಡ ಅಪಮಾನಗೊಳಿಸುವುದು ನನ್ನಿಂದ ಇವರ
ಉದರ ನಿರ್ವಾಹವು ನಡೆಯುತ್ತಿರುವಾಗ ನನ್ನನ್ನು ಬಿಟ್ಟು ಇವನು ಎಲ್ಲಿದ್ದಾನು? ಮೊದಲಾದ ಅನೇಕ ಪ್ರಕಾರದ

ವಿಚಾರಗಳನ್ನು ಮನಸ್ಸಿನಲ್ಲಿ ತರುವುದು. ಈ ಪ್ರಕಾರ ಪಂಚಮ ಕಾಲದಲ್ಲಿ ಧನಾಢ್ಯ ಪುರುಷರ ಬುದ್ಧಿಯು ಮೋಹದಿಂದ ವಿಕೃತವಾಗಿದೆ

ಧನದ ಆಸಕ್ತಿಯ ಪರಿಣಾಮ—ಪೂರ್ವ ಜನ್ಮದಲ್ಲಿ ಜಿನಧರ್ಮವನ್ನು ಧರಿಸದೆ ಇದ್ದು. ಕುತಪಶ್ಚರ್ಯೆ, ಕುಪಾತ್ರದಾನ ಮಾಡಿರುವುದರಿಂದ ಸದ್ಯಕ್ಕೆ ಈ ವೈಭವ ಹಾಗೂ ಸಂಪತ್ತಿಯು ಪ್ರಾಪ್ತವಾಗಿರುತ್ತದೆ. ಇದನ್ನು ಬಿಟ್ಟು ಧನದ ಮೇಲಿನ ಮೋಹದಿಂದ ಮರಣಹೊಂದಿದರೆ ಅವರ ಕಷಾಯವು ತೀವ್ರ ಮತ್ತು ಮಂದವಾಗಿರುವಂತೆ ಆಯಾ ಪ್ರಮಾಣದಲ್ಲಿ ಸರ್ಪಾದಿ ತಿರ್ಯಂಚ, ವೃಕ್ಷಾದಿ ವನಸ್ಪತಿ, ಮಧು ಮಕ್ಷಿಕಾದಿ ಪಕ್ಷಿ ಈ ಯೋನಿಗಳಲ್ಲಿ ಜನ್ಮವಾದೀತು ನರಕದಲ್ಲಿಯೂ ಅನಂತಕಾಲ ಭ್ರಮಣ ಮಾಡಬೇಕಾದೀತು. ಧನದ ಮೇಲಿನ ಈ ಆಸಕ್ತಿಯು ಇಹಲೋಕದಲ್ಲಿ ವೈರ ಮತ್ತು ಅಪಯಶಕ್ಕೆ ಕಾರಣವಾಗಿದೆ. ಕೃಪಣ ಪುರುಷನಿಗೆ ಎಲ್ಲ ಜನರು ಹೆಸರು ಇಡುತ್ತಾರೆ ಕೃಪಣನ ಪರಿಣಾಮವು ಯಾವಾಗಲೂ ದುರ್ಧ್ಯಾನದಿಂದ ತುಂಬಿರುವುದು ಅದಕ್ಕಾಗಿ ಅಣ್ಣಗಳಿರಾ, ದಾನ ಮಾರ್ಗದಲ್ಲಿ ವೆಚ್ಚವಾಗುವ ಧನವೇ ತಮ್ಮದೆಂದು ತಿಳಿಯಬೇಕು

ಸತ್ಪಾತ್ರದಾನದ ಫಲ— ಪಾತ್ರದಾನದಲ್ಲಿ ವೆಚ್ಚಮಾಡಿದ ಧನವು ಮರಣ ಸಮಯದಲ್ಲಿ ಪರಿಣಾಮವನ್ನು ನಿರ್ಮಲ ಮಾಡಿ, ಅಂತರ್ಮುಹೂರ್ತದಲ್ಲಿ ಸ್ವರ್ಗ ಸಂಪತ್ತಿಯನ್ನು ಪ್ರಾಪ್ತಮಾಡಿ ಕೊಡುತ್ತದೆ ಸದ್ಯಕ್ಕೆ ನಿರ್ಗ್ರಂಥ, ವೀತರಾಗಿ, ಸರ್ವಪ್ರಕಾರದ ಮೂಲಗುಣ ಹಾಗೂ ಉತ್ತರ ಗುಣಗಳನ್ನು ಧರಿಸಿ, ದಶಲಾಕ್ಷಣಿಕ ಧರ್ಮವನ್ನು ಪಾಲನ ಮಾಡುವಂಥವರೂ ಇಪ್ಪತ್ತೆರಡು ಪರೀಷಹಗಳನ್ನು ಸಹನ ಮಾಡುವಂಥವರೂ ಆದ ನಿರ್ಗ್ರಂಥ ಸಾಧುಗಳು ಉತ್ತಮ ಪಾತ್ರರೆನಿಸುತ್ತಾರೆ. ದರ್ಶನ ಪ್ರತಿಮೆಯಿಂದ ಉದ್ದಿಷ್ಟಾಹಾರತ್ಯಾಗ ಪ್ರತಿಮೆಯ ವರೆಗೆ ಹನ್ನೊಂದು ಪ್ರತಿಮೆಗಳನ್ನು ಧಾರಣಮಾಡುವಂಥ ಶ್ರಾವಕರು ಮಧ್ಯಮ ಪಾತ್ರರಾಗಿದ್ದಾರೆ ಯಾರಿಗೆ ವ್ರತಗಳಿಲ್ಲವೋ— ಆದರೂ ಜಿನೇಶ್ವರರು ವರ್ಣಿಸಿದಂಥ ತತ್ತ್ವಗಳ ಮೇಲೆ ಸಾಯುವ ವರೆಗೂ ಪೂರ್ಣ ವಿಶ್ವಾಸವಿರುವುದೋ—ಅಂಥ ಶ್ರಾವಕರು ಜಘನ್ಯ ಪಾತ್ರರಾಗಿದ್ದಾರೆ. ಇವರು ಜನ್ಮ ಮರಣ ರೂಪೀ ಸಂಸಾರ ಪರಿಭ್ರಮಣಕ್ಕೆ ಭಯಭೀತರಾಗಿರುತ್ತಾರೆ ಅಲ್ಲದೆ ನಾಲ್ಕು ಪ್ರಕಾರದ ಸಂಘಕ್ಕೆ ಯಾವಾಗಲೂ ಹಿತವಾಗಬೇಕೆಂಬ ಇಚ್ಛೆಯನ್ನು ಇಟ್ಟುಕೊಂಡಿರುತ್ತಾರೆ ಇವರಿಗೆ ಸಂಸಾರ, ದೇಹ, ಭೋಗಗಳ ವಿಷಯದಲ್ಲಿ ವಿರಕ್ತಿಯು ಉಂಟಾಗಿರುತ್ತದೆ ಇವರು ಜಿನಶಾಸನವನ್ನು ಉದ್ಯೋತಗೊಳಿಸುತ್ತಾರೆ. ತಮ್ಮ ನಿಂದೆಯನ್ನು ಮಾಡಿಕೊಂಡು ಸ್ವಪರತತ್ತ್ವ ವಿಚಾರದಲ್ಲಿ ತನ್ಮಯರಾಗಿರುತ್ತಾರೆ ಜಿನೇಶ್ವರರು ಹೇಳಿದ ತತ್ವದಲ್ಲಿ ಹಾಗೂ ಧರ್ಮದಲ್ಲಿ ದೃಢವಾದ ನಿಶ್ಚಯ ಉಳ್ಳವರು ಧರ್ಮ ಹಾಗೂ ಅಧರ್ಮದ ಫಲಗಳ ಮೇಲೆ ಅನುರಾಗ ಉಳ್ಳವರು, ಸಂಪೂರ್ಣ ಜೀವಿಗಳ ವಿಷಯದಲ್ಲಿ ಅಂತಃಕರಣದಲ್ಲಿ ದಯೆಯನ್ನು ಇಡುವಂಥವರು, ಮಂದ ಕಷಾಯಿಗಳು, ಪರಮೇಷ್ಠಿಯ ಭಕ್ತಿಯನ್ನು ಮಾಡುವಂಥವರು, ಸಮ್ಯಕ್ತ್ವದ ಸಂಪೂರ್ಣ ಗುಣಗಳನ್ನು ಧಾರಣ ಮಾಡುವವರು ಜಘನ್ಯ ಪಾತ್ರರಲ್ಲಿ ಸಮಾವೇಶವಾಗುತ್ತಾರೆ. ಈ ರೀತಿಯುಳ್ಳ ಮೂರು ಪ್ರಕಾರದ ಪಾತ್ರಗಳಿಗೆ ಯಥಾಯೋಗ್ಯ ಆಹಾರ, ಔಷಧ, ಶಾಸ್ತ್ರ, ವಸತಿಗೆ ಸ್ಥಳ, ವಸ್ತ್ರ. ಉಪಜೀವಿಕೆ ಮೊದಲಾದವುಗಳನ್ನು, ಸ್ಥೈರ್ಯವು ಪ್ರಾಪ್ತವಾಗಬೇಕೆಂದು ಭಕ್ತಿಯಿಂದಲೂ ವಿನಯದಿಂದಲೂ ಕೊಡಬೇಕು ಅದರ ಪರಿಣಾಮಕ್ಕನುಸರಿಸಿ ಉತ್ತಮ, ಮಧ್ಯಮ, ಜಘನ್ಯ ಭೋಗ ಭೂಮಿಗಳಲ್ಲಿ ದಾತೃಗಳಿಗೆ ಸ್ಥಳವು ದೊರೆಯುತ್ತದೆ ಸಮ್ಯಗ್ದೃಷ್ಟಿ ಜೀವವು ಸೌಧರ್ಮಾದಿಕ ಸ್ವರ್ಗದಲ್ಲಿ ಮಹರ್ದ್ಧಿಕ ದೇವರಲ್ಲಿ ಉತ್ಪನ್ನವಾಗುತ್ತದೆ

ಕುಪಾತ್ರದ ಲಕ್ಷಣ—ಕುಪಾತ್ರದ ಲಕ್ಷಣಗಳು ಹೀಗಿರುತ್ತವೆ—ಅವರಲ್ಲಿ ಸುಳ್ಳು ಧರ್ಮದ ವಿಷಯದಲ್ಲಿ ದೃಢ ಪ್ರೇಮವು ಅಂತಃಕರಣದಲ್ಲಿ ಇರುತ್ತದೆ ಅವರಿಗೆ ಮಿಥ್ಯಾ ತಪಶ್ಚರಣವನ್ನು ಮಾಡುವವರ ಮೇಲೆ ದಯೆಯನ್ನು ತೋರಿಸಿ, ಸಹಾಯಮಾಡಬೇಕೆನಿಸುತ್ತದೆ ಸುಳ್ಳು ಅಥವಾ ಕಠೋರ ವಚನಗಳನ್ನು ಆಡದೆ ಅವರು ಎಲ್ಲರಿಗೂ ಸವಿಯಾದ ಮಾತುಗಳನ್ನು ಆಡುವರು ಸ್ತ್ರೀ—ಪುತ್ರ—ಮಿತ್ರ—ಕುಟುಂಬಗಳ ವಿಷಯದಲ್ಲಿ ನಿಸ್ಪೃಹರಾಗಿರುತ್ತಾರೆ ಆದರೆ ಯಾವಾಗಲೂ ಮಿಥ್ಯಾಧರ್ಮದ ಸೇವನೆಯನ್ನು ಮಾಡುತ್ತಾರೆ ಜಪ, ತಪ, ಸಂಯಮ, ಶೀಲ, ಪಿವ್ರ.ವ.ಗಳ ವಿಷಯದಲ್ಲಿ ಅವರಿಗೆ ಆದರವಿರುತ್ತದೆ ಕಷಾಯವನ್ನು ಮಂದಗೊಳಿಸಿಯೂ ಪರಿಗ್ರಹಗಳನ್ನು ತ್ಯಜಿಸಿಯೂ ಅವರು ಅರಣ್ಯದಲ್ಲಿರುತ್ತಾರೆ ಪಾಪಾರಂಭವನ್ನು ಮಾಡದೆ ಪರೀಷಹಗಳನ್ನು ಸಹನಮಾಡುತ್ತಾರೆ ದಾನ ಪ್ರಕಾರದ ದುಃಖವನ್ನು ಮಾಡದೆ ಸಂತೋಷದಿಂದ ಲಭಿಸಿದಂಥ ಸರಸನೀರಸ ಆಹಾರವನ್ನು ಶಾಂತತೆಯಿಂದ ಸ್ವೀಕರಿಸುತ್ತಾರೆ

ಕ್ಷಮೆಯನ್ನೂ ಧರಿಸಿರುತ್ತಾರೆ. ಆದರೆ ಆತ್ಮಜ್ಞಾನವಿಲ್ಲದೆ ಬಾಹ್ಯ ಕ್ರಿಯಾಕಾಂಡಗಳಿಂದಲೇ ಮೋಕ್ಷವಾಗುತ್ತದೆಂದು ಸ್ವೀಕರಿಸುವವರು ಇವರೆಲ್ಲರೂ ಕುಪಾತ್ರರೆಂದು ತಿಳಿಯಬೇಕು

ಜೈನರಲ್ಲಿಯ ಕುಪಾತ್ರ—ಜಿನಧರ್ಮದೊಳಗಿನ ಅನೇಕ ಜನರು ಏಕಾಂಗಿಗಳಾಗಿ, ತಮ್ಮ ಅಭಿಪ್ರಾಯಗಳ ಹಟವನ್ನೇ ಹಿಡಿದು, ಸ್ವತಃ ಧರ್ಮಾತ್ಮರೆಂದೇ ತಿಳಿಯುತ್ತಾರೆ ಇವರಲ್ಲಿ ಅನೇಕರು ಜಿನೇಶ್ವರನ ಭಜನೆ, ಪೂಜೆ, ಆರಾಧನೆ ಮೊದಲಾದವುಗಳಲ್ಲಿ ಕಾಲ ಕಳೆಯುವುದರಿಂದ ಕೃತಕೃತ್ಯರೆಂದು ಭಾವಿಸುತ್ತಾರೆ ಜ್ಞಾನಾಭ್ಯಾಸ ವ್ರತ ಮೊದಲಾದ ಕ್ರಿಯೆಗಳ ವಿಷಯಕ್ಕೆ ಅನಾಸ್ಥೆಯನ್ನು ತೋರಿಸುತ್ತಾರೆ ಅನೇಕರು ನೀರಿನಿಂದ ತಮ್ಮ ಶರೀರದ ಅಂಗೋಪಾಂಗಗಳನ್ನು ಮೇಲಿಂದ ಮೇಲೆ ತೊಳೆದುಕೊಳ್ಳುವುದು, ಸ್ನಾನಮಾಡಿ ತಮ್ಮ ಕೈಯಿಂದಲೇ ಮಾಡಿಕೊಂಡ ಆಹಾರವನ್ನು ಊಟಮಾಡುವುದು, ಅನ್ನಾದಿ ಸಾಮಗ್ರಿಗಳನ್ನು ಮೇಲಿಂದಮೇಲೆ ತೊಳೆಯುವುದು, ತೊಳೆದ ಸ್ಥಳದಲ್ಲಿಯೇ ಊಟಕ್ಕೆ ಕೂಡುವುದು, ವಸ್ತ್ರಗಳನ್ನು ತೊಳೆಯುವುದು ಇವೇ ಮೊದಲಾದ ಕ್ರಿಯೆಗಳಲ್ಲಿ ಧರ್ಮವಿದೆಯೆಂದು ಭಾವಿಸುತ್ತಾರೆ ಇನ್ನೂ ಹಲವು ಜನರು ಸಾವಧಾನಪೂರ್ವಕವಾಗಿ ನಡೆಯುವುದು, ಕೂಡುವುದು, ಏಳುವುದು, ಮಲಗುವುದು, ನೀರು ಮೊದಲಾದವುಗಳನ್ನು ಎಚ್ಚರದಿಂದ ನೆಲಕ್ಕೆ ಹೊಡೆಯುವುದು, ಉಪಯೋಗಿಸುವುದು, ಸೋಸುವುದು ಈ ಕ್ರಿಯೆಗಳನ್ನು ಮಾಡುವುದರಿಂದಲೇ ತಾವು ಕೃತಾರ್ಥರಾದೆವೆನ್ನುವರು ಇವುಗಳನ್ನುಳಿದು ಉಳಿದ ಕ್ರಿಯೆಗಳು ನಿರರ್ಥಕವಾಗಿವೆ—ಎಂದು ಭಾವಿಸುವರು ಹಲವರು ಉಪವಾಸ, ವ್ರತ, ರಸಪರಿತ್ಯಾಗದಿಂದ ತಮ್ಮನ್ನು ಶ್ರೇಷ್ಠರೆಂದು ತಿಳಿಯುತ್ತಾರೆ ಕೆಲವರು ದುಃಖಿತರಿಗೂ ಹಸಿದವರಿಗೂ ದಾನಕೊಡುವುದರಲ್ಲಿ ಧನ್ಯರೆಂದು ತಿಳಿಯುತ್ತಾರೆ ಹಲವು ಜನ ಭಾವುಕರು ಎಲ್ಲ ಧರ್ಮಗಳು ಸಮಾನವಾಗಿವೆ, ಆ ವಿಷಯದಲ್ಲಿ ಹೆಚ್ಚು ಸೂಕ್ಷ್ಮ ವಿಚಾರಮಾಡುವ ಅವಶ್ಯಕತೆ ಇಲ್ಲವೆಂದು ತಿಳಿಯುತ್ತಾರೆ ಹಲವರು ಕೇವಲ ಪರಮೇಶ್ವರನ ನಾಮಸ್ಮರಣೆಯನ್ನು ಮಾಡುವುದರಲ್ಲಿ ಧರ್ಮವಿದೆಯೆಂದು ಮನ್ನಿಸುತ್ತಾರೆ ಇನ್ನುಳಿದವರು ಇತರ ಜೀವಗಳ ಮೇಲೆ ಉಪಕಾರಮಾಡುವುದು ಮತ್ತು ಸರ್ವರ ವಿನಯಮಾಡುವುದೇ ಧರ್ಮವೆನ್ನುವರು ಕೆಲವರು ಇಂದ್ರಿಯ ನಿಗ್ರಹ ಮಾಡಿ, ಉಪವಾಸ ಮಾಡುವುದರಲ್ಲಿಯೇ ಧರ್ಮವಿದೆಯೆಂದು ತಿಳಿಯುವರು ಹಲವರು ಅನೇಕ ಪ್ರಕಾರದ ವೇಷಗಳನ್ನು ಧರಿಸಿ, ಕಷಾಯವನ್ನು ಮಂದಗೊಳಿಸಿ, ಪರಿಗ್ರಹಗಳನ್ನು ಬಿಟ್ಟಿರುವರು ಅನೇಕರು ಒಮ್ಮೆ ಊಟಮಾಡಿ ತಿರುಗಿ ಯಾಚನೆಯನ್ನು ಮಾಡದೆ ಆ ಒಪ್ಪತ್ತು ಊಟದ ಮೇಲೆಯೇ ಸಂತುಷ್ಟರಾಗಿ ಇರುವರು ಈ ಪ್ರಕಾರ ಅನೇಕ ಜನರು ಏಕಾಂತ ಪಕ್ಷದವರಾದುದರಿಂದ ಅವರಿಗೆ ನಿಜವಾದ ಆತ್ಮಜ್ಞಾನವು ಆಗುವದಿಲ್ಲ ಅದರಿಂದ ಅವರೆಲ್ಲರೂ ಕುಪಾತ್ರರೆಂದು ತಿಳಿಯಬೇಕು. ಇಂಥವರಿಗೆ ದಾನಕೊಡುವುದರಿಂದ ಅದು ಅನೇಕ ಪ್ರಕಾರದ ಫಲಗಳನ್ನು ಕೊಡುತ್ತದೆ ಪಾತ್ರ ಹೇಗೆ, ದಾತೃ ಎಂಥವನು, ಪರಿಣಾಮ ಎಂಥದು, ದ್ರವ್ಯ ಯಾವುದು, ವಿಧಿಯು ಹೇಗೆ ಇರುವುದೋ ಹಾಗೆ ಫಲವು ಪ್ರಾಪ್ತವಾಗುತ್ತದೆ

ಕುಭೋಗ ಭೂಮಿಯೊಳಗಿನ ಅವಸ್ಥೆ— ಅನೇಕ ಜೀವಗಳು ಕುಪಾತ್ರಕ್ಕೆ ದಾನಕೊಟ್ಟ ಕಾರಣದಿಂದ ಕುಭೋಗ ಭೂಮಿಯೊಳಗಿನ ಅಸಂಖ್ಯಾತ ದ್ವೀಪಗಳಲ್ಲಿ ಪಂಚೇಂದ್ರಿಯ ತಿರ್ಯಂಚ ಯುಗಲಗಳಾಗಿ ಜನ್ಮಿಸುತ್ತವೆ ಅಲ್ಲಿ ಅವುಗಳಿಗೆ ನಾಲ್ಕು ಅಂಗುಲ ಪ್ರಮಾಣದ ಸುಗಂಧವುಳ್ಳ ದ್ರವ್ಯವು ತಿನ್ನಲಿಕ್ಕೆ ಲಭಿಸುತ್ತದೆ ಅಮೃತದಂಥ ಮಧುರ ನೀರು ಕುಡಿಯಲಿಕ್ಕೆ ಲಭಿಸುತ್ತದೆ ಪರಸ್ಪರರಲ್ಲಿ ವೈರವಿರೋಧಗಳು ಮೂಲದಲ್ಲಿಯೇ ಇರುವದಿಲ್ಲ ಶೀತ, ಉಷ್ಣ, ಬಿಸಿಲು, ಚಳಿ, ಗಾಳಿ, ಮಳೆ ಇವುಗಳ ಬಾಧೆಯು ಆಗುವದಿಲ್ಲ ಒಂದು ಪಲ್ಯ ಆಯುಷ್ಯವು ಪ್ರಾಪ್ತವಾಗುತ್ತದೆ. ವಿಕಲತ್ರಯಗಳ ಪೀಡೆಯು ಆ ಸ್ಥಳದಲ್ಲಿ ಇರುವದಿಲ್ಲ ಇಲ್ಲಿ ಅನೇಕ ಪ್ರಕಾರದ ಸ್ಥಲಚರ, ನಭಚರ, ತಿರ್ಯಂಚ ಜೀವಗಳಿದ್ದು ಮನಸ್ಸಿಗೆ ಬಂದಂತೆ ವಿಹಾರಮಾಡಿ, ಸುಖವನ್ನು ಅನುಭವಿಸುತ್ತವೆ ಒಂದು ಯುಗಲದ ತರುವಾಯ ಅವುಗಳಲ್ಲಿ ಎರಡನೆಯ ಯುಗಲವು ಜನಿಸುತ್ತದೆ ಮೊದಲನೆಯ ಯುಗಲವು ಮರಣದ ತರುವಾಯ ವ್ಯಂತರವಾಸಿ, ಭವನವಾಸಿ, ಜ್ಯೋತಿಷ್ಕವಾಸಿ ಜೀವಗಳಲ್ಲಿ ಜನ್ಮ ತಕ್ಕೊಳ್ಳುತ್ತದೆ ಕೆಲವರು ಕುಪಾತ್ರ ದಾನದ ಪ್ರಭಾವದಿಂದ ಉತ್ತರ ಕುರು, ದೇವ ಕುರು ಭೋಗಭೂಮಿಯಲ್ಲಿ ತಿರ್ಯಂಚರಾಗಿ, ಅಲ್ಲಿ ಮೂರು ಪಲ್ಯಕಾಲ ಸುಖವನ್ನು ಭೋಗಿಸಿ, ದೇವಲೋಕದಲ್ಲಿ ಉತ್ಪನ್ನರಾಗುತ್ತಾರೆ ಹಲವರು ಹರಿರಮ್ಯಕ ಕ್ಷೇತ್ರಗಳಲ್ಲಿ ಎರಡುಪಲ್ಯ ಆಯುಷ್ಯದೊಡನೆ ತಿರ್ಯಂಚ ಯುಗಲದಲ್ಲಿ ಜನ್ಮ ತಕ್ಕೊಳ್ಳುತ್ತಾರೆ ಅದರಂತೆ ಹೈಮವತ, ಹೈರಣ್ಯವತ ಕ್ಷೇತ್ರಗಳಲ್ಲಿಯೂ ಒಂದು ಪಲ್ಯ ಆಯುಷ್ಯವುಳ್ಳ ತಿರ್ಯಂಚ ಯುಗಲರಾಗುತ್ತಾರೆ ಅಲ್ಲಿಂದ ಮರಣದ ತರುವಾಯ ದೇವಲೋಕದಲ್ಲಿ ಜನ್ಮಿಸುತ್ತಾರೆ.

ಅಂತರ ದ್ವೀಪದೊಳಗಿನ ಮನುಷ್ಯರ ಸ್ವರೂಪ—ತೊಂಭತ್ತಾರು ಅಂತರ ದ್ವೀಪಗಳಿವೆ ಇವುಗಳಲ್ಲಿ ಕುಪಾತ್ರದಾನದ ಪ್ರಭಾವದಿಂದ ಹಲವರು ಜನಿಸುತ್ತಾರೆ ಅವರೂ ಮನುಷ್ಯ ಯುಗಲ ಆಗಿರುತ್ತಾರೆ ಸಮುದ್ರದ ನಾಲ್ಕೂ ದಿಕ್ಕುಗಳಿಗೆ ನಾಲ್ಕು ದ್ವೀಪಗಳಿವೆ. ಅವುಗಳಲ್ಲಿ ಪೂರ್ವದಿಕ್ಕಿನ ದ್ವೀಪಗಳಲ್ಲಿ ಒಂದು ಕಾಲುಳ್ಳ ಮನುಷ್ಯರು, ದಕ್ಷಿಣ ದಿಕ್ಕಿನ ದ್ವೀಪಗಳಲ್ಲಿ ಬಾಲವುಳ್ಳ ಮನುಷ್ಯರು, ಪಶ್ಚಿಮದಲ್ಲಿ ಕೋಡುಗಳಿದ್ದ ಮಾನವರು, ಉತ್ತರಕ್ಕೆ ಮಾತುಗಳಿಲ್ಲದ ಮೂಕ ಮನುಷ್ಯರು ಜನ್ಮಿಸುತ್ತಾರೆ ನಾಲ್ಕು ಉಪದಿಕ್ಕುಗಳ ನಾಲ್ಕು ದ್ವೀಪಗಳಲ್ಲಿ ಅನುಕ್ರಮದಿಂದ ಮೊರದಂಥ ಕಿವಿಯ ಮತ್ತು ಚಕ್ಕುಲೀ ಆಕಾರದ (ಕಿವಿಯ ಹೊರಭಾಗದ ಆಕಾರವುಳ್ಳ) ಕಿವಿಗಳುಳ್ಳ ಜನರು ಹುಟ್ಟುತ್ತಾರೆ ಒಂದು ಕಿವಿಯನ್ನು ಹೊತ್ತುಕೊಂಡು, ಇನ್ನೊಂದು ಕಿವಿಯನ್ನು ಹಾಸಿಕೊಂಡು ಮಲಗುವಷ್ಟು ದೊಡ್ಡ ಕಿವಿಗಳು ಅವರಿಗೆ ಇರುತ್ತವೆ ಉದ್ದ ಕಿವಿಗಳೂ ಮೊಲದಂತೆ ಕಿವಿಗಳುಳ್ಳ ಮನುಷ್ಯರೂ ಸಮುದ್ರದ ವಿದಿಸೆಗಳಲ್ಲಿಯೇ ಹುಟ್ಟುವರು. ಸಿಂಹ, ಕುದುರೆ, ನಾಯಿ, ಹಂದಿ, ಗೂಗಿ, ಹುಲಿ, ಮಂಗ, ನೊಣ, ಕುರಿ, ಆಕಳು, ಆನೆಗಳಂತೆ ಮುಖಗಳುಳ್ಳವರೂ ಕಪ್ಪುವರ್ಣ, ಮೋಡದಂಥ ಬಣ್ಣ, ವಿದ್ಯುಲ್ಲತೆಯಂತೆ ಹೊಳೆಯುವ ವರ್ಣ, ಕನ್ನಡಿಯಂತೆ ನಿರ್ಮಲವಾದ ಮುಖಗಳನ್ನು ಧರಿಸುವವರೂ ಹದಿನಾರು ವಿದೇಶಗಳ ಒಳಭಾಗದಲ್ಲಿಯೂ ಪರ್ವತದ ಒಳಪ್ರದೇಶದಲ್ಲಿಯೂ ಇರುವಂಥ ದ್ವೀಪಗಳಲ್ಲಿ ಉತ್ಪನ್ನರಾಗುತ್ತಾರೆ ಇದೇ ಪ್ರಕಾರ ಲವಣ ಸಮುದ್ರದ ಒಂದು ದಂಡೆಯ ಮೇಲೆ ಇಪ್ಪತ್ತುನಾಲ್ಕು ಅಂತರ ದ್ವೀಪಗಳಿವೆ. ಎರಡೂ ತೀರದಲ್ಲಿ ಕೂಡಿ ೪೮ ಅಂತರದ್ವೀಪ ಮತ್ತು ಕಾಲೋದಧಿ ಸಮುದ್ರದ ೪೮ ಹೀಗೆ ಸೇರಿ ೯೬ ಅಂತರ ದ್ವೀಪಗಳು ಕುಭೋಗ ಭೂಮಿಗಳಾಗಿವೆ ಈ ಸ್ಥಳದಲ್ಲಿ ಕುಪಾತ್ರದಾನದ ಪ್ರಭಾವದಿಂದ ಮನುಷ್ಯ ಯುಗಲವು ಉತ್ಪನ್ನವಾಗುತ್ತದೆ ಇನ್ನು ಒಂದು ಕಾಲುಳ್ಳ ಯುಗಲವು ಗುಹೆಯಲ್ಲಿ ನಿಲ್ಲುವುದು ಸವಿಯಾದ ಅಲ್ಲಿಯ ಮಣ್ಣನ್ನು ತಿನ್ನುವುದು ಇನ್ನು ಉಳಿದ ಪ್ರಕಾರದ ಮನುಷ್ಯರು ಗಿಡದ ಕೆಳಗೆ ಇದ್ದು, ಕಲ್ಪವೃಕ್ಷದಿಂದ ಪ್ರಾಪ್ತವಾದ ಅನೇಕ ಪ್ರಕಾರದ ಫಲಗಳನ್ನು ತಿನ್ನುತ್ತಿರುತ್ತಾರೆ

ಕುಭೋಗ ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟಲಿಕ್ಕೆ ಕಾರಣವಾದಂಥ ಪರಿಣಾಮಗಳು ಹೇಗೆ ಇರುತ್ತವೆ ಎಂಬುದನ್ನು "ತ್ರೈಲೋಕ್ಯಸಾರ" ಎಂಬ ಗ್ರಂಥದಲ್ಲಿ ವರ್ಣಿಸಲಾಗಿದೆ—

> ಜಿಣಲಿಂಗೋ ಮಾಯಾವೀ ಜೋಇಸಮಂತೋಪಜೀವಿ ಧಣಕಂಖಾ ।
> ಅಇಗಉರವಸಂಜುತ್ತಾ ಕರಂತಿ ಜೇ ಪರವಿವಾಹಂ ಚ ॥ ೧ ॥
> ದಂಸಣವಿರಾಹಿಯಾ ಜೇ ದೋಸಂ ಣಾಲೋಚಯಂತಿ ದೂಸಣಗಾ ।
> ಪಂಚಗ್ಗಿತವಾ ಮಿಚ್ಛಾ ಮೋಣಂ ಪರಿಹರಿಯ ಭುಂಜಂತಿ ॥ ೨ ॥
> ದುಬ್ಭಾವ ಅಸುಇಸೂದಗಪುಪ್ಫವಹಿಂ ಜಾಇಸಂಕರಾದೀಹಿಂ ।
> ಕಯದಾಣಾ ವಿ ಕುಪತ್ತೇ ಜೀವಾ ಕುಣರೇಸು ಜಾಯಂತೆ ॥ ೩ ॥

ಅರ್ಥ—ಜಿನಮುದ್ರೆಯನ್ನು ಧರಿಸಿ, ಅನೇಕ ಪರಿಷಹಗಳನ್ನು ಸಹನ ಮಾಡುತ್ತಿದ್ದೂ ಸಹ ಕೆಲವರು ಮಾಯಾಚಾರದ ಪರಿಣಾಮವನ್ನು ಸ್ವೀಕರಿಸಿರುತ್ತಾರೆ. ಕೆಲವರು ಜಿನಲಿಂಗವನ್ನು ಧಾರಣಮಾಡಿ ಜ್ಯೋತಿಷ ವಿದ್ಯಾ, ಮಂತ್ರವಿದ್ಯಾ, ವೈದ್ಯವಿದ್ಯಾ ಇವುಗಳನ್ನೂ ಮಾಡಿ ಜಗತ್ತಿನಲ್ಲಿ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುತ್ತಾರೆ. ದ್ರವ್ಯದ ಅಪೇಕ್ಷೆಯನ್ನು ಇಟ್ಟಿರುತ್ತಾರೆ ಜಿನಲಿಂಗವನ್ನು ಸ್ವೀಕರಿಸುವುದರಿಂದ ಪ್ರಾಪ್ತವಾದ ಋದ್ಧಿಗಳ ಗರ್ವವನ್ನು ಮಾಡುತ್ತಾರೆ ನಾವೇ ಜಗತ್ತಿನಲ್ಲಿ ಪೂಜ್ಯರು, ನಮ್ಮದೇ ಜಗತ್ತಿನಲ್ಲಿ ಪ್ರತಿಷ್ಠೆ, ಇವೇ ಮೊದಲಾದ ಗರ್ವದಿಂದ ಉಬ್ಬಿ ಹೋಗುತ್ತಾರೆ ಸಾತಾಕರ್ಮದ ಉದಯದಿಂದ ಪ್ರಾಪ್ತವಾಗುವ ಸುಖದಿಂದ ಕೆಲವರಿಗೆ ಗರ್ವವೆನಿಸುತ್ತದೆ ಜಿನಲಿಂಗವನ್ನು ಧಾರಣ ಮಾಡಿಯೂ ಕೆಲವರಿಗೆ ಆಹಾರದ ಇಚ್ಛೆಯಾಗುತ್ತದೆ ಅಶುಭ ಕರ್ಮದ ಉದಯದಿಂದ ಹಲವರಿಗೆ ಭಯವೆನಿಸುತ್ತದೆ. ಅನೇಕರಿಗ ಮೈಥುನ ಮಾಡುವ ಇಚ್ಛೆಯು ಇರುತ್ತದೆ ಪರಿಗ್ರಹವನ್ನೂ ಶಿಷ್ಯ ಸಂಪ್ರದಾಯವನ್ನೂ ಕೆಲವರು ಅಪೇಕ್ಷಿಸುತ್ತಾರೆ ತಾವು ಜಿನಲಿಂಗವನ್ನು ಧಾರಣಮಾಡಿಯೂ ಅನ್ಯರ ಮದುವೆ-ಯನ್ನು ಮಾಡಿಕೊಡುವುದರಲ್ಲಿ ಪ್ರವೃತ್ತರಾಗುತ್ತಾರೆ. ಇಂಥವರೆಲ್ಲರೂ ಕೆಟ್ಟ ತಪದ ಪ್ರಭಾವದಿಂದ ಕುಮನುಷ್ಯರಲ್ಲಿ ಹೋಗಿ ಹುಟ್ಟುತ್ತಾರೆ. ಕೆಲವರು ಜಿನಮುದ್ರೆಯನ್ನು ಧಾರಣಮಾಡಿಯೂ ಸಮ್ಯಗ್ದರ್ಶನವನ್ನು ನಷ್ಟಮಾಡಿ-ಕೊಂಡಿರುತ್ತಾರೆ ಇಂಥ ತಪಸ್ವಿಯು ತಮ್ಮ ಗುರುವಿನ ಹತ್ತರ ತನ್ನಿಂದಾದ ದೋಷಗಳ ಆಲೋಚನೆಯನ್ನು ಮಾಡುವದಿಲ್ಲ ತಾನು ಧಾರಣ ಮಾಡಿದ ಲಿಂಗಕ್ಕೆ ಅಯೋಗ್ಯವಾದಂಥ ಜನರ ದೋಷಗಳನ್ನು ತನ್ನ ಮುಖದಿಂದ

ತೆಗೆಯುತ್ತಾರೆ ಕೆಲವರು ಮಿಥ್ಯಾದೃಷ್ಟಿಗಳಾಗಿ ಪಂಚಾಗ್ನಿ ತಪಶ್ಚರಣವನ್ನು ಮಾಡಿ ದೇಹಕ್ಕೆ ಕಷ್ಟ ಕೊಡುತ್ತಾರೆ. ಕೆಲವರು ಮೌನವಿಲ್ಲದೆ ಊಟ ಮಾಡುತ್ತಾರೆ ಹಲವರು ದುಷ್ಟ ವಿಚಾರಗಳಿಂದ ದಾನಕೊಡುತ್ತಾರೆ ಅಶುದ್ಧರಾಗಿದ್ದು ದಾನಕೊಡುತ್ತಾರೆ ಸೂತಕವಿದ್ದರೂ ದಾನಮಾಡುತ್ತಾರೆ ರಜಸ್ವಲೆಯಾದ ಸ್ತ್ರೀಯರ ಸಂಸರ್ಗಮಾಡಿ ದಾನ ಕೊಡುತ್ತಾರೆ ಜಾತಿಸಂಕರ ಮಾಡಿ ದಾನಮಾಡುತ್ತಾರೆ ಕುಪಾತ್ರಗಳಿಗೆ ದಾನಮಾಡುತ್ತಾರೆ ಇಂಥವರೆಲ್ಲರೂ ಕುಮಾನುಷದಲ್ಲಿ ಉತ್ಪನ್ನರಾಗುತ್ತಾರೆ ಯಾವ ಪ್ರಕಾರದ ದುಃಖವನ್ನೂ ಭೋಗಿಸದೆ ಒಂದು ಪಲ್ಯದ ವರೆಗೆ ಆಯುಷ್ಯವನ್ನು ಧರಿಸಿ ಒಂದೇ ಹೊತ್ತಿಗೆ ಇಬ್ಬರೂ ಮರಣ ಹೊಂದುತ್ತಾರೆ ಕೂಡಿಯೇ ಜನ್ಮ ತಕ್ಕೊಳ್ಳುತ್ತಾರೆ ದಾನ ಮತ್ತು ತಪದ ಪ್ರಭಾವದಿಂದ ಸುಖದಲ್ಲಿ ಮಗ್ನರಾಗಿ ಕಾಲವನ್ನು ಪೂರ್ಣಗೊಳಿಸುತ್ತಾರೆ ಮಂದ ಕಷಾಯದ ಪ್ರಭಾವದಿಂದ ಭವನತ್ರಿಕಗಳಲ್ಲಿ ಹೋಗಿ ಹುಟ್ಟುತ್ತಾರೆ ಅನೇಕರು ಕುಪಾತ್ರದಲ್ಲಿ ದಾನವಿತ್ತು ಬಹಳಷ್ಟು ಭೋಗೋಪಭೋಗಗಳನ್ನು ಭೋಗಿಸುವಂಥ ಮನುಷ್ಯರಾಗಿ ಮ್ಲೇಂಚ್ಛ ಜನಾಂಗದಲ್ಲಿ ಜನ್ಮತಕ್ಕೊಳ್ಳುತ್ತಾರೆ. ಕೆಲವರು ನೀಚಕುಲದಲ್ಲಿ ಹುಟ್ಟಿಯೂ ಸಹ ವಿಪುಲ ಧನವುಳ್ಳವರಾಗಿರುತ್ತಾರೆ ಕೆಲವರು ಮದ್ಯಪಾನ, ಮಾಂಸಭಕ್ಷಣ, ವೇಶ್ಯಾಸಕ್ತರಾಗಿದ್ದೂ ನಿರೋಗಿಗಳೇ ಆಗಿರುತ್ತಾರೆ ಹಲವರಿಗೆ ಕುಪಾತ್ರದಾನದ ಪ್ರಭಾವದಿಂದ ರಾಜನ ಮನೆಯಲ್ಲಿ ದಾಸ–ದಾಸಿ, ಆನೆ–ಕುದುರೆ, ನಾಯಿ–ಮಂಗ ಮೊದಲಾದ ಯೋನಿಗಳಲ್ಲಿ ಜನ್ಮ ತಕ್ಕೊಂಡು ಇರಬೇಕಾಗುತ್ತದೆ. ಅಲ್ಲಿ ಒಳ್ಳೆಯ ಊಟ, ವಸ್ತ್ರಾಭರಣ ಮೊದಲಾದ ಭೋಗೋಪಭೋಗಗಳ ವಿಪುಲ ಸಾಮಗ್ರಿಯು ಭೋಗಿಸಲಿಕ್ಕೆ ದೊರೆಯುತ್ತದೆ ಆದರೆ ಸತ್ತಮೇಲೆ ದುರ್ಗತಿಯು ಇವರೆಲ್ಲರಿಗೂ ನಿಶ್ಚಿತವಿರುತ್ತದೆ ಕುಪಾತ್ರಗಳು ವಿವಿಧ ಪ್ರಕಾರ, ದಾತೃಗಳ ಪರಿಣಾಮವೂ ಅನೇಕ ವಿಧ, ದಾನದ ಸಾಮಗ್ರಿಗಳೂ ಅನೇಕ ಪ್ರಕಾರದವು ಇರುತ್ತವೆ. ಅದರಿಂದ ಅವುಗಳ ಫಲಗಳೂ ಸಹ ಅನೇಕ ಪ್ರಕಾರವಾಗಿ ಲಭಿಸುತ್ತಿರುತ್ತವೆ

**ದಯಾದಾನದ ಲಕ್ಷಣ**—ಹಸಿದವ, ಬಡವ, ಕುರುಡ, ಕುಂಟ, ರೋಗಿ, ಅಶಕ್ತ, ಮುದುಕ, ಹುಡುಗ, ಅನಾಥ, ಪರದೇಶಿ, ತನ್ನ ಸಂಘದಿಂದ ತಪ್ಪಿಸಿಕೊಂಡವ, ಕಾರಾಗೃಹದಲ್ಲಿರುವವ, ಕಟ್ಟಿಗೆ ಒಳಗಾದವ, ದುಷ್ಟರ ಕಷ್ಟದಿಂದ ಹೆದರಿ ಬಂದವ, ಸುಲಿಗೆಗೆ ಒಳಗಾದವ, ವಿಧುರ, ಭಯಭೀತ ಪುರುಷ, ಸ್ತ್ರೀ, ಬಾಲಕ, ಕನ್ಯಾ, ಪಶು ಯಾರೇ ಇರಲಿ, ಹಸಿದು, ನೀರಡಿಸಿ, ಶೀತ, ಉಷ್ಣ, ರೋಗ, ವಿಯೋಗ ಮೊದಲಾದ ದುಃಖಗಳಿಂದ ನೋತವರಿದ್ದರೆ ಅಂಥವರನ್ನು ದುಃಖಿತರೆಂದು ತಿಳಿದು, ಕರುಣಾಬುದ್ಧಿಯಿಂದ ಅನ್ನ ವಸ್ತ್ರಾದಿಗಳನ್ನೂ ಕೊಡುವದಕ್ಕೆ ದಯಾದಾನವೆನ್ನುವರು ಇದರಲ್ಲಿಯೂ ಕೂಡ ಜಾತಿ, ಕುಲ, ಆಚಾರ ಮೊದಲಾದವುಗಳನ್ನು ನೋಡಿ, ಯಥಾಯೋಗ್ಯ ದಾನಮಾಡಬೇಕು ತಿನ್ನಬಾರದುದನ್ನು ತಿನ್ನುವಂಥವರಿದ್ದರೆ ಅನ್ನ ಔಷಧಗಳನ್ನಷ್ಟೇ ಅವರಿಗೆ ಕೊಡಬೇಕು. ಹಣ ಹಾಗೂ ಹಣವನ್ನು ಕೊಡಕೂಡದು ನಿಂದ್ಯ ಆಚರಣ ಉಳ್ಳವರಿಗೆ ಅವರ ದುಃಖವು ದೂರಗೊಳ್ಳುವಷ್ಟೇ ಹಣ ಹಾಗೂ ಇಂಥ ದುಃಖಿ ಮನುಷ್ಯನಿಗೆ ಉಪದೇಶ ಕೊಡಲಿಕ್ಕೆ ಯೋಗ್ಯನಿದ್ದಾನೆಂದು ಎನಿಸಿದರೆ ಅವನಿಗೆ ಸ್ಥಾನಕೊಡಬೇಕು ಉಪದೇಶ, ಊಟ, ಅರಿವೆ, ಔಷಧ, ಸ್ಥಾನ, ಮೊದಲಾದವುಗಳನ್ನು ಕೊಡಬೇಕು ಉಪದೇಶಮಾಡಲಿಕ್ಕೆಯೋಗ್ಯನಿಲ್ಲದ ಮನುಷ್ಯನನ್ನು ದುಃಖಿತನೆಂದು ತಿಳಿದು ರೊಟ್ಟಿಯ ತುಂಡೊಂದನ್ನು ಕೊಟ್ಟರೆ ಸಾಕು ಯಾರ ಸೇವೆಮಾಡುವ ಅವಶ್ಯಕತೆಯು ಇರುವುದೋ ಅವರ ವೈಯಾವೃತ್ಯವನ್ನು ಮಾಡಬೇಕು. ಕರುಣಾದಾನವನ್ನು ಪಾತ್ರಾಪಾತ್ರಗಳ ವಿಚಾರಮಾಡದೆ ಕೇವಲ ದಯೆಯನ್ನು ಮನಸ್ಸಿನಲ್ಲಿಟ್ಟು ಕೊಡಬೇಕು ಆದರೂ ದೇಶ, ಕಾಲ, ಪರಿಣಾಮ, ಜಾತಿ, ಕುಲ, ನೀತಿ ಇವುಗಳ ವಿಚಾರಮಾಡಿ ಕೊಡುತ್ತ ಇರಬೇಕು ಮಾಂಸ, ಮದ್ಯಗಳನ್ನು ಸೇವಿಸುವವರಿಗೆ ಹಣವನ್ನು ಕೊಡಬಾರದು ಅತಿಶಯ ದುಃಖಿಯಾದವರನ್ನು ನೋಡಿ, ಕರುಣೆಯು ಹುಟ್ಟಿದರೆ ಅವರಿಗೆ ಅನ್ನದಾನಮಾಡಬೇಕು. ಅದರಿಂದ ತಮ್ಮ ಕೀರ್ತಿಯಾಗಬೇಕು ಎಂಬ ಇಚ್ಛೆ ಇರಬಾರದು ದಾನಕೊಡಲಿಕ್ಕೆ ಯೋಗ್ಯರಲ್ಲದವರು ಅಪಾತ್ರರೆಂದು ತಿಳಿಯಬೇಕು

**ಅಪಾತ್ರದ ಲಕ್ಷಣ**—ಯಾರ ಮನಸ್ಸಿನಲ್ಲಿ ದಯೆ ಇಲ್ಲವೋ ಅವರು ಯಾವಾಗಲೂ ಹಿಂಸೆಯನ್ನು ಮಾಡುತ್ತ ಇದ್ದಾರು ಅತ್ಯಂತ ಲೋಭಿಗಳಾದವರು ತಮ್ಮ ಪರಿಗ್ರಹಗಳು ಹೆಚ್ಚಬೇಕೆಂದು ಒಂದೇ ಸಮನೆ ಇಚ್ಛಿಸುತ್ತಿರಬಹುದು ಯಾವಾಗಲೂ ಸಿರಿವಂತರ ಹತ್ತರ ಯಾಚನೆಯನ್ನು ಮಾಡುವವರು ಕೆಲವರು ವೇದದಲ್ಲಿ ಹೇಳಿದ ಧರ್ಮದ ವಿಷಯದಲ್ಲಿ ಅತ್ಯಂತ ಪ್ರೇಮ ಉಳ್ಳವರು ಹಲವರು ಚಂಡಿ, ಭವಾನಿ ಮೊದಲಾದ ದೇವಿಯರ ಸೇವೆಮಾಡುವವರು ಇನ್ನು ಕೆಲವರು ಕುರಿ, ಕೋಣಗಳನ್ನು ಬಲಿಕೊಡುವಂಥವರು ಇನ್ನುಳಿದವರು ಕುದಾನವನ್ನು

ಸ್ವೀಕರಿಸುವವರೂ ಇರುತ್ತಾರೆ ಮದ್ಯ, ಮಾಂಸ, ವೇಶ್ಯೆಯರಲ್ಲಿ ಆಸಕ್ತರಾದವರೂ ಇರುವರು ಜಿನಧರ್ಮದ ದ್ರೋಹಮಾಡುವವರೂ ಇದ್ದಾರು. ಪರಧನ, ಪರಸ್ತ್ರೀಯರನ್ನು ಇಚ್ಛಿಸಿ, ತಮ್ಮ ಪ್ರಶಂಸೆಯನ್ನು ಮಾಡಿಕೊಳ್ಳುತ್ತಲೂ ಇರಬಹುದು ವ್ರತಾಚರಣೆಯ ನಟನೆಯನ್ನು ಮಾಡಿ ಐದು ಪ್ರಕಾರದ ಪಾಪಗಳನ್ನು ಮಾಡುತ್ತಿರಬಹುದು ಕೆಲವರು ಬಹು ಆರಂಭ, ಬಹು ಪರಿಗ್ರಹ, ತೀವ್ರ ಕಷಾಯ, ಅಸತ್ಯ ಭಾಷಣ, ಕುಶಾಸ್ತ್ರದ ಉಪದೇಶ, ಜಿನಶಾಸನದಲ್ಲಿ ಸುಳ್ಳು ವಿಚಾರಗಳನ್ನು ಸೇರಿಸಿ ವಿವರಿಸುವುದೇ ಮೊದಲಾದವುಗಳನ್ನು ಮಾಡುತ್ತಾರೆ. ವ್ಯಸನಿ, ಧರ್ಮಲಂಡ, ತಿನ್ನಬಾರದುದನ್ನು ತಿನ್ನುವಂಥವ, ವ್ರತ, ಶೀಲ, ಸಂಯಮ, ತಪದಿಂದ ಪರಾಙ್ಮುಖಿ, ವಿಷಯಲೋಲುಪ, ಜಿಹ್ವೇಂದ್ರಿಯಕ್ಕೆ ವಶನಾದಂಥ ಮಿಷ್ಟಾನ್ನ ಭಕ್ಷಕ ಇಂಥ ಜೀವಗಳೆಲ್ಲ ಅಪಾತ್ರಗಳೆಂದು ತಿಳಿಯಬೇಕು ಇವರಲ್ಲಿ ರತ್ನತ್ರಯಗಳು ಇಲ್ಲದಿರುವದರಿಂದ ಪಾತ್ರತೆಯು ಉತ್ಪನ್ನವಾಗುವದಿಲ್ಲ ಅನ್ಯ ಧರ್ಮಾನುಯಾಯಿಗಳಂತೆ ದಯೆ, ಕ್ಷಮಾ, ಸಂತೋಷ, ಸತ್ಯ, ಶೀಲ, ತ್ಯಾಗ, ಪೂಜೆ, ಜಪ-ಜಾಪ್ಯ, ನಾಮಸ್ಮರಣ ಮೊದಲಾದ ಕೃತ್ಯಗಳಲ್ಲಿಯೂ ಯಾರಿಗೆ ಪ್ರೀತಿ ಇಲ್ಲವೋ ಅವರು ಕುಪಾತ್ರಗಳಿಗಿಂತ ಹೀನರು ಇಂಥವರು ಅಧಮರೂ ಅಪಾತ್ರರೂ ಆಗಿದ್ದು, ಅತ್ಯಂತ ಲೋಭಿಗಳೂ ಮದೋನ್ಮತ್ತರೂ ವಿಷಯ ಲಂಪಟಿಗಳೂ ಆಗಿರುತ್ತಾರೆ. ಧರ್ಮಾಚರಣದ ಇಚ್ಛೆ ಇದ್ದರೂ ಮನಸ್ಸಿನಲ್ಲಿ ಇರುವದಿಲ್ಲ ಕೇವಲ ನಾಲಿಗೆಗೆ ವಿವಿಧ ಪ್ರಕಾರದ ಪಕ್ವಾನ್ನಗಳಿಂದ ಪುಷ್ಟಗೊಳಿಸುವದಕ್ಕಾಗಿ ಇಂಥವರು ಜೈನರೆಂಬ ಹೆಸರನ್ನು ಧಾರಣ-ಮಾಡಿರುತ್ತಾರೆ ಧನವನ್ನು ಎತ್ತಿ ಹಾಕುವದಕ್ಕಾಗಿ ಜೈನರ ವೇಷವನ್ನು ಹಾಕಿರುತ್ತಾರೆ ತಮ್ಮ ಪೂಜೆ ಆಗಬೇಕು, ಅದರ ಜೊತೆಗೆ ಧನದ ಲಾಭವೂ ಆಗಬೇಕು ಎಂಬ ಹೇತುವಿನಿಂದ ವ್ರತ, ತಪಶ್ಚರಣ, ಪರಸ ಪಾಚನಾದಿ ಕ್ರಿಯೆಗಳನ್ನು ಮಾಡುತ್ತಿರುತ್ತಾರೆ ಇಂಥವರು ಅಪಾತ್ರರೆಂದು ದಾನಕ್ಕೆ ಯೋಗ್ಯರಲ್ಲ ಇಂಥ ಪುರುಷರಿಗೆ ದಾನಕೊಡುವದೆಂದರೆ ಕಲ್ಲಿನಲ್ಲಿ ಬೀಜವನ್ನು ಬಿತ್ತಿದಂತೆಯೇ ಸರಿ ಇಷ್ಟೇ ಅಲ್ಲ, ಈ ಕುಪಾತ್ರ ದಾನವು ಕಹಿಯಾದ ಪಾತ್ರದಲ್ಲಿ ಹಾಲನ್ನು ಇಟ್ಟಂತೆ, ಅರಣ್ಯದಲ್ಲಿ ಕಳ್ಳರ ಅಧೀನದಲ್ಲಿ ಧನವನ್ನು ಒಪ್ಪಿಸಿದಂತೆ, ಬದುಕಬೇಕೆಂದು ವಿಷವನ್ನು ತಿಂದಂತೆ, ರೋಗವನ್ನು ಕಳೆದುಕೊಳ್ಳಲಿಕ್ಕೆ ಅಪಥ್ಯ ಭೋಜನಮಾಡಿದಂತೆ, ಹಾವಿಗೆ ಹಾಲು ಕುಡಿಸಿದಂತೆ, ದುಃಖೋತ್ಪತ್ತಿಗೆ ಬೀಜ ಹಾಕಿದಂತೆ ಆಗುವದು ತಳವು ಕಾಣದಂಥ ಬಾವಿಯಲ್ಲಿ ಧನವನ್ನು ಒಗೆಯಬಹುದಾದರೂ ಕುಪಾತ್ರಕ್ಕೆ ದಾನಕೊಡಬಾರದು. ಅಪಾತ್ರಕ್ಕೆ ದಾನಮಾಡುವದೆಂದರೆ ತಮ್ಮ ಮನೆಯಲ್ಲಿ ವಿಷದ ಗಿಡವನ್ನು ಬೆಳೆಯಿಸಿದಂತೆಯೇ ಇದೆ ಅಪಾತ್ರದ ಸಂಬಂಧವನ್ನು ದಾವಾಗ್ನಿಯಂತೆ ದೂರದಿಂದಲೇ ತ್ಯಾಗಮಾಡುವದಕ್ಕೆ ತಕ್ಕದಾಗಿರುತ್ತದೆ ಯಾವ ಪ್ರಕಾರ ವಿಷವೃಕ್ಷದ ವಾಸನೆಯು ಮೂರ್ಛಿತಗೊಳಿಸಲಿಕ್ಕೆ ಕಾರಣವಾಗುತ್ತದೆಯೋ ಹಾಗೆಯೇ ಅಪಾತ್ರದ ವಾಸನೆಯೂ ಆತ್ಮಜ್ಞಾನದಿಂದ ಭ್ರಷ್ಟಗೊಳಿಸುತ್ತದೆ.

ಅನ್ನವು ಶಾಸ್ತ್ರವು ಭೈಷಜವು ಮನ್ನಿಸಿಕೊಡುವುದು ಮತ್ತೆ
ಚನ್ನಾಗಭಯವ ಮಾಡುವದು ಇನ್ನಾಗಲಿ ಜಗಕ್ಕೆಲ್ಲ ।
ಕಾವ್ಯ ರಸಾಮೃತ ಧಾರೆಗಳಿಂ ದಿವ್ಯ ಸುಖಾಂಬುಧಿಯಲ್ಲಿ
ಭವ್ಯರು ತಣ್ಣನೆ ತಣಿದಿರಲಿ ಸೇವ್ಯರು ಬುಧರುಗಳಿಂದ ॥

—ಕಲ್ಯಾಣಕೀರ್ತಿ–ಚಿನ್ಮಯಚಿಂತಾಮಣಿ ೧೧೧–೩.

ಇನ್ನು ನಾಲ್ಕು ಪ್ರಕಾರದ ದಾನವನ್ನಿತ್ತು ಆಗಮ ಪ್ರಸಿದ್ಧಿಯನ್ನು ಹೊಂದಿದವರ ಹೆಸರುಗಳನ್ನು ಹೇಳುತ್ತಾರೆ—

ಶ್ರೀಷೇಣವೃಷಭಸೇನೆ ಕೌಂಡೇಶಃ ಸೂಕರಶ್ಚ ದೃಷ್ಟಾಂತಾಃ ।
ವೈಯಾವೃತ್ಯಸ್ಯೈತೇ ಚತುರ್ವಿಕಲ್ಪಸ್ಯ ಮಂತವ್ಯಾಃ ॥ ೧೧೮ ॥[1]

ಅನ್ವಯಾರ್ಥ—(ಶ್ರೀಷೇಣವೃಷಭಸೇನೆ) ಶ್ರೀಷೇಣರಾಜ, ವೃಷಭಸೇನಾ (ಕೌಂಡೇಶಃ) ಕೌಂಡೇಶ (ಚ) ಮತ್ತು (ಶೂಕರಃ) ಸೂಕರ (ಏತೇ) ಇವು (ಚತುರ್ವಿಕಲ್ಪಸ್ಯ) ನಾಲ್ಕು ಪ್ರಕಾರದ (ವೈಯಾವೃತ್ಯಸ್ಯ) ವೈಯಾವೃತ್ತದ–ದಾನದ–(ದೃಷ್ಟಾಂತಾಃ) ಉದಾಹರಣೆಗಳು (ಮಂತವ್ಯಾಃ) ಮಾನ್ಯತೆಯನ್ನು ಹೊಂದಿವೆ

[1] ಆಯುಕವರ್ಣನ ವಿವರ ಹೀಗೆ—

ವಚನ—ಇಂತಾಹಾರದಾನದ ಫಲದಿಂದ ಕೌಂಡೇಶಂ ಆವಾಸದಾನದ ಫಲದಿಂ ಸೂಕರನು ಪೊಂದಿವರೆಯ್ದಿದ ಮಹಿಮೆಗಳು ಮುನಿವರ್ಗಳ ಕಥೆಗಳೊಳು ಕೇಳ್ವುದು

ಅರ್ಥ—ನಾಲ್ಕು ಪ್ರಕಾರದ ವೈಯಾವೃತ್ಯಕ್ಕೆ ಅಂದರೆ ದಾನಕ್ಕೆ ನಾಲ್ಕು ದೃಷ್ಟಾಂತಗಳು ಇರುತ್ತವೆ ಆಹಾರದಾನದಲ್ಲಿ ಶ್ರೀಷೇಣ ರಾಜನು ಪ್ರಸಿದ್ಧನಾಗಿದ್ದಾನೆ ಔಷಧ ದಾನದಲ್ಲಿ ವೃಷಭಸೇನಾ ಎಂಬ ಹೆಸರಿನ ನಾವುಕಾರನ ಮಗಳೊಬ್ಬಳು ಹೆಸರಾಗಿದ್ದಾಳೆ ಶಾಸ್ತ್ರದಾನದಲ್ಲಿ ಕೌಂಡೇಶ ಎಂಬ ಹೆಸರಿನ ಗವಳಿಗನು ಪ್ರಸಿದ್ಧನಿರುವನು ಅವನು ಶಾಸ್ತ್ರದಾನದ ಪ್ರಭಾವದಿಂದ ಮುಂದಿನ ಜನ್ಮದಲ್ಲಿ ಶ್ರುತಕೇವಲಿಯಾದನು. ವಸತಿಗೆ ಸ್ಥಳವನ್ನು ದಾನ ಮಾಡಿದುದರಿಂದ ಸೂಕರ ಹೆಸರಾಗಿದೆ ಅದು ಮರಣದ ತರುವಾಯ ಸ್ವರ್ಗದಲ್ಲಿ ಮಹರ್ದ್ಧಿಕ ದೇವನಾಗಿ ಹುಟ್ಟಿದ ಜೀವವಾಗಿದೆ ದಾನದ ಫಲಕ್ಕೆ ಈ ನಾಲ್ಕು ಜೀವಗಳು ಪ್ರಸಿದ್ಧ ಉದಾಹರಣೆಗಳಾಗಿವೆ

ವಿಶೇಷಾರ್ಥ—ದಾನದ ಅಚಿಂತ್ಯ ಪ್ರಭಾವ. ದಾನದ ಪ್ರಭಾವವು ಅಚಿಂತ್ಯವಾಗಿದೆ ಇಹ ಲೋಕದಲ್ಲಿಯೂ ಸಹ ದಾನ ಮಾಡುವಂಥ ಪುರುಷರಿಗೆ ಮನ್ನಣೆಯು ದೊರೆಯುತ್ತದೆ ಆದರೆ ದಾನಕೊಟ್ಟು, ಅದರಿಂದ ಇಂಥಿಂಥ ವಿಷಯೋಪಭೋಗಗಳು ಸಿಗಬೇಕೆಂಬ ಇಚ್ಛೆಯನ್ನು ಮಾಡುವುದು ಯೋಗ್ಯವಲ್ಲ. ದಾನದ ಫಲವೆಂದು ಇಂದ್ರಿಯೋಪಭೋಗದ ವಸ್ತುಗಳು ದೊರೆಯಬೇಕೆನ್ನುವುದು ಚಿಂತಾಮಣಿಯನ್ನು ಕೊಟ್ಟು ಕಾಜಿನ ತುಂಡುಗಳನ್ನು ತಕ್ಕೊಂಡಂತಿದೆ ಅಲ್ಲದೆ ಅಮೃತವನ್ನು ನೆಲಕ್ಕೆ ಸುರುವಿ ವಿಷವನ್ನು ಕುಡಿದಂತಿದೆ ಹಗ್ಗಕ್ಕಾಗಿ ನವರತ್ನಹಾರವನ್ನು ಕೊಟ್ಟಂತೆಯೇ ನರಿ ಉರುವಲಕ್ಕಾಗಿ ಕಲ್ಪವೃಕ್ಷವನ್ನು ಕಡಿದಂತಾಗುತ್ತದೆ ಕಬ್ಬಿಣ ಬೇಕೆಂದು ಡೋಣೆಯನ್ನು ಒಡೆದಂತಿದೆ ಅಲ್ಲದೆ ತಮ್ಮ ಕೊರಳಲ್ಲಿ ದೊಡ್ಡ ಕಲ್ಲನ್ನು ಕಟ್ಟಿಕೊಂಡು ಆಳವಾದ ನೀರಿನಲ್ಲಿ ಹಾರಿದಂತಾಗುತ್ತದೆ. ಅದರಿಂದ ದಾನಕ್ಕೆ ಪ್ರತಿಫಲವೆಂದು ಭೋಗಾಕಾಂಕ್ಷೆಯನ್ನು ಇಟ್ಟುಕೊಳ್ಳಬಾರದು.

ಇಂದ್ರಿಯ ವಿಷಯಗಳು ದುಃಖವನ್ನು ಕೊಡುವಂಥವಿರುತ್ತವೆ. ಅಗ್ನಿಯಂತೆ ದಾಹ ಉತ್ಪನ್ನ ಮಾಡುವ ಗುಣವು ಇಂದ್ರಿಯ ವಿಷಯಗಳಲ್ಲಿದೆ ಅವು ಕಾಲಕೂಟ ವಿಷದಂತೆ ನಮ್ಮನ್ನು ಅಚೇತನಗೊಳಿಸಿ ಕೊಲ್ಲುತ್ತವೆ ಪಂಚಪಾಪಗಳಲ್ಲಿ ಪ್ರವೃತ್ತಿಯನ್ನುಂಟು ಮಾಡುತ್ತವೆ ಅದರಂತೆ ತೃಷೆಯನ್ನು ಉತ್ಪನ್ನಮಾಡಿ ನರಕಕ್ಕೆ ನಮ್ಮನ್ನೂ ತಲುಪಿಸುತ್ತವೆ ಅದಕ್ಕಾಗಿಯೇ ಇಂದ್ರಿಯ ವಿಷಯಗಳು ವೈರತ್ವವನ್ನು ಹುಟ್ಟಿಸಲಿಕ್ಕೆ ಕಾರಣವಾಗುತ್ತವೆ ಅಲ್ಲದೆ ಜ್ವರದಂತೆ ಸಂತಾಪ, ಮೂರ್ಛೆ, ಪ್ರತಾಪ, ದುಃಖ, ಭಯ, ಶೋಕ ಮತ್ತು ಭ್ರಮೆಗಳನ್ನು ಉತ್ಪನ್ನ ಮಾಡುವಂಥವಿರುತ್ತವೆ ವಿಷಯದ ಚಿಂತೆಯು ಜೀವವನ್ನು ಅಚೇತನಗೊಳಿಸುತ್ತದೆ ಅಂಥದನ್ನು ಸೇವಿಸಿದ ಮೇಲೆ ಅನೇಕ ಭವಗಳಲ್ಲಿ ಮರಣಕ್ಕೆ ಸಮಾನವಾದ ದುಃಖವನ್ನು ಅದು ಕೊಟ್ಟೀತು ಇದರಲ್ಲಿ ಆಶ್ಚರ್ಯವೇನೂ ಇಲ್ಲ ಅದಕ್ಕಾಗಿ ವಿಷಯದ ಇಚ್ಛೆಯನ್ನು ಇಡದೆ ದಾನ-ಧರ್ಮಗಳನ್ನು ಮಾಡಲಿಕ್ಕೆ ಪ್ರವೃತ್ತರಾಗಬೇಕು ಲಾಭಾಂತರಾಯಕರ್ಮದ ಕ್ಷಯೋಪಶಮದಿಂದ ನಮಗೆ ಕೆಲವೊಂದು ಧನವು ಪ್ರಾಪ್ತವಾಗುತ್ತದೆ ಅದರಲ್ಲಿಯೇ ಸಂತೋಷದಿಂದ ಇದ್ದು, ಹೆಚ್ಚಿನ ಧನದ ಅಪೇಕ್ಷೆಯನ್ನು ಮಾಡಬಾರದು ಒಂದು ಕಾಲು ಸೇರು ಅಕ್ಕಿಯು ನಮಗೆ ಊಟಕ್ಕೆ ದೊರೆತರೂ ಸಹ ಅದರೊಳಗಿನ ದಾನದ ವಿಭಾಗವನ್ನು ಬೇರೆಯಾಗಿ ತೆಗೆದು ಇಡಬೇಕು. ದಾನವನ್ನು ಮಾಡುವದಕ್ಕಾಗಿ ಧನವು ಬೇಕೆಂಬ ಅಪೇಕ್ಷೆಯನ್ನೂ ಮಾಡಕೂಡದು ಎಲ್ಲ ಕಡೆಗೂ ಇಚ್ಛೆಯ ಅಭಾವವೇ ದಾನವು ಅದೇ ಉತ್ಕೃಷ್ಟ ತಪವೂ ಆಗಿದೆ. ವೈಯಾವೃತ್ಯಕ್ಕೆ ಅತಿಥಿಸಂವಿಭಾಗವ್ರತವೆಂದೂ ಹೇಳಲಾಗಿದೆ

ಪರಮಾನಂದದಿ ವಜ್ರಜಂಘನರಪಂ ಸತ್ಪಾತ್ರದಾನಕ್ರಿಯಾ-
ನಿರತಂ ಸತ್ಕ್ರಿಯನುತ್ತರೋತ್ತರ ಕುರು ಶ್ರೀನಾಥನಾದಂದು ತಂ- ।
ನರಪಾಲ ಪ್ರಿಯಕಾರಿಗಳ್ ನಕುಲಗೋಲಾಂಗೂಳಶಾರ್ದೂಳ ಸೂ-
ಕರಿಗಳ್ ದಾನದೊಡಂಬಡಿ ಪಡೆದುವಾ ಭೋಗೋರ್ವಿಯೋಳ್ಭೋಗಮಂ ॥
ರತಿವರ ರತಿವೇಗಾಹ್ವಯಕೃತಸುಕೃತಕಪೋತಮಿಥುನಮುತ್ತಮ ಪಾತ್ರಂ ।
ನುತದಾನದೊಡಂಬಡಿಕೆಯಿನತಿಶಯ ಸುಖನಿರತ ಖಚರದಂಪತಿಯಾದರ್ ॥
ಶ್ರೀಷೇಣಂ ಪ್ರಿಳಾಯತನೇಷಂಗತದೋಷ ನಿಖಿಳವಿಷಯಿಜಸುಖಸಂ- ।
ತೋಷಂ ಸುಖಾಮೃತಾರ್ಣವತೋಷಾಕರನಾಗಿ ಪರಮಪದಮಂ ಪಡೆದಂ ॥

ಮಾಘನಂದಿ—ಶಾಸ್ತ್ರಸಾರಸಮುಚ್ಚಯ ಟೀಕು-ಚರಣಾನುಯೋಗ ೧೨೨, ೨೪, ೨೫.

ವೈಯಾವೃತ್ಯದಲ್ಲಿ ಜಿನಪೂಜೆಯೂ ಸಮಾವೇಶವಾಗುತ್ತದೆ. ಅದಕ್ಕಾಗಿ ಆ ವಿಷಯದಲ್ಲಿಯೂ ಇಲ್ಲಿ ಸೂತ್ರ ಹೇಳಿದ್ದಾರೆ—

> ದೇವಾಧಿದೇವಚರಣೇ ಪರಿಚರಣಂ ಸರ್ವದುಃಖನಿರ್ಹರಣಂ ।
> ಕಾಮದುಹಿ ಕಾಮದಾಹಿನಿ ಪರಿಚಿನುಯಾದಾದೃತೋ ನಿತ್ಯಮ್ ॥ ೧೧೯ ॥ [1]

ಅನ್ವಯಾರ್ಥ—(ಕಾಮದುಹಿ) ಇಚ್ಛೆಯನ್ನು ಪೂರ್ಣಗೊಳಿಸುವಂಥ (ಕಾಮದಾಹಿನಿ) ಕಾಮನನ್ನು ಸುಡುವಂಥ (ದೇವಾಧಿದೇವಚರಣೇ) ದೇವಾಧಿದೇವನೆನಿಸುವಂಥ ಅರಹಂತ ದೇವನ ಪಾದಕಮಲಗಳಲ್ಲಿ (ಸರ್ವ-ದುಃಖನಿರ್ಹರಣಮ್) ಎಲ್ಲ ದುಃಖಗಳನ್ನು ನಾಶಮಾಡುವಂಥ (ಪರಿಚರಣಂ) ಪೂಜೆಯನ್ನು (ನಿತ್ಯಂ) ದಿನಾಲು (ಆದೃತಃ ಆದರ ಪೂರ್ವಕವಾಗಿ (ಪರಿಚಿನುಯಾತ್) ಮಾಡಬೇಕು

ಅರ್ಥ—ದೇವನೆಂದರೆ ಇಂದ್ರ ಅವನ ಅಧಿದೇವನೆಂದರೆ ಸ್ವಾಮಿಯಾದ ಅರಿಹಂತದೇವ ಈ ಅರಿಹಂತನ ಚರಣಗಳ ಪರಿಚರಣವೆಂದರೆ ಪೂಜೆ ಇದನ್ನು ದಿನಾಲು ಆದರದಿಂದ ಮಾಡಬೇಕು ಅದು ಎಲ್ಲ ದುಃಖಗಳನ್ನು ನಾಶಮಾಡುವಂಥದಿದೆ ಅಲ್ಲದೆ ಕಾಮನನ್ನು ಸುಟ್ಟುಹಾಕುವಂಥದೂ ಇದೆ [ಇಲ್ಲಿ ವೈಯಾವೃತ್ಯವೆಂಬ ಹೆಸರಿನ ಶಿಕ್ಷಾವ್ರತದಲ್ಲಿ ದೇವಾಧಿದೇವನಾದ ಅರ್ಹಂತದೇವ ನಿತ್ಯ ಪೂಜೆಯನ್ನೂ ಸಮಾವೇಶಗೊಳಿಸಲಾಗಿದೆ ಅಲ್ಲದ ಅದು ಎಲ್ಲ ದುಃಖವನ್ನೂ ಹರಣಮಾಡುವಂಥದೆಂದು ಹೇಳಿದೆ ಆದರೆ ಅದನ್ನು ಆದರದಿಂದ—ಪೂರ್ಣಭಕ್ತಿ ಭಾವಪೂರ್ವಕ—ಅರಹಂತನ ಚರಣಗಳಲ್ಲಿ ಸಮರ್ಪಿತ ಚಿತ್ತನಾಗಿ ಮಾಡಲಿಕ್ಕೆಬೇಕು. ಹಾಗೆ ಮಾಡದೆ ಆದರ-ಉತ್ಸಾಹಗಳಿಲ್ಲದೆಯೂ ನಿಯಮವನ್ನು ಪೂರ್ಣಗೊಳಿಸಲಿಕ್ಕೆಂದು ಲೋಕಾಚಾರದ ದೃಷ್ಟಿಯಿಂದ ಮಾಡಿದ ಪೂಜೆಯು ಸಾರ್ಥಕವೆನಿಸದು. ಆಲಸ್ಯದಿಂದ ಮನಸ್ಸಿಲ್ಲದೆ ಮಾಡಿದ ಪೂಜೆಯೂ ಉಪಜೀವನದ ಸಾಧನವೆಂದು ಮಾಡುವ ಪೂಜೆಯೂ ನಿರರ್ಥಕ-ವಾದವುಗಳು. ಇವು ನಿಜವಾದ ಪೂಜಾಫಲವನ್ನು ಒದಗಿಸಲಾರವು ಇನ್ನು ವೈಯಾವೃತ್ಯದಲ್ಲಿ ದಾನದ ದೃಷ್ಟಿಯಿಂದ ನಾಲ್ಕು ಭೇದಗಳನ್ನು ಮಾಡಲಾಗಿದೆ ಆದರೆ ಅದರಲ್ಲಿ ಈ ಪೂಜೆಯೆಂಬುದು ಸಮಾವೇಶವಾಗುವದಿಲ್ಲ ಗೃಹಸ್ಥನ ಆವಶ್ಯಕ ಆರು ಕ್ರಿಯೆಗಳಲ್ಲಿಯೂ ದಾನ, ಪೂಜೆಗಳೆಂಬವು ಭಿನ್ನ ಭಿನ್ನವಾಗಿಯೇ ಇವೆ ಅದಕ್ಕಾಗಿಯೇ ಪ್ರಭಾಚಂದ್ರಾಚಾರ್ಯರು ತಮ್ಮ ಟೀಕೆಯಲ್ಲಿ ದಾನದ ವಿಷಯವನ್ನು ವಿವರಿಸಿ ಮುಗಿಸುವಾಗ, ಈ ಸೂತ್ರವನ್ನು ಆರಂಭಿಸುವ ಪೂರ್ವದಲ್ಲಿ "ಯಥಾ ವೈಯಾವೃತ್ಯಂ ವಿದಧತಾ ಚತುರ್ವಿಧಂ ದಾನಂ ದಾತವ್ಯಂ ತಥಾ ಪೂಜಾವಿಧಾನಮಪಿ ಕರ್ತವ್ಯಮಿತ್ಯಾಹ"—ಎಂದು ಹೇಳಿದ್ದಾರೆ ಇದರಿಂದ "ವೈಯಾವೃತ್ಯದ ಅನುಷ್ಠಾನವನ್ನು ಮಾಡುವಾಗ ಹೇಗೆ ನಾಲ್ಕು ಪ್ರಕಾರದ ದಾನಗಳನ್ನು ಕೊಡಲಿಕ್ಕೆ ಬೇಕೊ ಹಾಗೆಯೇ ಪೂಜಾ ವಿಧಾನವನ್ನೂ ಮಾಡಲಿಕ್ಕೆ ಬೇಕು," ಎಂಬುದು ಸ್ಪಷ್ಟವಾಗುತ್ತದೆ ಆದರೆ ಅರ್ಹಂತದೇವನು ಹಸಿವು, ನೀರಡಿಕೆ, ರೋಗ, ಶೋಕಾದಿಗಳಿಗೆ ಒಳಗಾದವನು ಅಲ್ಲ ಊಟ ಮೊದಲಾದವುಗಳನ್ನೂ ಸ್ವೀಕರಿಸುವದಿಲ್ಲ ಅದರಿಂದ ಇವರಿಗೆ ಆಹಾರ ದಾನಮಾಡುವುದು ಸಾಧ್ಯವಿಲ್ಲ [2] ಅಂದ ಮೇಲೆ ದೇವಾಧಿದೇವನ ಪೂಜೆಯು ದಾನವೆಂದು ತಿಳಿಯುವುದು ಯೋಗ್ಯವೆನಿಸಲಾರದು ಮೇಲಾಗಿ ಇಲ್ಲಿ ಪೂಜೆಯ ಯಾವ ರೂಪ ವಿಶೇಷವನ್ನೂ ನಿರ್ದೇಶಿಸಿಲ್ಲ. ಪೂಜೆಗೆ ಒಂದೇ ಸ್ವರೂಪವೂ ಇಲ್ಲ ಪೂಜ್ಯರಿಗೆ ತೋರಿಸುವ ಆದರ-ಸತ್ಕಾರ ರೂಪ ಪ್ರವೃತ್ತಿಗೇನೇ ಪೂಜೆಯೆಂದು ಹೆಸರಿದೆ. ಅಂದಮೇಲೆ ಪೂಜೆಯನ್ನು ತಮ್ಮ ತಮ್ಮ ರುಚಿ, ಶಕ್ತಿ, ಭಕ್ತಿ ಮತ್ತು ಪರಿಸ್ಥಿತಿಗಳಿಗೆ ಅನುಸಾರವಾಗಿ ಅನೇಕ ಪ್ರಕಾರವಾಗಿ ಮಾಡಲಿಕ್ಕೆ ಬರುತ್ತದೆ ಅದರಿಂದ ಪೂಜೆಗೆ ಎಲ್ಲ ಕಡೆಗೂ ಒಂದೇ ರೂಪವೆಂಬುದು ಉಳಿಯುವದಿಲ್ಲ. ಯಾರನ್ನು ನಾವು ಪೂಜಿಸುತ್ತೇವೆಯೋ

---

[1] ಆಯತವರ್ಮನ ವಿಚಾರ ಹೀಗೆ

ವಚನ—ಶ್ರಾವಕಂ ನಿತ್ಯಸ್ಥಿತಿಯೊಳಕ್ಕೆ ಪರ್ವದಿನಂಗಳೊಳಕ್ಕೆ ತನ್ನ ಸಾಮಾಯಿಕದ ಸಮಯದೊಳಕ್ಕೆ ಅಮಿತಪ್ರಭಪರಮೇಶ್ವರ ಚರಣಸರಸಿರುಹಂಗಳ್ಗೆ ಪೂಜಾಭಿಷೇಕಂಗಳಂ ಮಾಡುಗೆ

[2] ನಾರ್ಹಃ ಕ್ಷುತ್ತೃಡ್ವಿನಾಶಾದ್ವಿವಿಧರಸಯುತೈರನ್ನಪಾನೈರಶುಚ್ಯಾ-
ನಾಸ್ಪೃಷ್ಟೈರ್ಗಂಧಮಾಲ್ಯೈರ್ನಹಿ ಮೃದುಶಯನೈರ್ಗ್ಲಾನಿನಿದ್ರಾದ್ಯಭಾವಾತ್ ।
ಆತಂಕಾರ್ತೇರಭಾವೇ ತದುಪಶಮನಸದ್ಭೇಷಜಾನರ್ಥತಾವದ್-
ದೀಪಾನರ್ಥಕ್ಯವದ್ವಾ ವ್ಯಪಗತತಿಮಿರೇ ದೃಶ್ಯಮಾನೇ ಸಮಸ್ತೇ ॥

—ಪೂಜ್ಯಪಾದಾಚಾರ್ಯ—ಸಿದ್ಧಭಕ್ತಿ.

ಅವರಿಗೆ ಅನುಕೂಲವೆನಿಸುವ ವರ್ತನವಿಡುವುದೇ ಶ್ರೇಷ್ಠರೂಪದ ಪೂಜೆ ಎನಿಸುವದು ಇದು ಗುಣದ ಅನುಸರಣ-ವಾಗಿದೆ ಪೂಜೆಯಲ್ಲಿ ಇದಕ್ಕೇ ಮೊದಲಸ್ಥಾನವಿದೆ ಇನ್ನು ಪೂಜೆಯಲ್ಲಿ ಎರಡನೆಯ ಸ್ಥಾನವು ಅವರಿಗೆ ಅನುಕೂಲ-ವರ್ತನದತ್ತ ಒಯ್ಯುವಂಥ ಸ್ತುತಿ-ಸ್ತೋತ್ರಾದಿಗಳಿಗಿದೆ ಇವು ಪೂಜ್ಯರ ಪುಣ್ಯಗುಣಗಳ ಸ್ಮರಣೆಯನ್ನು ತಂದುಕೊಡುತ್ತವೆ ಅಲ್ಲದೆ ಪೂಜಕನನ್ನು ಪಾಪದಿಂದ ಸಂರಕ್ಷಿಸಿ, ಪವಿತ್ರಗೊಳಿಸುತ್ತವೆ ಹೀಗೆ ನೋಡುವಾಗ ಪೂಜ್ಯವ್ಯಕ್ತಿಯು ಎದುರಿಗೆ ಇಲ್ಲದಿದ್ದರೂ ನಮ್ಮ ಶ್ರೇಯೋಮಾರ್ಗವು ಸುಲಭವಾಗುತ್ತದೆ[1]. ಪೂಜೆಯ ಈ ಎರಡು ರೂಪಗಳು ಗ್ರಂಥಕರ್ತರಾದ ಶ್ರೀ ಸ್ವಾಮಿ ಸಮಂತಭದ್ರಾಚಾರ್ಯರಿಗೆ ಎಲ್ಲಕ್ಕೂ ಹೆಚ್ಚು ಸೇರುತ್ತವೆ ಅವರು ತಮ್ಮನ್ನು ಅರ್ಹಂತರ ಅನುಕೂಲ ಆಚರಣೆಯ ಪಡಿಯಚ್ಚಿನಲ್ಲಿ ಒತ್ತಿಕೊಂಡಿದ್ದಾರೆ ಅಲ್ಲದೆ ಅವರಿಗೆ ಸ್ತುತಿ-ಸ್ತೋತ್ರಗಳೂ ಬಹಳಷ್ಟು ಸೇರುತ್ತವೆ ಅವುಗಳನ್ನು ಅವರು ಆತ್ಮವಿಕಾಸದ ಮಾರ್ಗದಲ್ಲಿ ಸಹಾಯಕವೆಂದು ತಿಳಿಯುತ್ತಿದ್ದರು ಇದೇ ದೃಷ್ಟಿಯಿಂದ ಅವರು ಸ್ತೋತ್ರಾದಿಗಳಲ್ಲಿ ತನ್ಮಯರಾಗಿರುತ್ತಿದ್ದರು ಸಮಂತಭದ್ರರು ಯಾರ ಪ್ರಸನ್ನತೆಯನ್ನು ಸಂಪಾದಿಸುವದಕ್ಕಾಗಿಯೂ ಯಾವ ಲೌಕಿಕ ಲಾಭಕ್ಕಾಗಿಯೂ ಸ್ತುತಿಸಿದ್ದಲ್ಲ ಅವರು ಜಲ-ಚಂದನ-ಅಕ್ಷತಾದಿಗಳಿಂದ ಪೂಜೆಯನ್ನು ಮಾಡದಿದ್ದರೂ ಪೂಜಕರಾಗಿದ್ದಾರೆ. ಅವರ ದ್ರವ್ಯ ಪೂಜೆಯು, ತಮ್ಮ ವಚನ ಮತ್ತು ಕಾಯಗಳನ್ನು ಅನ್ಯ ವ್ಯವಹಾರಗಳಿಂದ ಪರಿವರ್ತಿಸಿ ಪೂಜ್ಯರ ಸನ್ನಿಧಿಯಲ್ಲಿ ಪ್ರಾರ್ಥನೆ-ಸ್ತುತಿಗಳಲ್ಲಿಯೂ ಪ್ರಣಾಮಾಂಜಲಿಯಲ್ಲಿಯೂ ಏಕಾಗ್ರಗೊಳಿಸುವು-ದರಲ್ಲಿಯೇ ಸನ್ನಿಹಿತವಾಗಿದೆ ಇದು ಬಹುತರವಾಗಿ ಅತಿ ಪ್ರಾಚೀನ ಕಾಲದಲ್ಲಿ ಮಾಡಲ್ಪಡುವ 'ದ್ರವ್ಯಪೂಜೆಯು' ಆ ಸಮಯದ ರೂಪವಾಗಿರಬೇಕು ಇದು ಶ್ರೀ ಅಮಿತಗತಿ ಆಚಾರ್ಯರ ಕೆಳಗೆ ಕಾಣಿಸಿದ ಮಾತಿನಿಂದಲೂ ಸ್ಪಷ್ಟವಾಗುತ್ತದೆ —

ವಚೋವಿಗ್ರಹಸಂಕೋಚೋ ದ್ರವ್ಯಪೂಜಾ ನಿಗದ್ಯತೇ ।<br>
ತತ್ರ ಮಾನಸಸಂಕೋಚೋ ಭಾವಪೂಜಾ ಪುರಾತನೈಃ ॥ —ಉಪಾಸಕಾಚಾರ

ಈ ಸಂದರ್ಭದಲ್ಲಿ ಸ್ವಾಮಿ ಸಮಂತಭದ್ರರು ಈ ಸೂತ್ರದಲ್ಲಿ ಪ್ರಯೋಗಿಸಿದ 'ಪರಿಚರಣ' ಎಂಬ ಪದಕ್ಕೆ ಅನುಕೂಲ ವರ್ತನ ಎಂಬ ಅರ್ಥದ ಜೊತೆಗೆ ಗುಣಸ್ಮರಣ ಎಂದೂ ಆಗುತ್ತದೆ ಗುಣಸ್ಮರಣವೆಂದರೆ ಅವರ ಸ್ತುತಿ-ಸ್ತೋತ್ರಗಳಾಗಿವೆ ಜೊತೆಗೆ ದೇವಾಧಿದೇವನ ಪೂಜೆ-ಸೇವೆಗಳಲ್ಲಿ ಅವನ ಶಾಸನದ ಪೂಜೆ-ಸೇವೆಗಳೂ ಸಮ್ಮಿಳಿತವಾಗುತ್ತವೆ ಸ ಧ]

ವಿಶೇಷಾರ್ಥ—ಗೃಹಸ್ಥನು ದಿನಾಲು ಜಿನಪೂಜೆಯನ್ನು ಮಾಡಬೇಕು. ಇದಕ್ಕೆ ಸಮಾನವಾದ ಉತ್ತಮ ಕಾರ್ಯವು ಬೇರೊಂದಿಲ್ಲ. ಅಶುಭ ಕರ್ಮದ ಅಭಾವದಿಂದ ಮನುಷ್ಯ ತಿರ್ಯಂಚರಂತೆ ಸಪ್ತಧಾತುಮಯ ದೇಹವು ಅರಹಂತರಿಗೆ ಇಲ್ಲ ಅವರಿಗೆ ಆಹಾರದ ಇಚ್ಛೆಯು ಇಲ್ಲದುದರಿಂದ ಹಸಿವು ನೀರಡಿಕೆಗಳ ವೇದನೆಯು ಇರುವದಿಲ್ಲ. ಕಂಠದಲ್ಲಿ ಅಮೃತವು ಹರಿಯುತ್ತಿರುತ್ತದೆ ಆದರಿಂದ ಹಸಿವು ನೀರಡಿಕೆಗಳ ಬಾಧೆಯು ಆಗುವದಿಲ್ಲ. ಮುಪ್ಪು ರೋಗ ಮೊದಲಾದವುಗಳ ವಿಕಾರವು ಅವರಿಗೆ ಇಲ್ಲ ಇಂಥ ಸ್ಥಿತಿಯುಳ್ಳವರಿಗೆ ದೇವರೆಂದು ಹೇಳಿದೆ ಯಾರ ಜ್ಞಾನಾವರಣ ವೀರ್ಯಾಂತರಾಯಾದಿಕ ಕರ್ಮಗಳು ಇದಕ್ಕಿಂತಲೂ ಹೆಚ್ಚಾಗಿ ಕ್ಷಯೋಪಶಮವಾಗಿರುವವೋ ಅವರಿಗೆ ಉಳಿದ ದೇವರಲ್ಲಿ ಇಲ್ಲದಂಥ ಜ್ಞಾನ ಮತ್ತು ವೀರ್ಯದ ಶಕ್ತಿಗಳು ಹೆಚ್ಚಾಗಿ ಪ್ರಾಪ್ತವಾಗುತ್ತವೆ ಅಂತಲೇ ದೇವರಲ್ಲಿ ಹೆಚ್ಚಿನವ ಎನ್ನಿಸಿಕೊಳ್ಳುತ್ತಾನೆ ದೇವರ ಸ್ವಾಮಿತ್ವವು ಪ್ರಾಪ್ತವಾಗುತ್ತದೆ. ಯಾರಿಗೆ ಅಸಂಖ್ಯಾತ ದೇವರು ವಂದನ ಮಾಡುವರೋ, ಯಾರು ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ ಮೊದಲಾದ

---

[1] ನ ಪೂಜಯಾರ್ಥಸ್ತ್ವಯಿ ವೀತರಾಗೇ ನ ನಿಂದಯಾ ನಾಥ ವಿವಾಂತವೈರೇ ।<br>
ತಥಾಪಿ ತೇ ಪುಣ್ಯಗುಣಸ್ಮೃತಿರ್ನಃ ಪುನಾತಿ ಚಿತ್ತಂ ದುರಿತಾಂಜನೇಭ್ಯಃ ॥ ೫೭ ॥

ಸ್ತುತಿಃ ಸ್ತೋತುಃ ಸಾಧೋಃ ಕುಶಲಪರಿಣಾಮಾಯ ಸ ತದಾ ಭವೇನ್ಮಾ ವಾ ಸ್ತುತ್ಯಃ ಫಲಮಪಿ ತತಸ್ತಸ್ಯ ಚ ಸತಃ ।<br>
ಕಿಮೇವಂ ಸ್ವಾಧೀನ್ಯಾಜ್ಜಗತಿ ಸುಲಭೇ ಶ್ರಾಯಸಪಥೇ ಸ್ತುಯಾನ್ನ ತ್ವಾ ವಿದ್ವಾನ್ಸತತಮಭಿಪೂಜ್ಯಂ ನಮಿಜಿನಮ್ ॥ ೧೧೬ ॥<br>
—ಸ್ವಯಂಭೂಸ್ತೋತ್ರ.

ಇಲ್ಲಿ ಮೊದಲನೆಯ ಪದ್ಯದಲ್ಲಿ ಬಂದ 'ಪೂಜೆ' ಎಂಬ ಶಬ್ದವು ನಿಂದೆಯ ಪ್ರತಿಪಕ್ಷಿಯಾಗಿರುವುದರಿಂದ 'ಸ್ತುತಿ' ಎಂಬ ಅರ್ಥದಲ್ಲಿದೆ ಎರಡನೆಯ ಪದ್ಯದಲ್ಲಿ 'ಸ್ತುಯಾತ್' ಪದದ ಜೊತೆಯಲ್ಲಿ 'ಅಭಿಪೂಜ್ಯಂ' ಇರುವುದರಿಂದ 'ಪೂಜೆ' ಎಂಬ ಅರ್ಥವನ್ನು ಕೊಡುತ್ತದೆ

ಆತ್ಮನ ಘಾತ ಮಾಡುವಂಥ ಕರ್ಮದ ನಾಶಮಾಡಿ ಜಿನೇಂದ್ರ ಪದವನ್ನು ಸಂಪಾದಿಸಿರುವರೋ ಅವರೇ ಇಂದ್ರಾದಿಗಳಿಂದ ವಂದ್ಯರಾಗಿದ್ದಾರೆ ಇಂಥ ದೇವಾಧಿದೇವನ ಪಾದಗಳ ಪೂಜೆಯು ಸಂಪೂರ್ಣ ದುಃಖವನ್ನು ನಾಶಮಾಡುವಂಥದಿದೆ ಇಂದ್ರಿಯಗಳ ವಿಷಯದ ಇಚ್ಛೆಯನ್ನು ನಾಶಮಾಡಿ, ಮೋಕ್ಷರೂಪೀ ಕಾಮನೆಯನ್ನು ಪೂರ್ಣಮಾಡುವಂಥದಿದೆ ಅಂತಲೇ ಅನ್ಯದೇವರ ಆರಾಧನೆಯನ್ನು ಬಿಟ್ಟು, ಜಿನೇಶ್ವರನ ಆರಾಧನೆಯನ್ನು ಮಾಡಬೇಕು

ಬಹಳಷ್ಟು ಕಾಲ ರಾಗ-ದ್ವೇಷ-ಮೋಹಗಳುಳ್ಳ ಜೀವಗಳ ಆರಾಧನೆಯನ್ನು ಮಾಡಿ, ಭಯಂಕರ ಕರ್ಮಬಂಧವನ್ನು ಹೊಂದಿ, ಸಂಸಾರದಲ್ಲಿ ಪರಿಭ್ರಮಣ ಮಾಡಿದೆವು ಅದರ ಬದಲಾಗಿ ವೀತರಾಗ ಸರ್ವಜ್ಞನ ಆರಾಧನೆಯನ್ನು ಮಾಡಿದ್ದರೆ ಕರ್ಮದ ನಾಶವಾಗುತ್ತಿತ್ತು ಅಲ್ಲದೆ ಮೋಕ್ಷರೂಪೀ ಅಕ್ಷಯ ಸುಖವು ಪ್ರಾಪ್ತವಾಗುತ್ತಿತ್ತು. ಸರ್ವ ದುಃಖಗಳ ನಾಶವು ಜಿನಪೂಜೆಯಿಂದ ಆಗುತ್ತದೆಂದು ಅದನ್ನು ಮಾಡುವುದು ಅವಶ್ಯವಾಗಿದೆ

ಒಂದು ಸಂಶಯ—ಅರ್ಹಂತನು ಲೋಕದ ಅಗ್ರಭಾಗದಲ್ಲಿ-ಮೋಕ್ಷಸ್ಥಾನದಲ್ಲಿ-ಹೋಗಿ ನಿಂತಸು ಅವನು ಕಲ್ಲು, ತಾಮ್ರ, ಹಿತ್ತಾಳೆಗಳಿಂದ ಮಾಡಿ, ಸ್ಥಾಪನೆ ಮಾಡಿದ ಮೂರ್ತಿಯಲ್ಲಿ ಹೇಗೆ ಬಂದಾನು? ಮತ್ತು ಅವನಿಗೆ ತನ್ನ ಪೂಜೆ, ಸ್ತುತಿಗಳಾಗಬೇಕೆಂಬ ಇಚ್ಛೆಯಾದರೂ ಹೇಗಿದ್ದೀತು? ಅವನು ತನ್ನ ಅನಂತ ಜ್ಞಾನ ಮತ್ತು ಅನಂತ ಸುಖದಲ್ಲಿ ಮಗ್ನನಾಗಿರುತ್ತಾನೆ ಯಾರು ಕಷಾಯದಿಂದ ಕೂಡಿರುವರೋ ಅವರಿಗೆ ತಮ್ಮ ಪೂಜೆಯಾಗ-ಬೇಕೆಂದು ಎನಿಸುತ್ತದೆ ಅವನೇ ತನ್ನ ಸ್ತುತಿಯನ್ನು ಯಾರಾದರೂ ಮಾಡಿದರೆ ಸಂತುಷ್ಟನಾಗುವನು ಇಂಥವನು ಸಂಸಾರಿಯಾಗಿದ್ದು, ರಾಗ-ದ್ವೇಷಗಳಿಂದ ಕೂಡಿದವನಿರುತ್ತಾನೆ ಅವನಿಗೇ ಪೂಜೆಯು ಸೇರುತ್ತದೆ ವೀತರಾಗ ಭಗವಂತ ಪರಮೇಷ್ಠಿಯು ಅನಂತ ಚತುಷ್ಟಯಗಳಲ್ಲಿ ಲೀನನಾಗಿರುವುದರಿಂದ ಅವನಿಗೆ ಪೂಜೆಯ ಇಚ್ಛೆ ಇಲ್ಲ ಅವನು ಧಾತು-ಪಾಷಾಣಗಳ ಮೂರ್ತಿಯಲ್ಲಿ ಬರುವದಿಲ್ಲ ಯಾರ ಮೇಲೆಯೂ ಉಪಕಾರವನ್ನಾಗಲಿ, ಅಪಕಾರ-ವನ್ನಾಗಲಿ ಮಾಡುವದಿಲ್ಲ ತಮ್ಮ ಪೂಜೆ, ಸ್ತುತಿಗಳನ್ನು ಮಾಡುವವರ ಮೇಲೆಯೂ ಸಂತುಷ್ಟವಾಗುವದಿಲ್ಲ. ನಿಂದೆ ಮಾಡುವವರ ಮೇಲೆ ದ್ವೇಷಮಾಡುವದಿಲ್ಲ ಇಂಥ ಅವಸ್ಥೆಯಲ್ಲಿ ಭಗವಂತನ ಪೂಜೆಯನ್ನು ಏಕೆಮಾಡಬೇಕು?

ಸಮಾಧಾನ— ಭಗವಂತನಿಗೆ ತನ್ನ ಪೂಜೆ, ಸ್ತುತಿಗಳ ಇಚ್ಛೆಯು ಮೂಲದಲ್ಲಿಯೇ ಇಲ್ಲ ಇದು ನಿಜವಿದೆ ಆದರೆ ಗೃಹಸ್ಥನ ಪರಿಣಾಮವು ಯಾವಾಗಲೂ ಶುದ್ಧ ಆತ್ಮನ ಚಿಂತನ ಮಾಡುವುದರಲ್ಲಿ ಸ್ಥಿರವಾಗಿ ಉಳಿಯುವದಿಲ್ಲ ಮೇಲಾಗಿ ಸೌಮ್ಯಭಾವದಲ್ಲಿಯೂ ನಿಲ್ಲುವದಿಲ್ಲ ಗೃಹಸ್ಥನ ಮನವು ನಿರಾಲಂಬವಾಗಿಯೂ ನಿಲ್ಲಲು ಸಾಧ್ಯವಿಲ್ಲ ಪರಮಾತ್ಮ ಭಾವನೆಯ ಅವಲಂಬನದಿಂದ ವೀತರಾಗ ಸ್ವರೂಪದ ಧ್ಯಾನವಾಗಬೇಕೆಂದೂ, ಶುದ್ಧಾತ್ಮನನ್ನು ಅವಲಂಬಿಸುವದಕ್ಕಾಗಿಯೂ, ವಿಷಯ ಕಷಾಯದ ಅವಲಂಬನವನ್ನು ಬಿಟ್ಟು, ಸಾಕ್ಷಾತ್ ಪರಮಾಗಮ ಸ್ವರೂಪದ ಧಾತು ಪಾಷಾಣಗಳ ಪ್ರತಿಬಿಂಬದಲ್ಲಿ ಸಂಕಲ್ಪವನ್ನು ಮಾಡಿ, ಅವನ ಧ್ಯಾನ ಮತ್ತು ಪೂಜೆಗಳನ್ನು ಮಾಡುವುದು ಅವಶ್ಯವಾಗಿದೆ ಆ ಕಾಲದಲ್ಲಿ ವಿಷಯ ಕಷಾಯಗಳ ಸಂಕಲ್ಪದ ಅಭಾವವಿರುತ್ತದೆ ಅಂತಲೇ ದುರ್ಧ್ಯಾನವು ಆಗುವದಿಲ್ಲ ಅಲ್ಲದೆ ಪರಿಣಾಮವು ಶುದ್ಧವಾಗಿರುತ್ತದೆ ಪರಿಣಾಮವು ವಿಶುದ್ಧವಾಗಿರುವುದರ ಪ್ರಭಾವದಿಂದ ಅಶುಭ ಕರ್ಮದ ರಸವು ಒಣಗಿ ಹೋಗುತ್ತದೆ ಅದರ ಸ್ಥಿತಿ ಮತ್ತು ಅನುಭಾಗವು ಕಡಿಮೆಯಾಗುತ್ತದೆ. ಒಟ್ಟಿನಲ್ಲಿ ಪಾಪಕರ್ಮವು ಇಲ್ಲದಂತೆ ಆಗುವದು ಇದಲ್ಲದೆ ಪರಿಣಾಮವು ಶುದ್ಧವಾಗಿರುವುದರಿಂದ ಶುಭ ಪ್ರಕೃತಿಯೊಳಗಿನ ರಸವು ಹೆಚ್ಚುವುದು ಆಯುಕರ್ಮದ ಹೊರತಾಗಿ ಇತರ ಕರ್ಮದ ಪ್ರಕೃತಿಯ ಸ್ಥಿತಿಯು ಕಡಿಮೆಯಾಗುತ್ತ ಹೋಗುತ್ತದೆ ಅಂತಲೇ ವೀತರಾಗ ಪ್ರಭುವಿನ ಸ್ತುತಿ-ಪೂಜೆ-ಧ್ಯಾನಗಳ ಪ್ರಭಾವದಿಂದ ಪಾಪವು ನಾಶವಾಗುತ್ತದೆ, ಅತಿಶಯವಾದ ಪುಣ್ಯಕರ್ಮದ ಪ್ರಾಪ್ತಿಯಾಗುತ್ತದೆ

ಪಾಪ-ಪುಣ್ಯಗಳು ನಮ್ಮ ಪರಿಣಾಮವನ್ನು ಅವಲಂಬಿಸಿವೆ. ಪುಣ್ಯ ಪಾಪಗಳ ಬಂಧದ ಕಾರಣವು ನಮ್ಮ ಪರಿಣಾಮವೇ ಆಗಿದೆ ಬಾಹ್ಯದಲ್ಲಿ ಹೇಗೆ ಅವಲಂಬನ ಇರುವದೋ ಹಾಗೆಯೇ ನಮ್ಮ ಪರಿಣಾಮವು ಆಗುತ್ತಿರುತ್ತದೆ ಭಗವಂತ ಅರಹಂತರು ಧಾತು ಪಾಷಾಣಗಳ ಪ್ರತಿಬಿಂಬದಲ್ಲಿ ಬರುವದಿಲ್ಲ, ಯಾರಿಗೂ ಅಪಕಾರ ಉಪಕಾರಗಳನ್ನು ಮಾಡುವದಿಲ್ಲ, ಆದರೂ ವೀತರಾಗ ಪರಮಾತ್ಮನ ಧ್ಯಾನ ಪೂಜೆಗಳು ನಮ್ಮ ಪರಿಣಾಮವನ್ನು ಶುದ್ಧಮಾಡಲಿಕ್ಕೂ ರಾಗ-ದ್ವೇಷಗಳನ್ನು ನಾಶಮಾಡಲಿಕ್ಕೂ ಬಾಹ್ಯ ಕಾರಣಗಳಾಗಿವೆ ಅದರಿಂದ ಜೀವದ ಮೇಲೆ

ದೊಡ್ಡ ಉಪಕಾರವಾಗುತ್ತದೆ. ಹೇಗೆಂದರೆ ಕಟ್ಟಿಗೆ ಕಲ್ಲುಗಳಿಂದ ಮಾಡಿದ ಸ್ತ್ರೀಯರ ಮೂರ್ತಿ ಚಿತ್ರಗಳು ಅಂತಃಕರಣದಲ್ಲಿ ಪ್ರೀತಿಯನ್ನು ಹುಟ್ಟಿಸುತ್ತವೆ ಇನ್ನು ಅಚೇತನವಾದಂಥ ಸುವರ್ಣ, ಮಣಿ, ಮಾಣಿಕ, ತೋಟಪಟ್ಟಿ, ಅರಮನೆ, ನಗರ, ಕಲ್ಲು, ಉಪವನಗಳನ್ನು ನೋಡುವದರಿಂದಲೂ ಅವುಗಳ ವರ್ಣನೆಯನ್ನು ಕೇಳುವುದರಿಂದಲೂ ರಾಗ-ದ್ವೇಷಗಳು ಉತ್ಪನ್ನವಾಗುತ್ತವೆ ಇದೇ ಪ್ರಕಾರ ಶುಭಾಶುಭ ವಚನ, ರಾಗ, ರೋದನ, ಸುಗಂಧ, ದುರ್ಗಂಧ ಇವೆಲ್ಲವೂ ಅಚೇತನ ಪುದ್ಗಲ ದ್ರವ್ಯಗಳಿದ್ದೂ, ಅವುಗಳ ಶ್ರವಣ, ಅವಲೋಕನ, ಚಿಂತನ, ಅನುಭವಮಾಡುವುದರಿಂದ ರಾಗ-ದ್ವೇಷಗಳು ಹುಟ್ಟುತ್ತವೆ ಇದರಂತೆಯೇ ಜಿನೇಂದ್ರನ ಪರಮಶಾಂತ ಮುದ್ರೆಯು ಜ್ಞಾನೀ ಪುರುಷನಿಗೆ ವೀತರಾಗತ್ವವನ್ನು ಉತ್ಪನ್ನಮಾಡಲಿಕ್ಕ ಸಹಕಾರಿ ಕಾರಣವಾಗುತ್ತದೆ ಅದು ಪ್ರೇರಕ ಕಾರಣ ಮಾತ್ರ ಆಗುವದಿಲ್ಲ ಭವ್ಯ ಜೀವಿಗಳಿಗೆ ವೀತರಾಗತ್ವವನ್ನುಳಿದು ಎರಡನೆಯ ಯಾವ ಇಚ್ಛೆಯೂ ಇರುವದಿಲ್ಲ ಜಿನೇಂದ್ರನ ಪಾದಗಳ ಪೂಜೆಯನ್ನು ಮಾಡುವಾಗ ಜಲ-ಚಂದನಾದಿ ಅಷ್ಟ ದ್ರವ್ಯಗಳನ್ನು ಅರ್ಪಿಸಬೇಕಾಗುತ್ತದೆ. ಅದು ಭಗವಂತನಿಗೆ ತಿನ್ನಲಿಕ್ಕೆಂದಲ್ಲ ಅಲ್ಲದೆ ಪೂಜೆಯನ್ನು ಮಾಡದಿದ್ದರೆ ಅಪೂಜ್ಯವೆನಿಸುತ್ತದೆಂದೂ ಅಲ್ಲ ದೇವರ ಇಚ್ಛೆಗಾಗಿ ಅರ್ಪಿಸುತ್ತೇವೆಂದೂ ಕೂಡ ಅಲ್ಲ ಭಗವಂತನನ್ನು ನೋಡಿ ಪೂಜಕನಿಗೆ ಅತಿಶಯ ಆನಂದವಾಯಿತೆಂದು ಜಲಚಂದನದ ನೆವದಿಂದ ಅರ್ಘ್ಯವನ್ನು ನೀಡುವುದು ಅಷ್ಟ ದ್ರವ್ಯ ಸಮರ್ಪಣೆಯ ಹೇತುವಾಗಿದೆ ಹೇಗೆಂದರೆ ರಾಜನನ್ನು ಕಾಣಲಿಕ್ಕೆ ಹೋದಾಗ ಅವನನ್ನು ಕಂಡು ಅತ್ಯಂತ ಹರ್ಷವಾಗಿದೆಯೆಂದು ವ್ಯಕ್ತಪಡಿಸಲಿಕ್ಕೆ ಜನರು ಅನೇಕ ಕ್ರಿಯೆಗಳನ್ನು ಮಾಡುತ್ತಾರೆ ಕಾಣಿಕೆಯನ್ನು ಸಲ್ಲಿಸುವುದು, ಆರತಿಯನ್ನು ಬೆಳಗುವುದು, ಹೂವು ಅಕ್ಷತೆಗಳ ವೃಷ್ಟಿಯನ್ನು ಸುರಿಸುವುದು, ಮುತ್ತಿನ ತಳಿಯನ್ನು ಹೊಡೆದು ಬೆಳಗುವುದು, ಸುವರ್ಣ ನಾಣ್ಯಗಳಿಂದ ತಳಿಗೆಯನ್ನು ತುಂಬಿ, ಅದರಿಂದ ಬೆಳಗಿ ಜನರಿಗೆ ಹಂಚಿಕೊಡುವುದು, ಅದರಂತೆ ರತ್ನದ ತಳಿಗೆಯಿಂದ ಬೆಳಗಿ ಅವುಗಳನ್ನು ಹಂಚುವುದು ಇವೆಲ್ಲ ಚಟುವಟಿಕಗಳನ್ನು ರಾಜನ ಮೇಲಿನ ಭಕ್ತಿಯಿಂದ ಆನಂದ ಪ್ರಕಟಮಾಡುವದಕ್ಕಾಗಿ ಮಾಡಲಾಗುತ್ತದೆ ರಾಜನಿಗೆ ಅದರ ಅಪೇಕ್ಷೆಯೂ ಇರುವದಿಲ್ಲ. ಬೆಲೆಯುಳ್ಳ ವಸ್ತುಗಳನ್ನು ನಿವಾಳಿಸುವುದರಿಂದ ಅವುಗಳನ್ನು ರಾಜನಿಗೆ ದಾನಕೊಟ್ಟಂತೆ ಅಲ್ಲ ರಾಜನ ಮೇಲೆ ನಿವಾಳಿಸಿದುದನ್ನು ಆತನ ಸಮೀಪದ ಜನರು ತಕ್ಕೊಳ್ಳುತ್ತಾರೆ ಇದೇ ಪ್ರಕಾರ ಭಗವಾನ್ ಅರಹಂತರಿಗೆ ಅಷ್ಟ ದ್ರವ್ಯಗಳನ್ನು ಅರ್ಪಿಸುವುದರ ಮರ್ಮವಾಗಿದೆ

ಪೂಜೆ ಮಾಡಲಿಕ್ಕೆ ಯೋಗ್ಯವಾದ ಒಂಬತ್ತು ದೇವತೆಗಳು ಇರುತ್ತವೆ ಅವುಗಳ ವಿಷಯದಲ್ಲಿ ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರು 'ಗೊಮ್ಮಟಸಾರ'ದಲ್ಲಿ ಹೀಗೆ ಹೇಳಿದ್ದಾರೆ—

ಅರಹಂತಸಿದ್ಧಸಾಹುತಿದಯಂ ಜಿಣಧಮ್ಮವಯಣಪಡಿಮಾ ಹೂ ।
ಜಿಣಣಿಲಯಾ ಇದಿ ಏದೇ ಣವದೇವಾ ದಿಂತು ಮೇ ಬೋಹಿಂ ॥

ಅರ್ಥ—ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧು, ಜಿನಧರ್ಮ, ಜಿನವಚನ, ಜಿನಪ್ರತಿಮೆ ಮತ್ತು ಜಿನಮಂದಿರ ಈ ಒಂಬತ್ತು ದೇವತೆಗಳು ಇರುತ್ತವೆ ಇವು ನನ್ನ ರತ್ನತ್ರಯಗಳನ್ನು ಪೂರ್ಣಗೊಳಿಸಲಿ.

ಪೂಜಿಸಲಿಕ್ಕೆ ಯೋಗ್ಯವಾದ ಒಂಬತ್ತು ಪ್ರತಿಮೆಗಳು—ಎಲ್ಲಿ ಅರಿಹಂತನ ಪ್ರತಿಮೆ ಇದೆಯೋ ಅಲ್ಲಿ ಒಂಬತ್ತು ದೇವತೆಗಳಿವೆಯೆಂದು ಗ್ರಹಿಸಬೇಕು ಯಾಕಂದರೆ ಆಚಾರ್ಯ, ಉಪಾಧ್ಯಾಯ ಮತ್ತು ಸಾಧುಗಳಂತೂ ಅರಹಂತನ ಪೂರ್ವ ಅವಸ್ಥೆಯೇ ಆಗಿದ್ದಾರೆ ಸಿದ್ಧ ಎಂಬುದು ತರುವಾಯದ ಅವಸ್ಥೆಯಾಗಿದೆ. ಮೊದಲು ಅರಹಂತ ಪದ ಆ ಮೇಲೆ ಸಿದ್ಧಪದವು ಪ್ರಾಪ್ತವಾಗುತ್ತದೆ ಅರಹಂತರ ವಾಣಿಯೇ ಜಿನವಚನವು. ಈ ವಚನಗಳಿಂದ ಪ್ರಕಟವಾದುದೇ ಜಿನಧರ್ಮ ಅರಹಂತನ ಸ್ವರೂಪವು ಎಲ್ಲಿ ವಿರಾಜಮಾನವಾಗಿದೆಯೋ ಅದು ಜಿನಾಲಯವು ಈ ಪ್ರಕಾರ ಒಂಬತ್ತು ದೇವತಾರೂಪ ಭಗವಾನ್ ಅರಿಹಂತನ ಪ್ರತಿಬಿಂಬವನ್ನು ದಿನಾಲು ಪೂಜಿಸುವುದು ಯೋಗ್ಯವಾಗಿದೆ ಅರಿಹಂತನ ಪ್ರತಿಬಿಂಬವನ್ನು ಅಧೋಲೋಕದಲ್ಲಿ ಭವನವಾಸಿಯೊಳಗಿನ ಚಮರ-ವೈರೋಚನಾದಿ ಇಂದ್ರರು, ಅಂಸಖ್ಯಾತ ಭವನವಾಸಿ ದೇವರು ಪೂಜಿಸುತ್ತಾರೆ ಇದರಂತೆಯೇ ಮಧ್ಯಲೋಕದಲ್ಲಿ ಚಕ್ರವರ್ತಿ, ನಾರಾಯಣ, ಬಲಿಭದ್ರರೇ ಮೊದಲಾದ ಅನೇಕ ಧರ್ಮಾತ್ಮರಾದ ಜೀವಗಳು ಅರಹಂತರನ್ನು ಪೂಜಿಸುತ್ತವೆ ಇನ್ನು ವ್ಯಂತರ ಲೋಕದೊಳಗಿನ ದೇವರು,- ಜ್ಯೋತಿರ್‌ಲೋಕದೊಳಗಿನ ಚಂದ್ರ-ಸೂರ್ಯಾದಿ ಅಸಂಖ್ಯಾತ ದೇವರು, ಸ್ವರ್ಗಲೋಕದಲ್ಲಿಯ ಸೌಧರ್ಮ-ಇಂದ್ರಾದಿ ಅಸಂಖ್ಯಾತ ಕಲ್ಪವಾಸೀ ದೇವರು ಅರಹಂತನ

ಪೂಜೆಯನ್ನು ಮಾಡುತ್ತಾರೆ. ಇದೇ ಪ್ರಕಾರ ಮೂರು ಲೋಕದೊಳಗಿನ ಭವ್ಯ ಜೀವಗಳಿಂದ ವಂದ್ಯ ಮತ್ತು ಪೂಜ್ಯನಾದಂಥ ಅರಹಂತನ ತದಾಕಾರದ ಪ್ರತಿಬಿಂಬದ ಪೂಜೆಯು ಭವ್ಯಜೀವಗಳಿಂದ ಯಾವಾಗಲೂ ಮಾಡಲ್ಪಡುತ್ತದೆ

**ಪೂಜೆಯ ಪ್ರಕಾರ**—ಪೂಜೆಯು ಎರಡು ವಿಧವಾಗಿದೆ. ಒಂದು ದ್ರವ್ಯ ಪೂಜೆ, ಇನ್ನೊಂದು ಭಾವ ಪೂಜೆ ಇವುಗಳಲ್ಲಿ ಅರಿಹಂತನ ಪ್ರತಿಬಿಂಬದೆದುರಿಗೆ ಮುಖದಿಂದ ಸ್ತುತಿ ಮಾಡುತ್ತ, ನಮಸ್ಕಾರ ಮಾಡಿ, ಮೂರು ಪ್ರದಕ್ಷಿಣೆಯನ್ನು ಹಾಕಿ, ಎರಡೂ ಕೈಗಳನ್ನು ಜೋಡಿಸಿ ತಲೆಬಾಗಿಸುವುದು, ಆ ಪ್ರತಿಬಿಂಬಕ್ಕೆ ಜಲ-ಚಂದನಾದಿ ಅಷ್ಟ ದ್ರವ್ಯಗಳನ್ನು ಅರ್ಪಿಸುವುದು; ಇವೆಲ್ಲ ದ್ರವ್ಯ ಪೂಜೆಯಾಗಿವೆ ಅರಿಹಂತನ ಗುಣಗಳ ಚಿಂತನೆಯಲ್ಲಿ ಏಕಾಗ್ರನಾಗಿ ಉಳಿದ ಎಲ್ಲ ವಿಕಲ್ಪ ಸಮೂಹವನ್ನು ಬಿಡುವುದೂ ಅರಿಹಂತನ ಧ್ಯಾನ ಮಾಡುವುದೂ ಭಾವಪೂಜೆಯೆನಿಸುತ್ತದೆ ಇನ್ನು ಪೂಜೆಗಾಗಿ ಶುದ್ಧ ಸ್ಥಳದಲ್ಲಿ ಸ್ವಲ್ಪ ನೀರಿನಿಂದ ಸ್ನಾನಮಾಡಿ. ಶುದ್ಧ ವಸ್ತ್ರಗಳನ್ನು ಧರಿಸಿ ವಿನಯಪೂರ್ವಕ ಕೈಜೋಡಿಸಿ, ಭಕ್ತಿಸಹಿತ ಉಜ್ವಲ ಮತ್ತು ನಿರ್ದೋಷ ಜಲದಿಂದ ಪ್ರತಿಮೆಯ ಅಭಿಷೇಕ ಮಾಡುವುದಕ್ಕೂ ಪೂಜೆ ಎನ್ನುತ್ತಾರೆ. ಆ ವೇಳೆಯಲ್ಲಿ ನಾನು ಸ್ವತಃ ಅರಿಹಂತನನ್ನು ಸ್ಪರ್ಶ ಮಾಡುತ್ತಿದ್ದೇನೆ, ಅವನ ಅಭಿಷೇಕ ಮಾಡುತ್ತಿದ್ದೇನೆ ಎಂಬ ವಿಚಾರಗಳನ್ನು ಮನಸ್ಸಿನಲ್ಲಿ ತರಬೇಕು. ಇದು ಶುದ್ಧ ಭಕ್ತಿಯ ಮಹಿಮೆಯಾಗಿದೆ ಶುದ್ಧ ನೀರನ್ನು ಗಿಂಡಿಯಲ್ಲಿ ತುಂಬಿಕೊಂಡು ಭಗವಂತನ ಪ್ರತಿಮೆಯ ಮುಂದೆ ನಿಂತು ಮುಂದಿನ ವಿಚಾರಗಳನ್ನು ಚಿಂತಿಸಬೇಕು

**ಪೂಜೆಯ ಹೊತ್ತಿನಲ್ಲಿ ಏನು ಚಿಂತಿಸಬೇಕು!** "ಎಲೈ ಹುಟ್ಟು-ಮುಪ್ಪು-ಸಾವುಗಳನ್ನು ಗೆಲ್ಲುವಂಥ ಜಿನೇಶ್ವರಾ! ನಾನು ಜನ್ಮ-ಜರಾ-ಮರಣಗಳ ನಿವಾರಣಾರ್ಥ ನೀರಿನ ಮೂರು ಧಾರೆಗಳನ್ನು ನಿಮ್ಮ ಚರಣಾರವಿಂದಗಳ ಮುಂದೆ ಬಿಡುವೆ. ಭಗವಾನ್! ತಮ್ಮ ಚರಣಗಳಿಗೆ ಶರಣ ಬರುವುದೊಂದೇ ಜನ್ಮ-ಜರಾ-ಮರಣ ರಹಿತನಾಗುವುದಕ್ಕೆ ಕಾರಣವಾಗಿದೆ. ಸಂಸಾರ ಪರಿಭ್ರಮಣದ ತಾಪವನ್ನು ಇಲ್ಲದಂತೆ ಮಾಡುವ ದೇವಾ! ನಾನು ಕೂಡ ಅದೇ ತಾಪವನ್ನು ನಷ್ಟಗೊಳಿಸುವುದಕ್ಕಾಗಿ ಚಂದನ ಕರ್ಪೂರಾದಿ ದ್ರವ್ಯಗಳಿಂದ ತಮ್ಮ ಪಾದ ಕಮಲಗಳನ್ನು ಅರ್ಚಿಸುವೆ. ಅವಿನಾಶೀಪದ ಧಾರಕ ಭಗವಂತಾ! ನಾನೂ ಕೂಡ ಅಕ್ಷಯ ಪದವು ಸಿಕ್ಕಲೆಂದು ತಮ್ಮ ಮುಂದೆ ಅಕ್ಷತೆಯನ್ನು ಹಾಕುವೆ ಹೇ ಕಾಮಬಾಣ ವಿಧ್ವಂಸಕಾ! ನಾನು ನಿನ್ನ ಮುಂದೆ ಕಾಮವೇದನೆಯನ್ನು ನಷ್ಟಗೊಳಿಸುವುದಕ್ಕಾಗಿ ಪುಷ್ಪರಾಶಿಯನ್ನು ಅರ್ಪಣ ಮಾಡುವೆ ಕ್ಷುಧಾ ರೋಗವನ್ನು ಇಲ್ಲದಂತೆ ಮಾಡುವ ಜಿನೇಂದ್ರಾ! ನಾನು ಅದೇ ರೋಗವು ನಷ್ಟವಾಗಲೆಂದು ನೈವೇದ್ಯವನ್ನು ಅರ್ಪಿಸುವೆ. ಮೋಹಾಂಧಕಾರವನ್ನು ಇಲ್ಲದಂತೆ ಮಾಡುವ ಜಿನೇಶ್ವರಾ! ನಾನು ಅಜ್ಞಾನಾಂಧಕಾರವು ನಷ್ಟವಾಗಲೆಂದು ನಿನ್ನ ಮುಂದೆ ದೀಪವನ್ನು ಸಮರ್ಪಿಸುವೆ ಅಷ್ಟಕರ್ಮದಾಹಕ ಜಿನರಾಜಾ! ನಾನು ನನ್ನ ಎಂಟು ಕರ್ಮಗಳು ನಷ್ಟವಾಗಲೆಂದು ಧೂಪವನ್ನು ಅರ್ಪಿಸುವೆ ಮೋಕ್ಷ ಸ್ವರೂಪವನ್ನು ಧಾರಣ ಮಾಡುವಂಥ ಭಗವಂತಾ! ನನಗೆ ಮೋಕ್ಷರೂಪ ಫಲವು ಪ್ರಾಪ್ತವಾಗಲೆಂದು ನಿನ್ನ ಮುಂದೆ ಫಲಗಳನ್ನು ಅರ್ಪಿಸುವೆ." ಈ ಪ್ರಕಾರ ತನ್ನ ಯೋಗ್ಯತೆಗೆ ಅನುಸರಿಸಿ ಒಂದು ದ್ರವ್ಯದಿಂದ ಇಲ್ಲವೆ ಎರಡು, ಮೂರು, ನಾಲ್ಕು, ಐದು, ಆರು, ಏಳು ಮತ್ತು ಎಂಟೂ ದ್ರವ್ಯಗಳಿಂದ ಪೂಜೆಯನ್ನು ಮಾಡಬೇಕು ತನ್ನ ಪರಿಣಾಮವನ್ನು ಭಗವಂತನ ಧ್ಯಾನದಲ್ಲಿ ಹಚ್ಚಬೇಕು. ಭಗವಂತನ ಗುಣಗಳ ಸ್ತವನಮಾಡಿ, ಮಹಾನ್ ಪುಣ್ಯವನ್ನು ಸಂಪಾದಿಸಿಕೊಳ್ಳಬೇಕು ಮತ್ತು ಪಾಪದ ನಿರ್ಜರೆಯನ್ನೂ ಮಾಡಬೇಕು. ಜಿನೇಶ್ವರನ ಪೂಜೆಯನ್ನು ಮಾಡುವ ನಾಲ್ಕು ಪ್ರಕಾರದ ದೇವರು ಕಲ್ಪವೃಕ್ಷದಿಂದ ಉತ್ಪನ್ನವಾಗುವಂಥ ಗಂಧ, ಹೂವು, ಫಲವೇ ಮೊದಲಾದ ಸಾಮಗ್ರಿಗಳಿಂದ ಪೂಜಿಸುತ್ತಾರೆ. ಸೌಧರ್ಮ ಇಂದ್ರ ಮೊದಲಾದ ಸಮ್ಯಗ್ದೃಷ್ಟಿ ಜೀವಗಳು ಜಿನವರರ ಭಕ್ತಿ ಪೂಜೆಗಳಿಂದಲೇ ತಮ್ಮ ಉತ್ತಮ ಜನ್ಮವು ಸಫಲವೆಂದು ತಿಳಿಯುತ್ತಾರೆ. ಮಾನವರಲ್ಲಿ ಚಕ್ರವರ್ತಿ, ನಾರಾಯಣ, ಬಲಭದ್ರಾದಿ ರಾಜ ಶ್ರೇಷ್ಠರಿದ್ದಾರೆ ಅವರು ಮುತ್ತಿನ ಅಕ್ಷತೆ, ರತ್ನದ ಹೂವು, ಫಲ, ದೀಪ ಮತ್ತು ಅಮೃತಪಿಂಡ ಮೊದಲಾದ ಪದಾರ್ಥಗಳಿಂದ ಜಿನೇಂದ್ರನನ್ನು ಪೂಜಿಸುತ್ತಾರೆ. ಅಲ್ಲದೆ ಸ್ತುತಿ, ಗಾಯನ, ನೃತ್ಯ ಮೊದಲಾದವುಗಳನ್ನು ಮಾಡಿ ಮಹಾ ಪುಣ್ಯವನ್ನು ಗಳಿಸುತ್ತಾರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರೆಲ್ಲರು ತಮ್ಮ ತಮ್ಮ ಸಾಮರ್ಥ್ಯ, ಜ್ಞಾನ, ಕುಲ, ಬುದ್ಧಿ, ಸಂಪತ್ತಿ, ಸಂಗತಿಗಳನ್ನು ನೋಡಿಕೊಂಡು ಜಿನೇಶ್ವರನ ಪೂಜೆಯನ್ನು ಮಾಡುತ್ತಾರೆ. ಅದೇ ಪ್ರಕಾರ ದೇಶಕಾಲಕ್ಕೆ ಯೋಗ್ಯವಾದಂಥ ಅನೇಕ ಸ್ತ್ರೀ-ಪುರುಷ, ಧನಿಕ-ಬಡವ, ರೋಗಿ-ನಿರೋಗಿ, ಇವರೆಲ್ಲರೂ ಪೂಜಿಸುತ್ತಾರೆ ಅನೇಕರು ಹಳ್ಳಿ,

ಪಟ್ಟಣ, ಅರಣ್ಯ, ಗ್ರಾಮಗಳಲ್ಲಿ ವಾಸಿಸುತ್ತಾರೆ ಅದರಲ್ಲಿಯೂ ಅನೇಕ ಜನರು ಅಷ್ಟದ್ರವ್ಯಗಳ ನಿರ್ಮಲ ಸಾಮಗ್ರಿಯನ್ನು ಸಿದ್ಧಗೊಳಿಸಿ, ಭಗವಂತನ ಗುಣಗಾನವನ್ನು ಮಾಡಿ, ಪೂಜೆಯನ್ನು ಮಾಡುತ್ತಾರೆ ಕೆಲವರು ಒಣಗೋಧಿ, ಅಗಸಿ, ಕಡಲೆ, ಗೋವಿನ ಜೋಳ, ಸಜ್ಜೆ, ಉದ್ದು ಮೊದಲಾದವುಗಳನ್ನು ಬಟ್ಟಲಗಳಲ್ಲಿ ತುಂಬಿ, ದೇವರಿಗೆ ಅರ್ಪಿಸಿ ಪೂಜೆಮಾಡುತ್ತಾರೆ ಕೆಲವರು ರೊಟ್ಟಿಯನ್ನು ಅರ್ಪಿಸುವರು ಹಲವರು ಹಾಲು, ಮೊಸರು, ಅನ್ನ, ಬಾಳೆ ಮೊದಲಾದ ಅನೇಕ ಪ್ರಕಾರದ ಆಹಾರ ಪದಾರ್ಥಗಳನ್ನು ದೇವರಿಗೆ ತೋರಿಸುತ್ತಾರೆ ಅನೇಕರು ನಾನಾ ಪ್ರಕಾರದ ಮಿಠಾಯಿಗಳನ್ನು ತಂದು ಅರ್ಪಿಸುತ್ತಾರೆ ಕೆಲವರು ಮುತ್ತಿನ ಅಕ್ಷತೆ, ರತ್ನದ ದೀಪ, ಬೆಳ್ಳಿ ಬಂಗಾರ ಮತ್ತು ಪಂಚರತ್ನಗಳಿಂದ ಕತ್ತಿದ ಹೂವುಗಳು ಮತ್ತು ಹಣ್ಣುಗಳನ್ನು ಅರ್ಪಿಸಿ ಪೂಜೆಮಾಡುತ್ತಾರೆ ಕೆಲವರು ಹಾಲು ಮೊಸರು, ತುಪ್ಪಗಳನ್ನು ಅರ್ಪಿಸುತ್ತಾರೆ. ಹಲವರು ಉಂಡಿ, ಚಕ್ಕುಲಿ, ಪೇಡೆ, ಬರ್ಫಿ ಮೊದಲಾದ ಸಿಹಿ ಪದಾರ್ಥಗಳನ್ನು ಜಿನೇಶ್ವರರಿಗೆ ನೈವೇದ್ಯವೆಂದು ತೋರಿಸುತ್ತಾರೆ ಹಲವರು ಕೇವಲ ವಂದನೆಯನ್ನೇ ಮಾಡುತ್ತಾರೆ ಕೆಲವರು ಹಾಡು, ನೃತ್ಯ, ಗಾಯನ, ವಾದ್ಯಗಳಿಂದ ಭಜನೆ ಮಾಡುತ್ತಾರೆ ಅನೇಕ ಅಸ್ಪೃಶ್ಯರೂ ಶೂದ್ರರೂ ಮಂದಿರದ ಹೊರಗಿನಿಂದಲೇ ಶಿಖರದ ಮೇಲಿನ ಜಿನಬಿಂಬಕ್ಕೆ ವಂದಿಸುತ್ತಾರೆ ಈ ಪ್ರಕಾರ ಯಾರಿಗೆ ಎಂಥ ಸಂಗತಿ, ಎಂಥ ಜ್ಞಾನ, ಎಂಥ ಸಾಮರ್ಥ್ಯ, ಎಂಥ ಧನಸಂಪತ್ತಿ, ಅದೆಂಥ ಶಕ್ತಿ ಇದ್ದೀತೋ ಆ ಪ್ರಕಾರ ದೇಶ-ಕಾಲಗಳನ್ನು ನೋಡಿ ಜಿನೇಶ್ವರರ ಆರಾಧನೆಯನ್ನು ಮಾಡಬೇಕು ಈ ಪ್ರಕಾರ ವೀತರಾಗ ಪ್ರಭುವಿನ ಸ್ತವನಪೂಜನಗಳನ್ನು ಮಾಡಿ, ತನ್ನ ತನ್ನ ಪರಿಣಾಮದ ಪ್ರಕಾರ ಎಲ್ಲರೂ ಉತ್ತಮ, ಮಧ್ಯಮ, ಜಘನ್ಯ ಪುಣ್ಯವನ್ನು ಸಂಪಾದಿಸಬೇಕು

**ಜೈನ ಧರ್ಮವು ಜಾತಿ ಕುಲಗಳನ್ನು ಅವಲಂಬಿಸಿರದೆ ಪರಿಣಾಮವನ್ನು ಅವಲಂಬಿಸಿದೆ.** ಜೈನ ಧರ್ಮವು ಜಾತಿ ಇಲ್ಲವೆ ಕುಲವನ್ನು ಅವಲಂಬಿಸಿಲ್ಲ. ಧನಸಂಪತ್ತಿಯ ಅಧೀನವೂ ಇಲ್ಲ ಬಾಹ್ಯಕ್ರಿಯೆಗಳ ಮೇಲೆ ಅವಲಂಬಿಸಿಲ್ಲ ಅದು ಅವರವರ ಪರಿಣಾಮದ ವಿಶುದ್ಧತೆಯನ್ನು ಅವಲಂಬಿಸಿದೆ. ದೊಡ್ಡ ಸಿರಿವಂತನೊಬ್ಬನು ಮಹಾ ಅಭಿಮಾನದಿಂದ ತನ್ನ ಕೀರ್ತಿಯಾಗಬೇಕೆಂದು ಮುತ್ತಿನ ಅಕ್ಷತೆ, ರತ್ನದ ದೀಪ, ಸುವರ್ಣದ ಹೂವು ಮೊದಲಾದವುಗಳಿಂದ ಪೂಜೆಯನ್ನು ಮಾಡಿ, ಅನೇಕ ಪ್ರಕಾರದ ಗಾಯನ-ವಾದನ-ಭಜನ-ಪೂಜನಗಳಿಂದ ದೊಡ್ಡ ಪ್ರಭಾವನೆಯನ್ನು ಮಾಡಿ ತೋರಿಸಿದರೆ ಅದು ಅಲ್ಪ ಪುಣ್ಯವನ್ನೇ ನೀಡೀತು. ಒಮ್ಮೊಮ್ಮೆ ಅದೂ ಅಲ್ಪ ಪುಣ್ಯ ಬಂಧವಾಗದೆ ತಿರುಗಿ ಕರ್ಮಬಂಧ ಕೂಡ ಆದೀತು ಯಾಕೆಂದರೆ ಬಂಧವು ಕಷಾಯದ ಅಧೀನವಿದೆ ಭಕ್ತನು ಭಾವ ಶುದ್ಧಿಯಿಂದ ಒಂದು ಹಣ್ಣು, ಒಂದು ಎಲೆ ಇಲ್ಲವೆ ಒಂದು ಅನ್ನದ ಕಣವನ್ನು ಅರ್ಪಣ ಮಾಡಿದರೂ ಪಾಪದ ನಾಶವಾದೀತು ಮನೋಭಾವದಿಂದ ನಿರ್ಮಲ ಸ್ತುತಿಯನ್ನು ಮಾಡಿದರೂ ಅನೇಕ ಜನ್ಮಗಳಿಂದ ಸಂಚಯಗೊಂಡ ಪಾಪದ ಮಲವು ತೊಳೆದು ಹೋದೀತು ದ್ರವ್ಯದಿಂದ ಪುಣ್ಯವನ್ನು ಕೊಳ್ಳಲಿಕ್ಕೆ ಬರುವದಿಲ್ಲ ಇಚ್ಛೆಯನ್ನು ನಷ್ಟಗೊಳಿಸಬೇಕು, ಕಷಾಯ ಮಂದಗೊಳಿಸಬೇಕು, ಖ್ಯಾತಿ, ಲಾಭ, ಪೂಜೆ ಮೊದಲಾದವುಗಳ ಅಪೇಕ್ಷೆಯನ್ನು ತ್ಯಜಿಸಬೇಕು ಕೇವಲ ಪರಮೇಷ್ಠಿಗಳ ಗುಣಗಳನ್ನೇ ಪ್ರೀತಿಸಬೇಕು ಇಂಥವರಿಗೇನೇ ಜಿನ ಪೂಜೆಯು ವಿಶೇಷ ಲಾಭವು ಪ್ರಾಪ್ತವಾಗುತ್ತದೆ, ಮತ್ತು ಪ್ರಾಪ್ತವಾದೀತು

**ಸಚಿತ್ತ ಅಥವಾ ಅಚಿತ್ತ ದ್ರವ್ಯಗಳಿಂದ ಪೂಜಿಸಬೇಕು.** ಪರಮಾಗಮದಲ್ಲಿ ಸಚಿತ್ತ ಮತ್ತು ಅಚಿತ್ತ ದ್ರವ್ಯಗಳಿಂದ ಜಿನ ಪೂಜೆಯನ್ನು ಮಾಡಬೇಕೆಂದು ಹೇಳಿದೆ ಯಾರಿಗೆ ಸಚಿತ್ತದ ದೋಷದಿಂದ ಹೆದರಿಕೆಯು ಎನಿಸುವುದೋ ಅವರು ದೊಡ್ಡ ಪ್ರಯತ್ನದಿಂದ ಪ್ರಾಸುಕ, ಜಲ, ಚಂದನ, ಅಕ್ಷತ ಮತ್ತು ಅಕ್ಷತೆಗೇನೇ ಚಂದನ, ಕುಂಕುಮಗಳನ್ನು ಹಚ್ಚಿ ಸುಗಂಧಿತಗೊಳಿಸಿ, ಅದನ್ನೇ ಪುಷ್ಪವೆಂದು ಸಂಕಲ್ಪಿಸಿ ಪೂಜೆಯನ್ನು ಮಾಡುತ್ತಾರೆ ಹಾಗೆಯೇ ಶಾಸ್ತ್ರದಲ್ಲಿ ವರ್ಣಿಸಿದಂಥ ಬಂಗಾರ, ಬೆಳ್ಳಿ, ವಜ್ರಗಳ ಹೂವು ಮತ್ತು ಲವಂಗಗಳನ್ನು ಸಿದ್ಧಗೊಳಿಸಿ ಅವುಗಳಿಂದ ಪೂಜಿಸುತ್ತಾರೆ ಪ್ರಾಸುಕವಾದಂಥದೂ ಯಾವುದರಲ್ಲಿ ಬಹಳ ಆರಂಭ ಮಾಡಲಿಕ್ಕೆ ಹತ್ತುವದಿಲ್ಲವೋ ಅಂಥ ಸ್ವಲ್ಪ ನೈವೇದ್ಯದಿಂದ ಪೂಜೆಮಾಡುತ್ತಾರೆ ಕೆಲವರು ತಮಗೆ ಸಾಧ್ಯವಿದ್ದರೆ, ರತ್ನದ ದೀಪ, ಬೆಳ್ಳಿಬಂಗಾರದ ಹೂವುಗಳಿಂದ ಪೂಜಿಸುತ್ತಾರೆ. ಸಚಿಕ್ಕಣ ದ್ರವ್ಯಕ್ಕೆ ಕೇಶರದ ಬಣ್ಣ ಕೊಟ್ಟು, ಅದನ್ನು ದೀಪವೆಂದು ಸಂಕಲ್ಪಿಸಿ ಅದರಿಂದಲೂ ಪೂಜಿಸುವರು ಚಂದನ, ಊದಬತ್ತಿ, ಧೂಪ ಮೊದಲಾದವುಗಳನ್ನು ಪೂಜೆಗೆ ಉಪಯೋಗಿಸುತ್ತಾರೆ ಬದಾಮದಂಥ ಶುದ್ಧ ಫಲವನ್ನು ತಕ್ಕೊಂಡು ಪೂಜೆಮಾಡುತ್ತಾರೆ ಈ ಪ್ರಕಾರ ಅವರು ಅಚಿತ್ತ ದ್ರವ್ಯದಿಂದ ಪೂಜಿಸುವರು ಯಾರು ಸಚಿತ್ತ ದ್ರವ್ಯಗಳಿಂದ ಭಗವಂತನ ಪೂಜೆಯನ್ನು ಮಾಡುವರೋ ಅವರು ಜಲ, ಗಂಧ,

ಅಕ್ಷತಾದಿ ಉತ್ತಮ ಮತ್ತು ನಿರ್ಮಲ ಪದಾರ್ಥಗಳನ್ನು ತಕ್ಕೊಂಡು ಜಿನನ ಪೂಜೆ ಮಾಡುತ್ತಾರೆ. ಅವರು ಮಲ್ಲಿಗೆ, ಗುಲಾಬಿ, ಕಮಲ ಮೊದಲಾದ ಕುಸುಮಗಳನ್ನೂ ಪೂಜೆಗೆ ತಕ್ಕೊಳ್ಳುವರು ತುಪ್ಪದ ದೀಪ, ಕರ್ಪೂರದ ಆರತಿ, ಮಾವು, ಬಾಳೆ, ದಾಳಿಂಬಗಳಂಥ ಸಚಿತ್ತ ಫಲಗಳಿಂದ ಪೂಜೆಗೈಯುತ್ತಾರೆ. ಬೆಂಕಿಯಲ್ಲಿ ಧೂಪವನ್ನು ದಹಿಸುತ್ತಾರೆ. ಈ ಎರಡೂ ಮಾರ್ಗಗಳು ಶಾಸ್ತ್ರಪ್ರಣೀತ ಹಾಗೂ ಸನಾತನವಾಗಿವೆ. ಅಲ್ಲದೆ ತಮ್ಮ ಪರಿಣಾಮವನ್ನು ಅವಲಂಬಿಸಿದಂಥ ಪುಣ್ಯಬಂಧಕ್ಕೆ ಕಾರಣವಾಗಿವೆ

ತ್ರಸಜೀವದ ರಕ್ಷಣೆಯು ಅವಶ್ಯವಾಗಿದೆ. ಹೂವಿನಂಥ ವನಸ್ಪತಿಯಲ್ಲಿ ವಿಕಲತ್ರಯ ಜೀವದ ಉತ್ಪತ್ತಿಯು ವಿಶೇಷವಾಗಿ ಹೆಚ್ಚಾಗಿರುತ್ತದೆ ಹೂವುಗಳಲ್ಲಿ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ತ್ರಸಜೀವಗಳನ್ನು ನಾವು ಪ್ರತ್ಯಕ್ಷ ಕಾಣುತ್ತೇವೆ ಹೂವನ್ನು ತಕ್ಕೊಂಡು ಒಂದು ಪಾತ್ರೆಯಲ್ಲಿ ಜಾಡಿಸಿದರೆ ಸಾವಿರಾರು ಜೀವಗಳು ಅದರೊಳಗಿಂದ ಹೊರಗೆ ಬಿದ್ದು ಹಾರುವದನ್ನೂ ನಾವು ಕಾಣುತ್ತೇವೆ ಪುಷ್ಪದಲ್ಲಿ ತ್ರಸಜೀವಗಳು ಬಹಳವಿರುತ್ತವೆ ಇವಲ್ಲದೆ ಬಾದರ ನಿಗೋದ ಜೀವಗಳು ಅನಂತವಾಗಿರುತ್ತವೆ ಚೈತ್ರಮಾಸದಲ್ಲಿ ಹಾಗೂ ಮಳೆಗಾಲದಲ್ಲಿಯಂತೂ ತ್ರಸಜೀವಗಳ ಉತ್ಪತ್ತಿಯು ಬಹಳಷ್ಟು ಆಗುತ್ತದೆ ಇಂಥ ಸ್ಥಿತಿಯು ಹೂವಿನದಾಗಿದೆ ಆದರಿಂದ ಈ ವಿಷಯದಲ್ಲಿ ಜ್ಞಾನವಂತರು ವಿಚಾರಮಾಡಿ, ಧರ್ಮಬುದ್ಧಿಯನ್ನು ಮನಸ್ಸಿನಲ್ಲಿ ಜಾಗೃತವಾಗಿಟ್ಟುಕೊಂಡು, ಸರ್ವ ಕ್ರಿಯೆಗಳನ್ನೂ ಯತ್ನಾಚಾರ ಪೂರ್ವಕ ಮಾಡಲಿಕ್ಕೆ ಬೇಕು ಯಾವುದೇ ಕ್ರಿಯೆಯನ್ನು ಮಾಡುವಾಗ ಜೀವಗಳ ಘಾತವಾಗದಂತೆ ಎಚ್ಚರಿಕೆಯನ್ನು ವಹಿಸಬೇಕು ಈ ದೃಷ್ಟಿಯಿಂದ ನೋಡಿದಾಗ ಹೂವುಗಳನ್ನು ತೊಳೆಯುವಾಗ ಅಸಂಖ್ಯ ತ್ರಸಜೀವಗಳ ಹಿಂಸೆಯಾಗುತ್ತದೆ. ಇದರಲ್ಲಿ ಹಿಂಸೆಯು ಹೆಚ್ಚಾಗಿ ಪೂಜೆಯನ್ನು ಮಾಡುವುದರಿಂದ ಉಂಟಾಗುವ ಪರಿಣಾಮದ ವಿಶುದ್ಧತೆಯಲ್ಲಿ ಕೊರತೆಯುಂಟಾಗುತ್ತದೆ ಅಂತಲೇ ಪಕ್ಷಪಾತವನ್ನಿಡದೆ ಜಿನನು ನಿರೂಪಿಸಿದ ಅಹಿಂಸಾ ಧರ್ಮವನ್ನು ಅನುಸರಿಸಿ ಎಷ್ಟು ಕಾರ್ಯಗಳನ್ನು ಮಾಡಲಿಕ್ಕೆ ಬರುವುದೋ ಅಷ್ಟನ್ನು ಬಹು ಸಾವಧಾನತೆಯಿಂದ ಜೀವ ಹಿಂಸೆಯಾಗದಂತೆ ಮಾಡಬೇಕು

**ರಾತ್ರಿಯಲ್ಲಿ ಪೂಜೆ ಮಾಡಬಾರದು.** ಕಲಿಕಾಲದಲ್ಲಿ ಭಗವಂತನು ವರ್ಣಿಸಿದ ನಯ ವಿಭಾಗವನ್ನು ಯಾರೂ ತಿಳಿಯುವದಿಲ್ಲ, ಮತ್ತು ಶಾಸ್ತ್ರದಲ್ಲಿ ಹೇಳಿದ ವಿಷಯಗಳನ್ನು ನ್ಯಾಯ ದೃಷ್ಟಿಯಿಂದ ವಿಚಾರಿಸುವುದೂ ಇಲ್ಲ ತಮ್ಮ ಕಲ್ಪನೆಯಿಂದಲೇ ಒಂದು ಪಕ್ಷವನ್ನು ಸ್ವೀಕರಿಸಿ, ಆ ಮಾರ್ಗದಿಂದ ಸಾಕಷ್ಟು ಪ್ರಗತಿಯನ್ನು ಸಾಧಿಸಿಕೊಳ್ಳುವುದು ವಿಶೇಷವಾಗಿ ಕಂಡುಬರುತ್ತದೆ ಅನೇಕ ಪಕ್ಷಪಾತಿಗಳಾದ ಜನರು ಭಾದ್ರಪದ ಮಾಸದಲ್ಲಿ ಹಗಲು ಪೂಜೆಯನ್ನು ಮಾಡದೆ ಅದನ್ನು ರಾತ್ರಿಯಲ್ಲಿ ಮಾಡುತ್ತಾರೆ ದೀಪಗಳನ್ನು ಉರಿಸಿ ನೈವೇದ್ಯವನ್ನು ಅರ್ಪಿಸುತ್ತಾರೆ. ಹೂವಿನ ರಾಶಿಗೆ ರಾಶಿಯನ್ನೇ ದೇವರ ಮುಂದೆ ಸುರಿಯುತ್ತಾರೆ ಇದರಲ್ಲಿ ಲಕ್ಷಾವಧಿ ನೊಣ, ಗುಂಗಾಡು, ಪಕ್ಕದಹುಳ, ಕ್ರಿಮಿ ಮೊದಲಾದ ಜೀವಗಳು ಉತ್ಪನ್ನವಾಗುತ್ತವೆ ಅಲ್ಲದೆ ಅವು ದೀಪದ ಮೇಲೆ ಬಿದ್ದು ಸಾಯುತ್ತವೆ. ದೀಪದ ನಿಮಿತ್ತದಿಂದ ರಾತ್ರಿಯಲ್ಲಿ ಅಳತೆಯಿಲ್ಲದಷ್ಟು ಜೀವ, ನೊಣ, ಕೆಂಪು ಹುಳ, ಹಳದಿ ಬಣ್ಣದ ಹುಳಗಳು, ತ್ರಸಜೀವ, ಚಿಕ್ಕ ಪುಟ್ಟ ಶರೀರವನ್ನು ಧಾರಣಮಾಡುವ ಕ್ರಿಮಿಗಳು ಪೂಜೆಯನ್ನು ಮಾಡುವ ಸಾಮಗ್ರಿಗಳಿಂದ ತುಂಬಿದ ತಳಿಗೆಯಲ್ಲಿ ಬಂದು ಬಿದ್ದು ಸಾಯುತ್ತವ ಅವು ನಮ್ಮ ಬಾಯಿ, ಮೂಗು, ಕಿವಿಗಳಲ್ಲಿಯೂ ಕೂಡ ಹೋಗುತ್ತವೆ ಅವುಗಳನ್ನು ನಾವು ಹೊಡೆಯ ಹತ್ತಿದರೂ ಅವು ನಮ್ಮ ಶರೀರದ ಮೇಲಿಂದ ಹಾರಿ ಹೋಗುವದಿಲ್ಲ ಇಷ್ಟು ಹಿಂಸೆಯಾಗುವದನ್ನು ಪ್ರತ್ಯಕ್ಷ ಕಾಣುತ್ತಿದ್ದರೂ ಕೆಲವು ಜನರು ತಮ್ಮ ಪಕ್ಷವನ್ನು ಬಿಡದೆ, ಹಟದಿಂದ ರಾತ್ರಿಯಲ್ಲಿಯೇ ಪೂಜೆಯನ್ನು ಮಾಡುತ್ತಾರೆ ರಾತ್ರಿಯಲ್ಲಿ ಎಲ್ಲ ಪ್ರಕಾರದ ಆರಂಭವನ್ನು ಬಿಟ್ಟು, ಯತ್ನಾಚಾರ ಪೂರ್ವಕವಾಗಿ ಇರಬೇಕೆಂದು ಶಾಸ್ತ್ರದ ಆಜ್ಞೆಯಿದೆ ಧರ್ಮದ ಸ್ವರೂಪವು ಬಾಹ್ಯತಃ ಜೀವದಯೆಯು, ಅಂತರಂಗದಲ್ಲಿ ರಾಗ-ದ್ವೇಷಗಳ ವಿಜಯವಾಗಿದೆ. ಎಲ್ಲಿ ಜೀವ ಹಿಂಸೆಯಾಗುವುದೋ ಅಲ್ಲಿ ಧರ್ಮವಿಲ್ಲ ಯಾವ ಅಭಿಮಾನಕ್ಕೆ ವಶರಾಗಿ, ಒಂದು ಪಕ್ಷವನ್ನು ಸ್ವೀಕರಿಸಿ, ಅದನ್ನು ಸಮರ್ಥಿಸುವುದರಲ್ಲಿ ಹಿಂಸೆಯ ಹೆದರಿಕೆಯನ್ನೂ ಸಹ ಇಟ್ಟುಕೊಳ್ಳುವದಿಲ್ಲವೋ ಅಂಥವರಿಗೆ ಧರ್ಮವಂತನೆಂದಾದರೂ ಹೇಗೆ ಎನ್ನಲಿಕ್ಕೆ ಬಂದೀತು? ಅನೇಕ ವಿಚಾರಿ ಜನರು ಮಂಡಲವನ್ನು ಹಾಕಿ, ಎಂಟೆಂಟು, ಹತ್ತು ಹತ್ತು ದಿವಸಗಳ ವರೆಗೆ ಇಡುವರು ಆ ಸಾಮಗ್ರಿಯಲ್ಲಿ ಪ್ರತ್ಯಕ್ಷವಾಗಿ ಪಕ್ಷಿ, ಹುಳಗಳು ಉತ್ಪನ್ನವಾಗುತ್ತವೆ ಹೂವು ಮೊದಲಾದವುಗಳು ಪಡಿಸಿದವು ಹಾಗೆಯೇ ಇರುತ್ತವೆ ಅವು ನಾಶವಾಗಿ ಹೋಗುತ್ತವೆ. ನೈವೇದ್ಯ ಅರ್ಪಿಸಿದುದು ಇರುತ್ತದೆ. ಅದರ ವಾಸನೆಯಿಂದ ಹುಳ ಇರುವೆಗಳ ಸಾಲು ಹತ್ತುತ್ತದೆ. ಮತ್ತು ಅವು

ಪೂಜೆ ಪ್ರಭಾವನೆಗಳನ್ನು ನೋಡಲಿಕ್ಕೆ ಬರುವ ಜನರ ಕಾಲ ಕೆಳಗೆ ಸಿಕ್ಕು ಸತ್ತು ಹೋಗುತ್ತವೆ ಇದನ್ನು ಪ್ರತ್ಯಕ್ಷ ಕಂಡೂ ಕೂಡ ತಮ್ಮ ಪಕ್ಷದ ಅಭಿಮಾನವನ್ನು ಯಾರು ಬಿಡುವದಿಲ್ಲವೋ ಅವರು ಇರುಳೆಲ್ಲ ಪೂಜೆಯ ಸಾಮಗ್ರಿಯನ್ನು ಇಟ್ಟಿದಕ್ಕಾಗಿ ಅದರಲ್ಲಿ ಆಗುವ ಹಿಂಸೆಗೆ ಪಾತ್ರರಾಗುತ್ತಾರೆ ಆ ಪಾತಕವು ಅವರಿಗೆ ತಗಲುತ್ತದೆ

**ಸ್ಥಾಪನೆಯನ್ನು ಮಾಡುವ ಅವಶ್ಯಕತೆಯಿಲ್ಲ.** ಅನೇಕ ಪುರಾಣ ಮತ್ತು ಶ್ರಾವಕಾಚಾರಗಳಲ್ಲಿ ಅರಿಹಂತನ ಪ್ರತಿಮೆಯನ್ನು ಅಷ್ಟ ದ್ರವ್ಯಗಳಿಂದ ಪೂಜಿಸಬೇಕೆಂದು ಉಪದೇಶವಿದೆ ಕೆಲಕೆಲವು ಕಡೆಗೆ ಅರಿಹಂತ ಪ್ರತಿಬಿಂಬದ ಸ್ತುತಿ, ಇನ್ನು ಕೆಲವೆಡೆ ಅಭಿಷೇಕಮಾಡಬೇಕೆಂದು ವರ್ಣಿಸಲಾಗಿದೆ ಆದರೆ ಪ್ರತ್ಯಕ್ಷ ಪ್ರತಿಬಿಂಬವು ಎದುರಿಗೆ ಇದ್ದಾಗ ಪುನಃ ಸ್ಥಾಪನೆಯನ್ನು ಮಾಡಬೇಕೆಂದು ವರ್ಣಿಸಿದ್ದು ಎಲ್ಲಿಯೂ ಕಂಡು ಬರುವದಿಲ್ಲ ಸದ್ಯಕ್ಕೆ ಪ್ರತಿಮೆಯು ಸಾಕ್ಷಾತ್ ಎದುರಿಗೆ ವಿರಾಜಮಾನವಾಗಿದ್ದರೂ ಸ್ಥಾಪನೆಯನ್ನು ಮಾಡುವ ಆವಶ್ಯಕತೆ ಇದೆಯೆಂದು ಹಲವರು ಅನ್ನುತ್ತಾರೆ ಜಯಪುರ ನಗರದಲ್ಲಿ ಸಂವತ್ ೧೮೫೦ ನೆಯ ವರ್ಷ ತಮ್ಮ ಕಲ್ಪನೆಯಿಂದ ಯಾರೋ ಒಬ್ಬರು ಈ ಸ್ಥಾಪನೆಯ ನವೀನ ಪ್ರವೃತ್ತಿಯನ್ನು ಆರಂಭಿಸಿದರು. ಅದರಲ್ಲಿ ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು, ಜಿನವಾಣಿ, ದಶಲಾಕ್ಷಣಿಕ ಧರ್ಮ, ಷೋಡಶ ಕಾರಣ, ರತ್ನತ್ರಯಗಳೆಂದು ಒಂಭತ್ತು ಪ್ರಕಾರದ ಸ್ಥಾಪನೆಯನ್ನು ಮಾಡಬೇಕೆಂದು ಅವರ ಅಭಿಪ್ರಾಯವಿದೆ ಯಾರಿಗೆ ಸಪ್ತವ್ಯಸನ, ಅಭಕ್ಷ ಮೊದಲಾದವುಗಳ ತ್ಯಾಗವಿರುವುದೋ ಅವರು ಸ್ಥಾಪನೆಯನ್ನು ಮಾಡಿ ಪೂಜೆಯನ್ನು ಮಾಡಬೇಕು ಇನ್ನು ಯಾರಿಗೆ ಇವುಗಳ ತ್ಯಾಗವಿರುವದಿಲ್ಲವೋ ಅವರು ಸ್ಥಾಪನೆಯನ್ನು ಮಾಡಬಾರದು ಕೇವಲ ಪೂಜೆಯನ್ನು ಮಾಡಿದರೆ ಸಾಕು ಸ್ಥಾಪನಾಯುಕ್ತ ಪೂಜೆಯನ್ನು ಅನ್ಯಾಯ, ಅಭಕ್ಷ್ಯ, ಸಪ್ತವ್ಯಸನಗಳ ತ್ಯಾಗವನ್ನು ಯಾರು ಮಾಡಿರುವರೋ ಅವರೇ ಮಾಡಲಿಕ್ಕೆ ತಕ್ಕುದಾಗಿದೆ ಇತರರು ಸ್ಥಾಪನೆ ಇಲ್ಲದೆ ಪೂಜೆಯನ್ನು ಮಾಡಬೇಕು ಸ್ತ್ರೀಯರು ಬಣ್ಣದ ವಸ್ತ್ರವನ್ನು ಉಟ್ಟುಕೊಂಡು, ಸ್ಥಾಪನೆಯನ್ನು ಮಾಡದೆ, ಪೂಜೆಯನ್ನು ಮಾಡಬೇಕೆಂದು ಅವರ ಅಭಿಪ್ರಾಯವಾಗಿದೆ ಈ ಅಭಿಪ್ರಾಯ ಉಳ್ಳವರು ಸಾಕ್ಷಾತ್ ಇರುವ ಜಿನಬಿಂಬವನ್ನು ಮನ್ನಿಸುತ್ತಿರಲಿಕ್ಕಿಲ್ಲೆಂದು ತೋರುತ್ತದೆ ಶಪಾಕಾರ ಅಕ್ಕಿಯ ಸ್ಥಾಪನೆಯ ವಿನಯವನ್ನು ಮಾಡಬೇಕು ಪ್ರತಿಬಿಂಬದ ವಿನಯಮಾಡುವ ಮುಖ್ಯ ಕರ್ತವ್ಯವೇ ಉಳಿಯುವದಿಲ್ಲ. ಪ್ರತಿಮೆಯ ಪೂಜೆ, ವಂದನೆ, ಸ್ತವನಗಳನ್ನು ಬೇಕಾದವರು ಮಾಡಬೇಕು ಆದರೆ ಹಳದಿ ವರ್ಣದ ಅಕ್ಕಿಯಲ್ಲಿ ಸ್ಥಾಪನೆಯನ್ನು ಮಾಡುವುದು ಉತ್ತಮ ಪಕ್ಷವು ಅದು ಅಭಕ್ಷ್ಯಾದಿ ಪಾಪರಹಿತನಿದ್ದವನಿಗೇ ಯೋಗ್ಯವಾಗಿದೆ ಈ ಪ್ರಕಾರ ಹಳದಿಯ ಅಕ್ಕಿಯಲ್ಲಿ ಸ್ಥಾಪನೆಯನ್ನು ಮಾಡುವುದೇ ಮುಖ್ಯ ವಿನಯವು ಮತ್ತು ಪ್ರತಿಬಿಂಬದ ಪೂಜೆ ಮೊದಲಾದವುಗಳು ಅಮುಖ್ಯವಾಗಿವೆಯೆಂದು ಅವರ ಅಭಿಪ್ರಾಯವಿದ್ದಂತೆ ಕಾಣುತ್ತದೆ. ಇದಲ್ಲದೆ ಯಾವ ತೀರ್ಥಂಕರರ ಪ್ರತಿಮೆಯು ಇರುವುದೋ ಆ ತೀರ್ಥಂಕರರ ಸ್ತುತಿ ಪೂಜೆಗಳನ್ನೇ ಮಾಡಬೇಕು ಎರಡನೆಯ ತೀರ್ಥಂಕರರ ಸ್ತುತಿಸ್ತೋತ್ರಗಳನ್ನು ಮಾಡುವುದು ಉಪಯೋಗದ್ದಲ್ಲ ಒಂದು ವೇಳೆ ಮಾಡುವದಾದರೆ ಆ ಪ್ರತಿಬಿಂಬವನ್ನೂ ಅಕ್ಷತೆಯಲ್ಲಿ ಸ್ಥಾಪನೆಮಾಡಿ ಮಾಡಲಿಕ್ಕೆ ಬೇಕು

**ಸ್ಥಾಪನೆಯ ನಿರರ್ಥಕತೆ.** ಈ ವಿಷಯದಲ್ಲಿ ಅವರಿಗೆ ಹೀಗೆ ಕೇಳುವದಿರುತ್ತದೆ—ಶ್ರೀ ಸಮಂತಭದ್ರ ಸ್ವಾಮಿಗಳು ಶಿವಕೋಟಿ ಮಹಾರಾಜನ ಸಮಕ್ಷ ಸ್ವಯಂಭೂ ಸ್ತೋತ್ರವನ್ನು ರಚಿಸಿ, ಸ್ತುತಿಮಾಡಿದರು ಅದರಿಂದ ಚಂದ್ರಪ್ರಭುವಿನ ಪ್ರತಿಮೆಯು ಪ್ರಕಟವಾಯಿತು ಆ ಮೇಲೆ ಚಂದ್ರಪ್ರಭ ತೀರ್ಥಂಕರರ ಪ್ರತಿಮೆಯ ಮುಂದೆ ಉಳಿದ ಹದಿನಾರು ತೀರ್ಥಂಕರರ ಸ್ತುತಿಗಳನ್ನು ಹೇಗೆ ಮಾಡಿದರು? ಒಂದು ವೇಳೆ ಒಬ್ಬರ ಪ್ರತಿಮೆಯ ಮುಂದೆ ಅವರ ಸ್ತುತಿಯನ್ನೇ ಮಾಡಬೇಕೆಂದಿದ್ದರೆ–ಅದೇ ಯೋಗ್ಯವಿದ್ದರೆ–ಸ್ವಯಂಭೂ ಸ್ತೋತ್ರವನ್ನು ಅನ್ನುವುದೇ ಯೋಗ್ಯವೆನಿಸುತ್ತಿರಲಿಲ್ಲ. ಶ್ರೀ ಆದಿ ತೀರ್ಥಂಕರರ ಪ್ರತಿಮೆಯ ಹೊರತಾಗಿ ಇತರರ ಮುಂದೆ ಭಕ್ತಾಮರ ಸ್ತೋತ್ರವನ್ನೂ ಅನ್ನಲಿಕ್ಕೆ ಬರಲಾರದು ಶ್ರೀಪಾರ್ಶ್ವನಾಥ ತೀರ್ಥಂಕರರ ಪ್ರತಿಮೆಯನ್ನುಳಿದು ಇತರರ ಮುಂದೆ ಕಲ್ಯಾಣಮಂದಿರ ಸ್ತೋತ್ರವನ್ನೂ ಅನ್ನಬಾರದಾಯಿತು ಪಂಚಪರಮೇಷ್ಠಿಗಳ ಪ್ರತಿಮೆಯು ಇಲ್ಲದ ಹೊರತಾಗಿಯೂ ಸ್ಥಾಪನೆಯ ಹೊರತಾಗಿಯೂ ಪಂಚ ನಮಸ್ಕಾರ ಮಂತ್ರವನ್ನಾದರೂ ಏಕೆ ಎನ್ನಬೇಕು? ಕಾಯೋತ್ಸರ್ಗ ಜಾಪ್ಯ, ಪಂಚಪರಮೇಷ್ಠಿಗಳ ಹೆಸರು, ಸಾಮಾಯಿಕ ಮೊದಲಾದವುಗಳೇನನ್ನೂ ಮಾಡಕೂಡದಲ್ಲ ಅದರಂತೆಯೇ ಪರದೇಶದ ಪರಿಚಯವಿಲ್ಲದ ಮಂದಿರದಲ್ಲಿ ಮೊಟ್ಟಮೊದಲು ಯಾವ ಮೂರ್ತಿಯು ಇದೆ ಎಂಬುದು ತಿಳಿಯದ ಹೊರತಾಗಿ ಒಮ್ಮೆಲೇ ಹೋಗಿ ಸ್ತುತಿಮಾಡುವುದೇ ಮೊದಲಾದ ಕ್ರಿಯೆಗಳು ಅಸಂಭವವಾಗುತ್ತವೆ ರಾತ್ರಿಯಲ್ಲಿ ಒಂದು ಪ್ರತಿಮೆಯು ಚಿಕ್ಕದಿದ್ದು ಅದರ ಮೇಲಿನ

ಲಾಂಛನವು ಲಗೂನೆ ಕಾಣದಿದ್ದರೆ ಸ್ತುತಿಸಲಿಕ್ಕೆ ಬರಲಾರದು  ಯಾವ ಮಂದಿರದಲ್ಲಿ ಅನೇಕ ಪ್ರತಿಮೆಗಳು ಇರುವವೋ ಆ ಮಂದಿರದಲ್ಲಿ ಆಯಾ ಮೂರ್ತಿಗಳ ಮುಂದೆ ಹೋಗಿ ಕೈ ಜೋಡಿಸಿ ನಿಂತು, ಅವರವರ ಸ್ತುತಿಗಳನ್ನು ಅನ್ನಬೇಕಾದೀತು  ಎರಡನೆಯ ಪ್ರತಿಮೆಯ ಕಡೆಗೆ ಆಗ ದೃಷ್ಟಿಯು ಹೊರಳಕೂಡದೆಂದಾಯಿತು  ಇನ್ನೊಂದು ಮಂದಿರದಲ್ಲಿ ಅನೇಕ ಪ್ರತಿಮೆಗಳು ಇದ್ದಾಗ ಅವುಗಳಲ್ಲಿ ಒಂದೇ ಪ್ರತಿಮೆಯ ನಾಮೋಚ್ಚಾರಣೆಯನ್ನು ಮಾಡಿ, ಸ್ತುತಿಸುವದೆಂದರೆ ಉಳಿದ ಪ್ರತಿಮೆಗಳನ್ನು ಅನಾದರಿಸಿದಂತೆ ಆಗಲಿಕ್ಕಿಲ್ಲವೆ? ಅಂದ ಮೇಲೆ ಭಕ್ತಿಯು ಎಲ್ಲಿ ಉಳಿಯಿತು? ಇಷ್ಟಾದ ಮೇಲೆ ಅನೇಕ ಪ್ರತಿಮೆಗಳು ಇದ್ದರೆ ಇಪ್ಪತ್ನಾಲ್ಕೂ ತೀರ್ಥಂಕರರ ಹೆಸರುಗಳನ್ನು ಹೇಳಿ ಸ್ತುತಿಸ-ಬೇಕೆಂದಾಯಿತು. ಒಂದು ವೇಳೆ ಅಲ್ಲಿ ಇಪ್ಪತ್ತು ಇಲ್ಲವೆ ಇಪ್ಪತ್ತೆರಡು ಮೂರ್ತಿಗಳು ಮಾತ್ರ ಇದ್ದರೆ ಮೊಟ್ಟಮೊದಲು ಆ ಎಲ್ಲ ಮೂರ್ತಿಗಳ ಚಿಹ್ನೆಗಳನ್ನು ನೋಡಿ, ಅಲ್ಲಿ ಇಲ್ಲದಿರುವ ಮೂರ್ತಿಗಳ ಹೆಸರುಗಳನ್ನು ತ್ಯಜಿಸಿ, ಇರುವ ಮೂರ್ತಿಗಳನ್ನಷ್ಟೇ ನೆನೆದು ಸ್ತುತಿಮಾಡಬೇಕಾದೀತು  ಇದೇ ಪ್ರಕಾರ ಎಲ್ಲಿ ಮೂರ್ತಿಯು ಚಿಕ್ಕದಿದ್ದೀತೋ, ಅದರ ಲಾಂಛನವು ಕತ್ತಲೆಯಿಂದ ಸ್ಪಷ್ಟ ಕಾಣದೆ ಹೋದೀತೋ ಅಲ್ಲಿ ಅನ್ಯರನ್ನು ವಿಚಾರಿಸಿ ಸ್ತುತಿ ಪಾಠವನ್ನು ಆರಂಭಿಸಬೇಕಾಯಿತಲ್ಲ! ಈ ಪ್ರಕಾರ ಏಕಾಂತಿಕ ಕಲ್ಪನೆಯನ್ನು ಮಾಡುವುದರಿಂದ ಅನೇಕ ದೋಷಗಳು ಉತ್ಪನ್ನವಾಗುತ್ತವೆ

**ಸರಿಸಮಾನ ಆಕಾರವಿಲ್ಲದ ಪ್ರತಿಮೆಗಳಲ್ಲಿ ಸ್ಥಾಪನೆಯು ಹುಚ್ಚು.** ಸ್ಥಾಪನೆಯ ಪಕ್ಷಪಾತಿಗಳು ಸ್ಥಾಪನೆಯ ಹೊರತಾಗಿ ಪ್ರತಿಮೆಗಳ ಪೂಜೆಯನ್ನೇ ಮಾಡದಿದ್ದರೆ ಸ್ತುತಿ, ವಂದನೆಗಳನ್ನು ಮಾಡುವ ಯೋಗ್ಯತೆಯೇ ಪ್ರತಿಮೆಗಳಲ್ಲಿ ಇಲ್ಲವೆಂದಂತೆ ಆದೀತು. ಒಂದು ವೇಳೆ ಹಳದಿ ಅಕ್ಕಿಯು ಸರಿಸಮಾನ ಆಕಾರದ ಸ್ಥಾಪನೆಗೇನೇ ಪೂಜ್ಯವೆಂದು ಮನ್ನಿಸಿದಲ್ಲಿ ಧಾತುಪಾಷಾಣಗಳ ಅದೇ ಆಕಾರದ ಪ್ರತಿಮೆಗಳನ್ನು ಸ್ಥಾಪನ ಮಾಡುವುದರಲ್ಲಿ ಪ್ರಯೋಜನವಾದರೂ ಏನಿದೆ? ಅಕೃತ್ರಿಮ ಚೈತ್ಯಾಲಯಗಳಲ್ಲಿ ಜಿನಪ್ರತಿಮೆಗಳು ಅನಾದಿ ಕಾಲದಿಂದ ಸ್ಥಾಪನಗೊಂಡಿವೆ. ಅವುಗಳಲ್ಲಿಯೂ ಸಹಪೂಜ್ಯತ್ವವು ಉಳಿಯಲಿಲ್ಲ  ಇದಕ್ಕೆ ಸ್ಥಾಪನಾ ಪಕ್ಷಪಾತಿಗಳು ಹೀಗೆನ್ನುತ್ತಾರೆ—ಒಂದು ಪ್ರತಿಮೆಯ ಮುಂದೆ ಒಬ್ಬರ ಪೂಜೆಯನ್ನೇ ಮಾಡಬೇಕು  ಒಂದು ಪ್ರತಿಮೆಯ ಮುಂದೆ ಉಳಿದ ಇಪ್ಪತ್ಮೂರು ತೀರ್ಥಂಕರರ ಪೂಜೆಯನ್ನೂ ಮಾಡುವದಾದಲ್ಲಿ ಹಳದಿಯ ಅಕ್ಕಿಯಿಂದ ಸ್ಥಾಪನೆಮಾಡಿ ಮಾಡಲಿಕ್ಕೆ ಬೇಕು. ಈ ಪ್ರಕಾರ ಮಾಡುವುದರಿಂದ ಇಪ್ಪತ್ಮೂರು ಪ್ರತಿಮೆಗಳ ಸಂಕಲ್ಪವು ಹಳದಿಯ ಅಕ್ಷತೆಯಲ್ಲಿ ಆದಂತಾಯಿತು. ಜಯಮಾಲೆ, ಪೂಜೆ, ಸ್ತವನಗಳನ್ನು ಮಾಡುವಾಗ ಪೂಜಕನು ತನ್ನ ದೃಷ್ಟಿಯನ್ನು ಆ ಸ್ಥಾಪಿತ ಹಳದಿಯ ಅಕ್ಕಿಯ ಕಡೆಗೆ ಇಡಬೇಕು. ಒಂದು ಪ್ರತಿಮೆಯಲ್ಲಿ ಇಪ್ಪತ್ನಾಲ್ಕು ಪ್ರತಿಮೆಗಳ ಸಂಕಲ್ಪವು ಅಯೋಗ್ಯವಾಗಿದೆ  ಅಂತಲೇ ಇಪ್ಪತ್ಮೂರು ಪ್ರತಿಮೆಗಳಿಗಾಗಿ ಅಷ್ಟು ಹೂವುಗಳನ್ನು ಸ್ಥಾಪಿಸಬೇಕು. ಆದರೆ ಸ್ಥಾಪನೆಯ ಹೊರತಾಗಿ ಪೂಜೆಯನ್ನೇ ಮಾಡಲಿಕ್ಕೆ ಬರದಿದ್ದರೆ ಮನೆ, ವನ, ಅನ್ಯದೇಶಗಳಲ್ಲಿ ಅರಹಂತನ ಸ್ತವನ ಅಥವಾ ವಂದನೆಯನ್ನು ಹೇಗೆ ಮಾಡುವುದು? ಈ ಪ್ರಕಾರ ಪ್ರತಿಪಾದನೆಯನ್ನು ಮಾಡುವವರಿಗೆ ಶಾಸ್ತ್ರಜ್ಞಾನವು ಇಲ್ಲವೆಂದು ಅನ್ನಬೇಕಾದೀತು. ಯಾಕೆಂದರೆ ಇಪ್ಪತ್ನಾಲ್ಕು ತೀರ್ಥಂಕರರ ಪೂಜೆಯನ್ನು ಮಾಡುವುದೆನ್ನುವುದು ಮತ್ತು ಕೊನೆಗೆ ಶಾಂತಿಯನ್ನು ಮಾಡುವದಕ್ಕಾಗಿ ಕೇವಲ ಹದಿನಾರನೆಯ ತೀರ್ಥಂಕರರ ಸ್ತುತಿಯನ್ನು ಮಾತ್ರ ಮಾಡಿದರೆ ಸಾಕೆನ್ನುವುದು  ಈ ಅಭಿಪ್ರಾಯದಲ್ಲಿ ಏನಾದರೂ ಅರ್ಥವಿದೆಯೆ?

**ಒಬ್ಬನೇ ತೀರ್ಥಂಕರನನ್ನು ಸಾವಿರ ಹೆಸರುಗಳಿಂದ ಸ್ತುತಿಸಲಾಗುತ್ತಿದೆ.** ಮೇಲೆ ವರ್ಣಿಸಿದ ಸ್ಥಾಪನಾವಾದಿಗಳ ಅಭಿಪ್ರಾಯವು ಅವಾಸ್ತವವಾಗಿದೆ  ಒಬ್ಬನೇ ತೀರ್ಥಂಕರನಿಗೆ ನಿರುಕ್ತಿಯ ಮುಖಾಂತರ ಇಪ್ಪತ್ನಾಲ್ಕು ಹೆಸರುಗಳನ್ನು ಕೊಡಲಿಕ್ಕೆ ಬರುತ್ತದೆ  ಇನ್ನು ಒಂದು ಸಾವಿರದೆಂಟು ಹೆಸರುಗಳಿಂದಲೂ ಸೌಧರ್ಮೇಂದ್ರನು ತೀರ್ಥಂಕರನನ್ನು ಸ್ತುತಿಸಿದ್ದುಂಟು. ಒಬ್ಬ ತೀರ್ಥಂಕರನ ಅನಂತ ಗುಣಗಳಿಗೆ ಅನುಸರಿಸಿ ಅನಂತ ಹೆಸರುಗಳನ್ನು ಅವನಿಗೆ ಕೊಡಲಿಕ್ಕೆ ಬರುತ್ತದೆ. ಈ ಇಪ್ಪತ್ನಾಲ್ಕು ಹೆಸರುಗಳನ್ನೂ ಅನಂತಾನಂತ ಹೆಸರುಗಳನ್ನೂ ಅನಂತಕಾಲದಲ್ಲಿ ಅನಂತ ತೀರ್ಥಂಕರರಿಗೆ ಕೊಡುತ್ತ ಬಂದಿವೆ  ಹಾಗೆಯೇ ಅವರ ತಂದೆ ತಾಯಂದಿರ ಹೆಸರುಗಳು, ಶರೀರದ ಅವಗಾಹನೆ, ವರ್ಣ ಮೊದಲಾದವುಗಳೂ ಅನಂತವಾಗಿವೆ  ಅಂತಲೇ ಒಬ್ಬ ತೀರ್ಥಂಕರರಲ್ಲಿ ಒಬ್ಬರ ಇಲ್ಲವೆ ಇಪ್ಪತ್ನಾಲ್ಕೂ ಜನರ ಸಂಕಲ್ಪ ಮಾಡಿದರೂ ಸಹ ನಡೆಯುತ್ತದೆ  ಈ ಕಾಲದಲ್ಲಿ ಉಳಿದ ಧರ್ಮದ ಜನರೂ ಸಹ ತಮ್ಮ ತಮ್ಮ ತಿಳುವಳಿಕೆಗೆ ತಕ್ಕಂತೆ ಬೇರೆ ಬೇರೆ ಮಾದರಿಯ ಪೂಜೆಯ ಪ್ರಕಾರಗಳನ್ನು ಕಲ್ಪಿಸಿದ್ದಾರೆ  ಅಂತಲೇ

ಈ ಕಾಲಕ್ಕೆ ಅನುಸರಿಸಿ ನಮ್ಮಲ್ಲಿ ಆಚಾರ್ಯರು ತದಾಕಾರ ಸ್ಥಾಪನೆಯ ಮುಖ್ಯತ್ವವನ್ನು ವರ್ಣಿಸಿದ್ದಾರೆ. ಒಂದು ವೇಳೆ ಈಗ ತದಾಕಾರ ಸ್ಥಾಪನೆಗೆ ಮುಖ್ಯತೆಯನ್ನು ಕೊಡುತ್ತ ಹೋದರೆ ಬೇಕಾದ ಜೀವದಲ್ಲಿ ಇಲ್ಲವೆ ಇತರ ಧರ್ಮೀಯರ ಪ್ರತಿಮೆಗಳಲ್ಲಿ ಕೂಡ ಸ್ಥಾಪನೆಯ ಸಂಕಲ್ಪವಾಗಲಿಕ್ಕೆ ಹತ್ತೀತು. ಇದರಿಂದ ಸನ್ಮಾರ್ಗವು ಭ್ರಷ್ಟವಾದೀತು. ಇಂದ್ರನು ಭಗವಂತನ ಜನ್ಮಾಭಿಷೇಕ ಮಾಡಿ, ಮೇರು ಪರ್ವತದಿಂದ ತಕ್ಕೊಂಡು ಬರುತ್ತಾನೆ. ಆ ಕಾಲದಲ್ಲಿ ಧ್ವಜದ ಮೇಲೆ ಯಾವ ಚಿಹ್ನವನ್ನು ಸ್ಥಾಪಿಸಲಾಗುವದೋ ಅದನ್ನೇ ಆ ತೀರ್ಥಂಕರರ ಪ್ರತಿಮೆಯ ಕೆಳಗಿನ ಆಸನದ ಮೇಲೆ ನಾವು ನಿರ್ಣಯದ ವ್ಯವಹಾರಕ್ಕಾಗಿ ಕೆತ್ತಲಾಗುತ್ತದೆ. ವಾಸ್ತವಿಕವಾಗಿ ಪರಮಾತ್ಮಾ ಸ್ವರೂಪದ ದೃಷ್ಟಿಯಿಂದ ಅರಹಂತರೆಲ್ಲ ಏಕರೂಪವಾಗಿದ್ದಾರೆ. ದೇಹಗಳ ದೃಷ್ಟಿಯಿಂದ ಅನೇಕರೂಪವಾಗಿದ್ದಾರೆ. ಸತ್ಯಾರ್ಥ ಜ್ಞಾನಸ್ವಭಾವವು ರತ್ನತ್ರಯ ಸ್ವರೂಪ ಮತ್ತು ವೀತರಾಗ ಭಾವ ಇವುಗಳಿಂದಲೂ ಪಂಚಪರಮೇಷ್ಠಿರೂಪ ಪ್ರತಿಮೆಯು ಒಂದೇ ಆಗಿದೆ. ಅದಕ್ಕಾಗಿ ಪರಮಾಗಮದ ಆಜ್ಞೆಯ ವಿರುದ್ಧ ವಿನಾಕಾರಣ ವಿಕಲ್ಪನೆಯನ್ನು ಯೋಜಿಸಿ ಸಂಶಯವನ್ನು ಉತ್ಪನ್ನ ಮಾಡುವದು ಯೋಗ್ಯವಲ್ಲ. ಭಗವಂತನ ಅಥವಾ ಜಿನಸೂತ್ರದ ಆಜ್ಞೆಯು ಯಾವುದಿರುವುದೋ ಅದನ್ನು ಪ್ರಮಾಣವೆಂದು ಮನ್ನಿಸಲಿಕ್ಕೆ ಬೇಕು.

**ಪೂಜೆಯ ಐದು ಪ್ರಕಾರಗಳು**—ವ್ಯವಹಾರದಲ್ಲಿ ಪೂಜೆಯನ್ನು ಐದು ಪ್ರಕಾರಗಳಿಂದ ಮಾಡಲಾಗುತ್ತದೆ. ಆಹ್ವಾನ, ಸ್ಥಾಪನ, ಸನ್ನಿಧೀಕರಣ, ಪೂಜನ ಮತ್ತು ವಿಸರ್ಜನ. ಇವುಗಳಲ್ಲಿ ಪರಿಣಾಮ ಶುದ್ಧಿಗೆ ಪುಷ್ಟಿಯು ಬರಬೇಕೆಂದು ಮೊಟ್ಟಮೊದಲು ಆಹ್ವಾನ ಮಾಡಲಿಕ್ಕೆ ಹೂವಿನ ಮಳೆಯನ್ನು ಸುರಿಸಬೇಕು. ಪ್ರತಿಮೆಯೇನೂ ಹೂವುಗಳನ್ನು ಅರಿಯುವುದಿಲ್ಲ. ಆಹ್ವಾನದ ಸಂಕಲ್ಪವನ್ನು ಮಾಡಿ ಪುಷ್ಪಾಂಜಲಿಯನ್ನು ಚೆಲ್ಲುವ ಒಂದು ರೂಢಿಯು ಇದೆ. ಪೂಜೆಗೆ ಪ್ರಾರಂಭದಲ್ಲಿ ಸ್ಥಾಪನೆಯ ಭಾವವು ಇದ್ದರೆ ಸ್ಥಾಪನೆಯನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಹಾಗೆಯೇ ಪೂಜೆಯನ್ನು ಮಾಡಬೇಕು. ನಾವು ಅನೇಕಾಂತಿಗಳಾಗಿದ್ದೇವೆ. ನಮಗೆ ಯಾವಾಗಲೂ ಒಂದೇ ಪಕ್ಷದ ಹಟವಿರಕೂಡದು. ಭಗವಾನ್ ಪರಮಾತ್ಮನು ಸಿದ್ಧಲೋಕದಲ್ಲಿ ವಿರಾಜಮಾನನಾಗಿದ್ದಾನೆ. ಅವನು ಅಲ್ಲಿಂದ ಚಲಾಯಮಾನನಾಗುವದಿಲ್ಲ. ಆದರೆ ತದಾಕಾರ ಬಿಂಬದೊಡನೆ ಏಕಾಗ್ರತೆಯನ್ನು ಹೊಂದುವದಕ್ಕಾಗಿ ಸಾಕ್ಷಾತ್ ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧುಗಳ ಸ್ವರೂಪವನ್ನು ಪ್ರತಿಬಿಂಬದಲ್ಲಿ ನಿಶ್ಚಯಗೊಳಿಸಿ, ಪ್ರತಿಬಿಂಬದ ಧ್ಯಾನ, ಪೂಜೆ, ಸ್ತುತಿಗಳನ್ನು ಮಾಡಬೇಕು, ಹಾಗೆ ಮಾಡಬೇಕಾಗುತ್ತದೆ.

ಭಗವಂತನ ಪ್ರತಿಬಿಂಬವು ಪ್ರತ್ಯಕ್ಷ ಇಲ್ಲದ ಹೊರತಾಗಿ ಸಭೆಯೊಳಗಿನ ಉಳಿದ ಜನರ ಮುಂದೆ ಭಗವಂತನ ಗುಣದ ಸ್ತೋತ್ರವನ್ನು ಅನ್ನಕೂಡದು, ಭಜನವನ್ನೂ ಮಾಡಬಾರದು ಎಂದು ಹಲವರ ಅಭಿಪ್ರಾಯವಾಗಿದೆ. ಈ ತಿಳುವಳಿಕೆಯು ಅಯೋಗ್ಯವಾಗಿದೆ. ಭಗವಂತನ ಧ್ಯಾನ, ಸ್ತವನ ಮೊದಲಾದವುಗಳನ್ನು ಪರಮೇಷ್ಠಿಯನ್ನು ಕಣ್ಣೆದುರಿಗೆ ತಂದು ಮಾಡಬೇಕಾಗುತ್ತದೆ. ಆದರೆ ಯಾರು ಭಜನ, ಪೂಜನಗಳನ್ನು ಮಾಡುವದನ್ನು ನಿಷೇಧಿಸುವರೋ ಅವರಿಗೆ ಪಂಚ ನಮಸ್ಕಾರದ ಜಪ, ಸ್ತುತಿ, ಸಾಮಾಯಿಕ, ವಂದನೆ ಮೊದಲಾದವುಗಳನ್ನು ಪ್ರತಿಮೆ ಇಲ್ಲದೆ ಮಾಡಲಿಕ್ಕೆ ಬರಲಾರದು. ಅದರಂತೆಯೇ ಶಾಸ್ತ್ರವನ್ನು ಓದುವ ಮೊದಲು ನಮಸ್ಕಾರಾತ್ಮಕ ಶ್ಲೋಕವನ್ನೂ ಸಹ ಹೇಳಲಿಕ್ಕೆ ಬರಲಾರದು. ಅದಕ್ಕಾಗಿ ಮಿಥ್ಯಾ ಸಂಶಯವನ್ನು ತೆಗೆಯುವ ಜನರ ಹೇಳಿಕೆಯ ಮೇಲಿಂದ ಧ್ಯಾನ, ಸ್ತವನ, ಪೂಜನ ಮೊದಲಾದ ಕ್ರಿಯೆಗಳನ್ನು ಮಾಡುವುದರಿಂದ ಎಂದೂ ಪರಾಙ್ಮುಖವಾಗಕೂಡದು.

**ಅಕೃತ್ರಿಮ ಚೈತ್ಯಾಲಯಗಳು**—ಇಲ್ಲಿ ಸಂದರ್ಭಕ್ಕೆ ಅನುಸರಿಸಿ ಅಕೃತ್ರಿಮ ಚೈತ್ಯಾಲಯಗಳ ಸ್ವರೂಪವನ್ನು ಸ್ವಲ್ಪದರಲ್ಲಿ 'ತ್ರಿಲೋಕಸಾರ' ಗ್ರಂಥದ ಆಧಾರದಿಂದ ವಿವರಿಸಿದರೆ ಅನುಚಿತವಾಗಲಾರದು. ಅಧೋಲೋಕದಲ್ಲಿ ಏಳುಕೋಟಿ ಎಪ್ಪತ್ತೆರಡು ಲಕ್ಷ (೭೭೨೦೦೦೦೦) ಭವನವಾಸಿ ದೇವರ ಮನೆಗಳಿವೆ. ಅವುಗಳಲ್ಲಿ ಅನೇಕ ಗೃಹಗಳು ಅಸಂಖ್ಯಾತ ಯೋಜನ ವಿಸ್ತಾರವಾಗಿವೆ. ಕೆಲವು ಸಂಖ್ಯಾತ ಯೋಜನ ವಿಸ್ತಾರವುಳ್ಳವುಗಳಾಗಿವೆ. ಆ ಒಂದೊಂದು ಮನೆಯಲ್ಲಿಯೂ ಅಸಂಖ್ಯಾತ ಭವನವಾಸಿ ದೇವರಿಂದ ವಂದನೀಯವೆನಿಸುವಂಥ ಒಂದೊಂದು ಜಿನಮಂದಿರ ರೂಪುಗೊಂಡಿದೆ. ಈ ಪ್ರಕಾರ ೭೭೨೦೦೦೦೦ ಜಿನಮಂದಿರಗಳು ಇರುತ್ತವೆ. ಮಧ್ಯಲೋಕದಲ್ಲಿ ಪಂಚಮೇರುವಿನ ಮೇಲೆ ೮೦ ಜಿನಮಂದಿರ, ಗಜದಂತದ ಮೇಲೆ ೨೦, ಕುಲಾಚಲಗಳ ಮೇಲೆ ೩೦, ವಿಜಯಾರ್ಧ ಪರ್ವತದ ಮೇಲೆ ೧೭೦, ದೇವಕುರು ಉತ್ತರಕುರುಗಳಲ್ಲಿ ೧೦, ವಕ್ಷಾರಗಿರಿಯ ಮೇಲೆ ೮೦, ಮಾನುಷೋತ್ತರ ಪರ್ವತದ ಮೇಲೆ ೪, ಇಕ್ಷ್ವಾಕಾರ ಪರ್ವತದ ಮೇಲೆ ೪, ಕುಂಡಲಗಿರಿಯ ಮೇಲೆ ೪, ರುಚಕಗಿರಿಯ ಮೇಲೆ ೪, ನಂದೀಶ್ವರ ದ್ವೀಪದಲ್ಲಿ ೫೨, ಈ ಪ್ರಕಾರ

ಮನುಷ್ಯಲೋಕದಲ್ಲಿ ೪೫೮ ಮಂದಿರಗಳು ಇರುತ್ತವೆ ಊರ್ಧ್ವಲೋಕ, ಸ್ವರ್ಗ, ಅಹಮಿಂದ್ರ ಲೋಕಗಳಲ್ಲಿ ಸೇರಿ ಎಂಬತ್ನಾಲ್ಕು ಲಕ್ಷ ತೊಂಬತ್ತೇಳು ಸಾವಿರ ಇಪ್ಪತ್ತುಮೂರು (೮೪೯೭೦೨೩) ಚೈತ್ಯಾಲಯಗಳಿವೆ. ವ್ಯಂತರ ದೇವ ಮತ್ತು ಜ್ಯೋತಿರ್ಲೋಕಗಳ ಅಸಂಖ್ಯಾತ ಜಿನಮಂದಿರಗಳು ಇರುತ್ತವೆ ಕೆಲವುಗಳ ಸಂಖ್ಯೆಯನ್ನು ಎಣಿಸಲಿಕ್ಕೆ ಬರುತ್ತದೆ ಇಂತವುಗಳೇ ಎಂಟು ಕೋಟಿ, ಐವತ್ತಾರು ಲಕ್ಷ, ತೊಂಬತ್ತೇಳು ಸಾವಿರ, ನಾಲ್ಕುನೂರ ಎಂಬತ್ತೊಂದು (೮೫೬೯೭೪೮೧) ಜಿನಮಂದಿರಗಳಾಗುತ್ತವೆ

**ಜಿನಾಲಯದ ಸ್ವರೂಪ**—ಜಿನಾಲಯಗಳಲ್ಲಿ ಉತ್ಕೃಷ್ಟ, ಮಧ್ಯಮ ಮತ್ತು ಜಘನ್ಯ ಎಂದು ಮೂರು ಭೇದಗಳು ಇರುತ್ತವೆ ಇವುಗಳಲ್ಲಿ ಉತ್ಕೃಷ್ಟ ಜಿನಾಲಯವು ಉದ್ದ ೧೦೦ ಯೋಜನ, ಅಗಲ ೫೦ ಯೋಜನ, ಎತ್ತರ ೭೫ ಯೋಜನ ಇರುತ್ತದೆ ಮಧ್ಯಮ ಜಿನಮಂದಿರವು ಉದ್ದ ೫೦ ಯೋಜನ, ಅಗಲ ೨೫ ಯೋಜನ, ಎತ್ತರ ೩೭½ ಯೋಜನ ಪ್ರಮಾಣದಲ್ಲಿ ಇರುತ್ತದೆ ಜಘನ್ಯ ಜಿನಮಂದಿರವು ಉದ್ದ ೨೫ ಯೋಜನ, ಅಗಲ ೧೨½ ಯೋಜನ, ಎತ್ತರ ೧೮¾ ಯೋಜನ ಇರುತ್ತದೆ. ಎಲ್ಲ ಮಂದಿರಗಳ ತಳಹದಿಯು ನೆಲದಲ್ಲಿ ಅರ್ಧಯೋಜನ ಆಳವಿರುತ್ತದೆ. ಈ ಜಿನಮಂದಿರಗಳಿಗೆ ಮೂರು ಮೂರು ಬಾಗಿಲುಗಳಿವೆ ಅವುಗಳಲ್ಲಿ ಎದುರಿಗೆ ಒಂದು ದ್ವಾರವಿರುತ್ತದೆ ಹಿಂದಿನ ಮಗ್ಗಲಿಗೆ ಎರಡು ದ್ವಾರಗಳಿರುತ್ತವೆ. ಎದುರಿಗಿನ ಮಹಾದ್ವಾರದ ಅಳತೆಯು-ಉತ್ಕೃಷ್ಟ ಜಿನಮಂದಿರದ್ದು-ಎತ್ತರ ೧೬ ಯೋಜನ, ಅಗಲ ೮ ಯೋಜನ ಇರುತ್ತದೆ ಮಧ್ಯಮ ಜಿನ ಮಂದಿರದ ಎದುರಿಗಿನ ದ್ವಾರವು ಎತ್ತರ ೮ ಯೋಜನ, ಅಗಲ ೪ ಯೋಜನ, ಜಘನ್ಯ ಮಂದಿರದ ದ್ವಾರದ ಎತ್ತರ ೪ ಯೋಜನ, ಅಗಲ ೨ ಯೋಜನ ಈ ಪ್ರಮಾಣದಲ್ಲಿವೆ ಹಿಂದಿನ ಎರಡು ಬಾಗಿಲುಗಳ ಪ್ರಮಾಣವು ಉತ್ಕೃಷ್ಟ ಮಂದಿರಗಳ ಚಿಕ್ಕ ದ್ವಾರಗಳು ಎತ್ತರ ೮ ಯೋಜನ, ಅಗಲ ೪ ಯೋಜನ, ಮಧ್ಯಮ ಮಂದಿರದ ಚಿಕ್ಕ ಬಾಗಿಲುಗಳು ಎತ್ತರ ೪ ಯೋಜನ ಅಗಲ ೨ ಯೋಜನ; ಜಘನ್ಯ ಮಂದಿರದ ಕಿರಿಯ ಬಾಗಿಲುಗಳು ಎತ್ತರ ೨ ಯೋಜನ, ಅಗಲ ೧ ಯೋಜನ, ಇರುತ್ತವೆ ಭದ್ರಶಾಲಾವನ, ನಂದನವನ, ನಂದೀಶ್ವರ ದ್ವೀಪ, ಸ್ವರ್ಗದೊಳಗಿನ ವಿಮಾನಗಳಲ್ಲಿ ಉತ್ಕೃಷ್ಟ ಪ್ರಮಾಣದ ಜಿನಾಲಯಗಳು ಇರುತ್ತವೆ ಸೌಮನಸವನ, ರುಚಕ ಪರ್ವತ, ಕುಂಡಲಗಿರಿ, ವಕ್ಷಾರಗಿರಿ, ಇಷ್ವಾಕಾರ, ಮಾನುಷೋತ್ತರ ಮತ್ತು ಕುಲಾಚಲ ಪರ್ವತ ಇವುಗಳ ಮೇಲೆ ಮಧ್ಯಮ ಪ್ರಮಾಣದ ಜಿನಮಂದಿರಗಳು ಇರುತ್ತವೆ. ಪಾಂಡುಕ ವನದೊಳಗಿನ ಜಿನಾಲಯಗಳು ಜಘನ್ಯ ಪ್ರಮಾಣದವುಗಳಾಗಿವೆ ವಿಜಯಾರ್ಧ ಪರ್ವತ, ಮತ್ತು ಜಂಬೂ ಶಾಲ್ಮಲಿವೃಕ್ಷ ಇವುಗಳ ಮೇಲಿನ ಜಿನಮಂದಿರಗಳ ಉದ್ದಳತೆಯು ಒಂದು ಹರದಾರಿ ಇರುತ್ತದೆ. ಉಳಿದ ಭವನವಾಸಿಗಳ ಮನೆಯಲ್ಲಿ ಮತ್ತು ವ್ಯಂತರ ಜ್ಯೋತಿಷ ಲೋಕದೊಳಗಿನ ಅಸಂಖ್ಯಾತ ಜಿನಾಲಯಗಳು ಇರುತ್ತವೆ. ಅವುಗಳ ಉದ್ದಗಲಗಳು ಜಿನೇಶ್ವರನಿಗೆ ಬೇಕಾಗುವಷ್ಟು ಇರುತ್ತವೆ

**ಜಿನಮಂದಿರಗಳ ಬಾಹ್ಯ ಪರಿಕರ**—ಜಿನಮಂದಿರಗಳ ಬಾಹ್ಯ ಪರಿಕರಗಳನ್ನು ಏಳು ಗಾಹೆಗಳಲ್ಲಿ ವರ್ಣಿಸಲಾಗಿದೆ ಅದು ಹೀಗಿದೆ-ಎಲ್ಲ ಜಿನಮಂದಿರಗಳ ನಾಲ್ಕೂ ಮಗ್ಗಲಿಗೆ ನಾಲ್ಕು ದ್ವಾರಗಳಿಂದ ಕೂಡಿದ ರತ್ನಮಯ ಮೂರು ಕೋಟೆಗಳಿರುತ್ತವೆ ಮಹಾದ್ವಾರದೊಳಗಿಂದ ಹೋಗಲಿಕ್ಕೆ ಯಾವ ಸಣ್ಣ ಸಣ್ಣ ದಾರಿಗಳು ಇರುವವೋ ಆ ಸ್ಥಳದಲ್ಲಿ ಒಂದೊಂದು ಮಾನಸ್ತಂಭ ಮತ್ತು ಒಂಬತ್ತು ಒಂಬತ್ತು ಸ್ತೂಪಗಳಿವೆ ಮೂರು ಕೋಟೆಗಳಲ್ಲಿ ಮೊದಲನೆಯ ಹಾಗೂ ಎರಡನೆಯ ಕೋಟೆಗಳ ಮಧ್ಯದಲ್ಲಿ ವನವಿದೆ ಎರಡನೆಯ ಮತ್ತು ಮೂರನೆಯ ಕೋಟೆಗಳ ನಡುವೆ ಧ್ವಜಗಳಿವೆ. ಮೂರನೆಯ ಕೋಟೆ ಮತ್ತು ಚೈತ್ಯಾಲಯಗಳ ಮಧ್ಯದಲ್ಲಿ ಚೈತ್ಯಭೂಮಿಯಿದೆ. ಅಲ್ಲಿಯ ಚೈತ್ಯಾಲಯದಲ್ಲಿ ಒಂದುನೂರಾ ಎಂಟು ಗರ್ಭಗೃಹಗಳಿವೆ. ಮಧ್ಯಭಾಗದಲ್ಲಿ ರತ್ನಗಳಿಂದ ಕೆತ್ತಿದ ಕಂಭಗಳಿಂದ ಕೂಡಿದ ಸುವರ್ಣದ ಎರಡು ಯೋಜನ ಅಗಲ ಎಂಟು ಯೋಜನ ಉದ್ದ, ಮತ್ತು ನಾಲ್ಕು ಯೋಜನ ಎತ್ತರವಿರುವ ಮಂಟಪವಿದೆ ಇದಕ್ಕೆ ದೇವಚ್ಛಂದವೆಂದೂ ಹೆಸರು ಅದಕ್ಕೆ ಮೇಲ್ಮನೆಯಿದ್ದು, ಅದರಲ್ಲಿ ಒಂದುನೂರಾ ಎಂಟು ಗರ್ಭಗೃಹಗಳು ಇರುತ್ತವೆ ಆ ಗರ್ಭಗೃಹಗಳಲ್ಲಿ ಆದಿ ಜಿನೇಂದ್ರನ ಶರೀರದಷ್ಟು ಎತ್ತರವಾದ ರತ್ನದ ಪ್ರತಿಮೆಗಳು ಒಂದುನೂರಾ ಎಂಟು ಇರುತ್ತವೆ. ಆ ಪ್ರತಿಮೆಗಳಿಗೆ ಭಿನ್ನ ಭಿನ್ನ ಸಿಂಹಾಸನ, ಛತ್ರ, ಚಾಮರ, ಪ್ರಾತಿಹಾರ್ಯ ಮೊದಲಾದವುಗಳು ಇರುತ್ತವೆ ಪ್ರತಿಮೆಗಳ ಮಸ್ತಕದ ಮೇಲೆ ಕಪ್ಪು ಕೂದಲುಗಳಿರುತ್ತವೆ ಅವು ನಿಜವಾಗಿಯೂ ರತ್ನಗಳು ಕೇಶಾಕಾರಕ್ಕೆ ಪರಿಣಮನವಾದಂತಿವೆ ಬಾಯಿಯಲ್ಲಿ ಹಲ್ಲಿನಾಕಾರದ ರತ್ನಗಳನ್ನು ಕೂಡಿಸಲಾಗಿದೆ. ಕೆಂಪು ತುಟಿಗಳು ಇರುತ್ತವೆ ಹೊಸ ಕೆಂಪು ಚಿಗುರೆಲೆಯ ವರ್ಣದ ಅಂಗೈ ಅಂಗಾಲುಗಳು ಶೋಭಿಸುತ್ತವೆ

ಶ್ರೀರಾಜವಾರ್ತಿಕ ಗ್ರಂಥದಲ್ಲಿ ಪ್ರತಿಮೆಯನ್ನು ವರ್ಣಿಸುವಾಗ ಹೀಗೆ ಹೇಳಿದೆ–ಲೋಹಿತಾಕ್ಷ ಮಣಿಗಳಿಂದ ವ್ಯಾಪಿಸಿದ ಮೊಳಕಾಲುಗಳು, ಸ್ಫಟಿಕ ಮಣಿಯ ನೇತ್ರಗಳು, ಅರಿಷ್ಟ ಮಣಿಯಂತೆ ಇರುವ ನೇತ್ರದ ತಾರಕೆಗಳು, ಅಂಜನಮೂಲ ಮಣಿಯಂತಿರುವ ಹುಬ್ಬುಗಳು, ನೀಲ ಮಣಿಯಂತಿರುವ ಕೂದಲುಗಳು ಇವೆ. ಹತ್ತು ತಾಳ (ಒಂದು ತಾಳವು ಹನ್ನೆರಡು ಅಂಗುಲ ಪ್ರಮಾಣವಾಗಿರುತ್ತದೆ.) ಪ್ರಮಾಣ ಎತ್ತರ ಮತ್ತು ೧೦೦೮ ಲಕ್ಷಣಗಳಿಂದ ಕೂಡಿದ ಆ ಪ್ರತಿಮೆಗಳು ಇರುತ್ತವೆ. ಆ ಜಿನಮೂರ್ತಿಗಳನ್ನು ಕಂಡೊಡನೆಯೇ ಇವು ಪ್ರತ್ಯಕ್ಷ ಮಾತನಾಡುತ್ತಿವೆಯೋ ಏನೋ ಎಂದೆನಿಸುತ್ತದೆ! ಪ್ರತಿಯೊಂದು ಗರ್ಭಗೃಹದಲ್ಲಿಯೂ ಸರಿಯಾಗಿ ಸಾಲಾಗಿ ಎದ್ದು ನಿಂತಿರುವ ಮೂವತ್ತೆರಡು ನಾಗಕುಮಾರರ–ಯಕ್ಷರ–ಜೋಡಿಗಳು ಇರುತ್ತವೆ. ಅವರೆಲ್ಲರ ಕೈಗಳಲ್ಲಿ ಚಾಮರಗಳಿವೆ. ಪ್ರತಿಮೆಯ ಎರಡೂ ಮಗ್ಗುಲಿಗೆ ಸರ್ವ ವಸ್ತ್ರಾಭರಣಗಳಿಂದ ಶೋಭಿಸುವ ಬಿಳಿಯ ರತ್ನಮಯ ಚಮರಿಗಳನ್ನು ಕೈಯಲ್ಲಿ ಹಿಡಿದಿರುವ ನಾಗಕುಮಾರರು–ಯಕ್ಷರು–ಐವತ್ನಾಲ್ಕು ಚಾಮರಗಳನ್ನು ಪ್ರಭುವಿನ ಮೇಲೆ ಬೀಸುತ್ತಿರುವರು. ಈ ಪ್ರಕಾರ ಒಂದುನೂರಾ ಎಂಟು ಪ್ರತಿಮೆಗಳ ಬೇರೆ ಬೇರೆ ಪ್ರಾತಿಹಾರ್ಯಗಳು ಒಂದೊಂದು ಮಂದಿರದಲ್ಲೂ ಇರುತ್ತವೆ. ಜಿನ ಪ್ರತಿಮೆಗಳ ಹಿಂದಿನ ಮಗ್ಗುಲಿಗೆ ಶ್ರೀದೇವಿ ಮತ್ತು ಸರಸ್ವತಿದೇವಿ, ಸರ್ವಾಹ್ಣಯಕ್ಷ ಮತ್ತು ಸನತ್ಕುಮಾರಯಕ್ಷ ಇವರ ಆಕಾರದ ಪ್ರತಿಮೆಗಳನ್ನೂ ತೆಗೆದಿರುತ್ತಾರೆ. ಗಿಂಡಿ, ಕಲಶ, ಕನ್ನಡಿ, ಧ್ವಜ, ಚಾಮರ, ಛತ್ರ, ಬೀಸಣಿಗೆ, ದೀಪಸ್ತಂಭ (ಠೋಣಾ) ಈ ಎಂಟು ಮಂಗಲ ದ್ರವ್ಯಗಳು ಪ್ರಭುವಿನ ಮುಂದೆ ಇಟ್ಟಿರುತ್ತವೆ. ಈ ಪ್ರಕಾರ ಒಂದುನೂರಾ ಎಂಟು ಪ್ರತಿಮೆಗಳ ಹತ್ತಿರ ಹೀಗೆಯೇ ಮಂಗಲ ದ್ರವ್ಯಗಳನ್ನು ಇಟ್ಟಿರುತ್ತದೆ.

**ಗರ್ಭಗೃಹದ ರಚನೆ**—ಗರ್ಭಗೃಹದ ಬಾಹ್ಯ ರಚನೆಯು ಈ ಪ್ರಕಾರ ಇರುತ್ತದೆ. ರತ್ನದಿಂದ ಕೆತ್ತಿದ ಮತ್ತು ಸುವರ್ಣ ಪುಷ್ಪಗಳಿಂದ ಶೋಭಿಸುವ ಮಂಟಪದ ಮಧ್ಯಭಾಗದಲ್ಲಿ ಬೆಳ್ಳಿ–ಬಂಗಾರಗಳ ಮೂವತ್ತೆರಡು ಸಾವಿರ ಕಲಶಗಳಿರುತ್ತವೆ. ಮಹಾದ್ವಾರದ ಎರಡೂ ಮಗ್ಗುಲಿಗೆ ಇಪ್ಪತ್ನಾಲ್ಕು ಸಾವಿರ ಧೂಪದ ಕೊಡಗಳನ್ನು ಇಡಲಾಗಿದೆ. ಮಹಾದ್ವಾರದ ಹೊರಗಿನ ಮಗ್ಗುಲಿಗೆ ಎರಡೂ ಕಡೆಗೆ ಎಂಟು ಸಾವಿರ ರತ್ನದ ಮಾಲೆಗಳನ್ನು ತೂಗುಹಾಕಲಾಗಿದೆ. ಆ ರತ್ನ ಮಾಲೆಗಳ ಮಧ್ಯದಲ್ಲಿ ಇಪ್ಪತ್ನಾಲ್ಕು ಸಾವಿರ ಬಂಗಾರದ ಮಾಲೆಗಳು ಇರುತ್ತವೆ. ಮಹಾದ್ವಾರದ ಮುಂದಿನ ಮುಖಮಂಟಪದಲ್ಲಿ ಹದಿನಾರು ಸಾವಿರ ಕಲಶಗಳಿದ್ದು ಅಷ್ಟೇ ಸುವರ್ಣ ಮಾಲೆಗಳು ಇರುತ್ತವೆ. ಮುಖ ಮಂಟಪದಲ್ಲಿ ಹದಿನಾರು ಸಾವಿರ ಧೂಪದ ಘಟಗಳಿವೆ. ಅವುಗಳ ಮಧ್ಯದಲ್ಲಿ ಮಹಾನ್ ಶಬ್ದ ಮಾಡುವಂಥದೂ ಮುತ್ತಿನಿಂದ ಸುತ್ತಲ್ಪಟ್ಟಿದ್ದೂ ಆದ ರತ್ನದ ಚಿಕ್ಕ ಘಂಟೆಯು ಇರುತ್ತದೆ. ಇಂಥ ಚಿಕ್ಕ ಚಿಕ್ಕ ಘಂಟೆಗಳಿಂದ ಕೂಡಿದಂಥ ಅನೇಕ ಪ್ರಕಾರದ ದೊಡ್ಡ ಘಂಟೆಗಳು ಇರುತ್ತವೆ.

**ಮಂದಿರಗಳ ಚಿಕ್ಕ ದ್ವಾರಗಳ ವರ್ಣನೆ**—ಜಿನಮಂದಿರಗಳ ಚಿಕ್ಕ ದ್ವಾರಗಳ ಸ್ವರೂಪ—ದಕ್ಷಿಣೋತ್ತರದಲ್ಲಿರುವ ಹಿಂದಿನ ಚಿಕ್ಕ ದ್ವಾರವು ಮೇಲೆ ವರ್ಣಿಸಿದ ವರ್ಣನೆಗಿಂತಲೂ ಎಲ್ಲ ರೀತಿಯಿಂದಲೂ ಅರ್ಧದಷ್ಟು ಇರುತ್ತದೆ. ರತ್ನ–ಮಾಲೆಗಳು ನಾಲ್ಕು ಸಾವಿರ, ಧೂಪ ಘಟಗಳು ಹನ್ನೆರಡು ಸಾವಿರ, ಸುವರ್ಣ ಮಾಲೆಗಳು ಹನ್ನೆರಡು ಸಾವಿರ ಇರುತ್ತವೆ. ಬಾಗಿಲಿನ ಎದುರಿನ ಮುಖ ಮಂಟಪದಲ್ಲಿ ಸುವರ್ಣ ಘಟಗಳು ಎಂಟು ಸಾವಿರ, ಸುವರ್ಣ ಮಾಲಾ ಎಂಟು ಸಾವಿರ, ಧೂಪಘಟ ಎಂಟು ಸಾವಿರ, ಇವಲ್ಲದೆ ಅನೇಕ ಪ್ರಕಾರದ ಚಿಕ್ಕ ಚಿಕ್ಕ ಘಂಟೆಗಳು ಇರುವವು. ಮಂದಿರದ ಪೃಷ್ಠಭಾಗದಲ್ಲಿ ರತ್ನಮಾಲೆಗಳು ಎಂಟು ಸಾವಿರ, ಸುವರ್ಣ ಮಾಲೆಗಳು ಇಪ್ಪತ್ನಾಲ್ಕು ಸಾವಿರ ಇವೆ. ಈ ಮಾಲೆಗಳನ್ನು ನಾಲ್ಕೂ ಮಗ್ಗುಲಿಗೆ ಗೋಡೆಗಳ ಮೇಲೆ ನೇತಾಡುವಂತೆ ತೂಗು ಹಾಕಲಾಗಿದೆ.

**ಮುಖಮಂಟಪದ ವರ್ಣನೆ**—ಮುಖ ಮಂಟಪದ ವಿಸ್ತಾರ ಮೊದಲಾದವುಗಳನ್ನು ತ್ರೈಲೋಕ್ಯಸಾರ ಗ್ರಂಥದಲ್ಲಿ ಹದಿನೈದು ಪದ್ಯಗಳಿಂದ ವರ್ಣಿಸಲಾಗಿದೆ. ಅದರ ಸಾರಾಂಶ ಹೀಗಿದೆ—ಮಂದಿರಗಳ ಮುಂದೆ ಮುಖಮಂಟಪ ಇರುತ್ತದೆ. ಅದು ಜಿನ ಮಂದಿರಕ್ಕೆ ಸಮಾನವಾಗಿ ನೂರು ಯೋಜನ ಉದ್ದ, ಐವತ್ತು ಯೋಜನ ಅಗಲ ಮತ್ತು ಹದಿನಾರು ಯೋಜನ ಎತ್ತರವಿರುತ್ತದೆ. ಆ ಮುಖ ಮಂಟಪದ ಮುಂದೆ ಚೌಕೋನಾಕಾರದ ಪ್ರೇಕ್ಷಣ ಮಂಟಪವಿದೆ. ಅದು ನೂರು ಯೋಜನ ಉದ್ದಗಲ ಪ್ರಮಾಣದಲ್ಲಿದೆ. ಅಲ್ಲದೆ ಹದಿನಾರು ಯೋಜನಗಳಿಗಿಂತ ಸ್ವಲ್ಪ ಹೆಚ್ಚು ಎತ್ತರವಿದೆ. ಈ ಪ್ರೇಕ್ಷಣ ಮಂಟಪದ ಎದುರು ಗಡೆಯಲ್ಲಿ ಎಂಬತ್ತು ಯೋಜನ ಉದ್ದಗಲಗಳುಳ್ಳ ಎರಡು ಯೋಜನ ಎತ್ತರವಾದಂಥ ಸುವರ್ಣಮಯ ಪೀಠವಿದೆ. ಪೀಠವೆಂದರೆ ಕಟ್ಟೆ. ಆ ಕಟ್ಟೆಯ ಮಧ್ಯಭಾಗದಲ್ಲಿ

ನಾಲ್ಕೂ ಮಗ್ಗಲು ಅರವತ್ನಾಲ್ಕು ಯೋಜನ ಉದ್ದಗಲ ಮತ್ತು ಹದಿನಾರು ಯೋಜನ ಎತ್ತರವಾದ ಆಸ್ಥಾನ ಮಂಟಪವಿರುತ್ತದೆ ಆಸ್ಥಾನ ಮಂಟಪವೆಂದರೆ ಸಭಾಮಂಟಪವು ಆ ಸಭಾಮಂಟಪದ ಮುಂದೆ ನಲವತ್ತು ಯೋಜನ ಎತ್ತರವಾದ ಸ್ತೂಪದ ರತ್ನಜಡಿತ ಪೀಠವಿದೆ ಆ ಪೀಠಕ್ಕೆ ನಾಲ್ಕು ಕಟ್ಟೆಗಳೂ ಹನ್ನೆರಡು ಅಂಬುಜವೇದಿಗಳೂ (ಕಮಲದಾಕಾರದ ಕಟ್ಟೆಗಳು) ಇರುತ್ತವೆ. ಆ ಪೀಠದ ಮಧ್ಯಭಾಗದಲ್ಲಿ ಮೂರು ನಡುಸುತ್ತು-ಗಳುಳ್ಳ ಕಟ್ಟೆಯು ಅರವತ್ನಾಲ್ಕು ಯೋಜನ ಉದ್ದ, ಅಗಲ ಮತ್ತು ಎತ್ತರ ಇದ್ದು, ಅದರ ಮೇಲೆ ಅನೇಕ ಜಿನ ಪ್ರತಿಮೆಗಳು ಇರುವವು.

ಸ್ತೂಪ ಮತ್ತು ಚೈತ್ಯ ವೃಕ್ಷದ ವರ್ಣನೆ—ಸ್ತೂಪವೆಂದರೆ ಮೂರು ನಡುಕಟ್ಟುಗಳಿಂದ ಕೂಡಿದಂಥ ರತ್ನರಾಶಿಯ ಕಟ್ಟೆ. ಅದರ ಮೇಲೆ ಜಿನ ಪ್ರತಿಮೆಯು ವಿರಾಜಮಾನವಾಗಿದೆ. ಈ ಪ್ರಕಾರ ಒಂಬತ್ತು ಸ್ತೂಪಗಳಿವೆ. ಅವುಗಳ ಕ್ರಮ ಮತ್ತು ಸ್ವರೂಪ ಹೀಗಿವೆ—ಈ ಸ್ತೂಪಗಳ ಮುಂದೆ ಒಂದು ಸಾವಿರ ಯೋಜನ ಉದ್ದಗಲ ಹಾಗೂ ಹನ್ನೆರಡು ಕಟ್ಟೆಗಳಿಂದ ಕೂಡಿದಂಥ ಸುವರ್ಣ ಪೀಠವಿದೆ ಅದರ ಮೇಲೆ ನಾಲ್ಕು ಯೋಜನ ಉದ್ದ ಮತ್ತು ಒಂದು ಯೋಜನ ದಪ್ಪ, ನಾಲ್ಕು ಮಹಾಶಾಖೆಗಳೂ ಅನೇಕ ಚಿಕ್ಕ ಟೊಂಗೆಗಳೂ ಇದ್ದಂಥ ಎರಡು ವೃಕ್ಷಗಳಿವೆ ಅವುಗಳಲ್ಲಿ ಒಂದರ ಹೆಸರು ಸಿದ್ಧಾರ್ಥ, ಇನ್ನೊಂದರ ಹೆಸರು ಚೈತ್ಯ. ಇವುಗಳ ಮೇಲ್ಭಾಗವು ಹನ್ನೆರಡು ಯೋಜನಗಳಷ್ಟು ವಿಸ್ತಾರವಾಗಿವೆ. ಅಲ್ಲದೆ ಅನೇಕ ಪ್ರಕಾರದ ಫಲ ಪುಷ್ಪಗಳಿಂದ ಕೂಡಿವೆ ಮೇಲಾಗಿ ಇವುಗಳಿಗೆ ಒಂದು ಲಕ್ಷ, ಒಂದುನೂರಾ ಇಪ್ಪತ್ನಾಲ್ಕು ಪರಿವಾರ ವೃಕ್ಷಗಳೂ ಇವೆ.

ತೋರಣದ ವರ್ಣನೆ—ಸಿದ್ಧಾರ್ಥ ವೃಕ್ಷದ ಬುಡದಲ್ಲಿ ಆ ಪೀಠದ ಮೇಲೆ ನಾಲ್ಕೂ ಕಡೆಗೆ ನಾಲ್ಕು ಸಿದ್ಧರ ಪ್ರತಿಮೆಗಳು ಇವೆ ಚೈತ್ಯ ವೃಕ್ಷದ ಬುಡದಲ್ಲಿಯೂ ನಾಲ್ಕು ಪೀಠಗಳಿವೆ ಅವುಗಳ ಮೇಲೆ ನಾಲ್ಕು ಅರಿಹಂತರ ಪ್ರತಿಮೆಗಳು ವಿರಾಜಮಾನವಾಗಿವೆ. ಈ ವೃಕ್ಷದ ಪೀಠಗಳ ಮುಂದೆ ಎರಡನೆಯ ಪೀಠಗಳಿವೆ ಅವುಗಳ ಮೇಲೆ ನಾನಾ ಪ್ರಕಾರದ ಧ್ವಜಗಳನ್ನು ಹಚ್ಚಲಾಗಿದೆ ಆ ಧ್ವಜಗಳ ಸುವರ್ಣದ ಕಂಬಗಳು ಹದಿನಾರು ಯೋಜನ ಎತ್ತರ, ಒಂದು ಹರದಾರಿ ಅಗಲವಾಗಿವೆ ಆ ಧ್ವಜದ ತುದಿಯಲ್ಲಿ ಮನುಷ್ಯರ ಕಣ್ಮನಗಳನ್ನು ಸೆಳೆಯುವಂಥ ವಸ್ತ್ರ ಮತ್ತು ರತ್ನಗಳಿಂದ ನಿರ್ಮಿಸಿದ ಮೂರು ಛತ್ರಗಳಿವೆ ಧ್ವಜದ ಮೇಲಿನ ವಸ್ತ್ರವು ನಿಜವಾದ ವಸ್ತ್ರವಲ್ಲ. ವಸ್ತ್ರದ ಆಕಾರದ ಅನೇಕ ಬಣ್ಣಗಳ ರತ್ನಮಯ ಪುದ್ಗಲ ಪರಮಾಣುಗಳಾಗಿರುತ್ತವೆ ಅದಕ್ಕಾಗಿ ವಸ್ತ್ರಗಳು ರತ್ನಮಯವೆಂದು ಹೇಳಲಾಗಿದೆ ಆ ಧ್ವಜ ಪೀಠಗಳ ಮುಂದೆ ಜಿನಮಂದಿರಗಳು ಇರುತ್ತವೆ ಅವುಗಳ ನಾಲ್ಕೂ ಮಗ್ಗಲು ಅನೇಕ ಪ್ರಕಾರದ ಹೂವುಗಳಿಂದ ಕೂಡಿದ ನೂರು ಯೋಜನ ಉದ್ದ, ಐವತ್ತು ಯೋಜನ ಅಗಲವಾಗಿರುವ ನಾಲ್ಕು ಸರೋವರಗಳಿವೆ. ಅವು ಹತ್ತು ಯೋಜನ ಆಳವಾಗಿವೆ ಅವುಗಳ ಬದಿಗಳು ರತ್ನದಿಂದ ನಿರ್ಮಿಸಲ್ಪಟ್ಟಿವೆ. ಅವುಗಳ ಮುಂದೆ ಮಾರ್ಗವಿದೆ ಅದರ ಎರಡೂ ಮಗ್ಗಲು ಐವತ್ತು ಯೋಜನ ಎತ್ತರ, ಐವತ್ತು ಯೋಜನ ಅಗಲವಿರುವ ದೇವರು ಕ್ರೀಡಿಸುವ ಎರಡು ಮಂದಿರಗಳಿವೆ ಅವುಗಳಿಗೆ ತೋರಣಗಳನ್ನು ಹಚ್ಚಲಾಗಿದೆ ಅವು ರತ್ನಮಯವಾಗಿದ್ದು ಕಂಬಗಳ ಅಗ್ರಭಾಗದಲ್ಲಿವೆ. ಆ ತೋರಣಗಳಿಗೆ ಅನೇಕ ಮುತ್ತುಗಳನ್ನೂ ಚಿಕ್ಕ ಚಿಕ್ಕ ಘಂಟೆಗಳನ್ನೂ ಕಟ್ಟಲಾಗಿದೆ. ಅದು ಐವತ್ತು ಯೋಜನ ಎತ್ತರ, ಇಪ್ಪತ್ತೈದು ಯೋಜನ ಅಗಲವಿದ್ದು, ಅನೇಕ ಜಿನಬಿಂಬ ಸಮೂಹಗಳ ಮೇಲೆ ಬಹಳಷ್ಟು ಚೆಂದ ಕಾಣುತ್ತದೆ ಜಿನ ಬಿಂಬಗಳ ಆಕಾರವನ್ನು ತೋರಣದಲ್ಲಿ ತೋರಿಸಲಾಗಿದೆ ಈ ತೋರಣದ ಮುಂದೆ ಸ್ಫಟಿಕದ ಮೊದಲನೆಯ ಕೋಟೆ ಇದ್ದು, ಅದರ ಒಳಗಿನ ಕೋಟೆಯ ದ್ವಾರದ ಎರಡು ಮಗ್ಗಲಿಗೆ ನೂರು ಯೋಜನ ಎತ್ತರ ಮತ್ತು ಐವತ್ತು ಯೋಜನ ಅಗಲವಾದಂಥ ರತ್ನಮಯ ಎರಡು ಮಂದಿರಗಳು ಇವೆ

ಈ ಪ್ರಕಾರ ಕೋಟೆಯ ವರೆಗೆ ವರ್ಣನೆಮಾಡಿದ ಪೂರ್ವದ್ವಾರದ ಯಾವ ಪ್ರಮಾಣವನ್ನು ಹೇಳಿದೆಯೋ ಅದರ ಅರ್ಧದಷ್ಟು ಪ್ರಮಾಣದಲ್ಲಿ ಉತ್ತರ ದ್ವಾರವಿದೆಯೆಂದು ತಿಳಿಯಬೇಕು ಉಳಿದ ಮೂರೂ ಮಗ್ಗಲಿನ ದ್ವಾರಗಳು ಒಂದೇ ರೀತಿಯಾಗಿವೆ ಆ ಚೈತ್ಯಾಲಯದಲ್ಲಿ ಸಾಮಾಯಿಕ ಮೊದಲಾದ ಕ್ರಿಯೆಗಳನ್ನು ಮಾಡುವ ಮಂಟಪ, ವಂದನ ಮಾಡುವ ಮಂಟಪ, ಸ್ನಾನಮಾಡುವ ಸ್ಥಳ, ಅಭಿಷೇಕ ಮಾಡುವ ಮಂಟಪ, ನೃತ್ಯಮಾಡುವ ಸ್ಥಾನ, ಗಾಯನ ಮತ್ತು ಭಜನೆಗಳನ್ನು ಮಾಡುವ ಸ್ಥಳ, ಪ್ರೇಕ್ಷಕರು ಕುಳಿತು ಅವಲೋಕನ ಮಾಡುವಂಥ ಮಂಟಪ ಮೊದಲಾದ ಬೇರೆ ಬೇರೆ ಸ್ಥಳಗಳೂ ಮಂಟಪಗಳೂ ಇರುತ್ತವೆ ಅದರಂತೆಯೇ ಕ್ರೀಡಾಮಂಟಪ, ಕ್ರೀಡಾಸ್ಥಾನ, ಶಾಸ್ತ್ರ

ಸ್ವಾಧ್ಯಾಯ ಮಾಡುವ ಸ್ಥಳ, ಸ್ವಾಧ್ಯಾಯ ಶಾಲೆ (ಗುಣನ ಗೃಹ), ದೊಡ್ಡ ದೊಡ್ಡ ಸಕಾಶಗಳನ್ನು ತೂಗು ಹಾಕುವ ಶಾಲೆಗಳು (ವಟ್ಟಶಾಲಾ) ಮೊದಲಾದ ಅನೇಕ ಬೇರೆ ಬೇರೆ ಸ್ಥಳಗಳನ್ನು ಮಾಡಲಾಗಿದೆ.

ಧ್ವಜದ ವರ್ಣನೆ—ಹೊರಗಿನ ಕೋಟೆ ಮತ್ತು ನಡುವಿನ ಕೋಟೆ ಇವುಗಳ ಮಧ್ಯದಲ್ಲಿ ಸಿಂಹ, ಗಜ, ವೃಷಭ, ಗರುಡ, ಮಯೂರ, ಚಂದ್ರ, ಸೂರ್ಯ, ಹಂಸ, ಕಮಲ, ಮತ್ತು ಚಕ್ರ ಈ ಹತ್ತು ಆಕಾರಗಳನ್ನು ಯಾವುದರ ಮೇಲ ತೆಗೆದಿಡೆಯೋ ಅಂಥ ಧ್ವಜಗಳು ಇರುತ್ತವೆ ಅವು ಬೇರೆ ಬೇರೆಯಾಗಿ ಒಂದುನೂರಾ ಎಂಟು ಇವೆ ಈ ಪ್ರಕಾರ ಒಂದು ದಿಕ್ಕಿಗೆ ಒಂದು ಸಾವಿರ ಎಂಬತ್ತು ಧ್ವಜಗಳು ಆಗುತ್ತವೆ ಇನ್ನು ನಾಲ್ಕೂ ದಿಕ್ಕುಗಳಲ್ಲಿ ಸೇರಿ, ನಾಲ್ಕು ಸಾವಿರದ ಮೂರುನೂರಾ ಇಪ್ಪತ್ತು (೪೩೨೦) ಮುಖ್ಯ ಧ್ವಜಗಳು ಇವೆ ಒಂದೊಂದು ಮುಖ್ಯ ಧ್ವಜದಲ್ಲಿ ಒಂದುನೂರಾ ಎಂಟು ಚಿಕ್ಕ ಧ್ವಜಗಳು ಇರುವವು ಮುಂದೆ ಎರಡನೆಯ ಮತ್ತು ಮೂರನೆಯ ಕೋಟೆಯ ಮಧ್ಯಾಂತರದಲ್ಲಿ ಅಶೋಕ, ಸಪ್ತಚ್ಛದ, ಚಂಪಕ ಮತ್ತು ಆಮ್ರ ಹೀಗೆ ನಾಲ್ಕು ವನಗಳಿವೆ ಅಲ್ಲಿ ಸುವರ್ಣದ ಪುಷ್ಪಗಳಿದ್ದು, ವಜ್ರರತ್ನದ ಎಲೆಗಳುಳ್ಳ ಕಲ್ಪವೃಕ್ಷಗಳು ಇರುತ್ತವೆ. ಅವುಗಳಿಗೆ ವೈಡೂರ್ಯ ರತ್ನದ ಹಣ್ಣುಗಳಿವೆ ಹೀಗೆ ಭೋಜನಾಂಗಾದಿ ಹತ್ತು ಪ್ರಕಾರದ ಕಲ್ಪವೃಕ್ಷಗಳು ಇವೆ. ಈ ನಾಲ್ಕೂ ವನಗಳಲ್ಲಿ ನಾಲ್ಕು ಚೈತ್ಯ ವೃಕ್ಷಗಳಿವೆ ಅವು ಮೂರು ಪೀಠಗಳ ಮೇಲೆ ಇದ್ದು, ಮೂರು ಕೋಟೆಗಳ ಮಧ್ಯದಲ್ಲಿವೆ ಆ ವೃಕ್ಷಗಳಿಗೆ ರತ್ನಮಯ ಟೊಂಗೆ, ಎಲೆ, ಹೂವು, ಹಣ್ಣುಗಳಿರುವವು ಇವು ನಾಲ್ಕೂ ವನಗಳ ಮಧ್ಯಭಾಗದಲ್ಲಿವೆ ಈ ನಾಲ್ಕೂ ಚೈತ್ಯವೃಕ್ಷಗಳ ಬುಡದಲ್ಲಿ–ಪೂರ್ವಾದಿ ನಾಲ್ಕೂ ದಿಕ್ಕುಗಳಲ್ಲಿ–ಸಿಂಹಾಸನ ಛತ್ರ ಪ್ರಾತಿಹಾರ್ಯಾದಿಗಳಿಂದ ಕೂಡಿದಂದ ಪಲ್ಯಂಕಾಸನವುಳ್ಳ ನಾಲ್ಕು ಜಿನೇಂದ್ರರ ಪ್ರತಿಮೆಗಳಿವೆ. ನಂದಾ ಮೊದಲಾದ ಹದಿನಾರು ಬಾವಿಗಳು ಮೂರು ಸುತ್ತಿನ ಗೋಡೆಗಳಿಂದ ಕೂಡಿವೆ ವನ ಭೂಮಿಗೆ ಬರಲಿಕ್ಕೆ ಇರುವ ಮಹಾದ್ವಾರದ ಮಾರ್ಗದಲ್ಲಿ ಮೂರು ಕೋಟೆಗಳಲ್ಲಿ ಮೂರು ಪೀಠಗಳ ಮೇಲಿರುವ ಮಾನಸ್ತಂಭಗಳಿವೆ ಇವು ಧರ್ಮ ವೈಭವದಿಂದ ಶೋಭಿಸುತ್ತವೆ ಇವುಗಳ ಅಗ್ರಭಾಗದಲ್ಲಿ ನಾಲ್ಕೂ ದಿಕ್ಕುಗಳಲ್ಲಿ ಶೋಭಿಸುವ ಜಿನಪ್ರತಿಮೆಗಳು ಇವೆ. ಶ್ರೀರಾಜವಾರ್ತಿಕದಲ್ಲಿ ಹೀಗೆ ಹೇಳಲಾಗಿದೆ–ಈ ಜಿನಾಲಯಗಳ ಮಹಿಮೆಯನ್ನು ವರ್ಣಿಸಲಿಕ್ಕೆ ಸಾವಿರ ನಾಲಿಗೆಗಳುಳ್ಳವರೂ ಸಮರ್ಥವಾಗಲಾರರು. ಒಂದು ಸಾವಿರ ಕಣ್ಣುಗಳುಳ್ಳ ಇಂದ್ರನೂ ಸಹ ಈ ಜಿನಾಲಯಗಳನ್ನು ನೋಡುತ್ತಿದ್ದು ತೃಪ್ತಿಯನ್ನು ಹೊಂದಲಿಲ್ಲ. ಈ ಪ್ರಕಾರ ಅಳತೆಯಿಲ್ಲದ ಮಹಾತ್ಮೆ ಇರುವ ಅಕೃತ್ರಿಮ ಜಿನ ಚೈತ್ಯಾಲಯಗಳ ವರ್ಣನೆಯು ತ್ರೈಲೋಕ್ಯಸಾರ ಗ್ರಂಥದಲ್ಲಿ ಬಂದಿದೆ ಅದನ್ನು ಶುಭಧ್ಯಾನ ಸಿದ್ಧಿಗಾಗಿ ಸಂಗ್ರಹಿಸಿ ಇಲ್ಲಿ ಹೇಳಿದೆ ಇದರ ಚಿಂತನ ಮಾಡುವುದು.

ಪೂಜಾತಂತ್ರದೆ ವಸ್ತುವಂ ನೆನೆಯುತಂ ಮತ್ತಂ ಸುಮಂತ್ರಾಕ್ಷರ-
ಭ್ರಾಜದ್ಧ್ವಾನಮನಾಲಿಸುತ್ತೆ ತವ ಬಿಂಬನ್ನಾನಮಂ ನೋಡಿ ನಾ- ।
ನಾ ಜೀವಂ ಸುಖಿಯಕ್ಕುಪಲ್ಲಿ ಬಹಿರಂಗಾಳೋಚನಂ ಮೋಚನಂ
ಪೂಜಾರ್ಥಂ ಪುರುಷಾರ್ಥಮಾದುದದರಿಂ ರತ್ನಾಕರಾಧೀಶ್ವರಾ ॥

—ರತ್ನಾಕರ–ರತ್ನಾಕರ ಶತಕ ೧೦೦.

ಜಿನ ಚೈತ್ಯವ್ರಾತಮಂ ಬಂದಿಸು, ಜಿನಪದ ಪದ್ಮಂಗಳಂ ದಿವ್ಯಮಪ್ಪ
ರ್ಚನೆಯಿಂದಂ ಭಕ್ತಿಯಿಂದರ್ಚಿಸು, ಜಿನನ ನಮಸ್ಕಾರಮಂತ್ರಂಗಳೊಳ್ ಬಾ- ।
ವನೆಯಂ ತಾಳ್ದು ಜ್ಞಿಯಿಂದಂ ಜಿನಮಹಿಮೆಗಳಂ ಮಾಡು, ನೀಂಭವ್ಯನಪ್ಪೈ, ಮ-
ತ್ತಿನ ಮಿಧ್ಯಾಜ್ಞಾನಿವೋಲ್ ನೀನ್ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ[1] ॥

—ಆದಿಪಂಪ–ಆದಿಪುರಾಣ–೩–೭.

ಜಿನಪೂಜೆಯನ್ನು ಮಾಡುವುದರಿಂದ ಹಲವರಿಗೆ ಸುಖ ಪ್ರಾಪ್ತಿಯಾಗಿದೆ. ಅಂಥವರ ಕೆಲವು ಉದಾಹರಣೆಗಳನ್ನು ಹೇಳುವದಕ್ಕಾಗಿ ಈಗ ಆಚಾರ್ಯರು ಸೂತ್ರವನ್ನು ರಚಿಸುತ್ತಾರೆ—

ಅರ್ಹಚ್ಚರಣಸಪರ್ಯಾಮಹಾನುಭಾವಂ ಮಹಾತ್ಮನಾಮವದತ್ ।
ಭೇಕಃ ಪ್ರಮೋದಮತ್ತಃ ಕುಸುಮೇನೈಕೇನ ರಾಜಗೃಹೇ ॥ ೧೨೦ ॥[1]

ಅನ್ವಯಾರ್ಥ—(ರಾಜಗೃಹೇ) ರಾಜಗೃಹ ನಗರದಲ್ಲಿ (ಪ್ರಮೋದಮತ್ತಃ) ಆನಂದದ ಮದವೇರಿದ (ಭೇಕಂ) ಕಪ್ಪೆಯು (ಏಕೇನ ಕುಸುಮೇನ) ಒಂದೇ ಹೂವಿನಿಂದ (ಅರ್ಹಚ್ಚರಣಸಪರ್ಯಾಮಹಾನುಭಾವಂ) ಅರ್ಹಂತನ ಪಾದಪೂಜೆಯ ಮಹಿಮೆಯನ್ನು (ಮಹಾತ್ಮನಾಂ) ಮಹಾತ್ಮರಿಗೆ—ಭವ್ಯ ಜೀವಿಗಳಿಗೆ—(ಅವದತ್) ಹೇಳುವಂದದಾಯಿತು

ಅರ್ಥ—ರಾಜಗೃಹನಗರದಲ್ಲಿ ಆನಂದಾತಿಶಯದಿಂದ ಉಬ್ಬಿದಂಥ ಒಂದು ಕಪ್ಪೆಯು, ಒಂದು ಹೂವಿನಿಂದ ಶ್ರೀ ಅರಹಂತ ಪರಮೇಷ್ಠಿಯ ಚರಣಗಳಿಗೆ ಮಾಡಿದ ಪೂಜೆಯು, ಪೂಜೆಯ ಮಹತ್ವವನ್ನು ಮಹಾ ಪುರುಷರಿಗೆ ತೋರಿಸುವಂತಿದೆ

ವಿಶೇಷಾರ್ಥ—ಕಪ್ಪೆಯ ಕಥೆ. ಇದು ಭಗವಾನ್ ಮಹಾವೀರರ ಕಾಲದಲ್ಲಿ ನಡೆದ ಸಂಗತಿ ಆಗ ಮಗಧದೇಶದ ರಾಜಧಾನಿಯು ರಾಜಗೃಹ ನಗರವಾಗಿತ್ತು. ಅಲ್ಲಿ ಶ್ರೇಣಿಕ ಮಹಾರಾಜನು ರಾಜ್ಯವಾಳುತ್ತಿದ್ದನು. ಅದೇ ಪಟ್ಟಣದಲ್ಲಿ ನಾಗದತ್ತ ಎಂಬ ಹೆಸರಿನ ದೊಡ್ಡ ಸಿರಿವಂತನೊಬ್ಬನಿದ್ದನು. ಅವನ ಹೆಂಡತಿಯು ಭವದತ್ತೆಯು. ಈ ದಂಪತಿಗಳಿಬ್ಬರೂ ಪ್ರೇಮದಿಂದ ಬಾಳುತ್ತಿದ್ದರು ಇವರ ಸಂಸಾರವೂ ಸುಖಮಯವಾಗಿತ್ತು. ಇಂಥದರಲ್ಲಿ ನಾಗದತ್ತನು ಆಕಸ್ಮಿಕವಾಗಿಯೇ ಮರಣಹೊಂದಿದನು. ಆದರೆ ಮರಣ ಕಾಲದಲ್ಲಿ ಅವನ ಮಾನಸಿಕ ಪರಿಣಾಮವು ಆರ್ತವಾಗಿತ್ತು

ಮರಣ ಕಾಲದ ಈ ಆರ್ತಪರಿಣಾಮದಿಂದ ನಾಗದತ್ತನು ಪುನರ್ಭವದಲ್ಲಿ ಕಪ್ಪೆಯಾಗಿ ಜನಿಸಬೇಕಾಯಿತು ಅದೂ ತನ್ನ ಹಿತ್ತಲಿನ ಬಾವಿಯಲ್ಲಿಯೇ. ಇದು ಭವದತ್ತೆಯ ಕಲ್ಪನೆಯಲ್ಲಿಯೂ ಸಹ ಇಲ್ಲ. ತನ್ನ ಪತಿಯು ಕಪ್ಪೆಯಾಗಿ ಹುಟ್ಟಿಯಾನು ಎಂದು ಯಾವ ಸ್ತ್ರೀಯು ಕಲ್ಪಿಸಿಯಾಳು? ಸಹಜ ಅವಳು ತನ್ನ ಮನೆಯ ಬಾವಿಯತ್ತ ಹೋದಾಗ ಆ ಕಪ್ಪೆಯು ಅವಳನ್ನು ಕಂಡಿತು ಅದಕ್ಕೆ ಜಾತಿ ಸ್ಮರಣವಾಯಿತು ಅದು ತನ್ನ ಪೂರ್ವಭವವನ್ನು ನೆನೆಯಿತು. ಭವದತ್ತೆ ತನ್ನ ಹೆಂಡತಿಯೆಂದು ಸ್ಮರಿಸಿತು ಅವಳನ್ನು ಈಗಲೂ ಪ್ರೀತಿಸಲು ಆತುರಗೊಂಡಿತು ಒದರುತ್ತ ಮೋಹದಿಂದ ಆ ಬಾವಿಯಿಂದ ಮೇಲೇರಿಯೂ ಬಂತು ಹೆಂಡತಿಯ ಮೈಮೇಲೆ ಧಾವಿಸಿತು. ಅವಳ ಸಮೀಪಕ್ಕೆ ಸುಳಿಯಿತು ಮೈಮೇಲೆ ಏರಹತ್ತಿತು ಅವಳು ಕಪ್ಪೆಗೆ ಬೆದರಿ ಹಿಂದೆ ಸರಿದಳು. ಅದನ್ನು ದೂರ ನೂಕಿದಳು. ಮನೆಯಲ್ಲಿ ಓಡಿದಳು ಆದರೆ ಅದು ಆಗಾಗ ಅವಳು ಹಿತ್ತಲಿಗೆ ಕಾಲಿಟ್ಟಾಗ ಅವಳ ಹತ್ತರ ಬರಲಿಕ್ಕೆ

---

[1] ಆಯತವರ್ಮನು ಹೇಳುವದು ಹೀಗೆ.

ವಚನ— ಪರಮೇಶ್ವರನ ಪಾದ ಪೂಜೆಯೊಳಪ್ಪ ಫಲಂ ಸಾಮಾನ್ಯಮಲ್ಲಮೆಂತೆಂದೊಡೆ—

ಕಂದ ॥ ರಾಜಗೃಹಮೆಂಬ ಪೊಳಲಂ ರಾಜಮಹಾರಾಜಮಕುಟಘಟಿತ ಪದಂ ।
ರಾಜಂ ಶ್ರೇಣಿಕನಾಳ್ಗಂ ಶ್ರೀಜಿನವರಚರಣಕಮಳಪದನಯನನಘಂ ॥

ಒಂದು ದಿವಸ ಮಾತಂ ವಿಪುಳಗಿರಿಗೆ ಶ್ರೀವರ್ಧಮಾನ ಸ್ವಾಮಿಗಳ ಸಮವಸರಣಮವತರಿಸಿತೆಂಬುದಂ ಕೇಳ್ದಂತಃಪುರ ಪರಿವಾರ ಸಮೇತನಾಗಿ ವಂದನಾಭಕ್ತಿಗೆ ಪೋಗುತ್ತಿರೆ ಬಟ್ಟೆಯೊಳೊಂದು ಕೋಣದೂಳಿರ್ದ ಬೇಕಂ ಕಂಡು ತಾನುಂ ರಾಗಿಸಿ. ಯಾಸನ್ನ ಭವ್ಯನಪ್ಪುದರಿಂದೊಂದು ಪೂವಂ ಕರ್ಚಿಕೊಂಡು ಪರಮೇಶ್ವರನ ಶ್ರೀಪಾದಂಗಳನರ್ಚಿಸಲೆಂದು ಪೋಗುತ್ತಿರೆ ಶ್ರೇಣಿಕ ಮಹಾರಾಜನ ಕರಿತುರಗ ಪಾದದಡಿಗಳ ಪಟ್ಟೆಣೆಯೊಳು ಗತಜೀವಿಯಾಗಿ ಸ್ವರ್ಗಲೋಕದೊಳ್ಪುಟ್ಟಿಯಾಕ್ಷಣದೊಳ್ ನಿಜದೇಹ ದೀಪ್ತಿಗಳ್ ದಿಗಂತರಾಳಮಂ ಬೆಳಗಿ ಬಂದು ಸಮವಸರಣ ಭೂಮಿಯಂ ಪೊಕ್ಕು ತ್ರಿಲೋಕ ಶಿಖರಿ ಶೇಖರಾಯಮಾನ ಸಹಜ ಬೋಧಾನನ ಕಾರಣ ಬಂದು ಶ್ರೀವರ್ಧಮಾನ ಭಟ್ಟಾರಕರನನೇಕ ಸ್ತುತಿಶತಂಗಳಿಂ ಸ್ತುತಿಯಿಸಿ ಗಣಧರಾದಿ ಋಷಿ ಸಮೂಹಮಂ ಬಂದಿಸಿ ನಿಜೋಚಿತ ಕೋಷ್ಠದೊಳ್ಕುಳ್ಳಿರೆ ಸೌಧರ್ಮೇಂದ್ರಂ ಕಂಡಾತನ ವೃತ್ತಾಂತಮಂ ಸಭೆಗೆಲ್ಲಂ ಪೇಳ್ದು ಪ್ರಶಂಸೆಗೆಯ್ದನದರಿಂ,

ಕಂದ ॥ ಒಂದರಲನರ್ಚಿಸಲು ಬಗೆದಂದ ನೀತರೊಳಮರಗತಿಯನೆಯ್ದಿತು ಭೇಕಂ ।
ಕುಂದದೆ ಪೂಜೋತ್ಸವಮಂ ನಿಸ್ಸಂಗದೆ ನೆಗಳ್ವಂಗದೇನರಿದುಂಟೆ ॥

ಹವಣಿಸುವುದು. ತನ್ನ ಪ್ರೀತಿಯನ್ನೂ ವ್ಯಕ್ತಪಡಿಸಲಿಕ್ಕೆ ಪ್ರಯತ್ನಿಸುವುದು. ಮತ್ತೂ ಮತ್ತೂ ಮೈಮೇಲೆ ಏರಲಿಕ್ಕೆ ನೋಡುವುದು

ಕಪ್ಪೆಯ ಈ ನಡತೆಯನ್ನು ಕಂಡು ಭವದತ್ತೆಯ ಕುತೂಹಲವೂ ಕೆರಳಿತು. ತನ್ನನ್ನು ಕಂಡೊಡನೆ ಆ ಕಪ್ಪೆಯು ಹೀಗೇಕೆ ಮಾಡುತ್ತಿದೆ? ಎಂಬ ಪ್ರಶ್ನೆಯು ಅವಳ ಮನಸ್ಸಿನಲ್ಲಿ ಆಗಾಗ ಮೂಡಹತ್ತಿತು ಅದಕ್ಕೆ ಸಮಾಧಾನವನ್ನು ಕಂಡುಕೊಳ್ಳಲಿಕ್ಕೆ ಅವಳಿಗೆ ಸಾಧ್ಯವಾಗಲಿಲ್ಲ ಇಂಥ ಸಮಯದಲ್ಲಿ ಸುವ್ರತನೆಂಬ ಅವಧಿ ಜ್ಞಾನಿಯಾದ ಮುನಿಯು ಆ ನಗರದಲ್ಲಿ ಬಂದನು ಆ ಮುನಿಯ ದರ್ಶನಕ್ಕೆ ಹೋದಾಗ ಭವದತ್ತೆಯು ಆ ಕಪ್ಪೆಯ ಸಂಗತಿಯನ್ನು ಅವರಿಗೆ ಅರುಹಿದಳು. ಆಗ ಮುನಿಗಳಿಗೆ ತಟ್ಟನೆ ಎಲ್ಲ ಸಂಗತಿಯು ಹೊಳೆಯಿತು. ಅವರು ಭವದತ್ತೆಗೆ ಹೇಳಿದರು —"ನಿನ್ನ ಪತಿಯ ಜೀವವೇ ಆ ಕಪ್ಪೆ ಸಾಗದತ್ತನು ಆರ್ತಧ್ಯಾನದಿಂದ ಮರಣಹೊಂದಿ ಕಪ್ಪೆಯಾಗಿ ಜನ್ಮಿಸಿದ್ದಾನೆ ನಿನ್ನ ಮೇಲಿನ ಮೋಹದಿಂದ ಹಾಗೆ ನಿನ್ನ ಹತ್ತರ ಹತ್ತರ ಈಗ ಬರುತ್ತಲಿದ್ದಾನೆ!" ಮುನಿಗಳ ಈ ಮಾತನ್ನು ಕೇಳಿ ಭವದತ್ತೆಗೆ ಗಂಡನ ವಿಷಯದಲ್ಲಿ ತುಂಬ ಕನಿಕರವೆನಿಸಿತು ಆ ಕಪ್ಪೆಯ ವಿಷಯದಲ್ಲಿ ಆದರವೂ ಜನಿಸಿತು. ಅದನ್ನು ಮನೆಯಲ್ಲಿ ತಂದು ಭಕ್ತಿಯಿಂದ ಜೋಕೆಮಾಡ ಹತ್ತಿದಳು

ಹೀಗಿರುವಾಗ ಒಂದು ದಿನ ಭಗವಾನ್ ಮಹಾವೀರರ ಸಮವಸರಣವು ರಾಜಗೃಹ ನಗರದ ವೈಭಾರಗಿರಿಯ ಮೇಲೆ ಆಗಮಿಸಿತು ನಗರದ ಪುಣ್ಯೋದಯವಾದಂತಾಯಿತು ಇದು ಶ್ರೇಣಿಕ ರಾಜನಿಗೂ ತಿಳಿಯಿತು. ತಾನು ಭಗವಂತನ ದರ್ಶನಕ್ಕೆ ಹೊರಟಿರುವದಾಗಿ ಅವನು ಊರಲ್ಲೆಲ್ಲ ಆನಂದಭೇರಿಯನ್ನು ಹೊಡೆಯಿಸಿದನು ಇದನ್ನು ಕೇಳಿ ಅನೇಕ ಭವ್ಯರು ಭಗವಂತನ ದರ್ಶನಕ್ಕೆ ಹೊರಡಲು ಸಿದ್ಧರಾದರು. ಹಲವರು ತೀರ್ಥಂಕರರ ಪೂಜೆಗೆಂದು ವಿವಿಧ ಮಂಗಲ ದ್ರವ್ಯಗಳನ್ನು ತಕ್ಕೊಂಡರು ವಸ್ತ್ರಾಲಂಕಾರಗಳಿಂದ ಭೂಷಿತರಾದರು ಊರಿಗೆ ಊರೇ ಆನಂದ ಸಾಗರದಲ್ಲಿ ತೇಲಾಡಹತ್ತಿತು ಎಲ್ಲಿ ನೋಡಿದಲ್ಲಿ ಭಗವಂತನ ದರ್ಶನ, ಪೂಜೆಗಳ ಮಾತೇ ಮಾತು ಎಲ್ಲರಲ್ಲಿಯೂ ಸಮವಸರಣದತ್ತ ಸಾಗುವ ಆತುರ. ಭಗವಂತನ ದರ್ಶನವನ್ನು ಪಡೆಯುವ ಅವಸರ ಜಯಜಯಕಾರದ ನಿನಾದದಿಂದ ರಾಜಗೃಹ ನಗರದ ಆಕಾಶವೆಲ್ಲ ತುಂಬಿ ಬಿರಿಯುವಂತಾಯಿತು

ಈ ಜಯಜಯಕಾರದ ಧ್ವನಿಯನ್ನು ಆ ಕಪ್ಪೆಯೂ ಕೇಳಿತು ಭಗವಂತನ ಆಗಮನವನ್ನು ತಿಳಿದು ಅದಕ್ಕೂ ಹರ್ಷವಾಯಿತು. ತಾನೂ ಮಹಾವೀರ ತೀರ್ಥಂಕರರ ದರ್ಶನಕ್ಕೆ ಹೋಗಬೇಕೆಂದು ಬಯಸಿತು ಭಗವಂತನ ಚರಣಕಮಲಗಳನ್ನು ಪೂಜಿಸಬೇಕೆಂದು ಯೋಚಿಸಿತು ತನಗೆ ದೊರೆತ ಒಂದು ಹೂವನ್ನೇ ಬಾಯಲ್ಲಿ ಹಿಡಿದುಕೊಂಡು, ಆನಂದದಿಂದ ಜಿಗಿಯುತ್ತ ರಾಜಮಾರ್ಗದಿಂದ ಭಗವಂತನ ದರ್ಶನಕ್ಕೆಂದು ನಡೆಯಿತು ಪಾಪ ಅದಕ್ಕೆ ಕಲ್ಪನೆಯೂ ಕೂಡ ಇಲ್ಲ, ತಾನು ಇಪ್ಪತ್ತು ಸಾವಿರ ಮೆಟ್ಟಲುಗಳನ್ನು ಏರಿ ಪರ್ವತದ ಮೇಲಿರುವ ಸಮವ-ಸರಣವನ್ನು ಪ್ರವೇಶಿಸಬೇಕಾಗುವದೆಂದು. ತೀರ್ಥಂಕರ ದರ್ಶನದ ಉತ್ಸಾಹದಲ್ಲಿ ಮುಂದೆ ಮುಂದೆ ಸಾಗಿದೆ. ಅದರ ಬಗೆಗಣ್ಣಿನೆದುರಿಗೆ ಭಗವಂತನೊಬ್ಬನೇ! ಇನ್ನೇನೂ ಕಾಣದು ಅಂಥ ಹೊತ್ತಿನಲ್ಲಿ ಸಮ್ರಾಟ್ ಶ್ರೇಣಿಕ ಆನೆಯ ಕಾಲು ಅದರ ಮೇಲೆ ಬಿತ್ತು! ಆನೆಯ ಕಾಲ ಕೆಳಗೆ ಕಪ್ಪೆ ಅದು ಬದುಕುವುದು ಸಾಧ್ಯವೆ? ಕೂಡಲೆ ಅಲ್ಲಿಯೇ ಮರಣ-ಹೊಂದಿತು ಆಗಲೂ ಅದರ ಬಾಯಲ್ಲಿ ಹೂವಿನ ದೇಟು ಹಾಗೆಯೇ ಇದ್ದಿತು. ಭಗವಂತನ ಪಾದಗಳಿಗೆಂದು ಭಕ್ತಿಯಿಂದ ಒಯ್ಯುತ್ತಿದ್ದ ಹೂವದು!

ಆಗ ಆ ಕಪ್ಪೆಯು ಭಗವಂತನ ದರ್ಶನವನ್ನು ಪಡೆಯದೆ ಮರಣಹೊಂದಿದರೇನಾಯಿತು? ಆ ಕಪ್ಪೆಯು ವರ್ಧಮಾನರ ದರ್ಶನ ಪಡೆಯಲಿಲ್ಲ ಎಂಬ ಮಾತು ಲೌಕಿಕವಾದುದು ಅದರ ಭಾವ ಭೂಮಿಕೆಯಲ್ಲಿ ವರ್ಧಮಾನರು ಯಾವಾಗಲೂ ನೆಲಸಿ ಹೋಗಿದ್ದರು ಅದರ ಭಾವಪೂಜೆಯು ಸಂದು ಹೋಗಿತ್ತು ಅದರ ಮನಃಕುಸುಮ ಭಗವಂತನ ಪಾದಗಳಲ್ಲಿ ಅರ್ಪಣಗೊಂಡಿತ್ತು ಅಂದ ಮೇಲೆ ಅದು ಪುನರ್ಭವದಲ್ಲಿ ಸೌಧರ್ಮ ಸ್ವರ್ಗದಲ್ಲಿ ಜನಿಸಿದುದರಲ್ಲಿ ಆಶ್ಚರ್ಯವೇನು? ಮಹಾ ಋದ್ಧಿಧಾರಕ ದೇವಪದವನ್ನು ಹೊಂದಿತದು ಆ ದೇವವರ್ಗಕ್ಕ ಅವಧಿ ಜ್ಞಾನವಿರುವುದು. ಅದರಿಂದ ತಾನು ಭಗವಂತನ ಪೂಜಾಪ್ರಭಾವದಿಂದ ಈ ದೇವಪದವನ್ನು ಹೊಂದಿದೆನೆಂಬ ಅರಿವು ಆ ಜೀವಕ್ಕೆ ಉಂಟಾಯಿತು ಕೂಡಲೆ ಆ ದೇವನು ತನ್ನ ಧ್ವಜದ ಮೇಲೆ ಕಪ್ಪೆಯ ಗುರುತನ್ನು ಇಟ್ಟನು ಭಗವಂತನ ಪೂಜೆಯಿಂದ ಕಪ್ಪೆಯೂ ದೇವತ್ವವನ್ನು ಹೊಂದಿದುದರ ಚಿಹ್ನವದು. ಈ ಅಂಕಿತದೊಡನೆ ಆ ದೇವನು ಶ್ರೀ ಮಹಾವೀರ ಭಗವಂತನ ದರ್ಶನಕ್ಕೆಂದು ಸಮವಸರಣಕ್ಕೆ ಮತ್ತೆ ಬಂದನು,

ಜಿನಪೂಜೆಯ ಮಹತ್ವ—ಹೀಗೆ ಜಿನಪೂಜೆಯ ಪ್ರಭಾವವು ಅಚಿಂತ್ಯವಾಗಿದೆ. ಅಂತಲೇ ಗೃಹಸ್ಥಾಶ್ರಮದಲ್ಲಿ ಜಿನಪೂಜೆಗೆ ಇಷ್ಟೊಂದು ಮಹತ್ವ ಕೊಡಲಾಗಿದೆ. ಪೂಜೆಯು ಗೃಹಸ್ಥನ ಪರಿಣಾಮವನ್ನು ಅತಿಶಯ ನಿರ್ಮಲಗೊಳಿಸುತ್ತದೆ ಅದಕ್ಕಾಗಿ ಶ್ರಾವಕನು ದಿನಾಲು ಪೂಜೆಯನ್ನು ಮಾಡಲಿಕ್ಕೆ ಬೇಕು. ಜಿನಪೂಜೆಯನ್ನು ಬಡವ–ಬಲ್ಲಿದರಿಬ್ಬರೂ ಮಾಡಬಲ್ಲರು ತಮ್ಮ ಸಾಮರ್ಥ್ಯವು ಇದ್ದಂತೆ ಪೂಜಾದ್ರವ್ಯಗಳನ್ನು ತಕೊಂಡು ಪೂಜೆಯನ್ನು ಮಾಡಬಹುದು ಪೂಜೆಯನ್ನು ಮಾಡುವುದು, ಮಾಡಿಸುವುದು, ಮಾಡಿದವರಿಗೆ ಒಳ್ಳೆಯದೆನ್ನುವುದು ಇವು ಮೂರಕ್ಕೂ ಪೂಜೆಯೆಂದೇ ಹೇಳಲಾಗುವುದು ಇದೇ ಪ್ರಕಾರ ಸ್ತುತಿಸುವುದು, ನಮಸ್ಕರಿಸುವುದು, ಇವೆಲ್ಲ ಪೂಜೆಯೇ ಎನಿಸುತ್ತವೆ. ಒಂದೇ ದ್ರವ್ಯದಿಂದ ಅರ್ಹಂತನಿಗೆ ಅರ್ಘ್ಯ ಕೊಡುವುದೂ ಸಹ ಪೂಜೆಯೇ ಆಗಿದೆ ಯಾವ ಪ್ರಮಾಣದಲ್ಲಿ ಅರಿಹಂತನ ಗುಣಗಳ ಮೇಲೆ ಭಕ್ತಿಯ ನಿರ್ಮಲತೆಯು ಇದ್ದೀತೋ ಆ ಪ್ರಮಾಣದಲ್ಲಿ ಅಂದ ಪೂಜೆಯಿಂದ ಫಲವು ಪ್ರಾಪ್ತವಾಗುತ್ತದೆ ಜಿನಮಂದಿರದಲ್ಲಿ ಛತ್ರ, ಚಾಮರ, ಸಿಂಹಾಸನ, ಕಲಶ, ಪಂಟಿ ಮೊದಲಾದವುಗಳನ್ನು ಬೆಳ್ಳಿ, ಬಂಗಾರ, ಹಿತ್ತಾಳೆ, ತಾಮ್ರ, ಕಂಚುಗಳಿಂದ ತಮ್ಮ ಶಕ್ತಿಗನುಸರಿಸಿ, ಮಾಡಿಸಿ ಇಡುವುದು ಮಂದಿರದ ವೈಯಾವೃತ್ಯವಾಗಿದೆ. ಜೀರ್ಣ ಮಂದಿರದ ಸುದಾಹರಣೆಯೂ ಸಹ ವೈಯಾವೃತ್ಯದಲ್ಲಿಯೇ ಬರುತ್ತದೆ. ಧನವಂತರು ಜಿನಬಿಂಬದ ಪ್ರತಿಷ್ಠೆಯನ್ನು ಮಾಡಿಸುವುದು, ಹೊಸ ಮಂದಿರಗಳನ್ನು ಕಟ್ಟಿಸುವುದು, ಕಳಶವನ್ನು ಏರಿಸುವುದು ಇವೆಲ್ಲ ಅರಿಹಂತನ ವೈಯಾವೃತ್ಯಗಳಾಗಿವೆ ಮಂದಿರದ ವ್ಯವಸ್ಥೆಯನ್ನು ನೋಡುವುದು, ಅದನ್ನು ಕೋಮಲವಾದ ಪಿಂಛದಿಂದ ಹಗುರಾಗಿ ಝಾಡಿಸುವುದು, ಅಭಿಷೇಕಕ್ಕಾಗಿ ನೀರು ತಂದು, ಸಾಮಗ್ರಿಗಳನ್ನು ತೊಳೆದಿಡುವುದು, ಪೂಜೆಯ ಪಾತ್ರೆಗಳನ್ನು ಸ್ವಚ್ಛಮಾಡುವುದು, ಗಾನನೃತ್ಯವಾದನಗಳಿಂದ ಭಗವಂತನ ಗುಣಗಳನ್ನು ಹಾಡುವುದು, ಇವೆಲ್ಲ ಕ್ರಿಯೆಗಳು ಭಗವಂತನ ವೈಯಾವೃತ್ಯದಲ್ಲಿ ಸಮಾವೇಶವಾಗುತ್ತವೆ ಮನಸ್ಸು, ಮಾತು, ಶರೀರ, ವಿದ್ಯೆ, ಕಲೆ, ಜ್ಞಾನ ಇತ್ಯಾದಿಗಳಿಂದ ಶಕ್ಯವಿದ್ದಷ್ಟು ಸೇವೆಯನ್ನು ಮಾಡುತ್ತ ಅರಿಹಂತನ ಗುಣಗಳ ಮೇಲೆ ಪ್ರೀತಿಯು ಹೆಚ್ಚುವಂತೆ ಮಾಡುತ್ತಿರಬೇಕು ಧನ ಲಭಿಸುವದು, ನಿರೋಗಿಯಾದ ಶರೀರವು ಪ್ರಾಪ್ತವಾಗುವುದು, ಸರ್ವ ಇಂದ್ರಿಯಗಳು ಅನುಕೂಲವಾಗಿರುವುದು, ಶಕ್ತಿ ಜ್ಞಾನಗಳಿರುವುದು ಇವೆಲ್ಲವುಗಳ ಸಾರ್ಥಕತೆಯು ಅರಿಹಂತನ ವೈಯಾವೃತ್ಯ ಮಾಡುವುದರಲ್ಲಿಯೇ ಇದೆ ವೈಯಾವೃತ್ಯದಿಂದ ಸಮ್ಯಕ್ತ್ವ ಸಮ್ಯಗ್ಜ್ಞಾನಗಳು ಪ್ರಾಪ್ತವಾಗುತ್ತವೆ. ಮಿಥ್ಯಾಜ್ಞಾನ ಮತ್ತು ಮಿಥ್ಯಾಶ್ರದ್ಧೆಗಳ ಅಭಾವವಾಗುತ್ತದೆ. ಸ್ವಾಧ್ಯಾಯ, ಸಂಯಮ, ವ್ರತ, ಶೀಲ, ತಪ ಮೊದಲಾದ ಗುಣಗಳು ಜಿನಮಂದಿರದ ಸೇವೆಯನ್ನು ಮಾಡುವುದರಿಂದ ಲಭಿಸುತ್ತವೆ. ನರಕ, ತಿರ್ಯಂಚಗತಿಗಳಲ್ಲಿ ಪರಿಭ್ರಮಣ ಮಾಡುವುದು ಇದರಿಂದಲೇ ಇಲ್ಲದಂತಾಗುತ್ತದೆ. ಜಿನಮಂದಿರಕ್ಕೆ ಸಮಾನವಾದ ಉಪಕಾರಮಾಡುವಂಥ ಪದಾರ್ಥವು ಇನ್ನೊಂದಿಲ್ಲ ಜಿನಮಂದಿರದ ನಿಮಿತ್ತದಿಂದಲೇ ಶಾಸ್ತ್ರ ಶ್ರವಣ ಮತ್ತು ಪಠಣಗಳು ಒದಗಿ ಬಂದು ಅನೇಕ ಶ್ರೋತೃಗಳು ಹಾಗೂ ವಕ್ತೃಗಳ ಮೇಲೆ ಉಪಕಾರವಾಗುತ್ತದೆ ಜಿನಮಂದಿರವಿದ್ದರೆ ಅನೇಕ ಜನರು ಕಾಯೋತ್ಸರ್ಗ, ಜಪ, ಜಾಪ್ಯ, ರಾತ್ರಿ ಜಾಗರಣೆ, ಪೂಜೆ, ಸ್ತವನ, ತತ್ತ್ವಚರ್ಚೆ, ಪ್ರೋಷಧೋಪವಾಸ, ಸಂಚೋಪವಾಸ ಮೊದಲಾದವುಗಳನ್ನು ಮಾಡಿ ಕರ್ಮದ ನಿರ್ಜರೆಯನ್ನು ಮಾಡಬಲ್ಲರು ಅನೇಕರು ಭಜನ, ಸರ್ತನ, ಗಾಯನಗಳನ್ನು ಮಾಡಿ ಪುಣ್ಯೋಪಾರ್ಜನೆಯನ್ನು ಮಾಡಿಕೊಂಡಾರು. ಯಾರು ಸ್ವಾಧ್ಯಾಯ, ಯಾರು ಧರ್ಮಧ್ಯಾನ, ಯಾರು ವೀತರಾಗಭಾವ ಧಾರಣಮಾಡಬಲ್ಲರು ಕೆಲವರಿಗೆ ಮಂದಿರದಲ್ಲಿ ಅನೇಕ ಪ್ರಕಾರದ ಉಪಕರಣಗಳನ್ನಿಟ್ಟು ಪ್ರಭಾವನೆಯನ್ನು ಮಾಡಲು ಸಾಧ್ಯವಿದೆ. ಜಿನಮಂದಿರದಲ್ಲಿ ಸ್ವಾಧ್ಯಾಯದ ನಿಮಿತ್ತದಿಂದ ಪಾಪ–ಪುಣ್ಯ, ದೇವ–ಕುದೇವ, ಧರ್ಮ–ಕುಧರ್ಮ, ಗುರು–ಕುಗುರು ಇವರ ಜ್ಞಾನವಾಗುತ್ತದೆ ಭಕ್ಷ್ಯಾಭಕ್ಷ್ಯ, ಕಾರ್ಯಾಕಾರ್ಯ, ಹೇಯಾಹೇಯ ಇವುಗಳ ವಿಷಯಕ್ಕೂ ಜ್ಞಾನವಾಗುತ್ತದೆ. ಅಂತಲೇ ಜಿನಮಂದಿರದಂಥ ಉಪಕಾರಕ ವಸ್ತುವು ಇನ್ನೊಂದಿಲ್ಲ ಇದು ಅಶರಣರಿಗೆ ಶರಣವಾಗಿದೆ ಈ ಪ್ರಕಾರ ಜಿನಮಂದಿರವು ಪರೋಪಕಾರ ಮಾಡುವುದರಿಂದ ಅದರ ಸೇವೆಯನ್ನೂ ರಕ್ಷಣೆಯನ್ನೂ ಅತ್ಯವಶ್ಯವಾಗಿ ಮಾಡಬೇಕು

ಮೋಕ್ಷ ಶ್ರೀಸುಖ ವಿಶ್ವನಾಥನಿವಸಂದಾರೋಪಿಸಲ್ಪೂಜೆಯೋ
ಯಕ್ಷದಿಕ್ಪತಿಗಳ್ ಗ್ರಹರ್ತಿದಿವಿಜರ್ನಾಗಸುರರ್ಮರ್ತ್ಯಂತಕರ್ |
ನಕ್ಷತ್ರರ್ಮುನಿಗಳ್ಸಮಂತ್ರವಿಧಿಯಿಂ ಸನ್ಮಾನಿಸಲ್ಪಟ್ಟರೀ.
ವಾಕ್ಷಿಣ್ಯಂ ಭಜಕಂಗದೇನ ಕುಡದೋ ರತ್ನಾಕರಾಧೀಶ್ವರಾ ॥ —ರತ್ನಾಕರ–ರತ್ನಾಕರ ಶತಕ ೧೦೩

ಇನ್ನು ವೈಯಾವೃತ್ಯದ ಐದು ಅತಿಚಾರಗಳನ್ನು ಹೇಳುತ್ತಾರೆ—

**ಹರಿತಪಿಧಾನನಿಧಾನೇ ಹ್ಯನಾದರಾಸ್ಮರಣಮತ್ಸರತ್ವಾನಿ ।**
**ವೈಯಾವೃತ್ಯಸ್ಯೈತೇ ವ್ಯತಿಕ್ರಮಾಃ ಪಂಚ ಕಥ್ಯಂತೇ ॥ ೧೨೧ ॥**[1]

**ಅನ್ವಯಾರ್ಥ**—(ಹರಿತಪಿಧಾನನಿಧಾನೇ) ದಾನಕೊಡುವ ವಸ್ತುವನ್ನು ಹಸುರು ಎಲೆಗಳಿಂದ ಮುಚ್ಚುವುದು, ಹಸುರು ಎಲೆಗಳ ಮೇಲೆ ಇಡುವುದು (ಅನಾದರಾಸ್ಮರಣಮತ್ಸರತ್ವಾನಿ) ಅನಾದರ ಮಾಡುವುದು, ದಾನದ ವಿಧಿಯನ್ನು ಮರೆತು ಬಿಡುವುದು, ಮತ್ಸರದಿಂದ ದಾನ ಕೊಡುವುದು (ಏತೇ ಪಂಚ) ಇವು ಐದು (ವೈಯಾವೃತ್ಯಸ್ಯ) ವೈಯಾವೃತ್ಯದ (ವ್ಯತಿಕ್ರಮಾಃ) ಅತಿಚಾರ (ಕಥ್ಯಂತೇ) ಹೇಳಲಾಗಿದೆ

**ಅರ್ಥ**—ವೈಯಾವೃತ್ಯಕ್ಕೆ ಹರಿತ ಪಿಧಾನ, ಹರಿತ ನಿಧಾನ, ಅನಾದರ, ಅಸ್ಮರಣ, ಮತ್ಸರಭಾವ ಎಂದು ಐದು ಅತಿಚಾರಗಳು (ದೋಷ) ಇವೆ [ಇಲ್ಲಿ 'ಹರಿತ ಪಿಧಾನ ನಿಧಾನೇ' ಎಂಬ ಪದದಲ್ಲಿ ಪ್ರಯೋಗಿಸಲ್ಪಟ್ಟ 'ಹರಿತ' ಎಂಬ ಶಬ್ದವು ಸಚಿತ್ತ (ಸಜೀವ) ಎಂಬ ಅರ್ಥವನ್ನು ಸೂಚಿಸುತ್ತದೆ ಕೇವಲ ಹಸಿರು ಪದಾರ್ಥ ಎನ್ನುವ ಅರ್ಥದಲ್ಲಿ ಅದು ಇಲ್ಲ ಇದರಿಂದ ಸಚಿತ್ತ ವಸ್ತುವಿನಿಂದ ಮುಚ್ಚಿದ ಅಥವಾ ಅದರ ಮೇಲೆ ಇಟ್ಟ ಅಚಿತ್ತ ಪದಾರ್ಥವೂ ಸಹ ದಾನಕ್ಕೆ ಯೋಗ್ಯವಲ್ಲವೆಂಬ ಮಾತು ಸ್ಪಷ್ಟವಾಗುತ್ತದೆ ಅನಗಾರ, ಮುನಿ ಹಾಗೂ ಸಚಿತ್ತತ್ಯಾಗಿ ಸಂಯಮಿಗಳಿಗೆ ಆಹಾರಾದಿ ದಾನಗಳನ್ನು ಕೊಡುವಾಗ ಸಚಿತ್ತ ವಸ್ತುಗಳನ್ನು ಕೊಡುವುದು ನಿಷಿದ್ಧವಾಗಿದೆ ಆದರೆ ಸಂಸ್ಕಾರದಿಂದ ಅಚಿತ್ತಗೊಳಿಸಿದ ವಸ್ತುಗಳನ್ನು ಕೊಡಬಹುದಾಗಿದೆ ಉದಾಹರಣೆಗೆ ಕಬ್ಬಿನ ಹಾಲು, ಕಿತ್ತಳೆ ಹಣ್ಣಿನ ರಸ ಇವುಗಳನ್ನು ದಾನಕೊಡಬಹುದು ಸ ಧ]

**ವಿಶೇಷಾರ್ಥ**—(೧) ವ್ರತಿಕನಿಗೆ ಕೊಡತಕ್ಕ ಆಹಾರವನ್ನು ಕಮಲದ ಹಸಿರು ಎಲೆಯಲ್ಲಿ ಇಲ್ಲವೆ ಇನ್ನಾವುದಾದರೂ ಸಚಿತ್ತವಾದ ಎಲೆಯ ಕೆಳಗೆ ಮುಚ್ಚಿಕೊಡುವುದು ಹರಿತಪಿಧಾನ ಎಂಬ ಹೆಸರಿನ ಅತಿಚಾರವಾಗಿದೆ

(೨) ಸಚಿತ್ತ ಪಾತ್ರದಲ್ಲಿಟ್ಟು ಆ ಆಹಾರ ಕೊಡುವುದಕ್ಕೆ ಹರಿತ ನಿಧಾನ ಎಂಬ ಅತಿಚಾರವೆನ್ನುವರು

---

[1] ಆಯತವರ್ಮನ ವಿವರಣೆ ಹೀಗಿದೆ

ವಚನ—ಅಂತಾ ವೈಯ್ಯಾವೃತ್ಯಕ್ಕೆ ಸಚಿತ್ತದಾನಂ ಸನಿಕ್ಷೇಪಮುಮನಾದರಸ್ಮರಣಮಾತ್ಸರ್ಯಮೆಂಬಯ್ದತಿಚಾರಮಕ್ಕು-ಮವನಾಗಲೀಯದುದು ವೈಯ್ಯಾವೃತ್ಯಮೆಂಬೇಳನೆಯ ಶೀಲ ಬ್ರತಂ ಮತ್ತಂ ತಾವರೆಯೆಲೆ ಮೊದಲಾಗೊಡೆಯ ಸಚಿತ್ತಂಗಳಿಂ ಮುಚ್ಚುವುದು ಸಚಿತ್ತಪಿದಾನಂ ಸಚಿತ್ತಮುಪ್ಪವರೊಳು ಇಡುವುದು ಸಚಿತ್ತನಿಕ್ಷೇಪಂ ಅರ್ತಿಯಿಲ್ಲದೆ ಕೊಡುವುದನಾದರಂ ಆ ಪೊತ್ತುಮನ್ನಪಾನಾದಿಗಳನಿಕ್ಕುಮವುಮನಿಕ್ಕಮವುಮನಿವರ್ಗೀವು ತಕ್ಕೆಂಬುದು ಮನಿವ್ವ ಮೊದಲಾಗೊಡೆಯವಂ ಮರೆವುದಸ್ಮರಣಂ ಪೆರರ ದಾನಮಂ ಕಂಡು ಮಚ್ಚರಿಸುವುದು ಮಾತ್ಸರ್ಯಂ ಇಂತನತಿವಿಚಾರಬ್ರತಶೀಲಂಗಳುಂ ಬ್ರತಮೆರಡನೆಯ ದರ್ಮವಿಧಾಪಾದಿಯಾಗುತ್ತ್ಯವ್ವಾರ್ಥಮಪ್ಪೇಕಾದಶೋಪಾಸಕ ಸ್ಥಾನಂಗಳುಂ ಪೆರಗೆ ಚರಣಾನುಯೋಗದೊಳ್ಪೇಳ್ವುದು ಮತ್ತಂ

ಕಂದ ॥ ಸುಚರಿತನಮಲಗುಣಂ ಬ್ರಹ್ಮಚಾರಿ ಮತ್ತಂ ಗೃಹಸ್ಥಂ ವಾನಪ್ರಸ್ಥಂ ।
ಶುಚಿ ಬಿಕ್ಷುಕನೆಂದಾಗಮದುಚಿತದಿನೀ ಜೈನರಾಶ್ರಮಂ ನಾಲ್ಕಕ್ಕುಂ ॥

ಇಂತದನುಪಾಸಕಾಧ್ಯಯನಮೆಂಬೆ ಳನೆಯಂಗದೊಳು ಸವಿಸ್ತರಮರಿಯಲಕ್ಕುಮಲ್ಲಿ ಕಿರಿದನಾ ಸೂಚಿಸುವೆನಂತಾ ನಾಲ್ಕಾಶ್ರಮಂಗಳುವನಯುವ ಬ್ರಹ್ಮಚಾರಿ ಅವಲಂಬನಬ್ರಹ್ಮಚಾರಿ ಅದೀಕ್ಷಿತಬ್ರಹ್ಮಚಾರಿ ಗೂಡಬ್ರಹ್ಮಚಾರಿ ನೈಷ್ಠಿಕ ಬ್ರಹ್ಮಚಾರಿಯೆಂದೈದುಂತೆರನಪ್ಪವರೊಳು ಗಣದರ ಸೂತ್ರಮಂ ತಾಳ್ದಿ ಸಕಲಾಗಮಾಭ್ಯಾಸಂಗೆಯ್ದು ಬಳಿಯಂ ಗೃಹಸ್ಥ ಧರ್ಮದೊಳಿಪ್ಪವರ್ಗಳುಪನಯನಬ್ರಹ್ಮಚಾರಿಗಳು ಕ್ಷುಲ್ಲಕರೂಪುಮಂ ತಾಳ್ದಿಯಾಗಮಾಭ್ಯಾಸಂಗೈದು ಬಳಿಯಂ ಗೃಹಸ್ಥಾ ವಾಸಂಗಳಂ ಕೈಕೊಂಡಿರ್ಪವರ್ಗಳು ಅವಲಂಬನಬ್ರಹ್ಮಚಾರಿಗಳು ಕ್ಷುಲ್ಲಕ ರೂಪುಮಂ ತಾಳ್ದದೆಯಾಗಮಂಗಳನೋದಿ ಬಳಿಯಂ ಗೃಹಸ್ಥದೊಳಿಪ್ಪವರ್ಗಳದೀಕ್ಷಿತ ಬ್ರಹ್ಮಚಾರಿಗಳು ಕುಮಾರ ಬ್ರಹ್ಮಚರ್ಯದೊಳಾಗಮಮನೋದಿ ಸಂಬಂಧಿಪಮಾನುಂ ಅರಸುಗಳಿಂದಮಾನುಂ ಪರೀಷಹಗಳಿಂದಮಾನುಂ ತಪದೊಳಳಿಪಿ ಜಿನರೂಪಂ ಬಿಸುಟ್ಟು ಗೃಹಸ್ಥ ಮಾರ್ಗದೊಳಿಪ್ಪವರ್ಗಳ್ ಗೂಡ ಬ್ರಹ್ಮಚಾರಿಗಳು ತಲೆಯೊಳು ಜಂಡಿಕೆಯುಮನುರದೊಳು ಗಣದರ ಸೂತ್ರಮುಮಂ ಕಟಿಯೊಳು ದವಳ ವಸ್ತ್ರಮುಮಂ ತಾಳ್ದಿ ಬಿಕ್ಷೆಯೊಳುಂಡು ದೆ ವರಂ ಪೂಜಿಸಿತುಂ ಬಸದಿಯೊಳಿಪ್ಪವರ್ಗಳು ನೈಷ್ಠಿಕ ಬ್ರಹ್ಮಚಾರಿಗಳು ಮತ್ತಂ ಗೃಹಸ್ಥನಪ್ಪವಂಗೀ

(೩) ದಾನಕೊಡುತ್ತಿರುವಾಗ ಮನದಲ್ಲಿ ಆದರ ಬುದ್ಧಿಯು ಇಲ್ಲದಿರುವುದೂ ಅದನ್ನು ಅವಿನಯದಿಂದಲೂ ಆದರ ವಚನಗಳನ್ನಾಡದೆಯೂ ಕೊಡುವುದಕ್ಕೆ ಅನಾದರಾತಿಚಾರವೆನ್ನುವರು

(೪) ಸತ್ಪಾತ್ರಕ್ಕೆ ದಾನಕೊಡುವ ಯೋಜನೆಯನ್ನು ಮಾಡಿ ಎರಡನೆಯ ಕೆಲಸದಲ್ಲಿ ಮಗ್ನನಾಗಿ ಮರೆತು ಬಿಡುವುದು, ಕೊಡತಕ್ಕಂಥ ಪದಾರ್ಥ ಮತ್ತು ವಿಧಿಗಳನ್ನು ಮರೆತು ಬಿಡುವುದು ಇದಕ್ಕೆ ಅಸ್ಮರಣಾತಿಚಾರವೆನ್ನುವರು

(೫) ಎರಡನೆಯವರು ದಾನಕೊಡುವುದನ್ನು ನೋಡಿ ಈರ್ಷೆಯಿಂದ ತಾನೂ ದಾನ ಕೊಡುವುದಕ್ಕೆ ಮತ್ಸರತ್ವ ಅತಿಚಾರವೆನ್ನುವರು.

ಈ ಪ್ರಕಾರ ಐದು ದೋಷಗಳು ಇಲ್ಲದಂತೆ ವಿನಯಪೂರ್ವಕವಾಗಿ ಶುದ್ಧ ದಾನವನ್ನು ಕೊಡಬೇಕು

ಕ್ರಮದೆ ಪರವ್ಯಪದೇಶಂ ಸಮತ್ಸರತ್ವಂ ಸಚಿತ್ತನಿಕ್ಷೇಪ ಪಿಧಾ- ।
ನಮತಿಕ್ರಮಕಾಲಮತಿಕ್ರಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ ॥

—ಶಾಂತಿನಾಥ–ಸುಕುಮಾರಚರಿತಂ ೬–೨೨

---

ಜ್ಞಾನಾವರ್ತೆ ದತ್ತಿ ಸ್ವಾಧ್ಯಾಯಂ ಸಂಯಮಂ ತಪಮೆಂದಾರ್ಯರ ಕರ್ಮಮಾರಕ್ಕುಂ ಅಲ್ಲಿಯರ್ಹತ್ಪೂಜೆಯೆಂಬುದಕ್ಕುಮಾ ಪೂಜೆ ಮಹಾಮಹಂ ಸರ್ವತೋಭದ್ರಂ ಕಲ್ಪವೃಕ್ಷಂ ಚತುರ್ಮುಖಂ ರಥಾವರ್ತ ಇಂದ್ರಕೇತು ಪೂಜೆಮಹಿಮೆಯೆಂದೆಂಟು-ತೆರನಕ್ಕುಮಲ್ಲಿಪಂಚಮಹಾಕಲ್ಯಾಣಂಗಳೊಳಂ ನಂದೀಶ್ವರ ಪರ್ವತಂಗಳೊಳಂ ಸೌಧರ್ಮೇಂದ್ರಂ ಮಾಳ್ಪಪೂಜೆಮಹಾಮಹಂ ಚತುರ್ನಿಕಾಯಾಮರರು ಮಾಳ್ಪ ಪೂಜೆ ಸರ್ವತೋಭದ್ರಂ, ಬೇಡಿದೊಂಗೆ ಬೇಡಿದುದನೆ ಕೊಟ್ಟು ಚಕ್ರವರ್ತಿಗಳು ಮಾಳ್ಪ ಪೂಜೆ ಕಲ್ಪವೃಕ್ಷಂ, ವಾಸುದೇವರ್ಕಳು ಮಾಳ್ಪ ಪೂಜೆ ಚತುರ್ಮುಖಂ, ಸಮಸ್ತ ವಿದ್ಯಾಧರರ್ಕಳು ಮಾಳ್ಪ ಪೂಜೆ ರಥಾವರ್ತಂ, ಮಹಾಮಂಡಲೇಶ್ವರರ್ಮಾಡುವ ಪೂಜ್ಯ ಇಂದ್ರಕೇತು, ಅರ್ಧ ಮಂಡಳಿಕರ್ಮಾಳ್ಪ ಪೂಜೆ ಮಹಾಮಹಿಮೆಯೆಂಬುದಕ್ಕುಂ ಮತ್ತಂ ಸಮಸ್ತಜನಂಗಳು ತಂತಮ್ಮ ವಿತ್ತಾನುಸಾರಿಯಿಂದಷ್ಟವಿಧಾರ್ಚನೆಯಿಂ ನಿಜಗೃಹದಿಂ ಜಿನಗೃಹಕ್ಕೆ ಯಥೋಕ್ತಿಯಿಂದ-ಕಾರಣಬಂಧುವಂ ಪೂಜಿಸುವುದುಂ ಬಸದಿಗಳಂ ಮಾಡಿಸುವುದುಂ ಜಿನಸಿದ್ಧಪ್ರತಿಮೆಗಳಂ ಸ್ಥಾಪಿಸಿ ಗ್ರಾಮನಗರಾದಿಗಳುಮಂ ಕ್ಷೇತ್ರಂಗಳುಮಂ ಶಾಸನಂಗುಡುವುದುಂ ಮುನಿಗಳಂ ಪೂಜಿಸುವುದುಂ ಮತ್ತಂ ತ್ರಿಸಂಜೆಯೊಳಂ ತ್ರಿಭುವನ ವಂದ್ಯಂಗೆ ಜಲನಾಳಿ-ಕೇರ ಜಳೇಕ್ಷುರಸಾಮ್ರರಸ ಘೃತ ಕ್ಷೀರದಧಿಕಷಾಯೋದಕ ಚತುಃಕುಂಭೋದಕ ಗಂಧೋದಕ ಸ್ನಪನಂಗಳುಮಂ ಜಳಗಂಧಾಕ್ಷತೇಷ್ಟಾರ್ಚನೆಗಳುಮಂ ಮಾಳ್ಪುದು ನಿತ್ಯಮಹಮಪ್ಪದಿಜ್ಯಾಯೆಂಬ ಮೊದಲಾರ್ಯಕರ್ಮ ಅಸಿ ಮಷಿ ಕೃಷಿ ವಾಣಿಜ್ಯ ಶಿಲ್ಪಿ ಪಶುಪಾಲ್ಯಮೆಂಬ ಷಟ್ಕರ್ಮಂಗಳೊಳಂ ಶುದ್ಧವೃತ್ತಿಯೊಳರ್ಥಮನುಪಾರ್ಜಿಸುವುದು ವಾರ್ತೆಯೆಂಬೆರಡನೆಯಾರ್ಯ ಕರ್ಮಂ.

ಕಂದ ॥ ಅಭಯ ವರ ಪಾತ್ರ ಸಕಲಂ ವಿಭೇದದಿಂ ದತ್ತಿ ನಾಲ್ಕುತೆರನಂತವರೊಳ್ ।
ಶುಭಯೋಗದೆ ಸೋವುವುದುಮದಭಯಮೆನಿಪ ದತ್ತಿ ಸಕಲ ಜೀವಂಗಳುಮಂ ॥

ವಚನ—ಪೆರಗೆ ವೈಯ್ಯಾವೃತ್ಯದೊಳ್ಪೇಳ್ದಂದದೊಳೆ ಪಾತ್ರಕ್ಕಾಹಾರಂ ಕುಡುವುದು ಪಾತ್ರದತ್ತಿಯೆಂಬುದಕ್ಕುಂ ಕನ್ಯಾಶ್ವಕರಿ ಹಿರಣ್ಯ ಸುವರ್ಣ ಮಣಿ ಭೂಷಣಂಗಳಂ ತನ್ನ ಸಮಾನ ಮಪ್ಪಂಗೆ ಮೋಕ್ಷಾನ ಪೂಜೆ ಶೀಲ ಮುಪವಾಸನುಂ ತಾಳ್ದಿರ್ದ ಮಧ್ಯಮ ಪಾತ್ರಕ್ಕೆ ಮೇಣ್ಕುಡುವುದು ಸಮದತ್ತಿಯೆಂಬುದಕ್ಕುಂ ತನ್ನ ಸಂತತಿಯಂ ನಿರಿಸಲೆಂದು ಪುತ್ರಂಗೆ ಮೇಣ್ ಗೋತ್ರಜಂಗೆ ಮೇಣ್ ಧರ್ಮಮುಮಂ ಪರಿವಾರಮುಮಂ . ಇಂತಿ ದತ್ತಿಯೆಂಬ ಮೂರನೆಯಾರ್ಯ ಕರ್ಮಂ ಪರಮಾಗಮಂಗಳಂ ವ್ಯಾಖ್ಯಾನಂ ಗೆಯ್ವುದುಂ ಪೃಚ್ಛಿಸುವುದುಂ ಬಳಿಯಂ ನೆನೆವುದುಂ ಪರಿವಡಿಗೆಯ್ವುದುಂ ಧರ್ಮೋಪದೇಶಂಗೆಯ್ವುದುಮೆಂದೀ ಪಂಚ ಸ್ವಾಧ್ಯಾಯಂಗಳಂ ಸ್ವಾಧ್ಯಾಯಮೆಂಬ ನಾಲ್ಕನೆಯಾರ್ಯಕರ್ಮಂ ಪಂಚಾಣುವ್ರತಂಗಳಂ ಧರಿಯಿಸುವುದು ಸಂಯಮ. ಮೆಂಬಯ್ದನೆಯಯಾರ್ಯಕರ್ಮಂ ಅನಶನಾದಿ ಬ್ರತಮನನುಷ್ಠಿಸುವುದು ತಪಮೆಂಬಾರನೆಯಾರ್ಯಕರ್ಮಂ ಯಿಂತೀಯಾರ್ಯ ಕರ್ಮಂಗಳಂ ನೆಗಳ್ವ ಗೃಹಸ್ಥರು ಜಾತಿ ಕ್ಷತ್ರಿಯರೆಂದುಯಿತ್ತರನಪ್ಪರವರೊಳು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂದು ನಾಲ್ಕು ತೆರದವರ್ಗಳುಂ ಜಾತಿಕ್ಷತ್ರಿಯರು ತೀರ್ಥಕ್ಷತ್ರಿಯರು ಜೀವಿಕಲ್ಪದಿಂದನೇಕ ವಿಕಲ್ಪಮಪ್ಪರು ನಿರ್ಗ್ರಂಥ ರೂಪುಮಂ ತಾಳ್ದ ದೇವಸ್ತ್ರಖಂಡಧರರಾಗಿ ನಿರತಿಶಯ ತಪದೊಳ್ನೆಗಳವರ್ಗಳು ವಾನಪ್ರಸ್ಥರು ನಿರ್ಗ್ರಂಥ ರೂಪುಮಂ ತಾಳ್ದಿದ ಮಹಾಬ್ರತಿಗಳ್ ಭಿಕ್ಷುಕರಂತವರ್ಗಳನಗಾರರೆಂದುಂ ಯತಿಗಳೆಂದುಂ ಮುನಿಗಳೆಂದುಂ ಋಷಿಯರೆಂದಪ್ಪರಂತವರ್ಗಳೊಳು ದರ್ಶನಾಚಾರಂ ಜ್ಞಾನಾಚಾರಂ ತಪಾಚಾರಂ ವೀರ್ಯಾಚಾರಂ ಚಾರಿತ್ರಾಚಾರಮೆಂಬ ಪಂಚವಿಧಾಚಾರ ಸಮನ್ವಿತರನಗಾರರುಪಶಮ ಕ್ಷಪಕ ಶ್ರೇಣ್ಯಾರೋಹಣರಪ್ಪವರ್ಗಳು ಯತಿಗಳು ಅವಧಿ ಮನಃಪರ್ಯಾಯ ಕೇವಲ ಜ್ಞಾನಿಗಳು ಮುನಿಗಳು ಋದ್ಧಿಪ್ರಾಪ್ತರುಂ ಕೇವಳಿಗಳುಂ ಋಷಿಯರಂತಾಂ ಋಷಿಯರುಂ ರಾಜ ಋಷಿಯರೆಂದುಂ ಬ್ರಹ್ಮ ಋಷಿಯರೆಂದುಂ ದೇವ ಋಷಿಯರೆಂದು ಪರಮ ಋಷಿಯರೆಂದುಂ ಚತುರ್ವಿಧರಪ್ಪರವರೊಳು ವಿಕ್ರಿಯಾಶಕ್ತ್ಯಕ್ಷೀಣರ್ದ್ಧಿಸಂಪನ್ನರವರೊಳು ರಾಜಋಷಿಯರು ರುದ್ಧ್ಯೌಷಧಿ ರುದ್ಧಿ ಸಮೇತರಪ್ಪವರ್ಗಳು ಬ್ರಹ್ಮ ಋಷಿಯರು ಗಗನ ಗಮನ ಋದ್ಧಿ ಪ್ರಾಪ್ತರಪ್ಪವರ್ಗಳು ದೇವ ಋಷಿಯರು ಕೇವಲ ಜ್ಞಾನಿಗಳ್ ಪರಮ ಋಷಿಯರು ಇಂತು ಜೈನರಾಶ್ರಮಂ ನಾಲ್ಕಕ್ಕುಂ

# ಭಾವನಾಧಿಕಾರ

**ಭೂಮಿಕೆ**—ಇನ್ನು ಪರಮ ನಿರ್ಗ್ರಂಥ ಗುರುವಿನ ಪ್ರಸಾದದಿಂದ ಪರಮಾಗಮದ ಆಜ್ಞೆಗೆ ಅನುಸರಿಸಿ ಭಾವನಾ ಮಹಾಧಿಕಾರವನ್ನು ಹೇಳುವೆ ಧರ್ಮದ ಮೂಲವು ಭಾವನೆಯಾಗಿದೆ ಭಾವನೆಯಿಂದಲೇ ಪರಿಣಾಮದಲ್ಲಿ ನಿರ್ಮಲತೆಯು ಪ್ರಾಪ್ತವಾಗುತ್ತದೆ. ಭಾವನೆಯಿಂದ ಮಿಥ್ಯಾದರ್ಶನದ ಅಭಾವವಾಗುತ್ತದೆ ಭಾವನೆಯಿಂದ ವ್ರತಗಳಲ್ಲಿ ದೃಢತ್ವವು ಉತ್ಪನ್ನವಾಗುತ್ತದೆ. ಭಾವನೆಯಿಂದ ವೀತರಾಗತ್ವದ ವೃದ್ಧಿಯಾಗುತ್ತದೆ. ಭಾವನೆಯಿಂದ ಅಶುಭ ಧ್ಯಾನದ ಅಭಾವವಾಗಿ ಶುಭ ಧ್ಯಾನದ ಪುಷ್ಟಿಯಾಗುತ್ತದೆ ಮೇಲಾಗಿ ಭಾವನೆಯಿಂದಲೇ ಆತ್ಮಾನುಭವವಾಗುತ್ತದೆ. ಈ ಪ್ರಕಾರ ಸಾವಿರಾರು ಗುಣಗಳು ಭಾವನೆಯಿಂದ ಉತ್ಪನ್ನವಾಗುತ್ತವೆ. ಅದಕ್ಕಾಗಿ ವ್ರತಪಾಲನೆಯಲ್ಲಿ ದೋಷಗಳು ತಟ್ಟದಂಥ ಭಾವನೆಗಳನ್ನು ಭಾವಿಸುತ್ತ ಇರಬೇಕು ಪ್ರಥಮದಲ್ಲಿ ಐದು ವ್ರತಗಳ ಇಪ್ಪತ್ತೈದು ಭಾವನೆಗಳು ಹೀಗಿವೆ—

**ಅಹಿಂಸಾ ವ್ರತದ ಭಾವನೆ**—ಅಹಿಂಸಾ ಅಣುವ್ರತವನ್ನು ಧಾರಣ ಮಾಡುವವರು ಕೆಳಗೆ ಕಾಣಿಸಿದ ಐದು ವಿಷಯಗಳ ದೋಷವು ಸಂಭವಿಸಬಾರದೆಂದು ತಮ್ಮ ಭಾವನೆಯನ್ನು ಹೀಗೆ ಇಟ್ಟುಕೊಂಡಿರಬೇಕು.

೧ ಅನ್ಯಾಯದಿಂದ ವಿಷಯೋಪಭೋಗವನ್ನು ಮಾಡುವ ಇಚ್ಛೆಯನ್ನು ಮನಸ್ಸಿನೊಳಗಿಂದ ಇಲ್ಲದಂತೆ ಮಾಡಿ, ದುಷ್ಟ ಸಂಕಲ್ಪವನ್ನು ನಷ್ಟಗೊಳಿಸಬೇಕು. ದೊಡ್ಡಸ್ತಿಕೆಯ ಇಚ್ಛೆಯನ್ನು ಇಟ್ಟುಕೊಂಡಿರಬಾರದು. ಅಲ್ಲದೆ ಅನ್ಯ ಜನರಿಗೆ ವಿಘ್ನ ಉಂಟಾಗಲಿ, ಅವರ ಇಷ್ಟವಿಯೋಗವಾಗಲಿ, ಅವರ ಮಾನಭಂಗವಾಗಲಿ, ತಿರಸ್ಕಾರವಾಗಲಿ, ಧನದ ನಾಶವಾಗಲಿ, ರೋಗ ಸಂಭವಿಸಲಿ–ಈ ಪ್ರಕಾರದ ಇಚ್ಛೆಯನ್ನು ಮಾಡದೆ ಇರುವುದು ಮನೋಗುಪ್ತಿ ಎಂಬ ಮೊದಲನೆಯ ಭಾವನೆಯಾಗಿದೆ

೨. ವಿನೋದ, ವಾದವಿವಾದ, ಅಭಿಮಾನ ಮತ್ತು ಕಲಹಗಳನ್ನು ಉತ್ಪನ್ನ ಮಾಡುವ ಮಾತುಗಳನ್ನು ಆಡದೆ ಇರುವದು ವಚನಗುಪ್ತಿ ಭಾವನೆಯೆನಿಸುತ್ತದೆ.

೩. ತ್ರಸ ಜೀವಗಳ ಹಿಂಸೆಯಾಗಬಾರದೆಂದು ಹಸಿರು ಹುಲ್ಲು, ಕೆಸರು ಮೊದಲಾದ ಸ್ಥಳಗಳಲ್ಲಿ ಸಂಚರಿಸುವುದು, ಏರುವುದು, ಇಳಿಯುವುದು, ದಾಟುವುದು ಮೊದಲಾದ ಕ್ರಿಯೆಗಳನ್ನು ಮಾಡುವಾಗ ಅತ್ಯಂತ ಎಚ್ಚರಿಕೆಯಿಂದ ಮಾಡುವುದು. ಅಲ್ಲದೆ ತಮ್ಮ ಕೈಕಾಲು ಮೊದಲಾದ ಇಂದ್ರಿಯಗಳಿಂದ ಯಾವ ಎರಡನೆಯ ಜೀವಕ್ಕೂ ಕಷ್ಟವು ಒದಗ ಕೂಡದು, ಅವು ನಾಶವಾಗಬಾರದು, ಎನ್ನುವ ರೀತಿಯಲ್ಲಿ ಅವುಗಳ ಚಲನ–ವಲನ ಮಾಡಬೇಕು ಇದಕ್ಕೆ ಈರ್ಯಾಸಮಿತಿ ಎನ್ನುವರು ಈ ಪ್ರಕಾರ ಸಾವಧಾನ ಪೂರ್ವಕ ಕ್ರಿಯೆಯನ್ನು ಮಾಡುವ ವಿಷಯದಲ್ಲಿ ಯಾವಾಗಲೂ ಚಿಂತಿಸುತ್ತ ಇರುವುದು ಈರ್ಯಾಸಮಿತಿಯೆಂಬ ಭಾವನೆ ಎನಿಸುತ್ತದೆ

೪ ಅನ್ನ, ಪಾನ, ವಸ್ತ್ರ, ಆಸನ, ಶಯ್ಯಾ, ಕಾಷ್ಠ, ಪಾಷಾಣ ಪಾತ್ರೆಗಳು–ಅವು ಮಣ್ಣು, ಬಂಗಾರ, ಹಿತ್ತಾಳಿ, ತಾಮ್ರ ಯಾವುದರಿಂದಾದರೂ ಮಾಡಿದವುಗಳಿರಲಿ—ತುಪ್ಪ ಎಣ್ಣೆ ಮೊದಲಾದ ರಸಗಳು ಇವೆಲ್ಲವೂ ಗೃಹಸ್ಥರು ಸ್ವೀಕರಿಸಲಿಕ್ಕೆ ಯೋಗ್ಯವಾಗಿವೆ ಆದರೂ ಇವು ಅವರ ಪರಿಗ್ರಹಗಳಾಗಿವೆ. ಇವುಗಳನ್ನು ಯಾವಾಗಲೂ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಒಯ್ಯಬೇಕಾಗುತ್ತದೆ ಇಡಬೇಕಾಗುತ್ತದೆ ಇವುಗಳ ಉಪಯೋಗವನ್ನು ಗೃಹಸ್ಥನು ಯಾವಾಗಲೂ ಮಾಡಿಕೊಳ್ಳಬೇಕಾಗುತ್ತದೆ ಆಗ ಈ ಕ್ರಿಯೆಗಳಿಂದ ಇತರ ಯಾವ ಜೀವಕ್ಕೂ ಬಾಧೆಯಾಗದಂತೆ ವರ್ತಿಸಬೇಕು ಅಂದರೆ ನಮ್ಮ ಉಪಯೋಗದ ಯಾವ ವಸ್ತುಗಳೂ ಕೂಡ ಕೈಯಿಂದ ಜಾರಿ ಕೆಳಗೆ ಬಿದ್ದು ಜೀವದ ಘಾತವಾಗಬಾರದು ಹೀಗೆ ಎಚ್ಚರಿಕೆಯಿಂದ ಒಯ್ಯಬೇಕು, ತರಬೇಕು, ಎತ್ತಬೇಕು. ಇದಕ್ಕೇನೇ ಆದಾನನಿಕ್ಷೇಪಣಸಮಿತಿ ಎಂದು ಹೇಳಲಾಗುತ್ತದೆ. ನಮ್ಮ ಅಜಾಗರೂಕತೆಯಿಂದ ಆ ಪದಾರ್ಥಗಳು ನೆಲಕ್ಕೆ ತಿಕ್ಕುವಂತೆ ಎಳೆದು ತಕ್ಕೊಳ್ಳ ಕೂಡದು ಇಂಥ ಸಂದರ್ಭದಲ್ಲಿ ಯಾವುದಾದರೂ ಜೀವದ ಘಾತವಾದೀತಲ್ಲ, ಆಗ ಕೂಡದು, ಎಂಬ ವಿಚಾರವು ಮನಸ್ಸಿನಲ್ಲಿ ಉಳಿಯುವದಕ್ಕಾಗಿ ಈ ಭಾವನೆಯನ್ನು ಚಿಂತಿಸಬೇಕು

೫ ಗೃಹಸ್ಥನು ತಾನು ಉಣ್ಣುವಾಗ ಕುಡಿಯುವಾಗ ಒಳ–ಹೊರಗಿನ ದ್ರವ್ಯ, ಕ್ಷೇತ್ರ, ಕಾಲ, ಭಾವ ಇವುಗಳ ಯೋಗ್ಯಾಯೋಗ್ಯತೆಯನ್ನೂ ತಮ್ಮ ಪ್ರಕೃತಿಯನ್ನೂ ವಿಚಾರಮಾಡಿ, ಯೋಗ್ಯವೆನಿಸುವಷ್ಟೇ ಆಹಾರವನ್ನು ಸ್ವೀಕರಿಸಬೇಕು. ಹಗಲು ಬೆಳಕಿನಲ್ಲಿ ಮೇಲಿಂದ ಮೇಲೆ ನೋಡಿ, ಸಾವಕಾಶವಾಗಿ ತುತ್ತುಗಳನ್ನು ತಕ್ಕೊಂಡು,

ಬಾಯಿಯಲ್ಲಿ ಹಾಕಿಕೊಂಡು ತಿನ್ನಬೇಕು. ಆತುರತೆಯಿಂದ ಅವಸರದಲ್ಲಿ ನೋಡದೆ ಶೋಧಿಸದೆ ಉಣ್ಣಬಾರದು. ಇದಕ್ಕೆ ಆಲೋಕಿತ ಪಾನ ಭೋಜನ ಭಾವನೆ ಎನ್ನುವರು.

ಈ ಪ್ರಕಾರ ಅಹಿಂಸಾ ಅಣುವ್ರತದ ಐದು ಭಾವನೆಗಳು ಇರುತ್ತವೆ ಇವುಗಳನ್ನು ಯಾವಾಗಲೂ ಮರೆಯಕೂಡದು.

ಸತ್ಯವ್ರತದ ಭಾವನೆ—ಕ್ರೋಧತ್ಯಾಗ, ಲೋಭತ್ಯಾಗ, ಭೀರುತ್ವತ್ಯಾಗ, ಹಾಸ್ಯತ್ಯಾಗ ಮತ್ತು ಅನುವೀಚಿ ಭಾಷಣ ಎಂದು ಸತ್ಯಾಣುವ್ರತದ ಐದು ಭಾವನೆಗಳು ಇರುತ್ತವೆ.

೧. ಸತ್ಯಾಣುವ್ರತವನ್ನು ಸ್ವೀಕರಿಸುವವರು ಸಿಟ್ಟಿಗೆ ಬರುವವನ್ನು ಮೊದಲು ತ್ಯಾಗ ಮಾಡಲಿಕ್ಕೆಬೇಕು ಯಾಕೆಂದರೆ ಸಿಟ್ಟಿನ ಭರದಲ್ಲಿ ಆಡಿದ ಮಾತು ಸತ್ಯವಾಗಿರುವದಿಲ್ಲ ಮನದಲ್ಲಿ ಕ್ರೋಧವಿಲ್ಲದಿದ್ದರೇನೇ ಸತ್ಯವ್ರತವನ್ನು ಪಾಲಿಸಲಾಗುವುದು ಕರ್ಮೋದಯದಿಂದ ಒಂದು ವೇಳೆ ಗೃಹಸ್ಥನಿಗೆ ತನ್ನ ಮನಸ್ಸಿನ ವಿರೋಧ ಕಾರಣದಿಂದಾಗಿ ಸಿಟ್ಟು ಬಂದರೆ ಆಗ ಅವನು ಹೀಗೆ ವಿಚಾರಿಸಬೇಕು—"ಈಗ ನನ್ನ ಮನಸ್ಸಿನಲ್ಲಿ ಸಿಟ್ಟಿನಿಂದ ಉದ್ಭವಿಸಿದ ವಿಚಾರ ತರಂಗಗಳು ಇವೆ ನನ್ನಕ್ಕೆ ನಾನು ಮೌನ ಧರಿಸುವುದು ಯೋಗ್ಯವಾಗಿದೆ. ಈಗ ಹೆಚ್ಚಿಗೆ ಮಾತನಾಡುವದರಿಂದ ಕಷಾಯ ಹಾಗೂ ವಿಸಂವಾದ (ಸುಳ್ಳುವಾದವಿವಾದ) ಬೆಳೆಯುತ್ತವೆ. ಕ್ಷಮಾ ಗುಣವು ನಷ್ಟವಾಗುತ್ತದೆ. ಆದರಿಂದ ಎಲ್ಲಿಯವರೆಗೆ ಸಿಟ್ಟಿನ ಬೆಂಕಿಯು ಆರಿಹೋಗುವದಿಲ್ಲವೋ ಅಲ್ಲಿಯ ವರೆಗೆ ಮಾತನಾಡದೆ ಇರುವುದೇ ಯೋಗ್ಯವು" ಹೀಗೆ ಯಾರ ಮನಸ್ಸಿನಲ್ಲಿ ವಿಚಾರಗಳು ಹುಟ್ಟುತ್ತವೆಯೋ ಅವರು ಕ್ರೋಧತ್ಯಾಗ ಭಾವನೆಯನ್ನು ಪಾಲಿಸಿದಂತಾಗುತ್ತದೆ

೨. ಲೋಭವಿದ್ದರೆ ಸತ್ಯವ್ರತವನ್ನು ಪಾಲಿಸಲಿಕ್ಕೆ ಆಗುವದಿಲ್ಲ ಅದಕ್ಕಾಗಿ ಅನ್ಯಾಯವಾಗಿ ಮನಸ್ಸಿನಲ್ಲಿ ಲೋಭದ ಆಶೆಯು ಹುಟ್ಟದಂತೆ ನೋಡಿಕೊಳ್ಳಬೇಕು. ನಾವು ಸತ್ಯವ್ರತಿಗಳಾದುದರಿಂದ ಸುಳ್ಳು ಮಾತನಾಡಿ ಯಾರ ಹಾನಿಯನ್ನು ಮಾಡಿರುವದಿಲ್ಲ. ಅಂದ ಮೇಲೆ ನಮಗೆ ಹಾನಿಯನ್ನು ಮಾಡಲಿಕ್ಕೆ ಯಾರಿಗೆ ಸಾಧ್ಯವಿದೆ? ನಮಗೆ ಯಾರ ಹೆದರಿಕೆಯೂ ಇಲ್ಲ. ಇದು ಲೋಭ ತ್ಯಾಗ ಭಾವನೆಯಾಗಿದೆ

೩. ಹೆದರಿಕೆಯು ಯಾರಲ್ಲಿ ಉತ್ಪನ್ನವಾಗಿರುವುದೋ ಅವರಿಂದ ಸತ್ಯವ್ರತವನ್ನು ಪಾಲಿಸಲಿಕ್ಕೆ ಆಗುವದಿಲ್ಲ. ಅಂತಲೇ ಭಯ ತ್ಯಾಗ ಭಾವನೆಯನ್ನು ಇಟ್ಟುಕೊಳ್ಳಬೇಕು. ಅದರಿಂದ ನಿರ್ಭಯತೆಯು ಪ್ರಾಪ್ತವಾಗುತ್ತದೆ.

೪ ವಿನೋದದಲ್ಲಿ ನಿಜವನ್ನು ನುಡಿಯಲಾಗುವದಿಲ್ಲ ಅದರಿಂದ ಇನ್ನೊಬ್ಬರ ಹಾಸ್ಯ ಮಾಡಕೂಡದು.

೫ ಜಿನಸೂತ್ರಗಳಿಗೆ ವಿರುದ್ಧವಾಗಿ ಮಾತನಾಡಕೂಡದು. ಜಿನಸೂತ್ರಗಳಿಗೆ ಅನುಸರಿಸಿಯೇ ಮಾತನಾಡುವ ಭಾವನೆಯನ್ನು ಯಾವಾಗಲೂ ಮನಸ್ಸಿನಲ್ಲಿಡುವುದು ಅನುವೀಚಿ ಭಾವನೆಯೆನಿಸುವುದು

ಭಾವಾರ್ಥ—ಸತ್ಯವ್ರತ ಪಾಲಿಸಬೇಕೆನ್ನುವವರು ಕ್ರೋಧ ಉತ್ಪನ್ನವಾಗುವ ಕಾರಣಗಳಿಂದಲೂ ಪ್ರಸಂಗಗಳಿಂದಲೂ ದೂರವಿದ್ದಾರು. ಯಾವ ಲೋಭದಿಂದ ಅನೇಕ ಪ್ರಕಾರದ ಅಸತ್ಯದ ಪ್ರವೃತ್ತಿಯಾಗುವುದೋ ಆ ಲೋಭವನ್ನೂ ತ್ಯಾಗ ಮಾಡಿಯಾರು. ಜನತೆಯ ವಿರುದ್ಧ ಸತ್ಯ ಮಾತನಾಡುವುದರಿಂದ ತನ್ನ ಶರೀರ ಮತ್ತು ಧನದ ನಾಶವಾದೀತು ಎಂದು ಹೆದರಲಾರನು. ಸತ್ಯವಾದಿತ್ವವನ್ನು ಸ್ಥಿರವಾಗಿ ಇಟ್ಟುಕೊಳ್ಳಬೇಕೆನ್ನುವವನು ಅನ್ಯರ ಹಾಸ್ಯ ಮಾಡಲಾರನು. ಅಲ್ಲದೆ ಜಿನಸೂತ್ರಗಳಿಗೆ ವಿರುದ್ಧವಾಗಿ ಎಂದೂ ಮಾತನಾಡಲಾರನು.

ಅಚೌರ್ಯ ವ್ರತದ ಭಾವನೆ—ಶೂನ್ಯಾಗಾರನಿವಾಸ, ವಿಮೋಚಿತಾವಾಸ, ಪರೋಪರೋಧಾಕರಣ, ಭೈಕ್ಷ್ಯಶುದ್ಧಿ ಮತ್ತು ಸಧರ್ಮಾವಿಸಂವಾದ ಎಂದು ಅಚೌರ್ಯಾಣುವ್ರತದ ಐದು ಭಾವನೆಗಳು ಇರುತ್ತವೆ ಅಚೌರ್ಯ ವ್ರತವನ್ನು ಸ್ವೀಕರಿಸುವ ಗೃಹಸ್ಥರು ಇವುಗಳನ್ನು ಯಾವಾಗಲೂ ಚಿಂತಿಸುತ್ತಿರಬೇಕು

೧ ವ್ಯಸನಿಗಳು, ದುಷ್ಟರು, ಕಲಹ ಪ್ರಿಯರಾದ ಮನುಷ್ಯರು ಎಲ್ಲಿ ಬರಲಾರರೋ ಅಲ್ಲಿ ತಮ್ಮ ನಿವಾಸ ಸ್ಥಾನವು ಇರಬೇಕು. ಈ ವಿಚಾರವನ್ನು ಮನಸ್ಸಿನಲ್ಲಿ ಇಡುವದಕ್ಕೆ ಶೂನ್ಯಾಗಾರ ನಿವಾಸ ಭಾವನೆಯೆನ್ನುತ್ತಾರೆ. ಯಾಕೆಂದರೆ ಆ ಜನರ ಸಹವಾಸದಿಂದ ಪರಿಣಾಮದ ಶುದ್ಧತೆಯು ಇಲ್ಲದಂತಾಗುತ್ತದೆ. ದುರ್ಧ್ಯಾನವು ಪ್ರಕಟವಾಗುತ್ತದೆ ಅಂತಲೇ ಜನ ಶೂನ್ಯವಾದ ಮನೆಯಲ್ಲಿರುವುದು ಯೋಗ್ಯವಾಗಿದೆ.

೨ ಯಾವ ಮನೆಯಲ್ಲಿ ಪರಸ್ಪರ ಜಗಳವು ಉತ್ಪನ್ನವಾಗುವದಿಲ್ಲವೋ ಅಲ್ಲಿ ವಾಸಿಸುವದಕ್ಕೆ ವಿಮೋಚಿತಾವಾಸ ಭಾವನೆ ಎನ್ನುವರು.

೩ ಅನ್ಯರ ಮನೆಯಲ್ಲಿ ಹೊಕ್ಕು, ಬಲಾತ್ಕಾರದಿಂದ ಇರುವ ವಿಚಾರವನ್ನು ಮಾಡದೆ ಇರುವದಕ್ಕೆ ಪರೋಪರೋಧಾಕರಣ ಭಾವನೆ ಎನ್ನುವರು

೪ ಅನ್ಯಾಯ ಮತ್ತು ಅಭಕ್ಷ್ಯಗಳನ್ನು ತ್ಯಾಗಮಾಡಿ, ಭೋಗಾಂತರಾಯದ ಕ್ಷಯೋಪಶಮಕ್ಕನುಸರಿಸಿ ಲಭಿಸುವಂಥ-ಸರಸವಾಗಿರಲಿ ನೀರಸವಾಗಿರಲಿ-ಆಹಾರದಲ್ಲಿಯೇ ಸಂತೋಷದಿಂದ ಇದ್ದು, ಅದನ್ನೇ ಸ್ವೀಕರಿಸುವದಕ್ಕೆ ಭೈಕ್ಷ್ಯಶುದ್ಧಿ ಭಾವನೆ ಎನ್ನುವರು

೫ ಸಮಾನ ಧರ್ಮಿಯರಾದ ಪುರುಷರಲ್ಲಿ ವಾದವಿವಾದವನ್ನು ಮಾಡದ ಇರುವುದು ಸಧರ್ಮಾ-ವಿಸಂವಾದ ಭಾವನೆ ಎನಿಸುವುದು

**ಬ್ರಹ್ಮಚರ್ಯ ವ್ರತದ ಭಾವನೆ.** ಸ್ತ್ರೀರಾಗಕಥಾಶ್ರವಣತ್ಯಾಗ, ಸ್ತ್ರೀಯರ ಮನೋಹರವಾದ ಅಂಗಗಳನ್ನು ನಿರೀಕ್ಷಿಸದಿರುವುದು, ಮೊದಲು ಭೋಗಿಸಿದ ಭೋಗಗಳನ್ನು ನೆನಿಸುವದನ್ನು ಬಿಡುವುದು, ಪೌಷ್ಟಿಕ ಆಹಾರ, ಇಂದ್ರಿಯಗಳಲ್ಲಿ ಮದವು ಉತ್ಪನ್ನವಾಗುವಂಥ ಅನ್ನ ಇವುಗಳನ್ನು ತ್ಯಜಿಸುವದು, ತಮ್ಮ ಶರೀರವನ್ನು ಅಲಂಕರಿಸದಿರುವುದು-ಇವು ಬ್ರಹ್ಮಚರ್ಯವ್ರತದ ಭಾವನೆಗಳಾಗಿವೆ

೧ ಇತರ ಸ್ತ್ರೀಯರೊಡನೆ ರಾಗಭಾವನೆಯು ಉತ್ಪನ್ನವಾಗುವಂತೆ ಮಾತನಾಡುವದನ್ನೂ ಕೇಳುವದನ್ನೂ ತ್ಯಾಗ ಮಾಡಬೇಕು

೨ ಇತರ ಸ್ತ್ರೀಯರ ಅವಯವಗಳ ಕಡೆಗೆ ಹಾಗೂ ಮುಖದ ಕಡೆಗೆ ರಾಗಭಾವನೆಯಿಂದ ನೋಡುವದನ್ನು ತ್ಯಜಿಸುವುದು

೩ ವ್ರತವನ್ನು ಸ್ವೀಕರಿಸದಿದ್ದಾಗ ಯಾವ ವಿಷಯದ ಉಪಭೋಗವನ್ನು ಮಾಡಿಕ್ಕೊಂಡ ಅದನ್ನು ಅಣುವ್ರತವನ್ನು ಧಾರಣ ಮಾಡಿದ ಮೇಲೆ ಸ್ಮರಿಸಬಾರದು

೪. ಪೌಷ್ಟಿಕ ಹಾಗೂ ಕಾಮೋದ್ದೀಪಕ ಪದಾರ್ಥಗಳನ್ನು ಉಣ್ಣಬಾರದು

೫ ತನ್ನ ಶರೀರದ ಮೇಲೆ ಹೂವಿನ ಹಾರ, ಸುಂದರ ಅರಿವೆ, ಕಾಮವಿಕಾರವನ್ನು ಉತ್ಪನ್ನ ಮಾಡುವ ಅಲಂಕಾರ ಮೊದಲಾದವುಗಳನ್ನು ಹಾಕಿಕೊಂಡು, ಸುಂದರಗೊಳಿಸಿಕೊಳ್ಳಬಾರದು

**ಪರಿಗ್ರಹ ಪ್ರಮಾಣದ ಭಾವನೆ**—ಪರಿಗ್ರಹ ಪ್ರಮಾಣ ಅಣುವ್ರತವನ್ನು ಧಾರಣ ಮಾಡುವಂಥವರು ಕೆಳಗಿನ ಭಾವನೆಗಳನ್ನು ಸ್ವೀಕರಿಸಬೇಕು

೧ ಪಾಪ ಬಂಧಕ್ಕೆ ಕಾರಣವಾದಂಥ ಅನ್ಯಾಯ ಅಭಕ್ಷ್ಯಗಳನ್ನು ಜೀವವಿರುವ ವರೆಗೂ ತ್ಯಾಗ ಮಾಡಬೇಕು

೨ ತಮ್ಮ ಅಂತರಾಯ ಕರ್ಮದ ಕ್ಷಯೋಪಶಮಕ್ಕೆ ಅನುಸರಿಸಿ ದೊರೆಯುವ ಪಂಚೇಂದ್ರಿಯಗಳ ವಿಷಯದಲ್ಲಿ ಸಂತೋಷಗೊಂಡಿರಬೇಕು

೩ ತಮಗೆ ಸೇರುವ ವಸ್ತುಗಳ ಮೇಲೆ ಅತಿಶಯವಾಗಿ ಪ್ರೀತಿಸುವದನ್ನು ಬಿಡಬೇಕು

೪ ಅಪ್ರಿಯ ವಸ್ತುಗಳ ವಿಷಯದಲ್ಲಿ ದ್ವೇಷವು ಉತ್ಪನ್ನವಾಗದಂತೆ ಎಚ್ಚರಿಕೆಯನ್ನು ತಕ್ಕೊಳ್ಳಬೇಕು

೫ ಅನ್ಯ ಜೀವಗಳಿಗೆ ಸುಂದರವಾದ ವಿಷಯೋಪಭೋಗವು ಲಭಿಸುತ್ತಿದೆಯಲ್ಲ! ಅದರಂತೆ ತನಗೂ ಲಭಿಸಬೇಕೆಂದು ಇಚ್ಛೆಯನ್ನು ಮಾಡಬಾರದು ಈ ಪ್ರಕಾರ ಪರಿಗ್ರಹ ಪ್ರಮಾಣ ವ್ರತದ ಈ ಐದು ಭಾವನೆಗಳಿವೆ

**ಹಿಂಸಕ ಪರಿಣಾಮದ ಪರಿಣಾಮ**—ಐದೂ ಪಾಪಗಳು ಮಹಾನಿಂದ್ಯವಾಗಿವೆಯೆಂದು ಯಾವಾಗಲೂ ಚಿಂತಿಸುತ್ತಿರಬೇಕು ಈ ಐದು ಪಾಪಗಳಿಂದ ಇಹ ಲೋಕದಲ್ಲಿ ಮಹಾನ್ ದುಃಖವು ಪ್ರಾಪ್ತವಾಗಿ ನಾವು ನಾಶವನ್ನು ಹೊಂದುತ್ತೇವೆ ಪರಲೋಕದಲ್ಲಿಯೂ ಅನೇಕ ಜನ್ಮಗಳ ವರೆಗೆ ಘೋರ ದುಃಖವು ಪ್ರಾಪ್ತವಾಗುತ್ತದೆ ಇದನ್ನರಿತು ಆ ಪಂಚ ಪಾಪಗಳಿಗೆ ಹೆದರಿಕೊಂಡಿರಬೇಕು ಹಿಂಸೆಯನ್ನು ಮಾಡುವವರಿಗೆ ಯಾವಾಗಲೂ ಭಯವಿರುತ್ತದೆ ಒಬ್ಬನು ಇನ್ನೊಬ್ಬನನ್ನು ಕೊಂದರೆ ಆ ವೈರ ಸಂಸ್ಕಾರವು ಅನೇಕ ಜನ್ಮಗಳ ವರೆಗೆ ಇರುತ್ತದೆ. ಯಾವನ ಪಥೆಯು ಆಗಿರುವುದೋ ಅವನ ಸ್ತ್ರೀ, ಪುತ್ರ, ಮಿತ್ರ, ಕುಟುಂಬ ಮೊದಲಾದವರೆಲ್ಲರೂ ವೈರವನ್ನು ಸಾಧಿಸಿಕೊಳ್ಳುತ್ತಾರೆ ಪಶುವಿಗೆ ನಾವು ಕಟ್ಟಿಗೆ, ಕಲ್ಲು, ಶಸ್ತ್ರ, ಬಾರಕೋಲು ಮೊದಲಾದವುಗಳಿಂದ ಹೊಡೆಯುತ್ತೇವೆ ಆಗ ಆ ಪಶುವು ವೈರವನ್ನು ಮರೆಯುವದಿಲ್ಲ ಆನೆ, ಕುದುರೆ, ಒಂಟೆಗಳು ಸಹ ಬಹುದಿನಗಳ ವೈರವನ್ನು ಹಿಡಿದು

ನೇಡನ್ನು ತಕ್ಕೊಳ್ಳುತ್ತಾನೆ ಜಗತ್ತಿನಲ್ಲಿ ಎಲ್ಲ ಜನರೂ ಹಿಂಸಕನಿಗೆ ಪಾಪಿಯೆಂದೆನ್ನುವರು ಎಲ್ಲರ ಭರವಸೆಯೂ ಇಲ್ಲದಂತಾಗುವದು ನಾವು ಯಾರನ್ನು ಹೊಡೆಯುತ್ತೇವೆಯೋ ಅವರು ನಮ್ಮನ್ನು ಹೊಡೆದು ನೇಡನ್ನು ತಕ್ಕೊಳ್ಳುತ್ತಾರೆ. ರಾಜನ ಕಠೋರ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಕೈ, ಕಾಲು, ಕಿವಿ, ಮೂಗುಗಳನ್ನು ಕೊರೆಯಲಾಗುತ್ತದೆ. ರಾಜನು ಕೊಲೆಗಾರನ ಸರ್ವಸ್ವವನ್ನೂ ತಕ್ಕೊಂಡು ಬಿಡುವನು. ಅಪಕೀರ್ತಿಯು ಆಗುತ್ತದೆ ಕತ್ತೆಯ ಮೇಲೆ ಕೂಡುವಂಥ ಅಪಮಾನಕಾರಕ ಶಿಕ್ಷೆಯನ್ನು ಭೋಗಿಸಬೇಕಾಗುತ್ತದೆ. ಅಲ್ಲದೆ ನರಕಾದಿ ಕೆಟ್ಟಗತಿಗಳಲ್ಲಿ ಬಹುಕಾಲದ ವರೆಗೆ ಹೊಡೆತ, ಬಡೆತ, ಒದೆತ, ಕಡಿತ, ಶೂಲದ ಮೇಲೆ ಏರುವಿಕೆ, ಕೊಯ್ಯುವಿಕೆ, ವೈತರಣಿಯಲ್ಲಿ ಸ್ನಾನ ಇವೇ ಮೊದಲಾದ ದುಃಖಗಳನ್ನು ಭೋಗಿಸಬೇಕಾಗುತ್ತದೆ. ಮನುಷ್ಯ ಮತ್ತು ತಿರ್ಯಂಚ ಯೋನಿಗಳಲ್ಲಿಯೂ ಸಹ ಘೋರ ದುಃಖ, ಬಡತನ, ಅಪಮಾನಗಳನ್ನು ಭೋಗಿಸಬೇಕಾಗುತ್ತದೆ ಅಸಂಖ್ಯಾತ ಕಾಲ ಮತ್ತು ಅನಂತ ಭವಗಳ ವರೆಗೆ ಸಂಸಾರದಿಂದ ಬಿಡುಗಡೆಯಾಗುವದಿಲ್ಲ ಇನ್ನು ಕೆಲವರು ಅನ್ಯಜೀವಗಳ ವಧೆಯನ್ನು ಮಾಡಲಿಕ್ಕಿಲ್ಲ. ಆದರೆ ಅಭಿಮಾನ, ಕ್ರೋಧಗಳಿಂದ ತಮ್ಮ ಶಾರೀರಿಕ ಬಲವನ್ನು ಪ್ರಯೋಗಿಸಿ ತಿರ್ಯಂಚ, ಮನುಷ್ಯ, ಬಾಲಕ, ಸ್ತ್ರೀ ಮೊದಲಾದವರಿಗೆ ಹೊಡೆಯಬಹುದು, ಒದೆಯಬಹುದು. ಇಂಥವರೂ ಸಹ ಈ ಜನ್ಮದಲ್ಲಿ ಕ್ರೂರ ರಾಕ್ಷಸರಿಗೆ ಸಮಾನವಾದ ಪ್ರಾಣಿಗಳೆನಿಸಿಕೊಳ್ಳುತ್ತಾರೆ ನಿರ್ದಯ ಭಾವದಿಂದ ಘೋರ ಆರಂಭಾದಿಗಳನ್ನು ಮಾಡಿ ವಿಕಲತ್ರಯ ಜೀವಗಳನ್ನು ಕೆಲವರು ಘಾತಿಸುತ್ತಾರೆ ಅಲ್ಲದೆ ಪ್ರಯೋಜನ ಇಲ್ಲದೆ ಗಿಡ, ವನಸ್ಪತಿ ಮೊದಲಾದವುಗಳನ್ನು ಕಡಿಯುತ್ತಾರೆ. ಪೃಥ್ವಿ, ಜಲ, ಅಗ್ನಿಕಾಯ ಜೀವಗಳನ್ನು ಅಜ್ಞಾನದಿಂದ ಅಥವಾ ಪ್ರಮಾದದಿಂದ ಹಿಂಸಿಸುತ್ತಾರೆ ಇಂಥವರಿಗೆ ಇಹಲೋಕದಲ್ಲಿ ಜ್ವರ, ಸನ್ನಿಪಾತ, ಆಮಾಂಶ, ಸಂಧಿವಾತ, ಅರ್ಧಾಂಗವಾಯು, ಸಂಗ್ರಹಣಿ, ಅತಿಸಾರ, ವಾತ, ಪಿತ್ತ, ಕಫ, ಶ್ವಾಸ, ಕೆಮ್ಮು, ಬಿರುಪ್ರ, ಕಜ್ಜಿ ಮೊದಲಾದ ರೋಗಗಳಿಂದ ಘೋರ ದುಃಖವು ಪ್ರಾಪ್ತವಾಗುತ್ತದೆ. ಒಟ್ಟಿನ ಮೇಲೆ ಹಿಂಸೆಯಿಂದ ಇಹಲೋಕದಲ್ಲಿ ಭಯಂಕರ ದುಃಖವು ಪ್ರಾಪ್ತವಾಗುತ್ತದೆ ಇದನ್ನರಿತು ಹಿಂಸೆಯನ್ನು ಸಂಪೂರ್ಣವಾಗಿ ತ್ಯಾಗಮಾಡಬೇಕು

**ಅಹಿಂಸೆಯ ಮಹಿಮೆ**—ಜೀವ ದಯೆಯಿಂದ ಯಾರ ಅಂತಃಕರಣವು ಮೃದುವಾಗಿರುವುದೋ ಅವರು ಎಲ್ಲ ಜೀವಗಳಿಗೂ ಅಭಯದಾನವನ್ನೇ ಕೊಡುವರು ಅಹಿಂಸಕನು ತನ್ನ ಪರಿಣಾಮದಿಂದ ಯಾವ ಜೀವದ ನಾಶವನ್ನೂ ಮಾಡಲಿಕ್ಕೆ ಇಚ್ಛಿಸುವದಿಲ್ಲ. ಅಲ್ಲದೆ ಹಿಂಸೆಯಾಗಬಾರದೆಂದು ಬಹು ಎಚ್ಚರಿಕೆಯಿಂದ ಪ್ರಯತ್ನ ಪೂರ್ವಕವಾಗಿ ತನ್ನ ಕ್ರಿಯೆಗಳನ್ನು ಮಾಡುತ್ತಾನೆ. ಅಹಿಂಸಾಧರ್ಮವನ್ನು ಎಂದೂ ಮರೆಯುವಂತಿಲ್ಲ. ಇಂಥವರ ಮಹಿಮೆಯನ್ನು ಇಹಲೋಕದಲ್ಲಿ ದೇವತೆಗಳೂ ಸಹ ಎತ್ತಿ ತೋರಿಸುತ್ತಾರೆ. ಇವರು ಎಲ್ಲರಿಗೂ ಪೂಜ್ಯರೆನಿಸುತ್ತಾರೆ. ಎಲ್ಲ ಪಾಪದಿಂದ ಮುಕ್ತರಾಗಿ ಸ್ವರ್ಗಲೋಕದಲ್ಲಿ ಮಹರ್ಧಿಕ ದೇವರಾಗುತ್ತಾರೆ ಅಲ್ಲಿಂದ ಮನುಷ್ಯ ಲೋಕದಲ್ಲಿ ಇಲ್ಲವೆ ವಿದೇಹ ಮೊದಲಾದ ಉತ್ತಮ ಕ್ಷೇತ್ರಗಳಲ್ಲಿ ಮಹಾಪ್ರಭಾವಶಾಲಿಯಾದ ಪುಣ್ಯ ಪುರುಷರಾಗಿ ಹುಟ್ಟಿ ಕ್ರಮದಿಂದ ನಿರ್ವಾಣವನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ.

**ಅಸತ್ಯದ ಪರಿಣಾಮ**—ಸುಳ್ಳು ಮಾತನಾಡುವುದರಿಂದ ಅನೇಕ ದೋಷಗಳು ಸಂಭವಿಸುತ್ತವೆ. ಅಸತ್ಯ ಭಾಷಣ ಮಾಡುವವರ ಮೇಲೆ ಯಾರ ವಿಶ್ವಾಸವೂ ಕೂಡುವದಿಲ್ಲ ಎರಡನೆಯವರಿಗಂತೂ ಇರಲಿ ಆದರೆ ಪ್ರತ್ಯಕ್ಷ ಅವನ ತಾಯಿ, ತಂದೆ, ಮಗ, ಮಿತ್ರ, ಹೆಂಡತಿ ಇವರಿಗೂ ಕೂಡ ವಿಶ್ವಾಸವಿಡುವದಿಲ್ಲ ಅಂದಮೇಲೆ ಎರಡನೆಯವರಿಗೆ ಇಲ್ಲದಿರುವುದರಲ್ಲಿ ಆಶ್ಚರ್ಯವೇನು? ಜಗತ್ತಿನೊಳಗಿನ ಎಲ್ಲ ವ್ಯವಹಾರಗಳು ವಚನವನ್ನು ಅವಲಂಬಿಸಿ ನಡೆಯುತ್ತವೆ ಅಂದ ಮೇಲೆ ನಾವು ಅದನ್ನೇ ಕಾಪಾಡದಿದ್ದರೆ ನಮ್ಮ ಎಲ್ಲ ವ್ಯವಹಾರದಲ್ಲಿಯೂ ಅವಿಶ್ವಾಸವು ಉತ್ಪನ್ನವಾಗುತ್ತದೆ. ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳೆಂಬ ಈ ನಾಲ್ಕೂ ಪುರುಷಾರ್ಥಗಳೂ ವಚನವನ್ನೇ ಅವಲಂಬಿಸಿವೆ ಈ ಮೂಲಾಧಾರವನ್ನೇ ಪಾಲಿಸಲಾಗದಿದ್ದರೆ ಉನ್ನತಿಯ ತಳಹದಿಯೇ ಇಲ್ಲದಂತಾಗುತ್ತದೆ. ಅಸತ್ಯವಾದಿಯಾದ ಮನುಷ್ಯನು ಎಲ್ಲರಿಗೂ ಅಪ್ರಿಯನಾಗಿರುತ್ತಾನೆ ಅವನು ಬಹಳ ಕಪಟಿಯಾಗಿರುತ್ತಾನೆ. ಅಸತ್ಯ ಹಾಗೂ ಕಪಟಗಳಲ್ಲಿ ಅವಿನಾಭಾವಿಯಾದ ಸಂಬಂಧವು ಇರುತ್ತದೆ. ಅಂದರೆ ಅಸತ್ಯವಿದ್ದಲ್ಲಿ ಕಪಟವು ಇದ್ದೇ ಇರುತ್ತದೆ. ಅವು ಒಂದನ್ನೊಂದುಳಿದು ಎಂದೂ ಇರುವದಿಲ್ಲ ಸುಳ್ಳು ಮಾತಾಡುವಿಕೆ, ದೂರು ಹೇಳುವಿಕೆ, ಕೆಟ್ಟ ಕಥೆಗಳನ್ನು ಹೇಳುವಿಕೆ, ತನ್ನನ್ನು ಹೊಗಳಿಕೊಳ್ಳುವಿಕೆ, ಪರನಿಂದೆಯನ್ನು ಮಾಡುವಿಕೆ ಇವೆಲ್ಲವೂ ಅಸತ್ಯದ ಪರಿವಾರಗಳಾಗಿವೆ ಸುಳ್ಳು ಮಾತನಾಡುವ ಮನುಷ್ಯನಿಗೆ ಈ ಲೋಕದಲ್ಲಿಯೂ ಸಹ ನಾಲಿಗೆ ಕತ್ತರಿಸುವುದು.

ಅವನ ಸರ್ವಸ್ವವು ಹರಣವಾಗುವದು ನಾಲಿಗೆಯ ಬೇನೆಗಳಂಥ ಅನೇಕ ವಿಕಾರಗಳು ಉಂಟಾಗಿ ದುಃಖವು ಪ್ರಾಪ್ತವಾಗುತ್ತದೆ ಅನೇಕ ಅಪವಾದಗಳು ಬರುತ್ತವೆ ಇನ್ನು ಪರಲೋಕದಲ್ಲಿ ನರಕಾದಿ ಗತಿಗಳಲ್ಲಿ ಸುತ್ತಾಡುವಿಕೆ, ತಿರ್ಯಂಚ ಗತಿಯಲ್ಲಿ ಮಾತಿನ ಶಕ್ತಿಯೇ ಇಲ್ಲದಿರುವಿಕೆ, ಮಾನವನಾಗಿಯೂ ಮೂಕನಾಗುವಿಕೆ, ಕಿವುಡನಾಗುವಿಕೆ, ಕುರುಡ, ದರಿದ್ರನಾಗುವಿಕೆ ಇವೆಲ್ಲವೂ ಪ್ರಾಪ್ತವಾಗುತ್ತವೆ ಅದರಿಂದ ಸುಳ್ಳು ಮಾತನಾಡುವದನ್ನು ತ್ಯಾಗಮಾಡಬೇಕು.

ಸತ್ಯವಚನದ ಪ್ರಭಾವ—ಸತ್ಯ ಭಾಷಣದ ಪ್ರಭಾವದಿಂದ ಸ್ವರ್ಗದಲ್ಲಿ ಮಹರ್ದ್ಧಿಕ ದೇವನಾಗುವ ಜನ್ಮವು ಲಭಿಸುತ್ತದೆ ಸತ್ಯ ವಚನಕ್ಕೆ ಜಗತ್ತಿನಲ್ಲಿ ಎಲ್ಲೆಡೆಗೂ ಮನ್ನಣೆಯಿದೆ ಸತ್ಯವಾದಿ ಮನುಷ್ಯನು ಸಂಪೂರ್ಣ ಶಾಸ್ತ್ರದ ಪಾರಗಾಮಿಯಾಗುವನು ಅವನು ಕವಿಯೂ ಮಾತುಗಾರನೂ ಆಗಿ, ಅನೇಕ ಜೀವಗಳ ಮೇಲೆ ತನ್ನ ಭಾಷಣದ ಪ್ರಭಾವದಿಂದ ಉಪಕಾರ ಮಾಡುವಂಥವನಾಗುತ್ತಾನೆ ಸತ್ಯ ವಚನದಿಂದ ನಾವಿರಾರು-ಅಲ್ಲ-ಲಕ್ಷಾವಧಿ ಜನರು ಅವನ ಅನುಯಾಯಿಗಳಾಗುತ್ತಾರೆ ಯಾರು ತಮ್ಮ ವಚನಗಳನ್ನು ನಿರ್ಮಲವಾಗಿ ಇಟ್ಟುಕೊಂಡಿರುವರೋ ಅವರ ಭಾಷಣವನ್ನು ಕೇಳಲಿಕ್ಕೆ ಸಜ್ಜನರು ಆತುರಗೊಂಡಿರುತ್ತಾರೆ.

ಕಳ್ಳತನದ ದೋಷ—ಕಳ್ಳನು ಎಲ್ಲರ ಮನಸ್ಸಿನಲ್ಲಿಯೂ ಹೆದರಿಕೆಯನ್ನು ಉಂಟುಮಾಡುತ್ತಾನೆ ಅವನ ತಾಯಿಗೂ ಕೂಡ ಹೆದರಿಕೆ ಎನಿಸುತ್ತದೆ. ಹಿತಮಿತ್ರ, ಬಾಂಧವ ಮೊದಲಾದವರಾರೂ ಕಳ್ಳ ಮನುಷ್ಯನ ಸಂಬಂಧವನ್ನು ಇಟ್ಟುಕೊಳ್ಳುವದಿಲ್ಲ. ಕಳ್ಳನ ಸಂಗತಿಯಿಂದ ನಮಗೆ ಕಲಂಕ ತಟ್ಟೀತು, ರಾಜ್ಯಾಧಿಕಾರಿಗಳಿಂದ ನಮಗೆ ಏನಾದರೂ ಸಂಕಟ ಉತ್ಪನ್ನವಾದೀತು, ಅವನು ನಮ್ಮದೇ ಏನಾದರೂ ಕದ್ದಾನು ಇವೇ ಮೊದಲಾದ ಭೀತಿಗಳು ಮನಸ್ಸಿನೊಳಗಿಂದ ಇಲ್ಲದಂತೆ ಆಗುವದಿಲ್ಲ ಕಳ್ಳನು ಎಲ್ಲರಲ್ಲಿಯೂ ನೀಚನೆನಿಸಿದ್ದಾನೆ ಅವನ ಸಲುವಾಗಿ ಯಾರಿಗೂ ದಯೆ ಎನಿಸುವದಿಲ್ಲ ಸುಳ್ಳು, ಮೋಸ, ಹಟ ಮೊದಲಾದ ದುರ್ಗುಣಗಳು ಕಳ್ಳನಲ್ಲಿ ತುಂಬಿರುತ್ತವೆ ಕಳ್ಳನು ಪಾಪಿಗಳಲ್ಲಿ ಮಹಾಪಾಪಿಯು ಅವನಿಗೆ ಯಾರೂ ಸಹಾಯಕ್ಕೆ ಬರುವದಿಲ್ಲ ತಾಯಿ, ತಂದೆ, ಅಣ್ಣ-ತಮ್ಮಂದಿರು, ಮಕ್ಕಳು, ಹೆಂಡತಿ ಇವರೇ ಮೊದಲಾದ ಮನೆಯವರೂ ಸಹ ಅವನ ನೆರವಿಗೆ ಬರಲಾರರು ಕಳ್ಳರ ಮಾನವು ಇಲ್ಲದಂತೆ ಆಗುತ್ತದೆ ಅವರನ್ನು ಯಾರೂ ಸಮೀಪಕ್ಕೆ ಬರಗೊಡುವದಿಲ್ಲ ಅಕಸ್ಮಾತ್ತಾಗಿ ಯಾವುದಾದರೊಂದು ನಿಮಿತ್ತದಿಂದ ಕಳ್ಳನು ಮನೆಯಲ್ಲಿ ಸೇರಿದರೆ ಅವನನ್ನು ಹೊಡೆದು ಬಡೆದು ಹೊರಗೆ ಹಾಕುವರು. ರಾಜನೂ ಕೂಡ ಅವನನ್ನು ಹಿಡಿದು, ಒದ್ದು, ಹೊಡೆದು ಬಡೆದು, ಕೈ ಮೂಗುಗಳನ್ನು ಕೊರೆದು, ತೀವ್ರವಾದ ದಂಡನೆಯನ್ನು ಮಾಡುವನು. ಸೆರೆಮನೆಯಲ್ಲಿ ಬಹುದಿನ ಇರುವುದರಿಂದ ಅವನ ಅಸ್ತಿತ್ವವೂ ಇಲ್ಲದಂತಾಗುತ್ತದೆ. ಸತ್ತ ಮೇಲೆಯೂ ಕೂಡ ಅವನಿಗೆ ನರಕದೊಳಗಿನ ಘೋರವೇದನೆಯನ್ನು ಅಸಂಖ್ಯಾತ ಕಾಲದ ವರೆಗೆ ಭೋಗಿಸ-ಬೇಕಾಗುತ್ತದೆ ಅನಂತ ಕಾಲದವರೆಗೆ ತಿರ್ಯಂಚ ಯೋನಿಯಲ್ಲಿ ಹಸಿವು, ನೀರಡಿಕೆ, ಪೆಟ್ಟು, ಗುದ್ದು ಮೊದಲಾದ ದುಃಖಗಳನ್ನು ಸಹನ ಮಾಡಬೇಕಾಗುತ್ತದೆ ಅಪ್ಪಿ ತಪ್ಪಿ ಮಾನವ ಜನ್ಮದಲ್ಲಿ ಜನಿಸಿದರೂ ನೀಚ ಕುಲದಲ್ಲಿ ಹುಟ್ಟಬೇಕಾಗುತ್ತದೆ. ಅಲ್ಲಿ ಬಡತನ, ಬೇನೆ, ಹಸಿವು, ಬಾಯರಿಕೆ, ಅಗಲುವಿಕೆ ಇವೇ ಮೊದಲಾದ ದುಃಖಗಳು ಪ್ರಾಪ್ತವಾಗುತ್ತವೆ. ಮೇಲಿಂದ ಮೇಲೆ ಯಾಚನೆಯ ವೇದನೆಯನ್ನೂ ಅಪಮಾನವನ್ನೂ ಸಹನ ಮಾಡಬೇಕಾಗುತ್ತದೆ. ಅದಕ್ಕಾಗಿ ಕಳವು ಮಾಡುವದನ್ನು ಪೂರ್ಣವಾಗಿ ತ್ಯಾಗಮಾಡಬೇಕು ತಮ್ಮ ಪುಣ್ಯ-ಪಾಪಗಳಿಗೆ ಅನುಸರಿಸಿ ಎಷ್ಟು ದೊರಕೀತೋ ಅದರಲ್ಲಿಯೇ ಸಂತೋಷವನ್ನು ಹೊಂದಿರಬೇಕು ಎರಡನೆಯವರ ಧನವನ್ನು ಕನಸಿನಲ್ಲಿಯೂ ಸಹ ಇಚ್ಛಿಸಬಾರದು ಪುಣ್ಯವಿಲ್ಲದೆ ದ್ರವ್ಯವು ಪ್ರಾಪ್ತವಾಗಲಾರದು. ಪೂರ್ವ ಜನ್ಮದಲ್ಲಿ ಕುಪಾತ್ರದಾನ, ಕುತಪಶ್ಚರಣ ಮಾಡಿರುವುದರಿಂದ ಧನವು ಒಂದು ವೇಳೆ ಪ್ರಾಪ್ತವಾಗಿದ್ದರೂ ಅದರ ಉಪಭೋಗವನ್ನು ತೀರ ಕಡಿಮೆ ವೇಳೆಯ ವರೆಗೆ ಮಾತ್ರ ತಕ್ಕೊಳ್ಳಲಿಕ್ಕೆ ದೊರೆಯುತ್ತದೆ ಕೊನೆಗೆ ದುಃಖವನ್ನು ಭೋಗಿಸಿ, ದುರ್ಗತಿಗೆ ಹೋಗಬೇಕಾಗುತ್ತದೆ. ಯಾರಿಗೆ ಪರಧನದ ಇಚ್ಛೆಯು ಇಲ್ಲವೋ ಮತ್ತು ತಮ್ಮ ಪುಣ್ಯಕ್ಕೆ ಅನುಸರಿಸಿ ಎಷ್ಟು ಲಭಿಸೀತೋ ಅಷ್ಟರಲ್ಲಿ ಸಂತೋಷವಾಗಿದ್ದು, ಅನ್ಯಾಯದಿಂದ ಧನವನ್ನು ಸಂಪಾದಿಸುವದರಲ್ಲಿ ತಮ್ಮ ಚಿತ್ತವನ್ನು ಚಂಚಲ ಮಾಡಿಕೊಳ್ಳುವ ದಿಲ್ಲವೋ ಅವರಿಗೆ ಇಹಲೋಕದಲ್ಲಿ ಕೀರ್ತಿಯು ಲಭಿಸುತ್ತದೆ ಮಾನಮರ್ಯಾದೆಗಳು ಹೆಚ್ಚುತ್ತವೆ ಪತ್ತು ಬೆಳೆಯುತ್ತದೆ. ಪರಧನವನ್ನು ಸ್ವೀಕರಿಸುವ ಇಚ್ಛೆ ಇಲ್ಲದವರಿಗೆ ತಾನು ಗಳಿಸಿದ ಧನದಲ್ಲಿಯೂ ಕೂಡ ಅಭಿಮಾನ-ವಿರುವದಿಲ್ಲ ಅದರಿಂದ ಅವರಿಗೆ ಯಾವುದರ ದುಃಖವೂ ಆಗುವದಿಲ್ಲ. ಅಶುಭ ಕರ್ಮದ ಬಂಧವೂ ಆಗುವದಿಲ್ಲ ಪರಲೋಕದಲ್ಲಿಯೂ ಸಹ ದೇವಲೋಕದ ಅಪ್ರಮಾಣ ವಿಭೂತಿಮತ್ತೆಯನ್ನು ಅಸಂಖ್ಯಾತ ಕಾಲದ ವರೆಗೆ

ಭೋಗಿಸಲಿಕ್ಕೆ ದೊರೆಯುತ್ತದೆ ಅಲ್ಲಿಂದ ಪುನಃ ಮಾನವ ಜನ್ಮದಲ್ಲಿ ರಾಜಾಧಿರಾಜ, ಮಂಡಲೇಶ್ವರ, ಚಕ್ರವರ್ತಿಗಳ ವೈಭವವು ಪ್ರಾಪ್ತವಾಗುತ್ತದೆ ಕ್ರಮದಿಂದ ಮುಕ್ತಿಯೂ ಲಭಿಸುತ್ತದೆ ಅದಕ್ಕಾಗಿ ಭಗವಾನ್ ವೀತರಾಗನ ಧರ್ಮವನ್ನು ಸ್ವೀಕರಿಸಿ, ಅನ್ಯಾಯದಿಂದ ಧನವನ್ನು ಎತ್ತಿ ಹಾಕುವದನ್ನು ಸಂಪೂರ್ಣವಾಗಿ ತ್ಯಾಗ ಮಾಡಬೇಕು.

ಪರಸ್ತ್ರೀ ತ್ಯಾಗ—ವ್ಯಭಿಚಾರಿ ಪುರುಷನು ಕಾಮಮದದಿಂದ ಉನ್ಮತ್ತನಾಗಿ ಮದವೇರಿದ ಆನೆಯ ಹಾಗೆ ಅವಿಚಾರಿಯಾಗುತ್ತಾನೆ. ಸ್ತ್ರೀಯ ಮೇಲಿನ ಪ್ರೇಮದಿಂದ ಹುಚ್ಚನಾಗಿರುವದರಿಂದ ಇಹ ಪರಲೋಕದ ವಿಚಾರವು ಅವನಿಗೆ ಇರುವದಿಲ್ಲ ಭಕ್ಷ್ಯಾಭಕ್ಷ್ಯ ಮತ್ತು ಯೋಗ್ಯಾಯೋಗ್ಯ ವಿಚಾರಗಳಿಂದ ಅವನು ಪರಾವೃತ್ತನಾಗುತ್ತಾನೆ. ಅವನು ಪಾಪಪುಣ್ಯಗಳಿಗೆ ಹೆದರುವದಿಲ್ಲ ಪ್ರತ್ಯಕ್ಷ ಸಂಕಟ ಬಂದರೂ ಅಪಕೀರ್ತಿ ಯಾವುದು ಪ್ರತ್ಯಕ್ಷ ಕಾಣುತ್ತಿದ್ದರೂ ಕೂಡ ಅದು ಅವನಿಗೆ ಕಾಣುವದಿಲ್ಲ ಕಾಮದಂಥ ಮದವು ಲೋಕದಲ್ಲಿ ಇನ್ನೊಂದಾವುದೂ ಇಲ್ಲ ಕಾಮ ಪೀಡಿತ ಮನುಷ್ಯನು ಪಶುವಿನಂತಾಗಿರುತ್ತಾನೆ. ಪಶು ಮತ್ತು ಕಾಮಾಂಧರಲ್ಲಿ ಅಂತರವೇ ಇರುವದಿಲ್ಲ ಕಾಮಾಂಧತೆಯಿಂದ ಪಶುವೂ ಕೂಡ ಸೊರಗಿ ಸಾಯುತ್ತದೆ ಅದೇ ಪ್ರಕಾರ ಮನುಷ್ಯನಿಗೂ ಸಹ ಈ ಜನ್ಮದಲ್ಲಿ ಮರಣವು ಪ್ರಾಪ್ತವಾಗುತ್ತದೆ ಹಲವರು ಆತ್ಮಘಾತವನ್ನೂ ಕೂಡ ಮಾಡಿಕೊಳ್ಳುವರು. ಕಾಮಾಂಧರಿಗೆ ಧರ್ಮಾಧರ್ಮ ವಿಚಾರವು ಉಳಿಯುವದಿಲ್ಲ. ಜನರಿಗೆ ನಾಚುವ ಗುಣವು ಮೂಲದಲ್ಲಿಯೇ ಅವನಲ್ಲಿ ನಷ್ಟವಾಗಿರುತ್ತದೆ. ಪರಸ್ತ್ರೀ ಲಂಪಟರಿಗೆ ಅನೇಕ ದುಃಖಗಳು ಪ್ರಾಪ್ತವಾಗುತ್ತವೆ ರಾಜನು ಲಿಂಗಚ್ಛೇದನವನ್ನು ಮಾಡಿ ಅವನ ಸರ್ವಸ್ವವನ್ನೂ ಹರಣ ಮಾಡುತ್ತಾನೆ ಮರಣದ ತರುವಾಯ ನರಕಾದಿ ದುರ್ಗತಿಗಳಲ್ಲಿ ಅವನು ಪರಿಭ್ರಮಣ ಮಾಡಬೇಕಾಗುತ್ತದೆ ತಿರ್ಯಂಚ ಮನುಷ್ಯ ಯೋನಿಗಳಲ್ಲಿ ಚಾಂಡಾಲ, ಚರ್ಮಕಾರ, ಬಲೆಗಾರ, ಮೀನುಗಾರ, ಬಡವ, ಕುರೂಪಿ, ಬಿಳುಪುಳ್ಳವ, ಅವಯವ ಹೀನ, ಕುರುಡ, ಕುಂಟ, ಕಾಲಿಲ್ಲದವ, ಮೂಗ ಮೊದಲಾದ ರೂಪತಳೆದು ಅನೇಕ ದುಃಖಗಳನ್ನು ಅನುಭವಿಸುತ್ತಾನೆ ಅದರಿಂದ ಮತ್ತೆ ಮತ್ತೆ ನರಕ, ತಿರ್ಯಂಚ, ಕುಮಾನುಷ, ನಪುಂಸಕಾದಿ ಯೋನಿಗಳಲ್ಲಿ ಜನ್ಮವನ್ನು ತಕ್ಕೊಳ್ಳಬೇಕಾಗುತ್ತದೆ ಅದಕ್ಕಾಗಿ ವ್ಯಭಿಚಾರದ ತ್ಯಾಗಮಾಡಬೇಕು. ಶೀಲವಾನ್ ಮನುಷ್ಯರ ಸೇವೆಯನ್ನು ಸ್ವರ್ಗಲೋಕದಲ್ಲಿ ಕೋಟ್ಯಾವಧಿ ಅಪ್ಸರೆಯರು ಮಾಡುತ್ತಾರೆ. ಅಲ್ಲಿ ಅವರಿಗೆ ಅಸಂಖ್ಯಾತ ಕಾಲದ ವರೆಗೆ ಸುಖವು ಪ್ರಾಪ್ತವಾಗುತ್ತದೆ. ಮಾನವ ಜನ್ಮದಲ್ಲಿ ಶ್ರೇಷ್ಠತ್ವವು ಲಭಿಸುತ್ತದೆ ಕ್ರಮದಿಂದ ಅವನು ಸಂಸಾರದಿಂದ ಮುಕ್ತನಾಗುತ್ತಾನೆ.

ಪರಿಗ್ರಹದ ಮಮತೆಯ ಪರಿಣಾಮ—ಇಷ್ಟಾದ ಮೇಲೆ ಪರಿಗ್ರಹದ ಮೇಲೆ ಮಮತೆಯನ್ನೂ ಇಡುವದರಿಂದ ಆಗುವ ದೋಷಗಳ ವಿಚಾರಮಾಡಿ, ಅದರಿಂದ ವಿರಕ್ತನಾಗುವುದು ಶ್ರೇಯಸ್ಕರವಾಗಿದೆ ಪರಿಗ್ರಹದ ಮೇಲಿನ ಮಮತೆಯು ಐದು ಪಾಪಗಳಲ್ಲಿ ಪ್ರವೃತ್ತಿಯನ್ನುಂಟುಮಾಡುತ್ತದೆ. ಪರಿಗ್ರಹದಿಂದ ತೃಪ್ತಿಯು ಉಂಟಾಗುವದಿಲ್ಲ ಉರುವಲವನ್ನು ಹಾಕುವದರಿಂದ ಬೆಂಕಿಯು ಹೆಚ್ಚುತ್ತಲೇ ಹೋಗುತ್ತದೆ. ಹಾಗೆಯೇ ತೃಷ್ಣೆಯೆಂಬ ಅಗ್ನಿಯಿಂದ ಪರಿಗ್ರಹವೂ ಕೂಡ ಯಾವಾಗಲೂ ಹೆಚ್ಚುತ್ತಲೇ ಹೋಗುವದು ಪರಿಗ್ರಹವನ್ನು ಸಂಪಾದಿಸಲಿಕ್ಕೆ, ಅದನ್ನು ರಕ್ಷಿಸುವದಕ್ಕೆ ಅತ್ಯಂತ ಪರಿಶ್ರಮ ಮಾಡಬೇಕಾಗುತ್ತದೆ. ಮೇಲಾಗಿ ಅವುಗಳ ನಾಶವಾದರೆ ಅತಿಶಯ ದುಃಖವಾಗುತ್ತದೆ ಪರಿಗ್ರಹದ ಮೇಲೆ ಯಾರಿಗೆ ಅತಿಶಯ ಮೋಹವಿರುವುದೋ ಅವರಿಗೆ ಧರ್ಮ ಅಧರ್ಮ ಮತ್ತು ಜೀವನ ಮರಣದ ವಿಚಾರವು ಉಳಿಯುವದಿಲ್ಲ. ಪರಿಗ್ರಹದ ಮೇಲಿನ ಪ್ರೀತಿಯಿಂದಾಗಿ ಹಿಂಸೆ, ಕಳವು, ಅಸತ್ಯ, ಕುಶೀಲ, ಅಭಕ್ಷ್ಯ, ಬಹು ಆರಂಭ, ಜಗಳ, ವೈರ, ಈರ್ಷೆ, ಭಯ, ಶೋಕ, ಸಂತಾಪ ಇತ್ಯಾದಿ ಸಾವಿರಾರು ದೋಷಗಳು ಉತ್ಪನ್ನವಾಗುತ್ತವೆ ಸಂಸಾರದೊಳಗಿನ ಬಂಧನ, ಪರಾಧೀನತೆ, ಕಷಾಯ, ದುಃಖ ಇವೆಲ್ಲವೂ ಪರಿಗ್ರಹಗಳ ಮಮತೆಯಿಂದಲೇ ಉತ್ಪನ್ನವಾಗುತ್ತವೆ ಪರಿಗ್ರಹದ ತ್ಯಾಗ ಮಾಡುವದೆಂದರೆ ತಲೆಯ ಮೇಲಿನ ಭಾರವನ್ನು ಕಡಿಮೆ ಮಾಡಿಕೊಂಡಂತೆಯೇ ಇದೆ ಯಾರು ಪರಿಗ್ರಹವನ್ನು ತ್ಯಾಗ ಮಾಡಿರುವರೋ ಅವರಿಗೆ ಕರ್ಮದ ಬಂಧವಾಗುವದಿಲ್ಲ. ಪರಿಗ್ರಹದ ತ್ಯಾಗದ ಫಲವು ಸ್ವರ್ಗ ಮತ್ತು ಮೋಕ್ಷವಾಗಿದೆ ಅಂತಲೇ ಪರಿಗ್ರಹತ್ಯಾಗವು ಸರ್ವ ಕಲ್ಯಾಣದ ಮೂಲವಾಗಿದೆ

ಪಂಚಾಣುವ್ರತದ ದೋಷಗಳು—ಕೊಲೆ, ಸುಳ್ಳು, ಕಳವು, ಕೆಟ್ಟನಡತೆ, ಪರಿಗ್ರಹ ಇವುಗಳ ದೋಷವನ್ನು ಈಗ ವಿಚಾರಿಸೋಣ. ಈ ಐದು ಪಾಪಗಳು ಸದಾಕಾಲ ದುಃಖಕಾರಕವಾಗಿವೆಯೆಂಬುದನ್ನು ಯಾವಾಗಲೂ ಚಿಂತಿಸುತ್ತಿರಬೇಕು ಹಿಂಸಾದಿಗಳಂತೂ ದುಃಖಕ್ಕೆ ಕಾರಣವಾಗಿವೆ ಅದರಿಂದ ಈ ಐದು

ಪಾಪಗಳೂ ದುಃಖವೇ ಆಗಿವೆ ಕಾರ್ಯದ ಸ್ಥಾನದಲ್ಲಿ ಕಾರಣವನ್ನೂ ನನೆದಾಗ ದುಃಖದ ಕಾರಣಗಳೆಲ್ಲವಕ್ಕೂ ದುಃಖವೆಂದೇ ಕರೆಯಲಾಗಿದೆ ಯಾವ ಪ್ರಕಾರ ಬಂಧನ ಮತ್ತು ಪೀಡನಗಳು ನಮಗೆ ಅಪ್ರಿಯವಾಗಿವೆಯೋ ಹಾಗೆಯೇ ಎಲ್ಲ ಜೀವಕ್ಕೂ ಅಪ್ರಿಯವಾಗಿರುತ್ತವೆ ಸುಳ್ಳು, ಕಠೋರ, ಕಹಿ ನುಡಿಗಳು ನಮಗೆ ಹೇಗೆ ಸೇರುವದಿಲ್ಲವೋ ಹಾಗೆ ಎಲ್ಲ ಪ್ರಾಣಿಗಳಿಗೂ ಸೇರುವದಿಲ್ಲ ಅವುಗಳನ್ನು ಕೇಳುವದರಿಂದ ನಮಗೆ ಹೇಗೆ ದುಃಖವಾಗುತ್ತದೆಯೋ ಹಾಗೆಯೇ ಇತರರಿಗೂ ದುಃಖವಾಗುತ್ತದೆ ನಮ್ಮ ಹೆಂಡತಿಯನ್ನು ಯಾರಾದರೂ ಪಾಪದೃಷ್ಟಿಯಿಂದ ನೋಡಿದರೆ ನಮಗೆ ಹೇಗೆ ಮಾನಸಿಕ ಪೀಡೆಯು ಉಂಟಾಗುವದೋ ಅದರಂತೆಯೇ ಇತರರಿಗೂ ಕೂಡ ತಮ್ಮ ತಾಯಿ, ಹೆಂಡತಿ, ತಂಗಿ, ಮಗಳು ಇವರ ವ್ಯಭಿಚಾರದ ವಿಚಾರವನ್ನು ಕೇಳಿಯೂ ಸಹ ಉಂಟಾಗುತ್ತದೆ. ಅರಿವೆ–ಅಂಚಡಿ ಧನ–ಧಾನ್ಯಗಳು ದೊರೆಯದಿದ್ದರೆ ಇಲ್ಲವೆ ದೊರೆತವುಗಳು ಹೋದರೆ ನಮಗೆ ದುಃಖವಾಗುತ್ತದೆ. ಪರಿಗ್ರಹದ ಇಚ್ಛೆಯಿಂದ ಪರಿಗ್ರಹವು ನಷ್ಟವಾದಾಗ ಎಲ್ಲ ಜೀವಗಳಿಗೂ ದುಃಖವಾಗುತ್ತದೆ ಅದರಿಂದ ಹಿಂಸೆಯೇ ಮೊದಲಾದ ಐದು ಪಾಪಗಳಿಂದ ವಿರಕ್ತವಾಗುವುದರಲ್ಲಿಯೇ ಜೀವದ ಕಲ್ಯಾಣವಿದೆ.

**ಸ್ಪರ್ಶನ ಇಂದ್ರಿಯದ ದುಃಖ**—ಸುಂದರ ಸ್ತ್ರೀಯರ ಸ್ಪರ್ಶದಿಂದ ಸುಖದ ಅನುಭವವು ಆಗುತ್ತಿರುವಾಗ ಅದು ದುಃಖಕಾರಕವಾಗಿದೆಯೆಂದು ಹೇಗೆ ಅನ್ನಲಿಕ್ಕೆ ಬಂದೀತು? ಆದರೆ ನಿಜವಾಗಿ ನೋಡಿದರೆ ಇಂದ್ರಿಯಗಳ ವಿಷಯಗಳಿಂದ ಉತ್ಪನ್ನವಾಗುವ ಸುಖವು ನಿಜವಾದ ಸುಖವಲ್ಲ ಅದು ಸುಖಾಭಾಸವಾಗಿದೆ. ಮೊದಲು ವಿಷಯಗಳ ಇಚ್ಛೆಯಾಗುತ್ತದೆ ಆ ಮೇಲೆ ಅದನ್ನು ದೂರ ಮಾಡುವ ಉಪಾಯ ಮಾಡಬೇಕೆನಿಸುತ್ತದೆ. ಶರೀರದೊಳಗಿನ ರಕ್ತದಲ್ಲಿ ವಿಕಾರವು ಉತ್ಪನ್ನವಾಗುವುದರಿಂದ ಕಿಚ್ಚು ಬಿಡುತ್ತದೆ ಆ ಕಿಚ್ಚನ್ನು ಶಾಂತಗೊಳಿಸುವ-ದಕ್ಕಾಗಿ ಉಗುರಿನಿಂದ ನಾವು ಕೆರೆದು ಕೊಳ್ಳುತ್ತೇವೆ ಹೀಗೆ ಕೆರೆಯುವಾಗ ಮೈಯೊಳಗಿನ ರಕ್ತವು ಹೊರಬಿದ್ದರೂ ಸುಖವೇ ಆದಂತೆ ಎನಿಸುತ್ತದೆ ಇದೇ ಪ್ರಕಾರ ಮೈಥುನ ಮಾಡುವ ಮನುಷ್ಯನೂ ಸಹ ಮೋಹದಿಂದ ದುಃಖಕ್ಕೇನೇ ಸುಖವೆಂದು ಭಾವಿಸುತ್ತಾನೆ ಮನುಷ್ಯ, ತಿರ್ಯಂಚ, ಅಸುರ, ಸುರೇಂದ್ರ ಮೊದಲಾದ ಜೀವಗಳು ತಮ್ಮ ಶರೀರದ ಜೊತೆಗೇ ಉತ್ಪನ್ನವಾದಂಥ ವಿಷಯಗಳ ದುಃಖವನ್ನು ಸಹನ ಮಾಡಲಿಕ್ಕೆ ಅಸಮರ್ಥವಾಗಿರುವುದರಿಂದ ಉಪಭೋಗದ ಕಡೆಗೆ ಪ್ರವೃತ್ತವಾಗುತ್ತವೆ. ಬೆಂಕಿಯಿಂದ ಕಾಯ್ದು ಕೆಂಪಾದ ಕಬ್ಬಿಣದ ಗುಂಡಿನಂತೆ ಇಂದ್ರಿಯಗಳ ತಾಪದಿಂದ ಸಂತಪ್ತವಾದಂಥ ಜೀವವು ಅತಿ ತೃಷ್ಣೆಯಿಂದ ಉಂಟಾಗುವ ದುಃಖವನ್ನು ಸಹಿಸಲಿಕ್ಕಾಗದೆ ವಿಷಯೋಪಭೋಗದಲ್ಲಿ ತಲ್ಲೀನವಾಗುತ್ತದೆ ಸುತ್ತಲೂ ಅಗ್ನಿ ಜ್ವಾಲೆಯಿಂದ ಸಂತಪ್ತನಾದ ಮನುಷ್ಯನು ದುರ್ಗಂಧದಿಂದ ತುಂಬಿದ ನೀರಿನ ಕುಂಡದಲ್ಲಿ ಬಿದ್ದೂ ಕೂಡ ತನ್ನ ಸಂತಾಪವು ಇಲ್ಲದಂತೆ ಆಯಿತೆಂದು ಒಂದು ಕ್ಷಣ ಸಮಾಧಾನವನ್ನು ಹೊಂದುತ್ತಾನೆ, ಸುಖವಾಯಿತೆಂದು ಭಾವಿಸುತ್ತಾನೆ. ಹಾಗೆಯೇ ಸಂಸಾರೀ ಜೀವವು ಸ್ಪರ್ಶನೇಂದ್ರಿಯದ ಇಚ್ಛಾರೂಪೀ ಸಂತಾಪವನ್ನು ಸಹನ ಮಾಡಲಿಕ್ಕೆ ಅಸಮರ್ಥವಾಗಿ, ಸ್ತ್ರೀಯರ ಮಲಿನವಾದಂಥ ದೇಹದ ಭೋಗವನ್ನು ತಕ್ಕೊಂಡು ಕಾಮ ತೃಪ್ತಿಯಿಂದ ಸುಖವಾಯಿತೆಂದು ಭಾವಿಸುತ್ತದೆ ಆದರೆ ಅತಿ ತೃಷ್ಣೆಯಿಂದ ಒದಗುವ ದುಃಖದಿಂದ ನುಗ್ಗುನುಗ್ಗಾಗಿ ಮರಣವನ್ನು ಹೊಂದುತ್ತದೆ ಶರೀರಕ್ಕೆ ಇಂದ್ರಿಯಗಳು ಸತತ ದುಃಖವನ್ನು ಕೊಡುವ ಬಹು ದೊಡ್ಡ ರೋಗಗಳಾಗಿವೆ. ಅವುಗಳ ಮೇಲೆ ವಿಷಯೋಪಭೋಗವೆಂಬುದು ಸ್ವಲ್ಪ ಹೊತ್ತು ದಾಹವನ್ನು ಶಮನಮಾಡುವ ಔಷಧವಾಗಿದೆ ಮಾನವ ಪ್ರಾಣಿಯು ಇದಕ್ಕೇನೇ ಭ್ರಮೆಯಿಂದ ದುಃಖದೊಳಗಿಂದ ಮುಕ್ತನಾಗುವ ಉಪಾಯವೆಂದು ಭಾವಿಸುತ್ತಾನೆ ಇಂದ್ರಿಯಗಳು ಇರುವವರೆಗೆ ದುಃಖವು ಕಟ್ಟಿಟ್ಟದ್ದೇ ಹಾಗಿಲ್ಲದಿದ್ದರೆ ವಿಷಯೋಪಭೋಗವನ್ನು ಸಂಪಾದಿಸುವ-ದಕ್ಕಾಗಿ ಜೀವವನ್ನೂ ಒತ್ತೆ ಇಟ್ಟು ಯಾರು ಪ್ರಯತ್ನಿಸುತ್ತಿದ್ದರು? ಕೃತ್ರಿಮ ಹೆಣ್ಣಾನೆಯನ್ನು ಸ್ಪರ್ಶಮಾಡುವ ಆಶೆಯಿಂದ ಅಡವಿಯೊಳಗಿನ ಆನೆಯು ಆಳವಾದ ತಗ್ಗಿನಲ್ಲಿ ಬಿದ್ದು, ಚಿರಕಾಲದ ಪಾರತಂತ್ರ್ಯಕ್ಕೆ ಬಲಿಯಾಗುತ್ತದೆ ಸ್ಪರ್ಶನ ಇಂದ್ರಿಯದ ತಾಪದಿಂದ ಒದಗುವ ಈ ಕಷ್ಟ ಪರಂಪರೆಯನ್ನಂತೂ ನಾವು ಪ್ರತ್ಯಕ್ಷವಾಗಿ ಕಾಣುತ್ತೇವಷ್ಟೆ? ಚಪಲವಾದಂಥ ಮೀನುಗಳು ರಸನೇಂದ್ರಿಯಕ್ಕೆ ವಶವಾಗಿ ಮೀನುಗಾರನು ಬೀಸಿದ ಬಲೆಯ ಕಬ್ಬಿಣ ಮುಳ್ಳಿಗೆ ಸಿಕ್ಕು ಪ್ರಾಣವನ್ನು ನೀಗುತ್ತವಲ್ಲವೆ? ಘ್ರಾಣೇಂದ್ರಿಯದ ವೇದನೆಯಿಂದ ಇದೀಗ ಸಂಕೋಚವಾಗಲಿರುವ ಕಮಲದ ಮೇಲೆ ಅದರ ಪರಿಮಳವನ್ನು ಹೀರಲಿಕ್ಕೆಂದು ಭ್ರಮರಗಳು ಕುಳಿತು ಮರಣವನ್ನು ಹೊಂದುವವಲ್ಲ! ನೇತ್ರೇಂದ್ರಿಯದ ಸಂತಾಪದಿಂದ ಪತಂಗವು ದೀಪದ ಜ್ವಾಲೆಯಲ್ಲಿ ಬಿದ್ದು ಸುಟ್ಟು ಹೋಗುತ್ತದಲ್ಲವೆ? ಕರ್ಣೇಂದ್ರಿಯಕ್ಕೆ ವಶವಾಗು-ವುದರಿಂದ ಚಿಗರೆಗಳು ಗಾನದ ನಾದದಲ್ಲಿ ಮಗ್ನವಾಗಿ ಜಾಳಿಗೆಯಲ್ಲಿ ಸಿಕ್ಕು ಬೀಳುವದಿಲ್ಲವೆ? ಈ ಪ್ರಕಾರ ಅನಿವಾರ್ಯವಾದ

ಇಂದ್ರಿಯಗಳ ವೇದನೆಗೆ ವಶವಾದ ಜೀವವು ಮರಣದ ಸಮೀಪಕ್ಕೆ ಒಯ್ಯುವ ವಿಷಯಗಳನ್ನು ಸಂಪಾದಿಸಲಿಕ್ಕೆ ಸತತ ಪ್ರಯತ್ನಿಸುತ್ತಿರುತ್ತದೆ. ಜಗತ್ತಿನಲ್ಲಿ ಇಂದ್ರಿಯಗಳಿಂದ ಉಂಟಾಗುವ ಸಂತಾಪಕ್ಕಿಂತ ಹೆಚ್ಚಾಗಿ ದುಃಖವನ್ನು ಕೊಡುವ ಇನ್ನೊಂದು ಸಂತಾಪವೇ ಇಲ್ಲ ಇಂಥ ಪ್ರಬಲ ಸಂತಾಪವು ಅಗ್ನಿ, ಶಸ್ತ್ರ, ವಿಷಗಳಿಂದಲೂ ಸಹ ಆಗುವದಿಲ್ಲ. ಇಂದ್ರಿಯಗಳ ಕಷ್ಟವನ್ನು ಸಹನ ಮಾಡಲಿಕ್ಕೆ ಅಸಮರ್ಥರಾದ ಮನುಷ್ಯರು ವಿಷಯ ಸುಖವನ್ನು ಸಂಪಾದಿಸುವದಕ್ಕಾಗಿ ಅಗ್ನಿಯಲ್ಲಿ ಸುಟ್ಟು ಸತ್ತಾರು, ಶಸ್ತ್ರ ಘಾತದ ನೋವನ್ನು ಸಹನ ಮಾಡಿಯಾರು, ಪ್ರಸಂಗ ಬಂದಲ್ಲಿ ವಿಷದ ವೇದನೆಯನ್ನೂ ಸಹನ ಮಾಡಬಲ್ಲರು ತಂದೆ, ತಾಯಿ, ಗುರುಗಳೆಲ್ಲ ನೇರಿ ವಿಷಯಗಳಿಂದ ಪರಾಙ್ಮುಖವಾಗುವ ಉಪದೇಶವನ್ನು ಮಾಡುತ್ತಾರೆ. ಆದರೆ ಅದು ಮಾನವನಿಗೆ ಒಪ್ಪಿಗೆಯಾಗುವದಿಲ್ಲ ಜಗತ್ತಿನಲ್ಲಿ ಇಂದ್ರಿಯಗಳಿಂದಲೇ ದುಃಖವು ಪ್ರಾಪ್ತವಾಗುತ್ತಿದೆ. ಯಾರಿಗೆ ಅತೀಂದ್ರಿಯ ಜ್ಞಾನವಿರುವುದೋ ಅವರಿಗೇ ನಿರಾಕುಲತೆಯು ಪ್ರಾಪ್ತವಾಗಿ ಜ್ಞಾನಾನಂದದ ಸುಖವು ಲಭಿಸುತ್ತದೆ. ಯಾರು ಇಂದ್ರಿಯಾಧೀನರಿರುವರೋ ಅವರು ಸ್ವಾಭಾವಿಕವಾಗಿಯೇ ದುಃಖಿಗಳಾಗಿದ್ದಾರೆ. ಹಾಗಿಲ್ಲದಿದ್ದರೆ ಅವರ ಪ್ರವೃತ್ತಿಯು ವಿಷಯಗಳ ಕಡೆಗೆ ಇರುತ್ತಿರಲಿಲ್ಲ ಯಾರಿಗೆ ಚಳಿಜ್ವರವು ಇರುವದಿಲ್ಲವೋ ಅವರಿಗೆ ಬೆಂಕಿಯಿಂದ ಕಾಯಿಸಿಕೊಳ್ಳುವ ಇಚ್ಛೆಯು ಆಗುವದಿಲ್ಲ ಯಾರ ದಾಹವು ಇಲ್ಲದಂತಾಗಿರುವುದೋ ಅವರಿಗೆ ಗುಲಾಬದ ನೀರಿನಿಂದ ತಂಪನ್ನು ಹೊಂದುವ ಅವಶ್ಯಕತೆಯು ಎನಿಸುವದಿಲ್ಲ ನೇತ್ರರೋಗವಿಲ್ಲದವರಿಗೆ ಅಂಜನದ ಅವಶ್ಯಕತೆ ಏನಿದೆ? ಕರ್ಣಶೂಲಿಯು ಇಲ್ಲದವರಿಗೆ ಕಿವಿಯಲ್ಲಿ ಕುರಿಯ ಮೂತ್ರವನ್ನು ಹಾಕಿಕೊಳ್ಳುವ ಕಾರಣವೇ ಇಲ್ಲ ಘಾಯವು ಮುಗಿದವರಿಗೆ ಔಷಧದ ಪಟ್ಟಿಯ ಅವಶ್ಯಕತೆ ಇಲ್ಲ ಇದೇ ಪ್ರಕಾರ ಯಾರಿಗೆ ಇಂದ್ರಿಯ ಜನಿತ ವೇದನೆಯು ಇಲ್ಲದಂತೆ ಆಗಿರುವದೋ ಅವರಿಗೆ ವಿಷಯಗಳ ಕಡೆಗೆ ಪ್ರವೃತ್ತಿಯು ಆಗುವದಿಲ್ಲ ಹಸಿವೆಯಾಗದ ಹೊರತಾಗಿ ಊಟವನ್ನು ಯಾರು ಮಾಡುವರು? ನೀರಡಿಕೆಯಾಗದೆ ನೀರನ್ನು ಯಾರು ಕುಡಿಯುವರು? ಉಷ್ಣತೆಯು ಎನಿಸದಿದ್ದರೆ ಶೀತವಾಯುವನ್ನು ಯಾರು ಅಪೇಕ್ಷಿಸುವರು? ಚಳಿಯು ಎನಿಸದಿದ್ದರೆ ಉಣ್ಣೆಯ ಬಟ್ಟೆಗಳನ್ನು ಯಾರು ಹೊತ್ತುಕೊಂಡಾರು? ಇವೆಲ್ಲ ವಿಷಯ ವೇದನೆಗಳನ್ನು ಇಲ್ಲದಂತೆ ಮಾಡುವ ಸಾಧನಗಳಾಗಿವೆ. ಇವುಗಳಿಂದ ಸ್ವಲ್ಪ ಹೊತ್ತು ವೇದನೆಯು ಕಡಿಮೆಯಾದಲ್ಲಿ ಅಜ್ಞಾನಿ ಜೀವಗಳು ತಮಗೆ ಸುಖವಾಯಿತೆಂದು ತಿಳಿಯುತ್ತವೆ ಆದರೆ ಇದು ನಿಜವಾದ ಸುಖವಲ್ಲ. ನಿಜವಾದ ಸುಖವೆಂದರೆ ಮೂಲದಲ್ಲಿ ವೇದನೆಯೇ ಆಗದಂಥದು ಇರಬೇಕು ಅನಾಕುಲವೂ ಸ್ವಾಧೀನವೂ ಆದ ಅನಂತ ಜ್ಞಾನವೇ ನಿಜವಾದ ಸುಖವಾಗಿದೆ. ಇನ್ನೊಂದಲ್ಲ ಇದನ್ನು ಪೂರ್ಣವಾಗಿ ಅರಿತುಕೊಂಡಲ್ಲಿ ಮಾತ್ರ ಎಲ್ಲ ದುಃಖಗಳಿಂದ ಬಿಡುಗಡೆಯು ಆದೀತು

ನಾಲ್ಕು ಭಾವನೆಗಳ ಚಿಂತನ—ಇನ್ನು ಮುಂದೆ ಶ್ರಾವಕನು ಮೈತ್ರಿಯೇ ಮೊದಲಾದ ನಾಲ್ಕು ಭಾವನೆಗಳನ್ನು ಕುರಿತು ವಿಚಾರಮಾಡಬೇಕು ಏಕೇಂದ್ರಿಯವೇ ಮೊದಲಾದ ಎಲ್ಲ ಪ್ರಾಣಿಗಳ ವಿಷಯದಲ್ಲಿ ಮೈತ್ರೀಭಾವವನ್ನು ಇಟ್ಟುಕೊಳ್ಳಬೇಕು. ಯಾವ ಜೀವಕ್ಕೂ ದುಃಖವಾಗಬಾರದೆಂಬ ಇಚ್ಛೆಯನ್ನೂ ಇಡುವುದೇ ಮಿತ್ರಭಾವವಾಗಿದೆ ಇನ್ನು ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಮೊದಲಾದ ಗುಣಗಳಲ್ಲಿ ತಮಗಿಂತ ಹೆಚ್ಚಿಗೆ ಇರುವವರನ್ನು ಕಂಡು ಹರ್ಷಗೊಳ್ಳುವುದಕ್ಕೆ ಪ್ರಮೋದ ಭಾವನೆಯೆನ್ನುವರು ಪ್ರಮೋದವೆಂದರೆ ಹರ್ಷ ಅಥವಾ ಆನಂದ. ತಮಗಿಂತ ಸುಗುಣಗಳು ಹೆಚ್ಚಾಗಿ ಇರುವವರನ್ನು ಕಂಡಾಗ ದ್ರವ್ಯದ ನಿಧಿಯು ಸಿಕ್ಕಾಗ ಸಂತೋಷವಾದಂತೆಯೇ ಆನಂದವಾಗಬೇಕು. ಗುಣವಂತನನ್ನು ಕಂಡ ಕೂಡಲೆ ಮೈಮೇಲೆ ಆನಂದದಿಂದ ರೋಮಾಂಚ ಏಳುವುದು, ಮುಖವು ಪ್ರಸನ್ನವಾಗಿ ನೇತ್ರದ ಅರಳುವುದು, ಹೃದಯದೊಳಗಿನ ಆಲ್ಹಾದದಿಂದ ಸ್ತುತಿ, ಭಾಷಣ, ನಾಮಕೀರ್ತನಾದಿಗಳ ಯೋಗದಿಂದ ಭಕ್ತಿಯನ್ನು ಪ್ರಕಟಗೊಳಿಸುವುದು ಇವೆಲ್ಲವುಗಳಿಗೆ ಪ್ರಮೋದ ಭಾವನೆಯೆನ್ನುವರು ಅಸಾತಾವೇದನೀಯ ಕರ್ಮದ ಉದಯದಿಂದ ರೋಗ ದಾರಿದ್ರ್ಯಗಳಿಂದ ಪೀಡಿತರಾದವರ ದುಃಖವನ್ನು ನಿವಾರಿಸಬೇಕೆನ್ನುವ ಭಾವವು ಕಾರುಣ್ಯವೆನಿಸುತ್ತದೆ ಈ ಭಾವನೆಯಿಂದ ಇಂದ್ರಿಯ ವಿಕಲರಾದಂಥ ಕುರುಡ, ಕುಂಟ, ಕಿವುಡ, ದೀನ, ಅನಾಥ, ಪರದೇಶಿ, ಅತಿವೃದ್ಧ, ಬಾಲ, ವಿಧವಾ ಮೊದಲಾದ ದುಃಖಿತ ಪ್ರಾಣಿಗಳಿಗೆ ನೆರವಾಗಬೇಕೆಂಬ ಭಾವವು ಉತ್ಪನ್ನವಾಗುತ್ತದೆ ಧರ್ಮರಹಿತ, ತೀವ್ರ ಕಷಾಯಿ, ಹಟವುಳ್ಳವರು, ಉಪದೇಶ ಮಾಡಲಿಕ್ಕೆ ಅಯೋಗ್ಯರು, ವಿಪರೀತ ಜ್ಞಾನಿಗಳು, ಧರ್ಮದ್ರೋಹಿಗಳು, ದುಷ್ಟ ಅಭಿಪ್ರಾಯ ಉಳ್ಳವರು, ನಿರ್ದಯಿಗಳು ಇದಂಥವರ ವಿಷಯದಲ್ಲಿ ರಾಗದ್ವೇಷಗಳಿಲ್ಲದಂಥ ಪರಿಣಾಮವನ್ನು ಇಡುವದಕ್ಕೆ ಮಧ್ಯಸ್ಥ ಭಾವನೆ ಎನ್ನುವರು.

**ಭಾವಾರ್ಥ**—ಎಲ್ಲ ಜೀವಗಳಿಗೆ ದುಃಖವಾಗಬಾರದೆಂಬ ಭಾವನೆಯು ಮನಸ್ಸಿನಲ್ಲಿ ಇರುವದಕ್ಕೆ ಮೈತ್ರೀಭಾವನೆನ್ನುವರು ತನಗಿಂತ ಗುಣಗಳಲ್ಲಿ ಹೆಚ್ಚಿಗೆ ಇದ್ದ ಪುರುಷನನ್ನು ನೋಡಿ ಇಲ್ಲವೆ ಅಂಥವರ ಗುಣಗಳನ್ನು ಕೇಳಿ ಅತಿಶಯ ಆನಂದವನ್ನು ಹೊಂದುವುದು ಪ್ರಮೋದ ಭಾವನೆಯಾಗಿದೆ ದುಃಖಿತರನ್ನು ಕಂಡು ಉಪಕಾರ ಮಾಡಬೇಕೆಂಬ ಬುದ್ಧಿಯು ಉತ್ಪನ್ನವಾಗುವುದು ಕಾರುಣ್ಯಭಾವನೆಯಾಗಿದೆ ನಿರ್ದಯಿ, ಹಟಮಾರಿ, ಅಭಿಮಾನಿಗಳ ವಿಷಯದಲ್ಲಿ ರಾಗದ್ವೇಷರಹಿತವಾದಂಥ ಪರಿಣಾಮ ಇಡುವುದು ಮಾಧ್ಯಸ್ಥ ಭಾವವಾಗಿದೆ ಧರ್ಮಿಷ್ಟನಾದ ಪುರುಷನು ಇವುಗಳನ್ನು ಯಾವಾಗಲೂ ನೆನೆಯುತ್ತಿರಬೇಕು.

**ಜಗತ್ತು ಮತ್ತು ಶರೀರ ಇವುಗಳ ಸ್ವರೂಪದ ವಿಚಾರ**—ಗೃಹಸ್ಥರು ಜಗತ್ತಿನ ಸ್ವಭಾವ, ಮತ್ತು ಶರೀರದ ಧರ್ಮಗಳ ವಿಚಾರವನ್ನು ಮಾಡಬೇಕು ಜಗತ್ತಿನ ಸ್ವಭಾವದ ವಿಚಾರಮಾಡುವದರಿಂದ ಸಂಸಾರ ಪರಿಭ್ರಮಣದ ಭಯವು ಉತ್ಪನ್ನವಾಗುತ್ತದೆ ದೇಹಧರ್ಮವನ್ನು ಅರಿತುಕೊಳ್ಳುವುದರಿಂದ ರಾಗ ಭಾವದ ಅಭಾವವಾಗುತ್ತದೆ ಈ ಜಗತ್ತು ಅಥವಾ ಲೋಕವು ಅನಾದಿ-ನಿಧನವಾಗಿದ್ದು, ಒಂದು ಮೃದಂಗದ ಮೇಲೆ ಎರಡನೆಯ ಅರ್ಧ ಮೃದಂಗವನ್ನು ಇಟ್ಟರೆ ಯಾವ ಆಕಾರವಾಗುವುದೋ ಆ ಆಕಾರದಲ್ಲಿ ಇದೆ ಈ ಲೋಕವು ಹದಿನಾಲ್ಕು ರಜ್ಜುವಿನಷ್ಟು ಎತ್ತರ, ದಕ್ಷಿಣೋತ್ತರ ಎಲ್ಲೆಡೆಗೂ ಏಳು ರಜ್ಜುವಿನಷ್ಟು ಅಗಲ, ಪೂರ್ವ ಪಶ್ಚಿಮ ಕೆಳಭಾಗದಲ್ಲಿ ಏಳು ರಜ್ಜು ಮತ್ತು ಮೇಲೆ ಕ್ರಮ ಕ್ರಮದಿಂದ ಕಡಿಮೆಯಾಗುತ್ತ ಏಳು ರಜ್ಜುವಿನ ತರುವಾಯದಲ್ಲಿ ಒಂದು ರಜ್ಜು ಮಾತ್ರ ಅಗಲವಾಗಿ ಉಳಿಯುವದು ಮುಂದೆ ಮತ್ತೆ ಮೇಲೆ ಕ್ರಮದಿಂದ ಅಗಲ ಬೆಳೆಯುತ್ತ ಬೆಳೆಯುತ್ತ ಮೂರೂ ಅರ್ಧ ರಜ್ಜುವಿನ ಅಂತರದಲ್ಲಿ ಐದು ರಜ್ಜು ಅಗಲವಾದದ್ದು ಇದ್ದು, ಅಲ್ಲಿಂದ ಮತ್ತೆ ಕಡಿಮೆಯಾಗುತ್ತ ಹೋಗಿ, ಮೂರೂ ಅರ್ಧ ರಜ್ಜುವಿನಲ್ಲಿ ಅಂದರೆ ಲೋಕದ ಅಗ್ರಭಾಗದಲ್ಲಿ ಒಂದು ರಜ್ಜುಮಾತ್ರ ಅಗಲವಾಗಿದೆ ಈ ಪ್ರಕಾರ ಪೂರ್ವ-ಪಶ್ಚಿಮದಲ್ಲಿ ಕ್ರಮದಿಂದ ಹೆಚ್ಚು ಕಡಿಮೆ ಅಳತೆಯಲ್ಲಿ ಇದೆ. ಇಂಥ ಆಕಾರವುಳ್ಳ ಲೋಕದಲ್ಲಿ ಒಂದು ರಜ್ಜು ಅಗಲ, ಒಂದು ರಜ್ಜು ಉದ್ದ, ಒಂದು ರಜ್ಜು ಎತ್ತರವಾದಂಥ ಭಾಗಗಳನ್ನು ಕಲ್ಪಿಸಿದರೆ ಮೂರನೂರಾ ನಲವತ್ತುಮೂರು ಇಂಥ ವಿಭಾಗಗಳು ಆಗುತ್ತವೆ ಈ ಲೋಕರೂಪೀ ಕ್ಷೇತ್ರದಲ್ಲಿ ಅನಂತಾನಂತ ಕಾಲ ಪರಿಭ್ರಮಣ ಮಾಡುತ್ತ ನಮ್ಮ ಕಾಲವು ಕಳೆದು ಹೋಗಿದೆ ಇನ್ನು ಜೀವವನ್ನು ಧಾರಣ ಮಾಡುವಂಥ ಯಾವ ಪುದ್ಗಲ ಪರಮಾಣುವೂ ಲೋಕದಲ್ಲಿ ಹಿಂದೆ ಉಳಿದಿಲ್ಲ. ಮೂರುನೂರಾ ನಲವತ್ತುಮೂರು ರಜ್ಜುವಿನ ಪ್ರಮಾಣದಲ್ಲಿ ಈ ಜೀವವು ಅನಂತ ಸಲ ಜನ್ಮ-ಮರಣವನ್ನು ಹೊಂದದಂಥ ಒಂದು ಭಾಗವೂ ಸಹ ಉಳಿದಿಲ್ಲ ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಕಾಲಗಳ ಇಪ್ಪತ್ತು ಕೋಡಾಕೋಡಿ ಸಾಗರ ಕಾಲದಲ್ಲಿ ಈ ಜೀವವು ಜನ್ಮಮರಣವನ್ನು ಹೊಂದದಂಥ ಒಂದು ಸಮಯವೂ ಕೂಡ ಉಳಿದಿಲ್ಲ ನರಕ, ತಿರ್ಯಂಚ, ಮನುಷ್ಯ, ದೇವ ಈ ನಾಲ್ಕು ಗತಿಗಳಲ್ಲಿ ಜಘನ್ಯ ಆಯುವಿನಿಂದ ಉತ್ಕೃಷ್ಟ ಆಯುವಿನ ವರೆಗೆ ಸಮಯೋತ್ತರವಾದಂಥ ಯಾವ ಪರ್ಯಾಯವೂ ಈ ಜೀವಕ್ಕೆ ಅನಂತಸಲ ಪ್ರಾಪ್ತವಾಗದಂಥದು ಹಿಂದೆ ಉಳಿದಿಲ್ಲ ಒಟ್ಟಿನಲ್ಲಿ ಎಲ್ಲ ಗತಿ, ಎಲ್ಲ ಕಾಲ, ಎಲ್ಲ ಪರ್ಯಾಯ, ಎಲ್ಲ ಪ್ರದೇಶಗಳನ್ನೂ ಈ ಜೀವವು ಅನಂತಸಲ ಹೊಂದಿದೆ

**ಸಂಸಾರ ಪರಿವರ್ತನದ ಭಯ**—ಜ್ಞಾನಾವರಣಾದಿ ಸರ್ವ ಕರ್ಮಗಳ ಬಂಧವಾಗುವಂಥ ಜಘನ್ಯ ಸ್ಥಿತಿಯು ಅಂತಃಕೋಟಾಕೋಟಿ ಸಾಗರ ಪ್ರಮಾಣವಾಗಿದೆ. ಇನ್ನು ಉತ್ಕೃಷ್ಟ ಸ್ಥಿತಿಯು ಜ್ಞಾನಾವರಣ, ದರ್ಶನಾವರಣ, ವೇದನೀಯ ಮತ್ತು ಅಂತರಾಯ ಈ ನಾಲ್ಕು ಕರ್ಮಗಳಿಗೆ ಮೂವತ್ತು ಕೊಡಾಕೋಡಿ ಸಾಗರ ಪ್ರಮಾಣವಾಗಿದೆ ಮೋಹನೀಯ ಕರ್ಮದ ಉತ್ಕೃಷ್ಟ ಸ್ಥಿತಿಯು ಎಪ್ಪತ್ತು ಕೋಡಾಕೋಡಿ ಸಾಗರವಿದೆ. ನಾಮಕರ್ಮ ಮತ್ತು ಗೋತ್ರ ಕರ್ಮದ ಉತ್ಕೃಷ್ಟ ಸ್ಥಿತಿಯು ಇಪ್ಪತ್ತು ಕೋಡಾಕೋಡಿ ಸಾಗರವಿದೆ ಆಯು ಕರ್ಮದ ಉತ್ಕೃಷ್ಟ ಸ್ಥಿತಿಯು ಮೂವತ್ತು ಮೂರು ಸಾಗರವಾಗಿದೆ. ಈ ಪ್ರಕಾರ ಜಘನ್ಯ ಸ್ಥಿತಿಯಿಂದ ಸಮಯ ಸಮಯದಂತೆ ಉತ್ಕೃಷ್ಟ ಸ್ಥಿತಿಯು ವೃದ್ಧಿಯನ್ನು ಹೊಂದುತ್ತಿರುವದು ಆಗ ಕರ್ಮದ ಯಾವ ಸ್ಥಿತಿಯು ಇರುವದೋ ಆ ಎಲ್ಲ ಸ್ಥಿತಿಯ ಒಂದೊಂದು ಸ್ಥಾನಕ್ಕೆ ಅಸಂಖ್ಯಾತ ಲೋಕ ಪ್ರಮಾಣ ಕಷಾಯಗಳ ಸ್ಥಾನವು ಕಾರಣವಾಗಿದೆ ಆ ಕಷಾಯಗಳ ಒಂದೊಂದು ಸ್ಥಾನವೂ ಅನಂತಸಲ ಈ ಜೀವಕ್ಕೆ ಪ್ರಾಪ್ತವಾಗಿದೆ ಅಂತಲೇ ಇಂಥ ಪರಿಭ್ರಮಣ ರೂಪ ಜಗತ್ತಿನಲ್ಲಿ ಜೀವವು ನಾನಾ ಭೇದರೂಪವಾದ ಚತುರ್ಗತಿಯಲ್ಲಿ ಪರಿಭ್ರಮಣ ಮಾಡುತ್ತ ನಿರಂತರ ದುಃಖ ಭೋಗಿಸುತ್ತಿದೆ. ಯಾವ ಜೀವವೂ ನಿಶ್ಚಲವಾಗಿಲ್ಲ ನೀರಿನೊಳಗಿನ ಬುದ್ಬುದದಂತೆ ಅವುಗಳ ಜೀವನವು

ಚಂಚಲವಾಗಿದೆ. ಭೋಗ ಸಂಪತ್ತಿಯು ಆಕಾಶದೊಳಗಿನ ಮೋಡದಂತೆ ಕ್ಷಣಭಂಗುರವಾಗಿದೆ ರಾಜ್ಯ, ಧನ, ಐಶ್ವರ್ಯ, ಹೆಂಡರು-ಮಕ್ಕಳು ಮೊದಲಾದವೆಲ್ಲ ಇಂದ್ರ ಧನುಷ್ಯದಂತೆ ಬೇಗನೇ ನಷ್ಟವಾಗುವಂಥವು ಇರುತ್ತವೆ. ಇಂಥ ಸಂಸಾರದಲ್ಲಿ ಈ ಪ್ರಾಣಿಯು ಅನಂತಾನಂತ ಪರಿವರ್ತನವನ್ನು ಹೊಂದುತ್ತಲಿದೆ ಇಂಥ ಸಂಸಾರದ ನಿಜವಾದ ಸ್ವರೂಪವನ್ನು ನೆನೆಯುವುದರಿಂದ ಸಂಸಾರ ಪರಿಭ್ರಮಣದ ಭಯವು ಉತ್ಪನ್ನವಾಗುತ್ತದೆ.

ಶರೀರದ ಸ್ವರೂಪ—ಈ ಮನುಷ್ಯ ಶರೀರವು ರೋಗವೆಂಬ ಹಾವಿನ ಬಿಲವಾಗಿದೆ. ಅಲ್ಲದೆ ಇದು ಅನಿತ್ಯವಾಗಿದೆ ದುಃಖಕ್ಕೆ ಕಾರಣವಾಗಿದೆ. ಅಪವಿತ್ರವೂ ನಿಃಸಾರವೂ ಆಗಿದೆ ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದರೂ ನಷ್ಟವಾಗುವಂಥದಿದೆ ಇದನ್ನು ತೊಳೆದಂತೆ ಹೊಲಸು ಹೊರಡುತ್ತ ಹೋಗುತ್ತದೆ. ಇದನ್ನು ಪೌಷ್ಟಿಕ ಆಹಾರದಿಂದ ಪೋಷಿಸುತ್ತ ಇದ್ದರೂ ಬಲಿಷ್ಟವಾಗುವದಿಲ್ಲ ಸುವಾಸಿಕ ದ್ರವ್ಯಗಳನ್ನು ಸವರುತ್ತ ಇದ್ದರೂ ಈ ಶರೀರದಿಂದ ದುರ್ಗಂಧವು ಬಾರದೆ ಇರುವದಿಲ್ಲ. ಸುಖದಲ್ಲಿ ಇಟ್ಟರೂ ಅದು ಹಾಗೇ ಇರುವದಿಲ್ಲ. ಅನೇಕ ವಸ್ತ್ರಾಲಂಕಾರಗಳಿಂದ ಅಲಂಕರಿಸುತ್ತಿದ್ದರೂ ಪ್ರತಿದಿನ ಕುರೂಪವಾಗುತ್ತ ಹೋಗುತ್ತದೆ. ಈ ಶರೀರವನ್ನು ಹಗಲಿರುಳೂ ಸುಂದರವಾಗಿಡಲು ಯತ್ನಿಸುತ್ತಿದ್ದರೂ ಅದು ಭಯಾನಕವಾಗಿ ತೋರುತ್ತದೆ. ಸುಖದಲ್ಲಿ ಇರುತ್ತಿರುತ್ತ ದುಃಖಿಯಾಗುತ್ತದೆ ಅನೇಕ ಪ್ರಕಾರದ ಮಂತ್ರೋಪಚಾರಗಳಿಂದ ಇದರ ಭಯವು ಇಲ್ಲದಂತಾಗುವದಿಲ್ಲ. ದೀಕ್ಷೆಯನ್ನು ಸ್ವೀಕರಿಸಿದರೂ ಶರೀರವು ಸಾಧುಮಾರ್ಗವನ್ನು ದೂಷಿತಗೊಳಿಸುತ್ತದೆ ಹಗಲಿರುಳೂ ಸುಗುಣಗಳನ್ನು ಸ್ವೀಕರಿಸುವದಕ್ಕಾಗಿ ಶಿಕ್ಷಣವನ್ನು ಒದಗಿಸುತ್ತಿದ್ದರೂ ಅದು ಗುಣಗಳಲ್ಲಿ ರಮಮಾಣವಾಗುವದಿಲ್ಲ. ಯಾವಾಗಲೂ ದುಃಖವನ್ನು ಭೋಗಿಸುತ್ತಿದ್ದೂ ಕಷಾಯಗಳ ಉಪಶಮವನ್ನು ಮಾಡಲಿಕ್ಕೆ ಇಚ್ಛಿಸುವದಿಲ್ಲ. ಬೇಡ ಬೇಡವೆಂದರೂ ಇದು ಪಾಪದ ಕಡೆಗೆ ಪ್ರವೃತ್ತವಾಗುತ್ತದೆ. ಪ್ರೇರಣೆಯನ್ನು ಮಾಡುತ್ತಿದ್ದರೂ ಅದು ಧರ್ಮವನ್ನು ಧಾರಣ ಮಾಡುವದಿಲ್ಲ. ಅದನ್ನು ಮೃದುಗೊಳಿಸಲು ಯತ್ನಿಸುತ್ತಿದ್ದರೂ ದಿನದಿನಕ್ಕೆ ಬಿರುಸಾಗುತ್ತ ಹೋಗುತ್ತದೆ. ಒಣಗಿರಲಿಕ್ಕೆ ಬೇಕಾದ ಉಪಾಯಗಳನ್ನು ಕೈಕೊಂಡರೂ ಅದು ಹಸಿಯಾಗುತ್ತ ಇರುತ್ತದೆ ಸುಗಂಧದ ಎಣ್ಣೆಗಳನ್ನು ತಿಕ್ಕುತ್ತಿದ್ದರೂ ದುರ್ಗಂಧವನ್ನುಬಿಡುವದಿಲ್ಲ. ಚಂದನಾದಿಗಳಿಂದ ತಣಿಸುತ್ತಿದ್ದರೂ ಪಿತ್ತದಿಂದ ಪ್ರಕೋಪಗೊಳ್ಳುತ್ತದೆ. ಶೋಷಣದ ಉಪಚಾರ ಮಾಡುತ್ತಿದ್ದರೂ ಬಾಯಿಂದ ಕಫವನ್ನು ಹೊರಗೆ ಹಾಕುತ್ತದೆ ಶರೀರವನ್ನು ಸ್ವಚ್ಛವಾಗಿ ಇಟ್ಟರೂ ಬಿಳುಪು ಮೊದಲಾದ ರೋಗಗಳು ಉತ್ಪನ್ನವಾಗುತ್ತವೆ. ತೊಗಲಿನಿಂದ ಸುತ್ತಲ್ಪಟ್ಟಿದ್ದರೂ ಕ್ಷೀಣವಾಗುತ್ತಿರುತ್ತದೆ ಹಗಲಿರುಳು ಸಂರಕ್ಷಿಸುತ್ತಿದ್ದರೂ ಕೊನೆಗೆ ಯಮನ ಬಾಯಿಗೆ ಬಲಿಯಾಗುತ್ತದೆ ಇದು ಶರೀರದ ಸ್ವಭಾವವಾಗಿದೆ. ಇದರ ಮೇಲಿನ ಮಮತೆಯು ಇಲ್ಲದಂತಾಗಲೆಂದು ಶರೀರದ ಸ್ವಭಾವವನ್ನು ಸದಾ ನೆನೆಯುತ್ತಿರಬೇಕು. ಅದರಂತೆ ಜಗತ್ತಿನ ಸ್ಥಿತಿಗತಿಯನ್ನು ನೆನೆಯುವುದರಿಂದ ಸಂಸಾರದ ಭೀತಿಯು ಉತ್ಪನ್ನವಾಗುತ್ತದೆ. ಇದಕ್ಕೆ ಸಂವೇಗವೆಂದೂ ಹೆಸರು ಇವೆಲ್ಲವುಗಳ ಸ್ವರೂಪ ಚಿಂತನವು ವೈರಾಗ್ಯ ಉತ್ಪನ್ನವಾಗಲಿಕ್ಕೆ ಪೋಷಕವಾಗಿದೆ.

## ಹದಿನಾರು ಕಾರಣ ಭಾವನೆಗಳು

ಇನ್ನು ಹದಿನಾರು ಕಾರಣ ಭಾವನೆಗಳನ್ನೂ ಸಹ ಶ್ರಾವಕರು ನೆನೆಯುತ್ತಿರಬೇಕು ಇವುಗಳ ಚಿಂತನೆಯಿಂದ ಅವ್ರತ ಸಮ್ಯಗ್ದೃಷ್ಟಿಗೂ ಕೂಡ ತೀರ್ಥಂಕರ ಪ್ರಕೃತಿಯ ಬಂಧವಾಗುತ್ತದೆ ಅದರಂತೆಯೇ ದೇಶವ್ರತಿ ಶ್ರಾವಕ, ಪ್ರಮತ್ತ ಸಂಯತ ಮತ್ತು ಅಪ್ರಮತ್ತ ಸಂಯತ ಇವರಿಗೂ ಸಹ ಆಗುತ್ತದೆ ಇದಕ್ಕಿಂತಲೂ ಹೆಚ್ಚಾದ ಪುಣ್ಯಪ್ರಕೃತಿಯು ಮೂರು ಲೋಕದಲ್ಲಿ ಬೇರೊಂದಿಲ್ಲ ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರ 'ಗೊಮ್ಮಟಸಾರ'ದಲ್ಲಿ ಈ ವಿಷಯವಲ್ಲಿ ಹೀಗೆ ಹೇಳಿದೆ—

> ಪಢಮುವಸಮಿಯೇ ಸಮ್ಮೇ ಸೇಸತಿಯೇ ಅವಿರದಾದಿ ಚತ್ತಾರಿ ।
> ತಿತ್ಥಯರಬಂಧಪಾರಂಭಯಾ ಣರಾ ಕೇವಲಿದುಗಂತೇ ॥ ೧ ॥

ಅರ್ಥ—ತೀರ್ಥಂಕರ ಪ್ರಕೃತಿಯ ಬಂಧದ ಪ್ರಾರಂಭವು ಕರ್ಮಭೂಮಿಯೊಳಗಿನ ಪುರುಷಲಿಂಗಧಾರಿಯಾದ ಮಾನವನಿಗೇನೇ ಆಗುತ್ತದೆ ಉಳಿದ ಮೂರು ಗತಿಗಳಲ್ಲಿ ಈ ಪ್ರಕೃತಿಯ ಆರಂಭವು ಆಗುವದಿಲ್ಲ. ಹಾಗೆಯೇ ಕೇವಲಿ ಮತ್ತು ಶ್ರುತಕೇವಲಿಗಳ ಚರಣ ಕಮಲಗಳ ಸಾಂನಿಧ್ಯದಲ್ಲಿಯೇ ಅದು ಆಗುತ್ತದೆ. ಕೇವಲಿ ಮತ್ತು ಶ್ರುತಕೇವಲಿಗಳ ಸಾಂನಿಧ್ಯವಿಲ್ಲದೆ ಅನ್ಯಸ್ಥಳದಲ್ಲಿ ತೀರ್ಥಂಕರ ಪ್ರಕೃತಿಯು ಕಟ್ಟಲಿಕ್ಕೆ ಯೋಗ್ಯವಾದ ಪರಿಣಾಮ

ಶುದ್ಧಿಯು ಆಗುವದು ಸಾಧ್ಯವಿಲ್ಲ ಈ ತೀರ್ಥಂಕರರ ಪ್ರಕೃತಿಯು ಬಂಧವು ಪ್ರಥಮೋಪಶಮ ಸಮ್ಯಕ್ತ್ವ, ದ್ವಿತೀಯೋಪಶಮ ಸಮ್ಯಕ್ತ್ವ, ಕ್ಷಾಯೋಪಶಮಿಕ ಮತ್ತು ಕ್ಷಾಯಿಕ ಸಮ್ಯಕ್ತ್ವ ಈ ನಾಲ್ಕು ಪ್ರಕಾರದ ಸಮ್ಯಕ್ತ್ವಗಳಲ್ಲಿ ಯಾವುದಾದರೊಂದರಲ್ಲಿ ಆಗುತ್ತದೆ.

ತೀರ್ಥಂಕರ ಪ್ರಕೃತಿಯು ಬಂಧವಾಗಲಿಕ್ಕೆ ಕಾರಣವಾಗುವಂಥ ಭಾವನೆಗಳು ಹದಿನಾರು ಇವೆ. ಈ ಭಾವನೆಗಳು ಎಲ್ಲ ಪಾಪಗಳನ್ನು ನಾಶಮಾಡುತ್ತವೆ ಪರಿಣಾಮದ ಅಶುದ್ಧತೆಯನ್ನು ನಷ್ಟಗೊಳಿಸುತ್ತವೆ ಇವುಗಳನ್ನು ಕೇಳುವ ಮತ್ತು ಪಠಿಸುವ ಜನರ ಸಂಸಾರ ಬಂಧವನ್ನು ನಾಶಗೊಳಿಸುತ್ತವೆ ಅದಕ್ಕಾಗಿ ಇವುಗಳನ್ನು ನಿರಂತರವಾಗಿ ಚಿಂತಿಸುತ್ತಿರಬೇಕು.

ಹದಿನಾರು ಭಾವನೆಗಳ ಹದಿನಾರು ಜಯಮಾಲೆಗಳ ಅರ್ಥವನ್ನು ತಿಳಿದುಕೊಂಡು, ಭಕ್ತಿಪೂರ್ವಕ ಅವುಗಳನ್ನು ಪಠಿಸುವುದರಿಂದ ಮಹಾನ್ ಪುಣ್ಯವನ್ನು ಸಂಪಾದಿಸಲಿಕ್ಕೆ ಸಾಧ್ಯವಾಗುತ್ತದೆ ಪರಿಣಾಮದ ವಿಶುದ್ಧತೆಗಾಗಿ ಅವುಗಳ ಅರ್ಥವನ್ನು ಸವಿಸ್ತಾರವಾಗಿ ಇಲ್ಲಿ ಕೊಡಲಾಗಿದೆ—

ಎಲೈ, ಸಂಸಾರ ಸಮುದ್ರದೊಳಗಿಂದ ತೇಲಿಸಿ ಒಯ್ಯುವಂಥ, ಕುಮತಿಯನ್ನು ನಿವಾರಣ ಮಾಡುವಂಥ, ತೀರ್ಥಂಕರ ಪದವಿಯನ್ನು ಪ್ರಾಪ್ತಮಾಡಿಕೊಡುವಂಥ, ನಿರ್ವಾಣ ಪದಕ್ಕೆ ಮುಟ್ಟಿಸುವಂಥ ಹದಿನಾರು ಕಾರಣಗಳೇ, ನಾನು ನಿಮಗೆ ನಮಸ್ಕಾರಮಾಡಿ, ನಿಮ್ಮ ಸ್ತುತಿಯನ್ನು ಮಾಡುತ್ತೇನೆ

**ಹದಿನಾರು ಕಾರಣ ಭಾವನೆಗಳ ವರ್ಣನೆ**—ಯಾರಿಗೆ ಹದಿನಾರು ಕಾರಣ ಭಾವನೆಗಳು ಆಗುತ್ತವೆಯೋ ಅವರು ತೀರ್ಥಂಕರರಾಗುವವರೆಂಬುದು ನಿಶ್ಚಿತವಿದೆ ಅವರ ಕುಗತಿಯು ಮುಗಿದಂತಾಯಿತು ಅವರು ಸಂಸಾರ ಸಮುದ್ರದೊಳಗಿಂದ ಈಸಿ ಹೋದಂತಾಯಿತು ವಿದೇಹಕ್ಷೇತ್ರದಲ್ಲಿ ಅನೇಕ ಜೀವಗಳಿಗೆ ಗೃಹಸ್ಥಾಶ್ರಮದಲ್ಲಿರುವಾಗಲೇ ಕೇವಲಿ ಶ್ರುತಕೇವಲಿಗಳ ಸಾಂನಿಧ್ಯದಲ್ಲಿ ಹದಿನಾರು ಕಾರಣ ಭಾವನೆಗಳನ್ನು ನೆನೆಯುವುದರಿಂದ ಅದೇ ಜನ್ಮದಲ್ಲಿ ದೇವರ ಕಡೆಯಿಂದ ಅವರ ತಪಃಕಲ್ಯಾಣಕ, ಜ್ಞಾನ ಕಲ್ಯಾಣಕ, ನಿರ್ವಾಣ ಕಲ್ಯಾಣಕಗಳು ಮಾಡಲ್ಪಡುತ್ತವೆ ಮತ್ತು ಅವರು ಮೋಕ್ಷಕ್ಕೆ ಹೋಗುತ್ತಾರೆ ಅನೇಕರು ತಮ್ಮ ಪೂರ್ವ ಭವದಲ್ಲಿ ಕೇವಲಿ ಇಲ್ಲವೆ ಶ್ರುತಕೇವಲಿಗಳ ಸಾಂನಿಧ್ಯದಲ್ಲಿ ಹದಿನಾರು ಕಾರಣ ಭಾವನೆಗಳನ್ನು ಭಾವಿಸಿ ಸೌಧರ್ಮ ಸ್ವರ್ಗವೇ ಮೊದಲಾದ ಸರ್ವಾರ್ಥ ಸಿದ್ಧಿಗಳಲ್ಲಿ ಅಹಮಿಂದ್ರರ ವರೆಗೆ ಜನ್ಮವನ್ನು ತಕ್ಕೊಳ್ಳುತ್ತಾರೆ ಮುಂದೆ ತೀರ್ಥಂಕರರಾಗಿ ನಿರ್ವಾಣ ಹೊಂದುತ್ತಾರೆ. ಅನೇಕರು ಪೂರ್ವಜನ್ಮದಲ್ಲಿ ಮಿಥ್ಯಾ ಶ್ರದ್ಧೆಯನ್ನು ಇಟ್ಟು, ನರಕ ಗತಿಯು ಬಂಧವನ್ನು ಮಾಡಿಕೊಂಡರು. ಮುಂದೆ ಕೇವಲಿ, ಶ್ರುತಕೇವಲಿಗಳ ಆಶ್ರಯದಿಂದ ಸಮ್ಯಕ್ತ್ವವನ್ನು ಗ್ರಹಣಮಾಡಿ, ಹದಿನಾರು ಕಾರಣ ಭಾವನೆಗಳನ್ನು ಚಿಂತಿಸಿದರು ಆದರೂ ಪೂರ್ವದಲ್ಲಿ ಮಾಡಿದ ಪಾಪದಿಂದ ಆದ ಗತಿಬಂಧಕ್ಕಾಗಿ ಅವರಿಗೆ ನರಕಕ್ಕೆ ಹೋಗಬೇಕಾಯಿತು. ಅಂದರೂ ಅವರು ನರಕದಿಂದ ಹೊರಬಿದ್ದು, ತೀರ್ಥಂಕರರಾಗಿ ಮೋಕ್ಷಕ್ಕೆ ಹೋಗುತ್ತಾರೆ ಪೂರ್ವ ಜನ್ಮದಲ್ಲಿ ಹದಿನಾರು ಭಾವನೆಗಳನ್ನು ಭಾವಿಸಿದುದರಿಂದ ತೀರ್ಥಂಕರ ಪ್ರಕೃತಿಯಂತೂ ಕಟ್ಟುತ್ತದೆ. ಅದರಿಂದ ಅವರಿಗೆ ಐದು ಕಲ್ಯಾಣಕಗಳ ಮಹಿಮೆಯು ಪ್ರಾಪ್ತವಾಗುತ್ತದೆ ಇನ್ನು ವಿದೇಹ ಕ್ಷೇತ್ರದಲ್ಲಿ ಗೃಹಸ್ಥಾವಸ್ಥೆಯಲ್ಲಿದ್ದಾಗಲೇ ಯಾರಿಗೆ ತೀರ್ಥಂಕರ ಪ್ರಕೃತಿಗಳು ಕಟ್ಟುತ್ತವೆಯೋ ಅವರು ಅದೇ ಜನ್ಮದಲ್ಲಿ ತಪ, ಜ್ಞಾನ, ನಿರ್ವಾಣ, ಈ ಮೂರು ಕಲ್ಯಾಣಕಗಳನ್ನು ಭೋಗಿಸಿ ಮೋಕ್ಷಕ್ಕೆ ಹೋಗುತ್ತಾರೆ. ಹಲವರು ವಿದೇಹ ಕ್ಷೇತ್ರದಲ್ಲಿ ಮುನಿಯ ವ್ರತವನ್ನು ಸ್ವೀಕರಿಸಿ, ತರುವಾಯ ಕೇವಲಿ, ಶ್ರುತಕೇವಲಿಗಳ ಹತ್ತಿರ ಈ ಹದಿನಾರು ಕಾರಣ ಭಾವನೆಗಳನ್ನು ಚಿಂತಿಸಿ, ಆ ಭವದಲ್ಲಿಯೇ ತೀರ್ಥಂಕರರಾಗಿ ಜ್ಞಾನ ಹಾಗೂ ನಿರ್ವಾಣಗಳೆಂಬ ಎರಡು ಕಲ್ಯಾಣಕಗಳನ್ನು ಭೋಗಿಸಿ, ಮೋಕ್ಷಕ್ಕೆ ಹೋಗುತ್ತಾರೆ ಯಾಕಂದರೆ ಅವರ ತಪಃ ಕಲ್ಯಾಣಕವು ಮೊದಲೇ ಆಗಿ ಹೋಗಿರುತ್ತದೆ. ಅದು ಪುನಃ ಆಗುವ ಅವಶ್ಯಕತೆ ಇಲ್ಲ ಯಾರಿಗೆ ತೀರ್ಥಂಕರ ಪ್ರಕೃತಿಯು ಬಂಧವಾಗುವುದೋ ಅವರು, ಭವನತ್ರಿಕ ದೇವರಲ್ಲಿಯೂ ಕುಮಾನುಷ್ಯ–ತಿರ್ಯಂಚರಲ್ಲಿಯೂ ಭೋಗ-ಭೂಮಿಯಲ್ಲಿಯೂ ಜನಿಸುವದಿಲ್ಲ ಅಲ್ಲದೆ ಸ್ತ್ರೀ, ನಪುಂಸಕ, ಏಕೇಂದ್ರಿಯ, ವಿಕಲ ಚತುಷ್ಕಾದಿಭವಗಳಲ್ಲಿಯೂ ಅವರು ಉತ್ಪನ್ನವಾಗುವದಿಲ್ಲ. ಹಾಗೆಯೇ ಮೂರನೆಯ ನರಕದ ಕೆಳಗೆ ಜನ್ಮವನ್ನೂ ತಕ್ಕೊಳ್ಳುವದಿಲ್ಲ ಅಂತಲೇ ಹದಿನಾರು ಕಾರಣ ಭಾವನೆಗಳು ಕೆಟ್ಟ ಗತಿಯನ್ನು ನಿವಾರಣ ಮಾಡುವಂಥವು ಇರುತ್ತವ ಇಷ್ಟೇ ಅಲ್ಲ, ಹದಿನಾರು ಕಾರಣ ಭಾವನೆಗಳು ಉಂಟಾದ ತರುವಾಯ ಮೂರನೆಯ ಭವದಲ್ಲಿ ನಿರ್ವಾಣವು ಪ್ರಾಪ್ತವಾಗುತ್ತದೆ ಅದಕ್ಕಾಗಿ ಅವು ಮೋಕ್ಷಕ್ಕೆ ಕಾರಣವಾಗಿವೆಯೆಂದು ಹೇಳಲಾಗಿದೆ ಇಂಥ ಕಾರಣ ಭಾವನೆಗಳಿಗೆ ನಮಸ್ಕಾರಮಾಡಿ ಅವುಗಳ ವರ್ಣನೆಯನ್ನು ಮಾಡುವೆ

೧ ಎಲೈ ಭವ್ಯ ಜೀವಿಗಳೆ, ದುರ್ಲಭವಾದ ಮಾನವ ಜನ್ಮವು ನಿಮಗೆ ಪ್ರಾಪ್ತವಾಗಿದೆ. ಅಂದ ಮೇಲೆ ನೀವು ಇಪ್ಪತ್ತೈದು ದೋಷಗಳನ್ನುಳಿದು ದರ್ಶನವಿಶುದ್ಧಿ ಎಂಬ ಹೆಸರಿನ ಭಾವನೆಯನ್ನು ಭಾವಿಸಿರಿ. ಸಮ್ಯಗ್ದರ್ಶನವನ್ನು ನಷ್ಟಗೊಳಿಸುವ ಮೂರು ಮೂಢತೆಗಳು, ಎಂಟು ಮದ, ಆರು ಅನಾಯತನ, ಸಂಶಯವೇ ಮೊದಲಾದ ಎಂಟು ದೋಷಗಳು ಸೇರಿ ಇಪ್ಪತ್ತೈದು ದೋಷಗಳಾಗುತ್ತವೆ ಇವುಗಳನ್ನು ತ್ಯಾಗಮಾಡಿರಿ ಅಂದರೆ ನಿಮ್ಮ ಸಮ್ಯಗ್ದರ್ಶನವು ಅತಿಶಯ ನಿರ್ಮಲವಾದೀತು ಇದು ದರ್ಶನವಿಶುದ್ಧಿ ಭಾವನೆಯಾಗಿದೆ

೨ ವಿನಯ ಸಂಪನ್ನತೆ ಎಂದರೆ ಐದು ಪ್ರಕಾರದ ವಿನಯಗಳನ್ನು ಯಥಾಯೋಗ್ಯವಾಗಿ ಪಾಲಿಸುವದು. ಈ ಐದು ಭೇದಗಳನ್ನು ಸರ್ವಜ್ಞ ಪ್ರಭುವು ಪರಮಾಗಮದಲ್ಲಿ ಹೇಳಿದ್ದಾನೆ ದರ್ಶನವಿನಯ, ಜ್ಞಾನವಿನಯ, ಚಾರಿತ್ರವಿನಯ, ತಪೋವಿನಯ ಮತ್ತು ಉಪಚಾರವಿನಯ ಈ ಐದು ವಿನಯಗಳು ಜಿನಶಾಸನದ ತಳಹದಿಯಾಗಿವೆ. ಈ ಐದು ಪ್ರಕಾರದ ವಿನಯಗಳು ಇಲ್ಲದಲ್ಲಿ ಜಿನ ಧರ್ಮದ ಪ್ರವೃತ್ತಿಯೇ ಇಲ್ಲ ಅಂತಲೇ ಜಿನೇಂದ್ರ ದೇವನು ಇವುಗಳಿಗೆ ಜಿನಶಾಸನದ ಆಧಾರವೆಂದು ಹೇಳಿದ್ದಾನೆ.

೩ ಅತಿಚಾರವಿಲ್ಲದಂಥ ಶೀಲವನ್ನು ಪಾಲಿಸಿರಿ. ಶೀಲವು ಮಲಿನವಾಗದಂತೆ ಇಡಿರಿ. ನಿರ್ಮಲವಾದ ಶೀಲವು ಮೋಕ್ಷ ಮಾರ್ಗದಲ್ಲಿ ದೊಡ್ಡ ಸಹಾಯಕಾರಿಯಾಗಿದೆ ಯಾರ ಶೀಲವು ನಿರ್ಮಲವಾಗಿರುವುದೋ ಅವರಿಗೆ ಇಂದ್ರಿಯ ವಿಷಯಗಳು ಮತ್ತು ಕಷಾಯ ಪರಿಗ್ರಹಗಳೇ ಮೊದಲಾದವುಗಳು ಮೋಕ್ಷ ಮಾರ್ಗದಲ್ಲಿ ವಿಘ್ನವನ್ನು ಉಂಟುಮಾಡುವದಿಲ್ಲ

೪ ದುರ್ಲಭವಾದ ಮನುಷ್ಯ ಜನ್ಮದಲ್ಲಿ ಜ್ಞಾನಾಭ್ಯಾಸದಲ್ಲಿಯೇ ಮನಸ್ಸನ್ನು ತೊಡಗಿಸಿ ಇಡಿರಿ. ಸಮ್ಯಗ್ಜ್ಞಾನದ ಹೊರತಾಗಿ ಒಂದು ಕ್ಷಣವನ್ನೂ ಕಳೆಯಬೇಡಿರಿ ಅನ್ಯ ಸಂಕಲ್ಪ ವಿಕಲ್ಪಗಳು ಸಂಸಾರದಲ್ಲಿ ಮುಳುಗಿಸುವಂಥವು ಇರುತ್ತವೆ ಇದನ್ನರಿತು ಅವುಗಳನ್ನು ತ್ಯಾಗಮಾಡಿರಿ

೫ ಧರ್ಮದ ಮೇಲೆ ಪ್ರೀತಿಯನ್ನಿಟ್ಟು, ಸಂಸಾರದೊಳಗಿನ ಶರೀರಕ್ಕೆ ಸಂಬಂಧಿಸಿದ ಭೋಗದಿಂದ ವಿರಕ್ತರಾಗಿ ಸಂವೇಗ ಭಾವನೆಯನ್ನು ಮನಸ್ಸಿನಲ್ಲಿ ಚಿಂತಿಸುತ್ತಿರಬೇಕು ಇದರಿಂದ ವಿಷಯಗಳ ಮೇಲಿನ ಪ್ರೀತಿಯು ಸಂಪೂರ್ಣ ಇಲ್ಲದಂತಾಗುವದು ಮೇಲಾಗಿ ಧರ್ಮ ಹಾಗೂ ಧರ್ಮದ ಫಲಗಳಲ್ಲಿ ನಮ್ಮ ಪ್ರವೃತ್ತಿಯು ದೃಢವಾಗುವದು

೬. ಆತ್ಮನ ಘಾತವನ್ನು ಮಾಡುವಂಥ ಲೋಭಾದಿ ನಾಲ್ಕು ಕಷಾಯಗಳಾಗಿವೆ ಅವುಗಳ ತ್ಯಾಗ ಮಾಡು ತಮ್ಮ ಶಕ್ತಿಗೆ ಅನುಸರಿಸಿ ಆಹಾರವೇ ಮೊದಲಾದ ನಾಲ್ಕು ಪ್ರಕಾರದ ದಾನಗಳನ್ನು ಸುಪಾತ್ರದ ಗುಣದ ಮೇಲೆ ಪ್ರೀತಿಯಿಟ್ಟು ಮಾಡಬೇಕು ಇದಕ್ಕೆ ಶಕ್ತಿ ಇದ್ದಷ್ಟು ತ್ಯಾಗ ಎಂಬ ಭಾವನೆಯಾಗಿದೆ

೭. ಅಂತರಂಗ ಮತ್ತು ಬಹಿರಂಗ ಎಂಬ ಎರಡೂ ವಿಧ ಪರಿಗ್ರಹಗಳ ಮೇಲಿನ ಆಸಕ್ತಿಯನ್ನು ಬಿಡಿರಿ ವಿಷಯದ ಇಚ್ಛೆಯನ್ನು ಸಂಪೂರ್ಣ ಇಲ್ಲದಂತೆ ಮಾಡಿ, ತಮ್ಮ ಶಕ್ತಿಗೆ ಅನುಸರಿಸಿ ತಪಶ್ಚರ್ಯವನ್ನು ಮಾಡಬೇಕು. ಅಂದರೆ ಶಕ್ತಿ ಇದ್ದಷ್ಟು ತಪಭಾವನೆ ಎನಿಸುವದು

೮ ಅಂತಃಕರಣದೊಳಗಿನ ರಾಗಾದಿ ವಿಕಾರ ಮತ್ತು ಇಂದ್ರಿಯ ವಿಷಯಗಳನ್ನು ತ್ಯಜಿಸಿ ಪರಮ ವೀತರಾಗ ರೂಪದಲ್ಲಿರುವ ಸಾಧು ಸಮಾಧಿಯನ್ನು ಸ್ವೀಕರಿಸಿರಿ ಸಾಧು ಪುರುಷರ ಮೇಲೆ ಸಂಕಟ ಬಂದಾಗ ಅವುಗಳನ್ನು ದೂರಮಾಡುವ ಪ್ರಯತ್ನ ಮಾಡಿರಿ.

೯ ಸಂಸಾರದೊಳಗಿನ ದುಃಖದ ನಿರಾಕರಣಮಾಡುವಂಥ ಹತ್ತು ಪ್ರಕಾರದ ವೈಯ್ಯಾವೃತ್ಯಗಳನ್ನು ಕೈಕೊಳ್ಳಿರಿ.

೧೦. ಅರಿಹಂತರ ಗುಣಗಳಲ್ಲಿ ಭಕ್ತಿಯನ್ನಿಟ್ಟು, ಅವರ ನಾಮಾದಿಗಳ ಧ್ಯಾನಮಾಡಿರಿ ಅಂದರೆ ಅರ್ಹಂತ ಭಕ್ತಿಯು ಸಂಭವಿಸೀತು

೧೧. ಐದು ಪ್ರಕಾರದ ಆಚಾರಗಳನ್ನು ಸ್ವತಃ ಆಚರಿಸುತ್ತಲೂ ಉಳಿದ ಶಿಷ್ಯರ ಕಡೆಯಿಂದ ಆಚರಿಸಲಿಕ್ಕೆ ಹಚ್ಚುತ್ತಲೂ ಇರುವವರಿಗೆ ಆಚಾರ್ಯರೆನ್ನುತ್ತಾರೆ. ಇವರು ದೀಕ್ಷೆ ಮತ್ತು ಶಿಕ್ಷಣಗಳನ್ನು ಕೊಡುವದರಲ್ಲಿ ನಿಪುಣರಿರುತ್ತಾರೆ ಧರ್ಮದ ಆಧಾರದೂಟಿಗಳೂ ಎನಿಸುತ್ತಾರೆ ಇಂಥ ಆಚಾರ್ಯ ಪರಮೇಷ್ಠಿಯ ಗುಣಗಳ ಮೇಲೆ ಅಂತಃಕರಣ ಪೂರ್ವಕವಾಗಿ ಪ್ರೀತಿಯನ್ನು ಇಡಿರಿ ಇದಕ್ಕೇನೇ ಆಚಾರ್ಯಭಕ್ತಿ ಎನ್ನುತ್ತಾರೆ

೧೨ ಜ್ಞಾನದಲ್ಲಿ ಪ್ರವೃತ್ತಿಯನ್ನು ಉಂಟುಮಾಡುವವರು, ನಿರಂತರವಾಗಿ ಸಮ್ಯಗ್‌ಜ್ಞಾನದ ಪಠಣವನ್ನು ಸ್ವತಃ ಮಾಡಿ ಅನ್ಯ ಶಿಷ್ಯರಿಂದಲೂ ಮಾಡಿಸಲಿಕ್ಕೆ ತತ್ಪರರಾದವರು, ನಾಲ್ಕೂ ಅನುಯೋಗದ ಶಾಸ್ತ್ರಗಳಲ್ಲಿ ಪಾರಂಗತ-ರಾದವರು, ಅಂಗ ಪೂರ್ವ ಮೊದಲಾದ ಶ್ರುತಜ್ಞಾನವುಳ್ಳವರು ಉಪಾಧ್ಯಾಯ ಪರಮೇಷ್ಠಿಗಳು ಇವರ ವಿಷಯದಲ್ಲಿ ಭಕ್ತಿಯನ್ನಿಡುವದಕ್ಕೆ ಬಹು ಶ್ರುತ ಭಕ್ತಿ ಎನ್ನುವರು

೧೩ ಜಿನಶಾಸನವನ್ನು ಪುಷ್ಟಗೊಳಿಸುವಂಥದು ಆಗಮವಾಗಿದೆ ಅದು ಸಂಶಯವೆಂಬ ಅಂಧಕಾರವನ್ನು ದೂರಮಾಡುವದು ಸೂರ್ಯನ ಹಾಗೆ ಜ್ಞಾನದ ಬೆಳಕನ್ನು ಕೊಡುವದು ಅಲ್ಲದೆ ಅದು ಸರ್ವಜ್ಞ ಪ್ರಣೀತವಾಗಿದ್ದು ಅನೇಕಾಂತಾತ್ಮಕವಾಗಿರುವದು ಇಂಥ ಆಗಮಗಳನ್ನು ಅಭ್ಯಾಸಮಾಡುವುದರಲ್ಲಿಯೂ ಕೇಳುವುದರಲ್ಲಿಯೂ ಚಿಂತಿಸುವುದರಲ್ಲಿಯೂ ಭಕ್ತಿಯನ್ನು ಇಡುವದಕ್ಕೆ ಪ್ರವಚನ ಭಕ್ತಿ ಎನ್ನುವರು.

೧೪ ಮಾಡಲಿಕ್ಕೆ ಯೋಗ್ಯವಾದಂಥ ಆರು ಆವಶ್ಯಕ ಕ್ರಿಯೆಗಳಿವೆ ಇವು ಅಶುಭ ಕರ್ಮದ ಆಗಮನವನ್ನು ತಡೆದು, ಇದ್ದ ಕರ್ಮವನ್ನೂ ನಷ್ಟಗೊಳಿಸುವಂಥವು ಇವೆ ಇವು ಅಶರಣರಿಗೂ ಶರಣಸ್ಥಾನವಾಗಿವೆ ಇವುಗಳನ್ನು ಹೊತ್ತು ಹೊತ್ತಿಗೆ ಮಾಡುವುದಕ್ಕೆ ಆವಶ್ಯಕಾಪರಿಹಾರಿಣೀ ಭಾವನೆ ಎನ್ನುವರು

೧೫ ಜನರಲ್ಲಿ ಹಬ್ಬಿದಂಥ ಅಜ್ಞಾನವನ್ನು ದೂರಮಾಡಿ, ವಿದ್ವತ್ತೆ ಹಾಗೂ ಶುದ್ಧ ಆಚರಣೆಗಳಿಂದ ಪ್ರಭಾವವನ್ನು ಬೀರಿ, ಜಿನಮಾರ್ಗದ ಮಹಾತ್ಮ್ಯವನ್ನು ಪ್ರಕಟಮಾಡುವದಕ್ಕೆ ಮಾರ್ಗಪ್ರಭಾವನೆ ಎನ್ನುವರು ಈ ಮಾರ್ಗಪ್ರಭಾವನೆಯಿಂದ ಅನೇಕ ಪುರುಷರಲ್ಲಿ ವೀತರಾಗ ಧರ್ಮದ ಪ್ರವೃತ್ತಿಯು ಉಂಟಾಗುತ್ತದೆ ಅಲ್ಲದೆ ಕುಮಾರ್ಗದ ಅಭಾವವಾಗುತ್ತದೆ

೧೬ ಧರ್ಮ, ಧರ್ಮಾತ್ಮ ಪುರುಷ, ಧರ್ಮದ ಆಯತನ ಮತ್ತು ಪರಮಾಗಮದ ಅನೇಕಾಂತ ರೂಪ ವಾಕ್ಯ ಇವುಗಳಲ್ಲಿ ಅತ್ಯಂತ ಪ್ರೀತಿಯನ್ನು ಇಡುವುದಕ್ಕೆ ವಾತ್ಸಲ್ಯ ಭಾವನೆ ಎನ್ನುವರು ಈ ವಾತ್ಸಲ್ಯ ಭಾವನೆಯಿಂದ ದುರ್ಧರವಾದಂಥ ಮೋಹ ಮತ್ತು ಮಾನ ಇವುಗಳ ನಾಶವಾಗುತ್ತದೆ

ಈ ಪ್ರಕಾರ ನಿರ್ವಾಣ ಸುಖವನ್ನು ಕೊಡುವಂಥ ಈ ಹದಿನಾರು ಭಾವನೆಗಳನ್ನು ಯಾವ ಭವ್ಯ ಜೀವವು ಸ್ಥಿರ ಚಿತ್ತದಿಂದ ಚಿಂತಿಸುವುದೋ ಅದಕ್ಕೇನೇ ಎಲ್ಲ ಜೀವಗಳ ಹಿತವನ್ನು ಸಾಧಿಸುವಂಥ ತೀರ್ಥಂಕರ ಪದವು ಪ್ರಾಪ್ತವಾಗುತ್ತದೆ ಆದರೆ ಅಂಥವರ ಆತ್ಮದಲ್ಲಿ ಅತ್ಯಂತ ಉತ್ಕಟತೆಯಿಂದ ಈ ಭಾವನೆಗಳು ಸ್ಫುರಣಹೊಂದ-ಬೇಕಾಗುತ್ತದೆ ಆಗ ಅದಕ್ಕೆ ಪಂಚಮ ಗತಿಯು ಪ್ರಾಪ್ತವಾಗುತ್ತದೆ ಹೀಗೆ ಈ ಹದಿನಾರು ಭಾವನೆಗಳ ಸ್ವರೂಪವನ್ನು ಸಂಗ್ರಹವಾಗಿ ಹೇಳಲಾಗಿದೆ ಇನ್ನು ಪ್ರತಿಯೊಂದು ಭಾವನೆಯನ್ನು ವಿವರವಾಗಿ ವರ್ಣಿಸುವೆ

## ದರ್ಶನ ವಿಶುದ್ಧಿ ಮತ್ತು ಅದರ ಅಂಗಗಳ ಸ್ವರೂಪ

೧. ದರ್ಶನ ವಿಶುದ್ಧಿ—ಎಲೈ ಭವ್ಯ ಜೀವಿಗಳೆ, ಈ ಪ್ರಾಪ್ತವಾದ ಮಾನವ ಜನ್ಮವು ಸಫಲವಾಗ ಬೇಕಾದರೆ ನಿಮ್ಮ ಸಮ್ಯಗ್ದರ್ಶನದ ಶುದ್ಧಿಯನ್ನು ಮಾಡಿಕೊಳ್ಳಿರಿ ಸಮ್ಯಗ್ದರ್ಶನವು ಸಂಪೂರ್ಣ ಧರ್ಮದ ಮೂಲವಾಗಿದೆ ಸಮ್ಯಕ್ತ್ವವಿಲ್ಲದೆ ಶ್ರಾವಕ ಧರ್ಮವು ನಡೆಯುವದಿಲ್ಲ ಅಲ್ಲದೆ ಮುನಿ ಧರ್ಮವೂ ನೆರವೇರುವದಿಲ್ಲ. ಸಮ್ಯಗ್ದರ್ಶನವನ್ನುಳಿದ ಜ್ಞಾನವು ಕುಜ್ಞಾನವಾಗಿದೆ. ಚಾರಿತ್ರವಿದ್ದರೆ ಕುಚಾರಿತ್ರವಾಗಿದೆ, ತಪವಿದ್ದರೆ ಕುತಪವಾಗಿದೆ. ಸಮ್ಯಗ್ದರ್ಶನವಿಲ್ಲದುದಕ್ಕೆ ಈ ಜೀವವು ಅನಂತಾನಂತ ಕಾಲದ ವರೆಗೆ ಪರಿಭ್ರಮಣ ಮಾಡಿದೆ ಈಗ ಚತುರ್ಗತಿ ರೂಪದಲ್ಲಿರುವ ಸಂಸಾರ ಪರಿಭ್ರಮಣದಿಂದ ಬಿಡುಗಡೆ ಹೊಂದಬೇಕು, ಹುಟ್ಟು, ಮುಪ್ಪು, ಮರಣಗಳಿಂದ ಮುಕ್ತನಾಗಬೇಕು, ಅನಂತವೂ ಅವಿನಾಶಿಯೂ ಆದ ಆತ್ಮ ಸುಖದ ಲಾಭವನ್ನು ಹೊಂದಬೇಕು, ಹೀಗೆ ಅನಿಸುತ್ತಿದ್ದರೆ ಬೇರೆ ಎಲ್ಲ ಪರದ್ರವ್ಯಗಳ ಮೇಲಿನ ಅಭಿಲಾಷೆಯನ್ನು ಬಿಟ್ಟು, ಸಮ್ಯಗ್ದರ್ಶನದ ಶುದ್ಧಿಯನ್ನು ಮಾಡಿರಿ ಈ ದರ್ಶನ ವಿಶುದ್ಧಿಯಿಂದ ದುರ್ಗತಿಯ ನಾಶವಾಗಿ ನಿರ್ವಾಣ ಸುಖವು ಪ್ರಾಪ್ತವಾಗುತ್ತದೆ ವಿನಯ ಸಂಪನ್ನತೆಯೇ ಮೊದಲಾದ ಯಾವ ಹದಿನೈದು ಭಾವನೆಗಳು ಇರುವವೋ ಅವೆಲ್ಲಕ್ಕೂ ಮೂಲವು ದರ್ಶನವಿಶುದ್ಧಿ ಭಾವನೆಯೇ ಆಗಿದೆ ಇದು ಇಲ್ಲದಿದ್ದರೆ ಮುಂದಿನ ಹದಿನೈದು ಭಾವನೆಗಳೇ ಹುಟ್ಟುವದಿಲ್ಲ ಅದಕ್ಕಾಗಿ ಈ ಭಾವನೆಯು ಸಂಸಾರದ ದುಃಖವೆಂಬ ಕತ್ತಲೆಯನ್ನು ಕಳೆಯುವ ಸೂರ್ಯನೆಂದು ಹೇಳಿದೆ ಇದು ಭವ್ಯ ಜೀವಕ್ಕೆ ಪರಮ ಶರಣವಾಗಿದೆ ಯಾವುದರ ಸಹಾಯದಿಂದ ಸ್ವಪರದ್ರವ್ಯವೊಳಗಿನ ಭೇದ ವಿಜ್ಞಾನವು ಸ್ಪಷ್ಟವಾಗುವುದೋ ಅಂದೆ ಸಮ್ಯಗ್ದರ್ಶನವು

ಸಂಪಾದಿಸಲಿಕ್ಕೆ ಯತ್ನಿಸಿರಿ ಈ ಜೀವವು ಅನಾದಿಕಾಲದಿಂದ ಮಿಥ್ಯಾತ್ವ ಕರ್ಮದ ವಶವಾಗಿರುವುದರಿಂದ ಅದಕ್ಕೆ ತಾನು ಯಾರು, ಪರ ಯಾವುದು ಇದರ ಅರಿವು ಇಲ್ಲದಂತಾಗಿದೆ ಕರ್ಮದ ಉದಯದಿಂದ ಯಾವ ಯಾವ ಶರೀರಗಳು ಪ್ರಾಪ್ತವಾಗಿರುವವೋ ಆ ಶರೀರವೆಂದರೇನೇ ತಾನು ಎಂದು ಭಾವಿಸಿದೆ. ತನ್ನ ನಿಜವಾದ ಸ್ವರೂಪವನ್ನು ಮರೆತಿದೆ. ದೇವ ಯಾರು, ಕುದೇವ ಯಾರು, ಧರ್ಮ ಯಾವುದು, ಅಧರ್ಮ ಯಾವುದು, ಸದ್ಗುರು ಯಾರು, ಕೆಟ್ಟ ಗುರುವು ಯಾರು, ಇವೆಲ್ಲ ತಿಳಿಯದಂತೆ ಆಗಿದೆ, ಹಾಗೆಯೇ ಪುಣ್ಯ, ಪಾಪ, ಇಹಲೋಕ, ಪರಲೋಕ ಇವೂ ಕೂಡ ತಿಳಿಯದಂತೆ ಆಗಿದೆ. ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ತ್ಯಾಗಮಾಡಬೇಕು, ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಕೂಡದು, ಯಾರ ಸಂಗತಿಯನ್ನು ಮಾಡಬೇಕು, ಯಾರ ಸಂಗತಿಯನ್ನು ಮಾಡಬಾರದು, ಯಾವುದಕ್ಕೆ ಶಾಸ್ತ್ರನೆಂದು ಮನ್ನಿಸಬೇಕು, ಯಾವುದನ್ನು ಶಾಸ್ತ್ರವೆನ್ನಕೂಡದು, ಈ ವಿಷಯಗಳಲ್ಲಿ ಯಾವ ನಿರ್ಣಯಕ್ಕೂ ಬರಲಿಕ್ಕೆ ಬಾರದಾಗಿದೆ ಕರ್ಮದ ಉದಯದಿಂದ ಯಾವ ಸುಖ-ದುಃಖಗಳನ್ನು ಭೋಗಿಸಬೇಕಾಗಿದೆಯೋ ಅವುಗಳಲ್ಲಿಯೇ ಏಕರೂಪವಾಗಿ ತನ್ನ ಹಿತಾಹಿತಗಳನ್ನು ತಿಳಿಯದೆ ಪರದ್ರವ್ಯದಲ್ಲಿ ನಿಮಗ್ನನಾಗಿರುವೆ. ಅದರಿಂದ ಯಾವಾಗಲೂ ದುಃಖವಾಗುತ್ತಿದೆ ಕಾಲಲಬ್ಧಿಯ ಪ್ರಭಾವದಿಂದ ಉತ್ತಮ ಕುಲದಲ್ಲಿ ಜನ್ಮವಾಗಿ ನನಗೆ ಜಿನಧರ್ಮವು ಪ್ರಾಪ್ತವಾಗಿದೆ ಇದರಿಂದ ವೀತರಾಗ ಸರ್ವಜ್ಞನ ಅನೇಕಾಂತ ರೂಪವಾದ ಪರಮಾಗಮದ ಪ್ರಸಾದದಿಂದ ಪ್ರಮಾಣ ನಯ ನಿಕ್ಷೇಪಗಳಿಂದ ಪರೀಕ್ಷೆಮಾಡಿ ನಿರ್ಣಯಕ್ಕೆ ಬರುವ ಶಕ್ತಿಯು ನನಗೆ ಒದಗಿ ಬಂದಿದೆ ಶರೀರವೇ ಮೊದಲಾದ ಪರದ್ರವ್ಯಗಳಿಂದ ಭಿನ್ನವಾದಂಥ ಅಖಂಡ ಅವಿನಾಶಿಯೂ ಚೈತನ್ಯ ಲಕ್ಷಣದಿಂದ ಯುಕ್ತವೂ ಎಲ್ಲವನ್ನೂ ತಿಳಿಯು-ವಂಥವನೂ (ಜ್ಞಾತಾ) ಆದಂಥ ನಾನೊಬ್ಬನೇ ಆತ್ಮನಿದ್ದೇನೆ. ಶರೀರ, ಜಾತಿ, ಕುಲ, ರೂಪ, ಹೆಸರು, ವಂಶ ಮೊದಲಾದವುಗಳು ನನ್ನಿಂದ ತೀರ ಭಿನ್ನವಾಗಿವೆ ರಾಗ, ದ್ವೇಷ, ಕಾಮ, ಕ್ರೋಧ, ಮದ, ಲೋಭಾದಿಗಳು ಕರ್ಮದ ಉದಯದಿಂದ ಉತ್ಪನ್ನವಾಗುತ್ತವೆ. ಅವು ನನ್ನ ಜ್ಞಾಯಕ ಸ್ವಭಾವದಲ್ಲಿ ವಿಕಾರವಾಗಿವೆ ಸ್ಫಟಿಕ ಮಣಿಯು ಮೂಲದಲ್ಲಿ ನಿರ್ಮಲವೂ ಶುಭ್ರವೂ ಆಗಿರುತ್ತದೆ ಆದರೆ ಭಿನ್ನ ಭಿನ್ನ ವರ್ಣದ ಧಾತುಗಳ ಸಂಸರ್ಗದಿಂದ ಕಪ್ಪು, ಹಳದಿ, ಹಸಿರು, ಕೆಂಪು ವರ್ಣದ್ದಾಗಿ ಕಾಣುವದು ಹಾಗೆ ಆತ್ಮವು ಸ್ವಚ್ಛ, ಜ್ಞಾಯಕ, ನಿರ್ವಿಕಾರ ಸ್ವರೂಪವಾಗಿದ್ದು, ಮೋಹ ಕರ್ಮದಿಂದ ಹುಟ್ಟಿದ ರಾಗ ದ್ವೇಷಾದಿ ವಿಕಾರಗಳಲ್ಲಿ ವ್ಯಕ್ತವಾಗುತ್ತದೆ. ಅದು ನನ್ನ ಸ್ವರೂಪವಾಗಿರದೆ ಪರ ಸ್ವರೂಪವಾಗಿದೆ ಹೀಗೆ ತನ್ನ ಸ್ವರೂಪದ ನಿಶ್ಚಯ ಮಾಡಬೇಕು ಅಲ್ಲದೆ ನಿಜವಾದ ದೇವ-ಗುರು-ಶಾಸ್ತ್ರಗಳ ಸ್ವರೂಪವನ್ನು ಮನಸ್ಸಿನಲ್ಲಿ ನೆನೆಯಬೇಕು

ನಿಃಶಂಕಿತ ಅಂಗ—ಸರ್ವಜ್ಞ, ವೀತರಾಗ, ಪರಮ ಹಿತೋಪದೇಶಕನಾದವನು ಆಪ್ತನು ಅವನು ಹಸಿವು, ನೀರಡಿಕೆ, ಹುಟ್ಟು, ಮುಪ್ಪು, ಸಾವು, ಬೇಸ್ರೆ, ದುಃಖ, ಅಂಜಿಕೆ, ಬೆರಗು, ಪ್ರೀತಿ, ವೈರ, ನಿದ್ರೆ, ಬೆವರು, ಸೊಕ್ಕು, ಮೋಹ, ಚಿಂತೆ, ಖೇದ, ಅರತಿಗಳೆಂಬ ಹದಿನೆಂಟು ದೋಷಗಳು ಇಲ್ಲದಂಥವನಿರುತ್ತಾನೆ. ಮೇಲಾಗಿ ಅವನಲ್ಲಿ ಅನಂತಜ್ಞಾನ, ಅನಂತ ದರ್ಶನ, ಅನಂತ ವೀರ್ಯ, ಅನಂತ ಸುಖ ಇವೇ ಮೊದಲಾದ ಆತ್ಮಿಕ ಮತ್ತು ಅವಿನಾಶಿಯಾದಂಥ ಅನಂತ ಗುಣಗಳು ಪ್ರಕಟವಾಗಿರುತ್ತವೆ ಇಂಥ ಆಪ್ತನೇ ನಮ್ಮ ವಂದನೆ ಹಾಗೂ ಸ್ತುತಿಗಳಿಗೆ ಪಾತ್ರನು ಉಳಿದ ಕಾಮಿ, ಕ್ರೋಧಿ, ಲೋಭಿ, ಮೋಹಿ, ಸ್ತ್ರೀಯರಲ್ಲಿ ಆಸಕ್ತ, ಶಸ್ತ್ರಗಳನ್ನು ಧಾರಣಮಾಡುವಂಥವನು ವಂದಿಸಲಿಕ್ಕೂ ಸ್ತುತಿಸಲಿಕ್ಕೂ ಅಯೋಗ್ಯನು. ಯಾಕಂದರೆ ಇವನು ಸರ್ವಜ್ಞತಾ ರಹಿತನು, ಕೇವಲ ಇಂದ್ರಿಯ ಜನ್ಯ ಜ್ಞಾನದ ಧಾರಕನು ಆಗಿರುತ್ತಾನೆ. ಕಳ್ಳ, ಜಾರರ ಶಿರೋಮಣಿಯಾದಂಥವನ ಆರಾಧನೆಯನ್ನು ಮಾಡುವದರಿಂದ ಏನು ಹಿತವಾಗುವದಿದೆ? ಇನ್ನು ಸರ್ವಜ್ಞನೂ ವೀತರಾಗಿಯೂ ಆದಂಥವನು ಉಪದೇಶಿಸಿದ್ದು ಆಗಮವೆನಿಸುತ್ತದೆ. ಅದರಲ್ಲಿ ಪ್ರತ್ಯಕ್ಷ ಅನುಮಾನಾದಿಗಳಿಂದ ಎಲ್ಲಿಯೂ ಬಾಧೆಯು ಬರುವದಿಲ್ಲ ಇದರಲ್ಲಿ ಸಂಪೂರ್ಣ ಷಟ್ಕಾಯ ಜೀವಗಳ ಹಿಂಸೆಯನ್ನು ನಿಷೇಧಿಸಲಾಗಿದೆ. ಆತ್ಮನ ಉದ್ಧಾರದ ಉಪಾಯಗಳನ್ನು ಹೇಳಲಾಗಿದೆ ವಸ್ತುವಿನ ಅನೇಕಾಂತ ಸ್ವರೂಪವನ್ನು ಅದರಲ್ಲಿ ವಿವರಿಸಿದೆ ಇಂಥ ಲಕ್ಷಣಗಳುಳ್ಳದೇ ನಿಜವಾದ ಶಾಸ್ತ್ರವೆನಿಸುತ್ತದೆ ಇದೇ ಶಾಸ್ತ್ರವು ಕೇಳಲಿಕ್ಕೂ ಕಲಿಯಲಿಕ್ಕೂ ಕಲಿಸಲಿಕ್ಕೂ ಶ್ರದ್ಧೆ ಇಡಲಿಕ್ಕೂ ನಮಸ್ಕಾರ ಮಾಡಲಿಕ್ಕೂ ಯೋಗ್ಯವಾಗಿದೆ. ಇದನ್ನುಳಿದು ರಾಗ, ದ್ವೇಷ, ಮೋಹಗಳುಳ್ಳವರು ನಿರೂಪಿಸಿದ ಗ್ರಂಥವು ಶಾಸ್ತ್ರವೆನಿಸದು ಇಂಥ ಗ್ರಂಥಗಳಿಂದ ವಿಷಯ ವಾಸನೆ, ಕಷಾಯಗಳು ಬೆಳೆಯುತ್ತವೆ ಇವುಗಳಲ್ಲಿ ಹಿಂಸೆಯನ್ನು ಮಾಡಲಿಕ್ಕೆ ಬೋಧಿಸಿರುತ್ತದೆ ಪ್ರತ್ಯಕ್ಷ, ಅನುಮಾನಾದಿಗಳಿಂದ ಖಂಡಿಸಲಿಕ್ಕೆ ಬರುತ್ತದೆ ಅರ್ಥಾತ್ ವಿಚಾರಗಳು ಬಾಧಕವಾಗಿರುತ್ತವೆ ಏಕಾಂತ

ರೂಪದಲ್ಲಿಯೂ ಇರುತ್ತವೆ. ಇಂಥ ಗ್ರಂಥಗಳು ಅಭ್ಯಾಸಮಾಡಲಿಕ್ಕೂ ಕೇಳಲಿಕ್ಕೂ ನಮಸ್ಕರಿಸಲಿಕ್ಕೂ ಯೋಗ್ಯವಲ್ಲ ಇನ್ನು ಪರಮ ನಿರ್ಗ್ರಂಥ ದಿಗಂಬರ ಗುರುವೇ ವಂದಿಸಲಿಕ್ಕೂ ಸ್ತುತಿಸಲಿಕ್ಕೂ ತಕ್ಕವನಾಗಿದ್ದಾನೆ. ಯಾಕಂದ ಈ ಗುರುವಿನಲ್ಲಿ ವಿಷಯದ ಅಪೇಕ್ಷೆಯು ಇರುವದಿಲ್ಲ ಕಷಾಯವು ಅತ್ಯಂತ ಮಂದವಾಗಿರುತ್ತದೆ ಇವರು ಆರಂ ಹಾಗೂ ಪರಿಗ್ರಹಗಳನ್ನು ತ್ಯಾಗಮಾಡಿರುತ್ತಾರೆ ಇವರು ಕೇವಲ ಆತ್ಮನನ್ನು ಉಜ್ವಲಗೊಳಿಸುವ ಉದ್ಯೋಗದಲ್ಲಿಯೆ ತೊಡಗಿರುತ್ತಾರೆ ಧ್ಯಾನಸ್ವಾಧ್ಯಾಯಗಳಲ್ಲಿ ತನ್ಮಯರಾಗಿರುತ್ತಾರೆ ಕರ್ಮದ ಉದಯದಿಂದ ಉಂಟಾಗುವ ಸುಃ ದುಃಖಗಳಲ್ಲಿ ಸಾಮ್ಯಭಾವವನ್ನು ಧರಿಸುತ್ತಾರೆ ಜೀವನ, ಮರಣ, ಲಾಭ, ಹಾನಿ, ಸ್ತುತಿ, ನಿಂದೆ ಮೊದಲಾದವುಗಳ ರಾಗ-ದ್ವೇಷ ರಹಿತರಾಗಿರುತ್ತಾರೆ ಉಪಸರ್ಗ ಮತ್ತು ಪರೀಷಹಗಳನ್ನು ಸಹನಮಾಡುವದರಲ್ಲಿ ಅಕಂಪ ಸ್ಥಿತಿಯನ್ನು ಹೊಂದಿ ಧೈರ್ಯ ಧಾರಣಮಾಡಿರುತ್ತಾರೆ ಇಂಥ ಸದ್ಗುರುವನ್ನುಳಿದು ಆರಂಭೀ, ಕಷಾಯೀ, ವಿಷಯಾನುರಾಗಿ ಗಳಾದಂಥ ಕುಗುರುವು ಸ್ತುತಿ ವಂದನೆಗಳಿಗೆ ಪಾತ್ರನಲ್ಲ ಪ್ರಾಣಿ ಮಾತ್ರರ ಮೇಲೆ ದಯೆಯನ್ನು ಇಡುವುದೇ ಧರ್ಮವಾಗಿದೆ ಹಿಂಸೆಯನ್ನು ಮಾಡುವುದು ಯಾವಾಗಲೂ ಧರ್ಮವೆನಿಸದು ಒಂದು ವೇಳೆ ಸೂರ್ಯನ ಪೂರ್ವಕ್ಕೆ ಹುಟ್ಟುವವನು ಪಶ್ಚಿಮಕ್ಕೆ ಹುಟ್ಟಿಯಾನು, ಅಗ್ನಿಯು ಶೀತವಾದೀತು, ಸರ್ಪನ ಮುಖದಲ್ಲಿ ಅಮೃತ ವಿದ್ದೀತು, ಮೇರು ಪರ್ವತವು ಚಲಿಸೀತು, ಪೃಥ್ವಿಯು ತಲೆ ಕೆಳಗಾದೀತು ಆದರೂ ಹಿಂಸೆಯು ಧರ್ಮವೆಂದೂ ಆಗದು. ಈ ಶ್ರದ್ಧೆಯು ಸಮ್ಯಗ್ದೃಷ್ಟಿಗೆ ಪೂರ್ಣವಾಗಿರುತ್ತದೆ, ದೃಢವಾಗಿರುತ್ತದೆ. ತಮ್ಮ ಆತ್ಮನ ಅನುಭವದಲ್ಲಿ, ಸರ್ವಜ್ಞ, ವೀತರಾಗರೂಪ ಆಪ್ತನ ಸ್ವರೂಪದಲ್ಲಿ, ವಿಷಯ ಕಷಾಯರಹಿತ ನಿರ್ಗ್ರಂಥ ಗುರುವಿನಲ್ಲಿ, ಅನೇಕಾಂತ ಸ್ವರೂಪದ ಆಗಮಗಳಲ್ಲಿ, ದಯಾರೂಪ ಧರ್ಮದಲ್ಲಿ ಸಂಶಯವಿಲ್ಲದೆ ಇರುವುದೇ ನಿಃಶಂಕಿತ ಅಂಗವೆಂದು ತಿಳಿಯಬೇಕು.

**ನಿಃಕಾಂಕ್ಷಿತ ಅಂಗ**—ಸಮ್ಯಗ್ದೃಷ್ಟಿಯುಳ್ಳವನು ಧರ್ಮ ಸೇವನೆಯ ಫಲವೆಂದು ವಿಷಯ ಸುಖವನ್ನು ಎಂದೂ ಇಚ್ಛಿಸುವದಿಲ್ಲ. ಯಾಕಂದರೆ ಸಮ್ಯಗ್ದೃಷ್ಟಿಗೆ ಇಂದ್ರ. ಅಹಮಿಂದ್ರ ಲೋಕದ ವಿಷಯಗಳು ಕೂಡಾ ಮಹಾ ವೇದನಾರೂಪವೂ ನಾಶವಂತವೂ ಪಾಪದ ಬೀಜವೂ ಎಂದು ಕಂಡು ಬರುತ್ತವೆ ಧರ್ಮದ ಫಲವು ಅನಂತ, ಅವಿನಾಶಿ, ಸ್ವಾಧೀನ ಸುಖದಿಂದ ಕೂಡಿದ ಮೋಕ್ಷವಾಗಿದೆ ಎಂದು ಸಮ್ಯಗ್ದೃಷ್ಟಿಯು ತಿಳಿಯುತ್ತಾನೆ ಅದಕ್ಕಾಗಿ ಇಂಥ ಬಹು ಮೂಲ್ಯವಾದ ರತ್ನವನ್ನು ಬಿಟ್ಟು, ಕಾಜಿನ ತುಂಡನ್ನು ಎಂದೂ ಸ್ವೀಕರಿಸುವದಿಲ್ಲ ಯಾರಿಗೆ ಆತ್ಮಿಕ, ಅವಿನಾಶಿ, ನಿರಾಬಾಧ ಸುಖದ ಅರಿವು ಇದೆಯೋ ಅವರು ಈ ದುಃಖಮಯವಾದ ಸುಖಾಭಾಸರೂಪದ ವಿಷಯ ಸುಖಗಳನ್ನು ಏಕೆ ಇಚ್ಛಿಸಿಯಾರು? ಅದಕ್ಕಾಗಿ ಸಮ್ಯಗ್ದೃಷ್ಟಿ ಜೀವವು ವಾಂಛಾರಹಿತವೇ ಇರುತ್ತದೆ ಇನ್ನು ಯಾದು ಅಪ್ರತಿ ಸಮ್ಯಗ್ದೃಷ್ಟಿಗಳಾಗಿರುವರೋ ಅವರಿಗೆ ವರ್ತಮಾನ ಕಾಲದಲ್ಲಿ ತಮ್ಮ ಜೀವನ ಸಾಧನೆಗಳಲ್ಲಿಯೂ ಸ್ವಾದಿಸ ಪರಿಗ್ರಹಗಳಲ್ಲಿಯೂ ಉಂಟಾಗುವ ವೇದನೆಗಳು ಇಲ್ಲದಂತಾಗಬೇಕೆಂಬ ಇಚ್ಛೆಯು ಇರುತ್ತದೆ ಅದು ಸದ್ಯಕ್ಕಿನ ವೇದನೆಯನ್ನು ಸಹನ ಮಾಡುವ ಸಾಮರ್ಥ್ಯವು ಇಲ್ಲದುದಕ್ಕೆಂದೇ ತಿಳಿಯುವುದು ಅವನು ವೇದನೆಗಳಿಗೆ ಉಪಾಯ- ಗಳನ್ನು ಮಾತ್ರ ಇಚ್ಛಿಸುತ್ತಿರುತ್ತಾನೆ ರೋಗಿಯು ಕಹಿಯಾದ ಔಷಧವನ್ನು ಕುಡಿಯಲಿಕ್ಕ ಹಿಂಜರಿಯುತ್ತಿರುತ್ತಾನೆ ಆದರೂ ರೋಗದಿಂದುಂಟಾದ ವೇದನೆಯನ್ನು ಸಹನ ಮಾಡಲಿಕ್ಕಾಗದ, ತಿರುಗಿ ಶಾಂತಿಯಾಗುವಷ್ಟು ಕಹಿಯಾದ ಔಷಧವನ್ನೂ ಸಹ ಕುಡಿದು ಬಿಡುತ್ತಾನೆ ಹಾಗೆಯೇ ಸಮ್ಯಗ್ದೃಷ್ಟಿ ಮನುಷ್ಯನಿಗೆ ಇಂದ್ರಿಯಗಳ ವಿಷಯವನ್ನು ಭೋಗಿಸುವ ಇಚ್ಛೆಯು ಎಳ್ಳಷ್ಟೂ ಇರುವದಿಲ್ಲ ಆ ದೃಷ್ಟಿಯಿಂದ ಅವನು ನಿರ್ವಾಂಛಕನೇ ಆಗಿರುತ್ತಾನೆ ಆದರೂ ವರ್ತಮಾನಕಾಲದ ದುಃಖವನ್ನು ಕಳೆದುಕೊಳ್ಳುವದಕ್ಕಾಗಿ ವಿಷಯಗಳನ್ನು ಇಚ್ಛಿಸುತ್ತಾನೆ ಅಪ್ರತ್ಯಾಖ್ಯಾನಾ- ವರಣೀಯ ಕರ್ಮದ ಉದಯದ ಅಭಾವದಿಂದ ಯಾರು ವ್ರತಗಳನ್ನು ಸ್ವೀಕರಿಸುವರೋ ಅವರು ಎಂಥ ಸಂಕಟ ಬಂದರೂ ಸಹ ವಿಷಯಸುಖಗಳ ಇಚ್ಛೆಯನ್ನು ಮಾಡುವದಿಲ್ಲ ಇದರ ಮೇಲಿಂದ ಸಮ್ಯಗ್ದೃಷ್ಟಿಗೆ ನಿಃಕಾಂಕ್ಷಿತ ಗುಣವು ಇದ್ದೇ ತೀರುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ

**ನಿರ್ವಿಚಿಕಿತ್ಸಾ ಅಂಗ**—ಸಮ್ಯಗ್ದೃಷ್ಟಿ ಜೀವಕ್ಕ ಅಶುಭ ಕರ್ಮದ ಉದಯದಿಂದ ತನ್ನ ಮನಸ್ಸಿಗೆ ಸೇರದ ಜೀವನ ಸಾಮಗ್ರಿಗಳು ಒದಗಿದರೂ ಆ ವಿಷಯದಲ್ಲಿ ಅವನು ಮನಸ್ಸಿಗೆ ಕೆಡಕೆನಿಸಿಕೊಳ್ಳುವದಿಲ್ಲ ಅಲ್ಲದೆ ತನ್ನ ಪರಿಣಾಮವನ್ನೂ ಕೆಡಿಸಿಕೊಳ್ಳುವದಿಲ್ಲ ಅವನು ವಿಚಾರಿಸುವುದು ಹೀಗೆ—ನಾನು ಪೂರ್ವ ಜನ್ಮದಲ್ಲಿ ಎಂಥ ಕರ್ಮವನ್ನು ಕಟ್ಟಿಕೊಂಡಿರುವೆನೋ ಅದಕ್ಕೆ ಅನುಸರಿಸಿಯೇ ನನಗೆ ಊಟ, ಉಪಚಾರ, ಹೆಂಡತಿ, ಮಕ್ಕಳು, ಬಡತನ, ಸಂಪತ್ತು, ಆಪತ್ತು ಮೊದಲಾದವುಗಳು ಪ್ರಾಪ್ತವಾಗಿವೆ. ಅದರಂತೆ ಅನ್ಯ ರೋಗಿ, ದರಿದ್ರಿ, ಹೀನ, ನೀಚ, ಮಲಿನ

ಜನರೂ ಕೂಡ ತಮ್ಮ ತಮ್ಮ ಕರ್ಮಗಳಿಗೆ ತಕ್ಕಂತೆ ಇರುವರೆಂದು ತಿಳಿದು, ಅವರ ವಿಷಯದಲ್ಲಿ ಹೀನ ಭಾವನೆಯನ್ನು ಇಟ್ಟುಕೊಳ್ಳುವದಿಲ್ಲ ಅದು ಪಾಪದ ಫಲವಾಗಿದೆಯೆಂದು ತಿಳಿದು, ಅವನು ಅವರನ್ನು ತಿರಸ್ಕರಿಸುವದಿಲ್ಲ ಅದರಂತೆಯೇ ಮಲಮೂತ್ರ, ಕೆಸರು ಮೊದಲಾದ ಪದಾರ್ಥಗಳನ್ನು ನೋಡಿ, ಭಯಂಕರವಾದಂಥ ಸ್ಮಶಾನವನ್ನು ಕಂಡು, ವನ, ಪರ್ವತಗಳನ್ನು ನೋಡಿ, ಭಯರೂಪಿಯಾದ ದುಃಖಕಾರಕ ಪರಿಸ್ಥಿಯನ್ನು ನೆನೆದು, ದುಷ್ಟ, ಕಠೋರ ಮೊದಲಾದ ವಸ್ತುಗಳ ಸ್ವಭಾವವನ್ನು ಅನುಭವಿಸಿ ತನ್ನ ಪರಿಣಾಮದಲ್ಲಿ ಕ್ಲೇಶವನ್ನು ಉತ್ಪನ್ನವಾಗಗೊಡುವದಿಲ್ಲ ಇಂಥ ನಿರ್ವಿಚಿಕಿತ್ಸಾ ಅಂಗವು ಸಮ್ಯಗ್ದೃಷ್ಟಿಗೆ ಇರುತ್ತದೆ

**ಅಮೂಢ ದೃಷ್ಟಿ**—ಸುಳ್ಳು ಶಾಸ್ತ್ರಗಳು, ವ್ಯಂತರಾದಿ ದೇವತೆಗಳು ಮಾಡಿದಂಥ ಚಮತ್ಕಾರಗಳಿಂದಲೂ ಮಣಿ ಮಂತ್ರ ಔಷಧಗಳಿಂದಲೂ ಸಮ್ಯಗ್ದೃಷ್ಟಿ ಜೀವವು ಮರುಳಾಗುವದಿಲ್ಲ. ವಸ್ತುಗಳ ವಿಪರೀತ ಸ್ವಭಾವವನ್ನು ಕಂಡು ಸತ್ಯಾರ್ಥವನ್ನು ಮರೆಯುವದಿಲ್ಲ ಆ ಸತ್ಯ ಧರ್ಮದಿಂದ ಚ್ಯುತನಾಗುವದಿಲ್ಲ. ಇದು ಸಮ್ಯಗ್ದೃಷ್ಟಿಯ ಅಮೂಢದೃಷ್ಟಿ ಗುಣವಾಗಿದೆ

**ಉಪಗೂಹನ ಅಂಗ**—ಸಮ್ಯಗ್ದೃಷ್ಟಿಯುಳ್ಳ ಮನುಷ್ಯನು ವಿವಿಧ ಜೀವಗಳಿಗೆ ಅಜ್ಞಾನ, ಅಶಕ್ತತೆಗಳಿಂದ ಉಂಟಾಗುವ ದೋಷಗಳನ್ನು ಕಂಡರೂ ಅವುಗಳನ್ನು ಅವನು ಮುಚ್ಚುತ್ತಾನೆ. ಸಂಸಾರೀಜೀವವು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಕರ್ಮದ ಉದಯದಿಂದ ತನ್ನ ಸ್ವಭಾವವನ್ನು ಮರೆತು ಅಸತ್ಯ ಭಾಷಣವನ್ನು ಮಾಡುತ್ತವೆ ಕೆಲವರು ಪರಧನವನ್ನು ಅಪಹರಿಸುತ್ತಾರೆ ಹಲವರು ಕುಶೀಲ ಸೇವನ ಮಾಡುತ್ತಾರೆ ಯಾರು ಈ ಪಾಪಗಳಿಂದ ದೂರ ಇರುವರೋ ಅವರು ಧನ್ಯರು ಧರ್ಮಾತ್ಮರು ಇಲ್ಲವೆ ಹೆಸರಾದವರ ಕಡೆಯಿಂದಲೂ ಒಮ್ಮೊಮ್ಮೆ ಆಕಸ್ಮಾತ್ತಾಗಿ ಅಪರಾಧಗಳು ಆಗುತ್ತವೆ ಅವು ಅವರ ಪಾಪದ ಉದಯದಿಂದ ಆಗಿರುತ್ತವೆ. ಇದನ್ನರಿತು ಸಮ್ಯಗ್ದೃಷ್ಟಿಯಾದವನು ಈ ಪಾಪಕಾರ್ಯಗಳನ್ನು ಬೈಲಿಗೆಳೆಯುವದಿಲ್ಲ. ಆ ದೋಷಗಳನ್ನು ಬೈಲಿಗೆ ಎಳೆಯುವುದರಿಂದ ಜಿನಧರ್ಮದ ನಿಂದೆಯಾದೀತು, ಇತರ ಧರ್ಮಾತ್ಮರಿಗೆ ಹಾನಿ ತಟ್ಟೀತು ಎಂದು ಭಾವಿಸಿ, ಆ ದೋಷಗಳನ್ನು ಮುಚ್ಚುವನು. ಇದು ಉಪಗೂಹನ ಗುಣವಾಗಿದೆ

**ಸ್ಥಿತೀಕರಣ ಅಂಗ**—ರೋಗದ ವೇದನೆ, ಬಡತನ, ಉಪಸರ್ಗ, ಪರೀಷಹ ಮೊದಲಾದವುಗಳಿಂದ ಧಾರ್ಮಿಕ ಮನುಷ್ಯರ ಪರಿಣಾಮವು ಒಮ್ಮೊಮ್ಮೆ ಚಂಚಲವಾಗುತ್ತದೆ. ಆಗ ಅನ್ಯರ ನೆರವು ಇಲ್ಲದಿದ್ದರೆ ಅವರು ಧರ್ಮಭ್ರಷ್ಟರಾಗುವ ಸಂಭವವಿರುತ್ತದೆ ಹಲವರು ಅನ್ನ ನೀರುಗಳು ದೊರೆಯದೆ ಧರ್ಮದಿಂದ ಚ್ಯುತರಾಗುತ್ತಾರೆ ಇಂಥವರಿಗೆಲ್ಲ ಉಪದೇಶಮಾಡಿ ಧರ್ಮದಲ್ಲಿ ಸ್ಥಿರಗೊಳಿಸಬೇಕು ಅವರಿಗೆ ಹೀಗೆ ತಿಳಿಸಿ ಹೇಳಬೇಕು—"ಎಲೈ ಧರ್ಮಾತ್ಮರೆ, ಎಲೈ ಜ್ಞಾನಿಗಳೆ, ನೀವು ಹೀಗೆ ಯಾಕೆ ಗಾಬರಿಯಾಗುವಿರಿ? ಎಚ್ಚರಾಗಿರಿ ರೋಗದ ವೇದನೆಯಿಂದ ಧೈರ್ಯಗೆಡುವ ಕಾರಣವೇನು? ನೀವು ತಿಳುವಳಿಕೆಯವರಿದ್ದೂ ಈ ರೀತಿ ತಪ್ಪಿ ನಡೆಯುವುದೆ? ಇದು ಅಸಾತಾವೇದನೀಯ ಕರ್ಮವು ತನ್ನ ಉದಯವಾಗುವ ಕಾಲಕ್ಕೆ ಉದಯವಾಗಿದೆ ನೀವು ಈಗ ಗಾಬರಿಯಾದರೂ ಅತ್ತು ಕರೆದರೂ ಅದನ್ನು ಭೋಗಿಸಿಯೇ ತೀರಿಸಬೇಕಾಗುತ್ತದೆ. ಕರ್ಮವು ನಿಮ್ಮನ್ನು ಬಿಡಲಾರದು. ಕರ್ಮಕ್ಕೆ ದಯೆ ಇರುವದಿಲ್ಲ ಆದಕ್ಕಾಗಿಯೇ ಧೈರ್ಯದಿಂದ ಸಹನಮಾಡಿರಿ ಈ ಪ್ರಸಂಗದಲ್ಲಿ ಯಾವ ದೇವರು, ದಾನವ, ಮಂತ್ರ, ತಂತ್ರ, ಔಷಧಗಳು ಮತ್ತು ಸ್ತ್ರೀ, ಪುತ್ರ, ಮಿತ್ರ, ಬಾಂಧವ, ಸೇವಕ, ಸೈನಿಕ ಮೊದಲಾದವರು ಉದಯಕ್ಕೆ ಬಂದ ಕರ್ಮವನ್ನು ಹರಣಮಾಡಲಿಕ್ಕೆ ಸಮರ್ಥರಾಗಲಾರರು ಇದನ್ನು ತಾವು ಚೆನ್ನಾಗಿ ತಿಳಿದಿದ್ದೀರಿ ಅಂದ ಮೇಲೆ ಈ ವೇದನೆಯಲ್ಲಿ ಗಾಬರಿಯಾಗಿ ಧರ್ಮ ನಿಮ್ಮ ಶ್ರೇಯಸ್ಸು, ನಿಮ್ಮ ಪರಲೋಕಗಳನ್ನು ಯಾಕೆ ಕೆಡಿಸಿಕೊಳ್ಳುವಿರಿ? ಧರ್ಮವನ್ನು ಕೆಡಿಸಿಕೊಂಡು, ಮನಸ್ಸಿಗೆ ಬಂದಂತೆ ನಡೆದು, ಅತ್ತು ಕೂಗಿದರೆ ವೇದನೆಯು ಕಡಿಮೆಯಾಗುತ್ತಿದ್ದರೆ ಏನೂ ಅಡ್ಡಿಯಿಲ್ಲ! ಆದರೆ ವೇದನೆಯು ಕಡಿಮೆಯಾಗದೆ ನೀವು ಗಾಬರಿಯಾದಂತೆ ವೇದನೆಯ ದುಃಖವೇ ಹೆಚ್ಚಾದೀತು ಅದಕ್ಕಾಗಿ ನೀವು ಧೈರ್ಯದಿಂದ ಇದ್ದು, ಧರ್ಮದ ಕಡೆಗೆ ಲಕ್ಷ್ಯವಿಡಿರಿ. ಧರ್ಮವೊಂದೇ ದುಃಖದಲ್ಲಿ ಸಮಾಧಾನ ಮಾಡುವಂಥದಿದೆ. ಈ ಸಂಸಾರದಲ್ಲಿ ಭ್ರಮಣ ಮಾಡುವಾಗ ನರಕಾದಿ ಗತಿಗಳಲ್ಲಿ ಅನೇಕ ಸಲ ಪೆಟ್ಟು ನಾವುಗಳ ದುಃಖವನ್ನು ಅಸಂಖ್ಯಾತ ಕಾಲದ ವರೆಗೆ ಸಹನ ಮಾಡಲಾಗಿದೆ ಪಶುಯೋನಿಯಲ್ಲಿ ಹಸಿವು, ನೀರಡಿಕೆ ಮೊದಲಾದವುಗಳನ್ನು ಪರಾಧೀನತೆಯಿಂದ ಸಹಿಸಲಾಗಿದೆ. ಮಾನವ ಯೋನಿಯಲ್ಲಿಯೂ ನಾನಾ ಪ್ರಕಾರದ ರೋಗಗಳನ್ನು ಅನೇಕ ಸಲ ಭೋಗಿಸಲಾಗಿದೆ. ಈಗಿನಕ್ಕಿಂತ ಹೆಚ್ಚಿನ ವೇದನೆಗಳನ್ನು ಅನೇಕ ಸಲ ನೀವು ಭೋಗಿಸಿದ್ದೀರಿ ಪುತ್ರಶೋಕ, ಸ್ತ್ರೀವಿಯೋಗ, ವೈಧವ್ಯದುಃಖ

ಮೊದಲಾದ ಮಾನಸಿಕ ವ್ಯಥೆಗಳನ್ನೂ ಅನೇಕ ಸಲ ಭೋಗಿಸಲಾಗಿದೆ ಅವುಗಳ ಮುಂದೆ ಈ ದುಃಖ ಎಷ್ಟರದು? ಇದಂತೂ ಸ್ವಲ್ಪ ಹೊತ್ತಿನಲ್ಲಿ ಇಲ್ಲದಂತೆ ಆದೀತು ಒಂದು ವೇಳೆ ರೋಗದ ವೇದನೆಯು ನಿಮ್ಮ ಶರೀರಕ್ಕೆ ನೋವನ್ನುಂಟು ಮಾಡೀತು ಆದರೆ ನಿಮ್ಮ ಆತ್ಮವು ಚೈತನ್ಯ ಸ್ವರೂಪಿಯಾಗಿದೆ ಅದನ್ನು ರೋಗವು ಕೊಲ್ಲಲಾರದು ಶರೀರಕ್ಕೆ ಮರಣವು ಅವಶ್ಯವೇ ಆಗಿದೆ ದೇಹವು ಧರಿಸಿದ್ದಿರುವುದರಿಂದ ಅದನ್ನು ಬಿಡಲೇ ಬೇಕಾಗುತ್ತದೆ. ಅಂದ ಮೇಲೆ ನೀವು ಎಚ್ಚರಾಗಿರಿ ಈ ಪ್ರಸಂಗವು ಕರ್ಮವನ್ನು ಗೆಲ್ಲುವದಕ್ಕಾಗಿ ಇದೆ. ಇಂಥ ಪ್ರಸಂಗದಲ್ಲಿ ಭಗವಾನ್ ಪಂಚಪರಮೇಷ್ಠಿಗಳ ಧ್ಯಾನಮಾಡಿರಿ ನಿಮ್ಮ ಸ್ವರೂಪವು ಮುಪ್ಪು ರಹಿತ, ಮೃತ್ಯುವಿಲ್ಲದ, ಅಖಂಡ, ಜ್ಞಾತಾ, ದ್ರಷ್ಟಾ ಇರುವದನ್ನು ಲಕ್ಷ್ಯದಲ್ಲಿ ಇಡಿರಿ ಇಂಥ ಸಂದರ್ಭವು ತಿರುಗಿ ಲಭಿಸುವುದು ಕಠಿಣವಾಗಿದೆ" ಈ ಪ್ರಕಾರ ಧರ್ಮೋಪದೇಶವನ್ನು ಮಾಡಿ, ಅವರನ್ನು ಧರ್ಮದಲ್ಲಿ ಸ್ಥಿರಗೊಳಿಸಬೇಕು ಅಲ್ಲದೆ ಅನಿತ್ಯ, ಅಶರಣ ಮೊದಲಾದ ಭಾವನೆಗಳ ಚಿಂತನೆಯ ಕಡೆಗೆ ಅವರ ಮನಸ್ಸನ್ನು ಸೆಳೆಯಬೇಕು ಈ ಮೊದಲು ತಕ್ಕೊಂಡ ವ್ರತ, ನಿಯಮಗಳನ್ನು ಅವರು ಬಿಟ್ಟಿದ್ದರೆ ಅವುಗಳನ್ನು ತಿರುಗಿ ಸ್ವೀಕರಿಸುವಂತೆ ಮಾಡಬೇಕು ಅವರಿಗೆ ಒಳ್ಳೆಯದೆನಿಸುವಂತೆ ಅವರ ಮೈಯನ್ನು ಒತ್ತಬೇಕು ಕೈಕಾಲುಗಳನ್ನು ಒತ್ತಬೇಕು ಅವರ ದುಃಖವನ್ನು ದೂರಗೊಳಿಸಬೇಕು. ಅವರ ಹತ್ತರ ಕೂಡಲಿಕ್ಕೆ ಯಾರೂ ಇಲ್ಲವಾದರೆ ತಾವು ಕೂಡಬೇಕು ಸಹಧರ್ಮಿಗಳಾದ ಅನ್ಯರ ಸಂಬಂಧವನ್ನು ತಂದುಕೊಡಬೇಕು. ಮಲ-ಮೂತ್ರ, ಕಫಗಳನ್ನು ದೂರ ಒಯ್ದು ಒಗೆಯಲಿಕ್ಕೆ ಅವರಿಗೆ ಶಕ್ತಿಯು ಇಲ್ಲವಾದರೆ ಅದನ್ನು ತಾವು ಮಾಡಬೇಕು. ಅನ್ನ, ನೀರು, ಔಷಧ, ಪಥ್ಯ ಮೊದಲಾದವುಗಳನ್ನು ಕೊಟ್ಟು, ಅವರನ್ನು ಧರ್ಮ ಮಾರ್ಗದಲ್ಲಿ ಸ್ಥಿರಗೊಳಿಸಬೇಕು. ಬಡತನದ ಬಾಧೆಗೆ ಒಳಗಾಗಿದ್ದರೆ ಅವರ ಊಟ, ಉಪಚಾರಗಳ ವ್ಯವಸ್ಥೆಯನ್ನು ಮಾಡಿ, ಉಪಜೀವನಕ್ಕೆ ಸಹಾಯ ನೀಡಬೇಕು ಒಟ್ಟಿನಲ್ಲಿ ಯಾವ ಯಾವ ಉಪಾಯಗಳಿಂದ ಅವರು ಧರ್ಮ ಮಾರ್ಗದಲ್ಲಿ ಸ್ಥಿರವಾಗಿ ಉಳಿಯುವರೋ ಅವನ್ನೆಲ್ಲ ಮಾಡುವದಕ್ಕೆ ಸ್ಥಿತೀಕರಣ ಅಂಗವೆನ್ನುವರು

**ವಾತ್ಸಲ್ಯ ಅಂಗೆ**—ಸಮ್ಯಗ್ದೃಷ್ಟಿಯುಳ್ಳವರಲ್ಲಿ ವಾತ್ಸಲ್ಯವೆಂಬ ಗುಣವು ಇರುತ್ತದೆ ಸಂಸಾರೀ ಜೀವಿಗಳಿಗೆ ತಮ್ಮ ಸ್ತ್ರೀಪುತ್ರಾದಿಗಳ ಮೇಲೆ ಬಹಳಷ್ಟು ಪ್ರೀತಿಯು ಇದ್ದೇ ಇರುತ್ತದೆ. ಇಂದ್ರಿಯಗಳ ವಿಷಯ ಭೋಗಿಸುವುದರಲ್ಲಿಯೂ ಧನವನ್ನು ಗಳಿಸುವುದರಲ್ಲಿಯೂ ತುಂಬ ಆಸ್ಥೆಯಿರುತ್ತದೆ. ಆದರೆ ಆ ಸ್ತ್ರೀ, ಪುತ್ರ, ಧನ, ಪರಿಗ್ರಹ, ವಿಷಯಾದಿಗಳೆಲ್ಲ ಈ ಸಂಸಾರ ಪರಿಭ್ರಮಣಕ್ಕೆ ಕಾರಣವಾಗಿವೆ ಇದನ್ನು ತಿಳಿದು ಮುನಿ, ಆರ್ಯಿಕಾ, ಶ್ರಾವಕ, ಶ್ರಾವಿಕಾ ಮೊದಲಾದ ರತ್ನತ್ರಯಗಳನ್ನು ಧರಿಸುವ ಧರ್ಮಾತ್ಮರುಗಳ ಮೇಲೆ ಅತ್ಯಂತ ಪ್ರೀತಿಯನ್ನೂ ಇಡಬೇಕು ಧರ್ಮಾಯತನಗಳ ಮೇಲೆಯೂ ಬಹಳಷ್ಟು ಪ್ರೀತಿಯು ಇರಬೇಕು, ಇದರಿಂದ ಸಮ್ಯಗ್ದರ್ಶನದ ವಾತ್ಸಲ್ಯ ಅಂಗವು ಸಿದ್ಧಿಸುತ್ತದೆ

**ಪ್ರಭಾವನಾ ಅಂಗ.** ತಮ್ಮ ಮನಸ್ಸು, ಮಾತು, ದೇಹ, ದ್ರವ್ಯ, ದಾನ, ವ್ರತ, ತಪ ಮತ್ತು ಭಕ್ತಿ ಇವುಗಳಿಂದ ರತ್ನತ್ರಯದ ಪ್ರಭಾವವನ್ನು ಪ್ರಕಟಗೊಳಿಸುವದಕ್ಕೆ ಪ್ರಭಾವನಾ ಅಂಗವೆನ್ನುವರು ಇದರ ವಿವರವಾದ ವರ್ಣನೆಯು ಮಾರ್ಗಪ್ರಭಾವನಾ ಎಂಬ ಭಾವನೆಯನ್ನು ವಿವರಿಸುವಾಗ ಮುಂದೆ ಬರುವುದು ಈ ಪ್ರಕಾರ ಇರುವ ಸಮ್ಯಗ್ದರ್ಶನದ ಎಂಟು ಅಂಗಗಳನ್ನು ಧಾರಣಮಾಡುವುದರಿಂದ ಈ ಗುಣದ ವಿರೋಧಿಗಳಾದ ಸಂಶಯವೇ ಮೊದಲಾದ ದೋಷಗಳು ನಷ್ಟವಾಗಿ ದರ್ಶನವಿಶುದ್ಧಿಯು ಉಂಟಾಗುತ್ತದೆ

## ಮೂರು ಮೂಢತೆಗಳು

**ಲೋಕ ಮೂಢತೆ**—ಸಮ್ಯಗ್ದರ್ಶನವನ್ನು ಶುದ್ಧಗೊಳಿಸುವಾಗ ಲೋಕ ಮೂಢತೆ, ದೇವ ಮೂಢತೆ ಮತ್ತು ಗುರು ಮೂಢತೆಗಳೆಂಬ ತ್ರಿಮೂಢತೆಗಳನ್ನು ತ್ಯಾಗಮಾಡಬೇಕು ಲೋಕ ಮೂಢತೆಯಲ್ಲಿ ಅನೇಕ ಸಂಗತಿಗಳು ಸಮಾವೇಶವಾಗುತ್ತವೆ ಅವುಗಳಲ್ಲಿ ಇವು ಕೆಲವು-ಸತ್ತ ಮನುಷ್ಯನ ಎಲುವುಗಳನ್ನು ಭಾಗೀರಥಿಯಲ್ಲಿ ಮುಳುಗಿಸುವುದರಿಂದ ಅವರಿಗೆ ಸದ್ಗತಿಯಾಗುತ್ತದೆ, ಗಂಗಾನದಿಯ ನೀರು ಪವಿತ್ರವಾಗಿರುತ್ತದೆಯೆಂದು ಭಾವಿಸುವುದು, ಗಂಗಾ ಹಾಗೂ ಇತರ ನದಿಗಳಲ್ಲಿ ಸ್ನಾನಮಾಡುವುದರಲ್ಲಿ ಪುಣ್ಯವಿದೆಯೆಂದು ನಂಬುವದು, ನದಿ ಹಾಗೂ ಸಮುದ್ರಗಳ ತೆರೆಗಳನ್ನು ಮೈ ಮೇಲೆ ಹಾಯಿಸಿಕೊಳ್ಳುವದರಲ್ಲಿ ಧರ್ಮವಿದೆಯೆಂದು ಭಾವಿಸುವುದು, ಮರಣ ಹೊಂದಿದ ಪುರುಷನ ಸಂಗಡ ಅವನ ಹೆಂಡತಿಯು ಸತಿ ಹೋಗುವುದರಲ್ಲಿ ಪಾವಿತ್ರ್ಯವಿದೆ ಎನ್ನುವುದು, ಸತ್ತವರಿಗೆ ಪಿತೃಗಳೆಂದು

ಪೂಜಿಸುವುದು, ಪಿತೃಗಳನ್ನು ತಾಯಿತದಲ್ಲಿ ಸ್ಥಾಪಿಸಿ ರಕ್ಷೆಯೆಂದು ಮಕ್ಕಳ ಕೊರಳಲ್ಲಿ ಕಟ್ಟುವುದು, ಸೂರ್ಯ, ಚಂದ್ರ, ಮಂಗಳ ಮೊದಲಾದ ಗ್ರಹಗಳನ್ನು ಬೆಳ್ಳಿ ಬಂಗಾರಗಳಲ್ಲಿ ಮಾಡಿ ಕೊರಳಲ್ಲಿ ಹಾಕಿಕೊಳ್ಳುವದು, ಗ್ರಹಣದ ದೋಷವು ದೂರವಾಗಲೆಂದು ದಾನಮಾಡುವದು, ಸಂಕ್ರಾಂತಿ, ವ್ಯತೀಪಾತ, ಸೋಮವತೀ, ಅಮಾವಾಸ್ಯೆ ಇವೇ ಮೊದಲಾದವು-ಗಳನ್ನು ಪರ್ವಗಳೆಂದು ಮನ್ನಿಸಿ ದಾನಕೊಡುವುದು, ಸೂರ್ಯ ಚಂದ್ರರ ಗ್ರಹಣಗಳಲ್ಲಿ ಸ್ನಾನ ಮಾಡುವುದು, ದರ್ಭೆಯು ಶುದ್ಧವೆಂದು ತಿಳಿಯುವುದು, ಹಸ್ತಿದಂತವು ಪವಿತ್ರವೆಂದು ಭಾವಿಸುವುದು, ಭಾವಿ ಕೆರೆಗಳನ್ನು ಪೂಜಿಸುವುದು, ಸೂರ್ಯಚಂದ್ರರಿಗೆ ಅರ್ಘ್ಯ ಕೊಡುವುದು, ಹೊಸ್ತಿಲನ್ನು ಪೂಜಿಸುವುದು; ಒಣಕೆ ಕೋಡುಗಳನ್ನು ಪೂಜಿಸುವುದು, ವಿನಾಯಕನ ಹೆಸರಿನಲ್ಲಿ ಗಣಪತಿಯನ್ನು ಪೂಜಿಸುವುದು, ದೀಪವನ್ನು ಪೂಜಿಸುವುದು, ದೇವರಿಗೆ ಹರಿಕೆ ಮಾಡುವುದು; ದೇವತೆ ಹೆಸರಿನಲ್ಲಿ ಜಡೆ ಕಾಯುವುದು, ದೇವರಿಗೆ ಕಾಣಿಕೆ ಸಲ್ಲಿಸಿದುದರಿಂದ ತನ್ನ ಮಕ್ಕಳು ಬಾಳಿದವೆಂದು ತಿಳಿಯುವುದು, ಇಂಥ ದೇವರು ಮಕ್ಕಳನ್ನು ಕೊಟ್ಟನೆಂದು ಭಾವಿಸುವುದು, ತಮ್ಮ ಲಾಭ, ಕಾರ್ಯಸಿದ್ಧಿ, ಧನ ಪ್ರಾಪ್ತಿ, ರೋಗದ ನಾಶ, ವೈರಿಯ ನಾಶ, ಮಕ್ಕಳಾಗುವಿಕೆ ಇವೇ ಮೊದಲಾದವುಗಳಿಗೆ, ದೇವರಿಗೆ ಛತ್ರ, ಚಾಮರ, ದೇವಾಲಯ ಮೊದಲಾದವುಗಳನ್ನು ನಿರ್ಮಿಸಿ ಅರ್ಪಿಸುವ ಮಾತು ಕೊಡುವುದು, ದೇವರಿಗೆ ಕೈಯಾಸೆಯನ್ನು ಹಚ್ಚಿ ಕಾರ್ಯ ಸಾಧಿಸಿಕೊಳ್ಳುವ ಇಚ್ಛೆಯನ್ನು ಮಾಡುವುದು, ಜಾಗರಣೆ ಮಾಡುವುದು, ಕುಲದೇವತೆಯನ್ನು ಪೂಜಿಸುವುದು; ಶಾಂತಿದೇವಿಯನ್ನು ಪೂಜಿಸುವುದು, ಲಕ್ಷ್ಮಿಯನ್ನು ಕೂಡಿಸುವುದು, ಬೆಳ್ಳಿ ಬಂಗಾರಗಳನ್ನು ಪೂಜಿಸುವುದು, ಪೌತಿ, ಆಕಳು, ಅನ್ನ, ಶಸ್ತ್ರ, ಗಿಡ, ಅಗ್ನಿ, ಇವುಗಳನ್ನು ಪೂಜಿಸುವುದು; ಇವೆಲ್ಲ ಲೋಕ ಮೂಢತೆಯಾಗಿವೆ ಮಿಥ್ಯಾ-ದರ್ಶನದ ಯೋಗದಿಂದ ಇಂಥ ವಿಪರೀತ ಶ್ರದ್ಧೆಗಳು ಉತ್ಪನ್ನವಾಗುತ್ತವೆ ಅವುಗಳನ್ನು ಬಿಡಲಿಕ್ಕೆಬೇಕು

**ದೇವ ಮೂಢತೆ**—ದೇವ ಕುದೇವಗಳ ವಿಚಾರಮಾಡದೆ ಕಾಮ, ಕ್ರೋಧ, ಶಸ್ತ್ರಗಳನ್ನು ಧರಿಸಿದಂಥ ಈಶ್ವರ ದೇವ ದೇವತೆಗಳನ್ನು ಪೂಜಿಸುವುದು ದೇವ ಮೂಢತೆಯಾಗಿದೆ ಇದರಂತೆಯೇ ಶ್ರೀವಿಷ್ಣುವು ಭಗವಾನ್ ಪರಮೇಶ್ವರನೆಂದು ಮನ್ನಿಸುವುದು; ಈ ಸೃಷ್ಟಿಯ ಸಂಪೂರ್ಣ ರಚನೆಯನ್ನು ಅವನೇ ಮಾಡಿರುವನೆಂದು ತಿಳಿಯುವುದು, ಇವನೇ ಕರ್ತೃವು, ಇವನೇ ರಕ್ಷಕನು, ನಾಶಕನು ಎಂದು ಭಾವಿಸುವುದು, ಆದದ್ದೆಲ್ಲ ಈಶ್ವರನ ಇಚ್ಛೆಯೇ ಆಗಿದ ಎನ್ನುವುದು, ಜನರಿಂದ ಕೆಡಕು ಒಳಿತುಗಳನ್ನು ದೇವರೇ ಮಾಡಿಸುತ್ತಾನೆ, ದೇವರು ಮಾಡದೆ ಏನೂ ಆಗುವದಿಲ್ಲ; ಎಲ್ಲವೂ ಈಶ್ವರನ ಇಚ್ಛೆಗೆ ಸ್ವಾಧೀನವಾಗಿದೆ, ಒಳಿತು ಕೆಡಕುಗಳ ಪ್ರೇರಣೆಯೂ ಕೂಡ ಈಶ್ವರನಿಂದಲೇ ಆಗುವುದು; ಹೀಗೆಲ್ಲ ತಿಳಿದು ವರ್ತಿಸುವುದು ದೇವಮೂಢತೆ ಎನಿಸುವದು

**ಗುರು ಮೂಢತೆ**—ಪಾಖಂಡಿಯೂ ನೀಚ ಆಚರಣೆಯನ್ನು ಮಾಡುವವನೂ ಪರಿಗ್ರಹ, ಲೋಭ, ವಿಷಯ ವಾಸನೆಗಳುಳ್ಳವನಿಗೆ ಗುರುವೆಂದು ಮನ್ನಿಸುವುದಕ್ಕೆ ಗುರು ಮೂಢತೆ ಎನ್ನುವರು ಕೆಲವೊಂದು ವ್ಯಕ್ತಿಗಳಲ್ಲಿ ವಚನ ಸಿದ್ಧಿ ಇದೆ ಎನ್ನುವುದು, ಅವನು ಪ್ರಸನ್ನನಾದನೆಂದು ಭಾವಿಸುವುದು, ಅವನು ಬಹು ಕರ್ತೃತ್ವಶಾಲಿಯೆಂದು ನಂಬುವುದು, ಅವನಿಂದ ನಮ್ಮ ಕಾರ್ಯಸಿದ್ಧಿಯಾದೀತೆಂದು ಭಾವಿಸುವುದು, ಅವನು ತಪಸ್ವಿ, ಮಹಾಪುರುಷ, ಪೂಜ್ಯನೆಂದು ಪೂರ್ಣ ಶ್ರದ್ಧೆ ಇಡುವುದು, ಇವುಗಳಿಗೆಲ್ಲ ಗುರು ಮೂಢತೆ ಎನ್ನುವರು. ಯಾರ ಶ್ರದ್ಧೆಯಲ್ಲಿ ಈ ಮೂರು ಮೂಢತೆಗಳು ಇರುವದಿಲ್ಲವೋ ಅವರ ದರ್ಶನವು ವಿಶುದ್ಧಗೊಳ್ಳುವದು

**ಆರು ಅನಾಯತನಗಳು**—ದರ್ಶನ ವಿಶುದ್ಧಿಗೆ ಆರು ಅನಾಯತನಗಳ ತ್ಯಾಗವು ಅತ್ಯವಶ್ಯವಾಗಿದೆ. ಆಯತನವೆಂದರೆ ಸ್ಥಾನ. ಅನಾಯತನವೆಂದರೆ ಸ್ಥಾನವಿಲ್ಲದೆ ಇರುವುದು. ಕುದೇವ, ಕುಗುರು, ಕುಶಾಸ್ತ್ರ ಇವು ಮೂರು, ಮತ್ತು ಈ ಮೂರನ್ನು ಸೇವನ ಮಾಡುವಂಥವು ಮೂರು ಸೇರಿ ಆರು ಅನಾಯತನಗಳಾಗುತ್ತವೆ. ಯಾರು ರಾಗ, ದ್ವೇಷ, ಕಾಮ, ಕ್ರೋಧ, ಲೋಭಗಳಿಂದ ಕೂಡಿಯೂ ಶಸ್ತ್ರಗಳನ್ನು ಧರಿಸಿಯೂ ಇರುವರೋ ಅವರು ಮಿಥ್ಯಾತ್ವಿಗಳಾಗಿರುತ್ತಾರೆ ಅವರಿಗೆ ಸಮ್ಯಗ್ದರ್ಶನವು ಇರುವದಿಲ್ಲ ಅಂತಲೇ ಕುದೇವರು ಮೊದಲನೆಯ ಅನಾಯತನವೆನಿಸುತ್ತಾರೆ ಪಂಚೇಂದ್ರಿಯಗಳ ವಿಷಯದಲ್ಲಿ ಲುಬ್ಧ, ಪರಿಗ್ರಹಧಾರಿ, ಆರಂಭಗಳನ್ನು ಮಾಡುವಂಥವನು ಗುರುವಲ್ಲ ಅವನು ವೇಷಧಾರಿಯಾಗಿರುವನು, ಧರ್ಮಹೀನನಿರುವನು. ಅದಕ್ಕಾಗಿ ಅವನು ಎರಡನೆಯ ಅನಾಯತನ ಎನಿಸುತ್ತಾನೆ. ಹಾಗೆಯೇ ಹಿಂಸೆ ಆರಂಭಾದಿಗಳನ್ನು ಪ್ರೇರಿಸುವುದು, ರಾಗ, ದ್ವೇಷ, ಕಾಮಾದಿಗಳನ್ನು ಬೆಳೆಯಿಸುವುದು; ಸಂಪೂರ್ಣವಾಗಿ ಏಕಾಂತ ಅಭಿಪ್ರಾಯವನ್ನು ಪ್ರರೂಪಿಸುವದು; ಈ ಲಕ್ಷಣಗಳುಳ್ಳ ಗ್ರಂಥಗಳು ಕುಶಾಸ್ತ್ರವೆನಿಸುತ್ತವೆ. ಇದು ಮೂರನೆಯ ಅನಾಯತನವು ದೇವ-ದೇವಿ, ಕ್ಷೇತ್ರಪಾಲ ಮೊದಲಾದವರಿಗೆ ವಂದಿಸುವಂಥವನು ನಾಲ್ಕನೆಯ

ಅನಾಯತನ ಕುಗುರುವಿನ ಸೇವಕನು ಐದನೆಯ ಅನಾಯತನವೆನಿಸುತ್ತಾನೆ ಮಿಥ್ಯಾ ಶಾಸ್ತ್ರವನ್ನು ಕಲಿಯುವಂಥವ, ಕಲಿಸುವಂಥವ, ಅವುಗಳ ಸೇವೆ ಮತ್ತು ಭಕ್ತಿಗಳನ್ನು ಮಾಡುವಂಥವನು ಆರನೆಯ ಅನಾಯತನವೆನಿಸುತ್ತಾನೆ ಈ ಆರೂ ಅನಾಯತನಗಳಲ್ಲಿ ಸಮ್ಯಗ್ದರ್ಶನವು ಇರುವದಿಲ್ಲ ಇದನ್ನು ದೃಢವಾಗಿ ನಂಬುವುದರಿಂದ ನಮ್ಮ ದರ್ಶನವು ಶುದ್ಧಗೊಳ್ಳುತ್ತದೆ

**ಜಾತಿಮದ**—ಮದಗಳು ಎಂಟು ವಿಧವಾಗಿವೆ ಅವು ಜಾತಿಮದ ಕುಲಮದ, ಐಶ್ವರ್ಯಮದ, ರೂಪಮದ, ಜ್ಞಾನಮದ, ವಿಜ್ಞಾನಮದ ಎಂದಿವೆ ಇವುಗಳನ್ನು ನಾಶಮಾಡಿದವರಿಗೇನೇ ದರ್ಶನ ವಿಶುದ್ಧತೆಯು ಪ್ರಾಪ್ತವಾಗುತ್ತದೆ ಈ ವಿಷಯದಲ್ಲಿ ಸಮ್ಯಗ್ದೃಷ್ಟಿಯು ಹೀಗೆ ವಿಚಾರಿಸುವನು—ಎಲೈ ಆತ್ಮನೇ? ಈ ಉಚ್ಚ ಜಾತಿಯೆಂಬುದು ನಿನ್ನ ಸ್ವಭಾವವಲ್ಲ. ಅದು ಕರ್ಮದ ಪ್ರಕೃತಿಯಾಗಿವೆ ಪರಕೃತವಾಗಿದೆ, ವಿನಾಶಿಕವಾಗಿದೆ, ಕರ್ಮದ ಉದಯದಿಂದ ಸಂಸಾರದಲ್ಲಿ ಹಲವು ಸಲ ಹಲವು ಜಾತಿಗಳು ಪ್ರಾಪ್ತವಾಗಿವೆ ತಾಯಿಯ ಪಕ್ಷಕ್ಕೆ ಜಾತಿ ಎಂದು ಹೇಳುವರು ಈ ಜೀವವು ಅನೇಕ ಸಲ ಹೊಲೆಯರ ಹೆಣ್ಣು, ಬೇಡತಿ, ಸಮಗಾರತಿ, ಮುಸಲ್ಮಾನರ ಹೆಂಗಸು, ಅಗಸಗಿತ್ತಿ, ನಾವಲಿಗಸ ಹೆಂಡತಿ, ಕಟುಕನ ಹೆಂಡತಿ ಮತ್ತು ವೇಶ್ಯೆ ಮೊದಲಾದವರ ಹೊಟ್ಟೆಯಿಂದ ಹುಟ್ಟಿದೆ ಇಷ್ಟೇ ಅಲ್ಲ, ಪಶುಗಳಲ್ಲಿಯೂ ಸಹ ಹೀನ ತರದ ಪಶುವಿನ ಗರ್ಭದಲ್ಲಿಯೂ ಜನ್ಮ ತಕ್ಕೊಂಡಿದೆ ನಾಯಿ, ಹಂದಿ, ಕತ್ತೆ, ನರಿ, ಕಾಗೆ, ಹದ್ದುಗಳ ಹೊಟ್ಟೆಯಲ್ಲಿಯೂ ಸಹ ಹಲವು ಸಲ ಹುಟ್ಟಿಬಂದಿದೆ ಅನಂತ ಸಲ ನೀಚ ಜಾತಿಯಲ್ಲಿ ಜನಿಸಿದ ಮೇಲೆ ಒಮ್ಮೆ ಉಚ್ಚ ಜಾತಿಯು ಲಭಿಸೀತು. ಪುನಃ ಅನಂತಸಲ ನೀಚ ಯೋನಿಗಳಲ್ಲಿ ಜನಿಸಿ ಜನಿಸಿ ಬಂದಾಗ ತಿರುಗಿ ಉಚ್ಚ ಜಾತಿಯು ದೊರೆಯುತ್ತದೆ. ಹೀಗೆ ಉಚ್ಚ ಜಾತಿಯಲ್ಲಿ ಹಲವು ಸಲ ಜನ್ಮಿಸಿ ಬಂದರೂ ಈ ಸಂಸಾರ ಪರಿಭ್ರಮಣವೇನೂ ತಪ್ಪಲಿಲ್ಲ. ಇದರಂತೆಯೇ ತಂದೆಯ ಕಡೆಯಿಂದಲೂ ಅನೇಕ ಸಲ ಉಚ್ಚ ನೀಚ ಜಾತಿಗಳ ಗರ್ವವನ್ನಾದರೂ ಏಕೆ ಹಿಡಿಯಬೇಕು?

**ಕುಲಮದ**—ಸ್ವರ್ಗದೊಳಗಿನ ಮಹರ್ಧಿಕ ದೇವರೂ ಸಹ ಮರಣ ಹೊಂದಿ ಏಕೇಂದ್ರಿಯ ಯೋನಿಯಲ್ಲಿ ಜನ್ಮತಕ್ಕೊಳ್ಳುವರು. ನಾಯಿ–ನರಿಗಳಂಥ ನೀಚ ಯೋನಿಗಳಲ್ಲಿಯೂ ಹುಟ್ಟುವರು. ಉತ್ತಮ ಕುಲದೊಳಗಿನ ಮನುಷ್ಯರೂ ಸಹ ಸತ್ತ ಮೇಲೆ ಮಾದಿಗರ ಕುಲದಲ್ಲಿಯೂ ಜನಿಸುವರು ಅಂದ ಮೇಲೆ ಜಾತಿ ಮತ್ತು ಕುಲಗಳ ಅಭಿಮಾನದಿಂದ ಗರ್ವಮಾಡುವುದು ಮಿಥ್ಯಾದರ್ಶನವಾಗಿದೆ. ಎಲೈ ಆತ್ಮನೇ, ನಿನ್ನ ಕುಲಜಾತಿಗಳು ಸಿದ್ಧನಿಗೆ ಅಭಿಮಾನದಿಂದ... ಸಮಾನವಾಗಿವೆ. ಅದನ್ನು ನೀನು ಮರೆತಿರುವಿ ತಾಯಿಯ ರಕ್ತ ಮತ್ತು ತಂದೆಯ ವೀರ್ಯಗಳಿಂದ ಉತ್ಪನ್ನ-ವಾದಂಥ ಈ ಸಲ್ಲದ ಕುಲದ ಮದದಲ್ಲಿ ಮುಳುಗಿ ಪುನಃ ಅನಂತ ಕಾಲದ ವರೆಗೆ ನಿಗೋದದಲ್ಲಿ ಭ್ರಮಣ ಮಾಡಲು ಸಿದ್ಧನಾಗಿರುವಿ ಆದರೆ ಹೀಗೆ ಮಾಡಬೇಡ ನೀನು ವೀತರಾಗನ ಉಪದೇಶವನ್ನು ಗ್ರಹಣ ಮಾಡಿರುವಿ ಅಂದ ಮೇಲೆ ಈ ಶರೀರದ ಜಾತಿಗೆ ಸಂಯಮ, ಶೀಲ, ದಯೆ, ಸತ್ಯಭಾಷಣ ಇವುಗಳಿಂದ ಸಫಲತೆಯನ್ನು ಒದಗಿಸು. ನನಗೆ ಉತ್ತಮ ಜಾತಿ ಮತ್ತು ಉತ್ತಮ ಕುಲಗಳು ಪ್ರಾಪ್ತವಾಗಿವೆ, ಅಂದ ಮೇಲೆ ನಾನು ನೀಚ ಜಾತಿಯವರಂತೆ ಹಿಂಸೆ, ಅಸತ್ಯ, ಪರಧನ ಹರಣ, ಕುಶೀಲ ಸೇವನ, ಅಭಕ್ಷ್ಯ ಭಕ್ಷಣವೇ ಮೊದಲಾದ ನಿಂದ್ಯ ಆಚರಣೆಯನ್ನು ಮಾಡಲಾರೆನೆಂದು ಅಭಿಮಾನವನ್ನು ಇಡು.

**ಐಶ್ವರ್ಯಮದ.** ಸಮ್ಯಗ್ದೃಷ್ಟಿ ಜೀವಕ್ಕೆ ಕರ್ಮದಿಂದ ಉಂಟಾದ ದೇಹಾದಿಗಳಲ್ಲಿ ಆತ್ಮ ಬುದ್ಧಿಯು ಎಂದೂ ಹುಟ್ಟುವದಿಲ್ಲ ನೀನು ಐಶ್ವರ್ಯದ ಗರ್ವವನ್ನಾದರೂ ಏಕೆ ಮಾಡುವಿ? ನೋಡು, ಈ ಐಶ್ವರ್ಯವು ನಿನಗೆ ಮೋಹವನ್ನು ತೂರಿ, ರಾಗದ್ವೇಷಗಳಿಂದ ಪಾಪಾರಂಭದಲ್ಲಿ ಪ್ರವೃತ್ತಗೊಳಿಸುವಂಥದಿದೆ ಅದರ ಸಹವಾಸದಿಂದ ಚತುರ್ಗತಿಯಲ್ಲಿ ಭ್ರಮಣ ಮಾಡಲಿಕ್ಕೆ ಬೇಕಾಗುತ್ತದೆ ನಿರ್ಗ್ರಂಥ ಅವಸ್ಥೆಯೊಂದೇ ಮೂರು ಲೋಕದಲ್ಲಿ ಪೂಜ್ಯವಾಗಿದೆ ಚಿಂತನ ಮಾಡಲಿಕ್ಕೆ ಯೋಗ್ಯವೂ ಆಗಿದೆ ಈ ಐಶ್ವರ್ಯವು ಕ್ಷಣಭಂಗುರವಾಗಿದೆ. ದೊಡ್ಡ ದೊಡ್ಡ ಇಂದ್ರ, ಅಹಮಿಂದ್ರ, ಬಲಭದ್ರ, ನಾರಾಯಣ ಮೊದಲಾದವರ ಐಶ್ವರ್ಯವು ಕ್ಷಣಮಾತ್ರದಲ್ಲಿ ನಷ್ಟವಾಗಿ ಹೋಗಿದೆ ಅಂದ ಮೇಲೆ ಉಳಿದ ಜೀವಗಳ ಐಶ್ವರ್ಯದ ಪಾಡೇನು? ಹೀಗೆ ವಿಚಾರಮಾಡಿ, ಒಂದೆರಡು ದಿನಗಳ ಮಟ್ಟಿಗೆ ಪ್ರಾಪ್ತವಾದ ಐಶ್ವರ್ಯದ ಉಪಯೋಗವನ್ನು ದುಃಖಿಗಳಿಗೆ ನೆರವಾಗಲಿಕ್ಕೆಂದು ಉಪಯೋಗಮಾಡು, ವಿನಯದಿಂದ ದಾನಕೊಡು ಪರಮಾತ್ಮ ಸ್ವರೂಪವೇ ನಮ್ಮ ಐಶ್ವರ್ಯವಾಗಿದೆ ಅದೇ ನಿಜವಾದ ಐಶ್ವರ್ಯವೆಂದು ಭಾವಿಸಿ ಈ ಕರ್ಮಕೃತ ಐಶ್ವರ್ಯದಿಂದ ವಿರಕ್ತವಾಗುವುದೇ ಯೋಗ್ಯವಾಗಿದೆ

ರೂಪವಮದ—ಚೆಲುವಿಕೆಯ ವಿಷಯದಲ್ಲಿ ಅಭಿಮಾನ ಪಡಕೂಡದು ಇದು ನಾಶವಾಗುವಂಥ ಶರೀರದ ಸ್ವರೂಪವಾಗಿದೆ ಇದು ಆತ್ಮನ ರೂಪವಲ್ಲ ವಿನಾಶಿಕವಾದುದರಿಂದ ಪ್ರತಿಕ್ಷಣವೂ ನಷ್ಟವಾಗುತ್ತಿದೆ ಈ ಸ್ವರೂಪಕ್ಕೆ ರೋಗ, ವಿಯೋಗ, ಬಡತನ, ಮುಪ್ಪು ಇವು ಕುರೂಪತೆಯನ್ನು ತಂದುಬಿಡುತ್ತವೆ. ಇಂಥ ಈ ಎಲುವು ಮಾಂಸಗಳ ಸ್ವರೂಪಕ್ಕೆ ಮೋಹಿತರಾಗಿ ಗರ್ವ ಪಡುವುದು ದೊಡ್ಡ ತಪ್ಪಾಗುವುದು ಆತ್ಮನ ಸ್ವರೂಪವಂತೂ ಕೇವಲ ಜ್ಞಾನವಾಗಿದೆ ಅದರಲ್ಲಿ ಲೋಕ ಅಲೋಕಗಳೆಲ್ಲ ಪ್ರತಿಬಿಂಬಿತವಾಗುತ್ತವೆ. ಅದರಿಂದ ತೊಗಲು, ರಕ್ತ, ಮಾಂಸಗಳಿಂದ ಉಂಟಾದ ರೂಪವು ನಮ್ಮದಲ್ಲ ಅನಂತವೂ ಅವಿನಾಶಿಯೂ ಆದ ಆತ್ಮನ ಜ್ಞಾನ ಸ್ವರೂಪವೇ ನಮ್ಮದಾಗಿದೆ ಇದನ್ನು ಅರಿತುಕೊಳ್ಳಬೇಕು

ಜ್ಞಾನವಮದ—ಮಾನವನು ತನ್ನ ಜ್ಞಾನದ ವಿಷಯದಲ್ಲಿ ಸಹ ಗರ್ವವನ್ನು ಪಡೆಯಬಾರದು ಆತ್ಮಜ್ಞಾನ-ವಿಲ್ಲದ ಶಾಸ್ತ್ರಜ್ಞಾನವಂತೂ ವ್ಯರ್ಥವಾಗಿದೆ ಯಾಕಂದರೆ ಆಗಮಗಳ ಹನ್ನೊಂದು ಅಂಗಗಳ ಜ್ಞಾನವಿದ್ದೂ ಸಹ ಅಭವ್ಯನು ಆತ್ಮಜ್ಞಾನವಿಲ್ಲದುದರಿಂದ ಸಂಸಾರದಲ್ಲಿ ಒದ್ದಾಡುತ್ತಿರುತ್ತಾನೆ ಸಮ್ಯಗ್ದರ್ಶನವನ್ನುಳಿದು ಅನೇಕ ಪ್ರಕಾರದ ವ್ಯಾಕರಣ, ಛಂದ, ಅಲಂಕಾರ, ಕಾವ್ಯ, ಕೋಶಾದಿಗಳ ಜ್ಞಾನವಿದ್ದರೂ ಸಹ ಅದು ವಿಪರೀತ ಧರ್ಮದಲ್ಲಿ ಪ್ರವರ್ತನಗೊಳಿಸಬಹುದಾಗಿದೆ, ಅಭಿಮಾನ, ಲೋಭಗಳನ್ನು ಹುಟ್ಟಿಸಿ ಸಂಸಾರದ ಕುಂಡದಲ್ಲಿ ನೂಕುವಂತಿರುತ್ತದೆ ಈ ಇಂದ್ರಿಯಜನ್ಯ ಜ್ಞಾನದ ಮಹತ್ವವಾದರೂ ಏನು? ಅದು ಶಾಶ್ವತವಾದರೂ ಎಲ್ಲಿರುವುದು? ಒಂದು ಕ್ಷಣದಲ್ಲಿ ವಾತ, ಪಿತ್ತ, ಕಫಗಳಲ್ಲಿ ಹೆಚ್ಚು ಕಡಿಮೆಯಾದರೆ ಕೂಡಲೆ ಕೆಟ್ಟು ಹೋಗುತ್ತದೆ ಇಂದ್ರಿಯ ಜನ್ಯಜ್ಞಾನವು ಈ ಇಂದ್ರಿಯಗಳು ನಷ್ಟವಾದೊಡನೆಯೇ ನಾಶ ಹೊಂದುತ್ತದೆ ಮಿಥ್ಯಾ ಜ್ಞಾನವಂತೂ ಬೆಳೆದಂತೆ ಸುಳ್ಳು ಕಾವ್ಯ, ಇಲ್ಲದ ಸಲ್ಲದ ಅರ್ಥ ರಚಿಸುವದರಲ್ಲಿಯೇ ಪ್ರವೃತ್ತಿಯನ್ನು ಉಂಟುಮಾಡಿಸೀತು ಆದರಿಂದ ಅನೇಕ ಪ್ರಾಣಿಗಳು ದುರಾಚಾರದಲ್ಲಿ ಮುಳುಗಿಯಾವು ಅದಕ್ಕಾಗಿ ಶಾಸ್ತ್ರಜ್ಞಾನದ ಗರ್ವವನ್ನು ಸಹ ಮಾಡಕೂಡದು. ಜ್ಞಾನವು ಪ್ರಾಪ್ತವಾಗಿದ್ದರೆ ಆತ್ಮನ ಶುದ್ಧಿಯನ್ನು ಮಾಡಿಕೊಳ್ಳು ಜ್ಞಾನವಿದ್ದೂ ಹುಂಬರಂತೆ ಆಚರಣೆಯನ್ನು ಮಾಡಿ, ಸಂಸಾರದಲ್ಲಿ ಭ್ರಮಣ ಮಾಡುವುದು ಯೋಗ್ಯವಲ್ಲ.

ತಪಮದ—ತಪಶ್ಚರಣದ ಗರ್ವವನ್ನೂ ಸಹ ಮಾಡಬಾರದು ಸಮ್ಯಕ್ತ್ವವಿಲ್ಲದ ಮಿಥ್ಯಾದೃಷ್ಟಿಯ ತಪವಂತೂ ವ್ಯರ್ಥವೇ ಆಗಿದೆ. ನಾನು ದೊಡ್ಡ ತಪಸ್ವಿಯೆಂದು ಗರ್ವ ಮಾಡುವಂಥವನು ಅದರಿಂದ ಬುದ್ಧಿಭ್ರಷ್ಟನಾಗಿ ಅದೇ ತಪದಿಂದ ಅವನು ನರಕಕ್ಕೆ ಹೋಗುತ್ತಾನೆ ಆದರಿಂದ ತಪದ ಗರ್ವ ಮಾಡುವುದು ದೊಡ್ಡ ಅನರ್ಥಕಾರಿ-ಯಾಗಿದೆ. ಇದನ್ನರಿತು ಭವ್ಯ ಜೀವಿಗಳು ತಪದ ಗರ್ವ ಮಾಡುವುದು ಯೋಗ್ಯವಲ್ಲ

ಬಲಮದ—ತನ್ನ ಶಕ್ತಿ, ಸಾಮರ್ಥ್ಯಗಳ ವಿಷಯದಲ್ಲಿ ಸಹ ಅಭಿಮಾನ ಪಡಬಾರದು. ಯಾವ ಶಕ್ತಿಯಿಂದ ಕರ್ಮವೆಂಬ ವೈರಿಯನ್ನು ಗೆಲ್ಲಲು ಸಾಧ್ಯವಿದೆಯೋ ಅದೇ ಯೋಗ್ಯ ಬಲವು. ಕಾಮ, ಕ್ರೋಧ, ಲೋಭಗಳನ್ನು ಗೆಲ್ಲುವ ಸಾಮರ್ಥ್ಯವೇ ಪ್ರಶಂಸೆಗೆ ಪಾತ್ರವಾದುದು ಉಳಿದ ಶರೀರಬಲ, ತಾರುಣ್ಯಬಲ, ಐಶ್ವರ್ಯ ಬಲಗಳು ಇರುತ್ತವೆಂದು ಅವುಗಳಿಂದ ನಿರ್ಬಲರೂ ಅನಾಥರೂ ಆದ ಪ್ರಾಣಿಗಳನ್ನು ನೋಯಿಸುವದನ್ನಾಗಲಿ ಅವರ ಧನವನ್ನು ಅಪಹರಿಸುವದನ್ನಾಗಲಿ ಮಾಡಕೂಡದು ನಿರ್ಬಲರ ನೆಲ-ಹೊಲಗಳನ್ನು ವ್ಯಾಪಿಸುವುದು, ವ್ಯಭಿಚಾರ ಮಾಡುವುದು, ದುರಾಚಾರ ಮಾಡುವುದು ಇವೇ ಮೊದಲಾದ ಕಾರ್ಯಗಳಲ್ಲಿ ಬಲದ ಉಪಯೋಗ ಮಾಡುವುದರಿಂದ ಈ ಜನ್ಮದಲ್ಲಿಯೂ ಪರಲೋಕದಲ್ಲಿಯೂ ನರಕದ ದುಃಖವನ್ನು ಭೋಗಿಸಬೇಕಾಗುತ್ತದೆ ಅಲ್ಲದೆ ತಿರ್ಯಂಚ ಗತಿಯಲ್ಲಿ ಹೊಡೆತ, ಪೆಟ್ಟು, ಕಟ್ಟುವಿಕೆ, ಸಾವು, ನೋವುಗಳಿಗೆ ಒಳಗಾಗಿ ಪರಾಧೀನತೆಯಿಂದ ದುಃಖವನ್ನು ಭೋಗಿಸಬೇಕಾಗುತ್ತದೆ. ಕೊನೆಗೆ ಏಕೇಂದ್ರಿಯ ಜೀವವಾಗಿ ಬಲವಿಲ್ಲದ ಸ್ಥಿತಿಯಲ್ಲಿ ಹುಟ್ಟಬೇಕಾಗುತ್ತದೆ. ಅದಕ್ಕಾಗಿ ಬಲದ ಗರ್ವವನ್ನು ಬಿಟ್ಟು ಕ್ಷಮೆಯನ್ನು ಧರಿಸಬೇಕು ಮತ್ತು ಉತ್ತಮ ತಪವನ್ನು ಡಾರಣಮಾಡಬೇಕು

ವಿಜ್ಞಾನವಮದ—ಅನೇಕ ಪ್ರಕಾರದ ಕುಶಲ ಕಲೆ, ಕೈಗಾರಿಕೆ, ವಕ್ತೃತ್ವಕಲೆ, ಮನಃ ಸಂಕಲ್ಪ ಇವುಗಳ ಯೋಗದಿಂದ ಆತ್ಮನು ಚತುರ್ಗತಿ ರೂಪವಾದ ಸಂಸಾರದಲ್ಲಿ ಭ್ರಮಣ ಮಾಡುವನು. ದುಃಖವನ್ನೂ ಭೋಗಿಸುವನು. ಈ ಸಂಸಾರ ಪರಿಭ್ರಮಣಕ್ಕೆ ಕಾರಣವಾಗುವ ಎಲ್ಲ ಸಂಗತಿಗಳೂ ವಿಜ್ಞಾನವೆನಿಸುತ್ತವೆ ಈ ಸಂಸಾರದಲ್ಲಿ ಸುಳ್ಳು ಚಾತುರ್ಯದ ಸುಳ್ಳು ಕಲೆಯ ಬಗ್ಗೆ ದೊಡ್ಡ ಗರ್ವವು ಇರುತ್ತದೆ. ಅವನು ಯಾವಾಗಲೂ ಹೀಗೆ ಅನ್ನುತ್ತಾನೆ— 'ಸತ್ಯವನ್ನು ಅಸತ್ಯವನ್ನಾಗಿಯೂ ಅಸತ್ಯವನ್ನು ಸತ್ಯವನ್ನಾಗಿಯೂ ಮಾಡಿತೋರಿಸುವ ಸಾಮರ್ಥ್ಯವು ನನ್ನಲ್ಲಿ ಇದೆ.

ನಿರ್ಮಲ ಚಾರಿತ್ರ್ಯವುಳ್ಳವರಿಗೆ ಕಲಂಕವನ್ನು ಹಚ್ಚಿಯೇನು ಶೀಲವಂತರನ್ನು ದುಃಖಿತರನ್ನಾಗಿ ಮಾಡಿ ಬಿಡಬಹುದು ನಿರಪರಾಧಿಗೆ ಶಿಕ್ಷೆಯನ್ನು ಮಾಡಿಸಿಯೇನು ಧನವಂತನ ಹತ್ತಿರ ಸಂಗ್ರಹಗೊಂಡ ದುಡ್ಡನ್ನು ಹೊರಗೆ ತೆಗೆದೇನು ಧರ್ಮದ ಮೇಲಿನ ಶ್ರದ್ಧೆಯನ್ನೇ ವ್ಯತ್ಯಾಸಗೊಳಿಸಿ ಬಿಡುವೆ ಪ್ರಾಣಿಗಳನ್ನು ವಶಮಾಡಿಕೊಳ್ಳುವುದು, ಅನೇಕ ಜೀವಿಗಳನ್ನು ಹೊಡೆಯುವುದು, ನೀರಿನಲ್ಲಿ ಧುಮುಕುವುದು, ನೆಲದಲ್ಲಿ ನೇರುವುದು, ಆಕಾಶದಲ್ಲಿ ಸಂಚರಿಸುವುದು, ಅನೇಕ ಯಂತ್ರಗಳನ್ನು ಮಾಡಿಕೊಡುವುದು ಇವೇ ಮೊದಲಾದ ಕಲೆಗಳಲ್ಲಿ ವಿಜ್ಞಾನವೆನಿಸುತ್ತವೆ ಇವುಗಳ ಗರ್ವಮಾಡುವುದು ಘೋರ ನರಕದ ದುಃಖಕ್ಕೆ ಕಾರಣವಿದೆ ಯಾವ ಕಲಾಚಾತುರ್ಯವು ತನ್ನ ಆತ್ಮವನ್ನು ವಿಷಯ ಕಷಾಯಗಳಿಂದ ವಿಮುಖಗೊಳಿಸುವುದೋ ಅದು ಸಮ್ಯಕ್ ಕಲಾಚಾತುರ್ಯವು ಅದು ಇತರರನ್ನು ಹಿಂಸಾ-ರಹಿತವಾದ ಸತ್ಯ ಮಾರ್ಗದ ಕಡೆಗೆ ಪ್ರವರ್ತಿಸುತ್ತದೆ ಉಳಿದ ವಿಜ್ಞಾನಗಳು ಸ್ವಂತಕ್ಕೂ ಅನ್ಯರನ್ನೂ ಸಂಸಾರದಲ್ಲಿ ಮೋಸಗೊಳಿಸುವಂತಾಗಿವೆ

ಈ ಪ್ರಕಾರ ಸತ್ಯಾರ್ಥವಸ್ತುವಿನ ಸ್ವರೂಪವನ್ನು ತಿಳಿದು ಜಾತಿ, ಕುಲ, ಧನ, ಐಶ್ವರ್ಯ, ರೂಪ, ವಿಜ್ಞಾನಾದಿಗಳು ಕರ್ಮದ ಸ್ವಾಧೀನವಾಗಿವೆಯೆಂದು ತಿಳಿದು, ಅವುಗಳ ಗರ್ವವನ್ನು ಬಿಟ್ಟು, ದರ್ಶನ ವಿಶುದ್ಧಿಯನ್ನು ಮಾಡಿಕೊಳ್ಳಿರಿ. ಹೀಗೆ ಮೂರು ಮೂಢತೆ, ಸಂಶಯವೇ ಮೊದಲಾದ ಎಂಟು ದೋಷಗಳು, ಆರು ಅನಾಯತನ, ಎಂಟು ಮದ ಸೇರಿ ಇಪ್ಪತ್ತೈದು ದೋಷಗಳು ಆಗುತ್ತವೆ ಇವು ಇಲ್ಲದಂತೆ ಮಾಡುವುದರಿಂದ ಸಮ್ಯಗ್ದರ್ಶನವು ಉಜ್ವಲವಾಗುತ್ತದೆ ಇದರ ಪೂರ್ಣ ಅರಿವಿನಿಂದ ದರ್ಶನ ವಿಶುದ್ಧಿ ಭಾವನೆಯನ್ನು ನಿರಂತರವಾಗಿ ಚಿಂತಿಸಿರಿ. ಅದರ ಧ್ಯಾನಮಾಡಿರಿ ಯಾರು ಈ ಭಾವನೆಯಿಂದ ಸ್ತುತಿಯನ್ನು ಮಾಡಿ, ಅರ್ಘ್ಯಾವತರಣವನ್ನು ಮಾಡುವರೋ ಅವರು ಮುಕ್ತಿರೂಪಿ ಸ್ತ್ರೀಯ ಸಹವಾಸವನ್ನು ಹೊಂದುವರು ಇಷ್ಟು ದರ್ಶನ ವಿಶುದ್ಧಿ ಭಾವನೆಯ ವಿವರವಾಯಿತು

## ೨. ವಿನಯ ಸಂಪನ್ನತೆ

ಐದು ವಿನಯಗಳು—ಇನ್ನು ಭಾವನೆಗಳಲ್ಲಿ ವಿನಯ ಸಂಪನ್ನತೆ ಎಂಬುದನ್ನು ಇಲ್ಲಿ ವಿವರಿಸುವೆ. ವಿನಯಗಳನ್ನು ಐದು ವಿಧವೆಂದು ಹೇಳಲಾಗಿದೆ (೧) ದರ್ಶನ ವಿನಯ, (೨) ಜ್ಞಾನ ವಿನಯ, (೩) ಚಾರಿತ್ರ ವಿನಯ, (೪) ತಪೋವಿನಯ, ಮತ್ತು (೫) ಉಪಚಾರ ವಿನಯ ಇವುಗಳಲ್ಲಿ ತನ್ನ ಶ್ರದ್ಧೆಗೆ ಶಂಕಾದಿ ದೋಷಗಳು ಹತ್ತದಂತೆ ಇರುವುದು, ಸಮ್ಯಗ್ದರ್ಶನದ ಶುದ್ಧಿಯಿಂದಲೇ ತನ್ನ ಜನ್ಮವು ಸಫಲವೆಂದು ನಂಬುವುದು, ಸಮ್ಯಗ್ದರ್ಶನ ಉಳ್ಳವರನ್ನು ಪ್ರೀತಿಸುವುದು, ಆತ್ಮ ಹಾಗೂ ಪರವಸ್ತು ಇವುಗಳಲ್ಲಿಯ ಭೇದವಿಜ್ಞಾನವನ್ನು ಅನುಭವಿಸುವುದು ಇವು ದರ್ಶನ ವಿನಯದ ಲಕ್ಷಣಗಳಾಗಿವೆ ಸಮ್ಯಗ್ದರ್ಶನದ ಪ್ರಾಪ್ತಿಗಾಗಿ ಉದ್ಯಮ ಮಾಡುವುದು, ಸಮ್ಯಗ್ದರ್ಶನದ ವರ್ಣನೆಯ ವಿಷಯದಲ್ಲಿ ಆದರವನ್ನು ಇಡುವುದು, ಸಮ್ಯಗ್ದರ್ಶನಕ್ಕೆ ಕಾರಣವಾದಂಥ ಅನೇಕಾಂತ ರೂಪವಾದಂಥ ಜಿನಸೂತ್ರಗಳನ್ನು ಶ್ರವಣಮಾಡುವುದು, ಪಠಿಸುವುದು, ಪಾಠ ಮಾಡುವುದರಲ್ಲಿ ಉತ್ಕಂಠತೆಯನ್ನು ವ್ಯಕ್ತಮಾಡುವುದು, ಅದನ್ನು ಓದುವಾಗ ಸ್ತವನ, ನಮಸ್ಕಾರಗಳಿಂದ ಬಹಳ ಆದರದಿಂದ ಓದುವುದು, ಜ್ಞಾನಾಭ್ಯಾಸಂಗಿಗಳಾದ ಜ್ಞಾನೀ ಜನರು ಲಭಿಸಿದರೆ ಜಿನಾಗಮದ ಗ್ರಂಥಗಳು ದೊರೆತರೆ ದೊಡ್ಡ ಭಾಗ್ಯವೆಂದು ತಿಳಿದು ಸತ್ಕಾರ, ಸ್ತುತಿ, ಆದರ ಮೊದಲಾದವುಗಳನ್ನು ಮಾಡುವುದು ಜ್ಞಾನವಿನಯವಾಗಿದೆ ತನ್ನ ಶಕ್ತಿಗೆ ಅನುಸರಿಸಿ ಚಾರಿತ್ರವನ್ನು ಧಾರಣ ಮಾಡುವುದರಲ್ಲಿ ಹರ್ಷಗೊಳ್ಳುವುದು, ಚಾರಿತ್ರ ಉಳ್ಳವರ ಗುಣಗಳನ್ನು ಪ್ರೀತಿಸುವುದು, ಆದರ ಸತ್ಕಾರಮಾಡುವುದು ಸ್ತುತಿಸುವುದು ಇವುಗಳಿಗೆ ಚಾರಿತ್ರ ವಿನಯವೆನ್ನುವರು ಇಚ್ಛೆಯನ್ನು ಒತ್ತಿಟ್ಟು, ದೊರಕಿದ ವಿಷಯಗಳಲ್ಲಿಯೇ ಸಂತೋಷವನ್ನು ಹೊಂದಿ, ಧ್ಯಾನ ಸ್ವಾಧ್ಯಾಯಗಳಲ್ಲಿ ತೊಡಗುವುದು, ಕಾಮವಿಕಾರವನ್ನು ಗೆಲ್ಲುವದಕ್ಕಾಗಿ ಮತ್ತು ಇಂದ್ರಿಯಗಳ ಪ್ರವೃತ್ತಿಯನ್ನು ವಿಷಯಗಳ ಮೇಲಿಂದ ತಡೆದು ಹಿಡಿಯುವದಕ್ಕಾಗಿ ಉಪವಾಸ ಮೊದಲಾದ ತಪಗಳಲ್ಲಿ ತೊಡಗುವುದಕ್ಕೆ ತಪೋವಿನಯವೆನ್ನುತ್ತಾರೆ ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಈ ನಾಲ್ಕು ಆರಾಧನೆಗಳ ಉಪದೇಶ ಮಾಡಿದಂಥವರು ಪಂಚಪರಮೇಷ್ಠಿಗಳು ಇವರನ್ನು ಸ್ಮರಿಸುವುದರಿಂದ ಪರಿಣಾಮವು ಶುದ್ಧವಾಗುತ್ತದೆ. ಆದರಿಂದ ಇವರ ನಾಮ ಸ್ಥಾಪನೆಯ ವಿನಯಮಾಡುವುದು, ನಮಸ್ಕಾರ ಮಾಡುವುದು ಮತ್ತು ಸ್ತವನ ಮಾಡುವುದು ಇದಕ್ಕೆ ಉಪಚಾರ ವಿನಯವೆನ್ನುತ್ತಾರೆ

ಇನ್ನೂ ಉಪಚಾರ ವಿನಯದ ಅನೇಕ ಭೇದಗಳು ಇವೆ. ಅಭಿಮಾನವನ್ನು ಬಿಟ್ಟು, ಎಂಟೂ ಮದಗಳನ್ನು ಸಂಪೂರ್ಣವಾಗಿ ನಾಶಮಾಡಿದವನಲ್ಲಿಯೂ, ಕಠೋರತೆಯನ್ನು ಬಿಟ್ಟು ಕೋಮಲತೆಯನ್ನು ಸ್ವೀಕರಿಸಿದವನಲ್ಲಿಯೂ ವಿಶೇಷ ನಮ್ರತೆಯು ಇರುತ್ತದೆ. ಅವರ ವಿಚಾರಗಳು ಹೀಗಿರುತ್ತವೆ-ಈ ಧನ, ಯೌವನ, ಜೀವನಗಳು ಕ್ಷಣ ಭಂಗುರವಾಗಿವೆ ಕರ್ಮದ ಸ್ವಾಧೀನವೂ ಆಗಿವೆ ಕಾಣುವವೆಲ್ಲ ಸಂಯೋಗ-ವಿಯೋಗ ರೂಪವಾಗಿದೆ ನನಗೆ ಎಷ್ಟು ದಿವಸಗಳನ್ನು ಉಳಿಸುವದಿದೆ? ಪ್ರತಿಕ್ಷಣವೂ ನಾನು ಕಾಲನ ಎದುರಿಗೆ ಒಂದೇ ಸವನೆ ಸಾಗುತ್ತಲಿದ್ದೇನೆ. ಯಾವ ವಸ್ತುವಿನ ಸಂಬಂಧವೂ ಸ್ಥಿರವಲ್ಲ. ಅಂದ ಮೇಲೆ ನನ್ನಿಂದ ಯಾವ ಜೀವಕ್ಕೂ ದುಃಖವಾಗಬಾರದೆಂದು ಪ್ರತಿಕ್ಷಣವೂ ಅವನು ವಿಚಾರಮಾಡುತ್ತಿರುತ್ತಾನೆ

**ವಿನಯಗಳಿಂದಾಗುವ ಲಾಭ-ಹಾನಿ**—ಭಗವಂತನು ವಿನಯ ಧರ್ಮವೇ ಮಾನವ ಜನ್ಮದ ಸಾರವೆಂದು ಅಂದಿದ್ದಾನೆ. ಈ ವಿನಯವು ಸಂಸಾರವೆಂಬ ವೃಕ್ಷಕ್ಕೆ ಅದನ್ನು ಸುಡುವ ಅಗ್ನಿಯಂತೆ ಇದೆ ವಿನಯವು ಮೂರು ಲೋಕದಲ್ಲಿ ಮುಖ್ಯವಾಗಿದೆ ಮತ್ತು ತ್ರೈಲೋಕ್ಯದೊಳಗಿನ ಜೀವದ ಮನಸ್ಸಿನ ಶುದ್ಧಿಯನ್ನು ಮಾಡುವಂಥ ದಾಗಿದೆ ವಿನಯವು ಸಮಸ್ತ ಜಿನಶಾಸನದ ಮೂಲವಾಗಿದೆ ಯಾರಲ್ಲಿ ವಿನಯವಿಲ್ಲವೋ ಅವರಿಂದ ಜಿನಶಾಸನದ ಶಿಕ್ಷಣವನ್ನು ಸ್ವೀಕರಿಸಲಿಕ್ಕೆ ಆಗುವದಿಲ್ಲ ವಿನಯ ರಹಿತ ಜೀವವು ಎಲ್ಲ ದೋಷಗಳಿಗೂ ಪಾತ್ರವಾಗಿದೆ ವಿನಯವು ಮಿಥ್ಯಾ ಶ್ರದ್ಧೆಯನ್ನು ಕಡಿದೊಗೆಯುವ ಕೊಡಲಿಯಾಗಿದೆ ವಿನಯವಿಲ್ಲದ್ದಕ್ಕೆ ಮಾನವ ರೂಪದ ತೊಗಲಿನ ಗಿಡವು ಗರ್ವರೂಪಿಯಾದ ಅಗ್ನಿಯಿಂದ ಭಸ್ಮವಾಗುತ್ತಿದೆ ಮಾನ ಕಷಾಯದ ಯೋಗದಿಂದ ಇಲ್ಲಿಯೇ ಭಯಂಕರ ದುಃಖವನ್ನು ಅನುಭವಿಸಬೇಕಾಗುತ್ತದೆ ಪರಲೋಕದಲ್ಲಿ ನಿಂದ್ಯ ಜಾತಿ, ನೀಚ ಕುಲ, ಕುರೂಪತೆ, ಬುದ್ಧಿಹೀನತ್ವ, ನಿರ್ಬಲತೆ ಇಂಥ ಸ್ಥಿತಿಯಲ್ಲಿ ಜನ್ಮವು ದೊರೆಯುತ್ತದೆ. ಗರ್ವಿಷ್ಟ ಮನುಷ್ಯನಿಗೆ ಇಲ್ಲಿ ಯಾವ ಶಬ್ದವೂ ಸಹನವಾಗುವದಿಲ್ಲ ಆದರೆ ಸತ್ತಮೇಲೆ ತಿರ್ಯಂಚ ಗತಿಯಲ್ಲಿ ಅನ್ಯರ ಬೈಗಳು ಇಷ್ಟೇ ಅಲ್ಲ, ಮೂಗು ಚುಚ್ಚಿ ಮೂಗದಾರವನ್ನು ಹಾಕಿಸಿಕೊಳ್ಳುವುದು, ಹಗ್ಗದಿಂದ ಕಟ್ಟಿಸಿಕೊಳ್ಳುವುದು, ಭಾರವನ್ನು ಹೊರಿಸಿಕೊಳ್ಳುವುದು, ಪೆಟ್ಟು ತಿನ್ನುವುದು, ಬಾರಕೋಲಿನ ಪೆಟ್ಟುಗಳು ಮರ್ಮಸ್ಥಾನದಲ್ಲಿ ಬೀಳುವುದು ಇವೇ ಮೊದಲಾದ ದುಃಖಗಳನ್ನು ಪರಾಧೀನನಾಗಿ ಹೊಂದಬೇಕಾಗುತ್ತದೆ ಹಾಗೆಯೇ ಚಾಂಡಾಲರ ಹೊಲಸು ಮನೆಯಲ್ಲಿ ಹಗ್ಗದಿಂದ ಕಟ್ಟಿಸಿಕೊಂಡು ನಿಲ್ಲ-ಬೇಕಾಗುವದು. ತನ್ನ ಬೆನ್ನಿನ ಮೇಲೆ ಮಲ-ಮೂತ್ರಾದಿಗಳನ್ನು ಹೊತ್ತುಕೊಳ್ಳಬೇಕಾಗುತ್ತದೆ ಗರ್ವಿಷ್ಟ ಮನುಷ್ಯನಿಗೆ ಈ ಲೋಕದಲ್ಲಿ ಸಹಿತ ಎಲ್ಲ ಜನರೂ ವೈರಿಗಳಾಗಿರುತ್ತಾರೆ. ಅವರ ನಿಂದೆಯನ್ನು ಮಾಡುತ್ತಾರೆ. ಅವರ ಅಪಕೀರ್ತಿಯು ಬಹಳವಾಗುತ್ತದೆ. ಗರ್ವಿಷ್ಟ ಮನುಷ್ಯರಿಂದ ದೂರವಿರಬೇಕೆಂದು ಎಲ್ಲರಿಗೂ ಎನಿಸುತ್ತದೆ ಮಾನ ಕಷಾಯದಿಂದ ಕ್ರೋಧವು ಪ್ರಕಟವಾಗುತ್ತದೆ. ಕಪಟ ಉತ್ಪನ್ನವಾಗುತ್ತದೆ ಲೋಭ ಬೆಳೆಯುತ್ತದೆ. ದುರ್ವಚನದಲ್ಲಿ ಪ್ರವೃತ್ತಿ ಉಂಟಾಗುತ್ತದೆ ಒಟ್ಟಿನಲ್ಲಿ ಜಗತ್ತಿನಲ್ಲಿದ್ದ ಅನೀತಿ ಎಲ್ಲವೂ ಮಾನ ಕಷಾಯದಿಂದ ಉತ್ಪನ್ನವಾಗುತ್ತದೆ ಗರ್ವಿಷ್ಟ ಮನುಷ್ಯನು ತನ್ನ ಅಭಿಮಾನವು ಪುಷ್ಟವಾಗುವದಕ್ಕಾಗಿ ಪರಧನ ಹರಣವೇ ಮೊದಲಾದ ನಿಂದ್ಯ ಕರ್ಮಗಳನ್ನೂ ಸಹ ಮಾಡುತ್ತಾನೆ ಇದರ ಮೇಲಿಂದ ಮಾನ ಕಷಾಯವು ಈ ಜೀವಕ್ಕೆ ದೊಡ್ಡ ವೈರಿಯಾಗಿದೆಯೆಂದು ಕಂಡುಬರುತ್ತದೆ

**ಯಾರಲ್ಲಿ ವಿನಯಿಯಾಗಿರಬೇಕು.** ನಮ್ಮ ಎರಡೂ ಲೋಕಗಳ ಕಲ್ಯಾಣವನ್ನು ಮಾಡಲಿರುವ ವಿನಯಗುಣದಲ್ಲಿ ಬಹಳಷ್ಟು ಆದರವನ್ನು ಇಟ್ಟು ಕಲ್ಯಾಣವನ್ನು ಸಾಧಿಸಿಕೊಳ್ಳಬೇಕು. ದೇವರ ವಿನಯ ಮಾಡಿರಿ, ಶಾಸ್ತ್ರಗಳ ವಿನಯ ಮಾಡಿರಿ, ಗುರುಗಳ ವಿನಯ ಮಾಡಿರಿ, ಮನಸ್ಸು, ಮಾತು, ಮೈಗಳಿಂದ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ವಿನಯ ಮಾಡಿರಿ ದೇವರೆಂದರೆ ಭಗವಾನ್ ಅರಿಹಂತ ವೀತರಾಗನು. ಅವನು ಸಮವಸರಣ ವಿಭೂತಿ ಸಹಿತ ಗಂಧ ಕುಟಿಯಲ್ಲಿ ಸಿಂಹಾಸನದ ಮೇಲೆ ಆಧಾರವಿಲ್ಲದೆ ವಿರಾಜಮಾನನಾಗಿದ್ದಾನೆ. ಅರವತ್ನಾಲ್ಕು ಚಾಮರಗಳಿಂದ ಅವನು ಶೋಭಿಸುವನು. ಮೂರು-ಛತ್ರಗಳೇ ಮೊದಲಾದ ಪ್ರಾತಿಹಾರ್ಯಗಳಿಂದ ಒಪ್ಪುತ್ತಿರುವನು. ಕೋಟಿ ಸೂರ್ಯರನ್ನೂ ಮೀರಿಸುವ ಪ್ರಕಾಶವು ಅವನಿಗೆ ಇದೆ ಪರಮ ಔದಾರಿಕ ದೇಹಧಾರಕನವನು. ಹನ್ನೆರಡು ಸಭೆಗಳಿಂದ ಸೇವೆಗೊಳ್ಳುವನು ತನ್ನ ದಿವ್ಯ ಧ್ವನಿಯಿಂದ ಅನೇಕ ಜೀವಗಳ ಮೇಲೆ ಉಪಕಾರ ಮಾಡುವನು. ಇಂಥ ಸರ್ವಜ್ಞ ಪ್ರಭುವಿನ ಚಿಂತನಮಾಡಿ, ಧ್ಯಾನ ಮಾಡುವುದು ಪರೋಕ್ಷ ವಿನಯವಾಗಿದೆ ಭಗವಂತನನ್ನು ವಿನಯಪೂರ್ವಕವಾಗಿ ಮುಖದಿಂದ ಸ್ತುತಿಸುವುದು ವಚನದಿಂದ ವ್ಯಕ್ತಪಡಿಸುವ ಪರೋಕ್ಷವಿನಯವೆನಿಸುತ್ತದೆ

ಇನ್ನು ಕೈಜೋಡಿಸಿ, ತಲೆಯೂರಿ ನಮಸ್ಕಾರ ಮಾಡುವುದು ಕಾಯಕ ಪರೋಕ್ಷ ವಿನಯವಾಗಿದೆ ಜಿನೇಂದ್ರ ಮೂರ್ತಿಯ ಶಾಂತ ಮುದ್ರೆಯನ್ನು ಪ್ರತ್ಯಕ್ಷ ಕಣ್ಣುಗಳಿಂದ ನೋಡಿ, ಬಹಳ ಆನಂದದಿಂದ ಮನದಲ್ಲಿ ಧ್ಯಾನಮಾಡಿ ತಾನು ಕೃತಕೃತ್ಯನೆಂದು ತಿಳಿದು ಕೊಳ್ಳುವುದು ಮನಃಕೃತ ಪ್ರತ್ಯಕ್ಷ ವಿನಯವೆನಿಸುತ್ತದೆ ಜಿನೇಂದ್ರನ ಮೂರ್ತಿಯ ಸಮ್ಮುಖದಲ್ಲಿ ಪ್ರತ್ಯಕ್ಷವಾಗಿ ಸ್ತುತಿಸುವುದು ಪ್ರತ್ಯಕ್ಷ ವಚನವಿನಯವಾಗಿದೆ ಹಾಗೆಯೇ ಎರಡೂ ಕೈಗಳನ್ನು ಜೋಡಿಸಿ ವಂದಿಸುವದು, ನೆಲದ ಮೇಲೆ ಒರಗಿ ಸಾಷ್ಟಾಂಗ ನಮಸ್ಕಾರ ಮಾಡುವುದು, ದಂಡವತ್ ಹಾಕುವುದು ಇವೆಲ್ಲ ಕಾಯಕೃತ ಪ್ರತ್ಯಕ್ಷ ವಿನಯಗಳಾಗಿವೆ ಸರ್ವಜ್ಞ ವೀತರಾಗ ಪರಮಾತ್ಮನಾದಂಥ ಜಿನೇಂದ್ರ ಭಗವಂತನ ನಾಮಸ್ಮರಣೆ ಮಾಡುವುದು, ಧ್ಯಾನ ಮಾಡುವುದು, ವಂದನ–ಸ್ತವನಗಳನ್ನು ಮಾಡುವುದು ಇವೆಲ್ಲ ಪರೋಕ್ಷ ವಿನಯಗಳಾಗಿವೆ ದೇವರ ಇಂಥ ವಿನಯವು ಸಂಪೂರ್ಣವಾಗಿ ಕರ್ಮವನ್ನು ನಷ್ಟಗೊಳಿಸುವಂಥವಾಗಿದೆಯೆಂದು ಹೇಳಿದೆ ನಿರ್ಗ್ರಂಥ ವೀತರಾಗಿ ಮುನಿಯನ್ನು ಪ್ರತ್ಯಕ್ಷ ಕಂಡು ಎದ್ದು ನಿಲ್ಲುವುದು, ಹರ್ಷದಿಂದ ಅವರನ್ನು ಎದುರುಗೊಳ್ಳುವುದು, ಅವರನ್ನು ಸ್ತುತಿಸಿ ವಂದಿಸುವುದು, ಮುನಿಗಳನ್ನು ಮುಂದೆಮಾಡಿಕೊಂಡು ತಾನು ಅವರ ಹಿಂದೆ ಹಿಂದೆ ನಡೆಯುವುದು, ಒಂದು ವೇಳೆ ಜೊತೆಯಲ್ಲಿಯೇ ನಡೆಯುವ ಅವಶ್ಯಕತೆ ಇದ್ದರೆ ಎಡ ಮಗ್ಗಲಿಗಾಗಿ ನಡೆಯುವುದು ಗುರುಗಳು ತನ್ನ ಬಲಗಡೆಗೆ ಆಗುವಂತೆ ನಡೆಯುವುದು, ಕೂಡುವುದು ಗುರುವಿನ ಹತ್ತರ ಇದ್ದಾಗ ತಾನು ಉಪದೇಶ ಮಾಡದೆ ಇರುವುದು ಯಾರಾದರೂ ಪ್ರಶ್ನೆಗಳನ್ನು ಕೇಳಿದರೆ ಗುರುಗಳೆದುರಿನಲ್ಲಿ ತಾನು ಉತ್ತರ ಹೇಳದೆ ಇರುವುದು. ತಾನು ಉತ್ತರ ಕೊಡಬೇಕಾದಲ್ಲಿ ಗುರುಗಳ ಇಚ್ಛೆಯನ್ನು ಅನುಸರಿಸಿ ಉತ್ತರಿಸುವುದು ಗುರುಗಳು ಹತ್ತರವಿರುವಾಗ ತಾನು ಎತ್ತರವಾದ ಪೀಠದಲ್ಲಿ ಕೂತಿರಬಾರದು ಗುರುವು ಉಪದೇಶಮಾಡುವಾಗಲೂ ವ್ಯಾಖ್ಯಾನವನ್ನು ಕೊಡುತ್ತಿದ್ದಾಗಲೂ ಕೈಜೋಡಿಸಿ, ಅತ್ಯಂತ ವಿನಯದಿಂದ ಕೇಳಿ ತಿಳಿದುಕೊಳ್ಳಬೇಕು ಗುರುವಿನ ಗುಣದಲ್ಲಿ ಪ್ರೀತಿಯನ್ನು ಇಟ್ಟು, ಅವರ ಆಜ್ಞೆಯಂತೆ ನಡೆಯಬೇಕು ಗುರುವು ಬೇರೆ ಕಡೆಗೆ ಇದ್ದರೆ ಅವರ ಆಜ್ಞೆಯನ್ನು ಪಾಲಿಸಬೇಕು. ಅಲ್ಲದೆ ಗುರುವಿನ ಸ್ತುತಿ, ಧ್ಯಾನ, ನಮಸ್ಕಾರಾದಿಗಳನ್ನು ದೂರದಿಂದ ಮಾಡುವುದು ಸಹ ಗುರುವಿನ ವಿನಯವಾಗಿದೆ

**ಶಾಸ್ತ್ರದ ವಿನಯ**—ಶಾಸ್ತ್ರದ ವಿನಯವನ್ನೂ ಕೂಡ ಮಾಡಬೇಕು ಬಹಳ ಆದರದಿಂದ ಶಾಸ್ತ್ರವನ್ನು ಓದಬೇಕು ಮತ್ತು ಕೇಳಬೇಕು. ದ್ರವ್ಯ, ಕ್ಷೇತ್ರ, ಕಾಲ, ಭಾವಗಳನ್ನು ನೋಡಿ ವ್ಯಾಖ್ಯಾನ ಮೊದಲಾದವುಗಳನ್ನು ಮಾಡಬೇಕು ಶಾಸ್ತ್ರದಲ್ಲಿ ಹೇಳಿದಂಥ ವ್ರತಸಂಯಮಾದಿಗಳು ತಮ್ಮ ಕಡೆಯಿಂದ ಆಗುವದಿಲ್ಲವೆಂದು ಶಾಸ್ತ್ರದ ಆಜ್ಞೆಯನ್ನು ಲೋಪಮಾಡಕೂಡದು ಶಾಸ್ತ್ರದ ಆಜ್ಞೆಯು ಹೇಗಿರುವುದೋ ಹಾಗೆಯೇ ಹೇಳಬೇಕು ಸೂತ್ರದ ಆಜ್ಞೆಯನ್ನು ಏಕಾಗ್ರಚಿತ್ತದಿಂದ ಶ್ರವಣಮಾಡಬೇಕು. ಕೇಳುವಾಗ ಎರಡನೆಯ ಮಾತನ್ನು ತೆಗೆಯಬಾರದು. ಆದರದಿಂದ ಮೌನ ಧಾರಣಮಾಡಿ ಶಾಸ್ತ್ರವನ್ನು ಕೇಳಬೇಕು. ತಮಗೆ ಒಂದು ವೇಳೆ ಸಂಶಯವು ಬಂದರೆ ಅವುಗಳನ್ನು ದೂರಮಾಡುವದಕ್ಕಾಗಿ ಸಭಿಕರಿಗೂ ಹೇಳುವವರಿಗೂ ಕ್ಷೋಭ ಉತ್ಪನ್ನವಾಗದಂತೆ ವಿನಯದಿಂದ ಪ್ರಶ್ನೆಯನ್ನು ಕೇಳಬೇಕು ಉತ್ತರವು ದೊರೆತುದನ್ನು ಕೇಳಿಕೊಳ್ಳಬೇಕು. ಶಾಸ್ತ್ರವನ್ನು ಎತ್ತರವಾದ ಆಸನದ ಮೇಲೆ ಇಟ್ಟು ತಾವು ಕೆಳಗೆ ಕುಳಿತುಕೊಳ್ಳಬೇಕು. ಶಾಸ್ತ್ರದ ಸ್ತುತಿಯನ್ನು ಮಾಡಬೇಕು, ಹೊಗಳಬೇಕು ಶಾಸ್ತ್ರಕ್ಕೆ ನಮಸ್ಕಾರ ಮಾಡಬೇಕು. ಇದು ಶಾಸ್ತ್ರದ ವಿನಯವೆನಿಸುತ್ತದೆ ಈ ಪ್ರಕಾರ ದೇವ, ಗುರು, ಶಾಸ್ತ್ರಗಳ ವಿನಯ ಮಾಡುವುದು ಧರ್ಮವಾಗಿದೆ

**ಆತ್ಮ ವಿನಯ**—ಆತ್ಮನ ಗುಣದ ಘಾತವು ರಾಗದ್ವೇಷಗಳಿಂದ ಆಗುತ್ತದೆ ಅದು ಆಗದ ಹಾಗೆ ತಮ್ಮ ವರ್ತನದ ರೀತಿಯನ್ನು ಇಡುವದಕ್ಕೆ ಆತ್ಮನ ವಿನಯವೆನ್ನುವರು ಇನ್ನು ಮುಂದೆ ನನಗೆ ಈ ಚತುರ್ಗತಿಯೊಳಗಿನ ಭ್ರಮಣವು ಬೇಡ. ನನ್ನ ಆತ್ಮಕ್ಕೆ ಮಿಥ್ಯಾತ್ವ, ಕಷಾಯ, ಅವಿನಯ ಮೊದಲಾದವುಗಳ ಯೋಗದಿಂದ ಇಲ್ಲಿಯ ವರೆಗೆ ಸಂಸಾರದಲ್ಲಿ ಸುತ್ತಬೇಕಾಯಿತು ಇನ್ನು ಹಾಗೆ ಆಗಕೂಡದು. ಮಿಥ್ಯಾತ್ವ, ಕಷಾಯ, ಅವಿನಯವೇ ಮೊದಲಾದವುಗಳ ಯೋಗದಿಂದ ಆತ್ಮನ ಜ್ಞಾನಾದಿ ಗುಣಗಳನ್ನು ಘಾತಮಾಡಿಕೊಳ್ಳಬಾರದು ಇದು ಆತ್ಮನ ವಿನಯವಾಗಿದೆ ಇದಕ್ಕೇನೇ ನಿಶ್ಚಯವಿನಯವೆನ್ನುತ್ತಾರೆ ಇದು ಪರಮಾರ್ಥ ವಿನಯವಾಗಿದೆ.

**ವ್ಯವಹಾರ ವಿನಯ**—ಮಾನ ಕಷಾಯವು ಕಡಿಮೆಯಾದಂಥವರಿಗೇನೇ ವ್ಯವಹಾರ ವಿನಯವಾದರೂ ಸಾಧಿಸುತ್ತದೆ ನನ್ನ ಕಡೆಯಿಂದ ಯಾವ ಮನುಷ್ಯನ ಅಪಮಾನವು ಆಗಬಾರದೆಂದು ಮನಸ್ಸಿನಲ್ಲಿ ಯಾವಾಗಲೂ ಚಿಂತಿಸುತ್ತಿರಬೇಕು ಯಾರು ಅನ್ಯರ ಅಪಮಾನವನ್ನು ಮಾಡುವರೋ ಅವರು ಸ್ವತಃ ಅಪಮಾನಿತರಾಗುವದು

ಯಾವನು ಅನ್ಯರನ್ನು ಸನ್ಮಾನಿಸುವನೋ ಅವನೇ ಮಾನಕ್ಕೆ ಪಾತ್ರನಾಗುತ್ತಾನೆ ಎಲ್ಲರ ಕೂಡ ಸವಿಯಾದ ನುಡಿಗಳನ್ನು ಆಡುವುದು ವಿನಯವಾಗಿದೆ ಯಾವ ಜೀವದ ತಿರಸ್ಕಾರವನ್ನು ಮಾಡದಿರುವುದೂ ಸಹ ವಿನಯವೆನಿಸುತ್ತದೆ. ತಮ್ಮ ಮನೆಯಲ್ಲಿ ಯಾರಾದರೂ ಬಂದರೆ ಅವರನ್ನು ಯೋಗ್ಯ ರೀತಿಯಲ್ಲಿ ಸತ್ಕರಿಸಬೇಕು ಯಾರನ್ನು ಎದುರುಗೊಳ್ಳಬೇಕೋ ಅವರನ್ನು ಎದುರಿಗೆ ಹೋಗಿ ಕರೆದು ತರಬೇಕು ಯಾರು ಬರುವಾಗ ತಾವು ಎದ್ದು ನಿಲ್ಲುವ ಅವಶ್ಯಕತೆಯು ಇರುವುದೋ ಆಗ ಎದ್ದು ನಿಲ್ಲಬೇಕು ಕೈಜೋಡಿಸಿ ಯಾರಿಗೆ ನಮಸ್ಕಾರ ಮಾಡಬೇಕೋ ಅವರಿಗೆ ಹಾಗೆ ಮಾಡಿ ಸನ್ಮಾನಿಸಬೇಕು. ಯಾರಿಗೆ "ಬರಬೇಕು, ಬರಬೇಕು, ಬರಬೇಕು" ಎಂದು ಮೂರು ಸಲ ಉಚ್ಚರಿಸಿ ಮಾನಕೊಡುವದಿರುವದೋ ಅವರಿಗೆ ಹಾಗೆ ಮಾನವನ್ನು ಸಲ್ಲಿಸಬೇಕು ತಾವು ಆದರದಿಂದ ಅವರ ಮುಂದ ಕೂಡಬೇಕು ಯಾರನ್ನು ತಮ್ಮ ಸ್ಥಳದಲ್ಲಿ ಕೂಡಿಸುವುದು ಯೋಗ್ಯವೋ ಅವರನ್ನು ಹಾಗೆ ಮಾಡಿ, ತಾವು ಎದುರಿಗೆ ಅಥವಾ ಪಕ್ಕಲಿಗೆ ಕೂಡಬೇಕು ಕೂಡಲಿಕ್ಕೆಂದು ಗಾದಿ, ಕುರ್ಚಿ, ಮೆತ್ತೆ ಮೊದಲಾದ ಯೋಗ್ಯವಾದುದನ್ನು ಕೊಡಬೇಕು "ಬರ್ರಿ, ಕೂಡಿರಿ" ಎಂದು ಅನ್ನಬೇಕು ಶರೀರದ ಕ್ಷೇಮ, ಕುಶಲವನ್ನು ಕೇಳಬೇಕು. ಮನೆಯ ಜನರ ಕ್ಷೇಮ ಸಮಾಚಾರವನ್ನೂ ಕೇಳಬೇಕು "ನಾನು ನಿಮ್ಮವನೇ ಇದ್ದೇನೆ, ಏನಾದರೂ ಕೆಲಸಗಳಿದ್ದರೆ ಹೇಳಿರಿ." ಎಂದು ಅನ್ನಬೇಕು "ಊಟಕ್ಕ ಏಳಿರಿ, ಮನೆ ನಿಮ್ಮದೇ ಇದೆ" ಎಂದೂ ಅನ್ನಬೇಕು. "ನೀರು ತಂದು ಕೊಡಲೆ?" ಎಂದು ಕೇಳಬೇಕು ಮತ್ತು ನೀರು ತಂದು ಕೊಡಬೇಕು "ಈ ಮನೆಯು ನಿಮ್ಮ ಆಗಮನದಿಂದ ಪವಿತ್ರವಾಯಿತು" ಎಂದು ಅನ್ನಬೇಕು. "ನಿಮ್ಮ ಕೃಪೆಯು ನನ್ನ ಮೇಲೆ ಮೊದಲಿನಿಂದಲೂ ಇದೆ." ಎಂದು ಅನ್ನಬೇಕು ಇವೆಲ್ಲ ವ್ಯವಹಾರ ವಿನಯವೆನಿಸುತ್ತವೆ ಹಾಗೆಯೇ ದಾನಕೊಡುವುದು, ಸತ್ಕಾರ ಮಾಡುವುದು, ಕ್ಷೇಮ ಕುಶಲಗಳನ್ನು ಕೇಳುವುದು, ರೋಗಿ ಹಾಗೂ ದುಃಖಿಗಳ ಸೇವೆಯನ್ನು ಮಾಡುವುದು ಇವಲ್ಲವೂ ವಿನಯವುಳ್ಳವರಿಂದಲೇ ಸಾಧ್ಯವಾಗುತ್ತವೆ ಯಾರಾದರೂ ದುಃಖಿಗಳು ತಮ್ಮ ದುಃಖವನ್ನು ಹೇಳಿಕೊಳ್ಳಲಿಕ್ಕೆ ಬಂದಿದ್ದರೆ ಅವರ ಹೇಳಿಕೆಯನ್ನು ಕೇಳಿಕೊಳ್ಳಬೇಕು. ಮತ್ತು ತಮ್ಮ ಸಾಮರ್ಥ್ಯಕ್ಕೆ ಅನುಸರಿಸಿ ಸಹಾಯ ಮಾಡಬೇಕು. ತಮ್ಮ ಕಡೆಯಿಂದ ಏನೂ ಸಹಾಯವು ಆಗದಂತೆ ಇರದಿದ್ದರೆ ಕೊನೆಗೆ ಧೈರ್ಯವನ್ನಾದರೂ ಕೊಡಬೇಕು. ಸಂತೋಷವಾಗಿರಲಿಕ್ಕೆ ಉಪದೇಶಿಸ-ಬೇಕು ಇದೂ ಕೂಡ ವ್ಯವಹಾರವಿನಯವೇ ಆಗಿದೆ. ಮತ್ತು ಅದು ಪರಮಾರ್ಥ ವಿನಯಕ್ಕೆ ಕಾರಣವಾಗಿದೆ. ಇದರಿಂದ ಕೀರ್ತಿಯಾಗುತ್ತದೆ, ಧರ್ಮ ಪ್ರಭಾವನೆಯಾಗುತ್ತದೆ ಮಿಥ್ಯಾದೃಷ್ಟಿಯವರನ್ನೂ ಸಹ ಅವಮಾನಗೊಳಿಸ-ಬಾರದು ಅವರೊಡನೆಯೂ ಸವಿಯಾದ ಮಾತುಗಳನ್ನು ಆಡಬೇಕು ಯಥಾಯೋಗ್ಯ ಅವರ ಆದರ ಸತ್ಕಾರವನ್ನೂ ಮಾಡಬೇಕು ಇದೂ ವಿನಯವೆನಿಸುತ್ತದೆ. ಮಹಾನ್ ಪಾಪಿಯೂ ದ್ರೋಹಿಯೂ ದುರಾಚಾರಿಯೂ ಇದ್ದರೂ ಸಹ ಅವರಿಗೂ ಕೆಟ್ಟ ಶಬ್ದಗಳನ್ನು ಆಡಕೂಡದು. ಏಕೇಂದ್ರಿಯ ವಿಕಲೇಂದ್ರಿಯವೇ ಮೊದಲಾದ ಮತ್ತು ಹಾವಿನಂಥ ದುಷ್ಟ ಜೀವಗಳ ಪ್ರಾಣವನ್ನು ತಕ್ಕೊಳ್ಳಕೂಡದು. ಅವುಗಳ ಜೀವವು ಉಳಿಯುವಂತೆಯೇ ತಾವು ವರ್ತಿಸಬೇಕು ಇದೇ ಅವುಗಳ ವಿನಯವಾಗಿದೆ ಅನ್ಯ ಧರ್ಮೀಯರ ಮೂರ್ತಿ ಹಾಗೂ ದೇವಸ್ಥಾನಗಳನ್ನು ನಿಂದಿಸಕೂಡದು. ಅವುಗಳ ಕೂಡ ವೈರಭಾವವನ್ನೂ ಇಡಬಾರದು ಈ ಪ್ರಕಾರ ಪರಮಾರ್ಥ ಹಾಗೂ ವ್ಯವಹಾರ ವಿನಯಗಳನ್ನು ಪಾಲಿಸುವುದು ಗೃಹಸ್ಥನ ಕರ್ತವ್ಯವಾಗಿದೆ. ಸಕಲ ಸಂಗವನ್ನು ಪರಿತ್ಯಾಗ ಮಾಡಿದಂಥ ವೀತರಾಗಿಯಾದ ಮುನೀಶ್ವರನೂ ಸಹ ವಂದನೆ ಮಾಡಿದ ಮಿಥ್ಯಾದೃಷ್ಟಿಗಳಿಗೆ ಆಶೀರ್ವಾದ ಮಾಡುತ್ತಾರೆ ಚಾಂಡಾಳ, ಭಿಲ್ಲ ಬೇಡರಂಥ ಜಾತಿಗಳ ಜನರು ವಂದನೆಯನ್ನು ಮಾಡಿದರೆ "ಪಾಪಕ್ಷಯೋಽಸ್ತು" ಎಂದು ಆಶೀರ್ವದಿಸುತ್ತಾರೆ, ಅದಕ್ಕಾಗಿ ವಿನಯಗುಣವನ್ನು ಧಾರಣ ಮಾಡುವದಾದಲ್ಲಿ ಚಿಕ್ಕ ಮಗು, ಅಜ್ಞಾನಿ, ಧರ್ಮರಹಿತ ಮತ್ತು ನೀಚ ಜಾತಿಯವರನ್ನೂ ಕೂಡ ನಿಂದಿಸಕೂಡದು, ತಿರಸ್ಕರಿಸಕೂಡದು ಈ ಮನುಷ್ಯ ಜನ್ಮದ ಶೋಭೆಯು ವಿನಯದಿಂದಲೇ ಇದೆ ವಿನಯವನ್ನು ತ್ಯಜಿಸಿ ಒಂದು ಘಳಿಗೆಯನ್ನೂ ಸಹ ಮಾನವನು ಬಾಳಬಾರದು, ಹೀಗೆ ಭಗವಾನ್ ಗಣಧರ ದೇವನು ಹೇಳುತ್ತಾನೆ.

ಹೀಗೆ ವಿನಯ ಗುಣದ ಮಹಿಮೆಯನ್ನು ತಿಳಿದು ಅದಕ್ಕೆ ಮಹಾನ್ ಅರ್ಘ್ಯವನ್ನು ಅರ್ಪಿಸಿರಿ ಇದು ವಿನಯ ಸಂಪನ್ನತಾ ಅಂಗವು! ನೀನು ನನ್ನ ಅಂತಃಕರಣದಲ್ಲಿ ನಿರಂತರ ವಾಸಿಸು ನಿನ್ನ ಪ್ರಸಾದದಿಂದ ನನ್ನ ಆತ್ಮವು ಎಂಟು ಪ್ರಕಾರದ ಗರ್ವವನ್ನು ಎಂದೂ ಹೊಂದದೆ ಇರಲಿ ಈ ಪ್ರಕಾರ ವಿನಯ ಸಂಪನ್ನತೆ ಎಂಬ ಹೆಸರಿನ ಎರಡನೆಯ ಭಾವನೆಯ ವರ್ಣನೆಯಾಗಿದೆ.

## ೩. ಶೀಲವ್ರತೇಷ್ವನತಿಚಾರ

**ನಿರ್ದೋಷ ಶೀಲದ ಸ್ವರೂಪ**—ಇನ್ನು ಮೂರನೆಯದಾದ ಶೀಲವ್ರತೇಷ್ವನತಿಚಾರ ಭಾವನೆಯ ವಿಷಯಕ್ಕೆ ಹೇಳುತ್ತಾರೆ. ಶೀಲವ್ರತೇಷ್ವನತಿಚಾರ ಎಂಬುದರ ಅರ್ಥವನ್ನು ವಾರ್ತಿಕದಲ್ಲಿ ಹೀಗೆ ಹೇಳಿದೆ-ಅಹಿಂಸೆಯೇ ಮೊದಲಾದ ಐದು ವ್ರತಗಳು ಮತ್ತು ಈ ವ್ರತಗಳನ್ನು ಪಾಲಿಸುವದಕ್ಕಾಗಿ ಕಷಾಯವೇ ಮೊದಲಾದವುಗಳನ್ನೂ ತ್ಯಾಗ ಮಾಡುವ ಶೀಲ ಅಂದರೆ ಮನ-ವಚನಕಾಯಗಳ ನಿರ್ದೋಷ ಪ್ರವೃತ್ತಿ ಇದಕ್ಕೇನೇ ಶೀಲವ್ರತೇಷ್ವನತಿಚಾರ ಭಾವನೆ ಎನ್ನುವರು ಶೀಲವೆಂದರೆ ಆತ್ಮನ ಸ್ವಭಾವ ಈ ಆತ್ಮನ ಸ್ವಭಾವವನ್ನು ನಷ್ಟಗೊಳಿಸುವಂಥ ಹಿಂಸೆಯೇ ಮೊದಲಾದವುಗಳು ಐದು ಪಾಪಗಳಾಗಿವೆ. ಇವುಗಳಲ್ಲಿ ಕಾಮ ಸೇವನೆ ಎಂಬ ಪಾಪವು ಹಿಂಸೆಯೇ ಮೊದಲಾದ ಎಲ್ಲ ಪಾಪಗಳನ್ನೂ ಹೆಚ್ಚಿಸುವಂಥದಿದೆ ಅಲ್ಲದೆ ಅದು ಕ್ರೋಧಾದಿಗಳನ್ನೂ ಬೆಳೆಯಿಸುವಂಥದಿರುತ್ತದೆ ಅದಕ್ಕಾಗಿ ಇಲ್ಲಿ ಬ್ರಹ್ಮಚರ್ಯಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು, ವರ್ಣಿಸಲಾಗಿದೆ

ಶೀಲವು ದುರ್ಗತಿಯ ದುಃಖವನ್ನು ಹರಣ ಮಾಡುವಂಥದ್ದಾಗಿದೆ. ಸ್ವರ್ಗಾದಿ ಶುಭ ಗತಿಗಳಿಗೆ ಕಾರಣವಾಗಿದೆ ಮತ್ತು ತಪ, ವ್ರತ, ಸಂಯಮಗಳ ಪ್ರಾಣವಾಗಿದೆ ಶೀಲವಿಲ್ಲದೆ ತಪಮಾಡುವುದು, ವ್ರತಧಾರಣ ಮಾಡುವುದು, ಸಂಯಮ ಪಾಲಿಸುವುದು ಇವೆಲ್ಲ ಪ್ರೇತದ ದೇಹದಂತೆ ತ್ಯಾಜ್ಯವಾಗಿವೆ ಶೀಲವಿಲ್ಲದೆ ಇರುವವರ ತಪ, ವ್ರತ, ಸಂಯಮ ಇವೆಲ್ಲವೂ ಧರ್ಮದ ನಿಂದೆಯನ್ನು ಮಾಡಿಸುವಂಥವಿರುತ್ತವೆ ಅದಕ್ಕಾಗಿ ಶೀಲವು ಧರ್ಮದ ಅಂಗವೆಂದು ತಿಳಿದು ಅವಶ್ಯವಾಗಿ ಅದನ್ನು ಪಾಲಿಸಲಿಕ್ಕೆ ಬೇಕು ಈ ಚಂಚಲವಾದ ಮನವೆಂಬ ಪಕ್ಷಿಯನ್ನು ಶೀಲವ್ರತವೆಂಬ ಕಂಬಕ್ಕೆ ಕಟ್ಟಿಯಿಡಿರಿ ನಿಮ್ಮ ಶೀಲವನ್ನು ನಿರ್ದೋಷಗೊಳಿಸಿ ಅದನ್ನು ಪುಷ್ಟಮಾಡಿರಿ

**ಕಾಮ ಮತ್ತು ಮದೋನ್ಮತ್ತ ಆನೆಗಳ ತುಲನೆ**—ಧರ್ಮವೆಂಬ ಹೂದೋಟವನ್ನು ನಾಶಮಾಡುವ ಮನವೆಂಬ ಮದೋನ್ಮತ್ತ ಆನೆಯನ್ನು ತಡೆದು ಹಿಡಿಯಿರಿ ಸಿಕ್ಕ ಸಿಕ್ಕ ಕಡೆಗೆ ಓಡುವ ಮನಸ್ಸೆಂಬ ಆನೆಯು ಬಹಳ ಅನರ್ಥವನ್ನುಂಟು ಮಾಡುತ್ತದೆ ಉನ್ಮತ್ತಗೊಂಡಾಗ ಅದು ತನ್ನ ಬಂಧನಗಳನ್ನು ಹರಿದೊಗೆದು ಓಡಿಹೋಗುತ್ತದೆ ಹಾಗೆಯೇ ಮನವೆಂಬ ಆನೆಯು ಕಾಮ ವಿಕಾರದಿಂದ ಉನ್ಮತ್ತವಾದರೆ ಸಾಮ್ಯಭಾವರೂಪದ ಸ್ವರೂಪದೊಳಗಿಂದ ಹೊರಟು ಓಡಹತ್ತುತ್ತದೆ ಅದಕ್ಕೆ ಕುಲದ ಮರ್ಯಾದೆಯೂ ವಿವೇಕವೂ ಉಳಿಯವದಿಲ್ಲ ಮದೋನ್ಮತ್ತ ಆನೆಯು ನರವಳಿಯನ್ನು ಕಡಿದೊಗೆದು ಹೋಗುತ್ತದೆ. ಆದರೆ ಮನವೆಂಬ ಆನೆಯು ಸದ್ಬುದ್ಧಿಯೆಂಬ ಸರವಳಿಯನ್ನು ಹರಿದು ತಿರುಗ ಹತ್ತುತ್ತದೆ. ಆನೆಯು ಮಾವುತನನ್ನು ನೆಲಕ್ಕೆ ಒಗೆಯುತ್ತದೆ. ಕಾಮಾಂಧವಾದ ಮನಸ್ಸು ಸಮ್ಯಗ್ಧರ್ಮದ ಮಾರ್ಗದಲ್ಲಿ ಪ್ರವೃತ್ತಿಸುವಂಥ ಜ್ಞಾನವನ್ನು ಚೆಲ್ಲಿ ಬಿಡುತ್ತದೆ ಆನೆಯು ಅಂಕುಶದ ಆಧೀನ-ವಾಗುವದಿಲ್ಲ ಆದರೆ ಮನಸ್ಸು ಗುರು ಹಾಗೂ ಶಿಕ್ಷಕರ ಉಪದೇಶಪರ ಮಾತುಗಳನ್ನು ಮನ್ನಿಸುವದಿಲ್ಲ ಆನೆಯು ನೆರಳನ್ನೂ ಹಣ್ಣುಗಳನ್ನೂ ಕೊಡುವ ಗಿಡಗಳನ್ನು ಕಿತ್ತು ಒಗೆಯುತ್ತದೆ ಆದರೆ ಕಾಮವಿಕಾರದಿಂದ ದೂಷಿತವಾದ ಮನಸ್ಸು ಸ್ವರ್ಗಮೋಕ್ಷಗಳೆಂಬ ಫಲಗಳನ್ನು ಕೊಡುವ, ಯಶ ರೂಪೀ ಸುಗಂಧವನ್ನು ಪಸರಿಸುವ, ಸಂಪೂರ್ಣ ವಿಷಯದ ತಾಪವನ್ನು ಇಲ್ಲದಂತೆ ಮಾಡುವಂಥ ಬ್ರಹ್ಮಚರ್ಯವೆಂಬ ವೃಕ್ಷವನ್ನೇ ಕಿತ್ತು ಒಗೆಯುತ್ತದೆ ಆನೆಯು ಸರೋವರದಲ್ಲಿ ಸ್ನಾನಮಾಡಿ ಪುನಃ ತಲೆಯ ಮೇಲೆ ಧೂಳನ್ನು ಹಾಕಿಕೊಂಡು, ಮಣ್ಣಿನೊಡನೆ ಆಡುತ್ತದೆ ಕಾಮವಿಕಾರದಿಂದ ವ್ಯಾಪ್ತವಾದ ಮನಸ್ಸು ಸಿದ್ಧಾಂತವೆಂಬ ಸರೋವರದಲ್ಲಿ ನುತ್ತಾಡಿ, ಅಜ್ಞಾನವೆಂಬ ಮಲವನ್ನು ತೊಳೆದುಕೊಂಡು, ತಿರುಗಿ ಪಾಪವೆಂಬ ಮಣ್ಣಿನಲ್ಲಿ ಹೊರಳಾಡಹತ್ತುತ್ತದೆ. ಆನೆಯು ತನ್ನ ಕಿವಿಗಳನ್ನು ಯಾವಾಗಲೂ ತೂಗಿಸುತ್ತಿರುತ್ತದೆ ಆದರಂತೆಯೇ ಕಾಮ ಸಂಯುಕ್ತ ಮನಸ್ಸೂ ಸಹ ಐದೂ ಇಂದ್ರಿಯಗಳ ವಿಷಯದಿಂದ ಚಂಚಲವಾದದ್ದು ಇರುತ್ತದೆ ಆನೆಯು ಹೆಣ್ಣಾನೆಯೊಡನೆ ರಮಿಸುತ್ತದೆ ಆದರೆ ಕಾಮಿ ಮನಸ್ಸು ಕುಬುದ್ಧಿಯೆಂಬ ಆನೆಯೊಡನೆ ಆನಂದ ಹೊಂದುತ್ತದೆ ಆನೆಯು ಸ್ವಚ್ಛಂದವಾಗಿ ವಿಹರಿಸುತ್ತದೆ ಕಾಮಯುಕ್ತವಾದ ಮನಸ್ಸೂ ಸಹ ಸ್ವಚ್ಛಂದಿಯಾಗಿರುತ್ತದೆ ಆನೆಯು ಮದದಿಂದ ಸೊಕ್ಕಿಗೆ ಒಂದಿರುತ್ತದೆ ಆದರೆ ಕಾಮಿ ಪುರುಷನ ಮನಸ್ಸು ರೂಪಾದಿ ಎಂಟು ಮದಗಳಿಂದ ಉನ್ಮತ್ತವಾಗಿರುತ್ತದೆ ಉನ್ಮತ್ತ ಆನೆಯ ಹತ್ತರ ಯಾರೂ ಬರುವದಿಲ್ಲ. ಅದರಂತೆ ಕಾಮವಿಕಾರದಿಂದ ಕೂಡಿದ ಉನ್ಮತ್ತ ಮನುಷ್ಯನ ಹತ್ತರ ಯಾವ ಗುಣವೂ ಇರುವದಿಲ್ಲ ಅದಕ್ಕಾಗಿ

ಕಾಮವಿಕಾರದಿಂದ ಉನ್ಮತ್ತವಾದ ಮನವೆಂಬ ಆನೆಯನ್ನು ವೈರಾಗ್ಯವೆಂಬ ಕಂಬಕ್ಕೆ ಕಟ್ಟಿರಿ ಅದು ಜಡುಗಡೆಯನ್ನು ಹೊಂದಿದ್ದರೆ ಬಹಳ ಅನರ್ಥವನ್ನು ಮಾಡೀತು

ಕಾಮನ ಇತರ ಹೆಸರುಗಳು—ಕಾಮನಿಗೆ ಅನಂಗವೆನ್ನುವರು, ಅವನಿಗೆ ಶರೀರವಿಲ್ಲ. ಕಾಮನಿಗೆ ಮನಸಿಜವೆನ್ನುವರು; ಅವನ ಜನ್ಮವು ಮನಸ್ಸಿನಲ್ಲಿಯೇ ಆಗುತ್ತದೆ. ಕಾಮನಿಗೆ ಮನ್ಮಥನೆನ್ನುವರು, ಇವನು ಮನಸ್ಸಿನೊಳಗಿನ ಜ್ಞಾನದ ಮಂಥನ ಮಾಡುವವನಾಗಿದ್ದಾನೆ ಹಾಗೆಯೇ ಇವನು ಸಂವರದ ಅರಿಯಾಗಿದ್ದಾನೆ. ಅಂತಲೇ ಇವನಿಗೆ ಸಂವರಾರಿ ಎಂಬ ಹೆಸರು ಕಾಮದಿಂದ ಸುಳ್ಳು ಗರ್ವವು ಉತ್ಪನ್ನವಾಗುತ್ತದೆ ಅಂತಲೇ ಅವನಿಗೆ ಕಂದರ್ಪವೆನ್ನುವರು ಕಾಮನ ಯೋಗದಿಂದ ಅನೇಕ ತಿರ್ಯಂಚ ಹಾಗೂ ಮನುಷ್ಯರು ಪರಸ್ಪರರಲ್ಲಿ ಹೋರಾಡಿ ಮರಣವನ್ನು ಹೊಂದುತ್ತಾರೆ ಅದಕ್ಕಾಗಿ ಇವನಿಗೆ ಮಾರ ಎನ್ನುವರು. ಮಾನವನಿಗೆ ಉಳಿದ ಇಂದ್ರಿಯಗಳಿಂದ ವಿಷಯ ಭೋಗವನ್ನು ಸ್ಪಷ್ಟವಾಗಿ ಸ್ವೀಕರಿಸಲಿಕ್ಕೆ ಬರುತ್ತದೆ ಆದರೆ ಕಾಮ ಸೇವನೆಯ ಇಂದ್ರಿಯವು ಮುಚ್ಚಿದ್ದಿರುತ್ತದೆ. ಕಾಮ ವಿಷಯಕ್ಕೆ ಸಂಬಂಧಿಸಿದ ಇಂದ್ರಿಯದ ಹೆಸರನ್ನೂ ಸಹ ಸಭ್ಯ ಸ್ತ್ರೀ ಪುರುಷರು ಬಾಯಿಂದ ಉಚ್ಚರಿಸುವದಿಲ್ಲ ಕಾಮವಿಕಾರವಿದು ಧರ್ಮದಿಂದ ಮಾನವನನ್ನೂ ಭ್ರಷ್ಟಗೊಳಿಸುವಂಥದಿದೆ. ಇದರಂಥ ಅನ್ಯ ಪಾಪವು ಇಲ್ಲ. ಈ ಕಾಮ ವಿಕಾರದಿಂದ ಹರಿಹರಬ್ರಹ್ಮಾದಿಗಳೂ ಭ್ರಷ್ಟರಾಗಿ ಅದಕ್ಕೆ ವಶವಾಗಿದ್ದಾರೆ. ಆದರಿಂದ ಸಂಪೂರ್ಣ ಜಗತ್ತನ್ನು ಗೆಲ್ಲುವುದು ಕಾಮವೊಂದೇ ಆಗಿದೆ ಕಾಮವನ್ನು ಗೆದ್ದವನು ಮೋಹವನ್ನು ಸಹಜವಾಗಿ ಗೆದ್ದಾನು.

ಸ್ತ್ರೀಯರ ಸಂಬಂಧವನ್ನು ಇಡಬೇಡಿರಿ. ಕಾಮ ವಿಕಾರವನ್ನು ನಷ್ಟಗೊಳಿಸುವದಕ್ಕಾಗಿ ಮಾನವಸ್ತ್ರೀ, ದೇವಾಂಗನಾ, ತಿರ್ಯಂಚ ಜಾತಿಯ ಹೆಣ್ಣು ಇವರ ಕೂಡ ಸಂಬಂಧವನ್ನು ಇಡಬೇಡಿರಿ. ಅವರ ಜೊತೆಯಲ್ಲಿ ಕೂಡಬೇಡಿರಿ. ಸ್ತ್ರೀಯರ ವಿಷಯಕ್ಕಿರುವ ಒಲವನ್ನು ಬಿಟ್ಟು ಬಿಡಿರಿ ನೀವು ಕೆಟ್ಟ ಶೀಲದ ಮಾರ್ಗದಿಂದ ನಡೆಯಬೇಡಿರಿ. ಅನ್ಯರಿಗೆ ಕುಶೀಲ ಮಾರ್ಗದ ಉಪದೇಶ ಮಾಡಬೇಡಿರಿ. ಕೆಟ್ಟ ಶೀಲವುಳ್ಳವರಿಗೆ ಪ್ರೋತ್ಸಾಹಿಸ-ಬೇಡಿರಿ ಅವರ ನಡತೆಯನ್ನು ಅನುಮೋದಿಸದಿರಿ. ಚಿಕ್ಕ ಹುಡಿಗೆಯರನ್ನು ಕಂಡಾಗ ಅವರು ತನ್ನ ಮಕ್ಕಳೆಂದು ಬಾವಿಸಿರಿ. ತರುಣ ಸ್ತ್ರೀಯರನ್ನು ಕಂಡಾಗ ಅವಳು ತನ್ನ ತಂಗಿಯೆಂದು ತಿಳಿಯಬೇಕು. ಅವರ ಕೂಡ ವರ್ತಿಸುವದನ್ನೂ ಮಾತನಾಡುವದನ್ನೂ ಹೆಚ್ಚಾಗಿ ಮಾಡಬೇಡಿರಿ. ಶೀಲವಂತ ಮನುಷ್ಯನು ಸ್ತ್ರೀಯರ ಕಡೆಗೆ ನೋಡಿದ ಕೂಡಲೆ ಕಣ್ಣುಗಳನ್ನು ಮುಚ್ಚಿ ಬಿಡುವನು ಯಾವನು ಸ್ತ್ರೀಯರೊಡನೆ ಹೆಚ್ಚಾಗಿ ಮಾತನಾಡಬಹುದು, ಕೂಡಿಯೂ ಇರಬಹುದು, ಅವರ ಅಂಗ ಸೌಷ್ಠವವನ್ನು ನೋಡುತ್ತಲೂ ಇದ್ದಾನು ಅಂದರೆ ಅವನ ಶೀಲಭಂಗವಾಗುವ ಸಂಭವವಿದೆ. ಅದಕ್ಕಾಗಿ ಗೃಹಸ್ಥನು ತನ್ನ ಸ್ತ್ರೀಯ ಹೊರತಾಗಿ ಅನ್ಯ ಸ್ತ್ರೀಯರ ಸಹವಾಸವನ್ನು ಬಿಟ್ಟು ಬಿಡಬೇಕು. ಎರಡನೆಯ ಸ್ತ್ರೀಯರ ವಿಷಯದಲ್ಲಿ ಮನಸ್ಸು ಹಾಕಬಾರದು ತಮ್ಮ ತಾಯಿ, ತಂಗಿ, ಮಗಳು ಇದ್ದರೂ ಸಹ ಅವರ ಕೂಡ ಏಕಾಂತದಲ್ಲಿ ಮಾತನಾಡುತ್ತ ಕೂಡಬಾರದು ಮುನಿಗಳಂತೂ ಸ್ತ್ರೀಯರ ಸಂಬಂದವನ್ನೇ ಇಡುವದಿಲ್ಲ ಸ್ತ್ರೀಯರಲ್ಲಿ ಕುಳಿತು ಉಪದೇಶ ಮಾಡುವದಿಲ್ಲ. ಸ್ತ್ರೀಯ ಹೆಸರುಗಳೂ ಸಹ ದೋಷದರ್ಶಕವಾಗಿವೆ. ಸ್ತ್ರೀಯರಿಗೆ ನಾರೀ ಎನ್ನುವರು ಸ್ತ್ರೀಯರಿಗೆ ಸಮಾನವಾದ ವೈರಿಯು ಬೇರೆ ಇಲ್ಲವಾದುದರಿಂದ ಅವರಿಗೆ ನಾರೀ ಎಂದು ಹೆಸರು ಬಂದಿದೆ. ದೋಷಗಳನ್ನು ನೋಡುವವಷ್ಟರಲ್ಲಿ ಪ್ರತ್ಯಕ್ಷವಾಗಿ ಮುಚ್ಚಿಬಿಡುವಳು ಅದಕ್ಕಾಗಿ ಅವಳು ಸ್ತ್ರೀ ಎಂಬ ಹೆಸರಿಗೆ ಪಾತ್ರಳಾಗಿರುವಳು ಅವಳನ್ನು ಕಂಡೊಡನೆಯೇ ಪುರುಷರ ಪತನವಾಗುವುದರಿಂದ ಅವಳು ಪತ್ನಿ ಎನಿಸಿದ್ದಾಳೆ. ಕುಮರಣಕ್ಕೆ ಕಾರಣವಾಗುವುದರಿಂದ ಅವಳು ಕು–ಮಾರಿಯು ಅವಳ ಸಂಗತಿಯಿಂದ ಪುರುಷನ ಬುದ್ಧಿ, ಬಲ ಮೊದಲಾದವುಗಳು ಇಲ್ಲದಂತಾಗುವುದರಿಂದ ಅವಳು ಅಬಲಾ ಎನಿಸಿದ್ದಾಳೆ. ಸಂಸಾರದ ಬಂಧಕ್ಕೆ ಕಾರಣವಾಗಿರುವದರಿಂದ ಅವಳು ವಧುವೆನಿಸಿದ್ದಾಳೆ ಕುಟಿಲತೆಯನ್ನು (ಮಾಯಾಚಾರಿ ಸ್ವಬಾವ) ಧಾರಣ ಮಾಡಿರುವದರಿಂದ ಸ್ತ್ರೀಯು ವಾಮಾ ಎನಿಸಿದ್ದಾಳೆ ಅವಳ ದೃಷ್ಟಿಯಲ್ಲಿ ಕುಟಿಲತೆಯು ಇರುವುದರಿಂದ ಅವಳಿಗೆ ವಾಮಲೋಚನಾ ಎಂದು ಹೇಳುವರು ಸ್ತ್ರೀಯ ಎಲ್ಲ ಹೆಸರುಗಳೂ ದೋಷದರ್ಶಕವೇ ಆಗಿವೆ

ಶೀಲವಂತನು ಪೂಜ್ಯನೆನಿಸುತ್ತಾನೆ. ಶೀಲವಂತನಿಗೆ ಇಂದ್ರನೂ ಕೂಡ ನಮಸ್ಕಾರ ಮಾಡುವನು. ಶೀಲವುಳ್ಳವನು ರತ್ನತ್ರಯವೆಂಬ ಧನವನ್ನು ಹೊಂದಿ ಕಾಮಾದಿ ಸುಲಿಗೆಗಾರರ ಹೆದರಿಕೆ ಇಲ್ಲದೆ ನಿರ್ಭಯನಾಗಿ ನಿರ್ವಾಣ ನಗರಕ್ಕೆ ಹೋಗುತ್ತಾನೆ. ಶೀಲದಿಂದ ಶೋಭಿಸುವ ಮನುಷ್ಯನು ಕುರೂಪಿ, ಮುಲಿನ, ರೋಗ ಗ್ರಾಸಿತನಿದ್ದರೂ ಸಹ ಅವನು ತನ್ನ ಶೀಲಗುಣದಿಂದ ಸಂಪೂರ್ಣ ಸಭಿಕರಿಗೆ ತನ್ನ ಮೋಹದಲ್ಲಿ ಹಿಡಿದು ಬಿಡುತ್ತಾನೆ.

ಸುಖಿಯುನ್ನಾಗಿಯೂ ಮಾಡುತ್ತಾನೆ ಶೀಲವಿಲ್ಲದಂದ ವ್ಯಭಿಚಾರಿಯೂ ಕಾಮದೇವನಂತೆ ಸುಂದರನಾಗಿದ್ದರೂ ಜನರ ಅನಾದರಕ್ಕೆ ಪಾತ್ರನಾಗುತ್ತಾನೆ ಯಾಕೆಂದರೆ ಅವನ ಹೆಸರೇ ಕುಶೀಲನೆಂದಿದೆ ಶೀಲವೆಂಬುದು ಸ್ವಭಾವದ ಹೆಸರಾಗಿದೆ ಆತ್ಮನ ಸ್ವಭಾವವು ಬ್ರಹ್ಮಚರ್ಯೆಯಾಗಿದೆ ಕಾಮಿ ಪುರುಷನು ಅದರಿಂದ ಭ್ರಷ್ಟನಾಗಿರುವುದರಿಂದ ಅವನು ಕುಶೀಲನಾಗಿದ್ದಾನೆ ಕಾಮುಕನು ಧರ್ಮ, ಆತ್ಮನ ಸ್ವಭಾವ, ವ್ಯವಹಾರದ ಶುದ್ಧತೆಗಳಿಂದ ಚ್ಯುತನಾಗುವನು ಅಂತಲೇ ಅವನಿಗೆ ವ್ಯಭಿಚಾರಿ ಎನ್ನುವರು ಜಗತ್ತಿನಲ್ಲಿ ಇದಕ್ಕೆ ಸಮಾನವಾದ ಕುಕರ್ಮ ಇಲ್ಲವೆಂದೇ ಕಾಮನಿಗೆ ಕುಕರ್ಮ ಎನ್ನುವರು. ಕಾಮವಿಕಾರದಿಂದ ಮನುಷ್ಯನು ಪಶುವಿನಂತೆ ಆಗುತ್ತಾನೆ. ಅದಕ್ಕಾಗಿ ಅವನಿಗೆ ಪಶುಕರ್ಮ ಎನ್ನುವರು. ಬ್ರಹ್ಮನೆಂದರೆ ಆತ್ಮ ಅವನ ಜ್ಞಾನ ದರ್ಶನಾದಿ ಸ್ವಭಾವಗಳು ಕಾಮನಿಂದ ನಷ್ಟಗೊಳ್ಳುತ್ತವೆ. ಅಂತಲೇ ಕಾಮನಿಗೆ ಅಬ್ರಹ್ಮವೆನ್ನುವರು ಕುಶೀಲ ಉಳ್ಳವಳ ಸಂಗತಿಯಿಂದ ಕುಶೀಲನಾಗುತ್ತಾನೆ ಯಾರು ಶೀಲವನ್ನು ಪಾಲಿಸುವರೋ ಅವರೇ ಕ್ಷಮಾ, ತಪ, ವ್ರತ, ಸಂಯಮಗಳನ್ನು ಕಾಪಾಡುವರು ತಮ್ಮ ಸ್ವಭಾವದಿಂದ ಚಂಚಲನಾಗದಿರುವುದಕ್ಕೆ ಮುನೀಶ್ವರರು ಶೀಲವೆನ್ನುವರು ಶೀಲವೆಂಬ ಗುಣವು ಎಲ್ಲ ಗುಣಗಳಲ್ಲಿ ಹೆಚ್ಚಿನದಾಗಿದೆ ಶೀಲವಂತನ ಸ್ವಲ್ಪ ತಪವೂ ಸಹ ಬಹಳಷ್ಟು ಫಲವನ್ನು ಕೂಡುತ್ತದೆ ಶೀಲವಿಲ್ಲದ ಬಹು ತಪಸ್ಸೂ ಕೂಡ ನಿಷ್ಫಲವಾಗುತ್ತದೆ ಈ ಪ್ರಕಾರ ಆತ್ಮನ ಶೀಲವು ಶುದ್ಧವಾಗುವದಕ್ಕಾಗಿ ಶೀಲದ ನಿತ್ಯ ಪೂಜೆಯನ್ನು ಮಾಡಿರಿ ಈ ಶೀಲವ್ರತವನ್ನು ಮಾನವ ಜನ್ಮದಲ್ಲಿಯೇ ಪಾಲಿಸಲಿಕ್ಕೆ ಬರುವಂಥದಿದೆ ಉಳಿದ ಗತಿಗಳಲ್ಲಿ ಶೀಲವು ಸಾಧ್ಯವಿಲ್ಲ ಅದಕ್ಕಾಗಿ ಮಾನವ ಜನ್ಮವು ಸಫಲವಾಗಲೆಂದು ಇಚ್ಛಿಸುತ್ತಿದ್ದರೆ ಶೀಲದ ಬೆನ್ನು ಹತ್ತಿರಿ ಹೀಗೆ ಶೀಲವ್ರತೇಷ್ವನತಿಚಾರವೆಂಬ ಹೆಸರಿನ ಭಾವನೆಯನ್ನು ವರ್ಣಿಸಲಾಗಿದೆ ಇದು ಮೂರನೆಯ ಭಾವನೆಯಾಗಿದೆ

## ೪. ಅಭೀಕ್ಷ್ಣ ಜ್ಞಾನೋಪಯೋಗ

ಯಾವಾಗಲೂ ಜ್ಞಾನಾಭ್ಯಾಸದಲ್ಲಿ ಕಾಲ ಕಳೆಯಿರಿ. ಎಲೈ ಆತ್ಮನೇ, ಮಾನವ ಜನ್ಮವು ಪ್ರಾಪ್ತವಾಗಿದೆ ಇಂದಮೇಲೆ ಯಾವಾಗಲೂ ಜ್ಞಾನಾಭ್ಯಾಸದಲ್ಲಿ ವೇಳೆಯನ್ನು ಕಳೆ ಜ್ಞಾನಾಭ್ಯಾಸವಿಲ್ಲದೆ ಒಂದು ಕ್ಷಣವನ್ನೂ ಕಳೆಯಬೇಡ ಜ್ಞಾನಾಭ್ಯಾಸವಿಲ್ಲದ ಮನುಷ್ಯನು ಪಶುವಿಗೆ ಸಮಾನನಾಗಿರುತ್ತಾನೆ. ಅದಕ್ಕಾಗಿ ಸಮಯ ಒದಗಿದಾಗೆಲ್ಲ ಜಿನಾಗಮದ ಪಾಠ ಮಾಡುತ್ತ ಹೋಗು ಸಾಮ್ಯಭಾವವು ಉಂಟಾದಾಗ ಧ್ಯಾನ ಮಾಡುತ್ತ ಇರು ಶಾಸ್ತ್ರದ ಅರ್ಥವನ್ನು ಚಿಂತಿಸುತ್ತ ಇರು ಜ್ಞಾನಿಗಳನ್ನೂ ಗುರುಜನರನ್ನೂ ನಮ್ರತೆಯಿಂದ ವಂದಿಸುತ್ತಿರು ಧರ್ಮಶ್ರವಣ ಮಾಡಲು ಯಾರಾದರೂ ಇಚ್ಛಿಸಿದರೆ ಅವರಿಗೆ ಧರ್ಮವನ್ನು ವಿವರಿಸಿ ಹೇಳು ಈ ಪ್ರಕಾರ ತಮ್ಮ ವೇಳೆಯನ್ನು ಜ್ಞಾನದ ಕೊಡಕೊಳ್ಳುವಿಕೆಯಲ್ಲಿ ಕಳೆಯುವದಕ್ಕೆ ಅಭೀಕ್ಷ್ಣ ಜ್ಞಾನೋಪಯೋಗವೆಂದಿದ್ದಾರೆ. ಈ ಎಲ್ಲ ಗುಣಗಳನ್ನು ಅಷ್ಟ ದ್ರವ್ಯಗಳಿಂದ ಪೂಜಿಸಿ ಅರ್ಘ್ಯವನ್ನು ಕೊಡಿರಿ ಜೊಗನೆ ತುಂಬ ಹೂವುಗಳನ್ನು ತಕ್ಕೊಂಡು ಮುಂಭಾಗದಲ್ಲಿ ಉದುರಿಸಿರಿ ಜ್ಞಾನೋಪಯೋಗವೆಂಬುದು ಚೈತನ್ಯ ಗುಣದ ಪರಿಣಾಮವಾಗಿದೆ. ಅಂತಲೇ ಪ್ರತಿಕ್ಷಣಕ್ಕೂ ಈ ಭಾವನೆಯನ್ನು ಧರಿಸಬೇಕು ಅದಕ್ಕಾಗಿ ಹೀಗೆ ವಿಚಾರಿಸಬೇಕು–ಅನಾದಿ ಕಾಲದಿಂದಲೂ ಕಾಮ, ಕ್ರೋಧ, ಅಭಿಮಾನ, ಲೋಭ ಇವೇ ಮೊದಲಾದವುಗಳ ಸಂಸ್ಕಾರವು ನನ್ನ ಚೈತನ್ಯ ಸ್ವರೂಪದಲ್ಲಿ ಸೇರಿದೆ ಅದು ಸರ್ವಜ್ಞ ಪ್ರಭುವಿನ ಪರಮಾಗಮದ ಪ್ರಭಾವದಿಂದ ಇಲ್ಲದಂತೆ ಆಗಿ ನಾನು ನನ್ನ ಜ್ಞಾಯಕ ಸ್ವಭಾವ ಸ್ವರೂಪದಲ್ಲಿ ಸ್ಥಿರನಾಗಬೇಕು ರಾಗಾದಿವಿಕಾರಗಳ ಸ್ವಾಧೀನವಾಗಕೂಡದು ಇದರಲ್ಲಿಯೇ ನನ್ನ ಹಿತವಿದೆ ಹೀಗೆ ನನ್ನ ಮನೋವೃತ್ತಿಯಾಗಬೇಕು ಹೊಸ ಶಿಷ್ಯರ ಮುಂದೆ ಶ್ರುತದ ಅರ್ಥವನ್ನು ಹೇಳಬೇಕು ಅದರಿಂದ ಅವರ ಸಂಶಯ ಭಾವವು ದೂರವಾಗಿ ಅವರ ಅಂತಃಕರಣದಲ್ಲಿ ಸ್ವಪರ ಪದಾರ್ಥಗಳ ಸತ್ಯ ಸ್ವರೂಪವು ಪ್ರಕಟವಾಗಬೇಕು ಪಾಪಪುಣ್ಯ, ಲೋಕಅಲೋಕ, ಮುನಿಧರ್ಮ–ಶ್ರಾವಕಧರ್ಮಗಳ ಯಥಾರ್ಥ ಸ್ವರೂಪವು ಅವರಿಗೆ ತಿಳಿದು ಹೋಗಬೇಕು ತಾವು ಅಂತಃಕರಣದಲ್ಲಿ ಸಂಸಾರ ದೇಹ ಭೋಗಗಳಿಂದ ವಿರಕ್ತವಾಗುವುದರ ಚಿಂತನೆಯನ್ನು ಮಾಡಬೇಕು ಸಂಸಾರ, ದೇಹಭೋಗ ಇವುಗಳ ಯಥಾರ್ಥ ಸ್ವರೂಪವನ್ನು ವಿಚಾರಿಸಿದರೆ ರಾಗ, ದ್ವೇಷ ಮತ್ತು ಮೋಹಗಳು ನಮ್ಮ ಜ್ಞಾನವನ್ನು ವಿಪರೀತಗೊಳಿಸಲಾರವು ಅನ್ಯ ದ್ರವ್ಯಗಳೊಡನೆ ಆತ್ಮವು ಏಕರೂಪವಾಗಿವೆಯಾದರೂ ಅದನ್ನು ಭಿನ್ನವೆಂದು ಅನುಭವಿಸುವುದೇ ಜ್ಞಾನೋಪಯೋಗವಾಗಿದೆ ಜ್ಞಾನಾಭ್ಯಾಸ ಮಾಡುವುದರಿಂದ ವಿಷಯಗಳ ಮೇಲಿನ ಇಚ್ಛೆಯು ಇಲ್ಲದಂತೆ ಆಗುತ್ತದೆ ಕಷಾಯದ ಅಭಾವವಾಗುತ್ತದೆ

ತಾರುಣ್ಯ ಮತ್ತು ಸೌಂದರ್ಯಗಳನ್ನು ನಷ್ಟ ಮಾಡಿರುತ್ತಾನೆ. ಬಹಳ ಶ್ರಮದಿಂದಲೂ ವೈಭವದಿಂದಲೂ ನಾವು ಅವನ ಜನ್ಮೋತ್ಸವವನ್ನು ಮಾಡುತ್ತೇವೆ ಬೇಕಾದಷ್ಟು ದುಡ್ಡನ್ನು ವೆಚ್ಚಮಾಡುವೆವು ಅವನಿಗೆ ಏನೂ ನೋವಾಗಬಾರದೆಂದು ಬಹು ಎಚ್ಚರಿಕೆಯಿಂದ ಸಂರಕ್ಷಿಸುತ್ತೇವೆ ದೊಡ್ಡವನಾದ ಮೇಲೆ ಅವನಿಗೆ ಚೆನ್ನಾಗಿ ತಿನ್ನಲಿಕ್ಕೂ ಬೆಲೆಯುಳ್ಳ ಬಟ್ಟೆಬರೆಗಳನ್ನೂ ಕೊಟ್ಟು ಜೋಪಾನ ಮಾಡುತ್ತೇವೆ ಅದರಂತೆ ಬೆಲೆಯುಳ್ಳ ಆಭರಣಗಳನ್ನೂ ನಿಲ್ಲಲಿಕ್ಕೆ ಒಳ್ಳೆಯ ಸ್ಥಳವನ್ನೂ ಒದಗಿಸುತ್ತೇವೆ ಇಷ್ಟೆಲ್ಲ ಮಾಡಿಯೂ ಕೂಡ ಅವನು ಮೂರ್ಖ ಇಲ್ಲವೆ ವ್ಯಸನಿಯಾದರೆ ಅವನಿಂದ ನಮಗೆ ಹಗಲಿರುಳೂ ದುಃಖವಾಗುತ್ತದೆ ಅವನ್ನು ಹೇಳಲಿಕ್ಕೂ ಸಹ ಸಾಧ್ಯವಿಲ್ಲ ಅವನು ಕರ್ತೃತ್ವ ಶಕ್ತಿಯುಳ್ಳವನಿದ್ದು ನಮ್ಮ ಮಾತನ್ನು ಕೇಳದಿದ್ದರೆ ನಮ್ಮ ದುಃಖಕ್ಕೆ ಅಳತೆಯೇ ಇಲ್ಲದಂತಾಗುತ್ತವೆ ಪುತ್ರನ ಮೇಲಿನ ಮೋಹದಿಂದ ಪರಿಗ್ರಹಗಳ ಮೇಲಿನ ಮೂರ್ಛೆಯು ಬೆಳೆಯುತ್ತ ಹೋಗುತ್ತದೆ ನಾವು ಜೀವಂತರಿರುವಾಗ ಮಗನು ಮರಣ ಹೊಂದಿದರೆ ಜನ್ಮವಿರುವವರೆಗೂ ಅವನನ್ನು ನೆನೆದು ನಾವು ಅಳುತ್ತ ಕೂಡ್ರಬೇಕಾಗುತ್ತದೆ ನಾವು ದುಡಿಯುವ ವರೆಗೆ ಅವನು ನಮ್ಮನ್ನು ಪ್ರೀತಿಸುತ್ತಾನೆ ನಾವು ದುಡಿಯುವದನ್ನು ನಿಲ್ಲಿಸಿದಾಗ ಅವನು ನಮ್ಮನ್ನು ಪ್ರೀತಿಸುವದಿಲ್ಲ ನಮ್ಮ ಹತ್ತರ ಧನವು ಇಲ್ಲದಾಗಲು ನಮ್ಮನ್ನು ಅವನು ನಿರಾದರ ಮಾಡಲಿಕ್ಕೆ ಹತ್ತುವನು ಪುತ್ರ ಸುಖದ ಅವಸ್ಥೆಯು ಹೀಗಿದೆಯೆಂಬುದನ್ನು ತಿಳಿದು ಅವನ ವಿಷಯದಲ್ಲಿ ಪ್ರೀತಿಯನ್ನು ಕಡಿಮೆಮಾಡಿ, ಧರ್ಮವನ್ನು ಪ್ರೀತಿಸಬೇಕು ಮಗನಿಗಾಗಿ ಅನ್ಯಾಯದಿಂದ ಧನ ಸಂಪಾದಿಸುವ ಪಾಪವನ್ನೂ ಹೊಂದಬಾರದು ಸ್ತ್ರೀಯಂತೂ ಮೋಹವೆಂಬ ರಕ್ಕಸ ಬಲೆಯಾಗಿದ್ದಾಳೆ ಅವಳು ಮೋಹವನ್ನು ಹುಟ್ಟಿಸಿ, ತೃಷ್ಣೆಯನ್ನು ಹೆಚ್ಚಿಸುವಂಥವಳಾಗಿದ್ದಾಳೆ ಸ್ತ್ರೀಯರ ಮೇಲಿನ ಹೆಚ್ಚಿನ ಪ್ರೀತಿಯಿಂದ ಧರ್ಮದ ಕಡೆಗೆ ಪ್ರವೃತ್ತಿಯು ಕಡಿಮೆಯಾಗುತ್ತದೆ ಸ್ತ್ರೀಯು ಲೋಭವನ್ನು ಬೆಳೆಯಿಸುವಂಥವಳಾಗಿದ್ದಾಳೆ, ಪರಿಗ್ರಹಗಳ ಮೇಲಿನ ಮೂರ್ಛೆಯನ್ನು ಬೆಳೆಯಿಸುವಂಥವಳಾಗಿದ್ದಾಳೆ, ಧ್ಯಾನ ಸ್ವಾಧ್ಯಾಯಗಳಿಗೆ ವಿಘ್ನವನ್ನುಂಟು ಮಾಡುವಂಥವಳಾಗಿದ್ದಾಳೆ ಅವಳು ವಿಷಯಾಂಧತೆಯನ್ನುಂಟು ಮಾಡುತ್ತಾಳೆ ಕ್ರೋಧಾದಿ ನಾಲ್ಕೂ ಕಷಾಯಗಳ ತೀವ್ರತೆಯನ್ನು ಹೆಚ್ಚಿಸುತ್ತಾಳೆ ಸಂಯಮದ ಘಾತಮಾಡುತ್ತಾಳೆ. ಕಲಹದ ಮೂಲವಾಗಿದ್ದಾಳೆ ದುರ್ಧ್ಯಾನದ ಸ್ಥಾನವಾಗಿದ್ದಾಳೆ ಮರಣವನ್ನು ಕೆಡಿಸುವಂಥವಳಾಗಿದ್ದಾಳೆ ಈ ಪ್ರಕಾರ ಅನೇಕ ದೋಷಗಳ ಮೂಲ ಕಾರಣವು ಸ್ತ್ರೀಯೆಂದು ತಿಳಿದು ಅವಳನ್ನು ಬಹಳವಾಗಿ ಪ್ರೀತಿಸಕೂಡದು ಕಲಿಯುಗ-ದೊಳಗಿನ ಮಿತ್ರನೂ ಸಹ ವಿಷಯ ವಾಸನೆಯಲ್ಲಿ ತೊಡಗಿಸುವಂಥವನಾಗಿದ್ದಾನೆ ಅನೇಕ ವ್ಯಸನಗಳ ಕಡೆಗೆ ಪ್ರವೃತ್ತಿಯನ್ನುಂಟುಮಾಡುವಂಥವನಾಗಿದ್ದಾನೆ ಧನವಂತನನ್ನು ನೋಡಿಯೇ ಧೂರ್ತ ಜನರು ಅವನ ಮಿತ್ರತ್ವವನ್ನು ಮಾಡುತ್ತಾರೆ ನಿರ್ಧನರ ಕೂಡ ಭಾಷಣವನ್ನೂ ಸಹ ಮಾಡುವದಿಲ್ಲ. ಅಂದ ಮೇಲೆ ಎಲೈ ಜ್ಞಾನಿಗಳೇ! ಸಂಸಾರ ಪತನದ ಭಯವು ಅನಿಸುತ್ತಿದ್ದರೆ ಇಂಥ ಧೂರ್ತರ ಮಿತ್ರತೆಯನ್ನು ಬಿಟ್ಟು ಸ್ವಧರ್ಮದ ಮೇಲೆ ಪ್ರೀತಿಯನ್ನಿಡಿರಿ.

ಪಂಚೇಂದ್ರಿಯಗಳ ಪ್ರೀತಿಯನ್ನು ತೊರೆಯಿರಿ. ಸಂಸಾರವು ಜನ್ಮ ಮರಣದ ನಿರಂತರವಾದ ಚಕ್ರವಾಗಿದೆ ಹುಟ್ಟಿದಾಗಿನಿಂದಲೇ ಅದು ಮರಣದ ಕಡೆಗೆ ಯಾವಾಗಲೂ ಸಾಗುತ್ತಿರುತ್ತದೆ ನೀವು ಅನಂತಾನಂತ ಕಾಲದ ವರೆಗೆ ಜನ್ಮ-ಮರಣಗಳನ್ನು ಹೊಂದುತ್ತ ಬಂದಿರುವಿರಿ ಈಗ ಈ ಐದು ಪರಿವರ್ತನ ರೂಪ ಸಂಸಾರದಿಂದ ಬಿಡುಗಡೆಯನ್ನು ಹೊಂದುವ ವಿಚಾರವನ್ನು ಮನಸ್ಸಿನಲ್ಲಿ ಮಾಡಿರಿ ಪಂಚೇಂದ್ರಿಯ ವಿಷಯಗಳು ಆತ್ಮನ ಸ್ವಭಾವವನ್ನು ಮರೆಯಿಸುವಂಥವೂ ತೃಷ್ಣೆಯನ್ನು ಬೆಳೆಯಿಸುವಂಥವೂ ಆಗಿವೆ ಅಲ್ಲದೆ ಅತೃಪ್ತಿಯನ್ನು ಹೆಚ್ಚಿಸುತ್ತವೆ ವಿಷಯದಂಥ ಪಾಪವು ಮೂರು ಲೋಕದಲ್ಲಿ ಯಾವುದೂ ಇಲ್ಲ. ವಿಷಯವು ನರಕಾದಿ ದುರ್ಗತಿಗಳಿಗೆ ಒಯ್ಯುವಂಥದು, ಧರ್ಮದಿಂದ ಪರಾಙ್ಮುಖಗೊಳಿಸುವಂಥದು, ಕಷಾಯವನ್ನು ಹೆಚ್ಚಿಸುವಂಥದು, ಜ್ಞಾನವನ್ನೂ ವಿಕೃತಗೊಳಿಸುವಂಥದು ವಿಷದಂತೆ ಪ್ರಾಣವನ್ನು ಹರಣಮಾಡುವಂಥದು, ವಿಷ ಹಾಗೂ ಅಗ್ನಿಯಂತೆ ದಾಹ ಉತ್ಪನ್ನಮಾಡುವಂಥದೂ ಇದೆ. ಅದರಿಂದ ಯಾರಿಗೆ ತಮ್ಮ ಕಲ್ಯಾಣಮಾಡಿಕೊಳ್ಳುವ ಇಚ್ಛೆ ಇರುವುದೋ ಅವರು ವಿಷಯಗಳ ಮೇಲಿನ ಪ್ರೀತಿಯನ್ನು ಬಿಟ್ಟುಕೊಡಬೇಕು ಅಲ್ಲದೆ ವಿಷಯಗಳ ತ್ಯಾಗವನ್ನೂ ಮಾಡಬೇಕು. ಶರೀರವು ರೋಗದ ಸ್ಥಾನವಾಗಿದೆ ಬಹಳ ಹೊಲಸಾದಂಥ ದುರ್ಗಂಧವುಳ್ಳ ಸಪ್ತ ಧಾತುಗಳಿಂದ ತುಂಬಿಕೊಂಡಿದೆ. ಮಲಮೂತ್ರಗಳಿಂದ ವಾತ, ಪಿತ್ತ, ಕಫಗಳ ದೋಷದಿಂದ ತುಂಬಿದ ಶರೀರದಲ್ಲಿ ಯಾವಾಗಲೂ ಹಸಿವು, ನೀರಡಿಕೆ, ವೇದನೆಗಳು ಉಂಟಾಗುತ್ತಿರುತ್ತವೆ ಅಪವಿತ್ರತೆಯು ತವರುಮನೆಯೇ ಆಗಿದ್ದು, ಪ್ರತಿ ಕ್ಷಣಕ್ಕೂ ಕ್ಷೀಣವಾಗುತ್ತ ನಡೆದಿದೆ. ಮರಣದ ವೇಳೆಯು ಬಂದರೆ ಕೋಟಿ ಉಪಾಯಗಳನ್ನು ಮಾಡಿದರೂ ಸಂರಕ್ಷಿಸುವದಕ್ಕೆ ಆಗುವದಿಲ್ಲ. ಇಂಥ ಶರೀರದಿಂದ ವಿರಕ್ತನಾಗುವುದೇ

ವಿಹಿತವಾಗಿದೆ. ಇದೇ ಪ್ರಕಾರ ಪುತ್ರ, ಮಿತ್ರ, ಕಲತ್ರ, ಸಂಸಾರ ಭೋಗ, ಶರೀರ ಇವೆಲ್ಲ ದುಃಖರೂಪವೆಂದು ತಿಳಿದು ವೈರಾಗ್ಯ ಭಾವನೆಯನ್ನೇ ಚಿಂತಿಸಬೇಕು. ಇದೇ ಸಂವೇಗ ಗುಣವೆನಿಸುತ್ತದೆ.

ಧರ್ಮವನ್ನು ಪ್ರೀತಿಸಿರಿ. ಧರ್ಮವೆಂಬ ಪದದ ಅರ್ಥವು ವಸ್ತುವಿನ ಸ್ವಭಾವ ಎಂದಿದೆ ಉತ್ತಮ ಕ್ಷಮೆಯೇ ಮೊದಲಾದ ಹತ್ತು ಲಕ್ಷಣಗಳಿಂದ ಧರ್ಮವು ಕೂಡಿರುತ್ತದೆ. ಅದು ರತ್ನತ್ರಯ ಸ್ವರೂಪಿಯಾಗಿದೆ ಜೀವದಯೆಯೂ ಧರ್ಮವೆನಿಸುತ್ತದೆ ಈ ಪ್ರಕಾರ ವಿವಿಧ ಅರ್ಥಗಳನ್ನೂ ಪರ್ಯಾಯ ಬುದ್ಧಿಯನ್ನೂ ಶಿಷ್ಯರಿಗೆ ತಿಳಿಸಿಕೊಡಲಿಕ್ಕೆಂದು ಧರ್ಮ ಶಬ್ದವನ್ನು ನಾಲ್ಕು ಪ್ರಕಾರಗಳಿಂದ ವರ್ಣಿಸಲಾಗಿದೆ ಆದರೂ ವಸ್ತು ಅಂದರೆ ಆತ್ಮವು ಅದರ ಸ್ವಭಾವವು ಹತ್ತು ಲಕ್ಷಣಗಳಿಂದ ಕೂಡಿದ್ದಿದೆ ಕ್ಷಮೆಯೇ ಮೊದಲಾದ ಹತ್ತು ಪ್ರಕಾರಗಳು ಆತ್ಮನ ಗುಣಗಳೇ ಆಗಿವೆ ಹಾಗೆಯೇ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳೂ ಸಹ ಆತ್ಮನಿಂದ ಭಿನ್ನವಾಗಿಲ್ಲ ದಯೆಯು ಆತ್ಮನ ಪರಿಣಾಮವೇ ಆಗಿವೆ ಈ ಪ್ರಕಾರ ಜಿನೇಂದ್ರರು ಹೇಳಿದ ದಶಲಕ್ಷಣ ರೂಪಿಯಾದ ಧರ್ಮದಲ್ಲಿ ಪ್ರೀತಿಯನ್ನಿಡುವುದಕ್ಕೆ ಸಂವೇಗವೆನ್ನುವರು ಕಪಟತನವಿಲ್ಲದೆ ರತ್ನತ್ರಯ ಧರ್ಮವನ್ನು ಪ್ರೀತಿಸುವುದೂ ಸಂವೇಗ ಭಾವನೆಯಾಗಿದೆ ಹಾಗೆಯೇ ಮುನಿ ಧರ್ಮ ಮತ್ತು ಶ್ರಾವಕ ಧರ್ಮಗಳಲ್ಲಿ ಅನುರಾಗವಿಡುವುದೂ ಸಂವೇಗವಾಗಿದೆ ಸಕಲ ಪ್ರಾಣಿಗಳನ್ನು ರಕ್ಷಣಮಾಡುವದಕ್ಕಾಗಿ ಜೀವ ದಯೆಯ ಪರಿಣಾಮವಿಟ್ಟುಕೊಳ್ಳುವುದಕ್ಕೆ ಭಗವಂತನು ಸಂವೇಗವೆಂದು ಹೇಳಿದ್ದಾನೆ ವಸ್ತು ಅಥವಾ ಆತ್ಮನ ಸ್ವಭಾವವು ಕೇವಲ ಜ್ಞಾನ ಹಾಗೂ ಕೇವಲ ದರ್ಶನವಾಗಿದೆ. ಈ ಸ್ವಭಾವದಲ್ಲಿ ಲೀನನಾಗಿರುವುದೂ ಸಂವೇಗವಾಗಿದೆ ಧರ್ಮದ ಫಲವನ್ನು ಅತ್ಯಂತ ಸವಿಯೆಂದು ತಿಳಿಯುವುದು ಸಂವೇಗವಾಗಿದೆ ಧರ್ಮದಲ್ಲಿ ಪ್ರೀತಿರೂಪದ ಪರಿಣಾಮವಿರುವುದು ಕೂಡ ಸಂವೇಗವೆನಿಸುತ್ತದೆ. ತೀರ್ಥಂಕರ, ಚಕ್ರವರ್ತಿ, ನಾರಾಯಣ, ಪ್ರತಿನಾರಾಯಣ, ಬಲಭದ್ರರೇ ಮೊದಲಾದ ಪುಣ್ಯ ಪುರುಷರಾಗುವುದು ಧರ್ಮದ ಫಲವೇ ಆಗಿದೆ ಸ್ವರ್ಗದಲ್ಲಿ ಮಹಾನ್ ಋದ್ಧಿಧಾರಕ ದೇವನಾಗುವದು, ಇಂದ್ರನಾಗುವುದು, ಅನುತ್ತರಾದಿಕ ವಿಮಾನಗಳಲ್ಲಿ ಅಹಮಿಂದ್ರನಾಗುವದು, ಕೇವಲಿಯಾಗುವುದು ಇವೆಲ್ಲ ಪೂರ್ವ ಜನ್ಮದಲ್ಲಿ ಆರಾಧನೆ ಮಾಡಿದ ಧರ್ಮದ ಫಲಗಳೇ ಆಗಿರುತ್ತವೆ. ಹಾಗೆಯೇ ಭೋಗಭೂಮಿಯಲ್ಲಿ ಹುಟ್ಟುವುದು, ರಾಜ್ಯ ಸಂಪತ್ತಿಯು ಲಭಿಸುವದು, ಅಖಂಡ ಐಶ್ವರ್ಯವು ದೊರೆಯುವುದು, ಅನೇಕ ದೇಶಗಳಲ್ಲಿ ತನ್ನ ಆಜ್ಞೆಯು ನಡೆಯುವುದು, ಬಹಳಷ್ಟು ಧನಸಂಪತ್ತಿಯು ದೊರೆಯುವುದು, ರೂಪಬಲಗಳಿರುವುದು, ಚಾತುರ್ಯ, ಮಹಾ ಪಾಂಡಿತ್ಯಗಳಿರುವುದು, ಎಲ್ಲ ಲೋಕಗಳಲ್ಲಿ ಮಾನ್ಯತೆಯು ಲಭಿಸುವುದು, ನಿರ್ಮಲ ಕೀರ್ತಿಯು ಹಬ್ಬುವುದು, ಬುದ್ಧಿಯು ಉಜ್ವಲವಾಗಿರುವುದೂ, ಆಜ್ಞಾಧಾರಕ ಹಾಗೂ ಧಾರ್ಮಿಕ ಕುಟುಂಬದ ಸಂಯೋಗವಾಗುವುದು, ಸತ್ಪುರುಷರ ಸಂಗತಿಯು ಒದಗುವುದು, ಶರೀರವು ನಿರೋಗಿಯಾಗಿರುವುದು, ದೀರ್ಘಾಯುಷಿಯಾಗಿರುವುದು, ಇಂದ್ರಿಯಗಳು ಒಳ್ಳೆಯವಾಗಿರುವುದು, ನ್ಯಾಯಮಾರ್ಗದಲ್ಲಿ ನಡೆಯುವುದು, ಸವಿಯಾದ ಮಾತುಗಳನ್ನು ಆಡುವುದು, ಇವೇ ಮೊದಲಾದ ಉತ್ತಮ ಸಾಮಗ್ರಿಗಳು ಪೂರ್ವದಲ್ಲಿ ಮಾಡಿದ ಧರ್ಮದ ಮೇಲಿನ ಪ್ರೀತಿ, ಧರ್ಮಾತ್ಮರ ಸೇವೆ, ಧರ್ಮ ಹಾಗೂ ಧರ್ಮಾತ್ಮರ ಪ್ರಶಂಸೆ ಇವುಗಳ ಫಲವಾಗಿವೆ. ಕಲ್ಪವೃಕ್ಷ ಹಾಗೂ ಚಿಂತಾಮಣಿ ರತ್ನ ಇವೆಲ್ಲವೂ ಧರ್ಮಾತ್ಮರ ಬಾಗಿಲಲ್ಲಿ ನಿಂತಿರುತ್ತವೆ ಧರ್ಮದ ಫಲದ ಮಹಾತ್ಮ್ಯವನ್ನು ವರ್ಣಿಸಲಿಕ್ಕೆ ಕೋಟಿ ನಾಲಿಗೆಗಳಿಂದಲೂ ಸಾಧ್ಯವಿಲ್ಲ. ಈ ಪ್ರಕಾರ ಧರ್ಮದ ಫಲವು ಮೂರು ಲೋಕದಲ್ಲಿಯೂ ಉತ್ಕೃಷ್ಟವಾಗಿದೆ ಇದನ್ನು ಯಾರು ತಿಳಿಯುವರೋ ಅವರಿಗೆ ಸಂವೇಗ ಭಾವನೆಯೂ ಉತ್ಪನ್ನ-ವಾಗುತ್ತದೆ. ಧರ್ಮವಂತರನ್ನು ನೋಡಿ ಆನಂದಿತನಾಗುವುದು, ಧರ್ಮದ ವರ್ಣನೆಯಲ್ಲಿ ಆನಂದವನ್ನು ಹೊಂದುವುದು, ವಿಷಯ ಭೋಗಗಳಿಂದ ವಿರಕ್ತನಾಗುವುದು, ಇವು ಸಂವೇಗವೆಂಬ ಹೆಸರಿನ ಐದನೆಯ ಅಂಗಗಳಾಗಿವೆ. ಇವುಗಳಲ್ಲಿ ಆತ್ಮನ ಹಿತವಿದೆ ಇದನ್ನರಿತು ನಿರಂತರ ಚಿಂತಿಸಬೇಕು ಈ ಚಿಂತನದಿಂದಾದ ಆನಂದದಿಂದ ಸಂವೇಗವನ್ನು ದೊರಕಿಸಿಕೊಳ್ಳುವದಕ್ಕಾಗಿ ಮಹಾ ಅರ್ಘ್ಯವನ್ನು ನೀಡಬೇಕು ಈ ಪ್ರಕಾರ ಸಂವೇಗವೆಂಬ ಹೆಸರಿನ ಐದನೆಯ ಭಾವನೆಯನ್ನು ವರ್ಣಿಸಲಾಗಿದೆ

## ೬. ಶಕ್ತಿತಸ್ತ್ಯಾಗಭಾವನಾ

ಇನ್ನು ಶಕ್ತಿಗನುಸರಿಸಿ ತ್ಯಾಗಭಾವನೆ ಎಂಬುದರ ವರ್ಣನೆಯನ್ನು ಮಾಡುತ್ತಾರೆ

ಅಂತರಂಗ ಪರಿಗ್ರಹದ ತ್ಯಾಗ—ಈ ತ್ಯಾಗ ಎಂಬ ಹೆಸರಿನ ಭಾವನೆಯು ಮಾನವ ಜನ್ಮಕ್ಕೇ ಭೂಷಣವಾಗಿದೆ ನಮ್ಮ ಅಂತಃಕರಣದಲ್ಲಿ ತ್ಯಾಗ ಭಾವನೆಯು ಉತ್ಪನ್ನವಾಗುವದಕ್ಕಾಗಿ ಅನೇಕ ಧರ್ಮೋತ್ಸವಗಳನ್ನು

ಮಾಡಬೇಕು. ಬಾಹ್ಯ ಹಾಗೂ ಅಭ್ಯಂತರಗಳೆಂಬ ಎರಡು ಪ್ರಕಾರದ ಪರಿಗ್ರಹಗಳ ಮೇಲಿನ ಮಮತ್ವವನ್ನು ಬಿಡುವುದರಿಂದ ತ್ಯಾಗ ಧರ್ಮವು ಸಂಭವಿಸುತ್ತವೆ (೧) ಮಿಥ್ಯಾತ್ವ, (೨) ವೇದ, (೩) ಹಾಸ್ಯ, (೪) ರತಿ, (೫) ಅರತಿ, (೬) ಶೋಕ, (೭) ಭಯ, (೮) ಜುಗುಪ್ಸಾ, (೯) ರಾಗ, (೧೦) ದ್ವೇಷ, (೧೧) ಕ್ರೋಧ, (೧೨) ಮಾನ, (೧೩) ಮಾಯಾ, (೧೪) ಲೋಭ ಹೀಗೆ ಹದಿನಾಲ್ಕು ವಿಧ ಅಂತರಂಗ ಪರಿಗ್ರಹಗಳು ಇರುತ್ತವೆ

೧. ಮಿಥ್ಯಾತ್ವ—ಶರೀರವೇ ಮೊದಲಾದ ಪರದ್ರವ್ಯಗಳಲ್ಲಿ ಆತ್ಮ ಬುದ್ಧಿಯನ್ನು ಇಡುವುದು ಮಿಥ್ಯಾತ್ವ ಎಂಬ ಪರಿಗ್ರಹವೆನಿಸುತ್ತದೆ. ವಸ್ತುವು ತನ್ನ ದ್ರವ್ಯ, ತನ್ನ ಗುಣ, ತನ್ನ ಪರ್ಯಾಯಗಳ ಸ್ವರೂಪದಿಂದ ಇರುತ್ತದೆ ಸುವರ್ಣವು ಒಂದು ದ್ರವ್ಯವಾಗಿದೆ. ಹಳದಿ ಮೊದಲಾದವು ಅದರ ಗುಣವಾಗಿವೆ ಕುಂಡಲವೇ ಮೊದಲಾದವುಗಳು ಅದರ ಪರ್ಯಾಯಗಳಾಗಿವೆ ಆದರೆ ಇವೆಲ್ಲವೂ ಬಂಗಾರವೇ ಆಗಿರುತ್ತವೆ ಸುವರ್ಣವು ಅನ್ಯ ವಸ್ತುವಲ್ಲ, ಅನ್ಯ ವಸ್ತುವೂ ಸುವರ್ಣವಲ್ಲ. ಸುವರ್ಣವು ಸುವರ್ಣವೇ ಆಗಿದೆ ಒಂದು ವಸ್ತುವು ಯಾವಾಗಲೂ ಬೇರೆ ಸ್ವರೂಪ-ದ್ದಾಗಿರುವದಿಲ್ಲ ಎಂದೂ ಆಗುವುದೂ ಇಲ್ಲ ನಮ್ಮ ಸ್ವರೂಪವು ಯಾವುದಾಗಿರುವುದೋ ಅದೇ ನಮ್ಮದಾಗಿರುವುದು ಹಾಗೆಯೇ ಆತ್ಮವು ಆತ್ಮವೇ ಆಗಿದೆ. ಆತ್ಮವು ಬೇರೆ ಯಾವ ದ್ರವ್ಯವೂ ಆಗಲಾರದು ಶರೀರಕ್ಕೇನೇ ಆತ್ಮವೆಂದು ತಿಳಿದು ನಾನು ಕೆಂಪಗಿದ್ದೇನೆ, ನಾನು ಕಪ್ಪು ಇದ್ದೇನೆ, ನಾನು ರಾಜ, ಅವನು ರಂಕ, ನಾನು ಒಡೆಯ, ಅವನು ಸೇವಕ; ನಾನು ಬ್ರಾಹ್ಮಣ, ಅವನು ಕ್ಷತ್ರಿಯ, ಇನ್ನೊಬ್ಬನು ವೈಶ್ಯ, ಅವನೊಬ್ಬನು ಶೂದ್ರ, ನಾನು ತರುಣ, ಅವನು ಮುದುಕ, ನಾನು ಬಲಿಷ್ಠ, ಅವನು ನಿರ್ಬಲ, ನಾನು ಮನುಷ್ಯ, ಅವನು ತಿರ್ಯಂಚ—ಈ ಪ್ರಕಾರ ಮನಸ್ಸಿನಲ್ಲಿ ಕರ್ಮಕೃತಪರ್ಯಾಯಗಳ ವಿಷಯದಲ್ಲಿ ಆತ್ಮ ಬುದ್ಧಿಯನ್ನು ಧಾರಣಮಾಡುವುದು ಮಿಥ್ಯಾತ್ವವೆಂಬ ಹೆಸರಿನ ಪರಿಗ್ರಹವಾಗಿದೆ ಮಿಥ್ಯಾದರ್ಶನದ ಯೋಗದಿಂದಲೇನೇ ನನ್ನ ಮನೆ, ನನ್ನ ಮಗ, ನನ್ನ ರಾಜ್ಯವೆಂದು ತಿಳಿದು ಎಲ್ಲ ಪರ ಪದಾರ್ಥಗಳಲ್ಲಿ ಆತ್ಮ ಬುದ್ಧಿಯು ಉಂಟಾಗುತ್ತದೆ ಶರೀರವು ನಾಶವಾಯಿತೆಂದರೆ ನನ್ನ ನಾಶವಾಯಿತು, ಶರೀರವು ಬೆಳೆದರೆ ನಾನು ಬೆಳೆದೆ, ದೇಹವು ಸೊರಗಿದರೆ ನಾನು ಸೊರಗಿದೆ ಎಂದು ತಿಳಿಯುತ್ತೇವೆ ಪರ್ಯಾಯಗಳಲ್ಲಿ ಹೀಗೆ ಆತ್ಮ ಬುದ್ಧಿಯನ್ನು ಇಡುವುದರಿಂದ ಅನಾದಿ ಕಾಲದಿಂದಲೂ ಇವನು ತನ್ನನ್ನು ಮರೆತಿದ್ದಾನ ಅಂತಲೇ ಸಂಪೂರ್ಣ ಪರಿಗ್ರಹಗಳಲ್ಲಿ ಆತ್ಮ ಬುದ್ಧಿಯು ಉತ್ಪನ್ನವಾಗುತ್ತಿದ ಅದೇ ಮಿಥ್ಯಾತ್ವ ಪರಿಗ್ರಹವಾಗಿದೆ

೨. ವೇದ—ಈ ಕರ್ಮದ ಉದಯದಿಂದ ಸ್ತ್ರೀ ಪುರುಷರಲ್ಲಿ ಕಾಮ ಸೇವನೆಯ ಪರಿಣಾಮ ಉಂಟಾಗುತ್ತದೆ. ಆ ಕಾಮ ಭಾವನೆಗೆ ಆತ್ಮ ಭಾವವೆಂದು ತಿಳಿಯುವುದು ವೇದಪರಿಗ್ರಹವಾಗಿದೆ ಕಾಮವು ಶರೀರದ ವಿಕಾರವಾಗಿದೆ ಅದನ್ನು ನಮ್ಮ ಸ್ವರೂಪವೆಂದು ತಿಳಿದುಕೊಳ್ಳುವುದು ವೇದಪರಿಗ್ರಹವನಿಸುತ್ತದೆ.

೩. ರಾಗ—ಧನ, ಐಶ್ವರ್ಯ, ಪುತ್ರ, ಸ್ತ್ರೀ, ಆಭರಣ ಮೊದಲಾದ ಪರ ಪದಾರ್ಥಗಳಲ್ಲಿ ಆಸಕ್ತ-ನಾಗಿರುವುದು ರಾಗ ಪರಿಗ್ರಹವಾಗಿದೆ.

೪. ದ್ವೇಷ—ಎರಡನೆಯವರ ವೈಭವ, ಪರಿವಾರ, ಐಶ್ವರ್ಯ, ಪಾಂಡಿತ್ಯ ಮೊದಲಾದವುಗಳನ್ನು ನೋಡಿ ವೈರ ಭಾವವನ್ನು ತಾಳುವುದು ದ್ವೇಷ ಪರಿಗ್ರಹವು.

೫. ಹಾಸ್ಯ—ನಗೆ, ನಗೆಯಾಟ ಮೊದಲಾದವುಗಳನ್ನು ಇನ್ನೊಬ್ಬರಿಗೆ ಮಾಡುವುದು ಹಾಸ್ಯ ಪರಿಗ್ರಹವು

೬. ಭಯ—ತನ್ನ ಮರಣವಾದೀತು, ತನ್ನ ಇಷ್ಟ ಮಿತ್ರರ ಮರಣವಾದೀತು, ತನ್ನ ಪರಿಗ್ರಹಗಳು ನಷ್ಟ ಹೊಂದಿಯಾವು ಎಂದು ಯಾವಾಗಲೂ ಹೆದರಿಕೊಂಡಿರುವುದು ಭಯಪರಿಗ್ರಹವಾಗಿದೆ

೭. ರತಿ—ಪಂಚೇಂದ್ರಿಯಗಳಿಗ ರುಚಿಸುವಂಥ ಭೋಗ ಉಪಭೋಗಗಳಲ್ಲಿ ಲೀನನಾಗಿ ಹೋಗುವುದು ರತಿ ಪರಿಗ್ರಹವಾಗಿದೆ

೮. ಅರತಿ—ಅನಿಷ್ಟ ವಸ್ತುಗಳ ಸಂಯೋಗವಾದಾಗ ಪರಿಣಾಮದಲ್ಲಿ ಸಂಕ್ಲೇಶಿತನಾಗುವುದಕ್ಕೆ ಅರತಿ-ಪರಿಗ್ರಹವೆನ್ನುವರು

೯. ಶೋಕ—ತಮಗೆ ಬೇಕಾದ ಸ್ತ್ರೀ, ಪುತ್ರ, ಮಿತ್ರ, ಧನ, ಉಪಜೀವಿಕೆಗಳು ಇಲ್ಲದಂತೆ ಆಗಲು ಅವು ತಿರುಗಿ ದೊರೆಯಬೇಕೆಂದು ತಳಮಳಗೊಳ್ಳುವುದಕ್ಕ ಶೋಕಪರಿಗ್ರಹವೆನ್ನುವರು ಇದರಲ್ಲಿ ಅಳುವುದೂ ಸಹ ಸಮಾವೇಶವಾಗುತ್ತದ

೧೦. ಜುಗುಪ್ಸೆ—ಹೊಲಸು ಪದಾರ್ಥವನ್ನು ಕಂಡಾಗ, ನೆನೆದಾಗ, ಸ್ಪರ್ಶಮಾಡಿದಾಗ, ಕೆಟ್ಟಮಾತು-ಗಳನ್ನು ಕೇಳಿದಾಗ, ಸ್ಮರಿಸಿದಾಗ ಮನದಲ್ಲಿ ಉಂಟಾಗುವ ಹೇಸಿ ಭಾವನೆಗೆ ಜುಗುಪ್ಸಾಪರಿಗ್ರಹವೆನ್ನುವರು

೧೧. ಕ್ರೋಧ—ಪರಿಣಾಮದಲ್ಲಿ ಸಿಟ್ಟು ಉಂಟಾಗಿ ಕಾವೇರುವುದು ಕ್ರೋಧ ಪರಿಗ್ರಹವಾಗಿದ.

೧೨ ಮಾನ—ಉಚ್ಚಕುಲ, ಜಾತಿ, ಧನ, ಐಶ್ವರ್ಯ, ರೂಪ, ಬಲ, ಜ್ಞಾನ, ಬುದ್ಧಿ, ವಿದ್ಯೆ ಇವುಗಳಿಂದ ನಾವು ಇತರರಿಗಿಂತ ಶ್ರೇಷ್ಠರಿದ್ದೇವೆ ಉಳಿದವರು ನಮಗಿಂತ ಕಡಿಮೆಯವರು, ಎಂದು ತಿಳಿದು ಗರ್ವಪಡುವುದು, ಇತರರನ್ನು ಕಡಿಮೆಯೆಂದು ತಿಳಿಯುವುದು, ಅನಾದರಿಸುವುದು, ಕಠೋರಭಾವವನ್ನು ಇಡುವುದು ಇವೆಲ್ಲ ಮಾನ ಪರಿಗ್ರಹಗಳಾಗಿವೆ

೧೩. ಮಾಯೆ—ಅನೇಕ ಪ್ರಕಾರದ ಕಪಟಾಚರಣಗಳನ್ನು ಮಾಡುವದಕ್ಕಾಗಿ ಪರಿಣಾಮವನ್ನು ವಕ್ರವಾಗಿ ಇಡುವುದು ಮಾಯಾ ಪರಿಗ್ರಹವೆನಿಸುತ್ತದೆ

೧೪. ಲೋಭ—ಪರದ್ರವ್ಯವನ್ನು ಅಪಹರಿಸುವುದರಲ್ಲಿ ಆಸಕ್ತಿ, ತೃಷ್ಣೆಗಳನ್ನು ತಾಳುವುದು ಲೋಭ ಪರಿಗ್ರಹವಾಗಿದೆ.

**ಅಂತರಂಗ ಬಹಿರಂಗ ಪರಿಹಗ್ರಗಳನ್ನು ತ್ಯಾಗಮಾಡಬೇಕು.** ಸಂಸಾರ ಪರಿಭ್ರಮಣಕ್ಕೆ ಕಾರಣವೂ ಆತ್ಮನ ಜ್ಞಾನಾದಿ ಗುಣಗಳ ಘಾತಕವೂ ಆದ ಹದಿನಾಲ್ಕು ಪರಿಗ್ರಹಗಳು ಇವೆ ಇವುಗಳ ಸಂಯೋಗದಿಂದ ಧನ, ಧಾನ್ಯ, ಕ್ಷೇತ್ರ, ಸುವರ್ಣ, ಸ್ತ್ರೀ, ಪುತ್ರ ಮೊದಲಾದ ಚೇತನ, ಅಚೇತನ ಪದಾರ್ಥಗಳ ವಿಷಯದಲ್ಲಿ ಮಮತ್ವವು ಉತ್ಪನ್ನವಾಗುವುದಕ್ಕೆ ಬಾಹ್ಯ ಪರಿಗ್ರಹವೆನ್ನಲಾಗಿದೆ. ಈ ಅಂತರಂಗ ಬಹಿರಂಗದಲ್ಲಿರುವ ಎರಡೂ ಪ್ರಕಾರದ ಪರಿಗ್ರಹಗಳನ್ನು ತ್ಯಾಗಮಾಡುವುದರಿಂದ ಧರ್ಮವು ಸಂಭವಿಸುತ್ತದೆ. ಒಂದು ವೇಳೆ ಬಾಹ್ಯ ಪರಿಗ್ರಹವು ಕೆಲವರ ಹತ್ತಿರ ಇರುವದಿಲ್ಲ ಅದರಿಂದ ಅದನ್ನು ಬಿಡಲಿಕ್ಕೆ ಬಂದೀತು ಆದರೆ ಅಂತರಂಗ ಪರಿಗ್ರಹವನ್ನು ತ್ಯಾಗಮಾಡುವುದು ಮಹಾ ಕಠಿಣವಾಗಿದೆ ಈ ಎರಡೂ ಪ್ರಕಾರದ ಪರಿಗ್ರಹಗಳ ಏಕದೇಶ ತ್ಯಾಗವು ಶ್ರಾವಕರಿಗೆ ಸಾಧ್ಯವಿದೆ ಸಂಪೂರ್ಣ ತ್ಯಾಗವು ಮುನಿಗಳಿಗೇ ಸಾಧ್ಯವಾಗುತ್ತದೆ.

ಕಷಾಯಗಳನ್ನು ತ್ಯಜಿಸುವುದರಿಂದ ತ್ಯಾಗ ಧರ್ಮವು ಸಂಭವಿಸುತ್ತದೆ ಇಂದ್ರಿಯಗಳನ್ನು ವಿಷಯಗಳ ಕಡೆಯಿಂದ ಸೆಳೆದುಕೊಳ್ಳುವುದರಿಂದ ತ್ಯಾಗ ಧರ್ಮವು ಸಿದ್ಧಿಸುತ್ತದೆ ರಸಗಳನ್ನು ಬಿಡುವುದರಲ್ಲಿಯೂ ತ್ಯಾಗ ಧರ್ಮವಿದೆ ಯಾಕಂದರೆ ರಸನೇಂದ್ರಿಯದ ಲೋಲುಪತೆಯನ್ನು ಗೆಲ್ಲುವುದರಿಂದ ಸಮಸ್ತ ಪಾಪದ ತ್ಯಾಗವು ಸಹಜವಾಗುತ್ತದೆ

ಜಿನೇಂದ್ರನ ಪರಮಾಗಮವನ್ನು ಅಭ್ಯಸಿಸುವುದು, ಎರಡನೆಯವರಿಗೆ ಅಭ್ಯಾಸಮಾಡಲಿಕ್ಕೆ ಹಚ್ಚುವುದು, ಶಾಸ್ತ್ರಗಳನ್ನು ಬರೆದುಕೊಡುವುದು, ಸಂಶೋಧನಮಾಡುವುದು, ಮಾಡಿಸುವುದು ಇವೆಲ್ಲ ಕಾರ್ಯಗಳು ಬಹಳ ಲೋಕೋಪಕಾರಕವಾಗಿವೆ. ಇವುಗಳಿಂದಲೂ ತ್ಯಾಗ ಧರ್ಮವು ಸಿದ್ಧಿಸುತ್ತದೆ

ಮನಸ್ಸಿನೊಳಗಿನ ದುಷ್ಟ ವಿಕಲ್ಪಗಳನ್ನು ಇಲ್ಲದಂತೆ ಮಾಡುವುದು ಮತ್ತು ದುಷ್ಟ ವಿಕಲ್ಪಗಳಿಗೆ ಇರುವ ಕಾರಣಗಳನ್ನು ಬಿಟ್ಟು ನಾಲ್ಕು ಅನುಯೋಗಗಳ ಚರ್ಚೆಯಲ್ಲಿ ಚಿತ್ತವನ್ನು ಹಚ್ಚುವುದು ಇದೂ ತ್ಯಾಗಧರ್ಮವಾಗಿದೆ

ಮೋಹದ ನಾಶವನ್ನು ಮಾಡುವಂಥದು ಧರ್ಮವಾಗಿದೆ ಅಂದ ಮೇಲೆ ಮೋಹದ ನಾಶವಾಗುವಂಥ ಧರ್ಮೋಪದೇಶವನ್ನು ಶ್ರಾವಕರಿಗೆ ಮಾಡುವುದು ಮಹಾ ಪುಣ್ಯವನ್ನು ಉತ್ಪನ್ನಮಾಡುವ ತ್ಯಾಗಧರ್ಮವಾಗಿದೆ ಯಾಕಂದರೆ ವೀತರಾಗ ಧರ್ಮದ ಉಪದೇಶದಿಂದ ಅನೇಕ ಪ್ರಾಣಿಗಳ ಮನವು ಪಾಪಕ್ಕಾಗಿ ಹೆದರುತ್ತದೆ ಮತ್ತು ಹಲವು ಪ್ರಾಣಿಗಳು ಧರ್ಮಮಾರ್ಗಕ್ಕೆ ಹತ್ತುತ್ತವೆ

ಉತ್ತಮ, ಮಧ್ಯಮ ಮತ್ತು ಜಘನ್ಯವೆನಿಸುವ ಮೂರು ಪ್ರಕಾರದ ಪಾತ್ರಗಳಿಗೆ ಭಕ್ತಿಪುರಃಸರವಾಗಿ ಆಹಾರ ದಾನಕೊಡುವುದು, ಶುದ್ಧ ಔಷಧಕೊಡುವುದು, ಜ್ಞಾನದ ಉಪಕರಣಗಳಾದ ಶಾಸ್ತ್ರಗಳನ್ನು—ಸಿದ್ಧಾಂತದ ಅಭ್ಯಾಸಕ್ಕೆ ಉಪಯುಕ್ತವಾದಂಥವು—ದಾನಕೊಡುವುದು, ಶ್ರಾವಕರಿಗೂ ಮುನಿಗಳಿಗೂ ಯೋಗ್ಯವಾದ ವಸತಿ ಗೃಹವನ್ನು ಒದಗಿಸುವುದು—ಇವೆಲ್ಲ ತ್ಯಾಗ ಧರ್ಮಗಳೇ ಆಗಿವೆ ಸುಗುಣಿಗಳಿಗೆ ಯಾವ ದಾನದಿಂದ ಅವರ ತಪೋವೃದ್ಧಿಯು ಆದೀತೋ, ಸ್ವಾಧ್ಯಾಯದಲ್ಲಿ ಲಕ್ಷ್ಯ ಹತ್ತುವುದೋ, ಧ್ಯಾನದಲ್ಲಿ ಏಕಾಗ್ರತೆಯು ಉಂಟಾಗುವುದೋ ಅಂಥ ಆಹಾರಾದಿ ನಾಲ್ಕು ಪ್ರಕಾರದ ದಾನಗಳನ್ನು ಬಹಳ ಭಕ್ತಿಯಿಂದ ಚಿತ್ತವನ್ನು ಪ್ರಸನ್ನವಾಗಿಟ್ಟು ಬಹಳ ಆದರದಿಂದ

ದಾನಕೊಡಬೇಕು ಆದರಿಂದ ತನ್ನ ಜನ್ಮವು ಕೃತಾರ್ಥವಾಯಿತು, ತನ್ನ ಗೃಹಸ್ಥಾಶ್ರಮವು ಸಫಲವಾಯಿತು ಎಂದು ಭಾವಿಸಿಕೊಳ್ಳಬೇಕು ಇಂಥ ಪಾತ್ರದಾನವು ಮಹಾನ್ ಭಾಗ್ಯವಂತನಿಗೂ ಭವಿಷತ್ ಕಾಲದಲ್ಲಿ ಯಾರದು ಬಹಳ ಒಳ್ಳೆಯದಾಗುವದಿದೆಯೋ ಅವರಿಗೂ ಸಂಭವಿಸುತ್ತದೆ ಸತ್ಪಾತ್ರವು ದೊರಕುವುದೂ ಬಹು ದುರ್ಲಭವಾಗಿದೆ ಅಂದಮೇಲೆ ಭಕ್ತಿಸಹಿತ ಪಾತ್ರದಾನವು ಯಾರಿಗೆ ಸಂಭವಿಸುವದೋ ಅವರಿಗೆ ತ್ಯಾಗಧರ್ಮವು ಸಿದ್ಧಿಸಿದಂತಾಗುತ್ತದ

ಹಸಿವು, ನೀರಡಿಕೆಗಳಿಂದ ತೊಂದರೆ ಪಟ್ಟವರಿಗೂ ರೋಗಿ, ದರಿದ್ರರು, ವೃದ್ಧ, ದೀನರು ಇಂಥವರ ಮೇಲೆ ದಯೆಯನ್ನು ಮಾಡಿ ದಾನಕೊಡುವುದೂ ತ್ಯಾಗಧರ್ಮವೇ ಆಗಿದೆ ತ್ಯಾಗದಿಂದಲೇ ಮಾನವ ಜನ್ಮವು ಸಫಲವಾಗುತ್ತದೆ ಧನ ಧಾನ್ಯಗಳು ಲಭಿಸಿದ್ದು, ತ್ಯಾಗದಿಂದಲೇ ಸಫಲತೆಯನ್ನು ಹೊಂದಿದಂತೆ. ತ್ಯಾಗವಿಲ್ಲದ ಗೃಹಸ್ಥನ ಮನೆಯು ಸ್ಮಶಾನವಿದ್ದಂತೆ ಇಂಥ ಮನೆಯ ಒಡೆಯನು ಹೆಣಕ್ಕೆ ಸಮಾನವಿದ್ದಂತೆ ಇರುವನು ಇವನ ಮನೆಯ ಹೆಂಡರು ಮಕ್ಕಳು ಹದ್ದು ಕಾಗೆಗಳಂತೆ ಇರುತ್ತಾರೆಂದು ತಿಳಿಯಬೇಕು ಅವರೆಲ್ಲರೂ ಅವನ ಧನವೆಂಬ ಮಾಂಸವನ್ನು ಕಡಿಕಡಿದು ತಿನ್ನುತ್ತಾರೆ ಈ ಪ್ರಕಾರ ತ್ಯಾಗ ಭಾವನೆಯ ವರ್ಣನೆ ಇದೆ

## ೭. ಶಕ್ತಿತಸ್ತಪಭಾವನಾ

ಈಗ ಶಕ್ತಿಯಿದ್ದಷ್ಟು ತಪಮಾಡಬೇಕೆಂಬ ಭಾವನೆಯನ್ನು ವರ್ಣಿಸುತ್ತಾರೆ

**ಯಥಾಶಕ್ತಿ ತಪಸ್ಸು ಮಾಡಬೇಕು.** ಈ ಶರೀರವು ದುಃಖಕ್ಕೆ ಕಾರಣವಾಗಿದೆ ಅನೇಕ ಪ್ರಕಾರದ ದುಃಖಗಳನ್ನು ಈ ಶರೀರವು ಉತ್ಪನ್ನ ಮಾಡುತ್ತದೆ ಈ ದೇಹವು ಅನಿತ್ಯವಾಗಿದೆ. ಅಸ್ಥಿರವೂ ಆಗಿದೆ ಅಶುಚಿಯಾಗಿದೆ ಕೃತಘ್ನವಾಗಿದೆ ಕೋಟ್ಯಾವಧಿ ಉಪಕಾರ ಮಾಡಿದರೂ ಕೃತಘ್ನ ಮನುಷ್ಯನು ನಮ್ಮವನಾಗುವದಿಲ್ಲ ಈ ಶರೀರವೂ ಕೂಡ ಹಾಗೆಯೇ ಇದೆ ಹಲವು ಪ್ರಕಾರಗಳಿಂದ ಸೇವೆಯನ್ನು ಮಾಡಿದರೂ ಉಪಕಾರವನ್ನು ಮಾಡಿದರೂ ಅದು ನಮ್ಮದಾಗುವದಿಲ್ಲ ಆದರಿಂದ ಅದನ್ನು ಬಹಳಷ್ಟು ಪುಷ್ಟಗೊಳಿಸುವುದು ಯೋಗ್ಯವಲ್ಲ. ಆದರೆ ದೇಹದ ಕಡೆಗೆ ತೀರ ದುರ್ಲಕ್ಷ ಮಾಡುವುದೂ ವಿಹಿತವಲ್ಲ. ಯಾಕೆಂದರೆ ಇದು ಸದ್ಗುಣಗಳ ಸಂಚಯಕ್ಕೆ ಸಾಧನವಾಗಿದೆ ಶರೀರವನ್ನುಳಿದು ರತ್ನತ್ರಯ ಧರ್ಮವು ಸಿದ್ಧಿಸುವದಿಲ್ಲ. ರತ್ನತ್ರಯ ಧರ್ಮವಿಲ್ಲದೆ ಕರ್ಮದ ನಾಶವಾಗುವದಿಲ್ಲ. ಅಂತಲೇ ನಮ್ಮ ಪ್ರಯೋಜನಕ್ಕಾಗಿ ವಿಷಯಗಳಲ್ಲಿ ಆಸಕ್ತಿಯನ್ನು ಇಡದೆ, ಸೇವಕನಂತೆ ಇದಕ್ಕೆ ಯೋಗ್ಯ ಆಹಾರ ಕೊಟ್ಟು, ಯಥಾಶಕ್ತಿ ಜಿನೇಂದ್ರನ ಮಾರ್ಗವನ್ನು ಅನುಸರಿಸಿ, ಕಾಯಕ್ಲೇಶಾದಿ ತಪವನ್ನು ಮಾಡಿಸುವುದು ಯೋಗ್ಯವಾಗಿದೆ

ತಪದ ಮಹಿಮೆ—ತಪಸ್ಸಿಲ್ಲದೆ ಇಂದ್ರಿಯಗಳ ಮೇಲಿನ ಲೋಲುಪತೆಯು ಕಡಿಮೆಯಾಗುವದಿಲ್ಲ ಮೂರು ಲೋಕಗಳನ್ನು ಗೆದ್ದಂಥ ಕಾಮನನ್ನು ನಷ್ಟಗೊಳಿಸಲಿಕ್ಕೆ ತಪದ ಹೊರತಾಗಿ ಇನ್ನೊಂದು ಶಸ್ತ್ರವು ಇಲ್ಲ ತಪವನ್ನುಳಿದು ಆತ್ಮನನ್ನು ಅಚೇತನ ಗೊಳಿಸುವ ನಿದ್ರೆಯನ್ನು ಗೆಲ್ಲಲಿಕ್ಕೆ ಆಗುವದಿಲ್ಲ ಶರೀರಕ್ಕೆ ಸುಖಕೊಡುವ ರೂಢಿಯು ತಪಸ್ಸಿಲ್ಲದೆ ಮುರಿಯಲಿಕ್ಕೆ ಸಾಧ್ಯವಿಲ್ಲ ಶರೀರಕ್ಕೆ ತಪವನ್ನು ಆಚರಿಸುವ ರೂಢಿಇದ್ದರೆ ಹಸಿವು, ನೀರಡಿಕೆ, ಚಳಿ, ಬಿಸಿಲು ಇವೇ ಮೊದಲಾದ ದುಃಖಗಳು ಪ್ರಾಪ್ತವಾದರೂ ಸಹ ಹೆದರಿಕೆಯು ಉಂಟಾಗುವದಿಲ್ಲ ಅಲ್ಲದೆ ನಾವು ನಮ್ಮ ನಿಯಮ ಹಾಗೂ ಧರ್ಮಗಳಿಂದ ಚ್ಯುತಿಯನ್ನು ಹೊಂದುವದಿಲ್ಲ ಕರ್ಮದ ನಿರ್ಜರೆಗೆ ತಪವು ಕಾರಣವಾಗಿದೆ. ಅದಕ್ಕಾಗಿ ತಪವನ್ನು ಆಚರಿಸುವ ಅವಶ್ಯಕತೆಯು ಇರುತ್ತದೆ ತನ್ನ ಶಕ್ತಿಯನ್ನು ಅಡಗಿಸಿಟ್ಟುಕೊಳ್ಳದೆ ಜಿನೇಂದ್ರನ ಮಾರ್ಗಕ್ಕೆ ವಿರೋಧವು ಉಂಟಾಗದಂತೆ ತಪವನ್ನು ಆಚರಿಸಿರಿ ತಪವೆಂಬ ಕಾವಲುಗಾರನ ಸಹಾಯವಿಲ್ಲದೆ ನಮ್ಮ ಶ್ರದ್ಧೆ, ಜ್ಞಾನ ಆಚರಣವೆಂಬ ಧನವನ್ನು ಸಂರಕ್ಷಿಸಲಿಕ್ಕೆ ಆಗದು ಇಲ್ಲದಿದ್ದರೆ ಕಾಮ, ಕ್ರೋಧ, ಪ್ರಮಾದಗಳೆಂಬ ಸುಲಿಗೆಗಾರರು ಕದ್ದು ಒಯ್ದಾರು ರತ್ನತ್ರಯ ರೂಪದಲ್ಲಿರುವ ಸಂಪತ್ತು ನಷ್ಟವಾದಲ್ಲಿ ಬಹುಕಾಲದ ವರೆಗೆ ಚತುರ್ಗತಿ ರೂಪದಲ್ಲಿರುವ ಸಂಸಾರದಲ್ಲಿ ಭ್ರಮಣ ಮಾಡಬೇಕಾಗುವದು ಅದಕ್ಕಾಗಿ ಯಾವ ಪ್ರಕಾರದ ತಪದಿಂದ ವಾತ, ಪಿತ್ತ, ಕಫ ಈ ತ್ರಿದೋಷಗಳು ಕೆಡಿಸದಂತೆಯೂ ರೋಗಾದಿಗಳು ಉತ್ಪನ್ನವಾಗದಂತೆಯೂ ತಪವನ್ನು ಆಚರಿಸುವುದು ಯೋಗ್ಯವಾಗಿದೆ

**ದಿಗಂಬರತ್ವವು ಪರಮತಪವಾಗಿದೆ.** ಎಲ್ಲ ತಪಗಳಲ್ಲಿಯೂ ದಿಗಂಬರತ್ವವನ್ನು ಧಾರಣ ಮಾಡುವುದು ಶ್ರೇಷ್ಠತಪವೆನಿಸುತ್ತದೆ ಇದರಿಂದ ಮನೆಯೊಳಗಿನ ಮಮತೆಯೆಂಬ ಪಾಶವು ಹರಿದು ಹೋಗಿ, ಶರೀರಕ್ಕೆ ಸಂಬಂಧಿಸಿದ ಎಲ್ಲ ಸುಖಗಳನ್ನು ಭೋಗಿಸುವ ಅಭ್ಯಾಸವು ಮುರಿದು ಹೋಗುತ್ತದೆ ದೇಹಕ್ಕೆ ಚಳಿ, ಉಷ್ಣ, ಗುಂಗಾಡು, ಸೊಳ್ಳೆ

ಮೊದಲಾದವುಗಳ ಉಪದ್ರವವನ್ನು ತಡೆದುಗೊಳ್ಳುವ ಶಕ್ತಿಯು ಬರುತ್ತದೆ ಲಂಗೋಟಿಯನ್ನೂ ಕೂಡ ತ್ಯಾಗಮಾಡಿ ಹತ್ತು ದಿಕ್ಕುಗಳೇ ತನ್ನ ವಸ್ತ್ರಗಳೆಂದು ತಿಳಿದು, ದಿಗಂಬರತ್ವವನ್ನು ಧಾರಣಮಾಡುವುದೇ ಉತ್ಕೃಷ್ಟ ತಪವಾಗಿದೆ. ದಿಗಂಬರ ಸ್ವರೂಪವನ್ನು ನೋಡಿಯೂ ಕೇಳಿಯೂ ದೊಡ್ಡ ದೊಡ್ಡ ಶೂರರೂ ಸಹ ಆಶ್ಚರ್ಯ ಚಕಿತರಾಗುತ್ತಾರೆ ಸಂಸಾರ ಬಂಧನದಿಂದ ಬಿಡುಗಡೆ ಹೊಂದಬೇಕೆಂಬುದು ಇಚ್ಛಿಸುತ್ತಿದ್ದರೆ ದಿಗಂಬರ ಜಿನದೀಕ್ಷೆಯನ್ನು ಸ್ವೀಕರಿಸಿರಿ ಶರೀರಕ್ಕೆ ಹತ್ತಿರುವ ಸುಖಬೋಗದ ರೂಢಿಯನ್ನು ಅದು ಇಲ್ಲದಂತೆ ಮಾಡುತ್ತದೆ. ಉಪಸರ್ಗ ಮತ್ತು ಪರೀಷಹಗಳನ್ನು ಸಹನ ಮಾಡುವಾಗ ಹೆದರದೆ ಶಾಂತ ರೀತಿಯಿಂದ ತಾಳಿಕೊಳ್ಳಿರಿ ತಪಃ ಪ್ರಭಾವದಿಂದ, ಸ್ವರ್ಗಲೋಕದೊಳಗಿನ ರಂಭೆ ಇಲ್ಲವೆ ತಿಲೋತ್ತಮಾ ಮೊದಲಾದವರು ತಮ್ಮ ಹಾವ-ಭಾವ-ವಿಲಾಸ-ವಿಭ್ರಮಾದಿ-ಗಳಿಂದ ನಿಮ್ಮ ಮನಸ್ಸನ್ನು ಚಂಚಲಗೊಳಿಸಲು ಸಮರ್ಥರಾಗಲಾರರು

ನಿಜವಾದ ತಪವು ಯಾವುದು? ಯಾವ ತಪದಿಂದ ಆಶೆ ಮತ್ತು ಕಾಮಗಳು ಇಲ್ಲದಂತೆ ಆಗುವವೋ ಅದೇ ತಪವು ನಿಜವಾದದ್ದು ಯಾವ ತಪದಿಂದ ಎರಡೂ ಪ್ರಕಾರದ ಪರಿಗ್ರಹಗಳ ಮೇಲಿನ ಇಚ್ಛೆಯು ಇಲ್ಲದಂತೆ ಆಗುವುದೋ ಅದೇ ನಿಜವಾದ ತಪವು ಯಾವ ತಪದಿಂದ ಇಂದ್ರಿಯಗಳ ವಿಷಯದ ಪ್ರವೃತ್ತಿಯು ಇಲ್ಲದಂತೆ ಆಗುವುದೋ ಅದೇ ನಿಜವಾದ ತಪವೆನಿಸುತ್ತದೆ. ತಪಸ್ಸಿಗಾಗಿ ನಿರ್ಜನವನ ಹಾಗೂ ಭಯಂಕರ ಗುಹೆಗಳಲ್ಲಿ ವಾಸಿಸಬೇಕು ಅಲ್ಲಿ ಭೂತ ರಾಕ್ಷಸಾದಿಗಳ ಅನೇಕ ವಿಕಾರಗಳು ಕಂಡು ಬರುತ್ತವೆ ಹುಲಿ, ಸಿಂಹ ಮೊದಲಾದ ಅನೇಕ ಹಿಂಸ್ರ ಪಶುಗಳ ವಾಸ್ತವ್ಯವು ಅಲ್ಲಿ ಇರುತ್ತದೆ ಕೊಟ್ಯಾವಧಿ ಗಿಡಗಳ ಗುಂಪಿನಿಂದ ಕತ್ತಲೆಯು ಬಿದ್ದಾಗ ಹಾವು, ಅಜಗರ, ಕರಡಿ, ಚಿರ್ಚು, ತೋಳ ಇತ್ಯಾದಿ, ದುಷ್ಟ ತಿರ್ಯಂಚ ಪ್ರಾಣಿಗಳು ಸಂಚರಿಸುತ್ತಿರುತ್ತವೆ. ಇಂಥ ಸ್ಥಳದಲ್ಲಿ ಅಂಜಿಕೆಯನ್ನು ಬಿಟ್ಟು, ಧ್ಯಾನ-ಸ್ವಾಧ್ಯಾಯಗಳಲ್ಲಿ ನಿರಾಕುಲನಾಗಿರುವುದೇ ತಪವಾಗಿದೆ ಆಹಾರವು ಸಿಗಲಿ, ಸಿಗದೆ ಇರಲಿ ಶಾಂತಸ್ವಭಾವವನ್ನು ಕಾಯ್ದುಕೊಳ್ಳಬೇಕು ಅಲ್ಲದೆ ಆಹಾರವು ಸವಿ, ಹುಳಿ, ಕಹಿ, ಒಗರು, ಹಸಿ, ಬಿಸಿ, ಸರಸ, ನೀರಸ ಎಂಥದು ಸಿಕ್ಕರೂ ಲಾಲಸೆಯನ್ನು ಬಿಟ್ಟು ತಿಂದು ಸಂತೋಷವೃತ್ತಿಯಿಂದ ಇರುವುದೇ ನಿಜವಾದ ತಪವಾಗಿದೆ ದುಷ್ಟ ದೇವ, ದುಷ್ಟ ಮನುಷ್ಯ, ದುಷ್ಟ ಪಶುಗಳು ಇವೇ ಮೊದಲಾದವುಗಳು ಘೋರ ಉಪಸರ್ಗ ಮಾಡಿದರೂ ಗಾಬರಿಗೊಳ್ಳದೆ ಸಹನ ಮಾಡುವುದೇ ನಿಜವಾದ ತಪಸ್ಸಾಗಿದೆ ಇದರಿಂದ ಬಹು ಕಾಲದಿಂದಲೂ ಸಂಚಯವಾದ ಕರ್ಮದ ನಿರ್ಜರೆಯು ಆಗುತ್ತದೆ ನಮಗೆ ಕೆಟ್ಟ ಮಾತುಗಳನ್ನು ಆಡುವವರು, ನಿಂದ್ಯ ದೋಷಗಳನ್ನು ಆರೋಪಿಸುವವರು, ಬಡೆಯುವರು, ಹೊಡೆಯುವರು, ಬೆಂಕಿಯಲ್ಲಿ ಸುಡುವವರು, ಇಂಥವರೇ ಮೊದಲಾದ ಉಪದ್ರವಗಳನ್ನು ಕೊಡುವವರು ಗಂಟು ಬಿದ್ದರೂ ಅವರ ವಿಷಯದಲ್ಲಿ ದ್ವೇಷ ಬುದ್ಧಿಯನ್ನು ಇಡಕೂಡದು ಅದೂ ತಪಸ್ಸು ಎನಿಸುತ್ತದೆ ಹಾಗೆಯೇ ತಮ್ಮ ಸ್ತುತಿ, ಪೂಜೆ ಮೊದಲಾದವುಗಳನ್ನೂ ಮಾಡುವವರ ವಿಷಯದಲ್ಲಿಯೂ ರಾಗಭಾವನೆಯನ್ನು ಇಡಕೂಡದು ಇದೂ ಸಹ ತಪವಾಗಿದೆ

ಮೂಲಗುಣಗಳ ಪಾಲನೆಯೂ ತಪವಾಗಿದೆ. ಐದು ಮಹಾ ವ್ರತಗಳನ್ನು ಸ್ವೀಕರಿಸುವುದು, ಐದು ಸಮಿತಿಗಳನ್ನು ಪಾಲಿಸುವುದು, ಐದು ಇಂದ್ರಿಯಗಳ ನಿರೋಧ ಮಾಡುವುದು, ಆರು ಆವಶ್ಯಕ ಕ್ರಿಯೆಗಳನ್ನು ಕಾಲಕಾಲಕ್ಕೆ ನೆರವೇರಿಸುವುದು, ತಮ್ಮ ತಲೆ, ಗಡ್ಡ, ಮೀಸೆಗಳ ಕೂದಲುಗಳನ್ನು ಕಿತ್ತಿ ತೆಗೆಯುವುದು ಇವೆಲ್ಲ ತಪವೆನಿಸುತ್ತವೆ ಎರಡು ತಿಂಗಳಿಗೆ ಒಮ್ಮೆ ಕೇಶಲೋಚ ಮಾಡಿಕೊಳ್ಳುವದು ಉತ್ತಮ ಲೋಚವು, ಮೂರು ತಿಂಗಳಿಗೊಮ್ಮೆ ಮಾಡಿಕೊಳ್ಳುವುದು ಮಧ್ಯಮ ಲೋಚವು, ನಾಲ್ಕು ತಿಂಗಳಿಗೊಮ್ಮೆ ಮಾಡಿಕೊಳ್ಳುವುದು ಜಘನ್ಯ ಲೋಚವೆಂದು ತಿಳಿಯಬೇಕು. ಲೋಚವನ್ನು ಮಾಡಿಕೊಳ್ಳುವುದೂ ಸಹ ತಪವಾಗಿದೆ ಜೈನ ಮುನಿಗಳು ಅನ್ಯ ವೇಷಧಾರಿಗಳಂತೆ ದಿನಾಲು ಕೂದಲುಗಳನ್ನು ಕಿತ್ತುಕೊಳ್ಳುವದಿಲ್ಲ ಚಳಿ, ಬೇಸಿಗೆ, ಮಳೆಗಾಲಗಳಲ್ಲಿಯೂ ಸಹ ನಗ್ನವಾಗಿರುತ್ತಾರೆ. ಸ್ನಾನಮಾಡದೆ ಇರುವುದು, ಭೂಮಿಯ ಮೇಲೆ ಮಲಗುವುದು, ಅದೂ ತೀರ ಕಡಿಮೆ ಹೊತ್ತು ಮಲಗುವುದು, ಬೆರಳಿನಿಂದ ಹಲ್ಲುಗಳನ್ನು ತಿಕ್ಕಿಕೊಳ್ಳದೆ ಇರುವುದು, ಒಂದು ದಿವಸಕ್ಕೆ ಒಂದು ಹೊತ್ತು ಮಾತ್ರ ನಿಂತು ಆಹಾರ ಸ್ವೀಕರಿಸುವುದು, ಸರಸ ನೀರಸ ಮೊದಲಾದ ರುಚಿಗಳನ್ನು ಬಿಟ್ಟು ಭೋಜನಮಾಡುವುದು ಹೀಗೆ ಇಪ್ಪತ್ತೆಂಟು ಮೂಲಗುಣಗಳನ್ನು ಪಾಲಿಸುವುದು ದೊಡ್ಡ ತಪಸ್ಸಾಗಿದೆ ಈ ಮೂಲಗುಣಗಳ ಪ್ರಭಾವದಿಂದ ಘಾತಿಕರ್ಮಗಳ ನಾಶವಾಗಿ ಕೇವಲ ಜ್ಞಾನವು ಪ್ರಾಪ್ತವಾಗುತ್ತದೆ ಅದಕ್ಕಾಗಿ ಜ್ಞಾನಿಗಳೆ, ತಪವು ಧರ್ಮದ ಅಂಗವಾಗಿದೆ ಅದು ತಮ್ಮ ಜೀವನದಲ್ಲಿ ನಿರ್ವಿಘ್ನವಾಗಿ ಪಾಲಿಸಲ್ಪಡಬೇಕು ಅಂತಲೇ ಅದರ ಸ್ತುತಿ, ಪೂಜೆಗಳನ್ನು

ನೀಡಿ ಮಹಾ ಅರ್ಘ್ಯವನ್ನು ಕೊಡಬೇಕು. ಇದರ ಯೋಗದಿಂದ ಅತ್ಯಂತ ದೂರ ಮತ್ತು ಪರೋಕ್ಷವಾದಂಥ ಮೋಕ್ಷವು ನಿಮಗೆ ತೀರ ಸಮೀಪವಾಗುವುದು. ಈ ಪ್ರಕಾರ, ಏಳನೆಯದಾದ ಶಕ್ತಿಯಿದ್ದಷ್ಟು ತಪ ಎಂಬ ಹೆಸರಿನ ಭಾವನೆಯನ್ನು ವರ್ಣಿಸಲಾಗಿದೆ.

## ೮. ಸಾಧುಸಮಾಧಿಭಾವನಾ

ಇನ್ನು ಸಾಧುಸಮಾಧಿ ಎಂಬ ಹೆಸರಿನ ಎಂಟನೆಯ ಭಾವನೆಯನ್ನು ಹೇಳುತ್ತಾರೆ.

**ಸಾಧುಸಮಾಧಿಯ ಲಕ್ಷಣ**—ಮನೆಗೆ ಬೆಂಕಿಯು ಹತ್ತಿದಾಗ ಅದರೊಳಗಿನ ವಸ್ತುಗಳನ್ನು ರಕ್ಷಿಸುವದಕ್ಕಾಗಿ ಅಗ್ನಿಯನ್ನು ನಂದಿಸುವುದು ಅವಶ್ಯಕವಾಗಿರುತ್ತದೆ. ಈ ಪ್ರಕಾರ ವ್ರತ ಶೀಲಾದಿ ಗುಣಗಳಿಂದ ಕೂಡಿದ ಸಂಯಮಿ ಹಾಗೂ ಸಾಧು ಪುರುಷರ ಮೇಲೆ ಸಂಕಟವು ಪ್ರಾಪ್ತವಾದಾಗ, ಅವುಗಳನ್ನು ದೂರಗೊಳಿಸಲಿಕ್ಕೆ ಪ್ರಯತ್ನಮಾಡಿ, ಅವರ ವ್ರತ ಶೀಲಗಳನ್ನು ರಕ್ಷಣಮಾಡುವುದಕ್ಕೆ ಸಾಧುಸಮಾಧಿ ಎನ್ನುವರು. ಅದರಂತೆ ಗೃಹಸ್ಥರು ಮರಣ ಒದಗಿದರೂ ಉಪಸರ್ಗ, ರೋಗ, ಇಷ್ಟವಿಯೋಗ, ಅನಿಷ್ಟ ಸಂಯೋಗಗಳು ಪ್ರಾಪ್ತವಾದರೂ ಅಂಜದೆ ಅಳುಕದೆ ಇರುವುದು ಕೂಡ ಸಾಧುಸಮಾಧಿಯಾಗಿದೆ.

**ಸಾವಿನ ಹೆದರಿಕೆಯನ್ನು ಬಿಡಿರಿ.** ಇಂಥ ಪ್ರಸಂಗದಲ್ಲಿ ಸಮ್ಯಗ್‌ಜ್ಞಾನಿಯು ಹೀಗೆ ವಿಚಾರಿಸುತ್ತಾನೆ—ಎಲೈ ಆತ್ಮನೇ, ನೀನು ಅಖಂಡ, ಅವಿನಾಶಿ, ಜ್ಞಾನದರ್ಶನ ಸ್ವಭಾವದವನಾಗಿರುವಿ. ನಿನಗೆ ಮರಣವಿಲ್ಲ. ಹುಟ್ಟಿದುದೆಲ್ಲ ಸಾಯುವುದು ನಿಜ. ಪರ್ಯಾಯಗಳ ನಾಶವಾಗುತ್ತದೆ, ದ್ರವ್ಯದ ನಾಶವಾಗುವದಿಲ್ಲ. ಐದು ಇಂದ್ರಿಯಗಳು, ಮನ–ವಚನ–ಕಾಯ ಬಲಗಳು, ಆಯುಷ್ಯ ಮತ್ತು ಉಸುರಾಡಿಸುವಿಕೆ ಎಂಬ ಹತ್ತು ಪ್ರಾಣಗಳಿರುತ್ತವೆ. ಇವುಗಳ ನಾಶಕ್ಕೆ ಮರಣವೆನ್ನುವರು. ಜ್ಞಾನ, ದರ್ಶನ, ಸುಖ, ಶಕ್ತಿ ಇವೇ ಮೊದಲಾದ ಭಾವ ಪ್ರಾಣಗಳ ನಾಶವು ಎಂದೂ ಆಗುವದಿಲ್ಲ. ಅಂತಲೇ ಶರೀರದ ನಾಶಕ್ಕೆ ತನ್ನ ನಾಶವೆಂದು ತಿಳಿಯುವುದು ಮಿಥ್ಯಾಜ್ಞಾನವಾಗಿದೆ. ಎಲಾ! ಈ ಶರೀರವು ನಾವಿರಾರು ಕ್ರಿಮಿಗಳಿಂದ ತುಂಬಿದ್ದು, ಎಲುವು, ಮಾಂಸ, ರಕ್ತ ಇತ್ಯಾದಿ ಹೊಲಸು ಪದಾರ್ಥಗಳಿಂದ ರೂಪುಗೊಂಡದ್ದಿದೆ. ಅದು ನಷ್ಟವಾಯಿತೆಂದು ನಿನ್ನದೇನು ಕೆಟ್ಟಿತು? ನೀನು ಅವಿನಾಶಿ ಜ್ಞಾನಮಯನಾಗಿರುವಿ. ಮೃತ್ಯುವು ದೊಡ್ಡ ಉಪಕಾರವನ್ನು ಮಾಡುವ ಮಿತ್ರನಾಗಿದೆ. ಅದು ನಿನ್ನನ್ನು ಮುಪ್ಪಾದ ಹಳೆಯ ದೇಹದಿಂದ ಮುಕ್ತಗೊಳಿಸಿ ದೇವಾದಿಕ ಉತ್ತಮ ಶರೀರವನ್ನು ಒದಗಿಸಿಕೊಡುತ್ತದೆ. ಮೃತ್ಯುವೆಂಬ ಮಿತ್ರನು ಇಲ್ಲದಿದ್ದರೆ ಈ ಶರೀರದಲ್ಲಿ ಎಷ್ಟೊಂದು ಕಾಲದ ವರೆಗೆ ನೀನು ಇರಬೇಕಾಗುತ್ತಿತ್ತೋ ಏನೋ. ಆಗ ರೋಗ ಹಾಗೂ ದುಃಖಗಳಿಂದ ತುಂಬಿದ ಈ ಶರೀರದಿಂದ ನಿನ್ನನ್ನು ಯಾರು ಮುಕ್ತಗೊಳಿಸುತ್ತಿದ್ದರು? ಮತ್ತು ಸಮಾಧಿ ಮರಣವೇ ಮೊದಲಾದವುಗಳಿಂದ ನಿನ್ನ ಉದ್ಧಾರವು ಹೇಗೆ ಆಗುತ್ತಿತ್ತು? ವ್ರತ, ತಪ, ಸಂಯಮ ಇವುಗಳ ಉತ್ತಮ ಫಲವು ಪರಲೋಕದಲ್ಲಿ ನಿನಗೆ ದೊರೆಯುವುದು ಈ ಮರಣವೆಂಬ ಸ್ನೇಹಿತನ ಸಹಾಯದಿಂದಲೇ ಅಲ್ಲವೆ? ಮೃತ್ಯುವು ಇಲ್ಲದಿದ್ದರೆ ಪಾಪದ ಭಯವನ್ನಾದರೂ ಯಾರು ನೋಡುವರು? ಮರಣವೆಂಬ ಕಲ್ಪವೃಕ್ಷವು ಇರದಿದ್ದರೆ ನಾಲ್ಕು ಆರಾಧನೆಗಳನ್ನು ಸ್ವೀಕರಿಸಿ, ಸಂಸಾರ ರೂಪೀ ಕೆಸರಿನೊಳಗಿಂದ ನಿನ್ನನ್ನು ಯಾರು ತೆಗೆಯುತ್ತಿದ್ದರು? ಸಂಸಾರದಲ್ಲಿ ಯಾರ ಚಿತ್ತವು ಆಸಕ್ತವಾಗಿರುವುದೋ, ಶರೀರವೇ ತನ್ನ ಸ್ವರೂಪವೆಂದು ಯಾರು ತಿಳಿದಿರುವರೋ ಅವರೇ ಮಾತ್ರ ಮರಣಕ್ಕೆ ಹೆದರುವರು. ಆದರೆ ಸಮ್ಯಗ್ದೃಷ್ಟಿಯು ತನ್ನನ್ನು ಶರೀರದಿಂದ ಭಿನ್ನನೆಂದು ತಿಳಿಯುತ್ತಾನೆ. ಅಂತಲೇ ಅವನಿಗೆ ಮರಣದ ಭಯವು ಇರುವದಿಲ್ಲ. ಇಂಥ ಪುರುಷರಿಗೆ ಸಾಧುಸಮಾಧಿಯು ಸಂಭವಿಸುತ್ತದೆ.

ಸಮ್ಯಗ್ದೃಷ್ಟಿಯುಳ್ಳವರಿಗೆ ಮರಣದ ಸಮಯದಲ್ಲಿ ರೋಗ ದುಃಖಾದಿಗಳು ಪ್ರಾಪ್ತವಾದಲ್ಲಿ ಅವು ಶರೀರದ ಮೇಲಿನ ಮಮತ್ವವನ್ನು ಬಿಡಿಸಲಿಕ್ಕೆಂದು ಸಂಭವಿಸಿವೆಯೆಂದು ತಿಳಿಯುತ್ತಾನೆ. ತ್ಯಾಗ ಸಂಯಮಗಳನ್ನು ಪಾಲಿಸಲಿಕ್ಕೆ ಹಚ್ಚಲಿಕ್ಕೂ ಪ್ರಮಾದವನ್ನುಳಿದು ಸಮ್ಯಗ್ದರ್ಶನವೇ ಮೊದಲಾದ ನಾಲ್ಕು ಆರಾಧನೆಗಳಲ್ಲಿ ಮನಸ್ಸನ್ನು ದೃಢಗೊಳಿಸಲಿಕ್ಕೂ ರೋಗಾದಿಗಳು ಪೋಷಕವೆಂದು ಸಮ್ಯಗ್ದೃಷ್ಟಿಯು ತಿಳಿಯುವನು. ನಾನು ಹುಟ್ಟಿದಾಗಿನಿಂದ ನನ್ನನ್ನು ಮೇಲೆ ಮರಣವನ್ನು ಹೊಂದತಕ್ಕವನೇ. ನಾನು ಹೆದರಿದರೂ, ಧೈರ್ಯದಿಂದ ಇದ್ದರೂ, ಹೇಗಿದ್ದರೂ ಕೊನೆಯ ಮರಣವು ಬಿಡುವದಿಲ್ಲ. ಅಂದಮೇಲೆ ದುರ್ಗತಿಗೆ ಕಾರಣವಾದ ಕಳವಳದ ಮರಣವು ಮಾತ್ರ ಬೇಡ. ಜ್ಞಾನ ದರ್ಶನ ಸ್ವರೂಪವಾದ ನಾಶವಾಗದಂತೆ ವರೆಗೂ ಧೈರ್ಯವು ಉಳಿದು, ದೇಹವು ಪವಿತ್ರ ಬಿದ್ದು ಹೋಗಬೇಕು.

ಮರಣವು ಬರಬೇಕು ಇದೇ ಅವನ ಇಚ್ಛೆಯಾಗಿರುತ್ತದೆ ಇದರಿಂದ ಸಮ್ಯಗ್ದೃಷ್ಟಿಯು ಮರಣದ ಭಯವನ್ನು ಇಟ್ಟುಕೊಳ್ಳದಿರುವುದೇ ಸಾಧು ಸಮಾಧಿಯಾಗಿದೆ

**ಬೇನೆಯ ಭಯವು ಬೇಡ.** ದೇವಕೃತ, ಮನುಷ್ಯಕೃತ, ತಿರ್ಯಂಚಕೃತ ಉಪಸರ್ಗಗಳು ಸಂಭವಿಸಿದ್ದರೆ ಅವುಗಳಿಗೆ ಭಯವೆನಿಸುವದಿಲ್ಲ ಇವೆಲ್ಲ ನಾವು ಮೊದಲು ಮಾಡಿದ ಕರ್ಮಗಳ ನಿರ್ಜರೆಗಾಗಿ ಸಂಭವಿಸುತ್ತವೆಂದು ತಿಳಿಯುವೆನೆನ್ನುವವರಿಗೆ ಸಾಧು ಸಮಾಧಿಯು ಪ್ರಾಪ್ತವಾಗುತ್ತದೆ ಸಾಧು ಪುರುಷನು ರೋಗದ ಭಯವನ್ನು ಹೊಂದುವದಿಲ್ಲ, ಯಾಕೆಂದರೆ ತನ್ನ ಶರೀರವೇ ಒಂದು ದೊಡ್ಡ ರೋಗವೆಂದು ಅವನು ತಿಳಿಯುತ್ತಾನೆ ದೇಹದಿಂದಲೇ ಹಸಿವು, ನೀರಡಿಕೆ, ಆಲಸ್ಯ ಮೊದಲಾದ ರೋಗಗಳು ಯಾವಾಗಲೂ ಆಗುತ್ತಿರುತ್ತವೆ ಮಾನವನ ಶರೀರವು ವಾತ, ಪಿತ್ತ, ಕಫ, ಈ ತ್ರಿದೋಷಗಳಿಂದ ಕೂಡಿದೆ ಅಸಾತಾವೇದನೀಯ ಕರ್ಮದ ಉದಯದಿಂದ ಈ ತ್ರಿದೋಷಗಳು ಹೆಚ್ಚು ಕಡಿಮೆಯಾದಲ್ಲಿ ಜ್ವರ, ಶ್ವಾಸ, ಉದರ, ಅತಿಸಾರ, ಶೂಲಿ, ಮಸ್ತಕ ಶೂಲಿ, ನೇತ್ರರೋಗ, ವಾತರೋಗ ಮೊದಲಾದವುಗಳು ಒದಗುತ್ತವೆ ಆಗ ಜ್ಞಾನಿಯು ಅಸಾತಾವೇದನೀಯ ಕರ್ಮದ ಉದಯವೇ ತನ್ನ ರೋಗಗಳ ನಿಜವಾದ ಕಾರಣವೆಂದು ತಿಳಿಯುತ್ತಾನೆ ದ್ರವ್ಯ, ಕ್ಷೇತ್ರ, ಕಾಲಗಳು ಮಾತ್ರ ಬಾಹ್ಯ ಕಾರಣಗಳಾಗಿವೆ. ಅಂದ ಮೇಲೆ ಸಾತಾವೇದನೀಯ ಕರ್ಮದ ಉದಯ ಮತ್ತು ಅಸಾತಾವೇದನೀಯ ಕರ್ಮದ ಉಪಶಮದಿಂದಲೇ ಈ ರೋಗವು ಹೋದೀತು, ಒಂದು ವೇಳೆ ಅಸಾತಾ ಕರ್ಮದ ಉದಯವು ಪ್ರಬಲವಾಗಿದ್ದರೆ ಬಾಹ್ಯ ಔಷಧ ಮೊದಲಾದ ಉಪಚಾರಗಳು ರೋಗವನ್ನು ಕಳೆಯಲಿಕ್ಕೆ ಸಮರ್ಥವಾಗಲಾರವು ಅಸಾತಾ ಕರ್ಮವನ್ನು ನಷ್ಟಗೊಳಿಸಲಿಕ್ಕೆ ಯಾವ ದೇವ, ದಾನವ, ಮಂತ್ರ, ತಂತ್ರ, ಔಷಧಾದಿಗಳು ಸಮರ್ಥವಾಗಲಾರವು. ಅಂತಲೇ ಕಳವಳವನ್ನು ಬಿಟ್ಟು ಶಾಂತಿಯಿಂದ ಇರಬೇಕು. ಹೊರಗಿನ ಔಷಧಾದಿಗಳು ಅಸಾತಾ ಕರ್ಮದ ಉದಯವು ಮಂದವಿದ್ದಾಗಲೇ ಸಹಕಾರಿ ಕಾರಣಗಳಾಗಿ ಪರಿಣಮಿಸುತ್ತವೆ ಯಾವಾಗ ಅಸಾತಾ ಕರ್ಮದ ತೀವ್ರ ಉದಯವು ಇರುವುದೋ ಆಗ ಔಷಧಾದಿಗಳು ರೋಗವನ್ನು ಕಳೆಯಲಿಕ್ಕೆ ಸಮರ್ಥವಾಗುವದಿಲ್ಲ. ಹೀಗೆ ವಿಚಾರ ಮಾಡಿ ಅಸಾತಾ ಕರ್ಮದ ನಾಶಕ್ಕೆ ಕಾರಣವಾದ ಪರಮ ಶಾಂತಿ ಭಾವವನ್ನು ಧರಿಸಿ, ಕಳವಳವನ್ನು ಪಡದೆ ವೇದನೆಯನ್ನು ಸಹನ ಮಾಡಬೇಕು, ಗಾಬರಿಯಾಗಬಾರದು. ಇದೇ ಸಾಧು ಸಮಾಧಿಯಾಗಿದೆ

**ಇಷ್ಟಾನಿಷ್ಟ ಸಂಯೋಗ ವಿಯೋಗಗಳಿಗೆ ಹೆದರಕೂಡದು.** ಬೇಕಾದುದು ಇಲ್ಲದಂತೆ ಆಗುವುದು, ಬೇಡವಾದುದು ಹತ್ತಿರಕ್ಕೆ ಬರುವುದು ಹೀಗಾದಾಗ ಜ್ಞಾನದ ದೃಢತೆಯನ್ನು ಕಾಯ್ದುಕೊಂಡು, ಹೆದರದೆ ಇರುವುದಕ್ಕೆ ಸಾಧು ಸಮಾಧಿ ಎನ್ನುವರು. ಯಾವ ಮನುಷ್ಯನು ಜನ್ಮ, ಮರಣ, ಮುಪ್ಪುಗಳಿಂದ ಕೂಡಿದ ಸಂಸಾರಕ್ಕೆ ಹೆದರುವನೋ ಅವನು ಸಮ್ಯಗ್ದರ್ಶನವೇ ಮೊದಲಾದ ಗುಣಗಳಿಂದ ಕೂಡಿದ್ದರೆ ಮಾತ್ರ ಆರಾಧನಾ ಸಹಿತ ಸಮಾಧಿ ಮರಣದ ಇಚ್ಛೆಯನ್ನು ಮಾಡುತ್ತಾನೆ. ಅವನು ನಿರ್ಭಯವಾಗಿ ಶರೀರಾದಿ ಪರದ್ರವ್ಯಗಳ ಮೇಲಿನ ಮಮತ್ವವನ್ನು ಬಿಟ್ಟು, ವ್ರತ ಸಂಯಮಗಳಲ್ಲಿ ಚಿತ್ತವನ್ನು ಇಡುವನು ಸಂಸಾರದಲ್ಲಿ ಸುತ್ತುತ್ತ ಅನಂತಾನಂತ ಕಾಲವು ಉರುಳಿದೆ, ಎಲ್ಲದರ ಸಮಾಗಮವು ಅನೇಕ ಸಲವಾಗಿದೆ. ಆದರೆ ಸಮಾಧಿ ಮರಣವು ಪ್ರಾಪ್ತವಾಗಿಲ್ಲ ಅದು ಒಮ್ಮೆಯಾದರೂ ಲಭಿಸಿದ್ದರೆ ನಾನು ಜನ್ಮ ಮರಣಕ್ಕೆ ಪಾತ್ರನಾಗುತ್ತಿರಲಿಲ್ಲ ಸಂಸಾರದಲ್ಲಿ ಪರಿಭ್ರಮಣ ಮಾಡುವಾಗ ನಾನು ಅನೇಕ ಹೊಸ ಹೊಸ ದೇಹಗಳನ್ನು ಧರಿಸಿದೆ. ಧಾರಣ ಮಾಡದಂಥ ಒಂದು ಶರೀರವೂ ಕೂಡ ಉಳಿದಿಲ್ಲ ಅಂದಮೇಲೆ ಈಗಿನ ಶರೀರದ ಮೇಲೆಯೇ ಏನೆಂದು ಮೋಹಗೊಳ್ಳಲಿ? ಹಾಗೆಯೇ ಪ್ರತಿಯೊಂದು ಜನ್ಮದಲ್ಲಿಯೂ ನನಗೆ ಅನೇಕ ಹೆಂಡರು ಮಕ್ಕಳುಗಳ ಸಂಬಂಧವು ಬರುತ್ತ ಹೋಗಿದೆ. ಇಂದೇ ಈ ಸ್ವಜನರು ಲಭಿಸಿದ್ದಾರೆನ್ನುವಂತಿಲ್ಲ. ಅಂದ ಮೇಲೆ ಈಗ ನಾನು ಯಾವ ಯಾವ ಸ್ವಜನರ ಮೇಲೆ ಮೋಹ ಮಾಡಲಿ? ಈಗಿನ ಈ ಸಂಪತ್ತಿಗಿಂತಲೂ ಹೆಚ್ಚಿನ ದೊಡ್ಡ ದೊಡ್ಡ ರಾಜ್ಯ ವೈಭವವೂ ಸಹ ಹಲವು ಜನ್ಮಗಳಲ್ಲಿ ದೊರಕಿದೆ ಅಂದಮೇಲೆ ಈ ಕವಡೀ ಕಿಮ್ಮತ್ತಿನ ಸಂಪತ್ತಿನ ಮೇಲೆಯಾದರೂ ಏಕೆ ಮಮತ್ವವನ್ನು ಇಡಲಿ? ಪ್ರತಿಯೊಂದು ಜನ್ಮದಲ್ಲಿಯೂ ಪಾಲನ ಪೋಷಣಗಳನ್ನು ಮಾಡುವ ಅನೇಕ ತಂದೆತಾಯಂದಿರು ಆಗಿ ಹೋಗಿದ್ದಾರೆ ಈಗಿನ ತಂದೆ ತಾಯಂದಿರಷ್ಟೇ ನನ್ನನ್ನು ಸಂರಕ್ಷಿಸಿದವರಲ್ಲ ಅನೇಕ ಜನ್ಮದಲ್ಲಿ ಪುರುಷನಾಗಿಯೂ ಹಾಗೆಯೇ ಸ್ತ್ರೀಯಾಗಿಯೂ ನಾನು ಜನ್ಮವೆತ್ತಿರುವೆ. ಹಲವು ಜನ್ಮಗಳಲ್ಲಿ ತೀವ್ರ ಕಾಮವಾಸನೆಯಿಂದ ನಪುಂಸಕನೂ ಆಗಿರುವೆ. ಆದರೆ ಲಿಂಗಾಭಿಮಾನದಿಂದ ಅದನ್ನೆಲ್ಲ ಭೋಗಿಸಿರುವ ನಾನು ಒಮ್ಮೆಯೂ ಭೋಗಿಸದಂಥ ದುಃಖವು ಸಂಸಾರದಲ್ಲಿ ಯಾವುದೂ ಉಳಿದಿಲ್ಲ. ಎಲ್ಲವೂ ಅನೇಕ ಸಲ ಭೋಗಿಸಿದ

ದುಃಖಗಳೇ ಆಗಿವೆ ಅದರಂತೆ ಇಂದ್ರಿಯ ಜನಿತ ಎಲ್ಲ ಸುಖಗಳೂ ಸಹ ಹಲವು ಸಲ ಭೋಗಿಸಿದಂಥವುಗಳೇ ಆಗಿವೆ ನಾನು ಅನೇಕಸಲ ನರಕದಲ್ಲಿ ನಾರಕಿಯಾಗಿಯೂ ಹುಟ್ಟಿ ಅಸಂಖ್ಯಾತ ಕಾಲದ ವರೆಗೆ ನಾನಾ ಪ್ರಕಾರದ ದುಃಖಗಳನ್ನು ಭೋಗಿಸಿದೆ ಅನೇಕಸಲ ತಿರ್ಯಂಚ ಯೋನಿಗಳಲ್ಲಿ ಜನಿಸಿದೆ ಅಲ್ಲಿ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಿದೆ ಆಗ ಹಲವು ಸಲ ಜನ್ಮ ಮರಣಗಳನ್ನು ಹೊಂದುತ್ತ ಅನೇಕ ಪ್ರಕಾರದ ಕಷ್ಟಗಳನ್ನು ಅನುಭವಿಸಿದೆ ಕೆಲವು ಸಾರೆ ಮನುಷ್ಯನಾಗಿಯೂ ಹುಟ್ಟಿದೆ ಆಗ ಧರ್ಮವಾಸನೆಯನ್ನು ಬಿಟ್ಟು, ಮಿಥ್ಯಾದೃಷ್ಟಿಯವನಾದೆ ಕೆಲ ಕೆಲವು ಸಲ ದೇವಲೋಕದಲ್ಲಿಯೂ ಜನ್ಮವನ್ನು ತಕ್ಕೊಂಡೆ ಅನೇಕ ಜನ್ಮಗಳಲ್ಲಿ ಜಿನೇಂದ್ರರ ಪೂಜೆಯನ್ನೂ ಮಾಡಿದೆ ಕೆಲವು ಜನ್ಮಗಳಲ್ಲಿ ಗುರುಗಳಿಗೆ ವಂದನಾದಿಗಳನ್ನು ಮಾಡಿದೆ. ಅನೇಕ ಜನ್ಮಗಳಲ್ಲಿ ಮಿಥ್ಯಾದೃಷ್ಟಿಯಾಗಿ ಕಪಟದಿಂದ ಆತ್ಮ ನಿಂದೆಯನ್ನೂ ಮಾಡಿದೆ ಹಲವು ಜನ್ಮಗಳಲ್ಲಿ ದುರ್ಧರ ತಪವನ್ನೂ ಧಾರಣ ಮಾಡಿದೆ ಅನೇಕ ಜನ್ಮಗಳಲ್ಲಿ ಭಗವಂತನ ಸಮವಸರಣದಲ್ಲಿಯೂ ಹೋಗಿ ಕುಳಿತೆ. ಕೆಲವು ಜನ್ಮಗಳಲ್ಲಿ ಶ್ರುತಜ್ಞಾನದ ಅಂಗಗಳ ಪಠನವನ್ನೂ ಮಾಡಿದೆ ಆದರೆ ಜನ್ಮಮರಣಗಳನ್ನು ತಪ್ಪಿಸಲಿಕ್ಕೆ ಆಗಲಿಲ್ಲ ಜಿನೇಂದ್ರನ ಪೂಜೆಯನ್ನು ಮಾಡುವುದು, ಗುರುಗಳನ್ನು ವಂದಿಸುವುದು, ಆತ್ಮ ನಿಂದೆಯನ್ನು ಮಾಡುವುದು, ಕಠಿಣ ತಪಸ್ಸನ್ನಾಚರಿಸುವುದು, ಸಮವಸರಣದಲ್ಲಿ ಹೋಗುವುದು, ಶ್ರುತದ ಅಂಗಗಳ ಅಭ್ಯಾಸಮಾಡುವುದು, ಇವೇ ಮೊದಲಾದ ಕೆಲಸಗಳು ಪ್ರಶಂಸನೀಯವಾಗಿವೆ ಪಾಪನಾಶಕವೂ ಪುಣ್ಯಕಾರಕವೂ ಆಗಿವೆ ಆದರೆ ಅವು ಸಮ್ಯಗ್ದರ್ಶನವಿಲ್ಲದೆ ಕೃತಾರ್ಥವಾಗಲಾರವು ಅಲ್ಲದೆ ಸಂಸಾರ ಪರಿಭ್ರಮಣವನ್ನು ತಡೆಯಲಿಕ್ಕೆ ಸಮರ್ಥವೂ ಆಗುವದಿಲ್ಲ ಸಮ್ಯಗ್ದರ್ಶನವಿಲ್ಲದ ಈ ಎಲ್ಲ ಕ್ರಿಯೆಗಳು ಪುಣ್ಯಬಂಧಕ್ಕೆ ಕಾರಣವಾಗಿವೆ ಆದರೆ ಯಾವಾಗ ಅವು ಸಮ್ಯಗ್ದರ್ಶನದಿಂದ ಕೂಡಿರುವವೋ ಆಗ ಮಾತ್ರ ಸಂಸಾರ ಬಂಧದ ನಾಶವನ್ನು ಮಾಡಿಯಾವು. ಭಗವಾನ್ ಗುಣಭದ್ರಾಚಾರ್ಯರು 'ಆತ್ಮಾನುಶಾಸನ'ದಲ್ಲಿ ಹೀಗೆ ಹೇಳಿದ್ದಾರೆ—

> ಶಮಬೋಧವೃತ್ತತಪಸಾಂ ಪಾಷಾಣಸ್ಯೇವ ಗೌರವಂ ಪುಂಸಃ ।
> ಪೂಜ್ಯಂ ಮಹಾಮಣೇರಿವ ತದೇವ ಸಮ್ಯಕ್ತ್ವಸಂಯುಕ್ತಂ ॥ ೧ ॥

ಅರ್ಥ—ಪುರುಷನಿಗೆ ಕೇವಲ ಸಾಮ್ಯಭಾವ, ಜ್ಞಾನ, ಚಾರಿತ್ರ ಮತ್ತು ತಪ ಇವುಗಳ ಮಹತಿಯು ಕಲ್ಲಿನ ಭಾರವಿದ್ದಂತೆ ಇರುತ್ತದೆ ಆದರೆ ಇದೇ ಸಾಮ್ಯಭಾವ, ಜ್ಞಾನ, ಚಾರಿತ್ರ ಮತ್ತು ತಪಗಳು ಸಮ್ಯಕ್ತ್ವ ಸಹಿತವಾಗಿದ್ದರೆ ಮಾತ್ರ ಮಹಾ ರತ್ನದಂತೆ ಪೂಜ್ಯವೆನಿಸುತ್ತವೆ

ಸಮ್ಯಕ್ತ್ವ ಸಹಿತ ಕ್ರಿಯೆಗಳೇತಾರಕವಾಗುತ್ತವೆ. ಜಗತ್ತಿನಲ್ಲಿ ರತ್ನ ಮತ್ತು ಕಲ್ಲುಗಳು ಒಂದೇ ಜಾತಿಗೆ ಸೇರಿದವುಗಳಾಗಿವೆ ಆದರೆ ಒಂದೆರಡು ಮಣ ಕಲ್ಲನ್ನು ಮಾರಲಿಕ್ಕೆ ಒಯ್ದರೆ ಅದರ ಬೆಲೆಯು ಕೇವಲ ಒಂದೆರಡು ಆಣೆಗಳೂ ಆಗಲಿಕ್ಕಿಲ್ಲ. ಅದರಿಂದ ಒಂದು ಹೊತ್ತಿನ ಊಟವೂ ದೊರೆಯಲಿಕ್ಕಿಲ್ಲ ಆದರೆ ಒಂದು ತೊಲೆ ಎರಡು ತೊಲೆಗಳಷ್ಟು ರತ್ನಗಳನ್ನು ಮಾರಿದರೆ ಅವುಗಳಿಂದ ಸಾವಿರಾರು ರೂಪಾಯಿಗಳು ಬರಬಹುದು. ಇದೇ ಪ್ರಕಾರ ಸಾಮ್ಯಭಾವ, ಶಾಸ್ತ್ರಜ್ಞಾನ, ಚಾರಿತ್ರಧಾರಣ ಮತ್ತು ಘೋರ ತಪಶ್ಚರಣಗಳನ್ನು ಸಮ್ಯಕ್ತ್ವವಿಲ್ಲದೆ ದೀರ್ಘ ಕಾಲದ ವರೆಗೆ ಪಾಲಿಸಿದರೂ ಕೂಡ ಅವುಗಳಿಂದ ರಾಜ್ಯಸಂಪತ್ತು ಲಭಿಸೀತು, ಮಂದ ಕಷಾಯದ ಯೋಗದಿಂದ ದೇವಲೋಕದಲ್ಲಿ ಜನ್ಮವಾದೀತು, ಆದರೆ ಮರಳಿ ಏಕೇಂದ್ರಿಯ ಅವಸ್ಥೆಯಲ್ಲಿಯೂ ಹುಟ್ಟಬೇಕಾದೀತು ಇನ್ನು ಅವೇ ಗುಣಗಳು ಸಮ್ಯಕ್ತ್ವ ಸಹಿತವಾಗಿದ್ದರೆ ಸಂಸಾರ ಪರಿಭ್ರಮಣದಿಂದ ಮುಕ್ತಗೊಳಿಸಿ, ಮುಕ್ತಿ ಸುಖಕ್ಕನೇ ಒಯ್ದು ಮುಟ್ಟಿಸಬಲ್ಲುವು ಅಂತಲೇ ಸಮ್ಯಕ್ತ್ವವಿಲ್ಲದೆ ಮಿಥ್ಯಾದೃಷ್ಟಿಯಾದವನು ಜಿನೇಶ್ವರನ ಪೂಜೆಯನ್ನು ಮಾಡಲಿ, ಗುರುಗಳನ್ನು ವಂದಿಸಲಿ, ಸಮವಸರಣದಲ್ಲಿ ಹೋಗಲಿ, ಶ್ರುತದ ಅಭ್ಯಾಸ ಮಾಡಲಿ, ತಪಸ್ಸನ್ನಾಚರಿಸಲಿ, ಆದರೂ ಕೂಡ ಅವನು ಅನಂತ ಕಾಲದ ವರೆಗೆ ಸಂಸಾರದಲ್ಲಿಯೇ ವಾಸಮಾಡಿಯಾನು ಈ ಮೂರು ಲೋಕದಲ್ಲಿ ಈ ಜೀವಕ್ಕೆ ಸುಖದುಃಖಗಳ ಸಂಪೂರ್ಣ ಸಾಮಗ್ರಿಯು ಅನೇಕ ಸಲ ಲಭಿಸುವುದು ದುರ್ಲಭವಲ್ಲ ಸಾಧು ಸಮಾಧಿಯು ಮಾತ್ರ ಎಂದೂ ಲಭಿಸಿಲ್ಲ ಅದು ಮಾತ್ರ ದುರ್ಲಭವಾಗಿದೆ ಅದು ನಮ್ಮನ್ನು ಸಂಗಡ ಕರೆದೊಯ್ಯುವಂಥದಿದೆ ಅದಕ್ಕಾಗಿ ರತ್ನತ್ರಯವನ್ನು ಧಾರಣಮಾಡಿ ಯಾರು ದೇಹವನ್ನು ಬಿಡುವರೋ ಅವರಿಗೆ ಮಾತ್ರ ಸಾಧು ಸಮಾಧಿಯು ಪ್ರಾಪ್ತವಾಗುತ್ತದೆ ಸಾಧು ಸಮಾಧಿಯು ಚತುರ್ಗತಿಯಲ್ಲಿ ಭ್ರಮಣಮಾಡುವಂಥ ಜೀವಗಳ ದುಃಖವನ್ನು ನಾಶಮಾಡಿ ನಿಶ್ಚಲ, ಸ್ವಾಧೀನ, ಅನಂತ ಸುಖವನ್ನು ಪ್ರಾಪ್ತಮಾಡಿಕೊಡುತ್ತದೆ ಯಾವ

ಪುರುಷನು ಸಾಧು ಸಮಾಧಿ ಭಾವನೆಯು ಪ್ರಾಪ್ತವಾಗುವದಕ್ಕಾಗಿ ಅದಕ್ಕೆ ಮಹಾನ್ ಅರ್ಘ್ಯವನ್ನು ಕೊಡುತ್ತಾನೆಯೋ ಅವನು ಬೇಗನೆ ಸಂಸಾರ ಸಮುದ್ರದೊಳಗಿಂದ ಈಸಿ, ಎಂಟು ಗುಣಗಳನ್ನು ಧಾರಣಮಾಡುವಂಥ ಸಿದ್ಧನಾಗುತ್ತಾನೆ

ಈ ಪ್ರಕಾರ ಸಾಧು ಸಮಾಧಿ ಎಂಬ ಹೆಸರಿನ ಎಂಟನೆಯ ಭಾವನೆಯನ್ನು ವರ್ಣಿಸಲಾಗಿದೆ

## ೯. ವೈಯಾವೃತ್ಯ ಭಾವನಾ

ವೈಯಾವೃತ್ಯದ ಹತ್ತು ವಿಧಗಳು. ಮುನಿ ಇಲ್ಲವೆ ಶ್ರಾವಕನು ಯಾವಾಗ ಜ್ವರ, ಸಂಗ್ರಹಣಿ, ಶ್ವಾಸ, ಶೂಲಿ, ಉದರ ಮೊದಲಾದ ರೋಗಗಳಿಂದ ಪೀಡಿತನಾಗಿರುವನೋ ಆಗ ಸೇವೆಯನ್ನು ಮಾಡುವುದು ವೈಯಾವೃತ್ಯವೆನಿಸುತ್ತದೆ ಆ ಸೇವೆಯಲ್ಲಿ ಶುದ್ಧ ಔಷಧ, ಯೋಗ್ಯ ಪಥ್ಯ, ಉತ್ತಮ ಹವೆಯ ಸ್ಥಾನಗಳನ್ನು ಒದಗಿಸುವುದು, ರೋಗಿಯ ಆರೈಕೆ ಮಾಡುವುದು, ಅವನೊಡನೆ ಸವಿಯಾದ ಮಾತುಗಳನ್ನಾಡುವುದು, ಇತರ ಉಪಾಯಗಳಿಂದ ಅವನ ದುಃಖವನ್ನು ದೂರಗೊಳಿಸುವುದು—ಇವೆಲ್ಲವೂ ಸಮಾವೇಶವಾಗುತ್ತವೆ ವೈಯಾವೃತ್ಯವು ಮುನಿಗಳ ಹತ್ತು ಪ್ರಕಾರಗಳಿಗೆ ಅನುಸರಿಸಿ ಹತ್ತು ವಿಧವಾಗಿದೆ ೧ ಆಚಾರ್ಯ, ೨ ಉಪಾಧ್ಯಾಯ, ೩ ತಪಸ್ವೀ, ೪ ಶೈಕ್ಷ್ಯ, ೫ ಗ್ಲಾನ, ೬ ಗಣ, ೭ ಕುಲ, ೮ ಸಂಘ, ೯. ಸಾಧು, ೧೦ ಮನೋಜ್ಞ ಈ ಹತ್ತು ಪ್ರಕಾರದ ಮುನಿಗಳಲ್ಲಿ ಪರಸ್ಪರ ವೈಯಾವೃತ್ಯವು ನಡೆಯುತ್ತಿರುತ್ತದೆ. ದೇಹ ಶ್ರಮದಿಂದಲೂ ಹಾಗೆಯೇ ಅನ್ಯ ಪದಾರ್ಥಗಳಿಂದಲೂ ದುಃಖ ಮತ್ತು ವೇದನೆಗಳನ್ನು ದೂರಮಾಡುವದಕ್ಕಾಗಿ ಪ್ರಯತ್ನ ಮಾಡುವುದು ವೈಯಾವೃತ್ಯವೆನಿಸುತ್ತದೆ ಈ ಹತ್ತು ಪ್ರಕಾರದ ಮುನಿಗಳ ಲಕ್ಷಣವು ಹೀಗಿದೆ

೧. ಆಚಾರ್ಯ—ಸ್ವರ್ಗ ಮೋಕ್ಷಗಳಿಗೆ ಸಾಧನವಾದಂಥ ವ್ರತಗಳ ಆಚರಣೆಯನ್ನು ಮಾಡುವವರು ಆಚಾರ್ಯರು

೨. ಉಪಾಧ್ಯಾಯ—ಯಾರ ಸನ್ನಿಧಿಯಲ್ಲಿ ನಿಂತು ಆಗಮದ ಅಧ್ಯಯನವನ್ನು ಮಾಡಲಿಕ್ಕೆ ಬರುತ್ತಪೆಯೋ ಅವರು ಉಪಾಧ್ಯಾಯರು ಇವರು ವ್ರತಶೀಲಧಾರಿಗಳಾಗಿ ಶ್ರುತದ ಆಧಾರ ಪುರುಷರೆನಿಸುತ್ತಾರೆ.

೩. ತಪಸ್ವಿ—ಮಹಾನ್ ಉಪವಾಸ ಮೊದಲಾದ ತಪಗಳಲ್ಲಿ ತತ್ಪರರಿದ್ದವರು ತಪಸ್ವಿಗಳು

೪. ಶೈಕ್ಷ—ಶ್ರುತದ ಅಭ್ಯಾಸದಲ್ಲಿಯೂ ವ್ರತಗಳ ಭಾವನೆಯಲ್ಲಿಯೂ ನಿರಂತರ ತತ್ಪರರಾಗಿರುವವರಿಗೆ ಶೈಕ್ಷರೆನ್ನಬೇಕು

೫. ಗ್ಲಾನ—ರೋಗಾದಿಗಳಿಂದ ಯಾರ ಶರೀರವು ಕ್ಲೇಶದಿಂದ ಕೂಡಿರುವುದೋ ಅವರು ಗ್ಲಾನರೆನಿಸುತ್ತಾರೆ

೬. ಗಣ—ವೃದ್ಧ ಮುನಿಗಳ ಸಮೂಹಕ್ಕೆ ಗಣವೆನ್ನುವರು.

೭. ಕುಲ—ಶಿಷ್ಯರಿಗೆ ದೀಕ್ಷೆಯನ್ನು ಕೊಡುವಂಥ ಆಚಾರ್ಯರ ಸಮೂಹಕ್ಕೆ ಕುಲವೆನ್ನಲಾಗುವುದು

೮. ಸಂಘ—ನಾಲ್ಕು ಪ್ರಕಾರದ ಮುನಿಗಳ ಸಮೂಹಕ್ಕೆ ಸಂಘವೆನ್ನುವರು

೯. ಸಾಧು—ಬಹು ದಿನಗಳ ಹಿಂದೆ ದೀಕ್ಷೆಯನ್ನು ತಕ್ಕೊಂಡವರಿಗೆ ಸಾಧುವೆನ್ನುವರು

೧೦. ಮನೋಜ್ಞ—ಯಾರು ವಿದ್ವತ್ತೆ, ವಕ್ತೃತ್ವ ಗುಣ, ಉಚ್ಚ ಕುಲಗಳಿಂದ ಲೋಕದಲ್ಲಿ ಮಾನ್ಯರಿರುವರೋ ಅವರು ಮನೋಜ್ಞರು ಇವರು ಧರ್ಮ ಹಾಗೂ ಗುರುಕುಲದ ಗೌರವವನ್ನು ಬೆಳೆಯಿಸುವಂಥವರಿರುತ್ತಾರೆ. ಇನ್ನು ಅಸಂಯತ ಸಮ್ಯಗ್ದೃಷ್ಟಿಗಳೂ ಸಹ ಸಂಸಾರದ ಅಭಾವದ ಅಪೇಕ್ಷೆಯಿಂದ ಮನೋಜ್ಞರೆನಿಸುತ್ತಾರೆ

ಈ ಹತ್ತು ಪ್ರಕಾರದ ಮುನಿಗಳಿಗೆ ರೋಗ ಉಂಟಾದಾಗ, ಪರೀಷಹಗಳಿಂದ ದುಃಖ ಸಂಭವಿಸಿದಾಗ ಅವರ ಶ್ರದ್ಧೆಯು ಕೆಟ್ಟು ಮಿಥ್ಯಾತ್ವ ಮೊದಲಾದವುಗಳ ಕಡೆಗೆ ಪ್ರವೃತ್ತಿಯಾಗುತ್ತದೆ ಅಂಥ ಸಂದರ್ಭದಲ್ಲಿ ಪ್ರಾಸುಕ ಔಷಧ, ಯೋಗ್ಯ ಆಹಾರಪಾನ, ನಿರೋಗಿ ಸ್ಥಳ, ಕಟ್ಟಿಗೆಯ ಆಸನ, ತಕ್ಕ ಉಪದೇಶ, ಯೋಗ್ಯ ಗ್ರಂಥ, ಪಿಂಛಿ ಮೊದಲಾದ ಧರ್ಮೋಪಕರಣಗಳನ್ನು ಕೊಟ್ಟು ಪುನಃ ಸಮ್ಯಕ್ತ್ವದಲ್ಲಿ ಸ್ಥಿರಗೊಳಿಸುವುದು ವೈಯಾವೃತ್ಯವೆನಿಸುತ್ತದೆ

ಯಾರ ವೈಯಾವೃತ್ಯವನ್ನು ಮಾಡಬೇಕು. ಜೀನೆಬಿದ್ದ ಮುನಿಯ ಉಗುಳು, ಮಲ–ಮೂತ್ರ ಮೊದಲಾದವುಗಳನ್ನು ತಾನು ಸ್ವತಃ ದೂರ ಒಯ್ದು ಒಗೆದು, ಅವರಿಗೆ ಒಳ್ಳೆಯದೆನಿಸುವಂತೆ ಸೇವೆಯನ್ನು ಮಾಡುವುದು ವೈಯಾವೃತ್ಯವಾಗಿದೆ ಇದರಿಂದ ಸಂಯಮದ ಸ್ಥಾಪನೆ, ಗ್ಲಾನಿಯ ಅಭಾವ, ಅನ್ಯರ ಸದ್ಗುಣಗಳಲ್ಲಿ ಪ್ರೀತಿ

ಮೊದಲಾದ ಗುಣಗಳು ನಮ್ಮಲ್ಲಿ ಪ್ರಕಟವಾಗುತ್ತವೆ ವೈಯಾವೃತ್ಯವು ಉತ್ಕೃಷ್ಟ ಧರ್ಮವಾಗಿದೆ ವೈಯಾವೃತ್ಯವು ಇರದಿದ್ದರೆ ಮೋಕ್ಷ ಮಾರ್ಗವೇ ಉಳಿಯಲಿಕ್ಕಿಲ್ಲ ಆಚಾರ್ಯರು ಸ್ವತಃ ರೋಗಿಗಳಾದ ಶಿಷ್ಯರ ಹಾಗೂ ಮುನಿಗಳ ವೈಯಾವೃತ್ಯವನ್ನು ಮಾಡುತ್ತಾರೆ ಅದರಿಂದ ಅವರ ಉಚ್ಚತೆಯು ಕಂಡುಬರುತ್ತದೆ ಹಾಗೆಯೇ ಶ್ರಾವಕರೂ ಸಹ ಮುನಿಗಳ ಮತ್ತು ಶ್ರಾವಕ ಶ್ರಾವಿಕೆಯರ ವೈಯಾವೃತ್ಯವನ್ನು ಮಾಡಬೇಕು ಔಷಧವನ್ನು ಕೊಟ್ಟು ವೈಯಾವೃತ್ಯ ಮಾಡಬೇಕು ಹಾಗೆಯೇ ಶರೀರಕ್ಕೆ ಆಧಾರ ಭೂತವಾದ ಆಹಾರವನ್ನು ಭಕ್ತಿಪೂರ್ವಕವಾಗಿ ಕೊಟ್ಟು ವೈಯಾವೃತ್ಯವನ್ನು ಮಾಡಬೇಕು ಕರ್ಮದ ಉದಯದಿಂದ ಯಾರಿಗಾದರೂ ದೋಷವು ತಟ್ಟಿದ್ದರೆ ಅದನ್ನು ಮುಚ್ಚಬೇಕು ಅವರ ಶ್ರದ್ಧೆಯು ಅಸ್ಥಿರವಾಗಿದ್ದರೆ ಅವರಿಗೆ ಪುನಃ ಸಮ್ಯಗ್ದರ್ಶನವನ್ನು ಗ್ರಹಣ ಮಾಡಿಸಬೇಕು ಜಿನೇಂದ್ರನ ಮಾರ್ಗದಿಂದ ಯಾರಾದರೂ ಚ್ಯುತಗೊಂಡಿದ್ದರೆ ಅವರನ್ನು ತಿರುಗಿ ಧರ್ಮದಲ್ಲಿ ಸ್ಥಿರಗೊಳಿಸಬೇಕು ಇಂಥ ಉಪಕಾರಗಳನ್ನು ಮಾಡುವುದರಿಂದ ವೈಯಾವೃತ್ಯವು ನೆರವೇರುತ್ತದೆ ಆಚಾರ್ಯರು ಶಿಷ್ಯರಿಗೆ ಶ್ರುತಜ್ಞಾನದ ಅಭ್ಯಾಸ ಮಾಡಿಸುವರು ವ್ರತ ಸಂಯಮಾದಿಗಳ ಶುದ್ಧಿಯ ಉಪದೇಶ ಮಾಡುವರು ಈ ಯೋಗದಿಂದ ಅವರು ಶಿಷ್ಯರ ವೈಯಾವೃತ್ಯ ಮಾಡುವರು ಆ ಶಿಷ್ಯರು ಗುರುವಿನ ಆಜ್ಞೆಯಂತೆ ನಡೆದು, ಅವರ ಚರಣ ಸೇವೆಯನ್ನು ಮಾಡುವರು ಇದರಿಂದ ಅವರು ಆಚಾರ್ಯರ ವೈಯಾವೃತ್ಯ ಮಾಡುವರೆಂದು ತಿಳಿಯಬೇಕು

**ಸ್ವಂತದ ವೈಯಾವೃತ್ಯವನ್ನೂ ಮಾಡಬೇಕು.** ತಮ್ಮ ಚೈತನ್ಯ ಸ್ವರೂಪ ಆತ್ಮಕ್ಕೆ ರಾಗ-ದ್ವೇಷಾದಿ ದೋಷಗಳು ತಗಲದಂತೆ ಎಚ್ಚರಿಕೆಯನ್ನು ವಹಿಸುವುದು ತಮ್ಮ ಆತ್ಮನ ವೈಯಾವೃತ್ಯವಾಗಿದೆ ಹಾಗೆಯೇ ತಮ್ಮ ಆತ್ಮವನ್ನು ಪರಮಾಗಮದ ಚಿಂತನೆಯಲ್ಲಿಯೂ ದಶಲಕ್ಷಣ ರೂಪಿಯಾದ ಧರ್ಮದಲ್ಲಿಯೂ ತೊಡಗಿಸಿ ಇಡುವುದೂ ಆತ್ಮ ವೈಯಾವೃತ್ಯವಾಗಿದೆ ಕಾಮ, ಕ್ರೋಧ, ಲೋಭಾದಿಗಳ ಹಾಗೂ ಇಂದ್ರಿಯಗಳ ವಿಷಯದ ಸ್ವಾಧೀನವಾಗ-ದಿರುವುದೂ ಸಹ ಆತ್ಮನ ವೈಯಾವೃತ್ಯವಾಗಿದೆ

**ರೋಗಿಯಾದ ಮುನಿಯ ವೈಯಾವೃತ್ಯ**—ರೋಗಿಯಾದ ಮುನಿಯ ಹಾಗೂ ಗುರುಗಳ ವೈಯಾ-ವೃತ್ಯವನ್ನು ಮಾಡಬೇಕು ಅಂದರೆ ಸಂಜೆ ಮುಂಜಾವುಗಳಲ್ಲಿ ಶಯನ, ಆಸನ, ಕಮಂಡಲು, ಪಿಂಛಿ, ಪುಸ್ತಕಗಳನ್ನು ಕಣ್ಣಿನಿಂದ ನೋಡಿ ನವಿಲಿನ ಗರಿಯ ಪಿಂಛಿಯಿಂದ ಧೂಳು ಹೊಡೆದು ಸ್ವಚ್ಛಮಾಡಬೇಕು ಅಶಕ್ತರೂ ರೋಗಿಗಳೂ ಆದ ಮುನಿಗಳಿಗೆ ಆಹಾರ ಔಷಧಾದಿಗಳನ್ನು ಅವರ ಸಂಯಮಕ್ಕೆ ಅನುಸರಿಸಿ ಕೊಡಬೇಕು ಅವರಿಗೆ ಧರ್ಮದ ಉಪದೇಶಮಾಡಿ, ಅವರ ಚಿತ್ತವು ಧರ್ಮದಲ್ಲಿ ಲೀನವಾಗಿರುವಂತೆ ಮಾಡಬೇಕು ಅವರನ್ನು ಎಬ್ಬಿಸುವುದು, ಕೂಡಿಸುವುದು, ಈ ಮೈಯಿಂದ ಆ ಮೈಗೆ ಹೊರಳಿಸುವುದು, ಶೌಚಕ್ಕೆ ಕೂಡಿಸುವುದು, ಮೂತ್ರ ವಿಸರ್ಜನೆಗೆ ಒಯ್ಯುವುದು ಇತ್ಯಾದಿ ಕೃತ್ಯಗಳಿಂದ ವೈಯಾವೃತ್ಯವನ್ನು ಮಾಡಬೇಕು ಇನ್ನು ಸಾಧುವು ದಾರಿಯಲ್ಲಿ ದಣಿದು ಕುಳಿತಿದ್ದರೆ ಇಲ್ಲವೆ ನೀಚ ಜನರಿಂದಲೂ ದುಷ್ಟ ರಾಜನಿಂದಲೂ ತೊಂದರೆಯಾಗಿದ್ದರೆ ಅವುಗಳನ್ನು ದೂರಗೊಳಿಸಬೇಕು ಅದರಂತೆ ತಿರ್ಯಂಚ ಪ್ರಾಣಿಗಳಿಂದ ಉಪದ್ರವವಾಗಿದ್ದರೆ ಅದನ್ನೂ ಇಲ್ಲದಂತೆ ಮಾಡಬೇಕು ಬರಗಾಲ, ಮಹಾಮಾರಿ, ಮೈಲೀಬೇನೆ, ಪ್ಲೇಗ ಮೊದಲಾದವುಗಳಿಂದ ಕೆಲವರು ಗಾಬರಿಗೊಂಡಿರಬಹುದು. ಅಂಥವರಿಗೆ ಆಶ್ರಯಕೊಟ್ಟು, ಅವರ ಯೋಗಕ್ಷೇಮವನ್ನು ನೋಡಿಕೊಂಡು, ಆದರದಿಂದ ಉಪದೇಶಮಾಡಿ, ಅವರ ಮನಸ್ಸಿಗೆ ಸಮಾಧಾನಮಾಡುವುದು ವೈಯಾವೃತ್ಯವಾಗಿದೆ ಯಾರು ಸಮರ್ಥರಿದ್ದೂ ವೈಯಾವೃತ್ಯವನ್ನು ಮಾಡುವದಿಲ್ಲವೋ ಅವರು ಅಧರ್ಮಿಗಳೆಂದು ತಿಳಿಯಬೇಕು ಅವನು ತೀರ್ಥಂಕರರ ಆಜ್ಞೆಯನ್ನು ಭಂಗಮಾಡಿದವನು, ಜಿನಾಗಮದಲ್ಲಿ ಹೇಳಿದ ಧರ್ಮವನ್ನು ನಾಶಗೊಳಿಸಿದನು, ಆಚಾರವನ್ನು ಕೆಡಿಸಿದನು ಮತ್ತು ಪ್ರಭಾವನೆಯನ್ನು ನಷ್ಟಗೊಳಿಸಿದನು ಧರ್ಮಾತ್ಮರಾದ ಮನುಷ್ಯರಿಗೆ ವಿಪತ್ ಕಾಲದಲ್ಲಿ ಯಾರು ಉಪಕಾರ ಮಾಡುವದಿಲ್ಲವೋ ಅವರು ಧರ್ಮದಿಂದ ವಿಮುಖರಾದಂತೆಯೇ ಸರಿ ಮೋಹವೆಂಬ ಅಗ್ನಿಯಿಂದ ಸುಡುತ್ತಿರುವ ಈ ಜಗತ್ತಿನಲ್ಲಿ ದಿಗಂಬರ ಮುನಿಯೊಬ್ಬನೇ ಜ್ಞಾನರೂಪೀ ಜಲದಿಂದ ಮೋಹರೂಪೀ ಅಗ್ನಿಯನ್ನು ಆರಿಸಿ ಆತ್ಮ ಕಲ್ಯಾಣವನ್ನು ಮಾಡುತ್ತಾನೆ ಯಾವನು ಕಾಮವಿಕಾರವನ್ನು ಇಲ್ಲದಂತೆ ಮಾಡಿ, ರಾಗ-ದ್ವೇಷಗಳನ್ನು ಬಿಟ್ಟು, ಇಂದ್ರಿಯಗಳ ವಿಷಯಗಳನ್ನು ಗೆದ್ದು, ಆತ್ಮ ಹಿತಕ್ಕಾಗಿ ಉದ್ಯುಕ್ತನಾಗಿರುವನೋ ಅವನು ಧನ್ಯನು ಇಂಥ ಲೋಕೋತ್ತರ ಗುಣಗಳನ್ನು ಧಾರಣಮಾಡಿದವರ ಚರಣ ಕಮಲಗಳಿಗೆ ಶರಣ ಹೋಗುವ ಪರಿಣಾಮವು ವೈಯಾವೃತ್ಯವನ್ನು ಮಾಡುವುದರಿಂದಲೇ ಉಂಟಾಗುತ್ತದೆ ಹೇಗೆ ಹೇಗೆ ಸದ್ಗುಣಗಳ ವಿಷಯದಲ್ಲಿ ಪ್ರೇಮವು ಬೆಳೆಯುತ್ತ ಹೋಗುವುದೋ ಹಾಗೆ ಹಾಗೆ ಶ್ರದ್ಧೆಯು ಬಲಿಷ್ಠವಾಗುತ್ತ

ಹೋಗುತ್ತದೆ. ಶ್ರದ್ಧೆಯು ಹೆಚ್ಚಿದಂತೆ ಧರ್ಮದ ಮೇಲಿನ ಪ್ರೀತಿಯು ಹೆಚ್ಚುತ್ತದೆ. ಧರ್ಮದ ಮೇಲೆ ಪ್ರೀತಿಯು ಬೆಳೆದಾಗ ಧರ್ಮದ ಒಡೆಯರೆನಿಸುವ ಅರ್ಹಂತರೇ ಮೊದಲಾದ ಪಂಚ ಪರಮೇಷ್ಠಿಗಳ ಗುಣಗಳಲ್ಲಿ ಅನುರಾಗವೂ ಭಕ್ತಿಯೂ ಹೆಚ್ಚುತ್ತ ಹೋಗುತ್ತದ. ಈ ಭಕ್ತಿಯಲ್ಲಿ ಕಪಟ, ಮಿಥ್ಯಾಜ್ಞಾನ, ಭೋಗದ ಇಚ್ಛೆ ಇಲ್ಲದಿರುವುದರಿಂದ ಮಹಾಮೇರು ಪರ್ವತದಂತೆ ಅದು ನಿಷ್ಕಂಪವಾಗಿರುತ್ತದೆ ಅದರಿಂದ ಅದು ಪೂರ್ಣ ಶುದ್ಧವಾಗಿರುತ್ತದೆ ಇಂಥ ಭಕ್ತಿಯು ಧರ್ಮಾತ್ಮರ ವೈಯಾವೃತ್ಯದಿಂದ ಉಂಟಾಗುತ್ತದೆ. ಪಂಚ ಮಹಾ ವ್ರತಗಳಿಂದ ಕೂಡಿದ, ಕಷಾಯವಿಲ್ಲದ, ರಾಗ-ದ್ವೇಷಗಳನ್ನು ಗೆದ್ದಂಥ, ಶ್ರುತ ಜ್ಞಾನವೆಂಬ ರತ್ನಗಳ ಭಂಡಾರವೆನಿಸುವ ಉತ್ತಮ ಪಾತ್ರದ ಲಾಭವು ವೈಯಾ-ವೃತ್ಯವನ್ನು ಮಾಡುವವರಿಗೇ ಆಗುತ್ತದೆ. ಯಾರು ರತ್ನತ್ರಯಗಳನ್ನು ಧಾರಣಮಾಡುವವರ ವೈಯಾವೃತ್ಯವನ್ನು ಮಾಡುವರೋ ಅವರು ರತ್ನತ್ರಯಗಳ ಜೊತೆಯಲ್ಲಿ ತಮ್ಮನ್ನು ಗಂಟುಹಾಕಿ ಕೊಂಡಂತೆಯೇ ಆಗುವುದು ಇದರಿಂದ ತಾವು ಹಾಗೂ ಇತರರೂ ಸಹ ಮೋಕ್ಷ ಮಾರ್ಗಕ್ಕೆ ಹತ್ತಿದಂತೆ ಆಗುತ್ತದೆ.

ವೈಯಾವೃತ್ಯದ ಫಲ—ವೈಯಾವೃತ್ಯವು ಅಂತರಂಗ ಹಾಗೂ ಬಹಿರಂಗ ತಪಗಳಲ್ಲಿ ಮುಖ್ಯವಾಗಿದೆ. ಕರ್ಮದ ನಿರ್ಜರೆಯನ್ನು ಮಾಡುವುದಕ್ಕೆ ಪ್ರಬಲ ಕಾರಣವೂ ಆಗಿದೆ ಯಾರು ಆಚಾರ್ಯರ ವೈಯಾವೃತ್ಯವನ್ನು ಮಾಡುವರೋ ಅವರು ಎಲ್ಲ ಸಂಘದ ಹಾಗೂ ಧರ್ಮದ ವೈಯಾವೃತ್ಯವನ್ನು ಮಾಡಿದಂತೆ, ಅವರು ಪರಮಾತ್ಮನ ಆಜ್ಞೆಯನ್ನು ಪಾಲಿಸಿದಂತೆ, ಅವರು ಸ್ವಂತ ಹಾಗೂ ಇತರರ ಸಂಯಮವನ್ನು ರಕ್ಷಿಸಿದಂತೆ, ಅವರು ಶುಭ ಧ್ಯಾನದ ವೃದ್ಧಿಯನ್ನು ಮಾಡಿದಂತೆ. ಅವರು ಇಂದ್ರಿಯ ನಿಗ್ರಹಮಾಡಿದಂತೆ, ರತ್ನತ್ರಯದ ರಕ್ಷಣ ಮಾಡಿದಂತೆ, ಅತಿಶಯ ದಾನ ಕೊಟ್ಟಂತೆ, ನಿರ್ವಿಚಿಕಿತ್ಸಾ ಗುಣವನ್ನು ಪ್ರಕಟಗೊಳಿಸಿದಂತೆ ಮತ್ತು ಜಿನೇಂದ್ರ ಧರ್ಮದ ಪ್ರಭಾವನೆಯನ್ನು ಮಾಡಿದಂತೆ ಇರುತ್ತದೆ ದ್ರವ್ಯವನ್ನು ವೆಚ್ಚಮಾಡುವುದು ಸುಲಭ, ಆದರೆ ರೋಗಿಯ ಶುಶ್ರೂಷೆ ಮಾಡುವುದು ಬಹು ಕಠಿಣವು. ಅನ್ಯರ ಅವಗುಣಗಳನ್ನು ಮುಚ್ಚಿ, ಸದ್ಗುಣಗಳನ್ನು ಪ್ರಕಟಗೊಳಿಸುವುದೂ ವೈಯಾವೃತ್ಯವಾಗಿದೆ ಈ ಸದ್ಗುಣದಿಂದ ತೀರ್ಥಂಕರ ನಾಮಕರ್ಮದ ಪ್ರಕೃತಿಯ ಬಂಧವಾಗುತ್ತದೆ. ವೈಯಾವೃತ್ಯವು ಜಗತ್ತಿನಲ್ಲಿ ಸರ್ವೋತ್ತಮ-ವಾಗಿದೆ ವೈಯಾವೃತ್ಯವನ್ನು ಮಾಡಿದಂಥ ಸಾಧುವಿರಲಿ, ಶ್ರಾವಕನಿರಲಿ ಅವನು ಸರ್ವೋತ್ಕೃಷ್ಟವಾದ ನಿರ್ವಾಣ ಪದವನ್ನು ಹೊಂದುತ್ತಾನೆ ಇನ್ನು ತಮ್ಮ ಸಾಮರ್ಥ್ಯಕ್ಕೆ ಅನುಸರಿಸಿ ಯಾರು ಷಟ್‌ಕಾಯ ಜೀವಗಳ ರಕ್ಷಣೆ ಮಾಡುವುದರಲ್ಲಿ ತತ್ಪರರಾಗಿರುತ್ತಾರೋ ಅವರು ಸಂಪೂರ್ಣ ಪ್ರಾಣಿ ಮಾತ್ರದ ವೈಯಾವೃತ್ಯವನ್ನು ಮಾಡಿದಂತೆ ಆಗುತ್ತದೆ ಹೀಗೆ ಒಂಭತ್ತನೆಯದಾದ ವೈಯಾವೃತ್ಯ ಎಂಬ ಹೆಸರಿನ ಭಾವನೆಯ ವರ್ಣನೆಯು ಇದೆ

## ೧೦. ಅರ್ಹದ್ಭಕ್ತಿ

ಅರ್ಹದ್‌ಭಕ್ತಿಯ ಫಲ—ಮನ, ವಚನ, ಕಾಯಗಳಿಂದ 'ಜಿನ' ಎಂಬ ಪದವನ್ನು ಸ್ಮರಿಸಿದರೂ ಅರ್ಹದ್ ಭಕ್ತಿ ಎನಿಸುತ್ತದೆ ಅರ್ಹಂತನ ಗುಣಗಳಲ್ಲಿರುವ ಅನುರಾಗವೇ ಅರ್ಹದ್ ಭಕ್ತಿಯಾಗಿದೆ ಹಿಂದಿನ ಜನ್ಮದಲ್ಲಿ ಹದಿನಾರು ಕಾರಣ ಭಾವನೆಗಳನ್ನು ಚಿಂತನಮಾಡಿದವನು ಈ ಜನ್ಮದಲ್ಲಿ ಅರಿಹಂತನಾಗುತ್ತಾನೆ ಅವನ ಹದಿನಾರು ಭಾವನೆಗಳಿಂದ ಉತ್ಪನ್ನವಾದ ಅದ್ಭುತ ಪುಣ್ಯದಿಂದ ಅವನು ಗರ್ಭದಲ್ಲಿ ಬರುವ ಪೂರ್ವದಲ್ಲಿಯೇ ಆರು ತಿಂಗಳಿಂದ ಇಂದ್ರನ ಆಜ್ಞೆಯಂತೆ ಕುಬೇರನು ಹನ್ನೆರಡು ಯೋಜನ ಉದ್ದ, ಒಂಭತ್ತು ಯೋಜನ ಅಗಲವಾದಂಥ ರತ್ನಮಯ ನಗರವನ್ನು ನಿರ್ಮಿಸುತ್ತಾನೆ. ಅದರ ಮಧ್ಯ ಭಾಗದಲ್ಲಿ ಅರಮನೆಯು ಇರುತ್ತದೆ ರತ್ನದ ಕೋಟೆ, ಕೊತ್ತಳಗಳನ್ನೂ ಸಹ ಕುಬೇರನು ಆ ನಗರಿಗೆ ರಚಿಸಿರುತ್ತಾನೆ ಅದರ ವರ್ಣನೆಯನ್ನು ಮಾಡಲಿಕ್ಕೆ ಯಾರೂ ಸಮರ್ಥರಿಲ್ಲ ಅಲ್ಲಿ ತೀರ್ಥಂಕರರ ಮಾತೆಯ ಗರ್ಭವನ್ನು ಶೋಧಿಸುವದಕ್ಕಾಗಿಯೂ ಜಿನಮಾತೆಯ ಸೇವೆಯನ್ನು ಮಾಡುವದಕ್ಕಾಗಿಯೂ ರುಚಕ ದ್ವೀಪದಲ್ಲಿ ವಾಸಿಸುವಂಥ ಐವತ್ತಾರು ಕುಮಾರಿಕೆಯರು ಬಂದು ನಿಲ್ಲುತ್ತಾರೆ. ತೀರ್ಥಂಕರರು ಗರ್ಭದಲ್ಲಿ ಬರುವ ಪೂರ್ವದಲ್ಲಿ ಆರು ತಿಂಗಳಿಂದಲೂ ಸಂಜೆ, ಮುಂಜಾವು, ಮಧ್ಯಾಹ್ನಗಳಲ್ಲಿ ಆಕಾಶದಿಂದ ಮೂರೂ ಅರ್ಧ ಕೋಟಿ ರತ್ನಗಳ ಮಳೆಯನ್ನು ಕುಬೇರನು ಸುರಿಸುತ್ತಾನೆ

ಗರ್ಭೋತ್ಸವ—ಪ್ರಭುವು ಗರ್ಭದಲ್ಲಿ ಬಂದ ತರುವಾಯ ಇಂದ್ರನೇ ಮೊದಲಾದ ನಾಲ್ಕು ಪ್ರಕಾರದ ದೇವರ ಆಸನಗಳು ಕಂಪಾಯಮಾನವಾಗುತ್ತವೆ ಅದರಿಂದ ಅವರು ಬಂದು ನಗರ ಪ್ರದಕ್ಷಿಣೆಯನ್ನು ಹಾಕುತ್ತಾರೆ. ಪ್ರಭುವಿನ ತಂದೆ ತಾಯಂದಿರ ಪೂಜೆ ಸತ್ಕಾರಗಳನ್ನು ಮಾಡುತ್ತಾರೆ ಆ ಮೇಲೆ ತಮ್ಮ ತಮ್ಮ ಸ್ಥಳಗಳಿಗೆ

ತೆರಳುತ್ತಾರೆ ತೀರ್ಥಂಕರ ಭಗವಾನ್‌ರು ಸ್ಫಟಿಕ ಮಣಿಯ ಪೆಟ್ಟಿಗೆಯಂತೆಯೂ ಮಲಮೂತ್ರ ರಹಿತವೂ ಆಗಿರುವ ಮಾತೆಯ ಗರ್ಭದಲ್ಲಿ ಇರುತ್ತಾರೆ ಆ ಕಾಲದಲ್ಲಿ ಕಮಲದೊಳಗಿರುವ ಐವತ್ತಾರು ದೇವಿಯರು ಅಲ್ಲದೆ ಇನ್ನೂ ಅನೇಕ ದೇವಿಯರು ಮಾತೆಯ ಸೇವೆಯನ್ನು ಮಾಡುತ್ತ ಇರುವರು ಮುಂದೆ ಒಂಭತ್ತು ತಿಂಗಳುಗಳು ಪೂರ್ಣವಾದ ಮೇಲೆ ಯೋಗ್ಯ ಕಾಲವಲ್ಲಿ ತೀರ್ಥಂಕರರ ಜನ್ಮವಾಗುತ್ತದೆ. ಆ ಕಾಲದಲ್ಲಿಯೂ ನಾಲ್ಕು ಪ್ರಕಾರದ ದೇವರ ಆಸನಗಳು ಕಂಪಾಯಮಾನವಾಗುತ್ತವೆ ಅಲ್ಲದೆ ಅಕಸ್ಮಾತ್ತಾಗಿ ವಾದ್ಯಗಳು ಬಾರಿಸ ಹತ್ತುತ್ತವೆ ಅದರಿಂದ ತೀರ್ಥಂಕರರ ಜನ್ಮವಾಯಿತೆಂದು ಅವಧಿ ಜ್ಞಾನದಿಂದ ದೇವರು ತಿಳಿಯುತ್ತಾರೆ ಆ ಕಾಲದಲ್ಲಿ ಸೌದರ್ಮ ಸ್ವರ್ಗದಲ್ಲಿಯ ಇಂದ್ರನು, ಒಂದು ಲಕ್ಷ ಯೋಜನ ಪ್ರಮಾಣದಲ್ಲಿರುವ ಆನೆಯ ಮೇಲೆ ಕುಳಿತು, ತನ್ನ ಸೌಧರ್ಮ ಸ್ವರ್ಗದೊಳಗಿನ ಮೂವತ್ತೊಂದನೆಯ ಪಟಲದೊಳಗಿನ ಹದಿನೆಂಟನೆಯ ಶ್ರೇಣಿಬದ್ಧ ಹೆಸರಿನ ವಿಮಾನದೊಳಗಿನ ಅಸಂಖ್ಯಾತ ದೇವ, ಸೇವಕರು, ಪರಿವಾರ ಸಹ ಹನ್ನೆರಡೂ ಅರ್ಧ ಕೋಟಿ ವಿಧದ ವಾದ್ಯಗಳ ಸುಸ್ವರ ಧ್ವನಿಯನ್ನು ಮಾಡುತ್ತ ಅಲ್ಲಿಗೆ ಬರುತ್ತಾನೆ ಅವನ ಸಂಗಡ ಅಸಂಖ್ಯಾತ ದೇವತೆಗಳು ಜಯ ಜಯ ಕಾರವನ್ನು ಮಾಡುತ್ತ ಅನೇಕ ಧ್ವಜ ಹಾಗೂ ಉತ್ಸವದ ಸಾಮಗ್ರಿಗಳನ್ನು ತಕ್ಕೊಂಡು ಬರುತ್ತಾರೆ ಅವರೊಡನೆ ಕೋಟ್ಯಾವಧಿ ಅಪ್ಸರೆಯರು ನೃತ್ಯವನ್ನು ಮಾಡುತ್ತ ಬರುವರು. ಅಲ್ಲದೆ ಕೋಟ್ಯಾವಧಿ ಗಂಧರ್ವ ದೇವರು ಗಾಯನ ಮಾಡುತ್ತ ಬರುವರು

ಜನ್ಮೋತ್ಸವ—ಇಂದ್ರನು ನಗರ ಪ್ರದಕ್ಷಿಣೆಯನ್ನು ಮಾಡಿ, ಐರಾವತ ಆನೆಯ ಮೇಲೆ ಕುಳಿತು, ಪ್ರಸೂತಿ ಗೃಹದ ಹೊರಮಗ್ಗಲು ನಿಲ್ಲುತ್ತಾನೆ ಅವನ ಇಂದ್ರಾಣಿಯು ಪ್ರಸೂತಿ ಗೃಹದ ಒಳಗೆ ಹೋಗುತ್ತಾಳೆ ಮಾತೆಗೆ ಮಾಯಾನಿದ್ರೆಯನ್ನು ಒದಗಿಸಿ, ಅವಳಿಗೆ ಮಗುವಿನ ವಿಯೋಗದ ದುಃಖವಾಗಬಾರದೆಂದು ತನ್ನ ದೇವತ್ವ ಶಕ್ತಿಯಿಂದ ಬೇರೊಂದು ಮಾಯಾರೂಪದ ಬಾಲಕನನ್ನು ನಿರ್ಮಿಸಿ ಮಾತೆಯ ಹತ್ತರ ಇಡುತ್ತಾಳೆ ಆ ಮೇಲೆ ತೀರ್ಥಂಕರರನ್ನು ಬಹಳ ಭಕ್ತಿಯಿಂದ ಎತ್ತಿಕೊಂಡು ತಂದು ತನ್ನ ಇಂದ್ರನ ಸ್ವಾಧೀನ ಮಾಡುತ್ತಾಳೆ. ಆಗ ಇಂದ್ರನು ತೀರ್ಥಂಕರನ ಸ್ವರೂಪದ ಕಡೆಗೆ ಒಂದೇ ಸಮನೆ ನೋಡ ಹತ್ತುತ್ತಾನೆ ಎಷ್ಟು ನೋಡಿದರೂ ಅವನ ತೃಪ್ತಿಯಾಗುವದಿಲ್ಲ ಆಗ ಅವನು ಸಾವಿರ ಕಣ್ಣುಗಳುಳ್ಳವನಾಗಿ ನಿರೀಕ್ಷಿಸುತ್ತಾನೆ. ಈ ಸಮಾರಂಭದ ಕಾಲದಲ್ಲಿ ಈಶಾನಾದಿ ಸ್ವರ್ಗದ ಇಂದ್ರ ಮತ್ತು ಭವನವಾಸಿ, ವ್ಯಂತರವಾಸಿ, ಜ್ಯೋತಿಷವಾಸಿ, ಇಂದ್ರಾದಿಗಳು ತಮ್ಮ ತಮ್ಮ ಅಸಂಖ್ಯಾತ ಸೇನೆ, ವಾಹನ, ಪರಿವಾರಗಳನ್ನು ಕರೆದುಕೊಂಡು ಬಂದಿರುತ್ತಾರೆ ಸೌಧರ್ಮ ಇಂದ್ರನು ಐರಾವತ ಆನೆಯ ಮೇಲೆ ಉಡಿಯಲ್ಲಿ ತೀರ್ಥಂಕರರನ್ನು ತಕ್ಕೊಂಡು ಕೂತಿರುತ್ತಾನೆ ಈಶಾನ ಇಂದ್ರನು ಮೇಲೆ ಛತ್ರವನ್ನು ಹಿಡಿದಿರುವನು ಸನತ್ಕುಮಾರ, ಮಾಹೇಂದ್ರರು ಮೇಲೆ ಚಾರಿಯನ್ನು ಬೀಸುತ್ತಲಿರುವರು ಉಳಿದ ಅಸಂಖ್ಯಾತ ದೇವರು ತಮ್ಮ ತಮ್ಮ ಕೆಲಸಗಳಲ್ಲಿ ತತ್ಪರರಾಗಿರುವರು ಇಂಥ ವೈಭವದಲ್ಲಿ ಪ್ರಭುವನ್ನು ಮೇರು ಪರ್ವತದ ಕಡೆಗೆ ಒಯ್ದು ಪಾಂಡುಕ ವನದಲ್ಲಿ, ಪಾಂಡುಕ ಶಿಲೆಯ ಮೇಲೆ ಅಕೃತ್ರಿಮ ಸಿಂಹಾಸನದಲ್ಲಿ ಭಗವಂತನನ್ನು ಸ್ಥಾಪಿಸುವರು. ಆ ಮೇಲೆ ಪಾಂಡುಕ ವನದಿಂದ ಕ್ಷೀರ ಸಾಗರದ ವರೆಗೆ ಎರಡೂ ಮಗ್ಗಲು ದೇವತೆಗಳು ಸಾಲಾಗಿ ನಿಲ್ಲುತ್ತಾರೆ. ಈ ಕ್ಷೀರ ಸಮುದ್ರವು ಮೇರು ಪರ್ವತದಿಂದ ಐದು ಕೋಟಿ, ಹತ್ತು ಲಕ್ಷ, ನಲವತ್ತೊಂಭತ್ತು ಸಾವಿರ ಐದುನೂರು ಯೋಜನ ದೂರವಿದೆ ಮೇರುವಿನ ಶಿಖರದಿಂದ ಆ ಸಾಗರದ ವರೆಗೆ ಮುಕುಟ, ಕುಂಡಲ, ಹಾರ, ಕಂಕಣಗಳನ್ನೂ ಅದ್ಭುತ ರತ್ನಾಭರಣಗಳನ್ನೂ ಧರಿಸಿದ ದೇವತೆಗಳು ಎರಡೂ ಮಗ್ಗಲು ಎರಡು ಸಾಲಾಗಿ ನಿಲ್ಲುವರು. ಕ್ಷೀರ ಸಮುದ್ರದೊಳಗಿನ ಜಲವನ್ನು ಒಂದು ಸಾವಿರದ ಎಂಟು ಕಲಶಗಳಲ್ಲಿ ತುಂಬಿ ಕೈಯಿಂದ ಕೈಗೆ ಕೊಡುತ್ತ ಮೇರು ಪರ್ವತದ ವರೆಗೆ ತರುತ್ತಾರೆ ಅಲ್ಲಿ ಎರಡೂ ಮಗ್ಗಲು ಇಂದ್ರರು ನಿಲ್ಲಲೆಂದು ಎರಡು ಚಿಕ್ಕ ಸಿಂಹಾಸನಗಳು ಇರುತ್ತವೆ. ಅವುಗಳ ಮೇಲೆ ನಿಂತು, ಸೌಧರ್ಮ ಇಂದ್ರ ಹಾಗೂ ಈಶಾನ ಇಂದ್ರರು ಒಂದು ಸಾವಿರದ ಎಂಟು ಕಲಶಗಳನ್ನು ತಕ್ಕೊಂಡು ತೀರ್ಥಂಕರ—ಮಗುವಿನ—ಅಭಿಷೇಕ ಮಾಡುವರು ಆ ಕಲಶಗಳ ಮುಖವು ಒಂದು ಸಾವಿರ ಯೋಜನ ಅಗಲವೂ, ಅದರ ಗರ್ಭವು ನಾಲ್ಕು ಯೋಜನ ಅಗಲವೂ ಎಂಟು ಯೋಜನ ಎತ್ತರವೂ ಇರುತ್ತವೆ ಇಂಥ ಕಲಶದೊಳಗಿಂದ ಬೀಳುವಂಥ ಜಲದ ಧಾರೆಯು ವಜ್ರದೇಹಿಯಾದ ತೀರ್ಥಂಕರರ ಮೇಲೆ ಬೀಳುತ್ತದೆ. ಆದರೂ ಅದು ಭಗವಂತನಿಗೆ ಪುಷ್ಪವೃಷ್ಟಿಯಂತೆ ಹಗುರು ಎನಿಸುತ್ತದೆ ತರುವಾಯ ಇಂದ್ರಾಣಿಯು ಅತ್ಯಂತ ಮೃದು ವಸ್ತ್ರದಿಂದ ಪ್ರಭುವಿನ ಶರೀರವನ್ನು ಒರಿಸುವಳು ಸ್ವರ್ಗದಿಂದ ತಂದ ರತ್ನದ ಆಭರಣಗಳನ್ನು ಹಾಕುವಳು ಇದರಿಂದ ತನ್ನ ಜನ್ಮವು ಸಫಲವಾಯಿತೆಂದು ಭಾವಿಸುವಳು ಆ ಮೇಲೆ ಮೇರು ಪರ್ವತದಿಂದ ತೀರ್ಥಂಕರ

ಬಾಲಕನನ್ನು ತಂದು ತಾಯಿಯ ಹತ್ತಿರ ಇಡುತ್ತಾರೆ ಆ ಸಂದರ್ಭದಲ್ಲಿ ಅಲ್ಲಿ ದೇವತೆಗಳು ತಾಂಡವನೃತ್ಯ ಮೊದಲಾದ ಉತ್ಸವಗಳನ್ನು ಮಾಡುತ್ತಾರೆ ಅದರ ವರ್ಣನೆಯನ್ನೆಲ್ಲ ಮಾಡುವುದು ಶಕ್ಯವಿಲ್ಲ

ಹತ್ತು ಜನ್ಮಾತಿಶಯಗಳು—ತೀರ್ಥಂಕರ ಪ್ರಕೃತಿಯ ಉದಯದಿಂದ ಹುಟ್ಟುವಾಗಲೇ ತೀರ್ಥಂಕರರಿಗೆ ಹತ್ತು ಅತಿಶಯಗಳು ಪ್ರಾಪ್ತವಾಗುತ್ತವೆ ಅವು ಹೀಗಿವೆ—(೧) ಶರೀರಕ್ಕೆ ಬೆವರು ಬಾರದಿರುವದು, (೨) ಮಲ, ಮೂತ್ರ ಮತ್ತು ಶ್ಲೇಷ್ಮವಿಲ್ಲದ ಶರೀರ, (೩) ದೇಹದೊಳಗಿನ ರಕ್ತವು ಹಾಲಿನಂತಿರುವದು, (೪) ಸಮಚತುರಸ್ರ ಸಂಸ್ಥಾನ, (೫) ವಜ್ರರ್ಷಭನಾರಾಚಸಂಹನನ, (೬) ಅತ್ಯಂತ ಸುಂದರ ಸ್ವರೂಪ, (೭) ಮಹಾಸುಗಂಧಿತ ದೇಹ, (೮) ಅಪ್ರಮಾಣ ಬಲ, (೯) ಒಂದು ಸಾವಿರದ ಎಂಟು ಲಕ್ಷಣಗಳು, (೧೦) ಪ್ರಿಯ ಮಧುರ ಭಾಷಣ ಪ್ರಭುವಿನ ಬೆರಳಿನಲ್ಲಿ ಇಂದ್ರನು ಅಮೃತವನ್ನು ಇಟ್ಟಿರುವನು ಅದರಿಂದ ಅವನು ತಾಯಿಯ ಹಾಲನ್ನು ಕುಡಿಯುವದಿಲ್ಲ ಪ್ರಭುವಿನ ವಯಸ್ಸಿಗೆ ಅನುಸರಿಸಿಯೇ ದೇವನು ತನ್ನ ಶರೀರವನ್ನು ರೂಪಿಸಿಕೊಂಡು ಪ್ರಭುವಿನ ಹತ್ತಿರ ನಿಲ್ಲುವನು ಆ ದೇವ ಕುಮಾರನೊಡನೆ ಕ್ರೀಡೆಯನ್ನು ಮಾಡುತ್ತ ಪ್ರಭುವು ದೊಡ್ಡವನಾಗುವನು. ಪ್ರಭುವಿಗಾಗಿ ಬೇಕಾಗುವಂಥ ಊಟ ಉಪಚಾರ, ವಸ್ತ್ರ, ಅಲಂಕಾರಗಳನ್ನು ದೇವನು ಸ್ವರ್ಗದಿಂದ ತರುತ್ತಾನೆ. ಭಗವಂತನು ಪೃಥ್ವಿಯ ಮೇಲಿನ ಜನರ ಊಟ, ಆಭರಣ, ವಸ್ತ್ರ ಮೊದಲಾದವುಗಳನ್ನು ಸ್ವೀಕರಿಸುವದಿಲ್ಲ

ವೈರಾಗ್ಯ ಪ್ರಾಪ್ತಿ—ಬಾಲ್ಯವು ಮುಗಿದು, ತಾರುಣ್ಯವು ಬಂದ ಮೇಲೆ ತಂದೆಯು ಕೊಟ್ಟ ರಾಜ್ಯವನ್ನು ಭೋಗಿಸುವನು ಅವನಿಗೆ ಸಂಸಾರ ಭೋಗದಿಂದ ವಿರಕ್ತತೆಯು ಉತ್ಪನ್ನವಾಗುತ್ತದೆ ಆಗ ಅವನು ಅನಿತ್ಯವೇ ಮೊದಲಾದ ಹನ್ನೆರಡು ಅನುಪ್ರೇಕ್ಷೆಗಳನ್ನು ಚಿಂತಿಸುತ್ತಾನೆ ಆ ಕಾಲದಲ್ಲಿ ಬ್ರಹ್ಮ ಸ್ವರ್ಗದಿಂದ ಲೋಕಾಂತಿಕ ದೇವರು ಬಂದು ಪ್ರಭುವಿನ ಸ್ತುತಿಯನ್ನು ಮಾಡುತ್ತಾರೆ ಆ ಕಾಲದಲ್ಲಿ ನಾಲ್ಕು ಪ್ರಕಾರದ ಇಂದ್ರಾದಿ ದೇವತೆಗಳ ಆಸನವು ಕಂಪಾಯಮಾನವಾಗುತ್ತದೆ ಅದರ ಮೇಲಿಂದ ಅವಧಿ ಜ್ಞಾನದಿಂದ ಜಿನೇಂದ್ರನಿಗೆ ವೈರಾಗ್ಯವು ಉಂಟಾದದ್ದು ಅವರಿಗೆ ತಿಳಿಯುತ್ತದೆ ಅವರು ಅಲ್ಲಿ ಬರುವರು ಪ್ರಭುವಿನ ಅಭಿಷೇಕವನ್ನು ಮಾಡಿ ಅವನನ್ನು ದೇವಲೋಕದ ವಸ್ತ್ರಾಭರಣಗಳಿಂದ ಭೂಷಿತಗೊಳಿಸಿ, ರತ್ನದ ಪಲ್ಲಕ್ಕಿಯಲ್ಲಿ ದೊಡ್ಡ ಉತ್ಸವದೊಡನೆ ಜಯಜಯಕಾರ ಮಾಡುತ್ತ ತಪೋವನಕ್ಕೆ ಒಯ್ಯುವರು

ದೀಕ್ಷಾಗ್ರಹಣ—ಅಲ್ಲಿ ಪ್ರಭುವು ತನ್ನ ಮೈಮೇಲಿನ ಎಲ್ಲ ವಸ್ತ್ರಾಭರಣಗಳನ್ನು ತೆಗೆದಿಡುತ್ತಾನೆ. ತರುವಾಯ ಸಿದ್ಧರಿಗೆ ನಮಸ್ಕಾರ ಮಾಡಿ, ತನ್ನ ಕೂದಲುಗಳನ್ನು ಐದು ಮುಷ್ಟಿಗೆಗಳಿಂದ ಕಿತ್ತುಕೊಳ್ಳುವನು ಆ ಕೂದಲುಗಳನ್ನು[1] ಇಂದ್ರನು ರತ್ನದ ಪಾತ್ರೆಯಲ್ಲಿ ತಕ್ಕೊಂಡು ಹೋಗಿ, ಕ್ಷೀರ ಸಮುದ್ರದಲ್ಲಿ ಒಗೆಯುತ್ತಾನೆ. ಈ ಪ್ರಕಾರ ದೀಕ್ಷೆಯನ್ನು ತಕ್ಕೊಂಡ ಮೇಲೆ ಕೆಲವು ವರ್ಷಗಳಲ್ಲಿ ತಪಶ್ಚರ್ಯದ ಪ್ರಭಾವದಿಂದ ಹಾಗೂ ಶುಕ್ಲಧ್ಯಾನದ ಬಲದಿಂದ ಕ್ಷಪಕ ಶ್ರೇಣಿಯನ್ನು ರೂಪಿಸಿಕೊಂಡು, ಘಾತಿ ಕರ್ಮದ ನಾಶಮಾಡುತ್ತಾನೆ ಅದರ ಯೋಗದಿಂದ ಪ್ರಭುವಿಗೆ ಕೇವಲ ಜ್ಞಾನವು ಉತ್ಪನ್ನವಾಗುತ್ತದೆ. ಆ ವೇಳೆಯಲ್ಲಿ ಅವನಿಗೆ ಅರ್ಹಂತತ್ವವು ಪ್ರಕಟವಾಗುತ್ತದೆ. ತರುವಾಯ ಕೇವಲ ಜ್ಞಾನರೂಪೀ ದೃಷ್ಟಿಯಿಂದ ಭೂತ-ಭವಿಷ್ಯ, ವರ್ತಮಾನಗಳಲ್ಲಿರುವ ಸಮಸ್ತ ಪದಾರ್ಥಗಳ ಅನಂತಾನಂತ ಪರ್ಯಾಯಗಳನ್ನು ಸಹ ಒಂದು ಸಮಯದಲ್ಲಿ ಯುಗಪತ್ತು ಕಾಣುತ್ತಾನೆ, ತಿಳಿಯುತ್ತಾನೆ

ಸಮವಸರಣದ ರಚನೆ—ಆ ಕಾಲದಲ್ಲಿ ನಾಲ್ಕು ಪ್ರಕಾರದ ದೇವರು ಪ್ರಭುವಿನ ಜ್ಞಾನ ಕಲ್ಯಾಣದ ಪೂಜೆಯನ್ನು ಮಾಡುತ್ತಾರೆ ಅಲ್ಲದೆ ಪ್ರಭುವು ಉಪದೇಶ ಮಾಡಲಿಕ್ಕೆಂದು ಸಮವಸರಣವನ್ನು ರಚಿಸುತ್ತಾರೆ ಅದು ಪೃಥ್ವಿಯಿಂದ ಐದು ಸಾವಿರ ಧನುಷ್ಯ ಎತ್ತರವಾಗಿರುತ್ತದೆ ಅಲ್ಲಿ ಇಂದ್ರ ನೀಲ ರತ್ನದ ಹನ್ನೆರಡು ಯೋಜನ ಗೋಲ ಭೂಮಿಯ ಮೇಲೆ ಸಮವಸರಣವು ರಚಿಸಲ್ಪಡುತ್ತದೆ. ಸಮವಸರಣದ ರಚನೆಯು ಎಲ್ಲಿ ಆಗುವುದೋ, ಭಗವಂತನ ವಿಹಾರವು ಎಲ್ಲಿ ನಡೆಯುವುದೋ ಅಲ್ಲಿ ಕುರುಡನಿಗೂ ಕಣ್ಣುಗಳು ಕಾಣಹತ್ತುತ್ತವೆ ಕಿವುಡನಿಗೆ ಕೇಳಬರುತ್ತದೆ ಕುಂಟನು ನಡೆಯ ಹತ್ತುತ್ತಾನೆ ಮೂಕನು ಮಾತನಾಡುತ್ತಾನೆ. ಇವೆಲ್ಲವೂ ವೀತರಾಗತ್ವದ ಅದ್ಭುತ ಮಹಾತ್ಮ್ಯಗಳಾಗಿವೆ ಸಮವಸರಣ ರಚನೆಯಲ್ಲಿ ರತ್ನಮಯವಾದ ಕೋಟೆ, ಮಾನಸ್ತಂಭ ನೀರಿನ ಅಗಳ,

[1] ಎರಡು ಮುಷ್ಟಿಗೆಗಳಿಂದ ತಲೆಯ ಕೂದಲುಗಳನ್ನು ಕಿತ್ತುಕೊಳ್ಳುವುದು, ಎರಡು ಮುಷ್ಟಿಗೆಗಳಿಂದ ಎರಡೂ ಮಗ್ಗಲಿನ ಮೀಸೆಯ ಕೂದಲುಗಳನ್ನು ಕಿತ್ತುಕೊಳ್ಳುವುದು, ಇನ್ನೊಂದು ಮುಷ್ಟಿಗೆಯಿಂದ ಗಡ್ಡದ ಕೂದಲುಗಳನ್ನು ಕಿತ್ತುಕೊಳ್ಳುವುದು ಇದು ಪಂಚಮುಷ್ಟಿ ಲೋಚವಾಗಿದೆ.

ಹೂದೋಟ, ಪುನಃ ರತ್ನದ ಕೋಟೆ, ಮಹಾದ್ವಾರ, ನಾಟ್ಯಶಾಲಾ, ಉಪವನ, ಕಟ್ಟೆ, ಧ್ವಜಭೂಮಿ, ಪುನಃ ಕೋಟೆ, ಕಲ್ಪವೃಕ್ಷದ ವನ, ರತ್ನಮಯ ಸ್ತೂಪ, ಪ್ರಸಾದ ಪ್ರದೇಶ, ಆ ಮೇಲಿನ ಸ್ಫಟಿಕದ ಕೋಟೆಯಲ್ಲಿ ದೇವಿಭಂದವೆಂಬ ಹೆಸರಿನ ಒಂದು ಯೋಜನ ಮಂಟಪ, ಸುತ್ತುವದರಿಂದ ಹನ್ನೆರಡು ಸಭೆಗಳು, ಅದರ ಮುಂದೆ ರತ್ನಗಳಿಂದ ನಿರ್ಮಿಸಿದ ಮೂರು ಕಟಾಂಜನಗಳ ಮೇಲಿನ ಗಂಧ ಕುಟಿಯ ಸಿಂಹಾಸನದ ಮೇಲೆ ನಾಲ್ಕು ಬೆರಳಿನಷ್ಟು ಅಂತರದ ಮೇಲೆ ನಿರಾಧಾರವಾಗಿ ಭಗವಂತನು ವಿರಾಜಮಾನನಾಗುತ್ತಾನೆ. ಅವನ ಅನಂತಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತ ಸುಖವುಳ್ಳ ಅಂತರಂಗ ವಿಭೂತಿಯ ಮಹಿಮೆಯನ್ನು ವರ್ಣನ ಮಾಡಲಿಕ್ಕೆ ನಾಲ್ಕು ವಿಧದ ಜ್ಞಾನಗಳ ಧಾರಕನಾದ ಗಣಧರನು ಕೂಡ ಸಮರ್ಥನಿಲ್ಲ ಅಂದಮೇಲೆ ಎರಡನೆಯವರ ಕಡೆಯಿಂದ ಅದು ಹೇಗಾದೀತು? ಸಮವಸರಣ ವಿಭೂತಿಯೇ ವಚನಕ್ಕೆ ಅಗೋಚರವಾಗಿದೆ ಗಂಧ ಕುಟಿಯು ಮೂರನೆಯ ಕಟಾಂಜನದ ಮೇಲಿದೆ ಅಲ್ಲಿ ಪ್ರತಿಯೊಂದು ಮಗ್ಗುಲಿಗೂ ಮೂವತ್ತೆರಡು ಮೂವತ್ತೆರಡರಂತೆ ಎರಡೂ ಮಗ್ಗಲಿಗೆ ಸೇರಿ, ಅರವತ್ತು ನಾಲ್ಕು ಇಂದ್ರರು ಮಕುಟ, ಕುಂಡಲ, ಹಾರ, ತೋಳಬಂದಿಗೆ, ಕೈಗಡಗ ಮೊದಲಾದ ಸಂಪೂರ್ಣ ಅಲಂಕಾರಗಳನ್ನು ಹಾಕಿಕೊಂಡು, ಅರವತ್ತು ನಾಲ್ಕು ಚಾಮರಗಳನ್ನು ಕರಗಳಲ್ಲಿ ಹಿಡಿದು, ಪರಮೇಶ್ವರನ ಮೇಲೆ ಬೀಸುತ್ತಲಿರುವರು. ಭಗವಂತನ ತಲೆಯ ಮೇಲೆ ಮೂರು ಛತ್ರಗಳು ಇರುತ್ತವೆ. ಅವು ಸೂರ್ಯ ಚಂದ್ರರಿಗಿಂತಲೂ ಹೆಚ್ಚು ದೈದೀಪ್ಯ-ಮಾನವಾಗಿ ತೋರುತ್ತವೆ ಪರಮೇಶ್ವರನ ಶರೀರದ ಕಾಂತಿಯು ಅತ್ಯಂತ ಪ್ರಕಾಶಮಾನವಾಗಿರುತ್ತದೆ. ಆದರಿಂದ ಸಮವಸರಣದಲ್ಲಿ ಹಗಲು ರಾತ್ರಿಗಳ ಭೇದವೇ ಕಂಡು ಬರುವದಿಲ್ಲ. ಯಾವಾಗಲೂ ಹಗಲಾಗಿರುತ್ತದೆ. ಮೂರು ಲೋಕದಲ್ಲಿಯೂ ಇನ್ನೊಂದಿರದಂಥ ಸುಗಂಧವು ಪರಮೇಶ್ವರನ ಶರೀರಕ್ಕೆ ಇರುತ್ತದೆ ಗಂಧ ಕುಟಿಯ ಮೇಲೆ ದೇವರು ರಚಿಸಿದ ಅಶೋಕ ವೃಕ್ಷವನ್ನು ನೋಡಿದ ಕೂಡಲೆ ಅಲ್ಲಿಯ ಜೀವಗಳ ಶೋಕವು ಇಲ್ಲದಂತೆ ಆಗುತ್ತದೆ. ಕಲ್ಪವೃಕ್ಷಗಳ ಹೂವಿನ ಮಳೆಯು ಆಕಾಶದೊಳಗಿಂದ ಸುರಿಯುತ್ತಿರುತ್ತದೆ ಆಕಾಶದಲ್ಲಿ ಹನ್ನೆರಡೂ ಅರ್ಧ ಕೋಟಿ ಜಾತಿಯ ವಾದ್ಯಗಳ ಸುಸ್ವರ ಧ್ವನಿಯು ಹೊರಡುತ್ತದೆ. ಅದನ್ನು ಕೇಳಿದಾಕ್ಷಣ, ಹಸಿವು ನೀರಡಿಕೆಗಳು ಇಷ್ಟೇ ಅಲ್ಲ, ಎಲ್ಲ ರೋಗಗಳ ವೇದನೆಯೂ ಸಹ ಇಲ್ಲದಂತಾಗುತ್ತದೆ ಪ್ರಭುವಿನ ರತ್ನ ಜಡಿತ ಸಿಂಹಾಸನವು ಸೂರ್ಯನ ಕಾಂತಿಯನ್ನೂ ಸಹ ಹಿಂದಕ್ಕೆ ಸರಿಸುತ್ತದೆ ಭಗವಂತನ ದಿವ್ಯ ಧ್ವನಿಗೆ ಅದ್ಭುತ ಮಹಿಮೆಯಿದೆ ಅದು ಮೂರು ಲೋಕದೊಳಗಿನ ಎಲ್ಲ ಪ್ರಾಣಿಗಳ ಮೇಲೆ ದಯೆಯನ್ನು ಸುರಿಸಿ, ಮೋಹರೂಪೀ ಅಂಧಕಾರವನ್ನು ನಷ್ಟಗೊಳಿಸುತ್ತದೆ. ಸಕಲ ಪ್ರಾಣಿಗಳೂ ತಮ್ಮ ತಮ್ಮ ಭಾಷೆಯಲ್ಲಿ ಅದರ ಅರ್ಥವನ್ನು ಗ್ರಹಿಸುತ್ತವೆ ಎಲ್ಲರ ಸಂಶಯವೂ ಇಲ್ಲದಂತೆ ಆಗುತ್ತವೆ. ಅದು ಸ್ವರ್ಗ ಮೋಕ್ಷಗಳ ಮಾರ್ಗವನ್ನು ಪ್ರಕಟಗೊಳಿಸುತ್ತದೆ. ದಿವ್ಯಧ್ವನಿಯ ಮಹಾತ್ಮ್ಯೆಯನ್ನು ವಚನಗಳಿಂದ ವರ್ಣಿಸಲಿಕ್ಕೆ ಗಣಧರ, ಇಂದ್ರ ಮೊದಲಾದವರೂ ಸಹ ಸಮರ್ಥರಾಗಲಾರರು.

**ಸಮವಸರಣದ ಮಹಿಮೆ ಮತ್ತು ಕೇವಲ ಜ್ಞಾನದ ಅತಿಶಯ**—ಸಮವಸರಣದಲ್ಲಿ ಪರಸ್ಪರ ವಿರೋಧ ಜಾತಿಯ ಪ್ರಾಣಿಗಳಲ್ಲಿಯೂ ಸಹ ವೈರತ್ವವು ನಿಲ್ಲುವದಿಲ್ಲ ಸಮವಸರಣದಲ್ಲಿ ಸಿಂಹ ಮತ್ತು ಆನೆ, ಹುಲಿ ಮತ್ತು ಆಕಳು, ಬೆಕ್ಕು ಮತ್ತು ಇಲಿ ಇತ್ಯಾದಿ ಜೀವಗಳು ಪರಸ್ಪರ ವೈರವನ್ನು ಬಿಟ್ಟು, ಮಿತ್ರಭಾವವನ್ನು ಧಾರಣ ಮಾಡುತ್ತವೆ ಇದು ವೀತರಾಗತ್ವದ ಅದ್ಭುತ ಮಹಿಮೆಯಾಗಿದೆ ಈ ಮಹಿಮಾತಿಶಯದ ಸಾಂನಿಧ್ಯದಿಂದ ದೇವತೆಗಳು ನಿರ್ಮಿಸಿದ ಕಲಶ, ಕನ್ನಡಿ, ಧ್ವಜ, ಛತ್ರ, ಚಾಮರ ಮೊದಲಾದ ಅಚೇತನ ಪದಾರ್ಥಗಳೂ ಸಹ ಲೋಕದಲ್ಲಿ ಮಂಗಲತ್ವವನ್ನು ಹೊಂದುತ್ತವೆ ಕೇವಲಜ್ಞಾನವಾದನಂತರ ಪ್ರಭುವಿಗೆ ಹತ್ತು ಅತಿಶಯಗಳು ಪ್ರಕಟವಾಗುತ್ತವೆ. ಅವು ಹೀಗಿವೆ—(೧) ನಾಲ್ಕೂ ಕಡೆಗೆ ನೂರು ಯೋಜನೆಗಳ ವರೆಗೆ ಸುಭಿಕ್ಷವಾಗಿರುವುದು, (೨) ನೆಲಕ್ಕೆ ಮುಟ್ಟದೆ ಆಕಾಶದಲ್ಲಿಯೇ ಗಮನಮಾಡುವುದು, (೩) ಯಾವ ಪ್ರಾಣಿಯ ವಧೆಯೂ ಆಗದಿರುವುದು, (೪) ಊಟವಿಲ್ಲದಿರುವುದು, (೫) ಉಪಸರ್ಗವಿಲ್ಲದಿರುವುದು, (೬) ಚತುರ್ಮುಖವಾಗಿ ಕಾಣುವುದು, (೭) ಸಂಪೂರ್ಣವಿದ್ಯೆಯ ಒಡೆತನವು ಲಭಿಸುವುದು, (೮) ನೆರಳು ಬೀಳದಿರುವುದು, (೯) ಕಣ್ಣುಗಳ ರೆಪ್ಪೆಗಳನ್ನು ಹೊಡೆಯದಿರುವುದು, (೧೦) ಕೂದಲು, ಉಗುರುಗಳು ಬೆಳೆಯದಿರುವುದು ಹೀಗೆ ಹತ್ತು ಅತಿಶಯಗಳು ಘಾತಿ ಕರ್ಮದ ನಾಶವಾಗುವುದರಿಂದ ತನ್ನಿಂದ ತಾನೇ ಪ್ರಕಟವಾಗುತ್ತವೆ

**ದೇವಕೃತ ಅತಿಶಯುಗಳು**—ಈ ಕಾಲದಲ್ಲಿ ಸ್ವರ್ಗದೊಳಗಿನ ದೇವರು ಹದಿನಾಲ್ಕು ಅತಿಶಯಗಳನ್ನು ತೋರಿಸುತ್ತಾರೆ ಅವು ಹೀಗಿವೆ—(೧) ಅರ್ಧಮಾಗಧೀಭಾಷೆ, (೨) ಎಲ್ಲ ಪ್ರಾಣಿಗಳ ಸಮೂಹದಲ್ಲಿ ಮೈತ್ರೀ ಭಾವನ,

(೩) ಸರ್ವ ಋತುಗಳಲ್ಲಿಯ ಹೂವು, ಹಣ್ಣುಗಳಿಂದ ಮರಗಳು ತುಂಬಿರುವುದು, (೪) ಪೃಥ್ವಿಯು ಕನ್ನಡಿಯಂತೆ ಸ್ವಚ್ಛ—ಹುಲ್ಲು, ಕಂಟಿ, ಧೂಳುಗಳಿಲ್ಲದಿರುವುದು—ರತ್ನದಂತಾಗುವುದು, (೫) ಸುಗಂಧ ಮಿಶ್ರಿತ ಹಿತ ಮಧುರ ಮಂದ ಗಾಳಿಯು ಬೀಸುವುದು, (೬) ಎಲ್ಲ ಲೋಕಕ್ಕೂ ಆನಂದವೆನಿಸುವುದು, (೭) ಅನುಕೂಲ ದಿಕ್ಕಿನಿಂದ ಗಾಳಿಯು ಬೀಸುವುದು, (೮) ಸುಗಂಧವುಳ್ಳ ನೀರಿನ ವೃಷ್ಟಿಯಿಂದ ಭೂಮಿಯ ಮೇಲಿನ ಧೂಳು ಇಲ್ಲದಂತಾಗುವುದು, (೯) ಪ್ರಭುವು ಎಲ್ಲಿ ಕಾಲಿಡುವನೋ ಅಲ್ಲಿ ಹಿಂದೆ ಏಳು ಕಮಲಗಳು, ಮುಂದೆ ಏಳು ಕಮಲಗಳು, ಕಾಲ ಕೆಳಗೆ ಒಂದು ಕಮಲ, ಹೀಗೆ ಎರಡುನೂರಾ ಇಪ್ಪತ್ತೈದು ಕಮಲಗಳ ರಚನೆಯಾಗುವುದು, (ಪ್ರತಿಯೊಂದು ದಿಕ್ಕಿನಲ್ಲಿ ಹದಿನಾಲ್ಕರಂತೆ ಎಂಟೂ ದಿಕ್ಕಿನಲ್ಲಿ ಸೇರಿ ಒಂದು ನೂರಾ ಹನ್ನೆರಡು, ಮತ್ತು ಅವುಗಳ ಒಳಗಿನವು ಒಂದು ನೂರಾ ಹನ್ನೆರಡು, ಹಾಗೂ ಪಾದ ಕೆಳಗಿನದು ಒಂದು ಸೇರಿ ಎರಡು ನೂರಾ ಇಪ್ಪತ್ತೈದು ಕಮಲಗಳು ಆಗುತ್ತವೆ ) (೧೦) ಆಕಾಶವು ನಿರ್ಮಲವಾಗಿರುವುದು, (೧೧) ದಿಕ್ಕುಗಳು ನಿರ್ಮಲವಾಗಿರುವುದು, (೧೨) ನಾಲ್ಕು ಪ್ರಕಾರದ ದೇವತೆಗಳು ಮಾಡುವ ಜಯ ಜಯಕಾರ ಶಬ್ದ, (೧೩) ಸೂರ್ಯನಕ್ಕಿಂತಲೂ ಹೆಚ್ಚು ಹೊಳೆಯುವಂಥ ಒಂದು ಸಾವಿರ ಹಲ್ಲುಗಳಿರುವ ಧರ್ಮ ಚಕ್ರವು ಭಗವಂತನು ಗಮನಮಾಡುವಾಗ ಮುಂದಿರುವುದು, (೧೪) ಎಂಟು ಮಂಗಲ ದ್ರವ್ಯಗಳು ಈ ಹದಿನಾಲ್ಕು ದೇವಕೃತ ಅತಿಶಯಗಳು ಪ್ರಕಟವಾಗುತ್ತವೆ ಹಸಿವು, ನೀರಡಿಕೆ, ಹುಟ್ಟು, ಸಾವು, ಮುಪ್ಪು, ರೋಗ, ಶೋಕ, ಅಂಜಿಕೆ, ಆಶ್ಚರ್ಯ, ರಾಗ, ವೈರ, ಮೋಹ, ಅರತಿ, ಚಿಂತಾ, ಬೆವರು, ಖೇದ, ಸೊಕ್ಕು, ನಿದ್ರೆ ಈ ಹದಿನೆಂಟು ದೋಷಗಳಿಂದ ರಹಿತನಾದಂಥ ಅರಿಹಂತ ಪರಮೇಷ್ಠಿಗೆ ನಮಸ್ಕಾರ ಮಾಡಿರಿ. ಅವರನ್ನು ಸ್ತುತಿಸಿರಿ. ಧ್ಯಾನಮಾಡಿರಿ. ಈ ಭಕ್ತಿಯು ಸಂಸಾರ ಸಮುದ್ರದೊಳಗಿಂದ ಮುಕ್ತಗೊಳಿಸುವಂಥದಿದೆ ಇದನ್ನು ನಿರಂತರ ಚಿಂತಿಸಿರಿ ಅರಹಂತನ ಹೆಸರುಗಳು ಗುಣಗಳನ್ನು ಆಶ್ರಯಿಸಿ ಅನಂತವಾಗಿವೆ ಭಕ್ತಿವಶನಾದ ಇಂದ್ರನು ಭಗವಂತನನ್ನು ಒಂದು ಸಾವಿರ ಎಂಟು ಹೆಸರುಗಳಿಂದ ಸ್ತುತಿಸಿರುವನು ಯಾರಿಗೆ ಹಾಗೆ ಸಾಮರ್ಥ್ಯವು ಇಲ್ಲವೋ ಅವರು ತಮ್ಮ ಶಕ್ತಿಗನುಸರಿಸಿ ಪೂಜೆ, ಸ್ತುತಿ, ನಮಸ್ಕಾರ ಧ್ಯಾನಗಳನ್ನು ಮಾಡಬೇಕು ಸಮ್ಯಗ್ದರ್ಶನ ಮತ್ತು ಅರಹಂತ ಭಕ್ತಿ ಇವುಗಳಲ್ಲಿ ನಾಮಭೇದವಿದೆ ಅರ್ಥ ಭೇದವಿಲ್ಲ ಅರಹಂತ ಭಕ್ತಿಯು ನರಕಾದಿಗಳನ್ನು ನಾಶಮಾಡುವಂಥದಿದೆ ಅರ್ಹದ್ಭಕ್ತಿಯ ಪೂಜೆ, ಸ್ತುತಿಗಳನ್ನು ಮಾಡಿ, ಅರ್ಘ್ಯವನ್ನು ಅರ್ಪಿಸುವಂಥವರು ದೇವರ ಸುಖವನ್ನು ಭೋಗಿಸುವರು ಕೊನೆಗೆ ಮನುಷ್ಯ ಗತಿಯೊಳಗಿನ ಉತ್ತಮ ಸುಖವನ್ನು ಭೋಗಿಸಿ, ಅವಿನಾಶಿಯಾದ ಅಕ್ಷಯ ಸುಖವನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ ಈ ಪ್ರಕಾರ ಅರಹಂತ ಭಕ್ತಿ ಎಂಬ ಹೆಸರಿನ ಹತ್ತನೆಯ ಭಾವನೆಯನ್ನು ವರ್ಣಿಸಲಾಗಿದೆ.

## ೧೧. ಆಚಾರ್ಯಭಕ್ತಿ

ಆಚಾರ್ಯರ ಗುಣಗಳು—ವೀತರಾಗ ಗುರುಗಳಲ್ಲಿ—ಗುರುಗಳ ಗುಣಗಳಲ್ಲಿ—ಪ್ರೇಮವುಳ್ಳವರು ಧನ್ಯರು ಅದೇ ಗುರುಭಕ್ತಿಯು. ಗುರುವಿನ ಆಜ್ಞೆಯನ್ನು ಯಾರು ಶಿರಸಾವಂದ್ಯವೆಂದು ತಿಳಿಯುವರೋ ಅವರು ಭಾಗ್ಯವಂತರೆಂದು ತಿಳಿಯಬೇಕು ಆಚಾರ್ಯರು ಅನೇಕ ಗುಣಗಳ ಆಗರವಾಗಿರುತ್ತಾರೆ ಅವರು ಉತ್ಕೃಷ್ಟ ತಪಶ್ಚರ್ಯವನ್ನು ಹೊಂದಿರುತ್ತಾರೆ ಅವರ ಗುಣಗಳನ್ನು ಮನಸ್ಸಿನಲ್ಲಿ ಸ್ವೀಕರಿಸಿ ಪೂಜೆಯನ್ನು ಮಾಡಬೇಕು ಅರ್ಘ್ಯವನ್ನು ಕೊಡಬೇಕು ಮುಂಭಾಗದಲ್ಲಿ ಪುಷ್ಪಾಂಜಲಿಯನ್ನು ನೀಡಬೇಕು. ಅಲ್ಲದೆ ಮೇಲಿಂದ ಮೇಲೆ ಇಂಥ ಗುರುವಿನ ಚರಣ ಸೇವೆಯು ಒದಗಲೆಂದು ಮನಸ್ಸಿನಲ್ಲಿ ಬಯಸಬೇಕು. ಆಚಾರ್ಯರು ಉಪವಾಸವೇ ಮೊದಲಾದ ಹನ್ನೆರಡು ಪ್ರಕಾರದ ತಪಗಳಲ್ಲಿ ನಿರಂತರ ತತ್ಪರರಾಗಿರುತ್ತಾರೆ ಅದರಂತೆ ಆರು ಆವಶ್ಯಕ ಕ್ರಿಯೆಗಳಲ್ಲಿಯೂ ಸಾವಧಾನದಿಂದ ಇರುವರು ಐದು ಆಚಾರಗಳನ್ನು ಪಾಲಿಸುತ್ತಾರೆ. ಹತ್ತು ಲಕ್ಷಣಗಳುಳ್ಳ ಧರ್ಮ, ಮೂರು ಗುಪ್ತಿಗಳನ್ನು ಧಾರಣಮಾಡಿ, ಮನ, ವಚನ, ಕಾಯಗಳನ್ನು ನಿಗ್ರಹಮಾಡುತ್ತಾರೆ

ಪಂಚಾಚಾರಗಳಿವು—(೧) ಸಮ್ಯಗ್ದರ್ಶನಾಚಾರ, (೨) ಸಮ್ಯಗ್ಜ್ಞಾನಾಚಾರ, (೩) ಸಮ್ಯಕ್ಚಾರಿತ್ರಾಚಾರ, (೪) ತಪಾಚಾರ ಮತ್ತು (೫) ವೀರ್ಯಾಚಾರ ಈ ಐದು ಪ್ರಕಾರದ ಆಚಾರಗಳನ್ನು ಪಾಲನಮಾಡುವುದರಲ್ಲಿ ತತ್ಪರರಿರುವಂಥವರು ಅಂತರಂಗ ಬಹಿರಂಗ ಪರಿಗ್ರಹಗಳನ್ನು ಮೂಲದಲ್ಲಿಯೇ ಇಟ್ಟುಕೊಳ್ಳುವದಿಲ್ಲ ಒಂದು ಉಪವಾಸ, ಎರಡು ಉಪವಾಸ, ಮೂರು ಉಪವಾಸ, ಐದು ಉಪವಾಸ, ತಿಂಗಳ ಉಪವಾಸಗಳನ್ನು ಮಾಡುತ್ತಾರೆ. ನಿರ್ಜನ, ವನದಲ್ಲಿಯೂ ಪರ್ವತದ ದರಿಯಲ್ಲಿಯೂ ಗುಹೆಗಳಲ್ಲಿಯೂ ನಿಂತು ನಿಶ್ಚಲ ಧ್ಯಾನಮಾಡುತ್ತಾರೆ ಶಿಷ್ಯರ

ಯೋಗ್ಯತೆಯನ್ನು ಚೆನ್ನಾಗಿ ತಿಳಿದುಕೊಂಡು, ಅವರಿಗೆ ದೀಕ್ಷೆಯನ್ನೂ ಶಿಕ್ಷೆಯನ್ನೂ ಕೊಡುತ್ತಾರೆ ನೈಗಮವೇ ಮೊದಲಾದ ಒಂಬತ್ತು ಪ್ರಕಾರದ ನಯಗಳ ಜ್ಞಾನವು ಅವರಿಗೆ ಚೆನ್ನಾಗಿ ಇರುತ್ತದೆ ಅವರು ತಮ್ಮ ಶರೀರದ ಮೇಲೆ ಮಮತ್ವವನ್ನು ಇಟ್ಟಿರುವದಿಲ್ಲ ಸಂಸಾರವೆಂಬ ಬಾವಿಯಲ್ಲಿ ಬೀಳಲಿಕ್ಕೆ ಅವರಿಗೆ ಭಯವೆನಿಸುತ್ತದೆ ಮನ, ವಚನ, ಕಾಯಗಳನ್ನು ಶುದ್ಧಗೊಳಿಸಿ ಮೂಗಿನ ತುದಿಯ ಮೇಲೆ ಎರಡೂ ದೃಷ್ಟಿಗಳನ್ನು ಇಟ್ಟು ಏಕಾಗ್ರ ಧ್ಯಾನವನ್ನು ಮಾಡುವರು ಇಂಥ ಆಚಾರ್ಯರಿಗೆ ತಮ್ಮ ಎಲ್ಲ ಅಂಗಗಳನ್ನು ಬಾಗಿಸಿ ನಮಸ್ಕಾರವನ್ನು ಮಾಡಬೇಕು. ಅಷ್ಟ ದ್ರವ್ಯಗಳಿಂದ ಅವರ ಚರಣ ಕಮಲಗಳನ್ನು ಪೂಜಿಸಬೇಕು ಇದು ಆಚಾರ್ಯ ಭಕ್ತಿಯಾಗಿದೆ ಇದರಿಂದ ಸಂಸಾರ ಪರಿಭ್ರಮಣದ ಪೀಡೆಯು ದೂರವಾಗುತ್ತದೆ

**ಆಚಾರ್ಯರ ಯೋಗ್ಯತೆ**—ಆಚಾರ್ಯರು ಸಂಪೂರ್ಣ ಧರ್ಮದ ನಾಯಕರು. ಅವರು ರಾಜಕುಲ, ಮಂತ್ರಿಕುಲ, ವೈಶ್ಯಕುಲದಲ್ಲಿ ಹುಟ್ಟಿದವರಿರಬೇಕು ಸುಸ್ವರೂಪಿಯಾಗಿರಬೇಕು ಅವರ ರೂಪವನ್ನು ನೋಡಿದ ಕೂಡಲೆ ಮನಸ್ಸು ಶಾಂತವಾಗಬೇಕು ಅವರ ಉಚ್ಚ ಆಚರಣೆಯು ಜಗತ್ತಿನಲ್ಲಿ ಪ್ರಸಿದ್ಧವಾಗಿರಲಿಕ್ಕೆಬೇಕು ಗೃಹಸ್ಥಾಶ್ರಮದಲ್ಲಿ ನಿಂದ್ಯ ಆಚರಣ ಮತ್ತು ನಿಂದ್ಯ ವ್ಯವಹಾರಗಳನ್ನು ಅವನು ಮಾಡಿರಕೂಡದು ಸದ್ಯಕ್ಕಿನ ಭೋಗ, ಸಂಪತ್ತುಗಳನ್ನು ಬಿಟ್ಟು ವಿರಕ್ತನಾಗಿರಲಿಕ್ಕೆ ಬೇಕು ಲೌಕಿಕ ವ್ಯವಹಾರವನ್ನೂ ಪರಮಾರ್ಥವನ್ನೂ ತಿಳಿದಿರಬೇಕು. ತೀವ್ರ ಬುದ್ಧಿಯುಳ್ಳವನೂ ತಪಸ್ವಿಯೂ ಆಗಿರಬೇಕು ಅನ್ಯ ಮುನಿಗಳಿಂದ ಮಾಡಲಿಕ್ಕೆ ಆಗದಂಥ ತಪಸ್ಸನ್ನು ಆಚಾರ್ಯರು ಆಚರಿಸಲಿಕ್ಕೆ ಸಮರ್ಥರಾಗಿರಲಿಕ್ಕಬೇಕು ದೀಕ್ಷೆಯನ್ನು ತಕ್ಕೊಂಡು ಹಲವು ದಿವಸಗಳು ಉರುಳಿರಲಿಕ್ಕೆ ಬೇಕು ಬಹಳಷ್ಟು ದಿವಸ ಗುರುಗಳ ಸೇವೆಯನ್ನು ಮಾಡಿದವನಿರಬೇಕು ಅವರ ವಚನಗಳನ್ನು ಕೇಳುವುದರಿಂದ ಕೇಳುವವರ ಶ್ರದ್ಧೆಯು ಧರ್ಮದಲ್ಲಿ ದೃಢವಾಗಬೇಕು ಸಂಶಯವು ಇಲ್ಲದಂತೆ ಆಗಬೇಕು. ಸಂಸಾರ ದೇಹ ಭೋಗಗಳಿಂದ ವಿರಕ್ತಿಯನ್ನು ಹೊಂದಲಿಕ್ಕೆ ಬೇಕು ಇದಲ್ಲದೆ ಸಿದ್ಧಾಂತ ಸೂತ್ರದ ಅರ್ಥವನ್ನು ಸಂಪೂರ್ಣವಾಗಿ ಅರಿತವನಿರಬೇಕು ಇಂದ್ರಿಯಗಳ ದಮನಮಾಡಿ, ಇಹಲೋಕ ಹಾಗೂ ಪರಲೋಕಗಳಲ್ಲಿಯ ಭೋಗವಿಲಾಸದ ಇಚ್ಛೆಯನ್ನು ಬಿಟ್ಟವನಿರಬೇಕು ದೇಹದ ಮೇಲಿನ ಮಮತ್ವವನ್ನು ಬಿಟ್ಟು, ಬಹಳ ಧೈರ್ಯದಿಂದ ಉಪಸರ್ಗ ಮತ್ತು ಪರೀಷಹಗಳನ್ನು ಸಹನ ಮಾಡುವಂಥವನಿರಬೇಕು ಆಚಾರ್ಯರೇ ತಮ್ಮ ಚಾರಿತ್ರ್ಯದಿಂದ ಚ್ಯುತರಾದಲ್ಲಿ ಎಲ್ಲ ಸಂಘವು ಭ್ರಷ್ಟವಾಗಿ ಧರ್ಮದ ಲೋಪವಾದೀತು. ಆಚಾರ್ಯನು ಸ್ವಮತ ಹಾಗೂ ಪರಮತಗಳನ್ನು ತಿಳಿದವ-ನಿರಬೇಕು ಅನೇಕಾಂತ ವಿದ್ಯೆಯಲ್ಲಿ ಪಾರಂಗತನಿರಬೇಕು ಎರಡನೆಯವರ ಪ್ರಶ್ನೆಗಳಿಗೆ ಗಾಬರಿಯಾಗದೆ ಕೂಡಲೆ ಉತ್ತರವನ್ನು ಕೊಡುವಂಥವನಿರಬೇಕು ಏಕಾಂತ ಪಕ್ಷದ ಖಂಡನ ಮಾಡಿ, ಸತ್ಯಾರ್ಥ ಧರ್ಮವನ್ನು ಸ್ಥಾಪನ ಮಾಡಲಿಕ್ಕೆ ಸಮರ್ಥನಿರಬೇಕು ಧರ್ಮದ ಪ್ರಭಾವನೆಯನ್ನು ಮಾಡುವುದರಲ್ಲಿ ಸತತೋದ್ಯೋಗಿಯಾಗಿರಬೇಕು. ಗುರುವಿನ ಹತ್ತರ ಪ್ರಾಯಶ್ಚಿತ್ತವೇ ಮೊದಲಾದ ಸೂತ್ರಗಳನ್ನು ಕಲಿತಂಥವನೂ ಮೂವತ್ತಾರು ಗುಣಗಳ ಧಾರಕನೂ ಆಗಿರಬೇಕು ಸಮಸ್ತ ಸಂಘದ ಸಾಕ್ಷಿಯಾಗಿ ಗುರುವು ಇಂಥ ಪುರುಷರಿಗೇನೇ ಆಚಾರ್ಯ ಪದವನ್ನು ಕೊಡುತ್ತಾನೆ ಈ ಗುಣಗಳಿಲ್ಲದವರಿಗೆ ಆಚಾರ್ಯ ಪದವನ್ನು ಕೊಟ್ಟರೆ ಧರ್ಮ ತೀರ್ಥದ ಲೋಪವಾಗುತ್ತದೆ ಮಿಥ್ಯಾ ಮಾರ್ಗದ ಪ್ರವೃತ್ತಿಯು ಉಂಟಾಗುತ್ತದೆ, ಹೆಚ್ಚುತ್ತದೆ. ಸಮಸ್ತ ಸಂಘವು ಸ್ವೇಚ್ಛಾಚಾರಿಯಾಗುತ್ತದೆ ಅಲ್ಲದೆ ಸೂತ್ರ ಮತ್ತು ಆಚಾರಗಳ ಪರಂಪರೆಯು ಇಲ್ಲದಂತಾಗುತ್ತದೆ

**ಬೇರೆ ಎಂಟು ಗುಣಗಳು**—ಆಚಾರ್ಯತ್ವದ ಬೇರೆ ಎಂಟು ಗುಣಗಳು ಇವೆ ಅವು ಹೀಗಿವೆ— (೧) ಆಚಾರವಂತ, (೨) ಆಧಾರವಂತ, (೩) ವ್ಯವಧಾನವಂತ, (೪) ಪ್ರಕರ್ತೃವು, (೫) ಅಪಾಯೋಪಾಯವಿದರ್ಶಿ (೬) ಅವಪೀಡಕ, (೭) ಅಪರಿಸ್ರಾವೀ ಮತ್ತು (೮) ನಿರ್ಯಾಪಕ ಇವುಗಳಲ್ಲಿ ಐದು ಪ್ರಕಾರದ ಆಚಾರಗಳನ್ನು ಧಾರಣ ಮಾಡುವವರಿಗೆ ಆಚಾರವಂತನೆನ್ನುವರು ಆ ಐದು ಪ್ರಕಾರದ ಆಚಾರಗಳು ಹೀಗಿವೆ—(೧) ಸರ್ವಜ್ಞ ವೀತರಾಗ ಪ್ರಭುವು ದಿವ್ಯ ಜ್ಞಾನದಿಂದ ನೋಡಿ ಹೇಳಿದಂಥ ಜೀವಾದಿ ತತ್ತ್ವಗಳ ಮೇಲೆ ಶ್ರದ್ಧೆಯನ್ನು ಇಡುವುದು ದರ್ಶನಾಚಾರವಾಗಿದೆ (೨) ತಾನು ಯಾರು, ಪರ ಯಾವುದು ಎಂಬುದನ್ನು ಆಗಮಗಳಿಂದಲೂ ಆತ್ಮಾನುಭವ-ದಿಂದಲೂ ತಿಳಿಯುವದು ಜ್ಞಾನಾಚಾರವೆನಿಸುವದು (೩) ಹಿಂಸೆಯೇ ಮೊದಲಾದ ಐದು ಪಾಪಗಳನ್ನು ತ್ಯಾಗ ಮಾಡುವುದು ಚಾರಿತ್ರಾಚಾರವಾಗಿದೆ (೪) ಅಂತರಂಗ ಬಹಿರಂಗ ತಪಗಳಲ್ಲಿ ಪ್ರವೃತ್ತನಾಗುವುದು ತಪಾಚಾರ-ವೆನಿಸುತ್ತದೆ (೫) ಪರೀಷಹಾದಿಗಳು ಪ್ರಾಪ್ತವಾದಾಗ ಧೈರ್ಯದಿಂದ ಇರುವುದು ವೀರ್ಯಾಚಾರವೆನಿಸುವುದು

ಐದು ಪ್ರಕಾರದ ಆಚಾರಗಳನ್ನು ತಾನು ನಿರ್ದೋಷ ರೀತಿಯಿಂದ ಪಾಲಿಸಿ, ಇತರ ಶಿಷ್ಯರ ಕಡೆಯಿಂದಲೂ ಪಾಲಿಸಲಿಕ್ಕೆ ಹಚ್ಚುವವರಿಗೆ ಆಚಾರ್ಯರೆನ್ನಬೇಕು ಯಾರು ತಾವು ಸ್ವತಃ ಹೀನಾಚಾರಿಗಳು ಇರುವರೋ ಅವರು ಶಿಷ್ಯರ ಕಡೆಯಿಂದ ಶುದ್ಧ ಆಚರಣೆಯನ್ನು ಮಾಡಿಸಿಕೊಳ್ಳಲಾರರು ಅಂತಲೇ ಶಿಷ್ಯರೂ ಸಹ ಹೀನಾಚಾರಿಗಳಾಗುತ್ತಾರೆ ಅವರು ಸ್ವತಃ ಆಹಾರವಿಹಾರ, ಉಪಕರಣ, ವಸತಿಕಾ ಮೊದಲಾದವುಗಳ ವಿಚಾರದಲ್ಲಿ ಶಾಸ್ತ್ರಕ್ಕೆ ಅನುಕೂಲವಾಗುವಂತೆ ಆಚರಣೆಯು ಇರುವದಿಲ್ಲ ಅಂತಲೇ ಅವರ ಕಡೆಯಿಂದ ಶುದ್ಧ ಉಪದೇಶವು ಲಭಿಸುವದಿಲ್ಲ ಅವಕ್ಕಾಗಿಯೇ ಕಟ್ಟುನಿಟ್ಟಾಗಿ ಆಚರಣೆಯುಳ್ಳ ಆಚಾರ್ಯನಿರಬೇಕು ಇದು ಮೊದಲನೆಯದಾದ ಆಚಾರವಂತನೆಂಬ ಹೆಸರಿನ ಭೇದವಾಗಿದೆ.

(೨) ಆಧಾರವಂತ ಎಂಬ ಎರಡನೆಯ ಪ್ರಕಾರವು ಹೀಗಿದೆ—ಭಗವಾನ್ ಜಿನೇಂದ್ರರು ವರ್ಣಿಸಿದ ನಾಲ್ಕು ಪ್ರಕಾರದ ಅನುಯೋಗಗಳನ್ನು ಚೆನ್ನಾಗಿ ತಿಳಿದಿರಬೇಕು ಸ್ಯಾದ್ವಾದ ವಿದ್ಯೆಯಲ್ಲಿ ಪಾರಂಗತನಿರಬೇಕು ಪ್ರಮಾಣ, ನಯ, ನಿಕ್ಷೇಪಗಳಿಂದ ಉತ್ತಮ ರೀತಿಯಲ್ಲಿ ತತ್ತ್ವ ನಿರ್ಣಯವನ್ನು ಮಾಡುವಂಥವನಾಗಬೇಕು ಇಂಥವನಿಗೇನೇ ಆಧಾರವಂತ ಆಚಾರ್ಯನೆನ್ನಬೇಕು

ಇವರ ವಿಶೇಷ ಗುಣಗಳು— ಈ ಪ್ರಕಾರ ಶ್ರುತದ ಜ್ಞಾನವು ಯಾರಿಗೆ ಒಳ್ಳೆಯದಾಗಿರುವದಿಲ್ಲವೋ ಅವರು ಅನ್ಯ ಶಿಷ್ಯರ ಸಂಶಯ, ಏಕಾಂತರೂಪದ ಹಟ, ಮಿಥ್ಯಾ ಆಚರಣಗಳನ್ನು ನಷ್ಟಗೊಳಿಸಲಾರರು ಅನಂತಾನಂತ ಕಾಲದಿಂದ ಸಂಸಾರದಲ್ಲಿ ಭ್ರಮಣಮಾಡುತ್ತಿರುವ ಜೀವಿಗೆ ದುರ್ಲಭವಾದ ಮಾನವ ಜನ್ಮವು ಲಭಿಸಿರುತ್ತದೆ ಅದರಲ್ಲಿಯೂ ಉತ್ತಮ ದೇಶ, ಉತ್ತಮ ಜಾತಿ, ಉತ್ತಮ ಕುಲ, ಪರಿಪೂರ್ಣ ಇಂದ್ರಿಯಗಳು, ದೀರ್ಘಾಯುಷ್ಯ, ಸತ್‌ಸಂಗತಿ, ಯಥಾರ್ಥ ಶ್ರದ್ಧೆ, ಜ್ಞಾನ, ಆಚರಣವೇ ಮೊದಲಾದ ಮೇಲಿಂದ ಮೇಲೆ ದೊರೆಯದಂಥ ಸಂಗತಿಗಳ ಸಂಯೋಗವಾಗಿರುತ್ತದೆ. ಹೀಗಿದ್ದೂ ಅಲ್ಪಜ್ಞಾನಿಯಾದ ಗುರುವಿನ ಸಹವಾಸವು ಲಭಿಸಿದರೆ ಸತ್ಯಾರ್ಥದ ಉಪದೇಶವು ಲಭಿಸುವದಿಲ್ಲ. ಅದರಿಂದ ಅವನಿಗೆ ಯಥಾರ್ಥ ಸ್ವರೂಪವು ಪ್ರಾಪ್ತವಾಗುವದಿಲ್ಲ ಅವನು ಸಂಶಯದಲ್ಲಿ ಸುತ್ತಾಡಲಿಕ್ಕೆ ಹತ್ತುತ್ತಾನೆ ಅಲ್ಲದೆ ಅವನು ಮೋಕ್ಷ ಮಾರ್ಗವು ತೀರ ಕಠಿಣವೆಂದು ತಿಳಿದು, ರತ್ನತ್ರಯಗಳಿಂದ ಚ್ಯುತನಾಗುತ್ತಾನೆ ವಿಷಯ ಕಷಾಯಗಳಲ್ಲಿ ತೊಡಗಿದಂಥ ಮನಸ್ಸನ್ನು ಬೇರೆ ಕಡೆಗೆ ಸೆಳೆಯಲಿಕ್ಕ ಅಸಮರ್ಥನಾಗುತ್ತಾನೆ ಮೇಲಾಗಿ ರೋಗದ ವೇದನೆ ಮತ್ತು ಘೋರ ಉಪಸರ್ಗ, ಪರೀಷಹಗಳು ಬಂದಾಗ ಮನಸ್ಸು ಚಂಚಲವಾಗುತ್ತದೆ ಆ ಕಾಲದಲ್ಲಿ ಶ್ರುತದ ಉಪದೇಶದ ಹೊರತಾಗಿ ಯಾವುದರಿಂದಲೂ ಮನಸ್ಸು ಸ್ಥಿರಗೊಳ್ಳುವದಿಲ್ಲ ಸಾಯುವಾಗ ಸಲ್ಲೇಖನವನ್ನು ಸ್ವೀಕರಿಸುವದಿರುತ್ತದೆ. ಆಗ ದೇಶ, ಕಾಲ, ಸಾಹಾಯ್ಯ, ಸಾಮರ್ಥ್ಯ ಇವುಗಳ ಕ್ರಮವು ತಿಳಿಯದ ಹೊರತಾಗಿ ಆಹಾರ ಪಾನಗಳನ್ನು ತ್ಯಾಗಮಾಡುವುದರಿಂದ ಪರಿಣಾಮವು ಕೆಡುತ್ತದೆ, ಆರ್ತಧ್ಯಾನವು ಸಂಭವಿಸುತ್ತದೆ, ಗತಿಯು ಕೆಡುವದು, ಧರ್ಮದ ಮೇಲೆ ಅಪವಾದವು ಉಂಟಾಗುತ್ತದೆ; ಇವುಗಳನ್ನೆಲ್ಲ ನೋಡಿ ಇತರ ಮುನಿಗಳೂ ಶಿಥಿಲಾಚಾರಿಗಳು ಆಗುತ್ತಾರೆ ಒಟ್ಟಿನಲ್ಲಿ ದೊಡ್ಡ ಅನರ್ಥವಾಗುವ ಸಂಭವವಿರುತ್ತದೆ. ಮನುಷ್ಯ ಪ್ರಾಣಿಯು ಆಹಾರದ ಮೇಲೆ ಬಾಳುವಂಥದಿರುತ್ತದೆ. ಅದರಿಂದ ಅವನಿಗೆ ಯಾವಾಗಲೂ ಆಹಾರದ ಇಚ್ಛೆಯು ಆಗುತ್ತಿರುತ್ತದೆ ರೋಗ ಉಂಟಾಗುವುದರಿಂದ ಇಲ್ಲವೆ ಆಹಾರದ ತ್ಯಾಗ ಮಾಡುವುದರಿಂದ ದುಃಖವು ಆಗುತ್ತದೆ. ಆಗ ಜ್ಞಾನ, ಚಾರಿತ್ರಗಳಲ್ಲಿ ಶಿಥಿಲತೆಯು ಉತ್ಪನ್ನವಾಗುತ್ತದೆ ಧರ್ಮಧ್ಯಾನವು ಇಲ್ಲದಂತೆ ಆಗುತ್ತದೆ. ಇಂದ ಕಾಲದಲ್ಲಿ ಗುರುವು ತನ್ನ ಉಪದೇಶದಿಂದ ಅವರ ಹಸಿವು, ನೀರಡಿಕೆ ಮೊದಲಾದ ವೇದನೆಗಳನ್ನು ಇಲ್ಲದಂತೆ ಮಾಡುತ್ತಾನೆ ಉಪದೇಶವೆಂಬ ಅಮೃತವನ್ನು ಅವರಿಗೆ ಒದಗಿಸಿ, ಅವರ ಕ್ಲೇಶವನ್ನು ಇಲ್ಲದಂತೆ ಮಾಡಿ, ಅವರನ್ನು ಧರ್ಮಧ್ಯಾನದಲ್ಲಿ ಸ್ಥಿರಗೊಳಿಸು-ವರು ಉಪದೇಶದ ಆಧಾರವಿಲ್ಲದೆ ಧರ್ಮವು ತಡೆಯಲಾರದು ಅಂತಲೇ ಆಧಾರವಂತನಾಗಿರುವ ಆಚಾರ್ಯರ ಆಶ್ರಯವನ್ನು ಪಡೆಯುವುದೇ ಯೋಗ್ಯವಾಗಿದೆ ಶಿಷ್ಯನು ವೇದನೆಯಿಂದ ಪೀಡಿತನಾದಾಗ ಅವನ ಕೈಕಾಲು, ತಲೆಗಳನ್ನು ಒತ್ತುವುದು, ಅವನ ಮೈಮೇಲೆ ಕೈಯಾಡಿಸುವುದು, ಅವನೊಡನೆ ಮಧುರ ಮಾತುಗಳನ್ನಾಡುವುದು ಇತ್ಯಾದಿ ಕೃತ್ಯಗಳಿಂದ ಜ್ಞಾನಿಗಳಾದ ಗುರುಗಳು ಅವರ ದುಃಖವನ್ನು ದೂರಮಾಡುತ್ತಾರೆ ಪೂರ್ವಕಾಲದಲ್ಲಿ ಹಲವು ಜನ ಸಾಧುಗಳು ಘೋರ ಉಪಸರ್ಗಗಳನ್ನು ಸಹನಮಾಡಿ ಆತ್ಮ ಕಲ್ಯಾಣವನ್ನು ಮಾಡಿಕೊಂಡ ಸಂಗತಿಯನ್ನು ಹೇಳಿ, ಶರೀರದಿಂದ ಆತ್ಮನು ಭಿನ್ನನಾಗಿದ್ದಾನೆಂಬ ಬೋಧವನ್ನು ಕೊಟ್ಟು ಅವರ ವೇದನೆಯನ್ನು ಇಲ್ಲದಂತೆ ಮಾಡುತ್ತಾರೆ ಆಗ ಅವರು ಹೀಗೆನ್ನುವರು—"ಎಲೈ ಮುನಿಗಳೇ, ದುಃಖದ ಪ್ರಸಂಗದಲ್ಲಿ ಧೈರ್ಯವನ್ನು ಧಾರಣಮಾಡಿರಿ. ಸಂಸಾರದಲ್ಲಿ

ಇಲ್ಲಿಯ ವರೆಗೆ ನೀವು ಅನೇಕ ದುಃಖಗಳನ್ನು ಭೋಗಿಸಿದ್ದೀರಿ. ಅಂದಮೇಲೆ ಈಗ ವೀತರಾಗತ್ವದ ಆಶ್ರಯವನ್ನು ಹೊಂದಿದರೇನೇ ದುಃಖದ ನಾಶವಾಗಿ ಕಲ್ಯಾಣವಾದೀತು." ಈ ಪ್ರಕಾರ ತಿಳಿಸಿ ಹೇಳಿ, ಅವರನ್ನು ಧರ್ಮಮಾರ್ಗದಿಂದ ಚ್ಯುತನಾಗಗೊಡುವದಿಲ್ಲ ಅಂತಲೇ ಅವನಿಗೆ ಆಧಾರವಂತ ಗುರುವಿನ ಆಶ್ರಯವಿರುವುದು ಅವಶ್ಯವಾಗಿದೆ.

(೩) ಇನ್ನು ಮೂರನೆಯ ಪ್ರಕಾರವು ವ್ಯವಹಾರವಂತನೆಂದು ಇದೆ ಅದರ ವಿವರ ಹೀಗಿದೆ—ಅವನು ಪ್ರಾಯಶ್ಚಿತ್ತ ಸೂತ್ರಗಳನ್ನು ತಿಳಿದವನಿರಲಿಕ್ಕೆ ಬೇಕು ಮುಂದೆ ಆಚಾರ್ಯನಾಗುವಂಥವನಿಗೇನೇ ಪ್ರಾಯಶ್ಚಿತ್ತ ಶಾಸ್ತ್ರವನ್ನು ಅವನು ಕಲಿಸಲಿಕ್ಕೆ ಬೇಕು ಜಿನಾಗಮವನ್ನು ಬಲ್ಲವನೂ ಬಹಳ ಧೈರ್ಯವಂತನೂ ಬಹು ಬುದ್ಧಿವಂತನೂ ಆದವನೇ ಪ್ರಾಯಶ್ಚಿತ್ತ ಕೊಡಲಿಕ್ಕೆ ಯೋಗ್ಯನಿರುವನು. ದ್ರವ್ಯ, ಕ್ಷೇತ್ರ, ಕಾಲ, ಬಾವ, ಕ್ರಿಯಾ, ಪರಿಣಾಮ, ಉತ್ಸಾಹ, ಸಂಹನನ, ಪರ್ಯಾಯ, ದೀಕ್ಷೆಯ ಕಾಲ, ಶಾಸ್ತ್ರಜ್ಞಾನ, ಪುರುಷಾರ್ಥ ಮೊದಲಾದವುಗಳನ್ನು ಚೆನ್ನಾಗಿ ತಿಳಿದುಕೊಂಡು, ರಾಗ-ದ್ವೇಷಗಳಿಲ್ಲದೆ ಪ್ರಾಯಶ್ಚಿತ್ತವನ್ನು ಕೊಡಲಿಕ್ಕ ಬೇಕು ಇಂಥ ದೋಷಕ್ಕೆ ಇಷ್ಟು ಪ್ರಾಯಶ್ಚಿತ್ತ ಕೊಡುವುದರಿಂದ ಅವನ ಪರಿಣಾಮವು ಸುಧಾರಿಸೀತು, ದೋಷವು ಇಲ್ಲದಂತಾಗಿ ಅವನ ವ್ರತದಲ್ಲಿ ದೃಢತೆಯು ಉತ್ಪನ್ನವಾದೀತು ಇತ್ಯಾದಿ ವಿಷಯಗಳ ಜ್ಞಾನವು ಆಚಾರ್ಯರಿಗೆ ಇರಲಿಕ್ಕ ಬೇಕು ಅದರಂತೆ ಆಹಾರದ ಯೋಗ್ಯಾಯೋಗ್ಯತೆಯ ಜ್ಞಾನವೂ ಅವರಿಗೆ ಇರಲಿಕ್ಕ ಬೇಕು ಈ ಕ್ಷೇತ್ರದಲ್ಲಿ ಈ ಪ್ರಾಯಶ್ಚಿತ್ತವನ್ನು ನಡೆಯಿಸಲಿಕ್ಕ ಆದೀತೋ ಇಲ್ಲವೋ, ಈ ಪ್ರಾಂತದಲ್ಲಿ ವಾತ, ಪಿತ್ತ, ಕಫ, ಶೀತ, ಉಷ್ಣ ಇವು ಕಡಿಮೆಯಾಗಿವೆ, ಇಲ್ಲವೆ ಹೆಚ್ಚಾಗಿವೆಯೋ ಏನು ಸಮಾನವಾಗಿವೆಯೋ, ಇಲ್ಲಿ ಮಿಥ್ಯಾದೃಷ್ಟಿ ಜೀವಗಳು ಹೆಚ್ಚಾಗಿವೆಯೋ, ಕಡಿಮೆಯಾಗಿವೆಯೋ, ಧರ್ಮಾತ್ಮರು ಕಡಿಮೆಯಾಗಿದ್ದಾರೆಯೋ ಹೆಚ್ಚಾಗಿದ್ದಾರೆಯೋ, ಮೊದಲಾದ ಸಂಗತಿಗಳ ವಿಚಾರಮಾಡಿ, ಪ್ರಾಯಶ್ಚಿತ್ತವನ್ನು ಕೊಡಲಿಕ್ಕೆ ಬೇಕು ಚಳಿಗಾಲ, ಬೇಸಿಗೆ ಕಾಲ, ಮಳೆಗಾಲ ಮತ್ತು ಅವಸರ್ಪಿಣೀ ಹಾಗೂ ಉತ್ಸರ್ಪಿಣಿಯ ಮೂರು, ನಾಲ್ಕು ಐದನೆಯ ಕಾಲ ಖಂಡಗಳನ್ನು ನೋಡಿ ಅವುಗಳ ಪರಿಣಾಮಗಳಿಗೆ ಅನುಸರಿಸಿ ಪ್ರಾಯಶ್ಚಿತ್ತವನ್ನು ಕೊಡಲಿಕ್ಕೆ ಬೇಕು. ಅವನ ಶಕ್ತಿ ಹೇಗಿದೆ, ಪರಿಣಾಮವೆಂತಿದೆ, ತಪಶ್ಚರಣದಲ್ಲಿ ಅವನಿಗೆ ಉತ್ಸಾಹ ಇದೆಯೋ ಇಲ್ಲವೋ, ಅವನ ಸಂಹನನ ಹೇಗಿದೆ, ಅವನು ದೀಕ್ಷೆ ತಕ್ಕೊಂಡು ಎಷ್ಟು ದಿವಸಗಳಾದುವು, ಸಹನಶೀಲನಾಗಿರುವನೋ, ಗಾಬರಿಗೊಳ್ಳುವನೋ, ತರುಣನೋ, ಮುಪ್ಪಿನವನೋ, ಆಗಮಗಳನ್ನು ತಿಳಿದವನಿರುವನೋ, ಇಲ್ಲವೋ ಪುರುಷಾರ್ಥವನ್ನು ಮಾಡುವಂಥವನಿರುವನೋ, ಆಲಸಿ ಇರುವನೋ ಮೊದಲಾದವುಗಳ ವಿಚಾರಮಾಡಿ ಪ್ರಾಯಶ್ಚಿತ್ತವನ್ನು ಕೊಡಲಿಕ್ಕೆ ಬೇಕು ಯಾವನು ಗುರುವಿನ ಹತ್ತರ ಪ್ರಾಯಶ್ಚಿತ್ತ ಸೂತ್ರವನ್ನು ಶಬ್ದಾರ್ಥಗಳ ಸಹಿತ ಕಲಿತಿರುವದಿಲ್ಲವೋ ಅವನು ಎರಡನೆಯವರಿಗೆ ಪ್ರಾಯಶ್ಚಿತ್ತವನ್ನು ಕೊಡುವದೆಂದರೆ ಸಂಸಾರವೆಂಬ ಕೆಸರಿನಲ್ಲಿ ಮುಳುಗಿದಂತೆಯೇ ಇದೆ. ಅಲ್ಲದೆ ಅಪಕೀರ್ತಿಯನ್ನೂ ಹೊಂದುವನು ಉನ್ಮಾರ್ಗದ ಉಪದೇಶಮಾಡಿ, ಸಮ್ಯಗ್ ಮಾರ್ಗವನ್ನು ನಾಶಮಾಡುವನು ಮಿಥ್ಯಾದೃಷ್ಟಿಯಾಗುವನು ಇನ್ನು ಆಚಾರ್ಯ ಪದವನ್ನು ಯಾರಿಗೆ ಗುರುವು ಕೊಡುವನೋ ಅವನಲ್ಲಿ ಈ ಮುಂದಿನ ಗುಣಗಳು ಇರಲಿಕ್ಕೆ ಬೇಕು—ಅವನು ಉಚ್ಚಕುಲದಲ್ಲಿ ಜನ್ಮಿಸಿದವನಿರಬೇಕು ವ್ಯವಹಾರ ಪರಮಾರ್ಥಗಳನ್ನು ತಿಳಿದವನಿರಬೇಕು. ಅವನು ತನ್ನ ಮೂಲಗುಣಗಳಿಗೆ ಎಂದೂ ಅತಿಚಾರದ ದೋಷವನ್ನು ತಗಲಗೊಟ್ಟಿರಬಾರದು. ಆಗಮದ ನಾಲ್ಕೂ ಅನುಯೋಗಗಳನ್ನು ಅಭ್ಯಾಸಮಾಡಿದವನಿರಬೇಕು ಧೈರ್ಯವಂತನಿರಬೇಕು. ಪರೀಷಹಗಳನ್ನು ಸಹನಮಾಡುವಂಥ ಶಕ್ತಿವಂತನಿರಬೇಕು ದೇವಾದಿಗಳು ಮಾಡಿದಂಥ ಉಪಸರ್ಗಗಳಿಂದಲೂ ಸಹ ಚಂಚಲನಾಗುವಂಥವನಿರಕೂಡದು ವಕ್ತೃತ್ವ ಶಕ್ತಿಯುಳ್ಳವನೂ ವಾದಿ ಪ್ರತಿವಾದಿಗಳನ್ನು ಗೆಲ್ಲಲಿಕ್ಕೆ ಸಮರ್ಥನಾದವನೂ ವಿಷಯಗಳಿಂದ ಅತ್ಯಂತ ವಿರಕ್ತನೂ ಬಹಳ ವರ್ಷಗಳ ವರೆಗೆ ಗುರುಗಳ ಸೇವೆಯನ್ನು ಮಾಡಿದವನೂ ಎಲ್ಲ ಸಂಘಕ್ಕೂ ಮಾನ್ಯನಿದ್ದವನೂ ಆಚಾರ್ಯ ಪದಕ್ಕೆ ಯೋಗ್ಯನಾಗಿರುತ್ತಾನೆ ಇದನ್ನು ಸಂಘದ ವ್ಯಕ್ತಿಗಳೆಲ್ಲರೂ ಮೊದಲೇ ತಿಳಿದಿರಲಿಕ್ಕೆ ಬೇಕು ಒಟ್ಟಿನಲ್ಲಿ ಮೂರ್ಖ ವೈದ್ಯನು ದೇಶ, ಕಾಲ, ಪ್ರಕೃತಿ ಮೊದಲಾದವುಗಳನ್ನು ತಿಳಿಯದುದರಿಂದ ರೋಗಿಯನ್ನು ಕೊಲ್ಲುತ್ತಾನೆ ಹಾಗೆಯೇ ವ್ಯವಹಾರ ಸೂತ್ರವನ್ನು ತಿಳಿಯದ ಮೂರ್ಖ ಗುರುವೂ ಸಂಸಾರದಲ್ಲಿ ಮುಳುಗಿಸುತ್ತಾನೆ ಅಂತಲೇ ಆಚಾರ್ಯನು ವ್ಯವಹಾರವಿದನಿರಲಿಕ್ಕೆ ಬೇಕು.

(೪) ಆಚಾರ್ಯನು ಪ್ರಕರ್ತೃ ಗುಣವುಳ್ಳವನಿರಲಿಕ್ಕೆಬೇಕು ಸಂಘದಲ್ಲಿ ರೋಗಿ, ವೃದ್ಧ, ಅಶಕ್ತ ಮತ್ತು ವಯಸ್ಸಿನಿಂದ ಚಿಕ್ಕವನಿದ್ದು ಸನ್ಯಾಸ ಸ್ವೀಕರಿಸಿದವನಿದ್ದರೆ ಅಂಥವರ ಸೇವೆಗಾಗಿ ನಿಯಮಿಸಿದ ಮುನಿಗಳಂತೂ ವೈಯಾವೃತ್ಯವನ್ನು ಮಾಡುತ್ತಲೇ ಇರುವರು ಆದರೆ ಆಚಾರ್ಯನೂ ಸಹ ಯಾವನಾದರೊಬ್ಬ ಮುನಿಯು

ಅಶಕ್ತನಾಗಿದ್ದರೆ ಅವನನ್ನು ಎಬ್ಬಿಸುವುದು, ಕೂಡಿಸುವುದು, ಮಲಗಿಸುವುದು, ಅವರ ಮಲಮೂತ್ರ, ಉಗುಳು, ಕೀವು, ರಕ್ತ ಮೊದಲಾದವುಗಳನ್ನು ತೆಗೆದು ಒಗೆಯುವುದು, ಅದನ್ನು ತೊಳೆಯುವುದು, ಅವನನ್ನು ಒಳ್ಳೆಯ ಸ್ಥಳದಲ್ಲಿ ಕೂಡಿಸುವುದು, ಧರ್ಮೋಪದೇಶ ಮಾಡುವುದು, ಧೈರ್ಯದಿಂದ ಇರಲಿಕ್ಕೆ ಹೇಳುವುದು ಇತ್ಯಾದಿ ವೈಯಾವೃತ್ಯಗಳನ್ನು ಮಾಡುವನು ಇವುಗಳನ್ನು ನೋಡಿ ಸಂಘದೊಳಗಿನ ಎಲ್ಲ ಮುನಿಗಳೂ ವೈಯಾವೃತ್ಯವನ್ನು ಮಾಡಲಿಕ್ಕೆ ಸಿದ್ಧರಾಗುತ್ತಾರೆ ಆಗ ಅವರು ಹೀಗೆ ವಿಚಾರ ಮಾಡುವರು —ಅಹಾ! ಗುರುಗಳು ಧನ್ಯ! ಕರುಣಾನಿಧಾನ! ಧರ್ಮಾತ್ಮರ ವಿಷಯಕ್ಕೆ ಎಷ್ಟು ಆದರ, ವಾತ್ಸಲ್ಯ! ನಾವು ಮಾತ್ರ ಏನೂ ಮಾಡದೆ ಆಲಸಿಗರಾಗಿ ಕುಳಿತಿದ್ದೇವೆ! ನಾವು ಇರುವಾಗ ಗುರು ಮಹಾರಾಜರೇ ರೋಗಿಗಳ ಸೇವೆ ಸುಶ್ರೂಷೆಗಳನ್ನು ಮಾಡಬೇಕು, ನಾವು ನೋಡುತ್ತ ಇರಬೇಕು? ನಮ್ಮ ಪ್ರಮಾದಕ್ಕೆ ಧಿಕ್ಕಾರವಿರಲಿ!" ಹೀಗೆ ಮನಸ್ಸಿನಲ್ಲಿ ವಿಚಾರಮಾಡಿ ಸಮಸ್ತ ಸಂಘವು ವೈಯಾವೃತ್ಯವನ್ನು ಮಾಡಲಿಕ್ಕೆ ಪ್ರವೃತ್ತವಾಗುತ್ತದೆ ಒಂದು ವೇಳೆ ಸ್ವತಃ ಆಚಾರ್ಯನೇ ಪ್ರಮಾದಿಯಾಗಿದ್ದರೆ ಸಂಪೂರ್ಣ ಸಂಘವೇ ಪ್ರಮಾದಿ ಎನಿಸುತ್ತದೆ ಅಂತಲೇ ಆಚಾರ್ಯರಲ್ಲಿ ಕರ್ತೃತ್ವಗುಣವು ಮುಖ್ಯವಾಗಿರಲಿಕ್ಕೆ ಬೇಕು. ಸಂಪೂರ್ಣ ಸಂಘದ ವೈಯಾವೃತ್ಯವನ್ನು ಮಾಡುವ ಸಾಮರ್ಥ್ಯವು ಯಾರಲ್ಲಿ ಇರುವದೋ ಅವರೇ ಆಚಾರ್ಯಪದಕ್ಕೆ ಯೋಗ್ಯರೆನಿಸುತ್ತಾರೆ ಯಾರಾದರೂ ಆಚಾರಹೀನರಿದ್ದರೆ ಅವರಿಂದ ಶುದ್ಧ ಆಚರಣೆಯನ್ನು ಇಡಿಸುತ್ತಾರೆ. ಮಂದಜ್ಞಾನಿಗಳಿದ್ದರೆ ಅವರಿಗೆ ತಿಳಿಸಿ ಹೇಳಿ, ಚಾರಿತ್ರದಲ್ಲಿ ಸ್ಥಿರಗೊಳಿಸುತ್ತಾರೆ. ಅನೇಕರಿಗೆ ಪ್ರಾಯಶ್ಚಿತ್ತವನ್ನು ಕೊಟ್ಟು ಶುದ್ಧಗೊಳಿಸುತ್ತಾರೆ ಕೆಲವರಿಗೆ ಉಪದೇಶವಿತ್ತು ದೃಢಗೊಳಿಸುವರು. ಅಂಥ ಆಚಾರ್ಯ ಧನ್ಯ! ಅವರಿಗೆ ಯಾರು ಶರಣು ಹೋಗುವರೋ ಅವರನ್ನು ಅವರು ಮೋಕ್ಷದ ಮಾರ್ಗಕ್ಕೆ ಹಚ್ಚಿ ಉದ್ಧಾರ ಮಾಡುತ್ತಾರೆ. ಅಂತಲೇ ಆಚಾರ್ಯರಲ್ಲಿ ಪ್ರಕರ್ತಾ ಎಂಬ ಗುಣವು ಮುಖ್ಯವಾಗಿರುತ್ತದೆ

(೫) ಅಪಾಯಕ್ಕೆ ಉಪಾಯವನ್ನು ಸೂಚಿಸುವ ಐದನೆಯ ಗುಣವೂ ಕೂಡ ಆಚರ್ಯರಲ್ಲಿ ಇರಲಿಕ್ಕೆ ಬೇಕು ಅದರ ವಿವರ ಹೀಗಿದೆ —ಅನೇಕ ಸಾಧುಗಳು ಹಸಿವು, ನೀರಡಿಕೆ, ರೋಗ ಮೊದಲಾದವುಗಳ ವೇದನೆಯಿಂದ ಪೀಡಿತರಾಗಿ ದುಃಖಕ್ಕೆ ಒಳಗಾಗುತ್ತಾರೆ ಒಮ್ಮೊಮ್ಮೆ ತೀವ್ರ ರಾಗ-ದ್ವೇಷಗಳ ಅಧೀನರಾಗುತ್ತಾರೆ ಅಲ್ಲದೆ ಲಜ್ಜೆ ಭಯಗಳಿಂದ ಯಥಾಸ್ಥಿತಿ ವಿಚಾರವನ್ನೂ ಕೂಡ ಮಾಡದೆ ಹೋಗುತ್ತಾರೆ. ಆಗ ರತ್ನತ್ರಯಗಳನ್ನು ಧಾರಣಮಾಡುವ ಉತ್ಸಾಹವಿಲ್ಲದಂತಾಗಿ ಧರ್ಮದಲ್ಲಿ ಶಿಥಿಲತೆಯುಳ್ಳವರಾಗುತ್ತಾರೆ ಇಂಥ ಸಂದರ್ಭದಲ್ಲಿ ಅವರಿಗೆ ರತ್ನತ್ರಯದ ನಾಶದಿಂದ ಆಗುವ ಅಪಾಯವನ್ನೂ ಅವುಗಳ ರಕ್ಷಣದಿಂದಾಗುವ ಕಲ್ಯಾಣವನ್ನು ವಿವರಿಸಿ ಹೇಳುವ ಕಾರ್ಯವನ್ನು ಆಚಾರ್ಯನು ಮಾಡುತ್ತಾನೆ ಅಲ್ಲದೆ ಆ ಶಿಷ್ಯನಾದ ಸಾಧುವು ರತ್ನತ್ರಯದ ನಾಶಕ್ಕೆ ಹೆದರುವಂತೆ ಮಾಡುವನು ರತ್ನತ್ರಯಗಳ ನಾಶದಿಂದ ತಮ್ಮ ನಾಶವೂ ಆಗಿ ನರಕಾದಿ ಕುಗತಿಗಳಲ್ಲಿ ಕೂಡಲೇ ಬೀಳಬೇಕಾದೀತು, ರತ್ನತ್ರಯ-ಗಳನ್ನು ಸಂರಕ್ಷಿಸುವುದರಿಂದ ಸಂಸಾರದಿಂದ ಉದ್ಧಾರವಾಗಿ ಅನಂತ ಸುಖದ ಪ್ರಾಪ್ತಿಯು ನಿಶ್ಚಿತವಾಗಿ ಆಗುತ್ತದೆ. ಇಂದ ಉಪದೇಶದ ಸಾಮರ್ಥ್ಯವು ಯಾರಲ್ಲಿ ಇರುವದೋ ಅವರು ಅಪಾಯೋಪಾಯವಿದರ್ಶಿ ಎಂಬ ಗುಣದ ಧಾರಕ ಆಚಾರ್ಯರೆನಿಸುತ್ತಾರೆ

(೬) ಇನ್ನು ಅವಪೀಡಕ ಎಂಬ ಹೆಸರಿನ ಆರನೆಯ ಗುಣದ ವಿವರ ಹೇಳುತ್ತಾರೆ. ರತ್ನತ್ರಯವನ್ನು ಧಾರಣ ಮಾಡಿದಂಥ ಅನೇಕ ಮುನಿಗಳು ಲಜ್ಜೆ, ಭಯ, ಅಭಿಮಾನ ಇಲ್ಲವೆ ಗೌರವಗಳಿಂದ ತಾವು ಮಾಡಿದ ದೋಷಗಳ ಆಲೋಚನೆಯನ್ನು ಸರಿಯಾಗಿ ಮಾಡುತ್ತಿರುವದಿಲ್ಲ ಇಂಥವರಿಗೆ ಆಚಾರ್ಯರು ಮಧುರ ಹಾಗೂ ಅಂತಃಕರಣಕ್ಕೆ ಒಪ್ಪುವಂಥ ಶಬ್ದಗಳಲ್ಲಿ ತಿಳಿಸಿ ಹೇಳುವರು —'ಎಲೈ, ಅತ್ಯಂತ ದುರ್ಲಭವಾದ ರತ್ನತ್ರಯಗಳ ಲಾಭವು ನಿಮಗೆ ಆಗಿದೆ ಅವುಗಳನ್ನು ನೀವು ವ್ಯರ್ಥವಾಗಿ ಕಳೆದುಕೊಳ್ಳಬೇಡಿರಿ ತಂದೆತಾಯಿಗಳಂಥ ಗುರುಗಳ ಹತ್ತಿರ ನಿಮ್ಮ ದೋಷಗಳನ್ನು ಹೇಳಿಕೊಳ್ಳುವುದರಲ್ಲಿ ಲಜ್ಜೆ ಏನು? ನಿಮ್ಮ ಗುರುಗಳು ವಾತ್ಸಲ್ಯಗುಣದ ಧಾರಕರಿರುತ್ತಾರೆ. ಅವರು ತಮ್ಮ ಶಿಷ್ಯರ ದೋಷಗಳನ್ನು ಪ್ರಕಟಗೊಳಿಸಿ ಶಿಷ್ಯನಿಗೂ ಧರ್ಮಕ್ಕೂ ಕಲಂಕ ಹಚ್ಚಲಾರರು. ಅದಕ್ಕಾಗಿ ನೀವು ಮನಸ್ಸಿನಲ್ಲಿ ಯಾವ ಶಲ್ಯವನ್ನೂ ಇಡದೆ ಆಲೋಚನೆಯನ್ನು ಮಾಡಿರಿ ಯಾವುದರಿಂದ ನಿಮ್ಮ ರತ್ನತ್ರಯಗಳ ಶುದ್ಧಿಯೂ ತಪಶ್ಚರಣಗಳ ನಿರ್ವಾಹವೂ ಆಗುವುದೋ ಅಂಥ ಪ್ರಾಯಶ್ಚಿತ್ತವನ್ನೇ ದ್ರವ್ಯ, ಕ್ಷೇತ್ರ, ಕಾಲ, ಭಾವಗಳನ್ನು ಗಮನದಲ್ಲಿಟ್ಟು ನಿಮಗೆ ಕೊಡಲಾದೀತು. ಅದಕ್ಕಾಗಿ ನೀವು ಅಂಜಿಕೆಯನ್ನು ಬಿಟ್ಟು ವಿಚಾರ ಮಾಡಿರಿ." ಇಷ್ಟು ಹೇಳಿಯೂ ಕೂಡ ಯಾರು ಮಾಯಾ ಶಲ್ಯವನ್ನು ಬಿಡುವದಿಲ್ಲವೋ ಅವರಿಗೆ ಆಚಾರ್ಯನು ಆಗ್ರಹದಿಂದ ಅವರ

ಶಲ್ಯವನ್ನು ಹೊರಗೆಳೆಯುವ ಉದ್ದೇಶದಿಂದ ಹೀಗೆ ಹೇಳುವನು —"ಎಲೈ ಮುನಿಯೇ, ನಿಮ್ಮ ಕಡೆಯಿಂದ ಈ ದೋಷವು ಆಗಿದೆಯೋ ಇಲ್ಲವೋ, ನಿಜವಾಗಿ ಹೇಳಿರಿ ನೋಡುವಾ?" ಇದನ್ನು ಕೇಳಿದ ಕೂಡಲೆ ಗುರುವಿನ ತಪಸ್ಸಿನ ಪ್ರಭಾವದಿಂದ ಶಿಷ್ಯನು ಮಾಯಾ ಶಲ್ಯವನ್ನು ತೊರೆದು ನಿಜವಾದ ಸಂಗತಿಯನ್ನು ಹೇಳಹತ್ತುವನು ಆಗ ಆ ಶಿಷ್ಯನ ಗತಿಯು ಸಿಂಹವನ್ನು ನೋಡಿದ ಕೂಡಲೆ ತಿಂದ ಮಾಂಸವನ್ನು ಕಾರುವ ನರಿಯಂತೆ ಆಗಿರುತ್ತದೆ ಇಲ್ಲವೆ ತೇಜಸ್ವಿಯಾದ ರಾಜನ ಮುಂದೆ ನಿಂತ ಆರೋಪಿಯಂತೆ ಆಗುತ್ತದೆ. ಇಷ್ಟಾಗಿಯೂ ಅವನು ನಿಜವನ್ನು ಹೇಳುವದಿಲ್ಲ-ವೆಂದು ಕಂಡು ಬಂದರೆ ಆಚಾರ್ಯನು ತಿರಸ್ಕಾರಯುಕ್ತ ಸ್ವರದಿಂದ ಹೀಗೆ ಅನ್ನುವನು "ಎಲೈ ಮುನಿಯೆ, ನೀವು ನಮ್ಮ ಸಂಘದೊಳಗಿಂದ ಹೊರಟು ಹೋಗಿರಿ ನಮ್ಮ ಹತ್ತರ ನಿಮ್ಮ ಪ್ರಯೋಜನವಾದರೂ ಏನಿದೆ? ಯಾರಿಗೆ ತಮ್ಮ ಶರೀರಕ್ಕೆ ಹತ್ತಿದ ಮಲವನ್ನು ತೊಳೆಯುವ ಅಪೇಕ್ಷೆ ಇದೆಯೋ ಅವರು ನಿರ್ಮಲ ಜಲದಿಂದ ತುಂಬಿದ ಸರೋವರದ ಹತ್ತರ ಹೋದಾರು ಯಾರಿಗೆ ತಮ್ಮ ಭಯಂಕರ ರೋಗವು ನಷ್ಟವಾಗಲೆಂಬ ಇಚ್ಛೆಯು ಇರುವುದೋ ಅವರು ಪ್ರವೀಣನಾದ ವೈದ್ಯನ ಸಲಹೆಯಂತೆ ವರ್ತಿಸಿಯಾರು ಹಾಗೆಯೇ ರತ್ನತ್ರಯ ರೂಪಿಯಾದ ಪರಮ ಧರ್ಮದ ಅತಿಚಾರಗಳನ್ನು ಕಳೆದುಕೊಂಡು, ನಿರ್ಮಲ ಧರ್ಮಾಚರಣೆಯ ಇಚ್ಛೆಯುಳ್ಳವರಿರುವರೋ ಅವರೇ ಗುರುಗಳ ಆಶ್ರಯದಲ್ಲಿ ನಿಂತಾರು. ನಿಮಗೆ ರತ್ನತ್ರಯವನ್ನು ಶುದ್ಧಗೊಳಿಸುವ ಇಚ್ಛೆಯಿಲ್ಲ ಅಂದಮೇಲೆ ಈ ಮುನಿತ್ವವನ್ನು ಧಾರಣಮಾಡುವುದು, ನಗ್ನನಾಗಿದ್ದು ಹಸಿವು ಮೊದಲಾದ ಪರೀಷಹಗಳನ್ನು ಸಹನ ಮಾಡುವ ನಟನೆಯನ್ನು ಮಾಡುವುದು, ಇವುಗಳ ಉಪಯೋಗವಾದರೂ ಏನು? ಕರ್ಮದ ಸಂವರ ಹಾಗೂ ನಿರ್ಜರೆಗಳು ಕಷಾಯಗಳನ್ನು ಗೆಲ್ಲುವುದರಿಂದ ಆಗುತ್ತವೆ ನೀವು ಮಾಯಾ ಕಷಾಯವನ್ನು ತ್ಯಾಗಮಾಡದೆ ಇದ್ದರೆ ವ್ರತ, ಸಂಯಮ, ಮೌನಧಾರಣ ಇವೆಲ್ಲವೂ ವ್ಯರ್ಥವಾಗಿವೆ ಒಳಗೆ ಮಾಯಾಚಾರವನ್ನಿಟ್ಟು ನಗ್ನವಾಗಿರುವುದು, ಮತ್ತು ಪರೀಷಹಗಳನ್ನು ಸಹನ ಮಾಡುವುದು ನಿರರ್ಥಕವಾಗಿದೆ ಹಾಗಿದ್ದರೆ ತಿರ್ಯಂಚ ಪ್ರಾಣಿಗಳೂ ಸಹ ನಗ್ನವಾಗಿರುತ್ತವೆ ನೀವು ದೂರಭವ್ಯರಾಗಿದ್ದೀರಿ. ನಿಮ್ಮ ಕಲ್ಯಾಣವಾಗುವ ವೇಳೆಯು ಇನ್ನೂ ಬಂದಿಲ್ಲ ನಮಗೆ ನಮಸ್ಕಾರ ಮಾಡಲಿಕ್ಕೆ ನೀವು ಯೋಗ್ಯರಲ್ಲ ನಿಮ್ಮ ಮನಸ್ಸಿನಲ್ಲಿರುವ ನಿಮ್ಮ ದೋಷವು ಪ್ರಕಟವಾಯಿತೆಂದರೆ ಎಲ್ಲೆಡೆಗೂ ನಿಂದೆಯಾದೀತು ನಿಮ್ಮ ದೊಡ್ಡಸ್ತನವು ಕಡಿಮೆಯಾದೀತು ಹೀಗೆ ನಿಮಗೆ ಎನಿಸುವುದೂ ಬಂಧಕ್ಕೆ ಕಾರಣವಿದೆ. ಮುನಿಯು ಸ್ತುತಿ ನಿಂದೆಗಳಲ್ಲಿ ಸಮಾನವಾದ ಪರಿಣಾಮವನ್ನು ಇಡಲಿಕ್ಕೆ ಬೇಕು." ಇವೇ ಮೊದಲಾದ ಕಠೋರ ಶಬ್ದಗಳನ್ನು ಆಡಿ, ಅವರ ಮಾಯಾಚಾರವನ್ನು ಇಲ್ಲದಂತೆ ಮಾಡುತ್ತಾರೆ ಇದು ಆಚಾರ್ಯರ ಅವಪೀಡಕ ಗುಣವೆಂದು ತಿಳಿಯಬೇಕು ಅವಪೀಡಕ ಆಚಾರ್ಯನು ಉಪಸರ್ಗ, ಪರೀಷಹಗಳು ಬಂದರೂ ಗಾಬರಿಯಾಗಲಾರನು ಅವನು ಬಲವಂತನೂ ಧೈರ್ಯವಂತನೂ ಇರುವುದರಿಂದ ಅವುಗಳನ್ನು ಅವನು ಸಹನ ಮಾಡುವನು ಅವನ ಪ್ರಭಾವವೂ ಕೂಡ ಹಾಗೆಯೇ ಇರುತ್ತದೆ ಅವನ ವಚನವನ್ನು ಯಾರಿಗೂ ಉಲ್ಲಂಘನ ಮಾಡಲಿಕ್ಕೆ ಆಗುವದಿಲ್ಲ ಆಚಾರ್ಯನ ಪ್ರತಾಪದ ಮುಂದೆ ದೋಷಧಾರಿಯಾದ ಸಾಧುವೂ ಸಹ ಹೆದರಿ ಗಡ ಗಡ ನಡುಗುತ್ತಾನೆ ಅವನನ್ನು ನೋಡಿ, ದೊಡ್ಡ ದೊಡ್ಡ ವಿದ್ವಾಂಸರೂ ಸಹ ನಮ್ರರಾಗಿ ವಂದನೆ ಮಾಡುತ್ತಾರೆ ಅವರ ಕೀರ್ತಿಯ ಸುಗಂಧವು ಅವರ ಗುಣಗಳ ವಿಷಯದಲ್ಲಿ ಉತ್ಕಟ ಪ್ರೇಮವನ್ನು ಉತ್ಪನ್ನ ಮಾಡುವಷ್ಟು ಪಸರಿಸಿರುತ್ತದೆ ಅವರ ವಚನಗಳು ದೂರ ದೂರ ದೇಶಗಳಲ್ಲಿಯೂ ಕೂಡ ಪ್ರಮಾಣವೆನಿಸುತ್ತವೆ ಇಂಥ ಅವಪೀಡಕ ಆಚಾರ್ಯರು ಸಿಂಹನಂತೆ ನಿರ್ಭಯರಾಗಿದ್ದು, ಶಿಷ್ಯರ ಹಿತವು ಯಾವ ಉಪಾಯದಿಂದ ಆದೀತೋ ಅಂಥ ಉಪಾಯಗಳಿಂದ ಅವರ ಮೇಲೆ ಉಪಕಾರ ಮಾಡುತ್ತಿರುತ್ತಾರೆ ತಾಯಿಯು ತನ್ನ ಮಗುವಿನ ಹಿತಕ್ಕಾಗಿ, ಅದು ಅಳುತ್ತಿದ್ದರೂ ಅದಕ್ಕೆ ಆಗ್ರಹದಿಂದ ಹಾಲನ್ನು ಕುಡಿಸುತ್ತಾಳೆ ಹಾಗೆಯೇ ಶಿಷ್ಯನ ಹಿತವನ್ನು ಚಿಂತಿಸುವ ಆಚಾರ್ಯನೂ ಕೂಡ ಮಾಯಾ ಶಲ್ಯವನ್ನು ಇಟ್ಟುಕೊಳ್ಳುವಂಥ ಶಿಷ್ಯನ ದೋಷಗಳನ್ನು ಬಲಾತ್ಕಾರದಿಂದ ಬಿಡಿಸುವನು ಔಷಧವು ಮೊದಲು ಕಹಿ ಎನಿಸುತ್ತದೆ. ಆದರೆ ಅದು ಕೊನೆಗೆ ಹಿತಕರವೆನಿಸುತ್ತದೆ ಕೇವಲ ಸವಿಯಾದ ಮಾತುಗಳನ್ನು ಆಡುತ್ತ ಶಿಷ್ಯರ ದೋಷಗಳನ್ನು ಕಳೆಯದಿರುವಂಥವನು ನಿಜವಾದ ಸಾಧುವಲ್ಲ, ಗುರುವೂ ಅಲ್ಲ ಯಾರು ಹೊಡೆದೂ ಕೂಡ ಶಿಷ್ಯರ ದೋಷಗಳನ್ನು ದೂರ ಮಾಡುವರೋ ಅವರಿಗೇ ಅವಪೀಡಕ ಗುಣವನ್ನು ಧಾರಣಮಾಡಿದ ಆಚಾರ್ಯರೆನ್ನಬೇಕು.

(೭) ಇನ್ನು ಅಪರಿಸ್ರಾವೀ ಗುಣವನ್ನು ಹೇಳುವರು ಶಿಷ್ಯನು ತನ್ನ ದೋಷಗಳನ್ನು ಗುರುವಿನ ಮುಂದೆ ಆಲೋಚಿಸಿ ಹೇಳುತ್ತಾನೆ ಆ ದೋಷಗಳನ್ನು ಗುರುವು ಪ್ರಕಟಮಾಡಬಾರದು. ಕಾಯ್ದ ಕಬ್ಬಿಣದ ಗುಂಡಿನ

ಮೇಲೆ ಹೊಯ್ದ ನೀರಿನ ಅಂಶವು ಸುಟ್ಟು ಹೋಗಿ ಹೇಗೆ ಪುನಃ ಕಾಣಿಸಲಾರದೋ ಹಾಗೆಯೇ ಶಿಷ್ಯನ ಕಡೆಯಿಂದ ಕೇಳಿದ ದೋಷವನ್ನು ಪುನಃ ಯಾರಿಗೂ ತಿಳಿಯಗೊತಬಾರದು ಇದು ಆಚಾರ್ಯನ ಅಪರಿಸ್ರಾವೀ ಎಂಬ ಹೆಸರಿನ ಗುಣವಾಗಿದೆ. ಶಿಷ್ಯನು ವಿಶ್ವಾಸದಿಂದ ಗುರುವಿಗೆ ತನ್ನ ದೋಷಗಳನ್ನು ತಿಳಿಸುತ್ತಾನೆ. ಅಂದಮೇಲೆ ಶಿಷ್ಯನು ಗುರುವಿನ ದೋಷಗಳನ್ನು ಪ್ರಕಟಮಾಡಿದರೆ ಅವನು ಗುರುವಲ್ಲ ಅವನು ಅಧಮ ವಿಶ್ವಾಸ ಘಾತಕಿ ಎನಿಸುತ್ತಾನೆ ಕೆಲವು ಜನ ಶಿಷ್ಯರು ತಮ್ಮ ದೋಷವು ಪ್ರಕಟವಾದುದನ್ನು ತಿಳಿದು ದುಃಖಿಗಳಾಗುತ್ತಾರೆ. ಒಮ್ಮೊಮ್ಮೆ ಆತ್ಮ ಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಇಲ್ಲವೆ ಸಿಟ್ಟಿಗೆ ಬಂದು ರತ್ನತ್ರಯ ಧರ್ಮವನ್ನೇ ತ್ಯಜಿಸುತ್ತಾರೆ. ಮೇಲಾಗಿ ಗುರುವಿನ ದುಷ್ಟತನವನ್ನು ನೋಡಿ, ನನ್ನ ಅವಮಾನವನ್ನು ಇವನು ಮಾಡಿದಂತೆ ನಿಮ್ಮ ಅವಮಾನವನ್ನು ಮಾಡಿಯಾನು ಎಂದು ಸಂಘಕ್ಕೆ ಹೇಳಿ, ಅನ್ಯ ಸಂಘವನ್ನು ಸೇರುತ್ತಾನೆ ಇದರಿಂದ ಸಂಪೂರ್ಣ ಸಂಘದ ವಿಶ್ವಾಸವು ಆಚಾರ್ಯರ ಮೇಲಿಂದ ಹಾರಿಹೋಗುತ್ತದೆ ಎಲ್ಲರೂ ಆಚಾರ್ಯರನ್ನು ತ್ಯಜಿಸುವರು ಅದಕ್ಕಾಗಿ ಅಪರಿಸ್ರಾವೀ ಗುಣದ ಧಾರಕನೇ ಆಚಾರ್ಯ ಪದಕ್ಕೆ ಯೋಗ್ಯನಾಗಿರುವನು

(೮) ಇನ್ನು ಆಚಾರ್ಯರ ನಿರ್ಯಾಪಕ ಎಂಬ ಹೆಸರಿನ ಎಂಟನೆಯ ಗುಣವನ್ನು ಹೇಳುವರು ನಾವಿಕನು ತನ್ನ ನಾವನ್ನು ನಡೆಯಿಸುವಾಗ ಅನೇಕ ತೊಂದರೆಗಳನ್ನು ತಪ್ಪಿಸಿ ನಾವನ್ನು ಆಚೆಯ ತೀರಕ್ಕೆ ಒಯ್ಯುವನು. ಹಾಗೆಯೇ ಯಾವ ಆಚಾರ್ಯನು ಶಿಷ್ಯರನ್ನು ಅನೇಕ ವಿಘ್ನಗಳಿಂದ ಉಳಿಸಿ, ಸಂಸಾರ ಸಮುದ್ರದೊಳಗಿಂದ ಪಾರುಗೊಳಿಸುವನೋ ಅವನೇ ನಿರ್ಯಾಪಕ ಗುಣದ ಆಚಾರ್ಯನಾಗಿದ್ದಾನೆ

ಇಂಥ ಗುಣಗಳನ್ನು ಧರಿಸಿರುವ ಆಚಾರ್ಯರ ಗುಣಗಳಲ್ಲಿ ಅನುರಾಗ ಇರುವುದಕ್ಕೆ ಆಚಾರ್ಯಭಕ್ತಿ ಎನ್ನುವರು. ಹೀಗೆ ಆಚಾರ್ಯರ ಗುಣಗಳ ಸ್ಮರಣೆಯನ್ನು ಮಾಡಿ ಅವರ ಸ್ತುತಿಗಳನ್ನು ಮಾಡುವೆ, ಅವರಿಗೆ ನಾನು ವಂದಿಸುತ್ತೇನೆ; ಮತ್ತು ಅರ್ಘ್ಯವನ್ನು ಅರ್ಪಿಸುತ್ತೇನೆ. ಇದು ಪಾಪರೂಪದ ಸಂಸಾರದ ಪರಂಪರೆಯನ್ನು ನಾಶಗೊಳಿಸಿ ಅಕ್ಷಯ ಸುಖವನ್ನು ಒದಗಿಸುತ್ತದೆ

## ೧೨. ಬಹುಶ್ರುತಭಕ್ತಿ

ಇನ್ನು ಬಹುಶ್ರುತಭಕ್ತಿ ಎಂಬ ಹೆಸರಿನ ಹನ್ನೆರಡನೆಯ ಭಾವನೆಯ ವರ್ಣನೆಯನ್ನು ಮಾಡುತ್ತಾರೆ ಯಾರು ಜಿನಾಗಮಗಳ ಪೂರ್ವ ಹಾಗೂ ಅಂಗಗಳನ್ನು ಅಭ್ಯಸಿಸಿರುವರೋ, ನಾಲ್ಕು ಅನುಯೋಗಗಳನ್ನು ತಿಳಿದು-ಕೊಂಡಿರುವರೋ, ಮೇಲಾಗಿ ನಿರಂತರ ಪರಮಾಗಮದ ಅಭ್ಯಾಸವನ್ನು ಮಾಡುವರೋ, ಅಲ್ಲದೆ ಶಿಷ್ಯರಿಂದಲೂ ಮಾಡಿಸುವರೋ ಅವರು ಬಹುಶ್ರುತರೆನಿಸುತ್ತಾರೆ ಇವರಿಗೆ ಶ್ರುತಜ್ಞಾನವೆಂಬುದೇ ದಿವ್ಯವಾದ ನೇತ್ರವು. ತನ್ನ ಹಾಗೂ ಇತರರ ಹಿತವನ್ನು ಮಾಡುವುದರಲ್ಲಿ ಇವರು ಯಾವಾಗಲೂ ಪ್ರವೃತ್ತರಾಗಿರುತ್ತಾರೆ. ಜೈನ ಸಿದ್ಧಾಂತವನ್ನೂ ಅನ್ಯ ಏಕಾಂತ ಮತದ ಸಿದ್ಧಾಂತಗಳನ್ನೂ ವಿವರವಾಗಿ ತಿಳಿದುಕೊಂಡಿರುತ್ತಾರೆ ಪರಮ ವಿದ್ಯೆಯೆನಿಸುವ ಸ್ಯಾದ್ವಾದವನ್ನು ಹೊಂದಿರುತ್ತಾರೆ ಇಂಥವರಿಗೆ ಶ್ರುತಭಕ್ತರೆನ್ನಬೇಕು. ಅವರ ಭಕ್ತಿಯೇ ಬಹುಶ್ರುತಭಕ್ತಿಯು. ಬಹುಶ್ರುತದ ಮಹಿಮೆಯನ್ನು ವರ್ಣಿಸಲಿಕ್ಕೆ ಯಾರು ಸಮರ್ಥರಾಗಿದ್ದಾರೆ? ನಿರಂತರ ಜ್ಞಾನದಾನವನ್ನು ಮಾಡುವಂಥ ಉಪಾಧ್ಯಾಯರ ಭಕ್ತಿಯನ್ನು ವಿನಯ ಸಹಿತ ಯಾರು ಮಾಡುವರೋ ಅವರು ಶಾಸ್ತ್ರರೂಪೀ ಸಮುದ್ರದ ಪಾರಗಾಮಿ-ಗಳಾಗುತ್ತಾರೆ ಅಂಗ, ಪೂರ್ವ, ಪ್ರಕೀರ್ಣಕಗಳೆಂದು ವಿಂಗಡಿಸಿ ಜಿನೇಂದ್ರ ದೇವರು ವರ್ಣಿಸಿರುವ ಸಮಸ್ತ ಜಿನಾಗಮವನ್ನು ಸ್ವತಃ ಅಭ್ಯಸಿಸಿ, ಇತರರಿಗೂ ಅಭ್ಯಾಸಮಾಡಲಿಕ್ಕೆ ಹಚ್ಚುವರೋ ಅವರು ಬಹುಶ್ರುತರು ಇನ್ನು ಹನ್ನೆರಡು ಅಂಗ ಮತ್ತು ಹದಿನಾಲ್ಕು ಪೂರ್ವಗಳಲ್ಲಿ ಪ್ರತಿಯೊಂದರಲ್ಲಿಯೂ ಏನೇನು ವರ್ಣಿಸಿದೆ? ಅವುಗಳ ಪದ ಸಂಖ್ಯೆ ಎಷ್ಟು?—ಎಂಬುದರ ವಿವರ ಹೀಗಿದೆ—

೧. ಆಚಾರಾಂಗದಲ್ಲಿ ಹದಿನೆಂಟು ಸಾವಿರ ಪದಗಳು ಇವೆ ಅದರಲ್ಲಿ ಮುನಿಧರ್ಮದ ವರ್ಣನೆ ಇದೆ

೨ ಸೂತ್ರಕೃತಾಂಗದಲ್ಲಿ ಮೂವತ್ತಾರು ಸಾವಿರ ಪದಗಳಿವೆ ಇದರಲ್ಲಿ ಜೈನ ಶಾಸ್ತ್ರದ ಆರಾಧನೆಯನ್ನು ಹೇಗೆ ಮಾಡಬೇಕೆಂಬುದರ ಕ್ರಿಯೆಗಳನ್ನು ವಿವರಿಸಿದ್ದಾರೆ

೩ ಸ್ಥಾನಾಂಗದಲ್ಲಿ ನಲವತ್ತೆರಡು ಸಾವಿರ ಪದಗಳಿವೆ ಅದರಲ್ಲಿ ಆರು ದ್ರವ್ಯಗಳ ಅನೇಕ ಸ್ಥಾನದ ವರ್ಣನೆಯಿದೆ.

೪ ಸಮವಾಯಾಂಗದಲ್ಲಿ ಒಂದು ಲಕ್ಷ ಅರವತ್ತು ನಾಲ್ಕು ಸಾವಿರ ಪದಗಳಿವೆ ಇದರಲ್ಲಿ ಜೀವಾದಿ ಪದಾರ್ಥಗಳನ್ನು ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವ ಇವುಗಳ ಆಶ್ರಯದಿಂದ ವರ್ಣಿಸಲಾಗಿದೆ

೫ ವ್ಯಾಖ್ಯಾಪ್ರಜ್ಞಪ್ತಿ ಅಂಗಕ್ಕೆ ಎರಡು ಲಕ್ಷ ಇಪ್ಪತ್ತೆಂಟು ಸಾವಿರ ಪದಗಳಿವೆ ಅದರಲ್ಲಿ ಜೀವವನ್ನು ಅಸ್ತಿ ನಾಸ್ತಿ ಮೊದಲಾದ ಪ್ರಕಾರಗಳಿಂದ ಗಣಧರರು ವರ್ಣಿಸಿದ ಅರವತ್ತು ಸಾವಿರ ಪದಗಳ ವರ್ಣನೆಯಿದೆ

೬. ಜ್ಞಾತೃಧರ್ಮಕಥಾ ಅಂಗಕ್ಕ ಐದು ಲಕ್ಷ ಐವತ್ತಾರು ಸಾವಿರ ಪದಗಳಿವೆ ಅದರಲ್ಲಿ ಗಣಧರರು ಮಾಡಿದ ಪ್ರಶ್ನೆಗಳಿಗೆ ಅನುಸರಿಸಿ ಜೀವಾದಿಗಳ ಸ್ವಭಾವದ ವರ್ಣನೆಯಿದೆ

೭. ಉಪಾಸಕಾಧ್ಯಯನ ಅಂಗಕ್ಕೆ ಹನ್ನೊಂದು ಲಕ್ಷ ಎಪ್ಪತ್ತು ಸಾವಿರ ಪದಗಳಿವೆ ಇದರಲ್ಲಿ ಶ್ರಾವಕರ ವ್ರತಶೀಲ ಮತ್ತು ಆಚಾರಾದಿ ಕ್ರಿಯೆಗಳನ್ನೂ ಮಂತ್ರಗಳನ್ನೂ ವರ್ಣಿಸಲಾಗಿದೆ.

೮ ಅಂತಕೃದ್‌ದಶಾಂಗಕ್ಕೆ ಇಪ್ಪತ್ತು ಮೂರು ಲಕ್ಷ ಇಪ್ಪತ್ತೆಂಟು ಸಾವಿರ ಪದಗಳಿವೆ ಅದರಲ್ಲಿ ಒಬ್ಬೊಬ್ಬ ತೀರ್ಥಂಕರರ ತೀರ್ಥದಲ್ಲಿ ಹತ್ತು ಹತ್ತು ಮುನಿಗಳು ಉಪಸರ್ಗವನ್ನು ಸಹನಮಾಡಿ, ನಿರ್ವಾಣಹೊಂದಿ-ದ್ದಾರೆ ಅವರ ವರ್ಣನೆಯಿದೆ

೯. ಅನುತ್ತರೋಪಪಾದಕ ದಶಾಂಗಕ್ಕೆ ತೊಂಭತ್ತೆರಡು ಲಕ್ಷ ನಲವತ್ತು ನಾಲ್ಕು ಸಾವಿರ ಪದಗಳಿವೆ. ಇದರಲ್ಲಿ ಒಬ್ಬೊಬ್ಬ ತೀರ್ಥಂಕರನ ತೀರ್ಥದಲ್ಲಿ ಹತ್ತು ಹತ್ತು ಮುನೀಶ್ವರರು ಭಯಂಕರ ಘೋರ ಉಪಸರ್ಗವನ್ನು ಸಹನಮಾಡಿ, ದೇವತೆಗಳಿಂದ ಪೂಜಿಸಲ್ಪಟ್ಟು, ವಿಜಯಾದಿ ಅನುತ್ತರ ವಿಮಾನಗಳಲ್ಲಿ ಜನ್ಮಿಸಿದರು ಅವರ ವರ್ಣನೆಯು ಇದೆ

೧೦ ಪ್ರಶ್ನವ್ಯಾಕರಣವೆಂಬ ಹೆಸರಿನ ಅಂಗದಲ್ಲಿ ತೊಂಬತ್ತುಮೂರು ಲಕ್ಷ ಹದಿನಾರು ಸಾವಿರ ಪದಗಳಿವೆ. ಅದರಲ್ಲಿ ನಷ್ಟ, ಮೃಷ್ಟ, ಲಾಭ, ಅಲಾಭ, ಸುಖ, ದುಃಖ, ಜೀವಿತ ಮತ್ತು ಮರಣ ಮೊದಲಾದವುಗಳ ವರ್ಣನೆಯು ಇದೆ

೧೧. ವಿಪಾಕ ಸೂತ್ರಕ್ಕೆ ಒಂದು ಕೋಟಿ ಎಂಬತ್ತು ನಾಲ್ಕು ಲಕ್ಷ ಪದಗಳಿವೆ. ಅದರಲ್ಲಿ ಕರ್ಮದ ಉದಯ, ಉದೀರಣಾ ಮತ್ತು ಸತ್ತಾ ಇವುಗಳ ವರ್ಣನೆಯು ಇದೆ.

೧೨ ದೃಷ್ಟಿವಾದನೆಂಬ ಹನ್ನೆರಡನೆಯ ಅಂಗವಿದೆ ಅದರಲ್ಲಿ ಐದು ಭೇದಗಳಿವೆ (೧) ಪರಿಕರ್ಮ, (೨) ಸೂತ್ರ, (೩) ಪ್ರಥಮಾನುಯೋಗ, (೪) ಪೂರ್ವ, (೫) ಚೂಲಿಕಾ.

ಇದರಲ್ಲಿ ಪರಿಕರ್ಮದಲ್ಲಿಯೂ ಐದು ಭೇದಗಳಿವೆ (೧) ಚಂದ್ರಪ್ರಜ್ಞಪ್ತಿ, (೨) ಸೂರ್ಯಪ್ರಜ್ಞಪ್ತಿ, (೩) ಜಂಬೂ ದ್ವೀಪ ಪ್ರಜ್ಞಪ್ತಿ, (೪) ದ್ವೀಪಸಾಗರ ಪ್ರಜ್ಞಪ್ತಿ, (೫) ವ್ಯಾಖ್ಯಾಪ್ರಜ್ಞಪ್ತಿ

ಚಂದ್ರ ಪ್ರಜ್ಞಪ್ತಿಗೆ ಆರು ಲಕ್ಷ ಐದು ಸಾವಿರ ಪದಗಳು ಇರುತ್ತವೆ ಅದರಲ್ಲಿ ಚಂದ್ರನ ಆಯುಷ್ಯ ಗತಿ, ಕಲೆಗಳ ಹಾನಿವೃದ್ಧಿ, ದೇವಿ, ವೈಭವ, ಪರಿವಾರ ಇತ್ಯಾದಿಗಳ ವರ್ಣನೆಯಿದೆ

ಸೂರ್ಯಪ್ರಜ್ಞಪ್ತಿಗೆ ಐದು ಲಕ್ಷ ಮೂರು ಸಾವಿರ ಪದಗಳಿವೆ ಅದರಲ್ಲಿ ಸೂರ್ಯನ ಆಯುಷ್ಯ, ಗತಿ, ವೈಭವ, ಮೊದಲಾದವುಗಳ ವರ್ಣನೆಯಿದೆ.

ಜಂಬೂದ್ವೀಪ ಪ್ರಜ್ಞಪ್ತಿಗೆ ಮೂರು ಲಕ್ಷ ಇಪ್ಪತ್ತೈದು ಸಾವಿರ ಪದಗಳಿವೆ ಅದರಲ್ಲಿ ಜಂಬೂದ್ವೀಪಕ್ಕೆ ಸಂಬಂಧಿಸಿದ ಕ್ಷೇತ್ರ, ಕುಲಾಚಲ, ಪರ್ವತ, ಸರೋವರ, ನದಿ ಮೊಲಾದವುಗಳ ನಿರೂಪಣೆಯಿದೆ

ದ್ವೀಪಸಾಗರ ಪ್ರಜ್ಞಪ್ತಿಗೆ ಐವತ್ತೆರಡು ಲಕ್ಷ ಮೂವತ್ತಾರು ಸಾವಿರ ಪದಗಳಿವೆ ಅದರಲ್ಲಿ ಅಸಂಖ್ಯಾತ ದ್ವೀಪ, ಸಮುದ್ರ, ಮಧ್ಯಲೋಕದೊಳಗಿನ ಜಿನಮಂದಿರ, ಭವನವಾಸಿ, ವ್ಯಂತರ, ಜ್ಯೋತಿಷ್ಕ ದೇವರ ನಿವಾಸಗಳನ್ನು ವರ್ಣಿಸಿದೆ

ವ್ಯಾಖ್ಯಾ ಪ್ರಜ್ಞಪ್ತಿಗೆ ಎಂಬತ್ತು ನಾಲ್ಕು ಲಕ್ಷ ಐವತ್ತಾರು ಸಾವಿರ ಪದಗಳಿವೆ ಅದರಲ್ಲಿ ಜೀವ ಪುದ್ಗಲಾದಿ ದ್ರವ್ಯಗಳ ನಿರೂಪಣೆಯಿದೆ

ಹೀಗೆ ಐದು ಪ್ರಕಾರದ ಪರಿಕರ್ಮದ ಭೇದಗಳಿವೆ—

ಇನ್ನು ದೃಷ್ಟಿವಾದ ಅಂಗದ ಎರಡನೆಯ ಪ್ರಕಾರವಾದ ಸೂತ್ರ ಎಂಬುದರಲ್ಲಿ ಇಪ್ಪತ್ತೆಂಟು ಲಕ್ಷ ಪದಗಳಿವೆ ಅದರಲ್ಲಿ ಜೀವವು ಅಸ್ತಿರೂಪವೇ ಇದೆ, ನಾಸ್ತಿರೂಪವೇ ಇದೆ, ಕರ್ತೃವೇ ಇದೆ, ಭೋಕ್ತೃವೇ ಇದೆ

ವಿದ್ಯೆಯ ಫಲಗಳ ವಿವರ ಹೇಳಿದೆ. ಮೇಲಾಗಿ ಅಂತರಿಕ್ಷ, ಭೌಮ, ಅಂಗ, ಸ್ವರ, ಸ್ವಪ್ನ, ಲಕ್ಷಣ, ವ್ಯಂಜನಾ, ಛಿನ್ನ ಹೀಗೆ ಎಂಟು ಪ್ರಕಾರದ ನಿಮಿತ್ತ ಜ್ಞಾನದ ವರ್ಣನೆಯೂ ಇರುತ್ತದೆ

೧೧. ಕಲ್ಯಾಣವಾದ ಪೂರ್ವಕ್ಕೆ ಇಪ್ಪತ್ತಾರು ಕೋಟಿ ಪದಗಳಿವೆ ಅದರಲ್ಲಿ ತೀರ್ಥಂಕರ, ಚಕ್ರಧರ, ಬಲದೇವ, ವಾಸುದೇವ, ಪ್ರತಿವಾಸುದೇವ ಮೊದಲಾದವರ ಗರ್ಭಕಲ್ಯಾಣವೇ ಮೊದಲಾದ ಮಹಾ ಉತ್ಸವಗಳ ವರ್ಣನೆಯಿದೆ. ಇನ್ನು ಈ ಪದಗಳಿಗೆ ಕಾರಣವಾದ ಹದಿನಾರು ಭಾವನೆಗಳು, ತಪಸ್ಸು, ವಿಶೇಷ ಆಚರಣೆಗಳು, ಚಂದ್ರ, ಸೂರ್ಯ, ಗ್ರಹ, ನಕ್ಷತ್ರಗಳ ಗಮನ, ಗ್ರಹಣ ಮತ್ತು ಶಕುನಗಳ ಫಲವೇ ಮೊದಲಾದವುಗಳ ವರ್ಣನೆಯು ಇದೆ.

೧೨ ಪ್ರಾಣಪ್ರವಾದ ಪೂರ್ವಕ್ಕೆ ಹದಿಮೂರು ಕೋಟಿ ಪದಗಳಿವೆ ಅದರಲ್ಲಿ ಶರೀರ ಚಿಕಿತ್ಸೆಗೆ ಸಂಬಂಧಿಸಿದ ಅಷ್ಟಾಂಗ ಆಯುರ್ವೇದ ಅಂದರೆ ವೈದ್ಯಶಾಸ್ತ್ರ, ವಿವಿಧ ನಾಡಿಗಳ ಸ್ವರೂಪ, ಶ್ವಾಸೋಚ್ಛ್ವಾಸ ಮತ್ತು ಅದರ ಗತಿಗಳಿಗೆ ಅನುಸರಿಸುವ ಹತ್ತು ಪ್ರಕಾರದ ಪ್ರಾಣಗಳಿಗೆ ಉಪಕಾರಕ ಹಾಗೂ ಅನುಪಕಾರಕ ದ್ರವ್ಯದ ವರ್ಣನೆಯಿದೆ

೧೩ ಕ್ರಿಯಾವಿಶಾಲ ಪೂರ್ವಕ್ಕೆ ಒಂಬತ್ತು ಕೋಟಿ ಪದಗಳಿವೆ. ಅದರಲ್ಲಿ ಸಂಗೀತ ಶಾಸ್ತ್ರ, ಛಂದಃ ಶಾಸ್ತ್ರ, ಅಲಂಕಾರ ಶಾಸ್ತ್ರ, ಎಪ್ಪತ್ತೆರಡು ಕಲೆಗಳು, ಸ್ತ್ರೀಯರ ಅರವತ್ತು ನಾಲ್ಕು ಗುಣಗಳು, ಶಿಲ್ಪ ಶಾಸ್ತ್ರ, ಗರ್ಭಾಧಾನಾದಿಕ ಎಂಬತ್ತು ನಾಲ್ಕು ಕ್ರಿಯೆಗಳು, ಸಮ್ಯಗ್ದರ್ಶನಾದಿ ಒಂದುನೂರಾ ಎಂಟು ಕ್ರಿಯೆಗಳು, ದೇವ ವಂದನೆಯೇ ಮೊದಲಾದ ನಿತ್ಯನೈಮಿತ್ತಿಕ ಇಪ್ಪತ್ತೈದು ಕ್ರಿಯೆಗಳ ವರ್ಣನೆಯಿದೆ.

೧೪ ತ್ರಿಲೋಕಬಿಂದುಸಾರ ಪೂರ್ವದ ಹನ್ನೆರಡು ಕೋಟಿಯಲ್ಲದೆ ಮೇಲೆ ಅರ್ಧಕೋಟಿ ಪದಗಳಿವೆ. ಅದರಲ್ಲಿ ಮೂರುಲೋಕದ ಸ್ವರೂಪ, ಇಪ್ಪತ್ತಾರು ಪರಿಕರ್ಮ, ಅಷ್ಟ ವ್ಯವಹಾರ, ನಾಲ್ಕು ಬೀಜ, ಮೋಕ್ಷ ಸ್ವರೂಪ, ಮೋಕ್ಷ ಗಮನದ ಕಾರಣ, ಕ್ರಿಯೆ ಮತ್ತು ಮೋಕ್ಷ ಸುಖದ ವರ್ಣನೆಗಳಿವೆ.

ಹೀಗೆ ತೊಂಬತ್ತೈದು ಕೋಟಿ ಐವತ್ತು ಲಕ್ಷ ಮತ್ತು ಐದು ಪದಗಳಲ್ಲಿ ಹದಿನಾಲ್ಕು ಪೂರ್ವಗಳೆಂಬ ಆಗಮಗಳ ವಿಷಯವನ್ನು ವಿವರಿಸಲಾಗಿದೆ

ಇನ್ನು ದೃಷ್ಟಿವಾದ ಅಂಗದ ಐದನೆಯ ಭೇದವು ಚೂಲಿಕಾ ಎಂಬ ಹೆಸರಿನದು ಇರುತ್ತದೆ. ಅದರಲ್ಲಿಯೂ ಐದು ಭೇದಗಳಿವೆ. ಪ್ರತಿಯೊಂದು ಚೂಲಿಕೆಯಲ್ಲಿ ಎರಡು ಕೋಟಿ ಒಂಬತ್ತು ಲಕ್ಷ ಎಂಬತ್ತೊಂಬತ್ತು ಸಾವಿರ ಎರಡುನೂರು ಪದಗಳಿವೆ.

೧. ಜಲಗತಾ ಚೂಲಿಕೆಯಲ್ಲಿ ಜಲದ ಸ್ತಂಭನ, ಜಲದಲ್ಲಿ ಗಮನ, ಅಗ್ನಿಯ ಸ್ತಂಭನ ಮತ್ತು ಭಕ್ಷಣ, ಅಗ್ನಿಯ ಮೇಲೆ ಕೂಡುವುದು, ಬೆಂಕಿಯಲ್ಲಿ ಪ್ರವೇಶ, ಮಂತ್ರ, ತಂತ್ರ, ತಪಶ್ಚರಣ ಇವುಗಳ ವರ್ಣನೆಯು ಇರುತ್ತದೆ.

೨ ಸ್ಥಲಗತಾ ಚೂಲಿಕೆಯಲ್ಲಿ ಮೇರು ಕುಲಾಚಲಾದಿ ಪರ್ವತಗಳ ಮೇಲೆಯೂ ಭೂಮಿಯಲ್ಲಿ ಪ್ರವೇಶಮಾಡುವುದೂ ಶೀಘ್ರ ಗಮನ ಮಾಡುವ ಕಾರಣ ಮಂತ್ರ, ತಂತ್ರ, ತಪಶ್ಚರಣಗಳ ವರ್ಣನವಿದೆ

೩. ಮಾಯಾಗತಾ ಚೂಲಿಕೆಯಲ್ಲಿ ಮಾಯಾರೂಪ ಇಂದ್ರಜಾಲಾದಿ ವಿಕ್ರಿಯೆಗಳ ಮಂತ್ರ, ತಂತ್ರ, ತಪಶ್ಚರಣಾದಿಗಳ ವರ್ಣನೆಯು ಇರುತ್ತದೆ

೪ ಆಕಾಶಗತಾ ಚೂಲಿಕೆಯಲ್ಲಿ ಆಕಾಶ ಗಮನದ ಕಾರಣ, ಮಂತ್ರ, ತಂತ್ರ, ತಪಶ್ಚರಣಾದಿಗಳ ವರ್ಣನೆಯು ಇದೆ

೫. ರೂಪಗತವೆಂಬ ಚೂಲಿಕೆಯಲ್ಲಿ ಸಿಂಹ, ಆನೆ, ಕುದುರೆ, ಮನುಷ್ಯ, ವೃಕ್ಷ, ಜಿಗರೆ, ಮೊಲ, ಎತ್ತು, ಹುಲಿ ಮೊದಲಾದ ರೂಪವನ್ನು ಬದಲಿಸುವುದರ ಕಾರಣ, ಮಂತ್ರ, ತಂತ್ರ, ತಪಶ್ಚರ್ಯಾದಿಗಳ ವರ್ಣನೆಯು ಇದೆ. ಹಾಗೆಯೇ ಚಿತ್ರ, ಮಣ್ಣು, ಕಲ್ಲು, ಕಟ್ಟಿಗೆ ಇತ್ಯಾದಿ ಶಿಲ್ಪಕಲೆ, ಧಾತುವಾದ ಮತ್ತು ರಸವಾದ ಇತ್ಯಾದಿ ಕ್ರಿಯೆಗಳ ವರ್ಣನೆ ಇದೆ.

ಐದು ಚೂಲಿಕೆಗಳಲ್ಲಿಯೂ ಸೇರಿ ಹತ್ತು ಕೋಟಿ ನಲವತ್ತೊಂಭತ್ತು ಲಕ್ಷ ನಲವತ್ತಾರು ಸಾವಿರ ಪದಗಳು ಇವೆ ಇನ್ನು ಸಂಪೂರ್ಣ ದ್ವಾದಶಾಂಗ ವಾಣಿಗೆ ಒಂದು ಕಡಿಮೆ ಏಕಟ್ಠೀ ಪ್ರಮಾಣ ಅಕ್ಷರಗಳಿವೆ ಅವುಗಳ ಸಂಖ್ಯೆಯು ೧೮೪೪೬೭೪೪೦೭೩೭೦೯೫೫೧೬೧೫ ಇಷ್ಟು ಅಪುನರುಕ್ತ ಅಕ್ಷರಗಳು (ಒಮ್ಮೆ ಬಂದ ಅಕ್ಷರಗಳು ಇನ್ನೊಮ್ಮೆ ಬರುವಂತಿಲ್ಲ) ಆಗುತ್ತದೆ. ಇವುಗಳಲ್ಲಿ ಅರವತ್ತು ನಾಲ್ಕು ಸಂಯೋಗೀ ಅಕ್ಷರಗಳು ಇವೆ ಮಧ್ಯಮ

ಪದಗಳ ಪ್ರಮಾಣವು ಹದಿನಾಲು ನೂರಾ ಮೂವತ್ತು ನಾಲ್ಕು ಕೋಟಿ ಎಂಬತ್ತು ಮೂರು ಲಕ್ಷ ಏಳು ಸಾವಿರ ಎಂಟುನೂರಾ ಎಂಬತ್ತೆಂಟು (೧೬೩೪೮೩೦೭೮೮೮) ಅಪುನರುಕ್ತ ಅಕ್ಷರಗಳಿವೆ. ಈ ಅಕ್ಷರಗಳ ಪ್ರಮಾಣದಿಂದ 'ಏಕಕ್ಷ್ಮೀ' ಅಕ್ಷರಗಳ ಪ್ರಮಾಣಕ್ಕೆ ಭಾಗಿಸಲು ಒಂದುನೂರಾ ಹನ್ನೆರಡು ಕೋಟಿ ಎಂಬತ್ತು ಮೂರು ಲಕ್ಷ ಐವತ್ತೆಂಟು ಸಾವಿರ ಐದು ಪದಗಳು ಬರುತ್ತವೆ. ಇಷ್ಟು ಅಕ್ಷರಗಳಲ್ಲಿ ಸಮಸ್ತ ದ್ವಾದಶಾಂಗವು ನಿರೂಪಿಸಲ್ಪಟ್ಟಿದೆ ಉಳಿದ ಅಕ್ಷರಗಳು ಎಂಟು ಕೋಟಿ ಒಂದು ಲಕ್ಷ ಎಂಟು ಸಾವಿರ ಒಂದು ನೂರಾ ಎಪ್ಪತ್ತೈದು ಉಳಿದವು, (೮೦೧೦೮೧೭೫) ಈ ಅಕ್ಷರಗಳಿಂದ ಒಂದು ಪದವು ಪೂರ್ಣವಾಗುವದಿಲ್ಲ. ಅದಕ್ಕಾಗಿ ಇವುಗಳಿಗೆ ಅಂಗ ಬಾಹ್ಯವೆಂದು ಹೇಳಲಾಗಿದೆ ಈ ಅಕ್ಷರಗಳಲ್ಲಿ ಸಾಮಾಯಿಕವೇ ಮೊದಲಾದ ಹದಿನಾಲ್ಕು ಪ್ರಕೀರ್ಣಕಗಳು ಇವೆ. ಅವು ಹೀಗೆ—

೧ ಸಾಮಾಯಿಕ ಪ್ರಕೀರ್ಣಕದಲ್ಲಿ ಮಿಥ್ಯಾತ್ವ ಕಷಾಯಾದಿಗಳ ಕ್ಲೇಶದ ಅಭಾವ, ನಾಮ, ಸ್ಥಾಪನಾ, ದ್ರವ್ಯ, ಕ್ಷೇತ್ರ. ಕಾಲ ಮತ್ತು ಭಾವ ಈ ಆರು ಪ್ರಕಾರಗಳಿಂದ ಹೇಗೆ ಮಾಡಬೇಕೆಂಬುದರ ವರ್ಣನೆಯು ಇದೆ.

೨. ಸ್ತವನ ನಾಮ ಪ್ರಕೀರ್ಣಕದಲ್ಲಿ ಮೂವತ್ತು ನಾಲ್ಕು ಅತಿಶಯ, ಅಷ್ಟ ಪ್ರಾತಿಹಾರ್ಯ, ಪರಮೌದಾರಿಕ ದಿವ್ಯದೇಹ, ಸಮವಸರಣ ಸಭಾ, ಧರ್ಮೋಪದೇಶವೇ ಮೊದಲಾದ ತೀರ್ಥಂಕರರ ಮಹಾತ್ಮ್ಯದ ಪ್ರಕಾಶ ಮೊದಲಾದವುಗಳ ವರ್ಣನೆಯು ಇದೆ

೩. ವಂದನಾ ಪ್ರಕೀರ್ಣಕದಲ್ಲಿ ಒಬ್ಬ ತೀರ್ಥಂಕರನ, ಅವನ ಚೈತ್ಯಾಲಯದ ಮತ್ತು ಪ್ರತಿಮೆಯ ವಂದನೆಯ ವರ್ಣನೆಯು ಇರುತ್ತದೆ

೪. ಪ್ರತಿಕ್ರಮಣವೆಂಬ ಹೆಸರಿನ ಪ್ರಕೀರ್ಣಕದಲ್ಲಿ ಪೂರ್ವಕೃತ ಪ್ರಮಾದ ಜನಿತ ದೋಷಗಳ ನಿರಾಕರಣಕ್ಕಾಗಿ ದೈವಸಿಕ, ರಾತ್ರಿಕ, ಪಾಕ್ಷಿಕ, ಚಾತುರ್ಮಾಸಿಕ, ಸಾಂವತ್ಸರಿಕ, ಐರ್ಯಾಪಥಿಕ ಮತ್ತು ಉತ್ತಮಾರ್ಥವೆಂದು ಏಳು ಪ್ರಕಾರದ ಪ್ರತಿಕ್ರಮಣದ ವರ್ಣನೆಯು ಇದೆ.

೫ ವಿನಯನೆಂಬ ಪ್ರಕೀರ್ಣಕದಲ್ಲಿ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪ, ಉಪಚಾರ ಹೀಗೆ ಐದು ಪ್ರಕಾರದ ವಿನಯಗಳ ವರ್ಣನೆಯು ಇದೆ

೬. ಕೃತಕರ್ಮ ಪ್ರಕೀರ್ಣಕದಲ್ಲಿ ಒಂಬತ್ತು ದೇವತೆಗಳ ವಂದನೆಗಾಗಿ ಮೂರು ಪ್ರದಕ್ಷಿಣೆ, ನಾಲ್ಕು ಶಿರೋನತಿ, ಮನ ವಚನ ಕಾಯ ಕ್ರಿಯೆಗಳ ಶುದ್ಧತೆ ಮತ್ತು ಹನ್ನೆರಡು ಆವರ್ತ ಮೊದಲಾದ ನಿತ್ಯ ನೈಮಿತ್ತಿಕ ಕ್ರಿಯೆಗಳ ವರ್ಣನೆಯು ಇದೆ.

೭. ದಶವೈಕಾಲಿಕ ಪ್ರಕೀರ್ಣಕದಲ್ಲಿ ಸಾಧುಗಳ ಆಚಾರಕ್ಕೆ ಯೋಗ್ಯವಾದ ಶುದ್ಧ ಆಹಾರದ ವರ್ಣನೆಯು ಇದೆ.

೮. ಉತ್ತರಾಧ್ಯಯನ ಪ್ರಕೀರ್ಣಕದಲ್ಲಿ ನಾಲ್ಕು ಪ್ರಕಾರದ ಉಪಸರ್ಗ, ಇಪ್ಪತ್ತೆರಡು ಪ್ರಕಾರದ ಪರೀಷಹ ಸಹನ ಮಾಡುವ ವಿಧಾನ ಮತ್ತು ಅವುಗಳ ಫಲದ ವರ್ಣನೆಯು ಇದೆ

೯ ಕಲ್ಪ ವ್ಯವಹಾರವೆಂಬ ಪ್ರಕೀರ್ಣಕದಲ್ಲಿ ಸಾಧುಗಳಿಗೆ ಯೋಗ್ಯವಾದ ಆಚರಣದ ವಿಧಾನ ಮತ್ತು ಅಯೋಗ್ಯ ಆಚರಣೆಯ ಪ್ರಾಯಶ್ಚಿತ್ತಗಳನ್ನು ಹೇಳಿದೆ

೧೦. ಕಲ್ಪಾಕಲ್ಪ ಪ್ರಕೀರ್ಣಕದಲ್ಲಿ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಆಶ್ರಯದಿಂದ ಸಾಧುಗಳಿಗೆ ಯಾವುದು ಯೋಗ್ಯವಿದೆ, ಯಾವುದು ಅಯೋಗ್ಯವಿದೆ ಎಂಬುದರ ವಿಂಗಡಣೆಯಿದೆ.

೧೧ ಮಹಾಕಲ್ಪವೆಂಬ ಹೆಸರಿನ ಪ್ರಕೀರ್ಣಕದಲ್ಲಿ ಉತ್ಕೃಷ್ಟ ಸಂಹನನವೇ ಮೊದಲಾದ ಸಂಯುಕ್ತ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಪ್ರಭಾವದಿಂದ ಉತ್ಕೃಷ್ಟ ಆಚರಣೆಯಲ್ಲಿರುವ ಜಿನಕಲ್ಪೀ ಸಾಧುಗಳಿಗೆ ಯೋಗ್ಯ- ವೆನಿಸುವ ತ್ರಿಕಾಲ ಯೋಗಾದಿ ಆಚರಣ, ಮತ್ತು ಸ್ಥವಿರಕಲ್ಪೀ ಮುನಿಯ ದೀಕ್ಷೆ, ಶಿಕ್ಷೆ, ಗಣಪೋಷಣ, ಆತ್ಮಸಂಸ್ಕಾರ, ಭಾವನಾ ಮತ್ತು ಸಲ್ಲೇಖನಾ ಇವುಗಳ ವರ್ಣನೆಯು ಇದೆ.

೧೨. ಪುಂಡರೀಕವೆಂಬ ಹೆಸರಿನ ಪ್ರಕೀರ್ಣಕದಲ್ಲಿ ಭವನ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ವಿಮಾನಗಳಲ್ಲಿ ಉತ್ಪತ್ತಿಗೆ ಕಾರಣ, ದಾನ, ಪೂಜೆ, ತಪಶ್ಚರಣ, ಅಕಾಮನಿರ್ಜರಾ, ಸಮ್ಯಕ್ತ್ವ, ಸಂಯಮ ಇತ್ಯಾದಿಗಳ ವಿಧಾನ, ಅವು ಉತ್ಪತ್ತಿಯಾಗುವ ಸ್ಥಾನ ಹಾಗೂ ವೈಭವ ಇವುಗಳ ವರ್ಣನೆಯು ಇದೆ.

೧೩ ಮಹಾಪುಂಡರೀಕ ಪ್ರಕೀರ್ಣಕದಲ್ಲಿ ಮಹರ್ಧ್ಧಿಕ ದೇವರಲ್ಲಿ ಇಂದ್ರ ಪ್ರತೀಂದ್ರರಲ್ಲಿ ಉತ್ಪನ್ನವಾಗುವ ಕಾರಣ ಮತ್ತು ತಪೋವಿಶೇಷಾದಿಕಗಳ ವರ್ಣನೆಯು ಇದ

೧೪ ನಿಷಿದ್ಧಿಕಾ ಪ್ರಕೀರ್ಣಕದಲ್ಲಿ ಪ್ರಮಾದದಿಂದ ಉತ್ಪನ್ನವಾಗಿರುವ ದೋಷಗಳ ತ್ಯಾಗದ ವರ್ಣನೆಯು ಇದೆ.

ಹೀಗೆ ದ್ವಾದಶಾಂಗ ರೂಪೀ ಸೂತ್ರಗಳ ಜ್ಞಾನವಿದೆ ಇದು ತಪದ ಪ್ರಭಾವದಿಂದ ಉತ್ಪನ್ನವಾಗುತ್ತದೆ ಈ ಹನ್ನೆರಡು ಅಂಗಗಳಲ್ಲಿಯ ಸೂತ್ರಗಳನ್ನು ಸ್ವತಃ ಅಭ್ಯಾಸಮಾಡಿ ಅನ್ಯರಿಗೂ ಅಭ್ಯಾಸ ಮಾಡಿಸುವವರು ಬಹುಶ್ರುತರೆನಿಸುತ್ತಾರೆ ಅವರ ಭಕ್ತಿಯನ್ನು ಮಾಡುವುದು ಬಹುಶ್ರುತ ಭಕ್ತಿಯಾಗಿದೆ ಗುಣಗಳಲ್ಲಿ ಅನುರಾಗ-ವಿಡುವುದಕ್ಕೆ ಭಕ್ತಿಯೆನ್ನುತ್ತಾರೆ. ಒಲವಿನಿಂದ ಶಾಸ್ತ್ರಗಳನ್ನು ಅಭ್ಯಾಸ ಮಾಡುವುದು, ಶಾಸ್ತ್ರದ ಅರ್ಥವನ್ನು ಎರಡನೆಯವರಿಗೆ ಹೇಳುವುದು, ದ್ರವ್ಯವನ್ನು ವೆಚ್ಚಮಾಡಿ ಶಾಸ್ತ್ರವನ್ನು ಬರೆಯಿಸುವುದು, ತಾವು ಸ್ವತಃ ಶಾಸ್ತ್ರ ಬರೆಯುವುದು, ಬರೆದಂಥ ಶಾಸ್ತ್ರದೊಳಗಿನ ಅಕ್ಷರ ದೋಷಗಳನ್ನು ತಿದ್ದುವುದು, ಕಲಿಯುವವರಿಗ ಶಾಸ್ತ್ರವನ್ನು ಬರೆದು ಕೊಡುವುದು, ವ್ಯಾಖ್ಯಾನ ಕೊಡುವುದು, ಶಾಸ್ತ್ರಗಳನ್ನು ಕಲಿಯುವ ಹಾಗೂ ಕಲಿಸುವವರ ಜೀವನ ಸಾಧನ ಗಳನ್ನು ವ್ಯವಸ್ಥಿತಗೊಳಿಸುವುದು, ಇದರಿಂದ ಜ್ಞಾನಾಭ್ಯಾಸದಲ್ಲಿ ಪ್ರವರ್ತನ ಗೊಳಿಸುವುದು, ಸ್ವಾಧ್ಯಾಯ ಮಾಡುವದಕ್ಕಾಗಿ ನಿರಾಕುಲ ಸ್ಥಾನವನ್ನು ಕೊಡುವುದು, ಇವೆಲ್ಲ ಜ್ಞಾನಾವರಣೀಯ ಕರ್ಮವನ್ನು ನಷ್ಟಗೊಳಿಸುವ ಬಹುಶ್ರುತ ಭಕ್ತಿಯೇ ಎನಿಸುತ್ತವೆ ಶಾಸ್ತ್ರವನ್ನು ಕಟ್ಟುವದಕ್ಕಾಗಿ ಉತ್ತಮ ಬೆಲೆಯುಳ್ಳ ವಸ್ತ್ರ, ರಟ್ಟು, ದಾರಗಳನ್ನು ನೀಡಿ, ಅವುಗಳಲ್ಲಿ ಪುಸ್ತಕಗಳನ್ನು ಕಟ್ಟಿಸುವುದು, ಇದೂ ಬಹುಶ್ರುತ ಭಕ್ತಿಯಾಗಿದೆ. ಸುವರ್ಣ ಹಾಗೂ ಐದು ಪ್ರಕಾರದ ರತ್ನ ಜಡಿತ ಪುಷ್ಪಗಳಿಂದ ಶಾಸ್ತ್ರಗಳ ಪೂಜೆಯನ್ನು ಮಾಡುವುದು ಬಹುಶ್ರುತ ಭಕ್ತಿಯೇ ಆಗಿದೆ. ಬಹುಶ್ರುತ ಭಕ್ತಿಯಿಂದ ಸಮ್ಯಜ್ಞಾನವು ಉಂಟಾಗುತ್ತದೆ ಮುಂದೆ ಕ್ರಮ ಕ್ರಮದಿಂದ ಕೇವಲ ಜ್ಞಾನವೂ ಪ್ರಾಪ್ತನಾಗುತ್ತದೆ. ಯಾವ ಪುರುಷನು ತನ್ನ ಮನಸ್ಸನ್ನು ಇಂದ್ರಿಯ ವಿಷಯಗಳಿಂದ ಸಾವರಿಸಿಕೊಂಡು ಪುನಃ ಪುನಃ ಶ್ರುತದೇವಿಯ ಗುಣ ಸ್ಮರಣ ಮಾಡುವುದರಲ್ಲಿ ತನ್ಮಯಗೊಳಿಸುತ್ತಾನೋ, ಅಲ್ಲದೆ ಉತ್ತಮ ಪ್ರಕಾರದ ಅರ್ಘ್ಯವನ್ನು ಶ್ರುತದೇವಿಗೆ ಅರ್ಪಣ ಮಾಡುತ್ತಾನೋ ಅವನು ಸಂಪೂರ್ಣ ಶಾಸ್ತ್ರಗಳಲ್ಲಿ ಪಾರಂಗತನಾಗಿ ಕೇವಲ ಜ್ಞಾನವನ್ನು ಸಂಪಾದಿಸಿ, ಮೋಕ್ಷಕ್ಕೆ ಹೋಗುತ್ತಾನೆ. ಈ ಪ್ರಕಾರ ಬಹುಶ್ರುತ ಭಕ್ತಿ ಎಂಬ ಹೆಸರಿನ ಹನ್ನೆರಡನೆಯ ಭಾವನೆಯ ವರ್ಣನೆಯನ್ನು ಮಾಡಲಾಗಿದೆ

## ೧೩. ಪ್ರವಚನ ಭಕ್ತಿ

ಪ್ರವಚನದ ಲಕ್ಷಣ—ಇನ್ನು ಪ್ರವಚನ ಭಕ್ತಿ ಎಂಬ ಹೆಸರಿನ ಹದಿಮೂರನೆಯ ಭಾವನೆಯನ್ನು ಹೇಳಿದೆ ಪ್ರವಚನವೆಂದರೆ ಜಿನೇಂದ್ರ, ಸರ್ವಜ್ಞ, ವೀತರಾಗಿಯು ಪ್ರರೂಪಣ ಮಾಡಿದ ಆಗಮವು ಅದರಲ್ಲಿ ಆರು ದ್ರವ್ಯ, ಐದು ಅಸ್ತಿಕಾಯ, ಏಳು ತತ್ತ್ವ, ಒಂಬತ್ತು ಪದಾರ್ಥಗಳ ವರ್ಣನೆಯು ಇರುತ್ತದೆ ಅಲ್ಲದೆ ಕರ್ಮ ಪ್ರಕೃತಿಯ ನಾಶದ ವಿವರವೂ ಇರುತ್ತದೆ ಯಾವುದರ ಪ್ರದೇಶವು ಬಹಳಷ್ಟು ಇರುವುದೋ ಅದಕ್ಕೆ ಅಸ್ತಿಕಾಯ-ವೆನ್ನುವರು ಯಾವುದರಲ್ಲಿ ಗುಣ ಹಾಗೂ ಪರ್ಯಾಯಗಳು ಸತತ ಸಂಭವಿಸುತ್ತಿರುತ್ತವೆಯೋ ಅದಕ್ಕೆ ದ್ರವ್ಯವೆನ್ನುವರು. ಯಾವುದನ್ನು ಒಂದು ವಸ್ತುವೆಂದು ನಿಶ್ಚಯಿಸಲಿಕ್ಕೆ ಬರುವುದೋ ಅದಕ್ಕ ಪದಾರ್ಥವೆನ್ನುವರು ವಸ್ತುವಿನೊಳಗಿನ ಸ್ವಭಾವಕ್ಕೆ ತತ್ತ್ವ ಎಂಬ ಸಂಜ್ಞೆಯು ಇದೆ. ಇದರ ವರ್ಣನೆಯನ್ನು ಮುಂದೆ ಪ್ರಸಂಗಾನುಸಾರ ಮಾಡಲಾಗುವದು ಕತ್ತಲೆಯು ಇರುವ ಕೋಣೆಯಲ್ಲಿ ಕೈಯೊಳಗೆ ದೀಪವನ್ನು ಹಿಡಿದುಕೊಂಡು, ಎಲ್ಲ ಪದಾರ್ಥವನ್ನು ನೋಡ-ಬೇಕಾಗುತ್ತದೆ ಹಾಗೆಯೇ ಈ ಮೂರು ಲೋಕಗಳೆಂಬ ಮಂದಿರದಲ್ಲಿ ಪ್ರವಚನವೆಂಬ ದೀಪದಿಂದ ಚಿಕ್ಕ ದೊಡ್ಡ ಮೂರ್ತಿಕ, ಅಮೂರ್ತಿಕ ಪದಾರ್ಥಗಳು ತಿಳಿಯುತ್ತವೆ ಪ್ರವಚನ ರೂಪದ ಕಣ್ಣಿನಿಂದಲೇ ಮುನೀಶ್ವರರು ಚೇತನಾದಿ ಗುಣಗಳಿಂದ ಕೂಡಿದ ಜೀವ ದ್ರವ್ಯ ಹಾಗೂ ಅಚೇತನವಾದಂಥ ಉಳಿದ ದ್ರವ್ಯಗಳನ್ನು ನೋಡುತ್ತಿರುತ್ತಾರೆ. ಜಿನೇಂದ್ರನ ಪರಮಾಗಮವನ್ನು ಯೋಗ್ಯ ವೇಳೆಯಲ್ಲಿ ವಿನಯದಿಂದ ಓದುವುದು ಪ್ರವಚನ ಭಕ್ತಿ ಎನಿಸುತ್ತದೆ

ಪ್ರವಚನದಲ್ಲಿ ವರ್ಣಿಸಿದ ವಿಷಯಗಳು—ಪ್ರವಚನದಲ್ಲಿ ಆರು ದ್ರವ್ಯ, ಏಳು ತತ್ತ್ವ, ಒಂಬತ್ತು ಪದಾರ್ಥ, ಅವುಗಳ ಭೇದ ಮತ್ತು ಅವುಗಳ ಎಲ್ಲ ಗುಣ ಪರ್ಯಾಯಗಳ ವರ್ಣನೆಯು ಇರುತ್ತದೆ. ಹಾಗೆಯೇ

ನರಕದೊಳಗಿನ ಏಳು ಭೂಮಿಗಳು, ನಾರಕೀ ಜೀವಗಳ ಉತ್ಪತ್ತಿ, ಅವು ಇರುವ ಸ್ಥಳ, ಅವುಗಳ ಆಯುಷ್ಯ, ಶರೀರದ ವೇದನೆ, ಗತಿ ಮೊದಲಾದವುಗಳ ವರ್ಣನೆಯು ಇದೆ ಅನಂತ ಭೂತ ಮತ್ತು ಭವಿಷ್ಯ ಅಲ್ಲದೆ ವರ್ತಮಾನ ಕಾಲದಲ್ಲಿ ಸಂಭವಿಸುವ ಅವಸ್ಥೆಗಳ ವರ್ಣನೆಯಿದೆ. ಅಧೋಲೋಕದೊಳಗಿನ ಭವನವಾಸಿ ದೇವರ ಏಳು ಕೋಟಿ ಎಪ್ಪತ್ತೆರಡು ಲಕ್ಷ ಭವನಗಳ, ಹಾಗೂ ಅವರ ಆಯುಷ್ಯ, ಶರೀರ, ವೈಭವ, ಕ್ರಿಯಾ, ಭೋಗ ಇತ್ಯಾದಿಗಳ ವರ್ಣನೆಯು ಇದೆ ಮಧ್ಯ ಲೋಕಕ್ಕೆ ಸಂಬಂಧಿಸಿದ ಅಸಂಖ್ಯಾತ ದ್ವೀಪ ಸಮುದ್ರ, ಮೇರು, ಕುಲಾಚಲ, ನದಿ ಸರೋವರ ಮೊದಲಾದವುಗಳ ಹಾಗೂ ಕರ್ಮ ಭೂಮಿಯ ವಿದೇಹಾದಿ ಕ್ಷೇತ್ರಗಳ, ಭೋಗ ಭೂಮಿಯು, ತೊಂಭತ್ತಾರು ಅಂತರ್ ದ್ವೀಪಗಳಿಗೆ ಸಂಬಂಧಿಸಿದ ಮನುಷ್ಯರ, ಕರ್ಮಭೂಮಿ ಭೋಗ ಭೂಮಿಯೊಳಗಿನ ಮಾನವರ ಕರ್ತವ್ಯಗಳ, ಅವರ ಆಯುಷ್ಯ, ಶರೀರ, ಸುಖದುಃಖ ಮೊದಲಾದವುಗಳ ಮತ್ತು ತಿರ್ಯಂಚ ಹಾಗೂ ವ್ಯಂತರರ ನಿವಾಸ, ವೈಭವ, ಪರಿವಾರ, ಆಯುಷ್ಯ, ಶರೀರ, ಸಾಮರ್ಥ್ಯ, ವಿಕ್ರಿಯಾ ಇವುಗಳ ವರ್ಣನೆಯು ಇದೆ ಮಧ್ಯ ಲೋಕದಲ್ಲಿ ಜೋತಿಷೀ ದೇವರಿದ್ದಾರೆ ಅವರ ವಿಮಾನ, ವೈಭವ, ಪರಿವಾರ, ಆಯುಷ್ಯ, ಶರೀರ. ಮತ್ತು ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳ ಗತಿ ಹಾಗೂ ಸಂಯೋಗಾದಿಗಳ ವರ್ಣನೆಯಿದೆ. ಊರ್ಧ್ವ ಲೋಕದೊಳಗಿನ ಅರವತ್ತು ಮೂರು ಪಟಲಗಳ, ಸ್ವರ್ಗದೊಳಗಿನ ಅಹಮಿಂದ್ರನ ಪಟಲದ, ಮತ್ತು ಇಂದ್ರಾದಿ ದೇವತೆಗಳ ವೈಭವ, ಪರಿವಾರ, ಆಯುಷ್ಯ ಶರೀರ, ಶಕ್ತಿ, ಗತಿ, ಸುಖದುಃಖಾದಿಗಳ ವರ್ಣನೆಯಿದೆ ಈ ಪ್ರಕಾರ ಸರ್ವಜ್ಞನು ಪ್ರತ್ಯಕ್ಷ ನೋಡಿದಂಥ ಮೂರು ಲೋಕದಲ್ಲಿರುವ ಸಮಸ್ತ ದ್ರವ್ಯದ ವರ್ಣನೆಯು ಪ್ರವಚನದಲ್ಲಿ ಸಮಾವೇಶವಾಗುತ್ತದೆ

ಗೃಹಸ್ಥ ಧರ್ಮ ಮತ್ತು ಕ್ರಿಯಾ ಕರ್ಮ ಪ್ರಕೃತಿಗಳ ವರ್ಣನೆ—ಜೀವಕ್ಕೆ ಕರ್ಮ ಪ್ರಕೃತಿಯು ಕಟ್ಟುವುದು, ಅದು ಉದಯಕ್ಕೆ ಬರುವುದು, ಅದು ಸತ್ತೆಯಲ್ಲಿ ಇರುವುದು, ಅದರ ಸಂಕ್ರಮಣವಾಗುವುದು ಇವೆಲ್ಲ ಸ್ಥಿತಿಗಳ ವರ್ಣನೆಯೂ ಆಗಮದಲ್ಲಿದೆ ಸಂಸಾರದೊಳಗಿಂದ ಉದ್ಧಾರ ಮಾಡುವಂಥ ರತ್ನತ್ರಯವನ್ನು ಸಂಪಾದಿಸುವ ಉಪಾಯಗಳನ್ನು ಪರಮಾಗಮದಲ್ಲಿ ಹೇಳಿದೆ ಗೃಹಸ್ಥ ಅವಸ್ಥೆಯೊಳಗಿನ ಶ್ರಾವಕ ಧರ್ಮದ ಜಘನ್ಯ, ಮಧ್ಯಮ, ಉತ್ಕೃಷ್ಟ ಆಚಾರ ಮತ್ತು ಶ್ರಾವಕರ ವ್ರತಗಳು, ಸಂಯಮಾದಿ ವ್ಯವಹಾರ, ಪರಮಾರ್ಥರೂಪ ಪ್ರವೃತ್ತಿಯ ವರ್ಣನೆ ಇವು ಪ್ರವಚನದಿಂದ ತಿಳಿಯುತ್ತವೆ ಮುನಿಗಳ ಮಹಾವ್ರತಗಳೇ ಮೊದಲಾದ ಇಪ್ಪತ್ತೆಂಟು ಮೂಲಗುಣ ಮತ್ತು ಎಂಬತ್ತು ಲಕ್ಷ ಉತ್ತರಗುಣ, ಸ್ವಾಧ್ಯಾಯ, ಧ್ಯಾನ, ಆಹಾರ, ವಿಹಾರ, ಸಾಮಾಯಿಕ ಮೊದಲಾದ ಚಾರಿತ್ರ, ಧರ್ಮಧ್ಯಾನ, ಶುಕ್ಲಧ್ಯಾನ, ಸಲ್ಲೇಖನಾ ಮೊದಲಾದ ಸರ್ವ ವರ್ಣನೆಯು ಪ್ರವಚನದಲ್ಲಿದೆ ಹದಿನಾಲ್ಕು ಗುಣಸ್ಥಾನಗಳ ಸ್ವರೂಪ, ಹದಿನಾಲ್ಕು ಜೀವ ಸಮಾಸ, ಹದಿನಾಲ್ಕು ಮಾರ್ಗಣಾಗಳ ವರ್ಣನೆಯನ್ನೂ ಪ್ರವಚನ-ದಿಂದಲೇ ತಿಳಿಯಬೇಕಾಗುತ್ತದೆ ಜೀವದ ಒಂದು ನೂರಾ ತೊಂಬತ್ತೆರೊಂಬತ್ತೂ ಅರ್ಧಲಕ್ಷ ಕೋಟಿ ಕುಲಗಳು ಮತ್ತು ಎಂಬತ್ತು ನಾಲ್ಕು ಲಕ್ಷ ಜಾತಿಯ ಯೋನಿಯ ಸ್ಥಾನಗಳ ವರ್ಣನೆಯು ಪ್ರವಚನದಿಂದಲೇ ನಮಗೆ ತಿಳಿದು ಬರುತ್ತದೆ ನಾಲ್ಕು ಅನುಯೋಗ, ನಾಲ್ಕು ಶಿಕ್ಷಾವ್ರತಗಳು, ಮೂರು ಗುಣವ್ರತಗಳು ಇವು ಆಗಮಗಳಿಂದಲೇ ಗೊತ್ತಾಗುತ್ತವೆ ನಾಲ್ಕು ಗತಿಗಳ ಭೇದ, ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್‌ಚಾರಿತ್ರ, ಇವುಗಳ ಸ್ವರೂಪವನ್ನು ಭಗವಂತನು ಹೇಳಿದ ಆಗಮದಿಂದಲೇ ತಿಳಿಯಲಾಗುತ್ತದೆ ಹನ್ನೆರಡು ಭಾವನೆ, ಹನ್ನೆರಡು ಪ್ರಕಾರದ ತಪಗಳು, ಹನ್ನೊಂದು ಲಿಂಗಗಳು, ಹದಿನಾಲ್ಕು ಪೂರ್ವ, ಹದಿನಾಲ್ಕು ಪ್ರಕೀರ್ಣಕ ಅವುಗಳ ಸ್ವರೂಪ ಇವುಗಳನ್ನೆಲ್ಲ ಪ್ರವಚನದಿಂದಲೇ ಅರಿತುಕೊಳ್ಳಬೇಕಾಗುತ್ತದೆ ಉತ್ಸರ್ಪಿಣಿ ಅವಸರ್ಪಿಣಿ ಕಾಲದ ಚಕ್ರ ಹಾಗೂ ಅವುಗಳಲ್ಲಿಯ ಆರು ಆರು ಪ್ರಕಾರದಲ್ಲಿ ಆಗುವ ಪದಾರ್ಥಗಳ ಅವಸ್ಥೆಗಳ ಭೇದಗಳೆಲ್ಲ ಆಗಮದಿಂದಲೇ ತಿಳಿಯುತ್ತವೆ ಕುಲಂಕರ, ತೀರ್ಥಂಕರ, ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವ ಮೊದಲಾದವರ ಉತ್ಪತ್ತಿ, ಪ್ರವೃತ್ತಿ, ಧರ್ಮತೀರ್ಥದ ಪ್ರವರ್ತನ, ಚಕ್ರವರ್ತಿಯ ಸಾಮ್ರಾಜ್ಯ, ವಾಸುದೇವರ ವೈಭವ, ಪರಿವಾರ, ಐಶ್ವರ್ಯಾದಿಗಳು ಆಗಮಗಳಿಂದಲೇ ಗೊತ್ತಾಗುತ್ತವೆ. ಜೀವಾದಿ ದ್ರವ್ಯಗಳ ಪ್ರಭಾವವೂ ಕೂಡ ಆಗಮಗಳಿಂದಲೇ ತಿಳಿಯುತ್ತದೆ ಅಂದ ಮೇಲೆ ಇಂಥ ಆಗಮವನ್ನು ಭಕ್ತಿ ಪೂರ್ವಕ ಸೇವಿಸದ ಮಾನವ ಜನ್ಮವು ಪಶುವಿಗೆ ಸಮಾನವಾಗಿದೆ.

ಆದಿಪ್ರಭುವಿನ ಪರಂಪರೆ—ಭಗವಾನ್ ಸರ್ವಜ್ಞ ವೀತರಾಗನು ಸಮಸ್ತ ಲೋಕಾಲೋಕಗಳನ್ನು ಭೂತ, ಭವಿಷ್ಯ, ವರ್ತಮಾನ ಕಾಲಗಳ ಪರ್ಯಾಯ ಸಹಿತ ಒಂದೇ ಸಮಯದಲ್ಲಿ ಯುಗಪತ್ ಕ್ರಮ ರಹಿತ ಹಸ್ತದೊಳಗಿನ ರೇಖೆಗಳಂತೆ ಪ್ರತ್ಯಕ್ಷ ಕಂಡನು. ತಾನು ಕಂಡುದನ್ನು ವಿವರವಾಗಿ ಪ್ರರೂಪಿಸಿದನು ಅದನ್ನು

ಸಪ್ತ ಋದ್ಧಿ ನಾಲ್ಕು ಪ್ರಕಾರದ ಜ್ಞಾನಗಳನ್ನು ಧರಿಸಿದ ಗಣಧರ ದೇವನು ತಿಳಿದು, ದ್ವಾದಶಾಂಗ ರೂಪದಲ್ಲಿ ರಚನೆಯನ್ನು ಮಾಡಿದನು ಶ್ರೀ ಋಷಭನಾಥ ತೀರ್ಥಂಕರರಿಂದ ಇಪ್ಪತ್ತುನಾಲ್ಕನೆಯವರಾದ ಮಹಾವೀರ ತೀರ್ಥಂಕರರ ವರೆಗೆ ಈ ಕ್ರಮವು ನಡೆಯುತ್ತ ಬಂದಿತು ಕೊನೆಯ ತೀರ್ಥಂಕರ ಶ್ರೀ ವರ್ಧಮಾನ ಸ್ವಾಮಿಯು— ದೇವಾಧಿದೇವ, ಪರಮಪೂಜ್ಯ, ಧರ್ಮತೀರ್ಥದ ಪ್ರವರ್ತಕ, ಅನಂತದರ್ಶನ, ಅನಂತಜ್ಞಾನ, ಅನಂತಸುಖ ಮತ್ತು ಅನಂತವೀರ್ಯರೂಪದಲ್ಲಿರುವ ಅಂತರಂಗ ಲಕ್ಷ್ಮಿಯಿಂದಲೂ ಸಮವಸರಣಾದಿ ಬಾಹ್ಯ ಲಕ್ಷ್ಮಿಯಿಂದಲೂ ಶೋಭಿಸು-ತ್ತಿದ್ದಾರೆ. ಅವರು ಇಂದ್ರಾದಿ ಅಸಂಖ್ಯಾತ ದೇವರ ಸಮೂಹದ ಕಡೆಯಿಂದ ವಂದನೀಯ, ಮೂವತ್ತುನಾಲ್ಕು ಅತಿಶಯ, ಅಷ್ಟ ಪ್ರಾತಿಹಾರ್ಯ, ಇತ್ಯಾದಿ ಅನುಪಮ ಋದ್ಧಿಗಳಿಂದ ಕೂಡಿದ ಕ್ಷುಧಾ ತೃಷಾದಿ, ಹದಿನೆಂಟು ದೋಷಗಳು ಇಲ್ಲದಂಥ, ಸಂಪೂರ್ಣ ಜೀವಗಳ ಮೇಲೆ ಉಪಕಾರ ಮಾಡುವ, ಲೋಕ ಅಲೋಕಗಳ ಅನಂತ ಗುಣ ಪರ್ಯಾಯಗಳನ್ನು ಯುಗಪತ್ ತಿಳಿಯುವ, ಅನಂತಶಕ್ತಿ ಮಾನ್, ಸಂಸಾರದಲ್ಲಿ ಮುಳುಗುವ ಪ್ರಾಣಿಗೆ ಆಧಾರವನ್ನು ಕೊಡುವ, ಸಮಸ್ತ ಪ್ರಾಣಿಗಳ ಮೇಲೆ ದಯೆಯನ್ನು ಮಾಡುವವರಾಗಿದ್ದಾರೆ. ಪರಮಾತ್ಮಾ, ಪರಮೇಶ್ವರ, ಪರಬ್ರಹ್ಮ, ಪರಮೇಷ್ಠಿ, ಸ್ವಯಂಭೂ, ಶಿವ, ಅಜರ, ಅಮರ, ಅರಿಹಂತಾದಿ ಹೆಸರುಗಳಿಂದ ವಿಖ್ಯಾತರಾಗಿದ್ದಾರೆ ಶರಣರಹಿತರಿಗೆ ಪರಮ ಶರಣ, ಕೊನೆಯ ಪರಮೌದಾರಿಕ ಶರೀರದಲ್ಲಿ ಇರುವ, ಗಣಧರಾದಿ ಮುನೀಶ್ವರರ ಕಡೆಯಿಂದ ವಂದನೀಯ ರಾಗಿದ್ದಾರೆ. ಅವರ ಮುಖದಿಂದ ಹೊರಡುವ ದಿವ್ಯಧ್ವನಿಯು ಕಂಠ, ತಾಲು, ಓಷ್ಠ, ನಾಲಿಗೆ ಇವುಗಳ ಚಲನವಲನಗಳಿಲ್ಲದೆ ಹೊರಡುವುದು. ಅದು ಅವರ ಇಚ್ಛೆಯಿಲ್ಲದೆ ಅನೇಕ ಪ್ರಾಣಿಗಳ ಪುಣ್ಯ ಪ್ರಭಾವದಿಂದ ಹೊರಡುವಂಥ, ಆರ್ಯ ಅನಾರ್ಯ ಪ್ರದೇಶದೊಳಗಿನ ಎಲ್ಲ ಜನರಿಗೂ ತಿಳಿಯುವಂಥ ಸಂಪೂರ್ಣ ಪಾಪವನ್ನು ನಾಶ ಮಾಡುವಂಥ, ಭವ್ಯ ಜೀವಗಳ ಮೋಹಾಂಧಕಾರವನ್ನು ದೂರಮಾಡುವಂಥದಿರುತ್ತದೆ ಅವರ ತಲೆಯ ಮೇಲೆ ಮೂರು ಛತ್ರಗಳಿರುತ್ತವೆ. ಪಕ್ಕಲಿಗೆ ಅರವತ್ತು ನಾಲ್ಕು ಚಾಮರಗಳು ಬೀಸುತ್ತಿರುತ್ತವೆ. ಅವನು ರತ್ನಮಯ ಸಿಂಹಾಸನದ ಮೇಲೆ ನಾಲ್ಕು ಬೆರಳು ಅಂತರದಲ್ಲಿ ಕುಳಿತಿರುತ್ತಾನೆ ಇಂಥ ಪರಮ ಪೂಜ್ಯ ದೇವಾಧಿದೇವ ವರ್ಧಮಾನ ತೀರ್ಥಂಕರರು ಮೋಕ್ಷ ಮಾರ್ಗವನ್ನು ಪ್ರಕಟಿಸುವ ಸಲುವಾಗಿ ಸಂಪೂರ್ಣ ಪದಾರ್ಥಗಳ ಸ್ವರೂಪವನ್ನು ತನ್ನ ಅತಿಶಯ ದಿವ್ಯಧ್ವನಿಯಲ್ಲಿ ಪ್ರಕಟಮಾಡಿದರು. ಆಗ ಹತ್ತಿರವಿರುವ ನಿರ್ಗ್ರಂಥ ಋಷೀಶ್ವರರ ಕಡೆಯಿಂದ ವಂದನೀಯು, ಸಪ್ತ ಋದ್ಧಿ ಮತ್ತು ನಾಲ್ಕು ಜ್ಞಾನಗಳ ಧಾರಕರಾದಂಥ ಗಣಧರ ದೇವನು ತನ್ನ ಕೋಷ್ಟ ಬುದ್ಧಿಯೇ ಮೊದಲಾದ ಋದ್ಧಿಯ ಪ್ರಭಾವದಿಂದ ಭಗವಂತನು ಹೇಳಿದ ಅರ್ಥಕ್ಕೆ ಬಾಧೆಯುಂಟಾಗದಂತೆ, ಆ ಅರ್ಥವನ್ನು ಲಕ್ಷ್ಯದಲ್ಲಿಟ್ಟುಕೊಂಡು, ದ್ವಾದಶಾಂಗರೂಪದ ಆಗಮವನ್ನು ರಚಿಸಿದನು ಚತುರ್ಥಕಾಲದ ಮೂರು ವರ್ಷ ಹಾಗೂ ಎಂಟೂ ಅರ್ಧ ತಿಂಗಳು ಇನ್ನೂ ಇರುವಾಗ ಶ್ರೀವರ್ಧಮಾನ ಸ್ವಾಮಿಗಳು ನಿರ್ವಾಣವನ್ನು ಹೊಂದಿದರು

**ಗಣಧರ ಮತ್ತು ಆಚಾರ್ಯ ಪರಂಪರೆ**—ತರುವಾಯ ಗೌತಮ ಸ್ವಾಮಿ, ಸುಧರ್ಮಾಚಾರ್ಯ, ಜಂಬೂಸ್ವಾಮಿ ಹೀಗೆ ಮೂವರು ಕೇವಲ ಜ್ಞಾನಿಗಳು ಅರವತ್ತೆರಡು ವರ್ಷಗಳಲ್ಲಿ ಆಗಿ ಹೋದರು ಅವರು ತಮ್ಮ ಕೇವಲ ಜ್ಞಾನದಿಂದ ಸಂಪೂರ್ಣ ಪದಾರ್ಥಗಳನ್ನು ತಿಳಿದು, ನಿರೂಪಣ ಮಾಡಿದರು ಆ ಮೇಲೆ ಅನುಕ್ರಮವಾಗಿ ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹುಗಳೆಂಬ ಐವರು ಮುನಿಗಳು ದ್ವಾದಶಾಂಗಧಾರಕ ಶ್ರುತ ಕೇವಲಿಗಳು ನೂರು ವರ್ಷಗಳಲ್ಲಿ ಆಗಿ ಹೋದರು. ಇವರ ಕಾಲದಲ್ಲಿ ಭಗವಾನ್ ಕೇವಲಿಗಳಂತೆಯೇ ಪದಾರ್ಥಗಳ ಜ್ಞಾನ ಹಾಗೂ ನಿರೂಪಣಗಳು ಮುಂದರಿದವು. ಮುಂದೆ ಒಂದು ನೂರಾ ಎಂಬತ್ತುಮೂರು ವರ್ಷಗಳಲ್ಲಿ ವಿಶಾಖಾಚಾರ್ಯ, ಪ್ರೋಷ್ಠಿಲಾಚಾರ್ಯ, ಕ್ಷತ್ರಿಯ, ಜಯಸೇನ, ನಾಗಸೇನ, ಸಿದ್ಧಾರ್ಥ, ಧೃತಿಷೇಣ, ವಿಜಯ, ಬುದ್ಧಿಮಾನ್, ಗಂಗದೇವ, ಧರ್ಮಸೇನ ಹೀಗೆ ಹನ್ನೊಂದು ಜನ ಪರಮ ನಿರ್ಗ್ರಂಥ ಮುನೀಶ್ವರರು ಹತ್ತು ಪೂರ್ವಜ್ಞಾನದ ಧಾರಕರಾದರು ಅವರೂ ಕೂಡ ಹಾಗೆಯೇ ಪ್ರರೂಪಣೆಯನ್ನು ಮಾಡಿದರು. ಮುಂದೆ ಎರಡುನೂರಾ ಇಪ್ಪತ್ತು ವರ್ಷಗಳಲ್ಲಿ ನಕ್ಷತ್ರ, ಜಯಪಾಲ, ಪಾಂಡು, ಧ್ರುವಸೇನ, ಕಂಸಾಚಾರ್ಯ, ಹೀಗೆ ಐವರು ಮುನಿಗಳು ಏಕಾದಶಾಂಗ ವಿದ್ಯೆಯ, ಪಾರಗಾಮಿಗಳಾದರು. ಅವರೂ ಯಥಾಪ್ರಕಾರ ಪ್ರರೂಪಣೆಯನ್ನು ಮಾಡಿದರು ಮುಂದೆ ಒಂದುನೂರಾ ಹದಿನೆಂಟು ವರ್ಷಗಳಲ್ಲಿ ಸುಭದ್ರ, ಯಶೋಭದ್ರ, ಭದ್ರಬಾಹು, ಮಹಾಯಶ, ಲೋಹಾಚಾರ್ಯರೆಂಬ ಐದು ಜನ ಮುನಿಗಳು ಒಂದು ಪ್ರಥಮ ಅಂಗದ ಪಾರಗಾಮಿಗಳಾದರು. ಈ ಪ್ರಕಾರ ಭಗವಾನ್ ಮಹಾವೀರ ಸ್ವಾಮಿಗಳು ಮೋಕ್ಷಕ್ಕೆ ಹೋದ ತರುವಾಯ ಆರುನೂರಾ ಎಂಬತ್ತು ಮೂರು ವರ್ಷಗಳ

ವರೆಗೆ ಅಂಗಪಾರದ ಜ್ಞಾನವು ಬಾಳಿ ಉಳಿದು ಬಂತು. ಮುಂದೆ ಕಾಲದ ಪ್ರಭಾವದಿಂದ ಬುದ್ಧಿ ವೀರ್ಯಾದಿಗಳು ಮಂದನಾದುದರಿಂದ ಅಂಗ ಪಾರದ ಜ್ಞಾನವು ನಷ್ಟವಾಯಿತು ತರುವಾಯ ಶ್ರೀಕುಂದಕುಂದಾದಿ ಅನೇಕ ನಿರ್ಗ್ರಂಥ ವೀತರಾಗಿ ಮುನಿಗಳು ಒಂದು ಅಂಗದ ಅನೇಕ ವಿಭಾಗದ ಜ್ಞಾನಿಗಳಾಗಿ ಮಾತ್ರ ಉಳಿದರು. ತರುವಾಯ ಉಮಾ ಸ್ವಾಮಿಗಳು ಆದರು ಹೀಗೆ ಪಾಪಕ್ಕೆ ಹೆದರುವಂಥವರೂ ಜ್ಞಾನ–ವಿಜ್ಞಾನ ಸಂಪನ್ನರೂ ಪರಮ ಸಂಯಮ ಗುಣಗಳಿಂದ ಮಂಡಿತರೂ ಗುರುಪರಂಪರೆಯಿಂದ ಶ್ರುತದ ಅವಿಚ್ಛಿನ್ನ ಅರ್ಥವನ್ನು ಧಾರಣ ಮಾಡುವಂಥವರೂ ವೀತರಾಗಿಗಳೂ ಆದ ಮುನಿಗಳ ಪರಂಪರೆಯು ನಡೆಯುತ್ತ ಬಂದಿದೆ

ಆಚಾರ್ಯ ಪ್ರಣೀತ ಗ್ರಂಥ ಪರಂಪರೆಯು—ಶ್ರೀಕುಂದಕುಂದ ಸ್ವಾಮಿಗಳು ಸಮಯಸಾರ, ಪ್ರವಚನಸಾರ, ಪಂಚಾಸ್ತಿಕಾಯ, ನಿಯಮಸಾರ, ರಯಣಸಾರ, ಅಷ್ಟಪಾಹುಡ ಇತ್ಯಾದಿ ಅನೇಕ ಗ್ರಂಥಗಳನ್ನು ರಚಿಸಿದರು ಅವುಗಳನ್ನು ಸದ್ಯಕ್ಕೆ ಜನರು ಓದುತ್ತಾರೆ ಈ ಗ್ರಂಥಗಳ ವಿನಯಪೂರ್ವಕ ಆರಾಧನೆಯನ್ನು ಮಾಡುವುದು ಪ್ರವಚನ ಭಕ್ತಿ ಎನಿಸುವದು ಶ್ರೀ ಉಮಾಸ್ವಾಮಿಗಳು 'ತತ್ತ್ವಾರ್ಥಸೂತ್ರ'ವನ್ನು ಹತ್ತು ಅಧ್ಯಾಯ-ಗಳಲ್ಲಿ ರಚಿಸಿದರು ಅದರ ಮೇಲೆ 'ಸರ್ವಾರ್ಥಸಿದ್ಧಿ' ಎಂಬ ಹೆಸರಿನ ವಿಸ್ತಾರವಾದ ಟೀಕೆಯನ್ನು ಪೂಜ್ಯಪಾದ ಸ್ವಾಮಿಗಳು ರಚಿಸಿದರು. ಅದರಂತೆ 'ರಾಜವಾರ್ತಿಕ' ಎಂಬ ಹೆಸರಿನ ಹದಿನಾರು ಸಾವಿರ ಶ್ಲೋಕಗಳುಳ್ಳ ಗ್ರಂಥವನ್ನು ತತ್ತ್ವಾರ್ಥಸೂತ್ರದ ಟೀಕಾರೂಪದಲ್ಲಿ ಶ್ರೀ ಅಕಲಂಕಸ್ವಾಮಿಗಳು ನಿರ್ಮಿಸಿದರು. ಇದೇ ವಿಷಯವನ್ನು ಕುರಿತು 'ಶ್ಲೋಕವಾರ್ತಿಕ' ಎಂಬ ಹೆಸರಿನ ಇಪ್ಪತ್ತು ಸಾವಿರ ಶ್ಲೋಕಗಳುಳ್ಳ ಗ್ರಂಥವನ್ನು ಶ್ರೀ ವಿದ್ಯಾನಂದಿ ಸ್ವಾಮಿಗಳು ನಿರೂಪಿಸಿದರು ಇದೇ ತತ್ತ್ವಾರ್ಥಸೂತ್ರದ ಮೇಲೆ ಶ್ರೀಸಮಂತಭದ್ರ ಸ್ವಾಮಿಗಳು ಎಂಬತ್ತು ನಾಲ್ಕು ಸಾವಿರ ಶ್ಲೋಕಗಳುಳ್ಳ 'ಗಂಧಹಸ್ತಿಮಹಾಭಾಷ್ಯ' ಎಂಬ ಹೆಸರಿನ ಗ್ರಂಥವನ್ನು ನಿರ್ಮಿಸಿದ್ದರು. ಅದು ಈಗ ಸದ್ಯಕ್ಕೆ ಉಪಲಬ್ಧವಿಲ್ಲ ಈ ಗಂಧಹಸ್ತಿಮಹಾಭಾಷ್ಯದ ಆರಂಭದ ಮಂಗಲಾಚರಣವು ಒಂದುನೂರಾ ಹದಿನೈದು ಶ್ಲೋಕಗಳಲ್ಲಿ 'ದೇವಾಗಮಸ್ತೋತ್ರ' ಎಂಬ ಹೆಸರಿನಿಂದ ಈಗ ಉಪಲಬ್ಧವಿದೆ. ಈ ಸ್ತೋತ್ರದ ಮೇಲೆ ಎಂಟುನೂರು ಶ್ಲೋಕಗಳುಳ್ಳ 'ಅಷ್ಟಶತಿ' ಎಂಬ ಹೆಸರಿನ ಟೀಕಾ ಗ್ರಂಥವನ್ನು ಶ್ರೀ ಅಕಲಂಕ ಸ್ವಾಮಿಗಳು ನಿರ್ಮಾಣ ಮಾಡಿದ್ದಾರೆ. ಈ ದೇವಾಗಮದ ಅಷ್ಟ ಶತಿಯ ಮೇಲೆ 'ಆಪ್ತಮೀಮಾಂಸಾ' ಎಂಬ ಟೀಕಾಗ್ರಂಥವೂ ಇದೆ ಅದಕ್ಕೆ 'ಅಷ್ಟಸಹಸ್ರೀ' ಎಂದೂ ಕರೆಯುವರು. ಇದರಲ್ಲಿ ಎಂಟು ಸಾವಿರ ಶ್ಲೋಕಗಳಿದ್ದು, ಶ್ರೀ ವಿದ್ಯಾನಂದೀ ಸ್ವಾಮಿಗಳಿಂದ ರಚಿಸಲ್ಪಟ್ಟಿದೆ. ಈ ಅಷ್ಟಸಹಸ್ರೀ ಗ್ರಂಥದ ಮೇಲೆ ಹದಿನಾರು ಸಾವಿರ ಶ್ಲೋಕಗಳ ಟಿಪ್ಪಣಿಯೊಂದನ್ನು ಲಘುಸಮಂತಭದ್ರರು ರಚಿಸಿದ್ದಾರೆ ವಿದ್ಯಾನಂದಿ ಸ್ವಾಮಿಗಳು 'ಆಪ್ತಪರೀಕ್ಷಾ' ಎಂಬ ಹೆಸರಿನ ಮೂರುಸಾವಿರ ಶ್ಲೋಕಗಳುಳ್ಳ ಗ್ರಂದವನ್ನು ನಿರ್ಮಿಸಿದರು ಮಾಣಿಕ್ಯನಂದಿ ಸ್ವಾಮಿಗಳು 'ಪರೀಕ್ಷಾಮುಖ' ಎಂಬ ಗ್ರಂಥವನ್ನು ರಚಿಸಿದರು. ಅದರ ಮೇಲೆ ದೊಡ್ಡ ಟೀಕಾಗ್ರಂಥವೆಂದು ಪ್ರಭಾಚಂದ್ರಾಚಾರ್ಯಕೃತ 'ಪ್ರಮೇಯ ಕಮಲ ಮಾರ್ತಂಡ' ಎಂಬ ಹೆಸರಿನಿಂದ ಹನ್ನೆರಡು ಸಾವಿರ ಶ್ಲೋಕಗಳಲ್ಲಿದೆ ಅದರಂತೆ ಚಿಕ್ಕದಾದ ಟೀಕಾಗ್ರಂದ ಒಂದು 'ಪ್ರಮೇಯ ರತ್ನ ಮಾಲಾ' ಎಂಬುದನ್ನು ಅನಂತವೀರ್ಯ ಆಚಾರ್ಯರು ನಿರ್ಮಿಸಿದ್ದಾರೆ. ಅಕಲಂಕದೇವಕೃತ 'ಲಘುತ್ರಯೀ'ಯ ಮೇಲೆ 'ನ್ಯಾಯ ಕುಮುದ ಚಂದ್ರೋದಯ' ಎಂಬ ಹೆಸರಿನ ಹದಿನಾರು ಸಾವಿರ ಶ್ಲೋಕಗಳ ಗ್ರಂದವನ್ನು ಪ್ರಭಾ ಚಂದ್ರ ಆಚಾರ್ಯರು ರಚಿಸಿದ್ದಾರೆ ಹಾಗೆಯೇ ಅನೇಕ ನ್ಯಾಯದ ಗ್ರಂಥಗಳು 'ಪ್ರಮಾಣ ಪರೀಕ್ಷಾ', 'ಪ್ರಮಾಣ ನಿರ್ಣಯ', 'ಪ್ರಮಾಣ ಮೀಮಾಂಸಾ', 'ನ್ಯಾಯದೀಪಿಕಾ' ಇತ್ಯಾದಿ ಜಿನದರ್ಶನದ ಆಧಾರ ಗ್ರಂಥಗಳು ಇವೆ. ಅವುಗಳಲ್ಲಿ ಪ್ರಮಾಣಗಳಿಂದ ನಿರ್ಣಯ ಮಾಡಿದ ಪದಾರ್ಥಗಳ ಅನೇಕಾಂತ ಸ್ವರೂಪದ ವರ್ಣನೆಯು ಇದೆ ಇವೆಲ್ಲ ದ್ರವ್ಯಾನುಯೋಗದ ಗ್ರಂಥಗಳು ಜಯವಂತವಾಗಿರಲಿ.

ಇನ್ನು ಕರುಣಾನುಯೋಗದ ಗ್ರಂಥಗಳು ಗೊಮ್ಮಟಸಾರ, ಲಬ್ಧಿಸಾರ, ಕ್ಷಪಣಾಸಾರ, ತ್ರಿಲೋಕಸಾರ ಇತ್ಯಾದಿ ಅನೇಕವಾಗಿವೆ ಚರಣಾನುಯೋಗದ ಗ್ರಂಥಗಳು ಮೂಲಾಚಾರ, ಆಚಾರಸಾರ, ರತ್ನಕರಂಡ–ಶ್ರಾವಕಾಚಾರ, ಭಗವತೀ ಆರಾಧನಾ, ಸ್ವಾಮಿ ಕಾರ್ತಿಕೇಯಾನುಪ್ರೇಕ್ಷಾ, ಆತ್ಮಾನುಶಾಸನ, ಪದ್ಮನಂದಿ ಪಂಚವಿಂಶತಿ ಇವೇ ಮೊದಲಾದ ಗ್ರಂದಗಳು ಇವೆ ಪ್ರಥಮಾನುಯೋಗದ ಗ್ರಂಥಗಳು ಜಿನಸೇನಾಚಾರ್ಯ ಕೃತ ಆದಿಪುರಾಣ, ಗುಣಭದ್ರಾಚಾರ್ಯಕೃತ ಉತ್ತರಪುರಾಣ, ರವಿಷೇಣಾಚಾರ್ಯರ ಪದ್ಮಪುರಾಣ ಮೊದಲಾದ ಗ್ರಂಥಗಳು ಜಿನೇಂದ್ರನ ಪರಮಾಗಮಾನುಸಾರ ಬರೆದಂಥ ಗ್ರಂಥಗಳು ಇರುತ್ತವೆ. ಹಾಗೆಯೇ ಪೂಜ್ಯಪಾದಾಚಾರ್ಯರ ಜೈನೇಂದ್ರ

ವ್ಯಾಕರಣವೆಂಬ ಅಪೂರ್ವ ಗ್ರಂಥವಿದೆ ಈ ಎಲ್ಲ ಗ್ರಂಥಗಳ ಸ್ವಾಧ್ಯಾಯವನ್ನೂ ಮನನವನ್ನೂ ಮಾಡುವುದು, ಭಕ್ತಿಪುರಃಸರ ಓದುವುದು, ಕೇಳುವುದು, ವ್ಯಾಖ್ಯಾನ ಮಾಡುವುದು, ನಮಸ್ಕಾರ ಮಾಡುವುದು, ಬರೆಯುವುದು, ಬರೆಯಿಸುವುದು, ಶೋಧಿಸುವುದು, ಇವೆಲ್ಲವೂ ಪ್ರವಚನ ಭಕ್ತಿಯೆನಿಸುತ್ತವೆ

**ಪ್ರವಚನದ ಅಭ್ಯಾಸದ ಫಲ**—ಮೇಲೆ ಹೇಳಿದ ಶಾಸ್ತ್ರಗಳ ಅಭ್ಯಾಸದಲ್ಲಿ ಕಳೆದ ದಿವಸಗಳು ಧನ್ಯವೆಂದು ತಿಳಿಯಬೇಕು ಪರಮಾಗಮದ ಅಭ್ಯಾಸವನ್ನುಳಿದು ಕಳೆದ ಕಾಲವು ವ್ಯರ್ಥವಾಗಿದೆ. ಸ್ವಾಧ್ಯಾಯವಿಲ್ಲದೆ ಶುಭಧ್ಯಾನವು ಆಗುವದಿಲ್ಲ ಸ್ವಾಧ್ಯಾಯವಿಲ್ಲದೆ ಧರ್ಮದ ಧ್ಯಾನವೂ ಇಲ್ಲ ಕಷಾಯವೂ ಮಂದವಾಗುವದಿಲ್ಲ. ಶಾಸ್ತ್ರದ ಚಿಂತನೆಯ ಹೊರತಾಗಿ ಸಂಸಾರದಲ್ಲಿ ದೇಹವು ಭೋಗದಿಂದ ವಿರಕ್ತವಾಗುವದಿಲ್ಲ ಸಂಪೂರ್ಣ ವ್ಯವಹಾರದ ಉಜ್ವಲತೆಯೂ ಪರಮಾರ್ಥ ವಿಚಾರವೂ ಆಗಮದ ಅಬ್ಯಾಸದಿಂದಲೇ ಆಗುತ್ತದೆ. ಆಗಮದ ಅಭ್ಯಾಸದಿಂದ ಜಗತ್ತಿನಲ್ಲಿ ಮನ್ನಣೆಯೂ ಉಚ್ಚತೆಯೂ ನಿರ್ಮಲಯಶವೂ ಆದರಸತ್ಕಾರವೂ ಪ್ರಾಪ್ತವಾಗುತ್ತವೆ ಸಮ್ಯಗ್ಜ್ಞಾನವು ಪರಮ ಬಂಧುವಾಗಿದೆ, ಉತ್ಕೃಷ್ಟಧನವಾಗಿದೆ, ಪರಮ ಮಿತ್ರವಾಗಿದೆ ಸಮ್ಯಗ್ಜ್ಞಾನವೇ ಅವಿನಾಶಿಯಾದ ಧನವಾಗಿದೆ. ಸ್ವದೇಶ, ಪರದೇಶ, ಸುಖ, ದುಃಖ, ಸಂಪತ್ತು, ವಿಪತ್ತು ಇವೇ ಮೊದಲಾದ ಅವಸ್ಥೆಗಳಲ್ಲೆಲ್ಲ ಸಮ್ಯಗ್ಜ್ಞಾನವೇ ಶ್ರೇಷ್ಠ ಶರಣಸ್ಥಾನವಾಗಿದೆ ಸ್ವಾಧೀನವೂ ಅವಿನಾಶಿಯೂ ಆದ ಜ್ಞಾನವು ಧನವೇ ಆಗಿದೆ. ಅದಕ್ಕಾಗಿಯೇ ಆಗಮದೊಳಗಿನ ಅರ್ಥದ ಅಭ್ಯಾಸವನ್ನು ಯಾವಾಗಲೂ ಮಾಡುತ್ತಿರಬೇಕು ನಿಮ್ಮ ಆತ್ಮಕ್ಕೆ ನಿರಂತರ ಜ್ಞಾನ ದಾನವನ್ನು ಮಾಡಿರಿ. ನಿಮ್ಮ ಮಕ್ಕಳು ಮರಿಗಳಿಗೂ ಇತರರ ಮಕ್ಕಳಿಗೂ ಜ್ಞಾನ ದಾನವನ್ನೇ ಮಾಡಿರಿ ಕೋಟ್ಯಾವಧಿ ಸಂಪತ್ತಿಯು ಕೂಡ ಜ್ಞಾನ ಧನಕ್ಕೆ ಸಮಾನವಾಗಲಾರದು ಧನವು ಗರ್ವವನ್ನು ಉತ್ಪನ್ನ ಮಾಡುವಂಥದಿದೆ; ವಿಷಯಗಳಲ್ಲಿ ಮಗ್ನಗೊಳಿಸುವಂಥದಿದೆ, ದುರ್ಧ್ಯಾನವನ್ನು ಉತ್ಪನ್ನ ಮಾಡುವಂಥದಿದೆ, ಸಂಸಾರವೆಂಬ ಬಾವಿಯಲ್ಲಿ ಮುಳುಗಿಸು-ವಂಥದಿದೆ, ಜ್ಞಾನ ದಾನದಿಂದ ಇಂಥ ಯಾವ ದೋಷಗಳೂ ಆಗುವದಿಲ್ಲ ಅಂತಲೇ ಜ್ಞಾನದಾನಕ್ಕೆ ಸಮಾನವಾದ ಅನ್ಯ ದಾನಗಳೇ ಇಲ್ಲ. ಪ್ರತಿಯೊಂದು ದಿವಸ ಒಂದು ಶ್ಲೋಕ ಇಲ್ಲವೆ ಅರ್ಧಶ್ಲೋಕ ಅದವಾ ಒಂದು ಪದವನ್ನಾದರೂ ನಿತ್ಯ ಅಭ್ಯಾಸ ಮಾಡಿದರೆ ಕೆಲವೊಂದು ದಿವಸಗಳಲ್ಲಿ ಅವನು ಶಾಸ್ತ್ರಾರ್ಥದಲ್ಲಿ ಪಾರಂಗತನಾಗುವನು ವಿದ್ಯೆಯೊಂದು ದೊಡ್ಡ ದೇವತೆಯಿದ್ದಂತೆ ಯಾವ ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಜ್ಞಾನಾಭ್ಯಾಸವನ್ನು ಮಾಡಿಸುತ್ತಾರೋ ಅವರು ಮಕ್ಕಳಿಗೆ ಕೋಟ್ಯಾವಧಿ ರೂಪಾಯಿಗಳಿಗಿಂತ ಹೆಚ್ಚಿನ ಆಸ್ತಿಯನ್ನು ಕೊಟ್ಟಂತಾಗುತ್ತದೆ ಸಮ್ಯಗ್ಜ್ಞಾನವನ್ನು ಕೊಡುವ ಗುರುವಿಗಿಂತ ಹೆಚ್ಚಿಗೆ ಉಪಕಾರ ಮಾಡುವವರು ಈ ಮೂರು ಲೋಕಗಳಲ್ಲಿ ಇನ್ನಾರು ಇಲ್ಲ ಜ್ಞಾನವನ್ನು ನೀಡಿದ ಗುರುವಿನ ಉಪಕಾರವನ್ನು ಯಾರು ಮನ್ನಿಸುವದಿಲ್ಲವೋ ಅವರಂಥ ಕೃತಘ್ನ, ಪಾಪಿಗಳು ಇನ್ನಾರೂ ಇಲ್ಲ ಜ್ಞಾನದ ಅಭ್ಯಾಸವಿಲ್ಲದೆ ವ್ಯವಹಾರ ಪರಮಾರ್ಥಗಳೆರಡೂ ಸಾಧಿಸುವದಿಲ್ಲ ಅದಕ್ಕಾಗಿ ಪ್ರವಚನ ಭಕ್ತಿಯೇ ಕಲ್ಯಾಣಮಾಡುವಂಥದಾಗಿದೆ ಪ್ರವಚನ ಭಕ್ತಿಯು ಸಾವಿರಾರು ದೋಷಗಳನ್ನು ಇಲ್ಲದಂತೆ ಮಾಡುವಂಥದಾಗಿದೆ ಅದಕ್ಕಾಗಿ ಅದರ ಭಕ್ತಿಯನ್ನು ಮಾಡಬೇಕು, ಅರ್ಘ್ಯವನ್ನು ನೀಡಬೇಕು. ಇದರಿಂದಲೇ ಸಮ್ಯಗ್ದರ್ಶನವು ಉಜ್ವಲವಾದೀತು

ಈ ಪ್ರಕಾರ ಪ್ರವಚನ ಭಕ್ತಿ ಎಂಬ ಹೆಸರಿನ ಹದಿಮೂರನೆಯ ಭಾವನೆಯ ವರ್ಣನೆಯನ್ನು ಮಾಡಿದೆ

## ೧೪. ಆವಶ್ಯಕಾಪರಿಹಾಣಿ

**ಮುನಿಯ ಆರು ಆವಶ್ಯಕ ಕ್ರಿಯೆಗಳು**—ಇನ್ನು ಆವಶ್ಯಕಾಪರಿಹಾಣಿ ಎಂಬ ಹೆಸರಿನ ಹದಿನಾಲ್ಕನೆಯ ಭಾವನೆಯ ವರ್ಣನೆಯನ್ನು ಮಾಡಲಾಗುವದು ಅವಶ್ಯ ಮಾಡಲಿಕ್ಕೆ ಯೋಗ್ಯವಾದ ಕ್ರಿಯೆಗಳಿಗೆ ಆವಶ್ಯಕವೆನ್ನುವರು ಆವಶ್ಯಕಗಳ ಹಾನಿಯನ್ನು ಮಾಡದಂಥ ವಿಚಾರವು ಯಾವುದು ಇರುವುದೋ ಅದಕ್ಕೆ ಆವಶ್ಯಕಾಪರಿಹಾಣಿ ಎನ್ನುವರು. ಅಥವಾ ಇಂದ್ರಿಯಗಳಿಗೆ ವಶವಿಲ್ಲದಂಥ ಅವಶರ ಅಂದರೆ ಮುನಿಗಳ ಕ್ರಿಯೆಗಳು ಆವಶ್ಯಕ ಕ್ರಿಯೆಗಳೆನಿಸುತ್ತವೆ ಈ ಆವಶ್ಯಕ ಕ್ರಿಯೆಗಳು ಆರು ಪ್ರಕಾರವಾಗಿವೆ (೧) ಸಾಮಾಯಿಕ, (೨) ಸ್ತವನ, (೩) ವಂದನಾ, (೪) ಪ್ರತಿಕ್ರಮಣ, (೫) ಪ್ರತ್ಯಾಖ್ಯಾನ, (೬) ಕಾಯೋತ್ಸರ್ಗ.

**೧. ಸಾಮಾಯಿಕ**—ಸಾಮಾಯಿಕವೆಂದರೆ ಸಾಮ್ಯಭಾವ ಸುಂದರ ಇಲ್ಲವೆ ಕುರೂಪ ವಸ್ತುಗಳಲ್ಲಿ ರಾಗ ದ್ವೇಷಗಳನ್ನು ಇಡಕೂಡದು. ಶುಭ ಅಥವಾ ಅಶುಭ ಕರ್ಮದ ಉದಯಗಳಲ್ಲಿ ಹರ್ಷ ವಿಷಾದಗಳನ್ನು

ಹೊಂದಬಾರದು. ಆಹಾರ, ವಸತಿಯ ಸ್ಥಾನಗಳು ದೊರೆಯಲಿ, ದೊರೆಯದೆ ಇರಲಿ, ಎರಡರಲ್ಲಿಯೂ ಸಮಭಾವವನ್ನು ಇಡಬೇಕು ಸ್ತುತಿ ನಿಂದೆಗಳಲ್ಲಿ, ಆದರ–ತಿರಸ್ಕಾರಗಳಲ್ಲಿ, ರತ್ನ–ಪಾಷಾಣಗಳಲ್ಲಿ, ಜೀವನ–ಮರಣಗಳಲ್ಲಿ, ಮಿತ್ರ–ಶತ್ರುಗಳಲ್ಲಿ, ಸುಖ–ದುಃಖಗಳಲ್ಲಿ, ಮನೆ ಸುಡುಗಾಡುಗಳಲ್ಲಿ ರಾಗದ್ವೇಷರಹಿತ, ಪರಿಣಾಮವಿರುವುದಕ್ಕೆ ಸಮಭಾವ ಇಲ್ಲವೆ ಸಾಮಾಯಿಕ ಎನ್ನುವರು ಯಾರು ಸಾಮ್ಯಭಾವವನ್ನು ಧಾರಣ ಮಾಡುವರೋ ಅವರು ಬಾಹ್ಯ ಜಡ ಪದಾರ್ಥಗಳನ್ನು ತಮ್ಮಿಂದ ಭಿನ್ನವೆಂದು ತಿಳಿಯುತ್ತಾರೆ ಆ ಜಡ ಪದಾರ್ಥಗಳು ತಮ್ಮ ಸ್ವಭಾವದಲ್ಲಿ ಯಾವ ವಿಕಾರವನ್ನು ಉತ್ಪನ್ನ ಮಾಡಲಿಕ್ಕೆ ಸಮರ್ಥವಿಲ್ಲವೆಂದು ತಿಳಿದು, ಆ ವಿಷಯದಲ್ಲಿ ರಾಗದ್ವೇಷಗಳನ್ನು ಬಿಟ್ಟುಬಿಡುತ್ತಾರೆ. ತಾನು ಶುದ್ಧ ಜ್ಞಾತಾ, ದೃಷ್ಟಾ ಇರುವೆನೆಂದು ತಿಳಿದಿರುತ್ತಾರೆ ಶರೀರದಿಂದ ಭಿನ್ನವಾದ ಜ್ಞಾನವೇ ತನ್ನ ದೇಹವಾಗಿದೆ ಎಂದು ತಿಳಿದು ಕರ್ಮ ರಹಿತ ಚೈತನ್ಯ ಸ್ವರೂಪಿಯಾದ ಶುದ್ಧ ಜೀವವನ್ನೇ ಏಕಾಗ್ರತೆಯಿಂದ ಧ್ಯಾನಿಸುತ್ತಾರೆ ಇಂಥವರೇ ಸರ್ವೋತ್ಕೃಷ್ಟವಾದ ನಿರ್ವಾಣ ಪದವನ್ನು ಹೊಂದುತ್ತಾರೆ. ಇಂಥ ನಿರ್ವಿಕಲ್ಪ ಆತ್ಮ ಗುಣದಲ್ಲಿ ತಮ್ಮ ಮನವು ಸ್ಥಿರವಾಗದಿದ್ದಲ್ಲಿ ಈ ಆರು ಆವಶ್ಯಕ ಕ್ರಿಯೆಗಳಲ್ಲಿ ಮನಸ್ಸನ್ನು ತೊಡಗಿಸಿ, ಅವುಗಳ ಯೋಗದಿಂದ ಸೌಮ್ಯ ಭಾವವನ್ನು ಸಂಪಾದಿಸಬೇಕು ಇಂಥ ಪ್ರಯತ್ನಕ್ಕೇನೇ ಸಾಮಾಯಿಕವೆನ್ನುವರು

೨. ಸ್ತವನ—ಸ್ತವನವೆಂದರೆ ಭಗವಾನ್ ಸರ್ವಜ್ಞರನ್ನು ಅನೇಕ ಹೆಸರುಗಳಿಂದ ಸ್ತುತಿಸುವುದು. ಇದು ಸ್ತವನ ಎಂಬ ಹೆಸರಿನ ಆವಶ್ಯಕವಾಗಿದೆ ಅದು ಹೀಗ–"ಹೇ ಪ್ರಭೋ, ನೀನು ಕರ್ಮರೂಪಿ ವೈರಿಯನ್ನು ಗೆದ್ದಿಯೆಂದು ನೀನು ಜಿನನಾಗಿರುವಿ ನಿನ್ನ ಸ್ವರೂಪದಲ್ಲಿಯೇ ನೀನು ಸದಾ ಇರುವುದರಿಂದ ಸ್ವಯಂಭೂ ಎನಿಸುವಿ ಕೇವಲ ಜ್ಞಾನರೂಪದೃಷ್ಟಿಯಿಂದ ಮೂರು ಕಾಲಗಳಲ್ಲಿರುವ ಪದಾರ್ಥಗಳನ್ನು ತಿಳಿಯುವುದರಿಂದ ತ್ರಿಲೋಚನನೆನಿಸುವಿ. ಮೋಹವೆಂಬ ಅಂಧಾಸುರನನ್ನು ಕೊಂದಿರುವೆಯಾದುದರಿಂದ ಅಂಧಕಾಂತಕನಾಗಿರುವಿ. ಘಾತಿಯ ಕರ್ಮಗಳೆಂಬ ಅರ್ಧ ವೈರಿಗಳನ್ನು ನಾಶಮಾಡಿ, ಅದ್ವಿತೀಯ ಈಶ್ವರತ್ವವನ್ನು ಪಡೆದುದರಿಂದ ಅರ್ಧನಾರೀಶ್ವರನಹುದು. ಶಿವಪದದಲ್ಲಿ ಅಂದರೆ ನಿರ್ವಾಣ ಪದದಲ್ಲಿ ವಾಸಮಾಡುವುದರಿಂದ ನೀನು ಶಿವನು ಪಾಪರೂಪಿಯಾದ ವೈರಿಯ ಸಂಹಾರ ಮಾಡುವುದರಿಂದ ನಿನಗೆ ನಾವು ಹರ ಎನ್ನುವೆವು ಜನರ ಕಲ್ಯಾಣವನ್ನು ಮಾಡುವವನಿರುವುದರಿಂದ ನೀನು ಶಂಕರನು 'ಶಂ' ಎಂದರೆ ಪರಮಾನಂದ ರೂಪಿಯಾದ ಸುಖವು. ಅದರಲ್ಲಿ ನೀನು ಉತ್ಪನ್ನನಾಗಿರುವುದರಿಂದ ನೀನು ಶಂಭವ-ನಾಗಿರುವೆ ವೃಷವೆಂದರೆ ಧರ್ಮ ಆ ಯೋಗದಿಂದ ನೀನು ಶೋಭಿಸುವೆಯೆಂದು ನೀನು ವೃಷಭನೆನಿಸುವಿ ಜಗತ್ತಿನಲ್ಲಿ ಎಲ್ಲ ಪ್ರಾಣಿಗಳಿಗಿಂತ ಗುಣಗಳಿಂದ ಶ್ರೇಷ್ಠನಾಗಿರುವುದರಿಂದ ಜಗಜ್ಜ್ಯೇಷ್ಠನೆನಿಸುವಿ 'ಕಂ' ಎಂದರೆ ಸುಖ, ಅದರಿಂದ ನೀನು ಸಂಪೂರ್ಣ ಜೀವಗಳ ಪಾಲನ ಮಾಡಿರುವಿ ಅಂತಲೇ ನೀನು ಕಪಾಲಿಯು ಕೇವಲ ಜ್ಞಾನದಿಂದ ಸಂಪೂರ್ಣ ಲೋಕಾಲೋಕಗಳನ್ನು ವ್ಯಾಪಿಸಿರುವುದರಿಂದ ನೀನು ವಿಷ್ಣುವೆನಿಸುವಿ ಜನ್ಮ, ಜರಾ, ಮರಣಗಳೆಂಬ ತ್ರಿಪುರಗಳನ್ನು ನೀನು ಧ್ವಂಸಮಾಡಿರುವಿ, ಅದಕ್ಕಾಗಿ ತ್ರಿಪುರಾಂತಕನಾಗಿರುವಿ" ಈ ಪ್ರಕಾರ ಒಂದು ಸಾವಿರದ ಎಂಟು ಹೆಸರುಗಳಿಂದ ಇಂದ್ರನು ನಿನ್ನ ಸ್ತುತಿಯನ್ನು ಮಾಡಿರುವನು ಗುಣದ ಅಪೇಕ್ಷೆಯಿಂದ ನಿನ್ನ ಹೆಸರುಗಳು ಅನಂತವಾಗಿವೆ ಅವುಗಳನ್ನು ಮನಸ್ಸಿನಲ್ಲಿ ತಂದು ಸ್ತುತಿಸುವುದಕ್ಕೆ ಸ್ತವನ ಎನ್ನುವರು ಇದು ಸ್ತವನ ಎಂಬ ಆವಶ್ಯಕವಾಗಿದೆ

೩. ವಂದನಾ—ಇಪ್ಪತ್ನಾಲ್ಕು ತೀರ್ಥಂಕರರಲ್ಲಿ ಒಬ್ಬರ, ಇಲ್ಲವೆ ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವ ಸಾಧು ಇವರಲ್ಲಿ ಒಬ್ಬರನ್ನು ಮುಖ್ಯವಾಗಿಟ್ಟುಕೊಂಡು ಸ್ತುತಿಸುವುದು ವಂದನಾ ಆವಶ್ಯಕವಾಗಿದೆ.

೪. ಪ್ರತಿಕ್ರಮಣ—೧ ಮಾನವನು ಇಡೀ ದಿವಸ ರಾಗದ್ವೇಷಗಳಲ್ಲಿ ವಶನಾಗಿ ಕಳೆದಿರಬಹುದು, ವಿಷಯಗಳಲ್ಲಿ ಇರುವ ಅತ್ಯಂತ ಆಸಕ್ತಿಯಿಂದ ಏಕೇಂದ್ರಿಯವೇ ಮೊದಲಾದ ಜೀವಗಳ ಘಾತ ಮಾಡಿರಬಹುದು, ನಿರರ್ಥಕ ಪ್ರವರ್ತನಗೊಂಡಿರಬಹುದು, ಸದೋಷ ಭೋಜನ ಮಾಡಿರಬೇಕು, ಯಾವುದಾದರೊಂದು ಜೀವಕ್ಕೆ ಪೀಡೆಯನ್ನು ಉಂಟುಮಾಡಿರಲೂ ಬಹುದು, ಕರ್ಕಶ, ಕಠೋರ, ಮಿಥ್ಯಾ ಭಾಷಣಗಳನ್ನು ಮಾಡಿರಬಹುದು, ಸ್ತ್ರೀಕಥಾ, ಭೋಜನಕಥಾ, ಕಳ್ಳರ ಕಥಾ, ರಾಜಕಥಾ ಇತ್ಯಾದಿಗಳಲ್ಲಿ ಹೊತ್ತುಗಳೆದಿರಬಹುದು, ಕೊಡದೆ ಇದ್ದ ಅನ್ಯರ ಧನವನ್ನು ತಕ್ಕೊಂಡಿರಬಹುದು, ಅನ್ಯರ ಧನದ ಮೇಲೆ ಲಾಲಸೆಯನ್ನು ಇಟ್ಟಿರಬೇಕು, ಪರಸ್ತ್ರೀಯನ್ನು ಇಚ್ಛಿಸಿರಬೇಕು, ಧನ ಪರಿಗ್ರಹದ ಮೇಲೆ ಲಾಲಸೆಯನ್ನು ಇಟ್ಟಿರಬೇಕು, ಆದರೆ ಇದೆಲ್ಲ ನಾನು ಕೆಟ್ಟ ಕೆಲಸ ಮಾಡಿರುವೆ, ಪಾಪಮಾಡಿರುವೆ ಈಗ ನನಗೆ ಅದಕ್ಕಾಗಿ ಪಶ್ಚಾತ್ತಾಪವಾಗುತ್ತಿದೆ ಅದಕ್ಕಾಗಿ ಆ ನನ್ನ ದೋಷಗಳು ಇಲ್ಲದಂತೆ

ಆಗಲಿ ಪಂಚಪರಮೇಷ್ಠಿಗಳ ಪ್ರಸಾದದಿಂದ ಪುನಃ ನನ್ನ ಪರಿಣಾಮವು ಪಾಪರೂಪವಾಗದಂತೆ ಇರಲಿ. ಹೀಗೆ ಮುಖದಿಂದ ಮಾತನಾಡಿ, ಭಾವಶುದ್ಧವಾಗಲಿಕ್ಕೆಂದು ಕಾಯೋತ್ಸರ್ಗವನ್ನು ಮಾಡಿ, ಪಂಚ ನಮಸ್ಕಾರದ ಒಂಬತ್ತು ಜಪಗಳನ್ನು ಮಾಡಬೇಕು ಈ ಪ್ರಕಾರ ಹಗಲೆಲ್ಲ ಆದ ಪ್ರವೃತ್ತಿಗಳನ್ನು ಸಂಜೆಗೆ ಚಿಂತಿಸಿ, ಪಾಪ ಪರಿಣಾಮದ ನಿಂದೆಯನ್ನು ಮಾಡುವುದು ದಿನದ ಪ್ರತಿಕ್ರಮಣವಾಗಿದೆ

೨ ರಾತ್ರಿಯಲ್ಲಿ ಆದ ಪಾಪವನ್ನು ದೂರಗೊಳಿಸುವದಕ್ಕಾಗಿ ಮುಂಜಾನೆ ಪ್ರತಿಕ್ರಮಣ ಮಾಡುವುದು ರಾತ್ರಿಕ ಪ್ರತಿಕ್ರಮಣವಾಗಿದೆ

೩. ದಾರಿಯಿಂದ ನಡೆಯುವಾಗ ಅನೇಕ ದೋಷಗಳು ತಗುಲಿರಬೇಕು. ಅವುಗಳ ಶುದ್ಧಿಗಾಗಿ ಮಾಡುವ ಪ್ರತಿಕ್ರಮಣಕ್ಕೆ ಐರ್ಯಾಪಥಿಕ ಪ್ರತಿಕ್ರಮಣವೆನ್ನುವರು

೪. ಹದಿನೈದು ದಿವಸಗಳಲ್ಲಿ ಆದ ದೋಷಗಳ ನಿರಾಕರಣ ಮಾಡುವುದು ಪಾಕ್ಷಿಕ ಪ್ರತಿಕ್ರಮಣವೆನ್ನುವರು.

೫. ನಾಲ್ಕು ತಿಂಗಳ ದೋಷ ನಿರಾಕರಣ ಮಾಡುವ ಸಲುವಾಗಿ ಯಾವ ಪ್ರತಿಕ್ರಮಣವನ್ನು ಆಚರಿಸಲಾಗುವದೋ ಅದು ಚಾತುರ್ ಮಾಸಿಕ ಪ್ರತಿಕ್ರಮಣವಾಗಿದೆ

೬ ಒಂದು ವರ್ಷದಲ್ಲಾದ ದೋಷವನ್ನು ನಿರಾಕರಣ ಮಾಡುವದಕ್ಕಾಗಿ ಮಾಡುವ ಪ್ರತಿಕ್ರಮಣಕ್ಕೆ ಸಾಂವತ್ಸರಿಕ ಪ್ರತಿಕ್ರಮಣವೆನ್ನುವರು

೭ ಸಂಪೂರ್ಣ ಆಯುಷ್ಯದಲ್ಲಿಯೇ ಸಂಭವಿಸಿದ ದೋಷಗಳನ್ನು ನಿರಾಕರಣ ಮಾಡುವದಕ್ಕಾಗಿ ಕೊನೆಗೆ ಸಲ್ಲೇಖನದ ಪೂರ್ವದಲ್ಲಿ ಮಾಡುವ ಪ್ರತಿಕ್ರಮಣಕ್ಕೆ ಉತ್ತಮಾರ್ಥ ಪ್ರತಿಕ್ರಮಣವೆಂದು ಹೇಳುವರು

ಹೀಗೆ ಏಳು ಪ್ರಕಾರದ ಪ್ರತಿಕ್ರಮಣಗಳಿವೆ ಇದರಲ್ಲಿ ಗೃಹಸ್ಥನು ತನ್ನ ಕೈಯಿಂದ ಹಗಲಿರುಳುಗಳಲ್ಲಿ ಆಗುವ ದೋಷಗಳ ವಿಚಾರವನ್ನು ಸಂಜೆ ಮುಂಜಾವುಗಳಲ್ಲಂತೂ ಮಾಡಲಿಕ್ಕೇಬೇಕು ಹತ್ತಿಪ್ಪತ್ತು ರೂಪಾಯಿಗಳ ವ್ಯವಹಾರ ಮಾಡುವವನೂ ಸಹ ಸಾಯಂಕಾಲ ತನ್ನ ಲೆಕ್ಕವನ್ನು ನೋಡಿ, ಲಾಭ-ಹಾನಿಗಳನ್ನು ಗೊತ್ತುಮಾಡಿ-ಕೊಳ್ಳುತ್ತಾನೆ. ಅಂದ ಮೇಲೆ ಈ ಅತ್ಯಂತ ದುರ್ಲಭವಾದ ಮಾನವ ಜನ್ಮದ ಒಂದು ಘಳಿಗೆಯು ಹೋಯಿತೆಂದರೆ ತಿರುಗಿ ಬಾರದಂಥ ಅಮೌಲ್ಯ ಕಾಲದ ವಿನಿಯೋಗವನ್ನು ಹೇಗೆ ಮಾಡಿದೆವೆಂಬುದನ್ನು ಅವಶ್ಯ ನಿರೀಕ್ಷಿಸಲಿಕ್ಕಬೇಕು. ಇಂದು ಪರಮೇಷ್ಠಿಯ ಪೂಜೆ, ಸ್ನಪನಗಳನ್ನು ಮಾಡುವದರಲ್ಲಿ ಎಷ್ಟು ಹೊತ್ತು ಹೋಯಿತು? ಸ್ವಾಧ್ಯಾಯ ಮಾಡುವದರಲ್ಲಿ ಎಷ್ಟು ಹೊತ್ತು ಕಳೆಯಿತು? ಜಪಮಾಡುವುದರಲ್ಲಿ ಶಾಸ್ತ್ರ ಕೇಳುವುದರಲ್ಲಿ, ತತ್ತ್ವಾರ್ಥದ ಚರ್ಚೆ ಮಾಡುವುದರಲ್ಲಿ, ಧರ್ಮಾತ್ಮರ ವೈಯಾವೃತ್ಯ ಮಾಡುವುದರಲ್ಲಿ ಎಷ್ಟು ವೇಳೆ ಹೋಯಿತು? ಮನೆಯ ಆರಂಭ ಪ್ರಪಂಚದಲ್ಲಿಯೂ ವಿಷಯ ಭೋಗ ಕಷಾಯಗಳಲ್ಲಿಯೂ ವಿಕಥಾ-ವಿಸಂವಾದಗಳನ್ನು ಮಾಡುವುದರಲ್ಲಿಯೂ ತಿನ್ನುಣ್ಣುವುದರಲ್ಲಿಯೂ ನಿದ್ರೆ-ಆಲಸ್ಯಗಳಲ್ಲಿಯೂ ಶರೀರ ಶೃಂಗಾರ, ಹಿಂಸಾದಿ ಪಂಚ ಪಾಪಗಳಲ್ಲಿಯೂ ಎಷ್ಟು ವೇಳೆ ಹೋಯಿತೆಂಬುದರ ವಿಚಾರ ಮಾಡಬೇಕು. ಒಂದು ವೇಳೆ ಪಾಪ ಕರ್ಮದಲ್ಲಿ ಹೆಚ್ಚು ಪ್ರವೃತ್ತಿಯು ಆಗಿದ್ದರೆ ತನ್ನನ್ನು ತಾನೇ ಧಿಕ್ಕರಿಸಿಕೊಂಡು, ಪಾಪಬಂಧದ ಕಾರಣಗಳನ್ನು ಇಲ್ಲದಂತೆ ಮಾಡಬೇಕು ಧರ್ಮ ಕಾರ್ಯದಲ್ಲಿ ತಮ್ಮ ಪರಿಣಾಮಗಳನ್ನು ಹಚ್ಚಬೇಕು ಪಂಚಮ ಕಾಲದಲ್ಲಿ ಪ್ರತಿಕ್ರಮಣವೇ ಆತ್ಮಶುದ್ಧಿಯ ಮಾರ್ಗವಾಗಿದೆ.

೫. ಪ್ರತ್ಯಾಖ್ಯಾನ— ಇನ್ನು ಮುಂದೆ ಇಂಥ ಪಾಪವನ್ನು ನಾನು ಮನ, ವಚನ, ಕಾಯಗಳಿಂದ ಎಂದೂ ಮಾಡಲಾರೆನೆಂದು ಪ್ರತಿಜ್ಞೆ ಮಾಡುವುದಕ್ಕೆ ಪ್ರತ್ಯಾಖ್ಯಾನವೆನ್ನುವರು.

೬. ಕಾಯೋತ್ಸರ್ಗ— ನಾಲ್ಕು ಬೆರಳುಗಳಷ್ಟು ಅಂತರದಲ್ಲಿ ಎರಡೂ ಕಾಲುಗಳನ್ನು ಒಂದೇ ಸಮನಾಗಿ ಇಟ್ಟು, ಎದ್ದು ನಿಲ್ಲುವುದು ಆಗ ಎರಡೂ ಕೈಗಳನ್ನು ಸರಳವಾಗಿ ಇಳಿಬಿಟ್ಟಿರಬೇಕು ಅಲ್ಲದೆ ಶರೀರದ ಮೇಲಿನ ಮಮತ್ವವನ್ನು ಬಿಟ್ಟು ಮೂಗಿನ ತುದಿಯ ಮೇಲೆ ದೃಷ್ಟಿಯನ್ನು ಇಡುವುದು. ಶರೀರದಿಂದ ಆತ್ಮನು ಭಿನ್ನನಾಗಿದ್ದಾನೆಂದು ಭಾವಿಸುವುದು. ಇದಕ್ಕೆ ಕಾಯೋತ್ಸರ್ಗವೆನ್ನುವರು ಇದು ಪದ್ಮಾಸನದಿಂದಲೂ ಸಾಧಿಸುತ್ತದೆ. ಯಾವ ಆಸನದಲ್ಲಿದ್ದರೂ ಶುಭಧ್ಯಾನವಿದ್ದರೆ ಮಾತ್ರ ಅದು ಸಫಲವಾಗುತ್ತದೆ

ಇವು ಆರು ಆವಶ್ಯಕಗಳು ಪರಮಧರ್ಮ ಸ್ವರೂಪದ ದ್ಯೋತಕಗಳಾಗಿವೆ. ಅದಕ್ಕಾಗಿ ಇವುಗಳ ಪೂಜೆಯನ್ನು ಮಾಡಿ, ಪುಷ್ಪಾಂಜಲಿಯನ್ನು ಅರ್ಪಿಸಿ, ಅರ್ಘ್ಯವನ್ನು ಕೊಡಬೇಕು

ಮೊದಲನೆಯ ಆವಶ್ಯಕದಲ್ಲಿ ಆರು ಪ್ರಕಾರಗಳೆಂದು ಪರಮಾಗಮದಲ್ಲಿ ಹೇಳಲಾಗಿದೆ ಅವು ಹೀಗಿವೆ— (೧) ನಾಮ, (೨) ಸ್ಥಾಪನಾ, (೩) ದ್ರವ್ಯ, (೪) ಕ್ಷೇತ್ರ, (೫) ಕಾಲ ಮತ್ತು (೬) ಬಾವ

ನಾಮಸಾಮಾಯಿಕದ ಪ್ರಕಾರಗಳು—(೧) ಶುಭ ಅಶುಭ ಹೆಸರುಗಳನ್ನು ಕೇಳಿ ರಾಗದ್ವೇಷಗಳನ್ನು ಹೊಂದದೆ ಇರುವದಕ್ಕೆ ನಾಮ ಸಾಮಾಯಿಕವೆನ್ನುವರು (೨) ಒಂದು ಸ್ಥಾಪನೆಯು ಅಂದರೆ ಮೂರ್ತಿಯ ಆಕಾರವು ಪ್ರಮಾಣಬದ್ಧ ಇರುವುದರಿಂದ ಸುಂದರವು ಇನ್ನೊಂದು ಅಪ್ರಮಾಣಬದ್ಧವಾಗಿದ್ದು ಹೀನಾಧಿಕವಾಗಿರುವುದರಿಂದ ಅಸುಂದರವಾಗಿದ್ದೀತು ಅದರ ವಿಷಯದಲ್ಲಿ ರಾಗದ್ವೇಷಗಳಿಲ್ಲದಿರುವುದು ಸ್ಥಾಪನಾ ಸಾಮಾಯಿಕವು (೩) ಬೆಳ್ಳಿ, ಬಂಗಾರ, ರತ್ನ, ಮುತ್ತು ಇತ್ಯಾದಿ ಬೆಲೆಯುಳ್ಳ ವಸ್ತುಗಳಲ್ಲಿ ಮತ್ತು ಮಣ್ಣು, ಕಟ್ಟಿಗೆ, ಕಲ್ಲು, ಮುಳ್ಳು, ಉಪ್ಪು, ಬೂದಿ ಮೊದಲಾದವುಗಳ ಕಡೆಗೆ ರಾಗ–ದ್ವೇಷರಹಿತ ದೃಷ್ಟಿಯಿಂದ ನೋಡುವುದು ದ್ರವ್ಯ ಸಾಮಾಯಿಕವಾಗಿದೆ (೪) ದೊಡ್ಡಮನೆ, ಹೂದೋಟ ಮೊದಲಾದ ರಮಣೀಯ ಪದಾರ್ಥಗಳ ವಿಷಯದಲ್ಲಿಯೂ ಸ್ಮಶಾನವೇ ಮೊದಲಾದ ಮನಸ್ಸಿಗೆ ಹಿಡಿಸದ ವಸ್ತುಗಳ ವಿಷಯದಲ್ಲಿಯೂ ರಾಗ–ದ್ವೇಷಗಳನ್ನು ಮಾಡದಿರುವುದು ಕ್ಷೇತ್ರ ಸಾಮಾಯಿಕವೆನಿಸುತ್ತದೆ (೫) ಹಿಮ, ಶಿಶಿರ, ವಸಂತ, ಗ್ರೀಷ್ಮ, ವರ್ಷಾ, ಶರತ್ ಈ ಋತುಗಳ ವಿಷಯದಲ್ಲಿಯೂ ರಾತ್ರಿ, ಹಗಲು, ಕೃಷ್ಣಪಕ್ಷ–ಶುಕ್ಲಪಕ್ಷ, ಇತ್ಯಾದಿ ಕಾಲಗಳ ಬಗ್ಗೆ ರಾಗ–ದ್ವೇಷಗಳನ್ನು ತ್ಯಜಿಸುವುದು ಕಾಲ ಸಾಮಾಯಿಕವೆನಿಸುತ್ತದೆ (೬) ಎಲ್ಲ ಪ್ರಾಣಿಗಳಿಗೂ ದುಃಖವಾಗಬಾರದೆಂದು ಮೈತ್ರೀಭಾವವನ್ನು ಇಡುವುದು ಭಾವಸಾಮಾಯಿಕವಾಗಿದೆ. ಹೀಗೆ ಆರು ಪ್ರಕಾರದ ಸಾಮಾಯಿಕಗಳನ್ನು ಹೇಳಿದೆ

ಸ್ತವನದ ಪ್ರಕಾರಗಳು—(೧) ಇಪ್ಪತ್ನಾಲ್ಕು ತೀರ್ಥಂಕರರನ್ನು ಒಂದು ಸಾವಿರ ಎಂಟು ಹೆಸರುಗಳಿಂದ ಅರ್ಥ ಸಹಿತ ಸ್ತುತಿಸುವುದು ನಾಮಸ್ತವನವೆನಿಸುವುದು. (೨) ಕೃತ್ರಿಮ ಅಕೃತ್ರಿಮ ಚೈತ್ಯಾಲಯಗಳಲ್ಲಿಯ ಅರಿಹಂತನ ಪ್ರತಿಬಿಂಬದ ಸ್ತವನ ಮಾಡುವುದು ಸ್ಥಾಪನಾ ಸ್ತವನವೆನಿಸುತ್ತದೆ (೩) ಸಮವಸರಣದಲ್ಲಿರುವ ಪ್ರಭುವಿನ ದೇಹ, ಕಾಂತಿಗಳನ್ನೂ ಅವನ ಪ್ರತಿಹಾರ್ಯಾದಿಗಳನ್ನೂ ಸ್ತವನ ಮಾಡುವುದು ದ್ರವ್ಯ ಸ್ತವನವಾಗಿದೆ (೪) ಕೈಲಾಸ, ಸಮ್ಮೇದಗಿರಿ, ಗಿರನಾರ, ಪಾವಾಪುರಿ, ಚಂಪಾಪುರಿ ಮೊದಲಾದ ನಿರ್ವಾಣ ಕ್ಷೇತ್ರಗಳ ಹಾಗೂ ಸಮವಸರಣದೊಳಗಿನ ಧರ್ಮೋಪದೇಶದ ದ್ರವ್ಯದ ಕ್ಷೇತ್ರವನ್ನು ವರ್ಣನ ಮಾಡುವದಕ್ಕೆ ಕ್ಷೇತ್ರಸ್ತವನವೆನ್ನುವರು (೫) ತೀರ್ಥಂಕರರ ಸ್ವರ್ಗಾವತರಣ, ಜನ್ಮ, ತಪ, ಜ್ಞಾನ, ನಿರ್ವಾಣ ಈ ಕಾಲಗಳ ಸ್ತವನ ಮಾಡುವುದು ಕಾಲಸ್ತವನವಾಗಿದೆ (೬) ಕೇವಲ ಜ್ಞಾನಾದಿ ಅನಂತ ಚತುಷ್ಟಯ ಬಾವದ ಸ್ತವನ ಮಾಡುವುದು ಭಾವಸ್ತವನ-ವೆನಿಸುತ್ತದೆ ಈ ಪ್ರಕಾರ ಆರು ವಿಧದ ಸ್ತವನಸಾಮಾಯಿಕಗಳನ್ನು ಹೇಳಿದ್ದಾರೆ.

ವಂದನೆಯ ಪ್ರಕಾರಗಳು—(೧) ತೀರ್ಥಂಕರ ಅಥವಾ ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಇವರಲ್ಲಿ ಒಬ್ಬರ ಹೆಸರನ್ನು ಉಚ್ಚರಿಸುತ್ತ ವಂದನೆಯನ್ನು ಸಲ್ಲಿಸುವುದಕ್ಕೆ ನಾಮವಂದನೆ ಎನ್ನುವರು (೨) ಅರಿಹಂತ, ಸಿದ್ಧ, ಆಚಾರ್ಯಾದಿಗಳಲ್ಲಿ ಒಬ್ಬರ ಪ್ರತಿಮೆಗೆ ವಂದಿಸುವದು ಸ್ಥಾಪನಾ ವಂದನೆಯಾಗಿದೆ (೩) ಅವರ ಶರೀರಕ್ಕೆ ವಂದಿಸುವುದು ದ್ರವ್ಯವಂದನೆಯಾಗಿದೆ (೪) ಅರಿಹಂತ, ಸಿದ್ಧ, ಆಚಾರ್ಯ ಮೊದಲಾದವರು ವ್ಯಾಪಿಸಿದ ಕ್ಷೇತ್ರವನ್ನು ವಂದಿಸುವುದು ಕ್ಷೇತ್ರವಂದನೆ ಎನಿಸುತ್ತದೆ (೫) ಅದೇ ಪಂಚಪರಮೇಷ್ಠಿಗಳಲ್ಲಿಯ ಯಾವುದಾದರೊಂದು ಜನ್ಮ, ದೀಕ್ಷಾದಿ ಕಾಲಗಳಲ್ಲಿ ಒಂದನ್ನು ವಂದಿಸುವದು ಕಾಲವಂದನೆಯಾಗಿದೆ. (೬) ತೀರ್ಥಂಕರ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಇವರಲ್ಲಿ ಒಬ್ಬರ ಆತ್ಮಗುಣವನ್ನು ವಂದಿಸುವುದು ಭಾವವಂದನೆಯಾಗಿದೆ ಹೀಗೆ ಆರು ಪ್ರಕಾರದ ವಂದನೆಗಳು ಇವೆ

ಪ್ರತಿಕ್ರಮಣದ ಪ್ರಕಾರಗಳು—(೧) ಅಯೋಗ್ಯ ಹೆಸರನ್ನು ಉಚ್ಚರಿಸುವುದರಿಂದ ಕೃತ, ಕಾರಿತ, ಅನುಮೋದನರೂಪೀ ಮನ, ವಚನ ಕಾಯಗಳಿಂದ ಉತ್ಪನ್ನವಾಗುವ ದೋಷಗಳನ್ನು ನಿರಾಕರಣ ಮಾಡುವದಕ್ಕಾಗಿ ಪ್ರತಿಕ್ರಮಣ ಮಾಡುವುದು ನಾಮ ಪ್ರತಿಕ್ರಮಣವಾಗಿದೆ. (೨) ಒಂದು ಶುಭ, ಅಶುಭ ಸ್ಥಾಪನೆಯ ನಿಮಿತ್ತದಿಂದ ಮನ ವಚನ ಕಾಯಗಳಿಂದ ಸಂಭವಿಸಿದ ದೋಷಗಳಿಂದ ಆತ್ಮನನ್ನು ನಿವೃತ್ತಗೊಳಿಸುವುದಕ್ಕಾಗಿ ಮಾಡುವ ಪ್ರತಿಕ್ರಮಣವು ಸ್ಥಾಪನಾ ಪ್ರತಿಕ್ರಮಣವಾಗಿದೆ (೩) ದ್ರವ್ಯವೆಂದರೆ ಆಹಾರ, ಪುಸ್ತಕ, ಔಷಧ ಮೊದಲಾದವುಗಳನ್ನು ಕೊಡುವ ನಿಮಿತ್ತದಿಂದ ತ್ರಿಕರಣಗಳಿಂದ ಆಗುವ ದೋಷಗಳನ್ನು ನಿರಾಕರಣ ಮಾಡುವುದಕ್ಕೆ ದ್ರವ್ಯ ಪ್ರತಿಕ್ರಮಣ-ವೆನ್ನುವರು (೪) ಕ್ಷೇತ್ರದಲ್ಲಿ ಸಂಚರಿಸುವುದೇ ಮೊದಲಾದ ನಿಮಿತ್ತದಿಂದ ಉತ್ಪನ್ನವಾಗುವ ಅಶುಭ ಪರಿಣಾಮದ

ದೋಷಗಳನ್ನು ನಿರಾಕರಣ ಮಾಡುವುದು ಕ್ಷೇತ್ರ ಪ್ರತಿಕ್ರಮಣವಾಗಿದೆ. (೫) ಹಗಲು, ರಾತ್ರಿ, ಪಕ್ಷ, ಋತು, ಶೀತ, ಉಷ್ಣ, ಮಳೆಗಾಲ, ಚಳಿಗಾಲ ಇವುಗಳ ನಿಮಿತ್ತದಿಂದ ಉತ್ಪನ್ನವಾದಂಥ ಅತಿಚಾರಗಳನ್ನು ದೂರಮಾಡುವದಕ್ಕಾಗಿ ಮಾಡುವ ಪ್ರತಿಕ್ರಮಣವು ಕಾಲಪ್ರತಿಕ್ರಮಣವಾಗಿದೆ. (೬) ರಾಗದ್ವೇಷಾದಿ ಭಾವನೆಗಳಿಂದ ಉತ್ಪನ್ನವಾದಂಥ ದೋಷಗಳನ್ನು ದೂರಗೊಳಿಸಲಿಕ್ಕೆ ಆಚರಿಸುವ ಪ್ರತಿಕ್ರಮಣವು ಭಾವ ಪ್ರತಿಕ್ರಮಣವಾಗಿದೆ. ಹೀಗೆ ಆರು ಪ್ರಕಾರದ ಪ್ರತಿಕ್ರಮಣಗಳು ಇವೆ.

**ಪ್ರತ್ಯಾಖ್ಯಾನದ ಪ್ರಕಾರಗಳು**— ಇನ್ನು ಆರು ಪ್ರಕಾರದ ಪ್ರತ್ಯಾಖ್ಯಾನಗಳನ್ನು ಹೇಳಲಾಗುತ್ತದೆ (೧) ಅಯೋಗ್ಯ ಪಾತಕದ ಹೆಸರನ್ನು ಕೂಡ ಉಚ್ಚಾರ ಮಾಡದೆ ಇರುವುದು ನಾಮ ಪ್ರತ್ಯಾಖ್ಯಾನವಾಗಿದೆ. (೨) ಅಯೋಗ್ಯ ಮಿಥ್ಯಾತ್ವಾದಿಗಳಲ್ಲಿ ಪ್ರವೃತ್ತಿಯನ್ನು ಉಂಟು ಮಾಡುವ ಸ್ಥಾಪನೆಯ ತ್ಯಾಗ ಮಾಡುವುದು ಸ್ಥಾಪನಾ ಪ್ರತ್ಯಾಖ್ಯಾನವಾಗಿದೆ (೩) ಪಾಪ ಬಂಧನಕ್ಕೆ ಕಾರಣವಾದ ಸದೋಷ ದ್ರವ್ಯವನ್ನು ಗ್ರಹಣ ಮಾಡುವುದನ್ನೂ ತಪದ ಸಲುವಾಗಿ ನಿರ್ದೋಷದ್ರವ್ಯವನ್ನು ಸ್ವೀಕರಿಸುವದನ್ನೂ ತ್ರಿಕರಣಗಳಿಂದ ತ್ಯಾಗ ಮಾಡುವುದು ದ್ರವ್ಯ ಪ್ರತ್ಯಾಖ್ಯಾನವಾಗಿದೆ (೪) ಅಸಂಯಮಕ್ಕೆ ಕಾರಣವಾದಂಥ ಕ್ಷೇತ್ರವನ್ನು ತ್ಯಾಗಮಾಡುವುದು ಕ್ಷೇತ್ರ ಪ್ರತ್ಯಾಖ್ಯಾನವಾಗಿದೆ (೫) ಅಸಂಯಮಕ್ಕೆ ಕಾರಣವಾದಂಥ ಕಾಲವನ್ನು ತ್ಯಾಗ ಮಾಡುವುದು ಕಾಲ ಪ್ರತ್ಯಾಖ್ಯಾನವಾಗಿದ. (೬) ಮಿಥ್ಯಾತ್ವ, ಅಸಂಯಮ, ಕಷಾಯಾದಿಗಳ ತ್ಯಾಗ ಮಾಡುವುದು ಭಾವ ಪ್ರತ್ಯಾಖ್ಯಾನವೆನಿಸುತ್ತದೆ ಹೀಗೆ ಆರು ಪ್ರಕಾರದ ಪ್ರತ್ಯಾಖ್ಯಾನಗಳಿವೆ

**ಕಾಯೋತ್ಸರ್ಗದ ಪ್ರಕಾರಗಳು**— ಇನ್ನು ಆರು ಪ್ರಕಾರದ ಕಾಯೋತ್ಸರ್ಗದ ವಿಷಯಗಳನ್ನು ಹೇಳಲಾಗುತ್ತದೆ (೧) ಪಾಪಕ್ಕೆ ಕಾರಣವಾದ ಕಠೋರ ಮತ್ತು ಕಟು ಹೆಸರುಗಳಿಂದ ಉತ್ಪನ್ನವಾಗುವ ದೋಷವನ್ನು ದೂರಮಾಡುವದಕ್ಕಾಗಿ ಮಾಡುವ ಕಾಯೋತ್ಸರ್ಗಕ್ಕೆ ನಾಮ ಕಾಯೋತ್ಸರ್ಗವೆನ್ನುವರು (೨) ಪಾಪರೂಪೀ ಸ್ಥಾಪನೆಯಿಂದ ಆಗುವ ಅತಿಚಾರವನ್ನು ದೂರ ಮಾಡುವದಕ್ಕಾಗಿ ಕಾಯೋತ್ಸರ್ಗ ಮಾಡುವುದು ಸ್ಥಾಪನಾ ಕಾಯೋತ್ಸರ್ಗವಾಗಿದೆ (೩) ಸದೋಷ ದ್ರವ್ಯವನ್ನು ಸೇವಿಸುವುದರಿಂದ ಸಂಭವಿಸಿದ ದೋಷನಿವಾರಣೆಗಾಗಿ ಮಾಡುವ ಕಾಯೋತ್ಸರ್ಗವು ದ್ರವ್ಯ ಕಾಯೋತ್ಸರ್ಗವು. (೪) ಸದೋಷ ದ್ರವ್ಯದಿಂದ ಒದಗುವ ದೋಷಪರಿಹಾರಕ್ಕಾಗಿ ಮಾಡುವ ಕಾಯೋತ್ಸರ್ಗವು ದ್ರವ್ಯ ಕಾಯೋತ್ಸರ್ಗವು (೫) ದೋಷದಿಂದ ಕೂಡಿದ ಕಾಲದಲ್ಲಿ ಕೂಡಿರುವುದರಿಂದ ಒದಗುವ ದೋಷ ಪರಿಹಾರಕ್ಕಾಗಿ ಮಾಡುವ ಕಾಯೋತ್ಸರ್ಗವು ಕಾಲಕಾಯೋತ್ಸರ್ಗವಾಗಿದೆ (೬) ಮಿಥ್ಯಾತ್ವ, ಅಸಂಯಮಾದಿ ಭಾವಗಳಿಂದ ಉತ್ಪನ್ನವಾಗುವ ದೋಷಗಳ ನಿರಾಕರಣ ಮಾಡುವುದಕ್ಕಾಗಿ ಕಾಯೋತ್ಸರ್ಗವನ್ನು ಆಚರಿಸುವುದು ಭಾವಕಾಯೋತ್ಸರ್ಗವಾಗಿದೆ ಹೀಗೆ ಆರು ಪ್ರಕಾರದ ಕಾಯೋತ್ಸರ್ಗಗಳಿವೆ

ಈ ಪ್ರಕಾರ ಆರಾರು ವಿಧಗಳುಳ್ಳ ಆರು ಆವಶ್ಯಕಗಳನ್ನು ಹೇಳಲಾಯಿತು.

**ಗೃಹಸ್ಥನ ಆರು ಆವಶ್ಯಕಗಳು**— ಇನ್ನು ಗೃಹಸ್ಥನ ಇನ್ನೂ ಆರು ಪ್ರಕಾರದ ಆವಶ್ಯಕಗಳು ಇವೆ ಅವು ಹೀಗೆ—(೧) ಭಗವಾನ್ ಜಿನೇಂದ್ರನ ಪೂಜೆಯನ್ನು ನಿತ್ಯವೂ ಮಾಡುವುದು (೨) ನಿರ್ಗ್ರಂಥ ಗುರುವಿನ ಸೇವೆ, ಸ್ತವನ, ಚಿಂತನಗಳನ್ನು ದಿನಾಲು ಮಾಡುವುದು (೩) ಜಿನೇಂದ್ರನು ಪ್ರರೂಪಣ ಮಾಡಿದ ಆಗಮಗಳನ್ನು ನಿತ್ಯಸ್ವಾಧ್ಯಾಯ ಮಾಡುವುದು (೪) ಇಂದ್ರಿಯಗಳ ವಿಷಯ ಭೋಗದ ಅಪೇಕ್ಷೆಯನ್ನು ತಡೆಯುವುದು ಮತ್ತು ಷಟ್‌ಕಾಯ ಜೀವಗಳ ಮೇಲೆ ದಯೆಯನ್ನು ಮಾಡುವುದು (೫) ತನ್ನ ಶಕ್ತಿಗೆ ಅನುಸರಿಸಿ ನಿತ್ಯವೂ ತಪ ಮಾಡುವುದು (೬) ಶಕ್ತಿಗೆ ಅನುಸರಿಸಿ ನಿತ್ಯ ದಾನವನ್ನೂ ಕೊಡುವುದು ಈ ಆರು ಆವಶ್ಯಕಗಳನ್ನು ನಿತ್ಯವೂ ಪಾಲಿಸುವುದು ಗೃಹಸ್ಥನ ಕರ್ತವ್ಯವಾಗಿದೆ

ಹೀಗೆ ಸಮಸ್ತ ಪಾಪವನ್ನು ನಾಶಮಾಡುವಂಥ ಹಾಗೂ ತನ್ನ ವಿಚಾರಗಳನ್ನು ಉಜ್ವಲಗೊಳಿಸುವಂಥ ಆವಶ್ಯಕಾಪರಿಹಾಣಿ ಎಂಬ ಹೆಸರಿನ ಹದಿನಾಲ್ಕನೆಯ ಭಾವನೆಯನ್ನು ವರ್ಣಿಸಲಾಗಿದೆ

## ೧೫. ಮಾರ್ಗಪ್ರಭಾವನಾ

ಇನ್ನು ಮಾರ್ಗಪ್ರಭಾವನಾ ಎಂಬ ಹೆಸರಿನ ಹದಿನೈದನೆಯ ಭಾವನೆಯನ್ನು ಹೇಳಲಾಗುತ್ತದೆ

**ರತ್ನತ್ರಯ ಪ್ರಾಪ್ತಿ**— ಇಲ್ಲಿ ಮಾರ್ಗವೆಂದರೆ ಮೋಕ್ಷ ಮಾರ್ಗವು ಅದು ಸತ್ಯಾರ್ಥ ಮಾರ್ಗವಾಗಿದೆ ಇದರ ಪ್ರಭಾವನ್ನು ಪ್ರಕಟ ಮಾಡುವುದಕ್ಕೆ ಮಾರ್ಗಪ್ರಭಾವನೆ ಎನ್ನಬೇಕು. ಈ ಮಾರ್ಗವು ರತ್ನತ್ರಯಾತ್ಮಕವಾಗಿದೆ,

ಇದು ಆತ್ಮನ ಸ್ವಭಾವವಾಗಿದೆ ಅದನ್ನು ಮಿಥ್ಯಾತ್ವ, ರಾಗ, ದ್ವೇಷ, ಕಾಮ, ಕ್ರೋಧ, ಮಾನ, ಮಾಯಾ, ಲೋಭಗಳು ಸೇರಿ ಅನಾದಿ ಕಾಲದಿಂದ ಮಲಿನಗೊಳಿಸಿವೆ. ವಿಪರೀತಗೊಳಿಸಿವೆ ಈಗ ನನಗೆ ಪರಮಾಗಮದ ಜ್ಞಾನವಾಗಿದೆ. ಅದಕ್ಕಾಗಿ ನಾನು ಮಿಥ್ಯಾತ್ವಾದಿ ದೋಷಗಳನ್ನು ದೂರಗೊಳಿಸಿ, ನನ್ನ ರತ್ನತ್ರಯ ಸ್ವಭಾವವನ್ನು ನಿರ್ಮಲ ಮಾಡುವೆ ನನಗೆ ಈ ಮನುಷ್ಯ ಜನ್ಮ, ಇಂದ್ರಿಯಗಳ ಪೂರ್ಣತೆ, ಜ್ಞಾನ ಶಕ್ತಿ, ಪರಮಾಗಮದ ಸಹಾಯ, ಧಾರ್ಮಿಕ ಜನರ ಸಹವಾಸ, ಆರೋಗ್ಯ, ನಿರ್ಬಾಧ ಉಪಜೀವಿಕಾ, ಇನ್ನೇ ಮೊದಲಾದ ಪುಣ್ಯರೂಪ ಸಾಮಗ್ರಿಗಳು ಪ್ರಾಪ್ತವಾಗಿದ್ದೂ ಸಹ ಈಗ ನಾನು ಮಿಥ್ಯಾತ್ವ ಹಾಗೂ ವಿಷಯ ಕಷಾಯಗಳಿಂದ ಬಿಡುಗಡೆಯನ್ನು ಹೊಂದದಿದ್ದರೆ ಅನಂತ ಕಾಲದಲ್ಲಿಯೂ ಹೊಂದುವುದು ಸಾಧ್ಯವಿಲ್ಲ ಸದ್ಯಕ್ಕೆ ಈಗ ಯಾವ ಸಾಮಗ್ರಿಗಳು ಒದಗಿರುವವೋ ಅವು ತಿರುಗಿ ಮತ್ತೊಮ್ಮೆ ಸಿಗುವುದು ಬಹಳ ಕಠಿಣವಿದೆ. ಅಂದ ಮೇಲೆ ಈ ಅಂತರಂಗ ಬಹಿರಂಗ ಈ ಎರಡೂ ಪ್ರಕಾರದ ಸಾಮಗ್ರಿಗಳು ದೊರೆತೂ ಕೂಡ ನಾವು ಆತ್ಮದ ಪ್ರಭಾವನೆಯನ್ನು ಪ್ರಕಟ ಮಾಡದಿದ್ದರೆ ಅಕಸ್ಮಾತ್ ಮರಣವು ಒದಗಿ ಈ ಎಲ್ಲ ಸಂಯೋಗವನ್ನು ಇಲ್ಲದಂತೆ ಮಾಡೀತು ಅದಕ್ಕಾಗಿ ರಾಗ, ದ್ವೇಷ, ಮೋಹ ಇವುಗಳನ್ನು ದೂರಗೊಳಿಸಿ, ಯಾವುದರಿಂದ ನಮ್ಮ ಶುದ್ಧ 'ವೀತರಾಗ ಸ್ವರೂಪವು ಪ್ರಕಟವಾಗುವುದೋ ಅಂಥ ರೀತಿಯಿಂದಲೇ ನಾವು ಧ್ಯಾನ, ಸ್ವಾಧ್ಯಾಯಗಳಲ್ಲಿ ತತ್ಪರರಾಗಿರಲಿಕ್ಕೆಬೇಕು ನಾವು ನಮ್ಮ ಬಾಹ್ಯ ನಡತೆಯನ್ನು ಸಹ ಶುದ್ಧವಾಗಿಟ್ಟು-ಕೊಂಡು, ಅಂತರ್ಗತ ಧರ್ಮದ ಪ್ರಭಾವವನ್ನು ಪ್ರಕಟಗೊಳಿಸಿ, ಮಾರ್ಗ ಪ್ರಭಾವನೆಯನ್ನು ಮಾಡಲಿಕ್ಕಬೇಕು. ಆ ಮಾರ್ಗ ಪ್ರಭಾವನೆಯನ್ನು ನೋಡಿ, ಅನೇಕ ಜನರ ಹೃದಯದಲ್ಲಿಯೂ ಧರ್ಮದ ಮಹಾತ್ಮೆಯು ಪ್ರಕಟವಾಗಬೇಕು, ಪ್ರಕಾಶಗೊಳ್ಳಬೇಕು

**ಅಭಿಷೇಕೋತ್ಸವ**—ಜಿನೇಂದ್ರನ ಜನ್ಮಾಭಿಷೇಕದ ಉತ್ಸವವನ್ನು ಹೀಗೆ ಮಾಡಬೇಕು ಅದನ್ನು ನೋಡಿದವರಿಗೆ ಇಂದ್ರಾದಿಗಳು ಭಗವಂತನ ಅಭಿಷೇಕವನ್ನು ಮಾಡಿ ತಮ್ಮ ಜನ್ಮವನ್ನು ಸಫಲಮಾಡಿಕೊಂಡರೆಂದು ಎನಿಸಿರಬೇಕು ಅಲ್ಲದೆ ಅವರಂತೆಯೇ ನಾವೂ ಕೂಡ ಸಾವಿರಾರು ಸ್ತವನಗಳಿಂದ ಭಗವಂತನ ಜಯ ಜಯಕಾರ ಮಾಡಿ ಕೃತಾರ್ಥರಾಗಬೇಕೆಂಬ ಭಾವನೆಯು ಉಂಟಾಗಬೇಕು. ಜಿನೇಂದ್ರನನ್ನು ಅತ್ಯಂತ ಭಕ್ತಿ, ವಿನಯಗಳಿಂದ ಧ್ಯಾನಿಸಿ ಪೂಜಿಸಿರಿ. ಅದನ್ನು ನೋಡಿಯೂ ನಿಮ್ಮ ವಾಣಿಯ ಸ್ತುತಿ ಪಾಠಗಳನ್ನು ಕೇಳಿಯೂ ಹರ್ಷದ ಅಂಕುರವು ಇತರರಲ್ಲಿಯೂ ಒಡೆದು, ಅವರಲ್ಲಿ ಆನಂದವು ಉಕ್ಕಿಬರಬೇಕು ಮಿಥ್ಯಾದೃಷ್ಟಿಯವರ ಮುಖದಿಂದಲೂ ಸಹ ಸಹಜ ಹೀಗೆ ಉದ್ಗಾರವು ಹೊರಡಬೇಕು. "ಇದೆಷ್ಟು ಜೈನರ ಭಕ್ತಿಯು! ಎಷ್ಟು ಉತ್ತಮ ಹಾಗೂ ಸ್ವಚ್ಛ ಸಾಮಗ್ರಿಯಿದು! ಬೆಳ್ಳಿ ಬಂಗಾರದ, ತಾಮ್ರ-ಹಿತ್ತಾಳೆಗಳ ಪೂಜೆಯ ಪಾತ್ರೆಗಳು ಎಷ್ಟು ಚೆಂದ ಕಾಣುತ್ತಿವೆ! ಅವರು ಅನ್ನುವ ಮಂತ್ರಗಳು ಎಷ್ಟು ಶುದ್ಧ! ಭಕ್ತಿರಸದಿಂದ ತುಂಬಿವೆ! ಅದರಲ್ಲಿಯ ಅರ್ಥವೂ ಎಂದ ಬೋಧಪ್ರದ! ಏಕಾಗ್ರ ಚಿತ್ತದಿಂದ ಬಹುಮೂಲ್ಯ ಶುದ್ಧ ಪದಾರ್ಥಗಳನ್ನು ದೇವರಿಗೆ ನಿಷ್ಕಾಮ ಬುದ್ಧಿಯಿಂದ ಸಮರ್ಪಣ ಮಾಡುವ ಪದ್ಧತಿಯು ಎಷ್ಟು ಸರಳ! ದೇವರ ಮೂರ್ತಿಯೂ ಕೂಡ ಎಷ್ಟೊಂತ ಶಾಂತ! ರಾಗ-ದ್ವೇಷ ರಹಿತ ಉತ್ಕೃಷ್ಟ ವೈರಾಗ್ಯ ಹಾಗೂ ಧ್ಯಾನದ ಮುದ್ರೆಯು ಮೂರ್ತಿಯ ಮುಖದ ಮೇಲೆ ಹೇಗೆ ಸ್ಪಷ್ಟವಾಗಿ ಕಾಣಿಸುತ್ತಿದೆ! ಪ್ರಾತಿಹಾರ್ಯಗಳು ಎಂದ ದೊಡ್ಡ ವೈಭವವನ್ನು ತೋರಿಸುತ್ತಿವೆ! ಆ ಪೂಜೆಯನ್ನು ಮಾಡುವ ಪುರುಷರು ಧನ್ಯರು! ಧನ್ಯ ಧನ್ಯ ಅವರ ಭಕ್ತಿ!" ಯಾವ ಲಾಭದ ಆಶೆಯನ್ನೂ ಇಟ್ಟುಕೊಳ್ಳದೆ ತಮ್ಮ ದ್ರವ್ಯವನ್ನು ಇಂಥ ಕೆಲಸಗಳಲ್ಲಿ ವೆಚ್ಚಮಾಡುವರೋ ಅವರ ಜನ್ಮವೇ ಧನ್ಯವಾಗಿದೆ"

**ಪೂಜೆಯಿಂದಾಗುವ ಪ್ರಭಾವನೆ**—ಭಕ್ತಿಯು ಸಂಸಾರ ಸಮುದ್ರದಲ್ಲಿ ಮುಳುಗುವವರನ್ನು ಕೈಹಿಡಿದು ಎತ್ತಿ ತೆಗೆಯುವಂಥದ್ದಿದೆ ನನ್ನ ಜನ್ಮ ಜನ್ಮಗಳಲ್ಲಿಯೂ ಜಿನೇಂದ್ರ ಭಕ್ತಿಯೇ ಶರಣಾಗಿರಲಿ ಇಂದ ಜಿನೇಂದ್ರನ ಪೂಜೆಯನ್ನು ನಿತ್ಯವೂ ಮಾಡುತ್ತಿರಬೇಕು ಅಷ್ಟಾಹ್ನಿಕಪರ್ವ, ಷೋಡಶಕಾರಣ, ದಶಲಕ್ಷಣ, ರತ್ನತ್ರಯ ಮೊದಲಾದ ಪರ್ವಗಳಲ್ಲಿ ಪಾಪಾರಂಭವನ್ನು ಬಿಟ್ಟು ಜಿನೇಂದ್ರನ ಪೂಜೆಯನ್ನು ಮಾಡಬೇಕು. ಆನಂದದಿಂದ ನೃತ್ಯವನ್ನು ಮಾಡಬೇಕು ಕಿವಿಗೆ ಇಂಪೆನಿಸುವ ವಾದ್ಯಗಳನ್ನು ಬಾರಿಸಬೇಕು ತಾಳಸ್ವರಸಹಿತ ಜಿನೇಂದ್ರನ ಗುಣಗಳನ್ನು ಹಾಡಬೇಕು ಇವೆಲ್ಲವೂ ಮಾರ್ಗ ಪ್ರಭಾವನೆಯಾಗಿವೆ. ಯಾವ ಹೃದಯದಲ್ಲಿ ಸತ್ಯ ಧರ್ಮದ ವಾಸ್ತವ್ಯವಿದೆಯೋ ಅವರಿಂದಲೇ ಇಂಥ ಪ್ರಭಾವನೆಯು ಸಂಭವಿಸುತ್ತದೆ.

**ಉಪದೇಶದಿಂದಾಗುವ ಪ್ರಭಾವನೆ**—ಜಿನೇಂದ್ರನು ಹೇಳಿದ ನಾಲ್ಕು ಅನುಯೋಗಗಳಲ್ಲಿಯ ಸಿದ್ಧಾಂತ-ಗಳನ್ನು ವಿವರಿಸಿ ಹೇಳಬೇಕು ಅವನ್ನು ಕೇಳುವವರಲ್ಲಿಯ. ಏಕಾಂತ ಮತದ ಮಿಥ್ಯಾ ಶ್ರದ್ಧೆಯು ಅಳಿಯಬೇಕು

ಅವರಲ್ಲಿ ಅನೇಕಾಂತ ದೃಷ್ಟಿಯೂ ಮೂಡಬೇಕು. ಅವರು ಪಾಪಗಳನ್ನು ಕಂಡು ಗದಗದ ನಡುಗಬೇಕು. ಅವರ ದುರ್ವ್ಯಸನಗಳು ಬಿಡಬೇಕು. ಸಾವಿರಾರು ಜನರ ಮಿಥ್ಯಾತ್ವಗಳು ನಷ್ಟವಾಗಬೇಕು. ದಯಾಧರ್ಮದ ಕಡೆಗೆ ಅವರ ಪ್ರವೃತ್ತಿಯಾಗಬೇಕು ಅಭಕ್ಷ್ಯ ಭಕ್ಷಣಮಾಡುವದನ್ನು ಬಿಡಬೇಕು ಕುದೇವ, ಕುಗುರು, ಕುಧರ್ಮ ಇವುಗಳ ಆರಾಧನೆಯನ್ನು ಬಿಟ್ಟು, ವೀತರಾಗದೇವ, ದಯಾರೂಪಧರ್ಮ, ಆರಂಭ ಮತ್ತು ಪರಿಗ್ರಹ ರಹಿತ ಗುರು ಇವರ ಆರಾಧನೆಯ ಕಡೆಗೆ ದೃಢ ಶ್ರದ್ಧೆಯನ್ನು ಇಡುವಂತಾಗಬೇಕು ರಾತ್ರಿ ಭೋಜನ, ಅಯೋಗ್ಯ ಭೋಜನ, ಅನ್ಯಾಯ, ವಿಷಯಭೋಗ, ಪರಧನ ಹರಣ ಇತ್ಯಾದಿ ಸಂಗತಿಗಳ ಮೇಲಿನ ಪ್ರೀತಿಯನ್ನು ಬಿಟ್ಟು ವ್ರತ, ಶೀಲ, ಸಂಯಮ, ಸಂತೋಷ ಇವುಗಳಲ್ಲಿಯೇ ಲೀನವಾಗುವಂತೆಯೂ ಆತ್ಮವು ಶರೀರಾದಿ ಪರದ್ರವ್ಯಗಳಿಂದ ಭಿನ್ನವಾಗಿದೆ ಎಂಬ ಅನುಭವವು ಅವರಿಗೆ ಬರುವಂತೆಯೂ ಉಪದೇಶ ಮಾಡಬೇಕು ಜೀವ, ಅಜೀವಾದಿ ಪದಾರ್ಥಗಳನ್ನು ಪ್ರಮಾಣನಯ ನಿಕ್ಷೇಪಗಳಿಂದ ನಿರ್ಣಯಿಸಿ, ದ್ರವ್ಯಗುಣಪರ್ಯಾಯಗಳ ಯಥಾರ್ಥ ಸ್ವರೂಪವನ್ನು ತಿಳಿಸಿ ಹೇಳಿ, ಅವರಕಡೆಯಿಂದ ಮಿಥ್ಯಾಂಧ-ಕಾರವನ್ನು ದೂರಮಾಡಬೇಕು ಈ ಪ್ರಕಾರ ಆಗಮಗಳ ಉಪದೇಶದಿಂದ ಸನ್ಮಾರ್ಗದ ಪ್ರಭಾವನೆಯು ಆಗುತ್ತದೆ.

**ತಪದಿಂದಾಗುವ ಪ್ರಭಾವನೆ**—ಇತರರಿಂದ ಆಗದಂಥ ಕಠಿಣ ತಪಶ್ಚರಣವನ್ನು ಮಾಡುವುದರಿಂದ ಮಾರ್ಗ ಪ್ರಭಾವನೆಯು ಆಗುತ್ತದೆ ಯಾಕಂದರೆ ವಿಷಯಾನುರಾಗವನ್ನು ಬಿಟ್ಟು, ನಿರ್ವಾಂಛಕನಾಗುವುದರಿಂದ ಆತ್ಮನ ಪ್ರಭಾವವು ಪ್ರಕಟವಾಗುತ್ತದೆ ಅಲ್ಲದೆ ಧರ್ಮದ ಮಾರ್ಗವೂ ತಪಸ್ಸಿನಿಂದ ಶೋಭಿಸುವುದು ತಪಶ್ಚರಣವು ದುರ್ಗತಿಯನ್ನು ನಾಶಗೊಳಿಸುವಂಥದಿದೆ ತಪಸ್ಸು ಇಲ್ಲದಿದ್ದರೆ ಕಾಮಾದಿ ವಿಷಯಗಳು ಜ್ಞಾನ ಹಾಗೂ ಚಾರಿತ್ರಗಳನ್ನು ನಷ್ಟಗೊಳಿಸುತ್ತವೆ. ತಪದ ಪ್ರಭಾವದಿಂದ ಕಾಮ ವಿಕಾರವು ಕ್ಷಯವಾಗಿ, ರಸನೇಂದ್ರಿಯದ ಲಾಲಸೆಯು ನಷ್ಟವಾಗುತ್ತದೆ ಅಂತಲೇ ರತ್ನತ್ರಯದ ಪ್ರಭಾವನೆಯು ತಪಶ್ಚರಣದಿಂದ ದೃಢವಾಗುತ್ತದೆ.

**ಮಂದಿರಗಳಿಂದಾಗುವ ಪ್ರಭಾವನೆ**—ಜಿನೇಂದ್ರನ ಪ್ರತಿಬಿಂಬದ ಪ್ರತಿಷ್ಠೆ ಮಾಡುವುದು, ಜಿನೇಂದ್ರನ ಮಂದಿರವನ್ನು ಕಟ್ಟುವುದು, ಇವುಗಳಿಂದಲೂ ಮಾರ್ಗ ಪ್ರಭಾವನೆಯು ಆಗುತ್ತದೆ. ಹೇಗೆಂದರೆ ಪ್ರತಿಷ್ಠೆಯನ್ನು ಮಾಡಿಸಿದರೆ ಎಲ್ಲಿಯ ವರೆಗೆ ಜಿನಬಿಂಬವಿರುವುದೋ ಅಲ್ಲಿಯ ವರೆಗೆ ದರ್ಶನ, ಸ್ತವನ, ಪೂಜಾದಿಗಳನ್ನು ಮಾಡಿ, ಅನೇಕ, ಭವ್ಯಜೀವಗಳು ಪುಣ್ಯವನ್ನು ಸಂಪಾದಿಸುತ್ತವೆ ಯಾವ ಗೃಹಸ್ಥನು ಜಿನಮಂದಿರುವನ್ನು ಕಟ್ಟಿಸುವನೋ ಅವನ ಧನವು ಇದಕ್ಕಾಗಿ ಸಫಲವಾಗುತ್ತದೆ ಜಿನಮಂದಿರವು ಇರುವುದರಿಂದ ಅಲ್ಲಿ ಪೂಜೆ, ರಾತ್ರಿ ಜಾಗರಣ, ಶಾಸ್ತ್ರದ ವ್ಯಾಖ್ಯಾನ, ಶ್ರವಣ, ಪಠಣ, ಜಿನೇಂದ್ರನ ಸ್ತವನ, ಸಾಮಾಯಿಕ, ಪ್ರತಿಕ್ರಮಣ, ಅನಶನಾದಿ ತಪ, ನೃತ್ಯ, ಗಾಯನ, ಭಜನ, ಉತ್ಸವ ಇವೆಲ್ಲ ನಡೆಯುತ್ತವೆ ಜಿನಮಂದಿರವು ಇಲ್ಲದಿದ್ದರೆ ಈ ಧರ್ಮದ ಕಾರ್ಯಗಳು ಆಗುವದಿಲ್ಲ ಅಂದಮೇಲೆ ಈ ವಿಷಯದಲ್ಲಿ ಹೆಚ್ಚಿಗೆ ಏನು ಹೇಳುವುದು? ಜಿನಮಂದಿರವನ್ನು ಕಟ್ಟಿಸುವುದು, ಪ್ರತಿಷ್ಠೆಯನ್ನು ಮಾಡಿಸುವುದು ಇಂಥ ಕಾರ್ಯಗಳು ತನ್ನ ಮೇಲೆಯೂ ಇತರರ ಮೇಲೆಯೂ ಉಪಕಾರ ಮಾಡುವುದರ ಮೂಲವಾಗಿವೆ

**ತ್ಯಾಗದಿಂದಾಗುವ ಪ್ರಭಾವನೆ**—ಧರ್ಮದ ಉತ್ಕೃಷ್ಟ ಮಾರ್ಗವೆಂದರೆ ಸಂಪೂರ್ಣ ಪರಿಗ್ರಹವನ್ನು ಬಿಟ್ಟು, ವೀತರಾಗತ್ವವನ್ನು ಅಂಗೀಕರಿಸುವುದೇ ಆಗಿದೆ ಆದರೆ ಯಾರಿಗೆ ಪ್ರತ್ಯಾಖ್ಯಾನ, ಅಪ್ರತ್ಯಾಖ್ಯಾನ ಎಂಬ ಹೆಸರಿನ ಕಷಾಯಗಳ ಉಪಶಮವಾಗಿರುವದಿಲ್ಲವೋ ಅದರಿಂದ ಮನೆ ಮಠ ಮೊದಲಾದ ಸಂಪತ್ತಿಯ ಮೋಹವನ್ನು ಬಿಡಲಿಕ್ಕೆ ಆಗುವದಿಲ್ಲವೋ ಅವರು ತಮ್ಮಲ್ಲಿರುವ ವಿಪುಲ ಸಂಪತ್ತಿಯ ಕಾರಣವನ್ನು ತಿಳಿದುಕೊಳ್ಳಬೇಕು. ಅನ್ಯರ ಧನವನ್ನು ನಾವು ಅನ್ಯಾಯದಿಂದ ಸಂಪಾದಿಸಿದ್ದರೆ ಅವರದನ್ನು ಅವರಿಗೆ ಕೊಟ್ಟು, ಕ್ಷಮೆಯನ್ನು ಕೇಳಬೇಕು ಹೀಗೆ ವಿತರಣ ಮಾಡಿದ ಮೇಲೆಯೂ ಹೆಚ್ಚಿನ ಧನವು ನಮ್ಮಲ್ಲಿ ಉಳಿದರೆ ಹೊಸ ಹೊಸ ಧನವನ್ನು ಗಳಿಸುವದನ್ನೇ ತ್ಯಾಗಮಾಡಬೇಕು. ತೀವ್ರ ರಾಗವು ಬೆಳೆಯುವಂಥ ಇಂದ್ರಿಯ ವಿಷಯಗಳ ಮೇಲಿನ ಲಾಲಸೆಯನ್ನು ಬಿಟ್ಟು ಸಂವರವನ್ನು ಧರಿಸಬೇಕು ಇನ್ನು ನಮ್ಮಲ್ಲಿರುವ ಧನವನ್ನು ನಮ್ಮ ಬಂಧುಗಳು, ಹೆಣ್ಣುಮಕ್ಕಳು, ತಂಗಿ, ಅತ್ತೆ, ಮಿತ್ರ, ಹಿತಸಂಬಂಧವುಳ್ಳವರಿಗಾಗಿ ವ್ಯಯಮಾಡಬೇಕು. ಅಲ್ಲದೆ ನಿರ್ಧನ, ರೋಗಿ, ದುಃಖಿ, ಅನಾಥ, ವಿಧವಾ, ಅಶಕ್ತರಿದ್ದಂಥವರಿಗೂ ಯಥಾಯೋಗ್ಯಕೊಟ್ಟು ಸಂತುಷ್ಟಗೊಳಿಸಬೇಕು ಹಾಗೆಯೇ ತಮ್ಮ ಆಶ್ರಿತರೂ ಸೇವಕರೂ ಹತ್ತರಿರುವಂಥವರಿಗೂ ಯಥಾಯೋಗ್ಯ ಧನವನ್ನಿತ್ತು ಸಂತೋಷಗೊಳಿಸಬೇಕು ಹೆಂಡತಿ, ಮಕ್ಕಳ ಪಾಲವನ್ನು ಬೇರೆಯಾಗಿಯೇ ಇಟ್ಟಿರಬೇಕು ಆ ಮೇಲೆ ಹೆಚ್ಚಿಗೆ ಉಳಿದ ಹಣದಿಂದ ಜಿನ ಬಿಂಬದ ಪ್ರತಿಷ್ಠೆಯನ್ನು ಮಾಡಿಸಬಹುದು.

ಇಲ್ಲವೆ ಜಿನಧರ್ಮದ ಆಧಾರಭೂತವೆನಿಸುವ ಸಿದ್ಧಾಂತ ಗ್ರಂಥಗಳನ್ನು ಬರೆಯಿಸಬಹುದು. ಇಂಥ ಕಾರ್ಯಗಳಲ್ಲಿ ಕೃಪಣತೆಯನ್ನು ಬಿಟ್ಟು ಸಹಾಯಮಾಡಬೇಕು ಈ ಪ್ರಕಾರ ಯಾರು ತಮ್ಮ ಧನದ ವಿನಿಯೋಗವನ್ನು ಮಾಡುವರೋ ಅದಕ್ಕೆ ಸಮಾನವಾದ ಪ್ರಭಾವನೆಯು ಇನ್ನೊಂದಿಲ್ಲ. ಹಲವರು ಮಂದಿರ ಪ್ರತಿಷ್ಠೆಯನ್ನು ಮಾಡಿದರೂ ಅನ್ಯಾಯ ಅತ್ಯಾಚಾರಗಳಿಂದ ಧನವನ್ನು ಸಂಪಾದಿಸುತ್ತಾರೆ. ಇಂಥವರ ಪ್ರಭಾವನೆಯೆಲ್ಲ ವ್ಯರ್ಥವಾದುದಾಗಿದೆ. ಪ್ರತಿಷ್ಠೆಯನ್ನು ಮಾಡಿಸುವವನು ಮತ್ತು ಜಿನಮಂದಿರವನ್ನು ಕಟ್ಟಿಸುವವನು ಅಸತ್ಯ ವ್ಯಾಪಾರ, ವ್ಯವಹಾರಗಳನ್ನು ಮಾಡಕೂಡದು, ಹಿಂಸಾದಿ ಪಾತಕಗಳಲ್ಲಿ ಇರಕೂಡದು, ನಿಂದ್ಯ ಹಾಗೂ ಅಯೋಗ್ಯ ಭಾಷಣಗಳನ್ನು ಮಾಡುವದರಲ್ಲಿ ತೊಡಗಿರಬಾರದು ತೀವ್ರಲೋಭದಲ್ಲಿಯೂ ವ್ಯಭಿಚಾರದಲ್ಲಿಯೂ ಮಗ್ನನಾಗಿರಕೂಡದು ಇವೆಲ್ಲವುಗಳನ್ನು ಮಾಡುವುದು ಯೋಗ್ಯವೆಂದು ತಿಳಿಯುವವನು ಮಾಡುವ ಪ್ರಭಾವನೆ ಎಲ್ಲವೂ ವ್ಯರ್ಥವಾದೀತು. ಹಾಗೆಯೇ ವೆಚ್ಚವನ್ನು ಮಾಡುವಾಗ ಜೀವನಪನದಿಂದ ತಳಮಳಿಸುತ್ತಿದ್ದರೆ ಅವನ ಪ್ರಭಾವನೆಯೂ ಕೂಡ ನಿರರ್ಥಕವಾದೀತು. ಆದರಿಂದ ಮಂದಿರವನ್ನು ಕಟ್ಟುವವನೂ ಪ್ರತಿಷ್ಠೆಯನ್ನು ಮಾಡಿಸುವವನೂ ತನ್ನ ಬಾಹ್ಯ ಪ್ರವೃತ್ತಿಯನ್ನು ಶುದ್ಧವಾಗಿಟ್ಟುಕೊಂಡಿದ್ದರೇನೇ ಧರ್ಮದ ಪ್ರಭಾವನೆಯು ಆಗುವುದು ಸಾಧ್ಯವಿದೆ ಮಂದಿರದ ಮೇಲೆ ಶಿಖರವನ್ನು ಕಟ್ಟಿಸುವದು, ಅದರ ಮೇಲೆ ಕಲಶವನ್ನು ಇಡುವುದು, ದೇವಸ್ಥಾನದಲ್ಲಿ ಘಂಟೆಯನ್ನು ಕಟ್ಟಿಸುವುದು. ಸಿಂಹಾಸನಾದಿ ಉತ್ತಮ ಉಪಕರಣಗಳನ್ನು ಕೊಡುವುದು, ಸ್ವಾಧ್ಯಾಯದ ಪ್ರವೃತ್ತಿಯನ್ನು ಮಾಡುವುದು ಇತ್ಯಾದಿ ಕಾರ್ಯಗಳಿಂದಲೂ ಪ್ರಭಾವನೆಯು ಆಗುತ್ತದೆ.

**ಶುದ್ಧಾಚರಣೆಯಿಂದಾಗುವ ಪ್ರಭಾವನೆ**—ಪ್ರಭಾವನೆಯು ಶುದ್ಧ ಆಚರಣೆಯಿಂದಲೇ ಆಗುವದು ಅಂದ ಮೇಲೆ ಯಾರು ಜಿನವಚನಗಳಲ್ಲಿ ಶ್ರದ್ಧೆಯುಳ್ಳವರಿರುವರೋ ಅವರು ಯಾವಾಗಲೂ ಧರ್ಮದ ಪ್ರಭಾವನೆಯನ್ನೇ ಮಾಡುತ್ತಲಿರುವರು ಜೈನ ಗೃಹಸ್ಥರ ದೃಢ ನಿಶ್ಚಯವನ್ನು ನೋಡಿ, ಮಿಥ್ಯಾದೃಷ್ಟಿ ಜನರೂ ಕೂಡ ಆಶ್ಚರ್ಯ-ಚಕಿತರಾಗುತ್ತಾರೆ ಅಲ್ಲದೆ ಅವರಿಗೆ ಜೈನ ಧರ್ಮದ ಮಹಾತ್ಮ್ಯವು ಕಂಡುಬರುತ್ತದೆ ಆಗ ಅವರು ಅನ್ನುವದು— "ಜೈನರ ಧರ್ಮನಿಷ್ಠೆಯನ್ನು ನೋಡಿರಿ! ಅವರು ತಮ್ಮ ಪ್ರಾಣ ಹೋದರೂ ಸಹ ಅಭಕ್ಷ್ಯ ಭಕ್ಷಣ ಮಾಡಲಾರರು ರೋಗದ ವೇದನೆಯು ತೀರ ತೀವ್ರವಾದರೂ ಸಹ ರಾತ್ರಿಯಲ್ಲಿ ಔಷಧ, ನೀರುಗಳನ್ನು ತಕ್ಕೊಳ್ಳುವದಿಲ್ಲ. ಧನ, ಅಭಿಮಾನಗಳು ಹೋದರೂ ಕೂಡ ಅಸತ್ಯ ಭಾಷಣವನ್ನು ಮಾಡುವದಿಲ್ಲ ದೊಡ್ಡ ಸಂಕಟ ಬಂದರೂ ಕೂಡ ಅನ್ಯರ ಧನದ ಮೇಲೆ ಲೋಭವನ್ನು ಇಡುವದಿಲ್ಲ. ತನ್ನ ಪ್ರಾಣ ಹೋದರೂ ಅನ್ಯ ಪ್ರಾಣಿಗಳ ಘಾತವನ್ನು ಮಾಡಲಾರರು" ಈ ಪ್ರಕಾರ ಅನ್ಯಧರ್ಮದ ಮನುಷ್ಯರೂ ಸಹ ಆಶ್ಚರ್ಯಗೊಳ್ಳುವಂತೆ ತಮ್ಮ ಆಚರಣೆಯನ್ನು ಇಡುವುದು ಮಾರ್ಗಪ್ರಭಾವನೆಯಾಗಿದೆ ದೃಢವಾಗಿ ಶೀಲವನ್ನು ಪಾಲಿಸುವುದು, ಪರಿಗ್ರಹದ ಪ್ರಮಾಣವನ್ನು ಇಟ್ಟುಕೊಳ್ಳುವುದು, ಪರಮ ಸಂತೋಷ ಧಾರಣ ಮಾಡುವುದು, ಇವುಗಳಿಂದ ಆತ್ಮ ಪ್ರಭಾವನೆ ಹಾಗೂ ಧರ್ಮ ಪ್ರಭಾವನೆಗಳೆರಡೂ ಆಗುತ್ತವೆ ಅಂದ ಮೇಲೆ ಎಲ್ಲ ಧನವು ಹೋದರೂ ಕೂಡ ಒಂದು ವೇಳೆ ಪ್ರಾಣ ಹೋದರೂ ಸಹ ತಾನು ನಿಮಿತ್ತನಾಗಿ ಧರ್ಮದ ನಿಂದೆಯಾಗಗೊಡಬಾರದು ಇದೂ ಮಾರ್ಗ ಪ್ರಭಾವನೆಯೇ ಆಗಿದೆ. ಮಾರ್ಗ ಪ್ರಭಾವನೆಯ ಮಹತ್ವವನ್ನು ವರ್ಣನೆಮಾಡಲಿಕ್ಕೆ ಕೋಟಿ ನಾಲಿಗೆಗಳುಳ್ಳವರಿಗೂ ಸಾಧ್ಯವಿಲ್ಲ. ಅದಕ್ಕಾಗಿ ಎಲ್ಲ ಭವ್ಯ ಜೀವಿಗಳಿರಾ, ತ್ರೈಲೋಕ್ಯದಲ್ಲಿ ಪೂಜ್ಯವಾದಂಥ ಪ್ರಭಾವನಾ ಅಂಗವನ್ನು ಧಾರಣ ಮಾಡಿರಿ ಅದನ್ನು ಭಕ್ತಿ ಪುರಃಸರ ಪೂಜಿಸಿರಿ ಅದಕ್ಕೆ ಮಹಾನ್ ಅರ್ಘ್ಯವನ್ನು ಅರ್ಪಿಸಬೇಕು ಈ ಪ್ರಕಾರ ಯಾರು ಪ್ರಭಾವನಾ ಅಂಗವನ್ನು ಧಾರಣ ಮಾಡುವರೋ ಅವರು ಇಂದ್ರಾದಿ ದೇವತೆಗಳ ಕಡೆಯಿಂದ ಪೂಜ್ಯನೆನಿಸುವ ತೀರ್ಥಂಕರ ಪದವನ್ನು ಪಡೆಯುತ್ತಾರೆ ಇಂಥ ಮಾರ್ಗ ಪ್ರಭಾವನಾ ಎಂಬ ಹೆಸರಿನ ಹದಿನೈದನೆಯ ಭಾವನೆಯನ್ನು ವರ್ಣಿಸಲಾಗಿದೆ.

## ೧೬. ಪ್ರವಚನ ವತ್ಸಲತ್ವ

ಈಗ ಪ್ರವಚನವತ್ಸಲತ್ವ ಎಂಬ ಹೆಸರಿನ ಹದಿನಾರನೆಯ ಭಾವನೆಯನ್ನು ಕುರಿತು ಹೇಳಲಾಗುತ್ತದೆ. ಇದು ಈ ಭಾವನೆಗಳಲ್ಲಿ ಕೊನೆಯದೂ ಆಗಿದೆ.

**ವಾತ್ಸಲ್ಯವನ್ನು ಯಾರ ಮೇಲೆ ಮಾಡಬೇಕು?** ಪ್ರವಚನವೆಂದರೆ ದೇವ, ಗುರು, ಧರ್ಮಗಳ ವಿಷಯದಲ್ಲಿ ವಾತ್ಸಲ್ಯವಿಡುವುದು ಅಂದರೆ ಪ್ರೀತಿಯನ್ನು ಇಡುವುದು. ಇದಕ್ಕೇನೇ ಪ್ರವಚನ ವಾತ್ಸಲ್ಯವೆನ್ನುತ್ತಾರೆ.

ಚಾರಿತ್ರಗುಣಯುಕ್ತ, ಶೀಲವಂತ, ಪರಮಸೌಮ್ಯಭಾವದ ಧಾರಕ, ಇಪ್ಪತ್ತೆರಡು ಪರೀಷಹಗಳನ್ನು ಸಹಿಸುವ, ದೇಹದ ಮೇಲೆ ಮಮತೆ ಇರದ, ಸಂಪೂರ್ಣ ವಿಷಯಗಳ ಮೇಲೆ ಇಚ್ಛೆ ಇಲ್ಲದಂತಿರುವ, ಆತ್ಮಹಿತತತ್ಪರ, ಎರಡನೆಯವರ ಮೇಲೆ ಉಪಕಾರ ಮಾಡುವಾಗ ಸಾವಧಾನದಿಂದಿರುವ ಈ ಎಲ್ಲ ಗುಣಗಳಿರುವವರಿಗೆ ಸಾಧುಗಳೆನ್ನುವರು. ಇಂಥ ಸಾಧುಗಳ ಗುಣಗಳ ವಿಷಯದಲ್ಲಿ ಆದರ, ಪ್ರೀತಿಗಳನ್ನು ಇಡುವುದು ವಾತ್ಸಲ್ಯವಾಗಿದೆ ಅಣುವ್ರತಗಳನ್ನು ಪಾಲಿಸುವವರು, ಪಾಪಕ್ಕೆ ಹೆದರುವವರು, ನ್ಯಾಯ ಮಾರ್ಗಿಗಳು, ಧರ್ಮಾನುರಾಗಿಗಳು, ಮಂದ ಕಷಾಯಿಗಳು, ಸದಾ ಸಂತೋಷವುಳ್ಳವರು ಆದ ಶ್ರಾವಕ ಹಾಗೂ ಶ್ರಾವಿಕೆಯರ ಗುಣಗಳಲ್ಲಿ ಪ್ರೀತಿಯನ್ನು ಇಡುವುದೂ ವಾತ್ಸಲ್ಯವೆನಿಸುತ್ತದೆ ಸ್ತ್ರೀ ಪರ್ಯಾಯದಲ್ಲಿ ಮಾಡತಕ್ಕ ವ್ರತಗಳಲ್ಲಿ ಕೊನೆಯ ಮರ್ಯಾದೆಯನ್ನು ಮುಟ್ಟಿ, ಸರ್ವ ಪರಿಗ್ರಹಗಳನ್ನು ಬಿಟ್ಟು, ಕುಟುಂಬ ಹಾಗೂ ಸ್ವಂತ ದೇಹದ ಮೇಲಿನ ಮೋಹವನ್ನೂ ಬಿಟ್ಟಿರುತ್ತಾರೆ. ಪಂಚೇಂದ್ರಿಯ-ಗಳ ವಿಷಯವನ್ನು ತ್ಯಾಗಮಾಡಿ, ಒಂದು ವಸ್ತ್ರ ಮಾತ್ರ ಪರಿಗ್ರವನ್ನು ಇಟ್ಟುಕೊಳ್ಳುತ್ತಾರೆ ಭೂಮಿಯ ಮೇಲೆ ಮಲಗಿ ಹಸಿವು, ನೀರಡಿಕೆ, ಶೀತ, ಉಷ್ಣ ಮೊದಲಾದ ಪರೀಷಹಗಳನ್ನು ಸಹನ ಮಾಡುತ್ತಾರೆ ಸಂಯಮ, ಧ್ಯಾನ, ಸ್ವಾಧ್ಯಾಯ, ಸಾಮಾಯಿಕ ಮೊದಲಾದ ಆವಶ್ಯಕ ಕ್ರಿಯೆಗಳಲ್ಲಿ ತತ್ಪರರಾಗಿರುತ್ತಾರೆ ಇಂಥ ಆರ್ಯಿಕೆಯರ ಗುಣಗಳಲ್ಲಿ ಅನುರಾಗವಿಡುವುದು ವಾತ್ಸಲ್ಯಭಾವವಾಗಿದೆ ಮುನೀಶ್ವರರಂತೆ ಕಾಡಿನಲ್ಲಿ ಇದ್ದು, ಇಪ್ಪತ್ತೆರಡು ಪರೀಷಹಗಳನ್ನು ಸಹನ ಮಾಡುತ್ತಾರೆ, ಉತ್ತಮ ಕ್ಷಮಾದಿ ಧರ್ಮಗಳನ್ನು ಧರಿಸಿ ದೇಹದ ಮೇಲಿನ ಮಮತ್ವವನ್ನು ಬಿಟ್ಟಿರುತ್ತಾರೆ, ತಮ್ಮ ಸಲುವಾಗಿಯೇ ಮಾಡಿದ ಅನ್ನ ಹಾಗೂ ಔಷಧಗಳನ್ನು ಸ್ವೀಕರಿಸುವದಿಲ್ಲ, ಒಂದು ಲಂಗೋಟಿಯನ್ನುಳಿದು ಎಲ್ಲ ಪರಿಗ್ರಹವನ್ನು ತ್ಯಾಗಮಾಡಿರುತ್ತಾರೆ, ಇಂಥ ಹನ್ನೊಂದನೆಯ ಪ್ರತಿಮೆಯಲ್ಲಿರುವ ಉತ್ತಮ ಶ್ರಾವಕನ ಗುಣಗಳಲ್ಲಿರುವ ಅನುರಾಗವು ವಾತ್ಸಲ್ಯವಾಗಿದೆ ಹಾಗೆಯೇ ಅವ್ರತ ಸಮ್ಯಗ್ದೃಷ್ಟಿ ಅಂದರೆ ದೇವ, ಗುರು, ಶಾಸ್ತ್ರಗಳ ಸತ್ಯಾರ್ಥ ಸ್ವರೂಪವನ್ನು ತಿಳಿದು, ಅವುಗಳ ಮೇಲೆ ದೃಢವಾದ ಶ್ರದ್ಧೆಯನ್ನು ಪ್ರೀತಿಯನ್ನು ಇಡುವುದು ಇದೂ ಸಹ ವಾತ್ಸಲ್ಯವೆನಿಸುತ್ತದೆ

**ಲೋಭಿಗಳಿಗೆ ವಾತ್ಸಲ್ಯವಿರುವದಿಲ್ಲ.** ಸಂಸಾರದಲ್ಲಿ ಅನಾದಿ ಕಾಲದಿಂದಲೂ ತನ್ನ ಸ್ತ್ರೀ, ಪುತ್ರ, ಕುಟುಂಬ, ಶರೀರ, ಇಂದ್ರಿಯಗಳ ವಿಷಯ, ಆ ವಿಷಯಗಳನ್ನು ಒದಗಿಸುವವರ ಮೇಲೆ ಅತ್ಯಂತ ಪ್ರೇಮವನ್ನು ಮಾಡಿ, ಅವುಗಳಿಗಾಗಿಯೇ ಸ್ವತಃ ಸಾಯಲಿಕ್ಕೂ ಅನ್ಯರನ್ನು ಕೊಲ್ಲಲಿಕ್ಕೂ ಸಿದ್ಧರಾಗುತ್ತಾರೆ ತಿರ್ಯಂಚ ಜೀವಗಳೂ ಸಹ ತಮ್ಮ ಸಂತತಿಗಳ ಸಲುವಾಗಿ ಹೊಡೆದಾಡಿ ಸಾಯುತ್ತವೆ ಎರಡನೆಯವರನ್ನೂ ಕೊಲ್ಲುತ್ತವೆ ಹೀಗೆ ಮೋಹದ ಪರಿಣಾಮವು ಅದ್ಭುತವಾಗಿದೆ ಯಾವ ಪುರುಷರು ಸಮ್ಯಗ್‌ಜ್ಞಾನದಿಂದ ಮೋಹವನ್ನು ನಷ್ಟಗೊಳಿಸಿ, ಆತ್ಮನ ಗುಣದ ಮೇಲೆ ಪ್ರೀತಿಯನ್ನು ಮಾಡುತ್ತಾರೆಯೋ ಅವರು ಧನ್ಯರು ಸಂಸಾರಿ ಮನುಷ್ಯನು ದ್ರವ್ಯ ಸಂಪಾದನೆಯ ಸಲುವಾಗಿ ಅತಿಶಯವಾಗಿ ತಳಮಳಿಸುತ್ತ ಧರ್ಮದ ಮೇಲಿನ ಪ್ರೇಮವನ್ನು ತ್ಯಜಿಸುತ್ತಾನೆ ಅವನ ಧನವು ಹೇಗೆ ಹೇಗೆ ಹೆಚ್ಚಾಗುತ್ತದೆಯೋ ಹಾಗೆಯೇ ಅವನ ತೃಷ್ಣೆಯೂ ಹೆಚ್ಚುತ್ತ ಹೋಗುತ್ತದೆ ಆದರಿಂದ ಅವನು ಧರ್ಮದ ಮಾರ್ಗವನ್ನು ಮರೆತು, ಧರ್ಮಾತ್ಮಾ ಜೀವಿಗಳ ಮೇಲೆ ವಾತ್ಸಲ್ಯ ಮಾಡುವದನ್ನು ಬಿಟ್ಟು ಬಿಡುತ್ತಾನೆ. ಹಗಲಿರುಳೂ ಧನ ಸಂಪತ್ತಿಯನ್ನು ಬೆಳೆಯಿಸುವುದರಲ್ಲಿಯೇ ಮುಳುಗಿ ಹೋಗಿರುವುದರಿಂದ ಇಂಥ ಸ್ಥಿತಿಯಾಗುತ್ತದೆ. ಒಂದು ಲಕ್ಷ ರೂಪಾಯಿ ಧನವು ಹತ್ತರವಾದಲ್ಲಿ ಒಂದು ಕೋಟಿ ರೂಪಾಯಿಯ ಇಚ್ಛೆಯಾಗುತ್ತದೆ ಮತ್ತು ಅದು ಪೂರ್ಣವಾಗುವದಕ್ಕಾಗಿ ಅನೇಕ ಆರಂಭ ಮತ್ತು ಪರಿಗ್ರಹಗಳನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ ಆಗ ಪಾಪ-ಪುಣ್ಯ ಕರ್ಮಗಳ ವಿಚಾರವು ಉಳಿಯುವದಿಲ್ಲ ಅದಕ್ಕಾಗಿ ಧರ್ಮದ ಮೇಲಿನ ಪ್ರೀತಿಯು ಪೂರ್ಣ ಇಲ್ಲದಂತಾಗುತ್ತದೆ. ಪರೋಪಕಾರದಲ್ಲಿ ಧನವನ್ನು ವೆಚ್ಚಮಾಡುವ ಬುದ್ಧಿಯೂ ಇಲ್ಲದಂತೆ ಆಗುತ್ತದೆ ಬಹು ಆರಂಭ, ಬಹು ಪರಿಗ್ರಹ, ಅತಿತೃಷ್ಣೆ ಇವುಗಳಿಂದ ಸಮೀಪ ಬಂದು ನಿಂತ ನರಕವಾಸವು ಅವನಿಗೆ ಕಾಣುವದಿಲ್ಲ. ಅದರಲ್ಲಿಯೂ ಈ ಪಂಚಮಕಾಲದೊಳಗಿನ ಧನಾಢ್ಯ ಜನರ ಕಡೆಗೆ ದೃಷ್ಟಿಯನ್ನು ಇಟ್ಟರೆ ಅವರು ಪೂರ್ವ ಜನ್ಮದಲ್ಲಿ ಮಿಥ್ಯಾಧರ್ಮ, ಕುಪಾತ್ರದಾನ, ಕುದಾನಗಳನ್ನು ಮಾಡಿರುವುದರಿಂದಲೇ ಅವರ ಲಕ್ಷ್ಯವು ಧರ್ಮಕಾರ್ಯದ ಕಡೆಗೆ ಹತ್ತುವದಿಲ್ಲವೆಂದು ಗೊತ್ತಾಗುತ್ತದೆ ಹಗಲಿರುಳೂ ತೃಷ್ಣೆ ಹಾಗೂ ಆರಂಭಗಳಲ್ಲಿಯೇ ಆಯುಷ್ಯವು ಹೊರಟು ಹೋಗುತ್ತದೆ. ಇಂಥವರಿಗೆ ಸ್ವತಃ ಧರ್ಮಧಾರಣ ಮಾಡುವುದರಲ್ಲಿಯೂ ಧಾರ್ಮಿಕ ಪುರುಷರ ವಿಷಯದಲ್ಲಿಯೂ ಆದರವು ಹೇಗಿದ್ದೀತು? ಇವರು ಧನಹೀನರಾದಂಥ ಧಾರ್ಮಿಕ ಜನರಿಗೆ ಬೆಲೆಯಿಲ್ಲದವರೆಂದು ಭಾವಿಸುತ್ತಾರೆ ಇದರಿಂದ

ಅವರು ನರಕ ತಿರ್ಯಂಚಗತಿಗಳಲ್ಲಿ ಸಂಚರಿಸುವ ಮರ್ಯಾದೆಯು ಅಸಂಖ್ಯಾತ ಕಾಲಪರ್ಯಂತ ಇರುವದೆಂಬುದು ಗೊತ್ತಾಗುತ್ತದೆ

ನಿನ್ನನ್ನು ನೀನು ಪ್ರೀತಿಸು. ಆತ್ಮ ಹಿತವನ್ನು ಬಯಸುವವರು ಧನ–ಸಂಪತ್ತಿಯು ಮದವನ್ನು ಹುಟ್ಟಿಸುವಂಥದ್ದಿದೆಯೆಂದು ತಿಳಿಯಬೇಕು ಅದರಂತೆ ಈ ದೇಹವು ಕ್ಷಣಭಂಗುರವೂ ದುಃಖಮಯವೂ ಆಗಿದೆಯೆಂದು ಭಾವಿಸಬೇಕು ಕುಟುಂಬವೂ ಒಂದು ದೊಡ್ಡ ಬಂಧನಕಾರಕವೆಂದು ತಿಳಿದು ತನ್ನ ಆತ್ಮವೊಂದನ್ನೇ ಪ್ರೀತಿಸಲಿಕ್ಕೆ ಕಲಿಯಬೇಕು ಹಾಗೆಯೇ ಧರ್ಮಾತ್ಮರಲ್ಲಿಯೂ ವ್ರತಿಕರಲ್ಲಿಯೂ ಸ್ವಾಧ್ಯಾಯ ಜಿನಪೂಜೆಗಳಲ್ಲಿಯೂ ವಾತ್ಸಲ್ಯವಿಡಿರಿ. ಸಮ್ಯಕ್‌ಚಾರಿತ್ರವೆಂಬ ಆಭರಣದಿಂದ ಶೋಭಿಸುವ ಸಾಧು ಜನರ ಸ್ತುತಿ, ಗೌರವಗಳಿಂದ ಈ ವಾತ್ಸಲ್ಯಗುಣವು ಪ್ರಾಪ್ತವಾಗುತ್ತದೆ. ಮತ್ತು ಅದು ಸುಗತಿಯನ್ನು ಒದಗಿಸಿ ಕೊಡುತ್ತದೆ ವಾತ್ಸಲ್ಯ ಗುಣದ ಪ್ರಭಾವದಿಂದಲೇ ದ್ವಾದಶಾಂಗ ವಿದ್ಯೆಯು ಪ್ರಾಪ್ತವಾಗುತ್ತದೆ. ಯಾಕೆಂದರೆ ಸಿದ್ಧಾಂತ ಸೂತ್ರದಲ್ಲಿಯೂ ಸಿದ್ಧಾಂತದ ಉಪದೇಶ ಮಾಡುವವರಲ್ಲಿಯೂ—ಉಪಾಧ್ಯಾಯರಲ್ಲಿಯೂ—ನಿಜವಾದ ಭಕ್ತಿಯು ಇರುವುದರಿಂದ ಶ್ರುತಜ್ಞಾನಾವರಣೀಯ ಕರ್ಮದ ರಸವು ಇಲ್ಲದಂತೆ ಆಗುತ್ತದೆ ಅದರಿಂದ ಸಕಲ ವಿದ್ಯೆಯು ಸಿದ್ಧವಾಗುತ್ತದೆ

ವಾತ್ಸಲ್ಯದಿಂದ ಋದ್ಧಿಗಳು ಪ್ರಾಪ್ತವಾಗುತ್ತವೆ. ವಾತ್ಸಲ್ಯ ಗುಣದ ಧಾರಕರಿಗೆ ದೇವರು ನಮಸ್ಕಾರ ಮಾಡುತ್ತಾರೆ. ಹದಿನೆಂಟು ಪ್ರಕಾರದ ಬುದ್ಧಿ, ಎಂಟು ವಿಧದ ಋದ್ಧಿ ಎರಡು ಪ್ರಕಾರದ ಆಕಾಶ ಗಾಮಿನಿ ವಿದ್ಯಾ, ಅನೇಕ ಪ್ರಕಾರದ ಚಾರಣಋದ್ಧಿ, ಮೂರು ವಿಧದ ಬಲಋದ್ಧಿ, ಏಳು ಪ್ರಕಾರದ ತಪಋದ್ಧಿ, ಆರು ಪ್ರಕಾರದ ರಸಋದ್ಧಿ, ಆರು ವಿಧದ ಔಷಧಋದ್ಧಿ, ಎರಡು ಪ್ರಕಾರದ ಕ್ಷೇತ್ರ ಋದ್ಧಿ, ಇವೇ ಮೊದಲಾದ ಅನೇಕ ಋದ್ಧಿಗಳು ಪ್ರಾಪ್ತವಾಗುತ್ತವೆ, ಪ್ರಕಟವಾಗುತ್ತವೆ. ಇಲ್ಲಿ ಋದ್ಧಿಗಳನ್ನು ವರ್ಣಿಸಿದರೆ ಗ್ರಂಥ ವಿಸ್ತಾರವು ಹೆಚ್ಚುವದೆಂದು ವರ್ಣಿಸಿಲ್ಲ. ಅದನ್ನು ಅರ್ಥಪ್ರಕಾಶಕ ಮೊದಲಾದ ಗ್ರಂಥಗಳಲ್ಲಿ ನೋಡಬೇಕು ವಾತ್ಸಲ್ಯದ ಯೋಗದಿಂದ ಮಂದಬುದ್ಧಿ ಜೀವಗಳ ಮತಿಜ್ಞಾನ ಮತ್ತು ಶ್ರುತಜ್ಞಾನಗಳು ಬೆಳೆಯಹತ್ತುತ್ತವೆ. ವಾತ್ಸಲ್ಯದ ಪ್ರಭಾವದಿಂದ ಪಾಪದ ಪ್ರವೇಶವಾಗುವದಿಲ್ಲ. ವಾತ್ಸಲ್ಯದಿಂದ ತಪಶ್ಚರಣಕ್ಕೆ ಶೋಭೆಯುಂಟಾಗುತ್ತದೆ. ಈ ಜಿನೇಂದ್ರ ಧರ್ಮವು ವಾತ್ಸಲ್ಯದಿಂದಲೇ ಶೋಭಾಯಮಾನವಾಗುತ್ತದೆ. ಅಲ್ಲದೆ ಶುಭಧ್ಯಾನವು ಬೆಳೆಯ ಹತ್ತುವದು. ವಾತ್ಸಲ್ಯದಿಂದಲೇ ಸಮ್ಯಗ್ದರ್ಶನವು ನಿರ್ದೋಷವಾಗುತ್ತದೆ ದಾನಕೊಟ್ಟದ್ದು ವಾತ್ಸಲ್ಯದಿಂದಲೇ ಕೃತಾರ್ಥವಾಗುತ್ತದೆ. ಪಾತ್ರದ ಮೇಲೆ ಪ್ರೀತಿಯಿಲ್ಲದೆ ಕೊಟ್ಟ ದಾನವು ನಿಂದೆಗೆ ಕಾರಣವಾಗುತ್ತದೆ.

ವಾತ್ಸಲ್ಯ ಗುಣದಿಂದಾಗುವ ಲಾಭ—ಜಿನವಾಣಿಯ ವಿಷಯದಲ್ಲಿ ಪ್ರೀತಿಯನ್ನು ಇಡುವವರಿಗೆ ಶಾಸ್ತ್ರದ ನಿಜವಾದ ಅರ್ಥವು ತಿಳಿಯುತ್ತದೆ ಜಿನವಾಣಿಯಲ್ಲಿ ಆದರ, ಪ್ರೀತಿ, ವಿನಯಗಳು ಇಲ್ಲದಿದ್ದರೆ ಅದರ ನಿಜವಾದ ಅರ್ಥವು ತಿಳಿಯಲಾರದು. ಅಂಥವನು ಅದಕ್ಕೆ ವಿಪರೀತ ಅರ್ಥವನ್ನೇ ಮಾಡಿಯಾನು ವಾತ್ಸಲ್ಯವೇ ಮನುಷ್ಯ ಜನ್ಮದ ಭೂಷಣವಾಗಿದೆ ವಾತ್ಸಲ್ಯವಿಲ್ಲದೆ ಬಹು ಮನೋಹರವಾದ ಆಭರಣ ಮತ್ತು ವಸ್ತ್ರಗಳನ್ನು ತೊಟ್ಟುಕೊಂಡರೂ ಅದರ ಉಪಯೋಗವೇನು? ಇಹಲೋಕದಲ್ಲಿ ಉಪಯೋಗ ಬೀಳುವ ಕೀರ್ತಿಯ ಸಂಪಾದನೆ, ಧರ್ಮದ ಉಪಾರ್ಜನೆ ಧನ ಸಂಪಾದನೆಗಳೆಲ್ಲ ಈ ವಾತ್ಸಲ್ಯ ಅಂಗದಿಂದಲೇ ಸಿದ್ಧಿಸುತ್ತವೆ ಪರಲೋಕದಲ್ಲಿ ಸ್ವರ್ಗ ಪ್ರಾಪ್ತವಾಗುವುದು, ಮಹರ್ದ್ಧಿಕ ದೇವತ್ವವು ದೊರೆಯುವುದು, ಇವೂ ಸಹ ವಾತ್ಸಲ್ಯಗುಣದಿಂದಲೇ ಸಾಧ್ಯವಾಗುತ್ತವೆ ವಾತ್ಸಲ್ಯವಿಲ್ಲದಿದ್ದರೆ ಈ ಲೋಕದ ಎಲ್ಲ ಸುಖಗಳು ರುಕ್ಷವೆನಿಸುತ್ತವೆ. ಪರಲೋಕದಲ್ಲಿ ದೇವಾದಿ ಗತಿಗಳು ಪ್ರಾಪ್ತವಾಗುವದಿಲ್ಲ. ಅರಿಹಂತದೇವ, ನಿರ್ಗ್ರಂಥ ಗುರು, ಸ್ಯಾದ್ವಾದರೂಪ ಪರಮಾಗಮ. ದಯಾರೂಪೀ ಧರ್ಮ ಇವುಗಳ ವಿಷಯದಲ್ಲಿ ಮನದೊಳಗೆ ವಾತ್ಸಲ್ಯವಿರುವುದರಿಂದಲೇ ಸಂಸಾರ ಪರಿಭ್ರಮಣವು ನಷ್ಟವಾಗಿ ಮುಕ್ತಿಯು ಲಭಿಸುತ್ತದೆ ಜಿನ-ಮಂದಿರದ ಸೇವೆ, ಜಿನಸಿದ್ಧಾಂತದ ಅಭ್ಯಾಸ, ಸಧರ್ಮಿ ಮನುಷ್ಯರ ವೈಯಾವೃತ್ಯ, ಧರ್ಮದಲ್ಲಿ ಅನುರಾಗ, ದಾನಕೊಡುವುದರಲ್ಲಿ ಪ್ರೀತಿ, ಈ ಎಲ್ಲ ಗುಣಗಳು ವಾತ್ಸಲ್ಯದಿಂದಲೇ ಪ್ರಾಪ್ತವಾಗುತ್ತವೆ ಯಾರು ಷಟ್‌ಕಾಯ ಜೀವಗಳ ವಿಷಯದಲ್ಲಿ ವಾತ್ಸಲ್ಯವನ್ನು ಧಾರಣ ಮಾಡಿರುವರೋ ಅವರಿಗೆ ಮೂರು ಲೋಕದೊಳಗಿನ ಶ್ರೇಷ್ಠವಾದಂಥ ತೀರ್ಥಂಕರ ಪ್ರಕೃತಿಯು ಲಭಿಸುತ್ತದೆ ಅದಕ್ಕಾಗಿ ಯಾರಿಗೆ ತಮ್ಮ ಕಲ್ಯಾಣವನ್ನು ಮಾಡಿಕೊಳ್ಳುವದಿರುತ್ತದೆಯೋ ಅವರು ಭಗವಾನ್ ಜಿನೇಶ್ವರರು ಹೇಳಿದ ವಾತ್ಸಲ್ಯಗುಣದ ಮಹಿಮೆಯನ್ನು ತಿಳಿದು, ಅದನ್ನು ಸ್ತುತಿಸಬೇಕು, ಪೂಜಿಸಬೇಕು, ಮತ್ತು ಅದಕ್ಕೆ ಅರ್ಘ್ಯವನ್ನೂ ಕೊಡಬೇಕು.

ಇದರಿಂದ ಸಮ್ಯಗ್ದರ್ಶನವು ಶುದ್ಧವಾಗಿ ತಪಶ್ಚರಣದಿಂದ ಅಹಮಿಂದ್ರಾದಿ ದೇವಗತಿಗಳು ಪ್ರಾಪ್ತವಾದಾವು. ತರುವಾಯ ಜಗತ್ತಿನ ಉದ್ಧಾರ ಮಾಡುವ ತೀರ್ಥಂಕರ ಪದವು ದೊರೆತು ನಿರ್ವಾಣವು ಪ್ರಾಪ್ತವಾದೀತು. ಈ ಪ್ರಕಾರ ಪ್ರವಚನ ವತ್ಸಲತ್ವ ಎಂಬ ಹೆಸರಿನ ಹದಿನಾರನೆಯ ಭಾವನೆಯನ್ನು ವರ್ಣಿಸಲಾಗಿದೆ.

## ದಶಲಾಕ್ಷಣಿಕ ಧರ್ಮ

ಇನ್ನು ಮುಂದೆ ಧರ್ಮದ ಸ್ವರೂಪವನ್ನು ಹೇಳುತ್ತಾರೆ. ಧರ್ಮವು ದಶ-ಲಕ್ಷಣ ಸ್ವರೂಪದಲ್ಲಿದೆ. ಈ ಸ್ವರೂಪದ ಮೇಲಿಂದ ಆತ್ಮನ ಅಂತರ್ಗತ ಸ್ವಭಾವದ ಗುರುತು ಹತ್ತುತ್ತದೆ. ಉತ್ತಮ ಕ್ಷಮಾ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಸತ್ಯ, ಉತ್ತಮ ಶೌಚ, ಉತ್ತಮ ಸಂಯಮ, ಉತ್ತಮ ತಪ, ಉತ್ತಮ ತ್ಯಾಗ, ಉತ್ತಮ ಆಕಿಂಚನ್ಯ ಮತ್ತು ಉತ್ತಮ ಬ್ರಹ್ಮಚರ್ಯ ಇವು ಹತ್ತು ಧರ್ಮದ ಲಕ್ಷಣಗಳಾಗಿವೆ. ಧರ್ಮವೆಂದರೆ ಪದಾರ್ಥದ ಮೂಲ ಸ್ವಭಾವವಾಗಿದೆ. ಜಗತ್ತಿನೊಳಗಿನ ಎಲ್ಲ ಪದಾರ್ಥಗಳೂ ತಮ್ಮ ಮೂಲ ಸ್ವಭಾವವನ್ನು ಎಂದೂ ಬಿಡುವದಿಲ್ಲ. ಪದಾರ್ಥದೊಳಗಿನ ಸ್ವಭಾವದ ನಾಶವಾಗುತ್ತದೆಂದು ಮನ್ನಿಸಿದರೆ ಪದಾರ್ಥಗಳ ಅಭಾವವನ್ನೇ ಮನ್ನಿಸಬೇಕಾದೀತು. ಅದಕ್ಕಾಗಿ ಹಾಗೆ ತಿಳಿಯಲಿಕ್ಕೆ ಬರುವದಿಲ್ಲ ಆತ್ಮನ ಮೂಲ ಸ್ವಭಾವವು ಕ್ಷಮಾ-ಮಾರ್ದವಾದಿಗಳಿಂದ ಕೂಡಿದೆ ಅವುಗಳ ಸ್ಥಳದಲ್ಲಿ ಕ್ರೋಧಾದಿಗಳ ವಿಕಾರದ ಪ್ರಾಬಲ್ಯವು ಸಂಸಾರದಲ್ಲಿ ಕಂಡುಬರುತ್ತಿದೆ. ಅದು ಕರ್ಮದಿಂದ ಹುಟ್ಟಿದ ಉಪಾಧಿಯಾಗಿದೆ ಈ ಉಪಾಧಿಗಳಿಂದ ಆತ್ಮನ ಮೂಲ ಸ್ವಭಾವಗಳ ಮೇಲೆ ಆವರಣವು ಉಂಟಾಗುತ್ತದೆ. ಅದರಿಂದ ಮೂಲ ಸ್ವಭಾವವು ಕಾಣದಂತೆ ಆಗುತ್ತದೆ ಕ್ರೋಧಾದಿಗಳ ಅಭಾವವಾಯಿತೆಂದರೆ ಅದು ಪ್ರಕಟವಾಗುತ್ತದೆ. ಉದಾಹರಣಾರ್ಥ-ಕ್ರೋಧವು ನಷ್ಟವಾದಲ್ಲಿ ಕ್ಷಮಾ, ಮಾನದ ಅಭಾವದಲ್ಲಿ ಮಾರ್ದವ, ಮಾಯೆಯ (ಕಪಟ) ಅಭಾವದಲ್ಲಿ ಆರ್ಜವ, ಲೋಭದ ನಾಶದಲ್ಲಿ ಶೌಚ ಮೊದಲಾದ ಆತ್ಮನ ಎಲ್ಲ ಗುಣಗಳೂ ಆ ಆ ವಿಕಾರಗಳ ಅಭಾವದಿಂದ ಪ್ರಕಟಗೊಳ್ಳುತ್ತವೆ ಅಂತಲೇ ಆತ್ಮಕ್ಕೆ ಕ್ಷಮಾದಿ ದಶಲಕ್ಷಣ ಸ್ವರೂಪದವನೆಂದು ಹೇಳಲಾಗಿದೆ ಮೋಹನೀಯ ಕರ್ಮಕ್ಕೆ ಕ್ರೋಧ ಲೋಭಾದಿ ಕಷಾಯಗಳು ಭೇದಗಳಾಗಿವೆ ಇವು ಅನಾದಿ ಕಾಲದಿಂದಲೂ ಆತ್ಮನನ್ನು ಆಚ್ಛಾದಿಸಿವೆ ಅದರಿಂದ ಕಷಾಯವು ನಷ್ಟವಾದಲ್ಲಿ ಆತ್ಮನ ಮೂಲ ಸ್ವಭಾವವು ಪ್ರಕಟವಾಗುತ್ತದೆ

ಈ ಪ್ರಕಾರ ಆತ್ಮನ ದಶಲಾಕ್ಷಣಿಕ ಸ್ವಭಾವವನ್ನು ಸಂಗ್ರಹವಾಗಿ ವರ್ಣಿಸಿ, ಇನ್ನು ಮುಂದೆ ಪ್ರತಿಯೊಂದು ಧರ್ಮವನ್ನು ಸವಿಸ್ತರ ಸ್ವರೂಪದಲ್ಲಿ ವಿವರಿಸಲಾಗುವದು

## ಕ್ಷಮಾ

**ಕ್ರೋಧದ ದುಷ್ಪರಿಣಾಮ**—ಆತ್ಮನ ಸ್ವಾಭಾವಿಕ ಗುಣಗಳಲ್ಲಿ ಮೊದಲನೆಯದು ಕ್ಷಮಾ ಎಂಬುದಿದೆ ಆತ್ಮನಲ್ಲಿ ಉತ್ಪನ್ನವಾಗುವಂಥ ಕ್ರೋಧರೂಪೀ ವಿಕಾರವನ್ನು ಇಲ್ಲದಂತೆ ಮಾಡುವದೆಂದರೆ ಕ್ಷಮಾ ಗುಣವನ್ನು ಪ್ರಕಟ ಮಾಡುವದಾಗಿದೆ ಕ್ರೋಧದಿಂದ ಆತ್ಮನಲ್ಲಿ ನಿರಂತರವಾಸಮಾಡುವ ಸಂತೋಷ, ಸಂಯಮ, ನಿರಾಕುಲತೆ ಮೊದಲಾದ ಗುಣಗಳು ನಾಶವಾಗುತ್ತವೆ ಅದರಿಂದ ಜಗತ್ತಿನಲ್ಲಿ ಅವನ ಅಪಕೀರ್ತಿಯಾಗುತ್ತದೆ. ಸಿಟ್ಟಿನಿಂದ ಅವನಲ್ಲಿ ಕಾರ್ಯಾಕಾರ್ಯದ ವಿಚಾರವು ನಿಲ್ಲುವದಿಲ್ಲ ಅವನಿಗೆ ತನ್ನ ಮನ-ವಚನ-ಕಾಯಗಳ ಕ್ರಿಯೆಗಳನ್ನು ಸ್ವಾಧೀನವಿಟ್ಟುಕೊಳ್ಳುವ ಸಾಮರ್ಥ್ಯವು ಇರುವದಿಲ್ಲ. ಅನೇಕ ದಿನಗಳ ಪ್ರೇಮ ಸಂಬಂಧವು ಇದ್ದರೂ ಸಹ ಅದನ್ನು ಒಂದು ಕ್ಷಣದಲ್ಲಿ ಇಲ್ಲದಂತೆ ಮಾಡಿಬಿಡುತ್ತದೆ. ಅವನು ಎಲ್ಲರ ದೊಡ್ಡ ವೈರಿಯಾಗಿ ಬಿಡುತ್ತಾನೆ ಅವನಿಗೆ ಸತ್ಯಾಸತ್ಯ ಭಾಷಣ ಮಾಡುವ ವಿಚಾರವು ಉಳಿಯುವದಿಲ್ಲ ಅವನು ನೀಚ ಜನರಿಗೂ ಸಹ ಶೋಭಿಸದಂಥ ಭಾಷೆಯನ್ನು ತನ್ನ ಮುಖದಿಂದ ಮಾತನಾಡಲಿಕ್ಕೆ ಹತ್ತುವನು. ಅವನಿಗೆ ಧರ್ಮಾಧರ್ಮದ ವಿಚಾರವು ಉಳಿಯುವದಿಲ್ಲ ಅವನು ರಾಗದ ಆವೇಶದಲ್ಲಿ ತನ್ನ ತಂದೆ, ಅಣ್ಣ, ಮಗ, ಹೆಂಡತಿ, ಒಡೆಯ, ಸೇವಕ, ಮತ್ತು ಪ್ರತ್ಯಕ್ಷ ಜನ್ಮವಿತ್ತ ತಾಯಿಯನ್ನೂ ಸಹ ಕೊಲ್ಲಲಿಕ್ಕೆ ಸಿದ್ಧನಾಗುತ್ತಾನೆ ಇಷ್ಟೇ ಅಲ್ಲ, ಅವನು ಸ್ವತಃ ಬಾವಿಯಲ್ಲಿ ಹಾರಿ ತನ್ನ ಪ್ರಾಣಗಳನ್ನೂ ಕೂಡ ಕಳೆದುಕೊಂಡು ಕೊಡುತ್ತಾನೆ ಸ್ವಲ್ಪದರಲ್ಲಿ ಹೇಳುವದೆಂದರೆ ಅವನಿಗೆ ಯಾವುದರ ಸುದ್ದಿಯೂ ಉಳಿಯುವದಿಲ್ಲ ಅಂತಲೇ ಸಿಟ್ಟಿನ ಮನುಷ್ಯರು ಯಾವಾಗ ಏನು ಮಾಡಿಯಾರೆಂಬುದರ ಭರವಸೆಯು

ಒಳ್ಳೆಯ ಜನರಿಗೆ ಇರುವದಿಲ್ಲ. ಅದರಿಂದ ಅವರು ದೂರವಿರುತ್ತಾರೆ. ಕ್ರೋಧಿಗಳಿಗೆ ಯಮರಾಜನ ಉಪಮೆಯನ್ನು ಕೊಡಲಾಗುತ್ತದೆ ಅದು ವಿಚಾರದ ಕೊನೆಯಲ್ಲಿ ಯಥಾರ್ಥವೇ ಎನಿಸುತ್ತದೆ.

ಇನ್ನೊಂದು ರೀತಿಯಿಂದ ಕ್ರೋಧವುಳ್ಳ ಪುರುಷನ ಹಾನಿಯೇನಾಗುತ್ತದೆಂಬುದನ್ನು ನೋಡೋಣ ಮೊಟ್ಟ ಮೊದಲು ಅವನ ಜ್ಞಾನ-ದರ್ಶನಾದಿ ಆತ್ಮಿಕ ಗುಣಗಳ ಘಾತವಾಗುತ್ತದೆ. ಕ್ರೋಧಕ್ಕೆ ವಶವಾಗುವುದರಿಂದ ಮಹಾನ್ ತಪಸ್ವಿಗಳೂ ದಿಗಂಬರ ಮುನಿಗಳೂ ಸಹ ಧರ್ಮಭ್ರಷ್ಟರಾಗಿ ನರಕಕ್ಕೆ ಹೋದುದುಂಟು ಸಿಟ್ಟಿನಿಂದ ಅತ್ಯಂತ ತೀವ್ರ ಪಾಪಬಂಧವು ಆಗಿ ನರಕವಾಸವನ್ನು ಹೊಂದಬೇಕಾಗುತ್ತದೆ ಬುದ್ಧಿಭ್ರಷ್ಟನಾಗಿ ಮನುಷ್ಯನು ನಿರ್ದಯಿಯಾಗುತ್ತಾನೆ. ಪರೋಪಕಾರವನ್ನು ಮರೆತು ಕೃತಘ್ನತೆಯನ್ನು ಹೊಂದುತ್ತಾನೆ ಅದಕ್ಕಾಗಿ ಮನುಷ್ಯ-ರೆಲ್ಲರೂ ಕ್ರೋಧವನ್ನು ಭಯಂಕರ ಶತ್ರುವೆಂದು ತಿಳಿದು, ಅದರಿಂದ ತಾವು ದೂರವಿರಲಿಕ್ಕೆ ಅವಶ್ಯ ಪ್ರಯತ್ನಿಸಬೇಕು. ಕ್ರೋಧದಿಂದ ಆತ್ಮಘಾತದಂಥ ಭಯಂಕರ ಪಾಪವು ಸಂಭವಿಸುತ್ತದೆ ಇದನ್ನರಿತು ವಿಕಾರವು ತನ್ನಲ್ಲಿ ಉತ್ಪನ್ನ-ವಾಗದಂತೆ ಅತ್ಯಂತ ಪ್ರಯತ್ನಿಸುತ್ತಿರಬೇಕು.

ಉತ್ತಮ ಕ್ಷಮೆಯ ಲಕ್ಷಣ—ಪುಣ್ಯವಂತರಿಗೇನೇ ಕ್ಷಮೆಯನ್ನು ಧಾರಣಮಾಡುವ ಸದ್ಬುದ್ಧಿಯು ಉತ್ಪನ್ನವಾಗುತ್ತದೆ ಸಂಸ್ಕೃತ ಭಾಷೆಯಲ್ಲಿ ಕ್ಷಮಾ ಎಂಬ ಹೆಸರನ್ನು ಪೃಥ್ವಿಗೆ ಕೊಡಲಾಗಿದೆ. ಪೃಥ್ವಿಯು ತನ್ನ ಮೇಲೆ ಆದ ಆಘಾತಗಳನ್ನು ಸಹನ ಮಾಡುತ್ತಿರುತ್ತದೆ. ಎಲ್ಲ ಪ್ರಾಣಿಗಳ ಜೀವನವು ಈ ಭೂಮಿಯ ಮೇಲೆಯೇ ನಡೆದಿರುತ್ತದೆ. ಅದರಿಂದ ಪೃಥ್ವಿಗೆ ಅಪರಿಮಿತವಾದ ತ್ರಾಸವು ಆಗುತ್ತಿರುತ್ತದೆ ಆದರೆ ಅದನ್ನೆಲ್ಲ ಅದು ಸಹನ ಮಾಡುವದಲ್ಲವೆ! ಅದೇ ಪ್ರಕಾರ ಯಾವ ಜನರು ಅನ್ಯ ಜನರಿಂದ ಆಗುವ ಅನೇಕ ಪ್ರಕಾರದ ತ್ರಾಸಗಳನ್ನು ಸಹನ ಮಾಡುವರೋ ಅವರಿಗೇ ಕ್ಷಮಾ ಗುಣವು ಪ್ರಾಪ್ತವಾಗುತ್ತದೆ. ಸ್ವಂತಕ್ಕೆ ಪ್ರತೀಕಾರ ಮಾಡುವ ಸಾಮರ್ಥ್ಯವು ಇದ್ದರೂ ಸಹ ಯಾರು ಇತರರು ಮಾಡಿದ ಉಪಸರ್ಗವನ್ನು ಸ್ವಹಿತಕ್ಕಾಗಿ ಸಹನ ಮಾಡುವರೋ ಅವರ ಸಹನಶೀಲತೆಗೇನೇ ಉತ್ತಮ ಕ್ಷಮಾ ಎನ್ನಬೇಕು. ಸಾಮಾನ್ಯವಾಗಿ ತಮ್ಮ ಲೌಕಿಕ ಜೀವನಕ್ಕಾಗಿಯೂ, ದ್ರವ್ಯ ಪ್ರಾಪ್ತಿಗಾಗಿಯೂ ಬೇರೆ ಇನ್ನಾವುದಾದರೂ ಹೇತುವಿಗಾಗಿಯೂ ಅನ್ಯರ ಉಪದ್ರವನ್ನು ಸಹನಮಾಡುವ ವ್ಯಕ್ತಿಗಳು ಜಗತ್ತಿನಲ್ಲಿ ಕಂಡುಬರುತ್ತಾರೆ ಆದರೆ ಅವರು ಧರ್ಮಕ್ಕಾಗಿ ಕ್ಷಮೆಯನ್ನು ಧಾರಣಮಾಡಿದಂತೆ ಅಲ್ಲ. ರಾಗ-ದ್ವೇಷಗಳಿಂದ ರಹಿತವಾಗಿದ್ದು, ಆತ್ಮನ ಯಥಾರ್ಥ ಸ್ವರೂಪವನ್ನು ಪ್ರಕಟಮಾಡುವ ಉದ್ದೇಶವೇ ಇರುವುದರಿಂದ ಕ್ಷಮೆಯೆಂಬುದರ ಹಿಂದೆ ಉದ್ದೇಶಪೂರ್ವಕ-ವಾಗಿಯೇ 'ಉತ್ತಮ' ಎಂಬ ವಿಶೇಷಣವನ್ನು ಹೇಳಲಾಗಿದೆ ಇದಲ್ಲದೆ 'ಉತ್ತಮ' ಎಂಬ ವಿಶೇಷಣಕ್ಕೆ ಇನ್ನೊಂದು ಹೇತುವೂ ಇದೆ. ಆ ಕ್ಷಮೆಯು ಸಮ್ಯಗ್‌ಜ್ಞಾನ ಪೂರ್ವಕವಾಗಿ ಇರಲಿಕ್ಕೆಬೇಕು ಇಂಥ ಉತ್ತಮ ಕ್ಷಮೆಯು ನಮ್ಮಲ್ಲಿ ಇರುವದೆಂದರೆ ಮೂರು ಲೋಕದ ಸಾರವೇ ನಮ್ಮಲ್ಲಿದ್ದಂತೆ. ಇದೇ ಕ್ಷಮೆಯು ಜೀವಗಳನ್ನು ಸಂಸಾರ ಸಮುದ್ರದೊಳಗಿಂದ ಆಚೆಯ ತೀರಕ್ಕೆ ಒಯ್ಯಲು ಸಮರ್ಥವಾಗುತ್ತದೆ ಉತ್ತಮ ಕ್ಷಮೆಯಲ್ಲಿ ರತ್ನತ್ರಯಗಳ ಸಮಾವೇಶವಾಗುತ್ತದೆ. ಅಂತಲೇ ಅವರಿಗೆ ದುರ್ಗತಿಯೊಳಗಿನ ದುಃಖವನ್ನು ಭೋಗಿಸುವ ಪ್ರಸಂಗವು ಒದಗುವದಿಲ್ಲ ಕ್ಷಮಾಧಾರಣ ಮಾಡಿದ್ದರಿಂದ ಮನುಷ್ಯನಿಗೆ ನರಕ ಹಾಗೂ ತಿರ್ಯಂಚ ಗತಿಗಳಿಗೆ ಹೋಗಬೇಕಾಗುವದಿಲ್ಲ ಈ ಒಂದು ಉತ್ತಮ ಕ್ಷಮೆಯು ನಮ್ಮಲ್ಲಿದ್ದರೆ ಅದರ ಜೊತೆಗೆ ಅನೇಕ ಒಳ್ಳೆಯ ಗುಣಗಳ ಪ್ರಾದುರ್ಭಾವವಾಗುತ್ತದೆ ದಿಗಂಬರ ಮುನಿಗಳಿಗಂತೂ ಕ್ಷಮೆಯೇ ಪ್ರಾಣವಾಗಿದೆ. ಉತ್ತಮ ಕ್ಷಮೆಯು ಲಭಿಸುವದೆಂದರೆ ಒಂದು ಚಿಂತಾಮಣಿಯೇ ದೊರೆತಂತೆ. ಹೀಗೆ ಜ್ಞಾನಿಗಳೇ ಹೇಳುತ್ತಾರೆ ಉತ್ತಮ ಕ್ಷಮೆಯನ್ನು ತಾಳುವದರಿಂದ ಮನಸ್ಸು ಅತಿಶಯ ಶುದ್ಧವಾಗಿರುತ್ತದೆ. ಕ್ಷಮೆಯು ಇಲ್ಲದೆ ಮನದ ಸ್ಥಿರತೆಯೂ ಉಜ್ವಲತೆಯೂ ಇರುವುದು ಶಕ್ಯವಿಲ್ಲ ಒಟ್ಟಿನಲ್ಲಿ ಎಲ್ಲ ಮನೋರಥಗಳ ಸಿದ್ಧಿಯು ಒಂದು ಉತ್ತಮ ಕ್ಷಮೆಯಿಂದ ಆಗುತ್ತದೆ ಅದಕ್ಕಾಗಿ ಅದನ್ನು ಧರಿಸಲಿಕ್ಕೆ ಎಲ್ಲರೂ ಪ್ರಯತ್ನಮಾಡಬೇಕು

ಇಲ್ಲಿ ಪ್ರಸಂಗಕ್ಕೆ ಅನುಸರಿಸಿ ಕ್ರೋಧವು ಉತ್ಪನ್ನವಾದರೆ ಅದನ್ನು ಹೇಗೆ ಗೆಲ್ಲಬೇಕು? ಆ ಸಂದರ್ಭದಲ್ಲಿ ಮನಸ್ಸಿನಲ್ಲಿ ಯಾವ ವಿಚಾರಗಳನ್ನು ತರಬೇಕು? ಇವೆಲ್ಲ ಸಂಗತಿಗಳನ್ನು ಹೇಳುವದು ಈಗ ಅಪ್ರಸ್ತುತವೆನಿಸಲಿಕ್ಕಿಲ್ಲ. ಅಂತಲೇ ಆ ವಿಷಯದಲ್ಲಿಯೂ ಸ್ವಲ್ಪ ವಿವೇಚನೆಯನ್ನು ಮಾಡಲಾಗಿದೆ ಕ್ರೋಧವು ಉತ್ಪನ್ನವಾದಾಗ ಮುಂದೆ ಹೇಳಿದಂತೆ ಪ್ರತಿಯೊಬ್ಬರೂ-ವಿಶೇಷವಾಗಿ ಮುನಿಗಳು-ತಮ್ಮ ತಮ್ಮ ಮನಸ್ಸಿನಲ್ಲಿ ವಿಚಾರಿಸಬೇಕು

ಕ್ರೋಧವನ್ನು ಹೇಗೆ ಗೆಲ್ಲಬೇಕು? ಯಾರಾದರೊಬ್ಬರು ನಮಗೆ ದುರ್ವಚನಗಳನ್ನಾಡಿ ದುಃಖ ಕೊಟ್ಟರೆ ಆಗ ನಾವೇ ಮೊದಲು ಆತ್ಮ ನಿರೀಕ್ಷಣೆಗೆ ತೊಡಗಬೇಕು ಅನ್ಯರು ನಮಗೆ ಕೆಟ್ಟ ಶಬ್ದಗಳಿಂದ ಬೈದಾರು,

ಕಳ್ಳ ಎಂದಾರು, ಅನ್ಯಾಯಿ, ಪಾಪಿ, ದುರಾಚಾರಿ, ದುಷ್ಟ, ನೀಚ, ದುರ್ಬಲ, ಚಾಂಡಾಲ, ಕೃತಘ್ನ, ಮೊದಲಾದ ಶಬ್ದಗಳಿಂದಲೂ ಸಂಬೋಧಿಸಬಹುದು ಇಂಥ ಸಂದರ್ಭದಲ್ಲಿ ಜ್ಞಾನೀ ಪುರುಷರು ಹೀಗೆ ವಿಚಾರಿಸಬೇಕು. “ಇವರ ವಿಷಯದಲ್ಲಿ ನಾನೇ ಏನಾದರೂ ತಪ್ಪನ್ನೆಸಗಿರಬೇಕು? ಇಲ್ಲವೆ ರಾಗದ್ವೇಷದ ಭರದಲ್ಲಿ ಒಂದು ಅಪಶಬ್ದವನ್ನು ಆಡಿ ಅವರ ಅಂತಃಕರಣವನ್ನು ನೋಯಿಸಿರಲಿಕ್ಕೆಬೇಕು ಅದಕ್ಕಾಗಿ ಅವನು ನನಗೆ ತಿರುಗಿ ಬೈದರೆ, ಧಿಕ್ಕಾರ ಮಾಡಿದರೆ, ನೀಚ, ಕಳ್ಳ, ಕಪಟಿ, ಅದರ್ಮಿ ಮೊದಲಾದ ಶಬ್ದಗಳನ್ನು ಉಚ್ಚರಿಸಿ ಅಪಮಾನ ಮಾಡಿದರೆ ಅದರಲ್ಲಿ ಹೆಚ್ಚಿನ ಸಂಗತಿ ಏನಿದೆ? ಇದಕ್ಕಿಂತಲೂ ಹೆಚ್ಚಿಗೇನಾದರೂ ಅವನು ನಮಗೆ ಶಿಕ್ಷೆಯನ್ನು ನೀಡಿದ್ದರೆ ಅದು ಯೋಗ್ಯವಾಗುತ್ತಿತ್ತು ಯಾವಾಗ ನಾನು ಅವನ ದೃಷ್ಟಿಯಿಂದ ಅಪರಾಧಿಯಾಗಿರುವೆನೋ ಆಗ ನಾನು ಅವನ ದುರ್ವಚನಗಳನ್ನು ಕೇಳುವ ಪ್ರಸಂಗವುಂಟಾಗುವುದು ಸರಿಯಾಗಿಯೇ ಇದೆ ಅವುಗಳನ್ನು ಕೇಳಿ ತಿರುಗಿ ನಾನು ಸಿಟ್ಟಿಗೆ ಬರುವುದು ಉಚಿತವೆನಿಸಲಿಕ್ಕಿಲ್ಲ. ಅಪರಾಧಿ ಪುರುಷನಿಗ ಇಲ್ಲಿಲ್ಲದಿದ್ದರೂ ನರಕದಲ್ಲಿ ಹೋಗಿಯಾದರೂ ದಂಡವನ್ನು ಭೋಗಿಸಲೇ ಬೇಕಾಗುವದಲ್ಲ? ಅಂದ ಮೇಲೆ ನನ್ನ ನಿಮಿತ್ತದಿಂದ ಅವನಿಗೆ ದುಃಖವಾಗಿದೆ, ಆ ದುಃಖದ ಆವೇಶದಲ್ಲಿ ನಮಗೆ ಅವನು ಕೆಟ್ಟ ಶಬ್ದಗಳನ್ನು ಆಡಿ, ತನ್ನ ಸಮಾಧಾನವನ್ನು ಮಾಡಿಕೊಳ್ಳುತ್ತಿದ್ದಾನೆ ಅದರಿಂದ ನಾನು ಕಡಕು ಎನ್ನಿಸಿಕೊಳ್ಳುವ ಕಾರಣವಿಲ್ಲ ” ಹೀಗೆ ಜ್ಞಾನಿಗಳು ವಿಚಾರಿಸುತ್ತಾರೆ

**ದುರ್ವಚನಕ್ಕಾಗಿ ಕ್ಷಮೆ ಕೇಳಬೇಕು.** ಯಾವನಾದರೊಬ್ಬ ಗೃಹಸ್ಥನಿಂದ ವಿಕಾರವಶನಾಗಿ ಅಪ್ಪಿ-ತಪ್ಪಿ ದುರ್ವಚನಗಳು ಬಾಯಿಯಿಂದ ಹೊರಬಿದ್ದರೆ ಅವನು ತಾನು ಆಡಿದ ಮಾತುಗಳಿಗಾಗಿ ಯಾರನ್ನು ಕುರಿತು ತಾನು ಮಾತನಾಡಿರುವನೋ ಅವರ ಹತ್ತರ ಕ್ಷಮೆಯನ್ನು ಕೇಳಬೇಕು ಆಗ ಹೀಗೆ ಅನ್ನಬೇಕು–“ಎಲೈ ದಯಾಮಯನೆ! ನಾನು ಅಜ್ಞಾನಿಯಾಗಿರುವೆ ರಾಗ–ದ್ವೇಷಗಳಿಗೆ ವಶನಾಗಿ ತಮ್ಮ ಮನಸ್ಸನ್ನು ನೋಯಿಸಿದೆ ಇಂಥ ತೀರ ಕೆಟ್ಟ–ಕಾರ್ಯವು ನನ್ನಿಂದ ಆಯಿತು. ಅದಕ್ಕಾಗಿ ನನ್ನನ್ನು ಕ್ಷಮಿಸಿರಿ ಇನ್ನು ಮುಂದೆ ಇಂಥ ಸಂಗತಿಗಳು ನನ್ನಿಂದ ಎಂದೂ ಸಂಭವಿಸಲಾರವು ಒಮ್ಮೆ ಆದ ತಪ್ಪಿಗಾಗಿ ಸತ್ಪುರುಷರು ಯಾವಾಗಲೂ ಕ್ಷಮಿಸುತ್ತಿರುತ್ತಾರೆ.”

ಇನ್ನು ನಾವು ಯಾರಲ್ಲಿ ಕ್ಷಮೆಯನ್ನು ಕೇಳಲಿಕ್ಕೆ ಹೋಗುತ್ತೇವೆಯೋ ಆ ಪುರುಷನು ತೀವ್ರ ಕ್ರೋಧಿಯಾಗಿದ್ದರೆ ಇಲ್ಲವೆ ಅನ್ಯಾಯದ ನಡತೆಯುಳ್ಳವನಾಗಿದ್ದರೆ ಅಂಥವರ ಹತ್ತರ ಮಂದ ಕಷಾಯಿ ಪುರುಷರು ಅಪರಾಧದ ವಿಷಯದಲ್ಲಿ ಕ್ಷಮೆಯನ್ನು ಕೇಳಲಿಕ್ಕೆ ಹೋಗಕೂಡದು ಕಾಲಾಂತರದಲ್ಲಿ ಅವನ ಕ್ರೋಧವು ಶಾಂತವಾಗಿದೆ ಎಂದು ತಿಳಿದ ಮೇಲೆ ಅವರ ಹತ್ತರ ಕ್ಷಮೆಯನ್ನು ಕೇಳಲಿಕ್ಕೆ ಅಡ್ಡಿಯಿಲ್ಲ.

**ನಿರ್ದೋಷ ಪುರುಷನ ವಿಚಾರಗಳು**—ಒಮ್ಮೊಮ್ಮೆ ನಮ್ಮಿಂದ ಯಾವ ತರದ ತಪ್ಪುಗಳೂ ಆಗಿರು-ವದಿಲ್ಲ ಆಗಲೂ ಕೆಲವರು ನಮ್ಮನ್ನು ನಿಂದಿಸುತ್ತಾರೆ, ನಮಗೆ ಬಯ್ಯುತ್ತಾರೆ ಆ ಪುರುಷರು ಕೇವಲ ದ್ವೇಷ, ಈರ್ಷೆಗಳಿಂದ ನಮ್ಮ ಮೇಲೆ ದ್ವೇಷಾರೋಪವನ್ನು ಮಾಡುತ್ತಾರೆಂದು ತಿಳಿದು ಜ್ಞಾನಿ ಪುರುಷರು ಮೂಲತಃ ದುಃಖವನ್ನೇ ಮಾಡಬಾರದು ಆ ಕಾಲದಲ್ಲಿ ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತರಬೇಕು–“ಒಂದು ವೇಳೆ ನಾವು ಅವರ ಧನವನ್ನು ಅಪಹರಿಸಿದ್ದರೆ, ಹೊಲ–ಮನೆಗಳನ್ನು ಎತ್ತಿಹಾಕಿದ್ದರೆ, ಅವರ ಉಪಜೀವಿಕೆಯ ಸಾಧನಗಳನ್ನು ನಾಶಗೊಳಿಸಿದ್ದರೆ, ಸುಳ್ಳು ಸುಳ್ಳೇ ಅವರ ವಿಷಯದಲ್ಲಿ ಚಾಡಿಯನ್ನು ಹೇಳಿದ್ದರೆ, ಇಲ್ಲವೆ ಅವರ ದೋಷವನ್ನು ಪ್ರಕಟಗೊಳಿಸಿ ನಾಚಿಕೆಗೇಡು ಮಾಡಿದ್ದರೆ, ಆ ನಮ್ಮ ಅಪರಾಧಕ್ಕಾಗಿ ಪಶ್ಚಾತ್ತಾಪವನ್ನು ಹೊಂದಿ, ಅವರ ಕ್ಷಮೆಯನ್ನು ಕೇಳುವುದು ಯೋಗ್ಯವಾಗಿದೆ ಆದರೆ ಇಂಥ ಅಪರಾಧಗಳು ಯಾವವೂ ನಮ್ಮಿಂದ ಸಂಭವಿಸಿರದಿದ್ದರೆ ನಾವು ಯಾವ ಕಾರಣಕ್ಕಾಗಿಯೂ ಕ್ಷಮೆಯನ್ನು ಕೇಳುವುದು ಯೋಗ್ಯವಲ್ಲ ಒಂದು ವೇಳೆ ಅವನು ನಮ್ಮನ್ನುದ್ದೇಶಿಸಿ, ತನ್ನ ಮುಖದಿಂದ ಅಭದ್ರವಚನಗಳನ್ನು ಆಡುತ್ತಿದ್ದರೂ ಆ ಶಬ್ದಗಳಿಂದ ನಮ್ಮ ಆತ್ಮಕ್ಕೆ ಯಾವ ದೋಷಗಳೂ ತಗಲುವದಿಲ್ಲ ಅವನು ನಮ್ಮ ಹೆಸರು ಮತ್ತು ಕುಲಗಳನ್ನು ಎತ್ತಿ ಉಚ್ಚರಿಸಿ ಬೈಯುತ್ತಿದ್ದಾನೆ ಆದರೆ ಹೆಸರು ಮತ್ತು ಕುಲಗಳು ನನ್ನ ನಿಜವಾದ ಸ್ವರೂಪವಲ್ಲ ನನ್ನ ನಿಜವಾದ ಸ್ವರೂಪವು ಜ್ಞಾನವಾಗಿದೆ ಅವನು ಯಾರಿಗೆ ಬೈಯುತ್ತಾನೆಯೋ ಅವನು ನಾನಲ್ಲ ನಾನು ಯಾರಿದ್ದೇನೆಯೋ ಅವನಿಗೆ ಮೂಲದಲ್ಲಿ ಈ ಶಬ್ದಗಳೇ ಕೇಳಬರುವದಿಲ್ಲ. ಅಂದಮೇಲೆ ನಾವು ಈಗ ಕ್ಷಮೆಯನ್ನೇ ಧಾರಣಮಾಡಲಿಕ್ಕೆಬೇಕು. ಇನ್ನು ಮತ್ತೊಂದು ಸಂಗತಿಯು ಹೀಗಿದೆ–ಅವನು ಆಡುವ ದುರ್ವಚನಗಳು ಅವನ ಮುಖದಿಂದ ಅವನ ಮನಸ್ಸಿನ ಅಭಿಪ್ರಾಯಗಳನ್ನು ವ್ಯಕ್ತಗೊಳಿಸುವ ಶಬ್ದಗಳಾಗಿವೆ. ಅವು ಹಲ್ಲು ಮತ್ತು ನಾಲಿಗೆಗಳ ಸಹಾಯದಿಂದ ಉತ್ಪನ್ನವಾಗುವ ಪುದ್ಗಲ ಪರಮಾಣುಗಳ ಪದರೂಪದ ಅವಸ್ಥೆಯಲ್ಲಿವೆ.

ಇಂಥ ವಚನಗಳನ್ನು ಕೇಳಿ ನನ್ನ ಆತ್ಮನಲ್ಲಿ ವಿಕಾರವುಂಟಾಗಲು ಅವಕಾಶ ಕೊಟ್ಟರೆ ನನ್ನಂಥ ಮೂರ್ಖನಾರು? ಈ ಮನುಷ್ಯನು ನನಗೆ ಈರ್ಷೆಯಿಂದ ಬೈಯುತ್ತಿದ್ದಾನೆ ನಿಜವಾಗಿ ನೋಡಿದರೆ ಈ ಕೆಟ್ಟ ಮಾತುಗಳೂ ಬೈಗಳೂ ಯಾವ ಒಂದು ವಸ್ತುವೇನಲ್ಲ ಅವು ನನ್ನ ಶರೀರಕ್ಕೆ ಹತ್ತಿದುತೆಯೂ ಕಾಣುವದಿಲ್ಲ ಆ ವಸ್ತುವಿನಲ್ಲಿ ಕೊಡಕೊಳ್ಳುವ ವ್ಯಾಪಾರವು ನಡೆಯುತ್ತದೆಂಬುದನ್ನು ಜ್ಞಾನಿಯಾದ ನಾನು ಹೇಗೆ ಸ್ವೀಕರಿಸಲಿ? ಈಗ ಅವನು ನನಗೆ ಕಳ್ಳ, ಅನ್ಯಾಯಿ, ಕಪಟಿ, ಅಧರ್ಮಿ ಮೊದಲಾದ ಮಾತುಗಳನ್ನಾಡಿದರೂ ಇವರಲ್ಲಿ ಹೆಚ್ಚಿನದೇನಿದೆ? ನಾವು ಅನೇಕ ಜನ್ಮಗಳಲ್ಲಿ ಕಳ್ಳರಾಗಿಲ್ಲವೆ? ಕೇವಲ ಕಳ್ಳರಿಷ್ಟೇ ಅಲ್ಲ, ವ್ಯಭಿಚಾರಿಯೂ, ತಿನ್ನಬಾರದುದನ್ನು ತಿನ್ನುವಂಥವರೂ, ಭಿಲ್ಲ, ಚಾಂಡಾಲ, ಚರ್ಮಕಾರ, ಹೊಲೆಯ, ನಾಯಿ, ಕತ್ತೆ, ಮೊದಲಾಗಿ, ಮನುಷ್ಯ ಹಾಗೂ ಪಶುಗಳಲ್ಲಿ ಅನೇಕ ಅವಸ್ಥೆಗಳನ್ನು ಹೊಂದಿದ್ದೇವೆ. ಜಗತ್ತಿನಲ್ಲಿ ಎಷ್ಟು ಅನ್ಯಾಯದ ಆಚರಣೆಯ ಕೃತಿಗಳು ಇರುವವೋ ಅವೆಲ್ಲ ನಮ್ಮ ಕೈಯಿಂದ ಅನೇಕ ಜನ್ಮಗಳಲ್ಲಿ ಹಲವು ಪ್ರಸಂಗಗಳಲ್ಲಿ ಆಗಿಯೂ ಹೋಗಿವೆ ಇನ್ನೂ ಸಂಸಾರ ಪರಿಭ್ರಮಣವನ್ನು ಮಾಡುವದಿದೆ, ಅಲ್ಲಿಯ ವರೆಗೆ ಅನೇಕ ಪರ್ಯಾಯಗಳಲ್ಲಿ ಬೇರೆ ಬೇರೆ ಅವಸ್ಥೆಗಳಲ್ಲಿ ಇದಕ್ಕಿಂತಲೂ ನೀಚ ಅವಸ್ಥೆಯನ್ನು ಹೊಂದಬೇಕಾದೀತು ಅಂದಮೇಲೆ ಅವನು ನಮಗೆ ಹಾಗೆ ಮಾತಾಡಿದರೆ ನಾವು ಏಕೆ ಕೆಡಕೆನಿಸಿಕೊಳ್ಳಬೇಕು. ನಾವು ಎಂದಾದರೂ ಒಮ್ಮೆ ಈ ಎಲ್ಲ ಅವಸ್ಥೆಯನ್ನು ಭೋಗಿಸಿಯೇ ಇದ್ದೇವೆ ಅದನ್ನೇ ಅವನು ಮಾತನಾಡಿ ತೋರಿಸಿದನು ಇವರಲ್ಲಿ ಕೆಡಕೆನಿಸಿಕೊಳ್ಳುವಂಥದೇನಿದೆ? ಅವನು ನಮಗೆ ಕತ್ತೆ ಎಂದನೆಂದು ಕೆಡಕೆನಿಸಿಕೊಂಡು ಅದರಿಂದ ನಮ್ಮ ಶುದ್ಧ ಆತ್ಮದಲ್ಲಿ ವಿಕಾರಭಾವವನ್ನು ಉತ್ಪನ್ನವಾಗಗೊಡುವುದು ಒಳ್ಳೆಯದಲ್ಲ ದುಷ್ಟ ಜನರು ದುರ್ವಚನಗಳನ್ನಾಡಿ ನನಗೆ ದುಃಖ ಕೊಡಲಿಕ್ಕೆ ಪ್ರಯತ್ನಿಸುತ್ತಾರೆ ಇದರಲ್ಲಿ ಅವರ ದೋಷವು ಮೂಲದಲ್ಲಿ ಇಲ್ಲವೇ ಇಲ್ಲ. ನಾವು ಪೂರ್ವ ಜನ್ಮದಲ್ಲಿ ಯಾವ ಯಾವ ಕರ್ಮಗಳನ್ನು ಕಟ್ಟಿಕೊಂಡಿರುವೆವೋ ಅವು ಉದಯಕ್ಕೆ ಬರುತ್ತವೆ ಅವೇ ಈ ದುಷ್ಟ ಮನುಷ್ಯನಿಂದ ಅಪಶಬ್ದರೂಪದಲ್ಲಿ ವ್ಯಕ್ತವಾಗಿ ನಷ್ಟವಾಗುತ್ತವೆ. ಇದೇನು ಸಣ್ಣ ಲಾಭವಲ್ಲ? ನಿಜವಾಗಿಯೂ ಈ ದುಷ್ಟ ಜನರು ನನ್ನ ಮೇಲೆ ಬಹಳ ಉಪಕಾರ ಮಾಡುತ್ತಿದ್ದಾರೆ ಯಾಕೆಂದರೆ ಅವರು ನನಗೆ ಕೆಟ್ಟ ಮಾತುಗಳನ್ನು ಆಡಿ, ತಮ್ಮ ಪುಣ್ಯ ಸಂಚಯದ ನಾಶಮಾಡಿಕೊಂಡು, ನನ್ನ ಪಾಪವನ್ನು ಕಳೆಯಲಿಕ್ಕೆ ಕಾರಣರಾಗುತ್ತಿದ್ದಾರೆ ಇಂಥ ಉಪಕಾರವನ್ನು ಮಾಡುವವರ ಮೇಲೆ ಒಂದು ವೇಳೆ ನಾನು ಸಿಟ್ಟನ್ನು ಮಾಡಿದರೆ ನನ್ನಷ್ಟು ಅಧಮ ಇನ್ನಾರು ಇರುವರು? ಎಲಾ! ಇವನು ನನಗೆ ಕೇವಲ ಬೈದಿದ್ದಾನೆ, ಹೊಡೆದಿಲ್ಲ. ಇದೇನು ಸಣ್ಣ ಲಾಭವೆ? ಸಿಟ್ಟಿಗೆ ಬಂದ ಮನುಷ್ಯನು ಹೊಡೆಯಲಿಕ್ಕೂ ಪ್ರವೃತ್ತನಾಗುತ್ತಾನೆ ಅವನಿಗೆ ತಂದೆ-ತಾಯಿ, ಅಣ್ಣ-ತಮ್ಮಂದಿರು, ಮಕ್ಕಳು-ಮರಿಗಳು, ಸ್ತ್ರೀ-ಮಿತ್ರರು ಇವರಲ್ಲಿ ಯಾರ ಅರಿವೂ ಇರುವದಿಲ್ಲ ಹೀಗಿದ್ದೂ ಅವನು ನನಗೆ ಹೊಡೆಯಲಿಲ್ಲ ಇದು ಉಪಕಾರವೇ ಎನ್ನಬೇಕು "

ಪ್ರತ್ಯಕ್ಷ ಹೊಡೆಯುವವರ ಬಗ್ಗೆ ವಿಚಾರ—ಇದಕ್ಕೂ ಮುಂದೆ ಹೋಗಿ ಸಿಟ್ಟಿನ ಭರದಲ್ಲಿ ಆ ಮನುಷ್ಯನು ಹೊಡೆದದ್ದಾದರೆ ಜ್ಞಾನಿಗಳು ಕ್ಷಮೆಯನ್ನೇ ಧರಿಸಬೇಕು. ಆಗ ಹೀಗೆ ವಿಚಾರ ಮಾಡಬೇಕು— "ಇವನು ನನಗೆ ಕೇವಲ ಹೊಡೆದಿದ್ದಾನೆ. ನನ್ನ ಜೀವನವನ್ನು ತಕ್ಕೊಂಡಿಲ್ಲ. ದುಷ್ಟ ಜನರು ತಮ್ಮ ಜೀವದ ಮೇಲೆ ಉದಾರರಾಗಿಯೇ ಇನ್ನೊಬ್ಬರ ಘಾತ ಮಾಡಲಿಕ್ಕೆ ಸಿದ್ಧರಾಗುತ್ತಿರುತ್ತಾರೆ ಇವನು ಇನ್ನೂ ನನಗೆ ಆ ಅವಸ್ಥೆಯನ್ನು ಉಂಟುಮಾಡಿಲ್ಲ. ಇದೂ ಒಂದು ಲಾಭವೇ ಆಗಿದೆ ಇಷ್ಟಾಗಿಯೂ ಅವನು ಪ್ರಾಣ ತಕ್ಕೊಳ್ಳಲಿಕ್ಕೆ ಪ್ರವೃತ್ತನಾದರೆ ಮುಂದಿನ ವಿಚಾರಗಳನ್ನು ಮನಸ್ಸಿನಲ್ಲಿ ತರಬೇಕು—"ಯಾವಾಗಾದರೂ ಒಮ್ಮೆ ಸಾಯುವುದು ಇದ್ದೇ ಇತ್ತು. ಈಗಲೇ ಅದು ಪ್ರಾಪ್ತವಾಗಿರುವುದರಿಂದ ಕರ್ಮದ ಋಣವು ಕಳೆಯಿತು ಇದು ಸರಿಯೇ ಆಯಿತು ಇಂದ ಸಾವಿನಲ್ಲಿ ನನ್ನ ಧರ್ಮವು ನಷ್ಟವಾಗಲಿಲ್ಲ ಧರ್ಮದ ರಕ್ಷಣೆಯು ಆಗುತ್ತಿದ್ದು, ನಾವು ಬದುಕುವಂತೆ ಇದ್ದರೇನೇ ಆ ಬಾಳು ನಿಜವಾದುದು ಈ ದ್ರವ್ಯ ಪ್ರಾಣವು (ಶ್ವಾಸೋಚ್ಛ್ವಾಸಾದಿ) ಪುದ್ಗಲರೂಪಿಯಾಗಿದೆ. ಜ್ಞಾನ ದರ್ಶನವೇ ಮೊದಲಾದ ಸ್ವಾಭಾವಿಕ ಆತ್ಮಗುಣಗಳಿಗೆ ಭಾವ-ಪ್ರಾಣವೆನ್ನುವರು ಅವುಗಳ ಘಾತವನ್ನು ನಾನು ಕ್ರೋಧಾದಿ ವಿಕಾರಗಳ ಅಧೀನನಾಗಿ ಮಾಡಿಲ್ಲ. ಇದೊಂದು ದೊಡ್ಡ ಲಾಭವಾಗಿದೆ ಇದಕ್ಕಿಂತ ದೊಡ್ಡ ಲಾಭವು ಜಗತ್ತಿನಲ್ಲಿ ಬೇರೊಂದಿಲ್ಲ ಉತ್ತಮ ಕೆಲಸದಲ್ಲಿ ಸಾವಿರಾರು ವಿಘ್ನಗಳು ಬರುವುದು ಸೃಷ್ಟಿ ಕ್ರಮವೇ ಆಗಿದೆ. ಹಾಗೆ ನನಗೆ ತೊಂದರೆಗಳು ಬಂದವು ಇದು ಯೋಗ್ಯವೇ ಆಯಿತು ಇಂಥ ವೇಳೆಯಲ್ಲಿ ನಾನು ಕ್ಷಮಾಭಾವವನ್ನು ಧಾರಣಮಾಡಿ, ಪ್ರಾಪ್ತವಾಗುವ ಉಪಸರ್ಗವನ್ನು ಸಹನ ಮಾಡದೆ ಹೋದರೆ—ವಿಕಾರದ ಸ್ವಾಧೀನನಾಗಿ ಕ್ಷುಬ್ಧನಾದರೆ—

ಈ ನನ್ನ ಆಚರಣೆಯನ್ನು ನೋಡಿ, ನನಗಿಂತ ಅಲ್ಪಜ್ಞಾನಿಗಳೂ ಹೆದರ ಬಡಕರೂ ಆದ ತ್ಯಾಗಿಗಳೂ ತಪಸ್ವಿಗಳೂ ನನ್ನ ಕ್ರಿಯೆಗಳನ್ನು ನೋಡಿ, ತಾವು ನಿರ್ದೋಷ ಕ್ರಿಯೆಗಳನ್ನು ಆಚರಿಸಲಿಕ್ಕೆ ದೃಢ ನಿಶ್ಚಯಿಗಳು ಹೇಗಾಗಿ ಉಳಿದಾರು? ಅವರೆಲ್ಲರೂ ತಮ್ಮ ತಮ್ಮ ಕರ್ಮಮಾರ್ಗಗಳಲ್ಲಿ ಶಿಥಿಲರಾದಾರು. ಆದರಿಂದ ಧರ್ಮಮಾರ್ಗವು ಸದೋಷವಾದೀತು ಇನ್ನೊಂದು, ಸಧ್ಯಕ್ಕೆ ನಾನು ವೀತರಾಗಿಯಾಗಿದ್ದೇನೆ, ಇಂಥ ಪ್ರಸಂಗದಲ್ಲಿ ನಾನು ವಿಕಾರವಶನಾಗಿ ಒಂದು ವೇಳೆ ನನ್ನ ಮುಖದಿಂದ ದುರ್ವಚನಗಳನ್ನು ಆಡತೊಡಗಿದರೆ ನನ್ನನ್ನು ನೋಡಿ ಇತರರೂ ಸಹ ಹಾಗೆಯೇ ಮಾತನಾಡಬಹುದಾಗಿದೆ ನಾನು ಧರ್ಮದ ಮರ್ಯಾದೆಯನ್ನು ಬಿಟ್ಟು ಪಾಪದ ಪರಂಪರೆಯನ್ನು ನಡೆಯಿಸಿದಂಥವನಾದೇನು ಅದಕ್ಕಾಗಿ ನಾನು ಪ್ರಾಣ ಹೋದರೂ ಕೂಡ ಸ್ವೀಕರಿಸಿದ ಕ್ಷಮಾಗುಣವನ್ನು ಬಿಡುವದಿಲ್ಲ ಪೂರ್ವದಲ್ಲಿ ನಾನು ಯಾವ ಅಶುಭ ಕರ್ಮಗಳನ್ನು ಸಂಪಾದಿಸಿ ಇಟ್ಟಿರುವೆನೋ ಅದರ ಫಲವನ್ನು ನಾನೊಬ್ಬನೇ ಭೋಗಿಸಬೇಕಾಗುವದು ಇತರ ಪದಾರ್ಥಗಳು ಕೇವಲ ನಿಮಿತ್ತ ಮಾತ್ರವಾಗಿವೆ ಇವರ ನಿಮಿತ್ತದಿಂದ ನನ್ನ ಕರ್ಮವು ಉದಯಕ್ಕೆ ಬಾರದೆ ಹೋಗಿದ್ದರೆ ಇನ್ನಾರ ನಿಮಿತ್ತದಿಂದಾದರೂ ಅದು ಉದಯಕ್ಕೆ ಬಂದೇ ತೀರುತ್ತಿತ್ತು ಉದಯ ಹೊಂದಿದ ಕರ್ಮವು ಫಲ ಕೊಡದೆ ಇರಲಾರದೆಂಮ ಜೈನ ಸಿದ್ಧಾಂತವಿದೆ ಈ ಅಜ್ಞ ಜೀವವು ನನ್ನ ಮೇಲೆ ಬಹಳ ಸಿಟ್ಟುಮಾಡಿ, ಕೆಟ್ಟ ವಚನಗಳನ್ನು ಆಡಿ ನನಗೆ ತ್ರಾಸಕೊಡುತ್ತಿದ್ದಾನೆ ಅವನಿಗೂ ಕೂಡ ನಾನು ತಿರುಗಿ ಮಾತನಾಡಹತ್ತಿದರೆ ಅವನಲ್ಲಿಯೂ ನನ್ನಲ್ಲಿಯೂ ಅಂತರವೇನು? ನಾನೂ ವಿಕಾರವಶನಾದೆನೆಂದರೆ ನನಗೆ ತತ್ತ್ವಜ್ಞಾನವಾಗಿಯೂ ನಿರರ್ಥಕವಾಯಿತೆಂದು ಹೇಳಬೇಕಾದೀತು " ಉದಯ ಹೊಂದಿದ ಪಾಪಕರ್ಮವು ತನ್ನ ಫಲವನ್ನು ನೀಡಲಿಕ್ಕೆ ಸಿದ್ಧವಾಗಿದ್ದಾಗ ಅದರಿಂದ ಕೆರಳಿ ಯಾವ ವಿಚಾರವಂತನೂ ತನ್ನ ಆತ್ಮನಲ್ಲಿ ಕ್ರೋಧಾದಿ ವಿಕಾರಗಳು ಉತ್ಪನ್ನವಾಗಲಿಕ್ಕೆ ಆಸ್ಪದ ಕೊಡುವದಿಲ್ಲ ಅಂಥ ಸಂದರ್ಭದಲ್ಲಿ ಅವನು ಮನಸ್ಸಿನಲ್ಲಿ ಹೀಗೆ ವಿಚಾರ ಮಾಡಬೇಕು – "ಎಲೈ ಆತ್ಮನೇ! ನೀನು ಮೊದಲು ಮಾಡಿದ ಅಶುಭ ಕರ್ಮವು ಈಗ ಉದಯ ಹೊಂದಿ ದುಃಖವನ್ನು ಕೊಡುತ್ತಿದೆ ಅದನ್ನು ಪ್ರತಿಬಂಧಿಸುವುದು ಅಶಕ್ಯವಿದೆ ಅಂತಲೇ ಅದನ್ನೀಗ ಸಹನ ಮಾಡು. ದುಃಖದಿಂದ ಭಯಭೀತನಾಗಿರುವಿ ಆದರೂ ಆ ಕರ್ಮಗಳು ನಿನ್ನನ್ನು ಬಿಡುವಂತೇನೂ ಇಲ್ಲ ತಿರುಗಿ ಅದರಿಂದ ನಿನಗೆ ಹೆಚ್ಚಿಗೆ ಪಾಪಬಂಧವು ಮಾತ್ರ ಆದೀತು ಅದಕ್ಕಾಗಿ ಒದಗಿದ ದುಃಖಕ್ಕೆ ಸ್ವಲ್ಪವೂ ಹೆದರದೆ ಪರಮಶಾಂತಭಾವದಿಂದ ಅದನ್ನು ಸಹನಮಾಡು ನಿನ್ನ ಸುತ್ತಲೂ ದುಷ್ಟ ಜನರ ದೊಡ್ಡ ಸಮೂಹವೇ ಕೂಡಿದೆ ಅವರು ತಮ್ಮ ಸಾಮರ್ಥ್ಯದಿಂದ ನಿನ್ನ ಕ್ರೋಧವೆಂಬ ಬೆಂಕಿಯನ್ನು ಪ್ರಜ್ವಲಿತಗೊಳಿಸಿ, ಪರಮ ಶಾಂತಭಾವವೆಂಬ ಸಂಪತ್ತನ್ನು ಭಸ್ಮಗೊಳಿಸಲು ಯತ್ನಿಸುತ್ತಿದ್ದಾರೆ ಇಂಥ ಪ್ರಸಂಗದಲ್ಲಿ ನೀನು ಎಚ್ಚರಗೊಳ್ಳದೆ ಕ್ಷಮೆಯನ್ನು ಬಿಟ್ಟೆಯೆಂದರೆ ಅವಶ್ಯವಾಗಿ ನಿನ್ನ ಸಾಮ್ಯಭಾವ, ಧರ್ಮ ಮತ್ತು ಕೀರ್ತಿಗಳು ನಾಶಹೊಂದಿಯಾವು "

ಜ್ಞಾನಿ ಪುರುಷರು ಅಸಹ್ಯ ದುಃಖವು ಪ್ರಾಪ್ತವಾದಾಗ ತಮ್ಮ ಪೂರ್ವ ಕರ್ಮವು ನಾಶವಾಗುತ್ತಿದೆಯೆಂದು ತಿಳಿದು ಬಹಳ ಆನಂದದಲ್ಲಿರುವರು ಅಂದಮೇಲೆ ಅವರು ಹೀಗೆ ವಿಚಾರಿಸುತ್ತಾರೆ

**ಅಸಹ್ಯ ದುಃಖವು ಒದಗಿದಾಗ ಏನು ವಿಚಾರಮಾಡಬೇಕು?** "ಒಂದು ವೇಳೆ ಈ ದುಷ್ಟರು ಅನೇಕ ಪ್ರಕಾರದ ಕಟು ಮಾತುಗಳಿಂದಲೂ ಪೀಡೆಯಿಂದಲೂ ನನಗೆ ಕಷ್ಟ ಕೊಡದೆ ಇದ್ದರೆ ನನ್ನ ಬಿಡುಗಡೆಯು ಅಶುಭ ಕರ್ಮಗಳಿಂದ ಆಗುತ್ತಿರಲಿಲ್ಲ ಅವರು ನನ್ನ ಮೇಲೆ ನಿಜವಾಗಿಯೂ ಉಪಕಾರ ಮಾಡಿದ್ದಾರೆ ಅಥವಾ ಅವರ ದುಷ್ಟವಚನಗಳಿಂದಲೇ ನನ್ನ ವಿವೇಕ ಶಕ್ತಿಯು ಜಾಗೃತವಾಗಿ ಜಿನಾಗಮದ ಸಹಾಯದಿಂದ ನಾನು ಅಭ್ಯಾಸ ಮಾಡಿದ ಸಾಮ್ಯಭಾವವು ಒರೆಗೆ ಹತ್ತಿದಂತಾಯಿತು ನನ್ನನ್ನು ಪರೀಕ್ಷಿಸುವದಕ್ಕಾಗಿಯೇ ಈ ಕರ್ಮವೂ ಉದಯ ಹೊಂದಿತು. ಇಂಥ ಪ್ರಸಂಗದಲ್ಲಿ ನಾನು ಸಾಮ್ಯಭಾವವನ್ನು ಬಿಟ್ಟು, ಅವರ ಮೇಲೆ ಸಿಟ್ಟು ಮಾಡಿದ್ದರೆ ಜ್ಞಾನನೇತ್ರವು ಪ್ರಾಪ್ತವಾಗಿಯೂ ಸಹ ಸಾಮ್ಯಭಾವವು ಲಭಿಸಲಿಲ್ಲವೆಂದಂತಾಯಿತು ಕ್ರೋಧವೆಂಬ ಅಗ್ನಿಯಲ್ಲಿ ಸುಟ್ಟು ನಾನು ಭಸ್ಮವಾದೇನು ನಾನು ವೀತರಾಗ ಪ್ರಭುವು ಉಪದೇಶಿಸಿದ ಮಾರ್ಗದಿಂದ ಹೋಗಿ ಸಂಸಾರ ಬಂಧನವನ್ನು ಕಡಿದೊಗೆಯುವ ವಿಷಯದಲ್ಲಿ ಉದ್ಯುಕ್ತನಾದಾಗ ನನ್ನ ಚಿತ್ತವು ಕ್ಷುಬ್ಧವಾದೀತು ಅಂದಮೇಲೆ ಸಂಸಾರ ಪರಿಭ್ರಮಣ ಮಾಡುವಂಥ ಅಜ್ಞಾನಿ, ಮಿಥ್ಯಾದೃಷ್ಟಿಗಳಿಗೆ ನಾನೂ ಸಮಾನನಾದೇನು ಇದರಲ್ಲೇನು ಸಂಶಯವಿದೆ

ಸತ್ಪುರುಷರು ಅಜ್ಞ ಜನರಿಗೆ ಧರ್ಮಮಾರ್ಗದ ಉಪದೇಶ ಮಾಡುತ್ತಾರೆ. ಆದರೆ ಅದರ ಉಪಯೋಗವಾಗುವದಿಲ್ಲ ಹಾಗಾದರೂ ಅವರು ಮನಸ್ಸಿನಲ್ಲಿ ಕೆಡಕು ಎನ್ನಿಸಿಕೊಳ್ಳುವದಿಲ್ಲ, ಹೇಗೆಂದರೆ ಒಬ್ಬ ವೈದ್ಯನು

ಕ್ಕಾಗಿ ಪ್ರಯತ್ನಿಸುತ್ತ ಇದ್ದು, ಅದು ನಷ್ಟವಾಗಲಿಲ್ಲೆಂದು ಆ ವಿಷವನ್ನು ಸ್ವತಃ ತಾನು ತಿನ್ನುವದಿಲ್ಲ.
ಗುಣವಾಗಲಿಲ್ಲೆಂದು ವೈದ್ಯನು ಸ್ವತಃ ತಾನು ಸಾಯಬೇಕೆಂದೇನೂ ಇಲ್ಲ ಇದೇ ಪ್ರಕಾರ ಧರ್ಮದ
ಶವನ್ನು ನಾವು ಯಾರಿಗೆ ಕೊಡುತ್ತೇನೆಯೋ ಅವರ ಪಾತ್ರತೆಯನ್ನು ಮೊದಲು ನೋಡಬೇಕು. ನಮ್ಮ
ಶದಿಂದ ಇಷ್ಟ ಪರಿಣಾಮವು ಆಗದೆ ವಿರುದ್ಧ ಪರಿಣಾಮವೇ ಆಗುವಂತಿದ್ದರೆ ಉಪದೇಶ ಮಾಡಲಿಕ್ಕೆ ಹೋಗ
ು ನಾವು ಹೇಳುವುದರಿಂದ ಒಬ್ಬರ ಮೇಲೆ ಪರಿಣಾಮವು ಆಗುತ್ತಿದ್ದರೆ ನಾವು ಹೇಳಿದ್ದನ್ನು ತಿಳಿದುಕೊಳ್ಳುವ
ಯು ಅವರಲ್ಲಿ ಇದ್ದರೆ ಮಾತ್ರ ನಾವು ಅಂಥವರಿಗೆ ಉಪದೇಶ ಮಾಡಬೇಕು. ಆಗ ಸಹ ಸ್ವಲ್ಪ ಶಬ್ದಗಳಲ್ಲಿ
ಾದ ಮಾತುಗಳಿಂದ ಉಪದೇಶಮಾಡಬೇಕು ಇಷ್ಟರಿಂದ ಅವನು ತನ್ನ ದುಷ್ಟತನವನ್ನು ಬಿಡದಿದ್ದರೆ ನಾವು
ಮೇಲೆ ಕೆರಳಕೂಡದು ಅವನನ್ನು ಉಪೇಕ್ಷಿಸಿ ಬಿಟ್ಟುಬಿಡಬೇಕು

ದುಷ್ಟರು ಕಷ್ಟವನ್ನು ಕೊಟ್ಟಾಗ ಏನು ವಿಚಾರಮಾಡಬೇಕು? ಈ ದುಷ್ಟರು ನಮ್ಮ
ರಿಗೇನೇ ಕೆಟ್ಟ ಮಾತುಗಳನ್ನು ಆಡಿ ನಮಗೆ ಉಪದ್ರವನ್ನು ಕೊಡದೆ ಇದ್ದರೆ ನಾವು ಶಾಂತವಾಗಿದ್ದು ಧರ್ಮಕ್ಕೆ
ವಾದರೂ ಎಲ್ಲಿ ಹೋಗುತ್ತಿದ್ದೆವು? ಉಪದ್ರವ ಕೊಡುವಂಥವನು ನಾನು ಪಾಪಕ್ಕೆ ಹೆದರುವಂತೆ ಮಾಡಿ ಧರ್ಮದ
ಬಂಧವನ್ನು ಹೊಂದಿಸಿ ಕೊಟ್ಟನು ಆ ದೃಷ್ಟಿಯಿಂದ ತೊಂದರೆಯನ್ನು ಕೊಡುವ ಪುರುಷನು ನಮ್ಮ
ದ್ವೇಷಗಳನ್ನು-ವಿಕಾರಗಳನ್ನು-ಬಿಡಿಸುವಂಥವನಾಗಿದ್ದಾನೆ ಅದರಿಂದ ಅವನು ನಮಗೆ ಉಪಕಾರ ಮಾಡು-
ವನೆಂದು ತಿಳಿಯಬೇಕು ಜಗತ್ತಿನಲ್ಲಿ ಇಂಥ ಉಪಕಾರಿ ಜನರು ಅನೇಕರು ಇರುವರು. ಅವರು ಅನ್ಯರ ಸುಖಕ್ಕಾಗಿ
ನ ಮೊದಲಾದವುಗಳನ್ನು ಕೊಡುತ್ತಾರೆ ಪ್ರಸಂಗ ಬಂದಲ್ಲಿ ತಮ್ಮ ಪ್ರಾಣವನ್ನೂ ಕೂಡ ಅರ್ಪಿಸಲಿಕ್ಕೆ
ದ್ಧರಿರುತ್ತಾರೆ ನನಗಂತೂ ಕೇವಲ ದುಷ್ಟರ ದುರ್ವಚನಗಳನ್ನು ಕೇಳುವದಿದೆ ಇದರಲ್ಲಿ ಕಠಿಣವಾದದ್ದೇನಿದೆ?
ಕೆಟ್ಟ ವಚನಗಳನ್ನು ಆಡುವುದರಿಂದ ಅವನಿಗೆ ಸುಖವಾಗುತ್ತಿದ್ದರೆ ಅದರಲ್ಲಿ ನಮಗೇನು ಹಾನಿಯಿದೆ? ದುಃಖ
ಕೊಡುವವರ ವಿಷಯದಲ್ಲಿ ನಾನು ಮನದಲ್ಲಿ ದ್ವೇಷವನ್ನು ಮಾಡದಿದ್ದರೇನೇ ನನ್ನ ಆತ್ಮ ಹಿತವಾಗುವುದು

ಹಾಗೆಯೇ ಇದರಿಂದ, ನಾನು ಸರ್ವಸಂಗ ಪರಿತ್ಯಾಗಮಾಡಿ ಮುನಿವ್ರತದಲ್ಲಿ ಕ್ಷಮೆಯನ್ನೂ ಅಂಗೀ-
ಕರಿಸಿದ್ದೇನೆ, ಎಂದ ಮೇಲೆ ಕಟುವಚನಗಳಿಂದ ನನ್ನ ಕ್ಷಮಾಭಾವವು ತಾಳೀತೊ ಇಲ್ಲವೋ ಎಂಬುದು ಕಂಡು
ಬಂದೀತು ಹಾಗೆಯೇ ನನ್ನ ಸಾಮ್ಯಭಾವವನ್ನು ನಾಶಮಾಡುವಂಥ ಅನೇಕ ಪ್ರಸಂಗಗಳನ್ನು ಅನೇಕರು ತಂದು
ಒಡ್ಡಿ, ತಮ್ಮ ಶಕ್ತಿಯಿದ್ದಷ್ಟು ಪ್ರಯತ್ನ ಮಾಡಿದರೂ ಸಹ ನಾನು ಒಂದು ಅಣುವಿನಷ್ಟು ಸಹ ಶಾಂತಭಾವವನ್ನು
ಬಿಡಲಿಕ್ಕಿಲ್ಲ ಬಹು ಕಾಲದ ವರೆಗೆ ಶಾಸ್ತ್ರಾಭ್ಯಾಸವನ್ನು ಮಾಡಿ ಸಾಮ್ಯಭಾವದ ಮಹತ್ವವನ್ನು ತಿಳಿದುಕೊಂಡ
ಮೇಲೆ ಪ್ರಸಂಗವು ಒದಗಿದಾಗ ಆ ಸಾಮ್ಯಭಾವವು ತಾಳದಿದ್ದರೆ ಆ ಶಾಸ್ತ್ರಾಧ್ಯಯನದ ಫಲವಾದರೂ ಏನಿದೆ? ಇಲ್ಲಿಯ
ವರೆಗೆ ಪ್ರಸಂಗಬಂದಾಗ ಹೀಗೆ ಧೈರ್ಯವನ್ನು ಧಾರಣಮಾಡುವೆ, ಈ ರೀತಿಯಿಂದ ನಡೆಯುವೆ-ಎಂದು ನಿಶ್ಚಯಮಾಡಿ
ಈಗ ಪ್ರಸಂಗ ಒದಗಿದಾಗ ಅದೆಲ್ಲ ನಷ್ಟವಾದರೆ ಆ ಪೊಳ್ಳು ಧೈರ್ಯದ ಉಪಯೋಗವೇನು? ದುಷ್ಟರು ತಮ್ಮ
ಕೃತಿಯಿಂದ ಇಲ್ಲವೆ ಶಬ್ದಗಳಿಂದ ನಮಗೆ ದುಃಖವನ್ನು ಕೊಡುತ್ತಿದ್ದಾರೆ ಆಗ ನಾವು ಒಂದು ಅಣುವಿನಷ್ಟು ಕೂಡ
ಮನಸ್ಸಿನಲ್ಲಿ ವಿಕಾರ ಉಂಟಾಗಗೊಡದೆ ದೃಢ ಭಾವನೆಯಿಂದ ಆ ವಿಪತ್ತಿಯಲ್ಲಿ ಉಪದ್ರವನ್ನು ಸಹಿಸಿದರೆ ಮಾತ್ರ ಅದು
ನಿಜವಾದ ಧೈರ್ಯವು! ಇಂಥ ಧೈರ್ಯವನ್ನೇ ಲೋಕದಲ್ಲಿ ಸಜ್ಜನರು ಪ್ರಶಂಸಿಸುವರು. ಉಪದ್ರವ, ಸಂಕಟ,
ದುಃಖಗಳು ಎಲ್ಲಿಯ ವರೆಗೆ ಪ್ರತ್ಯಕ್ಷ ಬಂದು ಪ್ರಾಪ್ತವಾಗಿಲ್ಲವೋ ಅಲ್ಲಿಯ ವರೆಗೇನೇ ಹಲವು ಜನರು ಸತ್ಯ, ಶೌಚ,
ಕ್ಷಮಾ, ದಯಾ ಮೊದಲಾದ ಸದ್ಗುಣಗಳ ಧಾರಕರೆಂದು ಹೇಳಿಕೊಳ್ಳುತ್ತಾರೆ ಆದರೆ ಪ್ರತ್ಯಕ್ಷ ಪ್ರಸಂಗವು ಒದಗಿದಾಗ
ಈ ಎಲ್ಲ ಗುಣಗಳೂ ಇಲ್ಲದಂತೆ ಆಗುತ್ತವೆ ಅಲ್ಲದೆ ಅನೇಕ ಅವಗುಣಗಳೇ ಅವರಲ್ಲಿ ತುಂಬಿದ್ದು ಕಂಡುಬರುತ್ತವೆ.
ನಿಜವಾದ ಸಜ್ಜನರು ಇಂಥ ಢೋಲನ್ನು ಎಂದೂ ತೋರಿಸುವದಿಲ್ಲ ದುರ್ಜನರು ಎಷ್ಟು ಉಪಕಾರ ಮಾಡಿದರೂ
ಕೊನೆಗೆ ಸಜ್ಜನರು ಸಜ್ಜನರಾಗಿಯೇ ತೋರುವರು ದುಷ್ಟರ ಅಪಕಾರದ ವಿಷಯದಲ್ಲಿ ಸಜ್ಜನರು ತಮ್ಮ ಬಾಯಿಂದ
ಒಂದು ಅಕ್ಷರವನ್ನೂ ಸಹ ಉಚ್ಚರಿಸುವದಿಲ್ಲ ಅದು ಅವರ ನಿಶ್ಚಯ ಭಾವವಾಗಿರುತ್ತದೆ ಇಂಥ ನಿಶ್ಚಯವುಳ್ಳವರೇ
ನಿಜವಾದ ಸಾಧುಗಳು, ಸಜ್ಜನರು ಇಂಥ ಸಜ್ಜನರ ಕಾರ್ಯ ಸಿದ್ಧಿಯು ನಿಶ್ಚಿತವಾಗಿರುತ್ತದೆ ಅನ್ಯರಿಂದ
ಉಪಸರ್ಗವಾಗಲಿ, ಇಲ್ಲವೆ ಅದು ತನ್ನಿಂದ ತಾನೇ ಒದಗಲಿ ಅದರಿಂದ ಅವರ ಅಂತಃಕರಣವು ಕಲುಷಿತವಾಗುವದಿಲ್ಲ.
ಇಂಥವರಿಗೇನೇ ಅವಿನಾಶಿಯಾದ ಮುಕ್ತಿಯು ಒದಗುತ್ತದೆ. ಅಜ್ಞಾನಿ ಜನರು ಪ್ರಾಪ್ತ ಮಾಡಿದ ಪೂರ್ವ ಕರ್ಮದ

ಬಗ್ಗೆ ತಮ್ಮ ಮೇಲೆ ತಾವು ಕೋಪಿಸಿಕೊಳ್ಳದೆ ಕರ್ಮಫಲವನ್ನು ಒದಗಿಸಲು ಸಿದ್ಧವಾದ ಬಾಹ್ಯ ನಿಮಿತ್ತಗಳ ಮೇಲೆಯೇ ಕೆರಳುತ್ತಾರೆ ಈ ಸಂಸಾರವು ಅನಂತ ದುಃಖಗಳಿಂದ ತುಂಬಿದೆ ಇದರಲ್ಲಿ ಭ್ರಮಣ ಮಾಡುವವರಿಗೆ ಯಾವ ಯಾವ ದುಃಖಗಳನ್ನು ಭೋಗಿಸಲಿಕ್ಕೆ ಹತ್ತಲಿಕ್ಕಿಲ್ಲ? ಸಂಸಾರದಲ್ಲಿಯಂತೂ ಯಾವಾಗಲೂ ದುಃಖವಿದ್ದುದೆ ಸಂಸಾರದಲ್ಲಿ ಸಮ್ಯಗ್‌ಜ್ಞಾನರಹಿತ, ಕಾರ್ಯಾಕಾರ್ಯ ವಿಚಾರವಿಲ್ಲದವರು, ಜಿನ ಸಿದ್ಧಾಂತದ ವಿಷಯದಲ್ಲಿ ದ್ವೇಷವನ್ನು ತಾಳುವವರು, ಅತ್ಯಂತ ನಿರ್ದಯಿಗಳು, ಪರಲೋಕದ ಹಿತವನ್ನು ಇಚ್ಛಿಸದಂಥವರು, ಕ್ರೋಧವುಳ್ಳವರು, ದುಷ್ಟರು, ವಿಷಯ ವಾಸನೆಯು ಹೆಚ್ಚಾಗಿರುವಂಥವರು, ಹಟಮಾರಿಗಳು, ದುರಾಗ್ರಹಿಗಳು, ಮಹಾ ಅಭಿಮಾನಿಗಳು, ಕೃತಘ್ನರು ಇಂದ ಜೀವಗಳು ಹುಟ್ಟದೆ ಇದ್ದರೆ ನಿರ್ಮಲ ಬುದ್ಧಿಯನ್ನು ಧಾರಣ ಮಾಡುವಂಥ ಸಜ್ಜನರಿಗೆ ವ್ರತ, ತಪಶ್ಚರಣ ಕ್ರಿಯೆಗಳನ್ನು ಮಾಡಿ ಮೋಕ್ಷ ಸಂಪಾದಿಸುವ.ಉದ್ಯೋಗವಾದರೂ ಏಕೆ ಬೇಕಾಗುತ್ತಿತ್ತು? ಅದರ ಪ್ರಯೋಜನವಾದರೂ ಏನು? ಹೀನಗುಣಿಗಳನ್ನು ನೋಡಿಯೇ ಸತ್ಪುರುಷರಿಗೆ ಉದ್ವೇಗವು ಉತ್ಪನ್ನವಾಗುತ್ತದೆ. ಅವರು ವೀತರಾಗಿಗಳು ಆಗುವುದರ ಕಡೆಗೆ ತಮ್ಮ ಮನಸ್ಸನ್ನು ಒಲಿಸುತ್ತಾರೆ. ನನಗೆ ಮೊದಲು ಮಾಡಿದ ಪುಣ್ಯದಿಂದ ಪರಮಾತ್ಮ ಸ್ವರೂಪದ ಜ್ಞಾನವಾಗಿದೆ, ಸರ್ವಜ್ಞರು ಉಪದೇಶಿಸಿದ ಪದಾರ್ಥಗಳ ಸ್ವರೂಪದ ಯಥಾರ್ಥ ತಿಳುವಳಿಕೆಯನ್ನು ಹೊಂದುವ ಶಕ್ತಿಯು ನನ್ನಲ್ಲಿ ಉತ್ಪನ್ನವಾಗಿದೆ. ಅಂತಲೇ ನನಗೆ ಸಂಸಾರ ಪರಿಭ್ರಮಣದ ಬಗ್ಗೆ ಭೀತಿಯು ಹುಟ್ಟಿದೆ ಅದರಿಂದ ವೀತರಾಗಧರ್ಮವನ್ನು ಧಾರಣಮಾಡಿ, ಆ ಪ್ರಕಾರ ಆಚರಿಸುತ್ತಲಿದ್ದೇನೆ ಇಂಥ ಸ್ಥಿತಿಯಲ್ಲಿ ನಾನು ಕ್ರೋಧದ ವಶನಾದಲ್ಲಿ ನನ್ನ ಜ್ಞಾನ, ಚಾರಿತ್ರಗಳೆಲ್ಲವೂ ನಿಷ್ಫಲವೆಂದು ಹೇಳಬೇಕಾದೀತು ಈ ವಿಷಯದಲ್ಲಿ ಶ್ರೀ ಪದ್ಮನಂದಿ ಮುನಿಗಳು ಹೀಗೆ ಹೇಳಿದ್ದಾರೆ-"ಮೂರ್ಖರು ಕೊಟ್ಟ ಉಪದ್ರವನ್ನೂ, ಮಾಡಿದ ನಿಂದೆಯನ್ನೂ ಬೈಗಳು, ನಿಂದೆ ಮೊದಲಾದ ಅಪಮಾನಗಳನ್ನೂ ಲೆಕ್ಕಿಸದೆ ಯಾವನು ತನ್ನ ಮನಸ್ಸನ್ನು ಶಾಂತವಾಗಿಟ್ಟುಕೊಳ್ಳುವನೋ, ಸ್ವಲ್ಪವೂ ಕೂಡ ವಿಕಾರವಾಗದಂತೆ ಇರುವನೋ ಅಂಥ ಪುರುಷನಿಗೇನೇ ಕ್ಷಮಾಗುಣವು ಸಂಭವಿಸುತ್ತದೆ ಈ ಉತ್ತಮ ಕ್ಷಮಾಗುಣವು ಮೋಕ್ಷ ಮಾರ್ಗದ ಕಡೆಗೆ ಪ್ರವೃತ್ತರಾದವರಿಗೆ ಉತ್ತಮ ಪದಗಳನ್ನು ಒದಗಿಸುತ್ತ ಹೋಗುತ್ತದೆ"

ಸತ್ಪುರುಷರ ಕ್ಷಮೆಯ ಚಿಂತನದ ರೀತಿ—ವಿವೇಕಿ ಪುರುಷರು ಹೀಗೆ ಚಿಂತಿಸುತ್ತಿರುತ್ತಾರೆ- "ನಾವಂತೂ ರಾಗದ್ವೇಷಾದಿ ಮಲ ರಹಿತ ಉಜ್ವಲ ಅಂತಃಕರಣದವರಾಗಿದ್ದೇವೆ ಉಳಿದ ಜನರು ನಮಗೆ ಸುಳ್ಳೆನಲಿ, ಇಲ್ಲವೆ ನಿಜವೆನ್ನಲಿ. ಅದರಿಂದ ನಮಗೆ ಪ್ರಯೋಜನವಾದರೂ ಏನು? ವೀತರಾಗ ಧರ್ಮವನ್ನು ಧಾರಣಮಾಡಿದವರು ತಮ್ಮ ಆತ್ಮನ ವಿಶಿಷ್ಟ ಶುದ್ಧಿಯ ಕಡೆಗೇನೇ ಕೇವಲ ದೃಷ್ಟಿಯನ್ನು ಇಟ್ಟು, ಜಾಗರೂಕತೆಯಿಂದ ಇರಲಿಕ್ಕೆಬೇಕು. ನಮ್ಮ ವಿಚಾರಗಳು ಕೀಳವಾಗಿದ್ದು, ಇತರರು ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವದಕ್ಕಾಗಿ ನಮ್ಮನ್ನು ಬಹಳ ಒಳ್ಳೆಯವರೆಂದು ಸ್ತುತಿಸಿದರೆ ನಾವು ಒಳ್ಳೆಯವರಾಗುವದಿಲ್ಲ ಇದಕ್ಕೆ ವಿಪರೀತವಾಗಿ ನಮ್ಮ ವಿಚಾರಗಳು ಒಳ್ಳೆಯವಾಗಿದ್ದು, ದ್ವೇಷಬುದ್ಧಿಯಿಂದ ಜನರು ನಮಗೆ ಕೆಟ್ಟವರೆಂದು ಎಂದರೆ ಅಷ್ಟರಿಂದ ನಾವು ಕೆಟ್ಟ ಜನರೆಂದು ನಿಶ್ಚಯವಾಗುತ್ತದೆಂದೇನೂ ಇಲ್ಲ ನಮ್ಮ ವಿಚಾರಗಳು ಹೇಗಿರುತ್ತವೆಯೋ ಹಾಗೆಯೇ ಫಲಗಳು ದೊರೆಯುತ್ತವೆ ಯಾರಾದರೂ ಕನ್ನಡಿಯ ತುಂಡಿಗೆ ರತ್ನವೆಂದೂ ರತ್ನಕ್ಕೆ ಕನ್ನಡಿಯ ತುಣುಕೆಂದೂ ಅಂದರೆ ಅದು ಅವರು ಅಂದಂತೆ ಆಗಲಾರದು ನಿಜವಾದ ರತ್ನದ ಬೆಲೆಯೇ ಯಾವಾಗಲೂ ಆಗುತ್ತದೆ. ಒಡಕು ಕಾಜಿಗೆ ಯಾರು ಮಹತ್ವ ಕೊಡುವರು? ಅಂತಲೇ ಇತರರ ಹೇಳುವಿಕೆಯ ಮೇಲೆ ಸತ್ಯಾಸತ್ಯಗಳೂ ಗುಣಾವಗುಣಗಳೂ ಅವಲಂಬಿಸಿಲ್ಲ. ಇದನ್ನು ಸ್ವತಃ ವಿಚಾರ ಮಾಡಿದರಾಯಿತು ದುಷ್ಟರ ಸ್ವಭಾವವು ಇನ್ನೊಬ್ಬರ ದೋಷಗಳನ್ನು ಪ್ರಕಟಗೊಳಿಸುವುದೇ ಆಗಿದೆ ಅವರಿಗೆ ಹಾಗೆ ಮಾಡದ ಹೊರತಾಗಿ ಎಂದೂ ಸಮಾಧಾನವೆನಿಸುವದಿಲ್ಲ ಅದಕ್ಕಾಗಿ ದುಷ್ಟ ಜನರು ನನ್ನಲ್ಲಿ ಇಲ್ಲದ ದೋಷಗಳನ್ನೂ ಸಹ ಎತ್ತಿ ಪ್ರತಿಯೊಂದು ಮನೆಗೂ ಹೋಗಿ ಹೇಳಲಿ, ಮತ್ತು ಸ್ವತಃ ಸುಖಿಗಳಾಗಲಿ. ಯಾರಿಗೆ ದ್ರವ್ಯ ಬೇಕಾಗಿದೆಯೋ ಅವರು ನನ್ನ ಸರ್ವಸ್ವವನ್ನು ಹರಣಮಾಡಿ ಸಮಾಧಾನವನ್ನು ಹೊಂದಲಿ. ನನ್ನ ಪ್ರಾಣತೆಗೆಯುವ ಇಚ್ಛೆಯು ನನ್ನ ಶತ್ರುವಿಗೆ ಇದ್ದರೆ ಕೂಡಲೆ ಅವನು ಅದನ್ನು ಪೂರೈಸಿಕೊಳ್ಳಲಿ ಯಾರಿಗೆ ನನ್ನ ಸ್ಥಳ, ಹೊಲ, ಮನೆ ಮೊದಲಾದವುಗಳು ಬೇಕಾಗಿವೆಯೋ ಅವರು ಕೂಡಲೆ ಅವುಗಳನ್ನು ಗ್ರಹಣಮಾಡಲಿ. ನಾನೀಗ ರಾಗ-ದ್ವೇಷಗಳನ್ನು ಬಿಟ್ಟು, ಮಾಧ್ಯಸ್ಥ-ತಾಟಸ್ಥ್ಯ-ಭಾವವನ್ನು ಧರಿಸಿರುವೆ ಜಗತ್ತಿನೊಳಗಿನ ಎಲ್ಲ ಪ್ರಾಣಿಗಳೂ ನನ್ನ ನಿಮಿತ್ತದಿಂದ ಸುಖಿಯಾಗಲಿ ನನ್ನ ಸಲುವಾಗಿ ಯಾವ ಪ್ರಾಣಿಗೂ ಯಾವ ಪ್ರಕಾರದ ದುಃಖವೂ ಆಗದಿರಲಿ ನನ್ನ ಪ್ರಾಣವು ನನ್ನ ಆಯು ಕರ್ಮದ ಸ್ವಾಧೀನವಿದೆಯೆಂಬುದು ನನಗೆ ನಿಶ್ಚಿತವಾಗಿಯೂ ಗೊತ್ತಿದೆ. ದ್ರವ್ಯ ಹಾಗೂ

ಹೊಲ-ಮನೆಗಳ ಲಾಭಾಲಾಭವು ಪಾಪ-ಪುಣ್ಯಗಳ ಸ್ವಾಧೀನವಿದೆ ನಾನೀಗ ಯಾವ ಜೀವದೊಡನೆಯು ವೈರ, ವಿರೋಧಗಳನ್ನು ಮಾಡದೆ ಎಲ್ಲರ ಬಗ್ಗೆಯೂ ಕ್ಷಮೆಯನ್ನು ಧಾರಣ ಮಾಡಿರುವೆ ಹೀಗಿದ್ದೂ ದುಷ್ಟ ಜನರು ತಮ್ಮ ಹಿತಾಹಿತದ ವಿಚಾರವನ್ನು ಮಾಡದೆ ದುರ್ವಚನಗಳೇ ಮೊದಲಾದ ಉಪದ್ರವಗಳಿಂದ ನನಗೆ ದುಃಖಕೊಡ-ಬೇಕೆಂದು ಯತ್ನಿಸುತ್ತಿದ್ದಾರೆ ಅವರ ಉಪದ್ರವಗಳಿಂದ ನಾನು ದುಃಖಿಯಾಗಿ ಕ್ಷಮೆಯನ್ನು ಬಿಡಲಿಕ್ಕೆ ಸಿದ್ಧನಾಗಬೇಕು ಎಂದರೆ ತ್ರೈಲೋಕ್ಯ ಚೂಡಾಮಣಿ ಭಗವಾನ್ ವೀತರಾಗ ಪ್ರಭುವಿನ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳದಂತೆಯೇ ಆಯಿತು ಇಲ್ಲವೆ ಇಲ್ಲಿಯ ವರೆಗೆ ನಾನು ವೀತರಾಗ ಧರ್ಮದ ಉಪಾಸನೆಯನ್ನು ಮಾಡಿಯೇ ಇಲ್ಲ ಅಥವಾ ಮೂರ್ಖಜನರ ಸ್ವಭಾವವನ್ನು ತಿಳಿದಿಲ್ಲ ಎಂದ ಹಾಗಾಯಿತು ಮೂಢ ಜನರ ಜ್ಞಾನವು ಯಥಾರ್ಥವಾಗಿರುವದಿಲ್ಲ. ಅವರ ಸಂಪೂರ್ಣ ವೃತ್ತಿಯು ಮೋಹ ಕರ್ಮದ ಸ್ವಾಧೀನವಾಗಿರುತ್ತದೆ. ಅಂದಮೇಲೆ ನಾನು ಅಂಥ ಜನರ ವಿಷಯದಲ್ಲಿ ಕ್ಷಮೆಯನ್ನೇ ಧಾರಣ ಮಾಡಲಿಕ್ಕೆಬೇಕು. ಅದೇ ಯೋಗ್ಯವಾಗಿದೆ. ಈ ಕ್ಷಮೆಯು ಇಹಲೋಕದಲ್ಲಿ ಪರಮ ಶರಣಸ್ಥಾನವಾಗಿದೆ ತಾಯಿಯಂತೆ ನಮ್ಮನ್ನು ರಕ್ಷಣ ಮಾಡುವಂಥದಾಗಿದೆ. ಹೆಚ್ಚಿಗೇನು? ಕ್ಷಮೆಯೇ ಜಿನಧರ್ಮದ ಮೂಲವಾಗಿದೆ. ಇದರ ಆಧಾರದಿಂದಲೇ ಉಳಿದ ಎಲ್ಲ ಗುಣಗಳು ಪ್ರಾಪ್ತವಾಗುತ್ತವೆ ಈ ಕ್ಷಮೆಯಿಂದ ಕರ್ಮದ ನಿರ್ಜರವು ಆಗುತ್ತದೆ ಇದೇ ಸಾವಿರಾರು ಸಂಕಟಗಳಿಂದ ಪ್ರಾಣಿಗಳನ್ನು ರಕ್ಷಣ ಮಾಡಲಿಕ್ಕೆ ಸಮರ್ಥವಾಗಿದೆ ಅಂತಲೇ ಧನವನ್ನು ಕೊಟ್ಟು, ಪ್ರಸಂಗ ಬಂದರೆ ಪ್ರಾಣವನ್ನೂ ಸಹ ಕೊಟ್ಟು, ಕ್ಷಮೆಯನ್ನು ರಕ್ಷಣ ಮಾಡಿಕೊಳ್ಳುವುದು ಯೋಗ್ಯವಾಗಿದೆ ಇದನ್ನು ಬಿಡುವುದು ಕರ್ತವ್ಯವೆನಿಸದು ಯಾರಾದರೂ ದುಷ್ಟ-ತನದಿಂದ ನಮ್ಮ ಪ್ರಾಣವನ್ನು ತೆಗೆಯ ಹತ್ತಿದರೂ ಸಹ ಅವರನ್ನುದ್ದೇಶಿಸಿ ಕೆಟ್ಟ ವಚನಗಳನ್ನು ನಾವು ಆಡಕೂಡದು. ಆ ಕಾಲಕ್ಕೆ ಅಂತರಿಕ ವೈರವನ್ನು ಬಿಟ್ಟು ಆ ದುಷ್ಟನಿಗೆ ಹೀಗೆನ್ನುವುದು—"ಮಹಾರಾಜ! ನೀವು ನಮ್ಮನ್ನು ನಿಜವಾಗಿಯೂ ರಕ್ಷಣ ಮಾಡುವಂಥವರಾಗಿರುವಿರಿ ನಮ್ಮ ಮರಣದ ವೇಳೆಯೇ ಬಂದಿದೆ. ಅದಕ್ಕೆ ನೀವೇನು ಮಾಡೀರಿ. ನಮ್ಮ ಪಾಪ-ಕರ್ಮದ ಉದಯವಾಯಿತೆಂದೇ ಈ ಸ್ಥಿತಿಯು ಪ್ರಾಪ್ತವಾಗಿದೆ. ಆದರೂ ಕೂಡ ತಮ್ಮಂಥ ಮಹಂತ ಪುರುಷನ ಹಸ್ತದಿಂದ ನಮಗೆ ಮರಣವು ಒದಗುತ್ತಿದೆ ಇದರಲ್ಲಿ ನಮ್ಮದೇ ವಿಶೇಷ ಭಾಗ್ಯೋದಯವೆನ್ನಬೇಕು ಇನ್ನೊಂದು ಸಂಗತಿಯೆಂದರೆ ನಮ್ಮಂಥ ಅಪರಾಧಿಗಳಿಗೆ ನೀವು ಶಿಕ್ಷೆಯನ್ನು ಮಾಡದಿದ್ದರೆ ಈ ಲೋಕದೊಳಗಿನ ಸನ್ಮಾರ್ಗವೇ ನಷ್ಟವಾಗಿ ಹೋದೀತು ನಾವು ಇಹಲೋಕದಲ್ಲಿ ಮಾಡಿದ ಅಪರಾಧಕ್ಕಾಗಿ ಅದರ ಫಲವನ್ನು ನರಕ ತಿರ್ಯಂಚಗತಿಗಳಲ್ಲಿ ಹೋಗಿ ಮುಂದೆ ಭೋಗಿಸಬೇಕಾಗುತ್ತಿತ್ತು. ಅದನ್ನು ಇಲ್ಲಿಯೇ ಭೋಗಿಸುವಂತೆ ಮಾಡಿ ಋಣಮುಕ್ತಗೊಳಿಸಿದಿರಿ! ಇದು ಎಂಥ ದೊಡ್ಡ ಉಪಕಾರವು! ನಾವು ನಿಮ್ಮೊಡನಿರುವ ವೈರವನ್ನು ಮನ-ವಚನ-ಕಾಯಗಳಿಂದ ತೊರೆದು ಎಲ್ಲ ಅಪರಾಧಗಳ ಬಗ್ಗೆ ಕ್ಷಮೆಯನ್ನು ಬೇಡುವೆ ನೀವೂ ನಮಗೆ ಅಪರಾಧದ ಬಗ್ಗೆ ಶಿಕ್ಷೆಯನ್ನು ಕೊಟ್ಟು ಕ್ಷಮಿಸಿರಿ ನಮಗೆ ಅನೇಕ ಪ್ರಕಾರದ ಬೇನೆಗಳು ಬಂದು, ಅವುಗಳಿಂದ ಉತ್ಪನ್ನವಾಗುವ ಅನೇಕ ವೇದನೆಗಳಿಂದ ಕಷ್ಟ ಭೋಗಿಸಿ, ಮರಣ ಹೊಂದಬೇಕಾಗುತ್ತಿತ್ತು. ಆದರೆ ಯೋಗ್ಯ ಕಾಲದಲ್ಲಿ ಧರ್ಮಕ್ಕೆ ಶರಣು ಹೋಗುವ ಬುದ್ಧಿಯು ಉತ್ಪನ್ನವಾಗಿ, ಇಲ್ಲಿಯೇ ಕರ್ಮದ ಋಣವು ತೀರಿ, ತಮ್ಮಂಥ ಸತ್ಪುರುಷರ ಕೈಯಿಂದ ಮರಣವು ಒದಗಿತು ಇದು ಬಹಳ ಸಮಾಧಾನದ ಸಂಗತಿಯಾಗಿದೆ. ನಾನೀಗ ಸುಖದಿಂದ ಸಾಯುವೆ." ನಾವು ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ವಿಕಾರವಶರಾಗದಿದ್ದರೆ ನಾವು ಆಚರಿಸುವ ಜೈನಧರ್ಮದ ಪ್ರಭಾವವು ದುಷ್ಟರ ಅಂತಃಕರಣಕ್ಕೆ ತಗಲದೆ ಇರಲಾರದು ಮರಣದಂಥ ಪ್ರಸಂಗ ಒದಗಿದರೂ ಸಹ ಸತ್ಪುರುಷರು ಹೇಗೆ ಕ್ಷಮಾಶೀಲರಾಗಿರುತ್ತಾರೆ, ಪ್ರಸಂಗ ಬಂದಾಗ ಕ್ಷಮೆಯನ್ನು ಅವರು ಹೇಗೆ ಕಾಪಾಡಿಕೊಳ್ಳುತ್ತಾರೆಂಬುದು ಲೋಕಕ್ಕೆ ಗೊತ್ತಾಗುತ್ತದೆ. ಇರಲಿ ಈ ಪ್ರಕಾರ ಉತ್ತಮ ಕ್ಷಮಾಗುಣದ ವರ್ಣನೆಯನ್ನು ಮಾಡಲಾಗಿದೆ

## ಮಾರ್ದವ

ಅಭಿಮಾನವನ್ನು ಬಿಡಿರಿ. ಮಾನ ಕಷಾಯದ ಉದಯದಿಂದ ಆತ್ಮನಲ್ಲಿ ಉತ್ಪನ್ನವಾಗುವ ಕಠೋರ ವಿಚಾರಗಳು ನಷ್ಟವಾಗಬೇಕು. ಅಂದರೆ ಮನಸ್ಸಿನಲ್ಲಿ ಕೋಮಲತನವು ಉತ್ಪನ್ನವಾಗುವದು. ಇದು ಆತ್ಮನ ಮಾರ್ದವ ಎಂಬ ಹೆಸರಿನ ಗುಣವಾಗಿದೆ ವಿನಯ ಮತ್ತು ಗರ್ವ ಇವುಗಳಲ್ಲಿಯ ಭೇದವು ತಿಳಿದು ಗರ್ವದ ತ್ಯಾಗ ಮಾಡುವದಕ್ಕೂ ಮಾರ್ದವ ಗುಣವೆನ್ನುವರು. ಗರ್ವವು ಸಂಸಾರದ ಬೆಳವಣಿಗೆಗೂ ಮಾರ್ದವ ಗುಣವು ಸಂಸಾರದ

ನಾಶಕ್ಕೂ ಕಾರಣವಾಗಿವೆ ಮಾರ್ದವ ಗುಣವು ದಯಾಧರ್ಮದ ಮೂಲವಾಗಿದೆ ಅಭಿಮಾನಿ ಪುರುಷನ ಅಂತಃಕರಣದಲ್ಲಿ ದಯಾಧರ್ಮವು ಎಳ್ಳಷ್ಟೂ ಕೂಡ ಇರುವದಿಲ್ಲ ಅವನ ವಿಚಾರಗಳು ಅತ್ಯಂತ ಕಠೋರವಾಗಿರುತ್ತವೆ. ಅವನು ನಿರ್ದಯಿಯಾಗಿರುತ್ತಾನೆ ಅಂತಲೇ ಮಾರ್ದವ ಗುಣವನ್ನೂ ಧಾರಣ ಮಾಡುವುದರಿಂದ ಎಲ್ಲರ ಹಿತವೂ ಆಗುತ್ತದೆ ಹೀಗೆ ಆಚಾರ್ಯರು ಹೇಳಿದ್ದಾರೆ ಇದು ಯಥಾರ್ಥವೂ ಆಗಿದೆ ಯಾರು ಮಾರ್ದವ ಗುಣವನ್ನ ಹೊಂದಿರುವರೋ ಅವರು ವ್ರತಪಾಲನ, ಸಂಯಮ-ಧಾರಣ ಮತ್ತು ಜ್ಞಾನಾಭ್ಯಾಸಗಳಲ್ಲಿ ಸಫಲತೆಯನ್ನು ಹೊಂದುತ್ತಾರೆ ಅಭಿಮಾನಿ ಪುರುಷರ ಈ ಕ್ರಿಯೆಗಳು ಸಫಲವಾಗುವದಿಲ್ಲ ಮಾರ್ದವ ಗುಣವನ್ನು ಹೊಂದುವುದರಿಂದ ಕಷಾಯಗಳು ನಾಶ ಹೊಂದುತ್ತವೆ ಐದು ಇಂದ್ರಿಯಗಳೂ, ಮನಸ್ಸೂ ಸ್ವಾಧೀನದಲ್ಲಿ ಉಳಿಯುತ್ತವೆ ಮಾರ್ದವ ಧರ್ಮದ ಪ್ರಸಾದದಿಂದ ಚಿತ್ತವೆಂಬ ಭೂಮಿಯಲ್ಲಿ ಕರುಣೆಯೆಂಬ ಬಳ್ಳಿಯು ಉತ್ಪನ್ನವಾಗುತ್ತದೆ ಈ ಗುಣದಿಂದಲೇ ಭಗವಾನ್ ಜಿನೇಶ್ವರರ ವಿಷಯದಲ್ಲಿಯೂ ಜಿನಾಗಮದ ವಿಷಯದಲ್ಲಿಯೂ ನಿರ್ಮಲ ಭಕ್ತಿಯು ಅಂತಃಕರಣದಲ್ಲಿ ಉದಯ ಹೊಂದುತ್ತದೆ ಗರ್ವಿಷ್ಠ ಪುರುಷನಿಗೆ ಜಿನೇಂದ್ರನ ಗುಣಗಳ ವಿಷಯದಲ್ಲಿ ಅನುರಾಗವು ಇರುವದಿಲ್ಲ ಮಾರ್ದವ ಗುಣದಿಂದ ಕುಮತಿಜ್ಞಾನವು ನಾಶವಾಗುತ್ತದೆ. ಅದರ ಪ್ರಸಾರವು ಹೆಚ್ಚಾಗುವದಿಲ್ಲ ಅಭಿಮಾನಿ ಪುರುಷರಿಗೆ ಅನೇಕ ಪ್ರಕಾರದ ಕುಬುದ್ಧಿಗಳು ಉತ್ಪನ್ನವಾಗುತ್ತವೆ. ಮಾರ್ದವ ಗುಣದಿಂದ ಮನುಷ್ಯನು ಅತ್ಯಂತ ವಿನಯಶೀಲನಾಗುತ್ತಾನೆ ಇದರಿಂದ ಬಹುದಿನಗಳಿಂದ ವೈರಿಯಾದವನೂ ಸಹ ತನ್ನ ವೈರತ್ವವನ್ನು ಬಿಡಲು ಸಿದ್ಧನಾಗುತ್ತಾನೆ ಅಂತಃಕರಣದೊಳಗಿನ ಗರ್ವವು ಇಲ್ಲದಂತಾದರೆ ಪರಿಣಾಮವು ನಿರ್ಮಲವಾಗುತ್ತದೆ. ಇದರಿಂದ ಇಹ-ಪರಲೋಕಗಳ ಸಿದ್ಧಿಯು ಆಗುತ್ತದೆ ಅತ್ಯಂತ ನಮ್ರ ಹಾಗೂ ವಿನಯಿ ಪುರುಷರ ಕೀರ್ತಿಯೇ ಲೋಕದಲ್ಲಿ ಆಗುತ್ತದೆ ಪರಲೋಕದಲ್ಲಿ ಅವರಿಗೆ ದೇವ ಗತಿಯು ಪ್ರಾಪ್ತವಾಗುತ್ತದೆ ಕೋಮಲ ಪರಿಣಾಮದಿಂದಲೇ ಅಂತರಂಗ ಹಾಗೂ ಬಹಿರಂಗ ತಪಗಳಿಗೆ ಶೋಭೆಯು ಉಂಟಾಗುತ್ತದೆ ಅಭಿಮಾನಿ ಪುರುಷರ ತಪವನ್ನು ಜಗತ್ತಿನಲ್ಲಿ ನಿಂದ್ಯವೆಂದು ತಿಳಿಯಲಾಗುತ್ತದೆ ಕೋಮಲ ಪರಿಣಾಮವುಳ್ಳ ಪುರುಷರಿಗೇನೇ ಲೋಕದ ಅಂತಃಕರಣವನ್ನು ರಂಜಿಸಲಿಕ್ಕೆ ಬರುತ್ತದೆ ಈ ಗುಣದಿಂದ ಜಿನಶಾಸನದ ಯಥಾರ್ಥಜ್ಞಾನವಾಗುತ್ತದೆ ಮಾರ್ದವ ಗುಣವಿದ್ದರೇನೇ ಸ್ವಪರ ಸ್ವರೂಪದ ಅನುಭವವಾಗುತ್ತದೆ ಗರ್ವಿಷ್ಠ ಪುರುಷರಿಗೆ ಸ್ವಪರ ವಿಚಾರವು ಉಳಿಯುವದಿಲ್ಲ ಮಾರ್ದವ ಗುಣದಿಂದಲೇ ಎಲ್ಲ ದೋಷಗಳು ಇಲ್ಲದಂತಾಗುತ್ತವೆ ಅಲ್ಲದೆ ಸಂಸಾರದೊಳಗಿಂದ ಪಾರಾಗಲಿಕ್ಕೂ ಬರುತ್ತದೆ ಅಂತಲೇ ಮಾರ್ದವ ಗುಣವನ್ನು ಸ್ವೀಕರಿಸಲಿಕ್ಕೆಬೇಕು

**ಮಿಥ್ಯಾದರ್ಶನದಿಂದ ಎಂಟು ಮದಗಳು ಉತ್ಪನ್ನವಾಗುತ್ತವೆ.** ಸಂಸಾರೀ ಜೀವಿಗಳಿಗೆ ಅನಾದಿ ಕಾಲದಿಂದಲೂ ಮಿಥ್ಯಾದರ್ಶನದ ಉದಯವಿರುತ್ತದೆ ಅದಕ್ಕಾಗಿ ಪರ್ಯಾಯಗಳ ವಿಷಯದಲ್ಲಿ ಅವರಿಗೆ ಆತ್ಮಬುದ್ಧಿಯು ಉತ್ಪನ್ನವಾಗುತ್ತದೆ ಅದರಿಂದ ಜಾತಿ, ಕುಲ, ವಿದ್ಯಾ, ಬಲ, ಐಶ್ವರ್ಯ, ರೂಪ, ತಪ, ಧನ ಇವು ತನ್ನ ಸ್ವರೂಪವೆಂದು ತಿಳಿದು ಅವುಗಳ ವಿಷಯದಲ್ಲಿ ಅತ್ಯಂತ ಗರ್ವವನ್ನು ತಾಳುತ್ತಾನೆ. ಈ ಜಾತಿ-ಕುಲಾದಿ ಎಂಟು ಪದಾರ್ಥಗಳು ಕರ್ಮದ ಉದಯಕ್ಕೆ ಅಧೀನವಾಗಿರುತ್ತವೆ ಅಲ್ಲದೆ ಇವು ಪುದ್ಗಲದ ವಿಕಾರವಾಗಿರುತ್ತವೆ ನಮ್ಮ ನಿಜವಾದ ಸ್ವರೂಪವು ಅವಿನಾಶಿ ಮತ್ತು ಅಮೂರ್ತಿಕವಾಗಿದೆ ನಾವು ಅನಾದಿಕಾಲದಿಂದಲೂ ಇಂಥ ಅನೇಕ ಪರ್ಯಾಯಗಳನ್ನು ಧಾರಣಮಾಡಿ ಬಿಟ್ಟವರೂ ಇದ್ದೇವೆ ಈಗ ನಾವು ಅವುಗಳಲ್ಲಿ ಯಾವ ಪರ್ಯಾಯವನ್ನು ನಮ್ಮದೆಂದು ತಿಳಿಯಬೇಕು ಧನ-ಯೌವನ-ಸಂಪತ್ತಾದಿಗಳು ಮತ್ತು ಇಂದ್ರಿಯಗಳಿಂದ ಜನಿಸಿದ ಜ್ಞಾನಾದಿ ಸರ್ವ ಪದಾರ್ಥಗಳು ನಶ್ವರವಾಗಿದ್ದು, ಕ್ಷಣ ಭಂಗುರವಾಗಿವೆ ಇವು ನಮಗೆ ಲಭಿಸಿವೆಯೆಂದು ಅಭಿಮಾನವನ್ನು ತಾಳುವದೆಂದರೆ ಸಂಸಾರ ಪರಿಭ್ರಮಣಕ್ಕೆ ಕಾರಣವಾಗುತ್ತದೆ ಸ್ವರ್ಗದೊಳಗಿನ ಮಹಾನ್‌ಋದ್ಧಿಧಾರಿ ಜೀವಿಗಳೂ ಸಹ-ದೇವರೂ ಕೂಡ-ಮರಣದ ತರುವಾಯ ಏಕೇಂದ್ರಿಯ ಜೀವಗಳಾಗಿ ಜನಿಸುತ್ತವೆ ಇಲ್ಲವೆ ದ್ವೀಂದ್ರಿಯಗಳಿಂದ ಪಂಚೇಂದ್ರಿಯಗಳ ವರೆಗಿನ ಚಾಂಡಾಲ, ನಾಯಿ, ಬೆಕ್ಕು ಮೊದಲಾದ ಅನೇಕ ಅವಸ್ಥೆಗಳನ್ನು ಹೊಂದುತ್ತವೆ ಒಂಭತ್ತು ನಿಧಿ ಹಾಗೂ ಹದಿನಾಲ್ಕು ರತ್ನಗಳನ್ನು ಧಾರಣಮಾಡುವಂಥ ಚಕ್ರವರ್ತಿಗಳು ಮರಣಹೊಂದಿದ ಮೇಲೆ ಏಳನೆಯ ನರಕದಲ್ಲಿಯೂ ಹೋಗಿ ಜನ್ಮವನ್ನು ಹೊಂದುತ್ತಾರೆ. ಬಲಭದ್ರ, ನಾರಾಯಣರಂಥ ಪುಣ್ಯವಂತ ಪುರುಷರ ಐಶ್ವರ್ಯವೂ ನಷ್ಟವಾಗುತ್ತದೆ ಅವುಗಳ ಮುಂದೆ ನಮ್ಮಂಥವರ ಪಾಡೇನು? ಯಾರ ಸೇವೆಯನ್ನು ಮಾಡಲಿಕ್ಕೆ ಸಾವಿರಾರು ದೇವತೆಗಳು ಕೈಕಟ್ಟಿಕೊಂಡು ನಿಲ್ಲುವರೋ ಅಂಥವರ ಪುಣ್ಯವೂ ಸಹ ಕ್ಷಯವಾಗಲು, ಮರಣಕಾಲದಲ್ಲಿ

ಅವರ ಬಾಯಲ್ಲಿ ನೀರನ್ನು ಹಾಕಲಿಕ್ಕೂ ಸಹ ಯಾರೂ ಇಲ್ಲದಂತೆ ಆಗುವರು. ಅಂದಮೇಲೆ ಪುಣ್ಯರಹಿತ ಜೀವಗಳ ಅವಸ್ಥೆಯೇನು! ಅವರು ತಮ್ಮ ಸ್ವಲ್ಪ ಪುಣ್ಯದ ಅಭಿಮಾನವನ್ನಾದರೂ ಯಾಕೆ ಹಿಡಿಯಬೇಕು? ಜಗತ್ತಿನಲ್ಲಿ ತಮ್ಮ ಶ್ರೇಷ್ಠಜ್ಞಾನದಿಂದ ಉಚ್ಚಪದವಿಯನ್ನು ಹೊಂದಿದಂಥವರು, ಯಾವಾಗಲೂ ಉತ್ಕೃಷ್ಟ ತಪವನ್ನು ಮಾಡುವುದರಲ್ಲಿ ಮಗ್ನರಾದವರು, ಸದಾ ಉತ್ತಮ ದಾನವನ್ನು ಕೊಡುವುದರಲ್ಲಿ ತತ್ಪರರಾದವರು ಮತ್ತು ಇಷ್ಟೆಲ್ಲ ಮಾಡಿಯೂ ಕೂಡ ತಾವು ಸ್ವತಃ ಕಡಿಮೆ ತರಗತಿಯವರೆಂದು ತಿಳಿದು ಬಾಳುವಂಥವರಿಗೇನೇ ಮಾರ್ದವಗುಣವು ಪ್ರಾಪ್ತವಾಗುತ್ತದೆ. ಇದನ್ನು ನಾವು ಅರಿತಿರಬೇಕು.

ವಿನಯ ಧಾರಣ ಮಾಡಿರಿ. ವಿನಯ ಅಥವಾ ಗರ್ವ ರಹಿತ ಅವಸ್ಥೆಯೇ ಧರ್ಮದ ಮೂಲವಾಗಿದೆ ಸಮ್ಯಗ್ದರ್ಶನವೇ ಮೊದಲಾದ ಅನೇಕ ಗುಣಗಳ ಪ್ರಾಪ್ತಿಯಾಗಬೇಕು, ಜಗತ್ತಿನಲ್ಲಿ ಕೀರ್ತಿಯಾಗಬೇಕು, ಯಾರೂ ನಮ್ಮೊಡನೆ ವೈರವನ್ನು ಮಾಡಬಾರದು ಇವೇ ಮೊದಲಾದ ಸಂಗತಿಗಳ ಅವಶ್ಯಕತೆಯು ಎನಿಸಿದರೆ ಗರ್ವವನ್ನು ಬಿಟ್ಟು ನೀವು ವಿನಯಶೀಲರಾಗುವುದು. ಎಲ್ಲಕ್ಕೂ ಮೊದಲು ಗರ್ವವನ್ನು ನಷ್ಟಪಡಿಸಿಕೊಳ್ಳಲಿಕ್ಕೆ ಬೇಕು. ಅದರ ಹೊರತಾಗಿ ನಮ್ರತೆ, ವಚನ ಮಾಧುರ್ಯ ಪೂಜ್ಯತ್ವ, ದಾನ, ಸನ್ಮಾನ ಮೊದಲಾದ ಅನೇಕ ಗುಣಗಳಲ್ಲಿ ಒಂದು ಗುಣವೂ ಸಹ ಪ್ರಾಪ್ತವಾಗಲಾರದು. ಗರ್ವಿಷ್ಠ ಪುರುಷನಿಗೆ ಕಾರಣವಿಲ್ಲದೆ ಶತ್ರುವು ಉತ್ಪನ್ನವಾಗುತ್ತಾರೆ. ಎಲ್ಲೆಡೆಗೂ ಅವನ ನಿಂದೆಯು ಆಗುತ್ತದೆ. ಎಲ್ಲ ಜನರೂ ಗರ್ವವುಳ್ಳ ಪುರುಷರ ಮಾನಖಂಡನವಾಗಬೇಕೆಂದು ಬಯಸುತ್ತಾರೆ. ಉದ್ಧಟ ನೌಕರರನ್ನು ಒಡೆಯರೂ ಕೂಡ ಹೊರಗೆ ಹಾಕುತ್ತಾರೆ. ಸೊಕ್ಕಿನಿಂದ ಉಬ್ಬಿದ ಶಿಷ್ಯನನ್ನು ವಿದ್ಯೆ ಕಲಿಸಲೆಂದು ಗುರುವು ಹತ್ತರ ಇಟ್ಟುಕೊಳ್ಳುವದಿಲ್ಲ. ಅಂಥ ಶಿಷ್ಯರಿಗೆ ಶಿಕ್ಷಣಕೊಡಲು ಗುರುಗಳು ನಿರುತ್ಸಾಹಿಗಳಾಗಿರುತ್ತಾರೆ. ಮದೋನ್ಮತ್ತ ಪುರುಷನ ಹತ್ತರ ಸೇವಕರೂ ಸಹ ಇರಲಿಕ್ಕೆ ಇಚ್ಛಿಸುವದಿಲ್ಲ. ಗರ್ವಿಷ್ಠ ಪುರುಷನ ಮಾನಖಂಡನವಾದರೆ ಮಿತ್ರ, ಅಣ್ಣ-ತಮ್ಮಂದಿರು, ನೆರೆ-ಹೊರೆಯವರು, ಹಿತ-ಚಿಂತಕರೆ, ಮೊದಲಾದವರೆಲ್ಲ ಸುಮ್ಮನೆ ಇದುತ್ತಾರೆ. ಇದಕ್ಕೆ ವಿಪರೀತವಾಗಿ ನಮ್ರ ಪುತ್ರ ಹಾಗೂ ಶಿಷ್ಯರ ಅವಸ್ಥೆಯು ಇರುತ್ತದೆ. ಗುರುವಿಗೂ, ತಂದೆಗೂ ತಮ್ಮ ಶಿಷ್ಯರೂ ಮಕ್ಕಳೂ ವಿನಯಶೀಲರಾಗಿರುವುದರಿಂದ ಅತ್ಯಂತ ಆನಂದವಾಗುತ್ತದೆ. ಉದ್ಧಟ ಶಿಷ್ಯರೂ ಮಕ್ಕಳೂ ತಮ್ಮ ಗುರು-ಹಿರಿಯರ ಮಾನಭಂಗವನ್ನು ಮಾಡಿ, ಅವರ ಅಂತಃಕರಣವನ್ನು ನೋಯಿಸುತ್ತಾರೆ ಮಕ್ಕಳೂ ಶಿಷ್ಯರೂ ಯಾವುದಾದರೊಂದು ನವೀನ ಕಾರ್ಯವನ್ನು ಕೈಕೊಳ್ಳುವದಿದ್ದರೆ ಸ್ವಬುದ್ಧಿಯಿಂದ ಅದನ್ನು ಆರಂಭಿಸದೆ ತಮ್ಮ ತಂದೆ-ತಾಯಿ, ಗುರು-ಹಿರಿಯರ ಅನುಮತಿಯಂತೆ ನಡೆದುಕೊಳ್ಳಬೇಕು. ಮೊದಲೇ ಒಪ್ಪಿಗೆಯನ್ನು ಪಡೆಯಲಿಕ್ಕೆ ವೇಳೆಯು ಇರದಿದ್ದರೆ ಹಿಂದಿನಿಂದಾದರೂ ಹಿರಿಯರ ಹತ್ತರ ಹೋಗಿ, ಎಲ್ಲವನ್ನೂ ವಿವರಿಸಿ ಹೇಳಿ, ಅವರನ್ನು ಸಮಾಧಾನಗೊಳಿಸಬೇಕು, ನಮ್ಮ ಕಾರ್ಯಕ್ಕೆ ಅವರ ಸಮ್ಮತಿಯನ್ನು ಪಡೆಯಬೇಕು. ಇಂಥ ಕೃತಿಗೇನೇ ವಿನಯವೆಂದೂ ಭಕ್ತಿಯೆಂದೂ ಹೇಳುವದು. ಯಾರ ಮೇಲೆ ಗುರು-ಹಿರಿಯರೂ ತಂದೆತಾಯಿಗಳೂ ಇದ್ದು ಆಜ್ಞೆಯನ್ನು ಮಾಡುವರೋ ಅವರು ಧನ್ಯರೆಂದು ತಿಳಿಯಬೇಕು. ಎಲ್ಲರಿಗೂ ಇಂಥ ಯೋಗವು ಲಭಿಸುವುದಿಲ್ಲ.

ಗುರು-ಹಿರಿಯರ ಆಜ್ಞೆಯನ್ನು ಪಾಲಿಸಬೇಕು. ನಿರಭಿಮಾನಿಯೂ ವಿನಯಶೀಲನೂ ಆದ ಪುರುಷನು ತನ್ನ ಎಲ್ಲ ಕಾರ್ಯಗಳನ್ನು ಗುರುವಿನ ಆಜ್ಞೆಗೆ ಅನುಸರಿಸಿಯೇ ಮಾಡುತ್ತಾನೆ. ಯಾವನು ಈ ಪ್ರಕಾರ ಗರ್ವವನ್ನು ಬಿಟ್ಟು ವರ್ತಿಸುತ್ತಾನೆಯೋ ಅವನು ನಿಜವಾಗಿಯೂ ಧನ್ಯನು. ಉತ್ತಮ ಪುರುಷನು ಬಾಲಕ, ವೃದ್ಧ, ನಿರ್ಧನ, ರೋಗಿ, ಮೂರ್ಖ, ಜ್ಞಾನಿ, ನೀಚ ಇವರಲ್ಲಿ ಯಾರು ಬಂದರೂ ಎಲ್ಲರೊಡನೆ ಯಥಾಯೋಗ್ಯ ಪ್ರಿಯ ಮಾತುಗಳನ್ನಾಡಿಯೂ ಅವರವರ ಯೋಗ್ಯತೆಯಂತೆ ಆದರ ಸತ್ಕಾರಗಳನ್ನು ಮಾಡಿಯೂ ಕಳಿಸುತ್ತಾನೆ. ಇಂಥ ಕ್ರಿಯೆಗಳಲ್ಲಿ ಅವನೆಂದೂ ತಪ್ಪುವದಿಲ್ಲ. ಅವನು ಯಾವಾಗಲೂ ತನ್ನ ಮುಖದಿಂದ ಪ್ರಿಯ ವಚನಗಳನ್ನೇ ಆಡುತ್ತಾನೆ ಉತ್ತಮ ಪುರುಷನು ಉದ್ಧಟನಂತೆ ವೇಷ ಭೂಷಣಗಳನ್ನೂ ಕೂಡ ಮಾಡುವದಿಲ್ಲ. ಅಲ್ಲದೆ ತನ್ನ ಹಾಗೂ ಅನ್ಯರ ಅಪಮಾನವಾಗುವಂಥ ವ್ಯವಹಾರದಲ್ಲಿಯೂ ಅವನು ಕೈಹಾಕುವದಿಲ್ಲ. ಉದ್ಧಟರೊಡನೆ ಮಾತನಾಡಲಿಕ್ಕೂ ವ್ಯವಹಾರಮಾಡಲಿಕ್ಕೂ ಸಹ ಅವನು ಇಚ್ಛಿಸುವದಿಲ್ಲ. ಅಂದಮೇಲೆ ಉಳಿದ ವ್ಯವಹಾರಗಳನ್ನಾದರೂ ಅವನು ಹೇಗೆ ಮಾಡಿಯಾನು? ಇಂಥ ರೀತಿಯ ನಡೆ-ನುಡಿಗಳುಳ್ಳವನಿಗೇನೇ ಲೋಕಮಾನ್ಯನೆನಿಸುವ ವಿನಯಗುಣವು ಲಭಿಸುತ್ತದೆ. ಇಂಥ ಸತ್ಪುರುಷರಿಗೇನೇ ಧನ, ರೂಪ, ಜ್ಞಾನ, ವಿದ್ಯೆ, ಕಲೆ, ಐಶ್ವರ್ಯ, ಬಲ, ಜಾತಿ, ಕುಲ ಮೊದಲಾದವುಗಳು ಪ್ರಾಪ್ತನಾದಲ್ಲಿ ಅವು ಸಫಲವಾಗುತ್ತವೆ. ಅವನು ಸ್ವತಃ ಅಭಿಮಾನಪಡುವದಿಲ್ಲ. ಎಲ್ಲರೊಡನೆ ವಿನಯದಿಂದ

ವರ್ತಿಸುತ್ತಾನೆ ತಾನು ಎಲ್ಲರಿಗಿಂತಲೂ ಹಿರಿಯನೆಂದು ಭಾವಿಸುತ್ತಾನೆ ಕರ್ಮಾಧೀನನಾದುದರಿಂದ ನನ್ನಿಂದ ಅನೇಕ ದುಷ್ಕರ್ಮಗಳು ಸಂಭವಿಸುತ್ತವೆ ನಮ್ಮ ಶರೀರದಲ್ಲಿ ಇಷ್ಟು ಉತ್ತಮ ಗುಣಗಳು ಬರಬೇಕಾದರೆ ಬಹಳ ಕಾಲವು ಹಿಡಿಯುತ್ತದೆಂದು ಅವನ ತಿಳುವಳಿಕೆಯು ಇರುತ್ತದೆ. ಇಂಥ ಪುರುಷನು ಗರ್ವದ ಸ್ವಾಧೀನ ಎಂದೂ ಆಗುವದಿಲ್ಲ ಅದಕ್ಕಾಗಿ ಭವ್ಯ ಪುರುಷರಿರಾ! ಮಾರ್ದವ ಗುಣವು ಸಮ್ಯಗ್ದರ್ಶನದ ಒಂದು ಅಂಗವೆಂದು ತಿಳಿದು, ಅದನ್ನು ನಿಮ್ಮ ಅಂತಃಕರಣದಲ್ಲಿ ಯಾವಾಗಲೂ ನೆನಪಿನಲ್ಲಿಡಿರಿ; ಮತ್ತು ಅದರ ಧ್ಯಾನ, ಸ್ತವನಗಳನ್ನು ಮಾಡಿರಿ. ಇನ್ನು ಮುಂದೆ ಆರ್ಜವ ಗುಣದ ಸ್ವರೂಪವನ್ನು ಹೇಳಲಾಗುತ್ತದೆ.

## ಆರ್ಜವ

ಆರ್ಜವದ ಲಕ್ಷಣ -ಆರ್ಜವವೂ ದರ್ಮದ ಲಕ್ಷಣವಾಗಿದೆ ಮನ— ವಚನ— ಕಾಯಗಳಲ್ಲಿರುವ ಸರಳತೆಗೇನೇ ಆರ್ಜವವೆನ್ನುವರು ಇದರಲ್ಲಿ ಮಾಯಾಚಾರ ಇಲ್ಲವೆ ಕಪಟವು ಎಳ್ಳಷ್ಟೂ ಇರಕೂಡದು. ಆರ್ಜವ ಗುಣವು ನಮ್ಮಲ್ಲಿದ್ದರೆ ಅದರಿಂದ ಅನೇಕ ಪಾಪಗಳು ತೊಳೆದು ಹೋಗಿ, ಸುಖವು ಉತ್ಪನ್ನವಾಗುತ್ತದೆ. ಅಂತಲೇ ಕಪಟವನ್ನು ತೊರೆದು ಆರ್ಜವ ಗುಣವನ್ನು ಸ್ವೀಕರಿಸಿರಿ ಇದರಿಂದ ಕರ್ಮದ ಕ್ಷಯವು ಆಗುತ್ತದೆ. ಕುಟಿಲತೆ ಅಥವಾ ಕಪಟತನದಿಂದ ಅಶುಭಕರ್ಮದ ಬಂಧವಾಗಿ ಜಗತ್ತಿನಲ್ಲಿ ಅಪಕೀರ್ತಿಯಾಗುತ್ತದೆ. ಅಂತಲೇ ಆತ್ಮ ಹಿತವನ್ನು ಬಯಸುವ ಪುರುಷರು ಆರ್ಜವ ಧರ್ಮವನ್ನು ಅವಲಂಬಿಸಬೇಕು ತನ್ನ ಮನಸ್ಸಿನಲ್ಲಿ ಇದ್ದುದನ್ನು ಇದ್ದಂತೆಯೇ ಅನ್ಯರಿಗೆ ಹೇಳುವುದು, ಅದಕ್ಕನುಸರಿಸಿಯೇ ಬಾಹ್ಯದಲ್ಲಿ ಶರೀರದ ಕ್ರಿಯೆಗಳನ್ನು ಮಾಡುವುದು, ಇದಕ್ಕೇನೇ ಸರಳತನವೆನ್ನುವುದು ಇದರಲ್ಲಿ ಒಳಗೊಂದು ಭಾವ, ಹೊರಗೊಂದು ಕ್ರಿಯೆ ಇರುವದಿಲ್ಲ, ಇದೇ ಆರ್ಜವವಾಗಿದೆ ಇಂಥ ಸರಳತೆಯು ನಮ್ಮಲ್ಲಿರುವದೆಂದರೆ ಅದೊಂದು ಧರ್ಮದ ಅಂಗವೇ ಇದ್ದಂತೆ ಅಂತಃಕರಣ-ದೊಳಗಿಂದ ಕಪಟದ ಮುಳ್ಳನ್ನು ತೆಗೆದು ಅದನ್ನು ನಿರ್ಮಲಗೊಳಿಸಬೇಕು. ಆ ಸ್ಥಳದಲ್ಲಿ ಆರ್ಜವ ಧರ್ಮವನ್ನು ಸ್ಥಾಪಿಸಬೇಕು ಮನಸ್ಸಿನಲ್ಲಿ ಕಪಟವನ್ನು ಇಟ್ಟುಕೊಂಡು, ಹೊರಗೆ ಎಷ್ಟೋ ಕಠಿಣ ವ್ರತ, ತಪಶ್ಚರಣ, ಸಂಯಮಗಳನ್ನು ಮಾಡಿದರೂ ಸಹ ಎಲ್ಲವೂ ನಿರರ್ಥಕವಾಗುವುದು ನಿಜವಾಗಿಯೂ ನಿರ್ವಾಣ ಮಾರ್ಗವನ್ನು ಸ್ವೀಕರಿಸಬೇಕೆನ್ನುವವರಿಗೆ ಆರ್ಜವ ಧರ್ಮವೇ ಸಹಾಯಕವಾಗಿದೆ ಈ ಆರ್ಜವ ಧರ್ಮವು ದರ್ಶನ ಜ್ಞಾನ ಚಾರಿತ್ರಗಳ ನಿಜವಾದ ಅಖಂಡ ಸ್ವರೂಪವಾಗಿದೆ. ಅತೀಂದ್ರಿಯ ಸುಖದ ಭದ್ರಸ್ಥಾನವಾಗಿದೆ ಇದರ ಪ್ರಭಾವದಿಂದಲೇ ಅವಿನಾಶಿ ಸುಖದ ಪ್ರಾಪ್ತಿಯಾಗುತ್ತದೆ ಸಂಸಾರ ಸಮುದ್ರದೊಳಗಿಂದ ಪಾರಾಗಿ ಹೋಗಲಿಕ್ಕೆ ಆರ್ಜವ ಧರ್ಮವು ಒಂದು ಹಡಗವು ಇದ್ದಂತಿದೆ. ಅದಕ್ಕಾಗಿ ಇದನ್ನು ಅಂಗೀಕರಿಸಿರಿ.

ಕಪಟವನ್ನು ತ್ಯಜಿಸಿರಿ. ಕಪಟತನವು ಬಹಳ ನಾಚಿಕೆಗೇಡು ಆಗಿದೆ ಅದು ಪ್ರಕಟವಾಯಿತೆಂದರೆ ಬಹುದಿನಗಳ ಪ್ರೀತಿಯೂ ಕೂಡ ನಷ್ಟವಾಗುತ್ತದೆ ಹಾಲಿನಲ್ಲಿ ಉಪ್ಪಿನ ಹರಳನ್ನು ಒಗೆಯುವುದರಿಂದ ಹಾಲು ಕೆಡುತ್ತದೆ. ಹಾಗೆಯೇ ಕಪಟವನ್ನು ಎಷ್ಟು ಮುಚ್ಚಿದರೂ ಒಂದಿಲ್ಲ ಒಂದು ದಿನ ಅದು ಪ್ರಕಟವಾಗಿಯೇ ತೀರುತ್ತದೆ ಇನ್ನೊಬ್ಬರ ವಿಷಯದಲ್ಲಿ ಚಾಡಿಯನ್ನು ಹೇಳುವುದು, ಇಲ್ಲವೆ ಅನ್ಯರ ದೋಷಗಳನ್ನು ಪ್ರಕಟಗೊಳಿಸುವುದು ಹಲವರಿಗೆ ಬಹಳ ಸಂತೋಷಕರವೆನಿಸುತ್ತದೆ ಆದರೆ ಹೀಗೆ ಮಾಡುವುದರಿಂದ ಇನ್ನೊಬ್ಬರ ನಿಂದೆಯು ಆಗುತ್ತದೆಂದೇನೂ ಇಲ್ಲ. ಅವರ ಅಶುಭ ಕರ್ಮದ ಉದಯವು ಆಗುವ ಕಾಲವು ಬಂದಿದ್ದರೆ ಮಾತ್ರ ಅದು ತನ್ನಿಂದ ತಾನೇ ಸಂಭವಿಸುತ್ತದೆ ಅದಕ್ಕಾಗಿ ನಾವು ಪ್ರಯತ್ನಿಸುವ ಕಾರಣವಿಲ್ಲ ಆದರೆ ಇನ್ನೊಬ್ಬರ ನಿಂದೆಯಾಗಲೆಂದು ನಾವು ಕಪಟಾಕೃತಿಯನ್ನು ಮಾಡುವುದು ಮಾತ್ರ ಅತ್ಯಂತ ನಿಂದ್ಯವಾಗಿದೆ. ಇಂಥ ಮನುಷ್ಯನಿಗೆ ಹಿತ ಮಾಡುವಂಥ ಮಿತ್ರರೂ ಸಹ ತನ್ನಿಂದ ತಾನೇ ಶತ್ರುಗಳಾಗುತ್ತಾರೆ ವ್ರತಿಕ, ತಪಸ್ವಿ, ತ್ಯಾಗಿ ಎನಿಸಿಕೊಳ್ಳುವಂಥವನ ಕಪಟತನವು ಬೈಲಿಗೆ ಬಂದರೆ ಅವನನ್ನು ಧರ್ಮಭ್ರಷ್ಟನೆಂದು ಎಲ್ಲರೂ ನಿಂದಿಸುವರು. ಅವನ ಮೇಲೆ ಯಾರ ವಿಶ್ವಾಸವೂ ಉಳಿಯಲಾರದು ಕಪಟಿಯಾದ ಮಗನ ಮೇಲೆ ಅವನ ತಾಯಿಯೂ ಸಹ ವಿಶ್ವಾಸವನ್ನು ಇಡುವದಿಲ್ಲ. ಕಪಟಿಯಾದ ಪುರುಷನು ಮಿತ್ರದ್ರೋಹಿ, ಸ್ವಾಮಿದ್ರೋಹಿ, ಧರ್ಮದ್ರೋಹಿ, ಮತ್ತು ಕೃತಘ್ನನಾಗಿರುವನು ಜೈನಧರ್ಮವು ಕಪಟ ರಹಿತವಾಗಿದೆ ಇದರಲ್ಲಿ ಎಳ್ಳಷ್ಟು ಕಪಟವೆಂಬುದಿಲ್ಲ ಡೊಂಕಾದ ಒರೆಯಲ್ಲಿ ಸರಳ ಖಡ್ಗವು ಹೋಗಲಾರದು ಅದರಂತೆ ಕಪಟದಿಂದ ವಕ್ರವಾದ ಅಂತಃಕರಣವುಳ್ಳವರಲ್ಲಿ ಜಿನೇಂದ್ರ ಪ್ರಣೀತವಾದ ಆರ್ಜವ (ಸರಳತನ) ಧರ್ಮದ

ಪ್ರವೇಶವಾಗುವದಿಲ್ಲ. ಕಪಟಿ ಪುರುಷನ ಎರಡೂ ಲೋಕಗಳು ನಷ್ಟಹೊಂದುತ್ತವೆ, ಅಂತಲೇ ಧರ್ಮವನ್ನು ಸ್ವೀಕರಿಸುವ ಇಚ್ಛೆಯು ನಿಮಗೆ ಇದ್ದಲ್ಲಿ, ಜ್ಞಾನ, ಕೀರ್ತಿಗಳನ್ನೂ ಪಡೆಯುವ ಅಪೇಕ್ಷೆ ಇದ್ದಲ್ಲಿ, ಮೊಟ್ಟಮೊದಲು ನೀವು ಕಪಟವನ್ನು ತೊರೆದು ಆರ್ಜವ ಧರ್ಮವನ್ನು ಸ್ವೀಕರಿಸಿರಿ ಈ ಧರ್ಮವನ್ನು ವೈರಿಗಳೂ ಸಹ ಪ್ರಶಂಸಿಸುತ್ತಾರೆ ಸರಳ ಮನಸ್ಸುಳ್ಳ ಮನುಷ್ಯನು ಅಕಸ್ಮಾತ್ತಾಗಿ ತಪ್ಪನ್ನು ಮಾಡಿದರೂ ಸಹ ಅವನಿಗೆ ಶಿಕ್ಷೆಯು ಆಗುವದಿಲ್ಲ ಆರ್ಜವ ಧರ್ಮವನ್ನು ಧಾರಣ ಮಾಡುವಂಥ ಪುರುಷನು ಪರಮಾತ್ಮನ ಅನುಭವವನ್ನು ಹೊಂದಲಿಕ್ಕೆ ಸಹ ಸಂಕಲ್ಪಮಾಡುತ್ತಾನೆ ಕಷಾಯಗಳನ್ನು ಗೆಲ್ಲಲಿಕ್ಕೂ ಸಂತೋಷಿಯಾಗಿರಲಿಕ್ಕೂ ಅವನ ಸಂಕಲ್ಪವು ಇರುತ್ತದೆ ಜಗತ್ತಿನೊಳಗಿನ ಮಾಯಾಚಾರವನ್ನು ಅವನು ದೂರಿಂದಲೇ ತ್ಯಾಗಮಾಡಬೇಕಾಗುತ್ತದೆ ಅವನು ಆತ್ಮವನ್ನು ಅಸಹಾಯ ಮತ್ತು ಚೈತನ್ಯ ಸ್ವರೂಪನೆಂದು ಮಾತ್ರ ತಿಳಿಯುತ್ತಾನೆ ಧನಸಂಪತ್ತು ಕುಟುಂಬ ಮೊದಲಾದವುಗಳು ತನ್ನ ಸ್ವರೂಪವೆಂದು ತಿಳಿದಂಥವನು ಕಪಟತನದಿಂದ ಯಾರನ್ನಾದರೂ ಮೋಸಗೊಳಿಸಲಿಕ್ಕೆ ಯತ್ನಿಸುವನು. ಆದರೆ ಯಾವನು ಆತ್ಮನನ್ನು ಸಂಸಾರದ ಬಂಧನದಿಂದ ಬಿಡುಗಡೆ ಮಾಡಲಿಕ್ಕೆ ಇಚ್ಛಿಸುವನೋ ಅವನು ಧನ-ಸಂಪತ್ತುಗಳಿಗಾಗಿ ಕಪಟಾಚಾರವನ್ನು ಎಂದೂ ಆಚರಿಸಲಾರನು. ಯಾಕೆಂದರೆ ಅವನು ಪರದ್ರವ್ಯವನ್ನೆಲ್ಲ ತನ್ನ ಸ್ವಸ್ವರೂಪದಿಂದ ಭಿನ್ನವೆಂದು ತಿಳಿದಿರುತ್ತಾನೆ. ಅದರಂತೆ ಆತ್ಮನು ಅಸಹಾಯ, ಸ್ವತಂತ್ರ ಜ್ಞಾನನಿಧಿಯೆಂದೂ ನಂಬಿರುತ್ತಾನೆ. ಇಂಥ ಇಚ್ಛೆಯು ನಿಮಗೂ ಇದ್ದರೆ ನೀವೂ ಮಾಯಾಚಾರವನ್ನು ಆರ್ಜವ ಧರ್ಮವನ್ನು ಸ್ವೀಕರಿಸಿರಿ ಹೀಗೆ ಆರ್ಜವ ಧರ್ಮದ ಸ್ವರೂಪವಾಗಿದೆ. ಇನ್ನು ಮುಂದೆ ಶೌಚಧರ್ಮದ ವಿವೇಚನೆಯನ್ನು ಮಾಡಲಾಗುತ್ತದೆ

## ಶೌಚ

ಶರೀರವು ಕೇವಲ ನೀರಿನಿಂದ ಶುದ್ಧವಾಗುವದಿಲ್ಲ. ಶೌಚ ಎಂಬುದರ ಶಬ್ದಾರ್ಥವು ಪವಿತ್ರತೆ ಎಂದಿದೆ ಹೊರನೋಟವುಳ್ಳವರು–ಬಹಿರಾತ್ಮಾ–ಸ್ನಾನಾದಿ ಕ್ರಿಯೆಗಳಿಂದ ಶರೀರವನ್ನು ಸ್ವಚ್ಛಗೊಳಿಸುವದಕ್ಕೇನೇ ಶೌಚವೆಂದು ತಿಳಿಯುತ್ತಾರೆ ಆದರೆ ಏಳು ಧಾತುಗಳಿಂದಲೂ ಮಲಮೂತ್ರಗಳಿಂದಲೂ ತುಂಬಿದ ಶರೀರವನ್ನು ನೀರಿನಿಂದ ತೊಳೆದರೆ ಪವಿತ್ರವಾಗಲು ಅದು ಸಾಧ್ಯವಿಲ್ಲ ಇದನ್ನು ಅವರು ಮರೆಯುತ್ತಾರೆ ಮಲಮೂತ್ರಗಳಿಂದ ತುಂಬಿದ ಕೊಡವನ್ನು ಹೊರ ಮಗ್ಗಲು ಎಷ್ಟು ನೀರನ್ನು ಸುರುವಿ ತೊಳೆದರೂ ಅದು ಶುದ್ಧವಾಯಿತೆನ್ನಲು ಬರುವದಿಲ್ಲ. ಅದರಂತೆಯೇ ಶರೀರವನ್ನೂ ಸಹ ಮೇಲಿಂದ ಮೇಲೆ ಎಷ್ಟು ನೀರಿನಿಂದ ತೊಳೆದರೂ ಸಹ ಅದು ಶುದ್ಧವಾಗದು. ಅದಕ್ಕಾಗಿ ಸ್ನಾನಾದಿಗಳಿಂದ ಅದು ಶುದ್ಧವಾಗುತ್ತದೆಂದು ತಿಳಿಯುವುದು ವ್ಯರ್ಥವಾಗಿದೆ ನಿಜವಾಗಿಯೂ ಆತ್ಮನನ್ನು ಉಜ್ವಲಗೊಳಿಸುವುದರಲ್ಲಿಯೇ ಶೌಚಧರ್ಮವಿದೆ ಆತ್ಮನ ಮೇಲೆ ಕ್ರೋಧ, ಲೋಭ, ಮಾಯಾ, ಮಾನ ಮೊದಲಾದ ಅನೇಕ ಕಷಾಯಗಳ ಆವರಣವು ಮುಸುಕಿದೆ. ಅದನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡುವುದೇ ನಿಜವಾಗಿ ಆತ್ಮಶುದ್ಧಿಯಾಗಿದೆ. ಆತ್ಮನು ಈ ದೇಹದಿಂದ ಭಿನ್ನನೂ ಜ್ಞಾನಾದರ್ಶನ ಸ್ವರೂಪಿಯೂ ಅಖಂಡ, ಅವಿನಾಶಿಯೂ ಜನ್ಮಜರಾಮರಣ ರಹಿತನೂ ಮೂರು ಲೋಕಗಳಲ್ಲಿರುವ ಪದಾರ್ಥಗಳಿಗೆ ಬೆಳಕನ್ನು ನೀಡುವಂಥವನೂ ಆಗಿದ್ದಾನೆ. ಇದನ್ನು ಒಪ್ಪುವುದು, ಇಂಥ ಆತ್ಮ ಸ್ವರೂಪವನ್ನು ಚಿಂತಿಸುವುದು ಶೌಚ ಧರ್ಮವೆನಿಸುತ್ತದೆ. ಮನವು ಮಾಯಾಚಾರ ಲೋಭ ಮೊದಲಾದ ವಿಕಾರಗಳ ವಶವಾಗದಂತೆ ನೋಡಿಕೊಳ್ಳುವುದೂ ಸಹ ಇನ್ನೊಂದು ಪ್ರಕಾರದ ಶೌಚವೇ ಎನಿಸುತ್ತದೆ ಯಾರ ಮನಸ್ಸು ಕಾಮಕ್ರೋಧಾದಿ ವಿಕಾರಗಳ ವಶವಾಗುವುದೋ ಅವರಿಗೆ ಶೌಚಧರ್ಮವು ಸಂಭವಿಸುವದಿಲ್ಲ. ಧನದ ವಿಷಯದಲ್ಲಿರುವ ತೀವ್ರ ಇಚ್ಛೆಯನ್ನು ತ್ಯಾಗಮಾಡುವುದರಿಂದ ಶೌಚ ಧರ್ಮವು ಸಂಭವಿಸುತ್ತದೆ. ಪರಿಗ್ರಹಗಳ ಮೇಲಿನ ಮಮತ್ವವನ್ನು ತೊರೆದು ಇಂದ್ರಿಯಗಳ ವಿಷಯದಲ್ಲಿ ರಮಿಸದೆ ತಪಶ್ಚರ್ಯಾದಿ ಧರ್ಮ ಕ್ರಿಯೆಗಳ ಕಡೆಗೆ ಪ್ರವೃತ್ತನಾಗುವುದರಿಂದ ಶೌಚಧರ್ಮವು ಸಂಭವಿಸುತ್ತದೆ ಬ್ರಹ್ಮಚರ್ಯೆ-ಯನ್ನು ಧಾರಣಮಾಡುವುದರಿಂದ ಶೌಚಧರ್ಮದ ಪಾಲನವಾಗುತ್ತದೆ ಅಷ್ಟಮದಗಳ ತ್ಯಾಗಮಾಡಿ, ನಮ್ರತೆಯಿಂದ ಬಾಳುವುದರಿಂದ ಶೌಚ ಧರ್ಮದ ಪಾಲನವಾಗುತ್ತದೆ ಅಭಿಮಾನದಿಂದ ಯಾರ ಅಂತಃಕರಣವು ಮಹಾಮಲಿನ-ವಾಗಿರುವುದೋ ಅವರಿಗೆ ಶೌಚಧರ್ಮವು ಹೇಗೆ ಸಾಧಿಸೀತು? ಈ ಮಲಿನ ಅಂತಃಕರಣವು ವೀತರಾಗ ಪ್ರಣೀತ ತತ್ವಜ್ಞಾನದ ಚಿಂತನೆಯಿಂದಲೂ ಅದಕ್ಕನುಸರಿಸಿ ಆಚರಣೆಯನ್ನು ಇಡುವುದರಿಂದಲೂ ಶುದ್ಧವಾಗುತ್ತದೆ. ಇತರ ಉಪಾಯಗಳಿಂದ ಅದು ಶುದ್ಧವಾಗುವದಿಲ್ಲ ಅದಕ್ಕಾಗಿ ಬಾಹ್ಯ ಸ್ವಚ್ಛತೆಗೆ ಯತ್ನಿಸದೆ ಅಂತರ್ ಶುದ್ಧತೆಯನ್ನು

ಮಾಡಿಕೊಳ್ಳಬೇಕು ಅಂದರೆ ಶೌಚ ಧರ್ಮವನ್ನು ಪಾಲನ ಮಾಡಿದ ಶ್ರೇಯವು ಲಭಿಸುತ್ತದೆ. ಬಾಹ್ಯವೆನಿಸುವ ಶರೀರದ ಮೇಲೆ ಆಸಕ್ತಿಯನ್ನು ಇಡುವುದರಿಂದ ಕ್ರೋಧಾದಿ ಕಷಾಯಗಳ ವೃದ್ಧಿಯಾಗುತ್ತದೆ ಅದರಿಂದ ಖಾದ್ಯಾಖಾದ್ಯ, ಭಕ್ಷ್ಯಾಭಕ್ಷ್ಯಗಳ ವಿಚಾರವು ಉಳಿಯುವದಿಲ್ಲ ಆ ಮೇಲೆ ಅವನು ಅನಾಚಾರಿಯೂ ನಿರ್ಲಜ್ಜನೂ ಆಗುತ್ತಾನೆ ಸಂಸಾರದಲ್ಲಿ ಮುಖ್ಯವಾಗಿ ಎಲ್ಲ ಜೀವಗಳೂ ಜಿಹ್ವೇಂದ್ರಿಯ ಮತ್ತು ಉಪಸ್ಥ ಇಂದ್ರಿಯ ಇವುಗಳ ವಶವಾಗಿ ತನ್ನನ್ನು ತಾನು ಮರೆತು ಬಿಡುತ್ತವೆ ಅಲ್ಲದೆ ನರಕ ತಿರ್ಯಂಚ ಮೊದಲಾದ ಗತಿಗೆ ಕಾರಣವಾಗುವಂಥ ಹೀನ ವಿಚಾರಗಳಿಂದ ತಮ್ಮ ಮನಸ್ಸನ್ನು ಕಲುಷಿತಗೊಳಿಸಿಕೊಳ್ಳುತ್ತವೆ

ದುಃಖದ ಮೂಲ—ಜಗತ್ತಿನಲ್ಲಿ ಎಲ್ಲ ಕಡೆಗೂ ಪರದ್ರವ್ಯದ ಅಪಹರಣ, ಪರಸ್ತ್ರೀ ಸೇವನ, ಭೋಜನ ಲೋಲುಪತೆ ಈ ಮೂರು ಸಂಗತಿಗಳು ಮನಸ್ಸನ್ನು ಕೆಡಿಸುವಂಥವಿವೆ ಈ ಮೂರರಿಂದಲೂ ದೂರವಿದ್ದು ಆತ್ಮ ಹಿತವನ್ನು ಸಾಧಿಸುವ ವಿಷಯದಲ್ಲಿ ತತ್ಪರರಾಗಿರಲಿಕ್ಕೆಬೇಕು ಪರಸ್ತ್ರೀ, ಪರಧನ ಮತ್ತು ಜೀವಹಿಂಸೆಗಳಿಂದಲೂ ಆತ್ಮವು ಮಲಿನವಾಗುತ್ತದೆ ಈ ಮೂರನ್ನೂ ಯಾವಾಗಲೂ ಇಚ್ಛಿಸುವವನು ಕೋಟ್ಯಾವಧಿ ತೀರ್ಥಗಳಲ್ಲಿ ಸ್ನಾನ ಮಾಡಲಿ, ಎಲ್ಲ ತೀರ್ಥಗಳನ್ನು ವಂದಿಸಲಿ, ಲಕ್ಷಾವಧಿ ರೂಪಾಯಿಗಳ ದಾನ ಮಾಡಲಿ, ಕೋಟಿ ವರ್ಷ ತಪಸ್ಸು ಮಾಡಲಿ ಇಲ್ಲವೆ ಎಲ್ಲ ಶಾಸ್ತ್ರಗಳ ಅಭ್ಯಾಸಮಾಡಲಿ ಎಂದೂ ಶುದ್ಧಿಯು ಪ್ರಾಪ್ತವಾಗಲಾರದು ಅಭಕ್ಷ್ಯ ಭಕ್ಷಣ ಮಾಡುವವನಿಗೂ ಅನ್ಯಾಯದಿಂದ ವಿಷಯೋಪಭೋಗವನ್ನು ಭೋಗಿಸುವಂಥವನಿಗೂ ಪರದ್ರವ್ಯವನ್ನು ಹರಣ ಮಾಡುವಂಥವನಿಗೂ ಎಷ್ಟೋ ಧರ್ಮೋಪದೇಶವನ್ನು ಮಾಡಿದರೂ ಎಲ್ಲ ಸಿದ್ಧಾಂತ ಗ್ರಂಥಗಳ ಸಾರವನ್ನೂ ವರ್ಷಾನುವರ್ಷ ತಿಳಿಸಿ ಹೇಳಿದರೂ ಸಹ ಅವನ ಮನಸ್ಸಿನ ಮೇಲೆ ಒಂದು ಅಣುವಿನಷ್ಟೂ ಪರಿಣಾಮವು ಆಗುವದಿಲ್ಲ. ಇಷ್ಟು ಅವನ ಪರಿಣಾಮವು ಮಲಿನವಾಗಿರುತ್ತದೆ ದುರಾಚಾರವನ್ನು ಬಿಟ್ಟು ಸದ್‌ಗುರುವಿನ ಉಪದೇಶವನ್ನು ಗ್ರಹಣ ಮಾಡಬೇಕೆಂಬ ಬುದ್ಧಿಯೇ ಅವರಿಗೆ ಆಗುವದಿಲ್ಲ

ಅನ್ಯಾಯ, ಅಭಕ್ಷ್ಯ ಮತ್ತು ಪರಸ್ತ್ರೀ ತ್ಯಾಗದಿಂದಲೇ ಆತ್ಮ ಶುದ್ಧಿಯು. ವ್ಯವಹಾರದಲ್ಲಿ ನಾವು ನಿತ್ಯವೂ ಸಾವಿರಾರು ಜನರನ್ನು ಕಾಣುತ್ತೇವೆ ಅವರು ಇಪ್ಪತ್ತು, ಮೂವತ್ತು, ಐವತ್ತು ವರ್ಷಗಳಷ್ಟು ಕಾಲ ಶಾಸ್ತ್ರವನ್ನು ಕೇಳುವುದರಲ್ಲಿ ಕಳೆದಿರುತ್ತಾರೆ. ಆದರೆ ಅವರಿಗೆ ಇನ್ನೂ ಧರ್ಮದ ಸ್ವರೂಪವು ತಿಳಿದಿರುವದಿಲ್ಲ ಇದೆಲ್ಲ ಅನ್ಯಾಯದ ನಡತೆ ಮತ್ತು ಅಭಕ್ಷ್ಯ ಭಕ್ಷಣದ ಫಲವಾಗಿದೆ ಅದಕ್ಕಾಗಿ ತಮ್ಮ ಆತ್ಮವು ಶುದ್ಧವಾಗಬೇಕೆಂದು ಇಚ್ಛೆಯು ಯಾರಿಗೆ ಇರುವುದೋ ಅವರು ಹೊಟ್ಟೆ ಮೊದಲು ಅನ್ಯಾಯದಿಂದ ಧನ ಸಂಪಾದನೆಯನ್ನು ಮಾಡುವದಿಲ್ಲೆಂದು ನಿಶ್ಚಯ ಮಾಡಬೇಕು. ಅದರಂತೆ ಪರಸ್ತ್ರೀಯರ ವಿಷಯದಲ್ಲಿ ಮನದೊಳಗೆ ಅನುರಾಗವನ್ನು ಇಡಕೂಡದು. ಅಭಕ್ಷ್ಯ ಭಕ್ಷಣವನ್ನೂ ಮಾಡಬಾರದು. ಪರಮಾತ್ಮ ಸ್ವರೂಪವನ್ನು ಯಾವಾಗಲೂ ಧ್ಯಾನಿಸುತ್ತ ಇರಬೇಕು ಇದರಿಂದಲೇ ಆತ್ಮನ ನಿಜವಾದ ಶುದ್ಧಿಯು ಉಂಟಾಗುತ್ತದೆ ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ ಮತ್ತು ಪರಿಗ್ರಹತ್ಯಾಗ ಈ ಐದು ಮಹಾ ವ್ರತಗಳಿಂದಲೇ ನಿಜವಾದ ಶೌಚಧರ್ಮವು ಸಾಧಿಸುತ್ತದೆ. ಯಾರು ಯಾವಾಗಲೂ ಐದು ಪಾಪಗಳನ್ನು ಮಾಡುವುದರಲ್ಲಿ ಮಗ್ನರಾಗಿರುವರೋ ಅವರ ಆತ್ಮವು ಸದಾ ಮಲಿನವಾಗಿಯೇ ಇರುವುದು. ಯಾರು ಪರೋಪಕಾರವನ್ನೂ ಅರಿಯುವದಿಲ್ಲವೋ ಅವರು ಕೃತಘ್ನರು ಇಂಥವರ ಆತ್ಮಕ್ಕೆ ಶುದ್ಧಿ ಎಲ್ಲಿಯದು? ಗುರುದ್ರೋಹಿ, ಧರ್ಮದ್ರೋಹಿ, ಸ್ವಾಮಿದ್ರೋಹಿ, ಮಿತ್ರದ್ರೋಹಿ ಮತ್ತು ಕೃತಘ್ನ ಜನರ ಪಾಪದ ಪರಂಪರೆಯು ಅಸಂಖ್ಯಾತ ಜನ್ಮಗಳ ವರೆಗೆ ಕಡಿಯುವದಿಲ್ಲ ಅವರು ದೊಡ್ಡ ದೊಡ್ಡ ತೀರ್ಥಗಳಲ್ಲಿ ಹೋಗಿ ಸ್ನಾನಮಾಡಲಿ, ದಾನಮಾಡಲಿ ಆದರೂ ಅವರ ಪಾಪವು ಇಲ್ಲದಂತೆ ಆಗುವದಿಲ್ಲ ವಿಶ್ವಾಸಘಾತ ಮಾಡುವವರ ವಿಚಾರಗಳೂ ಕೂಡ ಮೇಲಿನವ-ರಂತೆಯೇ ಯಾವಾಗಲೂ ದುಷ್ಟವಾಗಿರುತ್ತವೆ ಅದಕ್ಕಾಗಿ ಇವೆಲ್ಲವುಗಳ ವಿಚಾರಮಾಡಿ ಪರಮ ವೀತರಾಗ ಭಗವಂತನ ಆಜ್ಞೆಯಂತೆ ಶುದ್ಧ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳ ಪಾಲನಮಾಡಬೇಕು ಕಾಮಕ್ರೋಧಾದಿ ಕಷಾಯಗಳನ್ನು ಗೆದ್ದು, ಉತ್ತಮ ಕ್ಷಮಾಮಾರ್ದವಾದಿ ಗುಣಗಳನ್ನು ಧಾರಣಮಾಡಬೇಕು ಇದರಿಂದಲೇ ಆತ್ಮವು ಶುದ್ಧವಾಗುತ್ತದೆ ಎಲ್ಲ ವ್ಯವಹಾರಗಳನ್ನೂ ಯಾವಾಗಲೂ ನಿಷ್ಕಪಟ ಭಾವದಿಂದ ಮಾಡುತ್ತಿರಬೇಕು ಅನ್ಯರ ವೈಭವ, ಕೀರ್ತಿ ಮತ್ತು ಪುಣ್ಯೋದಯಗಳನ್ನು ಕಂಡು ತಮ್ಮ ಅಂತಃಕರಣದಲ್ಲಿ ಮತ್ಸರ ಉತ್ಪನ್ನವಾಗಗೊಡಬಾರದು ಮನುಷ್ಯ ಜನ್ಮ, ಅದರಲ್ಲಿ ಪ್ರಾಪ್ತವಾಗುವ ಇಂದ್ರಿಯಗಳ ವಿಷಯ, ಬಲ, ಆಯುಷ್ಯ, ಸಂಪತ್ತಿ ಮೊದಲಾದವುಗಳೆಲ್ಲವೂ ಕ್ಷಣಭಂಗುರ-ವಾಗಿವೆ ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಏಕಾಗ್ರ ಚಿತ್ತದಿಂದ ಆತ್ಮ ಸ್ವರೂಪವನ್ನು ಚಿಂತಿಸುವುದರಲ್ಲಿ ಕಾಲವನ್ನು

ಕಳೆಯಬೇಕು ಅಂದರೆ ಅದರಿಂದ ಅಶುಭ ವಿಚಾರಗಳು ಹುಟ್ಟವೆ ಆತ್ಮ ಶುದ್ಧಿಯು ಆದೀತು. ಆತ್ಮವನ್ನು ಶುದ್ಧವಾಗಿ ಇಡುವುದು, ಆದರಲ್ಲಿ ವಿಕಾರವು ಉತ್ಪನ್ನವಾಗದಂತೆ ಪ್ರಯತ್ನಿಸುವುದು ಇದೇ ನಿಜವಾದ ಶೌಚಧರ್ಮ-ವಾಗಿದೆ ಈ ಶೌಚ ಧರ್ಮವೇ ಮೋಕ್ಷ ಮಾರ್ಗವಾಗಿದ್ದು, ಆತ್ಮವನ್ನು ಅವಿನಾಶಿ ಪದಕ್ಕೆ ಮುಟ್ಟಿಸುವಂಥದ್ದಾಗಿದೆ.

## ಸತ್ಯ

ಸತ್ಯದ ಮಹಿಮೆ—ಸತ್ಯ ಮಾತನಾಡುವುದು ಧರ್ಮವಾಗಿದೆ ಸತ್ಯ ವಚನವೇ ದಯಾಧರ್ಮದ ಮೂಲ ಕಾರಣವು. ಇದರಿಂದ ಅನೇಕ ದೋಷಗಳ ಪರಿಮಾರ್ಜನೆಯು ಆಗುತ್ತದೆ. ಈ ಜನ್ಮದಲ್ಲಿಯೂ ಪರಜನ್ಮದಲ್ಲಿಯೂ ಸುಖವು ಉತ್ಪನ್ನವಾಗಲಿಕ್ಕೆ ಸತ್ಯ ವಚನವೇ ಕಾರಣವಾಗುತ್ತದೆ. ಸತ್ಯ ಮಾತಾಡುವುದರಿಂದ ಮನುಷ್ಯನು ಲೋಕದಲ್ಲಿ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ ಎಲ್ಲ ಧರ್ಮಗಳಲ್ಲಿಯೂ 'ಸತ್ಯ ಮಾತಾಡುವುದು' ಒಂದು ಮುಖ್ಯ ಧರ್ಮಾಚರಣೆ ಎನಿಸುತ್ತದೆ ಅದು ಸಂಸಾರಸಮುದ್ರದೊಳಗಿಂದ ತೇಲಿಸಿ ಒಯ್ಯಲಿಕ್ಕೆ ಒಂದು ಹಡಗವಿದ್ದಂತಿರುತ್ತದೆ ಎಲ್ಲ ವಿಧಾನಗಳಲ್ಲಿಯೂ ಸತ್ಯ ವಿಧಾನವು ದೊಡ್ಡದಾಗಿದೆ ಹೆಚ್ಚಿಗೇನು? ಎಲ್ಲ ಸುಖಗಳ ತವರು ಮನೆಯು ಸತ್ಯವೇ ಆಗಿದೆ ಸತ್ಯ ವಚನದಿಂದಲೇ ಮಾನವ ಜನ್ಮಕ್ಕೆ ಶೋಭೆಯುಂಟಾಗುತ್ತದೆ ಸತ್ಯ ಭಾಷಣವಿದ್ದರೇನೇ ಎಲ್ಲ ಪುಣ್ಯ ಕರ್ಮಗಳು ಉಜ್ವಲವಾದಾವು ಪುಣ್ಯೋತ್ಪಾದಕವಾದ ಅನೇಕ ಉಚ್ಚ ಕಾರ್ಯಗಳು ಲೋಕದಲ್ಲಿ ನಡೆಯುತ್ತವೆ. ಅವೆಲ್ಲವುಗಳ ಮೂಲದಲ್ಲಿ ಸತ್ಯವಿರದಿದ್ದರೆ ಪ್ರಭಾವವು ಬೀಳಲಾರದು ಸತ್ಯ ಧರ್ಮವು ನಮ್ಮಲ್ಲಿ ಇದ್ದರೇನೇ ಎಲ್ಲ ಗುಣಗಳ ಪ್ರಭಾವವು ಹೆಚ್ಚಾದೀತು ಸತ್ಯದ ಪ್ರಭಾವದಿಂದ ದೇವರೂ ಸಹ ಸೇವೆಯನ್ನು ಮಾಡ ಹತ್ತುವರು. ಅಣುವ್ರತಗಳು ಈ ಸತ್ಯ ಗುಣದಿಂದಲೇ ಮಹಾವ್ರತಗಳಾಗುತ್ತವೆ ಸತ್ಯವಿಲ್ಲದ ವ್ರತ, ಸಂಯಮಗಳೂ ಸಹ ವ್ಯರ್ಥವಾಗುತ್ತವೆ ಸತ್ಯದಿಂದ ಎಲ್ಲ ಸಂಕಟಗಳ ನಿವಾರಣೆಯು ಆಗುತ್ತದೆ ಅಂತಲೇ ಯಾವಾಗಲೂ ಸ್ವ-ಪರ ಹಿತವನ್ನು ಮಾಡುವಂಥದನ್ನೇ ನೀವು ಮಾತನಾಡಿರಿ ಯಾರಿಗೂ ನಿಮ್ಮ ಮಾತಿನಿಂದ ದುಃಖವಾದೀತು ಎನ್ನುವ ಹಾಗೆ ಮಾತನಾಡಬೇಡಿರಿ ಸತ್ಯವಿದ್ದರೂ ಸಹ ಅದು ಪರಜೀವಗಳಿಗೆ ಬಾಧೆಯನ್ನು ಮಾಡುತ್ತಿದ್ದರೆ ಅಂಥದನ್ನೂ ಕೂಡ ನುಡಿಯಬೇಡಿರಿ. ಯಾವಾಗಲೂ ಮುಖದಿಂದ ಮೃದುವಚನಗಳನ್ನು ಉಚ್ಚರಿಸಿರಿ ಪರಮಾತ್ಮನ ಅಸ್ತಿತ್ವವು ಯಾವ ಮಾತುಗಳಿಂದ ಪ್ರಸ್ಥಾಪಿತವಾದೀತೊ ಅಂಥ ಶಬ್ದಗಳನ್ನೇ ಬಾಯಿಂದ ಉಚ್ಚರಿಸಿರಿ ನಾಸ್ತಿಕರಂತೆ 'ಪಾಪ-ಪುಣ್ಯವೆಂದರೇನು? ಅದು ಹೇಗಿರುತ್ತದೆ? ಪ್ರತ್ಯಕ್ಷ ಕಾಣುವದಿಲ್ಲವಲ್ಲ? ಸ್ವರ್ಗ, ನರಕ, ಮೋಕ್ಷಗಳು ಎಲ್ಲಿವೆ? ಅವೆಲ್ಲ ಕೇವಲ ಕಲ್ಪನೆಗಳು ಇದರಲ್ಲಿ ನಿಜವಾದುದು ಏನೂ ಇಲ್ಲ.' ಎಂದು ಮೊದಲಾಗಿ ಮಾತನಾಡಬೇಡಿರಿ ನಾನು ಯಾರು, ಎಲ್ಲಿಂದ ಬಂದೆ, ಎಲ್ಲಿಗೆ ಹೋಗುವವ, ನನ್ನ ಅವಸ್ಥೆ ಯಾವುದು—ಇವೆಲ್ಲವುಗಳನ್ನು ಪರಮಾಗಮದ ಆಶ್ರಯದಿಂದ ವಿಚಾರಮಾಡಿ, ಏನು ಮಾತನಾಡಬೇಕೋ ಅದನ್ನೇ ಮಾತನಾಡಬೇಕು.

ವಚನೋಚ್ಚಾರದ ದುರ್ಲಭತೆ—ಈ ಜೀವವು ಅನಂತಾನಂತ ಕಾಲದ ವರೆಗೆ ನಿಗೋದದಲ್ಲಿ ವಾಸ ಮಾಡಿದೆ ಅಲ್ಲಿ ಅದಕ್ಕೆ ವಚನರೂಪ ಕಾರ್ಮಣ ವರ್ಗಣಾ ಗ್ರಹಣಮಾಡುವ ಸಾಮರ್ಥ್ಯವು ಇಲ್ಲದುದರಿಂದ ಮಾತನಾಡುವ ಶಕ್ತಿಯೂ ಇರಲಿಲ್ಲ. ಮುಂದೆ ಪೃಥ್ವಿಕಾಯ, ಆಪ್‌ಕಾಯ, ತೇಜಸ್ಕಾಯ, ವಾಯುಕಾಯ ಮತ್ತು ವನಸ್ಪತಿಕಾಯ ಈ ಪಂಚ ಸ್ಥಾವರ ಏಕೇಂದ್ರಿಯ ಜೀವಗಳ ಅವಸ್ಥೆಯಲ್ಲಿಯೂ ಅನಂತಕಾಲ ಕಳೆದಿದೆ ಅಲ್ಲಿ ಜಿಹ್ವೇಂದ್ರಿಯವು ಇಲ್ಲದುದರಿಂದ ಮಾತನಾಡುವ ಶಕ್ತಿಯು ಪ್ರಾಪ್ತವಾಗಲಿಲ್ಲ ಆ ಮೇಲೆ ದ್ವೀಂದ್ರಿಯ ಮೊದಲು-ಗೊಂಡು ಪಂಚೇಂದ್ರಿಯಗಳ ವರೆಗೆ ವಿಕಲ ಚತುಷ್ಕ ಯೋನಿಯಲ್ಲಿ ಉತ್ಪನ್ನವಾಯಿತು ತರುವಾಯ ಪಂಚೇಂದ್ರಿಯ ತಿರ್ಯಂಚದಲ್ಲಿ ಜನ್ಮವಾಯಿತು. ಅಲ್ಲಿ ಜಿಹ್ವೇಂದ್ರಿಯ ಪ್ರಾಪ್ತವಾಯಿತು ಆದರೆ ಅಕ್ಷರ ಉಚ್ಚರಿಸುವ ಸಾಮರ್ಥ್ಯವು ಉಂಟಾಗಲಿಲ್ಲ ಅದಕ್ಕಾಗಿ ಮಾತನಾಡಲಿಕ್ಕೆ ಬರಲಿಲ್ಲ ಯಾವಾಗ ಜೀವಕ್ಕೆ ಮನಸ್ಸು ಯೋನಿಯು ಪ್ರಾಪ್ತ-ವಾಯಿತೋ ಆಗಲೇ ಅದಕ್ಕೆ ಮಾತನಾಡುವ ಶಕ್ತಿಯು ಪ್ರಾಪ್ತವಾಯಿತು. ಕೇವಲ ಮಾನವ ಜನ್ಮದಲ್ಲಿ ಮಾತ್ರ ಈ ಶಕ್ತಿಯು ಪ್ರಾಪ್ತವಾಗುತ್ತದೆ ಇದು ಲಭಿಸಲಿಕ್ಕೆ ಬಹು ದೀರ್ಘಕಾಲ ಬೇಕಾಗುತ್ತದೆ ಇಂಥ ದುರ್ಲಭವಾದ ವಚನ ಶಕ್ತಿಯು ಕೇವಲ ಮನುಷ್ಯ ಜನ್ಮದಲ್ಲಿ ಮಾತ್ರ ದೊರಕಿದಾಗ ಅದರ ಮಹತ್ವವನ್ನು ತಿಳಿಯದೆ ಏನಾದರೊಂದನ್ನೂ ಬಡಬಡಿಸಿ ಅದನ್ನು ಅಪವ್ಯಯಗೊಳಿಸುವುದು, ದೊಡ್ಡ ಅನರ್ಥಕರವಾಗಿದೆ. ಮನುಷ್ಯ ಜನ್ಮದ ಮಹಿಮೆಯು ಒಂದು ವಚನ ಶಕ್ತಿಯನ್ನೇ ಅವಲಂಬಿಸಿದೆ ಉಳಿದ ನಾಲಿಗೆ, ಕಿವಿ, ಮೂಗು ಮೊದಲಾದ ಇಂದ್ರಿಯಗಳು ನಮ್ಮಂತೆಯೇ

ತಿನ್ನಲು, ಕುಡಿಯಲು, ಆಹಾರ ವಿಹಾರ ಮಾಡಲು ಎಲ್ಲ ಪಶುಗಳಿಗೂ ಅವವುಗಳ ಪಾಪಪುಣ್ಯಗಳಿಗೆ ಅನುಸರಿಸಿ ಪ್ರಾಪ್ತವಾಗುತ್ತಿರುತ್ತವೆ. ಆಭರಣ ವಸ್ತ್ರ ಪ್ರಾವರಣಾದಿಗಳೂ ನಮ್ಮಂತೆಯೇ ಅವುಗಳಿಗೂ ಒಮ್ಮೊಮ್ಮೆ ಪ್ರಾಪ್ತ-ವಾಗುತ್ತವೆ ಯಾಕೆಂದರೆ ನಾವು ಆನೆ, ಕುದುರೆ, ಒಂಟೆ, ಎತ್ತು ಮೊದಲಾದ ಪಶುಗಳ ಮೇಲೆ ಹೆಚ್ಚು ಬೆಲೆಬಾಳುವ ವಸ್ತ್ರ, ಆಭರಣಗಳನ್ನೂ ಹಾಕುತ್ತೇವೆ ಅವುಗಳನ್ನು ಧರಿಸುವ ಸಂದರ್ಭ ಆ ಪಶುಗಳಿಗೂ ಒದಗುತ್ತದೆ. ಆದರೆ ಅವುಗಳಿಗೆ ಮಾತನಾಡುವ ಸಾಮರ್ಥ್ಯವೂ ಮಾತನ್ನು ಕೇಳಿ ಅದಕ್ಕೆ ಪ್ರತ್ಯುತ್ತರ ಕೊಡುವ ಶಕ್ತಿಯೂ ಇರುವದಿಲ್ಲ. ಅದು ಕೇವಲ ಮಾನವ ಜನ್ಮದಲ್ಲಿಯೇ ಪ್ರಾಪ್ತವಾಗುವಂಥದಿದೆ ಮಾತಿನಿಂದಲೇ ಕಲಿಯುವಿಕೆ ಕಲಿಸುವಿಕೆಗಳು ನಡೆಯುತ್ತವೆ ಅದಿಲ್ಲದಿದ್ದರೆ ಏನು ಕಲಿಸುವುದು ಮತ್ತು ಹೇಗೆ ಕಲಿಸುವುದು? ಈ ಪ್ರಕಾರ ದುರ್ಲಭ ಮನುಷ್ಯ ಜನ್ಮವು ಪ್ರಾಪ್ತವಾಗಿಯೂ ಕೂಡ ಅದರಲ್ಲಿ ನಾವು ನಮ್ಮ ವಚನವನ್ನು ಕಾಯ್ದುಕೊಳ್ಳದಿದ್ದರೆ ನಮ್ಮ ಎಲ್ಲ ಜನ್ಮವು ವ್ಯರ್ಥವಾದಂತಾದೀತು ಮನುಷ್ಯ ಜನ್ಮದಲ್ಲಿ ಕೊಡುವುದೂ, ತಕ್ಕೊಳ್ಳುವುದು, ಕೇಳುವುದು, ಧರ್ಮ, ಕರ್ಮ, ಪ್ರೀತಿ, ವೈರ ಮೊದಲಾದ ಎಲ್ಲ ಪ್ರವೃತ್ತಿರೂಪ ಅಥವಾ ನಿವೃತ್ತಿರೂಪ ಕ್ರಿಯೆಗಳು ವಚನದ ಆಧಾರದಿಂದಲೇ ನಡೆಯುತ್ತಿರುತ್ತವೆ ಅಂದ ಮೇಲೆ ನಾವು ವಚನವನ್ನೇ ದೂಷಿತಗೊಳಿಸಿಕೊಂಡರೆ ಮನುಷ್ಯ ಜನ್ಮದೊಳಗಿನ ಎಲ್ಲ ವ್ಯವಹಾರವನ್ನೂ ದೂಷಿತಗೊಳಿಸಿದಂತಾದೀತು ಅದಕ್ಕಾಗಿ ಜೀವ ಹೋದರೂ ಸಹ ಹೋಗಲಿ. ಮಿಥ್ಯಾವಚನವನ್ನು ಆಡಕೂಡದು

**ಅಸತ್ಯದ ನಾಲ್ಕು ಪ್ರಕಾರಗಳು**—ಪರಮಾಗಮದಲ್ಲಿ ಅಸತ್ಯವಚನವು ನಾಲ್ಕು ವಿಧವಾಗಿರುತ್ತದೆಂದು ಹೇಳಲಾಗಿದೆ ಇವುಗಳನ್ನು ತ್ಯಜಿಸಿರಿ. ಅವುಗಳಲ್ಲಿ ಮೊದಲನೆಯ ಅಸತ್ಯವು, ಆಗಮದಲ್ಲಿ ಹೇಳಿದ ತತ್ತ್ವದ ಸ್ವರೂಪವನ್ನೂ ಅಲ್ಲಗಳೆಯುವುದು ಹೇಗೆಂದರೆ ಕರ್ಮಭೂಮಿಯೊಳಗಿನ ಮನುಷ್ಯ, ತಿರ್ಯಂಚರಿಗೆ ಅಕಾಲ ಮೃತ್ಯುವು ಒದಗುವದಿಲ್ಲವೆಂದು ಪ್ರತಿವಾದಿಸುವದು. ಇದು ಮೊದಲನೆಯ ಪ್ರಕಾರದ ಅಸತ್ಯವಾಗಿದೆ. ಕರ್ಮ ಭೂಮಿಯೊಳಗಿನ ಮನುಷ್ಯ ಮತ್ತು ಪಶುಗಳಿಗೆ ಅಕಾಲದಲ್ಲಿ ಮೃತ್ಯುವು ಒದಗುತ್ತದೆಂದು ಭಗವಂತನ ವಚನವಿದೆ ಇದಕ್ಕೆ ವಿಪರೀತವಾಗಿ ಮಾತನಾಡುವುದು ಅಸತ್ಯವೆನಿಸುತ್ತದೆ ದೇವ, ನಾರಕಿ ಮತ್ತು ಭೋಗ ಭೂಮಿಯೊಳಗಿನ ಮನುಷ್ಯ ತಿರ್ಯಂಚರ ಆಯುಷ್ಯವು ಪೂರ್ಣವಾಗದ ಹೊರತಾಗಿ ಮರಣವು ಒದಗುವದಿಲ್ಲ ಆದರೆ ಕರ್ಮ-ಭೂಮಿಯಲ್ಲಿ ವಿಷತಿನ್ನುವುದರಿಂದ, ಹೊಡೆತ, ಬಡಿತ, ಕೊಲೆ, ಕಡಿಯುವಿಕೆ, ಒಡೆಯುವಿಕೆ, ಕಟ್ಟುವಿಕೆ ಮೊದಲಾದ ವೇದನೆಗಳಿಂದಲೂ ರೋಗದ ತೀವ್ರ ತಾಪದಿಂದಲೂ ರಕ್ತದ ಅಭಾವದಿಂದಲೂ ದುಷ್ಟ ಮನುಷ್ಯರು ಮತ್ತು ತಿರ್ಯಂಚರು ಕೊಟ್ಟ ಉಪದ್ರವದಿಂದಲೂ ದೇವದಾನವರ ಭೀತಿಯಿಂದಲೂ ವಜ್ರಘಾತ, ಸ್ವಚಕ್ರ ಪರಚಕ್ರದ ಭಯ, ಶಸ್ತ್ರಘಾತ, ಪರ್ವತದ ಮೇಲಿಂದ ಹಾರುವುದು, ಬೆಂಕಿ ನೀರುಗಳಲ್ಲಿ ಬೀಳುವುದು, ಗಾಳಿ, ಜಗಳದೊಳಗಿನ ಸಂತಾಪ, ಶ್ವಾಸೋಚ್ಛ್ವಾಸ ತಡೆಯುವಿಕೆ, ಹೊಗೆಯಲ್ಲಿ ಸಿಗುವಿಕೆ, ಉಸುರು ಕಟ್ಟುವಿಕೆ, ಆಹಾರಪಾನಗಳ ನಿರೋಧ ಇವೇ ಮೊದಲಾದ ಬಾಹ್ಯಕಾರಣಗಳಿಂದ ಆಯುಷ್ಯವು ನಾಶಹೊಂದುತ್ತದೆ ಆಯುಷ್ಯದ ಸ್ಥಿತಿಯು ಪೂರ್ಣವಾಗಿರದಿದ್ದರೂ ಮೇಲಿನ ಕಾರಣಗಳಿಂದ ಮರಣವು ಪ್ರಾಪ್ತವಾಗುತ್ತದೆ ಹಲವರ ತಿಳುವಳಿಕೆಯು ಆಯುಷ್ಯವು ಮುಗಿಯದ ಹೊರತಾಗಿ ಮರಣವು ಬರುವದಿಲ್ಲವೆಂದಿರುತ್ತದೆ ಒಂದು ವೇಳೆ ಹಾಗಿದ್ದರೆ ವಿಷಭಕ್ಷಣದಿಂದ ಪರಾಙ್ಮುಖನಾಗುವುದರ ಪ್ರಯೋಜನವಾದರೂ ಏನಿದೆ? ವಿಷವನ್ನು ತಿಂದ ಮೇಲೆ ವಾಂತಿಯ ಔಷಧಕೊಟ್ಟು ಅದನ್ನು ತಿರುಗಿ ಹೊರಗೆ ಹಾಕುವ ಪ್ರಯತ್ನವನ್ನಾದರೂ ಏಕೆ ಮಾಡಲಾಗುತ್ತಿತ್ತು? ನಮ್ಮ ಮೇಲೆ ಶಸ್ತ್ರವನ್ನು ತಕ್ಕೊಂಡು ಏರಿ ಬರುವ ಮನುಷ್ಯನನ್ನು ನೋಡಿದ ಕೂಡಲೆ ಆತ್ಮರಕ್ಷಣೆಗಾಗಿ ಹೆದರುವ ಕಾರಣವಾದರೂ ಏನಿದೆ? ಸಿಂಹ, ಹುಲಿ, ಹಾವಿನಂಥ ಪ್ರಾಣಹರಣ ಮಾಡುವ ಪ್ರಾಣಿಗಳನ್ನು ನೋಡಿದ ಕೂಡಲೆ ದೂರ ಓಡಿಯಾದರೂ ಏಕೆ ಹೋಗಬೇಕು? ನದಿ, ಸಮುದ್ರ, ಬಾವಿ ಮೊದಲಾದವುಗಳಲ್ಲಿ ಬೀಳಲಿಕ್ಕೂ, ಅಗ್ನಿಯಲ್ಲಿ ಹಾರಲಿಕ್ಕೂ ಹಿಂದೆಗೆಯುವ ಕಾರಣವಾದರೂ ಏನು? ರೋಗವು ಪ್ರಾಪ್ತವಾದಲ್ಲಿ ಅದಕ್ಕೆ ಉಪಾಯವನ್ನಾದರೂ ಏಕೆ ಯೋಚಿಸಬೇಕು? ಹೀಗೆ ಎಷ್ಟೆಂತ ಉದಾಹರಣೆಗಳನ್ನು ಕೊಡುತ್ತ ಹೋಗುವುದು ಒಂದು ವೇಳೆ ಆಯುಷ್ಯವು ಪೂರ್ಣವಾಗದ ಹೊರತಾಗಿ ಮರಣವು ಒದಗುವುದೇ ಇಲ್ಲವೆಂಬ ನಿಯಮವಿದ್ದರೆ ಮೇಲೆ ಹೇಳಿದ ಎಲ್ಲ ಕಾರಣಗಳಿಗಾಗಿ ಮನುಷ್ಯ ಪ್ರಾಣಿಯು ಹೆದರುವ ಕಾರಣವೇ ಇರಲಿಲ್ಲ ಆದರೆ ಹಾಗೆ ವಸ್ತು ಸ್ಥಿತಿಯು ಇಲ್ಲ. ಆಯುರ್ಘಾತವಾಗಲಿಕ್ಕೆ ಅಂತರಂಗ ಅಥವಾ ಬಾಹ್ಯ ಕಾರಣಗಳು ಸಂಭವಿಸಿದೊಡನೆಯೇ ಮರಣವು ಒದಗುತ್ತದೆಂಬುದೇ ಸಿದ್ಧವಾಗುತ್ತದೆ.

ಆಯು ಕರ್ಮದಂತೆಯೇ ಇತರ ಕರ್ಮಗಳೂ ಕೂಡ ಬಾಹ್ಯ ಕಾರಣಗಳು ಪ್ರಾಪ್ತವಾದಾಗ ಉದಯವನ್ನು ಹೊಂದಿ ತಮ್ಮ ರಸವನ್ನು ಒದಗಿಸ ಹತ್ತುತ್ತವೆ ಸರ್ವ ಜೀವಗಳ ಪಾಪಪುಣ್ಯಗಳ ಉದಯವು ಸತ್ತೆಯಲ್ಲಿ ಅಸ್ತಿತ್ವದಲ್ಲಿರುತ್ತದೆ ಹೊರಗಿನ ದ್ರವ್ಯ ಕ್ಷೇತ್ರ ಕಾಲ ಭಾವಾದಿ ಪರಿಪೂರ್ಣ ಸಾಮಗ್ರಿಗಳು ಪ್ರಾಪ್ತವಾದ ಕೂಡಲೇ ಕರ್ಮವು ತನ್ನ ಫಲವನ್ನು ಕೊಡಲಿಕ್ಕೆ ಪ್ರಾರಂಭಿಸುತ್ತದೆ. ಬಾಹ್ಯ ಸಾಮಗ್ರಿಗಳು ಲಭಿಸದಿದ್ದರೆ ಅವು ಉದಯ ಹೊಂದದೆ ಫಲ ಕೊಡದೆಯೂ ನಷ್ಟಹೊಂದುತ್ತವೆ ಈ ಪ್ರಕಾರ ಅಸ್ತಿತ್ವದಲ್ಲಿ ಇರುವ ಪದಾರ್ಥಗಳು 'ಇಲ್ಲ'ವೆಂದು ಪ್ರತಿಪಾದಿಸುವುದು ಮೊದಲನೆಯ ಅಸತ್ಯವಾಗಿದೆ

ಅಸದ್‌ಭೂತವೆಂದರೆ ಯಾವುದು ಮೂಲದಲ್ಲಿಯೇ ಇಲ್ಲವೋ ಅದು 'ಇದೆ' ಎಂದು ಪ್ರತಿಪಾದಿಸುವುದು ಎರಡನೆಯ ಅಸತ್ಯವಾಗಿದೆ ದೇವರಿಗೆ ಅಕಾಲ ಮೃತ್ಯುವಿದೆ, ದೇವರು ಆಹಾರವನ್ನು ಗ್ರಹಣಮಾಡುವರು, ದೇವರು ಮಾಂಸ ಭಕ್ಷಣ ಮಾಡುವರು; ಮನುಷ್ಯ ಮತ್ತು ದೇವ ಸ್ತ್ರೀಯರು ಹಾಗೂ ದೇವ ಮತ್ತು ಮಾನವಸ್ತ್ರೀಯರಲ್ಲಿ ಪರಸ್ಪರ ಮೈಥುನ ವ್ಯವಹಾರವು ನಡೆಯುತ್ತದೆ ಇವೇ ಮೊದಲಾದ ಸಂಗತಿಗಳನ್ನು ಹೇಳುವುದು ಎರಡನೆಯ ಪ್ರಕಾರದ ಅಸತ್ಯದ ಭೇದವೆಂದು ತಿಳಿಯಬೇಕು.

ಪದಾರ್ಥದ ವಿಪರೀತ ಸ್ವರೂಪವನ್ನು ಹೇಳುವುದು ಅಸತ್ಯದ ಮೂರನೆಯ ಭೇದವಾಗಿದೆ

ನಿಂದ್ಯ ವಚನಗಳನ್ನು ಮುಖದಿಂದ ಆಡುವುದು ಅಸತ್ಯದ ನಾಲ್ಕನೆಯ ಪ್ರಕಾರವಾಗಿದೆ ಇದರಲ್ಲಿ ಗರ್ಹಿತ, ಸಾವದ್ಯ, ಅಪ್ರಿಯಗಳೆಂದು ಮೂರು ಭೇದಗಳಿರುತ್ತವೆ

ಗರ್ಹಿತ ವಚನತ್ಯಾಗ—ಪೈಶೂನ್ಯ, ಹಾಸ, ಕರ್ಕಶ, ಅಸಮಂಜಸ, ಪ್ರಲಪಿತ ಮೊದಲಾದ ಅನೇಕ ಪ್ರಕಾರದ ಶಾಸ್ತ್ರವಿರುದ್ಧ ಸಂಭಾಷಣ ಮಾಡುವುದು ಗರ್ಹಿತವಚನವೆನಿಸುತ್ತದೆ ಇದರಲ್ಲಿಯೇ ಅನ್ಯರ ಇರುವ ಹಾಗೂ ಇಲ್ಲದಿರುವ ದೋಷಗಳನ್ನು ಅವರ ಹಿಂದುಗಡೆಯಲ್ಲಿ ಮಾತನಾಡುವುದು, ಅನ್ಯರ ಧನ, ಉಪಜೀವಿಕೆ, ಪ್ರಾಣದ ನಾಶವೂ ಸಹ ಹೊತ್ತು ಹೊತ್ತಿಗೆ ಆಗುವಂತೆ ಮಾತನಾಡುವುದು, ಜಗತ್ತಿನಲ್ಲಿ ತಮ್ಮ ಭಾಷಣದಿಂದ ಇನ್ನೊಬ್ಬರ ನಿಂದೆಯಾಗುವಂತೆಯೂ ಇಲ್ಲವೆ ಅವರ ಮೇಲೆ ಅಪವಾದ ಆಪರಿಸುವಂತೆಯೂ ಮಾತನಾಡುವುದು—ಇವೆಲ್ಲ ಸಮಾವೇಶವಾಗುತ್ತವೆ ಇಂಥ ಸಂಭಾಷಣಗಳೆಲ್ಲ ಗರ್ಹಿತ ವಚನಗಳಲ್ಲಿಯೇ ಸಮಾವೇಶವಾಗುತ್ತವೆ ನಗೆ ಮಾತುಗಳಲ್ಲಿ ಅಭದ್ರ ನುಡಿಗಳನ್ನು ಬಾಯಿಂದ ಉಚ್ಚರಿಸುವುದು, ತಮ್ಮ ಮಾತಿನಿಂದ ಅನ್ಯರಿಗೆ ಕ್ರೋಧವು ಉತ್ಪನ್ನವಾಗುವಂತೆ ನುಡಿಯುವುದು ಇವುಗಳಿಗೆ ಹಾಸ್ಯವೆಂಬ ಹೆಸರಿನ ಗರ್ಹಿತ ವಚನವೆನ್ನಬೇಕು ಅನ್ಯರಿಗೆ ಅವರ ಎದುರಿಗೇನೇ ಮೂರ್ಖ, ಕತ್ತೆ, ಅಜ್ಞಾನಿ ಮೊದಲಾದವುಗಳೆನ್ನುವುದು ಕರ್ಕಶ ವಚನವೆನ್ನಿಸುತ್ತದೆ ದೇಶಕಾಲಗಳಿಗೆ ಅನುಸರಿಸಿ ಇಲ್ಲದ ಮತ್ತು ಯಾವುದರಿಂದ ಅನ್ಯರಿಗೂ ತಮಗೂ ಸಂತಾಪ ಉತ್ಪನ್ನವಾಗುವುದೋ ಅಂಥ ಸಂಭಾಷಣೆ-ಯನ್ನು ಮಾಡುವುದು ಅಸಮಂಜಸವಚನವೆನಿಸುತ್ತದೆ. ಇದಕ್ಕೆ ಮೂರ್ಖರ ಮಾತು ಎಂದು ಹೇಳುವರು ಪ್ರಯೋಜನವಿಲ್ಲದೆ ವಿನಾಕಾರಣ ಧೈರ್ಯದಿಂದ ಬಡಬಡಿಸುವವಕ್ಕೆ ಪ್ರಲಪಿತಗರ್ಹಿತ ವಚನವೆನ್ನುವರು ಇವು ಗರ್ಹಿತದ ಭೇದಗಳಾಗಿವೆ

ಸಾವದ್ಯ ವಚನದ ತ್ಯಾಗ—ಯಾವ ಮಾತಿನಿಂದ ಒಬ್ಬರ ಪ್ರಾಣವು ಹೋದೀತೋ ಅಂಥ ವಚನಕ್ಕೆ ಸಾವದ್ಯ ವಚನವೆನ್ನಬೇಕು ಇದರಲ್ಲಿ ದೇಶದ ಮೇಲೆ ಸಂಕಟ, ದೇಶದ ಸುಲಿಗೆ, ರಾಜನೊಡನೆ ವೈರ, ನಗರಕ್ಕೆ ಬೆಂಕಿ ಹತ್ತುವಿಕೆ, ಯಾರ ಮನೆಯನ್ನಾಗಲಿ ಅಡವಿಯನ್ನಾಗಲಿ ಸುಟ್ಟು ಬಿಡುವಿಕೆ, ಕಲಹ, ವಿಸಂವಾದ ಇಲ್ಲವೆ ಯುದ್ಧ ಆರಂಭವಾಗುವಿಕೆ, ಕೆಲವರ ಮೇಲೆ ಕೆಟ್ಟ ಪರಿಣಾಮವಾಗಿ ಅವರು ದುಃಖದಿಂದ ಸಾಯುವಂತಾಗುವಿಕೆ, ಎಲ್ಲರೊಡನೆ ಶತ್ರುತ್ವವು ಉತ್ಪನ್ನವಾಗುವಿಕೆ, ಷಟ್‌ಕಾಯ ಜೀವಗಳ ಹಿಂಸೆಯಾಗುವಿಕೆ, ಮಹಾನ್ ಹಿಂಸೆಯಾದೀತು ಇಂಥ ಎಲ್ಲ ಪರಿಣಾಮಗಳನ್ನು ಮಾಡುವ ಭಾಷಣಕ್ಕೆ ಸಾವದ್ಯ ಬಾಷಣವೆಂದೇ ಹೇಳಲಾಗುವುದು. ಇದೇ ಪ್ರಕಾರ ಅನ್ಯರಿಗೆ ಕಳ್ಳ, ಸುಳ್ಳುಗಾರ, ವ್ಯಭಿಚಾರಿ ಎಂದು ಮೊದಲಾಗಿ ಎನ್ನುವುದೂ ಸಾವದ್ಯ ವಚನದಲ್ಲಿಯೇ ಅಂತರ್‌ಬಾವ ಹೊಂದುತ್ತದೆ. ಈ ವಚನಗಳು ದುರ್ಗತಿಗೆ ಕಾರಣವಾಗುತ್ತವೆ ಅದಕ್ಕಾಗಿ ಮಾತನಾಡಲಿಕ್ಕೆ ಯೋಗ್ಯವಲ್ಲ

ಅಪ್ರಿಯ ವಚನದ ಹತ್ತು ಪ್ರಕಾರಗಳು—ಅಪ್ರಿಯ ವಚನಗಳೂ ಸಹ ತ್ಯಾಗಮಾಡಲಿಕ್ಕೆ ಯೋಗ್ಯ-ವಾಗಿವೆ. ಪ್ರಾಣ ಹೋದರೂ ಸಹ ತನ್ನ ಮುಖದಿಂದ ಅಪ್ರಿಯ ವಚನವನ್ನು ಆಡಕೂಡದು ಇದರಲ್ಲಿ ಕರ್ಕಶ, ಕಟು, ಪರುಷ, ನಿಷ್ಠುರ, ಪರಕೋಪಿನಿ, ಮಧ್ಯಕೃಶ, ಅಭಿಮಾನಿನಿ, ಅನಯಂಕರಿ, ಭೇದಂಕರಿ, ಭೂತವಧಕರಿ

ಎಂದು ಹತ್ತು ಭೇದಗಳಿವೆ ಇವೆಲ್ಲವುಗಳಿಂದಲೂ ಪಾಪಬಂಧವಾಗಿ ಜಗತ್ತಿನಲ್ಲಿ ಜೀವವು ಅತ್ಯಂತ ನಿಂದ್ಯವೆಂದು ನಿಶ್ಚಯವಾಗುತ್ತದೆ ಅದಕ್ಕಾಗಿ ಈ ಹತ್ತು ಪ್ರಕಾರದ ಭಾಷಣಗಳನ್ನೂ ಸತ್ಯವಾದಿಗಳಾದ ಜೀವಗಳು ಮಾತನಾಡ ಕೂಡದು ಯಾರಿಗೂ ಮೂರ್ಖ, ಕತ್ತೆ, ಎತ್ತು ಎಂದು ಮೊದಲಾಗಿ ಎನ್ನುವುದೂ ಕರ್ಕಶ ಭಾಷೆಯಾಗಿದೆ ಇದೇ ಪ್ರಕಾರ ಯಾರಿಗೂ ನೀಚ, ಮಹಾಪಾಪಿ, ಬೆಲೆಯಿಲ್ಲದವ, ಅಸ್ಪೃಶ್ಯ ಮೊದಲಾದ ಪದಗಳನ್ನು ಉಪಯೋಗಿಸಿ ಮಾತನಾಡಿದರೆ ಅದೂ ಕಟು ಭಾಷೆಯೆನಿಸುವುದು ಆಚಾರಭ್ರಷ್ಟ, ದುಷ್ಟ ಮೊದಲಾದ ಮರ್ಮಭೇದಕ ಭಾಷೆಯನ್ನು ಆಡುವದಕ್ಕೆ ಪರುಷ ಭಾಷೆ ಎನ್ನುವರು. "ಬಡಿದು ಒಗೆಯುವೆ, ಮೂಗು ಕೊಯ್ಯುವೆ, ತಲೆಯನ್ನು ಕತ್ತರಿಸುವೆ" ಮೊದಲಾದ ಮಾತುಗಳನ್ನು ಉಚ್ಚರಿಸುವದಕ್ಕೆ ನಿಷ್ಠುರ ಭಾಷೆ ಎನ್ನುವರು 'ಎಲಾ ಮೂರ್ಖಾ, ನಿರ್ಲಜ್ಜಾ, ನಿನ್ನ ಜಾತಿ ಕುಲಗಳು ಯಾವವೆಂಬುದು ಗೊತ್ತಿಲ್ಲ. ನೀನು ಮಹಾ ನೀಚನಿದ್ದು ದುಷ್ಟನಿರುವಿ. ತಪಶ್ಚರಣದ ಡೌಲು ಮಾಡಿ ಜಗತ್ತನ್ನು ಮೋಸಗೊಳಿಸುವವನಾಗಿರುವಿ. ಅಭಕ್ಷ್ಯ ಭಕ್ಷಣದಿಂದ ನೀನು ನಿನ್ನ ಕುಲಕ್ಕೂ ಧರ್ಮಕ್ಕೂ ದೋಷವನ್ನು ತಂದಿರುವಿ." ಇವೇ ಮೊದಲಾದ ಭಾಷೆಗಳಿಗೆ ಪರಕೋಪಿನೀ ಭಾಷೆ ಎನ್ನುವರು ಹೃದಯವು ನೀರಾಗುವಂತೆ ಮಾತನಾಡುವದಕ್ಕೆ ಮಧ್ಯಕೃಶಾ ಭಾಷೆ ಎನ್ನಲಾಗುವುದು. ತನ್ನ ಗುಣವನ್ನೂ ಪರರ ದೋಷಗಳನ್ನೂ ಜಗತ್ತಿನಲ್ಲಿ ಪ್ರಕಟಗೊಳಿಸುವುದಕ್ಕೂ ಸ್ವಂತದ ಜಾತಿ, ಕುಲ, ಸ್ವರೂಪ, ಜ್ಞಾನ ಮೊದಲಾದವುಗಳ ಅಭಿಮಾನ ಹಿಡಿದು ಮಾತನಾಡುವದಕ್ಕೂ ಅಭಿಮಾನಿನೀ ಭಾಷೆ ಎನ್ನುವರು ಯಾವ ಮಾತಿನಿಂದ ಇನ್ನೊಬ್ಬರ ಶೀಲಕ್ಕೆ ಬಾಧೆಯುಂಟಾಗುವುದೋ ಇಲ್ಲವೆ ಒಬ್ಬರು ಇನ್ನೊಬ್ಬರನ್ನು ದ್ವೇಷಿಸಲಿಕ್ಕೆ ಸಿದ್ಧರಾಗುವರೋ ಅಂಥ ಭಾಷೆಗಳನ್ನು ಆಡುವುದು ಅನಯಂಕರೀ ಭಾಷೆ ಎನ್ನುವರು. ಯಾವುದರಿಂದ ಮೂಲ ವೀರ್ಯ, ಶೀಲ ಮೊದಲಾದ ಗುಣಗಳು ನಾಶವಾಗಿ ಸುಳ್ಳು ದೋಷವು ಹಬ್ಬುವುದೋ ಅದು ಛೇದಂಕರೀ ಭಾಷೆಯು. ಯಾವ ಮಾತಿನಿಂದ ಸಾವಿಗೆ ಸಮಾನವಾದ ವೇದನೆಯು ಉತ್ಪನ್ನವಾಗುವುದೋ ಇಲ್ಲವೆ ಒಮ್ಮೊಮ್ಮೆ ಪ್ರಾಣವೂ ಸಹ ಹೋಗುವುದೋ ಅಂಥ ನುಡಿಗೆ ಭೂತವಧಕರೀ ಭಾಷೆ ಎನ್ನುವರು. ಈ ಪ್ರಕಾರ ಭಾಷೆಯ ನಿಂದ್ಯ ಪ್ರಕಾರಗಳು ಹತ್ತು ವಿಧವಾಗಿವೆ. ಇವುಗಳನ್ನು ಅಗತ್ಯವಾಗಿ ತ್ಯಾಗಮಾಡಬೇಕು

ನಾಲ್ಕು ವಿಕಥೆಗಳನ್ನು ತ್ಯಜಿಸಬೇಕು. ಸ್ತ್ರೀಯರ ಹಾವ ಭಾವ ವಿಲಾಸ ವಿಭ್ರಮ ರೂಪದ ಕ್ರೀಡೆ, ವ್ಯಭಿಚಾರ ಮೊದಲಾದವುಗಳಿಗೆ ಸಂಬಂಧಿಸಿದ ಸಂಭಾಷಣೆ, ಕಾಮೋತ್ಪಾದನೆಯನ್ನು ಮಾಡಿ ಬ್ರಹ್ಮಚರ್ಯವನ್ನು ನಾಶಮಾಡುವಂಥ ಸ್ತ್ರೀಯರಿಗೆ ಸಂಬಂಧಿಸಿದ ಕಥೆಗಳು, ಊಟ ತಿನಿಸುಗಳ ವಿಷಯದಲ್ಲಿ ಲಾಲಸೆಯನ್ನು ಉತ್ಪನ್ನ ಮಾಡುವಂಥ ಸಂಗತಿಗಳು, ಭಯಂಕರದ ಕರ್ಮವೆಸಗಲಿಕ್ಕೆ ಉತ್ಸುಕಗೊಳಿಸುವಂಥ ದೊಡ್ಡ ದೊಡ್ಡ ರಾಜರ ಪರಾಕ್ರಮದ ಕಥೆಗಳು, ಕಳ್ಳರ ಕಥೆ, ಸುಳ್ಳು ವೇಷಧಾರಿ ಸಾಧುಗಳ ಕಥೆ, ಅನೇಕ ಪ್ರಕಾರದಿಂದ ದ್ರವ್ಯ ಸಂಪಾದನೆಗೆ ಪ್ರೋತ್ಸಾಹನ ಕೊಡುವ ಕಥೆ, ದುಷ್ಟರು ಹಾಗೂ ಶತ್ರುಗಳು ಇವರ ತಿರಸ್ಕಾರ ಉತ್ಪನ್ನವಾಗುವಂಥ ಸಂಗತಿಗಳು, ಹಿಂಸೆಗೆ ಪುಷ್ಟಿಯನ್ನು ಕೊಡುವ ಕಥೆ, ವೇದ, ಸ್ಮೃತಿ, ಪುರಾಣ ಮೊದಲಾದ ಅನೇಕ ಶಾಸ್ತ್ರದೊಳಗಿನವೆಂದು ಸುಳ್ಳು ಸುಳ್ಳು ಕಥೆಗಳನ್ನು ಹೇಳುವುದು ಇಲ್ಲವೆ ಕೇಳುವುದು ಯೋಗ್ಯವಲ್ಲ ಈ ಪ್ರಕಾರ ಪಾಪ ಉತ್ಪನ್ನ ಮಾಡುವಂಥ ಅಪ್ರಿಯ ಭಾಷಣವನ್ನು ತ್ಯಾಗ ಮಾಡಬೇಕು.

ಪರಹಿತವಾಗುವಂತೆಯೇ ಮಾತನಾಡಬೇಕು. ಜ್ಞಾನೀ ಪುರುಷನು ಮೇಲಿನ ಮುಖ್ಯ ನಾಲ್ಕು ಅಸತ್ಯ ಭಾಷೆಗಳನ್ನು ಕ್ರೋಧ, ಲೋಭ, ಹಾಸ್ಯ, ಗರ್ವ, ಭಯ ಅಥವಾ ದ್ವೇಷಗಳಿಗೆ ಒಳಗಾಗಿ ಎಂದೂ ಮಾತನಾಡ-ಬಾರದು. ಯಾವಾಗಲೂ ತನ್ನ ಹಾಗೂ ಅನ್ಯರ ಹಿತವಾಗುವಂತೆಯೇ ಮಾತನಾಡಬೇಕು ಯಾವ ಪ್ರಕಾರ ಜೀವಗಳ ಮೇಲೆ ಹಿತ ಮಿತ ಭಾಷಣಗಳಿಂದ ಉಪಕಾರವಾಗುವುದೋ, ಅವುಗಳಿಗೆ ಶಾಂತಿ ಸುಖಗಳು ಹೇಗೆ ಉಂಟಾಗುವವೋ ಹಾಗೆ ಮುತ್ತು ರತ್ನಗಳಿಂದಲೂ, ಜಲ ಚಂದನಗಳಿಂದಲೂ, ಚಂದ್ರಕಾಂತ ಶಿಲೆಯಿಂದಲೂ ಸಹ ಉಂಟಾಗುವದಿಲ್ಲ ಧರ್ಮರಕ್ಷಣವಾಗುತ್ತಿದ್ದರೆ, ಯಾವದಾದರೊಂದು ಪ್ರಾಣಿಯ ಹಿತವಾಗುತ್ತಿದ್ದರೆ ಯಾರನ್ನು ವಿಚಾರಿಸದೆಯೂ ಸಹ ಅಲ್ಲಿ ಮಾತನಾಡಬೇಕು ಎಲ್ಲಿ ತನ್ನ ಹಾಗೂ ಪರರ ಹಿತವು ಆಗುವದಿಲ್ಲವೋ ಅಲ್ಲಿ ಮಾತನಾಡದೆ ಮೌನಧಾರಣ ಮಾಡಬೇಕು

ಸತ್ಯ ವಚನದಿಂದಾಗುವ ಲಾಭ—ಸತ್ಯ ಮಾತನಾಡುವುದರಿಂದ ಅನೇಕ ಲಾಭಗಳಿವೆ ಅದರಲ್ಲಿ ಸತ್ಯವಚನವುಳ್ಳ ಪುರುಷನಿಗೆ ಎಲ್ಲ ವಿದ್ಯೆಗಳು ಸಾಧ್ಯವಾಗುತ್ತವೆಂಬುದಾಗಿದೆ. ಅಲ್ಲದೆ ಅವನ ಕರ್ಮದ ನಿರ್ಜರೆ-

ಯಾಗುತ್ತದೆಂಬುದು ಇನ್ನೊಂದು ಲಾಭವಾಗಿದೆ. ಸತ್ಯವಚನದ ಪ್ರಭಾವದಿಂದ ಅಗ್ನಿ, ಜಲ, ವಿಷ, ಸಿಂಹ, ಸರ್ಪ, ದುಷ್ಟದೇವ ಮನುಷ್ಯ ಮೊದಲಾದವರು ಯಾವುದೇ ಪ್ರಕಾರದಿಂದ ನಮಗೆ ತೊಂದರೆ ಕೊಡಲಾರರು ತಿರುಗಿ ನಮ್ಮ ಸತ್ಯ ವಚನದ ಪ್ರಭಾವದಿಂದ ಅನೇಕ ದೇವ ದೇವತೆಗಳು ವಶವಾಗುತ್ತವೆ ಸತ್ಯವಚನದಿಂದ ನಮ್ಮಲ್ಲಿ ಪ್ರೀತಿ ಹಾಗೂ ಜ್ಞಾನಗಳು ಬೆಳೆಯುತ್ತವೆ ಸತ್ಯವಾದಿಯು ತಾಯಿಯಂತೆ ಲೋಕದಲ್ಲಿ ಎಲ್ಲರಿಗೂ ಪ್ರಿಯನಾಗುತ್ತಾನೆ, ವಿಶ್ವಾಸಕ್ಕೆ ಪಾತ್ರನೂ ಆಗುತ್ತಾನೆ. ಅವನಿಗೆ ಗುರುವಿನಂತೆ ಎಲ್ಲೆಡೆಗೂ ಮರ್ಯಾದೆಯು ದೊರೆಯುತ್ತದೆ. ಅವನು ಎಲ್ಲರಿಗೂ ಮಿತ್ರನೆನಿಸುತ್ತಾನೆ. ಅವನ ಉಜ್ವಲ ಕೀರ್ತಿಯು ಎಲ್ಲೆಡೆಗೂ ಪಸರಿಸುತ್ತದೆ. ತಪಶ್ಚರಣ ಸಂಯಮಾದಿ ಕ್ರಿಯೆಗಳಿಗೆ ಸತ್ಯವಚನದಿಂದ ವಿಶೇಷ ಶೋಭೆಯು ಉಂಟಾಗುತ್ತದೆ.

ಅಸತ್ಯ ಭಾಷಣದ ಪರಿಣಾಮ—ಅಮೃತದಂತಿರುವ ಸವಿಯಾದ ಅನ್ನದಲ್ಲಿ ವಿಷವನ್ನು ಕೂಡಿಸಿದರೆ ಯಾವ ಪ್ರಕಾರ ಆ ಅನ್ನವು ನಾಶವಾಗುತ್ತದೆಯೋ ಅದೇ ಪ್ರಕಾರ ಅಸತ್ಯ ಭಾಷಣದಿಂದ ಅಹಿಂಸಾದಿ ಐದು ಮಹಾವ್ರತಗಳೂ ಇತರ ಸರ್ವಗುಣಗಳೂ ನಾಶಹೊಂದುತ್ತವೆ ಸುಳ್ಳು ಮಾತನಾಡುವವರ ನಿಂದೆಯು ಜಗತ್ತಿನಲ್ಲೆಲ್ಲ ಆಗುತ್ತದೆ ಅವರ ಮೇಲೆ ಯಾರೂ ವಿಶ್ವಾಸವಿಡುವದಿಲ್ಲ ಅಸತ್ಯ ಮಾತನಾಡುವುದರಿಂದ ಜಗತ್ತಿನಲ್ಲಿ ಅಪಕೀರ್ತಿಯು ಆಗುತ್ತದೆ. ಅಪವಾದವೂ ಆವರಿಸುತ್ತದೆ. ತಮಗೂ ಇನ್ನೊಬ್ಬರಿಗೂ ದುಃಖವು ಉತ್ಪನ್ನವಾಗಿ ವೈರ, ಕಲಹ, ಭಯ, ಶೋಕಗಳೂ ಉತ್ಪನ್ನವಾಗುತ್ತವೆ. ಅಸತ್ಯ ಭಾಷಣ ಮಾಡುವವರಿಗೆ ವಧೆ, ಬಂಧನ, ನಾಲಿಗೆಯನ್ನು ಕತ್ತರಿಸುವಿಕೆ, ಸರ್ವಸ್ವಹರಣ, ಸೆರೆಮನೆಯ ವಾಸ ಅಪಮೃತ್ಯು ಮತ್ತು ದುರ್ಧ್ಯಾನ ಇವುಗಳಿಂದ ದುಃಖವನ್ನು ಭೋಗಿಸಬೇಕಾಗುತ್ತದೆ ಹಾಗೆಯೇ ವ್ರತ, ಶೀಲ, ಸಂಯಮ, ತಪಶ್ಚರಣಗಳು ನಾಶಹೊಂದಿ, ನರಕತಿರ್ಯಂಚಾದಿ ದುರ್ಗತಿಗಳಿಗೆ ಹೋಗಬೇಕಾಗುತ್ತದೆ. ಇದಲ್ಲದೆ ಭಗವಂತನ ಆಜ್ಞೆಗೆ ವಿರೋಧವಾದಂತಾಗಿ ಶಾಸ್ತ್ರದ ಅವಮಾನವೂ ಆಗುತ್ತದೆ ಮೇಲಾಗಿ ಅದರ ರಹಸ್ಯವನ್ನು ತಿಳಿದುಕೊಳ್ಳುವ ಪಾತ್ರತೆಯೂ ಕೂಡ ನಮ್ಮಲ್ಲಿ ಉಂಟಾಗುವದಿಲ್ಲ. ಇದರಿಂದ ಹಗಲಿರುಳೂ ಪಾಪಾಸ್ರವವು ಆರಂಭವಾಗಿ ಜನ್ಮವು ಹಾಳಾಗುತ್ತದೆ. ಈ ಪ್ರಕಾರ ಅಸತ್ಯ ಮಾತನಾಡು-ವುದರಿಂದ ಸಾವಿರಾರು ದೋಷಗಳು ಸಂಭವಿಸುತ್ತವೆ

ಮಾತು ಮಧುರವಾಗಿರಬೇಕು. ಸತ್ಪುರುಷರು ಯಾವಾಗಲೂ ಹಿತ, ಮಿತ ಮತ್ತು ಪ್ರಿಯವಾದಂಥ ಸತ್ಯವಚನಗಳನ್ನೇ ಮುಖದಿಂದ ಉಚ್ಚರಿಸುತ್ತಿರುತ್ತಾರೆ ಜಗತ್ತಿನಲ್ಲಿ ಮಧುರ ಶಬ್ದಗಳಿಗೇನೂ ಕೊರತೆಯಿಲ್ಲ ಸಾವಿರಾರು ಸವಿಯಾದ ಹಾಗೂ ಕರ್ಣ ಮಧುರ ವಾಕ್ಯಗಳು ಮಾತನಾಡಲಿಕ್ಕೆ ದೊರೆಯುತ್ತಿರಲಾಗಿ ನಿಂದ್ಯ ಮತ್ತು ಕಟು ಮಾತುಗಳನ್ನಾಡಲಿಕ್ಕೆ ಯಾಕೆ ಸಿದ್ಧರಾಗಬೇಕು? ಇದು ನಮಗೆ ತಿಳಿಯುವದಿಲ್ಲ ಇದೇ ಉದ್ದೇಶವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಆಚಾರ್ಯರು ಮೇಲಿಂದ ಮೇಲೆ ಹೀಗೆ ಉಪದೇಶಿಸಿದ್ದಾರೆ—"ಮಕ್ಕಳೇ, ಪ್ರಾಣ ಹೋದರೂ ಅಡ್ಡಿಯಿಲ್ಲ, ಆದರೆ ನೀಚ ಜನರಂತೆ ನಿಂದ್ಯ ವಚನಗಳನ್ನು ನೀವು ಉಚ್ಚರಿಸಬೇಡಿರಿ ನೀಚತನ ಅಥವಾ ಉಚ್ಚತನ ಎಂಬುದು ವಚನದಿಂದಲೇ ಪರೀಕ್ಷೆ ಹೊಂದುತ್ತದೆ ಅದಕ್ಕಾಗಿ ನಿಂದ್ಯ ವಚನದ ತ್ಯಾಗಮಾಡಿ ಸವಿಯಾದ, ಹಿತವಾದ ವಚನಗಳನ್ನು ಮಾತನಾಡಿರಿ ಯಾರು ಎರಡನೆಯವರಿಗೆ ದುಃಖವಾಗುವಂತೆ ಮಾತನಾಡುವರೋ ಅವರಿಗೆ ಪಾಪದಿಂದ ಬುದ್ಧಿ ಭ್ರಷ್ಟವಾಗಿದೆ ಎಂದು ತಿಳಿಯಬೇಕು ಇವರು ಇನ್ನೊಬ್ಬರ ಮೇಲೆ ಇಲ್ಲದ ದೋಷಾರೋಪಣೆಯನ್ನೂ ಮಾಡಲಿಕ್ಕೆ ಹಿಂಜರಿಯುವದಿಲ್ಲ. ಇಂಥ ಮಾತನಾಡುವವರ ನಾಲಿಗೆ ಹಾಗೂ ತಲೆಗಳು ಇಲ್ಲದಂತೆಯೇ ಸರಿ. ಕಣ್ಣು, ಕಾಲುಗಳೂ ಹೋಗುತ್ತವೆ ಹಗಲಿರುಳೂ ದುರ್ಧ್ಯಾನವು ಸಂಭವಿಸುವುದರಿಂದ ಅವರು ನರಕ ತಿರ್ಯಂಚಾದಿ ಗತಿಗಳಿಗೆ ಹೋಗುತ್ತಾರೆ ಇದಕ್ಕೆ ವಿರುದ್ಧವಾಗಿ ಸತ್ಯವಚನದಿಂದ ಕೀರ್ತಿಯು ಬೆಳೆದು, ದ್ವಾದಶಾಂಗವಾಣಿಯ ಜ್ಞಾನವು ಪ್ರಾಪ್ತವಾಗುತ್ತದೆ. ಕ್ರಮದಿಂದ ರಾಜಾ, ಮಹಾರಾಜಾ, ಚಕ್ರವರ್ತಿ, ಇಂದ್ರ, ಮಹರ್ಧಿಕದೇವ ಮತ್ತು ತೀರ್ಥಂಕರ ಪದವಿಗಳು ಪ್ರಾಪ್ತವಾಗುತ್ತವೆ. ಅಂತಲೇ ಇಂಥ ಸತ್ಯ ಧರ್ಮವನ್ನು ನೀವು ಅಂಗೀಕರಿಸಿರಿ

## ಸಂಯಮ

ಸಂಯಮದ ಲಕ್ಷಣ—ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ ಮತ್ತು ಪರಿಗ್ರಹತ್ಯಾಗ ಇವು ಐದು ಮಹಾವ್ರತಗಳಾಗಿವೆ ಈ ವ್ರತಗಳನ್ನು ಒಂದು ದೇಶ ಮಾತ್ರ ಪಾಲನ ಮಾಡುವುದು ಅಣುವ್ರತವೆನಿಸುತ್ತದೆ.

ಇದಕ್ಕೆ ವಿರುದ್ಧವಾಗಿ ಹಿಂಸೆ, ಕಳವು, ಸುಳ್ಳು, ಮೈಥುನ ಸೇವನ ಮತ್ತು ಅಪರಿಮಿತ ಪರಿಗ್ರಹ ಇವುಗಳಿಗೆ ಐದು ಮಹಾಪಾಪಗಳೆಂದು ಎನ್ನುವರು ಈ ಐದು ಮಹಾಪಾಪಗಳನ್ನು ಸಂಪೂರ್ಣವಾಗಿ ತ್ಯಾಗಮಾಡುವುದರಿಂದ ಮಹಾವ್ರತಗಳು ಸಂಭವಿಸುತ್ತವೆ, ಏಕದೇಶ ತ್ಯಾಗಮಾಡುವುದರಿಂದ ಅಣುವ್ರತವು ಸಂಭವಿಸುತ್ತದೆ ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನನಿಕ್ಷೇಪಣ ಮತ್ತು ಪ್ರತಿಷ್ಠಾಪನಾ ಹೀಗೆ ಐದು ಸಮಿತಿಗಳು ಇವೆ ನಡೆಯುವಾಗ ಮುಂದೆ, ಹಿಂದೆ, ಎರಡೂ ಮಗ್ಗಲು ನೋಡುತ್ತ ಯಾವ ಜೀವ ಹಿಂಸೆಯನ್ನೂ ಮಾಡದೆ ನಡೆಯುವುದು ಈರ್ಯಾಸಮಿತಿಯು ಹಿತ ಮಿತ ಮತ್ತು ಪ್ರಿಯ ಸಂಭಾಷಣೆಯನ್ನೂ ಮಾಡುವುದು ಭಾಷಾ ಸಮಿತಿಯು. ನಿರ್ದೋಷ ಶುದ್ಧ ಆಹಾರ ಗ್ರಹಣ ಮಾಡುವುದು ಏಷಣಾ ಸಮಿತಿಯು ಶಾಸ್ತ್ರವೇ ಮೊದಲಾದ ಉಪಕರಣಗಳನ್ನು ನೋಡಿ, ಸ್ಥಳವನ್ನು ಝಾಡಿಸಿ ಇಡುವುದು ಮತ್ತು ತಕ್ಕೊಳ್ಳುವುದು ಆದಾನ ನಿಕ್ಷೇಪಣ ಸಮಿತಿಯಾಗಿದೆ ಅದರಂತೆಯೇ ಎರಡನೆಯ ಜೀವಗಳಿಗೆ ತ್ರಾಸವಾಗದಂತೆಯೂ ಗ್ಲಾನಿಯಾಗದಂತೆಯೂ ತನ್ನ ಮಲ ಮೂತ್ರ ಕಫಗಳನ್ನು ವಿಸರ್ಜಿಸುವುದು ಪ್ರತಿಷ್ಠಾಪನಾ ಸಮಿತಿಯೆನಿಸುತ್ತದೆ ಈ ಪಂಚ ಸಮಿತಿಗಳನ್ನೂ ಪಂಚ ಮಹಾವ್ರತಗಳನ್ನೂ ಪಾಲನ ಮಾಡುವುದು, ಕ್ರೋಧ ಮಾನ ಮಾಯಾ, ಲೋಭ ಈ ನಾಲ್ಕು ಕಷಾಯಗಳ ನಿಗ್ರಹ ಮಾಡುವುದು, ಮನ ವಚನ ಕಾಯಗಳ ಅಶುಭ ಪ್ರವೃತ್ತಿಯು ಆಗದಂತೆ ನೋಡಿಕೊಳ್ಳುವುದು, ಪಂಚೇಂದ್ರಿಯಗಳನ್ನೂ ಅವವುಗಳ ವಿಷಯಗಳಿಂದ ಪ್ರವೃತ್ತಗೊಳಿಸಿ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕೆ ಸಂಯಮವೆನ್ನುವರು.

ಸಂಯಮವು ಲಭಿಸುವುದು ದುರ್ಲಭವಾದುದು. ಈ ಸಂಯಮವು ಪ್ರಾಪ್ತವಾಗುವುದು ಬಹಳ ಕಠಿಣವಾಗಿರುತ್ತದೆ. ಯಾರ ಪೂರ್ವ ಜನ್ಮದ ಅಶುಭ ಕರ್ಮವು–ಅದು ಉದಯ ಹೊಂದುವ ಸ್ಥಿತಿಯು–ತೀರ ಕ್ಷೀಣವಾಗಿರುವುದೋ ಆ ಮನುಷ್ಯನ ಜನ್ಮವು, ಉತ್ತಮ ಕುಲ, ಉತ್ತಮ ದೇಶ, ಉತ್ತಮ ಜಾತಿ, ಇಂದ್ರಿಯ ಪರಿಪೂರ್ಣತೆ, ನಿರೋಗಿತೆ, ಕಷಾಯಗಳು ಉದ್ರೇಕಗೊಳ್ಳದಿರುವುದು, ಉತ್ತಮ ಸಂಗತಿ, ಜಿನೇಂದ್ರ ಭಗವಂತನ ಆಗಮಗಳ ಪರಿಶೀಲನ, ಸದ್ಗುರುವಿನ ಸಂಯೋಗ ಮೊದಲಾದ ಸಮ್ಯಗ್ದರ್ಶನದ ಸಾಮಗ್ರಿಗಳಿಂದ ಕೂಡಿರುತ್ತದೆ ಇಂಥವರಿಗೇನೇ ಅಪ್ರತ್ಯಾಖ್ಯಾನಾವರಣೀಯ ಕರ್ಮದ ಕ್ಷಯೋಪಶಮದಿಂದ ಸಂಸಾರ ದೇಹ ಭೋಗಗಳ ವಿಷಯದಲ್ಲಿ ವಿರಕ್ತತೆಯು ಉತ್ಪನ್ನವಾಗಿ ದೇಶ ಸಂಯಮವು ಪ್ರಾಪ್ತವಾಗುತ್ತದೆ ಇನ್ನು ಯಾರಿಗೆ ಅಪ್ರತ್ಯಾಖ್ಯಾನ ಮತ್ತು ಪ್ರತ್ಯಾಖ್ಯಾನ ಈ ಎರಡು ಕಷಾಯಗಳು ಕ್ಷಯೋಪಶಮವನ್ನು ಹೊಂದಿರುವವೋ ಅವರಿಗೆ ಸಕಲ ಸಂಯಮವು ಪ್ರಾಪ್ತವಾಗುತ್ತದೆ ಅಂತಲೇ ಸಂಯಮವು ಲಭಿಸುವುದು ಬಹು ಕಠಿಣವೆಂದು ಹೇಳಲಾಗಿದೆ ನರಕ, ತಿರ್ಯಂಚ ಮತ್ತು ದೇವ ಈ ಮೂರು ಗತಿಗಳಲ್ಲಿಯಂತೂ ಸಂಯಮ ಪ್ರಾಪ್ತಿಗೆ ಅನುಕೂಲತೆಗಳಿಲ್ಲ ತಿರ್ಯಂಚ ಯೋನಿಯಲ್ಲಿ ಅಪರೂಪವಾಗಿ ಯಾವುದಾದರೊಂದು ತಿರ್ಯಂಚ ಜೀವಿಗೆ ಅದರ ಸ್ಥಿತಿಗೆ ಅನುಸರಿಸಿ ಸಂಯಮದ ಕೆಲವು ಕಾರಣಗಳು ಉಂಟಾಗುತ್ತವೆ ಮನುಷ್ಯ ಗತಿಯಲ್ಲಿ ಎಲ್ಲರಿಗೇನೇ ಸಂಯಮ ಪ್ರಾಪ್ತಮಾಡಿಕೊಳ್ಳುವ ಪಾತ್ರತೆಯು ಇರುತ್ತದೆಂದೇನೂ ಇಲ್ಲ ನೀಚ ಕುಲೋತ್ಪನ್ನರೂ ಅಪೂರ್ಣ ಇಂದ್ರಿಯಗಳುಳ್ಳವರೂ ಸದಾ ರೋಗಿಗಳಾದವರೂ ದರಿದ್ರರಾದವರೂ ವಿಷಯಲಂಪಟರೂ ಕ್ರೋಧವುಳ್ಳವರೂ ಯಾವಾಗಲೂ ನಿಂದ್ಯ ಕರ್ಮಗಳನ್ನು ಮಾಡುವುದರ ಕಡೆಗೇನೇ ಪ್ರವೃತ್ತಿ-ಯುಳ್ಳವರೂ ಆದಂಥವರಿಗೆ ಸಂಯಮವು ಪ್ರಾಪ್ತವಾಗುವದಿಲ್ಲ ನೀಚ ಕುಲ ಅಥವಾ ಅಧಮ ದೇಶದಲ್ಲಿ ಜನ್ಮವಾದಲ್ಲಿ, ಇಂದ್ರಿಯಗಳು ಪರಿಪೂರ್ಣ ಇಲ್ಲದಿದ್ದಲ್ಲಿ, ಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವ ಸಾಧನಗಳು ಅಪೂರ್ಣ-ವಿದ್ದಲ್ಲಿ, ಸ್ವತಃ ಯಾವಾಗಲೂ ರೋಗಿಯಾಗಿ ಬಳಲುತ್ತಿದ್ದಲ್ಲಿ, ಹದಿನೆಂಟು ವಿಶ್ವದ ತೀರ ಒಡತನವು ಮನೆಯನ್ನು ವ್ಯಾಪಿಸಿದ್ದಲ್ಲಿ, ಸ್ವಂತದ ಆಕರ್ಷಣೆಯು ಅನ್ಯಾಯದ ಮಾರ್ಗದ ಕಡೆಗೂ ವಿಷಯೋಪಭೋಗದ ಕಡೆಗೂ ಇದ್ದಲ್ಲಿ, ಕ್ರೋಧವೇ ಮೊದಲಾದ ವಿಕಾರಗಳು–ಕಾರಣವು ಸ್ವಲ್ಪ ಒದಗಿದರೆ ಸಾಕು–ಪ್ರಾಬಲ್ಯವಾಗುತ್ತಿದ್ದಲ್ಲಿ, ನಿಂದ್ಯ ಕರ್ಮದ ಪ್ರವೃತ್ತಿಯು ಹೆಚ್ಚುತ್ತ ಇರುವಲ್ಲಿ ಸಂಯಮವು ಹೇಗೆ ಸಾಧಿಸೀತು? ಎಂದೂ ಸಾಧಿಸಲಾರದು ಇದರಿಂದಲೂ ಸಂಯಮವು ಪ್ರಾಪ್ತವಾಗುವುದು ಮಹಾ ದುರ್ಲಭವೆಂಬುದು ಗೊತ್ತಾಗುತ್ತದೆ

ಸಂಯಮವು ತ್ಯಾಗದ ಫಲವಾಗಿದೆ—ಅನುಕೂಲ ಪರಿಸ್ಥಿತಿಗಳೆಲ್ಲ ಒದಗಿದವರಿಗೇನೇ ಸಂಯಮ ಪ್ರಾಪ್ತಿಯ ಉಪಾಯ ಹೊಳೆಯುತ್ತದೆ. ಯಾರಿಗೆ ಸಂಯಮ ಪ್ರಾಪ್ತಿಯ ಸಾಧನಗಳು ಲಭಿಸಿರುವವೋ ಅವರು ಪುನಃ ವಿಷಯಗಳ ಕಡೆಗೆ ಪ್ರವೃತ್ತರಾಗಿ ಅವುಗಳನ್ನು ಕಳೆದುಕೊಂಡು ಕೂಡುವದೆಂದರೆ ಜನ್ಮಮರಣದ ಚಕ್ರದಲ್ಲಿ ಸಿಗುವುದೇ ಆಗಿದೆ ಅರ್ಥಾತ್ ಅಂಥವರಿಗೆ ಆತ್ಮ ಶುದ್ಧಿಯನ್ನು ಮಾಡಿಕೊಳ್ಳುವುದು ಅಶಕ್ಯವಾಗಿರುತ್ತದೆ. ಸಂಯಮ

ಧಾರಣಮಾಡಿಯೂ ಅದನ್ನು ಬಿಡುವಂಥವನಿಗೆ ಅನಂತಕಾಲ ನರಕನಿಗೋದ ಗತಿಯಲ್ಲಿ ಭ್ರಮಣ ಮಾಡಬೇಕಾಗುತ್ತದೆ ಸಂಯಮ ಸ್ವೀಕರಿಸಿ ಅದನ್ನು ಕೆಡಿಸಿಕೊಳ್ಳುವಂಥ ಅನರ್ಥವು ಜಗತ್ತಿನಲ್ಲಿ ಇನ್ನೊಂದಿಲ್ಲ ಇಂಥ ಪುರುಷನ ಸ್ಥಿತಿಯು ಲಭಿಸಿದ ಅಮೂಲ್ಯ ಚಿಂತಾಮಣಿ ರತ್ನವನ್ನು ಕವಡಿಯ ಬೆಲೆಗೆ ಮಾರಿದಂತೆ ಇದೆ. ಇಲ್ಲವೆ ಉರುವಲಕ್ಕಾಗಿ ಕಲ್ಪ ವೃಕ್ಷವನ್ನು ಕಡಿಯುವ ಮೂರ್ಖ ಪುರುಷನಂತೆ ಇದೆ ವಿಷಯ ಸುಖವು ನಿಜವಾದ ಸುಖವಲ್ಲ ಅದು ಕೇವಲ ಸುಖಾಭಾಸವಾಗಿದೆ. ವಿಷಯ ಸುಖವು ಕ್ಷಣ ಭಂಗುರವಾಗಿದ್ದು, ಭಯಂಕರ ದುಃಖಕ್ಕೆ ಕಾರಣವಾಗಿರುತ್ತವೆ. ಕೆಲವು ಫಲಗಳು ತಿನ್ನುವಾಗೇನೋ ಸವಿಯೆನಿಸುತ್ತವೆ, ಆದರೆ ಕೊನೆಗೆ ಅತ್ಯಂತ ದಾಹಕಾರಕವಾಗಿರುತ್ತವೆ ಹಾಗೆಯೇ ಇಂದ್ರಿಯಜನ್ಯ ಭೋಗವು ಅಜ್ಞಾನದಿಂದ ಜೀವಿಗಳಿಗೆ ಕೊನೆಗೆ ಸುಖವನ್ನು ಕೊಡುತ್ತದೆಂದು ಎನಿಸುವದು ಆದರೆ ಕೊನೆಗೆ ಅವರಿಂದ ದುಃಖ ಭೋಗಿಸುವ ಸ್ಥಿತಿಯೇ ಒದಗುತ್ತದೆ ಅಂತಲೇ ಸಂಯಮ ಪ್ರಾಪ್ತಿಗಾಗಿ ಪ್ರಯತ್ನ ಮಾಡುವುದು ಇಷ್ಟವಾಗಿದೆ

**ಸಂಯಮವು ಯಾತರಿಂದ ಪ್ರಾಪ್ತವಾಗುತ್ತದೆ?** ಇಂದ್ರಿಯಗಳನ್ನು ವಿಷಯ ಪ್ರವೃತ್ತವಾಗಗೊಡ-ಬಾರದು ಕಷಾಯಗಳನ್ನು ನಾಶಗೊಳಿಸಬೇಕು ದುರ್ಧರ ತಪಶ್ಚರಣ ಮಾಡಬೇಕು ರಸ ತ್ಯಾಗಮಾಡಿ ಆಹಾರದ ಮೇಲಿನ ಪ್ರೇಮವನ್ನೂ ಕಡಿಮೆ ಮಾಡುತ್ತ ಹೋಗುವುದು ಮನದಲ್ಲಿ ಸಂಕಲ್ಪ ವಿಕಲ್ಪಗಳು ಉಂಟಾಗದಂತೆ ನೋಡಿಕೊಳ್ಳುವುದು ದೊಡ್ಡ ದೊಡ್ಡ ಕಾಯಕ್ಲೇಶಗಳನ್ನು ಸಹನಮಾಡುವುದು ಅನಶನವೇ ಮೊದಲಾದ ಬಾಹ್ಯ ತಪಶ್ಚರಣಗಳನ್ನು ಮಾಡಿ ದೇಹವನ್ನು ಕೃಶಗೊಳಿಸುವುದು ಅಂತಃಕರಣದೊಳಗಿನ ಲೋಭ ಮತ್ತು ಪರಿಗ್ರಹದ ಲಾಲಸೆಯನ್ನು ಕಡಿಮೆ ಮಾಡುತ್ತ ಹೋಗುವದು ತ್ರಸ ಸ್ಥಾವರ ಜೀವಗಳ ರಕ್ಷಣೆ ಮಾಡುವುದು ಮನ ವಚನ ಕಾಯಗಳ ಪ್ರವೃತ್ತಿಗೆ ಅಡ್ಡಿಯನ್ನು ಒಡ್ಡುವುದು ಶರೀರದ ಇತರ ಅವಯವಗಳಿಗೂ ಸ್ವೈರ ವರ್ತಿಸಗೊಡದಿರುವುದು. ಹೋಗಿ ಬರುವ ಸ್ಥಿತಿಯನ್ನೂ ಕ್ರಿಯೆಯನ್ನೂ ತಡೆಯುವುದು ಮನಸ್ಸಿನಲ್ಲಿ ಯಾವಾಗಲೂ ದಯೆಯನ್ನು ಜಾಗೃತವಾಗಿಡುವುದು. ಯಾವಾಗಲೂ ಪರಮಾರ್ಥದ ವಿಚಾರಮಾಡುತ್ತಿದ್ದು ಪರಮಾತ್ಮನ ಧ್ಯಾನ ಮೊದಲಾದ ಸಂಗತಿಗಳಿಂದ ಸಂಯಮವು ಸಂಭವಿಸುತ್ತದೆ ಸಂಯಮದಿಂದ ಸಮ್ಯಗ್ದರ್ಶನವು ದೃಢವಾಗುತ್ತದೆ ಸಂಯಮವೇ ಮೋಕ್ಷದ ಮಾರ್ಗವಾಗಿದೆ ಇದಿಲ್ಲದ ಮಾನವ ಜನ್ಮವು ವ್ಯರ್ಥವಾಗಿದೆ ಇಲ್ಲಿಯ ವರೆಗೆ ಸಂಯಮ ಧರ್ಮವನ್ನು ಸ್ವೀಕರಿಸದೆ ಇದ್ದುದರಿಂದಲೇ ಅನೇಕ ದುರ್ಗತಿಗಳು ಪ್ರಾಪ್ತವಾದುವು ಸಂಯಮವಿಲ್ಲದೆ ಜ್ಞಾನ, ಬುದ್ಧಿ, ಶರೀರ, ಇವೆಲ್ಲ ಪ್ರಾಪ್ತವಾಗಿಯೂ ಉಪಯೋಗವಿಲ್ಲ ಸಂಯಮದ ಹೊರತಾಗಿ ದೀಕ್ಷಾ, ವ್ರತವೈಕಲ್ಯ, ನಗ್ನತ್ವ, ಸಾಧುತ್ವ ಇವೂ ವ್ಯರ್ಥವಾಗುತ್ತವೆ ಅದಕ್ಕಾಗಿ ಸಂಯಮಧಾರಣ ಮಾಡುವುದೇ ಯೋಗ್ಯವಾಗಿದೆ

**ಸಂಯಮದ ಭೇದಗಳು**—ಸಂಯಮದಲ್ಲಿ ಇಂದ್ರಿಯ ಸಂಯಮ ಮತ್ತು ಪ್ರಾಣ ಸಂಯಮ ಎಂದು ಎರಡು ಭೇದಗಳಿವೆ ಯಾರಿಗೆ ವಿಷಯಗಳಿಂದ ಇಂದ್ರಿಯಗಳನ್ನು ಪರಾವೃತ್ತಗೊಳಿಸಲಿಕ್ಕೆ ಆಗುವುದಿಲ್ಲವೋ, ಯಾರು ಷಟ್‌ಕಾಯ ಜೀವಗಳ ವಧೆ ಮಾಡುವದನ್ನು ಬಿಟ್ಟಿಲ್ಲವೋ, ಅವರು ಬಾಹ್ಯ ತಪಶ್ಚರಣವನ್ನು ಎಷ್ಟು ಕಠಿಣ ರೀತಿಯಿಂದ ಮಾಡಿದರೂ ಪರೀಷಹಗಳನ್ನು ಸಹನ ಮಾಡಿದರೂ ದೀಕ್ಷೆಯನ್ನು ಧಾರಣ ಮಾಡಿದರೂ ಸಹ ಏನೂ ಉಪಯೋಗ-ವಾಗಲಾರದು ಸಂಸಾರದೊಳಗಿನ ದುಃಖಿ ಜೀವಗಳಿಗೆ ಸಂಯಮದ ಹೊರತಾಗಿ ಶರಣು ಹೋಗಲಿಕ್ಕೆ ಬೇರೊಂದು ಸ್ಥಾನವೇ ಇಲ್ಲ ಹೀಗೆ ಜ್ಞಾನಿಗಳೂ ಸತ್ಪುರುಷರೂ ಹೇಳುತ್ತಾರೆ ಅವರು ಯಾವಾಗಲೂ ಹೀಗೆ ಚಿಂತಿಸುತ್ತಿರುತ್ತಾರೆ – ಸಂಯಮವಿಲ್ಲದೆ ನಮ್ಮ ಆಯುಷ್ಯದೊಳಗಿನ ಒಂದು ಕ್ಷಣವೂ ಸಹ ವ್ಯರ್ಥ ಹೋಗದಿರಲಿ. ಸಂಯಮವಿಲ್ಲದೆ ಆಯುಷ್ಯವೆಲ್ಲ ಬದುಕುವುದು ವ್ಯರ್ಥವಾಗಿದೆ ಸಂಯಮವೇ ಇಹಪರ ಲೋಕಗಳಲ್ಲಿ ಶರಣು ಹೋಗಲಿಕ್ಕೆ ಯೋಗ್ಯವಾಗಿದೆ ಸಂಯಮವು ದುರ್ಗತಿರೂಪ ಸರೋವರವನ್ನು ಒಣಗಿಸಲಿಕ್ಕೆ ಸೂರ್ಯನಂತಿದೆ ಸಂಯಮ ಗ್ರಹಣ ಮಾಡುವುದರಿಂದಲೇ ಸಂಸಾರವೆಂಬ ವಿಷಯ ವೈರಿಯನ್ನು ನಾಶಮಾಡಲಿಕ್ಕೆ ಸಾಮರ್ಥ್ಯವು, ಪ್ರಾಪ್ತವಾಗುತ್ತದೆ ಸಂಸಾರ ಪರಿಭ್ರಮಣವು ಸಂಯಮ ಧಾರಣ ಮಾಡದ ಹೊರತಾಗಿ ಎಂದೂ ನಿಲ್ಲುವಂತಿಲ್ಲ ಹೀಗೆ ನಿಯಮವೇ ಇದೆ. ಒಟ್ಟಿನಲ್ಲಿ ಯಾವನು ಅಂತರಂಗದಲ್ಲಿ ಕಷಾಯವು ಉತ್ಪನ್ನವಾಗದಂತೆ ಇದ್ದು, ಆತ್ಮನನ್ನು ಮಲಿನವಾಗಗೊಡದಿದ್ದರೆ ಮಾತ್ರ ಅವನಿಂದ ಸಂಯಮ ಧರ್ಮದ ಪಾಲನವಾಗುತ್ತದೆ ಇವನು ಬಾಹ್ಯದಲ್ಲಿ ಯತ್ನಾಚಾರ ಪೂರ್ವಕ ಪ್ರಮಾದ ರಹಿತ ವರ್ತನವನ್ನು ಇಟ್ಟುಕೊಂಡಿರಲಿಕ್ಕೆಬೇಕು ಈ ಪ್ರಕಾರ ಸಂಯಮ ಧರ್ಮದ ವರ್ಣನೆಯಿದೆ ಇನ್ನು ತಪ ಧರ್ಮದ ಸ್ವರೂಪವನ್ನು ಹೇಳುವೆ

## ತಪ

ತಪದ ಲಕ್ಷಣ— ಇಚ್ಛೆಯನ್ನು ನಿರೋಧಿಸುವದಕ್ಕೆ ತಪವೆಂದು ಹೇಳಲಾಗುತ್ತದೆ ನಾಲ್ಕು ಆರಾಧನೆಗಳಲ್ಲಿ ಈ ತಪವು ಶ್ರೇಷ್ಠವಾಗಿದೆ ಸುವರ್ಣವನ್ನು ಕಾಯಿಸಿ, ಕರಗಿಸಿದರೆ ಅದು ಹೇಗೆ ಶುದ್ಧವಾಗುವುದೋ ಹಾಗೆಯೇ ಹನ್ನೆರಡು ಪ್ರಕಾರದ ಅಂತರ್ ಬಾಹ್ಯ ತಪಗಳಿಂದ ಆತ್ಮವೂ ಕರ್ಮಮಲರಹಿತವಾಗಿ ಶುದ್ಧವಾಗುವುದು ಅಜ್ಞಾನೀ ಜೀವಗಳು ಪಂಚಾಗ್ನಿ ಸಾಧನೆಯಿಂದಲೂ ಇತರ ಕಾಯಕ್ಲೇಶಾದಿಗಳಿಂದಲೂ ಶರೀರವನ್ನು ಕೃಶಗೊಳಿಸುವದಕ್ಕೆ ತಪವೆಂದು ತಿಳಿಯುತ್ತಾರೆ ಆದರೆ ನಿಜವಾದ ತಪವು ಇದಲ್ಲ ಶರೀರವನ್ನು ಕೃಶಗೊಳಿಸಿದರೆ ಇಲ್ಲವೆ ಅದಕ್ಕೆ ಬಹಳಷ್ಟು ಕಷ್ಟಕೊಟ್ಟೆವೆಂದು ಏನಾಗುವದಿದೆ? ಇದರಿಂದ ಆತ್ಮನ ಕರ್ಮ-ಬಂಧನವು ನಷ್ಟವಾಗುವದಿಲ್ಲ ಭೇದ-ವಿಜ್ಞಾನವು ಉಂಟಾಗದ ಹೊರತಾಗಿ ಆತ್ಮನ ಯಥಾರ್ಥ ಸ್ವರೂಪವು ತಿಳಿಯುವದಿಲ್ಲ. ಭೇದವಿಜ್ಞಾನದಿಂದಲೇ ಆತ್ಮನ ಸ್ವಭಾವ ಹಾಗೂ ರಾಗದ್ವೇಷಾದಿ ಭಾವಕರ್ಮಗಳೂ ಭಿನ್ನ ಭಿನ್ನವಾಗಿವೆ ಎಂಬುದರ ತಿಳುವಳಿಕೆಯು ಉಂಟಾಗುತ್ತದೆ. ರಾಗ-ದ್ವೇಷಾದಿ ವಿಕಾರಗಳು ಹೇಗೆ ಹೇಗೆ ಕಡಿಮೆಯಾಗುತ್ತ ಹೋಗುತ್ತವೆಯೋ ಹಾಗೆ ಹಾಗೆ ಆತ್ಮನ ಜ್ಞಾನದರ್ಶನ ಸ್ವರೂಪವು ಪ್ರಕಟವಾಗುತ್ತದೆ ಅದೇ ತಪವಾಗಿದೆ ಇದೇ ದೃಷ್ಟಿಯನ್ನು ಎದುರಿಗೆ ಇಟ್ಟುಕೊಂಡು ಬೇರೆ ಬೇರೆ ಸ್ಥಳಗಳಲ್ಲಿ ಉಪದೇಶ ಮಾಡಲಾಗಿದೆ ಒಂದು ವೇಳೆ ಮಾನವ ಜನ್ಮವು ಪ್ರಾಪ್ತವಾಗಿ ಸ್ವಪರ ತತ್ತ್ವದ ಜ್ಞಾನವಾಗಿದ್ದರೆ ಮಾತ್ರ ಪಂಚೇಂದ್ರಿಯಗಳನ್ನು ತಡೆಹಿಡಿದು ವಿಷಯ ಸುಖಗಳಿಂದ ವಿರಕ್ತರಾಗಲಿಕ್ಕೆಬೇಕು ಸಂಪೂರ್ಣ ಪರಿಗ್ರಹಗಳನ್ನು ತ್ಯಾಗಮಾಡಿ, ಬಂಧನದಲ್ಲಿ ತೊಡಕಿಸುವ ರಾಗದ್ವೇಷಪ್ರವೃತ್ತಿಗಳನ್ನು ಬಿಟ್ಟು, ಪಾಪದ ಅವಲಂಬನವು ಇನ್ನು ಮುಂದೆ ಆಗದಂತೆಯೂ ಮಮತೆಯು ನಷ್ಟವಾಗಬೇಕೆಂದೂ ಅರಣ್ಯದಲ್ಲಿ ಹೋಗಿ ತಪಶ್ಚರಣ ಮಾಡಬೇಕು ಇಂಥ ತಪವು ಸತ್ಪುರುಷರಿಗೇನೇ ಸಂಭವಿಸುತ್ತದೆ ಸಂಸಾರೀ ಜೀವವು ಮಾಯೆ-ಮೋಹಗಳ ಜಾಳಿಗೆಯಲ್ಲಿ ಸಿಕ್ಕಿರುತ್ತದೆ ಆದರಿಂದ ಅದಕ್ಕೆ ಯಾವಾಗಲೂ ಪಾಪಕರ್ಮವನ್ನು ಮಾಡ-ಬೇಕಾಗುತ್ತದೆ ಅಲ್ಲದೆ ರೋಗಾದಿಗಳ ತೀವ್ರ ವೇದನೆಯಿಂದಲೂ ಸ್ತ್ರೀಪುತ್ರಾದಿ ಕುಟುಂಬ ಮತ್ತು ಪರಿಗ್ರಹಗಳ ವಿಯೋಗದಿಂದಲೂ ಉತ್ಪನ್ನವಾಗುವ ಆರ್ತಧ್ಯಾನದಲ್ಲಿ ಮರಣ ಹೊಂದಿ ದುರ್ಗತಿಗೆ ಹೋಗಬೇಕಾಗುತ್ತದೆ. ಸಂಸಾರೀ ಜೀವಗಳಿಗೆ ಅರಣ್ಯವಾಸಮಾಡಿ ತಪಸ್ಸು ಮಾಡುವ ಪ್ರವೃತ್ತಿಯು ಉಂಟಾಗುವದಿಲ್ಲ. ಅದು ಯಾರಿಗಾದರೂ ಒಬ್ಬ ಮಹಾ ಭಾಗ್ಯವಂತನಿಗೆ ಮಾತ್ರ ಆಗುತ್ತದೆ.

ನಿಜವಾದ ತಪವು ಯಾವುದು? ಪಾಪ ಕಾರ್ಯಗಳಿಂದ ವಿರಕ್ತಿಯನ್ನು ಹೊಂದಬೇಕು, ಸ್ತ್ರೀ ಪುತ್ರ ಧನಾದಿಗಳ ಮೇಲಿನ ಮೋಹವನ್ನು ಬಿಡಬೇಕು, ಧರ್ಮಕ್ಕೆ ಶರಣು ಹೋಗಬೇಕು; ವೀತರಾಗ ನಿರ್ಗ್ರಂಥ ಗುರುವಿನ ಸೇವೆಯನ್ನು ಮಾಡಲಿಕ್ಕೆ ಸಿದ್ಧರಾಗಬೇಕು, ಅದರಂತೆ ಸದ್‌ಗುರುವಿಗೆ ಶರಣು ಹೋಗಬೇಕು ಇಂಥವರ ಅಶುಭ ಕರ್ಮದ ಉದಯವು ಮಂದವಾಗಿ ಸಮ್ಯಕ್ತ್ವರೂಪೀ ಸೂರ್ಯನ ಉದಯವು ಅವರ ಅಂತಃಕರಣದಲ್ಲಿ ಆಗುತ್ತದೆ. ಸಂಸಾರ ವಿಷಯಭೋಗಾದಿಗಳ ವಿಷಯದಲ್ಲಿ ವಿರಕ್ತಿಯು ಉತ್ಪನ್ನವಾಗಿ ಅವನು ತಪಶ್ಚರಣ ಮತ್ತು ಸಂಯಮಗಳನ್ನು ಸ್ವೀಕರಿಸುತ್ತಾನೆ. ಇಂಥ ದುರ್ಧರ ತಪಶ್ಚರಣವನ್ನು ಮಾಡುತ್ತ ಇರುವಾಗ ಯಾರಾದರೂ ಪಾಪಿಗಳು ವಿಷಯಾಸಕ್ತಿಯಿಂದ ಅದನ್ನು ಕೆಡಿಸಿಯಾರು ಇಂಥ ಕೆಡುಕರಿಗೆ ಅನಂತಾನಂತಕಾಲ ಹೋದರೂ ಸಹ ಪುನಃ ತಪಶ್ಚರಣ ಮಾಡುವ ಸಂಧಿಯು ಪ್ರಾಪ್ತವಾಗಲಾರದು ಅಂದ ಮೇಲೆ ಮಾನವ ಜನ್ಮಕ್ಕೆ ಬಂದು, ತತ್ತ್ವದ ಸ್ವರೂಪವನ್ನು ಯಥಾರ್ಥವಾಗಿ ತಿಳಿದು, ಪಂಚೇಂದ್ರಿಯಗಳ ವಿಷಯಕ್ಕೆ ಬಲಿಬೀಳದೆ ವೈರಾಗ್ಯಪ್ರವೃತ್ತಿಯನ್ನು ಧಾರಣ ಮಾಡಬೇಕು ಅಲ್ಲದೆ ಸರ್ವ ಪರಿಗ್ರಹಗಳನ್ನು ತ್ಯಾಗಮಾಡಿ ಅರಣ್ಯದಲ್ಲಿ ಹೋಗಿ ಆತ್ಮಧ್ಯಾನದಲ್ಲಿ ಲೀನವಾಗಬೇಕು. ಇದು ನಿಜವಾದ ತಪವೆನಿಸುತ್ತದೆ ಪರಿಗ್ರಹಗಳ ಮೇಲಿನ ಮೋಹವನ್ನು ನಷ್ಟಗೊಳಿಸಿ, ಇಚ್ಛೆಯನ್ನು ನಿರೋಧ-ಗೊಳಿಸುವುದು ಮತ್ತು ಕಾಮವಿಕಾರವನ್ನು ಅಂತಃಕರಣದಲ್ಲಿ ಮೂಲದಲ್ಲಿ ಉತ್ಪನ್ನವಾಗಗೊಡದೆ ಇರುವುದು ಇದೇ ಎಲ್ಲದರಲ್ಲಿಯೂ ದೊಡ್ಡ ತಪವಾಗಿದೆ. ಹಾಗೆಯೇ ನಗ್ನ ದಿಗಂಬರ ರೂಪವನ್ನು ಧಾರಣಮಾಡಿ ಶೀತೋಷ್ಣ ಹವೆಯ ವೇದನೆ ಮತ್ತು ಗುಂಗಾಡು, ಸೊಣ, ಹಾವು, ಚೇಳು ಮೊದಲಾದ ಪ್ರಾಣಿಗಳಿಂದ ಆಗುವ ಉಪದ್ರವಗಳಿಗೂ ಸಹ ಸ್ವಲ್ಪವೂ ಚಲ-ವಿಚಲವಾಗದೆ ಸಹನ ಮಾಡುವುದು ಇದೂ ತಪವಾಗಿದೆ. ಭಯಂಕರ ನಿರ್ಜನ ಗುಹೆಯಲ್ಲಿ ಮತ್ತು ಪರ್ವತದ ದರಿಯಲ್ಲಿ ವಿಹಾರ ಮಾಡುವಂಥ ಸಿಂಹ, ಹುಲಿ ಮೊದಲಾದ ಕ್ರೂರ ಪಶುಗಳಿಂದ ತುಂಬಿದ ವನದಲ್ಲಿ ಹೋಗಿ, ನಿರ್ಭಯದಿಂದ ಇರುವುದು ಕೂಡ ತಪದಲ್ಲಿಯೇ ಸಮಾವೇಶವಾಗುತ್ತದೆ. ದುಷ್ಟ ಮನುಷ್ಯ, ಶತ್ರು, ಕಳ್ಳ

ಬೇಟೆಗಾರ, ದುಷ್ಟವ್ಯಂತರದೇವ, ಹಿಂಸ್ರಪಶು ಇವೇ ಮೊದಲಾದವುಗಳಿಂದ ಉಪಸರ್ಗವಾದಲ್ಲಿ ಅಂಜದೆ ಇರುವುದು. ಆ ಕಾಲದಲ್ಲಿ ಧೈರ್ಯದಿಂದ ಪರಮಾತ್ಮ ಭಾವವನ್ನು ಧಾರಣಮಾಡುವುದು, ಪರಮಾತ್ಮನ ಧ್ಯಾನಮಾಡುವುದರಲ್ಲಿ ಲೀನನಾಗುವುದು, ಎಲ್ಲ ಜೀವಗಳನ್ನೂ ಸೋಲಿಸುವಂಥ ರಾಗ-ದ್ವೇಷಗಳಿಗೆ ವಶವಾಗದೆ ಅವುಗಳನ್ನು ಗೆಲ್ಲುವುದು, ಯಾಚನೆಯನ್ನು ಮಾಡದೆ ಭಿಕ್ಷೆಯ ಪ್ರಸಂಗದಲ್ಲಿ ಶ್ರಾವಕರ ಮನೆಯೊಳಗೆ ನವಧಾ ಭಕ್ತಿಪೂರ್ವಕ ಕೈಯಲ್ಲಿ ಇಟ್ಟಿದ್ದನ್ನು ಸರಸ, ನೀರಸ, ಕಹಿ, ಕಾರ, ಹುಳಿ, ಒಗರು ಎನ್ನದೆ, ಆಹಾರದ ವಿಷಯದಲ್ಲಿ ಆಸಕ್ತಿಯನ್ನೂ ಇಡದೆ, ಸಂಕ್ಲೇಶರಹಿತ ನಿರ್ದೋಷ ಮತ್ತು ಪ್ರಾಸುಕ ಆಹಾರವನ್ನು ಒಮ್ಮೆ ಮಾತ್ರ ಗ್ರಹಣಮಾಡುವುದು, ಐದು ಸಮಿತಿಗಳನ್ನು ಪಾಲಿಸುವುದು, ಮನ ವಚನ ಕಾಯಗಳ ಪ್ರವೃತ್ತಿಗೆ ಚಂಚಲವಾಗಗೊಡದೆ ಇರುವುದು, ರಾಗದ್ವೇಷರಹಿತ ಆತ್ಮ ಸ್ವರೂಪದ ಅನುಭವ ತಕೊಳ್ಳುವುದು, ಸ್ವಪರ ಶಾಸ್ತ್ರಗಳ ವಿಚಾರಮಾಡಿ ಆ ವಿಷಯದಲ್ಲಿ ಚರ್ಚಿಸುವುದು, ನಾಲ್ಕು ಅನುಯೋಗಗಳ ಅಭ್ಯಾಸದಲ್ಲಿ ಕಾಲವನ್ನು ಕಳೆಯುವದು, ಅಭಿಮಾನವನ್ನು ಬಿಟ್ಟು ಎಲ್ಲರೊಡನೆಯೂ ವಿನಯದಿಂದ ವರ್ತಿಸುವುದು, ಕಪಟವನ್ನು ಬಿಟ್ಟು ಸರಳತನವನ್ನು ಸ್ವೀಕರಿಸುವುದು, ಕ್ರೋಧವನ್ನು ತ್ಯಜಿಸಿ, ಕ್ಷಮೆಯನ್ನು ಧಾರಣ ಮಾಡುವುದು, ಲೋಭವನ್ನು ಬಿಟ್ಟು ಇಚ್ಛಾರಹಿತನಾಗಿರುವುದು, ಕರ್ಮವು ನಾಶವಾಗುತ್ತ ಹೋಗಿ ಆತ್ಮವು ಸ್ವತಂತ್ರವಾಗುತ್ತ ಹೋಗುವ ಹಾಗೆ ಕ್ರಿಯೆಗಳನ್ನು ಮಾಡುತ್ತ ಇರುವುದು, ಶಾಸ್ತ್ರಾಭ್ಯಾಸವನ್ನು ಸ್ವತಃ ಮಾಡಿ ಅನ್ಯರಿಗೂ ಮಾಡಿಸುವುದು, ಶಾಸ್ತ್ರದೊಳಗಿನ ಗೂಢ ಅರ್ಥದ ಪ್ರತಿಪಾದನ ಮಾಡಿ ಅದರ ಅರ್ಥವನ್ನು ಜನರಿಗೆ ತಿಳಿಸಿ ಹೇಳುವುದು, ತಪಸ್ವಿ, ದೇವ, ಇಂದ್ರ ಇವರ ಸ್ತುತಿಮಾಡಿ ಅವರ ವಿಷಯದಲ್ಲಿ ಭಕ್ತಿಯನ್ನು ಪ್ರಕಟಮಾಡುವುದು,—ಇವೆಲ್ಲವುಗಳಿಗೆ ತಪವೆನ್ನಲಾಗುವದು.

ತಪದ ಪ್ರಭಾವ—ತಪಶ್ಚರಣದಿಂದ ಕೇವಲ ಜ್ಞಾನವು ಉತ್ಪನ್ನವಾಗುತ್ತದೆ. ಇಂಥ ತಪದ ಪ್ರಭಾವವು ಅಚಿಂತ್ಯವಾಗಿದೆ. ಇಂಥ ತಪವು ತಮ್ಮ ಕಡೆಯಿಂದ ಆಗಬೇಕೆಂಬ ವಿಚಾರವು ಮನಸ್ಸಿನಲ್ಲಿ ಬರುವುದೂ ಕೂಡ ಕಠಿಣ ಸಂಗತಿಯಾಗಿದೆ ನರಕ, ತಿರ್ಯಂಚ, ದೇವಗತಿಗಳಲ್ಲಿ ತಪಸ್ಸು ಮಾಡುವ ಯೋಗ್ಯತೆಯು ಇರುವದಿಲ್ಲ ಇದು ಕೇವಲ ಮನುಷ್ಯ ಗತಿಯಲ್ಲಿಯೇ ಸಂಭವಿಸುತ್ತದೆ. ಅದರಲ್ಲಿಯೂ ಉತ್ತಮ ಕುಲ, ಉತ್ತಮ ಜಾತಿ, ಬಲ, ಬುದ್ಧಿ, ಇಂದ್ರಿಯ ಪರಿಪೂರ್ಣತೆ ಮೊದಲಾದವುಗಳು ಯಾರಿಗೆ ಅನುಕೂಲವಿರುವವೋ ಅವರಿಗೇ ಅದು ಸಾಧಿಸುತ್ತದೆ ತಪದಲ್ಲಿ ಹನ್ನೆರಡು ಭೇದಗಳು ಇರುತ್ತವೆ. ಅವುಗಳಲ್ಲಿ ತಮ್ಮ ತಮ್ಮ ಶಕ್ತಿಗೆ ಅನುಸರಿಸಿದ್ದುದನ್ನು ಆಚರಿಸುತ್ತಿರಬೇಕು. ಭಗವಂತನು ಹೇಳಿದ ತಪದ ಸ್ವರೂಪವು ಬಾಲಕ, ವೃದ್ಧ, ಧನವಂತ, ದರಿದ್ರ, ಬಲವಂತ, ದುರ್ಬಲ, ಎಲ್ಲ ಸಾಮಗ್ರಿಗಳುಳ್ಳವ, ಇಲ್ಲವೆ ಏನೂ ಸಾಮಗ್ರಿಗಳಿಲ್ಲದವ, ಯಾರಿಗೂ ಸಹ ಮಾಡಲಿಕ್ಕೆ ಬರುವಂಥದಿದೆ. ಯಾರಿಗೂ ಅದು ಅಶಕ್ಯವಿಲ್ಲ ಯಾವುದರಿಂದ ವಾತ, ಪಿತ್ತ, ಕಫ ಮೊದಲಾದವುಗಳು ಪ್ರಕೋಪ ಹೊಂದಿ ರೋಗದ ವೃದ್ಧಿಯು ಆಗಲಾರದೋ ಮತ್ತು ಶರೀರವು ಯಾವಾಗಲೂ ರತ್ನತ್ರಯ ಧರ್ಮವನ್ನು ಧಾರಣಮಾಡಲಿಕ್ಕೆ ಸಹಾಯಕವಾಗಿ ಇರುವುದೋ ಇಂಥ ಸಾಮರ್ಥ್ಯವನ್ನು ನೋಡಿಯೇ ತಪವನ್ನು ಕೈಕೊಳ್ಳಬೇಕು. ಅದರಂತೆ ದೇಶ, ಕಾಲ, ಆಹಾರಗಳ ಅನುಕೂಲತೆಯನ್ನೂ ನೋಡಬೇಕು. ದಿನ ದಿನಕ್ಕೆ ಉತ್ಸಾಹವು ಬೆಳೆಯುತ್ತ ಹೋಗಿ, ಪರಿಣಾಮದ ಉಜ್ವಲತೆಯು ಹೆಚ್ಚುತ್ತ ಹೋಗುವಂತೆಯೇ ತಪಸ್ಸಿನ ರೀತಿಯು ಇರಬೇಕು ಇಚ್ಛೆಯನ್ನು ನಿರೋಧಿಸಿ, ವಿಷಯದ ಮೇಲಿನ ಪ್ರೀತಿಯನ್ನು ಕಡಿಮೆ ಮಾಡುತ್ತ ಹೋಗುವುದೇ ನಿಜವಾದ ತಪಸ್ಸಾಗಿದೆ. ಇದನ್ನು ಮುಖ್ಯವಾಗಿ ತಿಳಿದು, ಉಳಿದ ಬಾಹ್ಯ ಸಾಧನಗಳಿಂದ ಹೇಗೆ ಹೇಗೆ ತಪವು ಪೂರ್ಣ ಅವಸ್ಥೆಗೆ ಮುಟ್ಟುತ್ತ ಹೋಗುವುದೋ ಹಾಗೆ ಹಾಗೆ ಉಚ್ಚ ಕ್ರಿಯೆಗಳನ್ನು ಮಾಡುತ್ತ ಕೊನೆಗೆ ಪೂರ್ಣ ನಿರೀಚ್ಛಕನಾಗಬೇಕು ತಪಮಾಡುವುದರಿಂದ ಎಲ್ಲ ಜೀವಗಳ ಕಲ್ಯಾಣವಿದೆ. ತಪದಿಂದ ನಿದ್ರೆ, ಕಾಮ, ಪ್ರಮಾದಗಳು ನಷ್ಟವಾಗುತ್ತವೆ ಅಂತಲೇ ಅಭಿಮಾನವನ್ನು ಬಿಟ್ಟು, ಯಥಾವಿಧಿ ಹನ್ನೆರಡು ಪ್ರಕಾರದ ತಪಗಳನ್ನು ಸಾಮರ್ಥ್ಯಕ್ಕೆ ಅನುಸರಿಸಿ ಮಾಡಬೇಕು ತಪದ ಹನ್ನೆರಡು ಪ್ರಕಾರಗಳನ್ನು ಮುಂದೆ ವರ್ಣಿಸೋಣ. ಈ ಪ್ರಕಾರ ತಪಧರ್ಮದ ಸ್ವರೂಪವಿದೆ. ಇನ್ನು ಮುಂದೆ ತ್ಯಾಗ ಧರ್ಮದ ವರ್ಣನೆ ಮಾಡುವೆ.

## ತ್ಯಾಗ

ತ್ಯಾಗದ ಲಕ್ಷಣ—ಧನ, ಸಂಪತ್ತಿ, ಬಂಡಿ, ಕುದುರೆ ಮೊದಲಾದ ಅನೇಕ ಬಾಹ್ಯ ಪರಿಗ್ರಹಗಳು ಕರ್ಮೋದಯದಿಂದ ಪ್ರಾಪ್ತವಾಗುತ್ತವೆ ಇವು ಪರಾಧೀನವಿದ್ದು ನಾಶವಂತವಾಗಿವೆ. ಇವುಗಳಿಂದ ನಮ್ಮ ಮನಸ್ಸಿನಲ್ಲಿ

ಅಭಿಮಾನ, ತೃಷ್ಣೆ, ತೀವ್ರ ರಾಗ-ದ್ವೇಷ ಮೊದಲಾದ ವಿಕಾರಗಳು ಉತ್ಪನ್ನವಾಗುತ್ತವೆ. ಹಾಗೆಯೇ ಇವುಗಳನ್ನು ಸಂರಕ್ಷಿಸುವದಕ್ಕಾಗಿ ಅನೇಕ ಪಾಪ ಕ್ರಿಯೆಗಳನ್ನು ಮಾಡಬೇಕಾಗುತ್ತದೆ. ಅಂತಲೇ ಸತ್ಪುರುಷರು ಈ ಬಾಹ್ಯ ಪರಿಗ್ರಹಗಳಿಗೆ ಪಂಚ ಪಾಪಗಳ ಮೂಲವೆಂದು ತಿಳಿಯುತ್ತಾರೆ ಅಲ್ಲದೆ ಅವುಗಳನ್ನು ಗ್ರಹಣ ಮಾಡುವದಿಲ್ಲ. ನಿಜವಾಗಿ ಅವರೇ ಧನ್ಯರು ಕೆಲವರು ಮೊದಲು ಈ ಎಲ್ಲ ಪರಿಗ್ರಹಗಳನ್ನು ಸ್ವೀಕರಿಸಿ, ಅನುಭವ ತಕ್ಕೊಂಡು, ಹಿಂದಿನಿಂದ ಇವು ಹಾಲಾಹಲ ವಿಷಕ್ಕೆ ಸಮಾನವೆಂದು ತಿಳಿದು ಬಿಟ್ಟು, ವಿರಕ್ತರಾಗುತ್ತಾರೆ. ಇವರು ಪರಿಗ್ರಹಗಳೆಂದರೆ ಕೊಳೆತ ಹುಲ್ಲೆಂದು ಭಾವಿಸುತ್ತಾರೆ ಇವರ ಮಹಿಮೆಯು ಇನ್ನೂ ಅಧಿಕವಾಗಿದೆ. ಯಾಕಂದರೆ ಆರಂಭದಲ್ಲಿ ಗ್ರಹಣಮಾಡದೆ ಇರುವುದೇ ಒಳ್ಳೆಯದು. ಆದರೆ ಒಮ್ಮೆ ಸ್ವೀಕಾರಮಾಡಿದ ಮೇಲೆ ಅವುಗಳ ಮೇಲಿನ ಮೋಹವನ್ನು ಕಡಿಮೆ ಮಾಡುವುದು ಬಹಳ ಕಠಿಣವಿರುತ್ತದೆ ಇಂಥ ಮೋಹವನ್ನು ಯಾರು ಕಡಿಮೆ ಮಾಡುತ್ತಾರೆಯೋ ಅವರ ಪರಾಕ್ರಮವು ಹೆಚ್ಚಿನದೆಂದು ತಿಳಿಯಲಿಕ್ಕೆಬೇಕು

ಸ್ವದ್ರವ್ಯದ ವಿನಿಯೋಗವನ್ನು ದಾನದಲ್ಲಿ ಮಾಡಬೇಕು. ಅನೇಕ ಜೀವಗಳ ತೀವ್ರ ರಾಗವು ಅಥವಾ ಮೋಹವು ಕಡಿಮೆಯಾಗುವದಿಲ್ಲ. ಅದಕ್ಕಾಗಿ ಅವರಿಗೆ ಸಂಪೂರ್ಣವಾಗಿ ಪರಿಗ್ರಹಗಳನ್ನು ತ್ಯಾಗಮಾಡುವದು ಕಠಿಣವಾಗುತ್ತದೆ ಆದರೆ ಧರ್ಮದ ಮೇಲಿನ ಪ್ರೀತಿಯಿಂದ ಅವರಿಗೆ ಪಾಪದ ವಿಷಯದಲ್ಲಿ ಹೆದರಿಕೆಯು ಇರುತ್ತದೆ. ಅವರು ತಮ್ಮ ದ್ರವ್ಯವನ್ನು ಉತ್ತಮ ಪಾತ್ರದ ಮೇಲೆ ಉಪಕಾರ ಮಾಡುವದಕ್ಕಾಗಿ ದಾನ ಮಾಡುವುದರಲ್ಲಿಯೂ ಧರ್ಮಸೇವಕರಾದಂಥ ನಿರ್ಧನರಿಗೆ ಅನ್ನ ವಸ್ತ್ರಾದಿಗಳನ್ನು ಪೂರೈಸುವದರಲ್ಲಿಯೂ ಉಪಯೋಗವಾಗುವಂತೆ ವಿನಿಯೋಗ ಮಾಡುತ್ತಾರೆ ಧರ್ಮಾಯತನ-ಧರ್ಮವು ಸದಾ ನಡೆಯುವಂಥ ಸ್ಥಾನಗಳು ಜಿನಮಂದಿರ, ಸರಸ್ವತೀ ಭವನ, ಜಿನಸಿದ್ಧಾಂತಲೇಖನ, ಉಪಕರಣ, ಪೂಜನ, ಪ್ರಭಾವನಾ ಇತ್ಯಾದಿ ಕಾರ್ಯಗಳಲ್ಲಿ ವ್ಯಯಮಾಡುತ್ತಾರೆ. ದುಃಖಿ, ರೋಗಿ, ದರಿದ್ರ ಜನರ ಮೇಲೆ ಕರುಣಾ ಬುದ್ಧಿಯಿಂದ ಉಪಕಾರವಾಗಬೇಕೆಂದು ಯಾರು ತಮ್ಮ ತನು-ಮನ-ಧನಗಳನ್ನು ಉಪಯೋಗಿಸುವರೋ ಅವರ ಜೀವಿತವು ಸಫಲವಾಗುತ್ತದೆ ದಾನವಿದು ಧರ್ಮದ ಒಂದು ಅಂಗವಾಗಿದೆ ಅದನ್ನು ಶಕ್ತಿಗೆ ಅನುಸರಿಸಿ ಭಕ್ತಿಪೂರ್ವಕ ನಿರ್ಮಲ ಮತ್ತು ಗುಣವಾನ್ ಪುರುಷನಿಗೆ ಕೊಡುವುದರಿಂದ ಪರಲೋಕದಲ್ಲಿ ಸುಖ ಸಾಮಗ್ರಿಯ ಸಂಗ್ರಹವನ್ನು ಸಂಗಡ ಒಯ್ದಂತೆ ಆಗುತ್ತದೆ. ದಾನದ ಪ್ರಭಾವದಿಂದ ಸ್ವರ್ಗದಲ್ಲಿ ಮತ್ತು ಭೋಗಭೂಮಿಯಲ್ಲಿ ನಿರ್ವಿಘ್ನವಾದ ಸುಖದ ಪ್ರಾಪ್ತಿಯು ಆಗುತ್ತದೆ. ದಾನದ ಮಹಾತ್ಮ್ಯವನ್ನು ಚಿಕ್ಕದೊಡ್ಡವರೆಲ್ಲ ತಿಳಿದಿರುತ್ತಾರೆ ಯಾರಿಗೆ ಇಲ್ಲಿ ಅನೇಕ ಪ್ರಕಾರದ ವೈಭವಗಳು ಪ್ರಾಪ್ತ-ವಾಗುತ್ತವೆಯೋ ಅವುಗಳನ್ನು ನೋಡಿ ಹೀಗೆ ಅನ್ನುವ ರೂಢಿಯು ಬಿದ್ದಿದೆ—"ಅವನು ಪೂರ್ವಜನ್ಮದಲ್ಲಿ ದಾನಮಾಡಿದ್ದಾನೆ ಅದರ ಫಲವೆಂದೇ ಅವನಿಗೆ ಈಗ ಅನೇಕ ಪ್ರಕಾರದ ಸುಖೋಪಭೋಗಗಳು ದೊರೆಯುತ್ತಿವೆ. ಇದೇ ಪ್ರಕಾರ ಈಗಲೂ ನಹ ಯಾರು ದಾನಮಾಡುವರೋ ಅವರಿಗೂ ಸಹ ಇಂಥ ಫಲಗಳು ಪ್ರಾಪ್ತವಾಗುವವು. ಅದಕ್ಕಾಗಿ ಸುಖ-ಸಂಪತ್ತುಗಳ ಇಚ್ಛೆ ಇದ್ದವರು ದಾನಮಾಡಲಿಕ್ಕೆ ಸಿದ್ಧರಾಗಬೇಕು. ಯಾರು ಸಾಯುವ ವರೆಗೆ ಒಂದು ಕಪಡಿಯನ್ನೂ ಸಹ ಖರ್ಚುಮಾಡದೆ ಕೇವಲ ದ್ರವ್ಯದ ಸಂಚಯ ಮಾಡುವದರಲ್ಲಿಯೇ ಕಾಲವನ್ನು ಕಳೆಯುವರೋ ಅವರು ಯಾವಾಗಲೂ ಆರ್ತರೌದ್ರ ಧ್ಯಾನದಲ್ಲಿದ್ದು, ಮರಣೋತ್ತರ ಸರ್ಪ ವ್ಯಾಘ್ರಾದಿಕ ತಿರ್ಯಂಚ ಗತಿಯಲ್ಲಿ ಉತ್ಪನ್ನವಾಗಬೇಕಾಗುತ್ತದೆ ಅಲ್ಲಿಂದ ತಿರುಗಿ ನಿಗೋದದಲ್ಲಿ ಹೋಗಿ ಅನಂತ ದುಃಖವನ್ನು ಭೋಗಿಸ-ಬೇಕಾಗುತ್ತದೆ ಆಗ ಧನವು ಸಂಗಡ ಬರುವದಿಲ್ಲ ಧನವು ಪ್ರಾಪ್ತವಾಗಿ, ಅದರ ಉಪಯೋಗವು ಸತ್ಪಾತ್ರ ದಾನಮಾಡುವುದರಲ್ಲಿ ಮಾತ್ರ ಆದರೆ ಅದಕ್ಕೆ ಸಫಲವೆನ್ನಬೇಕಾದೀತು ಉಳಿದ ಕೋಟ್ಯಾವಧಿ ಧನವಿದ್ದರೂ ಅದು ಘೋರ ದುಃಖಕ್ಕೆ ಕಾರಣವಾಗುತ್ತದೆ

ಕೃಪಣನ ನಿಂದೆ ಮತ್ತು ಉದಾರನ ಸ್ತುತಿ—ಈ ಲೋಕದಲ್ಲಿ ಕೃಪಣ ಮನುಷ್ಯನ ನಿಂದೆಯು ಜಗತ್ತಿನಲ್ಲಿ ತುಂಬ ಆಗುವದು ಕೃಪಣ ಮನುಷ್ಯನ ಹೆಸರನ್ನು ಮುಂಜಾನೆ ಉಚ್ಚರಿಸುವುದೂ ಸಹ ಅಮಂಗಲವೆಂದು ತಿಳಿಯುತ್ತಾರೆ ಇಷ್ಟು ಕೃಪಣನ ವಿಷಯದಲ್ಲಿ ಜನರೊಳಗೆ ತಿರಸ್ಕಾರವಿರುತ್ತದೆ. ಇದಕ್ಕೆ ಭಿನ್ನವಾಗಿ ದಾನಿಗಳಲ್ಲಿ ಕೆಲವೊಂದು ದೋಷಗಳಿದ್ದರೂ ಸಹ ಅವು ಅವರ ದಾತೃತ್ವ ಗುಣದಿಂದ ಮುಚ್ಚಿ ಹೋಗುತ್ತವೆ ಜಗತ್ತಿನಲ್ಲಿ ಅವರ ಕೀರ್ತಿಯು ಹಬ್ಬಿ ಹತ್ತುತ್ತದೆ ದಾನ ಕೊಡುವುದರಿಂದ ಶತ್ರುವೂ ಕೂಡ ವೈರವನ್ನು ಬಿಟ್ಟು, ನಮ್ಮ ಹಿತವನ್ನು ಮಾಡುವ ಮಿತ್ರನಾಗುವನು.

ದಾನದ ಹಿರಿಮೆ—ಜಗತ್ತಿನಲ್ಲಿ ದಾನದ ಮಹಿಮೆಯು ಬಹಳ ದೊಡ್ಡದಿದೆ ನಿಜವಾದ ಭಕ್ತಿಯಿಂದ ಸ್ವಲ್ಪದಾನವನ್ನು ಮಾಡುವಂಥ ಪುರುಷನಿಗೆ ಭೋಗ ಭೂಮಿಯೊಳಗಿನ ಮೂರು ಪಲ್ಯದಷ್ಟು ಸುಖಮಯ ಆಯುಷ್ಯವು ಪ್ರಾಪ್ತವಾಗಿ, ಕೊನೆಗೆ ಸ್ವರ್ಗವು ಲಭಿಸುತ್ತದೆ. ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದ ಪದವಿಯು ಯಾವುದಾದರೂ ಇದ್ದರೆ ಅದು 'ದಾನವೀರತೆ' ಎಂಬುದೇ ಆಗಿದೆ ದಾನಕೊಡುವಂಥ ಪುರುಷನಷ್ಟು ಉಚ್ಚ ಪುರುಷನು ಈ ಸಂಸಾರದಲ್ಲಿ ಬೇರೊಬ್ಬನಿಲ್ಲ ದಾನ ಕೊಡುವದನ್ನು ವಿನಯಪೂರ್ವಕವಾಗಿಯೂ ಮಧುರ ವಚನಗಳನ್ನಾಡಿಯೂ ಕೊಡಬೇಕು. ದಾನಕೊಡುವಂಥವರು ದಾನಕೊಡುವಾಗ ತಾನು ಯಾರ ಮೇಲಾದರೂ ದೊಡ್ಡ ಉಪಕಾರ ಮಾಡುತ್ತಿರುವೆನೆಂದು ಭಾವಿಸಿ ದಾನವನ್ನು ಕೊಡಬಾರದು. ದಾನದ ಅಭಿಮಾನವನ್ನು ಹಿಡಿಯಬಾರದು ದಾನಕೊಡುವಂಥ ಪುರುಷನು ತಿರುಗಿ ದಾನ ತಕ್ಕೊಳ್ಳುವಂಥ ಪಾತ್ರವೇ ತನಗೆ ಉಪಕಾರ ಮಾಡುವಂಥದೆಂದು ತಿಳಿದು, ಅದರ ವಿಷಯದಲ್ಲಿ ಅತ್ಯಂತ ಆದರವನ್ನು ಇಟ್ಟುಕೊಳ್ಳಬೇಕು. ಯಾಕಂದರೆ ಲೋಭವೆಂಬ ಅಂಧ ಕೂಪದಲ್ಲಿ ಬಿದ್ದಂಥ ಜೀವಕ್ಕೆ ಇಂಥ ಸತ್ಪಾತ್ರದ ಹೊರತಾಗಿ ಯಾರು ಉದ್ಧಾರ ಮಾಡಲಿಕ್ಕೆ ಸಾಧ್ಯವಿದೆ? ಈ ಜಗತ್ತಿನಲ್ಲಿ ದಾನ ತಕ್ಕೊಳ್ಳುವ ವ್ಯಕ್ತಿಗಳೇ ಇಲ್ಲದಿದ್ದಲ್ಲಿ ಲೋಭೀ ಪುರುಷನ ಲೋಭವು ಕಡಿಮೆಯಾಗುವದಾದರೂ ಹೇಗೆ? ಅಲ್ಲದೆ ಸಂಸಾರದಲ್ಲಿ ಉದ್ಧಾರ ಮಾಡುವಂಥ ದಾನ ಕ್ರಿಯೆಯಾದರೂ ಹೇಗೆ ಸಂಭವಿಸುತ್ತಿತ್ತು? ಅಂತಲೇ ಧರ್ಮವಾನ್ ಪುರುಷನಿಗೆ ಸತ್ಪಾತ್ರ ಮತ್ತು ದಾನ ಇವೆರಡರ ಲಾಭವು ಆಯಿತೆಂದರೆ ಅವನಿಗೆ ಇನ್ನಾವುದಕ್ಕಿಂತಲೂ ಹೆಚ್ಚಿಗೆ ಆನಂದವು ಆಗುತ್ತದೆ ಸತ್ಪಾತ್ರಕ್ಕೆ ಯೋಗ್ಯ ದಾನವನ್ನು ಕೊಟ್ಟವರು ತಾವು ಬಹಳ ದೊಡ್ಡವರು, ಜ್ಞಾನಿಗಳು, ಶ್ರೀಮಂತರು ಎಂದು ತಿಳಿಯುತ್ತಾರೆ. ಅದಕ್ಕಾಗಿ ಎಲ್ಲರೂ ದಾನ ಕೊಡುವ ಕ್ರಮವನ್ನು ಇಡಬೇಕು.

ಅಭಯ ದಾನ—ಷಟ್‌ಕಾಯ ಜೀವಗಳನ್ನು ಯಾವಾಗಲೂ ರಕ್ಷಣಮಾಡಿ ಅವುಗಳಿಗೆ ಅಭಯ ದಾನವನ್ನು ಕೊಡಬೇಕು. ಅಭಕ್ಷ್ಯ ಭಕ್ಷಣ, ಅಪ್ರಮಾಣ ಪರಿಗ್ರಹ, ಅಯತ್ನಾಚಾರ ಪೂರ್ವಕ ಕ್ರಿಯಾ ಮತ್ತು ಇತರ ಜೀವಗಳಿಗೆ ದುಃಖ ಇವು ಮನ-ವಚನ-ಕಾಯಗಳಿಂದ ಎಂದೂ ಸಂಭವಿಸಬಾರದು. ಇದೇ ಪ್ರಯತ್ನದಲ್ಲಿ ಯಾವಾಗಲೂ ಇರಬೇಕು ದುಃಖಿ ಜೀವಗಳನ್ನೂ ನೋಡಿದ ಕೂಡಲೇ ಅಂತಃಕರಣದಲ್ಲಿ ಕರುಣೆಯು ಉಂಟಾಗಬೇಕು ಇದರಿಂದ ಗೃಹಸ್ಥರಿಗೆ ಅಭಯ ದಾನವು ಸಂಭವಿಸುತ್ತದೆ. ಇದರಿಂದ ಜನ್ಮ ಮರಣ, ರೋಗ, ಶೋಕ, ದಾರಿದ್ರ್ಯ, ವಿಯೋಗ, ಸಂಯೋಗ, ಸಂತಾಪ ಮೊದಲಾದ ಆಪತ್ತಿಗಳ ತ್ರಾಸವು ಆಗುವದಿಲ್ಲ ಹಿಂಸೆಯ ವೃದ್ಧಿಯು ಆಗುವಂಥ ಮತ್ತು ಮಿಥ್ಯಾಧರ್ಮದ ಪ್ರಸಾರವಾಗುವಂಥ ಯುದ್ಧ ಶಾಸ್ತ್ರ, ಶೃಂಗಾರ ಶಾಸ್ತ್ರ, ರಸಾಯನ-ಶಾಸ್ತ್ರ, ಕಪಟ, ಮಂತ್ರ, ತಂತ್ರ, ಜಾರಣ, ಮಾರಣ, ಉಚ್ಚಾಟನ, ವಶೀಕರಣ ಮೊದಲಾದ ಅನೇಕ ಪಾಪಗಳಿಗೆ ಪ್ರವೃತ್ತಗೊಳಿಸುವಂಥ ಶಾಸ್ತ್ರಗಳ ಅಭ್ಯಾಸ ಮಾಡುವುದರಲ್ಲಿ ಕಾಲವನ್ನು ಕಳೆಯಬಾರದು. ಇದರಿಂದ ಆತ್ಮನ ಹಿತವು ಯತ್‌ಕಿಂಚಿತವೂ ಆಗದೆ ತಿರುಗಿ ಅನಂತ ಸಂಸಾರದಲ್ಲಿ ಪರಿಭ್ರಮಣ ಮಾಡಬೇಕಾಗುತ್ತದೆ

ಶಾಸ್ತ್ರದಾನ—ಭಗವಾನ್ ವೀತರಾಗ ಸರ್ವಜ್ಞ ಪ್ರಭುವು ವರ್ಣಿಸಿದ ದಯಾಮಯವಾದ ಧರ್ಮದ ಪ್ರರೂಪಣೆ ಮಾಡುವಂಥ ಶಾಸ್ತ್ರದ ಅವಲೋಕನ ಮಾಡಬೇಕು ಸ್ಯಾದ್ವಾದವೆಂದರೆ ಅನೇಕ ಧರ್ಮಾತ್ಮಕ ವಸ್ತುವಿನ ಪ್ರತಿಪಾದನೆ ಮಾಡುವ ನಯ ಪ್ರಮಾಣಾತ್ಮಕ ಶಾಸ್ತ್ರದ ಅಧ್ಯಯನ ಮಾಡಿ, ಆತ್ಮನ ಉದ್ಧಾರ ಮಾಡುವದಕ್ಕಾಗಿ ಇಂಥ ಶಾಸ್ತ್ರಗಳ ದಾನವನ್ನು ಮಾಡಬೇಕು. ತತ್ತ್ವದ ಸ್ವರೂಪವನ್ನು ಸ್ವತಃ ತಿಳಿದುಕೊಂಡು, ಅದರ ಉಪದೇಶವನ್ನು ಜನರಿಗೂ ಮಾಡಬೇಕು ತಮ್ಮ ಮಕ್ಕಳು ಮರಿಗಳಿಗೂ ಚಿಕ್ಕಂದಿನಿಂದಲೂ ಧರ್ಮದ ಸವಿಯನ್ನು ಹಚ್ಚಬೇಕು. ಇನ್ನುಳಿದ ಧರ್ಮಾನುಯಾಯಿ ತತ್ತ್ವಜಿಜ್ಞಾಸು ಜನರಿಗೆ ಶಾಸ್ತ್ರದಾನವನ್ನು ಕೊಡಬೇಕು. ಸಂಸಾರದಲ್ಲಿ ಎಲ್ಲೆಡೆಗೂ ಜ್ಞಾನ-ಪ್ರಸಾರವು ಆಗಬೇಕು ಈ ಹೇತುವಿನಿಂದ ಪಾಠಶಾಲೆಗಳನ್ನು ಸ್ಥಾಪಿಸಬೇಕು ಇದರಿಂದ ಜ್ಞಾನದಾನವು ಸಂಭವಿಸುತ್ತದೆ ಯಾಕಂದರೆ ಎಲ್ಲ ಧರ್ಮಗಳ ಮುಖ್ಯ ಆಧಾರವು ಜ್ಞಾನವೇ ಆಗಿದೆ. ಎಲ್ಲಿ ಜ್ಞಾನವು ಜಾಗೃತವಾಗಿರುವುದೋ ಅಲ್ಲಿಯೇ ಧರ್ಮದ ವಾಸ್ತವ್ಯವಿರುವುದು ಜ್ಞಾನದ ಅಭಾವದಲ್ಲಿ ಧರ್ಮವೂ ನಷ್ಟ ವಾಗುವುದು ಅದಕ್ಕಾಗಿ ಧರ್ಮದ ಅಸ್ತಿತ್ವಕ್ಕಾಗಿ ಜ್ಞಾನದಾನವನ್ನು ಮಾಡುವುದು ಅವಶ್ಯಕವಾಗಿದೆ. ಜ್ಞಾನದಾನದ ಪ್ರಭಾವದಿಂದ ಆತ್ಮನಿಗೆ ಕೇವಲಜ್ಞಾನವು ಉತ್ಪನ್ನವಾಗುವ ಶಕ್ತಿಯು ಪ್ರಾಪ್ತವಾಗುತ್ತದೆ

ಔಷಧದಾನ—ಇದೇ ಪ್ರಕಾರ ಅನೇಕ ರೋಗಗಳನ್ನು ನಾಶಮಾಡುವ ಪ್ರಾಸುಕ ಔಷಧಗಳನ್ನೂ ಸಹ ದಾನಕೊಡಬೇಕು. ಔಷಧದಾನದಿಂದ ಬಹಳ ದೊಡ್ಡ ಉಪಕಾರವಾಗುತ್ತದೆ. ಒಂದು ವೇಳೆ ರೋಗಿಯಾದ

ಮನುಷ್ಯನಿಗೆ ಸಿದ್ಧವಾದ ಔಷಧವು ಲಭಿಸಿದರೆ ಅವನಿಗೆ ಬಹಳ ಆನಂದವಾಗುತ್ತದೆ. ಬಡವನೂ ಸೇವಕರಿಲ್ಲದವನಂಥವನೂ ಆದ ರೋಗಿಗೆ ಸಿದ್ಧವಾದ ಔಷಧವು ದೊರೆತರೆ ಬಡವನಿಗೆ ಧನವು ಸಿಕ್ಕಂತೆ ಆನಂದವಾಗುತ್ತದೆ. ಔಷಧವನ್ನು ತಕ್ಕೊಳ್ಳುವುದರಿಂದ ರೋಗವು ಇಲ್ಲದಂತಾಗುತ್ತದೆ. ಅದರಿಂದ ವ್ರತ, ಶೀಲ, ಸಂಯಮ, ತಪಶ್ಚರಣಗಳನ್ನು ಮಾಡಲಿಕ್ಕೆ ಬರುತ್ತದೆ. ಹಾಗೆಯೇ ಶರೀರವು ನಿರೋಗಿಯಾಗಿರುವುದರಿಂದ ಜ್ಞಾನಾಭ್ಯಾಸವನ್ನು ಬೆಳೆಯಿಸಿ ಆತ್ಮನ ಕಲ್ಯಾಣವನ್ನು ಮಾಡಿಕೊಳ್ಳಲಿಕ್ಕೆ ಬರುತ್ತದೆ. ಔಷಧವನ್ನು ದಾನಕೊಡುವಂಥ ಪುರುಷನಲ್ಲಿ ಸಮ್ಯಗ್ದರ್ಶನದ ಇತರ ಅಂಗಗಳಾದ ವಾತ್ಸಲ್ಯ, ಸ್ಥಿತೀಕರಣತ್ವ, ನಿರ್ವಿಚಿಕಿತ್ಸತಾ ಮೊದಲಾದವುಗಳೂ ಕಂಡುಬರುತ್ತವೆ ಔಷಧ ದಾನದ ಪ್ರಭಾವದಿಂದ ಮುಂದಿನ ಜನ್ಮದಲ್ಲಿ ಸಪ್ತಧಾತುಗಳಿಲ್ಲದ ನಿರೋಗಿಯಾದಂಥ ದೇವನ ವೈಕ್ರಿಯಕ ಶರೀರವು ಪ್ರಾಪ್ತವಾಗುತ್ತದೆ

**ಆಹಾರದಾನ**—ಇದೇ ಪ್ರಕಾರ ಆಹಾರ ದಾನವೂ ಕೂಡ ಎಲ್ಲ ದಾನಗಳಲ್ಲಿ ಶ್ರೇಷ್ಠವಾಗಿದೆ. ಎಲ್ಲ ಪ್ರಾಣಿವರ್ಗದ ಜೀವನ, ಶಕ್ತಿ, ಬಲ, ಬುದ್ಧಿ ಮೊದಲಾದ ಸರ್ವಗುಣಗಳು ಆಹಾರವಿಲ್ಲದೆ ನಷ್ಟವಾಗುತ್ತವೆ ಯಾರು ಆಹಾರದಾನವನ್ನು ಮಾಡುವರೋ ಅವರು ಇವೆಲ್ಲ ಗುಣಗಳ ದಾನವನ್ನು ಮಾಡಿದಂತೆಯೇ ಆಗುತ್ತದೆ ಆಹಾರದಾನದಿಂದ ಮುನಿ ಮತ್ತು ಶ್ರಾವಕ ಇವರ ಧರ್ಮದ ರಕ್ಷಣೆಯು ಆಗುತ್ತದೆ ಆಹಾರವಿಲ್ಲದಿದ್ದರೆ ಎಲ್ಲ ಧರ್ಮಮಾರ್ಗಗಳೂ ಸಹ ಭ್ರಷ್ಟವಾಗುತ್ತಿದ್ದವು. ಆಹಾರದಿಂದಲೂ ಅನೇಕ ರೋಗಗಳು ನಷ್ಟವಾಗುತ್ತವೆ ಆಹಾರದಾನ ಕೊಡುವಂಥವನು ಯಾರೇ ಇರಲಿ, ಅವನು ಮಿಥ್ಯಾದೃಷ್ಟಿ ಇದ್ದರೂ ಸಹ ಆಹಾರದಾನದ ಪ್ರಭಾವದಿಂದ ಭೋಗಭೂಮಿಯಲ್ಲಿ ಹುಟ್ಟಿ, ಅಲ್ಲಿ ಕಲ್ಪವೃಕ್ಷದಿಂದ ಪ್ರಾಪ್ತವಾಗುವ ಹತ್ತು ಪ್ರಕಾರದ ಭೋಗಗಳನ್ನು ಅಸಂಖ್ಯಾತ ಕಾಲದ ವರೆಗೆ ಅನುಭವ ತಕ್ಕೊಳ್ಳುತ್ತಾನೆ. ಅಲ್ಲಿ ಹಸಿವು, ನೀರಡಿಕೆಗಳ ಬಾಧೆಯು ತೀರ ಕಡಿಮೆಯಾಗಿರುತ್ತದೆ ಭೋಗಭೂಮಿಯಲ್ಲಿ ಮೂರು ದಿನಗಳಿಗೊಮ್ಮೆ ಬೋರಿಯ ಬೀಜದಷ್ಟು ಆಹಾರವನ್ನು ಸ್ವೀಕರಿಸಿದರೂ ಸಹ ಹಸಿವು ಹಿಂಗುತ್ತದೆ. ಯಾವ ದುಃಖವೂ ಅಲ್ಲಿ ಇರುವದಿಲ್ಲ ಅಸಂಖ್ಯಾತ ವರ್ಷಗಳ ವರೆಗೆ ಅಲ್ಲಿಯ ಸುಖವನ್ನು ಭೋಗಿಸಿದ ಮೇಲೆ ಮುಂದೆ ದೇವಲೋಕದಲ್ಲಿ ಜನ್ಮವಾಗುತ್ತದೆ ಅದಕ್ಕಾಗಿ ಏನಾದರೂ ದ್ರವ್ಯದ ಸಂಚಯವು ಇದ್ದರೆ ಅದನ್ನು ಚತುರ್ವಿಧ ದಾನದಲ್ಲಿ ಉಪಯೋಗಮಾಡಿ ಮೇಲಿನ ಫಲಗಳನ್ನು ಸಂಪಾದಿಸಬೇಕು. ನಿರ್ಧನ ಪುರುಷರೂ ಸಹ ತಮ್ಮ ಆಹಾರದೊಳಗಿನ ಶಕ್ಯವಿದ್ದಷ್ಟು ಭಾಗವನ್ನು ಬೇರೆ ತೆಗೆದಿಟ್ಟು ಅದನ್ನು ದುಃಖಿತರಿಗೂ ಹಸಿದವರಿಗೂ ಕೊಟ್ಟು, ತರುವಾಯ, ತಾವು ಊಟ ಮಾಡಬೇಕು ಯಾರಿಗೆ ಒಂದು ಹೊತ್ತೂ ಕೂಡ ಅನ್ನವು ಹೊಟ್ಟೆ ತುಂಬ ಸಿಗುವದಿಲ್ಲವೋ ಅವರೂ ಕೂಡ ಸಿಕ್ಕಷ್ಟು ಆಹಾರದೊಳಗಿಂದ ಎರಡು ತುತ್ತನ್ನಾದರೂ ಹಸಿದವರಿಗೆ ಕೊಟ್ಟು ತರುವಾಯ ಉಳಿದ ಅನ್ನವನ್ನು ಉಂಡು ಅಷ್ಟರಿಂದ ಸಂತೋಷವನ್ನು ಹೊಂದಿರಬೇಕು ಆದರೆ ದಾನವನ್ನು ಕೊಡದೆ ಇರಕೂಡದು

**ಯಾರ ಮನಸ್ಸನ್ನೂ ನೋಯಿಸಬಾರದು**—ಇದೇ ಪ್ರಕಾರ ಮುಖದಿಂದ ಮಧುರ ವಚನಗಳನ್ನು ಉಚ್ಚರಿಸುವುದು, ಸವಿಯಾಗಿ ಮಾತನಾಡುವುದು, ಎಲ್ಲರ ಆದರ ಸತ್ಕಾರ ಮಾಡುವುದು, ನಮ್ರತೆಯಿಂದಲೂ ವಿನಯದಿಂದಲೂ ಅತಿಥಿಗಳ ಸ್ವಾಗತಮಾಡಿ ಉಚ್ಚಾಸನದ ಮೇಲೆ ಕೂಡ್ರಿಸುವುದು, ಕುಶಲ ಸಮಾಚಾರವನ್ನು ಕೇಳಿ ಅವರನ್ನು ಆನಂದಿತಗೊಳಿಸುವುದು ಇವೇ ಮೊದಲಾದ ಕ್ರಿಯೆಗಳನ್ನು ಮಾಡುವುದೂ ಮಹಾದಾನವಾಗಿದೆ ಮನಸ್ಸಿನಲ್ಲಿ ದುಷ್ಟ ಸಂಕಲ್ಪ ವಿಕಲ್ಪ ಉತ್ಪನ್ನವಾಗಗೊಡದೆ ಇರುವುದು ಪಾಪಕ್ರಿಯೆಯ ಕಡೆಗೆ ಪ್ರವೃತ್ತರಾಗಕೂಡದು ಕಾಮ-ಕ್ರೋಧಾದಿ ವಿಕಾರಗಳ ಸ್ವಾಧೀನವಾಗಬೇಡಿರಿ ವಿಕಥೆಗಳನ್ನು ಹೇಳಬೇಡಿರಿ ಇನ್ನೊಬ್ಬರ ಸುಳ್ಳು ನಿಜ ದೋಷಗಳನ್ನು ಎತ್ತಿ ಆಡಬೇಡಿರಿ ಅನ್ಯಾಯದಿಂದ ಯಾರ ಧನವನ್ನೂ ಸ್ವೀಕರಿಸುವ ಇಚ್ಛೆಯನ್ನು ಮಾಡಬೇಡಿರಿ ಈ ಪ್ರಕಾರ, ಸ್ವಂತದ ಆತ್ಮಹಿತವನ್ನು ಮಾಡಿಕೊಳ್ಳಬೇಕೆನ್ನುವವರು ವರ್ತಿಸಬೇಕು ಯಾವಾಗಲೂ ದುಃಖಿ, ಹಸಿದವರು, ಬಡವರು ಆದ ಜನರನ್ನು ನೋಡಿ ಅವರಿಗೆ ದಾನಕೊಡಬೇಕು ಸಮ್ಯಗ್ದರ್ಶನ ಮೊದಲಾದ ಗುಣಗಳನ್ನು ಧಾರಣಮಾಡುವಂಥ ಜನರು ಭೇಟಿಯಾದರೆ ಅವರ ಸನ್ಮಾನ ಮಾಡಬೇಕು ಎಲ್ಲ ಜೀವಗಳ ಮೇಲೆ ಕರುಣೆಯನ್ನು ಇಡಬೇಕು ಮಿಥ್ಯಾದರ್ಶನವು ಉತ್ಪನ್ನವಾಗದಂತೆ ಇರಬೇಕು ರಾಗದ್ವೇಷಿ ಮತ್ತು ಮೋಹಿಯಾದಂಥ ಕುದೇವರಿಗೂ ಆರಂಭ ಪರಿಗ್ರಹಗಳನ್ನು ಧಾರಣಮಾಡುವಂಥ ವೇಷಧಾರಿ ಗುರುಗಳಿಗೂ ಹಿಂಸೆಯನ್ನು ಮಾಡಲಿಕ್ಕೆ ಪ್ರೋತ್ಸಾಹನ ಕೊಡುವಂಥ ಶಾಸ್ತ್ರಗಳಿಗೂ ವಂದನೆಯನ್ನು ಮಾಡಕೂಡದು. ಅಲ್ಲದೆ ಅವುಗಳ ಸ್ತುತಿಯನ್ನೂ ಮಾಡಬಾರದು.

ಹಗಲಿರುಳೂ ಕಾಮ, ಕ್ರೋಧ, ಮಾನ, ಮಾಯಾ, ಲೋಭ ಈ ವಿಕಾರಗಳು ಇಲ್ಲದಂತೆ ಆಗುವ ಹಾಗೆಯೇ ಪ್ರಯತ್ನ ಮಾಡುತ್ತಿರಬೇಕು ಯಾರಿಗೂ ದುಃಖ ಉತ್ಪನ್ನವಾಗುವಂತೆ, ಅಪ್ರಿಯವಾದ ಭಾಷಣ, ಅಪಮಾನ ಮಾಡುವಂಥ ಮಾತು, ಅಭದ್ರಶಬ್ದಗಳಿಂದ ಕೂಡಿದ ಸಂಭಾಷಣ, ಗರ್ವದಿಂದ ಉದ್ಧಟನಾಗಿ ನುಡಿಯುವದನ್ನು ಮಾಡಬಾರದು. ಇದೇ ಪ್ರಕಾರ ಎರಡನೆಯವರಿಗೆ ದುಃಖವು ಉತ್ಪನ್ನವಾಗಿ ಜಗತ್ತಿನಲ್ಲಿ ತಮ್ಮ ಕೀರ್ತಿಗೆ ಕಲಂಕ ಹತ್ತುವಂಥ ಯಾವ ಕ್ರಿಯೆಯನ್ನೂ ಮನ-ವಚನ-ಕಾಯದಿಂದ ಎಂದೂ ಸಂಭವಿಸದಂತೆ ಇರುವುದಕ್ಕೆ ತ್ಯಾಗಧರ್ಮವೆನ್ನಲಾಗಿದೆ. ಇದನ್ನು ಸ್ವೀಕರಿಸಿರಿ ಈ ಪ್ರಕಾರ ತ್ಯಾಗಧರ್ಮದ ಸ್ವರೂಪವನ್ನು ವರ್ಣಿಸಲಾಗಿದೆ. ಇನ್ನು ಮುಂದೆ ಆಕಿಂಚನ ಧರ್ಮದ ಸ್ವರೂಪವನ್ನು ಹೇಳುವೆ.

## ಆಕಿಂಚನ್ಯ

ಆಕಿಂಚನ್ಯದ ಲಕ್ಷಣ—ತನ್ನ ಜ್ಞಾನದರ್ಶನ ಸ್ವರೂಪದ ಹೊರತಾಗಿ ಉಳಿದ ಯಾವುದೂ ತನ್ನ ಸ್ವರೂಪವಲ್ಲ. ಅನ್ಯ ದ್ರವ್ಯಗಳು ತನ್ನವಲ್ಲ. ತಾನೂ ಅನ್ಯ ದ್ರವ್ಯ ಸ್ವರೂಪವಲ್ಲ. ಹೀಗೆ ವಿಚಾರ ಮಾಡುವುದಕ್ಕೆ ಆಕಿಂಚನ್ಯಧರ್ಮವೆನ್ನುವರು. ಇದರಲ್ಲಿ ಆತ್ಮನನ್ನು ಉದ್ದೇಶಿಸಿ ಹೀಗೆ ವಿಚಾರ ಮಾಡಬೇಕು—"ಎಲೈ ಆತ್ಮನೇ, ನೀನು ಶರೀರದಿಂದ ಭಿನ್ನ, ಜ್ಞಾನಸ್ವರೂಪಿ, ಅನ್ಯ ದ್ರವ್ಯದ ಉಪಮೆಯಿಂದ ರಹಿತ, ಸ್ಪರ್ಶ, ರಸ, ಗಂಧ ವರ್ಣವಿವರ್ಜಿತ, ಸ್ವಾಧೀನ ಜ್ಞಾನಾನಂದ ಸುಖದಿಂದ ಪರಿಪೂರ್ಣ, ಅತೀಂದ್ರಿಯ ಮತ್ತು ನಿರ್ಭಯನಾಗಿರುವಿ, ಎಂದು ತಿಳಿದುಕೊಳ್ಳು; ಅರ್ಥಾತ್ ದೇಹವೆಂದರೆ ನಾನಲ್ಲ ದೇಹವು ರಕ್ತ, ಮಾಂಸ, ಎಲುವು, ಕೀವು ಮತ್ತು ಚರ್ಮ ಇವುಗಳಿಂದ ರೂಪುಗೊಂಡ ಅಚೇತನ ವಸ್ತುವಾಗಿದೆ. ಅದರಿಂದ ನಾವು ಅತ್ಯಂತ ಭಿನ್ನರಾಗಿದ್ದೇವೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿ ಕುಲಾದಿ ಮೊದಲಾದವುಗಳು ಶರೀರಕ್ಕೆ ಸಂಬಂಧಿಸಿದವುಗಳಾಗಿವೆ ಇವುಗಳಲ್ಲಿ ನಮ್ಮ ಸಂಬಂಧವಿಲ್ಲ. ಸ್ತ್ರೀ-ಪುರುಷ-ನಪುಂಸಕ-ಲಿಂಗದ ಭೇದವು ಶರೀರಕ್ಕೆ ಇದೆ ನನಗೆ ಇಲ್ಲ ಕೆಂಪು, ಕಪ್ಪು, ರಾಜಾ, ಸೇವಕ, ಪಂಡಿತ, ಮೂರ್ಖ ಈ ಎಲ್ಲ ವಿಶೇಷಣಗಳು ಕರ್ಮದ ಉದಯದಿಂದ ಶರೀರಕ್ಕೆ ಪ್ರಾಪ್ತವಾಗುತ್ತವೆ. ಇವುಗಳಿಗೂ ನನಗೂ ಯಾವ ರೀತಿಯ ಸಂಬಂಧವೂ ಇಲ್ಲ ನಾನು ಜ್ಞಾಯಕನಾಗಿದ್ದೇನೆ ಶರೀರಕ್ಕೆ ಯಾವುದರ ಸಂಬಂಧ ಬರುವುದೋ ಅದು ನನ್ನ ಸ್ವರೂಪವೆನಿಸುವದಿಲ್ಲ ನನ್ನ ಸ್ವರೂಪಕ್ಕೆ ಅನ್ಯ ದ್ರವ್ಯದ ಉಪಮೆಯನ್ನೇ ಕೊಡಲಿಕ್ಕೆ ಬರುವದಿಲ್ಲ.

ಸ್ವರೂಪದ ಚಿಂತನ—ತಂಪು, ಉಷ್ಣ (ಕಾವು), ಮೆತ್ತಗೆ, ಕಠೋರ (ಬಿರುಸು), ಸ್ನಿಗ್ಧ (ಜಿಗಟು), ಒಣ, ಹಗುರು, ಜಡ ಈ ಎಂಟು ಪ್ರಕಾರದ ಸ್ಪರ್ಶಗಳಿವೆ ಇವು ನನ್ನ ಸ್ವರೂಪವಾಗಿರದೆ ಪುದ್ಗಲದ ವಿಕಾರಗಳಾಗಿವೆ. ಉಪ್ಪು, ಖಾರ, ಒಗರು, ಹುಳಿ, ಕಹಿ ಎಂದು ಐದು ಪ್ರಕಾರದ ರಸಗಳಿವೆ. ಸುಗಂಧ ಮತ್ತು ದುರ್ಗಂಧ, ಕಪ್ಪು, ಹಳದಿ, ಬೆಳ್ಳಗೆ, ಹಸಿರು, ಕೆಂಪು ಇವೈದು ಬಣ್ಣಗಳು, ಇವೆಲ್ಲ ನನ್ನ ಸ್ವರೂಪಗಳಲ್ಲ. ಇವೆಲ್ಲ ಪುದ್ಗಲದ ಸ್ವರೂಪವೆನಿಸುತ್ತವೆ ನನ್ನ ಸ್ವಭಾವವು ಸುಖಮಯವಾಗಿದೆ ಆದರೆ ನಾನು ಕರ್ಮದ ಸ್ವಾಧೀನನಾಗಿರುವುದರಿಂದ ದುಃಖದಿಂದ ಸೋತು ಹೋಗಿರುವೆ. ನನ್ನ ಸ್ವರೂಪವು ಇಂದ್ರಿಯಗಳಿಗೆ ತಿಳಿಯುವದಿಲ್ಲ ನಾನು ಅತೀಂದ್ರಿಯ-ನಾಗಿರುವೆ ಇಂದ್ರಿಯಗಳು ಪುದ್ಗಲದ ವಿಕಾರಗಳಾಗಿದ್ದು ಕರ್ಮದಿಂದ ಪ್ರಾಪ್ತವಾಗಿರುತ್ತವೆ ನಾನು ನಿರ್ಭಯ, ಅವಿನಾಶಿ, ಅಖಂಡ, ಆದ್ಯಂತರಹಿತ, ಶುದ್ಧ, ಜ್ಞಾನ ಸ್ವಭಾವಿಯಾಗಿರುವೆ. ಆದರೆ ಅನಾದಿ ಕಾಲದಿಂದಲೂ ಬಂಗಾರ ಹಾಗೂ ಮಣ್ಣುಗಳು ಕೂಡಿಯೇ ಇವೆ ಇಲ್ಲವೆ ಹಾಲು-ನೀರುಗಳಂತೆ ಕರ್ಮದೊಡನೆ ನಾನು ಬೆರೆತು ಹೋಗಿರುವೆ ಅದರೊಳಗಿನ ಮಿಥ್ಯಾತ್ವವೆಂಬ ಹೆಸರಿನ ಕರ್ಮದ ಉದಯದಿಂದ ನನಗೆ ನನ್ನ ಸ್ವರೂಪದ ಜ್ಞಾನವು ಆಗುವದಿಲ್ಲ. ದೇಹಾದಿಕ ಪರದ್ರವ್ಯಗಳಿಗೆ ನನ್ನ ಸ್ವರೂಪವೆಂದು ತಿಳಿದು, ಅನಂತ ಕಾಲದಿಂದ ಮಿಥ್ಯಾತ್ವವು ಪರಿಭ್ರಮಣ ಮಾಡಲಿಕ್ಕೆ ಹಚ್ಚಿದೆ. ಈಗ ಸ್ವಲ್ಪ ಮಾತ್ರ ಇದರ ಆವರಣವು ದೂರವಾಗಿರುವುದರಿಂದಲೂ ಭಗವಂತನ ಆಗಮಗಳನ್ನು ತುಸು ತಿಳಿದುಕೊಂಡುದರಿಂದಲೂ ನನಗೆ ಸ್ವಪರ ಸ್ವರೂಪದ ಜ್ಞಾನವಾಗಿದೆ. ರತ್ನಮಾಣಿಕ್ಯಗಳ ವ್ಯಾಪಾರವನ್ನು ಮಾಡುವಂಥ ಜವಾಹಿರನು ಯಾವ ಪ್ರಕಾರ ಗುರು ಕೃಪೆಯಿಂದಲೂ ಸತತ ಅಭ್ಯಾಸದಿಂದಲೂ ರತ್ನದ ಅನೇಕ ಅಲಂಕಾರಗಳಲ್ಲಿಂದ ನಿಜವಾದ ರತ್ನವು ಯಾವುದು, ಕೇವಲ ರತ್ನದಂತೆ ಹೊಳೆಯುವ ವಸ್ತುವು ಯಾವುದು, ಇದರಲ್ಲಿ ಬಣ್ಣ ಕೊಟ್ಟು ಕೂಡಿಸಿದ ಕಾಚು ಯಾವುದು, ಪ್ರತಿಯೊಂದರ ತೂಕ ಬೆಲೆಗಳೆಷ್ಟು ಮೊದಲಾದವುಗಳನ್ನು ವಿವರವಾಗಿ ತಿಳಿಯುತ್ತಾನೆ. ಅದೇ ಪ್ರಕಾರ ನಾನು ಪರಮಾಗಮದ ನಿರಂತರ ಅಭ್ಯಾಸದಿಂದ ನನ್ನ ಜ್ಞಾನ ಸ್ವಭಾವದಲ್ಲಿ ಕೂಡಿದ ರಾಗದ್ವೇಷಮೋಹ

ಕಾಮಾದಿ ವಿಕಾರಗಳು ಭಿನ್ನವೆಂದು ತಿಳಿದಿರುವೆ. ಮತ್ತು ಇವೆಲ್ಲವುಗಳಿಂದ ಆತ್ಮವು ಭಿನ್ನವಾಗಿದೆ ಎಂದು ನನಗೆ ಸಂಪೂರ್ಣ ನಿಶ್ಚಯವಾಗಿದೆ ಅಂತಲೇ ಇಲ್ಲಿಯ ವರೆಗೆ ರಾಗ–ದ್ವೇಷಾದಿ ಕರ್ಮಗಳ ಮೇಲೆ ಅಥವಾ ಕರ್ಮೋದಯ-ದಿಂದ ಪ್ರಾಪ್ತವಾಗುವ ಶರೀರ ಧನ ಧಾನ್ಯಾದಿ ಪರಿಗ್ರಹಗಳ ಮೇಲೆ ಪುನಃ ಮಮತ್ವ ಬುದ್ಧಿಯು ಇಹ ಜನ್ಮದಲ್ಲಿ ಮತ್ತು ಪರಜನ್ಮದಲ್ಲಿ ಉತ್ಪನ್ನವಾಗಲಿಕ್ಕಿಲ್ಲವೆಂದು ಆಂಕಿಚನ್ಯ ಭಾವನೆಯಿಂದ ಚಿಂತನೆಯನ್ನು ಮಾಡಬೇಕು.

ಸ್ವಪರಭೇದ ವಿಜ್ಞಾನ— ಈ ಆಕಿಂಚನ್ಯ ವಿಚಾರವು ಅನಾದಿಕಾಲದಿಂದಲೂ ಎಂದೂ ಮನಸ್ಸಿನಲ್ಲಿ ಬಂದಿಲ್ಲ ಇಲ್ಲಿಯ ವರೆಗೆ ಎಲ್ಲ ಪರ ಪದಾರ್ಥಗಳನ್ನೇ ನಾನು ತಿಳಿದೆ ರಾಗದ್ವೇಷ ಮೋಹ ಕಾಮ ಕ್ರೋಧ ಮೊದಲಾದ ಪರಿಣಾಮಗಳು ಕರ್ಮಕೃತವಿದ್ದು ಅವುಗಳನ್ನೂ ಕೂಡ ನನ್ನವೆಂದೇ ತಿಳಿದೆನು. ಈ ವಿಪರೀತ ಭಾವನೆಯಿಂದ ಘೋರ ಕರ್ಮಬಂಧವನ್ನು ಮಾಡಿಕೊಂಡೆ. ಇನ್ನು ಮುಂದೆ ಈ ಆಕಿಂಚನ್ಯ ಭಾವನೆಯಲ್ಲಿ ಯಾವ ವಿಘ್ನವೂ ಬರಕೂಡದು ಅದಕ್ಕಾಗಿ ನಾನು ಪಂಚ ಪರಮೇಷ್ಠಿಗಳಿಗೆ ಶರಣು ಹೋಗುತ್ತೇನೆ ಮೂರು ಲೋಕದಲ್ಲಿ ನನಗೆ ಈ ಆಕಿಂಚನ್ಯ ಭಾವನೆಯನ್ನುಳಿದು ಬೇರೆ ಯಾವ ಇಚ್ಛೆಯೂ ಆಗದಿರಲಿ, ಹೀಗೆ ಅನನ್ಯ ಭಾವನೆಯಿಂದ ಪ್ರಾರ್ಥನೆಯನ್ನು ಮಾಡುವೆ ಈ ಆಕಿಂಚನ್ಯ ಭಾವನೆಯೇ ಸಂಸಾರ ಸಮುದ್ರದೊಳಗಿಂದ ಪಾರಾಗಲಿಕ್ಕೆ ಹಡಗದಂತೆ ನನಗೆ ಉಪಯೋಗ ಬೀಳುವಂಥದಾಗಲಿ.

ಪರಿಗ್ರಹ ತ್ಯಾಗದಿಂದ ಆಕಿಂಚನ್ಯವು ಸಂಭವಿಸುವದು. ಪರಿಗ್ರಹವು ಬಂಧಕ್ಕೆ ಕಾರಣವಿದೆ. ಅದರ ವಿಷಯದಲ್ಲಿ ಆಕಾಂಕ್ಷೆಯು ಉತ್ಪನ್ನವಾಗಗೊಡದಿದ್ದರೆ ಮಾತ್ರ ಆಕಿಂಚನ್ಯ ಧರ್ಮವು ಸಂಭವಿಸುತ್ತದೆ. ಈ ಧರ್ಮವನ್ನು ಯಾರು ಗ್ರಹಣ ಮಾಡಿರುವರೋ ಅವರಿಗೆ ಪರಿಗ್ರಹದ ಇಚ್ಛೆಯು ಎಂದೂ ಆಗುವದಿಲ್ಲ ಅವರ ಚಿತ್ತವು ಆತ್ಮಧ್ಯಾನದಲ್ಲಿ ಲೀನವಾಗುತ್ತದೆ ದೇಹಾದಿ ಬಾಹ್ಯ ಪದಾರ್ಥಗಳ ವಿಷಯದಲ್ಲಿ ತನ್ನತನವು ಉಳಿಯುವದಿಲ್ಲ ಸ್ವಸ್ವರೂಪ ಅಂದರೆ ರತ್ನತ್ರಯಗಳ ವಿಷಯದಲ್ಲಿ ವಿಚಾರ ಮಾಡುವುದರೊಳಗೆ ಮನಸ್ಸು ರಮಮಾಣವಾಗುತ್ತದೆ ಇಂದ್ರಿಯಗಳ ವಿಷಯಗಳ ಕಡೆಗೆ ಧಾವಿಸುವ ಮನಸ್ಸು ಶಾಂತವಾಗುತ್ತದೆ. ಶರೀರದ ಮೇಲಿನ ಪ್ರೇಮವು ಇಲ್ಲದಂತಾಗುತ್ತದೆ ಸಾಂಸಾರಿಕ ಮತ್ತು ದೇವಾದಿಕಗಳ ಸುಖವು, ಚಕ್ರವರ್ತಿ ಇಲ್ಲವೆ ಅಹಮಿಂದ್ರನ ಸುಖವು ಕೂಡ ದುಃಖರೂಪವೇ ಎನಿಸುತ್ತದೆ ಅಂದಮೇಲೆ ಅದು ಪ್ರಾಪ್ತವಾಗಬೇಕೆಂಬ ಇಚ್ಛೆಯಂತೂ ನನಗೆ ಉತ್ಪನ್ನ-ವಾಗುವುದೇ ಇಲ್ಲ ಪರಿಗ್ರಹವೆಂದರೆ ಧನ, ಧಾನ್ಯ, ರತ್ನ, ಸುವರ್ಣ, ಸ್ತ್ರೀ ಪುತ್ರ ಮೊದಲಾದ ಪದಾರ್ಥಗಳ ಮೇಲಿನ ಪ್ರೇಮವು ಇದನ್ನು ಜೀರ್ಣ ಹುಲ್ಲಿನ ಮೇಲಿನಂತೆಯೇ ತ್ಯಾಗ ಮಾಡಲು ಏನೂ ದುಃಖವೆನಿಸುವದಿಲ್ಲ.

ಆಕಿಂಚನ್ಯದ ಲಾಭ—ಆಕಿಂಚನ್ಯವೆಂದರೆ ಪರಮ ವೀತರಾಗತ್ವ ಯಾರಿಗೆ ಇನ್ನು ಮುಂದೆ ಸಂಸಾರ ಪರಿಭ್ರಮಣವು ಸಂಭವಿಸುವದಿಲ್ಲವೋ ಅವರಿಗೆ ಮಾತ್ರ ಈ ಗುಣವು ಪ್ರಾಪ್ತವಾಗುತ್ತದೆ ಈ ಗುಣವು ಯಾರಲ್ಲಿರುವುದೋ ಅವರಿಗೆ ಪರಮಾರ್ಥದ ಅಂದರೆ ಶುದ್ಧ ಆತ್ಮನ ವಿಚಾರಮಾಡುವ ಶಕ್ತಿಯು ಪ್ರಕಟವಾಗುತ್ತದೆ. ಪಂಚಪರಮೇಷ್ಠಿಗಳ ವಿಷಯದಲ್ಲಿ ಅತ್ಯಂತ ಭಕ್ತಿ, ದುಷ್ಟ ಸಂಕಲ್ಪ–ವಿಕಲ್ಪಗಳ ನಾಶ, ಇಷ್ಟಾನಿಷ್ಟ ಪದಾರ್ಥಗಳ ವಿಷಯದಲ್ಲಿ ರಾಗ–ದ್ವೇಷಗಳ ಅಭಾವ ಮೊದಲಾದ ಅನೇಕ ಗುಣಗಳು ಪ್ರಾಪ್ತವಾಗುತ್ತವೆ ಇದೇ ಪ್ರಕಾರ ಸ್ವಾದಿಷ್ಟ ಭೋಜನದ ವಿಷಯದಲ್ಲಿ ಲಾಲಸೆಯು ಇಲ್ಲದಂತಾಗಿ ಹೇಗಾದರೂ ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿ ಸರಸ ನೀರಸ ಆಹಾರವನ್ನು ನಿರ್ವಿಕಾರ ಮನಸ್ಸಿನಿಂದ ಸ್ವೀಕರಿಸುವ ಪ್ರವೃತ್ತಿಯು ಉಂಟಾಗುತ್ತದೆ ಎಲ್ಲ ಧರ್ಮಗಳಲ್ಲಿ ಆಕಿಂಚನ್ಯವೇ ಪ್ರಧಾನ ಧರ್ಮವಾಗಿದೆ ಇದರ ಚಿಂತನದಿಂದ ಮೋಕ್ಷದ ಮಾರ್ಗವು ಸಮೀಪವಾಗುತ್ತದೆ. ಅನಾದಿಕಾಲದಿಂದಲೂ ಎಷ್ಟು ಜನ ಸಿದ್ಧರಾಗಿರುವರೋ ಅವರೆಲ್ಲ ಇದೇ ಮಾರ್ಗದಿಂದ ಆಗಿದ್ದಾರೆ ಮುಂದೆ ಆಗುವ ಸಿದ್ಧರೂ ಇದೇ ಮಾರ್ಗವನ್ನು ಅವಲಂಬಿಸಿಯೇ ಆಗುವರು. ಈ ಧರ್ಮವು ಸಂಪೂರ್ಣವಾಗಿ ಯೋಗೀಶ್ವರ ಇಲ್ಲವೆ ಸಾಧುಗಳಿಂದ ಪಾಲಿಸಲಿಕ್ಕೆ ಆಗುತ್ತದೆ. ಆದರೂ ಅಂಶತಃ ಗೃಹಸ್ಥರಿಗೂ ಇದನ್ನು ಪಾಲಿಸಲಿಕ್ಕೆ ಬರುತ್ತದೆ ಗೃಹಸ್ಥರು ತಮ್ಮ ಅವಸ್ಥೆಯಲ್ಲಿ ತಮ್ಮ ರಾಗ–ದ್ವೇಷಗಳನ್ನು ಕಡಿಮೆಮಾಡಿಕೊಂಡು ವಿರಕ್ತರಾಗಬೇಕು ಪರಿಗ್ರಹಕ್ಕೆ ಪ್ರಮಾಣವನ್ನು ಇಟ್ಟುಕೊಳ್ಳಬೇಕು. ಮುಂದಿನ ನಿದಾನವನ್ನು ಕಟ್ಟಬಾರದು ಅನ್ಯಾಯದ ಧನವನ್ನು ಎಂದೂ ಗ್ರಹಣ ಮಾಡಬಾರದು. ಸ್ವಲ್ಪ ಪರಿಗ್ರಹದಲ್ಲಿ ಸಂತುಷ್ಟರಾಗಿ ಇರಬೇಕು ಪರಿಗ್ರಹಗಳು ದುಃಖ ಕೊಡುವಂಥವಿದ್ದು, ಎಲ್ಲ ಪದಾರ್ಥಗಳು ಅಸ್ಥಿರವಾಗಿವೆಯೆಂದು ವಿಚಾರಿಸಬೇಕು ಈ ಪ್ರಕಾರ ನಡೆಯುವ ಗೃಹಸ್ಥರಿಗೆ ಈ ಧರ್ಮವು ಸಂಭವಿಸುತ್ತದೆ. ಈ ಪ್ರಕಾರ ಆಕಿಂಚನ್ಯ ಧರ್ಮದ ಸ್ವರೂಪವು ವರ್ಣಿಸಲ್ಪಟ್ಟಿದೆ, ಮುಂದೆ ಬ್ರಹ್ಮಚರ್ಯದ ಸ್ವರೂಪವನ್ನು ಹೇಳಲಾಗುವುದು

## ಬ್ರಹ್ಮಚರ್ಯ

ಬ್ರಹ್ಮಚರ್ಯದ ಲಕ್ಷಣ—ಮೊದಲು ಬ್ರಹ್ಮಚರ್ಯ ಈ ಪದದ ಅರ್ಥವನ್ನು ಅವಲೋಕಿಸೋಣ. ಎಲ್ಲ ವಿಷಯಗಳ ಮೇಲಿನ ಅನುರಾಗವನ್ನು ಇಲ್ಲದಂತೆ ಮಾಡಿ, ಬ್ರಹ್ಮನೆಂದರೆ ಜ್ಞಾಯಕ ಸ್ವಭಾವಿಯಾದ ಆತ್ಮನಲ್ಲಿ ಚರ್ಯಾ ಎಂದರೆ ಪ್ರವೃತ್ತನಾಗುವುದು—ಇದಕ್ಕೆ ಬ್ರಹ್ಮಚರ್ಯವೆನ್ನುವರು ಈ ವ್ರತವು ಬಹಳ ಕಠಿಣವಾಗಿದೆ. ಸಂಸಾರದಲ್ಲಿ ಪ್ರತಿಯೊಂದು ಪ್ರಾಣಿಯೂ ವಿಷಯದ ಅಧೀನನಾದುದರಿಂದ ಯಾವಾಗಲೂ ಆತ್ಮಜ್ಞಾನದ ಪರಾಙ್ಮುಖನಾಗಿರುತ್ತಾನೆ ಅಂತಲೇ ಅವನಿಗೆ ಈ ವ್ರತವನ್ನು ಸ್ವೀಕಾರ ಮಾಡಲಿಕ್ಕೆ ಆಗುವದಿಲ್ಲ ಯಾವ ಮನುಷ್ಯರು ದೇವರಿಗೆ ಸಮಾನನಾಗಿರುವರೋ ಅವರೇ ಈ ವ್ರತವನ್ನು ಸ್ವೀಕರಿಸಲು ಸಮರ್ಥರಾಗುತ್ತಾರೆ ಉಳಿದ ವಿಷಯ ಲೋಲುಪಿಗಳಾದ ಜನರಿಗೆ ಈ ವ್ರತವನ್ನು ಧಾರಣಮಾಡುವದಕ್ಕೆ ಸಾಧ್ಯವಾಗುವದಿಲ್ಲ ಅಂತಲೇ ಈ ವ್ರತವು ಎಲ್ಲ ವ್ರತಗಳಲ್ಲಿ ಕಠಿಣವಿದೆಯೆಂದು ಹೇಳಲಾಗಿದೆ. ಯಾರು ಈ ವ್ರತವನ್ನು ಧಾರಣಮಾಡುವರೋ ಅವರಿಗೆ ಇಂದ್ರಿಯಗಳು ವಶವಾಗಿ ರಾಗ–ದ್ವೇಷಾದಿ ವಿಕಾರಗಳನ್ನು ಸಹಜವಾಗಿ ಗೆಲ್ಲಲಿಕ್ಕೆ ಬರುತ್ತದೆ ಅದಕ್ಕಾಗಿ ಸ್ತ್ರೀ ಸುಖದಲ್ಲಿ ಅನುರಕ್ತವಾಗುವಂಥ ಮನವೆಂಬ ಮದ್ದಾನೆಯನ್ನು ವೈರಾಗ್ಯದ ವಿಚಾರದ ಕಡೆಗೆ ಹಚ್ಚಿ ವಿಷಯದ ಆಶೆಯನ್ನು ನಷ್ಟಗೊಳಿಸಬೇಕು

ಕಾಮವೇದನೆಯಿಂದ ಅನರ್ಥ – ಕಾಮವು ಚಿತ್ತವೆಂಬ ಭೂಮಿಯಲ್ಲಿ ಉತ್ಪನ್ನವಾಗುತ್ತದೆ ಇದರ ಯೋಗದಿಂದ ಮಾನವನು ವೇದನೆಗೆ ಬಲಿಬಿದ್ದು, ಮಾಡಬಾರದಂಥ ನೀಚ ಕೃತಿಗಳನ್ನು ಮಾಡಲು ಸಿದ್ಧನಾಗುತ್ತಾನೆ. ಈ ಕಾಮವು ಮನಸ್ಸನ್ನು ಮಂಥನ ಮಾಡುತ್ತದೆ. ಅವನ ಜ್ಞಾನವನ್ನು ನಷ್ಟಗೊಳಿಸುತ್ತದೆ. ಅಂತಲೇ ಅವನಿಗೆ ಮನ್ಮಥನೆಂದೂ ಹೆಸರಿದೆ ಒಮ್ಮೆ ಜ್ಞಾನವು ನಷ್ಟವಾಯಿತೆಂದರೆ ಸ್ತ್ರೀಯರ ನಿಂದ್ಯ ಮತ್ತು ದುರ್ಗಂಧಯುಕ್ತ ಶರೀರದ ಬಗ್ಗೆ ಪ್ರೇಮವು ಉತ್ಪನ್ನವಾಗುತ್ತದೆ ಕಾಮದಿಂದ ಕುರುಡರಾದವರಿಗೆ ಅನೇಕ ಪ್ರಕಾರದ ಅನೀತಿಗಳನ್ನು ಮಾಡಲಿಕ್ಕೆ ಪ್ರವೃತ್ತಿಯು ಉಂಟಾಗುತ್ತದೆ ಸ್ವಸ್ತ್ರೀ, ಪರಸ್ತ್ರೀ ಎಂಬ ವಿಚಾರವೇ ಉಳಿಯುವದಿಲ್ಲ ಪರಸ್ತ್ರೀಯ ಕಡೆಗೆ ಪಾಪ ಬುದ್ಧಿಯಿಂದ ನೋಡುವುದರಿಂದಲೇ ಒಂದೊಂದು ಪ್ರಸಂಗದಲ್ಲಿ ಮರಣ ಹೊಂದುವ ಸ್ಥಿತಿಯು ಒದಗುತ್ತದೆ. ರಾಜನು ಕಠಿಣವಾದ ಶಿಕ್ಷೆಯನ್ನೂ ಮಾಡಬಹುದು ಕೀರ್ತಿಗೆ ಕಲಂಕ ಹತ್ತಬಹುದು. ಧರ್ಮಭ್ರಷ್ಟರಾಗಿ ಸತ್ಯಾರ್ಥ ಬುದ್ಧಿಯು ಹಾಳಾದೀತು. ಸತ್ತ ಮೇಲೆ ನರಕದೊಳಗಿನ ದುಃಖವನ್ನು ಅಸಂಖ್ಯಾತ ಕಾಲದ ವರೆಗೆ ಭೋಗಿಸಬೇಕಾದೀತು. ತಿರುಗಿ ಪಶುಯೋನಿಯಲ್ಲಿ ಹುಟ್ಟುವ ಪ್ರಸಂಗ ಬಂದು, ಅಲ್ಲಿಯ ದುಃಖವನ್ನು ಭೋಗಿಸಬೇಕಾಗುವದು ಅಲ್ಲಿಂದ ತಿರುಗಿ ಕುಮನುಷ್ಯ-ಯೋನಿಯಲ್ಲಿ ಜನಿಸಿ, ಅಲ್ಲಿ ಕುರುಡ, ಕುಂಟ, ಮೂಗ, ರೋಗಿ, ದರಿದ್ರ, ಇಂದ್ರಿಯ ಹೀನ, ಕಿವುಡ, ಮೂರ್ಖನಾಗಬೇಕಾಗಿ ಬಂದು, ಚಾಂಡಾಲರಂಥ ನೀಚಯೋನಿಯಲ್ಲಿ ಜನ್ಮವನ್ನು ತಕ್ಕೊಳ್ಳಬೇಕಾದೀತು. ತಿರುಗಿ ತ್ರಸ–ಸ್ಥಾವರ ಯೋನಿಯಲ್ಲಿಯೂ ಹೋಗಬೇಕಾದೀತು. ಈ ಪ್ರಕಾರ ಒಂದೇ ಸವನೆ ಪರಿಭ್ರಮಣವು ನಡೆಯುತ್ತಲೇ ಇರುತ್ತದೆ ಈ ಸಂಗತಿಗಳ ವಿಚಾರವು ಅವರ ಮನದಲ್ಲಿಯೇ ಬರುವದಿಲ್ಲ ಕಾಮಪದದ ಅರ್ಥದ ಮೇಲಿಂದಲೇ ಅವನ ಶಕ್ತಿಯು ಪ್ರಕಟವಾಗುತ್ತದೆ. 'ಕಂ' ಅಂದರೆ ಸುಳ್ಳು, 'ದರ್ಪ' ಗರ್ವ ಉತ್ಪನ್ನ ಮಾಡುವಂಥವನಾದುದರಿಂದ ಕಂದರ್ಪನೆಂದು ಇವನಿಗೆ ಹೆಸರಾಗಿದೆ. ದುಷ್ಟ ಸಂಕಲ್ಪಗಳನ್ನು ಹುಟ್ಟಿಸಿ ದುಃಖಕೊಡುವಂಥವನಾದುದರಿಂದ ಇವನಿಗೆ ಕಂದರ್ಪನೆಂದು ಹೇಳಲಾಗಿದೆ. ತಿರ್ಯಂಚಯೋನಿ ಮತ್ತು ಮನುಷ್ಯಯೋನಿಗಳಲ್ಲಿ ಇವರಿಂದಲೇ ಪರಸ್ಪರ ದ್ವೇಷವು ಉತ್ಪನ್ನವಾಗುತ್ತದೆ ಕೊಲೆಯ ವರೆಗೂ ಜಗಳಗಳು ಬೆಳೆಯುತ್ತವೆ. ಅಂತಲೇ ಇವನಿಗೆ 'ಮಾರ' ಎಂದು ಹೆಸರಾಗಿದೆ. ಸಂವರಕ್ಕೆ ಇವನು ಅರಿಯಾದುದರಿಂದ ಇವನಿಗೆ ಸಂವರಾರಿ ಎಂದರು ಬ್ರಹ್ಮವೆಂದರೆ ತಪಸಂಯಮಾದಿ ಕ್ರಿಯೆಗಳು. ಸುಪತಿ ಎಂದರೆ ಅವುಗಳಿಂದ ಚಂಚಲಗೊಳಿಸುವಂತವನು. ಅಂತಲೇ ಇವನಿಗೆ 'ಬ್ರಹ್ಮಸೂ' ಎಂದು ಹೆಸರಿದೆ. ಹೀಗೆ ಕಾಮನ ದೋಷಗಳನ್ನು ತೋರಿಸುವಂಥ ನೂರಾರು ಹೆಸರುಗಳಿವೆ. ಅವುಗಳ ವಿಚಾರಮಾಡಿ ಕಾಮವು ಉತ್ಪನ್ನವಾಗದಂತೆ ಉಪಾಯ ಯೋಜಿಸುವುದು ಅವಶ್ಯವಾಗಿದೆ.

ಕಾಮವಿಕಾರವು ಭೇದ ವಿಜ್ಞಾನದಿಂದ ನಷ್ಟವಾಗುತ್ತದೆ. ಕಾಮವಿಕಾರವು ಉತ್ಪನ್ನವಾಗಬಾರದೆಂದು ಶರೀರ ಮತ್ತು ಆತ್ಮಗಳು ಪರಸ್ಪರ ಅತ್ಯಂತ ಭಿನ್ನವಾಗಿವೆ–ಈ ವಿಚಾರವನ್ನು ಅತ್ಯಂತ ಜೋರಿನಿಂದ ಮನಸ್ಸಿನಲ್ಲಿ ತಂದು ಸಂಕಲ್ಪ ಮಾಡುವದೊಂದೇ ಉಪಾಯವಾಗಿದೆ. ಇದಕ್ಕೆ ಭೇದವಿಜ್ಞಾನವೆನ್ನುವರು. ಈ ಭೇದ–ವಿಜ್ಞಾನವಿಲ್ಲದೆ ಅನೇಕ ಶಾಸ್ತ್ರಗಳ ಅಭ್ಯಾಸವಿದ್ದರೂ ಸಹ ಕಾಮವಿಕಾರವನ್ನು ಅದು ನಾಶಗೊಳಿಸುವದಿಲ್ಲ. ಅದಕ್ಕಾಗಿ ಮೇಲಿನ ಭೇದ–ವಿಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವುದೇ ಬ್ರಹ್ಮಚರ್ಯವಾಗಿದೆ. ಬ್ರಹ್ಮಚರ್ಯ

ವ್ರತವನ್ನುಳಿದು, ಇತರ ಅನೇಕ ವ್ರತ ಹಾಗೂ ತಪಶ್ಚರ್ಯೆಗಳನ್ನು ಮಾಡಿದರೂ ಸಹ ಅದೆಲ್ಲ ವ್ಯರ್ಥವಾಗುತ್ತದೆ ಬ್ರಹ್ಮಚರ್ಯವಿಲ್ಲದೆ ಕಾಯಕ್ಲೇಶ ಮಾಡುವದೆಲ್ಲ ನಿಷ್ಫಲವಾಗಿದೆ. ಬಾಹ್ಯತಃ ಸ್ಪರ್ಶನೇಂದ್ರಿಯದ ಸುಖದ ಮೇಲೆಯೇ ದೃಷ್ಟಿಯನ್ನಿಟ್ಟು ಅದರಲ್ಲಿ ಆಸಕ್ತರಾಗದೆ, ಅಭ್ಯಂತರ ಪರಮಾತ್ಮ—ಸ್ವರೂಪದ ಕಡೆಗೆ ಮತ್ತು ಅದರ ಉಜ್ವಲತೆಯ ಕಡೆಗೆ ಲಕ್ಷಕೊಟ್ಟು, ಆತ್ಮವು ಕಾಮವಿಕಾರದಿಂದ ಮಲಿನವಾಗದಂತೆಯೇ ಪ್ರಯತ್ನವನ್ನು ಯಾವಾಗಲೂ ಮಾಡುತ್ತಿರಬೇಕು

ಬ್ರಹ್ಮಚರ್ಯವನ್ನು ಕಾಯ್ದುಕೊಳ್ಳುವ ಉಪಾಯ— ಬ್ರಹ್ಮಚರ್ಯ ವ್ರತವನ್ನು ಪಾಲಿಸುವದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಶೋಭೆಯು ಹೆಚ್ಚುತ್ತದೆ. ತನ್ನ ಶೀಲದ ಪಾಲನವಾಗಬೇಕು, ಜಗತ್ತಿನಲ್ಲಿ ನನ್ನ ಪರಿಮಳ ಕೀರ್ತಿಯು ಹಬ್ಬಬೇಕು, ಧರ್ಮ ಸಾಧನೆಯಾಗಬೇಕು, ಪ್ರತಿಷ್ಠೆಯು ಹೆಚ್ಚಬೇಕು, ಹೀಗೆ ಯಾರಿಗೆ ಇಚ್ಛೆಯು ಇರುವದೋ ಅವರು ಅಂತಃಕರಣದಲ್ಲಿ ಪರಮಾಗಮದ ಉಪದೇಶವನ್ನು ಧಾರಣ ಮಾಡಬೇಕು. ಪರಸ್ತ್ರೀಯರ ಕಡೆಗೆ ನೋಡಕೂಡದು, ಅವರ ವಿಷಯದಲ್ಲಿ ಮಾತನಾಡಕೂಡದು; ಅವರ ನಗೆಮಾತು, ರಾಗ, ರಂಗ, ನೃತ್ಯ ಮೊದಲಾದವುಗಳನ್ನು ನೋಡಬಾರದು; ವ್ಯಭಿಚಾರಿ ಪುರುಷನ ಸಂಗತಿಯನ್ನು ಮಾಡಕೂಡದು, ಅಫುಗಾಂಜಾ, ಭಂಗಿ ಮೊದಲಾದ ಮಾದಕ ಪದಾರ್ಥಗಳನ್ನು ಸೇವನ ಮಾಡದೆ ಇರುವುದು, ಎಲೆಯಡಿಕೆ, ಹೂವಿನ ಹಾರ, ಸುಗಂಧದೆಣ್ಣೆ, ಸುಗಂಧ ದ್ರವ್ಯಗಳನ್ನು ಉಪಯೋಗಿಸಕೂಡದು. ಈ ಎಲ್ಲ ಕ್ರಿಯೆಗಳಿಂದ ಪರಿಣಾಮವು ಕೆಟ್ಟು ವ್ರತಭಂಗವಾಗುವ ಸಂಭವವಿರುತ್ತದೆ ಅಂತಲೇ ಈ ಎಲ್ಲ ಕಾರಣಗಳನ್ನು ತ್ಯಾಗಮಾಡಲಿಕ್ಕೆಬೇಕು ಹಾಡುವುದು, ಬಾರಿಸುವುದು, ನೃತ್ಯಮಾಡುವದನ್ನು ಮಾಡಕೂಡದು ರಾತ್ರಿಯಲ್ಲಿ ಊಟ ಮಾಡಕೂಡದು ಆಕರ್ಷಕ ಹಾಗೂ ಸಭ್ಯತೆಯನ್ನು ಮೀರುವ ವಸ್ತ್ರಾಭರಣಗಳನ್ನು ಧಾರಣ ಮಾಡಕೂಡದು ಏಕಾಂತದಲ್ಲಿದ್ದ ಯಾವ ಸ್ತ್ರೀಯೊಡನೆಯೂ ಸಂಬಂಧವನ್ನು ಇಡಬಾರದು ರಸನೇಂದ್ರಿಯದ ದಾಸನಾಗಕೂಡದು. ಒಂದು ನಾಲಿಗೆಯ ಲಂಪಟತೆಯಿಂದ ನಾವಿರಾರು ದೋಷಗಳು ನಮ್ಮಲ್ಲಿ ಬಂದು ಸೇರುತ್ತವೆ. ಅದರಿಂದ ನಮ್ಮ ಶ್ರೇಷ್ಠತ್ವ, ಕೀರ್ತಿ, ಧರ್ಮಗಳು ನಷ್ಟವಾಗುತ್ತವೆ ಜಿಹ್ವೇಂದ್ರಿಯ ಲಂಪಟ ಪುರುಷನ ಸಂತೋಷವು ಇಲ್ಲದಂತೆ ಆಗುತ್ತದೆ ಸಮಾಭಾವವು ಅವನ ಕನಸಿನಲ್ಲಿಯೂ ಉಳಿಯುವದಿಲ್ಲ. ಲೋಕ ವ್ಯವಹಾರವು ಭ್ರಷ್ಟವಾಗುತ್ತದೆ. ಬ್ರಹ್ಮಚರ್ಯೆಯು ಇಲ್ಲದಂತಾಗುತ್ತದೆ ಅದಕ್ಕಾಗಿ ಆತ್ಮಹಿತವನ್ನು ಇಚ್ಛಿಸುವಂಥ ಪುರುಷನು ಈ ಎಲ್ಲ ಸಂಗತಿಗಳನ್ನು ತ್ಯಾಗಮಾಡಿ, ಬ್ರಹ್ಮಚರ್ಯವ್ರತವನ್ನು ಪೂರ್ಣ ಪಾಲನ ಮಾಡಬೇಕು ಅದಕ್ಕೆ ಅನುಕೂಲವಾದ ಕ್ರಿಯೆಗಳನ್ನೇ ಯಾವಾಗಲೂ ಮಾಡುತ್ತಿರಬೇಕು

ಈ ಪ್ರಕಾರ ದಶಲಾಕ್ಷಣಿಕ ಧರ್ಮದ ಸ್ವರೂಪವನ್ನು ಭಗವಂತನು ಹೇಳಿದ್ದಾನೆ. ಯಾರಲ್ಲಿ ಧರ್ಮದ ಈ ಹತ್ತು ಲಕ್ಷಣಗಳು ಪ್ರಕಟವಾಗುವವೋ ಅವರಿಗೆ ಈ ಧರ್ಮವು ಸಂಭವಿಸುತ್ತದೆ

## ಸಾರಾಂಶ

ಕ್ಷಮಾ— ಉತ್ತಮ ಕ್ಷಮಾ-ಮಾರ್ದವಾದಿ ಧರ್ಮಗಳ ಘಾತ ಮಾಡುವಂಥ ಕ್ರೋಧ ಮೊದಲಾದ ವಿಕಾರಗಳಿವೆ ಈ ವಿಕಾರಗಳಿಂದ ಅನೇಕ ದೋಷಗಳು ಉತ್ಪನ್ನವಾಗುತ್ತವೆ ಇದನ್ನು ಮನದಲ್ಲಿ ನೆನೆದು ಕ್ಷಮಾದಿ ಗುಣಗಳು ಪ್ರಾಪ್ತವಾಗಲೆಂಬ ಭಾವನೆಯನ್ನು ಮೇಲಿಂದ ಮೇಲೆ ಮಾಡಬೇಕು. ಕ್ಷಮೆಯನ್ನು ಧಾರಣ ಮಾಡುವದೆಂದರೆ ತಮ್ಮ ಪ್ರಾಣ, ಧನ, ಕೀರ್ತಿ, ಧರ್ಮ, ವ್ರತ, ಶೀಲ, ಸಂಯಮ ಸತ್ಯಗಳ ರಕ್ಷಣೆಯನ್ನು ಮಾಡುವದಾಗಿದೆ ಜಗಳದಿಂದ ಆಗುವ ದುಃಖವನ್ನು ಶಮನ ಮಾಡಲಿಕ್ಕೆ ಕ್ಷಮೆಯೇ ಸಮರ್ಥವಾಗಿದೆ. ಅನೇಕ ಪ್ರಕಾರದ ಉಪದ್ರವ ಮತ್ತು ವೈರ ಇವುಗಳಿಂದಲೂ ಕ್ಷಮೆಯೇ ರಕ್ಷಿಸುತ್ತದೆ ಕ್ರೋಧವು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಮೂಲದಲ್ಲಿಯೇ ನಾಶಮಾಡುವಂಥದಾಗಿದೆ ಕ್ರೋಧದಿಂದ ಸ್ವಂತದ ಪ್ರಾಣದ ಹಾನಿಯೂ ಕೂಡ ಆಗುತ್ತದೆ ಕ್ರೋಧದಿಂದ ಪ್ರಚಂಡ ರೌದ್ರಧ್ಯಾನವು ಉತ್ಪನ್ನವಾಗುವದು. ಕ್ರೋಧಿ ಪುರುಷನು ಕೆರೆ, ಬಾವಿ, ಸಮುದ್ರಗಳಲ್ಲಿ ಹಾರಿ ತನ್ನ ಪ್ರಾಣವನ್ನು ನೀಗುತ್ತಾನೆ. ಅವನು ಶಸ್ತ್ರಘಾತ, ವಿಷಭಕ್ಷಣ, ಉರುಲು ಹಾಕಿಕೊಳ್ಳುವುದು ಇತ್ಯಾದಿ ಅನೇಕ ಕುಕರ್ಮಗಳಿಂದ ಆತ್ಮಘಾತ ಮಾಡಿಕೊಳ್ಳುತ್ತಾನೆ. ಅನ್ಯರ ಪ್ರಾಣವನ್ನು ತಕ್ಕೊಳ್ಳುವಾಗ ಕ್ರೋಧೀ ಪುರುಷನಿಗೆ ದಯೆಯು ಉತ್ಪನ್ನವಾಗುವದಿಲ್ಲ. ಕ್ರೋಧವುಳ್ಳವನು ತನ್ನ ತಂದೆ, ಮಗ, ಅಣ್ಣ ತಮ್ಮಂದಿರು, ಮಿತ್ರ, ಒಡೆಯ, ಗುರು, ಸೇವಕ ಇವರಿಗೆಲ್ಲ ಹೊಡೆಯಲಿಕ್ಕೆ

ಸಿದ್ಧನಾಗುತ್ತಾನೆ. ಸಿಟ್ಟುಳ್ಳವನು ನರಕಕ್ಕೆ ಪಾತ್ರನಾಗುತ್ತಾನೆ ಕ್ರೋಧಿಯ ಹೆದರಿಕೆಯು ಎಲ್ಲರಿಗೂ ಇರುತ್ತದೆ ಅವನು ಧರ್ಮದ ನಾಶವನ್ನು ಮಾಡುವಂಥವನಾಗಿರುತ್ತಾನೆ ಸತ್ಯವನ್ನು ಮಾತಾಡಲಿಕ್ಕೆ ಕ್ರೋಧಿಗೆ ಶಕ್ಯವಾಗುವದಿಲ್ಲ ಯಾವಾಗಲೂ ಸ್ವಂತಕ್ಕೂ ಧರ್ಮಕ್ಕೂ ಮತ್ತು ಪರಮ ಶಾಂತಿಗೂ ನಷ್ಟವನ್ನು ಒದಗಿಸುವಂಥ ಕುವಚನವೆಂಬ ಅಗ್ನಿಯನ್ನು ಇದು ಉತ್ಪನ್ನಮಾಡುತ್ತದೆ ಸಿಟ್ಟಿನ ಮಾನವನು ಧರ್ಮಾತ್ಮಾ, ಸಂಯಮೀ, ಶೀಲವಾನ್ ಮುನಿ ಹಾಗೂ ಶ್ರಾವಕರ ಮೇಲೆ ಕಳವು ಅನ್ಯಾಯಗಳ ಸುಳ್ಳು ಆರೋಪಗಳನ್ನು ಹೊರಿಸಿ, ಅವರನ್ನು ಕಲಂಕಿತಗೊಳಿಸುತ್ತಿರುತ್ತಾನೆ ಕ್ರೋಧದ ಪ್ರಭಾವದಿಂದ ಜ್ಞಾನವು ಕುಜ್ಞಾನವಾಗುತ್ತದೆ ಆಚರಣವು ವಿಪರೀತ-ವಾಗುತ್ತದೆ. ಶ್ರದ್ಧೆಯು ಭ್ರಷ್ಟವಾಗುತ್ತದೆ. ಅನ್ಯಾಯ ಪ್ರವೃತ್ತಿಯು ಬೆಳೆಯುತ್ತದೆ. ನೀತಿಯು ನಾಶವಾಗುತ್ತದೆ ಹಟಮಾರಿತನದ ಸ್ವಭಾವವು ಉತ್ಪನ್ನವಾಗುತ್ತದೆ. ಧರ್ಮಕ್ಕೆ ವಿರೋಧವಾದ ಮಾರ್ಗವನ್ನು ಸ್ಥಾಪಿಸುವ ಬುದ್ಧಿಯು ಉತ್ಪನ್ನವಾಗುತ್ತದೆ. ಧರ್ಮ, ಅಧರ್ಮ, ಉಪಕಾರ, ಅಪಕಾರ ಇವುಗಳ ವಿಚಾರವೇ ಉಳಿಯುವದಿಲ್ಲ. ಅಂತಲೇ ಅವನು ಕೃತಘ್ನನಾಗುತ್ತಾನೆ ಈ ಪ್ರಕಾರ ಒಂದು ಕ್ರೋಧದಿಂದ ಸಾವಿರಾರು ದೋಷಗಳು ಸಂಭವಿಸುತ್ತವೆ ಯಾರಿಗೆ ವೀತರಾಗ ಧರ್ಮವನ್ನು ಸಾಧಿಸುವದಿದೆಯೋ ಅವರು ಎಂದೂ ಕ್ರೋಧವಶರಾಗಕೂಡದು.

ಮಾರ್ದವ—ಮಾರ್ದವವೆಂದರೆ ಯಾವಾಗಲೂ ಕಠೋರ ಹಾಗೂ ನಿರ್ದಯಿ ವಿಚಾರಗಳನ್ನು ಬಿಟ್ಟು ಸದಾ ಕೋಮಲ ಪರಿಣಾಮವನ್ನು ಧಾರಣ ಮಾಡುವದಾಗಿದೆ ಈ ಗುಣದಿಂದ ಗುರುಗಳ ವಿಷಯದಲ್ಲಿಯೂ ದೇವರ ವಿಷಯದಲ್ಲಿಯೂ ಅತ್ಯಂತ ಪೂಜ್ಯಭಾವವು ಉತ್ಪನ್ನವಾಗುತ್ತದೆ. ಯಾರ ಪರಿಣಾಮವು ಅತಿ ಕೋಮಲ-ವಿರುವುದೋ ಅವರಿಗೇನೇ ಸಜ್ಜನರು ಸಾಧುಗಳೆಂದು ಹೇಳುವರು. ಯಾರಲ್ಲಿ ಮಾನವು ಇರದೆ ಅತ್ಯಂತ ನಮ್ರತೆಯು ಇರುವುದೋ ಅವರಿಗೇ ಜ್ಞಾನವು ಪ್ರಾಪ್ತವಾಗುತ್ತದೆ. ವಿನಯಶೀಲ ಹಾಗೂ ನಮ್ರ ಮನುಷ್ಯನಿಗೆ ಯಾವ ಗುಣ ಅದವಾ ಯಾವ ಕಲೆಯನ್ನು ಕಲಿಸಲಾಗುವುದೋ ಅದೆಲ್ಲ ಅವನಿಗೆ ಬರುತ್ತದೆ. ಎಲ್ಲ ಧರ್ಮ ಹಾಗೂ ವಿದ್ಯೆಗಳ ಮೂಲವು ವಿನಯವೇ ಆಗಿದೆ. ವಿನಯಿ ಪುರುಷನೇ ಎಲ್ಲರಿಗೂ ಪ್ರಿಯನಾಗುತ್ತಾನೆ ಇತರ ಯಾವ ಗುಣವೂ ಇಲ್ಲದೆ ಕೇವಲ ವಿನಯ ಗುಣವೊಂದರಿಂದಲೇ ಸಭ್ಯ ಜನರಲ್ಲಿ ಅವನಿಗೆ ಮಾನವು ದೊರೆಯುತ್ತದೆ ವಿನಯ ನಮ್ಮಲ್ಲಿರುವುದೆಂದರೆ ಬಹು ಮೂಲ್ಯ ಆಭರಣವನ್ನು ನಾವು ಧರಿಸಿದಂತೆಯೇ ಇರುತ್ತದೆ ಯಾರ ಪರಿಣಾಮವು ಕೋಮಲವಿರುವುದೋ ಅವರಲ್ಲಿಯೇ ದಯೆಯು ಇರುತ್ತದೆ ಮಾರ್ದವ ಧರ್ಮವನ್ನು ಸ್ವೀಕರಿಸುವುದರಿಂದ ಸ್ವರ್ಗಲೋಕದ ವೈಭವ ಮತ್ತು ಕೊನೆಗೆ ನಿರ್ವಾಣ ಪದದಂಥ ಅವಿನಾಶಿ ಸಂಪತ್ತು ಪ್ರಾಪ್ತವಾಗುತ್ತದೆ ಉದ್ಧಟತೆ ಹಾಗೂ ಗರ್ವವನ್ನು ಧಾರಣ ಮಾಡುವ ಪುರುಷನ ಮೇಲೆ ಉಪದೇಶ ಅಥವಾ ಶಿಕ್ಷಣದ ಪರಿಣಾಮವು ಆಗುವದಿಲ್ಲ ಸಾಧು ಪುರುಷರಿಗೆ ಇಂಥ ಉದ್ಧಟ ಪುರುಷರ ಸಂಗತಿಯು ಮೂಲದಲ್ಲಿಯೇ ಸೇರುವದಿಲ್ಲ ಅವರು ಇಂಥ ಜನರಿಂದ ದೂರವಿರಲಿಕ್ಕೆ ಇಚ್ಛಿಸುತ್ತಾರೆ. ಕಲ್ಲಿನಲ್ಲಿ ನೀರಿನ ಪ್ರವೇಶವು ಆಗುವದಿಲ್ಲ ಹಾಗೆಯೇ ಉದ್ಧಟ ಪುರುಷನ ಅಂತಃಕರಣದಲ್ಲಿ ಸದ್‌ಗುರುವಿನ ಉಪದೇಶವು ಪ್ರವಿಷ್ಟವಾಗುವದಿಲ್ಲ ಇನ್ನೊಂದು ಉದಾಹರಣವನ್ನೂ ಹೇಳ-ಬಹುದಾಗಿದೆ. ಕಲ್ಲು ಅಥವಾ ಕಟ್ಟಿಗೆಯು ಮೃದುವಿದ್ದರೇನೇ ಅದರ ಮೇಲೆ ತಮ್ಮ ಮನಸ್ಸಿಗೆ ಒಪ್ಪುವಂಥ ಮೂರ್ತಿಯನ್ನು ಕೆತ್ತಬಹುದು ಆದರೆ ಆ ಕಲ್ಲು ಕಟ್ಟಿಗೆಗಳಲ್ಲಿ ಮೃದುತ್ವವೇ ಇಲ್ಲವಾದರ ಶಿಲ್ಪಕಾರನ ಉಳಿಯ ಪೆಟ್ಟು ತಗುಲಿದೊಡನೆಯೇ ಒಮ್ಮೆಲೇ ಅದು ಒಡೆದು, ತುಂಡು ತುಂಡುಗಳು ಆಗುತ್ತವೆ ಅದರಿಂದ ಶಿಲ್ಪಕಾರನ ಇಚ್ಛೆಯಂತೆ ಮೂರ್ತಿಯು ಸಿದ್ಧವಾಗುವದಿಲ್ಲ ಇದೇ ಪ್ರಕಾರ ಉದ್ಧಟ ಇಲ್ಲವೆ ಗರ್ವಿಷ್ಠ ಪುರುಷನ ಮೇಲೆ ಉಪದೇಶದ ಪರಿಣಾಮವು ಆಗುವದಿಲ್ಲ ಗರ್ವಿಷ್ಠ ಪುರುಷನು ಯಾರಿಗೂ ಪ್ರಿಯನಿರುವದಿಲ್ಲ. ಕಾರಣವಿಲ್ಲದೆ ಅವನೊಡನೆ ಎಲ್ಲರೂ ವೈರವನ್ನು ಮಾಡಹತ್ತುತ್ತಾರೆ ಅವನು ಮರಣದ ತರುವಾಯ ತಿರ್ಯಂಚ ಯೋನಿಯಲ್ಲಿ ಉತ್ಪನ್ನವಾಗಿ ಅಸಂಖ್ಯಾತ ಕಾಲದ ವರೆಗೆ ಅನೇಕ ಪ್ರಕಾರದ ದುಃಖ ಹಾಗೂ ತಿರಸ್ಕಾರಗಳನ್ನು ಭೋಗಿಸಬೇಕಾಗುತ್ತದೆ. ಅದಕ್ಕಾಗಿ ಗರ್ವವನ್ನು ಬಿಟ್ಟು ನಮ್ರತೆಯನ್ನು ಸ್ವೀಕರಿಸಿರಿ. ಅಂದರೆ ಮಾರ್ದವ ಧರ್ಮವನ್ನೂ ಅಳವಡಿಸಿಕೊಳ್ಳಲು ಪ್ರಯತ್ನ ಮಾಡಬೇಕು

ಆರ್ಜವ—ಕಪಟವು ಎಲ್ಲ ಅನರ್ಥದ ಮೂಲವಾಗಿದೆ ಕಪಟದಿಂದ ಪ್ರೀತಿಯೂ ವಿಶ್ವಾಸವೂ ಇಲ್ಲದಂತಾಗುತ್ತದೆ ಕಪಟಿ ಪುರುಷನಲ್ಲಿ ಅಸತ್ಯ, ಛಲ, ನಿರ್ದಯತೆ, ವಿಶ್ವಾಸಘಾತ ಮೊದಲಾದ ಅನೇಕ

ದೋಷಗಳು ತುಂಬಿರುತ್ತವೆ ಗುಣದ ಲವಲೇಶವೂ ಕೂಡ ಆ ಪುರುಷನಲ್ಲಿ ಸಿಗುವುದು ಕಠಿಣವಾಗಿದೆ. ಕಪಟ ಪುರುಷನ ಅಪಕೀರ್ತಿಯು ಲೋಕದಲ್ಲೆಲ್ಲ ಆಗುತ್ತದೆ ಪರಲೋಕದಲ್ಲಿ ನರಕ, ತಿರ್ಯಂಚ ಗತಿಗಳಲ್ಲಿ ಉತ್ಪನ್ನ-ವಾಗಬೇಕಾಗುತ್ತದೆ, ಅನಂತ ದುಃಖಗಳನ್ನು ಭೋಗಿಸಬೇಕಾಗುತ್ತದೆ ಅಲ್ಲದೆ ಅಸಂಖ್ಯಾತ ಕಾಲದ ವರೆಗೆ ಸಂಸಾರ ಪರಿಭ್ರಮಣವು ಬಿಡುವದಿಲ್ಲ ಅದಕ್ಕಾಗಿ ಪ್ರತಿಯೊಬ್ಬರೂ ಕಪಟತನವನ್ನು ಬಿಟ್ಟು, ಸರಳತನವನ್ನು ಸ್ವೀಕರಿಸಬೇಕು ಈ ಸರಳತನವೇ ಆರ್ಜವ ಧರ್ಮವಾಗಿದೆ ಸರಳತನವು ಯಾರಲ್ಲಿ ಇರುವುದೋ ಅವರಲ್ಲಿ ಎಲ್ಲ ಸುಗುಣಗಳು ತುಂಬಿರುತ್ತವೆ. ಎಲ್ಲ ಜನರೂ ಅವರನ್ನು ಪ್ರೀತಿಸುವರು ಅಲ್ಲದೆ ಅವರ ಮೇಲೆ ವಿಶ್ವಾಸವನ್ನೂ ಇಡುವರು. ಪರಲೋಕದಲ್ಲಿ ಆ ಪುರುಷನಿಗೆ ದೇವಾದಿಗಳೂ ಕೂಡ ಮಾನ-ಮರ್ಯಾದೆಗಳನ್ನು ಕೊಡುವರು ಹೀಗೆ ಇಂದ್ರ ಮಹೇಂದ್ರಾದಿ ಪದವಿಗಳೂ ಅವರಿಗೆ ಪ್ರಾಪ್ತವಾಗುತ್ತವೆ ಇದರಿಂದ ಸರಳ ಪರಿಣಾಮವನ್ನು ಇಡುವುದರಲ್ಲಿಯೇ ಆತ್ಮನ ಹಿತವಿದೆಯೆಂದು ಸಿದ್ಧವಾಗುತ್ತದೆ

ಶೌಚ—ಶೌಚ ಧರ್ಮವೆಂದರೆ ಆತ್ಮ ಮತ್ತು ಶರೀರಗಳನ್ನು ಪವಿತ್ರವಾಗಿ ಇಡುವುದು. ಶುಚಿ ಈ ಶಬ್ದದ ಅರ್ಥವು ಪವಿತ್ರತಾ, ನಿರ್ಮಲತಾ ಎಂದಿದೆ ಯಾರ ಆಹಾರ ವಿಹಾರಾದಿಗಳೂ ಸರ್ವ ಪ್ರವೃತ್ತಿಯೂ ಹಿಂಸಾ ರಹಿತವಿರುವುದೋ, ಹಿಂಸೆಯಾದೀತೆಂದು ಯಾರು ಸ್ವಪ್ನದಲ್ಲಿಯೂ ಸಹ ಪರಧನ ಹಾಗೂ ಪರಸ್ತ್ರೀಯರನ್ನು ಅಪೇಕ್ಷಿಸುವದಿಲ್ಲವೋ ಇವರಿಗೇ ನಿರ್ಮಲ ಆಚರಣೆಯು ಸಂಭವಿಸುತ್ತದೆ. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಆ ಪುರುಷನಿಗೇ ಮನ್ನಣೆಯು ದೊರೆಯುತ್ತದೆ. ನಿರ್ಲೋಭಿ ಪುರುಷನ ಮೇಲೆ ಎಲ್ಲ ಜನರೂ ವಿಶ್ವಾಸವನ್ನು ಇಡುತ್ತಾರೆ ಇಂಥ ನಿರ್ಲೋಭವೃತ್ತಿಯನ್ನು ಇಡುವುದೇ ಜಗತ್ತಿನಲ್ಲಿ ಉತ್ತಮವೆಂದು ತಿಳಿಯಲಾಗುತ್ತದೆ ಇದರಿಂದ ಮುಂದೆ ಸ್ವರ್ಗ ಮೋಕ್ಷಾದಿಗಳು ಅನುಕ್ರಮದಿಂದ ಪ್ರಾಪ್ತವಾಗುತ್ತವೆ ನಿರ್ಲೋಭಿ ಪುರುಷನ ಕೀರ್ತಿಯು ಜಗತ್ತಿನಲ್ಲಿ ಪಸರಿಸುತ್ತದೆ. ಇದಕ್ಕೆ ವಿರುದ್ಧವಾಗಿ ಲೋಭೀ ಪುರುಷನು ಅತ್ಯಂತ ಅಪವಿತ್ರನೂ ಅನೇಕ ದೋಷಗಳಿಂದ ಕೂಡಿದವನೂ ಇರುತ್ತಾನೆ. ಯಾವಾಗಲೂ ನಿಂದ್ಯ ಕರ್ಮಗಳನ್ನು ಮಾಡುವುದರ ಕಡೆಗೇ ಆ ಪುರುಷನ ಪ್ರವೃತ್ತಿಯು ಇರುತ್ತದೆ. ಅವನಿಗೆ ಗ್ರಾಹ್ಯಾಗ್ರಾಹ್ಯ, ಖಾದ್ಯಾಖಾದ್ಯ, ಕೃತ್ಯಾಕೃತ್ಯಗಳ ವಿಚಾರವು ಉಳಿಯುವದಿಲ್ಲ ಅವನು ಇಹಲೋಕದಲ್ಲಿ ನಿಂದ್ಯ, ಧರ್ಮಪರಾಙ್ಮುಖ, ನಿರ್ದಯನಾಗುತ್ತಾನೆ ಧರ್ಮ, ಅರ್ಥ, ಕಾಮ ಈ ಮೂರು ಪುರುಷಾರ್ಥಗಳನ್ನು ನಾಶಮಾಡಿ ಕುಮರಣದಿಂದ ದುರ್ಗತಿಗೆ ಹೋಗುತ್ತಾನೆ ಅವನ ಅಂತಃಕರಣದಲ್ಲಿ ಸದ್ಗುಣದ ಪ್ರವೇಶಕ್ಕೆ ಎಡೆಯೇ ಇರುವದಿಲ್ಲ ಅದರಿಂದ ಅವನಿಗೆ ಅಚಿಂತ್ಯ ದುಃಖವನ್ನು ಈ ಲೋಕದಲ್ಲಿ ಭೋಗಿಸಬೇಕಾಗುತ್ತದೆ ಪರಲೋಕದಲ್ಲಿಯಂತೂ ಅಪಾರ ದುಃಖವು ಪ್ರಾಪ್ತವಾಗುತ್ತದೆ ಅದಕ್ಕಾಗಿ ಲೋಭವನ್ನು ಬಿಟ್ಟು, ಇಲ್ಲಿಯೇ ಶೌಚ ಧರ್ಮವನ್ನು ಧಾರಣಮಾಡುವುದು ಉತ್ತಮವಾಗಿದೆ.

ಸತ್ಯ—ಸತ್ಯ ನುಡಿಯುವವರಲ್ಲಿ ಮೇಲಿನ ಎಲ್ಲ ಗುಣಗಳೂ ಇರುತ್ತವೆ. ಅವರಲ್ಲಿ ಕಪಟ ಮೊದಲಾದ ದೋಷಗಳು ಇಲ್ಲದುದರಿಂದ ಜಗತ್ತಿನಲ್ಲೆಲ್ಲ ಅವರ ಮಾನ್ಯತೆಯು ಆಗುತ್ತದೆ ಪರಲೋಕದಲ್ಲಿಯೂ ಸಹ ಎಲ್ಲ ದೇವ ಹಾಗೂ ಮನುಷ್ಯರು ಅವನ ಆಜ್ಞೆಯನ್ನೂ ಶಿರಸಾವಂದ್ಯವೆಂದು ತಿಳಿಯುತ್ತಾರೆ ಇಂಥ ಅವಸ್ಥೆಯೇ ಅವನಿಗೆ ಪ್ರಾಪ್ತವಾಗುತ್ತದೆ. ಅಸತ್ಯ ಭಾಷಣ ಮಾಡುವವರ ನಿಂದೆ, ಅಪಕೀರ್ತಿಗಳು ಈ ಲೋಕದಲ್ಲಿಯಂತೂ ಆಗಿಯೇ ಆಗುತ್ತವೆ ಅಲ್ಲದೆ ಯಾರೂ ಅವನ ಮೇಲೆ ವಿಶ್ವಾಸವನ್ನೂ ಇಡುವದಿಲ್ಲ. ಆಪ್ತರು, ಬಂಧು ಮಿತ್ರಾದಿಗಳೂ ಸಹ ಅವನನ್ನು ಅವಜ್ಞೆಗೊಳಿಸಿ ದೂರ ಸರಿದು ಹೋಗುವರು. ರಾಜನು ಸುಳ್ಳುಮಾತನಾಡುವವರ ನಾಲಿಗೆಯನ್ನು ಕತ್ತರಿಸುವವನು ಅವರ ಸರ್ವಸ್ವವನ್ನೂ ಹರಣಮಾಡಿ ದಂಡ ವಿಧಿಸುತ್ತಾನೆ ಪರಲೋಕದಲ್ಲಿ ತಿರ್ಯಂಚ ಯೋನಿಯಲ್ಲಿ ಉತ್ಪನ್ನವಾಗಬೇಕಾಗುತ್ತದೆ. ಅಲ್ಲಿ ಮಾತನಾಡುವ ಸಾಮರ್ಥ್ಯವೂ ಇರುವದಿಲ್ಲ ಏಕೇಂದ್ರಿಯದಿಂದ ವಿಕಲೇಂದ್ರಿಯಗಳ ವರೆಗೆ ಅನಂತ ಪರ್ಯಾಯಗಳನ್ನೂ ಆ ಯೋನಿಯಲ್ಲಿ ಸ್ವೀಕರಿಸಿ, ದುಃಖವನ್ನು ಭೋಗಿಸ-ಬೇಕಾಗುತ್ತದೆ ಅದರಿಂದ ಸತ್ಯ ಧರ್ಮವನ್ನು ಧಾರಣಮಾಡಿ ಇರುವುದು ಎಲ್ಲಕ್ಕೂ ಶ್ರೇಷ್ಠವಾಗಿದೆ

ಸಂಯಮ—ಈ ಧರ್ಮವನ್ನು ಧಾರಣ ಮಾಡುವುದರಿಂದ ಆತ್ಮನ ಹಿತವಾಗುತ್ತದೆ ಈ ಧರ್ಮವನ್ನು ಸ್ವೀಕರಿಸುವ ಪುರುಷನ ಪೂಜ್ಯತೆಯು ಇಹಲೋಕದಲ್ಲಿ ಎಲ್ಲ ಕಡೆಗೂ ಆಗುತ್ತದೆ ಯಾವ ಪಾಪವೂ ಅವನಿಗೆ ತಗಲುವದಿಲ್ಲ. ಪರಲೋಕದಲ್ಲಿ ಅಚಿಂತ್ಯ ಸುಖವು ಪ್ರಾಪ್ತವಾಗುತ್ತದೆ ಅಸಂಯಮಿ ಪುರುಷನು ಪ್ರಾಣಘಾತ ಮತ್ತು ವಿಷಯಾನುರಾಗಗಳಲ್ಲಿಯೇ ಯಾವಾಗಲೂ ಲೀನನಾಗಿರುತ್ತಾನೆ. ಅದರಿಂದ ಅವನಿಗೆ ಅಶುಭ

ಕರ್ಮದ ಬಂಧವಾಗುತ್ತದೆ ಅದರಿಂದ ಯಾವಾಗಲೂ ಸಂಯಮ ಧರ್ಮವನ್ನು ಪಾಲಿಸುವುದರಲ್ಲಿಯೇ ಜೀವದ ಹಿತವಿದೆ.

ತಪ—ತಪಸ್ಸನ್ನು ಆಚರಿಸುವುದರಿಂದ ಕರ್ಮದ ಸಂವರ ಹಾಗೂ ನಿರ್ಜರೆಯು ಆಗುತ್ತದೆ. ತಪವೇ ಆತ್ಮನ ಕರ್ಮ ಮಲವನ್ನು ಇಲ್ಲದಂತೆ ಮಾಡುತ್ತದೆ ತಪದ ಪ್ರಭಾವದಿಂದ ಇಲ್ಲಿ ಅನೇಕ ಋದ್ಧಿಗಳು ಪ್ರಾಪ್ತ-ವಾಗುತ್ತವೆ ಈ ಪ್ರಕಾರ ತಪದ ಪ್ರಭಾವವು ಅಚಿಂತ್ಯವಾಗಿದೆ. ತಪಸ್ಸಿಲ್ಲದೆ ಕಾಮ ಹಾಗೂ ನಿದ್ರೆಗಳನ್ನು ಗೆಲ್ಲಲಿಕ್ಕೆ ಆಗುವದಿಲ್ಲ. ತಪದ ಹೊರತಾಗಿ ಇಚ್ಛೆಯ ಅಭಾವವೂ ಆಗುವದಿಲ್ಲ ಇಂದ್ರಿಯಗಳ ವಿಷಯದ ದಮನ, ಆಶಾರೂಪೀ ಪಿಶಾಚಿಣಿಯ ಅಭಾವ, ಕಾಮನ ಗೆಲವು ಇವೆಲ್ಲ ತಪದಿಂದಲೇ ಆಗುತ್ತವೆ. ತಪಶ್ಚರಣವನ್ನು ಮಾಡುವಂಥ ಪುರುಷನು ಉಪಸರ್ಗ ಇಲ್ಲವೆ ಆಪತ್ತಿಗಳು ಪ್ರಾಪ್ತವಾದರೂ ತನ್ನ ರತ್ನತ್ರಯ ಧರ್ಮದಿಂದ ಚ್ಯುತನಾಗುವದಿಲ್ಲ ಅಂತಲೇ ತಪಶ್ಚರಣವನ್ನು ಮಾಡುವುದು ಯೋಗ್ಯವಾಗಿದೆ ತಪಸ್ಸಿಲ್ಲದೆ ಸಂಸಾರದಿಂದ ಬಿಡುಗಡೆಯನ್ನೂ ಹೊಂದುವುದು ಸಾಧ್ಯವಿಲ್ಲ ಸಾಮ್ರಾಜ್ಯಾಧಿಪತಿಗಳೂ ಚಕ್ರವರ್ತಿ ಮಹಾಮಂಡಲೇಶ್ವರರೂ ಕೂಡ ಐಹಿಕ ವಿಭೂತಿ ಮತ್ತು ರಾಜ್ಯಗಳನ್ನು ಬಿಟ್ಟು, ಯಾವಾಗ ತಪೋವೃತ್ತಿಗಳನ್ನು ಧಾರಣ ಮಾಡಿದರೋ ಆಗಲೇ ಅವರಿಗೆ ತ್ರೈಲೋಕ್ಯ ಪೂಜ್ಯವಾದಂಥ ನಿರ್ವಾಣ ಪದವಿಯು ಪ್ರಾಪ್ತವಾಯಿತು. ಅಲ್ಲದೆ ಅವರು ಜಗದ್ವಂದ್ಯರೂ ಆದರು . ಇದಕ್ಕೆ ವಿರುದ್ಧವಾಗಿ ತಪಶ್ಚರಣವನ್ನು ಬಿಟ್ಟು, ಮೋಹವಶರಾಗಿ ಯಾರು ಪುನಃ ರಾಜ್ಯಗ್ರಹಣವನ್ನು ಮಾಡುತ್ತಾರೆಯೋ ಅವರ ಅತ್ಯಂತ ನಿಂದೆಯು ಜಗತ್ತಿನಲ್ಲಿ ಆಗುತ್ತದೆ ಆದಕ್ಕಾಗಿ ತಪಶ್ಚರಣವನ್ನು ಬಿಟ್ಟು, ರಾಜ್ಯವನ್ನು ಸ್ವೀಕರಿಸುವ ವಿಚಾರವನ್ನು ಮನಸ್ಸಿನಲ್ಲಿ ಎಂದೂ ತರಬಾರದು ತಪಸ್ಸಿನಂಥ ಶ್ರೇಷ್ಠ ವಸ್ತುವು ಮೂರು ಲೋಕದಲ್ಲಿಯೇ ಇನ್ನೊಂದಿಲ್ಲ ಇದನ್ನು ಯಥಾಶಕ್ತಿ ಸ್ವೀಕರಿಸುವ ಪ್ರಯತ್ನವನ್ನು ಮಾಡುತ್ತಿರಬೇಕು

ತ್ಯಾಗ—ತ್ಯಾಗ ಧರ್ಮದ ಲಕ್ಷಣವನ್ನು ಈ ಮೊದಲೇ ಸವಿಸ್ತರವಾಗಿ ವರ್ಣಿಸಲಾಗಿದೆ ಸಾರಾಂಶ-ವಿಷ್ಟೆ–ಪರಿಗ್ರಹಗಳ–ವಿಷಯದಲ್ಲಿ ಆಸಕ್ತಿಯನ್ನಿಡದೆ ಆತ್ಮ ಕಲ್ಯಾಣದ ಕಡೆಗೆ ಪ್ರವೃತ್ತಿಯನ್ನು ಇಡಬೇಕು. ಯಾಕೆಂದರೆ ಪರಿಗ್ರಹದಷ್ಟು ಭಾರವು ಜಗತ್ತಿನಲ್ಲಿ ಇನ್ನಾವುದೂ ಇಲ್ಲ ಎಲ್ಲ ಪ್ರಕಾರದ ದುಃಖ, ದುರ್ಧ್ಯಾನ, ಕ್ಲೇಶ, ವೈರ, ವಿಯೋಗ, ಶೋಕ, ಭಯ, ಅಪಮಾನ ಮೊದಲಾದವುಗಳೆಲ್ಲ ಪರಿಗ್ರಹಗಳಿಂದ ಉತ್ಪನ್ನವಾಗುತ್ತವೆ ಅಲ್ಲದೆ ಅವು ಪರಿಗ್ರಹದ ಇಚ್ಛೆಯನ್ನು ಇಡುವವರಿಗೆ ಅತ್ಯಂತ ತೊಂದರೆಯನ್ನು ಕೊಡುತ್ತವೆ ಪರಿಗ್ರಹಗಳು ಎಷ್ಟೆಷ್ಟು ಕಡಿಮೆಯೋ ಅಷ್ಟಷ್ಟು ದುಃಖಗಳೂ ಕಡಿಮೆ. ಒಬ್ಬ ಮನುಷ್ಯನ ತಲೆಯ ಮೇಲೆ ಅತಿಶಯ ಭಾರವನ್ನು ಹೇರಿದರೆ ಆ ಭಾರದಿಂದ ಅವನು ಕೆಲಹೊತ್ತಿನಲ್ಲಿ ಬೇಸರ ಪಡುವನು, ಭಾರವನ್ನು ಸ್ವಲ್ಪ ಸ್ವಲ್ಪ ಕಡಿಮೆ ಮಾಡುತ್ತ ಹೋದಂತೆ ಅವನಿಗೆ ಸುಖವೆನಿಸುತ್ತದೆ ಅದರಂತೆಯೇ ಪರಿಗ್ರಹದ ವಾಸನೆಯು ಕಡಿಮೆಯಾಗುತ್ತ ಹೋದಂತೆ ಸುಖವಾಗುತ್ತದೆ ಎಲ್ಲ ಪ್ರಕಾರದ ದುಃಖ ಮತ್ತು ಪಾಪದ ಉಗಮಸ್ಥಾನವು ಪರಿಗ್ರಹವೇ ಆಗಿದೆ ಅನೇಕ ನದಿಗಳು ಸಮುದ್ರಕ್ಕೆ ಕೂಡಿದರೂ ಅದಕ್ಕೆ ತೃಪ್ತಿಯು ಇಲ್ಲ ಅಗ್ನಿಗೆ ಎಷ್ಟು ಉರುವಲಗಳನ್ನು ಹಾಕಿದರೂ ಅದಕ್ಕೆ ಶಾಂತಿಯೆಂಬುದಿಲ್ಲ ಅದರಂತೆಯೇ ಈ ಆಶೆಯೆಂಬ ತಗ್ಗು ಬಹು ಅಗಾಧವಾಗಿದೆ ಇದರ ಆಳತೆಯು ಯಾರಿಗೂ ಹತ್ತುವದಿಲ್ಲ ಪ್ರತಿ ದಿವಸವೂ ಇದನ್ನು ತುಂಬಬೇಕೆಂದು ಎಷ್ಟು ಧನವನ್ನು ಕೂಡ ಹಾಕುವೆವೋ ಅಷ್ಟು ಅದು ದೊಡ್ಡದಾಗಿ ಕಾಣುತ್ತದೆ ಅದು ದೊಡ್ಡ ನಿಧಿಯಿಂದಲೂ ಸಹ ತುಂಬುವಂದದಲ್ಲ ಅಂದ ಮೇಲೆ ಅದರಲ್ಲಿ ಇತರ ಸಂಪತ್ತಿಯನ್ನು ಎಷ್ಟು ತಂದು ಹಾಕಿದರೂ ಏನು ಉಪಯೋಗವಾದೀತು? ಅದು ಕೇವಲ ಪರಿಗ್ರಹಗಳನ್ನು ತ್ಯಾಗ ಮಾಡುತ್ತ ಹೋದಂತೆ ತುಂಬುತ್ತ ಹೋಗುತ್ತದೆ ಅದರಿಂದ ಎಲ್ಲ ದುಃಖಗಳಿಂದಲೂ ಮುಕ್ತನಾಗಲಿಕ್ಕೆ ಕೇವಲ ತ್ಯಾಗಧರ್ಮವೊಂದೇ ಸಾಧನವಾಗಿದೆ. ಅದಕ್ಕಾಗಿ ಅಂತರ್–ಬಾಹ್ಯ ಪರಿಗ್ರಹಗಳನ್ನು ಬಿಟ್ಟು ಬಂಧನ ರಹಿತನಾಗುವದಕ್ಕಾಗಿ ತ್ಯಾಗಧರ್ಮವನ್ನು ಸ್ವೀಕರಿಸುವುದು ಯೋಗ್ಯವಾಗಿದೆ ಇದರಿಂದ ಅನಂತ ಸುಖಗಳು ಪ್ರಾಪ್ತವಾದಾವು ಪರಿಗ್ರಹದ ಬಂಧನದಲ್ಲಿ ಸಿಕ್ಕ ಜೀವದ ಮುಕ್ತಿಯು ಪರಿಗ್ರಹದ ತ್ಯಾಗಮಾಡುವುದರಿಂದಲೇ ಆಗುವದಿರುತ್ತದೆ

ಆಕಿಂಚನ್ಯ—ಆಕಿಂಚನ್ಯ ಧರ್ಮದ ಸಾರಂಶವು ಹೀಗಿದೆ. ಈ ಧರ್ಮವನ್ನು ಧಾರಣ ಮಾಡುವಾಗ ಮುಂದೆ ಹೇಳಿದ ಹಾಗೆ ವಿಚಾರ ಮಾಡಬೇಕು "ಹೇ ಆತ್ಮನ್! ಈ ಸಂಸಾರ, ಈ ದೇಹ, ಸ್ತ್ರೀ, ಪುತ್ರ, ಮಿತ್ರ, ಧನ–ಧಾನ್ಯ ರಾಜ್ಯೈಶ್ವರ್ಯಾದಿಗಳು ಇವೇ ಮೊದಲಾದ ವಿಭೂತಿಗಳಲ್ಲಿ ಒಂದು ಅಣುವೂ ಕೂಡ ನಿನ್ನ ಸಂಗಡ ಬರುವದಿಲ್ಲ; ನಿನ್ನದೂ ಅಲ್ಲ. ಇದೆಲ್ಲ ಪುದ್ಗಲ ದ್ರವ್ಯವಾಗಿದ್ದು ವಿನಾಶಿಕವೂ ಅಚೇತನವೂ ಆಗಿದೆ. ಈ ಪರದ್ರವ್ಯದ ವಿಷಯದಲ್ಲಿ

'ಅಹಂಬುದ್ಧಿ' ದರ್ಶನವು ಮೋಹನೀಯ ಕರ್ಮದ ತೀವ್ರ ಉದಯದಿಂದ ಉತ್ಪನ್ನವಾಗುತ್ತದೆ. ಅದು ನನಗೆ ಎಂದೂ ಉತ್ಪನ್ನವಾಗದಿರಲಿ. ಯಾಕೆಂದರೆ ಉಳಿದವುಗಳೆಲ್ಲವೂ ಪರವದಾರ್ಥಗಳಿದ್ದು, ನಾನು ಸಂಕಲ್ಪವಿಕಲ್ಪ ರಹಿತನೂ ಅತ್ಯಂತ ಭಿನ್ನನೂ ಆಗಿದ್ದೇನೆ ಅರ್ಥಾತ್ ಅಕಿಂಚನನಾಗಿದ್ದೇನೆ." ಹೀಗೆ ಅಕಿಂಚನ ಭಾವನೆಯನ್ನು ಭಾವಿಸುವುದರಿಂದ ಆತ್ಮನು ಕರ್ಮಮಲ ರಹಿತನಾಗಿ ಅದರ ಬಂಧನವು ಇಲ್ಲಿಯೇ ನಷ್ಟವಾಗುತ್ತದೆ ಈ ಧರ್ಮವು ಸಾಕ್ಷಾತ್ ಮೋಕ್ಷಕ್ಕೆ ಕಾರಣವಾಗಿದೆ ಅದಕ್ಕಾಗಿ ಇದರ ಅಂಗೀಕಾರ ಮಾಡುವುದು ಅವಶ್ಯವಾಗಿದೆ

ಬ್ರಹ್ಮಚರ್ಯ—ಬ್ರಹ್ಮಚರ್ಯವೆಂಬ ಹೆಸರಿನ ಹತ್ತನೆಯ ಧರ್ಮವನ್ನು ಧಾರಣಮಾಡುವಾಗ ಕುಶೀಲದ ವಿಷಯಕ್ಕೆ ಮನಸ್ಸಿನಲ್ಲಿ ಅತ್ಯಂತ ತಿರಸ್ಕಾರವು ಇರಲಿಕ್ಕೆಬೇಕು ಯಾಕೆಂದರೆ ಕುಶೀಲದ ಸೇವನ ಮಾಡುವುದು ಅತ್ಯಂತ ಮಹಾಪಾತಕಗಳೆಲ್ಲಿ ಒಂದಾಗಿದೆ. ಸಂಸಾರ ಪರಿಭ್ರಮಣಕ್ಕೆ ಅದು ಬೀಜವಾಗಿದೆ ಬ್ರಹ್ಮಚರ್ಯ ವ್ರತವನ್ನು ಪಾಲನ ಮಾಡುವವರಿಗೆ ಹಿಂಸೆಯೇ ಮೊದಲಾದ ಐದು ಪಾಪಗಳು ಮೂಲದಲ್ಲಿಯೇ ಆಗುವದಿಲ್ಲ ಎಲ್ಲ ಗುಣಗಳೂ ಐಶ್ವರ್ಯವೂ ಈ ಒಂದು ಬ್ರಹ್ಮಚರ್ಯ ವ್ರತದಲ್ಲಿಯೇ ಒಂದು ಗೂಡಿವೆ ಈ ವ್ರತವನ್ನು ಪಾಲಿಸುವುದರಿಂದ ಮನುಷ್ಯನಲ್ಲಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವ ಸಾಮರ್ಥ್ಯವು ಪ್ರಕಟವಾಗುತ್ತದೆ ಅದರಿಂದ ಅವನ ಕುಲಕ್ಕೂ ಜಾತಿಗೂ ಅತ್ಯಂತ ಗೌರವವು ಪ್ರಾಪ್ತವಾಗುತ್ತದೆ ಪರಲೋಕದಲ್ಲಿ ಈ ವ್ರತದ ಪ್ರಭಾವದಿಂದ ಅನೇಕ ಋದ್ಧಿಗಳು ಪ್ರಾಪ್ತವಾಗುತ್ತವೆ. ಮೇಲಾಗಿ ದೇವಯೋನಿಯಲ್ಲಿ ಜನ್ಮವಾಗುತ್ತದೆ ಹೀಗೆ ಭಗವಂತನು ವರ್ಣಿಸಿದ್ದಾನೆ

ಈ ಪ್ರಕಾರ ದಶಲಕ್ಷಣ ಧರ್ಮವು ಆತ್ಮನ ಸ್ವಭಾವವಾಗಿದೆ ಈ ಧರ್ಮವು ಪರವಸ್ತುವಲ್ಲ. ಕ್ರೋಧವೇ ಮೊದಲಾದ ಕರ್ಮಜನಿತ ಉಪಾಧಿಗಳು ಇಲ್ಲದಂತೆ ಆದೊಡನೆಯೇ ತನ್ನಿಂದ ತಾನೇ ಆತ್ಮನ ಈ ಯಥಾರ್ಥ ಸ್ವರೂಪವು ಪ್ರಕಟವಾಗುತ್ತದೆ. ಇನ್ನು ಕ್ರೋಧದ ಅಭಾವದಲ್ಲಿ ಕ್ಷಮೆ, ಮಾನದ ಅಭಾವದಲ್ಲಿ ಮಾರ್ದವ, ಕಪಟವಿಲ್ಲದಲ್ಲಿ ಆರ್ಜವ, ಲೋಭವಳಿದಾಗ ಶೌಚ, ಅಸತ್ಯ ಕಳೆದು ಹೋಗಲು ಸತ್ಯ, ಕಷಾಯಗಳು ನಷ್ಟವಾದರೆ ಸಂಯಮ, ಇಚ್ಛೆ ಇಲ್ಲದಲ್ಲಿ ತಪ, ಮಮತ್ವವು ದೂರವಾದಾಗ ತ್ಯಾಗ, ಪರದ್ರವ್ಯದ ವಿಷಯದಲ್ಲಿರುವ ಆತ್ಮಬುದ್ಧಿಯನ್ನೂ ತ್ಯಾಗಮಾಡಿದಾಗ ಆಕಿಂಚನ್ಯ ಮತ್ತು ವೇದನೀಯ ಕರ್ಮದ ಅಭಾವವಾಗುವುದರಿಂದ ಆತ್ಮಸ್ವರೂಪ ಪ್ರವೃತ್ತಿರೂಪ ಬ್ರಹ್ಮಚರ್ಯವು ಹೀಗೆ ಹತ್ತು ಪ್ರಕಾರದ ಧರ್ಮಗಳು ಪ್ರಕಟವಾಗುತ್ತವೆ ಈ ಧರ್ಮಗಳನ್ನು ಯಾರಿಗೂ ಕಸಿದುಕೊಳ್ಳಲಿಕ್ಕೆ ಬರುವದಿಲ್ಲ. ಕಳ್ಳರು ಇವುಗಳನ್ನು ಕದಿಯಲಾರರು. ರಾಜನಿಗೆ ಬಲಾತ್ಕಾರದಿಂದ ಇವುಗಳನ್ನು ಇಲ್ಲದಂತೆ ಮಾಡಲಿಕ್ಕೆ ಬರುವದಿಲ್ಲ ಸ್ವದೇಶ ಇಲ್ಲವೆ ಪರದೇಶಗಳಲ್ಲಿ ಇವುಗಳ ಸ್ವರೂಪವು ಬದಲಾಗುವದಿಲ್ಲ ಈ ಧರ್ಮಗಳನ್ನು ಯಾರಾದರೂ ಕೆಡಿಸಬೇಕೆಂದು ಇಚ್ಛಿಸಿದರೆ ಅದು ಶಕ್ಯವಿಲ್ಲ ಯಾರಾದರೂ ಬಹಳಷ್ಟು ಧನವನ್ನು ಕೊಟ್ಟು ಈ ದಶಧರ್ಮಗಳನ್ನು ಕೊಂಡುಕೊಳ್ಳಬೇಕೆಂದರೆ ಅವು ಅವರಿಗೆ ದೊರೆಯಲಾರವು ಆಕಾಶ, ಪಾತಾಳ, ದಿಕ್ಕು ಉಪದಿಕ್ಕು, ಪರ್ವತ, ನೀರು, ತೀರ್ಥಕ್ಷೇತ್ರ, ಮಂದಿರ ಮೊದಲಾದ ಸ್ಥಳಗಳಲ್ಲಿ ಇವುಗಳನ್ನು ಸಂಗ್ರಹಿಸಿ ಇಟ್ಟಿಲ್ಲ, ಇಡಲಿಕ್ಕೂ ಬರುವದಿಲ್ಲ ಆದ್ದರಿಂದ ಸ್ವಲ್ಪ ಶ್ರಮದಿಂದಾಗಲಿ, ಬಹಳ ಕಷ್ಟದಿಂದಾಗಲಿ ಇವುಗಳನ್ನು ಸಂಪಾದಿಸಿ ತಂದು ಕೊಡಲಿಕ್ಕೆ ಬರುವದಿಲ್ಲ! ಇದು ಆತ್ಮನ ನಿಜವಾದ ಸ್ವಭಾವವಾಗಿದೆ ಇದರ ಪ್ರಾಪ್ತಿಯು ಸಮ್ಯಗ್‌ಜ್ಞಾನ ಮತ್ತು ಸಮ್ಯಕ್ ಶ್ರದ್ಧಾನ ಇವುಗಳಿಂದ ಆಗುವದಿದೆ ಈ ಧರ್ಮವು ಬಹು ಸುಲಭವಾಗಿದೆ ಬಾಲಕ, ವೃದ್ಧ, ತರುಣ, ಧನವಂತ, ನಿರ್ಧನ, ಬಲವಂತ, ಅಶಕ್ತ, ಅಸಹಾಯ, ರೋಗಿ, ನಿರೋಗಿ ಮೊದಲಾದ ಎಲ್ಲರಿಗೂ ಸಹಜವಾಗಿ ಸ್ವಾಧೀನಮಾಡಿಕೊಳ್ಳಲಿಕ್ಕೆ ಬರುತ್ತದೆ ಇವುಗಳನ್ನು ಧಾರಣಮಾಡುವುದರಿಂದ ಯಾವ ದುಃಖ, ಅಪಮಾನ, ಕ್ಲೇಶ, ಭಯ, ವಿಷಾದ, ಕಲಹ, ಶೋಕ ಮೊದಲಾದವುಗಳು ಆಗುವದಿಲ್ಲ ಅದಕ್ಕಾಗಿಯೇ ಇವು ದುರ್ಲಭವಿಲ್ಲೆಂದು ಹೇಳಲಾಗಿದೆ. ಇವುಗಳನ್ನು ಧಾರಣಮಾಡಲಿಕ್ಕೆಂದು ಬಹಳ ಭಾರ ಹೊರಬೇಕಾಗಿಲ್ಲ, ಪರದೇಶಕ್ಕೂ ಹೋಗಬೇಕಾಗಿಲ್ಲ, ಚಳಿ, ಬಿಸಿಲು, ಗಾಳಿಗಳ ವೇದನೆಯನ್ನು ಸಹನ ಮಾಡಬೇಕೆಂದೇನೂ ಇಲ್ಲ, ದೊಡ್ಡ ಹೋರಾಟವನ್ನೂ ಮಾಡುವ ಅವಶ್ಯಕತೆಯಿಲ್ಲ. ಅರ್ಥಾತ್ ಇವು ಅತ್ಯಂತ ಸುಗಮ, ಸಂಪೂರ್ಣ ಕ್ಲೇಶರಹಿತ, ಸ್ವಾಧೀನ ಆತ್ಮನ ಸತ್ಯಪರಿಣಮನ-ವಾಗಿದೆ ಇವುಗಳನ್ನು ಧಾರಣ ಮಾಡುವುದರಿಂದ ಸಂಸಾರ ಪರಿಭ್ರಮಣವು ತಪ್ಪಿ ಅನಂತ ಜ್ಞಾನದರ್ಶನ-ಸುಖ ವೀರ್ಯಗಳು ಪ್ರಾಪ್ತವಾಗುತ್ತವೆ ಸಿದ್ಧ ಅವಸ್ಥೆಯೂ ಲಭಿಸುತ್ತದೆ. ಈ ಪ್ರಕಾರ ದಶಲಕ್ಷಣ ಧರ್ಮಗಳ ಸಂಕ್ಷೇಪ ಸ್ವರೂಪವನ್ನು ವರ್ಣಿಸಲಾಗಿದೆ.

## ಶಲ್ಯ

**ಶಲ್ಯದ ಲಕ್ಷಣ**—ಇನ್ನು 'ನಿಃಶಲ್ಯೋ ವ್ರತೀ' ಎಂದರೆ ಶಲ್ಯದ ಅಭಾವವಿದ್ದವರಿಗೇನೇ ವ್ರತಿಗಳೆಂದು ಎನ್ನಲಾಗುವುದು ಶಲ್ಯವಿದ್ದವರಿಗೆ ವ್ರತಿಗಳಾಗಲಿಕ್ಕೆ ಸಾಧ್ಯವಿಲ್ಲ ಅದಕ್ಕಾಗಿ ಶಲ್ಯದ ಸ್ವರೂಪವನ್ನು ವಿಚಾರಿಸೋಣ. ಶಲ್ಯವು ಮೂರು ವಿಧವಾಗಿದೆ. ಮಾಯಾ ಶಲ್ಯ, ಮಿಥ್ಯಾದರ್ಶನ ಶಲ್ಯ, ನಿದಾನ ಶಲ್ಯ ಈ ಮೂರು ಶಲ್ಯಗಳಿಂದ ವ್ರತಗಳ ಘಾತವಾಗುತ್ತದೆ ಶಲ್ಯ ಇದರ ಅರ್ಥವು ಮುಳ್ಳು ಎಂದಿದೆ ಅಂದಮೇಲೆ ಯಾವಾಗ ನಾವು ಧರ್ಮವನ್ನು ಧಾರಣಮಾಡುವದಕ್ಕಾಗಿ ವ್ರತಗಳನ್ನು ಪಾಲಿಸಲಿಕ್ಕೆ ಆರಂಭಿಸುತ್ತೇವೆಯೋ ಆ ಕಾಲದಲ್ಲಿಯೇ ಮೊದಲು ಮನಸ್ಸಿನೊಳಗಿನ ಕಪಟ, ಮಿಥ್ಯಾತ್ವ ನಿದಾನಗಳನ್ನು ಬಿಡಬೇಕಾಗುವದು ಇಂಥ ವ್ರತದಿಂದ ಇಂಥ ಫಲವು ಪ್ರಾಪ್ತವಾಗಬೇಕೆಂಬ ಇಚ್ಛೆಯೇ ನಿದಾನವೆನಿಸಿಕೊಳ್ಳುತ್ತದೆ. ಕಪಟ, ಮಿಥ್ಯಾತ್ವಗಳೊಡನೆ ಇದೂ ನಷ್ಟವಾಗದ ಹೊರತಾಗಿ ನಿಜವಾದ ವ್ರತವು ಸಾಧಿಸುವದಿಲ್ಲ ಇವು ಮನಸ್ಸಿನೊಳಗಿಂದ ಇಲ್ಲದಂತೆ ಆಗದಿದ್ದರೆ ಧರ್ಮವು ಸಾಧ್ಯವಾಗುವಂತಿಲ್ಲ ಅಂತಲೇ ಈ ಮೂರಕ್ಕೂ ಸನ್ಮಾರ್ಗದೊಳಗಿನ ಮುಳ್ಳುಗಳೆಂದು ಸಾರ್ಥಕ ಹೆಸರನ್ನು ಕೊಟ್ಟಿದ್ದಾರೆ.

**ನಿದಾನ ಶಲ್ಯದ ಭೇದಗಳು**—ಇವುಗಳಲ್ಲಿ ನಿದಾನ ಶಲ್ಯದ ಭೇದಗಳು ಮೂರಾಗಿವೆ ಒಂದು ಪ್ರಶಸ್ತನಿದಾನ, ಇನ್ನೊಂದು ಅಪ್ರಶಸ್ತನಿದಾನ, ಮೂರನೆಯದು ಭೋಗಾರ್ಥನಿದಾನ ಈ ನಿದಾನಗಳೇ ಸಂಸಾರಕ್ಕೆ ಕಾರಣವಾಗಿವೆ. (೧) ಸಂಯಮ ಧಾರಣಮಾಡುವದಕ್ಕಾಗಿ ಉತ್ತಮ ಕುಲ, ಉತ್ತಮ ಸಂಹನನ, ಉತ್ಕೃಷ್ಟ ಬಲ, ಬಂಧುವರ್ಗದ ಸಹಾಯ, ಶುಭಸಂಗತಿ, ಉಜ್ವಲ ಬುದ್ಧಿ ಮೊದಲಾದವುಗಳು ಇರಬೇಕೆಂದು ಇಚ್ಛೆಮಾಡುವುದು ಪ್ರಶಸ್ತನಿದಾನವೆನಿಸುವದು (೨) ಇದಕ್ಕೆ ವಿರೋಧವಾಗಿ ಅಭಿಮಾನಕ್ಕೆಂದು ಮೇಲಿನ ಎಲ್ಲ ಗುಣ ಮತ್ತು ಆಚಾರ್ಯ ಗಣಧರ ತೀರ್ಥಂಕರ ಪದಗಳು ಪ್ರಾಪ್ತವಾಗಬೇಕು, ತನ್ನ ಆಜ್ಞೆಯನ್ನು ಜಗತ್ತೆಲ್ಲ ಮನ್ನಿಸಬೇಕು, ಎಲ್ಲರ ಕಡೆಯಿಂದ ತನಗ ಆದರ ದೊರೆಯಬೇಕು, ಇವೇ ಮೊದಲಾದ ಇಚ್ಛೆಗಳನ್ನು ಇಡುವುದಕ್ಕೆ ಅಪ್ರಶಸ್ತನಿದಾನವೆನ್ನುವರು. ಸಿಟ್ಟಿನಿಂದ ಇನ್ನೊಬ್ಬರನ್ನು ನಾಶಗೊಳಿಸುವ ಇಚ್ಛೆಯನ್ನು ಮಾಡುವುದು ಇಲ್ಲವೆ ಅನ್ಯ ಸ್ತ್ರೀ, ಪುತ್ರ, ರಾಜ್ಯ, ಐಶ್ವರ್ಯಗಳು ನಾಶವಾಗಲೆಂದು ಇಚ್ಛಿಸುವುದು ಇದೂ ಕೂಡ ಅಪ್ರಶಸ್ತನಿದಾನದಲ್ಲಿಯೇ ಸಮಾವೇಶಗೊಳ್ಳುತ್ತದೆ (೩) ಸಂಯಮವನ್ನೂ ಧಾರಣಮಾಡಿ ಘೋರ ತಪಶ್ಚರಣವನ್ನು ಮಾಡುತ್ತಿರುವಾಗ ಅದರ ಫಲವು ಇಂದ್ರಿಯಗಳ ವಿಷಯ, ರಾಜ್ಯೈಶ್ವರ್ಯ, ದೇವಪದ, ಅನೇಕ ಅಪ್ಸರೆಯರ ಪ್ರಭುತ್ವ, ಜಾತಿಕುಲಗಳ ಶ್ರೇಷ್ಠತ್ವ, ಚಕ್ರವರ್ತಿತ್ವ ಇವೇ ಮೊದಲಾದ ಭೋಗಗಳು ಪ್ರಾಪ್ತವಾಗಬೇಕಂದು ಇಚ್ಛೆಮಾಡುವುದು, ಇದರಿಂದ ದೀರ್ಘಕಾಲದ ವರೆಗೆ ಸಂಸಾರ ಪರಿಭ್ರಮಣವು ಒದಗುತ್ತದೆ ಇದಕ್ಕೆ ಭೋಗಾರ್ಥನಿದಾನವೆನ್ನುವರು

**ವಿಷಯೋಪಭೋಗದ ಇಚ್ಛೆಯನ್ನು ಮಾಡಕೂಡದು.** ಸಂಯಮದ ಪ್ರಭಾವದಿಂದ ಸಂಪೂರ್ಣ ಕರ್ಮದ ನಾಶವಾಗಿ ಅತೀಂದ್ರಿಯ ಅವಿನಾಶೀ ನಿರ್ವಾಣ ಪದದ ಅನಂತ ಸುಖವು ಪ್ರಾಪ್ತವಾಗುತ್ತದೆ ಹೀಗಿದ್ದೂ ಕೂಡ ಅದರಿಂದ ವಿಷಯೋಪಭೋಗದ ಇಚ್ಛೆಯನ್ನು ಮಾಡುವದೆಂದರೆ ಚಿಂತಾಮಣಿ ರತ್ನವನ್ನು ಕವಡಿಗೆ ಮಾರಿದಂಥ ಹುಚ್ಚತನವಾಗುತ್ತದೆ ಇಲ್ಲವೆ ಅನೇಕ ಬೆಲೆಯುಳ್ಳ ರತ್ನಗಳಿಂದ ತುಂಬಿದ ಕಟ್ಟಿಗೆಯ ದೋಣಿಯು ಸಮುದ್ರದಲ್ಲಿ ಸಾಗುತ್ತಿರುವಾಗ ಅದನ್ನು ಉರುವಲಕ್ಕಾಗಿ ಒಡೆದಂಥ ಮೂರ್ಖತನವಾಗುತ್ತದೆ ನೂಲು ಬೇಕಾಗಿದೆಯೆಂದು ಕೊರಳೊಳಗಿನ ರತ್ನದ ಹಾರವನ್ನು ಹರಿದು ಉಪಯೋಗಿಸುವರೆ? ಬೂದಿಯು ಬೇಕೆಂದು ಚಂದನವನ್ನು ಸುಡುವರೆ? ಇಲ್ಲ ನಿದಾನ ಮಾಡುವುದರಿಂದ ಪುಣ್ಯವು ನಷ್ಟಹೊಂದಿ ಪಾಪದ ಬಂಧವಾಗುತ್ತದೆ ನಿರ್ವಾಂಛಕ ಪರಿಣಾಮದಿಂದ ಪುಣ್ಯಬಂಧವಾಗುತ್ತಿರುತ್ತದೆ ಸಮ್ಯಗ್‌ದೃಷ್ಟಿ ಪುರುಷನಿಗೆ ಭೋಗೋಪಭೋಗದ ಇಚ್ಛೆಯು ಮೂಲದಲ್ಲಿಯೇ ಇರುವದಿಲ್ಲ ಅವನಿಗೆ ಅಹಮಿಂದ್ರನ ಸುಖವೂ ಸಹ ನಾಶವಂತವೂ ಪರಾಧೀನವೂ ಎನಿಸುತ್ತದೆ ನಿಜವಾದ ಸುಖವೆಂದರೆ ಆತ್ಮನ ಸ್ವಾಧೀನವಿರುವಂಥ ಅತೀಂದ್ರಿಯ ಸುಖದ ಅನುಭವವೇ ಆಗಿದೆ. ಅಂದಮೇಲೆ ಆ ಸಮ್ಯಗ್ದೃಷ್ಟಿಯು ಇಂದ್ರಿಯ ಜನಿತ ಸಂತಾಪದಿಂದ ಮಹಾನ್ ದುಃಖದಿಂದ ತುಂಬಿದ ತೃಷ್ಣಾರೂಪೀ ಸಂತಾಪವನ್ನು ಹೆಚ್ಚಿಸುವಂಥ ಮತ್ತು ವಿಷಯದ ಆಧೀನವಾದಂಥ ಪದಾರ್ಥಗಳಿಗೆ ಸುಖವೆಂದು ಹೇಗೆ ಮನ್ನಿಸಿಯಾನು? ಯಾರು ಅಮೃತದ ಸ್ವಾದವನ್ನು ತಕ್ಕೊಂಡಿರುವರೋ ಅವರು ದುರ್ಗಂಧಯುಕ್ತ ಹಾಗೂ ಕಹಿಯಾದ ಪಾನಾದಿಗಳನ್ನು ಕುಡಿಯಲಿಕ್ಕೆ ಹೇಗೆ ಇಚ್ಛಿಸಿಯಾರು? ಅದು ಅವರಿಗೆ ಸೇರುವುದೇ ಇಲ್ಲ. ಸಮ್ಯಗ್ದೃಷ್ಟಿ ಪುರುಷನಿಗೆ ಹೀಗೆ ಇಚ್ಛೆ ಇರುತ್ತದೆ—

ದುಕ್ಖಖಓ ಕಮ್ಮಖಓ ಸಮಾಹಿಮರಣಂ ಚ ಬೋಹಿಲಾಹೋ ಯ ।
ಏಯಂ ಪತ್ಥೇದವ್ವಂ ಣ ಪತ್ಥಣೀಯಂ ತದೋ ಅಣ್ಣಂ ॥

ಅರ್ಥ—ನನ್ನ ಜನ್ಮ–ಮರಣ–ಕ್ಷುಧಾ–ತೃಷಾದಿ ದುಃಖಗಳ ಕ್ಷಯವಾಗಲಿ ಆತ್ಮಸುಖವನ್ನು ನಷ್ಟ ಮಾಡುವಂಥ ಮೋಹನೀಯ, ಜ್ಞಾನಾವರಣ, ದರ್ಶನಾವರಣ ಮತ್ತು ಅಂತರಾಯ ಕರ್ಮಗಳ ಕ್ಷಯವಾಗಲಿ. ನನಗೆ ಈ ಪರ್ಯಾಯದಲ್ಲಿ ನಾಲ್ಕು ಆರಾಧನೆಗಳಿಂದ ಕೂಡಿದ ಸಮಾಧಿ ಮರಣವು ಪ್ರಾಪ್ತವಾಗಲಿ ರತ್ನತ್ರಯಗಳ ಲಾಭವಾಗಲಿ ಸಮ್ಯಗ್‌ದೃಷ್ಟಿ ಪುರುಷನು ಇಷ್ಟೇ ಪ್ರಾರ್ಥನೆಯನ್ನು ಮಾಡುವುದು ಯೋಗ್ಯವಾಗಿದೆ. ಇದನ್ನುಳಿದು ಬೇರೆ ಇನ್ನಾವುದೂ ಪ್ರಾರ್ಥನೆಯನ್ನು ಈ ಜನ್ಮದಲ್ಲಿಯೂ ಪರಜನ್ಮದಲ್ಲಿಯೂ ಸಹ ಮಾಡುವುದು ಯೋಗ್ಯವಲ್ಲ.

**ನಿದಾನದ ವಿಷಯದಲ್ಲಿ ಸಮ್ಯಗ್ದೃಷ್ಟಿ ಪುರುಷನ ವಿಚಾರಗಳು**—ಸಂಸಾರದಲ್ಲಿ ಪರಿಭ್ರಮಣ ಮಾಡುತ್ತಿರುವಾಗ ಜೀವಕ್ಕೆ ಉಚ್ಚಕುಲ, ನೀಚಕುಲ, ರಾಜ್ಯ, ಐಶ್ವರ್ಯ, ಲಕ್ಷ್ಮೀ, ದಾರಿದ್ರ್ಯ, ದೈನ್ಯ, ರೋಗ, ಸುರೂಪ, ಕುರೂಪ, ಶಕ್ತಿ, ದೌರ್ಬಲ್ಯ, ಪಾಂಡಿತ್ಯ, ಮೂರ್ಖತ್ವ, ಸ್ವಾಮಿತ್ವ, ಸೇವಕತ್ವ, ರಾಜತ್ವ, ಗುಣತ್ವ, ನಿರ್ಗುಣತ್ವ ಇವು ಅನಂತವೇಳೆ ಲಭಿಸಿ, ಇಲ್ಲದಂತೆಯೂ ಆಗಿವೆ ಅದಕ್ಕಾಗಿ ಇಂಥ ಸಂಯೋಗ–ವಿಯೋಗ ಸ್ವರೂಪವುಳ್ಳ ಸಂಸಾರದಲ್ಲಿ ಅನಂತ ಪರ್ಯಾಯಗಳು ದು ಖವನ್ನು ಒದಗಿಸಿದ ತರುವಾಯ ಎಲ್ಲಿಯಾದರೂ ಒಂದು ಪರ್ಯಾಯದಲ್ಲಿ ಇಂದ್ರಿಯಜನ್ಯ ಸುಖಾನುಭಾವವು ದೊರೆಯುವ ಸಂಭವವಿರುತ್ತದೆ ಆ ಮೇಲೆ ಮತ್ತೆ ಅನಂತ ಪರ್ಯಾಯಗಳು ದುಃಖದಾಯಕವಾಗಿರುತ್ತವೆ ಈ ಪ್ರಕಾರ ಸಂಸಾರದಲ್ಲಿ ಸುತ್ತುತ್ತಿರುವಾಗ ಇಂದ್ರಿಯಜನ್ಯ ಸುಖವು ಹಲವು ಸಲ ಲಭಿಸಿದೆ ಈಗ ಮತ್ತೆ ಆ ಸುಖವು ಲಭಿಸಬೇಕೆಂದು ಸಮ್ಯಗ್ದೃಷ್ಟಿ ಪುರುಷನು ಏಕೆ ಇಚ್ಛಿಸಿಯಾನು? ಸಂಸಾರದಲ್ಲಿ ಸ್ವಯಂಭೂರಮಣ ಸಮುದ್ರದೊಳಗಿನ ನೀರಿನಷ್ಟು ದುಃಖವು ತುಂಬಿದೆ ಇನ್ನು ಒಂದು ಕೂದಲೆಳೆಯ ತುದಿಯಲ್ಲಿ ನಿಲ್ಲುವ ನೀರ ಹನಿಯ ಅನಂತ ಭಾಗದಷ್ಟು ಇಂದ್ರಿಯ ಜನ್ಯ ಸುಖವು ಇದೆ ಇಷ್ಟು ಅಲ್ಪ ಸುಖದಿಂದ ತೃಪ್ತಿಯಾದರೂ ಹೇಗೆ ಆದೀತು? ಭೋಗೋಪಭೋಗ ಮತ್ತು ಇತರ ಪದಾರ್ಥಗಳ ಸಂಯೋಗದಿಂದ ಎಷ್ಟು ಸುಖವಾಗುವುದೋ ಅದಕ್ಕಿಂತಲೂ ಅನಂತಪಟ್ಟು ದುಃಖವು ಅವುಗಳ ವಿಯೋಗದಿಂದ ಆಗುತ್ತಿರುತ್ತದೆ ಯಾವುದರ ಸಂಯೋಗವಾಗಿರುತ್ತದೆಯೋ ಅದರ ವಿಯೋಗವಾಗುವುದು ನಿಶ್ಚಿತವಿರುತ್ತದೆ ಜೇನ–ತುಪ್ಪವನ್ನು ಸವರಿದ ಖಡ್ಗವನ್ನು ನೆಕ್ಕುವದರಿಂದ ಆರಂಭದಲ್ಲಿ ತುಸು ಹೊತ್ತು ಬಾಯಿ ಸವಿಯಾಗುತ್ತದೆ ಆದರೆ ಅದರಿಂದ ನಾಲಿಗೆಯೂ ಕತ್ತರಿಸುತ್ತದೆ ಆ ದುಃಖವು ಬಹಳವಾಗಿರುತ್ತದೆ. ಇದರಂತೆಯೇ ವಿಷಯಗಳ ಸಂಯೋಗದ ಸುಖವಿರುತ್ತದೆ ಕೆಲವೊಂದು ಹಣ್ಣುಗಳು ನೋಡಲಿಕ್ಕೆ ಬಹಳ ಸುಂದರವಿರುತ್ತವೆ ತಿನ್ನಲಿಕ್ಕೂ ಸವಿಯಾಗಿರುತ್ತವೆ ಆದರೆ ಪ್ರಾಣದ ಘಾತವನ್ನು ಮಾಡುತ್ತವೆ ಇದರಂತೆಯೇ ಭೋಗಜನಿತಸುಖವಿದೆ ಒಬ್ಬ ಪುರುಷನ ಹತ್ತಿರ ಬಹಳಷ್ಟು ಬೆಲೆಯುಳ್ಳ ರತ್ನಗಳಿದ್ದು, ಅವುಗಳ ಬೆಲೆಯು ನನಗೆ ಸ್ವಲ್ಪ ಸಿಕ್ಕರೂ ಸಾಕೆಂದು, ಅವನು ಅವುಗಳನ್ನೂ ಅಲ್ಪಬೆಲೆಯಲ್ಲಿ ಮಾರಿ ಬಿಡುತ್ತಾನೆ. ಆದರೆ ಕಡಿಮೆ ಬೆಲೆಯ ವಸ್ತುವಿಗೆ ಬಹಳ ಬೆಲೆ ಬರಬೇಕೆಂದು ಇಚ್ಛೆಯನ್ನು ಮಾಡಿದರೂ ಅವನ ಆಶೆಯು ಪೂರ್ಣವಾಗುವದಿಲ್ಲ ಯಾಕೆಂದರೆ ಬಹುಮೂಲ್ಯ ವಸ್ತುವು ಕಡಿಮೆ ಬೆಲೆಯಲ್ಲಿ ದೊರೆತರೆ ಯಾರೂ ಕೊಳ್ಳಬಹುದು. ಆದರೆ ಕಡಿಮೆ ಬೆಲೆಯ ವಸ್ತುವನ್ನು ಹೆಚ್ಚು ಬೆಲೆಯನ್ನು ಕೊಟ್ಟು ಯಾರು ಕೊಳ್ಳುವರು? ಇದೇ ಪ್ರಕಾರ ನಮಗೆ ಸ್ವರ್ಗದೊಳಗಿನ ಐಶ್ವರ್ಯವು ಪ್ರಾಪ್ತವಾದೀತೆನ್ನುವಷ್ಟು ಪುಣ್ಯಬಂಧವಾದಾಗ ನಾವು ರಾಜ್ಯಸಂಪದವು ನಮಗೆ ದೊರೆಯಲಿ ಎಂದು ನಿದಾನ ಮಾಡಿದರೆ ಅದು ದೊರೆಯುವುದು, ಅದರಂತೆ ವ್ಯಂತರ ದೇವತೆಯ ಪರ್ಯಾಯವು ಲಭಿಸಲಿ ಎಂದು ಬಯಸಿದರೆ ಅದೂ ದೊರೆತೀತು ಯಾಕಂದರೆ ನಿದಾನ ಕಟ್ಟಿಕೊಳ್ಳುವುದರಿಂದ ಹೆಚ್ಚು ಪುಣ್ಯವು ಇದ್ದರೆ ಅದರ ಘಾತವಾಗಿ ತುಚ್ಛ ಸಂಪತ್ತು ಪ್ರಾಪ್ತವಾಗುತ್ತದೆ ಆದರೆ ಮತ್ತೆ ಸಂಸಾರ ಪರಿಭ್ರಮಣ ಮಾಡ-ಬೇಕಾಗುತ್ತದೆ ಹೇಗೆಂದರೆ ಉದ್ದವಾದ ನೂಲಿನ ಎಳೆಯಿಂದ ಕಟ್ಟಿದ ಪಕ್ಷಿಯು ಎಷ್ಟು ದೂರದಲ್ಲಿ ಹಾರಾಡುತ್ತಿದ್ದರೂ ಅದು ತಿರುಗಿ ತನ್ನ ಮೊದಲಿನ ಸ್ಥಳಕ್ಕೇ ಬರಬೇಕಾಗುತ್ತದೆ ಅದು ದೂರ ಎಲ್ಲಿಗೆ ಹೋದೀತು? ಅದರ ಕಾಲಿಗೆ ನೂಲಿನ ಬಂಧನವಿದೆ. ಅದರಿಂದ ಅದಕ್ಕೆ ಸ್ವಾತಂತ್ರ್ಯವಿಲ್ಲ ಇದೇ ಪ್ರಕಾರ ನಿದಾನವನ್ನು ಮಾಡುವವನು ಅತಿದೂರವೆಂದರೆ ಸ್ವರ್ಗದಲ್ಲಿ ಮಹರ್ದ್ಧಿಕ ದೇವನಾಗುವನು ಆದರೆ ಪುನಃ ಸಂಸಾರದಲ್ಲಿ ಪರಿಭ್ರಮಣ ಮಾಡಿಯಾನು. ದೇವಲೋಕಕ್ಕೆ ಹೋಗಿಯೂ ಸಹ ನಿದಾನದ ಪ್ರಭಾವದಿಂದ ಏಕೇಂದ್ರಿಯ ತಿರ್ಯಂಚ, ಪಂಚೇಂದ್ರಿಯ ತಿರ್ಯಂಚ ಇಲ್ಲವೆ ಮನುಷ್ಯಯೋನಿಯಲ್ಲಿ ಜನ್ಮಹೊಂದಿ, ಪುನಃ ಪಾಪಸಂಚಯ ಮಾಡಿಕೊಂಡು ದೀರ್ಘ ಕಾಲದ ವರೆಗೆ

ಸಂಸಾರದ ಪರಿಭ್ರಮಣ ಮಾಡಬೇಕಾಗುವದು ಸಾಲಗಾರರನ್ನು ಸೆರೆಮನೆಯಲ್ಲಿಟ್ಟಾಗ ಅವನು ಅಲ್ಲಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿ ಸ್ವಲ್ಪ ಅವಧಿಯಲ್ಲಿ ಸಾಲ ತೀರಿಸುವೆನೆಂದು ಹೇಳಿ ಹೊರಗೆ ಬರಬಲ್ಲನು. ಆದರೆ ತಾನು ಕೊಟ್ಟ ಅವಧಿಯಲ್ಲಿ ಸಾಲವು ತೀರದಿದ್ದರೆ ತಿರುಗಿ ಅವನು ಸೆರೆಮನೆಗೇ ಹೋಗಬೇಕಾಗುವದು. ಹಾಗೆಯೇ ನಿದಾನವನ್ನು ಇಟ್ಟುಕೊಳ್ಳುವ ಮನುಷ್ಯನು ತಪ-ಸಂಯಮಗಳ ಮುಖಾಂತರ ಪುಣ್ಯ ಸಂಪಾದನಮಾಡಿ ಸ್ವರ್ಗಲೋಕದಲ್ಲಿ ಹೋಗುತ್ತಾನೆ. ಅಲ್ಲಿಯ ಆಯುಷ್ಯವು ಪೂರ್ಣವಾದ ತರುವಾಯ ತಿರುಗಿ ಸಂಸಾರದಲ್ಲಿಯೇ ಪರಿಭ್ರಮಣ ಮಾಡುತ್ತಾನೆ ಒಟ್ಟಿನಲ್ಲಿ ಮುನಿ ಅವಸ್ಥೆಯಲ್ಲಿ ಅಥವಾ ಗೃಹಸ್ಥಾವಸ್ಥೆಯಲ್ಲಿ ಮಂದ ಕಷಾಯದ ಪ್ರಭಾವದಿಂದ ಇಲ್ಲವೆ ತಪಶ್ಚರಣದ ಪ್ರಭಾವದಿಂದ ಅಹಮಿಂದ್ರ ಪದವು ಪ್ರಾಪ್ತವಾದೀತು, ಸ್ವರ್ಗವೂ ಲಭಿಸೀತು ಎನ್ನುವಷ್ಟು ಪುಣ್ಯವನ್ನು ಸಂಪಾದಿಸಿ, ಹಿಂದಿನಿಂದ ಇಂಥ ಭೋಗವು ಪ್ರಾಪ್ತವಾಗಬೇಕೆಂದು ಇಚ್ಛಾರೂಪ ನಿದಾನವನ್ನು ಕಲ್ಪಿಸಿಕೊಂಡಲ್ಲಿ ಭವನತ್ರಿಕ ಅಶುಭ ದೇವರಲ್ಲಿ ಹೋಗಿ ಜನ್ಮಿಸಿಯಾನು ಯಾರ ಪುಣ್ಯವು ಹೆಚ್ಚಿಗೆ ಇದ್ದು, ಅವನು ಅಲ್ಪ ಪುಣ್ಯಕ್ಕೆ ಲಭಿಸುವಂಥ ನಿದಾನವನ್ನು ಮಾಡಿದ್ದಾದರೆ ಸ್ವಲ್ಪ ಪುಣ್ಯಧಾರಿಯಾದ ದೇವನಾಗಿ ಉತ್ಪನ್ನನಾದಾನು. ಆದರೆ ಅದೇ ಹೆಚ್ಚಿಗೆ ಪುಣ್ಯವುಳ್ಳವರಿಗೆ ಲಭಿಸುವಂಥ ಭವನತ್ರಿಕ ದೇವರಲ್ಲಿ ಜನ್ಮವನ್ನು ಹೊಂದಲಾರನು. ಸ್ವರ್ಗ ಮೋಕ್ಷಾದಿಗಳು ಪ್ರಾಪ್ತವಾಗುವಂಥ ಮುನಿಧರ್ಮ ಇಲ್ಲವೆ ಶ್ರಾವಕ ಧರ್ಮಗಳನ್ನು ಸ್ವೀಕರಿಸಿ, ಅದಕ್ಕಾಗಿ ಬೇರೆ ನಿದಾನವನ್ನು ಕಟ್ಟಿದಲ್ಲಿ ಆ ಉತ್ತಮ ಧರ್ಮವನ್ನು ಕೆಡಿಸಿಕೊಂಡಂತಾಗುವದು. ಇದು ಉರುವಲಕ್ಕಾಗಿ ಕಲ್ಪವೃಕ್ಷವನ್ನು ಕಡಿದಂತೆ ಆಗುತ್ತದೆ ಈ ಪ್ರಕಾರ ನಿದಾನ ಶಲ್ಯಕ್ಕೆ ದೋಷಗಳಿವೆ.

**ಮಾಯಾ ಶಲ್ಯ**—ಮಾಯಾಚಾರದ ದೋಷಗಳನ್ನು ಈ ಮೊದಲೇ ಹೇಳಿದೆ. ಮಾಯಾಚಾರಿ ಪುರುಷನ ವ್ರತ, ಶೀಲ, ಸಂಯಮ ಮೊದಲಾದವುಗಳೆಲ್ಲವೂ ವ್ಯರ್ಥವಾಗಿವೆ ಭಗವಾನ್ ಜಿನೇಂದ್ರನು ಉಪದೇಶಿಸಿದ ಧರ್ಮವನ್ನು ಸ್ವೀಕರಿಸಬೇಕೆಂಬ ಇಚ್ಛೆಯುಳ್ಳವರೂ ಆತ್ಮನ ದುರ್ಗತಿ ಗಮನವನ್ನು ತಡೆಯಬೇಕೆನ್ನುವವರೂ ಕೋಟ್ಯಾವಧಿ ಉಪದೇಶಗಳಲ್ಲಿಯ ಮುಖ್ಯ ಉಪದೇಶವನ್ನು-ಮಾಯಾ ಶಲ್ಯ-ಕಪಟವನ್ನು ಅಂತಃಕರಣದೊಳಗಿಂದ ತೆಗೆದು ಹಾಕಬೇಕು. ಕೀರ್ತಿ ಹಾಗೂ ಧರ್ಮಗಳನ್ನು ನಾಶಗೊಳಿಸುವಂಥ ಮಾಯಾಚಾರವನ್ನು ತ್ಯಾಗಮಾಡಿ, ಸರಳತೆಯನ್ನು ಧಾರಣ ಮಾಡಬೇಕು ಮಿಥ್ಯಾತ್ವದ ವರ್ಣನೆಯಂತೂ ಈ ಮೊದಲೇ ಮಾಡಲಾಗಿದೆ ಈ ಮಿಥ್ಯಾತ್ವವೇ ಎಲ್ಲ ಸಂಸಾರ ಪರಿಭ್ರಮಣಕ್ಕೆ ಬೀಜವಾಗಿದೆ. ಅದರ ಪ್ರಭಾವದಿಂದಲೇ ಅನಂತಾನಂತ ಪರಿವರ್ತನಗಳು ಆಗುತ್ತಲಿವೆ. ಮಿಥ್ಯಾತ್ವವನ್ನು ಬಿಡದ ಹೊರತಾಗಿ ಸತ್ಯಧರ್ಮದ ಪ್ರವೇಶವು ಅಂತಃಕರಣದಲ್ಲಿ ಆಗಲಾರದು. ಅದಕ್ಕಾಗಿ ಮಿಥ್ಯಾತ್ವ ಶಲ್ಯವನ್ನೂ ಇಲ್ಲದಂತೆ ಮಾಡಬೇಕು. ಮಾಯಾ, ಮಿಥ್ಯಾತ್ವ, ನಿದಾನ ಈ ಮೂರು ಶಲ್ಯಗಳ ಅಭಾವವಾಗದ ಹೊರತಾಗಿ ಮುನಿ ಇಲ್ಲವೆ ಶ್ರಾವಕರ ಧರ್ಮವು ಸಿದ್ಧಿಸುವದಿಲ್ಲ ಒಟ್ಟಾರೆ ನಿಃಶಲ್ಯನಾದಂಥವನೇ ವ್ರತಿಕನಾಗಲಿಕ್ಕೆ ಸಾಧ್ಯವಿದೆ.

**ದುಷ್ಟ ಸಂಗತಿಯ ಫಲ**—ದುಷ್ಟ ಮನುಷ್ಯನ ಸಂಗತಿಯನ್ನು ಮಾಡಬಾರದು ಅವನ ಸಂಗತಿಯಿಂದ ಪಾಪದ ವಿಷಯಕ್ಕೆ ಎನಿಸುತ್ತಿರುವಂಥ ನಮ್ಮಲ್ಲಿಯ ನೋವೇ ಇಲ್ಲದಂತಾಗುತ್ತದೆ. ಪಾಪ ಮಾಡುವ ಪ್ರಸಂಗವು ಯಾರ ಸಹವಾಸದಿಂದ ಬರುವುದೋ ಅಂಥವರ ಸಂಗತಿಯನ್ನೂ ಮೂಲದಲ್ಲಿಯೇ ಮಾಡಬಾರದು. ಜೂಜು, ಕಪಟ, ಕಳವು, ಪರಸ್ತ್ರೀ ಲಂಪಟ, ಜಿಹ್ವಾಲೋಲುಪ, ಕುಲಾಚಾರಭ್ರಷ್ಟ, ವಿಶ್ವಾಸಘಾತಕಿ, ಮಿತ್ರದ್ರೋಹಿ, ಗುರುದ್ರೋಹಿ, ಧರ್ಮದ್ರೋಹಿ, ಅಪಕೀರ್ತಿ ಇವುಗಳ ಹೆದರಿಕೆ ಇಲ್ಲದವನು ನಿರ್ಲಜ್ಜನೂ ಪಾಪಕ್ರಿಯೆಯಲ್ಲಿ ನಿಪುಣನೂ ವ್ಯಸನಿಯೂ ಸುಳ್ಳು ಮಾತನಾಡುವಂಥವನೂ ಆದಂಥವರ ಸಂಗತಿಯನ್ನು ಮಾಡಕೂಡದು ಯಾಕೆಂದರೆ ಇವರು ನಿರ್ಲಜ್ಜ, ಅತಿಲೋಭಿ, ಅಸಂತೋಷಿ, ನಿರ್ದಯಿ, ಕಠೋರ ಪರಿಣಾಮಿ, ಕಲಹ ಪ್ರಿಯ, ವಿಸಂವಾದಿ, ಅಭಕ್ಷ್ಯ ಭಕ್ಷಕ, ವೇಶ್ಯಾಸಕ್ತ, ಮದ್ಯಸೇವಕ, ನೀಚಕರ್ಮಿಯಾಗಿರುತ್ತಾರೆ. ಇಂಥವರ ಸಹವಾಸ ಮಾಡುವುದು ಯೋಗ್ಯವಾಗದು ಶ್ರಾವಕಧರ್ಮದ ರಕ್ಷಣೆಯನ್ನು ಮಾಡಿ, ತಮ್ಮ ಕಲ್ಯಾಣವನ್ನು ಮಾಡಿಕೊಳ್ಳುವದಿದ್ದರೆ ಬೆಂಕಿ ಹಾಗೂ ವಿಷಗಳಂತೆ ಇರುವ ಕೆಟ್ಟ ಸಂಗತಿಯನ್ನೂ ತ್ಯಾಗ ಮಾಡಬೇಕು ಸಂಗತಿಯನ್ನು ಇಡಬೇಕು ಎಂಬ ಬುದ್ಧಿಯು ಆಗುತ್ತಿರುತ್ತದೆ-ಎಂಬುದು ನಿಯಮವಿದೆ ಅಚೇತನವಾದಂಥ ಮಣ್ಣು ಕೂಡ ಹೂವಿನ ಸಂಗತಿಯಿಂದ ಸುಗಂಧವುಳ್ಳದಾಗುತ್ತದೆ ದುರ್ಜನರ ಸಂಗತಿಯಿಂದ ಸಜ್ಜನರೂ ಕೂಡ ತಮ್ಮ ಸ್ವಭಾವವನ್ನು ಬಿಟ್ಟು ದುರ್ಜನರಾಗುತ್ತಾರೆ ತಣ್ಣೀರು ಅಗ್ನಿಯ ಸಹವಾಸದಿಂದ ತನ್ನ ತಂಪು ಗುಣವನ್ನು ಬಿಟ್ಟು, ಉಷ್ಣತೆಯನ್ನು ಹೊಂದುತ್ತದೆ ಹಾಗೆಯೇ ಉತ್ತಮ ಪುರುಷರೂ

ಸಹ ಅಧಮರ ಸಂಗತಿಯಿಂದ ಅಧಮರಾಗುತ್ತಾರೆ ದುಷ್ಟರ ಸಂಗತಿಯಿಂದ ತ್ಯಾಗಿ ಹಾಗೂ ಸಂಯಮ ಪುರುಷರಿಗೂ ಸಹ ದೋಷವು ತಗಲುತ್ತದೆ ಸೆರೆಗಾರನ ಕೈಯಲ್ಲಿ ಹಾಲಿನ ತಂಬಿಗೆಯು ಇದ್ದರೂ ಸಹ ಜನರು ಅದು ಮದಿರೆಯ ತಂಬಿಗೆಯೇ ಇರಬೇಕೆಂದು ಸಂಶಯವನ್ನು ತಕ್ಕೊಳ್ಳುತ್ತಾರೆ ಅದರಂತೆ ಸೆರೆಗಾರನ ಮನೆಯಲ್ಲಿ ಹಾಲನ್ನು ಕುಡಿಯುವ ಬ್ರಾಹ್ಮಣನಿಗೂ ಕೂಡ ಮದ್ಯವನ್ನೇ ಸೇವಿಸಿದನೆಂದು ಹೇಳುವರು ಯಾವಾಗಲೂ ಜನರು ಅನ್ಯರ ದೋಷಗಳನ್ನು ನೋಡುತ್ತಿರುತ್ತಾರೆ ಎರಡನೆಯವರ ತಪ್ಪುಗಳನ್ನು ಹೇಳುವದರಲ್ಲಿ ಅವರಿಗೆ ಬಹಳ ಸವಿಯೆನಿಸುತ್ತದೆ ನೀವು ದುಷ್ಟ ಇಲ್ಲವೆ ದುರಾಚಾರಿಗಳ ಸಂಗತಿಯನ್ನು ಹಿಡಿದದ್ದಾದರೆ ಜನರ ನಿಂದೆಗೆ ಪಾತ್ರರಾಗಿ ಧರ್ಮದ ಮೇಲೆ ಅಪವಾದವನ್ನು ತರುವಿರಿ ಅದಕ್ಕಾಗಿ ಕುಸಂಗತಿಯನ್ನು ಮಾಡಬೇಡಿರಿ ಕುಸಂಗತಿಯಿಂದ ನಿರ್ದೋಷ ಮನುಷ್ಯನೂ ಸಹ ದೋಷಿಯೆನಿಸಿ ಮಿಥ್ಯಾಮಾರ್ಗಿ ಎನಿಸುತ್ತಾನೆ ಮಿಥ್ಯಾತ್ವ ಹಾಗೂ ಕಷಾಯಗಳ ಪರಿಚಯವು ಈ ಜೀವಕ್ಕೆ ಅನಾದಿಕಾಲದಿಂದಲೂ ಇದೆ. ವೀತರಾಗ ಭಾವದ ಪ್ರಾದುರ್ಭಾವವು ಇದಕ್ಕೆ ಬಹಳ ಕಷ್ಟದಿಂದ ಆದದ್ದುಂಟು. ಅದು ಕುಸಂಗತಿಯಿಂದ ಒಂದು ಕ್ಷಣದಲ್ಲಿಯೇ ಇಲ್ಲದಂತಾಗುತ್ತದೆ ಅನಾದಿ ಕಾಲದಿಂದ ಮೋಹನೀಯ ಕರ್ಮವು ಬಹಳಷ್ಟು ಪ್ರಭಾವವನ್ನು ಬೀರುತ್ತ ಬಂದಿದೆ ಇದರ ಉದಯದಿಂದ ಜೀವವು ವಿಷಯ-ಕಷಾಯಗಳಲ್ಲಿ ಯಾರೂ ಕಲಿಸದೆಯೂ ಸಹ ಪ್ರವೃತ್ತಿಯನ್ನು ಹೊಂದುತ್ತ ಬಂದಿದೆ. ಅದರಲ್ಲಿಯೂ ಕುಸಂಗತಿಯು ಲಭಿಸಿದಲ್ಲಿ ಬೆಂಕಿಗೆ ಗಾಳಿಯ ಸಹಾಯವು ದೊರೆತಂತೆ ಆಗಿ ಅವನು ಅತ್ಯಂತ ದುಷ್ಟನಾಗುತ್ತಾನೆ ಅದಕ್ಕಾಗಿ ಕೆಟ್ಟಸಂಗತಿಯನ್ನು ಬಿಟ್ಟು ಒಳ್ಳೆಯವರ ಸಹವಾಸವನ್ನು ಮಾಡಬೇಕು

**ಸಜ್ಜನರ ಸಂಗತಿಯನ್ನು ಮಾಡು.** ಸಜ್ಜನರ ಸಂಗತಿಯಿಂದ ದುಷ್ಟರೂ ಸಹ ತಮ್ಮ ಸ್ವಭಾವವನ್ನು ಬಿಡುತ್ತಾರೆ ಸತ್‌ಸಂಗತಿಯ ಪ್ರಭಾವದಿಂದ ನಿರ್ಗುಣ ಪುರುಷನೂ ಕೂಡ ಜಗತ್ತಿನಲ್ಲಿ ಮನ್ನಣೆಯನ್ನು ಪಡೆಯುವನು ವಾಸನೆಯಿಲ್ಲದ ಹೂವು ಕೂಡ ದೇವರ ಸಹವಾಸದಲ್ಲಿ ಇದ್ದುದಾದರೆ ಅದೂ ತಲೆಯಲ್ಲಿ ಧರಿಸುವ ಯೋಗ್ಯತೆಯನ್ನು ಹೊಂದುತ್ತದೆ ಒಬ್ಬೊಬ್ಬರಿಗೆ ಧರ್ಮದ ಮೇಲೆ ಪ್ರೀತಿಯು ಇರುವದಿಲ್ಲ; ಅದರಿಂದ ಪರೀಷಹಗಳನ್ನು ಸಹನಮಾಡಿ, ಇಂದ್ರಿಯಗಳ ವಿಷಯದಿಂದ ಪರಾಙ್ಮುಖನಾಗಿ ತ್ಯಾಗ ಮಾಡಲಿಕ್ಕೆ ಆಗುವದಿಲ್ಲ. ಆದರೆ ಅಂಥವರಿಗೂ ಕೂಡ ಸಂಯಮಿ, ತ್ಯಾಗಿ, ವ್ರತೀ ಪುರುಷರ ಸಂಗತಿಯಿಂದ ಜನರಿಗೆ ನಾಚಿಯೂ ಭಯದಿಂದಲೂ ಅಭಿಮಾನದಿಂದಲೂ ಇಲ್ಲವೆ ಇನ್ನಾವುದರಿಂದಲಾದರೂ ವಿಷಯ ಕಷಾಯದಿಂದ ವಿಮುಕ್ತರಾಗುವ ಪ್ರಸಂಗವು ಒದಗುತ್ತದೆ. ಅಂದಮೇಲೆ ಸ್ವಾಭಾವಿಕವಾಗಿಯೇ ಮಂದಕಷಾಯಿ, ಧರ್ಮಾನುರಾಗಿ, ಪಾಪಭೀರುಗಳಾದಂಥವರಿಗೆ ಸತ್‌ಸಂಗತಿಯು ಗಂಟುಬಿದ್ದಲ್ಲಿ ಅವರು ಸತ್ಯಧರ್ಮವನ್ನು ಸ್ವೀಕರಿಸಿ, ಸಂಸಾರದಿಂದ ಮುಕ್ತರಾದಾರು ಇದರಲ್ಲಿ ಸಂಶಯವಿಡುವ ಕಾರಣವೇ ಇಲ್ಲ. ಯಾರ ಉಪದೇಶದಿಂದ ಸಮ್ಯಕ್ ಧರ್ಮದ ಪ್ರವೃತ್ತಿಯಾಗುವುದೋ, ಯಾರ ಸಂಗತಿಯಿಂದ ಅನೇಕ ಜನರು ವಿಷಯ ಕಷಾಯಗಳಿಂದ ವಿರಕ್ತರಾಗಿ ತ್ಯಾಗ, ಸಂಯಮ, ತಪಶ್ಚರಣಗಳನ್ನೂ ಆಚರಿಸಲಿಕ್ಕೆ ತತ್ಪರರಾಗುವರೋ ಇಂಥ ನ್ಯಾಯ್ಯ ಮಾರ್ಗಿಗಳೂ ಧರ್ಮಾಚರಣೆಯನ್ನು ಸ್ವೀಕರಿಸಿದವರೂ ಆದಂಥ ಪುರುಷರು ಒಬ್ಬಿಬ್ಬರೇ ಇದ್ದರೂ ಸಹ ಜಗತ್ತನ್ನು ಬೆಳಗುತ್ತಾರೆ ಇಂಥ ಪುರುಷರೇ ಧನ್ಯರೆಂದು ತಿಳಿಯಬೇಕು ಧರ್ಮವಿಲ್ಲದಂಥವರೂ ವಿಷಯ-ಕಷಾಯದಲ್ಲಿ ಮಗ್ನರಾದಂಥವರೂ ಅನೇಕ ಜನರಿದ್ದೂ ಏನುಪಯೋಗವು? ಒಂದೇ ಇದ್ದರೂ ಕಲ್ಪವೃಕ್ಷವು ಎಲ್ಲರ ದುಃಖಗಳನ್ನು ಇಲ್ಲದಂತೆ ಮಾಡಿ, ಇಷ್ಟವಾದ ಫಲವನ್ನು ಕೊಡುತ್ತದೆ. ವಿಷದ ಅನೇಕ ವೃಕ್ಷಗಳು ಕೇವಲ ದುಃಖಕ್ಕೆ ಕಾರಣವಾಗುತ್ತವೆ ಜಗತ್ತಿನೊಳಗಿನ ಎಲ್ಲ ಕೇಡುಗಳೂ ಕುಸಂಗತಿಯಿಂದಲೇ ಉತ್ಪನ್ನವಾಗಿರುತ್ತವೆ. ಕೆಟ್ಟ ಸಂಗತಿಯು ಇರದಿದ್ದರೆ ಜೂಜು, ಕಳವು, ಪರಸ್ತ್ರೀ ಲಂಪಟ, ವೇಶ್ಯಾಸಕ್ತ, ಅಭಕ್ಷ್ಯ ಭಕ್ಷಕ, ಸೆರೆಗುಡುಕ ಮೊದಲಾದ ಜನರ ಬುದ್ಧಿಯಲ್ಲಿ ವಿಕಾರವು ಉತ್ಪನ್ನವಾಗದೆ ಇರುತ್ತಿತ್ತು ಇಹ-ಪರಗಳೆನಿಸುವ ಎರಡೂ ಲೋಕಗಳಲ್ಲಿ ತಮ್ಮ ಕಲ್ಯಾಣವಾಗಬೇಕೆಂದು ಇಚ್ಛಿಸುವವರು ದುರ್ಜನರ ಸಂಗತಿಯನ್ನು ಆರಂಭದಲ್ಲಿಯೇ ಮಾಡಬಾರದು. ಉತ್ತಮ ಕುಲದಲ್ಲಿ ಹುಟ್ಟಿ, ಉತ್ತಮ ಧರ್ಮವು ಪ್ರಾಪ್ತವಾಗಿಯು ಕೂಡ ಕುದೇವ, ಕುಗುರು, ಕುಧರ್ಮ, ಪಾಖಂಡೀ ಜನರ ಉಪಾಸನೆಯನ್ನು ಮಾಡುವವರು ದುರ್ಗತಿಗೆ ಹೋಗುವರು. ಇವರಂತೆಯೇ ಗಾಂಜೀ ಸೇದುವವರು, ತಂಬಾಕು ತಿನ್ನುವವರು, ಅಫು ತಿನ್ನುವವರು, ತಂಬಾಕು ಸೇದುವವರು, ರಾತ್ರಿಯಲ್ಲಿ ಊಟ ಮಾಡುವವರು, ವೇಶ್ಯೆಯ ಎಂಜಲನ್ನು ತಿನ್ನುವವರು, ಜೂಜಾಡುವವರು, ಕಳವು ಮಾಡುವವರು, ಚಾಡಿಯನ್ನು ಹೇಳುವವರು, ಪರಧನ-ಪರಸ್ತ್ರೀಯರನ್ನು ಇಚ್ಛಿಸುವವರು, ಜಿಹ್ವೇಂದ್ರಿಯದ ಲೋಲುಪಿಗಳು, ನಿರ್ದಯ ಪರಿಣಾಮವುಳ್ಳವರು, ಸುಳ್ಳು ಮಾತನಾಡುವವರಲ್ಲಿ

ತರಬೇತಿಯಾದವರು, ಇನ್ನೊಬ್ಬರಿಗೆ ತೊಂದರೆಯನ್ನು ಕೊಟ್ಟು ಸಂತೋಷವನ್ನು ಹೊಂದುವವರು, ಇವರೆಲ್ಲರೂ ದುರ್ಗತಿಗೆ ಹೋಗುವರು. ಅದಕ್ಕಾಗಿ ಕೆಟ್ಟಜನರ ಸಂಗತಿಯನ್ನು ಬಿಟ್ಟು ಸಜ್ಜನರ ಸಂಗತಿಯನ್ನು ಹಿಡಿಯಬೇಕು. ಇಂಥ ಯೋಗವು ಪುಣ್ಯವಾನ್ ಪುರುಷರಿಗೇನೇ ಈ ವಿಷಮ ಕಾಲದಲ್ಲಿ ಒದಗಿಬರುತ್ತವೆ

**ಸ್ವಪ್ರಶಂಸೆಯನ್ನು ಮಾಡಿಕೊಳ್ಳಕೂಡದು.** ಈ ಮೊದಲು ವಿವರಿಸಿದ ದುಷ್ಕೃತ್ಯಗಳನ್ನೆಲ್ಲ ತ್ಯಜಿಸಿ, ಈ ಜನ್ಮದಲ್ಲಿ ಯಾರು ಜೈನಧರ್ಮವನ್ನು ಸ್ವೀಕರಿಸುವರೋ ಅವರು ತಮ್ಮ ಪ್ರಶಂಸೆಯನ್ನು ತಾವು ಮಾಡಿಕೊಳ್ಳಬಾರದು ಇನ್ನೊಬ್ಬರ ನಿಂದೆಯನ್ನೂ ಮಾಡಕೂಡದು ಯಾರು ತಮ್ಮ ಮುಖದಿಂದ ತಮ್ಮ ಸ್ತುತಿಯನ್ನು ಮಾಡಿಕೊಳ್ಳುವರೋ ಅವರ ಕೀರ್ತಿಯು ಇಲ್ಲದಂತಾಗುತ್ತದೆ. ಅಭಿಮಾನ ಇಲ್ಲವೆ ಅತಿಶಯ ಗರ್ವವು ಯಾರಿಗೆ ಉಂಟಾಗಿರುವುದೋ ಅವರನ್ನುಳಿದು ಯಾರೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವಂಥವನು ಜಗತ್ತಿನಲ್ಲಿ ಯಃಕಶ್ಚಿತ್ ಮನುಷ್ಯನೆನಿಸುತ್ತಾನೆ. ಜನರು ಅವನಿಗೆ ಅಗೌರವವನ್ನು ತೋರಿಸುತ್ತಾರೆ. ನಮ್ಮಲ್ಲಿ ಸದ್ಯಕ್ಕೆ ಇರುವ ಗುಣಗಳನ್ನು ಹೇಳಿಕೊಂಡೆವು, ಕೆಲವು ದಿನಗಳ ಮೇಲೆ ಆ ಗುಣಗಳು ನಮ್ಮಲ್ಲಿ ಇಲ್ಲದಂತಾದರೆ ಆಗ ಅದು ದೋಷ ಮಾತ್ರ ಎನಿಸುತ್ತದೆ. ಯಾವುದರಲ್ಲಿ ತೋರಿಸುವಂಥ ಬೇರೆ ಇನ್ನಾವ ದೋಷವು ಇರದೆಯೂ ಕೇವಲ ಆತ್ಮ ಪ್ರಶಂಸೆ ಇಷ್ಟೇ ದೋಷವಾಗಿದ್ದರೂ ಕೂಡ ಅದು ಎಲ್ಲಕ್ಕಿಂತ ದೊಡ್ಡ ದೋಷವೆಂದು ತಿಳಿಯಬೇಕು ತನ್ನ ಮುಖದಿಂದ ತನ್ನನ್ನು ಹೊಗಳಿಕೊಳ್ಳದೆ ಇರುವುದು ಶ್ರೇಷ್ಠತಮ ಗುಣವಾಗಿದೆ ಇಂಥ ಪುರುಷನಲ್ಲಿರುವ ಗುಣಗಳೂ ಕೂಡ ನಾಶಹೊಂದುವದಿಲ್ಲ ತಮ್ಮ ತೇಜದ ಪ್ರಶಂಸೆಯನ್ನು ಮಾಡಿಕೊಳ್ಳದ ಸೂರ್ಯನು ಲೋಕದಲ್ಲಿ ಪ್ರಸಿದ್ಧನಾಗಿಯೇ ಇರುವನು ನಮ್ಮಲ್ಲಿ ಗುಣಗಳಿಲ್ಲದೆಯೂ ನಮ್ಮ ಪ್ರಶಂಸೆಯನ್ನೂ ಮಾಡುವ ಪುರುಷನಿಗೆ ಗುಣವಂತನೆಂದು ಯಾರೂ ಎನ್ನುವದಿಲ್ಲ ಹಾವಭಾವ, ವಿಲಾಸ, ವಿಭ್ರಮ, ಶೃಂಗಾರ, ಅಂಜನ, ವಸ್ತ್ರ, ಮೊದಲಾದವುಗಳನ್ನೂ ಧರಿಸಿ, ಸ್ತ್ರೀಯರಂತೆ ಆಚರಣೆಯನ್ನು ಮಾಡುವ ನಪುಂಸಕ ಪುರುಷನು ಸ್ತ್ರೀಯಾಗುವದಿಲ್ಲ, ನಪುಂಸಕನೇ ಎನಿಸುತ್ತಾನೆ ನಮ್ಮಲ್ಲಿ ಗುಣಗಳಿದ್ದು, ಅವುಗಳ ಸ್ತುತಿಯನ್ನೂ ಯಾರಾದರೂ ಮಾಡಿದಲ್ಲಿ ಸಹ ಉತ್ತಮ ಪುರುಷನು ಲಜ್ಜಿತನಾಗುವನು ಸತ್‌ಪುರುಷರು ತಮ್ಮ ಕೀರ್ತಿಯನ್ನು ಪ್ರತ್ಯಕ್ಷ ಕೇಳಿ ಲಜ್ಜಿತರಾಗುತ್ತಾರೆ ಅಲ್ಲದೆ ಆತ್ಮನಿಂದೆಯನ್ನೂ ಮಾಡಿಕೊಳ್ಳುತ್ತ ಹೀಗೆ ನುಡಿಯುವರು–"ಅಯ್ಯಯ್ಯೋ! ನಾವು ಸಂಸಾರಿ ಜನರು ಅನೇಕ ದೋಷಗಳಿಂದ ಕೂಡಿರುತ್ತೇವೆ. ಜನರು ನಮ್ಮನ್ನೂ ಸ್ತುತಿಸುವರು ಇದೊಂದು ದೊಡ್ಡ ಭಾರವನ್ನೇ ನಮ್ಮ ಮೇಲೆ ಹೊರಿಸಿದಂತಿದೆ ಜಗತ್ತಿನಲ್ಲಿ ತಮ್ಮ ಆತ್ಮನ ವಿಶುದ್ಧಿಯನ್ನು ಮಾಡಿಕೊಂಡವರು ಇಲ್ಲವೆ ಮಾಡಿಕೊಳ್ಳುವ ಇಚ್ಛೆಯುಳ್ಳವರು ಮಾತ್ರ ಪ್ರಶಂಸೆಗೆ ಯೋಗ್ಯರಾದವರು. ಅವರು ಕಾಮ ಕ್ರೋಧಗಳ ಮೇಲೆ ವಿಜಯವನ್ನು ಸಂಪಾದಿಸಿದವರು ನಾವು ಸಂಸಾರಿಗಳು. ರಾಗದ್ವೇಷಗಳಿಂದ ಮಲಿನಗೊಂಡವರು, ವಿಷಯ ಸುಖಕ್ಕಾಗಿ ಹಾತೊರೆದವರು, ಪರಿಗ್ರಹಾಸಕ್ತರು, ಅತಿನಿಂದ್ಯರೂ ಆಗಿದ್ದೇವೆ ನಮ್ಮ ಎಲ್ಲ ವೇಳೆಯು ಪ್ರಮಾದಕ್ಕೆ ಆಧೀನವಾಗಿ ಧರ್ಮಸಂಪಾದನೆಯನ್ನು ಮಾಡದೆ ವ್ಯರ್ಥ ಹೋಗುತ್ತಿರುತ್ತದೆ ನಾವು ಮಹಾ ಮೂರ್ಖರಿದ್ದು ನಿಂದ್ಯರಾಗಿದ್ದೇವೆ ಮನುಷ್ಯ ಜನ್ಮವು ದುರ್ಲಭ, ಅದರಲ್ಲೂ ಜೈನ ಧರ್ಮವು ಲಭಿಸುವುದು ಅತ್ಯಂತ ದುರ್ಲಭವಾಗಿದೆ ಇಂಥ ಸ್ಥಿತಿಯಲ್ಲಿಯೂ ಸಹ ತಮಗೆ ದೊರೆತ ಧರ್ಮವನ್ನು ಬಿಟ್ಟು, ವಿಷಯ ಸೇವನೆಯನ್ನು ಸ್ವೀಕರಿಸುವರೋ ಅವರು ಮನೆಯಲ್ಲಿ ಹುಟ್ಟಿದ ಕಲ್ಪವೃಕ್ಷವನ್ನು ಕಡಿದು, ವಿಷವೃಕ್ಷವನ್ನು ಹಚ್ಚಿದಂತೆ ಆಗುತ್ತದೆ ಚಿಂತಾಮಣಿ ರತ್ನವು ಪ್ರಾಪ್ತವಾಗಿದ್ದರೂ ಅದನ್ನು ಕಾಗೆಯನ್ನು ಹಾರಿಸುವದಕ್ಕಾಗಿ ಬೀಸಿ ಒಗೆದಂತೆ ಆಗುವದು ಇಲ್ಲವೆ ಆ ರತ್ನವನ್ನು ಕಾಚಿನ ಬೆಲೆಗೆ ಮಾರಿದಂತಿದೆ. ಮನುಷ್ಯ ಜನ್ಮದೊಳಗಿನ ಪ್ರತಿಯೊಂದು ಕ್ಷಣವೂ ಕೋಟ್ಯಾವಧಿ ರೂಪಾಯಿಗಳನ್ನು ಕೊಟ್ಟರೂ ದೊರೆಯುವದಿಲ್ಲ ಅಂಥದು ವ್ಯರ್ಥ ಹೋಗುತ್ತಿದೆ ಜನರ ವೃತ್ತಿಯನ್ನೂ ಅವರ ರಾಗ–ದ್ವೇಷ ಪ್ರವೃತ್ತಿಯನ್ನೂ ನೋಡಿ ನಾವು ಕಷಾಯಕ್ಕೆ ಒಳಗಾಗಿ ದುರ್ಧ್ಯಾನದಲ್ಲಿ ಮನುಷ್ಯ ಜನ್ಮವನ್ನೂ ವ್ಯರ್ಥಕಳೆಯುತ್ತಲಿದ್ದೇವೆ ಅಂದಮೇಲೆ ನಮ್ಮಂಥ ನಿಂದ್ಯ ಮಾನವನು ಇನ್ನಾವನು ಇದ್ದಾನು?" ಈ ಪ್ರಕಾರ ತಮ್ಮ ನಿಂದೆಯನ್ನು ಮಾಡಿಕೊಳ್ಳುತ್ತಿರುವ ಉತ್ತಮ ಪುರುಷನಿಗೆ ಆತ್ಮ ಪ್ರಶಂಸೆಯು ಹೇಗೆ ಸೇರಿತು? ಅವನು ಯಾವಾಗಲೂ ತಾನು ನೀಚನೆಂದು ತಿಳಿಯುತ್ತಾನೆ. ಯಾರು ಸ್ವಮುಖದಿಂದ ತಮ್ಮ ಸ್ತುತಿಯನ್ನು ಮಾಡಿಕೊಳ್ಳುವರೋ ಅವರಿಗೆ ನೀಚ ಕರ್ಮದ ಬಂಧವು ಆಗುತ್ತದೆ. ಈ ಜನ್ಮದಲ್ಲಿ ಅವರಿಗೆ ತೊಂದರೆಯು ಆಗುತ್ತದೆ ಸತ್ಪುರುಷರು ತಮ್ಮ ಗುಣಗಳನ್ನು ತಮ್ಮ ಮುಖದಿಂದ ಉಚ್ಚರಿಸುವದಿಲ್ಲ ನಿರ್ಮಲ ಆಚರಣೆಯಿಂದ ಅವರ ಗುಣಗಳು ತನ್ನಿಂದ ತಾನೇ ಪ್ರಕಟವಾಗುತ್ತವೆ ಚಂದ್ರನ

ಶೀತಲತನ, ಪ್ರಕಾಶ ಮತ್ತು ಅಲ್ಹಾದಕತ್ವ ಇವೇ ಮೊದಲಾದ ಗುಣಗಳನ್ನು ವರ್ಣಿಸದೆ ಇದ್ದರೂ ಕೂಡ ಜನರು ತಿಳಿದುಕೊಳ್ಳುತ್ತಾರೆ

ಎರಡನೆಯುವರ ನಿಂದೆಯನ್ನು ತ್ಯಜಿಸಿರಿ. ಪರ ನಿಂದೆಯನ್ನು ಎಂದೂ ಮಾಡಬೇಡಿರಿ ಇದಕ್ಕೆ ಸಮಾನವಾದ ಪಾಪವು ಜಗತ್ತಿನಲ್ಲಿ ಇನ್ನೊಂದಿರಲಾರದು ಪರನಿಂದೆಯು ದೊಡ್ಡ ವೈರವನ್ನು ಉತ್ಪನ್ನ ಮಾಡಲಿಕ್ಕೆ ಕಾರಣವಾಗುತ್ತದೆ. ಅದರಂತೆ ದುರ್ಧ್ಯಾನವನ್ನು ಹುಟ್ಟಿಸಲಿಕ್ಕೂ ಕಲಹಕ್ಕೂ ಅಂಜಿಕೆಗೂ ದುಃಖಕ್ಕೂ ಪಶ್ಚಾತ್ತಾಪಕ್ಕೂ ವಿಸಂಗತವಾದಕ್ಕೂ ಅಪ್ರೀತಿಗೂ ಕಾರಣವಿದೆ ಇದರಿಂದ ಜಗತ್ತಿನಲ್ಲಿ ನಮ್ಮ ನಿಂದೆಯಾಗುತ್ತದೆ ಪರರ ನಿಂದೆಯನ್ನು ಮಾಡುವಂಥವನು ತನ್ನ ಧರ್ಮ, ಯಶ, ದೊಡ್ಡಸ್ತನ ಇವುಗಳನ್ನು ನಷ್ಟಮಾಡಿಕೊಳ್ಳುತ್ತಾನೆ ಇನ್ನೊಬ್ಬರ ದೋಷಗಳನ್ನು ಪ್ರಕಟಗೊಳಿಸಿ, ತಾವು ನಿರ್ದೋಷಿಗಳೆನಿಸಬೇಕೆಂದು ಇಚ್ಛಿಸುವವರು ಇನ್ನೊಬ್ಬರು ಔಷಧ ತಿಂದು ತಮ್ಮ ರೋಗವು ಗುಣ ಹೊಂದಲೆಂದು ಇಚ್ಛಿಸುವವರಂತೆ ಮೂರ್ಖರೆನಿಸುತ್ತಾರೆ. ಕೋಟ್ಯಾವಧಿ ದೋಷಗಳಲ್ಲಿ ಪರನಿಂದೆಯು ಹಿರಿಯ ದೋಷವಾಗಿದೆ ನೀವು ಜೈನಧರ್ಮವನ್ನು ಸ್ವೀಕರಿಸಿರುವಿರಿ ಅದರಿಂದ ಅನ್ಯರ ದೋಷಗಳನ್ನು ನಿಮ್ಮ ಮುಖದಿಂದ ಎಂದೂ ಉಚ್ಚರಿಸಬೇಡಿರಿ ಸತ್ಪುರುಷರಿಗೆ ಇನ್ನೊಬ್ಬರ ದೋಷಗಳನ್ನು ನೋಡಿ ನಾಚಿಕೆ ಎನಿಸುತ್ತದೆ ಅಂತಲೇ ಅವರು ತಮ್ಮ ಸಾಮರ್ಥ್ಯಕ್ಕೆ ಅನುಸರಿಸಿ ಪರರ ದೋಷಗಳನ್ನು ಮುಚ್ಚಲಿಕ್ಕೆ ಯತ್ನಿಸುತ್ತಾರೆ. ಸತ್ಪುರುಷರು ಸ್ವತಃ ತಮ್ಮ ಮೇಲೆ ಬರುವ ಅಪವಾದಕ್ಕೆ ಹೆದರುತ್ತಿರುತ್ತಾರೆ ಹಾಗೆಯೇ ಅನ್ಯರ ಮೇಲಿನ ಅಪವಾದಕ್ಕೂ ಸಹ ಅವರು ಅಷ್ಟೇ ಹೆದರುತ್ತಾರೆ ಅದರಿಂದ ಅವರು ಯಾರ ಮೇಲೆಯೂ ಅಪವಾದವನ್ನು ಹೊರಿಸರು. ಸಂಸಾರೀ ಜೀವಿಗಳ ಜ್ಞಾನಾವರಣ, ದರ್ಶನಾವರಣ ಕರ್ಮಗಳ ಪ್ರಬಲ ಉದಯದಿಂದ ಅಜ್ಞಾನವು ಬೆಳೆಯುತ್ತ ಹೋಗುತ್ತದೆ ಮೋಹನೀಯ ಕರ್ಮದ ಉದಯದಿಂದ ಅವನು, ರಾಗ, ದ್ವೇಷ, ಕಾಮ, ಕ್ರೋಧ, ಲೋಭ, ಮಾನ, ಮತ್ತು ಕಪಟ ಸ್ವಭಾವವುಳ್ಳವನಾಗುತ್ತಾನೆ ಅವನು ಭಯಭೀತ, ಶೋಕಗ್ರಸ್ತ ಮತ್ತು ಗ್ಲಾನನಾಗಿ ರತಿ ಮತ್ತು ಅರತಿ ಕರ್ಮಗಳ ವಶನಾಗುವುದರಿಂದ ನಾನಾ ಪ್ರಕಾರದ ವಿಕಾರಗಳು ಅವರ ಮನಸ್ಸಿನಲ್ಲಿ ಉದ್ಭವಿಸುತ್ತವೆ. ಸೆರೆಗುಡುಕನು ಹೇಗೆ ಪರವಶನಾಗಿ ತನ್ನನ್ನು ತಾನೇ ಮರೆಯುತ್ತಾನೆಯೋ ಹಾಗೆಯೇ ಇವನ ಸ್ಥಿತಿಯು ಆಗಿರುತ್ತದೆ. ಆಗ ಇವನು ಮಾದಕ ಪದಾರ್ಥಗಳನ್ನು ಸೇವಿಸಿದವರಂತೆಯೇ ಉನ್ಮತ್ತನಾಗಿ ನಿಂದ್ಯ ಚಟುವಟಿಕೆಗಳನ್ನು ನಡೆಸುತ್ತಾನೆ. ಇವನ ಆಚರಣೆಯು ವಾತ-ಪಿತ್ತಾದಿಗಳಿಂದ ಉನ್ಮತ್ತನಾಗಿ ಏನನ್ನಾದರೂ ಬಡಬಡಿಸುವ ವ್ಯಕ್ತಿಯಂತೆ ಇರುತ್ತದೆ ಸಂಸಾರೀ ಜೀವಗಳು ವಿಷಯ-ಕಷಾಯಗಳಿಗೆ ಒಳಗಾಗಿ ನಿಂದ್ಯ ಚಟುವಟಿಕೆಗಳನ್ನೂ ನಡೆಯಿಸುತ್ತವೆ , ಇಂಥವರನ್ನು ನೋಡಿ ನಾವು ಕರುಣೆಯನ್ನೇ ಧಾರಣಮಾಡಲಿಕ್ಕೆಬೇಕು. ಅದನ್ನು ಬಿಟ್ಟು ತಿರುಗಿ ಅವರ ನಿಂದೆಯನ್ನು ಹೇಗೆ ಮಾಡೋಣ? ಅನ್ಯರ ಮೇಲೆ ಅಪವಾದವನ್ನು ಹೊರಿಸಿ ಇಲ್ಲಿಯ ವರೆಗೆ ಅನೇಕ ಸಲ ಹೀನ ಪರ್ಯಾಯಗಳನ್ನು ಹೊಂದಿದ್ದಾಗಿದೆ ಅದರಂತೆ ದುರ್ಗತಿಗೂ ಹೋಗಿ ಹಲವು ಬಗೆಯ ತಿರಸ್ಕಾರಗಳನ್ನು ಅನುಭವಿಸಿಯಾಗಿದೆ. ಈಗಲಾದರೂ ಪರನಿಂದೆಯನ್ನು ದೂರವಿಡೋಣ "ನನಗೆ ಪರನಿಂದೆಯನ್ನು ಮಾಡುವ ಪ್ರಸಂಗ ಬಂದಾಗ ಮೌನವು ಒದಗಲಿ. ನನ್ನ ಎಲ್ಲ ಆಯುಷ್ಯವು ಎಲ್ಲ ಜೀವಗಳ ಕೂಡ ಪ್ರಿಯ, ಹಿತ, ಮಧುರ ಭಾಷಣ ಮಾಡುವುದರಲ್ಲಿಯೇ ಹೋಗಲಿ " ಹೀಗೆ ಸಮ್ಯಗ್ದೃಷ್ಟಿಯುಳ್ಳವನು ಯಾವಾಗಲೂ ಪ್ರಾರ್ಥಿಸುತ್ತಿರುತ್ತಾನೆ ಜೈನಧರ್ಮೀಯರಂತೂ ಗುಣಗ್ರಾಹಿಗಳೇ ಇರಲಿಕ್ಕೆಬೇಕು ಅವರು ಮಿಥ್ಯಾದೃಷ್ಟಿ ಜನರ ಹಾಗೂ ತೀವ್ರ ಕಷಾಯವುಳ್ಳಂಥವರ ಮಿಥ್ಯಾಚರಣೆ-ನೋಡಿ, ವೈರ ಬುದ್ಧಿಯಿಂದ ಅವರ ನಿಂದೆಯನ್ನು ಮಾಡುವದಿಲ್ಲ. ಇಷ್ಟೇ ಅಲ್ಲ, ಅಂಥವರ ಮೇಲೆ ಏನಾದರೂ ಅಪವಾದ ಬಂದರೆ ಒಳ್ಳೆಯದೆಂದೂ ಇಚ್ಛಿಸುವದಿಲ್ಲ ಅನಾದಿ ಮಿಥ್ಯಾತ್ವ ಮತ್ತು ಇತರ ದೋಷಗಳಿಂದ ಅನಂತ ಕಾಲದ ವರೆಗೆ ದುಃಖವಾಗುತ್ತದೆಂದು ತಿಳಿದು ಕರುಣಾ ಬುದ್ಧಿಯಿಂದ ಮಂದ ಕಷಾಯೀ ಜೀವಿಗಳಿಗೆ ಅವನು ಗುಣ-ದೋಷಗಳ ಸ್ವಭಾವವನ್ನೂ ಸ್ವರೂಪವನ್ನೂ ತಿಳಿಸಿ ಹೇಳುತ್ತಾನೆ

ನಿದ್ರೆ, ಆಲಸ್ಯ ಮತ್ತು ಪ್ರಮಾದಗಳನ್ನು ಗೆಲ್ಲು. ನಿದ್ರೆಯು ಸಂಪೂರ್ಣ ಧರ್ಮವನ್ನು ಇಲ್ಲದಂತೆ ಮಾಡುತ್ತದೆ. ಯಾರು ನಿದ್ರೆಯನ್ನು ಗೆದ್ದಿರುವದಿಲ್ಲವೋ ಅವರಿಗೆ ಆರು ಆವಶ್ಯಕಗಳು, ಸ್ವಾಧ್ಯಾಯ, ಧ್ಯಾನ, ಜಪ-ಜಾಪ್ಯ ಮೊದಲಾದ ಉತ್ತಮ ಕಾರ್ಯಗಳು ಮೂಲದಲ್ಲಿಯೇ ಸಂಭವಿಸುವದಿಲ್ಲ. ಮುನೀಶ್ವರನಿಗೆ ತಪ, ನಿದ್ರೆಯನ್ನು ಗೆಲ್ಲುವದಕ್ಕಾಗಿಯೇ ಮಾಡಬೇಕಾಗುತ್ತದೆ ನಿದ್ರೆಯು ದರ್ಶನಾವರಣ ಕರ್ಮದ ಉದಯದಿಂದ ಉತ್ಪನ್ನವಾಗುವಂಥದಿದ್ದು, ಎಲ್ಲವನ್ನೂ ಘಾತಮಾಡುವಂಥದಾಗಿದೆ. ಅದು ಆತ್ಮನನ್ನು ಅಚೇತನಗೊಳಿಸುತ್ತದೆ.

ಯಾರು ಅದನ್ನು ನಷ್ಟಗೊಳಿಸುವದಿಲ್ಲವೋ ಅವರ ಎಲ್ಲ ಹಿತ ರೂಪ ಕಾರ್ಯಗಳು ನಾಶವಾದವೆಂದೇ ತಿಳಿಯಬೇಕು. ಅವನು ಶಾಸ್ತ್ರಪಠಣ ಮಾಡುತ್ತಿರುವಾಗ ಇಲ್ಲವೆ ಜಿನಸೂತ್ರಗಳನ್ನು ಶ್ರವಣ ಮಾಡುವಾಗ ಒಂದು ವೇಳೆ ಅವನಿಗೆ ತೂಕಡಿಕೆ ಬರಹತ್ತಿದರೆ ಅದಕ್ಕೆ ಏನೆಂದು ತಿಳಿಯುವರು? ತಿರುಗಿ ಜಿನಸೂತ್ರಗಳ ಶ್ರವಣ ಪಠಣಗಳ ವಿಷಯದಲ್ಲಿ ಅರುಚಿಯೇ ಉತ್ಪನ್ನವಾದೀತು. ಧ್ಯಾನ, ಸಾಮಾಯಿಕಗಳನ್ನು ಮಾಡುವಾಗ ನಿದ್ರೆಯು ಬಂದರೆ ಆತ್ಮಧ್ಯಾನ, ಜಾಪ್ಯ, ಸಾಮಾಯಿಕ, ದ್ವಾದಶ ಭಾವನಾ ಮೊದಲಾದವುಗಳೆಲ್ಲವೂ ನಷ್ಟವಾದಾವು. ನಿದ್ರೆಯಲ್ಲಿ ಜೀವವು ಏಕೇಂದ್ರಿಯ ಜೀವದಂತಾಗುತ್ತದೆ ಆ ಪುರುಷನೊಳಗಿನ ಎಲ್ಲ ಜ್ಞಾನವು ನಿದ್ರೆಯೊಳಗೆ ಇಲ್ಲದಂತಾಗುತ್ತದೆ. ನಿದ್ರೆಯಲ್ಲಿ ಅಬುದ್ಧಿ ಪೂರ್ವಕ ಅನೇಕ ವಿಕಲ್ಪಗಳು ಮನಸ್ಸಿನಲ್ಲಿ ಉತ್ಪನ್ನವಾಗುತ್ತವೆ ಆತ್ಮನ ಕಲ್ಯಾಣ ಮಾಡುವಂಥ ಭಾವನೆಗಳನ್ನು ಬುದ್ಧಿಪೂರ್ವಕವಾಗಿ ನಿದ್ರೆಯಲ್ಲಿ ಕಾಯ್ದುಕೊಳ್ಳಲಿಕ್ಕೆ ಬರುವದಿಲ್ಲ ಹಗಲು ಮಲಗುವುದರಿಂದ ದರ್ಶನಾವರಣ ಕರ್ಮದ ಆಸ್ರವವು ಆಗುತ್ತದೆ ಮುನೀಶ್ವರರಂತೂ ಒಂದು ಪ್ರಹರ ರಾತ್ರಿಯು ಕಳೆದ ತರುವಾಯ ದುಃಖ, ಪ್ರಮಾದಗಳು ದೂರವಾಗುವದಕ್ಕಾಗಿ ಮಧ್ಯರಾತ್ರಿಯ ಎರಡನೆಯ ಪ್ರಹರದಲ್ಲಿ ಸ್ವಲ್ಪ ನಿದ್ರೆಯನ್ನು ಮಾಡುತ್ತಾರೆ. ಆ ಹೊತ್ತಿಗೂ ಕೂಡ ಸ್ವಲ್ಪ ನಿದ್ರೆಯನ್ನು ಮಾಡಿ ಎಚ್ಚರಾದ ಕೂಡಲೇ ಹನ್ನೆರಡು ಭಾವನೆಗಳನ್ನು ಚಿಂತಿಸುತ್ತಾರೆ. ಪುನಃ ಸ್ವಲ್ಪ ನಿದ್ರೆಯನ್ನು ಮಾಡಿ, ತಿರುಗಿ ಜಾಗೃತರಾಗಿ ಧರ್ಮಧ್ಯಾನದಲ್ಲಿ ತನ್ಮಯರಾಗುತ್ತಾರೆ ಇದೇ ಪ್ರಕಾರ ನಡುವಿನ ಆ ಎರಡು ಪ್ರಹರದಲ್ಲಿಯೂ ನಹ ಅನೇಕ ಸಲ ಜಾಗ್ರತರಾಗಿ ಧರ್ಮಧ್ಯಾನವನ್ನು ಮಾಡುತ್ತಿರುತ್ತಾರೆ ಅಪ್ಪಿ ತಪ್ಪಿ ಒಂದು ಮೂಹೂರ್ತದಷ್ಟು ಕಾಲ ನಿದ್ರೆಯಲ್ಲಿ ಅಚೇತನರಾಗಿದ್ದಾರೆ ಅದೂ ಕೂಡ ಹೆಚ್ಚಿಗೆ ನಿದ್ರೆಯಾಯಿ-ತೆಂದು ತಿಳಿದು ಅದನ್ನೂ ಕಡಿಮೆ ಮಾಡಲು ಒಂದು, ಎರಡು, ಮೂರು, ನಾಲ್ಕು, ಐದು ಮೊದಲಾದ ಉಪವಾಸಗಳನ್ನೂ ರಸಪರಿತ್ಯಾಗ ಮೊದಲಾದ ತೀವ್ರ ತಪಶ್ಚರಣಗಳನ್ನೂ ಮಾಡಿ, ನಿದ್ರೆಯನ್ನು ಇಲ್ಲದಂತೆ ಮಾಡುತ್ತಾರೆ ನಿದ್ರೆ ಮತ್ತು ಕಾಮಗಳನ್ನು ಗೆಲ್ಲುವದಕ್ಕಾಗಿ ಉಪವಾಸ ಮೊದಲಾದ ತಪಗಳನ್ನು ನಿರಂತರವಾಗಿ ಆಚರಿಸುತ್ತಿರುತ್ತಾರೆ ನಿದ್ರೆಯಲ್ಲಿ ಪಚನಕಾಯದ ಎಚ್ಚರಿಕೆಯು ನಷ್ಟವಾಗುತ್ತದೆ ಯಾರಿಗೆ ಉತ್ತಮ ಮನುಷ್ಯ ಜನ್ಮ ಮತ್ತು ಉತ್ತಮ ಧರ್ಮ ಇವುಗಳನ್ನೂ ನಾಶಗೊಳಿಸಿ ಏಕೇಂದ್ರಿಯ ಪ್ರಾಣಿಗಳಂತೆ ತಮ್ಮ ಆಯುಷ್ಯವನ್ನೂ ಪೂರ್ಣಗೊಳಿಸುವದಿದೆಯೋ ಅವರೇ ಅತಿಶಯ ನಿದ್ರೆಯನ್ನು ಮಾಡುತ್ತಾರೆ. ಹಗಲು ನಿದ್ರೆಯನ್ನು ಮಾಡುವವರ ವ್ರತ, ಸಂಯಮ, ಸ್ವಾಧ್ಯಾಯಗಳು ಇಲ್ಲದಂತೆ ಆಗುತ್ತವೆ ಆಲಸ್ಯ ಮತ್ತು ಶ್ರಮಗಳನ್ನು ಇಲ್ಲದ ಹಾಗೆ ಮಾಡುವದಕ್ಕಾಗಿ ರಾತ್ರಿಯಲ್ಲಿ ಸ್ವಲ್ಪ ನಿದ್ರೆಯನ್ನು ಮಾಡುವುದೇ ಯೋಗ್ಯವಾಗಿದೆ ನಿದ್ರೆ, ಆಲಸ್ಯ ಮೊದಲಾದವುಗಳು ಜೀವದ ಅಂತರ್ಗತ ದೊಡ್ಡ ವೈರಿಗಳಾಗಿವೆ. ನಿದ್ರೆಯಲ್ಲಿ ಹೇಯೋಪಾದೇಯ, ಕಾರ್ಯಾಕಾರ್ಯ, ಹಿತಾಹಿತ, ಯೋಗ್ಯಾಯೋಗ್ಯ ಇವುಗಳ ವಿಚಾರವು ನಿಲ್ಲುವುದಿಲ್ಲ. ನಿದ್ರೆಯನ್ನು ಗೆಲ್ಲದ ಹೊರತಾಗಿ ಈ ಲೋಕದಲ್ಲಿ ಎಲ್ಲ ಕಾರ್ಯಗಳೂ ನಾಶವನ್ನು ಹೊಂದುತ್ತವೆ. ಅಂತಲೇ ಯಾರಿಗೆ ವಿದ್ಯೆ, ವಿನಯ, ತಪ, ಸಂಯಮ, ಸ್ವಾಧ್ಯಾಯ, ಧ್ಯಾನ, ಜಾಪ್ಯ ಮೊದಲಾದವುಗಳನ್ನು ಪ್ರಾಪ್ತಮಾಡಿಕೊಳ್ಳುವ ಇಚ್ಛೆ ಇದೆಯೋ ಅವರು ನಿದ್ರೆಯನ್ನು ಗೆಲ್ಲಲಿಕ್ಕೆಬೇಕು

## ಎಂಟು ಪ್ರಕಾರದ ಶುದ್ಧತೆ

ಅಷ್ಟಶುದ್ಧಿ—ಈ ಅಷ್ಟ ಶುದ್ಧಿಗಳು ಪರಮ ವೀತರಾಗಿಗಳಾದ ಮುನೀಶ್ವರರಿಗೇನೇ ಸಾಧಿಸುತ್ತವೆ. ಆದರೂ ಸಾಧು ಪದವನ್ನು ಇಚ್ಛಿಸುವಂಥ ಗೃಹಸ್ಥನಿಗೆ ಇವುಗಳ ಪರಿಚಯವಿರುವ ಅವಶ್ಯಕತೆಯು ಇದೆ ಅದಕ್ಕಾಗಿ ಆ ವಿಷಯದಲ್ಲಿಯೂ ವಿಚಾರಮಾಡುವ ಅವಶ್ಯಕತೆಯು ಇದೆ. ಆ ಶುದ್ಧಿಗಳು ಹೀಗಿವೆ—(೧) ಭಾವಶುದ್ಧಿ, (೨) ಕಾಯಶುದ್ಧಿ, (೩) ವಿನಯಶುದ್ಧಿ, (೪) ಈರ್ಯಾಪಥಶುದ್ಧಿ, (೫) ಭಿಕ್ಷಾಶುದ್ಧಿ, (೬) ಪ್ರತಿಷ್ಠಾಪನಾಶುದ್ಧಿ, (೭) ಶಯನಾಸನಶುದ್ಧಿ, (೮) ವಾಕ್ಯಶುದ್ಧಿ.

೧. ಭಾವಶುದ್ಧಿ—ಮೋಹನೀಯ ಕರ್ಮದ ಕ್ಷಯೋಪಶಮದಿಂದ ಉತ್ಪನ್ನವಾಗುವ ಮೋಕ್ಷ-ಮಾರ್ಗದ ವಿಷಯದಲ್ಲಿಯ ಅಭಿರುಚಿಯೂ ಅದರಿಂದ ಪರಿಣಾಮದಲ್ಲಿ ನಿರ್ಮಲತೆಯೂ ಉಂಟಾಗುತ್ತವೆ ಅವು ಹೀಗಿವೆ—"ಈ ರತ್ನತ್ರಯ ಮಾರ್ಗವೇ ಸತ್ಯವಾಗಿದೆ ಇದನ್ನುಳಿದು ಅನ್ಯ ಮಾರ್ಗಗಳೆಲ್ಲ ಸಂಸಾರದಲ್ಲಿ ಮುಳುಗಿಸುವಂಥ ಕುಮಾರ್ಗಗಳೇ ಆಗಿವೆ ಆತ್ಮನ ಹಿತವು ಮೋಕ್ಷವಾಗಿದೆ. ಆ ಮೋಕ್ಷವು ಕರ್ಮಬಂಧದಿಂದ ರಹಿತವಾಗಿದೆ ಈ ಕರ್ಮ ಬಂಧವು ರತ್ನತ್ರಯದಿಂದಲೇ ಇಲ್ಲದಂತೆ ಆಗುವದಿರುತ್ತದೆ" ಈ ಪ್ರಕಾರ ದೃಢ ಶ್ರದ್ಧೆಯನ್ನು ಇಡಬೇಕು.

ಇನ್ನು ಜ್ಞಾನದಿಂದ ಸಂಸಾರ, ದೇಹಗಳ ಭೋಗದ ವಿಷಯದಲ್ಲಿ ಉತ್ಪನ್ನವಾದಂಥ ವೀತರಾಗತ್ವವೇ ಸಂಪೂರ್ಣ ರಾಗ–ದ್ವೇಷಾದಿ ಮಲಗಳನ್ನು ಇಲ್ಲದಂತೆಮಾಡಿ ಮನವನ್ನು ನಿರ್ಮಲಗೊಳಿಸುತ್ತದೆ ಈ ನಿರ್ಮಲತೆಗೇನೇ ಭಾವಶುದ್ಧಿ ಎನ್ನುವರು ಯಾಕೆಂದರೆ ಮಾನಸಿಕ ಅಂದರೆ ವಿಚಾರದೊಳಗಿನ ವಿಷಯಗಳ ಇಚ್ಛೆ, ರಾಗ–ದ್ವೇಷಾದಿ ಉಪದ್ರವ ಮತ್ತು ಮಿಥ್ಯಾತ್ವ ಇಲ್ಲದಂತೆ ಆಗದ ವಿನಹ ಮುನಿ ಹಾಗೂ ಶ್ರಾವಕರ ಆಚಾರವು ಶುದ್ಧವಾಗುವದಿಲ್ಲ ಒಣಗಿದ ಮೃದು ಮತ್ತು ಸ್ವಚ್ಛ ನೆಲದ ಮೇಲೆ ರಂಗವಲ್ಲಿಯನ್ನು ತೆಗೆದರೆ ಅದು ಸುಂದರವಾಗಿಯೂ ಸ್ಪಷ್ಟವೂ ಕಾಣುತ್ತದೆ. ಅದೇ ಕೆಸರಿನಿಂದ ತುಂಬಿದ ಯಾವುದಾದರೊಂದು ನೆಲದ ಮೇಲೆ ಸುಪ್ರಸಿದ್ಧ ಚಿತ್ರಗಾರನಿಂದ ಬರೆಯಿಸಿದರೂ ಅದು ಚೆನ್ನಾಗಿ ಕಾಣಲಾರದು ಇದೇ ಪ್ರಕಾರ ಮಿಥ್ಯಾತ್ವ ಕಷಾಯಾದಿಗಳಿಂದ ಯಾರ ಅಂತಃಕರಣವು ಲಿಪ್ತವಾಗಿರುವುದೋ ಅವರಿಗೂ ಸಮ್ಯಗ್‌ಜ್ಞಾನ ಮತ್ತು ಚಾರಿತ್ರಗಳು ಉಂಟಾಗುವದಿಲ್ಲ

೨. ಕಾಯಶುದ್ಧಿ—ಸಾಧುಗಳಿಗೆ ಶರೀರ ಶುದ್ಧಿಯು ಹೇಗಾಗುತ್ತದೆ? ಅವರು ನೂಲು, ರೇಶಿಮೆ, ಜೂಟು, ಹುಲ್ಲು, ಉಣ್ಣೆ, ತೊಗಲು ಮೊದಲಾದವುಗಳ ವಸ್ತ್ರ ಪ್ರಾವರಣಗಳನ್ನು ಇಡುವದಿಲ್ಲ ಹಾಗೆಯೇ ಶರೀರಕ್ಕೆ ಭಸ್ಮವನ್ನೂ ಸಹ ಹಚ್ಚಿಕೊಳ್ಳುವದಿಲ್ಲ ಎಲ್ಲ ಪ್ರಕಾರದ ಆಭರಣ, ಅಲಂಕಾರ, ಸ್ನಾನ, ಗಂಧವಿಲೇಪನ ಮೊದಲಾದ ಸಂಸ್ಕಾರಗಳನ್ನೂ ಮಾಡಿಕೊಳ್ಳುವದಿಲ್ಲ. ಮೈಮೇಲೆ ಧೂಳು ಮೊದಲಾದ ಪದಾರ್ಥಗಳು ಬಿದ್ದು, ಬೆವರಿನಿಂದ ಕೂಡಿದ್ದು ಮಲಿನವಾಗಿದ್ದರೂ ಸಹ ಶರೀರವನ್ನು ಸ್ವಚ್ಛಗೊಳಿಸಿಕೊಳ್ಳುವದಿಲ್ಲ. ಮೂಗು, ಬಾಯಿ, ಕಣ್ಣು, ಗಲ್ಲ, ಹುಬ್ಬು, ತಲೆ, ಬಾಹು, ಕೈಯು, ಬೆರಳು ಮೊದಲಾದವುಗಳ ಚಲನವಲನವನ್ನೂ ಸಹ ಅನಾವಶ್ಯಕವಾಗಿ ಮಾಡುತ್ತಿರುವದಿಲ್ಲ. ಅವರು ತಮ್ಮ ನಿತ್ಯಕ್ರಿಯೆಗಳನ್ನು ಅತ್ಯಂತ ಸಾವಧಾನತೆಯಿಂದ ಮಾಡುತ್ತಾರೆ. ಅವರ ಮನಸ್ಸು ಯಾವಾಗಲೂ ಆತ್ಮ ಚಿಂತನೆಯಲ್ಲಿ ಮುಳುಗಿರುತ್ತದೆ ಅದರಿಂದ ಬಾಹ್ಯಪದಾರ್ಥಗಳ ವಿಷಯದಲ್ಲಿ ಯಾವ ವಿಕಲ್ಪವೂ ಉತ್ಪನ್ನವಾಗುವದಿಲ್ಲ ಇಂಥ ಅವಸ್ಥೆಯು ಪ್ರಾಪ್ತವಾಯಿತೆಂದರೇನೇ ನಿಜವಾದ ಆತ್ಮಶುದ್ಧಿಯು ಉಂಟಾಗುತ್ತದೆ. ಅದಕ್ಕಾಗಿ ಅವರಿಗೆ ಬಾಹ್ಯ ಶುದ್ಧಿಯ ಅವಶ್ಯಕತೆಯು ಎನಿಸುವದಿಲ್ಲ. ಇಂಥ ಶುದ್ಧಿಯು ದಿಗಂಬರ ಸಾಧುಗಳಿಗೇನೇ ಸಾಧ್ಯವಾಗುತ್ತದೆ ಅವರು ತಮ್ಮ ಎಲ್ಲ ಕ್ರಿಯೆಗಳನ್ನು ಯತ್ನಾಚಾರ ಪೂರ್ವಕವಾಗಿ ಮಾಡುತ್ತಿರುತ್ತಾರೆ ಶ್ರಾವಕರು ಏಕದೇಶ ಶುದ್ಧಿಯನ್ನು ಮಾಡಬೇಕು ಇವರು ತಾವು ಧರಿಸುವ ವಸ್ತ್ರ, ಅಲಂಕಾರಗಳಿಂದ ಇನ್ನೊಬ್ಬರಿಗೂ ತಮಗೂ ಕಾಮಬುದ್ಧಿಯು ಉತ್ಪನ್ನವಾಗುವಂತೆ ಇರಕೂಡದು, ಅಭಿಮಾನ, ಭಯಗಳೂ ಹುಟ್ಟಬಾರದು, ಇಂಥವುಗಳನ್ನೇ ಧರಿಸಬೇಕು ಆದರೆ ಜನರಲ್ಲಿ ಒಪ್ಪಿರಬೇಕು, ತನ್ನ ಯೋಗ್ಯತೆಗೆ ತಕ್ಕವಾಗಿರಬೇಕು, ತನ್ನ ವಯಸ್ಸಿಗೂ ಶೋಭಿಸಿರಬೇಕು ಇಂಥ ವಸ್ತ್ರಾಭರಣಗಳಿರಬೇಕು ತನ್ನ ಶರೀರ ಹಾಗೂ ಅವಯವಗಳ ಚಲನವಲನೆ, ಮಾತುಗಾರಿಕೆ, ನಡೆಯುವಿಕೆ, ಕೂಡುವಿಕೆ, ಮಲಗುವಿಕೆ, ರಾಗ–ದ್ವೇಷಾದಿ ಅಭಿಮಾನ ಮೊದಲಾದ ಕ್ರಿಯೆಗಳನ್ನು ಮಾಡುವ ವಿಷಯದಲ್ಲಿ ಜಪ್ಪಿಸುತ್ತ ಇರಬೇಕು. ಇದು ಗೃಹಸ್ಥನ ಕಾಯಶುದ್ಧಿಯ ರೀತಿಯೆಂದು ತಿಳಿಯಬೇಕು

೩. ವಿನಯಶುದ್ಧಿ—ಅರಹಂತರೇ ಮೊದಲಾದ ಪರಮ ಗುರುಗಳ ಪೂಜೆಯಲ್ಲಿ ಮಗ್ನನಾಗಿರುವುದು, ಸಮ್ಯಗ್‌ಜ್ಞಾನಾದಿಗಳಲ್ಲಿ ಯಥಾಪ್ರಕಾರ ಭಕ್ತಿಯನ್ನು ಇಡುವುದು, ಯಾವಾಗಲೂ ಗುರುವಿನ ಇಚ್ಛೆಯಂತೆ ನಡೆಯು-ವುದು, ಪ್ರಶ್ನೆ, ಸ್ವಾಧ್ಯಾಯ, ವಾಚನ, ಚರ್ಚೆ, ಸ್ತುತಿಮಾಡುವುದರಲ್ಲಿ ನಿಪುಣನಾಗಿರುವುದು, ದೇಶ ಕಾಲ ಭಾವಗಳನ್ನು ತಿಳಿದು, ಚಾತುರ್ಯದಿಂದ ಆಚಾರ್ಯರಿಗೆ ಅನುಕೂಲವಾಗಿ ತಮ್ಮ ನಡತೆಯನ್ನು ಇಡುವುದು ಇದಕ್ಕೆ ವಿನಯಶುದ್ಧಿ-ಯೆನ್ನುವರು ವಿನಯವೇ ಎಲ್ಲ ಚಾರಿತ್ರ ಸಂಪತ್ತಿನ ಮೂಲವಾಗಿದೆ. ವಿನಯವೇ ಪುರುಷನ ಅಲಂಕಾರವಾಗಿದೆ ವಿನಯವೇ ಸಂಸಾರ ಸಮುದ್ರದೊಳಗಿಂದ ತೇಲಿಸಿ ಒಯ್ಯುವ ನಾವೆಯಾಗಿದೆ. ಅದಕ್ಕಾಗಿ ಗೃಹಸ್ಥರು ಮನ–ವಚನ-ಕಾಯಗಳಿಂದ ಪ್ರತ್ಯಕ್ಷ ಮತ್ತು ಪರೋಕ್ಷ ವಿನಯವನ್ನು ಸ್ವೀಕರಿಸಬೇಕು ಇದರ ವಿಸ್ತಾರವಾದ ವರ್ಣನೆಯನ್ನು ಮುಂದೆ ತಪದ ವಿವರಣೆಯಲ್ಲಿ ಮಾಡಲಾಗುವುದು

೪. ಈರ್ಯಾಪಥಶುದ್ಧಿ—ಅನೇಕ ಪ್ರಕಾರದ ಜೀವಗಳಿರುವ ಸ್ಥಳ, ಜೀವವು ಜನಿಸುವಂಥ ಯೋನಿ, ಜೀವಗಳ ಆಶ್ರಯ ಸ್ಥಾನ ಇವುಗಳನ್ನು ತಿಳಿದು, ಅವುಗಳಿಗೆ ಪೀಡೆಯು ತಗಲದಂತೆ ಸೂರ್ಯ ಪ್ರಕಾಶದಲ್ಲಿ ನಿರೀಕ್ಷಣೆಯನ್ನು ಮಾಡಿ ನಡೆಯಬೇಕು ಮಾರ್ಗದಲ್ಲಿ ಆತುರತೆಯಿಂದಲೂ ಅತ್ಯಂತ ಸಾವಕಾಶವಾಗಿಯೂ ನಡೆಯಕೂಡದು ಅದರಂತೆ ಭ್ರಮ, ವಿಸ್ಮಯ ಆಶ್ಚರ್ಯಗಳಲ್ಲಿ ಮುಳುಗಿ ಸಾಗಕೂಡದು ಹಾಗೆಯೇ

ಆಡುತ್ತಾಡುತ್ತಲೂ ಶರೀರದ ಅವಯುವಗಳನ್ನು ಅಂಕುಡೊಂಕುಗೊಳಿಸುತ್ತಲೂ ನಡೆಯಬಾರದು ವಿವಿಧ ಕಡೆಗೆ ನಡೆಯುತ್ತ ಸಾಗಕೂಡದು ಇವೆಲ್ಲ ಗಮನದ ವಿಷಯದ ದೋಷಗಳಾಗಿವೆ ಇವು ಆಗದಂತೆ ನಾಲ್ಕು ಮೊಳ ಮುಂದಿನ ನೆಲದ ಕಡೆಗೆ ನೋಡುತ್ತ ನಡೆಯಬೇಕು ಅಲ್ಲದೆ ನಾವು ನಡೆಯುವ ಮಾರ್ಗವು ಅನೇಕ ಜನರು, ಬಂಡಿಗಳು, ಕುದುರೆ, ಎತ್ತುಗಳು ನಡೆದು ಹೋದಂಥದಿರಬೇಕು ಮೇಲಾಗಿ ಆ ಮಾರ್ಗದಲ್ಲಿ ಗಾಳಿ ಬೀಸಿರಬೇಕು, ಸೂರ್ಯ ಪ್ರಕಾಶವು ಬಿದ್ದಿರಬೇಕು. ಇಂಥ ಮಾರ್ಗದಿಂದ ಹಗಲು ಮಾತ್ರ ನಡೆದಾಡುವದಕ್ಕೆ ಈರ್ಯಾಸಮಿತಿ ಎಂದು ಹೇಳುವರು. ನೀತಿ ವೈಭವಗಳು ಒತ್ತಟ್ಟಿಗೆ ಇರುತ್ತವೆ ಹಾಗೆಯೇ ಸಮಿತಿ ಮತ್ತು ಸಂಯಮಗಳು ಸಾಧುಗಳ ಹತ್ತರ ಒತ್ತಟ್ಟಿಗೆ ಇದ್ದುದನ್ನು ನಾವು ಕಾಣುತ್ತೇವೆ ಇಂಥ ಸಾಧುತ್ವದ ಮಾರ್ಗವನ್ನು ಏಕದೇಶವಾಗಿ ಸ್ವೀಕಾರ ಮಾಡುವ ಗೃಹಸ್ಥರು ಮಾರ್ಗವನ್ನು ನೋಡುತ್ತ ನಡೆಯುವ ಭಾವನೆಯನ್ನೂ ಇಡಬೇಕು ದಾರಿಯೊಳಗಿಂದ ಸಾಗುವಾಗ ಕ್ರಿಮಿ, ಕೀಟಕ, ಇರುವೆ, ಹಸಿರು, ಹುಲ್ಲು, ಕೆಸರು ಮೊದಲಾದವುಗಳು ಇಲ್ಲದಂಡಲ್ಲಿ ನಡೆಯಬೇಕು ಸಾಮಾನ್ಯವಾಗಿ ಕೆಳಗೆ ನೋಡಿ ನಡೆಯುವವರ ಹೆಜ್ಜೆಗಳು ತಗ್ಗು-ದಿನ್ನೆಗಳಲ್ಲಿ ಬೀಳುವದಿಲ್ಲ. ಅದರಂತೆ ಹಾವು, ಚೇಳುಗಳಂಥ ದುಷ್ಟ ಜೀವಗಳ ಮೇಲೆ ಕಾಲು ಬೀಳುವ ಭಯವೂ ಇಲ್ಲದಂತಾಗುತ್ತದೆ ಆ ಬಾಧೆಯೂ ತಪ್ಪುತ್ತದೆ ಇದರಿಂದ ಈರ್ಯಾಪಥ ಸಮಿತಿಯನ್ನು ಪಾಲಿಸುವುದರಲ್ಲಿ ಎಲ್ಲರ ಹಿತವೇ ಆಗಿ ಜಿನನ ಆಜ್ಞೆಯ ಪಾಲನೆಯೂ ಆಗುತ್ತದೆ.

೫. ಭಿಕ್ಷಾಶುದ್ಧಿ—ಸಾಧುವು ದೇಶ, ಕಾಲ, ನಡಾವಳಿಗಳ ಸ್ಥಿತಿಯನ್ನು ವಿಚಾರಮಾಡಿ ಆಹಾರದ ಸಲುವಾಗಿ ಹೊರಡುತ್ತಾರೆ ಊರಲ್ಲಿ ಎಲ್ಲಿಯಾದರೂ ಬೆಂಕಿಯು ಹತ್ತಿದ್ದರೆ, ಪರರಾಜರ ಉಪದ್ರವ ಉಂಟಾಗಿದ್ದರೆ, ರಾಜಸಂಥ ಪ್ರಸಿದ್ಧ ವ್ಯಕ್ತಿಯು ಮರಣವನ್ನು ಹೊಂದಿದ್ದರೆ, ಧರ್ಮದ ಮೇಲೆ ವಿಘ್ನವು ಉತ್ಪನ್ನವಾಗಿದ್ದರೆ ಮುನಿಗಳು ಭಿಕ್ಷೆಗಾಗಿ ಹೊರಡುವದಿಲ್ಲ ಅದರಂತೆ ಎಲ್ಲಿಯಾದರೂ ಹಿಂಸೆಯು ಆಗುವಂತಿದ್ದರೆಯೂ ಅಥವಾ ಹಿಂಸೆಯು ನಡೆಯುತ್ತಿದೆ ಎಂದು ಕೇಳಿದರೂ ಅವರು ಆಹಾರಕ್ಕೆ ಹೊರಡುವದಿಲ್ಲ ಅವಸರದಿಂದಲೂ ತೀರ ಸಾವಕಾಶವಾಗಿಯೂ ಅವರು ಸಾಗುವದಿಲ್ಲ ನಡೆಯುವಾಗ ಇನ್ನೊಬ್ಬರೊಡನೆ ಮಾತನಾಡುವದಿಲ್ಲ. ನಡೆಯುತ್ತಿರುವಾಗ ಅರಣ್ಯದೊಳಗಿನ ವನಶ್ರೀಯನ್ನಾಗಲಿ, ನಗರದೊಳಗೆ ಕಟ್ಟಡಗಳ ಸೌಂದರ್ಯವನ್ನಾಗಲಿ ನೋಡುತ್ತ ನಡೆಯುವದಿಲ್ಲ ಎಲ್ಲಿ ಕಲಹ, ವಿಸಂವಾದ, ಕೌತುಕ, ನೃತ್ಯಗೀತಾದಿಗಳು ನಡೆಯುವವೋ ಆ ಸ್ಥಳವನ್ನು ಬಿಟ್ಟು ಬೇರೆ ಮಾರ್ಗದಿಂದ ಹೋಗುತ್ತಾರೆ ಎಲ್ಲಿ ದುಷ್ಟರು, ದುಷ್ಟಪಶುಗಳು, ಉನ್ಮತ್ತ ಪುರುಷ ಮತ್ತು ಸ್ತ್ರೀ, ಎಲೆ, ಹಣ್ಣು, ಹೂವು, ಬೀಜ, ನೀರು, ಕೆಸರು ಮೊದಲಾದವುಗಳು ಇದ್ದ ದಾರಿಯನ್ನು ಬಿಟ್ಟು ಬೇರೆ ದಾರಿಯಿಂದ ಸಾಗುತ್ತಾರೆ ಭಿಕ್ಷೆಗೆ ಹೊರಡುವಾಗ ಇಂಥ ದಾತೃವಿನ ಮನೆಗೇ ಹೋಗುವೆನೆಂದು ಎಂದೂ ನಿಶ್ಚಯಿಸುವದಿಲ್ಲ ಅದರಂತೆ ಬೇಗನೆ ಆಹಾರ ಹಾಕುವಂದವರು ಒಳ್ಳೆಯವರು, ಅವರಲ್ಲಿ ಆಹಾರ ದೊರೆತರೆ ಉತ್ತಮ, ಅದರಲ್ಲೂ ಸವಿಯಾದ ಊಟವು ಲಭಿಸಿದರಂತೂ ಇನ್ನೂ ಉತ್ತಮವೆಂದು ಮುನಿಗಳೂ ಎಂದೂ ಅಪೇಕ್ಷಿಸುವದಿಲ್ಲ ಆಹಾರದಲ್ಲಿ ಉಪ್ಪು ಇರಬೇಕು, ಆಹಾರವು ಬಿಸಿಬಿಸಿ-ಯಾಗಿರಬೇಕು, ಆರಿ ರುಚಿಯು ನಷ್ಟವಾದುದು ಇರಕೂಡದು, ಇವೇ ಮೊದಲಾದ ಸಂಕಲ್ಪ ವಿಕಲ್ಪಗಳು ಸಾಧುಗಳ ಮನಸ್ಸಿನಲ್ಲಿ ಇರಕೂಡದು. ಅಂತರಾಯ ಕರ್ಮದ ಕ್ಷಯೋಪಶಮಕ್ಕನುಸರಿಸಿ ಲಾಭಾಲಾಭಗಳು ಆಗುವವವಿರುತ್ತವೆ ಇದನ್ನರಿತು ಅವುಗಳ ವಿಷಯದಲ್ಲಿಯೂ ಮಾನಾಪಮಾನದ ವಿಷಯದಲ್ಲಿಯೂ ಮನೋವೃತ್ತಿಯನ್ನು ಸಮಾನವಾಗಿ ಇಡದೇಕು ಮನಸ್ಸಿನಲ್ಲಿ ಧರ್ಮಧ್ಯಾನವನ್ನು ನೆನೆಯುತ್ತ ನಾಲ್ಕು ಆರಾಧನೆಗಳಿಗೆ ಶರಣುಹೋಗಬೇಕು. ಹಸಿವು, ನೀರಡಿಕೆಗಳ ವೇದನೆಯನ್ನು ಮನಸ್ಸಿನಲ್ಲಿ ನೆನೆಯಕೂಡದು. ಹೀಗೆ ಜೈನ ಸಾಧುಗಳ ಭಿಕ್ಷೆಯ ಪದ್ಧತಿಯು ಇದೆ ಸಾಧುವು ನಿಂದ್ಯ ಹಾಗೂ ಹೀನ ಕುಲವಿದ್ದವರಲ್ಲಿ ಆಹಾರಕ್ಕೆಂದು ಹೋಗುವದಿಲ್ಲ ಉತ್ತಮ ಕುಲವಿದ್ದೂ ಎಲ್ಲಿ ದಾನಶಾಲೆಯು ಇರುವದೋ ಅಲ್ಲಿ ಸಾಧುವು ಆಹಾರಕ್ಕೆಂದು ಪ್ರವೇಶಿಸುವದಿಲ್ಲ ಅದರಂತೆಯೇ ಲಗ್ನ ಸಮಾರಂಭ, ಸತ್ತ ಪುರುಷರ ಸೂತಕ, ಹಾಡುವಿಕೆ, ಬಾರಿಸುವಿಕೆ, ಮೇಳವಾದ್ಯಗಳ ಘೋಷಣೆ, ಬಹುಜನರ ಕೂಡುವಿಕೆ, ತಲೆಬಾಗಿಲು ಮುಚ್ಚಿರುವಿಕೆ, ಹೋಗುವವರಿಗೆ ತೊಂದರೆ ಇರುವಿಕೆ, ಬಾಗಿಲಲ್ಲಿ ಆನೆ, ಕುದುರೆಗಳು ನಿಲ್ಲುವಿಕೆ ಇಲ್ಲವೆ ಕಟ್ಟಿರುವಿಕೆ, ಅನೇಕ ಜನರ ಹೋಗು-ಬರುವಿಕೆ, ಕಿರಿಯಗಲಾದ ಮಾರ್ಗವಿದ್ದು ಅನೇಕ ಜನರು ಮೈಗೆ ಮೈ ತಿಕ್ಕಿ ಹೋಗಿಬರುವಿಕೆ, ಎರಡು ಮೊಳಕ್ಕಿಂತ ಹೆಚ್ಚು ಇಳಿದು ಹೋಗುವಂತೆ ಇರುವುದು, ಎತ್ತರವಾದ ಭೂಮಿಯ ಮರ್ಯಾದೆಯು ಉಲ್ಲಂಗನವಾಗುವಿಕೆ—ಈ ಪ್ರಕಾರದ ಮನೆಗಳಲ್ಲಿ ಆಹಾರಕ್ಕಾಗಿ ಸಾಧುಗಳು ಪ್ರವೇಶ ಮಾಡುವದಿಲ್ಲ.

ಚಂದ್ರನ ಪ್ರಕಾಶವು ಯಾವ ಪ್ರಕಾರ ಬಡವ–ಬಲ್ಲಿದರೆನ್ನದೆ ಎಲ್ಲರ ಮನೆಯನ್ನೂ ಸಮಾನವಾಗಿಯೇ ಪ್ರವೇಶಿಸುವುದೋ ಹಾಗೆಯೇ ಈ ಸಾಧುಗಳೂ ಸಹ ಸಮಬಾವನೆಯಿಂದ ಎಲ್ಲರ ಮನೆಗೆ ಆಹಾರಕ್ಕೆ ಹೋಗುವರು  ದೀನ, ಅನಾಥ, ನಿಂದ್ಯಕರ್ಮಗಳನ್ನು ಮಾಡಿ ಹೊಟ್ಟೆಯನ್ನು ತುಂಬಿಕೊಳ್ಳುವವರ ಮನೆಗಳನ್ನು ಬಿಟ್ಟು ಎಲ್ಲರಲ್ಲಿಯೂ ಭೋಜನಕ್ಕೆ ಹೋಗುವರು  ಆದರೆ ಆ ಮನೆಗಳಲ್ಲಿ ಅನ್ಯ ಭಿಕ್ಷುಕರಿಗೂ ಉಳಿದ ಬರು–ಹೋಗುವವರಿಗೂ ಎಲ್ಲಿಯ ವರೆಗೆ ಹೋಗಲಿಕ್ಕೆ ಆಸ್ಪದವಿರುವುದೋ ಅಲ್ಲಿಯ ತನಕ ಹೋಗುವರು  ಮುಖದಿಂದ ಧರ್ಮಲಾಭವಾಗಲಿ ಮೊದಲಾದ ಯಾವ ಶಬ್ದವನ್ನೂ ಉಚ್ಚರಿಸದೆ, ಹೂಂಕಾರ, ಕಣ್ಣುಸನ್ನೆ ಮೊದಲಾದವುಗಳನ್ನೇನೂ ವ್ಯಕ್ತಪಡಿಸದೆ, ಹೊಟ್ಟೆಯ ಹಸಿವು, ಕೈಯಿಂದ ಯಾಚನೆ, ದಾತೃವಿನ ನಿರೀಕ್ಷಣೆ, ಆಹಾರ, ಮನೆಯವರ ಚಲನವಲನಗಳನ್ನು ಗಮನಿಸುವುದು, ಬಹಳ ಹೊತ್ತು ನಿಲ್ಲುವಿಕೆ ಇವಾವದನ್ನೂ ಮಾಡದೆ ಅರ್ಧ ಅಂಗಳದ ವರೆಗೆ ಮಿಂಚಿನಂತೆ ಹೋಗಿ ಬಂದು ಬಿಡುತ್ತಾರೆ ಇಷ್ಟರಲ್ಲಿಯೇ 'ತಿಷ್ಠ, ತಿಷ್ಠ, ತಿಷ್ಠ' ಎಂದು ದಾತೃವು ಮೂರು ಸಲ ಆದರದಿಂದ ಉಚ್ಚರಿಸಿ, ಪ್ರತಿಗ್ರಹ ಮಾಡಿದರೆ ಮಾತ್ರ ಸಾಧುಗಳು ನಿಲ್ಲುವರು  ಒಮ್ಮೆ ಆ ಮನೆಯಿಂದ ಹೊರಬಿದ್ದರೆ ತಿರುಗಿ ಆ ಮನೆಯನ್ನು ಪ್ರವೇಶಿಸುವದಿಲ್ಲ ಇನ್ನೊಂದು ಮನೆಗೇ ಹೋಗುವರು  ಅಲ್ಲಿ ಅಂತರಾಯವಾದರೆ ಮತ್ತೊಂದು ಮನೆಗೆ ಹೋಗದೆ ನೆಟ್ಟಗೆ ತಿರುಗಿ ವನಕ್ಕೇ ಹೋಗುವರು  ಆಚಾರಾಂಗ ಸೂತ್ರದಲ್ಲಿ ವರ್ಣಿಸಿದ ಪ್ರಕಾರ ನಲವತ್ತಾರು ದೋಷ, ಹದಿನಾಲ್ಕು ಮಲ, ಮೂವತ್ತೆರಡು ಅಂತರಾಯಗಳನ್ನು ದೂರವಿರಿಸಿ ಆಹಾರವು ಲಭಿಸುವಂತಿದ್ದರೆ ಮಾತ್ರ ಕೇವಲ ಪ್ರಾಣ ರಕ್ಷಣ-ವಾಗುವಷ್ಟು ಅನ್ನವನ್ನು ಸ್ವೀಕರಿಸುತ್ತಾರೆ  ಸರಸ–ನೀರಸ, ಲಾಬಾಲಾಭಗಳ ವಿಷಯದಲ್ಲಿ ಸಮಾನ ಭಾವವನ್ನೂ ಇಡುವರು  ಸಾಧು ಪುರುಷರ ಸೇವೆಯಿಂದ ಹೇಗೆ ಅನೇಕ ಗುಣಗಳು ಪ್ರಾಪ್ತವಾಗುತ್ತಿವೆಯೋ ಹಾಗೆಯೇ ಭಿಕ್ಷೆಯಿಂದಲೂ ಚಾರಿತ್ರಶುದ್ಧಿಯು ಪ್ರಾಪ್ತವಾಗುತ್ತದೆ  ಈ ಭಿಕ್ಷೆಯನ್ನು ಮುನೀಶ್ವರರು ಐದು ಪ್ರಕಾರದಿಂದ ತಕ್ಕೊಳ್ಳುತ್ತಿರುತ್ತಾರೆ  ಅವು (೧) ಗೋಚರೀವೃತ್ತಿ, (೨) ಅಕ್ಷಮ್ರಕ್ಷಣವೃತ್ತಿ, (೩) ಉದರಾಗ್ನಿ ಪ್ರಶಮನವೃತ್ತಿ, (೪) ಭ್ರಾಮರೀವೃತ್ತಿ, (೫) ಗರ್ತಪೂರ್ಣವೃತ್ತಿಗಳೆಂದು ಇವೆ

೧. ಗೋಚರೀವೃತ್ತಿ—ವಸ್ತ್ರಾಲಂಕಾರಗಳಿಂದ ಭೂಷಿತಳಾದ ಸುಂದರ ಸ್ತ್ರೀಯು ಹಸಿರು ಹುಲ್ಲನ್ನು ತಂದು ಆಕಳ ಮುಂದೆ ಹಾಕಿದಲ್ಲಿ ಅದು ಅವಳ ಕಡೆಗೆ ನೋಡದೆ ತನ್ನ ಮುಂದಿನ ಹುಲ್ಲನ್ನೇ ತಿನ್ನುತ್ತದೆ  ಅದರಂತೆಯೇ ಸಾಧುಗಳೂ ಸಹ ದಾತೃವಿನ ವಸ್ತ್ರ, ಭೂಷಣ, ಸೌಂದರ್ಯಗಳನ್ನು ನೋಡದೆ ನವಧಾಭಕ್ತಿಯಿಂದ ಪ್ರತಿಗ್ರಹಪೂರ್ವಕ ತಮ್ಮ ಕರಪುಟದಲ್ಲಿ ಇಟ್ಟ ತುತ್ತನ್ನು ಭಕ್ಷಣ ಮಾಡುತ್ತಾರೆ  ಅವರು ಅವರ ವಸ್ತ್ರಾಭರಣಗಳ ಕಡೆಗೆ ನೋಡುವದಿಲ್ಲ. ಸಾಧುಗಳ ಈ ಪ್ರಕಾದ ವೃತ್ತಿಗೆ ಗೋಚರೀ ವೃತ್ತಿಯೆಂದು ಹೆಸರಿದೆ  ಆಕಳು ವನದಲ್ಲಿ ಹಲವು ಕಡೆಗೆ ಸಂಚರಿಸಿ ಹುಲ್ಲನ್ನು ಮೇಯುತ್ತಿರುತ್ತದೆ  ಆದರೆ ಅದು ವನದ ಶೋಭೆಯನ್ನು ನೋಡುವುದರಲ್ಲಿ ಮಗ್ನವಾಗಿರುವದಿಲ್ಲ ಹಾಗೆಯೇ ಜೈನಸಾಧುವೂ ಕೂಡ ಗೃಹಸ್ಥರ ಮನೆಯಲ್ಲಿ ಹೋದರೆ ಅವರ ಮನೆ, ಹಾಸಿಗೆ, ಮಲಗುವ ಕೋಣೆ, ಆಸನ ಮೊದಲಾದವುಗಳ ಕಡೆಗೆ ಗಮನ ಕೊಡುವದಿಲ್ಲ  ಅಲ್ಲದೆ ಅವರಲ್ಲಿಯ ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳೆ, ಮಣ್ಣಿನ ಪಾತ್ರೆಗಳ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸುವದಿಲ್ಲ  ತನ್ನ ಕೈಗೆ ಬಂದ ತುತ್ತನ್ನು ಸ್ವೀಕರಿಸುವ ಕಡೆಗೇನೇ ಅವರ ಸಂಪೂರ್ಣ ದೃಷ್ಟಿಯು ಇರುತ್ತದೆ  ಆ ಮನೆಯೊಳಗಿನ ಪರಿವಾರ ಜನರ ಮನೋಹರ ವೇಷ, ಅಥವಾ ಅವರ ರೂಪಗಳನ್ನು ಮುನಿಗಳು ನೋಡುವದಿಲ್ಲ  ಸರಸ ನೀರಸ ಆಹಾರವಿದೆಯೆಂದು ವಿವೇಚಿಸುತ್ತಲೂ ಇರುವದಿಲ್ಲ ಆಕಳ ಹಾಗೆ ಆಹಾರವನ್ನು ಸ್ವೀಕರಿಸುತ್ತಾರೆ.  ಅಂತಲೇ ಇದಕ್ಕೆ ಗೋಚರೀವೃತ್ತಿ ಎಂದು ಹೆಸರಿದೆ  ಇದಕ್ಕೇನೇ ಗವೇಷಣಾವೃತ್ತಿ ಎಂದೂ ಎನ್ನಲಾಗುವದು

೨. ಅಕ್ಷಮ್ರಕ್ಷಣವೃತ್ತಿ—ಒಬ್ಬ ರತ್ನದ ವ್ಯಾಪಾರಿಯು ರತ್ನದಿಂದ ತುಂಬಿದ ಬಂಡಿಯನ್ನು ಎಚ್ಚರದಿಂದ ಕಾಯ್ದುಕೊಂಡು, ತಾನು ಹೋಗಬೇಕಾದ ದೇಶಕ್ಕೆ ನೇರವಾಗಿ ಹೋಗಿ ಸೇರುತ್ತಾನೆ  ಹಾಗೆಯೇ ಸಾಧುವೂ ಸಹ ಗುಣಗಳೆಂಬ ರತ್ನದಿಂದ ತುಂಬಿದ ಈ ದೇಹರೂಪೀ ಬಂಡಿಯನ್ನು ನಿರ್ದೋಷವಾದಂಥ ಭಿಕ್ಷೆಯಿಂದ ದೊರಕಿದ ಅನ್ನವನ್ನು ಕೊಟ್ಟು, ತಾನು ಬಯಸಿದ ಸಮಾಧಿರೂಪ ಪಟ್ಟಣಕ್ಕೆ ಒಯ್ಯುವನು  ಅಂತಲೇ ಈ ಪ್ರಕಾರದ ವೃತ್ತಿಗೆ ಅಕ್ಷಮ್ರಕ್ಷಣವೃತ್ತಿ ಎಂದು ಹೇಳುವರು

೩. ಉದರಾಗ್ನಿ ಪ್ರಶಮನ ವೃತ್ತಿ—ಅನೇಕ ಪ್ರಕಾರದ ಬೆಲೆಯುಳ್ಳ ವಸ್ತ್ರಗಳಿಂದ ತುಂಬಿದ ಮನೆಗೆ ಬೆಂಕಿಯು ಹತ್ತಿದರೆ ಅದನ್ನು ಶುದ್ಧ ಇಲ್ಲವೆ ಅಶುದ್ಧನೀರುಗಳಿಂದ ಗೃಹಸ್ಥನು ಆರಿಸಿಬಿಡುತ್ತಾನೆ  ತನ್ನ ಸಂಗ್ರಹವನ್ನು

ರಕ್ಷಿಸಿಕೊಳ್ಳುತ್ತಾನೆ. ಹಾಗೆಯೇ ಸಾಧುವೂ ಕೂಡ ಹೊಟ್ಟೆಯೆಂಬ ಭಾಂಡಾರದಲ್ಲಿ ಉತ್ಪನ್ನವಾಗಿರುವ ಹಸಿವು-ನೀರಡಿಕೆಗಳೆಂಬ ಅಗ್ನಿಯನ್ನು ಸರಸ ನೀರಸ ಭೋಜನದಿಂದ ಶಾಂತಗೊಳಿಸುತ್ತಾನೆ. ಈ ಪ್ರಕಾರದ ವೃತ್ತಿಗೆ ಉದರಾಗ್ನಿ ಪ್ರಶಮ ವೃತ್ತಿ ಎನ್ನುವರು

೪. ಭ್ರಮರಾಹಾರ ವೃತ್ತಿ—ಭ್ರಮರಗಳು ಹೂವಿಗೆ ಸ್ವಲ್ಪವೂ ಬಾಧೆಯು ತಗಲದಂತೆ ಅದರೊಳಗಿನ ಗಂಧವನ್ನು ಸ್ವೀಕರಿಸುತ್ತವೆ ಹಾಗೆಯೇ ಸಾಧುವೂ ಕೂಡ ದಾತೃವಿಗೆ ಸ್ವಲ್ಪವೂ ಸಹ ನೋವಿಸದೆ ಭೋಜನ ಮಾಡುವನು. ಈ ಪ್ರಕಾರ ಆಹಾರವನ್ನು ಸ್ವೀಕರಿಸುವುದಕ್ಕೆ ಭ್ರಮರಾಹಾರವೃತ್ತಿಯೆನ್ನುವರು.

೫. ಗರ್ತಪೂರ್ಣ ವೃತ್ತಿ—ನಮ್ಮ ಮನೆಯಲ್ಲಿ ಒಂದು ತಗ್ಗು ಬಿದ್ದರೆ ಅದನ್ನು ಕಲ್ಲು, ಗರಸು, ಮಣ್ಣುಗಳಿಂದ ತುಂಬುತ್ತೇವೆ ಅದೇ ಪ್ರಕಾರ ಸಾಧುವು ತನ್ನ ಹೊಟ್ಟೆಯೆಂಬ ತಗ್ಗನ್ನು ಸರಸ ನೀರಸ ಆಹಾರದಿಂದ ತುಂಬಿಬಿಡುವನು. ಇದಕ್ಕೆ ಗರ್ತಪೂರ್ಣವೃತ್ತಿಯೆನ್ನುವರು

ಈ ಪ್ರಕಾರ ಐದು ವೃತ್ತಿಗಳಿಂದ ಸಾಧುಗಳು ಶುದ್ಧ ಆಹಾರವನ್ನು ಸ್ವೀಕರಿಸುತ್ತಿರುತ್ತಾರೆ

ಶ್ರಾವಕರು ತಮ್ಮ ಭೋಜನ ಶುದ್ಧಿಯನ್ನು ಅನ್ಯಾಯ ಮತ್ತು ಹಿಂಸೆಗಳನ್ನು ಉತ್ಪನ್ನ ಮಾಡುವಂಥ ವ್ಯವಹಾರವನ್ನು ಬಿಟ್ಟು ತಮ್ಮ ಕರ್ಮಕ್ಕನುಸರಿಸಿ ಪ್ರಾಪ್ತವಾದುದರಲ್ಲಿ ಸಂತೋಷದಿಂದ ಇರುವದರಿಂದ ಹೊಂದುತ್ತಾರೆ ಇತರರಿಗೆ ದುಃಖವನ್ನು ಕೊಡದೆ ನ್ಯಾಯದಿಂದ ಸಂಪಾದನ ಮಾಡಿದ ಧನದ ಗರ್ವ, ವಿಷಾದ ಮತ್ತು ದೈನ್ಯಗಳನ್ನು ಬಿಟ್ಟು, ದಾನದ ವಿಭಾಗವನ್ನು ತೆಗೆದು ಇಟ್ಟು ಅನ್ನದ ಉಪಭೋಗವನ್ನು ಮಾಡಬೇಕು. ಅಭಕ್ಷ್ಯವೇ ಮೊದಲಾದ ಸದೋಷ ಭೋಜನವನ್ನು ತ್ಯಾಗಮಾಡಬೇಕು. ಹಗಲಿನಲ್ಲಿ, ತಮ್ಮ ಭೋಗಾಂತರಾಯ ಮತ್ತು ಲಾಭಾಂತರಾಯಗಳ ಕ್ಷಯೋಪಶಮಕ್ಕನುಸರಿಸಿ ಪ್ರಾಪ್ತವಾಗುವ ಸರಸ-ನೀರಸ ಆಹಾರಗಳಲ್ಲಿ ತನ್ನ ಕುಟುಂಬಕ್ಕೂ ದಾನಕ್ಕೂ ಬೇಕಾಗುವದನ್ನು ಬೇರೆ ತೆಗೆದಿಟ್ಟು ಊಟವನ್ನು ಮಾಡಬೇಕು ಈ ಪ್ರಕಾರ ಗೃಹಸ್ಥರು ಅತಿ ಆಸಕ್ತಿ ಮತ್ತು ಲಾಲಸೆಗಳನ್ನು ತ್ಯಾಗಮಾಡುವುದರಿಂದ ಭೋಜನದ ಶುದ್ಧಿಯಾಗುತ್ತದೆ

೬. ಪ್ರತಿಷ್ಠಾಪನಾ ಶುದ್ಧಿ—ಸಂಯಮಧಾರಣ ಮಾಡಿದಂಥ ಮುನಿಯು ತನ್ನ ಶರೀರದ ಮೇಲಿನ ಉಗುರು, ಕೂದಲು, ಕಫ, ಮೂಗಿನೊಳಗಿನ ಹೊಲಸು, ಮೂತ್ರ, ಮೊದಲಾದವುಗಳಿಂದ ಯಾರಿಗೂ ಕಷ್ಟವಾಗ-ದಂತೆಯೂ ಯಾವ ಜೀವವೂ ಮರಣ ಹೊಂದದಂತೆಯೂ ಯಾವ ಜೀವದ ಪರಿಣಾಮವೂ ಮಲಿನವಾಗದಂತೆಯೂ ನೋಡಿಕೊಳ್ಳಬೇಕು ಅಂಥ ನಿರುಪದ್ರವ ಸ್ಥಳವನ್ನು ನೋಡಿಯೇ ವಿಸರ್ಜಿಸಬೇಕು. ಈ ಪ್ರಕಾರ ಆಚರಣೆ-ಯುಳ್ಳವರಿಗೆ ಪ್ರತಿಷ್ಠಾಪನಾಶುದ್ಧಿಯು ಉಂಟಾಗುತ್ತದೆ. ಗೃಹಸ್ಥರು ತಮ್ಮ ಶರೀರದ ಮಲ, ನೀರು, ಬೂದಿ, ಮಣ್ಣು, ಕಲ್ಲು, ಕಟ್ಟಿಗೆ ಮೊದಲಾದವುಗಳನ್ನು ಇತರ ಜೀವಿಗಳಿಗೆ ತೊಂದರೆಯಾಗದಂಥ ಸ್ಥಳದಲ್ಲಿ ಒಗೆಯಬೇಕು. ಹಾಗೆ ಒಗೆಯುವಾಗಲೂ ಇಡುವಾಗಲೂ ಯಾವ ಜೀವದ ವಧೆಯೂ ಆಗಕೂಡದು. ಯಾರೊಡನೆಯೂ ಜಗಳ, ವಿಸಂವಾದ ಉತ್ಪನ್ನವಾಗಬಾರದು. ತಮ್ಮ ಶರೀರಕ್ಕೂ ಅಪಾಯವಾಗಿರಕೂಡದು. ಇನ್ನೊಬ್ಬರಿಗೆ ದುಃಖವಾಗಿರಬಾರದು ಇವೆಲ್ಲ ಸಂಗತಿಗಳ ವಿಷಯದಲ್ಲಿ ಎಚ್ಚರಿಕೆಯನ್ನು ವಹಿಸಬೇಕು

೭. ಶಯನಾಸನ ಶುದ್ಧಿ—ಇದು ಸಾಧುಗಳ ಮುಖ್ಯ ಆಚರಣೆಯಾಗಿದೆ. ಸ್ತ್ರೀ, ನಪುಂಸಕ, ಕಳ್ಳರು, ಸೆರೆಗುಡುಕರು, ಬೇಟೆಗಾರರೇ ಮೊದಲಾದ ಪಾಪಿಗಳು ಬರು-ಹೋಗುವಂಥ ಸ್ಥಳದಲ್ಲಿ ಸಾಧುಗಳು ವಾಸಿಸುವುದು ಯೋಗ್ಯವಲ್ಲ ಆ ಜನರು ಬಾರದಂಥ ಸ್ಥಾನದಲ್ಲಿಯೇ ಇರಬೇಕು ಇನ್ನು ಶೃಂಗಾರಿಕ ವಸ್ತ್ರಾಭರಣಗಳನ್ನು ಧಾರಣ ಮಾಡುವಂಥ ಸ್ತ್ರೀಯರು ಇರುವ ಸ್ಥಳದಲ್ಲಿ ಮುನಿಗಳು ಇರಕೂಡದು ಅದರಂತೆ ಕ್ರೀಡೆಗಾಗಿ ಮಾಡಿದ ತೋಟ, ಹಾಡುಗಾರಿಕೆ, ಕುಣಿಯುವಿಕೆ, ಬಾರಿಸುವಿಕೆ ಮೊದಲಾದ ಕ್ರಿಯೆಗಳು ನಡೆಯುವಂಥ ಸ್ಥಳ ಇವು ಸಾಧುಗಳು ಇರಲಿಕ್ಕೆ ಯೋಗ್ಯವಾದ ಸ್ಥಳಗಳಲ್ಲ ಅಂತಲೇ ಇವರು ಇಂಥ ಸ್ಥಳಗಳನ್ನು ತ್ಯಾಗಮಾಡಿ ದೂರವಿರುತ್ತಾರೆ ಜೈನ ಸಾಧುಗಳು ಅಕೃತ್ರಿಮವಾದಂಥ ಪರ್ವತದ ಗುಹೆಯಲ್ಲಿಯೂ ಗಿಡಗಳ ಪೊದರಿನಲ್ಲಿಯೂ ಇರುವರು ಅದು ಇಲ್ಲದಿದ್ದರೆ ಪೈಲಾದ ಮನೆಯಲ್ಲಿ ಇಲ್ಲವೆ ತಮಗಾಗಿಯೇ ನಿಲ್ಲಿಸದ ಸ್ಥಳದಲ್ಲಿ ಇರಬೇಕು ಅದರಂತೆಯೇ ಶುದ್ಧವಾದ ಭೂಮಿಯ ಮೇಲೆಯೇ ಕೂಡುವದನ್ನೂ ಮಲಗುವದನ್ನೂ ಮಾಡುತ್ತಾರೆ. ಗೃಹಸ್ಥರು ಕೂಡ ಸ್ತ್ರೀ, ನಪುಂಸಕ, ದುಷ್ಟ, ಕಲಹ, ವಿಸಂವಾದ, ವಿಕಥೆ ಮೊದಲಾದವುಗಳಿಂದ ಪರಿಣಾಮದ ನಿರ್ಮಲತೆಯು ಕೆಡದಂಥ ಸ್ಥಳದಲ್ಲಿ ಶಯನ, ಆಸನಗಳನ್ನು ಮಾಡಬೇಕು ಸ್ಥಾನ ದೋಷದಿಂದ ಪರಿಣಾಮದಲ್ಲಿ ದುರ್ಧ್ಯಾನವು ಉತ್ಪನ್ನವಾಗುತ್ತದೆ. ದುಷ್ಟ ವಿಚಾರಗಳು

ಬರುತ್ತವೆ. ಅದಕ್ಕಾಗಿ ಗೃಹಸ್ಥರು ತಮ್ಮ ಜೀವನೋದ್ಯೋಗವನ್ನು ನ್ಯಾಯಮಾರ್ಗದಿಂದ ಮಾಡಿ, ಊಟ-ಉಪಚಾರ-ಗಳನ್ನು ಕೊಡುವುದು-ಏಳುವುದನ್ನೂ ನಿರಾಕುಲವಾದ ಸ್ಥಳದಲ್ಲಿಯೇ ಮಾಡಬೇಕು.

೮. ವಾಕ್ಯ ಶುದ್ಧಿ—ಮುನಿಯು ತನ್ನ ಮುಖದಿಂದ ಪೃಥ್ವೀಕಾಯಾದಿ ಜೀವಗಳ ಕೊಲೆಯಾಗುವಂತೆ ಕಠೋರ, ನಿಂದ್ಯ ಪರಪೀಡೆಯನ್ನು ಉತ್ಪನ್ನ ಮಾಡುವಂಥ ಮಾತುಗಳನ್ನು ಎಂದೂ ಆಡಕೂಡದು ಅವರು ಯಾವಾಗಲೂ ತನ್ನ ಮುಖದಿಂದ ವ್ರತ, ಶೀಲ, ಸಂಯಮ, ತಪ ಇವುಗಳ ಉಪದೇಶವನ್ನೇ ಹಿತ ಹಾಗೂ ಮಿತವಾದಂಥ ಮಧುರ ಮನೋಹರ ವಚನಗಳಿಂದ ಮಾಡುತ್ತಾರೆ ಇಂಥ ಮುನಿಗಳಿಗೇನೇ ವಾಕ್ಯ ಶುದ್ಧಿಯು ಸಂಭವಿಸುತ್ತದೆ ಗೃಹಸ್ಥನೂ ಸಹ ತಾನು ಮಾತನಾಡಬೇಕಾದ ಮಾತುಗಳನ್ನು ವಿಚಾರ ಪೂರ್ವಕವಾಗಿ ಮಾತನಾಡಬೇಕು. ಲೋಕವಿರುದ್ಧ, ಧರ್ಮವಿರುದ್ಧ, ಹಿಂಸೋತ್ಪಾದಕ, ಅಸತ್ಯ, ಬಹುಕರ್ಕಶವಾದಂಥ ಮಾತುಗಳನ್ನು ಬಾಯಿಂದ ಎಂದೂ ಉಚ್ಚರಿಸಬಾರದು ಇದರಿಂದ ಅವರಿಗೆ ವಾಕ್ಯಶುದ್ಧಿಯು ಸಾಧಿಸುತ್ತದೆ

ಈ ಪ್ರಕಾರ ಎಂಟು ವಿಧದ ಶುದ್ಧಿಗಳು ಸಂಯಮಿ ಪುರುಷನು ಸಾಧಿಸಲು ತಕ್ಕವುಗಳಾಗಿವೆ. ಇವುಗಳನ್ನು ಗೃಹಸ್ಥರೂ ಕೂಡ ವಿಚಾರಿಸುತ್ತ ಇದ್ದು, ತಾವೂ ಇವುಗಳನ್ನು ಸಾಧಿಸಬೇಕೆಂದು ಭಾವನೆಯನ್ನು ಇಡಬೇಕು ಇದರಿಂದ ಅವನು ವಿಶೇಷ ಪಾಪದಲ್ಲಿ ಮುಳುಗದೆ ಧರ್ಮವೃದ್ಧಿಯ ಚಿಂತನೆಯನ್ನು ಮಾಡಲಿಕ್ಕೆ ಸಮರ್ಥನಾಗುತ್ತಾನೆ

## ತಪಭಾವನೆ

ತಪಭಾವನೆಯೂ ಸಹ ಗೃಹಸ್ಥರು ಚಿಂತಿಸಲಿಕ್ಕೆ ಯೋಗ್ಯವಾಗಿದೆ ಆದರೆ ತಪವನ್ನು ಮುಖ್ಯವಾಗಿ ಮುನೀಶ್ವರರು ಮಾಡಬೇಕೆಂದಿದೆ ಅಂದರೂ ಗೃಹಸ್ಥರೂ ಸಹ ಇದರ ಅಭ್ಯಾಸವನ್ನು ಮಾಡುತ್ತಿರಬೇಕು ಅಂದರೆ ರೋಗ ಮೊದಲಾದವುಗಳು ಪ್ರಾಪ್ತವಾದಾಗ ವ್ರತಗಳಿಂದ ಚ್ಯುತಿಯಾಗುವದಿಲ್ಲ ಮುಪ್ಪಿನ ಕಾಲದಲ್ಲಿ ಇಂದ್ರಿಯಗಳ ಮೇಲಿನ ನಿಯಂತ್ರಣದಿಂದ ಬುದ್ಧಿಯು ಚಂಚಲವಾಗುವದಿಲ್ಲ. ಊಟ, ಕುಡಿಯುವಿಕೆ ಮೊದಲಾದವುಗಳ ವಿಷಯದಲ್ಲಿ ಉಂಟಾದ ಆಕುಲತೆಯನ್ನೂ ಸಹನ ಮಾಡುವುದರಿಂದ ಸಂತೋಷವೃತ್ತಿಯು ಪ್ರಕಟವಾಗಿ ದೈನ್ಯವು ಇಲ್ಲದಂತಾಗುತ್ತದೆ ಅಲ್ಲದೆ ಪರಲೋಕದಲ್ಲಿ ಸ್ವರ್ಗದ ಪ್ರಾಪ್ತಿಯೂ ಆಗುತ್ತದೆ. ಅದಕ್ಕಾಗಿ ತಪಮಾಡುವುದು ಯೋಗ್ಯವಾಗಿದೆ ಈ ತಪವು ಬಾಹ್ಯ ಹಾಗೂ ಅಭ್ಯಂತರ ಎಂದು ಎರಡು ಪ್ರಕಾರಗಳಿಂದ ಕೂಡಿದೆ ಬಾಹ್ಯ ತಪಗಳಲ್ಲಿ ಅನಶನ, ಅವಮೌದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತ-ಶಯ್ಯಾಸನ ಮತ್ತು ಕಾಯಕ್ಲೇಶ ಎಂದು ಆರು ಭೇದಗಳಿವೆ

೧. ಅನಶನ—ಅಶನ ಎಂದರೆ ಊಟ ಅದನ್ನು ತ್ಯಾಗಮಾಡುವುದಕ್ಕೆ ಅನಶನವೆನ್ನುವರು ಈ ತಪವು ಕಣ್ಣಿಗೆ ಕಾಣುವಂಥ ಫಲವನ್ನೂ ಯಾರು ಅಪೇಕ್ಷಿಸುವದಿಲ್ಲವೋ ಅವರಿಗೆ ಸಿದ್ಧಿಸುತ್ತದೆ. ಈ ಲೋಕದಲ್ಲಿ ತಮ್ಮ ಕೀರ್ತಿ ಯಾಗಬೇಕು, ಪ್ರಸಿದ್ಧಿಯು ಲಭಿಸಬೇಕು, ಜನರು ತಮಗೆ ನಮಸ್ಕಾರ ಮಾಡಬೇಕು, ಮಂತ್ರಸಾಧನೆಯಾಗಬೇಕು, ಋದ್ಧಿ, ಸಂಪತ್ತಿಗಳು ಪ್ರಾಪ್ತವಾಗಬೇಕು, ಶತ್ರುಗಳ ನಾಶವಾಗಿ ಪರಲೋಕದಲ್ಲಿ ವೈಭವವು ಪ್ರಾಪ್ತವಾಗಬೇಕು, ಕಷಾಯಗಳಿಂದ ಇಲ್ಲವೆ ವೈರದಿಂದ ದುಃಖಿತರಾಗಿ ತನ್ನ ಘಾತವಾಗಬೇಕು—ಇವೇ ಮೊದಲಾದ ಇಚ್ಛೆಗಳಿಂದ ಅನಶನ ವ್ರತ-ಉಪವಾಸ ವ್ರತವನ್ನು ಕೈಕೊಂಡರೆ ಅದು ನಿಜವಾದುದಲ್ಲ ಅಂಥ ತಪವು ಕೇವಲ ಸಂಸಾರ ಪರಿಭ್ರಮಣಕ್ಕೆ ಕಾರಣವಾಗುತ್ತದೆ. ಇಂದ್ರಿಯಗಳ ವಿಷಯದ ಮೇಲಿನ ಪ್ರೀತಿಯು ಕಡಿಮೆಯಾಗಬೇಕು, ಷಟ್‌ಕಾಯ ಜೀವಗಳ ರಕ್ಷಣೆಯಾಗಬೇಕು, ರಾಗಭಾವವು ಕಡಿಮೆಯಾಗಬೇಕು, ನಿದ್ರೆಯನ್ನೂ ಗೆಲ್ಲಬೇಕು, ಕರ್ಮದ ನಿರ್ಜರೆಯು ಆಗಬೇಕು, ಧ್ಯಾನದ ಸಿದ್ಧಿಯು ಆಗಬೇಕು, ದೇಹದ ಸುಖವು ಇಲ್ಲದಂತೆ ಆಗಬೇಕು-ಇವೇ ಮೊದಲಾದ ಕಾರಣಗಳಿಗಾಗಿ ಉಪ-ವಾಸಾದಿಗಳನ್ನು ಮಾಡುವದಕ್ಕೆ ನಿಜವಾದ ತಪವೆನ್ನುವರು ಈ ತಪವು ಎರಡು ವಿಧವಾಗಿದೆ. ಒಂದು ಕಾಲಮರ್ಯಾದೆ-ಯುಳ್ಳದು, ಇನ್ನೊಂದು ಯಾವಜ್ಜೀವ ನಡೆಯಿಸುವಂಥದು ದಿನಕ್ಕೆ ಎರಡು ಹೊತ್ತು ಊಟಮಾಡುವ ಪರಿಪಾಠವಿದೆ. ಅದರೊಳಗಿಂದ ಒಮ್ಮೆ ಊಟ ಮಾಡಿ, ಇನ್ನೊಂದು ಹೊತ್ತಿನದನ್ನು ತ್ಯಾಗ ಮಾಡುವದಕ್ಕೆ ತಪವೆನ್ನುವರು ಮೊದಲನೆಯ ದಿನ ಒಂದು ಹೊತ್ತು ಉಂಡು ಮತ್ತೊಂದು ಹೊತ್ತಿನ ಊಟವನ್ನು ತ್ಯಾಗ ಮಾಡುವುದು, ಮರುದಿನ ಎರಡೂ ಹೊತ್ತಿನ ಊಟವನ್ನು ತ್ಯಾಗ ಮಾಡುವುದು, ಮೂರನೆಯ ದಿನ ಒಮ್ಮೆ ಊಟಮಾಡಿ ಇನ್ನೊಂದು ಹೊತ್ತಿನ ಊಟವನ್ನು ತ್ಯಾಗ ಮಾಡುವುದು, ಈ ಪ್ರಕಾರ ನಾಲ್ಕು ಊಟಗಳನ್ನೂ ತ್ಯಾಗ ಮಾಡುವುದಕ್ಕೆ ಪ್ರೋಷಧೋಪವಾಸ-

ವೆನ್ನುವರು. ಆರು ಊಟಗಳನ್ನು ತ್ಯಾಗ ಮಾಡುವದಕ್ಕೆ 'ಬೇಲಾ' ಎನ್ನುವರು ಎಂಟು ಊಟಗಳನ್ನು ತ್ಯಾಗ ಮಾಡುವುದಕ್ಕೆ 'ತೇಲಾ' ಎನ್ನುವರು. ಹತ್ತು ಊಟಗಳನ್ನು ತ್ಯಾಗ ಮಾಡುವುದಕ್ಕೆ 'ಚೌಲಾ' ಎನ್ನುವರು. ಈ ಪ್ರಕಾರ ಕಾಲದ ಮರ್ಯಾದೆ ಇರುವ ಉಪವಾಸಕ್ಕೆ ಕಾಲಮರ್ಯಾದಾರೂಪ ಅನಶನವೆನ್ನುವರು ಆಯುಷ್ಯದ ಕೊನೆಗೆ ಯಾವಜ್ಜೀವ ಆಹಾರದ ತ್ಯಾಗಮಾಡುವದಕ್ಕೆ ಯಾವಜ್ಜೀವಾನಶನ ಎನ್ನುವರು. ಭಗವಂತನು ಇಂದ್ರಿಯಗಳು, ಉಪಶಮ ಹೊಂದುವದಕ್ಕಾಗಿ ಉಪವಾಸ ಕೈಕೊಳ್ಳಲಿಕ್ಕೆ ಹೇಳಿದ್ದಾರೆ. ಅದಕ್ಕಾಗಿ ಇಂದ್ರಿಯಗಳನ್ನು ಗೆಲ್ಲುವ ಮುನಿಯು ಊಟಮಾಡುತ್ತಿದ್ದರೂ ಉಪವಾಸಿ ಎನಿಸಿಕೊಳ್ಳುವನು, ಉಂಡುಪವಾಸಿಯುವನು ಆದರೆ ಯಾರು ಉಪವಾಸ ಮಾಡಿಯೂ ಸಹ ಇಂದ್ರಿಯಗಳನ್ನು ಗೆಲ್ಲಲಿಚ್ಛಿಸುವದಿಲ್ಲವೋ, ಅನೇಕ ಪ್ರಕಾರದ ಆರಂಭಗಳನ್ನು ಮಾಡುವರೋ, ಕಷಾಯಗಳಲ್ಲಿ ಪ್ರವೃತ್ತನಾಗಿರುವರೋ ಅವರ ಉಪವಾಸವು ವ್ಯರ್ಥವಾಗಿದೆ. ಅಂಥ ತಪವು ಕರ್ಮದ ನಿರ್ಜರೆಯನ್ನು ಮಾಡಲಾರದು. ಈ ಪ್ರಕಾರ ಅನಶನ ತಪದ ಸ್ವರೂಪವಾಗಿದೆ ಗೃಹಸ್ಥರು ಯಾವುದರಿಂದ ತಮ್ಮ ವಾತ, ಪಿತ್ತ, ಕಫದ ವಿಕಾರಗಳು ಬೆಳೆಯಲಾರವೋ, ರೋಗದ ಉಪಶಮವಾಗಿ ಉತ್ಸಾಹವು ಹೆಚ್ಚುತ್ತ ಹೋಗುವುದೋ ಅಂಥ ತಪವನ್ನು ಸ್ವೀಕರಿಸಬೇಕು ಇದರಲ್ಲಿ ತನ್ನ ಪರಿಣಾಮವು ಮೇಲಿಂದ ಮೇಲೆ ಶುದ್ಧವಾಗಿ-ಬೇಕೆಂಬ ಭಾವನೆಯು ಇರಬೇಕು ಅಲ್ಲದೆ ದೇಶಕಾಲಕ್ಕೆ ಅನುಕೂಲವಾದ ಆಹಾರ ಪಾನಾದಿಗಳು ಇರಬೇಕು ಮೇಲಾಗಿ ತನ್ನ ತಪಕ್ಕೆ ಮನೆಯೊಳಗಿನ ಜನರು ಎಷ್ಟು ನೆರವು ಸಲ್ಲಿಸಬಲ್ಲರೆಂಬುದನ್ನೂ ಗಮನಿಸಬೇಕು. ತನ್ನ ದೇಹ ರಚನೆಗೆ ಬಾಧೆಯು ತಟ್ಟದಂತೆಯೂ ನೋಡಿಕೊಳ್ಳಬೇಕು. ಇವುಗಳನ್ನೆಲ್ಲ ನೋಡಿಕೊಂಡು ಉಪವಾಸ ತಪವನ್ನೂ ಸ್ವೀಕರಿಸಬೇಕು.

೨. ಅವಮೌದರ್ಯ—'ಅವಮ' ಎಂದರೆ ಕಡಿಮೆ. 'ಉದರ' ಎಂದರೆ ಹೊಟ್ಟೆ ಯಾವ ಬಗೆಯಲ್ಲಿ ದಿನದಕ್ಕಿಂತ ಕಡಿಮೆ ಆಹಾರವನ್ನು ತಕ್ಕೊಳ್ಳಲಾಗುವುದೋ ಅದಕ್ಕೆ ಅವಮೌದರ್ಯದ ರೀತಿ ಎನ್ನ-ಬಹುದಾಗಿದೆ ಇಂದ್ರಿಯಗಳ ಸಂಯಮವು ಇದರಿಂದ ಸಾಧಿಸುತ್ತದೆ ಭೋಜನದ ಮೇಲಿನ ಆಸಕ್ತಿಯು ಕಡಿಮೆಯಾಗುತ್ತದೆ. ಅಲ್ಪಾಹಾರದಿಂದ ವಾತ, ಪಿತ್ತ, ಕಫಗಳ ವಿಕಾರವು ಪ್ರಜ್ವಲಿಸುವದಿಲ್ಲ. ರೋಗದ ಉಪಶಮ-ವಾಗುತ್ತದೆ ಆಲಸ್ಯ, ನಿದ್ರೆಗಳು ಕಡಿಮೆಯಾಗುತ್ತವೆ. ಸ್ವಾಧ್ಯಾಯ, ಸಾಮಾಯಿಕ, ಕಾಯೋತ್ಸರ್ಗ, ಧ್ಯಾನ ಮೊದಲಾದವುಗಳನ್ನು ಮಾಡಲಿಕ್ಕೆ ಕಷ್ಟವಾಗುವದಿಲ್ಲ ಸುಖದಿಂದಲೇ ಆವಶ್ಯಕ ಕ್ರಿಯೆಗಳನ್ನು ಮಾಡಲಿಕ್ಕೆ ಬರುತ್ತದೆ ಅವಮೌದರ್ಯವನ್ನು ಮಾಡುವುದರಿಂದ ಉಪವಾಸದಿಂದಾಗುವ ಉಷ್ಣತೆ ಹಾಗೂ ಖೇದಗಳು ಆಗಲಾರವು ಮುಂದೆ ಕ್ರಮದಿಂದ ಉಪವಾಸವೂ ಸಹ ಸಹನವಾಗುವುದು ಹೊಟ್ಟೆತುಂಬ-ಕುತ್ತಿಗೆಯವರೆಗೆ-ಊಟ ಮಾಡು-ವವರಿಗೆ ಆವಶ್ಯಕ ಕ್ರಿಯೆ, ಧ್ಯಾನ, ಕಾಯೋತ್ಸರ್ಗಾದಿಗಳು ಸುಖದಿಂದ ಆಗುವದಿಲ್ಲ. ಅವರಲ್ಲಿ ಆಲಸ್ಯ, ನಿದ್ರೆಗಳು ಹೆಚ್ಚುತ್ತವೆ, ನೀರಡಿಕೆಯಾಗುತ್ತವೆ, ಉಷ್ಣತೆಯು ಬೆಳೆದು ರೋಗವು ಉತ್ಪನ್ನವಾಗುತ್ತದೆ ಇಂದ್ರಿಯಗಳ ಲಾಲಸೆಯು ಕಡಿಮೆಯಾಗುವದಕ್ಕೆಂದೂ ಮನಸ್ಸಿಗೆ ಪ್ರತಿಬಂಧ ಹಾಕಲಿಕ್ಕೆಂದೂ ಜ್ಞಾನಿಗಳಾದ ಮುನಿಗಳು ಅರ್ಧ ಊಟ, ಕಾಲು ಊಟ, ಎರಡು ತುತ್ತು ಊಟ, ಕೊನೆಗೆ ಒಂದು ತುತ್ತು ಮಾತ್ರ ಅನ್ನವನ್ನು ಸ್ವೀಕರಿಸಿ ಅವಮೌದರ್ಯವನ್ನು ಆಚರಿಸುತ್ತಾರೆ ಆದರೆ ಅದನ್ನೇ ಅವರು ಸವಿಯಾದ ಊಟಕ್ಕಾಗಿಯೂ ಕೀರ್ತಿಗಾಗಿಯೂ ಅಲ್ಪ ಭೋಜನವನ್ನು ಮಾಡುತ್ತಿದ್ದರೆ ಅದಕ್ಕೆ ಅವಮೌದರ್ಯವೆನ್ನಲಿಕ್ಕೆ ಆಗದು ಅವಮೌದರ್ಯವು ಭೋಜನದ ಲಾಲಸೆಯನ್ನು ಕಡಿಮೆ ಮಾಡಲಿಕ್ಕೆಂದು ಮಾತ್ರ ಇದೆ ಗೃಹಸ್ಥನಾಗಿರುವ ಶ್ರಾವಕನೂ ಸಹ ಅಂತರಾಯ ಕರ್ಮದ ಕ್ಷಯೋಪ-ಶಮಕ್ಕನುಸರಿಸಿ ಲಭಿಸುವ ಊಟದಲ್ಲಿ ಸಂತೋಷವನ್ನು ಹೊಂದಿರಬೇಕು ಊಟದ ಲಾಲಸೆಯನ್ನು ಬಿಟ್ಟಿರಬೇಕು ಇಚ್ಛೆಯನ್ನು ನಿರೋಧಿಸುವದಕ್ಕಾಗಿ ಅವಮೌದರ್ಯ ತಪವನ್ನು ಆಚರಿಸಬೇಕು

೩. ವೃತ್ತಿ ಪರಿಸಂಖ್ಯಾನ—ಈ ತಪವು ಕೇವಲ ಮುನಿಗಳಿಗೇನೇ ಸಾಧ್ಯವಿದೆ. ಮುನೀಶ್ವರರು ಆಹಾರಕ್ಕೆಂದು ಹೊರಡುವಾಗ ಈ ಹೊತ್ತು ಒಂದು, ಎರಡು, ನಾಲ್ಕು, ಐದು ಏಳು ಮನೆಗಳಿಗೆ ಮಾತ್ರ ಹೋಗುವವೆಂದು ಪ್ರತಿಜ್ಞೆಯನ್ನು ಮಾಡುತ್ತಾರೆ ಒಂದು ವೇಳೆ ತಾವು ಹೋಗುವ ಮಾರ್ಗದಲ್ಲಿರುವ ಮನೆಯಲ್ಲಿಯೇ ಆಹಾರ ದೊರೆತರೆ ಸ್ವೀಕರಿಸುವದು. ಬೇರೆ ಮಾರ್ಗದಿಂದ ಹೋಗಿ ಇಂಥಿಂಥವರು ಆಹಾರವನ್ನು ಕೊಟ್ಟರೆ ಮಾತ್ರ ಸ್ವೀಕರಿಸುವುದು ಅದರಂತೆಯೇ ಇಂಥ ಪಾತ್ರೆಯಲ್ಲಿ ಇಂಥ ಆಹಾರವನ್ನು ಕೊಟ್ಟರೇನೇ ಭೋಜನ ಮಾಡುವುದು, ಇತರ ವಿಧದಿಂದ ಕೊಟ್ಟರೆ ಸ್ವೀಕರಿಸಲಾಗದು ಈ ಪ್ರಕಾರ ಅನೇಕ ಕಠಿಣ ನಿಯಮಗಳನ್ನು ಮಾಡಿ ಅವರು

ಆಹಾರಕ್ಕೆಂದು ಹೊರಡುವರು ಈ ಪ್ರಕಾರದ ಪ್ರತಿಜ್ಞೆಗಳಿಗೆ ವೃತ್ತಿಪರಿಸಂಖ್ಯಾನ ತಪವೆಂದು ಹೇಳಲಾಗುವುದು. ಈ ಕಠಿಣ ತಪಸ್ಸು ಮುನಿಗಳಿಗೇನೇ ಸಾಧ್ಯವಾಗುತ್ತದೆ ಉಳಿದ ಗೃಹಸ್ಥರಿಗೆ ಇದನ್ನು ಧಾರಣ ಮಾಡುವುದು ಅಶಕ್ಯವಾಗಿದೆ ಗೃಹಸ್ಥರಿಗೆ ಈ ತಪವನ್ನು ಸ್ವೀಕರಿಸಬೇಕೆಂದು ಎನಿಸಿದರೆ ಅವರು ಆರಂಭದಲ್ಲಿ ವೀತರಾಗಿಯಾದ ಗುರುವಿನ ಹತ್ತಿರ ಹೋಗಿ ಅವರ ಕೃಪೆಯನ್ನು ಸಂಪಾದಿಸಿ ಒಂದು ಪ್ರತಿಜ್ಞೆಯನ್ನು ಸ್ವೀಕರಿಸಬೇಕು. ಅದು ಹೀಗೆ ಇರುವುದು-ನಾನು ಉಜ್ವಲವಾದ ಜಿನಧರ್ಮವನ್ನು ಸ್ವೀಕಾರ ಮಾಡುವೆ. ಧರ್ಮದ ಘಾತವಾಗುವಂತೆ ನಡೆಯಲಿಕ್ಕಿಲ್ಲ. ಮೇಲಾಗಿ ನನ್ನ ಜ್ಞಾನ, ಶ್ರದ್ಧೆ, ತಪ, ವ್ರತಗಳು ನಷ್ಟವಾಗುವಂಥ ಉದ್ಯೋಗವನ್ನೂ ಸಹ ಮಾಡಲಾರೆನು. ಹೆಚ್ಚು ಹಿಂಸೆ, ಅಸತ್ಯ, ಕಪಟಗಳು ಯಾವುದರಲ್ಲಿ ಇರುವವೋ ಅಂಥ ನೌಕರಿಯನ್ನೂ ಸಹ ನಾನು ಮಾಡಲಾರೆನು ಥಳ್ಳು, ಮೋಸ ಮತ್ತು ಪಾಪ ಉತ್ಪನ್ನವಾಗುವಂಥ ವ್ಯವಹಾರವನ್ನೂ ಸಹ ನಾನು ಮಾಡಲಾರೆನು ಪ್ರಾಮಾಣಿಕ ತನದ ವ್ಯಾಪಾರವನ್ನೇ ಮಾಡೇನು ಆರಂಭ, ಕಪಟ, ಅಸತ್ಯಗಳಿಲ್ಲದಂಥ ಉಪಜೀವಿಕೆಗಳ ಅವಲಂಬನವನ್ನೇ ಮಾಡಿಯೇನು ಅನ್ಯಾಯದಿಂದ ಬಾಳಲಾರೆನು ಈ ಪ್ರಕಾರ ತಮ್ಮ ಜೀವನ ಕ್ರಮದ ನಿಯಮವನ್ನು ನಿರ್ಧರಿಸಿಕೊಳ್ಳಬೇಕು. ಹಾಗೆಯೇ ಇಷ್ಟು ಧನ, ಇಷ್ಟು ಪರಿಗ್ರಹ, ಇಷ್ಟು ವಸ್ತ್ರಗಳ ಉಪಭೋಗವನ್ನು ಮಾತ್ರ ಮಾಡುವೆ, ರೋಗಾದಿಗಳು ಪ್ರಾಪ್ತವಾದರೆ ಇಷ್ಟು ಔಷಧಗಳನ್ನು ಮಾತ್ರ ಸ್ವೀಕರಿಸುವೆ, ಇವುಗಳನ್ನು ಬಿಟ್ಟು ಬೇರೆ ಔಷಧಗಳನ್ನು ತಕ್ಕೊಳ್ಳಲಾರೆನು, ಅಲ್ಲದೆ ನಾನೇ ಸ್ವತಃ ಹೇಳಿ ಏನನ್ನೂ ಮಾಡಿಸಲಾರೆನು, ಏನನ್ನೂ ತರಿಸಲಾರೆನು. ಈ ಹೊತ್ತು ಮನೆಯಲ್ಲಿ ಊಟ ಮಾಡುವಾಗ ಮೊಟ್ಟಮೊದಲು, ಒಮ್ಮೆ ಮಾತ್ರ ಎಡೆಯಲ್ಲಿ ಎಷ್ಟು ಹಾಕುವರೋ ಅಷ್ಟನ್ನೇ ಮಾತ್ರ ಊಟ ಮಾಡುವೆ, ತಿರುಗಿ ಬೇಡಲಾರೆ ಈ ಪ್ರಕಾರ ಇಚ್ಛೆಯನ್ನು ತಡೆಯುವದಕ್ಕಾಗಿ ಗೃಹಸ್ಥರು ಪ್ರತಿಜ್ಞೆಯನ್ನು ಸ್ವೀಕರಿಸಬೇಕು. ಅಂದರೆ ಅವರಿಗೆ ಈ ವ್ರತವು ಸಾಧಿಸಿದಂತಾಗುವದು

೪. ರಸಪರಿತ್ಯಾಗ—ಹಾಲು, ಮೊಸರು, ತುಪ್ಪ, ಬೆಲ್ಲ, ಉಪ್ಪು ಮತ್ತು ಎಣ್ಣೆ ಇವು ಆರು ರಸ ಪದಾರ್ಥಗಳಾಗಿವೆ ನಾಲಿಗೆ ಮತ್ತು ಇತರ ಇಂದ್ರಿಯಗಳ ಇಚ್ಛೆಯೂ ಮನದ ಲೋಲುಪತೆಯೂ ಇಲ್ಲದಂತಾಗುವ-ದಕ್ಕಾಗಿ ಕೆಲವು ರಸಗಳನ್ನು ತ್ಯಾಗಮಾಡಬೇಕಾಗುತ್ತದೆ ಕಾಮವನ್ನು ಗೆಲ್ಲುವುದಕ್ಕೂ ನಿದ್ರೆಯನ್ನು ಕಡಿಮೆ ಮಾಡುವುದಕ್ಕೂ ಸಂಯಮವನ್ನು ಸಾಧಿಸುವದಕ್ಕೂ ಕೆಲವು ರಸಗಳ ತ್ಯಾಗದ ಅವಶ್ಯಕತೆಯು ಇದೆ ಒಮ್ಮೆ ಒಂದು ಅಥವಾ ಎರಡು ರಸಗಳನ್ನು ತ್ಯಾಗಮಾಡಬಹುದು. ಒಮ್ಮೊಮ್ಮೆ ಆರೂ ರಸಗಳನ್ನು ತ್ಯಜಿಸಬಹುದಾಗಿದೆ. ಇದಕ್ಕೆಲ್ಲ ರಸಪರಿತ್ಯಾಗವೆನ್ನುವರು. ಸಂಸಾರದಲ್ಲಿ ಇರುವಂಥ ಜೀವಗಳಿಗೆ ಸವಿ ಸವಿ ತಿನಿಸುಗಳನ್ನು ತಿನ್ನುವ ಅಪೇಕ್ಷೆಯು ಇರುತ್ತದೆ ಅದರಿಂದ ಪ್ರಸಂಗಾನುಸಾರ ಅವನು ನಾಚಿಕೆಯನ್ನೂ ಸಹ ಬಿಟ್ಟು ಅಭಕ್ಷ ಭಕ್ಷಣವನ್ನೂ ಮಾಡುವನು ಭೋಜನದ ಲೋಲುಪತೆಯಿಂದ ವ್ರತ, ತಪಶ್ಚರಣಗಳಂತೂ ಕೆಟ್ಟೇ ಕೆಡುತ್ತವೆ, ಅಲ್ಲದೆ ಶೂದ್ರರೇ ಮೊದಲಾದ ಅಯೋಗ್ಯ ಕುಲದಲ್ಲಿ ಜನಿಸಿದವರಲ್ಲಿಯೂ ಹೋಗಿ ಊಟ ಮಾಡುವಂತೆ ಎನಿಸುತ್ತದೆ ಹಸಿವೆಯಿಂದ ದೀನರಾಗುತ್ತಾರೆ ಸವಿಯಾದ ತಿನಿಸುಗಳನ್ನು ತಿನ್ನುವದಕ್ಕಾಗಿ ಜಗಳವನ್ನೂ ಕೂಡ ಮಾಡುತ್ತಾರೆ ಪ್ರಸಂಗ ಒದಗಿದರೆ ಅದಕ್ಕಾಗಿ ಜೀವವನ್ನೂ ಸಹ ಕೊಡುವರು ರಸ ಲೋಲುಪಿಗಳಾದ ಜನರು ಬಹುತರ ಅನ್ನದ ಲೋಭದಿಂದ ಭ್ರಷ್ಟರಾಗುತ್ತಾರೆ. ಉತ್ತಮ ಪುರುಷರು ಯಾರೇ ಇದ್ದರೂ ಅವರಿಗೆ ರುಚಿಕರವಾದ ಊಟದಲ್ಲಿ ಅಷ್ಟು ಲೋಲುಪತೆ ಹಾಗೂ ಆಸಕ್ತಿಗಳು ಇರುವದಿಲ್ಲ ಅವರು ಮೊದಲಿನಿಂದಲೇ ತಮ್ಮ ಮನೆಯಲ್ಲಿ ವಿವಿಧ ಪ್ರಕಾರದ ತುಪ್ಪ ಸಕ್ಕರೆಗಳಿಂದ ಮಾಡಿದ ಸವಿಯಾದ ಪದಾರ್ಥಗಳ ಮೇಲಿನ ಲಾಲಸೆಯನ್ನು ಕಡಿಮೆ ಮಾಡಿರುತ್ತಾರೆ ಅಲ್ಲದೆ ಸಪ್ಪಗಿನ, ಒಣ ಹಾಗೂ ಸಾದಾ ಆಹಾರವನ್ನೇ ತಮ್ಮ ಅವಸ್ಥೆಗೆ ಅನುಸರಿಸಿ, ದೊರೆತುದನ್ನು ಸ್ವೀಕರಿಸುತ್ತಾರೆ ರಸ ಲಂಪಟತೆಯು ಎರಡೂ ಲೋಕಗಳಲ್ಲಿ ನಮ್ಮನ್ನು ಭ್ರಷ್ಟಗೊಳಿಸುತ್ತದೆ ಅದಕ್ಕೆ, ಅದನ್ನು ನಷ್ಟಗೊಳಿಸುವದಕ್ಕಾಗಿಯೂ ಇಂದ್ರಿಯಗಳನ್ನು ವಶ ಪಡಿಸಿಕೊಳ್ಳುವದಕ್ಕಾಗಿಯೂ ರಸಪರಿತ್ಯಾಗದ ಅವಶ್ಯಕತೆಯು ಇದೆ. ಇದರಿಂದ ಉತ್ಕೃಷ್ಟ ಸಂವರ ಹಾಗೂ ನಿರ್ಜರೆಗಳು ಸಾಧಿಸುತ್ತವೆ, ದೀನತೆಯು ನಷ್ಟವಾಗುತ್ತದೆ, ಸಂತೋಷವೃತ್ತಿಯು ಲಭಿಸುತ್ತದೆ ಅದಕ್ಕಾಗಿ ರಸಪರಿತ್ಯಾಗವೆಂಬ ಹೆಸರಿನ ತಪಶ್ಚರಣವನ್ನು ಮಾಡುವುದು ಯೋಗ್ಯವಾಗಿದೆ

೫. ವಿವಿಕ್ತಶಯ್ಯಾಸನ—ಶೂನ್ಯಗೃಹವೆಂದರೆ ಯಾರೂ ಇಲ್ಲದಂಥ ಮನೆ, ಏಕಾಂತ ಸ್ಥಳ, ವಿಕಲತ್ರಯಗಳ ಬಾಧೆಯಾಗದಂಥ ಸ್ಥಾನ, ನಪುಂಸಕರೇ ಮೊದಲಾದ ಅಸಂಯಮಿಗಳಾದ ಜನರು ಬಂದು ಹೋಗದಂಥ ಸ್ಥಳ, ಪರ್ವತದ ಗುಹೆ, ಅರಣ್ಯ ಈ ಸ್ಥಳಗಳಲ್ಲಿ ಧ್ಯಾನ, ಅಧ್ಯಯನ, ಮಲಗುವುದು, ಕೂಡುವುದನ್ನು ಮಾಡುವುದಕ್ಕೆ

ವಿವಿಕ್ತಶಯ್ಯಾಸನ ತಪವೆನ್ನುವರು ಏಕಾಂತ ಸ್ಥಾನದಲ್ಲಿ ವಾಸಮಾಡುವಂಥ ಸಾಧುಗಳಿಗೆ ಹಿಂಸೆ, ಮಮತ್ವ, ವಿಕಥೆ ಮತ್ತು ಕಾಮವಿಕಾರಗಳು ಉತ್ಪನ್ನವಾಗುವದಿಲ್ಲ ಆದರಿಂದ ಅವರಿಗೆ ಧ್ಯಾನದ ಸಿದ್ಧಿಯು ಆಗುತ್ತದೆ. ಎರಡನೆಯವರು ಯಾರಾದರೂ ಬಂದಲ್ಲಿ ಅವರ ಕೂಡ ಮಾತನಾಡಬೇಕಾಗುತ್ತದೆ. ಮಾತನಾಡುವುದರಿಂದ ಮನಸ್ಸಿನಲ್ಲಿ ಸಂಕಲ್ಪವು ಉತ್ಪನ್ನವಾಗುತ್ತದೆ ಸಂಕಲ್ಪವು ಉತ್ಪನ್ನವಾಗುವುದರಿಂದ ಧ್ಯಾನವು ಚಂಚಲವಾಗುತ್ತದೆ. ರಾಗಭಾವನೆಯೂ ಬೆಳೆಯುತ್ತದೆ ಅದಕ್ಕಾಗಿ ಸಂಯಮಿಗಳಾದ ಮುನಿಗಳು ಏಕಾಂತ ಸ್ಥಳದಲ್ಲಿಯೇ ಶಯನ, ಆಸನಗಳನ್ನೂ ಮಾಡುತ್ತಿರುತ್ತಾರೆ. ಗೃಹಸ್ಥರೂ ಸಹ ಧರ್ಮಸಾಧನೆಯನ್ನು ಮಾಡುವುದಿದ್ದರೆ ಪಾಪದ ಹೆದರಿಕೆಯನ್ನು ಇಟ್ಟುಕೊಂಡು, ತಮ್ಮ ಜೀವನೋಪಯುಕ್ತ ಕಾರ್ಯಗಳನ್ನು ನ್ಯಾಯಬುದ್ಧಿಯಿಂದ ಮಾಡಬೇಕು ಆರಂಭಾದಿ ಕಾರ್ಯಗಳಿಂದ ಪಾಪವು ಕಡಿಮೆಯಾದೀತೆನ್ನುವ ರೀತಿಯಲ್ಲಿ ಜಳಕ, ಊಟ ಮೊದಲಾದ ಕ್ರಿಯೆಗಳನ್ನು ಎಚ್ಚರಿಕೆಯಿಂದ ಮಾಡುತ್ತಿರ-ಬೇಕು ಏಕಾಂತ ಸ್ಥಳದಲ್ಲಿ ಅಂದರೆ ತಮ್ಮ ಮನೆಯಲ್ಲಿ ಇಲ್ಲವೆ ಮಂದಿರ, ಧರ್ಮಶಾಲೆ, ವನ, ಚೈತ್ಯಾಲಯಗಳಲ್ಲಿ ಸಹಧರ್ಮಿಗಳಾದ ಜನರ ಜೊತೆಯಲ್ಲಿ ಧರ್ಮಚರ್ಚೆ, ಸ್ವಾಧ್ಯಾಯ, ಜಿನಾಗಮದ ವಾಚನ, ವ್ಯಾಖ್ಯಾನ, ಜಿನ ಶಾಸ್ತ್ರದ ಶ್ರವಣ, ಪಂಚ ನಮಸ್ಕಾರಗಳ ಸ್ಮರಣಗಳನ್ನು ಮಾಡುತ್ತ ಹಗಲು ರಾತ್ರಿಗಳನ್ನು ಕಳೆಯಬೇಕು. ಸ್ತ್ರೀಕಥೆ, ರಾಜಕಥೆ, ಭೋಜನಕಥೆ, ದೇಶಕಥೆ, ದುಷ್ಟರ ಕಥೆಗಳನ್ನು ಹೇಳುವುದರಲ್ಲಿ ವ್ಯರ್ಥವಾಗಿ ವೇಳೆಯನ್ನು ಕಳೆಯಬಾರದು ಇದೇ ಪ್ರಕಾರ ಕಾಮ ವಿಕಾರವನ್ನು ಬೆಳೆಯಿಸುವಂಥ ಮತ್ತು ರಾಗವನ್ನು ಉತ್ಪನ್ನ ಮಾಡುವಂಥ ಶಯನಾಸನಗಳನ್ನು ತ್ಯಾಗಮಾಡಬೇಕು ಅಂದರೆ ಗೃಹಸ್ಥನಿಗೂ ಸಹ ಈ ವಿವಿಕ್ತಶಯ್ಯಾಸನ ತಪವು ಸಾಧಿಸುತ್ತದೆ. ಅದು ಅವನ ಕರ್ಮದ ನಿರ್ಜರೆಗೆ ಕಾರಣವಾಗುತ್ತದೆ

೬. ಕಾಯಕ್ಲೇಶ—ಇದು ಮುನಿಗಳ ಕಠೋರ ತಪಶ್ಚರಣವಾಗಿದೆ ಒಂದೇ ರೀತಿಯಲ್ಲಿ—ಆಸನದಲ್ಲಿ-ಕೂಡುವುದು, ಒಂದೇ ಮಗ್ಗಲಿನ ಮೇಲೆ ಮಲಗುವುದು, ಮೌನವನ್ನು ಧರಿಸಿರುವುದು, ಸುಡುವ ಬೇಸಿಗೆಯಲ್ಲಿ ಪರ್ವತದ ಶಿಖರದ ಮೇಲೆ ದೊಡ್ಡದೊಂದು ಬಂಡೆಯ ಮೇಲೆ ಸೂರ್ಯನ ಕಡೆಗೆ ಮುಖಮಾಡಿ ಕಾಯೋತ್ಸರ್ಗ ಮಾಡುವುದು, ಸೂರ್ಯನ ಭಯಂಕರ ಬಿಸಿಲನ್ನೂ, ಬೆಂಕಿಯಂತೆ ಕಾಯ್ದ ಹವೆಯ ತೆರೆಗಳಿಂದ ಆಗುವ ವೇದನೆಯನ್ನೂ ಸಹನ ಮಾಡುವುದು, ಇದನ್ನು ಸಹಿಸುವಾಗ ಸ್ಥಿರ ಮನಸ್ಸಿನಿಂದ ಹನ್ನೆರಡು ಭಾವನೆಗಳನ್ನು ಭಾವಿಸುವುದು, ಧರ್ಮ-ಧ್ಯಾನದ ಪರಿಣಾಮವನ್ನೂ ಸ್ಥಿರವಾಗಿಡುವುದು, ಪರಿಣಾಮದಲ್ಲಿ ಸ್ವಲ್ಪವೂ ಸಹ ಕ್ಲೇಶವು ಉತ್ಪನ್ನವಾಗದಂತೆ ಇರುವುದು ಇದೇ ಪ್ರಕಾರ ಮಳೆಗಾಲದಲ್ಲಿ ಗಿಡದ ಕೆಳಗೆ ಯೋಗವನ್ನು ಹಿಡಿದು ಕೂಡುವುದು ಭಯಾನಕವಾದಂಥ ಕತ್ತಲೆಯ ರಾತ್ರಿಯಲ್ಲಿ ಅಖಂಡವಾಗಿ ದೊಡ್ಡ ಮಳೆಯು ಸುರಿಯುತ್ತಿರುತ್ತದೆ ಮೋಡಗಳ ಗರ್ಜನೆಯಿಂದ ಆಕಾಶವೂ ಭೂಮಿಯೂ ನೀರಿನಿಂದ ತುಂಬಿದಂತೆ ಆಗಿರುತ್ತದೆ. ಎತ್ತರವಾದ ಪರ್ವತಗಳ ಮೇಲಿಂದ ಭಯಂಕರವಾಗಿ ಧುಮುಕುವ ನದಿಯ ಪ್ರವಾಹಗಳು ಸುತ್ತಲೂ ಕೋಲಾಹಲ ಮಾಡಿ ಹರಿಯುತ್ತಿರುತ್ತವೆ ಮರಗಳ ಎಲೆಗಳಲ್ಲಿ ನಿಂತ ನೀರು, ಮಳೆ ನಿಂತರೂ ಮೈಮೇಲೆ ಒಂದೇ ಸಮನೆ ತಟಕಿಕ್ಕುತ್ತವೆ ಸಿಡಿಲು ಮಿಂಚುಗಳ ಹೊಡೆತ, ಘೋರ ಗರ್ಜನೆಗಳಿಂದ ವಜ್ರಾಘಾತವೇ ಆಗುವಂತೆ ಭಾಸವಾಗುತ್ತದೆ ಇಂಥ ವಾತಾವರಣದಲ್ಲಿಯೂ ಮುನೀಶ್ವರರು ಪ್ರಕೃತಿಯ ಪ್ರಕೋಪವನ್ನೆಲ್ಲ ಸಹನಮಾಡಿ ಧರ್ಮಧ್ಯಾನ ಹಾಗೂ ಶುಕ್ಲಧ್ಯಾನಗಳಲ್ಲಿ ತಲ್ಲೀನರಾಗಿರುತ್ತಾರೆ ಧನ್ಯ ಧನ್ಯ ಅವರ ಜೀವನ! ಇದೇ ಪ್ರಕಾರ ಚಳಿಗಾಲದಲ್ಲಿ ನದಿಯ ತೀರದಲ್ಲಿಯೂ ಉಸುಬಿನ ಬೈಲಲ್ಲಿ ಮೈಮೇಲೆ ಹಿಮವು ಸುರಿಯುತ್ತಿರುವಾಗಲೂ ತೀರ ತಂಪಾದ ಗಾಳಿಯೂ ಬೀಸುತ್ತಿರುವಾಗಲೂ ದುಃಖವೆನಿಸಿಕೊಳ್ಳದೆ ಧರ್ಮಧ್ಯಾನದಲ್ಲಿ ರಾತ್ರಿಯನ್ನೆಲ್ಲ ಮುನಿಗಳು ಕಳೆಯುವರು ಹಾಗೆಯೇ ದುಷ್ಟ ಜನರು ಕೊಟ್ಟ ಭಯಂಕರ ಉಪದ್ರವವನ್ನೂ ಸಹನ ಮಾಡಿ, ಸಮಭಾವದಲ್ಲಿರುವುದಕ್ಕೆಲ್ಲ ಕಾಯಕ್ಲೇಶ ತಪವೆನ್ನುವರು ಈ ಕಾಯಕ್ಲೇಶವನ್ನು ಮಾಡುವುದರಲ್ಲಿ ಒಂದು ಉದ್ದೇಶವಿರುತ್ತದೆ. ಪಾರತಂತ್ರ್ಯದಿಂದ ದುಃಖವು ಪ್ರಾಪ್ತವಾಗಿದ್ದರೂ ನಮ್ಮ ಪರಿಣಾಮವು ಅಪೇಕ್ಷಿಸಿದ ಗುರಿಯಿಂದ ಕದಲಕೂಡದು ಶರೀರದಿಂದ ಉತ್ಪನ್ನವಾಗುವ ಸುಖದ ಅಪೇಕ್ಷೆಯನ್ನು ಮಾಡಬಾರದು ರೋಗವು ಪ್ರಾಪ್ತವಾದಲ್ಲಿ ಚಿತ್ತವು ಚಂಚಲವಾಗಕೂಡದು. ಭೀತಿಯನ್ನು ಗೆಲ್ಲಬೇಕು ಪರೀಷಹಗಳನ್ನು ಸಹನ ಮಾಡಬೇಕು. ಕರ್ಮದ ನಿರ್ಜರೆಯನ್ನು ಮಾಡಬೇಕು ಗೃಹಸ್ಥರಿಗೆ ಇಂಥ ತಪವು ಸಾಧ್ಯವಾಗಲಾರದು ಇಂಥ ಘೋರ ತಪಶ್ಚರಣವನ್ನು ದಿಗಂಬರ ಸಾಧುಗಳೇ ಮಾಡಲಿಕ್ಕೆ ಸಮರ್ಥರಾಗುತ್ತಾರೆ ಗೃಹಸ್ಥರು ತಾವಾಗಿಯೇ ಕಾಯಕ್ಲೇಶವನ್ನು ಮಾಡ-ಕೂಡದು ಆದರೆ ಸಾಮಾಯಿಕ ಮೊದಲಾದ ಕ್ರಿಯೆಗಳನ್ನು ಮಾಡುತ್ತಿರುವಾಗ ಏನಾದರೂ ಪರೀಷಹಗಳು

ಪ್ರಾಪ್ತವಾದಲ್ಲಿ ತಮ್ಮ ಚಿತ್ತದಲ್ಲಿ ಚಂಚಲತೆಯನ್ನುಂಟುಮಾಡಗೊಡಬಾರದು ನಾವು ಎಚ್ಚರದಿಂದ ನಡೆಯುತ್ತಿದ್ದೂ ಕೂಡ ಕರ್ಮೋದಯದಿಂದ ಚಳಿಜ್ವರ, ದಾಹಜ್ವರ, ವಾಯು, ಶೂಲಿ ಮೊದಲಾದ ರೋಗಗಳು ಪ್ರಾಪ್ತವಾಗಬಹುದು ಇಲ್ಲವೇ ದುಷ್ಟ, ಧರ್ಮದ್ರೋಹಿ, ಮ್ಲೇಚ್ಛ ಮೊದಲಾದವರು ಬಂದು ಉಪಸರ್ಗವನ್ನೂ ಮಾಡಬಹದು ಅದೂ ಅಲ್ಲದೆ, ನೆರೆನುನೆಯಲ್ಲಿ ಹಾಕಿ ಹೊಡೆಯಲೂ ಬಹುದು ಇಂಥ ಸಂದರ್ಭಗಳಲ್ಲಿ ಗೃಹಸ್ಥರು ಮುನಿಗಳ ಕಾಯ-ಕ್ಲೇಶವನ್ನು ನೆನೆದು, ಆ ತಪದ ಭಾವನೆಯಲ್ಲಿದ್ದು, ಸಮಭಾವವನ್ನು ಧರಿಸಬೇಕು ಆ ಕಾಲದಲ್ಲಿ ಗಾಬರಿಯಾಗ-ಕೂಡದು ಬಡತನದಿಂದ ಹಸಿವು, ನೀರಡಿಕೆ, ಚಳಿ, ಉಷ್ಣ ಮೊದಲಾದ ವೇದನೆಗಳು ಕರ್ಮೋದಯದಿಂದ ಪ್ರಾಪ್ತವಾದರೂ ಕೂಡ ಧೈರ್ಯವನ್ನು ಬಿಡಬಾರದು ಆಗ ಧರ್ಮಕ್ಕೇನೇ ಶರಣು ಹೋಗಿ ಎಲ್ಲ ದುಃಖಗಳನ್ನೂ ಸಹನ ಮಾಡಬೇಕು ಇದಕ್ಕೇನೇ ಕಾಯಕ್ಲೇಶ ತಪವೆಂದು ಹೆಸರಿದೆ ಮುನಿಗಳಂತೂ ಇಂಥ ಕಾಯಕ್ಲೇಶವನ್ನು ಬಹಳ ಉತ್ಸಾಹದಿಂದ ಸಹನ ಮಾಡಿಯೇ ಮಾಡುತ್ತಾರೆ ಅವರಂತೆ ನಮಗೆ ಕಾಯಕ್ಲೇಶವನ್ನು ತಡೆಯಲಿಕ್ಕೆ ಆಗುವದಿಲ್ಲ ಆದರೂ ಸಹ ಅಸಾತಾ ಕರ್ಮದ ಉದಯದಿಂದ ದುಃಖವು ಪ್ರಾಪ್ತವಾಗಿ, ಆ ದುಃಖದಿಂದ ಬಹಳ ಹೆದರಿಕೆಯುಂಟಾದರೂ ಆ ದುಃಖವನ್ನು ಯಾರು ಇಲ್ಲದಂತೆ ಮಾಡುವರು? ಆ ಕಾಲದಲ್ಲಿ ಧೈರ್ಯದಿಂದ ಇದ್ದು, ನಾವು ಸಹನ ಮಾಡಿದಲ್ಲಿ ಕರ್ಮವು ತನ್ನ ರಸವನ್ನು ಒದಗಿಸಿ ಇಲ್ಲದಂತೆ ಆಗುತ್ತದೆ ಕರ್ಮದ ಉದಯಕ್ಕೆ ಮೂಲದಲ್ಲಿ ದಯವೇ ಇಲ್ಲ ಗಾಬರಿಯಾಗಿ ಅಳುತ್ತ ಕೂತರೂ ಉದಯಕ್ಕೆ ಬಂದ ದುಃಖವನ್ನು ಭೋಗಿಸಿಯೇ ತೀರಬೇಕಾಗುತ್ತದೆ ಆದರೆ ಶೋಕಿಸುವುದರಿಂದ ಮಾತ್ರ ಇದಕ್ಕಿಂತಲೂ ಅನೇಕ ಪಟ್ಟು ಹೆಚ್ಚು ದುಃಖ ಮುಂದಿನ ಕಾಲಕ್ಕಾಗಿ ಕಟ್ಟುವುದು. ಅಂತಲೇ ಜಿನವಚನದ ಮೇಲೆ ಶ್ರದ್ಧೆಯನ್ನು ಇಟ್ಟು, ಕರ್ಮೋದಯದ ಪ್ರಸಂಗದಲ್ಲಿ ಧೈರ್ಯವನ್ನು ಧಾರಣ ಮಾಡುವುದೇ ಶ್ರೇಷ್ಠತೆಯಾಗಿದೆ. ಗೃಹಸ್ಥರಿಗೆ ಯಾವ ಕಾಲದಲ್ಲಿ ಅಂತರಾಯ ಕರ್ಮದ ಉದಯವು ಪ್ರಾಪ್ತ-ವಾಗುವುದೋ ಆ ಕಾಲಕ್ಕೆ ಅವನಿಗ ಹೊಟ್ಟೆತುಂಬ ಅನ್ನವು ಲಭಿಸುವದಿಲ್ಲ ಅಂದ ಮೇಲೆ ತುಪ್ಪ, ಸಕ್ಕರೆ ಎಲ್ಲಿಂದ ಸಿಕ್ಕೀತು? ಅಂತಲೇ ಕರ್ಮಕ್ಕನುಸರಿಸಿ ಏನಾದರೂ ಅಲ್ಪ ಸ್ವಲ್ಪ ದೊರೆತಲ್ಲಿ ಅದರಲ್ಲಿಯೇ ಸಂತೋಷ ಹೊಂದಿ ಇರಬೇಕು ಇನ್ನೊಬ್ಬರ ವೈಭವವನ್ನೂ ಕಂಡು, ತಮಗೂ ಅಂಥದು ಪ್ರಾಪ್ತವಾಗಬೇಕೆಂದು ಬಯಸಕೂಡದು ಸಾಮ್ಯಭಾವವನ್ನು ಇಡಬೇಕು ಅಂದರೆ ಸಹಜ ರೀತಿಯಿಂದ ಕಾಯಕ್ಲೇಶತಪವು ಸಂಭವಿಸುತ್ತದೆ ಅದರಿಂದ ಕರ್ಮದ ನಿರ್ಜರೆಯು ಆಗುತ್ತದೆ

ಈ ಪ್ರಕಾರ ಆರು ವಿಧದ ಬಾಹ್ಯ ತಪಗಳನ್ನು ವರ್ಣಿಸಲಾಗಿದೆ. ಇವುಗಳನ್ನು ಆಚರಿಸಿದ್ದು ಇತರರಿಗೆ ಪ್ರತ್ಯಕ್ಷವಾಗಿ ಕಂಡುಬರುತ್ತದೆ. ಹೊರಗಿನ ಆಹಾರ ಮೊದಲಾದವುಗಳನ್ನು ತ್ಯಾಗ ಮಾಡಿದುದರಿಂದ ಈ ತಪವು ಸಂಭವಿಸುತ್ತದೆ ಅನ್ಯ ಧರ್ಮಿಯರಿಗೂ ಸಹ ಇದನ್ನು ತಿಳಿದುಕೊಳ್ಳಲಿಕ್ಕೆ ಬರುತ್ತದೆ ಅದರಿಂದ ಇದಕ್ಕೆ ಬಾಹ್ಯ ತಪವೆಂಬ ಹೆಸರು ಸಾರ್ಥಕವಾಗಿದೆ ಬೇಕಾದಷ್ಟು ಹುಲ್ಲನ್ನೂ ಕೂಡ ಹಾಕಿದ್ದರೂ ಅಗ್ನಿಯು ಸುಟ್ಟು ಹಾಕುತ್ತದೆ. ಅದೇ ಪ್ರಕಾರ ಈ ತಪವು ಪೂರ್ವ ಸಂಚಿತ ಕರ್ಮವನ್ನು ಸುಟ್ಟು ಬಿಡುತ್ತದೆ ಅಂತಲೇ ಇದಕ್ಕೆ ತಪವೆಂದು ಹೆಸರಿದೆ ಮೇಲಾಗಿ ಇಂದ್ರಿಯಗಳಿಗೆ ತೊಂದರೆ ಕೊಟ್ಟು, ಅವುಗಳಿಗೆ ವಿಷಯಾದಿಗಳಲ್ಲಿ ಮಗ್ನವಾಗಗೊಡುವದಿಲ್ಲ, ಅದಕ್ಕಾಗಿಯೂ ಇದಕ್ಕೆ ತಪವೆಂದು ಹೆಸರು ಇದೆ ಹೊನ್ನುಕಲ್ಲನ್ನು ಕಾಯಿಸಿದರೆ ಅದು ತನ್ನ ಮಲವನ್ನು ಬಿಟ್ಟು ಶುದ್ಧ ಸುವರ್ಣವಾಗುತ್ತದೆ ಹಾಗೆಯೇ ಆತ್ಮವೂ ಕೂಡ ತಪದ ಪ್ರಭಾವದಿಂದ ಕರ್ಮಮಲ ರಹಿತವಾಗುತ್ತದೆ ಅಂತಲೇ ಭಗವಂತರು ಇದಕ್ಕೆ ತಪವೆಂದು ಕರೆದಿದ್ದಾರೆ

ಅಂತರಂಗ ತಪದ ಭೇದಗಳು—ಇನ್ನು ಮುಂದೆ ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ ಮತ್ತು ಧ್ಯಾನ ಎಂಬ ಅಂತರಂಗ ತಪದ ಆರು ಪ್ರಕಾರಗಳನ್ನು ಹೇಳಲಾಗಿದೆ ಇವುಗಳಲ್ಲಿ ಪ್ರಾಯಶ್ಚಿತ್ತಕ್ಕೆ ಸ್ಥೂಲವಾದ ಒಂಬತ್ತು ಭೇದಗಳನ್ನು ಹೇಳಲಾಗಿದೆ. ಸೂಕ್ಷ್ಮ ಭೇದಗಳನ್ನು ಗಮನಿಸಿದಲ್ಲಿ ಅವು ಅಸಂಖ್ಯಾತವಾಗಿವೆ ಅವುಗಳನ್ನೆಲ್ಲ ಇಲ್ಲಿ ವರ್ಣಿಸತೊಡಗಿದರೆ ಗ್ರಂಥ ವಿಸ್ತಾರವು ಹೆಚ್ಚುತ್ತದೆ ಅದರಿಂದ ಸಂಗ್ರಹ ರೂಪವಾಗಿ ಈಗ ನಿರ್ದೇಸಲಾಗುತ್ತದೆ

೧. ಪ್ರಾಯಶ್ಚಿತ್ತ—ಧರ್ಮಾತ್ಮರು ತಮ್ಮ ವ್ರತಧರ್ಮಗಳಲ್ಲಿ ದೋಷವು ತಟ್ಟದಂತೆ ತಾವು ಸ್ವತಃ ವರ್ತಿಸಬೇಕು ಎರಡನೆಯವರಿಂದಲೂ ದೋಷವಾಗಗೊಡಬಾರದು ದೋಷಗಳನ್ನು ಯಾರಾದರೂ ಮಾಡಿದರೆ ಮನವಚನಕಾಯಗಳಿಂದ ಅದಕ್ಕೆ ಒಳ್ಳೆಯದೆಂದು ಎನ್ನಕೂಡದು ಅಕಸ್ಮಾತ್ತಾಗಿ ಪ್ರಮಾದದಿಂದ ದೋಷವು

ತಪ್ಪಿದರೆ ಸಾದುಗಳ ಹತ್ತಿರ ಹೋಗಿ, ಸರಳ ಪರಿಣಾಮದಿಂದ ಹತ್ತು ಪ್ರಕಾರದ ದೋಷಗಳನ್ನು ದೂರಗೊಳಿಸಿ, ನಿವೇದನಮಾಡಿ, ಆಲೋಚನೆಯನ್ನು ಮಾಡಬೇಕು. ಅಲ್ಲದೆ ಗುರುಗಳು ಕೊಟ್ಟ ಪ್ರಾಯಶ್ಚಿತ್ತವನ್ನೂ ಪೂರ್ಣ ಶ್ರದ್ಧೆಯಿಂದ ಆದರ ಪೂರ್ವಕ ಸ್ವೀಕರಿಸಬೇಕು. ಗುರುಗಳು ನನಗೆ ಕಠಿಣವಾದ ಪ್ರಾಯಶ್ಚಿತ್ತ ಕೊಟ್ಟರು, ಸ್ವಲ್ಪ ಪ್ರಾಯಶ್ಚಿತ್ತ ವಿಧಿಸಿದರು ಎಂಬ ಸಂಶಯವನ್ನು ಮನಸ್ಸಿನಲ್ಲಿ ತರಕೂಡದು. ಪ್ರಮಾದದಿಂದ ಒಮ್ಮೆ ದೋಷವು ಸಂಭವಿಸಿದರೆ ಅದನ್ನು ಪ್ರಾಯಶ್ಚಿತ್ತ ತಕ್ಕೊಂಡು ದೂರಗೊಳಿಸಬೇಕು. ಮುಂದೆ ತಮ್ಮನ್ನು ನೂರಾರು ತುಂಡಾಗು-ವಂತೆ ಕತ್ತರಿಸಿದರೂ ಅಂಥ ದೋಷವನ್ನು ತಿರುಗಿ ಮಾಡುವದಿಲ್ಲವೆಂಬ ಎಚ್ಚರಿಕೆಯನ್ನು ವಹಿಸಬೇಕು. ಅಂದರೇನೇ ಆ ಪ್ರಾಯಶ್ಚಿತ್ತವು ಸಾರ್ಥಕವಾಗುತ್ತದೆ. ಪ್ರಾಯಶ್ಚಿತ್ತವನ್ನು ಅನೇಕ ಗುಣಗಳನ್ನೂ ಧಾರಣ ಮಾಡುವಂಥ ಗುರುವಿನ ಹತ್ತಿರ ಸ್ವೀಕರಿಸಬೇಕು. ಪ್ರಾಯಶ್ಚಿತ್ತವನ್ನು ಕೊಡುವಂಥ ಗುರುವಿನಲ್ಲಿ ಗುಣಗಳು ಹೀಗಿರಬೇಕು — ಅವನು ಸಿದ್ಧಾಂತದ ರಹಸ್ಯವನ್ನು ತಿಳಿದಿರಬೇಕು: ಅತಿಶಯ ಶಾಂತ ಮನಸ್ಸಿನವನಿರಬೇಕು, ಅಪರಿಸ್ರಾವಿ ಅಂದರೆ ಪರರ ದೋಷಗಳನ್ನು ಹೇಳದಂಥ ಗುಣವುಳ್ಳವನಿರಬೇಕು, ಕಾಯ್ದ ಕಬ್ಬಿಣದ ಗುಂಡಿನ ಮೇಲೆ ನೀರು ಹಾಕಿದರೆ ಆ ನೀರು ಉಗಿಯಾಗಿ ಹೋಗಿ ಪುನಃ ವ್ಯಕ್ತವಾಗದಂತೆ ಗುರುಗಳ ಹತ್ತಿರ ಶಿಷ್ಯನು ಪ್ರಕಟಗೊಳಿಸಿದ ದೋಷವು ತಿರುಗಿ ಎಲ್ಲಿಯೂ ಪ್ರಕಟವಾಗದಂತೆ ಕಾಪಾಡುವ ಗುಣವು ಗುರುವಿನಲ್ಲಿರಬೇಕು, ದೇಶ ಕಾಲಗಳ ಪರಿಸ್ಥಿತಿಯನ್ನು ತಿಳಿದವನಿರಬೇಕು, ಏಕಾಂತದಲ್ಲಿ ಕುಳಿತಿರುವಂಥವನಿರಬೇಕು, ಈ ಮೊದಲು ವರ್ಣಿಸಿದ ಆಚಾರ್ಯರ ಗುಣಗಳೆಲ್ಲ ಅವನಲ್ಲಿ ಇರಬೇಕು. ಇಂಥ ಗುರುಗಳ ಸನ್ನಿಧಿಯಲ್ಲಿಯೇ ಪ್ರಾಯಶ್ಚಿತ್ತವನ್ನು ಸ್ವೀಕರಿಸಬೇಕು. ಆಗ ಪ್ರಾಯಶ್ಚಿತ್ತವನ್ನು ಬೇಡುವವನು ಕೈಜೋಡಿಸಿ, ಬಹಳ ವಿನಯದಿಂದ, ಬಾಲಕರಂತೆ ಸರಳ ಮನಸ್ಸಿನವರಾಗಿ, ಆತ್ಮ ನಿಂದೆಯನ್ನೂ ಮಾಡಿಕೊಳ್ಳುತ್ತ ಆಲೋಚನೆಯನ್ನು ಮಾಡಬೇಕು. ಅರಿವೆಯ ಮೇಲೆ ಬಿದ್ದ ರಕ್ತದ ಕಲೆಯನ್ನು ರಕ್ತದಿಂದ ತೊಳೆದರೆ ಹೋಗಲಾರದು. ಕೆಸರಿನಿಂದ ಕೆಸರನ್ನು ತೊಳೆದರೆ ಅದೂ ಹೋಗದು. ಹಾಗೆಯೇ ದೋಷಗಳಿಂದ ಕೂಡಿದ ಗುರುವು ಶಿಷ್ಯನನ್ನೂ ನಿರ್ದೋಷಗೊಳಿಸಲಾರನು. ಮೂರ್ಖ ವೈದ್ಯರು ರೋಗಿಯ ಪ್ರಾಣವನ್ನೇ ಅಪಹರಿಸುವರು. ಅದೇ ಪ್ರಕಾರ ಅಜ್ಞಾನಿಗಳಾದ ಗುರುಗಳು ಶಿಷ್ಯನನ್ನೂ ಸಂಸಾರ ಸಮುದ್ರದಲ್ಲಿ ಮುಳುಗಿಸುವರು. ನಿರ್ದೋಷ ಗುರುವೇ ಪ್ರಾಯಶ್ಚಿತ್ತವನ್ನು ಕೊಟ್ಟು ಶುದ್ಧಗೊಳಿಸಲಿಕ್ಕೆ ಸಮರ್ಥನಾಗಿರುತ್ತಾನೆ. ಸಂಯಮಿ ಪುರುಷರು ಏಕಾಂತದಲ್ಲಿ ಆಲೋಚನೆಯನ್ನೂ ಮಾಡುತ್ತಾರೆ. ಆರ್ಯಿಕೆ ಮೊದಲಾದವರು ಬಹಿರಂಗದಲ್ಲಿ ಒಬ್ಬ ಗುರುವು ಇನ್ನೊಬ್ಬರು ಆರ್ಯಿಕೆಯರು, ಮೂರನೆಯವರು ದೋಷ ಮಾಡಿದಂಥವರು ಹೀಗೆ ಮೂವರು ಇದ್ದಾಗ ಆಲೋಚನಾ ಮಾಡಬೇಕು. ಒಂದು ವೇಳೆ ನಾಚಿಕೆಯಿಂದಲೂ, ತಿರಸ್ಕಾರ ಉಂಟಾದೀತೆಂಬ ಭಾವನೆಯಿಂದಲೂ, ಕಠಿಣ ಪ್ರಾಯಶ್ಚಿತ್ತವನ್ನು ಭೋಗಿಸಬೇಕಾದೀತೆಂಬ ಹೆದರಿಕೆಯಿಂದಲೂ, ಅಭಿಮಾನಕ್ಕೆ ಒಳಗಾಗಿಯೂ ತನ್ನ ದೋಷವನ್ನು ಹೇಳದೆ ಇದ್ದರೆ ಅವರಿಗೆ ಲಾಭಹಾನಿಗಳನ್ನು ನೋಡದ ವ್ಯಾಪಾರಿಯಂತೆ ಕರ್ಮರೂಪ ಋಣದಿಂದ ಭ್ರಷ್ಟವಾಗಬೇಕಾಗುತ್ತದೆ. ದೋಷದ ಆಲೋಚನೆಯನ್ನು ಮಾಡದೆ, ಭಯಂಕರ ತಪಶ್ಚರಣವನ್ನು ಮಾಡಿದರೂ ಸಹ ಅದರಿಂದ ಇಚ್ಛಿಸಿದ ಫಲವು ಪ್ರಾಪ್ತವಾಗುವದಿಲ್ಲ. ಆಲೋಚನೆಯನ್ನು ಮಾಡಿ, ಗುರುವು ಹೇಳಿದ ಪ್ರಾಯಶ್ಚಿತ್ತವನ್ನು ತಕ್ಕೊಳ್ಳದೆ ಇದ್ದರೆ ವೈದ್ಯನು ಕೊಟ್ಟ ಔಷಧವನ್ನು ತಿನ್ನದಂಥ ರೋಗಿಯ ಸ್ಥಿತಿಯಂತೆ ಆಗುತ್ತದೆ. ಅವನು ಶುದ್ಧನಾಗಲಾರನು. ನೇಗಿಲವನ್ನು ಹೊಡೆದು, ಸ್ವಚ್ಛ ಮಾಡದ ನೆಲದಲ್ಲಿ ಬೆಳೆಯು ಬರಲಾರದು. ಸ್ವಚ್ಛವಿಲ್ಲದ ಕನ್ನಡಿಯಲ್ಲಿ ಮುಖವು ಕಾಣಲಾರದು. ಅದರಂತೆಯೇ ಚಿತ್ತ ಶುದ್ಧಿಯಿಲ್ಲದ ಜೀವಿಗಳಲ್ಲಿ ಚಾರಿತ್ರ್ಯದ ಉಜ್ಜ್ವಲತೆಯು ವ್ಯಕ್ತವಾಗಲಾರದು. ಕಲಿಕಾಲದ ಪ್ರಭಾವದಿಂದ ಪ್ರಾಯಶ್ಚಿತ್ತವನ್ನು ಕೊಡುವಂಥ ನಿರ್ದೋಷಿಗಳಾದ ಗುರುಗಳು ಕಂಡು ಬರುವದಿಲ್ಲ. ಯಾರು ತಾವೇ ಅನೇಕ ಪಾಪಗಳಿಂದ ಲಿಪ್ತರಾಗಿರುವರೋ ಅವರು ಅನ್ಯರನ್ನು ಹೇಗೆ ಶುದ್ಧ ಮಾಡಿಯಾರು? ರಕ್ತದಿಂದ ರಕ್ತವನ್ನು ಹೇಗೆ ತೊಳೆಯಲಿಕ್ಕೆ ಆದೀತು? ಈ ವಿಷಯದಲ್ಲಿ ಶ್ರೀ ಗುಣಭದ್ರಾಚಾರ್ಯರು ತಮ್ಮ 'ಆತ್ಮಾನುಶಾಸನ' ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ.

ಕಲೌ ದಂಡೋ ನೀತಿಃ ಸ ಚ ನೃಪತಿಭಿಸ್ತೇ ನೃಪತಯೋ
ನಯಂತ್ಯರ್ಥಾರ್ಥಂ ತಂ ನ ಚ ಧನಮದೋಽಸ್ತ್ಯಾಶ್ರಮವತಾಮ್ ।
ನತಾನಾಮಾಚಾರ್ಯಾ ನ ಹಿ ನತಿರತಾಃ ಸಾಧುಚರಿತಾ-
ಸ್ತಪಸ್ಸ್ತೇಷು ಶ್ರೀಮನ್ಮಣಯ ಇವ ಜಾತಾಃ ಪ್ರವಿರಲಾಃ ॥ ೧೪೯ ॥

ಅರ್ಥ—ಕಲಿಕಾಲದಲ್ಲಿ ನೀತಿ ಮಾರ್ಗವು ದಂಡವನ್ನವಲಂಬಿಸಿದೆ. ದಂಡದ ಹೆದರಿಕೆಯು ಇಲ್ಲದೆ ಯಾರೂ ಸ್ವತಃ ನ್ಯಾಯಮಾರ್ಗದ ಕಡೆಗೆ ಪ್ರವೃತ್ತರಾಗಲಾರರು ದಂಡವನ್ನು ವಿಧಿಸಲಿಕ್ಕೆ ಸ್ವತಃ ರಾಜನೇ ಸಮರ್ಥನಾಗಿದ್ದಾನೆ ರಾಜನಂಥ ಬಲಿಷ್ಠ ಪುರುಷನ ಹೊರತಾಗಿ ಸಹಧರ್ಮಿ ಜನರಾಗಲಿ, ವೃದ್ಧರಾಗಲಿ, ಸಮಾಜದೊಳಗಿನ ಮುಖಂಡರಾಗಲಿ ದಂಡವನ್ನು ವಿಧಿಸಿದರೆ ಯಾರೂ ಒಪ್ಪುವದಿಲ್ಲ ಆದರೆ ಈ ಕಾಲದಲ್ಲಿ ರಾಜನೂ ಸಹ ಯಾವುದರಿಂದ ಧನವು ಲಭಿಸೀತೋ ಅಂಥ ದಂಡವನ್ನೇ ವಿಧಿಸುತ್ತಾರೆ. ನಿರ್ಧನರಿಗೆ ದಂಡವನ್ನೇ ಮಾಡುವದಿಲ್ಲ ಆಶ್ರಮದಲ್ಲಿರುವ ಸನ್ಯಾಸಿಯ ಹತ್ತರ ಧನವೆಲ್ಲಿಯದು? ಅಂತಲೇ ಸಂಯಮವನ್ನು ಸ್ವೀಕರಿಸಿ, ಕುಮಾರ್ಗದಿಂದ ನಡೆಯುವ ತ್ಯಾಗಿಗಳಿಗೆ ರಾಜನು ದಂಡವನ್ನು ವಿಧಿಸಲಿಕ್ಕೆ ಹೋಗುವದಿಲ್ಲ ಅವರಿಗೆ ಆಚಾರ್ಯರು ದಂಡವನ್ನು ವಿಧಿಸಬೇಕಾಗುವದು ಸದ್ಯಕ್ಕೆ ಆಚಾರ್ಯರು ಶಿಷ್ಯರನ್ನು ಪ್ರೀತಿಸುತ್ತಾರೆ ಮೇಲಾಗಿ ಯಾರು ತಮಗೆ ಶರಣು ಬರುವರೋ ಅವರಿಗೆ ದಂಡವನ್ನು ವಿಧಿಸುವದಿಲ್ಲ ತಮ್ಮ ಸಂಘ, ಸಂಪ್ರದಾಯಗಳನ್ನೂ ವಿಸ್ತರಿಸುವ ಅಪೇಕ್ಷೆಯಲ್ಲಿ ತಮಗೆ ನಮಸ್ಕಾರ ಮಾಡಿದವರೆಲ್ಲ ತಮ್ಮವರೆಂದು ತಿಳಿಯುತ್ತಾರೆ ಅವರಿಗೆ ಶಿಕ್ಷೆಯನ್ನೇ ನೀಡುವದಿಲ್ಲ ಇದರಿಂದ ಅವರ ಶಿಷ್ಯರು ಶಾಸ್ತ್ರಕ್ಕೆ ವಿರುದ್ಧವಾಗಿ ಆಚರಿಸಲಿಕ್ಕೆ ತೊಡಗುತ್ತಾರೆ ಈ ಕಾರಣದಿಂದ ಈ ಕಾಲದಲ್ಲಿ ತಪಸ್ವಿಗಳಲ್ಲಿಯೂ ಸಹ ಸತ್ಯನಿಷ್ಠುರ ಸಾಧುಗಳ ಸಂಖ್ಯೆಯೂ ತೀರ ಕಡಿಮೆಯಾಗಿದೆ ಕೇವಲ ಸೋಗ ಮಾಡುವ ಜನರೇ ಬಹು ಸಂಖ್ಯೆಯಲ್ಲಿ ಕಾಣುತ್ತಾರೆ ಒಟ್ಟಿನಲ್ಲಿ, ಪ್ರಾಯಶ್ಚಿತ್ತವನ್ನು ತಕ್ಕೊಳ್ಳದ ಹೊರತಾಗಿ ಜೀವದ ಪರಮ ಕಲ್ಯಾಣವು ಆಗಲಾರದು ಗೃಹಸ್ಥರು ಜಿನ ಪ್ರತಿಮೆಯ ಎದುರಿಗೆ ನಿಂತು, ತಮ್ಮ ಅಪರಾಧದ ಆಲೋಚನೆಯನ್ನು ಮಾಡಬೇಕು ಅಲ್ಲದೆ ಮತ್ತೊಮ್ಮೆ ಆ ಅಪರಾಧವು ಸಂಭವಿಸಲಿಕ್ಕಿಲ್ಲವೆನ್ನುವಂತೆ ಎಚ್ಚರವನ್ನೂ ವಹಿಸಬೇಕು ಅಂದರೆ ಗೃಹಸ್ಥನು ಪ್ರಾಯಶ್ಚಿತ್ತವನ್ನು ತಕ್ಕೊಂಡಂತಾಯಿತು

೨. ವಿನಯ–ದರ್ಶನ ವಿನಯ—ವಿನಯದಲ್ಲಿ ದರ್ಶನ ವಿನಯ, ಜ್ಞಾನ ವಿನಯ, ಚಾರಿತ್ರ ವಿನಯ, ತಪ ವಿನಯ, ಉಪಚಾರ ವಿನಯಗಳೆಂಬ ಐದು ಭೇದಗಳಿವೆ ಇನ್ನು ಪದಾರ್ಥದ ಸ್ವರೂಪದ ವಿಷಯದಲ್ಲಿ ಶ್ರದ್ಧೆಯನ್ನು ಇಡುವಾಗ ಸಂಶಯವೇ ಮೊದಲಾದ ಎಂಟು ದೋಷಗಳನ್ನು ಮೂಲದಲ್ಲಿಯೇ ಆಗಗೊಡದಂತೆ ಇರುವುದಕ್ಕೆ ದರ್ಶನವಿನಯವೆನ್ನುವರು ಸಮ್ಯಗ್ದರ್ಶನಕ್ಕನುಕೂಲವಾದ ಪರಿಣಾಮವಾದಲ್ಲಿ ಹರ್ಷಗೊಳ್ಳುವಿಕೆ, ಸಮ್ಯಕ್ತ್ವವು ಶುದ್ಧವಾಗಲೆಂದು ಹಗಲಿರುಳೂ ಉದ್ಯೋಗ ಮಾಡುತ್ತಿರುವಿಕೆ, ಸಮ್ಯಗ್ದೃಷ್ಟಿಯುಳ್ಳ ಪುರುಷನ ಸಂಗತಿಯು ಲಭಿಸಲೆಂದು ಯಾವಾಗಲೂ ಬಯಸುವಿಕೆ, ಮಿಥ್ಯಾಧರ್ಮದ ಪ್ರಶಂಸೆಯನ್ನು ಮಾಡದಿರುವಿಕೆ, ಮಿಥ್ಯಾದೃಷ್ಟಿಯ ತಪ, ದಾನ, ಜ್ಞಾನಗಳನ್ನು ಹೊಗಳದಿರುವಿಕೆ, ವೀತರಾಗ ಪ್ರಭುವು ಹೇಳಿದ್ದು ಪ್ರಮಾಣವೆಂದು ಬುದ್ಧಿಯನ್ನು ಇಡುವಿಕೆ–ಇವೆಲ್ಲವುಗಳಿಗೆ ದರ್ಶನ ವಿನಯವೆನ್ನುವರು. ಇದರಲ್ಲಿ ಮಿಥ್ಯಾದೃಷ್ಟಿಯ ತಪ, ಜ್ಞಾನ, ಆಚರಣೆಗಳ ಪ್ರಶಂಸೆಯನ್ನು ಮಾಡಕೂಡದೆಂದು ಹೇಳಿದೆ ಅದಕ್ಕೆ ಕಾರಣವೂ ಇಲ್ಲದಿಲ್ಲ ಮಿಥ್ಯಾದೃಷ್ಟಿಯ ಆಚರಣೆಯಿಂದ ಇಹ–ಪರಲೋಕಗಳಲ್ಲಿ ಕೀರ್ತಿ, ಪ್ರಸಿದ್ಧಿ, ವಿಷಯ ಸುಖ, ಧನಸಂಪತ್ತಿನ ಇಚ್ಛೆ ಇವೇ ಉತ್ಪನ್ನ-ವಾಗತಕ್ಕವು ಇವುಗಳಿಂದ ಆತ್ಮ ಪ್ರಾಪ್ತಿಯು ಹೇಗಾದೀತು? ಅಂತಲೇ ಅವು ಬಂಧಕ್ಕೆ ಕಾರಣವಾಗಿವೆ ಅದಕ್ಕಾಗಿ ಅವು ಪ್ರಮಾಣವಲ್ಲ, ಅವುಗಳನ್ನು ಪ್ರಶಂಸಿಸಕೂಡದು

ಜ್ಞಾನ ವಿನಯ – ಆಲಸ್ಯ ವಿಕ್ಷೇಪಗಳನ್ನು ತೊರೆದು, ವಿಷಯ ಕಷಾಯವೆಂಬ ಮಲವನ್ನು ಇಲ್ಲದಂತೆ ಮಾಡಿ, ಶುದ್ಧ ಮನಸ್ಸಿನಿಂದ ಪರಮಾಗಮದ ಜ್ಞಾನವನ್ನು ಮಾಡಿಕೊಳ್ಳುವದಕ್ಕೆ ಜ್ಞಾನವಿನಯವೆನ್ನುವರು ಇದನ್ನು ಸಾಧಿಸುವವನು ಬಹು ಚಾತುರ್ಯದಿಂದ ದೇಶ–ಕಾಲಗಳ ವಿಶುದ್ಧತೆಯನ್ನು ನೋಡಿಕೊಳ್ಳುವನು. ಅಲ್ಲದೆ ಬಹಳ ಆದರದಿಂದ ತನ್ನ ಶಕ್ತಿಗೆ ಅನುಸರಿಸಿ ತಪಸ್ಸನ್ನೂ ಆಚರಿಸುವನು ಆ ಮೇಲೆ ವೀತರಾಗ ಪ್ರಭುವು ಪ್ರರೂಪಿಸಿದ ಶಾಸ್ತ್ರಗಳ ಅಭ್ಯಾಸ ಹಾಗೂ ಚಿಂತನಗಳನ್ನು ಮಾಡುವನು. ಆಗ ಅದು ಜ್ಞಾನ ವಿನಯವೆನಿಸುತ್ತದೆ ಜ್ಞಾನದ ಅಭ್ಯಾಸಮಾಡುವುದರಲ್ಲಿಯೇ ಜೀವದ ಕಲ್ಯಾಣವಿದೆ ಜ್ಞಾನವಿಲ್ಲದ ಮನುಷ್ಯನು ಪಶುವಿಗೆ ಸಮಾನನು. ಮಾನವನಿಗೆ ಮನುಷ್ಯತ್ವವು ಜ್ಞಾನದಿಂದಲೇ ಒದಗುತ್ತದೆ ಕಾಮಕ್ರೀಡೆ, ಆಹಾರ, ಇಂದ್ರಿಯ ವಿಷಯ ಇವಂತೂ ಪಶುಗಳಿಗೂ ಇರುತ್ತವೆ ಜ್ಞಾನ ವಿನಯವನ್ನು ಧಾರಣಮಾಡುವವನು ಯಾವಾಗಲೂ ಸಮ್ಯಗ್‌ಜ್ಞಾನದ ಅಪೇಕ್ಷೆಯನ್ನೇಮಾಡುವನು.

ಚಾರಿತ್ರ ವಿನಯ—ಜ್ಞಾನ ಮತ್ತು ದರ್ಶನಗಳು ಯಾವ ಪುರುಷನಲ್ಲಿ ಇರುವವೋ ಅವನು ಪಂಚಾಚಾರಗಳ ವರ್ಣನೆಯನ್ನು ಕೇಳಿದ ಕೂಡಲೆ ಸರ್ವ ಶರೀರದ ತುಂಬೆಲ್ಲ ರೋಮಾಂಚಗಳನ್ನು ಹೊಂದುತ್ತಾನೆ.

ಅಲ್ಲದೆ ಅವನ ಅಂತರಂಗದಲ್ಲಿ ಭಕ್ತಿಯು ಪ್ರಕಟವಾಗುತ್ತದೆ ಇದರಿಂದ ವಿಷಯ ಕಷಾಯಗಳ ನಿಗ್ರಹವಾಗಿ ಶಾಂತ ಪರಿಣಾಮವು ಉಂಟಾಗುತ್ತದೆ. ಆಗ ಅವನು ನತ ಮಸ್ತಕನಾಗಿ ಚಾರಿತ್ರವನ್ನು ಧಾರಣ ಮಾಡಲಿಕ್ಕೆ ಸಿದ್ಧನಾಗುತ್ತಾನೆ ಇದು ಚಾರಿತ್ರ ವಿನಯವಾಗಿದೆ

ತಪ ವಿನಯ—ಸಂಸಾರದೊಳಗಿನ ದುಃಖವನ್ನು ಇಲ್ಲದಂತೆ ಮಾಡುವ, ಆತ್ಮನಿಗೆ ಶಾಶ್ವತ ಹಾಗೂ ನಿರ್ಬಾಧ ಸುಖವನ್ನು ಒದಗಿಸುವ, ವಿಷಯ ಕಷಾಯಾದಿ ರೋಗಗಳ ಬಾಧೆಯಿಂದ ಮುಕ್ತಗೊಳಿಸುವ ಸಾಮರ್ಥ್ಯವು ತಪಕ್ಕೇನೇ ಇರುತ್ತದೆ ಅಂದ ಮೇಲೆ ಈ ತಪಕ್ಕೆ ಶರಣು ಹೋಗಬೇಕೆಂಬ ವಿಚಾರವು ಯಾರ ಮನಸ್ಸಿನಲ್ಲಿ ಬರುವುದೋ ಅವರಿಗೆ ತಪ ವಿನಯವು ಸಾಧಿಸುತ್ತದೆ ತಪಸ್ವಿಗಳನ್ನು ಶ್ರೇಷ್ಠರೆಂದು ತಿಳಿದು ಅವರ ಸೇವೆ, ಭಕ್ತಿ, ವೈಯಾವೃತ್ಯ, ಸ್ತುತಿ ಮೊದಲಾದವುಗಳನ್ನು ಮಾಡುವುದೂ ತಪ ವಿನಯವೇ ಆಗಿದೆ ತಮ್ಮ ಶಕ್ತಿಗನುಸರಿಸಿ, ಇಂದ್ರಿಯಗಳ ನಿಗ್ರಹ ಮಾಡಿ, ದೇಶ ಕಾಲಗಳಿಗನುಸರಿಸಿ, ಉಪವಾಸವೇ ಮೊದಲಾದ ತಪಗಳನ್ನು ಮಾಡಲಿಕ್ಕೆ ಪ್ರವೃತ್ತರಾಗುವುದು ಸಹ ತಪವಿನಯದಲ್ಲಿಯೇ ಸಮಾವೇಶವಾಗುತ್ತದೆ.

ಉಪಚಾರ ವಿನಯ—ಇದರ ಸ್ವರೂಪವು ಹೀಗಿದೆ ಆಚಾರ್ಯಾದಿ ಪೂಜ್ಯ ಪುರುಷರನ್ನೂ ಕಂಡ ಕೂಡಲೆ ಎದ್ದು ನಿಲ್ಲಬೇಕು, ಗುರುವಿನ ಎದುರಿಗೆ ಏಳು ಹೆಜ್ಜೆಗಳಷ್ಟು ನಡೆದು ಹೋಗುವುದು, ಅವರಿಗೆ ವಂದಿಸುವುದು, ಕೈಜೋಡಿಸುವುದು, ಅವರನ್ನು ಮುಂದೆ ನಡೆಯಗೊಟ್ಟು ತಾವು ಹಿಂದಿನಿಂದ ನಡೆಯುವುದು, ಅವರು ಕೂತ ಮೇಲೆ ತಾವು ಕೂಡುವುದು, ನಮಸ್ಕಾರ ಮಾಡಿ ರತ್ನತ್ರಯಗಳ ಕುಶಲವನ್ನು ವಿಚಾರಿಸುವುದು, ಅವರ ಆಜ್ಞೆಯಂತೆ ನಡೆಯುವುದು, ಪಠನ, ಪಾಠನ, ತಪಶ್ಚರಣ, ಆತಾಪನಯೋಗ, ಸಿದ್ಧಾಂತದ ಅಭ್ಯಾಸಮಾಡುವುದು, ವಿಹಾರ ಮಾಡುವುದು, ವಂದನೆಯನ್ನು ಮಾಡುವದಕ್ಕಾಗಿ ಕ್ಷೇತ್ರಗಳ ಸಂಚಾರ ಕೈಕೊಳ್ಳುವುದು, ಈ ಎಲ್ಲ ಕಾರ್ಯಗಳನ್ನು ಗುರುಗಳನ್ನು ವಿಚಾರಿಸಿ ಮಾಡುವುದು, ಗುರುವು ಸಮಕ್ಷವಿದ್ದಾಗ ತಾವು ಆಸನದಲ್ಲಿ ಕೂಡದೆ ಕೆಳಗೆ ಕೂಡುವುದು ಇವೆಲ್ಲ ಉಪಚಾರ ವಿನಯಗಳೆನಿಸುತ್ತವೆ ಈ ಕ್ರಿಯೆಗಳು ಪ್ರತ್ಯಕ್ಷ ಗುರುಗಳು ಇದ್ದಾಗ ಮಾಡುವಂಥವುಗಳು ಆದುವು ಆದರೆ ಒಂದು ವೇಳೆ ಗುರುಗಳೇ ಮೊದಲಾದ ಪೂಜ್ಯ ಪುರುಷರು ಪರೋಕ್ಷದಲ್ಲಿ ಇದ್ದರೆ ಮನವಚನಕಾಯಗಳ ಶುದ್ಧಿಯನ್ನು ಮಾಡಿಕೊಂಡು ಅವರಿಗೆ ನಮಸ್ಕಾರ ಮಾಡುವುದು, ಕೈಜೋಡಿಸುವುದು, ಅವರ ಗುಣಗಳ ಸ್ಮರಣ ಮಾಡುವುದು, ಅವರು ಮಾಡಿದ ಆಜ್ಞೆಯನ್ನು ಪಾಲಿಸುವುದು ಇವೆಲ್ಲ ಉಪಚಾರ ವಿನಯವೆನಿಸುತ್ತವೆ ಇವುಗಳ ಪ್ರಭಾವದಿಂದ ಸಮ್ಯಗ್ದರ್ಶನದ ಲಾಭವಾಗುತ್ತದೆ ಅನೇಕ ವಿದ್ಯೆಗಳು ಸಿದ್ಧಿಸುತ್ತವೆ ಸೊಕ್ಕು ಇಲ್ಲದಂತೆ ಆಗುತ್ತದೆ ಆಚಾರದ ಉಜ್ವಲತೆಯು ಉಂಟಾಗುತ್ತದೆ ಸಮ್ಯಕ್ ಆರಾಧನೆಯು ಸಂಭವಿಸುತ್ತದೆ ಕೀರ್ತಿಯು ನಿರ್ಮಲ-ವಾಗುತ್ತದೆ. ಕರ್ಮದ ನಿರ್ಜರೆಯೂ ಆಗುತ್ತದೆ ಇನ್ನು ಇದಲ್ಲದೆ ಇತರ ಧರ್ಮೀಯ ಜನರೊಡನೆಯೂ ಮಂದ ಜ್ಞಾನಿ ಜೀವಗಳ ಕೂಡವೂ ಯಥಾಯೋಗ್ಯ ವಿನಯವನ್ನು ವ್ಯಕ್ತಗೊಳಿಸಬೇಕು. ಮಿಥ್ಯಾದೃಷ್ಟಿ ಇದ್ದರೂ ಅವನ ತಿರಸ್ಕಾರವನ್ನೂ ಸಹ ಮಾಡಕೂಡದು ಅವರ ಕೂಡ ಸವಿಯಾದ ಮಾತುಗಳನ್ನೂ ಬಹಳ ಆದರದಿಂದ ಅವರಿಗೆ ಸಂತೋಷವಾಗುವಂತೆ ಮಾತನಾಡಬೇಕು. ಅವರ ದುಃಖವು ಇಲ್ಲದಂತೆ ಆಗುವ ಹಾಗೆ ನಮ್ಮ ವಾಣಿಯು ಇರಬೇಕು. ಉದ್ಧಟ ನಡತೆಯಿಂದ ಇಹಪರ ಲೋಕಗಳೆರಡೂ ಕೆಡುತ್ತವೆ ಉಪಚಾರ ವಿನಯವು ಮನ–ವಚನ–ಕಾಯದ ಮಾರ್ಗದಿಂದ ಅನೇಕ ವಿಧವಾಗಿದೆ ಗುರುಗಳ ಅಥವಾ ಸಮ್ಯಗ್ದರ್ಶನ ಗುಣವನ್ನು ಧಾರಣ ಮಾಡಿದವರ ಕೂಡುವ ಆಸನ, ಹಾಸಿಗೆ ಮೊದಲಾದವುಗಳನ್ನು ಸ್ವಚ್ಛ ಮಾಡುವುದು, ಅವರ ಆಸನಕ್ಕಿಂತ ತಾವು ಕೆಳಗೆ ಕೂಡುವುದು, ಮಲಗುವುದು, ಅವರಿಗೆ ಸುಖವೆನಿಸುವ ರೀತಿಯಲ್ಲಿ ಕಾಲುಗಳನ್ನು ಒತ್ತುವುದು, ಅವರಿಗೆ ದುಃಖವು ಪ್ರಾಪ್ತವಾದಲ್ಲಿ, ರೋಗವು ಉತ್ಪನ್ನವಾದಲ್ಲಿ ಅವರ ಸೇವೆಯನ್ನು ಮಾಡಿ ತಮ್ಮ ಜನ್ಮವು ಸಫಲವಾಯಿತೆಂದು ತಿಳಿಯುವುದು, ಅವರ ಎದುರಿಗೆ ಉಗುಳದೆ ಇರುವುದು, ಮೈಮುರಿಯದಿರುವುದು, ಆಕಳಿಕೆ, ತೇಗುಗಳನ್ನು ಬಿಡದಿರುವುದು, ಬೆರಳುಗಳನ್ನು ಮುರಿಯದಿರುವುದು, ಕೈಕಾಲುಗಳನ್ನು ಪಸರಿಸದೆ ಇರುವುದು, ಚಪ್ಪಾಳೆ ಬಾರಿಸದೆ ಇರುವುದು, ಶರೀರ, ಹುಬ್ಬುಗಳನ್ನು ಅಂಕಡೊಂಕಗೊಳಿಸದೆ ಇರುವುದು, ಶರೀರವನ್ನು ಸಿಂಗರಿಸಿಕೊಳ್ಳದಿರುವುದು ಇವೆಲ್ಲ ಕ್ರಿಯೆಗಳೂ ವಿನಯದಲ್ಲಿಯೇ ಸಮಾವೇಶಗೊಳ್ಳುತ್ತವೆ. ವಿನಯ ಗುಣವುಳ್ಳ ಪುರುಷನು ತಾನು ಉಚ್ಚಾಸನದಲ್ಲಿ ಕುಳಿತು, ಸಂಯಮಿ ಪುರುಷನಿಗೆ ನಮಸ್ಕಾರ ಮಾಡುವದಿಲ್ಲ, ಸಂಯಮಿಗಳು ಇರುವಲ್ಲಿಗೆ ಹೋಗಿ ನಮಸ್ಕಾರ ಮಾಡುತ್ತಾನೆ. ಸಂಯಮಿಗಳು ಬರುತ್ತಾರೆಂದು ತಿಳಿದೊಡನೆಯೇ ಆಸನದಿಂದ ಎದ್ದು ನಿಲ್ಲುತ್ತಾನೆ. ಗುರುವಿನ ಆಜ್ಞೆಯನ್ನು ನಾವು ಪಾಲಿಸಿದರೆ

ಮಾತ್ರ ಪುಣ್ಯವಂತರೆಂಬ ಭಾವನೆಯು ಅವರಲ್ಲಿ ಇರುತ್ತದೆ ಇದಕ್ಕೆ ವಿಪರೀತವಾಗಿ ಉದ್ಧಟ ಜನರಲ್ಲಿ ವ್ರತ, ಸಂಯಮ, ವಿದ್ಯಾ, ಶೀಲಗಳಿದ್ದರೂ ಸಹ ಎಲ್ಲವೂ ನಿಷ್ಫಲವಾಗಿರುತ್ತದೆ ವಿನಯದ ಪ್ರಭಾವದಿಂದ ಕ್ರೋಧ, ಮಾನ, ವೈರ ಮೊದಲಾದವುಗಳು ಇಲ್ಲದಂತೆ ಆಗುತ್ತವೆ ಹಾಗೆಯೇ ಸಂಸಾರಕ್ಕೆ ಸಂಬಂಧಿಸಿದ ಲಕ್ಷ್ಮಿ, ಸೌಭಾಗ್ಯ, ಕೀರ್ತಿ, ಮಿತ್ರತ್ವ ಗುಣಗ್ರಹಣ, ಸರಳತೆ, ಮಾನ್ಯತೆ, ಕೃತಜ್ಞತೆ ಮೊದಲಾದ ಗುಣಗಳೂ ಇಲ್ಲದಂತೆ ಆಗುತ್ತವೆ. ಅಂತಲೇ ಸಾಧುಗಳೂ ಗೃಹಸ್ಥರೂ ಸಂಪೂರ್ಣ ಧರ್ಮದ ಮೂಲವೆನಿಸುವ ವಿನಯವನ್ನು ಧರಿಸುವುದು ಯೋಗ್ಯವಾಗಿದೆ.

೩. ವೈಯಾವೃತ್ಯ—ಅಂದರೆ ಸೇವೆ ಇದು ಯಾರಿಗೆ ಗುಣದ ಮೇಲೆ ಪ್ರೀತಿಯೂ ಧರ್ಮದ ಮೇಲೆ ಶ್ರದ್ಧೆಯೂ ಧರ್ಮಾತ್ಮಾ ಪುರುಷರ ಮೇಲೆ ವಾತ್ಸಲ್ಯವೂ ನಿರ್ವಿಚಿಕಿತ್ಸೆಯೇ ಮೊದಲಾದ ಗುಣಗಳು ಇರುವವೋ ಅವರಿಗೇ ಸಾಧಿಸುತ್ತದೆ ಕೃತಘ್ನರಿಗೆ ಆಚಾರ್ಯ ಮೊದಲಾದವರ ವೈಯಾವೃತ್ಯ ಮಾಡಬೇಕೆಂಬ ವಿಚಾರವು ಮನಸ್ಸಿನಲ್ಲಿ ಬರುವದಿಲ್ಲ ಹತ್ತು ಪ್ರಕಾರದ ಸಾಧುಗಳ ವೈಯಾವೃತ್ಯವನ್ನು ಮಾಡಬೇಕೆಂದು ಆಗಮದಲ್ಲಿ ಹೇಳಿದೆ. ಆ ಹತ್ತು ಪ್ರಕಾರದ ಸಾಧುಗಳು ಇವರೆನಿಸುತ್ತಾರೆ —ಆಚಾರ್ಯ, ಉಪಾಧ್ಯಾಯ, ತಪಸ್ವಿ, ಶೈಕ್ಷ್ಯ, ಗ್ಲಾನ, ಗುಣ, ಕುಲ, ಸಂಘ, ಸಾಧು ಮತ್ತು ಮನೋಜ್ಞ ಇವರಲ್ಲಿ ಸಮ್ಯಗ್ದರ್ಶನಾದಿ ಗುಣಗಳಿಗೂ ಸ್ವರ್ಗಮೋಕ್ಷಾದಿ ಸುಖಗಳಿಗೂ ಯಾರು ಅಮೃತದ ಬೀಜವೆಂದು ತಿಳಿಯುವರೋ ಅವರಿಗೆ ಆಚಾರ್ಯರೆನ್ನುವರು ಇವರು ವ್ರತ, ಸಂಯಮ, ತಪಾದಿಗಳನ್ನು ತಮ್ಮ ಹಿತಕ್ಕಾಗಿ ಧಾರಣ ಮಾಡಿರುತ್ತಾರೆ ಇಂಥ ಆಚಾರ್ಯರ ಸೇವೆಯನ್ನು ತಮ್ಮ ಶರೀರದಿಂದಲೂ ಇತರ ಹಾಸಿಗೆ ಆಸನಾದಿಗಳನ್ನಿತ್ತೂ ಮಾಡುವದಕ್ಕೆ ಆಚಾರ್ಯ ವೈಯಾವೃತ್ಯವೆನ್ನುವರು. ಆಚಾರ್ಯರ ವೈಯಾವೃತ್ಯವನ್ನು ಮಾಡುವದೆಂದರೆ ಪರಂಪರೆಯಿಂದ ಎಲ್ಲ ಸಂಘದ ವೈಯಾವೃತ್ಯವನ್ನು ಮಾಡಿದಂತೆಯೇ ಇದೆ. ಯಾಕಂದರೆ ಸಮಸ್ತ ಸಂಘದ ಅಸ್ತಿತ್ವವು ಆಚಾರ್ಯರ ಪ್ರಭಾವವನ್ನೇ ಅವಲಂಬಿಸಿದೆ

**ಮುನಿಗಳ ಭೇದ**—ಜಿನೇಶ್ವರನು ವರ್ಣಿಸಿದಂಥ ವ್ರತ, ಶೀಲ, ತಪ, ಸಂಯಮ ಧಾರಣ ಮಾಡುವಂಥ ಮುನಿಯ ಹತ್ತರ ಹೋಗಿ ಯಾರು ಪರಮಾಗಮದ ಅಧ್ಯಯನವನ್ನು ಹಾಗೂ ಪಠನವನ್ನು ಮಾಡುವರೋ ಅವರು ತಪಸ್ವಿಗಳು. ಶ್ರುತ ಜ್ಞಾನದ ಶಿಕ್ಷಣದಲ್ಲಿಯೂ ವ್ರತಶೀಲಗಳ ಭಾವನೆಯಲ್ಲಿಯೂ ಯಾರು ನಿರಂತರ ತತ್ಪರ-ರಾಗಿರುವರೋ ಅವರು ಶೈಕ್ಷ್ಯರು. ರೋಗಾದಿಗಳಿಂದ ಯಾರ ಶರೀರವು ಪೀಡಿತವಾಗಿರುವುದೋ ಅವರು ಗ್ಲಾನರು. ವೃದ್ಧ ಮುನಿಗಳ ಸಮೂಹವು ಗಣವೆನಿಸುತ್ತದೆ. ದೀಕ್ಷೆಯನ್ನು ಕೊಡುವಂಥ ಆಚಾರ್ಯರ ಶಿಷ್ಯ ಸಮೂಹಕ್ಕೆ ಕುಲವೆನ್ನುವರು. ನಾಲ್ಕು ಪ್ರಕಾರದ ಮುನೀಶ್ವರರ ಸಮುದಾಯವೇ ಸಂಘವು. ಅನೇಕ ವರ್ಷಗಳಿಂದ ದೀಕ್ಷೆಯನ್ನು ತಕ್ಕೊಂಡಂಥವನು ಸಾಧುವು ಜನರಲ್ಲಿ ಪಂಡಿತನೆಂದು ಮರ್ಯಾದೆಯನ್ನು ಹೊಂದುವವನೂ ವಕ್ತೃವೂ ಕುಲೀನನೂ ಆದವನು ಮನೋಜ್ಞನು. ಈ ಪ್ರಕಾರ ಹತ್ತು ಪ್ರಕಾರದ ಮುನಿಗಳಿದ್ದಾರೆ ಇವರಿಂದ ಧರ್ಮದ ಗೌರವವು ಹೆಚ್ಚುತ್ತದೆ ಇಂಥವರ ಶರೀರದಲ್ಲಿ ರೋಗವು ಉತ್ಪನ್ನವಾದಲ್ಲಿ, ಅವರ ಮೇಲೆ ಸಂಕಟ ಬಂದಲ್ಲಿ, ಅವರ ಪರಿಣಾಮದಲ್ಲಿ ಮಿಥ್ಯಾತ್ವಭಾವವು ಉತ್ಪನ್ನವಾಗುವ ಸಂಭವವಿದ್ದಲ್ಲಿ ಅವರಿಗೆ ಯಥಾಕ್ರಮವಾಗಿ ಊಟ, ಪಾತ್ರೆ, ವಸತಿಯು ಸ್ಥಳ, ಸಹಾಯ, ಧರ್ಮೋಪದೇಶ ಮೊದಲಾದವುಗಳನ್ನು ನೀಡಿ ಶ್ರದ್ಧೆಯನ್ನು ದೃಢಗೊಳಿಸಬೇಕು. ಅದರಂತೆ ಪುಸ್ತಕ, ಪಿಂಛಿ, ಕಮಂಡಲು ಮೊದಲಾದ ಧರ್ಮೋಪಕರಣಗಳನ್ನು ದಾನಕೊಡುವುದು. ಪ್ರಸಂಗ ಬಂದಾಗ ಧೈರ್ಯ ಹಾಗೂ ಉಪದೇಶಗಳನ್ನು ಕೊಟ್ಟು, ಅವರು ಸಂತೋಷವೃತ್ತಿಯನ್ನು ಧಾರಣ ಮಾಡುವಂತೆ ಮಾಡುವುದು, ಅವರ ವೀತರಾಗ ವೃತ್ತಿಯು ಬೆಳೆಯುವಂತೆ ಉಪಾಯಗಳನ್ನು ಯೋಜಿಸುವುದು ಇವೆಲ್ಲ ವೈಯಾವೃತ್ಯ-ಗಳಾಗಿವೆ ಬಹಿರಂಗವಾಗಿ ಔಷಧೋಪಚಾರ, ಭೋಜನ ಮೊದಲಾದವುಗಳು ಪ್ರಾಪ್ತವಾಗುವಂತೆ ಇರದಿದ್ದರೆ ತಾವು ಸ್ವತಃ ಅವರ ಕಫ, ಮಲಮೂತ್ರಾದಿಗಳನ್ನು ಇಲ್ಲದಂತೆ ಮಾಡುವುದು, ಅವರ ಹತ್ತರ ಇರುಳು ಜಾಗರಣೆಯಲ್ಲಿದ್ದು ಸೇವೆ ಮಾಡುವುದು ಇವೂ ವೈಯಾವೃತ್ಯವೆನಿಸುತ್ತವೆ ವೈಯಾವೃತ್ಯವೆಂಬುದೂ ತಪವಾಗಿದೆ ಇದು ಬಹಳಷ್ಟು ಕರ್ಮನಿರ್ಜರೆಗೆ ಕಾರಣವಾಗುತ್ತದೆ ಇವುಗಳಲ್ಲಿಯ ಅನೇಕ ಕ್ರಿಯೆಗಳನ್ನು ಮುನಿಗಳು ಮುನಿಗಳಿಗೆ ಮಾಡುತ್ತಾರೆ ಉದಾಹರಣೆಗಾಗಿ ಮಲಗಿಸುವುದು, ಕೂಡಿಸುವುದು, ಕೈಕಾಲುಗಳನ್ನು ಪಸರಿಸುವುದು, ಉಪದೇಶ ಮಾಡುವುದು, ಕಫ ಮಲಗಳನ್ನು ದೂರಗೊಳಿಸುವುದು, ಧೈರ್ಯ ಹೇಳುವುದು ಇವೇ ಮೊದಲಾದ ಕ್ರಿಯೆಗಳನ್ನು ಹೇಳಬಹುದು ಈ ಕ್ರಿಯೆಗಳನ್ನು ಮುನಿಗಳು ಬೇನೆ ಬಂದ ಉಳಿದ ಮುನಿಗಳಿಗೆ ಮಾಡುವರು. ಇವಲ್ಲದೆ ಇನ್ನೂ ಅನೇಕ ಕ್ರಿಯೆಗಳಲ್ಲಿ ಪ್ರಾಸುಕ ಔಷಧ, ಆಹಾರಪಾನ, ಉಪಕರಣ ಮೊದಲಾದವುಗಳನ್ನು ಧರ್ಮಾತ್ಮರಾದ ಶ್ರಾವಕರೇ ಮಾಡುವಂಥವಿರುತ್ತವೆ

ಗೃಹಸ್ಥರು ಸಾಧುಗಳ ಹಾಗೂ ಶ್ರಾವಕಿಯರು ಆರ್ಯಿಕೆಯರ ವೈಯಾವೃತ್ಯವನ್ನು ಮಾಡಬೇಕು. ದುಃಖಿತ, ರೋಗಿ, ಜೋಪಾನ ಮಾಡುವವರು ಇಲ್ಲದಂಥವರು, ಬಾಲಕ, ವೃದ್ಧ, ಪರಾಧೀನ, ಸೆರೆಮನೆಯಲ್ಲಿದ್ದವ ಮೊದಲಾದವರ ಮೇಲೆ ಕರುಣಾಬುದ್ಧಿಯಿಂದ ಉಪಕಾರಮಾಡಬೇಕು ತಂದೆ, ತಾಯಿ, ವಿದ್ಯಾಗುರು, ಒಡೆಯ, ಮಿತ್ರ ಮೊದಲಾದವರು ಯಾರೇ ಇದ್ದರೂ ಉಪಕಾರ ಮಾಡಿದ್ದರೆ ಅವರನ್ನು ಸ್ಮರಿಸಬೇಕು ಅಲ್ಲದೆ ಸೇವೆ, ಸನ್ಮಾನ, ದಾನ, ಪ್ರಶಂಸೆ ಮೊದಲಾದವುಗಳಿಂದ ಅವರಿಗೆ ಸುಖವನ್ನುಂಟು ಮಾಡಲಿಕ್ಕೆ ಪ್ರಯತ್ನ ಮಾಡಬೇಕು. ಅವರ ದುಃಖವನ್ನು ಇಲ್ಲದಂತೆ ಮಾಡಬೇಕು ತಮ್ಮ ಶಕ್ತಿಗೆ ಅನುಸರಿಸಿ ದಾನ ಸನ್ಮಾನಾದಿಗಳಿಂದ ವೈಯಾವೃತ್ಯವನ್ನು ಮಾಡುವವರಿಗೆ ಈ ತಪವು ಸಾಧಿಸಿ, ಅವರ ಕರ್ಮನಿರ್ಜರೆಯು ಆಗುತ್ತದೆ. ವೈಯಾವೃತ್ಯದಿಂದ ಗ್ಲಾನಿಯು ಇಲ್ಲದಂತಾಗುತ್ತದೆ. ಪ್ರವಚನದ ಮೇಲೆ ಅಂದರೆ ಶಾಸ್ತ್ರದ ಮೇಲೆ ವಾತ್ಸಲ್ಯವು ಉತ್ಪನ್ನವಾಗುತ್ತದೆ ಆಚಾರ್ಯರೇ ಮೊದಲಾದ ಅನೇಕ ವಾತ್ಸಲ್ಯದ ಸ್ಥಾನ-ಗಳಿವೆ ಇವುಗಳಲ್ಲಿ ಯಾವ ವೈಯಾವೃತ್ಯವನ್ನು ಮಾಡಿದರೂ ಅದರ ಯೋಗದಿಂದ ಸರ್ವಪ್ರಕಾರದ ಕಲ್ಯಾಣವು ಆಗುತ್ತದೆ.

೪. ಸ್ವಾಧ್ಯಾಯ—ಸ್ವಾಧ್ಯಾಯ ಎಂಬ ಹೆಸರಿನ ತಪಕ್ಕೆ ಐದು ಅಂಗಗಳಿವೆ ಅವು ವಾಚನಾ, ಪೃಚ್ಛನಾ, ಅನುಪ್ರೇಕ್ಷಾ (ಚಿಂತನ), ಆಮ್ನಾಯ ಮತ್ತು ಧರ್ಮೋಪದೇಶಗಳೆಂದು ಐದು ವಿಧವೆನಿಸುತ್ತವೆ

೧. ವಾಚನಾ—ಆಗಮ ಗ್ರಂಥಗಳ ನಿರ್ದೋಷ ಪಾಠ ಮತ್ತು ಅವುಗಳ ಅರ್ಥ ಇವೆರಡನ್ನೂ ಕಲಿಸುವುದು ವಾಚನಾ ತಪ ಎನಿಸುತ್ತದೆ.

೨. ಪೃಚ್ಛನಾ—ಪರಮಾಗಮವನ್ನು ಕಲಿಸುವದಕ್ಕೆ ಸಮಾನವಾದಂಥ ಬೇರೆ ಯಾವುದೂ ತನ್ನ ಹಾಗೂ ಇನ್ನೊಬ್ಬರ ಉಪಕಾರವೆಂಬುದಿಲ್ಲ ಇದರಲ್ಲಿ ಆಗಮದ ಅರ್ಥವನ್ನು ತಿಳಿಸಿ ಹೇಳುವುದೂ ಸಮಾವೇಶ-ವಾಗುತ್ತದೆ ಇದಲ್ಲದೆ ಪರಮಾಗಮವನ್ನು ಕಲಿಸಿ ಶಿಷ್ಯರನ್ನು ಸಿದ್ಧಗೊಳಿಸುವದೆಂದರೆ ಧರ್ಮದ ಆಧಾರ ಸ್ತಂಭಗಳನ್ನು ನಿಲ್ಲಿಸಿದಂತೆ ಆಗುತ್ತದೆ ಯಾಕೆಂದರೆ ಜಿನಧರ್ಮವು ಶಾಸ್ತ್ರಜ್ಞಾನವನ್ನೇ ಅವಲಂಬಿಸಿದೆ ಪ್ರತಿಮೆಗಳಾಗಲಿ, ದೇವಾಲಯಗಳಾಗಲಿ ಬಾಯಿಯಿಂದ ಮಾತನಾಡುವದಿಲ್ಲ ಸಾಕ್ಷಾತ್ ಮಾತನಾಡುವಂಥ ಹಾಗೂ ದೇವರಂತೆ ಹಿತದ ಪ್ರೇರಣೆಯನ್ನು ಮಾಡುವಂಥ ಮತ್ತು ಅಹಿತದಿಂದ ರಕ್ಷಣ ಮಾಡುವಂಥದು ಕೇವಲ ಭಗವಾನ್ ಸರ್ವಜ್ಞನ ಪರಮಾಗಮಗಳೇ ಆಗಿವೆ ಅದಕ್ಕಾಗಿ ಶಾಸ್ತ್ರವನ್ನು ಅಭ್ಯಾಸ ಮಾಡಿಸುವ ವಿಷಯದಲ್ಲಿ ಯಾವಾಗಲೂ ತತ್ಪರರಾಗಿರ-ಬೇಕು. ತಮಗೆ ಉತ್ಪನ್ನವಾದಂಥ ಸಂಶಯವನ್ನು ಇಲ್ಲದಂತೆ ಮಾಡಿಕೊಳ್ಳುವದಕ್ಕಾಗಿ ವಿಶೇಷ ಜ್ಞಾನವುಳ್ಳವರ ಹತ್ತಿರ ಹೋಗಿ ವಿನಯದಿಂದ ಪ್ರಶ್ನೆಗಳನ್ನು ಕೇಳಿ ತಿಳಿದುಕೊಳ್ಳಬೇಕು. ಪ್ರಶ್ನೆಗಳನ್ನು ಕೇಳದ ಹೊರತಾಗಿ ಸಂಶಯವು ಹೇಗೆ ದೂರವಾದೀತು? ಸಮ್ಯಗ್‌ಜ್ಞಾನವಾದರೂ ಪ್ರಾಪ್ತವಾಗುವುದು ಹೇಗೆ? ಇದೇ ಕಾರಣದಿಂದಾಗಿ ಪ್ರಶ್ನೆಕೇಳುವುದು ಅರ್ಥಾತ್ ಪೃಚ್ಛನಾ ಎಂಬುದೂ ಒಂದು ತಪವೆನಿಸುತ್ತದೆ ನಮಗೆ ಆಗಮದೊಳಗಿನ ಶಬ್ದಗಳ ಅರ್ಥವು ತಿಳಿದಿರುತ್ತದೆ ಅದನ್ನೇ ವಿಶೇಷ ಜ್ಞಾನವುಳ್ಳವರ ಹತ್ತಿರ ವಿವೇಚಿಸಿದರೆ ಆ ಜ್ಞಾನವು ದೃಢಗೊಳ್ಳುತ್ತದೆ. ಜ್ಞಾನದೊಳಗಿನ ಶಿಥಿಲತೆಯು ನಷ್ಟವಾಗುತ್ತದೆ ಅದಕ್ಕಾಗಿ ವಿಶೇಷಜ್ಞಾನವುಳ್ಳವರ ಹತ್ತಿರ ವಿಚಾರ-ವಿನಿಮಯವನ್ನು ಮಾಡುತ್ತಿರಬೇಕು ಅಲ್ಲದೆ ತಮಗೆ ಸಾರರೂಪದಲ್ಲಿ ತಿಳಿದುದರ ವಿವರವನ್ನು ತಿಳಿದುಕೊಳ್ಳುವದಕ್ಕಾಗಿ ಬಹಳ ವಿನಯದಿಂದ ಸಮ್ಯಗ್‌ಜ್ಞಾನಿ ಪುರುಷರ ಹತ್ತಿರ ಹೋಗಿ ವಿಚಾರಿಸಬೇಕು. ತಮ್ಮ ಶ್ರೇಷ್ಠತೆ ಹಾಗೂ ಪಾಂಡಿತ್ಯಗಳನ್ನು ಪ್ರದರ್ಶಿಸುವದಕ್ಕಾಗಿಯೂ ಇನ್ನೊಬ್ಬರ ತಿರಸ್ಕಾರವನ್ನು ಮಾಡುವದಕ್ಕಾಗಿಯೂ ಉಪಹಾಸ ಮಾಡುವದಕ್ಕೆಂದೂ ಸಮ್ಯಗ್‌ದೃಷ್ಟಿಯು ಎಂದೂ ಪ್ರಶ್ನೆಯನ್ನು ಕೇಳಕೂಡದು ಶಬ್ದ, ಅರ್ಥಗಳೆರಡರಲ್ಲಿಯೂ ಪ್ರಶ್ನೆಗಳನ್ನು ಮಾಡಿ ನಿರ್ಣಯ ಮಾಡಿಕೊಳ್ಳುವುದು ಪೃಚ್ಛನಾ ಎಂಬ ಹೆಸರಿನ ಸ್ವಾಧ್ಯಾಯವಾಗಿದೆ.

೩. ಅನುಪ್ರೇಕ್ಷಾ—ಪರಮಾಗಮಗಳಿಂದ ತಿಳಿದಂಥ ಶಬ್ದ ಹಾಗೂ ಅರ್ಥಗಳನ್ನು ತಮ್ಮ ಮನಸ್ಸಿನಲ್ಲಿ ಧಾರಣಮಾಡಿ ಅವುಗಳನ್ನು ಆಗಾಗ ಚಿಂತಿಸುತ್ತಿರುವುದಕ್ಕೆ ಅನುಪ್ರೇಕ್ಷೆ ಎನ್ನುವರು ಇನ್ನು ಶಾಸ್ತ್ರದಲ್ಲಿ ಹೇಳಿದ ಈ ದೋಷಗಳನ್ನು ತಾನು ತ್ಯಾಗಮಾಡಲಿಕ್ಕೆ ಬೇಕೆಂದು ಆಗಾಗ ನೆನೆಯುತ್ತಿರುವುದೂ ಇಂದಿಂಥ ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಸ್ಮರಿಸುತ್ತಿರುವುದೂ ಕೂಡ ಅನುಪ್ರೇಕ್ಷೆಯಾಗಿದೆ. ಮೇಲಾಗಿ ತನ್ನ ಸ್ವರೂಪವನ್ನುಳಿದು ಅನ್ಯ ದ್ರವ್ಯಗಳ ವಿಷಯದಲ್ಲಿ ಚಿಂತಿಸತಕ್ಕದಲ್ಲವೆಂದು ಭಾವಿಸುವುದೂ ಅನುಪ್ರೇಕ್ಷೆಯಲ್ಲಿಯೇ ಸಮಾವೇಶವಾಗುತ್ತದೆ. ಇದೊಂದು ವಿಧದ ಸ್ವಾಧ್ಯಾಯವಾಗಿದೆ ಸ್ವಾಧ್ಯಾಯದ ಈ ಅಂಗದಿಂದ ಅಶುಭ ಭಾವನೆಗಳು ನಾಶವಾಗಿ ಶುಭ ಧರ್ಮಧ್ಯಾನವು ಪ್ರಕಟವಾಗುತ್ತದೆ

೪. ಆಮ್ನಾಯ—ಅತಿ ಅವಸರದಿಂದ ಇಲ್ಲವೆ ತೀರ ಸಾವಕಾಶವಾಗಿ ಓದುವುದು ವಾಚನದ ದೋಷವಾಗಿದೆ ಇವು ಆಗದಂತೆ ಧೈರ್ಯದಿಂದ ಒಂದೊಂದು ಅಕ್ಷರವನ್ನು ಸ್ಪಷ್ಟವಾಗಿಯೂ ಅರ್ಥವನ್ನು ತಿಳಿದುಕೊಂಡೂ ಪಾಠಮಾಡುವುದು, ಮಾಡಿಸುವುದು, ಉಚ್ಚರಿಸುವುದು ಇವೆಲ್ಲ ಆಮ್ನಾಯವೆನಿಸುತ್ತವೆ. ಆದರೆ ಅದು ಸಿದ್ಧಾಂತದ ಪರಂಪರೆಗೆ ಅನುಸರಿಸಿ ಇರಬೇಕು ಅಲ್ಲದೆ ಆಗಮ ಲೌಕಿಕಗಳಿಗೆ ವಿರುದ್ಧವಾಗಿರಕೂಡದು. ಇಂಥ ಪಠನ ಮಾಡುವ ಕ್ರಮಕ್ಕೆ ಆಮ್ನಾಯವೆನ್ನುವರು

೫. ಧರ್ಮೋಪದೇಶ—ಲೌಕಿಕ ಪ್ರಯೋಜನ, ಲಾಭ, ಪೂಜೆ, ಅಭಿಮಾನ, ಮದ ಮೊದಲಾದವುಗಳನ್ನು ಬಿಟ್ಟು, ಉನ್ಮಾರ್ಗವನ್ನು ದೂರಮಾಡುವದಕ್ಕಾಗಿಯೂ ಸನ್ಮಾರ್ಗವನ್ನು ತೋರಿಸುವದಕ್ಕಾಗಿಯೂ ಧರ್ಮೋಪದೇಶವಿರುತ್ತದೆ ಇದರಿಂದ ಸಂಶಯವು ನಷ್ಟವಾಗುತ್ತದೆ, ಅಪೂರ್ವ ಪದಾರ್ಥದ ಸ್ವರೂಪವು ಪ್ರಕಟವಾಗುತ್ತದೆ, ಧರ್ಮವು ಪ್ರಕಟಗೊಳ್ಳುತ್ತದೆ, ಮೋಹಾಂಧಕಾರವು ನಷ್ಟವಾಗುತ್ತದೆ, ಸಂಸಾರ, ದೇಹದ ಭೋಗೋಪಭೋಗಗಳಿಂದ ಜನರನ್ನು ವಿರಕ್ತಗೊಳಿಸುತ್ತದೆ, ವಿಷಯಾನುರಾಗ ಕಷಾಯಗಳನ್ನು ಕಡಿಮೆ ಮಾಡುತ್ತದೆ; ಅಜ್ಞಾನವು ನಾಶವಾಗಿ ಭೇದ-ವಿಜ್ಞಾನವು ಪ್ರಕಟವಾಗುತ್ತದೆ, ಪಾಪಕ್ರಿಯೆಗಳ ವಿಷಯದಲ್ಲಿ ಭೀತಿಯು ಉತ್ಪನ್ನವಾಗುತ್ತದೆ ಇವೆಲ್ಲವನ್ನು ಸಾಧಿಸುವದಕ್ಕಾಗಿ ಭವ್ಯ ಜನರಿಗೆ ಧರ್ಮದ ಉಪದೇಶವನ್ನು ಮಾಡುವುದಕ್ಕೆ ಧರ್ಮೋಪದೇಶ ಸ್ವಾಧ್ಯಾಯವೆನ್ನುವರು ಎಲ್ಲಿ ಅನೇಕ ಭವ್ಯ ಜೀವಿಗಳಿಗೆ ಧರ್ಮೋಪದೇಶವನ್ನು ಮಾಡುವ ಕಾರ್ಯವು ನಡೆದಿರುತ್ತದೆಯೋ ಅಲ್ಲಿ ಮನ, ವಚನ, ಕಾಯಗಳೆಲ್ಲ ಧರ್ಮವಿಚಾರದಲ್ಲಿಯೇ ಮಗ್ನವಾಗಿರುತ್ತವೆ

ಧರ್ಮೋಪದೇಶಕನು ಹೇಗಿರಬೇಕು? ಯಾವುದೇ ರೀತಿಯಿಂದ ಕೇಳುವವರ ಮನಸ್ಸಿನಲ್ಲಿ ಅನೇಕಾಂತ ಧರ್ಮದ ಯಥಾರ್ಥ ಸ್ವರೂಪವು ಮೂಡಿ ನಿಲ್ಲಬೇಕು ಅವರ ಮನಸ್ಸಿನಲ್ಲಿ ಸಂಸಾರ, ದೇಹ ಭೋಗಗಳ ವಿಷಯದಲ್ಲಿ ಅಪ್ರೀತಿಯು ಉತ್ಪನ್ನವಾಗಲಿಕ್ಕೆ ಬೇಕು ಯಾವುದೇ ಬಗೆಯಿಂದಲಾದರೂ ಅವರಿಗೆ ಭೇದ ವಿಜ್ಞಾನವು ಪ್ರಾಪ್ತವಾಗಲಿಕ್ಕೆಬೇಕು. ಇವೆಲ್ಲ ಅಭಿಪ್ರಾಯಗಳು ಯಾವ ವಕ್ತೃವಿನಲ್ಲಿ ಇರುವವೋ ಅವನು ಸತ್ಯಾರ್ಥ ಧರ್ಮದ ಉಪದೇಶ ಮಾಡಲಿಕ್ಕೆ ಸಮರ್ಥನಾಗುತ್ತಾನೆ. ಯಾರ ಅಂತಃಕರಣವು ಧರ್ಮದ ಕಡೆಗೆ ಹತ್ತಿರುತ್ತದೆಯೋ ಅವನೇ ಶ್ರೋತೃಗಳಲ್ಲಿಯೂ ಧರ್ಮಪ್ರವೃತ್ತಿಯನ್ನುಂಟು ಮಾಡಬಲ್ಲನು ಧರ್ಮೋಪದೇಶ ಮಾಡುವವನಲ್ಲಿ ಯಾವ ಯಾವ ಗುಣಗಳು ಇರಬೇಕೆಂಬುದನ್ನು ಶ್ರೀ ಗುಣಭದ್ರಾಚಾರ್ಯರು ತಮ್ಮ 'ಆತ್ಮಾನುಶಾಸನ'ದಲ್ಲಿ ವಿವರಿಸಿದ್ದಾರೆ ಅಲ್ಲಿ ಧರ್ಮೋಪದೇಶಕನು ತ್ರಿಕಾಲಜ್ಞನಾಗಿರಬೇಕೆನ್ನುವರು ಯಾಕೆಂದರೆ ಪೂರ್ವಕಾಲದ ಅನೇಕ ರೀತಿ, ನಡೆವಳಿಗಳ ಜ್ಞಾನವಿಲ್ಲದವನು ಪರಮಾಗಮದ ಭಾವವನ್ನು ಸರಿಯಾಗಿ ತಿಳಿಯಲಾರನು ಅಲ್ಲದೆ ವಸ್ತುವಿನ ಸ್ವರೂಪವನ್ನು ಯಥಾರ್ಥವಾಗಿ ಪ್ರಕಟಿಸಲಾರನು, ಪ್ರತಿಪಾದಿಸಲಾರನು ಇನ್ನು ಯಾರಿಗೆ ವರ್ತಮಾನ ಕಾಲದ ಪರಿಸ್ಥಿತಿ, ಮುಂದಿನ ಕಾಲದ ಕಲ್ಪನೆ ಇರುವದಿಲ್ಲವೋ ಅವನೂ ಅಯೋಗ್ಯವಾದುದನ್ನು ಹೇಳಬಹುದಾಗಿದೆ ಅಂತಲೇ ಧರ್ಮೋಪದೇಶಕನು ತನ್ನ ಬುದ್ಧಿಯನ್ನು ಸೂಕ್ಷ್ಮವಾಗಿ ಮಾಡಿಕೊಂಡು, ಧರ್ಮದ ಉಪದೇಶವನ್ನು ನಿಶ್ಚಯ ಹಾಗೂ ವ್ಯವಹಾರ ದೃಷ್ಟಿಗಳಿಂದ ಮಾಡಲಿಕ್ಕೆ ಸಮರ್ಥನಾಗಬೇಕು

ಇದಲ್ಲದೆ ಧರ್ಮೋಪದೇಶಕನು ನಾಲ್ಕೂ ಅನುಯೋಗಗಳ ಜ್ಞಾನವುಳ್ಳವನಿರಬೇಕು ಯಾರಿಗೆ ಸ್ವಂತಕ್ಕೇನೇ ತಿಳಿದಿರುವದಿಲ್ಲವೋ ಅವರು ಧರ್ಮೋಪದೇಶವನ್ನು ಮಾಡಲಿಕ್ಕೆ ಹತ್ತಿದ ಶ್ರೋತೃಗಳಿಗೆ ಯಥಾರ್ಥವಾದುದನ್ನು ತಿಳಿಸಿಕೊಡಲಿಕ್ಕೆ ಸಾಧ್ಯವಿಲ್ಲ ಪ್ರಮಾಣ, ನ್ಯಾಯ, ನಿಕ್ಷೇಪ, ಗುಣಸ್ಥಾನ, ಮಾರ್ಗಣಾ, ತ್ರಿಲೋಕ, ಕರ್ಮಪ್ರಕೃತಿ, ಆಚಾರ ಮೊದಲಾದ ವಿಷಯಗಳ ಜ್ಞಾನವು ಉಪದೇಶಕನಿಗೆ ಇದ್ದರೇನೇ ಆಯಾ ವಿಷಯಗಳನ್ನು ಸಂಶಯರಹಿತವಾಗಿ ಪ್ರತಿಪಾದಿಸಲು ಸಾಧ್ಯವಿದೆ. ಅದಕ್ಕಾಗಿ ಅವನು ಸಂಪೂರ್ಣ ಶಾಸ್ತ್ರಗಳ ಪಾರಗಾಮಿಯಾಗಿರಲಿಕ್ಕೆಬೇಕು.

ಇದೂ ಅಲ್ಲದೆ ವಕ್ತೃವಿಗೆ ಲೌಕಿಕ ರೀತಿನೀತಿಗಳ ಜ್ಞಾನವೂ ತೀರ ಅವಶ್ಯಕವಾಗಿದೆ. ಅದು ಇರದಿದ್ದರೆ ಲೋಕವಿರುದ್ಧ ವ್ಯಾಖ್ಯಾನವನ್ನು ಅವನು ಹೇಳಿಯಾನು ಜನರ ಮೇಲೆ ಅದರ ಪರಿಣಾಮವೇನೂ ಆಗದು

ಇನ್ನು ಯಾರಿಗೆ ಊಟ, ಅರಿವೆ, ದುಡ್ಡು, ಅಧಿಕಾರ, ಅಭಿಮಾನ, ಸ್ಥಾನ ಮೊದಲಾದವುಗಳ ಅಪೇಕ್ಷೆಯು ಇರುವುದೋ ಅವರೂ ಕೂಡ ಯಥಾರ್ಥವಾದುದನ್ನು ಪ್ರತಿಪಾದಿಸಲಾರರು ಅವರಿಗೆ ಜನರ ಮನರಂಜನೆಯನ್ನು

ಮಾಡಿ ಸ್ವಾರ್ಥ ಸಾಧಿಸುವ ಉದ್ದೇಶವು ಮಾತ್ರ ಇರುತ್ತದೆ ಇದಲ್ಲದೆ ಲೋಭಿಗಳಿಗೆ ಸತ್ಯ ವಕ್ತೃತ್ವವು ಇರುವುದೇ ಇಲ್ಲ ವಕ್ತೃವು ಸಮಯಕ್ಕೆ ತಕ್ಕ ಉತ್ತರವನ್ನು ತತ್ಕಾಲದಲ್ಲಿ ಕೊಡುವ ಬುದ್ಧಿವಂತನಾಗಿರಬೇಕು ಹಾಗೆ ಇರದಿದ್ದರೆ ಸಭೆಯಲ್ಲಿ ಗೊಂದಲವೆದ್ದು, ಅವನ ಪ್ರಭಾವವು ಸಭೆಯ ಮೇಲೆ ಬೀಳಲಾರದು.

ವಕ್ತೃವು ಮಂದಕಷಾಯಿಯಾಗಿರಲಿಕ್ಕೆ ಬೇಕು ಯಾಕಂದರೆ ಯಾರ ರಾಗದ್ವೇಷಗಳು ಮಂದ-ವಾಗಿರುವದಿಲ್ಲವೋ ಅವರು ಕ್ರೋಧಿಗಳು, ಲೋಭಿಗಳು, ಕಪಟಿಗಳು ಮತ್ತು ಅಭಿಮಾನಿಗಳು ಆಗಿರುತ್ತಾರೆ ಇಂಥ ಪುರುಷರ ಉಪದೇಶದಿಂದ ಯಾರ ಮೇಲೆಯೂ ಸತ್‌ಪರಿಣಾಮವಾಗಲಾರದು

ಇದಲ್ಲದೆ, ವಕ್ತೃವಿನಲ್ಲಿ ಸಭೆಯಲ್ಲಿ ಪ್ರಶ್ನೆ ಏಳುವ ಮುನ್ನವೇ ಉತ್ತರ ಕೊಡುವ ಸಾಮರ್ಥ್ಯವು ಇರಲಿಕ್ಕೆ ಬೇಕು. ನೀವು ಹೀಗೆ ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಹೀಗೆ, ಆ ಪ್ರಕಾರ ಪ್ರಶ್ನೆ ಕೇಳಿದಲ್ಲಿ ಅದಕ್ಕೂ ಉತ್ತರ ಹೀಗಿದೆ. ಎಂದು ತಾನೇ ಪ್ರಶ್ನೆಗಳನ್ನು ಉದ್ಭವಿಸಿಕೊಂಡು, ಅದಕ್ಕೆ ಉತ್ತರವನ್ನು ಹೇಳಿ, ಕೇಳುವವರ ಮನಸ್ಸಿನೊಳಗಿನ ಸಂಶಯವನ್ನು ನಿವಾರಣೆ ಮಾಡಬೇಕು ಈ ಪ್ರಕಾರ ಅವನು ವಸ್ತುಸ್ವರೂಪವನ್ನು ಪ್ರಶ್ನೋತ್ತರ ರೂಪದಲ್ಲಿ ವಿವರಿಸುತ್ತ ಹೋದಲ್ಲಿ ಯಾರಿಗೂ ಪ್ರಶ್ನೆಮಾಡುವ ಸಂದರ್ಭವಾಗಲಿ, ಸಂಶಯಕ್ಕೆ ಅವಕಾಶವಾಗಲಿ ಉಳಿಯುವದಿಲ್ಲ. ವ್ಯಾಖ್ಯಾನ ನಡೆದಿರುವಾಗ ಒಂದು ವೇಳೆ ವ್ಯಾಖ್ಯಾತನಲ್ಲಿ ಮೇಲೆ ಹೇಳಿದಂತೆ ವಿವೇಚನ ಮಾಡುವ ಯೋಗ್ಯತೆಯು ಇಲ್ಲದಿದ್ದರೆ ಸಭೆಯಲ್ಲಿ ಅನೇಕ ಪ್ರಶ್ನೆಗಳು ಎದ್ದು, ಎಲ್ಲವೂ ಗೊಂದಲಮಯವಾಗಿಬಿಡುತ್ತದೆ ತನಗೆ ಉತ್ತರ ಕೊಡಲಿಕ್ಕೆ ಬಾರದಂಥ ಪ್ರಶ್ನೆಯನ್ನು ಸಭೆಯಲ್ಲಿ ಯಾರಾದರೂ ಕೇಳಿದರೆ, ವಕ್ತೃವು ಆ ವೇಳೆಯಲ್ಲಿ ಸಹನಶೀಲತೆಯನ್ನು ಧಾರಣಮಾಡಬೇಕು. ವಿಕಾರವಶನಾಗಿ ಸಿಟ್ಟಿಗೇಳಬಾರದು. ಇದರಿಂದ ಕೇಳುವವರ ಮನಸ್ಸಿನಲ್ಲಿ ಅನೇಕ ಪ್ರಕಾರದ ಸಂಶಯಗಳು ಉತ್ಪನ್ನವಾಗುತ್ತವೆ. ಮೇಲಾಗಿ ಅವರು ಮತ್ತೆ ಪ್ರಶ್ನೆಗಳನ್ನು ಕೇಳಿ ಸಂಶಯಗಳನ್ನು ದೂರ ಮಾಡಿಕೊಳ್ಳಲಿಕ್ಕೆ ಹೆದರುತ್ತಾರೆ. ಧರ್ಮೋಪದೇಶವನ್ನು ಮಾಡಿ, ಜೀವದ ಕಲ್ಯಾಣ ಮಾಡುವ ಹೇತುವು ಧರ್ಮೋಪದೇಶಕನಲ್ಲಿರುತ್ತದೆ ಕೆರಳುವುದರಿಂದ ಅದು ಸಿದ್ಧಿಸುವದಿಲ್ಲ.

ಇನ್ನು ವಕ್ತೃವಿನಲ್ಲಿ ಪ್ರಭುತ್ವ ಅಂದರೆ ಶ್ರೇಷ್ಠತ್ವ ಎಂಬ ಗುಣವು ಇರಲಿಕ್ಕೇಬೇಕು. ಯಾಕಂದರೆ ವಕ್ತೃವು ದೊಡ್ಡವನು, ಶ್ರೇಷ್ಠನು, ವಿದ್ವಾಂಸನು ಎಂದು ಶ್ರೋತ್ರೃಗಳು ತಿಳಿದು ಕೇಳುತ್ತಿರಬೇಕು ಅಂದರೇನೇ ಅವರು ಉಪದೇಶವನ್ನು ಆದರದಿಂದ ಕೇಳಲು ಸಿದ್ಧರಾಗುತ್ತಾರೆ. ಹಾಗೆ ಇರದಿದ್ದರೆ ಅವನ ಉಪದೇಶವನ್ನು ಕೇಳಲಿಕ್ಕೆ ಯಾರೂ ಸಿದ್ಧವಾಗುತ್ತಿರಲಿಲ್ಲ ಎಲ್ಲ ಜನರಿಗೆ ಪ್ರಿಯನೆನಿಸುವಂಥವನೇ ವಕ್ತೃವು.

ಯಾರು ಸ್ವತಃ ಗುರುಪರಂಪರೆಯಿಂದಲೂ ಶಾಸ್ತ್ರಪಠನದಿಂದಲೂ ಒಳ್ಳೆಯ ರೀತಿಯಿಂದ ಜ್ಞಾನವನ್ನು ಸಂಪಾದನ ಮಾಡಿಕೊಂಡು ಸಿದ್ಧಿಯನ್ನು ಹೊಂದಿರುವರೋ ಅವರೇ ಧರ್ಮದ ವ್ಯಾಖ್ಯಾನ ಮಾಡಲು ಸಮರ್ಥ-ರೆನಿಸುತ್ತಾನೆ ಯಾಕಂದರೆ ಯಾರಿಗೆ ಸ್ವತಕ್ಕೇನೇ ಚೆನ್ನಾಗಿ ತಿಳಿದಿರುವದಿಲ್ಲವೋ ಅವರು ಇನ್ನೊಬ್ಬರಿಗೇನು ತಿಳಿಸಿ ಹೇಳುವರು? ಯಾರು ಸ್ವತಃ ಅಂಧಕಾರ ಸ್ವರೂಪದಲ್ಲಿ ಇರುವರೋ ಅವರು ಅನ್ಯರಿಗೇನು ಪ್ರಕಾಶವನ್ನು ನೀಡಿಯಾರು? ದೀಪಕವು ಸ್ವಯಂ ಪ್ರಕಾಶಕವಾಗಿರುವುದರಿಂದಲೇ ಕೊಡ, ಪಾತ್ರೆ, ಮೊದಲಾದವುಗಳ ಮೇಲೆ ಬೆಳಕನ್ನು ಬೀರುತ್ತದೆ.

ಯಾರ ನಡತೆಯು ವ್ಯವಹಾರ, ಪರಮಾರ್ಥ, ಧರ್ಮ, ಕೊಡಕೊಳ್ಳುವಿಕೆ, ಮಾತನಾಡುವಿಕೆ, ವ್ಯಾಪಾರ, ಉಪಜೀವಿಕೆ, ಊಟ, ಅರಿವೆ, ಮೊದಲಾದವುಗಳಲ್ಲಿ ನಿರ್ಮಲವಿರುವುದೋ ಅವರೇ ಉಪದೇಶ ಮಾಡಲಿಕ್ಕೆ ಯೋಗ್ಯರು ಇದಕ್ಕೆ ವಿಪರೀತವಾದ ನಡತೆಯುಳ್ಳವರು ವಕ್ತೃತ್ವಕ್ಕೆ ಶೋಭಿಸಲಾರರು

ಯಾರು ಸ್ವತಃ ವ್ಯಸನಿಗಳಾಗಿರುವರೋ ಅವರಿಗೆ ಜಗತ್ತಿನಲ್ಲಿ ಮರ್ಯಾದೆಯು ಇರುವದಿಲ್ಲ ಯಾರಲ್ಲಿ ಇತರ ಜನರೊಳಗೂ ಜ್ಞಾನ ಪ್ರಸಾರವಾಗಬೇಕು, ರತ್ನತ್ರಯ ಧರ್ಮದ ಕಡೆಗೆ ಅವರು ಪ್ರವೃತ್ತರಾಗಬೇಕು-ಎಂಬ ಇಚ್ಛೆಯು ಇರುವದೋ ಅವರೇ ಧರ್ಮವನ್ನು ವಿವೇಚನ ಮಾಡುವಂಥ ವಕ್ತೃವೆನಿಸುತ್ತಾರೆ

ಜ್ಞಾನಿಗಳು ಯಾರನ್ನು ಪ್ರಶಂಸಿಸುವರೋ ಅವರೇ ಧರ್ಮೋಪದೇಶಕರೆನಿಸುತ್ತಾರೆ. ಅವರ ವಿದ್ವತ್ತೆಯನ್ನು ಕುರಿತು ವಿದ್ವಾಂಸರು ಹೊಗಳುವುದರಿಂದ ಜನರ ಶ್ರದ್ಧೆಯು ಅವರ ಭಾಷಣದ ಮೇಲೆ ಕೂಡುವುದು.

ವಕ್ತೃವು ಉದ್ಧಟನಾಗಿರಕೂಡದು ಯಾಕಂದರೆ ಉದ್ಧಟ ಪುರುಷರು ಎಲ್ಲರಿಗೂ ಅಪ್ರಿಯರಾಗಿರುತ್ತಾರೆ ವಕ್ತೃವು ದೇಶಕಾಲಗಳ ರೀತಿ, ಶ್ರೋತ್ರೃಗಳ ಸುಷ್ಠುತೆ, ದುಷ್ಟತೆ, ಪ್ರವೀಣತೆ, ಮೂಢತೆ, ಶಕ್ತಿ ಮೊದಲಾದವುಗಳನ್ನು

ತಿಳಿದು ಉಪದೇಶ ಮಾಡುವಂಥವನಿದ್ದರೆ ಅವನ ಪ್ರಭಾವವು ಜನರ ಮೇಲೆ ಬಹಳ ಬೇಗನೆ ಬೀಳುತ್ತದೆ ಲೌಕಿಕ ಜ್ಞಾನವಿಲ್ಲದೆ, ಯಥಾಯೋಗ್ಯ ಉಪದೇಶ ಮಾಡಲಿಕ್ಕೆ ಬರುವದಿಲ್ಲ

ಇನ್ನು ವಕ್ತೃವು ಕೋಮಲ ಮನಸ್ಸಿನವನಿರಬೇಕು ಯಾಕಂದರೆ ಕಠೋರ ನುಡಿಗಳುಳ್ಳವರ ಭಾಷಣವು ಅಪ್ರಿಯವೆನಿಸುತ್ತದೆ, ಅನಾದರಣೀಯವೂ ಆಗುತ್ತದೆ ಕಠೋರ ಮಾತುಗಳನ್ನು ಕೇಳುವುದರಿಂದ ಮಾನವನು ಹಿತ ಪರಾಙ್ಮುಖನಾಗುತ್ತಾನೆ ವಕ್ತೃವಿಗೆ ತನ್ನ–ವಕ್ತೃತ್ವಗುಣದ ಪ್ರತಿಫಲವೆಂದು ಧನ, ಭೋಜನ, ವಸ್ತ್ರ, ಪಾತ್ರಗಳನ್ನು ಸಂಪಾದಿಸುವ ಇಚ್ಛೆಯು ಇರಕೂಡದು

ವಕ್ತೃವು ಸ್ಪಷ್ಟ ಮಾತನಾಡುವಂಥವನಿರಬೇಕು ಅಸ್ಪಷ್ಟ ಮಾತನಾಡುವವರ ಉಚ್ಚಾರವು ತಿಳಿಯದೆ ಅರ್ಥದ ಬೋಧೆಯಾಗುವದಿಲ್ಲ

ವಕ್ತೃವು ಸವಿಯಾದ ಮಾತುಗಳನ್ನಾಡುವವನಿರಬೇಕು ಅವನ ಸವಿಯಾದ ಭಾಷಣವನ್ನು ಕೇಳಿ-ದೊಡನೆಯೇ ಶ್ರೋತ್ರಗಳಿಗೆ ಕಿವಿಯಿಂದ ಅಮೃತವನ್ನೇ ಸುರಿದಂತಾಗಿ, ಮೈಯೆಲ್ಲ ರೋಮಾಂಚಿತವಾಗಬೇಕು

ಶ್ರೋತ್ರಗಳು ಶ್ರೇಷ್ಠನೆಂದು ತಿಳಿಯುವಂಥವನು ವ್ಯಕ್ತೃವಾಗಿರಬೇಕು ಇದೇ ಪ್ರಕಾರ ಸಮ್ಯಗ್ದರ್ಶನ, ಚಾರಿತ್ರ, ವಾತ್ಸಲ್ಯ ಮೊದಲಾದ ಅನೇಕ ಗುಣಗಳಿಂದ ಕೂಡಿದವನಿರಬೇಕು ಈ ಪ್ರಕಾರ ವಕ್ತೃವಿನ ಅನೇಕ ಗುಣಗಳು ಇರುತ್ತವೆ ಇವು ಯಾರಲ್ಲಿ ಮನೆಮಾಡಿಕೊಂಡಿವೆಯೋ ಅವರೇ ಧರ್ಮೋಪದೇಶ ಮಾಡಲಿಕ್ಕೆ ಯೋಗ್ಯರಾಗಿರುತ್ತಾರೆ ಇಂಥ ವಕ್ತೃವಿನ ಭಾಷಣವು ಮಹಾ ಭಾಗ್ಯಶಾಲಿಯಾದ ಪುರುಷನಿಗೆ ಎಂದಾದರೂ ಒಮ್ಮೆ ಲಭಿಸುತ್ತದೆ ಇಂಥ ಉಪದೇಶಕ್ಕೆ ಸಮ್ಯಗ್ದೇಶನಾಲಬ್ಧಿ ಎನ್ನುವರು ಇದು ಪ್ರಾಪ್ತವಾಗುವುದು ದುರ್ಲಭವಾಗಿದೆ. ಯೋಗ್ಯ ಪಾತ್ರವಿಲ್ಲದ ಹೊರತಾಗಿ ಅದರಲ್ಲಿ ವಸ್ತುವು ನಿಲ್ಲಲಾರದು ಅಯೋಗ್ಯ ಪಾತ್ರದಲ್ಲಿ ವಸ್ತುವನ್ನು ಇಟ್ಟರೆ ಆ ವಸ್ತುವೂ ಪಾತ್ರೆಯೂ ಎರಡೂ ನಾಶ ಹೊಂದುತ್ತವೆ ಹಾಗೆಯೇ ಯೋಗ್ಯ ಶ್ರೋತ್ರವು ಇಲ್ಲದ ಹೊರತಾಗಿ ಧರ್ಮೋಪದೇಶದ ಉಪಯೋಗವು ಆಗುವದಿಲ್ಲ ಅದಕ್ಕಾಗಿ ಇಲ್ಲಿ ಶ್ರೋತ್ರಗಳ ಸ್ವರೂಪವನ್ನೂ ಸ್ವಲ್ಪದರಲ್ಲಿ ತಿಳಿದುಕೊಳ್ಳುವ ಅವಶ್ಯಕತೆಯು ಇದೆ.

ಶ್ರೋತ್ರಗಳ ಲಕ್ಷಣ—ಯಾರಿಗೆ ಉಪದೇಶ ಮಾಡಿಯೂ ಕೂಡ ಸಮ್ಯಕ್ ಶ್ರದ್ಧೆ ಮೊದಲಾದವುಗಳು ಉತ್ಪನ್ನವಾಗುವದಿಲ್ಲವೋ ಅವರಿಗೆ ಹೇಳಿಯೂ ಸಹ ವ್ಯರ್ಥವಾಗುತ್ತದೆ ಅಂತಲೇ ಮೊದಲು ಕೇಳುವವರು ಭವ್ಯರಾಗಿರಲಿಕ್ಕೆಬೇಕು. ಅಂದರೆ ಅವರಿಗೆ ತಮ್ಮ ಹಿತಾಹಿತಗಳು ಯಾವುದರಲ್ಲಿವೆ–ಎಂಬುದನ್ನು ವಿಚಾರಿಸುವ ರೂಢಿಯು ಇರುತ್ತದೆ. ಅವನೇ ನಿಜವಾದ ಶ್ರೋತ್ರವು. ಯಾರಿಗೆ ಈ ಪ್ರಕಾರ ವಿಚಾರಗಳಿಲ್ಲವೋ ಅವನು ಧರ್ಮ ಶ್ರವಣವನ್ನು ಮಾಡುವದಿಲ್ಲ ಅವನಿಗೆ ಕೇವಲ ವಿಷಯ ಲಾಭವು ತನಗೆ ಯಾವುದರಲ್ಲಿದೆ ಎಂಬುದನ್ನಷ್ಟೇ ವಿಚಾರಿಸುತ್ತಾನೆ

ಶ್ರೋತೃವು ತಾನು ಸ್ವತಃ ದುಃಖಕ್ಕೆ ಹೆದರುವಂಥವನಿರಬೇಕು ಅಂದರೆ ಅವನಿಗೆ ನರಕ ತಿರ್ಯಂಚಾದಿ ಗತಿಗಳಲ್ಲಿಯ ದುಃಖವು ಎಂದೂ ಪ್ರಾಪ್ತವಾಗಕೂಡದೆಂಬ ಇಚ್ಛೆಯು ಇರಬೇಕು. ಈ ಹೆದರಿಕೆಯು ಯಾವನಿಗೆ ಇಲ್ಲವೋ ಅವನು ಪಾಪವನ್ನು ಬಿಡಲಿಕ್ಕೆ ಹಾಗೂ ವಿಷಯ ಕಷಾಯಗಳನ್ನು ತ್ಯಾಗಮಾಡಲಿಕ್ಕೆ ಉಪದೇಶಿಸುವ ಶಾಸ್ತ್ರವನ್ನು ಎಂದೂ ಕೇಳಲು ಸಿದ್ಧನಾಗುವದಿಲ್ಲ.

ಕೇಳುವಂಥವನು ಸುಖದ ಇಚ್ಛೆಯುಳ್ಳವನಿರಬೇಕು ಹಾಗಿಲ್ಲದಿದ್ದರೆ ಅವನು ಧರ್ಮವನ್ನು ಕೇಳಿ ತಿಳಿದುಕೊಳ್ಳಲಾರನು. ಯಾರಿಗೆ ಕಿವಿಗಳಿದ್ದೂ ಅವು ಕೆಟ್ಟಿದ್ದರೆ ಅಂಥವರು ಧರ್ಮಶ್ರವಣವನ್ನು ಯಾತರಿಂದ ಮಾಡಿಯಾರು? ಯಾರಿಗೆ ಧರ್ಮಶ್ರವಣ ಮಾಡುವ ಇಚ್ಛೆ ಇದ್ದೀತೋ ಅವರೇ ಧರ್ಮವನ್ನು ಕೇಳಿಯಾರು. ಇಚ್ಛೆ ಇದ್ದೂ ಸಹ ಆಲಸ್ಯ, ಪ್ರಮಾದ, ಕುಸಂಗತಿಗಳಿಂದ ಅವನು ಧರ್ಮವನ್ನು ಕೇಳದೆ ಇದ್ದರೆ ಆ ಇಚ್ಛೆಯೂ ಕೂಡ ವ್ಯರ್ಥವಾದುದು ಕೆಲವರು ಕೇಳಬಹುದು ಆದರೆ ಗುರುಗಳು ಹೇಳಿದುದನ್ನು ಗ್ರಹಣ ಮಾಡದಿದ್ದರೆ ಉಪಯೋಗ-ವೇನು? ಅದೂ ವ್ಯರ್ಥವಾಗುತ್ತದೆ ಅದರಂತೆ ಕೇಳಿದಂಥ ಧರ್ಮವು ನೆನಪಿನಲ್ಲಿ ಉಳಿಯದೆ ಕೂಡಲೆ ಮರೆತು ಹೋದರೆ ಅದರ ಉಪಯೋಗವೂ ಇಲ್ಲ ವಿಚಾರ ಮಾಡಿ ಧರ್ಮದ ವಿಷಯದಲ್ಲಿ ಪ್ರಶ್ನೆಗಳನ್ನು ಕೇಳಿ ತತ್ತ್ವ ನಿರ್ಣಯ ಮಾಡಿಕೊಳ್ಳಲಿಕ್ಕಬೇಕು. ಇಲ್ಲವಾದರೆ ಕೇಳಿದ ಧರ್ಮದಲ್ಲಿ ಸಂಶಯವು ಉಳಿದು ಬಿಡುತ್ತದೆ ಅದಕ್ಕಾಗಿ ಶಾಸ್ತ್ರವನ್ನು ಕೇಳುವವರು ಆಗಾಗ ಪ್ರಶ್ನೆಗಳನ್ನು ಮಾಡಿ ಸಂಶಯಗಳನ್ನು ನಿವಾರಿಸಿಕೊಳ್ಳಲಿಕ್ಕೆಬೇಕು. ದಯಾಮಯವು

ಸುಖವನ್ನು ಕೊಡುವಂಥದ್ದು ಆದ ಧರ್ಮವನ್ನೇ ಕೇಳಬೇಕು ಯುಕ್ತಿಯಿಂದಲೂ ಪ್ರಮಾಣದಿಂದಲೂ ಯಾವುದರಲ್ಲಿ ಬಾಧೆಯು ಉಂಟಾಗುವದಿಲ್ಲವೋ ಅಂಥ ಧರ್ಮವನ್ನು ವೀತರಾಗ ಸರ್ವಜ್ಞನು ಪ್ರರೂಪಿಸಿದ ಆಗಮದಿಂದ ಪ್ರಕಟಗೊಳಿಸಲಾಗುತ್ತಿದೆ. ಇಂಥ ಧರ್ಮವನ್ನು ಮೇಲಿಂದ ಮೇಲೆ ಕೇಳುವುದನ್ನು, ಚಿಂತನ ಮಾಡುವುದನ್ನು ಮಾಡಬೇಕು. ವಿಚಾರ ಮಾಡದೆ ಮಿಥ್ಯಾತ್ವ ಹಾಗೂ ಹಿಂಸೆಗಳಿಗೆ ಕಾರಣವಾದಂಥ ಧರ್ಮ ಬೋಧೆಯನ್ನು ಕೇಳಿದರೆ ನರಕಕ್ಕೆ ಹೋಗಬೇಕಾದೀತು. ಯಾವ ಧರ್ಮದಲ್ಲಿ ಯುಕ್ತಿ, ಪ್ರಮಾಣಗಳಿಂದ ಬಾಧೆಯು ಉಂಟಾಗುವುದೋ ಅದು ನಿಜವಾದ ಧರ್ಮವಲ್ಲ. ಅದು ಸರ್ವಜ್ಞನು ಬೋಧಿಸಿದ ಆಗಮಕ್ಕೂ ವಿರೋಧವಾಗಿರುತ್ತದೆ. ಇದು ಶ್ರವಣ ಮಾಡಲಿಕ್ಕೆ ಯೋಗ್ಯವಲ್ಲ

ಧರ್ಮವನ್ನು ಕೇಳುವಂಥವನು ದುರಾಗ್ರಹಿಯಾಗಿರಕೂಡದು ಹಾಗೆ ಇದ್ದರೆ ಅವನ ಮೇಲೆ ಯಾವ ಉಪದೇಶದ ಪರಿಣಾಮವೂ ಆಗುವದಿಲ್ಲ. ಈ ಪ್ರಕಾರ ಅನೇಕ ಗುಣಗಳನ್ನು ಧಾರಣ ಮಾಡುವಂಥ ಶ್ರೋತೃವು ಇದ್ದರೇನೇ ಅವನು ಧರ್ಮಶ್ರವಣ ಮಾಡಿ ಆತ್ಮಕಲ್ಯಾಣ ಮಾಡಿಕೊಳ್ಳುತ್ತಾನೆ.

ಇಲ್ಲಿ ಸಂದರ್ಭಕ್ಕನುಸರಿಸಿ ಶ್ರೋತೃಗಳ ಜಾತಿಯು ಎಷ್ಟು ವಿಧವಾಗಿದೆಯೆಂಬುದನ್ನು ಉದಾಹರಣೆ ಸಹಿತ ಹೇಳಲಾಗುವದು. ಅನೇಕ ಶ್ರೋತೃಗಳ ಸ್ವಭಾವವು ಮಣ್ಣಿನಂತೆ ಇರುತ್ತದೆ ಮಣ್ಣು ನೀರು ಬಿದ್ದೊಡನೆ ಮೃದುವಾಗುತ್ತದೆ ನೀರು ಆರಿದರೆ ಒಣಗಿ ಗಟ್ಟಿಯಾಗುತ್ತದೆ. ಹಾಗೆಯೇ ಧರ್ಮಬೋಧೆಯನ್ನು ಕೇಳುತ್ತಿರುವಾಗ ಅವರ ಪರಿಣಾಮವು ಕೋಮಲವಾಗುತ್ತದೆ. ಧರ್ಮೋಪದೇಶವು ಮುಗಿದೊಡನೆ ಮೊದಲಿನ ಸ್ಥಿತಿಯು ಇದ್ದ-ಕ್ಕಿದ್ದಂತೆಯೇ ಬಂದು ಬಿಡುವುದು.

ಅನೇಕ ಶ್ರೋತೃಗಳು ಜಾಳಿಗೆಯಂತೆ ಇರುತ್ತಾರೆ. ಜಾಳಿಗೆಯು ಹೇಗೆ ಒಳ್ಳೆಯ ಧಾನ್ಯಗಳನ್ನು ಕೆಳಗೆ ಬಿಟ್ಟು, ಅದರೊಳಗಿನ ಹರಳು, ಕಲ್ಲು, ಮಣ್ಣಿನ ಹೆಂಟೆಗಳನ್ನು ಹಿಡಿದು ಇಟ್ಟುಕೊಳ್ಳುವುದು ಹಾಗೆಯೇ ಧರ್ಮ ಕಥೆಯೊಳಗಿನ ಸಾರವನ್ನು ಬಿಟ್ಟು ಬಿಟ್ಟು, ಅವಗುಣಗಳನ್ನು ಗ್ರಹಣ ಮಾಡುವ ಸ್ವಭಾವವು ಹಲವರಲ್ಲಿರುತ್ತದೆ ಇಂಥವರಿಗೆ ಜಾಳಿಗೆಯಂದ ಶ್ರೋತೃಗಳೆನ್ನಲಾಗುವದು

ಕಲವುಜನ ಶ್ರೋತೃಗಳು ಕೋಣದಂಥ ಗುಣವುಳ್ಳವರಿರುತ್ತಾರೆ ಕೋಣವನ್ನು ನಿರ್ಮಲವಾದ ಜಲವಿರುವ ಸರೋವರದಲ್ಲಿ ಒಯ್ದು ಬಿಟ್ಟರೆ ಅದು ಸ್ವಲ್ಪ ಹೊತ್ತಿನಲ್ಲಿ ಕದಡಿ ನೀರನ್ನೆಲ್ಲ ಹೊಲಸುಮಾಡಿ ಬಿಡುತ್ತದೆ. ಹಾಗೆಯೇ ಅವರು ಸಭೆಯೊಳಗಿನ ಜನರ ಮನವನ್ನೆಲ್ಲ ಹೊಲಸು ಮಾಡಿ ಬಿಡುವರು.

ಇನ್ನು ಕೆಲವರು ಹಂಸದಂತೆ ಇರುವರು. ಹಂಸ ಪಕ್ಷಿಯು ಹಾಲು ನೀರುಗಳನ್ನು ಕೂಡಿಸಿ ಇಟ್ಟರೆ ನೀರನ್ನು ಬಿಟ್ಟು ಹಾಲನ್ನಷ್ಟೇ ಸೇವಿಸುವದು. ಹಾಗೆಯೇ ಉಪದೇಶದೊಳಗಿನ ನಿರರ್ಥಕ ಭಾಗವನ್ನು ತ್ಯಜಿಸಿ ಆತ್ಮಹಿತಕಾರಿಯಾದ ಭಾಗವನ್ನು ಮಾತ್ರ ಸ್ವೀಕರಿಸುವರು.

ಉಪದೇಶವನ್ನು ಕೇಳುವ ಅನೇಕ ಜನರು ಗಿಳಿಯಂತೆ ಇರುತ್ತಾರೆ ಅವರಿಗೆ ನೀವು ಗಿಳಿಯಂತೆ ಎಷ್ಟು ಶಬ್ದಗಳನ್ನು ಕಲಿಸುವಿರೋ ಅಷ್ಟನ್ನು ಮಾತ್ರ ಉಚ್ಚರಿಸುವರು. ಅವರಿಗೆ ರಾಮನಾರು? ರಹಿಮನಾರು? ಎಂಬುದರ ಜ್ಞಾನವೇ ಇರುವದಿಲ್ಲ. ಹಾಗೆಯೇ ಪಾಪ-ಪುಣ್ಯಗಳ ವಿಚಾರವೇ ಇಲ್ಲದಂಥ ಶ್ರೋತೃಗಳಿಗೆ ಸ್ವಪರ ಸ್ವರೂಪದ ಜ್ಞಾನವೇ ಇರುವದಿಲ್ಲ.

ಅನೇಕ ಶ್ರೋತೃಗಳು ಬೆಕ್ಕುಗಳಂತೆ ಇರುವರು. ಬೆಕ್ಕು ತಾನು ನಿದ್ರೆ ಮಾಡುತ್ತ ಇದ್ದರೂ ತನ್ನ ಬೇಟೆಯ ಮೇಲೆ ಕಣ್ಣಿಟ್ಟಿರುವುದು ಹಾಗೆಯೇ ಇಂಥವರು ಧರ್ಮ ಕಥೆಯನ್ನು ಕೇಳುತ್ತಿದ್ದರೂ ತಮ್ಮ ವಿಷಯ-ಕಷಾಯಗಳ ಪ್ರವೃತ್ತಿಯಲ್ಲಿ ತನ್ಮಯರಾಗಿರುತ್ತಾರೆ.

ಅನೇಕರು ಬಕ ಪಕ್ಷಿಯ ವೃತ್ತಿಯವರು ಇರುತ್ತಾರೆ. ಅವರು ಯಾವಾಗಲೂ ಧರ್ಮಧ್ಯಾನದಲ್ಲಿ ಮಗ್ನರಿದ್ದಂತೆ ತೋರಿಸಿ, ತಮ್ಮ ಅಪೇಕ್ಷೆಯನ್ನು ಪೂರೈಸಿಕೊಳ್ಳುವುದರಲ್ಲಿ ತತ್ಪರರಾಗಿರುತ್ತಾರೆ

ಇನ್ನು ಕೆಲವರು ಮೇಲಿಂದ ಮೇಲೆ ಉಪದೇಶಕರಿಗೆ ಗುಂಗಾಡಿನಂತೆ ತೊಂದರೆಯನ್ನು ಕೊಡುತ್ತಾರೆ

ಅನೇಕ ಜನರು ಕುರಿಗಳ ಸಮೂಹದಂತೆ ಇರುತ್ತಾರೆ. ಅವುಗಳಿಗೆ ಬೇಕಾದಷ್ಟು ಸುಗಂಧ ದ್ರವ್ಯಗಳನ್ನು ಹಚ್ಚಿದರೂ ಅವು ತಮ್ಮ ದೇಹದ ದುರ್ಗಂಧವನ್ನು ತ್ಯಜಿಸುವದಿಲ್ಲ ಹಾಗೆ ಇಂಥವರು ಧರ್ಮಬೋಧೆಯನ್ನು ಹೊಂದಿಯೂ ಪಾಪವನ್ನೇ ಆಚರಿಸುತ್ತಿರುತ್ತಾರೆ

ಹಲವು ಜನರು ಉಣ್ಣಿಯಂತೆ ಇರುತ್ತಾರೆ. ಈ ಉಣ್ಣಿಯು ಮೈಯೊಳಗಿನ ಹೊಲಸು ರಕ್ತವನ್ನು ಹೀರುತ್ತದೆ. ಹಾಗೆಯೇ ಇಂಥ ಶ್ರೋತ್ರಗಳು ಧರ್ಮಶ್ರವಣವನ್ನು ಮಾಡುವಾಗ ಅದರೊಳಗಿನ ದೃಷ್ಟಾಂತ ಹಾಗೂ ಪುಣ್ಯ ಪುರುಷರ ಕಥೆಗಳಲ್ಲಿಯ ಪಾಪಯುಕ್ತ ಭಾಗವು ಎಷ್ಟು ಬರುವುದೋ ಅಷ್ಟನ್ನು ಮಾತ್ರ ಗ್ರಹಣ ಮಾಡುವರು.

ಇನ್ನುಳಿದ ಕೆಲವು ಜನ ಶ್ರೋತೃಗಳು ಒಡಕು ಪಾತ್ರೆಗಳಂತೆ ಇರುತ್ತಾರೆ ಅದರಲ್ಲಿ ಹಾಕಿದ ಜಲವು ಹೇಗ ಸೋರಿ ಹೋಗುತ್ತದೆಯೋ ಹಾಗೆಯೇ ಎಂಥ ಉಪದೇಶವನ್ನೂ ಇವರು ಧಾರಣ ಮಾಡುವದಿಲ್ಲ.

ಹಲವು ಜನ ಶ್ರೋತೃಗಳು ಧರ್ಮಾಮೃತವನ್ನು ಪಾನಮಾಡಿಯೂ ಹಾಲುಂಡ ಹಾವು ವಿಷಕಾರುವಂತೆ ವಿಷಯ ಕಷಾಯಗಳನ್ನೇ ನೆನೆಯುತ್ತಾರೆ.

ಹಲವರು ಹುಲ್ಲನ್ನು ತಿಂದು ಅಮೃತಕ್ಕೆ ಸಮಾನವಾದ ಹಾಲನ್ನು ಕೊಡುವ ಆಕಳುಗಳಂತೆ ಇರುತ್ತಾರೆ

ಕೆಲವರು ಕಪ್ಪು ಶಿಲೆಯಂತೆ ಕಠೋರವಾಗಿರುತ್ತಾರೆ. ಅವರಿಗೆ ಎಷ್ಟು ಧರ್ಮೋಪದೇಶವನ್ನು ಮಾಡಿದರೂ ಅದು ಅವರ ಹೃದಯದಲ್ಲಿ ಪ್ರವೇಶಿಸುವುದೇ ಇಲ್ಲ

ಅನೇಕರು ಒರೆಗಲ್ಲಿನಂತೆ ಪರೀಕ್ಷಾ ಪ್ರಧಾನ ಗುಣವುಳ್ಳವರಾಗಿರುತ್ತಾರೆ.

ಹಲವರು ತಕ್ಕಡಿಯ ದಂಡಿಗೆಯಂತೆ ಹೆಚ್ಚು ಕಡಿಮೆ ಪ್ರಮಾಣದಲ್ಲಿ ತೂಗಿ ನೋಡುತ್ತಾರೆ

ಈ ಪ್ರಕಾರ ಶ್ರೋತೃಗಳಲ್ಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬ ಮೂರು ತರಗತಿಗಳು ಇವೆ ಅವರವರ ಸ್ವಭಾವಗಳು ಹೇಗಿರುವವೋ ಹಾಗೆ ಹಾಗೆ ಅವರ ಮೇಲೆ ಧರ್ಮೋಪದೇಶದ ಪರಿಣಾಮವಾಗುತ್ತದೆ ಹೀಗೆ ಧರ್ಮೋಪದೇಶ ಎಂಬ ಹೆಸರಿನ ಸ್ವಾಧ್ಯಾಯ ಪ್ರಕರಣದಲ್ಲಿ ವಕ್ತಾ ಮತ್ತು ಶ್ರೋತಾ ಇವರ ಲಕ್ಷಣವನ್ನು ಹೇಳಲಾಗಿದೆ. ಅಲ್ಲದೆ ಐದು ಪ್ರಕಾರದ ಸ್ವಾಧ್ಯಾಯದ ವರ್ಣನೆಯನ್ನೂ ಮಾಡಲಾಗಿದೆ

ಸ್ವಾಧ್ಯಾಯದ ಫಲ— ಸ್ವಾಧ್ಯಾಯ ಮಾಡುವುದರಿಂದ ಬುದ್ಧಿಗೆ ತೇಜವು ಉತ್ಪನ್ನವಾಗುತ್ತದೆ ವಿಚಾರವು ನಿರ್ಮಲಗೊಳ್ಳುತ್ತದೆ ಧರ್ಮದ ಶ್ರದ್ಧೆಯು ದೃಢಗೊಳ್ಳುತ್ತದೆ ಸಂಶಯಗಳು ಇಲ್ಲದಂತಾಗುತ್ತವೆ. ಉಳಿದ ಜನರು ಎತ್ತಿದ ಸಂಶಯಗಳನ್ನು ನಿವಾರಣೆ ಮಾಡಲಿಕ್ಕೆ ಬರುತ್ತದೆ ಧರ್ಮದ ಮೇಲಿನ ಪ್ರೀತಿಯು ಹೆಚ್ಚುತ್ತದೆ ತಪವು ಬೆಳೆಯುತ್ತದೆ. ಆಚಾರವು ಉಜ್ವಲವಾಗುತ್ತದೆ ಅತಿಚಾರ-ದೋಷಗಳು-ಇಲ್ಲದಂತೆ ಆಗುತ್ತವೆ ಪಾಪಕ್ರಿಯೆಗಳ ಪರಿಹಾರವಾಗುತ್ತದೆ. ಕುಧರ್ಮದ ಮೇಲಿನ ಪ್ರೇಮವು ಇಲ್ಲದಂತೆ ಆಗುತ್ತದೆ ಪಂಚಪರಮೇಷ್ಠಿಗಳ ಮೇಲಿನ ಪ್ರೀತಿಯು ಇಮ್ಮಡಿಯಾಗಿ ಸಮ್ಯಗ್ದರ್ಶನವು ಪ್ರಕಟವಾಗುತ್ತದೆ ಸಂಸಾರ, ದೇಹ, ವಿಷಯೋಪ ಭೋಗಾದಿಗಳ ವಿಷಯದಲ್ಲಿ ತಿರಸ್ಕಾರವು ಉತ್ಪನ್ನವಾಗುತ್ತದೆ ಕಷಾಯವು ಮಂದವಾಗುತ್ತದೆ ದಯಾಭಾವದ ವೃದ್ಧಿಯಾಗುತ್ತದೆ ಶುಭಧ್ಯಾನದಲ್ಲಿ ಕಾಲವು ಕಳೆಯುತ್ತದೆ ಆರ್ತ, ರೌದ್ರ ಧ್ಯಾನಗಳು ಇಲ್ಲದಂತೆ ಆಗುತ್ತವೆ ಜಗತ್ತಿನಲ್ಲಿ ಮನ್ನಣೆಯು ಹೆಚ್ಚುತ್ತದೆ ನಿರ್ಮಲವಾದ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬುತ್ತದೆ ದುರ್ಗತಿಯು ಇಲ್ಲದಂತೆ ಆಗಿ, ಸ್ವರ್ಗದೊಳಗಿನ ಉತ್ತಮ ಸುಖವು ಪ್ರಾಪ್ತವಾಗುತ್ತದೆ, ಮೋಕ್ಷದ ಅತೀಂದ್ರಿಯ ಸುಖವು ಉತ್ಪನ್ನವಾಗುತ್ತದೆ ಈ ಪ್ರಕಾರ ಅನೇಕ ಗುಣಗಳನ್ನೂ ಪೋಷಿಸುವಂಥ ಸ್ವಾಧ್ಯಾಯವೆಂಬ ತಪಶ್ಚರಣವಿದೆ ಅದಕ್ಕಾಗಿ ವೀತರಾಗ ಭಗವಂತನು ಪ್ರಕಟಗೊಳಿಸಿದ ಆಗಮದ ಅಭ್ಯಾಸ ಮಾಡದ ಹೊರತಾಗಿ ಜನ್ಮ ಸಾರ್ಥಕವಾಗದು ಅದನ್ನು ಮಾಡದೆ ಜನ್ಮವನ್ನು ವ್ಯರ್ಥ ಕಳೆಯಬೇಡಿರಿ ಈ ಪ್ರಕಾರ ಸ್ವಾಧ್ಯಾಯ ಎಂಬ ಹೆಸರಿನ ಅಂತರಂಗ ತಪದ ಐದೂ ಪ್ರಕಾರಗಳ ಸ್ವರೂಪದ ವಿವರ ಮುಗಿಯಿತು.

೫. ಕಾಯೋತ್ಸರ್ಗ—ಕಾಯೋತ್ಸರ್ಗದ ಲಕ್ಷಣ ಹೀಗೆ ಇನ್ನು ಮುಂದೆ ಕಾಯೋತ್ಸರ್ಗ ತಪದ ಸ್ವರೂಪವನ್ನು ಕುರಿತು ವಿಚಾರಿಸುವ. ಬಾಹ್ಯಾಭ್ಯಂತರ ಉಪಾಧಿಗಳನ್ನು ತ್ಯಾಗ ಮಾಡುವುದಕ್ಕೆ ಕಾಯೋತ್ಸರ್ಗ-ವೆನ್ನುವರು ಬಾಹ್ಯವೆಂದರೆ ಶರೀರ, ಧನ, ಧಾನ್ಯಗಳೆಂಬಂಥ ಉಪಾಧಿಗಳು, ಅಭ್ಯಂತರವೆಂದರೆ ಕ್ರೋಧ, ಮಾನ, ಮಾಯಾ, ಲೋಭ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ ಮತ್ತು ವೇದ ಈ ಪರಿಣಾಮಗಳೆಂಬ ಉಪಾಧಿಗಳು ಈ ಎರಡೂ ಉಪಾಧಿಗಳನ್ನು ತ್ಯಾಗ ಮಾಡುವುದು ಬಾಹ್ಯ ಉಪಾಧಿಯ ತ್ಯಾಗದಲ್ಲಿ ಆಹಾರ ಮೊದಲಾದವುಗಳ ತ್ಯಾಗವೂ ಸಮಾವೇಶವಾಗುತ್ತದೆ. ಸನ್ಯಾಸವನ್ನು ಸ್ವೀಕರಿಸುವಾಗ ಆಯುಷ್ಯವು ಪೂರ್ಣವಾಗುವ

ವರೆಗೆ ಇದನ್ನು ಯಾವಜ್ಜೀವವೂ ತ್ಯಾಗ ಮಾಡಬೇಕಾಗುತ್ತದೆ ಸಲ್ಲೇಖನದ ವಿಚಾರ ಮಾಡುವಾಗ ಈ ವಿಷಯದಲ್ಲಿ ಹೆಚ್ಚಿಗೆ ವಿವರಿಸಿದೆ ಅದಕ್ಕಾಗಿ ಇಲ್ಲಿ ವಿಸ್ತಾರ ಪೂರ್ವಕವಾಗಿ ಹೇಳಲಿಲ್ಲ

೬. ಧ್ಯಾನ—ಧ್ಯಾನದ ಲಕ್ಷಣವು ಈ ಪ್ರಕಾರವಾಗಿದೆ. ಇನ್ನು ಮುಂದೆ ಧ್ಯಾನ ಎಂಬ ಹೆಸರಿನ ತಪದ ಸ್ವರೂಪವನ್ನು ಹೇಳುತ್ತಾರೆ ಒಂದೇ ವಸ್ತುವನ್ನು ಚಿಂತಿಸುವುದರಲ್ಲಿ ಮನದ ಪರಿಣಾಮವನ್ನು ತೊಡಗಿಸುವುದಕ್ಕೆ ಧ್ಯಾನವೆನ್ನುವರು ಈ ಧ್ಯಾನವು ಉತ್ತಮ ಸಂಹನನವು ಇರುವಂಥವರಿಗೆ ಅಂತರ್ಮುಹೂರ್ತ—ನಲವತ್ತೆಂಟು ನಿಮಿಷ—ಮಾತ್ರ ಇರುತ್ತದೆ. ಇದಕ್ಕಿಂತ ಹೆಚ್ಚಿನ ಅವಧಿಯ ವರೆಗೆ ಇರುವದಿಲ್ಲ ವಜ್ರವೃಷಭನಾರಾಚ ಸಂಹನನ, ವಜ್ರನಾರಾಚ ಸಂಹನನ, ನಾರಾಚ ಸಂಹನನ, ಹೀಗೆ ಮೂರು ಉತ್ತಮ ಸಂಹನನಗಳಿವೆ. ಇವು ಯಾರಿಗೆ ಇರುವವೋ ಅವರಿಗೇನೇ ಮುಖ್ಯವಾಗಿ ಒಂದು ಪದಾರ್ಥದ ಮೇಲೆ ಚಿತ್ತವನ್ನು ಏಕಾಗ್ರಗೊಳಿಸಲಿಕ್ಕೆ ಬರುತ್ತದೆ ಯಾವ ಜನರು ಸಾಂಸಾರಿಕ ಕ್ರಿಯೆಗಳನ್ನು ಅಂದರೆ ಗಮನ, ಭೋಜನ, ಶಯನ, ಅಧ್ಯಯನಾದಿ ಕ್ರಿಯೆಗಳಲ್ಲಿ ನಿಯಮಿತರಾಗಿರುವದಿಲ್ಲವೋ ಅವರಿಗೆ ಧ್ಯಾನವು ಸಾಧಿಸುವದಿಲ್ಲ

ಧ್ಯಾನ ಭಾವನೆಯ ಭೇದಗಳು—ಈ ಭಾವನೆಯಲ್ಲಿ ಪ್ರಶಸ್ತ—ಒಳ್ಳೆಯ—ಸಂಕಲ್ಪದಿಂದ ಶುಭಧ್ಯಾನವು ಅಪ್ರಶಸ್ತ—ಕೆಡಕು—ಸಂಕಲ್ಪದಿಂದ ಅಶುಭ ಧ್ಯಾನವು ಉಂಟಾಗುತ್ತದೆ ಇವುಗಳಲ್ಲಿ ಶುಭಧ್ಯಾನವು ಧರ್ಮಧ್ಯಾನ ಮತ್ತು ಶುಕ್ಲಧ್ಯಾನಗಳೆಂದು ಎರಡು ವಿಧವಾಗಿದೆ ಅಶುಭಧ್ಯಾನದಲ್ಲಿಯೂ ಆರ್ತಧ್ಯಾನ ಮತ್ತು ರೌದ್ರಧ್ಯಾನ ಎಂಬ ಎರಡು ಭೇದಗಳಿವೆ ಈ ಪ್ರಕಾರ ಸಾಮಾನ್ಯ ಧ್ಯಾನದಲ್ಲಿ ನಾಲ್ಕು ಪ್ರಕಾರಗಳಾದವು ಇನ್ನು ಶುಭಧ್ಯಾನವು ಜೀವಕ್ಕೆ ಏನೂ ಮಾಡದೆಯೂ ಕೂಡ ಉತ್ಪನ್ನವಾಗುತ್ತಿರುತ್ತದೆ. ಯಾಕೆಂದರೆ ಇದರ ಸಂಸ್ಕಾರವು ಜೀವದ ಮೇಲೆ ಅನಾದಿ ಕಾಲದಿಂದಲೂ ಆಗುತ್ತ ಬಂದಿದೆ ಇದನ್ನು ಕಲಿಸುವದಕ್ಕಾಗಿ ಯಾವ ಶಾಸ್ತ್ರವನ್ನೂ ರಚಿಸಲಾಗಿಲ್ಲ. ಯಾರೂ ಕಲಿಸದೆ ಇದ್ದರೂ ಸಹ ಈ ಧ್ಯಾನವು ಜೀವಕ್ಕೆ ಉಂಟಾಗುತ್ತದೆ ಅಶುಭಧ್ಯಾನವನ್ನು ಇಲ್ಲದಂತೆ ಮಾಡುವದಕ್ಕಾಗಿ ಮೊದಲು ನಾಲ್ಕು ಪ್ರಕಾರದ ಆರ್ತಧ್ಯಾನಗಳ ಸ್ವರೂಪವನ್ನು ವಿಚಾರಿಸಲಿಕ್ಕಬೇಕು

ಅನಿಷ್ಟ ಸಂಯೋಗದಿಂದ ಜನಿಸುವ ಆರ್ತಧ್ಯಾನ—ಆರ್ತಧ್ಯಾನದಲ್ಲಿ ಅನಿಷ್ಟ ಸಂಯೋಗಜ, ಇಷ್ಟ ವಿಯೋಗಜ, ರೋಗ ಜನಿತ, ನಿದಾನ ಜನಿತ ಎಂಬ ನಾಲ್ಕು ಭೇದಗಳಿವೆ ಋತವೆಂದರೆ ದುಃಖ. ಇದರ ಅವಸ್ಥೆಯಲ್ಲಿ ಆಗುವ ಧ್ಯಾನವು ಆರ್ತಧ್ಯಾನವು. ಅನಿಷ್ಟ ಪದಾರ್ಥಗಳ ಸಂಯೋಗವಾಗುವುದರಿಂದ ದುಃಖವು ಉತ್ಪನ್ನವಾಗುತ್ತದೆ ಆ ವೇಳೆಯಲ್ಲಿ ಯಾವ ಚಿಂತನೆಯು ಉಂಟಾಗುವುದೋ ಅದಕ್ಕೆ ಅನಿಷ್ಟ ಸಂಯೋಗಜ ಆರ್ತಧ್ಯಾನವೆನ್ನುವರು ನಮ್ಮ ಶರೀರ, ಧನ, ಆಜೀವಿಕೆ, ಸ್ವಜನ ಮಿತ್ರಾದಿಗಳ ಅಗಲುವಿಕೆಗಳನ್ನು ಉಂಟುಮಾಡುವ ದುಷ್ಟ ಶತ್ರು, ದುಷ್ಟ ರಾಜ, ರಾಜನ ಕೆಟ್ಟ ಅಧಿಕಾರಿ ಇತ್ಯಾದಿ ಜನರ ಸಂಯೋಗ ಪ್ರಾಪ್ತವಾಗುವುದು; ರೋಗಯುಕ್ತ ಶರೀರ, ಕಳವು, ಬಡತನ, ನೀಚಜಾತಿ, ನೀಚ ಕುಲಗಳಲ್ಲಿ ಜನ್ಮ, ದುರ್ಬಲತೆ, ಅಸಮರ್ದತೆ, ಇಂದ್ರಿಯ ವಿಕಲತೆ ಮೊದಲಾದವುಗಳು ಪ್ರಾಪ್ತವಾಗುವುದು, ಸಿಂಹ, ಹುಲಿ, ಹಾವು, ನಾಯಿ, ಇಲಿ, ಬೆಂಕಿ, ನೀರು ಮೊದಲಾದವುಗಳ ಸಂಯೋಗವಾಗುವುದು, ದುಷ್ಟ ಆಪ್ತರು, ದುಷ್ಟ ಹೆಂಡತಿ, ವ್ಯಸನಿಗಳಾದ ಮಕ್ಕಳು, ಮೊದಲಾದವುಗಳ ಸಂಯೋಗವಾಗುವುದು, ಇದೆಲ್ಲ ಸಂಯೋಗವು ದುಃಖವನ್ನು ಉತ್ಪನ್ನ ಮಾಡುವಂಥದಿದೆ ಇದರಿಂದ ಪರಿಣಾಮದಲ್ಲಿ ಆಗುವ ವಿಕಲತ್ವವನ್ನು ಇಲ್ಲದಂತೆ ಮಾಡುವದಕ್ಕಾಗಿ ಯಾರು ಹಗಲಿರುಳೂ ಚಿಂತಿಸುತ್ತಾರೋ ಅವರ ಧ್ಯಾನಕ್ಕೆ ಅನಿಷ್ಟ ಸಂಯೋಗಜ ಆರ್ತಧ್ಯಾನವೆಂದು ಹೇಳಲಾಗುವದು. ಬಹಳ ಚಳಿ, ಉಷ್ಣತೆ, ಮಳೆ ಇವುಗಳಿಂದ ಗುಂಗಾಡು, ಸೊಣ, ಇರುವೆ, ತಗಣೆ, ದುಷ್ಟರ ದುರ್ವಚನ ಇವೇ ಮೊದಲಾದವುಗಳ ಸ್ಮರಣ ಮತ್ತು ಚಿಂತನಗಳನ್ನು ಮಾಡುವುದರಿಂದ ಪರಿಣಾಮದಲ್ಲಿ ಅತಿಶಯ ದುಃಖವು ಉತ್ಪನ್ನವಾಗುತ್ತದೆ. ಮತ್ತು ಅದು ಹಗಲು, ರಾತ್ರಿ, ಮನೆ, ಬಾಗಿಲು ಇಲ್ಲವೆ ಯಾವುದೇ ಸ್ಥಳದಲ್ಲಿ ಯಾವುದೇ ಕಾಲದಲ್ಲಿ ಇಲ್ಲದಂತೆ ಆಗುವದಿಲ್ಲ. ಇದರಿಂದಾಗುವ ಆರ್ತಪರಿಣಾಮದಿಂದ ಘೋರ ಕರ್ಮದ ಬಂಧವಾಗುತ್ತದೆ ಅಂತಲೇ ಇವೆಲ್ಲ ಅನಿಷ್ಟ ಸಂಯೋಗಜ ದುಃಖಗಳಾಗಿವೆ. ಇದು ಆರ್ತಧ್ಯಾನದ ಮೊದಲಭೇದವಾಯಿತು ಈ ದುಃಖಗಳನ್ನು ಯಾವ ಸಮ್ಯಗ್‌ದೃಷ್ಟಿ ಜೀವವು ತನ್ನ ಪರಿಣಾಮದಲ್ಲಿ ಆಗಗೊಡುವದಿಲ್ಲವೋ ಅದರ ಕರ್ಮ ನಿರ್ಜರೆಯು ಆಗುತ್ತದೆ ಯಾವನು ಜ್ಞಾನವಾನ್ ಸತ್ಪುರುಷನಿರುವನೋ ಅವನು ಅನಿಷ್ಟ ಸಂಯೋಗವು ಪ್ರಾಪ್ತವಾದರೂ ಸಹ ತನ್ನ ಪರಿಣಾಮದಲ್ಲಿ ದುಃಖ ಉತ್ಪನ್ನವಾಗಗೊಡುವದಿಲ್ಲ. ಅಂಥ ಸಂದರ್ಭದಲ್ಲಿ ಅವನು ಮುಂದೆ ಸೂಚಿಸಿದಂತೆ ವಿಚಾರಿಸುತ್ತಾನೆ.

ಆರ್ತಧ್ಯಾನವು ಉಂಟಾದಾಗ ಏನು ವಿಚಾರಮಾಡಬೇಕು? "ಎಲೈ ಆತ್ಮನೇ, ನಿನಗೆ ದುಃಖವನ್ನು ಕೊಡುವಂಥ ಈ ಅನಿಷ್ಟ ಸಾಮಗ್ರಿಗಳು ನಿನ್ನ ಸುತ್ತಲೂ ಮುತ್ತಿವೆ ಅವೆಲ್ಲವೂ ನೀನು ಸಂಪಾದಿಸಿದ ಪಾಪಕರ್ಮದ ಫಲಗಳಾಗಿವೆ ಇದರಲ್ಲಿ ಇನ್ನೊಬ್ಬರ ದೋಷಗಳೇನೂ ಇಲ್ಲ ಇತರರು ನಿನ್ನನ್ನು ನಾಶ ಮಾಡುತ್ತಾರೆಂಬುದನ್ನು ನೀನು ತಿಳಿಯಬೇಡ ನೀನು ಹಿಂದೆ ಪರಧನವನ್ನು ಹರಣ ಮಾಡಿರುವಿ, ಅನ್ಯಾಯ ಮಾಡಿರುವಿ, ಅನೇಕ ನಿರ್ಬಲರಿಗೆ ಸಂತಾಪವನ್ನು ಕೊಟ್ಟಿರುವಿ, ಎರಡನೆಯವರಿಗೆ ಕಲಂಕವನ್ನು ಹಚ್ಚಿರುವಿ, ಸುಳ್ಳು ಧರ್ಮಗಳ ಶಿಕ್ಷಣವನ್ನು ಕೊಟ್ಟಿರುವಿ, ಶೀಲವಂತ ತ್ಯಾಗೀ ತಪಸ್ವಿಗಳಿಗೆ ದೋಷವನ್ನಿಟ್ಟು ನಿಂದಿಸಿರುವಿ, ಕುಮಾರ್ಗದ ಪ್ರವೃತ್ತಿಯನ್ನು ಉಂಟುಮಾಡಿರುವಿ, ಸುಳ್ಳು ಸಂಗತಿಗಳನ್ನು ಕೇಳುವುದರಲ್ಲಿ ಮುಳುಗಿ ಹೋಗಿರುವಿ, ಅನ್ಯಾಯದಿಂದ ವಿಷಯುಗಳನ್ನು ಭೋಗಿಸಿರುವಿ, ದೇವ ದ್ರವ್ಯವನ್ನು ಅಂದರೆ ನಿರ್ಮಾಲ್ಯ ಪದಾರ್ಥವನ್ನು ತಿಂದಿರುವಿ, ಅದಕ್ಕಾಗಿ ಈ ಎಲ್ಲ ಕರ್ಮಗಳು ಸಂದರ್ಭ ನೋಡಿಕೊಂಡು ಈಗ ಉದಯಿಸಿವೆ ಇನ್ನು ಈ ಕರ್ಮದ ಉದಯ ಪ್ರಸಂಗದಲ್ಲಿ ದುಃಖಭಾವದಿಂದ ಬಂದ ಕಷ್ಟವನ್ನು ಭೋಗಿಸಿದರೆ ಹೊಸ ಹೊಸ ಪಾಪಗಳ ಬಂಧವು ಮತ್ತೆ ಆಗುವುದು. ಇರಲಿ, ಈಗ ನೀನು ಬಹಳಷ್ಟು ದುಃಖಮಾಡಿದರೆ ಕರ್ಮವು ಬಿಡುವದೆಂದು ತಿಳಿದಿರುವಿಯಾ? ಅದಂತೂ ಹೆಚ್ಚು ಹೆಚ್ಚಾಗಿ ದುಃಖವನ್ನು ಕೊಟ್ಟೀತು. ನಿನ್ನ ಬುದ್ಧಿಯನ್ನೂ ಭ್ರಷ್ಟಗೊಳಿಸೀತು. ಅಲ್ಲದೆ ಅದು ನಿನ್ನ ಅಂತಃಕರಣದಲ್ಲಿ ಎಳ್ಳಷ್ಟೂ ಧರ್ಮವನ್ನೂ ನಿಲ್ಲಗೊಡಲಿಕ್ಕಿಲ್ಲ ಅದಲ್ಲದೆ ಈ ಎಲ್ಲ ಕ್ರಿಯೆಗಳಿಂದ ನಿನ್ನ ಪಾಪದ ಬಂಧವು ಹೆಚ್ಚು ದೃಢವಾದೀತು ಅಂತಲೇ ಈಗ ನೀನು ಧೈರ್ಯವನ್ನು ಧಾರಣಮಾಡಿ, ಪ್ರಾಪ್ತವಾದಂಥ ದುಃಖವನ್ನು ಸಮಭಾವದಿಂದ ಸಹನಮಾಡು ಈ ಪ್ರಕಾರ ಸಹನ ಮಾಡಿದ್ದಾದರೆ ಬೇಗನೇ ಪಾಪಕರ್ಮದ ನಾಶವಾದೀತು ಅದಕ್ಕಾಗಿ ಮನಸ್ಸಿನಲ್ಲಿ ಈ ಪ್ರಕಾರ ವಿಚಾರ ಮಾಡು–'ಈಗ ನನಗೆ ಬಹಳ ಲಾಭವಾಯಿತು'' ಯಾಕಂದರೆ ಈಗಲೇ ಕರ್ಮವು ಉದಯಕ್ಕೆ ಬಂದು ತನ್ನ ಫಲವನ್ನು ಕೊಟ್ಟು ಇಲ್ಲದಂತಾಗಿ ಹೋಯಿತಲ್ಲ ನಾನು ಇಂಥ ಹೊತ್ತಿನಲ್ಲಿ ಜಿನ-ಧರ್ಮವನ್ನು ಧಾರಣ ಮಾಡಿರುವೆ ಈ ಸಂದರ್ಭದಲ್ಲಿ ಕರ್ಮದ ಪ್ರಹಾರಗಳನ್ನು ಅತಿಶಯ ಶಾಂತಭಾವದಿಂದ ಸಹನಮಾಡಿ, ಅವುಗಳ ಋಣದಿಂದ ಮುಕ್ತನಾಗುವೆ. ಇದೇ ಕರ್ಮವು ಒಂದು ವೇಳೆ ಇನ್ನೊಂದು ಪ್ರಸಂಗದಲ್ಲಿ ಉದಯಕ್ಕೆ ಬಂದಿದ್ದರೆ ಅದರಿಂದ ಹೆಚ್ಚಿನ ಬಂಧವಾಗಿ ಅಸಂಖ್ಯಾತ ಜನ್ಮಗಳ ವರೆಗೆ ಇದರ ಸುತ್ತುವಿಕೆಯೊಳಗಿಂದ ಬಿಡುಗಡೆಯನ್ನು ಹೊಂದುತ್ತಿರಲಿಲ್ಲ."

ಈ ಅನಿಷ್ಟ ಸಂಯೋಗವು ನನಗೆ ಹೇಗೆ ದುಃಖದಾಯಕವಾಗಿರುವುದೋ ಹಾಗೆಯೇ ಅನ್ಯ ಜೀವಿಗಳಿಗೂ ದುಃಖದಾಯಕವೆನಿಸುತ್ತಿರಬೇಕು ಅಂತಲೇ ನಾನು ಇಂದಿನಿಂದಲೂ ಯಾವ ಪ್ರಕಾರದ ಅನ್ಯ ಜೀವಕ್ಕೂ ಅಯೋಗ್ಯ ವಚನಗಳನ್ನು ಆಡಿಯೂ ಎಚ್ಚರಗೇಡಿತನದಲ್ಲಿ ಶರೀರದ ಚಟುವಟಿಕೆಗಳನ್ನು ನಡೆಯಿಸಿಯೂ, ದುಃಖವನ್ನು ಉಂಟು-ಮಾಡುವಂತೆ ವರ್ತಿಸಲಿಕ್ಕಿಲ್ಲ ಅಲ್ಲದೆ ಅವುಗಳಿಗೆ ದುಃಖ ಉಂಟಾಗಲೆಂಬ ವಿಚಾರವನ್ನೂ ಕೂಡ ಮಾಡುವದಿಲ್ಲ ಈಗ ನನಗೆ ಪ್ರಾಪ್ತವಾಗಿರುವ ಅನಿಷ್ಟ ಸಂಯೋಗಕ್ಕಿಂತಲೂ ಅನೇಕಪಟ್ಟು ಹೆಚ್ಚು ದುಃಖವನ್ನು ಕೊಡುವ ನರಕ ತಿರ್ಯಂಚಾದಿ ಪರ್ಯಾಯಗಳು ಹಲವು ಸಲ ಪ್ರಾಪ್ತವಾಗುತ್ತವೆ ಈ ಮನುಷ್ಯ ಜನ್ಮದಲ್ಲಿಯೂ ಕೂಡ ಇದಕ್ಕಿಂತ ಹೆಚ್ಚಿನ ದುಃಖಗಳೂ ಸಹ ಹಿಂದೆ ಪ್ರಾಪ್ತವಾಗಿವೆ ಅನೇಕ ಪ್ರಕಾರದ ದುರ್ವಚನಗಳನ್ನೂ ಸಹನ ಮಾಡಿರುವೆ, ಅನೇಕ ಪ್ರಕಾರದ ಪೆಟ್ಟುಗಳನ್ನು ತಿಂದು ದಿನಾಲು ದುಃಖ ಭೋಗಿಸಿರುವೆ, ಹಲವು ಜನ್ಮಗಳಲ್ಲಿ ಬಡತನದ ದುಃಖವನ್ನು ಅನುಭವಿಸಿರುವೆ ಭಾರ ಹಾಗೂ ಮರ್ಮಸ್ಥಾನಗಳಲ್ಲಿ ಹೊಡೆತಗಳನ್ನು ತಿಂದಿರುವೆ. ಕೈಕಾಲು, ಮೂಗುಗಳನ್ನು ಕತ್ತರಿಸುವದರಿಂದಲೂ ಕಣ್ಣುಗಳನ್ನು ತೆಗೆಯುವುದರಿಂದಲೂ ಹಸಿವು, ನೀರಡಿಕೆ, ಚಳಿ, ಉಷ್ಣ, ಬೇಸಿಗೆಗಳಲ್ಲಿ ಸಿಗುವುದರಿಂದಲೂ ಘೋರ ದುಃಖಗಳನ್ನು ಭೋಗಿಸಿರುವೆ ಅಲ್ಲದೆ ದುಷ್ಟ ಜೀವಗಳಿಗೆ ಆಹಾರವೂ ಆಗಿರುವೆ. ಹಲವು ದಿನಗಳ ವರೆಗೆ ಸೆರೆಮನೆಯಲ್ಲಿ ಬಿದ್ದಿರುವೆ ಬಂಧನದಲ್ಲಿ ಸಿಕ್ಕು ಕೈಕಾಲುಗಳನ್ನು ಕಡಿದ ನೋವಿನಲ್ಲಿ ನರಳಿರುವೆ ಹಾಗೆಯೇ ಹಲವು ಸಲ ಬೆಂಕಿಯಲ್ಲಿ ಸುಟ್ಟೂ ಸತ್ತಿರುವೆ ಹಲವು ಸಲ ನೀರು–ಕೆಸರುಗಳಲ್ಲಿ ಮುಳುಗಿ ಸತ್ತಿರುವೆ ಹಲವು ಸಲ ಬೆಂಕಿಯಲ್ಲಿ ಸುಟ್ಟೂ ಸತ್ತಿರುವೆ ಈ ಪ್ರಕಾರ ಮನುಷ್ಯ ತಿರ್ಯಂಚ ಯೋನಿಗಳಲ್ಲಿ ಉತ್ಪನ್ನನಾಗಿ ಅನಿಷ್ಟ ಸಂಯೋಗವನ್ನು ಅನಂತ ವೇಳೆ ಭೋಗಿಸಿರುವೆ ನರಕ ಗತಿಯ ದುಃಖವನ್ನಂತೂ ಪ್ರತ್ಯಕ್ಷ ಜ್ಞಾನಿಗಳಾದ ಕೇವಲಿಗಳೇ ಅರಿಯಲಿಕ್ಕೆ ಸಮರ್ಥರು ಅದು ಅನ್ಯರಿಗೆ ತಿಳಿಯಲಾರದು. ಈ ಸಂಸಾರದಲ್ಲಿ ಇರುವ ವರೆಗೂ ಅನಿಷ್ಟ ಸಂಯೋಗ ಎಂಬುದು ಇದ್ದೇ ಇರುತ್ತದೆ ಈಗ ನಾನು ಪಾಪ ಕರ್ಮದ ಉದಯದಿಂದ ಪಂಚಮ

ಕಾಲದಲ್ಲಿ ಮನುಷ್ಯನಾಗಿ ಜನ್ಮಿಸಿರುವೆ. ಅಂದಮೇಲೆ ಅದರ ಹೆದರಿಕೆಯನ್ನು ಇಟ್ಟುಕೊಂಡು ಏನು ಉಪಯೋಗ? ಮನುಷ್ಯ ಜನ್ಮದಲ್ಲಿಯೂ ಕೂಡ ಅನಂತ ಕಾಲದ ವರೆಗೆ ಯಾವುದರ ಲಾಭವಾಗುವುದು ದುರ್ಲಭವಾಗಿರುವುದೋ ಅಂಥ ಧರ್ಮದ ಪರಮ ನಿಧಿಯು ನನಗೆ ಪ್ರಾಪ್ತವಾಗಿದೆ. ಅದಕ್ಕಾಗಿ ಆನಂದವನ್ನು ಹೊಂದಬೇಕು ಅಲ್ಲದೆ ಅನಿಷ್ಟ ಸಂಯೋಗದಿಂದ ಜನಿಸಿದ ದುಃಖವನ್ನು ಮರೆಯಬೇಕು ಮೇಲಾಗಿ ಪರಮ ಶಾಂತ ಭಾವವನ್ನು ಧಾರಣ ಮಾಡಬೇಕು ಕರ್ಮದ ಉದಯವನ್ನು ಗೆಲ್ಲಬೇಕು ಇದೇ ಯೋಗ್ಯವಾಗಿದೆ ಈ ಪ್ರಕಾರ ಅನಿಷ್ಟ ಸಂಯೋಗದಿಂದ ಹುಟ್ಟಿದ ಆರ್ತಧ್ಯಾನದ ವಿಚಾರವನ್ನು ಮನಸ್ಸಿನಲ್ಲಿ ನೆನೆದು ಅದನ್ನು ಇಲ್ಲದಂತೆ ಮಾಡಬೇಕು

**ಇಷ್ಟ ವಿಯೋಗಜ ಆರ್ತಧ್ಯಾನ**—ಈಗ ಆರ್ತಧ್ಯಾನದ ಇಷ್ಟ ವಿಯೋಗಜ ಎಂಬ ಭೇದವನ್ನು ಕುರಿತು ವಿಚಾರಿಸೋಣ ನಮಗೆ ಬೇಕಾದ ಪದಾರ್ಥದ ವಿಯೋಗದಿಂದ ಬಹಳ ದುಃಖವು ಉತ್ಪನ್ನವಾಗುತ್ತದೆ ಅದು ಹೀಗಿದೆ–ನಮ್ಮ ಅಂತಃಕರಣಕ್ಕೆ ಆನಂದವನ್ನು ಕೊಡುವ ಹಾಗೂ ಅನೇಕ ಪ್ರಕಾರದ ಸುಖಗಳನ್ನು ಕೊಡುವ ಪುತ್ರನ ಮರಣವಾಗುವಿಕೆ, ನಮ್ಮ ಆಜ್ಞೆಯನ್ನು ಪಾಲಿಸುವ ಸ್ತ್ರೀಯು ಅಗಲುವಿಕೆ, ಪ್ರಾಣಕ್ಕಿಂತಲೂ ಪ್ರಿಯವಾದಂಥ ಮಿತ್ರನ ವಿಯೋಗವಾಗುವಿಕೆ, ವಿಪುಲ ಸಂಪತ್ತು ಹಾಗೂ ರಾಜೈಶ್ವರ್ಯದ ಉಪಭೋಗವನ್ನು ದೊರಕಿಸಿಕೊಡುವಂಥ ಒಡೆಯನ ವಿಯೋಗವಾಗುವಿಕೆ, ಸುಖದಿಂದ ಜೀವನ ಸಾಗಿಸಲಿಕ್ಕೆ ಅನುಕೂಲವಾದ ಸಾಮಗ್ರಿಗಳು ನಷ್ಟವಾಗುವಿಕೆ, ರಾಜ್ಯವು ಇಲ್ಲದಂತಾಗುವಿಕೆ, ಮಾನಭಂಗವಾಗುವಿಕೆ, ಸಂಪತ್ತಿಯು ಇಲ್ಲದಂತಾಗುವಿಕೆ, ಸುಖದಿಂದ ವಾಸಿಸುವ ಸ್ಥಳವಾದ ಮನೆಯನ್ನು ದುಷ್ಟರು ಯಾರಾದರೂ ನಾಶಗೊಳಿಸುವಿಕೆ, ತಮ್ಮ ಸೌಭಾಗ್ಯ ತಿಲಕವೆನಿಸುವಂಥ ಕೀರ್ತಿಯು ನಷ್ಟವಾಗುವಿಕೆ, ನಾವು ಅತಿಶಯ ಪ್ರೀತಿಯನ್ನು ಮಾಡುವ ವಸ್ತುವು ನಷ್ಟವಾಗುವಿಕೆ, ಇಂಥ ಪ್ರಸಂಗಗಳಲ್ಲಿ ಉತ್ಪನ್ನವಾಗುವ ದುಃಖಕ್ಕೆ ಇಷ್ಟ ವಿಯೋಗಜ ದುಃಖವೆನ್ನುವರು ಈ ಇಷ್ಟ ವಿಯೋಗದಿಂದ ಮೇಲಿಂದ ಮೇಲೆ ದುಃಖ, ಭ್ರಮ, ಭಯ, ಮೂರ್ಛೆಗಳು ಪ್ರಾಪ್ತವಾಗುತ್ತವೆ ಈ ಪದಾರ್ಥಗಳ ಸಂಯೋಗವು ಪುನಃ ಯಾವಾಗ ಪ್ರಾಪ್ತವಾದೀತು ಎಂದು ಯಾವಾಗಲೂ ಚಿಂತಿಸುತ್ತಿರುವುದು, ಮೇಲಿಂದ ಮೇಲೆ ಅಳುತ್ತಿರುವುದು, ಅಳುತ್ತ ಅಳುತ್ತ ಸುದ್ದಿಹಾರಿ ಬೀಳುವುದು, ದನಿ ತೆಗೆದು ಅಳುವುದು, ಮೇಲಿಂದ ಮೇಲೆ ದುಃಖದಿಂದ ಪೀಡಿತರಾಗಿ 'ಹಾ! ಹಾ!' ಎನ್ನುವದು. ಇವೆಲ್ಲ ತಿರ್ಯಂಚ ಗತಿಯಲ್ಲಿ ಉತ್ಪನ್ನವಾಗುವದಕ್ಕೆ ಕಾರಣವಾದ ಇಷ್ಟ ವಿಯೋಗದಿಂದ ಹುಟ್ಟುವ ಆರ್ತಧ್ಯಾನಗಳೇ ಆಗಿವೆ ಈ ಇಷ್ಟವಿಯೋಗದಿಂದ ದೊಡ್ಡ ದೊಡ್ಡ ಶೂರರು ಎನಿಸಿಕೊಳ್ಳುವವರೂ ಸಹ ಧೈರ್ಯಗೆಡುತ್ತಾರೆ ದೊಡ್ಡ ದೊಡ್ಡ ಮನುಷ್ಯರು ದೀನರಾಗಿ ಹೋಗುತ್ತಾರೆ ಅನೇಕರ ಹೃದಯದಲ್ಲಿ ನಡುಗು ಹುಟ್ಟುತ್ತದೆ. ಹಲವರು ಸತ್ತು ಹೋಗುತ್ತಾರೆ ಅನೇಕರು ಹುಚ್ಚರಾಗುತ್ತಾರೆ ಕೆಲವರು ಬಾವಿಯಲ್ಲಿ ಹಾರಿಕೊಳ್ಳುತ್ತಾರೆ. ಅನೇಕರು ಮಾಳಿಗೆಯ ಮೇಲಿಂದ ಜಿಗಿಯುತ್ತಾರೆ ಹಲವರು ಪರ್ವತದ ಮೇಲಿಂದ ಬೀಳುತ್ತಾರೆ. ಕೆಲವರು ವಿಷವನ್ನು ತಿಂದು ಇಲ್ಲವೆ ಶಸ್ತ್ರದಿಂದ ಇರಿದುಕೊಂಡು ಆತ್ಮಘಾತ ಮಾಡಿಕೊಳ್ಳುತ್ತಾರೆ ಈ ಪ್ರಕಾರ ಈ ಇಷ್ಟ ವಿಯೋಗ ಎಂಬ ಪೀಡೆಯು ಬೇರೆ ಯಾವುದರಿಂದಲೂ ಆಗುವದಿಲ್ಲ ಈ ವಿಯೋಗದ ದುಃಖದಿಂದ ಇಹಪರ ಲೋಕಗಳೆರಡೂ ನಾಶ ಹೊಂದುತ್ತವೆ ಯಾರು ಸಂಸಾರ ದೇಹಭೋಗಗಳಿಂದ ವಿರಕ್ತರಾಗಿ, ಭಗವಾನ್ ವೀತರಾಗ ಸರ್ವಜ್ಞನ ವಚನಗಳ ಮೇಲೆ ವಿಶ್ವಾಸವಿಟ್ಟು, ಸಮ್ಯಗ್‌ದರ್ಶನವನ್ನು ಧಾರಣಮಾಡುವವರಿರುವರೋ ಅವರೇ ಪದಾರ್ಥಗಳ ಸತ್ಯ ಸ್ವರೂಪವನ್ನು ತಿಳಿದು, ಇಷ್ಟ ವಿಯೋಗದಿಂದ ಉತ್ಪನ್ನವಾಗುವ ದುಃಖವನ್ನು ಗೆಲ್ಲುತ್ತಾನೆ ಇಂಥವನು ಹೀಗೆ ವಿಚಾರಿಸುತ್ತಾನೆ.

**ಇಷ್ಟ ವಿಯೋಗದ ವೇಳೆಯಲ್ಲಿ ಏನನ್ನು ವಿಚಾರಿಸಬೇಕು?** ಎಲೈ ಆತ್ಮನೇ, ಸಂಸಾರದಲ್ಲಿ ಯಾವ ಯಾವ ಪದಾರ್ಥಗಳ ಸಂಯೋಗವು ನಿನಗೆ ಆಗಿರುವುದೋ ಅವೆಲ್ಲವುಗಳ ವಿಯೋಗವೂ ನಿಶ್ಚಯವಾಗಿಯೂ ಆಗುವಂತಹದಿದೆ ಅದನ್ನು ತಡೆಯಲಿಕ್ಕೆ ದೇವ, ದೇವತೆ, ಇಂದ್ರ, ಮಂತ್ರ, ತಂತ್ರ, ಔಷಧ, ಸೈನ್ಯ, ಶಕ್ತಿ, ನೇಪಜ ಸಮೂಹ, ಬುದ್ಧಿ, ಮಿತ್ರ, ಧನ, ಐಶ್ವರ್ಯ, ರಾಜ ಇವರಲ್ಲಿ ಯಾರೂ ಸಮರ್ಥರಿಲ್ಲ ಎಲೈ, ನಿನ್ನ ದೇಹದ ವಿಯೋಗವೂ ಕೂಡ ನಿಶ್ಚಿತವಾಗಿ ಆಗುವದಿದೆ ಎಂಬುದು ಗೊತ್ತಾದದ್ದೇ ಇದೆ ಅಂದ ಮೇಲೆ ದೇಹದ ಸಂಬಂಧವಿಡುವ ಇತರ ವಸ್ತುಗಳ ವಿಯೋಗವಾಗುವುದರಲ್ಲಿ ಆಶ್ಚರ್ಯವೇನು? ನೀನು ತಂದೆ, ಮಗ, ತಾಯಿ, ತಂಗಿ ಮೊದಲಾದ ಆಪ್ತವರ್ಗದ ಜನರಿಗೆ ನಿನ್ನವರೆಂದು ತಿಳಿದು ಪ್ರೀತಿಸುತ್ತಿರುವಿ ಆದರೆ ಇವರ ಸಂಬಂಧವು ನಿನ್ನ ಆತ್ಮನ ಕೂಡ ಇಲ್ಲ. ಈ ಮುಖದ ಮೇಲೆ ಆವರಿಸಿದಂಥ ತೊಗಲು, ದುರ್ಗಂಧದಿಂದ ತುಂಬಿದ ಮೂಗು, ತೊಗಲಿನಿಂದ

ಮುಚ್ಚಿದ ತೊಗಲು ನೋಡಿ ಮೋಹಿಸಿ ನಿನ್ನವರೆಂದು ಬಹಳ ಪ್ರೇಮದಿಂದ ಮನ್ನಿಸುತ್ತಲಿರುವಿ. ಆದರೆ ಇವರೆಲ್ಲರೂ ಒಂದು ದಿನ ಅಗ್ನಿಯಲ್ಲಿ ಸುಟ್ಟು ಹೋಗುವಂಥವರಿದ್ದಾರೆ. ಇದೇ ಪ್ರಕಾರ ತಾಯಿ, ತಂದೆ, ಪ್ರೀತಿಯ ಸ್ತ್ರೀ, ಸತ್ಪುತ್ರ, ಮೈದುನ, ಐಶ್ವರ್ಯ, ಧನ, ಮನೆ-ಮಠ, ದೇಶ, ನಗರ, ಹಳ್ಳಿ, ಮಿತ್ರ, ಒಡೆಯ, ಸೇವಕ ಮೊದಲಾದ ಎಲ್ಲರ ವಿಯೋಗವು ಆಗಿಯೇ ತೀರುತ್ತದೆ ಅದಕ್ಕಾಗಿ ಇಷ್ಟ ವಿಯೋಗದ ದುಃಖವನ್ನು ಮಾಡಿ ಅಶುಭ ಕರ್ಮದ ಬಂಧವನ್ನು ಮಾಡಿಕೊಳ್ಳಬೇಡಿರಿ ಅದು ನಿನಗೆ ಹಿತವನ್ನು ಮಾಡುವಂಥದಿದ್ದರೆ ನಿನ್ನನ್ನು ಬಿಟ್ಟು ಅದು ಏಕೆ ಹೋಗುತ್ತಿತ್ತು? ಇಷ್ಟ ಪದಾರ್ಥದ ವಿಯೋಗವಾಗುತ್ತದೆಂದ ಮೇಲೆ ನಿನಗೆ ಸಮ್ಯಗ್ ಜ್ಞಾನವು ಇದ್ದುದೇ ಆದಲ್ಲಿ ಧರ್ಮವೊಂದೇ ನಿನ್ನ ಹಿತಮಾಡುವಂಥದೆಂದು (ಇಷ್ಟ) ತಿಳಿದು ಅದನ್ನೇ ಚಿಂತಿಸು ಧರ್ಮವನ್ನೇ ಇಷ್ಟವೆಂದು ನೀನು ಭಾವಿಸಿದರೇನೇ ದುಃಖದೊಳಗಿಂದ ಮುಕ್ತನಾಗುವಿ ಇದನ್ನುಳಿದು ಇತರ ಸ್ತ್ರೀ, ಪುತ್ರ, ಕುಟುಂಬ, ಧನ, ಪರಿಗ್ರಹ ಮೊದಲಾದವುಗಳು ಇಷ್ಟವೆನಿಸುವದಿಲ್ಲ ಈ ಪದಾರ್ಥಗಳು ಮಮತ್ವವನ್ನು ಉತ್ಪನ್ನಮಾಡಿ, ಇಂದ್ರಿಯಗಳನ್ನು ವಿಷಯದಲ್ಲಿ ಪ್ರವೃತ್ತ-ಗೊಳಿಸುತ್ತವೆ. ಅಲ್ಲದೆ ಅನೀತಿಯ ಕಡೆಗೆ ಪ್ರವೃತ್ತಗೊಳಿಸಿ ದುರ್ಗತಿಗೆ ಮುಟ್ಟಿಸುತ್ತವೆ ಅಂದ ಮೇಲೆ ಆ ಪದಾರ್ಥಗಳು 'ಇಷ್ಟ' ಹೇಗೆ ಎನಿಸಿಯಾವು? ಪರಮ ಹಿತವನ್ನು ಸಾಧಿಸುವದಕ್ಕೆ ಪ್ರವೃತ್ತಿಯನ್ನುಂಟು ಮಾಡುವ ಧರ್ಮಾತ್ಮರಾದ ಗುರುಗಳು ಇಲ್ಲವೆ ಸಹಧರ್ಮಿಗಳಾದ ಜನರು ಇವರೇ ನಿಜವಾದ ಇಷ್ಟವೆನಿಸುತ್ತಾರೆ. ಇವರನ್ನುಳಿದು ಇನ್ನಾರೂ ಇಷ್ಟ ಪದಾರ್ಥವೆನಿಸುವದಿಲ್ಲ ಕುಟುಂಬದೊಳಗಿನ ಈ ಜನರು, ಪುಣ್ಯೋದಯದಿಂದ ನಿಮ್ಮ ಹತ್ತರ ಧನವಿರುವ ವರೆಗೆ ಇಷ್ಟರೆನಿಸುತ್ತಾರೆ. ದ್ರವ್ಯವು ಇಲ್ಲದಂತೆ ಆದ ಕೂಡಲೇ ಅವರೆಲ್ಲರೂ ಇಲ್ಲದಂತಾಗುತ್ತಾರೆ ದ್ರವ್ಯವಿಲ್ಲದೆ ಯಾರೂ ಯಾರಿಗೂ ಇಷ್ಟವೆಂದು ಮನ್ನಿಸುವದಿಲ್ಲ ದ್ರವ್ಯವು ಪುಣ್ಯದ ಸ್ವಾಧೀನವಾಗಿದೆ. ಅದಕ್ಕಾಗಿ ಪುಣ್ಯದ ಪ್ರಭಾವವೇ ಇಷ್ಟ ಎಂದು ತಿಳಿಯಿರಿ ಪುಣ್ಯದ ಉದಯವು ಪ್ರಾಪ್ತವಾಯಿತೆಂದರೆ ಸ್ವರ್ಗಲೋಕದೊಳಗಿನ ಮಹಾನ್ ಇಷ್ಟ ಸಾಮಗ್ರಿಗಳೆಲ್ಲ ಪ್ರಾಪ್ತವಾಗಿ ಅಸಂಖ್ಯ ದೇವರು ಅವರ ಸೇವೆಯನ್ನು ಮಾಡುವರು. ಇಂದ್ರಪದವಿ, ಪ್ರೇಮವನ್ನು ಮಾಡುವಂಥ ಅನೇಕ ದೇವಾಂಗನೆಯರು, ಅದ್ಭುತ ಭೋಗ ಮೊದಲಾದವುಗಳು ಪ್ರಾಪ್ತವಾಗುತ್ತವೆ. ಇದಕ್ಕೆ ವಿರೋಧವಾಗಿ ಪಾಪದ ಉದಯವು ಆದಲ್ಲಿ ತನ್ನ ಅತಿಶಯ ಪ್ರೀತಿಯ ಪುತ್ರನು ಅಲ್ಲದೆ ಬಹಳ ಪ್ರೀತಿಯಿಂದ ನಾವು ಬೆಳೆಯಿಸಿದ ಶರೀರವು ಸಹ ಭಯಂಕರ ದುಃಖವನ್ನು ಕೊಡುವ ವೈರಿಗಳಂತೆ ಎನಿಸುತ್ತಾರೆ. ಇನ್ನು ಸಂಸಾರದಲ್ಲಿ ಅಜ್ಞಾನದಿಂದ ನಾವು ಸ್ತ್ರೀ, ಪುತ್ರ, ಮಿತ್ರಾದಿಗಳನ್ನು ನಮ್ಮ ಹಿತ ಮಾಡುವವರೆಂದು ತಿಳಿಯುವ ಪ್ರವೃತ್ತಿಯು ಇದೆ. ನಿಜವಾಗಿ ವಿಚಾರ ಮಾಡಿದರೆ ಹೀಗೆ ಕಂಡು ಬರುತ್ತದೆ — ಈ ಜೀವಕ್ಕೆ ಇತರ ವಸ್ತು ಹಾಗೂ ಜೀವಗಳ ಸಂಬಂಧವು ಹಿಂದಕ್ಕೆ ಅಸಂಖ್ಯವಾಗಿವೆ ಈ ಜೀವವು ಇಲ್ಲಿಯ ವರೆಗೆ ಅನಂತಾನಂತ ಮಾತೆಯರ ಮೊಲೆ ಹಾಲನ್ನು ಕುಡಿದಿದ್ದಾನೆ ಅಂಥ ತಾಯಂದಿರ ಒಬ್ಬೊಬ್ಬರ ಒಂದೊಂದು ಹನಿಯನ್ನು ಕೂಡ ಹಾಕಿದರೂ ಸಹ ಅನಂತ ಸಮುದ್ರವೇ ತುಂಬಿ ಹೋದೀತು. ಇದರಂತೆ ಅವನು ಧಾರಣ ಮಾಡಿರುವ ಶರೀರಗಳೂ ಸಹ ಅನಂತವಾಗಿವೆ ಆ ಎಲ್ಲ ಶರೀರಗಳ ಒಂದೊಂದು ಕೂದಲೆಳೆಯನ್ನು ಕೂಡ ಹಾಕಿದರೂ ಸಹ ಮೇರು ಪರ್ವತದಂಥ ಅನೇಕ ಪರ್ವತಗಳು ಆದಾವು. ಇಲ್ಲಿಯ ವರೆಗೆ ಅನೇಕ ಕುಟುಂಬದವರ ಅಗಲುವಿಕೆಗಾಗಿ ಈ ಜೀವವು ಶೋಕ ಮಾಡಿದೆ. ಅವನ ಸಲುವಾಗಿಯೂ ಹಲವು ಜನ ಅತ್ತರು ಶೋಕಿಸಿದ್ದಾರೆ ಅವರೆಲ್ಲರ ಕಣ್ಣೀರುಗಳನ್ನು ಒತ್ತಟ್ಟಿಗೆ ನೇರಿಸಿದರೆ ಅನಂತ ಸಮುದ್ರವೇ ತುಂಬಿ ಹೋದಿತು ಇದರ ಮೇಲಿಂದ ನೀವು ಯಾವ ಯಾವ ಪದಾರ್ಥಗಳನ್ನು ಇಷ್ಟವೆಂದು ತಿಳಿಯುತ್ತೀರೆಂಬುದನ್ನು ನೋಡಿಕೊಳ್ಳಿರಿ! ಇದೇ ಪ್ರಕಾರ ಇಲ್ಲಿಯ ವರೆಗೆ ನೀವು ಅನೇಕ ಇಷ್ಟ ಪದಾರ್ಥಗಳನ್ನು ಗ್ರಹಣಮಾಡಿ ತ್ಯಜಿಸಿರುವಿರಿ. ಎಲ್ಲಿಯ ವರೆಗೆ ಇಷ್ಟ ಪದಾರ್ಥವೆಂಬುದಕ್ಕೆ ಅಸ್ತಿತ್ವ ಇದೆಯೋ ಅಲ್ಲಿಯ ವರೆಗೆ ಅದರ ವಿಯೋಗ ಎಂಬ ಅವಸ್ಥೆಯೊಂದು ಇದ್ದೇ ಇರುತ್ತದೆ ಆ ಕಾಲವು ಯಾವಾಗ ಬಂದೀತೆಂಬುದನ್ನು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ಮೃತ್ಯುವು ಒದಗುವದೆಂಬುದು ನಿಶ್ಚಿತ ಆದರೆ ಅದು ಯಾವಾಗ ಹೇಗೆ ಬಂದೀತೆಂಬುದನ್ನೂ ನಿಶ್ಚಿತವಾಗಿ ಯಾರಿಗೂ ಹೇಳಲಿಕ್ಕೆ ಬರುವದಿಲ್ಲ ಈಗ ಯಾವ ಇಷ್ಟ ಸಾಮಗ್ರಿಗಳು ನಿಮಗೆ ಕಾಣುತ್ತಿವೆಯೋ ಅವೆಲ್ಲವುಗಳ ವಿಷಯದಲ್ಲಿ ನಿಮಗೆ ಪೂಜ್ಯ ಬುದ್ಧಿಯೂ ಉತ್ಪನ್ನವಾಗಿದೆ ಆದರೆ ಅವುಗಳ ವಿಯೋಗವು ಹೇಗೆ ಅಕಸ್ಮಾತ್ ಆದೀತೆಂಬುದರ ಕಲ್ಪನೆಯು ಇಲ್ಲ ಯಾವ ನಿಮ್ಮ ಇಷ್ಟ ಸಾಮಗ್ರಿಯ ಮೇಲಿನ ಪ್ರೇಮದಿಂದ ನೀವು ಸಂಸಾರದಲ್ಲಿ ಮೋಸ ಹೊಂದಿರುವರೋ ಅಲ್ಲದೆ ಆ ಸಾಮಗ್ರಿಗಳ ಸಲುವಾಗಿ ಪಂಚ ಪಾಪವನ್ನು ಆಚರಿಸುತ್ತಿರುವಿರೋ ಆ ಸಾಮಗ್ರಿಗಳು ಅವಶ್ಯವಾಗಿ ನಾಶವಾಗುವಂಥವು ಇವೆ ವಿಯೋಗವಾಗುವ ವೇಳೆಯು ಪ್ರಾಪ್ತವಾದಾಗ ಆ ಕಾಲವನ್ನು ನಷ್ಟಗೊಳಿಸುವ ಸಾಮರ್ಥ್ಯವು ಯಾರಿಗೂ

ಇಲ್ಲ ಅದಕ್ಕಾಗಿ ತಿರ್ಯಂಚ ಗತಿಗೆ ಕಾರಣವಾಗುವಂಥ ಇಷ್ಟ ವಿಯೋಗವು ಪ್ರಾಪ್ತವಾದಾಗ ದುಃಖವನ್ನು ಮಾಡಬೇಡಿರಿ ಆಗ ಮುಂದೆ ಹೇಳಿದ ವಿಚಾರಗಳನ್ನು ಮನಸ್ಸಿನಲ್ಲಿ ನೆನೆಯಿರಿ

"ಈ ಶರೀರವು ನೀರ ಮೇಲಿನ ಗುಳ್ಳೆಯಂತೆ ಕ್ಷಣಭಂಗುರವಾಗಿದೆ ಇದು ಒಂದು ಕ್ಷಣದಲ್ಲಿ ನಾಶವಾಗಿ ಹೋಗುವಂಥದಿದೆ. ಈ ಲಕ್ಷ್ಮಿಯಂತೂ ಇಂದ್ರಜಾಲದಂತೆ ಆಭಾಸವನ್ನು ಉತ್ಪನ್ನ ಮಾಡುವವಳಾಗಿದ್ದಾಳೆ ಈ ಸ್ತ್ರೀ, ಪುತ್ರ, ಮಿತ್ರ, ಬಂಧುಬಾಂಧವರಾದಿಯೆಲ್ಲ ದೊಡ್ಡ ಬಿರುಗಾಳಿಯಿಂದೇಳುವ ಸಮುದ್ರದ ತೆರೆಗಳಂತಿದ್ದಾರೆ ಅವು ಎಷ್ಟು ದೊಡ್ಡವಿದ್ದರೂ ಅಸ್ಥಿರ ಈ ವಿಷಯಸುಖವು ಸಾಯಂಕಾಲದ ಮೋಡಗಳ ಬಣ್ಣದಂತೆ ಚಂಚಲವಾಗಿದೆ, ಕ್ಷಣಭಂಗುರವಾಗಿದೆ ಅದಕ್ಕಾಗಿ ಅವುಗಳ ವಿಯೋಗಕ್ಕಾಗಿ ಶೋಕಿಸುವುದು ವ್ಯರ್ಥವಾಗಿದೆ ನಾವು ದೇಹ ಧರಿಸಿದ ಮೇಲೆ ಅದಕ್ಕೆ ದುಃಖ ಮತ್ತು ಮರಣಗಳು ಆಗುವುದು ನಿಶ್ಚಯವಾಗಿದೆ ಅದಕ್ಕಾಗಿ ದುಃಖ ಹಾಗೂ ಮರಣಗಳ ಭಯವನ್ನು ಬಿಡಬೇಕು ಅಲ್ಲದೆ ಪುನಃ ದೇಹವನ್ನು ಧಾರಣ ಮಾಡುವ ಪ್ರಸಂಗವೇ ಬಂದಿರಬಾರದಂಥ ಉಪಾಯ-ವನ್ನು ಶೋಧಿಸಬೇಕು "

"ಎಲೈ ಆತ್ಮನೇ, ಮತ್ತೂ ವಿಚಾರಮಾಡು ನಮ್ಮ ಇಷ್ಟ ವಸ್ತುಗಳ ವಿಯೋಗವನ್ನು ಯಾವ ದೇವ, ದಾನವ, ಮಂತ್ರ, ತಂತ್ರ, ಔಷಧಾದಿಗಳಿಂದ ಎಂದೂ ತಡೆಯಲಿಕ್ಕೆ ಆಗದು ಆ ವಿಯೋಗವು ಕರ್ಮಕ್ಕೆ ಅಧೀನವಾಗಿರುವುದರಿಂದ ಉಂಟಾಗಿದೆ ಅಂದ ಮೇಲೆ ಇಂಥ ಆಪ್ತಾದಿಗಳ ವಿಯೋಗದ ವಿಷಯದಲ್ಲಿ ಶೋಕಮಾಡಿ, ಆರ್ತಧ್ಯಾನದಲ್ಲಿ ಮುಳುಗುವುದು ಕೇವಲ ಹುಚ್ಚುತನದ ಕಾರ್ಯವಾಗಿದೆ ಎಷ್ಟು ದುಃಖ ಮಾಡಿದರೂ ಸಹ ಯಾರಿಗಾದರೂ ಕರುಣಾಬುದ್ಧಿಯು ಹುಟ್ಟೀತೆ? ಎಷ್ಟು ದುಃಖ ಮಾಡಿದರೂ ಮೃತ ಮನುಷ್ಯನನ್ನು ಯಾರು ಜೀವಂತಗೊಳಿಸಿಯಾರು? ಅದಕ್ಕಾಗಿ ಶೋಕದಿಂದ ಏನೂ ಉಪಯೋಗವಾಗದೆ ತಿರುಗಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ನಷ್ಟವಾಗುತ್ತವೆ! ಎಲಾ! ಯಾವುದು ಹುಟ್ಟಿದೆಯೋ ಅದು ಮೂಲದಲ್ಲಿ ಮರಣ ಹೊಂದು-ವದಕ್ಕಾಗಿಯೋ ಉತ್ಪನ್ನವಾಗಿದೆ ಎಷ್ಟು ಕ್ಷಣಗಳು ಕಳೆಯುತ್ತವೆಯೋ ಅಷ್ಟು ಮರಣದ ಸಮೀಪಕ್ಕೇನೆ ವಸ್ತುಗಳು ಹೋಗುತ್ತಲಿವೆ ಯಾವ ಪ್ರಕಾರ ಗಿಡಕ್ಕೆ ಎಲೆ, ಹೂವು ಮತ್ತು ಹಣ್ಣುಗಳು ಉತ್ಪನ್ನವಾಗಿರುವವೋ ಅವು ಒಂದು ದಿನ ನಷ್ಟವಾಗತಕ್ಕವೇ ಅದೇ ಪ್ರಕಾರ ಈ ಕುಲವೆಂಬ ವೃಕ್ಷಕ್ಕೆ ತಾಯಿ, ತಂದೆ, ಮಕ್ಕಳು, ಮೊಮ್ಮಕ್ಕಳು ಉತ್ಪನ್ನವಾಗಿದ್ದರೂ ಅವರು ಎಂದಾದರೂ ಇಲ್ಲದಂತೆ ಆಗತಕ್ಕವರೆಂಬುದು ನಿಶ್ಚಿತವಿದೆ ಆ ವಿಷಯದಲ್ಲಿ ಶೋಕ ಮಾಡುವುದು ವ್ಯರ್ಥವಾಗಿದೆ. ಭವಿತವ್ಯವನ್ನು ಬದಲಿಸುವುದೂ ಸಾಧ್ಯವಿಲ್ಲ ಭವಿತವ್ಯವು ಪೂರ್ವ ಕರ್ಮದ ಸ್ವಾಧೀನವಾಗಿರುತ್ತದೆ ಕರ್ಮದ ಉದಯವು ಪ್ರಾಪ್ತವಾದಾಗ ಅದು ಫಲವನ್ನು ಕೊಡದೆ ನಿಲ್ಲುವದಿಲ್ಲ ಇದು ನಿಯಮವಿದೆ ಇದರ ಮೇಲಿಂದ ಇಷ್ಟ ವಸ್ತುವಿನ ನಾಶವು ಉದಯದ ಅಧೀನವೆಂದು ನಿಶ್ಚಿತವಾದಲ್ಲಿ ಅದರ ವಿಯೋಗವಾದಾಗ ವಿಲಾಪಮಾಡಿ ಶೋಕಿಸುವದೆಂದರೆ ಕತ್ತಲೆಯಲ್ಲಿ ನೃತ್ಯ ಮಾಡಿದಂತೆಯೇ ಇದೆ ಇಂಥ ನೃತ್ಯವನ್ನು ಯಾರೂ ನೋಡುವದಿಲ್ಲ ಹಾಗೆಯೇ ಇಂಥ ಶೋಕದ ಕಡೆಗೆ ಯಾರೂ ಲಕ್ಷ್ಯಕೊಡುವದಿಲ್ಲ. ಮೊದಲು ಗಳಿಸಿದ ಕರ್ಮದ ಉದಯದಿಂದ ಯಾವುದರ ಆಯುಷ್ಯವು ತೀರಿರುವುದೋ ಅದರ ವಿಯೋಗವು ಪ್ರಾಪ್ತವಾಗುತ್ತದೆ. ಇಂಥ ಪ್ರಸಂಗದಲ್ಲಿ ಅದನ್ನು ಯಾರು ವಿರೋಧಿಸುವವರು? ಹೀಗೆ ವಿಚಾರ ಮಾಡಿ ದುಃಖವನ್ನು ಬಿಟ್ಟು ಶ್ರೇಷ್ಠ ಧರ್ಮದ ಪಾಲನ ಮಾಡುವದಕ್ಕೆ ಯತ್ನ ಮಾಡಬೇಕು "

ಹೊಟ್ಟೆ ಮೊದಲು ದ್ರವ್ಯೋಪಾರ್ಜನ ಮಾಡುವದಕ್ಕಾಗಿಯೂ ಅನೇಕ ಪ್ರಕಾರದ ಪರಿಗ್ರಹಗಳನ್ನು ಬೆಳೆಯಿಸುವದಕ್ಕಾಗಿಯೂ ನಾವು ಬಹುದಿನ ಬಾಳಬೇಕೆಂದೂ ಅನೇಕ ಪ್ರಕಾರದ ಕಷ್ಟಗಳನ್ನು ಮಾಡಿ, ಹಗಲಿರುಳೂ ದುರ್ಧ್ಯಾನದಲ್ಲಿ ಕಾಲವನ್ನು ಕಳೆಯುತ್ತೇವೆ ಇಂಥವರೆಲ್ಲ ಮಹಾಮೂರ್ಖರು. ನಾವು ಜೀವನವನ್ನು ಕತ್ತಿ ಇಟ್ಟು ಪ್ರಯತ್ನಿಸಿದರೂ ಸಹ ಪುಣ್ಯ ಸಂಚಯವಿಲ್ಲದಿದ್ದರೆ ಆ ಎಲ್ಲ ಪದಾರ್ಥಗಳು ಪ್ರಾಪ್ತವಾಗುವದಿಲ್ಲ ಅದರಂತೆ ನಮ್ಮ ಅನೇಕ ಪ್ರಕಾರದ ಇಚ್ಛೆಗಳೂ ಕೂಡ ಪೂರ್ಣವಾಗುವದಿಲ್ಲ ಆಪ್ತರೊಬ್ಬರು ತೀರಿಕೊಂಡಾಗ ಅವರ ದೇಹವನ್ನು ಅಗ್ನಿಯಲ್ಲಿ ಸುಟ್ಟು ಬಿಡುತ್ತೇವೆ ಅದು ಕಣಕಣವಾಗಿ ಹವೆಯಲ್ಲಿ ಹಾರಿಯೂ ಹೋಗಿ ಬಿಡುತ್ತದೆ ಆ ಮೇಲೆ ಮನೆಗೆ ಬಂದು ಆ ಮರಣ ಹೊಂದಿದ ಆಪ್ತನು ತಿರುಗಿ ಲಭಿಸಬೇಕೆಂದು ಶೋಕಿಸಿದರೆ ಎಲ್ಲಿಂದ ಅವನು ಬಂದಾನು? ಹೀಗೆ ಅಳುವುದು ಮೂರ್ಖತನವಲ್ಲವೆ? ಈ ಜಗತ್ತು ಕಾಮನ ಬಿಲ್ಲಿನಂತೆ ಕ್ಷಣಭಂಗುರವಾಗಿದ್ದರೂ ಅದರ ವಿಷಯದಲ್ಲಿ ಮಾನವನು ಮೋಹಕ್ಕೊಳಗಾಗುವುದು ಆಶ್ಚರ್ಯದ ಸಂಗತಿಯೇ ಆಗಿದೆ ಮೃತ್ಯುವಿನ ದಿವಸವು ಬಾರದು

ನಿಶ್ಚಿತವಾಗಿರುವುದೋ ಆ ಸಮಯವು ಪ್ರಾಪ್ತವಾದಾಗ ಒಂದು ಕ್ಷಣವೂ ಕೂಡ ಹಿಂದೆ ಮುಂದೆ ಆಗುವದಿಲ್ಲ. ಇದನ್ನು ಬದಲಿಸಲಿಕ್ಕೆ ಇಂದ್ರ, ದೇವ, ರಾಕ್ಷಸ, ಹೆಚ್ಚಿಗೇನು ಪ್ರತ್ಯಕ್ಷ ಜಿನೇಂದ್ರನೂ ಕೂಡ ಸಮರ್ಥವಾಗಲಾರನು ಇದನ್ನು ತಿಳಿದಿದ್ದೂ ಸಹ ಶೋಕ ಮಾಡುತ್ತಿರುವುದು ಅರಣ್ಯ-ರೋದನದಂತೆ ನಿರುಪಯೋಗಿಯಾಗಿದೆ ಅರಣ್ಯದಲ್ಲಿ ದೊಡ್ಡ ದೊಡ್ಡ ದನಿ ತೆಗೆದು ಅತ್ತರೆ ಅಲ್ಲಿ ಸಮಾಧಾನ ಹೇಳಲಿಕ್ಕೆ ಯಾರು ಇರುವರು? ಕೇವಲ ಕೇಳಲಿಕ್ಕಾದರೂ ಯಾರು ಬಂದಾರು? ಅವರ ಮೇಲೆ ದಯೆಯಾದರೂ ಯಾರಿಗೆ ಹುಟ್ಟೀತು? ಪೂರ್ವೋಪಾರ್ಜಿತ ಕರ್ಮವೇ ದಯೆ ಮಾಡೀತು ಎನ್ನಬೇಕಾದರೆ ಅದು ಅಚೇತನ ಇರುವುದರಿಂದ ಅದಕ್ಕೆ ದಯೆಯಾದರೂ ಎಲ್ಲಿ? ತಮ್ಮ ಇಷ್ಟ ವಸ್ತುವು ನಾಶವನ್ನು ಹೊಂದಲು ಶೋಕ ಮಾಡಿದರೆ ಆ ವಸ್ತುವು ತಿರುಗಿ ಲಭಿಸುವಂತಿದ್ದರೆ ದುಃಖಿಸುವುದು ಯೋಗ್ಯವಾದೀತು. ನಮ್ಮ ದುಃಖದಿಂದ ನಮಗೆ ಸುಖವಾಗುತ್ತದೆ, ನಮಗೆ ಜಗತ್ತಿನಲ್ಲಿ ಮನ್ನಣೆಯು ದೊರೆಯುತ್ತದೆ, ಧರ್ಮಧ್ಯಾನವು ಸಂಭವಿಸುತ್ತದೆ, ದ್ರವ್ಯಲಾಭವಾಗುತ್ತದೆ ಹೀಗೆ ನಿಯಮವಿದ್ದರೆ ಶೋಕಮಾಡುವುದು ಯೋಗ್ಯ-ವೆನ್ನಲಾಗುವುದು ಆದರೆ ಇದರಿಂದ ಏನೂ ಲಭಿಸುವದಿಲ್ಲ ಈ ಅನುಭವವು ಎಲ್ಲರಿಗೂ ಇದೆ ಅಲ್ಲದೆ ಶಾಸ್ತ್ರವೂ ಕೂಡ ಹೀಗೆಯೇ ಹೇಳುತ್ತದೆ. ಅಂದಮೇಲೆ ಶೋಕದಿಂದ ಧರ್ಮ, ಬುದ್ಧಿ, ಶರೀರ, ಇಂದ್ರಿಯಗಳೆಲ್ಲ ನಾಶ ಹೊಂದುತ್ತವೆ ಕಣ್ಣಿನೊಳಗಿನ ತೇಜವು ಇಲ್ಲದಂತಾಗುತ್ತದೆ. ಘೋರ ದುಃಖವು ಪ್ರಾಪ್ತವಾಗಿ ಪರಲೋಕದಲ್ಲಿ ದುರ್ಗತಿಯು ಉಂಟಾಗುತ್ತದೆ ಮೇಲಾಗಿ ಈ ಶೋಕವನ್ನು ಕೇಳುವವರಿಗೂ ದುಃಖವಾಗುತ್ತದೆ. ಅನೇಕ ರೋಗಗಳು ಉತ್ಪನ್ನವಾಗುತ್ತವೆ ಶಕ್ತಿಯು ಹ್ರಾಸವಾಗುತ್ತದೆ ವ್ಯವಹಾರ ಪರಮಾರ್ಥಗಳೆರಡರಲ್ಲಿಯೂ ನಷ್ಟವು ಒದಗುತ್ತದೆ. ಧೈರ್ಯ ಜ್ಞಾನಗಳೂ ಕೂಡ ನಾಶಹೊಂದುತ್ತವೆ ಅದಕ್ಕಾಗಿ ಅನೇಕ ಪ್ರಕಾರದ ದುಃಖಗಳಿಗೆ ಕಾರಣವಾದಂಥ ಶೋಕವನ್ನು ತ್ಯಾಗಮಾಡುವುದೇ ಯೋಗ್ಯವಾಗಿದೆ ಅದಕ್ಕಾಗಿ ತಿರ್ಯಂಚಗತಿಯಲ್ಲಿ ಅನೇಕ ಜನ್ಮಗಳ ವರೆಗೆ ತಿರುಗಿಸುವಂಥ ಇಷ್ಟವಿಯೋಗಜ ಆರ್ತಧ್ಯಾನವನ್ನು ಎಂದೂ ಅಂತಃಕರಣದಲ್ಲಿ ಉತ್ಪನ್ನವಾಗ-ಗೊಡಬೇಡಿರಿ

ಈ ಇಷ್ಟವಿಯೋಗವು ಪಾಪದ ಫಲವಾಗಿದೆ. ಅದರ ವಿಷಯದಲ್ಲಿ ಶೋಕ ಮಾಡಿ ಉಪಯೋಗವೇನು? ಇನ್ನು ಮುಂದೆ ಪಾಪಕರ್ಮವನ್ನು ಹೇಗೆ ಇಲ್ಲದಂತೆ ಮಾಡುವದೆಂಬುದನ್ನೇ ವಿಚಾರಿಸೋಣ ಮತ್ತು ಅದನ್ನು ಸಾಧಿಸಲಿಕ್ಕೆ ಯತ್ನಿಸೋಣ ಮತ್ತು ಅದನ್ನು ಸಾಧಿಸಲಿಕ್ಕೆ ಯತ್ನಿಸೋಣ ಅಂದರೆ ತಿರುಗಿ ಈ ಇಷ್ಟವಿಯೋಗದ ದುಃಖವು ಪ್ರಾಪ್ತವಾಗಲಿಕ್ಕಿಲ್ಲ ಯಾರು ಈ ಇಷ್ಟವಿಯೋಗದಿಂದ ಉಂಟಾಗುವ ದುಃಖದಿಂದ ಕಳವಳಗೊಂಡಿರುವರೋ ಅವರಿಗೆ ಈ ಪ್ರಕಾರದ ಅಸಾತಾ ಕರ್ಮದ ಬಂಧವಾಗುತ್ತದೆ-ಅದರಿಂದ ಸಂಖ್ಯಾತ ಅಸಂಖ್ಯಾತ ಜನ್ಮಗಳ ವರೆಗೆ ದುಃಖದ ಪರಿಪಾಟಿಯು ಇಲ್ಲದಂತೆ ಆಗುವದಿಲ್ಲ ಹೇಗೆ ಪ್ರತಿಯೊಂದು ಕ್ಷಣದಲ್ಲಿಯೂ ಆಯುಷ್ಯವು ನಷ್ಟ-ವಾಗುತ್ತಿದೆಯೋ ಹಾಗೆಯೇ ಅವರವರ ಪ್ರವೇಶವು ಯಮನ ಮುಖದಲ್ಲಿ ಅಷ್ಟಷ್ಟು ಆಗುತ್ತಿರುತ್ತದೆ ದೇಹಧಾರಣ ಮಾಡಿರುವವರಿಗೆ ಮರಣವು ಪ್ರಾಪ್ತವಾಗಿಲ್ಲವೆಂಬ ಸಂಗತಿಯು ಈ ಅನಂತ ಕಾಲದಲ್ಲಿ ಎಂದೂ ಸಂಭವಿಸಿಲ್ಲ. ಮುಂದೆಯೂ ಸಹ ಎಂದೂ ಸಂಭವಿಸಲಾರದು ಸೂರ್ಯ ಚಂದ್ರಾದಿ ದೇವರು ಮತ್ತು ಪಕ್ಷಿ ಇವರು ಆಕಾಶದಲ್ಲಿ ವಿಹಾರ ಮಾಡುತ್ತಾರೆ ಮನುಷ್ಯ ತಿರ್ಯಂಚ ಮೊದಲಾದವರೂ ಪೃಥ್ವಿಯ ಮೇಲೆ ನಿಲ್ಲುತ್ತಾರೆ ಮತ್ಸ್ಯ ಕಚ್ಛಪ ಮೊದಲಾದ ಜೀವಗಳು ನೀರಿನಲ್ಲಿ ವಾಸಿಸುತ್ತವೆ. ಕಾಲವೆಂಬುದು ಸ್ವರ್ಗ, ನರಕ, ಆಕಾಶ, ಪಾತಾಳ, ನೀರು, ನೆಲ ಮೊದಲಾದ ಎಲ್ಲ ಕಡೆಗೂ ಇರುತ್ತದೆ ಇದರಿಂದ ಯಾರ ಬಿಡುಗಡೆಯಾದೀತು? ಎಷ್ಟು ದಿವಸಗಳು ಕಳೆಯುತ್ತಿವೆಯೋ ಅಷ್ಟು ಆಯುಷ್ಯದ ದೊಡ್ಡ ದೊಡ್ಡ ತುಂಡುಗಳು ಆಗುತ್ತಿವೆ ಸಾಗರ ಪ್ರಮಾಣದಲ್ಲಿ ಯಾರ ಆಯುಷ್ಯ ಇರುವುದೋ ಅವರ ಸಂಹಾರವೂ ಕೂಡ ಆಗಿದೆ. ಅಲ್ಲದೆ ಅಣಿಮಾ ಮಹಿಮಾ ಮೊದಲಾದ ಅಷ್ಟ ಋದ್ಧಿಗಳನ್ನು ಪಡೆದವರು, ಸಾವಿರಾರು ದೇವತೆಗಳಿಂದ ರಕ್ಷಣೆಯನ್ನು ಹೊಂದುವಂಥವರೂ ಮರಣವನ್ನು ಹೊಂದಿದ್ದಾರೆ ಇಂಥವರ ಮುಂದೆ ಮಾನವನು ತೀರ ಅಲ್ಪ ಶಕ್ತಿಯುಳ್ಳವನೆನಿಸುತ್ತಾನೆ ಇಂಥವನ ಪಾಡೇನು? ಅವನು ಯಾವಾಗಲೂ ಸ್ಥಿರವಾಗಿ ಹೇಗೆ ನಿಂತಾನು? ಯಾವ ಗಾಳಿಯಿಂದ ಪರ್ವತವೂ ಕೂಡ ಹಾರಿ ಹೋಗಿರುವುದೋ ಅದರ ಎದುರಿಗೆ ಹುಲ್ಲು ಕಡ್ಡಿಯ ಕಥೆಯೇನು! ಈ ಪ್ರಕಾರ ತನ್ನ ಮನಸ್ಸಿನಲ್ಲಿ ವಿಚಾರ ಮಾಡಿ ಇಷ್ಟವಿಯೋಗವು ಪ್ರಾಪ್ತವಾದಾಗ ಆರ್ತ-ಧ್ಯಾನವನ್ನು ಮಾಡಕೂಡದು ಇಂಥ ಇಷ್ಟ ವಿಯೋಗದಿಂದ ಉತ್ಪನ್ನವಾಗುವ ಆರ್ತಧ್ಯಾನವನ್ನು ಗೆಲ್ಲುವಂಥ ಉಪಾಯಗಳನ್ನು ಇಲ್ಲಿಯ ವರೆಗೆ ವಿವರಿಸಲಾಯಿತು

ರೋಗದಿಂದ ಹುಟ್ಟುವ ಆರ್ತಧ್ಯಾನದ ಸ್ವರೂಪ—ಇನ್ನು ಮುಂದೆ ರೋಗದಿಂದ ಹುಟ್ಟುವ ಆರ್ತಧ್ಯಾನದ ಸ್ವರೂಪವನ್ನು ಕುರಿತು ವಿಚಾರಿಸೋಣ ಶರೀರದಲ್ಲಿ ರೋಗವು ಉತ್ಪನ್ನವಾದಾಗ ಅದು ಇಲ್ಲದಂತೆ ಆಗುವದಕ್ಕಾಗಿ ಪರಿಣಾಮದಲ್ಲಿ ಯಾವಾಗಲೂ ಕ್ಲೇಶವು ಉತ್ಪನ್ನವಾಗುತ್ತಿರುತ್ತದೆ. ಇದಕ್ಕೆ ರೋಗ ಜನಿತ ಆರ್ತಧ್ಯಾನವೆನ್ನುವರು ಕೆಮ್ಮು, ದಮ್ಮು, ಜ್ವರ, ವಾತ, ಪಿತ್ತ, ಕಫ, ಹೊಟ್ಟೆ ಶೂಲಿ, ತಲೆನೋವು, ಕಣ್ಣುಬೇನೆ, ಕಿವಿಯ ಶೂಲಿ, ದಂತ ಶೂಲಿ, ಜಲೋದರ, ಹೊಟ್ಟೆ ಉಬ್ಬುವಿಕೆ, ಬಿಳುಪು, ಕಜ್ಜಿ, ಗಜಕರ್ಣ, ಸಂಗ್ರಹಣಿ, ಹೊಟ್ಟೆ ಗಟ್ಟಿಯಾಗುವಿಕೆ, ಅತಿಸಾರ ಇತ್ಯಾದಿ ಅನೇಕ ಪ್ರಾಣಘಾತಕ ರೋಗಗಳು ಶರೀರದಲ್ಲಿ ಉತ್ಪನ್ನವಾಗುತ್ತಿರುತ್ತವೆ ಇದರಿಂದ ಭಯಂಕರ ವೇದನೆಯು ಉಂಟಾಗುತ್ತಿರುತ್ತದೆ ರೋಗದ ಪೀಡೆಯಿಂದ ಶ್ವಾಸೋಚ್ಛ್ವಾಸ ಮಾಡುವುದೂ ಕೂಡ ತ್ರಾಸದಾಯಕವಾಗುತ್ತದೆ ಏಳುವಾಗ, ಕೂಡುವಾಗ ಮಲಗುವಾಗ ಯಾವುದೇ ಸ್ಥಿತಿಯಲ್ಲಿಯೂ ಸಹ ಪರಿಣಾಮವು ಸ್ಥಿರ ಉಳಿಯುವದಿಲ್ಲ ಇಂಥ ಪ್ರಸಂಗದಲ್ಲಿ ಪರಿಣಾಮದಲ್ಲಿ ಉಂಟಾದ ಮಹಾನ್ ದುಃಖದ ಪೀಡೆಯನ್ನೇ ಚಿಂತಿಸುವುದು ಆರ್ತಧ್ಯಾನವೆನಿಸುತ್ತದೆ ಈ ರೋಗದ ಪೀಡೆಯು ಬಹಳ ಪ್ರಬಲವಾಗಿರುತ್ತದೆ ಅದರ ಎದುರಿಗೆ ದೊಡ್ಡ ದೊಡ್ಡ ಯೋಧರೂ ಮಹಾ ಶೂರ-ವೀರರೂ, ಶಸ್ತ್ರಾಸ್ತ್ರಗಳ ಅನೇಕ ಘಾಯಗಳನ್ನು ಸಹಿಸುವವರೂ ಸಹ ಧೈರ್ಯಗುಂದುತ್ತಾರೆ. ದೊಡ್ಡ ದೊಡ್ಡ ತ್ಯಾಗಿ, ತಪಸ್ವಿ, ಯೋಗಿ, ಯಾವಾಗಲೂ ಪರೀಷಹಗಳನ್ನು ಸಹನ ಮಾಡುವವರೂ ಕೂಡ ಧೈರ್ಯವನ್ನು ಕಳೆದುಕೊಳ್ಳುತ್ತಾರೆ. ಈ ಪ್ರಕಾರವಾಗಿರುವ ರೋಗದ ವೇದನೆಯಿಂದ ಹುಟ್ಟಿದ ಆರ್ತಧ್ಯಾನವನ್ನು ಗೆಲ್ಲುವ ಸಾಮರ್ಥ್ಯವಿರುವುದೂ ಕೂಡ ಬಹು ಕಠಿಣ ಸಂಗತಿಯಾಗಿದೆ ಈ ಪ್ರಕಾರದ ವೇದನೆಯು ಆಗುತ್ತಿರುವಾಗ ತಮ್ಮ ಪರಿಣಾಮದಲ್ಲಿ ಚಂಚಲವಾಗಗೊಡದಿರುವುದು ಭಗವಾನ್ ವೀರ ಜಿನೇಂದ್ರನಿಗೆ ಶರಣು ಹೋಗುವುದರಿಂದಲೇ ಶಕ್ಯವಾಗುವುದು ಈ ಪ್ರಕಾರ ಜಿನೇಶ್ವರನಿಗೆ ಅನನ್ಯ ಶರಣ ಹೋಗದ ಹೊರತಾಗಿ ದುರ್ಧರ ವೇದನೆಯನ್ನು ಸಹನ ಮಾಡುವ ಸಾಮರ್ಥ್ಯವು ಪ್ರಾಪ್ತವಾಗುವದಿಲ್ಲ ಅಂತಲೇ ಜ್ಞಾನೀ ಪುರುಷರು ಸರ್ವಜ್ಞ ಜಿನ ಭಗವಂತನಿಗೆ ಶರಣು ಹೋಗಿ, ಈ ಪ್ರಕಾರ ಚಿಂತಿಸುತ್ತಾರೆ.

ರೋಗ ಪೀಡೆಯನ್ನು ಹೇಗೆ ಹೇಗೆ ಸಹನ ಮಾಡಬೇಕು? "ಎಲೈ ಆತ್ಮನೇ, ಸದ್ಯಕ್ಕೆ ನಿನಗೆ ಈ ಭಯಂಕರ ಅಸಾತಾ ಕರ್ಮದ ಉದಯವು ಪ್ರಾಪ್ತವಾಗಿದೆ ಈಗ ನೀನು ಒಂದು ವೇಳೆ ಶೋಕಮಾಡಹತ್ತಿದರೆ ನಿನ್ನ ಶೋಕ ಹಾಗೂ ದುಃಖವನ್ನು ಯಾರು ಇಲ್ಲದಂತೆ ಮಾಡಿಯಾರು ನೋಡು' ಹೀಗಿದ್ದೂ ಕೂಡ ನೀನು ದುಃಖದಿಂದ ಚಡಪಡಿಸಿದರೆ ವೇದನೆಯು ಕಡಿಮೆಯಾಗುವುದು ಅಷ್ಟರಲ್ಲಿಯೇ ಇದೆಯಷ್ಟೆ? ಅದಕ್ಕಾಗಿ ಈ ಸಂದರ್ಭದಲ್ಲಿ ಧೈರ್ಯವನ್ನು ತಾಳಿ ಒದಗಿದ ದುಃಖವನ್ನು ಭೋಗಿಸಲೇಬೇಕು ಧೈರ್ಯವನ್ನು ಕಳೆದುಕೊಂಡು ಬಹಳಷ್ಟು ಗಾಬರಿಯಾದರೂ ಸಹ ಆ ದುಃಖವನ್ನು ಭೋಗಿಸದೆ ಗತಿಯಿಲ್ಲ ಅದರಿಂದ ಬಿಡುಗಡೆಯೂ ಇಲ್ಲ ರೋಗವು ಇದು ಶರೀರಕ್ಕೆ ಉತ್ಪನ್ನವಾಗಿದೆ ಅದು ಬಹಳವೆಂದರೆ ದೇಹವನ್ನು ಹೊಡೆದು ಹಾಕೀತು ಆತ್ಮದ ಘಾತವನ್ನು ಮಾಡಲಾರದಷ್ಟೆ? ನಿನ್ನ ಸ್ವಭಾವವು ಜ್ಞಾನದರ್ಶನವಾಗಿದ್ದು, ನೀನು ಅವಿನಾಶಿಯಾಗಿರುವಿ ಆದರೆ ನೀನು ದೇಹದಲ್ಲಿ ಬಂದು ಸಿಕ್ಕಿರುವುದರಿಂದ ಧೈರ್ಯವನ್ನು ಧಾರಣಮಾಡಿ ಮನಸ್ಸಿನೊಳಗಿನ ಭೀತಿಯನ್ನು ಬಿಟ್ಟು ಬಿಡು ಸಂಸಾರದಲ್ಲಿ ಭ್ರಮಣ ಮಾಡುತ್ತಿರುವಾಗ ಇಂದ ಕೋಟ್ಯಾವಧಿ ರೋಗಗಳು ನಿನಗೆ ಉತ್ಪನ್ನವಾಗಿವೆ. ನೀನು ಹೊಡೆತ ತಿವಿತಗಳ ಕಷ್ಟವನ್ನೂ ಸಹ ನರಕದಲ್ಲಿ ಭೋಗಿಸಿರುವೆ ತಿರ್ಯಂಚ ಗತಿಯಲ್ಲಿ ನಿನಗೆ ಪ್ರತ್ಯಕ್ಷ ಘೋರ ದುಃಖವು ರೋಗದಿಂದ ಪ್ರಾಪ್ತವಾಗಿದೆ. ಇದನ್ನೆಲ್ಲ ನೀನು ತಿಳಿದಿರುವಿ. ಉಳಿದ ಬೇಕಾದ ಸಂಕಟಗಳಿಂದ ಓಡಿ ಹೋಗಲಿಕ್ಕೆ ಬಂದೀತು. ಆದರೆ ಕರ್ಮದಿಂದ ಓಡಿ ಹೋಗಲಿಕ್ಕೆ ಬರಲಾರದು. ಈ ಕಾರಣದಿಂದಾಗಿ ನಿನ್ನ ಕರ್ಮಮಯ ಶರೀರವು ಪ್ರತಿಯೊಂದು ಪ್ರದೇಶದಲ್ಲಿಯೂ ಅನಂತ ಕರ್ಮ ಪರಮಾಣುಗಳಿಂದ ಕಟ್ಟಿ ತನ್ನ ಸ್ವಾಧೀನ ಇಟ್ಟುಕೊಂಡು ಬಿಟ್ಟಿದೆ. ಆ ಕರ್ಮವು ನಿನಗೆ ಹೇಗೆ ಓಡಲಿಕ್ಕೆ ಬಿಟ್ಟೀತು? ಅಲ್ಲದೆ ಈ ಕರ್ಮವು ನಿನಗೆ ಮರಣವನ್ನು ಒದಗಿಸದೆ ಬಿಡಲಾರದು. ಒಂದು ವೇಳೆ ದೇಹವು ಬಿಟ್ಟೀತು ಆದರೆ ಈ ಕರ್ಮವು ಇನ್ನೊಂದು ಶರೀರಕ್ಕೂ ಸಹ ನೀನು ಪುನರ್ ಜನ್ಮವನ್ನು ಧಾರಣ ಮಾಡಿದ ಕೂಡಲೇ ಬೆನ್ನು ಹತ್ತಿ ಬರುತ್ತದೆ ರೋಗವು ಪ್ರಾಪ್ತವಾದ ಸಮಯದಲ್ಲಿ ಯಾರು ಧೈರ್ಯವನ್ನು ಧಾರಣ ಮಾಡುವರೋ ಅವರ ಕರ್ಮವು ನಿರ್ಜರೆಯನ್ನು ಹೊಂದುತ್ತದೆ. ಅದಕ್ಕಾಗಿ ನೀನು ಧೈರ್ಯವನ್ನು ಧಾರಣ ಮಾಡು ಮೇಲಾಗಿ, ಹೇಗೆ ಮುನೀಶ್ವರರು ತಮ್ಮ ಕರ್ಮಗಳನ್ನು ಕಳೆದುಕೊಳ್ಳುವದಕ್ಕೆಂದು ಬೇಸಿಗೆಯಲ್ಲಿ ಬಿಸಿಲಿನಲ್ಲಿಯೂ, ಚಳಿಗಾಲದಲ್ಲಿ ನದೀ ತೀರದಲ್ಲಿಯೂ ಇದ್ದು ಬಿಸಿಲು-ಚಳಿಗಳ ವೇದನೆಯನ್ನು ಸಹನ ಮಾಡಲಿಕ್ಕೆ ಉತ್ಸಾಹದಿಂದ

ಸಿದ್ಧರಾಗುವರೋ ಹಾಗೆಯೇ ನಾವೂ ವೇದನೆಗಳನ್ನು ಸಹಿಸಲಿಕ್ಕೆ ಸದಾ ಸಿದ್ಧರಿರಬೇಕು ನಿನಗೆ ಕರ್ಮದ ಉದಯವು ಪ್ರಾಪ್ತವಾಗಿದೆ ಅದಕ್ಕಾಗಿಯೇ ಧೈರ್ಯವನ್ನು ಧಾರಣಮಾಡಿ ಕರ್ಮವನ್ನು ಗೆಲ್ಲಲಿಕ್ಕೆ ಸಿದ್ಧನಾಗು ಇನ್ನೂ ವಿಚಾರಿಸು. ಅನೇಕ ಜನರು ನಿರ್ಧನರಿದ್ದು ಏಕಾಕಿಯಾಗಿರುತ್ತಾರೆ ಅವರಿಗೆ ವಾಸಿಸಲಿಕ್ಕೆ ಸ್ಥಳವೂ ಹೊಟ್ಟೆಗೆ ಅನ್ನವೂ ಸಹ ಇರುವದಿಲ್ಲ ಅವರ ಚಿಂತೆಯನ್ನು ಮಾಡುವವರೂ ಸಹಾಯ ಮಾಡುವಂಥವರೂ ಕೂಡಾ ಯಾರೂ ಇರುವದಿಲ್ಲ ಶರೀರದಲ್ಲಿಯೂ ಮೇಲಿಂದ ಮೇಲೆ ರೋಗಗಳು ಉತ್ಪನ್ನವಾಗುತ್ತಿರುತ್ತವ ಅಂದ ಸಂದರ್ಭದಲ್ಲಿ ಬಾಯಲ್ಲಿ ನೀರೂ ಹಾಕಲೂ ಕೂಡ ಹತ್ತರ ಯಾರೂ ಇರುವದಿಲ್ಲ ಆಗ ಅವರಿಗೆ ಅದೆಂಥ ದುಃಖವಾಗುವುದೋ ಅದನ್ನು ವರ್ಣಿಸಲು ಸಾಧ್ಯವಿಲ್ಲ ಈ ಪ್ರಕಾರ ದುಃಖವನ್ನು ಭೋಗಿಸುವ ಅಜ್ಞಾನಿ ಮನುಷ್ಯನು ತಾನು ನಿರಾಧಾರನೆಂದು ತಿಳಿದು ಎಲ್ಲ ದುಃಖಗಳನ್ನು ಭೋಗಿಸುವನಲ್ಲ! ನಿನಗಂತೂ ವಾಸಿಸಲಿಕ್ಕೆ ಸ್ವಂತದ ಸ್ಥಳವಿದೆ. ತಿನ್ನಲಿಕ್ಕೆ ಷಡ್‌ರಸ ಅನ್ನ, ರೋಗದ ಮೇಲೆ ಔಷಧ, ಸೇವೆಗಾಗಿ ಸೇವಕರು, ಹೆಂಡತಿ, ಮಕ್ಕಳು, ಮಿತ್ರರು ಮೊದಲಾದ ಸಾಮಗ್ರಿಗಳೆಲ್ಲ ಒದಗಿರುತ್ತವೆ ಇಂಥ ಸ್ಥಿತಿಯಲ್ಲಿ ಹೆದರಿಕೆಯನ್ನು ಬಿಟ್ಟು, ಶಾಂತಭಾವದಿಂದ ಪ್ರಾಪ್ತವಾದ ವೇದನೆಯನ್ನು ನೀನು ಸಹನ ಮಾಡಲಿಕ್ಕೆಬೇಕು. ಧರ್ಮವನ್ನು ಧಾರಣ ಮಾಡುವುದರ ಫಲವು ಇದೇ ಆಗಿದೆ ಎಲಾ! ಯಾರಿಗೆ ಏನೂ ಸಹಾಯವಿಲ್ಲವೋ ಅವರೂ ಕೂಡ ಧೈರ್ಯವನ್ನು ಧಾರಣ ಮಾಡುವರು ನಿನಗಂತೂ ಎಲ್ಲ ಪ್ರಕಾರದ ಅನುಕೂಲತೆ ಇದೆ ನೀನು ಜೈನ ಧರ್ಮವನ್ನು ಸ್ವೀಕರಿಸಿ, ಕರ್ಮೋದಯವು ಮೀರಲಿಕ್ಕೆ ಅಸಾಧ್ಯ-ವೆಂಬುವನ್ನು ತಿಳಿದವನಿರುವಿ ಇಂದ ಸ್ಥಿತಿಯಲ್ಲಿ ನೀನು ಈ ರೋಗದ ಬಾಧೆಗೆ ಹೆದರಬೇಕೇನು! ರೋಗದಿಂದ ಉತ್ಪನ್ನವಾಗುವ ಭಯಂಕರ ವೇದನೆಯನ್ನು ಸಹನ ಮಾಡುತ್ತ ಇಲ್ಲಿಯ ವರೆಗೆ ಅನೇಕ ಸೆರೆಯಾಳುಗಳು ಮರಣವನ್ನು ಹೊಂದಿದ್ದಾರಲ್ಲ! ಪಶುಯೋನಿಯಲ್ಲಿಯೂ ಇದೇ ಪ್ರಕಾರ ರೋಗ, ವೇದನೆ, ಕಷ್ಟಗಳನ್ನು ಸಹನ ಮಾಡಿಯೇ ಎಷ್ಟೋ ಜೀವಗಳು ಸಾಯುತ್ತವೆ! ರೋಗ ಉಂಟಾಗುವುದರಿಂದ ನಿರ್ಜನವನದಲ್ಲಿ, ಕೆಸರಿನಲ್ಲಿ, ಬಿಸಿಲು-ಚಳಿಗಳಲ್ಲಿ ಆಶ್ರಯವಿಲ್ಲದೆ ಇರುವುದೂ ಕೋಟ್ಯಾವಧಿ ಕ್ರಿಮಿಕೀಟಕಗಳಿಂದ ಕಡಿಸಿಕೊಂಡು ಅತ್ಯಂತ ಘೋರ ವೇದನೆಯನ್ನು ಸಹನಮಾಡಿಯೂ ದುಃಖವನ್ನು ಪ್ರಾಣಿಮಾತ್ರರು ಸಂಸಾರದಲ್ಲಿ ಭೋಗಿಸಬೇಕಾಗುತ್ತದೆ ಸಂಸಾರವು ಕೇವಲ ದುಃಖದಿಂದಲೇ ತುಂಬಿದೆ. ಒಟ್ಟಾರೆ ಎಲ್ಲ ಪ್ರಕಾರದ ರೋಗಗಳು ಈ ಶರೀರಕ್ಕೆ ಆಗತಕ್ಕವೇ ಆದರೆ ಆ ಪ್ರಸಂಗದಲ್ಲಿ ಜಿನಧರ್ಮಕ್ಕೆ ಶರಣು ಹೋಗಿ ಜಿನೇಂದ್ರವಚನಗಳನ್ನು ಸ್ಮರಿಸುವುದೇ ಎಲ್ಲ ಪ್ರಕಾರದ ರೋಗಗಳ ಮೇಲೆಯೂ ಜನ್ಮ-ಮರಣವೆಂಬ ವ್ಯಾಧಿಗೂ ಅಪ್ರತಿಮ ಔಷಧವಾಗಿದೆ. ಇದಲ್ಲದೆ ಇತರ ಔಷಧೋಪಚಾರಗಳು ಸಾತಾ ಕರ್ಮದ ಉದಯದ ಸಹಾಯದಿಂದಲೂ ಅಸಾತಾ ಕರ್ಮದ ಉದಯವು ಮಂದವಾಗುವುದರಿಂದಲೂ ಉಪಕಾರಕವಾಗುತ್ತವೆ. ಅಸಾತಾ ಕರ್ಮದ ಪ್ರಬಲ ಉದಯವು ಇದ್ದಲ್ಲಿ ಮಾಡಿದಂದ ಅನೇಕ ಉಪಚಾರಗಳು ವ್ಯರ್ಥವಾಗುತ್ತವೆ ಅಂತಲೇ ಅಶುಭ ಕರ್ಮವನ್ನು ನಾಶಮಾಡುವಂಥ ಪರಮ ಶಾಂತ ಭಾವವನ್ನು ಧಾರಣ ಮಾಡುವುದೇ ಶ್ರೇಯಸ್ಕರವಾಗಿದೆ." ಈ ಪ್ರಕಾರ ರೋಗದಿಂದ ಹುಟ್ಟಿದ ಆರ್ತಧ್ಯಾನವನ್ನು ಗೆಲ್ಲುವ ಭಾವನೆಯನ್ನು ವರ್ಣಿಸಲಾಗಿದೆ.

ನಿದಾನದ ಸ್ವರೂಪ—ಇನ್ನು ಮುಂದೆ ನಿದಾನ ಎಂಬ ಹೆಸರಿನ ನಾಲ್ಕನೆಯ ಆರ್ತಧ್ಯಾನದ ಸ್ವರೂಪವನ್ನು ಸ್ವಲ್ಪದಲ್ಲಿ ಹೇಳುವೆ. ದೇವಾದಿಗಳ ಭೋಗೋಪಭೋಗವು ತನಗೆ ಪ್ರಾಪ್ತವಾಗಬೇಕು, ಅಪ್ಸರೆಯರ ನೃತ್ಯ ಮೊದಲಾದವುಗಳು ನೋಡಲಿಕ್ಕೆ ದೊರೆಯಬೇಕು, ನಮ್ಮ ದೈವವು ಒಳ್ಳೆಯದಾಗಿರಬೇಕು, ನನ್ನ ರೂಪವು ಸುಂದರವಾಗಿರಬೇಕು, ಅಖಂಡ ಐಶ್ವರ್ಯದಿಂದ ಕೂಡಿದಂಥ ಸಾಮ್ರಾಜ್ಯಪದದ ವೈಭವವು ಪ್ರಾಪ್ತವಾಗಬೇಕು, ಸುಖೋಪಭೋಗಕ್ಕಾಗಿ ರಮ್ಯ-ಗೃಹ, ರಾಜಗೃಹ, ಬಂಗಲೆ ಮೊದಲಾದವುಗಳು ಇರಬೇಕು, ಸುಸ್ವರೂಪಿಯಾದ ಸ್ತ್ರೀಯ ಶರೀರದ ಸ್ಪರ್ಶವು ತನಗೆ ಯಾವಾಗಲೂ ಆಗುತ್ತಿರಬೇಕು, ಹಾಸಿಗೆ, ಕೂಡುವ ಆಸನ, ವಸ್ತ್ರಾಲಂಕಾರ, ಷಡ್‌ರಸದಿಂದ ಇಷ್ಟ ಭೋಜನ ದೊರೆಯಬೇಕು, ಅನೇಕ ಸುರಮ್ಯ ಸ್ಥಳಗಳಲ್ಲಿ ಕ್ರೀಡೆಯನ್ನೂ ವಿಹಾರವನ್ನೂ ಮಾಡಬೇಕು, ತನ್ನ ವೈರಿಗಳು ನಾಶಹೊಂದಬೇಕು, ತನ್ನ ಇಚ್ಛೆಯಂತೆ ಯಾವಾಗಲೂ ತನಗೆ ವಿಭೂತಿಯು ಪ್ರಾಪ್ತವಾಗುತ್ತಿರಬೇಕು, ತನಗೆ ಜನರು ದೊಡ್ಡವನೆನ್ನಬೇಕು, ತನ್ನ ಆಜ್ಞೆಯನ್ನು ಪಾಲಿಸುವವರಿಗೆ ವಿಜಯವು ಪ್ರಾಪ್ತವಾಗಬೇಕು, ಆಜ್ಞೆಯನ್ನು ಪಾಲಿಸದವರಿಗೆ ತಿರಸ್ಕಾರವು ಸಂಭವಿಸಬೇಕು, ಗರ್ವ ಉತ್ಪನ್ನ ಮಾಡುವಂಥ ಹಾಗೂ ಎಲ್ಲ ಪಂಡಿತರನ್ನೂ ತಿರಸ್ಕಾರ ಮಾಡುವಂಥ ವಿದ್ಯೆಯು ಪ್ರಾಪ್ತವಾಗಬೇಕು, ರಾಜನು ತನ್ನ ಸ್ವಾಧೀನನಿರಬೇಕು, ತನ್ನ ಜೀವನಕ್ಕೆ ಅವಶ್ಯಕವಾದ ಉದ್ಯೋಗಗಳು ಯಾವಾಗಲೂ ವೃದ್ಧಿಯಾಗುತ್ತಿರಬೇಕು, ಅನ್ಯರ ಮನೆತನದ

ಸಂಪತ್ತಿಯು ನಾಶವಾಗಬೇಕು, ತನ್ನ ಮನೆತನಕ್ಕೆ ಧನದ ಲಾಭವಾಗಬೇಕು, ತಾನು ಬಹುದಿನ ಬಾಳಬೇಕು, ತಾನು ಮಾತನಾಡಿದ್ದು ನಡೆಯಬೇಕು, ತಾನು ಮಾಡಿದ ಕಪಟ ಹಾಗೂ ಮೋಸದ ಕೆಲಸಗಳು ಯಾರಿಗೂ ಗೊತ್ತಾಗದೆ ಉಳಿಯಬೇಕು, ಉಳಿದ ಜೀವಗಳು ತನಗಿಂತ ಕಡಿಮೆ ತರಗತಿಯವೆಂದು ಮನ್ನಿಸಲ್ಪಡಬೇಕು, ಎಲ್ಲ ಜನರಲ್ಲಿಯೂ ತನಗೇ ಶ್ರೇಷ್ಠತೆಯು ಲಭಿಸಬೇಕು, ಎಲ್ಲ ಭೋಗವು ತನಗೇ ಪ್ರಾಪ್ತವಾಗಬೇಕು, ನಿರೋಗಿ ಶರೀರ ಮತ್ತು ಸುಂದರ ಸ್ವರೂಪ, ಅಪಾರ ಸಂಪತ್ತಿ, ಆಜ್ಞಾಧಾರಕ ಮಕ್ಕಳು, ಚತುರ ಸೇವಕ, ಪತಿವ್ರತಾ ಸ್ತ್ರೀ ಮೊದಲಾದವರೆಲ್ಲ ಭವಿಷ್ಯತ್ ಕಾಲದಲ್ಲಿ ತನಗೆ ಪ್ರಾಪ್ತವಾಗಬೇಕು, ಹೀಗೆ ಇಚ್ಛೆ ಮಾಡುವುದಕ್ಕೆ ನಿದಾನವೆಂಬ ಹೆಸರಿನ ಆರ್ತಧ್ಯಾನ ಎನ್ನುವರು. ಇದು ಸಂಸಾರ ಪರಿಭ್ರಮಣಕ್ಕೆ ಕಾರಣವೂ ಪುಣ್ಯವನ್ನು ನಾಶಮಾಡುವಂಥದೂ ಆಗಿದೆ ಅದಕ್ಕಾಗಿ ನಿದಾನವನ್ನು ಎಂದೂ ಮಾಡಕೂಡದು

ಇಚ್ಛೆಯನ್ನು ನಿರೋಧಿಸಿರಿ. ಇಚ್ಛೆಯು ಪಾಪಬಂಧಕ್ಕೆ ಕಾರಣವಾಗಿದೆ. ಭೋಗದ ಅಭಿಲಾಷೆ ಮತ್ತು ತನ್ನ ಅಭಿಮಾನ ಪುಷ್ಟವಾಗುವ ಇಚ್ಛೆ ಇವುಗಳಿಂದ ಸಂಚಯ ಮಾಡಿದ ಪುಣ್ಯವು ನಾಶವಾಗುತ್ತದೆ ನಮ್ಮ ಪರಿಣಾಮವು ನಿರ್ವಾಣಫಲವಾಗಿದ್ದರೆ ಪುಣ್ಯಬಂಧಕ್ಕೆ ಕಾರಣವಾಗುತ್ತದೆ ತನ್ನ ಉನ್ನತಿಯಾಗಬೇಕು, ತನಗೆ ವಿಷಯ ಸುಖಗಳ ಪ್ರಾಪ್ತಿಯಾಗಬೇಕು ಈ ಎಲ್ಲ ಲೋಭಗಳು ತೀವ್ರ ಕಷಾಯಿ ಮತ್ತು ಪರ್ಯಾಯ ಬುದ್ಧಿಯ ಪುರುಷರ ಹೊರತಾಗಿ ಇತರರಿಗೆ ಉಂಟಾಗುವದಿಲ್ಲ. ವಿಷಯ ಹಾಗೂ ಅಭಿಮಾನಗಳಾದರೂ ಎಷ್ಟು ದಿವಸ ತಾಳುತ್ತವೆ? ಜಗತ್ತಿನಲ್ಲಿ ಇಲ್ಲಿಯ ವರೆಗೆ ಅನಂತ ಪುರುಷರು ಸಂಪತ್ತಿಮಾನ್, ಬಲವಾನ್, ವಿದ್ವಾನ್, ರೂಪವಾನ್ ಮೊದಲಾದವರು ಆಗಿ ಹೋಗಿದ್ದಾರೆ ಅವರ ಗುರುತು, ಸ್ಮೃತಿಗಳು ಇಂದು ಸ್ವಲ್ಪವೂ ಉಳಿದಿಲ್ಲ. ಇಷ್ಟು ದಿವಸ ನೀವು ಭೋಗವನ್ನು ಭೋಗಿಸುತ್ತಿದ್ದೀರಿ; ಅವು ನಿಮ್ಮ ಕಲ್ಯಾಣವನ್ನು ಏನು ಮಾಡಿದುವು? ಈ ಭೋಗಗಳು ಎಂದೂ ತೃಪ್ತಿಯನ್ನು ಉಂಟು ಮಾಡಿಲ್ಲ, ಮಾಡುವಂಥವೂ ಅಲ್ಲ. ಅವು ದುರ್ಗತಿಗೆ ಒಯ್ದು ಮುಟ್ಟಿಸುವಂಥವಿವೆ. ಇವು ಲಭಿಸಲೆಂದು ಆಶೆಯನ್ನು ಮಾಡಿದರೆ ಎಂದೂ ಪ್ರಾಪ್ತವಾಗದಂಥವಿರುತ್ತವೆ. ಅಸಂಖ್ಯಾತ ಜೀವಗಳು ಇವು ಪ್ರಾಪ್ತವಾಗಬೇಕೆಂದು ಇಚ್ಛಿಸಿ, ಆ ಇಚ್ಛಾಗ್ನಿಯಲ್ಲಿ ಹಗಲಿರುಳೂ ಸುಟ್ಟು ಸುಣ್ಣವಾಗುತ್ತಿವೆ. ಸಾಯುವ ಸಮಯ ಸಮೀಪಕ್ಕೆ ಬಂದರೂ ಸಹ ಇಚ್ಛೆಗಳು ಉತ್ಪನ್ನವಾಗುತ್ತಲೇ ಇರುತ್ತವೆ. ಎಲ್ಲ ಜಗತ್ತು ಈ ಇಚ್ಛೆಯಿಂದ ಸುಟ್ಟು ಬೂದಿಯಾಗುತ್ತಿದೆ. ಮೂರು ಲೋಕದ ರಾಜ್ಯವನ್ನೆಲ್ಲ ಕೊಟ್ಟರೂ ತೃಪ್ತಿಯಾಗದಂಥ ತೃಷ್ಣೆಯು ಜಗತ್ತಿನೊಳಗಿನ ಜೀವಗಳಿಗೆ ಉತ್ಪನ್ನ-ವಾಗಿದೆ ಮೂರು ಲೋಕದ ರಾಜ್ಯವನ್ನು ಹಂಚಿಕೊಡುವದೆಂದು ನಿಶ್ಚಯಿಸಿದರೂ ಒಬ್ಬೊಬ್ಬರ ಪಾಲಿಗೆ ಎಷ್ಟು ಬಂದೀತು? ಬೂದಿಗೆ ಸಮಾನವಾಗಿರುವ ಈ ಧನ ಸಂಪತ್ತಿನಿಂದ ಆತ್ಮನಿಗೆ ಏನು ಸಮಾಧಾನವಾದೀತು? ಸಂಪತ್ತು, ಪರಿಗ್ರಹ, ಅಭಿಮಾನ ಇವೇ ದುಃಖವನ್ನು ಉತ್ಪನ್ನಮಾಡುವಂಥವಾಗಿವೆ ಅದಕ್ಕಾಗಿ ಇವುಗಳ ಮೋಹಕ್ಕೆ ಬೀಳದೆ ತನ್ನ ಅವಿನಾಶಿ ಜ್ಞಾನ ಸಂಪತ್ತನ್ನೂ ಸುಖ ಸಂಪತ್ತನ್ನೂ ಪ್ರಾಪ್ತಮಾಡಿಕೊಳ್ಳುವ ಪ್ರಯತ್ನದಲ್ಲಿ ತೊಡಗಬೇಕು.

ಸಂತೋಷವೇ ನಿಜವಾದ ಸುಖವು. ಸಂತೋಷಕ್ಕೆ ಸಮಾನವಾದ ಸುಖವಿಲ್ಲ. ಸಂತೋಷಕ್ಕೆ ಸಮಾನವಾದ ತಪವೂ ಇಲ್ಲ ದೊರೆತ ವಿಷಯಗಳಲ್ಲಿ ಸಂತೋಷ ಹೊಂದಿದ್ದು, ನಿರ್ವಾಂಛಕರಾಗಿರಲಿಕ್ಕೆ ಯತ್ನಿಸು-ವವರಿಗೇನೇ ದೊಡ್ಡ ತಪಶ್ಚರಣವು ಸಂಭವಿಸುತ್ತದೆ. ಅವರ ಕರ್ಮದ ನಿರ್ಜರೆಯು ಆಗುತ್ತದೆ. ಅದಿರಲಿ, ಯಾವಾಗಲೂ ಸಂಪತ್ತಿಗಾಗಿ ತಳಮಳಿಸುವವರಿಗಾದರೂ ಏನು ಲಭಿಸುತ್ತದೆ? ಅನಂತಾನಂತ ಜೀವಗಳು ವಿಷಯ ಕಷಾಯಗಳ ಪ್ರಾಪ್ತಿಯ ಇಚ್ಛೆಯನ್ನು ಮಾಡುತ್ತಿರುವಾಗಲೇ ದುರ್ಗತಿಗೆ ಹೋಗುತ್ತವೆ. ಅದಕ್ಕಾಗಿ ಜೈನ ಧರ್ಮದ ನಿಜವಾದ ಅರ್ಥವು ನಿಮ್ಮ ಅಂತಃಕರಣದಲ್ಲಿ ಬಿಂಬಿಸಿದ್ದರೆ ಕಳೆದ ವಸ್ತುವಿನ ಬಗ್ಗೆ ವಿಚಾರಿಸಬೇಡಿರಿ. ಭವಿಷ್ಯತ್ ಕಾಲದಲ್ಲಿ ಇಂಥದು ಪ್ರಾಪ್ತವಾಗಬೇಕೆಂದು ಇಚ್ಛಿಸಬೇಡಿರಿ ವರ್ತಮಾನ ಕಾಲದಲ್ಲಿ ನಿಮ್ಮ ಕರ್ಮದ ಶುಭಾ-ಶುಭ ರಸವು ಎಷ್ಟು ಉದಯಕ್ಕೆ ಬಂದಿರುವುದೋ ಅದಕ್ಕೆ ತಕ್ಕಂತೆ ಒದಗಿದ ವಸ್ತುಗಳ ವಿಷಯದಲ್ಲಿ ರಾಗ-ದ್ವೇಷಗಳನ್ನು ಹೊಂದದೆ ಶಾಂತ ಚಿತ್ತದಿಂದ ಸ್ವೀಕರಿಸಿರಿ ಈ ಶುಭಾಶುಭದ ಸಂಯೋಗವೇನೂ ನಿಮ್ಮ ಸ್ವಭಾವವಲ್ಲ. ಇದು ಕರ್ಮದ ಉದಯವಾಗಿದೆ ಇದನ್ನರಿತು ಮುಂದಿನ ಇಚ್ಛೆಯನ್ನು ನಷ್ಟಗೊಳಿಸಿ, ನಿದಾನವೆಂಬ ಹೆಸರಿನ ಆರ್ತಧ್ಯಾನ-ವನ್ನು ಗೆಲ್ಲಿರಿ ಈ ಪ್ರಕಾರ ಇಲ್ಲಿಯ ವರೆಗೆ ನಾಲ್ಕು ಪ್ರಕಾರದ ಆರ್ತಧ್ಯಾನದ ಸ್ವರೂಪವನ್ನು ಹೇಳಲಾಗಿದೆ.

ಆರ್ತಧ್ಯಾನದ ಫಲ—ಈ ಆರ್ತಧ್ಯಾನವು ಆರನೆಯ ಗುಣಸ್ಥಾನದ ವರೆಗೂ ಉತ್ಪನ್ನವಾಗುತ್ತದೆ ನಿದಾನವೆಂಬ ಆರ್ತಧ್ಯಾನವು ಐದನೆಯ ಗುಣಸ್ಥಾನದ ವರೆಗೇನೇ ಹುಟ್ಟುತ್ತಿರುತ್ತದೆ ಇದು ಆರನೆಯ ಗುಣಸ್ಥಾನದಲ್ಲಿ

ಉಂಟಾಗುವದಿಲ್ಲ ಆರ್ತಧ್ಯಾನವು ಕೃಷ್ಣ, ನೀಲ, ಕಾಪೋತ ಈ ಮೂರು ಅಶುಭ ಲೇಶ್ಯೆಗಳ ಪ್ರಭಾವದಿಂ ಉತ್ಪನ್ನವಾಗುತ್ತದೆ. ಈ ಆರ್ತಧ್ಯಾನವು ಪಾಪವೆಂಬ ಅಗ್ನಿಯನ್ನೂ ಹೆಚ್ಚಿಸುವ ಉರುವಲು ಇದ್ದಂತಿದೆ. ಇದ ಅನಾದಿಕಾಲದಿಂದಲೂ ಇರುವ ಅಶುಭ ಸಂಸ್ಕಾರದಿಂದ ಏನೂ ಪ್ರಯತ್ನ ಮಾಡದಿದ್ದರೂ ಸಹ ಉತ್ಪನ್ನವಾಗುತ್ತ ಇದರ ಫಲವೆಂದು ನಿರಂತರ ಅನಂತ ದುಃಖವು ಪ್ರಾಪ್ತವಾಗಿ ತಿರ್ಯಂಚಯೋನಿಯಲ್ಲಿ ಪರಿಭ್ರಮಣ ಮಾಡ ಬೇಕಾಗುತ್ತದೆ ಇದು ಕ್ಷಾಯೋಪಶಮಿಕ ಭಾವವಾಗಿದೆ ಇದರ ಕಾಲವು ಅಂತರ್ಮುಹೂರ್ತವಾಗಿದೆ ಯಾ ಅಂತಃಕರಣದಲ್ಲಿ ಆರ್ತಧ್ಯಾನವಿರುವುದೋ ಅವರ ಬಾಹ್ಯ ಶರೀರದ ಮೇಲೆ ಶೋಕ, ಸಂಶಯ, ಭಯ, ಪ್ರಮಾದ ಕಲಹ, ಚಿಂತೆ, ಭ್ರಾಂತಿ, ಉನ್ಮಾದ, ನಿದ್ರೆ, ಜಾಡ್ಯ, ಭ್ರಮ ಮತ್ತು ಮೂರ್ಛೆ ಮೊದಲಾದ ಚಿಹ್ನಗಳು ಪ್ರಕಟವಾಗುತ್ತವ

## ರೌದ್ರಧ್ಯಾನ

ರೌದ್ರಧ್ಯಾನಗಳು ನಾಲ್ಕು ವಿಧವಾಗಿವೆ ಅವುಗಳನ್ನೂ ಬಿಟ್ಟು ಬಿಡಲಿಕ್ಕೆ ಬೇಕು. ಹಿಂಸಾನಂದ ಮೃಷಾನಂದ, ಸ್ತೇಯಾನಂದ ಮತ್ತು ಪರಿಗ್ರಹಾನಂದ ಹೀಗೆ ನಾಲ್ಕು ಪ್ರಕಾರದ ರೌದ್ರಧ್ಯಾನಗಳು ಇವೆ ಇವುಗಳ ಮೊದಲನೆಯದಾದ ಹಿಂಸಾನಂದದ ಸ್ವರೂಪವು ಹೀಗಿದೆ

ಹಿಂಸಾನಂದದ ಸ್ವರೂಪ—ಅನೇಕ ಪ್ರಾಣಿಗಳ ಘಾತವನ್ನು ತಾನು ಸ್ವತಃ ಮಾಡುವುದು ಇಲ್ಲವ ಎರಡನೆಯವರ ಕಡೆಯಿಂದ ಮಾಡಿಸುವುದು, ಇವೆರಡೂ ಕಾರ್ಯಗಳಿಂದಲೂ ಮನಸ್ಸಿನಲ್ಲಿ ಅತಿಶಯ ಆನಂದವನ್ನು ಹೊಂದುವುದು, ಇದಕ್ಕೆ ಹಿಂಸಾನಂದ ರೌದ್ರಧ್ಯಾನವೆನ್ನುವರು ಇಂಥವರಿಗೆ ಹಿಂಸೆಗೆ ಬೇಕಾಗುವ ಕಾರಣಗಳು ಉತ್ಪನ್ನವಾದೊಡನೆಯೇ ಆನಂದವಾಗುತ್ತದೆ ಅರಣ್ಯವನ್ನು ಕಡಿಯುವುದು, ತೋಟ ಪಟ್ಟಿಗಳನ್ನು ಮಾಡುವುದು, ನೆಲವನ್ನು ಅಗಿಸುವುದು, ರಾಜಮಾರ್ಗವನ್ನು ನಿರ್ಮಿಸುವುದು, ಇಲ್ಲವೆ ಅದನ್ನು ಪುನರ್ ನಿರ್ಮಾಣ ಮಾಡುವುದು ಇವೇ ಮೊದಲಾದ ಕಾರ್ಯಗಳಲ್ಲಿ ಹರ್ಷವು ಉಂಟಾಗುತ್ತದೆ ಹಲವರಿಗೆ ನೀರಿನ ಎಂಜಿನು, ಕೆರೆ, ಬಾವಿ, ಕಾಪಲಿ, ನದಿ, ಕಾಲುವೆ ಮೊದಲಾದವುಗಳನ್ನು ನಿರ್ಮಿಸುವುದರಲ್ಲಿ ಬಹಳ ಸಂತೋಷವು ಇರುತ್ತದೆ ಕೆಲ ಕೆಲವರಿಗೆ ಮನೆ ಊರುಗಳನ್ನೂ ಸುಡುವುದರಲ್ಲಿಯೂ ಗುಡ್ಡಗಳನ್ನು ಒಡೆಯುವುದರಲ್ಲಿಯೂ ಆನಂದವಿರುತ್ತದೆ ಯುದ್ಧ, ಪರ-ದ್ರವ್ಯದ ನಾಶ, ಮದ್ಯಪಾನದ ವ್ಯಸನ, ಕಳವು-ಸುಲಿಗೆಗಳಲ್ಲಿ ಅನುರಾಗವು ಹೆಚ್ಚಿಗಿರುತ್ತವೆ ಆಕಾಶ ಮತ್ತು ಭೂಮಿಯ ಮೇಲಿನ ಪಶು ಪಕ್ಷಿಗಳ ಬೇಟೆಯನ್ನು ಆಡುವುದು, ಪಶುಗಳ ಹತ್ಯೆಯನ್ನು ಮಾಡುವುದು, ಅನೇಕ ಪ್ರಾಣಿಗಳನ್ನು ಬಲೆಯಲ್ಲಿ ಹಿಡಿದಿರುವುದು ಇಂಥವೇ ಕೃತಿಗಳಲ್ಲಿ ಮನಸ್ಸಿಗೆ ಕೆಲವರಿಗೆ ಸಮಾಧಾನವಿರುತ್ತದೆ ಇದೇ ಪ್ರಕಾರ ಇನ್ನುಳಿದ ಅನೇಕ ಹಿಂಸಾ ಕೃತಿಗಳಲ್ಲಿ ಯಾರಿಗೆ ಆನಂದವು ಉತ್ಪನ್ನವಾಗಿರುತ್ತದೆಯೋ ಅದೆಲ್ಲವೂ ಹಿಂಸಾನಂದ ರೌದ್ರಧ್ಯಾನವಾಗಿದೆ ಅಲ್ಲದೆ ಅಂಥ ಕಾರ್ಯಗಳನ್ನು ಮಾಡುವ ವಿಚಾರವೂ ಕೂಡ ಹಿಂಸಾನಂದ ರೌದ್ರಧ್ಯಾನ-ದಲ್ಲಿಯೇ ಸಮಾವೇಶವಾಗುತ್ತದೆ

ರೌದ್ರಧ್ಯಾನವನ್ನು ಮಾಡುವವರಿಗೆ ಯಾವಾಗಲೂ ನಿರ್ದಯ ಸ್ವಭಾವವಿರುತ್ತದೆ. ಅವರಲ್ಲಿ ಯಾವಾಗಲೂ ಸಿಟ್ಟು ತುಂಬಿರುತ್ತದೆ ಅವರ ಬುದ್ಧಿಯು ಗರ್ವದಿಂದ ಉದ್ಧಟವಾಗಿದ್ದು, ಯಾವಾಗಲೂ ಪಾಪಕ್ರಿಯೆಯ ಚಿಂತನೆಯಲ್ಲಿಯೇ ಮಗ್ನವಾಗಿರುತ್ತದೆ ಅವರು ಪರಲೋಕ, ಧರ್ಮ, ಅಧರ್ಮ ಇವುಗಳಲ್ಲಿ ಯಾವುದನ್ನೂ ಮನ್ನಿಸುವದಿಲ್ಲ ರೌದ್ರ ಧ್ಯಾನಿಗಳಾದ ಪುರುಷರು ಪಾಪ ಕಾರ್ಯಗಳಲ್ಲಿ ಅತಿಶಯ ನಿಪುಣರಾಗಿರುತ್ತಾರೆ. ಆದರಿಂದ ಅನೇಕ ಪ್ರಕಾರದ ಕುಬುದ್ಧಿಗಳು ಕೈಜೋಡಿಸಿಕೊಂಡು ಅವರ ಮುಂದೆ ಒಂದು ಮೊದಲೇ ನಿಲ್ಲುತ್ತವೆ ರೌದ್ರಧ್ಯಾನ ಉಳ್ಳವನು ಪಾಪೋಪದೇಶವನ್ನು ಕೊಡುವುದರಲ್ಲಿಯೂ ನಾಸ್ತಿಕ ಮತ ಸ್ಥಾಪನೆ ಮಾಡುವುದರಲ್ಲಿಯೂ ಹಿಂಸೆಯ ಕಾರ್ಯವನ್ನು ಅತಿ ಪ್ರೀತಿಯಿಂದ ಹೊಂದಿಸಿ ತರುವುದರಲ್ಲಿಯೂ ಬಹಳ ನಿಷ್ಣಾತನಿರುತ್ತಾನೆ ಇಂಥ ಪುರುಷನ ಸಂಗತಿಯಲ್ಲಿ ಹಗಲಿರುಳೂ ಇರುವುದು ಕೂಡ ಹಿಂಸಾನಂದ ರೌದ್ರಧ್ಯಾನವಾಗಿದೆ ರೌದ್ರಧ್ಯಾನಿಯಾದ ಪುರುಷನು ಯಾವುದರಿಂದ ತನ್ನ ಯಾವ ಅಭಿಪ್ರಾಯವೂ ಸಿದ್ಧಿಸುವದಿಲ್ಲವೋ ಆ ವಿಷಯದಲ್ಲಿ ಯಾವಾಗಲೂ ಕೆಳಗೆ ಹೇಳಿದ ಪ್ರಕಾರ ಚಿಂತಿಸುತ್ತಿರುತ್ತಾನೆ

ರೌದ್ರಧ್ಯಾನಿ ಪುರುಷನ ವಿಚಾರ ಮತ್ತು ಸ್ವಭಾವ—"ಇವನ ಘಾತವನ್ನು ಯಾವ ರೀತಿಯಿಂದ ಮಾಡಬೇಕು? ಊರಲ್ಲಿ ಇವನ ಕೂಡ ಯಾರ ವೈರವು ಇರಬಹುದು? ಇವನನ್ನು ನಾಶಮಾಡಲಿಕ್ಕೆ ಯಾರು ಆನಂದದಿಂದ

ಸಿದ್ಧರಾದಾರು? ಯಾರೂ ತಿಳಿಯದಂತೆ ಇವನ ಘಾತವನ್ನು ಮಾಡಲಿಕ್ಕೆ ಯಾರು ಪ್ರವೀಣರಿರಬಹುದು! ಇವನನ್ನು ಎಷ್ಟು ದಿವಸಗಳಲ್ಲಿ ನಾಶಮಾಡಲಿಕ್ಕೆ ಬಂದೀತು? ಅದಕ್ಕೆ ಯಾವ ಯೋಜನೆಯನ್ನು ಕೈಕೊಳ್ಳಲಿ!! ನಿಜವಾಗಿಯೂ ನನ್ನ ಇಚ್ಛೆಯಂತೆ ಇವರ ನಾಶವಾದರೆ ಬ್ರಾಹ್ಮಣರಿಗೆ ಇಚ್ಛಾಭೋಜನವನ್ನು ಕೊಟ್ಟೇನು. ಅಲ್ಲದೆ ಇಷ್ಟಾ ದೇವತೆಯ ಪೂಜೆಯನ್ನು ಮಾಡುವೆ!!! 'ತಮ್ಮ ಶತ್ರುಗಳನ್ನು ನಾಶ ಮಾಡುವದಕ್ಕಾಗಿ ಧನವೆಚ್ಚಮಾಡಿ ಜಪ ಮಾಡಿಸುವುದು ಗಡ್ಡವನ್ನು ಬೆಳೆಯಿಸುವುದು, ತಲೆಗೂದಲನ್ನು ಕಾಯುವುದು, ಹಗಲಿರುಳೂ ವಿಚಾರದಲ್ಲಿ ಮಗ್ನನಾಗಿರುವುದು, ಇವೆಲ್ಲವೂ ಹಿಂಸಾನಂದದಲ್ಲಿ ಸಮಾವೇಶವಾಗುತ್ತವೆ ನೀರು, ನೆಲ, ಮುಗಿಲುಗಳಲ್ಲಿಯ ಅನೇಕ ಪ್ರಕಾರದ ತ್ರಸ ಜೀವಗಳನ್ನು ಕೊಲ್ಲುವದಕ್ಕಾಗಿ, ಅವುಗಳನ್ನು ಕಟ್ಟಿ ಹಾಕುವದಕ್ಕಾಗಿ, ಮನೆಯಲ್ಲಿ ಹಾಕಿಬಿಡುವುದು ಇವೇ ಮೊದಲಾದ ಪ್ರಯತ್ನಗಳನ್ನು ತಮ್ಮ ಶಕ್ತಿಮೀರಿ ಮಾಡುತ್ತಾರೆ. ಪ್ರಾಣಿಗಳ ಉಗುರು, ಕಣ್ಣು, ಹಲ್ಲು, ತೊಗಲುಗಳನ್ನು ಕಿತ್ತುವುದರಲ್ಲಿಯೂ ಪ್ರಾಣಿ ಪ್ರಾಣಿಗಳಲ್ಲಿ ಯುದ್ಧ ಹಚ್ಚುವುದರಲ್ಲಿಯೂ ಯಾರಿಗೆ ಅತಿಶಯ ಆನಂದವಾಗುವುದೋ ಪ್ರೇಮವಿರುವುದೋ ಅವರಿಗೆ ಹಿಂಸಾನಂದ ರೌದ್ರಧ್ಯಾನವು ಇರುವದೆಂದು ತಿಳಿಯಬೇಕು ಇಂಥವನನ್ನು ಸೋಲಿಸುವುದು, ಅಂಥವನನ್ನು ಗೆಲ್ಲುವುದು, ಅವರ ತಿರಸ್ಕಾರ ಮಾಡುವುದು, ಇವರನ್ನು ಕೊಲ್ಲುವುದು, ಇಂಥವರ ದ್ರವ್ಯ ನಾಶಮಾಡುವುದು, ಇವರ ಸ್ತ್ರೀ ಪುತ್ರರ ಮರಣ ಇಲ್ಲವೆ ವಿಯೋಗಗೊಳಿಸುವುದು ಮೊದಲಾದವುಗಳೆಲ್ಲ ಸಂಭವಿಸಲಿ ಎಂದು ಭಾವಿಸುವುದು, ಚಿಂತಿಸುವುದು, ಯತ್ನಿಸುವುದು; ಅಲ್ಲದೆ ಅದರಲ್ಲಿ ಸಿದ್ಧಿಯು ಸಮೀಪಿಸಿದಂತೆ ಅತಿಶಯ ಆನಂದವನ್ನು ಹೊಂದುವುದು, ಇದಕ್ಕೂ ಹಿಂಸಾನಂದ ರೌದ್ರಧ್ಯಾನವೆನ್ನಬೇಕು. ಪುನಃ ಪುನಃ ಮನದಲ್ಲಿ ಇಂಥ ವಿಚಾರಗಳನ್ನೇ ಮಾಡುತ್ತಾರೆ —'ಏನು ಮಾಡಲಿ ನನಗೆ ಅಷ್ಟು ಶಕ್ತಿಯಿಲ್ಲ. ಬಲಿಷ್ಠರ ಸಹಾಯವೂ ಇಲ್ಲ ನನ್ನ ಮೊದಲಿನ ವೈರಿಯನ್ನು ಸೋಲಿಸುವ ಶಕ್ತಿಯು ಎಂದಾದರೂ ಬಂದೇ ತೀರೀತಲ್ಲ ಒಂದು ವೇಳೆ ಈ ಜನ್ಮದಲ್ಲಿ, ಈ ಲೋಕದಲ್ಲಿ ನನ್ನ ಶತ್ರುವನ್ನು ನಾಶಮಾಡುವ ಸಾಮರ್ಥ್ಯವು ನನಗೆ ಪ್ರಾಪ್ತವಾಗದೆ ಇದ್ದರೆ ಪರಲೋಕದಲ್ಲಿ ಆದರೂ ಅವರ ಬೆನ್ನು ಹತ್ತಿ, ಅವರನ್ನು ನಾಶಗೊಳಿಸಿಯೇ ಬಿಡುವೆ, ಸೇಡನ್ನು ತೆಕ್ಕೊಂಡೇ ಬಿಡುವೆ" ಈ ಪ್ರಕಾರ ಮನಸ್ಸಿನಲ್ಲಿ ಯಾವಾಗಲೂ ಯಾರ ಮೇಲಾದರೂ ಅಪಕಾರ ಮಾಡುವ ಬುದ್ಧಿಯನ್ನು ಇಡುವುದು ಆ ಪ್ರಕಾರ ಯಾರಿಗಾದರೂ ವಿಘ್ನವು ಪ್ರಾಪ್ತವಾದರೆ ಯಾರ ಹೆಂಡರು ಮಕ್ಕಳು ಸತ್ತರೆ ಜಗತ್ತಿನಲ್ಲಿ ಅಪಮಾನವಾದರೆ ತಾನು ಹರ್ಷಗೊಳ್ಳುವನು. ಇವೆಲ್ಲವೂ ಹಿಂಸಾನಂದ ರೌದ್ರಧ್ಯಾನಗಳಾಗಿವೆ ಇವು ಇಲ್ಲವೆ ಈ ಪ್ರಕಾರದ ಹಿಂಸೆಯ ವಿಕಲ್ಪಗಳನ್ನು ಮನಸ್ಸಿನಲ್ಲಿ ತರುವುದೆಲ್ಲ ಹಿಂಸಾನಂದ ರೌದ್ರಧ್ಯಾನದಲ್ಲಿ ಸಮಾವೇಶವಾಗುತ್ತವೆ. ಇದನ್ನರಿತು ಇಂಥವುಗಳನ್ನೆಲ್ಲ ತ್ಯಾಗ ಮಾಡುವ ಅವಶ್ಯಕತೆಯು ಇದೆ.

**ಹಿಂಸಾನಂದದ ಬಾಹ್ಯ ಚಿಹ್ನಗಳು**—ಇನ್ನು ಹಿಂಸಾನಂದವು ಯಾರಿಗೆ ಯಾರಿಗೆ ಆಗುತ್ತದೆಂಬುದು ಅವರ ಬಾಹ್ಯ ಚಿಹ್ನದಿಂದ ಸಹಜ ಗೊತ್ತಾಗುವಂತಿದೆ. ಆ ಚಿಹ್ನಗಳು ಹೀಗಿವೆ. ಹಿಂಸೆಯ ಉಪಕರಣಗಳಾದ ಖಡ್ಗ, ಚೂರಿ, ಕಠಾರಿ ಮೊದಲಾದವುಗಳನ್ನು ಧರಿಸುವುದು ಆ ಶಸ್ತ್ರಗಳಿಂದ ಹೊಡೆಯುವುದು, ಸೀಳುವುದು, ಹೊಂಚು ಹಾಕಿ ಹೊಡೆಯುವ ವಿಚಾರ ಮಾಡುವುದು, ಇದೇ ಪ್ರಕಾರ ಕೊಲ್ಲುವ ಕಲೆಯಲ್ಲಿ ನಿಪುಣತೆಯನ್ನು ಸಂಪಾದಿಸುವುದು, ಹಿಂಸೆಯನ್ನು ಮಾಡುವಂಥ ಪಶುಗಳನ್ನು ತನ್ನ ಹತ್ತರ ಸಾಕುವುದು, ನಾಯಿ, ಹುಲಿ, ಮೊದಲಾದ ಹಿಂಸಕ ಜೀವಗಳನ್ನು ಬೇಟೆಗಾಗಿ ಹತ್ತರ ಇಟ್ಟುಕೊಳ್ಳುವುದು, ಮೊದಲಾದ ಅನೇಕ ಕ್ರಿಯೆಗಳು ಹಿಂಸಾನಂದದ ಬಾಹ್ಯ ಚಿಹ್ನಗಳಾಗಿವೆ.

**ಮೃಷಾನಂದದ ಸ್ವರೂಪ**—ಇನ್ನು ರೌದ್ರಧ್ಯಾನದ ಎರಡನೆಯ ಭೇದವಾದ ಮೃಷಾನಂದದ ಸ್ವರೂಪವನ್ನು ಹೇಳಲಾಗುತ್ತದೆ. ಮೃಷಾನಂದವೆಂದರೆ ಸುಳ್ಳು ಮಾತನಾಡುವುದರಲ್ಲಿ ಆನಂದವನ್ನು ಹೊಂದುವುದು. ಇಲ್ಲವೆ ಅಸತ್ಯದ ಕಲ್ಪನೆಯನ್ನು ಮಾಡುವುದರಲ್ಲಿ ನಿಪುಣನಾಗಿರುವುದು ಮಾಯೆಯ ಬಲಿಯಿಂದ ಜನರನ್ನು ಮೋಸಗೊಳಿಸಿ ಅವರಿಂದ ಧನವನ್ನು ಸೆಳೆಯುವುದು. ಯಾವುದಾದರೊಂದು ವಿದ್ಯೆ, ರಸಾಯನ, ಮಂತ್ರತಂತ್ರ, ಯಂತ್ರ, ಇಂದ್ರಜಾಲಗಳಿಂದ ಚಮತ್ಕಾರಗಳನ್ನು ತೋರಿಸಿ, ಎಲ್ಲ ಜನರೂ ಸ್ವತ್ವವನ್ನು ಮರೆತು ತನ್ನ ಸ್ವಾಧೀನವಾಗುವಂತೆ ಮಾಡುವುದು ತನ್ನ ಸವಿಮಾತಿಗೆ ಮರುಳರಾಗಿ ಜನರು ವಶರಾಗಬೇಕೆನ್ನುವಂತೆ ಸವಿಸುಡಿಗಳನ್ನು ಆಡುವುದು ಹೀಗೆಲ್ಲ ಮಾಡಿದರೇನೇ ತನ್ನ ಲಕ್ಷಣದ ನಿಜವಾದ ಕುಶಲತೆಯೆಂದು ಅವರ ನಿಶ್ಚಿತ ತಿಳುವಳಿಕೆಯು ಇರುತ್ತದೆ. ಪಾಪಿಗಳಿಗೆ ಪರಲೋಕದ ಭಯವು ಮೂಲದಲ್ಲಿಯೇ ಇರುವದಿಲ್ಲ. ಅಂತಲೇ ಅವರು ತಮ್ಮ ಪಾಂಡಿತ್ಯದ ಬಲದ ಮೇಲಿಂದ ಅನೇಕ ಕಲ್ಪಿತ ಶಾಸ್ತ್ರಗಳನ್ನು ರಚಿಸಿ, ಧರ್ಮದ ವಿಪರೀತ ಸ್ವರೂಪವನ್ನು ಜಗತ್ತಿಗೆ ಪ್ರದರ್ಶಿಸುತ್ತಾರೆ.

ಅವರಿಗೆ ಯಜ್ಞ–ಯಾಗಾದಿಗಳಲ್ಲಿಯೂ ಧರ್ಮವು ತೋರುತ್ತದೆ ರಾಗ–ದ್ವೇಷಗಳುಳ್ಳ ದೇವ–ದೇವತೆಗಳಿಂದಲೂ ಅವರ ಇಚ್ಛಿತಕಾರ್ಯಗಳು ಕೊನೆಗೊಳ್ಳುತ್ತವೆ ದೇವ–ದೇವತೆಗಳು ಮದ್ಯಪಾನವನ್ನು ಮಾಡಿ ಸಂತುಷ್ಟರಾಗುತ್ತಾರೆಂದು ಅವರು ತಿಳಿಯುತ್ತಾರೆ ಕುರಿ, ಕೋಣ ಮೊದಲಾದ ಜೀವಗಳನ್ನು ಬಲಿಕೊಡುವುದರಿಂದ ದೇವತೆಗಳು ತೃಪ್ತವಾಗಿ ತಮ್ಮ ಇಚ್ಛಿತ ಕಾರ್ಯಗಳೂ ಪೂರ್ಣಗೊಳ್ಳುತ್ತವೆ ಅಲ್ಲದೆ ವೈರಿಗಳ ನಾಶವೂ ಆಗುತ್ತದೆಂದು ಅವರ ತಿಳುವಳಿಕೆಯು ಇರುತ್ತದೆ ಇದೇ ಕಾರಣದಿಂದ ರಾಜ್ಯಲಕ್ಷ್ಮಿಯೂ ಕೂಡ ತಮ್ಮ ಹತ್ತಿರ ಸ್ಥಿರವಾಗಿ ಉಳಿಯುತ್ತದೆ. ಈ ಪ್ರಕಾರದ ಅನೇಕ ಕಲ್ಪಿತ ಸಂಗತಿಗಳನ್ನೂ ಸುಳ್ಳು ಸಂಗತಿಗಳನ್ನೂ ಶಾಸ್ತ್ರದಲ್ಲಿ ಬರೆದು ಪರಿಗ್ರಹ, ಆರಂಭಾದಿ ಪಾಪ ಕಾರ್ಯಗಳಲ್ಲಿ ಜನರನ್ನು ಪ್ರವೃತ್ತಗೊಳಿಸುತ್ತಾರೆ ಇದೇ ಪ್ರಕಾರ ದೇವತೆಗಳನ್ನು ಪ್ರಸನ್ನಗೊಳಿಸುವವರು ಯಾರಾದರೂ ಇದ್ದರೆ ಅವರೇ ನಿಜವಾದ ಮೋಕ್ಷಮಾರ್ಗಿಗಳೆಂದು ಪ್ರತಿಪಾದನ ಮಾಡುತ್ತಾರೆ. ಪ್ರೀತಿ, ರಾಗ, ದ್ವೇಷ, ಕಾಮ ಈ ಎಲ್ಲ ಭಾವನೆಗಳನ್ನು ಬೆಳೆಯಿಸುವಂಥ ಸ್ತ್ರೀ ಕಥೆ, ರಾಜ ಕಥೆ, ಭೋಜನ ಕಥೆ, ದೇಶ ಕಥೆ ಮೊದಲಾದವುಗಳನ್ನು ಹೇಳುವುದರಲ್ಲಿ ಆನಂದವನ್ನು ಹೊಂದುತ್ತಾರೆ ಇನ್ನೊಬ್ಬರ ಸತ್ಯಾಸತ್ಯ ಸಂಗತಿಗಳನ್ನು ಹೇಳುವುದರಲ್ಲಿಯೂ ತನ್ನ ದೊಡ್ಡಸ್ತನವನ್ನು ಬೆಳೆಯಿಸಿ ಹೇಳುವುದರಲ್ಲಿಯೂ ಹರ್ಷಗೊಳ್ಳುವುದು ಇವೆಲ್ಲ ಮೃಷಾನಂದ ರೌದ್ರಧ್ಯಾನಗಳಾಗಿವೆ. ಅಸತ್ಯದ ಸಾಮರ್ಥ್ಯದಿಂದ ಸುಳ್ಳನ್ನು ನಿಜವೆಂದೂ, ನಿಜವಾದುದನ್ನು ಸುಳ್ಳೆಂದೂ, ನಿರ್ದೋಷಕ್ಕೆ ದೋಷವೆಂದೂ, ದೋಷವುಳ್ಳುದಕ್ಕೆ ನಿರ್ದೋಷವೆಂದೂ ಅಂದೇ ತೀರುವುದು ಇದೇ ಪ್ರಕಾರ 'ಈ ಎಲ್ಲ ಜನರೂ ಮೂರ್ಖರಿದ್ದಾರೆ, ಇವರಿಗೆ ಜ್ಞಾನ ಅಥವಾ ವಿಚಾರ ಏನೂ ಇಲ್ಲ ಇವರನ್ನು ತಮ್ಮ ವಕ್ತೃತ್ವದಿಂದಲೂ ವಿಪರೀತ ಸಲಹೆಗಳಿಂದಲೂ ಅನರ್ಥಕಾರಿಯಾದ ಕಾರ್ಯಗಳಲ್ಲಿ ಪ್ರವರ್ತಿಸಬಹುದು ಅದರಿಂದ ಭ್ರಷ್ಟಗೊಳಿಸಲೂ ಬಂದೀತು. ಇವರ ಎಲ್ಲ ಧನ ಸಂಪತ್ತನ್ನೂ ಕಸಿದುಕೊಳ್ಳುವೆ' ಹೀಗೆ ವಿಚಾರ ಮತ್ತು ಸುಳ್ಳು ಸಂಕಲ್ಪಗಳನ್ನು ಯಾವಾಗಲೂ ಮನಸ್ಸಿನಲ್ಲಿ ಇಟ್ಟುಕೊಳ್ಳುವುದು ಇದು ನರಕ ಗತಿಗೆ ಕಾರಣವಾದಂಥ ಮೃಷಾನಂದದ ಕಾರ್ಯವಾಗಿದೆ ಇದನ್ನರಿತು ಇದರಿಂದ ದೂರ ನಿಲ್ಲಲಿಕ್ಕೆ ಪ್ರಯತ್ನ ಮಾಡುವ ಅವಶ್ಯಕತೆಯಿದೆ

**ಚೌರ್ಯಾನಂದ**—ಮೂರನೆಯದಾದ ಚೌರ್ಯಾನಂದದ ಸ್ವರೂಪವು ಹೀಗಿದೆ ಇದೂ ರೌದ್ರಧ್ಯಾನಗಳಲ್ಲಿ ಒಂದಾಗಿದೆ ಚೌರ್ಯಾನಂದವೆಂದರೆ ಕಳವು ಮಾಡುವುದನ್ನು ಉಪದೇಶಿಸುವುದರಲ್ಲಿ ನೈಪುಣ್ಯವನ್ನು ಸಂಪಾದನ ಮಾಡಿ, ಅದರಲ್ಲಿ ಆನಂದವನ್ನು ಹೊಂದುವುದು ಇದೇ ಪ್ರಕಾರ ಪರಧನ ಹರಣಮಾಡುವ ವಿಚಾರವನ್ನು ಹಗಲಿರುಳೂ ಒಂದೇ ಸವನೆ ಮಾಡುತ್ತಿರುವುದು. ಅದರಂತೆ ಎಲ್ಲಿಂದಾದರೂ ಹಣವನ್ನು ಅಪಹರಿಸಿ, ತಂದಾಗ ಅತ್ಯಂತ ಹರ್ಷವನ್ನು ಹೊಂದುವುದು, ಇನ್ನೊಬ್ಬರು ಕಳ್ಳತನದಿಂದ ತಂದ ದ್ರವ್ಯವನ್ನು ತಂದಿದ್ದರೆ ಅವನ್ನು ನೋಡಿ ಹೀಗೆ ವಿಚಾರ ಮಾಡುವುದು–"ಇವರಿಗೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಪರಧನವು ಎಲ್ಲಿಂದ ಲಭಿಸೀತು! ಇದೇ ಪ್ರಕಾರ ನನಗೂ ಎಲ್ಲಿಯಾದರೂ ಧನದ ರಾಶಿಯು ಲಭಿಸೀತಲ್ಲ!! ಯಾವಾಗ ಲಭಿಸೀತು!!! ಇದಕ್ಕೆ ಏನು ಉಪಾಯ ಯೋಜಿಸಲಿ ಯಾರ ಸಹಾಯ ತಕ್ಕೊಳ್ಳಲಿ!! ಎಲ್ಲಿಯಾದರೂ ಬಿದ್ದದ್ದು, ಮರೆತದ್ದು, ಹುಗಿದದ್ದು ಧನವು ತನ್ನ ಕೈಗೆ ಹತ್ತೀತು! ಅಂಥ ದೈವವು ಯಾವಾಗ ಉದಯಕ್ಕೆ ಬಂದೀತು! ಇನ್ನಾರಾದರೂ ಕಳವು ಮಾಡಿ ತನಗೆ ಧನಕೊಟ್ಟು ಹೋದಾರೆಯೋ, ಕಳವಿನ ಜೀನಸು ನನಗೆ ಸ್ವಲ್ಪ ಬೆಲೆಯಲ್ಲಿ ಲಭಿಸೀತೇ, ಬಹಳ ಬೆಲೆಯುಳ್ಳ ರತ್ನ ಬಂಗಾರಗಳನ್ನು ಯಾರಾದರೂ ನನಗೆ ತಪ್ಪಿಕೊಟ್ಟು ಹೋಗಬಹುದೇ–ಹೀಗೆಲ್ಲ ಯೋಗ ಒದಗಿ ಬಂದರೆ ಬಹಳ ಒಳ್ಳೆಯದಾಯಿತು ಯಾವನಾದರೂ ಅಜ್ಞಾನ ಬಾಲಕನು ಬಹುಮೂಲ್ಯವಾದ ವಸ್ತುವನ್ನು ಕೊಟ್ಟು ಹೋಗುವಂತಾದರೆ ಎಷ್ಟು ಆನಂದ! "ಇವು ಹಾಗೂ ಇಂಥ ವಿಚಾರಗಳನ್ನೇ ಮನಸ್ಸಿನಲ್ಲಿ ನೆನೆಯುತ್ತಿರುವುದು ಚೌರ್ಯಾನಂದ ರೌದ್ರಧ್ಯಾನವಾಗಿದೆ 'ಒಂದು ದೊಡ್ಡ ಸೈನ್ಯದ ಸಹಾಯವನ್ನು ತಕ್ಕೊಂಡು, ಎಲ್ಲಿಯಾದರೂ ಸಂಗ್ರಹಿಸಿಟ್ಟ ದ್ರವ್ಯದ ಸಂಚಯವನ್ನು ಉಪಾಯದಿಂದ ಹಸ್ತಗತ ಮಾಡಿಕೊಳ್ಳುವಾ ಏನಾದರೂ ಒಂದು ಕಪಟ ತಂತ್ರವನ್ನು ಹೂಡಿ ವಾಕ್‌ಚಾತುರ್ಯದಿಂದ ಮತ್ತು ಪುರುಷಾರ್ಥದಿಂದ ಜೀವದ ಹಂಗುದೊರೆದು ಯಾರ ಘಾತವನ್ನಾದರೂ ಮಾಡಿ ಅವರ ಧನವನ್ನು ಅಪಹರಿಸುವಾ' ಈ ಪ್ರಕಾರ ಅನೇಕ ವಿಚಾರಗಳನ್ನೂ ಮನಸ್ಸಿನಲ್ಲಿ ತಂದು ಅದೇ ಚಿಂತೆಯಲ್ಲಿರುವುದು ಇದು ನರಕಕ್ಕೆ ಕಾರಣವಾದ ಚೌರ್ಯಾನಂದ ರೌದ್ರಧ್ಯಾನವಾಗಿದೆ ಇದನ್ನು ಅತ್ಯವಶ್ಯವಾಗಿ ತ್ಯಾಗ ಮಾಡಲಿಕ್ಕೆಬೇಕು

**ಪರಿಗ್ರಹಾನಂದ**—ಈಗ ಪರಿಗ್ರಹಾನಂದ ರೌದ್ರಧ್ಯಾನದ ವಿಚಾರವನ್ನು ಮಾಡೋಣ ಪರಿಗ್ರಹವೆಂದರೆ ಧನಧಾನ್ಯ, ದಾಸೀದಾಸ, ಬಾವಿ, ಪಾತ್ರೆ ಮೊದಲಾದ ವಸ್ತುಗಳಾಗಿವೆ ಇವು ಹೆಚ್ಚಾಗಿ ತನಗೆ ದೊರಕಿದರೆ

ಆನಂದ ಹೊಂದುವುದಕ್ಕೆ ಪರಿಗ್ರಹಾನಂದವೆನ್ನುವರು ಇವುಗಳನ್ನು ಯಾವಾಗಲೂ ಚಿಂತಿಸುತ್ತಿರುವುದು ರೌದ್ರಧ್ಯಾನವೆನಿಸುತ್ತದೆ ಇಂದ್ರಿಯ ಇಲ್ಲವೆ ಅಭಿಮಾನದ ವಶವಾಗಿರುವುದರಿಂದ ಮನಸ್ಸಿನಲ್ಲಿ ಅನೇಕ ವಿಚಾರಗಳು ಬರುತ್ತವೆ - "ನನಗೆ ವಾಸಮಾಡಲಿಕ್ಕೆ ಸುಂದರ ಮನೆಯು ದೊರೆಯಬೇಕು ಅದರ ಸುತ್ತಲೂ ಮನೋಹರವಾದ ತೋಟವಿರಬೇಕು. ನಾಲ್ಕೂ ಕಡೆಯಿಂದಲೂ ಸ್ವಚ್ಛ ಹವೆ ಹಾಗೂ ಬೆಳಕುಗಳು ಬರುವಂತಿರಬೇಕು ಅದು ಅನೇಕ ಕುಶಲ ಕಲೆಗಾರರಿಂದ ನಿರ್ಮಿಸಲ್ಪಟ್ಟು, ಮನೋಹರ ಚಿತ್ರಗಳಿಂದ ಕೂಡಿದ್ದಿರಬೇಕು ಅದರಲ್ಲಿ ಬೆಳ್ಳಿಯ ತೂಗು ಮಂಚವು ನಿದ್ರೆ ಮಾಡಲಿಕ್ಕೆಂದು ಕಟ್ಟಿದ್ದಿರಬೇಕು. ಮನೆಯ ಹೊರ-ಒಳಗುಗಳೆಲ್ಲ ಬಹು ಸುಂದರವಾಗಿರಬೇಕು ನೋಡಿದೊಡನೆ ಯಾರಿಗೂ ಆಶ್ಚರ್ಯವಾಗುವಂತಿರಬೇಕು. ಇಂಥ ಮನೆಯು ಪ್ರಾಪ್ತವಾದೊಡನೆಯೇ ಅದರ ಸುತ್ತಲೂ ಸುಂದರ ಹೂದೋಟವನ್ನು ನಿರ್ಮಿಸುವೆ. ಅದರಲ್ಲಿ ವೃಕ್ಷಗಳಿಗೆ ನೀರನ್ನು ಪೂರೈಸುವದಕ್ಕಾಗಿ ಬಾವಿಯನ್ನೂ ಅಗಿಯಿಸೇನು, ಜಲವಿಹಾರವನ್ನು ನಿರ್ಮಿಸೇನು ಜಲಕ್ರೀಡೆಗಾಗಿ ಕೆಲವು ಚಿಕ್ಕ ಚಿಕ್ಕ ಜಲಾಶಯಗಳನ್ನು ಕಟ್ಟಿಸಿಯೇನು. ಕಾಮಕ್ರೀಡೆಯ ಸ್ಥಾನ, ಭೋಜನ ಶಾಲೆ, ನಾಟ್ಯಗೃಹ ಮೊದಲಾದ ಮನೋರಂಜಕವಾದ ಸ್ಥಾನಗಳನ್ನು ಆ ಸ್ಥಳದಲ್ಲಿ ನಿರ್ಮಾಣಮಾಡುವೆ. ಅದನ್ನೊಂದು ಸುಂದರ ನಂದನವನವನ್ನಾಗಿ ಮಾಡುವೆ. ಇಂಥ ಸುಂದರ ಬನದೊಳಗಿನ ಹೂವುಗಳನ್ನು ಎಲ್ಲ ಋತುಗಳಲ್ಲಿಯೂ ತೋಟಿಗನು ತಂದು ನನಗೆ ಅರ್ಪಿಸಬೇಕು ಇದರಿಂದ ನನಗೆ ಬಹಳ ಸಮಾಧಾನವಾಗುವುದು ನನಗೆ ಸಮಾನವಾದ ವಿಭೂತಿ, ಮನೆ, ಐಶ್ವರ್ಯ ಮೊದಲಾದವುಗಳು ಇನ್ನಾರಿಗೂ ಪ್ರಾಪ್ತವಾದುದಿಲ್ಲ. ಇಂಥ ಸ್ಥಿತಿಯು ನನಗೆ ಯಾವಾಗ ಪ್ರಾಪ್ತವಾಗುವುದೋ ಅದೇ ನನ್ನ ಭಾಗ್ಯದ ದಿವಸಗಳೆಂದು ತಿಳಿಯುವೆ.

**ಸುಸ್ವರೂಪ ಹಾಗೂ ಅಲಂಕಾರ ಪ್ರಾಪ್ತವಾಗಲೆಂಬ ಇಚ್ಛೆ.** ನನ್ನ ರೂಪು ಬಹು ಸುಂದರವಾಗಿರಬೇಕು ಯಾವಾಗಲೂ ನನ್ನನ್ನು ಸಾವಿರಾರು ಜನ ಸ್ತ್ರೀ ಪುರುಷರು ನೋಡುತ್ತಿರಬೇಕು ನನ್ನ ಮೈಮೇಲಿನ ಅಲಂಕಾರ, ರತ್ನ, ಮಾಣಿಕ, ಮುತ್ತು ಮೊದಲಾದವುಗಳು ಅಮೌಲ್ಯವಾಗಿರಬೇಕು, ನವರತ್ನಗಳಿಂದ ಕೂಡಿರಬೇಕು ಈ ಅಲಂಕಾರಗಳಿಗೆ ಒಪ್ಪುವಂಥ ಉತ್ಕೃಷ್ಟ ರೇಶಿಮೆಯ ಬೆಲೆಯುಳ್ಳ ವಸ್ತ್ರಗಳಿರಬೇಕು. ಮನೆಯಲ್ಲಿಯೂ ಸಹ ಹೀಗೆಯೇ ಶೋಭಿಸುವಂಥ ಬೆಳ್ಳಿ ಬಂಗಾರಗಳ ಉಪಕರಣಗಳಿರಬೇಕು ರೂಪ-ಲಾವಣ್ಯ ಮತ್ತು ಕೋಮಲತೆಗಳಿಂದ ಅಪ್ಸರೆಯರನ್ನೂ ಕೂಡ ಗೆಲ್ಲುವಂಥ ಶೀಲವತಿಯೂ, ಪ್ರಿಯ ಭಾಷಿಣಿಯೂ ಆದ ಸತಿಯು ಮನೆಯಲ್ಲಿರಬೇಕು, ಆಜ್ಞಾಧಾರಕ, ಶೂರ, ವೀರ, ಧೀರ, ವಿದ್ವಾಂಸ, ಕೀರ್ತಿವಂತ, ವಿನಯಶೀಲ ಪುತ್ರನಿರಬೇಕು ತನ್ನ ಮನಸ್ಸಿನಂತೆ ಕೆಲಸ ಮಾಡಿಕೊಡುವ ಚತುರ ಹಾಗೂ ಸ್ವಾಮಿ-ಭಕ್ತ-ಪರಾಯಣರಾದಂಥ ಸೇವಕರಿರಬೇಕು ಇಷ್ಟೆಲ್ಲ ಪ್ರಾಪ್ತವಾದ ಮೇಲೆ ತನಗೆ ಸಮಾನವಾದ ವೈಭವವು ಇನ್ನಾರಿಗೂ ಇಲ್ಲವೆಂಬುದನ್ನು ನೋಡಿ, ಅದನ್ನೇ ನೆನೆನೆನೆದು ಆನಂದ ಪಡುವುದು ಹೇಗೆ ಹೇಗೆ ಧನ ಸಂಪತ್ತು ಬೆಳೆಯುತ್ತ ಹೋದೀತೋ ಹಾಗೆ ಹಾಗೆ ಹೆಚ್ಚಾಗಿ ಆನಂದವನ್ನು ಹೊಂದುತ್ತಲೇ ಹೋಗುವುದು. ಇವೆಲ್ಲವೂ ಪರಿಗ್ರಹಾನಂದದ ಲಕ್ಷಣಗಳಾಗಿವೆ

**ಬೆಳ್ಳಿ-ಬಂಗಾರಗಳ ಉಪಕರಣ ಮತ್ತು ಇತರ ಪದಾರ್ಥಗಳ ಮೋಹ**—ತಮ್ಮ ಮನೆಯಲ್ಲಿ ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳೆ, ಕಂಚು, ಕಬ್ಬಿಣ, ಕಲ್ಲು, ಕಟ್ಟಿಗೆ, ಕಾಚು, ಚೀನೀ ಮಣ್ಣು ಮೊದಲಾದ ಅನೇಕ ಪ್ರಕಾರದ ಪಾತ್ರೆಗಳು ವಿಪುಲವಾಗಿರಬೇಕು ವಸ್ತ್ರ-ಪ್ರಾವರಣಾದಿ ಪರಿಗ್ರಹಗಳೂ ಹೆಚ್ಚಾಗಿರುವುದನ್ನು ಕಂಡು ಆನಂದವನ್ನು ಹೊಂದುವುದು. ಇಂಥ ಪರಿಗ್ರಹಗಳಲ್ಲಿ ಏನನ್ನಾದರೂ ಅನ್ಯರು ತಮ್ಮ ಮನೆಯಲ್ಲಿ ಮರೆತು ಹೋದರೆ ಅದು ತಮಗೇ ಪ್ರಾಪ್ತವಾಯಿತೆಂದು ಹಿಗ್ಗುವುದು ಅಲ್ಲದೆ ತಮ್ಮ ಪರಿಗ್ರಹಗಳು ಹೆಚ್ಚಿದಂತೆ ಜಗತ್ತಿನಲ್ಲಿ ತಮ್ಮ ಉಚ್ಚತೆಯು ಬೆಳೆಯಿತೆಂದು ಕಲ್ಪಿಸಿ ಮಾಡುವುದು ಇವೆಲ್ಲವೂ ಪರಿಗ್ರಹಾನಂದ ರೌದ್ರಧ್ಯಾನಗಳಾಗಿವೆ ಇವಲ್ಲದೆ ಇನ್ನೂ ಅನೇಕ ಸಂಗತಿಗಳ ಸಮಾವೇಶವನ್ನು ಇದರಲ್ಲಿ ಮಾಡಲಿಕ್ಕೆ ಬರುತ್ತದೆ ಕೆಲವರ ಹೊಲ, ತೋಟ-ಪಟ್ಟಿಗಳು ತನಗೆ ಪ್ರಾಪ್ತವಾಗಬೇಕು, ಇಂಥವರ ಉಪಜೀವಿಕೆಯು ಆ ಉದ್ಯಮದಿಂದ ನಡೆದಿದೆ, ಅದು ತನಗೆ ಪ್ರಾಪ್ತವಾದರೆ ಉತ್ತಮ; ಇನ್ನೂ ಅವನು ಮಾಡುವದೇನೂ ಉಳಿದಿಲ್ಲ, ಅದರಿಂದ ಅವನು ಸತ್ತರೆ ಒಳ್ಳೆಯದು, ಅವನು ಸಾಯುವುದರಿಂದ ತನ್ನ ಉದ್ಯೋಗ ಹೆಚ್ಚಾದೀತು, ಅವನ ಎಲ್ಲ ಸಂಪತ್ತಿಯ ಒಡೆತನವು ಲಭಿಸೀತು, ಇಂದವರ ಮಕ್ಕಳು ಮರಿ, ಹೆಂಡತಿ ಇವರೆಲ್ಲ ಅಸಮರ್ಥರಿದ್ದಾರೆ, ಇನ್ನು ಅವರನ್ನು ಏನು ಕೇಳುವದಿದೆ; ಅವರನ್ನು ತಿರಸ್ಕರಿಸಿ ನಾನೇ ಎಲ್ಲ ಸಂಪತ್ತಿಯ ಉಪಭೋಗ ಮಾಡಿದರಾಯಿತು. ಈ ಪ್ರಕಾರದ ವಿಚಾರಗಳನ್ನು ಯಾವಾಗಲೂ ಮನಸ್ಸಿನಲ್ಲಿ ನೆನೆಯುತ್ತಿರುವುದೂ ಪರಿಗ್ರಹಾನಂದದಲ್ಲಿಯೇ ಸಮಾವೇಶವಾಗುತ್ತದೆ ಇದೇ ಪ್ರಕಾರ ಇನ್ನೊಬ್ಬರ ಧನ, ರಾಜ್ಯ,

ಹೊಲಮನೆಗಳು, ಜೀವನ ಸಾಧನೆ, ಸುಂದರ ಪರಿಗ್ರಹ, ಲಾವಣ್ಯವತಿಯಾದ ಸ್ತ್ರೀ, ಆಭರಣಗಳು, ಆನೆ ಮೊದಲಾದವು-ಗಳನ್ನು ಬಲಾತ್ಕಾರಗಳಿಂದ ಕಸಿದುಕೊಳ್ಳುವುದು, ಈ ಕಾರ್ಯದಲ್ಲಿ ಬುದ್ಧಿ, ಶರೀರ, ಮಿತ್ರ ಇವರನ್ನೆಲ್ಲ ಕಪಟ ಕೃತಿಗಳಲ್ಲಿ ತೊಡಗಿಸುವುದು, ಮೋಸದ ಕೆಲಸ ಮಾಡುವುದರಲ್ಲಿ ಬಹಳ ಉಪಯುಕ್ತತೆಯು ಇದೆಯೆಂದು ಬೇಕಾದ ಪ್ರಯತ್ನವನ್ನು ಮಾಡಿ, ಅವರೆಲ್ಲರ ಸಹಾಯವನ್ನು ಹೊಂದಿಸಿಕೊಳ್ಳುವುದರಲ್ಲಿ ಆನಂದವನ್ನು ಹೊಂದುವುದು. ಇದೂ ಪರಿಗ್ರಹಾನಂದ ರೌದ್ರಧ್ಯಾನವಾಗಿದೆ

ಪರಿಗ್ರಹಾನಂದದ ಫಲ—ಈ ರೌದ್ರಧ್ಯಾನದ ಪ್ರಭಾವದಿಂದ ನಾವು ಅನೇಕ ಸಲ ನರಕದಲ್ಲಿ ಹುಟ್ಟಿದ್ದೇವೆ. ಹಲವು ಸಲ ಪಶುಯೋನಿಯಲ್ಲಿಯೂ ಜನ್ಮತಾಳಿ ಘೋರ ದುಃಖವನ್ನು ಸಹನ ಮಾಡಿದ್ದೇವೆ ಕೆಲವು ಕುಮಾನುಷ ಯೋನಿಯಲ್ಲಿ ಹುಟ್ಟಿ ಭಯಂಕರ ದಾರಿದ್ರ್ಯ ಮತ್ತು ಅನಿವಾರ್ಯ ರೋಗದ ದುಃಖವನ್ನು ಭೋಗಿಸಿದ್ದೇವೆ ಅದಕ್ಕಾಗಿ ಈಗಲಾದರೂ ಇವು ಉತ್ಪನ್ನವಾಗದಂತೆ ಎಚ್ಚರಿಕೆಯನ್ನು ವಹಿಸುವುದು ನಮ್ಮ ಕರ್ತವ್ಯ-ವಾಗಿದೆ ಈ ರೌದ್ರಧ್ಯಾನದಲ್ಲಿ ಕೃಷ್ಣ-ಲೇಶ್ಯೆಯ ಬಲವಿದ್ದು, ಇದು ಐದನೆಯ ಗುಣಸ್ಥಾನದ ವರೆಗೂ ಉತ್ಪನ್ನವಾಗುತ್ತದೆ ಆದರೂ ಐದು ಗುಣಸ್ಥಾನಗಳಲ್ಲಿರುವ ಅವ್ರತಿ ಸಮ್ಯಗ್‌ದೃಷ್ಟಿಗಳಿಗೆ ಹಾಗೂ ವ್ರತಿಕರಾದ ಶ್ರಾವಕರಿಗೆ ನರಕ ಗತಿಯು ಪ್ರಾಪ್ತವಾಗುವಷ್ಟು ಅದು ತೀವ್ರವಾಗಿರುವದಿಲ್ಲ. ಒಮ್ಮೊಮ್ಮೆ ಹೀಗೂ ಸಂಭವಿಸುತ್ತದೆ.-ವ್ರತಿಕರಾದ ಶ್ರಾವಕರು ತಮ್ಮ ಮಕ್ಕಳ ಮದುವೆಯನ್ನು ಮಾಡುವುದು, ಇರಲಿಕ್ಕೆ ಮನೆಯನ್ನು ಕಟ್ಟಿಸುವುದು, ನ್ಯಾಯ ಮಾರ್ಗದಿಂದ ಉಪಜೀವನವನ್ನು ಸಾಗಿಸುವಾಗ ಹೆಚ್ಚು ಲಾಭವಾಗುವಂಥ ಕಾರ್ಯಗಳ ಬಗ್ಗೆ ವಿಚಾರಮಾಡುವುದು ಇವೆಲ್ಲ ಪ್ರಸಂಗಗಳು ಒದಗುತ್ತವೆ. ಇವುಗಳಲ್ಲಿ ಹಿಂಸೆಯೂ ಸಂಭವಿಸುತ್ತದೆ ಆದರೆ ಈ ಹಿಂಸೆಯೂ ಕೂಡ ಪಾಪಕ್ಕೆ ಕಾರಣವಾಗಿದೆ ಇದರಿಂದ ತನ್ನ ಅಕಲ್ಯಾಣವಿದೆ. ಎಂಬ ಅರಿವು ಅವನಿಗೆ ಇರುತ್ತದೆ. ಅದಕ್ಕಾಗಿ ಅವನು ಯಾವಾಗಲೂ ತನ್ನ ಆತ್ಮನಿಂದೆಯನ್ನು ಮಾಡಿಕೊಳ್ಳುತ್ತಲೇ ಇರುವನು ಹೀಗಿದ್ದೂ ಕೂಡ ಅವನಿಗೆ ತಾನು ಆರಂಭಿಸಿದ ಕಾರ್ಯದಿಂದ ಸ್ವಲ್ಪ ಹರ್ಷವೂ ಕೂಡ ಆಗುತ್ತಿರುತ್ತದೆ ನ್ಯಾಯ ಮಾರ್ಗದಿಂದ ಯೋಗ್ಯ ಪರಿಗ್ರಹ ಇಟ್ಟುಕೊಂಡರೂ ಕೂಡ ಆ ಮರ್ಯಾದೆಯ ಒಳಗೆ ಸಹ ಏನಾದರೂ ಪ್ರಾಪ್ತವಾದರೂ ಆನಂದವಾಗಿಯೇ ತೀರುತ್ತದೆ ಹಾಗೆಯೇ ತನ್ನ ಧನವು ಕಳ್ಳಕಾರರ ಕೈಗೆ ಹತ್ತಬಾರದೆಂದು ಅದನ್ನು ರಕ್ಷಿಸಲಿಕ್ಕೂ ಕೆಲವು ಸುಳ್ಳು ಪ್ರಯೋಗ ಹಾಗೂ ಮಾಯಾಚಾರಗಳನ್ನು ಯೋಜಿಸಬೇಕಾಗುತ್ತದೆ. ಆದರೆ ಅಂದವರಿಗೆ ಅನ್ಯ ಜೀವಿಗಳಿಗೆ ಹಿಂಸಿಸುವ ಉದ್ದೇಶವು ಇರುವದಿಲ್ಲ ಆ ಕಡೆಗೆ ಪ್ರವೃತ್ತಿಯೂ ಇರುವದಿಲ್ಲ ಅವನು ತನ್ನ ಧನದ ಸಂರಕ್ಷಣವನ್ನು ಮಾಡುವದಕ್ಕಾಗಿ ಕಪಟ ಹಾಗೂ ಅಸತ್ಯಗಳ ಆಶ್ರಯವನ್ನು ಹೊಂದುತ್ತಾನೆ. ಇನ್ನೊಬ್ಬರ ಘಾತವನ್ನು ಮಾಡು-ವದಕ್ಕಾಗಿ ಅವನು ಸತ್ಯ ಮತ್ತು ಅಸತ್ಯ ಇವುಗಳ ಖಡ್ಗವನ್ನು ಪ್ರಯೋಗಿಸುವದಿಲ್ಲ ಅಂತಲೇ ಆ ಶ್ರಾವಕರಿಗೆ ನರಕಾದಿ ಕಾರಣವಾದಂಥ ರೌದ್ರಧ್ಯಾನವು ಉಂಟಾಗುವದಿಲ್ಲ

ಬಾಹ್ಯಲಕ್ಷಣಗಳು—ರೌದ್ರಧ್ಯಾನಿಯಾದ ಮನುಷ್ಯನ ಬಾಹ್ಯ ಲಕ್ಷಣಗಳು ಹೀಗೆ ಇರುತ್ತವೆ.— ಅವನು ಸ್ವಾಭಾವಿಕವಾಗಿಯೇ ಕ್ರೂರನಿರುತ್ತಾನೆ ಅವನ ಮನಸ್ಸಿನಲ್ಲಿ ಯಾವಾಗಲೂ ಅನ್ಯರಿಗೆ ತೀವ್ರ ತೊಂದರೆ ಕೊಡುವುದು, ಇನ್ನೊಬ್ಬರ ವಿಷಯದಲ್ಲಿ ನಿರ್ದಯತನ ಮತ್ತು ಕಪಟ ವೃತ್ತಿಯನ್ನು ತೋರಿಸುವುದು, ಇನ್ನೊಬ್ಬರಲ್ಲಿ ಇರಬಹುದಾದ ದೋಷಗಳನ್ನಷ್ಟೇ ಎತ್ತಿ ಹಿಡಿಯುವುದು ಇವೇ ಮೊದಲಾದ ವಿಕಾರಗಳು ಉಂಟಾಗುತ್ತಿರುತ್ತವೆ. ಇವಲ್ಲದೆ ಸಿಟ್ಟಿನಿಂದ ಕಣ್ಣುಗಳು ಕೆಂಪಾಗುವುದು, ಹುಬ್ಬುಗಳನ್ನು ಏರಿಸುವುದು, ಭಯಂಕರ ರೂಪವನ್ನು ಹೊಂದುವುದು, ಬಾಯಿಂದ ಕೆಟ್ಟ ಮಾತುಗಳನ್ನು ಆಡುವುದು ಇವೇ ಮೊದಲಾದವುಗಳು ಅವನ ಅಂತಃಕರಣದೊಳಗಿನ ವಿಕಾರವನ್ನು ಪ್ರಕಟಗೊಳಿಸುವ ಲಕ್ಷಣಗಳಾಗಿವೆ ರೌದ್ರಧ್ಯಾನವು ಕ್ಷಯೋಪಶಮ ಭಾವವಾಗಿದೆ ಅಂತರ್‌ಮುಹೂರ್ತ-ನಲವತ್ತೈದು ನಿಮಿಷಗಳ-ತರುವಾಯ ಪುನಃ ಬೇರೆ ಬೇರೆ ವಿಚಾರಗಳು ಮನಸ್ಸಿನಲ್ಲಿ ಬರುತ್ತವೆ. ಈ ಪ್ರಕಾರ ನಾಲ್ಕು ಪ್ರಕಾರದ ರೌದ್ರಧ್ಯಾನಗಳ ಸ್ವರೂಪವಿದೆ ಇವುಗಳ ತ್ಯಾಗ ಮಾಡಿದರೇನೇ ಧರ್ಮಧ್ಯಾನವು ಸಂಭವಿಸುತ್ತದೆ. ಅವರ ಹೊರತಾಗಿ ಆಗಲಾರದು. ಇಲ್ಲಿಯ ವರೆಗೆ ರೌದ್ರಧ್ಯಾನವನ್ನು ನಾವು ತ್ಯಾಗಮಾಡಲಿಲ್ಲವೆಂದೇ ಅನಾದಿ ಕಾಲದಿಂದಲೂ ನಮಗೆ ಧರ್ಮಧ್ಯಾನದ ವಾಸನೆಯು ಉಂಟಾಗಿಲ್ಲ ಈಗ ಧರ್ಮವನ್ನು ಸಂಪಾದಿಸುವದಕ್ಕಾಗಿ ಎರಡೂ ದುರ್ಧ್ಯಾನಗಳ ಸ್ವರೂಪವನ್ನು ತಿಳಿದುಕೊಂಡು ನಮ್ಮ ಆತ್ಮನಲ್ಲಿ ಆರ್ತರೌದ್ರಧ್ಯಾನಗಳ ವಿಕಾರವು ಉತ್ಪನ್ನ-ವಾಗದಂತೆ ಇರುವುದರಲ್ಲಿಯೇ ಆತ್ಮನ ಕಲ್ಯಾಣವಿದೆ.

## ಧರ್ಮಧ್ಯಾನ

ಧರ್ಮಧ್ಯಾನಕ್ಕೆ ಪ್ರತಿಕೂಲ ಪರಿಸ್ಥಿತಿ — ಇನ್ನು ಮುಂದೆ ಧರ್ಮಧ್ಯಾನದ ಸ್ವರೂಪವನ್ನು ವಿಚಾರಿಸೋಣ ಧರ್ಮಧ್ಯಾನವು ಎಲ್ಲಿಯಾದರೂ ಒಬ್ಬರಿಗೆ-ಅದೂ ಸಮ್ಯಗ್ದೃಷ್ಟಿ ಪುರುಷನಿಗೆ ಉಂಟಾಗುತ್ತದೆ ಮಹಾಪುರುಷನೊಬ್ಬನು ರಾಗದ್ವೇಷ, ಮೋಹರೂಪಗಳ ಉರುವಲನ್ನು ನಾಶಮಾಡಿ ಅತಿಶಯ, ಪ್ರಯತ್ನದಿಂದಲೂ ಸತತ ಪರಿಶ್ರಮದಿಂದಲೂ ಧರ್ಮಧ್ಯಾನದಲ್ಲಿ ಪ್ರವೃತ್ತನಾಗುತ್ತಾನೆ ಆದರೆ ಆರ್ತರೌದ್ರಧ್ಯಾನಗಳು ಕೂಡುವಾಗ, ಏಳುವಾಗ, ನಡೆಯುವಾಗ, ತಿನ್ನುಣ್ಣುವಾಗ, ವಿಷಯೋಪಭೋಗವನ್ನು ತಕ್ಕೊಳ್ಳುವಾಗ, ವಿಷಯಗಳ ಕಡೆಗೆ ಪ್ರವೃತ್ತನಾದ ಮನುಷ್ಯನಿಗೆ ಏನೂ ಪ್ರಯತ್ನ ಮಾಡದೆಯೂ ಸಹ ಉಂಟಾಗುತ್ತವೆ ಧರ್ಮಧ್ಯಾನವು ಹಾಗಲ್ಲ ಸ್ಥಿರತೆಯಿಂದ ಧರ್ಮಧ್ಯಾನವು ಉಂಟಾಗುತ್ತದೆ ಅದಕ್ಕಾಗಿ ಪರಿಣಾಮವನ್ನು ಕೆಡಿಸುವಂಥ ಅನೇಕ ಸ್ಥಾನಗಳ ತ್ಯಾಗವನ್ನು ಮಾಡಬೇಕಾಗುತ್ತದೆ. ಯಾಕೆಂದರೆ ಸ್ಥಳ ಮಹಾತ್ಮ್ಯದಿಂದ ವಿಚಾರದಲ್ಲಿ ಶುಭಾಶುಭತೆಗಳು ಉಂಟಾಗುತ್ತವೆ ಅವಕ್ಕಾಗಿ ಕೆಟ್ಟ ಸ್ಥಳಗಳನ್ನಂತೂ ಅತ್ಯವಶ್ಯವಾಗಿ ತ್ಯಾಗಮಾಡಲಿಕ್ಕೇಬೇಕು ಕಪಟ, ಮೋಸಗಳು ನಡೆಯುವಂಥ ಸ್ಥಳದಲ್ಲಿ ಹೋಗಿ ಕುಳಿತರೆ ಅಂಥ ವಿಚಾರಗಳೇ ಮನಸ್ಸಿನಲ್ಲಿ ಬರುತ್ತವ ಯಾವ ಸ್ಥಳದಲ್ಲಿ ದುಷ್ಟರು, ಹಿಂಸೆಯನ್ನು ಮಾಡುವವರು, ಪಾಪಕರ್ಮವನ್ನು ಮಾಡುವಂಥವರು, ಪಾಪಕರ್ಮದ ಮೇಲೆ ತಮ್ಮ ಉಪಜೀವಿಕೆಯನ್ನು ನಡೆಯಿಸುವಂಥವರು, ತೀವ್ರಕಷಾಯಿಗಳು, ನಾಸ್ತಿಕರು, ಧರ್ಮದ್ರೋಹಿಗಳು ಇರುವಂಥ ಸ್ಥಳಗಳಲ್ಲಿ ನಾವು ನೇಲಿಂದ ಮೇಲೆ ಹೋಗಹತ್ತಿದರೆ ಸ್ವತಃ ನಮ್ಮ ವಿಚಾರವೂ ಸಹ ಅವರಂತೆಯೇ ಆಗುತ್ತವೆ. ಎಲ್ಲಿ ರಾಜನು ದುಷ್ಟನಿರುವನೋ, ಎಲ್ಲಿ ರಾಜನ ಮಂತ್ರಿಯು ದುಷ್ಟನಿರುವನೋ, ಎಲ್ಲಿ ರಾಜ್ಯವ್ಯವಸ್ಥೆ ಧರ್ಮ ವಿಹೀನ ಹಾಗೂ ಮಿಥ್ಯಾದೃಷ್ಟಿಗಳಿಂದ ಕೂಡಿರುವುದೋ, ರಾಜ್ಯಸೂತ್ರಗಳು ಎಲ್ಲಿ ವೇಷಧಾರಿಗಳ ಕೈಯಲ್ಲಿ ಇರುವವೋ ಅಲ್ಲಿ ಧರ್ಮಧ್ಯಾನದಲ್ಲಿ ವಿಚಾರವು ಸ್ಥಿರವಾಗಿ ನಿಲ್ಲುವದಿಲ್ಲ ಇನ್ನೂ ಪ್ರಜೆಗಳ ಮೇಲೆ ಎಲ್ಲಿ ಪರಚಕ್ರಗಳ ದಾಳಿಯು ಉಂಟಾಗಿರುವುದೋ, ದುರ್ಭಿಕ್ಷವು ಸಂಭವಿಸಿರುವುದೊ, ಸಾಂಸರ್ಗಿಕ ರೋಗವು ಹಬ್ಬಿರುವುದೋ ಇವೆಲ್ಲ ಕಾರಣಗಳಿಂದ ಪ್ರಜೆಗಳಿಗೆ ತೊಂದರೆಯು ಎಲ್ಲೆಲ್ಲಿ ಉಂಟಾಗಿರುವುದೋ ಅವೆಲ್ಲ ಧರ್ಮಧ್ಯಾನದಲ್ಲಿ ಚಿತ್ತವು ಸ್ಥಿರವಾಗಿ ಉಳಿಯಲಾರದು ಎಲ್ಲಿ ಯಾವಾಗಲೂ ವೇಶ್ಯೆಯು ನುಳಿದಾಡುವವೋ, ವ್ಯಭಿಚಾರಿ ಸ್ತ್ರೀ ಹಾಗೂ ವಿಟಪುರುಷರ ಸಂಕೇತ ಸ್ಥಾನವು ಯಾವುದಿರುವುದೋ, ಆಚಾರಭ್ರಷ್ಟ ವೇಷಧಾರಿ ಸಾಧುಗಳು ಎಲ್ಲಿರುವರೋ, ಎಲ್ಲಿ ರಸ ರಸಾಯನ ಕ್ರಿಯೆಗಳು ಒಂದೇ ಸವನೆ ನಡೆಯುವವೋ, ಮಾರಣ, ಜಾರಣ, ಉಚ್ಚಾಟನಗಳಂಥ ವಿದ್ಯೆಗಳ ಸಾಧನೆಯು ಸತತವಾಗಿ ಎಲ್ಲಿ ನಡೆಯುವುದೋ, ಹಿಂಸಾದಿ ಪಾಪಕರ್ಮಗಳ ಉಪದೇಶವು ಎಲ್ಲಿ ನಡೆಯುವುದೋ, ಹಿಂಸಾದಿ ಪಾಪಕರ್ಮಗಳ ಉಪದೇಶವು ಎಲ್ಲಿ ನಡೆಯುವುದೋ, ಕಾಮಶಾಸ್ತ್ರ, ಯುದ್ಧಶಾಸ್ತ್ರ, ಕಪಟ ಮತ್ತು ಧೂರ್ತಜನರು ಹೂಡಿದ ತಂತ್ರಗಳ ವಿವರಣೆಯು ಎಲ್ಲಿ ನಡೆಯುವುದೋ, ಎಲ್ಲಿ ದ್ಯೂತಕ್ರೀಡೆ, ಮದ್ಯಪಾನ, ವ್ಯಭಿಚಾರಗಳನ್ನು ಮಾಡುವವರು ಹಾಗೂ ನಪುಂಸಕರು, ಭಟರು, ನೀಚರು, ಚಾಂಡಾಲರು, ಬೇಟೆಗಾರರು, ಕಟುಕರು, ಮೀನ ಬಲೆಗಾರರು ಮೊದಲಾದ ದುಷ್ಟ ಜನರು ಇರುವರೋ, ದುಷ್ಟ ತಪಸ್ವಿನಿಗಳೂ ಸಾಮಾನ್ಯ ಸ್ತ್ರೀಯರೂ ಎಲ್ಲಿ ಒದುವರೋ; ನಪುಂಸಕರ ಸಂಚಾರವು ಎಲ್ಲಿರುವುದೋ, ದೀನ, ಯಾಚಕ, 'ರೋಗಿ, ಅಂಗಹೀನ, ಕುರುಡ, ಕುಂಟ,' ಕಿವುಡ ಇವರು ಯಾವಾಗಲೂ ಬರುತ್ತಿರುವರೋ; ಎಲ್ಲಿ ಬೇಟೆಯನ್ನು ಆಡುವಂಥ ಹಿಂಸ್ರಪಶು ಮತ್ತು ಕಲಹ ಪ್ರಿಯ ಮನುಷ್ಯ ಅಲ್ಲದೆ ಪಶುಗಳು ಇರುವವೋ, ಎಲ್ಲಿ ಅನೇಕ ಹುಳಗಳ ಮನೆ, ಬಿಲ, ಮುಳ್ಳು, ಹುಲ್ಲು, ಗೊರಟೆ, ಎಲವು, ಮಾಂಸ, ರಕ್ತ, ಮಲ, ಮೂತ್ರ, ಪಂಚೇಂದ್ರಿಯ ಜೀವಗಳ ಮೃತ ಶರೀರ, ಕೆಸರು ಮೊದಲಾದವುಗಳಿಂದ ದುರ್ಗಂಧವು ಉಂಟಾಗುವುದೋ ನಾಯಿ, ಹದ್ದು, ಬೆಕ್ಕು, ನರಿ, ಕಾಗೆ ಮೊದಲಾದ ಪ್ರಾಣಿಗಳು ಎಲ್ಲಿ ಇರುವವೋ, ಇದರಂತೆಯೆ ಶುಭ ಪರಿಣಾಮವನ್ನು ಕೆಡಿಸುವಂಥ ಅನೇಕ ಪದಾರ್ಥಗಳು ಎಲ್ಲಿ ಕಂಡು ಬರುವವೋ ಅಂದ ಎಲ್ಲ ಸ್ಥಾನಗಳನ್ನೂ ಅವಶ್ಯವಾಗಿ ಬಿಡಬೇಕು. ಇಂದ ಸ್ಥಾನಗಳಿಂದ ಅವಶ್ಯವಾಗಿ ಪರಿಣಾಮವು ಕೆಡುತ್ತದೆ. ಶುಭ ಧ್ಯಾನವು ಉಂಟಾಗಬೇಕೆಂಬ ಇಚ್ಛೆಯು ಇದ್ದರೆ ಮೇಲೆ ಹೇಳಿದ ಎಲ್ಲ ಸ್ಥಳಗಳಲ್ಲಿಯೂ ಹೋಗಿ ಧರ್ಮಧ್ಯಾನವನ್ನು ಸ್ಥಿರತೆಯಿಂದ ಮಾಡುವೆನೆಂಬ ವಿಚಾರವನ್ನು ಕನಸಿನಲ್ಲಿಯೂ ಸಹ ತರಲಾಗದು

ಧರ್ಮಧ್ಯಾನಕ್ಕೆ ತಕ್ಕ ಸ್ಥಳ—ಧರ್ಮಧ್ಯಾನಕ್ಕೆ ಯೋಗ್ಯವಾದ ಸ್ಥಳವು ಹೀಗಿರಬೇಕು —ಸುಂದರ: ಮನಸ್ಸನ್ನು ಸಮಾಧಾನದಲ್ಲಿಡುವಂಥದು. ಶೀತ, ಉಷ್ಣ, ಮಳೆ, ಬಿಸಿಲು, ಗಾಳಿಗಳಿಂದ ಬಾಧೆಯಾಗದಂಥದು,

ಗುಂಗಾಡು, ನೊಣ, ಅನ್ಯವಿಕಲತ್ರಯ ಜೀವಗಳೂ ಸಹ ಪೀಡೆಯನ್ನು ಉತ್ಪನ್ನಮಾಡದಂಥ ಶುದ್ಧ ಸ್ಥಾನವಿರಬೇಕು. ಇಂಥ ಯಾವುದಾದರೊಂದು ನಿರ್ಮಲ ಸ್ಥಳ ಇಲ್ಲವೆ ಕಲ್ಲು, ಕಟ್ಟಿಗೆಯ ಹಲಿಗೆ ಇಂಥದೇನಾದರೂ ಇದ್ದರೂ ಅದರ ಮೇಲೆ ಕುಳಿತು ಧರ್ಮಧ್ಯಾನವನ್ನು ಮಾಡಬೇಕು ತೋಟ, ಯಾರೂ ಇಲ್ಲದ ಮನೆ, ವನದೊಳಗಿನ ಮಂದಿರ, ತಮ್ಮ ಮನೆಯೊಳಗಿನ ನಿರಾಕುಲ ಏಕಾಂತ ಸ್ಥಳ, ಯಾವ ಬಾಧೆಯೂ ಒದಗದಂಥ ಕೋಣೆ, ರಾಗ–ದ್ವೇಷಗಳನ್ನು ಉತ್ಪನ್ನ ಮಾಡುವ ಸಾಧನಗಳು ಇಲ್ಲದಂಥ ಹಾಗೂ ಉತ್ಪನ್ನವಾಗದಂಥ ಸ್ಥಾನ, ನೃತ್ಯ ಗಾಯನಗಳ ಶಬ್ದ, ಗೊಂದಲ, ಜಗಳ, ವಿತಂಡವಾದ ಇತ್ಯಾದಿಗಳು ಕೇಳಬಾರದಂಥ ಸ್ಥಳ, ಹಿಂಸೆಯ ಕೃತ್ಯವೂ ದೃಷ್ಟಿಗೆ ಬೀಳಕೂಡದು, ಇಂಥ ಸ್ಥಳವನ್ನು ಆಯ್ದುಕೊಂಡು ಧರ್ಮಧ್ಯಾನವನ್ನು ಮಾಡಲಿಕ್ಕೆ ಇಚ್ಛಿಸುವವರು ಅಲ್ಲಿ ಹೋಗಿ ನಿಶ್ಚಲ ವೃತ್ತಿಯಿಂದ ಕೂಡಬೇಕು ಧರ್ಮಧ್ಯಾನಕ್ಕೆ ಸ್ಥಾನಶುದ್ಧಿ ಹಾಗೂ ಆಸನದ ದೃಢತೆಗಳು ಮುಖ್ಯ ಕಾರಣವೆನಿಸುತ್ತವೆ ಯಾರಿಗೆ ಎರಡು ಪ್ರಹರ (ಆರು ತಾಸುಗಳು) ಕೂಡ ಒಂದೇ ಸ್ಥಳವಲ್ಲಿ ಕೂಡಲಿಕ್ಕೆ ಆಗುವದಿಲ್ಲವೋ ಅವರಿಗೆ ಧರ್ಮಧ್ಯಾನವಂತೂ ಹೋಗಲಿ, ಆದರೆ ವ್ಯವಹಾರ, ಒಕ್ಕಲತನ, ಸೇವೆ ಸಹ ಯಥಾರ್ಥವಾಗಿ ಸಾಗಲಾರವು ಅಂದ ಮೇಲೆ ಧರ್ಮಧ್ಯಾನವು ಹೇಗೆ ಸಾಧೀಸೀತು? ಧರ್ಮಧ್ಯಾನದಲ್ಲಿ ಸ್ವಲ್ಪವೂ ಅಲುಗಾಡದೆ ಒಂದೇ ಸ್ಥಳದಲ್ಲಿ ಕೂಡುವುದೇ ಮುಖ್ಯ ಸಾಧನವಾಗಿದೆ. ಮೊದಲಿನ ಮೂರು ಉತ್ತಮ ಸಂಹನನಗಳನ್ನು ಧಾರಣ ಮಾಡಿದವರಿಗೇನೇ ಧ್ಯಾನದ ದೃಢತೆಯು ಸಿದ್ಧಿಸುತ್ತದೆ. ವಜ್ರದಂಥ ಸಂಹನನ ಉಳ್ಳವರೂ ಮಹಾ ಪರಾಕ್ರಮಿ ಹಾಗೂ ಬಲವಂತರಿದ್ದು, ದೇವ ಮನುಷ್ಯ ಮೊದಲಾದವರಿಂದ ಆಗುವ ಘೋರ ಉಪದ್ರವಗಳಿಂದ ಸ್ವಲ್ಪವೂ ಚಂಚಲರಾಗದಂಥ ಗಟ್ಟಿಮನಸ್ಸಿನವರೂ ಸ್ಥಿರ ಆಸನ ಉಳ್ಳವರೂ ಯಾವ ಸ್ಥಾನದಲ್ಲಿಯೂ, ಎಂಥ ಆಸನದಲ್ಲಿಯೂ ಸಹ ಧ್ಯಾನವನ್ನು ಮಾಡಬಲ್ಲರು ಆದರೆ ಯಾರಿಗೆ ಅಂಥ ಸಂಹನನವಿಲ್ಲವೋ ಅವರಿಗೆ ಸ್ಥಾನದ ಶುದ್ಧತೆ ಹಾಗೂ ಆಸನದ ದೃಢತೆಗಳೂ ಅತ್ಯವಶ್ಯವಾಗಿವೆ ಇವುಗಳನ್ನು ಒದಗಿಸಿಕೊಂಡೇ ಧ್ಯಾನ ಮಾಡುವುದರ ಕಡೆಗೆ ಪ್ರವೃತ್ತರಾಗಬೇಕು. ಯಾರ ಮನಸ್ಸು ಸಂಸಾರ–ದೇಹ–ಭೋಗಾದಿಗಳಿಂದ ವಿರಕ್ತವಾಗಿರುವುದೋ, ಯಾರ ಅಂತಃಕರಣದಲ್ಲಿ ಯಾವ ಕಾರಣದಿಂದಲೂ ವಿಕ್ಷಿಪ್ತತೆಯು ಉಂಟಾಗುವದಿಲ್ಲವೋ, ಯಾರಿಗೆ ಯಾವ ಸಂಶಯವೂ ಉಳಿದಿಲ್ಲವೋ, ಯಾರು ಅಧ್ಯಾತ್ಮ ರಸದಲ್ಲಿ ಮಗ್ನರಾಗಿರುವುದರಿಂದ ನಿಶ್ಚಲರಾಗಿರುವರೋ ಅವರಿಗೆ ಸ್ಥಾನ ಹಾಗೂ ಆಸನಗಳ ನಿಯಮವು ಇರುವದಿಲ್ಲ ಅವರು ಜ್ಞಾನ, ಚಾರಿತ್ರ ಸಂಪನ್ನರಾಗಿ ಜಿತೇಂದ್ರಿಯತ್ವದಿಂದ ಅನೇಕ ಪ್ರಕಾರದ ಧ್ಯಾನವನ್ನು ಸಿದ್ಧ ಮಾಡಿಕೊಳ್ಳಲಿಕ್ಕೆ ಸಮರ್ಥರಾಗಿರುತ್ತಾರೆ

ಧರ್ಮಧ್ಯಾನಿಗಳಾದ ಪುರುಷರು ಏನನ್ನು ಚಿಂತಿಸಬೇಕು? "ನಾನು ಅನಂತ ಗುಣಗಳನ್ನೂ ಧಾರಣ ಮಾಡುವವನಿದ್ದೇನೆ ಸಂಸಾರವೆಂಬ ವನದಲ್ಲಿ ಅನಾದಿ ಕಾಲದಿಂದಲೂ ಕರ್ಮವೆಂಬ ವೈರಿಯ ಕಡೆಯಿಂದ ಎಲ್ಲ ಪ್ರಕಾರದಿಂದಲೂ ಮೋಸಗೊಂಡವನಿರುವೆ ನಾನು ಅಜ್ಞಾನದಿಂದ ಉತ್ಪನ್ನವಾಗುವ ರಾಗ–ದ್ವೇಷ ಮೋಹಾದಿಗಳಿಗೇನೇ ನನ್ನ ಸ್ವರೂಪವೆಂದು ತಿಳಿದು, ಸಂಸಾರದಲ್ಲಿ ಪರಿಭ್ರಮಣ ಮಾಡುತ್ತ ಬಂದೆ. ಈಗ ಕರ್ಮದಲ್ಲಿ ಏನೋ ಸ್ವಲ್ಪ ಉಪಶಮವಾದುದರಿಂದ ಪರಮೋಪಕಾರಕ ಜಿನಪರಮಾಗಮದ ಉಪದೇಶದ ಲಾಭವು ಆದುದರಿಂದ ನನ್ನ ರಾಗದ್ವೇಷಗಳೆಂಬ ಜ್ವರವು ಇಲ್ಲದಂತೆ ಆಗಿವೆ ಈಗ ಮೋಹರೂಪೀ ನಿದ್ರೆಯು ಇಲ್ಲದಂತೆ ಆದುದರಿಂದ ಸ್ವಸ್ವಭಾವ ಹಾಗೂ ಪರಸ್ವಭಾವಗಳನ್ನು ತಿಳಿದುಕೊಳ್ಳುವ ಶಕ್ತಿಯು ಉಂಟಾಗಿದೆ. ಈಗ ಶುದ್ಧಧ್ಯಾನವೆಂಬುದೊಂದೇ ಖಡ್ಗವು. ಇದರಿಂದ ಕರ್ಮರೂಪೀ ಶತ್ರುವನ್ನು ನಾಶ ಮಾಡಿದ್ದಾದಲ್ಲಿ ಸ್ವಸ್ವರೂಪದ ಪ್ರಾಪ್ತಿಯಾಗಿ ದುಃಖದಿಂದ ಮುಕ್ತಿಯು ಒದಗೀತು ಆತ್ಮಜ್ಞಾನರೂಪೀ ಸೂರ್ಯನ ಪ್ರಕಾಶದಿಂದ ಅಜ್ಞಾನರೂಪಿಯಾದ ಅಂಧಕಾರಕ್ಕೆ ಹಾನಿಯು ತಟ್ಟದಿದ್ದರೆ ಇನ್ಯಾವ ಅವಸ್ಥೆಯಲ್ಲಿ ಇಂಥ ಸುಸಂಧಿಯು ನನಗೆ ಪ್ರಾಪ್ತವಾದೀತು? ಸಂಪೂರ್ಣ ಜಗತ್ತನ್ನು ನೋಡುವಂಥ ಅದ್ವಿತೀಯವಾದ ನೇತ್ರವು ನನ್ನ ಆತ್ಮವೇ ಆಗಿದೆ. ಅದಕ್ಕೆ ಅವಿದ್ಯಾರೂಪಿಯಾದ ಪಿಶಾಚಿಯು ಪ್ರೇರಣೆಯನ್ನುಂಟು ಮಾಡಿದ ವಿಷಯ ಕಷಾಯವು ತನ್ನ ಕಡೆಗೆ ಎಳೆದುಕೊಳ್ಳುವ ಪ್ರಯತ್ನವನ್ನು ಮಾಡುತ್ತಿರುತ್ತದೆ ಇಂದ್ರಿಯಗಳ ವಿಷಯ ಹಾಗೂ ಕಷಾಯಗಳು ನನ್ನ ಹಿತಾಹಿತವನ್ನು ನೋಡಗೊಡುವದಿಲ್ಲ ಈ ರಕ್ಕಸರ ಸ್ವಾಧೀನನಾಗಿ ನನ್ನ ನಿಜವಾದ ಸ್ವರೂಪವನ್ನು ಮರೆತು ಬಿಟ್ಟಿದ್ದೇನೆ. ಇಂದ್ರಿಯ ವಿಷಯಗಳು ರಮಣೀಯವೆನಿಸುತ್ತವೆ. ಆದರೆ ಕೊನೆಗೆ ಅವು ನೀರಸವಾಗಿ ಆತ್ಮನ ಘಾತವನ್ನು ಮಾಡುತ್ತವೆ ಇವುಗಳ ಬಲೆಗೆ ಬಿದ್ದು, ನಮ್ಮ ಪರಮ ಪ್ರಕಾಶಮಾನವಾದ ಆತ್ಮವು ತನ್ನ ಸ್ವಸ್ವರೂಪಕ್ಕೆ ಮೋಸ ಹೊಂದುತ್ತಿದೆ ನಾನು ಮತ್ತು ಪರಮಾತ್ಮ ಇಬ್ಬರೂ ಜ್ಞಾನಲೋಚನರಾಗಿದ್ದೇವೆ ಪರಮಾತ್ಮ ಸ್ವರೂಪವನ್ನು ಹೊಂದಬೇಕೆಂದು ಇಚ್ಛಿಸುತ್ತಿದ್ದೇನೆ ಪರಮಾತ್ಮನಲ್ಲಿಯಂತೂ ಆತ್ಮಗುಣವು ಪ್ರಕಟ-

ವಾಗಿಯೇ ಇದೆ. ಆದರೆ ನನ್ನ ಆತ್ಮವು ಕರ್ಮದ ಭಾರದ ಕೆಳಗೆ ಅಡಗಿ ಹೋಗಿದೆ, ಗುಣಗಳ ದೃಷ್ಟಿಯಿಂದ ನಾನು ಹಾಗೂ ಪರಮಾತ್ಮನಲ್ಲಿ ಅಂತರವೆನ್ನುವದೇನೂ ಇಲ್ಲ. ನಮ್ಮಿಬ್ಬರಲ್ಲಿ ಒಬ್ಬರ ಶಕ್ತಿಯು ವ್ಯಕ್ತವಾಗಿದೆ. ಇನ್ನೊಬ್ಬರ ಶಕ್ತಿಯು ವ್ಯಕ್ತವಾಗಿಲ್ಲ ಇಷ್ಟೇ ಶಕ್ತಿವ್ಯಕ್ತಿಕೃತತ್ವದ ಭೇದ ಮಾತ್ರವಿದೆ ಕರ್ಮಕೃತ ಸಂತಾಪ ಹಾಗೂ ದಾಹಗಳು ನಾನು ಎಲ್ಲಿಯವರೆಗೆ ಜ್ಞಾನ ಸಮುದ್ರದಲ್ಲಿ ಮುಳುಗೇಳುತ್ತಿರುವದಿಲ್ಲವೋ ಅಲ್ಲಿಯ ವರೆಗೆ ತೊಂದರೆಯನ್ನು ಕೊಡುತ್ತಲೇ ಇದ್ದಾವು ನರಕ, ಪಶು, ದೇವ, ಮನುಷ್ಯ ಇವು ಕರ್ಮೋದಯಗಳಿಂದ ಪ್ರಾಪ್ತವಾಗುವ ಪರ್ಯಾಯಗಳಾಗಿವೆ. ಇವು ನಿಜವಾಗಿಯೂ ನನ್ನ ಸ್ವರೂಪಗಳಲ್ಲ ನಾನು ಸಿದ್ಧ ಸ್ವರೂಪ, ನಿರ್ವಿಕಾರ ಮತ್ತು ಅನಂತ ಜ್ಞಾನ, ಅನಂತ ದರ್ಶನ, ಅನಂತ ವೀರ್ಯ, ಅನಂತ ಸುಖ ಸ್ವರೂಪನಾಗಿದ್ದೇನೆ ಆದಕ್ಕಾಗಿ ನಾನೀಗ ಇಂದ್ರಿಯ ರೂಪದಲ್ಲಿರುವ ವಿಷ ವೃಕ್ಷವನ್ನು ಕಿತ್ತಿ ಒಗೆಯುವೆ. ನನ್ನ ನಿಜವಾದ ಸ್ವರೂಪವನ್ನು ಗುರುತಿಸಿ, ಅದರಲ್ಲಿಯೇ ತನ್ಮಯನಾಗುವೆ ಎಲ್ಲ ಇಚ್ಛೆಗಳನ್ನೂ ಇಲ್ಲದಂತೆ ಮಾಡಿ ಮೋಹರೂಪೀ ವಿಷವೃಕ್ಷವನ್ನು ಕಿತ್ತೆಸೆಯುವೆ ನನ್ನ ಸ್ವರೂಪದಲ್ಲಿ ನಾನು ನಿಶ್ಚಲನಾಗಿರುವೆ ಅನಾದಿ ಕಾಲದಿಂದಲೂ ಮೋಹವೆಂಬ ಉರುವಲು ನನ್ನ ಕುತ್ತಿಗೆಯನ್ನು ಒತ್ತಿ ಬಿಗಿದಿದೆ ಅದನ್ನು ನಾನೀಗ ಬಿಡಿಸಿಕೊಳ್ಳಬೇಕಾಗಿದೆ ಯಾರು ತಮ್ಮ ಸ್ವರೂಪವನ್ನು ತಿಳಿದುಕೊಳ್ಳುವದಿಲ್ಲವೋ ಅವರು ಪರಮಾತ್ಮನನ್ನಾದರೂ ಹೇಗೆ ತಿಳಿದಾರು? ಅಂತಲೇ ಜ್ಞಾನವಂತನಾದ ಪುರುಷನಿಗೆ ಎಲ್ಲಕ್ಕೂ ಮೊದಲು ತನ್ನ ಸ್ವರೂಪವನ್ನು ಅರಿತುಕೊಳ್ಳುವ ಕಾರ್ಯವು ಮುಖ್ಯವಾಗಿದೆ ಯಾರು ತನ್ನ ಸ್ವರೂಪವನ್ನೇ ತಾನು ತಿಳಿದುಕೊಳ್ಳುವದಿಲ್ಲವೋ ಅವರಲ್ಲಿ ಸ್ಥಿರತೆಯಾದರೂ ಹೇಗೆ ಉಂಟಾದೀತು? ಇನ್ನೊಂದು, ಈ ಆತ್ಮನು ಅನಾದಿ ಕಾಲದಿಂದಲೂ ಪುದ್ಗಲವನ್ನು ಹೊಂದಿ ನಿಂತಿದ್ದಾನೆ, ಏಕರೂಪವಾದಂತೆ ಕಾಣುತ್ತಿದ್ದಾನೆ, ಆದರೆ ನಿಜವಾಗಿಯೂ ಅದು ಹಾಗಿಲ್ಲ ಸ್ವತಂತ್ರವಾಗುವಂತೆ ಇದೆ ಈ ಭೇದವಿಜ್ಞಾನವಾದರೂ ನನಗೆ ಎಂದು ಪ್ರಾಪ್ತವಾದೀತು? ಇದು ಲಭಿಸದ ಹೊರತಾಗಿ ಆತ್ಮಲಾಭವಾದರೂ ಹೇಗಾದೀತು? ಆತ್ಮಲಾಭವನ್ನುಳಿದು ಅನಂತ ಜ್ಞಾನಾದಿ ಆತ್ಮನ ಗುಣಗಳೂ ಅವುಗಳ ಅರಿವೂ ಹೇಗೆ ಉಂಟಾದವು? ಇಷ್ಟು ಸಂಗತಿಗಳೂ ತಿಳಿಯದ ಹೋದರೆ ಆತ್ಮಲಾಭದ ಮಾತಾದರೂ ಏತಕ್ಕೆಬೇಕು? ಅದಕ್ಕಾಗಿ ಮೋಕ್ಷಾಭಿಲಾಷಿಯಾದ ಪುರುಷನಿಗೆ ಪುದ್ಗಲದ ಎಲ್ಲ ಪರ್ಯಾಯಗಳು ಆತ್ಮನಿಂದ ಭಿನ್ನವಾಗಿವೆ, ಎಂಬುದರಲ್ಲಿ ಸಂಪೂರ್ಣ ಶ್ರದ್ಧೆಯು ಇರಲಿಕ್ಕೆಬೇಕು ಅಲ್ಲದೆ ಆತ್ಮನು ಸರ್ವ ಸ್ವತಂತ್ರನೆಂಬುದನ್ನೂ ತಿಳಿದುಕೊಂಡಿರಬೇಕು "

**ಬಹಿರಾತ್ಮನ ಸ್ವರೂಪ**—ಜೀವಿಗಳಲ್ಲಿ ಮೂರು ಪ್ರಕಾರಗಳು ಇರುತ್ತವೆ. ಬಹಿರಾತ್ಮಾ, ಅಂತರಾತ್ಮಾ ಮತ್ತು ಪರಮಾತ್ಮಾ ಇವರಲ್ಲಿ ಯಾರಿಗೆ ಬಾಹ್ಯ ಶರೀರಾದಿ ಪುದ್ಗಲ ಪರ್ಯಾಯಗಳಲ್ಲಿ ಆತ್ಮಬುದ್ಧಿಯು ಇರುವದೋ ಅವರಿಗೆ ಬಹಿರಾತ್ಮರೆನ್ನುವರು. ಯಾರಲ್ಲಿ ಮೋಹರೂಪೀ ನಿದ್ರೆಯಿಂದ ಚೈತನ್ಯವು ಅಸ್ತವಾಗಿರುವದೋ ಅವರು ತಮ್ಮ ಪರ್ಯಾಯಕ್ಕೇನೇ ತಮ್ಮ ಸ್ವರೂಪವೆಂದು ತಿಳಿಯುತ್ತಾರೆ ಇವರ ಪ್ರವೃತ್ತಿಯು ಯಾವಾಗಲೂ ಇಂದ್ರಿಯಗಳಿಗೆ ಅನುಸರಿಸಿಯೇ ನಡೆಯುತ್ತಿರುತ್ತದೆ ಅವರಿಗೆ ತಮ್ಮ ಸ್ವರೂಪವು ಇದ್ದಕ್ಕಿದ್ದಂತೆ ಕಾಣುವದಿಲ್ಲ ಅವರು ಶರೀರಕ್ಕೇನೇ ಆತ್ಮನೆಂದು ತಿಳಿಯುತ್ತಾರೆ ದೇವ ಪರ್ಯಾಯದಲ್ಲಿ ಉತ್ಪನ್ನವಾದಾಗ ದೇವ, ನರಕಗತಿಯಲ್ಲಿ ಉತ್ಪನ್ನವಾದಾಗ ನಾರಕಿ, ತಿರ್ಯಂಚಗತಿಯಲ್ಲಿ ಜನಿಸಿದಾಗ ತಾವು ಸ್ವತಃ ತಿರ್ಯಂಚ ಮತ್ತು ಮನುಷ್ಯರಾಗಿ ಹುಟ್ಟಿದಾಗ ಮಾನವ ಎಂದು ತಿಳಿದು ಬಾಳುತ್ತಾರೆ ಅಲ್ಲದೆ ಈ ಪರ್ಯಾಯಗಳ ಪೋಷಣದಲ್ಲಿಯೇ ಯಾವಾಗಲೂ ಮಗ್ನರಾಗಿರುತ್ತಾರೆ. ಈ ಪರ್ಯಾಯಗಳು ಕರ್ಮದಿಂದ ಉತ್ಪನ್ನವಾಗಿದ್ದು, ಅವು ಪ್ರತ್ಯಕ್ಷ ಜ್ಞಾನದರ್ಶನಮಯನಾದ ಆತ್ಮನಿಂದ ಭಿನ್ನವಾಗಿವೆ. ಇದು ಸ್ಪಷ್ಟವಾಗಿ ಕಾಣಿಸುತ್ತಿದ್ದರೂ ಕೂಡ ಕರ್ಮದಿಂದ [illegible] ಇವನ್ನೇ ತನ್ನ ಸ್ವರೂಪವೆಂದು ತಿಳಿದು, ಪರ್ಯಾಯಗಳಲ್ಲಿ ತನ್ಮಯನಾಗಿ ಇರುತ್ತಾನೆ ನಾನು ಕೆಂಪು, ನಾನು ಕಪ್ಪು, ನಾನು [illegible], ನಾನು ಅನ್ಯವರ್ಣದವನು, ನಾನು ರಾಜಾ, ನಾನು ಬಡವ ನಾನು ಒಡೆಯ, ನಾನು ಸೇವಕ, ನಾನು ಬಲವಂತ, ನಾನು ನಿರ್ಬಲ, ನಾನು ಬ್ರಾಹ್ಮಣ, ನಾನು ಕ್ಷತ್ರಿಯ, ನಾನು ವೈಶ್ಯ, ನಾನು ಶೂದ್ರ, ನಾನು ಕೊಳ್ಳುವವ, ನಾನು [illegible] ಕೊಡುವವ, ನಾನು ಸಿರಿವಂತ, ನಾನು ದಾನಶೂರ ನಾನು ತ್ಯಾಗಿ, ನಾನು ಗೃಹಸ್ಥ, ನಾನು ಮುನಿ, ನಾನು [illegible], ನಾನು ದೀನ, ನಾನು ಅನಾಥ, ನಾನು ಸನಾಥ, ನಾನು ಅಸಮರ್ಥ, ನಾನು [illegible], ನಾನು [illegible], ನಾನು ಸುರೂಪ, ನಾನು ಕುರೂಪ, ನಾನು ಪುರುಷ, ನಾನು ಸ್ತ್ರೀ, ನಾನು ನಪುಂಸಕ, ನಾನು [illegible] ನಾನು [illegible] ಇತ್ಯಾದಿ ಕರ್ಮದ ಉದಯದಿಂದ ಪ್ರಾಪ್ತವಾಗುವ ಪರ ಪುದ್ಗಲದ ವಿಕಾರಿ ಅವಸ್ಥೆಗಳನ್ನು ತನ್ನದೆಂದು ತಿಳಿದು.

ವವನು ಬಹಿರಾತ್ಮನೆನಿಸುವ ಮಿಥ್ಯಾದೃಷ್ಟಿ ಜೀವವೆಂದು ತಿಳಿಯಬೇಕು ಶರೀರದ ವಿಷಯದಲ್ಲಿ ಇಂಥ ಆತ್ಮಬುದ್ಧಿಯು ಉತ್ಪನ್ನವಾಗುವುದರಿಂದ ಶರೀರದೊಡನೆ ಸಂಬಂಧವುಳ್ಳ ಸ್ತ್ರೀ–ಪುತ್ರ, ಮಿತ್ರ, ಶತ್ರು ಮೊದಲಾದವರಲ್ಲಿ ರಾಗ–ದ್ವೇಷ ಮೋಹ ಕ್ಲೇಶಾದಿಗಳು ಉತ್ಪನ್ನವಾಗುತ್ತವೆ ಆದರಿಂದ ಆರ್ತರೌದ್ರ ಪರಿಣಾಮಗಳಲ್ಲಿ ಮರಣವು ಪ್ರಾಪ್ತವಾಗಿ ಸಂಸಾರದಲ್ಲಿ ಅನಂತ ಕಾಲದ ವರೆಗೆ ಜನ್ಮ ಮರಣದ ಚಕ್ರದಲ್ಲಿ ಸುತ್ತಬೇಕಾಗುತ್ತದೆ ಈ ಪುದ್ಗಲ ಪರ್ಯಾಯ-ದೊಳಗಿನ ಆತ್ಮಬುದ್ಧಿಯು ಪುದ್ಗಲದಲ್ಲಿ ಮತ್ತು ಏಕೇಂದ್ರಿಯಗಳಲ್ಲಿ ಅನಂತಕಾಲ ಭ್ರಮಣ ಮಾಡಿಸುತ್ತದೆ ಅಂತಲೇ ಈ ಬಹಿರಾತ್ಮ ಬುದ್ಧಿಯನ್ನು ತ್ಯಜಿಸಿ ಅಂತರಾತ್ಮನನ್ನು ಅವಲಂಬಿಸಬೇಕು ಮೇಲಾಗಿ ಪರಮಾತ್ಮ ಪದವು ಪ್ರಾಪ್ತ-ವಾಗುವಂತೆ ಪ್ರಯತ್ನಿಸಬೇಕು

ಅಂತರಾತ್ಮದ ಸ್ವರೂಪ— ಈ ಜಗತ್ತಿನಲ್ಲಿ ಯಾವ ಯಾವ ರೂಪವು ಕಣ್ಣಿಗೆ ಕಾಣಿಸುವುದೋ ಅದೆಲ್ಲ ಆತ್ಮ ಸ್ವಭಾವದಿಂದ ಭಿನ್ನವಾಗಿದೆ ಅದು ಪರದ್ರವ್ಯವಾಗಿದ್ದು, ಜಡವೂ ಅಚೇತನವೂ ಆಗಿದೆ ನಾನು ಜ್ಞಾನಸ್ವರೂಪಿ-ಯಾಗಿದ್ದು, ಇಂದ್ರಿಯಗಳಿಂದ ತಿಳಿಯಲ್ಪಡುವದಿಲ್ಲ. ನನ್ನ ಸ್ವರೂಪವನ್ನು ಸ್ವಾನುಭವದಿಂದಲೇ ತಿಳಿಯಲಿಕ್ಕೆ ಸಾಧ್ಯವಿದೆ ಇನ್ನೊಬ್ಬರಿಂದ ನಾನು ತಿಳಿದುಕೊಳ್ಳಲಿಕ್ಕೆ ಯೋಗ್ಯನಿದ್ದೇನೆ, ಇಲ್ಲವೆ ಇನ್ನೊಬ್ಬರಿಗೆ ನಾನು ತಿಳಿಸಿ ಕೊಡಲಿಕ್ಕೆ ಸಮರ್ಥನಿದ್ದೇನೆ; ಇಂಥ ವಿಕಲ್ಪಗಳನ್ನು ಮನಸ್ಸಿನಲ್ಲಿ ತರುವುದೇ ಮೂಲದಲ್ಲಿ ಭ್ರಮಾತ್ಮಕವಾಗಿದೆ ಸ್ವತಃ ತಿಳಿಯದ ಹೊರತಾಗಿ ಯಾರು ಯಾರಿಗೆ ಹೇಗೆ ತಿಳಿಸಿ ಕೊಡಬಲ್ಲರು? ನಾನಂತೂ ಸಂಪೂರ್ಣ ವಿಕಲ್ಪರಹಿತನೂ ಜ್ಞಾತೃವೂ ಆಗಿರುವೆ ತನ್ನ ಸ್ವರೂಪವನ್ನು ಯಾವನು ತಾನೇ ತಿಳಿದುಕೊಳ್ಳುವನೋ ಮತ್ತು ತನ್ನನ್ನುಳಿದು ಇನ್ನೊಂದನ್ನು ತನ್ನ ಸ್ವರೂಪದವೆಂದು ಯಾವನು ತಿಳಿಯುವದಿಲ್ಲವೋ ಆ ಸ್ವಸಂವೇದನ ರೂಪ ಜ್ಞಾನವು ಆತ್ಮನಿಗೇನೇ ಉಂಟಾಗುತ್ತಿರುತ್ತದೆ ಕತ್ತಲೆಯಲ್ಲಿ ಹಗ್ಗವನ್ನು ನೋಡಿ ಅದು ಹಾವೆಂಬ ಜ್ಞಾನವು ಆದಲ್ಲಿ ಆದರಿಂದ ಭಯವು ಉತ್ಪನ್ನವಾಗುತ್ತದೆ ಅಲ್ಲದೆ ಮರಣದ ಅಂಜಿಕೆಯಿಂದ ಅದರಿಂದ ದೂರ ಓಡಿಯೂ ಹೋಗಬೇಕಾಗುತ್ತದೆ ಈ ಕ್ರಿಯೆಗಳೆಲ್ಲ ಕೇವಲ ಭ್ರಮಾತ್ಮಕವಾಗಿವೆ ಇದೇ ಪ್ರಕಾರ ನಮಗೂ ಕೂಡ ಪೂರ್ವಕಾಲದಲ್ಲಿ ಶರೀರ ಮೊದಲಾದವು-ಗಳ ವಿಷಯದಲ್ಲಿ ಆತ್ಮಬುದ್ಧಿಯು ಇತ್ತು ಶರೀರದ ನಾಶವೇ ತನ್ನ ನಾಶವೆಂದು ತಿಳಿಯುತ್ತಿದ್ದೆವು. ಅದರಿಂದ ಅನೇಕ ವಿಪರೀತ ಕ್ರಿಯೆಗಳನ್ನು ಮಾಡುತ್ತಿದ್ದೆವು ಈಗ ಯಾವ ಪ್ರಕಾರ ಹಗ್ಗದ ವಿಷಯದಲ್ಲಿದ್ದ ಹಾವಿನ ಭ್ರಮವು ನಷ್ಟವಾಗಿ ಹಗ್ಗಕ್ಕೆ ಹಗ್ಗವೆಂದೇ ತಿಳಿದೆವು, ಅದರಿಂದ ಭ್ರಮವು ಇಲ್ಲದಂತಾಯಿತು, ಹಾಗೆಯೇ ಶರೀರದೊಳಗಿನ ಆತ್ಮತ್ವ ಭಾವನೆಯು ನಷ್ಟವಾಗುವುದರಿಂದ ಈಗ ಆಚರಣೆಯೊಳಗಿನ ಭ್ರಮೆಯೂ ಇಲ್ಲದಂತಾಗಿದೆ. ಇದರ ಜ್ಞಾನವು ಇಲ್ಲಿಯ ವರೆಗೆ ಇಲ್ಲದುದರಿಂದ ಇಷ್ಟು ದಿನ ನಿದ್ರೆಯಲ್ಲಿದ್ದೆವು ಈಗ ಅದರ ಜ್ಞಾನವು ನಮಗಾದುದರಿಂದ ನಾವು ಜಾಗೃತರಾದಂತಾಯಿತು ಆ ಚೈತನ್ಯಮಯನು ನಾನು ಈ ಜ್ಞಾನ ಜ್ಯೋತಿ ಸ್ವರೂಪಿಯಾದ ನನ್ನ ಸ್ವರೂಪ-ವನ್ನು ಕಾಣುವ ನನ್ನ ರಾಗದ್ವೇಷಗಳು ನಷ್ಟವಾಗಿವೆ ಈಗ ನನಗೆ ಯಾರೂ ಶತ್ರುಗಳೂ ಮಿತ್ರರೂ ಉಳಿದಿಲ್ಲ. ಜ್ಞಾನದಲ್ಲಿ ರಾಗ–ದ್ವೇಷಗಳ ವಿಕಾರವು ಉತ್ಪನ್ನವಾದಲ್ಲಿ ಶತ್ರು ಹಾಗೂ ಮಿತ್ರರು ಕಾಣ ಹತ್ತುತ್ತಾರೆ ಯಾರು ನನ್ನ ಜ್ಞಾಯಕ ಆತ್ಮ ಸ್ವರೂಪವನ್ನು ತಿಳಿದಿಲ್ಲವೋ ಅವರು, ಇಲ್ಲವೆ ಯಾರು ನನ್ನ ಸ್ವರೂಪವನ್ನು ಪ್ರತ್ಯಕ್ಷ ತಿಳಿದಿರುವರೋ ಅವರು, ಇವರಲ್ಲಿ ಯಾರೂ ನನ್ನ ವೈರಿಯೂ ಅಲ್ಲ, ಮಿತ್ರನೂ ಅಲ್ಲ ಸ್ವಸ್ವರೂಪದ ಜ್ಞಾನವಾದಂಥ ನನಗೆ ಈಗ ಮೊದಲಿನ ಎಲ್ಲ ಆಚರಣೆಗಳೂ ಸ್ವಪ್ನ ಇಲ್ಲವೆ ಇಂದ್ರಜಾಲದಂತೆ ಸುಳ್ಳೆಂದು ತೋರುತ್ತಿವೆ ಜ್ಞಾನೀ ಪುರುಷರ ಅಲೌಕಿಕ ಚಾರಿತ್ರವನ್ನು ವರ್ಣಿಸಲಿಕ್ಕೆ ಯಾರು ಸಮರ್ಥರಿದ್ದಾರೆ? ಇಲ್ಲಿ ಅಜ್ಞಾನೀ ಜೀವಗಳು ತಮ್ಮ ಪ್ರವೃತ್ತಿಯಿಂದ ಕರ್ಮಬಂಧನವನ್ನು ಮಾಡಿಕೊಳ್ಳುತ್ತವೆ ಜಗತ್ತಿನಲ್ಲಿ ಪದಾರ್ಥಗಳು ಹೇಗಿರುವವೋ ಹಾಗೆಯೇ ಅನಾದಿ ಕಾಲ-ದಿಂದಲೂ ಇವೆ, ಮುಂದೆಯೂ ಇರುತ್ತವೆ, ಇದರಲ್ಲಿ ಏನೂ ವ್ಯತ್ಯಾಸವಾಗುವದಿಲ್ಲ. ಆದರೆ ಅಜ್ಞಾನೀ ಜೀವಗಳು ಈ ವಿಷಯದಲ್ಲಿ ವಿಪರೀತ ಭಾವನೆಯನ್ನು ಮಾಡಿಕೊಂಡು ರಾಗ–ದ್ವೇಷ ಮೋಹ ಇತ್ಯಾದಿ ವಿಕಾರಗಳನ್ನು ಉತ್ಪನ್ನ ಮಾಡಿಕೊಳ್ಳುತ್ತವೆ ಅದರಿಂದ ಅವಕ್ಕೆ ಕರ್ಮದ ಬಂಧವಾಗುತ್ತದೆ. ಜ್ಞಾನೀ ಪುರುಷನು ಪದಾರ್ಥದ ಸತ್ಯ ಸ್ವರೂಪವನ್ನೂ ತಿಳಿಯುವನು ಪರಮ ಸೌಮ್ಯಭಾವವನ್ನು ಧಾರಣ ಮಾಡುವನು ರಾಗದ್ವೇಷ ರಹಿತ ಪ್ರವೃತ್ತಿಯುಳ್ಳವನಾಗುವನು ಅಂತಲೇ ಅವನಿಗೆ ಕರ್ಮಬಂಧವು ಇಲ್ಲ ತಿರುಗಿ ಕರ್ಮದ ನಿರ್ಜರೆಯೇ ಆಗುತ್ತ ಹೋಗುತ್ತದೆ ನಾನು ಚಿರಕಾಲದಿಂದಲೂ ಸಂಸಾರ ರೂಪೀ ವನದಲ್ಲಿ ದುಃಖ ಭೋಗಿಸುತ್ತಿರುವೆನು ಇದಕ್ಕೆ ಮುಖ್ಯ ಕಾರಣವು ಸ್ವ–ಪರ ವಿಜ್ಞಾನದ ಭೇದವನ್ನು ಕಾಣದೆ ಇರುವುದೇ ಆಗಿದೆ ಎಲ್ಲ ಪದಾರ್ಥವನ್ನೂ ಪ್ರಕಾಶ-

ಗೊಳಿಸುವಂಥ ಭೇದ ವಿಜ್ಞಾನ ರೂಪದ ದೀಪಕವು ಪ್ರಜ್ವಲಿತವಾದಾಗ ಮೂಢ ಜನರು ಸಂಸಾರ ರೂಪೀ ಕೆಸರಿನಲ್ಲಿ ಸಿಕ್ಕು ಒದ್ದಾಡುತ್ತಿರುವುದು ಆಶ್ಚರ್ಯದ ಸಂಗತಿಯಾಗಿದೆ

ನಮ್ಮ ಸ್ವರೂಪವು ನಮ್ಮಲ್ಲಿಯೇ ಇದ್ದು, ನಮಗೆ ಅದರ ಅನುಭವವು ಬರುವದಿದೆ ಇದನ್ನರಿಯದೆ ಇನ್ನೊಬ್ಬರಲ್ಲಿ ತನ್ನ ಸ್ವರೂಪವನ್ನು ನೋಡುವ ಪ್ರಯತ್ನ ಮಾಡುವುದು ವ್ಯರ್ಥವಾಗಿದೆ ಅಜ್ಞಾನೀ ಪುರುಷನಿಗೆ ಯಾವುದರ ಮೇಲೆ ಪ್ರೀತಿಯನ್ನು ಮಾಡಬೇಕೆಂದು ಎನಿಸುವದೋ ಆ ಪ್ರತಿಯೊಂದು ವಸ್ತುವಿನಿಂದಲೂ ಅವನಿಗೆ ದುಃಖವು ಆಗುತ್ತಿರುತ್ತದೆ, ಯಾವ ವಸ್ತುವಿನಿಂದ ನಿಜವಾದ ಆನಂದವು ಆಗುವುದೋ ಅದನ್ನಂತೂ ಅಜ್ಞಾನಿಗಳು ಎಂದೂ ಪ್ರೀತಿಸ ಹೋಗುವದಿಲ್ಲ. ಪದಾರ್ಥಗಳ ಸ್ವರೂಪದ ಜ್ಞಾನದ ವಿಷಯದಲ್ಲಿರುವ ಭ್ರಮೆಯೇ ಬಂಧಕ್ಕೆ ಕಾರಣವಾಗಿದೆ, ಮತ್ತು ಪದಾರ್ಥಗಳ ಜ್ಞಾನದ ವಿಷಯದಲ್ಲಿ ಭ್ರಮವು ಇಲ್ಲದೆ ಇರುವುದೇ ಮೋಕ್ಷಕ್ಕೆ ಕಾರಣವಾಗಿದೆ ಬಂಧವು ಪರದ್ರವ್ಯದ ಸಂಬಂಧದಿಂದ ಆಗಿದೆ ಪರದ್ರವ್ಯದಿಂದ ಆತ್ಮನು ಭಿನ್ನನಾಗಿದ್ದಾನೆಂಬ ಭೇದ ವಿಜ್ಞಾನದ ಅಭ್ಯಾಸ ಮಾಡುವುದೇ ಮೋಕ್ಷಪ್ರಾಪ್ತಿಯ ಮಾರ್ಗವಾಗಿದೆ

ಭೇದ ವಿಜ್ಞಾನದ ಚಿಂತನೆಯನ್ನು ಮಾಡಿರಿ. ಯಾವ ಮನುಷ್ಯನು ಇಂದ್ರಿಯ ನಿಗ್ರಹವನ್ನು ಮಾಡಿ ಕ್ಷಣಮಾತ್ರವಾದರೂ ತನ್ನ ಮನಸ್ಸನ್ನು ಆತ್ಮನ ವಿಚಾರ ಮಾಡುವುದರ ಕಡೆಗೆ ಹಚ್ಚುವನೋ ಅವನಿಗೆ ಪರಮೇಷ್ಠಿ ಸ್ವರೂಪದ ಜ್ಞಾನವಾಗುತ್ತದೆ ಅದು ಹೀಗಿದೆ "ಯಾವನು ಸಿದ್ಧಾತ್ಮನೋ ಅವನೇ ನಾನು ಯಾವನು ಪರಮೇಶ್ವರನೋ ಅವನೇ ನಾನು ಅದಕ್ಕಾಗಿ ನನ್ನ ಸ್ವರೂಪವನ್ನು ಉಳಿದು ಇನ್ನೊಬ್ಬರ ಸ್ವರೂಪವನ್ನು ಸ್ಮರಿಸುವ ಅವಶ್ಯಕತೆಯು ಇಲ್ಲ ನನ್ನನ್ನುಳಿದು ಇನ್ನೊಬ್ಬರು ಉಪಾಸನೆ ಮಾಡಿಕೊಳ್ಳಲಿಕ್ಕೆ ಯೋಗ್ಯರಿಲ್ಲ ಅದರಂತೆ ನಾನೂ ಯಾರ ಕಡೆಯಿಂದಲೂ ಉಪಾಸ್ಯನಿಲ್ಲ. ಶರೀರದಿಂದ ಯಾವನು ಆತ್ಮನು ಭಿನ್ನನಾಗಿರುವನೆಂದು ಬಾವಿಸುವದಿಲ್ಲವೋ, ಅವನು ತೀವ್ರ ತಪವನ್ನು ಮಾಡುತ್ತಿದ್ದರೂ ಸಹ ಕರ್ಮ ಬಂಧನದಿಂದ ಮುಕ್ತನಾಗುವದಿಲ್ಲ ಯಾರಿಗೆ ಭೇದ ವಿಜ್ಞಾನ ರೂಪಿಯಾದ ಅಮೃತವನ್ನು ಸೇವಿಸುವ ಆನಂದವು ಲಭಿಸಿರುವದೋ ಅವರು ತೀವ್ರ ತಪಸ್ಸನ್ನು ಮಾಡುತ್ತಿದ್ದು, ಶರೀರಕ್ಕೆ ಉತ್ಪನ್ನವಾಗುವ ದುಃಖದಿಂದ ಅವನೆಂದೂ ನೊಂದುಕೊಳ್ಳುವದಿಲ್ಲ"

ಚಿತ್ತವಿಕಲ್ಪವಿಲ್ಲದಂತೆ ಮಾಡಿರಿ. ಯಾರ ಅಂತಃಕರಣವು ರಾಗ-ದ್ವೇಷಾದಿ ಮಲಗಳಿಂದ ಅಲಿಪ್ತ-ವಾಗಿರುವುದೋ ಅವರಿಗೆ ತಮ್ಮ ಸ್ವರೂಪವನ್ನು ಚೆನ್ನಾಗಿ ಅರಿತುಕೊಳ್ಳಲಿಕ್ಕೆ ಶಕ್ಯವಿದೆ. ಉಳಿದ ಯಾವ ರೀತಿಯಿಂದಲೂ ತಿಳಿಯಲು ಸಾಧ್ಯವಿಲ್ಲ. ತನ್ನ ಅಂತಃಕರಣವನ್ನು ವಿಕಲ್ಪರಹಿತ ಮಾಡುವುದೇ ಮುಖ್ಯ ಕರ್ತವ್ಯವಾಗಿದೆ ಇದಕ್ಕೆ ವಿರೋಧವಾಗಿ ಅನೇಕ ವಿಕಲ್ಪಗಳಿಂದ ಚಿತ್ತವನ್ನು ವ್ಯಾಕುಲಗೊಳಿಸುವುದು ಅನರ್ಥಕಾರಿಯಾಗಿದೆ ಅಂತಲೇ ಸಮ್ಯಕ್ತ್ವವನ್ನು ಸಾಧಿಸುವದಕ್ಕಾಗಿ ಚಿತ್ತವನ್ನು ವಿಕಲ್ಪ ಇಲ್ಲದಂತೆ ಮಾಡಿರಿ. ಯಾವನು ಅಜ್ಞಾನದಿಂದ ತನ್ನ ಅಂತಃಕರಣದಲ್ಲಿ ಅನೇಕ ವಿಕಲ್ಪಗಳನ್ನು ಉಂಟುಮಾಡಿಕೊಳ್ಳುವನೋ ಅವನು ಸ್ವಸ್ವರೂಪದಿಂದ ಪರಾಙ್ಮುಖ-ನಾಗುವನು, ಯಾವನು ಭೇದವಿಜ್ಞಾನವನ್ನು ತನ್ನ ಮನಸ್ಸಿನಲ್ಲಿ ಜಾಗೃತವಾಗಿ ಇಟ್ಟುಕೊಂಡಿರುವನೋ ಅವನು ಪರಮಾತ್ಮ ತತ್ತ್ವವನ್ನು ಸಾಕ್ಷಾತ್ ಕಾಣುವನು ಉತ್ತಮ ಪುರುಷನ ಅಂತಃಕರಣವು ಒಮ್ಮೆ ಮೋಹ ಕರ್ಮದ ವಶವಾಗಿ ರಾಗ-ದ್ವೇಷಗಳಿಂದ ಕೂಡಿದ್ದಾದರೆ ಅವನನ್ನು ಆತ್ಮ ಚಿಂತನೆಯ ಕಡೆಗೆ ಪ್ರವೃತ್ತಗೊಳಿಸಿ, ರಾಗ-ದ್ವೇಷಗಳ ಬಗ್ಗೆ ತಿರಸ್ಕಾರವನ್ನು ಹುಟ್ಟಿಸಬೇಕು

ಜ್ಞಾನೀ ಮತ್ತು ಅಜ್ಞಾನೀ ಜೀವಗಳಲ್ಲಿಯ ವಿಚಾರಗಳಲ್ಲಿರುವ ವ್ಯತ್ಯಾಸ—ಅಜ್ಞಾನೀ ಜೀವವು ಯಾವ ಶರೀರದ ಮೇಲೆ ಪ್ರೇಮ ಮಾಡಿದೆಯೋ ಆ ಶರೀರದ ಮೇಲಿನ ಮೋಹವನ್ನು ನಮ್ಮ ಬುದ್ಧಿಯ ಬಲದಿಂದ ಕಡಿಮೆ ಮಾಡಿ ಚಿದಾನಂದ ನಿಜ ಸ್ವರೂಪದ ಕಡೆಗೆ ಪ್ರವೃತ್ತಗೊಳಿಸುವುದೇ ಉತ್ತಮ ಪುರುಷನ ಆದ್ಯ ಕರ್ತವ್ಯವಾಗಿದೆ. ತನ್ನ ಭ್ರಮದಿಂದಲೇ ಉತ್ಪನ್ನವಾದಂಥ ದುಃಖವು ಆತ್ಮಜ್ಞಾನದ ಯಥಾರ್ಥ ತಿಳುವಳಿಕೆಯಿಂದಲೇ ಇಲ್ಲದ ಹಾಗೆ ಆಗುವದಿದೆ. ಆತ್ಮಜ್ಞಾನರಹಿತ ಪುರುಷನ ಪರಿಭ್ರಮಣವು ಎಷ್ಟು ತಪಸ್ಸನ್ನು ಆಚರಿಸಿದರೂ ನಷ್ಟವಾಗುವದಿಲ್ಲ ಬಹಿರಾತ್ಮನಾದವನು ತನ್ನ ರೂಪ, ಆಯುಷ್ಯ, ಬಲ, ಧನ, ಸಂಪತ್ತು ಮೊದಲಾದವುಗಳು ಇರಬೇಕೆಂದು ಇಚ್ಛಿಸುತ್ತಾನೆ ಅಂತರಾತ್ಮಾ ಜೀವವು ಇವುಗಳಿಗೆ ವಿರೋಧವಾಗಿ ಇವೆಲ್ಲ ತನ್ನಿಂದ ದೂರವಾಗಬೇಕೆಂದು ಬಯಸುತ್ತಾನೆ ಅಜ್ಞಾನಿ ಜೀವಗಳು ಪುದ್ಗಲಾದಿ ಪರಪದಾರ್ಥಗಳು ತಮ್ಮವಾಗಿವೆಯೆಂದು ತಿಳಿದು ಕರ್ಮಬಂಧವನ್ನು ಮಾಡಿಕೊಳ್ಳುತ್ತವೆ ಆದರೆ ಅಂತರಾತ್ಮನೆನಿಸುವ ಜ್ಞಾನೀ ಜೀವವು ತನ್ನ ಯಥಾರ್ಥ ಸ್ವರೂಪವನ್ನು ತಿಳಿದುಕೊಂಡು,

ಆದರ ವಿಷಯದಲ್ಲಿ ಆತ್ಮ ಬುದ್ಧಿಯನ್ನು ಇಟ್ಟುಕೊಂಡು ಇರುವುದರಿಂದ ಕರ್ಮಬಂಧದಿಂದ ಮುಕ್ತನಾಗುತ್ತಾನೆ ಅಜ್ಞಾನಿಗಳು ಪುರುಷಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳನ್ನು ತಮ್ಮ ಸ್ವರೂಪವೆಂದು ತಿಳಿಯುತ್ತಾರೆ ಜ್ಞಾನಿಯು ಈ ಮೂರು ಲಿಂಗಗಳಿಂದ ವಿರಹಿತವಾಗಿ ತನ್ನ ಸ್ವರೂಪವಿದೆಯೆಂದು ನಂಬುತ್ತಾನೆ. ಚಿರಕಾಲ ಅಭ್ಯಾಸಮಾಡಿ ನಿರ್ಣಯ ಮಾಡಿದಂಥ ಜ್ಞಾನವು ಅನಾದಿಕಾಲದ ಭ್ರಮೆಯಿಂದ ಆ ಕಾಲದಲ್ಲಿ ಇಲ್ಲದಂತೆ ಆಗುತ್ತದೆ ನಾವು ಯಾವ ಈ ಸಾಕ್ಷಾತ್ ರೂಪಗಳನ್ನು ಕಾಣುತ್ತೇವೆಯೋ ಅವೆಲ್ಲ ಅಚೇತನ ಪದಾರ್ಥಗಳಾಗಿವೆ ಚೇತನವು ನಮ್ಮ ದೃಷ್ಟಿಗೇ ಬೀಳುವದಿಲ್ಲ. ಅದಕ್ಕಾಗಿ ಅಚೇತನ ಪದಾರ್ಥಗಳ ವಿಷಯದಲ್ಲಿ ಪ್ರೇಮಮಾಡುವುದು ವ್ಯರ್ಥವಾಗಿದೆ ಇದಕ್ಕಿಂತ ನಾವು ಸ್ವಾನುಭವಗಮ್ಯ ಪ್ರತ್ಯಕ್ಷ ಆತ್ಮನನ್ನೇ ಆಶ್ರಯಿಸುವುದು ನೆಟ್ಟಗೆ. ಅಜ್ಞಾನಿಯು ಬಾಹ್ಯ ಪದಾರ್ಥಗಳ ತ್ಯಾಗದ ಕಡೆಗೆ ಪ್ರವೃತ್ತನಾಗುತ್ತಾನೆ ಜ್ಞಾನಿಯು ಅಂತರಂಗದೊಳಗಿನ ಕಾಮಕ್ರೋಧರಾಗದ್ವೇಷಾದಿ ವಿಕಾರಗಳಿಗೆ ಪರಾಭವವೆಂದು ತಿಳಿದು ಅವುಗಳನ್ನು ತ್ಯಜಿಸಲಿಕ್ಕೆ ಉತ್ಸುಕನಾಗಿರುತ್ತಾನೆ ಹಾಗೆಯೇ ಅವನು ವಚನ, ಕಾಯ-ಗಳನ್ನುಳಿದು ಮನಃಪೂರ್ವಕವಾಗಿ ಆತ್ಮನ ವಿಚಾರವನ್ನು ಮಾಡುತ್ತಾನೆ ವಿಷಯಭೋಗಾದಿಗಳಲ್ಲಿಯ ಕೆಲವೊಂದು ಕರ್ಮಗಳನ್ನು ವಚನಗಳಿಂದಲೂ ಕೆಲವುಗಳನ್ನು ಕಾಯದಿಂದಲೂ ನೆರವೇರಿಸುತ್ತಾನೆ ವಿಷಯೋಪಭೋಗದ ಕಡೆಗೆ ತನ್ನ ಮನಸ್ಸನ್ನು ಹಚ್ಚುವದಿಲ್ಲ. ಅಜ್ಞಾನಿ ಜೀವಗಳಿಗೆ ಮಾತ್ರ ತಮ್ಮ ವಿಶ್ವಾಸ, ಆನಂದಗಳ ಸ್ಥಾನವು ದೇಹವೇ ಆಗಿರುತ್ತದೆ, ಈ ಪ್ರತ್ಯಕ್ಷ ಜಗತ್ತೇ ಆಗಿರುತ್ತದೆ. ಆದರೆ ಜ್ಞಾನಿಗಳಿಗೆ ಇದರ ಮೇಲೆ ವಿಶ್ವಾಸವಿರುವದಿಲ್ಲ ಅವರಿಗೆ ಅದರಲ್ಲಿ ಆನಂದವೂ ಎನಿಸುವದಿಲ್ಲ ಅವರಿಗೆ ತಮ್ಮ ಸ್ವರೂಪದಲ್ಲಿಯೇ ಆನಂದ ಮತ್ತು ವಿಶ್ವಾಸವೆನಿಸುತ್ತದೆ ಅವನು ಆತ್ಮಕಾರ್ಯವನ್ನುಳಿದು ಇತರ ಯಾವ ಕಾರ್ಯಕ್ಕೂ ಮಹತ್ವವನ್ನು ಕೊಡುವದಿಲ್ಲ ಹೀಗಿದ್ದೂ ಕೂಡ ಅವನಿಗೆ ವ್ಯವಹಾರದಲ್ಲಿ ಕೆಲವು ಕೆಲಸಗಳನ್ನು ಮಾಡಬೇಕಾಗುತ್ತದೆ ಆದರೆ ಅವುಗಳ ವಿಷಯದಲ್ಲಿ ಅವನಿಗೆ ಅನಾದರವೇ ಇರುತ್ತದೆ ಆ ಕಾರ್ಯಗಳನ್ನೂ ಅವನು ವಚನ ಹಾಗೂ ಕಾಯಗಳಿಂದ ಮಾತ್ರ ಮಾಡುತ್ತಾನೆ ವಾಸ್ತವಿಕವಾಗಿ ತನ್ನ ಅಂತಃಕರಣವನ್ನು ಅದರಲ್ಲಿ ತೊಡಗಿಸುವದಿಲ್ಲ ಅವನು ಮನಸ್ಸಿನಲ್ಲಿ ಹೀಗೆ ಭಾವಿಸುತ್ತಾನೆ.– ಈ ಇಂದ್ರಿಯಗಳ ವಿಷಯವು ನನ್ನ ಸ್ವರೂಪಕ್ಕಿಂತ ವಿಲಕ್ಷಣವಾಗಿವೆ ನನ್ನ ಸ್ವರೂಪವು ಆನಂದದಿಂದ ಪರಿಪೂರ್ಣ-ವಾಗಿದೆ ಜ್ಞಾನಜ್ಯೋತಿರ್ಮಯವಾಗಿದೆ. ನನಗಂತೂ ಅದರ ಯೋಗದಿಂದ ಭ್ರಮವು ಇಲ್ಲದಂತಾಗಿ ನನ್ನ ಸ್ಥಿತಿಯು ನನ್ನ ರೂಪದಲ್ಲಿ ಸ್ಥಿರವಾದೀತು. ಇದನ್ನೇ ತಿಳಿಯುವುದು ಯೋಗ್ಯವಾಗಿದೆ ಅದನ್ನೇ ಮಾಡುವುದು, ಅದಕ್ಕಾಗಿ ಅದನ್ನೇ ಚಿಂತಿಸುವುದು ಯೋಗ್ಯವಾಗಿದೆ. ಇಂದ್ರಿಯಗಳ ವಿಷಯವನ್ನು ಚಿಂತಿಸುವುದರಲ್ಲಿ ಆತ್ಮನ ಯಾವ ಪ್ರಕಾರದ ಹಿತವೂ ಇಲ್ಲ.

ಜ್ಞಾನಿಗಳೇ ಉಪದೇಶವನ್ನು ಗ್ರಹಣ ಮಾಡುವರು. ಬಹಿರಾತ್ಮರಾದ ಅಜ್ಞಾನಿ ಜೀವಗಳು ವಿಷಯಗಳನ್ನು ಪ್ರೀತಿಸುತ್ತಾರೆ ಮೇಲಿಂದ ಮೇಲೆ ಆತ್ಮ ತತ್ತ್ವದ ಸ್ವರೂಪವನ್ನು ಹೇಳುತ್ತಿದ್ದೂ ಕೂಡ ಅದನ್ನೆಂದೂ ಕೇಳದವರಂತೆ ಅದನ್ನು ಸ್ವೀಕರಿಸುವದಕ್ಕೆ ಪ್ರವೃತ್ತರಾಗುವದಿಲ್ಲ ಇಂಥ ಅಜ್ಞಾನಿ ಜೀವಗಳಿಗೆ ಅದನ್ನು ಹೇಳುವುದೂ ವ್ಯರ್ಥವಾಗಿದೆ. ಅಜ್ಞಾನಿ ಜೀವಗಳಿಗೆ ಆತ್ಮನ ಪ್ರಭಾವವು ತಿಳಿಯುವದಿಲ್ಲ ಅಂತಲೇ ಅವರು ಪರದ್ರವ್ಯಗಳಲ್ಲಿ ಸಂತೋಷಚಿತ್ತರಾಗಿರುತ್ತಾರೆ ಜ್ಞಾನಿಗಳು ಮಾತ್ರ ಬಾಹ್ಯ ವಸ್ತುವಿನ ಮೇಲೆ ಪ್ರೇಮವನ್ನು ಮಾಡದೆ ತಮ್ಮ ಯಥಾರ್ಥ ಸ್ವರೂಪವನ್ನು ತಿಳಿದು ಸ್ವಸ್ವರೂಪದಲ್ಲಿಯೇ ಸಂತುಷ್ಟರಾಗಿರುತ್ತಾರೆ ಮನ–ವಚನ–ಕಾಯಗಳೇ ತಮ್ಮ ಸ್ವಸ್ವರೂಪವೆಂದು ಯಾರು ಯಾರು ತಿಳಿಯುತ್ತಲಿರುವರೋ ಅವರೆಲ್ಲ ಸಂಸಾರ ಪರಿಭ್ರಮಣ ಮಾಡುವವರಾಗಿದ್ದಾರೆ ಇದರಲ್ಲಿ ಸಂಶಯವೇನೂ ಇಲ್ಲ ದೇಹಾದಿಗಳ ವಿಷಯದಲ್ಲಿ ಭೇದವಿಜ್ಞಾನವಾಗುವುದೇ ಸಂಸಾರದ ಅಭಾವಕ್ಕೆ ಕಾರಣವಾಗಿದೆ ಅರಿವೆಯು ಹಳೆಯದಾದೀತು, ಬೆಳ್ಳಗಾದೀತು, ಕೆಂಪೂ ಆದೀತು, ತಾಳಿಕೆಯೂ ಬಂದೀತು ಆದರೆ ಆತ್ಮನು ಇದರಂತೆ ಜೀರ್ಣರಕ್ತಾದಿ ರೂಪವನ್ನು ಹೊಂದಲಾರನು ಹಾಗೆಯೇ ದೇಹವು ಜೀರ್ಣವಾಯಿತೆಂದು ಆತ್ಮನು ಹಾಗಾಗುವದಿಲ್ಲ. ಅಜ್ಞಾನಿ ಜೀವಗಳಿಗೆ ನಾಶವಾಗುವಂಥ ಪರಮಾಣುಗಳು ಪರಸ್ಪರ ನೇರುವುದರಿಂದ ಶರೀರವು ರೂಪುಗೊಂಡಿದೆಯೆಂಬುದು ತಿಳಿಯದುದಕ್ಕೆ ಅವರು ಶರೀರವನ್ನೇ ಆತ್ಮವೆಂದು ಭಾವಿಸುತ್ತಾರೆ ಈ ಭ್ರಮವು ಅನಾದಿಕಾಲದಿಂದಲೂ ಅವರಲ್ಲಿ ಸ್ಥಿರವಾಗಿ ಇರುತ್ತದೆ ಈ ದೃಢತೆ, ಈ ಸ್ಥೂಲತ್ವ, ಈ ದೀರ್ಘತನ, ಈ ಜೀರ್ಣತ್ವ, ಈ ಶೀರ್ಣತ್ವ ಮೊದಲಾದ ಧರ್ಮಗಳೆಲ್ಲ ಪುದ್ಗಲದ ಗುಣಗಳಾಗಿವೆ ಮೂಲದಲ್ಲಿ ಇವು ಆತ್ಮನ ಧರ್ಮಗಳೇ ಅಲ್ಲ ಆತ್ಮನು ಕೇವಲಜ್ಞಾನ ಸ್ವರೂಪಿಯು. ಸಂಸಾರದಲ್ಲಿ ಆತ್ಮನ ಸಂಬಂಧವು ಮನುಷ್ಯತ್ವದೊಡನೆ ಬರುವುದರಿಂದ

ಶರೀರದ ಸಹವಾಸದಿಂದ ಅವನು ಮಾತನಾಡಲಿಕ್ಕೆ ಹತ್ತುವನು ಈ ಮಾತಿನಿಂದ ಮನಸ್ಸು ಚಂಚಲವಾಗುತ್ತದೆ. ಮನಸ್ಸು ಚಂಚಲವಾದೊಡನೆ ಭ್ರಮವು ಉತ್ಪನ್ನವಾಗುತ್ತದೆ ಈ ಪ್ರಕಾರ ಇವು ಉತ್ತರೋತ್ತರ ಕಾರಣಗಳಾಗಿವೆ. ಅದಕ್ಕಾಗಿಯೇ ಜ್ಞಾನಿ ಪುರುಷರು ಈ ಜಗತ್ತಿನ ಸಂಬಂಧವನ್ನು ಬಿಡಲಿಕ್ಕೆ ಯತ್ನಿಸುತ್ತಾರೆ ಆದರೆ ಬಹಿರಾತ್ಮರೆನಿಸುವ ಅಜ್ಞಾನಿಗಳು ಮನೆ, ಊರು, ಪರ್ವತಾದಿಗಳೆಲ್ಲದರಲ್ಲಿಯೂ ತನ್ನತನವನ್ನು ಮನ್ನಿಸುತ್ತಾರೆ ಜ್ಞಾನಿಯಾದ ಅಂತರಾತ್ಮ ಜೀವನು ತನ್ನಲ್ಲಿಯೇ ತಾನಿರುವೆನೆಂದು ತಿಳಿಯುವನು ಶರೀರಕ್ಕೆ ಆತ್ಮನೆಂದು ತಿಳಿಯುವುದು ದೇಹ ಧಾರಣ ಮಾಡುವ ಪರಂಪರೆಯನ್ನು ಇದ್ದಕ್ಕಿದ್ದಂತೆ ಮುಂದರಿಸುವ ಬಗೆಯಾಗಿದೆ ತನ್ನ ನಿಜ ಸ್ವರೂಪಕ್ಕೆ ತಾನೆಂದು ತಿಳಿಯುವುದು ಇನ್ನೊಂದು ಶರೀರವು ಪುನಃ ಪ್ರಾಪ್ತವಾಗದೆ ಇರುವುದಕ್ಕೆ ಕಾರಣವಾಗಿದೆ ಆತ್ಮನು ಸ್ವತಃ ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾನೆ. ಸ್ವತಃ ವಿಪರ್ಯಯ ಸ್ವರೂಪಿಯಾಗಿ ಸಂಸಾರ ಬಂಧನವನ್ನೂ ಕಟ್ಟಿಕೊಳ್ಳುತ್ತಾನೆ ಅದಕ್ಕೆಂದು ಪ್ರತಿಯೊಬ್ಬನೂ ತನಗೆ ತಾನೇ ಗುರುವಾಗಿದ್ದಾನೆ, ತನಗೆ ತಾನೇ ಶತ್ರುವು ಆಗಿದ್ದಾನೆ. ಅನ್ಯ ಪದಾರ್ಥಗಳು ನಿಮಿತ್ತ ಮಾತ್ರವಾಗಿವೆ ಅಂತರಾತ್ಮರೆನಿಸುವ ಜೀವಗಳು ಆತ್ಮವಿದು ಶರೀರದಿಂದ ಭಿನ್ನವೆಂದು ತಿಳಿದು ಮತ್ತು ಶರೀರವು ಆತ್ಮನಿಂದ ಬೇರೆಯೆಂದು ಭಾವಿಸಿ, ಶರೀರವು ಮಲದಿಂದ ತುಂಬಿದ ವಸ್ತ್ರದಂತೆ ಎಂದರಿತು ಅದನ್ನು ತ್ಯಾಗ ಮಾಡುತ್ತಾರೆ ಶರೀರದಿಂದ ಆತ್ಮನು ಭಿನ್ನನಾಗಿದ್ದಾನೆಂದು ಎಲ್ಲಿಯ ವರೆಗೆ ಅಂತರಾತ್ಮ ಜೀವವು ಕಿವಿಯಿಂದ ಕೇಳುವುದು, ತಿಳಿಯುವುದು, ಮುಖದಿಂದ ಮಾತನಾಡುವುದು ಆದರೆ ಭೇದವಿಜ್ಞಾನದ ಅಭ್ಯಾಸ ಮಾಡುವುದರಲ್ಲಿ ಮಗ್ನನಾಗುವದಿಲ್ಲವೋ ಅಲ್ಲಿಯ ವರೆಗೆ ಅವನ ಶರೀರದ ಮೇಲಿನ ಮಮತ್ವವು ಇಲ್ಲದಂತೆ ಆಗುವದಿಲ್ಲ. ತನ್ನ ಆತ್ಮನು ಶರೀರದಿಂದ ಬಿನ್ನನಾಗಿದ್ದಾನೆ ಈ ಸ್ವತಂತ್ರನಾದ ಆತ್ಮನು ಪುನಃ ಎಂದಿಗೂ ದೇಹದೊಡನೆ ಸಂಯೋಗವಾದುದನ್ನು ಕನಸಿನಲ್ಲಿಯೂ ಕಾಣಲಿಕ್ಕಾಗದಂಟ ರೀತಿಯಲ್ಲಿ ಭೇದ ವಿಜ್ಞಾನವನ್ನು ಆಲೋಚಿಸಬೇಕು ಒಟ್ಟಿನಲ್ಲಿ, ಕನಸಿನಲ್ಲಿ ಸಹ ಶರೀರ ಮತ್ತು ಆತ್ಮಗಳು ಭಿನ್ನವೆಂದು ತೋರುವಂತೆ ಭಾವನೆಯು ಸ್ಥಿರಗೊಳ್ಳಬೇಕು. ಆಗಲೇ ಅವನಿಗೆ ಭೇದ ವಿಜ್ಞಾನಿ ಎನ್ನಲಿಕ್ಕೆ ಆದೀತು.

ವ್ರತ ಅವ್ರತಗಳ ವ್ಯವಹಾರವು ಶುಭಾಶುಭ ಬಂಧಕ್ಕೆ ಕಾರಣವಿದೆ ಮೋಕ್ಷವು ಬಂಧದ ಅಭಾವ ಸ್ವರೂಪಿಯಾಗಿದೆ. ಅಂತಲೇ ವ್ರತಾದಿಕ ಕ್ರಿಯೆಗಳು ಪೂರ್ವಾವಸ್ಥೆಯಲ್ಲಿ ಮಾಡಲಿಕ್ಕೆ ಯೋಗ್ಯವೇ ಆಗಿವೆ ಮೊದಲು ಅಸಂಯಮ ಭಾವವನ್ನು ಬಿಟ್ಟು, ಸಂಯಮ ಭಾವವನ್ನು ಧರಿಸಬೇಕು ಯಾವಾಗ ಶುದ್ಧಾತ್ಮ ಭಾವದಲ್ಲಿ ಇಲ್ಲವೆ ಪರಮವೀತರಾಗ ಭಾವದಲ್ಲಿ ಸ್ಥಿರತೆಯು ಪ್ರಾಪ್ತವಾಗುವುದೋ ಆಗ ಅವನಿಗೆ ಸಂಯಮ ಭಾವದ ಅವಶ್ಯ-ಕತೆಯೂ ಕೂಡ ಇಲ್ಲ. ಜಾತಿ ಹಾಗೂ ಮುನಿ ಶ್ರಾವಕರ ಲಿಂಗಗಳು ಶರೀರದ ಆಶ್ರಯವನ್ನು ಹೊಂದಿ ನಿಲ್ಲುವಂದವು ಇವೆ. ಅಲ್ಲದೆ ಸಂಸಾರವೂ ಶರೀರಾತ್ಮಕವೇ ಆಗಿದೆ ಅದಕ್ಕಾಗಿ ಜ್ಞಾನಿಪುರುಷರು ಜಾತಿ ಮತ್ತು ಲಿಂಗಗಳ ವಿಷಯದಲ್ಲಿ ಆತ್ಮಬುದ್ಧಿಯನ್ನು ತ್ಯಜಿಸುತ್ತಾರೆ ಶರೀರದ ವಿಷಯದಲ್ಲಿ ಆತ್ಮಬುದ್ಧಿಯುಳ್ಳ ಜ್ಞಾನಿಯೂ ವಿದ್ವಾಂಸನೂ ಸಹ ಸಂಸಾರದಿಂದ ಮುಕ್ತವಾಗಲಾರನು. ಯಾರಿಗೆ ಆತ್ಮ ನಿಶ್ಚಯವು ಇರುವದೋ ಅವರು ಮಲಗಿದ್ದರೂ ಅನಾವಧಾನತೆಯಿಂದ ವರ್ತಿಸುತ್ತಿದ್ದರೂ ಕೂಡ ಸಂಸಾರದಿಂದ ಮುಕ್ತರಾಗುತ್ತಾರೆ. ಜ್ಞಾನಿಯು ಸ್ವಂತಕ್ಕೆ ಸಿದ್ಧ ಸ್ವರೂಪಿಯೆಂದು ತಿಳಿಯುವುದರಿಂದ ಅವನು ಅದನ್ನು ಹೊಂದುತ್ತಾನೆ. ಬತ್ತಿಯೂ ದೀಪಕ್ಕೆ ಹೋಗಿ ತಲುಪುತ್ತದೆ. ಅಲ್ಲಿ ತಾನೇ ದೀಪವೂ ಆಗುತ್ತದೆ.

ಪರಮ ಆತ್ಮರ ಸ್ವರೂಪ—ಆತ್ಮವು ಆತ್ಮನ ಚಿಂತೆಯನ್ನು ಮಾಡುತ್ತಿರುವಾಗ ಪರಮಾತ್ಮರೂಪವಾಗಿ ಬಿಡುತ್ತದೆ. ವೃಕ್ಷವು ಹೇಗೆ ತನ್ನ ಅವಯವಗಳಲ್ಲಿಯೇ ಘರ್ಷಣವು ಉತ್ಪನ್ನವಾದಾಗ ಅಗ್ನಿರೂಪವನ್ನು ಹೊಂದು-ತ್ತದೆಯೋ ಹಾಗೆಯೇ ಆತ್ಮನೂ ಕೂಡ ಪರಮಾತ್ಮಭಾವವನ್ನು ಹೊಂದುವುದರಿಂದ ಸಿದ್ಧನಾಗುತ್ತಾನೆ. ಕನಸಿನಲ್ಲಿ ತನ್ನನ್ನು ಯಾರಾದರೂ ನಾಶಗೊಳಿಸಿದಂತೆ ಕಂಡರೂ ವಾಸ್ತವಿಕವಾಗಿ ತನ್ನನ್ನು ಯಾರೂ ನಾಶಗೊಳಿಸಿರುವದಿಲ್ಲ ಹಾಗೆಯೇ ತಾನು ಜಾಗ್ರತನಿದ್ದಾಗಲೂ ತನ್ನ ನಾಶವಾಗಿದೆಯೆಂದು ತಿಳಿಯುವದು ಶುದ್ಧ ಭ್ರಮೆಯಾಗಿದೆ ನಿಜವಾಗಿಯೂ ಆತ್ಮನ ನಾಶವು ಎಂದೂ ಆಗುವದಿಲ್ಲ ಪರ್ಯಾಯವು ಉತ್ಪನ್ನವಾದದ್ದು ನಷ್ಟವಾಗದೆ ಹೇಗೆ ಉಳಿದೀತು? ಆತ್ಮ ಸ್ವರೂಪದ ಅನುಭವದ ಹೊರತಾಗಿ ಶರೀರಕ್ಕೇನೇ ಆತ್ಮನೆಂದು ತಿಳಿದು ಅನೇಕ ಶಾಸ್ತ್ರಗಳನ್ನು ಪಠಣಮಾಡುವವರು ಸಂಸಾರದಿಂದ ಮುಕ್ತರಾಗಲಾರರು ಆದರೆ ಸ್ವಸ್ವರೂಪದ ಅನುಭವವನ್ನು ಹೊಂದುವಂಥವನು ಶಾಸ್ತ್ರಾಭ್ಯಾಸ ಮಾಡದಿದ್ದರೂ ಸಹ ಅವನು ಸಂಸಾರದಿಂದ ಮುಕ್ತನಾದಾನು ಜ್ಞಾನಿ ಪುರುಷರೆ! ನಿಮಗೆ

ಸುಖಾವಸ್ಥೆಯಲ್ಲಿ ಪ್ರಾಪ್ತವಾದ ಜ್ಞಾನವು ದುಃಖ ಪ್ರಾಪ್ತವಾದೊಡನೆಯೇ ಇಲ್ಲದಂತಾದೀತು. ದುಃಖಾವಸ್ಥೆಯಲ್ಲಿ ಇಲ್ಲವೆ ರೋಗ ಪರೀಷಹಾದಿಗಳು ಪ್ರಾಪ್ತವಾದಾಗ ಸಹ ಇರುವಂಥ ಆತ್ಮಜ್ಞಾನದ ಅಭ್ಯಾಸವನ್ನೂ ದೃಢವಾಗಿ ಮಾಡಿರಿ. ಇಂಥ ಹಾಗೂ ಇದೇ ಪ್ರಕಾರದ ವಿಚಾರಗಳ ಪ್ರಭಾವದಿಂದ ಬಾಹ್ಯ ಶರೀರಾದಿಗಳ ಮೇಲಿನ ಆತ್ಮ ಬುದ್ಧಿಯನ್ನು ಇಲ್ಲದಂತೆ ಮಾಡಿ, ತಮ್ಮ ಆತ್ಮ ಸ್ವರೂಪವನ್ನು ತಿಳಿದು, ಪರಮಾತ್ಮ ಪದವನ್ನು ಪ್ರಾಪ್ತಮಾಡಿಕೊಳ್ಳುವ ಪ್ರಯತ್ನವನ್ನು ಮಾಡಿರಿ

ಪರಮ ಆತ್ಮರಲ್ಲಿ ಪ್ರಕಾರಗಳು—ಪರಮ ಆತ್ಮರಲ್ಲಿ ಎರಡು ಪ್ರಕಾರಗಳಿರುತ್ತವೆ, ಒಂದು ಸಕಲ, ಇನ್ನೊಂದು ವಿಕಲ ಪರಮಾತ್ಮಾ. ಘಾತಿ ಕರ್ಮದ ನಾಶಮಾಡಿ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖಸ್ವರೂಪ, ಹದಿನೆಂಟು ದೋಷರಹಿತ, ಇಂದ್ರ, ಧರಣೇಂದ್ರ, ನರೇಂದ್ರರಿಂದ ವಂದ್ಯ, ಅನೇಕ ಅತಿಶಯ-ಗಳಿಂದ ಕೂಡಿದ, ಸರ್ವೋಪಕಾರಕ ದಿವ್ಯಧ್ವನಿ ಸಂಯುಕ್ತ, ದೇವಾಧಿದೇವ, ಪರಮೌದಾರಿಕ ದೇಹದಲ್ಲಿ ಇರುವಂಥವನಾದ ಅರಹಂತ ದೇವನೇ ಸಕಲ ಪರಮಾತ್ಮನೆನಿಸುತ್ತಾನೆ ಕಲ ಎಂದರೆ ಶರೀರ ಯಾರಿಗೆ ಶರೀರವಿದ್ದು, ಅದರ ಕೊನೆಯಾಗುವವರೆಗೆ ಪರಮೋಪದೇಶವನ್ನು ಕೊಡುತ್ತಾರೆಯೋ ಅವರು ಅರಹಂತರು. ಇವರಿಗೆ ಸಕಲ ಪರಮಾತ್ಮರೆನ್ನುವರು. ಅರಿ ಎಂದರೆ ಎಂಟು ಕರ್ಮರೂಪ ಶತ್ರುವಿರಹಿತನಾದಂಥವನೇ ಸಿದ್ಧ ಪರಮೇಷ್ಠಿಯು. ಇವರಿಗೆ ಶರೀರವು ಇರುವದಿಲ್ಲೆಂದು ವಿಕಲ ಪರಮಾತ್ಮನೆಂದು ಹೇಳಲಾಗುತ್ತದೆ. ಈ ಪರಮಾತ್ಮ ಪದವು ಮನುಷ್ಯ ಪರ್ಯಾಯದಲ್ಲಿ ರತ್ನತ್ರಯದ ಆರಾಧನೆಯನ್ನು ಮಾಡುವುದರಿಂದ ಪ್ರಾಪ್ತವಾಗುತ್ತದೆ. ಇದರ ಬೀಜವು ಬಹಿರಾತ್ಮ ವೃತ್ತಿಯನ್ನು ತ್ಯಜಿಸಿ ಅಂತರಾತ್ಮತ್ವದಲ್ಲಿ ಲೀನವಾಗುವುದರಲ್ಲಿಯೇ ಇದೆ. ಬಹಿರಾತ್ಮ ಬುದ್ಧಿಯುಳ್ಳ ಜೀವಕ್ಕೆ ಮಿಥ್ಯಾತ್ವ ಗುಣಸ್ಥಾನವು ಇರುತ್ತದೆ ಅಂತರಾತ್ಮಾ ಜೀವಗಳು ನಾಲ್ಕನೆಯ ಗುಣಸ್ಥಾನ-ದಿಂದ ಹನ್ನೆರಡನೆಯ ಗುಣಸ್ಥಾನದ ವರೆಗೆ ಇರುತ್ತವೆ. ಪರಮಾತ್ಮಾ ಜೀವಗಳು ದೇಹ ಸಹಿತ ಹದಿಮೂರು ಹದಿನಾಲ್ಕನೆಯ ಗುಣಸ್ಥಾನಗಳಲ್ಲಿಯೂ ದೇಹ ರಹಿತ ಪರಮಾತ್ಮಾ ಸಿದ್ಧ ಭಗವಾನರು ಗುಣ ಸ್ಥಾನರಹಿತರೂ ಆಗಿರುತ್ತಾರೆ ಯಾಕಂದರೆ ಗುಣಸ್ಥಾನಗಳು ಮೋಹ ಮತ್ತು ಯೋಗಗಳ ಅಪೇಕ್ಷೆಯಿಂದ ಉಂಟಾಗುತ್ತವೆ. ಸಿದ್ಧ ಭಗವಂತನಿಗೆ ಮೋಹಕರ್ಮ ಮತ್ತು ಮನವಚನ ಕಾಯರೂಪಯೋಗ ಇವೆರಡೂ ಇರುವದಿಲ್ಲ. ಅಂತಲೇ ಅವರಿಗೆ ಗುಣಸ್ಥಾನವು ಇರುವದಿಲ್ಲ.

## ಧರ್ಮಧ್ಯಾನ

ಇನ್ನು ಮುಂದೆ ಧರ್ಮಧ್ಯಾನವನ್ನು ವರ್ಣಿಸುತ್ತಾರೆ. ಧರ್ಮಧ್ಯಾನವು ಸಮ್ಯಗ್‌ದೃಷ್ಟಿ ಪುರುಷನ ಹೊರತಾಗಿ ಇತರ ಮಿಥ್ಯಾದೃಷ್ಟಿ ಜೀವಗಳಿಗೆ ಉಂಟಾಗುವದಿಲ್ಲ. ಅದಕ್ಕಾಗಿ ನಾಲ್ಕನೆಯ ಗುಣಸ್ಥಾನದಿಂದ ಆರಂಭವಾಗಿ ಏಳನೆಯ ಗುಣಸ್ಥಾನದ ವರೆಗೆ ಅದು ಸಂಭವಿಸುತ್ತದೆ ಈ ಧ್ಯಾನದಲ್ಲಿ ಆಜ್ಞಾವಿಚಯ, ಅಪಾಯ-ವಿಚಯ, ವಿಪಾಕ ವಿಚಯ ಮತ್ತು ಸಂಸ್ಥಾನ ವಿಚಯಗಳೆಂದು ನಾಲ್ಕು ಭೇದಗಳಿವೆ. ಇವುಗಳಲ್ಲಿ ಆಜ್ಞಾವಿಚಯ ಧರ್ಮಧ್ಯಾನದ ಸ್ವರೂಪವನ್ನು ಸ್ವಲ್ಪದರಲ್ಲಿ ಇಲ್ಲಿ ಅವಲೋಕಿಸೋಣ.

ಅಜ್ಞಾವಿಚಯ—ಭಗವಾನ್ ಸರ್ವಜ್ಞರು ವರ್ಣಿಸಿದ ಆಗಮಗಳ ಪ್ರಮಾಣದ ಮೇಲಿಂದ ಪದಾರ್ಥಗಳ ಸ್ವರೂಪವನ್ನು ನಿಶ್ಚಯ ಮಾಡುವದಕ್ಕೆ ಆಜ್ಞಾವಿಚಯವೆನ್ನುವರು ಉಪದೇಶ ಮಾಡುವವರು ಯಾರೂ ಇಲ್ಲದೆ ಇದ್ದಲ್ಲಿಯೂ, ಕರ್ಮದ ಉದಯದಿಂದ ತಮ್ಮ ಬುದ್ಧಿಯಲ್ಲಿ ಮಂದತ್ವವು ಇದ್ದಾಗಲೂ, ಪದಾರ್ಥದ ಸ್ವರೂಪವನ್ನು ಸೂಕ್ಷ್ಮ ರೀತಿಯಿಂದ ಹೇಳಿ ಅದನ್ನು ಸಿದ್ಧ ಮಾಡಲಿಕ್ಕೆ ದೃಷ್ಟಾಂತಗಳನ್ನು ಕೊಟ್ಟು ಉದ್ದೇಶವನ್ನು ವಿವರಿಸದೆ ಇರುವಲ್ಲಿ ಸರ್ವಜ್ಞರು ಹೇಳಿದ ಶಾಸ್ತ್ರವನ್ನೇ ಪ್ರಮಾಣವೆಂದು ತಿಳಿದು ಹೀಗೆ ಚಿಂತಿಸಬೇಕು –"ಇದೇ ತತ್ತ್ವವಾಗಿದೆ. ಇದು ಇದೇ ಪ್ರಕಾರವಾಗಿದೆ. ಬೇರೆ ಪ್ರಕಾರವಾಗಿಲ್ಲ ಸರ್ವಜ್ಞ ಜಿನ ಭಗವಾನನು ವೀತರಾಗ ಪ್ರಭುವು ಬೇರೆಯಾವುದನ್ನು ಪ್ರತಿಪಾದನ ಮಾಡಲಾರನು". ಈ ಪ್ರಕಾರ ಗಹನ ಪದಾರ್ಥಗಳ ಸ್ವರೂಪದ ವಿಷಯದಲ್ಲಿ ಶ್ರದ್ಧೆಯನ್ನು ದೃಢವಾಗಿ ಇಡುವುದಕ್ಕೆ ಆಜ್ಞಾವಿಚಯ ಧರ್ಮಧ್ಯಾನವೆನ್ನುವರು ಇಲ್ಲವೆ ಸಮ್ಯಗ್‌ದರ್ಶನವನ್ನು ಧಾರಣ ಮಾಡಿದುದರಿಂದ ಯಾರ ಪರಿಣಾಮವು ಶುದ್ಧವಾಗಿರುವುದೋ ಅವರು ಸ್ವಮತ ಹಾಗೂ ಪರಮತದೊಳಗಿನ ವಿಷಯಗಳಲ್ಲಿಯ ಪದಾರ್ಥಗಳ ಸತ್ಯಸ್ವರೂಪವನ್ನು ಯೋಗ್ಯವಾಗಿ ಅರಿತು ನಿರ್ಣಯಿಸುವರೋ ಅವರಿಗೆ ಸರ್ವಜ್ಞರು

ಹೇಳಿದ ಸೂಕ್ಷ್ಮ ಪದಾರ್ಥಗಳ ಸ್ವರೂಪದ ಯಥಾರ್ಥ ಜ್ಞಾನವು ಆಗಿರುತ್ತದೆ ಅವರು ಪಂಚಾಸ್ತಿಕಾಯಾದಿ ಪದಾರ್ಥಗಳ ನಿಶ್ಚಯಮಾಡಿ ಇತರ ಭವ್ಯ ಜೀವಗಳಿಗೆ ಉಪದೇಶ ಮಾಡಲಿಕ್ಕೆ ಹತ್ತುವರು. ಅವರು ತಮ್ಮ ಉಪದೇಶ ಕ್ರಮದಲ್ಲಿ ಶ್ರುತಜ್ಞಾನದ ಸಾಮರ್ಥ್ಯದಿಂದ ಜೈನ ಸಿದ್ಧಾಂತದಲ್ಲಿ ವಿರೋಧವು ಬರದಂತೆ ನೋಡಿಕೊಳ್ಳುವರು. ಅವರು ಇತರ ಮತಾನುಯಾಯಿಗಳ ಸಿದ್ಧಾಂತವನ್ನು ಹೇತು, ಪ್ರಮಾಣ, ನಯ ಮೊದಲಾದ ಯುಕ್ತಿಗಳಿಂದ ಅಲ್ಲಗಳೆಯುತ್ತಾರೆ. ಅನೇಕಾಂತ ಮತದ ರಹಸ್ಯವು ತಿಳಿದದ್ದರಿಂದ ಕೇಳುವವರಿಗೆ ಪದಾರ್ಥಗಳ ಯಥಾರ್ಥ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿ ಸಮರ್ಥನಾಗಿರುತ್ತಾರೆ. ಜೈನ ಸಿದ್ಧಾಂತದ ಪ್ರರೂಪಣ ಹಾಗೂ ಸಮರ್ಥನೆ-ಯನ್ನು ತರ್ಕ, ನಯ ಪ್ರಮಾಣಗಳಿಗೆ ಅನುಸರಿಸಿ ಹೇಗೆ ಮಾಡಬೇಕು-ಎಂಬ ವಿಷಯವನ್ನು ಚಿಂತಿಸುತ್ತರೇ ಯಾವಾಗಲೂ ತತ್ಪರನಾಗಿರುತ್ತಾನೆ, ಮೇಲಾಗಿ ಸರ್ವಜ್ಞನ ಆಜ್ಞೆಯನ್ನು ಸ್ವೀಕರಿಸಿ ಧರ್ಮವನ್ನು ಬೆಳಗಿಸುವ ಪ್ರಯತ್ನದಲ್ಲಿರುತ್ತಾರೆ. ಇವೆಲ್ಲ ಕಾರ್ಯಗಳಿಗೆ ಆಜ್ಞಾವಿಚಯ ಧರ್ಮಧ್ಯಾನವೆನ್ನುವರು. ಇದೇ ಪ್ರಕಾರ ಯಾರು ಸರ್ವಜ್ಞನ ಆಜ್ಞೆಯಂತೆ ಪದಾರ್ಥಗಳ ಸ್ವರೂಪದ ಚಿಂತನ ಮಾಡುತ್ತಿರುವರೋ ಅವರಿಗೇ ಈ ಆಜ್ಞಾವಿಚಯ ಧರ್ಮಧ್ಯಾನವು ಸಂಭವಿಸುತ್ತದೆ. ಜಗತ್ತಿನಲ್ಲಿ ವಸ್ತುಗಳು ಅನಂತ ಗುಣ ಪರ್ಯಾಯಾತ್ಮಕವಾಗಿವೆ ಅವುಗಳ ಸ್ವರೂಪವು ಉತ್ಪಾದ-ವ್ಯಯ-ಧ್ರುವಾತ್ಮಕವಾಗಿದೆ. ಅವು ಮೂರೂ ಕಾಲಗಳಲ್ಲಿ ಇರತಕ್ಕವಾದುದರಿಂದ ನಿತ್ಯವಾಗಿವೆ ಇಂಥ ಪ್ರಕಾರದ ವಸ್ತುಗಳ ಸ್ವರೂಪವನ್ನು ನಿರೂಪಣ ಮಾಡುವಂಥ ಆಗಮದೊಳಗಿನ ಒಂದು ಸೂಕ್ಷ್ಮ ನಿರೂಪಣವು ತಮ್ಮ ಜಡ ಬುದ್ಧಿಯಿಂದ ಒಂದು ವೇಳೆ ತಿಳಿಯದೆ ಹೋದರೆ ಆಗ ಅದನ್ನು ನಾವು ಶ್ರದ್ಧೆಯಿಂದ ಸ್ವೀಕರಿಸಲಿಕ್ಕೆಬೇಕು. ಯಾಕಂದರೆ ಸರ್ವಜ್ಞನಾದ ವೀತರಾಗ ಪ್ರಭುವು ಅನ್ಯಥಾ ನಿರೂಪಣ ಮಾಡಿರಲಾರನು ಅವನು ಪ್ರಮಾಣಕ್ಕೆ ಅನುಸರಿಸಿಯೇ ಪ್ರತಿಪಾದನ ಮಾಡಿರಲಿಕ್ಕೆಬೇಕು ಅದಕ್ಕಾಗಿ ಅವನ ಆಜ್ಞೆಯು ಮನ್ನಿಸಲಿಕ್ಕೆ ಯೋಗ್ಯವಾಗಿದೆ "- ಈ ಪ್ರಕಾರ ಚಿಂತನ ಮಾಡುವುದಕ್ಕೆ ಸಹ ಆಜ್ಞಾವಿಚಯ ಧರ್ಮಧ್ಯಾನವೆನ್ನುತ್ತಾರೆ ಪರಮಾಗಮದ ಪಠನ, ಪಾಠನ, ಶ್ರವಣ, ಚಿಂತನ, ಅನುಭಾವ ಮೊದಲಾದವುಗಳನ್ನೆಲ್ಲ ಆಜ್ಞಾವಿಚಯದಲ್ಲಿ ಸಮಾವೇಶಮಾಡಲಿಕ್ಕೆ ಬರುತ್ತದೆ ಸರ್ವಜ್ಞ ವೀತರಾಗ ಭಗವಂತನು ಹೇಳಿದ ಶಾಸ್ತ್ರವನ್ನು ಕೇಳುವುದರಿಂದ ರಾಗ-ದ್ವೇಷಗಳುಳ್ಳ ವೇಷಧಾರಿ ದೇವರ ಉಪಾಸನೆಯನ್ನು ಮಾಡುವ ಬುದ್ಧಿಯು ಇಲ್ಲದಂತಾಗುತ್ತದೆ. ಪರಿಗ್ರಹದಾರಿ; ವಿಷಯ ಕಷಾಯಿ, ಅನೇಕ ವೇಷಗಳನ್ನು ಧಾರಣ ಮಾಡುವಂಥ ಸುಳ್ಳುಸುಳ್ಳೇ ಗುರುವೆಂದು ಮೆರೆಯುವವರ ವಿಷಯದಲ್ಲಿ ಪೂಜ್ಯ-ಭಾವನೆಯು ಇಲ್ಲದಂತಾಗುತ್ತದೆ. ಯಾವುದರಲ್ಲಿ ಹಿಂಸೆಯನ್ನು ಮಾಡಬೇಕೆಂದು ನಿರೂಪಿಸಲಾಗಿದೆಯೋ ಅದು ನಿಜವಾದ ಧರ್ಮವೇ ಆಗಿರಲಾರದು. ಇದು ಮನಸ್ಸಿಗೆ ನಿಶ್ಚಿತವಾಗಿ ಬಿಡುತ್ತದೆ ಯಾವ ಶಾಸ್ತ್ರಗಳನ್ನೂ ಓದುವದರಿಂದ ವಿಷಯ ಕಷಾಯ—ದೇಹ—ಪರಿಗ್ರಹಾದಿಗಳ ವಿಷಯದಲ್ಲಿ ಪರಾಙ್ಮುಖತೆಯು ಪ್ರಾಪ್ತವಾಗಿ ದಯಾಮಯವಾದ ಧರ್ಮದ ವೃದ್ಧಿಯನ್ನೂ ಮಾಡಬೇಕೆಂಬ ಭಾವನೆಯು ಉತ್ಪನ್ನವಾಗುತ್ತದೆಯೋ ಇಂಥವುಗಳ ಶಬ್ದ ಅರ್ಥಗಳನ್ನೂ ಚಿಂತನ ಮಾಡುತ್ತಿರುವುದೂ ಸಹ ಆಜ್ಞಾವಿಚಯ ಧರ್ಮಧ್ಯಾನವೆನಿಸುತ್ತದೆ ಆಗಮವು ಶ್ರೀ ಸರ್ವಜ್ಞ ವೀತರಾಗ ದೇವನ ಉಪದೇಶವಾಗಿದೆ. ಅದು ರತ್ನತ್ರಯವನ್ನು ಪುಷ್ಟಗೊಳಿಸುವಂಥದಿದೆ ಅದು ಅನಾದಿನಿಧನವೂ ಎಲ್ಲ ಜೀವಗಳನ್ನೂ ರಕ್ಷಣ ಮಾಡುವಂಥದೂ ಇದೆ ಅನಂತ ಧರ್ಮಗಳುಳ್ಳ ಪದಾರ್ಥಗಳ ಸ್ವರೂಪವನ್ನು ಪ್ರಕಟಗೊಳಿಸುವಂಥದಿದೆ. ಪ್ರಮಾಣ ನಯ ನಿಕ್ಷೇಪಗಳಿಂದ ಪದಾರ್ಥಗಳನ್ನು ಸ್ಪಷ್ಟವಾಗಿ ಪ್ರಕಾಶಕ್ಕೆ ತರುವಂಥದಾಗಿದೆ ಇದರ ಪ್ರಾಣವು ಸ್ಯಾದ್ವಾದವಾಗಿದೆ. ಇಲ್ಲಿಯ ವರೆಗೆ ಇದಕ್ಕೆ ಶರಣು ಹೋಗದೆ ಇರುವುದರಿಂದಲೇ ಅನಾದಿಕಾಲದಿಂದಲೂ ಚತುರ್ಗತಿಗಳಲ್ಲಿ ಭ್ರಮಣ ಮಾಡಬೇಕಾಯಿತು. ಈ ಆಗಮವು ಸಪ್ತತತ್ತ್ವ, ನವಪದಾರ್ಥ, ಪಂಚಾಸ್ತಿಕಾಯ ಇವುಗಳ ಸ್ವರೂಪವನ್ನು ಪ್ರಕಟ ಮಾಡುವಂಥದಿದೆ ದ್ರವ್ಯಗುಣ ಪರ್ಯಾಯಗಳ ಯಥಾರ್ಥ ಸ್ವರೂಪವನ್ನು ತೋರಿಸುವಂಥದಿದೆ. ಗುಣಸ್ಥಾನ, ಮಾರ್ಗಣಾಸ್ಥಾನ ಮೊದಲಾದವುಗಳ ಮುಖಾಂತರ ಜೀವ ಹಾಗೂ ಆಸ್ರವ, ಬಂಧ, ಸಂವರ, ಉದಯ, ಉದೀರಣಾ, ಸತ್ತಾ ಇವುಗಳ ಸ್ವರೂಪವನ್ನು ನಿರೂಪಿಸಿ; ಅನಂತ ಲೋಕಾಲೋಕವನ್ನೂ ಆಗಮವು ಪ್ರಕಟಗೊಳಿಸುವಂದವಾಗಿದೆ ಅನೇಕ ಶಬ್ದಗಳ ರಚನೆಯು ಅದರಲ್ಲಿದೆ ಇಂದ ಅಂಗಪ್ರಕೀರ್ಣಕಾದಿ ರತ್ನಗಳ ಯೋಗದಿಂದ ಅದು ಸಮುದ್ರದಂತೆ ಗಂಭೀರವಾಗಿದೆ ಏಕಾಂತ ವಿದ್ಯೆಯ ಮದದಿಂದ ಉನ್ಮತ್ತನಾದಂಥ ಮಿಥ್ಯಾದೃಷ್ಟಿ ಜೀವಗಳ ಮದವನ್ನು ಇಲ್ಲದಂತೆ ಮಾಡುವಂದವಾಗಿದೆ ಮಿಥ್ಯಾತ್ವರೂಪದ ಅಂಧಕಾರವನ್ನು ಇಲ್ಲದಂತೆ ಮಾಡುವುದಕ್ಕೆ ಸೂರ್ಯ ಪ್ರಕಾಶದಂತೆ ಇದೆ. ರಾಗರೂಪೀ ಸರ್ಪದ

ವಿಷವನ್ನು ಇಳಿಸಲಿಕ್ಕೆ ಗರುಡನಂತೆ ಇದೆ ಅಂತರಂಗದೊಳಗಿನ ಸಮಸ್ತ ಪಾಪರೂಪೀ ಮಲವನ್ನು ತೊಳೆದು ಒಗೆಯಲಿಕ್ಕೆ ಪವಿತ್ರ ಜಲದಂತೆ ಇದೆ. ಈ ಆಗಮವು ಸಂಪೂರ್ಣ ವಸ್ತುಗಳ ಪರೀಕ್ಷೆಯನ್ನು ಮಾಡಲಿಕ್ಕೆ ಸಮರ್ಥ-ವಾಗಿದೆ. ಯೋಗೀಶ್ವರರಿಗೆ ಇದೊಂದು ಕೇವಲ ಮೂರನೆಯ ಕಣ್ಣೇ ಆಗಿದೆ ಸಂಸಾರದೊಳಗಿನ ಸಂತಾಪ ರೂಪೀ ಜ್ವರವನ್ನು ನಷ್ಟ ಮಾಡುವಂಥದಾಗಿದೆ ಆತ್ಮಸುಖರೂಪ ಅಮೃತವನ್ನು ಪ್ರಕಟಗೊಳಿಸುವಕ್ಕೆ ಚಂದ್ರನ ಉದಯದಂತೆ ಇದು ಇದೆ. ಅಕ್ಷಯ, ಅವಿನಾಶಿ, ಜೀವಗಳ ನಿಜವಾದ ಧನವು ಇದಾಗಿದೆ ಮುಕ್ತಿಗೆ ಹೋಗುವವರ ಮುಖ್ಯ ಆಹಾರವು ಇದಾಗಿದೆ ವಿನಯ, ಸಂಯಮ, ಸಂತೋಷಾದಿ ಗುಣಗಳನ್ನು ಉತ್ಪನ್ನ ಮಾಡುವಂಥದಾಗಿದೆ. ಈ ಪ್ರಕಾರದ ಪರಮಾಗಮದ ಚಿಂತನ, ಧ್ಯಾನ, ಅನುಭವಗಳನ್ನು ಹೊಂದುವುದೇ ಆಜ್ಞಾವಿಚಯ ಧರ್ಮಧ್ಯಾನವಾಗಿದೆ.

**ಅಪಾಯವಿಚಯ**—ಈ ಧರ್ಮಧ್ಯಾನದ ಸ್ವರೂಪವು ಹೀಗಿದೆ ಇಲ್ಲಿಯವರೆಗೆ ಮಿಥ್ಯಾತ್ವಾದಿಗಳಿಂದ ಸಂಸಾರಿ ಜೀವಗಳು ಹೇಗೆ ದೂರವಾದಾವು ಎಂಬುದನ್ನು ಮೇಲಿಂದ ಮೇಲೆ ವಿಚಾರಿಸುವುದು ಅಪಾಯವಿಚಯ ಧರ್ಮಧ್ಯಾನವಾಗಿದೆಯೆಂದು ಹೇಳಿದೆ ಈಗ ಸನ್ಮಾರ್ಗವೆಂದರೆ ಮೋಕ್ಷ ಮಾರ್ಗ. ಅದರ ಅಭಾವವು ಮಿಥ್ಯಾತ್ವ-ದಿಂದಲೇ ಆಗುತ್ತದೆ ಅರ್ಥಾತ್ ಮಿಥ್ಯಾತ್ವದಿಂದ ಜೀವಕ್ಕೆ ಮೋಕ್ಷಪದವು ಪ್ರಾಪ್ತವಾಗುವದಿಲ್ಲ. ಮಿಥ್ಯಾತ್ವದಿಂದ ಯಾರ ಜ್ಞಾನರೂಪೀನೇತ್ರಗಳು ಮುಚ್ಚಿರುವವೋ ಅವರ ಆಚಾರ ವಿಚಾರಾದಿ ಸಂಪೂರ್ಣ ಕಾರ್ಯಗಳು ಸಂಸಾರವನ್ನು ಬೆಳೆಯಿಸುವಂಥವೇ ಇರುತ್ತವೆ. ಮಿಥ್ಯಾದೃಷ್ಟಿ ಜೀವಿಗಳಲ್ಲಿ ಬಹಳಷ್ಟು ಜನರು ವಿಪರೀತ ಜ್ಞಾನಿಗಳೇ ಇರುತ್ತಾರೆ. ಹುಟ್ಟುಗುರುಡನಿಗೆ ಹೇಗೆ ಮಾರ್ಗದರ್ಶಕರಿಲ್ಲದೆ ಗಮನ ಮಾಡುವುದು ಸಾಧ್ಯವಿಲ್ಲವೋ ಹಾಗೆಯೇ ಸರ್ವಜ್ಞರು ಹೇಳಿದ ಸನ್ಮಾರ್ಗದಿಂದ ಪರಾಙ್ಮುಖರಾದ ಜೀವಗಳಿಗೆ ಇಚ್ಛೆ ಇದ್ದರೂ ಸಹ ಯಥಾರ್ಥಜ್ಞಾನದ ಅಭಾವದಿಂದ ಸಂಸಾರದಲ್ಲಿ ದೀರ್ಘ ಕಾಲದ ವರೆಗೆ ಸುತ್ತಬೇಕಾಗುತ್ತದೆ. ಅದಕ್ಕಾಗಿ ಸನ್ಮಾರ್ಗದ ನಾಶದ ಕಾರಣಗಳನ್ನು ವಿಚಾರ ಮಾಡುವುದು ಅಪಾಯವಿಚಯ ಧರ್ಮಧ್ಯಾನವೆನಿಸಿಕೊಳ್ಳುತ್ತದೆ.

ಇನ್ನು ಅಸತ್ಯಮಾರ್ಗದಿಂದ ನಡೆಯತಕ್ಕುದಲ್ಲ. ಸುಳ್ಳು ಮಾರ್ಗವನ್ನು ನಾಶಗೊಳಿಸುವುದು, ಹೀಗೆ ವಿಚಾರಮಾಡುವುದೂ ಸಹ ಅಪಾಯವಿಚಯವಾಗಿದೆ. ವಿಪರೀತ ಶ್ರದ್ಧೆಯನ್ನು ಇಟ್ಟು ಮೋಸಗಾರರು ರಚಿಸಿದ ಹಾಗೂ ಪ್ರತಿಪಾದಿಸಿದ ಮಾರ್ಗದಗುಂಟ ಸಾಗುವ ಜೀವಗಳ ಉದ್ಧಾರವು ಈ ಸಂಸಾರದಿಂದ ಹೇಗಾದೀತು? ಇಂಥ ಜನರಿಗೆ ಕುದೇವ, ಕುಧರ್ಮ, ಕುಗುರು ಇಂಥವರ ಉಪಾಸನೆಯಿಂದ ಹೇಗೆ ದೂರ ಮಾಡಲಿಕ್ಕೆ ಬಂದೀತು? ಹೀಗೆ ವಿಚಾರ ಮಾಡುವುದೂ ಅಪಾಯವಿಚಯ ಧರ್ಮಧ್ಯಾನದಲ್ಲಿಯೇ ಸಮಾವೇಶವಾಗುತ್ತದೆ. ಪಾಪದ ಕಾರಣಗಳು ಯಾವವು ಇರುವವೋ ಅವುಗಳ ವಿಷಯದಲ್ಲಿ ತಮ್ಮ ಶರೀರದಿಂದ ಅಂಥ ಕೃತಿಗಳನ್ನು ಮಾಡುವುದು, ಬಾಯಿಂದ ಮಾತನಾಡಿ ಉತ್ತೇಜನ ಕೊಡುವುದು, ಯಾರಾದರೂ ಅಂಥ ಕೆಲಸಗಳನ್ನು ಮಾಡುವಾಗ ನೋಡಿ ಅನುಮೋದಿಸು-ವುದು ಇವೆಲ್ಲವೂ ಅದರಲ್ಲಿ ಸಮಾವೇಶವಾಗುತ್ತವೆ. ಇದೇ ಪ್ರಕಾರ ಕರ್ಮದ ನಾಶ ಮಾಡುವ ವಿಚಾರವನ್ನು ಮನಸ್ಸಿನಲ್ಲಿ ತರದೆ ಅದಕ್ಕೆ ವಿರೋಧವಾಗಿ ಪಾಪಕರ್ಮದ ವಿಚಾರಗಳನ್ನೇ ಮನಸ್ಸಿನಲ್ಲಿ ನೆನೆಯುತ್ತಿರುವುದು ಸಹ ಅಪಾಯವಿಚಯ ಧರ್ಮಧ್ಯಾನವಾಗಿದೆ. ಸರ್ವಜ್ಞರು ಪ್ರತಿಪಾದಿಸಿದ ರತ್ನತ್ರಯರೂಪೀ ಮೋಕ್ಷಮಾರ್ಗದ ಅವಲಂಬನವನ್ನು ಮಾಡದೆ ಸಂಸಾರ ರೂಪೀ ಅರಣ್ಯದಲ್ಲಿ ಚಿರಕಾಲದಿಂದಲೂ ಸಿಕ್ಕು ನಾನು ಅನೇಕ ಪ್ರಕಾರದ ದುಃಖಗಳನ್ನು ಭೋಗಿಸುತ್ತಿದ್ದೇನೆ. ಜಿನೇಶ್ವರನ ಉಪದೇಶರೂಪದ ಸಹಾಯವು ದೊರೆಯದೆ ಹೋದುದರಿಂದ ನನಗೆ ತೀವ್ರ ದುಃಖಾವಸ್ಥೆಯು ಪ್ರಾಪ್ತವಾಗಿದೆ. ಈ ಪ್ರಕಾರ ಅನೇಕ ಕಷ್ಟರೂಪದ ಅಗ್ನಿಯಿಂದ ಸುಟ್ಟು ಹೋಗುತ್ತಿರುವಾಗ ನಾನು ಸಂಸಾರರೂಪೀ ಅರಣ್ಯದಲ್ಲಿ ಸುತ್ತುತ್ತ ಸುತ್ತುತ್ತ ಈಗ ಸಮ್ಯಗ್ಜ್ಞಾನ ರೂಪದ ತೀರವನ್ನು ಸೇರಿದ್ದೇನೆ. ಇನ್ನು ಇದಕ್ಕೂ ಮೇಲಿರುವ ಮೋಕ್ಷಲಕ್ಷ್ಮಿಯ ಮಂದಿರದ ಶಿಖರವನ್ನು ಹೋಗಿ ಮುಟ್ಟುವ ಪ್ರಯತ್ನವನ್ನು ಮಾಡಿಯೇನು ನಾನು ಹೀಗೆ ಮಾಡದೆ ಇದ್ದರೆ ಮತ್ತೆ ಸಂಸಾರರೂಪೀ ಅಂಧಕೂಪದಲ್ಲಿ ಬಿದ್ದೇನು. ಅನಾದಿಕಾಲದ ಮಿಥ್ಯಾತ್ವ, ಅವಿರತ, ಕಷಾಯ ಇವು ಕರ್ಮಬಂಧನದ ಕಾರಣಗಳಾಗಿವೆ. ಒಂದು ವೇಳೆ ನಾನು ಶುದ್ಧ, ಜ್ಞಾನದರ್ಶನ ಸ್ವರೂಪದವನಿದ್ದರೂ ಸಹ ಮಿಥ್ಯಾತ್ವಾದಿ ಕರ್ಮಗಳಿಂದ ನುಗ್ಗುನುಗ್ಗಾಗಿ ಹೋಗಿರುವೆ ನಾನು ಚಿರಕಾಲದಿಂದಲೂ ಸಂಸಾರರೂಪೀ ಕೆಸರಿನಲ್ಲಿ ಸಿಕ್ಕು ದುಃಖಿಯಾಗಿದ್ದೇನೆ. ಒಂದು ಕಡೆಗೆ ಅನೇಕ ಪ್ರಕಾರದ ಕರ್ಮವೆಂಬ ಸೈನ್ಯ, ಇನ್ನೊಂದು ಮಗ್ಗಲು ನನ್ನ ಆತ್ಮನೊಬ್ಬನೇ ನಿಂತು ಹೋರಾಡಲು ಸಿದ್ಧನಾಗಿದ್ದಾನೆ. ಇಂಥ ಸ್ಥಿತಿಯಲ್ಲಿ ನಾನು ಅತ್ಯಂತ ಸಾವಧಾನತೆಯಿಂದ ಇರಲಿಕ್ಕೆಬೇಕು ಇಂಥ ಸಂದರ್ಭದಲ್ಲಿ ಪ್ರಮಾದವಶನಾದಲ್ಲಿ

ಕರ್ಮವು ನನ್ನ ಜ್ಞಾನದರ್ಶನ ಸ್ವರೂಪವನ್ನು ಅಲ್ಲಗಳೆದು ಏಕೇಂದ್ರಿಯಾದಿ ಮೊದಲಾದ ಪರ್ಯಾಯಗಳಲ್ಲಿ ಒಯ್ದು ಒಗೆದೇ ತೀರೀತು. ಪ್ರಬಲ ಧ್ಯಾನರೂಪೀ ಅಗ್ನಿಯಿಂದ ಆತ್ಮನಿಂದ ಕರ್ಮವನ್ನು ಸಮೂಲ ನಷ್ಟಗೊಳಿಸಲಿಕ್ಕೆಬೇಕು. ಸುವರ್ಣದ ಕಲ್ಲುಗಳಿಂದ ಹೇಗೆ ಮಣ್ಣನ್ನು ಬೇರೆ ಮಾಡಿ, ಸುವರ್ಣವನ್ನು ಬೇರೆ ತೆಗೆಯುತ್ತಾರೆಯೋ ಹಾಗೆಯೇ ಅಭ್ಯಾಸದಿಂದ ಕರ್ಮವನ್ನು ಭಿನ್ನಗೊಳಿಸಿ ಆತ್ಮವನ್ನೂ ಶುದ್ಧಗೊಳಿಸಲಿಕ್ಕೆಬೇಕು. ಸಮ್ಯಗ್‌ದರ್ಶನ, ಸಮ್ಯಗ್ ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಇವು ನನಗೆ ಪ್ರಾಪ್ತವಾಗಲಿಕ್ಕೆ ಯೋಗ್ಯವಾಗಿದ್ದು, ಅವು ನನ್ನ ನಿಜವಾದ ಸ್ವಭಾವಗಳಾಗಿವೆ. ಇವನ್ನುಳಿದು ಬೇರೆಯಾದ ನೋಲು-ನಾವುಗಳೆಲ್ಲ ನನ್ನಿಂದ ಭಿನ್ನವಾಗಿವೆ ನನ್ನ ಸ್ವರೂಪವೇನು? ನನಗೆ ಕರ್ಮಗಳು ಯಾವ ಕಾರಣದಿಂದ ಕಟ್ಟುತ್ತವೆ? ಕಟ್ಟಿದ ಕರ್ಮಗಳನ್ನು ಹೇಗೆ ನಷ್ಟಗೊಳಿಸಲಿಕ್ಕೆ ಬಂದೀತು? ಮುಕ್ತಿ ಎಂದರೆ ಏನು? ಅದು ಎಲ್ಲಿದೆ? ಅದರ ಸ್ವರೂಪವೇನು? ಮುಕ್ತಿಯ ಸುಖವು ನಿರಾಕುಲ, ಬಾಧಾರಹಿತ, ಸ್ವಾಭಾವಿಕವಾಗಿದ್ದರೆ ಆ ಸುಖವು ನನಗೆ ಯಾವ ಉಪಾಯದಿಂದ ಲಭಿಸೀತು? ಈ ಪ್ರಕಾರ ತನ್ನ ಸ್ವರೂಪದ ಯಥಾರ್ಥ ಜ್ಞಾನವಾದರೆ ನನಗೆ ಮೂರೂ ಲೋಕದ ಜ್ಞಾನವೆಲ್ಲ ಆದಂತಾಗುವದು. ನನ್ನ ಸ್ವಭಾವವು ಸರ್ವಜ್ಞ ಮತ್ತು ಸರ್ವದರ್ಶಿಯಾಗಿದೆ. ಅದು ಕರ್ಮಮಲವು ನಷ್ಟವಾದೊಡನೆ ನನ್ನಲ್ಲಿಯೇ ಪ್ರಕಟವಾಗುವಂಥದಿದೆ. ಎಲ್ಲಿಯ ವರೆಗೆ ಬಾಹ್ಯ ವಸ್ತುವಿನೊಡನೆ ನನ್ನ ಸಂಬಂಧವು ಇರುವದೋ ಅಲ್ಲಿಯ ವರೆಗೆ ನನ್ನ ರೂಪದಲ್ಲಿ ನನಗೆ ಸ್ಥಿರವಾಗಿ ಉಳಿಯಲಿಕ್ಕೆ ಕಠಿಣವಾಗುತ್ತದೆ ಅದಕ್ಕಾಗಿ ಬಾಹ್ಯ ವಸ್ತುವಿನ ಸಂಬಂಧವನ್ನು ದೂರಗೊಳಿಸುವದಕ್ಕೆಂದು ಭೇದ ವಿಜ್ಞಾನವನ್ನು ಮೊದಲು ಸಂಪಾದಿಸಲಿಕ್ಕೆಬೇಕು ಹೀಗೆ ಅಪಾಯವಿಚಾಯ ಎಂಬ ಧರ್ಮಧ್ಯಾನದಲ್ಲಿ ವಿಚಾರಿಸಲಾಗುತ್ತದೆ.

**ವಿಪಾಕ ವಿಚಯ**—ಇನ್ನು ಮುಂದೆ ವಿಪಾಕವಿಚಯ ಎಂಬ ಹೆಸರಿನ ಧರ್ಮಧ್ಯಾನದ ಮೂರನೆಯ ಭೇದದ ಸ್ವರೂಪವನ್ನು ಕುರಿತು ವಿಚಾರಿಸೋಣ. ಜ್ಞಾನಾವರಣಾದಿ ಕರ್ಮಗಳ ಉದಯಕ್ಕೆಲ್ಲ ತನ್ನಿಂದ ಭಿನ್ನವೆಂದು ತಿಳಿಯುವುದು ವಿಪಾಕವಿಚಯವೆನಿಸುತ್ತದೆ. ಇದರ ಭಾವವು ಹೀಗಿದೆ-ಅನಾದಿ ಕಾಲದಿಂದಲೂ ಜೀವಗಳಿಗೆ ನರಕತಿರ್ಯಂಚಾದಿಗತಿಗಳಲ್ಲಿ ಉತ್ಪನ್ನವಾಗುವುದು, ಮನುಷ್ಯ ಪಶು ಮೊದಲಾದ ಪರ್ಯಾಯಗಳನ್ನು ಧಾರಣ ಮಾಡುವುದು, ಇಂದ್ರಿಯಗಳು, ಶರೀರ, ರೂಪರಸಗಂಧವರ್ಣ, ಸಂಹನನ, ಬಲ, ಪರಾಕ್ರಮ, ರಾಜ್ಯ, ವೈಭವ, ಪರಿವಾರ ಮೊದಲಾದವುಗಳೆಲ್ಲ ಪ್ರಾಪ್ತವಾಗುವುದು ಕರ್ಮದ ಉದಯದಿಂದ ಉತ್ಪನ್ನವಾಗುವ ಕಾರ್ಯಗಳಾಗಿವೆ. ಅರ್ಥಾತ್ ಇವು ನಮ್ಮ ನಿಜಸ್ವರೂಪಗಳಲ್ಲ. ಭಿನ್ನವಾಗಿವೆ. ನನ್ನ ಸ್ವರೂಪವೂ ಜ್ಞಾನ ದರ್ಶನಾತ್ಮಕವೂ ಅಖಂಡವೂ ಅವಿನಾಶಿಯೂ ಆಗಿದೆ. ಕರ್ಮೋದಯದಿಂದ ಹುಟ್ಟಿದ ಪರಿಣತಿಯಿಂದ ಭಿನ್ನವಾಗಿದೆ. ಈ ಕರ್ಮಜನಿತ ಪರಿಣತಿಯಿಂದ ನಾನು ಬೇರೆಯೆಂದು ತಿಳಿದು, ಕರ್ಮದಿಂದ ಉತ್ಪನ್ನವಾಗುವ ರಾಗ-ದ್ವೇಷ-ಜೀವನ-ಮರಣಾದಿಗಳೆಲ್ಲ ಸಹ ಭಿನ್ನವೆಂದು ಯಾವನು ತಿಳಿಯುತ್ತಾನೆಯೋ ಅವನಿಗೆ ವಿಪಾಕವಿಚಯ ಧರ್ಮಧ್ಯಾನವು ಸಂಭವಿಸುತ್ತದೆ ಪೂರ್ವಕಾಲದಲ್ಲಿ ಕಟ್ಟಿದ ಕರ್ಮವು ದ್ರವ್ಯ-ಕ್ಷೇತ್ರ-ಕಾಲ ಭಾವಗಳ ಸಂಯೋಗದಿಂದ ವಿಚಿತ್ರ ಫಲವನ್ನು ಕೊಡಲಿಕ್ಕೆ ಸಿದ್ಧವಾಗುತ್ತದೆ. ಕರ್ಮದ ಮೂಲಪ್ರಕೃತಿಗಳು ಎಂಟು ಇವೆ ಅವುಗಳಿಗೆ ಒಂದುನೂರ ನಲವತ್ತೆಂಟು ಉತ್ತರ ಭೇದಗಳು ಇರುತ್ತವೆ. ಇದರಲ್ಲಿ ಒಂದೊಂದರಲ್ಲೂ ಅಸಂಖ್ಯಾತ ಲೋಕ ಪ್ರಮಾಣ ಭೇದಗಳಿವೆ. ಏಕೇಂದ್ರಿಯಾದಿಗಳಿಂದ ಎಲ್ಲ ಪ್ರಕಾರದ ಜೀವಗಳಿಗೆ ಭಿನ್ನ ಭಿನ್ನ ಕರ್ಮೋದಯಗಳು ಇದ್ದುದು ಕಂಡುಬರುತ್ತದೆ. ಸಾಮಾನ್ಯವಾಗಿ ಜೀವವು ಜ್ಞಾನಸ್ವಭಾವವುಳ್ಳದಾಗಿದೆ. ಅದು ಸ್ವ-ಪರರೂಪವನ್ನು ತಿಳಿಯುವಂಥದಾಗಿದೆ. ಜೀವವು ಅಸಂಖ್ಯಾತ ಪ್ರದೇಶವುಳ್ಳದಾಗಿದ್ದು, ದೇಹ ಪ್ರಮಾಣವಾಗಿದೆ. ಸುಖ-ದುಃಖಗಳನ್ನು ಭೋಗಿಸುವಂಥದಿದೆ ಆದರೂ ಅದು ಕರ್ಮದ ಬಂಧವನ್ನು ಬೇರೆ ಬೇರೆ ಪರಿಣಾಮಗಳಿಂದ ಅನೇಕ ವಿಧವಾಗಿ ಮಾಡಿಕೊಂಡಿದೆ. ಅದು ಉದಯ ಕಾಲದಲ್ಲಿ ಭಿನ್ನ ಭಿನ್ನವಾಗಿ ಪ್ರಾಪ್ತವಾದಂತೆ ಕಂಡು ಬರುತ್ತದೆ. ಎಲ್ಲ ಜೀವಗಳಿಗೂ ಲಾಭ, ಹಾನಿ, ಸುಖ, ದುಃಖ, ರಾಗ, ದ್ವೇಷ, ಪುಣ್ಯ, ಪಾಪ, ಸಂಯೋಗ, ವಿಯೋಗ, ಆಯು, ಶರೀರ, ಬುದ್ಧಿ, ಬಲ, ಪರಾಕ್ರಮ, ಇಚ್ಛೆ ಮೊದಲಾದವುಗಳು ತಮ್ಮ ತಮ್ಮ ಕರ್ಮಕ್ಕನುಸರಿಸಿ ಭಿನ್ನ ಭಿನ್ನವಾಗುತ್ತವೆ ಇದನ್ನು ನಾವೆಲ್ಲ ಕಾಣುತ್ತೇವೆ. ಒಬ್ಬರ ಇಚ್ಛೆಯು ಇನ್ನೊಬ್ಬರ ಕೂಡ ಹೊಂದಲಾರದು. ಇದರ ಮೇಲಿಂದ ಅನೇಕ ಜೀವಗಳ ಅನೇಕ ಪ್ರಕಾರದ ಉದಯಗಳ ರೀತಿಯನ್ನು ಕಂಡು ನಾವು ರಾಗ-ದ್ವೇಷಗಳ ಆಧೀನವಾಗಕೂಡದು. ವನದಲ್ಲಿ ವಿಹಾರ ಮಾಡುವಂಥ ಪುರುಷನು ಲಕ್ಷಾವಧಿ ಚಿಕ್ಕ ದೊಡ್ಡ ವನಸ್ಪತಿಗಳನ್ನು ಕಾಣುತ್ತಿರುತ್ತಾನೆ ಅವುಗಳಲ್ಲಿ ಯಾವುದನ್ನು ಅವನು

ಪ್ರೀತಿಸಬೇಕು? ಯಾವುದನ್ನು ದ್ವೇಷಿಸಬೇಕು? ಕಲವು ವೃಕ್ಷಗಳು ಎತ್ತರವಾಗಿರುತ್ತವೆ ಇನ್ನು ಕಲವು ಗಿಡ್ಡವಾಗಿರುತ್ತವೆ ಕೆಲವು ವೃಕ್ಷಗಳ ನೆರಳು ದಟ್ಟವಾಗಿರುತ್ತದೆ. ಗಿಡಗಳಿಗೆ ತೀರ ಸ್ವಲ್ಪ ನೆರಳು ಇರುತ್ತದೆ. ಕೆಲವುಗಳಿಗೆ ಹೂವು ಹಣ್ಣುಗಳಿರುತ್ತವೆ ಉಳಿದವುಗಳಿಗೆ ಇರುವದಿಲ್ಲ ಇನ್ನು ಕಲವು ಮರಗಳ ಹಣ್ಣು ಕಹಿ, ಒಗರು ಇದ್ದರೆ ಹಲವು ವೃಕ್ಷಗಳ ಹಣ್ಣುಗಳು ಸವಿಯಾಗಿರುತ್ತವೆ, ಮಧುರವಾಗಿಯೂ ಇರುತ್ತವೆ. ಹಲವು ಗಿಡಗಳಿಗೆ ಹುಳಿ, ಕೆಲವುಗಳಿಗೆ ಒಗರು, ಕೆಲವುಗಳಿಗೆ ವಿಷಾರಿ, ಹಲವುಗಳಿಗೆ ಅಮೃತದಂತೆ ಸವಿ ಹಣ್ಣುಗಳಿರುತ್ತವೆ. ಕೆಲವು ಹಣ್ಣುಗಳಿಗೆ ಮುಳ್ಳುಗಳಿದ್ದರೆ ಹಲವು ಫಲಗಳು ಡೊಂಕಾಗಿರುತ್ತವೆ. ಹಲವು ಫಲಗಳು ನವೀನ, ಕೆಲವು ಜೀರ್ಣ ಫಲಗಳು ಕೆಲವು ಸುಗಂಧಿಯಾದರೆ ಹಲವು ದುರ್ಗಂಧಿಯಾಗುತ್ತವೆ. ಹೀಗೆ ಅನೇಕ ಪ್ರಕಾರದ ಸ್ವಾಭಾವಿಕ ರಚನೆಯು ಪೂರ್ವಕರ್ಮದ ಸಂಸ್ಕಾರಕ್ಕೆ ಅನುಸರಿಸಿ ಆಗಿರುತ್ತದೆ ಏಕೇಂದ್ರಿಯ ಜೀವಗಳಿಗೂ ಕೂಡ ಕರ್ಮದ ಉದಯವು ಇರುತ್ತದೆಂದು ಕಂಡು ಬರುತ್ತದೆ ಹೇಗೆಂದರೆ ಫಲಗಳನ್ನು ನಾವು ಕಡಿಯುತ್ತೇವೆ, ಹರಿಯುತ್ತೇವೆ, ಕತ್ತರಿಸಿ ಒಗೆಯುತ್ತೇವೆ, ನೆಕ್ಕುತ್ತೇವೆ, ಕುದಿಸುತ್ತೇವೆ, ಚೂರು ಮಾಡುತ್ತೇವೆ, ತಿಕ್ಕುತ್ತೇವೆ, ಹೋಳುತ್ತೇವೆ, ಹೆರಚುತ್ತೇವೆ, ಒಣಗಿಸುತ್ತೇವೆ, ಕಟ್ಟುತ್ತೇವೆ, ಮುರಿಯುತ್ತೇವೆ— ಈ ಪ್ರಕಾರ ಅನೇಕ ಕ್ರಿಯೆಗಳನ್ನು ಮಾಡುತ್ತೇವೆ ಇದರ ಮೇಲಿಂದ ಏಕೇಂದ್ರಿಯ ವನಸ್ಪತಿಗಳಲ್ಲಿಯೂ ಸಹ ಕರ್ಮದ ಉದಯದ ಅನೇಕ ಜಾತಿಗಳನ್ನೂ ಕಂಡೂ ತಮ್ಮ ಹಾಗೂ ಇತರರ ಪುಣ್ಯಪಾಪಗಳ ಉದಯದ ಅನೇಕ ಪ್ರಕಾರಗಳನ್ನೂ ನೋಡಿಯೂ ಸಾಮ್ಯಭಾವವನ್ನು ಧಾರಣಮಾಡಬೇಕು. ಆ ವಿಷಯದಲ್ಲಿ ಹರ್ಷ ವಿಷಾದಗಳನ್ನು ಹೊಂದಕೂಡದು. ಕರ್ಮದ ಉದಯದ ತರಂಗಗಳು ಪ್ರತಿಯೊಂದು ಕ್ಷಣಕ್ಕೂ ಭಿನ್ನ ಭಿನ್ನವಾಗುತ್ತ ಹೋಗುತ್ತವೆ ಆ ಭಗವಾನ್ ವೀತರಾಗ ದೇವನು ಯಾವ ಕಾಲದಲ್ಲಿ, ಯಾವ ಕ್ಷೇತ್ರದಲ್ಲಿ ನೋಡಿರುವನೋ ಅವೇ ಪ್ರಮಾಣವಾಗಿವೆ ಮತ್ತು ಅವು ಹಾಗೆಯೇ ಇರುವಂಥವಿವೆ. ಒಟ್ಟಿನಲ್ಲಿ ಕರ್ಮದ ಉದಯವು ತಮ್ಮ ಸ್ವಭಾವದಿಂದ ಭಿನ್ನವೆಂದು ತಿಳಿಯಬೇಕು ಅನೇಕ ಜೀವಪುದ್ಗಲಗಳ ರಚನೆಯನ್ನೂ ಸಂಯೋಗ–ವಿಯೋಗಗಳನ್ನೂ ನೋಡಿ ರಾಗದ್ವೇಷ ರಹಿತ ಪರಮ ಶಾಂತ ಭಾವವನ್ನು ಧಾರಣ ಮಾಡಬೇಕು. ಶಾಂತ ಭಾವವನ್ನು ಧಾರಣ ಮಾಡುವುದರಿಂದ ಪೂರ್ವ ಬದ್ಧ ಕರ್ಮದ ನಿರ್ಜರೆಯು ಆಗಿ, ನವೀನ ಬಂಧವೂ ಆಗುವುದಿಲ್ಲ ಈ ಪ್ರಕಾರ ತಪದ ಪ್ರಕರಣದಲ್ಲಿ ವಿಪಾಕವಿಚಯ ಧರ್ಮಧ್ಯಾನದ ಸ್ವರೂಪವು ಇದೆ.

ಸಂಸ್ಥಾನ ವಿಚಯ— ಇನ್ನು ದರ್ಮಧ್ಯಾನದ ನಾಲ್ಕನೆಯ ಪ್ರಕಾರವು ಸಂಸ್ಥಾನವಿಚಯವಾಗಿದೆ. ಅದರ ಸ್ವರೂಪವು ಹೀಗಿದೆ ನಮಗೆ ನಾಲ್ಕೂ ಕಡೆಗೆ ಕಾಣುವ ಅನಂತಾನಂತ ಆಕಾಶವು ಸ್ವಂತದ ಆಧಾರದ ಮೇಲೆಯೇ ನಿಂತಿದೆ ಅದಕ್ಕೆ ಇನ್ನಾವುದರ ಆಧಾರವೂ ಇಲ್ಲ ಇದರ ಅತ್ಯಂತ ಮಧ್ಯಭಾಗದಲ್ಲಿ ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಕಾಲ ಈ ಐದು ದ್ರವ್ಯಗಳು ಎಷ್ಟು ಸ್ಥಳದಲ್ಲಿ ನಿಲ್ಲುವವೋ ಅಷ್ಟು ಸ್ಥಳಕ್ಕೆ ಅಥವಾ ಕ್ಷೇತ್ರಕ್ಕ ಲೋಕವೆಂದು ಎನ್ನುವರು. ಈ ಲೋಕವನ್ನು ಯಾರೂ ನಿರ್ಮಿಸಿಲ್ಲ ಇದು ಅನಾದಿನಿಧನ ಅಂದರೆ ಅನಾದಿಕಾಲದಿಂದಲೂ ನಿರ್ಮಾಣವಾದುದೇ ಇರುತ್ತದೆ.

ಈ ವಿಷಯದಲ್ಲಿ ಅನ್ಯ ಮತಾನುಯಾಯಿಗಳು ಹೀಗೆ ಸಂಶಯನ್ನು ತೆಗೆಯುತ್ತಾರೆ.–ಹೀಗೆ ಲೋಕವು ಅನಾದಿನಿಧನವಾಗಿರುವುದು ಸಾಧ್ಯವಿಲ್ಲ ಈ ಲೋಕ ಅಥವಾ ಜಗದ ಕರ್ತೃವು ಯಾರಾದರೂ ಇರಲಿಕ್ಕೇಬೇಕು. ಮತ್ತು ಆ ಕರ್ತೃತ್ವವು ಈಶ್ವರನನ್ನುಳಿದು ಇನ್ನಾರಲ್ಲಿಯೂ ಇರಲಿಕ್ಕೆ ಸಾಧ್ಯವಿಲ್ಲ ಅಂತಲೇ ಈಶ್ವರನು ಸೃಷ್ಟಿಕರ್ತನಾಗಿದ್ದಾನೆ. ಕರ್ತೃವಿಲ್ಲದೆ ಯಾವ ಸದ್ರೂಪ ವಸ್ತುವೂ ನಿರ್ಮಾಣವಾಗಿಲ್ಲ, ಆಗಲು ಸಾಧ್ಯವಿಲ್ಲ ಇದು ಸಾಮಾನ್ಯ ನಿಯಮವಾಗಿದೆ

ಹೀಗೆ ಸಂಶಯವನ್ನು ಎತ್ತುವವರಿಗೆ ನಾವು ಈ ಪ್ರಕಾರ ಕೇಳುತ್ತೇವೆ.–ಯಾರಾದರೂ ಕರ್ತೃವಿಲ್ಲದ ಹೊರತಾಗಿ ಯಾವ ಸದ್ರೂಪ ವಸ್ತುವೂ ಇರುವದಿಲ್ಲವೆಂದು ನೀವು ಹೇಳುವಿರಿ. ಅಂದ ಮೇಲೆ ಈಶ್ವರನನ್ನು ಯಾರು ಮಾಡಿದರು? ಈಶ್ವರನೆಂಬವನಂತೂ ಸತ್‌ವಸ್ತುವಾಗಿರುವನಷ್ಟೆ? ಅವನನ್ನು ನಿರ್ಮಿಸಿದವರು ಯಾರಾದರೂ ಇರಲಿಕ್ಕೇಬೇಕು ಈಶ್ವರನನ್ನು ನಿರ್ಮಿಸಿದಂಥವನು ಬೇರೊಬ್ಬ ಮಹಾನ್ ಈಶ್ವರನು ಇರುತ್ತಾನೆನ್ನುವಿರೋ ಹಾಗಾದರೆ ಅವನನ್ನು ನಿರ್ಮಿಸಿದಂಥವರು ಮತ್ತೆ ಯಾರಾದರೂ ಇರಲಿಕ್ಕೆ ಬೇಕೆಂದಾಯಿತು ಇವನಿಗೂ ಇನ್ನೊಬ್ಬ ಕರ್ತೃವೆಂದು ಹೇಳಿದರೆ ಮತ್ತೆ ಅವನ ಕರ್ತೃ ಯಾರೆಂಬ ಪ್ರಶ್ನೆಯು ಹುಟ್ಟುವುದು. ಈ ರೀತಿ ಒಂದಕ್ಕೊಂದು ಪರಂಪರೆಯು ಬೆಳೆಯುತ್ತ ಹೋಗಿ ಕೊನೆ ಎಂಬುದೇ ಉಳಿಯುವದಿಲ್ಲ. ಅದರಿಂದ ಅನವಸ್ಥಾ ಎಂಬ ದೋಷವು ಉತ್ಪನ್ನವಾಗುತ್ತದೆ

ಈಶ್ವರವಾದಿಗಳಿಗೆ ಇನ್ನೂ ಒಂದು ಪ್ರಶ್ನೆಯನ್ನು ಕೇಳಲಾಗುತ್ತದೆ –ಆರಂಭದಲ್ಲಿ ಸೃಷ್ಟಿಯ ರಚನೆಯು ಆಗಿರಲಿಲ್ಲ, ಅದನ್ನು ಹಿಂದಿನಿಂದ ಯಾರಾದರೂ ಮಾಡಿದರೆಂಬುದು ನಿಮ್ಮ ಹೇಳುವಿಕೆಯಾಗಿದೆ. ಮೊದಲು ಸೃಷ್ಟಿ ಎಂಬ ಪದಾರ್ಥವೇ ಇಲ್ಲದಾಗ ಅದರ ರಚನೆಯನ್ನು ಮಾಡುವಂಥ ಈಶ್ವರನು ಯಾವ ಸ್ಥಳದಲ್ಲಿ ನಿಂತು ಸೃಷ್ಟಿ ರಚನೆಯನ್ನು ಮಾಡಿದನು ಹೇಳಿರಿ ನೋಡುವಾ? ಈ ಈಶ್ವರನು ನಿರಾಧಾರನಿದ್ದು ಬಹು ಕಾಲದಿಂದಲೂ ಇದ್ದಾ-ನೆನ್ನುವಿರಾ? ಹಾಗಾದರೆ ಅವನು ಎಲ್ಲಿರುತ್ತಿದ್ದನು? ಯಾವ ಸ್ಥಳದಲ್ಲಿ ಕುಳಿತು ಈ ಸೃಷ್ಟಿಯ ರಚನೆಯನ್ನು ಮಾಡಿದನು? ಸೃಷ್ಟಿಯು ಯಾವುದಾದರೊಂದು ಆಧಾರದ ಮೇಲೆ ಇದೆಯೆಂದರೆ ಆ ಆಧಾರವಾದ ವಸ್ತುವು ಯಾವುದರ ಮೇಲೆ ನಿಂತಿದೆ? ಅದಕ್ಕೆ ಇನ್ನೊಂದು ಆಧಾರವಿದೆಯೆಂದರೆ ಅದಕ್ಕಾಧಾರವೇನು? ಈ ರೀತಿ ಪ್ರಶ್ನೆಗಳ ಮಾಲಿಕೆಯೇ ಆರಂಭವಾಗುತ್ತದೆ. ಇದಕ್ಕೆ ಕೊನೆಯೇ ಇಲ್ಲದಾಗುತ್ತದೆ. ಅದರಿಂದ ಅನವಸ್ಥಾ ದೋಷವು ಉತ್ಪನ್ನವಾಗುತ್ತದೆ ಅದಕ್ಕಾಗಿ ನಿರಾಧಾರ ಹಾಗೂ ಅನಾದಿನಿಧನ ವಸ್ತುವಿನ ಮೇಲೆ ತರ್ಕವನ್ನು ಮಾಡಲಿಕ್ಕೆ ಹೋಗಕೂಡದು; ಹೀಗೂ ನೀವು ಅನ್ನಬಹುದು. ಆದರೆ ಇದರಿಂದ ಸೃಷ್ಟಿಕರ್ತನಿದ್ದಾನೆಂಬ ಸಂಗತಿಯು ಸಿದ್ಧವಾಗುವದಿಲ್ಲ. ಜೈನರಂತೂ ಎಲ್ಲ ಪದಾರ್ಥಗಳೂ ಅನಾದಿನಿಧನವೆಂದು ಹೇಳುತ್ತಾರೆ ಯಾರು ಸೃಷ್ಟಿಕರ್ತನನ್ನು ಒಪ್ಪಿರುವರೋ ಅವರ ಹೇಳಿಕೆಯಲ್ಲಿಯೇ ದೋಷವು ಸಂಭವಿಸುತ್ತದೆ

ಈ ಜಗತ್ತು ನಾನಾ ವಿಧವಾಗಿದೆ. ಈಶ್ವರನೆಂಬವನು ಏಕರೂಪನಾಗಿದ್ದಾನೆ. ಅರ್ಥಾತ್ ಏಕರೂಪ ಈಶ್ವರನು ವಿವಿಧ ರೂಪ ಸೃಷ್ಟಿಯನ್ನು ಹೇಗೆ ನಿರ್ಮಿಸಿದನು? ಇದೂ ಒಂದು ಪ್ರಶ್ನೆಯು ಇದ್ದೇ ಇದೆ. ಇನ್ನು ಈಶ್ವರನಿಗೆ ಶರೀರವಿಲ್ಲ ಅವನು ಅಮೂರ್ತಿಕನು. ಇದನ್ನೂ ನೀವೇ ಹೇಳುವಿರಿ. ಅಂದ ಮೇಲೆ ಅಮೂರ್ತಿಕ ವಸ್ತುವಿನಿಂದ ಮೂರ್ತಿಕವೆನಿಸುವ ಈ ಜಗತ್ತು ಹೇಗೆ ನಿರ್ಮಾಣವಾದೀತು? ಅಮೂರ್ತಿಕ ಪದಾರ್ಥದಿಂದ ಮೂರ್ತಿಕ ಪದಾರ್ಥವು ನಿರ್ಮಾಣವಾಗುತ್ತದೆಂಬ ನಿಯಮವು ಇಲ್ಲ. ಇರಲಿ, ಈಶ್ವರನು ಯಾವ ಕಾಲದಲ್ಲಿ ಸೃಷ್ಟಿಯನ್ನು ರಚಿಸಿದನೋ ಆ ಕಾಲಕ್ಕೆ ಅವನ ಹತ್ತರ ಸಾಮಗ್ರಿಗಳೂ ಉಪಕರಣಗಳೂ ಏನೇನಿದ್ದುವು? ಸಾಧನ ಸಾಮಗ್ರಿಗಳಿಲ್ಲದೆ ಈಶ್ವರನಿಗೆ ಸೃಷ್ಟಿಯನ್ನು ರಚಿಸಲಿಕ್ಕೆ ಬರುವುದೋ ಹೇಗೆ? ಜಗತ್ತಿನಲ್ಲಿ ಉಪಾದಾನ ಕಾರಣವು ಉಪಸ್ಥಿತವಿಲ್ಲದ ಹೊರತಾಗಿ ಯಾವ ವಸ್ತುವು ನಿರ್ಮಾಣವಾಗುವದಿಲ್ಲವೆಂಬುದನ್ನು ನಾವು ಕಾಣುತ್ತೇವೆ ಮಣ್ಣು ಇಲ್ಲದೆ ಕುಂಬಾರನು ಗಡಿಗೆಗಳನ್ನು ಮಾಡಲಿಕ್ಕೆ ಸಾಧ್ಯವೆ? ಈಶ್ವರನು ಮೊಟ್ಟಮೊದಲು ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡನು, ಆ ಮೇಲೆ ಸೃಷ್ಟಿಯ ರಚನೆಯನ್ನು ಆರಂಭಿಸಿದನು, ಹೀಗೆನ್ನಬೇಕಾದರೆ ಸಾಮಗ್ರಿಯನ್ನು ಯಾವುದರಿಂದ ಸಿದ್ಧಮಾಡಿಕೊಂಡನು? ಇದಕ್ಕೆ ಉತ್ತರ ಕೊಡುವಾಗ ತಿರುಗಿ ಅನವಸ್ಥೆಯ ದೋಷವು ಉತ್ಪನ್ನವಾಗುತ್ತದೆ ಜಗತ್ತಿನ ರಚನೆಯನ್ನು ಮಾಡಲಿಕ್ಕೆ ಯೋಗ್ಯವಾದ ಸಾಮಗ್ರಿಯು ಸ್ವತಃ ಸಿದ್ಧವಾಗಿದೆ. ಅದನ್ನು ನಿರ್ಮಿಸಲಿಕ್ಕೆ ಯಾರ ಅವಶ್ಯಕತೆಯೂ ಇಲ್ಲದೆ ಹೋದಲ್ಲಿ ಜಗತ್ತೂ ಕೂಡ ಸ್ವತಃ ಸಿದ್ಧವೆಂದು ಒಪ್ಪಬೇಕಾದೀತು ಜಗತ್ತಿನ ಕರ್ತೃವು ಹೇಗೆ ಸ್ವತಃ ಸಿದ್ಧವೋ ಹಾಗೆಯೇ ಜಗತ್ತೂ ಕೂಡ ಸ್ವತಃ ಸಿದ್ಧವೆಂದು ಮನ್ನಿಸಬೇಕಾದೀತು

ಈಶ್ವರನು ಸಮರ್ಥನಿದ್ದಾನೆ ಅವನಿಗೆ ಸಾಮಗ್ರಿಗಳಿಲ್ಲದೆ ಕೇವಲ ಇಚ್ಛಾ ಮಾತ್ರದಿಂದ ಜಗತ್ತಿನ ರಚನೆಯನ್ನು ಮಾಡಲು ಸಾಧ್ಯವಿದೆ ಹೀಗೆನ್ನಲಿಕ್ಕೆ ಏನಾದರೂ ಪ್ರಮಾಣಗಳಿವೆಯೇ? ಇಚ್ಛೆಯನ್ನು ಮಾತ್ರಮಾಡಿ ಏನು ಬೇಕಾದದನ್ನು ಮಾಡಲಿಕ್ಕೆ ಬರುತ್ತದೆಂಬುದು ಒಮ್ಮೆ ಸಿದ್ಧಾಂತವೆನಿಸಿದ ಮೇಲೆ ಅದರಲ್ಲಿ ವಿಚಾರ ಮಾಡುವದೇನು ಉಳಿಯಿತು?

ಈಶ್ವರನು ಕೃತಾರ್ಥನೋ, ಅಥವಾ ಅಕೃತಾರ್ಥನೋ? ಕೃತಾರ್ಥನೆಂದರೆ ಅವನಿಗೆ ಮಾಡಲಿಕ್ಕೆ ಯೋಗ್ಯ ಕಾರ್ಯವು ಯಾವುದೂ ಉಳಿದಿಲ್ಲವೆಂದಂತಾಯಿತು. ಅಂದ ಮೇಲೆ ಅವನಿಗೆ ಜಗತ್ತನ್ನು ರಚಿಸುವ ಇಚ್ಛೆಯಾದರೂ ಹೇಗಾಯಿತು? ಇನ್ನು ಅವನು ಅಕೃತಾರ್ಥನಿದ್ದಾನೆಂದು ಎಂದರೆ ಅವನು ಈ ಸರ್ವ ಜಗತ್ತನ್ನು ರಚಿಸಲಿಕ್ಕೆ ಸಮರ್ಥನಾಗಲಾರನು ಇದರಿಂದ ಜಗತ್ತಿನ ಕರ್ತೃತ್ವವು ಈಶ್ವರನ ಪಾಲಿಗೆ ಹೋಗುವದಿಲ್ಲ

ಉಳಿದವರು ಅನೇಕರು ಈಶ್ವರನು ಅಮೂರ್ತಿಕ, ನಿಷ್ಕ್ರಿಯ ಮತ್ತು ಸರ್ವವ್ಯಾಪಿ ಎಂದೆನ್ನುವರು ಅವರ ಹೇಳಿಕೆಯ ಪ್ರಕಾರ ಒಂದು ವೇಳೆ ಈಶ್ವರನ ಸ್ವರೂಪವನ್ನು ಮನ್ನಿಸಿದಲ್ಲಿ ಇಂಥ ಈಶ್ವರನು ಜಗತ್ತನ್ನು ನಿರ್ಮಿಸುವುದು ಹೇಗೆ ಸಾಧ್ಯವಿದೆ? ಇದೂ ಕಠಿಣವೇ ಆಗಿದೆ. ಯಾವನು ಸರ್ವವ್ಯಾಪಿಯೋ ಅವನು ಎಲ್ಲ ಪದಾರ್ಥಗಳಲ್ಲೂ ವ್ಯಾಪಿಸಿರುತ್ತಾನೆ. ಅವನು ಜಗತ್ತಿನ ರಚನೆಯನ್ನು ಹೇಗೆ ಮಾಡುವನು? ಈಶ್ವರನು ಕ್ರಿಯಾ ರಹಿತ

ಎಂದರೆ ನಿಷ್ಕ್ರಿಯನೆಂದು ಒಪ್ಪಿದರೆ ಅವನು ಸೃಷ್ಟಿಯ ರಚನೆಗಾಗಿ ಕಾರ್ಯವನ್ನು ಮಾಡುವನೆಂಬುದು ಹೇಗೆ ಸಂಭವಿಸೀತು? ಈಶ್ವರನು ಸೃಷ್ಟಿಯನ್ನು ಯಾವ ಹೇತುವಿನಿಂದ ರಚಿಸಿದನು? ಅವನಂತೂ ಕೃತಾರ್ಥ ಹಾಗೂ ಕೃತಕೃತ್ಯನಾಗಿದ್ದಾನೆ. ಅವನಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಈ ನಾಲ್ಕು ಪುರುಷಾರ್ಥಗಳಲ್ಲಿ ಏನನ್ನೂ ಅವನಿಗೆ ಮಾಡುವುದು ಉಳಿದಿಲ್ಲ ಅವನು ಸೃಷ್ಟಿಯನ್ನು ರಚಿಸಿ, ಏನು ಫಲವನ್ನು ಬಯಸುವನು? ಪ್ರಯೋಜನ-ವಿಲ್ಲದೆ ಮೂರ್ಖ ಮನುಷ್ಯನೂ ಕೂಡ ಯಾವ ಕೆಲಸವನ್ನೂ ಮಾಡಲಿಕ್ಕೆ ಪ್ರವೃತ್ತನಾಗುವದಿಲ್ಲವೆಂಬುದನ್ನು ನಾವು ಕಾಣುತ್ತೇವೆ ಒಂದು ವೇಳೆ ಸೃಷ್ಟಿಯನ್ನು ರಚಿಸುವುದರಲ್ಲಿ ಈಶ್ವರನಿಗೆ ಯಾವ ಪ್ರಯೋಜನವೂ ಇರಲಿಲ್ಲ, ಅವನು ನಿಷ್ಕಾರಣವಾಗಿಯೇ ರಚಿಸಿದ್ದಾನೆ ಎನ್ನುವದಾದಲ್ಲಿ ಈಶ್ವರನು ನಿರರ್ಥಕ ಕಾರ್ಯ ಮಾಡುವನೆಂದು ನಿಶ್ಚಿತ-ವಾಗುತ್ತದೆ ಈ ನಿರರ್ಥಕ ಕ್ರಿಯೆಯು 'ಈಶ್ವರಲೀಲೆ' ಎಂದು ಎನ್ನುವದಾದರೆ ಅವನಿಗೆ ಮೋಹ ಪರಂಪರೆಯು ಇದ್ದಂತಾಯಿತು ಯಾಕಂದರೆ ಲೀಲೆ ಮತ್ತು ಕ್ರೀಡೆಗಳು ಅಜ್ಞಾನಿಯಾದ ಬಾಲಕನಿಗೆ ಇರುತ್ತವೆ. ಇಲ್ಲವೆ ಆರಂಭದಲ್ಲಿ ಯಾವನು ದುಃಖಿಯಾಗಿರುವನೋ ಅವನು ಲೀಲೆಯಲ್ಲಿ ಮುಂದೆ ಆ ದುಃಖವನ್ನು ಮರೆಯಲಿಕ್ಕೆ ಯತ್ನಿಸುತ್ತಾನೆ. ಈಶ್ವರನು ಜಗತ್ತನ್ನು ನಿರ್ಮಿಸುವಾಗ ಎಲ್ಲ ವಸ್ತುಗಳನ್ನೂ ಸುಂದರ ಹಾಗೂ ಸುಖವನ್ನು ಕೊಡುವಂದವುಗಳನ್ನೇ ಏಕೆ ನಿರ್ಮಾಣ ಮಾಡಲಿಲ್ಲ? ಅವನು ಜಗತ್ತಿನಲ್ಲಿ ಅನೇಕ ಬಡವ, ರೋಗಿ, ದುಃಖಿ, ಕುರೂಪಿ, ಕುಬುದ್ಧಿ, ನೀಚ ಜಾತಿಯ ಪ್ರಾಣಿ; ಹಾಗೆಯೇ ವಿಷ, ಮುಳ್ಳು, ಮಲ, ಮೂತ್ರ ಇತ್ಯಾದಿ ಮತ್ತು ದುಷ್ಟ, ಮ್ಲೇಚ್ಛ, ಭಿಲ್ಲ, ಸರ್ಪ, ಚಾಂಡಾಲ ಮೊದಲಾದ ಪದಾರ್ಥಗಳನ್ನು ಯಾಕೆ ಉತ್ಪನ್ನ ಮಾಡಿದನು? ಬುದ್ಧಿವಂತನಿದ್ದವನು ತನ್ನ ಎಲ್ಲ ಬುದ್ಧಿಯನ್ನೂ ಖರ್ಚುಮಾಡಿ ಯಾವುದಾದರೂ ಕೆಲಸವನ್ನು ಅತ್ಯುತ್ತಮ ರೀತಿಯಲ್ಲಿ ಮಾಡಲಿಕ್ಕೆ ಯತ್ನಿಸುತ್ತಾನೆ. ತನ್ನಿಂದ ಯಾವ ಅನಿಷ್ಟವೂ ಉತ್ಪನ್ನವಾಗಬಾರದೆಂದು ಅವನು ಇಚ್ಛಿಸುತ್ತಿರುತ್ತಾನೆ. ಅಂದ ಮೇಲೆ ಈಶ್ವರನಂತೂ ಅತುಲ ಬುದ್ಧಿವಂತನು, ಅಲ್ಲದೆ ಸಮರ್ಥ ಹಾಗೂ ಸ್ವತಂತ್ರನು ಇದ್ದು ಗ್ಲಾನಿಯು ಉತ್ಪನ್ನ-ವಾಗುವಂತೆ ಭಯಾನಕ, ದುಃಖದಾಯಕ ಮತ್ತು ಹೊಲಸಾದಂಥ ಪದಾರ್ಥಗಳನ್ನು ಅವನು ಯಾಕೆ ಹುಟ್ಟಿಸಿದನು? ಮನುಷ್ಯನು ಎಂಥ ಎಂಥ ಕರ್ಮಗಳನ್ನು ಮಾಡಿದನೋ ಅವುಗಳಿಗೆ ಅನುಸರಿಸಿ ದೇವನು ಶರೀರಾದಿ ಸರ್ವ ಸಾಮಗ್ರಿಗಳನ್ನು ನಿರ್ಮಿಸಿದನೆಂದೂ ನೀವು ಹೇಳಬಹುದಾಗಿದೆ. ಹೀಗೆಂದರೆ ಈಶ್ವರನ ಈಶ್ವರತ್ವವು ಏನು ಉಳಿದಂತಾಯಿತು? ನೆಯ್ಕಾರನಿಗೆ ದಪ್ಪ ನೂಲನ್ನು ಕೊಟ್ಟರೆ ಅವನು ದಪ್ಪ ಅರಿವೆಯನ್ನು ನೆಯ್ದು ಕೊಡುವನು ಜಿನುಗು ನೂಲನ್ನು ಕೊಟ್ಟರೆ ತಿಳುವು ಅರಿವೆಯನ್ನು ನಿರ್ಮಿಸುವನು ಇದರಲ್ಲಿ ಅವನ ಮಹತ್ವವೇನು? ನಾವು ನೂಲನ್ನು ಯಾವ ತರಗತಿಯದನ್ನು ಕೊಟ್ಟೆವೋ ಆ ತರಗತಿಯ ವಸ್ತ್ರವನ್ನು ಅವನು ನೆಯ್ದು ಕೊಟ್ಟನು

ಸಂಸಾರದಲ್ಲಿ ಪ್ರಾಣಿಗಳು ಒಳ್ಳೆಯ ಹಾಗೂ ಕೆಟ್ಟ ಕರ್ಮಗಳನ್ನು ಮಾಡುತ್ತವೆ ಆಗ ಅವು ತಮ್ಮ ಇಚ್ಛೆಗೆ ಅನುಸರಿಸಿ ವರ್ತಿಸುತ್ತವೆಯೋ ಅಥವಾ ಈಶ್ವರನ ಇಚ್ಛೆಯಂತೆ ವರ್ತಿಸುತ್ತವೆಯೋ? ಅವು ಈಶ್ವರನ ಇಚ್ಛೆಯಂತೆ ನಡೆಯುತ್ತವೆಂದು ತಿಳಿದರೆ ಈಶ್ವರನು ಎಲ್ಲವನ್ನೂ ತಿಳಿದೂ ತಿಳಿದೂ ತನ್ನ ಪ್ರಜೆಗಳ ಕಡೆಯಿಂದ ಕೆಟ್ಟ ಕಾರ್ಯಗಳನ್ನು ಏಕೆ ಮಾಡಿಸುವನು? ತನ್ನ ಸಂತಾನ ಪರಂಪರೆಯು ದುಷ್ಟ ದುರಾಚಾರಿಗಳು ಆಗಲೆಂದು ಯಾರಾದರೂ ಇಚ್ಛಿಸುವರೋ? ಇನ್ನು ಈಶ್ವರನ ಇಚ್ಛೆ ಇಲ್ಲದೆ ಪ್ರಾಣಿಗಳು ತಮ್ಮ ಮನಸ್ಸಿಗೆ ಬಂದಂತೆ ಸ್ವತಂತ್ರವಾಗಿ ವರ್ತಿಸುತ್ತವೆ ಎಂದು ಒಪ್ಪಿದರೆ ಈಶ್ವರನ ಕರ್ತೃತ್ವ ಹಾಗೂ ಈಶ್ವರತ್ವಗಳು ಎಲ್ಲಿ ಹೋದುವು? ಆಗ ಜಗತ್ತು ಸ್ವತಃ ಕರ್ಮಾದಿಕ ಕಾರ್ಯಗಳ ಕರ್ತೃವಾದಂತಾಯಿತು ಅಂದ ಮೇಲೆ ಕರ್ಮವನ್ನು ಮಾಡಿದಂತೆ ಕಾರ್ಯವು ಆದೀತು ಆದರೆ ಅದು ಈಶ್ವರನ ನಿಮಿತ್ತದಿಂದ ನಡೆಯುತ್ತದೆನ್ನುವದಾದಲ್ಲಿ ಆ ವಸ್ತುವು ಮೊದಲೇ ಸಿದ್ಧವಾಗಿದೆ ಎಂದಂತಾಯಿತು ಅಂಥದರ ಸಂಬಂಧವನ್ನು ಕಾರಣವಿಲ್ಲದೆ ಈಶ್ವರನಿಗೆ ಒಯ್ದು ಹಚ್ಚುವುದರಲ್ಲಿ ಅರ್ಥವೇನಿದೆ?

ಈಶ್ವರನು ಎಲ್ಲ ಪ್ರಾಣಿಗಳ ಮೇಲೆಯೂ ಪ್ರೇಮ ಮಾಡುವವನಿದ್ದಾನೆ. ಜಗತ್ತಿನ ಮೇಲೆ ಅನುಗ್ರಹವನ್ನು ಮಾಡುವದಕ್ಕಾಗಿ ಅದನ್ನವನು ರಚಿಸಿದ್ದಾನೆ ಹೀಗೂ ನೀವು ಹೇಳುವದಾದಲ್ಲಿ ಅವನು ಸರ್ವ ಸೃಷ್ಟಿಯನ್ನು ಸುಖಿ ಹಾಗೂ ಉಪದ್ರವ ರಹಿತವನ್ನಾಗಿ ರಚಿಸಲಿಕ್ಕೆಬೇಕಾಗಿತ್ತು ಆದರೆ ಜಗತ್ತಿನಲ್ಲಿ ದುಃಖ, ವಿಯೋಗ, ದಾರಿದ್ರ್ಯ ಮತ್ತು ದೈನ್ಯ ಇವು ಎಲ್ಲೆಡೆಗೂ ತುಂಬಿದ್ದು ಕಂಡುಬರುತ್ತದೆ ಇದನ್ನೆಲ್ಲ ಗಮನಿಸುವಾಗ ಹೀಗೆ ಕಂಡುಬರುತ್ತದೆ ಈ ಸಂಗತಿಯಿಂದಲೂ ಈಶ್ವರನ ಪ್ರಭುತ್ವವು ಉಳಿಯುವದಿಲ್ಲ. ಇನ್ನೊಂದು ಮಾತನ್ನು ನೀವು ಹೇಳಬಹುದು ಈಶ್ವರನು ತನ್ನ ಭಕ್ತರನ್ನು ಸುಖಿಯಾಗಿಯೂ ದುಷ್ಟರನ್ನು ದುಃಖಿಯಾಗಿಯೂ ಮಾಡುವನು. ಇದರಲ್ಲಿ ಅವನ

ಪ್ರಭುತ್ವವಿಲ್ಲವೆ? ಆದರೆ ಈಶ್ವರನು ಸ್ವತಃ ಮೊದಲು ದುಷ್ಟರನ್ನೇಕೆ ನಿರ್ಮಿಸಿದನು? ಅವನಿಗೆ ಎಲ್ಲರನ್ನೂ ತನ್ನ ಭಕ್ತರನ್ನಾಗಿಯೇ ನಿರ್ಮಾಣ ಮಾಡಲಿಕ್ಕೆ ಬರುತ್ತಿರಲಿಲ್ಲವೆ? ಈಶ್ವರನಿಗೆ ಮೊದಲು ದುಷ್ಟರ ಕಲ್ಪನೆಯು ಇರಲಿಲ್ಲ. ಅವನು ಯಾವಾಗ ದುಷ್ಟತನ್ನು ಕಂಡನೋ ಆಗ ಅವರಿಗೆ ಶಾಸನವನ್ನು ಮಾಡಿದನು ಹೀಗೆ ಹೇಳುವುದರಲ್ಲಿ ಈಶ್ವರನ ಅಜ್ಞಾನವು ಪ್ರಕಟವಾಗುತ್ತದೆ.

ಈಶ್ವರನು ಮಾಡುವ ಜಗತ್ತಿನ ರಚನೆಯು ತೀರ ಹೊಸದಾದುದೋ, ಇಲ್ಲವೆ ಮೊದಲು ಇದ್ದುದನ್ನು ಪುನಃ ರಚಿಸಿದನೋ? ಮೊದಲು ಇದ್ದುದನ್ನು ಈಗ ಈಶ್ವರನು ರಚಿಸಿದನೆಂದರೆ ಈ ಸೃಷ್ಟಿಯು ಮೊದಲಿನಿಂದಲೂ ಸತ್ ಅರ್ಥಾತ್ ಅಸ್ತಿತ್ವದಲ್ಲಿತ್ತು. ಇದರ ರಚನೆಯನ್ನು ಪುನಃ ಏನು ಮಾಡುವದಿದೆ? ಮೊದಲು ಮೂಲದಲ್ಲಿ ಇಲ್ಲದ ಪದಾರ್ಥಗಳಿಂದ ಈ ಸೃಷ್ಟಿಯನ್ನು ನಿರ್ಮಿಸಿದನೆಂದರೆ ಅದಂತೂ ಆಕಾಶ ಪುಷ್ಪದಂತೆ ಪದಾರ್ಥವು ಅವಸ್ತುವೆಂದೇ ನಿಶ್ಚಿತವಾದೀತು

ಈಶ್ವರನಿಗೆ ನೀವು ಮುಕ್ತನೆನ್ನುವಿರಲ್ಲವೆ? ಮುಕ್ತರಿದ್ದವರು ಯಾವ ಕ್ರಿಯೆಯನ್ನೂ ಮಾಡುವದಿಲ್ಲ, ಅಲ್ಲದೆ ಮಾಡಿಸುವದಿಲ್ಲ ಅವರು ಯಾವಾಗಲೂ ಉದಾಸೀನರಾಗಿರುತ್ತಾರೆ. ಅವರಿಗೆ ಸೃಷ್ಟಿಯನ್ನು ರಚಿಸಬೇಕೆಂಬ ವಿಚಾರವಾದರೂ ಹೇಗೆ ಉತ್ಪನ್ನವಾದೀತು? ಮಾಡುವುದು ಇಲ್ಲವೆ ಮಾಡಿಸುವದೆಂಬ ಚಿಂತೆಯು ಮೂಲದಲ್ಲಿ ಮುಕ್ತಾತ್ಮರಲ್ಲಿ ಸಂಭವಿಸುವುದೇ ಇಲ್ಲ ಈಶ್ವರನು ಸಂಸಾರಿಯಾಗಿದ್ದರೆ ಅವನು ನಮ್ಮಂತೆ ಇರಲಿಕ್ಕೆಬೇಕಾಯಿತು ಅಂಥವನಿಗೆ ಈ ಸರ್ವ ಜಗತ್ತನ್ನು ಉತ್ಪನ್ನ ಮಾಡುವದಾಗದು. ಅದಕ್ಕಾಗಿ ಈಶ್ವರನು ಜಗತ್ತಿನ ಕರ್ತೃವಾಗಿದ್ದಾನೆ ' ಎಂದು ಹೇಳುವುದು ಮೂಲದಲ್ಲಿಯೇ ಸಿದ್ಧವಾಗುವದಿಲ್ಲ ಮೊದಲು ಜಗತ್ತನ್ನು ತಾನೇ ರಚಿಸುವುದು ಮತ್ತು ಪುನಃ ತಾನೇ ಅದನ್ನು ಸಂಹರಿಸುವುದು—ಇದು ಮಹಾನ್ ಅಧರ್ಮವಾಗಿದೆ.

'ಜಗತ್ತಿನಲ್ಲಿ ದೈತ್ಯರಾಕ್ಷಸಾದಿ ದುಷ್ಟರ ಉಪದ್ರವವು ಬಹಳವಾಯಿತೆಂದು ಈಶ್ವರನು ಪ್ರಲಯ ಕಾಲದಲ್ಲಿ ಅವರ ಸಂಹಾರ ಮಾಡುತ್ತಾನೆ.' ಹೀಗೆ ಹೇಳುವವಾದಲ್ಲಿ ಮೊದಲು ಇಂಥ ದುಷ್ಟರನ್ನು ಈಶ್ವರನು ನಿರ್ಮಿಸಬೇಕೇಕೆ? ಈ ಜನರು ದುಷ್ಟರಾದರೆಂದು ಅವನಿಗೆ ತಿಳಿದಿರಲಿಲ್ಲವೆಂದರೆ ಈಶ್ವರನು ಅಜ್ಞಾನಿಯೆನಿಸುವನು. ಅವನಿಗೆ ತನ್ನ ಕೃತಿಯ ಫಲವು ತಿಳಿಯಲಿಲ್ಲ ಅದಕ್ಕಾಗಿ ಅವನು ದುಃಖಿಯಾಗಿ ಮೇಲಿಂದ ಮೇಲೆ ಹೊಸ ರಚನೆಯನ್ನು ಮಾಡುತ್ತಿದ್ದಾನೆ. ರಚನೆ ಮಾಡುವುದರಲ್ಲಿ ತಪ್ಪಾಯಿತೆಂದು ತಿಳಿದು ಬಂದ ಮೇಲೆ ಅದನ್ನು ಸಂಹರಿಸಲಿಕ್ಕೆ ಸಿದ್ಧನಾಗುತ್ತಾನೆ. ಆಗ ದುಷ್ಟರು ಎಲ್ಲಿದ್ದಾರೆಂಬುದನ್ನು ಶೋಧಿಸ ತೊಡಗುತ್ತಾನೆ. ದುಃಖದಿಂದ ವ್ಯಾಕುಲನಾಗುವುದರಿಂದ ಸ್ವತಃ ಪ್ರಕಟ-ವಾಗದೆ ದುಷ್ಟರನ್ನು ಸಂಹರಿಸುವದಕ್ಕಾಗಿ ಸಾವಿರಾರು ಉಪಾಯ, ವೇಷ, ಶಸ್ತ್ರಾದಿ ಸಾಮಗ್ರಿಗಳನ್ನು ಕೂಡ ಹಾಕುವ ವಿಚಾರದಲ್ಲಿ ಅನೇಕರ ಸಹಾಯವನ್ನು ಹೇಗೆ ಪಡೆಯಬೇಕೆಂದು ಚಿಂತಿಸುತ್ತಾನೆ. ಈ ಚಿಂತೆಯಲ್ಲಿಯೇ ತನ್ನ ಜನ್ಮವನ್ನೆಲ್ಲ ದುಃಖದಲ್ಲಿ ಕಳೆಯುತ್ತಾನೆ ಹೀಗೆಲ್ಲ ಹೇಳಬೇಕಾಗುವುದು ಈ ಪ್ರಕಾರ ಈಶ್ವರನಲ್ಲಿ ಅಜ್ಞಾನ, ರಾಗ-ದ್ವೇಷ, ಮೋಹ ಮೊದಲಾದ ಅನೇಕ ದೋಷಗಳು ಉತ್ಪನ್ನವಾಗುತ್ತವೆ.

ಈ ಕಾರಣಕ್ಕಾಗಿ ಇತರ ಜನರು ರಚಿಸಿದ ಅಸತ್ಯ ಶಾಸ್ತ್ರಗಳಿಂದ ಉತ್ಪನ್ನವಾಗುವ ದುಃಖದ ವಿಚಾರವನ್ನು ದೂಡಿ ವೀತರಾಗ ಸರ್ವಜ್ಞನು ಪ್ರರೂಪಣ ಮಾಡಿದ ಅನಾದಿನಿಧನ, ಸ್ವತಃ ಸಿದ್ಧ, ಇಂಥ ಜಗತ್ತಿನ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡು ಅದೇ ನಿಜವಾದುದೆಂದು ದೃಢವಾದ ಶ್ರದ್ಧೆಯನ್ನು ಇಡಬೇಕು. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಈ ಆರು ದ್ರವ್ಯಗಳು ಅನಾದಿನಿಧನವಾಗಿವೆ. ಅಸತ್ ವಸ್ತುವಿನ ನಿರ್ಮಾಣಕ್ಕಾಗಿ ಸತ್ ವಸ್ತುವಿನ ನಾಶವನ್ನು ಮಾಡುವದಕ್ಕೆ ಯಾರೂ ಎಂದೂ ತ್ರಿಕಾಲದಲ್ಲಿಯೂ ಸಮರ್ಥರಾಗಲಾರರು ಇದು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು ಉತ್ಪಾದ, ವಿನಾಶಗಳು ದ್ರವ್ಯದಲ್ಲಿ ಆಗುತ್ತಿರುತ್ತವೆ. ಅಂತರೀ ಶಾಸ್ತ್ರದಲ್ಲಿ ವರ್ಣಿಸಿದ ವಿಷಯಗಳೆಲ್ಲ ಪರ್ಯಾಯಾರ್ಥಿಕ ನಯದ ಅಪೇಕ್ಷೆಯಿಂದ ಹೇಳಲಾಗಿವೆ ಚೇತನ, ಅಚೇತನ ಪದಾರ್ಥಗಳು ಎಷ್ಟಿವೆಯೋ ಅವೆಲ್ಲವುಗಳು ನಾಶ ಹೊಂದುವದಿಲ್ಲ ಇದು ದ್ರವ್ಯ ದೃಷ್ಟಿಯಿಂದ ಹೇಳಲಾಗಿದೆ ಅವು ಉತ್ಪತ್ತಿಯನ್ನೂ ಹೊಂದುವದಿಲ್ಲ ಪ್ರತಿಯೊಂದು ಕ್ಷಣದಲ್ಲಿಯೂ ಅದರೊಳಗಿನ ಪೂರ್ವ ಪರ್ಯಾಯದ ನಾಶ ಮತ್ತು ಉತ್ತರ ಪರ್ಯಾಯದ ಉತ್ಪಾದ ಆಗುತ್ತಿರುತ್ತದೆ ದ್ರವ್ಯತ್ವ ಧ್ರುವವಾಗಿದೆ. ಅದು ಎಂದೂ ಉತ್ಪನ್ನವಾಗುವದಿಲ್ಲ, ನಾಶವನ್ನೂ ಹೊಂದುವದಿಲ್ಲ ಉತ್ಪನ್ನವಾಗುವದು, ನಾಶವನ್ನು ಹೊಂದುವದು ಇವು ಪರ್ಯಾಯದ ಕಾರ್ಯಗಳಾಗಿವೆ. ಪರ್ಯಾಯವು ಯಾವಾಗಲೂ ಒಂದೇ ರೂಪದಲ್ಲಿ ಇರುವದಿಲ್ಲ. ದ್ರವ್ಯದ

ನಾಶವು ಎಂದೂ ಆಗುವದಿಲ್ಲ. ಆರೂ ದ್ರವ್ಯಗಳ ಸಮುದಾಯಕ್ಕೇನೇ ಲೋಕವೆನ್ನಲಾಗುವುದು ಇವನ್ನುಳಿದ ಬೇರೆ ವಸ್ತುವು ಲೋಕವೆನಿಸಲಾರದು

## ದ್ವಾದಶ ಭಾವನೆಗಳು

ಈ ಸಂಸ್ಥಾನವಿಚಯ ಧರ್ಮಧ್ಯಾನದಲ್ಲಿ ಹನ್ನೆರಡು ಭಾವನೆಗಳ ಚಿಂತನವನ್ನು ನಿರಂತರವಾಗಿ ಮಾಡು-ತ್ತಿರುವುದು ಯೋಗ್ಯವಾಗಿದೆ ಅಂತಲೇ ಅವುಗಳ ಸ್ವರೂಪವನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳಲಾಗುತ್ತದೆ. ಆ ಹನ್ನೆರಡು ಭಾವನೆಗಳು ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿ-ದುರ್ಲಭ ಮತ್ತು ಧರ್ಮ ಎಂದು ಇವೆ ಈ ಎಲ್ಲವುಗಳ ಸ್ವಭಾವವನ್ನು ಭಗವಾನ್ ತೀರ್ಥಂಕರರೂ ಕೂಡ ಧ್ಯಾನಿಸಿ ಸಂಸಾರ ದೇಹ ಭೋಗಗಳಿಂದ ವಿರಕ್ತಿಯನ್ನು ಹೊಂದಿದ್ದಾರೆ ಅದಕ್ಕಾಗಿ ಈ ಭಾವನೆಗಳಿಗೆ ವೈರಾಗ್ಯದ ತಾಯಿ ಎಂದು ಹೇಳಿದ್ದಾರೆ. ಅದು ಯೋಗ್ಯವಾಗಿದೆ ಈ ಭಾವನೆಗಳನ್ನು ಚಿಂತಿಸುವುದರಿಂದ ಎಲ್ಲ ಜೀವಗಳ ಹಿತವು ಆಗುತ್ತದೆ. ಅನೇಕ ದುಃಖಗಳಿಂದ ವ್ಯಾಪಿಸಿದಂಥ ಸಂಸಾರೀ ಜೀವಗಳಿಗೆ ಈ ಭಾವನೆಗಳಿಗೆ ಶರಣು ಹೋಗುವುದರಿಂದ ದುಃಖಮುಕ್ತವಾಗಲಿಕ್ಕೆಬರುತ್ತದೆ ದುಃಖರೂಪೀ ಅಗ್ನಿಯಿಂದ ಕಾಯ್ದು ಜೀವಗಳಿಗೆ ಶೀತಲ, ಮಂದಮತ್ತು ಸುಗಂಧ ವಾಯುವಿನಿಂದ ವ್ಯಾಪಿಸಿದ ಕಮಲ ವನದಲ್ಲಿ ಹೋಗಿ ವಾಸಮಾಡಿದಂಥ ಸುಖವು ಭಾವನೆಗಳಿಂದ ಆಗುತ್ತದೆ. ಈ ಭಾವನೆಗಳು ತತ್ತ್ವ ನಿರ್ಣಯವನ್ನು ಮಾಡಿ ಕೊಡುವ ಮತ್ತು ಅಶುಭ ಧ್ಯಾನದ ನಾಶ ಮಾಡುವಂಥವು ಇವೆ ಜೀವದ ಕಲ್ಯಾಣದಲ್ಲಿ ಇವುಗಳ ಚಿಂತನಕ್ಕೆ ಸಮಾನವಾದುದು ಯಾವುದೂ ಇಲ್ಲ ಈ ಭಾವನೆಗಳು ದ್ವಾದಶಾಂಗ-ವಾಣಿಯ ಕೇವಲ ಸಾರದಂತಿವೆ. ಅಂತಲೇ ಇವುಗಳನ್ನೂ ಬಹಳ ಪ್ರೀತಿಯಿಂದ ಈ ಸಂಸ್ಥಾನವಿಚಯ ಧರ್ಮಧ್ಯಾನದಲ್ಲಿ ಚಿಂತನ ಮಾಡುವುದು ಅವಶ್ಯವಾಗಿದೆ. ಇವುಗಳಿಗೆ ಅನುಪ್ರೇಕ್ಷೆ ಎಂದೂ ಹೇಳುವರು

## ೧. ಅನಿತ್ಯ ಅನುಪ್ರೇಕ್ಷೆ

ಜಗತ್ತಿನಲ್ಲಿ ಕಂಡು ಬರುವ ಎಲ್ಲ ಪದಾರ್ಥಗಳೂ ಅನಿತ್ಯವಾಗಿವೆ ದೇವ, ಮನುಷ್ಯ, ತಿರ್ಯಂಚ ಮೊದಲಾದ ಎಲ್ಲ ಪ್ರಾಣಿಗಳೂ ನೀರ ಮೇಲಿನ ಗುರುಳೆಯಂತೆಯೂ, ಅಗ್ನಿಯ ಜ್ವಾಲೆಯಂತೆಯೂ ಇಲ್ಲದಂತೆ ಆಗುತ್ತವೆ ಹಾಗೆಯೇ ವೈಭವ, ಋದ್ಧಿ, ಸಂಪತ್ತಿ ಮತ್ತು ಇತರ ಪರಿಗ್ರಹಗಳೂ ಕನಸಿನಂತೆ ಕ್ಷಣಭಂಗುರವಾಗಿವೆ ಇದೇ ಪ್ರಕಾರ ಧನ, ಯೌವನ, ಜೀವನ ಮೊದಲಾದ ಎಲ್ಲ ಪರಿವಾರವು ಸಹ ನಾಶವಾಗುವಂಥವಿವೆ ಆದರೆ ಮಿಥ್ಯಾದೃಷ್ಟಿ ಜೀವವು ಇವುಗಳಿಗೇ ತನ್ನ ಹಿತವನ್ನು ಮಾಡುವಂಥವೆಂದು ತಿಳಿಯುತ್ತದೆ ಯಾರಿಗೆ ಸ್ವಪರರೂಪದ ಜ್ಞಾನವಿರುವುದೋ ಅವರು ಪರವಸ್ತುವಿಗೆ ತನ್ನ ಸ್ವರೂಪವೆಂದು ಹೇಗೆ ತಿಳಿದಾರು, ನಮಗೆ ಕಾಣುವ ಇಂದ್ರಿಯಗಳ ಸೌಖ್ಯವು ಇಂದ್ರ ಧನುಷ್ಯದೊಳಗಿನ ವರ್ಣದಂತೆ ನೋಡು ನೋಡುವಷ್ಟರಲ್ಲಿ ನಷ್ಟವಾಗುವಂಥದಿರುತ್ತದೆ. ತಾರುಣ್ಯದ ಶಕ್ತಿಯು ಸಾಯಂಕಾಲದ ಸೂರ್ಯನ ಕೆಂಪುವರ್ಣದಂತೆ ಬೇಗನೆ ಅಳಿದು ಹೋಗುವಂಥದಿದೆ ಅದಕ್ಕಾಗಿ ಇದು ನನ್ನ ಊರು, ಇದು ನನ್ನ ರಾಜ್ಯ, ಇದು ನನ್ನ ಮನೆ, ಇದು ನನ್ನ ಧನ, ಇದು ನನ್ನ ಕುಟುಂಬ, ಇವು ನನ್ನ ಮಕ್ಕಳು ಎಂದು ವಿಕಲ್ಪನೆ ಮಾಡುವುದು ವ್ಯರ್ಥವಾಗಿದೆ ಇಂಥ ವಿಕಲ್ಪಗಳು ಮೋಹದ ಪ್ರಭಾವದಿಂದ ಆಗುತ್ತಿರುತ್ತವೆ. ಯಾವ ಪದಾರ್ಥಗಳು ನಮ್ಮ ಕಣ್ಣಿಗೆ ಕಾಣುವವೋ ಅವೆಲ್ಲವೂ ನಾಶವಂತವಾಗಿವೆ ಈ ಪದಾರ್ಥಗಳನ್ನು ನೋಡು-ವಂಥ ಹಾಗೂ ತಿಳಿಯುವಂಥ ಇಂದ್ರಿಯಗಳೂ ಕೂಡ ಅವಶ್ಯ ನಷ್ಟವಾಗುವಂಥವಿವೆ. ಇದನ್ನರಿತು ಆತ್ಮನ ಕಲ್ಯಾಣವನ್ನು ಮಾಡಿಕೊಳ್ಳುವದಕ್ಕಾಗಿ ಈ ಎಲ್ಲವುಗಳ ಸ್ವರೂಪವನ್ನು ತಿಳಿದುಕೊಂಡು ಬಾಳುವದಕ್ಕೆ ಪ್ರಯತ್ನಿಸಬೇಕು.

**ಆಪ್ತವರ್ಗದ ಸಂಬಂಧವು ಅನಿತ್ಯವಾಗಿದೆ.** ಸಂಸಾರದಲ್ಲಿ ಆಪ್ತವರ್ಗದ ಸಂಬಂಧದಿಂದ ಅನೇಕ ಪ್ರಕಾರದ ಪಾಪಕರ್ಮಗಳನ್ನು ನಾವು ಮಾಡಬೇಕಾಗುತ್ತದೆ. ಈ ಸಂಬಂಧವಾದರೂ ಸ್ಥಿರವಾಗಿ ಉಳಿಯುವಂಥ-ದಿದೆಯೆ? ಹಡಗದಲ್ಲಿ ಪರದೇಶಗಳಿಗೆ ಪ್ರವಾಸ ಮಾಡುವ ಜನರು ಅನೇಕ ದೇಶ ಹಾಗೂ ಅನೇಕ ಜಾತಿಯವರು ಇರುತ್ತಾರೆ. ಹಡಗವು ಯೋಗ್ಯ ಸ್ಥಳದಲ್ಲಿ ಮುಟ್ಟಿದೊಡನೆಯೇ ಅವರೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋಗುತ್ತಾರೆ ದಂಡೆಗೆ ಹಡಗವು ಹತ್ತುವವರೆಗೆ ಅವರೆಲ್ಲರೂ ಒತ್ತಟ್ಟಿಗೆ ಕೂಡಿ ಇರುತ್ತಾರೆ ಮುಂದೆ ಅವರು ಕೂಡಿರುವದಿಲ್ಲ ಇದೇ ಪ್ರಕಾರ ಜಗತ್ತಿನಲ್ಲಿ ಕುಲವೂ ಒಂದು ಹಡಗವಿದ್ದಂತಿದೆ ಈ ಕುಲದಲ್ಲಿ ಅನೇಕ ಗತಿಗಳಿಂದ

ಜೀವವು ಬಂದು ಉತ್ಪನ್ನವಾಗುತ್ತದೆ. ತಮ್ಮ ಆಯುಷ್ಯವು ಪೂರ್ಣವಾದೊಡನೆ ತಮ್ಮ ತಮ್ಮ ಕರ್ಮಾನುಸಾರ ನಾಲ್ಕೂ ಗತಿಗಳಲ್ಲಿ ಹೋಗಿ ಹುಟ್ಟುತ್ತವೆ ಅದಕ್ಕಾಗಿ ಆಪ್ತವರ್ಗದ ಸಂಬಂಧವು ಸತತವಾಗಿರುವದೆಂದು ಎಂದೂ ತಿಳಿಯಕೂಡದು.

**ಶರೀರವೂ ಅನಿತ್ಯವಾಗಿದೆ.** ಯಾವ ಶರೀರದ ಸಂಬಂಧದಿಂದ ಸ್ತ್ರೀಪುತ್ರ, ಮಿತ್ರಬಾಂಧವರೆಲ್ಲ ತನ್ನವರೆಂದು ಎನಿಸುವುದೋ, ಆ ಶರೀರವೂ ಸಹ ಬೆಂಕಿಯಲ್ಲಿ ಸುಟ್ಟು ಹೋಗುವಂಥದಿದೆ ಅದನ್ನು ಹುಗಿದರೆ ಭೂಮಿಯಲ್ಲಿ ಕೊಳೆತು ಕೂಡಿ ಹೋಗುವಂಥದಿದೆ ಈ ಶರೀರಕ್ಕೆ ಇವೆರಡೂ ಸಂಸ್ಕಾರಗಳನ್ನೂ ಮಾಡದೆಯೂ ಮಾನವರನ್ನು ತಿನ್ನುವ ಹಿಂಸ್ರಪಶುಗಳಿಗೆ ಒಪ್ಪಿಸಿದರೂ ಸಹ ಅದರ ಎಂಜಲವಾಗಿ ಹೋಗುತ್ತವೆ. ಕ್ರಿಮಿಕೀಟಕಗಳ ಆಹಾರವಾಗಿಯೂ ಬಿಡುತ್ತದೆ ಇದರ ಒಂದೊಂದು ಪರಮಾಣುವೂ ಕೂಡ ವಾಯು ಹಾಗೂ ಆಕಾಶದಲ್ಲಿ ಹಾರಿ ಹೋಗುವಂಥವು ಇವೆ. ಅವುಗಳಿಗೆ ಪುನಃ ಈ ಶರೀರದ ಸಂಬಂಧವು ಆಗುವದಿಲ್ಲ ಇದನ್ನೆಲ್ಲ ತಿಳಿದುಕೊಂಡು ಸ್ತ್ರೀಪುತ್ರಾದಿಗಳ ಮೋಹದಿಂದ ತನ್ನ ಧರ್ಮವನ್ನು ಕೆಡಿಸಿಕೊಳ್ಳಬಾರದು ನಾವು ಯಾವ ಸ್ತ್ರೀಪುತ್ರ, ಮಿತ್ರಬಾಂಧವ, ಸ್ವಾಮಿಸೇವಕಾದಿಗಳಿಂದ ಕೂಡಿ ಇದ್ದು ಸುಖದಿಂದ ಕಾಲವನ್ನು ಕಳೆಯಬೇಕೆಂದು ಇಚ್ಛಿಸುತ್ತೇವೆಯೋ ಆ ಎಲ್ಲ ಕೌಟುಂಬಿಕ ಜನರು ಶರದೃತುವಿನೊಳಗಿನ ಮೋಡದಂತೆ ಕರಗಿ ಹೋಗುವವರಾಗಿದ್ದಾರೆ ಇವರ ಸಂಬಂಧವೂ ಕೂಡ ನಾಶವಾಗುವಂಥದೇ ಇದೆ.

**ರಾಜ್ಯ ಮತ್ತು ಐಶ್ವರ್ಯಗಳೂ ಅನಿತ್ಯವೇ.** ಇವನ್ನುಳಿದು ಇತರ ಪದಾರ್ಥಗಳೆಂದರೆ ರಾಜ್ಯ, ಭೂಮಿ, ಅರಮನೆ, ಉಪಜೀವನದ ಸಾಧನಗಳು—ಇವೆಲ್ಲ ನಿಮ್ಮವೆಂದು ತಿಳಿದು ಅವುಗಳಿಗಾಗಿ ಹಿಂಸೆ, ಅಸತ್ಯ, ಕಪಟ ಮೊದಲಾದವುಗಳನ್ನು ಮಾಡಲಿಕ್ಕೆ ಪ್ರವೃತ್ತರಾಗುವಿರಿ ಅನೇಕ ಜೀವಿಗಳ ವಿತ್ತಜೀವಿತಗಳನ್ನು ಎತ್ತಿ ಹಾಕುವಿರಿ ಅದರಿಂದ ತಾವು ಹೊಟ್ಟೆಯನ್ನು ತುಂಬಿಕೊಳ್ಳುವಿರಿ ನಿಮ್ಮ ಶಕ್ತಿ, ಸತ್ತೆಗಳ ಬಲದಿಂದ ನಿರ್ಬಲರಿಗೆ ಹೆದರಿಕೆಯನ್ನು ಹಾಕಿ ದುಡ್ಡನ್ನು ಸೆಳೆಯುವಿರಿ ಆ ಎಲ್ಲ ಪರಿಗ್ರಹಗಳ ಸಂಬಂಧವೂ ಸಹ ಸ್ಥಿರವಾಗಿ ಉಳಿಯು-ವಂಥದಲ್ಲ ತೀರ ಕ್ಷುಲ್ಲಕವಾದ ಉಪಜೀವನಕ್ಕಾಗಿ ನರಕ ತಿರ್ಯಂಚ ಗತಿಗಳಲ್ಲಿ ಅನಂತ ಕಾಲದ ವರೆಗೆ ಅನಂತ ದುಃಖದ ಪರಂಪರೆಯನ್ನು ಒದಗಿಸುವಂಥ ಸಂಗತಿಯು ಇದು ಆಗಿದೆ ಅದಕ್ಕಾಗಿ ಅನ್ಯಾಯ ಪ್ರವೃತ್ತಿಯನ್ನು ಮಾಡುವ ವಿಚಾರವನ್ನೂ ಕೂಡ ಮನಸ್ಸಿನಲ್ಲಿ ತರಕೂಡದು ಅನಿತ್ಯ ಪರಿಗ್ರಹದ ಒಡೆತನಕ್ಕಾಗಿಯೂ ಅಭಿಮಾನ-ಕ್ಕಾಗಿಯೂ ಇಲ್ಲಿಯ ವರೆಗೆ ಹಲವರು ನಾಶವನ್ನು ಹೊಂದಿದ್ದಾರೆ, ಈಗಲೂ ನಾಶಹೊಂದುತ್ತಿದ್ದಾರೆ ಅದಕ್ಕಾಗಿ ಅನ್ಯಾಯ ಪ್ರವೃತ್ತಿಯನ್ನು ನಷ್ಟಗೊಳಿಸಿ, ತಮ್ಮ ಆತ್ಮನ ಕಲ್ಯಾಣವಾಗುವಂಥ ಮಾರ್ಗದ ಅವಲಂಬನವನ್ನು ಮಾಡಬೇಕು

**ಆಪ್ತರ ಸಂಬಂಧವು ಕ್ಷಣಿಕವಾಗಿದೆ.** ಆಪ್ತವರ್ಗದ ವಿಷಯದಲ್ಲಿ ಯಾವ ನಮ್ಮ ಸಂಬಂಧವು ಘನಿಷ್ಠವಾಗಿ ಕೂಡಿರುವುದೋ ಅದು ಬೇಸಿಗೆಯೊಳಗಿನ—ನಾಲ್ಕುದಾರಿಗಳ ಕೂಟದಲ್ಲಿರುವ-ಗಿಡದ ನೆರಳಿನಂತೆ ಇರುತ್ತದೆ ಆ ನೆರಳಿನಲ್ಲಿ ಅನೇಕ ಊರುಗಳ ದಾರಿಕಾರರೂ ಬಂದು ವಿಶ್ರಾಂತಿಯನ್ನು ಹೊಂದುವ ರೀತಿಯಲ್ಲಿದೆ ಗಿಡದ ನೆರಳಿನಲ್ಲಿ ಸ್ವಲ್ಪಹೊತ್ತು ವಿಶ್ರಾಂತಿಯನ್ನು ತಕ್ಕೊಂಡು ದಾರಿಕಾರರು ತಮ್ಮ ತಮ್ಮ ಊರುಗಳಿಗೆ ಹೋಗುತ್ತಾರೆ ಹಾಗೆಯೇ ಸಂಸಾರದಲ್ಲಿಯೂ ಕೂಡ ಕುಲವೆಂಬ ವೃಕ್ಷದ ನೆರಳಿನಲ್ಲಿ ಈ ಕುಟುಂಬದ ಜನರು ನಿಂತು, ತಮ್ಮ ತಮ್ಮ ಕರ್ಮಕ್ಕೆ ಅನುಸರಿಸಿ, ಅನೇಕ ಗತಿಗಳಲ್ಲಿ ಭ್ರಮಣ ಮಾಡುವದಕ್ಕಾಗಿ ಹೊರಟು ಹೋದಾರು ನೀವು ಯಾರ ಮೇಲೆ ಪ್ರೀತಿಯನ್ನು ಮಾಡುತ್ತೀರೋ ಆ ಜನರೂ ಕೂಡ ಮೋಸಗಾರರಿದ್ದಾರೆ. ಕಣ್ಣೊಳಗಿನ ಕೆಂಪು ವರ್ಣದಂತೆ ಅವರ ಪ್ರೇಮವು ನಷ್ಟವಾಗುವಂಥದಿದೆ. ಒಂದು ಗಿಡದ ಮೇಲೆ ಸಾಯಂಕಾಲದ ಹೊತ್ತಿನಲ್ಲಿ ಅನೇಕ ಪಕ್ಷಿಗಳು ಪೂರ್ವ ಸಂಕೇತವಿಲ್ಲದೆಯೂ ಬಂದು ಕೂಡುತ್ತವೆ ಅದೇ ಪ್ರಕಾರ ನಮ್ಮ ಕುಟುಂಬದೊಳಗಿನ ಮನುಷ್ಯರೂ ಸಹ ಕೂಡಿರುತ್ತೇವೆ ನಾವೆಲ್ಲ ನಮ್ಮ ನಮ್ಮ ಕರ್ಮಗಳಿಗೆ ಅನುಸರಿಸಿ ದೂರವಾಗುತ್ತೇವೆ.

**ತಾರುಣ್ಯವು ನಶ್ವರವಾಗಿದೆ.** ಈ ಎಲ್ಲ ಧನ, ಐಶ್ವರ್ಯ, ಆಜ್ಞಾ, ರಾಜ್ಯ ಮತ್ತು ಇಂದ್ರಿಯಗಳ ವಿಷಯದ ಸಾಮಗ್ರಿ ಮೊದಲಾದವುಗಳೆಲ್ಲ ನೋಡು—ನೋಡುವಷ್ಟರಲ್ಲಿ ನಾಶಹೊಂದುವಂಥವಿವೆ. ತಾರುಣ್ಯವೆಂಬುದು ಮಧ್ಯಾಹ್ನದ ನೆರಳಿನಂತೆ ಚಂಚಲವಾಗಿದೆ. ಅದು ಸ್ಥಿರವಾಗಿ ಉಳಿಯುವಂಥದಲ್ಲ. ಚಂದ್ರ—ಸೂರ್ಯ—ಗ್ರಹ—ನಕ್ಷತ್ರಗಳು ಅಸ್ತವಾದರೂ ಸಹ ಪುನಃ ಪುನಃ ಅವುಗಳ ಉದಯವಾಗುವದಿರುತ್ತದೆ. ವಸಂತ ಗ್ರೀಷ್ಮಾದಿ ಋತುಗಳು

ಹೋದರೂ ಸಹ ಪುನಃ ತಿರುಗಿ ಬರುವಂಥವಿರುತ್ತವೆ ಆದರೆ ಒಮ್ಮೆ ನಷ್ಟವಾದ ಇಂದ್ರಿಯಗಳು, ಯೌವನ, ಆಯುಷ್ಯ, ಶರೀರಾದಿಗಳು ಮಾತ್ರ ಪುನಃ ಎಂದೂ ಬರುವಂಥವು ಇಲ್ಲ. ಪರ್ವತದ ಮೇಲಿಂದ ಬೀಳುವಂಥ ನದಿಯೊಳಗಿನ ತೆರೆಗಳು ಪ್ರತಿಬಂಧವು ಇಲ್ಲದುದರಿಂದ ಇಲ್ಲದಂತೆ ಆಗುತ್ತವೆ. ಹಾಗೆಯೇ ಆಯುಷ್ಯವೂ ಕೂಡ ಪ್ರತಿಯೊಂದು ಕ್ಷಣದಲ್ಲಿಯೂ ಇಲ್ಲದಂತೆ ಆಗುತ್ತದೆ

**ಮುಪ್ಪಿನ ಸ್ವರೂಪ**—ಯಾವ ಶರೀರದ ಅಧೀನದಲ್ಲಿ ನಮ್ಮ ಜೀವನವಿದೆಯೋ ಆ ಶರೀರವನ್ನು ಹಣ್ಣು ಹಣ್ಣು ಮಾಡುವಂಥ ಮುಪ್ಪು ಪ್ರತಿಯೊಂದು ಕ್ಷಣಕ್ಕೂ ಹತ್ತರ ಬರುತ್ತಿದೆ ಅದು ತಾರುಣ್ಯವೆಂಬ ವೃಕ್ಷವನ್ನು ಸುಟ್ಟುಬಿಡುವ ದಾವಾಗ್ನಿಯಂತೆ ಇದೆ ಅಲ್ಲದೆ ಸೌಭಾಗ್ಯವೆಂಬ ಹೂವಿಗೆ ಮಳೆಯಂತೆಯೂ, ಸ್ತ್ರೀಯ ಪ್ರೀತಿಯೆಂಬ ಚಿಗರೆಗೆ ಹುಲಿಯಂತೆಯೂ, ಜ್ಞಾನರೂಪೀ ಕಣ್ಣುಗಳನ್ನು ಮುಚ್ಚುವಂತೆ ಮಾಡುವ ಧೂಳದಂತೆಯೂ, ತಪವೆಂಬ ಕಮಲವನಕ್ಕೆ ಹಿಮದಂತೆಯೂ, ದೈನ್ಯ ಉತ್ಪನ್ನಮಾಡುವ ತಾಯಿಯಂತೆಯೂ, ತಿರಸ್ಕಾರವನ್ನು ಬೆಳೆಯಿಸುವ ಬೇಗನೆ ಹೋಗುವ ಸ್ತ್ರೀಯಂತೆಯೂ, ಉತ್ಸಾಹವನ್ನು ಇಲ್ಲದಂತೆ ಮಾಡುವ ತಿರಸ್ಕಾರದಂತೆಯೂ ರೂಪವೆಂಬ ಧನವನ್ನು ಕದ್ದು ಒಯ್ಯುವ, ಶಕ್ತಿಯನ್ನು ನಷ್ಟಗೊಳಿಸುವ, ಕಾಲೊಳಗಿನ ಶಕ್ತಿಯನ್ನು ಇಲ್ಲದಂತೆ ಮಾಡುವ, ಆಲಸ್ಯವನ್ನು ಹೆಚ್ಚಿಸುವ, ಸ್ಮರಣ ಶಕ್ತಿಯನ್ನು ಇಲ್ಲದಂತೆ ಮಾಡುವಂಥದೂ ಆಗಿದೆ ಯಮನನ್ನು ಕರೆಯಲಿಕ್ಕೆ ಕಳಿಸಿದ ದೂತ ಸ್ತ್ರೀಯಂತೆ ಇರುವ ಇಂಥ ಮುಪ್ಪು ಪ್ರಾಪ್ತವಾಯಿತೆಂದರೆ ಆತ್ಮ ಹಿತದ ವಿಸ್ಮರಣವು ಉಂಟಾಗುತ್ತದೆ ಮೇಲಿಂದ ಮೇಲೆ ಮನುಷ್ಯ ಜನ್ಮ, ಸತ್ಕುಲ, ಜೈನಧರ್ಮ ಇಂಥ ಸಾಮಗ್ರಿಗಳು ದೊರಕುತ್ತಿರುವದಿಲ್ಲ. ಎಲ್ಲಿಯ ವರೆಗೆ ನಿಮ್ಮ ಕಣ್ಣುಗಳಲ್ಲಿ ತೇಜ, ಕಾಲುಗಳಲ್ಲಿ ಶಕ್ತಿ, ಆತ್ಮನಲ್ಲಿ ವಿಚಾರಮಾಡುವ ಶಕ್ತಿಗಳು ಇರುವವೋ ಅಲ್ಲಿಯ ವರೆಗೆ ಇವುಗಳ ವಿಚಾರಮಾಡಿರಿ. ಇಂದ್ರಿಯದೊಳಗಿನ ಶಕ್ತಿಯು ಪ್ರತಿಯೊಂದು ಸಮಯಕ್ಕೂ ಕಡಿಮೆಯಾಗುತ್ತಲಿದೆ. ಅದು ಇಲ್ಲದಂತೆ ಆದ ಮೇಲೆ ಆತ್ಮ ಕಲ್ಯಾಣವನ್ನು ಹೇಗೆ ಮಾಡಿಕೊಳ್ಳುವದು?

**ಇಂದ್ರಿಯ ವಿಷಯಗಳ ಅನಿತ್ಯತೆ**—ಈ ಎಲ್ಲ ಸಂಯೋಗವು ವಿಯೋಗ ಸ್ವರೂಪದಲ್ಲಿದೆ. ವಿಷಯಗಳ ಮೇಲಿನ ಪ್ರೇಮದಿಂದ ಯಾರ ಕಲ್ಯಾಣವಾದ ಉದಾಹರಣೆಯೂ ಇಲ್ಲ ತಿರುಗಿ ಅಸಂಖ್ಯಾತ ಜೀವಗಳ ಅಕಲ್ಯಾಣವಾದ ಉದಾಹರಣೆಗಳು ಪ್ರತ್ಯೇಕ ದಿನವೂ ದೊರೆಯುತ್ತವೆ ಅಪ್ಪಗಳಿರಾ, ಈ ವಿಷಯಗಳೂ ಇಂದ್ರಿಯಗಳೂ ನಷ್ಟವಾಗು-ವಂಥವಿವೆ. ನೀವು ಯಾರ ಸಲುವಾಗಿ ಆತ್ಮಹಿತವನ್ನು ಬಿಟ್ಟು ಘೋರ ಪಾಪವನ್ನು ಕಟ್ಟಿಕೊಳ್ಳುತ್ತಿರುವಿರಿ? ದಿನದಿನಕ್ಕೂ ವಿಷಯ ಪ್ರೀತಿಯಲ್ಲಿ ಯಾರ ಸಲುವಾಗಿ ಲೀನರಾಗುತ್ತಿರುವಿರಿ? ಈ ಎಲ್ಲ ವಿಷಯಗಳು ನಿಮ್ಮ ಅಂತಃಕರಣದಲ್ಲಿ ತೀವ್ರ ದಾಹವನ್ನು ಉತ್ಪನ್ನಮಾಡಿ ಇಲ್ಲದಂತೆ ಆಗುತ್ತವೆ ಶರೀರವಂತೂ ಯಾವಾಗಲೂ ರೋಗದಿಂದ ತುಂಬಿರುತ್ತದೆ ಜೀವನವು ಮರಣದಿಂದ ಕೂಡಿದ್ದಿದೆ ಐಶ್ವರ್ಯವು ನಾಶದ ಎದುರಿಗೆ ನಿಂತುದಾಗಿದೆ. ಸಂಯೋಗವು ನಿಶ್ಚಿತವಾಗಿಯೂ ವಿಯೋಗದಿಂದ ಕೂಡಿದೆ. ಇಂದ್ರಿಯಗಳ ಎಲ್ಲ ವಿಷಯಗಳೂ ಆತ್ಮ ಸ್ವರೂಪದ ಮೇಲೆ ಧೂಳನ್ನು ಚೆಲ್ಲುವಂಥವಿವೆ ಇವುಗಳ ಬೆನ್ನು ಹತ್ತಿದ ಎಲ್ಲ ಜೀವಗಳೂ ತಮ್ಮ ನಾಶವನ್ನು ಮಾಡಿಕೊಳ್ಳುತ್ತಿವೆ. ಇವುಗಳನ್ನು ಗಮನಿಸಿದಾಗ ವಿಷಯ ಸೇವನೆಯಿಂದ ಸುಖವನ್ನು ಅಪೇಕ್ಷಿಸುವವರು ಮೂರ್ಖರು, ಅಲ್ಲದೆ ಬಹಳ ದಿನ ಬದುಕಲಿಕ್ಕೆಂದು ವಿಷವನ್ನು ಸೇವಿಸುವಂಥವರು–ಎಂದು ತಿಳಿದು ಬರುತ್ತದೆ ಪ್ರಕೃತಿಗೆ ಶೀತವೆನಿಸಲೆಂದು ಅಗ್ನಿಯಲ್ಲಿ ಹಾರುವರೆ? ಸವಿಯಾದ ಊಟವು ದೊರೆಯಲೆಂದು ವಿಷದ ಬಳ್ಳಿಗೆ ನೀರೆರೆಯುವರೆ? ಹಾಗೆಯೇ ವಿಷಯ ಸುಖದ ಗತಿಯಾಗಿದೆ ವಿಷಯಗಳಿಂದ ಮೋಹ ಮತ್ತು ಮದಗಳು ಉತ್ಪನ್ನವಾಗುತ್ತವೆ ಅಂತಲೇ ಅವುಗಳ ಮೇಲಿನ ಪ್ರೇಮವನ್ನು ಬಿಟ್ಟು, ಆತ್ಮಕಲ್ಯಾಣ ಮಾಡಿಕೊಳ್ಳುವ ಪ್ರಯತ್ನವನ್ನು ಮಾಡಬೇಕು

**ಮನುಷ್ಯ ಜನ್ಮವು ಪುನಃ ಲಭಿಸಲಾರದು.** ಮರಣವು ಅಕಸ್ಮಿಕವಾಗಿ ಬಂದೀತು ಈ ಮಾನವ ಜನ್ಮ ಮತ್ತು ಜಿನಧರ್ಮ ಇಲ್ಲದಂತೆ ಆದಲ್ಲಿ ಪುನಃ ಅನಂತ ಕಾಲ ಹೋದರೂ ಕೂಡ ಪ್ರಾಪ್ತವಾಗುವುದು ದುರ್ಲಭ-ವಾಗಿದೆ. ನದಿಯೊಳಗಿನ ತರಂಗಗಳು ಒಮ್ಮೆ ಉತ್ಪನ್ನವಾದ ಮೇಲೆ ಅವು ನಾಶವಾಗತಕ್ಕವೇ. ತಿರುಗಿ ಅವು ಬರಲಾರವು ಹಾಗೆಯೇ ಆಯುಷ್ಯ, ಶರೀರ, ರೂಪ, ಶಕ್ತಿ, ಸೌಂದರ್ಯ ಮೊದಲಾದವುಗಳು ಒಮ್ಮೆ ಇಲ್ಲದಂತಾದ ಮೇಲೆ ಪುನಃ ಎಂದೂ ಪ್ರಾಪ್ತವಾಗುವದಿಲ್ಲ ಶರೀರವು ಒಮ್ಮೆ ನಾಶವಾಯಿತೆಂದರೆ ನಿಮಗೆ ಪ್ರಿಯವಾಗಿರುವ ಸ್ತ್ರೀ, ಪುತ್ರ, ಮಿತ್ರಾದಿಗಳ ಸಂಯೋಗವೆಲ್ಲ ಕನಸಿನಂತೆಯೇ ವ್ಯರ್ಥವಾಗುತ್ತವೆ. ಇದನ್ನರಿತು ಅವುಗಳಿಗಾಗಿ ಅನೀತಿ, ಪಾಪಗಳನ್ನು ಮಾಡುವದನ್ನು ಬಿಟ್ಟು, ಕೂಡಲೆ ಶೀಲ, ವ್ರತ, ಸಂಯಮಗಳನ್ನು ಧಾರಣಮಾಡಿರಿ.

**ಶರೀರದ ಮೇಲೆ ಅವಾಸ್ತವ ಪ್ರೇಮವನ್ನು ಮಾಡಬೇಡಿರಿ** ಈ ಜಗತ್ತು ಇಂದ್ರಜಾಲ ವಿದ್ಯೆಯಂತೆ ಭ್ರಮವನ್ನು ಉತ್ಪನ್ನ ಮಾಡುವಂಥದಾಗಿದೆ. ಇದರಲ್ಲಿ ಧನ, ಯೌವನ, ಜೀವನ, ಸ್ವಜನ, ಪರಜನ ಇವರ ಸಮಾಗಮದಿಂದ ಮೋಹಗೊಂಡು ಜೀವವು ಕುರುಡಾಗುತ್ತದೆ. ಆದರೆ ಈ ಧನ ಸಂಪತ್ತು ಚಕ್ರವರ್ತಿಗಳ ಹತ್ತರವೂ ಸ್ಥಿರವಾಗಿ ನಿಂತಿಲ್ಲ ಅಂದಮೇಲೆ ಅವು ಅನ್ಯ ಪುಣ್ಯಹೀನ ಪ್ರಾಣಿಗಳ ಹತ್ತರ ಹೇಗೆ ನಿಂತಾವು? ತಾರುಣ್ಯವು ಮುಪ್ಪಿನಿಂದ ನಷ್ಟವಾದೀತು. ಜೀವನವು ಮೃತ್ಯುವಿನಿಂದ, ಸ್ವಜನ ಪರಜನರು ವಿಯೋಗದಿಂದ ನಷ್ಟವಾಗುವಂಥವ-ವರಿದ್ದಾರೆ ಇವರಲ್ಲಿ ಚಿರಕಾಲ ಯಾರು ನಿಂತಾರೆಂದು ನಿಮಗೆ ಎನಿಸುತ್ತಿದೆ? ಈ ಶರೀರವನ್ನು ದಿನಾಲು ನೀವು ಸ್ನಾನ ಮಾಡಿ ಸ್ವಚ್ಛ ಮಾಡುವಿರಿ, ಅನೇಕ ಸುವಾಸಿಕ ದ್ರವ್ಯಗಳನ್ನು ಲೇಪಿಸಿ ಸುಗಂಧಿತಗೊಳಿಸುವಿರಿ, ಬೆಲೆಯುಳ್ಳ ವಸ್ತ್ರಾಭರಣಗಳಿಂದ ಸುಂದರಗೊಳಿಸುವಿರಿ, ಹಲವು ಪ್ರಕಾರದ ಮಧುರ ಹಾಗೂ ಮೃಷ್ಟಾನ್ನಗಳಿಂದ ಪುಷ್ಟಗೊಳಿಸುವಿರಿ ಈ ಪ್ರಕಾರ ಈ ದೇಹದ ದಾಸ್ಯತ್ವವನ್ನು ಮಾಡುವುದರಲ್ಲಿಯೇ ಹಗಲಿರುಳನ್ನೂ ಸತತ ಕಳೆಯುವಿರಿ. ಶಯ್ಯೆ, ಆಸನ, ಕಾಮ, ಭೋಗ, ನಿದ್ರೆ, ಶೀತ, ಉಷ್ಣ ಮೊದಲಾದ ಉಪಕರಣಗಳನ್ನು ಮಾಡಿ ಪುಷ್ಟಗೊಳಿಸುತ್ತಲಿರುವಿರಿ ಈ ದೇಹದ ಪ್ರೇಮಪಾಶದಲ್ಲಿ ಸಿಕ್ಕಿರುವಿರಿ ಅದರಿಂದ ಭಕ್ಷ್ಯ, ಅಭಕ್ಷ್ಯ, ಯೋಗ್ಯಅಯೋಗ್ಯ, ನ್ಯಾಯಾನ್ಯಾಯ ಇವುಗಳ ವಿಚಾರವನ್ನು ಮಾಡದೆ ನಿಮ್ಮ ಪ್ರೀತಿಯ ಧರ್ಮವನ್ನು ತ್ಯಜಿಸಲಿಕ್ಕೆ ಸಿದ್ಧರಾಗಿರುವಿರಿ ಇಷ್ಟೇ ಅಲ್ಲ, ಈ ನಾಶವಂತ ಶರೀರದ ಸಲುವಾಗಿ ಕೀರ್ತಿಯು ನಷ್ಟವಾದರೂ ಅಡ್ಡಿಯಿಲ್ಲ, ಪ್ರಸಂಗದಲ್ಲಿ ಮರಣ ಒದಗಿದರೂ ಒದಗಲಿ, ನರಕವಾಗಲಿ, ನಿಗೋದದಲ್ಲಿ ಹೋಗುವ ಸಂದರ್ಭವು ಬಂದರೂ ಬರಲಿ ಎನ್ನುವಿರಿ ಅದನ್ನೆಲ್ಲ ಮೌನದಿಂದ ಸ್ವೀಕರಿಸುವಿರಿ. ಇಂಥ ಸಂಕಟಗಳೆಂದರೆ ಶರೀರದ ಪ್ರೀತಿಯ ಮುಂದೆ ಏನೂ ಅಲ್ಲ. ಹೀಗೆ ನಿಮ್ಮ ತಿಳುವಳಿಕೆ ಇದೆ. ಆದರೆ ಈ ಶರೀರವು ನೀರು ತುಂಬಿದ ಕಾಚಿನ ಪಾತ್ರೆಯಂತೆ ನಷ್ಟವಾಗುವಂಥದಿದೆ. ಇದರ ಕಲ್ಪನೆಯೂ ಕೂಡ ನಿಮಗೆ ಇಲ್ಲ ಈ ಶರೀರದ ಮೇಲೆ ಉಪಕಾರ ಮಾಡುವದೆಂದರೆ ಕೃತಘ್ನರ ಮೇಲೆ ಉಪಕಾರ ಮಾಡಿದಂತೆಯೇ ಇದೆ. ಇದರ ಮೇಲೆ ನೀವು ಎಷ್ಟು ಉಪಕಾರ ಮಾಡುವಿರೋ ಅಷ್ಟೇ ಅದು ನಿಮಗೆ ಹಾವಿಗೆ ಕುಡಿಸಿದ ಹಾಲಿನಂತೆ ವಿಪರೀತ ಫಲವನ್ನು ಕೊಡುವಂತಾಗಿದೆ. ಈ ಶರೀರದ ಮೇಲೆ ಹೆಚ್ಚಿಗೆ ಪ್ರೇಮವನ್ನು ಮಾಡುವುದರಿಂದ ನಿಮಗೆ ಮಹಾದುಃಖ, ರೋಗ, ಕ್ಲೇಶ, ದುರ್ಧ್ಯಾನ, ಅಸಂಯಮ, ಕುಮರಣ, ನರಕಪತನ ಮೊದಲಾದವುಗಳು ನಿಶ್ಚಯದಿಂದ ಪ್ರಾಪ್ತ-ವಾಗುವಂಥವು ಇವೆ ಈ ಶರೀರವನ್ನು ನೀವು ಹೇಗೆ ಹೇಗೆ ವಿಷಯಾದಿಗಳಿಂದ ಸಂತುಷ್ಟಗೊಳಿಸುತ್ತ ಇರುವಿರೋ ಹಾಗೆ ಹಾಗೆ ಅದು ನಿಮ್ಮ ಆತ್ಮಘಾತವನ್ನು ಮಾಡಲಿಕ್ಕೆ ಹೆಚ್ಚು ಸಮರ್ಥವಾಗುತ್ತ ಹೋದೀತು ಶರೀರಕ್ಕೆ ಒಂದು ದಿವಸ ಮಾತ್ರ ನೀವು ಊಟಕ್ಕೆ ಕೊಡದಿದ್ದರೆ ಅದು ನಿಮಗೆ ದುಃಖದಿಂದ ವ್ಯಾಕುಲಗೊಳಿಸುವುದು ಇಲ್ಲಿಯ ವರೆಗೆ ಯಾರು ಯಾರು ಶರೀರದ ಮೇಲೆ ಪ್ರೇಮವನ್ನು ಮಾಡಿರುವರೋ ಅವರೆಲ್ಲರ ಗತಿಯೂ ಸಂಸಾರದಲ್ಲಿ ಒಳ್ಳೆಯದಾಗಿಲ್ಲ ಅವರ ಆತ್ಮಸಾಧನೆಯು ಕೆಟ್ಟು ಕೊನೆಗೆ ಅನಂತಾನಂತ ನರಕ ನಿಗೋದದಲ್ಲಿ ಭ್ರಮಣಮಾಡಲಿಕ್ಕೆ ಹತ್ತಿದೆ. ಆದರೆ ಯಾರು ಸಕಾಲಕ್ಕೆ ಎಚ್ಚರಗೊಂಡು ಶರೀರವನ್ನು ತಪಶ್ಚರಣದ ಕಡೆಗೆ ಹಚ್ಚಿದರೋ ಅವರು ಸೊರಗಿದರೂ ಸಹ ಅವರೇ ತಮ್ಮ ಹಿತವನ್ನು ಮಾಡಿಕೊಂಡಿದ್ದಾರೆ. ಇಂದ್ರಿಯಗಳಿಗೆ ಹೇಗೆ ಹೇಗೆ ವಿಷಯಭೋಗಗಳು ಲಭಿಸುತ್ತವೆಯೋ ಹಾಗೆ ಹಾಗೆ ಅವು ತೃಪ್ತವಾಗದೆ ತಿರುಗಿ ಅದರಿಂದ ನಿಮ್ಮ ತೃಷ್ಣೆಯು ಹೆಚ್ಚುತ್ತದೆ ಹೇಗೆ ಹೊತ್ತಿಸಿದ ಬೆಂಕಿಯಲ್ಲಿ ಕಟ್ಟಿಗೆಗಳನ್ನು ಹಾಕುತ್ತ ಹೋದಂತೆ ಅದು ಆರದೆ ಹೆಚ್ಚಿಗೇನೇ ಹೊತ್ತಿ ಉರಿಯುತ್ತದೆಯೋ ಹಾಗೆಯೇ ಇಂದ್ರಿಯಗಳು ವಿಷಯ ಭೋಗದಿಂದ ತೃಪ್ತವಾಗದೆ ತಿರುಗಿ ಅವುಗಳ ಭೋಗೇಚ್ಛೆಯು ಹೆಚ್ಚುತ್ತಲೇ ಹೋಗುವುದು. ಒಂದೊಂದು ಇಂದ್ರಿಯಗಳ ವಶವಾದುದಕ್ಕೆ ಚಕ್ರವರ್ತಿಗಳು, ರಾಜರು ಭ್ರಷ್ಟರಾಗಿ ನರಕದಲ್ಲಿ ಹೋಗಿದ್ದಾರೆ. ಅದಕ್ಕಾಗಿ ಇಂದ್ರಿಯಗಳು ದುಃಖಕೊಡುವಂಥವು, ಪರಾಧೀನಗೊಳಿಸುವಂಥವು, ನರಕಕ್ಕೆ ಮುಟ್ಟಿಸುವಂಥವು ಎಂದು ತಿಳಿದು ಅವುಗಳ ಮೇಲಿನ ಪ್ರೇಮವನ್ನು ತ್ಯಜಿಸಿ, ಅವುಗಳನ್ನೇ ತಮ್ಮ ಸ್ವಾಧೀನಗೊಳಿಸಿಕೊಳ್ಳಬೇಕು. ಜಗತ್ತಿನಲ್ಲಿ ಮನುಷ್ಯ ಪ್ರಾಣಿಯು ಸರ್ವ ನಿಂದ್ಯ ಕರ್ಮಗಳನ್ನು ಇಂದ್ರಿಯಗಳ ವಶನಾಗುವುದರಿಂದಲೇ ಮಾಡುತ್ತಿರುತ್ತಾನೆ ಅದಕ್ಕಾಗಿ ಇಂದ್ರಿಯಗಳೆಂಬ ಸರ್ಪದ ವಿಷದಿಂದ ನಮ್ಮ ಆತ್ಮದ ರಕ್ಷಣೆಯನ್ನೂ ಮಾಡಬೇಕು

**ಲಕ್ಷ್ಮಿಯ ಸ್ವಭಾವ**—ನಾವು ನಷ್ಟವಾಗುವಂಥ ಲಕ್ಷ್ಮಿಯನ್ನು ಸಹ ಅತಿಶಯವಾಗಿ ಪ್ರೀತಿಸುತ್ತೇವೆ ಆದರೆ ಅವಳು ಹೇಗಿದ್ದಾಳೆಂಬುದನ್ನು ವಿಚಾರ ಮಾಡುವದಿಲ್ಲ. ಲಕ್ಷ್ಮಿಯು ಕ್ಷಣಭಂಗುರವಾಗಿದ್ದು, ಕುಲೀನ ಪುರುಷನನ್ನು ಸಮಾದಾನಗೊಳಿಸುವಂಥವಳಾಗಿದ್ದಾಳೆ ಅವಳು ಶೂರ, ವೀರ, ಧೀರ, ಕುಶಲ, ಪಂಡಿತ, ಮೂರ್ಖ,

ಸುರೂಪಿ, ಕುರೂಪಿ, ಹೆದರಬಡಕ, ಧರ್ಮಾತ್ಮಾ, ಅಧರ್ಮಿ, ಪಾಪಿ, ದಾನಶೂರ, ಕೃಪಣ ಇವರಲ್ಲಿ ಯಾರ ಹತ್ತಿರವೂ ಯಾವಾಗಲೂ ನಿಲ್ಲುವದಿಲ್ಲ ಯಾರು ಪೂರ್ವದಲ್ಲಿ ಪುಣ್ಯಮಾಡಿರುವರೋ ಅವರ ಹತ್ತಿರ ದಾಸಾನು-ದಾಸಿಯಾಗಿ ನಿಲ್ಲುವಂಥವಳಾಗಿದ್ದಾಳೆ. ಇದು ಕುಪಾತ್ರಕ್ಕೆ ದಾನಕೊಡುವುದರಿಂದಲೂ, ಕೆಟ್ಟ ತಪಸ್ಸನ್ನು ಆಚರಿಸು-ವುದರಿಂದಲೂ ಲಭಿಸುವಂಥದಿದೆ ತನ್ನ ಮೋಹದಿಂದ ಜೀವಕ್ಕೆ ಕುಮಾರ್ಗ ಮತ್ತು ಕುಭೋಗಗಳ ಕಡೆಗೆ ಪ್ರವೃತ್ತಗೊಳಿಸಿ ದುರ್ಗತಿಗೆ ಕಳಿಸುತ್ತಾಳೆ ಸದ್ಯಕ್ಕೆ ನಡೆದಿರುವ ಈ ಪಂಚಮ ಕಾಲದಲ್ಲಂತೂ ಲಕ್ಷ್ಮಿಯು ಪಾಪದ ಕಾರಣಗಳಿಂದ ಪ್ರಾಪ್ತವಾಗುತ್ತದೆ ಮೇಲಾಗಿ ಬುದ್ಧಿಗೆ ಭ್ರಮೆಯನ್ನು ಉತ್ಪನ್ನ ಮಾಡಿ ಅನನ್ವಿತ ಕೃತಿಗಳನ್ನು ಮನುಷ್ಯನಿಂಧ ಮಾಡಲಿಕ್ಕೆ ಹಚ್ಚುತ್ತದೆ ಇದು ಮಹತ್ ಪ್ರಯಾಸದಿಂದ ಪ್ರಾಪ್ತವಾದರೂ ಸಹ ಅದರ ಉಪಯೋಗವು ಪಂಚ ವಿಷಯದ ಉಪಭೋಗದ ಕಡೆಗೇನೇ ಹೆಚ್ಚಾಗಿ ಆಗುತ್ತದೆ ಇದು ಹತ್ತಿರ ಇದ್ದಾಗ ಸತ್ಪಾತ್ರದಾನ, ವಿದ್ಯಾದಾನ, ಅಭಯದಾನ, ಔಷಧದಾನ ಮೊದಲಾದವುಗಳನ್ನು ಕೊಡುವ ಬುದ್ಧಿಯು ಕ್ವಚಿತ್ತವಾಗಿಯೇ ಉತ್ಪನ್ನವಾಗುತ್ತದೆ. ಲಕ್ಷ್ಮಿಯಿಂದ ಯಾವಾಗಲೂ ಆರ್ತಧ್ಯಾನದಲ್ಲಿಯೇ ಪರಿಣಾಮವು ಮುಳುಗಿ ಹೋಗಿ ತಿರ್ಯಂಚ ಗತಿಯಲ್ಲಿ ಉತ್ಪನ್ನವಾಗಬೇಕಾಗುತ್ತದೆ. ಲಕ್ಷ್ಮಿಯಿಂದ ತೃಷ್ಣೆಯು ಹೆಚ್ಚುತ್ತದೆ. ಮದವು ಉತ್ಪನ್ನವಾಗುತ್ತದೆ ಆದಕ್ಕಾಗಿಯೇ ಅದರ ಉಪಯೋಗವನ್ನು ದುಃಖಿ, ದರಿದ್ರ ಜನರ ಉಪಕಾರದ ಕಡೆಗೆ ಧರ್ಮಾಯತನ, ವಿದ್ಯಾಲಯ-ಗಳನ್ನು ನಿರ್ಮಿಸುವುದರ ಕಡೆಗೆ, ವಿದ್ಯೆಯನ್ನು ಕಲಿಸುವುದರ ಕಡೆಗೆ ಮತ್ತು ವೀತರಾಗ ಸಿದ್ಧಾಂತದ ಪ್ರಸಾರ ಮಾಡುವುದರ ಕಡೆಗೆ ಮಾಡಿ ಸಫಲಗೊಳಿಸಬೇಕು ನ್ಯಾಯದಿಂದ ಪ್ರಾಪ್ತವಾದ ಲಕ್ಷ್ಮಿಯ ಉಪಯೋಗವನ್ನು ಮರ್ಯಾದಿತ ಹಾಗೂ ಪ್ರಾಮಾಣಿಕ ಭೊಗೋಪಭೋಗಗಳಲ್ಲಿ ಮಾಡಬೇಕು ಹೀಗೆ ಮಾಡುತ್ತಿರುವಾಗ ಧರ್ಮದ ಘಾತವಾಗಲಿಕ್ಕಿಲ್ಲವೆಂಬುದನ್ನು ಲಕ್ಷ್ಯದಲ್ಲಿ ಇಡಬೇಕು ಇದು ಯಾವಾಗಲೂ ನೀರಿನ ಮೇಲಿನ ತೆರೆಗಳಂತೆ ಚಂಚಲ-ವಾಗಿರುತ್ತದೆ ಇದನ್ನರಿತು ಅದು ಪ್ರಾಪ್ತವಾದಾಗ ದಾನ, ಪರೋಪಕಾರಗಳನ್ನು ಮಾಡಿ ಬಿಡಬೇಕು ಇದು ಪರಲೋಕದಲ್ಲಿ ಸಂಗಡ ಬರುವಂಥದಲ್ಲ ನಾವು ಆಕಸ್ಮಿಕವಾಗಿ ಪ್ರಾಪ್ತವಾದಾಗ ಇದನ್ನು ಇಲ್ಲಿಯೇ ಬಿಟ್ಟು ನೀವು ಹೋಗಬೇಕಾದೀತು ಯಾವನು ದ್ರವ್ಯವನ್ನು ಸತ್ಕರ್ಮದ ಕಡೆಗೆ ವ್ಯಯ ಮಾಡದೆ, ಯಾವಾಗಲೂ ಸಂಚಯ ಮಾಡುವುದರಲ್ಲಿಯೇ ತೊಡಗಿರುವನೋ ಅವನು ಸ್ವತಃ ತನ್ನನ್ನು ತಾನೇ ಮೋಸಗೊಳಿಸಿಕೊಂಡಂತೆ ಆಗುತ್ತದೆ ಇದು ಅವನ ಲಕ್ಷ್ಯಕ್ಕೆ ಬರುವದಿಲ್ಲ ಅನೇಕ ಪ್ರಕಾರದ ಪಾಪಕರ್ಮ, ನ್ಯಾಯ ಅನ್ಯಾಯಗಳ ಕಡೆಗೆ, ಲಕ್ಷ್ಯಕೊಡದೆ ಬೇಕಾದಷ್ಟು ಧನವನ್ನು ಸಂಪಾದಿಸಿದರೂ ಸಹ ಅದು ನಮ್ಮ ತರುವಾಯ ಇನ್ನೊಬ್ಬರ ಕೈಯಲ್ಲಿ ಹೋಗುವದೆಂಬುದರಲ್ಲಿ ಸಂಶಯವೇ ಇಲ್ಲ ನಮ್ಮ ಮರಣದ ಪೂರ್ವದಲ್ಲಿ ಅದನ್ನು ನಾವು ಯಾರ ಕೈಯಲ್ಲಿಯೂ ಕೊಡದಿದ್ದರೆ, ಅನ್ಯ ದೇಶದಲ್ಲಿ ವ್ಯಾಪಾರ ಮೊದಲಾದವುಗಳನ್ನು ಮಾಡಿ ಅದನ್ನು ವೃದ್ಧಿಗೊಳಿಸುವದನ್ನು ಮನಸ್ಸಿನಲ್ಲಿ ನಿಶ್ಚಯಿಸಿದರೂ ಅದರ ರಕ್ಷಣೆ ಮತ್ತು ಲಾಭ ಹಾನಿಗಳ ಚಿಂತೆಯು ಯಾವಾಗಲೂ ಮನಸ್ಸಿಗೆ ಹತ್ತಿಯೇ ಇರುತ್ತದೆ ಹಾಗೆ ನಾವು ಮಾಡದೆ ಅದನ್ನು ನಾವು ನೆಲದಲ್ಲಿ ಆಳವಾಗಿ ಹುಗಿದು ಇಟ್ಟರೂ ಸಹ ಏನಾಯಿತು? ಪುನಃ ಅದನ್ನು ತಕ್ಕೊಂಡು ಯಾರಾದರೂ ಹೋಗಲಿಕಿಲ್ಲವಷ್ಟೆ! ಈ ವಿಕಲ್ಪವು ಎದುರಿಗೆ ಇದ್ದೇ ಇದೆ ಸಂಸಾರದಲ್ಲಿ ಹಗಲಿರುಳೂ ಇದರ ಚಿಂತೆಯು ಹತ್ತಿರುತ್ತದೆ ಅದರಿಂದ ದುರ್ಧ್ಯಾನವು ಉತ್ಪನ್ನವಾಗಿ ದುರ್ಗತಿಯು ಒದಗುತ್ತದೆ. ಇಡೀ ಆಯುಷ್ಯವೆಲ್ಲ ದ್ರವ್ಯವನ್ನು ಕೂಡಿ ಹಾಕುವದು, ಅದರ ಚಿಂತೆಯನ್ನು ಮಾಡುವುದು ಈ ಎರಡು ವಿಚಾರಗಳನ್ನುಳಿದು ಇತರ ವಿಚಾರಗಳಲ್ಲಿ ಒಂದು ಕ್ಷಣವೂ ಕೂಡ ಕಳೆಯದಿದ್ದವರಿಗೆ ಸದ್ಗತಿಯು ಯಾವುದರ ಆಧಾರದಿಂದ ಲಭಿಸೀತು? ಇದೂ ಒಂದು ಪ್ರಶ್ನವೇ ಆಗಿದೆ ಕೃಪಣ ಮನುಷ್ಯನು ಲಕ್ಷ್ಮಿಯ ದಾಸನಾಗಿದ್ದಾನೆ ಅವನು ಅದರ ರಕ್ಷಣೆಯನ್ನು ಮಾಡುತ್ತಲೇ ಇರುತ್ತಾನೆ ದಾಸನಾದವನಿಗೆ ಭೋಗಿಸುವ ಅಧಿಕಾರ ಎಲ್ಲಿಯದು? ಲಕ್ಷ್ಮಿಯನ್ನು ಆಳವಾದ ನೆಲದಲ್ಲಿ ಹುಗಿದಿಡುವುದರ ಅರ್ಥವು ಅದನ್ನೊಂದು ಕಲ್ಲಿಗೆ ಸಮಾನವೆಂದು ತಿಳಿದಂತೆ ಆಗುತ್ತದೆ ಮೊದಲೇ ನೆಲದಲ್ಲಿ ಅನೇಕ ಕಲ್ಲುಗಳು ಇರುತ್ತವೆ. ಅದರಲ್ಲಿ ಇದನ್ನೂ ಸಮಾವೇಶಗೊಳಿಸಿದಂತೆ ಇದರಿಂದ ಕೃಪಣನಿಗೆ ಏನು ಉಪಯೋಗವಾಯಿತು? ಕೃಪಣನ ತರುವಾಯ ಆ ಧನವು ಯಾವುದಾದರೂ ವ್ಯಕ್ತಿಯ ಕೈಗೆ ಇಲ್ಲವೆ ರಾಜನ ಕೈಗೆ ಹೋಗುವುದು ಕೃಪಣನ ಕೈಯಿಂದ ಯಾವ ಪರೋಪಕಾರವೂ ಆಗುವದಿಲ್ಲ ಒಟ್ಟಿನಲ್ಲಿ, ಜಗತ್ತಿನೊಳಗೆ ದ್ರವ್ಯದಷ್ಟು ಮನುಷ್ಯನನ್ನು ಮೋಸಗೊಳಿಸುವ ಇನ್ನೊಂದು ವಸ್ತುವು ಇಲ್ಲ ಜನರು ತಮ್ಮ ಪರಮಾರ್ಥವನ್ನು ಬದಿಗೆ ಇಟ್ಟು, ಧನದ ಲೋಭದಿಂದ ಹಗಲಿರುಳೂ ಅನೇಕ ಅನ್ಯಾಯಗಳನ್ನು ಮಾಡುತ್ತಿರುತ್ತಾರೆ ಅವರಿಗೆ ಹೊತ್ತಿಗೆ

ಸರಿಯಾಗಿ ಅನ್ನವೂ ಕೂಡ ಲಭಿಸುವದಿಲ್ಲ ಚಳಿ, ಮಳೆ, ಗಾಳಿಗಳ ವೇದನೆಯನ್ನು ಅವರು ಸಹನ ಮಾಡುವರು. ರೋಗ ಹಾಗೂ ಕಷ್ಟಗಳು ಅವರಿಗೆ ಪ್ರಾಪ್ತವಾದರೂ ಸಹ ಅವು ಅವರಿಗೆ ತಿಳಿಯುವದಿಲ್ಲ ಯಾವಾಗಲೂ ದ್ರವ್ಯದ ಚಿಂತೆಯಲ್ಲಿ ರಾತ್ರಿಯೊಳಗೆ ಅವರಿಗೆ ನಿದ್ರೆಯೂ ಸಹ ಬರುವದಿಲ್ಲ. ಬಹಳವೇನು? ದ್ರವ್ಯಲೋಭಿಯಾದ ಮನುಷ್ಯನು ದ್ರವ್ಯದಿಂದ ಪ್ರತ್ಯಕ್ಷ ಮರಣವೇ ಒದಗುತ್ತದೆಂದರೂ ಅದರ ಹೆದರಿಕೆಯನ್ನು ಅವನು ತಾಳುವದಿಲ್ಲ. ಇದಕ್ಕಿಂತ ಲೋಭದ ಹೆಚ್ಚಿನ ಸೀಮೆಯು ಇನ್ನಾವುದು ಉಳಿಯಿತು? ಇವುಗಳಿಗಿಂತ ಕಡಿಮೆ ಸಂಕಟಗಳೆಂದು ಎನ್ನಿಸಿಕೊಳ್ಳುವ ರಣಭೂಮಿಯಲ್ಲಿ ಹೋಗಿ ಯುದ್ಧ ಮಾಡುವುದು, ಸಮುದ್ರದಲ್ಲಿ ಹೋಗಿ ನಾವಿಕರ ಕೆಲಸ ಮಾಡುವುದು, ಎತ್ತರವಾದ ಪರ್ವತವನ್ನು ಹತ್ತುವುದು, ಧರ್ಮವಿಲ್ಲದ ಪ್ರದೇಶದಲ್ಲಿ ಹೋಗಿ ವ್ಯಾಪಾರವನ್ನು ಮಾಡುವುದು, ಎಲ್ಲಿ ತಮ್ಮ ಜಾತಿ ಕುಲ ಹಾಗೂ ಗೋತ್ರಗಳ ಜನರು ಇರುವದಿಲ್ಲವೋ ಅಂಥಲ್ಲಿ ಹೋಗಿರುವುದು—ಇವಾವವೂ ಲೋಭಿಗೆ ತೊಂದರೆ-ದಾಯಕವೆನ್ನಿಸುವದಿಲ್ಲ. ಇದೇ ಪ್ರಕಾರ ಲೋಭದ ಆಶೆಯಿಂದ ಜೀವವು ಅನೇಕ ಸ್ಥಳಗಳಲ್ಲಿ ಭ್ರಮಿಸಿ ಕೊನೆಗೆ ದುರ್ಗತಿಗೆ ಹೋಗುತ್ತದೆ. ಲೋಭಿಯಾದ ಪುರುಷನು ಮಾಡಬಾರದಂಥ ಕೆಲಸಗಳನ್ನೂ ಇಲ್ಲವೆ ಹೊಲೆಮಾದಿಗರು ಮಾಡುವಂಥ ಕೆಲಸಗಳನ್ನು ಕೂಡ ಮಾಡಲಿಕ್ಕೆ ಸಿದ್ಧನಾಗುತ್ತಾನೆ ಇಲ್ಲಿಯ ವರೆಗೆ ತಿಳಿಯದೆ ಅದವಾ ತಿಳಿದೂ ಆದದ್ದಾಯಿತು ಆದರೆ ಇನ್ನು ನಾವು ಜೈನ ಕುಲದಲ್ಲಿ ಉತ್ಪನ್ನರಾಗಿದ್ದೇವೆ; ನಮಗೆ ಭಗವಂತನ ಶಾಸ್ತ್ರವನ್ನು ಕೇಳುವ ಭಾಗ್ಯವು ಸುದೈವದಿಂದ ಪ್ರಾಪ್ತವಾಗಿದೆ. ಅದಕ್ಕಾಗಿ ಸಂತೋಷ ವೃತ್ತಿಯನ್ನೂ ಧಾರಣ ಮಾಡೋಣ ನಮ್ಮ ಪುಣ್ಯಕ್ಕೆ ಅನುಸರಿಸಿ ನ್ಯಾಯ ಮಾರ್ಗದಿಂದ ಲಭಿಸಿದುದರಲ್ಲಿಯೇ ಸಂತೋಷ ಹೊಂದಿರೋಣ ದ್ರವ್ಯದ ವಿಷಯದಲ್ಲಿ ಮನಸ್ಸಿನಲ್ಲಿ ಜನಿಸಿದ ಗಾಢ ಪ್ರೀತಿಯನ್ನು ಬಿಟ್ಟು ನ್ಯಾಯವಾದ ವಿಷಯೋಪಭೋಗವನ್ನು ಹೊಂದೋಣ ದುಃಖಿತ, ಹಸಿದವ, ದೀನ, ಅನಾಥರಾದವರ ಮೇಲೆ ಉಪಕಾರ ಮಾಡುವುದರ ಕಡೆಗೆ ನಮ್ಮ ಸಂಪತ್ತಿಯ ಉಪಯೋಗವನ್ನು ಮಾಡೋಣ. ಇಲ್ಲಿಯ ವರೆಗೆ ಲಕ್ಷ್ಮಿಯ ಆಶೆಗೆ ಬಿದ್ದು, ಅನೇಕ ಜನರು ಮೋಸ ಹೊಂದಿ, ದುರ್ಗತಿಗೆ ಹೋಗಿದ್ದಾರೆ ದ್ರವ್ಯದ ಸಂಬಂಧದಿಂದ ಜಗತ್ತಿನೊಳಗಿನ ಎಲ್ಲ ಜೀವಗಳು ಚೈತನ್ಯ ಹೀನವಾಗುತ್ತಿವೆ ಪುಣ್ಯವು ಅಳಿದ ಕೂಡಲೆ ಧನವು ನಷ್ಟವಾಗುವಂಥದಿದೆ ಕೇವಲ ಅದನ್ನು ಸಂಪಾದಿಸಿ, ನಾವು ಸತ್ತು ಹೋಗುವುದು ಲಕ್ಷ್ಮಿಯನ್ನು ಸಂಪಾದಿಸುವುದರ ಫಲವಲ್ಲ. ಲಕ್ಷ್ಮಿಯು ದೊರಕಿದಾಗ ಅದರ ಸಹಾಯದಿಂದ ಬಡವರ ಮೇಲೆ ಉಪಕಾರ ಮಾಡಬೇಕು. ಧರ್ಮಮಾರ್ಗವನ್ನು ವಿಸ್ತರಿಸಬೇಕು. ಅಂದರೆ ಲಕ್ಷ್ಮಿಯ ಉಪಯೋಗವನ್ನು ಯೋಗ್ಯ ರೀತಿಯಲ್ಲಿ ಮಾಡಿದಂತಾದೀತು ನಿಜವಾಗಿಯೂ ಯಾರು ಲಕ್ಷ್ಮಿಯನ್ನು ಪಾಪರೂಪವೆಂದು ತಿಳಿದು ಮೂಲದಲ್ಲಿಯೇ ಸ್ವೀಕರಿಸುವದಿಲ್ಲವೋ ಅವರು ಧನ್ಯರು ಆದರೆ ಯಾರು ಮೊದಲು ಗ್ರಹಣಮಾಡಿ, ತರುವಾಯ ಅದರ ಮೇಲಿನ ಪ್ರೀತಿಯನ್ನು ಬಿಟ್ಟು, ಅದನ್ನು ತ್ಯಜಿಸುವರೋ ಅವರು ಇನ್ನೂ ಹೆಚ್ಚಿನ ಮಹಿಮಾವಂತರು ಒಟ್ಟಿನಲ್ಲಿ ಈ ಧನ, ಯೌವನ, ಬಾಳುವೆ, ಕುಟುಂಬದ ಸಂಯೋಗ ಮೊದಲಾದವುಗಳು ನೀರ ಮೇಲಣ ಗುಳ್ಳೆಗಳಂತೆ ನಶ್ವರವಾಗಿವೆ. ಅದಕ್ಕಾಗಿ ಆತ್ಮನ ಹಿತವಾಗುವ ಹಾಗೆ ಕಾರ್ಯವನ್ನು ಮಾಡುವುದರ ಕಡೆಗೆ ಪ್ರವೃತ್ತರಾಗಿರಿ ಸ್ವಲ್ಪದರಲ್ಲಿ ಹೇಳುವದಾದಲ್ಲಿ ಸಂಸಾರದಲ್ಲಿ ಯಾವ ಯಾವವು ಸಂಯೋಗದ ಸಂಗತಿಗಳು ಆಗಿವೆಯೋ ಅವೆಲ್ಲವೂ ನಾಶವಂತವಾಗಿವೆ ಇದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು

ಈ ಪ್ರಕಾರ ಅನಿತ್ಯಭಾವನೆಯ ಸ್ವರೂಪವನ್ನೂ ಚಿಂತಿಸಬೇಕು. ಅಲ್ಲದೆ ಕೊನೆಗೆ ಹೀಗೂ ವಿಚಾರ ಮಾಡಬೇಕು.—ಈ ಮಕ್ಕಳು, ಮೊಮ್ಮಕ್ಕಳು, ಹೆಂಡತಿ ಮೊದಲಾದವರು ಇಲ್ಲಿಯ ವರೆಗೆ ಯಾರೂ ಯಾರ ಸಂಗಡವೂ ಹೋದುದಿಲ್ಲ, ಮುಂದೆಯೂ ಹೋಗುವಂಥವರಲ್ಲ ನಾವು ಸಂಪಾದಿಸಿದಂಥ ಕೇವಲ ಪುಣ್ಯ ಹಾಗೂ ಪಾಪವು ಮಾತ್ರ ಸಂಗಡ ಬರುತ್ತವೆ. ಜಾತಿ, ಕುಲ, ರೂಪ, ದೇಶ, ವೈಭವ ಇವುಗಳ ಸಮಾಗಮವು ಶರೀರದ ಜೊತೆಗೆ ಇಲ್ಲಿಯವು ಇಲ್ಲಿಯೇ ನಿಂತಾವು ಇದನ್ನರಿತು ಅನಿತ್ಯ ಭಾವನೆಯನ್ನು ಒಂದು ಕ್ಷಣವೂ ಸಹ ಮರೆಯಕೂಡದು

ವೃತ್ತ ॥ ವರರಾಜ್ಯಂ ಸುರಚಾಪದಂದದಜನಮುಂ ಸಂಧ್ಯಾರುಣಂ ಮತ್ತ-
ವಾರಣಮುಂ ವಾಜಿರದಂ ಪದಾತಿನಿವಹಂ ಸ್ತ್ರೀಯರ್ಕಳುಂ ಪುತ್ರರುಂ ।
ಘನಮೇಘಾಕೃತಿರೂಪುಯವ್ವನಬಲಂ ವಿದ್ಯುಚ್ಚಲಂ ಸೋಲ್ಪದಂ
ನಿರುತಂ ನಂಬಲು ಬೇಡ ಜೀವನಿನಗಂ ಸದ್ಧರ್ಮವೊಂದೇ ಧ್ರುವಂ ॥

—ಶ್ರೀ ವಿಜಯಣ್ಣ—ದ್ವಾದಶಾನುಪ್ರೇಕ್ಷೆ ೭ ೧

## ೨. ಅಶರಣಾನುಪ್ರೇಕ್ಷೆ

ಸಂಸಾರದಲ್ಲಿ ದೇವ, ದಾನವ, ಇಂದ್ರ, ಮಂತ್ರ, ತಂತ್ರ, ಇವರಲ್ಲಿ ಯಾರೂ ಶರಣು ಬಂದ ಮಾನವನ ದುಃಖವನ್ನು ನಿವಾರಿಸಲಿಕ್ಕೆ ಸಮರ್ಥರಿಲ್ಲ ಯಮರಾಜನ ದವಡೆಯೊಳಗಿಂದ ಇವರಾರೂ ಉಳಿಯುವಂತಿಲ್ಲ. ಆಯುಷ್ಯವು ಪೂರ್ಣವಾದೊಡನೆಯೇ ಇಂದ್ರನೂ ಕೂಡ ಕಾಲವಶನಾಗುತ್ತಾನೆ. ಇಂದ್ರನ ವಶದಲ್ಲಿ ಅಸಂಖ್ಯಾತ ದೇವತೆಗಳು ಇರುತ್ತಾರೆ, ಅವನ ಆಜ್ಞೆಯು ಆದೊಡನೆ ಸಾವಿರಾರು ಜನ ಋದ್ಧಿಧಾರಿ ದೇವರು ಕೈಜೋಡಿಸಿಕೊಂಡು ಎದುರಿಗೆ ಬಂದು ನಿಲ್ಲುತ್ತಾರೆ, ಅವನು ಸಾವಿರಾರು ವರ್ಷಗಳ ವರೆಗೆ ಸುಖವನ್ನು ಅನುಭವಿಸುತ್ತ ಸ್ವರ್ಗದಲ್ಲಿ ವಾಸಮಾಡಿರುತ್ತಾನೆ. ಅವನ ಶರೀರದಲ್ಲಿ ರೋಗ, ಬೇನೆ, ಬೇಸರಿಕೆ, ಹಸಿವು, ನೀರಡಿಕೆ ಮೊದಲಾದ ಉಪದ್ರವಗಳು ಉಂಟಾಗುವದಿಲ್ಲ; ಇಂಥವನನ್ನೂ ಕೂಡ ಮೃತ್ಯುವು ಬಿಟ್ಟಿಲ್ಲ. ಅಂದಮೇಲೆ ಇತರರನ್ನು ಮೃತ್ಯುವಿನಿಂದ ರಕ್ಷಿಸಲಿಕ್ಕೆ ಯಾರೂ ಸಮರ್ಥರಾದಾರು? ಮೃತ್ಯುವು ಪ್ರಾಪ್ತವಾದಾಗ ನಿರ್ಜನ ಅರಣ್ಯದಲ್ಲಿ ಹುಲಿಯ ದವಡೆಯಲ್ಲಿ ಸಿಕ್ಕ ಚಿಗರಿಯ ಮರಿಯನ್ನು ಸಂರಕ್ಷಿಸುವವರು ಯಾರಿದ್ದಾರೆ? ಹಾಗೆಯೇ ಇಲ್ಲಿ ಮನುಷ್ಯ ಪ್ರಾಣಿಯ ರಕ್ಷಣೆಯನ್ನು ಮಾಡಲಿಕ್ಕೆ ಯಾರೂ ಇಲ್ಲ ಜಗತ್ತಿನಲ್ಲಿ ಇಲ್ಲಿಯ ವರೆಗೆ ಅನಂತಾನಂತ ಪುರುಷರು ನಾಶಹೊಂದಿದ್ದಾರೆ ಅವರ ರಕ್ಷಣೆಯನ್ನು ಯಾರು ಮಾಡಿದ್ದಾರೆ? ಮೃತ್ಯುವಿನಿಂದ, ರಕ್ಷಣವನ್ನು ಮಾಡುವವರು ಯಾರಾದರೂ ಇದ್ದಿದ್ದರೆ ಮನುಷ್ಯನು ಅಮರನಾಗುತ್ತಿದ್ದನು. ಆದರೆ ಮಾನವನು ಇನ್ನೂ ವರೆಗೆ ಅಮರನಂತೂ ಆಗಿಲ್ಲ. ಅದಕ್ಕಾಗಿ ನಾವು ಯಾರಿಗಾದರೂ ಶರಣು ಹೋದರೆ ತಮ್ಮ ರಕ್ಷಣೆಯಾದೀತು ಎನ್ನುವ ಮಿಥ್ಯಾಬುದ್ಧಿಯನ್ನು ತ್ಯಜಿಸಬೇಕು.

**ನಾವು ತಪ್ಪುವದಿಲ್ಲ.** ಸಂಕಟ ಒದಗಿದಾಗ ನಾವು ನಮ್ಮ ಹಿತದ ಕಡೆಗೆ ಲಕ್ಷ ಹಾಕಲಿಲ್ಲವೆಂದು ನಮಗೆ ಹಾನಿಯು ಆಗಿದೆ. ಶರೀರದಲ್ಲಿ ರೋಗವು ಉತ್ಪನ್ನವಾದಲ್ಲಿ ನಮ್ಮ ಕಡೆಯಿಂದ ಉಪಾಯ ಮಾಡಲಿಕ್ಕೆ ಅಲಕ್ಷ್ಯವಾದಲ್ಲಿ, ಇಲ್ಲವೆ ನಮ್ಮ ಇಷ್ಟ ದೇವತೆಗೆ ಶರಣು ಹೋಗದೆ ಇದ್ದಲ್ಲಿ ಕೊನೆಗೆ ರೋಗಿಯ ಮರಣವಾಯಿತು ಈ ಪ್ರಕಾರ ನಮ್ಮ ಕುಟುಂಬದಲ್ಲಿ ಮರಣ ಹೊಂದಿದವರ ಬಗ್ಗೆ ಶೋಕಮಾಡಲಾಗುತ್ತದೆ. ಆ ಕಾಲದಲ್ಲಿ ತಾವೂ ಯಮನ ದವಡೆಯಲ್ಲಿ ಸಿಕ್ಕುವರೇ ಇದ್ದೇವೆ, ಇಂದಿಲ್ಲ ನಾಳೆ ನಮ್ಮ ಸ್ಥಿತಿಯೂ ಹೀಗೆಯೇ ಆಗುವದಿದೆ. ಕೋಟ್ಯಾವಧಿ ಉಪಾಯ ಮಾಡಿದರೂ ಸಹ ಯಾವ ಯಮನು ಇಂದ್ರನನ್ನೂ ಬಿಟ್ಟಿಲ್ಲವೋ ಅವನು ನಮ್ಮಂಥ ಮನುಷ್ಯರಿಂದ ತಡೆಯಲ್ಪಡುವನೊ? ಇಂದು ಇಂಥ ಮನುಷ್ಯನು ಮರಣ ಹೊಂದಿದನು, ನಾಳೆ ಅಂಥವನು ಸತ್ತನು, ಹೀಗೆ ನಾವು ಕಾಣುತ್ತೇವೆ. ಅದೇ ಪ್ರಕಾರ ನಾವು ಒಂದು ದಿವಸ ಅವಶ್ಯವಾಗಿ ಸಾಯುವಂಥವರು ಆಗಿದ್ದೇವೆ. ಇತರ ಮನುಷ್ಯರಿಗೆ ಹೇಗೆ ಸ್ತ್ರೀ, ಪುತ್ರರ ವಿಯೋಗವಾಗುವುದೋ ಹಾಗೆಯೇ ನಮಗೂ ಆದೀತು. ಆಕಾಲದಲ್ಲಿ ನಾವು ಯಾರಿಗಾದರೂ ಶರಣು ಹೋದೆವೆಂದು ನಮ್ಮ ಮರಣವು ನಿಲ್ಲುವುದು ಅಷ್ಟರಲ್ಲಿಯೇ ಇದೆ. ಅಶುಭಕರ್ಮದ ಉದಯವಾಗುವುದರಿಂದಲೇ ಬುದ್ಧಿಗೆ ಭ್ರಮವು ಉತ್ಪನ್ನವಾಗುತ್ತದೆ ಕರ್ಮದ ಉದಯವು ಪ್ರಬಲವಾಗಿದ್ದರೆ ಯಾವ ಉಪಾಯವೂ ಫಲವನ್ನು ಕೊಡಲಾರದು. ಇಂಥ ಪ್ರಸಂಗದಲ್ಲಿ ಅಮೃತವು ವಿಷವಾಗುತ್ತದೆ, ತೃಣವು ಶಸ್ತ್ರವಾಗುತ್ತದೆ. ನಮ್ಮ ಘಾತಮಾಡುತ್ತದೆ. ನಮ್ಮ ಜೀವದ ಗೆಳೆಯರೂ ಸಹ ವೈರಿಗಳಂತೆ ವರ್ತಿಸುತ್ತಾರೆ.

**ಪುಣ್ಯೋದಯದಿಂದಲೇ ಸುಖವಾಗುತ್ತದೆ.** ಶುಭಕರ್ಮದ ಉದಯವಾದಾಗ ಮೂರ್ಖ ಮನುಷ್ಯನಲ್ಲಿಯೂ ಬುದ್ಧಿಯ ತೇಜವು ಹೊಳೆಯ ಹತ್ತುವದು ಏನೂ ಪ್ರಯತ್ನ ಮಾಡದೆಯೂ ಸಹ ತನ್ನಿಂದ ತಾನೇ ಸುಖ-ಸಾಮಗ್ರಿಗಳು ಬಂದು ದೊರೆಯುತ್ತವೆ. ವೈರಿಯು ಮಿತ್ರನಂತೆಯೂ ವಿಷವು ಅಮೃತದಂತೆಯೂ ಆಗುತ್ತದೆ. ಪುಣ್ಯದ ಉದಯವಿದ್ದಾಗ ಉಪದ್ರವ ಕೊಡುವ ಇತರ ವಸ್ತುಗಳಿಂದಲೂ ಸಹ ಸುಖವೇ ಲಭಿಸುತ್ತದೆ ಅಂದಮೇಲೆ ಮನುಷ್ಯ ಪ್ರಾಣಿಗೆ ಸುಖವನ್ನು ಹೊಂದುವದಕ್ಕೆ ಶರಣು ಹೋಗುವ ಸ್ಥಳವು ಯಾವುದಾದರೂ ಇದ್ದರೆ ಅದು ಶುಭ ಕರ್ಮವೇ ಆಗಿದೆ ಅದಕ್ಕೇನೇ ಶರಣು ಹೋಗಿರಿ ಪಾಪದ ಉದಯದಿಂದ ಕೈಗೆ ಬಂದ ಧನವೂ ಕೂಡ ಕ್ಷಣದಲ್ಲಿ ನಷ್ಟ ಹೊಂದುತ್ತದೆ. ಪುಣ್ಯೋದಯದಿಂದ ಅತಿ ದೂರದ ವಸ್ತುವೂ ಕೂಡ ಲಭಿಸುತ್ತದೆ. ಲಾಭಾಂತರಾಯ ಕರ್ಮದ ಕ್ಷಯೋಪಶಮವು ಇದ್ದಲ್ಲಿ ಏನೂ ಪ್ರಯತ್ನ ಮಾಡದೆಯೂ ಸಹ ದ್ರವ್ಯದ ನಿಧಿಯು ಕೈಗೆ ಹತ್ತುತ್ತದೆ. ಆದರೆ ಪಾಪೋದಯವಿದ್ದಾಗ ನಾವು ಸದಾಚಾರದಿಂದ ನಡೆಯುತ್ತಿದ್ದರೂ ಸಹ ಹತ್ತರವಿದ್ದ ದ್ರವ್ಯವೂ ಇಲ್ಲದಂತೆ ಆಗಿ, ದೋಷದ ಆರೋಪವು ನಮ್ಮ ಮೇಲೆ ಬರುತ್ತದೆ. ಜಗತ್ತಿನಲ್ಲಿ ದುಷ್ಕೀರ್ತಿಯು ಉಂಟಾಗುತ್ತದೆ ಯಶನಾಮ

ಕರ್ಮದ ಉದಯವಾದಲ್ಲಿ ಅದೇ ಅವಾದ ದುಷ್ಕೀರ್ತಿಗಳು ಇಲ್ಲದಂತೆ ಆಗುತ್ತವೆ ದೋಷವಿದ್ದವುಗಳೆಲ್ಲವೂ ಗುಣದಂತೆ ಕಾಣಹತ್ತುತ್ತವೆ.

**ಕರ್ಮವು ಬಲಿಷ್ಠವಾಗಿದೆ.** ಈ ಸಂಸಾರವು ಪಾಪ–ಪುಣ್ಯಗಳ ಉದಯದಿಂದ ತುಂಬಿದೆ. ಸ್ವಾರ್ಥ ಮತ್ತು ಪರಮಾರ್ಥ ಈ ಎರಡೂ ಪ್ರಕಾರದ ಉದಯಾವಸ್ಥೆಗಳು ಪರಕೃತವಾಗಿವೆ ಅಂತೂ ಆತ್ಮದಿಂದ ಭಿನ್ನವಾಗಿವೆ. ಈ ತಿಳುವಳಿಕೆಯನ್ನು ಮನಸ್ಸಿನಲ್ಲಿ ಇಡಬೇಕು. ಯಾವ ಅವಸ್ಥೆಯು ಪ್ರಾಪ್ತವಾದರೂ ಸಹ ಹರ್ಷ ವಿಷಾದಗಳನ್ನು ಹೊಂದಕೂಡದು ಮೊದಲು ಕಟ್ಟಿದ ಕರ್ಮವು ಈಗ ಉದಯಕ್ಕೆ ಬಂದು, ತನ್ನ ಫಲವನ್ನು ಕೊಟ್ಟು ಇಲ್ಲದಂತೆ ಆಯಿತು ಇದೊಂದು ದೃಷ್ಟಿಯಿಂದ ಒಳ್ಳೆಯದೇ ಆಯಿತು. ಆ ಕರ್ಮವನ್ನು ನಮ್ಮ ಇಚ್ಛೆಯಂತೆ ಉದಯಕ್ಕೆ ತರಲಿಕ್ಕೆ ಆಗುತ್ತಿರಲಿಲ್ಲ ಪುನಃ ಕರ್ಮವು ಉದಯ ಹೊಂದಿದ ತರುವಾಯ ಅದರ ಮೇಲೆ ಏನೂ ಉಪಾಯವು ನಡೆಯುವದಿಲ್ಲ ಕರ್ಮದ ಫಲವು ಜನ್ಮ, ಜರಾ, ಮರಣ, ರೋಗ, ಚಿಂತೆ, ಭಯ, ವೇದನಾ, ದುಃಖ ಮೊದಲಾದವುಗಳೂ ಪ್ರಾಪ್ತವಾದಲ್ಲಿ ಅವುಗಳಿಂದ ರಕ್ಷಣೆಯನ್ನು ಹೊಂದಲಿಕ್ಕೆ ಮಂತ್ರ, ತಂತ್ರ, ಯಕ್ಷ, ರಾಕ್ಷಸ, ದೇವ, ಔಷಧ ಮತ್ತು ಪ್ರತ್ಯಕ್ಷ ಪರಮೇಶ್ವರನೂ ಕೂಡ ಸಮರ್ಥನಿಲ್ಲ. ಹಾಗೆಯೇ ಆಕಾಶ ಪಾತಾಳದಲ್ಲಿ ಎಲ್ಲಿ ಅಡಗಿ ಕುಳಿತರೂ ಅದು ನಮ್ಮನ್ನು ಹಿಡಿಯದೆ ಬಿಡುವದಿಲ್ಲ. ಔಷಧ ಮೊದಲಾದಂಥ ಪದಾರ್ಥಗಳು ಬಾಹ್ಯ ನಿಮಿತ್ತಗಳಾಗಿವೆ ಅವು ಕೂಡ ಅಶುಭ ಕರ್ಮದ ಉದಯವು ಮಂದವಿದ್ದರೇನೇ ಉಪಯೋಗ ಬೀಳುತ್ತವೆ ದುಷ್ಟ, ಕಳ್ಳ, ಬಿಲ್ಲ, ವೈರಿ, ಸಿಂಹ, ಹುಲಿ, ಹಾವು ಮೊದಲಾದವುಗಳು ನಾವು ಅಡವಿಯಲ್ಲಿ ಸಿಗಲಿ, ಊರಲ್ಲಿ ಸಿಗಲಿ, ಎಲ್ಲಿ ಸಿಕ್ಕಲ್ಲಿಯೂ ಕೊಂದು ಹಾಕಬಹುದು ಜಲಚರ ಜೀವಗಳು ನೀರಿನಲ್ಲಿ ಹೋದರೆ ಅಲ್ಲಿಯೂ ಕೊಂದುಬಿಡಬಲ್ಲವು. ಈ ಪ್ರಕಾರ ಅಶುಭಕರ್ಮದ ಉದಯವು ನೀರು, ನೆಲ, ಕಟ್ಟಿಗೆ, ಕಲ್ಲು, ಮನೆ, ಅಡವಿ, ಕುಟುಂಬ, ಶಸ್ತ್ರಾಸ್ತ್ರಗಳು ಸಜ್ಜವಾಗಿರುವ ರಾಜಸಭೆ, ಇಂಥ ಯಾವ ಸ್ಥಾನದಲ್ಲಿಯೂ ಯಾವ ಕಾಲಕ್ಕೂ ಬಿಡುವದಿಲ್ಲ. ಈ ಜಗತ್ತಿನಲ್ಲಿ ಇಂಥ ಕೆಲವು ಸ್ಥಳಗಳು ಇವೆ ಅಲ್ಲಿ ಸೂರ್ಯಚಂದ್ರರ ಪ್ರಕಾಶ, ಹವೆ, ವಿಕ್ರಿಯಋದ್ಧಿಧಾರಕ ದೇವತೆಗಳಿಗೂ ಕೂಡ ಹೋಗಲಿಕ್ಕೆ ಆಗುವದಿಲ್ಲ ಆದರೆ ಕರ್ಮವು ಅಲ್ಲಿಯೂ ಹೋಗುತ್ತದೆ ಇದರ ಮೇಲಿಂದ ಕರ್ಮದ ಉದಯವಿದ್ದಾಗ ವಿದ್ಯಾ, ಮಂತ್ರ, ಬಲ, ಔಷಧ, ಪರಾಕ್ರಮ, ಮಿತ್ರ, ಯೋಧ, ಆನೆ, ಕುದುರೆ, ರಥ, ಸೈನ್ಯ, ಕೋಟೆ, ಶಸ್ತ್ರಾಸ್ತ್ರಗಳು ಮತ್ತು ಸಾಮ, ದಾನ, ದಂಡ, ಭೇದಾದಿ ಉಪಾಯಗಳು ಇವುಗಳಲ್ಲಿ ಯಾವುದಕ್ಕೂ ಸಾಕ್ಷ ಶರಣು ಹೋದಲ್ಲಿ ಅವು ರಕ್ಷಣ ಮಾಡಲಿಕ್ಕೆ ಸಮರ್ಥವಾಗುವದಿಲ್ಲ ಉದಯ ಹೊಂದುವ ಸೂರ್ಯನನ್ನು ಪ್ರತಿಬಂಧಿಸುವ ಸಾಮರ್ಥ್ಯವು ಯಾರಿಗೂ ಇಲ್ಲ ಎಂಬುದನ್ನು ಅರಿತು ಸಾಮ್ಯಭಾವಕ್ಕೆ ಶರಣು ಹೋದಲ್ಲಿ ಅಶುಭ ಕರ್ಮದ ನಿರ್ಜರೆಯು ಆದೀತು. ಮುಂದೆ ನವೀನ ಕರ್ಮವು ಕಟ್ಟಲಾರದು. ರೋಗ, ವಿಯೋಗ, ದಾರಿದ್ರ್ಯ, ಮರಣ ಮೊದಲಾದವುಗಳ ಭಯವನ್ನು ಬಿಟ್ಟು, ಧೈರ್ಯವನ್ನು ಧಾರಣ ಮಾಡಬೇಕು

**ವೀತರಾಗ ಭಾವನೆಯಿಂದಲೇ ದುಃಖದ ನಿವಾರಣೆಯು.** ವೀತರಾಗ ಭಾವ, ಸಂತೋಷ ಭಾವ, ಪರಮ ಸಾಮ್ಯ ಭಾವ ಇವೇ ಸರ್ವ ದುಃಖಗಳನ್ನು ನಾಶಮಾಡಲಿಕ್ಕೆ ಕಾರಣವಾಗಿವೆ. ಇನ್ನಾರೂ ಕಾರಣರಿಲ್ಲ. ನಮಗೆ ಶರಣು ಹೋಗಲಿಕ್ಕೆ ಯೋಗ್ಯವೆಂದರೆ ನಮ್ಮ ಆತ್ಮನಲ್ಲಿಯೇ ಇರುವ ಉತ್ತಮ ಕ್ಷಮಾದಿ ಭಾವಗಳೇ ಆಗಿವೆ ಕ್ರೋಧಾದಿ ಪರಭಾವಗಳು ಈ ಲೋಕಪರಲೋಕಗಳಲ್ಲಿ ಜೀವದ ಘಾತಮಾಡುವಂಥವಾಗಿವೆ ಕಷಾಯಗಳ ಮಂದತೆಯು ಆಗುವುದರಿಂದ ಇಹಲೋಕದಲ್ಲಿ ಸಾವಿರಾರು ವಿಘ್ನಗಳಿಂದ ಜೀವಗಳ ಬಿಡುಗಡೆಯು ಆಗುತ್ತದೆ ಅಂತಲೇ ಇಂಥ ಸಾಮ್ಯಭಾವಕ್ಕೆ ಶರಣು ಹೋಗುವುದೇ ಯೋಗ್ಯವಾಗಿದೆ. ರಾಗ–ದ್ವೇಷಗಳ ಮಂದತೆಯಿಂದಲೇ ನರಕ–ತಿರ್ಯಂಚಾದಿ ಗತಿಗಳಲ್ಲಿ ಹೋಗುವ ಸ್ಥಿತಿಯು ಇಲ್ಲದಂತಾಗುತ್ತದೆ. ಮಂದ ಕಷಾಯಿಗಳಾದ ಜನರು ದೇವ ಲೋಕದಲ್ಲಿಯೂ ಉತ್ತಮ ಮನುಷ್ಯ ಯೋನಿಯಲ್ಲಿಯೂ ಜನಿಸುತ್ತಾರೆ

**ಕರ್ಮವು ದುರ್ನಿವಾರವಾಗಿದೆ.** ಪೂರ್ವ ಕರ್ಮದ ಉದಯವು ಪ್ರಾಪ್ತವಾದಾಗ ಅದರಿಂದ ಉಂಟಾಗುವ ಸುಖ ದುಃಖಗಳಲ್ಲಿ ಒಂದು ವೇಳೆ ಆರ್ತ ರೌದ್ರ ಪರಿಣಾಮಗಳು ಉಂಟಾದಲ್ಲಿ, ಅಸ್ತಿತ್ವದಲ್ಲಿ ಇದ್ದ ಕರ್ಮದ ಉದೀರಣವು ಆದೀತು, ಅಂದರೆ ಕಾಲಾಂತರದಲ್ಲಿ ಉದಯ ಹೊಂದಬಹುದಾದ ಕರ್ಮವು ಮೊದಲೇ ಉದಯಕ್ಕೆ ಬಂದು, ಅದರಿಂದ ಸುಖ–ದುಃಖವನ್ನು ಭೋಗಿಸಬೇಕಾದೀತು. ಉದಯ ಹೊಂದಿದ ಕರ್ಮವನ್ನು ಯಾರೂ ಪ್ರತಿಬಂಧಿಸಲಾರರು. ಅದರಿಂದ ಕೇವಲ ದುರ್ಗತಿಗೆ ಕಾರಣವಾದಂಥ ನವೀನ ಕರ್ಮಗಳು ಬಂಧವು

ಹೊಂದಲಿಕ್ಕೆ ಹೊರಗಿನಿಂದ ಸಹಾಯ ಮಾಡುವಂಥ ಕ್ಷೇತ್ರ, ಕಾಲ, ಭಾವ, ಇವು ಕೂಡಿ ಬಂದವೆಂದರೆ ಆ ಉದಯಕ್ಕೆ ಪ್ರತಿಬಂಧ ಮಾಡುವುದು ಯಾರಿಗೂ ಸಾಧ್ಯವಿಲ್ಲ ಜಗತ್ತಿನಲ್ಲಿ ರೋಗ ಮೊದಲಾದವುಗಳ ಮೇಲೆ ಉಪಚಾರ ಮಾಡಲಾಗುತ್ತದೆ ಪ್ರಸಂಗಕ್ಕೆ ಅನುಸರಿಸಿ ಅದರಿಂದ ಅನೇಕ ರೋಗಗಳೂ ನೆಟ್ಟಗೆ ಆಗುತ್ತವೆ ಆದರೆ ಕರ್ಮದ ಉದಯವು ಬಲಿಷ್ಠವಾಗಿದ್ದಾಗ ಔಷಧವೂ ತನ್ನ ಗುಣವನ್ನು ತೋರಿಸಲಾರದು. ತಿರುಗಿ ಆ ಉಪಾಯಗಳು ವಿಪರೀತ ಫಲವನ್ನು ಕೊಡಲು ಕಾರಣವಾಗುತ್ತವೆ ಒಟ್ಟಿನಲ್ಲಿ ಜೀವಿಗೆ ಯಾವ ವೇಳೆಯಲ್ಲಿ ಅಸಾತಾ–ವೇದನೀಯ ಕರ್ಮವು ಪ್ರಬಲವಾಗಿರುವುದೋ ಆಗ ಔಷಧ ಮೊದಲಾದ ಉಪಚಾರಗಳ ಪರಿಣಾಮವು ವಿಪರೀತವಾಗುತ್ತದೆ ಯಾವ ಕಾಲಕ್ಕೆ ಅಸತಾವೇದನೀಯ ಕರ್ಮದ ಉದಯವು ಮಂದವಾಗಿರುವುದೋ ಇಲ್ಲವೆ ಕರ್ಮದ ಉಪಶಮವಿರುವುದೋ ಆಗ ಔಷಧ ಮೊದಲಾದವುಗಳ ಉಪಯೋಗವು ಆಗುತ್ತದೆ. ಅದರಿಂದ ಕಡಿಮೆ ಶಕ್ತಿಯು ಇರುವವರ ಪ್ರತಿಬಂಧವನ್ನು ಒಬ್ಬ ದುರ್ಬಲ ಮನುಷ್ಯನೂ ಕೂಡ ಮಾಡಲು ಶಕ್ಯವಾಗುತ್ತಾನೆ. ಅದೇ ವ್ಯಕ್ತಿಯು ಬಲಿಷ್ಠನಾದ ಮನುಷ್ಯನನ್ನು ಪ್ರತಿಬಂಧಿಸಲಿಕ್ಕೆ ಸಾಧ್ಯವಿಲ್ಲ ಪಂಚಮ ಕಾಲದಲ್ಲಿ ಶುಭ ಕರ್ಮವು ಉದಯಕ್ಕೆ ಬರಲಿಕ್ಕೆ ಬಾಹ್ಯ ಸಾಮಗ್ರಿಗಳು ತೀರ ಕಡಿಮೆಯಾಗಿವೆ. ಜ್ಞಾನವು ಅಲ್ಪವಾಗಿದೆ, ಪುರುಷಾರ್ಥವೂ ಕೊರತೆಯೇ ಎನಿಸುತ್ತಿದೆ ಇದಕ್ಕೆ ವಿಪರೀತವಾಗಿ ಅಶುಭ ಕರ್ಮವು ಉದಯವನ್ನೂ ಹೊಂದಲಿಕ್ಕೆ ಬೇಕಾಗುವ ಬಾಹ್ಯ ಸಾಮಗ್ರಿಯ ಒದಗುವಿಕೆಯು ಸಾಕಷ್ಟು ಇರುತ್ತದೆ ಅದಕ್ಕಾಗಿ ಅಲ್ಪ ಸಾಮಗ್ರಿ, ಅಲ್ಪ ಜ್ಞಾನ, ಅಲ್ಪ ಪುರುಷಾರ್ಥಗಳನ್ನು ಮಾಡಿ ಬಲಿಷ್ಠವಾದಂಥ ಅಸಾತಾ ಕರ್ಮದ ಉದಯವನ್ನು ಹೇಗೆ ಗೆಲ್ಲಲಿಕ್ಕೆ ಆದೀತು? ಒಂದು ದೊಡ್ಡ ಹೊಳೆಯ ಪ್ರವಾಹವು ಒಡೆದು, ಹುಚ್ಚೆದ್ದು ಬೇಕಾದ ಕಡೆಗೆ ಹರಿಯ ಹತ್ತಿದಾಗ ಚೆನ್ನಾಗಿ ಈಸ ಬಲ್ಲ ಮನುಷ್ಯನಾದರೂ ಆ ಪ್ರವಾಹದ ಎದುರಿಗೆ ಈಸುವುದು ಸಾಧ್ಯವಿದೆಯೆ? ಯಾವ ಕಾಲಕ್ಕೆ ನದಿಯ ಪ್ರವಾಹವು ಮಂದವಾಗಿರುವುದೋ ಆಗ ಈಸುವ ಕಲೆಯಲ್ಲಿ ನಿಷ್ಣಾತನಾದ ಮನುಷ್ಯನು ಅದರೊಳಗಿಂದ ಈಸಿ ಇನ್ನೊಂದು ತೀರವನ್ನು ಸೇರಬಲ್ಲನು ಅವನಿಗೆ ಒಮ್ಮಿಂದೊಮ್ಮೆ ಒತ್ತರದಿಂದ ಬರುವ ಪ್ರವಾಹದೊಳಗೆ ಈಸಿ ಪಾರಾಗಿ ಹೋಗಲಿಕ್ಕೆ ಆಗಲಿಕ್ಕಿಲ್ಲ ಇದೇ ಪ್ರಕಾರ ಪ್ರಬಲ ಕರ್ಮದ ಉದಯವು ಆದಾಗ ಅದರೊಳಗಿಂದ ನಮ್ಮನ್ನು ಯಾರೂ ಬಿಡಿಸುವಂಥವರು ಇರುವದಿಲ್ಲ. ಇದನ್ನು ಯಾವಾಗಲೂ ಮನಸ್ಸಿನಲ್ಲಿ ನೆನೆಯಬೇಕು ಈ ಲೋಕದಲ್ಲಿ ಪೃಥ್ವಿ ಮತ್ತು ಸಮುದ್ರ ಇವೆರಡು ಪದಾರ್ಥಗಳು ಎಲ್ಲ ವಸ್ತುಗಳಲ್ಲಿಯೂ ದೊಡ್ಡವು ಆಗಿವೆ ಆದರೆ ಇವುಗಳಲ್ಲಿಯೂ ಭೂಮಿಯನ್ನು ಸುತ್ತು ಹಾಕುವ ಹಾಗೂ ಸಾಗರವನ್ನು ಈಸಿ ಪಾರಾಗುವ ಜನರು ದೊರೆಯುತ್ತಾರೆ. ಹೀಗಿದ್ದರೂ ಕರ್ಮದ ಉದಯದೊಳಗಿಂದ ಈಸಿ ಹೋಗುವಂಥವರು ಮಾತ್ರ ಯಾರೂ ಕಾಣುವದಿಲ್ಲ. ಸಂಸಾರದಲ್ಲಿ ಮನುಷ್ಯ ಪ್ರಾಣಿಗೆ ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರ ಮತ್ತು ಸಮ್ಯಕ್‌ತಪ ಈ ನಾಲ್ಕು ಆರಾಧನೆಗಳನ್ನುಳಿದು ಅನಂತಾನಂತ ಕಾಲದಲ್ಲಿ ಅನ್ಯರಾರೂ ರಕ್ಷಣ ಮಾಡಲಿಕ್ಕೆ ಸಮರ್ಥರಾಗುವದಿಲ್ಲ.

ಮಂದ ಕಷಾಯಕ್ಕೆ ಶರಣು ಹೋಗಿರಿ. ಉತ್ತಮ ಕ್ಷಮಾಮಾರ್ದವಾದಿ ದಶಧರ್ಮಗಳಿಂದ ಅನೇಕ ದುಃಖ, ಅಪಮಾನ ಮೊದಲಾದವುಗಳು ನಾಶ ಹೊಂದುತ್ತವೆ. ಮಂದ ಕಷಾಯದಿಂದ ಸ್ವಾಧೀನ ಸುಖ, ಆತ್ಮ ರಕ್ಷಣ, ನಿರ್ಮಲ ಕೀರ್ತಿ, ಉಚ್ಚತನ ಮೊದಲಾದ ಅನೇಕ ಸುಖ ಸಾಮಗ್ರಿಗಳು ಪ್ರಾಪ್ತವಾಗಿರುತ್ತವೆ ಇದು ಅದರ ಪ್ರತ್ಯಕ್ಷ ಫಲವಾಗಿದೆ. ಇದನ್ನರಿತು ಅದಕ್ಕೆ ಶರಣು ಹೋಗಿರಿ. ಪರಲೋಕದಲ್ಲಿ ಮಂದ ಕಷಾಯದ ಫಲವೆಂದು ಸ್ವರ್ಗಲೋಕವು ಪ್ರಾಪ್ತವಾಗುತ್ತದೆ ವ್ಯವಹಾರದಲ್ಲಿ ಪ್ರತಿಯೊಂದು ಜೀವಿಗೂ ನಾಲ್ಕು ವಸ್ತುಗಳು ಶರಣು ಹೋಗಲಿಕ್ಕೆ ತಕ್ಕವಾಗಿವೆ–ಅರಿಹಂತ ದೇವ, ಸಿದ್ಧ ಪರಮಾತ್ಮ, ನಿಷ್ಪರಿಗ್ರಹ ಸಾಧು, ಕೇವಲಿ ಭಗವಂತನು ಪ್ರಕಟಗೊಳಿಸಿದ ದಯಾಮಯಿಧರ್ಮ ಇವುಗಳಿಗೆ ಶರಣು ಹೋಗದ ಹೊರತಾಗಿ ಆತ್ಮನಲ್ಲಿ ನಿರ್ಮಲತ್ವವು ಪ್ರಾಪ್ತವಾಗಲಾರದು.

ವೃತ್ತ ॥ ಸುರಲೋಕಂಗಳ ಪೊಕ್ಕಡಂ ಯಿರದೆ ತಾಂ ಪಾತಾಳಮಂ ಪೊಕ್ಕಡಂ
ಗಿರಿ ದುರ್ಗಂಗಳ ಪೊಕ್ಕಡಂ ಶರಧಿಯಂ ಪಾಯ್ದಲ್ಲಿ ಪೊಕ್ಕಿರ್ದಡಂ ।
ಭರದಿಂ ಪರ್ವತದಗ್ರದಲ್ಲಿ ಗುಹೆಯಂ ಪೊಕ್ಕಿರ್ದಡಿಂತೆಲ್ಲಿಯುಂ
ಶರಣಿಲ್ಲಂ ಪೆರತಾವರಾವು ನಿನಗಂ ಸದ್ಧರ್ಮದುರ್ಗಂ ವಿನಾ ॥

ದೇವೇಂದ್ರಂ ಧರಣೇಂದ್ರ ದೈತ್ಯನಿವಹಂ ವಿದ್ಯಾಧರಾನೀಕಮಂ
ಭಾವನ್ವ್ಯಂತರಚಂದ್ರಸೂರ್ಯನಿವಹಂ ರುದ್ರರ್ಕಳಂ ಬಂಧುವಂ ।
ದೇವಾನೀಕಮು ಮಂತ್ರತಂತ್ರನಿವಹಂ ಮರ್ತ್ಯರ್ಕಳಂ ಬುದ್ಧಿಯುಂ-
ಕಾವವರಾರಿಮರಾಜನೆಂಬ ಮುಳಿಸಿಂ ಕೊಂಡೊಯ್ಯೆ ಮತ್ತೆಲ್ಲಿಯುಂ ॥

—ಶ್ರೀ ವಿಜಯಣ್ಣ—ದ್ವಾದಶಾನುಪ್ರೇಕ್ಷೆ ಪರಿಚ್ಛೇದ ೨

## ೩. ಸಂಸಾರಾನುಪ್ರೇಕ್ಷೆ

**ಚತುರ್ಗತಿ ಭ್ರಮಣ**—ಅನಾದಿ ಕಾಲದಿಂದಲೂ ಸಂಸಾರದಲ್ಲಿ ಮಿಥ್ಯಾತ್ವ ಕರ್ಮದ ಉದಯದಿಂದ ನಿಶ್ಶೇಷ್ಟವಾದಂಥ ಜೀವಗಳು ಸರ್ವಜ್ಞ ವೀತರಾಗ ಪ್ರಣೀತ ಧರ್ಮವನ್ನು ಗ್ರಹಣ ಮಾಡುತ್ತ ಇಲ್ಲ ಅದರಿಂದ ಅವುಗಳಿಗೆ ನಾಲ್ಕೂ ಗತಿಯಲ್ಲಿ ಭ್ರಮಣ ಮಾಡಬೇಕಾಗುತ್ತದೆ ಸಂಸಾರದಲ್ಲಿ ಕರ್ಮದ ಗಟ್ಟಿಯಾದ ಕಟ್ಟಿಗೆ ಒಳಗಾದುದರಿಂದ ಪರಾಧೀನವಾಗಿ ತ್ರಸ-ಸ್ಥಾವರ ಯೋನಿಗಳಲ್ಲಿ ನಿರಂತರ ಭಯಂಕರವಾಗಿ ದುಃಖವನ್ನು ಭೋಗಿಸುತ್ತಿದ್ದು, ಮೇಲಿಂದ ಮೇಲೆ ಜನ್ಮ ಮರಣಗಳನ್ನು ಹೊಂದುತ್ತಲಿವೆ ಯಾವ ಯಾವ ಕರ್ಮಗಳು ಉದಯಕ್ಕೆ ಬಂದು ರಸವನ್ನು ಕೊಡುವವೋ ಅವೆಲ್ಲವುಗಳ ಉದಯಕ್ಕೇನೇ ತಮ್ಮ ಸ್ವರೂಪವೆಂದು ತಿಳಿದು ಅಜ್ಞಾನೀ ಜೀವಗಳು ಸ್ವಸ್ವರೂಪವನ್ನು ತ್ಯಜಿಸುವದರಿಂದ ಹೊಸ ಹೊಸ ಕರ್ಮಗಳನ್ನು ಪ್ರತ್ಯಕ್ಷವಾಗಿ ಕಟ್ಟಿಕೊಳ್ಳುತ್ತವೆ ಕರ್ಮದ ಸ್ವಾಧೀನವಾಗುವುದರಿಂದ ಜೀವಕ್ಕೆ ದುಃಖ ಕೊಡುವಂಥ ಯಾವ ಜಾತಿಗಳಿರುವವೋ ಅವುಗಳಲ್ಲಿ ಒಂದೂ ಭೋಗಿಸದೆ ಉಳಿದಿಲ್ಲ ಸಂಪೂರ್ಣ ದುಃಖವನ್ನು ಭೋಗಿಸುತ್ತ ಭೋಗಿಸುತ್ತ ಅನಂತಾನಂತ ಕಾಲವು ಉರುಳಿ ಹೋಯಿತು. ಅದರಂತೆ ಅನೇಕ ಪರಿವರ್ತನೆಗಳೂ ಆಗಿ ಹೋದುವು ನಮಗೆ ಇನ್ನೂ ಪ್ರಾಪ್ತವಾಗಬೇಕಾಗಿರುವ ಶರೀರವೆಂಬುದು ಯಾವುದೂ ಉಳಿದಿಲ್ಲ ಅನಂತ ಜಾತಿಯ ಅನಂತ ಶರೀರಗಳನ್ನು ಧರಿಸಿದ್ದಾಯಿತು ಆಹಾರ ಭೋಜನ ಪಾನಗಳನ್ನೂ ಸ್ವೀಕರಿಸಿಯಾಯಿತು. ಮೂರುನೂರಾ ನಲವತ್ತು ಮೂರು ಘನ ರಜ್ಜು ಪ್ರಮಾಣದಲ್ಲಿರುವ ಈ ಲೋಕದಲ್ಲಿ ಈ ಜೀವವು ಅನಂತಾನಂತ ಸಲ ಜನ್ಮ ಧಾರಣ ಮಾಡದ ಸ್ಥಳವೇ ಉಳಿದಿಲ್ಲ ಇದೇ ಪ್ರಕಾರ ಉತ್ಸರ್ಪಿಣಿ-ಅವಸರ್ಪಿಣಿ ಕಾಲಗಳಲ್ಲಿ ಈ ಜೀವವು ಅನಂತ ಸಲ ಜನ್ಮ ಮರಣಗಳನ್ನು ಹೊಂದದ ಒಂದು ಸಮಯವೂ ಸಹ ಉಳಿದಿಲ್ಲ. ಮನುಷ್ಯ, ಪಶು, ದೇವ ಮತ್ತು ನರಕ ಈ ನಾಲ್ಕೂ ಗತಿಗಳಲ್ಲಿ ಸಹ ಜಘನ್ಯ ಆಯುರ್ ಮರ್ಯಾದೆಯಿಂದ ಉತ್ಕೃಷ್ಟ ಮರ್ಯಾದೆಯ ವರೆಗೆ ಸಂಪೂರ್ಣ ಆಯುಷ್ಯದ ಪ್ರಮಾಣವನ್ನು ಧಾರಣಮಾಡಿ ಅನಂತ ಸಲ ಜನ್ಮ-ಮರಣವನ್ನು ಹೊಂದಿದೆ. ಕೇವಲ ಈ ಜೀವವು ಅನುದಿಶ ಅನುತ್ತರ ವಿಮಾನದಲ್ಲಿ ಮಾತ್ರ ಉತ್ಪನ್ನವಾಗಿಲ್ಲ ಯಾಕಂದರೆ ಆ ಹದಿನಾಲ್ಕು ವಿಮಾನಗಳಲ್ಲಿ ಸಮ್ಯಗ್‌ದೃಷ್ಟಿ ಜೀವಗಳ ಹೊರತಾಗಿ ಇತರರ ಜನ್ಮವು ಆಗುವದಿಲ್ಲ ಸಮ್ಯಗ್‌ದೃಷ್ಟಿ ಪುರುಷನಿಗೆ ಸಂಸಾರ ಪರಿಭ್ರಮಣವು ಆಗುವದಿಲ್ಲವೆಂಬ ನಿಯಮವಿದೆ

**ಸ್ಥಿತಿ ಬಂಧದ ಅನೇಕ ಸ್ಥಾನಗಳು**—ಕರ್ಮದ ಸ್ಥಿತಿಯು ಯಾವ ಪರಿಣಾಮದಿಂದ ಕಟ್ಟಲ್ಪಡುತ್ತದೆಯೋ ಅಂಥ ಸ್ಥಾನಗಳಿವೆ ಇವುಗಳಲ್ಲಿ ಸ್ಥಿತಿಬಂಧಕ್ಕೆ ಕಾರಣವು ಅಸಂಖ್ಯಾತ ಲೋಕ ಪ್ರಮಾಣ ಕಷಾಯಾಧ್ಯವಸಾಯ ಸ್ಥಾನಗಳು ಮತ್ತು ಅವುಗಳಿಗೆ ಕಾರಣವಾದ ಅಸಂಖ್ಯಾತ ಲೋಕ ಪ್ರಮಾಣ ಅನುಭಾಗ ಬಂಧಾಧ್ಯವಸಾಯ ಸ್ಥಾನಗಳು ಅಲ್ಲದೆ ಜಗತ್ ಶ್ರೇಣಿಯ ಸಂಖ್ಯಾತದ ಭಾಗದಷ್ಟು ಯೋಗ ಸ್ಥಾನಗಳು ಇವುಗಳಲ್ಲಿ ಯಾವುದೇ ಭಾವವು ಸಂಸಾರೀ ಜೀವಕ್ಕೆ ಪ್ರಾಪ್ತವಾಗದೆ ಉಳಿದಿಲ್ಲ ಕೇವಲ ಸಮ್ಯಗ್‌ದರ್ಶನ ಚಾರಿತ್ರಗಳಿಗೆ ಯೋಗ್ಯವಾದಂಥ ಭಾವವೇ ಉತ್ಪನ್ನವಾಗಿಲ್ಲ. ಇದನ್ನುಳಿದು ಇತರ ಎಲ್ಲ ಭಾವಗಳು ಅನಂತಾನಂತ ಸಲ ಪ್ರಾಪ್ತವಾಗಿವೆ ಜಿನವಚನಗಳ ಮೇಲೆ ವಿಶ್ವಾಸವನ್ನೂ ಇಡದಂಥ ಪುರುಷನಿಗೆ ಮಿಥ್ಯಾಜ್ಞಾನದ ಪ್ರಭಾವದಿಂದ ಅನಾದಿ ಕಾಲದಿಂದಲೂ ವಿಪರೀತ ಬುದ್ಧಿಯು ಉಂಟಾಗುತ್ತ ಬಂದಿದೆ ಅದರಿಂದ ಅಂಥ ಜೀವಗಳಿಗೆ ಯೋಗ್ಯ ಮಾರ್ಗವನ್ನು ಅವಲಂಬಿಸಬೇಕೆಂದು ಎನಿಸುವದಿಲ್ಲ. ಸಂಸಾರವು ಇದೊಂದು ಅರಣ್ಯವು ಇದರಲ್ಲಿ ಆ ಜೀವಗಳು ನಾಶಹೊಂದಿ ನಿಗೋದದಲ್ಲಿ ಉತ್ಪನ್ನವಾಗುತ್ತವೆ ನಿಗೋದದಲ್ಲಿ ಹೋದ ಮೇಲೆ ಅನಂತಾನಂತ ಕಾಲದ ವರೆಗೆ ಬಿಡುಗಡೆಯಾಗುವ ಆಶೆಯಿಲ್ಲ

**ಏಕೇಂದ್ರಿಯ ಮತ್ತು ವಿಕಲತ್ರಯದೊಳಗಿನ ದುಃಖ**—ಸಂಸಾರೀ ಜೀವವು ಪಾಪೋದಯದಿಂದ ಪೃಥ್ವಿಕಾಯ, ಜಲ-ಕಾಯ, ಅಗ್ನಿ-ಕಾಯ, ಪವನಕಾಯ, ಪ್ರತ್ಯೇಕ ಮತ್ತು ಸಾಧಾರಣ ವನಸ್ಪತಿ ಕಾಯಗಳಲ್ಲಿ

ಉತ್ಪನ್ನವಾಗುತ್ತದೆ ಅಲ್ಲಿ ಅದರ ಜ್ಞಾನವು ಇಲ್ಲದಂತೆ ಆಗುವುದರಿಂದ ಅದು ಜಡದಂತೆ ಎನಿಸುತ್ತದೆ. ಅದಕ್ಕೆ ಕೇವಲ ಸ್ಪರ್ಶನೇಂದ್ರಿಯವಷ್ಟೇ ಇರುತ್ತದೆ. ಈ ಪ್ರಕಾರ ಇಲ್ಲಿ ಕರ್ಮದ ಉದಯದಿಂದ ಹುಟ್ಟಿದ ಆತ್ಮ ಶಕ್ತಿ ರಹಿತ ಜೀವವು ನಾಲಿಗೆ, ಮೂಗು, ಕಿವಿ, ಕಣ್ಣು ಮೊದಲಾದ ಇಂದ್ರಿಯಗಳು ಇಲ್ಲದುದರಿಂದ ದೀರ್ಘಕಾಲದ ವರೆಗೆ ದುಃಖದಲ್ಲಿ ಕಳೆಯುತ್ತವೆ. ಒಮ್ಮೊಮ್ಮೆ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಹೀಗೆ ವಿಕಲತ್ರಯ ಜೀವಗಳಾಗಿ ಜನಿಸಿ ಆತ್ಮಜ್ಞಾನವಿಲ್ಲದೆ ಕೇವಲ ರಸನೇಂದ್ರಿಯದ ವಿಷಯವನ್ನು ಪೂರ್ತಿಗೊಳಿಸಿಕೊಳ್ಳುವ ತೀವ್ರ ಇಚ್ಛೆಯಿಂದ ಅನೇಕ ವಿಷಯಗಳನ್ನು ಸಂಪಾದಿಸುವದಕ್ಕಾಗಿ ಪ್ರಯತ್ನಿಸುತ್ತಿರುತ್ತದೆ ಆಗ ಮೇಲೆ ಜಿಗಿ ಜಿಗಿದೂ ಕೆಳಗೆ ಬೀಳುತ್ತದೆ, ಸಾಯುತ್ತದೆ. ವಿಕಲತ್ರಯದಲ್ಲಿ ಅಸಂಖ್ಯಾತ ಕಾಲದ ವರೆಗೆ ಭ್ರಮಣಮಾಡಿ ಪುನಃ ಏಕೇಂದ್ರಿಯ ವರ್ಗದಲ್ಲಿ ಬರುತ್ತದೆ. ಚಕ್ರದಂತೆ ಪುನಃ ಪ್ರತಿಯೊಂದು ಸಲವೂ ಹೊಸ ಶರೀರವನ್ನು ಧಾರಣ ಮಾಡುತ್ತ ನಾಲ್ಕೂ ಗತಿಯಲ್ಲಿ ನಿರಂತರ ಜನ್ಮ–ಮರಣ, ಕ್ಷುಧಾ, ತೃಷಾ, ರೋಗ–ವಿಯೋಗ ಮೊದಲಾದ ದುಃಖಗಳ ಅನುಭವವನ್ನು ಹೊಂದುತ್ತ ಅನಂತಕಾಲ ಸುತ್ತುವುದೇಸೇ ಸಂಸಾರವೆನ್ನಿಸಿಕೊಳ್ಳುತ್ತದೆ ಯಾವ ಪ್ರಕಾರ ಅಕ್ಕಿಯನ್ನು ಕುದಿಯುವ ನೀರಿನಲ್ಲಿ ಹಾಕಿದರೆ ಅದು ಕೆಳಗೆ ಮೇಲೆ ಆಗುತ್ತ ಬೇಯುತ್ತದೆಯೋ ಹಾಗೆಯೇ ಸಂಸಾರೀ ಜೀವಗಳು ಕರ್ಮದಿಂದ ಸಂತಪ್ತವಾಗಿ ಅತ್ತಿತ್ತ ಪರಿಭ್ರಮಣವನ್ನು ಮಾಡುತ್ತವೆ ಆಕಾಶದಲ್ಲಿ ಹಾರುವ ಪಕ್ಷಿಗಳನ್ನು ಇತರ ಪಕ್ಷಿಗಳು ತಿನ್ನುತ್ತವೆ ನೀರಿನಲ್ಲಿರುವ ಸಣ್ಣ ಮೀನುಗಳನ್ನು ಇತರ ದೊಡ್ಡ ಮೀನುಗಳು ತಿನ್ನುತ್ತವೆ ಪೃಥ್ವಿಯ ಮೇಲಿರುವ ಮನುಷ್ಯ ಪಶು ಮೊದಲಾದವುಗಳನ್ನು ಸಿಂಹ, ಹುಲಿ, ಹಾವು ಮೊದಲಾದ ದುಷ್ಟ ಪಶು, ಕಳ್ಳ, ಬೇಡ, ಚಾಂಡಾಲ, ಸುಲಿಗೆಗಾರರು ಮತ್ತು ಮಹಾನ್ ನಿರ್ದಯಿ ಜನರು ಕೊಲ್ಲುತ್ತಾರೆ ಈ ಪ್ರಕಾರ ಸಂಸಾರದಲ್ಲಿ ಎಲ್ಲ ಸ್ಥಳಗಳೂ ನಿರಂತರವಾಗಿ ಹೆದರಿಕೆಯಿಂದಲೇ ತುಂಬಿವೆ ಅಂಥ ಸ್ಥಳದಲ್ಲಿ ಈ ಜೀವವು ಯಾವಾಗಲೂ ದುಃಖದ ಅನುಭವವನ್ನು ಹೊಂದುತ್ತ ಇದೆ.

ನಿಗೋದದೊಳಗಿನ ದುಃಖ—ಬೇಟೆಗಾರನ ತೊಂದರೆಯಿಂದ ಹೆದರಿದಂಥ ಮೊಲವು ಸ್ವಸಂರಕ್ಷಣೆಗೆಂದು ಆಯೆಂದು ಬಾಯ್ದೆರೆದು ಕುಳಿತ ಸರ್ಪದ ಬಾಯಿಗೇನೇ ಬಿಲವೆಂದು ತಿಳಿದು ಪ್ರವೇಶಿಸುತ್ತದೆ. ಹಾಗೆಯೇ ಅಜ್ಞಾನೀ ಜೀವವು ಹಸಿವು, ನೀರಡಿಕೆ, ಕಾಮ, ಕ್ರೋಧ ಮೊದಲಾದ ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯ ತೃಷ್ಣೆಯ ಸಂತಾಪದಿಂದ ತೃಪ್ತವಾದಂಥ, ವಿಷಯವೇ ಹಾವಿನ ಮುಖವೆಂಬ ಬಿಲವು, ಅದರಲ್ಲಿ ಪ್ರವೇಶಿಸುತ್ತದೆ ವಿಷಯ ಕಷಾಯದಲ್ಲಿ ಪ್ರವೃತ್ತವಾಗುವುದೇ ಸಂಸಾರರೂಪೀ ಹಾವಿನ ಮುಖವಾಗಿದೆ. ಇದರಲ್ಲಿ ಪ್ರವೇಶ ಮಾಡುವುದರಿಂದ ನಮ್ಮ ಜ್ಞಾನ–ದರ್ಶನ–ಸುಖ–ಸತ್ತಾದಿ ಭಾವ ಪ್ರಾಣಗಳ ನಾಶವಾಗುತ್ತದೆ. ಅಲ್ಲದೆ ನಿಗೋದದಲ್ಲಿ ಹುಟ್ಟ-ಬೇಕಾಗುತ್ತದೆ ಅಲ್ಲಿ ಜ್ಞಾನವಿಲ್ಲದುದರಿಂದ ಸತ್ತವರಂತೆ ಅದರ ಸ್ಥಿತಿಯಾಗುತ್ತದೆ. ಇಂಥ ಸ್ಥಿತಿಯಲ್ಲಿ ಜನ್ಮ-ಮರಣಗಳನ್ನು ಹೊಂದುತ್ತ ಅನಂತಾನಂತ ಕಾಲವು ಉರುಳಿ ಹೋಗುತ್ತದೆ ನಿಗೋದದಲ್ಲಿ ಜೀವವು ಉತ್ಪನ್ನವಾದಾಗ ಅದಕ್ಕೆ ಆತ್ಮವು ಇದ್ದೂ ಇಲ್ಲದಂತೆಯೇ ಇರುತ್ತದೆ. ಯಾಕಂದರೆ ಅಲ್ಲಿ ಜ್ಞಾನದ ಅಭಾವವಿರುತ್ತದೆ ಒಂದು ವೇಳೆ ಅಲ್ಲಿ ಆತ್ಮನ ಅಸ್ತಿತ್ವವು ಕಂಡು ಬಂದರೂ ಅದು ಇದ್ದರೂ ಅಷ್ಟೇ, ಇಲ್ಲದಿದ್ದರೂ ಅಷ್ಟೇ. ನಿಗೋದದಲ್ಲಿ ಜ್ಞಾನವು ಅಕ್ಷರದ ಅನಂತ ಭಾಗದಷ್ಟು ಸೂಕ್ಷ್ಮವಾಗಿರುತ್ತದೆ. ಈ ಪ್ರಕಾರ ನಿಗೋದದೊಳಗಿನ ಸ್ಥಿತಿಯಾಗಿದೆ.

ತ್ರಸ ಪರ್ಯಾಯದಲ್ಲಿಯೂ ಅನೇಕ ದುಃಖದ ಪ್ರಕಾರಗಳು ಇರುತ್ತವೆ. ಅವೆಲ್ಲವುಗಳನ್ನೂ ಈ ಜೀವವು ಅನುಭವಿಸಿದೆ. ದುಃಖದ ಯಾವ ಪ್ರಕಾರವೂ ಇದಕ್ಕೆ ಪ್ರಾಪ್ತವಾಗಿಲ್ಲವೆನ್ನುವಂತಿಲ್ಲ ಸಂಸಾರದಲ್ಲಿ ಪರಿಭ್ರಮಣ ಮಾಡುತ್ತಿರುವಾಗ ಯಾವಾಗ ಇದಕ್ಕೆ ದುಃಖದ ಅನಂತ ಪರ್ಯಾಯಗಳು ಪ್ರಾಪ್ತವಾಗುತ್ತವೆಯೋ ಆಗ ಯಾವಾಗಾದರೂ ಒಮ್ಮೆ ಪಂಚೇಂದ್ರಿಯಯುಕ್ತ ಪರ್ಯಾಯವು ಪ್ರಾಪ್ತವಾಗುತ್ತದೆ ಅದರಲ್ಲಿ ಪ್ರಾಣಿಗೆ ಸ್ವಲ್ಪ ಸುಖದ ಭಾಸವಾಗುತ್ತದೆ

ಇನ್ನು ಮುಂದೆ ಚತುರ್ಗತಿಯ ಸ್ವರೂಪವನ್ನು ಪರಮಾಗಮಕ್ಕೆ ಅನುಸರಿಸಿ ಇಲ್ಲಿ ಸ್ವಲ್ಪ ವಿವರಿಸಿದರೆ ಅದರ ವಿಷಯದಲ್ಲಿ ವಿಚಾರಿಸಲಿಕ್ಕೆ ಒಳ್ಳೆಯದಾದೀತು ಅದಕ್ಕಾಗಿ ಸಂಗ್ರಹವಾಗಿ ಇಲ್ಲಿ ಹೇಳಲಾಗುತ್ತದೆ

ದ್ರವ್ಯ ಕ್ಷೇತ್ರ ಕಾಲ ಭವಭವದೊಡಗೂಡಿ ಪೂರ್ವಿಯ ಗತಿ ನಾಲ್ಕರಲ್ಲಿ ।<br>
ಪೂರ್ವ ಚತುರ್ದಶ ಜೀವ ಸಮಾಸಾದಿ ತೀವ್ರ ಭ್ರಮಣೆ ಸಂಸಾರಾ ॥

ನಾರಕನಾದಡಲ್ಲಿ ಬಹುಭೇದನಭೇದನಯಂತ್ರದಾಹಮಂ
ತೀರದ ದುಃಖ ಭಾರ ಶ್ರಮ ಬಂಧನಮುಂ ತಿರ್ಯಂಚದಲ್ಲಿಯುಂ ।
ಅಪಾರ ಭಾರ ವಿಯೋಗ ದುಃಖ ಮನುಜತ್ವ ದೇವರಲ್ಲಿಯುಂ
ಸಂಸಾರ ದುರಂತ ದುಃಖ ಪರಿಪೂರಕೆ ಕಾರಣಮೆಲ್ಲಿನೋಳ್ಪಡಂ ॥

ಶ್ರೀ ವಿಜಯಣ್ಣ–ದಾದಶಾನು ಪ್ರೇಕ್ಷೆ ೫–೨, ೧೧೯.

## ಚತುರ್ಗತಿಯ ಸ್ವರೂಪ

**ನರಕದೊಳಗಿನ ಬಿಲಗಳ ಸಂಖ್ಯೆ**—ನರಕ ಭೂಮಿಗಳು ಏಳು ಇರುತ್ತವೆ ಅವೆಲ್ಲವುಗಳಲ್ಲಿ ಸೇರಿ ನಲವತ್ತೊಂಭತ್ತು ಭಾಗಗಳಿವೆ ಇವುಗಳಿಗೆ ಪಟಲಗಳೆಂದೂ ಹೇಳುವರು ಈ ಪಟಲಗಳಲ್ಲಿ ಎಂಬತ್ತು ನಾಲ್ಕು ಲಕ್ಷ ಬಿಲಗಳಿವೆ ಇವೆಲ್ಲಕ್ಕೂ ನರಕವೆಂಬ ಹೆಸರು ನರಕದ ಗೋಡೆ, ಮೇಲ್ಭಾಗ, ನೆಲ ಇವೆಲ್ಲವೂ ವಜ್ರಮಯ-ವಾಗಿವೆ ಅನೇಕ ಬಿಲಗಳು ಸಂಖ್ಯಾತ ಯೋಜನ ಉದ್ದ–ಅಗಲ ಇವೆ ಹಲವು ಅಸಂಖ್ಯಾತ ಯೋಜನ ಉದ್ದಗಲವಾಗಿವೆ. ಪ್ರತಿಯೊಂದು ಬಿಲದ ಮಧ್ಯಭಾಗದಿಂದ ಸ್ವಲ್ಪ ಮೇಲ್ಭಾಗಕ್ಕೆ ನಾರಕಿ ಜೀವಗಳು ಉತ್ಪನ್ನವಾಗುವ ಸ್ಥಳವಿದೆ ಈ ಉತ್ಪತ್ತಿ ಸ್ಥಾನವು ಸಣ್ಣ ಬಾಯಿಯ ಒಂಟೆಯ ಮುಖದಂತೆ ಇದೆ. ಅಲ್ಲದೆ ಅದು ತಲೆಕೆಳಗಾದ ಮುಖವುಳ್ಳದಿದೆ ಇದರಲ್ಲಿ ನಾರಕೀ ಜೀವಗಳು ಕೆಳಗೆ ತಲೆ, ಮೇಲೆ ಕಾಲುಗಳಿರುವ ರೀತಿಯಲ್ಲಿ ಉತ್ಪನ್ನವಾಗುತ್ತವೆ. ಮೇಲಾಗಿ ಕೆಳಗೆ ಇರುವ ವಜ್ರಮಯ ನೆಲದ ಮೇಲೆ ಬಹು ಜೋರಿನಿಂದ ಅಪ್ಪಳಿಸುತ್ತವೆ ಆ ಜೋರಿಗೆ ತಿರುಗಿ ಮೇಲಕ್ಕೆದ್ದು ಕೆಳಗೆ ಬೀಳುತ್ತವೆ ಈ ಪ್ರಕಾರ ಅಲ್ಲಿಯ ನೆಲದ ಮೇಲೆ ಅನೇಕ ಸಲ ಬಿದ್ದು ಬಿದ್ದೂ ನೆಲದ ಮೇಲೆಯೇ ಹೊರಳಾಡುತ್ತಿರುತ್ತವೆ

**ಬಿಲದೊಳಗಿನ ಶೀತೋಷ್ಣತೆಗಳ ಪ್ರಮಾಣ**—ಅಂಸಖ್ಯಾತ ಚೇಳುಗಳು ಕಡಿದಾಗ ಆಗುವ ವೇದನೆಗಿಂತಲೂ ಅಸಂಖ್ಯಾತ ಪಟ್ಟು ಹೆಚ್ಚು ವೇದನೆಯು ನರಕದ ಭೂಮಿಯಲ್ಲಿದೆ ನರಕದ ಬಿಲಗಳಲ್ಲಿ ಮೊದಲಿನ ನಾಲ್ಕು ಭೂಮಿಯೊಳಗಿನ ನಲವತ್ತು ಲಕ್ಷ ಮತ್ತು ಐದನೆಯ ಭೂಮಿಯೊಳಗಿನ ಎರಡು ಲಕ್ಷದಷ್ಟು ಬಿಲಗಳಲ್ಲಿ–ನಲವತ್ತೆರಡು ಲಕ್ಷ ಬಿಲಗಳಲ್ಲಿ–ಕೇವಲ ಉಷ್ಣದ ವೇದನೆಯು ಇರುತ್ತದೆ ಆ ಉಷ್ಣತೆಯನ್ನು ವರ್ಣಿಸಲಿಕ್ಕೆ ಉದಾಹರಿಸಬೇಕೆಂದರೆ ಈ ಲೋಕದಲ್ಲಿ ಯಾವ ಪದಾರ್ಥವು ಕಂಡು ಬರುವದಿಲ್ಲ. ಆದರೂ ಸಹ ಭಗವಂತನ ಆಗಮದಲ್ಲಿ ಆ ಉಷ್ಣತೆಯ ವರ್ಣನೆಯನ್ನು ಮಾಡಲಾಗಿದೆ ಅದು ಹೀಗಿದೆ–ಒಂದು ಲಕ್ಷ ಯೋಜನ ಪ್ರಮಾಣದ ಕಬ್ಬಿಣದ ದೊಡ್ಡ ಗುಂಡನ್ನು ನರಕದ ಆ ಬಿಲಗಳಲ್ಲಿ ಬಿಟ್ಟರೆ ಅದು ನೆಲಕ್ಕೆ ಹೋಗಿ ತಲುಪುವಷ್ಟರಲ್ಲಿ ಅಲ್ಲಿಯ ಉಷ್ಣತೆಯಿಂದ ಕರಗಿ ದ್ರವವಾಗಿ ಹೋಗುತ್ತದೆ. ಐದನೆಯ ಭೂಮಿಯ ಮೂರು ನಾಲ್ಕನೆಯಾಂಶ ಬಿಲಗಳಲ್ಲಿ ಮತ್ತು ಆರನೆಯ–ಏಳನೆಯ–ಪೃಥ್ವಿಯೊಳಗಿನ ಬಿಲಗಳ ಹವೆಯಲ್ಲಿ ಬಹಳ ಚಳಿಯೂ ಇದೆ. ಅಲ್ಲಿ ಅದೇ ಲಕ್ಷಯೋಜನ ಪ್ರಮಾಣದ ಕಬ್ಬಿಣದ ಗುಂಡಿನ ರಸವನ್ನು ಇಟ್ಟರೆ ಒಂದು ಕ್ಷಣದಲ್ಲಿ ಘನರೂಪವನ್ನು ಹೊಂದಿ ಬಿಟ್ಟೀತು. ಈ ಪ್ರಕಾರ ಶೀತ, ಉಷ್ಣ ವೇದನೆಗಳಿಂದ ತುಂಬಿದ ನರಕದಲ್ಲಿ ಕರ್ಮವಶನಾಗುವುದರಿಂದ ಜೀವಕ್ಕೆ ಅಸಂಖ್ಯಾತ ಕಾಲದ ವರೆಗೆ ಭಯಂಕರ ದುಃಖವನ್ನು ಭೋಗಿಸಬೇಕಾಗುತ್ತದೆ ಅಲ್ಲಿ ಆಯುಷ್ಯವು ಪೂರ್ಣವಾಗದ ಹೊರತಾಗಿ ಮರಣವು ಪ್ರಾಪ್ತವಾಗುವದಿಲ್ಲ.

**ನರಕದೊಳಗಿನ ವೇದನೆ**—ಅಲ್ಲಿ ಹಸಿವೆಯ ಬಾಧೆಯು ಬಹಳ ಭಯಂಕರವಾಗಿರುತ್ತದೆ ಜಗತ್ತಿನೊಳಗಿನ ಕಲ್ಲು, ಮಣ್ಣು ಮೊದಲಾದ ಎಲ್ಲ ಪದಾರ್ಥಗಳನ್ನು ತಿಂದರೂ ಆ ಹಸಿವು ಹಿಂಗುವದಿಲ್ಲ ಆದರೆ ಇಷ್ಟು ತಿನ್ನಲಿಕ್ಕಾದರೂ ಅಲ್ಲಿ ಎಲ್ಲಿ ಸಿಕ್ಕೀತು? ಒಂದು ಕಣದಷ್ಟು ತಿನ್ನೋಣವೆಂದರೆ ಅದೂ ದೊರೆಯುವದಿಲ್ಲ ನೀರಡಿಕೆ ಎಷ್ಟು? ಎಲ್ಲ ಸಮುದ್ರಗಳ ನೀರನ್ನು ಕುಡಿದರೂ ತೀರದಂಥದು ಆದರೆ ಅಲ್ಲಿ ಒಂದು ಹನಿಯೂ ನೀರು ಸಿಕ್ಕದು ಒಂದೇ ಕಾಲಕ್ಕೆ ಶರೀರದಲ್ಲಿ ಎಲ್ಲ ರೋಗಗಳು ಉತ್ಪನ್ನವಾಗುವವು ವೇದನೆಗೆ ಸೀಮೆಯಾದರೂ ಇದೆಯೆ? ಇದಲ್ಲದೆ ಹೊಸ ಜೀವವು ಯಾವುದಾದರೂ ನರಕದಲ್ಲಿ ಉತ್ಪನ್ನವಾದಲ್ಲಿ ಅಲ್ಲಿಯ ಮೊದಲನೆಯ ಜೀವಗಳು ಭಯಂಕರ ರೂಪವನ್ನು ಧಾರಣಮಾಡಿ, ಅನೇಕ ಶಸ್ತ್ರಾಸ್ತ್ರಗಳಿಂದ ಸಿದ್ಧವಾಗಿ ಆ ನವೀನ ಜೀವದ ಮೈಮೇಲೆ ಏರಿ ಬರುತ್ತವೆ. ಅಲ್ಲದೆ ಅದನ್ನು ಹಿಡಿ, ಹೊಡೆ, ಹರಿ, ತುಂಡು ಮಾಡು ಹೀಗೆ ಭೀಕರ ಶಬ್ದಗಳನ್ನು ಉಚ್ಚರಿಸುತ್ತ ಕೂಲ್ಲುವದಕ್ಕೆಂದು ದಾಳಿಸಿ,

ಬರುತ್ತವೆ ಆ ನಾರಕೀ ಜೀವಗಳು ನಗ್ನ, ತೀರ ಕಪ್ಪು, ರಕ್ತಪಿತ್ತದಿಂದ ತುಂಬಿದಂಥವು, ಕಣ್ಣುಗಳು ಏರುಗಟ್ಟಿದಂಥವು, ತೆರೆದ ಬಾಯಿ ಉಳ್ಳವು, ಹೊರಗೆ ನೇತಾಡುವ ಹಾವಿನಂಥ ನಾಲಿಗೆಯುಳ್ಳವು, ಕರಗಸದಂಥ ತೀಕ್ಷ್ಣ ಹಲ್ಲುಗಳು ಇರುವಂಥವು, ಎದ್ದು ನಿಂತ ಕಪ್ಪು, ಕೆಂಪು, ಹಳದಿ ಕೂದಲುಗಳಿಂದ ವಿಚಿತ್ರವಾಗಿ ಕಾಣುವಂಥವು, ಉಗುರು, ಗೊರಸುಗಳಿರುವಂಥವು, ಮಹಾನಿರ್ದಯಿ, ಹುಂಡಕ ಸಂಸ್ಥಾನವನ್ನು ಧಾರಣ ಮಾಡುವಂಥವಿರುತ್ತವೆ. ಅವು ಬಂದೊಡನೆಯೇ ಕೈಯೊಳಗಿನ ಮುಳ್ಳುಗಳುಳ್ಳ ಗದೆಯಿಂದ ಹೊಡೆದು, ಹೊಸ ಜೀವದ ತಲೆಯನ್ನು ಒಡೆದು ಬಿಡುತ್ತವೆ. ನಾರಕೀ ಜೀವಗಳ ಶರೀರಗಳು, ತುಂಬಿದ ಸರೋವರದಲ್ಲಿ ಒಣಕೆಯಿಂದ ಹೊಡೆದರೆ ನೀರು ಮೇಲೆ ಸಿಡಿದು, ತಿರುಗಿ ಅಲ್ಲಿಯೇ ಬಿದ್ದು ನೀರಿನಲ್ಲಿ ಮೊದಲಿನಂತೆ ಸೇರಿ ಹೋಗುವಂತೆ ಇರುತ್ತವೆ. ಆ ಜೀವಗಳ ಶರೀರದಲ್ಲಿ ಹಲವು ತುಣುಕುಗಳಾದರೂ ತಿರುಗಿ ಅವು ಆ ಶರೀರದಲ್ಲಿಯೇ ಕೂಡಿಕೊಳ್ಳುತ್ತವೆ. ಅವುಗಳ ಶರೀರವನ್ನು ಖಡ್ಗದಿಂದ ತುಂಡು ಮಾಡುತ್ತಾರೆ, ಕರಗಸದಿಂದ ಕೊಯ್ಯುತ್ತಾರೆ, ಕೊಡಲಿಯಿಂದ ಕಡಿಯುತ್ತಾರೆ, ಚೂರಿಯಿಂದ ಚುಚ್ಚುತ್ತಾರೆ, ಬರ್ಚಿಯಿಂದ ತಿವಿಯುತ್ತಾರೆ, ಶೂಲದ ಮೇಲೆ ಏರಿಸುತ್ತಾರೆ, ಹೊಟ್ಟೆ ಹಾಗೂ ಎದೆಯೊಳಗಿನ ಮರ್ಮಸ್ಥಾನಗಳನ್ನು ಒಡೆಯುತ್ತಾರೆ, ಕಣ್ಣುಗಳನ್ನು ತೆಗೆಯುತ್ತಾರೆ, ಮುಸಿಯಲ್ಲಿ ಸುಡುತ್ತಾರೆ, ಎಣ್ಣೆಯ ದೊಡ್ಡ ಕೊಪ್ಪರಿಗೆಯಲ್ಲಿ ಕುದಿಸುತ್ತಾರೆ, ಎಣ್ಣೆಯ ಗಾಣದಲ್ಲಿ ಹಾಕಿ ಹಿಂಡುತ್ತಾರೆ. ಈ ಪ್ರಕಾರ ಪರಸ್ಪರ ಹೊಡೆಯುವುದು, ಬಡೆಯುವುದು, ಸೀಳುವುದನ್ನು ಮಾಡುತ್ತಿರುವಾಗ ನಾರಕಿ ಜೀವಗಳಿಗೆ ಯಾವ ದುಃಖವು ಆಗುವುದೋ ಅದನ್ನು ಕೋಟಿ ನಾಲಿಗೆ-ಗಳುಳ್ಳವರು ಕೋಟ್ಯಾವಧಿ ವರ್ಷಗಳ ವರೆಗೆ ವರ್ಣಿಸಿದರೂ ಆಗದು. ಇಷ್ಟೇ ಅಲ್ಲ, ಆ ವರ್ಣನೆಯನ್ನೆಲ್ಲ ನಾರಕಿಗಳ ಒಂದು ಕ್ಷಣದ ದುಃಖವನ್ನೂ ವರ್ಣಿಸಲಾರವು. ಅಂದಮೇಲೆ ಸಂಪೂರ್ಣ ದುಃಖವನ್ನು ವರ್ಣಿಸುವದಂತೂ ದೂರವೇ ಉಳಿಯಿತು.

ನರಕದೊಳಗಿನ ಇತರ ಸಾಮಗ್ರಿಗಳು—ನರಕದೊಳಗಿನ ಸಾಮಗ್ರಿ ಮತ್ತು ಅಲ್ಲಿಯ ಜೀವಗಳ ಭಯಾನಕ ಸ್ವರೂಪವನ್ನು ಇಲ್ಲಿ ಯಾರಾದರೂ ತೋರಿಸಿದರೆ ನೋಡುವಂಥ ಮನುಷ್ಯನು ಕೂಡಲೆ ಭಯದಿಂದ ಸತ್ತು ಹೋದಾನು ನರಕದೊಳಗಿನ ರಸಾದಿ ಪದಾರ್ಥಗಳು ಬಹಳ ಕಹಿಯಾಗಿರುತ್ತವೆ. ಅವುಗಳ ಮುಂದೆ ಇಲ್ಲಿಯ ಬೇವಿನ ರಸ, ವಿಷ, ಹಾಲಾಹಾಲಗಳು ಏನೂ ಅಲ್ಲ. ಅಲ್ಲಿಯ ಶರೀರದ ಒಂದು ಕಣ ಮಾತ್ರ ಇಲ್ಲಿ ಬಂದರೆ ಅದರ ಕಹಿ ವಾಸನೆಯಿಂದ ಇಲ್ಲಿಯ ಸಾವಿರಾರು ಪಂಚೇಂದ್ರಿಯ ಜೀವಗಳು ಪ್ರಾಣತ್ಯಾಗವನ್ನು ಮಾಡಿಯಾವು ನರಕದೊಳಗಿನ ಮಣ್ಣೂ ಕೂಡ ಬಹು ದುರ್ಗಂಧಯುಕ್ತವಾಗಿದೆ ಏಳನೆಯ ನರಕ ಭೂಮಿಯ ಮೇಲಿನ ಒಂದು ಮಣ್ಣಿನ ಕಣವನ್ನು ಇಲ್ಲಿ ತಂದರೆ ಅದರ ಸುತ್ತಲೂ ಇಪ್ಪತ್ತುನಾಲ್ಕು ಹಾಗೂ ಮೇಲೆ ಅರ್ಧ ಹರದಾರಿಗಳ ವರೆಗಿನ ಪಂಚೇಂದ್ರಿಯ ಜೀವಗಳೆಲ್ಲ ದೇಹತ್ಯಾಗವನ್ನು ಮಾಡಿಯಾವು. ನರಕದೊಳಗಿನ ಒಂದೊಂದು ಪಟಲದೊಳಗಿನ ಮಣ್ಣಿನ ದುರ್ಗಂಧದಿಂದ ಅರ್ಧ ಹರದಾರಿಗಿಂತಲೂ ಹೆಚ್ಚು ದೂರವಿರುವ ಜೀವಗಳು ಸಾಯುತ್ತವೆ. ಈ ಪ್ರಮಾಣದ ಮೇಲಿಂದ ನರಕದ ಏಳನೆಯ ಭೂಮಿಯೊಳಗಿನ ನಲವತ್ತರೊಂಭತ್ತನೆಯ ಪಟಲದೊಳಗಿನ ಮಣ್ಣಿನ ದುರ್ಗಂಧವು ಇಪ್ಪತ್ನಾಲ್ಕುವರೆ ಹರದಾರಿಯ ವರೆಗಿನ ಜೀವಗಳನ್ನು ಕೊಲ್ಲಲು ಶಕ್ತವಾಗುತ್ತದೆ. ನರಕದಲ್ಲಿ ವೈತರಣಿ ನದಿಯು ಇದೆ. ಅದರ ನೀರಿನ ಸ್ಪರ್ಶವು ಆದೊಡನೆಯೇ ನಾರಕೀ ಜೀವಗಳ ಶರೀರವು ತುಂಡು-ತುಂಡಾಗಿ ಹೋಗುತ್ತದೆ, ಕ್ಷಾರ, ವಿಷ, ಅಗ್ನಿಯಂತೆ ತೀರ ಕಾವೇರಿದ ಎಣ್ಣೆ ಮೊದಲಾದ ಪದಾರ್ಥಗಳನ್ನು ಸಿಂಪಡಿಸಿದರೆ ನಮ್ಮ ದೇಹಕ್ಕೆ ಎಷ್ಟು ವೇದನೆಯು ಆಗುತ್ತದೆಯೋ ಅದಕ್ಕಿಂತ ಅಪರಿಮಿತ ಹೆಚ್ಚು ಪೀಡೆಯು ಆ ವೈತರಣಿಯ ನೀರಿನ ಬಿಂದುವು ಸೋಂಕುವುದರಿಂದ ಆಗುತ್ತದೆ. ಅಲ್ಲಿಯ ಗಾಳಿಯೂ ಭಯಂಕರವಾಗಿದೆ. ಅಲ್ಲಿಯ ಪರ್ವತಗಳೂ ಸಹ ಆ ಗಾಳಿಯಿಂದ ನಿಮಿಷಾರ್ಧದಲ್ಲಿ ಹಾರಿ ಹೋದಾವು ನರಕದಲ್ಲಿ ಇರುವಂಥ ಅಗ್ನಿಗೆ ವಜ್ರಾಗ್ನಿ ಎನ್ನುವರು ಅದನ್ನು ಒಂದು ವೇಳೆ ಇಲ್ಲಿ ತಂದರೆ ಇಲ್ಲಿಯ ಪರ್ವತ, ಸಮುದ್ರ ಅಥವಾ ವೃಷ್ಟಿ ಇವುಗಳಲ್ಲಿ ಯಾವುದೂ ಕೂಡ ಅದನ್ನು ಒಂದು ಕ್ಷಣವೂ ಸಹ ಧಾರಣ ಮಾಡಲಿಕ್ಕೆ ಸಮರ್ಥವಾಗಲಾರದು ಒಟ್ಟಿನಲ್ಲಿ ಅಲ್ಲಿಯ ಪ್ರತಿಯೊಂದು ಪದಾರ್ಥವೂ ಅದ್ವಿತೀಯ ಭಯಂಕರವಾಗಿವೆ

ನಾರಕಿಗಳ ಪರಿಣಾಮ—ನಾರಕಿ ಜೀವಗಳ ಶಬ್ದವು ಭಯಂಕರ ಹಾಗೂ ಕಠೋರವಾಗಿರುತ್ತವೆ. ಅದು ಕೇಳ ಬಂದರೆ ತೀರಿತು ಇಲ್ಲಿಯ ಮದೋನ್ಮತ್ತ ಆನೆಗಳೂ ಸಿಂಹವೂ ಸಹ ಎದೆ ಒಡೆದುಕೊಳ್ಳಬಹುದಾಗಿದೆ. ನರಕದೊಳಗಿನ ಜೀವಕ್ಕೆ ಕರ್ಮರೂಪೀ ಕಾವಲಗಾರನು ಸಾವಿರಾರು ವರ್ಷಗಳ ವರೆಗೆ ಹೊರಗೆಬರಗೊಡುವದಿಲ್ಲ.

ಅಲ್ಲಿ ಯಾವಾಗಲೂ ಹೊಡೆದಾಟವಾಗುತ್ತಿರುತ್ತದೆ ಹಲವು ಅಳುತ್ತವೆ. ಕೆಲವು ಹಿಡಿಯಲಿಕ್ಕೆ ಒಂದಾರೆಂದು ಓಡುತ್ತಿರುತ್ತವೆ ಅನೇಕ ಜೀವಗಳು ಅನ್ಯರ ಏಟಿನಲ್ಲಿ ಸಿಕ್ಕುದರಿಂದ ಚೀರುತ್ತಿರುತ್ತವೆ. ಅನೇಕ ಜೀವಗಳು ಅಲ್ಲಿಯ ಜೀವಗಳನ್ನು ಹಿಡಿದು ಚೂರು ಮಾಡುತ್ತಿದ್ದರೂ ಆ ಜೀವಗಳ ಶರೀರಗಳು ಪಾದರಸದಂತೆ ಪುನಃ ಒಂದರಲ್ಲಿ ಇನ್ನೊಂದು ಸೇರಿ ಹೋಗುತ್ತವೆ. ಅಲ್ಲಿ ಆ ದುಃಖದೊಳಗಿಂದ ಉಳಿಸುವಂಥವರು ಯಾರೂ ಇಲ್ಲ ಯಾರಿಗೂ ದಯವಿಲ್ಲ. ಯಾರೂ ಅರಸರಿಲ್ಲ. ಯಾರೂ ಮಿತ್ರರಿಲ್ಲ. ತಂದೆ, ತಾಯಿ, ಹೆಂಡರು, ಮಕ್ಕಳು ಯಾರೂ ಇಲ್ಲ. ಕೇವಲ ನಾವು ಮಾಡಿದ ಕರ್ಮದ ಉದಯವು ಮಾತ್ರ ಅಸ್ತಿತ್ವದಲ್ಲಿ ಇರುವುದು. ಅಲ್ಲಿ ಅಡಗಿ ಕೂಡಲಿಕ್ಕೆ ಒಂದು ಸ್ಥಳವು ಇಲ್ಲ ನಮ್ಮ ದುಃಖವನ್ನು ಒಂದು ಕ್ಷಣ ಯಾರ ಮುಂದಾದರೂ ಹೋಗಿ ಹೇಳಬೇಕೆಂದರೆ ಕೇಳಿಕೊಳ್ಳುವಂಥ ದಯಾಳುಗಳು ಯಾರೂ ಇಲ್ಲ. ಅದನ್ನು ಇಲ್ಲದಂತೆ ಮಾಡುವವರಂತೂ ಯಾರೂ ಇಲ್ಲವೇ ಇಲ್ಲ. ಅಲ್ಲಿ ಎಲ್ಲ ಕ್ರೂರ, ನಿರ್ದಯಿ, ಮಹಾ ಭಯಂಕರ ಪಾತಕಿ ಜೀವಗಳೇ ತುಂಬಿವೆ ಒಂದು ನಾಯಿಯು ಇನ್ನೊಂದು ನಾಯಿಯನ್ನು ಹೇಗೆ ನೋಡಿ ವೈರವನ್ನು ಮಾತಾಡುತ್ತದೆಯೋ ಹಾಗೆಯೇ ನಾರಕಿ ಜೀವಗಳಲ್ಲಿಯೂ ವಿನಾಕಾರಣ ಪರಸ್ಪರ ವೈರವು ಇರುತ್ತದೆ. ನಾರಕಿ ಜೀವಗಳು ಯಾವಾಗ ದುಃಖಾತಿಶಯದಿಂದ ವ್ಯಾಕುಲವಾಗಿ ವನದಲ್ಲಿ ವಿಶ್ರಾಂತಿಗಾಗಿ ಒಂದು ಕ್ಷಣ ಮಾತ್ರ ಹೋಗುತ್ತವೆ. ಅವುಗಳಿಗೆ ಅಲ್ಲಿಯಾದರೂ ವಿಶ್ರಾಂತಿಯು ದೊರೆಯುವುದೆ? ಶಾಂತಿಯು ಲಭಿಸುವುದೆ? ಇಲ್ಲ. ಅಲ್ಲಿ ಶಾಲ್ಮಲಿ ಎಂಬ ಹೆಸರಿನ ವೃಕ್ಷವಿದೆ ಅವುಗಳ ಎಲೆಗಳು ಶರೀರದ ಮೇಲೆ ತನ್ನಿಂದ ತಾನೇ ಉದುರಿ ಬೀಳುತ್ತವೆ. ಅವುಗಳಿಂದ ಕೊಡಲಿಯ ಪೆಟ್ಟಿನಂತೆ ವೇದನೆಯು ಆಗುತ್ತದೆ ಆ ಎಲೆಗಳು ಅತ್ಯಂತ ತೀಕ್ಷ್ಣವಾಗಿರುವುದರಿಂದ ಅವುಗಳಿಂದ ಸಂಪೂರ್ಣ ಶರೀರವು ಸೀಳಿ ಹೋಗುತ್ತದೆ. ಹಾಗೆಯೇ ಆ ವನದಲ್ಲಿ ಇರುವ ಗುಹೆಯಲ್ಲಿ ಸಿಂಹ, ಹುಲಿ ಮೊದಲಾದ ಪಶುಗಳು ಬಂದು ಅವನ ಶರೀರವನ್ನು ಹರಿದು ಹಾಕುತ್ತವೆ. ವಜ್ರಗಳಿಗಿಂತಲೂ ಬಿರುಸಾದ ಚುಂಚುವು ಇರುವ ಗೃಧ್ರ ಪಕ್ಷಿಗಳು ಅಲ್ಲಿರುತ್ತವೆ ಅವು ಬಂದು ಅವನ ಶರೀರಕ್ಕೆ ಕುಕ್ಕುತ್ತವೆ, ಹೊಟ್ಟೆಯನ್ನೂ ಒಡೆದು ಒಳಗಿನ ಕರುಳನ್ನು ಹೊರಗೆ ಎಳೆಯುತ್ತವೆ ಕಣ್ಣಿಗೆ ಚುಂಚುವಿನಿಂದ ಚುಚ್ಚಿ ನೋವನ್ನುಂಟು ಮಾಡುತ್ತವೆ ನರಕದಲ್ಲಿ ತಿರ್ಯಂಚ ಜೀವಗಳಿಲ್ಲ ನಾರಕಿ ಜೀವಗಳು ವಿಕ್ರಿಯದಿಂದ ತಿರ್ಯಂಚಗಳಂತೆ ತಮ್ಮ ರೂಪವನ್ನು ಬದಲಿಸಿಕೊಳ್ಳುತ್ತವೆ ಅವುಗಳಿಗೆ ವೈಕ್ರಿಯಿಕ ಋದ್ಧಿಯಿಂದ ಬೇರೆ ಹೊಸ ಶರೀರವನ್ನು ಹೊಂದಲಿಕ್ಕೆ ಬರುವದಿಲ್ಲ ಅವುಗಳ ಮೂಲ ಶರೀರವಾದ ಸಿಂಹ, ಹುಲಿ, ನಾಯಿ, ಹದ್ದು, ಕಾಗೆ ಮೊದಲಾದ ಪಶು ಪಕ್ಷಿಗಳ ಶರೀರವನ್ನು ಮಾತ್ರ ಧಾರಣಮಾಡುತ್ತವೆ. ನಾರಕಿ ಜೀವಗಳಿಗೆ ಶುಭ ಕ್ರಿಯೆಯನ್ನು ಮಾಡಬೇಕೆಂದು ಇಚ್ಛೆಯು ಆದರೆ ಅವುಗಳಿಗೆ ಹಾಗೆ ಮಾಡಲಿಕ್ಕೆ ಬರುವದಿಲ್ಲ. ಯಾವಾಗಲೂ ತಮಗೆ ಹಾಗೂ ಅನ್ಯರಿಗೆ ದುಃಖವಾಗುವಂಥ ವಿಚಾರ, ಕ್ರಿಯೆ, ವಿಕ್ರಿಯೆ, ಮೊದಲಾದವುಗಳೇ ಅವುಗಳಿಂದ ಸಂಭವಿಸುತ್ತವೆ. ಇತರ ಶುಭ ಕ್ರಿಯೆಗಳು, ವಿಕ್ರಿಯೆಗಳು ಸಂಭವಿಸುವದಿಲ್ಲ. ಪಾಪದಿಂದ ಆ ಕ್ಷೇತ್ರದಲ್ಲಿ ಉತ್ಪನ್ನವಾದುದರ ಪರಿಣಾಮವು ಇದಾಗಿದೆ ನರಕದಲ್ಲಿ ಜೀವಗಳಿಗೆ ದುಃಖಕೊಡುವಂಥ ಅನೇಕ ಪ್ರಕಾರದ ಶಸ್ತ್ರಾಸ್ತ್ರಗಳು-ಶೂಲ, ಗಾಣ, ಕಬ್ಬಿಣ ಕೊಪ್ಪರಿಗೆ, ಎಣ್ಣೆಯನ್ನು ಕುದಿಸುವ ಪಾತ್ರೆ ಮೊದಲಾ-ದವುಗಳು-ಕ್ಷೇತ್ರದ ಸ್ವಭಾವದಿಂದ ತನ್ನಿಂದ ತಾನೇ ಉತ್ಪನ್ನವಾಗುತ್ತವೆ ಅಲ್ಲಿ ಸುಖಕೊಡುವಂಥ ಸಾಮಗ್ರಿಗಳು ಲಭಿಸುವುದೇ ಇಲ್ಲ. ನರಕದಲ್ಲಿ ಕಬ್ಬಿಣದ ಗೊಂಬೆ, ಅದನ್ನು ಪೂರ್ಣಕಾಯಿಸಿ ಕೆಂಪುಗೊಳಿಸಲಾಗಿರುತ್ತದೆ. ಅದರ ಸ್ಪರ್ಶವಾದೊಡನೆಯೇ ತೀವ್ರ ವೇದನೆಯು ಉಂಟಾಗುತ್ತದೆ ಇಂಥ ಪುತ್ತಳಿಯು ತನ್ನಿಂದ ತಾನೇ ಬಂದು ಜೀವಿಗಳನ್ನು ಅಪ್ಪಿಕೊಳ್ಳುತ್ತದೆ ಆಗ ಕೋಟ್ಯಾವಧಿ ಚೇಳುಗಳು ಕಡಿದಷ್ಟು, ವಜ್ರಾಗ್ನಿಯು ಸ್ಪರ್ಶವಾದಷ್ಟು, ವಿಷವನ್ನು ಸವರಿದ ಹದನಾದ ಖಡ್ಗದಿಂದ ಹೊಡೆದಷ್ಟು-ಇಷ್ಟೇ ಅಲ್ಲ, ಇವೆಲ್ಲವುಗಳಿಗಿಂತ ಹೆಚ್ಚಾಗಿ ಅಸಂತಪಟ್ಟು ತೀವ್ರವೇದನೆಯು ಆಗುತ್ತದೆ ನರಕದೊಳಗಿನ ದುಃಖದಾಯಕ ಸಾಮಗ್ರಿಗಳ ಸ್ವಭಾವವನ್ನು ತೋರಿಸಿ, ಸ್ವಲ್ಪಾದರೂ ಅವುಗಳ ಪ್ರತೀತಿಯನ್ನೂ ಉಂಟುಮಾಡಿಕೊಡುವಂಥ ವಸ್ತುಗಳು ಈ ಜಗತ್ತಿನಲ್ಲಿ ಯಾವವೂ ಇಲ್ಲ. ಆದರೆ ತಿಳುವಳಿಕೆಯು ಆರಿವು ಆಗಬೇಕೆಂದು ಅನೇಕ ವಸ್ತುಗಳ ಉದಾಹರಣೆಯನ್ನು ಕೊಡಲಾಗಿದೆ. ನಾರಕಿ ಜೀವಗಳಿಗೆ ಹೇಗೆ ಮತ್ತು ಎಷ್ಟು ದುಃಖಗಳು ಇರುತ್ತವೆಂಬುನ್ನು ಕೇವಲಿ ಭಗವಂತರೇ ಪ್ರತ್ಯಕ್ಷವಾಗಿ ತಿಳಿಯಬಲ್ಲರು ಇಲ್ಲವೆ ಯಾರು ನಾರಕಿಗಳಾಗಿ ಹುಟ್ಟಿ ಅವುಗಳ ಅನುಭವವನ್ನು ಹೊಂದುತ್ತಿರುವರೋ ಅವರು ತಿಳಿಯಬಲ್ಲರು.

ನರಕವಾಸಿಗಳ ಶರೀರದ ದುರ್ಗಂಧ—ನಾರಕಿ ಜೀವಗಳ ಶರೀರವು ಎಲುಬು, ಮಾಂಸ, ಕೀವು, ರಕ್ತ, ತೊಗಲು ಮೊದಲಾದ ಸಪ್ತ ಧಾತುಗಳಿಂದ ನಿರ್ಮಾಣವಾದುದು ಇರುವದಿಲ್ಲ ಆದರೂ ಒಂಟೆ, ನಾಯಿ,

ಬೆಕ್ಕು ಮೊದಲಾದ ಪ್ರಾಣಿಗಳ ಕೊಳೆತ ಮಾಂಸಕ್ಕಿಂತ ಅಸಂಖ್ಯಾತಪಟ್ಟು ಹೆಚ್ಚು ದುರ್ಗಂಧವಾಗಿರುತ್ತದೆ ಈ ಪಶುಗಳ ಶರೀರಕ್ಕಿಂತ ಅಸಂಖ್ಯಾತಪಟ್ಟು ಅಸಹ್ಯ ಹಾಗೂ ನೋಡಲಾಗದ ಹೇಸಿಕೆ ಬರುವಂಥ ಸ್ಥಿತಿಯು ಇರುತ್ತದೆ ಅವುಗಳ ಸ್ವರೂಪವನ್ನು ನೋಡುವುದಂತೂ ದೂರವೇ ಉಳಿಯಿತು ಯಾರಾದರೂ ವರ್ಣನೆಯನ್ನು ಮಾಡಿದರೂ ಸಹ ಕೇಳಲಿಕ್ಕೂ ಆಗದು ಇಷ್ಟು ಕುರೂಪವಾಗಿರುತ್ತವೆ ನಾರಕಿ ಜೀವಗಳ ಶರೀರದ ವಾಸನೆಯು ಅತಿಶಯ ಕೆಟ್ಟದಿರುತ್ತದೆ. ಇಲ್ಲಿಯ ಮನುಷ್ಯರು ಅವುಗಳನ್ನೂ ಒಂದು ವೇಳೆ ನೋಡಿದ್ದಾದಲ್ಲಿ ಅವುಗಳ ಶರೀರದ ದುರ್ಗಂಧವು ಇವರ ಮೂಗಿಗೆ ತಲುಪುವ ಪೂರ್ವದಲ್ಲಿಯೇ ಇವರು ಪ್ರಾಣವನ್ನು ಬಿಡಬೇಕಾದೀತು.

**ನರಕದಲ್ಲಿ ಯಾರು ಹೋಗುತ್ತಾರೆ**—ಪೂರ್ವ ಜನ್ಮದಲ್ಲಿ ಅನೇಕ ಕೆಟ್ಟ ವಿಚಾರಗಳನ್ನು ಮನಸ್ಸಿನಲ್ಲಿ ತರುವುದರಿಂದ ನರಕಾಯುವಿನ ಬಂಧವಾಗುತ್ತದೆ, ಅಸಂಖ್ಯಾತ ವರ್ಷಗಳ ವರೆಗೆ ದುಃಖವನ್ನು ಭೋಗಿಸುತ್ತ ಅಲ್ಲಿ ಇರಬೇಕಾಗುತ್ತದೆ ಅನೇಕ ಪ್ರಕಾರದ ಪಾಪವು ಪ್ರತ್ಯಕ್ಷವಾಗಿ ಯಾವುದರಲ್ಲಿ ಕಂಡುಬರುವುದೋ ಅಂಥ ಕೆಲಸವನ್ನು ಮಾಡುವುದು, ಅತಿಶಯ ಧನ ಧಾನ್ಯಾದಿ ಪರಿಗ್ರಹಗಳಲ್ಲಿ ಆಸಕ್ತಿಯನ್ನು ಇಡುವುದು, ಭಯಂಕರ ಹಿಂಸೆಯ ವಿಚಾರವನ್ನು ಮನಸ್ಸಿನಲ್ಲಿ ತರುವುದು, ವಿಶ್ವಾಸಘಾತ, ಧರ್ಮದ್ರೋಹ, ಗುರುದ್ರೋಹ, ಸ್ವಾಮಿದ್ರೋಹ, ಕೃತಘ್ನತೆ, ಪರಧನ ಮತ್ತು ಪರಸ್ತ್ರೀ ಲೋಲುಪತೆ, ಅನ್ಯಾಯ ಮಾರ್ಗದಲ್ಲಿ ನಡೆಯುವಿಕೆ, ಧರ್ಮಾತ್ಮಾ ಹಾಗೂ ಗೃಹತ್ಯಾಗಿ ಪುರುಷರ ಮೇಲೆ ಸುಳ್ಳು ಆರೋಪವನ್ನು ಹೊರಿಸುವುದು, ಯತಿಯ ಘಾತಮಾಡುವುದು, ಊರು, ಬಣಿವೆ, ಗಿಡಗಳನ್ನೂ ಸುಡುವುದು, ದೇವ ದ್ರವ್ಯವನ್ನು ಕಳವು ಮಾಡುವುದು, ತೀವ್ರ ಕಷಾಯ ಹಾಗೂ ಅನಂತಾನುಬಂಧಿ ಕಷಾಯಗಳನ್ನು ಧಾರಣ ಮಾಡುವುದು, ಎಲ್ಲರ ಕೇಡಾಗಲೆಂದು ಯಾವಾಗಲೂ ವಿಚಾರಿಸುವುದು (ಕೃಷ್ಣ ಲೇಶ್ಯೆಯವರ ಭಾವ), ಸ್ವಚ್ಛವಾದ ಸವಿಯೂಟವು ಸಾಕಷ್ಟು ದೊರೆಯುತ್ತಿದ್ದರೂ ಸಹ ನಾಲಿಗೆಯ ರುಚಿಗಾಗಿ ಮಾಂಸವನ್ನು ತಿನ್ನುವುದು, ಮದ್ಯಪಾನ ಮಾಡುವುದು, ವೇಶ್ಯಾಸಕ್ತನಾಗುವುದು, ಪರವಿಘ್ನಸಂತೋಷಿಯಾಗಿರುವುದು, ಲಂಪಟ, ತೀವ್ರಲೋಭ, ದುರಾಚಾರ, ಮಿಥ್ಯಾತ್ವ, ಅನ್ಯಾಯ, ಅಭಕ್ಷ್ಯ ಇವುಗಳ ಸ್ತುತಿಯನ್ನು ಮಾಡುವುದು, ಇಂದ ಎಲ್ಲ ಕಾರ್ಯಗಳನ್ನು ಮಾಡುವವರು ನರಕಕ್ಕೆ ಹೋಗುವರು ಅನ್ನದಲ್ಲಿ ವಿಷವನ್ನು ಹಾಕುವವರು, ವಿಷವೇ ಮೊದಲಾದ ಪ್ರಾಣಘಾತಕ ವಸ್ತುಗಳನ್ನು ಸಿದ್ಧ ಮಾಡುವವರು, ಅರಣ್ಯವನ್ನು ಕಡಿಯುವವರು, ವನಕ್ಕೆ ಬೆಂಕಿಯನ್ನು ಹಚ್ಚುವಂಥವರು, ಜೀವಿಗಳನ್ನು ಮನೆಯಲ್ಲಿ ಹಾಕಿ ಸುಡುವವರು, ಹಿಂಸೆಯ ಪರಂಪರೆಯನ್ನು ಮುಂದರಿಸುವವರು, ಇವರೆಲ್ಲರೂ ನರಕಕ್ಕೆ ಹೋಗುತ್ತಾರೆ ಅಂಬಾ ಅಂಬರೀಷ ಮೊದಲಾದ ದುಷ್ಟ ಅಸುರಕುಮಾರ ಜಾತಿಯ ದೇವತೆಗಳು ನರಕದ ಮೂರನೆಯ ಭೂಮಿಯ ವರೆಗೂ ಹೋಗಿ, ಅಲ್ಲಿಯ ಜೀವಗಳಿಗೆ ಪೂರ್ವಭವದ ವೈರವನ್ನು ನೆನೆಪುಮಾಡಿಕೊಟ್ಟು ಪರಸ್ಪರರಲ್ಲಿ ಜಗಳವನ್ನು ಹಚ್ಚುತ್ತಾರೆ. ಇದೇ ಮೂರನೆಯ ಭೂಮಿಯ ವರೆಗೇ ಪೂರ್ವಭವದ ಸಂಬಂಧದಿಂದ ಸ್ವರ್ಗವಾಸಿ ದೇವತೆಗಳು ಬಂದು ಧರ್ಮೋಪದೇಶವನ್ನು ಮಾಡುತ್ತಾರೆ

**ನಾರಕಿಗಳ ಪಶ್ಚಾತ್ತಾಪದ ವಿಚಾರ**—ಅನೇಕ ನಾರಕಿ ಜೀವಗಳು ತಾವು ಮಾಡಿದ ಮೊದಲಿನ ಪಾಪದ ಬಗ್ಗೆ ಕೆಡಕೆನಿಸಿ ಬಹಳ ಪಶ್ಚಾತ್ತಾಪವನ್ನು ಹೊಂದುತ್ತಾರೆ ಅದು ಹೀಗೆ-"ನನಗೆ ಸಜ್ಜನರು ಪೂರ್ವ ಭವದಲ್ಲಿ ಕೆಟ್ಟ ಕೆಲಸಗಳನ್ನು ಮಾಡಕೂಡದೆಂದು ಬಹಳಷ್ಟು ಉಪದೇಶ ಮಾಡಿದ್ದರು. ಆದರೆ ನಾನು-ದುಷ್ಟನು-ವಿಷಯ ಕಷಾಯಗಳಿಂದ ಮದಾಂಧನಾದುದರಿಂದ ಅದನ್ನು ಕೇಳಲಿಲ್ಲ. ಈಗ ನನಗಿಲ್ಲಿ ದೈವವು ಅನುಕೂಲವಿಲ್ಲ ಏನಾದರೂ ಪುರುಷಾರ್ಥ ಮಾಡಬೇಕೆಂದರೆ ಮಾಡುವ ಪರಿಸ್ಥಿತಿಯು ಇಲ್ಲ ಇನ್ನೇನು ಮಾಡಲಿ! ಯಾವ ದುಷ್ಟರು ನನಗೆ ಪಾಪವನ್ನು ಮಾಡಲಿಕ್ಕೆ ಬುದ್ಧಿಯನ್ನು ಕೊಟ್ಟರೋ, ಅನೀತಿಯ ಮಾರ್ಗದಲ್ಲಿ ಪ್ರವರ್ತಿಸಿದರೋ, ಅವರು ನನ್ನನ್ನು ನರಕದಲ್ಲಿ ದೂಡಿ ತಾವು ಎಲ್ಲಿ ಹೋದರು ಯಾರಿಗ ಗೊತ್ತು! ನಮ್ಮ ಸಂಗಡ ಬರುವಂಥವರು ಯಾರೂ ಕಾಣುವದಿಲ್ಲ ನನ್ನ ಹತ್ತಿರ ದ್ರವ್ಯವಿದ್ದಾಗ ಮಾತ್ರ ಅನೇಕ ಪ್ರಕಾರದ ಇಂದ್ರಿಯ ವಿಷಯಗಳನ್ನು ಭೋಗಿಸಲಿಕ್ಕೆಂದೂ, ಪಾಪಕರ್ಮವನ್ನು ಮಾಡಲಿಕ್ಕೆ ನನಗೆ ಪ್ರೇರಣೆಯನ್ನೀಯಲಿಕ್ಕೂ, ಅದಕ್ಕೆ ಸಹಾಯ ಮಾಡಲಿಕ್ಕೂ ಪುತ್ರ, ಮಿತ್ರ, ಸ್ತ್ರೀ, ಬಾಂಧವ, ಆಪ್ತ ಮೊದಲಾದವರಿದ್ದರು ಆದರೆ ಈಗ ನಾನು ಅವರನ್ನು ಎಲ್ಲಿ ಶೋಧಿಸಲಿ?" ಈ ಪ್ರಕಾರ ಪೂರ್ವ ಜನ್ಮದಲ್ಲಿ ಮಾಡಿದ ಅನೇಕ ದುರಾಚಾರ ಹಾಗೂ ಅವುಗಳ ಜ್ಞಾನವನ್ನು ನೆನೆದು ಪಶ್ಚಾತ್ತಾಪವನ್ನು ಹೊಂದುವರು ಆಗ ಅವರಿಗೆ ಭಯಂಕರ ಮಾನಸಿಕ ದುಃಖವನ್ನೂ ಸಹಿಸಬೇಕಾಗುತ್ತದೆ ಇಂಥವರಲ್ಲಿ ಎಲ್ಲಿಯಾದರೂ ಒಬ್ಬ ಸುದೈವಿಗೆ ಕ್ವಚಿತ್ತಾಗಿ ಸಮ್ಯಗ್ದರ್ಶನವೂ ಅಲ್ಲಿ ಉತ್ಪನ್ನವಾಗುತ್ತದೆ. ಆದರೆ ಅದು ನರಕ ಪರ್ಯಾಯದಲ್ಲಿ

ಹುಟ್ಟಿದುದರಿಂದ ದುಃಖವು ಕಡಿಮೆಯಾಗುವದಿಲ್ಲ ಒಂದು ವೇಳೆ ಆ-ಜೀವವು ಸ್ವತಃ ಯಾರನ್ನೂ ಹೊಡೆಯ-ಬಾರದೆಂದು ಇದ್ದರೂ ಕಷಾಯದ ಉದಯವು ಸುಮ್ಮನಿರಗೊಡುವದಿಲ್ಲ ಅವನ-ಕೈಗಳೇ ಶಸ್ತ್ರಗಳಂತಾಗಿ ದುಃಖವನ್ನು ಕೊಡಲಿಕ್ಕೆ ಕಾರಣವಾಗುತ್ತವೆ.

**ನಾರಕಿ ಜೀವಗಳಿಗೆ ನಿದ್ರೆಯಿಲ್ಲ**—ನಾರಕಿ ಜೀವಗಳಿಗೆ ಒಂದು ಕ್ಷಣ ವಿಶ್ರಾಂತಿಯನ್ನು ತಕ್ಕೊಂಡೇ-ನೆಂದರೂ ಅವಕಾಶವಿಲ್ಲ ಅಲ್ಲದೆ ನಿದ್ರೆಯೂ ಇಲ್ಲ. ಅಲ್ಲಿಯ ನೆಲದ ಸ್ಪರ್ಶವಾದೊಡನೆಯೇ ದುಃಖವಾಗುತ್ತದೆ. ಅದು ಕೇವಲಿಗಳಿಗೇನೇ ತಿಳಿಯುವಂಥದಾಗಿದೆ. ಕರ್ಮದ ಉದಯವು ಅತಿಶಯ ತೀವ್ರವಾಗಿರುವುದರಿಂದ ಅಲ್ಲಿ ಯಾರೂ ರಕ್ಷಣ ಮಾಡುವವರು ಇಲ್ಲ ಯಾರಿಗಾದರೂ ಶರಣು ಹೋಗೋಣವೆಂದು ದೀನ ಭಾವದಿಂದ ವಿಚಾರ ಮಾಡುವರು. ಆದರೆ ಅಲ್ಲಿ ಯಾರು ದಯಾಳು ಪ್ರಾಣಿಗಳೇ ಇಲ್ಲ. ಅದಕ್ಕೆ ಅವರ ಉಪಾಯವೇನಿದೆ? ಅಲ್ಲಿಯ ಎಲ್ಲ ಜೀವಗಳು ಕ್ರೂರ, ನಿರ್ದಯಿ, ಭಯಂಕರ ದೇಹಧಾರಣ ಮಾಡುವಂಥವರು, ಬೆಂಕಿಯಂತೆ ಕೆಂಗಣ್ಣುಗಳುಳ್ಳವರು, ಪ್ರಚಂಡ ಅಶುಭಧ್ಯಾನವನ್ನು ಉತ್ಪನ್ನ ಮಾಡುವಂಥವರು, ಕ್ರೋಧವನ್ನು ಹುಟ್ಟಿಸುವಂಥವರೂ ಇದ್ದಾರೆ ಅವರ ಭಯಂಕರ ದುಃಖ, ಅಳುವಿಕೆ, ಕೊಲ್ಲುವುದು, ಹೊಡೆಯುವುದು ಇವುಗಳ ಧ್ವನಿಯೇ ಯಾವಾಗಲೂ ಅಲ್ಲಿ ಕೇಳ-ಬರುತ್ತಿರುತ್ತದೆ ನಾರಕಿ ಜೀವಗಳು ಹೀಗೆನ್ನುತ್ತವೆ—"ಎಲಾ, ನಾನು ಮನುಷ್ಯ ಪರ್ಯಾದಲ್ಲಿ ಇದ್ದಾಗ ಆತ್ಮಹಿತವನ್ನು ಮಾಡಿಕೊಳ್ಳಲಿಲ್ಲ. ಇಲ್ಲಿ ದೈವ ಮತ್ತು ಪುರುಷಾರ್ಥಗಳು ಎರಡೂ ಇಲ್ಲ. ಈಗ ಏನು ಮಾಡಲು ಸಾಧ್ಯವಿದೆ? ಪೂರ್ವದಲ್ಲಿ ನಾನು ಯಾವ ಯಾವ ನಿಂದ್ಯ ಕೆಲಸಗಳನ್ನು ಮಾಡಿದೆನೋ ಅವುಗಳ ನೆನವಾದೊಡನೆಯೇ ನನ್ನ ಹೃದಯವು ನಡುಗುವುದು ಮನುಷ್ಯ ಜನ್ಮದಲ್ಲಿ ಯಾವ ದುಃಖವನ್ನು ಒಂದು ಕ್ಷಣ ಮಾತ್ರ ಸಹನ ಮಾಡಲಿಕ್ಕೆ ಆಗುವದಿಲ್ಲವೋ ಅದರ ಸಾವಿರಾರು ಪಟ್ಟು ಹೆಚ್ಚು ದುಃಖವನ್ನು ಇಲ್ಲಿ ಸಹಸ್ರ ವರ್ಷಗಳ ವರೆಗೆ ಭೋಗಿಸಬೇಕಾಗುತ್ತದೆ ಇದು ಈಗ ಹೇಗೆ ಪೂರ್ಣವಾದೀತು? ಯಾರ ಸಲುವಾಗಿ ನಾನು ಇದಕ್ಕೆ ಕಾರಣವಾದ ಪಾಪಕಾರ್ಯಗಳನ್ನು ಮಾಡಿದೆನೋ ಆ ಕುಟುಂಬ ಮಿತ್ರಾದಿಗಳು ಈಗ ಎಲ್ಲಿದ್ದಾರೆ? ಅವರ ಭೆಟ್ಟಿಯು ಇನ್ನೆಲ್ಲಿ ಆಗುವುದೋ, ನನ್ನ ಹತ್ತರ ಧನವಿದ್ದಾಗ ವಿಷಯೋಪಭೋಗ ಮಾಡಿ, ವಿರಾಮದಲ್ಲಿರಲು ಬಂದಿದ್ದರಷ್ಟೆ? ಈಗ ಸಂಕಟದ ಹೊತ್ತಿನಲ್ಲಿ ಅವರನ್ನು ಎಲ್ಲಿ ಶೋಧಿಸಲಿ! ಎಲ್ಲ ದುಃಖಗಳಿಂದಲೂ ರಕ್ಷಣ ಮಾಡಲಿಕ್ಕೆ ದಯಾಮಯವಾದ ಧರ್ಮ ಒಂದೇ ಸಮರ್ಥವಾಗಿದೆ. ಪಾಪಿಯಾದ ನಾನು ಅದನ್ನೂ ಸಂಪಾದಿಸಲಿಲ್ಲ. ಆ ಕಾಲಕ್ಕೆ ಪರಿಗ್ರಹವೆಂಬ ಪಿಶಾಚವು ಹಿಡಿದುದರಿಂದ ನನಗೆ ಬುದ್ಧಿ, ಶುದ್ಧಿ, ಸುದ್ದಿಗಳು ಉಳಿಯಲಿಲ್ಲ. ಯಮನೇ ಒಬ್ಬ ಸಿಂಹ. ಅವನು ಒಂದು ಕ್ಷಣದಲ್ಲಿ ಹೊಡೆದು ಬಿಡುವನು. ಆಗ ನಾನು ನರಕಕ್ಕೆ ಹೋಗಬೇಕಾದೀತು ಈ ವಿಚಾರ ಕೂಡ ಮನದಲ್ಲಿ ಆಗ ಬರಲಿಲ್ಲ." ಈ ಪ್ರಕಾರ ಮನಸ್ಸಿಗೆ ಕಷ್ಟವನ್ನು ಕೊಡುವ ಅನೇಕ ವಿಧ ದುಃಖ ವೇದನೆಗಳು ಅವುಗಳಿಗೆ ಪ್ರಾಪ್ತವಾಗುತ್ತವೆ.

**ಪೂರ್ವಕೃತ ದುಷ್ಕರ್ಮಗಳ ನೆನವು**— ಇನ್ನೂ ಅನೇಕ ವಿಚಾರಗಳು ನಾರಕಿ ಜೀವಗಳ ಮನಸ್ಸಿನಲ್ಲಿ ಬರುತ್ತವೆ.—"ಪೂರ್ವಜನ್ಮದಲ್ಲಿ ನಾನು ಅನೇಕ ಪ್ರಾಣಿಗಳ ಮಾಂಸವನ್ನು ತಿಂದೆನೆಂದು ಈಗ ನನ್ನ ಶರೀರದ ಮಾಂಸವನ್ನೇ ಕಡಿದು ನನಗೆ ತಿನ್ನಲಿಕ್ಕೆ ಹಾಕುತ್ತಿದ್ದಾರೆ. ಹಿಂದಿನ ಕಾಲದಲ್ಲಿ ಮದ್ಯಪಾನ ಮಾಡಿದೆ, ತಿನ್ನಬಾರದುದನ್ನು ತಿಂದೆ ಅದಕ್ಕಾಗಿಯೇ ಈಗ ತಾಮ್ರ ಹಿತ್ತಾಳಿಗಳ ರಸವನ್ನು ಕಾಯಿಸಿ, ನನ್ನ ಬಾಯಲ್ಲಿ ಸುರಿಯುತ್ತಿದ್ದಾರೆ ಪೂರ್ವ ಜನ್ಮದಲ್ಲಿ ಪರಸ್ತ್ರೀ ಲಂಪಟನಾದುದರಿಂದ ಈಗ ಕಾಯ್ದ ಕಬ್ಬಿಣದ ಪುತ್ತಳಿಯನ್ನು ಅಪ್ಪಿಕೊಂಡು ಬಹಳವೇಳೆ ನಿಲ್ಲುವಂತೆ ಪ್ರತಿಬಂಧಗೊಳಿಸುತ್ತಲಿದ್ದಾರೆ." ಕಣ್ಣಿನ ರೆಪ್ಪೆ ಹೊಡೆಯುವಷ್ಟು ವೇಳೆಯೂ ಕೂಡ ನರಕದಲ್ಲಿ ಸುಖವಿಲ್ಲ. ಒಂದು ವೇಳೆ ಯಾರಾದರೂ ಮರೆತು ಒಂದು ಕ್ಷಣ ಮಾತ್ರ ದುಃಖವಿಲ್ಲದೆ ಉಳಿದರೆ ಅಲ್ಲಿಯ ದುಷ್ಟ ಅಸುರ ದೇವತೆಗಳು ಬೇರೆ ಜೀವಗಳಿಗೆ ಸೂಚನೆಯಿತ್ತು ಅವುಗಳಿಗೆ ದುಃಖವನ್ನು ಕೊಡಿಸುತ್ತವೆ. ಇಲ್ಲವೆ ನಾರಕೀ ಜೀವಗಳು ಪರಸ್ಪರರಲ್ಲಿ ಹೇಳಿಯೂ ದುಃಖವನ್ನು ಕೊಡಿಸುತ್ತವೆ ಅಸಂಖ್ಯಾತ ಜಾತಿಯ ಮತ್ತು ಅಸಂಖ್ಯಾತ ಕಾಲದ ವರೆಗೆ ನರಕದಲ್ಲಿ ನಾರಕಿ ಜೀವಗಳು ದುಃಖವನ್ನು ಭೋಗಿಸುತ್ತವೆ ಸಂಸಾರದೊಳಗಿಂದ ಉದ್ಧಾರ ಮಾಡುವುದು ಯಾವುದಾದರೂ ಇದ್ದರೆ ಅದು ಧರ್ಮವೇ ಆಗಿದೆ ಅದರ ಆರಾಧನೆಯನ್ನು ಮಾಡದೆ ಇದ್ದರೆ ನರಕದಲ್ಲಿ ಹೋಗುವದನ್ನು ಯಾರೂ ಬಿಡಿಸಲಾರರು ಧನ ಇಲ್ಲವೆ ಕುಟುಂಬದೊಳಗಿನ ಇತರ ಮನುಷ್ಯರು ಜೀವದ ಬೆನ್ನು ಹತ್ತಿ ಸ್ವಲ್ಪವೇ ಹೋಗುವರಷ್ಟೆ! ನಮ್ಮ ಕಾರ್ಯಕ್ಕೆ ಅನುಸರಿಸಿ ಬರುವ ಪಾಪ-ಪುಣ್ಯರೂಪದ ಕರ್ಮವೊಂದೇ ಹಿಂಬಾಲಿಸುವಂಥದಿದೆ ಸಂಸಾರದೊಳಗಿನ ಎಲ್ಲ ಜೀವಗಳು ಕರ್ಮೇಂದ್ರಿಯ ಮತ್ತು ರಸನೇಂದ್ರಿಯದ ವಿಷಯಗಳಿಗೆ

ಲುಬ್ಧವಾಗಿ ನರಕದೊಳಗಿನ ದುಃಖಕ್ಕೆ ಪಾತ್ರವಾಗುತ್ತವೆ. ಈ ಪ್ರಕಾರ ಅನೇಕ ಸಲ ನರಕಕ್ಕೆ ಹೋಗಿ ಘೋರ ದುಃಖವನ್ನು ಈ ಜೀವವು ಭೋಗಿಸಿದೆ.

ಕೆಳಗೇಳು ನಿರಯ ಭೂಮಿಗಳಳವಟ್ಟವರಲ್ಲಿ ಯೆರಡುವುಂ ಕಾಲ್ನೆಲಗಳ್
ಕೆಳಗಣವುಂ ಛಳಿನೆಲಳ್ಕೊಳೆ ಮುಕ್ಕಾಲ್ಗೂಡಿ ಮೇಲೆ ನಾಲ್ಕತ್ಯುಷ್ಣಂ ।
ಇಳೆಯೊಳ್ಬಿಡೆ ನಿಡುಲೋಹಾಚಳಮಾಗಳೆ ಮೇಣದಂತೆ ಕರಗುವುದೂರ್ಧ್ವ
ಸ್ಥಳದುಷ್ಣದಿನಾ ರಸಮಂ ಘಳಿಲನೆ ಬಲಿಯಿಸುವ ಶಕ್ತಿ ಕೆಳಗಣ ಶೈತ್ಯಂ ॥
ನೆಲನೆಲ್ಲಂ ದುರ್ಗಂಧದೆ ಕಲಿಸಿದ ವಿಷದಂತೆ ಮರಳೆಲೆಯೆಲ್ಲಂ ಕೂ-
ರಲಗಿನವೊಲ್ಪರಿವ ನದೀಜಲಮೆಲ್ಲಂ ಕಾಯ್ದ ಲೋಹ ರಸದಂ ತಿರ್ಕುಂ ।
ಓರ್ವರನೋರ್ವರ್ಕೆಡವುವರೋರ್ವರನೋರ್ವರ್ಕನಲ್ದು ತರಿವರ್ಕೊರೆವರ್
ಜರ್ವಿಸಿ ಪಳಿವರ್ಸೀತ್ಕರ್ ಪೂರ್ವಭವಸ್ಮರಣೆದೋರಿ ಬೈವರ್ಪೊಯ್ವರ್ ॥
ಸುಡುವರ್ಕಳ್ಳಿದೆ ಬಿಡದುರೆ ಕುಡಿಯೆನುತಂ ಕಾಯ್ದ ಲೋಹ-ರಸಮಂ ನೆರೆವರ್
ಒಡನವರೊಡಲಂ ಕೊರೆ ಕೊರೆದಡಗಿದೆ ತಿನ್ನೆನುತ ಬಾಯ್ಗೆ ಗಿಡಿವರ್ಜಡಿವರ್ ।
ಲೋಹದ ಪೆಣ್ಪುತ್ತಳಿಯಂ ಕಾಹೇರಿಸಿ ಕಾಸಿ ತಂದು ಪರಸತಿಯಿವಳೊಳ್
ಮೋಹಿಸುತಪ್ಪೆನುತಂ ಪಿಡಿಡಾ ಹಾದರದರಿಕೆಯವರ್ಗೆ ಪಿಡಿದಪ್ಪಿಸುವರ್ ॥

—ರತ್ನಾಕರ–ತ್ರಿಲೋಕ ಶತಕ–೧೨ರಿಂದ ೧೮.

ಸ್ಥಾವರ ಯೋನಿಯೊಳಗಿನ ದುಃಖ—ಸ್ಥಾವರ ಯೋನಿಯಲ್ಲಿ ಹುಟ್ಟಿದರೆ ದುಃಖವೇನಾದರೂ ಕಡಿಮೆಯಾದೀತೆ? ಇದನ್ನು ವಿಚಾರಿಸ ಹತ್ತಿದರೂ ಸಹ ಆ ಯೋನಿಯಲ್ಲಿ ಸುತ್ತುತ್ತಿರುವಾಗಲೂ ಪ್ರಾಪ್ತವಾಗುವ ದುಃಖಕ್ಕೇನೂ ಕೊರತೆಯಿಲ್ಲ. ಏಕೇಂದ್ರಿಯವಾಗಿ ಈ ಜೀವವು ಜನ್ಮಿಸಿದಾಗ ಅಲ್ಲಿ ನೆಲವನ್ನು ಅಗಿಯುವುದು, ಸುಡುವುದು, ತುಳಿಯುವುದು, ಬಡಿಯುವುದು, ಒಡೆಯುವುದು ಮೊದಲಾದ ಕ್ರಿಯೆಗಳಾಗುವಾಗ ಅತ್ಯಂತ ದುಃಖವಾಗುತ್ತದೆ ಜಲಕಾಯ ಜೀವವಾಗಿ ಜನ್ಮಿಸಿದರೂ ಸಹ ಅಲ್ಲಿ ನೀರು ಇಂಗಿ ಹೋದರೆ, ಕಾಯ್ದರೆ, ಉಕ್ಕೇರಿದರೆ, ಕುಡಿದರೆ, ವಿಷ–ಕ್ಷಾರಗಳು ಸೇರಿದರೆ, ಕಾಯ್ದ ಕಬ್ಬಿಣ ಮೊದಲಾದ ಧಾತುಗಳನ್ನು ಮುಳುಗಿಸಿದರೆ, ಎತ್ತರವಾದ ಪರ್ವತದ ಮೇಲಿಂದ ಕೆಳಗಿನ ಕಲ್ಲಿನ ಮೇಲೆ ಸುರುವಿದರೆ, ನೀರಿನ್ನು ವಸ್ತ್ರದಲ್ಲಿ ತುಂಬಿ, ಅದನ್ನು ಕಲ್ಲಿನ ಮೇಲೆ ಅಪ್ಪಳಿಸಿದರೆ, ಕಟ್ಟಿಗೆಯಿಂದ ಹೊಡೆದರೆ, ಮೊದಲಾದ ಅನೇಕ ಕ್ರಿಯೆಗಳನ್ನು ಮಾಡುವಾಗ ಜಲಕಾಯ ಜೀವಗಳ ದುಃಖದ ವಿಚಾರವನ್ನು ಯಾರೂ ಮಾಡುವದಿಲ್ಲ. ನೀರನ್ನು ಬೆಂಕಿಯ ಮೇಲೆ ಹೊಯ್ಯುವರು, ಬೇಸಿಗೆಯಲ್ಲಿ ಕಾಯ್ದ ನೆಲದ ಮೇಲೆ ಒಗೆಯುವರು ಆ ಕಾಲಕ್ಕೆ ಅದರೊಳಗಿನ ಜೀವಗಳು ಸಾಯುವವು. ಈ ಕಲ್ಪನೆಯು ಯಾರ ಮನಸ್ಸಿನಲ್ಲಾದರೂ ಬರುವುದೆ? ಬೂದಿಯಲ್ಲಿ ಒತ್ತಿ ಇಡುವುದು, ಆರಿಸುವುದು, ಕುಟ್ಟುವುದು, ಅದನ್ನು ತುಂಡುಗೊಳಿಸುವುದು ಮೊದಲಾದ ಕ್ರಿಯೆಗಳಿಂದ ಅಗ್ನಿಕಾಯ ಜೀವಗಳಿಗೆ ಬಹಳಷ್ಟು ದುಃಖವಾಗುತ್ತದೆ. ಪವನಕಾಯ ಜೀವಗಳಿಗೂ ಸಹ ಪರ್ವತಗಳ ಬಿರುಸಾದ ಕಲ್ಲುಗಳ ಮೇಲೆ ಹಪ್ಪಳಿಸುವುದರಿಂದಲೂ, ಗಿಡಗಳ ಟೊಂಗೆಗಳ ಪ್ರತಿಬಂಧದಿಂದಲೂ, ತೊಗಲಿನ ತಿದಿಯೊಳಗಿಂದ ಬೆಂಕಿಯ ಮೇಲೆ ಊದುವುದರಿಂದಲೂ, ವಸ್ತ್ರ ಹಾಗೂ ಬೀಸಣಿಗೆಗಳಿಂದ ಪೆಟ್ಟು ಬೀಳುವುದರಿಂದಲೂ ಬಹಳಷ್ಟು ದುಃಖವಾಗುತ್ತದೆ. ವನಸ್ಪತಿಕಾಯದಲ್ಲಿ ಒಂದು ಸಾಧಾರಣ ಜೀವದ ಜೊತೆಗೆ ಇರುವ ಅನಂತ ಜೀವಗಳ ಘಾತವಾಗುತ್ತದೆ. ಆ ಕಾಲಕ್ಕೆ ಅವುಗಳಿಗಾಗುವ ದುಃಖವನ್ನು ಕೇವಲಿಗಳೇ ತಿಳಿಯಬಲ್ಲರು. ಆದರೆ ಪ್ರತ್ಯೇಕ ವನಸ್ಪತಿಗೆ ಆಗುವ ದುಃಖವು ಮಾತ್ರ ನಮಗೆ ಕಂಡುಬರುತ್ತದೆ ನಾವು ವನಸ್ಪತಿಗಳನ್ನು ಕೊಯ್ಯುತ್ತೇವೆ, ಕಡಿಯುತ್ತೇವೆ, ಸುಲಿಯುತ್ತೇವೆ, ಕಚ್ಚುತ್ತೇವೆ, ಬೇಯಿಸುತ್ತೇವೆ, ಕರಿಯುತ್ತೇವೆ, ಎಣ್ಣೆ ತುಪ್ಪಗಳಲ್ಲಿ ಒಗ್ಗರಣೆಯನ್ನು ಹಾಕುತ್ತೇವೆ, ತಿಕ್ಕುತ್ತೇವೆ, ಗಾಣದಲ್ಲಿ ಹಾಕಿ ಹಿಂಡಿ ತೆಗೆಯುತ್ತೇವೆ ಮತ್ತು ಕುಟ್ಟುತ್ತೇವೆ. ಈ ಪ್ರಕಾರ ಕ್ರಿಯೆಯನ್ನು ಮಾಡುತ್ತಿರುವಾಗ ಅವುಗಳಿಗೆ ಭಯಂಕರ ದುಃಖವಾಗುತ್ತದೆ. ಏಕೇಂದ್ರಿಯ ಪರ್ಯಾಯದಲ್ಲಿ ಮಾತನಾಡಲಿಕ್ಕೆ ನಾಲಿಗೆಯಿಲ್ಲ, ನೋಡಲಿಕ್ಕೆ ಕಣ್ಣುಗಳಿಲ್ಲ, ಕೇಳಲಿಕ್ಕೆ ಕಿವಿಗಳಿಲ್ಲ, ಕೈಕಾಲು ಮೊದಲಾದ ಅಂಗೋಪಾಂಗಗಳಿಲ್ಲ, ರಕ್ಷಕರು ಯಾರೂ ಇಲ್ಲ, ಇಂಥ ಸ್ಥಿತಿಯಲ್ಲಿ ಅಸಂಖ್ಯಾತ, ಇಲ್ಲವೆ ಅನಂತ ಕಾಲದ ವರೆಗೆ ಅದರೊಳಗಿಂದ

ಬಿಡುಗಡೆಯೇ ಆಗುವದಿಲ್ಲ ಮಿಥ್ಯಾತ್ವ, ಅನ್ಯಾಯ, ಅಭಕ್ಷ್ಯ ಮೊದಲಾದ ಅನೇಕ ಕೆಟ್ಟ ಕೆಲಸಗಳು ನಮ್ಮ ಕೈಯಿಂದ ನಡೆಯುತ್ತವೆ ಅವುಗಳ ಪ್ರಭಾವದಿಂದ ಜೀವದ ಜ್ಞಾನಾದಿಕ ಗುಣಗಳು ನಷ್ಟವಾಗುತ್ತವೆ. ಏಕೇಂದ್ರಿಯ ಯೋನಿಯಲ್ಲಿ ಅಲ್ಪ ಪರ್ಯಾಯ ಜ್ಞಾನವು ಮಾತ್ರ ಉಳಿದಿರುತ್ತದೆ. ಅದರ ಹೊರತಾಗಿ ಎಲ್ಲ ಪ್ರಭಾವವೂ ಶಕ್ತಿ, ಸುಖ ಮೊದಲಾದವುಗಳೂ ನಷ್ಟವಾಗುತ್ತವೆ. ಆತ್ಮನು ಜಡ ಅಚೇತನ ಪದಾರ್ಥದಂತೆ ಆಗಿ ಉಳಿಯುತ್ತಾನೆ ಅವುಗಳಿಗೆ ಸ್ವಲ್ಪ ಜ್ಞಾನವಿದೆಯೆಂಬುದು ಸ್ಪರ್ಶನೇಂದ್ರಿಯ ಒಂದರಿಂದ ಮಾತ್ರ ಜ್ಞಾನಿ ಪುರುಷರಿಗೆ ತಿಳಿಯುತ್ತದೆ ಒಟ್ಟಿನಲ್ಲಿ, ಎಲ್ಲ ಪ್ರಕಾರದ ಶಕ್ತಿಯಿಲ್ಲದ, ಕೇವಲ ದುಃಖದಿಂದ ತುಂಬಿದಂಥ ಏಕೇಂದ್ರಿಯ ಪರ್ಯಾಯದಲ್ಲಿ ಜನ್ಮ-ಮರಣದ ದುಃಖವನ್ನು ಈ ಜೀವವು ಭೋಗಿಸಬೇಕಾಗುತ್ತದೆ.

ತ್ರಸಯೋನಿಯೊಳಗಿನ ದುಃಖ—ಸ್ಥಾವರ ಸ್ಥಿತಿಯೊಳಗಿಂದ ಎಲ್ಲಿಯಾದರೂ ಒಮ್ಮೆ ಹೇಗಾದರೂ ಬಿಡುಗಡೆಯನ್ನು ಹೊಂದಿ ಯಾರಿಗಾದರೂ ತ್ರಸ ಪರ್ಯಾಯವು ಪ್ರಾಪ್ತವಾದಲ್ಲಿ ಅಲ್ಲಿಯೂ ಸಹ ದ್ವೀಂದ್ರಿಯ ಮೊದಲುಗೊಂಡು ಚತುರಿಂದ್ರಿಯಗಳ ವರೆಗೆ ಭಯಂಕರ ದುಃಖವು ಇದ್ದೇ ಇದೆ ಹಸಿವೆಯ ಅಧೀನವಾಗಿರು-ವುದರಿಂದ ರಸ ಒಸರುತ್ತಿರುವ ನಾಲಿಗೆಗೆ ನಿರಂತರ ಆಹಾರವನ್ನು ಶೋಧಿಸುವದರಲ್ಲಿ ಮಗ್ನವಾಗಿರುತ್ತವೆ. ಕ್ರಿಮಿ ಕೀಟಕಗಳು ಯಾವಾಗಲೂ ತಮ್ಮ ಆಹಾರಕ್ಕಾಗಿ ಸುತ್ತುತ್ತಿರುತ್ತವೆ ಇದೇ ಗತಿಯು ನೊಣ, ಗುಂಗಾಡುಗಳಿಗೂ ಇದೆ ಇವು ಕ್ಷುಧೆಯ ವೇದನೆಯಿಂದ ಎಣ್ಣೆ, ನೀರು, ಅಗ್ನಿಗಳಲ್ಲಿ ಬಿದ್ದು ಮರಣವನ್ನು ಹೊಂದುತ್ತವೆ. ಹವೆಯ ಒತ್ತಡದಿಂದಲೂ ವಸ್ತ್ರದ ಹೊಡೆತದಿಂದಲೂ ಕೂಡ ಅವು ಸಾಯುತ್ತವೆ. ಎತ್ತು, ಕುದುರೆ ಮೊದಲಾದ ಪ್ರಾಣಿಗಳು ಬಾಲ ಬೀಸುವುದರಿಂದಲೂ ಹಲವು ಪ್ರಾಣಿಗಳು ಮರಣವನ್ನು ಹೊಂದುತ್ತವೆ ಮನುಷ್ಯರ ಕೈಕಾಲುಗಳಲ್ಲಿ ಸಿಕ್ಕು ನುಗ್ಗಾಗಿ ಅನೇಕ ಪ್ರಾಣಿಗಳು ಜೀವ ಕಳೆದುಕೊಳ್ಳುತ್ತವೆ. ಅನೇಕ ಕಫ-ಮಲಗಳಲ್ಲಿ ಸಿಕ್ಕೂ ಸಹ ಕ್ರಿಮಿಗಳು ಮರಣ ಹೊಂದುತ್ತವೆ ಈ ಪ್ರಕಾರ ವಿಕಲತ್ರಯ ಜೀವಗಳ ಘಾತವು ಯಾವಾಗಲೂ ಆಗುತ್ತಿರುತ್ತದೆ. ಅವುಗಳ ಮೇಲೆ ಯಾರೂ ದಯೆಯನ್ನು ತೋರುವದಿಲ್ಲ ತ್ರಸ ಜೀವಿಗಳನ್ನು ಇರುವೆ, ಕಾಗೆ ಮೊದಲಾದ ಪಕ್ಷಿಗಳು ಆಯ್ದು ತಿಂದುಬಿಡುತ್ತವೆ. ಇವು ಸರ್ಪ ಮೊದಲಾದವುಗಳ ಆಹಾರವೂ ಆಗುತ್ತವೆ ದೊಡ್ಡ ಚುಂಚನ್ನು ಧರಿಸಿರುವ ರಣ ಹದ್ದು ಮೊದಲಾದ ಪಕ್ಷಿಗಳು ಕೂಡ ತಮ್ಮ ಚುಂಚುವಿನಿಂದ ಕೊಂದು ಇವುಗಳನ್ನು ತಿಂದುಬಿಡುತ್ತವೆ ಇದೇ ಪ್ರಕಾರ ಇವುಗಳ ಜನ್ಮವು ಎಲ್ಲ ಪದಾರ್ಥಗಳಲ್ಲಿ ಆಗುತ್ತಿರುವುದರಿಂದ ಯಾರು ತುಳಿಯುವರು, ಯಾರು ಹೋಳುವರು, ಯಾರು ಸುಡುವರು ತತ್ತಿ ಜಾಳಿಗೆ ಮೊದಲಾದವುಗಳಂಥ ಯಾವ ಜೀವಗಳು ಧಾನ್ಯದಲ್ಲಿ ಹುಟ್ಟುತ್ತವೆಯೋ ಅವುಗಳನ್ನಂತೂ ಹಲವು ಜನರು ಧಾನ್ಯದೊಡನೆಯೇ ಬೀಸಿ ಬಿಡುತ್ತಾರೆ. ಕೆಲವರು ಒರಳಿನಲ್ಲಿ ಹಾಕಿ ಕುಟ್ಟುವರು. ಕೆಲವರು ಭಟ್ಟಿಯಲ್ಲಿ ಹಾಕಿ ಸುಡುವರು. ಇನ್ನು ಜೋಳ, ಭೆಂಡಿ, ಹಗಲ, ಹಿರೇ ಕಾಯಿಗಳಲ್ಲಿಯೂ ಅನೇಕ ಪ್ರಕಾರದ ಕಾಯಿಪಲ್ಲೆಗಳಲ್ಲಿಯೂ ಅನೇಕ ಜೀವಗಳು ಸತ್ತು ಹೋಗುತ್ತವೆ ಮೇವು-ಮಿಠಾಯಿ, ಔಷಧ, ಹೂವು-ಹಣ್ಣು ಮೊದಲಾದ ಪದಾರ್ಥಗಳಲ್ಲಿಯೂ ಹೂವಿನ ಎಲೆಗೆಯೊಳಗಿನ ಪೊಳ್ಳಿನಲ್ಲಿಯೂ ಅನೇಕ ಕ್ರಿಮಿಗಳು ಇರುತ್ತವೆ ಮರ್ಯಾದೆ ಮೀರಿದ ಅನ್ನ, ಮೊಸರು, ಹಾಲು ಇದೇ ಪ್ರಕಾರ ಹಲವು ರಸಪದಾರ್ಥಗಳಲ್ಲಿ ಬಹಳಷ್ಟು ವಿಕಲತ್ರಯ ಇಲ್ಲವೆ ಪಂಚೇಂದ್ರಿಯ ಜೀವಗಳ ಉತ್ಪತ್ತಿಯಾಗುತ್ತದೆ, ಅವುಗಳನ್ನು ಅರಿತು ಇಲ್ಲವೆ ಅರಿಯದೆ ಹಲವು ಜನರು ತಿನ್ನುತ್ತಾರೆ. ಆ ಕಾಲದಲ್ಲಿ ಆ ಜೀವಗಳ ಸಂಹಾರವಾಗುತ್ತದೆ ಹಲವು ಜೀವ ಜಂತುಗಳು ಕಸಗೂಡಿಸುವುದರಲ್ಲಿ, ಜಾಡಿಸುವುದರಲ್ಲಿ, ಬೆಂಕಿಯಲ್ಲಿಯೂ ನಮ್ಮಿಂದ ಸಾಯುತ್ತವೆ ವಿಶೇಷವಾಗಿ ಮಳೆಗಾಲದಲ್ಲಿ ವಿಕಲತ್ರಯ ಜೀವಗಳ ಉತ್ಪತ್ತಿಯು ಹೆಚ್ಚಾಗಿ ಆಗುತ್ತದೆ ವರ್ಷಾ ಋತುವಿನಲ್ಲಿ ಭೂಮಿಯೆಲ್ಲವೂ ನೀರಿನಿಂದ ಹಸಿಯಾಗಿರುತ್ತದೆ. ಆಗ ಕೆಸರಿನಲ್ಲಿ ದನಕರುಗಳ ಕಾಲುಗಳಲ್ಲಿಯೂ ಮಾನವರ ಹೆಜ್ಜೆಗಳ ಕೆಳಗೂ ಸಿಕ್ಕು ಅನೇಕ ಪ್ರಾಣಿಗಳ ನಾಶವಾಗುತ್ತದೆ. ಅದರಂತೆ ಆನೆಕುದುರೆಗಳ ಕಾಲಲ್ಲಿ, ಬಂಡಿ ರಥಗಳ ಚಕ್ರಗಳ ಕೆಳಗೆ ಅನೇಕ ಪ್ರಾಣಿಗಳು ನುಗ್ಗಾಗಿ ಸತ್ತು ಹೋಗುತ್ತವೆ ಆ ಕಾಲದಲ್ಲಿ ವಿಕಲತ್ರಯ ಜೀವಿಗಳ ಕಾಲು ಒತ್ತಟ್ಟಿಗೆ, ತಲೆಯು ಇನ್ನೊಂದು ಕಡೆಗೆ, ಹೊಟ್ಟೆಯು ಮತ್ತೊಂದೆಡೆಗೆ ಆಗಿ ಹೋಗುತ್ತವೆ ಈ ಪ್ರಕಾರ ಅವುಗಳ ಕೊಲೆಯಾಗುತ್ತದೆ. ಅಂಥ ಸಂದರ್ಭದಲ್ಲಿ ಅವುಗಳ ವಿಷಯದಲ್ಲಿ ದಯೆಯ ವಿಚಾರವನ್ನೂ ಸಹ ಯಾರೂ ಮನಸ್ಸಿನಲ್ಲಿ ತರುವದಿಲ್ಲ ಈ ಪ್ರಕಾರ ಈ ವಿಕಲತ್ರಯ ಯೋನಿಯಲ್ಲಿ ಉತ್ಪನ್ನವಾಗುವ ತಿರ್ಯಂಚ ಜೀವಗಳಿಗೆ ಅನೇಕ ಪ್ರಕಾರದ ದುಃಖವನ್ನು ಭೋಗಿಸಿ ಮರಣವನ್ನು ಹೊಂದಬೇಕಾಗುತ್ತದೆ. ಈ ಜೀವಗಳು ಹಸಿವು ನೀರಡಿಕೆಗಳ

ವೇದನೆಯಿಂದ, ಚಳಿ ಬಿಸಿಲುಗಳ ತೀವ್ರತೆಯಿಂದ, ದೊಡ್ಡ ಬಿರುಗಾಳಿಯಿಂದ ಮರಣವನ್ನು ಹೊಂದುತ್ತವೆ ಇದೇ ಪ್ರಕಾರ ಕಲ್ಲು-ಗುಂಡು, ಮಣ್ಣಿನ ರಾಶಿ, ಕಟ್ಟಿಗೆ, ಮಲ, ಮೂತ್ರ ಕಾಯಿಸಿದ ನೀರು ಮೊದಲಾದ ಪದಾರ್ಥಗಳು ಶರೀರದ ಮೇಲೆ ಬೀಳುವುದರಿಂದಲೂ ಗತಪ್ರಾಣವಾಗುತ್ತವೆ. ಎಣ್ಣೆ, ತುಪ್ಪ, ದೀಪ, ಬೆಂಕಿ ಮೊದಲಾದ ಪದಾರ್ಥ-ಗಳಲ್ಲಿ ಬಿದ್ದು ದುಃಖ ಸಹನ ಮಾಡುತ್ತ ಅಸಂಖ್ಯಾತ ಕಾಲದ ವರೆಗೆ ಈ ಯೋನಿಯಲ್ಲಿ ಹಲವು ಜೀವಗಳು ಭ್ರಮಣ ಮಾಡುತ್ತವೆ.

ಪಂಚೇಂದ್ರಿಯಗಳ ದುಃಖ — ಮುಂದೆ ವಿಕಲತ್ರಯ ಅವಸ್ಥೆಯಿಂದ ಉನ್ನತಿಯನ್ನು ಹೊಂದಿ ಪಂಚೇಂದ್ರಿಯ ತಿರ್ಯಂಚ ಜೀವವಾಗಿ ಜನ್ಮಿಸಿದರೂ ಸಹ ಅಲ್ಲಿ ಜಲ-ಚರ ಜೀವಗಳಲ್ಲಿ ಬಲಿಷ್ಠವಾದುದು ನಿರ್ಬಲ ಜೀವವನ್ನು ತಿನ್ನುತ್ತ ಹೋಗುವುದು ಅಲ್ಲದೆ ಬಲೆಗಾರನ ಜಾಳಿಗೆಯಲ್ಲಿ ಸಿಕ್ಕು, ಗಾಳಕ್ಕೆ ಗಂಟಲ ನೀಡಿಯೂ ಅನೇಕ ಮೀನುಗಳು ಯಮನ ಆಹಾರವಾಗಿ ಹೋಗುತ್ತವೆ ಅನೇಕ ಜನರಂತೂ ಜೀವಂತ ಮೀನುಗಳನ್ನು ಕರಿದು ತಿನ್ನುತ್ತಾರೆ ಅರಣ್ಯದಲ್ಲಿ ಇರುವ ಪಂಚೇಂದ್ರಿಯ ಜೀವಗಳಿಗೆ ಸಾವಿನ ಹೆದರಿಕೆಯಿಂದ ನೀರಡಿಕೆ, ಹಸಿವೆಯ ವೇದನೆಗಳನ್ನು ಸಹನ ಮಾಡುತ್ತ ಗುಹೆಯಲ್ಲಿ ಬಿದ್ದು ಇರಬೇಕಾಗುತ್ತದೆ. ಅರಣ್ಯದಲ್ಲಿರುವಂಥ ಜೀವಗಳಿಗೆ ಬಿಸಿಲು, ಚಳಿ ಇವುಗಳಿಂದ ಆಗುವ ವೇದನೆಯನ್ನು ಸಹನ ಮಾಡಬೇಕಾಗುತ್ತದೆ ಬೆಳಗಿನಲ್ಲಿ ಎದ್ದ ಕೂಡಲೆ ಅವುಗಳ ಮುಂದೆ ಅನ್ನದಿಂದ ತುಂಬಿದ ತಾಟವನ್ನು ಯಾರು ತಂದಿಡುತ್ತಾರೆ? ತೀವ್ರವಾದ ಹಸಿವೆಯ ವೇದನೆಯು ಆಗುತ್ತಿದ್ದರೂ ಒಂದು ವೇಳೆ ಎಲ್ಲಿಯಾದರೂ ಆಹಾರವು ಸಿಕ್ಕರೆ ಕುಡಿಯಲು ನೀರು ದೊರೆಯುವದಿಲ್ಲ. ನೀರಡಿಕೆಯ ವೇದನೆಯಿಂದ ಅದರ ಪ್ರಾಣವು ಸಂಕಟಕ್ಕೆ ಒಳಗಾಗುತ್ತದೆ. ಬೇಟೆಗಾರರು, ಬೇಡರು ತಮ್ಮ ಬೇಟೆಗಾಗಿ ಅದನ್ನು ಹುಡುಕುತ್ತಲೇ ಇರುತ್ತಾರೆ ಅವರ ಅಳವಿನಲ್ಲಿ ಸಿಕ್ಕೊಡನೆಯೇ ಬಾಣ ಹೊಡೆದು ಅದರ ಪ್ರಾಣವನ್ನು ತೆಗೆದು ಬಿಡುತ್ತಾರೆ ಒಂದು ವೇಳೆ ಬೇಡರು ಆ ಪಶುವನ್ನು ನೋಡದೆ ಹೋಗಿದ್ದರೂ ಸಹ ಅನ್ಯ ಬಲಿಷ್ಠ ಪಶುಗಳು ನಿರ್ಬಲ ಪಶುವನ್ನು ಕೊಂದುಹಾಕುತ್ತವೆ. ಇದಲ್ಲದೆ ಬೇಡರು ಬೇಟೆಗಾಗಿ ಆ ತಿರ್ಯಂಚ ಪ್ರಾಣಿಯನ್ನು ಅದು ವಾಸಮಾಡುವ ಸ್ಥಳದಿಂದ ಬಲಾತ್ಕಾರ ಪೂರ್ವಕ ಎಬ್ಬಿಸಿ ಹೊರಗೆ ಬರುವಂತೆ ಮಾಡುತ್ತಾರೆ ಇದು ಬೇರೆಯೇ ಸಿಂಹ, ಹುಲಿ ಮೊದಲಾದವುಗಳಂಥ ಕ್ರೂರ ಮತ್ತು ಎಲ್ಲವುಗಳಲ್ಲಿಯೂ ಶ್ರೇಷ್ಠವಾದಂಥ ಪ್ರಾಣಿಗಳು ಪರ್ವತ, ಗುಹ, ವೃಕ್ಷಗಳಲ್ಲಿ ಅಡಗಿ ಕುಳಿತ ಪ್ರಾಣಿಗಳನ್ನು ಕೊಂದು ಹಾಕುತ್ತವೆ. ಸ್ವತಃ ಸಿಂಹ ಮತ್ತು ಹುಲಿಗಳಿಗೂ ಕೂಡ ಬಹಳ ಹೆದರಿಕೆಯು ಇರುತ್ತದೆ ವೇಳೆ ವೇಳೆಗೆ ಅವುಗಳಿಗೆ ಆಹಾರವು ದೊರೆಯುವದಿಲ್ಲ ಒಂದು ವೇಳೆ ಆಹಾರವು ಸಿಕ್ಕರೂ ಕೂಡ ಮುಂದೆ ಎರಡು ಮೂರು ದಿವಸಗಳ ವರೆಗೆ ಏನೂ ದೊರೆಯುವದಿಲ್ಲ ಅದಕ್ಕಾಗಿ ಅವುಗಳಿಗೆ ಹಸಿವೆಯ ವೇದನೆಯನ್ನು ಸಹನ ಮಾಡಬೇಕಾಗುತ್ತದೆ ಬೇಡರು ಮೊದಲಾದವರು ಅನೇಕ ಪ್ರಕಾರದ ಬಲೆಗಳನ್ನು ಜಾಳಿಗೆ ಮೊದಲಾದವುಗಳನ್ನೂ ಇಟ್ಟು ಕಾಡ ಮೃಗಗಳನ್ನು ಹಿಡಿದು, ಹೊಡೆದು ತಿನ್ನುತ್ತಾರೆ ಇಲ್ಲವೆ ಪೇಟೆಗೆ ಮಾರಲಿಕ್ಕೂ ತರುತ್ತಾರೆ. ಜೀವಂತ ಪಶುಗಳ ಕಾಲು, ಕೈ, ನಾಲಿಗೆ, ಬಾಲಗಳನ್ನು ಕಡಿದು ಮಾರುತ್ತಾರೆ. ಹಾಗೆಯೇ ಅನೇಕ ಪ್ರಕಾರದ ಅವುಗಳ ಮರ್ಮಸ್ಥಾನವನ್ನು ತೆಗೆದು, ಕುದಿಸಿ, ತಿನ್ನುತ್ತಾರೆ. ತಿರ್ಯಂಚ ಗತಿಯಲ್ಲಿ ಯಾರೂ ಈ ಎಲ್ಲ ದುಃಖಗಳಿಂದ ರಕ್ಷಣ ಮಾಡುವವರು ಇಲ್ಲ ಅಲ್ಲದೆ ಒಂದು ಉಪಾಯವೂ ಕೂಡ ಅದಕ್ಕಿಲ್ಲ ಈ ಯೋನಿಯಲ್ಲಿ ತಾಯಿಯು ಕೂಡ ತನ್ನ ಕೂಸುಗಳನ್ನು ಹಸಿವೆಯ ಬಾಧೆಗಾಗಿ ತಿನ್ನುತ್ತದೆ ಅಂದ ಮೇಲೆ ಉಳಿದ ಯಾವುದು ತಿನ್ನಕೂಡದಂಥದು ಉಳಿಯಿತು?

ಪಕ್ಷಿಗಳ ದುಃಖ — ಇನ್ನು ಮುಂದೆ ಆಕಾಶದಲ್ಲಿ ಹಾರಾಡುವ ಪಕ್ಷಿಗಳಾದರೂ ನಿರ್ಭಯವಾಗಿರುವವೋ? ಅವುಗಳಿಗೆ ಮೇಲೆ ಹೇಳಿದ ಹೆದರಿಕೆಯು ಅರಣ್ಯದಲ್ಲಿ ಇಲ್ಲ ಅವು ಆಕಾಶದಲ್ಲಿ ವಿಹಾರ ಮಾಡುವುದರಿಂದ ಅರಣ್ಯದ ಸ್ಥಲಚರ ಪ್ರಾಣಿಗಳಿಂದ ಅವುಗಳಿಗೆ ಭೀತಿಯು ಇರುವದಿಲ್ಲ. ಹೀಗೆ ಯಾರಾದರೂ ಅಂದರೆ ಅದು ಪೂರ್ಣ ನಿಜವಾದ ಸಂಗತಿಯಿಲ್ಲ ಭೂಮಿಯ ಮೇಲಿನ ಹಿಂಸ್ರ ಪಶುಗಳ ಬಾಧೆಯು ಅವಕ್ಕೆ ಇಲ್ಲದಿದ್ದರೂ ಬಲಿಷ್ಠವಾಗಿರುವ ಆಕಾಶದೊಳಗೆ ಹಾರಾಡುವ ಪಕ್ಷಿಗಳು ನಿರ್ಬಲ ಪಕ್ಷಿಗಳನ್ನೂ ಹಿಡಿದು ತಿನ್ನುತ್ತವೆ ಬೇಟೆಯಾಡುವ ಜಾತಿಯ ಪಕ್ಷಿಗಳು ಆಕಾಶದಲ್ಲಿ ಹಾರಾಡುವ ಇತರ ಹಕ್ಕಿಗಳನ್ನು ಹಿಡಿದು ತಿಂದೇ ಬದುಕುತ್ತವೆ. ಗೂಗೆ ಮೊದಲಾದ ಪಕ್ಷಿಗಳು ರಾತ್ರಿಯಲ್ಲಿ ಸುತ್ತಾಡಿ ವೃಕ್ಷಗಳ ಮೇಲೆಯೂ ಗೂಡಿನಲ್ಲಿಯೂ ಇರುವ ಪಕ್ಷಿಗಳನ್ನು ಹಿಡಿದು ಗೋಣು ಮುರಿಯುತ್ತವೆ ಬೆಕ್ಕು ನಾಯಿಗಳೂ ಸಹ ತಮ್ಮ ಅಳವಿನಲ್ಲಿ ಸಿಕ್ಕ ಪಕ್ಷಿಗಳನ್ನೂ ಹೊಡೆದು ತಿನ್ನುತ್ತವೆ ರಾತ್ರಿಯಲ್ಲಿ ಪಕ್ಷಿಗಳಂತೂ

ಭಯ–ಭೀತವಾಗಿ ಗಿಡಗಳ ಹೊದರಿನಲ್ಲಿಯಾಗಲಿ, ಟೊಂಗೆಗಳ ಮೇಲಾಗಲಿ ಕುಳಿತಿರುತ್ತವೆ. ಅವುಗಳಿಗೆ ನಿದ್ರೆ-ಮಾಡುವದಕ್ಕಾಗಿ ಹಾಸಿಗೆ–ಹೊದಿಕೆಗಳೇನೂ ಇರುವದಿಲ್ಲ ಗಾಳಿ, ಮಳೆ, ಚಳಿ, ಬಿಸಿಲುಗಳ ತೀವ್ರ ವೇದನೆಯನ್ನು ಸಹನ ಮಾಡಬೇಕಾಗುತ್ತದೆ. ಅನೇಕ ಹಕ್ಕಿಗಳ ಪಕ್ಕಗಳನ್ನು ಕಿತ್ತುತ್ತಾರೆ. ಅವುಗಳನ್ನೂ ಕೆಲವರು ಸೀಳುವರು. ಕಾಯ್ದ ಎಣ್ಣೆಯಲ್ಲಿ ಜೀವಂತ ಒಗೆದು ಕರಿದು ತಿನ್ನುತ್ತಾರೆ. ಸಾರಾಂಶ ಎಲ್ಲಿ ನೋಡಿದರೂ ತಿರ್ಯಂಚ ಜೀವಗಳಿಗೆ ಭಯಂಕರ ದುಃಖವನ್ನು ಸಹನ ಮಾಡಬೇಕಾಗುತ್ತದೆ. ಇದೆಲ್ಲವೂ ಅವುಗಳ ಪೂರ್ವಕೃತ ಹಿಂಸೆಯ ಫಲವಾಗಿವೆ

**ಚತುಷ್ಪಾದ ಪಶುಗಳ ದುಃಖ**—ಇನ್ನು ಆನೆ, ಕುದುರೆ, ಒಂಟೆ, ಎತ್ತು, ಕೋಣ, ಕತ್ತೆ ಮೊದಲಾದ ನಾಲ್ಕು ಕಾಲುಗಳುಳ್ಳ ಪ್ರಾಣಿಗಳ ದುಃಖದ ವಿಚಾರದಲ್ಲಿ ತಿಳಿದುಕೊಳ್ಳೋಣ. ಈ ಪ್ರಾಣಿಗಳು ಪರಾಧೀನವಾಗಿರುತ್ತವೆ ಅಂದಮೇಲೆ ಇವುಗಳಿಗೆ ಆಗುವ ದುಃಖವನ್ನು ಎಷ್ಟೆಂತ ಹೇಳಲಿ? ಎತ್ತಿನ ಮೂಗಿನಲ್ಲಿ ತೂತನ್ನು ತೆಗೆದು ಮೂಗು-ದಾರವನ್ನು ಹಾಕುತ್ತಾರೆ. ಹಗಲಿರುಳೂ ಒತ್ತಟ್ಟಿಗೆ ಕಟ್ಟಿ ಹಾಕುತ್ತಾರೆ. ಸ್ವತಂತ್ರ ರೀತಿಯಿಂದ ತಿರುಗಾಡಲಿಕ್ಕೂ ತಿನ್ನಲಿಕ್ಕೂ ಅದಕ್ಕೆ ದೊರೆಯುವದಿಲ್ಲ. ಅದರಿಂದ ಅವುಗಳಿಗೆ ಅತಿಶಯವಾಗಿ ದುಃಖವಾಗುತ್ತದೆ ಇದೇ ಪ್ರಕಾರ ಅವುಗಳನ್ನೂ ಇಡೀ ಹಗಲೆಲ್ಲ ಬಿಸಿಲಿನಲ್ಲಿ ಕಟ್ಟುತ್ತಾರೆ. ಹಾಗೆಯೇ ಮಳೆ ಚಳಿಗಳಲ್ಲಿಯೂ ಕಟ್ಟಿ ನಿಲ್ಲಿಸುತ್ತಾರೆ. ತೊಗಲಿನ ತುದಿಯಿಂದ ಮಾಡಿದ ಬಾರಕೋಲಿನಿಂದ ಹೊಡೆಯುತ್ತಾರೆ. ಕಾಲಿನ ಗೊರಸುಗಳಿಗೆ ಕಬ್ಬಿಣದ ನಾಲುಗಳನ್ನು ಮೊಳೆಗಳಿಂದ ಹೊಡೆದು ಬಿಗಿಯುತ್ತಾರೆ. ಕೋಡುಗಳಿಗೆ ಅನಸು ಹಾಕುತ್ತಾರೆ. ಶಕ್ತಿಗಿಂತಲೂ ಹೆಚ್ಚಿಗೆ ಬಾರವನ್ನು ಹೇರುತ್ತಾರೆ. ಕಟ್ಟಿಗೆಯಿಂದ ಮರ್ಮಸ್ಥಾನಗಳಲ್ಲಿ ಹೊಡೆಯುತ್ತಾರೆ. ಜಡವಾದ ನೊಗವನ್ನು ಹೇರುವುದರಿಂದ ಎತ್ತುಗಳ ಹೆಗಲು ನೋವಾಗಿ ಹುಣ್ಣುಗಳೂ ಆಗಿ, ಕೀವು ರಕ್ತಗಳು ಸೋರಿ, ಭಯಂಕರ ನೋವಾಗುತ್ತದೆ ಆದರೂ ಅಂಥ ಘಾಯದ ಮೇಲೆಯೇ ಮತ್ತೆ ನೊಗವನ್ನು ಹೇರುತ್ತಾರೆ. ಆಗ ನೋವು ಹೆಚ್ಚಾಗಿ ಮಾಂಸವು ಹೊರಬೀಳುತ್ತದೆ. ಹುಳಗಳೂ ಉಂಟಾಗುತ್ತವೆ. ಅಂದರೂ ಕಲ್ಲು ಕಬ್ಬಿಣಗಳಂಥ ಭಾರವಾದ ವಸ್ತುಗಳನ್ನು ಹೇರಿದ ಬಂಡಿಗೆ ಹೂಡಿಯೇ ಹೂಡುತ್ತಾರೆ ಆಗ ಎಳೆಯದೆ ಇದ್ದರೆ ಹೊಡೆದು ಬಡೆದು ಮೈಯೊಳಗಿನ ಎಲುವುಗಳನ್ನು ನುಗ್ಗುನುಗ್ಗಾಗಿ ಮಾಡಿಬಿಡುತ್ತಾರೆ. ಜಗ್ಗುವದಕ್ಕೆ ಆ ಪಶುಗಳ ಶಕ್ತಿಯು ಸಾಲದೆ ಹೋದಾಗ ಕಾಲುಗಳು ನೋತು, ಮುರಿದು ಹೋಗುತ್ತವೆ. ಹಾಗೆಯೇ ಹಲವು ರೋಗಗಳು ಉತ್ಪನ್ನವಾಗುತ್ತವೆ. ಕುಳಿತಲ್ಲಿಂದ ಏಳಲಿಕ್ಕೆ ಆಗುವದಿಲ್ಲ. ಮೂಗು ಹರಿದು ಹೋಗುತ್ತದೆ ಬೆನ್ನ ಮೇಲೆ ಗಾಯಗಳಾಗಿ ಹುಳಗಳೂ ಹುಟ್ಟುತ್ತವೆ ಆದರೂ ಅವುಗಳ ಮೇಲೆ ಗಾಯಗಳಾಗಿ ಹುಳಗಳೂ ಹುಟ್ಟುತ್ತವೆ. ಆದರೂ ಅವುಗಳ ಮೇಲೆ ಬಾರವನ್ನು ಹೊರುವದನ್ನು ಯಾರೂ ಬಿಡುವದಿಲ್ಲ ಅವುಗಳ ಶಕ್ತಿಯನ್ನು ಮೀರಿಯೂ ದೂರ ಒಯ್ಯುತ್ತಾರೆ. ಆ ಕಾಲಕ್ಕೆ ಆ ಪಶುಗಳಿಗೆ ಹಸಿವು, ನೀರಡಿಕೆ, ಬಿಸಿಲು, ಚಳಿಗಳಿಂದ ವೇದನೆಯಾಗುತ್ತಿದ್ದೀತೆಂಬ ವಿಚಾರವನ್ನು ಯಾರೂ ಮಾಡುತ್ತಿರುವದಿಲ್ಲ ರಾತ್ರಿಯಲ್ಲಿ ಹನ್ನೆರಡು ಹೊಡೆದ ತರುವಾಯ ಅವುಗಳ ಮೇಲೆ ಹೇರಿದ ಬಾರವನ್ನು ಮರುದಿನ ಮಧ್ಯಾಹ್ನ ಇಳಿಹೊತ್ತಿನ ವರೆಗೆ ಇಳಿಸುವುದೇ ಇಲ್ಲ ಪಶುಯೋನಿಯೊಳಗಿನ ದುಃಖದಷ್ಟು ತೀವ್ರವಾದ ದುಃಖವು ಇನ್ನೆಲ್ಲಿಯೂ ನೋಡಲಿಕ್ಕೆ ದೊರೆಯುವದಿಲ್ಲ ಯಾವಾಗಲೂ ಅವುಗಳನ್ನು ಕಟ್ಟಿ ಹಾಕುವರು, ಪಂಜರದಲ್ಲಿ ಹಿಡಿದು ಇಡುವರು ಅದರಿಂದ ಅತಿಶಯ ದುಃಖವನ್ನು ಸಹಿಸಬೇಕಾಗುತ್ತದೆ. ಕೆಲವೊಂದು ಪಶುಗಳು ಚಾಂಡಾಲರ ಬಾಗಿಲಲ್ಲಿ ಕಟ್ಟಿದವುಗಳಾಗಿವೆ. ಅಲ್ಲಿ ಅವುಗಳಿಗೆ ತಿನ್ನಲಿಕ್ಕೆ ದೊರೆಯುವದಿಲ್ಲ. ಇತರ ಪಶುಗಳು ಸಿರಿವಂತರ ಬಾಗಿಲಲ್ಲಿದ್ದು, ಅವುಗಳಿಗೆ ತಿನ್ನುಣ್ಣುವುದಕ್ಕೆ ಹೆಚ್ಚಾಗಿ ಇರುತ್ತದೆ. ಇದನ್ನು ಕಂಡು ಉಪವಾಸ ಕಟ್ಟಿದ ಪಶುಗಳಿಗೆ ತುಂಬ ವೇದನೆಯಾಗುತ್ತದೆ. ಇನ್ನೊಬ್ಬರ ಹೊಲದಲ್ಲಿ, ಬಣಿವೆಯಲ್ಲಿ, ಹುಲ್ಲಿನಲ್ಲಿ ಬಾಯಿ, ಹಾಕಿದರೆ ಒಡೆಯನು ಕಟ್ಟಿಗೆಯಿಂದ ಹೊಡೆಯುತ್ತಾನೆ. ಈ ಪ್ರಕಾರ ಹಸಿವೆಯ ತೀವ್ರವೇದನೆಯನ್ನು ಪಶು ಯೋನಿಯಲ್ಲಿ ಸಹನ ಮಾಡಬೇಕಾಗುತ್ತದೆ. ಇದೇ ಪ್ರಕಾರ ನೀರಡಿಕೆ, ದಾರಿಯಿಂದ ಬಾರ ಹೊತ್ತುಕೊಂಡು ಸಾಗುವ ವೇದನೆ, ರೋಗದ ವೇದನೆಗಳನ್ನು ಸಹನ ಮಾಡಬೇಕಾಗುತ್ತದೆ. ಎತ್ತು, ನಾಯಿ ಇವುಗಳ ಕಣ್ಣುಗಳಲ್ಲಿಯೂ ಕಿವಿಗಳಲ್ಲಿಯೂ ತೀವ್ರ ದುಃಖಗಳಾಗುವ ರೋಗಗಳು ಉತ್ಪನ್ನವಾಗುತ್ತವೆ ಅವುಗಳ ಮರ್ಮಸ್ಥಾನಗಳಿಂದ ಆ ಹುಣ್ಣಿನೊಳಗಿನ ಕ್ರಿಮಿಗಳು ಸುರಿಸುವ ಕೀವು ರಕ್ತಗಳಿಂದ ಆಗುವ ವೇದನೆಯು ತೀರ ವಿಪರೀತವಾಗಿರುತ್ತದೆ ಅದನ್ನು ವರ್ಣಿಸಲಿಕ್ಕೆ ಆಗುವದಿಲ್ಲ ಅನೇಕ ಪಶುಗಳಿಗಂತೂ ತಿನ್ನಲು ಹುಲ್ಲು, ಕುಡಿಯಲು ನೀರು ಸಹ ದೊರೆಯುವದಿಲ್ಲ. ಇದರಿಂದ ಆಗುವ ವೇದನೆಯನ್ನು ಸಹಿಸುತ್ತ ಬೇಸಿಗೆಯ ಕಾಲವನ್ನು ಪೂರ್ಣಗೊಳಿಸಬೇಕಾಗುತ್ತದೆ ಮಳೆಗಾಲವು ಪ್ರಾರಂಭವಾದಾಗ

ಬಹಳಷ್ಟು ಹುಲ್ಲು ಬೆಳೆಯುತ್ತದೆ. ಆದರೆ ಅದರಲ್ಲಿ ಗುಂಗಾಡು ನೊಣಗಳೇ ಮೊದಲಾದವುಗಳು ಇದ್ದು, ಮೇಯಲಿಕ್ಕೆ ಹೋದರೆ ಮುಖಕ್ಕೆ ಕಡಿಯುತ್ತವೆ. ಅದರಿಂದ ಶಾಂತ ಚಿತ್ತದಿಂದ ಎದುರಿಗಿದ್ದ ಹುಲ್ಲನ್ನೂ ಕೂಡ ತಿನ್ನಲಿಕ್ಕೆ ಆಗುವದಿಲ್ಲ. ಮೈತುಂಬೆಲ್ಲ ನೊಣ, ಗುಂಗಾಡುಗಳು ಮುತ್ತುವುದರಿಂದ ಅತ್ತಿಂದ ಇತ್ತ ಇತ್ತಿಂದ ಅತ್ತ ಓಡಾಡ-ಬೇಕಾಗುತ್ತದೆ. ಹುಲ್ಲಿನ ಕಡೆಗೆ ಮುಖವನ್ನು ತಿರುವಲಿಕ್ಕೂ ಸಹ ಅವಕಾಶವು ಸಿಗುವದಿಲ್ಲ. ಅವು ಎಲ್ಲಿ ಕೂತರೂ ಕೂಡ ಜಿಗಳೆಗಳು ಹತ್ತಿ ರಕ್ತವನ್ನು ಹೀರುತ್ತವೆ ಈ ಪ್ರಕಾರ ಭಯಂಕರ ದುಃಖವನ್ನು ಪಂಚೇಂದ್ರಿಯ ಪಶುಗಳಿಗೆ ಅನುಭವಿಸಬೇಕಾಗುತ್ತದೆ ಆನೆ, ಕುದುರೆ, ಒಂಟೆ, ಎತ್ತು ಮೊದಲಾದ ಪ್ರಾಣಿಗಳ ಮೇಲೆ ಭಾರವನ್ನು ಹೇರಿ ಒಯ್ಯುತ್ತಿರುವಾಗ ಅವು ಹೇರಿದಭಾರದಿಂದಲೂ ಮುಪ್ಪಿನತನದಿಂದಲೂ, ರೋಗದಿಂದಲೂ ದಣಿದು ಸೋತು ಹೋಗುತ್ತವೆ. ಮುಂದೆ ಹೆಜ್ಜೆಯನ್ನು ಇಡಲಿಕ್ಕೆ ಆಗುವದಿಲ್ಲ. ನಡೆಯುತ್ತ ನಡೆಯುತ್ತ ಹಾದಿಯಲ್ಲಿ ಕೂಡ್ರುವವು. ಕೈಕಾಲುಗಳು ಕಡಿದು ಹೋಗುತ್ತವೆ ಮೇಲೆ ಒಂದೇ ಸವನೆ ಒಡೆಯನೂ ಹೊಡೆಯುತ್ತಿರುತ್ತಾನೆ. ಆದರೆ ನಡೆಯುವ ಶಕ್ತಿಯು ಇರುವದಿಲ್ಲ ಇಂಥ ಸ್ಥಿತಿಯಲ್ಲಿ ಅವುಗಳ ಒಡೆಯನು ಆ ನಿರ್ಜನ ಅರಣ್ಯದಲ್ಲಿ ಪರ್ವತದ ಮೇಲೆ ಇಲ್ಲವೆ ನೀರಿನಲ್ಲಿ ಹಾಗೆಯೇ ಒಗೆದು ತಾನು ಹೊರಟು ಹೋಗುತ್ತಾನೆ ಇಂಥ ಒಂದೇ ಪಶುವು ಅಡವಿಯಲ್ಲಿ ಉಳಿದರೆ ಅದು ಯಾರಿಗೆ ಶರಣು ಹೋದೀತು? ಯಾರ ಹತ್ತರ ನೀರನ್ನು ಬೇಡೀತು? ಹುಲ್ಲನ್ನು ಯಾರು ತಂದು ಹಾಕುವರು? ಚಳಿ, ಮಳೆ, ಬಿಸಿಲುಗಳಲ್ಲಿ ಇದ್ದು, ಹಸಿವೆ ನೀರಡಿಕೆಗಳ ವೇದನೆಯನ್ನು ಸಹನ ಮಾಡಬೇಕಾಗುತ್ತದೆ. ಈ ಪ್ರಾಣಿಯು ಅಶಕ್ತವಾದುದನ್ನು ಕಂಡು ರಣಹದ್ದು ಮೊದಲಾದ ದುಷ್ಟ ಪಕ್ಷಿಗಳು ಕಬ್ಬಿಣದಂಥ ಬಿರುಸಾದ ಹಾಗೂ ಚೂಪಾದ ಚುಂಚುವಿನಿಂದ ಅದರ ಕಣ್ಣುಗಳನ್ನು ಒಡೆಯುವವು ನೋವಾಗುವ ಸ್ಥಳದಲ್ಲಿ ಹೊಡೆದು, ಮಾಂಸದ ಕರಣೆಯನ್ನು ಎತ್ತಿಕೊಂಡು ಹೋಗುತ್ತವೆ ನರಕದಂಥ ತೀವ್ರ ವೇದನೆಯನ್ನು ಸಹನ ಮಾಡುತ್ತ ದುಃಖದಿಂದ ಅನೇಕ ಸಂಕಟಗಳನ್ನು ಅನುಭವಿಸುತ್ತ ಬಹುದಿನಗಳ ವರೆಗೆ ಒದ್ದಾಡುತ್ತ ಇದ್ದು ಪ್ರಾಣವನ್ನು ಬಿಡಬೇಕಾಗುತ್ತದೆ

**ತಿರ್ಯಂಚ ಯೋನಿಯಲ್ಲಿ ಏಕೆ ಹುಟ್ಟುವರು?** ಈ ದುಃಖವು ಪೂರ್ವ ಜನ್ಮದಲ್ಲಿ ಅನ್ಯಾಯದಿಂದ ಇನ್ನೊಬ್ಬರ ಧನವನ್ನು ಹರಣ ಮಾಡುವುದರಿಂದ ಉಂಟಾಗುತ್ತದೆ ಜನರನ್ನು ಮೋಸಗೊಳಿಸಿ ದಾನ ಪಡೆಯುವದ-ರಿಂದಲೂ ವಿಶ್ವಾಸ ಘಾತಮಾಡುವುದರಿಂದಲೂ ಸಂಭವಿಸುತ್ತದೆ. ಅಲ್ಲದೆ ಅಭಕ್ಷ್ಯ ಭಕ್ಷಣ, ರಾತ್ರಿಭೋಜನ, ದೇವ ದ್ರವ್ಯ–ನಿರ್ಮಾಲ್ಯ–ಭಕ್ಷಣ ಮಾಡುವುದರಿಂದ ತಿರ್ಯಂಚ ಯೋನಿಯಲ್ಲಿ ಉತ್ಪನ್ನವಾಗಿ ದುಃಖವನ್ನು ಭೋಗಿಸ-ಬೇಕಾಗುತ್ತದೆ ಇನ್ನೊಬ್ಬರ ಮೇಲೆ ಕಾರಣವಿಲ್ಲದೆ ದೋಷಗಳನ್ನು ಹೊರಿಸಿ ಕಲಂಕ ಹಚ್ಚುವುದು, ತಮ್ಮನ್ನು ಹೊಗಳಿಕೊಂಡು ಇನ್ನೊಬ್ಬರನ್ನು ನಿಂದಿಸುವುದು, ಇನ್ನೊಬ್ಬರಿಗೆ ಕಪಟತನದಿಂದ ಮೋಸ ಮಾಡುವುದು, ಮಿಷ್ಟಾನ್ನ ಭಕ್ಷಣ ಮಾಡುವ ತೀವ್ರ ಇಚ್ಛೆಯಿಂದ ಮೋಸಗೊಳಿಸುವುದು, ಇವೆಲ್ಲವುಗಳಿಂದ ತಿರ್ಯಂಚ ಯೋನಿಯಲ್ಲಿ ಹುಟ್ಟಿ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುತ್ತದೆ ಅಸಂಖ್ಯಾತ, ಅನಂತಭವ ತಿರ್ಯಂಚ ಗತಿಯಲ್ಲಿ ಮೇಲಿಂದ ಮೇಲೆ ಜನ್ಮ ತಾಳಿ ಪುನಃ ಮಾಯಾಚಾರವನ್ನು ಮಾಡಿ, ತೀವ್ರ ಪಾಪ ಬಂಧದಿಂದ ನವೀನ ತಿರ್ಯಂಚ ಯೋನಿಯ ಇಲ್ಲವೆ ನರಕಗತಿಯ ಬಂಧನದಲ್ಲಿ ಬಿದ್ದು ಈ ಜೀವವು ಅನಂತಕಾಲವನ್ನು ಕಳೆದಿದೆ ಮಿಥ್ಯಾ ಶ್ರದ್ಧೆ, ಮಿಥ್ಯಾ ಜ್ಞಾನ, ಮಿಥ್ಯಾ ಆಚರಣೆಯ ಫಲವಾಗಿದೆ.

**ಮಾನವ ಗತಿಯೊಳಗಿನ ದುಃಖ**—ಇನ್ನು ಮನುಷ್ಯಗತಿಯೊಳಗಿನ ದುಃಖದ ಬಗ್ಗೆ ಸ್ವಲ್ಪ ನೋಡೋಣ ಈ ಗತಿಯಲ್ಲಿಯೂ ಸಹ ಅನೇಕ ಜನರು ಪಶುಗಳಂತೆ ಜ್ಞಾನ ಹೀನರಾಗಿದ್ದಾರೆ. ಹಲವರು ಹುಟ್ಟಿದೊಡನೆಯೇ ತಂದೆ ತಾಯಂದಿರು ಮರಣ ಹೊಂದುತ್ತಾರೆ ಅವರಂತೂ ಇನ್ನೊಬ್ಬರ ಎಂಜಲು ತಿಂದು, ಹಸಿವು ನೀರಡಿಕೆಗಳ ವೇದನೆಯನ್ನು ಸಹನ ಮಾಡುತ್ತ, ತಿರಸ್ಕಾರವನ್ನು ಹೊಂದುತ್ತ ಜೀವಿಸುತ್ತಾರೆ ಹಲವರು ಇನ್ನೊಬ್ಬರಲ್ಲಿ ನೌಕರಿಯನ್ನು ಮಾಡುವರು ಅನೇಕರು ಕತ್ತೆಯಂತೆ ಭಾರವನ್ನು ಹೊತ್ತು ತಮ್ಮ ಆಯುಷ್ಯವನ್ನು ಪೂರ್ಣ-ಗೊಳಿಸುವರು ಹೊಟ್ಟೆಗೆ ಒಂದು ಸೇರು ಅನ್ನವು ದೊರೆಯಲೆಂದು ತಲೆ, ಹೆಗಲು, ಕೈಗಳಲ್ಲೆಲ್ಲ ಭಾರವನ್ನು ಹೊತ್ತು ಹತ್ತು ಹನ್ನೆರಡು ಹರದಾರಿಗಳಷ್ಟು ನಡೆಯುತ್ತಾರೆ ಕೆಲವರಂತೂ ಇಡೀ ದಿವಸ ಇನ್ನೊಬ್ಬರ ಮನೆಗೆ ನೀರು ಹಾಕುವ ಕೆಲಸವನ್ನು ಮಾಡುತ್ತಾರೆ ಹಲವರು ಹೊಟ್ಟೆಗಾಗಿ ಹಗಲಿರುಳೂ ಪರ ಊರಿಗೆ ನಡೆಯುತ್ತ ಹೋಗುತ್ತಾರೆ. ದಿನಾಲು ನಡೆಯುವುದರಿಂದ ಅತಿಶಯ ದುಃಖವಾಗುತ್ತದೆ ಇಪ್ಪತ್ತು, ಇಪ್ಪತ್ತೈದು, ಮೂವತ್ತು ಹರದಾರಿಗಳ ವರೆಗೆ ನಡೆಯುತ್ತ ಹೋಗಬೇಕಾಗುತ್ತದೆ ಅದೂ ಗೇಣು ಹೊಟ್ಟೆಯ ಪಾಡಿಗಾಗಿ, ಅನೇಕರು ಕಲ್ಲು ಮಣ್ಣುಗಳನ್ನ

ಹೊರುವ ಕೆಲಸವನ್ನು ಮಾಡುತ್ತಾರೆ. ಹಲವರ ಜನ್ಮವು ಪರಾಧೀನರಾಗಿ ಸೇವೆ ಮಾಡುವುದರಲ್ಲಿಯೇ ಹೋಗುತ್ತದೆ ಅನೇಕರು ಕುಂಬಾರ, ಪಾತ್ರೆಗಳನ್ನು ಮಾಡುವವರಾಗಿ ದುಡಿಯಬೇಕಾಗುತ್ತದೆ, ಕೆಲವರು ಅರಿವೆಗಳನ್ನು ಒಗೆದು, ವಸ್ತ್ರಗಳಿಗೆ ಬಣ್ಣಹಾಕಿ, ಅವುಗಳನ್ನು ಹೊಲಿದು, ಅವುಗಳ ಮೇಲೆ ನಕ್ಷೆ ತೆಗೆದು, ಹೆಣೆದು, ಕಸೂತಿ ಕೆಲಸಮಾಡಿ ಹೊಟ್ಟೆಯನ್ನು ಹೊರೆದುಕೊಳ್ಳುತ್ತಾರೆ ಕೆಲವರು ಕಟ್ಟಿಗೆ ಹುಲ್ಲುಗಳನ್ನು ಹೊತ್ತು ಇಡೀ ಆಯುಷ್ಯವೆಲ್ಲ ಕಳೆಯುತ್ತಾರೆ. ಅನೇಕರು ಜನರ ಮಲಮೂತ್ರಗಳನ್ನು ತೆಗೆದು, ತೊಗಲಿನ ಕೆಲಸ ಮಾಡಿ ಜೀವಿಸುತ್ತಾರೆ. ಕೆಲವರು ಬೀಸಿ, ಕೆಲವರು ನೆಲವನ್ನು ಅಗೆದು, ಕೆಲವರು ಅಗ್ನಿ ಸಂಸ್ಕಾರ ಮಾಡಿ, ಕೆಲವರು ಅಡಿಗೆ ಮಾಡಿ, ಕೆಲವರು ಇಟ್ಟಂಗಿಗಳ ಆವಿಗೆ ಹಾಕಿ, ಹಲವರು ಎಣ್ಣೆ ತುಪ್ಪಗಳನ್ನು ಮಾರಿ, ತಮ್ಮ ಉದರ ನಿರ್ವಾಹವನ್ನು ಮಾಡಿಕೊಳ್ಳುತ್ತಾರೆ. ಕೆಲವರು ದೀನವಾಣಿ ಹಾಗೂ ದೀನಮುದ್ರೆಗಳನ್ನು ಮಾಡಿಕೊಂಡು, ಮನೆ ಮನೆಗೆ ಹೋಗಿ ಭಿಕ್ಷೆಬೇಡಿ ಬದುಕುತ್ತಾರೆ. ಅನೇಕರು ಬಡವರಾಗಿ ಅಡ್ಡಾಡುತ್ತಾರೆ ಕೆಲವರು ತಮ್ಮ ಐಶ್ವರ್ಯ ಹೋದುದಕ್ಕಾಗಿ ಶೋಕ ಮಾಡುತ್ತಿರುತ್ತಾರೆ. ಒಟ್ಟಿನಲ್ಲಿ ಎಲ್ಲ ಜನರೂ ಕರ್ಮದ ಸ್ವಾಧೀನವಾಗಿರುವುದರಿಂದ ಆತ್ಮ ಸ್ವರೂಪವನ್ನು ಮರೆತು ಮನುಷ್ಯ ಜನ್ಮವನ್ನು ದುಃಖದಲ್ಲಿ ಕಳೆಯುತ್ತಾರೆ. ಹಲವರು ಕಳ್ಳತನವನ್ನು ಮಾಡುತ್ತಾರೆ. ಕೆಲವರು ಕಪಟ ಯುಕ್ತಿಯನ್ನು ಹೂಡುವುದರಲ್ಲಿ ಪ್ರವೀಣತೆಯನ್ನು ಸಂಪಾದಿಸುವರು. ಕೆಲವರು ಅಸತ್ಯ ಭಾಷಣಗಳನ್ನು ಆಡುವರು ಹಲವರು ವ್ಯಭಿಚಾರ, ಒಬ್ಬರ ಸಂಗತಿಯನ್ನು ಇನ್ನೊಬ್ಬರಿಗೆ ಹೇಳುವುದು, ಇದನ್ನೇ ಮಾಡುತ್ತ ಇರುವರು ಕೆಲವರು ಸುಲಿಗೆಗಾರರಾಗಿ ಜೀವಿಸುವರು ಕೆಲವರು ರಣಭೂಮಿಯ ಮೇಲೆ ಯುದ್ಧ ಮಾಡಲಿಕ್ಕೆಂದು ಹೋಗುವರು. ಹಲವರು ಸಮುದ್ರದಲ್ಲಿ ನಾವಿಕರ ಕೆಲಸವನ್ನು ಮಾಡುವರು. ಕೆಲವರು ನದಿಯನ್ನು ದಾಟಿಸುವ ಕೆಲಸಮಾಡಿ ಹೊಟ್ಟೆಯನ್ನು ಹೊರೆದುಕೊಳ್ಳುವರು ಕೆಲವರು ನದಿಯನ್ನು ದಾಟಿಸುವ ಕೆಲಸಮಾಡಿ ಹೊಟ್ಟೆಯನ್ನು ಹೊರೆದು-ಕೊಳ್ಳುವರು. ಕೆಲವರು ಬಾವಿಯ ಮೇಲೆ ಯಾತವನ್ನು ಹೊಡೆದು ನೀರು ತೋಡುವ ಕೆಲಸ ಮಾಡಿ ಹೊಟ್ಟೆಯನ್ನು ತುಂಬಿಕೊಳ್ಳುವರು ಹಲವರು ಒಕ್ಕಲತನ, ನಾವಾಡಿಸುವುದು, ಹೊಲ ಉಳುವುದು, ಬಿತ್ತುವುದು, ಹಿಂನೆಯ ವ್ಯಾಪಾರ, ಜಮಾಖರ್ಚನ್ನೂ ಬರೆಯುವುದು, ಚಿತ್ರ ತೆಗೆಯುವುದು, ಮಣ್ಣಿನ ಇಟ್ಟಂಗಿಗಳನ್ನು ಮಾಡುವುದು, ಮನೆ ಕಟ್ಟುವುದು, ಗುತ್ತಿಗೆ ವ್ಯಾಪಾರ ಮಾಡುವುದು, ಜೂಜು ಆಡುವುದು ಇವೆಲ್ಲವುಗಳನ್ನು ಮಾಡಿ ಧನವನ್ನು ಸಂಪಾದಿಸುತ್ತಾರೆ ಕೆಲವರು ಸೆರೆಯನ್ನು ಕುಡಿಯುವುದರಲ್ಲಿ ಮಗ್ನರಾಗುತ್ತಾರೆ ಹಲವರು ರಾಜರ ಸೇವೆಯನ್ನು ಮಾಡುತ್ತಾರೆ, ಕೆಲವರು ನೀಚ ಜನರ ಸೇವೆಯನ್ನು ಮಾಡುವರು, ಕೆಲವರು ಹಾಡುವುದು, ಬಾರಿಸುವುದು, ಕುಣಿಯುವುದು ಮಾಡಿ ಉಪಜೀವಿಸುತ್ತಾರೆ. ಈ ರೀತಿ ಅನೇಕ ಪ್ರಕಾರದ ದುಃಖಗಳನ್ನು ಹೊಂದಿ ಆಯುಷ್ಯವನ್ನು ವ್ಯರ್ಥವಾಗಿ ಕಳೆಯುತ್ತಾರೆ. ತಮ್ಮ ತಮ್ಮ ಪುಣ್ಯ-ಪಾಪಗಳಿಗೆ ಅನುಸರಿಸಿ ಎಲ್ಲರೂ ಸುಖ-ದುಃಖಗಳನ್ನು ಭೋಗಿಸಬೇಕಾಗುತ್ತದೆ ಹಲವರು ಧಾನ್ಯವನ್ನು ಮಾರಿ, ಕೆಲವರು ಬೆಲ್ಲ, ಸಕ್ಕರೆ, ಎಣ್ಣೆ, ತುಪ್ಪಗಳನ್ನೂ ಮಾರಿಯೂ ತಮ್ಮ ಉಪಜೀವಿಕೆಯನ್ನು ಸಾಗಿಸುತ್ತಾರೆ ಅನೇಕರು ಕಬ್ಬಿಣ ಹಿತ್ತಾಳಿ ಮೊದಲಾದ ಧಾತುಗಳನ್ನೂ ಕೆಲವರು ಕಟ್ಟಿಗೆ, ಕಲ್ಲು, ಮಣ್ಣು, ಗೊಬ್ಬರಗಳನ್ನು ಮಾರಿಯೂ ಹೊಟ್ಟೆಯನ್ನು ಹೊರೆದುಕೊಳ್ಳುತ್ತಾರೆ ಹಲವರು ಮಿಠಾಯಿ, ಉಂಡಿ, ಚಕ್ಕುಲಿ, ಪೇಡೆ ಇಂಥವುಗಳನ್ನು ಮಾರಿಯೂ ಸಿದ್ಧಗೊಳಿಸಿಯೂ ಹೊಟ್ಟೆಯನ್ನು ತುಂಬಿ-ಕೊಳ್ಳುತ್ತಾರೆ ಕೆಲವರು ಔಷಧಗಳನ್ನು ಸಿದ್ಧಗೊಳಿಸಿ ಮಾರುತ್ತಾರೆ. ಈ ಪ್ರಕಾರ ಅನೇಕ ಕ್ರಿಯೆಗಳನ್ನು ಮಾಡಿ ತಮ್ಮ ಉಪಜೀವಿಕೆಯನ್ನು ನಡೆಯಿಸಬೇಕಾಗುತ್ತದೆ ಜಗತ್ತಿನಲ್ಲಿ ಅನೇಕ ಜನ ವ್ಯಾಪಾರಿಗಳು ಇದ್ದಾರೆ. ಹಲವರು ಸೇವಕರಿದ್ದಾರೆ, ಕೆಲವರು ದಲಾಲರಾಗಿದ್ದಾರೆ, ಕೆಲವರು ಯಾವಾಗಲೂ ಉದ್ಯೋಗವನ್ನು ಮಾಡುತ್ತಿರುತ್ತಾರೆ. ಹಲವರು ಯಾವಾಗಲೂ ಆಲಸಿಗಳೂ ನಿರುದ್ಯೋಗಿಗಳೂ ಆಗಿರುತ್ತಾರೆ ಕೆಲವರು ಮನಸ್ಸಿಗೆ ಬಂದಂತೆ ವಸ್ತ್ರಾಭರಣ-ಗಳನ್ನು ತೊಡುವವರಿದ್ದಾರೆ, ಹಲವರು ಬಹು ಪರಿಶ್ರಮ ಮಾಡಿಯೂ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳಲಿಕ್ಕೆ ಅಸಮರ್ಥರಾಗಿರುತ್ತಾರೆ ಕೆಲವರಿಗೆ ಸ್ವಲ್ಪವೂ ಕೂಡ ದುಃಖವಿಲ್ಲದೆ ಊಟಕ್ಕೆ ದೊರೆಯುತ್ತದೆ, ಕೆಲವರಿಗೆ ಮನೆ ಮನೆ ತಿರುಗಿ ತಂದು ತಿನ್ನಬೇಕಾಗುತ್ತದೆ ಕೆಲವರು ಗುರುಗಳೆಂದು ಮನ್ನಣೆಯನ್ನು ಹೊಂದಿ ಆಹಾರವನ್ನು ಸಂಪಾದಿಸುತ್ತಾರೆ. ಹಲವರು ದೈನ್ಯವನ್ನು ವ್ಯಕ್ತಮಾಡಿ ಆಹಾರವನ್ನು ದೊರಕಿಸಬೇಕಾಗುತ್ತದೆ, ಕೆಲವರು ರುಚಿಕರವಾದ ಊಟವನ್ನು ದಿನಕ್ಕೆ ಹಲವು ಸಲ ತಕ್ಕೊಳ್ಳುತ್ತಾರೆ. ಕೆಲವರಿಗೆ ನೀರಸ ಭೋಜನ ಸಹಿತ ದಿನಕ್ಕೆ ಒಮ್ಮೆಯೂ ದೊರೆಯುವದಿಲ್ಲ. ಹಲವರಿಗೆ ಎರಡು ದಿನಗಳಿಗೆ ಒಮ್ಮೆಯಾದರೆ ಕೆಲವರಿಗೆ ಎರಡು ಮೂರು

ದಿನಗಳಿಗೊಮ್ಮೆ ಮಾತ್ರ ಲಭಿಸುತ್ತದೆ. ಒಮ್ಮೊಮ್ಮೆ ದೊರೆಯುವುದೂ ಇಲ್ಲ. ಇದರಿಂದ ಹಸಿವು ನೀರಡಿಕೆಗಳ ವೇದನೆಯು ಆಗುತ್ತದೆ. ಅದರಲ್ಲಿ ಪ್ರಾಣವೂ ಹಾರಿ ಹೋಗುತ್ತದೆ. ಕೆಲವರು ಸೆರೆಮನೆಯಲ್ಲಿದ್ದು ದುಃಖವನ್ನು ಅನುಭವಿಸುತ್ತ ಇರುತ್ತಾರೆ, ಹಲವರು ಇಷ್ಟ ಪದಾರ್ಥದ ವಿಯೋಗದ ದುಃಖಾಗ್ನಿಗೆ ತಮ್ಮ ಶರೀರವನ್ನು ಆಹುತಿಯನ್ನಾಗಿ ನೀಡುತ್ತಾರೆ, ಅನೇಕರು ರೋಗದಿಂದ ಆಗುವ ತೀವ್ರ ವೇದನೆಯನ್ನು ಹಲವು ಪರ್ಯಾಯಗಳಲ್ಲಿ ಅನುಭವಿಸುತ್ತ ಆರ್ತಧ್ಯಾನದಲ್ಲಿ ಮರಣವನ್ನು ಹೊಂದುತ್ತಾರೆ ಅನೇಕರಿಗೆ ಜ್ವರ, ಕೆಮ್ಮು, ವಾತ, ಪಿತ್ತ, ಕಫಗಳ ಅನೇಕ ವಿಕಾರಗಳಿಂದ ಅಂದರೆ ಉದರ, ಜಲೋದರ ಮೊದಲಾದ ತೀವ್ರ ವೇದನೆಯನ್ನು ಸಹಿಸಬೇಕಾಗುತ್ತದೆ ಕೆಲವರಿಗೆ ಹಲ್ಲುನೋವು, ಕರ್ಣಶೂಲಿ, ಮಸ್ತಕಶೂಲಿ, ಉದರಶೂಲಿಗಳ ವೇದನೆಯಿಂದ ಸಾಯಬೇಕಾಗುತ್ತದೆ. ಕೆಲವರು ಹುಟ್ಟುಗುರುಡರು, ಹಲವರು ಕಿವುಡರು, ಅನೇಕರು ಕೈಕಾಲುಗಳಿಲ್ಲದವರು, ಹೀಗಿದ್ದೂ ತಮ್ಮ ಆಯುಷ್ಯವನ್ನು ಹೇಗೋ ದುಃಖದಲ್ಲಿ ಕಳೆಯುತ್ತಾರೆ ಕೆಲವರು ವಯಸ್ಸು ಆದ ಮೇಲೆ ಕುರುಡ, ಕುಂಟರಾಗಿ ಪರಾಧೀನತೆಯಿಂದ ಮಾನಸಿಕ ಹಾಗೂ ಶಾರೀರಿಕ ದುಃಖವನ್ನು ಭೋಗಿಸುತ್ತ ಇರುತ್ತಾರೆ ಕೆಲವರು ರಕ್ತವಿಕಾರದ ರೋಗಗಳಿಂದ ಅಂದರೆ ಬಿಳುವು, ಕಜ್ಜಿ, ಮಹಾರೋಗಗಳಿಗೆ ತುತ್ತಾಗುತ್ತಾರೆ ಇದರಿಂದ ಕೆಲವರ ಕಾಲಬೆರಳುಗಳು, ಕೈಬೆರಳುಗಳು, ಮೂಗೂ ಇಲ್ಲದಂತೆ ಆಗುತ್ತವೆ ಕರ್ಮೋದಯದ ಗತಿಯು ಬಹಳ ವಿಚಿತ್ರವಾಗಿದೆ. ಅಂತರಾಯಕರ್ಮದ ಉದಯದಿಂದ ಅನೇಕರು ನಿರ್ಧನರಾಗಿ ಅನೇಕ ಪ್ರಕಾರದ ದುಃಖವನ್ನು ಭೋಗಿಸುತ್ತಾರೆ. ಒಮ್ಮೆ ಹೊಟ್ಟೆ ತುಂಬುತ್ತದೆ, ಒಮ್ಮೆ ತುಂಬುವುದೇ ಇಲ್ಲ. ಯಾವಾಗಾದರೂ ಒಮ್ಮೆ ಅನ್ನವು ಸಿಕ್ಕರೆ ಅದು ಹಳಸಿದ್ದು, ನಾಶವಾದದ್ದು, ಯಾರಾದರೂ ಚೆಲ್ಲಿದ್ದು ದೊರೆಯುತ್ತದೆ ಅನ್ನಕ್ಕಾಗಿ ಯಾಚನೆಯನ್ನು ಮಾಡುತ್ತಿರುವಾಗ ತಿರಸ್ಕಾರವನ್ನು ಹೊಂದ-ಬೇಕಾಗುತ್ತದೆ. ಇರುವ ಮನೆಯು ಬಹಳ ಹಳೆಯದು, ಅದರ ಮೇಲೆ ಹುಲ್ಲಿನ ಚಪ್ಪರವೂ ಕೂಡ ಪೂರ್ಣ ಇರುವದಿಲ್ಲ ಅಲ್ಲಿ ಇರುವ ವ್ಯವಸ್ಥೆಯೂ ಪೂರ್ಣವಾಗಿರುವದಿಲ್ಲ ಅದು ಅತಿಶಯ ಸಂಕುಚಿತವಾಗಿರುತ್ತದೆ. ಇಷ್ಟಿದ್ದೂ ಆ ಮನೆಯಲ್ಲಿ ಹಾವು, ಚೇಳು ಮೊದಲಾದ ವಿಷಾರಿ ಪ್ರಾಣಿಗಳು ನಾಲ್ಕೂ ಕಡೆಗೆ ಬಿಲಗಳನ್ನೂ ಮಾಡಿರುತ್ತವೆ ದಿನಾಲು ಅಲ್ಲಿ ಹೊಲಸು ಪದಾರ್ಥವು ಬಿದ್ದಿರುತ್ತದೆ ದುರ್ಗಂಧವಾಸ ಬರುವಂಥ ಮನೆಯದು ಅದೂ ಕೂಡ ಯಾವಾಗಲೂ ಚಾಂಡಾಲ ಮೊದಲಾದವರು ನೆರೆಯಲ್ಲಿ ಇರುವಂಥ ಸ್ಥಳವಾಗಿರುತ್ತದೆ. ಇಷ್ಟೆಲ್ಲ ತೊಂದರೆಗಳನ್ನು ಸಹಿಸಿದರೂ ಮನೆಯಲ್ಲಿ ಹೆಂಡತಿಯ ಸುಖವಾದರೂ ಇರಬೇಕು. ಆದರೆ ಅದನ್ನಾದರೂ ಎಲ್ಲಿಂದ ತರಬೇಕು? ಅವಳು ಯಾವಾಗಲೂ ಜಗಳಾಡುವವಳು, ಎದುರಿಗೆ ಬೇಕಾದ ಅವಾಚ್ಯ ಶಬ್ದಗಳನ್ನೂ ಆಡಿ, ಪತಿಯನ್ನು ಅವಮಾನಿತ-ಗೊಳಿಸುವಳು. ಮೇಲಾಗಿ ಮಹಾನ್ ಕುರೂಪಿ ಸ್ತ್ರೀಯಾಗಿಯೂ ಇರುವಳು. ಅಂದಮೇಲೆ ಈ ಸಂಸಾರದಲ್ಲಿ ಸುಖಕ್ಕೇನು ಕೊರತೆಯಿದೆ! ಪಾಪದ ಉದಯದಿಂದ ಬಹಳಷ್ಟು ರೋಗಿ, ಕುರೂಪ ಮತ್ತು ಅಳುಬುರುಕ ಮಕ್ಕಳು ಹುಟ್ಟುವುದು ಇಂಥ ದುಷ್ಟ ಮತ್ತು ವ್ಯಸನಿ, ಮಹಾಪಾಪಿ ಮಕ್ಕಳ ಸಂಯೋಗವು ತೀರ ವೈರಿಗಳಿಗಿಂತ ಅಸಹ್ಯ-ವಾಗಿರುತ್ತದೆ. ಈ ಪ್ರಕಾರ ದುಷ್ಟ ಬಂಧುಗಳು, ಅನ್ಯಾಯಿ, ಬಲಿಷ್ಠ. ಪಾಪಿ, ದುರಾಚಾರಿ, ವ್ಯಸನಿ ನೆರೆಯವರು, ಲೋಭಿ, ದುಷ್ಟ, ಅವಗುಣಗ್ರಾಹಿ, ಕೃಪಣ, ಕ್ರೋಧಿ ಮೂರ್ಖ ಮಾಲಕರ ಸಂಯೋಗ, ಇವು ಬಹಳ ದುಃಖ-ಕೊಡುವಂಥವಿದ್ದು, ಪಾಪದ ಉದಯದಿಂದ ಅವು ಪ್ರಾಪ್ತವಾಗುತ್ತವೆ. ಇದೇ ಪ್ರಕಾರ ದುಷ್ಟ, ಕೃತಘ್ನ, ವಿರೋಧ ಸಾಧಿಸುವ, ಬಲಿಷ್ಠವಾದಂಥ ಸೇವಕನು ದೊರೆಯುವುದಕ್ಕೂ ಪಾಪವೇ ಕಾರಣವಾಗಿರುತ್ತದೆ. ಧರ್ಮರಹಿತ, ಅನ್ಯಾಯ ಮಾರ್ಗಿ ಮತ್ತು ಕ್ರೂರ ರಾಜನ ರಾಜ್ಯದಲ್ಲಿ ನಿಲ್ಲುವುದು, ದುಷ್ಟ ಮಂತ್ರಿ, ದುಷ್ಟ ಪ್ರಧಾನ, ದುಷ್ಟ ನಗರ ರಕ್ಷಕ ಇವರ ಸಂಗತಿಯು ಒದಗುವುದು, ತಮ್ಮ ಕೀರ್ತಿಗೆ ಕಲಂಕ ಹತ್ತಿ ಜಗತ್ತಿನಲ್ಲಿ ಅಪಕೀರ್ತಿಯಾಗುವುದು, ಧನವು ನಷ್ಟವಾಗುವುದು, ಈ ಎಲ್ಲ ಸಂಗತಿಗಳು ಪಂಚಮ ಕಾಲದೊಳಗಿನ ಮನುಷ್ಯರಿಗೆ ಬಹುತರ ಪ್ರಾಪ್ತವಾಗುತ್ತವೆ. ಈ ದುಃಖಮಾ ಕಾಲದಲ್ಲಿ ಯಾವ ಮನುಷ್ಯನು ಹುಟ್ಟುವನೋ ಅವನು ಪೂರ್ವ ಜನ್ಮದಲ್ಲಿ ಮಿಥ್ಯಾದೃಷ್ಟಿ, ವ್ರತ-ಸಂಯಮಗಳನ್ನೂ ಪಾಲಿಸದಂಥವನಿರುತ್ತಾನೆ. ಇಂಥ ಜನರೇ ಭರತ ಕ್ಷೇತ್ರದಲ್ಲಿ ಬಂದು ಹುಟ್ಟುತ್ತಾರೆ. ಕೆಲವು ಮಿಥ್ಯಾಮಾರ್ಗಿ ಮನುಷ್ಯರಿಗೆ ಕುತಪ, ಕುದಾನ ಮತ್ತು ಮಂದ ಕಷಾಯಗಳ ಪ್ರಭಾವದಿಂದ ಇಲ್ಲಿ ಜನ್ಮವಾಗುತ್ತದೆ ಅವರು ರಾಜ್ಯ, ಐಶ್ವರ್ಯ, ಭೋಗ, ಸಂಪತ್ತಿ, ನಿರೋಗತೆ ಮೊದಲಾದವುಗಳನ್ನು ಹೊಂದುತ್ತಾರೆ. ಆದರೆ ಅವರು ಅವುಗಳನ್ನೇ ಭೋಗಿಸುವುದರಲ್ಲಿ ಮಗ್ನರಾಗಿರುವುದರಿಂದ ಕೆಟ್ಟ ಮಾರ್ಗದ ಪ್ರವೃತ್ತಿಯಿಂದ ಪರಾಙ್ಮುಖರಾಗುವದಿಲ್ಲ ಇದರಿಂದಾಗಿ ಸಂಸಾರ ಪರಿವರ್ತನೆಯನ್ನು ಮಾಡುತ್ತ ತಿರುಗಬೇಕಾಗುತ್ತದೆ ಈ ಕಾಲದಲ್ಲಿ ಸಮ್ಯಗ್‌ದರ್ಶನ, ವ್ರತ,

ಸಂಯಮ, ತಪಶ್ಚರಣಧಾರಣ ಮಾಡುವಂಥ ಪುರುಷರು ತೀರ ವಿರಳ  ಯಾರು ತಮ್ಮ ಕಷಾಯಗಳನ್ನು ಮಂದ ಮಾಡಿಕೊಂಡಿರುವರೋ, ಯಾರು ಯಾವಾಗಲೂ ಆತ್ಮನಿಂದೆಯನ್ನು ಮಾಡಿಕೊಳ್ಳುವರೋ ಅವರ ಮನುಷ್ಯ ಜನ್ಮವು ಸಫಲವಾಗಿ ಅವರು ಸ್ವರ್ಗದಲ್ಲಿ ಮಹಾನ್ ಋದ್ಧಿಧಾರಕ ದೇವರಾಗಿ ಜನ್ಮ ತಕ್ಕೊಳ್ಳುತ್ತಾರೆ. ಕೆಲವರು ಈ ಸಂಸಾರದೊಳಗೆ ಮಾನವ ಜನ್ಮದಲ್ಲಿ ಪೂರ್ವ ಜನ್ಮಕೃತ ಮಂದ ಕಷಾಯ, ನಿರ್ಮಲದಾನ ಈ ಪುಣ್ಯಗಳಿಂದ ಹುಟ್ಟಿ ಬಂದಿರುತ್ತಾರೆ.  ಆದರೆ ಅವರಿಗೆ ಇಷ್ಟ ವಿಯೋಗ ಮತ್ತು ಅನಿಷ್ಟ ಸಂಯೋಗವು ಪ್ರಾಪ್ತವಾಗಿಯೇ ತೀರುತ್ತದೆ.

ಸಂಸಾರದೊಳಗಿನ ದುಃಖದ ವರ್ಣನೆ — ಈಗ ಸಂಸಾರದೊಳಗಿನ ದುಃಖದ ಸ್ವರೂಪವನ್ನು ವಿಚಾರಿಸೋಣ.  ಭರತ ಚಕ್ರವರ್ತಿಯ ಚಿಕ್ಕ ತಮ್ಮನು ತನ್ನ ಅಣ್ಣನ ಮಾನಭಂಗ ಮಾಡಿದನು.  ನ್ಯಾಯ ದೃಷ್ಟಿಯಿಂದ ನೋಡಿದರೆ ಹಿರಿಯ ಅಣ್ಣನು ತಂದೆಗೆ ಸಮಾನನೆಂದು ತಿಳಿಯಲಿಕ್ಕೆ ಬೇಕು.  ಮತ್ತು ಅವನಿಗೆ ನಮಸ್ಕಾರವನ್ನೂ ಮಾಡಲಿಕ್ಕೆ ಬೇಕು  ಆದರೆ ಚಕ್ರವರ್ತಿಯ ಉಚ್ಚತನವು ತಮ್ಮನಿಗೆ ಸಹನವಾಗಲಿಲ್ಲ.  ಭರತನು ನಿಜವಾದ ಪ್ರೇಮದಿಂದ ತನ್ನ ಚಿಕ್ಕ ತಮ್ಮನಿಗೆ ರಾಜ್ಯಭೋಗವನ್ನು ಪಡೆಯಲಿಕ್ಕೆ ಕರೆದನು  ಆದರೆ ಅವನು ಈರ್ಷೆಯಿಂದ ಆ ಆಮಂತ್ರಣವನ್ನು ಅಲ್ಲಗಳೆದು ಅವನ ಅವಮಾನ ಮಾಡಿದನು — ಇಂಥ ಸ್ಥಿತಿಯು ಎಲ್ಲಿ ಚಕ್ರವರ್ತಿಯಂಥ ಅತುಲ ಪುಣ್ಯಧಾರಿ ಗೃಹಸ್ಥನಿಗೆ ಉಂಟಾಗುತ್ತದೆಯೋ ಅಲ್ಲಿ ಇತರರ ಗತಿಯೇನು? ಸಂಸಾರದಲ್ಲಿ ಅನೇಕರಿಗೆ ಹೆಂಡತಿಯು ಇರುವದಿಲ್ಲ.  ಅದಕ್ಕಾಗಿ ಅವರು ದುಃಖಿಗಳಾಗಿರುತ್ತಾರೆ  ಹಗಲಿರುಳೂ ಅದೇ ಚಿಂತೆಯಿಂದ ಅವರು ತಮ್ಮ ಜೀವನವು ವ್ಯರ್ಥವೆಂದು ತಿಳಿದು ನಿರಾಶರಾಗುತ್ತಾರೆ.  ಕೆಲವರಿಗೆ ಹೆಂಡತಿಯು ಇರುವಳು.  ಆದರೆ ಅವಳು ಬಹು ದುಷ್ಟ, ವ್ಯಭಿಚಾರಿ, ಕಲಹ ಮಾಡುವಂಥವಳು, ಮರ್ಮಭೇದಕ ಶಬ್ದಗಳನ್ನು ಆಡುವವಳು, ರೋಗಿ, ನಿರಂತರ ಸಂತಾಪವನ್ನುಂಟು ಮಾಡುವವಳು ಇರುವುದರಿಂದ ಬಹಳ ದುಃಖವಾಗುತ್ತದೆ  ಕೆಲವರಿಗೆ ಆಜ್ಞೆಯನ್ನು ಪಾಲಿಸುವಂಥ ಸದ್ಗುಣಿ ಸ್ತ್ರೀ ಇದ್ದೂ ಅವಳು ಮರಣ ಹೊಂದಿದುದರಿಂದ ಬಹಳ ದುಃಖವಾಗುತ್ತದೆ  ಹಲವರ ಸ್ತ್ರೀಯು ನಿರ್ಧನ ಸ್ಥಿತಿಯಲ್ಲಿ ಇಲ್ಲವೆ ಮುಪ್ಪಿನ ಅವಸ್ಥೆಯಲ್ಲಿ ಮರಣವನ್ನು ಹೊಂದಲು ಬಹಳ ದುಃಖವಾಗಿರುತ್ತದೆ. ಕೆಲವರಿಗೆ ಮುಪ್ಪಿನ ಕಾಲದಲ್ಲಿ ಲಗ್ನಮಾಡಿಕೊಳ್ಳುವ ಇಚ್ಛೆಯುಂಟಾಗಿ ಅದಕ್ಕನುಸರಿಸಿ ಹೆಣ್ಣು ಸಿಗದೆ ಇದ್ದಲ್ಲಿ ಬಹಳ ನೋವು ಉಂಟಾಗುತ್ತದೆ  ಯಾರಿಗೆ ಮಗನು ಇಲ್ಲವೆಂದು, ಹಲವರಿಗೆ ಮಕ್ಕಳಿದ್ದು ಅವರು ದುರ್ವ್ಯಸನಿಗಳು ಇರುವರೆಂದು, ಅನೇಕರಿಗೆ ಕೀರ್ತಿಶಾಲಿಯಾದ ಮಗನು ಸಾಯುವುದರಿಂದ ದುಃಖವಾಗುತ್ತದೆ  ಕೆಲವರಿಗೆ ಅಣ್ಣ ತಮ್ಮಂದಿರು ದುಷ್ಟ, ದುರ್ವಚನಗಳನ್ನು ಆಡುವಂಥವರು ಇರುವರೆಂದು, ದುಃಖಮಾಡುವರು.  ಕೆಲವರು ದೊಡ್ಡ ದೊಡ್ಡ ಅಸಾಧ್ಯ ರೋಗಗಳಿಂದ ಇಲ್ಲವೆ ತೀವ್ರ ಬಡತನದಿಂದ ದುಃಖಿಗಳಾಗುತ್ತಾರೆ.  ಅನೇಕರಿಗೆ ಹಲವು ಜನ ಹೆಣ್ಣುಮಕ್ಕಳು ಇರುವುದರಿಂದ, ಅವರೆಲ್ಲರ ಲಗ್ನ ಮಾಡುವಷ್ಟು ಧನವು ಹತ್ತರ ಇಲ್ಲದುದರಿಂದಲೂ ದುಃಖವಾಗುವುದು ಹಲವರಿಗೆ ಮಗಳು ದೊಡ್ಡವಳಾದಳು, ಅವಳಿಗೆ ಯೋಗ್ಯ ವರನು ಲಭಿಸಲಿಲ್ಲೆಂದು ಕೆಡಕೆನಿಸುತ್ತದೆ.  ಕೆಲವರಿಗೆ ತನ್ನ ಮಗಳು ಕುರುಡಿ, ಕುಂಟಿ, ಕಿವುಡಿ, ಹುಚ್ಚಿ, ಕುರೂಪಿ ಮತ್ತು ವಿಕಲಾಂಗಿಯಾಗಿರುವುದರಿಂದ ದುಃಖವಾಗುತ್ತದೆ. ಕೆಲವರಿಗೆ ತಮ್ಮ ಮಗಳು ಸ್ವಲ್ಪ ಕಾಲದಲ್ಲಿ ವಿಧವೆಯಾದುದರಿಂದ ದುಃಖವಾಗುತ್ತದೆ.  ಕೆಲವರಿಗೆ ಮಗಳ ಮನೆತನದ ಬಡತನವನ್ನು ಕಂಡು ಕೆಡಕೆನಿಸುತ್ತದೆ  ಅನೇಕರಿಗೆ ತಮ್ಮ ಮಗಳು ವ್ಯಭಿಚಾರಿಣಿಯಾದಳೆಂದು ಕೇಳಿ ಮರಣಪ್ರಾಯ ದುಃಖವಾಗುತ್ತದೆ  ಅನೇಕರಿಗೆ ಇದೀಗ ಮದುವೆ ಮಾಡಿದ ಮಗಳ ಮರಣದಿಂದ ದುಃಖವಾಗಿರುತ್ತದೆ.  ಕೆಲವರಿಗೆ ಮಾತಾಪಿತೃಗಳ ವಿಯೋಗದ ದುಃಖವಿದೆ  ಹಲವರಿಗೆ ತಂದೆಯು ತಮ್ಮ ಪಾಲಿಗೆ ಸಾಲಮಾಡಿ ಸತ್ತು ಹೋದುದಕ್ಕೆ ಕೆಡಕೆನಿಸುತ್ತದೆ.  ಸಾಲದಂಥ ಎರಡನೆಯ ದುಃಖವು ಇಲ್ಲ  ಅಂತಲೇ ತಂದೆಯು ಸಾಲ ಮಾಡಿದನೆಂಬ ದುಃಖ. ಅದರಲ್ಲಿ ತಾಯಿ, ತಂಗಿ ಮೊದಲಾದವರು ವ್ಯಭಿಚಾರಿಗಳು ಹೊರಟರೆಂದರೆ ಅದು ಮಹಾ ದುಃಖವು  ಬೇರೊಬ್ಬ ಬಲವಾನ್ ದುಷ್ಟ ಮನುಷ್ಯನು ತನ್ನ ತಾಯಿ-ತಂಗಿಯಂದಿರನ್ನೂ ಬಲಾತ್ಕಾರದಿಂದ ಹರಣ ಮಾಡಿಕೊಂಡು ಹೋದುದರಿಂದ ದುಃಖ.  ತನ್ನ ಮಗನನ್ನು ಯಾವನೋ ಕದ್ದು ಒಯ್ದನು, ಇಲ್ಲವೆ ಕೊಂದು ಹಾಕಿದನೆಂದು ದುಃಖವು. ದುಷ್ಟ ಜನರ ಸಮಾಗಮದ ದುಃಖ.  ಸುಳ್ಳು ಮಾತನಾಡುವವರು, ಕಳ್ಳರು, ಅನ್ಯಾಯಿಗಳಾದಂಥ ಜನರ ಸಹವಾಸದಲ್ಲಿ ಬಾಳಬೇಕಾದುದರ ದುಃಖ  ಮಾನವ ಜನ್ಮದಲ್ಲಿ ಬಂದು ಮೊದಲು ಸಿರಿವಂತನಾಗಿದ್ದು ತರುವಾಯ ಬಡತನವು ಬಂದುದಕ್ಕೆ ದುಃಖ.  ಮಾನ ಭಂಗದ ದುಃಖ.  ಮೊದಲು ತನ್ನ ಜೀವದ ಗೆಳೆಯನಾಗಿದ್ದು ಅವನೇ ಈಗ ತನ್ನ ಹುಳುಕುಗಳನ್ನೆಲ್ಲ ಹೊರಗೆ ಹಾಕುವಂಥವನೂ ಅಸತ್ಯ ಭಾಷಣದಿಂದ ಕಲಂಕವನ್ನು ಹಚ್ಚುವಂಥವನೂ ಆಗಿ

ಶತ್ರುವಾದನೆಂದು ದುಃಖ. ಈ ಪ್ರಕಾರ ಸಂಸಾರವೆಲ್ಲ ದುಃಖದಿಂದಲೇ ತುಂಬಿದೆ ಒಂದು ಕ್ಷಣದಲ್ಲಿ ರಾಜನು ಸೇವಕನಾಗುತ್ತಾನೆ. ಒಬ್ಬ ಕ್ಷುದ್ರ ಮನುಷ್ಯನಾದ ಸೇವಕನೂ ರಾಜನಾಗುತ್ತಾನೆ. ಈ ರೀತಿ ಮನುಷ್ಯ ಯೋನಿಯಲ್ಲಿ ದುಃಖದ ಹೊರತಾಗಿ ಬೇರೆ ಏನೂ ಇಲ್ಲ

**ದೇವ ಪರ್ಯಾಯದಲ್ಲಿಯ ದುಃಖ**—ಒಂದು ವೇಳೆ ಪೂರ್ವ ಪುಣ್ಯದಿಂದ ದೇವ ಪರ್ಯಾಯವು ಪ್ರಾಪ್ತವಾದರೂ ಅಲ್ಲಿಯೂ ಕೂಡ ಸುಖವಿಲ್ಲ. ದೇವರಿಗೆ ಮಾನಸಿಕ ದುಃಖವು ಯಾವಾಗಲೂ ಆಗುತ್ತಿರುತ್ತದೆ. ಆದರೆ ದೇವರಿಗೆ ನಿರ್ಧನತೆ, ಮುಪ್ಪು, ರೋಗ, ಹಸಿವು, ನೀರಡಿಕೆ, ಮರಣ, ಹೊಡೆತ ಇವುಗಳ ವೇದನೆಯು ಇರುವದಿಲ್ಲ. ಆದರೂ ತಮಗಿಂತ ಹೆಚ್ಚಿನ ಋದ್ಧಿಧಾರಿ ಹಾಗೂ ಐಶ್ವರ್ಯ ಸಂಪನ್ನರಾದ ಬೇರೆ ದೇವತೆಗಳನ್ನೂ ನೋಡಿ, ತಮಗೆ ಅಂಥ ಐಶ್ವರ್ಯವಿಲ್ಲೆಂದು ತೀವ್ರ ದುಃಖವು ಆಗುತ್ತದೆ ಅನೇಕ ದೇವರಿಗೆ ತಮ್ಮ ದೇವಾಂಗನೆಯ ವಿಯೋಗದಿಂದ ದುಃಖವುಂಟಾಗುತ್ತದೆ. ಸ್ವರ್ಗದಲ್ಲಿ ದೇವಾಂಗನೆಯರ ಆಯುಷ್ಯವು ದೇವ ಪುರುಷರಿಗಿಂತ ಕಡಿಮೆ ಇರುವುದರಿಂದ ಅವರು ಮೊದಲು ಮರಣ ಹೊಂದಿದರೂ ಅವರ ಸ್ಥಳದಲ್ಲಿ ಬೇರೊಬ್ಬಳು ಜನಿಸುತ್ತಾಳೆ. ಅವಳು ಮೊದಲಿನ ದೇವ ಪುರುಷನಿಗೆ ಲಭಿಸುತ್ತಾಳೆ ಆದರೂ ಪೂರ್ವ ದೇವಾಂಗನೆಯ ಮೇಲಿನ ಪ್ರೀತಿಯಿಂದ ಆ ದೇವನಿಗೆ ಪೂರ್ವದೇವಿಯ ವಿಯೋಗದ ದುಃಖವು ಆಗುತ್ತಿರುತ್ತದೆ ಅದು ಇಲ್ಲದಂತೆ ಆಗುವದಿಲ್ಲ ಪುಣ್ಯಹೀನ ದೇವರಿಗೆ ಇತರ ಇಂದ್ರಾದಿಕ ಮಹರ್ಧಿಕ ದೇವರ ಸಭೆಗಳಲ್ಲಿ ಪ್ರವೇಶ ಮಾಡಲಿಕ್ಕೆ ಬರುವದಿಲ್ಲ ಇದರಿಂದ ಮಾನಸಿಕ ದುಃಖವು ಆಗುತ್ತದೆ. ಆಯುಷ್ಯವು ಪೂರ್ಣವಾದೊಡನೆ ನಮಗೆ ಅಲ್ಲಿಂದ ಹೋಗಬೇಕಾಗುವದೆಂಬ ವಿಚಾರವು ಮನಸ್ಸಿನಲ್ಲಿ ಬಂದು ಅತ್ಯಂತ ದುಃಖವಾಗುತ್ತದೆ ಅದರ ಪ್ರಮಾಣವನ್ನೂ ಭಗವಾನ್ ಕೇವಲಿಯೇ ತಿಳಿಯಲಿಕ್ಕೆ ಸಮರ್ಥನು. ಇತರರಿಗೆ ಅದು ತಿಳಿಯಲಿಕ್ಕೆ ಸಾಧ್ಯವಿಲ್ಲ ಸಂಸಾರದಲ್ಲಿ ಸ್ವರ್ಗದೊಳಗಿನ ಮಹರ್ಧಿಕರು ಸತ್ತು ಏಕೇಂದ್ರಿಯ ಜೀವವಾಗಿಯೂ ಜನಿಸುತ್ತಾರೆ. ಇಲ್ಲವೆ ಮಲ ಮೂತ್ರದಿಂದ ತುಂಬಿದ ಗರ್ಭದಲ್ಲಿಯೂ ಬಂದು ಹುಟ್ಟುತ್ತಾರೆ. ಅದರಂತೆಯೇ ನಾಯಿ ಮೊದಲಾದ ಪಶುಗಳು ಸ್ವರ್ಗದಲ್ಲಿ ದೇವರಾಗಿ ಜನಿಸುತ್ತಾರೆ ಆದರೆ ಬ್ರಾಹ್ಮಣನು ಚಾಂಡಾಲನಾಗಿ ಹುಟ್ಟುತ್ತಾನೆ ಇಲ್ಲವೆ ತಿರ್ಯಂಚನಾಗಿಯೂ ಹುಟ್ಟುತ್ತಾನೆ ಕರ್ಮದ ಸ್ವಾಧೀನವಾಗಿರುವುದರಿಂದ ಜೀವವು ನಾಲ್ಕೂ ಗತಿಗಳಲ್ಲಿ ಭ್ರಮಣ ಮಾಡುತ್ತಿರುತ್ತದೆ. ಸಂಸಾರದಲ್ಲಿ ರಾಜನು ಸೇವಕನೂ ಸೇವಕನು ರಾಜನೂ ಒಂದು ಕ್ಷಣದಲ್ಲಿ ಆಗುತ್ತಾರೆ. ಒಡೆಯನು ಸೇವಕ, ಸೇವಕನು ಒಡೆಯ, ಮಗನು ಇದ್ದವನು ತಂದೆ, ತಂದೆ ಇದ್ದವನು ಪುತ್ರ, ಪಿತಾ ಪುತ್ರರಿದ್ದವರು ಒಮ್ಮೊಮ್ಮೆ ತಾಯಿ ತಂದೆಯರಾಗಿಯೂ ಗಂಡ ಹೆಂಡರಾಗಿಯೂ ಅಣ್ಣ ತಂಗಿಯಂದಿ-ರಾಗಿಯೂ ಸ್ವಾಮಿ ಭೃತ್ಯರಾಗಿಯೂ ಸೇವಕಿಯರಾಗಿಯೂ ಉತ್ತರೋತ್ತರ ಜನ್ಮಗಳಲ್ಲಿ ಜನಿಸುತ್ತಾರೆ ನಾವೇ ನಮ್ಮ ಮಗನ ಹೊಟ್ಟೆಯಲ್ಲಿ ಇಲ್ಲವೆ ಒಮ್ಮೊಮ್ಮೆ ದೇವ ಯೋನಿಯಲ್ಲಿ ಅಥವಾ ತಿರ್ಯಂಚ ಯೋನಿಯಲ್ಲಿಯೂ ಜನ್ಮ ತಕ್ಕೊಳ್ಳುತ್ತೇವೆ. ರೋಗಿಯೂ ಕುರೂಪಿಯೂ ಇದ್ದಂಥವನು ಒಮ್ಮೊಮ್ಮೆ ಸುದೃಢ ಮತ್ತು ಸುರೂಪಿಯಾಗುತ್ತಾನೆ ಆತ್ಮನಿಗೆ ಪ್ರಾಪ್ತವಾದ ಶರೀರವು ಬಹು ಭಾರದಾಯಕವಾಗಿದೆ ಒಬ್ಬನ ತಲೆಯ ಮೇಲೆ ಬಹಳಷ್ಟು ಭಾರವನ್ನು ಹೇರಿದರೆ ಅವನು ಒಂದು ಕ್ಷಣ ಬೇರೆ ಕಡೆಗೆ ಇಟ್ಟು ವಿಶ್ರಾಂತಿಯನ್ನಾದರೂ ತಕ್ಕೊಳ್ಳುತ್ತಾನೆ. ಆದರೆ ಶರೀರದ ಭಾರವನ್ನು ಹೊರುವಂಥ ಆತ್ಮನಿಗೆ ಎಲ್ಲಿಯೂ ವಿಶ್ರಾಂತಿಯನ್ನು ತಕ್ಕೊಳ್ಳಲಿಕ್ಕೆ ಬರುವದಿಲ್ಲ ಯಾವಾಗ ಔದಾರಿಕ, ವೈಕ್ರಿಯಕ ಶರೀರಗಳ ಕೊನೆಯು ಆಗುವುದೋ ಆಗ ಭಾರವು ಇಳಿದಂತೆ ಭಾಸವಾಗುತ್ತದೆ ಆದರೆ ಆತ್ಮನ ಮೇಲೆ ಈ ಶರೀರಕ್ಕಿಂತ ಅನಂತಪಟ್ಟು ಹೆಚ್ಚಾದ ತೈಜಸ, ಕಾರ್ಮಣ ಶರೀರದ ಭಾರವು ಇದ್ದೇ ಇರುತ್ತದೆ. ಈ ತೈಜಸ ಕಾರ್ಮಣ ಶರೀರದಿಂದಲೇ ಆತ್ಮನ ಅನಂತ ಜ್ಞಾನ-ದರ್ಶನ-ವೀರ್ಯಗಳು ಮುಚ್ಚಿ ಹೋಗುತ್ತವೆ ಅಂತಲೇ ಅದಕ್ಕೆ ಅನಂತ ಶಕ್ತಿ ಮತ್ತು ಕೇವಲ ಜ್ಞಾನಗಳ ಅಭಾವವು ಆದಂತೆ ಎನಿಸುತ್ತದೆ ಅರಣ್ಯದಲ್ಲಿ ತಿರುಗಾಡುವ ಕುರುಡ ಪುರುಷನಂತೆ ಮೋಹದಿಂದ ಈ ಜೀವವು ಚತುರ್ಗತಿಯಲ್ಲಿ ಭ್ರಮಣ ಮಾಡುತ್ತದೆ ಸಂಸಾರದೊಳಗಿನ ಜೀವವು ರೋಗ, ದಾರಿದ್ರ್ಯ, ವಿಯೋಗ ಇತ್ಯಾದಿ ದುಃಖಗಳಿಂದ ಯಾವಾಗಲೂ ವ್ಯಾಕುಲವಾಗುತ್ತದೆ. ಧನ ಸಂಪಾದನೆಮಾಡಿ ಆ ದುಃಖವನ್ನು ಇಲ್ಲದಂತೆ ಮಾಡಬೇಕೆಂದು ಅದಕ್ಕೆ ವಿಪರೀತ ಬುದ್ಧಿಯು ಉತ್ಪನ್ನವಾಗಿ ಆ ಪ್ರಕಾರ ಅದು ಉಪಾಯವನ್ನು ಯೋಜಿಸುತ್ತ ಇರುತ್ತದೆ ಸುಖವು ಪ್ರಾಪ್ತವಾಗಬೇಕೆಂದು ಅಭಕ್ಷ್ಯ ಭಕ್ಷಣ ಮಾಡುತ್ತಾರೆ ಕಪಟವನ್ನು ಮಾಡುತ್ತಾರೆ ಹಿಂಸೆಯನ್ನು ಮಾಡುತ್ತಾರೆ ಧನವು ಪ್ರಾಪ್ತವಾಗಬೇಕೆಂದು ಕಳವು ಮಾಡುತ್ತಾರೆ ಓಣಿಯನ್ನು ಉಡುಗುವರು ಆದರೆ ಪುಣ್ಯ ಹೀನರ ಕೈಯಲ್ಲಿ ದ್ರವ್ಯವು ಬರುವದಿಲ್ಲ ನಿಜವಾದ ಸುಖವು ಪಂಚ

ಪಾಪಗಳನ್ನು ತ್ಯಾಗಮಾಡುವುದರಲ್ಲಿದೆ. ಅಜ್ಞಾನಿಗಳು ಅವೇ ಪಂಚಪಾಪಗಳಿಂದ ತಮ್ಮ ಧನ, ಕುಟುಂಬ, ಸುಖದ ವೃದ್ಧಿಯಾಗಬೇಕೆಂದು ಇಚ್ಛೆಯನ್ನು ಮಾಡುತ್ತಾರೆ ಇಂದ್ರಿಯಗಳ ವಿಷಯವು ಪ್ರಾಪ್ತವಾಯಿತೆಂದರೆ ತಮಗೆ ಸುಖವು ಲಭಿಸಿತೆಂದು ಅವರ ತಿಳುವಳಿಕೆಯು ಇರುತ್ತದೆ. ಆದರೆ ಅದೇ ಮೋಹದ ಕಾರ್ಯವಾಗಿದೆ ಸಂಸಾರಿ ಜೀವಗಳಿಗೆ ಯಾವ ಯಾವ ದುಃಖಗಳು ಪ್ರಾಪ್ತವಾದುದನ್ನು ನಾವು ಕಾಣುವೆವೋ ಅವೆಲ್ಲವೂ ಪರಜೀವಗಳನ್ನು ಘಾತ ಮಾಡುವುದರಿಂದಲೂ ಅಸತ್ಯ ಭಾಷಣ ಮಾಡುವುದರಿಂದಲೂ ಕಳವು, ವ್ಯಭಿಚಾರಗಳಿಂದಲೂ ಪರಿಗ್ರಹಗಳ ಅಪರಿಮಿತ ಇಚ್ಛೆ, ಕಪಟ, ಅಭಿಮಾನ, ರಾಗ, ಲೋಭ, ಅನ್ಯಾಯಾಚರಣಗಳಿಂದಲೇ. ಪ್ರಾಪ್ತವಾಗುತ್ತವೆ ಇವುಗಳನ್ನುಳಿದು ದುಃಖವಾಗಲಿಕ್ಕೆ ಅನ್ಯಮಾರ್ಗಗಳೇ ಇಲ್ಲ ಇವುಗಳನ್ನು ನಾವು ಪ್ರತ್ಯಕ್ಷ ನೋಡುತ್ತಿದ್ದೂ ಅವೇ ಪಾಪಮಯ ಮಾರ್ಗದ ಅನುಸರಣ ಮಾಡುತ್ತೇವೆ. ಈ ವಿಪರೀತ ಮಾರ್ಗದಿಂದಲೇ ಸಂಸಾರವು ಅನಂತ ದುಃಖಕ್ಕೆ ಕಾರಣವಾಗುತ್ತದೆ ದುಃಖದಿಂದ ದುಃಖವೇ ಉತ್ಪನ್ನವಾದೀತು. ಅಗ್ನಿಯಿಂದ ಅಗ್ನಿಯೇ ಉತ್ಪನ್ನವಾದೀತು ಈ ಪ್ರಕಾರ ಸಂಸಾರದ ಸತ್ಯಾರ್ಥ ಸ್ವರೂಪವಿದೆ. ಇದನ್ನು ಮೇಲಿಂದ ಮೇಲೆ ವಿಚಾರ ಮಾಡುವವರಿಗೆ ಮತ್ತು ಅನುಭವಿಸುವವರಿಗೆ ಸಂಸಾರದಿಂದ ಉದ್ವೇಗವು ಉತ್ಪನ್ನವಾಗಿ ಪರಿಣಾಮದಲ್ಲಿ ವಿರಕ್ತಿಯು ಉಂಟಾಗುತ್ತದೆ ಅದೇ ಸಂಸಾರ ಪರಿಭ್ರಮಣವನ್ನು ದೂರ ಮಾಡಲಿಕ್ಕೆ ಕೈಕೊಳ್ಳುವ ಉದ್ಯೋಗದಲ್ಲಿ ತತ್ಪರಗೊಳಿಸುತ್ತದೆ

ವೃತ್ತ ॥ ಪಿತಪುತ್ರನಹನೊಮ್ಮೆ ಮತ್ತಾ ಪುತ್ರನು ಪಿತನಹನೊಂದು ಜನ್ಮದೊಳು
ಪುತ್ರಿಯಹಳೊಮ್ಮೆ ಮತ್ತಾ ಪುತ್ರಿಯು ಸತಿಯಹಳೊಂದು ಜನ್ಮದಲಿ ।
ಪರದೇಶಿಯಪ್ಪನೊಂದೆಡೆಯಲ್ಲಿ ಮತ್ತೊಮ್ಮೆ ಹಿರಿದು ಬಾಂಧವನುಳ್ಳವನಪ್ಪಾ
ಕರಪಾರಿದ್ರನೊಂದೆಡೆಯಲ್ಲಿ ಮತ್ತೊಮ್ಮೆ ಹಿರಿದು ಧನಾನ್ವಿತನಾಗಿ ॥
ರಕ್ಕರ ನಂಬೀ ಬಟ್ಟೆಯ ಪೋಪಾತನು ಮಿಕ್ಕ ಸಂಸಾರವ ನಂಬಿ
ನೊಕ್ಕಿ ಪಾಪವ ನೆರಪುವ ಮನುಜರು ಮುಂದೆ ದುಃಖ ಸಾಗರಕೊಳಗಹರು ।
ಮೇರೆಯಿಲ್ಲದ ಸಂಸಾರ ಕಾನನದೊಳು ತೋರುವ ಸುಳಿ ನಾಲ್ಕು ಗತಿಯು
ತೀರಲಿಲ್ಲದ ದುಃಖ ಪಡಪಾನಳನೊಳು ತೀವ್ರ ಭ್ರಮಣೆ ಸಂಸಾರ ॥
ಸ್ಥಾವರ ಜಂಗಮ ರೂಪಾದಿ ಜೀವನು ಚೌರಾಸಿ ಲಕ್ಷಯೋನಿಯಲಿ
ಆಪವರಿಯ ಬಹುರೂಪಿಯು ತೆರನಂತೆ ಕಾಯ ಪಲ್ಲಟಿದಿ ತೊಳಲುವ ।

—ವಿಜಯಣ್ಣ-ದಾದಶಾನುಪ್ರೇಕ್ಷೆ-ಸಂಸಾರನುಪ್ರೇಕ್ಷೆ.

## ೪. ಏಕತ್ವ ಭಾವನೆ

ಈ ಜೀವವು ಕುಟುಂಬ, ಸ್ತ್ರೀ, ಪುತ್ರ ಮೊದಲಾದವರ ಸಲುವಾಗಿಯೂ ಶರೀರವನ್ನು ಪುಷ್ಟಗೊಳಿಸುವುದಕ್ಕಾಗಿಯೂ ಅದನ್ನು ಸಂರಕ್ಷಿಸಲಿಕ್ಕೆಂದೂ ಅನೇಕ ಪ್ರಕಾರದ ಪಾಪ ಕಾರ್ಯಗಳನ್ನು ಮಾಡುತ್ತಾನೆ. ಅಭಕ್ಷ್ಯ ಭಕ್ಷಣ ಮಾಡಿ ಅಪರಿಮಿತ ಪರಿಗ್ರಹವನ್ನು ಧಾರಣ ಮಾಡುತ್ತಾನೆ. ಅದರಿಂದ ಅವನಿಗೆ ನರಕಾದಿ ಪರ್ಯಾಯಗಳಲ್ಲಿ ಭಯಂಕರ ದುಃಖವನ್ನು ಭೋಗಿಸಬೇಕಾಗುತ್ತದೆ ಯಾವ ಕುಟುಂಬದ ಸಲುವಾಗಿ ಇಲ್ಲವೆ ಯಾವ ಶರೀರದ ಸಲುವಾಗಿ ಅವನು ಪಾಪವನ್ನು ಉಪಾರ್ಜನ ಮಾಡುತ್ತಾನೆಯೋ ಅದು ಸುಟ್ಟು ಹೋಗುತ್ತದೆ ಅದರ ಬೂದಿಯು ಆಕಾಶದಲ್ಲಿ ಹಾರಿ ಹೋಯಿತು. ಈಗ ಆ ಶರೀರದ ಸಲುವಾಗಿ ಮಾಡಿದ ಕಾರ್ಯದ ದುಃಖವನ್ನು ಭೋಗಿಸುವ ವೇಳೆಯು ಬಂದಿದೆ ಈಗ ಅದನ್ನೆಲ್ಲಿ ಹುಡುಕಬೇಕು? ತಮ್ಮ ತಮ್ಮ ಗಳಿಸಿದ ಕರ್ಮಕ್ಕನುಸರಿಸಿ ಪ್ರಾಪ್ತವಾದ ರೋಗ ವಿಯೋಗಾದಿ ದುಃಖದ ಅನುಭವವನ್ನು ಹೊಂದುತ್ತ ಸರ್ವ ಕುಟುಂಬದ ಜನರು ನೋಡುತ್ತ ಇದ್ದರೂ ಸಹ ದುಃಖದ ಭಾರವನ್ನು ಕಡಿಮೆ ಮಾಡುವುದು ಅವರಿಂದ ಆಗುವದಿಲ್ಲ. ಅಂದಮೇಲೆ ನರಕಾದಿ ಕುಗತಿಯು ಪ್ರಾಪ್ತವಾದಾಗ ಆಗುವ ದುಃಖದಲ್ಲಿ ಭಾಗವಹಿಸಲಿಕ್ಕೆ ಆಗ ಯಾರು ಬರುತ್ತಾರೆ? ಅಲ್ಲಿಯ ದುಃಖವನ್ನು ಜೀವವು ಸ್ವತಃ ಒಬ್ಬನೇ ಭೋಗಿಸಬೇಕಾಗುತ್ತದೆ. ಆಯುಷ್ಯವು ತೀರಿದೊಡನೆ ಮರಣವು ಕಟ್ಟಿಟ್ಟದ್ದೇ. ಆ ಹೊತ್ತಿನಲ್ಲಿ ರಕ್ಷಣ ಮಾಡಲಿಕ್ಕೆ ಯಾರೂ ಸಮರ್ಥರಿರುವದಿಲ್ಲ. ಅಶುಭ ಕರ್ಮದ ಫಲವನ್ನು ಭೋಗಿಸುತ್ತಿರುವಾಗ ನಮಗೆ ಯಾರೂ

ಸಹಾಯವಾಗುವದಿಲ್ಲ. ಇಹ ಲೋಕವನ್ನು ಬಿಟ್ಟು ಪರಲೋಕಕ್ಕೆ ಹೋಗುವ ವೇಳೆಯಲ್ಲಿ ಆತ್ಮನಿಗೆ ಸ್ತ್ರೀ, ಪುತ್ರ, ಮಿತ್ರ, ದನ, ಪರಿಗ್ರಹಾದಿಗಳಲ್ಲಿ ಯಾವುದೂ ಸಂಗಡ ಬರುವದಿಲ್ಲ ಕರ್ಮ ಒಂದೇ ಆ ಜೀವವನ್ನು ಪರಲೋಕಕ್ಕೆ ತಕ್ಕೊಂಡು ಹೋಗುತ್ತದೆ ಇಹಲೋಕದಲ್ಲಿ ನಿಮಗೆ ಯಾರು ಪುತ್ರ, ಮಿತ್ರ, ಬಾಂಧವಾದಿಗಳಾಗಿರುವರೋ ಅವರೇ ಮುಂದಿನ ಜನ್ಮದಲ್ಲಿ ನಿಮ್ಮ ಇಷ್ಟ ಮಿತ್ರಾದಿಗಳು ಆಗುವದಿಲ್ಲ. ಯಾವ ದ್ರವ್ಯ, ಪರಿಗ್ರಹ, ರಾಜ್ಯ, ನಗರ, ಮನೆ, ಹಾಸಿಗೆ, ಅಲಂಕಾರ, ವಸ್ತ್ರಾಭರಣ, ಸೇವಕ–ಸೇವಕಿಯರು ಮೊದಲಾದವರು ಇಹ ಲೋಕದಲ್ಲಿ ಇದ್ದವರು ಪರಲೋಕದಲ್ಲಿ ಸಂಗಡ ಬರುವದಿಲ್ಲ. ಅವರೆಲ್ಲರೂ ಈ ಶರೀರದ ಸಂಬಂಧದಿಂದ ಇಲ್ಲಿ ನಿಮ್ಮ ಹತ್ತರ ಇದ್ದಾರೆ. ಆ ಶರೀರದ ನಾಶವಾದೊಡನೆಯೇ ನಿಮ್ಮ ಸಂಬಂಧವೂ ಕಡಿಯಿತೆಂದು ತಿಳಿಯಿರಿ. ನೀವು ಕರ್ಮದ ಅಧೀನ-ವಾಗಿರುವುದರಿಂದ ಕರ್ಮವು ಕೊಡುವ ಸುಖ–ದುಃಖವನ್ನು ನೀವೊಬ್ಬರೇ ಭೋಗಿಸಬೇಕಾಗುತ್ತದೆ. ಈ ಜೀವವು ಒಂದೇ ಗಮನ ಮಾಡೀತೆಂದು ಇಷ್ಟ ಮಿತ್ರರ ಮೇಲೆ ಮಮತೆಯನ್ನು ಮಾಡಿ, ಪರಲೋಕವನ್ನು ಕೆಡಿಸಿಕೊಳ್ಳುವುದು ಅನರ್ಥಕಾರಕವಾಗಿದೆ. ಇಹಲೋಕದಲ್ಲಿ ಸಮ್ಯಕ್ತ್ವ, ವ್ರತ, ಸಂಯಮ, ದಾನ, ಶುಭ ಭಾವನೆ ಇವುಗಳನ್ನು ಹೊಂದಿ ಸಂಪಾದಿಸಿದಂಥ ಧರ್ಮವೇ ಎಂದ ಪರಿಸ್ಥಿತಿಯಲ್ಲಿಯೂ ಜೀವಕ್ಕೆ ಸಹಾಯವಾಗುವಂಥದಿದೆ. ಧರ್ಮದ ಪ್ರಭಾವದಿಂದ ಈ ಜೀವಕ್ಕೆ ಸಹಾಯವಾಗುವಂಥದಿದೆ. ಧರ್ಮದ ಪ್ರಭಾವದಿಂದ ಈ ಜೀವಕ್ಕೆ ಸ್ವರ್ಗದಲ್ಲಿ ಇಂದ್ರಶ್ರೇಷ್ಠತ್ವ, ಮಹರ್ಧಿಕತ್ವ, ಚಕ್ರವರ್ತಿತ್ವ, ಉತ್ತಮ ರೂಪ, ಅತುಲ ಬಲ, ವಿದ್ಯಾ, ಸಂಹನನ, ಉತ್ತಮ ಜಾತಿ, ಉತ್ತಮ ಕುಲ, ಜಗತ್ತಿನಲ್ಲಿ ಮಾನ, ತೀರ್ಥಂಕರತ್ವಗಳು ಪ್ರಾಪ್ತವಾಗಿ ಕೊನೆಗೆ ನಿರ್ವಾಣವು ಪ್ರಾಪ್ತವಾಗುತ್ತದೆ. ಸೆರೆಮನೆಯಲ್ಲಿ ಗಟ್ಟಿಯಾದ ಹಗ್ಗದಿಂದ ಇಲ್ಲವೆ ಕಬ್ಬಿಣದ ಸರಪಳಿಯಿಂದ ಕಟ್ಟಿ ಹಾಕಿದ ಪುರುಷನಿಗೆ ಹೇಗೆ ಸೆರೆಮನೆಯ ಮೇಲೆ ಪ್ರೀತಿಯು ಇರುವದಿಲ್ಲವೋ, ಹಾಗೆಯೇ ಸಮ್ಯಗ್ಜ್ಞಾನಿ ಪುರುಷನ ದೇಹವೆಂಬ ಸೆರೆಮನೆಯ ಮೇಲೆ ಪ್ರೇಮವು ಇರುವದಿಲ್ಲ. ಈ ಶರೀರದ ಮೂಲಕ ದನ ಕುಟುಂಬಗಳ ವಿಷಯಕ್ಕೆ ಅಭಿಮಾನವು ಉತ್ಪನ್ನವಾಗಿ ಘೋರ ಬಂಧನದಲ್ಲಿ ಪರಾಧೀನನಾಗಿ ದುಃಖವನ್ನು ಭೋಗಿಸಬೇಕಾಗುತ್ತದೆ ಅಲ್ಲದೆ ತನ್ನ ಯಥಾರ್ಥ ಸ್ವರೂಪವನ್ನು ಬಿಟ್ಟು ಪರದ್ರವ್ಯ ಪರಿಗ್ರಹಗಳನ್ನು ತನ್ನವೆಂದು ತಿಳಿದು ಅನಂತಕಾಲ ಸಂಸಾರದಲ್ಲಿ ಭ್ರಮಣ ಮಾಡಬೇಕಾಗುತ್ತದೆ. ಒಬ್ಬನೇ ಇತರ ಗತಿಗಳಲ್ಲಿ ಹೋಗಿ ಹುಟ್ಟಬೇಕಾಗುತ್ತದೆ. ಆಗ ಕರ್ಮದ ಹೊರತಾಗಿ ಯಾರೂ ಸಂಗಡ ಬರುವದಿಲ್ಲ. ಕೇವಲ ಪಾಪ–ಪುಣ್ಯಗಳೇ ರಾಜ, ಸೇವಕ, ನೀಚ, ಉಚ್ಚ ಮೊದಲಾದ ಗರ್ಭಗಳಲ್ಲಿ ಒಯ್ದು ಹುಟ್ಟಿಸುತ್ತವೆ. ಅಲ್ಲಿಂದ ಆಯುಷ್ಯವು ಪೂರ್ಣವಾದ ಮೇಲೆ ಒಬ್ಬನೇ ಎಲ್ಲ ಕುಟುಂಬವನ್ನು ಬಿಟ್ಟು ಪರಲೋಕಕ್ಕೆ ಹೋಗಬೇಕಾಗುತ್ತದೆ, ಆ ಮೇಲೆ ತಿರುಗಿ ಆ ಸ್ಥಳಕ್ಕೆ ಬರುವುದಕ್ಕೆ ಆಗುವದಿಲ್ಲ ಗರ್ಭದಲ್ಲಿ ವಾಸಿಸುವ ದುಃಖ, ಯೋನಿಯೊಳಗಿಂದ ಹೊರಬೀಳುವ ದುಃಖ, ರೋಗವುಳ್ಳ ಶರೀರವು ಪ್ರಾಪ್ತವಾಗುವ ದುಃಖ, ಬಡತನದ ದುಃಖ, ವಿಯೋಗದ ದುಃಖ, ಹಸಿವು ನೀರಡಿಕೆಗಳ ದುಃಖ, ಇಷ್ಟಾನಿಷ್ಟ ಸಂಯೋಗ ವಿಯೋಗದ ದುಃಖ, ಈ ಎಲ್ಲ ದುಃಖಗಳನ್ನು ಈ ಆತ್ಮನೊಬ್ಬನೇ ಭೋಗಿಸಬೇಕಾಗುತ್ತದೆ. ಪಾಪದ ಉದಯದಿಂದ ಅಲ್ಲಿ ನರಕದಲ್ಲಿ ಹೋದರೆ ಅಲ್ಲಿ ಮರಣ, ಹೊಡೆತ ಕಡಿಯುವುದು, ಸೀಳುವುದು, ಶೂಲದ ಮೇಲೆ ಏರಿಸುವುದು, ಕುಂಭೀಪಾಚನ, ವೈತರಣೀಸ್ನಾನ ಮೊದಲಾದ ದುಃಖ, ಇದೇ ಪ್ರಕಾರ ಕ್ಷೇತ್ರಜನಿತ, ಶರೀರಜನಿತ, ಮಾನಸಿಕ ಮತ್ತು ಪರಸ್ಪರಕೃತ ಘೋರ ದುಃಖಗಳನ್ನು ಒಬ್ಬನೇ ಭೋಗಿಸಬೇಕಾಗುತ್ತದೆ. ತಿರ್ಯಂಚ ಯೋನಿಯಲ್ಲಿ ಪರಾಧೀನತ್ವ, ಹೆಚ್ಚು ಭಾರವನ್ನು ಹೊರುವುದು, ಮರ್ಮ-ಸ್ಥಾನಲ್ಲಿ ಹೊಡೆದ ಪೆಟ್ಟನ್ನು ಸಹನಮಾಡುವುದು, ಹಸಿವು ನೀರಡಿಕೆಗಳ ವೇದನೆಯನ್ನು ಸಹನಮಾಡುವುದು, ಬಿಸಿಲು, ಚಳಿ, ಮಳೆಗಳಿಂದಾಗುವ ತೊಂದರೆ, ಮೂಗಿನಲ್ಲಿ ಮೂಗುದಾರವನ್ನು ಹಾಕುವುದರಿಂದಾಗುವ ನೋವು, ಇವೆಲ್ಲವುಗಳನ್ನು ಒಬ್ಬನೇ ಭೋಗಿಸಬೇಕಾಗುವುದು. ಆ ಕಾಲಕ್ಕೆ ಅಣ್ಣ ತಮ್ಮರು, ಹೆಂಡರು–ಮಕ್ಕಳು, ತಂದೆ–ತಾಯಂದಿರು ಯಾರೂ ಭಾಗ ತಕ್ಕೊಳ್ಳಲಿಕ್ಕೆ ಬರುವದಿಲ್ಲ ಜೀವದ ಸಂಗಡ ಯಾರಾದರೂ ಬರುವವರಿದ್ದರೆ ಅದು ಧರ್ಮ ಒಂದೇ ಆಗಿದೆ ಅಂತಲೇ ಅದರ ಸೇವನೆಯನ್ನು ಮಾಡಬೇಕು ಈ ಪ್ರಕಾರ ಏಕತ್ವ ಭಾವನೆಯ ಚಿಂತನೆಯನ್ನು ಮಾಡುತ್ತ ಇರುವಾಗ ತಮ್ಮ ಇಷ್ಟ ಮಿತ್ರರ ಮೇಲೆ ಹೆಚ್ಚಿನ ಮಮತೆಯು ಉಂಟಾಗುವದಿಲ್ಲ. ಇತರ ಸೇವಕ–ಸೇವಕಿಯರ ಮೇಲೆಯೂ ದ್ವೇಷಮಾಡುವ ಬುದ್ಧಿಯು ಉಂಟಾಗುವದಿಲ್ಲ. ಈ ಪ್ರಕಾರ ತನ್ನ ಆತ್ಮ ಶುದ್ಧಿಯನ್ನ ಮಾಡಿಕೊಳ್ಳುತ್ತಿರಬೇಕು

ವೃತ್ತ ॥ ಪರಜನ ಪುರಜನ ಬಂಧುಗಳು, ಕರಿತುರಗಾದಿಗಳೆಲ್ಲ
ಪರಿಪರಿಯೌಷಧ ಮಂತ್ರಗಳು, ಮರಣದೊಳಿವು ಶರಣೆಲ್ಲ ।

ಓರ್ವನೆ ಕರ್ಮವ ಮಾಡುವನು, ಓರ್ವನೆ ದುಃಖವನುಂಬುವ
ಓರ್ವನೆ ಭವದೊಳು ತೊಳಲುವನು, ಓರ್ವನೆ ಶಿವ-ಸುಖದಲ್ಲಿ ॥
ಧರ್ಮವೆ ನಿರ್ಮಲ ಸುರಧೇನು, ಧರ್ಮವೆ ಮೂಜಗಕೆಲ್ಲ
ಧರ್ಮವೆ ಕಲ್ಪ ಮಹೀರುಹವು, ಧರ್ಮವೆ ಪರುಷದ ಮೂರ್ತಿ ।

—ಕಲ್ಯಾಣಕೀರ್ತಿ–ಚಿನ್ಮಯ ಚಿಂತಾಮಣಿ–೧೮,೧೯,೨೮.

ಓರ್ವನೆ ಸ್ವರ್ಗದಲ್ಲಿ ಸುರದೇವಿ ಮನೋಹರ ರೂಪನಾಗಿಯುಂ
ಓರ್ವನೆ ಕರ್ಮದಿಂ ನರಕ ತಿರ್ಯಗ ದುಃಖವ ನೆಯ್ದುವಲ್ಲಿಯುಂ ।
ಓರ್ವನೆ ನರನಾಗಿ ಪಾಪಪುಟ್ಟುವೆಡೆಯೊಳ್ಪಲು ಬಂಧನದಲ್ಲಿ ತೊಳಲ್ವೆಡಂ
ಓರ್ವನೆ ಸರ್ವಕರ್ಮಕ್ಷಯವನೆಯ್ದಿಸಿ ಮೋಕ್ಷಮನೆಯ್ದುವಲ್ಲಿಯುಂ ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ–ಏಕತ್ವಾನುಪ್ರೇಕ್ಷೆ.

## ಅನ್ಯತ್ವ ಭಾವನೆ

ಎಲ್ಲ ಪದಾರ್ಥಗಳು ಅನಿತ್ಯವಾಗಿವೆ. ಈ ಭಾವನೆಯ ಸ್ವರೂಪವನ್ನು ವಿಚಾರ ಮಾಡುವಾಗ ಮುಂದಿನ ವಿಚಾರಗಳನ್ನು ಮನಸ್ಸಿನಲ್ಲಿ ತರಬೇಕು. ಸಂಸಾರದಲ್ಲಿ ಸ್ತ್ರೀ, ಪುತ್ರ, ಮಿತ್ರ, ಧನ, ರಾಜ್ಯ, ಐಶ್ವರ್ಯ ಮತ್ತು ಭೋಗಾದಿಗಳೊಡನೆ ನಿನ್ನ ಸಂಬಂಧವು ಕೂಡಿದೆ. ಆದರೆ ಅವು ನಿಜವಾಗಿಯೂ ನಿನ್ನ ಸ್ವರೂಪದಿಂದ ಭಿನ್ನವಾಗಿವೆ ನೀನು ಯಾರ ದುಃಖದಲ್ಲಿ ಇಷ್ಟು ಮುಳುಗಿ ಹೋಗಿರುವಿ? ಅನಂತಾನಂತ ಜೀವಗಳ ಹಾಗೂ ಪುದ್ಗಲದ ಸಂಬಂಧವು ಅನಾದಿ ಕಾಲದಿಂದಲೂ ನಿನಗೆ ಬಂದು ಹೋಗಿದೆ ಅದನ್ನು ಮರೆತು ಅಜ್ಞಾನಿಯಾದ ನೀನು ಸ್ತ್ರೀ ಪುತ್ರಾದಿಗಳ ಸಂಯೋಗ-ವಿಯೋಗದ ಮತ್ತು ಅವುಗಳ ಸುಖದುಃಖದ ವಿಚಾರವನ್ನೇ ನೀನು ಹಗಲಿರುಳೂ ಮಾಡುತ್ತಿರುವಿ ಸಮೀಪ ಬಂದು ನಿಂತಿರುವ ಸ್ವಂತದ ಮರಣದ ಇಲ್ಲವೆ ಸ್ವಂತಕ್ಕೆ ಯಾವುದರಿಂದ ನರಕ ತಿರ್ಯಂಚಾದಿ ಗತಿಗಳಲ್ಲಿ ಉತ್ಪನ್ನವಾಗಬೇಕಾದೀತೋ ಅವುಗಳ ವಿಚಾರವನ್ನು ಮೂಲದಲ್ಲಿ ಮಾಡುವುದೇ ಇಲ್ಲ. ಪ್ರತಿಯೊಂದು ಕ್ಷಣಕ್ಕೂ ನಿನ್ನ ಆಯುಷ್ಯವು ಕಡಿಮೆಯಾಗುತ್ತಿದೆ. ಈ ಜನ್ಮದಲ್ಲಿ ನೀನು ನಿನ್ನ ಹಿತವನ್ನು ನೋಡದೆ ಇದ್ದರೆ–ಪಾಪಪರಾಙ್ಮುಖನಾಗದೆ ಇದ್ದರೆ ಕುಗತಿಗೆ ಮುಟ್ಟಿಸುವಂಥ ರಾಗದ್ವೇಷ ಮೋಹ ಕಾಮಕ್ರೋಧಾದಿ ವಿಕಾರಗಳಿಂದ ಆತ್ಮವನ್ನು ಬಿಡಿಸಲಾರಿ ಮುಂದೆಯಂತೂ ನರಕ ತಿರ್ಯಂಚ ಗತಿಗಳಲ್ಲಿ ಪರಾಧೀನವಾಗಿ ನಿಲ್ಲಬೇಕಾಗುವುದು. ಆ ಅಜ್ಞಾನ ಸ್ಥಿತಿಯಲ್ಲಿ ನಿನಗೆ ಏನು ಮಾಡಲಿಕ್ಕೆ ಬಂದೀತು? ಪಂಚ ಪರಿವರ್ತನ ಸ್ವರೂಪಿಯಾದ ಈ ಸಂಸಾರದಲ್ಲಿ ಅನಂತಾನಂತ ಕಾಲ ಪರಿಭ್ರಮಣ ಮಾಡುವ ಜೀವದ ಕಲ್ಯಾಣ ಮಾಡುವಂಥವರಾರೂ ಇಲ್ಲ. ಸೇವಕರು, ಅಣ್ಣ–ತಮ್ಮಂದಿರು, ಸ್ತ್ರೀ ಪುತ್ರ ಮೊದಲಾದವರನ್ನು ನೀನು ನಿನ್ನವರೆಂದು ತಿಳಿದಿರುವಿ. ಅದು ಕೇವಲ ಸುಳ್ಳು ಮೋಹಕ್ಕಾಗಿ ಇದೆ ಈ ಮೋಹದಿಂದ ಉಂಟಾಗುವ ಭಾವನೆಗೇನೇ ಮಿಥ್ಯಾತ್ವ ಎಂದು ಹೇಳಲಾಗಿದೆ. ಇವೆಲ್ಲವುಗಳ ಸಂಬಂಧವು ಕರ್ಮದಿಂದ ಪ್ರಾಪ್ತವಾದದ್ದಿದೆ. ಇದು ಸ್ವಲ್ಪ ಹೊತ್ತು ತಾಳುವಂದದಿದೆ ಇವುಗಳ ವಿಯೋಗವು ಅಕಸ್ಮಾತ್ ಆಗುವಂಥದಿದೆ ಈ ಎಲ್ಲವುಗಳ ಸಂಬಂಧವು ಬಂದಾಗಿನಿಂದ ವಿಷಯ ಕಷಾಯಗಳ ವೃದ್ಧಿಯೂ ಸ್ವರೂಪದ ಮರೆವೂ ಮಾತ್ರ ಆಗುತ್ತ ನಡೆದಿದೆ. ಇದು ನಿಜ.

ಮರದ ಮೇಲಿನ ಹಕ್ಕಿಯಂತೆ ಈ ಸಂಬಂಧವಿದೆ. ಸಂಸಾರದೊಳಗಿನ ಎಲ್ಲ ಜೀವಗಳಲ್ಲಿ ತಮ್ಮ ಶತ್ರುಮಿತ್ರತ್ವದ ಭಾವನೆಯೂ ಸಂಬಂಧವೂ ಅನೇಕ ಸಲ ಬಂದು ಹೋಗಿದೆ ಮುಂದೆಯೂ ಪರ–ದ್ರವ್ಯಗಳ ಸಂಬಂಧವು ಇರುವ ವರೆಗೆ ಇದು ಬರುವಂಥದೇ ಇದೆ ಇದರಿಂದಲೇ ನಮಗೆ ಏಕೇಂದ್ರಿಯ ಮೊದಲಾದ ಅವಸ್ಥೆಗಳು ಪ್ರಾಪ್ತವಾಗಿ ಅನಂತಕಾಲ ಸಂಸಾರದಲ್ಲಿ ಪರಿಭ್ರಮಣ ಮಾಡಬೇಕಾಗುತ್ತದೆ ಅನೇಕ ದೇಶಗಳಿಂದ ಬಂದ ಭಿನ್ನ ಭಿನ್ನ ಪ್ರವಾಸಿಗಳು ರಾತ್ರಿಯಲ್ಲಿ ವಿಶ್ರಾಂತಿಗಾಗಿ ಧರ್ಮಶಾಲೆಯಲ್ಲಿ ಇರುತ್ತಾರೆ ಹೀಗೆಯೇ ಒಂದು ಗಿಡದ ಮೇಲೆ ಅನೇಕ ಕಡೆಯಿಂದ ವಿಶ್ರಾಂತಿಗಾಗಿ ಅನೇಕ ಪಕ್ಷಿಗಳು ಬಂದು ನಿಲ್ಲುತ್ತವೆ. ಬೆಳಗಾದೊಡನೆಯೇ ಅವೆಲ್ಲವೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋಗುತ್ತವೆ. ಹಾಗೆಯೇ ಸ್ತ್ರೀ, ಪುತ್ರ, ಮಿತ್ರ, ಬಾಂಧವಾದಿಗಳೆಲ್ಲ ಅನೇಕ

ಗತಿಗಳಲ್ಲಿಂದ ಪಾಪ-ಪುಣ್ಯಗಳನ್ನು ಸಂಗ್ರಹಿಸಿಕೊಂಡು ಬಂದು ಕುಲವೆಂಬ ಧರ್ಮಶಾಲೆಯಲ್ಲಿ ಬಂದು ನಿಂತಿದ್ದಾರೆ. ಆಯುಷ್ಯವು ಪೂರ್ಣವಾದೊಡನೆಯೇ ಎಲ್ಲವೂ ತಮ್ಮ ತಮ್ಮ ಪುಣ್ಯ-ಪಾಪಗಳಿಗೆ ಅನುಸರಿಸಿ ನರಕ-ತಿರ್ಯಂಚ ಮನುಷ್ಯಾದಿ ಅನೇಕ ಗತಿಗಳಲ್ಲಿ ಹೋಗಿ ಹುಟ್ಟಿಯಾವು ಅದಕ್ಕಾಗಿ ಯಾರೂ ಯಾರ ಮಿತ್ರರೂ ಅಲ್ಲ ಪುಣ್ಯ-ಪಾಪಗಳ ಅನುಕೂಲತೆಗಳಿಗೆ ಅನುಸರಿಸಿ ಈ ಜನರೆಲ್ಲ ಎರಡು ದಿನ ನಮ್ಮ ಮೇಲೆ ಉಪಕಾರವನ್ನಾಗಲಿ, ಅಪಕಾರ-ವನ್ನಾಗಲಿ ಮಾಡಿ ಹೊರಟುಹೋಗುವರು

**ಪ್ರೀತಿಯು ಉಸುಬಿನ ಕರಣಿಯಂತೆ ಇದೆ.** ಸಂಸಾರದಲ್ಲಿ ಎಲ್ಲರ ಸ್ವಭಾವವು ಭಿನ್ನ-ಭಿನ್ನವಾಗಿದ್ದದ್ದು ಕಂಡು ಬರುತ್ತದೆ. ಯಾರ ಸ್ವಭಾವವೂ ಯಾರಿಗೂ ಹೊಂದುವದಿಲ್ಲ ಪ್ರತಿಯೊಬ್ಬರು ತಮ್ಮ ತಮ್ಮ ಇಚ್ಛೆಯನ್ನು ಪೂರೈಸಿಕೊಳ್ಳುವುದರಲ್ಲಿಯೇ ಇರುತ್ತಾರೆ ಅದರಿಂದ ಜನರು ಒಬ್ಬರನ್ನು ಒಬ್ಬರು ಪ್ರೀತಿಸುತ್ತಾರೆ ಪ್ರಯೋಜನವಿಲ್ಲದ ಪುಕ್ಕಟೆ ಪ್ರೀತಿಯು ಎಲ್ಲಿಯೂ ಕಂಡು ಬರುವದಿಲ್ಲ ಉಸುಬಿನ ಕಣಗಳ ಸಂಬಂಧವು ಪರಸ್ಪರ ಭಿನ್ನವಾಗಿರುತ್ತದೆ ಆದರೆ ಅದರಲ್ಲಿ ನೀರನ್ನು ಹಾಕಿದೊಡನೆಯೇ ಅವುಗಳ ಹೊಂದಿಕೆಯಾಗಿ ಮುಷ್ಟಿಯಲ್ಲಿ ಹಿಡಿಯಲಿಕ್ಕೆ ಬರುತ್ತದೆ ಉಂಡಿಯಾಗಿಯೂ ಇರುತ್ತದೆ ಅದನ್ನು ಸ್ವಲ್ಪ ಒತ್ತಿದರೆ ನಾಕು ಒಡೆದು ಅದರ ಕಣಗಳು ಚೆಲ್ಲಾಪಿಲ್ಲಿಯಾಗಿ ಹೋಗುತ್ತವೆ. ಹಾಗೆಯೇ ಇಹಲೋಕದಲ್ಲಿ ಮಿತ್ರ, ಪುತ್ರ, ಸ್ತ್ರೀ, ಬಾಂಧವ, ಸೇವಕ, ಸ್ವಾಮಿ ಮೊದಲಾದವರ ಸಂಬಂಧವು ಇದೆ. ಕೆಲವರು ತಮ್ಮ ವಿಷಯ ಕಷಾಯವು ಪುಷ್ಟವಾಗಬೇಕೆಂದು, ಕೆಲವರು ಲೋಭದಿಂದಲೂ ನಮ್ಮನ್ನು ಪ್ರೀತಿಸುತ್ತಾರೆ ಯಾವಾಗ ನಮ್ಮಿಂದ ಅವರಿಗೆ ಏನೂ ಲಭಿಸುವ ಆಶೆಯು ಕಾಣುವದಿಲ್ಲವೋ ಆಗ ಅವರಲ್ಲಿ ಯಾರೂ ಪ್ರೀತಿಸಲಿಕ್ಕೆ ಮುಂದಾಗುವದಿಲ್ಲ ಏನೂ ಪ್ರಯೋಜನ ಇಲ್ಲದಿದ್ದರೂ ಸಹ ಹಲವು ಸ್ಥಳಗಳಲ್ಲಿ ಪ್ರೀತಿಯನ್ನು ಮಾಡಿದ ಉದಾಹರಣೆಗಳು ಕಂಡುಬರುತ್ತವೆ. ಆದರೆ ಅವೂ ಕೂಡ ಜನರಿಗೆ ನಾಚಿ, ಅಭಿಮಾನದಿಂದ ಇಲ್ಲವೆ ಮುಂದೆ ಏನಾದರೂ ಪ್ರಯೋಜನವು ಸಿದ್ಧಿಗೆ ಬಂದೀತೆಂದು ಈ ಹೇತುಗಳಿಂದ ಸಂಭವಿಸಿರುತ್ತವೆ

**ಜನರಿಗೆ ನಾಚಿ ಪ್ರೀತಿಸಲಾಗುತ್ತಿದೆ.** ಇನ್ನೊಂದು ಭೀತಿಯು ಜನರ ಮನಸ್ಸಿನಲ್ಲಿ ಉಂಟಾಗುತ್ತದೆ ಇವನು ನನ್ನ ಮೇಲೆ ಮೊದಲು ಬಹಳ ಉಪಕಾರಮಾಡಿರುತ್ತಾನೆ ಈಗ ನಾನು ಅದನ್ನೂ ಮರೆತರೆ ಜನರು ಜಗತ್ತಿನಲ್ಲಿ ನನಗೆ 'ಛೀಃ! ಥೂಃ' ಎನ್ನುವರು. ಜನರು ನನಗೆ ಕೃತಘ್ನ ಎಂದಾರು ಹೀಗೆಂದು ಮನಸ್ಸಿನಲ್ಲಿ ಇರದೆ ಇದ್ದರೂ ಕೂಡ ಹಲವು ಸಲ ಕೆಲವರಿಂದ ಪ್ರೀತಿಯು ವ್ಯಕ್ತವಾಗುತ್ತಿರುತ್ತದೆ ವಿಷಯ ಕಷಾಯಗಳ ಸಂಬಂಧವಿಲ್ಲದೆ ಪ್ರೀತಿಯು ವ್ಯಕ್ತವಾಗುವ ಸಂಭವವೇ ಇಲ್ಲ. ಇದಕ್ಕೆ ಉದಾಹರಣೆಗಳು ವ್ಯವಹಾರದಲ್ಲಿ ನಿತ್ಯವೂ ನೋಡಲಿಕ್ಕೆ ನಮಗೆ ದೊರೆಯುತ್ತವೆ ಎಲ್ಲಿ ನಮ್ಮ ಅಭಿಮಾನವು ಕೊನೆಗಾಣುವ ಸಂದರ್ಭವಿರುವುದೋ, ಎಲ್ಲಿ ದ್ರವ್ಯವು ಸಿಗುವ ಸಂಭವವಿರುವುದೋ, ಎಲ್ಲಿ ವಿಷಯವನ್ನು ಉಪಭೋಗ ಮಾಡಲು ಲಭಿಸುವುದೋ, ಎಲ್ಲಿ ನಮಗೆ ದೊಡ್ಡ ಆದರ ಸತ್ಕಾರವು ಆಗುವುದೋ, ಎಲ್ಲಿ ನಮಗೆ ಕೀರ್ತಿಯು ಸಿಗುವ ಸಂಭವವಿರುವುದೋ ಅಥವಾ ಒಬ್ಬರನ್ನು ನಿರಾಶಗೊಳಿಸು-ವುದರಿಂದ ಕೆಲವು ಸಂಕಟಗಳು ಉದ್ಭವಿಸುವ ಸಂಭವವಿರುವುದೋ ಅಂಥ ಸ್ಥಳಗಳಲ್ಲಿಯೇ ಪ್ರೀತಿಯು ಉತ್ಪನ್ನವಾಗುತ್ತದೆ ವಿಷಯಗಳ ಒತ್ತಡವು ಇರದಿದ್ದರೆ ಪ್ರೀತಿಯು ಉತ್ಪನ್ನವಾಗುವುದೇ ಇಲ್ಲ.

**ಶತ್ರುವು ಮಿತ್ರನೂ ಮಿತ್ರನು ಶತ್ರುವೂ ಆಗುತ್ತಾರೆ.** ಎಲ್ಲ ಪದಾರ್ಥಗಳು ಪರಸ್ಪರ ಭಿನ್ನವಾಗಿವೆ. ತಾಯಿಯು ಕೂಡ ತನ್ನ ಮಕ್ಕಳನ್ನು ಜೋಕೆ ಮಾಡುವುದು ಯಾತಕ್ಕಾಗಿ? ಅವರು ಮುಪ್ಪು ಸಂಕಟಗಳಲ್ಲಿ ಆಧಾರವಾಗುವರೆಂದೇ, ತನ್ನ ದುಃಖ ಇಲ್ಲದಂತೆ ಮಾಡುವರೆಂಬ ಹೇತುವಿನಿಂದಲೇ ಮಗನು ತಾಯಿಯನ್ನು ಜೋಕೆ ಮಾಡುವುದರಲ್ಲಿಯೂ ಇಂಥದೇ ಉದ್ದೇಶವು ಇರುತ್ತದೆ "ಒಂದು ವೇಳೆ ನಾನು ನನ್ನ ತಾಯಿಯ ಸೇವೆಯನ್ನು ಮಾಡದಿದ್ದರೆ ಜನರು ನನಗೆ ಕೃತಘ್ನನೆಂದಾರು ನಾಲ್ಕು ಜನ ಶಿಷ್ಟ ಜನರಲ್ಲಿ ನನ್ನ ಮರ್ಯಾದೆಯು ಉಳಿಯಲಿಕ್ಕಿಲ್ಲ" ಈ ಅಭಿಮಾನವು ಮಗನಾದವನ ಮನಸ್ಸಿನಲ್ಲಿ ಉಳಿಯುತ್ತದೆ ಅದಕ್ಕಾಗಿ ಅವನು ತನ್ನ ತಾಯಿಯನ್ನು ಸಂರಕ್ಷಿಸುತ್ತಾನೆ ಸಾಮಾನ್ಯವಾಗಿ ಯಾರೂ ಯಾರನ್ನೂ ನಿಷ್ಕಾಮವಾಗಿ ಪ್ರೀತಿಸುವದಿಲ್ಲ. ಯಾವಾಗಲೂ ಉಪಕಾರ, ದಾನ, ಸನ್ಮಾನ ಮಾಡುತ್ತ ಇರುವುದರಿಂದಲೇ ವೈರಿಯು ಕೂಡ ಮಿತ್ರನಾಗುತ್ತಾನೆ ಪ್ರೀತಿಯ ಮಗನನ್ನು ತಪ್ಪು ದಾರಿಯಿಂದ ಹೋಗಗೊಡದಂತೆ ಪ್ರಯತ್ನಿಸುವುದು, ದುರ್ವ್ಯಸನದಿಂದ ಪರಾಙ್ಮುಖಗೊಳಿಸಲು ಯತ್ನಿಸುವುದು, ಇವನ್ನೆಲ್ಲ ಮಾಡುತ್ತಿರುವಾಗ ವೈರವು ಉತ್ಪನ್ನವಾಗುವ ಸಂಭವವಿರುತ್ತದೆ. ಇದರಿಂದ ಯಾರೂ ಯಾರ ಮಿತ್ರರೂ ಅಲ್ಲ, ಶತ್ರುಗಳೂ ಅಲ್ಲ. ಉಪಕಾರ, ಅಪಕಾರಗಳ ಅಪೇಕ್ಷೆಯಿಂದ ಶತ್ರು-ಮಿತ್ರತ್ವಗಳು ಉಂಟಾಗುತ್ತವೆ ಮನುಷ್ಯರೆಲ್ಲರ

ವಿಷಯ ಕಷಾಯಗಳನ್ನು ತೃಪ್ತಗೊಳಿಸುವಂಥವನು ಮಿತ್ರನು. ಅವುಗಳಿಂದ ಬಿಡಿಸುವಂಥವನು ಇಲ್ಲವೆ ಪರಾವೃತ್ತ-ಗೊಳಿಸುವಂಥವನು ಶತ್ರುವು. ಹೀಗೆ ಜಗತ್ತಿನ ಇರುವಿಕೆಯು ಇದೆ. ಅಂತಲೇ ಇಷ್ಟಾನಿಷ್ಟರ ವಿಷಯದಲ್ಲಿ ರಾಗ-ದ್ವೇಷಗಳು ಉತ್ಪನ್ನವಾಗದಂತೆ ಯತ್ನ ಮಾಡುತ್ತಿರಬೇಕು.

ನಿಜವಾದ ಮಿತ್ರನು ಯಾರು? ಅತಿಶಯ ಪ್ರಿಯವಾಗಿರುವ ಸ್ತ್ರೀ, ಪುತ್ರ, ಮಿತ್ರ, ಬಾಂಧವ ಇವರೆಲ್ಲರೂ ಸ್ವರ್ಗ ಮೋಕ್ಷಕ್ಕೆ ಕಾರಣವಾದಂಥ ವ್ರತ, ಸಂಯಮ, ವೀತರಾಗತ್ವ ಮೊದಲಾದ ಧರ್ಮಕ್ರಿಯೆಗಳಲ್ಲಿ ವಿಘ್ನವನ್ನು ತರುವವರಾಗಿದ್ದಾರೆ. ಇವರ ನಿಮಿತ್ತದಿಂದ ಹಿಂಸೆ, ಅಸತ್ಯ, ಕಳವು, ಕುಶೀಲ ಮತ್ತು ಅಪರಿಮಿತ ಪರಿಗ್ರಹ ಈ ಐದು ಪಾಪಗಳನ್ನು ಮಾಡಬೇಕಾಗುತ್ತದೆ. ಇದರಿಂದ ನರಕವೇ ಮೊದಲಾದ ಕುಗತಿಗಳ ಬಂಧವು ಉಂಟಾಗುತ್ತದೆ. ಆದರಿಂದ ಇವರು ಬಾಂಧವರಾಗಿರದೆ ಶತ್ರುಗಳೆಂದು ತಿಳಿಯಬೇಕು. ಯಾವುದು ಜೀವಕ್ಕೆ ಮಿಥ್ಯಾತ್ವ, ವಿಷಯಕಷಾಯಗಳಿಂದ ಪರಾವೃತ್ತಗೊಳಿಸುವದೋ ಅದೇ ಮಿತ್ರ. ಇಂಥ ಮಿತ್ರರು ಕೇವಲ ನಿರ್ಗ್ರಂಥ ಗುರುಗಳು ಮಾತ್ರರಾಗಿದ್ದಾರೆ. ಆತ್ಮನು ಸ್ವಾಭಾವಿಕವಾಗಿಯೇ ಶರೀರದಿಂದ ವಿಪರೀತ ಅಂದರೆ ಚೈತನ್ಯಮಯ-ನಾಗಿದ್ದಾನೆ. ಶರೀರವು ಅಚೇತನ ಹಾಗೂ ಜಡವಾಗಿದೆ. ಆದಕ್ಕಾಗಿ ಶರೀರದೊಡನೆ ಸಂಬಂಧವನ್ನು ಇಡುವ ಸ್ತ್ರೀ, ಪುತ್ರ, ಮಿತ್ರ, ಕುಟುಂಬ, ಧನ ಧಾನ್ಯ, ಸ್ಥಾನ ಮೊದಲಾದವುಗಳೆಲ್ಲವೂ ಭಿನ್ನವಾಗಿಯೇ ಇರತಕ್ಕವು. ದೇಹವು ಇಲ್ಲದಂತೆ ಆದೀತು. ಆತ್ಮನು ಚೈತನ್ಯ ಸ್ವಭಾವಿಯಾಗಿರುವುದರಿಂದ ಅಖಂಡವಾಗಿ ಅವಿನಾಶಿಯಾಗಿ ಉಳಿದೀತು. ಅದಕ್ಕಾಗಿ ಈ ಎಲ್ಲ ಪರಸಂಬಂಧಗಳಲ್ಲಿ ನಮ್ಮದು ಯಾವುದೂ ಅಲ್ಲವೆಂದು ನಿಶ್ಚಯಿಸಬೇಕು.

ರಾಗ-ದ್ವೇಷಗಳೂ ನಮ್ಮವಲ್ಲ. ಕರ್ಮದ ಉದಯದಿಂದ ಉಂಟಾಗುವ ರಾಗ-ದ್ವೇಷ ಮೋಹಾದಿ ವಿಕಾರಗಳೂ ಆತ್ಮನಿಂದ ಭಿನ್ನ ಮತ್ತು ನಾಶವಂತವಾಗಿವೆ. ಅಂದ ಮೇಲೆ ಶರೀರಕ್ಕೆ ಸಂಬಂಧಿಸಿದವುಗಳೆಲ್ಲವೂ ನಾಶವಂತವಿರುವುದರಲ್ಲಿ ಆಶ್ಚರ್ಯವೇನು? ಒಟ್ಟಿನಲ್ಲಿ, ನನ್ನ ಜ್ಞಾನ-ದರ್ಶನಮಯ ನಿಜಸ್ವಭಾವದ ಹೊರತಾಗಿ ಇತರ ಯಾವ ಜ್ಞಾನಾವರಣಾದಿ ದ್ರವ್ಯಕರ್ಮ, ರಾಗದ್ವೇಷಾದಿ ಭಾವಕರ್ಮ ಮತ್ತು ಶರೀರ ಪರಿಗ್ರಹಾದಿ ನೋಕರ್ಮ ಇವೆಲ್ಲವೂ ಭಿನ್ನವಾಗಿವೆ. ಈ ಪುತ್ರ ಮೊದಲಾದವರು ಅನ್ಯ ಗತಿಯೊಳಗಿನ ಪಾಪ-ಪುಣ್ಯ, ಸ್ವಭಾವ, ಕಷಾಯ, ಆಯು ಮತ್ತು ಶರೀರ ಮೊದಲಾದವುಗಳನ್ನು ಧರಿಸಿ ಬಂದಿರುತ್ತಾರೆ. ಆತ್ಮ ಸ್ವಭಾವವು ಪಾಪ-ಪುಣ್ಯಗಳಿಂದ ಭಿನ್ನವಾಗಿದೆ. ಅದಕ್ಕಾಗಿ ಯಾವಾಗಲೂ ಅನ್ಯತ್ವ ಭಾವನೆಯನ್ನು ಚಿಂತಿಸಿರಿ. ಇದರಿಂದ ಪರ-ವಸ್ತುವಿನ ಮೇಲಿನ ಮಮತ್ವವು ಇಲ್ಲದಂತೆ ಆಗಿ ಘೋರ ಬಂಧವು ಆಗುವುದು ನಿಂತೀತು.

ಧಾನ್ಯಧನಕನಕಾದಿಕದಿ ಮಾನರು ಮಿತ್ರರು ಸೂನು
ಕನ್ಯಾರತ್ನವು ಬಂಧುಗಳು ಅನ್ಯರು ನಿನಗವರಲ್ಲ ।
ಮಲದಿಂ ಮೂತ್ರದಿ ಮಿದುಳುಗಳಿಂ ಪುಳುಗಳ ರಾಶಿಗಳಿಂದ
ಎಲುವಿನಿಂದನುಗತ ಕಾಯದೊಳು ನಲಿಸಿದ ರತಿ ನಿನಗೆಂತು" ॥

—ಕಲ್ಯಾಣಕೀರ್ತಿ–ಜಿನ್ನಯ ಚಿಂತಾಮಣಿ ೨೦-೩೩

ಅನ್ಯವಿದೆಂಬುದಂಬಗೆದು ನೋಡದ ತನ್ನವಿದೆಂಬ ಮೋಹದಿಂ
ಮನ್ನಿಸಿ ಪುತ್ರ ಮಿತ್ರ ಸತಿಯರ್ಧನಧಾನ್ಯ ಸಮಸ್ತ ವಸ್ತುವಿಂ ।
ದುರ್ಮನಬೇಡ ಜನ್ಮಮರಣಂಗಳು ಬೇರಿವನೋಡಬಾರದೇ
ಅನ್ಯವಿವೆಲ್ಲ ನಿನ್ನ ಪರಮಾತ್ಮನೆ ನಿನ್ನದೆಂದು ನಂಬು ನೀಂ ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ–ಅನ್ಯತ್ವಾನುಪ್ರೇಕ್ಷೆ

## ಅಶುಚಿ ಭಾವನೆ

ಶರೀರದ ಸ್ವರೂಪ—ಅಶುಚಿ ಭಾವನೆಯಲ್ಲಿ ಮುಂದಿನ ವಿಚಾರಗಳನ್ನು ಚಿಂತಿಸಬೇಕು. ಮೊಟ್ಟ ಮೊದಲು ಶರೀರದ ಸ್ವರೂಪವನ್ನು ವಿಚಾರಮಾಡಬೇಕು. ಶರೀರವು [illegible] ತಾಯಿಯ ರಕ್ತ ಮತ್ತು ತಂದೆಯ ವೀರ್ಯದಿಂದ ಉತ್ಪನ್ನವಾದದ್ದಿದೆ. ರಕ್ತ ಮಾಂಸಗಳಿಂದ ತುಂಬಿದ [illegible]

ಪಟಲದೊಳಗೆ ಗರ್ಭದಲ್ಲಿ ಒಂಬತ್ತು ತಿಂಗಳು ಪೂರ್ಣ ಇದ್ದು, ಇದು ಉತ್ಪನ್ನವಾಗುತ್ತದೆ ಆಗ ಇದಕ್ಕೆ ಭಯಂಕರ ದುಃಖವನ್ನು ಸಹನ ಮಾಡಬೇಕಾಗುತ್ತದೆ. ರಕ್ತ, ಮಾಂಸ, ಎಲುವು, ತೊಗಲು, ವೀರ್ಯ, ಮಜ್ಜಾ, ಸ್ನಾಯು ಈ ಸಪ್ತ ಧಾತುಗಳಿಂದ ಇದು ರೂಪುಗೊಂಡಿದೆ ಮಲ-ಮೂತ್ರ, ಕ್ರಿಮಿ, ಶಕ್ತಿ ಮೊದಲಾದವುಗಳಿಂದ ಇದು ಯಾವಾಗಲೂ ತುಂಬಿರುವುದರಿಂದ ಅತ್ಯಂತ ಅಪವಿತ್ರವಾಗಿದೆ. ಇದಕ್ಕೆ ಒಂಬತ್ತು ದ್ವಾರಗಳು ಇವೆ ಇದರೊಳಗಿಂದ ಯಾವಾಗಲೂ ದುರ್ಗಂಧವಾದ ಮಲವು ಹರಿಯುತ್ತಿರುತ್ತದೆ ಹೊಲಸಿನಿಂದ ತುಂಬಿದ ಗಡಿಗೆಯು ಒಡೆದಾಗ ಅದರೊಳಗಿನ ಮಲವು ನಾಲ್ಕೂ ಕಡೆಗೆ ಹರಿಯುತ್ತದೆ ಅದನ್ನು ಮೇಲ್ಮಗ್ಗುಲಿಗೆ ತೊಳೆದರೆ ಸ್ವಚ್ಛವಾಗುವದಿಲ್ಲ. ಹಾಗೆಯೇ ಜಗತ್ತಿನೊಳಗಿನ ಎಲ್ಲ ಸುಗಂಧ ಪದಾರ್ಥಗಳಾದ ಕರ್ಪೂರ, ಚಂದನ, ಪುಷ್ಪ, ತಿರ್ಥೋದಕ ಮೊದಲಾದವುಗಳಿಂದ ಶರೀರವನ್ನು ಮುಚ್ಚಿದರೂ ಸಹ ಅದು ಶುದ್ಧವಾಗುವದಿಲ್ಲ ತಿರುಗಿ ಆ ಪದಾರ್ಥಗಳೇ ದುರ್ಗಂಧಯುಕ್ತವಾಗುತ್ತವೆ. ಜಗತ್ತಿನಲ್ಲಿ ಎಲ್ಲ ವಸ್ತುಗಳು ಶರೀರದ ಒಂದೊಂದು ಅವಯವದ ಸ್ಪರ್ಶದಿಂದ ಹೊಲಸಾಗಿವೆ ಮಲ, ಮೂತ್ರ, ಎಲುವು, ತೊಗಲು, ರಕ್ತ, ಮಾಂಸ, ವೀರ್ಯ, ಸ್ನಾಯು, ಕೂದಲು, ಉಗುರು, ಕಫ, ಹುಗುಳು, ಸುಂಬಳ, ಹಲ್ಲು, ಕಣ್ಣು, ಕಿವಿ ಈ ಎಲ್ಲ ಅವಯವಗಳು ಯಾವ ವಸ್ತುವನ್ನು ಸ್ಪರ್ಶಿಸುವವೋ ಆ ವಸ್ತುಗಳು ಹೊಲಸಾಗುವವು, ಅಪವಿತ್ರವಾಗುವವು ದ್ವೀಂದ್ರಿಯಾದಿ ಪ್ರಾಣಿಗಳ ಶರೀರದಷ್ಟು ಬೇರೆ ಅಪವಿತ್ರಪದಾರ್ಥವೇ ಜಗತ್ತಿನಲ್ಲಿ ಇಲ್ಲ. ಶರೀರದ ಸಂಬಂಧವೇ ಇರದಿದ್ದರೆ ಜಗತ್ತಿನಲ್ಲಿ ಅಪವಿತ್ರತೆಯೇ ಉತ್ಪನ್ನವಾಗುತ್ತಿರಲಿಲ್ಲ. ಶರೀರವನ್ನು ಪವಿತ್ರಗೊಳಿಸುವ ವಸ್ತುವು ಮೂರುಲೋಕದಲ್ಲಿಯೂ ಇಲ್ಲ. ನೀರಿನಿಂದ ಕೋಟ್ಯಾವಧಿ ಸಲ ತೊಳೆದರೂ ಸಹ ಅದರಿಂದ ಏನಾದೀತು? ಕೊನೆಗೆ ನೀರೇ ಅಪವಿತ್ರವಾಗಿ ಹೋಗುತ್ತದೆ. ಇದ್ದಲಿಯನ್ನು ಎಷ್ಟು ತಿಕ್ಕಿದರೂ ಅಷ್ಟು ಕಪ್ಪುತನವೇ ಹೊರಬೀಳುತ್ತದೆ. ಶರೀರದ ಸ್ವಭಾವವು ಹೀಗಿದೆ ಅದಕ್ಕಾಗಿ ಶರೀರವನ್ನು ಪವಿತ್ರವೆಂದು ತಿಳಿಯುವುದು ಮಿಥ್ಯಾದರ್ಶನವಾಗಿದೆ.

ರತ್ನತ್ರಯದಿಂದಲೇ ಶರೀರವು ಪವಿತ್ರವಾಗುವುದು. ಯಾವ ಕಾಲಕ್ಕೆ ರತ್ನತ್ರಯಗಳನ್ನು ಉತ್ತಮ ಕ್ಷಮಾದಿ ಧರ್ಮಗಳನ್ನೂ ಯಾವಾಗ ಧಾರಣ ಮಾಡಲಾಗುವುದೋ ಆಗ ಈ ಶರೀರವು ದೇವಾದಿಗಳಿಂದ ವಂದ್ಯ-ವೆನಿಸುತ್ತದೆ. ಅದನ್ನುಳಿದು ಇತರ ಯಾವ ಸ್ಥಿತಿಯಲ್ಲಿಯೂ ಅದನ್ನು ಪವಿತ್ರ ಹಾಗೂ ಪೂಜ್ಯವೆಂದು ತಿಳಿದಿಲ್ಲ ಧನಧಾನ್ಯಾದಿ ಪರಿಗ್ರಹ, ಪಂಚೇಂದ್ರಿಯಗಳ ವಿಷಯ, ಮಿಥ್ಯಾತ್ವ ಮತ್ತು ಕ್ರೋಧ, ಮಾನ, ಮಾಯಾ, ಲೋಭಾದಿಗಳು ಅಮೂರ್ತ ಆತ್ಮನ ಸ್ವಭಾವವನ್ನು ಅಪವಿತ್ರಗೊಳಿಸಿ ಬಿಡುತ್ತವೆ ಅಧಮ ಸ್ಥಿತಿಗೆ ಒಯ್ದು ಮುಟ್ಟಿಸುತ್ತವೆ. ಜಗತ್ತಿನಲ್ಲಿ ನಿಂದ್ಯವೆಂದು ನಿಶ್ಚಯಿಸುತ್ತವೆ ದುರ್ಗತಿಗೆ ಮುಟ್ಟಿಸುತ್ತವೆ. ಅದಕ್ಕಾಗಿ ಕ್ರೋಧಾದಿ ಕಷಾಯಗಳ ತ್ಯಾಗಮಾಡಿ ಆತ್ಮನನ್ನು ಪವಿತ್ರಗೊಳಿಸಿರಿ ದೇಹವನ್ನು ಪವಿತ್ರಗೊಳಿಸುವ ಹುಚ್ಚಿಗೆ ಬೀಳಬೇಡಿರಿ ಅದು ಎಂದೂ ಪವಿತ್ರವಾಗಲಾರದು. ಈ ಪ್ರಕಾರ ಶರೀರದ ಸ್ವಭಾವವನ್ನು ತಿಳಿದು, ಯಾರು ಇದರ ಮೇಲಿನ ಮಮತ್ವವನ್ನು ಬಿಟ್ಟು, ಆತ್ಮನೊಡನೆ ಅನಾದಿ ಕಾಲದಿಂದ ಸಂಬಂಧ ವಿಡುವಂಥ ರಾಗ-ದ್ವೇಷಾದಿ ಕರ್ಮಮಲವನ್ನು ದೂರಗೊಳಿಸುವ ಪ್ರಯತ್ನಮಾಡುವರೋ ಅವರಿಗೆ ಅಶುಚಿತ್ವ ಭಾವನೆಯ ಚಿಂತನೆಯನ್ನು ಮಾಡುವುದು ಬಹಳ ಉಪಯುಕ್ತವಾಗಿದೆ.

ಪರಿಗ್ರಹದಿಂದಲೇ ಅಪವಿತ್ರತೆಯು ಒದಗುತ್ತದೆ. ಧನ ಸಂಪತ್ತಾದಿ ಪರಿಗ್ರಹಗಳು, ಪಂಚೇಂದ್ರಿಯ-ಗಳ ಭೋಗ, ಶರೀರದ ಮೇಲಿನ ಪ್ರೀತಿ ಇವು ಆತ್ಮನನ್ನು ಮಲಿನಗೊಳಿಸುವಂಥವಾಗಿವೆ ಅದಕ್ಕಾಗಿ ಆದಷ್ಟು ಪ್ರಯತ್ನದಿಂದ ಇವು ಇಲ್ಲದಂತೆ ಆಗುವ ಹಾಗೆ ಪ್ರಯತ್ನಿಸಬೇಕು ಅದೇ ಯೋಗ್ಯವಾಗಿದೆ. ದ್ರವ್ಯದಿಂದ ಆತ್ಮನಲ್ಲಿ ಕಾಮ, ಕ್ರೋಧ, ಲೋಭ, ಮದ, ಕಪಟ, ಪ್ರೀತಿ, ವೈರ, ಕಲಹ, ದೊಡ್ಡ ಆರಂಭ, ಈರ್ಷೆ, ಮೂರ್ಛೆ, ಅತೃಪ್ತಿ ಮೊದಲಾದ ದೋಷಗಳು ಉತ್ಪನ್ನವಾಗುತ್ತವೆ. ಇವಲ್ಲದೆ ಈ ಲೋಕಕ್ಕೆ ಸಂಬಂಧಿಸಿದ ಹಾಗೂ ಪರ ಲೋಕಕ್ಕೂ ಸಂಬಂಧವಿರುವ ಎಲ್ಲ ದೋಷಗಳೂ ಅತಿಚಿಂತೆ, ದುರ್ಧ್ಯಾನ, ಮಹಾಭಯ ಮೊದಲಾದವುಗಳು ಉತ್ಪನ್ನವಾಗಲಿಕ್ಕೂ ದ್ರವ್ಯವೇ ಕಾರಣವಿದೆ. ಪಂಚೇಂದ್ರಿಯಗಳ ವಿಷಯಗಳು ಆತ್ಮನ ಸ್ವತ್ವವನ್ನು ಮರೆಯಲಿಕ್ಕೆ ಹಚ್ಚಿ ಅತಿನಿಂದ್ಯ ಕರ್ಮಗಳನ್ನು ಮಾಡಲಿಕ್ಕೆ ಪ್ರವೃತ್ತಿಸುತ್ತವೆ ಜಗತ್ತಿನಲ್ಲಿ ಅತಿನಿಂದ್ಯ ಕೆಲಸಗಳು ಯಾವುದಾದರೂ ಇದ್ದರೆ ಅದು ಇಂದ್ರಿಯ ಲಾಲಸೆಯನ್ನು ಪೂರೈಸುವ ಕಾರ್ಯವಾಗಿದೆ. ಶರೀರದ ಮೇಲಿನ ಪ್ರೇಮವೆಂದರೆ ಮಾಂಸ, ಎಲುವು, ಕೀವು, ರಕ್ತ ಇವುಗಳಿಂದ ತುಂಬಿದ ಹಾಗೂ ಕೊಳೆತು ದುರ್ಗಂಧಗಳಿಂದ ಕೂಡಿದ ದೇಹದ ಮೇಲಿನ ಪ್ರೀತಿಯಾಗಿದೆ.

ಇದರಿಂದ ಅತಿಶಯ ಮಲಿನ ಪರಿಣಾಮವು ಉಂಟಾಗುತ್ತದೆ ಒಟ್ಟಿನಲ್ಲಿ ಕೇವಲ ದಶಲಾಕ್ಷಣಿಕ ಧರ್ಮದ ಹೊರತಾಗಿ ಇತರ ಯಾವುದರಿಂದಲೂ ಶರೀರದ ಶುದ್ಧಿಯಾಗುವುದು ಸಾಧ್ಯವಿಲ್ಲ

ಶುದ್ಧಿಯ ಪ್ರಕಾರಗಳು—ಈ ಶುದ್ಧಿಯಲ್ಲಿಯೂ ಎರಡು ಪ್ರಕಾರಗಳಿವೆ. ಒಂದು ಲೌಕಿಕ ಶುದ್ಧಿ. ಇನ್ನೊಂದು ಲೋಕೋತ್ತರ ಶುದ್ಧಿ ಕರ್ಮ ಮಲದ ನಾಶವನ್ನು ಮಾಡಿ, ಆತ್ಮನ ಶುದ್ಧ ಸ್ವರೂಪದಲ್ಲಿ ಸ್ಥಿರನಾಗುವುದಕ್ಕೆ ಲೋಕೋತ್ತರ ಶುದ್ಧಿಯೆನ್ನುವರು. ಇದು ರತ್ನತ್ರಯಗಳಿಂದ ಉತ್ಪನ್ನವಾಗುತ್ತದೆ. ಇಲ್ಲವೆ ರತ್ನತ್ರಯಗಳನ್ನು ಧಾರಣಮಾಡಿ ಸರ್ವೋತ್ಕೃಷ್ಟವಾದಂಥ ಶಾಂತ ಭಾವವನ್ನು ಧಾರಣಮಾಡುವ ಸಾಧುಗಳ ಸಹವಾಸದಿಂದ ಲಭಿಸುತ್ತದೆ ಲೌಕಿಕ ಶುದ್ಧಿಯಲ್ಲಿ ಎಂಟು ಭೇದಗಳಿವೆ. ಅವುಗಳ ವಿವರ ಹೀಗಿದೆ—

೧. ಕಾಲ ಶೌಚ—ಕೆಲವೊಂದು ನಿಯಮಿತ ಕಾಲವು ಮುಗಿದ ಮೇಲೆ ಜಗತ್ತಿನಲ್ಲಿ ಒಂದು ಪದಾರ್ಥವು ಶುದ್ಧವಾಯಿತೆಂದು ತಿಳಿಯುವುದು.

೨. ಅಗ್ನಿಶೌಚ—ಅಗ್ನಿಯ ಸಂಸ್ಕಾರದಿಂದ ವಸ್ತುಗಳನ್ನು ಶುದ್ಧಮಾಡಿಕೊಳ್ಳುವುದು

೩. ಪವನಶೌಚ—ಗಾಳಿಯ ಸ್ಪರ್ಶದಿಂದ ಶುದ್ಧವಾಗುವದೆಂದು ತಿಳಿಯುವುದು

೪. ಭಸ್ಮಶೌಚ—ಬೂದಿಯಿಂದ ತಿಕ್ಕುವುದರಿಂದ ವಸ್ತುವಿನ ಶುದ್ಧತೆಯಾಗುವುದೆಂದು ನಂಬುವುದು

೫. ಮೃತ್ತಿಕಾಶೌಚ—ಮಣ್ಣಿನ ಸ್ಪರ್ಶದಿಂದ ವಸ್ತುವು ಶುದ್ಧಗೊಳ್ಳುವುದೆಂದು ತಿಳಿಯುವುದು.

೬. ಜಲಶೌಚ—ನೀರಿನ ಸ್ಪರ್ಶದಿಂದ ಶುದ್ಧವಾಗುವದೆಂದು ತಿಳಿಯುವುದು

೭. ಗೋಮಯಶೌಚ—ಆಕಳ ಸೆಗಣಿಯಿಂದ ನೆಲವನ್ನು ಸಾರಿಸಿದರೆ ಅದು ಶುದ್ಧವಾಗುವದೆಂದು ಭಾವಿಸುವುದು

೮. ಜ್ಞಾನಶೌಚ—ಜ್ಞಾನದೊಳಗಿನ ಗ್ಲಾನಿಯು ಇಲ್ಲದಂತೆ ಆಗುವುದು.

ಈ ಪ್ರಕಾರ ವ್ಯವಹಾರದಲ್ಲಿ ಜನರು ತಮ್ಮ ಮನಸ್ಸಿನಲ್ಲಿ ಶುದ್ಧತೆಯ ಸಂಕಲ್ಪವನ್ನು ಮಾಡುತ್ತಿರುತ್ತಾರೆ ನಿಜವಾಗಿ ನೋಡಿದರೆ ಶರೀರವನ್ನು ಶುದ್ಧಗೊಳಿಸಲಿಕ್ಕೆ ಯಾರೂ ಸಮರ್ಥರಿಲ್ಲ ಶರೀರವು ಆದಿ, ಅಂತ ಮತ್ತು ಮಧ್ಯ ಎಲ್ಲಿಯೂ ಅದು ಶುದ್ಧವಿಲ್ಲ. ಶರೀರದ ಸಂಪರ್ಕದಿಂದ ನೀರು, ಬೂದಿ ಮೊದಲಾದ ಪದಾರ್ಥಗಳು ತಿರುಗಿ ಅಶುದ್ಧವಾಗುತ್ತವೆ. ಶರೀರದ ಒಳಗೆ ಮಲಮೂತ್ರಾದಿ ದುರ್ಗಂಧ ಪದಾರ್ಥಗಳು—ಎಲುವು, ಮಾಂಸ, ರಕ್ತ, ಕೀವು—ತುಂಬಿದ್ದು ಹೊರಗೆ ಅಪವಿತ್ರವಾದ ತೊಗಲಿನಿಂದ ಆಚ್ಛಾದಿಸಲ್ಪಟ್ಟಿದೆ ಇದರ ಉಪಾದಾನ ಕಾರಣವು ರಕ್ತ ಮತ್ತು ವೀರ್ಯ ಇರುವುದರಿಂದ ಇದು ಶುದ್ಧವೆಂದು ಹೇಳಲಿಕ್ಕೆ ಆಗುವದಿಲ್ಲ ಇದಕ್ಕೆ ಜಗತ್ತಿನೊಳಗಿನ ಎಲ್ಲ ತೀರ್ಥಗಳ ನೀರನ್ನು ತಂದು ಎರೆದರೆ ಇಲ್ಲವೆ ತೊಳೆದರೂ ಸಹ ಶುದ್ಧವಾಗುವದಿಲ್ಲ ತಿರುಗಿ ಆ ತೀರ್ಥ ಜಲವನ್ನೇ ಅಪವಿತ್ರವನ್ನಾಗಿ ಮಾಡೀತು ಇದು ಯಾವಾಗಲೂ ರೋಗದಿಂದ ತುಂಬಿದ್ದಿದೆ ಯಾವಾಗಲೂ ನಾಶವಂತವಾಗಿದ್ದು ದುಃಖ ಕೊಡುವಂಥದಾಗಿದೆ ಇದನ್ನು ಶುದ್ಧಗೊಳಿಸುವ ಉಪಾಯ ಧೂಪ, ಚಂದನ, ಗಂಧ, ವಿಲೇಪನ, ಪುಷ್ಪ, ಜಲ, ಕರ್ಪೂರ, ಸುವಾಸಿಕ ತೈಲ ಮೊದಲಾದವುಗಳಲ್ಲಿ ಯಾವುದೂ ಇಲ್ಲ ಈ ಶರೀರದ ಸ್ಪರ್ಶದಿಂದಲೇ ಯಾವ ಪದಾರ್ಥವೂ ಕೂಡ ಅಗ್ನಿಯ ಸ್ಪರ್ಶದಿಂದ ಹೇಗೆ ಬೂದಿಯು ಆಗುವುದೋ ಹಾಗೆಯೇ ಅಪವಿತ್ರವಾಗುತ್ತದೆ ಈ ಪ್ರಕಾರ ಶರೀರವು ಅಪವಿತ್ರವಾಗಿದೆ ಇದನ್ನು ಮನಸ್ಸಿನಲ್ಲಿ ಯಾವಾಗಲೂ ಇಟ್ಟುಕೊಂಡು ಹೋದರೆ ಅದನ್ನು ಸಿಂಗರಿಸುವ ಗೊಡವೆಗೆ ಹೋಗಲಾರೆವು ಅಲ್ಲದೆ ತಮ್ಮ ಸೌಂದರ್ಯದ ವಿಷಯದಲ್ಲಿ ಅಭಿಮಾನವು ಹುಟ್ಟಲಾರದು. ಅಭಿಮಾನವೊಂದು ವಿಕಾರವಾಗಿದೆ ವಿಕಾರಗಳನ್ನು ನಷ್ಟಗೊಳಿಸುವದರಿಂದ ಮನುಷ್ಯನ ಪ್ರವೃತ್ತಿಯು ವೀತರಾಗ ಭಾವನೆಯು ಬೆಳೆಯುವುದರ ಕಡೆಗೆ ಉಂಟಾಗುತ್ತದೆ. ಅಂತಲೇ ಈ ಭಾವನೆಯನ್ನು ಭಾವಿಸಬೇಕು

ವೃತ್ತ ॥ ಜೀವನು ಪೋಗೆ ತಕ್ಷಣದಲ್ಲಿ ಹೆಣನೆಂದು ಪ್ರೇವದೆ ಸುಡುವರು ಬೇಗ
ತೀವಿದ ಗುಣಮಿಲ್ಲದಿರೆ ನಡೆವೆಣನೆಂಬರೀವಿಧ ನೋಡಿರಿ ದೇಹ ।
ಸಾಗರದುದಕದಿ ನಿಲ್ಲದೆ ತೊಳೆಯಲು ನೀಗದು ದುರ್ಗಂಧವನು
ಆಗದಾವ ಪರಿಯಲಿ ಶುಚಿಯೀದೇಹ ನೀಗದು ತನ್ನವಗುಣವ ॥
ತೊವಲುದಕೆಗೂಡಂ ಪಂಜರಂ ಅಸ್ಥಿಪುಂಜಂ ತಪೆಯುದೆ ಕ್ರಿಮಿಪೂರ್ಣಂ ಪೂತಿಗಂಧಂತು ನಿತ್ಯಂ
ಭವದುರಿತ ಸಮೇತಂ ಸರ್ವ ದುಃಖಾನಿಮೂಲಂ ಇವನರಿದೆರೆ ಜೀವಾದೇಹದೋಳ್ ಪ್ರೀತಿಬೇಡ ।
—ವಿಜಯಣ್ಣ—ದ್ವಾದಶಾನುಪ್ರೇಕ್ಷೆ—ಅಶುಚಿತ್ವಾನುಪ್ರೇಕ್ಷ ೧೯, ೨೦, ೨೪.

## ೭. ಆಸ್ರವ ಭಾವನೆ

**ಆಸ್ರವದ ಸ್ವರೂಪ**—ಆಸ್ರವವೆಂದರೆ ಕರ್ಮಬರುವ ಕಾರಣಗಳು ಸಮುದ್ರದಲ್ಲಿ ದೋಣಿಗೆ ತೂತು ಬಿದ್ದಾಗ ಅದರೊಳಗಿಂದ ನೀರು ಒಳಗೆ ಬರುತ್ತದೆ. ಹಾಗೆಯೇ ಕರ್ಮವೂ ಒಳಗೆ ಬರುತ್ತದೆ ಮಿಥ್ಯಾತ್ವ ಭಾವ, ಐದು ಇಂದ್ರಿಯಗಳು ಮತ್ತು ಮನಸ್ಸು ಇವುಗಳ ಪ್ರವೃತ್ತಿಯು ವಿಷಯಗಳ ಕಡೆಗೆ ಇರುವುದು ಷಟ್‌ಕಾಯ ಜೀವಗಳ ಹಿಂಸೆಯನ್ನು ತ್ಯಜಿಸದೆ ಇರುವುದು, ಅನಂತಾನುಬಂಧಿ ಕ್ರೋಧ ಮಾನ ಮಾಯಾಲೋಭಾದಿ ಇಪ್ಪತ್ತೈದು ಕಷಾಯಗಳ ಉದಯದಿಂದ, ಮನ–ವಚನ–ಕಾಯಗಳ ಭೇದದಿಂದ ಆಗುವ ಹದಿನೈದು ಯೋಗಗಳಿಂದ, ಹೀಗೆ ಒಟ್ಟು ಐವತ್ತೇಳು ದ್ವಾರಗಳಿಂದ ಆತ್ಮನಲ್ಲಿ ಕರ್ಮವು ಪ್ರವೇಶಿಸುತ್ತಿರುತ್ತದೆ. ಇವುಗಳಲ್ಲಿ ಮಿಥ್ಯಾತ್ವ, ಕಷಾಯ, ಅವ್ರತಾದಿಗಳಿಗೆ ಅನುಸರಿಸಿ ಮನ–ವಚನ–ಕಾಯಗಳ ಪ್ರವೃತ್ತಿಗಳಂತೆ ಶುಭಾಶುಭ ಕರ್ಮದ ಆಗಮನವಾಗುತ್ತದೆ ಪುಣ್ಯ–ಪಾಪಾನುಕೂಲಗಳ ಪ್ರಮಾಣದಲ್ಲಿ ಒದಗುವ ವಿಷಗಳಲ್ಲಿಯೇ ಸಂತೋಷವನ್ನು ಹೊಂದಿರುವುದು, ವಿಷಯ-ಗಳಿಂದ ವಿರಕ್ತನಾಗಿರುವುದು; ಪರೋಪಕಾರ ಮಾಡುವ ವಿಚಾರವನ್ನು ಯಾವಾಗಲೂ ಮನಸ್ಸಿನಲ್ಲಿಡುವುದು, ದುಃಖಿಗಳ ಮೇಲೆ ದಯೆಮಾಡುವುದು, ತತ್ತ್ವದ ಚಿಂತನೆ ಮಾಡುವುದು, ಎಲ್ಲ ಜೀವಗಳ ವಿಷಯದಲ್ಲಿ ಮಿತ್ರಭಾವ-ವನ್ನಿಡುವುದು, ಪಂಚ ಪರಮೇಷ್ಠಿಗಳ ಭಕ್ತಿಯನ್ನು ಮಾಡುವುದು; ಧರ್ಮವಂತ ಮನುಷ್ಯನ ವಿಷಯದಲ್ಲಿ ಮನಸ್ಸಿನಲ್ಲಿ ಪ್ರೇಮವನ್ನಿಡುವುದು, ವ್ರತ, ಸಂಯಮ, ತಪ, ಶೀಲಗಳ ವಿಷಯದಲ್ಲಿ ಮನಸ್ಸಿನಲ್ಲಿ ಆದರ ಬುದ್ಧಿಯನ್ನು ಇಡುವುದು, ಈ ಎಲ್ಲ ಪ್ರವೃತ್ತಿಗಳಿಂದ ಪುಣ್ಯದ ಆಸ್ರವವಾಗುತ್ತದೆ ಇದಕ್ಕೆ ವಿರುದ್ಧವಾಗಿ ಪರಿಗ್ರಹಗಳ ವಿಷಯದಲ್ಲಿ ಅಭಿಲಾಷೆ, ಇಂದ್ರಿಯಗಳ ವಿಷಯದಲ್ಲಿ ಅತ್ಯಂತ ಆಸಕ್ತಿ, ಪರದ್ರವ್ಯವನ್ನು ಹರಣಮಾಡುವ ವಿಚಾರ, ಅನ್ಯಾಯ ಪ್ರವೃತ್ತಿ, ಭಕ್ಷ್ಯಾಭಕ್ಷ್ಯದ ಅವಿಚಾರ; ಸಪ್ತ ವ್ಯಸನ ತತ್ಪರತೆ, ಪರಾಪವಾದ, ಅಸಂತೋಷ, ಪರಸ್ತ್ರೀ, ಪುತ್ರ, ಧನ, ಆಜೀವಿಕಗಳ ಅಪಹರಣದ ಆನಂದ, ಪರತಿರಸ್ಕಾರದ ಇಚ್ಛೆ, ಸ್ವಸತ್ಕಾರದ ಇಚ್ಛೆ ಮೊದಲಾದ ಮನದೊಳಗಿನ ವಿಚಾರಗಳಿಂದ ಅಶುಭ ಕರ್ಮದ ಆಸ್ರವವು ಆಗುತ್ತದೆ ಸತ್ಯ, ಹಿತ, ಮಧುರ, ಶುಸ್ತ್ರಾನುಕೂಲ ಮಾತುಗಳನ್ನು ಆಡುವುದರಿಂದ, ಪರಮೇಷ್ಠಿಗಳ ಸ್ತವನ ಮಾಡುವುದರಿಂದ, ಸಿದ್ಧಾಂತದ ಪಠಣ ಮತ್ತು ವ್ಯಾಖ್ಯಾನ ಮಾಡುವುದರಿಂದಲೂ ನ್ಯಾಯಕ್ಕೆ ಅನುಸರಿಸಿ ಮಾತನಾಡುವುದರಿಂದಲೂ ಪುಣ್ಯದ ಆಸ್ರವವಾಗುತ್ತದೆ ಇದಕ್ಕೆ ವಿರೋಧವಾಗಿ ಪರನಿಂದಾ, ಆತ್ಮಪ್ರಶಂಸೆ, ಅನ್ಯಾಯಾಚರಣ, ವಿಷಯಗಳ ಮೇಲೆ ಪ್ರೀತಿ ಹಾಗೂ ಅನ್ಯಾಯದ ನಡತೆಗಳಿಗೆ ಪೋಷಕವಾಗುವ ಮಾತುಗಳು, ಕಷಾಯರೂಪ ಅಗ್ನಿಯನ್ನು ಪ್ರಜ್ವಲಿತಗೊಳಿಸುವುದು, ಕಲಹ, ವಿಸಂವಾದ, ಶೋಕ ಮತ್ತು ಭಯಗಳನ್ನು ಉತ್ಪನ್ನ-ಮಾಡುವುದು, ಧರ್ಮವಿರುದ್ಧ, ಮಿಥ್ಯಾತ್ವ ಮತ್ತು ಅಸಂಯಮಗಳನ್ನು ಪುಷ್ಟಗೊಳಿಸುವುದು, ಇತರ ಜೀವಗಳಿಗೆ ದುಃಖ ಮತ್ತು ಅಪಮಾನ ಮಾಡುವುದು, ಅನ್ಯರ ಜೀವನ ಸಾಧನಗಳನ್ನೂ ಧನವನ್ನೂ ನಾಶಗೊಳಿಸುವುದು ಇವೆಲ್ಲವುಗಳಿಂದ ಪಾಪದ ಆಸ್ರವವಾಗುತ್ತದೆ. ಪಂಚಪರಮೇಷ್ಠಿಗಳ ಪೂಜೆ, ಪ್ರಣಾಮ, ಜಿನಾಯತನದ ಸೇವೆ, ಧರ್ಮವಂತ ಪುರುಷನ ವೈಯಾವೃತ್ಯ, ಪರಜೀವಗಳ ಮೇಲೆ ದಯೆಯನ್ನು ಇಟ್ಟು ಸಾವಧಾನತೆಯಿಂದ ಕೂಡುವುದು, ಏಳುವುದು, ಇಡುವುದು, ಎತ್ತುವುದು, ತಿನ್ನುವುದು, ಕುಡಿಯುವುದು, ಚಲನವಲನ ಮಾಡುವುದು, ಮೊದಲಾದ ಕ್ರಿಯೆಗಳನ್ನು ಮಾಡುವುದರಿಂದ ಶುಭಾಸ್ರವವಾಗುತ್ತದೆ. ಇದಕ್ಕೆ ವಿರೋಧವಾಗಿ ಸಾವಧಾನತೆಯನ್ನು ಇಡದೆ, ಮನಸ್ಸಿನಲ್ಲಿ ಕರುಣೆಯನ್ನು ಇಡದೆ, ಶರೀರದ ಸ್ವಚ್ಛಂದ ಪ್ರವೃತ್ತಿಯನ್ನು ಮಾಡುವುದು, ದೊಡ್ಡ ದೊಡ್ಡ ಆರಂಭಾದಿ ಕ್ರಿಯೆಗಳನ್ನು ಮಾಡುವುದು, ಶರೀರವನ್ನು ಸಿಂಗರಿಸಿಕೊಳ್ಳುವುದರಲ್ಲಿ ಯಾವಾಗಲೂ ತತ್ಪರನಾಗಿರುವುದು–ಈ ಎಲ್ಲ ದೇಹದ ಕ್ರಿಯೆಗಳಿಂದ ಅಶುಭ ಆಸ್ರವವೂ ಆಗುತ್ತದೆ ಮನ–ವಚನ–ಕಾಯಗಳ ಶುಭಾಶುಭ ಪ್ರವೃತ್ತಿ ತೀವ್ರ ಮಂದ ಕಷಾಯಗಳಿಂದ ತೀವ್ರ ಮಂದ ಮೊದಲಾದ ಅನೇಕ ಪ್ರಕಾರದ ಕರ್ಮಬಂಧಗಳಿಗೆ ಕಾರಣವು ಹೀಗೆ ಆಗುತ್ತಿರುತ್ತದೆ ಇದನ್ನು ತಿಳಿಯುವುದರಿಂದ ಆತ್ಮನನ್ನು ಅಶುಭ ಪ್ರವೃತ್ತಿಗಳಿಂದ ದೂರವಿಟ್ಟು, ಶುಭ ಪ್ರವೃತ್ತಿಗಳ ಕಡೆಗೆ ಹಚ್ಚಲಿಕ್ಕೆ ಬರುತ್ತದೆ

**ಕಷಾಯಗಳಿಂದ ಆತ್ಮನ ಘಾತ**—ಆತ್ಮನ ಎಲ್ಲ ಗುಣಗಳನ್ನೂ ಘಾತಮಾಡುವಂಥದು ಕಷಾಯ-ವಾಗಿದೆ ಇದರಲ್ಲಿ ಕ್ರೋಧವು ಪರಜೀವಗಳ ಘಾತಮಾಡುವುದರಲ್ಲಿಯೂ ಅವುಗಳನ್ನು ಕಟ್ಟಿ ಹಾಕುವುದರಲ್ಲಿಯೂ ನಮ್ಮ ಮನಸ್ಸನ್ನು ಪ್ರವೃತ್ತಿಸುತ್ತದೆ. ಮಾನವು ಆತ್ಮನ ಈ ಪ್ರಕಾರದ ಉಧ್ಧಟತನವನ್ನು ಉತ್ಪನ್ನಮಾಡುತ್ತದೆ ತಾಯಿ, ತಂದೆ, ಗುರು, ಉಪಾಧ್ಯಾಯ ಮೊದಲಾದವರೆಲ್ಲರೂ ಅವನ ತಿರಸ್ಕಾರ ಮಾಡ ಹತ್ತುತ್ತಾರೆ ಇದು

ವಿನಯವನ್ನು ವಿಧ್ವಂಸ ಮಾಡಿ ಬಿಡುತ್ತದೆ ಮಾಯಾ ಕಷಾಯಗಳಿಂದ ಅನೇಕ ಪ್ರಕಾರದ ಕಪಟಗಳನ್ನು ಯೋಜಿಸಿ ಧೂರ್ತತೆಯಿಂದ ಜನರನ್ನು ಮೋಸಗೊಳಿಸಲಿಕ್ಕೆ ಬರುತ್ತದೆ ಈ ಯೋಗದಿಂದ ಮನಸ್ಸಿನೊಳಗಿನ ಸರಳತೆಯು, ಇಲ್ಲದಂತೆ ಆಗುತ್ತದೆ. ಲೋಭ ಕಷಾಯಗಳಿಂದ ಸುಖಕ್ಕೆ ಕಾರಣವಾದ ಸಂತೋಷವು ನಷ್ಟವಾಗುತ್ತದೆ ಕಾಮವು ಮರ್ಯಾದೆ, ಲಜ್ಜೆ, ಹಿತಾಹಿತ ಪ್ರವೃತ್ತಿ, ಉಚ್ಚ-ನೀಚ ಕರ್ಮಗಳ ವಿಚಾರ ಮೊದಲಾದವುಗಳನ್ನೂ ಕೂಡ ಇಲ್ಲದಂತೆ ಮಾಡುತ್ತದೆ ಮೋಹವು ಮದ್ಯದಂತೆ ಸ್ವಸ್ವರೂಪವನ್ನೂ ಮರೆಯಿಸುವುದು ಶೋಕವು ಅತಿಶಯ ದುಃಖದ ವೇಳೆಯಲ್ಲಿ ಮುಖದಿಂದ ಹಾಹಾಕಾರ ಶಬ್ದಗಳನ್ನು ನುಡಿಸುವುದು ಮತ್ತು ರೋದನ ಮೊದಲಾದ ಕ್ರಿಯೆಗಳಿಂದ ಆತ್ಮ ಘಾತವನ್ನು ಮಾಡಿಸುವುದು ಹಾಸ್ಯವು ಇನ್ನೊಬ್ಬರ ಅಜ್ಞಾನವನ್ನು ಪ್ರಕಟಿಸುತ್ತದೆ ಸ್ನೇಹವೆಂಬುದು ಮದ್ಯವನ್ನು ಸೇವಿಸದೆಯೂ ಆತ್ಮನಲ್ಲಿ ಅಚೇತನವನ್ನು ಉತ್ಪನ್ನಮಾಡುತ್ತದೆ ಅಲ್ಲದೆ ಅದನ್ನು ಹಿತ ಪ್ರವೃತ್ತಿಯಿಂದ ದೂರವಿಡುತ್ತದೆ. ನಿದ್ರೆಯು ಆತ್ಮನ ಸಂಪೂರ್ಣ ಚೈತನ್ಯ ಗುಣವನ್ನು ಘಾತಮಾಡಿ ಅದಕ್ಕೆ ಅಚೇತನ ಸ್ಥಿತಿಯನ್ನು ಒದಗಿಸುತ್ತದೆ ಬಾಯಾರಿಕೆಯಿಂದ ಯಾವುದು ಕುಡಿಯಲಿಕ್ಕೆ ಯೋಗ್ಯವಿಲ್ಲವೋ ಅದನ್ನೂ ಕುಡಿಯುವ ಇಚ್ಛೆಯು ಆಗುತ್ತದೆ ಹಸಿವೆಯಿಂದ ಚಾಂಡಾಲರ ಮನೆಯಲ್ಲಿಯೂ ಸಹ ಬಿಕ್ಷೆಯನ್ನು ಬೇಡುವ ಸ್ಥಿತಿಯು ಉಂಟಾಗುತ್ತದೆ. ಅಂಥ ಹೊತ್ತಿನಲ್ಲಿ ತನ್ನ ಕುಲ, ಜಾತಿ, ಮರ್ಯಾದೆಗಳೆಲ್ಲವೂ ನಷ್ಟವಾಗುತ್ತವೆ ಕಣ್ಣುಗಳು ಸುಂದರ ಮತ್ತು ಸುಸ್ವರೂಪ ಲಾವಣ್ಯವನ್ನು ನೋಡುವದಕ್ಕೆಂದು ಹಾರಾಡುತ್ತಿರುತ್ತವೆ ನಾಲಿಗೆಯು ಸವಿಯಾದ ಊಟದ ಸಲುವಾಗಿ ಲಜ್ಜೆ, ವಿನಯ, ಶ್ರೇಷ್ಠತ್ವ ಮತ್ತು ಸಂಯಮಗಳನ್ನು ತೊರೆದು ನೀಚ ಪ್ರವೃತ್ತಿಯನ್ನು ಉಂಟುಮಾಡುತ್ತದೆ. ಮೂಗು ಸುಗಂಧಿತ ಪದಾರ್ಥದ ಕಡೆಗೆ ಮೈಮರೆತು ಧಾವಿಸುತ್ತಿರುತ್ತದೆ. ಸ್ಪರ್ಶನೇಂದ್ರಿಯವು ಸ್ತ್ರೀಯ ಕೋಮಲ ಶರೀರದ ಸ್ಪರ್ಶಕ್ಕಾಗಿ ಅತಿ ಉತ್ಸುಕವಾಗಿರುತ್ತದೆ ಕಿವಿಗಳು ಅನೇಕ ಪ್ರಕಾರದ ಹಾಡುಗಳಲ್ಲಿಯ ಹಾಗೂ ರಾಗಗಳಲ್ಲಿಯ ಸುಸ್ವರ ಮತ್ತು ಮನೋಹರ ಗಾನವನ್ನು ಕೇಳುವುದರಲ್ಲಿ ತಲ್ಲೀನವಾಗುತ್ತವೆ ಆಗ ಅವುಗಳ ಅಸ್ತಿತ್ವದ ಮರೆವೂ ಕೂಡ ಸ್ವಂತಕ್ಕೆ ಆಗುತ್ತದೆ ಮನಸ್ಸಂತೂ ಚಂಚಲ ಮಂಗನಂತೆ ಸ್ವಚ್ಛಂದ ಕಲ್ಪನೆಗಳನ್ನು ಮಾಡಿ ಶುಭ ಧ್ಯಾನ ಮತ್ತು ಶುಭ ಪ್ರವೃತ್ತಿಗಳಲ್ಲಿ ಸ್ಥಿರವಾಗಿ ಉಳಿಯುವದಿಲ್ಲ. ಅತಿಲೋಭದಿಂದ ಮುಖದಿಂದ ಬೇಕಾದಂಥ ಅಸತ್ಯ ನುಡಿಗಳು ಹೊರಬಿದ್ದು, ಅಲ್ಲಿ ನಮ್ಮ ಚತುರತೆಯು ವ್ಯಕ್ತವಾಗುತ್ತದೆ. ಕೈಗಳು ಹಿಂಸೆಯನ್ನು ಮಾಡುವ ಮುಖ್ಯ ಸಾದನೆಗಳಾಗಿವೆ ಕಾಲುಗಳು ಪಾಪವನ್ನು ಮಾಡುವ ಮಾರ್ಗದಲ್ಲಿ ಹೋಗುವ ಸಾಧನಗಳಾಗಿವೆ ಕವಿತ್ವ ಶಕ್ತಿಯು ಪ್ರೇಮಮಯ ಕಾವ್ಯವನ್ನು ರಚಿಸುವುದರಲ್ಲಿ ಕುಶಲತೆಯನ್ನು ವ್ಯಕ್ತಪಡಿಸುತ್ತದೆ ಪಾಂಡಿತ್ಯವು ಅನೇಕ ಪ್ರಕಾರದ ಕುತರ್ಕಗಳನ್ನು ಹೂಡಿ ಸುಳ್ಳು ಸುಳ್ಳು ಸಂಗತಿಗಳನ್ನು ಕಲ್ಪಿಸಿ ಹೇಳಿ, ಜನರನ್ನು ಮೋಸಗೊಳಿಸುವುದರಲ್ಲಿ ತನ್ನ ಪರಾಕ್ರಮ-ಪಾರಂಗತೆಯನ್ನು ಪ್ರಕಟಿಸುತ್ತದೆ. ಅತಿ ಪರಾಕ್ರಮಿಯಾದ ಯೋಧನು ತನ್ನ ಪರಾಕ್ರಮವನ್ನು ಅನಾದ ಪಶುಗಳ ಹಿಂಸೆಯನ್ನು ಮಾಡುವುದರಲ್ಲಿ ತೋರಿಸುತ್ತಾನೆ ಬಾಲ್ಯಾವಸ್ಥೆಯಲ್ಲಿ ಯಥಾರ್ಥ ಜ್ಞಾನವು ಇರುವದಿಲ್ಲ ಅಂತಲೇ ಅದು ಅಜ್ಞಾನ ಸ್ಥಿತಿಯೆಂದೆನ್ನಿಸಿಕೊಳ್ಳುವುದು. ತಾರುಣ್ಯವಂತೂ ಇಚ್ಛಿತ ವಸ್ತುವಿನ ಭೋಗದ ಕಡೆಗೆ ಧಾವಿಸುತ್ತದೆ ಮುಪ್ಪಿನ ಅವಸ್ಥೆಯಲ್ಲಿ ಅಂತೂ ಭಯಂಕರ ಯಮನ ಮುಖದಲ್ಲಿ ಬೀಳುವ ಕಾಲವು ಸಮೀಪಿಸಿರುತ್ತದೆ ಉಸುರಾಡಿಸುವಿಕೆಯು ಯಾವಾಗಲೂ ಶರೀರದೊಳಗಿಂದ ಹೊರಟು ಹೋಗುವ ಯತ್ನದಲ್ಲಿರುತ್ತದೆ ಮುಪ್ಪಂತೂ ಕಾಮ, ಭೋಗ, ತೇಜ, ರೂಪ, ಸೌಂದರ್ಯ, ಉದ್ಯಮ, ಬಲ, ಬುದ್ಧಿ ಮೊದಲಾದವುಗಳನ್ನು ಹರಣಮಾಡುವಂಥ ಕಳ್ಳರ ಸೇವಕನಾಗಿರುತ್ತದೆ. ರೋಗವು ಯಮರಾಜನ ಮಂತ್ರಿಯಾಗಿದೆ. ಇಷ್ಟು ಸಾಮಗ್ರಿಗಳು ಆತ್ಮನ ಸ್ವಸ್ವರೂಪವನ್ನು ಮರೆಯಿಸುವುದಕ್ಕೆ ಸಿದ್ಧವಾಗಿ ಕೂತಿರುತ್ತವೆ ಈ ಸಾಮಗ್ರಿಗಳಿಂದ ಕರ್ಮದ ಆಸ್ರವವಾಗುತ್ತದೆ. ಈ ಪ್ರಕಾರ ಇಂದ್ರಿಯ ಹಾಗೂ ವಿಷಯ ಕಷಾಯಗಳ ಸಂಯೋಗವಾಗುವುದರಿಂದಲೂ ಅಪಕ್ಷಸುಗುಣವಾಗಿ ಮನ-ವಚನ-ಕಾಯಗಳ ಪ್ರವೃತ್ತಿಯನ್ನಿಡುವುದರಿಂದಲೂ ಕರ್ಮಬಂದವಾಗುತ್ತದೆ ಇದು ಆಸ್ರವದ ಸ್ವರೂಪವಾಗಿದೆ

ವೃತ್ತ ॥ ಮಿಥ್ಯಾತ್ವಂಗಳುಮೈದುಮವ್ರತಗಳುಂ ಪನ್ನೆರಡು ಭೇದಂ ಕಷಾ-
ಯೋಕ್ತಂ ನೋಡಲು ಪಂಚವಿಂಶತಿವಿಧಂ ಯೋಗಂ ಪೃಥುತ್ವಂಗಳಿಂ ।
ಮತ್ತವು ಪಂಚದಶ ಪ್ರಮಾದಮಿವುತಾಂ ಜೀವಕ್ಕೆ ಸಂಸಾರಮಂ-
ಬತ್ಯಂತುಗ್ರಭವಾರ್ಣವಕ್ಕಿರದೆ ತಾಂ ಕರ್ಮಾಸ್ರವಂ ಮಾಡುಗುಂ ॥

—ವಿಜಂಪಣ್ಣ-ದ್ವಾದಶಾನುಪ್ರೇಕ್ಷೆ-ಆಸ್ರವಾನುಪ್ರೇಕ್ಷೆ.

## ೮. ಸಂವರ ಭಾವನೆ

**ಸಂವರೆದ ಕಾರಣಗಳು**—ಸಮುದ್ರದಲ್ಲಿ ನಾಗುವ ಹಡಗಿಗೆ ಬಿದ್ದ ತೂತನ್ನು ಮುಚ್ಚಿದರೆ ಅದರಲ್ಲಿ ನೀರು ಬರುವುದು ನಿಂತು ಬಿಡುತ್ತದೆ ಹಾಗೆಯೇ ಕರ್ಮಗಳು ಬರುವ ದ್ವಾರಗಳನ್ನು ಮುಚ್ಚಿದರೆ ಕರ್ಮವು ಬರುವುದು ನಿಲ್ಲುತ್ತದೆ ಇದಕ್ಕೆ ಸಂವರ ಎನ್ನುತ್ತಾರೆ ಸಮ್ಯಗ್ದರ್ಶನವು ಉಂಟಾದೊಡನೆಯೇ ಮಿಥ್ಯಾತ್ವ ಆಸ್ರವದ ದ್ವಾರವು ಮುಚ್ಚಲ್ಪಡುತ್ತದೆ ಇಂದ್ರಿಯ ಹಾಗೂ ಮನಸ್ಸುಗಳನ್ನು ವಶದಲ್ಲಿ ಇಟ್ಟುಕೊಳ್ಳುವುದರಿಂದ ಅವುಗಳ ಮುಖಾಂತರ ಬರುವ ಕರ್ಮಗಳು ತಡೆದು ನಿಂತು, ಸಂವರವು ಸಾಧಿಸುತ್ತದೆ ಷಟ್ಕಾಯ ಜೀವಗಳ ಘಾತ ಮಾಡುವುದನ್ನು ತ್ಯಾಗ ಮಾಡುವುದರಿಂದ ಪರಜೀವಿಗಳ ಘಾತವಾಗುವದಿಲ್ಲ ಅದರಿಂದ ಹಿಂಸೆಯನ್ನು ಮಾಡುವುದರಿಂದ ಕಟ್ಟುವ ಕರ್ಮವು ಕಟ್ಟದಿರುವುದರಿಂದ ಸಂವರವಾಗುತ್ತದೆ ವ್ರತಯುಕ್ತ ಆಚರಣೆಯನ್ನು ಇಡದೆ ಇರುವುದರಿಂದ ಯಾವ ಯಾವ ಕರ್ಮದ ಆಸ್ರವವಾಗುತ್ತಿತ್ತೋ ಅದೆಲ್ಲ ವ್ರತಿಕನಾಗುವುದರಿಂದ ಸಂವರ ಗೊಳ್ಳುತ್ತದೆ. ಕಷಾಯಗಳನ್ನು ಗೆದ್ದು, ದಶಲಾಕ್ಷಣಿಕ ಧರ್ಮವನ್ನು ಧಾರಣ ಮಾಡುವುದರಿಂದಲೂ ಸಚ್ಚಾರಿತ್ರವನ್ನು ಇಟ್ಟುಕೊಳ್ಳುವುದರಿಂದಲೂ ಕಾಮ ಕ್ರೋಧಗಳ ಅಭಾವದಿಂದಲೂ ಸಂವರವು ಆಗುತ್ತದೆ ಧ್ಯಾನ, ಸ್ವಾಧ್ಯಾಯ, ತಪಗಳ ಯೋಗದಿಂದ ಕರ್ಮದ ಆಗಮನವಾಗುವದಿಲ್ಲ ಅಂತಲೇ ಇವುಗಳಿಂದ ಸಂವರವಾಗುತ್ತದೆ. ಮೂರು ಗುಪ್ತಿ, ಐದು ಸಮಿತಿ, ದಶಲಕ್ಷಣ ಧರ್ಮ, ದ್ವಾದಶಾನುಪ್ರೇಕ್ಷೆ, ಇಪ್ಪತ್ತೆರಡು ಪರೀಷಹಗಳನ್ನು ಸಹನ ಮಾಡು-ವುದು, ಐದು ಪ್ರಕಾರದ ಚಾರಿತ್ರವನ್ನು ಪಾಲಿಸುವುದು ಇವುಗಳಿಂದ ಹೊಸ ಕರ್ಮವು ಕಟ್ಟುವದಿಲ್ಲ ಮನ-ವಚನ-ಕಾರ್ಯಗಳ ಪ್ರವೃತ್ತಿಯನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳುವುದಕ್ಕೆ ಗುಪ್ತಿ ಎನ್ನುವರು ಪರ ಪೀಡೆಯು ಆಗಬಾರದೆಂದು ಎಚ್ಚರದಿಂದ ಪ್ರಮಾದವಾಗದಂತೆ ಐದು ಪ್ರಕಾರದ ಕ್ರಿಯೆಗಳನ್ನು ಮಾಡುತ್ತಿರುವುದು ಸಮಿತಿ ಎನಿಸುವುದು. ದಯೆಯು ಯಾವುದರಲ್ಲಿ ಮುಖ್ಯವಾಗಿದೆಯೋ ಅದು ಧರ್ಮವಾಗಿದೆ ಸ್ವತತ್ತ್ವದ ಚಿಂತನೆಯನ್ನು ಮೇಲಿಂದ ಮೇಲೆ ಮಾಡುವುದು ಅನುಪ್ರೇಕ್ಷೆಯಾಗಿದೆ. ಕರ್ಮದ ಉದಯದಿಂದ ಪ್ರಾಪ್ತವಾದ ಹಸಿವು ನೀರಡಿಕೆ ಮೊದಲಾದ ವೇದನೆಗಳನ್ನು ಹೆದರದೆ ಸಹಿಸುವುದು ಪರೀಷಹ ಜಯವೆನಿಸುತ್ತದೆ ರಾಗದ್ವೇಷಾದಿ ದೋಷ ರಹಿತವೂ ತನ್ನ ಜ್ಞಾನ ಸ್ವರೂಪಿ ಆತ್ಮನಲ್ಲಿ ಪ್ರವೃತ್ತಿಯನ್ನು ಇಡುವುದು ಚಾರಿತ್ರವಾಗಿದೆ ಈ ಪ್ರಕಾರ ವಿಷಯ ಕಷಾಯಗಳಿಂದ ಪರಾಙ್ಮುಖನಾಗಿ ಸರ್ವ ಕ್ಷೇತ್ರ ಕಾಲಗಳಲ್ಲಿ ಪ್ರವರ್ತಿಸುವವರಿಗೆ ಮೇಲೆ ಹೇಳಿದ ಕಾರಣಗಳಿಗಾಗಿ ಹೊಸ ಕರ್ಮವು ಬರುವುದಿಲ್ಲ ಇದೇ ಸಂವರವಾಗಿದೆ ಈ ಪ್ರಕಾರ ಸಂವರದ ಕಾರಣಗಳಿವೆ ಇವುಗಳ ವಿಚಾರವನ್ನು ಯಾವಾಗಲೂ ಮಾಡುತ್ತಿರುವುದರಿಂದ ಮಾನವನಿಗೆ ನವೀನ ಕರ್ಮಬಂಧವಾಗುವುದಿಲ್ಲ

ವೃತ್ತ ॥ ಸಮಿತಿ ಸಕಲ ಮೂಲಂ ಸಂಯಮಸ್ಕಂಧಬಂಧೋ-
ಯಮಪ್ರಸವ ಸುಶಾಖೋ ಧರ್ಮಪುಷ್ಪಾವಕೀರ್ಣಂ ।
ವಿಮಲಫಲಸಮೂಹಂ ಶುದ್ಧ ಚಿದ್ರೂಪಭಾವಂ
ತಮದುರಿತನಿವಾರ್ಯಂ ಸಂವರಾಯೆಂಬ ವೃಕ್ಷಂ ॥

—ವಿಜಯಣ್ಣ-ದ್ವಾದಶಾನುಪ್ರೇಕ್ಷೆ-ಸಂವರಾನುಪ್ರೇಕ್ಷೆ

## ೯. ನಿರ್ಜರಾ ಭಾವನೆ

ನಿರ್ಜರಾ ಭಾವನೆಯ ಸ್ವರೂಪವು ಹೀಗಿದೆ ಜ್ಞಾನಿಗಳು ನಿದಾನವನ್ನು ಕಟ್ಟದೆ ಹನ್ನೆರಡು ಪ್ರಕಾರದ ತಪವನ್ನು ಆಚರಿಸುತ್ತಾರೆ ಅವರ ಕರ್ಮದ ಕ್ಷಯವಾಗುತ್ತದೆ ಈ ಪ್ರಕಾರ ಕರ್ಮವು ಉದಯಕ್ಕೆ ಬಂದು ತಮ್ಮ ರಸಗಳೆನಿಸುವ ಸುಖ-ದುಃಖಾದಿ ಫಲಗಳನ್ನು ಕೊಟ್ಟು, ಅಳಿದು ಹೋಗುವುದಕ್ಕೆ ನಿರ್ಜರಾ ಎನ್ನುತ್ತಾರೆ ಇದರಲ್ಲಿ ಎರಡು ಪ್ರಕಾರಗಳು ಇವೆ.

೧. ಕರ್ಮವು ಉದಯಕ್ಕೆ ಬಂದು, ತನ್ನ ಫಲವನ್ನು ಕೊಟ್ಟು, ಇಲ್ಲದಂತೆ ಆಗುವುದಕ್ಕೆ ಸವಿಪಾಕ ನಿರ್ಜರೆಯೆನಿಸುತ್ತದೆ ಈ ನಿರ್ಜರೆಯು ನಾಲ್ಕು ಗತಿಗಳಲ್ಲಿ ಆಗುತ್ತಿರುತ್ತದೆ

೨. ವ್ರತ, ಸಂಯಮ, ತಪಶ್ಚರಣಗಳನ್ನು ಮಾಡಿ ಕರ್ಮವು ಉದಯಕ್ಕೆ ಬರುವ ಪೂರ್ವದಲ್ಲಿಯೇ ಅದನ್ನು ನಷ್ಟಗೊಳಿಸುವುದು ಅವಿಪಾಕ ನಿರ್ಜರಾ ಎನಿಸುತ್ತದೆ ಕಷಾಯವೂ ಮಂದವಾಗುತ್ತ ಹೋದಂತೆ ಆಗಾಗ ತಪಶ್ಚರಣದ ಶಕ್ತಿಯು ಬೆಳೆಯುತ್ತ ಹೋಗುತ್ತದೆ. ಅದಕ್ಕನುಸರಿಸಿಯೇ ಕರ್ಮದ ನಿರ್ಜರೆಯೂ ಹೆಚ್ಚುತ್ತ ಹೋಗುವುದು. ಯಾವ ಪುರುಷನು ಕಷಾಯ ರೂಪ ಶತ್ರುವನ್ನೂ ಗೆದ್ದು, ದುಷ್ಟ ಜನರ ದುರ್ವಚನ, ಉಪದ್ರವ, ಅನಾದರ ಮೊದಲಾದವುಗಳಿಂದ ಮನಸ್ಸಿನಲ್ಲಿ ಮಲಿನತೆಯನ್ನು ತರದೆ ಸಹನ ಮಾಡುವನೋ ಅವನ ಕರ್ಮದ ನಿರ್ಜರೆಯು ಹೆಚ್ಚಾಗುತ್ತದೆ ಅವನು ಆಗ ಇಂಥ ವಿಚಾರಗಳನ್ನು ಮನಸ್ಸಿನಲ್ಲಿ ತರುವನು —"ನಾನು ಪೂರ್ವ ಜನ್ಮದಲ್ಲಿ ಪಾಪವನ್ನು ಸಂಪಾದಿಸಿದ್ದೆ. ಅದರ ಫಲವು ಇದಾಗಿದೆ. ಇದನ್ನು ಶಾಂತ ಪರಿಣಾಮದಿಂದ ಸಹಿಸಿದರೇನೇ ಕರ್ಮದ ಋಣವು ಕಳೆಯುವಂತಿದೆ ಇಲ್ಲದಿದ್ದರೆ ಕಳೆಯಲಾರದು. ಇಂಥ ಪ್ರಸಂಗದಲ್ಲಿ ದುಃಖವನ್ನು ಮಾಡುತ್ತ ಇದ್ದರೆ ಕರ್ಮವಂತೂ ಬಿಡುವದಿಲ್ಲ ಅಲ್ಲದೆ ತಿರುಗಿ ಅಸಂಖ್ಯಾತ ಪಟ್ಟು ಹೊಸ ಕರ್ಮದ ಬಂಧವು ಆಗುತ್ತದೆ. ಉತ್ತಮ ಪುರುಷರು ದೇಹಕ್ಕೆ, ಕೇವಲ ಮೋಹ ಉತ್ಪನ್ನವಾಗುವಂಥ ವಿನಾಶಿಕ, ಅಶುದ್ಧ, ದುಃಖದಾಯಕವೆಂದು ತಿಳಿಯುತ್ತಾರೆ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳಿಗೆ ಸುಖ ಕೊಡುವಂಥವು, ನಿರ್ಮಲ, ನಿತ್ಯ, ಅವಿನಾಶಿ-ಯೆಂದು ಭಾವಿಸುತ್ತಾರೆ. ಅಲ್ಲದೆ ತಮ್ಮ ಸ್ವಂತದ ನಿಂದೆಯನ್ನು ಮಾಡಿಕೊಂಡು, ಗುಣಗಳನ್ನೂ ಅತ್ಯಂತ ಆದರಿಸುತ್ತಾರೆ. ಅವರನ್ನು ತಮಗಿಂತ ಶ್ರೇಷ್ಠರೆಂದು ತಿಳಿಯುತ್ತಾರೆ ಹಾಗೆಯೇ ಮನಸ್ಸು ಮತ್ತು ಇಂದ್ರಿಯಗಳನ್ನು ಗೆದ್ದು, ತಮ್ಮ ಜ್ಞಾನ ಸ್ವಭಾವದಲ್ಲಿ ಯಾವಾಗಲೂ ಲೀನವಾಗಿರುತ್ತಾರೆ ಅರ್ಥಾತ್ ಇಂಥ ಸತ್ಪುರುಷರಿಗೇನೇ ಮಾನವ ಜನ್ಮವು ಲಭಿಸಿದ್ದು ಸಾರ್ಥಕವಾಗುತ್ತದೆ ಇಂಥವರ ಪಾಪ ಕರ್ಮದ ನಿರ್ಜರೆಯೂ ಆಗುತ್ತದೆ. ಸಂಸಾರ ಬಂಧನವನ್ನು ನಾಶ ಮಾಡುವಂಥ ನಾತಿಶಯ ಪುಣ್ಯದ ಬಂಧವಾಗುತ್ತದೆ. ಇದೇ ಪುರುಷನಿಗೆ ಪರಮ ಅತೀಂದ್ರಿಯ, ಅವಿನಾಶಿ, ಅನಂತ ಸುಖವಾದರೂ ಲಭಿಸುತ್ತದೆ ಯಾವನು ಸಮಭಾವ ರೂಪ ಸುಖದಲ್ಲಿ ಲೀನನಾಗಿ ಮೇಲಿಂದ ಮೇಲೆ ತನ್ನ ನಿರ್ಮಲ ಸ್ವರೂಪದ ವಿಚಾರವನ್ನು ಮನಸ್ಸಿನಲ್ಲಿ ತರುವನೋ ಅವನ ಕರ್ಮದ ನಿರ್ಜರೆಯು ಆಗುತ್ತದೆ ಇವನು ಇಂದ್ರಿಯ ಹಾಗೂ ಕಷಾಯಗಳನ್ನು ದುಃಖದಾಯಕವೆಂದು ತಿಳಿಯುವನು. ಅವುಗಳನ್ನು ಗೆಲ್ಲುವನು. ಅದರಿಂದ ಕರ್ಮ ನಿರ್ಜರೆಯನ್ನು ಮಾಡಿಕೊಳ್ಳುವನು ಅದಕ್ಕಾಗಿ ನಾವೂ ಹಾಗೆ ಆಗಲಿಕ್ಕೆ ಪ್ರಯತ್ನ ಮಾಡಬೇಕು."

ವೃತ್ತ ॥ ಸಮ್ಯಕ್ತ್ವ ಗ್ರಹಣಂಗಳಲ್ಲಿ ವ್ರತಮಂ ಕೊಳ್ವಲ್ಲಿ ನಿಸ್ಸಂಗಮಂ
ತಾಮಾಳ್ವಲ್ಲಿ ಕಷಾಯಮಂ ಮೊದಲಪಂ ನಾಲ್ಕಂ ವಿಸಂಯೋಜದೋಳ್ ।
ದೃಗ್ಮೋಹಕ್ಷಯನೋಳ್ ಕಷಾಯ ಸಮದೋಳ್ತಾನೋಪಶಾಂತಾಖ್ಯನೋಳ್
ದುರ್ಮೋಹ ಕ್ಷಪಿತತ್ರಯ ಕ್ರಮದಿತಾಂ ಕ್ಷೀಣೈಕನೋಳ್ ನೋಡಲುಂ ॥

—ವಿಜಯಣ್ಣ–ದ್ವಾದಶಾನುಪ್ರೇಕ್ಷೆ–ನಿರ್ಜರಾನುಪ್ರೇಕ್ಷೆ

## ೧೦. ಲೋಕ ಭಾವನೆ

ಈ ಭಾವನೆಯಲ್ಲಿ ಲೋಕವೆಂದರೆ ಕಾಯ, ಅದರ ವ್ಯವಸ್ಥೆಯು ಹೇಗಿದೆ, ಅದರಲ್ಲಿ ಜೀವವು ಎಲ್ಲೆಲ್ಲಿ ನಿಲ್ಲುವುದು, ಸ್ವರ್ಗ, ಮೋಕ್ಷ, ನರಕ ಮೊದಲಾದವುಗಳು ಎಲ್ಲೆಲ್ಲಿವೆ, ಈ ಎಲ್ಲ ಸಂಗತಿಗಳ ವಿಚಾರವನ್ನು ಮಾಡ-ಬೇಕಾಗುತ್ತದೆ.

ಮೊಟ್ಟ ಮೊದಲು ಲೋಕವೆಂದರೆ ಏನೆಂಬುದನ್ನು ನೋಡೋಣ ನಾಲ್ಕೂ ಕಡೆಗೆ ಅನಂತಾನಂತ ಆಕಾಶವು ವ್ಯಾಪಿಸಿ ನಿಂತಿದೆ ಈ ಆಕಾಶದ ಅತ್ಯಂತ ಮಧ್ಯಭಾಗದಲ್ಲಿ ಈ ಲೋಕವು ವಿರಾಜಮಾನವಾಗಿದೆ. ಆಕಾಶದ ಎಷ್ಟು ಭಾಗದಲ್ಲಿ ಜೀವ, ಅಜೀವ, ಧರ್ಮ, ಅಧರ್ಮ ಮತ್ತು ಕಾಲ ಈ ಐದು ದ್ರವ್ಯಗಳು ಕಂಡು ಬರುತ್ತವೆಯೋ ಆಕಾಶದ ಅಷ್ಟು ಭಾಗಕ್ಕೆ ಲೋಕವೆಂದು ಹೇಳಲಾಗುವುದು ಈ ಲೋಕದಲ್ಲಿ ಅನಂತಾನಂತ ಜೀವಗಳು ಇವೆ ಜೀವಗಳಿಗಿಂತ ಅನಂತ ಪಟ್ಟು ಹೆಚ್ಚು ಪುದ್ಗಲ ಪರಮಾಣುಗಳೂ ಇವೆ ಧರ್ಮ ದ್ರವ್ಯ, ಅಧರ್ಮ ದ್ರವ್ಯ ಮತ್ತು ಆಕಾಶ ದ್ರವ್ಯವೂ ಒಂದೊಂದಾಗಿವೆ ಕಾಲ ದ್ರವ್ಯಗಳು ಅಸಂಖ್ಯಾತವಾಗಿವೆ ಈ

ಎಲ್ಲವುಗಳ ಸ್ವರೂಪ, ಆಕಾರ, ಅವಗಾಹನ (ಇರುವ ಸ್ಥಳ) ಮೊದಲಾದವುಗಳ ವರ್ಣನೆ ಮಾಡುವುದರಿಂದ ಗ್ರಂಥದ ವಿಸ್ತಾರವು ಹೆಚ್ಚುತ್ತದೆ. 1

ವೃತ್ತ ॥ ಕಡೆಯಿಲ್ಲದೆಸೆವ ಗಗನದ ನಡುವಿರ್ಕುಂ ಪೂರು ಗಾಳಿಯಾ ಗಾಳಿಗಳಾ
ಒಡಲೊಳೆ ಷಡ್ದ್ರವ್ಯಂಗಳ್ ಇಡಿಕಿರಿದದು ಲೋಕಮದರ ಬಾಹ್ಯಮಲೋಕಂ ।
ಜೀವಾವಳಿ ಪುದ್ಗಲಚಯಮಾವರಿಸಿದ ಧರ್ಮಮೊಂದಧರ್ಮಂ ಗಗನಂ
ತೀವಿದ ಕಾಲಾಣುಗಳಿಂದೀವಿಧದಿಂ ದ್ರವ್ಯಷಟ್ಕಮಿರ್ಪುದರಿಂದಂ ॥

—ರತ್ನಾಕರ–ತ್ರಿಲೋಕಶತಕ ೩–೪

## ೧೧. ಬೋಧಿ ದುರ್ಲಭ ಭಾವನೆ

ಈ ಭಾವನೆಯ ಸ್ವರೂಪವು ಸ್ವಲ್ಪದರಲ್ಲಿ ಹೀಗಿದೆ– ಅನಾದಿ ಕಾಲದಿಂದಲೂ ಈ ಜೀವವು ನಿಗೋದದಲ್ಲಿ ನಿಂತದ್ದಿದೆ ಒಂದು ನಿಗೋದಿ ಜೀವದ ಶರೀರದಲ್ಲಿ ಭೂತಕಾಲದೊಳಗೆ ಎಷ್ಟು ಸಿದ್ಧ ಜೀವಗಳು ಆಗಿ ಹೋಗಿವೆಯೋ ಅದಕ್ಕಿಂತ ಅನಂತ ಪಟ್ಟು ಹೆಚ್ಚು ಜೀವಿಗಳು ಇರುತ್ತವೆ ಅವು ತಮ್ಮ ತಮ್ಮ ಕಾರ್ಮಣ ಶರೀರದ ಅವಗಾಹನೆಯನ್ನು ಧರಿಸಿ ಒಂದೇ ಶರೀರದಲ್ಲಿ ಇರುತ್ತವೆ ಈ ಪ್ರಕಾರದ ಬಾದರ (ಸ್ಥೂಲ) ಮತ್ತು ಸೂಕ್ಷ್ಮ ನಿಗೋದ ಜೀವಗಳಿಂದ ಈ ಲೋಕವು ಎಲ್ಲ ಮಗ್ಗುಲುಗಳಿಂದಲೂ–ಕೆಳಗೆ, ಮೇಲೆ, ಒಳಗೆ, ಹೊರಗೆ–ತುಂಬಿದೆ. ಇದೇ ಪ್ರಕಾರ ಪೃಥ್ವೀಕಾಯ ಮೊದಲಾದ ಪಂಚಸ್ಥಾವರ ಜೀವಗಳಿಂದಲೂ ತುಂಬಿದೆ. ಇವುಗಳೊಳಗಿಂದ ತ್ರಸ ಪರ್ಯಾಯವು ಪ್ರಾಪ್ತವಾಗುವುದೂ ಸಹ ಉಸುಬಿನ ವಿಸ್ತಾರವಾದ ಬಯಲಿನಲ್ಲಿ ಬಿದ್ದ ತೀರ ಸಣ್ಣ ರತ್ನದ ಕಣದ ಹಾಗೆ ದುರ್ಲಭವಾಗಿದೆ ಅಕಸ್ಮಾತ್ ಇದರೊಳಗಿಂದಲೂ ಬಹಳ ಪ್ರಯಾಸದಿಂದ ತ್ರಸ ಪರ್ಯಾಯವು ಪ್ರಾಪ್ತವಾದರೂ ಎಲ್ಲ ಇಂದ್ರಿಯಗಳು ಪರಿಪೂರ್ಣ ಇದ್ದು ಪಂಚೇಂದ್ರಿಯತ್ವವು ಪ್ರಾಪ್ತವಾಗುವುದು ದುರ್ಲಭವಾಗಿದೆ ವಿಕಲತ್ರಯದಲ್ಲಿ ಜನ್ಮವಾಗಿ ಪುನಃ ಅಲ್ಲಿಂದ ನಿಗೋದದಲ್ಲಿ ಹೋಗಬೇಕಾಗುತ್ತದೆ ಅಲ್ಲಿ ಅನಂತ ಕಾಲವಿದ್ದು ಆ ಮೇಲೆ ಪಂಚಸ್ಥಾವರ ಪರ್ಯಾಯವು ದೊರಕುತ್ತದೆ. ಅಲ್ಲಿ ಅಸಂಖ್ಯಾತ ಇಲ್ಲವೆ ಸಂಖ್ಯಾತ ಕಾಲವನ್ನು ಪೂರ್ಣಗೊಳಿಸಿ ಪುನಃ ನಿಗೋದದಲ್ಲಿ ಸೇರುತ್ತದೆ ಈ ಪ್ರಕಾರ ಪರಿಭ್ರಮಣ ಮಾಡುತ್ತ ಮಾಡುತ್ತ ಅನಂತ ಪರಿವರ್ತನೆಗಳು ಪೂರ್ಣವಾಗುತ್ತವೆ. ಇದರೊಳಗಿಂದ ಪಂಚೇಂದ್ರಿಯತ್ವವು ಪ್ರಾಪ್ತವಾಗುವುದು ಬಹಳ ಕಠಿಣವಾಗಿದೆ. ದೈವಯೋಗದಿಂದ ಅದು ಪ್ರಾಪ್ತವಾದರೂ ಸಹ ಅದು ಮನಸಹಿತವಾಗಿರುವುದು ದುರ್ಲಭವಾಗಿದೆ ಪಂಚೇಂದ್ರಿಯ ಪರ್ಯಾಯವು ಪ್ರಾಪ್ತವಾಗಿಯೂ ಸಾರಾಸಾರ ವಿಚಾರ ಮಾಡುವ ಮನಸ್ಸು ಪ್ರಾಪ್ತವಾಗದೆ ಇದ್ದರೆ ಅದರ ಉಪಯೋಗವೇನು? ಪುನಃ ಅಜ್ಞಾನವು ಇದ್ದಕ್ಕಿದ್ದಂತೆ ಇರುವುದರಿಂದ ಸತತ ನಿಗೋದದಲ್ಲಿ ಹೋಗಿ ಅನಂತ ಕಾಲ ಪರಿಭ್ರಮಣ ಮಾಡಲಿಕ್ಕೆ ಹತ್ತುವುದು. ಇಂಥ ಕಠಿಣ ಅವಸ್ಥೆಯೊಳಗಿಂದ ಸುದೈವದಿಂದ ಪಾರಾಗಿ ಒಂದು ವೇಳೆ ಮನಸಹಿತ ಪಂಚೇಂದ್ರಿಯ ಪರ್ಯಾಯವು ಪ್ರಾಪ್ತವಾದಲ್ಲಿ ಮತ್ತು ಅದರಲ್ಲಿ ಸಿಂಹ, ಹುಲಿಗಳಂಥ ಭಯಂಕರ ಕ್ರೂರ, ರೌದ್ರ ಪರಿಣಾಮಿ, ಅಶುಭಲೇಶ್ಯಾಧಾರಕರಾಗಿ ಜನ್ಮಿಸಿದರೆ ಮನಸ್ಸಿದ್ದೂ ಕೂಡ ಏನು ಉಪಯೋಗ? ಹಗಲಿರುಳೂ ಕ್ರೂರ ಪರಿಣಾಮದಿಂದ ತಿರುಗಿ ನರಕ ಗತಿಯು ಕಟ್ಟಿಟ್ಟದ್ದೇ ಈ ಪ್ರಕಾರ ನರಕದಲ್ಲಿ, ಪಶುಯೋನಿಯಲ್ಲಿ, ಸ್ಥಾವರ ಯೋನಿಗಳಲ್ಲಿ ಪರಿಭ್ರಮಣ ಮಾಡುತ್ತ ಅನಂತ ಕಾಲ ಹಸಿವು, ನೀರಡಿಕೆ, ಚಳಿ, ಉಷ್ಣ, ಹೊಡೆತ, ಬಡೆತಗಳನ್ನು ಸಹನ ಮಾಡಬೇಕಾಗುತ್ತದೆ ಅದರೊಳಗೂ ನಾಲ್ಕು ಬೀದಿಗಳ ಕೂಟದಲ್ಲಿ ಸಿಕ್ಕ ಬೆಲೆಯುಳ್ಳ ರತ್ನದಂತೆ ದುರ್ಲಭವಾದಂಥ ಮಾನವ ಜನ್ಮವು ಲಭಿಸಿತಸ್ನೋಣ. ಆದರೆ ಅದು ನೀಚ ಕುಲದಲ್ಲಿ ಆದರೆ ಅದೆಲ್ಲವೂ ವ್ಯರ್ಥವೇ ಸರಿ. ಯಾಕೆಂದರೆ ಆ ಕುಲದಲ್ಲಿ ಹುಟ್ಟಿದುದರಿಂದ ಪಾಪದ ಸಂಚಯವಾಗಿ ಪುನಃ ನರಕ ಪ್ರಾಪ್ತಿಯು ಇದ್ದೇ ಇದೆ. ತಿರುಗಿ ನರ ಜನ್ಮವು ಸಹಜವಾಗಿ ಪ್ರಾಪ್ತವಾಗುವುದು ಕಠಿಣವಾಗಿದೆ. ಅದರಲ್ಲೂ

---

1 ಪಂಡಿತ ಸದಾಸುಖಜಿಯವರು ಹೀಗೆ ಸೂಚಿಸಿದ್ದಾರೆ —

ನನ್ನ ಶರೀರ ಬಲವು ಕಡಿಮೆಯಾದುದರಿಂದ ಈ ವಿಷಯಗಳನ್ನು ಸ್ವಲ್ಪ ಸ್ವಲ್ಪ ವರ್ಣಿಸುತ್ತ ಹೋದರೂ ಕೈಯಲ್ಲಿ ತಕ್ಕೊಂಡ ಈ ಗ್ರಂಥದ ಕಾರ್ಯವು ಪೂರ್ಣವಾದೀತೆಂಬ ನಿಶ್ಚಯವು ಇಲ್ಲದಾಗಿದೆ ಅದಕ್ಕಾಗಿ ಈ ಭಾಗವನ್ನು ಇಲ್ಲಿ ವಿಸ್ತರಿಸಲಿಲ್ಲ ಆಯಾ ವಿಷಯಗಳಿಗೆ ಸಂಬಂಧಿಸಿದ ದೊಡ್ಡ ದೊಡ್ಡ ಗ್ರಂಥಗಳು ಇವೆ ಅವುಗಳನ್ನೋದಿ ವಾಚಕರು ತಿಳಿದುಕೊಳ್ಳಬಹುದಾಗಿದೆ

ಆರ್ಯಖಂಡದಲ್ಲಿ ಜನ್ಮವಾಗುವುದು ಇನ್ನೂ ದುರ್ಲಭವಾಗಿದೆ. ಆರ್ಯಖಂಡದಲ್ಲಿ ಏನಾದರೂ ಪೂರ್ವ ಪುಣ್ಯದಿಂದ ಜನ್ಮವಾದರೂ ಅದರಲ್ಲಿ ಉತ್ತಮ ಜಾತಿ, ಉತ್ತಮ ಕುಲಗಳು ಲಭಿಸುವುದು ತೀರ ವಿರಳವಾಗಿದೆ ಭಿಲ್ಲ, ತಳವಾರ, ಚಾಂಡಾಲ, ಚರ್ಮಕಾರ, ಕಟುಕ, ಅಗಸ, ನಾವಲಿಗ, ಕುಂಬಾರ ಮೊದಲಾದ ಅನೇಕ ಕುಲಗಳಿವೆ ಅಕಸ್ಮಾತ್ ಉತ್ತಮ ಕುಲದಲ್ಲಿ ಜನಿಸಿದರೂ ಸಹ ಧನವು ಹತ್ತರ ಇರದಿದ್ದರೆ ಏನು ಮಾಡುವುದು? ಪಶುವಿನಂತೆ ಭಾರವನ್ನು ಹೊರುವುದು; ಇಲ್ಲವೆ ನೀಚ ಕುಲದಲ್ಲಿ ಹುಟ್ಟಿದವರ ಸೇವೆ ಮಾಡುವುದು; ಅಲ್ಲದೆ ಹಗಲೆಲ್ಲ ನೀಚ ಕೆಲಸವನ್ನು ಮಾಡುತ್ತ ಪರಾಧೀನನಾಗಿದ್ದು ಹೊಟ್ಟೆಯನ್ನು ತುಂಬಿಕೊಳ್ಳುವುದು. ಇಂಥ ಸ್ಥಿತಿಯಲ್ಲಿ ಉತ್ತಮ ಕುಲದೊಳಗೆ ಹುಟ್ಟಿದರೂ ಉಪಯೋಗವೇನು? ಇನ್ನು ಅದೊಮ್ಮೆ ಉತ್ತಮ ಕುಲ, ವಿಪುಲ ಧನಗಳೆರಡೂ ಲಭಿಸಿದವೆಂದು ತಿಳಿಯೋಣ ಆಗ ಶರೀರದ ಎಲ್ಲ ಇಂದ್ರಿಯಗಳು ಪರಿಪೂರ್ಣ ಇರುವುದು ಅಪರೂಪ ಅತ್ಯಂತ ಸಿರಿವಂತಿಗೆ ಇದ್ದೂ ಕಿವಿಯಿಲ್ಲದಿದ್ದರೆ ಉಪಯೋಗವೇನು? ಒಂದು ವೇಳೆ ಇಂದ್ರಿಯಗಳು ಪೂರ್ಣವಿದ್ದರೂ ಶರೀರವು ರೋಗಿಯಾಗಿದ್ದುದಾದರೆ ಸ್ವಾಸ್ಥ್ಯವು ಲಭಿಸಿ ಆಯುಷ್ಯವು ಹೇಗೆ ತಾಳೀತು? ಒಂದು ವೇಳೆ ದೀರ್ಘಾಯುಷ್ಯವು ಪ್ರಾಪ್ತವಾದಲ್ಲಿ ಶೀಲವೆಂದರೆ ಮನ-ವಚನ-ಕಾಯಗಳ ನ್ಯಾಯಪೂರ್ವಕ ಪ್ರವೃತ್ತಿಗಳು ಇಲ್ಲದಿದ್ದರೆ ಆ ಆಯುಷ್ಯದ ಲಾಭವಾದರೂ ಏನು? ನ್ಯಾಯ ಪ್ರವೃತ್ತಿ ಇದ್ದರೂ ಸತ್ಸಂಗತಿಯು ಲಭಿಸುವುದು ಕಠಿಣ ಸತ್ಸಂಗತಿ ಇದ್ದೂ ಸಮ್ಯಗ್‌ದರ್ಶನ ಪ್ರಾಪ್ತವಾಗುವುದು ದುರ್ಲಭ. ಸಮ್ಯಕ್ತ್ವವಿದ್ದೂ ಚಾರಿತ್ರವಿರುವುದು ಅಪರೂಪ. ಚಾರಿತ್ರವಿದ್ದೂ ಸಾಯುವ ವರೆಗೆ ಸ್ಥಿರವಾಗಿ ಇಟ್ಟುಕೊಂಡು ಸಮಾಧಿ ಮರಣವನ್ನು ಸಾಧಿಸುವುದು ಇನ್ನೂ ಕಠಿಣವು. ರತ್ನತ್ರಯಗಳು ಪ್ರಾಪ್ತವಾಗಿಯೂ ಯಾವನು ತೀವ್ರ ಕಷಾಯಗಳ ಸ್ವಾಧೀನನಾಗಿರುವನೋ ಅವನು ಸಂಸಾರ ಸಾಗರದಲ್ಲಿ ಮುಳುಗಿಯಾನು ಅವನಿಗೆ ಸಮುದ್ರದಲ್ಲಿ ಬಿದ್ದ ರತ್ನಗಳಂತೆ ರತ್ನತ್ರಯಗಳು ಪುನಃ ಪ್ರಾಪ್ತವಾಗುವುದು ಕಠಿಣವಾಗಿದೆ ಮನುಷ್ಯಗತಿಯಲ್ಲಿ ಮಾತ್ರ ಇವು ಪ್ರಾಪ್ತವಾಗುತ್ತವೆ ಇದೇ ಗತಿಯಲ್ಲಿ ತಪ-ವ್ರತ-ಸಂಯಮಗಳನ್ನು ಧರಿಸಿ ನಿರ್ವಾಣವನ್ನು ಹೊಂದಲಿಕ್ಕೆ ಬರುತ್ತದೆ ಇಂದ ದುರ್ಲಭವಾದ ಮನುಷ್ಯ ಜನ್ಮವು ಲಭಿಸಿದ್ದರೂ ಸಹ ವಿಷಯ ಸುಖದ ಬಲಿಗೆ ಹಲವರು ಬೀಳುತ್ತಾರೆ ಅವರು ತಮ್ಮ ಹತ್ತರ ಇರುವ ಅನಮೂಲ್ಯ ಪ್ರಭಾವಶಾಲಿ ರತ್ನವನ್ನು ಭಸ್ಮ ಮಾಡುವದಕ್ಕಾಗಿ ಸುಟ್ಟು ಹಾಕುತ್ತಾರೆಂದು ತಿಳಿಯಬೇಕು

ವೃತ್ತ ॥ ವರರಾಜ್ಯಂಗಳನೆಯ್ದೆ ಸಾಧಿಸಲು ಬಕ್ಕುಂ ಚಕ್ರವರ್ತಿತ್ವಮುಂ
ಪುರಹೂತತ್ವಮನಾಂತು ಸ್ವರ್ಗದ ಮಹಾಭೋಗೋಪಭೋಗಂಗಳಂ ।
ನಿರುತಂ ಭೋಗಿಸಲಿಕ್ಕಿನೆಲ್ಲ ಸುಲಭಂ ಜೀವಕ್ಕೆ ಸಂಸಾರದೊಳ್
ದೊರಕೊಳ್ಗುಂ ನಲೆ ಬೋಧಿರತ್ನಮೆ ಕರಂ ನೋಡಲ್ ಮಹಾದುರ್ಲಭಂ ॥

—ವಿಜಯಣ್ಣ—ದ್ವಾದಶಾನುಪ್ರೇಕ್ಷೆ—ಬೋಧಿದುರ್ಲಭಾನುಪ್ರೇಕ್ಷೆ

ಪಡೆಯೊಳ್ಬಲ್ಲಿದನಾದೊಡಾ ಪಡೆಯಿನೇಂ ಪಾಪಾರಿಯಂ ಗೆಲ್ವನೇ?
ಕಡುಪಿಂದಂ ಜವನಂ ತೆರಳ್ಚುವನೆ ಬಲ್ಪಿಂ ಮೋಕ್ಷಮಂ ಕೊಂಬನೇ? ।
ಕಡೆಗಾಭೂಪನ ಶಕ್ತಿ ನಾಲ್ಗಲಗೆ ಸಲ್ಗುಂ ಮರ್ತ್ಯಕೀಟಂಗಳೊಳ್
ಬಿಡು ಯೋಗೀಂದ್ರನ ಶಕ್ತಿಗಾವುದು ಸಮಂ ರತ್ನಾಕರಾಧೀಶ್ವರಾ ॥

—ರತ್ನಾಕರ—ರತ್ನಾಕರ ಶತಕ ೭೭

## ೧೨. ಧರ್ಮಭಾವನೆ

ಧರ್ಮದ ಪ್ರಭಾವ—ಧರ್ಮಭಾವನೆಯ ಸ್ವರೂಪವನ್ನು ಸ್ವಲ್ಪದರಲ್ಲಿ ಹೇಳಬೇಕು. ಅದಕ್ಕಾಗಿ ಮೊಟ್ಟಮೊದಲು ಧರ್ಮವೆಂದರೇನು? ಎಂಬುದನ್ನು ವಿಚಾರಮಾಡಲಿಕ್ಕೆ ಬೇಕು ಇದರ ಸ್ವರೂಪವನ್ನು ದಶಲಾಕ್ಷಣಿಕ ಧರ್ಮದ ವಿಷಯವನ್ನೂ ವಿವರಿಸುವಾಗ ವಿಸ್ತಾರವಾಗಿ ಹೇಳಿದೆ. ಧರ್ಮವೆಂದರೆ ಆತ್ಮನ-ಸ್ವಭಾವ ಇದನ್ನು ಸರ್ವಜ್ಞ ವೀತರಾಗದೇವನು ದಶಲಕ್ಷಣ, ರತ್ನತ್ರಯ, ಜೀವದಯಾರೂಪವೆಂದು ಹೇಳಿದ್ದಾನೆ ಇದರ ವಿವೇಚನೆಯು ಪ್ರಸಂಗಾನುಸಾರ ಈ ಗ್ರಂಥದಲ್ಲಿ ಬಂದುಹೋಗಿದೆ ಸಂಸಾರದಲ್ಲಿ ಇಂದ ಪ್ರಕಾರದ ಧರ್ಮವನ್ನು ತಿಳಿದುಕೊಳ್ಳುವ

ಸಾಮಗ್ರಿಗಳು ಪ್ರಾಪ್ತವಾಗುವುದೇ ಕಠಿಣವಾಗಿದೆ. ಅದಕ್ಕಿಂತಲೂ ಧರ್ಮಶ್ರವಣ ಮಾಡುವ ಲಾಭವು ಪ್ರಾಪ್ತವಾಗುವುದು ಇನ್ನೂ ಕಠಿಣ ಇದಕ್ಕಿಂತಲೂ ಧರ್ಮವಂತ ಪುರುಷನ ಸಂಗತಿಯು ಲಭಿಸುವುದು ತೀರ ದುರ್ಲಭವಾಗಿದೆ ಧರ್ಮದ ಮೇಲೆ ಶ್ರದ್ಧೆ, ಧರ್ಮದ ಯಥಾರ್ಥಜ್ಞಾನ, ಧರ್ಮಯುಕ್ತ ಆಚರಣ ಇವು ಎಲ್ಲಿಯಾದರೂ ಒಬ್ಬ—ತೀರ ವಿರಳವಾಗಿ ಪುರುಷನಿಗೆ ಮೋಹಕರ್ಮದ ಮಂದತ್ವದಿಂದಲೂ ಕರ್ಮದ ಉಪಶಮ-ದಿಂದಲೂ ಪ್ರಾಪ್ತವಾದಾವು ಈ ಜೀವವು ಇಂದ್ರಿಯಗಳ ವಿಷಯದ ಮೇಲೆಯೂ ತನ್ನ ಸ್ತ್ರೀ, ಪುತ್ರ, ಮಿತ್ರಾದಿಗಳ ಮೇಲೆಯೂ ಪ್ರೀತಿಯನ್ನು ಮಾಡುತ್ತಿರುತ್ತಾನೆ. ಅಷ್ಟೇ ಪ್ರೀತಿಯನ್ನು ಒಂದು ಜನ್ಮದಲ್ಲಿ ಧರ್ಮದ ಮೇಲೆ ಮಾಡಿದರೆ ಸಂಸಾರದೊಳಗಿನ ಎಲ್ಲ ದುಃಖಗಳು ಇಲ್ಲದಂತೆ ಆಗಿ, ಅಕ್ಷಯ ಸುಖವು ಪ್ರಾಪ್ತವಾದೀತು. ಸಂಸಾರೀ ಜೀವವು ಹಗಲಿರುಳೂ ತನಗೆ ಸುಖವು ಪ್ರಾಪ್ತವಾಗಬೇಕೆಂದು ಇಚ್ಛಿಸುತ್ತದೆ. ಆದರೆ ಧರ್ಮಾಚರಣದ ವಿಷಯದಲ್ಲಿ ಆದರ ಮನಸ್ಸಿನಲ್ಲಿ ಆದರವು ಇಲ್ಲದುದರಿಂದ ಸುಖವು ಎಲ್ಲಿಂದ ಪ್ರಾಪ್ತವಾದೀತು! ಬೀಜವನ್ನು ಬಿತ್ತದಿದ್ದರೆ ಧಾನ್ಯವು ಎಲ್ಲಿಂದ ಪ್ರಾಪ್ತವಾದೀತು! ಸಂಸಾರದಲ್ಲಿ ಇಂದ್ರತ್ವ, ಅಹಮಿಂದ್ರತ್ವ, ತೀರ್ಥಂಕರತ್ವ, ಚಕ್ರವರ್ತಿತ್ವ, ಬಲಭದ್ರತ್ವ, ನಾರಾಯಣತ್ವ ಮೊದಲಾದವುಗಳು ಪ್ರಾಪ್ತವಾಗುತ್ತವೆ ಇವೆಲ್ಲ ಧರ್ಮದ ಫಲಗಳಾಗಿವೆ ಇದೇ ಪ್ರಕಾರ ಇಹಲೋಕದಲ್ಲಿ ಉತ್ತಮ ಕುಲ, ಉತ್ತಮ ರೂಪ, ಬಲ, ಐಶ್ವರ್ಯ, ರಾಜ್ಯ, ಸಂಪತ್ತಿ, ಆಜ್ಞಾ, ಸತ್ಪುತ್ರ, ಸುಸ್ವಭಾವಿ ಸ್ತ್ರೀ, ಹಿತಮಾಡುವ ಮಿತ್ರ, ಇಚ್ಛಿಸಿದ ಕಾರ್ಯವನ್ನು ಸಿದ್ಧಿಗೆ ಒಯ್ಯುವ ಸೇವಕ, ನಿರೋಗಿ ಶರೀರ, ಉತ್ತಮ ಭೋಗೋಪಭೋಗ, ದೇವತೆಗಳಿಗೆ ಸಮಾನವಾದ ನಿಲ್ಲುವ ಮನೆ, ಸತ್ಸಂಗತಿ, ಕ್ಷಮಾ, ವಿನಯ, ಶಾಂತವೃತ್ತಿ, ಮಂದಕಷಾಯ, ಪಾಂಡಿತ್ಯ, ಕವಿತ್ವ, ಚಾತುರ್ಯ, ಹಸ್ತಕಲಾ, ಪೂಜ್ಯತ್ವ, ಲೋಕಮಾನ್ಯತ್ವ, ಕೀರ್ತಿ, ದಾತೃತ್ವ ಔದಾರ್ಯ, ಶೌರ್ಯ ಮೊದಲಾದ ಉತ್ತಮ ಸಾಮಗ್ರಿಗಳು, ಉತ್ತಮ ಗುಣ, ಉತ್ತಮ ಬುದ್ಧಿ, ಉತ್ತಮ ಪ್ರವೃತ್ತಿ ಮೊದಲಾದವುಗಳು ನಮಗೆ ನೋಡಲಿಕ್ಕೂ ಕೇಳಲಿಕ್ಕೂ ದೊರೆಯುತ್ತವೆ ಅವೆಲ್ಲವೂ ಧರ್ಮದ ಪ್ರಭಾವದಿಂದಲೇ ಪ್ರಾಪ್ತವಾಗಿರುತ್ತವೆ ಧರ್ಮದ ಪ್ರಭಾವದಿಂದ ವಿಷಮವಾದುದು ಸುಗಮವಾಗುತ್ತದೆ ದೊಡ್ಡ ದೊಡ್ಡ ಉಪದ್ರವಗಳು ದೂರವಾಗುತ್ತವೆ. ಉದ್ಯೋಗ ಮಾಡದವರಿಗೂ ಸಹ ಲಕ್ಷ್ಮಿಯು ಬಂದು ಮಾಲೆಯನ್ನು ಹಾಕುತ್ತಾಳೆ ಅಗ್ನಿಯು ನೀರಿನಂತೆ ತಣ್ಣಗೆ ಆಗುತ್ತದೆ ಗಾಳಿ, ಮಳೆ, ರೋಗ, ದೇವ, ಸಿಂಹ, ಹುಲಿ, ನದಿ, ಸಮುದ್ರ, ವಿಷ, ಪರಚಕ್ರ, ದುಷ್ಟರಾಜ, ವೈರಿ ಮತ್ತು ಕಳ್ಳರ ಹೆದರಿಕೆಯು ಇರುವದಿಲ್ಲ ಆತ್ಮನಿಗೆ ಅನೇಕ ಪ್ರಕಾರದ ಸುಖ-ಶಾಂತಿಗಳು ಮತ್ತು ಸೌಖ್ಯವು ಪ್ರಾಪ್ತವಾಗುತ್ತದೆ ಅದಕ್ಕಾಗಿ ಸರ್ವಜ್ಞನ ವಚನದ ಮೇಲೆ ವಿಶ್ವಾಸವನ್ನು ಇಡುವಂಥವರು ಧರ್ಮಕ್ಕೆ ಶರಣುಹೋಗಿ, ಅದನ್ನು ಸ್ವೀಕರಿಸಬೇಕು ಆ ಪ್ರಕಾರ ಆಚರಣೆಯನ್ನೂ ಇಡಬೇಕು. ಇದೇ ಯೋಗ್ಯವಾಗಿದೆ

ವೃತ್ತ ॥ ಚೆಲುವು ವಿಲಾಸವಿವೇಕಂ ಪಲ ಪರಿಜನ ಕಾಮಭೋಗಮುಪಭೋಗಂಗಳು ।
ಸಲೆ ರಾಜ್ಯೈಶ್ವರ್ಯಂಗಳು ವಿಲಸತ್‌ಸದ್ಧರ್ಮದಿಂದಮಕ್ಕುಮಮೋಘಂ ॥
ಕೊಲೆಯಾದಿ ಪಾಪನಿಚಯಮ ತೊಲಗಿಸಿ ಸೌಖ್ಯವನೆಮಾಡುಗುಂ ಸದ್ಧರ್ಮಂ ।
ನೆಲಸಿದ ಮೋಹಾಂಧಕಾರವ ಬಲುಹಂ ತೊಲಗಿಸುತ ತರಣಿಯಂದದಿ ಕ್ಷಣದಿಂ ॥

—ವಿಜಯಣ್ಣ —ದ್ವಾದಶಾನುಪ್ರೇಕ್ಷೆ— ಧರ್ಮಾನುಪ್ರೇಕ್ಷೆ

## ಧರ್ಮಧ್ಯಾನದ ಸ್ವರೂಪ

**ಪಿಂಡಸ್ಥ ಧ್ಯಾನ**—ಪಿಂಡಸ್ಥ ಧ್ಯಾನದಲ್ಲಿ ಐದು ಪ್ರಕಾರದ ಧಾರಣೆಗಳನ್ನು ಧರಿಸಬೇಕೆಂದು ಭಗವಂತನ ಉಪದೇಶವಿದೆ ಈ ಧಾರಣೆಯ ಯಥಾರ್ಥ ಸ್ವರೂಪವನ್ನು ತಿಳಿಯುವಂಥ ಸಂಯಮಿ ಪುರುಷನು ಸಂಸಾರ ಬಂಧವನ್ನು ನಾಶಮಾಡಿಕೊಳ್ಳಲು ಶಕ್ಯವಾಗುತ್ತದೆ ಅವು ಪಾರ್ಥಿವೀಧಾರಣಾ, ಆಗ್ನೇಯೀಧಾರಣಾ, ಪವನಧಾರಣಾ, ವಾರುಣೀಧಾರಣಾ, ತತ್ತ್ವರೂಪವತೀ ಧಾರಣಾ ಎಂದು ಐದು ಇವೆ ಇವುಗಳಲ್ಲಿ ಪಾರ್ಥಿವೀ ಧಾರಣೆಯ ಸ್ವರೂಪವು ಹೀಗಿದೆ

**ಪಾರ್ಥಿವೀಧಾರಣಾ**—ಒಂದು ಉಜ್ವಲ, ಕ್ಷೋಭರಹಿತ, ಶಬ್ದರಹಿತ, ಮಧ್ಯಲೋಕ ಪ್ರಮಾಣ ವಿಸ್ತೀರ್ಣ, ಕ್ಷೀರ ಸಮುದ್ರದಲ್ಲಿ ಜಂಬೂದ್ವೀಪದಷ್ಟು, ಕಾಯ್ದ ಸುವರ್ಣದಂತೆ ಯಾವುದರ ಕಾಂತಿಯು ಇದೆಯೋ ಅಂಥ ಕಮಲದ ಕಲ್ಪನೆಯನ್ನು ಮಾಡಬೇಕು ಅದರ ಕೇಸರವು ಪದ್ಮರಾಗ ಮಣಿಯಂತೆ ಇರುವದೆಂದು ಭಾವಿಸಬೇಕು

ಅಲ್ಲದೆ ಅದಕ್ಕೆ ಸಾವಿರ ಪಕ್ಕಳಿಗಳು ಇರುತ್ತವೆಂದು ಕಲ್ಪಿಸುವುದು. ಆ ಕಮಲದ ಮಧ್ಯಬಾಗದಲ್ಲಿ ಮೇರು ಪರ್ವತದಂಥ ತೇಜಃಪುಂಜ ಕರ್ಣಿಕೆಯನ್ನು ಕಲ್ಪಿಸುವುದು. ಅದರಲ್ಲಿ ಶರತ್ಕಾಲದ ಚಂದ್ರನಂಥ ನಿರ್ಮಲ ಸಿಂಹಾಸನದ ಮೇಲೆ ಕ್ಷೋಭರಹಿತ, ರಾಗದ್ವೇಷ ರಹಿತ, ಕರ್ಮನಾಶೋದ್ಯುಕ್ತ, ನಿಶ್ಚಲವಾಗಿ ವಿರಾಜಮಾನನಾದಂಥ ತನ್ನ ಆತ್ಮನ ಚಿಂತನೆಯನ್ನು ಮಾಡಬೇಕು ಇದಕ್ಕೆ ಪಾರ್ಥಿವೀಧಾರಣಾ ಎನ್ನುವರು

ಅಗ್ನಿಧಾರಣಾ— ಪಾರ್ಥಿವೀಧಾರಣಾದ ಅಭ್ಯಾಸವು ದೃಢವಾದ ಮೇಲೆ ಆ ಸ್ಫಟಿಕಮಯ ಸಿಂಹಾಸನದ ಮೇಲೆ ಕುಳಿತು, ತನ್ನ ನಾಭಿ ಮಂಡಲದಲ್ಲಿ ಹದಿನಾರು ಪಕ್ಕಳಿಗಳುಳ್ಳ ಮನೋಹರ ಕಮಲವಿದೆಯೆಂದು ಧ್ಯಾನಿಸಬೇಕು. ಆ ಕಮಲದ ಒಂದೊಂದು ಪಕ್ಕಳಿಯ ಮೇಲೆ ಹದಿನಾರು ಸ್ವರಗಳ ಸಾಲು ಅಂದರೆ ಅ, ಆ, ಇ, ಈ, ಉ, ಊ, ಋ, ೠ, ಲು, ಲೂ, ಎ, ಐ, ಓ, ಔ, ಅಂ, ಅಃ ಗಳನ್ನೂ ಸ್ಥಾಪಿಸಬೇಕು ಆ ಕಮಲದ ಕರ್ಣಿಕೆಯಲ್ಲಿ ಇರುವ 'ಹ' ಅಕ್ಷರ, ರೇಫ, ಬಿಂದು ಮತ್ತು ಅರ್ಧ ಚಂದ್ರಾಕಾರ ಕಲೆಗಳಿಂದ ಕೂಡಿದಂದ ಒಂದು ಬಿಂದುವಿನೊಳಗಿಂದ ಕೋಟಿ ಕಾಂತಿಯಿಂದ ಕೂಡಿದ ಹತ್ತೂ ದಿಕ್ಕುಗಳಲ್ಲಿ ಪಸರಿಸುವಂಥ 'ರ್ಹಂ' ಈ ಮಂತ್ರದ ಚಿಂತನ ಮಾಡಬೇಕು. ಆ ಮೇಲೆ ಆ ರೇಫದೊಳಗಿಂದ ಸಾವಕಾಶವಾಗಿ ಹೊಗೆಯು ಏಳುತ್ತಿದೆ, ಬಳಿಕ ಅಗ್ನಿಯ ಕಣಗಳು ಅದರೊಳಗಿಂದ ಏಳುತ್ತಿವೆ; ಮುಂದೆ ಆ ಮಹಾಮಂತ್ರದ ಧ್ಯಾನದಿಂದ ಜ್ವಾಲೆಯ ಸಮೂಹವೇ ಹೊರಡುತ್ತಿದೆ; ಹೀಗೆ ಕ್ರಮದಿಂದ ಕಲ್ಪನೆಯನ್ನು ಮಾಡುತ್ತ ಹೋಗಬೇಕು ಆ ಜ್ವಾಲಾಸಮೂಹವು ಮೇಲ್ಭಾಗದಲ್ಲಿ ಒಂದೇ ಸವನೆ ಬೆಳೆಯುತ್ತಿದೆ ಅದು ಬೆಳೆಯುತ್ತ ಬೆಳೆಯುತ್ತ ತನ್ನ ಹೃದಯದಲ್ಲಿ ಅಧೋಮುಖವಾಗಿ ಇರುವ ಅಷ್ಟಕರ್ಮರೂಪದ ಎಂಟು ಪಕ್ಕಳಿಗಳು ಇರುವ ಕಮಲವನ್ನು ಭಸ್ಮಮಾಡಿ ಹೊರಗೆ ಬರುತ್ತಿದ್ದು, ಅದು ತ್ರಿಕೋಣಾಕಾರದ ಅಗ್ನಿಮಂಡಳದ ಅಗ್ನಿಯ ಬೀಜಾಕ್ಷರದ ರಕಾರ ಮತ್ತು ಸ್ವಸ್ತಿಕ ಚಿಹ್ನದಿಂದ ಕೂಡಿದ್ದಾಗಿ ತನ್ನ ಜ್ವಾಲೆಗಳಿಂದ ಶರೀರವನ್ನು ಸುಡುತ್ತಿದೆ ಆ ಮೇಲೆ ಆ ಸುವರ್ಣ ಸಮಾನವಾದ ತೇಜಃಪುಂಜ ನಿರ್ಧೂಮ ಅಗ್ನಿಯ ಪ್ರಜ್ವಲಿತವಾಗಿ ಅಂತರಂಗ ಭಾಗದಲ್ಲಿ ಮಂತ್ರರೂಪದಿಂದ ಕರ್ಮದ ದಹನ ಮಾಡುತ್ತಿದೆ, ಮತ್ತು ಬಾಹ್ಯತಃ ಶರೀರವನ್ನು ದಗ್ಧಮಾಡುತ್ತಿದೆ ಎಂಬುದನ್ನು ಮನ್ನಿಸಿ, ಅದಕ್ಕೆ ದಗ್ಧಮಾಡಲಿಕ್ಕೆ ಏನೂ ಉಳಿಯದುದರಿಂದ ಸಾವಕಾಶವಾಗಿ ಅದು ತನ್ನಷ್ಟಕ್ಕೆ ಶಾಂತ ಶಾಂತ-ವಾಗುತ್ತಿದೆ ಹೀಗೆ ಕಲ್ಪನೆಯನ್ನು ಮಾಡಬೇಕು ಇದಕ್ಕೆ ಅಗ್ನಿಧಾರಣೆ ಎನ್ನುತ್ತಾರೆ.

ಪವನ ಧಾರಣಾ—ಪವನ ಧಾರಣೆಯಲ್ಲಿ ಪವನವು (ವಾಯು) ಮಹಾನ್ ವೇಗವಾನ್ ಮತ್ತು ಬಲವಾನ್ ಇದೆಯೆಂದು ಕಲ್ಪಿಸಬೇಕು ಅದು ದೇಹ ಸಮೂಹವನ್ನು ಚಲಿಸುವಂಥದು, ಮೋಡವನ್ನು ಕದಲಿಸುವಂಥದು, ಸಮುದ್ರದಲ್ಲಿ ಅನೇಕ ತೆರೆಗಳನ್ನು ಉತ್ಪನ್ನ ಮಾಡುವಂಥದು, ಮೂರು ಲೋಕದಲ್ಲಿ ಸಂಚಾರ ಮಾಡುವಂಥದು, ದಿಶೆಗಳ ಮುಖದಲ್ಲಿ ಪ್ರವೇಶ ಮಾಡುವಂಥದು, ಜಗತ್ತಿನ ಮಧ್ಯ ಭಾಗವನ್ನು ವ್ಯಾಪಿಸುವಂಥದು, ಪೃಥ್ವಿಯ ಕೆಳಗೂ ಗಮನ ಮಾಡುವಂಥದು, ಸಂಪೂರ್ಣ ಆಕಾಶವೆಲ್ಲ ವ್ಯಾಪಿಸಿದಂಥದು ಇದೆ ಎಂದು ಕಲ್ಪಿಸಬೇಕು. ಆ ಮೇಲೆ ಆ ಪ್ರಬಲ ವಾಯುವು ಕರ್ಮರೂಪದ ಧೂಳು ಮತ್ತು ಶರೀರ ಇವುಗಳನ್ನು ಇಲ್ಲದಂತೆ ಮಾಡಿ, ಸಾವಕಾಶವಾಗಿ ಶಾಂತವಾಗುತ್ತಿದೆಯೆಂದು ಧ್ಯಾನಿಸಬೇಕು.

ವಾರುಣೀ ಧಾರಣಾ—ಈ ಧಾರಣಾದಲ್ಲಿ ಆಕಾಶವು ಎಲ್ಲೆಡೆಗೂ ಇಂದ್ರಧನುಷ್ಯ, ಮಿಂಚು, ಗುಡುಗುಗಳನ್ನು ಉತ್ಪನ್ನ ಮಾಡುವ ಮೋಡಗಳಿಂದ ತುಂಬಿದೆ ಅಲ್ಲದೆ ಮುತ್ತಿನಂತ ನಿರ್ಮಲ ವೃಷ್ಟಿಯನ್ನು ಸುರಿಸುತ್ತಿದೆಯೆಂದು ಕಲ್ಪಿಸಬೇಕು. ಆ ಮೇಲೆ ವರುಣಬೀಜಾಕ್ಷರ ಮಂಡಿತ, ಅಮೃತ ಸಮಾನವಾದ ಜಲದಿಂದ ತುಂಬಿದ ಆಕಾಶದಲ್ಲಿ, ಅರ್ಧ ಚಂದ್ರಾಕಾರದ ವರುಣಪುರವಿದೆಯೆಂಬುದನ್ನು ಮನಸ್ಸಿನಲ್ಲಿ ತಂದು, ಅದು ಅಚಿಂತ್ಯ ಪ್ರಭಾವಿ ಮತ್ತು ದಿವ್ಯ ಧ್ವನಿ ರೂಪದ ನೀರಿನಿಂದ ಶರೀರದೊಳಗಿಂದ ಉತ್ಪನ್ನವಾಗುವ ಎಲ್ಲ ರಜದ-ಧೂಳಿಯ-ಪ್ರಕ್ಷಾಲನೆಯನ್ನು ಮಾಡುತ್ತಿದೆಯೆಂದು ಚಿಂತಿಸಬೇಕು ಇದಕ್ಕೆ ವಾರುಣೀ ಧಾರಣಾ ಎನ್ನುವರು.

ತತ್ತ್ವರೂಪವತೀ ಧಾರಣಾ—ತರುವಾಯ ತತ್ತ್ವರೂಪಿ ಧಾರಣೆಯನ್ನು ಚಿಂತಿಸಬೇಕು. ಇದರಲ್ಲಿ ಸಿಂಹಾಸನದ ಮೇಲೆ ವಿರಾಜಮಾನ, ದಿವ್ಯ ಅತಿಶಯಗಳಿಂದ ಕೂಡಿದ, ಪಂಚಕಲ್ಯಾಣಿಕಗಳ ಮಹಿಮೆಯನ್ನು ಧಾರಣ ಮಾಡುವ, ನಾಲ್ಕು ಪ್ರಕಾರದ ದೇವ ಸಮೂಹದಿಂದ ವಂದನೀಯ, ಸಂಪೂರ್ಣ ಕರ್ಮರಹಿತ, ಅತಿಶಯ ನಿರ್ಮಲ, ಪ್ರಕಟ ಪುರುಷಾಕಾರ, ಸಪ್ತಧಾತು ರಹಿತ ಶರೀರವಿರುವ, ಹುಣ್ಣಿವೆಯ ಚಂದ್ರನಂಥ ಕಾಂತಿ ಇರುವ, ಸರ್ವಜ್ಞರೂಪ ನಮ್ಮ ಆತ್ಮನು ಇರುವನು ಹೀಗೆ ಚಿಂತಿಸಬೇಕು

ಈ ಪ್ರಕಾರ ಐದು ಧಾರಣೆಗಳು ಇರುವಂಥ ಪಿಂಡಸ್ಥ ಧ್ಯಾನದ ಚಿಂತನೆಯನ್ನು ಮಾಡುವವದರಲ್ಲಿ ಯಾವ ಯೋಗಿಯು ತನ್ನ ಮನವನ್ನು ನಿಶ್ಚಲಗೊಳಿಸುವನೋ ಅವನಿಗೆ ಸಂಸಾರ ಬಂಧನವನ್ನು ನಷ್ಟಗೊಳಿಸಲಿಕ್ಕೆ ಬರುತ್ತದೆ. ಈ ಪಿಂಡಸ್ಥ ಧ್ಯಾನದಲ್ಲಿ ತನ್ನ ಅಪ್ರತಿಮ ತೇಜದಿಂದ ಜಗತ್ತಿಗೆ ಆಲ್ಹಾದವನ್ನು ಉತ್ಪನ್ನ ಮಾಡುವಂಥ, ಸರ್ವಜ್ಞರಿಗೆ ಸಮಾನ, ಮೇರು ಪರ್ವತದ ಶಿರೋಭಾಗದಲ್ಲಿರುವ ಸಿಂಹಾಸನದ ಮೇಲೆ ವಿರಾಜಮಾನರಾಗಿರುವ, ಎಲ್ಲ ದೇವತೆ-ಗಳಿಂದಲೂ ವಂದ್ಯನಾದಂಥ ನನ್ನ ಆತ್ಮಸಿದ್ಧಾನೆ. ಈ ಭಾವವನ್ನು ದೃಢವಾಗಿ ಚಿಂತನ ಮಾಡುವುದರಿಂದ ಜಿನಾಗಮ ರೂಪದ ಮಹಾಸಮುದ್ರದ ಪಾರಗಾಮಿಯಾಗುತ್ತಾನೆ ಈ ಧ್ಯಾನದ ಪ್ರಭಾವನೆಯಿಂದಲೇ ದುಷ್ಟಕೃತ ವಿದ್ಯಾಮಂತ್ರ ತಂತ್ರಾದಿ ಕ್ರೂರ ಕ್ರಿಯೆಗಳು ನಾಶ ಹೊಂದುತ್ತವೆ ಸಿಂಹ, ಹುಲಿ, ಹಾವು, ಗಂಡಕ, ಆನೆ ಮೊದಲಾದ ಕ್ರೂರ ಜೀವಗಳು ಶಾಂತವಾಗುತ್ತವೆ ಅವು ಯಾವ ಉಪದ್ರವವನ್ನು ಮಾಡಲು ಶಕ್ಯವಾಗುವದಿಲ್ಲ. ಭೂತ, ಪಿಶಾಚ, ರಾಕ್ಷಸ, ಗ್ರಹ, ಶಾಕಿನಿ ಮೊದಲಾದ ದುಷ್ಟ ಮತ್ತು ಕ್ರೂರ ದೇವತೆಗಳ ಕ್ರೂರ ವಾಸನೆಗಳ ಅಭಾವವಾಗುತ್ತದೆ.

## ಪದಸ್ಥ ಧ್ಯಾನ

ಪದಸ್ಥ ಧ್ಯಾನದ ಸ್ವರೂಪ—ಇನ್ನು ಮುಂದೆ ಪದಸ್ಥ ಧಾನ್ಯದ ಸ್ವರೂಪವನ್ನು ನೋಡೋಣ ಪೂರ್ವಾಚಾರ್ಯರು ಪ್ರಸಿದ್ಧ ಸಿದ್ಧಾಂತದಲ್ಲಿ ಯಾವ ಯಾವ ಮಂತ್ರಗಳನ್ನು ಬರೆದಿರುವರೋ ಅವುಗಳ ಚಿಂತನೆಯನ್ನು ಮಾಡುವದಕ್ಕೆ ಪದಸ್ಥ ಧ್ಯಾನವೆನ್ನುತ್ತಾರೆ. ಆರಂಭದೊಳಗೆ ನಾಭಿ ಕಮಲದಲ್ಲಿ ಹದಿನಾರು ಪಕ್ಕಳಿಗಳ ಒಂದು ಕಮಲವಿದೆಯೆಂದು ಕಲ್ಪಿಸಬೇಕು. ತರುವಾಯ ಅದರ ಪ್ರತಿಯೊಂದು ಎಲೆಯ ಮೇಲೆ ಹದಿನಾರು ಸ್ವರಗಳ ಭ್ರಮಣ ಮಾಡುವ ಒಂದು ಪಂಕ್ತಿಯಿದೆ ಆ ಹದಿನಾರು ಸ್ವರಗಳೆಂದರೆ ಅ, ಆ, ಇ, ಈ, ಉ, ಊ, ಋ, ೠ, ಲು, ಲೂ, ಎ, ಏ, ಓ, ಔ, ಅಂ, ಅಃ ಇವು ಆಗಿವೆ ಆ ಮೇಲೆ ತನ್ನ ಹೃದಯದಲ್ಲಿ ಇಪ್ಪತ್ನಾಲ್ಕು ಪಕ್ಕಳಿಗಳ ಒಂದು ಕಮಲವನ್ನು ಕಲ್ಪಿಸಬೇಕು ಇಪ್ಪತ್ನಾಲ್ಕು ಪಕ್ಕಳಿಗಳು ಒಂದು ಕರ್ಣಿಕೆ ಸೇರಿ ಇಪ್ಪತ್ತೈದು ಸ್ಥಾನಗಳನ್ನು ಕಲ್ಪಿಸಿ, ಅವುಗಳ ಮೇಲೆ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಡ, ಢ, ಣ, ತ, ಥ, ದ, ಧ, ನ; ಪ, ಫ, ಬ, ಭ, ಮ ಈ ಅಕ್ಷರಗಳನ್ನು ಕಲ್ಪಿಸಬೇಕು. ಆ ಮೇಲೆ ಮುಖದಲ್ಲಿ ಎಂಟು ಪಕ್ಕಳಿಗಳ ಒಂದು ಕಮಲ-ವಿದೆಯೆಂದು ಕಲ್ಪನೆಯನ್ನು ಮಾಡಿ, ಅದರ ಎಂಟೂ ಪಕ್ಕಳಿಗಳ ಮೇಲೆ 'ಯ, ರ, ಲ, ವ, ಶ, ಷ, ಸ, ಹ' ಈ ಎಂಟು ಅಕ್ಷರಗಳು ಪ್ರದಕ್ಷಿಣೆಯ ಹಾಗೆ ತಿರುಗುತ್ತಿರುವವೆಂದು ಧ್ಯಾನಿಸಬೇಕು ಈ ಅನಾದಿ ಸಿದ್ಧ ವರ್ಣಮಾತೃಕೆಗಳ ಸ್ಮರಣ ಮಾಡುವಂಥ ಪುರುಷನಿಗೆ ಶ್ರುತಜ್ಞಾನದ ಪೂರ್ಣ ಜ್ಞಾನವಾಗುತ್ತದೆ ಈ ವರ್ಣಮಾತೃಕ ಜ್ಞಾನದ ಪ್ರಭಾವದಿಂದ ಕಳೆದ ವಸ್ತುವಿನ ಜ್ಞಾನವಾಗುತ್ತದೆ ಕ್ಷಯರೋಗ, ಅರುಚಿ, ಮಂದಾಗ್ನಿ, ಬಿಳುಪು, ಉದರ, ಶ್ವಾಸ, ಕೆಮ್ಮು ಮೊದಲಾದ ರೋಗಗಳು ಇದ್ದರೆ ಅವು ಇಲ್ಲದಂತೆ ಆಗುತ್ತವೆ ಇದಲ್ಲದೆ ಅಸಾಮಾನ್ಯ ವಕ್ತೃತ್ವ, ಮಹಂತ ಪುರುಷರಿಂದ ಪೂಜ್ಯತ್ವಗಳು ಪ್ರಾಪ್ತವಾಗಿ ಉತ್ತಮ ಗತಿಯು ಲಭಿಸುತ್ತದೆ. ಪರಮಾಗಮದಲ್ಲಿ ಮೂವತ್ತೈದು ಅಕ್ಷರಗಳ ಮಂತ್ರ 'ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸವ್ವಸಾಹೂಣಂ' ಮತ್ತು ಹದಿನಾರು ಅಕ್ಷರಗಳ ಮಂತ್ರ 'ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಭ್ಯೋ ನಮಃ' ಈ ಪ್ರಕಾರ ಹೇಳಲಾಗಿದೆ ಇವುಗಳನ್ನು ಧ್ಯಾನಿಸಬೇಕು. ಇದೇ ಪ್ರಕಾರ 'ಅರಹಂತಸಿದ್ಧ' ಈ ಆರು ಅಕ್ಷರಗಳ ಇಲ್ಲವೆ 'ಣಮೋ ಸಿದ್ಧಾಣಂ' ಈ ಐದು ಅಕ್ಷರಗಳ ಅಥವಾ 'ಅರಹಂತ' ಎಂಬ ನಾಲ್ಕು ಅಕ್ಷರಗಳ, ಅಥವಾ 'ಸಿದ್ಧ' ಎಂಬ ಎರಡು ಅಕ್ಷರಗಳ, ಇಲ್ಲವೆ 'ಓಂ' ಎಂಬ ಒಂದು ಅಕ್ಷರದ ಮಂತ್ರವನ್ನು ಧ್ಯಾನಿಸಬೇಕು 'ಣಮೋ ಅರಿಹಂತಾಣಂ' ಎಂಬ ಸಪ್ತಾಕ್ಷರಿ ಮಂತ್ರ, ಇಲ್ಲವೆ 'ಅಸಿಆಉಸಾ' ಎಂಬ ಪಂಚಾಕ್ಷರಿ ಮಂತ್ರವು ಪಂಚ ಪರಮೇಷ್ಠಿಗಳ ವಾಚಕವಾಗಿದೆ ಇದೇ ಪ್ರಕಾರ ಅನೇಕ ಮಂತ್ರಗಳು ಇವೆ ಅವೆಲ್ಲವುಗಳನ್ನು ಸುರೂಪ ದೇಶದಿಂದ ತಿಳಿದುಕೊಂಡು ಅವುಗಳ ಧ್ಯಾನವನ್ನು ಮಾಡಬೇಕು 'ಚತ್ತಾರಿ ಮಂಗಲಂ, ಅರಿಹಂತ ಮಂಗಲಂ, ಸಿದ್ಧ ಮಂಗಲಂ, ಸಾಹೂ ಮಂಗಲಂ, ಕೇವಲಿ ಪಣ್ಣತ್ತೋ ಧಮ್ಮೋ ಮಂಗಲಂ' ಈ ಮಂಗಲ ಪದಗಳು ಮತ್ತು 'ಚತ್ತಾರಿ ಲೋಗುತ್ತಮಾ, ಅರಿಹಂತ ಲೋಗುತ್ತಮಾ, ಸಾಹೂ ಲೋಗುತ್ತಮಾ, ಕೇವಲಿ ಪಣ್ಣತ್ತೋ ಧಮ್ಮೋ ಲೋಗುತ್ತಮಾ' ಈ ನಾಲ್ಕು ಉತ್ತಮ ಪದಗಳು ಮತ್ತು

'ಚತ್ತಾರಿ ಸರಣಂ ಪವ್ವಜ್ಜಾಮಿ, ಅರಿಹಂತ ಸರಣಂ ಪವ್ವಜ್ಜಾಮಿ, ಸಿದ್ಧ ಸರಣಂ ಪವ್ವಜ್ಜಾಮಿ, ಸಾಹೂ ಸರಣಂ ಪವ್ವಜ್ಜಾಮಿ, ಕೇವಲಿ ಪಣ್ಣತ್ತೋ, ಧಮ್ಮೋ ಸರಣಂ ಪವ್ವಜ್ಜಾಮಿ' ಈ ನಾಲ್ಕು ಶರಣ ಪದಗಳನ್ನು ಕರ್ಮ ಪಟಲವು ನಷ್ಟವಾಗುವದಕ್ಕಾಗಿ ನಿತ್ಯ ಧ್ಯಾನಿಸಬೇಕು ಮೂರು ಲೋಕದ ಎಲ್ಲ ಪದಾರ್ಥಗಳಲ್ಲಿ ಈ ನಾಲ್ಕು ಪದಗಳೇ ಮಂಗಲಕರವಾಗಿವೆ ಇವು ನಾಲ್ಕೇ ಉತ್ತಮವಾಗಿವೆ. ಇವು ನಾಲ್ಕೇ ಶರಣು ಹೋಗಲಿಕ್ಕೆ ಯೋಗ್ಯವಾಗಿವೆ ಇದರ ಮರೆವು ಎಂದೂ ಆಗಗೊಡಬಾರದು. ಈ ಪ್ರಕಾರ ಅನೇಕ ಮಂತ್ರಗಳು ಜೀವದ ರಾಗ-ದ್ವೇಷ-ಮೋಹಾದಿ ವಿಕಾರಗಳನ್ನು ನಾಶ ಮಾಡಲಿಕ್ಕೆ ಕಾರಣವಾಗಿವೆ ಮೇಲಾಗಿ ವೈರ-ವಿರೋಧದುರ್ಧ್ಯಾನಾದಿಗಳನ್ನು ಇಲ್ಲದಂತೆ ಮಾಡಿ ಪರಮ ಶಾಂತ ಭಾವವನ್ನು ಉತ್ಪನ್ನ ಮಾಡುವಂಥವಾಗಿವೆ ಈ ಎಲ್ಲವುಗಳ ವಿಷಯ ಪ್ರೀತಿಯು ಕಡಿಮೆಯಾಗಬೇಕು, ಪಂಚೇಂದ್ರಿಯಗಳ ವಿಷಯವನ್ನು ಗೆಲ್ಲಲಿಕ್ಕೆ ಬರಬೇಕು, ವೀತರಾಗತ್ವವು ಬೆಳೆಯಬೇಕು, ಪರವಸ್ತುವಿನ ಮೇಲಿನ ಇಚ್ಛೆಯು ನಷ್ಟವಾಗಬೇಕು, ಈ ಅರ್ಥಗಳನ್ನು ಗುರೂಪದೇಶಕ್ಕನುಸರಿಸಿ ಧ್ಯಾನ ಮಾಡಬೇಕು ಈ ಪ್ರಕಾರ ಧ್ಯಾನ, ಜಪ ಜಾಪ್ಯಗಳನ್ನು ಮಾಡುವವರ ಕರ್ಮವು ನಿರ್ಜರೆಯಾಗಿ ಕ್ರಮದಿಂದ ಸಂಸಾರ ಪರಿಭ್ರಮಣದ ಅಭಾವವಾಗುತ್ತದೆ ಇದಕ್ಕೆ ವಿಪರೀತವಾಗಿ ರಾಗ-ದ್ವೇಷಗಳಿಗೆ ವಶನಾಗಿ ಯಾವನು ಜಾರಣ, ಮಾರಣ, ಉಚ್ಚಾಟನ, ವಶೀಕರಣ ಮೊದಲಾದವುಗಳನ್ನು ಮಾಡುವನೋ ಅವನು ಘೋರ ಸಂಸಾರ ಪರಿಭ್ರಮಣಕ್ಕೆ ಕಾರಣವಾದಂಥ ಮಿಥ್ಯಾದರ್ಶನವೇ ಮೊದಲಾದ ಅಶುಭ ಕರ್ಮಗಳನ್ನು ಕಟ್ಟಿಕೊಳ್ಳುತ್ತಾನೆ ಇಂಥ ಅಶುಭ ಕರ್ಮಗಳು ವಿಷಯೋಪಭೋಗಕ್ಕಾಗಿ ಶತ್ರುಗಳನ್ನು ನಾಶ ಮಾಡುವುದರಿಂದಲೂ ರಾಜ್ಯೈಶ್ವರ್ಯವು ಪ್ರಾಪ್ತವಾಗಲೆಂದು ಜಪ-ಜಾಪ್ಯಗಳನ್ನು ಮಾಡುವುದರಿಂದಲೂ ಇದೇ ಕಾರಣಗಳಿಗಾಗಿ ಮಂತ್ರಧ್ಯಾನ, ತಪಸ್ಸುಗಳನ್ನು ಮಾಡುವುದ-ರಿಂದಲೂ ಕಟ್ಟುತ್ತವೆ ಸುಳ್ಳು ವಾಸನೆ, ಸಳ್ಳು ಧ್ಯಾನ, ವ್ಯಂತರ ದೇವ, ದೇವಿ ಯಕ್ಷಿಣಿ ಮೊದಲಾದ ಕುದೇವಗಳ ಧ್ಯಾನ ಮಾಡಿ ತನ್ನ ಪರಿಣಾಮವನ್ನು ಜ್ಞಾನ-ದರ್ಶನದಿಂದ ಪರಾಙ್ಮುಖಗೊಳಿಸುವುದರಿಂದ ಸಂಸಾರ ಬಂಧವು ಆಗುತ್ತದೆ ಎಲ್ಲಿಯಾದರೂ ಒಬ್ಬರಿಗೆ ಚಿತ್ತದ ಏಕಾಗ್ರತಾರೂಪ ತಪಶ್ಚರಣದ ಪ್ರಭಾವದಿಂದ ಇಲ್ಲವೆ ಮಂದ ಕಷಾಯದ ಪ್ರಭಾವದಿಂದ ಅಥವಾ ಶುಭ ಕರ್ಮದ ಉದಯದಿಂದ ಸುಳ್ಳು ವಿದ್ಯೆಯು ಪ್ರಾಪ್ತವಾಯಿತೆನ್ನೋಣ ಆದರೆ ಅದರಿಂದ ಅವನಿಗೆ ವಿಷಯಕಷಾಯದ ವೃದ್ಧಿ ಮತ್ತು ಅಭಿಮಾನಗಳೇ ಪ್ರಾಪ್ತವಾಗುತ್ತವೆ. ಆದರಿಂದ ಸಮ್ಯಕ್ ಶ್ರದ್ಧಾನ ಜ್ಞಾನ ಆಚರಣೆಗಳ ಘಾತವಾಗಿ ಪಾಪಪ್ರವೃತ್ತಿಯಿಂದ ದುರ್ಗತಿಗೆ ಹೋಗಬೇಕಾಗುತ್ತದೆ ಅದಕ್ಕಾಗಿ ವೀತರಾಗತೆಯನ್ನು ನಷ್ಟಗೊಳಿಸುವ ಸುಳ್ಳು ಮಂತ್ರ, ಯಂತ್ರ, ಮುದ್ರಾ, ಮಂಡಲ, ಧೂಪ ಮೊದಲಾದ ಕೃತಿಗಳನ್ನು ತ್ಯಾಗಮಾಡಬೇಕು ಮೋಹರೂಪೀ ಅಗ್ನಿಯಿಂದ ದಗ್ಧವಾಗುವ ಈ ಜಗತ್ತಿನಲ್ಲಿ ಕಷಾಯಗಳ ತ್ಯಾಗಮಾಡಿ ಆತ್ಮಕಲ್ಯಾಣವನ್ನು ಮಾಡಿಕೊಳ್ಳುವ ಪ್ರಾಣಿಯು ಕ್ವಚಿತ್ತಾಗಿ ಕಂಡು ಬರುತ್ತದೆ ಯಾರು ಈ ಪ್ರಕಾರ ಕಷಾಯಗಳನ್ನು ಗೆಲ್ಲುವರೋ ಅವರೇ ಸಂಸಾರದಿಂದ ಮುಕ್ತರಾಗುತ್ತಾರೆ. ಉಳಿದ ಸಾವಿರಾರು ಕಷ್ಟ ನಷ್ಟಗಳನ್ನು ಸಹಿಸಿ ಅನೇಕ ಪ್ರಕಾರದ ಆಧಿವ್ಯಾಧಿಗಳಿಂದ ವ್ಯಾಪಿಸಿ, ರಾಗ-ದ್ವೇಷ ಮೋಹರೂಪೀ ಮದಿರೆಯನ್ನು ಸೇವಿಸಿ, ಅತಿನಿಂದ್ಯವಾದಂಥ ಮನೆಯಲ್ಲಿ ವಾಸಿಸುವ ಮಹಾಬುದ್ಧಿವಂತ ಪುರುಷನಿಗೂ ಸಹ ಪ್ರಮಾದಗಳನ್ನು ಗೆದ್ದು ಚಂಚಲ ಮನವನ್ನು ವಶ ಮಾಡಿಕೊಳ್ಳಲಿಕ್ಕೆ ಬರುವದಿಲ್ಲ. ಗೃಹಸ್ಥಾಶ್ರಮದಲ್ಲಿ ಅನೇಕ ಪ್ರಕಾರದ ಪರಿಗ್ರಹಗಳ ಸಂಯೋಗವು ಇರುತ್ತದೆ ಅದರೊಳಗಿನ ಪ್ರತಿಯೊಂದು ವಸ್ತುವಿನ ಮೇಲಿನ ಪ್ರೇಮದಿಂದಲೂ ಆಶಾರೂಪೀ ಪಿಶಾಚಿಯು ಹಿಡಿದುದರಿಂದಲೂ ಸ್ತ್ರೀಯ ಪ್ರೇಮದಿಂದ ಅಂಧನಾದಂಥ ಜೀವವು ಆತ್ಮನ ಹಿತವು ಯಾವುದರಲ್ಲಿದೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಸಮರ್ಥವಾಗುವದಿಲ್ಲ ಇದೇ ಪ್ರಕಾರ ಗೃಹಸ್ಥಾಶ್ರಮದಲ್ಲಿ ಹಗಲಿರುಳೂ ಆರ್ತಧ್ಯಾನವೆಂಬುದೇ ಒಂದು ಅಗ್ನಿ, ಅದರಿಂದ ಪ್ರಜ್ವಲಿತವಾದಂಥ ಕುವಾಸನೆಗಳೆಂಬ ಹೊಗೆ, ಇದರಿಂದ ಜೀವರ ಜ್ಞಾನರೂಪೀ ನೇತ್ರವು ಮುಚ್ಚಿರುವುದೋ ಮತ್ತು ನಾನಾ ವಿಧ ಚಿಂತೆಯೆಂಬ ಜ್ವರದಿಂದ ಯಾರ ಆತ್ಮವು ನಿಶ್ಚೇಷ್ಟವಾಗಿರುವುದೋ, ಅವರಿಗೆ ಎಂದೂ ಧ್ಯಾನದ ಸಿದ್ಧಿಯು ಆಗುವದಿಲ್ಲ. ಈ ಪ್ರಾಣಿಯು ಆಪತ್ತುಗಳೆಂಬ ಕೆಸರಿನಲ್ಲಿ ಸಿಕ್ಕು ಪ್ರಬಲ ರಾಗರೂಪೀ ಪಂಜರದಲ್ಲಿ ಪರಿಗ್ರಹವೆಂಬ ವಿಷದಿಂದ ಮೂರ್ಛಿತನಾಗಿ ಅನೇಕ ಪೀಡೆಗಳನ್ನು ಅನುಭವಿಸುತ್ತಿದ್ದಾನೆ ಅವನಿಗೆ ತನ್ನ ಆತ್ಮನ ಹಿತ ಮಾಡುವಂಥ ಧ್ಯಾನವನ್ನು ಹೇಗೆ ಸಾಧಿಸಲಿಕ್ಕೆ ಬಂದೀತು? ಇಂಥವನು ಆರಂಭ ಪರಿಗ್ರಹದಲ್ಲಿ ಮಮತ್ವ ಬುದ್ಧಿಯನ್ನು ಇಟ್ಟು ಸ್ವತಃ ತನ್ನನ್ನೇ ಕಾಸು ಕಟ್ಟಿಕೊಂಡು ಪರಾಧೀನನಾಗುತ್ತಿದ್ದಾನೆ ರಾಗ-ದ್ವೇಷಾದಿ ವೈರಿಗಳ ನಾಶವನ್ನು ಗೃಹತ್ಯಾಗಿ ತಪಸ್ವಿಗಳ ಮೂಲಕವಾಗಿ ಇದರಿಂದ

ಮಾಡಲಿಕ್ಕೆ ಬರುವದಿಲ್ಲ. ತಪಸ್ವಿಯಾಗಿಯೂ ಸಹ ಯಥಾರ್ಥ ತತ್ತ್ವಗಳನ್ನು ಅರಿಯದೆ ಹೋದರೆ ಅವನು ಮಿಥ್ಯಾಮಾರ್ಗಿ ಎನಿಸುತ್ತಾನೆ ಅವನಿಗೂ ಧ್ಯಾನ ಸಿದ್ಧಿಯು ಆಗುವುದಿಲ್ಲ. ಯತಿತ್ವವನ್ನು ಸ್ವೀಕಾರ ಮಾಡಿದನಾದರೂ ಪೂರ್ವಾಪರ ವಿರೋಧಕವಾದಂಥ ತತ್ತ್ವಜ್ಞಾನವನ್ನು ಮನಸ್ಸಿನಲ್ಲಿ ಗ್ರಹಿಸಿದರೆ ಅವನಿಗೂ ಧ್ಯಾನ ಸಿದ್ಧಿಯು ಆಗಲಾರದು ಸಂಪೂರ್ಣವಾಗಿ ಏಕಾಂತವನ್ನು ಗ್ರಹಣ ಮಾಡುವಂಥ ಪಾಖಂಡೀ ಜನರಿಗೆ ಅನೇಕಾಂತ ರೂಪೀ ವಸ್ತುವಿನ ಜ್ಞಾನವಾಗುವುದು ಶಕ್ಯವಿಲ್ಲ ಅವರಿಗೆ ಧ್ಯಾನವು ಎಲ್ಲಿಂದ ಆದೀತು? ಜಿನೇಂದ್ರನ ಆಜ್ಞೆಗೆ ಅನುಸರಿಸಿ ನಡೆಯದಂಥವರು ಮುನಿಲಿಂಗವನ್ನು ಧಾರಣ ಮಾಡಿದ್ದರೂ ಮನದ ಕುಟಿಲತೆಯನ್ನು ಬಿಡದೆ ಇರುವರು ಇವರು ಶಿಷ್ಯ ಮೊದಲಾದವರನ್ನು ಹೆಚ್ಚಿಸಿ ಅವರಿಂದ ತಮ್ಮ ಶ್ರೇಷ್ಠತೆ, ಕೀರ್ತಿಗಳು ಬೆಳೆಯುವವೆಂದು ಭಾವಿಸುತ್ತಾರೆ ಸ್ವಂತದ ಕೀರ್ತಿ, ಪೂಜ್ಯತೆ, ಅಭಿಮಾನ, ಸತ್ಕಾರ ಇವೆಲ್ಲವೂ ಪುಷ್ಟವಾಗಬೇಕೆಂದು ಮನಸ್ಸಿನಲ್ಲಿ ಇಚ್ಛಿಸುತ್ತಾರೆ. ಜನ ಮನರಂಜನೆಯನ್ನು ಮಾಡುವುದರ ಕಡೆಗೆ ಹೆಚ್ಚಿಗೆ ಪ್ರವೃತ್ತಿಯು ಇರುತ್ತದೆ ಜ್ಞಾನನೇತ್ರವನ್ನು ತೆರೆದಿಡುವುದರ ಕಡೆಗೆ ಲಕ್ಷ್ಯವು ಕಡಿಮೆ ಇರುತ್ತದೆ ಗರ್ವದಿಂದ ಶರೀರದಲ್ಲಿ ಸೆಡವು ತುಂಬಿರುತ್ತದೆ. ಸವಿ ಸವಿ ತಿನ್ನುವ ಲಾಲಸೆಯು ಅಂತಃಕರಣದಲ್ಲಿ ಮೇಲಿಂದ ಮೇಲೆ ಉತ್ಪನ್ನವಾಗುವುದು ಪಕ್ಷಪಾತ ಮಾಡುವ ರೂಢಿಯು ಬಿಡುವದಿಲ್ಲ. ಸ್ವಭಾವದೊಳಗಿನ ಕೆಟ್ಟ ರೀತಿ ನೀತಿಗಳು ಇಲ್ಲದಂತೆ ಆಗದೆ ಇರುತ್ತವೆ. ಈ ಎಲ್ಲ ಗುಣಗಳಿದ್ದವನು ಮುನಿವೇಷವನ್ನು ಧಾರಣ ಮಾಡಿದರೂ ಸಹ ಅವನಿಗೆ ಧ್ಯಾನಸಿದ್ಧಿಯು ಎಂದೂ ಆಗಲಾರದು ಯಾಕೆಂದರೆ ಕಾಮ, ಕ್ರೋಧ, ಲೋಭ ಮೋಹಗಳು ಯಾರಲ್ಲಿ ಪೂರ್ಣ ತುಂಬಿರುವವೋ ಮತ್ತು ಯಾರ ಪ್ರವೃತ್ತಿಯು ಕುಶಾಸ್ತ್ರಗಳ ಕಡೆಗೆ ಇರುವುದೋ ಅವರಿಗೆ ಧ್ಯಾನವು ಹೇಗೆ ಸಾಧಿಸೀತು? ಇದೇ ಪ್ರಕಾರ ಹಗಲಿರುಳೂ ರಾಗ ಭಾವನೆಯು ಮನದಲ್ಲಿ ಉತ್ಪನ್ನವಾಗುತ್ತಿದೆ, ಯಾವಾಗಲೂ ಇಂದ್ರಿಯಗಳ ವಿಷಯ ಭೋಗವನ್ನು ಭೋಗಿಸುವ ಸಿದ್ಧತೆಯು ನಡೆದಿರುವುದು, ಮನಸ್ಸಿನಲ್ಲಿ ಕರುಣಾ ಭಾವವನ್ನು ಧಾರಣ ಮಾಡದೆ ಅನೇಕ ಪ್ರಕಾರದ ಹಾಸ್ಯ, ಕೌತುಕ, ಮಾಯಾಚಾರ, ಯುದ್ಧ, ಕಾಮ-ಶಾಸ್ತ್ರಾದಿಗಳ ಮಾತು ಮತ್ತು ಉಪದೇಶವು ನಡೆದಿರುವುದೋ ಅಂಥ ಪುರುಷನಿಗೆ ಧ್ಯಾನವು ಕನಸಿನಲ್ಲಿಯೂ ಪ್ರಾಪ್ತವಾಗಲಾರದು. ಜಿನದೀಕ್ಷೆಯನ್ನು ಧಾರಣ ಮಾಡಿಯೂ ಯಾರು ತಮ್ಮ ಮಹತ್ವವನ್ನು ಬೆಳೆಯಿಸಿಕೊಳ್ಳುವದಕ್ಕಾಗಿ ವಶೀಕರಣ, ಆಕರ್ಷಣ, ಮಾರಣ, ಉಚ್ಚಾಟನ, ಜಲಸ್ತಂಭನ, ಅಗ್ನಿಸ್ತಂಭನ, ವಿಷಸ್ತಂಭನ, ರಸಕರ್ಮ, ರಸಾಯನ, ಪಾದುಕಾ ವಿದ್ಯಾ, ಅಂಜನ ವಿದ್ಯಾ, ಪುರಕ್ಷೋಭ, ಇಂದ್ರಜಾಲ, ಬಲಸ್ತಂಭನ, ವಿದ್ಯಾಚ್ಛೇದ ಮತ್ತು ಭೇದ, ವೈದ್ಯವಿದ್ಯಾ, ಜ್ಯೋತಿಷವಿದ್ಯಾ, ಯಕ್ಷಿಣೀ ಸಿದ್ಧಿ, ಪಾತಾಲ ಸಿದ್ಧಿ, ಕಾಲವಂಚನಾ, ಸರ್ಪಮಂತ್ರ, ಭೂತಪಿಶಾಚ ಕ್ಷೇತ್ರಪಾಲಸಾಧನ, ಜಲಮಂಥನ-ಸೂತ್ರಬಂಧನ ಇತ್ಯಾದಿ ಕಾರ್ಯಗಳಿಗಾಗಿ ಧ್ಯಾನ, ಮಂತ್ರಸಾಧನೆ, ಘೋರ ತಪಸ್ಸುಗಳನ್ನು ಮಾಡುತ್ತಾರೆ, ಇವರು ಮಿಥ್ಯಾತ್ವ, ಕಷಾಯಗಳ ವಶವಾಗುವುದರಿಂದ ಘೋರ ಕರ್ಮದ ಬಂಧಕ್ಕೆ ಕಾರಣವಾದ ದುರ್ಧ್ಯಾನಕ್ಕೆ ಒಳಗಾಗುತ್ತಾರೆ. ಈ ದುರ್ಧ್ಯಾನದ ಪ್ರಭಾವದಿಂದ ಅವರು ನರಕತಿರ್ಯಂಚಾದಿ ಕುಗತಿಯಲ್ಲಿ ಅನಂತಕಾಲ ಭ್ರಮಣ ಮಾಡಬೇಕಾಗುತ್ತದೆ ಈ ಪ್ರಕಾರದ ಪಾಖಂಡೀ ಜನರ ಬಲೆಗೆ ಬಿದ್ದು ಅವುಗಳ ಉಪಾಸನೆಯನ್ನು ಮಾಡುವವರಿಗೆ ಮತ್ತು ಅನುಮೋದನೆಯನ್ನು ಕೊಡುವವರಿಗೂ ಸಹ ಅವರಂತೆಯೇ ದುರ್ಗತಿಗೆ ಹೋಗಬೇಕಾಗುತ್ತದೆ ಇದನ್ನು ನಿಶ್ಚಯವಾಗಿ ಮನಸ್ಸಿನಲ್ಲಿ ಇಟ್ಟುಕೊಂಡು ಸುಳ್ಳು ಮಂತ್ರ, ತಂತ್ರ, ಯಂತ್ರಾದಿಗಳ ಮೋಹಕ್ಕೆ ವಶವಾಗಕೂಡದು ಇದು ಸರ್ವೋತ್ಕೃಷ್ಟ ಮಾರ್ಗವಾಗಿದೆ ಇದಕ್ಕೆ ಕೆಲವರು ಹೀಗೂ ಅನ್ನಬಹುದು —ಸುಳ್ಳು ಮಂತ್ರ ತಂತ್ರಾದಿಗಳೂ ಜಾರಣ ಮಾರಣ ಉಚ್ಚಾಟಣಾದಿಗಳೂ ದ್ವಾದಶಾಂಗವಾಣಿಯಲ್ಲಿಯೇ ಸಮಾವೇಶವಾಗುತ್ತವಲ್ಲವೆ? ಅಂದಮೇಲೆ ಅವುಗಳನ್ನು ನಿಷೇಧ ಮಾಡುವುದರ ಪ್ರಯೋಜನವೇನು? ಇದಕ್ಕೆ ಸಮಾಧಾನ ಹೀಗಿದೆ—ದ್ವಾದಶಾಂಗವಾಣಿಯಲ್ಲಿ ಸಂಪೂರ್ಣ ಮೂರು ಲೋಕದಲ್ಲಿ ಇರುವಂಥ ದ್ರವ್ಯ ಕ್ಷೇತ್ರ ಕಾಲ ಭಾವ, ವಿಷ, ಅಮೃತ, ಔಷಧಗಳ ವರ್ಣನೆಗಳೆಲ್ಲ ಇದ್ದರೂ ಕೂಡ ವಿಷವು ತ್ಯಾಗ ಮಾಡಲಿಕ್ಕೆ ಯೋಗ್ಯವೂ ಅಮೃತವು ಗ್ರಹಣ ಮಾಡಲಿಕ್ಕೆ ಯೋಗ್ಯವೂ ಆಗಿದೆಯೆಂದು ಪ್ರತಿಪಾದಿಸಲಾಗಿದೆ ಹಾಗೆಯೇ ಸುಳ್ಳು ಮಂತ್ರ, ಸುಳ್ಳು ವಿದ್ಯೆ ಮೊದಲಾದವುಗಳೆಲ್ಲವೂ ತ್ಯಾಜ್ಯವಾಗಿವೆ. ಅರ್ಥಾತ್ ಇಂಥ ಎಲ್ಲ ಕುವಿದ್ಯೆಗಳನ್ನು ತ್ಯಾಗಮಾಡಿ ಕರ್ಮಸಮೂಹವನ್ನು ನಾಶಮಾಡುವಂಥ ಹಾಗೂ ವೀತರಾಗತ್ವವನ್ನು ಉತ್ಪನ್ನ ಮಾಡುವಂಥ ಪಂಚಪರಮೇಷ್ಠಿ ಪದಗಳ ಧ್ಯಾನವನ್ನು ಮಾಡುವುದೇ ಯೋಗ್ಯವಾಗಿದೆ ಈ ಪ್ರಕಾರ ಧರ್ಮಧ್ಯಾನದೊಳಗಿನ ಪದಸ್ಥ ಧ್ಯಾನದ ವರ್ಣನೆಯನ್ನು ಮಾಡಲಾಗಿದೆ.

## ರೂಪಸ್ಥಧ್ಯಾನ

ಸಮವಸರಣದ ಸ್ವರೂಪ—ತರುವಾಯ ರೂಪಸ್ಥ ಧ್ಯಾನದಲ್ಲಿ, ಭಗವಾನ್ ಅರಹಂತ ಪರಮೇಷ್ಠಿಯು ಸಮವಸರಣದಲ್ಲಿ ವಿರಾಜಮಾನನಾಗಿದ್ದು, ಅಸಂಖ್ಯಾತ ಇಂದ್ರಾದಿ ದೇವತೆಗಳಿಂದ ನಮಸ್ಕಾರವನ್ನು ಹೊಂದುತ್ತ, ಹನ್ನೆರಡು ಪ್ರಕಾರದ ಸಭೆಗಳೊಳಗಿನ ಎಲ್ಲ ಜೀವರಿಗೂ ಉತ್ಕೃಷ್ಟ ಧರ್ಮದ ಉಪದೇಶವನ್ನು ಮಾಡುತ್ತಿದ್ದಾನೆಂದು ಮನಸ್ಸಿನಲ್ಲಿ ನೆನೆದು ಧ್ಯಾನಿಸಬೇಕು ಭಗವಂತನು ಧರ್ಮೋಪದೇಶ ಮಾಡುವ ಸ್ಥಾನವು—ಸಮವಸರಣವು—ನೆಲದಿಂದ ಐದು ಸಾವಿರ ಧನುಷ್ಯ ಎತ್ತರವಾಗಿದ್ದು, ಅದಕ್ಕೆ ಇಪ್ಪತ್ತು ಸಾವಿರ ಪಾವಟಿಗೆಗಳು ಇವೆ. ಅದರ ಭೂಮಿಯು ಹಸಿರು ಪಚ್ಚೆಗಳಿಂದಲೂ ನೀಲ ಮಣಿಗಳಿಂದಲೂ ಮಾಡಿದ್ದಾಗಿರುತ್ತದೆ ಅದರ ಮೇಲೆ ಗೋಲ ಸಿಂಹಾಸನವಿದ್ದು, ಅದಕ್ಕೆ ಝೂಲರಿಯನ್ನು ಹಚ್ಚಿದ್ದಿರುತ್ತದೆ ಆ ಸಿಂಹಾಸನವು ತ್ರೈಲೋಕ್ಯ ರೂಪಲಕ್ಷ್ಮಿಯು ಮುಖವನ್ನು ನೋಡಿಕೊಳ್ಳುವ ಕನ್ನಡಿಯೋ ಏನೋ ಎನ್ನುವಂತೆ ಭಾಸವಾಗುತ್ತದೆ ಆ ಸಭಾಸ್ಥಾನದ ವರ್ಣನೆಯನ್ನು ಮಾಡುವುದು ಅಶಕ್ಯವಿದೆ. ಅದು ಪ್ರತ್ಯಕ್ಷ ಕುಬೇರನು ರಚಿಸಿದ್ದು ಇರುತ್ತದೆ ಯಾವ ಕುಬೇರನು ಸಾಕ್ಷಾತ್ ತನ್ನ ರಚನಾಚಾತುರ್ಯದಿಂದ ಆ ಸ್ಥಾನವನ್ನು ನಿರ್ಮಿಸಲಿಕ್ಕೆ ಸಿದ್ಧನಾದನೋ ಅದರ ವರ್ಣನೆಯನ್ನು ನಮ್ಮಂಥ ಮಂದ ಬುದ್ಧಿಯುಳ್ಳ ಮಾನವರು ಹೇಗೆ ಮಾಡುವುದು ಸಾಧ್ಯವಿದೆ? ಆದರೂ ಕೂಡ ಅದನ್ನು ನಮ್ಮ ಬುದ್ಧಿಗೆ ನಿಲುಕಿದಷ್ಟು ವರ್ಣನೆಯನ್ನು ಮಾಡಿದರೂ ಅದರಿಂದ ಶುಭಧ್ಯಾನದ ಉತ್ಪತ್ತಿಯೂ ಭವ್ಯ ಜನರಿಗೆ ಅದರ ಶ್ರವಣವೂ ಚಿಂತನ ಮಾಡುವುದರಿಂದ ಅತಿಶಯ ಆನಂದವೂ ಆಗುತ್ತದೆ. ಅಂತಲೇ ಇಲ್ಲಿ ಸ್ವಲ್ಪದರಲ್ಲಿ ವರ್ಣಿಸಲಾಗಿದೆ.

ಧೂಲಿಶಾಲ ಕೋಟೆ—ಆ ಸಭೆಯು ಹನ್ನೆರಡು ಯೋಜನ ಅಳತೆಯ ಇಂದ್ರನೀಲ ರತ್ನದ ಗೋಲ ಭೂಮಿಯಾಗಿದೆ ಅದರ ಮುಂದೆ ಅನೇಕ ರತ್ನಸಮೂಹಗಳಿಂದ ನಿರ್ಮಿಸಿದ ಧೂಲಿಶಾಲವೆಂಬ ಹೆಸರಿನ ಕೋಟೆಯಿದೆ. ಆ ಕೋಟೆಯೊಳಗಿನ ಹಸಿರು ಪಚ್ಚೆಗಳ ಪ್ರಭೆಯಿಂದ ಆಕಾಶವೇ ಹಸಿರುಗೊಂಡಂತೆ ಭಾಸವಾಗುತ್ತದೆ. ಕೆಲವೊಂದು ಸ್ಥಳದಲ್ಲಿ ಪದ್ಮರಾಗ ರತ್ನದ ಪ್ರಭೆಯಿಂದ ಅದು ಹಳದಿ ವರ್ಣದ್ದಾಗಿರುವಂತೆ ಎನಿಸುತ್ತದೆ ಕೆಲವು ಕಡೆಗೆ ವಿವಿಧ ವರ್ಣದ ರತ್ನಗಳ ಪ್ರಭೆಯು, ಇನ್ನೊಂದೆಡೆಗೆ ಚಂದ್ರಕಾಂತ ಮಣಿಯ ಕಾಂತಿಯು, ಆಕಾಶದ ಮೇಲೆ ಬಿದ್ದುದರಿಂದ ಆಯಾಭಾಗಗಳು ಆ ಆವರ್ಣದವುಗಳಾಗಿ ಕಂಗೊಳಿಸುತ್ತವೆ ಈ ಪ್ರಕಾರ ಅನೇಕ ಕಾಂತಿಮಯ ರತ್ನಗಳ ಪ್ರಭೆಯಿಂದ ಆ ಧೂಲಿಶಾಲ ಕೋಟೆಯು ಆಕಾಶದಲ್ಲಿ ಇಂದ್ರ ಧನುಷ್ಯದಂತೆ ಒಪ್ಪುತ್ತದೆ ಕೆಲಕೆಲವೆಡೆಗಳಲ್ಲಿ ಈ ಧೂಲಿಶಾಲ ಕೋಟೆಯಲ್ಲಿ ಇರುವ ಸುವರ್ಣದ ಪ್ರಭೆಯಿಂದ ಆಕಾಶವು ಸುವರ್ಣಮಯವಾಗಿ ಕಾಣುತ್ತದೆ ಈ ಪ್ರಕಾರ ಅತಿಶಯ ಕಾಂತಿಯುಳ್ಳಂಥ ಧೂಲಿಶಾಲ ಕೋಟೆಯ ನಾಲ್ಕೂ ದಿಕ್ಕುಗಳಲ್ಲಿ ಬಂಗಾರದ ಎರಡೆರಡು ಕಂಬಗಳಿವೆ ಆ ಕಂಬಗಳ ತುದಿಗೆ ಮಕರಾಕೃತಿಯ ತೋರಣಗಳಿವೆ. ಆ ತೋರಣದಲ್ಲಿ ರತ್ನಮಾಲೆಯನ್ನು ಕಟ್ಟಲಾಗಿದೆ

ಸುವರ್ಣದ ನಾಲ್ಕು ಮಾನಸ್ತಂಭಗಳು—ಕೋಟೆಯ ಸುತ್ತಲೂ ನಾಲ್ಕೂ ಮಗ್ಗಲಿಗೆ ಒಂದು ಯೋಜನ ಅಗಲವಾದಂಥ ಒಳಗೆ ಪ್ರವೇಶಿಸುವ ಒಂದು ದೊಡ್ಡ ಮಾರ್ಗವಿದೆ. ಆ ಮಾರ್ಗದಿಂದ ಬಹಳಷ್ಟು ದೂರ ಹೋದ ಮೇಲೆ ನಟ್ಟನಡುವೆ ಸುವರ್ಣದ ನಾಲ್ಕು ಮಾನಸ್ತಂಭಗಳಿವೆ ಅವು ಬಹಳ ಎತ್ತರವಾಗಿವೆ ಮಾನಸ್ತಂಭಗಳ ಸುತ್ತಲೂ ನಾಲ್ಕು ಮಗ್ಗಲು ನಾಲ್ಕು ಮಹಾದ್ವಾರಗಳಿರುವ ಮೂರು ಕೋಟೆಗಳು ಇವೆ ಆ ಕೋಟೆಯಲ್ಲಿ ಹದಿನಾರು ಮೆಟ್ಟಿಲುಗಳಿರುವ ಒಂದು ಕಟ್ಟೆಯಿದೆ ಅದರ ಮೇಲೆ ಮಧ್ಯದಲ್ಲಿ ಈ ಮಾನಸ್ತಂಭ ನಿಂತಿದೆ ಈ ಮಾನಸ್ತಂಭವನ್ನು ದೂರದಿಂದ ನೋಡಿದೊಡನೆಯೇ ಯಾವನೇ ಇರಲಿ, ಎಂಥ ತೀವ್ರ ಅಭಿಮಾನಿ ಮಿಥ್ಯಾದೃಷ್ಟಿ ಇದ್ದರೂ ಸಹ ಅವನ ಮಾನವು ಇಳಿದು ಹೋಗುತ್ತದೆ ಮಾನಸ್ತಂಭದ ಮೂಲದಲ್ಲಿ ಸಿಂಹಾಸನದ ಮೇಲೆ ಸುವರ್ಣದ ಜಿನ ಪ್ರತಿಮೆ ಇದೆ ಆ ಪ್ರತಿಮೆಗೆ ಕ್ಷೀರ ಸಾಗರದೊಳಗಿನ ನೀರಿನಿಂದ ಇಂದ್ರಾದಿ ದೇವತೆಗಳು ಅಭಿಷೇಕ ಮಾಡುತ್ತಾರೆ ಅಭಿಷೇಕದ ಜಲದಿಂದ ಆ ಸಿಂಹಾಸನವು ಪವಿತ್ರವಾಗಿದೆ ಸಿಂಹಾಸನದ ಎದುರಿಗೆ ೮ ಸ್ಥಳದಲ್ಲಿ ನಿತ್ಯವೂ ದೇವ ಮತ್ತು ಮನುಷ್ಯರು ನೃತ್ಯ ವಾದ್ಯಗಳೊಡನೆ ಭಗವಂತನ ಸ್ತವನ ಮಾಡುತ್ತಿರು-ತ್ತಾರೆ ಸಿಂಹಾಸನವು ಆ ಸ್ಥಳದ ಮಧ್ಯಭಾಗದಲ್ಲಿದೆ ಅದರ ಮೇಲ್ಭಾಗದಲ್ಲಿ ಮೂರು ಕಟ್ಟೆಗಳು ಇವೆ ಅದರ ಮೇಲೆ ಸುವರ್ಣದ ಮಾನಸ್ತಂಭವಿದೆ ಮಾನಸ್ತಂಭದ ಅಗ್ರಭಾಗದಲ್ಲಿ ಮೂರು ಛತ್ರಗಳಿವೆ ಅವುಗಳನ್ನು

ನೋಡುವುದರಿಂದ ಮಿಥ್ಯಾದೃಷ್ಟಿಯ ಮಾನವು ಹರಣವಾಗುತ್ತದೆ ಅಂತಲೇ ಅದಕ್ಕೆ ಮಾನಸ್ತಂಭವೆಂದು ಹೆಸರಿದೆ

ಮಾನಸ್ತಂಭದ ನೆರೆಯಲ್ಲಿರುವ ಬಾವಿಗಳು—ಆ ಮಾನಸ್ತಂಭಗಳ ನಾಲ್ಕೂ ಮಗ್ಗಲಿಗೆ ನಾಲ್ಕು ಬಾವಿಗಳು ಸ್ವಚ್ಛವಾದ ನೀರಿನಿಂದ ತುಂಬಿದ್ದು ಇರುತ್ತವೆ ಅದರಲ್ಲಿ ಅನೇಕ ಪ್ರಕಾರದ ಕಮಲಗಳು ಅರಳಿರುತ್ತವೆ. ಬಾವಿಗಳ ತೀರಗಳು ಸ್ಫಟಿಕ ಮಣಿಗಳಿಂದ ನಿರ್ಮಾಣವಾದವುಗಳಿರುತ್ತವೆ. ಅವುಗಳ ತೀರದಲ್ಲಿ ಅನೇಕ ಪ್ರಕಾರದ ಪಕ್ಷಿಗಳು ಮಧುರ ಶಬ್ದಗಳನ್ನು ಮಾಡುತ್ತಿರುತ್ತವೆ ಪಕ್ಷಿಗಳ ಶಬ್ದದಿಂದಲೂ ಭ್ರಮರಗಳ ಗುಂಜಾರವದಿಂದಲೂ ಪಕ್ಷಿಗಳೂ ಸಹ ಭಗವಂತನ ಸ್ತುತಿ ಮಾಡಹತ್ತಿದವೋ ಏನೋ ಎನ್ನುವಂತೆ ಭಾಸವಾಗುತ್ತದೆ. ಪೂರ್ವ ದಿಕ್ಕಿನ ಮಾನಸ್ತಂಭದ ಪೂರ್ವದಿಕ್ಕಿಗೆ ನಂದಾ, ನಂದೋತ್ತರಾ, ನಂದವತೀ ಮತ್ತು ನಂದಘೋಷಾ; ದಕ್ಷಿಣದ ಮಾನಸ್ತಂಭದ ಸುತ್ತಲೂ ವಿಜಯಾ, ವೈಜಯಂತೀ, ಜಯಂತೀ ಮತ್ತು ಅಪರಾಜಿತಾ; ಪಶ್ಚಿಮಕ್ಕೆ ಅಶೋಕಾ, ಸುಪ್ರಬಾ, ಸಿದ್ಧಾ ಮತ್ತು ಕುಮುದಾ; ಉತ್ತರಕ್ಕೆ ನಂದಾ, ಮಹಾನಂದಾ, ಸುಪ್ರಬುದ್ಧಾ, ಪ್ರಭಂಕರೀ ಈ ಪ್ರಕಾರ ನಾಲ್ಕೂ ದಿಕ್ಕಿನ ಮಾನಸ್ತಂಭಗಳ ಸುತ್ತಲೂ ಹದಿನಾರು ಬಾವಿಗಳು ಇರುತ್ತವೆ. ಪ್ರತಿಯೊಂದು ಬಾವಿಯ ಎರಡು ತೀರಗಳ ಹತ್ತರ ಎರಡೆರಡು ನೀರಿನ ಕುಂಡಗಳಿವೆ ಆ ಕುಂಡದೊಳಗಿನ ನೀರಿನಿಂದ ಪಾದಗಳನ್ನು ತೊಳೆದುಕೊಂಡು, ಮಾನಸ್ತಂಭದ ಪೂಜೆಯನ್ನು ಮಾಡಲಿಕ್ಕೆ ಹೋಗಬೇಕಾಗುತ್ತದೆ.

ಕಂದಕ—ಈ ಕುಂಡಗಳ ಮುಂದೆ ಕೆಲವೊಂದು ಮಾರ್ಗವನ್ನು ಆಕ್ರಮಿಸಿದ ಮೇಲೆ ದೊಡ್ಡ ಮಾರ್ಗವನ್ನು ಬಿಟ್ಟು, ನಾಲ್ಕೂ ಮಗ್ಗಲುಗಳಿಂದಲೂ ಕಮಲ ಪುಷ್ಪಗಳಿಂದಲೂ ನೀರಿನಿಂದಲೂ ತುಂಬಿದ ಕಂದಕವಿದೆ. ಅದು ಕಂದಕವಾಗಿರದೆ ಪ್ರಭುವಿಗೆ ವಂದನೆ ಮಾಡುವದಕ್ಕಾಗಿ ಗಂಗಾ ನದಿಯೇ ಬಂದಿರುವದೋ ಏನೋ ಎಂದೆನ್ನಿಸುತ್ತದೆ. ಈ ಕಂದಕ ಒಂದು ಆಕಾಶವಿದ್ದಂತೆ ಅದರಲ್ಲಿರುವ ಕಮಲಗಳೇ ನಕ್ಷತ್ರಗಳು ಆ ಅಗಳದ ರತ್ನಖಚಿತ ತೀರದ ಮೇಲೆ ಅನೇಕ ಪ್ರಕಾರದ ಪಕ್ಷಿಗಳು ತಮ್ಮ ಮಧುರ ಶಬ್ದಗಳಿಂದಲೂ ತಮ್ಮ ನಾನಾ ವಿಧ ಬಣ್ಣಗಳ ಪ್ರತಿಭೆಯಿಂದ ನೀರಿನಲ್ಲಿ ಪ್ರತಿಬಿಂಬಿತಗೊಂಡೂ ಅದಕ್ಕೆ ಮನೋಹರ ಶೋಭೆಯನ್ನು ತಂದಿವೆ ಕಂದಕದ ಸುತ್ತಲೂ ಒಂದು ಯೋಜನ ಅಗಲವಾದ ಗೋಲಾಕಾರದ ಹೂದೋಟವಿದೆ.

ವನಗಳು—ಆ ಕಂದಕದ ಒಳಗಿನ ಭೂಭಾಗವು ನಾಲ್ಕೂ ಮಗ್ಗಲುಗಳಿಗೆ ಅನೇಕ ಪ್ರಕಾರದ ಮನೋಹರ ಬಳ್ಳಿಗಳಿಂದ ಕೂಡಿದ ವನದಿಂದ ವ್ಯಾಪಿಸಿದೆ ಆ ವನದಲ್ಲಿ ಅನೇಕ ಚಿಕ್ಕ ಚಿಕ್ಕ ಗಿಡಬಳ್ಳಿಗಳೂ ಎಲ್ಲ ಋತುಗಳಲ್ಲಿಯ ಹಣ್ಣು ಹೂವುಗಳೂ ತುಂಬಿರುತ್ತವೆ. ಅದರಿಂದ ಆ ವನವು ದೇವಾಂಗನೆಯರ ಮಂದ ಹಾಸ್ಯದಿಂದ ಪ್ರಫುಲ್ಲಗೊಂಡಂತೆ ಭಾಸವಾಗುತ್ತದೆ ಆ ಸ್ಥಳದಲ್ಲಿ ಮಂದ ಸುಗಂಧ ಗಾಳಿಯ ತೆರೆಗಳು ಬಂದು ಹೋಗುತ್ತವೆ. ಭ್ರಮರಗಳು ಮೋಹಿಸಿ ಹೋಗಿರುವಂಥ ಬಳ್ಳಿಗಳ ವನದಲ್ಲಿ ಕ್ರೀಡೆಯನ್ನು ಮಾಡಲಿಕ್ಕೆಂದು ನಿರ್ಮಾಣವಾದ ಹಲವಾರು ಚಿಕ್ಕ ಚಿಕ್ಕ ಪರ್ವತಗಳಿವೆ ಸುಂದರವೂ ಮನೋಹರವೂ ಆದ ಹಾಸಿಗೆಗಳಿಂದ ಕೂಡಿದಂಥ ಬಳ್ಳಿ ವನಗಳು ಅಲ್ಲಲ್ಲಿ ಇವೆ ಆ ಸ್ಥಳಗಳಲ್ಲಿ ಅನೇಕ ದೇವಾಂಗನೆಯರು ಬಂದು ಭಗವಂತನ ಸ್ತುತಿಯನ್ನು ಮಾಡುತ್ತಿರುತ್ತಾರೆ ಆ ಲತಾಮಂಟಪಗಳಲ್ಲಿ ಚಂದ್ರಕಾಂತ ರತ್ನದ ಅತಿಶಯ ತಂಪಾದಂಥ ಶಿಲೆಗಳನ್ನು ದೇವತೆಗಳು ವಿಶ್ರಾಂತಿಯನ್ನು ತಕ್ಕೊಳ್ಳುವದಕ್ಕಾಗಿ ಇಟ್ಟಿರುತ್ತಾರೆ.

ಸುವರ್ಣಮಯವಾದ ಕೋಟೆ—ಧೂಲಿಶಾಲ ಕೋಟೆಯಿಂದ ಪುಷ್ಪ ವಾಟಿಕೆಯ ವರೆಗೆ ಎರಡು ಯೋಜನ ಪ್ರಮಾಣದಲ್ಲಿ ವಲಯ ವಿಸ್ತಾರವಿದೆ. ಇದರಿಂದ ಎರಡೂ ಮಗ್ಗಲು ಸೇರಿ ನಾಲ್ಕು ಯೋಜನ ವಿಸ್ತಾರವುಳ್ಳ ಕ್ಷೇತ್ರವಾದಂತಾಯಿತು ಅಲ್ಲಿಂದ ಮಹಾಮಾರ್ಗದ ಮಧ್ಯಭಾಗದಿಂದ ಬಹಳಷ್ಟು ದೂರ ಹೋದಲ್ಲಿ ಕಾಯಿಸಿದ ಬಂಗಾರದ ಬಣ್ಣದಂದ ಒಂದು ಕೋಟೆಯು ಇದ್ದದ್ದು ಕಣ್ಣಿಗೆ ಬೀಳುತ್ತದೆ. ಆ ಕೋಟೆಯಿಂದ ಅಲ್ಲಿಯ ಕ್ಷೇತ್ರವು ಮನುಷ್ಯೋತ್ತರ ಪರ್ವತದಿಂದ ಮಾನವ ಲೋಕವು ಹೇಗೆ ಸುತ್ತು ಹಾಕಲ್ಪಟ್ಟಿರುವುದೋ ಹಾಗೆ ಸುತ್ತಲ್ಪಟ್ಟಿದೆ ಈ ಕೋಟೆಯು ಸುವರ್ಣಮಯವಾಗಿದ್ದು ಅನೇಕ ಪ್ರಕಾರದ ರತ್ನಗಳಿಂದ ಚಿತ್ರ ವಿಚಿತ್ರವಾಗಿ ಕಾಣುವದು. ಈ ಕೋಟೆಯ ಮೇಲೆ ಕೆಲವೆಡೆಗೆ ಆನೆ, ಸಿಂಹ. ಹುಲಿ, ಹಂಸ, ನವಿಲು, ಮನುಷ್ಯ, ದೇವ ಇವರ ಸುಂದರ ಜೋಡಿಗಳನ್ನು ಚಿತ್ರಿಸಲಾಗಿದೆ ಕೆಲವೆಡೆಗಳಲ್ಲಿ ಬಳ್ಳಿ, ಹೂವು, ಎಲೆ, ಗಿಡ ಮೊದಲಾದವುಗಳನ್ನೂ ಕೂಡ ಸುಂದರ ರೀತಿಯಿಂದ ಆ ಕೋಟೆಯ ಮೇಲೆ ರತ್ನಖಚಿತ ರೀತಿಯಿಂದ ಕೆತ್ತಲಾಗಿದೆ. ಮೇಲೆ ಮತ್ತು ಕೆಳಗೆ ಇರುವ ಕೋಟೆಯ ಭಾಗದ

ಕಟ್ಟಿಯಂತಿರುವ ಭಾಗದಲ್ಲಿ (ಗಲತೆಯ ಮೇಲೆ) ಮುತ್ತು ರತ್ನಗಳ ಬಳ್ಳಿಗಳನ್ನೂ ಮಾಲೆಯನ್ನೂ ಚಿತ್ರಿಸಲಾಗಿದೆ. ಈ ಪ್ರಕಾರವಿರುವ ಆ ಕೋಟೆಯ ಅಪ್ರತಿಮ ಕಾಂತಿಯೂ ಅದರಿಂದ ಆಕಾಶದಲ್ಲಿ ಮೂಡುವ ಇಂದ್ರ ಧನುಸ್ಸೂ ಬಹು ಸುಂದರವಾಗಿ ಶೋಭಿಸುತ್ತವೆ.

ಗೋಪುರ—ಸುವರ್ಣಮಯವಾದ ಆ ಪ್ರಥಮ ಕೋಟೆಯ ನಾಲ್ಕೂ ದಿಕ್ಕುಗಳಿಗೆ ಅತಿಶಯ ಎತ್ತರವಾದ ಬೆಳ್ಳಿಯ ನಾಲ್ಕು ದ್ವಾರ ಗೋಪುರಗಳಿವೆ. ಅವು ವಿಜಯಾರ್ಧ ಪರ್ವತದ ಶಿಖರದಂತೆ ಎತ್ತರವಾಗಿವೆ. ಆ ಮಹಾದ್ವಾರಗಳು ಮೂರು ಅಂಕಣಗಳಲ್ಲಿ ಇದ್ದು ಅತಿಶಯ ತೇಜಃಪುಂಜವಾಗಿವೆ. ಮೂರು ಲೋಕದೊಳಗಿನ ಸಂಪತ್ತಿಯ ಕಡೆಗೆ ನೋಡಿ ಅವು ನಗುತ್ತಿವೆಯೋ ಏನೋ ಅನ್ನುವಂತಿವೆ. ಆ ಬೆಳ್ಳಿಯ ಮೂರು ಅಂಕಣಗಳಲ್ಲಿರುವ ಮಹಾದ್ವಾರಗಳ ಮೇಲಿರುವ ಪದ್ಮರಾಗ ಮಣಿಯ ಶಿಖರಗಳು ತಮ್ಮ ಕಾಂತಿಯಿಂದ ಆಕಾಶವನ್ನು ಬೆಳಗುತ್ತವೆ. ಈ ಗೋಪುರಗಳಲ್ಲಿ ಹಾಡುವಂಥ ಕೆಲವು ದೇವತೆಗಳು ತ್ರಿಭುವನ ಗುರುವಾದ ಜಿನೇಂದ್ರನ ಸ್ತುತಿಯನ್ನು ಮಾಡುತ್ತಾರೆ. ಅನೇಕರು ಆ ಸುತ್ತಿಯನ್ನು ಕೇಳುತ್ತಿರುವರು. ಜಿನೇಂದ್ರನ ಗುಣಗಾನದಲ್ಲಿ ತಲ್ಲೀನರಾಗಿ ಭಕ್ತಿರಸದಿಂದ ತುಂಬಿ ಬಂದು ಕೆಲವರು ನೃತ್ಯಮಾಡಲು ತೊಡಗುತ್ತಾರೆ. ಪ್ರತಿಯೊಂದು ಮಹಾದ್ವಾರದಲ್ಲಿ ಒಂದುನೂರಾ ಎಂಟು ಭೃಂಗಾರ, ಕಲಶ, ಕನ್ನಡಿ, ಸ್ಥಾಪನಾ, ಚಮರ, ಛತ್ರ, ಧ್ವಜಾ, ಪಂಖ ಹೀಗೆ ಎಂಟು ಮಂಗಲ ದ್ರವ್ಯಗಳು ಇಡಲ್ಪಟ್ಟಿವೆ. ಅವುಗಳ ಮೇಲೆ ಅಪ್ರತಿಮ ಕಾಂತಿಯುಳ್ಳಂಥ ರತ್ನದ ತೋರಣಗಳು ಇವೆ. ಅವುಗಳಿಂದ ಹೀಗೆ ಬಾಸವಾಗುತ್ತದೆ.— ಸ್ವಾಭಾವಿಕವಾಗಿ ಅತಿಶಯ ಕಾಂತಿಯನ್ನು ಧಾರಣ ಮಾಡುವಂಥ ಜಿನೇಶ್ವರನ ಶರೀರದ ಮೇಲೆ ಆ ಆಭರಣಗಳ ಸಮಾವೇಶವಾಗಲಿಲ್ಲವೆಂದು ಅವು ಮಹಾದ್ವಾರದ ತೋರಣಗಳ ಮೇಲೆ ಬಂದು ನೇತಾಡುತ್ತಿರಬೇಕಷ್ಟೆ.

ನವ ನಿಧಿ ಮತ್ತು ನಾಟ್ಯಶಾಲೆ—ಪ್ರತಿಯೊಂದು ಮಹಾದ್ವಾರದ ಹೊರ ಮಗ್ಗಲು ನವನಿಧಿಗಳು ಮೂರು ಲೋಕಗಳನ್ನೂ ಮೀರಿ ನಿಂತಿರುವ ಜಿನೇಂದ್ರನ ಪ್ರಭಾವವನ್ನು ನಿರೂಪಿಸುತ್ತಿವೆ. ವೀತರಾಗ ಭಗವಂತನು ಅವುಗಳನ್ನು ತಿರಸ್ಕಾರ ಮಾಡಿದನೆಂದೋ ಏನೋ ಅವು ಮಹಾದ್ವಾರದ ಹೊರಗೆ ಬಂದು ನಿಂತಿವೆಯೆಂದು ಎನಿಸುತ್ತದೆ. ಮಹಾದ್ವಾರದ ಒಳ ಮಗ್ಗುಲಿಗೆ ಒಂದು ಹರದಾರಿ ಅಗಲವಾದಂಥ ಮಹಾಮಾರ್ಗವು ಇರುತ್ತದೆ. ಅದರ ಎರಡೂ ಭಾಗಗಳಲ್ಲಿ ಎರಡು ನಾಟ್ಯಶಾಲೆಗಳು ಇವೆ. ಈ ಪ್ರಕಾರ ನಾಲ್ಕೂ ಮಗ್ಗಲಿಗೆ ಎರಡೆರಡು ನಾಟ್ಯಶಾಲೆಗಳು ಇವೆ. ಅವು ಮೂರು ಮೂರು ವಿಭಾಗವಾಗಿವೆ. ಆ ಭಾಗಗಳಿಂದ ಜೀವಗಳಿಗೆ ರತ್ನತ್ರಯ ಮಾರ್ಗವನ್ನೇ ತೋರಿಸು-ತ್ತವೇನೋ ಎನ್ನುವಂತೆ ಭಾಸವಾಗುತ್ತದೆ. ಆ ನಾಟ್ಯಶಾಲೆಗಳ ಗೋಡೆಗಳು ಶುಭ್ರ ಸ್ಫಟಿಕ ಮಣಿಯಿಂದ ನಿರ್ಮಾಣವಾಗಿವೆ. ಅದಕ್ಕೆ ಸುವರ್ಣದ ಕಂಬಗಳಿವೆ. ನೆಲವು ಸ್ಫಟಿಕದ್ದಾಗಿದೆ. ಶಿಖರಗಳು ಅನೇಕ ಪ್ರಕಾರದ ರತ್ನಗಳಿಂದ ನಿರ್ಮಾಣಗೊಂಡಿವೆ. ಆ ನಾಟ್ಯಶಾಲೆಗಳಲ್ಲಿ ವಿದ್ಯುತ್ ಪ್ರಬೆಯ ಕಾಂತಿಯನ್ನು ಧಾರಣ ಮಾಡುವ ಅನೇಕ ದೇವ-ದೇವಿಯರು ಭಗವಂತನ ನಾಮಸ್ಮರಣೆಯನ್ನು ಮಾಡುತ್ತಲೂ, ಪುಷ್ಪಾಂಜಲಿಯನ್ನು ಅರ್ಪಿಸುತ್ತಲೂ ನೃತ್ಯಮಾಡುವರು. ಕೆಲವು ದೇವಿಯರು ವೀಣೆ, ಮೃದಂಗಗಳನ್ನು ಬಾರಿಸುತ್ತಲಿರುವರು. ಕೆಲವರು ಈ ಎಲ್ಲ ಗಾನ ಸಾಹಿತ್ಯದೊಡನೆ ಜಿನೇಂದ್ರನ ಗುಣಗಾನ ಮಾಡುವುದರಲ್ಲಿ ತಲ್ಲೀನರಾಗಿದ್ದಾರೆ. ಈ ಪ್ರಕಾರ ಮನೋಹರ ಗಾಯನವನ್ನು ಮಾಡುತ್ತಿರುವಾಗ ಅದನ್ನು ನೋಡುವದಕ್ಕೆಂದು ಬರುವ ಕಿನ್ನರ ದೇವತೆಗಳ ಮನಸ್ಸು ಸೆಳೆಯಲ್ಪಡುತ್ತದೆ.

ಎರಡು ಧೂಪ ಘಟಗಳು—ನಾಟ್ಯ ಶಾಲೆಯನ್ನು ಬಿಟ್ಟು ಸ್ವಲ್ಪ ಮುಂದೆ ಹೋದ ಕೂಡಲೆ ಮಹಾ ಮಾರ್ಗದ ಮಗ್ಗುಲಿಗೆ ಎರಡೆರಡು ಧೂಪ ಘಟಗಳನ್ನು ಇಟ್ಟದ್ದು ಕಂಡು ಬರುತ್ತದೆ. ಇವದೊಳಗಿಂದ ಹೊರಡುವಂಥ ಸುಗಂಧದ ಹೊಗೆಯು ಆಕಾಶದಲ್ಲಿ ಎಲ್ಲೆಡೆಯೂ ಹಬ್ಬಿ, ಹತ್ತೂ ದಿಕ್ಕುಗಳನ್ನೂ ಸುಗಂಧಿತಗೊಳಿಸುತ್ತದೆ. ಈ ಹೊಗೆಯು ಆಕಾಶದೊಳಗಿಂದ ಕೆಳಗೆ ಇಳಿಯುವ ದೇವತೆಗಳಿಗೆ ಮೋಡವೇ ಇದೆಯೋ ಏನೋ ಎನ್ನುವಂತೆ ಸಂಶಯ ಉತ್ಪನ್ನಮಾಡುತ್ತದೆ.

ನಾಲ್ಕು ವನಗಳು—ಮಹಾಮಾರ್ಗದ ಮಗ್ಗುಲಿಗೆ ಇರುವ ಅಂತರದಲ್ಲಿ ನಾಲ್ಕೂ ಮಗ್ಗುಲುಗಳಿಂದ ವನದಲ್ಲಿ ಹೋಗಲಿಕ್ಕೆ ದಾರಿಯಿದೆ. ಆ ದಾರಿಗಳು ಒಂದು ಯೋಜನ ವಿಸ್ತಾರವಾಗಿವೆ. ಅದರಲ್ಲಿ ಒಂದು ಸಾಲು ಅಶೋಕ ವೃಕ್ಷ, ಎರಡನೆಯದು ಸಪ್ತಪರ್ಣ ವೃಕ್ಷ, ಮೂರನೆಯದು ಚಂಪಕ ವೃಕ್ಷ, ನಾಲ್ಕನೆಯದು ಆಮ್ರವೃಕ್ಷ ಹೀಗೆ ಸಾಲು-ಸಾಲಾಗಿ ವೃಕ್ಷಗಳ ವನಗಳಿವೆ. ಈ ವನಗಳು ಹೂವು ಹಣ್ಣುಗಳಿಂದ ತುಂಬಿದುದನ್ನು ನೋಡಿದರೆ ಅವು ಭಗವಂತನಿಗೆ ಅರ್ಘ್ಯವನ್ನು ಇಳಿಸುತ್ತಿವೆಯೋ ಏನೋ ಎನ್ನುವಂತೆ ಕಾಣುವವು. ಈ ಪ್ರಕಾರದ ವನಗಳು

ಎರಡೂ ಮಗ್ಗಲಿಗೆ ಎರಡೂ ಯೋಜನಗಳಲ್ಲಿ ಇವೆ. ಅವುಗಳಲ್ಲಿ ಮನೋಹರವಾದಂಥ ಅನೇಕ ಪಕ್ಷಿಗಳು ಮಧುರ ಶಬ್ದವನ್ನು ಮಾಡುತ್ತಿರುತ್ತವೆ. ಭ್ರಮರಗಳು ಗುಂಜಾರವ ಮಾಡುತ್ತಿವೆ. ನಂದನ ವನದಂತೆ ಸಾವಿರಾರು ದೇವ-ದೇವಿಯರು ಉತ್ಕೃಷ್ಟ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಪ್ರತ್ಯಕ್ಷ ತೇಜದ ಪುಂಜವೋ ಏನೋ ಎನ್ನುವಂತೆ ವಿಹಾರ ಮಾಡುತ್ತಿರುತ್ತಾರೆ ಕೋಗಿಲೆಗಳಂತೂ ತಮ್ಮ ಮಧುರ ಸ್ವರದಿಂದ ಜಿನ ಪೂಜೆಯನ್ನು ಮಾಡುವಂಥ ದೇವೇಂದ್ರನನ್ನು ಆಮಂತ್ರಿಸುವಂತೆ ಸ್ವರ ಗೈಯುತ್ತಿವೆ ಆ ವನಗಳಲ್ಲಿ ಶೀತಲ, ಮಂದ, ಸುಗಂಧವಾದಂಥ ವಾಯುವಿನಿಂದ ವೃಕ್ಷಗಳ ಶಾಖೆಗಳೂ ಕೂಡ ನೃತ್ಯಮಾಡುತ್ತಿರುವಂತೆ ಭಾಸವಾಗುತ್ತಿದೆ ಆ ವನಗಳಲ್ಲಿಯ ನೆಲವು ಸುವರ್ಣದ ಧೂಳಿಯಿಂದ ವ್ಯಾಪಿಸಲ್ಪಟ್ಟಿದೆ ಆ ವನದಲ್ಲಿ ವೃಕ್ಷದ ತೇಜದಿಂದ ಹಗಲು ರಾತ್ರಿಗಳಲ್ಲಿ ಭೇದವಿಲ್ಲ. ಅಲ್ಲಿ ಯಾವಾಗಲೂ ಪ್ರಕಾಶವು ಇದ್ದೇ ಇರುತ್ತದೆ ವೃಕ್ಷಗಳ ಶೀತಲತೆಯ ಪ್ರಭಾವದಿಂದ ಸೂರ್ಯನ ಕಿರಣಗಳು ಸಂತಾಪವನ್ನೂ ಉತ್ಪನ್ನ ಮಾಡುವದಿಲ್ಲ

**ವನಗಳಲ್ಲಿಯ ಬಾವಿ, ಕ್ರಿಡಾ ಪರ್ವತ ಹಾಗೂ ಮಂದಿರಗಳು**—ಆ ವನಗಳಲ್ಲಿ ತ್ರಿಕೋಣ ಮತ್ತು ಚತುಷ್ಕೋನ ಆಕಾರದ ಬಾವಿಗಳು ಅಲ್ಲಲ್ಲಿ ಇವೆ ಅವುಗಳಲ್ಲಿ ನಿರ್ಮಲ ಹಾಗೂ ನಿರ್ಜಂತುಕ ನೀರುಗಳು ತುಂಬಿವೆ. ಅವುಗಳ ಮೆಟ್ಟಲುಗಳು ರತ್ನದವುಗಳಾಗಿವೆ ತೀರಗಳು ಸುವರ್ಣದವುಗಳಾಗಿವೆ ಕೆಲಕೆಲವೆಡೆಗಳಲ್ಲಿ ಆ ವನದಲ್ಲಿ ರತ್ನ ಖಚಿತವಾದ ಅನೇಕ ಕ್ರೀಡಾ ಪರ್ವತಗಳೂ ರತ್ನಮಯವಾದ ಮಂದಿರಗಳೂ ಇರುತ್ತವೆ ಹಲವು ಕಡೆಗೆ ಅನೇಕ ಪ್ರಕಾರದ ಕ್ರೀಡಾ ಮಂಟಪಗಳೂ, ಪ್ರೇಕ್ಷಕರ ಗೃಹಗಳೂ ಇವೆ. ಅನೇಕ ಕಡೆಗೆ ಒಂದು, ಎರಡು, ಮೂರು ಅಂತಸ್ತುಗಳ ದೊಡ್ಡ ದೊಡ್ಡ ಮಂದಿರಗಳು ಇವೆ ಹಲವು ಸ್ಥಳಗಳಲ್ಲಿ ಪಚ್ಚರತ್ನದ ಭೂಮಿಯು ಇಂದ್ರಗೋಪರೂಪೀ ರತ್ನದಿಂದ ಹೆಣೆದದ್ದಿದೆ. ಒಂದೆಡೆಗೆ ಅತಿಶಯ ನಿರ್ಮಲ ಸರೋವರ ಇನ್ನೊಂದೆಡೆಗೆ ನದಿಗಳು, ಮತ್ತೊಂದೆಡೆಯಲ್ಲಿ ಎಲ್ಲ ಜೀವಗಳ ದುಃಖವನ್ನು ಹರಣ ಮಾಡುವಂಥ ಅಶೋಕವೃಕ್ಷದ ವನಗಳು, ಅವು ಜಿನೇಂದ್ರನ ಸೇವೆಗೆ ಸಿದ್ಧವಾಗಲೆಂದು ತಮ್ಮಲ್ಲಿರುವ ಕ್ರೋಧವನ್ನು ಕಾರಿಕೊಳ್ಳುತ್ತಿವೆ ಎನ್ನುವಂಥ ಕೆಂಪು ಚಿಗುರೆಲೆಗಳುಳ್ಳವು ಇನ್ನೊಂದೆಡೆಯಲ್ಲಿ ಸಪ್ತಚ್ಛದ ವನವು ತನ್ನ ಏಳೆಲೆಗಳಿಂದ ಭಗವಂತನ ಏಳು ಪರಮಸ್ಥಾನಗಳನ್ನು ದಿಗ್ದರ್ಶಿಸುತ್ತದೆ. ಬೇರೊಂದೆಡೆಗೆ ಚಂಪಕ ವನವು ತನ್ನ ದೀಪದಂಥ ಪ್ರಕಾಶಮಾನ ಹೂವುಗಳಿಂದ ದೀಪಾಂಗ ಜಾತಿಯ ಕಲ್ಪವೃಕ್ಷದ ವನದ ರೂಪದಲ್ಲಿ ಪ್ರಭುವಿನ ಸೇವೆಯನ್ನು ಮಾಡುವಂತೆ ಕಾಣುತ್ತದೆ ಆಮ್ರವನವಂತೂ ತನ್ನ ಟೊಂಗೆಗಳ ಮೇಲೆ ಕುಳಿತು ಸುಸ್ವರ ಗಾನವನ್ನು ಮಾಡುವ ಕೋಗಿಲೆಗಳ ನಿಮಿತ್ತದಿಂದ ಭಗವಂತನ ಸ್ತುತಿಯನ್ನು ಮಾಡುತ್ತಿವೆ ಹೀಗೆಲ್ಲ ಭಾಸವಾಗುತ್ತಿದೆ.

**ಅಶೋಕ ವೃಕ್ಷ**—ಅಶೋಕ ವನದ ಮಧ್ಯದಲ್ಲಿ ಅಶೋಕ ಎಂಬ ಹೆಸರಿನ ಚೈತ್ಯ ವೃಕ್ಷವಿದೆ. ಅದು ಮೂರು ಸುವರ್ಣ ಪೀಠಗಳ ಮೇಲಿದೆ. ಆ ಪೀಠಗಳ ನಾಲ್ಕೂ ಮಗ್ಗಲಿಗೆ ಮೂರು ಕೋಟೆಗಳು ಒಂದೊಂದು ಕೋಟೆಗೆ ನಾಲ್ಕು ನಾಲ್ಕು ಮಹಾದ್ವಾರಗಳು ಇವೆ ಆ ದ್ವಾರಗಳು ಎಂಟು ಪ್ರಕಾರದ ಮಂಗಲ ದ್ರವ್ಯಗಳಿಂದಲೂ ಮಕರಾಕಾರದ ಮುತ್ತಿನ ತೋರಣದಿಂದಲೂ ಮಾಲೆಗಳಿಂದಲೂ ಶೋಭಾಯಮಾನವಾಗಿ ಕಾಣುತ್ತಿವೆ ಯಾವ ಪ್ರಕಾರ ಜಂಬೂದ್ವೀಪದ ಮಧ್ಯದಲ್ಲಿ ಜಂಬೂವೃಕ್ಷವು ಶೋಭಿಸುವುದೋ ಹಾಗೆ ವನದ ಮಧ್ಯದಲ್ಲಿ ಮೂರು ಪೀಠಗಳ ಮೇಲೆ ಅಶೋಕ ವೃಕ್ಷವು ಶೋಭಿಸುತ್ತದೆ ಅದರ ಶಾಖೆಗಳು ಹತ್ತೂ ದಿಕ್ಕುಗಳಲ್ಲಿ ಪಸರಿಸಿವೆ. ಅದನ್ನು ನೋಡಿದೊಡನೆಯೇ ಶೋಕವು ಇಲ್ಲದಂತೆ ಆಗುತ್ತದೆ ಆ ವೃಕ್ಷದ ಹೂವಿನ ಸುಗಂಧದಿಂದಲೂ ವೃಕ್ಷದ ವಿಸ್ತಾರದಿಂದಲೂ ಸಂಪೂರ್ಣ ಆಕಾಶವೆಲ್ಲ ತುಂಬಿ ಹೋಗಿದೆ. ಅದರ ಎಲೆಗಳು ಮರಕತ ಮಣಿಯವಿದ್ದು, ಅಚ್ಚ ಹಸುರಾಗಿವೆ. ಪದ್ಮರಾಗ ಮಣಿಯ ಪುಷ್ಪಗಳಿವೆ. ಸುವರ್ಣದ ಶಾಖೆಗಳಿವೆ ವಜ್ರದ ಬೊಡ್ಡೆಗಳಿವೆ. ಈ ಪ್ರಕಾರ ಇಲ್ಲಿಯ ವೃಕ್ಷಗಳು ತಮ್ಮ ಪ್ರಭೆಯಿಂದ ಸರ್ವ ಪ್ರಕಾಶಮಂಡಲ ಮತ್ತು ಹತ್ತೂ ದಿಕ್ಕುಗಳನ್ನು ವ್ಯಾಪಿಸಿರುತ್ತವೆ

**ಘಂಟೆ, ಧ್ವಜ ಮತ್ತು ಛತ್ರತ್ರಯ**—ಶಬ್ದವನ್ನು ಉತ್ಪನ್ನಮಾಡುವ ಘಂಟೆಯ ನಾದದಿಂದ ಭಗವಂತನ ವಿಜಯ ಘೋಷಣೆಯು ಸಕಲ ಜಗತ್ತಿಗೂ ಪ್ರಕಟಗೊಳ್ಳುತ್ತಿದೆ ಧ್ವಜಸ್ತಂಭದ ಮೇಲಿನ ವಸ್ತ್ರವು ಗಾಳಿಯಿಂದ ಚಲಿಸುತ್ತಿರುವಾಗ ನೋಡಿದವರಿಗೆ ಭಗವಂತನ ದರ್ಶನ ಮಾಡುವವರ ಪಾಪವು ಇಲ್ಲದಂತೆ ಆಗುವದೆಂದು ಸೂಚಿಸುವಂತೆ ಇದೆ. ಮುತ್ತಿನ ಗವಸಣಿಕೆಯಿಂದ ಕೂಡಿದ ಛತ್ರತ್ರಯವು ಭಗವಂತನ ತಲೆಯ ಮೇಲೆ

ತಿರುಗುತ್ತಿರುತ್ತದೆ ಅದರಿಂದ ಭಗವಂತನು ಮೂರು ಲೋಕದ ಈಶ್ವರನಿದ್ದಾನೆಂಬುದನ್ನು ವಚನದಿಂದ ಹೇಳಿದ್ದೇನೇ ದೃಷ್ಟಿಗೋಚರವಾಗುತ್ತಿದೆ.

ಅಶೋಕ ವೃಕ್ಷದ ಕೆಳಗಿರುವ ನಾಲ್ಕು ಜಿನಬಿಂಬಗಳು—ಆ ಅಶೋಕ ವೃಕ್ಷದ ಬೊಡ್ಡೆಗೆ ನಾಲ್ಕು ದಿಕ್ಕಿಗೆ ನಾಲ್ಕು ಜಿನಬಿಂಬಗಳು ವಿರಾಜಮಾನವಾಗಿವೆ ಆ ಬಿಂಬದ ಅಭಿಷೇಕ ಹಾಗೂ ಪ್ರಕ್ಷಾಲನಗಳನ್ನು ಇಂದ್ರಾದಿಕ ದೇವರು ಬಂದು ಮಾಡುತ್ತಿರುತ್ತಾರೆ ಇತರ ದೇವರು ಗಂಧ, ದೀಪ, ಧೂಪ, ನೈವೇದ್ಯ, ಫಲ, ಅಕ್ಷತ ಇವುಗಳನ್ನು ಅರ್ಪಿಸಿ ಪೂಜಿಮಾಡುತ್ತಾರೆ ಆ ಪ್ರತಿಮೆಗಳ ಪ್ರಕ್ಷಾಲನವನ್ನು ಕ್ಷೀರ ಸಮುದ್ರದೊಳಗಿನ ಜಲದಿಂದ ಮಾಡಲಾಗುತ್ತದೆ. ಆ ಪ್ರತಿಮೆಗಳು ಸುವರ್ಣದವಿದ್ದು, ಅವುಗಳನ್ನು ನಿತ್ಯವೂ ಸುರ, ಅಸುರ, ದೇವೇಂದ್ರ, ಇಂದ್ರರು ಪೂಜನ, ಅರ್ಚನ, ಸ್ತವನ, ವಂದನ ಮಾಡುತ್ತಿರುತ್ತಾರೆ ಅನೇಕ ದೇವತೆಗಳು ಅರಿಹಂತ ಪ್ರಭುವಿನ ಗುಣಸ್ಮರಣ ಮಾಡಿ ಆನಂದದಿಂದ ಹಾಡುಗಳನ್ನು ಹಾಡುತ್ತಾರೆ ಯಾವ ಪ್ರಕಾರ ಅಶೋಕ ವನದಲ್ಲಿ ಒಂದು ಅಶೋಕ ಚೈತ್ಯ ವೃಕ್ಷವು ಇದೆಯೋ ಅದೇ ಪ್ರಕಾರ ಚಂಪಕ, ಸಪ್ತಚ್ಛದ, ಆಮ್ರ ಈ ವನಗಳಲ್ಲಿಯೂ ಸಹ ಒಂದೊಂದು ಚಂಪಕ ಹೆಸರಿನ ಚೈತ್ಯ ವೃಕ್ಷವಿದೆ. ಚೈತ್ಯವೆಂದರೆ ಜಿನ ಪ್ರತಿಮೆ ಇದು ಯಾವುದರ ಮೂಲದಲ್ಲಿ ಇದೆಯೋ ಅದು ಚೈತ್ಯ ವೃಕ್ಷವು ಅಂತಲೇ ಇವುಗಳಿಗೆ ಚೈತ್ಯ ವೃಕ್ಷವೆಂಬ ಹೆಸರು ಸಾರ್ಥಕವಾಗಿದೆ. ಈ ವನದ ಕೊನೆಯ ಭಾಗದಲ್ಲಿ ನಾಲ್ಕೂ ಮಗ್ಗುಲಿಗೆ ಕಟ್ಟೆಗಳಿವೆ ಅವುಗಳಿಗೆ ನಡುಕಟ್ಟು ಇರುತ್ತವೆ. ಯಾವುದಕ್ಕೆ ಕೋಟೆ ಮತ್ತು ನಡುಕಟ್ಟು ಇದ್ದು ನಾಲ್ಕೂ ಮಗ್ಗಲುಗಳಿಗೆ ದಂಡೆಯು ಇರುವುದೋ ಅದಕ್ಕೆ ವೇದಿ ಎನ್ನುವರು ಈ ಪ್ರಕಾರದ ವೇದಿಗಳು—ಸುವರ್ಣದಿಂದ ನಿರ್ಮಾಣವಾದುವು—ವನದ ಕೊನೆಯ ವರೆಗೂ ಇವೆ ಆ ವೇದಿಗೂ ಸಹ ಅತಿಶಯ ಎತ್ತರವಾದಂಥ ನಾಲ್ಕೂ ದಿಕ್ಕಿಗೂ ನಾಲ್ಕು ಬೆಳ್ಳಿಯ ಬಾಗಿಲುಗಳಿವೆ ಆ ಬಾಗಿಲುಗಳ ಮೇಲೆಯೂ, ಕಟ್ಟೆಗಳ ಮೇಲೆಯೂ ಬೆಲೆಯುಳ್ಳ ರತ್ನಗಳನ್ನು ಕೂಡಿಸಲಾಗಿದೆ ಮಹಾದ್ವಾರದ ಮೇಲೆ ಅನೇಕ ಘಂಟೆಗಳನ್ನು ತೂಗುಹಾಕಿದ್ದು, ಮುತ್ತಿನ ಮಾಲೆ, ಝುಲ್ಲರಿ ಮತ್ತು ಹೂವಿನ ಮಾಲೆಗಳನ್ನು ಕೂಡ ಹಚ್ಚಿದೆ ಆ ಬಾಗಿಲುಗಳಲ್ಲಿ ನೂರೆಂಟು ಮಂಗಲ ದ್ರವ್ಯಗಳೂ, ರತ್ನದ ಆಭರಣಗಳು, ತೋರಣಗಳು ಇರುವುದರಿಂದ ಅಪ್ರತಿಮ ಶೋಭೆಯು ಪ್ರಾಪ್ತವಾಗಿದೆ. ಈ ಬಾಗಿಲುಗಳು ಮೂರು ಅಂಕಣಗಳಲ್ಲಿದ್ದು ಅದರಲ್ಲಿ ಅನೇಕ ದೇವತೆಗಳು ಗಾಯನ, ವಾದನ, ನೃತ್ಯಗಳನ್ನು ಮಾಡಿ, ಪ್ರಭುವಿನ ಯಶಸ್ಸನ್ನು ಹಾಡುವುದರಲ್ಲಿ ತಲ್ಲೀನರಾಗಿರುತ್ತಾರೆ

ಆ ದ್ವಾರಗಳ ಮುಂದೆ ವೇದಿಗೆ ಹೊಂದಿಯೇ ಒಂದು ರತ್ನ ಖಚಿತ ಸಿಂಹಾಸನವಿದೆ ಅದಕ್ಕೆ ಸುವರ್ಣದ ಕಂಬವಿದ್ದು, ಅದರ ಮೇಲೆ ಅನೇಕ ಬಣ್ಣದ ಧ್ವಜಗಳನ್ನು ಹಚ್ಚಲಾಗಿದೆ ರತ್ನಜಡಿತ ಸಿಂಹಾಸನದ ಮೇಲಿರುವ ಆ ಸುವರ್ಣದ ಅಪ್ರತಿಮ ಕಾಂತಿಯುಕ್ತ ಕಂಬವು ಎಂಬತ್ತೆಂಟು ಅಂಗುಲ ದಪ್ಪ ಮತ್ತು ದೊಡ್ಡದಾಗಿದೆ ಪ್ರತಿಯೊಂದು ಕಂಬಗಳ ನಡುವೆ ಇಪ್ಪತ್ತೈದು ಧನುಷ್ಯಗಳ ಅಂತರವಿದೆ

ಸಮವಸರಣದೊಳಗಿನ ವೃಕ್ಷ ಮೊದಲಾದವುಗಳ ಎತ್ತರ—ಸಮವಸರಣದಲ್ಲಿ ಇರುವ ಸಿದ್ಧಾರ್ಥ-ವೃಕ್ಷ, ಕೋಟೆ, ವನ, ಕಟ್ಟೆ, ಸ್ತೂಪ, ತೋರಣದಿಂದ ಕೂಡಿದ ಮಾನಸ್ತಂಭ, ಧ್ವಜ, ವನದೊಳಗಿನ ವೃಕ್ಷ, ಮಂದಿರ, ಪರ್ವತ ಮೊದಲಾದವುಗಳ ಎತ್ತರವು ತೀರ್ಥಂಕರರ ಶರೀರದ ಎತ್ತರಕ್ಕಿಂತ ಹನ್ನೆರಡು ಪಟ್ಟು ಹೆಚ್ಚು ಇರುತ್ತದೆ ಕೋಟೆ, ಕಟ್ಟೆಗಳ ಅಗಲಳತೆಯು ಅವುಗಳ ಎತ್ತರದ ಒಂದು ನಾಲ್ಕನೆಯಾಂಶದಷ್ಟು ಇರುತ್ತದೆ

ಧ್ವಜದ ಪ್ರಮಾಣ—ಧ್ವಜಗಳು ಹತ್ತು ವಿಧವಾಗಿವೆ ಮಾಲೆ, ವಸ್ತ್ರ, ಮಯೂರ, ಕಮಲ, ಹಂಸ, ಗರುಡ, ಸಿಂಹ, ಎತ್ತು, ಆನೆ, ಚಕ್ರ ಈ ಹತ್ತು ಚಿನ್ಹಗಳು ಅವುಗಳ ಮೇಲೆ ಇರುತ್ತವೆ ಇವುಗಳಲ್ಲಿ ಪ್ರತಿಯೊಂದರ ಒಂದುನೂರಾಎಂಟು ಧ್ವಜಗಳು ಒಂದೊಂದು ದಿಕ್ಕಿಗೂ ಇರುತ್ತವೆ ಹತ್ತೂ ಪ್ರಕಾರದ ಧ್ವಜಗಳು ಸೇರಿ ಒಂದು ಸಾವಿರದ ಎಂಬತ್ತು ಧ್ವಜಗಳು ಒಂದೊಂದು ದಿಕ್ಕಿನಲ್ಲಿ ಆಗುತ್ತವೆ. ಈ ಪ್ರಕಾರ ನಾಲ್ಕೂ ದಿಕ್ಕಿನಲ್ಲಿ ಸೇರಿ ನಾಲ್ಕು ಸಾವಿರದ ಮೂರನೂರ ಇಪ್ಪತ್ತು ಧ್ವಜಗಳಾಗುತ್ತವೆ ಸಮುದ್ರದೊಳಗಿನ ತೆರೆಗಳಂತೆ ಧ್ವಜದ ವಸ್ತ್ರಗಳು ಚಂಚಲವಾಗಿರುತ್ತವೆ ಧ್ವಜಕ್ಕೆ ಯಾವುದು ಹೆಸರು ಇರುವುದೋ ಆ ಆಕಾರದವನ್ನವು ಆ ಸ್ತಂಭದ ಮೇಲೆ ಇರುತ್ತದೆ ಮಯೂರ ಧ್ವಜದ ಆಕಾರವು ನವಿಲಿನಂತೆ, ಕಮಲ ಧ್ವಜದ ಆಕಾರವು ಸಾವಿರ ಪಕ್ಕಳಿಗಳಿಂದ ಕಮಲ-ದಂತೆ, ಹಂಸ ಧ್ವಜವು ಹಂಸಾಕಾರ, ಗರುಡಾಕಾರ, ಸಿಂಹಾಕಾರ, ವೃಷಭಾಕಾರ, ಗಜಾಕಾರ ಮತ್ತು ಚಕ್ರಾಕಾರ ಈ ಪ್ರಕಾರ ಹತ್ತು ವಿಧದ ಆಕಾರಗಳುಳ್ಳ ಧ್ವಜಗಳು ಒಂದೊಂದು ದಿಕ್ಕಿಗೂ ನೂರಎಂಟು ಇರುತ್ತವೆ ನಾಲ್ಕೂ

ದಿಕ್ಕಿನಲ್ಲಿ ಸೇರಿ ೪೩೨೦ ಇರುತ್ತವೆ ಮೋಹಕರ್ಮವನ್ನು ಗೆದ್ದು, ಯಾರು ಮೂರುಲೋಕಗಳಲ್ಲಿಯೂ ಕೀರ್ತಿಯನ್ನು ಸಂಪಾದಿಸಿರುವರೋ ಅಂಥ ಜಿನೇಶ್ವರರ ಪ್ರಶಂಸೆಯನ್ನು ಈ ಧ್ವಜಗಳು ಮಾಡುತ್ತವೆಯೋ ಏನೋ ಎನ್ನುವಂತೆ ಭಾಸವಾಗುತ್ತದೆ ಈ ಧ್ವಜಗಳನ್ನು ಎಲ್ಲಿ ನೆಟ್ಟಿರುವರೋ ಆ ಸ್ಥಳದ ವರ್ತುಲಾಕಾರದ ವಿಸ್ತಾರವು (ವಲಯವಿಷ್ಕಂಭ) ಒಂದು ಯೋಜನವು ಇರುತ್ತದೆ ಎರಡೂ ಮಗ್ಗಲು ಸೇರಿ ಎರಡು ಯೋಜನ ಅಗಲವಿರುತ್ತದೆ

**ಎರಡನೆಯದಾದ ಅರ್ಜುನ ಕೋಟೆ**—ಇದಾದ ತರುವಾಯ ಅರ್ಜುನವೆಂಬ ಹೆಸರಿನ ಎರಡನೆಯ ಬಂಗಾರದ ಕೋಟೆಯಿದೆ. ಈ ಕೋಟೆಗೂ ಸಹ ಮೊದಲನೆಯ ಕೋಟೆಗೆ ಇದ್ದಂತೆಯೇ ಬೆಳ್ಳಿಯ ನಾಲ್ಕು ಮಹಾದ್ವಾರಗಳು ನಾಲ್ಕೂ ದಿಕ್ಕುಗಳಲ್ಲಿ ಇವೆ. ಈ ಹೆಬ್ಬಾಗಿಲುಗಳಲ್ಲಿಯೂ ಮೊದಲನೆಯ ಕೋಟೆಯ ಬಾಗಿಲು-ಗಳಲ್ಲಿದ್ದಂತೆ ಮಂಗಲದ್ರವ್ಯ, ರತ್ನದ ತೋರಣ, ಪುಷ್ಪಮಾಲೆ, ಮೌಲ್ಯವಾನ್ ವಸ್ತ್ರ ಮೊದಲಾದವುಗಳೆಲ್ಲ ಇವೆ ಈ ಹೆಬ್ಬಾಗಿಲುಗಳೂ ಮೂರು ಅಂಕಣಗಳಲ್ಲಿ ಇದ್ದು, ಒಳಗಿನ ಮಗ್ಗುಲಿಗೆ ಎರಡೂ ಮಗ್ಗಲು ಎರಡು ನಾಟ್ಯಶಾಲೆ ಮತ್ತು ಎರಡು ಧೂವ ಘಟಗಳು ಮಹಾಮಾರ್ಗದ ಮಗ್ಗುಲಿಗೆ ಇವೆ.

**ಕಲ್ಪವೃಕ್ಷ**—ಇದರ ಮುಂದೆ ಎರಡೂ ಮಗ್ಗುಲಿಗೆ ಒಂದು ಯೋಜನ ಅಗಲ ನೆಲದ ವಿಸ್ತಾರವು ಮಹಾ ಮಾರ್ಗದ್ದಾಗಿದೆ. ಅಲ್ಲಿ ಅನೇಕ ರತ್ನಮಯ ಕಲ್ಪವೃಕ್ಷಗಳ ವನವು ನಾಲ್ಕೂ ಮಗ್ಗಲುಗಳಲ್ಲಿ ಇದೆ ಅದಕ್ಕೆ ತಂಪು ನೆಳಲು ಮತ್ತು ಹೂವು ಹಣ್ಣುಗಳಿಂದ ಅಪ್ರತಿಮ ಶೋಭೆಯು ಪ್ರಾಪ್ತವಾಗಿರುತ್ತದೆ. ಹತ್ತು ಪ್ರಕಾರದ ಕಲ್ಪವೃಕ್ಷಗಳ ವನದ ಸ್ವರೂಪವನ್ನು ಧರಿಸಿ ದೇವಕುರು ಮತ್ತು ಉತ್ತರಕುರು ಈ ಭೋಗಭೂಮಿಗಳೇ ಆ ಸ್ಥಳದಲ್ಲಿ ಭಗವಂತನ ಸೇವೆಯನ್ನು ಮಾಡಲಿಕ್ಕೆಂದು ಪ್ರಾಪ್ತವಾಗಿವೆಯೋ ಏನೋ ಎನ್ನುವಂತೆ ಭಾಸವಾಗುತ್ತದೆ. ಕಲ್ಪವೃಕ್ಷದ ಆಭರಣ, ಹೂವು ಮೊದಲಾದ ಪದಾರ್ಥಗಳ ಮಹತಿಯು ಜಗತ್ತಿನಲ್ಲಿ ಬಹಳವಾಗಿದೆ. ಆ ವೃಕ್ಷದ ನೆರಳಲ್ಲಿ ಕೂಡುವಂಥ ದೇವತೆಗಳು ತಮ್ಮ ಸ್ವರ್ಗಸ್ಥಾನವನ್ನು ಮರೆತು ಚಿರಕಾಲ ಅಲ್ಲಿಯೇ ಇರಲಿಕ್ಕೆ ಇಚ್ಛಿಸುತ್ತಾರೆ ಜ್ಯೋತಿರಂಗ ಜಾತಿಯ ಕಲ್ಪ ವೃಕ್ಷದ ಕೆಳಗೆ ಜ್ಯೋತಿಷವಾಸಿ, ದೀಪಾಂಗ ಕಲ್ಪವೃಕ್ಷದ ಕೆಳಗೆ ಕಲ್ಪವಾಸಿ, ಸ್ರಗಂಗ ಕಲ್ಪವೃಕ್ಷದ ಕೆಳಗೆ ಭಾವನೇಂದ್ರರು ಯಥಾಯೋಗ್ಯವಾಗಿ ಕುಳಿತು ವಿಶ್ರಾಂತಿಯನ್ನು ತಕ್ಕೊಳ್ಳುತ್ತಿರುತ್ತಾರೆ. ಈ ನಾಲ್ಕು ಮಗ್ಗಲುಗಳ ವನಗಳಲ್ಲಿ ಪ್ರತಿಯೊಂದರ ಮಧ್ಯ ಭಾಗದಲ್ಲಿಯೂ ಒಂದೊಂದು ಸಿದ್ಧಾರ್ಥ ವೃಕ್ಷವಿದೆ ಅವುಗಳ ಬುಡದಲ್ಲಿ ಸಿದ್ಧ ಪ್ರತಿಮೆಗಳು ವಿರಾಜಮಾನವಾಗಿವೆ. ಈ ಮೊದಲು ಚೈತ್ಯ ವೃಕ್ಷಗಳ ವರ್ಣನೆಯನ್ನು ಮಾಡಿದಂತೆಯೇ ಇವುಗಳ ವರ್ಣನೆಯೂ ಕೂಡ ಇರುತ್ತದೆ ಆದರೆ ಸ್ವಲ್ಪ ವ್ಯತ್ಯಾಸವು ಮಾತ್ರ ಇರುತ್ತದೆ. ಅದೇನೆಂದರೆ ಈ ಕಲ್ಪವೃಕ್ಷಗಳಲ್ಲಿ ಸಂಕಲ್ಪಿಸಿದ ಪದಾರ್ಥವನ್ನು ಪೂರೈಸುವ ಶಕ್ತಿಯು ಇರುತ್ತದೆ. ಈ ಕಲ್ಪವೃಕ್ಷದ ವನಗಳಲ್ಲಿ ಒಂದೆಡೆ ಬಾವಿ, ಇನ್ನೊಂದೆಡೆ ನದಿ, ಮತ್ತೊಂದೆಡೆ ರತ್ನದ ಧೂಳಿನಿಂದ ನಿರ್ಮಾಣವಾದ ಉಸುಕಿನ ಬೈಲು, ಇನ್ನೊತ್ತಟ್ಟಿಗೆ ಸಭಾಗೃಹ, ಕೆಲವೆಡೆಗಳಲ್ಲಿ ದೊಡ್ಡ ದೊಡ್ಡ ಮನೆಗಳು, ಇವೇ ಮೊದಲಾದ ವಿಶ್ರಾಂತಿ ಸ್ಥಾನಗಳು ಇರುತ್ತವೆ.

**ಪ್ರಾಸಾದ**—ಈ ವನಮಾರ್ಗದ ಒಳ ಮಗ್ಗಲಿಗೆ ಒಂದು ಬೆಳ್ಳಿಯ ವನವೇದಿಯು ಇದೆ. ಅದಕ್ಕೆ ಎತ್ತರವಾದಂಥ ಮೂರು ಮೂರು ಅಂಕಣಗಳ ನಾಲ್ಕು ಹೆಬ್ಬಾಗಿಲುಗಳಿವೆ ಈ ಮೊದಲು ವರ್ಣಿಸಿದ ವೇದಿಕೆಯಂತೆ ತೋರಣ, ಆಭರಣ, ಮಂಗಲ ದ್ರವ್ಯ, ಇವೇ ಮೊದಲಾದ ಸಾಮಗ್ರಿಗಳೂ ಸಹ ಇವೆ ಈ ಹೆಬ್ಬಾಗಿಲಿನ ಒಳಗೆ ಹೋದೊಡನೆಯೇ ನಾಲ್ಕು ಮಗ್ಗಲಿಗೆ ದೇವ ಶಿಲ್ಪಿಗಳು ರಚಿಸಿದ ಸರ್ವಾಂಗ ಸುಂದರ ದೊಡ್ಡ ದೊಡ್ಡ ಪ್ರಾಸಾದಗಳಿವೆ. ಅದರಲ್ಲಿ ಬಂಗಾರದ ಕಂಬ, ರತ್ನದ ಭೂಮಿಗಳು ಇರುತ್ತವೆ ಆ ಪ್ರಾಸಾದದ ಗೋಡೆಗಳು ಚಂದ್ರಕಾಂತ ಮಣಿಯಿಂದ ನಿರ್ಮಾಣವಾಗಿವೆ. ಅವುಗಳ ಮೇಲೆ ನಾನಾ ವಿಧ ರತ್ನಗಳನ್ನು ಕೂಡಿಸಿ ಅಪ್ರತಿಮ ಶೋಭೆಯನ್ನು ಉಂಟುಮಾಡ-ಲಾಗಿದೆ ಆ ಪ್ರಾಸಾದಗಳಲ್ಲಿ ಅನೇಕ ಎರಡು, ಮೂರು, ನಾಲ್ಕು ಚೌಕು-ಅಂಗಣಗಳುಳ್ಳವೂ ಇವೆ ಕೆಲವೊಂದು ಪ್ರಾಸಾದಗಳ ಮೇಲೆ ಚಂದ್ರ ಶಾಲಾ ಅಂದರೆ ಅತಿಶಯ ಎತ್ತರವಾದ ಶಿಖರಾಕಾರದ ಅಂತಸ್ತುಗಳು ಇರುತ್ತವೆ ಈ ಪ್ರಕಾರ ಆ ಪ್ರಾಸಾದಗಳು ತಮ್ಮ ತಮ್ಮ ನಿರ್ಮಲ ಪ್ರಭೆಯಲ್ಲಿ ಮುಳುಗಿ ಹೋಗಿವೆ. ಕೆಲವೊಂದು ತಮ್ಮ ಉಜ್ವಲ ಶಿಖರಗಳ ಮುಖಾಂತರ ಚಂದ್ರನ ಬೆಳದಿಂಗಳ ಶೋಭೆಯನ್ನೇ ಉತ್ಪನ್ನಮಾಡುತ್ತಿರುತ್ತವೆಯೋ ಏನೋ ಈ ಸ್ಥಳದಲ್ಲಿ ಹಲವು ಶಿಖರಗಳುಳ್ಳ ಅನೇಕ ಮನೆಗಳಿವೆ ಕಲವು ಸಭಾಗೃಹಗಳೂ ಇವೆ ಕೆಲವೊಂದು ನಾಟ್ಯ ಶಾಲೆಗಳಿವೆ ಹಲವು ಶಯನ ಗೃಹಗಳಿವೆ. ಆ ಗೃಹಗಳಿಗೆ ಚಂದ್ರಕಾಂತ ಮಣಿಯ ಮೆಟ್ಟಲುಗಳಿವೆ ಇಂಥ ಅನೇಕ ಸುಂದರ

ಮನೆಗಳಲ್ಲಿ ವಿದ್ಯಾಧರ, ಸಿದ್ಧ, ಗಂಧರ್ವ, ಪನ್ನಗ, ಕಿನ್ನರ ಈ ಜಾತಿಯ ದೇವತೆಗಳು ಬಹಳ ಆದರದಿಂದ ಜಿನೇಂದ್ರನ ಗುಣ ಸಂಕೀರ್ತನ ಮಾಡುತ್ತಿದ್ದಾರೆ ಕೆಲವರು ವಾದ್ಯಗಳನ್ನು ಬಾರಿಸುತ್ತಿದ್ದಾರೆ. ನಾನಾ ಪ್ರಕಾರದ ವಾದ್ಯಗಳು ಅಲ್ಲಿವೆ ಆ ವಾದ್ಯಗಳಿಂದ ಆ ಸ್ಥಾನವು ಶಬ್ದಮಯವಾಗಿ ಹೋಗಿದೆ ಕೆಲವರು ಅಲ್ಲಿ ನೃತ್ಯಮಾಡುತ್ತಿದ್ದಾರೆ. ಹಲವರು ತಮ್ಮ ಮುಖದಿಂದ ಜಯಜಯಕಾರ ಶಬ್ದವನ್ನು ಉಚ್ಚರಿಸುತ್ತಿದ್ದಾರೆ.

ಸ್ತೂಪ—ಆ ಅನೇಕ ಪ್ರಾಸಾದಗಳ ಮಧ್ಯಭಾಗದಲ್ಲಿ ಒಂಭತ್ತು ಸ್ತೂಪಗಳಿವೆ ಅವು ಪದ್ಮರಾಗ ಮಣಿಯುವಿದ್ದು, ಆಕಾಶವನ್ನು ಭೇದಿಸಲಿಕ್ಕೆ ಹೋಗುವಂಥ ಎತ್ತರ ಉಳ್ಳವು ಇರುತ್ತವೆ. ಅವುಗಳನ್ನು ನೋಡಿದಾಗ ಎಲ್ಲ ದೇವ ಮನುಷ್ಯರ ಮನಸ್ಸಿನೊಳಗಿನ ಅನುರಾಗವೇ ಸ್ತೂಪಾಕಾರವಾಗಿ ಜನ್ಮಿಸಿತೋ ಏನೋ ಅನ್ನುವಂತೆ ಭಾಸವಾಗುತ್ತದೆ ಈ ಸ್ತೂಪಗಳ ಮೇಲೆ ಎರಡೂ ಮಗ್ಗಲಿಗೆ ಅರಿಹಂತ ಹಾಗೂ ಸಿದ್ಧರ ಪ್ರತಿಬಿಂಬಗಳಿವೆ ಆ ಸ್ತೂಪಗಳು ಬಹಳ ಎತ್ತರವೂ ಇವೆ ಅವು ತಮ್ಮ ಎತ್ತರದಿಂದ ಆಕಾಶವನ್ನೂ ಪ್ರತಿಬಂಧಿಸುವಂತಿವೆ ಇಂಥ ಸ್ತೂಪಗಳಿಗೆ ದೇವ ವಿದ್ಯಾಧರರು ಸುಮೇರು ಪರ್ವತದಂತೆ ಪೂಜ್ಯವೆಂದು ತಿಳಿಯುತ್ತಾರೆ ಇನ್ನುಳಿದ ಶ್ರೇಷ್ಠ ತರಗತಿಯ ದೇವತೆಗಳಿಂದಲೂ ಚಾರಣಋದ್ಧಿಯನ್ನು ಧಾರಣಮಾಡುವ ಮುನಿಗಳ ಕಡೆಯಿಂದಲೂ ಅವು ವಂದ್ಯವಾಗಿವೆ. ಇಷ್ಟೇ ಅಲ್ಲ, ಇವು ಒಂಭತ್ತು ಸ್ತೂಪಗಳಲ್ಲ, ಜಿನೇಶ್ವರನ ಒಂಭತ್ತು ಕೇವಲ ಲಬ್ಧಿಗಳೇ ಸ್ತೂಪ ರೂಪವನ್ನು ತಕ್ಕೊಂಡು ನಿರ್ಮಾಣವಾದಂತಿವೆ ಈ ಸ್ತೂಪಗಳ ಪರಸ್ಪರ ನಡುವಿನ ಭಾಗದಲ್ಲಿ ರತ್ನದ ತೋರಣ-ಗಳನ್ನು ಸಾಲುಸಾಲಾಗಿ ಹಚ್ಚಿದೆ. ಅವುಗಳನ್ನು ನೋಡಿದರೆ ಇಂದ್ರಧನುಷ್ಯದ ಶೋಭೆಯು ಅಲ್ಲಿ ಉಂಟಾದಂತೆ ಭಾಸವಾಗುತ್ತದೆ. ಆ ರತ್ನದ ತೋರಣಗಳ ಪ್ರಭೆಯಿಂದ ಆಕಾಶರೂಪೀ ಅಂಗಳವು ಚಿತ್ರ ವಿಚಿತ್ರವಾಗಿದೆ ಎನ್ನಿಸುತ್ತದೆ. ಆ ಸ್ತೂಪಗಳ ಮೇಲೆ ಛತ್ರ, ಪತಾಕೆ, ಧ್ವಜಾ ಮೊದಲಾದವುಗಳನ್ನು ಹಚ್ಚಲಾಗಿದೆ. ಮಗ್ಗುಲಿಗೆ ಎಲ್ಲ ಮಂಗಲ ದ್ರವ್ಯಗಳನ್ನು ಇಡಲಾಗಿದೆ. ಅವುಗಳ ಮೇಲಿನ ಜಿನ ಪ್ರತಿಮೆಯ ಅಭಿಷೇಕ, ಪೂಜೆ, ಸ್ತವನಗಳನ್ನು ಮಾಡಿ, ಭವ್ಯ ಜೀವಗಳ ಚಿತ್ತವು ಹರ್ಷದಿಂದ ತುಂಬುತ್ತದೆ

ಮೂರನೆಯದಾದ ಸ್ಫಟಿಕ ಮಣಿಯ ಕೋಟೆ—ಈ ಪ್ರಕಾರ ಅರ್ಧಯೋಜನ ಪ್ರಮಾಣದಲ್ಲಿರುವ ಹಾಗೂ ಗೋಲಾಕಾರದ ಸ್ತೂಪ ಪ್ರಾಸಾದಗಳಿಂದ ತುಂಬಿದಂಥ ಭೂಮಿಯನ್ನು ದಾಟಿ ಮುಂದೆ ಹೋಗಲು ಸ್ಫಟಿಕ ಮಣಿಗಳಿಂದ ನಿರ್ಮಿಸಿದ ಮೂರನೆಯ ಕೋಟೆಯು ಸಿಗುವುದು. ಅದು ತನ್ನ ಹೆಸರಿಗೆ ತಕ್ಕಂತೆ ನಿರ್ಮಲವಾಗಿದೆ. ಇದನ್ನು ಕಂಡಾಗ, ಭಗವಂತನ ಸಮೀಪದಲ್ಲಿ ನಿಂತು ಸೇವೆ ಮಾಡುವವರ ಅಂತಃಕರಣವು ಹೇಗೆ ನಿರ್ಮಲವಾಗಿರು-ತ್ತದೆಯೋ ಹಾಗೆಯೇ ಭಗವಂತನ ಸಾನ್ನಿಧ್ಯದಿಂದ ಈ ಕೋಟೆಯೂ ಕೂಡ ನಿರ್ಮಲವಾಗಿದೆಯೆಂದು ಭಾಸವಾಗುತ್ತದೆ. ಆ ಸ್ಫಟಿಕ ಕೋಟೆಯ ನಾಲ್ಕು ಮಗ್ಗುಲಿಗೆ ನಾಲ್ಕು-ಪ್ರತಿಯೊಂದು ದಿಕ್ಕಿನಲ್ಲಿಯೂ ಒಂದೊಂದು-ಪದ್ಮರಾಗ ಮಣಿಯ ಹೆಬ್ಬಾಗಿಲುಗಳಿವೆ. ಅವು ಎತ್ತರವೂ ಆಗಿವೆ. ಮೇಲಾಗಿ ಆ ಹೆಬ್ಬಾಗಿಲುಗಳು ಭವ್ಯ ಜನರ ಅಂತಃಕರಣದೊಳಗಿನ ರಾಗದ ಪುಂಜವೆನ್ನುವಂತೆ ಭಾಸವಾಗುತ್ತದೆ ಈ ದ್ವಾರಗಳಲ್ಲಿಯೂ ಈ ಮೊದಲು ವರ್ಣಿಸಿದಂತೆ ಮಂಗಲ ದ್ರವ್ಯವೇ ಮೊದಲಾದವುಗಳು ಇವೆ ಮಹಾದ್ವಾರಗಳ ನೆರೆಯಲ್ಲಿಯೇ ದೈದೀಪ್ಯಮಾನವೂ ಗಂಭೀರವೂ ಆದ ನವನಿಧಿಗಳು ಇರುತ್ತವೆ ಮೂರೂ ಕೋಟೆಗಳ ಮಹಾದ್ವಾರಗಳಲ್ಲಿ ಕೈಯೊಳಗೆ ಗದೆಯನ್ನು ಹಿಡಿದುಕೊಂಡಂಥ ದೇವತೆಗಳು ಯಾವಾಗಲೂ ನಿಂತಿರುತ್ತಾರೆ. ಮೊದಲನೆಯ ಕೋಟೆಗೆ ವ್ಯಂತರ ದೇವ, ಎರಡನೆಯ ಕೋಟೆಗೆ ಭವನವಾಸೀ ದೇವ, ಮೂರನೆಯದಾದ ಸ್ಫಟಿಕ ಕೋಟೆಗೆ ಕಲ್ಪವಾಸೀ ದೇವ-ಈ ಪ್ರಕಾರ ದ್ವಾರಪಾಲಕರಿದ್ದಾರೆ.

ಸ್ಫಟಿಕದ ಹದಿನಾರು ಗೋಡೆಗಳು—ಈ ಸ್ಫಟಿಕ ಮಣಿಯ ಕೋಟೆಯಿಂದ ಗಂಧಕುಟಿಯ ಮೊದಲನೆಯ ಕೆಳಭಾಗದ ಸಿಂಹಾಸನದ ವರೆಗೆ ಉದ್ದ ಹದಿನಾರು ಗೋಡೆಗಳಿವೆ. ಈ ಗೋಡೆಗಳನ್ನೂ ಸಹ ಸ್ಫಟಿಕ ಮಣಿಯಿಂದಲೇ ರಚಿಸಲಾಗಿದೆ ಮೇಲಾಗಿ ಅವುಗಳ ಕಾಂತಿಯೂ ಸಹ ಬಹಳ ಹೊಳಪುಳ್ಳದಾಗಿದೆ ಮೊದಲನೆಯ ಸಿಂಹಾಸನದ ಕೆಳಭಾಗದಿಂದ ಸ್ಫಟಿಕ ಕೋಟೆಯ ವರೆಗೆ ಇರುವ ಈ ಹದಿನಾರು ಗೋಡೆಗಳು ಅತ್ಯಂತ ನಿರ್ಮಲ-ವಾಗಿವೆ ಅಂದರೆ ಅತ್ಯಂತ ಸ್ವಚ್ಛವಾಗಿರುವುದರಿಂದ ನಮ್ಮ ಕಣ್ಣಿಗೇ ಕಾಣುವದಿಲ್ಲ. ನಾಲ್ಕೂ ಕಡೆಗೆ ಆಕಾಶವೇ ಹಬ್ಬಿರುವುದೇನೋ ಎಂದು ಭಾಸವಾಗುತ್ತದೆ. ಆ ಗೋಡೆಗಳನ್ನು ಕೈಯಿಂದ ಮುಟ್ಟಿ ನೋಡಿದಾಗಲೇ ಅವುಗಳ ಇರುವಿಕೆಯ ಅರಿವು ನಮಗಾಗುತ್ತದೆ ಆ ಸ್ಥಾನದ ಭೂಮಿಯೂ ಸಹ ಭಗವಂತನ ಜ್ಞಾನ ಪಿದ್ಯೆಗಳಂತೆ ನಿರ್ಮಲವೂ ಎಲ್ಲ ವಸ್ತುಗಳನ್ನು ಪ್ರತಿಬಿಂಬಿಸುವಂಥದೂ ಆಗಿರುತ್ತದೆ. ಈ ಹದಿನಾರೂ ಗೋಡೆಗಳ ಮಧ್ಯ

ಭಾಗದಲ್ಲಿ ಹದಿನಾರು ದ್ವಾರಗಳಿವೆ ಅವುಗಳೊಳಗಿಂದ ನಾಲ್ಕು ದೊಡ್ಡ ದಾರಿಗಳು-ಮಹಾವೀಥಿಗಳು-ಹೋಗಿರುತ್ತವೆ ಆ ಮಹಾವೀಥಿಗಳ ಮಧ್ಯಭಾಗದಲ್ಲಿ ಹನ್ನೆರಡು ಸಭಾಸ್ಥಾನಗಳಿವೆ ಸ್ಫಟಿಕ ಮಣಿಯ ಅತಿಶಯ ನಿರ್ಮಲ ಗೋಡೆಗಳಿಂದಾಗಿ ಸಭಾಸ್ಥಾನ ಹಾಗೂ ಗೋಡೆಗಳ ನಡುವೆ ಇರುವ ಭೇದವೇ ನಮಗೆ ಕಂಡು ಬರುವದಿಲ್ಲ ಆ ಗೋಡೆಗಳ ಮೇಲೆ ರತ್ನದ ಹದಿನಾರು ಕಂಭಗಳಿರುವ ಸ್ಫಟಿಕ ಮಣಿಯ ಅತ್ಯಂತ ಎತ್ತರವಾದಂಥ ಶ್ರೀಮಂಟಪವಿದೆ

**ಶ್ರೀಮಂಟಪ**—ಇದು ಒಂದು ಯೋಜನ ಉದ್ದಗಲ ಪ್ರಮಾಣದಲ್ಲಿದ್ದು ಗೋಲ ಹಾಗೂ ಸುಂದರವಾಗಿದೆ ಈ ಮಂಟಪದಲ್ಲಿ ಸುರಾಸರ-ಮನುಷ್ಯಾದಿಕರಿಂದ ವಂದ್ಯನಾದಂಥ ಶ್ರೀಪರಮೇಶ್ವರನು ವಿರಾಜಮಾನನಾಗಿರುತ್ತಾನೆ ಅದಕ್ಕಾಗಿಯೇ ಇದಕ್ಕೆ ಶ್ರೀಮಂಟಪವೆಂಬ ಹೆಸರು ಯಥಾರ್ಥವಾಗಿದೆ ಆ ಮಂಟಪವು ಸ್ಫಟಿಕಮಣಿಯಿಂದ ನಿರ್ಮಾಣವಾಗಿರುವುದರಿಂದ ಅದರಲ್ಲಿ ಆಕಾಶದ ಸರ್ವಭಾಗವೂ ಕಂಡು ಬರುತ್ತದೆ ಈ ಮಂಟಪವು ಮೂರುಲೋಕದೊಳಗಿನ ಜನಸಮೂಹಕ್ಕೆಲ್ಲ ನಿರ್ಬಂಧ ಸ್ಥಾನವನ್ನು ಕೊಟ್ಟದರಿಂದ ಬಹುದೊಡ್ಡ ವೈಭವವನ್ನು ಹೊಂದಿರುತ್ತದೆ. ಈ ಮಂಟಪದ ಮೇಲೆ ಗುಹ್ಯಕ ದೇವನು ಹೂವಿನ ಮಾಲೆಗಳನ್ನು ಇಳಿ ಬಿಟ್ಟಿರುವನು ಈ ಹಾರಗಳು ಮಂಟಪದ ಮಧ್ಯಭಾಗದಲ್ಲಿ ನೇತಾಡುವುದರಿಂದ ದೇವತೆಗಳಿಗೂ ಮನುಷ್ಯರಿಗೂ ತಾರಾಸಮೂಹವೇ ಇರುವವೋ ಏನೋ ಎನ್ನುವಂತೆ ಭಾಸವಾಗುತ್ತದೆ ಒಂದು ಯೋಜನ ಪ್ರಮಾಣದಲ್ಲಿ ಇರುವ ಆ ಶ್ರೀಮಂಟಪದಲ್ಲಿ ದೇವ, ಮನುಷ್ಯರೆಲ್ಲರೂ ಪರಸ್ಪರ ಅಡ್ಡಿ-ಆತಂಕಗಳನ್ನುಂಟು ಮಾಡದೆ ಇರುತ್ತಾರೆ

**ಮಧ್ಯಭಾಗದಲ್ಲಿರುವ ವೈಡೂರ್ಯದ ಸಿಂಹಾಸನ**—ಆ ಮಂಟಪದ ಮಧ್ಯಭಾಗದಲ್ಲಿ ಒಂದು ವೈಡೂರ್ಯ ಮಣಿಯ ಎಂಟು ಧನುಷ್ಯ ಎತ್ತರವುಳ್ಳ ಸಿಂಹಾಸನವಿದೆ. [ವೈಡೂರ್ಯ ಮಣಿಯ ವರ್ಣವು ನವಿಲಿನ ಕುತ್ತಿಗೆಯ ಬಣ್ಣದಂತೆ ನಸು ನೀಲವರ್ಣವಾಗಿರುತ್ತದೆ] ಈ ಸಿಂಹಾಸನಕ್ಕೆ ಹದಿನಾರು ಮೂಲೆಗಳಿವೆ ಪ್ರತಿಯೊಂದು ಮೂಲೆಯಲ್ಲಿಯೂ ಅದನ್ನು ಹತ್ತುವದಕ್ಕಾಗಿ ಹದಿನಾರರಂತೆ ಮೆಟ್ಟಲುಗಳಿವೆ ಈ ಮೊದಲನೆಯ ಸಿಂಹಾಸನದ ನಾಲ್ಕು ಮಗ್ಗುಲಿಗೆ ನಾಲ್ಕು ಮಹಾವೀಥಿಗಳು-ಒಂದೊಂದು ಹರದಾರಿ ಅಗಲವಾದಂಥವು-ಸಿಂಹಾಸನದಿಂದ ನೆಟ್ಟಗೆ ಧೂಲಿಶಾಲ ಕೋಟೆಯವರೆಗೂ ಹೋಗಿವೆ ಇನ್ನು ಹದಿನಾರು ಮೆಟ್ಟಲುಗಳನ್ನು ಏರಿ ಮೊದಲನೆಯ ಸಿಂಹಾಸನದ ಮೇಲೆ ಹೋಗಬೇಕಾಗುತ್ತದೆ ಆ ಮೇಲೆ ದೇವಮನುಷ್ಯರಿಗೆ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುವದಕ್ಕೆಂದು ಹೋಗಲಿಕ್ಕೆ ಪುನಃ ಹದಿನಾರು ಮೆಟ್ಟಲುಗಳನ್ನು ಇಳಿದು ಹೋಗಬೇಕಾಗುತ್ತದೆ. ಮೊದಲನೆಯ ಪೀಠದ ಸುತ್ತಲೂ ಎಂಟು ಮಂಗಲ ದ್ರವ್ಯಗಳನ್ನು ಇಟ್ಟು ಅದಕ್ಕೆ ಶೋಭೆಯನ್ನುಂಟು ಮಾಡಲಾಗಿದೆ ಈ ಪೀಠದ ಮೇಲೆ ಅತಿಶಯ ಎತ್ತರವಾದ ಯಕ್ಷರು ತಮ್ಮ ತಲೆಯ ಮೇಲೆ ಚತುರ್ಮುಖ ಧರ್ಮಚಕ್ರವನ್ನು ಧರಿಸಿಕೊಂಡವರು ಇದ್ದಾರೆ ಆ ಧರ್ಮಚಕ್ರವು ಒಂದು ಸಾವಿರ ರತ್ನಮಯ ಹಲ್ಲುಗಳಿಂದ ಕೂಡಿರುತ್ತದೆ ಅವುಗಳ ಪ್ರಭೆಯಿಂದ ಆ ಮೊದಲ ಪೀಠವೊಂದು ಉದಯಾಚಲ ಮತ್ತು ಅಲ್ಲಿ ಇದೀಗ ಸೂರ್ಯೋದಯವಾದಂತೆ ಭಾಸವಾಗುತ್ತದೆ. ಈ ಮೊದಲನೆಯ ಪೀಠದ ಮೇಲೆ ಎರಡನೆಯ ಸುವರ್ಣದ ಪೀಠವಿದೆ ಅದು ಸೂರ್ಯಕಾಂತಿಯಂತೆ ಸಂಪೂರ್ಣ ಆಕಾಶವನ್ನು ಪ್ರದೀಪ್ತಗೊಳಿಸುತ್ತದೆ ಈ ಎರಡನೆಯ ಪೀಠದ ಮೇಲೆ ಎಂಟು ಧ್ವಜಗಳಿವೆ ಚಕ್ರ, ಆನೆ, ಎತ್ತು, ಕಮಲ, ವಸ್ತ್ರ, ಸಿಂಹ, ಗರುಡ ಮತ್ತು ಮಾಲೆ ಈ ಚಿನ್ಹಗಳಿರುವಂಥ ಎಂಟು ಧ್ವಜಗಳಿವೆ ಗಾಳಿಯಿಂದ ಅವು ಅಗಳಾಡುತ್ತಿರುತ್ತವೆ ಪಾಪರೂಪದ ಧೂಳನ್ನು ಹಾರಿಸಿ ಬಿಡುತ್ತವೆ ಈ ಪೀಠದ ಮೇಲೆ ತನ್ನ ರತ್ನಗಳ ಕಾಂತಿಯಿಂದ ಅಂಧಕಾರವನ್ನು ದೂರಗೊಳಿಸುವಂಥ ಮೂರನೆಯದಾದ ರತ್ನದ ಪೀಠವಿದೆ. ಈ ಪ್ರಕಾರ ಸಂಪೂರ್ಣ ರತ್ನಮಯವನ್ನು ಹೊಂದಿ ತ್ರಿಮೇಖಲಾಮಯ ಪೀಠದ ರೂಪವನ್ನು ಧಾರಣಮಾಡಿ ಭಗವಂತನ ಉಪಾಸನೆಯನ್ನು ಮಾಡುವದಕ್ಕಾಗಿ ಸುಮೇರು ಪರ್ವತವೇ ಬಂದಿದೆಯೋ ಏನೋ ಎನ್ನುವಂತೆ ಭಾಸವಾಗುತ್ತದೆ

**ಸಮವಸರಣದ ವಿಸ್ತಾರ**—ಇನ್ನು ಸಮವಸರಣದ ವಿಸ್ತಾರವನ್ನು ನೋಡಿರಿ. ಧೂಲಿಶಾಲ ಕೋಟೆಯಿಂದ ಅಗಳದ (ಕಂದಕ) ವರೆಗಿನ ಗೋಲ ವ್ಯಾಸವು ಒಂದು ಯೋಜನವಿದೆ ಪೂರ್ವ ಭಾವಿಯ ಕಟ್ಟೆಯ ವರೆಗೆ ವಲಯ ವ್ಯಾಸವು ಒಂದು ಯೋಜನ, ಅಶೋಕ ಮೊದಲಾದ ವನಗಳ ವಲಯ ವ್ಯಾಸವು ಒಂದು ಯೋಜನ, ಪ್ರಾಸಾದ ಪಂಕ್ತಿಯ ವಲಯವ್ಯಾಸವು ಅರ್ಧಯೋಜನ, ಹೀಗೆ ಒಟ್ಟಿನಲ್ಲಿ ಒಂದು ಮಗ್ಗುಲಿಗೆ ಐದೂ ಅರ್ಧ ಯೋಜನ ವ್ಯಾಸವಾಯಿತು ಎರಡೂ ದಿಕ್ಕಿನಲ್ಲಿ ಸೇರಿ ಸಂಪೂರ್ಣ ವ್ಯಾಸವು ಹನ್ನೊಂದು ಯೋಜನವಾಗುತ್ತದೆ

ಇದಲ್ಲದೆ ಸ್ಫಟಿಕ ಕೋಟೆಯಲ್ಲಿರುವ ಶ್ರೀಮಂಟಪದೊಳಗಿನ ಭೂಮಿಯ ವಿಸ್ತಾರವು ಒಂದು ಯೋಜನವು ಇದೆಲ್ಲ ಸೇರಿ ಹನ್ನೆರಡು ಯೋಜನ ಸಮವಸರಣ ಭೂಮಿಯ ವಿಸ್ತಾರವಾಯಿತು ಶ್ರೀಮಂಟಪದೊಳಗಿನ ಸ್ಫಟಿಕಮಯ ಕೋಟೆಯಿಂದ ಗಂಧಕುಟಿಯ ಕೆಳಗಿನ ಸಿಂಹಾಸನದ ವರೆಗೆ ಸಭೆಯ ಭೂಮಿಯು ಒಂದು ಹರದಾರಿ, ಎರಡೂ ದಿಕ್ಕಿನದು ಸೇರಿ ಎರಡು ಹರದಾರಿ ಮಧ್ಯಭಾಗದಲ್ಲಿ ಮೂರು ಸ್ತರ ಇರುವ ಸಿಂಹಾಸನವು ಎರಡು ಹರದಾರಿ ಅಗಲವಾಗಿರುವಂಥದು ಅದರಲ್ಲಿ ಮೂರನೆಯ ಪೀಠದ ಅಗಲಳತೆಯು ಒಂದು ಸಾವಿರ ಧನುಷ್ಯ, ಎರಡನೆಯ ಪೀಠವು ಒಂದೊಂದು ಮಗ್ಗುಲಿಗೆ ಏಳುನೂರಾ ಐವತ್ತು ಧನುಷ್ಯ, ಎರಡೂ ಮಗ್ಗುಲಿಗೆ ಸೇರಿ ಹದಿನೈದುನೂರು ಧನುಷ್ಯವಿದೆ. ಅದರಂತೆ ಇನ್ನೊಂದು ಪೀಠದ ಒಂದೊಂದು ಮಗ್ಗುಲುಗಳ ಅಗಲಳತೆಯೂ ಸಹ ಏಳುನೂರಾ ಐವತ್ತು ಧನುಷ್ಯದಷ್ಟು ಇವೆ ಎರಡೂ ಕಡೆಗೆ ಸೇರಿ ಅದೂ ಹದಿನೈದು ನೂರು ಧನುಷ್ಯ ವಾಗುತ್ತದೆ. ನಡುವಿನ ವಿಸ್ತಾರವು ಒಂದು ಯೋಜನವಿದೆ. ಮೊದಲನೆಯ ಸಿಂಹಾಸನವು ನೆಲದಿಂದ ಎಂಟು ಧನುಷ್ಯ ಎತ್ತರವಾಗಿದೆ. ಅದರ ಮೇಲೆ ನಾಲ್ಕು ಧನುಷ್ಯ ಎತ್ತರವಾದ ಎರಡನೆಯ ಸಿಂಹಾಸನವಿದೆ ಅದರ ಮೇಲೆ ಮತ್ತೆ ನಾಲ್ಕು ಧನುಷ್ಯ ಎತ್ತರವುಳ್ಳ ಮೂರನೆಯ ಸಿಂಹಾಸನವಿದೆ ಸುತ್ತಲೂ ಒಂದು ಯೋಜನ ಅಗಲವಾದ ಮಹಾಮಾರ್ಗವಿದೆ ಅದರ ಎರಡೂ ಮಗ್ಗುಲಿಗೆ ಗೋಡೆಗಳು ಮೊದಲನೆಯ ಸಿಂಹಾಸನದಷ್ಟು ಎತ್ತರವಾಗಿವೆ. ಈ ಗೋಡೆಗಳು ಒಂದು ಧನುಷ್ಯದಷ್ಟು ದಪ್ಪವಾಗಿವೆ ಅಂದರೆ ಎತ್ತರದ ಒಂದು ಎಂಟನೆಯಾಂಶ-ದಷ್ಟು ದಪ್ಪವಾಗಿವೆ ಇನ್ನೂ ಹನ್ನೆರಡು ಸಭೆಯ ಹನ್ನೆರಡು ಗೋಡೆಗಳೂ ಸಹ ಎಂಟು ಧನುಷ್ಯ ಎತ್ತರ ಮತ್ತು ಒಂದು ಧನುಷ್ಯ ಅಗಲವಾಗಿವೆ ಮೂರನೆಯ ಸಿಂಹಾಸನದ ಮೇಲೆ ಅನೇಕ ಪ್ರಕಾರದ ರತ್ನಗಳ ರಾಶಿಯು ಬಿದ್ದು, ಅದರಿಂದ ಇಂದ್ರ ಧನುಷ್ಯದ ಶೋಭೆಯು ಉತ್ಪನ್ನವಾಗುತ್ತದೆ. ಅಲ್ಲಿಯೇ ಇಂದ್ರನು ಅನೇಕ ವರ್ಣದ ಹೂವುಗಳನ್ನು ಸುರುವಿ ಶೋಭೆಯನ್ನುಂಟು ಮಾಡಿದ್ದಾನೆ. ಒಂದು ಸಾವಿರ ಧನುಷ್ಯ ಪ್ರಮಾಣದಲ್ಲಿರುವ ಆ ಮೂರನೆಯ ಗೋಲ ಸಿಂಹಾಸನದ ಮೇಲೆ ಆರುನೂರು ಧನುಷ್ಯ ಉದ್ದಗಲವುಳ್ಳ ಚೌಕೋನಾಕಾರದ ರತ್ನ ಖಚಿತ ಗಂಧಕುಟಿಯನ್ನು ಕುಬೇರನು ನಿರ್ಮಿಸಿದ್ದಾನೆ ಅದು ಅಗಲಳತೆಗಿಂತ ಹೆಚ್ಚು ಎತ್ತರವಾಗಿದ್ದು, ಅದರ ರಚನಾಕೌಶಲವು ಬಹಳ ಉತ್ತಮವಾಗಿರುತ್ತದೆ ಅದರ ಸುತ್ತಲೂ ಎತ್ತರವಾದ ಕೋಟೆಯು ಇದ್ದು ಅನೇಕ ಪ್ರಕಾರದ ರತ್ನಗಳ ಪ್ರಭೆಯಿಂದ ಆಕಾಶಕ್ಕೆ ಶೋಭೆಯನ್ನು ತರುವಂಥ ಶಿಖರವಿದೆ ಅತಿಶಯ ಎತ್ತರವಾದ ಆ ಶಿಖರದ ಮೇಲೆ ಧ್ವಜಗಳನ್ನು ನಿಲ್ಲಿಸಲಾಗಿದೆ ಅವು ದೇವತೆಗಳನ್ನು ಆಮಂತ್ರಿಸುವಂತಿವೆ ನಾಲ್ಕೂ ಕಡೆಗೆ ದೊಡ್ಡ ದೊಡ್ಡ ಮುತ್ತಿನ ಝುಲ್ಲರಿಗಳನ್ನು ಹಚ್ಚಲಾಗಿದೆ ನಡುನಡುವೆ ಎಲ್ಲಿಯಾದರೂ ರತ್ನದ ಝುಲ್ಲರಿಗಳನ್ನೂ ತೂಗುಹಾಕಲಾಗಿದೆ ನಾಲ್ಕು ಕಡೆಗೆ ಪೂರ್ಣ ಜರದಿಂದ ತುಂಬಿದ ಬೆಲೆಯುಳ್ಳ ವಸ್ತ್ರಗಳ ರತ್ನಜಡಿತ ಪರದೆಗಳನ್ನು ಇಳಿಬಿಡಲಾಗಿದೆ ಕಲ್ಪವೃಕ್ಷಗಳ ಸುವಾಸಿಕ ಪುಷ್ಪಗಳ ಮಾಲೆಗಳನ್ನು ನಾಲ್ಕು ಮಗ್ಗುಲಿಗೆ ಹಚ್ಚಲಾಗಿದೆ ಜಗತ್ತಿನೊಳಗಿನ ಎಲ್ಲ ಸುಗಂಧ ಪದಾರ್ಥ, ಹೂವು, ಧೂಪ, ಮೊದಲಾದ ಪದಾರ್ಥಗಳಿಗಿಂತಲೂ ಹೆಚ್ಚೆನಿಸುವ ಜಿನೇಂದ್ರನ ಶರೀರದ ಸುಗಂಧವು ಹತ್ತೂ ದಿಕ್ಕುಗಳಲ್ಲಿ ತುಂಬಿ ಹೋಗಿದೆ ಅದಕ್ಕಾಗಿಯೇ ಇದಕ್ಕೆ ಗಂಧಕುಟಿ ಎಂಬ ಹೆಸರು ಸಾರ್ಥಕವಾಗಿದೆ ಈ ಗಂಧಕುಟಿಯೆಂದರೆ ಸೌಂದರ್ಯ ಹಾಗೂ ಸುಗಂಧಗಳಿಗೆ ಮೂರುಲೋಕದೊಳಗಿನ ಅತ್ಯಂತ ಕೊನೆಯ ಸೀಮೆಯಾಗಿದೆ ಇದಕ್ಕಿಂತಲೂ ಉತ್ಕೃಷ್ಟ ಪದಾರ್ಥವು ಜಗತ್ತಿನಲ್ಲಿ ಇನ್ನೊಂದಿಲ್ಲ ಆರುನೂರು ದನುಷ್ಯ ಪ್ರಮಾಣದಲ್ಲಿರುವ ಚೌಕೋನಾಕಾರದ ಗಂಧಕುಟಿಯ ಮಧ್ಯದಲ್ಲಿ ಒಂದು ಯೋಜನ ಎತ್ತರವಾದ ಒಂದು ಸಿಂಹಾಸನವಿದೆ ಅದರ ಕಾಂತಿ ಮತ್ತು ಸೌಂದರ್ಯಗಳು ಅವರ್ಣನೀಯವಾಗಿವೆ. ಆ ಸಿಂಹಾಸನದ ಮೇಲೆ ನಾಲ್ಕು ಅಂಗುಲ ಅದರ, ಸಿಂಹಾಸನಕ್ಕೆ ಸ್ಪರ್ಶ ಮಾಡದೆ ಜಿನೇಂದ್ರ ಭಗವಾನನು ವಿರಾಜಮಾನನಾಗಿದ್ದಾನೆ ಅವನಿಗೆ ಇಂದ್ರಾದಿ ದೇವತೆಗಳು ಪರಮ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಪೂಜನ–ಸ್ತವನಗಳನ್ನು ಮಾಡುತ್ತಾರೆ. ಆ ಹನ್ನೆರಡು ಯೋಜನ ಸಭೆಯಲ್ಲಿ ದೇವತೆಗಳೇ ಮೇಘದಂತೆನಿಸಿ ಕಲ್ಪವೃಕ್ಷದ ಪುಷ್ಪದ ರೂಪದಿಂದ ವೃಷ್ಟಿಯನ್ನು ಸುರಿಸುತ್ತಾರೆ ಒಂದು ಯೋಜನ ಪ್ರಮಾಣದ ಶ್ರೀಮಂಟಪದ ಮೇಲೆ ರತ್ನದ ಅಶೋಕ ವೃಕ್ಷವು ನಾಲ್ಕು ಕಡೆಗೆ ಹಬ್ಬಿದೆ ಆ ಅಶೋಕ ವೃಕ್ಷಕ್ಕೆ ಮರಕತಮಣಿಯ ಅಚ್ಚ ಹಸುರಾದ ಎಲೆಗಳು ಮತ್ತು ನಾನಾ ಪ್ರಕಾರದ ರತ್ನದ ಪುಷ್ಪಗಳು ಇವೆ ಗಾಳಿಯಿಂದ ಸಾವಕಾಶವಾಗಿ ತೂಗಾಡುವ ಆ ವೃಕ್ಷದ ಶಾಖೆಗಳನ್ನು ನೋಡಿದರೆ ಅವು ಆನಂದದಿಂದ ನೃತ್ಯವನ್ನೇ ಮಾಡುತ್ತಿರುವಂತೆ ಭಾಸವಾಗುತ್ತದೆ ಮದೋನ್ಮತ್ತ ಕೋಗಿಲೆ ಮತ್ತು ಭ್ರಮರಗಳು

ಜಿನೇಂದ್ರನ ಗುಣಸ್ತವನವನ್ನು ಮಾಡುತ್ತಿರುವಂತೆ ಎನಿಸುತ್ತದೆ. ಕಲ್ಪವೃಕ್ಷವು ತನ್ನ ಒಂದು ಯೋಜನ ಪ್ರಮಾಣದ ಶಾಖೆಗಳಿಂದ ಸಂಪೂರ್ಣ ಜೀವಿಗಳ ದುಃಖವನ್ನು ಇಲ್ಲದಂತೆ ಮಾಡುತ್ತದೆ. ಹತ್ತೂ ದಿಕ್ಕುಗಳು ಆ ವೃಕ್ಷದ ಟೊಂಗೆ-ಟಿಸಿಲುಗಳಿಂದ ಮುಚ್ಚಲ್ಪಟ್ಟಿವೆ ಆ ವೃಕ್ಷದ ಬುಡ್ಡವು ಹಿರಾಮಣಿಯದು, ಅದಕ್ಕೆ ರತ್ನದ ಹೂವುಗಳು ಇನ್ನೂ ದೈದೀಪ್ಯಮಾನವಾದ ಛತ್ರತ್ರಯಗಳು ತಮ್ಮ ನಿರ್ಮಲತೆಯಿಂದ ಸೂರ್ಯ-ಚಂದ್ರ ಪ್ರಭೆಯನ್ನು ತಿರಸ್ಕಾರ ಮಾಡಿ ಮೂರುಲೋಕದೊಳಗಿನ ಅದ್ಭುತ ಪದಾರ್ಥದ ಪ್ರಭೆಯನ್ನು ಗೆದ್ದಿವೆ ಆ ಛತ್ರಗಳಿಗೆ ಮುತ್ತಿನ ಝುಲ್ಲರಿಗಳನ್ನು ಹಚ್ಚಲಾಗಿದೆ. ಈ ಛತ್ರಗಳು ತ್ರೈಲೋಕ್ಯಲಕ್ಷ್ಮಿಯ ನಗೆಯಂತಿವೆ ಅದವಾ ಧರ್ಮರೂಪ ರಾಜನ ಮೂರು ಲೋಕಗಳಿಗೆ ಆನಂದವನ್ನು ನೀಡುವ ಹರ್ಷವಾಗಿದೆ ಇಲ್ಲವೆ ಮೋಹದ ನಾಶ ಮಾಡಿದುದರಿಂದ ಉತ್ಪನ್ನವಾದಂಥ ಪ್ರಭುವಿನ ಯಶಸ್ಸಿನ ಸಮೂಹವೇ ಆಗಿದೆ. ಇವೆಲ್ಲ ಕಲ್ಪನೆಗಳು ಆ ಛತ್ರತ್ರಯವನ್ನು ಕಂಡಾಗ ಬರುತ್ತವೆ ಯಕ್ಷರು ಜಿನೇಂದ್ರರ ಮಗ್ಗುಲಿಗೆ ನಿಂತು ಅರವತ್ತುನಾಲ್ಕು ಚವರಿಗಳನ್ನು ಬೀಸುತ್ತಿರುತ್ತಾರೆ ಆ ಚವರಿಗಳು ಕ್ಷೀರ ಸಾಗರದೊಳಗಿನ ತೆರೆಗಳ ಸಾಲೋ, ಅಮೃತದ ತುಂಡುಗಳೋ, ಚಂದ್ರನ ಕಿರಣದ ಸಮೂಹಗಳೋ ಏನೋ ಎನ್ನುವಂತೆ ಭಾಸವನ್ನು ಉತ್ಪನ್ನ ಮಾಡುತ್ತವೆ ಚಾಮರಗಳ ರೂಪವನ್ನು ಧರಿಸಿ ಭಗವಂತನ ಸೇವೆಯನ್ನು ಮಾಡಲಿಕ್ಕೆಂದು ಗಂಗಾನದಿಯೇ ಬಂದಂತಿದೆ. ಅಥವಾ ಅದು ಜಿನೇಶ್ವರನ ಮೈಯ ಕಾಂತಿಯೇ ಇದೆಯೋ ಏನೋ ಕ್ಷೀರ ಸಮುದ್ರದ ನೊರೆಯೇ ಗಾಳಿಗೆ ತೂಗಾಡಿದಂತೆ ತೋರುತ್ತವೆ ಆಕಾಶದಿಂದ ಕೆಳಗೆ ಇಳಿಯುವ ಹಂಸ ಪಕ್ಷಿಗಳ ಪಂಕ್ತಿಯಿದ್ದೀತೆ? ಅದೇನು ಪ್ರಭುವಿನ ಯಶಸ್ಸೇ ನಾಲ್ಕೂ ದಿಕ್ಕಿಗೆ ಹಚ್ಚಿರಬಹುದೆ?–ಹೀಗೆಲ್ಲ ಕಲ್ಪನೆಗಳು ಆ ಚಾಮರಗಳನ್ನು ನೋಡಿದಾಗ ನಮಗೆ ಉಂಟಾಗುತ್ತವೆ. ಆ ಸಮವಸರಣದಲ್ಲಿ ಬಾರಿಸುತ್ತಿರುವ ದೇವದುಂದುಭಿಗಳನ್ನು ಕೇಳಿದಾಗಂತೂ ಆಕಾಶದಲ್ಲಿ ಮೋಡಗಳೇ ಬಂದಿರಬೇಕೆಂದು ಸಂಶಯವು ಉತ್ಪನ್ನವಾಗುತ್ತದೆ. ಅವು ತಮ್ಮ ಅಮೃತದಂಥ ಮಧುರ ಶಬ್ದಗಳಿಂದ ಕಿವಿಗಳಿಗೆ ತೃಪ್ತಿಯನ್ನು ಉಂಟು ಮಾಡುತ್ತಿವೆ ದೇವಲೋಕದೊಳಗಿನ ಅನೇಕ ವಿಧದ ವಾದ್ಯಗಳು ಅನೇಕ ಪ್ರಕಾರದ ಧ್ವನಿಯಿಂದ ಎಲ್ಲ ದಿಕ್ಕುಗಳನ್ನು ನಡುಗಿಸಿ ಬಿಡುತ್ತಿರುವಾಗ ಮೇಘದ ಗರ್ಜನೆಯೇ ಲೋಕದ ತುಂಬ ಆಗುತ್ತಿರಬೇಕೆಂದು ಭಾಸವಾಗುತ್ತಿದೆ. ಅಥವಾ ಭಗವಂತನು ಮೋಹವನ್ನು ಗೆದ್ದನು, ಅದರ ವಿಜಯ ಧ್ವನಿಯೇ ಇದಾಗಿರಬೇಕು ಹೀಗೆಲ್ಲ ಭಾವಿಸಿ ಎಲ್ಲ ಜನರ ಅಂತಃಕರಣವು ಆನಂದದಿಂದ ತುಂಬಿ ಬರುತ್ತಿರುತ್ತದೆ ಜಿನೇಶ್ವರನ ಶರೀರದ ಅದ್ಭುತ ಶೋಭೆಯಿಂದ ಸರ್ವ ಸಮವಸರಣವು ವ್ಯಾಪಿಸಿ ಹೋಗಿದೆ. ಆ ಪ್ರಭೆಯನ್ನು ನೋಡಿ ಸುರ, ಅಸುರ, ಮನುಷ್ಯ, ಇಂದ್ರ ಇವರೆಲ್ಲರಿಗೂ ಅತಿಶಯ ಆಶ್ಚರ್ಯವು ಉಂಟಾಗುತ್ತಿದೆ. ಯಾವ ಪ್ರಭೆಯು ಸೂರ್ಯನ ತೇಜವನ್ನು ಅಡಗಿಸಿರುವುದೋ ಆ ಪ್ರಭೆಯು ಕಲ್ಪವಾಸಿ ಕೋಟ್ಯಾವಧಿ ದೇವತೆಗಳ ಪ್ರಭೆಯನ್ನು ಆವರಿಸಿ ಬಿಡುತ್ತಿರುವಾಗ ಅದರ ಖ್ಯಾತಿಯು ಸಂಪೂರ್ಣ ಜಗತ್ತಿನಲ್ಲೆಲ್ಲ ಆಗುವುದೂ ಅದಕ್ಕೆ ಅಪ್ರತಿಮ ಉತ್ಕೃಷ್ಟತೆಯು ಪ್ರಾಪ್ತವಾಗುವುದೂ ಇದರಲ್ಲಿ ಆಶ್ಚರ್ಯವೇನು' ಜಿನೇಶ್ವರನ ದೇಹರೂಪದ ಅಮೃತ ಸಮುದ್ರದಲ್ಲಿ ದೇವ, ದಾನವ, ಮನುಷ್ಯರೆಲ್ಲ ತಮ್ಮ ತಮ್ಮ ಏಳು ಭವಗಳನ್ನು ಕಂಡುಕೊಳ್ಳುತ್ತಾರೆ ಚಂದ್ರನ ಕಾಂತಿಯು ಚಳಿಯನ್ನುಂಟು ಮಾಡುತ್ತದೆ ಸೂರ್ಯನ ಕಾಂತಿಯು ಸಂತಾಪವನ್ನು ಒದಗಿಸುತ್ತದೆ. ಆದರೆ ಜಿನದೇವನ ದೇಹದ ಕಾಂತಿಯಿಂದ ಜಡತೆಯು ನಷ್ಟವಾಗಿ ಸಂತಾಪವಾಗದೆ ಜ್ಞಾನದ ಪ್ರಕಾಶವು ಉತ್ಪನ್ನವಾಗುತ್ತದೆ. ಮೇಲಾಗಿ ಅದ್ವಿತೀಯ ಸುಖದ ಪ್ರಾಪ್ತಿಯಾಗುತ್ತದೆ ಭಗವಂತನ ಮುಖಕಮಲದಿಂದ ಮೇಘಗರ್ಜನೆಗೆ ಸಮಾನವಾದ ದಿವ್ಯಧ್ವನಿಯು ಪ್ರಕಟವಾಗುತ್ತಿರುತ್ತದೆ ಅದು ಭವ್ಯ ಜೀವಿಗಳ ಮನಸ್ಸಿನಲ್ಲಿದ್ದ ಮೋಹಾಂಧಕಾರವನ್ನು ಸೂರ್ಯನಂತೆ ನಷ್ಟಗೊಳಿಸಿ ಅನೇಕಾಂತ ಸ್ವರೂಪಿಯಾದ ಪದಾರ್ಥವನ್ನು ಪ್ರಕಟಗೊಳಿಸುತ್ತದೆ ಇದಲ್ಲದೆ ಆ ವಾಣಿಗೆ ವಿಶಿಷ್ಟವಾದ ಒಂದು ಗುಣವೂ ಇರುತ್ತದೆ. ಅದು ಒಂದೇ ರೂಪದಲ್ಲಿ ಭಗವಂತನ ಮುಖದಿಂದ ಹೊರಟು ಎಲ್ಲ ವಿಧದ ಮನುಷ್ಯರಿಗೂ ಪಶುಗಳಿಗೂ ಅವರವರ ಸ್ವಭಾಷೆಯಂತೆಯೇ ಎನಿಸಿ ಅಂತಃಕರಣದಲ್ಲಿ ಪ್ರವೇಶ ಮಾಡುತ್ತದೆ ಅದು ಅಂತಃಕರಣದಲ್ಲಿ ಪ್ರವೇಶಿಸಿದೊಡನೆಯೇ ವಿಪರೀತ ಜ್ಞಾನವು ಇಲ್ಲದಂತಾಗಿ ಯಥಾರ್ಥತತ್ವಜ್ಞಾನದ ಪ್ರಕಾಶವು ಬೀಳುತ್ತದೆ. ನೀರಿನ ಪ್ರವಾಹವು ಹೇಗೆ ಏಕ ಸ್ವರೂಪದಲ್ಲಿದ್ದು ಅದು ಅನೇಕ ಪ್ರಕಾರದ ವೃಕ್ಷಗಳಿಗೆ ನೀರುಣಿಸಿದಾಗ ಆಯಾ ವೃಕ್ಷಗಳ ಸ್ವಭಾವಕ್ಕನುಸರಿಸಿ ಫಲಪುಷ್ಪಾದಿಗಳನ್ನು ನೀಡುತ್ತದೆಯೋ ಹಾಗೆಯೇ ಸರ್ವಜ್ಞನ ಧ್ವನಿಯೂ ಕೂಡ ಅನೇಕ ಶ್ರೋತೃಗಳ ಕರ್ಣ ಸಂಪುಟದಲ್ಲಿ ಹೋಗಿ ಎಂಥೆಂಥ ಪಾತ್ರತೆಯು ಅವರಲ್ಲಿ ಇರುವುದೋ ಅದಕ್ಕನುಸರಿಸಿ ಅನೇಕ ಫಲಗಳನ್ನು ಹೊಂದಿ

ಪ್ರಕಟಗೊಳ್ಳುತ್ತದೆ ಹಲವರು ಈ ಧ್ವನಿಯಲ್ಲಿಯ ನಾನಾ ಭಾಷೆಯ ಸ್ವರೂಪವನ್ನು ಕಂಡು ಇದು ದೇವಕೃತ ಗುಣವಿರಬೇಕೆಂದು ಭಾವಿಸುತ್ತಾರೆ. ಆದರೆ ಅದು ಯೋಗ್ಯವಲ್ಲ. ಯಾಕಂದರೆ ದಿವ್ಯ ಧ್ವನಿಯು ಅಕ್ಷರಯುಕ್ತ-ವಾಗಿದೆ. ಅಕ್ಷರ ಸಮೂಹವಿಲ್ಲದೆ ಅಕ್ಷರಜ್ಞಾನವಾದರೂ ಹೇಗಾದೀತು? ಇರಲಿ, ಈ ಪ್ರಕಾರ ಎಂಟು ಪ್ರಾತಿಹಾರ್ಯಗಳ ವಿಭೂತಿಯುಳ್ಳವನೂ ಗಂಧಕುಟಿಯ ಮೇಲೆ ಅನಂತ ಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತ ಸುಖಗಳನ್ನು ಹೊಂದಿದಂಥವನೂ ಪೂರ್ವದಿಶೋನ್ಮುಖ ಇಲ್ಲವೆ ಉತ್ತರ ದಿಶೋನ್ಮುಖನಾದಂಥ ಭಗವಾನ್ ಅರಿಹಂತ ಪರಮೇಷ್ಠಿಯು ವಿರಾಜಮಾನನಾಗಿದ್ದಾನೆ

ಹನ್ನೆರಡು ಸಭೆಗಳ ರಚನೆ—ಪ್ರದಕ್ಷಿಣ ರೂಪದಲ್ಲಿ ಇರುವ ಗಂಧಕುಟಿಯ ನೆರೆಯ ಸಭೆಯಲ್ಲಿ ಗಣಧರ ಮತ್ತು ಮುನೀಶ್ವರರು ಕೂತಿರುತ್ತಾರೆ ಎರಡನೆಯ ಸಭೆಯಲ್ಲಿ ಕಲ್ಪವಾಸಿ ದೇವ ಸ್ತ್ರೀಯರು; ಮೂರನೆಯ ಸಭೆಯಲ್ಲಿ (ಗಣಿನೀಯುಕ್ತ) ಅರ್ಜಿಕೆಯರು ಮತ್ತು ಮನುಷ್ಯ ಸ್ತ್ರೀಯರು, ನಾಲ್ಕನೆಯ ಸಭೆಯಲ್ಲಿ ಚಕ್ರವರ್ತಿ ಮತ್ತು ಮನುಷ್ಯರು; ಐದನೆಯ ಸಭೆಯಲ್ಲಿ ಜ್ಯೋತಿಷವಾಸಿ ದೇವರ ಸ್ತ್ರೀಯರು; ಆರನೆಯ ಸಭೆಯಲ್ಲಿ ವ್ಯಂತರ ದೇವರ ಸ್ತ್ರೀಯರು, ಏಳನೆಯ ಸಭೆಯಲ್ಲಿ ಭವನವಾಸೀ ದೇವಿಯರು, ಎಂಟನೆಯ ಸಭೆಯಲ್ಲಿ ಭವನವಾಸಿ ದೇವರು; ಒಂಭತ್ತನೆಯ ಸಭೆಯಲ್ಲಿ ವ್ಯಂತರ ದೇವರು; ಹತ್ತನೆಯ ಸಭೆಯಲ್ಲಿ ಜ್ಯೋತಿಷವಾಸಿ ದೇವರು, ಹನ್ನೊಂದನೆಯ ಸಭೆಯಲ್ಲಿ ಕಲ್ಪವಾಸಿ ದೇವರು; ಹನ್ನೆರಡನೆಯ ಸಭೆಯಲ್ಲಿ ತಿರ್ಯಂಚರು. ಈ ಪ್ರಕಾರ ಹನ್ನೆರಡೂ ಸಭೆಯೊಳಗಿನ ಎಲ್ಲ ಜೀವರುಗಳು ಜಿನೇಂದ್ರನ ಭಕ್ತಿರಸದಿಂದ ನಮ್ರರಾಗಿ ಉಪದೇಶ ರೂಪ ಧರ್ಮಾಮೃತವನ್ನು ಪಾನಮಾಡುತ್ತಾರೆ ಭಗವಂತನು ಘಾತಿ ಕರ್ಮಗಳನ್ನು ನಾಶಮಾಡಿದುದರಿಂದ ಅವನಿಗೆ ಹಸಿವು, ನೀರಡಿಕೆ, ಹುಟ್ಟು, ಸಾವು, ಮುಪ್ಪು, ಬೇನೆ, ದುಃಖ, ಹೆದರಿಕೆ, ಆಶ್ಚರ್ಯ, ಅರತಿ, ಚಿಂತೆ, ಬೆವರು, ಖೇದ, ಮದ, ಮೋಹ, ನಿದ್ರಾ, ರಾಗ, ದ್ವೇಷ ಈ ಹದಿನೆಂಟು ದೋಷಗಳು ಇಲ್ಲದಂತಾಗುತ್ತವೆ. ಯಾವ ಹದಿನೆಂಟು ದೋಷಗಳು ಸಂಸಾರದಲ್ಲಿ ಎಲ್ಲ ಪ್ರಾಣಿಗಳನ್ನೂ ವ್ಯಾಪಿಸಿರುವವೋ ಆ ದೋಷಗಳು ನಷ್ಟವಾಗಿರುವುದರಿಂದ ಅನಂತಸುಖರೂಪ ಪರಮಾತ್ಮಾ, ಪರಮಪೂಜ್ಯ ಜಿನೇಶ್ವರ, ಅನಂತ ಗುಣದಿಂದ ಕೋಟ್ಯಾವಧಿ ಸೂರ್ಯರಂತೆ ಪ್ರಕಾಶಿಸುವಂಥವನು ಅನೇಕ ಅತಿಶಯಗಳಿಂದ ಕೂಡಿದ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖಗಳನ್ನು ಧಾರಣಮಾಡಿ ವಿರಾಜಮಾನ-ನಾಗಿದ್ದಾನೆ. ಈ ಪ್ರಕಾರ ಅರಹಂತನ ಸ್ವರೂಪದ ಧ್ಯಾನಮಾಡುವುದು ರೂಪಸ್ಥಧ್ಯಾನವೆನಿಸುತ್ತದೆ.

ಏಕಾಗ್ರತೆಯ ಸಾಮರ್ಥ್ಯ—ಯಾವ ಪುರುಷನು ಸ್ವತಃ ವೀತರಾಗಿಯಾಗಿ ವೀತರಾಗ ಪರಮೇಷ್ಠಿಯ ಸ್ಮರಣಮಾಡುವನೋ ಅವನು ಕರ್ಮಬಂಧದಿಂದ ಮುಕ್ತನಾಗುತ್ತಾನೆ. ಆದರೆ ಯಾರು ಸ್ವತಃ ರಾಗ-ದ್ವೇಷಯುಕ್ತ-ರಾಗಿ ನರಾಗಿ ಪರಮೇಶ್ವರನ ಸ್ವರೂಪವನ್ನು ಅವಲಂಬಿಸಿ ಅವರ ಧ್ಯಾನವನ್ನು ಮಾಡುವರೋ ಇಲ್ಲವೆ ಮಂತ್ರ, ಮಂಡಲ, ಮುದ್ರೆ ಮೊದಲಾದ ಅನೇಕ ಪ್ರಯೋಗಗಳಿಂದ ಧ್ಯಾನಮಾಡಲಿಕ್ಕೆ ಇಚ್ಛಿಸುವರೋ ಅವರಿಗೆ ಆತ್ಮನ ಏಕಾಗ್ರತೆಯನ್ನು ಸಾಧಿಸಿದುದರಿಂದ ಬಹಳ ಸಾಮರ್ಥ್ಯವು ಪ್ರಾಪ್ತವಾಗುತ್ತದೆ ಇಂಥವನು ಒಂದು ಕ್ಷಣದಲ್ಲಿ ಸುರ, ಅಸುರ, ಮನುಷ್ಯರ ಸಮೂಹವನ್ನು ಕ್ಷೋಭೆಗೊಳಿಸಿಬಿಡುತ್ತಾನೆ ವಿದ್ಯಾನುವಾದದಲ್ಲಿ ಅನೇಕ ವಿದ್ಯೆ, ಮಂತ್ರ, ಮಂಡಲ ಮೊದಲಾದವುಗಳ ಅಕ್ಷರಗಳಿಗೂ ಆತ್ಮನಿಗೂ ಏಕಾಗ್ರತೆಯು ಉಂಟಾಗುವುದರಿಂದ ಆ ಅಕ್ಷರಗಳಲ್ಲಿ ಅಂಥ ಶಕ್ತಿಯು ಉತ್ಪನ್ನವಾಗುತ್ತದೆ. ಅದರಿಂದ ಅನೇಕ ಅದ್ಭುತ ಚಮತ್ಕಾರಗಳನ್ನು ಮಾಡಿತೋರಿಸಲಿಕ್ಕೆ ಬರುತ್ತದೆ. ಪದಾರ್ಥಗಳ ಸಂಯೋಗವು ಆತ್ಮನೊಡನೆ ಆಗಿ ಏಕಾಗ್ರತೆಯು ಉಂಟಾದಾಗ ಆ ಸಂಯೋಗದಲ್ಲಿ ಇಂಥ ಅಲೌಕಿಕ ಸಾಮರ್ಥ್ಯವು ಉತ್ಪನ್ನವಾಗುತ್ತಿರುತ್ತದೆ. ಇದು ವಸ್ತು ಸ್ವಭಾವವಾಗಿರುವುದರಿಂದ ಅದನ್ನು ಯಾರೂ ನಷ್ಟಗೊಳಿಸಲು ಸಮರ್ಥರಿಲ್ಲ.

ವಚನ ಶಕ್ತಿಯ ಸಾಮರ್ಥ್ಯ—ಕೆಲವೊಂದು ಪುದ್ಗಲ ಪರಮಾಣುಗಳ ಸಂಯೋಗವಾಗುವುದರಿಂದ ಅನೇಕ ಪದಾರ್ಥಗಳಲ್ಲಿ ವಿಷಶಕ್ತಿಯು ಉತ್ಪನ್ನವಾಗುತ್ತದೆ ಅದರಂತೆ ಕೆಲವು ಪದಾರ್ಥಗಳಲ್ಲಿ ಅಮೃತ ಶಕ್ತಿಯೂ ಉತ್ಪನ್ನವಾಗುತ್ತದೆ ಹಲವು ಪದಾರ್ಥಗಳಲ್ಲಿ ಅವುಗಳನ್ನು ಶರೀರಕ್ಕೆ ಹಚ್ಚುವುದರಿಂದ ದೇಹದೊಳಗಿನ ರೋಗಾದಿ ವಿಕಾರಗಳು ನಷ್ಟಹೊಂದುವ ಸಾಮರ್ಥ್ಯವು ಇರುತ್ತದೆ ಕೆಲವು ಪದಾರ್ಥಗಳನ್ನು ಭಕ್ಷಣಮಾಡುವುದರಿಂದ ಪ್ರಾಣ ಹರಣವಾಗುತ್ತದೆ. ಅನೇಕ ಪದಾರ್ಥಗಳ ಸೇವನದಿಂದ ಅಮೃತದ ಹಾಗೆ ಜೀವನ ಶಕ್ತಿಯು ಪ್ರಾಪ್ತವಾಗುತ್ತದೆ. ಇದೇ ಪ್ರಕಾರ ವಚನದಲ್ಲಿಯೂ ಅಚಿಂತ್ಯ ಸಾಮರ್ಥ್ಯವಿದೆ. ಅದರಿಂದ ಆತ್ಮನಲ್ಲಿ ಕ್ರೋಧಾದಿ ವಿಕಾರಗಳು ಉತ್ಪನ್ನವಾಗುತ್ತವೆ ಅದರಂತೆ ಕೆಲವೊಂದು ಮಾತುಗಳನ್ನು ಕೇಳುವುದರಿಂದ ಆಜನ್ಮ ಕಷಾಯವೇ ಇಲ್ಲದಂತಾಗು-

ತ್ತದೆ ಮಂತ್ರೋಚ್ಚಾರಣೆಯಿಂದ ವಿಷದ ಬಾಧೆಯು ಇಲ್ಲದಂತಾಗುತ್ತದೆ ಹಾಗೆಯೇ ವಿಷಬಾಧೆಯನ್ನು ಉಂಟು-ಮಾಡಲಿಕ್ಕೂ ಸಾಧ್ಯವಿದೆ.

**ಕುಧ್ಯಾನ ಮಾಡಬೇಡಿರಿ.** ಈ ಪ್ರಕಾರ ಮನದ ಏಕಾಗ್ರತೆಯಿಂದ ಧ್ಯಾನವು ಉತ್ಪನ್ನವಾಗುತ್ತದೆ ಅದರಲ್ಲಿಯೂ ಅಕಲ್ಪಿತ ಸಾಮರ್ಥ್ಯವಿದೆ. ಸ್ವರ್ಗ ಮೋಕ್ಷಗಳಿಗೆ ಕಾರಣವು ಧ್ಯಾನವೇ ಆಗಿದೆ ಹಲವು ಧ್ಯಾನಗಳು ವಿವಿಧ ಚಮತ್ಕಾರಗಳಿಗಾಗಿ ಮಾಡಲ್ಪಡುತ್ತವೆ. ಆದರೆ ಅವುಗಳಿಂದ ಇಷ್ಟ ಫಲಪ್ರಾಪ್ತಿಯು ಆಗದೆ ಕುಮಾರ್ಗ ಪ್ರವೃತ್ತಿಯ ಬುದ್ಧಿಯು ಮಾತ್ರ ಉಂಟಾಗುತ್ತದೆ ಒಟ್ಟಿನಲ್ಲಿ ಅವೆಲ್ಲ ದುರ್ಗತಿಗೆ ಕಾರಣವಾಗಿ ಕುಧ್ಯಾನಗಳೆನಿಸುತ್ತವೆ. ಆತ್ಮನು ಸ್ವಾಭಾವಿಕವಾಗಿಯೇ ಅನಂತ ಶಕ್ತಿಯನ್ನು ಧಾರಣಮಾಡಿದಂಥವನಾಗಿದ್ದಾನೆ ಅದಕ್ಕೆ ಬಾಹ್ಯ ನಿಮಿತ್ತಗಳು ಹೇಗೆ ಹೇಗೆ ಒದಗುತ್ತವೆಯೋ ಹಾಗೆ ಹಾಗೆ ಪರಿಣಾಮವು ಆಗುತ್ತ ಹೋಗುತ್ತದೆ ಅಂತಲೇ ಜಿನ ಧರ್ಮಾನು-ಯಾಯಿಗಳು ಸುಳ್ಳು ಧ್ಯಾನ, ಕುಮಂತ್ರ, ಮಂಡಲ, ಸಾಧನ ಮೊದಲಾದ ಕ್ರಿಯೆಗಳನ್ನು ಮಾಡುವದನ್ನು ಕನಸಿನಲ್ಲಿಯೂ ಸಹ ತರಕೂಡದು. ಕುಧ್ಯಾನದ ಪ್ರಭಾವದಿಂದ ಯಥಾರ್ಥ ಮಾರ್ಗದಿಂದ ಭ್ರಷ್ಟವಾಗಬೇಕಾಗುತ್ತದೆ ಒಮ್ಮೆ ಕುಬುದ್ಧಿಯು ಪ್ರಾಪ್ತವಾಯಿತೆಂದರೆ ಸದ್‌ಬುದ್ಧಿಯು ನಾಶವಾಗುತ್ತದೆ ಆ ಮೇಲೆ ಅನೇಕ ಜನ್ಮಗಳನ್ನು ಕಳೆದರೂ ನಿರ್ಮಲಬುದ್ಧಿಯು ಪ್ರಾಪ್ತವಾಗುವದಿಲ್ಲ. ಅಲ್ಲದೆ ಕೊರಳಿಗೆ ಸುತ್ತಿದ ಮಿಥ್ಯಾಮಾರ್ಗವು ದೂರವಾಗು-ವದಿಲ್ಲ ಸನ್ಮಾರ್ಗದಿಂದ ಚ್ಯುತನಾದಾಗ ಅಸಂಖ್ಯಾತ ಜನ್ಮಗಳಲ್ಲಿ ಸಮ್ಯಕ್ ಬುದ್ಧಿಯು ಪ್ರಾಪ್ತವಾಗುವದಿಲ್ಲ. ಜಿನ ಸಿದ್ಧಾಂತದ ನಿರ್ಮಲ ಉಪದೇಶವು, ಮನಸ್ಸಿನಲ್ಲಿ ವಿಪರೀತ ಬುದ್ಧಿಯು ಜಾಗೃತವಿದ್ದಾಗ ಪರಿಣಾಮವನ್ನು ಮಾಡುವದಿಲ್ಲ ಸುಳ್ಳು ಮಂತ್ರ, ತಂತ್ರ ಮೊದಲಾದವುಗಳೆಲ್ಲವೂ ಆತ್ಮ ಘಾತಮಾಡುವಂಥವಾಗಿವೆ ಅಲ್ಲದೆ ರಾಗ-ದ್ವೇಷಗಳನ್ನು ಬೆಳೆಯಿಸುವಂಥವಾಗಿವೆ ಗೃಹೀತ ಮಿಥ್ಯಾತ್ವೀ ಜೀವಿಗಳು ಕುಧ್ಯಾನ, ಸುಳ್ಳು ಮಂತ್ರ, ಮಂಡಲ, ಮುದ್ರೆ, ಯಂತ್ರ, ತಂತ್ರ ಪ್ರಯೋಗಗಳನ್ನು ಮಾಡಿ, ರಾಗ-ದ್ವೇಷ ಕಾಮ ಕ್ರೋಧಗಳಿಂದ ಕೂಡಿದ ವ್ಯಂತರವಾಸಿ, ಭವನವಾಸಿ, ಜ್ಯೋತಿಷವಾಸಿ ದೇವ-ದೇವಿ, ಯಕ್ಷಿಣಿ ಮೊದಲಾದವರ ಆರಾಧನೆಯನ್ನು ಮಾಡುತ್ತಾರೆ ಸಂಸಾರದಲ್ಲಿ ವಿಷಯೋಪಭೋಗವು ಪ್ರಾಪ್ತವಾಗಬೇಕೆಂದು, ಧನವು ಲಭಿಸಲೆಂದು, ಅಭಿಮಾನ ಬೆಳೆಯಲೆಂದು, ಕಷಾಯಗಳ ಇಲ್ಲದ ಸಲ್ಲದ ಆಶೆಯನ್ನು ಪೂರ್ಣಮಾಡಿಕೊಳ್ಳುವದಕ್ಕಾಗಿ ಆರ್ತಧ್ಯಾನವನ್ನು ಮಾಡಿ ಮೊದಲು ಸಂಪಾದಿಸಿದ ಪುಣ್ಯವನ್ನೂ ಸಹ ಕಳೆದುಕೊಳ್ಳುತ್ತಾರೆ

**ಸುಳ್ಳು ಮಂತ್ರ ತಂತ್ರಾದಿಗಳ ಬೆನ್ನು ಹತ್ತಬೇಡಿರಿ.** ವಿಷಯ ಕಷಾಯದ ಇಚ್ಛೆಯೇ ದುರ್ಗತಿಗೆ ಮುಟ್ಟಿಸುವಂಥದ್ದಾಗಿದೆ ಮತ್ತೆ ಅದರಲ್ಲಿ ಸುಳ್ಳು ವಿದ್ಯೆ, ಸುಳ್ಳು ಮಂತ್ರ, ಇವುಗಳ ಧ್ಯಾನಮಾಡುವುದೂ ಸಹ ಕೂಡಿಕೊಂಡಿತೆಂದರೆ ಆತ್ಮನಲ್ಲಿ ಮಿಥ್ಯಾತ್ವ ಕಷಾಯದ ದೃಢ ಮೂಲವನ್ನೇ ನೆಟ್ಟಂತಾಗುವುದು. ಇದರಿಂದ ನಿಗೋದದಲ್ಲಿ ಅನಂತ ಕಾಲದ ವರೆಗೆ ಭ್ರಮಣ ಮಾಡಬೇಕಾಗುತ್ತದೆ ಬುದ್ಧಿವಂತ ಪುರುಷರು ಜೀವನವು ಕರ್ಮ ಬಂಧನದಿಂದ ಮುಕ್ತವಾಗುವಂಥ ಧ್ಯಾನ, ಚಿಂತನ ಮತ್ತು ಆಚರಣೆಗಳನ್ನು ಇಟ್ಟುಕೊಳ್ಳಬೇಕು. ಯಾವನು ಶಾಂತಚಿತ್ತ, ಮಂದ ಕಷಾಯಿ, ನಿರ್ವಾಂಛಕ, ಸಂತೋಷಿ ಮತ್ತು ಮೋಕ್ಷ ಮಾರ್ಗಾವಲಂಬಿಯಾಗಿರುವನೋ ಅವನಿಗೆ ವಿದ್ಯಾ ಮಂತ್ರ ತಂತ್ರ ಮೊದಲಾದಿಗಳ ಸಾಧನೆ ಇಲ್ಲದೆಯೂ ತನ್ನಿಂದ ತಾನೇ ಋದ್ಧಿ ಸಿದ್ಧಿಗಳು ಪ್ರಾಪ್ತವಾಗುತ್ತವೆ. ಇದಕ್ಕೆ ವಿರೋಧವಾಗಿ ಯಾವನಿಗೆ ತೀವ್ರ ಇಚ್ಛೆಯೂ ಇರುವದೋ ಅವನಿಗೆ ಪುಣ್ಯ ಸಂಚಯವಿಲ್ಲದ ಕಾರಣ ವಸ್ತು ಫಲ ಪ್ರಾಪ್ತಿಯಂತೂ ಆಗುವದಿಲ್ಲ, ಅಲ್ಲದೆ ಮಂತ್ರ ತಂತ್ರಗಳ ಸಾಧನೆಯನ್ನು ಮಾಡುತ್ತಿದ್ದೂ ಸಹ ಅನೇಕ ಸಂಕಟಗಳು ಪ್ರಾಪ್ತವಾಗುತ್ತವೆ ಅದಕ್ಕಾಗಿ ವೀತರಾಗ ಧರ್ಮದ ಮೇಲೆ ಶ್ರದ್ಧೆ ಇದ್ದ ಜನರು ಎಂದೂ ಸುಳ್ಳು ಮಂತ್ರತಂತ್ರಾದಿಗಳ ವಿಚಾರವನ್ನು ಮನಸ್ಸಿನಲ್ಲಿ ತರಕೂಡದು ಅಲ್ಲದೆ ಅವುಗಳ ಪ್ರಶಂಸೆಯನ್ನೂ ಸಹ ಮಾಡಕೂಡದು

**ರೂಪಾತೀತಧ್ಯಾನ**—ಶರೀರಾದಿ ನೋಕರ್ಮ ಮತ್ತು ಜ್ಞಾನಾವರಣಾದಿ ಅಷ್ಟಕರ್ಮ ರಹಿತ, ಚೈತನ್ಯ ಸ್ವರೂಪಾತ್ಮಕ, ನಿಜಾನಂದಮಯ, ಶುದ್ಧ, ಅಮೂರ್ತ, ಅವಿನಾಶೀ, ಅಜನ್ಮಾ, ಸ್ಪರ್ಶರಸಗಂಧವರ್ಣಾದಿ ಪುದ್ಗಲ ವಿಕಾರರಹಿತ, ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತಶಕ್ತಿ ಚತುಷ್ಟಯ ಯುಕ್ತ, ಸ್ವಸ್ವಭಾವಾಧೀನ, ನಿರಾಕುಲ, ಅತೀಂದ್ರಿಯ, ಸಿದ್ಧ ಮತ್ತು ಕೃತಕೃತ್ಯ ಇಂಥ ಆತ್ಮನ ಸ್ವಭಾವವನ್ನೇ ಮನಸ್ಸಿನಲ್ಲಿ ಚಿಂತಿಸುವುದಕ್ಕೆ ರೂಪಾತೀತಧ್ಯಾನವೆನ್ನುವರು ಇನ್ನು ಚಿತ್ತದ ಏಕಾಗ್ರತೆಯನ್ನು ಮಾಡುವುದು ಧ್ಯಾನವೆನಿಸುತ್ತದೆ.

ಆದರೂ ಸಿದ್ಧ ಪರಮೇಷ್ಠಿಯ ಗುಣ ಹಾಗೂ ಸ್ವರೂಪಗಳನ್ನು ಧ್ಯಾನದಲ್ಲಿ ಅವಲೋಕಿಸಿ ಅನನ್ಯಶರಣನಾಗಿ ತತ್ ಸ್ವರೂಪದಲ್ಲಿ ಲೀನನಾಗಿ ಹೋಗುವುದೂ ಸಹ ಧರ್ಮಧ್ಯಾನವಾಗಿದೆ ಸಿದ್ಧ ಪರಮೇಷ್ಠಿಯ ಗುಣಗಳನ್ನು ತನ್ನ ಸ್ವಭಾವದಲ್ಲಿ ಅಳವಡಿಸಿಕೊಳ್ಳುವುದು ಇಲ್ಲವೆ ತತ್‌ಸ್ವರೂಪವೇ ತಾನಿರುವೆನೆಂದು ಭಾವಿಸುವುದು ಇದೇ ಪರಮಾತ್ಮನ ಚಿಂತನೆಯಲ್ಲಿ ಲೀನನಾಗುವದೆನಿಸುತ್ತದೆ. ಪರಮ ಆತ್ಮನಲ್ಲಿಯೂ ತನ್ನಲ್ಲಿಯೂ ಗುಣದೃಷ್ಟಿಯಿಂದ ಸಮಾನತೆಯಿದೆ ನಮ್ಮ ಗುಣಗಳು ಕರ್ಮದಿಂದ ಆಚ್ಛಾದಿಸಲ್ಪಟ್ಟಿವೆ ಕರ್ಮದ ಅಭಾವವಾದುದರಿಂದ ಸಿದ್ಧ ಪರಮೇಷ್ಠಿಯ ಎಲ್ಲ ಗುಣಗಳೂ ಪ್ರಕಟವಾಗಿರುತ್ತವೆ —ಈ ಪ್ರಕಾರ ಧ್ಯಾನ ಮಾಡುವದನ್ನು ನಿರಂತರ ಅಭ್ಯಾಸ ಮಾಡಿದರೆ ಆತ್ಮನಲ್ಲಿ ಪೂರ್ಣ ನಿಶ್ಚಲತೆಯು ಪ್ರಾಪ್ತವಾಗುತ್ತದೆ. ಮೇಲಾಗಿ ಸಿದ್ಧನ ಸ್ವಭಾವವು ಅವರಿಗೆ ಪ್ರತ್ಯಕ್ಷ ಅನುಭವವಾಗ ಹತ್ತುತ್ತದೆ. ಹೀಗೆ ಏಕತಾನತೆಯನ್ನು ಹೊಂದುವವರಿಗೇನೇ ರೂಪಾತೀತಧ್ಯಾನವು ಉಂಟಾಗುತ್ತವೆ

## ಶುಕ್ಲಧ್ಯಾನ

ಶುಕ್ಲಧ್ಯಾನದ ನಾಲ್ಕು ಪ್ರಕಾರಗಳು—ಇನ್ನು ಮುಂದೆ ಶುಕ್ಲಧ್ಯಾನದ ವಿಚಾರ ಮಾಡೋಣ. ಶುಕ್ಲಧ್ಯಾನದಲ್ಲಿ ಆಗುವಂಥ ನಿರ್ಮಲ ಪರಿಣಾಮದ ಅಂಶವನ್ನೂ ಸಹ ನಾವು ಪ್ರತ್ಯಕ್ಷ ಅನುಭವಿಸಿಲ್ಲ ಆದರೂ ಶಾಸ್ತ್ರಕ್ಕನುಸರಿಸಿ ಅದರ ವರ್ಣನೆಯನ್ನು ಸ್ವಲ್ಪದರಲ್ಲಿ ಮಾಡುವದನ್ನು ಯೋಜಿಸಿದೆ ಶುಕ್ಲಧ್ಯಾನದಲ್ಲಿ ನಾಲ್ಕು ಪ್ರಕಾರಗಳಿವೆ. ಅವುಗಳಲ್ಲಿ ಮೊದಲಿನ ಎರಡು ಧ್ಯಾನಗಳು ಹದಿನಾಲ್ಕು ಪೂರ್ವ ಹಾಗೂ ದ್ವಾದಶಾಂಗ ವಾಣಿಯನ್ನು ಧಾರಣ ಮಾಡುವಂಥ ಮುನಿಗಳಿಗೆ ಉಂಟಾಗುತ್ತವೆ. ಇನ್ನುಳಿದ ಎರಡು ಧ್ಯಾನಗಳು ಕೇವಲಿ ಭಗವಂತರಿಗೆ ಆಗುತ್ತವೆ. ಪೃಥಕ್ತ್ವವಿತರ್ಕವೀಚಾರ, ಏಕತ್ವವಿತರ್ಕವೀಚಾರ, ಸೂಕ್ಷ್ಮಕ್ರಿಯಾಪ್ರತಿಪಾತಿ ಮತ್ತು ವ್ಯುಪರತಕ್ರಿಯಾನಿವರ್ತಿ-ಗಳೆಂದು ಶುಕ್ಲಧ್ಯಾನದ ಪ್ರಕಾರಗಳು ನಾಲ್ಕಾಗಿವೆ. ಇದರಲ್ಲಿ ಮೊದಲನೆಯದು ಮನ-ವಚನ-ಕಾಯಗಳ ಮೂರೂ ಯೋಗದಿಂದ ಉಂಟಾಗುತ್ತದೆ. ಎರಡನೆಯದು ಕೇವಲ ಒಂದೇ ಯೋಗವಿದ್ದರೆ ಉಂಟಾಗುತ್ತದೆ. ಮೂರನೆಯ ಧ್ಯಾನವು ಕಾಯಯೋಗ ಒಂದಿದ್ದರೆ ಆಗುತ್ತದೆ. ಇನ್ನು ನಾಲ್ಕನೆಯ ಧ್ಯಾನವು ಅಯೋಗಿ ಕೇವಲಿಗಳಿಗೆ ಆಗುತ್ತದೆ. ಮೊದಲನೆಯ ಶುಕ್ಲಧ್ಯಾನವು ಸವಿತರ್ಕವಾಗಿದೆ. ಇದು ಶ್ರುತಜ್ಞಾನದ ಶಬ್ದ ಮತ್ತು ಅರ್ಥಗಳನ್ನು ಅವಲಂಬಿಸಿ ಉತ್ಪನ್ನವಾಗುತ್ತದೆ. ಇದರಲ್ಲಿ 'ಸವೀಚಾರ'ವೆಂದರೆ ಅರ್ಥ, ಶಬ್ದ, ಯೋಗ ಪುನಃ ಪುನಃ ವಿಚಾರವು ಇರುತ್ತದೆ. ಅಂತಲೇ ಇದಕ್ಕೆ ಸವಿತರ್ಕ ವೀಚಾರವೆನ್ನಲಾಗಿದೆ ಇದೇ ಪ್ರಕಾರ ಅನೇಕ ಶಬ್ದ ಮತ್ತು ಅರ್ಥ ಅಲ್ಲದೆ ಯೋಗದ ಪುನರಾವೃತ್ತಿಯು ಯಾವುದರಲ್ಲಿ ಆಗುತ್ತಿರುವುದೋ—ಅದೂ ಭಿನ್ನ ಭಿನ್ನವಾಗಿರುವುದೋ ಅದಕ್ಕೇನೇ ಮೊದಲು ಪೃಥಕ್ತ್ವವಿತರ್ಕವೀಚಾರ ಶುಕ್ಲಧ್ಯಾನವೆನ್ನಲಾಗವುದು

ಇನ್ನು ಎರಡನೆಯ ಶುಕ್ಲಧ್ಯಾನವು ಶ್ರುತದ ಒಂದು ಶಬ್ದ, ಒಂದು ಅರ್ಥ, ಒಂದು ಯೋಗ ಇವುಗಳನ್ನು ಅವಲಂಬಿಸಿ ಆಗುತ್ತದೆ. ಒಮ್ಮೆ ಯಾವ ಅರ್ಥ ಇಲ್ಲವೆ ಶಬ್ದವನ್ನು ಅವಲಂಬಿಸಲಾಗುವುದೋ ಅದರಲ್ಲಿ ವ್ಯತ್ಯಾಸ-ವಾಗುವದಿಲ್ಲ ಅಂತಲೇ ಇದಕ್ಕೆ ಏಕತ್ವವಿತರ್ಕವೀಚಾರವೆನ್ನುವರು ಇದರಲ್ಲಿ ವಿತರ್ಕವನ್ನು ಶ್ರುತಜ್ಞಾನಕ್ಕೂ ವೀಚಾರವನ್ನು ಅರ್ಥ ಮತ್ತು ವ್ಯಂಜನಗಳ ಯೋಗದ ಸಂಕ್ರಾಂತಿಗೂ ಅನ್ವಯಿಸಲಾಗಿದೆ. ಅರ್ಥವೆಂದರೆ ಧ್ಯಾನ ಮಾಡಲಿಕ್ಕೆ ಯೋಗ್ಯವಾದ ವಸ್ತುವು. ಇದಕ್ಕೇನೇ ಧ್ಯಾನದ ಧ್ಯೇಯವೆಂದೂ ಸೂಚಿಸಬಹುದು ಇವು ದ್ರವ್ಯ ಇಲ್ಲವೆ ಪರ್ಯಾಯಗಳೂ ಆಗಿರಬಹುದಾಗಿವೆ. ವ್ಯಂಜನವೆಂದರೆ ವಚನ ಯೋಗವೆಂದರೆ ಮನ, ವಚನ, ಕಾಯಗಳ ಚಲನವಲನ ಕ್ರಿಯೆಯು ಸಂಕ್ರಾಂತಿ ಅಂದರೆ ಪರಿವರ್ತನ. ದ್ರವ್ಯವನ್ನು ತೊರೆದು ಪರ್ಯಾಯದ ವಿಚಾರ ಮಾಡುವುದು, ಪರ್ಯಾಯವನ್ನು ಬಿಟ್ಟು ದ್ರವ್ಯದ ವಿಚಾರಕ್ಕೆ ತೊಡಗುವುದು—ಇದಕ್ಕೆ ಅರ್ಥಸಂಕ್ರಾಂತಿ ಎನ್ನುವರು ಶ್ರುತದ ಒಂದು ಶಬ್ದವನ್ನು ಗ್ರಹಣ ಮಾಡಿ, ಪುನಃ ಶ್ರುತದ ಇನ್ನೊಂದು ಪದವನ್ನು ಗ್ರಹಣ ಮಾಡುವುದು, ಆ ಎರಡನೆಯ ಶಬ್ದವನ್ನು ಬಿಟ್ಟು ಮೂರನೆಯ ಶಬ್ದವನ್ನು ಅವಲಂಬಿಸುವುದು ವ್ಯಂಜನ ಸಂಕ್ರಾಂತಿ ಎನಿಸುತ್ತದೆ ಇದೇ ಪ್ರಕಾರ ಕಾಯ-ಯೋಗದ ಹೊರತಾಗಿ ಇತರ ಯೋಗಗಳನ್ನು ಗ್ರಹಣ ಮಾಡುವುದೂ ಯೋಗ ಸಂಕ್ರಾಂತಿ-ಯಾಗಿದೆ. ಈ ಪ್ರಕಾರ ಪರಿವರ್ತನ ಹೊಂದುವುದಕ್ಕೆ ವೀಚಾರವೆನ್ನುವುದು ಈ ಪ್ರಕಾರ ಸಾಮಾನ್ಯ ವಿಶೇಷ ಪ್ರಕಾರಗಳಿಂದ ಹೇಳಿದ ನಾಲ್ಕು ಪ್ರಕಾರದ ಶುಕ್ಲಧ್ಯಾನವು ಸಂಸಾರದ ಪೂರ್ಣ ಅಭಾವವಾಗಲಿಕ್ಕೆಂದ ಮುನೀಶ್ವರರಿಗೆ ಉಂಟಾಗುತ್ತದೆ.

ಧ್ಯಾನಿಗೆ ಮೂರೇ ಭವಮಾಧ್ಯಾನಕೊಡಂಬಟ್ಟವಂಗೆ ಹತ್ತೆಂಟು ಭವಂ
ತಾನೊಡನೆ ಮುಕ್ತಿಯಹುದೀ ಧ್ಯಾನಕೆ ಮುನಿವಂಗೆ ಮುಕ್ತಿಯಿಲ್ಲಖಿಲ ಭವಂ ।

—ರತ್ನಾಕರ-ತ್ರಿಲೋಕ ಶತಕ-೧೨೫.

**ಧ್ಯಾನದ ಪ್ರಾರಂಭಿಕ ಸಾಮಗ್ರಿಗಳು**—ಧ್ಯಾನ ಮಾಡುವದಕ್ಕೆ ಆರಂಭಿಸುವ ಮೊದಲು ಮುಂದಿನ ಸಾಮಗ್ರಿಗಳ ಅವಶ್ಯಕತೆಯು ಇದೆ ಯಾವ ಕಾಲಕ್ಕೆ ಉತ್ತಮ ಮೂರು ಪ್ರಕಾರದ ಶರೀರದ ಸಂಹನನವು ಇರುವುದೋ, ಪರೀಷಹಗಳ ಪೀಡೆಯನ್ನು ಸಹನ ಮಾಡುವ ಸಾಮರ್ಥ್ಯವು ಆತ್ಮನಲ್ಲಿ ಇರುವುದೋ ಆ ಸಮಯದಲ್ಲಿಯೇ ಧ್ಯಾನ ಮಾಡಲಿಕ್ಕೆ ಪ್ರಾರಂಭಿಸಬೇಕು ಪರ್ವತ, ಗುಹೆ, ನದಿ, ದರಿ, ವೃಕ್ಷದ ಪೊಳ್ಳು ಸ್ಥಾನ, ನದಿಯ ತೀರ, ಸ್ಮಶಾನ, ಹಳೆಯ ಮನೆ ಇವುಗಳಲ್ಲಿ ಯಾವ ಸ್ಥಾನವಿದ್ದರೂ ನಡೆಯುತ್ತದೆ ಅದರಲ್ಲಿ ಹಾವು, ಪಶು-ಪಕ್ಷಿ ಮತ್ತು ಮನುಷ್ಯರ ವಾಸ್ತವ್ಯ ಇಲ್ಲದಿದ್ದರೆ ತೀರಿತು ಹಾಗೆಯೇ ಅಕಸ್ಮಿಕವಾಗಿ ಹುಟ್ಟುವ ಜೀವ, ಕ್ರಿಮಿ, ಕೀಟಕ, ಚೇಳು, ನೊಣ, ಜೇನ್ನೊಣ, ಹುಳ-ಹುಪ್ಪಡಿಗಳ ಉಪದ್ರವವೂ ಇರಕೂಡದು. ಧ್ಯಾನ ಮಾಡುವ ಸ್ಥಳದಲ್ಲಿ ಬಹಳ ಉಷ್ಣತೆ, ಅತಿ ಚಳಿ, ಬಿರುಗಾಳಿ, ಬಿರುಸಾದ ಮಳೆಗಳು ಉಂಟಾಗುವ ಭೀತಿಯು ಇರಕೂಡದು. ಯಾವ ರೀತಿಯಿಂದಲೂ ಹೊರಗೆ ಶರೀರಕ್ಕೂ ಆಂತರಿಕವಾಗಿ ಮನಸ್ಸಿಗೂ ಆತಂಕವು ಒದಗುವಂಥ ಕಾರಣಗಳು ಉಪಲಬ್ಧವಿರಕೂಡದು ಇಂಥ ಶುದ್ಧ, ಪವಿತ್ರ ಮತ್ತು ಅನುಕೂಲ ಸ್ಥಳವನ್ನು ನೋಡಿ ಅಲ್ಲಿ ನೆಲದ ಮೇಲೆ ಪಲ್ಯಂಕಾಸನ ಹಾಕಿ ಸಮ, ಸರಳವಾದಂಥ ಶರೀರರೂಪೀ ಕಟ್ಟಿಗೆಯನ್ನು ನಿಶ್ಚಲಗೊಳಿಸಬೇಕು ತನ್ನ ತೊಡೆಗಳ ಮೇಲೆ ಎಡಗೈಮೇಲೆ ಬಲಗೈಯನ್ನು ನೆಟ್ಟಗೆ ಇಟ್ಟು, ಕಣ್ಣುಗಳನ್ನು ಅರ್ಧ ಮುಚ್ಚಿ ಅಂದರೆ ನಾಸಾಗ್ರ ದೃಷ್ಟಿಯವನಾಗಿ, ಮೇಲಿನ ಹಲ್ಲುಗಳನ್ನು ಕೆಳಗಿನ ಹಲ್ಲುಗಳಿಗೆ ಸ್ಪರ್ಶಗೊಳಿಸದೆ, ಸ್ವಲ್ಪ ಮೇಲೆ ಮುಖ ಮಾಡಿ, ಹೊಟ್ಟೆ ಎದೆಗಳನ್ನು ಸರಳವಾಗಿ ಇಟ್ಟುಕೊಂಡು, ಶರೀರದೊಳಗಿನ ವಕ್ರತೆಗಳನ್ನು ತೊರೆದು ಮಸ್ತಕವನ್ನು ಸರಳವಾಗಿಡಬೇಕು. ಪರಿಣಾಮದಲ್ಲಿ ಶಾಂತಿ ಹಾಗೂ ಗಾಂಭೀರ್ಯಗಳನ್ನು ನಿಲ್ಲಿಸಿ, ಮುಖದಲ್ಲಿ ಪ್ರಸನ್ನತೆಯನ್ನು ಇಟ್ಟುಕೊಳ್ಳಬೇಕು. ಕಣ್ಣು ರೆಪ್ಪೆಗಳನ್ನು ಹೊಡೆಯದೆ, ಸೌಮ್ಯ ದೃಷ್ಟಿಯನ್ನು ಇಟ್ಟು, ನಿದ್ರೆ, ಆಲಸ್ಯ, ಕಾಮ, ರಾಗ, ರತಿ, ಅರತಿ, ಶೋಕ, ಹಾಸ್ಯ, ಭಯ, ದ್ವೇಷ, ಗ್ಲಾನಿಗಳನ್ನು ಇಲ್ಲದಂತೆ ಮಾಡಬೇಕು. ಶ್ವಾಸೋಚ್ಛ್ವಾಸವನ್ನು ಸಾವಕಾಶವಾಗಿ ಮಾಡಬೇಕು ಇವೇ ಧ್ಯಾನದ ಪರಿಕರಗಳಾಗಿವೆ. ಧ್ಯಾನ ಮಾಡುವಂದವರ ಹತ್ತರ ಈ ಪ್ರಾರಂಭಿಕ ಸಾಧನ-ಸಾಮಗ್ರಿಗಳೆಲ್ಲ ಇರಬೇಕಾಗುತ್ತದೆ ತರುವಾಯ ಅವನು ಹೊಕ್ಕಳದ ಮೇಲ್ಭಾಗದಲ್ಲಿ, ಹೃದಯದಲ್ಲಿ, ಮಸ್ತಕದಲ್ಲಿ ಇಲ್ಲವೆ ಇನ್ನಾವುದಾದರೂ ಬೇರೊಂದು ಸ್ಥಳದಲ್ಲಿ ತನ್ನ ಮನಸ್ಸಿನ ಪ್ರವೃತ್ತಿಯನ್ನು ಮೊದಲು ಅಭ್ಯಾಸ ಮಾಡಿಕೊಂಡಂತೆ ಸ್ಥಿರಗೊಳಿಸಬೇಕು ಅಲ್ಲದೆ ಮೋಕ್ಷವೆಂದರೆ ಕರ್ಮಬಂಧನರಹಿತ ಅವಸ್ಥೆಯು ಪ್ರಾಪ್ತವಾಗುವ ಇಚ್ಛೆಯಿಂದ ಪ್ರಶಸ್ತವಾದ ಧ್ಯಾನವನ್ನು ಮಾಡಬೇಕು ಧ್ಯಾನ ಮಾಡುವಾಗ ಮನಸ್ಸನ್ನು ಏಕಾಗ್ರಗೊಳಿಸಬೇಕು ರಾಗ, ದ್ವೇಷ, ಮೋಹಗಳ ಉದ್ರೇಕವಾಗಗೊಡಬಾರದು. ಶರೀರದ ಚಲನವಲನವಂತೂ ಮೂಲದಲ್ಲಿಯೇ ಆಗಕೂಡದು ಉಸಿರಾಡಿಸುವುದನ್ನು ಮಂದಗೊಳಿಸಿ ಮನವನ್ನು ಸ್ಥಿರಗೊಳಿಸಬೇಕು. ಕ್ಷಮೆಯನ್ನು ಧರಿಸಿರಬೇಕು. ಬಾಹ್ಯಾಭ್ಯಂತರ ದ್ರವ್ಯ ಪರ್ಯಾಯಗಳ ಧ್ಯಾನ ಮಾಡುತ್ತ ಶ್ರುತಜ್ಞಾನದ ಸಾಮರ್ಥ್ಯವು ಅಚಿಂತ್ಯವಾಗಿದೆಯೆಂದು ಮನದಲ್ಲಿ ನೆನೆಯಬೇಕು ಅರ್ಥ, ವ್ಯಂಜನ, ಕಾಯ, ವಚನ ಇವುಗಳ ಭಿನ್ನ ಭಿನ್ನ ಪರಿಣತಿಯನ್ನು ಅರಿತು ಮನಸ್ಸಿನಲ್ಲಿ ಪೃಥಕ್ತ್ವವಿತರ್ಕವೀಚಾರ ಶುಕ್ಲಧ್ಯಾನದ ಚಿಂತನೆಯನ್ನು ಮಾಡಬೇಕು. ಒಬ್ಬ ಮನುಷ್ಯನಿಗೆ ಪೂರ್ಣ ಶಕ್ತಿ ಇದ್ದೂ ಉತ್ಸಾಹವಿಲ್ಲದುದರಿಂದ ಅವನು ಕೈಯಲ್ಲಿ ಹದನವಾದ ಶಸ್ತ್ರವನ್ನು ತಕ್ಕೊಳ್ಳದೆ ಜಂಗುತಿಂದ ಕತ್ತಿಯಿಂದಲೇ ಬಹಳ ಹೊತ್ತಿನ ಮೇಲಾದರೂ ಗಟ್ಟಿಯಾದ ಕಟ್ಟಿಗೆಯನ್ನು ಒಡೆದು ಬಿಡುತ್ತಾನೆ. ಇದೇ ಪ್ರಕಾರ ಎಂಟನೆಯ, ಒಂಭತ್ತನೆಯ ಮತ್ತು ಹತ್ತನೆಯ ಗುಣಸ್ಥಾನಗಳಲ್ಲಿ ಇರುವ ಸಾಧುಗಳಲ್ಲಿ ಸಂಜ್ವಲನ ಕಷಾಯಗಳ ಉದಯವಿರುವುದರಿಂದ ಪರಿಣಾಮದಲ್ಲಿ ಪರಿಪೂರ್ಣ ಶಕ್ತಿ ಮತ್ತು ಉತ್ಸಾಹಗಳು ಉಳಿಯುವದಿಲ್ಲ. ಆದರೆ ಸೂಕ್ಷ್ಮಕಷಾಯಗಳ ಉದಯದಿಂದ ಅವರ ಪರಿಣಾಮದಲ್ಲಿ ಉಂಟಾಗುವ ತೂಗಾಟದಿಂದ ನಿಶ್ಚಲತೆಯು ತಡೆದು ನಿಲ್ಲುವದಿಲ್ಲ ಅವರ ಮೋಹನೀಯ ಕರ್ಮದ ಸಂಪೂರ್ಣ ಉದಯದ ನಾಶವು ಆಗಿರುವದಿಲ್ಲ. ಸಾವಕಾಶವಾಗಿ ಕರುಣರೂಪ ಪರಿಣಾಮದ ಸಾಮರ್ಥ್ಯದಿಂದ ಮೋಹನೀಯ

ಕರ್ಮ ಪ್ರಕೃತಿಯ ಉಪಶಮವು ಇಲ್ಲವೆ ಕ್ಷಯವು ಆಗುತ್ತಿರುತ್ತದೆ ಇಂಥ ಸ್ಥಿತಿಯಲ್ಲಿ ಅವರಿಗೆ ಈ ಪೃಥಕ್ತ್ವವಿ-ತರ್ಕವೀಚಾರವೆಂಬ ಶುಕ್ಲಧ್ಯಾನವು ಸಂಭವಿಸುತ್ತದೆ. ಅದಕ್ಕೂ ಮುಂದಿನ ಸಾಧನೆಯಲ್ಲಿ ಮೇಲಿಂದ ಮೇಲೆ ಕಷಾಯಗಳ ಶಕ್ತಿಯು ಇಲ್ಲದಂತೆ ಆಗುತ್ತ ಹೋಗಿ ಅವನು ಯೋಗದಿಂದ ಯೋಗಾಂತರ, ಶಬ್ದದಿಂದ ಶಬ್ದಾಂತರ, ಅರ್ಥದಿಂದ ಅರ್ಥಾಂತರ ಮಾಡುತ್ತ ಮಾಡುತ್ತ ಧ್ಯಾನದ ಪ್ರಭಾವದಿಂದ ಸಂಪೂರ್ಣ ಮೋಹ ಕರ್ಮದ ನಾಶಮಾಡಿ, ಧ್ಯಾನ ಯೋಗವನ್ನು ಆಕುಂಚನಗೊಳಿಸಿಕೊಳ್ಳುತ್ತಾನೆ

ಏಕತ್ವವಿತರ್ಕವೀಚಾರ—ಈ ಮಾರ್ಗದಿಂದ ಸಂಪೂರ್ಣ ಮೋಹಕರ್ಮದ ನಾಶಮಾಡಲಿಕ್ಕೆ ಇಚ್ಛಿಸುವವರು ಅನಂತಪಟ್ಟು ಶುದ್ಧವಾದಂಥ ಯೋಗದ ಆಶ್ರಯದಿಂದ ಜ್ಞಾನಾವರಣಕ್ಕೆ ಸಹಾಯವಾದಂಥ ಪ್ರಕೃತಿಗಳ ಪ್ರತಿಬಂಧವನ್ನು ಮಾಡಬೇಕು ಅವುಗಳ ಸ್ಥಿತಿಯನ್ನೂ ಕಡಿಮೆ ಮಾಡಬೇಕು ಇಲ್ಲವೆ ಅವುಗಳನ್ನು ಕ್ಷಯಗೊಳಿಸಬೇಕು ಶ್ರುತಜ್ಞಾನದ ಕಡೆಗೇನೇ ತಮ್ಮ ಲಕ್ಷ್ಯವನ್ನು ಹಚ್ಚಬೇಕು ಅರ್ಥ ಸಂಕ್ರಾಂತಿ, ವ್ಯಂಜನ ಸಂಕ್ರಾಂತಿ, ಯೋಗ ಸಂಕ್ರಾಂತಿಗಳು ಸಂಭವಿಸದಂತೆ ಮನವನ್ನು ನಿಶ್ಚಲಗೊಳಿಸಿ ಕಷಾಯಗಳನ್ನು ಕ್ಷೀಣಗೊಳಿಸ-ಬೇಕು ಮೇಲಾಗಿ ವೈಡೂರ್ಯ ಮಣಿಯಂತೆ ನಿರ್ಲೇಪನಾಗಿ ಧ್ಯಾನಮಾಡಬೇಕು. ಅಂದರೆ ಪುನಃ ಅದರಿಂದ ಚ್ಯುತನಾಗುವ ಹೆದರಿಕೆಯು ಇರುವದಿಲ್ಲ. ಈ ಪ್ರಕಾರ ಧ್ಯಾನಮಾಡುವವರಿಗೆ ಏಕತ್ವವಿತರ್ಕ ಧ್ಯಾನವು ಸಂಭವಿಸುತ್ತದೆ

ಸೂಕ್ಷ್ಮಕ್ರಿಯಾಪ್ರತಿಪಾತ—ಏಕತ್ವವಿತರ್ಕ ಶುಕ್ಲಧ್ಯಾನವೆಂಬ ಅಗ್ನಿಯಿಂದ ಯಾರು ತಮ್ಮ ಘಾತಿ ಕರ್ಮರೂಪದ ಉರುವಲವನ್ನು ಸುಟ್ಟು ಬಿಟ್ಟಿರುವರೋ ಅವರು ಕೇವಲ ಜ್ಞಾನವನ್ನು ಹೊಂದುವರು. ಈ ಕೇವಲ ಜ್ಞಾನವು ಸೂರ್ಯನಿದ್ದಂತೆ ಈ ಸೂರ್ಯನು ಮೇಘದಿಂದ ಹೊರಬಿದ್ದಾಗ ದೈದೀಪ್ಯಮಾನನಾಗಿರುವನು. ಅಂಥ ತೇಜಃಪುಂಜ ಅವಸ್ಥೆಯನ್ನು ಹೊಂದಿದ ಭಗವಾನ್ ತೀರ್ಥಂಕರರು, ಕೇವಲಿಗಳು, ತ್ರೈಲೋಕ್ಯದ ಪ್ರಭುಗಳೂ ಈ ಶುಕ್ಲಧ್ಯಾನದಿಂದಲೇ ಆಗುತ್ತಾರೆ ಇವರಿಗೆ ಇಂದ್ರ, ಧರಣೇಂದ್ರರೂ ನಮಸ್ಕಾರ ಮಾಡುತ್ತಾರೆ ಇವರು ಹೆಚ್ಚಿಗೆ ಹೆಚ್ಚು ದೇಶೋನಕೋಟಿ ಪೂರ್ವ ವರ್ಷಗಳ ವರೆಗೆ ವಿಹಾರಮಾಡುತ್ತಾರೆ. ಅಂತರ್ಮುಹೂರ್ತ ಆಯುಷ್ಯವು ಶೇಷ ಉಳಿದಾಗ ಮತ್ತು ವೇದನೀಯ, ನಾಮ, ಗೋತ್ರ ಇವುಗಳ ಮರ್ಯಾದೆಯು ಆಯುಕರ್ಮದಷ್ಟೇ ಇರುವಾಗ, ಸಂಪೂರ್ಣ ಮನೋವಚನ ಯೋಗವನ್ನೂ ಬಾದರ ಕಾಯ ಯೋಗವನ್ನೂ ತ್ಯಜಿಸಿ ಸೂಕ್ಷ್ಮ ಕಾಯ ಯೋಗದ ಅವಲಂಬನಮಾಡುವರು. ಈ ಪ್ರಕಾರದ ಮುನಿಗಳೇ ಸೂಕ್ಷ್ಮಕ್ರಿಯಾಪ್ರತಿಪಾತಿ ಧ್ಯಾನಕ್ಕೆ ಯೋಗ್ಯರು. ಅಂತರ್ಮುಹೂರ್ತ ಆಯುಷ್ಯದ ಸ್ಥಿತಿಯು ಇದ್ದು, ಇನ್ನುಳಿದ ವೇದನೀಯ ನಾಮ ಗೋತ್ರಗಳ ಸ್ಥಿತಿಯು ಅಧಿಕವಾಗಿದ್ದರೆ ಅವರು ಸಯೋಗಿ ಮುನೀಶ್ವರರು ಇವರು ಕರ್ಮದ ನಾಶಮಾಡುವದಕ್ಕಾಗಿ ದಂಡ, ಕಪಾಟ, ಪ್ರತರ ಈ ಕ್ರಮದಿಂದ ಲೋಕಪೂರಣ ಸಮುದ್ಘಾತಗೊಳಿಸಿ, ತಮ್ಮ ಆತ್ಮ ಪ್ರದೇಶವನ್ನು ನಾಲ್ಕು ಸಮಯಗಳಲ್ಲಿ ಸಂಪೂರ್ಣ ಲೋಕಾಕಾಶದಲ್ಲಿ ಪಸರಿಸಿ ಬಿಡುತ್ತಾರೆ ಬೇರೆ ನಾಲ್ಕು ಸಮಯಗಳಲ್ಲಿ ಆ ಪ್ರದೇಶವನ್ನು ಆಕುಂಚಿತಗೊಳಿಸಿ, ಎಲ್ಲ ಕರ್ಮಗಳ ಸ್ಥಿತಿಗಳ ಸ್ಥಿತಿಯನ್ನು ಸಮಾನಗೊಳಿಸಿ ಇಡುತ್ತಾರೆ. ಮತ್ತು ಪೂರ್ವ ಶರೀರ ಪ್ರಮಾಣಾಕಾರವನ್ನು ಹೊಂದಿ ಸೂಕ್ಷ್ಮಕಾಯಯೋಗದಿಂದ ಸೂಕ್ಷ್ಮಕ್ರಿಯಾಪ್ರತಿಪಾತ ಧ್ಯಾನವನ್ನು ಮಾಡತೊಡಗುತ್ತಾರೆ.

ಸಮುಚ್ಛಿನ್ನಕ್ರಿಯಾನಿವರ್ತಿ—ಆ ಮೇಲೆ ಸಮುಚ್ಛಿನ್ನಕ್ರಿಯಾನಿವರ್ತಿ ಧ್ಯಾನವನ್ನು ಪ್ರಾರಂಭಿಸುತ್ತಾರೆ ಸಮುಚ್ಛಿನ್ನವೆಂದರೆ ಇಲ್ಲದಂತೆ ಮಾಡಿದ್ದು. ಶ್ವಾಸೋಚ್ಛ್ವಾಸ ಕ್ರಿಯೆ ಮತ್ತು ಮನ–ವಚನ–ಕಾಯಗಳ ಕ್ರಿಯೆ ಅಂದರೆ ಸಂಪೂರ್ಣ ಪ್ರದೇಶದ ಚಲನ–ವಲನ–ರೂಪ ವ್ಯಾಪಾರ, ಇಂಥ ಕ್ರಿಯೆಗೆ ಸಮುಚ್ಛಿನ್ನ ಕ್ರಿಯಾನಿವರ್ತೀ ಧ್ಯಾನವೆನ್ನುವರು. ಈ ಧ್ಯಾನದಿಂದ ಸಂಪೂರ್ಣ ಬಂಧದ ಕಾರಣಗಳನ್ನು, ಸಂಪೂರ್ಣ ಆಸ್ರವದ ನಿರೋಧ ಮತ್ತು ಸರ್ವಕರ್ಮದ ನಾಶಮಾಡುವ ಸಾಮರ್ಥ್ಯವು ಉಂಟಾಗುತ್ತದೆ ಇದರಿಂದ ಅಯೋಗಿಕೇವಲಿಗಳಿಗೆ ಸಂಸಾರದೊಳಗಿನ ದುಃಖದ ಸಂಯೋಗವನ್ನು ಇಲ್ಲದಂತೆ ಮಾಡುವ ಸಾಕ್ಷಾತ್ ಮೋಕ್ಷಕ್ಕೆ ಕಾರಣವಾದ ಯಥಾಖ್ಯಾತಚಾರಿತ್ರವೂ ಜ್ಞಾನದರ್ಶನಗಳೂ ಉತ್ಪನ್ನವಾಗುತ್ತವೆ ಧ್ಯಾನರೂಪ ಅಗ್ನಿಯಿಂದ ಸರ್ವ ಕರ್ಮಕಲಂಕವು ಇಲ್ಲದಂತಾಗುತ್ತದೆ. ನಿರ್ಮಲ ಸುವರ್ಣದಂತೆ ತಮ್ಮ ಆತ್ಮನ ಶುದ್ಧಿಯನ್ನು ಮಾಡಿಕೊಂಡು ಅಯೋಗ ಕೇವಲಿಗಳು ಮೋಕ್ಷವನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ. ಈ ಪ್ರಕಾರ ಸಂಗ್ರಹರೂಪದಲ್ಲಿ ಶುಕ್ಲಧ್ಯಾನದ ಸ್ವರೂಪವನ್ನು ಹೇಳಿ, ಧ್ಯಾನ ತಪದ ಭಾವನೆಯನ್ನು ವರ್ಣಿಸಲಾಗಿದೆ.

ಇನ್ನು ಮುಂದೆ ಅನೇಕಾಂತ ಭಾವನೆ ಮತ್ತು ಸಮಯಸಾರಾದಿ ಭಾವನೆಗಳ ಸ್ವರೂಪವನ್ನು ಹೇಳಲಿಕ್ಕೆ ಬೇಕು ಆದರೆ ನಾಶವಂತ ಶರೀರದ ಭರವಸೆಯು ಎನಿಸುವದಿಲ್ಲ. ಅದಕ್ಕಾಗಿ ಮೂಲ ಸೂತ್ರಕಾರರು ವರ್ಣಿಸಿದ ಗ್ರಂಥವನ್ನು ಬೇಗನೆ ಪೂರ್ತಿಗೊಳಿಸುವುದು ಯೋಗ್ಯವಾಗಿದೆ. ಈ ವಿಚಾರದಿಂದ ಇಲ್ಲಿ ಹೆಚ್ಚಿಗೆ ವಿವರಣೆಯನ್ನು ಮಾಡದೆ ಮೂಲ ಗ್ರಂಥದ ವಿಷಯದ ಕಡೆಗೆ ಹೊರಳುವೆ.

ಯೋಗದಿಂ ಹರಿವವು ಕರ್ಮಗಳು ಯೋಗದ ದೆಶೆಯಿಂ ಮುಕ್ತಿ ।
ಯೋಗದ ಶಕ್ತಿಯ ಬಲ್ಲವನಾ ಯೋಗಿಯೊಳಲ್ಲದೆ ಕಾಣೆ ॥
ಜ್ಞಾನಿಜನಂಗಳು ಮನ್ನಿಸುವ ಧ್ಯಾನದ ಬಲದಿಂದ ।
ಜ್ಞಾನವಿದೊಂದೇ ಎನಗಹುದು ಏನನು ಕಾಣೆನು ಮತ್ತೆ ॥

—ಕಲ್ಯಾಣಕೀರ್ತಿ—ಚಿನ್ಮಯ ಚಿಂತಾಮಣಿ ೮೯-೯೦

## ಸಲ್ಲೇಖನಾ

ಇಲ್ಲಿಯ ವರೆಗೆ ಶ್ರಾವಕರ ಹನ್ನೆರಡು ವ್ರತಗಳನ್ನು ಹೇಳಲಾಯಿತು. ಆದರೆ ಕೊನೆಗೆ ಸಲ್ಲೇಖನಾ ವ್ರತವನ್ನು ಸ್ವೀಕರಿಸಿದ ಹೊರತಾಗಿ ವ್ರತಗಳಿಗೂ ಜೀವನಕ್ಕೂ ಸಾಫಲ್ಯತೆಯಿಲ್ಲ. ಹನ್ನೆರಡು ವ್ರತಗಳು ಒಂದು ದೇವಾಲಯವೆಂದು ಕಲ್ಪಿಸಿದರೆ ಅದಕ್ಕೆ ಸಲ್ಲೇಖನವೇ ಕಲಶವಾಗಿದೆ. ಈ ರತ್ನಮಯವಾದ ಕಲಶವಿಲ್ಲದೆ ದೇವಾಲಯಕ್ಕೆ ಶೋಭೆಯಿಲ್ಲ. ಅಂತಲೇ ಈಗ ಸಲ್ಲೇಖನದ ಸ್ವರೂಪ ಹಾಗೂ ಅದನ್ನು ಯಾವಾಗ ಮಾಡಬೇಕು ಎಂಬುದನ್ನು ಹೇಳುವದಕ್ಕಾಗಿ ಆಚಾರ್ಯರು ಸೂತ್ರವನ್ನು ಹೇಳುತ್ತಾರೆ—

**ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ ।**
**ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ॥ ೧೨೨ ॥** [1]

**ಅನ್ವಯಾರ್ಥ**—(ಆರ್ಯಾಃ) ಗಣಧರ ಮೊದಲಾದ ಶ್ರೇಷ್ಠ ಪುರುಷರು (ನಿಃಪ್ರತೀಕಾರೇ) ಪ್ರತೀಕಾರ ಮಾಡಲಿಕ್ಕೆ ಬಾರದಂಥ (ಉಪಸರ್ಗೇ) ಉಪಸರ್ಗದ ಹೊತ್ತಿನಲ್ಲಿ (ದುರ್ಭಿಕ್ಷೇ) ಬರಗಾಲದಲ್ಲಿ (ಜರಸಿ) ಮುಪ್ಪಿನ ಅವಸ್ಥೆಯಲ್ಲಿ (ಚ)[2] ಮತ್ತು (ರುಜಾಯಾಂ)—ಅಸಾಧ್ಯ—ರೋಗವು ಉತ್ಪನ್ನವಾದಾಗ (ಧರ್ಮಾಯ) ಧರ್ಮದ ಸಲುವಾಗಿ (ತನುವಿಮೋಚನಂ) ಶರೀರವನ್ನು ಬಿಡುವುದು—ಇದಕ್ಕೆ—(ಸಲ್ಲೇಖನಾ) ಸಲ್ಲೇಖನ ವ್ರತ (ಆಹುಃ) ಎನ್ನುವರು.

**ಅರ್ಥ**—ಅನಿವಾರ್ಯವಾದಂಥ ಉಪಸರ್ಗ, ಬರಗಾಲ, ಮುಪ್ಪು ಮತ್ತು ರೋಗಗಳು ಪ್ರಾಪ್ತವಾದಾಗ ಧರ್ಮವನ್ನು ಪಾಲಿಸುವದಕ್ಕಾಗಿ ಶರೀರವನ್ನು ತ್ಯಾಗಮಾಡುವದಕ್ಕೆ ಹಿರಿಯರು ಸಲ್ಲೇಖನವೆಂದು ಹೇಳುವರು [ಯಾವ ದೇಹತ್ಯಾಗಕ್ಕೆ—'ತನುವಿಮೋಚನ'ಕ್ಕೆ—ಇಲ್ಲಿ ಸಲ್ಲೇಖನವೆಂದು ಹೇಳಲಾಗಿದೆಯೋ ಅದಕ್ಕೇನೇ ಮುಂದಿನ ಸೂತ್ರದಲ್ಲಿ 'ಅಂತಕ್ರಿಯಾ' ಹಾಗೂ 'ಸಮಾಧಿ ಮರಣ'ಗಳೆಂಬ ಹೆಸರಿನಿಂದಲೂ ಉಲ್ಲೇಖಿಸಲಾಗಿದೆ ಸಾಮಾನ್ಯವಾಗಿ ಸಂಸಾರದಲ್ಲಿ ಎರಡು ವಿಧದಿಂದ ಪ್ರಾಣಿಗಳು ಮರಣವನ್ನು ಹೊಂದುತ್ತವೆ. ಆಯುಷ್ಯವು ತೀರುವುದರಿಂದ ಕೆಲವು ಜೀವಿಗಳು ದೇಹವನ್ನು ತ್ಯಜಿಸುತ್ತವೆ ಆಯುವಿನ ಕೊನೆಯು ಆಗದಿದ್ದರೂ ಸಹ ಕ್ರೋಧಾದಿಗಳಿಗೆ ವಶವಾಗಿಯೂ ಮೋಹದ ಹುಚ್ಚಿನಿಂದಲೂ ಅಪಘಾತಕ್ಕೆ ಈಡಾಗಿ ಆತ್ಮಘಾತವನ್ನು—Suicide—ಮಾಡಿಕೊಂಡು ಪ್ರಾಣವನ್ನು

---

1 ಆಯತವರ್ಮನು ಹೇಳುವದು ಹೀಗೆ—
ಕಂದ ॥ ಎಲ್ಲಾ ಪರಿಗ್ರಹವುಮಣವಿಲ್ಲದ ಮನದೊಡೆಯನಾಗಿ ಸವೆತಪವಂ ತಳು- ।
ವಿಲ್ಲದೆ ಕೈಕೊಳ್ವುದು ತಾಂ ಸಲ್ಲೇಖನೆಯೆಂದು ಪೇಳ್ವರಾಚಾರ್ಯರ್ಕಳು ॥

2 ಇಲ್ಲಿ ಇಂಥವೇ ಬೇರೆ ಕಾರಣಗಳು ಉಂಟಾದಲ್ಲಿಯೂ ಎಂದು ಹೇಳುವದಕ್ಕಾಗಿ ಚಕಾರದ ಪ್ರಯೋಗವಿದೆ.
"ಅಣ್ಣಂ ಪಿ ಚಾಪಿ ಎದಾರಿಸವ್ವಿ ಅಗಾಢಕಾರಣೇ ಜಾದೇ" । —ಭಗವತೀ ಆರಾಧನಾ

ಕಳೆದುಕೊಳ್ಳುತ್ತವೆ ಇಂಥ ಸಂದರ್ಭಗಳಲ್ಲಿ ಆತ್ಮನಲ್ಲಿ ಯಾವ ಸಾವಧಾನತೆಯಾಗಲಿ, ಸ್ವಸ್ವರೂಪಸ್ಥಿತಿಯಾಗಲಿ ಉಳಿಯುವದಿಲ್ಲ. ಇಲ್ಲಿ ಮರಣಕ್ಕೆ 'ಸಮಾಧಿ' ವಿಶೇಷಣದಿಂದ ಭಿನ್ನತೆಯು ಪ್ರಾಪ್ತವಾಗಿದೆ ಆದರಿಂದ ಸಮಾಧಿ ಮರಣವು ಸಾಮಾನ್ಯವಾದ ಸಾವಲ್ಲ ಇದರಲ್ಲಿ ಆತ್ಮನು ಸಂಪೂರ್ಣವಾಗಿ ಸಾವಧಾನಿಯಾಗಿರುತ್ತಾನೆ. ಅಲ್ಲದೆ ಮೋಹ ಹಾಗೂ ಕ್ರೋಧಾದಿ ಕಷಾಯಗಳ ಅವಶೇಷವು ಸ್ವಲ್ಪವೂ ಕೂಡಾ ಇರುವದಿಲ್ಲ. ಅಲ್ಲದೆ ಅವುಗಳನ್ನು ಗೆಲ್ಲಲಾಗಿರುತ್ತದೆ. ಚಿತ್ತವು ಪರಿಶುದ್ಧತೆಯಲ್ಲಿ ಸ್ಥಿರವಾಗಿರುತ್ತದೆ ಆದಕ್ಕಾಗಿ ಸಲ್ಲೇಖನವು ಯಾವ ಅಪರಾಧವೂ ಅಪಘಾತವೂ ಆತ್ಮಘಾತವೂ ಅಲ್ಲ. ಸಲ್ಲೇಖನವು ಬಹುತರವಾಗಿ ಜೀವನದ ಅಂತಿಮ ಕಾಲದಲ್ಲಿ ಆಚರಿಸುವ ಸಮೀಚೀನ ಕ್ರಿಯೆಯಾಗಿದೆ ಆದರಿಂದ 'ಅಂತಕ್ರಿಯಾ' ಎಂಬ ಹೆಸರಿನಿಂದ ಉಲ್ಲೇಖಿಸಲಾಗಿದೆ ಇನ್ನು ಸಮ್ಯಕ್ ಚಾರಿತ್ರದ ಅಂತದಲ್ಲಿ ಇದನ್ನು ನಿರ್ದೇಶಿಸಲಾಗಿದೆ. ಇದರಿಂದ ಸಮ್ಯಕ್ ಚಾರಿತ್ರದ ಕೊನೆಯ ಅವಸ್ಥೆಯ ಧಾರ್ಮಿಕ ಅನುಷ್ಠಾನವೆಂಬುದೂ ಸೂಚಿತವಾಗುತ್ತದೆ. ಆದಕ್ಕಾಗಿ ಈ ಕ್ರಿಯೆಯಿಂದ ದೇಹವನ್ನು ತ್ಯಾಗಮಾಡುವವರು ಆತ್ಮವಿಕಾಸಕ್ಕೆ ಸಹಾಯಕ-ವಾದಂಥ ಅರ್ಹಂತರನ್ನೇ ಮೊದಲಾದ ಪಂಚಪರಮೇಷ್ಠಿಗಳ ಧ್ಯಾನಮಾಡುತ್ತ ಬಹಳ ಯತ್ನಾಚಾರದಿಂದ ವರ್ತಿಸುತ್ತಾರೆ. ಅದರ ವಿವರವು ೧೨೮ನೆಯ ಸೂತ್ರದಲ್ಲಿ ಮುಂದೆ ಬರುತ್ತದೆ ಇಲ್ಲಿಯ ಮರಣವು ವಿಷ ತಿಂದು, ಬಾವಿಯಲ್ಲಿ ಬಿದ್ದು, ಗುಂಡುತಾಗಿ, ಅನ್ಯ ಶಸ್ತ್ರಾದಿಗಳಿಂದ ಹೊಡೆತ ಬಿದ್ದು ಬಂದುದಲ್ಲ

'ಸತ್' ಮತ್ತು 'ಲೇಖನಾ' ಈ ಎರಡು ಶಬ್ದಗಳಿಂದ 'ಸಲ್ಲೇಖನಾ' ಪದವು ನಿರ್ಮಾಣವಾಗಿದೆ 'ಸತ್'ವು ಪ್ರಶಂಸನೀಯ ಎಂಬರ್ಥದಲ್ಲಿದೆ 'ಲೇಖನಾ' ಎಂಬುದು ಕೃಶೀಕರಣ ಕ್ರಿಯೆಯ ಹೆಸರಾಗಿದೆ ಸಲ್ಲೇಖನದಿಂದ ಕಾಯ ಹಾಗೂ ಕಷಾಯಗಳನ್ನು ಕೃಷ ಅಥವಾ ಕ್ಷೀಣಗೊಳಿಸುವುದು. ಆದಕ್ಕಾಗಿ ಆಗಮಗಳಲ್ಲಿ ಸಲ್ಲೇಖನ ವ್ರತವನ್ನು ಕಾಯಸಲ್ಲೇಖನ ಮತ್ತು ಕಷಾಯ ಸಲ್ಲೇಖನವೆಂದು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಅಂತಃಶುದ್ಧಿಗಾಗಿ ಕಷಾಯ ಸಲ್ಲೇಖನವಿದೆ ಈ ಸೂತ್ರದಲ್ಲಿ ಮುಖ್ಯವಾಗಿ ಕಾಯಸಲ್ಲೇಖನದ ನಿರ್ದೇಶವಿದೆ. ಯಾಕೆಂದರೆ 'ತನುವಿಮೋಚನಂ' ಹಾಗೂ ಮುಂದೆ ಬರುವ 'ತನುಂ ತ್ಯಜೇತ್' (೧೨೮) ಎಂಬ ಪದಗಳ ಪ್ರಯೋಗವು ಈ ಅರ್ಥವನ್ನು ಸ್ಪಷ್ಟಗೊಳಿಸುತ್ತದೆ. ಈ ಅರ್ಥದಲ್ಲಿ ಆಹಾರವನ್ನು ಕ್ರಮದಿಂದ ತೊರೆದು ದೇಹವನ್ನು ತ್ಯಾಗಮಾಡು-ವದನ್ನು ವಿಧಿಸಲಾಗಿದೆ

ಇನ್ನು ಈ ಸೂತ್ರದಲ್ಲಿ ಬರುವ 'ನಿಃಪ್ರತೀಕಾರೇ' ಮತ್ತು 'ಧರ್ಮಾಯ' ಈ ಎರಡು ಪದಗಳನ್ನೂ ಗಮನಿಸಬೇಕು 'ನಿಃಪ್ರತೀಕಾರೇ' ಎಂಬ ವಿಶೇಷಣದ ಸಂಬಂಧವು ಉಪಸರ್ಗ, ದುರ್ಭಿಕ್ಷ, ಮುಪ್ಪು, ರೋಗಗಳಿಗೆ ಬರುವದು. ಅಲ್ಲದೆ ಚಕಾರದಿಂದ ಸೂಚಿಸಲ್ಪಡುವ ಇದಕ್ಕೆ ಸಮಾನವಾದ ಸಂಕಟಗಳಿಗೆಲ್ಲ ಅನ್ವಯಿಸುತ್ತದೆ ಸಂಕಟವನ್ನು ಇಲ್ಲದಂತೆ ಮಾಡುವ ಉಪಾಯಗಳೆಲ್ಲ ತೀರಿದ ಮೇಲೆ—ಇನ್ನು ಮಾರ್ಗವೇ ಉಳಿದಿಲ್ಲ ಎನ್ನುವ ಸಂದರ್ಭದಲ್ಲಿ ಮಾತ್ರ—ಮನುಷ್ಯನು ಸಲ್ಲೇಖನದ ಅಧಿಕಾರಿಯಾಗುತ್ತಾನೆ, ಪಾತ್ರನೆನಿಸುತ್ತಾನೆ. ಉಪಾಯವು ಶಕ್ಯವಾಗಿದ್ದಾಗ ಅವನು ಸಲ್ಲೇಖನದ ಅಧಿಕಾರಿಯೆನಿಸನು, ಪಾತ್ರನೂ ಆಗಲಾರನು. ಇನ್ನು 'ಧರ್ಮಾಯ' ಪದದ ಪ್ರಯೋಗವು ಎರಡು ದೃಷ್ಟಿಯಿಂದ ಆಗಿದೆ.—ಒಂದು ತನ್ನ ಸ್ವೀಕೃತ ಸಮೀಚೀನ ಧರ್ಮದ ರಕ್ಷಣೆ; ಇನ್ನೊಂದು ಆತ್ಮೀಯ ಧರ್ಮದ ಯಥಾಶಕ್ಯ ಸಾಧನೆ. ಇನ್ನು ಧರ್ಮದ ರಕ್ಷಣೆಗಾಗಿ ದೇಹವನ್ನು ತ್ಯಜಿಸುವದೆಂದರೆ ಸ್ವಲ್ಪ ಅನುಚಿತವೆಂದೇ ಮೊದಲು ತೋರೀತು. ಯಾಕೆಂದರೆ ಎಲ್ಲೆಡೆಗೂ 'ಧರ್ಮಾರ್ಥಕಾಮಮೋಕ್ಷಾಣಾಂ ಶರೀರಂ ಸಾಧನಂ ಮತಮ್' ಈ ವಾಕ್ಯಕ್ಕೆ ಅನುಸರಿಸಿ ಶರೀರವು ಧರ್ಮದ ಸಾಧನವೆಂದು ಸ್ವೀಕರಿಸಲಾಗಿದೆ. ಈ ಮಾತು ಒಂದು ದೃಷ್ಟಿಯಿಂದ ಸರಿಯಾಗಿದೆ ಆದರೆ ಶರೀರವು ಧರ್ಮದ ಸಂಪೂರ್ಣ ಅಥವಾ ಅನನ್ಯತಮ ಸಾಧನ ಮಾತ್ರವಾಗಿಲ್ಲ. ಅದು ಒಮ್ಮೊಮ್ಮೆ ಬಾಧಕವೂ ಆಗುತ್ತದೆ. ಯಾವಾಗ ಶರೀರವನ್ನು ರಕ್ಷಿಸುವುದರಿಂದ ಇಲ್ಲವೆ ಅದರ ಅಸ್ತಿತ್ವದಿಂದ ಧರ್ಮಪಾಲನೆಯಲ್ಲಿ ಬಾಧೆಯು ಉಂಟಾಗುವುದೋ ಆಗ ಧರ್ಮದ ರಕ್ಷಣೆಗಾಗಿ ದೇಹವನ್ನು ತ್ಯಾಗಮಾಡುವುದು ಶ್ರೇಯಸ್ಕರವಾಗಿದೆ ಇದೇ ಮೊದಲನೆಯ ದೃಷ್ಟಿಯಾಗಿದೆ ಇದರ ಉಲ್ಲೇಖವು ಮುಖ್ಯವಾಗಿ ಇಲ್ಲಿದೆ ವಿದೇಶಿಯರ ಹಾಗೂ ವಿಧರ್ಮಿಯರ ಆಕ್ರಮಣದಿಂದ ಅನೇಕ ಸಲ ಜೀವಿಸಿದ್ದರೆ ಧರ್ಮವನ್ನೇ ತ್ಯಜಿಸುವಂಥ ಸಂದರ್ಭವು ಒದಗುತ್ತದೆ ಆಗ ಧರ್ಮವೇ ಪ್ರಾಣವೆಂದು ಬಾಳುವಂಥ ಮಾನವನು ಇಂಥ ಅನಿವಾರ್ಯ ಉಪಸರ್ಗಾದಿಗಳ ಸಂದರ್ಭದಲ್ಲಿ ವಿಚಾರಪೂರ್ವಕವಾಗಿ, ಧರ್ಮಭ್ರಷ್ಟವಾಗುವ ಪೂರ್ವದಲ್ಲಿಯೇ ಬಹುಸಂತೋಷದಿಂದ ಸಾವಧಾನಪೂರ್ವಕವಾಗಿ ಆ ಧರ್ಮದ ಜೊತೆಯನ್ನೇ ಸ್ವೀಕರಿಸಿ ದೇಹವನ್ನು ತ್ಯಜಿಸುವನು. ಧರ್ಮವು ಅವನಿಗೆ

ದೇಹಕ್ಕಿಂತ ಹೆಚ್ಚು ಪ್ರಿಯವಾಗಿರುತ್ತದೆ ಇನ್ನು ಎರಡನೆಯ ದೃಷ್ಟಿಯಿಂದ ಮಾನವನು ಅಸಾಧ್ಯರೋಗಕ್ಕೆ ಒಳಗಾದಾಗ—ಅನ್ಯ ವಿಧದಿಂದ ಮರಣವು ಈಗ ಅನಿವಾರ್ಯವೆಂದಾಗ—ಅವನು ಶೀಘ್ರ ರೀತಿಯಿಂದ ಧರ್ಮದ ವಿಶೇಷ ಸಾಧನೆಯನ್ನು ಮಾಡಲು ಪ್ರಯತ್ನಶೀಲನಾಗುತ್ತಾನೆ. ತಾನು ಮಾಡಿದ ಪಾಪಗಳ ಆಲೋಚನೆಯನ್ನು ಮಾಡಿ ಮಹಾವ್ರತಗಳನ್ನು ಧಾರಣಮಾಡುತ್ತಾನೆ. ಅಲ್ಲದೆ ತನ್ನ ಹತ್ತರ ಯಾವಾಗಲೂ ತನ್ನನ್ನು ಧರ್ಮದಲ್ಲಿ ಸಾವಧಾನತೆ-ಯಿಂದ ಇಡುವವರನ್ನೂ ಧರ್ಮೋಪದೇಶ ಮಾಡುವವರನ್ನೂ ದುಃಖದಲ್ಲಿ ಬುದ್ಧಿಭ್ರಷ್ಟನಾಗದಂತೆ ಎಚ್ಚರಿಸುವವರನ್ನೂ ಇರಿಸಿಕೊಳ್ಳುತ್ತಾನೆ. ಮೇಲಾಗಿ ಅವನು ಮೃತ್ಯುವಿನ ದಾರಿಯನ್ನೂ ನೋಡುತ್ತಿರುತ್ತಾನೆ. ಅಂದರೂ ಅವಸರದಲ್ಲಿ ಸಾಯಲೂ ಮನಸ್ಸು ಮಾಡುವದಿಲ್ಲ, ಅದರಂತೆ ಜೀವಿತಕಾಲವನ್ನು ಹೆಚ್ಚಿಸಿಕೊಳ್ಳುವ ಅಪೇಕ್ಷೆಯನ್ನೂ ಮಾಡುವದಿಲ್ಲ. ಈ ಎರಡೂ ಸಂಗತಿಗಳು ಅವನ ದೃಷ್ಟಿಯಲ್ಲಿ ದೋಷಯುಕ್ತವೆನಿಸುತ್ತವೆ ಈ ಮಾತು ಮುಂದೆ ಈ ವ್ರತದ ಅತಿಚಾರಗಳನ್ನು ಹೇಳುವಾಗ ಪ್ರಯೋಗಿಸಿದ 'ಜೀವಿತ-ಮರಣಾಶಂಸೇ' ಎಂಬ ಪದಗಳಿಂದ ಸ್ಪಷ್ಟವಾಗುತ್ತದೆ. ಸ. ಧ.]

ವಿಶೇಷಾರ್ಥ—ಶರೀರ ಧಾರಣ ಮತ್ತು ಅದರ ರಕ್ಷಣೆ ಇವೆರಡೂ ಕಾರ್ಯಗಳನ್ನು ಧರ್ಮಕ್ಕಾಗಿ ಮಾಡುವ ಅವಶ್ಯಕತೆ ಇದೆ. ಧರ್ಮವನ್ನು ಪಾಲಿಸಿದರೇನೇ ನರಜನ್ಮ, ಇಂದ್ರಿಯಗಳು ಮತ್ತು ಮನಸ್ಸು ಇವು ಪ್ರಾಪ್ತವಾದದ್ದು ಸಫಲವೆಂದು ತಿಳಿಯಲಾಗುತ್ತದೆ. ಎಲ್ಲಿ ಧರ್ಮದ ನಾಶವಾಗುವ ಲಕ್ಷಣವು ಕಂಡುಬರುವುದೋ ಮತ್ತು ಜ್ಞಾನ, ಶ್ರದ್ಧೆ, ಚಾರಿತ್ರ ಮೊದಲಾದವುಗಳನ್ನು ಪಾಲಿಸಲು ಇನ್ನು ಮುಂದೆ ಸಾಧ್ಯವಿಲ್ಲವೆಂದು ಕಂಡುಬಂದಾಗ ಧರ್ಮದ ರಕ್ಷಣೆಯಾಗಬೇಕೆಂದು ದೇಹದ ತ್ಯಾಗಮಾಡುವುದಕ್ಕೆ ಆಚಾರ್ಯರು ಸಲ್ಲೇಖನವೆಂದು ಹೇಳಿದ್ದಾರೆ. ಯಾವನಾದರೂ ಪೂರ್ವ ಜನ್ಮದ ವೈರಿ, ರಾಕ್ಷಸ, ಪಿಶಾಚ, ದೇವನು ಬಂದು ಪೀಡೆಯನ್ನು ಕೊಡಬಹುದು, ದುಷ್ಟ ವೈರಿ, ಭಿಲ್ಲ, ಮ್ಲೇಂಛ, ಸಿಂಹ, ಹುಲಿ, ಆನೆ, ಹಾವು ಮೊದಲಾದವುಗಳು, ಉಪಸರ್ಗವನ್ನುಂಟು ಮಾಡಬಹುದು, ಇಲ್ಲವೆ ಪ್ರಾಣ ನಾಶಮಾಡುವಂಥ ಬಿರುಗಾಳಿಯಲ್ಲಿ ಸಿಗಬಹುದು, ದೊಡ್ಡ ಮಳೆಯಲ್ಲಿ ಸಿಕ್ಕು ಘಾಸಿಯಾಗಬಹುದು; ಚಳಿ, ಉಷ್ಣ, ಅಗ್ನಿ, ಕಲ್ಲು, ಮಹಾಪೂರ ಮೊದಲಾದವುಗಳಿಂದ ದುಃಖವು ಪ್ರಾಪ್ತವಾದೀತು; ಕುಟುಂಬದೊಳಗಿನ ಮನುಷ್ಯರ ದುಷ್ಟಕೃತಿಗಳಿಂದಲೂ, ಆಪ್ತ ಸ್ನೇಹಿತರ ಕೃತಿಗಳಿಂದಲೂ, ಪ್ರಬಲ ಮಿಥ್ಯಾತ್ವದ ಉದಯದಿಂದಲೂ, ಉದರ ಪೋಷಣೆಯ ಲೋಭದಿಂದಲೂ ಚಾರಿತ್ರಧರ್ಮದ ನಾಶವಾಗುವ ಸಂಭವವು ಕಂಡುಬರಬಹುದು, ದುಷ್ಟ ರಾಜ, ಮಂತ್ರಿ ಮೊದಲಾದವರು ತೊಂದರೆಯನ್ನು ಕೊಡಬಹುದು—ಇಂಥ ಎಲ್ಲ ಸಂದರ್ಭಗಳಲ್ಲಿ ಸಲ್ಲೇಖನವನ್ನು ಧಾರಣ-ಮಾಡಬೇಕು ಇದೇ ಪ್ರಕಾರ ಯಾವುದಾದರೊಂದು ಭಯಂಕರ ನಿರ್ಜನ ಅರಣ್ಯದಲ್ಲಿ ದಿಕ್ಕು ತಪ್ಪಿದುದರಿಂದ ದಾರಿಯು ಸಿಗದೆ ಇದ್ದಾಗಲೂ, ಬರಗಾಲದಿಂದ ಅನ್ನ ನೀರುಗಳು ದೊರೆಯುವುದು ದುರ್ಲಭವಾದಾಗಲೂ, ಸಂಪೂರ್ಣ ಶರೀರವನ್ನು ವ್ಯಾಪಿಸಿ ಕಣ್ಣು-ಕಿವಿ-ಮೂಗು ಮೊದಲಾದ ಇಂದ್ರಿಯಗಳನ್ನು ಕ್ಷೀಣಗೊಳಿಸುವಂಥ ಮುಪ್ಪು ಪ್ರಾಪ್ತವಾದಾಗಲೂ ಸಲ್ಲೇಖನವನ್ನು ಸ್ವೀಕರಿಸಬೇಕು. ಅದರಂತೆ ಅಸಾಧ್ಯ ರೋಗವು ಉತ್ಪನ್ನವಾದಾಗ, ಸನ್ನಿಪಾತ, ಅತಿಸಾರ, ಶ್ವಾಸ, ಕೆಮ್ಮು, ವಾತಪಿತ್ತಗಳ ಪ್ರಾಬಲ್ಯವಾಗಿ ಅಗ್ನಿ ಮಂದವಾದಾಗ, ಶಕ್ತಿಯು ಕಡಿಮೆಯಾಗಿ ದಿನದಿನಕ್ಕೆ ಶರೀರದೊಳಗಿನ ರಕ್ತವು ಕಡಿಮೆಯಾಗುತ್ತ ನಡೆದಾಗ, ಉದರ ವ್ಯಥೆಯಂಥ ವಿಕಾರವು ಉತ್ಪನ್ನವಾದಾಗ ಸಲ್ಲೇಖನವನ್ನು ಸ್ವೀಕರಿಸುವುದು ಯೋಗ್ಯವಾಗಿದೆ. ಈ ಎಲ್ಲ ಕಾರಣಗಳು ಅವಶ್ಯವಾಗಿ ಮರಣವನ್ನು ಉಂಟುಮಾಡುವಂಥವು ಆಗಿವೆ ಅಂತಲೇ ಆ ಪ್ರಸಂಗದಲ್ಲಿ ನಾಲ್ಕು ಆರಾಧನೆಗಳ ಚಿಂತನೆಯನ್ನು ಮಾಡಿ ಶರೀರ, ಮನೆ-ಮಠ, ಕುಟುಂಬ ಮೊದಲಾದ ಎಲ್ಲವುಗಳ ಮೇಲಿನ ಪ್ರೇಮವನ್ನು ಬಿಡಬೇಕು ಕ್ರಮಕ್ರಮದಿಂದ ಅನ್ನ-ನೀರುಗಳನ್ನು ಬಿಡುತ್ತ ಶರೀರವನ್ನು ತ್ಯಾಗಮಾಡಬೇಕು ಶರೀರವು ಇಲ್ಲದಂತೆ ಆದರೂ ಸಹ ಆತ್ಮನ ಜ್ಞಾನ-ದರ್ಶನ ಸ್ವಭಾವವು ನಷ್ಟವಾಗದಂತೆ ಪ್ರಯತ್ನಿಸಬೇಕು ಶರೀರವು ನಾಶವಂತವಾದುದರಿಂದ ಕೋಟ್ಯವಧಿ ಉಪಾಯಗಳನ್ನು ಮಾಡಿದರೂ ಮಂತ್ರ-ತಂತ್ರಾದಿಗಳಿಂದ ದೇವತೆಗಳನ್ನು ಎದುರಿಗೆ ತಂದು ನಿಲ್ಲಿಸಿದರೂ ಯಾರೂ ಇದನ್ನೂ ರಕ್ಷಣ ಮಾಡಲಾರರು. ಇಲ್ಲಿಯ ವರೆಗೆ ಅನಂತಾನಂತ ದೇಹಧಾರಣ ಮಾಡಿದೆ ಆದರೆ ರತ್ನತ್ರಯ ಧರ್ಮವನ್ನೊಂದು ಮಾತ್ರ ಗ್ರಹಣ ಮಾಡಲಿಲ್ಲ ಅದಕ್ಕಾಗಿಯೇ ಇಷ್ಟೊಂದು ಭವಗಳಲ್ಲಿ ಭ್ರಮಣಮಾಡಬೇಕಾಗಿದೆ ಈ ಧರ್ಮವೇ ಸಂಸಾರ ಪರಿಭ್ರಮಣದಿಂದ ರಕ್ಷಣೆಯನ್ನು ಒದಗಿಸುವಂಥದಿದೆ ಅದಕ್ಕಾಗಿ ಪರಲೋಕವು ಪ್ರಾಪ್ತವಾಗುವ ವರೆಗೆ ಧರ್ಮವು ಮಲಿನಗೊಳ್ಳದಂತೆ ನೋಡಿಕೊಳ್ಳಬೇಕು. ಅದಕ್ಕಾಗಿ ಶರೀರದ ಮೇಲಿನ ಪ್ರೇಮವನ್ನೂ ಕೂಡ

ತೊರೆಯಬೇಕು ಈ ಪ್ರಕಾರ ಸುಜ್ಞ ಜನರು ಸಮಾಧಿ ಮರಣವನ್ನು ಹೊಂದುವದಕ್ಕಾಗಿ ಯಾವಾಗಲೂ ಪ್ರಯತ್ನಿಸುತ್ತಿರುತ್ತಾರೆ

ಆಚಾರ್ಯರು ಈ ಸೂತ್ರದಲ್ಲಿ ಸಮಾಧಿಮರಣದ ಮಹಿಮೆಯನ್ನು ಹೇಳುತ್ತಾರೆ—

> ಅಂತಕ್ರಿಯಾಧಿಕರಣಂ[2] ತಪಃಫಲಂ ಸಕಲದರ್ಶಿನಃ ಸ್ತುವತೇ ।
> ತಸ್ಮಾದ್ಯಾವದ್ವಿಭವಂ ಸಮಾಧಿಮರಣೇ ಪ್ರಯತಿತವ್ಯಮ್ ॥ ೧೨೩ ॥[1]

ಅನ್ವಯಾರ್ಥ—(ಅಂತಕ್ರಿಯಾಧಿಕರಣಂ) ಮೃತ್ಯುವಿನ ಸಮಯದ ಕ್ರಿಯೆಯನ್ನು ಸುಧಾರಿಸುವುದು (ತಪಃ ಫಲಂ) ತಪದ ಫಲವಾಗಿದೆ. ಹೀಗೆ—(ಸಕಲದರ್ಶಿನಃ) ಸರ್ವಜ್ಞ ದೇವನು (ಸ್ತುವತೇ) ಹೇಳುತ್ತಾನೆ. (ತಸ್ಮಾತ್) ಅದಕ್ಕಾಗಿ (ಯಾವದ್ ವಿಭವಂ) ಯಥಾಶಕ್ತಿ (ಸಮಾಧಿ ಮರಣೇ) ಸಮಾಧಿ ಮರಣಕ್ಕಾಗಿ (ಪ್ರಯತಿತವ್ಯಮ್) ಪ್ರಯತ್ನಿಸಬೇಕು.

ಅರ್ಥ—ಅಂತಕ್ರಿಯಾ ಎಂದರೆ ಸನ್ಯಾಸ ಮರಣವು ಇದೇ ತಪದ ಫಲದ ಆಧಾರವಾಗಿರುವುದೆಂದು ಸರ್ವಜ್ಞರಾದವರು ಹೇಳುತ್ತಾರೆ. ತಪಶ್ಚರಣ ಮಾಡುವವರಿಗೆ ಕೊನೆಗೆ ತಪಸ್ಸಿನ ಫಲವೆಂದು ಸನ್ಯಾಸ ಮರಣವು ಪ್ರಾಪ್ತವಾಗದಿದ್ದರೆ ಅವರ ತಪಾಚರಣೆಯು ವ್ಯರ್ಥವಾಗುತ್ತದೆ. ಅಂತಲೇ ಶಕ್ಯವಿದ್ದಷ್ಟು ಪ್ರಯತ್ನಮಾಡಿ ಸಮಾಧಿ ಮರಣವು ಪ್ರಾಪ್ತವಾಗುವಂತೆ ಯತ್ನಿಸುವುದು ಯೋಗ್ಯವಾಗಿದೆ. [ಈ ಸೂತ್ರದ ಪೂರ್ವಾರ್ಧವು—ಅದರಲ್ಲೂ 'ಅಂತಕ್ರಿಯಾಧಿಕರಣಂ ತಪಃಫಲಂ' ಈ ಸೂತ್ರ ವಾಕ್ಯವು ಬಹಳ ಮಹತ್ವಪೂರ್ಣವಾಗಿದೆ. ತಪದ ಫಲವು ಸಲ್ಲೇಖನವನ್ನು—ಅಂತಕ್ರಿಯಾ—ಅವಲಂಬಿಸಿದೆಯೆಂದು ಇಲ್ಲಿ ಹೇಳಿದೆ. ಈಗ ಸಲ್ಲೇಖನದ ಪೂರ್ವದ ತಪವು ಯಾವುದು?—ಎಂಬ ಪ್ರಶ್ನೆಯೊಂದು ಏಳುತ್ತದೆ ಆ ತಪವೆಂಬುದು ಅಣುವ್ರತ–ಗುಣವ್ರತ ಮತ್ತು ಶಿಕ್ಷಾವ್ರತಾತ್ಮಕ ಚಾರಿತ್ರವಾಗಿದೆ. ಇವುಗಳ ಅನುಷ್ಠಾನದ ವಿಧಾನವನ್ನೂ ಈ ಗ್ರಂಥದಲ್ಲಿ ಈಗಾಗಲೇ ವಿವರಿಸಲಾಗಿದೆ. ಸಮ್ಯಕ್ ಚಾರಿತ್ರದ ಅನುಷ್ಠಾನದಲ್ಲಿ ಯಾವ ಯಾವ ಉದ್ಯೋಗಗಳನ್ನು ಮಾಡಲಾಗುವುದೋ ಅವೆಲ್ಲವೂ 'ತಪ'ವೆನಿಸುತ್ತವೆ.[3] ಈ ತಪಸ್ಸಿನ ಯಥೇಚ್ಛ ಫಲಪ್ರಾಪ್ತಿಯು—ಪರಲೋಕಕ್ಕೆ ಸಂಬಂಧಿಸಿದುದು—ಸಮಾಧಿ ಮರಣವು ಸಾಧಿಸಿದಾಗಲೇ ಸಿದ್ಧಿಸುವುದು. ಯಾಕಂದರೆ ಮರಣ ಸಮಯದಲ್ಲಿ ಧರ್ಮಾನುಷ್ಠಾನ ರೂಪದ ಪರಿಣಾಮವು ಆಗದೆ ಧರ್ಮದ ವಿರಾಧನವು ಆದರೆ ಅದರಿಂದ ದುರ್ಗತಿಗೆ ಹೋಗಬೇಕಾಗುತ್ತದೆ. ಅಲ್ಲಿ ಅವನು ಸಂಪಾದಿಸಿದ ಮೊದಲಿನ ಶುಭ ಕರ್ಮಗಳ ಫಲವನ್ನೂ ಭೋಗಿಸಲಿಕ್ಕೆ ಆಗುವದಿಲ್ಲ. ನಿಮಿತ್ತಗಳ ಅಭಾವದಿಂದ ಆ ಶುಭ ಕರ್ಮಗಳು ರಸವನ್ನು ಒದಗಿಸದೆ ನಷ್ಟವಾಗಿ ಹೋಗುತ್ತವೆ ಒಮ್ಮೆ ದುರ್ಗತಿಯಲ್ಲಿ ಬಿದ್ದು ಬಿಟ್ಟರೆ ಮುಂದೆ ದುರ್ಗತಿಗಳ ಪರಂಪರೆಯೇ ಆರಂಭವಾಗಿ ಬಿಡುತ್ತದೆ ತಿರುಗಿ ಧರ್ಮವನ್ನು ಸಂಪಾದಿಸುವುದು ಬಹಳ ಕಠಿಣವಾಗುತ್ತದೆ ಅದಕ್ಕಾಗಿ ಶ್ರೀ ಶಿವಾರ್ಯನು ತನ್ನ ಭಗವತೀಆರಾಧನೆಯಲ್ಲಿ ಹೀಗೆ ಹೇಳಿದ್ದಾನೆ—"ದರ್ಶನ–ಜ್ಞಾನ–ಚಾರಿತ್ರರೂಪ ಧರ್ಮದಲ್ಲಿ ಚಿರಕಾಲದ ವರೆಗೆ ನಿರತಿಚಾರ ಪ್ರವೃತ್ತಿಯನ್ನು ಮಾಡಿದಂಥ ಮನುಷ್ಯನೂ ಸಹ ಮರಣದ ಸಮಯದಲ್ಲಿ ಆ

---

[1] ಆಯತವರ್ಮನು ವಿವರಿಸುವುದು ಹೀಗೆ—

ಅದೇಕೆಂದೊಡೆ ಪೆರಗೆ ಪೇಳ್ದ ಗೃಹಸ್ಥನರಮಗನೆಂತಿವನೊಂದು ಕಾಲದೊಳು ಸಂಗ್ರಾಮಮಾದಂದಿಂಗೆ ಬಾರ್ಕೆಯಕ್ಕುಮೆಂದು ಧನುರ್ವಿದ್ಯೆ, ಶಸ್ತ್ರವಿದ್ಯೆ, ರಥವಿದ್ಯೆ ಕರಿತುರಗಾರೋಹಣಮಲ್ಲುವೂ ಎಂದಿವು ಮೊದಲಾಗೊಡೆಯ ಶತ್ರುಗಳ ವಿಚ್ಛೇದನೋಪಾಯಂಗಳಪ್ಪವವನನೇಕವಂ ಮುನ್ನಮೆಕಲ್ತು ಸಂಗ್ರಾಮಂ ಸಾರ್ಚಲೊಡಂ ನಿವಿಷಾರ್ಥದಿಂ ವೈರಬಳಮೆಲ್ಲಮನಳರುಸಿಕೊಂಡುದು ಗೆಲ್ಲಮಂ ಪೃಥ್ವಿರಾಜ್ಯಂಗೆಯ್ವಂತೆ ದುರಿತಾರಿ ಬಳವಿಚ್ಛೇದನೋಪಾಯಂಗಳಂ ಸಮ್ಯಗ್‌ಜ್ಞಾನ ಚಾರಿತ್ರಂಗಳಂ ತನಗೆ ಪಿರಿದುಮನುಭವಣೆಯಂ ಮಾಡಿ.

[2] 'ಅಂತಃಕ್ರಿಯಾಧಿಕರಣಂ' ಎಂದೂ ಪಾಠಾಂತರವುಂಟು

[3] ಚರಣಮ್ಮಿ ತಮ್ಮಿ ಜೋ ಉಜ್ಜಮೋ ಯ ಆಉಂಜಣಾ ಯ ಜೋ ಹೋಇ ।
ಸೋ ಚೇವ ಜಿಣೇಹಿಂ ತವೋ ಭಣಿದೋ ಅಸಢಂ ಚರಂತಸ್ಸ ॥ ೧೦ ॥ —ಭಗವತೀ ಆರಾಧನಾ

ಧರ್ಮವನ್ನು ತ್ಯಜಿಸಿ ಬಿಟ್ಟಿದ್ದಾದರೆ ಅವನು ಅನಂತ ಸಂಸಾರಿಯಾಗುತ್ತಾನೆ.[1]" ಈ ಎಲ್ಲ ಮಾತುಗಳಿಂದ ಒಂದು ಸಂಗತಿಯು ಸ್ಪಷ್ಟವಾಗುತ್ತದೆ.—ಅಂತ್ಯ ಸಮಯದಲ್ಲಿ ಧರ್ಮ ಪರಿಣಾಮದಲ್ಲಿ ಸಾವಧಾನತೆಯನ್ನು ಕಾಯ್ದುಕೊಳ್ಳದೆ ಮರಣವು ಕೆಡುಕು ಆದದ್ದಾದರೆ ಬಹುತರ ಆಯುಷ್ಯದಲ್ಲೆಲ್ಲ ಮಾಡಿದ ಧರ್ಮಾಚರಣೆಯ ಮೇಲೆ ನೀರು ಸುರುವಿದಂತಾಗುತ್ತದೆ. ಅದಕ್ಕಾಗಿ ಮರಣಕಾಲದಲ್ಲಿ ಪರಿಣಾಮವನ್ನು ಕಾಯ್ದುಕೊಳ್ಳುವದಕ್ಕಾಗಿ ಬಹಳ ಜಾಗರೂಕತೆಯನ್ನು ವಹಿಸುವ ಅವಶ್ಯಕತೆಯು ಇದೆ ಅಂತಲೇ ಈ ಸೂತ್ರದಲ್ಲಿ ಶಕ್ತಿ ಇದ್ದಷ್ಟು ಪ್ರಯತ್ನಮಾಡಿ ಸಮಾಧಿಮರಣವನ್ನು ಹೊಂದಲಿಕ್ಕೆ ಒತ್ತಿ ಹೇಳಲಾಗಿದೆ. ಇವೆಲ್ಲ ಸಂಗತಿಗಳಿಂದ ಜೈನ ಸಮಾಜದಲ್ಲಿ ಸಮಾಧಿ ಮರಣಕ್ಕೆ ಮಹತ್ವವು ಪ್ರಾಪ್ತವಾಗಿದೆ. ಅವರು ನಿತ್ಯ ಪೂಜೆ–ಪ್ರಾರ್ಥನೆ ಮೊದಲಾದವುಗಳಲ್ಲಿ 'ದುಕ್ಖಖಓ ಕಮ್ಮಖಓ ಸಮಾಹಿಮರಣಂ ಚ ಬೋಹಿಲಾಹೋ ವಿ' ಇಂಥ ವಾಕ್ಯಗಳಿಂದ ಸಮಾಧಿ ಮರಣದ ಭಾವನೆಯನ್ನು ಸರಿಯಾಗಿ ಭಾವಿಸುತ್ತಾರೆ. ಅದರಂತೆ 'ಮರಣವು ಚೆನ್ನಾಗಿ ಸಾಧಿಸಿದರೆ ಎಲ್ಲವೂ ಸಾಧಿಸಿತು'—ಎಂಬ ನುಡಿಯೂ ಜನಜನಿತವಾಗಿದೆ. ಈ ಸಲ್ಲೇಖನ ಕ್ರಿಯೆಯು ಗೃಹಸ್ಥ ಹಾಗೂ ಮುನಿಗಳಿಬ್ಬರಿಗೂ ವಿಹಿತವಾಗಿದೆ ಸ ಧ ]

ವಿಶೇಷಾರ್ಥ—ವ್ರತ, ಸಂಯಮ, ತಪಗಳನ್ನು ಮಾಡುವುದರಿಂದ ಅನೇಕ ಪ್ರಕಾರದ ಫಲಗಳು ಜಗತ್ತಿನಲ್ಲಿ ಪ್ರಾಪ್ತವಾಗುತ್ತವೆ. ತಪಸ್ಸಿನಿಂದ ದೇವಲೋಕವು ಪ್ರಾಪ್ತವಾಗುತ್ತದೆ ಮಿಥ್ಯಾದೃಷ್ಟಿ ಜೀವವೂ ಕೂಡ ತಪಶ್ಚರ್ಯದ ಪ್ರಭಾವದಿಂದ ಒಂಭತ್ತನೆಯ ಗ್ರೈವೇಕದ ವರೆಗೆ ಅಹಮಿಂದ್ರರಾಗಿ ಜನ್ಮವನ್ನು ಹೊಂದುತ್ತಾರೆ. ಅವರಿಗೆ ದೊಡ್ಡ ದೊಡ್ಡ ಋದ್ಧಿಗಳೂ, ಸಂಪತ್ತೂ ಪ್ರಾಪ್ತವಾಗುತ್ತವೆ ತಪಶ್ಚರ್ಯೆಯಿಂದ ಚಕ್ರವರ್ತಿತ್ವ, ನಾರಾಯಣ ಪದ, ಬಲಭದ್ರ ಪದ, ರಾಜೇಂದ್ರ ಪದ, ವೈಭವ, ಸಂಪತ್ತಿ, ನಿರೋಗತೆ, ಬಲ ಮೊದಲಾದವುಗಳು ಪ್ರಾಪ್ತವಾಗುತ್ತವೆ. ಅಖಂಡ ಆಜ್ಞೆ, ಎಲ್ಲರ ಮನಸೆಳೆಯುವಂಥ ಐಶ್ವರ್ಯ, ಅತುಲ ಋದ್ಧಿ ಮತ್ತು ಬೇಕಾದಷ್ಟು ಪರಿವಾರ ಇವೂ ತಪದ ಫಲವೇ ಆಗಿವೆ ಆದರೆ ಕೊನೆಗೆ ಸಮಾಧಿ ಮರಣವು ಆಗದ ಹೊರತಾಗಿ ಇವೆಲ್ಲವುಗಳ ಉಪಯೋಗವು ಏನೂ ಇಲ್ಲ. ಈ ವಿಭೂತಿಗಳನ್ನು ಮೊದಲು ಅನೇಕ ಸಲ ಭೋಗಿಸಿದ್ದಾಗಿದೆ ಈ ವಿಭೂತಿಗಳ ಮೋಹಕ್ಕೆ ಬಿದ್ದರೆ ಸಂಸಾರ ಪರಿಭ್ರಮಣ ಮಾಡುವುದು ಮುಗಿಯುವದಿಲ್ಲ ತಪಸ್ಸನ್ನು ಆಚರಿಸಿ ಕೊನೆಗೆ ಯಾರು ಸಮಾಧಿ ಮರಣದ ವಿಧಿಯಿಂದ ನಾಲ್ಕು ಆರಾಧನೆಗಳಿಗೆ ಶರಣು ಹೋಗಿ, ನಿರ್ಭಯತೆಯಿಂದ ಮರಣವನ್ನು ಸಾಧಿಸುವರೋ ಅವರಿಗೆ ತಪದ ನಿಜವಾದ ಫಲವು ಲಭಿಸುತ್ತದೆ. ಇಂಥವರನ್ನೇ ಸರ್ವದರ್ಶಿಯಾದ ಭಗವಂತನು ಪ್ರಶಂಸಿದ್ದಾನೆ ಕೋಟ್ಯಾವಧಿ ವರ್ಷಗಳ ವರೆಗೆ ತಪವನ್ನಾಚರಿಸಿಯೂ ಕೂಡ ಕೊನೆಯಲ್ಲಿ ಯಾರ ಮರಣವು ಕೆಡುವುದೋ, ಅವರ ತಪವು ಪ್ರಶಂಸೆಮಾಡಲಿಕ್ಕೆ ಯೋಗ್ಯವಲ್ಲ ತಪಸ್ಸನ್ನು ಮಾಡುವುದರಿಂದ ದೇವಲೋಕ ಇಲ್ಲವೆ ಮನುಷ್ಯಲೋಕದೊಳಗಿನ ಸಂಪತ್ತು ಪ್ರಾಪ್ತವಾದೀತು. ಆದರೆ ಮರಣಸಮಯಕ್ಕೆ ಆರಾದನೆಯ ಚಿಂತನೆಯು ಯಾರಿಗೆ ಆಗುವದಿಲ್ಲವೋ ಅವರಿಗೆ ಸಂಸಾರ ಪರಿಭ್ರಮಣವನ್ನೇ ಮಾಡಬೇಕಾದೀತು. ಒಬ್ಬ ಪುರುಷನು ದೂರದೇಶಕ್ಕೆ ಹೋಗಿ ಬಹಳಷ್ಟು ದ್ರವ್ಯವನ್ನು ಸಂಪಾದಿಸಿ ತಂದನು ಆದರೆ ಅವನು ತನ್ನ ಊರ ಹತ್ತಿರ ಬರುತ್ತಲೇ ಕಳ್ಳರು ಅದನ್ನೆಲ್ಲ ಅಪಹರಿಸಿದರು. ಅದರಿಂದ ಅವನು ಪುನಃ ದರಿದ್ರಿಯಾದನು ಆ ಪ್ರಕಾರ ಆಯುಷ್ಯವೆಲ್ಲ ತಪಶ್ಚರಣವನ್ನು ಮಾಡಿ ಅಂತಸಮಯದಲ್ಲಿ ಆರಾಧನೆಯನ್ನು ಧಾರಣಮಾಡದೆ ಇರುವುದರಿಂದಲೂ ಧಾರಣಮಾಡಿ ಬಿಡುವುದರಿಂದಲೂ ಅವನ ಜನ್ಮಮರಣದ ಚಕ್ರವು ತಪ್ಪದೆ ಹಾಗೇ ಉಳಿಯುವುದು.

ಕಿಡುಪೊಡಲ ಬಲ್ಪನಳಿಪಿಂ ಕಿಡಿಸದೆ ತಪದಿಂದೆ ತವಿಸಿ ಸವೆಯದ ಸುಖಮಂ ।
ಪಡೆವುದೆ ಕಜ್ಜಂ ಸಜ್ಜನರ್ಗೆಡೆವಾತಿನ್ನೇನೆನುತ್ತೆ ಮತ್ತಂ ಮನದೊಳ್ ॥
ಮದಮುದ್ರೇಕದಿನುರ್ಕಿ ಸೊರ್ಕಿ ಪಱಿಗಂ ಪಾಪಕ್ಕೆಮುಳ್ಳಟ್ಟಿದಾ-
ಡದ ಗೊಡ್ಡಾಲಮನಾಡಿ ಕೂಡಿ ಬಯಲಾರ್ತಕ್ಕರ್ಥಮಂ ಸಿಲ್ಕಿ ಕಾ- ।
ಲದ ಕೆಯ್ಯೊಳ್ ಕಡೆಪಟ್ಟುದುರ್ನರಕದೊಳ್ ಬಿದ್ದಿಲ್ಲಿ ಪಾಟೂರ ತೋ-
ಳದ ಕಳ್ಳಂಗೆಣೆಯಾಗಿ ಜೀವನಕಟಾ ಮೋಕ್ಷಕ್ಕೆ ನೆಂಟಾಗನೋ ॥

—ಮಧುರ—ಧರ್ಮನಾಥ ಪುರಾಣ ೫, ೧೦೫–೧೦೬

1 ಸುಚಿರಮವಿ ಣಿರದಿಚಾರಂ ವಿಹರಿತ್ತಾ ಣಾಣದಂಸಣಚರಿತ್ತೇ ।
ಮರಣೇ ವಿರಾಧಯಿತ್ತಾ ಅಣಂತ ಸಂಸಾರಿಓ ದಿಟ್ಠೋ ॥ ೧೫ ॥ —ಭಪಗತೀ ಆರಾಧನಾ

ಸನ್ಯಾಸವನ್ನು ಸ್ವೀಕರಿಸುವ ಪೂರ್ವದಲ್ಲಿ ಏನೇನು ಮಾಡಬೇಕೆಂಬುದನ್ನು ಈಗ ಹೇಳುತ್ತಾರೆ—

ಸ್ನೇಹಂ ವೈರಂ ಸಂಗಂ ಪರಿಗ್ರಹಂ ಚಾಪಹಾಯ ಶುದ್ಧಮನಾಃ ।
ಸ್ವಜನಂ ಪರಿಜನಮಪಿ ಚ ಕ್ಷಾಂತ್ವಾ ಕ್ಷಮಯೇತ್ಪ್ರಿಯೈರ್ವಚನೈಃ ॥ ೧೨೪ ॥[1]

ಅನ್ವಯಾರ್ಥ—(ಸ್ನೇಹಂ) ಪ್ರೇಮ (ವೈರಂ) ವೈರ (ಸಂಗಂ) ಮಮತೆ (ಚ) ಮತ್ತು (ಪರಿಗ್ರಹಂ) ಪರಿಗ್ರಹ-ಇವುಗಳನ್ನು-(ಅಪಹಾಯ) ಬಿಟ್ಟು (ಶುದ್ಧಮನಾಃ ಸನ್) ನಿರ್ಮಲ ಅಂತಃಕರಣಗೊಳಿಸಿ (ಪ್ರಿಯೈಃ ವಚನೈಃ) ಮಧುರ ಮಾತುಗಳಿಂದ (ಸ್ವಜನಂ ಅಪಿ ಚ ಪರಿಜನಂ) ತನ್ನ ಜನರನ್ನು ಮತ್ತು ಸೇವಕ ವರ್ಗದ ಜನರನ್ನೂ ಕೂಡ (ಕ್ಷಾಂತ್ವಾ) ಕ್ಷಮೆಯನ್ನು ಕೇಳಿಕೊಂಡು (ಕ್ಷಮಯೇತ್)-ತಾನೂ-ಕ್ಷಮಿಸಬೇಕು

ಅರ್ಥ—ಶುದ್ಧ ಅಂತಃಕರಣ ಧಾರಣ ಮಾಡುವವರು ಸ್ನೇಹ, ವೈರ, ಸಂಬಂಧ ಹಾಗೂ ಪರಿಗ್ರಹಗಳನ್ನು ಬಿಟ್ಟುಕೊಡಬೇಕು. ತಮ್ಮ ಆಪ್ತ ಇಷ್ಟಮಿತ್ರ ಮತ್ತು ಸೇವಕರಲ್ಲಿ ತನ್ನನ್ನು ಕ್ಷಮಿಸುವಂತೆ ಮಧುರ ವಚನಗಳಿಂದ ಕೇಳಿಕೊಳ್ಳಬೇಕು ಅಲ್ಲದೆ ತಾನೂ ಅವರನ್ನು ಕ್ಷಮಿಸಬೇಕು. [ಇದು ಕಷಾಯ ಸಲ್ಲೇಖನದ ವಿಧಿಯಾಗಿದೆ. ಇಲ್ಲಿ ರಾಗ-ದ್ವೇಷಗಳನ್ನು ತ್ಯಾಗಮಾಡಿ ಮನಸ್ಸನ್ನು ಶುದ್ಧಗೊಳಿಸಲಿಕ್ಕೆ ಹೇಳಿದೆ. ಸಲ್ಲೇಖನ ವ್ರತವನ್ನು ಸ್ವೀಕರಿಸುವ ಪೂರ್ವದಲ್ಲಿ ತಾನು ತನ್ನ ದೋಷಗಳನ್ನೆಲ್ಲ ಕ್ಷಮಿಸಲಿಕ್ಕೆ ಕೇಳಿಕೊಳ್ಳಬೇಕಾಗುತ್ತದೆ. ಅದರಂತೆ ಅನ್ಯರ ದೋಷಗಳನ್ನು ತಾನು ಕ್ಷಮಿಸಬೇಕಾಗುವುದು. ಸ. ಧ]

ವಿಶೇಷಾರ್ಥ—ಸಮ್ಯಗ್‌ಜ್ಞಾನಿ ಪುರುಷನಲ್ಲಿ ಸ್ನೇಹ ಹಾಗೂ ವೈರಗಳೆರಡೂ ಇಲ್ಲದಂತೆ ಆಗಿರುತ್ತವೆ. ಅವನು ಹೀಗೆ ವಿಚಾರ ಮಾಡುತ್ತಾನೆ—"ಕರ್ಮವಶದಿಂದ ನಾನು ಈ ಪರ್ಯಾಯದಲ್ಲಿ ಉತ್ಪನ್ನನಾಗಿದ್ದೇನೆ. ಉಪಕಾರಕ ಮತ್ತು ಅಪಕಾರಕ ಪದಾರ್ಥಗಳೊಳಗಿಂದ ಪುಣ್ಯ-ಪಾಪ ಕರ್ಮೋದಯಕ್ಕನುಸರಿಸಿ ಹೊರಗಿನ ಸ್ತ್ರೀ, ಪುತ್ರ, ಮಿತ್ರರ ಮೇಲೆ ಉಪಕಾರ ಮಾಡುವದಕ್ಕಾಗಿ ದಾನ, ಸನ್ಮಾನ ಮತ್ತು ಸ್ನೇಹ ಪ್ರೇಮಾದಿಗಳ ಕ್ರಿಯೆಗಳನ್ನು ಮಾಡಿದೆನು. ಈ ಪರ್ಯಾಯದಲ್ಲಿ ನನಗೆ ಉಪಕಾರವಾಗುವ ಪದಾರ್ಥಗಳನ್ನು ನಾಶಮಾಡುವಂಥವರನ್ನು ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ವಿರೋಧಿಸಿ, ಅವರಿಂದ ಪರಾಙ್ಮುಖನಾದೆ ಈಗ ಈ ಪರ್ಯಾಯವೇ ನಷ್ಟವಾಗುವ ಸಮಯವು ಬಂದಿದೆ. ಈಗ ಯಾರನ್ನು ಪ್ರೀತಿಸಲಿ? ಯಾರ ಮೇಲೆ ವೈರ ಮಾಡಲಿ? ನನಗೂ ಅವರ ಆತ್ಮಕ್ಕೂ ಮೂಲದಲ್ಲಿ ಯಾವ ಸಂಬಂಧವೂ ಇಲ್ಲ. ನಾನು ಅವರ ಆತ್ಮವನ್ನು ತಿಳಿಯುವದಿಲ್ಲ. ಅದರಂತೆ ಅವರೂ ನನ್ನ ಆತ್ಮವನ್ನು ತಿಳಿದಿರಲಾರರು ನಾವಿಬ್ಬರೂ ಪರಸ್ಪರ ಈ ಶರೀರಗಳ ಮೇಲಿನ ಚರ್ಮವನ್ನು ನೋಡಿ ರಾಗ-ದ್ವೇಷ ಮಾಡಹತ್ತುತ್ತೇವೆ. ಆದರೆ ಈ ಚರ್ಮವು ಸುಟ್ಟು ಭಸ್ಮವಾಗಿ ಹೋಗುವಂಥದಿದೆ. ಇದರ ಪರಮಾಣುಗಳು ಹವೆಯಲ್ಲಿ ಹಾರಿ ಹೋಗಿ ನಷ್ಟವಾಗಿ ಹೋಗಲಿವೆ. ಇಂಥ ಸ್ಥಿತಿಯಲ್ಲಿ ಯಾರೊಡನೆ ವೈರ ಇಲ್ಲವೆ ಸ್ನೇಹಗಳನ್ನು ಮಾಡಲಿ? ತಿರುಗಿ ಯಾರು ಅಭಿಮಾನದಿಂದ ನಮ್ಮೊಡನೆ ವಿನಾಕಾರಣ ವೈರ ಮಾಡುವಂಥವರು ಇರುವರೋ ಅವರೊಡನೆ ವಿನಯದಿಂದ ನಡೆದು "ನನ್ನಿಂದ ಏನಾದರೂ ತಪ್ಪು-ತಡಿಗಳು ಆಗಿದ್ದರೆ, ನಾನು ನಿಮ್ಮೊಡನೆ ಏನಾದರೂ ಉದ್ಧಟತನದಿಂದ ವರ್ತಿಸಿದ್ದರೆ ಆ ವರ್ತನಕ್ಕಾಗಿ ನಾನು ತಮ್ಮಲ್ಲಿ ವಿನಯದಿಂದ ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ. ತಾವು ನನ್ನ ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಕ್ಷಮಿಸಬೇಕು. ತಮ್ಮಂಥ ಸಜ್ಜನರ ಹೊರತಾಗಿ ಅಪರಾಧಗಳನ್ನು ಕ್ಷಮಿಸಲಿಕ್ಕೆ ಇನ್ನಾರು ಸಮರ್ಥರಿದ್ದಾರೆ?"-ಹೀಗೆಂದು ಅವರ ಹತ್ತಿರ ಕ್ಷಮೆಯನ್ನು ಕೇಳಿಕೊಳ್ಳಬೇಕು ಇನ್ನು ತಾನು ಎರಡನೆಯವರ ಹೊಲ-ಮನೆಗಳನ್ನು ಒತ್ತಾಯದಿಂದ ಎತ್ತಿ ಹಾಕಿದ್ದರೆ ಅವರವರಿಗೆ ಅವುಗಳನ್ನು ಒಪ್ಪಿಸಿ ಸಂತೋಷಗೊಳಿಸಬೇಕು ಅಲ್ಲದೆ ತಾನು ಮಾಡಿದ ದುಷ್ಟತನಕ್ಕಾಗಿ ಅವರಲ್ಲಿ ಕ್ಷಮೆಯನ್ನು ಕೇಳಬೇಕು ಆಗ ಅವರಿಗೆ ವಿನಯದಿಂದ ಹೀಗೆ ನುಡಿಯಬೇಕು-"ಮಹಾರಾಜ, ಪಾಪಿಯಾದ ನಾನು ದುಷ್ಟ ಬುದ್ಧಿಯಿಂದ ತಮ್ಮ ಧನ ಅಥವಾ ಭೂಮಿಯನ್ನು ವಶಪಡಿಸಿಕೊಂಡಿದ್ದೇನೆ. ಅದನ್ನು ತಿರುಗಿ ನಿಮಗೆ ಕೊಡಲಿಲ್ಲ.

---

[1] ಆಯುತಪರ್ಮನ ವಚನ ಹೀಗಿದೆ—

ಮರಣ ಕಾಲದೊಳ್ ಬಂಧುಗಳುಮವಾಪ್ತವರ್ಗಮುಮಂ ಬಿಡಿಸ್ಸಿ (ಬರಿಸಿ?) ಕ್ಷಮಿತಪ್ಪಮೆಂದು.

ಈ ದೊಡ್ಡ ತಪ್ಪನ್ನು ಮಾಡಿರುವೆ ಈಗ ನೀವು ನಿಮ್ಮ ವಸ್ತುಗಳನ್ನು ದಯಮಾಡಿ ಸ್ವೀಕರಿಸಿರಿ ದುಷ್ಟನಾದ ನಾನು ಕಪಟತನದಿಂದ ಲೋಭದಿಂದ ಕುರುಡನಾಗಿ ದುರಾಚಾರಿಯಾದೆ ಆ ವಿಷಯದಲ್ಲಿ ನನಗೆ ಅಂತರಂಗದಲ್ಲಿ ವಶ್ಚಾತ್ತಾಪವಾಗಿದೆ ನಾನು ನಿಮ್ಮ ವಸ್ತುವನ್ನು ಅಪಹರಿಸಿ, ನಿಮಗೆ ಬಹಳ ದುಃಖಕೊಟ್ಟೆ ನಿಮ್ಮಲ್ಲಿ ನಾನು ಮಾಡಿದ ಅಪರಾಧವು ಏನು ಮಾಡಿದರೂ ತುಂಬಿ ಬರಲಾರದು. ತಾವು ಈ ವಿಷಯದಲ್ಲಿ ನನ್ನನ್ನು ಕ್ಷಮಿಸಿರಿ."- ಈ ಪ್ರಕಾರ ಸರಳಭಾವದಿಂದ ಅವರ ಹತ್ತರ ಕ್ಷಮಾ ಮಾಡಲಿಕ್ಕೆಂದು ಪ್ರಾರ್ಥಿಸಿಕೊಳ್ಳಬೇಕು ತಮ್ಮ ಕುಟುಂಬದೊಳಗಿನ ಮನುಷ್ಯರಿಗೂ ಆಪ್ತರಿಗೂ ಇಷ್ಟರಿಗೂ ಈ ರೀತಿ ಕೇಳಿಕೊಳ್ಳಬೇಕು "ಮಹಾರಾಜ, ತಾವು ಎಲ್ಲರೂ ನನ್ನ ಆಪ್ತವರ್ಗ, ಸ್ನೇಹಿ, ಸಹಕಾರಿಗಳು ಇದ್ದೀರಿ ನಮ್ಮ ನಿಮ್ಮ ಸಂಬಂಧವು ಈ ಜನ್ಮದಲ್ಲಿ ಮಾತ್ರ ಇದೆ. ತಂದೆ-ತಾಯಂದಿರು ಜನ್ಮಕೊಡುವವರಾಗಿದ್ದಾರೆ ಸ್ತ್ರೀಯು ಶರೀರಕ್ಕೆ ಸುಖ ಕೊಡುವವಳಾಗಿದ್ದಾರೆ. ಪುತ್ರ-ಪುತ್ರಿಯರ ಜನ್ಮವು ನನ್ನಿಂದ ಆಗಿದೆ. ಈ ಶರೀರದ ಸಂಬಂಧದಿಂದ ಇಷ್ಟು ಜನರ ಸಂಬಂಧವು ನನ್ನೊಡನೆ ಕೂಡಿದ್ದಾಗಿದೆ. ನಮ್ಮ ನಿಮ್ಮ ಸಂಬಂಧವು ಈ ನಾಶವಂತ ಶರೀರವು ಇರುವ ವರೆಗೆ ಮಾತ್ರ ಇರುತ್ತದೆ. ಈಗ ಈ ಶರೀರವು ನಷ್ಟವಾಗಲಿದೆ. ಇದರ ಅಸ್ತಿತ್ವವು ಆಯುಕರ್ಮದ ಸ್ವಾಧೀನವಾಗಿದೆ ಅಂತಲೇ ಇದರ ಮೇಲೆ ಪ್ರೇಮಮಾಡುವುದು ವ್ಯರ್ಥವಾಗಿದೆ ಈ ದೇಹದ ಮೇಲೆ ನೀವು ಪ್ರೀತಿಯನ್ನು ಮಾಡಿದಿರೆಂದೇನು ಅದು ಸ್ಥಿರವಾಗಿ ನಿಲ್ಲುವದಿಲ್ಲ! ಅಗ್ನಿ ಸಂಸ್ಕಾರವಾದೊಡನೆಯೇ ಸುಟ್ಟು ಭಸ್ಮವಾಗಿ ಹೋದೀತು. ಅದರ ಪರಮಾಣುಗಳು ನಾಲ್ಕೂ ಕಡೆಗೆ ಹಂಚಿ ಹೋದಾವು. ಆದರೆ ನನ್ನ ಆತ್ಮನು ಮಾತ್ರ ಜ್ಞಾನಸ್ವರೂಪ, ಅವಿನಾಶಿ ಹಾಗೂ ಅಖಂಡನಾಗಿದ್ದಾನೆ ಅದೇ ನನ್ನ ನಿಜವಾದ ಸ್ವರೂಪವು ನಿಜ ಸ್ವಭಾವದ ನಾಶವಾಗುವದಿಲ್ಲ ಯಾವುದರ ಸಂಯೋಗವಿದೆಯೋ ಅದು ಅವಶ್ಯವಾಗಿ ವಿಯೋಗವನ್ನು ಹೊಂದತಕ್ಕುದೇ ಅಂತಲೇ ಈ ವಿನಾಶಿಕ, ಅಜ್ಞಾನ, ಜಡಸ್ವರೂಪವಾದ ಶರೀರದ ಮೇಲಿನ ಮೋಹವನ್ನು ತ್ಯಜಿಸಿ ತನ್ನ ಅವಿನಾಶಿ ಮತ್ತು ಜ್ಞಾಯಕ ಆತ್ಮನ ಮೇಲೆ ಉಪಕಾರ ಮಾಡಲಿಕ್ಕೆ ಉದ್ಯುಕ್ತನಾಗುವುದೇ ಯೋಗ್ಯವಾಗಿದೆ. ನನ್ನ ಜ್ಞಾನದರ್ಶನ ಸ್ವಭಾವವುಳ್ಳ ಆತ್ಮನ ಘಾತವು ರಾಗದ್ವೇಷಾದಿ ವಿಕಾರಗಳಿಂದ ಆಗುತ್ತದೆ. ಅದಕ್ಕೆ ವೀತರಾಗಮಯ ನಿಜ ಸ್ವಭಾವದ ಪ್ರಾಪ್ತಿಯು ಯಾವ ಉಪಾಯದಿಂದ ಆದೀತೋ ಆ ಯತ್ನದಲ್ಲಿ ತೊಡಗಬೇಕು. ಶರೀರದ ಬಗ್ಗೆ ವಿಚಾರ ಮಾಡಿದರಂತೂ ಇಂಥ ಶರೀರಗಳು ಅನಂತಾನಂತವಾಗಿ ಒಂದರ ಹಿಂದೊಂದು ಬಂದು ಹೋಗಿವೆ ಅವುಗಳ ಮಹತ್ವವು ನನಗೆ ಎನಿಸುವದಿಲ್ಲ ಕೇವಲ ದರ್ಶನ-ಜ್ಞಾನ-ಚಾರಿತ್ರಗಳ ವಿಪರೀತ ಶ್ರದ್ಧೆಯಿಂದ ನಾಲ್ಕೂ ಗತಿಗಳಲ್ಲಿ ಭ್ರಮಣ ಮಾಡಬೇಕಾಯಿತು ಇದರ ಸಂತಾಪವೇ ಈಗ ನನಗೆ ಆಗುತ್ತಿದೆ. ನನ್ನ ಎಲ್ಲ ಪದಾರ್ಥಗಳನ್ನು ತಿಳಿಯುವ ಸರ್ವಜ್ಞ ಸ್ವಭಾವವು ಎಲ್ಲಿ? ಅಕ್ಷರದ ಅನಂತನೆಯ ಭಾಗದಷ್ಟು ಅಲ್ಪ ಜ್ಞಾನವಿರುವ ಏಕೇಂದ್ರಿಯ ಪರ್ಯಾಯವು ಯಾವ ಕಡೆಗೆ? ಅನಂತಶಕ್ತಿಧಾರಕನಾದ ನನ್ನ ಆತ್ಮನು ಇರುವಾಗ ಆ ಎಲ್ಲ ಶಕ್ತಿಯು ಅಂತರಾಯ ಕರ್ಮದ ಉದಯದಿಂದ ಇಲ್ಲದಂತಾಯಿತು ಅದರಿಂದ ಪೃಥ್ವಿ, ಕಲ್ಲು, ನೀರು, ಬೆಂಕಿ, ಗಾಳಿ, ವನಸ್ಪತಿ ಮೊದಲಾದ ಪಂಚಸ್ಥಾವರ ಜೀವಗಳಲ್ಲಿಯೂ ದ್ವೀಂದ್ರಿಯದಿಂದ ಪಂಚೇಂದ್ರಿಯ ವರೆಗಿನ ಜೀವವಾಗಿಯೂ ಜನ್ಮ ತಕ್ಕೊಳ್ಳ-ಬೇಕಾಯಿತು ಇದೆಲ್ಲವೂ ಮಿಥ್ಯಾಜ್ಞಾನ ಶ್ರದ್ಧೆ ಹಾಗೂ ಆಚರಣೆಗಳ ಫಲವಾಗಿದೆ ಅನಂತಾನಂತ ಕಾಲವು ಕಳೆದ ಮೇಲೆ ಸದ್ಯಕ್ಕಿನ ಕರ್ಮದ ಕ್ಷಯೋಪಶಮವು ಆದಮೇಲೆ ವೀತರಾಗ ಪರಮೇಶ್ವರನು ಉಪದೇಶಿಸಿದ ಸ್ಯಾದ್ವಾದರೂಪ ವಾಣಿಯನ್ನು ಕೇಳಿ ನನಗೆ ಸ್ವಸ್ವರೂಪ, ಪರಸ್ವರೂಪದೊಳಗಿನ ಭೇದಜ್ಞಾನವು ಸ್ವಲ್ಪ ಮಟ್ಟಿಗೆ ಆಗಿದೆ ಅದಕ್ಕಾಗಿ ನಾನೀಗ ಆತ್ಮನು ರಾಗದ್ವೇಷ ರಹಿತನಾಗಿ ನಿರ್ಭಯದಿಂದ ಈ ಶರೀರವನ್ನು ತ್ಯಾಗಮಾಡಲಿಕ್ಕೆ ಸಿದ್ಧವಾಗುವಂಥ ಸ್ನೇಹವನ್ನು ಮಾತ್ರ ಧಾರಣ ಮಾಡಬೇಕು ಆರಾಧನೆಗಳನ್ನು ಶರಣುಹೋಗುವುದಕ್ಕೆ ಸಿದ್ಧವಾದ ಮನಸ್ಸನ್ನು ಧಾರಣಮಾಡಬೇಕು. ಅನಾದಿ ಕಾಲದಿಂದಲೂ ನನಗೆ ಬಾಲಮರಣವು ಸಂಭವಿಸುತ್ತ ಬಂದಿದೆ. ಇವುಗಳಲ್ಲಿ ಒಮ್ಮೆಯಾದರೂ ಪಂಡಿತಮರಣವು ನನಗೆ ಒದಗಿದ್ದಾದರೆ ತಿರುಗಿ ಮರಣಹೊಂದುವ ಪ್ರಸಂಗವೇ ನನಗೆ ಒದಗುತ್ತಿರಲಿಲ್ಲ ಇರಲಿ, ಈಗಾದರೂ ಶರೀರದ ಮೇಲಿನ ಮಮತ್ವವನ್ನು ಬಿಟ್ಟು, ಯಾವುದರಿಂದ ನನ್ನ ಆತ್ಮವು ರಾಗದ್ವೇಷಗಳಿಗೆ ಒಳಗಾಗಿ ಸಂಸಾರ ಸಮುದ್ರದಲ್ಲಿ ಮುಳುಗಲಾರದೋ ಅದನ್ನಾಚರಿಸಲು ಪ್ರಯತ್ನ ಮಾಡಲಿಕ್ಕೆಬೇಕು." ಈ ಪ್ರಕಾರ ಎಲ್ಲ ವಿಕಾರಗಳನ್ನು ತ್ಯಜಿಸಿ, ಪರಿಗ್ರಹಗಳ ಮೇಲಿನ ಮಮತೆಯನ್ನು ಬಿಟ್ಟು, ಮನಸ್ಸನ್ನು ಪವಿತ್ರಗೊಳಿಸಬೇಕು.

ಕರಣಂಗಳ್ ಪಟುಗಳ್ ಜಿನೇಂದ್ರಪದಮಂತ್ರಂ ಸಿದ್ಧಮಾಯ್ತಾಹ ನ್ಯೆ-
ತಿರೆ ರತ್ನತ್ರಯಮೆಂಬ ರಕ್ಮೆವಣಿ ಸಾರ್ದತ್ತೀಕೆ ತಳ್ವಂ ನೆನು- ।
ತ್ತರಸಂ ಕಾಲಪಿಶಾಚನಂ ತಗುಳ್ದ ತೂಳ್ದೆವ್ವಿಟ್ಟ ಕಟ್ಟೇವದೇಂ
ವರಮಾರ್ಥ್ಯೆಕ ನಿಧಾನಮುಂ ಪಡೆವೆನೆಂಬುದ್ಯೋಗಮಂ ತಾಳ್ದಿದಂ ॥

— ಮಧುರ–ಧರ್ಮನಾಥ ಪುರಾಣಂ ೫-೧೯೯.

ಇನ್ನು ಸಮಾಧಿ ಮರಣವನ್ನು ಹೊಂದಬೇಕೆನ್ನುವವರು, ಏನು ಮಾಡಬೇಕೆಂಬುದನ್ನು ಈಗ ಹೇಳುತ್ತಾರೆ—

ಆಲೋಚ್ಯ ಸರ್ವಮೇನಃ ಕೃತಕಾರಿತಮನುಮತಂ ಚ ನಿರ್ವ್ಯಾಜಮ್ ।
ಆರೋಪಯೇನ್ಮಹಾವ್ರತಮಾಮರಣಸ್ಥಾಯಿ ನಿಃಶೇಷಮ್ ॥ ೧೨೫ ॥ [1]

ಅನ್ವಯಾರ್ಥ—(ಚ) ಮತ್ತು (ಕೃತಕಾರಿತಂ ಅನುಮತಂ) ಮಾಡಿದ, ಮಾಡಿಸಿದ, ಒಪ್ಪಿಗೆಯಿತ್ತ (ಸರ್ವ) ಎಲ್ಲ (ಏನಃ) ದೋಷಗಳನ್ನು (ನಿರ್ವ್ಯಾಜಮ್) ನಿಷ್ಕಪಟ ಬುದ್ಧಿಯಿಂದ (ಆಲೋಚ್ಯ) ಆಲೋಚನೆ ಮಾಡಿ (ಆಮರಣಸ್ಥಾಯಿ) ಸಾಯುವವರೆಗೆ ಇರುವಂಥ (ನಿಃಶೇಷಂ) ಎಲ್ಲ (ಮಹಾವ್ರತ) ಮಹಾವ್ರತಗಳನ್ನು (ಆರೋಪ-ಯೇತ್) ಧಾರಣಮಾಡಬೇಕು.

ಅರ್ಥ—ಇಲ್ಲಿಯ ವರೆಗೆ ತಾನು ಮಾಡಿದ ಪಾಪ, ಎರಡನೆಯವರಿಂದ ಮಾಡಿಸಿದ ಪಾಪ, ಪಾಪ ಕಾರ್ಯಗಳನ್ನು ಮಾಡುವವರಿಗೆ ಸಮ್ಮತಿಸಿದ ಪಾಪ ಈ ಎಲ್ಲ ಪಾಪಗಳನ್ನು ಮನಸ್ಸಿನಲ್ಲಿ ಎಳ್ಳಷ್ಟೂ ಕಪಟತನವನ್ನು ಇಟ್ಟುಕೊಳ್ಳದೆ ಗುರುಗಳ ಹತ್ತರ ವಿವರಿಸಬೇಕು. ಆ ಮೇಲೆ ಸಾಯುವ ವರೆಗೆ ಬಿಡದೆ ಪಾಲಿಸುವಂಥ ಮಹಾ ವ್ರತಗಳನ್ನು ಧಾರಣ ಮಾಡಬೇಕು. [ಹೀಗೆ ಮಾಡುವುದು ಸಮಾಧಿಮರಣದ ಪೂರ್ವ ಹಾಗೂ ಪೂರ್ಣ ಸಿದ್ಧತೆಯಾಗಿದೆ ಸ. ದ ]

ವಿಶೇಷಾರ್ಥ—ವೀತರಾಗಿ ನಿರ್ದೋಷ ಗುರುವಿನ ಸಂಯೋಗವು ಲಭಿಸಿದಾಗ, ತಮ್ಮ ಅಂತಃಕರಣ-ದೊಳಗಿನ ರಾಗದ್ವೇಷಾದಿ ವಿಕಾರಗಳು ಕಡಿಮೆಯಾದಾಗ, ಪರೀಷಹಗಳು ಪ್ರಾಪ್ತವಾದರೆ ಅವುಗಳನ್ನು ಸಹನ ಮಾಡುವ ಮನಸ್ಸು ಹಾಗೂ ಶರೀರಗಳು ಸಿದ್ಧವಾದಾಗ, ಧೈರ್ಯ ಮೊದಲಾದ ಅನೇಕ ಗುಣಗಳು ತಮ್ಮ ಕೈಗೂಡಿದಾಗ, ನಿರ್ಗ್ರಂಥ ಗುರುಗಳು ಮೇಲಿಂದ ಮೇಲೆ ಉಪದೇಶವಿತ್ತು ಇದರೊಳಗಿಂದ ದಾಟಿಸಲಿಕ್ಕೆ ಸಿದ್ಧರಿದ್ದಾಗ, ದೇಶ ಕಾಲ ಪರಿಸ್ಥಿತಿಯು ಅನುಕೂಲವಿದ್ದಾಗ ಮಾತ್ರ ಈ ಮಹಾವ್ರತವನ್ನು ಸ್ವೀಕಾರ ಮಾಡಬೇಕು ಈ ಪ್ರಕಾರದ ಬಾಹ್ಯ ಸಾಮಗ್ರಿಗಳು ಉಪಲಬ್ಧವಿಲ್ಲದಿದ್ದರೆ ತಮ್ಮ ಅಂತಃಕರಣದಲ್ಲಿಯೇ ಭಗವಾನ್ ಪಂಚ ಪರಮೇಷ್ಠಿಗಳ ಧ್ಯಾನಮಾಡಿ, ಅರಿಹಂತರ ಪ್ರತಿಮೆಯ ಹತ್ತಿರ ಕುಳಿತು ಆಲೋಚನೆಯನ್ನು ಮಾಡಬೇಕು; ಮತ್ತು ತಮ್ಮ ಯೋಗ್ಯತೆಗೆ ಅನುಸರಿಸಿ ಸಂಪೂರ್ಣ ಪಂಚಪಾಪಗಳನ್ನು ತ್ಯಾಗಮಾಡಿ ಮನೆಯಲ್ಲಿರಬೇಕು. ಮಹಾವ್ರತಿಗಳಾದ ಸಾಧುಗಳಂತೆ ರೋಗಾದಿಗಳ ವೇದನೆಯು ಪ್ರಾಪ್ತವಾದಲ್ಲಿ ಗಾಬರಿಯಾಗದೆ ಅವುಗಳನ್ನು ಧೈರ್ಯದಿಂದ ಸಹನ ಮಾಡಬೇಕು ಆಗ ಆ ವೇದನೆಯು ತನಗೆ ಬಾಧಿಸುತ್ತದೆ ಎಂಬುದನ್ನು ಹೊರಗೆ ಪ್ರಕಟವಾಗಗೊಡಬಾರದು. ಕರ್ಮದ ಉದಯವನ್ನು ಸಹನ ಮಾಡಿ, ಅದು ಸ್ವಸ್ವಭಾವದಿಂದ ಭಿನ್ನವಿದೆಯೆಂಬುದನ್ನು ನಿಶ್ಚಯವಾಗಿಯೂ ಮನಸ್ಸಿನಲ್ಲಿ ನಂಬಬೇಕು ಎಲ್ಲ ಶತ್ರು ಮಿತ್ರರ ಸಂಯೋಗ-ವಿಯೋಗಗಳಲ್ಲಿ ಸಮತೆಯನ್ನು ಧಾರಣ ಮಾಡಬೇಕು. ಪರಿಗ್ರಹಗಳ ಉಪಾಧಿಯನ್ನು ತೊರೆದು ಬಿಡಬೇಕು ಸಂಕಲ್ಪ-ವಿಕಲ್ಪಗಳನ್ನು ಮನಸ್ಸಿನಲ್ಲಿ ತರಕೂಡದು ಸನ್ಯಾಸವನ್ನು ಸ್ವೀಕರಿಸುವ ಸಮಯದಲ್ಲಿ ಪರಿಗ್ರಹಗಳ ತ್ಯಾಗ ಮಾಡಬೇಕು ಆಗ ಮೊಟ್ಟ ಮೊದಲು ಯಾರಿಗೆ ಏನಾದರೂ ಕೊಡಬೇಕಾಗಿದ್ದರೆ ಅದನ್ನು ಕೊಟ್ಟು ಬಿಡಬೇಕು ಇನ್ನಾರಾದರೂ ಇಡಗಂಟು, ಮನೆ, ಹೊಲ,

---

1 ಆಯತವರ್ಮನು ಹೇಳುವುದು ಹೀಗೆ—

ಗುರುನಿಕಟಂ ಸಾರ್ದು ಲೋಕಾಗ್ರದೊಳು ಮನಮನಿಟ್ಟು ಶಕ್ತಿಯುಳ್ಳನಂ ದ್ರವ್ಯ ಕ್ಷೇತ್ರಕಾಲ ಭವ ಭಾವಂಗಳನಾಶ್ರಯಿಸಿ ಕೃತಕಾರಿತಾನುಮೋದಂಗಳಿಂದಂ ಇಂತಪ್ಪಿಂಕಪ್ಪತಿಚಾರಂಗಳಾದುವು ನಿಂದೆಗೆಯ್ದು . . ಆಚಾರ್ಯರಾಳೋಚಿಸಿ

ಒಡವೆ ವಸ್ತುಗಳನ್ನು ವಿಶ್ವಾಸದಿಂದ ನಿಮ್ಮ ಹತ್ತಿರ ಇಟ್ಟಿದ್ದರೆ ಅವರ ವಸ್ತುಗಳನ್ನು ಅವರಿಗೆ ಕೊಟ್ಟು ಸಂತೋಷಗೊಳಿಸಬೇಕು ಆತ್ಮನಿಂದೆಯನ್ನು ಮಾಡಿಕೊಂಡು ಕೆಟ್ಟ ಕೆಲಸವನ್ನು ಮಾಡಿದ್ದಕ್ಕಾಗಿ ಪಶ್ಚಾತ್ತಾಪವನ್ನು ಮಾಡಿಕೊಳ್ಳಬೇಕು. ಆ ಮೇಲೆ ತನ್ನ ಹತ್ತರ ಇರುವ ಧನ, ಪರಿಗ್ರಹಗಳನ್ನು ವಿಭಾಗ ಮಾಡಿ ಹೆಂಡತಿ, ಮಗ, ಮಗಳು, ದೀನ, ಅನಾಥ, ವಿಧವೆ, ಅಬಲೆ, ದುಃಖಿ, ಆಶ್ರಯವಿಲ್ಲದ ತನ್ನ ತಂಗಿ, ಅಣ್ಣ ತಮ್ಮರು ಮೊದಲಾದವರು ಯಾರಾದರೂ ಇದ್ದರೆ ಅವರಿಗೆ ಕೊಟ್ಟು ಬಿಡಬೇಕು ಈ ಪ್ರಕಾರ ಎಲ್ಲ ಪರಿಗ್ರಹಗಳನ್ನು ಬಿಟ್ಟು, ಅವುಗಳ ಮೇಲಿನ ಮಮತೆಯನ್ನು ಕಡಿಮೆ ಮಾಡಬೇಕು. ಆಗ ಮನಸ್ಸಿನಲ್ಲಿ ಹೀಗೆ ವಿಚಾರ ಮಾಡಬೇಕು.—ಈಗ ಈ ಪರಿಗ್ರಹ-ಗಳಿಗೂ ನನಗೂ ಎಷ್ಟು ಹೊತ್ತು ಸಂಬಂಧ ಉಳಿಯುವದಿದೆ? ಈ ಶರೀರದ ಸಂಬಂಧದಿಂದ ಈ ಎಲ್ಲ ಪರಿಗ್ರಹಗಳ ಮೇಲೆ ಮಮತೆಯನ್ನು ಮಾಡುತ್ತಲಿದ್ದೆ ಈ ಶರೀರವನ್ನೇ ಬಿಡುವ ವಿಚಾರ ಮಾಡಿದಾಗ ಅದಕ್ಕೆ ಸಂಬಂಧಿಸಿದ ಪರಿಗ್ರಹಗಳ ಮೇಲೆ ಮಮತೆ ಇಟ್ಟು ಏನು ಉಪಯೋಗ? ಇನ್ನು ನಾನು ಆತ್ಮನಿಗೆ ಸಂಬಂಧಿಸಿರುವ ಸಮ್ಯಗ್ ದರ್ಶನ, ಜ್ಞಾನ, ಚಾರಿತ್ರಗಳ ಮೇಲೆ ಮಮತೆಯನ್ನು ಮಾಡಲಿಕ್ಕೆ ಬೇಕು. ಯಾಕೆಂದರೆ ಅದೇ ನಿಜ ಸ್ವಭಾವವಾಗಿದೆ. ದೇಹವು ಎಲುವು, ಮಾಂಸ, ಕೀವು, ರಕ್ತಗಳಿಂದ ತುಂಬಿದ ಕೃತಘ್ನ ಮತ್ತು ಜಡವಾಗಿದೆ. ಅದು ನನ್ನದಲ್ಲ ನಾನು ಅದರವನಲ್ಲ. ಆತ್ಮನ ಸ್ವರೂಪವು ಅವಿನಾಶಿಯಾಗಿದೆ ಅಜ್ಞಾನದಿಂದ ನಾವು ಶರೀರವನ್ನು ಪ್ರೀತಿಸುತ್ತಿದ್ದೇವೆ ಇದರಿಂದ ಅಶುಭ ಕರ್ಮದ ಬಂಧವಾಗುತ್ತಿದೆ. ಈ ಪ್ರಕಾರ ದೇಹದ ಸಂಬಂಧವು ಆತ್ಮಕ್ಕೆ ಆಗಿದೆ ಇಷ್ಟೇ ಸಾಕು. ಇನ್ನು ಮುಂದೆ ಇದು ಆತ್ಮಕ್ಕೆ ಅಂಟಿಕೊಂಡಿರಬಾರದೆಂದು ಮನಃಪೂರ್ವಕವಾಗಿ ಇಚ್ಛಿಸುತ್ತೇನೆ. ಈ ದೇಹದ ಮೇಲೆ ಮಮತ್ವ ಮಾಡಿದುದರಿಂದಲೇ ಇಲ್ಲಿಯ ವರೆಗೆ ಅನಂತ ಜನ್ಮ ಮರಣದ ತಿರುಗಣಿಯಲ್ಲಿ ಸುತ್ತಬೇಕಾಯಿತು. ಸಂಸಾರದಲ್ಲಿ ದುಃಖದ ಪ್ರಕಾರಗಳು ಎಷ್ಟಿವೆಯೋ ಅವನ್ನೆಲ್ಲ ಈ ಶರೀರದ ಸಂಬಂಧದಿಂದಲೇ ಅನುಭವಿಸಬೇಕಾ-ಯಿತು. ರಾಗ-ದ್ವೇಷ-ಮೋಹ-ಕಾಮ-ಕ್ರೋಧ ಮೊದಲಾದ ವಿಕಾರಗಳ ಉತ್ಪತ್ತಿಗಂತೂ ಈ ದೇಹವೇ ಕಾರಣವಾಗಿದೆ. ಅದಕ್ಕಾಗಿ ಈಗ ಅವುಗಳ ಮೇಲಿನ ಮಮತ್ವವನ್ನು ಒಮ್ಮೆ ಬಿಟ್ಟು ವೈರಾಗ್ಯ ವೃತ್ತಿಯನ್ನು ದಾರಣ ಮಾಡಬೇಕು

> ಗತಗೌರವತ್ರಯಂ ನಿರ್ಜಿತದಂಡತ್ರಯಸಮೇತಶಲ್ಯತ್ರಯನ-
> ಪ್ರತಿಹತಯೋಗತ್ರಯನವಗತಕಾಲತ್ರಯನನಾಪ್ತಗುಪ್ತಿತ್ರಿತಯಂ ।
> ಪತ್ತುಂ ಧರ್ಮಂಗಳ್ ಮೂವತ್ತಾಱುಂ ಗುಣದೊಳಮರೆ ಸನ್ಮಾರ್ಗಣ ಮೋ-
> ಕ್ಷಾತ್ತದೃಢಚಿತ್ತನುದ್ಘಟವೃತ್ತಂ ಘಾತಿಸಲೊಡರ್ಚಿದಂ ಘಾತಿಗಳಂ ॥
>
> —ಗುಣವರ್ಮ—ಪುಷ್ಪದಂತ ಪುರಾಣಂ ೧೪, ೧೫-೧೬

ಮಹಾವ್ರತವನ್ನು ಸ್ವೀಕರಿಸಿದಾಗ ಇರಬೇಕಾದ ಮನೋವೃತ್ತಿಯ ವಿವರವನ್ನು
ಈ ಸೂತ್ರದಲ್ಲಿ ಆಚಾರ್ಯರು ಕೊಡುತ್ತಾರೆ—

> **ಶೋಕಂ ಭಯಮವಸಾದಂ ಕ್ಲೇದಂ ಕಾಲುಷ್ಯಮರತಿಮಪಿ ಹಿತ್ವಾ ।**
> **ಸತ್ತ್ವೋತ್ಸಾಹಮುದೀರ್ಯ ಚ ಮನಃ ಪ್ರಸಾದ್ಯಂ ಶ್ರುತೈರಮೃತೈಃ ॥ ೧೨೬ ॥** [1]

ಅನ್ವಯಾರ್ಥ—(ಶೋಕಂ) ದುಃಖ (ಭಯಂ) ಹೆದರಿಕೆ (ಅವಸಾದಂ) ಖೇದ (ಕ್ಲೇದಂ) ಸ್ನೇಹ (ಕಾಲುಷ್ಯಂ) ರಾಗ ದ್ವೇಷ ರೂಪ ಪರಿಣತಿ (ಅಪಿ) ಹಾಗೆಯೇ (ಅರತಿ) ಅರತಿ—ಇವುಗಳನ್ನು-(ಹಿತ್ವಾ) ತ್ಯಾಗಮಾಡಿ (ಚ) ಮತ್ತು (ಸತ್ತ್ವೋತ್ಸಾಹಂ) ಶಕ್ತಿ ಮತ್ತು ಉತ್ಸಾಹಗಳನ್ನು (ಉದೀರ್ಯ) ಪ್ರಕಟಗೊಳಿಸಿ (ಅಮೃತೈಃ) ಅಮೃತದಂತಿರುವ (ಶ್ರುತೈಃ) ಶಾಸ್ತ್ರದಿಂದ (ಮನಃ) ಮನಸ್ಸನ್ನು (ಪ್ರಸಾದ್ಯಂ) ಪ್ರಸನ್ನಗೊಳಿಸಬೇಕು

---

1 ಆಯತವರ್ಮನ ಗದ್ಯ ಹೀಗಿದೆ—

ಕ್ಷೇತ್ರವಾಸ್ತುವೊದಲಾಗೊಡೆಯ ಬಾಹ್ಯಪರಿಗ್ರಹ ಪತ್ತುಮಂ ಮಿಥ್ಯಾತ್ವ ವೇದ ರಾಗ ದ್ವೇಷ ಹಾಸ್ಯ ರತ್ಯರತಿ ಶೋಕ ಭಯ ಜುಗುಪ್ಸೆ ಕ್ರೋಧಮಾನ ಮಾಯಾಲೋಭವೆಂಬ ಪದಿನಾಲ್ಕಭ್ಯಂತರ ಪರಿಗ್ರಹಮುಮಂ ತೊರೆದು.

ಅರ್ಥ—ಸನ್ಯಾಸ ಕಾಲದಲ್ಲಿ ಶೋಕ, ಭೀತಿ, ವಿಷಾದ, ಸ್ನೇಹ, ಕಲುಷತ್ವ, ಅರತಿ ಮೊದಲಾದವುಗಳನ್ನು ತ್ಯಾಗ ಮಾಡಬೇಕು. ಅಲ್ಲದೆ ಬಲ ಹಾಗೂ ಉತ್ಸಾಹಗಳನ್ನು ಪ್ರಕಟಗೊಳಿಸಬೇಕು. ಅದರೊಡನೆಯೇ ಅಮೃತಕ್ಕೆ ಸಮಾನವಾಗಿರುವ ಜ್ಞಾನದಿಂದ ತನ್ನ ಮನವನ್ನು ಪ್ರಸನ್ನಗೊಳಿಸಬೇಕು. [ಈ ಸಲ್ಲೇಖನ ಮಹಾವ್ರತವನ್ನು ಸ್ವೀಕರಿಸಿದ ಮೇಲೆ ಅದನ್ನು ಪೂರ್ಣಗೊಳಿಸಲಿಕ್ಕೆ ಮಾಡಬೇಕಾದ ಕರ್ತವ್ಯಗಳನ್ನು ಇಲ್ಲಿ ನಿರ್ದೇಶಿಸಲಾಗಿದೆ. ಸಲ್ಲೇಖನ ವ್ರತದ ಅನುಷ್ಠಾನವು ಸರಿಯಾಗಿ ನಡೆಯಬೇಕಾದರೆ ಚಿತ್ತವು ಪ್ರಸನ್ನವಾಗಿರಬೇಕು. ಅದಕ್ಕಾಗಿ ಮಾನಸಿಕ ದೋಷಗಳನ್ನು ದೂರಗೊಳಿಸಿ ಬಲವನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಮಾನಸಿಕ ನಿರ್ಮಲತೆಯು ಸಂತತವಾಗಿ ಉಳಿಯಲಿಕ್ಕೆಂದು ಶಾಸ್ತ್ರ ವಚನಗಳ ಸ್ಮರಣ ಹಾಗೂ ಚಿಂತನೆಯನ್ನು ಮಾಡಬೇಕು. ಇದು ಚಿತ್ತವನ್ನು ಪ್ರಸನ್ನವಿಡಲಿಕ್ಕೆ ಪರಮ ಸಹಾಯಕವಾಗಿದೆ ಸ ಧ]

ವಿಶೇಷಾರ್ಥ—ಅನಾದಿ ಕಾಲದಿಂದಲೂ ಜೀವಿಗಳಿಗೆ ಶರೀರವೇ ತನ್ನ ಸ್ವರೂಪವೆಂದು ಎನಿಸುತ್ತಿದೆ. ಈ ದೇಹವು ನಾಶ ಹೊಂದುವುದೇ ತನ್ನ ನಾಶವೆಂದು ಪ್ರಾಣಿಗಳ ತಿಳುವಳಿಕೆ ಇದೆ. ಯಾವ ಕಾಲದಲ್ಲಿ ಈ ಪರ್ಯಾಯದ ನಾಶ ಮತ್ತು ಧನ, ಸ್ತ್ರೀ, ಪುತ್ರ, ಮಿತ್ರ, ಬಾಂಧವಾದಿಗಳೆಲ್ಲರ ವಿಯೋಗ ಹೊಂದುವ ಪ್ರಸಂಗ ಬರುವದೋ, ಆ ಕಾಲಕ್ಕೆ ಮಿಥ್ಯಾದೃಷ್ಟಿ ಜೀವಗಳಿಗೆ ಅತಿಶಯ ದುಃಖವಾಗುತ್ತದೆ. ಹಾಗೆ ಸಮ್ಯಗ್‌ದೃಷ್ಟಿ ಜೀವಗಳಿಗೆ ಆಗುವದಿಲ್ಲ ಅವನು ಅಂದ ವೇಳೆಯಲ್ಲಿ ಮನದೊಳಗೆ ಹೀಗೆ ವಿಚಾರಿಸುತ್ತಾನೆ—'ಎಲೈ ಆತ್ಮನೇ, ನಿನಗೆ ಇಂಥ ಶರೀರಗಳು ಇಲ್ಲಿಯ ವರೆಗೆ ಲೆಕ್ಕವಿಲ್ಲದಷ್ಟು ಪ್ರಾಪ್ತವಾಗಿವೆ ಅಲ್ಲದೆ ನಷ್ಟವಾಗಿಯೂ ಹೋಗಿವೆ. ಶರೀರವು ಅನೇಕ ರೋಗಗಳ ಉತ್ಪತ್ತಿ ಸ್ಥಾನವಾಗಿದೆಯಲ್ಲವೆ? ಇದಕ್ಕೆ ಯಾವಾಗಲೂ ಹಸಿವು, ನೀರಡಿಕೆ, ಚಳಿ, ಉಷ್ಣ ಮೊದಲಾದ ವೇದನೆಗಳು ಉತ್ಪನ್ನವಾಗುತ್ತವೆ. ಇದು ಅತಿಶಯ ಕೃತಘ್ನವಾಗಿದೆ ಅದು ಅವಶ್ಯವಾಗಿ ನಾಶವಾಗು-ವಂಥದಿದೆ. ಇದರಿಂದ ಆತ್ಮನಿಗೆ ಎಲ್ಲ ಪ್ರಕಾರದ ದುಃಖವನ್ನು ಭೋಗಿಸಬೇಕಾಗುತ್ತದೆ. ಅಂತಲೇ ದುಷ್ಟ ಜನರ ಸಂಗತಿಯನ್ನು ಹೇಗೆ ಬಿಡುವೆವೋ ಹಾಗೆ ಇದನ್ನೂ ತ್ಯಜಿಸಲಿಕ್ಕೆ ಬೇಕು ಇದು ಎಲ್ಲ ದುಃಖಗಳಿಗೆ ಬೀಜದಂತೆ ಇದ್ದು, ಅತಿಶಯ ಸಂತಾಪ ಉತ್ಪನ್ನ ಮಾಡುವಂಥದಾಗಿದೆ ಇದರಿಂದ ಯಾವಾಗಲೂ ಭಯವು ಹುಟ್ಟುತ್ತದೆ. ಇದು ಸೆರೆಮನೆಯಂತೆ ಆತ್ಮನನ್ನು ಪರಾಧೀನಗೊಳಿಸುತ್ತದೆ. ದುಃಖದ ಎಷ್ಟು ಪ್ರಕಾರಗಳಿವೆಯೋ ಅವೆಲ್ಲವನ್ನೂ ಇದರ ಸಂಯೋಗದಿಂದ ಭೋಗಿಸಬೇಕಾಗುತ್ತದೆ ಇದರಿಂದಲೇ ಆತ್ಮಸ್ವರೂಪದ ಭ್ರಮೆಯು ಉತ್ಪನ್ನವಾಗುತ್ತದೆ. ಮೇಲಿಂದ ಮೇಲೆ ಇಚ್ಛೆಯು ಉತ್ಪನ್ನವಾಗಿ ಕ್ಲೇಶವನ್ನು ಸಹನ ಮಾಡಬೇಕಾಗುತ್ತದೆ ಇದು ಅತಿಶಯ ದುರ್ಗಂಧವಾಗಿದ್ದು ಅನೇಕ ಕ್ರಿಮಿಗಳಿಂದ ತುಂಬಿದೆ. ಇದೊಂದು ದುಷ್ಟ ಬಂಧುವಿನ ಹಾಗೆ ಇಲ್ಲವೆ ಬಲಾಢ್ಯ ಶತ್ರುವಿನ ಹಾಗೆ ದುಃಖ ಕೊಡುವಂಥದಾಗಿದೆ ಇಂಥ ಶರೀರವು ನಾಶಹೊಂದುವಾಗ ಶೋಕ ಮಾಡಿ ಏನು ಪ್ರಯೋಜನವಿದೆ? ಅಂತಲೇ ಜ್ಞಾನೀ ಪುರುಷನು ಇದರ ವಿಯೋಗವಾದಲ್ಲಿ ದುಃಖ ಮಾಡುತ್ತಿರುವದಿಲ್ಲ. ಅವನು ಮರಣಕ್ಕೆ ಹೆದರುವದೂ ಇಲ್ಲ ಅವನು ವಿಷಾದ, ಸ್ನೇಹ, ಕಲುಷತ್ವ, ಅರತಿಭಾವಗಳನ್ನು ತ್ಯಜಿಸಿ, ಉತ್ಸಾಹ ಹಾಗೂ ಸಾಹಸಗಳನ್ನು ಪ್ರಕಟಗೊಳಿಸಿ, ಶ್ರುತಜ್ಞಾನವೇ ಒಂದು ಅಮೃತವೆಂದು ಅದನ್ನೇ ಸ್ವೀಕರಿಸಿ, ಮನವನ್ನು ತೃಪ್ತಮಾಡಿಕೊಳ್ಳುತ್ತಾನೆ.

ಬಗೆಗೆ ಸುಖದುಃಖಮುಂ ಪಟು ಪೊಗಟ್ತೆಯುಂ ಹಾನಿವೃದ್ಧಿಯುಂ ಪಟುಪ್ರೊಟಲುಂ
ಪಗೆಕೆಳೆಯುಂ ಸಮನೆನೆಯಾಯೋಗಿಗೆ ಸಮತೆ ಸಮಂತು ಸಮನಿಸಿತ್ತು ಸಮಗ್ರಂ ॥

—ಗುಣವರ್ಮ—ಪುಷ್ಪದಂತ ಪುರಾಣಂ ೧೪, ೧೭.

## ಮೃತ್ಯು-ಮಹೋತ್ಸವ

ಈ ಸಲ್ಲೇಖನ ವ್ರತದಲ್ಲಿ ಸದ್‌ಭಾವನೆಯನ್ನು ಪುಷ್ಟಗೊಳಿಸುವಂಥ ಹದಿನೆಂಟು ಶ್ಲೋಕಗಳ ಒಂದು ಪಾಠವಿದೆ ಅದರಿಂದ ಸಲ್ಲೇಖನದ ಉಪಚಿಂತನೆಗೆ ಪುಷ್ಟಿಯು ದೊರೆಯುತ್ತದೆ ಆ ದೃಷ್ಟಿಯಿಂದ ಅವುಗಳ ವರ್ಣನೆಯನ್ನು ಇಲ್ಲಿ ಕೊಡಲಾಗಿದೆ

ಮೃತ್ಯುಮಾರ್ಗೇ ಪ್ರವೃತ್ತಸ್ಯ ವೀತರಾಗೋ ದದಾತು ಮೇ ।
ಸಮಾಧಿಬೋಧಿಪಾಥೇಯಂ ಯಾವನ್ಮುಕ್ತಿಪುರೀ ಪುರಃ ॥ ೧ ॥

ಅರ್ಥ—ಮೃತ್ಯುವಿನ ಮಾರ್ಗಕ್ಕೆ ಹತ್ತಿದಂಥ ನನಗೆ ಭಗವಾನ್ ವೀತರಾಗ ದೇವನು ಸಮಾಧಿ—ತನ್ನ ಸ್ವರೂಪದ ವಿಷಯದಲ್ಲಿ ಸಾವಧಾನತೆ-ಹಾಗೂ ರತ್ನತ್ರಯಗಳ ಲಾಭ-ಬೋಧ-ಎಂಬ ದಾರಿಯ ಬುತ್ತಿಯನ್ನು ಕೊಡಲಿ. ಯಾಕಂದರೆ ನಾನು ಮೋಕ್ಷವೆಂಬ ಪಟ್ಟಣವನ್ನು ನೇರುವವರಿಗೆ ಇವೆರಡರ ಉಪಯೋಗವು ನನಗೆ ದಾರಿಯ ಬುತ್ತಿಯಂತೆ ಆಗಲಿದೆ

ಭಾವಾರ್ಥ—ನಾನು ಅನಾದಿ ಕಾಲದಿಂದಲೂ ಅನಂತ ಜನ್ಮ ಮರಣಗಳ ಚಕ್ರದಲ್ಲಿ ಸುತ್ತಿದೆ. ಅದನ್ನು ಸರ್ವಜ್ಞನೊಬ್ಬನೇ ತಿಳಿಯಲು ಸಮರ್ಥನು. ಇಲ್ಲಿಯ ವರೆಗೆ ಒಮ್ಮೆಯೂ ಕೂಡ ಸಮಾಧಿ ಮರಣವು ಸಾಧಿಸಲಿಲ್ಲ. ಅದು ಸಾಧಿಸುತ್ತಿದ್ದರೆ ನಾನು ಪುನಃ ಈ ಸಂಸಾರದಲ್ಲಿ ಜನ್ಮ-ಮರಣಕ್ಕೆ ಪಾತ್ರನಾಗುತ್ತಿರಲಿಲ್ಲ. ಸಮ್ಯಕ್ ಮರಣ ಅಥವಾ ಸಮಾಧಿ ಮರಣವೆಂದರೆ ಈ ಸ್ಥಳದಲ್ಲಿ ಕೇವಲ ದೇಹದ ನಾಶವಾಗತಕ್ಕದು ಶರೀರದ ಕೂಡ ಇರುವಂಥ ಆತ್ಮನ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ಸ್ವಭಾವದ ಘಾತವು ಕಷಾಯದಿಂದ ಆಗುವುದಲ್ಲ. ಕುಮರಣ ಎಂದರೆ ಮಿಥ್ಯಾ ಶ್ರದ್ಧೆಯಿಂದ ದೇಹದ ನಾಶಕ್ಕೇನೇ ಆತ್ಮನ ನಾಶವೆಂದು ತಿಳಿದು, ಅತಿಶಯ ದುಃಖವನ್ನು ಹೊಂದಿ ಮರಣ ಹೊಂದುವುದು. ನಾನು ಇಲ್ಲಿಯ ವರೆಗೆ ಮಿಥ್ಯಾದರ್ಶನದ ಪ್ರಭಾವದಿಂದ, ಶರೀರವು ನಾಶವಾದಾಗಲೆಲ್ಲ ಆತ್ಮನ ನಾಶವಾಯಿತೆಂದೇ ತಿಳಿದೆ ಅದರಿಂದ ನನ್ನ ಜ್ಞಾನದರ್ಶನ ಸ್ವರೂಪದ ಘಾತ ಮಾಡಿಕೊಂಡು ಅನಂತ ಪರಿವರ್ತನ-ವನ್ನೂ ಹೊಂದಿದೆ ಈಗ ನಾನು ಭಗವಂತನಿಗೆ ಹೀಗೆ ಪ್ರಾರ್ಥಿಸುತ್ತೇನೆ—'ಎಲೈ ಪ್ರಭುವೆ ನಾನು ಸಾಯುವ ಸಮಯದಲ್ಲಿ ವೇದನಾಯುಕ್ತ ಹಾಗೂ ಆತ್ಮಜ್ಞಾನ ರಹಿತ ಮರಣವು ಆಗದಿರಲಿ ಯಾಕಂದರೆ ನೀನು ಜನ್ಮ ಮರಣ ರಹಿತನಿರುವಿ. ನಾನು ನಿನಗೆ ಶರಣು ಬಂದು ಸಂಕ್ಲೇಶ ರಹಿತ ಧರ್ಮಧ್ಯಾನದಲ್ಲಿ ಲೀನನಾಗಿ ಮರಣ ಒದಗಬೇಕೆಂದು ಇಚ್ಛಿಸುವವನಾಗಿದ್ದೇನೆ.' ಈ ಪ್ರಕಾರ ವಿಚಾರ ಮಾಡಿ ವೀತರಾಗ ಪರಮೇಷ್ಠಿಗೆ ಶರಣು ಹೋಗಬೇಕು

ಆ ಮೇಲೆ ನಾವು ನಮ್ಮ ಆತ್ಮವನ್ನು ಅರಿತುಕೊಳ್ಳಲಿಕ್ಕೆ ಹೀಗೆ ಪ್ರಯತ್ನಿಸಬೇಕು—

> ಕೃಮಿಜಾಲಶತಾಕೀರ್ಣೇ ಜರ್ಜರೇ ದೇಹಪಂಜರೇ ।
> ಭಜ್ಯಮಾನೇ ನ ಭೇತವ್ಯಂ ಯತಸ್ತ್ವಂ ಜ್ಞಾನವಿಗ್ರಹಃ ॥ ೨ ॥

ಅರ್ಥ—ಎಲೈ ಆತ್ಮನೇ! ನೀನು ಜ್ಞಾನ ಶರೀರಿಯಾಗಿರುವಿ ಅಂದ ಮೇಲೆ ನಿನಗೆ ನೂರಾರು ಹುಳಗಳ ಜಾಳಿಗೆಯಿಂದ ತುಂಬಿದ ಮತ್ತು ಮುಪ್ಪಾಗುವಂಥ ಈ ದೇಹರೂಪೀ ಪಂಜರವು ನಾಶವಾಗುತ್ತದೆಂಬ ಹೆದರಿಕೆಯು ಇರುವ ಅವಶ್ಯಕತೆಯು ಇಲ್ಲ.

ಭಾವಾರ್ಥ—ಆತ್ಮನೇ! ನೀನು ಜ್ಞಾನಸ್ವರೂಪಿಯು. ಆ ಜ್ಞಾನದಲ್ಲಿ ಎಲ್ಲ ಪದಾರ್ಥಗಳು ಪ್ರತಿ-ಬಿಂಬಿಸುತ್ತವೆ. ನೀನು ಅಮೂರ್ತಿಕನು, ಜ್ಯೋತಿ ಸ್ವರೂಪಿಯು, ಅಖಂಡನು, ಅವಿನಾಶಿಯು, ಜ್ಞಾತಾ ಮತ್ತು ದ್ರಷ್ಟಾ ಕೂಡ ಆಗಿರುವಿ ಈ ದೇಹವು ಎಲುವು, ಮಾಂಸ, ಕೀವು, ರಕ್ತ, ತೊಗಲಿನಿಂದ ಕೂಡಿದ್ದಿದೆ. ಅಲ್ಲದೆ ನಾಶವಂತವೂ ಇದೆ. ಅರ್ಥಾತ್ ಇದು ನಿನ್ನ ಸ್ವರೂಪದಿಂದ ಅತ್ಯಂತ ಭಿನ್ನವಾಗಿದೆ ಕರ್ಮವಶನಾದುದರಿಂದ ಒಂದೇ ಕ್ಷೇತ್ರದಲ್ಲಿ ಆತ್ಮ ದೇಹಗಳ ಸಂಬಂಧವಾಗಿದೆಯಷ್ಟೆ ಅದರಿಂದ ಎರಡೂ ಒಂದೇ ರೂಪವೇನೋ ಎನ್ನುವಂತೆ ಭಾಸವಾಗುತ್ತದೆ ಆದರೆ ನಿನ್ನಲ್ಲಿಯೂ ಈ ದೇಹದಲ್ಲಿ ಬಹಳ ವ್ಯತ್ಯಾಸವಿದೆ. ಇದನ್ನು ಲಕ್ಷ್ಯದಲ್ಲಿಡಿರಿ. ದೇಹವಿದು ಪೃಥ್ವಿ, ಜಲ, ಅಗ್ನಿ, ವಾಯು ಈ ನಾಲ್ಕರ ಪರಮಾಣುಗಳ ಪಿಂಡವಾಗಿದೆ. ಇದು ಸಮಯ ಒದಗಿದಾಗ ಹಂಚಿಯೂ ಹೋಗುವುದು ಆದರೆ ನೀನು ಮಾತ್ರ, ಅವಿನಾಶಿ, ಅಖಂಡ, ಜ್ಞಾಯಕ ಸ್ವರೂಪಿಯಾಗಿರುವುದರಿಂದ ಶರೀರವು ನಾಶವಾದರೂ ಸಹ ನನ್ನ ನಾಶವೂ ಆದೀತೆಂದು ಹೆದರುವಿ ಏಕೆ?—ಇದು ತಿಳಿಯದ ಸಂಗತಿಯಾಗಿದೆ.

> ಜ್ಞಾನಿನ್ ಭಯಂ ಭವೇತ್ಕಸ್ಮಾತ್ಪ್ರಾಪ್ತೇ ಮೃತ್ಯುಮಹೋತ್ಸವೇ ।
> ಸ್ವರೂಪಸ್ಥಃ ಪುರಂ ಯಾತಿ ದೇಹೀ ದೇಹಾಂತರಸ್ಥಿತಿಃ ॥ ೩ ॥

ಅರ್ಥ—ಎಲೈ ಜ್ಞಾನಿ ಪುರುಷನೆ! ಮೃತ್ಯುವೆಂಬುದು ಒಂದು ದೊಡ್ಡ ಉತ್ಸವವು ಈ ಮಹೋತ್ಸವವು ನಿನಗೆ ಪ್ರಾಪ್ತವಾದಾಗ ನೀನು ಹೆದರುವಿ ಏಕೆ? ಎಲಾ! ಈ ಆತ್ಮನು ಸ್ವಸ್ವರೂಪದಲ್ಲಿ ನಿಲ್ಲುವವನಿದ್ದಾನೆ ಅವನು ಈ ಶರೀರವನ್ನು ಬಿಟ್ಟು ಇನ್ನೊಂದು ಶರೀರವೆಂಬ ನಗರದಲ್ಲಿ ವಾಸಮಾಡಲಿಕ್ಕೆಂದು ಹೊರಟಿದ್ದಾನೆ

ಭಾವಾರ್ಥ—ಒಬ್ಬ ಪುರುಷನು ಹಳೆಯದಾದ ತನ್ನ ಗುಡಿಸಲನ್ನು ಬಿಟ್ಟು, ಹೊಸದಾದಂಥ ದೊಡ್ಡ ಮನೆಯೊಂದರಲ್ಲಿ ವಾಸಿಸಲಿಕ್ಕೆ ಹೋಗುವಂಥ ಸಮಯದಲ್ಲಿ ಆ ದಿನವನ್ನು ಬಹು ಆನಂದವೆಂದು ತಿಳಿಯುವನು ಅದೇ ಪ್ರಕಾರ ಈ ಆತ್ಮನು ಸ್ವಸ್ವರೂಪದಲ್ಲಿ ವಿರಾಜಮಾನನಾಗಲಿಕ್ಕೆಂದು ಈ ಜೀರ್ಣವಾದಂಥ ದೇಹರೂಪೀ ಗುಡಿಸಲನ್ನು ಬಿಟ್ಟು ಹೊಸದಾದಂಥ ಇನ್ನೊಂದು ದೇಹರೂಪೀ ಅರಮನೆಯಲ್ಲಿ ನಿಲ್ಲಲಿಕ್ಕೆ ಹೋಗಹತ್ತಿದ್ದಾನೆ. ಅರ್ಥಾತ್ ಈ ದಿವಸವನ್ನು ಅವನು ಅತ್ಯಂತ ಆನಂದದ್ದೆಂದು ತಿಳಿಯಲಿಕ್ಕೆಬೇಕು. ಇದರಲ್ಲಿ ಹಾನಿಯೇನು? ಅದಕ್ಕಾಗಿ ಮೃತ್ಯುವು ಪ್ರಾಪ್ತವಾಯಿತೆಂದು ಹೆದರುವ ಕಾರಣವಿಲ್ಲ ತನ್ನ ಜ್ಞಾಯಕ ಸ್ವಭಾವದಲ್ಲಿ ಸ್ಥಿರವಾಗಿದ್ದು ಪರವಸ್ತುವಿನ ವಿಷಯದಲ್ಲಿ ತನ್ನತನವನ್ನು ಬಿಟ್ಟು ಮೃತ್ಯುವನ್ನು ಹೊಂದಿದರೆ ಪರಲೋಕದಲ್ಲಿ ಸಪ್ತಧಾತು ಹಾಗೂ ಉಪಧಾತುಗಳಿಲ್ಲದ ದಿವ್ಯವಾ-ದಂಥ ವೈಕ್ರಿಯಿಕ ದೇಹವು ಪ್ರಾಪ್ತವಾಗುತ್ತದೆ ಅಲ್ಲದೆ ದೇವಲೋಕದಲ್ಲಿ ಜನ್ಮವಾದೀತು. ಅಲ್ಲದೆ ಅನೇಕ ಋದ್ಧಿಗಳು ಪ್ರಾಪ್ತವಾಗಿ ದೇವತೆಗಳು ನಿಮ್ಮ ಆದರ ಸತ್ಕಾರಗಳನ್ನು ಮಾಡಿಯಾರು. ಇಲ್ಲಿ ಮರಣದ ಹೆದರಿಕೆಯನ್ನು ಇಟ್ಟುಕೊಂಡು ಜ್ಞಾನಸ್ವಭಾವವನ್ನು ಮರೆತು ಬಿಟ್ಟಿದ್ದಾದರೆ ಏಕೇಂದ್ರಿಯಾದಿಕ ಪರ್ಯಾಯಗಳಲ್ಲಿ ಉತ್ಪನ್ನವಾಗಬೇಕಾಗುವುದು. ಮೋಹದಲ್ಲಿ ಪ್ರಾಣೋತ್ಕ್ರಮಣವಾದವರಿಗೂ ಕೂಡ ಇದೇ ಗತಿಯಾಗುತ್ತದೆ. ಆ ಗತಿಗಳಲ್ಲಿ ನಿಮ್ಮ ಜ್ಞಾನವು ನಾಶವಾಗುತ್ತದೆ ನೀವು ಜಡವಾಗಿ ಇರಬೇಕಾಗುತ್ತದೆ. ಒಟ್ಟಿನಲ್ಲಿ ಮಲಿನ ಹಾಗೂ ದುಃಖದಾಯಕ ಶರೀರವನ್ನು ತ್ಯಾಗಮಾಡಿ ಬೇರೊಂದು ನಿರ್ಮಲ ಮತ್ತು ತೇಜಃಪುಂಜ ಶರೀರವನ್ನು ಧಾರಣ ಮಾಡುವದಕ್ಕಾಗಿ ಎಂದು ಹೋಗುವದಿರುವುದೋ ಅಂದು ಮಹಾ ಉತ್ಸವದ ದಿನವೆಂದು ತಿಳಿಯಬೇಕು

ಸುದತ್ತಂ ಪ್ರಾಪ್ಯತೇ ಯಸ್ಮಾತ್ ದೃಶ್ಯತೇ ಪೂರ್ವಸತ್ತಮೈಃ ।
ಭುಜ್ಯತೇ ಸ್ವರ್ಭವಂ ಸೌಖ್ಯಂ ಮೃತ್ಯೋರ್ಭೀತಿಃ ಕುತಃ ಸತಾಮ್ ॥ ೪ ॥

ಅರ್ಥ—ಮೃತ್ಯುವಿನಿಂದ ಉತ್ತಮ ಪ್ರಕಾರದ ಫಲವು ಪ್ರಾಪ್ತವಾಗುತ್ತದೆ. ಸ್ವರ್ಗಲೋಕದೊಳಗಿನ ಸುಖವನ್ನು ಉಪಭೋಗಿಸಲಿಕ್ಕೆ ಸಿಗುತ್ತದೆ ಅಂದ ಮೇಲೆ ಆ ಮೃತ್ಯುವಿನ ಹೆದರಿಕೆಯು ಸತ್ಪುರುಷರಿಗೇನು?—ಎಂದು ಪೂರ್ವಕಾಲದ ಋಷಿ, ಗಣಧರಾದಿ ಮಹಾಪುರುಷರು ಕೇಳುತ್ತಾರೆ

ಭಾವಾರ್ಥ—ನಾವು ಏನಾದರೂ ಈ ಜನ್ಮದಲ್ಲಿ ಸತ್ಕಾರ್ಯಗಳನ್ನು ಮಾಡಿದ್ದರೆ ಅದರ ಫಲವನ್ನು ನಾವು ಮೃತ್ಯುವಿನ ತರುವಾಯವೇ ಭೋಗಿಸುತ್ತೇವೆ ನಾವು ಷಟ್‌ಕಾಯ ಜೀವಗಳಿಗೆ ಅಭಯದಾನ ಕೊಟ್ಟಿರಬಹುದು, ರಾಗದ್ವೇಷ ಕಾಮಕ್ರೋಧಾದಿಗಳನ್ನು ನಷ್ಟಗೊಳಿಸಿ ಅಸತ್ಯ, ಅನ್ಯಾಯ, ವ್ಯಭಿಚಾರ, ಪರಧನ ಹರಣಗಳನ್ನು ತ್ಯಾಗಮಾಡಿದ್ದೇವು; ಕರ್ಮೋದಯದಿಂದ ಪ್ರಾಪ್ತವಾದಷ್ಟರಲ್ಲಿ ಸಂತೋಷದಿಂದ ಇದ್ದು ಇತರ ಆತ್ಮಗಳಿಗೆ ಅಭಯ-ದಾನವನ್ನು ಕೊಟ್ಟಿರಬಹುದು; ಇವೆಲ್ಲವುಗಳ ಫಲಸ್ವರೂಪವಾದ ಸುಖವನ್ನು ಸ್ವರ್ಗಲೋಕದ ಹೊರತಾಗಿ ಇನ್ನೆಲ್ಲಿ ಅನುಭವಿಸಬಲ್ಲೆವು? ಅಂತಲೇ ಸ್ವರ್ಗಲೋಕದೊಳಗಿನ ಸುಖವು ಮೃತ್ಯುವೆಂಬ ಮಿತ್ರನ ಸಹಾವಾಸದಿಂದಲೇ ನಮಗೆ ದೊರೆಯುತ್ತದೆ. ಅದು ಅವನ ಪ್ರಸಾದವಾಗಿದೆ. ಒಟ್ಟಿನಲ್ಲಿ ನಾವಿನಷ್ಟು ಉಪಕಾರ ಮಾಡುವವರು ಈ ಜಗತ್ತಿನಲ್ಲಿ ಬೇರೊಬ್ಬರಾರೂ ಇಲ್ಲ ಮೃತ್ಯುವು ಬೇಗನೆ ಬರದಿದ್ದರೆ ಈ ಹಣ್ಣು ಹಣ್ಣಾದ ಶರೀರದಲ್ಲಿ ಎಂಥೆಂಥ ಕಷ್ಟಗಳನ್ನು ಎಷ್ಟೆಷ್ಟು ದಿನಗಳ ವರೆಗೆ ಅನುಭವಿಸುತ್ತಿರಬೇಕಾಗುವುದೇ ಯಾರಿಗೆ ಗೊತ್ತು? ಅದರಿಂದ ಆರ್ತಧ್ಯಾನ, ರೌದ್ರಧ್ಯಾನಗಳು ಉತ್ಪನ್ನವಾಗಿ ಕೊನೆಗೆ ನರಕಕ್ಕೆ ಹೋಗಬೇಕಾಗುತ್ತದೆ ಈಗ ಮರಣದ ಹೆದರಿಕೆಯನ್ನೂ ದೇಹ, ಕುಟುಂಬ, ಪರಿಗ್ರಹಗಳ ಮೇಲಿನ ಮಮತೆಯನ್ನೂ ಇಟ್ಟು, ಚಿಂತಾಮಣಿ ಕಲ್ಪವೃಕ್ಷಗಳಿಗೆ ಸಮಾನವಾದ ಸಮಾಧಿ ಮರಣದ ತ್ಯಾಗಮಾಡಿ, ಕುಮರಣದಿಂದ ದುರ್ಗತಿಗೆ ಹೋಗುವುದು ಯೋಗ್ಯವಲ್ಲ.

ಆಗರ್ಭಾದ್ದುಃಖಸಂತಪ್ತಃ ಪ್ರಕ್ಷಿಪ್ತೋ ದೇಹಪಂಜರೇ ।
ನಾತ್ಮಾ ವಿಮುಚ್ಯತೇಽನ್ಯೇನ ಮೃತ್ಯುಭೂಮಿಪತಿಂ ವಿನಾ ॥ ೫ ॥

ಅರ್ಥ—ಕರ್ಮವೆಂಬ ವೈರಿಯು ಆತ್ಮನನ್ನು ಶರೀರವೆಂಬ ಪಂಜರದಲ್ಲಿ ಹಿಡಿದು ಹಾಕಿದ್ದಾನೆ ಅದರಿಂದ ಗರ್ಭದಲ್ಲಿ ಜನಿಸಿದಂದಿನಿಂದ ಇಲ್ಲಿಯ ವರೆಗೆ ಒಂದೇ ಸವನೆ ಹಸಿವು, ನೀರಡಿಕೆ, ರೋಗ-ವಿಯೋಗಾದಿ ಅನೇಕ ದುಃಖಗಳಿಂದ ಅವನು ಸಂತಪ್ತನಾಗಿದ್ದಾನೆ. ಇಂಥ ದುಃಖದೊಳಗಿಂದ ಮೃತ್ಯುರೂಪೀ ರಾಜನ ಹೊರತಾಗಿ ಆತ್ಮನನ್ನು ಬೇರೆ ಇನ್ನಾರೂ ಬಿಡಿಸುವಂಥವರಿಲ್ಲ

ಭಾವಾರ್ಥ—ದೇಹವೆಂಬ ಪಂಜರದಲ್ಲಿ ಕರ್ಮವೆಂಬ ಶತ್ರುವು ಹಿಡಿದು ಹಾಕಿದುದರಿಂದ ಇಂದ್ರಿಯಗಳ ಸ್ವಾಧೀನನಾಗಿ ಇಲ್ಲಿಯ ವರೆಗೆ ಅನೇಕ ಕಷ್ಟಗಳನ್ನು ನಾನು ಸಹಿಸಿದೆ. ಹಗಲಿರುಳೂ ಹಸಿವು ನೀರಡಿಕೆಗಳು ತೊಂದರೆಯನ್ನು ಕೊಡುತ್ತಿವೆ ಶ್ವಾಸೋಚ್ಛ್ವಾಸದ ಕ್ರಿಯೆಯಿಂದಲೂ ರೋಗದ ವೇದನೆಯಿಂದಲೂ ಜೀವವು ಯಾವಾಗಲೂ ವ್ಯಾಕುಲವಾಗುತ್ತದೆ. ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿ ಯಾವಾಗಲೂ ಪರತಂತ್ರನಾಗಿ ಸೇವೆಯನ್ನು ಮಾಡುತ್ತ ಅನೇಕ ಪ್ರಕಾರದ ದುಃಖಗಳನ್ನು ಸಹನ ಮಾಡಬೇಕಾಗುತ್ತಿದೆ. ವ್ಯಾಪಾರ ವ್ಯವಹಾರ-ಗಳಲ್ಲಿಯೂ ಇದೇ ಕಷ್ಟ–ನಿಷ್ಠುರಗಳಿವೆ. ಶೀತೋಷ್ಣಗಳ ಬಾಧೆ, ಪೆಟ್ಟು, ನಾವು, ಅಪಮಾನ, ಕಠೋರ ಶಬ್ದಗಳನ್ನು ಕೇಳುವುದು ಮೊದಲಾದವುಗಳನ್ನು ಸಹಿಸಬೇಕಾಗುತ್ತಿದೆ ಮನೆಯೊಳಗಿನ ಜನರ ಪ್ರವೃತಿಯನ್ನು ನೋಡಿ ಅದಕ್ಕನುಸರಿಸಿ ಇರಬೇಕಾಗುತ್ತಿದೆ ದ್ರವ್ಯ, ರಾಜ, ಸ್ತ್ರೀ, ಪುತ್ರ ಇವರ ಆಧೀನನಾಗಿ ಬಾಳಬೇಕಾಗಿದೆ ಹೀಗಾಗಿ ಈ ಶರೀರವೆಂದರೆ ಕೇವಲ ಸೆರೆಮನೆಯಾಗಿದೆ ಇದರೊಳಗಿಂದ ಮೃತ್ಯುವೆಂಬ ಬಲಿಷ್ಠ ರಾಜನ ಹೊರತಾಗಿ ಯಾರು ಬಿಡುಗಡೆಯನ್ನು ಮಾಡಬಲ್ಲರು? ಈ ಶರೀರವನ್ನಾದರೂ ಎಲ್ಲಿಯ ವರೆಗೆ ರಕ್ಷಿಸಬೇಕು? ಹಗಲಿರುಳೂ ಇದರೊಳಗಿಂದ ಮಲ–ಮೂತ್ರಗಳ ಪ್ರವಾಹವು ಹರಿಯುತ್ತಲೇ ಇದೆ ಇದನ್ನು ಎಬ್ಬಿಸು, ಕೂಡ್ರಿಸು, ಉಣಿಸು, ತಿನಿಸು, ನೀರು ಕುಡಿಸು, ಸ್ನಾನ ಮಾಡಿಸು, ಮಲಗಿಸು, ನಿದ್ರೆಮಾಡಗೊಡು, ಕಾಮಾದಿ ವಿಷಯಗಳ ಕಡೆಗೆ ಒಲಿಸು, ಅನೇಕ ಪ್ರಕಾರದ ವಸ್ತ್ರ ಭೂಷಣಗಳಿಂದ ಶೃಂಗರಿಸು, ಯಾವಾಗಲೂ ಇದರ ಸೇವೆಯನ್ನು ಮಾಡುತ್ತ ಮಾಡುತ್ತ ಆತ್ಮನಿಗೆ ಬಹಳ ಕಷ್ಟವನ್ನು ಸಹಿಸಬೇಕಾಗುತ್ತದೆ. ಈ ಶರೀರದಿಂದಲೇ ಆತ್ಮನಿಗೆ ಭಯವೆಂಬುದಿದೆ. ಈ ಶರೀರವೇ ಆತ್ಮನಿಗೆ ಸ್ವಸ್ವರೂಪವನ್ನು ಮರೆಯಿಸುವಂಥದಾಗಿದೆ. ಅಂದಮೇಲೆ ಇಂಥ ಕೃತಘ್ನ ದೇಹದಿಂದ ಬಿಡುಗಡೆಯನ್ನು ಹೊಂದಲಿಕ್ಕೆ ಮೃತ್ಯುರಾಜನ ಸಹಾಯವನ್ನು ತಕ್ಕೊಳ್ಳುವುದೇ ಅತ್ಯವಶ್ಯಕವಾಗಿದೆ

ಸರ್ವದುಃಖಪ್ರದಂ ಪಿಂಡಂ ದೂರೀಕೃತಾತ್ಮದರ್ಶಿಭಿಃ ।
ಮೃತ್ಯುಮಿತ್ರಪ್ರಸಾದೇನ ಪ್ರಾಪ್ಯಂತೇ ಸುಖಸಂಪದಃ ॥ ೬ ॥

ಅರ್ಥ—ಆತ್ಮದರ್ಶಿ ಅಂದರೆ ಆತ್ಮಜ್ಞಾನಿ ಪುರುಷರು ಇವರು ಮೃತ್ಯುವೆಂಬ ಹೆಸರಿನ ಮಿತ್ರನ ಪ್ರಸಾದದಿಂದ ಎಲ್ಲ ಪ್ರಕಾರದ ದುಃಖಗಳನ್ನು ಕೊಡುವಂಥ ಶರೀರದ ಪಿಂಡವನ್ನು ಇಲ್ಲದಂತೆ ಮಾಡಿ, ಸುಖಸಂಪತ್ತನ್ನು ಸಂಪಾದಿಸುತ್ತಾರೆ

ಭಾವಾರ್ಥ—ಯಾರು ಈ ಸಪ್ತಧಾತು ಹಾಗೂ ಉಪಧಾತುಗಳಿಂದ ತುಂಬಿದ, ಅತಿಶಯ ಅಶುದ್ಧ-ವಾದಂಥ ಮತ್ತು ದುಃಖದಾಯಕವಾದ ಶರೀರವನ್ನು ಬಿಟ್ಟು ವೈಕ್ರಿಯಿಕ–ದೇವತ್ವದ–ಶರೀರವನ್ನು ಪ್ರಾಪ್ತ ಮಾಡಿಕೊಳ್ಳುತ್ತಾರೆಯೋ ಅಲ್ಲದೆ ಅನೇಕ ಪ್ರಕಾರದ ಸುಖಗಳನ್ನು ಅನುಭವಿಸುತ್ತಾರೆಯೋ ಅವರಿಗೆಲ್ಲ ಸಮಾಧಿ ಮರಣದಿಂದಲೇ ಅವು ಲಭಿಸಿರುತ್ತವೆ. ಸಮಾಧಿಮರಣಕ್ಕೆ ಸರಿಯಾಗಿ ಈ ಜೀವದ ಮೇಲೆ ಉಪಕಾರ ಮಾಡುವಂಥ ವಸ್ತುವು ಇನ್ನೊಂದಿಲ್ಲ. ಶರೀರದಲ್ಲಿದ್ದು ಅನಂತ ಪ್ರಕಾರದ ದುಃಖಗಳನ್ನು ಸಹನ ಮಾಡುವುದು, ಅನೇಕ ರೋಗಗಳ ವೇದನೆಯನ್ನು ಸಹನ ಮಾಡಿ ಸಾಯುವುದು, ಪುನಃ ಪಶುಯೋನಿಯಲ್ಲಿಯೂ ಇಲ್ಲವೆ ನರಕ ಯೋನಿಯಲ್ಲಿಯೂ ಜನ್ಮಿಸಿ ಅಸಂಖ್ಯಾತ ಕಾಲದವರೆಗೆ ಅನಂತ ದುಃಖಗಳನ್ನೂ ಭೋಗಿಸುವುದು, ಜನ್ಮ ಮರಣ ರೂಪದ ಅನಂತ ಪರಿವರ್ತನಗಳನ್ನು ಹೊಂದುತ್ತಿರುವುದು, ಈ ಪರಿಸ್ಥಿತಿಗಳಲ್ಲಿ ಯಾರೂ ರಕ್ಷಕರು ಇಲ್ಲ ಅಕಸ್ಮಾತ್ತಾಗಿ ಅಶುಭಕರ್ಮದ ಮಂದ ಉದಯದಿಂದ ಮನುಷ್ಯಯೋನಿ, ಉಚ್ಚಕುಲ, ಇಂದ್ರಿಯ ಪರಿಪೂರ್ಣತೆ, ಸತ್ಪುರುಷ ಸಮಾಗಮ, ಭಗವಾನ್ ವೀತರಾಗ ಸರ್ವಜ್ಞನು ವಿವರಿಸಿದ ಶಾಸ್ತ್ರದ ಉಪದೇಶವು ಲಭಿಸಿದಾಗ ಜ್ಞಾನ, ತ್ಯಾಗ ಮತ್ತು ಸಂಯಮದ ಯೋಗದಿಂದ ಕುಟುಂಬ ಪರಿಗ್ರಹಗಳ ಮೇಲಿನ ಮಮತೆಯನ್ನು ಬಿಟ್ಟು ಶರೀರದಿಂದ ಭಿನ್ನವಾದಂಥ ಆತ್ಮನನ್ನು ತಿಳಿಯುವುದು ಮತ್ತು ಜ್ಞಾನ ಸ್ವರೂಪ ಆತ್ಮನ ಅನುಭವವನ್ನು ನಿರ್ಭಯತೆಯಿಂದ ಅನುಭವಿಸುತ್ತಿರುವುದು, ನಾಲ್ಕು ಪ್ರಕಾರದ ಆರಾಧನೆಗಳನ್ನು ಚಿಂತಿಸುತ್ತ ಪ್ರಾಣತ್ಯಾಗ ಮಾಡುವುದು, ಇಂಥ ಅವಸ್ಥೆಯು ಪ್ರಾಪ್ತವಾಯಿತೆಂದರೆ ಮೂರುಲೋಕದಲ್ಲಿ ಮತ್ತು ಮೂರೂ ಕಾಲಗಳಲ್ಲಿ ಈ ಜೀವವು ಸಾರ್ಥಕತೆಯನ್ನು ಹೊಂದಿತು ಒಟ್ಟಿನಲ್ಲಿ ಸಂಸಾರ ಪರಿಭ್ರಮಣದಿಂದ ಮುಕ್ತನಾಗುವುದು ಸಮಾಧಿ ಮರಣವೆಂದು ಹೆಸರಿರುವ ಮಿತ್ರನ ಪ್ರಸಾದವಾಗಿದೆ

ಮೃತ್ಯುಕಲ್ಪದ್ರುಮೇ ಪ್ರಾಪ್ತೇ ಯೇನಾತ್ಮಾರ್ಥೋ ನ ಸಾಧಿತಃ ।
ನಿಮಗ್ನೋ ಜನ್ಮಜಂಬಾಲೇ ಸ ಪಶ್ಚಾತ್ ಕಿಂ ಕರಿಷ್ಯತಿ ॥ ೭ ॥

ಅರ್ಥ—ಮೃತ್ಯುವೆಂಬ ಕಲ್ಪವೃಕ್ಷವೇ ಲಭಿಸಿದಾಗ ಯಾವನು ತನ್ನ ಕಲ್ಯಾಣವನ್ನು ಮಾಡಿಕೊಳ್ಳುವ-ದಿಲ್ಲವೋ ಅವನು ಜನ್ಮ ಮರಣ ರೂಪದ ಸಂಸಾರವೆಂಬ ಕೆಸರಿನಲ್ಲಿ ಸಿಕ್ಕನೆಂದು ತಿಳಿಯಬೇಕು. ಆ ಮೇಲೆ ಅವನೇನು ಮಾಡಬಲ್ಲನು?

ಭಾವಾರ್ಥ—ಮಾನವ ಜನ್ಮದಲ್ಲಿ ಮರಣದ ಸಂಯೋಗವೊಂದು ಸಾಕ್ಷಾತ್ ಕಲ್ಪವೃಕ್ಷವೇ ಇದೆ ನಿಮಗೆ ಏನೇನು ಬೇಡುವ ಇಚ್ಛೆ ಇದೆಯೋ ಅದನ್ನೆಲ್ಲ ಈ ಕಲ್ಪವೃಕ್ಷದಿಂದ ಬೇಡಿ ಪಡೆಯಿರಿ. ಒಂದು ವೇಳೆ ಜ್ಞಾನವನ್ನು ಸಂಪಾದಿಸಿ, ಸ್ವಸ್ವರೂಪವನ್ನು ತಿಳಿದು, ಆರಾಧನೆಗಳನ್ನು ಧಾರಣಮಾಡಿ ಮರಣವನ್ನು ಪ್ರಾಪ್ತಮಾಡಿ-ಕೊಳ್ಳಬೇಕು. ಅಂದರೆ ಸ್ವರ್ಗದಲ್ಲಿ ಮಹಾನ್ ಋದ್ಧಿಧಾರಕ ದೇವ, ಇಂದ್ರ, ಅಹಮಿಂದ್ರರಾಗಿ ಕ್ರಮದಿಂದ ಚಕ್ರವರ್ತಿ ಪದ ಮತ್ತು ತೀರ್ಥಂಕರ ಪದವಿಗಳನ್ನು ಧಾರಣ ಮಾಡಿ ಮೋಕ್ಷಕ್ಕೆ ಹೋದೀರಿ. ಮರಣದಂಥ ಇನ್ನೊಬ್ಬ ದಾತೃವು ಮೂರು ಲೋಕದಲ್ಲಿಯೂ ಇಲ್ಲ ಇಂಥ ದಾನಶೂರನು ಲಭಿಸಿದ್ದರೂ ಸಹ ವಿಷಯ ಕಷಾಯದ ಇಚ್ಛೆಯನ್ನು ಮಾಡಿದ್ದಾದರೆ ಅದರಿಂದ ನರಕ ನಿಗೋದವು ಪ್ರಾಪ್ತವಾದೀತು ಮರಣರೂಪೀ ಕಲ್ಪವೃಕ್ಷವನ್ನು ಹಾಳುಮಾಡೀತು ಹೀಗೆ ಆದಲ್ಲಿ ನಿಮ್ಮ ಜ್ಞಾನರೂಪೀ ಅಕ್ಷಯ ಭಂಡಾರವು ಇಲ್ಲದಂತೆ ಆಗಿ, ಚಿರಕಾಲ ಸಂಸಾರದಲ್ಲಿ ಭ್ರಮಣ ಮಾಡೀರಿ. ಇಚ್ಛಾವಶರಾಗಿ ನೀವು ಮೋಸಗಾರರ ಸಂಗತಿಯನ್ನು ಮಾಡಿದರೆ ಅತಿಶಯ ಲೋಭದಿಂದ ವಿಷಯೋಪಭೋಗಗಳು ಲಭಿಸಬೇಕೆಂದೂ ದ್ರವ್ಯ ಪ್ರಾಪ್ತಿಗಾಗಿಯೂ ಹಿಂಸೆ, ಮೋಸ, ಸುಳ್ಳು, ಕಳವು, ವ್ಯಭಿಚಾರ ಮತ್ತು ಅಪರಿಮಿತ ಪರಿಗ್ರಹ ಇವುಗಳಲ್ಲಿ ಆಸಕ್ತರಾಗಿ, ಅತಿನಿಂದ್ಯ ಕರ್ಮಗಳನ್ನು ಮಾಡಲಿಕ್ಕೆ ಉದ್ಯುಕ್ತರಾದಲ್ಲಿ ಅದರಿಂದ ನಿಮ್ಮ ಇಚ್ಛೆಗನುಸರಿಸಿ ಫಲಪ್ರಾಪ್ತಿಯು ಆಗದೆ ತಿರುಗಿ ತೀವ್ರ ಕ್ಲೇಶದಿಂದ ಮರಣವು ಆದೀತು ಇಷ್ಟೆಲ್ಲ ಆಗಿಯೂ ಕೂಡ ನಿಮ್ಮ ಇಚ್ಛೆಯಂತೆ ಫಲವು ಪ್ರಾಪ್ತವಾಗುವುದೆ? ಇಲ್ಲ ತಿರುಗಿ ಎಲ್ಲ ವೇಳೆಯು ಆರ್ತಧ್ಯಾನದಲ್ಲಿ ಹೋಗಿ ದುಃಖವನ್ನು ಸಹನಮಾಡುತ್ತ ಇರಬೇಕಾಗುತ್ತದೆ. ಕುಟುಂಬದೊಳಗಿನ ಎಲ್ಲ ಮನುಷ್ಯರನ್ನೂ ಬಿಟ್ಟು ದ್ರವ್ಯದ ಆಶೆಯಿಂದ ದೇಶ-ವಿದೇಶಗಳಲ್ಲಿ ಭ್ರಮಣ ಮಾಡಬೇಕಾಗುತ್ತದೆ. ಅನೇಕ ಪ್ರಕಾರದ ಲೋಕನಿಂದ್ಯ ಆಚರಣೆಯನ್ನು ಮಾಡಬೇಕಾಗುತ್ತದೆ. ಇದಕ್ಕಿಂತ ಒಮ್ಮೆ ಮಾತ್ರ ಸಮತೆಯನ್ನು ಧಾರಣಮಾಡಿ ವ್ರತ, ತಪ, ಸಂಯಮಗಳಿಂದ ಕೂಡಿ ಮರಣವನ್ನು ಹೊಂದಿದರೆ ಪುನಃ ಸಂಸಾರ ಪರಿಭ್ರಮಣದ ತೊಂದರೆಯೇ ಇರುವದಿಲ್ಲ. ಅವಿನಾಶಿ ಮೋಕ್ಷ ಸುಖವು ಲಭಿಸುತ್ತದೆ ಅದಕ್ಕಾಗಿ ಜ್ಞಾನಯುಕ್ತ ಸಮಾಧಿ ಮರಣವನ್ನು ಸಾಧಿಸುವುದೇ ಯೋಗ್ಯವಾಗಿದೆ.

ಜೀರ್ಣಂ ದೇಹಾದಿಕಂ ಸರ್ವಂ ನೂತನಂ ಜಾಯತೇ ಯತಃ ।
ಸ ಮೃತ್ಯುಃ ಕಿಂ ನ ಮೋದಾಯ ಸತಾಂ ಸಾತೋತ್ಥಿತಿರ್ಯಥಾ ॥ ೮ ॥

ಅರ್ಥ—ಯಾವ ಮೃತ್ಯುವಿನಿಂದ ಹಳೆಯದಾದ ದೇಹ ಮೊದಲಾದವೆಲ್ಲವೂ ಇಲ್ಲದಂತಾಗಿ ಹೊಸವು ಪ್ರಾಪ್ತವಾಗುತ್ತವೆಯೋ ಆ ಮೃತ್ಯುವಿಗೆ ಸತ್‌ಪುರುಷರು ಸಾತಾ ಕರ್ಮದ ಉದಯದ ಹಾಗೆ ಆನಂದದಾಯಕವೆಂದು ಭಾವಿಸದೆ ಇರುವರೆ? ಜ್ಞಾನಿ ಪುರುಷರಿಗೆ ಮರಣವು ಒದಗಿದಾಗ ಆನಂದವೇ ಎನಿಸುತ್ತದೆ

ಭಾವಾರ್ಥ—ಮನುಷ್ಯನ ಶರೀರವು ಪ್ರತಿಯೊಂದು ಕ್ಷಣಕ್ಕೂ ಜೀರ್ಣವಾಗುತ್ತಿದೆ. ದೇವತೆಗಳ ಶರೀರದಂತೆ ಇದಕ್ಕೆ ವೃದ್ಧತ್ವವು ತಪ್ಪಿಲ್ಲ ಪ್ರತಿ ದಿನಕ್ಕೂ ಇದರ ಶಕ್ತಿಯು ಕಡಿಮೆಯಾಗುತ್ತಿದ್ದು ಕಾಂತಿ ಹಾಗೂ ಸ್ವರೂಪಗಳು ಮಲಿನಗೊಳ್ಳುತ್ತಿವೆ ದಿನದಿನಕ್ಕೂ ಈ ಶರೀರದೊಳಗಿನ ಸೂಕ್ಷ್ಮತೆಯೂ ಕಡಿಮೆಯಾಗುತ್ತಿದೆ ಎಲ್ಲ ಸ್ನಾಯುಗಳ ಬಂಧನಗಳು ಶಿದಿಲಗೊಳ್ಳುತ್ತಿವೆ ತೊಗಲಿನ ಮೇಲೆ ಮಡಿಕೆಗಳು ಬೀಳುತ್ತಿವೆ. ಅದು ಜೋಲು ಬೀಳುತ್ತಿದೆ ಶರೀರದೊಳಗಿನ ಮಾಂಸವು ಮೇಲಿಂದ ಮೇಲೆ ಕಡಿಮೆಯಾಗುತ್ತಲಿದೆ. ಕಿವಿಯ ಶ್ರವಣ ಮಾಡುವ ಶಕ್ತಿಯು ಕಡಿಮೆಯಾಗುತ್ತಲಿದೆ ನಡೆಯುವ ಶಕ್ತಿಯೂ ಕಡಿಮೆಯಾಗಲಿದೆ ಕೂಡ್ರುವಾಗ, ಏಳುವಾಗ, ನಡೆಯುವಾಗ ಮೇಲಿಂದ ಮೇಲೆ ದಣಿವು ಉಂಟಾಗುತ್ತದೆ ಮೇಲಿಂದ ಮೇಲೆ ಕಫದ ವೃದ್ಧಿಯಾಗುತ್ತಿದೆ. ಅನೇಕ ಹೊಸ ರೋಗಗಳು ಉತ್ಪನ್ನವಾಗುತ್ತಿವೆ ಈ ಪ್ರಕಾರ ನಿತ್ಯವೂ ಜೀರ್ಣವಾಗುತ್ತಿರುವ ದೇಹವು ನಾಶವಾದ

ದುಃಖವನ್ನೇಕೆ ಮಾಡಬೇಕು? ಇಂಥ ಜೀರ್ಣ ದೇಹವನ್ನು ಇಟ್ಟುಕೊಂಡು ಅದರಿಂದ ದುಃಖವನ್ನು ಎಷ್ಟು ಕಾಲದ ವರೆಗೆ ಭೋಗಿಸುತ್ತಿರುವುದು? ಈ ಶರೀರವು ಇಂಥ ಸ್ಥಿತಿಯಲ್ಲಿ ಎಷ್ಟು ಕಾಲದ ವರೆಗೆ ಹೀಗೆಯೇ ನಣ್ಣಾಗುತ್ತ ಇರುವುದು ಯಾರಿಗೆ ಗೊತ್ತು? ಅಂದ ಮೇಲೆ ಈ ಎಲ್ಲ ದುಃಖದೊಳಗಿಂದ ಬಿಡುಗಡೆಯನ್ನು ಹೊಂದಿಸಲಿಕ್ಕೆ ಮರಣದಂಥ ಉದಾರ ದಾತೃವಿನ ಹೊರತಾಗಿ ಇನ್ನಾರು ಸಮರ್ಥರಿದ್ದಾರೆ? ಸಂಪೂರ್ಣವಾಗಿ ನಿಂದ್ಯವಾದಂಥ ಶರೀರದಲ್ಲಿ ವಾಸ ಮಾಡಬೇಕಾದುದರಿಂದ ಅಸಾತಾ ಕರ್ಮದ ಉದಯವಾಗಿ ದುಃಖವು ಉತ್ಪನ್ನವಾಗುತ್ತದೆ ಈ ಎಲ್ಲ ದುಃಖಗಳು ಮರಣವು ಪ್ರಾಪ್ತವಾದರೇನೇ ಇಲ್ಲದಂತಾಗುತ್ತವೆ. ಈ ದೃಷ್ಟಿಯಿಂದ ಸಮ್ಯಗ್ಜ್ಞಾನಿ ಪುರುಷನಿಗೆ ಮೃತ್ಯುವು ಒದಗಿದಾಗ ಅತಿಶಯ ಹರ್ಷವಾಗುತ್ತದೆ. ಅವನು ಅದರ ಲಾಭವನ್ನು ಹೊಂದಲು ಬಯಸುತ್ತಾನೆ. ತಾನು ವ್ರತ, ಶೀಲ, ಸಂಯಮ ಮೊದಲಾದ ತಪಶ್ಚರಣಗಳಿಂದ ಸಾವಧಾನತೆಯಿಂದ ಇದ್ದು ಈ ಮರಣ ಸಂದರ್ಭದ ಸದುಪಯೋಗ ಮಾಡಿಕೊಂಡಲ್ಲಿ ತಿರುಗಿ ತನಗೆ ಈ ಸಂಸಾರದ ದುಃಖಗಳೇ ಇಲ್ಲವೆಂದು ಅವನು ಅರಿತಿರುತ್ತಾನೆ. ಅಲ್ಲದೆ ಪುನಃ ಈ ದೇಹಧಾರಣೆಯೂ ಇಲ್ಲವೆಂಬುದು ಅವನಿಗೆ ಗೊತ್ತಿರುತ್ತದೆ. ಒಟ್ಟಿನಲ್ಲಿ ಸಮ್ಯಗ್ಜ್ಞಾನಿ ಪುರುಷನು ಮರಣಕ್ಕೇನೇ ಸಾತಾ ಕರ್ಮದ ಉದಯವೆಂದು ಮನ್ನಿಸುತ್ತಾನೆ.

ಸುಖಂ ದುಃಖಂ ಸದಾ ವೇತ್ತಿ ದೇಹಸ್ಥಶ್ಚ ಸ್ವಯಂ ವ್ರಜೇತ್ ।
ಮೃತ್ಯುಭೀತಿಸ್ತದಾ ಕಸ್ಯ ಜಾಯತೇ ಪರಮಾರ್ಥತಃ ॥ ೯ ॥

ಅರ್ಥ—ಈ ಆತ್ಮನು ಶರೀರದಲ್ಲಿ ಇದ್ದೂ ಸಹ ಸುಖ ದುಃಖಗಳನ್ನು ಯಾವಾಗಲೂ ತಿಳಿಯುತ್ತಿರುತ್ತಾನೆ. ಅಲ್ಲದೆ ಪರಲೋಕದಲ್ಲಿಯೂ ಸ್ವತಃ ಗಮನಮಾಡುತ್ತಾನೆ. ಅಂದಮೇಲೆ ಪರಮಾರ್ಥ ದೃಷ್ಟಿಯಿಂದ ನೋಡಿದರೆ ಮರಣದ ಭಯವು ಯಾರಿಗೆ ಇರುತ್ತದೆ ಹೇಳಿರಿ ನೋಡೋಣ?

ಭಾವಾರ್ಥ—ಅಜ್ಞಾನೀ ಜೀವಗಳ ತಿಳುವಳಿಕೆಯು ದೇಹ ಹಾಗೂ ಆತ್ಮಗಳು ಭಿನ್ನವೆಂದು ಇರುವದಿಲ್ಲ. ಇಂಥ ಜೀವಗಳಿಗೆ ಆಗಮಗಳಲ್ಲಿ ಬಹಿರಾತ್ಮರೆಂದು ಹೇಳಿದೆ. ಬಹಿರಾತ್ಮರಾದ ಜೀವಗಳು ಸ್ವತಃ ತಾವು ದುಃಖಿ, ತಾವು ಹಸಿದವರು, ನೀರಡಿಸಿದವರು, ನಾಯುವಂಥವರು ಎಂದು ತಿಳಿದುಕೊಳ್ಳುತ್ತವೆ. ಇದಕ್ಕೆ ವಿರುದ್ಧವಾಗಿ ಅಂತ-ರಾತ್ಮರಾದಂಥ ಸಮ್ಯಗ್ಜ್ಞಾನಿ ಜೀವಗಳು ಯಾವುದು ಉತ್ಪನ್ನವಾಗಿದೆಯೋ ಅದು ಅವಶ್ಯವಾಗಿ ನಾಯುವಂಥದೆಂದು ತಿಳಿದಿರುತ್ತವೆ. ಪೃಥ್ವಿ, ಜಲ, ಅಗ್ನಿ, ವಾಯು ಈ ನಾಲ್ಕರಿಂದ ಉತ್ಪನ್ನವಾದಂಥ ಪುದ್ಗಲ ಪಿಂಡವು ಅವಶ್ಯವಾಗಿ ಎಂದಾದರೂ ನಾಶವಾಗತಕ್ಕುದೇ. ನಾನು ಜ್ಞಾನಸ್ವರೂಪಿ, ಅಮೂರ್ತಿಕನಿರುವುದರಿಂದ ನಾನೆಂದೂ ನಾಶ-ಹೊಂದಲಾರೆ. ಹಸಿವು-ನೀರಡಿಕೆ, ವಾತ, ಪಿತ್ತ, ಕಫಾದಿಗಳ ವೇದನೆಯು ಪುದ್ಗಲಕ್ಕೆ ಆಗುತ್ತಿರುತ್ತದೆ. ನಾನು ಆತ್ಮಾ—ಕೇವಲ ಇವುಗಳನ್ನು ಅಂದರೆ ಸುಖ ದುಃಖಗಳನ್ನು ತಿಳಿಯುವವನಾಗಿದ್ದೇನೆ. ಹೀಗಿದ್ದೂ ಈ ಸುಖ-ದುಃಖಗಳ ವಿಷಯದಲ್ಲಿ ವಿನಾಕಾರಣ ಅಹಂಕಾರವನ್ನು ಹೊಂದುತ್ತಿರುವೆ ಶರೀರ ಹಾಗೂ ಆತ್ಮಗಳು ಒಂದೇ ಸ್ಥಳದಲ್ಲಿ ಇರುತ್ತಿದ್ದರೂ ಆತ್ಮನ ಸ್ವರೂಪವು 'ಜ್ಞಾನ'ವಾಗಿದ್ದು ಪುದ್ಗಲದ ಸ್ವರೂಪವು 'ಜಡ'ವಾಗಿದೆ. ಆತ್ಮನು ಅಮೂರ್ತಿಕ, ದೇಹ ಮೂರ್ತಿಕ, ಆತ್ಮನು ಅಖಂಡ ಮತ್ತು ಒಂದು, ಶರೀರವು ಅನೇಕ ಪರಮಾಣುಗಳ ಪಿಂಡ ಸೇರಿ ಆದುದು, ಆತ್ಮನು ಅವಿನಾಶಿ, ದೇಹವು ನಾಶವಂತ; ಶರೀರದಲ್ಲಿ ಯಾವ ರೋಗ, ಹಸಿವು, ನೀರಡಿಕೆಗಳ ವಿಕಾರವು ಉತ್ಪನ್ನವಾಗುವುದೋ ಅವುಗಳ ಜ್ಞಾನವು ಮಾತ್ರ ಆತ್ಮನಿಗೆ ಆಗುತ್ತದೆ. ಯಾಕಂದರೆ ಆತ್ಮನು ಜ್ಞಾಯಕ ಸ್ವಭಾವ ಉಳ್ಳವನು. ಇದಕ್ಕೆ ವಿರೋಧವಾಗಿ ಪರಪದಾರ್ಥಗಳ ಮೇಲೆ ಮಮತ್ವವನ್ನು ಇಡುವುದು ಅಜ್ಞಾನವಾಗಿದೆ. ಇದಕ್ಕೇನೇ ಮಿಥ್ಯಾತ್ವವೆಂದೂ ಹೇಳಲಾಗುತ್ತದೆ ನಾವು ಒಂದು ಮನೆಯನ್ನು ಬಿಟ್ಟು ಇನ್ನೊಂದು ಮನೆಗೆ ನಿಲ್ಲಲಿಕ್ಕೆ ಹೋಗುತ್ತೇವೆ. ಹಾಗೆಯೇ ಶುಭಾಶುಭ ಕರ್ಮದಿಂದ ರೂಪುಗೊಂಡ ಇನ್ನೊಂದು ಶರೀರದಲ್ಲಿ ಆತ್ಮನಿಗೆ ಹೋಗಬೇಕಾಗಿದೆ. ಇದರಲ್ಲಿ ಅವನ ಸ್ವರೂಪವು ನಾಶವಾಗುವದಿಲ್ಲ ಅದರಿಂದ ಮರಣದ ಭೀತಿಯನ್ನು ತಾಳುವ ಅವಶ್ಯಕತೆಯು ಇಲ್ಲ.

ಸಂಸಾರಾಸಕ್ತಚಿತ್ತಾನಾಂ ಮೃತ್ಯುರ್ಭೀತ್ಯೈ ಭವೇನ್ನೃಣಾಮ್ ।
ಮೋದಾಯತೇ ಪುನಃ ಸೋಽಪಿ ಜ್ಞಾನವೈರಾಗ್ಯವಾಸಿನಾಮ್ ॥ ೧೦ ॥

ಅರ್ಥ—ಯಾರ ಮನಸ್ಸು ಸಂಸಾರದಲ್ಲಿ ಮಗ್ನವಾಗಿರುವುದೋ ಮತ್ತು ಯಾರು ತಮ್ಮ ಸ್ವರೂಪವನ್ನು ತಿಳಿದಿರುವದಿಲ್ಲವೋ ಅವರೇ ಮೃತ್ಯುವಿಗೆ ಹೆದರುತ್ತಾರೆ ಆದರೆ ಯಾರಿಗೆ ನಿಜ ಸ್ವರೂಪದ ಜ್ಞಾನವಾಗಿರುವುದೋ

ಮತ್ತು ಯಾರು ಸಂಸಾರದೊಳಗಿನ ಅವಸ್ಥೆಯನ್ನು ನೋಡಿ, ಅದರಿಂದ ವೈರಾಗ್ಯವನ್ನು ಹೊಂದಿದವರಿರುವರೋ ಅವರಿಗೆ ಮೃತ್ಯುವು ಆನಂದದಾಯಕವೆನಿಸುತ್ತದೆ.

ಭಾವಾರ್ಥ—ಮಿಥ್ಯಾದರ್ಶನದ ಉದಯದಿಂದ ಯಾರಿಗೆ ಆತ್ಮಜ್ಞಾನವು ಆಗುವದಿಲ್ಲವೋ ಅವರು ಶರೀರವೇ ತಾನೆಂದು ತಿಳಿದು ತಿನ್ನುವುದು, ಕುಡಿಯುವುದು, ಕಾಮಭೋಗ ಸೇವಿಸುವುದು, ಇಂದ್ರಿಯಗಳ ವಿಷಯದಲ್ಲಿ ರಮಮಾಣನಾಗುವುದು ಇವುಗಳಲ್ಲಿಯೇ ಸುಖವನ್ನು ಕಾಣುತ್ತಾನೆ ಇವರಿಗೆ ಬಹಿರಾತ್ಮಾ ಜೀವಗಳೆನ್ನಬೇಕು. ಇಂಥ ಜೀವಗಳಿಗೆ ಮರಣದ ಹೆದರಿಕೆಯು ಬಹಳವಿರುತ್ತದೆ ಅವರಿಗೆ ಹೀಗೆನಿಸುತ್ತದೆ—'ಇನ್ನು ನನ್ನ ನಾಶವಾಗುವುದು. ಇನ್ನು ಮುಂದೆ ನನಗೆ ತಿನ್ನಲಿಕ್ಕೆ ಕುಡಿಯಲಿಕ್ಕೆ ಎಲ್ಲಿಂದ ಸಿಕ್ಕೀತು? ಮರಣದ ನಂತರ ನನ್ನ ಸ್ಥಿತಿಯು ಏನಾದೀತು? ಯಾರಿಗೆ ಗೊತ್ತು! ಸಾಯುವಾಗ ಏನೇನು ದುಃಖ ಉಂಟಾಗುತ್ತದೆ ಯಾರಿಗೆ ಗೊತ್ತು!! ಇನ್ನು ಮುಂದೆ ನನಗೆ ಈ ಕುಟುಂಬದೊಳಗಿನ ಎಲ್ಲ ಜನರ ಸಹವಾಸವು ಇಲ್ಲದಂತಾಗುವುದು! ಇನ್ನು ಯಾರಿಗೆ ಶರಣು ಹೋಗಲಿ? ಇವರಲ್ಲಿ ಯಾರು ನನ್ನನ್ನು ಕಾಯುವವರಿದ್ದಾರೆ?' ಈ ಪ್ರಕಾರ ಅತಿಶಯ ದುಃಖಮಾಡಿ ಅವನು ಮರಣ ಹೊಂದುತ್ತಾನೆ. ಆದರೆ ಆತ್ಮಜ್ಞಾನಿಯು ಇಂಥ ಪ್ರಸಂಗದಲ್ಲಿ ಹೀಗೆ ವಿಚಾರಿಸುತ್ತಾನೆ—"ನಮ್ಮ ಆತ್ಮವು ಶರೀರವೆಂಬ ಸೆರೆಮನೆಯಲ್ಲಿ ಸಿಕ್ಕು ಒದ್ದಾಡುತ್ತಿದೆ ಇಂದ್ರಿಯಗಳ ವಿಷಯರೂಪ ಅಗ್ನಿಯಿಂದ ಪ್ರಾಪ್ತವಾಗುವ ವಿಷಯ ಭೋಗಗಳಿಂದ ಅದರ ತೃಪ್ತಿಯು ಆಗುವದಿಲ್ಲ. ನಿತ್ಯವೂ ಹಸಿವು, ನೀರಡಿಕೆ, ಚಳಿ, ಉಷ್ಣ, ರೋಗ ಮೊದಲಾದವುಗಳಿಂದ ಉತ್ಪನ್ನವಾಗುವ ವೇದನೆಯಿಂದ ಒಂದು ಕ್ಷಣವೂ ಕೂಡ ಇದಕ್ಕೆ ಸ್ಥಿರತೆಯು ಪ್ರಾಪ್ತವಾಗುವದಿಲ್ಲ. ಪರಾಧೀನತೆಯಿಂದ ಇಲ್ಲಿಯ ವರೆಗೆ ಇದು ಅಪಮಾನದಂಥ ದುಃಖವನ್ನು ತಾಳಿಕೊಂಡಿತು. ಅನಿಷ್ಟ ಯೋಗದಿಂದ ಆಗುವ ದುಃಖವನ್ನು ಭೋಗಿಸಿತು. ಆ ದುಃಖದಲ್ಲಿಯೇ ತನ್ನ ಸರ್ವಕಾಲವನ್ನು ಪೂರ್ಣ ಮಾಡಿತು. ತನ್ನನ್ನು ದುಃಖದೊಳಗಿಂದ ಇಲ್ಲವೆ ಪರಾಧೀನತೆಯೊಳಗಿಂದ ಮುಕ್ತಗೊಳಿಸಿ ತನ್ನ ಅನಂತ ಸುಖಸ್ವರೂಪ, ಜನ್ಮಮರಣರಹಿತ, ಅವಿನಾಶಿಯಾದ ಮೋಕ್ಷಸ್ಥಾನಕ್ಕೆ ಒಯ್ದು ಮುಟ್ಟಿಸುವುದು ಮರಣವೇ ಆಗಿದೆ ಇಂಥ ಕಾಲವು ಸಮೀಪ ಬಂದಾಗ ದುಃಖವನ್ನು ಏಕೆ ಮಾಡಬೇಕು? ಈ ಮರಣವು ಅತಿಶಯ ಸುಖವನ್ನು ಕೊಡುವಂಥದಿದೆ. ಅಲ್ಲದೆ ಬಹಳ ಉಪಕಾರಿಯೂ ಇದೆ ಈ ಸಂಸಾರದಲ್ಲಿರುವುದು ಕೇವಲ ದುಃಖದಾಯಕವಾಗಿದೆ ಇಂಥ ಸಂಸಾರದಲ್ಲಿ ಸಮಾಧಿ ಮರಣವು ಒಂದೇ ಶರಣುಹೋಗಲಿಕ್ಕೆ ಯೋಗ್ಯವಾಗಿದೆ. ಇದನ್ನುಳಿದು ದುಃಖಿತರನ್ನು ರಕ್ಷಿಸುವುದಕ್ಕೆ ಇನ್ನಾವ ಸ್ಥಾನವೂ ಇಲ್ಲ ಇದು ಇಲ್ಲಿಯ ವರೆಗೆ ಪ್ರಾಪ್ತವಾಗಲಿಲ್ಲೆಂದು ಚತುರ್ಗತಿಯಲ್ಲಿ ಭ್ರಮಣ ಮಾಡಬೇಕಾಯಿತು. ಈಗ ಸಂಸಾರದಿಂದ ವೈರಾಗ್ಯವು ಪ್ರಾಪ್ತವಾಗಿದೆ ಅಂದ ಮೇಲೆ ನಾನೀಗ ಸಮಾಧಿ ಮರಣಕ್ಕೇನೇ ಶರಣು ಹೋಗುವೆ"

ಪುರಾಧೀಶೋ ಯದಾ ಯಾತಿ ಸುಕೃತಸ್ಯ ಬುಭುತ್ಸಯಾ ।
ತದಾಸೌ ವಾರ್ಯತೇ ಕೇನ ಪ್ರಪಂಚೈಃ ಪಾಂಚಭೌತಿಕೈಃ ॥ ೧೧ ॥

ಅರ್ಥ—ಯಾವ ಹೊತ್ತಿನಲ್ಲಿ ಈ ಆತ್ಮನು ತಾನು ಮಾಡಿದ ಸುಕೃತದ ಫಲವನ್ನು ಭೋಗಿಸುವ ಇಚ್ಛೆಯಿಂದ ಪರಲೋಕದಲ್ಲಿ ಹೋಗುತ್ತಾನೆಯೋ ಆಗ ಪಂಚ ಮಹಾಭೂತಾತ್ಮಕ ಶರೀರ ಮೊದಲಾದವುಗಳಲ್ಲಿ ಯಾವುದು ಆತ್ಮನನ್ನು ಪ್ರತಿಬಂಧಿಸುವುದು?

ಭಾವಾರ್ಥ—ಜೀವದ ಆಯುಷ್ಯವು ಮುಗಿದ ಮೇಲೆ ಆತ್ಮನಿಗೆ ಪರಲೋಕಕ್ಕೆ ಹೋಗುವ ಕಾಲವು ಸನ್ನಿಹಿತವಾಗುತ್ತದೆ. ಆಗ ಶರೀರಾದಿ ಪಂಚ ಮಹಾಭೂತಾತ್ಮಕ ಪದಾರ್ಥಗಳನ್ನು ಆತ್ಮನನ್ನು ತಡೆಯಲಾರವು ಅದಕ್ಕಾಗಿಯೇ ಬಹಳ ಹರ್ಷದಿಂದ ನಾಲ್ಕು ಆರಾಧನೆಗಳಿಗೆ ಶರಣು ಹೋಗಿ ಸಾಯಬೇಕು ಇದು ಉತ್ತಮವಾಗಿದೆ

ಮೃತ್ಯುಕಾಲೇ ಸತಾಂ ದುಃಖಂ ಯದ್ಭವೇದ್ವ್ಯಾಧಿಸಂಭವಮ್ ।
ದೇಹಮೋಹವಿನಾಶಾಯ ಮನ್ಯೇ ಶಿವಸುಖಾಯ ಚ ॥ ೧೨ ॥

ಅರ್ಥ—ಮೃತ್ಯುವು ಪ್ರಾಪ್ತವಾದಾಗ ಪೂರ್ವ ಕರ್ಮೋದಯದಿಂದ ರೋಗಾದಿಗಳು ಉತ್ಪನ್ನವಾಗುತ್ತವೆ ಅವು ಸತ್ಪುರುಷರಿಗೆ ಶರೀರದ ಮೇಲಿನ ಪ್ರೇಮವನ್ನು ಇಲ್ಲದಂತೆ ಮಾಡಿ ಮೋಕ್ಷ ಸುಖವನ್ನು ಒದಗಿಸುವದಕ್ಕಾಗಿಯೇ ಉಂಟಾಗುತ್ತವೇನೋ ಎಂದು ನನಗೆ ಎನಿಸುತ್ತದೆ.

ಭಾವಾರ್ಥ—ಈ ಜೀವವು ಜನ್ಮ ತಕ್ಕೊಂಡ ಕ್ಷಣದಿಂದಲೂ ಈ ಶರೀರದಲ್ಲಿ ತನ್ಮಯನಾಗಿ ಅದರಲ್ಲಿ ವಾಸಮಾಡಿದ್ದಾನೆ. ಶರೀರದ ಹೊರತಾಗಿ ವಾಸಮಾಡಲಿಕ್ಕೆ ಇನ್ನೊಂದು ಸ್ಥಾನವಿಲ್ಲೆಂದು ಅವನಿಗೆ ಎನಿಸಿದೆ ಈಗ ಇಂಥ ಶರೀರದಲ್ಲಿ ರೋಗವು ಉತ್ಪನ್ನವಾಗಿ ದುಃಖವು ಉಂಟಾಗ ಹತ್ತಿತೆಂದರೆ ಸತ್ಪುರುಷರಿಗೆ ಇದು ತನ್ನ ನಿಜವಾದ ನಿವಾಸಸ್ಥಾನವು ಅಲ್ಲವೆಂದು ಎನಿಸ ಹತ್ತುವುದು ಅದರಿಂದ ಅವನು ಅದರ ಮೇಲಿನ ಮೋಹವನ್ನು ಬಿಟ್ಟು ಬಿಡುವನು. ದೇಹದ ಪ್ರತ್ಯಕ್ಷ ದುಃಖಕೊಡುವ ಸ್ಥಿತಿ, ನಾಶವಾಗುವಂಥ ಸ್ವಭಾವ, ಕೃತಘ್ನತನಗಳು ಅವನಿಗೆ ಕಂಡುಬರುತ್ತವೆ ಅದರಿಂದ ಅವನು ಅವಿನಾಶಿಪದವನ್ನು ಪ್ರಾಪ್ತಮಾಡಿಕೊಳ್ಳುವ ಉದ್ಯೋಗದಲ್ಲಿ ತೊಡಗುವನು ಅವನಿಗೆ ಕೂಡಲೆ ಎಲ್ಲ ಐಹಿಕ ಪದಾರ್ಥಗಳ ವಿಷಯದಲ್ಲಿ ವೈರಾಗ್ಯವು ಹುಟ್ಟುತ್ತದೆ ಅವನು ಹೀಗೆ ವಿಚಾರಿಸ ಹತ್ತುವನು "ಇಲ್ಲಿಯ ವರೆಗೆ ಈ ಶರೀರದ ಮೇಲೆ ಮಮತೆಯನ್ನು ಇಟ್ಟು ಅನಂತ ಜನ್ಮ-ಮರಣ, ಸಂಯೋಗ ವಿಯೋಗ, ರೋಗಸಂತಾಪ ಇತ್ಯಾದಿ ದುಃಖಗಳನ್ನು ಭೋಗಿಸಿದೆ ನರಕವನ್ನು ಅನುಭವಿಸಿದೆ. ಪುನಃ ಇದೇ ದುಃಖದಾಯಕ ಶರೀರದ ಮೇಲೆ ಪ್ರೀತಿಯನ್ನು ಮಾಡಿ ಸ್ವಸ್ವರೂಪವನ್ನು ಮರೆತು ಏಕೇಂದ್ರಿಯವೇ ಮೊದಲಾದ ಕುಯೋನಿಗಳಲ್ಲಿ ಭ್ರಮಣ ಮಾಡಲಿಕ್ಕೆ ಕಾರಣೀಭೂತವಾದಂಥ ಕರ್ಮವನ್ನು ಸಂಪಾದಿಸುವುದು ಯೋಗ್ಯವಲ್ಲ. ಈಗ ಈ ಶರೀರದಲ್ಲಿ ಜ್ವರ, ಶ್ವಾಸ, ಕೆಮ್ಮು, ಶೂಲಿ, ವಾತ, ಪಿತ್ತ, ಅತಿಸಾರ, ಮಂದಾಗ್ನಿ ಮೊದಲಾದ ರೋಗಗಳು ಹುಟ್ಟಿವೆ ಇವುಗಳ ಉಪಯೋಗವು ಶರೀರದ ಮೇಲಿನ ಮೋಹವು ಕಡಿಮೆ ಮಾಡುವುದರ ಕಡೆಗೆ ಆದೀತು. ಇವುಗಳಿಂದ ಧರ್ಮದ ವಿಷಯದಲ್ಲಿ ಸಾವಧಾನತೆಯು ಉತ್ಪನ್ನವಾದೀತು ಶರೀರದಲ್ಲಿ ಈ ರೋಗಗಳು ಉತ್ಪನ್ನವಾಗದೆ ಇದ್ದರೆ ನನ್ನ ಪ್ರೀತಿಯು ಅದರ ಮೇಲಿಂದ ಕಡಿಮೆಯಾಗುತ್ತಿದ್ದಿಲ್ಲ ಗರ್ವವೂ ಕಡಿಮೆಯಾಗುತ್ತಿದ್ದಿಲ್ಲ. ನನ್ನ ಕಣ್ಣುಗಳ ಮೇಲೆ ಮೋಹದ ಪಟಲವು ಏರಿದುದರಿಂದ ನಾನು ಈ ದೇಹಕ್ಕೇನೆ ಅಜರ ಮತ್ತು ಅಮರ ಎಂದು ತಿಳಿದು ಬಾಳಿದ್ದೇನೆ ಆದರೆ ಈ ರೋಗಗಳ ಉತ್ಪತ್ತಿಯಿಂದ ನಾನು ಈಗ ಎಚ್ಚರನಾದೆನು. ಈ ಶರೀರವು ಅಜರ, ಅಮರವಲ್ಲ ಹಾಗೆಯೇ ಇದು ದುಃಖದೊಳಗಿಂದ ಮುಕ್ತಮಾಡುವಂಥದೂ ಅಲ್ಲ ಇದು ಈಗ ತಿಳಿಯಿತು ಸಂಸಾರದೊಳಗಿನ ಎಲ್ಲ ದುಃಖಗಳಿಂದಲೂ ಬಿಡುಗಡೆಯನ್ನು ಮಾಡಲಿಕ್ಕೆ ಕೇವಲ ಜ್ಞಾನ, ದರ್ಶನ, ಚಾರಿತ್ರ, ತಪ ಇವೇ ಸಮರ್ಥವಾಗಿವೆ. ಇವುಗಳಿಗೇನೇ ಶರಣು ಹೋಗಲಿಕ್ಕೆ ಬೇಕು ಅದಕ್ಕಾಗಿ ನಾಲ್ಕು ಆರಾಧನೆಗಳನ್ನು ಧಾರಣ ಮಾಡಿ, ಭಗವಾನ್ ಪರಮೇಷ್ಠಿಯನ್ನು ಹೃದಯದಲ್ಲಿ ಧಾರಣ ಮಾಡಲಿಕ್ಕೆ ಬೇಕು ಇಂಥ ಹೊತ್ತಿನಲ್ಲಿ ಜಿನೇಶ್ವರ ವಚನವೇ ಒಂದು ಅಮೃತ. ಅದನ್ನು ಸೇವಿಸುವುದೇ ಯೋಗ್ಯವಾಗಿದೆ ಜಿನವಚನಾಮೃತದ ಹೊರತಾಗಿ ಕಷಾಯರೂಪ ರೋಗಜನಿತ ದಾಹವು ಇಲ್ಲದಂತೆ ಆಗುವದಿಲ್ಲ. ಹೊರಗಿನ ಔಷಧಾದಿ ಉಪಚಾರಗಳು ಅಸಾತಾ ಕರ್ಮದ ಉದಯವು ಮಂದವಿದ್ದಾಗ ಸ್ವಲ್ಪ ಹೊತ್ತು ರೋಗದ ಉಪಶಮ ಮಾಡುತ್ತವೆ ಶರೀರವು ಇದು ಅನೇಕ ರೋಗಗಳಿಂದ ತುಂಬಿದ್ದಿದೆ ಆಕಸ್ಮಾತ್ ಒಂದು ರೋಗವು ಕ್ಷಣ ಮಾತ್ರ ಕಡಿಮೆಯಾದರೂ ಎರಡನೆಯ ರೋಗದ ವೇದನೆಯು ಇನ್ನೊಂದು ಕ್ಷಣದಲ್ಲಿ ಆರಂಭವಾಗಿರುತ್ತದೆ ಅದನ್ನು ಭೋಗಿಸಿ ಸಾಯಬೇಕಾಗುತ್ತದೆ. ಅದರಿಂದ ಜನ್ಮ ಮರಣಗಳೆಂಬ ರೋಗದಿಂದ ಮುಕ್ತಗೊಳಿಸುವಂಥ ಭಗವಂತನ ಉಪದೇಶರೂಪ ಅಮೃತದ ಪಾನವನ್ನೇ ಮಾಡುವುದು ಈಗ ಯೋಗ್ಯವಾಗಿದೆ ಔಷಧವೇ ಮೊದಲಾದ ಸಾವಿರಾರು ಬಾಹ್ಯ ಉಪಚಾರಗಳನ್ನು ಮಾಡುತ್ತಿದ್ದರೂ ಈ ವಿನಾಶಿಕ ದೇಹದೊಳಗಿನ ರೋಗವು ಇಲ್ಲದಂತೆ ಆಗುವದೆಂದೇನೂ ಹೇಳಲಿಕ್ಕೆ ಬರುವದಿಲ್ಲ ರೋಗಗಳಿಂದ ಉತ್ಪನ್ನವಾಗುವ ವೇದನೆಯಿಂದ ವ್ಯಾಕುಲನಾಗಿ ಕುಗತಿಗೆ ಒಯ್ಯುವ ದುರ್ಧ್ಯಾನವನ್ನು ಮಾಡಕೂಡದು ರೋಗವು ಉತ್ಪನ್ನವಾದಾಗ ಬಹಳ ಹರ್ಷಹೊಂದಬೇಕು ಯಾಕಂದರೆ ಅದರ ಪ್ರಭಾವದಿಂದಲೇ ಇಂಥ ಜೀರ್ಣವಾದಂಥ ಶರೀರದಿಂದ ಆತ್ಮನ ಬಿಡುಗಡೆಯಾಗುವದಿದೆ ಅದು ಬಾರದೆ ಇದ್ದರೆ ಪೂರ್ವ ಕರ್ಮದ ನಿರ್ಜರೆಯು ಆಗುತ್ತಿರಲಿಲ್ಲ. ದೇಹರೂಪಿಯಾದ ಈ ಸೆರೆಮನೆಯು ದುರ್ಗಂಧಮಯವೂ, ದುಃಖದಾಯಕವೂ ಆಗಿದೆ ಇದರೊಳಗಿಂದ ಆತ್ಮನ ಮುಕ್ತತೆಯು ರೋಗದಿಂದಲೇ ಆಗುವುದು ಈ ರೋಗರೂಪೀ ಮಿತ್ರನ ಸಹಾಯವು ಹೇಗೆ ಹೇಗೆ ಶರೀರಕ್ಕೆ ಹೆಚ್ಚು ಹೆಚ್ಚು ಆಗುತ್ತ ಹೋಗುವುದೋ ಹಾಗೆ ಹಾಗೆ ರಾಗ-ದ್ವೇಷಾದಿ ಕರ್ಮ ಬಂಧನದಿಂದ ಶರೀರದ ಬಿಡುಗಡೆಯು ಬೇಗನೆ ಆಗುತ್ತ ಹೋಗುವದು ರೋಗವು ಇದು ಶರೀರದಲ್ಲಿದೆ, ಮತ್ತು ದೇಹವನ್ನು ಅದು ನಾಶಗೊಳಿಸೀತು ನಾನಂತೂ ಅಮೂರ್ತಿಕ, ಚೈತನ್ಯ ಸ್ವಭಾವಿ, ಅವಿನಾಶಿ, ಜ್ಞಾತೃವಾಗಿದ್ದೇನೆ ನನಗೆ ಈ ರೋಗಾದಿಗಳಿಂದ ಆಗುವ ದುಃಖವು ತಿಳಿಯುತ್ತವೆ ಅಂತಲೇ ನಾನು ಕೇವಲ ಅವುಗಳನ್ನು ತಿಳಿಯುವವನಾಗಿದ್ದೇನೆ. ಶರೀರದ ಕೂಡ ನನ್ನ

ನಾಶವಾಗುವುದು ಅಷ್ಟರಲ್ಲಿಯೇ ಇದೆ. ಕಬ್ಬಿಣದ ಸಂಗತಿಯಿಂದ ಉಷ್ಣತೆಗೂ ಕೂಡ ಘನದ ಪೆಟ್ಟುಗಳನ್ನು ಸಹನ ಮಾಡಬೇಕಾಗುತ್ತದೆ ಹಾಗೆಯೇ ಶರೀರದ ಸಂಗತಿಯಿಂದ ನನಗೆ ವೇದನೆಯ ಅನುಭವವಾಗುತ್ತದೆ. ಬೆಂಕಿಯಿಂದ ಗುಡಿಸಲು ಸುಟ್ಟು ಹೋಗುತ್ತದೆ ಆದರೆ ಆ ಗುಡಿಸಲಿನೊಳಗಿನ ಆಕಾಶವು ಸುಟ್ಟು ಹೋಗುವದಿಲ್ಲ ಹಾಗೆಯೇ ಅವಿನಾಶಿ, ಅಮೂರ್ತಿಕ, ಚೈತನ್ಯಮಯ ಆತ್ಮನು ರೋಗವೆಂಬ ಅಗ್ನಿಯಿಂದ ನಷ್ಟವಾಗಲಾರನು ನಾನು ಇಲ್ಲಿಯ ವರೆಗೆ ಯಾವ ಕರ್ಮಗಳನ್ನು ಮಾಡಿರುವೆನೋ ಅವುಗಳ ಫಲವನ್ನು ಭೋಗಿಸಿಯೇ ತೀರಬೇಕಾಗುತ್ತದೆ ಈ ವೇಳೆಯಲ್ಲಿ ಗಾಬರಿಯಾದೆನೆಂದು ಕರ್ಮವು ಬಿಟ್ಟು ಹೋಗುವುದು ಅಷ್ಟರಲ್ಲಿಯೇ ಇದೆ! ಅಂದಮೇಲೆ ಈ ಸ್ಥಿತಿಯಲ್ಲಿ ಧೈರ್ಯಧಾರಣ ಮಾಡಿ, ಬಂದ ಕರ್ಮದ ಫಲವನ್ನು ಭೋಗಿಸಿದರೆ ಮಾತ್ರ ಇಹ-ಪರಲೋಕಗಳು ಕೆಡಲಾರವು. ಅಂತಲೇ ಹೆದರಬಡಕತನವನ್ನು ಬಿಟ್ಟು ಧೈರ್ಯಧಾರಣ ಮಾಡುವುದೇ ಯೋಗ್ಯವಾಗಿದೆ

ಎಲೈ ಆತ್ಮನೇ! ರೋಗ ಮೊದಲಾದವುಗಳು ಪ್ರಾಪ್ತವಾದಾಗ ನೀನು ಇಷ್ಟೊಂದು ಹೆದರುತ್ತಿರುವಿ. ಆದರೆ ನೀನು ನರಕದಲ್ಲಿ ಯಾವ ಯಾವ ದುಃಖಗಳನ್ನು ಭೋಗಿಸಿಲ್ಲ? ಅಸಂಖ್ಯಾತವಲ್ಲ, ಅನಂತ ವೇಳೆನಿನ್ನನ್ನು ಹೊಡೆದು, ಸೀಳಿ, ಹರಿದು ತುಂಡು ತುಂಡಾಗಿ ಮಾಡಿದ್ದಾರೆ ಆ ದೃಷ್ಟಿಯಿಂದ ಇಲ್ಲಿ ಎಷ್ಟು ಅಲ್ಪ ದುಃಖವಿದೆ? ಎಲಾ! ತಿರ್ಯಂಚ ಯೋನಿಯಲ್ಲಿ ನೀನು ಏನೇನು ದುಃಖಗಳನ್ನು ಅನುಭವಿಸಿರುವಿಯೋ ಅದನ್ನು ಸರ್ವಜ್ಞನೊಬ್ಬನೇ ತಿಳಿದಿರಲಿಕ್ಕೆ ಸಾಕು ಆ ದುಃಖಗಳನ್ನು ಸರ್ವಜ್ಞನಿಗೂ ಸಹಿತ ಬಾಯಿಂದ ಹೇಳಲಿಕ್ಕೆ ಆಗಲಾರದು. ಆ ಯೋನಿಯಲ್ಲಿ ನೀನು ಹಲವು ಸಲ ಬೆಂಕಿಯಲ್ಲಿ ಸುಟ್ಟು ಸಾಯಬೇಕಾಯಿತು ಕೆಲವು ಸಲ ನೀರಿನಲ್ಲಿ ಮುಳುಗಿ, ಅನೇಕ ಸಲ ವಿಷಭಕ್ಷಣ ಮಾಡಿ, ಸಿಂಹ ಹುಲಿಗಳ ಮುಖದಲ್ಲಿ ಬಿದ್ದು, ಹಾವು ಕಡಿದು, ಶಸ್ತ್ರದ ಆಘಾತ ಸಹನ ಮಾಡಿ, ಚಳಿ, ಉಷ್ಣ ಹವೆಗಳ ಅತಿರೇಕವನ್ನು ಸಹನಮಾಡಿ, ಹಸಿವೆಯ ವೇದನೆಯಿಂದ, ನೀರಡಿಕೆಯಿಂದ ನೀನು ಸತ್ತಿರುವಿ ಅವುಗಳ ಮುಂದೆ ಸದ್ಯಕ್ಕೆ ಆಗುವ ವೇದನೆಯು ಎಷ್ಟರದು? ನಿಜವಾಗಿಯೂ ನೋಡಿದರೆ ರೋಗವು ನಿನ್ನ ಮೇಲೆ ಉಪಕಾರ ಮಾಡುತ್ತಿದೆ. ರೋಗವಿಲ್ಲದಿದ್ದರೆ ಈ ದೇಹದ ಮೇಲಿನ ಪ್ರೀತಿಯು ಕಡಿಮೆಯಾಗುತ್ತಿರಲಿಲ್ಲ. ಎಲ್ಲ ಪದಾರ್ಥಗಳ ಮೇಲಿನ ಮಮತ್ವವು ಇಲ್ಲದಂತೆ ಆಗಿ, ನೀನು ಆತ್ಮನಿಗೆ ಶರಣು ಹೋಗುತ್ತಿರಲಿಲ್ಲ ಸಾರಾಂಶ ಸದ್ಯದ ಪ್ರಸಂಗದಲ್ಲಿ ಈ ರೋಗವೇ ನಿನಗೆ ಆರಾಧನಾಯುಕ್ತ ಮರಣವನ್ನು ಹೊಂದಲಿಕ್ಕೆ ಪ್ರೇರಣೆಯನ್ನು ಮಾಡಿತು. ಅದಕ್ಕಾಗಿ ಇದೇ ನಿನ್ನ ನಿಜವಾದ ಮಿತ್ರನೆಂದು ತಿಳಿಯಲಿಕ್ಕೆ ಬೇಕು ಈ ಪ್ರಕಾರ ವಿಚಾರ ಮಾಡುವ ಜ್ಞಾನೀ ಪುರುಷನು ರೋಗವು ಉತ್ಪನ್ನವಾದಾಗ ದುಃಖ ಮಾಡದೆ, ಮೋಹ ನಾಶ ಮಾಡುವ ಸಮಯವು ಪ್ರಾಪ್ತವಾಯಿತೆಂದು ಆನಂದ ಹೊಂದುತ್ತಾನೆ

ಜ್ಞಾನಿನೋಽಮೃತಸಂಗಾಯ ಮೃತ್ಯುಸ್ತಾಪಕರೋಽಪಿ ಸನ್ ।
ಆಮಕುಂಭಸ್ಯ ಲೋಕೇಽಸ್ಮಿನ್ಭವೇತ್ಪಾಕವಿಧಿರ್ಯಥಾ ॥ ೧೩ ॥

ಅರ್ಥ—ಸಾವು ಪ್ರಾಪ್ತವಾದಾಗ ಎಲ್ಲ ಜನರಿಗೂ ಅತಿಶಯ ದುಃಖವೆನಿಸುತ್ತದೆ ಆದರೆ ಸಮ್ಯಗ್ಜ್ಞಾನಿ ಪುರುಷರಿಗೆ ಅದು ಅಮೃತ ಅಂದರೆ ಮೋಕ್ಷದ ಸಂಗತಿಯನ್ನು ಒದಗಿಸುವಂಥದಾಗಿದೆ ಹಸಿಯ ಮಣ್ಣಿನ ಗಡಿಗೆಯನ್ನು ಬೆಂಕಿಯಲ್ಲಿ ಸುಡುವ ಹೇತುವು, ಅದರಲ್ಲಿ ನೀರು ತುಂಬುವುದು ಇರುತ್ತದೆ ಒಂದು ವೇಳೆ ಅದನ್ನು ಸುಡದೆ ಇದ್ದರೆ ಅದರಲ್ಲಿ ನೀರು ತುಂಬಲಿಕ್ಕೆ ಬರುವದಿಲ್ಲ ಅದಕ್ಕೆ ಒಮ್ಮೆ ಅಗ್ನಿ ಸಂಸ್ಕಾರ ಮಾಡಿದರೆ ಅದರಲ್ಲಿ ಹಲವು ಸಲ ನೀರು ತುಂಬಬಹುದು ಇದೇ ಪ್ರಕಾರ ಮೃತ್ಯು ಒದಗಿದಾಗ ಆಗುವ ದುಃಖಗಳನ್ನು ಶಾಂತಭಾವದಿಂದ ಒಮ್ಮೆ ಸಹನ ಮಾಡಿದರೆ ಆ ಪುರುಷನು ಮೋಕ್ಷಕ್ಕೆ ಪಾತ್ರನಾಗುತ್ತಾನೆ.

ಭಾವಾರ್ಥ—ಅಜ್ಞಾನಿ ಪುರುಷರ ಹತ್ತರೆ ಮೃತ್ಯುವಿನ ಹೆಸರನ್ನು ತೆಗೆದರೆ ಅವರಿಗೆ ಭಯಂಕರ ದುಃಖವಾಗುತ್ತದೆ ಇನ್ನು ನಾವು ಸಾಯುವವರೆಂದು ನಿಜವಾಗಿಯೂ ಅವರಿಗೆ ಎನಿಸುತ್ತದೆ ಅಂದಮೇಲೆ ಮುಂದೆ ತಮ್ಮದು ಹೇಗಾದೀತು? ಈ ಪ್ರಕಾರ ಅನೇಕ ಸಂಕಲ್ಪವಿಕಲ್ಪಗಳಿಂದ ಅವರ ಅಂತಃಕರಣವು ಸುಟ್ಟುಹೋಗುತ್ತದೆ. ಯಾಕೆಂದರೆ ಅವರ ಮನಸ್ಸಿನಲ್ಲಿ ಬಾಹ್ಯವಸ್ತುವಿನ ವಿಷಯಕ್ಕೆ ಆತ್ಮಬುದ್ಧಿಯು ಜಾಗೃತವಿರುತ್ತದೆ ಹೀಗೆ ಸಮ್ಯಗ್-ದೃಷ್ಟಿ ಪುರುಷನಿಗೆ ಇರುವದಿಲ್ಲ ಅವನು ಈ ಶರೀರವು ಆಯುಷ್ಯ ಮತ್ತು ಕರ್ಮಗಳ ನಿಮಿತ್ತದಿಂದ ಉತ್ಪನ್ನವಾಗುತ್ತದೆ, ಅವುಗಳ ಸ್ಥಿತಿಯು ಇಲ್ಲದಂತಾಗಲು ಅದೂ ನಷ್ಟವಾಗುತ್ತದೆ ಎಂದು ತಿಳಿಯುತ್ತಿರುತ್ತಾನೆ ಆತ್ಮನ ಸ್ವಭಾವವು

ಜ್ಞಾನವಾಗಿರುವುದರಿಂದ ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹ ಧಾರಣಮಾಡುವುದರಲ್ಲಿ ಆತ್ಮನ ನಾಶವಾಗುವದಿಲ್ಲ. ಹೀಗೆ ಸಮ್ಯಗ್‌ದೃಷ್ಟಿಯುಳ್ಳವನು ದೃಢವಾಗಿ ನಂಬಿರುತ್ತಾನೆ

ಯತ್ಫಲಂ ಪ್ರಾಪ್ಯತೇ ಸದ್ಭಿರ್ವ್ರತಾಯ ಸವಿಡಂಬನಾತ್ ।
ತತ್ಫಲಂ ಸುಖಸಾಧ್ಯಂ ಸ್ಯಾನ್ಮೃತ್ಯುಕಾಲೇ ಸಮಾಧಿನಾ ॥ ೧೪ ॥

ಅರ್ಥ—ಸತ್ಪುರುಷರು ವ್ರತೋಪವಾಸಾದಿ ಭಯಂಕರ ಕ್ಲೇಶ ಸಹನಮಾಡಿ ಯಾವ ಫಲವನ್ನು ಸಂಪಾದಿಸುತ್ತಾರೆಯೋ ಆ ಫಲವನ್ನು ಮೃತ್ಯುಕಾಲದಲ್ಲಿ ಸ್ವಲ್ಪ ಹೊತ್ತು ಶುಭ ಧ್ಯಾನರೂಪ ಸಮಾಧಿ ಮರಣವನ್ನು ಸಾಧಿಸಿ ಪಡೆಯಲು ಸಾಧ್ಯವಿದೆ.

ಭಾವಾರ್ಥ—ಸ್ವರ್ಗದಲ್ಲಿ ಇಂದ್ರಪದ ಮತ್ತು ಪರಂಪರೆಯಿಂದ ನಿರ್ವಾಣಪದವು ಐದು ಮಹಾವ್ರತ ಹಾಗೂ ಘೋರ ತಪಶ್ಚರ್ಯಗಳನ್ನು ಮಾಡುವುದರಿಂದ ಪ್ರಾಪ್ತವಾಗುತ್ತದೆ ಈ ಪದವು ಮೃತ್ಯುಕಾಲದಲ್ಲಿ ದೇಹ ಕುಟುಂಬಗಳ ಮೇಲಿನ ಪ್ರೀತಿಯನ್ನು ತೊರೆದು, ನಿರ್ಭಯನಾಗಿ, ವೀತರಾಗಭಾವದಿಂದ ನಾಲ್ಕು ಆರಾಧನೆಗಳಿಗೆ ಶರಣು ಹೋಗಿ, ತನ್ನ ಜ್ಞಾಯಕ ಸ್ವಭಾವವನ್ನು ಜಾಗೃತವಾಗಿಟ್ಟುಕೊಂಡು, ಮರಣಹೊಂದಿದರೆ ಸಹಜ ಸಾಧ್ಯವಾಗುವಂತಿದೆ ಸ್ವರ್ಗದೊಳಗಿನ ಮಹರ್ದ್ಧಿಕ ದೇವಪದದ ಉಪಭೋಗವನ್ನು ತಕ್ಕೊಂಡು, ಅಲ್ಲಿಂದ ನರಲೋಕದಲ್ಲಿ ಉಚ್ಚಕುಲ-ದೊಳಗೆ ಜನ್ಮವನ್ನು ಪಡೆಯುತ್ತೇವೆ ಅಲ್ಲಿ ಉತ್ತಮ ಸಂಹನನ ಮತ್ತು ಇತರ ಎಲ್ಲಾ ಯೋಗ್ಯ ಸಾಮಗ್ರಿಗಳು ಪ್ರಾಪ್ತವಾಗುತ್ತವೆ ಆ ಮೇಲೆ ದೀಕ್ಷೆಯನ್ನು ಧಾರಣಮಾಡಿ ರತ್ನತ್ರಯಗಳನ್ನು ಪೂರ್ಣಗೊಳಿಸಿದಾಗ ಮೋಕ್ಷ ಪ್ರಾಪ್ತಿಯೂ ಆಗುತ್ತದೆ.

ಅನಾರ್ತಃ ಶಾಂತಿಮಾನ್ಮರ್ತ್ಯೋ ನ ತಿರ್ಯಗ್ ನಾಪಿ ನಾರಕಃ ।
ಧರ್ಮಧ್ಯಾನೀ ಪುರೋ ಮರ್ತ್ಯೋಽನಶನೀ ತ್ವಮರೇಶ್ವರಃ ॥ ೧೫ ॥

ಅರ್ಥ—ಯಾರ ಪರಿಣಾಮವು ಮರಣ ಸಮಯದಲ್ಲಿ ದುಃಖರೂಪವಾಗುವದಿಲ್ಲವೋ, ರಾಗದ್ವೇಷ ರಹಿತವಾಗಿ ಶಾಂತವಾಗಿರುತ್ತದೆಯೋ, ಆ ಪುರುಷನು ಮರಣಾನಂತರ ತಿರ್ಯಂಚ ಇಲ್ಲವೆ ನಾರಕಿಯಾಗುವದಿಲ್ಲ ಅದೇ ಪುರುಷನು ಒಂದು ವೇಳೆ ಅಂತ ಸಮಯದಲ್ಲಿ ಧರ್ಮಧ್ಯಾನವನ್ನು ಮಾಡಿದರೆ ಮತ್ತು ಅನಶನ ವ್ರತವನ್ನು ಧಾರಣ ಮಾಡಿದರೆ ಅವನಿಗೆ ಸ್ವರ್ಗದೊಳಗಿನ ಇಂದ್ರಪದವು ಪ್ರಾಪ್ತವಾಗುತ್ತದೆ ಅದರಲ್ಲಿಯೂ ಮಹಾನ್ ಋದ್ಧಿಧಾರಕ ದೇವಪದವು ಪ್ರಾಪ್ತವಾಗುತ್ತದೆ ಎರಡನೆಯ ಪರ್ಯಾಯವು ಪ್ರಾಪ್ತವಾಗುವದಿಲ್ಲ. ಎಂಬ ನಿಯಮವಿದೆ.

ಭಾವಾರ್ಥ—ಮರಣದ ಸಂಧಿಯು ಪ್ರಾಪ್ತವಾದಾಗ ಆರಾಧನಾಯುಕ್ತ ಮರಣವು ಒದಗಲೆಂದು ಯತ್ನಿಸಬೇಕು. ಮೃತ್ಯುವು ಸಮೀಪಿಸಿತೆಂದು ಹೆದರಿ ಪರಿಗ್ರಹಗಳ ಮೇಲಿನ ಮಮತ್ವವನ್ನು ಬಿಡದೆ ಇದ್ದರೆ ಮತ್ತು ತಿರುಗಿ ಆ ವೇಳೆಯಲ್ಲಿ ಪರಿಣಾಮದಲ್ಲಿ ವ್ಯಾಕುಲತೆಯು ಉತ್ಪನ್ನವಾದರೆ ಮರಣೋತ್ತರ ಕುಗತಿಗೆ ಹೋಗಬೇಕಾದೀತು. ಇದನ್ನು ಲಕ್ಷದಲ್ಲಿಟ್ಟು ಕುಮರಣವನ್ನು ತಪ್ಪಿಸಬೇಕು ಇಂಥ ಪ್ರಸಂಗವು ಅನಂತ ಜನ್ಮದಲ್ಲಿ ಪುನಃ ಪ್ರಾಪ್ತವಾಗ-ಲಾರದು ಇಷ್ಟೆಲ್ಲ ಮಾಡಿಯೂ ಮರಣವು ತಪ್ಪುವದೆಂದೇನೂ ಇಲ್ಲ ಅಂತಲೇ ಯೋಗ್ಯ ಸಮಯಕ್ಕೆ ಎಚ್ಚರಗೊಳ್ಳಬೇಕು ಧರ್ಮಧ್ಯಾನದಲ್ಲಿ ಮನಸ್ಸನ್ನು ಸ್ಥಿರಗೊಳಿಸಬೇಕು ಧೈರ್ಯದಿಂದ ದೇಹ ವಿಸರ್ಜನೆಯನ್ನು ಮಾಡಬೇಕು.

ತಪ್ತಸ್ಯ ತಪಸಶ್ಚಾಪಿ ಪಾಲಿತಸ್ಯ ವ್ರತಸ್ಯ ಚ ।
ಪಠಿತಸ್ಯ ಶ್ರುತಸ್ಯಾಪಿ ಫಲಂ ಮೃತ್ಯುಃ ಸಮಾಧಿನಾ ॥ ೧೬ ॥

ಅರ್ಥ—ತಪಸ್ಸು, ದುಃಖಭೋಗ, ವ್ರತಪಾಲನ, ಅನೇಕ ಪ್ರಕಾರದ ಶಾಸ್ತ್ರಗಳ ಅಧ್ಯಯನ ಇವೆಲ್ಲವುಗಳ ಫಲವು ಸಮಾಧಿಯುಕ್ತ—ಆತ್ಮಸಾವಧಾನಯುಕ್ತ—ಮರಣವೇ ಆಗಿದೆ

ಭಾವಾರ್ಥ—ಎಲೈ ಆತ್ಮನೇ, ಇಷ್ಟು ದಿವಸ ನೀನು ಇಂದ್ರಿಯಗಳನ್ನು ಗೆದ್ದು, ಇಚ್ಛೆಯನ್ನು ತಡೆದು, ಉಪವಾಸ ಮೊದಲಾದ ತಪಶ್ಚರಣಗಳನ್ನು ಮಾಡಿ, ಅನಂತಕಾಲದಿಂದ ನಡೆದುಬಂದ ಆಹಾರದ ತ್ಯಾಗಮಾಡಿ, ಸಂಯಮ ಪಾಲಿಸಿ, ದೇಹದ ಮೇಲಿನ ಪ್ರೇಮ ನಷ್ಟಗೊಳಿಸಿದೆ ಇದೆಲ್ಲ ಯಾತಕ್ಕಾಗಿ? ಸಮಾಧಿ ಮರಣವು ಪ್ರಾಪ್ತವಾಗಲಿಕ್ಕೆಂದು ಅಲ್ಲವೆ? ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಮಿತ ಪರಿಗ್ರಹರೂಪವ್ರತಗಳನ್ನು

ಧಾರಣಮಾಡಿದೆ ಅದಾದರೂ ದೇಹ ಪರಿಗ್ರಹಗಳ ಮೇಲಿನ ಮಮತೆಯು ಕಡಿಮೆಯಾಲಿಕ್ಕೆಂದೇ ಇರುತ್ತದೆ. ಮನ-ವಚನ-ಕಾಯಗಳಿಂದ ಸಂಭವಿಸುವ ಆರಂಭಾದಿ ಕ್ರಿಯೆಗಳು ಸಂಭವಿಸಕೂಡದು, ಸಂಪೂರ್ಣ ಶತ್ರು-ಮಿತ್ರರ ಮೇಲೆ ಪ್ರೇಮ ದ್ವೇಷಗಳು ಇರಬಾರದು, ಸಂಕಟ (ಉಪಸರ್ಗ) ಒದಗಿದಾಗ ಧೈರ್ಯವು ಇಲ್ಲದಂತೆ ಆಗಬಾರದು ಮತ್ತು ಜ್ಞಾಯಕ ಸ್ವಭಾವದ ಅವಲಂಬನ ಮಾಡಿ ಸಮಾಧಿ ಮರಣವನ್ನು ಸಾಧಿಸಬೇಕು. ಇಲ್ಲಿಯ ವರೆಗೆ ಯಾವ ಯಾವ ಶಾಸ್ತ್ರಗಳನ್ನು ಓದಲಾಯಿತೋ ಅದೆಲ್ಲವೂ ಸಹ ಮರಣ ಸಮಯದಲ್ಲಿ ದುಃಖವಾಗದೆ ಸಮಭಾವ, ಶಾಂತ ಪರಿಣಾಮಗಳಿಂದ ಸಾವನ್ನಪ್ಪಬೇಕೆಂಬ ಉದ್ದೇಶವನ್ನು ಸಾಧಿಸುವದಕ್ಕಾಗಿಯೇ ಇದೆ ಅಲ್ಲದೆ ಶರೀರ ಮೊದಲಾದ ಪರಪದಾರ್ಥಗಳೂ ಈ ಆತ್ಮನೂ ಭಿನ್ನವೆಂಬ ಜ್ಞಾನವನ್ನು ಸಂಪಾದಿಸುವದಕ್ಕೆ ಇದೆ ಸಮಾಧಿಮರಣವು ಪ್ರಾಪ್ತವಾಗಬೇಕೆಂದು ಇಷ್ಟೆಲ್ಲ ಶ್ರಮಮಾಡಿ ವಿದ್ಯಾಧ್ಯಯನ ಮಾಡಿದ್ದಾಯಿತು. ಇಷ್ಟು ಸರ್ವ ಸಂಗತಿಗಳನ್ನು ಅನುಕೂಲಮಾಡಿಕೊಂಡೂ ಸಹ ಮರಣ ಸಮಯದಲ್ಲಿ ಮಮತೆ, ಭಯ, ರಾಗ, ದ್ವೇಷ, ಹೆದರಿಕೆ ಮತ್ತು ದೈನ್ಯಗಳನ್ನು ಬಿಡದಿದ್ದರೆ ಮಾಡಿದ ತಪಶ್ಚರಣ, ವ್ರತ, ಶ್ರುತಧ್ಯಾನ ಮೊದಲಾದವುಗಳೆಲ್ಲವೂ ನಿರರ್ಥಕವಾದಾವು ಅಂತಲೇ ಮರಣ ಸಂದರ್ಭದಲ್ಲಿ ಸಾವಧಾನತೆಯನ್ನು ಕೆಡುವಗೊಡಬಾರದು

ಅತಿಪರಿಚಿತೇಷ್ವವಜ್ಞಾ ನವೇ ಭವೇತ್ಪ್ರೀತಿರಿತಿ ಹಿ ಜನವಾದಃ ।
ಚಿರಂತನಶರೀರನಾಶೇ ನವತರಲಾಭೇ ಚ ಕಿಂ ಭೀರುಃ ॥ ೧೭ ॥

ಅರ್ಥ—ಜನರಲ್ಲಿ ಒಂದು ಮಾತು ಬಳಿಕೆಯಲ್ಲಿದೆ—ಅತಿಶಯ ಪರಿಚಯದಿಂದ ಅನಾದರವು ಉತ್ಪನ್ನ-ವಾಗುತ್ತದೆ. ಅದರಂತೆ ಬಹಳಷ್ಟು ಭೋಗಿಸಿದ ಪದಾರ್ಥದ ವಿಷಯದಲ್ಲಿಯೂ ಅನಾದರವು ಹುಟ್ಟುತ್ತದೆ. ಅದರ ಮೇಲಿನ ಪ್ರೇಮವೂ ಕಡಿಮೆಯಾಗುತ್ತದೆ. ಹೊಸ ಪದಾರ್ಥದ ವಿಷಯದಲ್ಲಿ ಪ್ರೇಮವು ಜನಿಸುತ್ತದೆ. ಹೀಗಿರುವಾಗ ಎಲೈ ಜೀವವೇ, ನೀನು ಈ ಶರೀರವನ್ನು ಬಹು ದಿನಗಳಿಂದ ಭೋಗಿಸುತ್ತ ಬಂದಿರುವಿ. ಈಗ ಇದು ನಾಶವಾಗಿ ನವೀನ ಶರೀರವು ನಿನಗೆ ಪ್ರಾಪ್ತವಾಗುತ್ತಿದೆ ಇಂಥ ಸುಸಮಯದಲ್ಲಿ ಹೆದರುವ ಕಾರಣವೇನಿದೆ?

ಭಾವಾರ್ಥ—ಈ ಶರೀರದ ಉಪಭೋಗವನ್ನು ಬಹುದಿನಗಳಿಂದ ತಕ್ಕೊಳ್ಳಲಾಗಿದೆ. ಈ ದೇಹವು ಜೀರ್ಣವಾಗಿದೆ ಇದರೊಳಗಿನ ಶಕ್ತಿ ಮತ್ತು ತೇಜಗಳು ಇಲ್ಲದಂತಾಗಿವೆ. ಅದರಿಂದ ಇದನ್ನು ಬಿಟ್ಟು ಬೇರೆ ಶರೀರವನ್ನು ಧಾರಣಮಾಡಬೇಕಾಗಿದೆ ಈಗ ಹೆದರಿಕೆ ಏಕೆ? ಈ ಜೀರ್ಣವಾದ ಶರೀರವಂತೂ ಇಲ್ಲದಂತೆ ಆಗುವಂಥದೇ. ಇದರ ಮೇಲೆ ಮಮತೆಯನ್ನು ಮಾಡಿ ಮರಣ ಪ್ರಸಂಗವನ್ನು ಕೆಡಿಸಿಕೊಂಡು ವಿನಾಕಾರಣ ದುರ್ಗತಿಯನ್ನು ಯಾಕೆ ಕಟ್ಟಿಕೊಳ್ಳುವಿ?

ಸ್ವರ್ಗಾದೇತ್ಯ ಪವಿತ್ರನಿರ್ಮಲಕುಲೇ ಸಂಸ್ಮರ್ಯಮಾಣೋ ಜನ್ಯೈ-
ರ್ದತ್ವಾ ಭಕ್ತಿವಿಧಾಯಿನಾಂ ಬಹುವಿಧಂ ವಾಂಛಾನುರೂಪಂ ಧನಂ ।
ಭುಕ್ತ್ವಾ ಭೋಗಮಹರ್ನಿಶಂ ಪರಕೃತಂ ಸ್ಥಿತ್ವಾ ಕ್ಷಣಂ ಮಂಡಲೇ
ಪಾತ್ರಾವೇಶವಿಸರ್ಜನಾಮಿವ ಮೃತಿಂ ಸಂತೋ ಲಭಂತೇ ಸ್ವತಃ ॥

ಅರ್ಥ—ಈ ಪ್ರಕಾರ ನಿರ್ಭಯವಾಗಿ, ಸಮಾಧಿಮರಣದ ವಿಷಯದಲ್ಲಿ ಉತ್ಸಾಹ ಧಾರಣಮಾಡಬೇಕು. ನಾಲ್ಕು ಆರಾಧನೆಗಳನ್ನು ಸ್ಮರಿಸುತ್ತ ಮರಣ ಹೊಂದಬೇಕು ಇಂಥವನಿಗೆ ಸ್ವರ್ಗಲೋಕದ ಹೊರತಾಗಿ ಬೇರೆ ಗತಿಯು ಪ್ರಾಪ್ತವಾಗುವದಿಲ್ಲ ಅವನು ಅಲ್ಲಿ ಮಹರ್ದ್ಧಿಕ ದೇವನಾಗಿಯೇ ಜನ್ಮತಕ್ಕೊಳ್ಳುವನೆಂಬ ನಿಯಮವಿದೆ ಸ್ವರ್ಗದಲ್ಲಿ ಆಯುಷ್ಯದ ಕೊನೆಯ ಕ್ಷಣದ ವರೆಗೂ ಸುಖವನ್ನು ಭೋಗಿಸಿ, ಮನುಷ್ಯ ಲೋಕದಲ್ಲಿ ಮಹಾನ್ ಪುಣ್ಯವಾನ್ ಮತ್ತು ನಿರ್ಮಲ ಕುಲದಲ್ಲಿ ಜನ್ಮ ತಕ್ಕೊಳ್ಳುತ್ತಾನೆ. ತಮ್ಮ ಕುಟುಂಬ ಪರಿವಾರಗಳಿಗೆ ಇಚ್ಛಿಸಿದ ಧನಭೋಗಾದಿಗಳನ್ನು ನೀಡಿ, ತನ್ನ ಪುಣ್ಯದಿಂದ ಪ್ರಾಪ್ತವಾದ ಭೋಗೋಪಭೋಗಗಳನ್ನು ಭೋಗಿಸಿ, ಉಳಿದ ಸ್ವಲ್ಪ ಆಯುಷ್ಯದಲ್ಲಿ ಸಂಯಮ ವ್ರತೋಪವಾಸಾದಿ ಆಚರಣೆಗಳಿಂದ ತನ್ನ ಪರಿಣಾಮವನ್ನು ವೀತರಾಗ ರೂಪ-ಗೊಳಿಸುತ್ತಾನೆ ಮೇಲಾಗಿ ರಂಗಭೂಮಿಯ ಮೇಲೆ ಕುಣಿಯುವ ನಟನಂತೆ ಸ್ವಲ್ಪ ಹೊತ್ತು ಜನರಿಗೆ ಆನಂದವನ್ನು ಉಂಟುಮಾಡಿ, ಸ್ವಂತದ ದೇಹವನ್ನು ತ್ಯಾಗಮಾಡಿ ಅವನು ಮೋಕ್ಷಕ್ಕೆ ಹೋಗುವನು.

ಈ ಪ್ರಕಾರ ಸಲ್ಲೇಖನದ ಸ್ವರೂಪವನ್ನು ವರ್ಣಿಸುವಾಗ 'ಮೃತ್ಯುಮಹೋತ್ಸವ'ದ ವಿವರವನ್ನು ಸ್ವಲ್ಪ ಇಲ್ಲಿ ಕೊಡಲಾಯಿತು ಇನ್ನು ಸಲ್ಲೇಖನದ ಸ್ವರೂಪದ ಕಡೆಗೆ ಹೊರಳೋಣ.

## ಸಲ್ಲೇಖನದ ಪ್ರಕಾರ

ಸಲ್ಲೇಖನದಲ್ಲಿ ಎರಡೆರಡು ಪ್ರಕಾರಗಳಿವೆ ಒಂದು ಕಾಯಸಲ್ಲೇಖನ, ಇನ್ನೊಂದು ಕಷಾಯ ಸಲ್ಲೇಖನ ಸಲ್ಲೇಖನ ಪದದ ಅರ್ಥವು ಉತ್ತಮ ರೀತಿಯಿಂದ ಕೃಷಿಮಾಡುವುದು ಎಂದಾಗುತ್ತದೆ ಇದರಲ್ಲಿ ಯಾವಾಗ ಶರೀರವನ್ನು ಕೃಶಗೊಳಿಸಲಾಗುವುದೋ ಆಗ ಕಾಯ ಸಲ್ಲೇಖನವೆನಿಸುತ್ತದೆ. ಶರೀರವನ್ನು ಪುಷ್ಟ-ಗೊಳಿಸುತ್ತ ಹೋದಂತೆ ಇಂದ್ರಿಯ ಲಾಲಸೆಯು ತೀವ್ರಗೊಳ್ಳುತ್ತ ಹೋಗುತ್ತದೆ ಆಗ ಆತ್ಮ ಶುದ್ಧಿಯ ಮಾರ್ಗದ ಕಡೆಗೆ ಸಹಜವಾಗಿಯೇ ಆ ಪ್ರೀತಿಯು ಉತ್ಪನ್ನವಾಗುತ್ತದೆ ಕಾಮ-ಕ್ರೋಧ-ಲೋಭ ಮೊದಲಾದ ವಿಕಾರಗಳು ಶರೀರದ ಪುಷ್ಟತೆಯ ಕೂಡ ಬೆಳೆಯುತ್ತ ಹೋಗುತ್ತವೆ ಇದೇ ಪ್ರಕಾರ ನಿದ್ರೆ, ಆಲಸ್ಯ, ಪ್ರಮಾದ ಮೊದಲಾದವುಗಳು ಬೆಳೆದು ಸಂಕಟವು ಪ್ರಾಪ್ತವಾಗುತ್ತದೆ ಅಲ್ಲದೆ ಉಪಸರ್ಗ ಸಹನ ಮಾಡುವ ಶಕ್ತಿಯು ಕಡಿಮೆಯಾಗುತ್ತದೆ. ಯಾವುದಾದರೊಂದು ಪದಾರ್ಥವನ್ನು ತ್ಯಾಗಮಾಡುವಂಥ ಸಂಯಮವು ಉಳಿಯುವದಿಲ್ಲ ಅರ್ಥಾತ್ ಈ ಎಲ್ಲ ಕ್ರಿಯೆಗಳಿಂದ ಆತ್ಮನಿಗೆ ದುರ್ಗತಿಯು ಪ್ರಾಪ್ತವಾಗುತ್ತದೆ ಇಷ್ಟರಿಂದಲೇ ಪೂರ್ತಿಯಾದರೆ ನೆಟ್ಟಗಿತ್ತು ಆದರೆ ಶರೀರದ ಬೆಳವಣಿಗೆಯ ಕೂಡ ಅನೇಕ ಪ್ರಕಾರದ ವಾತ-ಪಿತ್ತ-ಕಫಾತ್ಮಕ ವ್ಯಾಧಿಗಳು ಉತ್ಪನ್ನವಾಗಿ ಅದರಿಂದುಂಟಾ-ಗುವ ವ್ಯಾಧಿಯಿಂದ ದುರ್ಧ್ಯಾನವು ಸಂಭವಿಸುತ್ತದೆ. ಅದಕ್ಕಾಗಿ ಅನಶನಾದಿ ಬಾಹ್ಯ ತಪಶ್ಚರಣಗಳಿಂದ ಶರೀರವನ್ನು ಕೃಶಗೊಳಿಸಬೇಕು ಅಂದರೆ ರೋಗದಿಂದ ಉತ್ಪನ್ನವಾಗುವ ವೇದನೆಯನ್ನು ಭೋಗಿಸುವ ಕಾರಣವು ಉಳಿಯುವದಿಲ್ಲ. ಪರಿಣಾಮವು ಕೆಟ್ಟೀತೆಂಬ ಹೆದರಿಕೆಯು ಉಳಿಯುವದಿಲ್ಲ ಇದಕ್ಕಾಗಿ ಮೊಟ್ಟ ಮೊದಲು ಕಾಯ ಸಲ್ಲೇಖನದ ಸ್ವರೂಪವನ್ನು ಹೇಳುತ್ತಾರೆ.

> ಆಹಾರಂ ಪರಿಹಾಪ್ಯ ಕ್ರಮಶಃ ಸ್ನಿಗ್ಧಂ ವಿವರ್ಧಯೇತ್ಪಾನಮ್ ।
> ಸ್ನಿಗ್ಧಂ ಚ ಹಾಪಯಿತ್ವಾ ಖರಪಾನಂ ಪೂರಯೇತ್ ಕ್ರಮಶಃ ॥ ೧೨೭ ॥
> ಖರಪಾನಹಾಪನಾಮಪಿ ಕೃತ್ವಾ ಕೃತ್ವೋಪವಾಸಮಪಿ ಶಕ್ತ್ಯಾ ।
> ಪಂಚನಮಸ್ಕಾರಮನಾಸ್ತನುಂ ತ್ಯಜೇತ್ಸರ್ವಯತ್ನೇನ ॥ ೧೨೮ ॥[1]

ಅನ್ವಯಾರ್ಥ—(ಕ್ರಮಶಃ) ಕ್ರಮಕ್ರಮದಿಂದ (ಆಹಾರಂ ಪರಿಹಾಪ್ಯ) ಆಹಾರವನ್ನು ತ್ಯಜಿಸಿ (ಸ್ನಿಗ್ಧಂ ಪಾನಂ) ಸ್ನಿಗ್ಧವಾದ ಕುಡಿಯುವ ಪದಾರ್ಥವನ್ನು-ತಕ್ಕೊಳ್ಳುವದನ್ನು—(ವಿವರ್ಧಯೇತ್) ಹೆಚ್ಚಿಸಬೇಕು. (ಚ)

---

1 ಆಯತಪವರ್ಣನ ವಚನಿಕೆ ಹೀಗಿದೆ.

ಖರಪಾನಮುಮಂ ನಿಲಿಸಿ ಬಳಿಯಂ ಶಕ್ತಿಗಳನರಿದು ಪರಿಣಾಮುಮಂ ಬಿದರಲೀಯದ ಖರಪಾನಮಂ ನಿವೃತ್ತಿಗೆಯ್ದಾ-ಚಾರ್ಯರ್ಕಳು ಪೇಳ್ದ ಪಂಚನಮಸ್ಕಾರಂಗಳಂ ಪಂಚಮಗತಿಹೇತುಗಳನಾಲಿಸುತ್ತುಂ ಸಿದ್ಧರೆಂಟುಗುಣಂಗಳ ನೆನೆಯುತ್ತುಂ ಲೋಕಾಗ್ರದೊಳು ಮತಿಯನ್ನಿಟ್ಟು ಶಕ್ತಿಯುಳ್ಳನಂ ತಾನುಮುಚ್ಚರಿಸುತ್ತುಂ ಎಲ್ಲಾ ಪ್ರಯತ್ನದಿಂ ಶರೀರಮಂ ಪತ್ತುವಿಡುವುದು ಪಶ್ಚಿಮ ಸಲ್ಲೇಖನೆಯೆಂಬುದು ಚೋಳಿಕೆಯುಕ್ಕುಂ ಪತ್ತಂತಾಪರಣಂ ಆದಿಚಿ (?) ಮರಣಂ, ತದ್ಭವಮರಣಂ ಎಂದಿತ್ತೆರನಕ್ಕು-ಮಲ್ಲಿ ಕೀವಿದ ಕೆರೆಯನೀರೆಂತು ದಿವಸಗತಿಯಿಂ ಕುಂದುತಿರ್ಕುಮಂತೆ ಜೀವಂ ಗರ್ಭದೊಳು ನೆಲಸಿದಂದು ತೊಟ್ಟು ಪ್ರತಿಸಮಯ-ಮಾಯುಷ್ಯಂ ಕುಂದುತಿರ್ಕುಮದು ಅಪಿಚಿ (?) ಮರಣಂಮೆಂಬುದಕ್ಕು ಮರುಭವಮಂ ಕಾಣಿಸುವುದು ತದ್ಭವ ಮರಣಮೆಂಬು-ದದುಂ ವಿಕಲ್ಪದಿಂ ಬಾಳಬಾಳಮರಣಮೆಂದುಂ, ಬಾಳಮರಣಮೆಂದುಂ, ಬಾಳಪಂಡಿತಮರಣಮೆಂದುಂ, ಪಂಡಿತಮರಣಮೆಂದುಂ, ಪಂಡಿತಪಂಡಿತಮರಣಮೆಂದುಂ ಪಂಚಪ್ರಕಾರಮಕ್ಕುಮಲ್ಲಿ ಸಮ್ಯಗ್ದರ್ಶನಜ್ಞಾನಚಾರಿತ್ರತಪಮೆಂಬ ಚತುರ್ವಿಧಾರಾಧನೆಯೊಳಲ್ಲಿ-ಯೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಳಬಾಳಮರಣಂ ಸಮ್ಯಗ್ದರ್ಶನ ಜ್ಞಾನಾರಾಧನೆಯನುಳ್ಳ ದರ್ಶನಿಕನ ಸಾವು ಬಾಳಮರಣಂ ಜ್ಞಾನಸಮ್ಯಗ್ದರ್ಶನ ಸಂಯಮಾಸಂಯಮ ಚಾರಿತ್ರಂಗಳಂ ಕನಗೆ ಒಸಂಮಾಡಿ ನೆಗಳ್ವ ಸಂಯತಾ ಸಂಯತ ಸಾವು ಬಾಳಪಂಡಿತಮರಣಂ ಚತುರ್ವಿಧಾರಾಧನೆಯೊಳ್ಕೂಡಿಯಿಂಗಿನೀ ಮರಣಂ ಪ್ರಾಯೋಪಗಮನಂ ಬಕ್ತ ಪ್ರತ್ಯಾಖ್ಯಾನಮೆಂಬ ಮೂರುವಿಕಲ್ಪಮನುಳ್ಳ ಮಹಾಬ್ರತಿಗಳ ಸಾವು ಪಂಡಿತಮರಣಂ. ತದ್ಭವದೊಳೆ ಕರ್ಮಕ್ಷಯಂ ಗೆಯ್ವ ವರ್ಗಳ ಸಾವು ಪಂಡಿತಪಂಡಿತಮರಣಂ.

ಮತ್ತು (ಕ್ರಮಶಃ) ಕ್ರಮದಿಂದ (ಸ್ನಿಗ್ಧಂ) ಸ್ನಿಗ್ಧ ಪದಾರ್ಥದ (ಹಾಪಯಿತ್ವಾ) ತ್ಯಾಗಮಾಡಿ (ಖರಪಾನಂ) ಉಷ್ಣ ಪಾನವನ್ನು (ಪೂರಯೇತ್) ಪೂರೈಸುತ್ತ–ಕುಡಿಯುತ್ತ–ಹೋಗಬೇಕು. (ಖರಪಾನಹಾಪನಾಂ ಅಪಿ) ಬಿಸಿ ನೀರನ್ನೂ ಸಹ ತ್ಯಾಗ (ಕೃತ್ವಾ) ಮಾಡಿ (ಅಪಿ) ಹಾಗೆಯೇ (ಶಕ್ತ್ಯಾ) ಶಕ್ತಿಗೆ ಅನುಸರಿಸಿ (ಉಪವಾಸಂ) ಉಪವಾಸ (ಕೃತ್ವಾ) ಮಾಡಿ (ಸರ್ವಯತ್ನೇನ) ಎಲ್ಲ ಪ್ರಕಾರದ ಪ್ರಯತ್ನದಿಂದ (ಪಂಚನಮಸ್ಕಾರಮನಾಃ) ಪಂಚ ನಮಸ್ಕಾರ ಮಂತ್ರದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ (ತನುಂ) ಶರೀರವನ್ನು (ತ್ಯಜೇತ್) ಬಿಡಬೇಕು

ಅರ್ಥ—ಕ್ರಮದಿಂದ ಆಹಾರವನ್ನು ಕಡಿಮೆಮಾಡುತ್ತ ಹೋಗಿ ಹಾಲು, ಮೊಸರು, ಮಜ್ಜಿಗೆಗಳಂಥ ಸ್ನಿಗ್ಧ ಪದಾರ್ಥವನ್ನು ಹೆಚ್ಚಾಗಿ ತಕ್ಕೊಳ್ಳುತ್ತ ಹೋಗಬೇಕು ಮುಂದೆ ಸ್ನಿಗ್ಧ ಪದಾರ್ಥವನ್ನೂ ಕಡಿಮೆಮಾಡಿ ಬಿಸಿ ನೀರು ಮೊದಲಾದವುಗಳನ್ನು ಹೆಚ್ಚು ಹೆಚ್ಚು ಸೇವಿಸುತ್ತ ಹೋಗಬೇಕು ಮುಂದೆ ಬಿಸಿನೀರನ್ನೂ ಬಿಟ್ಟು, ತಮ್ಮ ಶಕ್ತಿಗೆ ಅನುಸರಿಸಿ ಉಪವಾಸ ಮಾಡಿ, ಪಂಚ ನಮಸ್ಕಾರ ಮಂತ್ರದ ಧ್ಯಾನದಲ್ಲಿದ್ದು, ಪ್ರಯತ್ನ ಪೂರ್ವಕ ಶರೀರವನ್ನು ತ್ಯಾಗಮಾಡಬೇಕು [ಕಷಾಯ ಸಲ್ಲೇಖನದ ತರುವಾಯ ಕಾಯ ಸಲ್ಲೇಖನದ ವಿಧಿಯನ್ನು ವಿವರಿಸುವಾಗ ಇದನ್ನು ಹೇಳಲಾಗಿದ ಆಹಾರಾದಿಗಳನ್ನು ಕ್ರಮದಿಂದ ಕಡಿಮೆಮಾಡುವುದು, ಉಪವಾಸಾದಿಗಳನ್ನು ಹೆಚ್ಚಿಸುವುದನ್ನು ಹೇಳಿದೆ. ಇದು ಬಹಳ ಅನುಭೂತ ಪ್ರಯೋಗವಾಗಿದೆ. ಇದರಿಂದ ಕಾಯವು ಕ್ಷೀಣವಾಗುವ ಜೊತೆಗೆ ಪರಿಣಾಮವು ಶುದ್ಧವಾಗುತ್ತ ಹೋಗುತ್ತದೆ ಅಲ್ಲದೆ ಸಮಾಧಿ ಪೂರ್ವಕ ದೇಹದ ತ್ಯಾಗವು ಸುಸಂಘಟಿತ-ವಾಗುತ್ತದೆ. ಮೇಲಾಗಿ ಸಾಧು-ಸಂತರ ಧ್ಯಾನದಿಂದ ಪೂರ್ಣ ಸಾವಧಾನತೆಯು ಪ್ರಾಪ್ತವಾಗುತ್ತದೆ ಇಂಥ ಸ್ಥಿತಿಯಲ್ಲಿ ದೇಹ ತ್ಯಾಗಮಾಡುವದಕ್ಕೆ ಬಹಳ ಮಹತ್ವವಿದೆ ಉಪವಾಸದ ವಿಷಯವಂತೂ ಅವರವರ ಶಕ್ತಿಗೆ ಅನುಸರಿಸಿ ಆಚರಿಸಲಿಕ್ಕೆ ಹೇಳಿದೆ ಶಕ್ತಿ ಸಾಲದೆ ಹೋದಲ್ಲಿ ಉಪವಾಸ ಮಾಡದೆ ಇದ್ದರೂ ದೋಷವಿಲ್ಲ ಹೀಗೆ ಸಮಾಧಿ ಮರಣವು ಮಾನವ ಜೀವನ ಮಂದಿರದ ಕಲಶವಿದ್ದಂತಿದೆ.]

ವಿಶೇಷಾರ್ಥ—ಆಹಾರದ ಇಚ್ಛೆಯನ್ನು ಕಡಿಮೆ ಮಾಡಬೇಕು. ಕಾಯ ಸಲ್ಲೇಖನವನ್ನು ಮಾಡಬೇಕಾದರೆ ಅದನ್ನು ಈ ಪ್ರಕಾರ ಅನುಕ್ರಮದಿಂದ ಮಾಡಬೇಕು —ಮೊಟ್ಟ ಮೊದಲು ತಮ್ಮ ಆಯುಷ್ಯದ ಉಳಿದ ಬಾಗ ಎಷ್ಟೆಂಬುದನ್ನು ನೋಡಬೇಕು ಆ ಮೇಲೆ ಆಯುಷ್ಯದ ಪ್ರಮಾಣಕ್ಕ ಅನುಸರಿಸಿ ಶರೀರ ಹಾಗೂ ಇಂದ್ರಿಯಗಳ ಮೇಲಿನ ಮಮತೆಯನ್ನು ಕಡಿಮೆ ಮಾಡಲಿಕ್ಕೆ ಹತ್ತಬೇಕು ಮುಂದೆ ಆಹಾರದ ಮೇಲಿನ ಆಸೆಯನ್ನೂ ಕಡಿಮೆಮಾಡಿ ಹೀಗೆ ವಿಚಾರಿಸಲಿಕ್ಕೆ ಪ್ರಾರಂಭಿಸಬೇಕು ಎಲೈ ಆತ್ಮನೇ! ಸಂಸಾರದಲ್ಲಿ ಭ್ರಮಣಮಾಡುತ್ತ ನೀನು ಬಹಳಷ್ಟು ಆಹಾರವನ್ನು ಈಗಾಗಲೇ ಸೇವಿಸಿರುವಿ ಒಂದೊಂದು ಜನ್ಮದೊಳಗಿನ ಒಂದೊಂದು ಕಣವನ್ನು ತಕ್ಕೊಂಡು ಕೂಡಿಸಿದರೂ ಅದು ಒಂದು ಮೇರೂ ಪರ್ವತದಷ್ಟು ದೊಡ್ಡ ರಾಶಿಯಾಗುವುದು ಅನೇಕ ಜನ್ಮಗಳಲ್ಲಿ ನೀನು ಕುಡಿದ ನೀರೂ ಸಹ ಒಂದೊಂದು ಬಿಂದುವಿನಂತೆ ಕೂಡ ಹಾಕಿದರೆ ಅನಂತ ಸಮುದ್ರವೇ ತುಂಬಿ ಹೋದೀತು ಇಷ್ಟೆಲ್ಲ ಅನ್ನ-ನೀರುಗಳಿಂದಲಾದರೂ ನೀನಲ್ಲಿ ತೃಪ್ತನಾಗಿರುವಿ? ಈಗಂತೂ ರೋಗ ಹಾಗೂ ಮುಪ್ಪುಗಳು ಒಟ್ಟಿಗೆ ಸೇರಿ ನಿನ್ನ ಮರಣವಂತೂ ಸಮೀಪಕ್ಕೆ ಬಂದು ನಿಂತಿದೆ ಈಗ ಸ್ವಲ್ಪ ಆಹಾರ ತಕ್ಕೊಳ್ಳುವದರಿಂದ ತೃಪ್ತಿಯಾಗುವುದು ಅಷ್ಟರಲ್ಲಿಯೇ ಇದೆ ಈ ಪರ್ಯಾಯದಲ್ಲಿ ಜನ್ಮ ತಕ್ಕೊಂಡಾಗಿನಿಂದಲೂ ಇಲ್ಲಿಯ ವರೆಗೆ ನೀನು ನಿನ್ನ ಆಹಾರ ಸೇವಿಸುತ್ತಲೇ ಬಂದಿರುವಿ. ಆಹಾರದ ಲೋಭಕ್ಕಾಗಿಯೇ ಅನೇಕ ದೊಡ್ಡ ದೊಡ್ಡ ಪಾಪಗಳು ಸಂಭವಿಸುವಂಥ ಕಾರ್ಯಗಳನ್ನು ಮಾಡಿರುವಿ ಹಿಂಸೆ, ಅಸತ್ಯ, ಪರಧನ ಲಾಲಸೆ, ವ್ಯಭಿಚಾರ, ಅಪ್ರಮಾಣ ಪರಿಗ್ರಹ ಈ ಐದು ಮಹಾಪಾಪಗಳನ್ನು ಮಾಡಿರುವಿ ದುರ್ಧ್ಯಾನ ಮತ್ತು ಅನೇಕ ಪ್ರಕಾರದ ಕುಕರ್ಮಗಳನ್ನು ನೀನು ಸಂಪಾದಿಸಿರುವಿ. ಆಹಾರದ ತೀವ್ರ ವೇದನೆಯಿಂದಲೇ ನೀನು ದೀನ ವೃತ್ತಿಯನ್ನು ಸ್ವೀಕರಿಸಿ, ಪರಾಧೀನನಾಗಿರುವಿ ಆಹಾರದ ಲೋಭದಿಂದ ಭಕ್ಷ್ಯ-ಅಭಕ್ಷ್ಯದ ವಿಚಾರವನ್ನೂ ಸಹ ಮಾಡಲಿಲ್ಲ ಹಗಲಿರುಳ ಇಲ್ಲವೆ ಯೋಗ್ಯಾಯೋಗ್ಯದ ವಿಚಾರವನ್ನು ಹಸಿವೆಗೆ ಒಳಗಾಗಿ ನೀನು ಮಾಡದೆ ಹೋದೆ ಕ್ರೋಧ, ಮಾನ, ಕಪಟ, ಲೋಭ, ಮೊದಲಾದವುಗಳನ್ನೂ ಆಹಾರಕ್ಕಾಗಿಯೇ ಸ್ವೀಕರಿಸಿದೆ ಹೊಟ್ಟೆಯ ಬೆನ್ನು ಹತ್ತಿ ಸ್ವಾಭಿಮಾನವನ್ನು ಕಳೆದುಕೊಂಡೆ ಆಹಾರದ ಲೋಭದಿಂದಲೇ ದೊಡ್ಡ ದೊಡ್ಡ ರೋಗದ ವೇದನೆಗಳನ್ನು ಸಹಿಸಿದೆ ಆಹಾರದ ಲೋಭದಿಂದಲೇ ಹೀನ ಜಾತಿ ಹಾಗೂ ನೀಚ ಕುಲದಲ್ಲಿ ಹುಟ್ಟಿದವರ ಸೇವೆಯನ್ನು ಮಾಡಿದೆ ಸ್ತ್ರೀಯರ ಪ್ರತಿ ಸ್ವಾಧೀನನಾಗಿ ನಿಂತೆ. ನಿರ್ಲಜ್ಜತನವನ್ನು ಸ್ವೀಕರಿಸಿ ಆಹಾರ-ವಿಹಾರಗಳಿಗೆ ತಿರುಗಾಡಿದ್ದನ್ನು ಕೇಳು. ಆಹಾರದ

ತೀವ್ರ ಇಚ್ಛೆಯಿಂದಾಗಿಯೇ ನಿನ್ನ ದೇಹವನ್ನು ಕಡಿದು ತುಂಡು ತುಂಡು ಮಾಡಲಾಯಿತು. ಅನೇಕ ಪ್ರಕಾರದ ದುರ್ವಚನಗಳನ್ನು ಸಹನಮಾಡಿದೆ ತಿರ್ಯಂಚ ಯೋನಿಯಲ್ಲಂತೂ ಈ ಆಹಾರದ ಲೋಭಕ್ಕಾಗಿಯೇ ಒಂದನ್ನೊಂದು ಪರಸ್ಪರ ಪ್ರಾಣಿಗಳು ಹರಿದು ತಿನ್ನುತ್ತವೆ. ಹೆಚ್ಚಿಗೇನು ಹೇಳುವುದು? ಈಗ ನಿನಗೆ ತೀರ ಕಡಿಮೆ ವೇಳೆ ಈ ಪರ್ಯಾಯದಲ್ಲಿ ಇರುವದಿದೆ ಅದಕ್ಕಾಗಿ ನೀನು ಈ ಆಹಾರದ ಮೇಲಿನ ಆಸಕ್ತಿಯನ್ನು ಬಿಡು ಇಂದ್ರಿಯಗಳ ಇಚ್ಛೆಯನ್ನು ಪೂರ್ಣ ಮಾಡುವ ಯತ್ನಕ್ಕೆ ಬೀಳಬೇಡ. ಈ ಹೊತ್ತಿನಲ್ಲಿ ಆಹಾರದ ತ್ಯಾಗಮಾಡುವ ಪ್ರಯತ್ನಕ್ಕೆ ನೀನು ತೊಡಗದೆ ಇದ್ದರೆ ವ್ರತ, ಸಂಯಮ, ತಪ, ಧರ್ಮ, ಕೀರ್ತಿ ಇವೆಲ್ಲವೂ ಕೆಟ್ಟು ಕುಮರಣವು ಪ್ರಾಪ್ತವಾದೀತು ಅದರಿಂದ ಅನಂತ ಕಾಲ ಸಂಸಾರದಲ್ಲಿ ಪರಿಭ್ರಮಣ ಮಾಡಬೇಕಾದೀತು. ಇದನ್ನು ನಿಶ್ಚಯವಾಗಿ ಮನಸ್ಸಿನಲ್ಲಿಟ್ಟು ಅತೃಪ್ತಿಯನ್ನು ಉತ್ಪನ್ನಮಾಡುವಂಥ ಆಹಾರವನ್ನು ಕ್ರಮ ಕ್ರಮದಿಂದ ತ್ಯಜಿಸುತ್ತ ಬರಬೇಕು. ಅದಕ್ಕಾಗಿ ಒಮ್ಮೊಮ್ಮೆ ಒಂದು, ಎರಡು, ಮೂರು, ಉಪವಾಸಗಳನ್ನು ಮಾಡುತ್ತಿರಬೇಕು ಮತ್ತೊಮ್ಮೆ ಒಂದು ಹೊತ್ತು ಊಟ ಇಲ್ಲವೆ ನೀರಸ ಆಹಾರ ಸ್ವೀಕರಿಸಬೇಕು. ಇನ್ನೊಮ್ಮೆ ಅಲ್ಪಾಹಾರ ತಕ್ಕೊಂಡು ಬಿಡಬೇಕು. ಈ ಕ್ರಮದಿಂದ ತನ್ನ ಶಕ್ತಿಯನ್ನು ನೋಡಿಕೊಂಡು, ಆಯುರ್ಮರ್ಯಾದೆಗೆ ಅನುಸರಿಸಿ ವ್ರತಗಳನ್ನು ಮಾಡುತ್ತ ಹೋಗಬೇಕು.

**ಹಾಲು ಮೊದಲಾದವುಗಳನ್ನು ಕುಡಿಯಲಿಕ್ಕೆ ತಕ್ಕೊಳ್ಳಬೇಕು.** ಸಾವಕಾಶವಾಗಿ ಆಹಾರವನ್ನು ಬಿಟ್ಟು ಹಾಲು ಕುಡಿದು ನಿಲ್ಲಲಿಕ್ಕೆ ಪ್ರಯತ್ನಿಸಬೇಕು ಹಾಲು ಕುಡಿದು ಇರುವ ರೂಢಿಯಾದ ತರುವಾಯ ಅದನ್ನೂ ಕೂಡ ಕ್ರಮದಿಂದ ತ್ಯಾಗಮಾಡುವದಕ್ಕಾಗಿ ಒಮ್ಮೆ ಮಜ್ಜಿಗೆ, ಇನ್ನೊಮ್ಮೆ ಬಿಸಿ ನೀರು ಕುಡಿದು ಇರಬೇಕು. ಮುಂದೆ ಕ್ರಮದಿಂದ ಸಂಪೂರ್ಣ ಆಹಾರವನ್ನೂ ನೀರನ್ನೂ ತ್ಯಾಗಮಾಡಿ ಉಪವಾಸವನ್ನೂ ಸ್ವೀಕರಿಸಬೇಕು. ಮೇಲಾಗಿ ಅಂತಃಕರಣದಲ್ಲಿ ಪಂಚ ನಮಸ್ಕಾರ ಮಂತ್ರದ ಧ್ಯಾನ ಮಾಡುತ್ತ ಧರ್ಮಧ್ಯಾನದಲ್ಲಿ ಲೀನನಾಗಿ, ಬಹಳ ಸಾವಧಾನತೆಯಿಂದ ದೇಹವನ್ನು ತ್ಯಾಗಮಾಡಬೇಕು ಇದಕ್ಕೆ ಕಾಯ ಸಲ್ಲೇಖನ ಎನ್ನುವರು

**ಒಂದು ಸಂಶಯ**—ಮೇಲೆ ಹೇಳಿದ ಕ್ರಮದಿಂದ ಆಹಾರದ ತ್ಯಾಗ ಮತ್ತು ಕೊನೆಗೆ ಪೂರ್ಣ ತ್ಯಾಗ ಮಾಡುವುದರಿಂದ ಆತ್ಮಘಾತ ಮಾಡಿಕೊಂಡಂತೆ ಆಗುತ್ತದೆ ಆತ್ಮಘಾತ ಮಾಡಿಕೊಳ್ಳುವುದು ಪಾಪವೆನ್ನುವರು. ಇದು ಹೇಗೆ?

**ಸಮಾಧಾನ**—**ಕಾಯ ಸಲ್ಲೇಖನವು ಆತ್ಮಘಾತವಲ್ಲ.** ಸುಖೋಪಭೋಗವನ್ನು ಬಿಟ್ಟು ಹಲವು ದಿನಗಳ ವರೆಗೆ ಮುನಿಯ ಅವಸ್ಥೆ, ಶ್ರಾವಕ ಅವಸ್ಥೆ, ಮಹಾವ್ರತಗಳು, ಅಣುವ್ರತಗಳು ಮೊದಲಾದವುಗಳನ್ನು ಪಾಲನ ಮಾಡುವ ಶಕ್ತಿ, ಸ್ವಾಧ್ಯಾಯ, ಧ್ಯಾನ, ಶೀಲ, ತಪ, ವ್ರತ, ಉಪವಾಸ ಮೊದಲಾದವುಗಳನ್ನು ಮಾಡುವ ಸಾಮರ್ಥ್ಯ ಯಾರಿಗೆ ಇರುವವೋ ಅವರು ಆಹಾರವನ್ನು ತ್ಯಾಗಮಾಡಿ ಸಲ್ಲೇಖನವನ್ನು ತಕ್ಕೊಳ್ಳಕೂಡದು. ಅದರಂತೆ ಜಿನಪೂಜೆ, ಸ್ವಾಧ್ಯಾಯ, ಧರ್ಮೋಪದೇಶ, ಧರ್ಮಶ್ರವಣ, ನಾಲ್ಕು ಆರಾಧನೆಗಳ ಚಿಂತನೆ ಮೊದಲಾದವುಗಳನ್ನು ಉತ್ತಮ ರೀತಿಯಿಂದಲೂ ನಿರ್ವಿಘ್ನವಾಗಿಯೂ ಸಾಧಿಸಲಿಕ್ಕೆ ಯಾರಿಗೆ ಸಾಧ್ಯವಿದೆಯೋ ಅವರೂ ಸಹ ಆಹಾರ ತ್ಯಾಗಮಾಡುವ ಸಲ್ಲೇಖನವನ್ನು ಸ್ವೀಕರಿಸಕೂಡದು ಯಾರಿಗೆ ಬರಗಾಲದ ಹೆದರಿಕೆ ಇಲ್ಲವೋ, ಯಾರ ಶರೀರದಲ್ಲಿ ಅಸಾಧ್ಯ ರೋಗವು ಉತ್ಪನ್ನವಾಗಿಲ್ಲವೋ, ಸ್ಮರಣ ಶಕ್ತಿ, ಜ್ಞಾನಮೊದಲಾದವುಗಳನ್ನು ನಷ್ಟಗೊಳಿಸುವಂಥ ಮುಪ್ಪು ಯಾರಿಗೆ ಆವರಿಸಿಲ್ಲವೋ, ದಶಲಾಕ್ಷಣಿಕ ಧರ್ಮವನ್ನು ಪಾಲಿಸುವ ಶಕ್ತಿಯು ಯಾರ ಶರೀರದಲ್ಲಿರುವುದೋ, ಇಂಥವರು ಆಹಾರವನ್ನು ತ್ಯಜಿಸಿ ಸಲ್ಲೇಖನವನ್ನು ಧಾರಣ ಮಾಡಕೂಡದು ಶರೀರದಿಂದ ಧರ್ಮ ಸಾಧನೆಯು ಆಗುತ್ತಿದ್ದರೂ ಸಹ ಯಾರು ಅನ್ನ ನೀರುಗಳನ್ನು ಬಿಟ್ಟು ಮರಣವನ್ನು ಎಳೆದುಕೊಳ್ಳುತ್ತಾರೆಯೋ ಅವರು ಧರ್ಮ ಪರಾಙ್ಮುಖರಾದಂತಾಗುತ್ತದೆ. ಮನುಷ್ಯ ಪರ್ಯಾಯದಲ್ಲಿ ವ್ರತ, ಶೀಲ, ಸಂಯಮ ಮೊದಲಾದ ಸಾಧನಗಳಿಂದ ಮೋಕ್ಷವನ್ನು ಸಂಪಾದಿಸಲಿಕ್ಕೆ ಸಾಧ್ಯವಿದ್ದಾಗಲೂ ಶರೀರದ ಮೇಲೆ ಬೇಸತ್ತು, ಆಯುಷ್ಯ ಇದ್ದಾಗಲೂ ಯಾರು ಧರ್ಮ ಸೇವನೆಯಿಂದ ಪರಾಙ್ಮುಖರಾಗಿ ಆಹಾರದ ತ್ಯಾಗವನ್ನು ಮಾಡುವರೋ ಅವರ ಆತ್ಮಘಾತವಾಗುತ್ತದೆ. ಯಾಕಂದರೆ ಶರೀರವು ಧರ್ಮದ ಪರಮ ಸಾಧನವಾಗಿವೆ ಅದರ ಸಂರಕ್ಷಣೆಯನ್ನು ಆಸ್ಥೆಯಿಂದ ಮಾಡಲಿಕ್ಕೆಬೇಕು ಹೀಗೆ ಭಗವಂತನ ಆಜ್ಞೆಯೂ ಇದೆ ಧರ್ಮದ ಸಾಧನವಾದಂಥ ಶರೀರಕ್ಕೆ ಅನ್ನನೀರುಗಳನ್ನು ಕೊಡದೆ ಅದನ್ನು ನಷ್ಟಗೊಳಿಸಿ ಬಿಟ್ಟರೆ ಮುಂದೆ ದೇವ-ನರಕ-ತಿರ್ಯಂಚ ಯೋನಿಗಳಲ್ಲಿ ಇದರ ಪ್ರಾಪ್ತಿಯು ಆಗಲಾರದು. ದೇವ ನರಕ ತಿರ್ಯಂಚ ಯೋನಿಗಳಲ್ಲಿ ಶರೀರವು ಪ್ರಾಪ್ತವಾದರೂ ಸಹ ಅದು ಸಂಯಮ, ವ್ರತ, ಶೀಲ, ಧರ್ಮ

ಮೊದಲಾದವುಗಳನ್ನು ಸಾಧ್ಯ ಮಾಡಿಕೊಳ್ಳಲಿಕ್ಕೆ ಉಪಯೋಗ ಬೀಳುವಂತೆ ಅದರ ರಚನೆಯು ಇರುವದಿಲ್ಲ. ಈ ಅನುಕೂಲತೆಯು ಕೇವಲ ಮಾನವ ಶರೀರದಲ್ಲಿಯೇ ಇದೆ. ಇಂಥ ಸ್ಥಿತಿಯಲ್ಲಿ ಶರೀರವನ್ನು ಯೋಗ್ಯ ರೀತಿಯಿಂದ ಪೋಷಿಸದೆ, ಕಾರಣವಿಲ್ಲದೆ ಆಹಾರವನ್ನು ತ್ಯಜಿಸಿ ಅದನ್ನು ಕಳೆದು ಕೊಳ್ಳುವುದು ಯೋಗ್ಯವಲ್ಲ ಇದರಿಂದ ಯಾವ ಕಾರ್ಯಸಿದ್ಧಿಯೂ ಆಗಲಾರದು. ಈ ದೇಹವು ಹೋಯಿತೆಂದರೆ ವ್ರತ-ಧರ್ಮಗಳನ್ನು ಸಾಧಿಸಲಿಕ್ಕೆ ಬಾರದಂಥ ದೇಹವು ಪ್ರಾಪ್ತವಾದೀತು. ಅದಕ್ಕಾಗಿ ಧರ್ಮಸಾಧನೆಯನ್ನು ಮಾಡದೆ ಶರೀರದ ನಾಶವನ್ನು ಮಾಡಬಾರದು

**ಕರ್ಮಮಯ ಶರೀರದ ತ್ಯಾಗವನ್ನು ಮೊದಲು ಮಾಡಿರಿ.** ಅನಂತಾನಂತ ಶರೀರಗಳನ್ನು ಧಾರಣ ಮಾಡಲಿಕ್ಕೆ ಕಾರಣವಾದಂಥ ಕರ್ಮಮಯ ಶರೀರವನ್ನು (ಕಾರ್ಮಣ ದೇಹ) ಮೊದಲು ತ್ಯಾಗ ಮಾಡಲಿಕ್ಕೆ ಯತ್ನಿಸಿರಿ ಅದರಂತೆ ಮಿಥ್ಯಾತ್ವ, ಅಸಂಯಮ, ಕಷಾಯ ಮೊದಲಾದ ವಿಕಾರಗಳನ್ನು ಮೊದಲು ಇಲ್ಲದಂತೆ ಮಾಡಲಿಕ್ಕೆಬೇಕು ಆಹಾರಾದಿಗಳನ್ನು ತ್ಯಾಗಮಾಡುವುದರಿಂದ ಎಲುವು-ಮಾಂಸಗಳಿಂದ ತುಂಬಿದ ಈ ಔದಾರಿಕ ದೇಹವು ಇಲ್ಲದಂತೆ ಆದೀತು ಆದರೆ ಇನ್ನೊಂದು ಶರೀರವು ಪ್ರಾಪ್ತವಾಗಿಯೇ ತೀರುವುದು ಅದಕ್ಕಾಗಿ ಎಂಟು ಕರ್ಮಗಳ ರೂಪದಲ್ಲಿರುವ ದೇಹವನ್ನು ನಾಶಗೊಳಿಸಿದರೆ ಜನ್ಮಮರಣಗಳಿಂದ ಬಿಡುಗಡೆಯಾದೀತು ಅಂತಲೇ ಆ ಕರ್ಮಮಯ ದೇಹವನ್ನು ಮೊದಲು ನಷ್ಟಗೊಳಿಸಬೇಕು. ವ್ರತ, ತಪ, ಸಂಯಮಾದಿಗಳನ್ನು ದೃಢತೆಯಿಂದ ಧಾರಣ ಮಾಡಿ ಆತ್ಮನ ಕಲ್ಯಾಣವನ್ನು ಮಾಡಿಕೊಳ್ಳಬೇಕು ಯಾವ ಕಾಲಕ್ಕೆ ಈ ಶರೀರವು ಧರ್ಮ ಪಾಲನ ಮಾಡಲಿಕ್ಕೆ ಅಸಮರ್ಥವೆಂದು ಕಂಡುಬರುವುದೋ ಆಗ ಅದರ ಮೇಲಿನ ಮಮತ್ವವನ್ನು ಬಿಟ್ಟು ಬಿಡಬೇಕು. ಯಾಕಂದರೆ ನಷ್ಟವಾಗುವ ಪದಾರ್ಥದ ಮೇಲೆ ಮಮತ್ವವನ್ನು ಇಡುವುದರಲ್ಲಿ ಅರ್ಥವಿಲ್ಲ

**ಕಷಾಯ ಸಲ್ಲೇಖನ**—ಈಗ ಕಾಯಸಲ್ಲೇಖನವೆಂದರೇನು? ಅದನ್ನು ಹೇಗೆ ಆಚರಿಸಬೇಕೆಂಬುದನ್ನು ಹೇಳಲಾಯಿತು. ಇದೇ ಪ್ರಕಾರ ರಾಗ-ದ್ವೇಷ-ಮೋಹಾದಿಕ ಕಷಾಯಗಳನ್ನೂ ಶರೀರದ ಸಂಗಡವೇ ಕೃಷ್ಯ-ಗೊಳಿಸುತ್ತ ಹೋಗುವುದು ಕಷಾಯ ಸಲ್ಲೇಖನವೆನಿಸುತ್ತದೆ. ಕಷಾಯ ಸಲ್ಲೇಖನವನ್ನು ಮಾಡದ ಹೊರತಾಗಿ ಕಾಯ ಸಲ್ಲೇಖನವು ವ್ಯರ್ಥವಾಗಿದೆ ಶರೀರವನ್ನು ಕೃಶಗೊಳಿಸುವುದು ರೋಗಿ, ದರಿದ್ರಿ ಮತ್ತು ಪರಾಧೀನ ಮನುಷ್ಯನಿಗೂ ಸಹ ಸಾಧ್ಯವಿದೆ ಇದರಲ್ಲಿ ಬಹಳ ದೊಡ್ಡ ಪುರುಷಾರ್ಥವಿಲ್ಲ. ಶರೀರವನ್ನು ಕೃಶಗೊಳಿಸುತ್ತಿರು-ವಾಗಲೇ ಅದರ ಜೊತೆಯಲ್ಲಿ ರಾಗದ್ವೇಷ ಮೋಹಾದಿಗಳನ್ನು ಕೃಶಗೊಳಿಸುತ್ತ ಹೋಗುವುದು ನಿಜವಾದ ಪುರುಷಾರ್ಥವಾಗಿದೆ. ಇದರಿಂದ ಅಂತಃಕರಣವು ವಿಕಾರರಹಿತವಾಗುವುದು ಈ ಪುರುಷಾರ್ಥವನ್ನು ಸಾಧಿಸು-ವವರಿಗೆ ಇಹ-ಪರಲೋಕದೊಳಗಿನ ಎಲ್ಲ ಇಚ್ಛೆಗಳ ಅಭಾವವಾಗುತ್ತದೆ ಅಲ್ಲದೆ ಮರಣಕಾಲದಲ್ಲಿ ಶರೀರ, ಕುಟುಂಬ, ಪರಿಗ್ರಹ ಮೊದಲಾದವುಗಳ ಮೇಲಿನ ಮಮತ್ವವು ಸಂಪೂರ್ಣ ಇಲ್ಲದಂತಾಗುತ್ತದೆ ಮತ್ತು ವೀತರಾಗ ಭಾವದಿಂದ ಸಂಯಮ ಧಾರಣಮಾಡಿ ಮರಣವನ್ನು ಹೊಂದುತ್ತಾರೆ ಇದಕ್ಕೇನೇ ನಿಜವಾದ ಕಷಾಯ ಸಲ್ಲೇಖನವೆನ್ನಬೇಕು.

**ವಿಷಯ ಕಷಾಯಗಳನ್ನು ಗೆಲ್ಲಬೇಕು.** ವಿಷಾಯ ಕಷಾಯಗಳನ್ನು ಗೆಲ್ಲುವವರಿಗೇನೇ ಸಮಾಧಿ ಮರಣವನ್ನು ಸಾಧಿಸುವ ಯೋಗ್ಯತೆಯು ಪ್ರಾಪ್ತವಾಗುತ್ತದೆ ಯಾರು ವಿಷಯಾಸಕ್ತರೂ ಕಷಾಯದ ಆಧೀನರೂ ಇರುವರೋ ಅವರಿಗೆ ಅದು ಸಾಧಿಸುವದಿಲ್ಲ ಸಂಸಾರೀ ಜೀವಗಳಲ್ಲಿ ವಿಷಯ ಹಾಗೂ ಕಷಾಯಗಳು ಮುಖ್ಯವಾಗಿ ವಾಸಮಾಡುತ್ತವೆ ಬಹಳಷ್ಟು ಸಾಮರ್ಥ್ಯ ಉಳ್ಳ ಪರಾಕ್ರಮಿ ಪುರುಷನಿಗೂ ಸಹ ಇವುಗಳನ್ನು ಗೆಲ್ಲಲಿಕ್ಕೆ ಆಗುವದಿಲ್ಲ. ಇಲ್ಲಿಯ ವರೆಗೆ ಈ ಪೃಥ್ವಿಯ ಮೇಲೆ ಅತುಲ ಬಲವನ್ನು ಧಾರಣ ಮಾಡುವಂಥ ಬಲಭದ್ರ, ನಾರಾಯಣ, ಚಕ್ರವರ್ತಿ ಪುರುಷರನ್ನು ದುರ್ಬಲಗೊಳಿಸಿ ಇಡಲಾಗಿದೆ ಎಲ್ಲರನ್ನೂ ತನ್ನ ಆಧೀನಗೊಳಿಸಿ ಇಟ್ಟಿದೆ. ಇವು ಎರಡು ಬಲಿಷ್ಠ ಶಕ್ತಿಗಳಾಗಿವೆ ಸಂಸಾರದೊಳಗಿನ ಎಲ್ಲ ದುಃಖಗಳು ವಿಷಯ ಲಂಪಟರು, ಲೋಭಿ, ಅಭಿಮಾನಿಗಳಿಗೇನೇ ಪ್ರಾಪ್ತವಾಗುತ್ತವೆ ಕೆಲವು ಜೀವಗಳು ಜಿನ ದೀಕ್ಷೆಯನ್ನೂ ತಕ್ಕೊಂಡು ಕಷಾಯದ ಸಂತಾಪವನ್ನು ತಾಳಲಾರದೆ ಭ್ರಷ್ಟವಾಗುತ್ತವೆ. ಅವರ ಅಭಿಮಾನ, ಲೋಭಗಳು ಬಿಡುವದಿಲ್ಲ. ಅನಾದಿ ಕಾಲದಿಂದಲೂ ಈ ವಿಷಯಗಳ ವಾಸನೆಯು ನಡೆಯುತ್ತ ಬಂದುದರಿಂದ ಒಂದು ಕ್ಷಣವೂ ಸಹ ಅವುಗಳಿಂದ ಪರಾಙ್ಮುಖನಾಗುವದೆಂದರೆ ಅತಿಶಯ ದುಃಖವೆನಿಸುತ್ತದೆ ಮೇಲಿಂದ ಮೇಲೆ ಕಷಾಯಗಳ ಪ್ರಜ್ವಲತೆಯು ಹೆಚ್ಚುತ್ತ ಹೋಗುವುದು ಆದರಿಂದ ಸ್ವಸ್ವರೂಪದ ಮರೆವು ಉಂಟಾಗುತ್ತದೆ

**ಭಗವತೀ ಆರಾಧನಾ ಗ್ರಂಥವನ್ನು ಅವಶ್ಯ ಓದಬೇಕು.** ಆತ್ಮ ಸ್ವರೂಪ-ಹಾಗೂ ವಿಷಯಗಳ ಸ್ವರೂಪದ ಸವಿಸ್ತರ ವರ್ಣನೆಯು 'ಭಗವತೀ ಆರಾಧನಾ' ಎಂಬ ಗ್ರಂಥದಲ್ಲಿ ಬರುತ್ತದೆ. ಅದನ್ನು ಜಿಜ್ಞಾಸುಗಳಾದವರು ನೋಡಬೇಕು. ಆ ಗ್ರಂಥವನ್ನು ಶಿವಾರ್ಯರೆಂಬ ಆಚಾರ್ಯರು ರಚಿಸಿದ್ದಾರೆ ವೀತರಾಗಿಯಾಗಲಿಕ್ಕೆ ಇಚ್ಛಿಸುವ ಪುರುಷನಿಗೆ ಈ ಗ್ರಂಥದ ಅವಲೋಕನದಿಂದ ಬಹಳ ಲಾಭವಾಗುತ್ತದೆ ಸಮಾಧಿ ಮರಣದ ಹೊತ್ತಿನಲ್ಲಿ ಜೀವದ ಕಲ್ಯಾಣ ಮಾಡುವಂಥ ಉಪದೇಶರೂಪ ಅಮೃತವನ್ನು ಸಹಸ್ರ ಧಾರೆಗಳಿಂದ ಅದು ಸುರಿಸುತ್ತದೆ. ಇದರ ಸ್ವಾಧ್ಯಾಯವನ್ನು ಅವಶ್ಯಮಾಡಬೇಕು. ಇಲ್ಲಿ ಆ ಗ್ರಂಥದ ಆಧಾರದಿಂದ ಸ್ವಲ್ಪದರಲ್ಲಿ ಸಮಾಧಿ ಮರಣದ ಸ್ವರೂಪವನ್ನು ಹೇಳಲಾಗಿದೆ

**ಧರ್ಮವಂತ ಹಾಗೂ ವ್ರತಿಕ ಗೃಹಸ್ಥನ ಸಹವಾಸವನ್ನು ಶ್ರಾವಕರು ಮಾಡಬೇಕು.** ಸಾಧುಗಳಿಗೆ ರತ್ನತ್ರಯ ಧರ್ಮದ ರಕ್ಷಣ ಮಾಡುವದಕ್ಕೆ ಆಚಾರ್ಯರ ಸಂಘವು ಸಹಾಯಕವಿರುತ್ತದೆ ಹಾಗೆಯೇ ವೈಯಾವೃತ್ಯವನ್ನು ಮಾಡಿ ಧರ್ಮೋಪದೇಶವನ್ನು ಪಡೆಯಲಿಕ್ಕೆ ಮುನಿಗಳ ಉಪಯೋಗವು ಬಹಳವಾಗುತ್ತದೆ ಯಾಕಂದರೆ ಅವರ ಸಹಾಯವು ದೊರೆಯಿತೆಂದರೇನೇ ಕರ್ಮವನ್ನು ಗೆದ್ದು ಆರಾಧನೆಯಲ್ಲಿ ಸಾವಧಾನಚಿತ್ತರಾಗಿರಲಿಕ್ಕೆ ಬರುತ್ತದೆ ಇದೇ ಪ್ರಕಾರ ಗೃಹಸ್ಥರಿಗೂ ಧರ್ಮವಾನ್, ಶ್ರದ್ಧಾಳು ಮತ್ತು ಜ್ಞಾನವಂತರಾದ ಶ್ರಾವಕರ ಸಹಾಯವು ಅವಶ್ಯವಾಗಿರಲಿಕ್ಕೆ ಬೇಕು. ಅಲ್ಲದೆ ಅದನ್ನು ಬಹಳ ಪ್ರಯತ್ನದಿಂದ ಸಂಪಾದಿಸಲಿಕ್ಕೆ ಬೇಕು ಪಂಚಮ ಕಾಲದಲ್ಲಿ ವಿಷಯಾನುರಾಗಿ ಮತ್ತು ಕಷಾಯಿ ಜೀವಿಗಳ ಸಂಗತಿಯೇ ಹೆಚ್ಚಾಗಿರುವುದರಿಂದ ಯಾವಾಗಲೂ ರಾಗ, ದ್ವೇಷ, ಶೋಕ, ಭಯ ಉತ್ಪನ್ನ ಮಾಡುವಂಥ ಆರ್ತರೌದ್ರಧ್ಯಾನಗಳ ಉತ್ಪತ್ತಿಯಾಗುವುದೇ ಸಹಜವಾಗಿದೆ. ಯಾಕಂದರೆ ಸ್ತ್ರೀ, ಪುತ್ರ, ಮಿತ್ರ, ಬಾಂಧವಾದಿಗಳೆಲ್ಲರೂ ತಮ್ಮ ತಮ್ಮ ಸ್ವಾರ್ಥಸಾಧನೆಯಲ್ಲಿ ಮಗ್ನರಾಗಿರುವುದರಿಂದ ಅವರು ಎರಡನೆಯವರನ್ನು ತಮ್ಮ ಸಲುವಾಗಿ ಪಾಪಮಾಡಲಿಕ್ಕೆ ಹಚ್ಚಿ ಆತ್ಮಸ್ವರೂಪವನ್ನು ಕಣ್ಮರೆಗೊಳಿಸುತ್ತಾರೆ ಎಲ್ಲರೂ ತಮ್ಮ ತಮ್ಮ ವಿಷಯ ಕಷಾಯಗಳನ್ನು ಪುಷ್ಟಗೊಳಿಸುವುದರಲ್ಲಿಯೇ ಮಗ್ನರಾಗಿರುತ್ತಾರೆ. ಅಂತಲೇ ಧರ್ಮಪ್ರೇಮಿ, ಪರೋಪಕಾರಿ, ವಾತ್ಸಲ್ಯ ಧಾರಣಮಾಡುವಂಥ ಮತ್ತು ಕರುಣಾರಸದಿಂದ ತುಂಬಿದಂಥ ಗೃಹಸ್ಥರ ಸಂಯೋಗವು ಪ್ರಾಪ್ತವಾಗುವುದೂ ಸಹ ಒಂದು ದೊಡ್ಡ ಪುಣ್ಯಸಂಚಯದ ಸಂಗತಿಯೇ ಆಗಿದೆ ಆದರೂ ಬೇಕಾದ ಪ್ರಯತ್ನಮಾಡಿ ಇಂಥ ಪುರುಷರ ಸಹವಾಸವನ್ನು ಸಂಪಾದಿಸಬೇಕು

**ಧರ್ಮಭ್ರಷ್ಟರ ಸಂಗತಿಯನ್ನು ಬಿಡಬೇಕು.** ಮೋಹಪಾಶದಲ್ಲಿ ತನ್ನ ಕುತ್ತಿಗೆಯನ್ನು ಕೊಟ್ಟು, ತಾನು ದೂರ ನಿಲ್ಲುವಂಥ ಧರ್ಮಭ್ರಷ್ಟರೆನಿಸುವ ಕುಟುಂಬದೊಳಗಿನ ಜನರ ಸಹವಾಸವನ್ನು ಶಕ್ಯವಿದ್ದಷ್ಟು ಬೇಗನೆ ಬಿಡಬೇಕು ಪರಾಧೀನತೆಯಿಂದ ಕುಸಂಗತಿಯು ಗಂಟುಬಿದ್ದರೆ ಮತ್ತು ಅವರಿಗೆ ಪ್ರತಿಕಾರ ಮಾಡುವುದು ಅಶಕ್ಯವೆನಿಸಿದರೆ ಅಂಥವರ ಕೂಡ ಮಾತನ್ನೇ ನಿಲ್ಲಿಸಬೇಕು. ತನ್ನ ಕರ್ಮಕ್ಕನುಸಾರವಾಗಿಯೂ ದೇಶಕಾಲಕ್ಕನು-ಕೂಲವಾಗಿಯೂ ಪ್ರಾಪ್ತವಾದಂಥ ಸ್ಥಳದಲ್ಲಿ ಆಸನ, ಶಯನಾದಿಗಳನ್ನು ಮಾಡಬೇಕು ಯಾವಾಗಲೂ ಅಂತಃಕರಣದಲ್ಲಿ ಜಿನಸೂತ್ರಗಳ ಚಿಂತನೆ ಮಾಡುತ್ತ ಇದ್ದು ಪರಮ ವೀತರಾಗ ಗುರುವಿಗೆ ಶರಣುಹೋಗಬೇಕು.

**ಧರ್ಮವಾನ್ ಗೃಹಸ್ಥನ ಉಪದೇಶವನ್ನು ಕೇಳಬೇಕು.** ಸಿದ್ಧಾಂತದ ಉಪದೇಶವನ್ನು ಧರ್ಮವಾನ್ ಗೃಹಸ್ಥನ ಮುಖದಿಂದ ಕೇಳಬೇಕು ವ್ರತ, ಉಪವಾಸ, ಸಂಯಮ, ಧ್ಯಾನ ಮತ್ತು ಭಾವನೆ ಇವುಗಳ ಚಿಂತನ ಮಾಡುವದನ್ನು ಬಿಡಬಾರದು ಧರ್ಮಾತ್ಮರು ತಮ್ಮ ಹಾಗೂ ಇತರರ ಧರ್ಮವೃದ್ಧಿಯಾಗಲೆಂಬ ಅಪೇಕ್ಷೆಯನ್ನು ಇಟ್ಟುಕೊಳ್ಳುವರು ಅಲ್ಲದೆ ಧರ್ಮದ ಪ್ರಭಾವನೆಯು ಆಗಲೆಂದು ಧರ್ಮೋಪದೇಶ, ವೈಯಾವೃತ್ಯ ಮೊದಲಾದ ಕ್ರಿಯೆಗಳನ್ನು ಮಾಡಲಿಕ್ಕೆ ಸಿದ್ಧರಿರುತ್ತಾರೆ ಈ ವಿಷಯದಲ್ಲಿ ಅವರೆಂದೂ ಆಲಸ್ಯವನ್ನು ಮಾಡುವದಿಲ್ಲ ತ್ಯಾಗ, ವ್ರತ, ಸಂಯಮ, ಶುಭಧ್ಯಾನ ಮತ್ತು ಶುಭಭಾವನೆ ಇವುಗಳಲ್ಲಿಯೇ ತಮ್ಮ ಹಾಗೂ ಇತರರ ಲಕ್ಷ್ಯವನ್ನು ಸೆಳೆಯುತ್ತಾರೆ ಕೆಲವರು ಹೀಗೆ ಮಾಡುತ್ತಿದ್ದರೂ ಕರ್ಮದ ತೀವ್ರ ಉದಯದಿಂದ ರೋಗ, ಹಸಿವು, ನೀರಡಿಕೆ ಮೊದಲಾದ ಪರೀಷಹಗಳು ಪ್ರಾಪ್ತವಾಗುತ್ತವೆ ಆಗ ಅವು ಸಹನವಾಗದೆ ಧರ್ಮದಿಂದ ಚ್ಯುತರಾಗುವ ಸಂಭವವು ಇರುತ್ತದೆ. ಅಂಥ ಸಂದರ್ಭದಲ್ಲಿ ಧರ್ಮವಂತ ಪುರುಷರು ಇಂಥ ಪತನದ ಅಂಚಿಗೆ ನಿಂತವರನ್ನು ಧರ್ಮದಲ್ಲಿ ಸ್ಥಿರಗೊಳಿಸುತ್ತಾರೆ.

**ರೋಗಪೀಡಿತರನ್ನು ತಿರಸ್ಕರಿಸಬಾರದು.** ಯಾರಾದರೂ ರೋಗದ ವೇದನೆಯಿಂದ ವ್ಯಾಕುಲರಾಗಿ ಅಳಹತ್ತಿದರೂ ಸಹ ಅವರನ್ನು ತಿರಸ್ಕರಿಸಕೂಡದು ಅಲ್ಲದೆ ಅವರ ಮನಸ್ಸಿಗೆ ಹತ್ತುವಂಥ ಮಾತುಗಳನ್ನು

ಆಡಬಾರದು. ಸವಿಯಾದ ಮಾತುಗಳಿಂದ ಅವರನ್ನು ಸಂತುಷ್ಟಗೊಳಿಬೇಕು ಮೊದಲೇ ವೇದನೆಯಿಂದ ಅವರ ಪರಿಣಾಮವು ಚಂಚಲವಾಗಿರುತ್ತದೆ. ಆಗ ತಿರಸ್ಕಾರದ ಮಾತುಗಳು ಅವರ ಕಿವಿಗೆ ಬಿದ್ದರೆ ತೀವ್ರ ಮಾನಸಿಕ ದುಃಖವಾಗಿ ದುರ್ಧ್ಯಾನವು ಸಂಭವಿಸುತ್ತದೆ ಅವರು ತಮ್ಮ ವ್ರತಗಳಿಂದ ಜಾರಿ, ಕೆಟ್ಟ ಆಚರಣೆಯ ಕಡೆಗೆ ಪ್ರವೃತ್ತರಾಗುತ್ತಾರೆ. ಒಮ್ಮೊಮ್ಮೆ ಆತ್ಮಘಾತವನ್ನು ಮಾಡಿಕೊಳ್ಳಲಿಕ್ಕೂ ಅವರು ಸಿದ್ಧರಾಗುತ್ತಾರೆ ಅದಕ್ಕಾಗಿ ಆರಾಧಕ ಪುರುಷರ ಧಿಕ್ಕಾರ ಇಲ್ಲವೆ ತಿರಸ್ಕಾರವನ್ನು ಮಾಡಕೂಡದು ಉಪದೇಶ ಮಾಡುವವರು ಧೈರ್ಯದಿಂದ ಅವರಿಗೆ ಬಹಳ ಪ್ರೀತಿಯಿಂದ ಹೇಳಬೇಕು ಸವಿಮಾತಿನಿಂದ ಅವರ ಅಂತಃಕರಣವನ್ನು ತಮ್ಮ ಕಡೆಗೆ ಸೆಳೆದುಕೊಳ್ಳ-ಬೇಕು ಸಹಜ ರೀತಿಯಿಂದ ಉಪದೇಶಮಾಡಬೇಕು ಅದನ್ನು ಕೇಳುತ್ತಿರುವಾಗ ಸ್ವಾಭಾವಿಕವಾಗಿ ಅವರ ದುಃಖವೆಲ್ಲ ಮರೆತುಹೋಗಬೇಕು ಯಾವಾಗಲೂ ಕರುಣಾರಸದಿಂದ ತುಂಬಿದ ಹಾಗೂ ಉಪಕಾರ ಬುದ್ಧಿಯು ಕಂಡುಬರುವಂಥ ಮಾತುಗಳನ್ನೇ ಬಾಯಿಂದ ಉಚ್ಚರಿಸುತ್ತಿರಬೇಕು.

ರೋಗಿಗಳಿಗೆ ಹೀಗೆ ಉಪದೇಶಿಸಬೇಕು. "ಎಲೈ ಆರಾಧಕ ಪುರುಷನೇ! ಧರ್ಮೇಚ್ಛು! ಸಾವಧ-ನಾಗಿರು. ಪೂರ್ವಕರ್ಮದ ಉದಯದಿಂದ ನಿನಗೆ ರೋಗದ ವೇದನೆಯು ಆಗುತ್ತಿದೆ. ನಿನಗೆ ಪರೀಷಹಗಳು ಪ್ರಾಪ್ತವಾದುದರಿಂದ ತೀವ್ರ ದುಃಖವಾಗುತ್ತಿದೆ. ನಿನ್ನ ಶರೀರವು ಅತಿಶಯ ನಿರ್ಬಲವಾಗಿದೆ ಆಯುಷ್ಯವು ಪೂರ್ಣವಾಗುವ ಹೊತ್ತು ಸಮೀಪಿಸಿದೆ. ಅದಕ್ಕಾಗಿ ಈಗ ನೀನು ಗಾಬರಿಯಾಗಬೇಡ. ಹೆದರಿಕೆಯನ್ನು ಬಿಟ್ಟು ಧೈರ್ಯದಿಂದಿರು ಭಯಭೀತನಾದಲ್ಲಿ ಇಲ್ಲವೆ ದೈನ್ಯವನ್ನು ಧಾರಣಮಾಡಿದಲ್ಲಿ ಕರ್ಮಕ್ಕೆ ದಯೆಯು ಬರುವುದು ಅಷ್ಟರಲ್ಲಿಯೇ ಇದೆ ನಿನಗೆ ಪ್ರಾಪ್ತವಾದ ದುಃಖವು ಯಾರಿಂದಲೂ ದೂರವಾಗದು ಅಸಾತಾ ಕರ್ಮದ ಉದಯವು ಇಲ್ಲದಂತಾಗಿ ಸಾತಾಕರ್ಮದ ಉದಯವನ್ನು ತಂದುಕೊಡುವುದಕ್ಕೆ ಯಾವ ಇಂದ್ರ, ಧರಣೇಂದ್ರ, ಅಹಮಿಂದ್ರ ಇಲ್ಲವೆ ಸಾಕ್ಷಾತ್ ಜಿನೇಂದ್ರನಿಗೂ ಸಾಮರ್ಥ್ಯವಿಲ್ಲ ಅವರಿಂದ ಅದು ಸಾಧ್ಯವೂ ಇಲ್ಲ ಹೀಗಿರಲಿಕ್ಕಾಗಿಯೂ ನೀನು ಕಾರಣವಿಲ್ಲದೆ ಈ ಹೆದರಿಕೆಯನ್ನು ಮನಸ್ಸಿನಲ್ಲಿ ಹುಟ್ಟಿಸಿಕೊಂಡಿರುವಿ ಅದು ವ್ಯರ್ಥವಾಗಿದೆ. ಈ ಹೆದರುವಿಕೆಯಿಂದ ನಿನ್ನ ಎರಡೂ ಲೋಕಗಳು ಕೆಟ್ಟುಹೋದಾವು ಧರ್ಮದಿಂದ ಪರಾಙ್ಮುಖವಾಗಬೇಕಾದೀತು ಹೀಗಾಗದಂತೆ ನೀನು ಧೈರ್ಯದಿಂದ ಇದ್ದು, ವ್ಯಾಕುಲಗೊಳ್ಳದೆ ಬಂದಂಥ ಕರ್ಮವನ್ನು ಭೋಗಿಸುತ್ತ ಹೋದಲ್ಲಿ ಪೂರ್ವಕರ್ಮದ ನಿರ್ಜರೆಯು ಆಗಿ, ಹೊಸಕರ್ಮವು ಕಟ್ಟಲಿಕ್ಕಿಲ್ಲ.

ಪ್ರತಿಜ್ಞಾ ಭಂಗವನ್ನು ಮಾಡಕೂಡದು. ನೀನು ಜೈನಧರ್ಮವನ್ನು ಧಾರಣಮಾಡಿದವನೆಂದು ಎನ್ನಿಸಿಕೊಳ್ಳುವಿ. ತ್ಯಾಗೀ ಹಾಗೂ ವ್ರತೀ ಪುರುಷರಲ್ಲಿ ನೀನು ಶ್ರೇಷ್ಠನೆಂದು ಮನ್ನಣೆಯಿದೆ. ಎಲ್ಲ ಜನರೂ ನಿನ್ನನ್ನು ದೊಡ್ಡ ಜ್ಞಾನಿಯೆಂದು ತಿಳಿಯುತ್ತಾರೆ ಸದ್ಯಕ್ಕೆ ಅಸ್ತಿತ್ವದಲ್ಲಿರುವ ಧರ್ಮಧಾರಕ ಪುರುಷರಲ್ಲಿ ನಿನ್ನ ಪ್ರಖ್ಯಾತಿಯಿದೆ. ನೀನು ವ್ರತಗ್ರಹಣಮಾಡಿರುವಿ. ಯಥಾಶಕ್ತಿ ವ್ರತ–ಸಂಯಮದ ಪ್ರತಿಜ್ಞೆಯನ್ನೂ ನೀನು ಮಾಡಿರುವಿ. ಈಗ ನೀನು ಆ ಪ್ರತಿಜ್ಞೆಯನ್ನು ರೋಗದ ವೇದನೆಯಿಂದ ವ್ಯಾಕುಲನಾಗಿ ಮುರಿಯುತ್ತಲಿರುವಿ ಇದರಿಂದ ಜಗತ್ತಿನಲ್ಲಿ ನಿನ್ನ ಅಪಕೀರ್ತಿಯಾದೀತು ಪರಲೋಕವೂ ಭ್ರಷ್ಟವಾದೀತು ಇದಲ್ಲದೆ ನಿನ್ನ ಧರ್ಮ ಹಾಗೂ ಧರ್ಮಬಂಧುಗಳ ಮೇಲೆ ಅಪವಾದವು ಆವರಿಸೀತು ನಿನ್ನ ಆಚರಣೆಯನ್ನು ನೋಡಿ, ಉಳಿದ ಭಾವುಕ ಜನರೂ ಸಹ ಇದೇ ಪ್ರಕಾರ ಸಂಕಟ ಸಮಯದಲ್ಲಿ ಪ್ರತಿಜ್ಞಾಭಂಗ ಮಾಡಲು ಯತ್ನಿಸಿಯಾರು. ಯಾವ ಪ್ರಕಾರ ಕ್ಷತ್ರಿಯ ಕುಲದಲ್ಲಿ ಉತ್ಪನ್ನವಾದಂಥ ಮಹಾನ್ ಸೇನಾಪತಿಯು ಯುದ್ಧಭೂಮಿಯ ದೊಡ್ಡ ದೊಡ್ಡ ಮಾತುಗಳನ್ನು ಹೇಳಿ, ಎದುರಿಗೆ ವೈರಿಯು ಬಂದೊಡನೆಯೇ ಹೆದರಿ ಓಡಹತ್ತಿದರೆ ಇತರ ಸೈನ್ಯದ ಅವಸ್ಥೆ ಏನಾದೀತು? ಅವರು ಸೇನಾಪತಿಯು ಹೋದ ಮೇಲೆ ಎಷ್ಟರ ವರೆಗೆ ಧೈರ್ಯವನ್ನು ತಾಳಬೇಕು? ಒಂದುವೇಳೆ ಈ ಸಂಕಟದೊಳಗಿಂದ ಪ್ರತಿಜ್ಞಾಭಂಗ ಮಾಡಿ ಬದುಕಿ ಉಳಿದರೂ ಜನನಿಂದೆಗೆ ಪಾತ್ರನಾಗಿ ಬಾಳಬೇಕಾದೀತು ಅಂದಮೇಲೆ ಹೀಗೆ ಬದುಕುವುದರಿಂದ ಏನು ಉಪಯೋಗ? ಈ ಪ್ರಕಾರ ನೀನು ಮೊದಲು ತ್ಯಾಗಸಂಯಮ ವ್ರತದ ಪ್ರತಿಜ್ಞೆಯನ್ನು ಮಾಡಿರುವಿ. ಅದನ್ನೀಗ ಬಿಡಲಿಕ್ಕೆ ಸಿದ್ಧನಾದರೆ ಜಗತ್ತಿನಲ್ಲಿ ನಿನ್ನ ಅಪಕೀರ್ತಿಯು ಬಹಳವಾಗುವುದು

ವೇದನೆಯ ಹೆದರಿಕೆಯು ಇರದಿರಲಿ. ಇದಲ್ಲದೆ ಅಶುಭ ಕರ್ಮವು ನಷ್ಟವಾದೀತೆನ್ನುವ ಹಾಗೇನೂ ಇಲ್ಲ ಮುಂದೆ ಇದಕ್ಕಿಂತಲೂ ಹೆಚ್ಚು ದುಃಖವನ್ನು ಕೊಡುವ ಅಶುಭ ಕರ್ಮದ ಬಂಧವಾಗುತ್ತ ಹೋದೀತು. ಅದರ ಮರ್ಯಾದೆಯು ಅಸಂಖ್ಯಾತಕಾಲದ ವರೆಗೂ ಇದ್ದೀತು. ಅಲ್ಲಿಯ ವರೆಗೆ ಇದಕ್ಕಿಂತಲೂ ಹೆಚ್ಚಿನ ದುಃಖ-

ವನ್ನು ಭೋಗಿಸ ಬೇಕಾದೀತು ಇದಕ್ಕೂ ಮೊದಲು ನೀನು "ನಾನು ಜೈನಧರ್ಮದ ಪರಮ ಭಕ್ತನಿರುವೆ ಜಿನೇಂದ್ರನ ಆಜ್ಞೆಯನ್ನು ಪಾಲಿಸುವದು ನನ್ನ ಪರಮ ಕರ್ತವ್ಯವಾಗಿದೆ ಅದಕ್ಕಾಗಿಯೇ ಈ ವ್ರತಾಚರಣೆಗಳನ್ನು ಸ್ವೀಕಾರ ಮಾಡುವುದು ಯೋಗ್ಯವಾಗಿದೆ. ಯಾವ ಜ್ಞಾನ, ಆಚರಣೆಗಳು ಅನಂತ ಜನ್ಮಗಳಲ್ಲಿ ದುರ್ಲಭವೋ ಅವು ಈಗ ವೀತರಾಗ ಗುರುವಿನ ಪ್ರಸಾದದಿಂದ ಲಭಿಸಿವೆ. ಇವುಗಳನ್ನು ನಾನು ಹೇಗೆ ಬಿಡಲಿ?"—ಹೀಗೆ ನಿಶ್ಚಯ ಮಾಡಿರುವಿ. ಹೀಗಿದ್ದೂ ಕೂಡ ನೀನು ಈಗ ರೋಗದ ವೇದನೆಯು ಹೆಚ್ಚಾದ ಕೂಡಲೆ ಮನಸ್ಸನ್ನು ಚಂಚಲಗೊಳಿಸುವುದು ನಾಚಿಕೆಗೇಡಲ್ಲವೆ? ಯಾವ ವೇದನೆಯಿಂದ ನಿನಗೆ ಇಂಥ ಭಯವು ಉತ್ಪನ್ನವಾಗಿರುವುದೋ ಅದರಿಂದ ಕೊನೆಗೆ ಏನಾಗುವುದಿದೆ? ಸಾವು ಪ್ರಾಪ್ತವಾದೀತು! ಇಷ್ಟೇ ತಾನೇ!! ಅದು ಎಂದಾದರೂ ಒಮ್ಮೆ ಬರತಕ್ಕದ್ದೇ ಯಾರು ದೇಹವನ್ನು ಧಾರಣ ಮಾಡಿರುವರೋ ಅವರಿಗೆ ಮರಣವು ಇದ್ದೇ ಇದೆ ಆದರೆ ಈ ಪ್ರಸಂಗದಲ್ಲಿ ವೀತರಾಗ ಗುರುವು ಉಪದೇಶಿಸಿದಂಥ ವ್ರತ-ಸಂಯಮಗಳನ್ನು ಹೆದರಿಕೆಯಿಂದ ತ್ಯಾಗ ಮಾಡದೆ, ನಾಲ್ಕು ಆರಾಧನೆಗಳಿಗೆ ಶರಣು ಹೋಗಿ ಮರಣವನ್ನೂ ಹೊಂದಿದರೆ ಇದರಂಥ ಲಾಭವು ಇನ್ನೊಂದಿಲ್ಲ ಮೂರು ಲೋಕದ ವಿಭೂತಿಯು ಒಂದು ವೇಳೆ ಪ್ರಾಪ್ತವಾದರೂ ಅದೂ ನಾಶವಂತವಿದೆ, ಪರಾಧೀನವೂ ಇದೆ ಆದರೆ ಈ ಆರಾಧನೆಯ ವಿಭೂತಿಯು ಅಥವಾ ಸಂಪತ್ತಿಯು ಅವಿನಾಶಿಯಾಗಿದೆ, ಅನಂತ ಸುಖವನ್ನು ಸಂಪಾದಿಸಿಕೊಡುವಂಥ-ದಾಗಿದೆ. ಇಂಥ ಸಮಾಧಿಮರಣವು ಪ್ರಾಪ್ತವಾಗಬೇಕೆಂದು ಮುನಿ, ಆಚಾರ್ಯ, ಉಪಾಧ್ಯಾಯ ಇವರು ಇಚ್ಛೆಯನ್ನು ಮಾಡುತ್ತಿರುತ್ತಾರೆ ಸಮ್ಯಗ್‌ದೃಷ್ಟಿ ಜೀವಿಗಳೂ ಇದನ್ನೇ ಅಪೇಕ್ಷಿಸುತ್ತಾರೆ ನೀವೂ ಕೂಡ ಇದನ್ನೇ ಬಯಸುತ್ತಿರುವಿರಿ. ಅದು ಪ್ರಾಪ್ತವಾಗಲಿಕ್ಕೆ ಕಾಲವೂ ಸಮೀಪಿಸಿದೆ. ಅಂದ ಮೇಲೆ ಇದಕ್ಕಿಂತ ಹೆಚ್ಚಿನ ಆನಂದವು ಇನ್ನೇನಿದೆ? ಅದರಲ್ಲಿಯೂ ಈ ರೋಗದ ವೇದನೆಯು ಮೇಲಿಂದ ಮೇಲೆ ಹೆಚ್ಚುತ್ತಲಿದೆ. ಇದೂ ಕೂಡ ದೊಡ್ಡ ಕೃಪೆಯೆಂದೇ ತಿಳಿಯಬೇಕು ಯಾಕಂದರೆ ಇದರಿಂದ ದೇಹದ ಮೇಲಿನ ಪ್ರೀತಿಯು ನಿಮ್ಮಲ್ಲಿ ಕಡಿಮೆಯಾಗುತ್ತ ಹೋದೀತು. ಪೂರ್ವ ಕಾಲದಲ್ಲಿ ಯಾವ ಅಸಾತಾ ಕರ್ಮದ ಬಂಧವಾಗಿತ್ತೋ ಅದರ ನಾಶವು ಸ್ವಲ್ಪ ಹೊತ್ತಿನಲ್ಲಿ ಆಗಿ ಹೋದೀತು ಅಲ್ಲದೆ ದುಃಖ ಹಾಗೂ ರೋಗದಿಂದ ತುಂಬಿದ ಶರೀರವೆಂಬ ಸೆರೆಮನೆಯೊಳಗಿಂದ ನಿಮ್ಮ ಬಿಡುಗಡೆಯು ಆದೀತು ವಿಷಯೋಪಭೋಗಾದಿಗಳ ವಿಷಯದಲ್ಲಿ ವಿರಕ್ತಿಯು ಉತ್ಪನ್ನವಾದೀತು. ಪರದ್ರವ್ಯದ ಮೇಲಿನ ಮಮತ್ವವು ಇಲ್ಲದಂತಾದೀತು ಮರಣದ ಭಯವು ಉಳಿಯಲಾರದು ಪುತ್ರ-ಮಿತ್ರ-ಬಾಂಧವರ ಮೇಲಿನ ಮಮತೆಯೂ ನಷ್ಟವಾದೀತು. ಈ ಪ್ರಕಾರ ಅನೇಕ ಉಪಕಾರಕ ಸಂಗತಿಗಳು ಈ ವೇದನೆಯಿಂದ ಉತ್ಪನ್ನವಾಗುವವು. ವೇದನೆಯಿಂದ ಭಯಭೀತನಾದರೂ ಸಹ ಅದರಿಂದ ತಿರುಗಿ ದುಃಖವೇ ಹೆಚ್ಚಾದೀತು. ಕರ್ಮದ ಉದಯವು ಇಲ್ಲದಂತೆ ಆಗುವದಿಲ್ಲ ಅಂದ ಮೇಲೆ ವಿನಾಕಾರಣ ಧೈರ್ಯವನ್ನು ಬಿಟ್ಟು ಏನುಪಯೋಗ? ಈ ಹೊತ್ತಿನಲ್ಲಿ ಧೈರ್ಯ ಧಾರಣ ಮಾಡಿದರೆ ಮಾತ್ರ ನೀನು ಕರ್ಮವನ್ನು ಗೆಲ್ಲುವುದು ಸಾಧ್ಯವಿದೆ.

**ಶೂರರು ಯಾರು?**—ಯಾರು ಕರ್ಮವನ್ನು ಗೆಲ್ಲುವರೋ ಅವರೇ ಶೂರರು. ಯಾವ ಹೊತ್ತಿನಲ್ಲಿ ನೀವು ಅಳುತ್ತ ಕೂಡುವಿರೋ, ಚಡಪಡಿಸುತ್ತಲಿರುವಿರೋ, ಕಸಿವಿಸಿಗೊಳ್ಳುವಿರೋ ಆಗ ಕರ್ಮವು ನಿಮ್ಮನ್ನು ಹೊಡೆದು ಒಗೆದು, ತಿರ್ಯಂಚಪೇ ಮೊದಲಾದ ಕುಗತಿಗಳಿಗೆ ಒಯ್ದು ಮುಟ್ಟಿಸೀತು. ಅಲ್ಲಿ ಅನಂತ ದುಃಖವನ್ನು ಭೋಗಿಸ ಬೇಕಾದೀತು. ಯಾವುದರಿಂದ ನಿಮ್ಮ ಕುಲ, ಜಾತಿ ಮತ್ತು ಧರ್ಮಗಳ ಕೀರ್ತಿಯು ಹೆಚ್ಚೀತೋ ಮತ್ತು ನಿಮಗೆ ದುಃಖವಾಗಲಿಕ್ಕಿಲ್ಲವೋ ಅಂಥ ನಡತೆಯನ್ನೇ ಈ ಹೊತ್ತಿನಲ್ಲಿ ನೀವು ಇಡಲಿಕ್ಕೆ ಬೇಕು. ಯಾವನು ಶೌರ್ಯಶಾಲಿಯಾದ ಕ್ಷತ್ರಿಯ ಕುಲದಲ್ಲಿ ಜನಿಸಿರುವನೋ ಅವನು ರಣಭೂಮಿಯ ಮೇಲೆ ವೈರಿಗಳಿಂದ ಎಂಥ ದೊಡ್ಡ ಆಘಾತವಾದರೂ ಸಹ ಸಹನ ಮಾಡಿಕೊಳ್ಳುತ್ತಾನೆ ವೈರಿಗಳಿಗೆ ಬೆನ್ನನ್ನು ತೋರಿಸಿ ರಣಭೂಮಿಯಿಂದ ಅವನೆಂದೂ ಓಡಿ ಬರಲಾರನು ಪ್ರಸಂಗ ಬಂದರೆ ತನ್ನ ಪ್ರಾಣವನ್ನು ಸಹ ಕೊಡುವನು. ಆದರೆ ಬೆನ್ನು ತೋರಿಸುವದಿಲ್ಲ. ಇದೇ ಪ್ರಕಾರ ಪರಮ ವೀತರಾಗ ಗುರುವಿಗೆ ಶರಣುಹೋದ ಶೂರ ಪುರುಷನು ಅಶುಭ ಕರ್ಮದ ಪ್ರಹಾರವಾಯಿತೆಂದು ದೇಹವನ್ನು ಬಿಡಲು ಸಿದ್ಧನಾಗಬೇಕೇ ಹೊರತಾಗಿ, ದೈನ್ಯವನ್ನು ತೋರಿಸಿ ಅಶುಭ ಕರ್ಮದಿಂದ ಸೋಲಕೂಡದು. ಅನೇಕ ಜೈನ ಸಾಧುಗಳಿಗೆ ದುಷ್ಟ ವೈರಿಗಳು ಅರಣ್ಯದಲ್ಲಿ ಸಮಾಧಿಸ್ಥರಿರುವಾಗ ನಾಲ್ಕು ಮಗ್ಗಲುಗಳಿಂದ ಬೆಂಕಿಯನ್ನು ಹಚ್ಚಿ ಬಿಟ್ಟರು. ಅಂಥ ಪ್ರಸಂಗದಲ್ಲಿ ಆ ಸಾಧುಗಳು ಆ ಅಗ್ನಿಯಲ್ಲಿ ಅನೇಕ ಪ್ರಕಾರದ ವೇದನೆಗಳನ್ನು ಅನುಭವಿಸಿದರು. ಆಗ ಅವರು ಮನಸ್ಸಿನಲ್ಲಿ ಹೀಗೆ ವಿಚಾರಿಸಿದರು.—"ನಮ್ಮ ಹಿಂದೆ

ಕರ್ಮದ ಋಣವು ಬೆನ್ನು ಹತ್ತಿದೆ ಈಗ ಅದರ ನಾಶವಾಗುತ್ತಿದೆ ಈಗ ನಾವು ಹೆದರಿ ಧೈರ್ಯವನ್ನು ಬಿಡ-ಕೂಡದು "-ಈ ಪ್ರಕಾರ ವಚನಕ್ಕೆ ಅಗೋಚರವಾದಂಥ ವೇದನೆಯನ್ನು ಅವರು ಸಹಿಸಿದರು. ಪಂಚಪರಮ ಗುರುಗಳಿಗೆ ಶರಣು ಹೋಗಿ, ಬಹಳ ಧೈರ್ಯದಿಂದ ಆ ವೇದನೆಯನ್ನು ಸಹನ ಮಾಡುತ್ತ ಅಗ್ನಿಯಲ್ಲಿ ಸುಟ್ಟು ಭಸ್ಮವಾಗಿ ಹೋದರು. ಆದರೆ ಹೆದರಿ ವ್ರತವನ್ನು ತ್ಯಾಗಮಾಡಿ ಓಡಿ ಹೋಗಲಿಲ್ಲ ಸಮ್ಯಗ್ ಜ್ಞಾನದ ಪ್ರಭಾವವು ಹೀಗಿದೆ.

ಸಾವಿಗಂಜಲದೇಕೆ ಸಾವು ಪೆರತೇ ಮೆಯ್ದಾಳ್ದಿದರ್ಗಂಜಲಾ<br>
ನಾವೇಂ ಮಾಣ್ಬಮೆ ಕಾವರುಂಟೆಯಕಟಾ! ಈ ಜೀವನೇನೆಂದುವುಂ ।<br>
ನಾವಂ ಕಂಡವನಲ್ಲವೇ ಮರಣವಾಗಲ್ಕುಂದದೇಂ ಪುಟ್ಟನೇ<br>
ನೀವೆನ್ನೊಳ್ಕಿಲೆ ಸಾವುದುಂ ಸುಖವಲ್ತೆ! ರತ್ನಾಕರಾಧೀಶ್ವರಾ ॥

—ರತ್ನಾಕರ—ರತ್ನಾಕರ ಶತಕ—೧೭

ನಿರ್ಭಯರಾಗಿರಿ. ಯಾವನು ಈ ಶರೀರದಿಂದ ಭಿನ್ನ, ಅವಿನಾಶಿ, ಅಖಂಡ, ಜ್ಞಾನಸ್ವಭಾವಿಯಾದ ಆತ್ಮನ ಅನುಭವವನ್ನು ಹೊಂದಿರುವನೋ ಅವನಿಗೆ ಇಂಥ ನಿಷ್ಕಂಪ ನಿರ್ಭಯ ವೃತ್ತಿಯು ಪ್ರಾಪ್ತವಾಗುತ್ತದೆ. ಅಜ್ಞಾನಿಗಳೂ ಕೂಡ ಪರಲೋಕವು ಪ್ರಾಪ್ತವಾಗಬೇಕೆಂದು ದೊಡ್ಡ ದೊಡ್ಡ ಸಂಕಟಗಳ ಪ್ರಸಂಗದಲ್ಲಿಯೂ ಬಹಳ ಧೈರ್ಯದಿಂದ ಇರುತ್ತಾರೆ. ಎಷ್ಟೋ ಭಯಂಕರ ವೇದನೆಯು ಶರೀರದಲ್ಲಿ ಆಗುತ್ತಿದ್ದರೂ ಸಹ ಅದಕ್ಕವರು ಸೋಲುವದಿಲ್ಲ. ಅಂದ ಮೇಲೆ ನೀವಂತೂ ಸಂಸಾರದೊಳಗಿನ ಎಲ್ಲ ದುಃಖವು ನಾಶವಾಗಲೆಂದು ಜೈನ ಧರ್ಮವನ್ನು ಸ್ವೀಕರಿಸಿರುವಿರಿ. ನೀವು ಭಯಕ್ಕೊಳಗಾಗಿ ಆತ್ಮನ ಅಕಲ್ಯಾಣವನ್ನು ಮಾಡಿಕೊಂಡು, ಜಗತ್ತಿನಲ್ಲಿ ಅಪಕೀರ್ತಿಗೆ ಪಾತ್ರರಾಗಿ, ದುರ್ಗತಿಗೆ ಗುರಿಯಾಗಲಿಕ್ಕೆ ಹೇಗೆ ಮನಸ್ಸು ಮಾಡೀರಿ? ಇದನ್ನು ವಿಚಾರಿಸಿ ಈಗಲೇ ನೀವು ಎಚ್ಚರಾಗಿರಿ ಧರ್ಮಕ್ಕೆ ಶರಣು ಹೋಗಿ ಕರ್ಮಜನಿತ ವೇದನೆಯನ್ನು ಗೆಲ್ಲಿರಿ ಇಂಥ ಪ್ರಸಂಗವು ಪುನಃ ಅನಂತ ಜನ್ಮದಲ್ಲಿ ಎಂದೂ ನಿಮಗೆ ಪ್ರಾಪ್ತವಾಗಲಾರದು. ಸದ್ಯಕ್ಕೆ ನಿಮ್ಮ ದೋಣಿಯು ದಂಡೆಗೆ ಬಂದಿದೆಯೆಂದು ತಿಳಿಯಿರಿ ಈಗ ನೀವು ಅದರೊಳಗಿಂದ ಇಳಿಯಲಿಕ್ಕೆ ಆಲಸ್ಯ ಮಾಡಿದರೆ ತಿರುಗಿ ಸಂಸಾರ ಸಮುದ್ರದಲ್ಲಿ ಮುಳುಗಿ ಹೋದೀರಿ ಇಡೀ ಆಯುಷ್ಯವೆಲ್ಲ ದೊಡ್ಡ ದೊಡ್ಡ ಗ್ರಂಥಗಳನ್ನು ಓದಿ ಯಾವ ಜ್ಞಾನವನ್ನು ಸಂಪಾದನೆ ಮಾಡಿದಿರೋ, ನಿಮ್ಮ ವಿಚಾರಗಳನ್ನು ನಿರ್ಮಲಗೊಳಿಸಿದಿರೋ, ತಪ, ತ್ಯಾಗ, ನಿಯಮಗಳನ್ನು ಧಾರಣ ಮಾಡಿದಿರೋ ಅವೆಲ್ಲವೂ ಈ ಪ್ರಸಂಗವು ಪ್ರಾಪ್ತವಾಗಲೆಂದೇ ಇರುತ್ತವೆ. ಈಗ ಆ ಪ್ರಸಂಗವು ಪ್ರಾಪ್ತವಾದಾಗ ವೇದನೆಯಿಂದ ಗಾಬರಿಯಾಗಿ ಭ್ರಷ್ಟನಾದರೆ ರೋಗ ಇಲ್ಲವೆ ವೇದನೆಯು ನಷ್ಟವಾಗುವದಿಲ್ಲ. ಮರಣವಂತೂ ಇಲ್ಲದಂತೆ ಆಗುವುದೇ ಇಲ್ಲ. ಅಂದ ಮೇಲೆ ನಿಮ್ಮ ಆತ್ಮವನ್ನು ದುರ್ಗತಿಯೆಂಬ ಅಂಧಕೂಪದಲ್ಲಿ ವಿನಾಕಾರಣ ಏಕೆ ಮುಳುಗಿಸುವಿರಿ?

ದುರ್ಧರ ರೋಗದಲ್ಲಿ ಸನ್ಯಾಸವನ್ನು ಸ್ವೀಕರಿಸಬೇಕು. ಯಾವ ಕಾಲದಲ್ಲಿ ದೇಶದೊಳಗೆ ಒಂದು ರೋಗವು ಹಬ್ಬಿರುವುದೋ, ಭಯಂಕರ ಬರಗಾಲ ಬಿದ್ದಿರುವುದೋ, ಅಕಸ್ಮಾತ್ತಾಗಿ ನಿರ್ಜನ ಅರಣ್ಯದಲ್ಲಿ ತಪ್ಪಿ ಒಬ್ಬನೇ ಸಿಕ್ಕಾಗ, ತೀರ ಕೆಟ್ಟ ರೋಗವು ಶರೀರದಲ್ಲಿ ಪ್ರವೇಶಿಸಿದಾಗ, ಉತ್ತಮ ಕುಲದಲ್ಲಿ ಜನಿಸಿದ ಜನರು ಸನ್ಯಾಸ-ಮರಣವನ್ನು ಹೊಂದಲು ಸಿದ್ಧರಾಗುತ್ತಾರೆ ಊರಲ್ಲಿ ಕೆಟ್ಟ ಹವೆಯು ಉಂಟಾಗಿದೆ, ಅದರ ಉಪದ್ರವ ತನಗೆ ಆಗಬಾರದು, ಎಂದು ಮದ್ಯ ಸೇವಿಸುವದು, ಬರಗಾಲವು ಬಿದ್ದು ಅನ್ನದ ಕೊರತೆಯಾದಾಗ ಮಾಂಸ ಭಕ್ಷಣಕ್ಕೆ ಸಿದ್ಧನಾಗುವುದು, ಕಂದಮೂಲವೇ ಮೊದಲಾದ ಅಭಕ್ಷ್ಯ ಭಕ್ಷಣ ಮಾಡಲು ಸಿದ್ಧನಾಗುವುದು; ಯಾರಾದರೂ ಹೆದರಿಸಲು ಹೆದರಿ ಧರ್ಮಾಂತರ ಮಾಡುವುದು; ಪಂಚ ಮಹಾ ಪಾಪಗಳಂಥ ಕುಕರ್ಮಗಳನ್ನು ಮಾಡುವುದು ಇವೇ ಮೊದಲಾದ ಆಚರಣೆಗಳನ್ನು ಮಾಡಕೂಡದು. ಇಂಥ ಆಚರಣೆಗಳು ನೀಚ ಪುರುಷರಿಗೇನೇ ಯೋಗ್ಯವಾಗಿವೆ ಜೈನ ಧರ್ಮಾನುಯಾಯಿಗಳಾದ ಶ್ರಾವಕರು ರೋಗಾದಿಗಳಿಂದ ತೀವ್ರ ವೇದನೆಯು ಆಗುತ್ತಿದ್ದರೂ ತಮ್ಮ ವಿಚಾರಗಳಲ್ಲಿ ವ್ಯತ್ಯಾಸವಾಗಗೊಡಬಾರದು. ಅನಂತ ಕಾಲದ ವರೆಗೆ ಸ್ವೀಕರಿಸಿದ ಧರ್ಮ, ವ್ರತ, ತ್ಯಾಗ, ನಿಯಮ ಇವು ನಿಃಸಂಶಯವಾಗಿ ಯಥಾವಿಧಿ ಪಾಲಿಸಲ್ಪಡುತ್ತವೆಯೆಂದು ಮನದಲ್ಲಿ ನಿಶ್ಚಯವು ಬೇಕು ಮರಣಕಾಲದಲ್ಲಿಯೂ ಕೂಡ ತನ್ನ ವಿಚಾರಗಳು ಪವಿತ್ರ ಉಳಿದವು, ಆಚರಣ, ಜ್ಞಾನಗಳಲ್ಲಿ ವ್ಯತ್ಯಾಸ-

ವಾಗಲಿಲ್ಲ ಎಂದು ಎಲ್ಲ ಜನರಿಗೂ ನಮ್ಮ ಕೃತಿಯಿಂದ ಕಂಡುಬರಬೇಕು ಅಂದರೇನೇ ಜಗತ್ತಿನಲ್ಲಿ ನಿಜವಾಗಿಯೂ ನಿಮ್ಮ ಕೀರ್ತಿಯು ಆಗುತ್ತದೆ ಇಂಥ ನಿರ್ಮಲ ಕ್ರಿಯೆಯಿಂದ ಉಚ್ಚವಾದಂಥ ದೇವಕುಲದಲ್ಲಿ ಜನ್ಮವಾದೀತು ಯಾರು ಪ್ರಾಣ ಹೋಗುವಂಥ ಪ್ರಸಂಗ ಬಂದರೂ ತಮ್ಮ ವಿಚಾರಗಳನ್ನು ಬದಲು ಮಾಡುವದಿಲ್ಲವೋ, ಆಚರಣಕ್ಕೆ ದೋಷ ಹತ್ತುಗೊಡುವದಿಲ್ಲವೋ, ತಿರುಗಿ ಮೇರು ಪರ್ವತದಂತೆ ನಿಶ್ಚಲರಾಗಿರುವರೋ ಇಲ್ಲವೆ ಸಮುದ್ರದಂತೆ ಗಂಭೀರರಾಗಿರುವರೋ ಅವರೇ ಜಗತ್ತಿನಲ್ಲಿ ಉತ್ತಮ ಪುರುಷರಲ್ಲಿ ಗಣ್ಯರೆನಿಸುತ್ತಾರೆ. ಅದಕ್ಕಾಗಿ ಸಮಾಧಿ ಮರಣವನ್ನು ಸಾಧಿಸುವವರಿಗೆ ಆಚಾರ್ಯರು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ —"ನೀವು ರೋಗ, ವೇದನೆಗಳಿಂದ ವ್ಯಾಕುಲರಾಗಬೇಡಿರಿ ಈ ಶರೀರದಿಂದ ಆತ್ಮನು ಅತ್ಯಂತ ಭಿನ್ನನಾಗಿದ್ದಾನೆ ಅವನ ಜ್ಞಾನಸ್ವಭಾವವನ್ನು ನೆನೆಯಿರಿ ತೀವ್ರ ವೇದನೆಯ ವ್ಯಥೆಯು ಆಗ ಹತ್ತಿದರೆ ಮೊದಲು ಆಗಿ ಹೋದಂಥ ಧೈರ್ಯವಾನ್ ಧಾರ್ಮಿಕ ಪುರುಷರ ಆಚರಣೆಗಳನ್ನು ಸ್ಮರಿಸಿರಿ " ಹೀಗೆ ಮನಸ್ಸಿನ ಸ್ಥಿರತೆಯನ್ನು ಕಾಯ್ದುಕೊಳ್ಳಲಿಕ್ಕೆ ವಿವಿಧ ರೀತಿಯಿಂದ ಯತ್ನಿಸಬೇಕು

**ಪೂರ್ವಕಾಲದ ಮಹಾತ್ಮರ ಉದಾಹರಣೆಗಳು**—ಪೂರ್ವಕಾಲದಲ್ಲಿ ಅನೇಕ ಸಾಧುಗಳಿಗೂ ಮುನಿಗಳಿಗೂ ಸಿಂಹ, ಹುಲಿ ಮೊದಲಾದ ದುಷ್ಟ ಪ್ರಾಣಿಗಳು ಅನೇಕ ತೊಂದರೆಗಳನ್ನು ಕೊಟ್ಟರೂ ಸಹ ಅವರು ತಮ್ಮ ಆತ್ಮಚಿಂತನೆಯನ್ನು ಬಿಡಲಿಲ್ಲ ಅದಕ್ಕಿಂತ ಹೆಚ್ಚಿನ ವೇದನೆಯು ನಿಮಗೇನಿದೆ? ಅವರ ಪರೀಷಹಕ್ಕೂ ನಿಮ್ಮ ತೊಂದರೆಗಳಿಗೂ ತುಲನೆ ಮಾಡಿ ನೋಡಿರಿ ಅತಿಶಯ ಕೋಮಲವಾದ ಶರೀರವುಳ್ಳ ಸುಕುಮಾರ ಸ್ವಾಮಿಗೆ ದೀಕ್ಷೆ ತಕ್ಕೊಂಡ ಕೂಡಲೆ ಘೋರ ಉಪಸರ್ಗವು ಆರಂಭವಾಯಿತು ಒಂದು ಹೆಣ್ಣು ನರಿಯು ತನ್ನ ಎರಡು ಮರಿಗಳೊಡನೆ ಸುಕುಮಾರನ ಪಾದಗಳನ್ನೇ ತಿನ್ನಲಿಕ್ಕೆ ಆರಂಭಿಸಿತು ಹಗಲಿರುಳೂ ಅದು ತಿನ್ನ ಹತ್ತಿತು. ಸುಕುಮಾರ ಸ್ವಾಮಿಯು ಧ್ಯಾನದಲ್ಲಿ ಮಗ್ನ. ಆ ನರಿಗಳು ಅವನ ಹೊಟ್ಟೆಯನ್ನು ಹರಿದಾಗ ಅವನ ಪ್ರಾಣ ಪಕ್ಷಿಯು ಹಾರಿಹೋಯಿತು. ಆದರೆ ಅವನು ಆತ್ಮಧ್ಯಾನವನ್ನು ಬಿಡಲಿಲ್ಲ ಇಂಥ ಭಯಂಕರ ಉಪಸರ್ಗವನ್ನು ಸಹನ ಮಾಡಿದನು ಅಪೂರ್ವ ಧೈರ್ಯವನ್ನು ಪ್ರಕಟಿಸಿ ತನ್ನ ಆತ್ಮ ಕಲ್ಯಾಣವನ್ನು ಮಾಡಿಕೊಂಡನು ಇಂಥ ಸಂಕಟಗಳ ಮುಂದೆ ನಿಮಗೆ ಆಗುವ ಈ ವೇದನೆಗಳು ತೀರ ಅಲ್ಪವೆನಿಸುತ್ತವೆ

ಸುಕೋಶಲ ಸ್ವಾಮಿಯನ್ನು ಸ್ವತಃ ಅವರ ತಾಯಿಯ ಜೀವವೇ—ಹೆಣ್ಣು ಹುಲಿಯಾಗಿ ಜನಿಸಿದುದು-ಭಕ್ಷಣ ಮಾಡಿತು ಆದರೂ ಅವರು ತಮ್ಮ ವ್ರತದಿಂದ ಚ್ಯುತರಾಗಲಿಲ್ಲ. ಅವರ ಮುಂದೆ ನಿಮ್ಮ ವೇದನೆಯು ಎಂಥ ದುಃಸಹನೀಯವಿದ್ದೀತು?

ಗಜಕುಮಾರ ಸ್ವಾಮಿಗೆ ಅವನ ಶತ್ರುಗಳು ಮೈತುಂಬ ಮೊಳೆಗಳನ್ನು ಹೊಡೆದು ತೂತು ಕೆಡವಿದರು. ಆದರೂ ಅವರು ತಮ್ಮ ವ್ರತದಿಂದ ಚಂಚಲರಾಗಲಿಲ್ಲ ಅವರಿಗಿಂತ ನಿಮ್ಮ ವೇದನೆಯು ಹೆಚ್ಚಿಗಿಲ್ಲವಷ್ಟೆ?

ಸನತ್ಕುಮಾರನೆಂಬ ಮುನಿಯ ಶರೀರದಲ್ಲಿ ಕೆಮ್ಮು, ಜ್ವರ, ಕಫ, ಹಸಿವು, ಓಕರಿಕೆ, ಕಣ್ಣಿನ ಶೂಲಿ, ಉದರ ಮೊದಲಾದ ಅನೇಕ ರೋಗಗಳು ಉತ್ಪನ್ನವಾದವು ಅವುಗಳ ವೇದನೆಯನ್ನು ಅವನು ನೂರು ವರ್ಷಗಳ ವರೆಗೂ ಸಾಮ್ಯಭಾವದಿಂದ ಸಹನ ಮಾಡಿದನು. ಆದರೆ ಧೈರ್ಯವನ್ನು ಬಿಡಲಿಲ್ಲ. ವ್ರತಗಳಿಂದ ಚ್ಯುತನಾಗಲಿಲ್ಲ. ಅವನಿಗಿಂತಲೂ ನಿಮಗೆ ವೇದನೆಯು ಹೆಚ್ಚಿಗಿದೆಯೆ?

ಏಣಿಕ ಪುತ್ರನನ್ನು ಕೆಲವು ಜನ ದುಷ್ಟರು ದೋಣಿಯಲ್ಲಿ ಕೂಡಿಸಿ ಒಯ್ದು, ಗಂಗಾ ನದಿಯಲ್ಲಿ ಮುಳುಗಿಸಿದರು ಆದರೂ ಅವನು ತನ್ನ ಆರಾಧನೆಯನ್ನು ಬಿಡಲಿಲ್ಲ ಅವನಿಗಿಂತ ನಿಮಗೆ ಹೆಚ್ಚಿಗೆ ದುಃಖವಿದೆಯೆ?

ಭದ್ರಬಾಹು ಮುನಿಗೆ ತೀವ್ರ ಹಸಿವೆಯ ರೋಗವು ಉತ್ಪನ್ನವಾಗಿತ್ತು. ಅವನು ಅವಮೌದರ್ಯ ತಪದ ಪ್ರತಿಜ್ಞೆಯನ್ನು ಮಾಡಿದ್ದನು ಹಸಿವೆಯ ದುಃಖವಾಗುತ್ತಿದ್ದರೂ ಅವನು ತನ್ನ ಆರಾಧನೆಯಿಂದ ಎಳ್ಳಷ್ಟು ಕದಲಲಿಲ್ಲ ಅವುಗಳ ಮುಂದೆ ನಿಮ್ಮ ವೇದನೆಯು ಎಷ್ಟಿದ್ದೀತು?

ಲಲಿತಘಟೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಮೂವತ್ತೆರಡು ಮುನಿಗಳು ಕೌಶಾಂಬಿ ನದಿಯ ಪ್ರವಾಹದಲ್ಲಿ ತೇಲಿಹೋದರು ಆದರೂ ಧ್ಯಾನಚ್ಯುತರಾಗಲಿಲ್ಲ

ಚಂಪಾ ನಗರದ ಹೊರಗಿನ ಮಗ್ಗಲು ಇರುವ ಗಂಗಾ ನದಿಯ ತೀರದಲ್ಲಿ ಧರ್ಮಘೋಷ ಮುನಿಯು ಒಂದು ತಿಂಗಳ ಉಪವಾಸದ ಪ್ರತಿಜ್ಞೆಯನ್ನು ಮಾಡಿದ್ದನು. ಹಸಿವೆಯ ತೀವ್ರ ವೇದನೆಯಿಂದ ಅವನ ಪ್ರಾಣವು

ಹಾರಿ ಹೋಯಿತು. ಆದರೂ ಅವನು ವ್ರತ ಭಂಗವನ್ನು ಮಾಡಲಿಲ್ಲ. ಅವನ ಮುಂದೆ ನಿಮ್ಮ ವೇದನೆಯು ಎಷ್ಟರದು?

ಶ್ರೀದತ್ತ ಮುನಿಗೆ ಪೂರ್ವಜನ್ಮದ ವೈರದಿಂದ ಒಬ್ಬ ದೇವನು ವಿಕ್ರಿಯಾ ಋದ್ಧಿಯಿಂದ ಭಯಂಕರ ಶೀತವೇದನೆಯನ್ನು ಉಂಟು ಮಾಡಿದನು. ಆದರೂ ಆ ಮುನಿಯು ಚಂಚಲ ಮನಸ್ಸು ಮಾಡಲಿಲ್ಲ, ಧ್ಯಾನವನ್ನು ಬಿಡಲಿಲ್ಲ, ನಿಶ್ಚಲನಾಗಿದ್ದನು ಆದರಿಂದ ಮುಕ್ತಿಗೆ ಹೋದನು

ವೃಷಭಸೇನ ಮುನಿಯು ಬಿಸಿಲಿನಿಂದ ಕಾಯ್ದ ಕಲ್ಲಿನ ಮೇಲೆ ಕುಳಿತುದರಿಂದ ಉಷ್ಣಗಾಳಿಯಿಂದಲೂ ಸೂರ್ಯನ ಬಿಸಿಲಿನಿಂದಲೂ ಅತ್ಯಂತ ತಾಪವಾಯಿತು ಆದರೂ ಅವರು ತಮ್ಮ ಆರಾಧನೆಯನ್ನು ಬಿಡಲಿಲ್ಲ.

ರೋಹೇಡ ಎಂಬ ನಗರದಲ್ಲಿ ಅಗ್ನಿರಾಜನ ಕಾರ್ತಿಕೇಯ ಪುತ್ರನಿಗೆ ಕ್ರೌಂಚನೆಂಬ ಅವನ ವೈರಿಯು ಶಸ್ತ್ರಗಳಿಂದ ಹೊಡೆದನು. ಆಗ ಅವನು ಕಾಯೋತ್ಸರ್ಗ ಧ್ಯಾನ ಮಾಡಿ ಆ ವೇದನೆಯನ್ನೆಲ್ಲ ಅತ್ಯಂತ ಶಾಂತ ಬಾವದಿಂದ ಸಹನ ಮಾಡಿದನು

ಕಾಕಂದೀ ನಗರದಲ್ಲಿ ಅಭಯಘೋಷ ಎಂಬ ಮುನಿಯ ಶರೀರವನ್ನು ಚಂಡವೇಗನೆಂಬ ವೈರಿಯು ಕಡಿದು ತುಂಡು ತುಂಡು ಮಾಡಿದನು ಆದರೆ ಆ ವೇದನೆಯಿಂದ ಅವನು ಹೆದರಿ, ಆರಾಧನೆಯನ್ನು ಬಿಡಲಿಕ್ಕೆ ಉದ್ಯುಕ್ತನಾಗಲಿಲ್ಲ ಅಂತಲೇ ಅವನು ಮುಕ್ತಿಗೆ ಹೋದನು

ವಿದ್ಯುಚ್ಚರ ಎಂಬ ಹೆಸರಿನ ಕಳ್ಳನಿಗೆ ತಪಶ್ಚರ್ಯದ ವೇಳೆಯಲ್ಲಿ ಗುಂಗಾಡು ಹಾಗೂ ನೊಣಗಳು ಬಹಳ ಕಡಿದವು ಆದರೂ ಅವನು ದುಃಖದಿಂದ ಕಾತರನಾಗಿ ಧ್ಯಾನವನ್ನು ಬಿಡಲಿಲ್ಲ. ಅಂತಲೇ ಅವನಿಗೆ ಸದ್ಗತಿಯಾಯಿತು.

ಚಿಲಾತಿಪುತ್ರ ಎಂಬ ಹೆಸರಿನ ಮುನಿಗೆ ಪೂರ್ವಜನ್ಮದ ವೈರಿಗಳು ಶಸ್ತ್ರದಿಂದ ಶರೀರದ ಮೇಲೆ ಆಘಾತ ಮಾಡಿದರು ಆ ಘಾಯದಲ್ಲಿ ದೊಡ್ಡ ದೊಡ್ಡ ಹುಳಗಳು ಬಿದ್ದವು ಅವು ಸಂಪೂರ್ಣ ಮೈಯನ್ನೆಲ್ಲ ಜಾಳಿಗೆಯಂತೆ ಛಿದ್ರ ಛಿದ್ರ ಗೊಳಿಸಿದುವು ಆದರೂ ಆ ವೇದನೆಯನ್ನೆಲ್ಲ ಅತ್ಯಂತ ಶಾಂತ ಪರಿಣಾಮದಿಂದ ಸಹನ ಮಾಡಿ ಉತ್ತಮ ಗತಿಯನ್ನು ಸಂಪಾದಿಸಿದನು

ದಂಡವೆಂಬ ಹೆಸರಿನ ಮುನಿಗೆ ಯಮುನಾವಕ್ರವೆಂಬ ಹೆಸರಿನ ಅವನ ಶತ್ರುವು ಬಾಣದಿಂದ ಹೊಡೆದನು ಆ ಬಾಣದ ವೇದನೆಯು ಶರೀರದಲ್ಲಿ ತೀವ್ರತರವಾಗಿದ್ದರೂ ಅದನ್ನು ಶಾಂತಭಾವದಿಂದ ಸಹನ ಮಾಡಿ ಆರಾಧನೆಯನ್ನು ಸಾಧಿಸಿದನು.

ಕುಂಭಕಾರಕಟ ಎಂಬ ಹೆಸರಿನ ನಗರದಲ್ಲಿ ಅಭಿನಂದನ ಮೊದಲಾದ ಐದು ನೂರು ಮುನಿಗಳಿಗೆ ಗಾಣದಲ್ಲಿ ಹಾಕಿ ಹಿಂಡಿದರು. ಆದರೂ ಅವರು ತಮ್ಮ ಸಮಾಧಿಯ ಭಂಗವಾಗಗೊಡಲಿಲ್ಲ. ಅವರ ಮುಂದೆ ನಿಮಗೆ ಆಗುವ ವೇದನೆಯು ಎಂಥದು?

ಚಾಣಕ್ಯವೆಂಬ ಮುನಿಗೆ ಸುಬಂಧುವೆಂಬ ಅವನ ವೈರಿಯು ಆಕಳ ಕೊಟ್ಟಿಗೆಯಲ್ಲಿ ಹಾಕಿ ಹೊರಗೆ ಬೆಂಕಿಯನ್ನು ಹಚ್ಚಿ ಸುಟ್ಟನು. ಆದರೆ ಆ ವೇಳೆಯಲ್ಲಿಯೂ ಕೂಡ ಆ ಮುನಿಯು ಪ್ರಾಯೋಪಗಮನ ಸನ್ಯಾಸವನ್ನು ಧಾರಣ ಮಾಡಿದ್ದನು ಅದರಿಂದ ಅವನು ಚಂಚಲನಾಗಲಿಲ್ಲ

ಕುಲಾಲ ಎಂಬ ಊರ ಹೊರಗಿನ ವನದಲ್ಲಿ ವೃಷಭಸೇನಾದಿ ಮುನಿಗಳು ತಮ್ಮ ಸಂಘ ಸಹ ಇಳಿದಿದ್ದರು ಆ ವನಕ್ಕೆ ರಿಷ್ಟಾಮನೆಂಬ ಹೆಸರಿನ ಒಬ್ಬ ದುಷ್ಟ ಶತ್ರುವು ಬೆಂಕಿಯನ್ನು ಹಚ್ಚಿದನು. ಅದರಿಂದ ಆ ಎಲ್ಲ ಮುನಿಗಳೂ ಸುಟ್ಟು ಹೋದರು ಆದರೂ ತಮ್ಮ ವ್ರತಗಳಿಂದ ಅವರು ಚ್ಯುತರಾಗಲಿಲ್ಲ.

ಒಟ್ಟಿನಲ್ಲಿ, ಈ ಪ್ರಕಾರ ಅನೇಕ ಭಯಂಕರ ವೇದನೆಗಳನ್ನು ಇಲ್ಲಿಯ ವರೆಗೆ ದೊಡ್ಡ ದೊಡ್ಡ ವೀರ ಪುರುಷರು ಸಹನ ಮಾಡಿದ್ದಾರೆ ಅವರ ಉದಾಹರಣೆಗಳನ್ನು ಗ್ರಂಥಗಳಿಂದ ನಿಮಗೆ ತೋರಿಸಲಿಕ್ಕೆ ಬಂದೀತು. ಅವರೆಲ್ಲರಿಗಿಂತಲೂ ನಿಮಗೆ ಆಗುತ್ತಿರುವ ವೇದನೆಯು ಎಷ್ಟು ಹೆಚ್ಚು ಇದ್ದೀತು? ಇದರ ಮೇಲಿಂದ ಸಮಾಧಿ ಮರಣವನ್ನು ಸಾಧಿಸಲಿಕ್ಕೆ ಇಚ್ಛೆಯುಳ್ಳವರು ತಿಳುವಳಿಕೆಯನ್ನು ಪಡೆಯಬಹುದಾಗಿದೆ

ಮೇಲೆ ವರ್ಣಿಸಿದ ಎಲ್ಲ ಮುನಿಗಳಿಗೆ ಯಾರ ಸಹಾಯವೂ ಇರಲಿಲ್ಲ ಅವರು ಏಕಾಕಿಯಾಗಿದ್ದರೂ ತಮಗೆ ಬಂದ ಸಂಕಟದಿಂದ ಪರಾವೃತ್ತರಾಗುವ ವಿಚಾರವನ್ನೂ ಸಹ ಮನದಲ್ಲಿ ತರಲಿಲ್ಲ ಅವರ ದುಃಖವು ದೂರವಾಗಲೆಂದು ಯತ್ನಿಸುವವರೂ ಕೂಡ ಸಮೀಪದಲ್ಲಿ ಯಾರೂ ಇರಲಿಲ್ಲ ಇಂಥ ಪ್ರಸಂಗದಲ್ಲಿ ಗಾಬರಿಯಾಗದೆ

ಧೈರ್ಯದಿಂದಲೂ ಪರಮ ಶಾಂತಭಾವದಿಂದಲೂ ಆರಾಧನೆಗಳ ಚಿಂತನೆಯನ್ನು ಮಾಡಿದರು ಈಗ ನಿಮಗೆ ಅಂಥ ಅಸಹ್ಯ ಉಪಸರ್ಗವು ಯಾವುದು ಪ್ರಾಪ್ತವಾಗಿದೆ? ನಿಮ್ಮ ಸೇವೆಗಾಗಿ ನಿಮ್ಮ ಸಹಧರ್ಮಿ ಬಾಂಧವರು ನಡಕಟ್ಟಿ ಸಿದ್ಧರಾಗಿದ್ದಾರೆ ಅಂದಮೇಲೆ ನೀವೇಕೆ ಗಾಬರಿಯಾಗುತ್ತೀರಿ? ಹಿಂದೆ ಆಗಿ ಹೋದ ದೊಡ್ಡ ದೊಡ್ಡ ಮಹಾಪುರುಷರಿಗೆ ಸೇವೆ ಮಾಡಲಿಕ್ಕೂ, ಸಂಕಟ ಕಾಲದಲ್ಲಿ ಸಹಾಯ ಮಾಡಲಿಕ್ಕೂ ಯಾರಾದರೂ ಇದ್ದರೇನು? ಆ ಸಾಧು ಪುರುಷರ ಮೇಲೆ ದುಷ್ಟರು ಭಯಂಕರ ಉಪಸರ್ಗವನ್ನು ಮಾಡಿದರು ಅವರನ್ನು ಬೆಂಕಿಯಲ್ಲಿ ಸುಟ್ಟರು, ಪರ್ವತದಿಂದ ನುಗಿಸಿದರು, ಶಸ್ತ್ರದಿಂದ ಹೊಡೆದರು, ನೀರಿನಲ್ಲಿ ಮುಳುಗಿಸಿದರು, ಪಶುಗಳೂ ಕೂಡ ತಿಂದವು, ಅನೇಕ ಪ್ರಕಾರದ ಅಪಶಬ್ದಗಳನ್ನು ಆಡಿ ಮನವನ್ನು ನೋಯಿಸಲಿಕ್ಕೆ ಯತ್ನಿಸಿದರು ಆದರೂ ಅವರು ತಮ್ಮ ಶಾಂತ ಸ್ವಭಾವವನ್ನು ಬಿಡಲಿಲ್ಲ ಅವರ ಒಂದು ಅಂಶದಷ್ಟು ಉಪಸರ್ಗವೂ ಕೂಡ ನಿಮಗೆ ಆಗಿಲ್ಲ. ನಿಮ್ಮ ಹತ್ತರ ಮನದಲ್ಲಿ ಕರುಣೆಯುಳ್ಳ ಪರಮ ಧರ್ಮೋಪದೇಶ ಮಾಡುವ ಎಲ್ಲ ಜನರೂ ಪ್ರತ್ಯಕ್ಷ ಇದ್ದಾರೆ ಪರಿಣಾಮದಲ್ಲಿ ಆಕುಲತೆಯು ಉತ್ಪನ್ನ-ವಾದೀತೆಂದು ತೋರುವ ಪರಿಸ್ಥಿತಿಯು ಸುತ್ತಲೂ ಇಲ್ಲ ಚಳಿ, ಬಿಸಿಲು, ಮಳೆ, ಗಾಳಿ ಇವುಗಳ ಉಪದ್ರವಿಲ್ಲ. ಅಂದರೂ ನೀವಿಷ್ಟು ಗಾಬರಿಯಾಗಿದ್ದೀರಿ ಇದಕ್ಕೇನೆನ್ನಬೇಕು? ನಿಮಗೆ ಕೇವಲ ತುಸುರೋಗ ಮತ್ತು ಅಶಕ್ತತೆ ಇವುಗಳಿಂದ ಹಸಿವು ನೀರಡಿಕೆಗಳ ವೇದನೆಯು ಆಗುತ್ತಿದೆ ಅವುಗಳ ಕಡೆಗೆ ನೀವು ಲಕ್ಷ್ಯ ಕೊಡಬೇಡಿರಿ ಸಹಧರ್ಮಿಗಳ ಮುಖದಿಂದ ಹೊರಡುವ ಜಿನವಾಣೀ ರೂಪದ ಅಮೃತವನ್ನು ಪಾನಮಾಡುವ ಕಡೆಗೆ ಮನಸ್ಸನ್ನು ತಿರುಗಿಸಿರಿ ಆದರಿಂದ ವೇದನೆಯೆಂಬ ವಿಷದ ಶಮನವಾಗುತ್ತದೆ, ಮನಸ್ಸಿಗೆ ಶಾಂತಿಯೂ ಲಭಿಸೀತು, ಪರಿಣಾಮವು ನಿರ್ಮಲವಾದೀತು, ಧರ್ಮದ ವಿಷಯಕ್ಕೆ ಉತ್ಸಾಹವು ಉತ್ಪನ್ನವಾದೀತು, ಪಾಪದ ನಿರ್ಜರೆಯಾದೀತು, ಭಯವೂ ಎನಿಸಲಿಕ್ಕಿಲ್ಲ.

**ನರಕ ತಿರ್ಯಂಚ ಗತಿಯೊಳಗಿನ ವೇದನೆಯನ್ನು ಸ್ಮರಿಸು.** ನಿಮಗೆ ವೇದನೆಯು ಆಗುತ್ತಿರುವಾಗ ತಳಮಳಗೊಂಡರೆ ಪಾಪಬಂಧವಾಗುತ್ತದೆ. ಆ ಪಾಪದಿಂದ ಚತುರ್ಗತಿಯೊಳಗೆ ಯಾವ ಯಾವ ದುಃಖಗಳು ಒದಗುತ್ತವೆಂಬುದನ್ನು ವಿಚಾರಿಸಿರಿ. ಅಂದರೆ ಸಂಸಾರದಲ್ಲಿ ಭ್ರಮಣ ಮಾಡುವಾಗ ಈ ಜೀವಕ್ಕೆ ಎಲ್ಲ ತರದ ದುಃಖಗಳೂ ಪ್ರಾಪ್ತವಾಗಿಯೇ ಹೋಗಿವೆ ಎಂಬುದು ಗೊತ್ತಾಗುತ್ತದೆ. ಅಂದಮೇಲೆ ಯಾವ ವೇದನೆಯಾಗದೆ ಉಳಿದಿದೆ? ಹಲವು ಸಲ ಹಸಿವೆ, ನೀರಡಿಕೆಗಳ ವೇದನೆಯಿಂದ ಸಾಯಲೂ ಬೇಕಾಯಿತು. ಅನೇಕ ಸಲ ಅಗ್ನಿಯಲ್ಲಿ ಸುಟ್ಟು, ನೀರಿನಲ್ಲಿ ಮುಳುಗಿ, ವಿಷಭಕ್ಷಣಮಾಡಿ, ಸಿಂಹ, ಹುಲಿ, ಸರ್ಪಾದಿ ದುಷ್ಟ ಜಂತುಗಳ ಬಾಧೆಗೆ ಒಳಗಾಗಿ, ಪರ್ವತದ ಅತ್ಯುಗ್ರ ಶಿಖರದ ಮೇಲಿಂದ ಬಿದ್ದು ಮತ್ತು ಶಸ್ತ್ರಘಾತದಿಂದ ಮರಣ ಹೊಂದಬೇಕಾಯಿತು. ಅಷ್ಟು ದುಃಖ ಈಗೆಲ್ಲಿದೆ? ಇವುಗಳಿಗಿಂತಲೂ ನರಕ–ತಿರ್ಯಂಚಗತಿಗಳಲ್ಲಿ ಭೋಗಿಸಿದ ದುಃಖವನ್ನಂತೂ ಸರ್ವಜ್ಞನೇ ಅರಿಯಬಲ್ಲನು ಅದಕ್ಕಿಂತ ಹೆಚ್ಚಿನ ವೇದನೆಯು ಇಲ್ಲಿ ಏನಿದೆ? ಇಲ್ಲಿ ಆ ದೃಷ್ಟಿಯಿಂದ ತೀರ ಕಡಿಮೆ ದುಃಖವಿದೆ ಅಲ್ಲದೆ ಅತಿ ಕಡಿಮೆ ವೇಳೆಯ ವರೆಗೆ ಇರುವಂಥದಿದೆ. ಅದಕ್ಕಾಗಿ ಇದರಿಂದ ಹೆದರಿ ಧೈರ್ಯ ಬಿಡಬೇಡಿರಿ. ಕರ್ಮದ ವಶನಾಗುವುದರಿಂದ ಭಯಂಕರ ವೇದನೆಯನ್ನು ನಾಲ್ಕೂ ಗತಿಗಳಲ್ಲಿ ಭೋಗಿಸಲಾಗಿದೆ ಅದನ್ನು ಕೋಟಿ ನಾಲಿಗೆ-ಗಳಿಂದ ವರ್ಣಿಸುವುದು ಅಶಕ್ಯವಾಗಿದೆ. ನರಕದಲ್ಲಿ ಒದಗುವ ದುಃಖದ ನೂರರಿಯಂತೂ ಇಲ್ಲಿ ಇಲ್ಲವೇ ಇಲ್ಲ. ಶಾಸ್ತ್ರಗಳಲ್ಲಿ ಅದರ ವರ್ಣನೆಯು ಇದೆ. ಅದರ ಮೇಲಿಂದ ಆ ದುಃಖದ ಕಲ್ಪನೆಯನ್ನು ಮಾಡಿರಿ. ಐದನೆಯ ನರಕದ ವರೆಗೆ ಬಿಲಗಳಲ್ಲಿ ತೀರ ಉಷ್ಣತೆಯ ವೇದನೆಯಿದೆ ಅದರಲ್ಲಿ ಮೇರು ಪರ್ವತದಷ್ಟು ದೊಡ್ಡದಾದ ಕಬ್ಬಿಣದ ಗುಂಡನ್ನು ಮೇಲಿನಿಂದ ಬಿಟ್ಟರೆ ಅದು ಭೂಮಿಗೆ ಹೋಗಿ ತಲುಪುವ ಪೂರ್ವದಲ್ಲಿಯೇ ಕರಗಿ ಹೋಗುತ್ತದೆ. ಅದಕ್ಕಿಂತ ಹೆಚ್ಚಾಗಿ ರೋಗದ ವೇದನೆಯು ನಿಮಗೆ ಎಷ್ಟು ಹೆಚ್ಚು ಇದ್ದೀತು ನೋಡಿರಿ! ಐದನೆಯ ನರಕದ ಮೂರನೆಯ ಭಾಗ, ಆರನೆಯ, ಏಳನೆಯ ನರಕ ಭೂಮಿಗಳ ಬಿಲಗಳಲ್ಲಿ ಶೀತದ ವೇದನೆಯಂತೂ ತೀರ ಭಯಂಕರವಿರುತ್ತದೆ ಅಲ್ಲಿ ಅದೇ ಕಬ್ಬಿಣದ ಗುಂಡು ಗಟ್ಟಿಯಾಗಿ ಹೋಗುತ್ತದೆ. ಇಂಥ ತೀವ್ರ ವೇದನೆಯನ್ನು ಅನಂತಕಾಲದ ವರೆಗೆ ಜೀವಗಳು ಅಲ್ಲಿ ಭೋಗಿಸಿವೆ ಮನುಷ್ಯ ಯೋನಿಯಲ್ಲಿ ಜ್ವರ, ಶ್ವಾಸ, ಕಫ ಇತ್ಯಾದಿ ರೋಗಗಳ ಮತ್ತು ಹಸಿವು ನೀರಡಿಕೆಗಳ ವೇದನೆ, ಉಷ್ಣಕಾಲದಲ್ಲಿ ಆಗುವ ಮತ್ತು ಚಳಿಗಾಲದಲ್ಲಿ ಆಗುವ ಚಳಿಜ್ವರದ ವೇದನೆಯು ಎಷ್ಟಿದ್ದೀತು? ಇದು ಸ್ವಲ್ಪ ಕಾಲವಿದ್ದು ಇಲ್ಲದಂತೆ ಆಗುವಂಥದಿದೆ. ಅಂತಲೇ ಧರ್ಮಧಾರಕರು ಇಲ್ಲವೆ ಮಮತ್ವವನ್ನು ತ್ಯಾಗಮಾಡಿದ ಪುರುಷರು ಈ ಅಲ್ಪ ವೇದನೆಯನ್ನು ಶಾಂತಭಾವದಿಂದ ಸಹನ ಮಾಡಲಿಕ್ಕೆ

ಬೇಕು ಈ ಪ್ರಸಂಗದಲ್ಲಿ ಪ್ರಾಪ್ತವಾದಾಗ ವೇದನೆಯನ್ನು ಸಮಭಾವದಿಂದ ಸಹನ ಮಾಡಲಿಕ್ಕೆ ಬೇಕು ಈಗ ಪರಿಣಾಮದಲ್ಲಿ ಕ್ಲೇಶ ಉತ್ಪನ್ನವಾಗಗೊಟ್ಟರೆ ಮಾತ್ರ ಕರ್ಮದ ಉದಯವು ನಿಮ್ಮನ್ನು ಬಿಡಲಾರದು ಸುಖ-ದುಃಖದ ವೇದನೆಯಂತೂ ಇದ್ದೇ ಇರುತ್ತದೆ. ಅದನ್ನಂತೂ ಸಹಿಸಲೇ ಬೇಕಾಗುತ್ತದೆ ವೇದನೆಯಿಂದ ಕೆರಳಿ ನೀವು ಅಪಘಾತಕ್ಕೆ ಒಳಗಾದದ್ದಾದರೆ ನರಕದಲ್ಲಿ ಇದಕ್ಕಿಂತ ಅನಂತಪಟ್ಟು ದುಃಖವನ್ನು ಹೊಂದಬೇಕಾಗುತ್ತದೆ. ಅಲ್ಲದೆ ಅದು ಅಸಂಖ್ಯಾತ ಕಾಲದ ವರೆಗೆ ಇರುತ್ತದೆ

ನರಕ ದುಃಖದ ಕಲ್ಪನೆ—ನಾರಕೀ ಜೀವಗಳ ಶರೀರದಲ್ಲಿ ಪಾಪದ ಉದಯದಿಂದ ಸ್ವಭಾವತಃ ಅನೇಕ ರೋಗಗಳ ಪಾಸ್ತವ್ಯವು ಇದ್ದೇ ಇರುತ್ತದೆ ನರಕದೊಳಗಿನ ನೆಲದ ಸ್ಪರ್ಶವೇ ಮೊದಲು ಕೋಟ್ಯಾವಧಿ ಚೇಳುಗಳು ಕಡಿದಷ್ಟು ಭಯಂಕರ ದುಃಖವು ಆಗುತ್ತದೆ ನಾರಕಿ ಜೀವಗಳಿಗೆ ಹಸಿವು ನೀರಡಿಕೆಗಳಂತೂ ಅಪರಿಮಿತವಾಗಿರುತ್ತವೆ. ಪೃಥ್ವಿಯ ಮೇಲಿನ ಎಲ್ಲ ಅನ್ನವನ್ನು ತಿಂದರೂ, ಸಮುದ್ರದ ಸಮಗ್ರ ನೀರನ್ನೂ ಕುಡಿದರೂ ತೃಪ್ತಿಯಾಗುವದಿಲ್ಲ ಆದರೆ ಅಲ್ಲಿ ಅನ್ನದ ಒಂದು ಕಣ ಇಲ್ಲವೆ ನೀರಿನ ಒಂದು ಬಿಂದು ಸಹ ಲಭಿಸುವದಿಲ್ಲ! ನರಕದೊಳಗಿನ ಮೊದಲನೆಯ ಪಟಲದೊಳಗಿನ ಭೂಮಿಯಂತೂ ಅತ್ಯಂತ ದುರ್ಗಂಧವಿರುತ್ತದೆ. ಅದರೊಳಗಿನ ಒಂದು ಕಣವನ್ನು ಈ ಭೂಮಿಯ ಮೇಲೆ ತಂದದ್ದಾದರೆ ಸುತ್ತಲೂ ಅರ್ಧ ಹರದಾರಿಯ ವರೆಗಿನ ಪಂಚೇಂದ್ರಿಯ ಮನುಷ್ಯ ತಿರ್ಯಂಚ ಜೀವಗಳೆಲ್ಲವೂ ಮರಣವನ್ನು ಹೊಂದಿಯಾವು. ಅದರಂತೆ ಎರಡನೆಯ ಭೂಮಿಯೊಳಗಿನ ಮಣ್ಣಿನ ಕಣದಿಂದ ಒಂದು ಹರದಾರಿಯ ವರೆಗಿನ ಜೀವಗಳು ಮರಣ ಹೊಂದುವಂಥ ದುರ್ಗಂಧವಿರುತ್ತದೆ ಈ ಪ್ರಕಾರ ಪ್ರತಿಯೊಂದು ಪಟಲಕ್ಕೂ ಅರ್ಧ ಅರ್ಧ ಹರದಾರಿಯಂತೆ ಹೆಚ್ಚಾಗುತ್ತ ಏಳನೆಯ ಪೃಥ್ವಿಯ ನಲವತ್ತರೊಂಭತ್ತನೆಯ ಪಟಲದ ಮಣ್ಣಿನಲ್ಲಿ ತೀರ ದುರ್ಗಂಧವು ತುಂಬಿರುತ್ತದೆ. ಅದರ ಒಂದು ಕಣವು ಭೂಮಿಯ ಮೇಲೆ ಬಂದರೆ ಇಪ್ಪತ್ತನಾಲ್ಕು ಹಾಗೂ ಅರ್ಧ ಹರದಾರಿ ಸೀಮೆಯೊಳಗಿನ ಪಂಚೇಂದ್ರಿಯ ಪ್ರಾಣಿಗಳೆಲ್ಲ ಆ ದುರ್ಗಂಧಕ್ಕೆ ಸತ್ತು ಹೋಗುತ್ತವೆ. ಇದೇ ಪ್ರಕಾರ ನರಕದೊಳಗಿನ ರೂಪ, ರಸ, ಶಬ್ದಗಳೆಲ್ಲ ಭಯಂಕರವಾಗಿರುತ್ತವೆ ಅವೆಲ್ಲವುಗಳಿಂದ ಆಗುವ ದುಃಖವು ಸರ್ವಜ್ಞನ ಹೊರತಾಗಿ ಇನ್ನೊಬ್ಬರಿಗೆ ತಿಳಿಯುವುದು ಅಶಕ್ಯವಾಗಿದೆ ಈ ಪ್ರಕಾರ ದುಃಖವು ಅತಿಶಯ ಪರಿಗ್ರಹ, ಅಳತೆಯಿಲ್ಲದ ಆರಂಭ, ಏಳು ವ್ಯಸನ, ಅಭಕ್ಷ ಭಕ್ಷಣ, ಹಿಂಸೆಯೇ ಮೊದಲಾದ ಐದು ಪಾಪಗಳ ಪ್ರವೃತ್ತಿ, ನಿರ್ಮಾಲ್ಯ ಭಕ್ಷಣ ಮೊದಲಾದ ಕ್ರಿಯೆಗಳಿಂದ ಪ್ರಾಪ್ತವಾಗುತ್ತದೆ ನಾರಕಿ ಜೀವಗಳಿಗೆ ಮಾನಸಿಕ ದುಃಖವೂ ಅಪಾರವಾಗಿದೆ. ಅವರ ಶರೀರದಲ್ಲಿ ಆಗುವ ಹಾಗೂ ಇರುವ ಸ್ಥಳದಲ್ಲಿ ಆಗುವಂಥ ದುಃಖವನ್ನು ವರ್ಣಿಸಲಿಕ್ಕೇ ಆಗುವದಿಲ್ಲ. ಅಲ್ಲದೆ ಅಲ್ಲಿ ಪರಸ್ಪರರಲ್ಲಿಯೂ ದುಃಖ ಕೊಡುವ ಪ್ರವೃತ್ತಿಯು ವಿಪರೀತವಾಗಿರುತ್ತದೆ. ನರಕದಲ್ಲಿ ಆಯುಷ್ಯವು ಪೂರ್ಣವಾಗದ ಹೊರತಾಗಿ ಮರಣವು ಪ್ರಾಪ್ತವಾಗುವದಿಲ್ಲ ಈ ಎಲ್ಲ ಸಂಗತಿಗಳನ್ನು ಮನಸ್ಸಿನಲ್ಲಿ ನೆನೆಯಿರಿ.

ಪಶುಗಳ ದುಃಖದ ಕಲ್ಪನೆ—ಮನುಷ್ಯ ಹಾಗೂ ಪಶುಗಳಿಗೆ ಪಾಪದ ಉದಯದಿಂದ ಆಗುವ ದುಃಖದ ಕಲ್ಪನೆಯು ಪ್ರತ್ಯಕ್ಷ ನೋಡಲಿಕ್ಕೆ ದೊರೆಯುತ್ತದೆ ಅದರ ವರ್ಣನೆಯನ್ನು ಮಾಡುವ ಅವಶ್ಯಕತೆ ಇಲ್ಲ. ಪರಾಧೀನವಾದ ಪಶುಗಳ ದುಃಖವೆಂದರೆ ಅವುಗಳಿಗೆ ಮಾತನಾಡಲಿಕ್ಕೆ ಬಾರದುದು, ಹಸಿವೆ, ನೀರಡಿಕೆ, ಶೀತ-ಉಷ್ಣ, ಹೊಡೆತ-ಬಡೆತ, ಅತಿಭಾರ ಹೊರಿಸುವುದು, ಮೂಗುದಾರ ಹಾಕುವುದು ಮೊದಲಾದವುಗಳಿಂದ ಆಗುವ ದುಃಖವನ್ನು ಭೋಗಿಸಬೇಕಾಗುತ್ತದೆ. ಅವುಗಳಿಗೆ ಸ್ವೇಚ್ಛೆಯಿಂದ ತಿರುಗಾಡುವದಕ್ಕೂ ಕೂಡಲಿಕ್ಕೂ ಏಳಲಿಕ್ಕೂ ಸ್ವಾತಂತ್ರ್ಯ-ವಿರುವದಿಲ್ಲ. ಅಲ್ಲದೆ ಯಾರಿಗೂ ದುಃಖವನ್ನು ಹೇಳಿಕೊಳ್ಳುವ ಹಾಗೂ ವ್ಯಕ್ತಪಡಿಸುವ ಮಾರ್ಗವು ಇಲ್ಲ ಇವರ ಮನೆಯಲ್ಲಿ ನಿಂತೇನು, ಇಂಥವರಲ್ಲಿ ನಿಲ್ಲಲಿಕ್ಕಿಲ್ಲ ಎನ್ನುವ ಸ್ವಾತಂತ್ರ್ಯವಿಲ್ಲ ಚಾಂಡಾಲ, ಮ್ಲೇಂಛ, ಕಟುಕರೇ ಮೊದಲಾದ ನಿರ್ದಯಿ ಜನರ ಮನೆಯಲ್ಲಿರಲಿ, ಇಲ್ಲವೆ ಬ್ರಾಹ್ಮಣ ವೈಶ್ಯಾದಿಗಳ ಮನೆಯಲ್ಲಿರಲಿ ಯಾವ ವ್ಯತ್ಯಾಸವನ್ನು ಅವುಗಳಿಗೆ ಹೇಳಲಿಕ್ಕೆ ಬರುವದಿಲ್ಲ ಹೇಳುವ ಸಾಧನವೂ ಅವುಗಳಿಗೆ ಇಲ್ಲ ಕೆಲವರು ಅವುಗಳಿಗೆ ಹೊಡೆದು ತೊಂದರೆ ಕೊಡುತ್ತಾರೆ; ಕೆಲವರು ಆಹಾರ ನೀರುಗಳನ್ನೇ ಕೊಡುವುದಿಲ್ಲ; ಹಲವರಂತೂ ತೀರ ಸ್ವಲ್ಪ ಆಹಾರಕೊಟ್ಟು ಬಹಳಷ್ಟು ದುಡಿಸಿಕೊಳ್ಳುತ್ತಾರೆ ಇಂಥ ಸ್ಥಿತಿಯಲ್ಲಿ ತಮ್ಮ ಮೇಲೆ ಆಗುವ ಅನ್ಯಾಯವನ್ನು ಯಾರ ಮುಂದೆ ಹೇಳಲಿಕ್ಕೂ ಸಾಮರ್ಥ್ಯವು ಇರುವದಿಲ್ಲ ದಯಾರ್ದ್ರ ಬುದ್ಧಿಯಿಂದ ಯಾರೂ ರಕ್ಷಿಸುವಂಥವರು ದೊರೆಯುವದಿಲ್ಲ ಮೂಗಿನಲ್ಲಿ ಮೂಗದಾರವು ಇರುವುದರಿಂದಲೂ ಅದನ್ನು ಮೇಲಿಂದ ಮೇಲೆ ಜಗ್ಗುವುದರಿಂದಲೂ ಮೂಗು ಕೊರೆಯುತ್ತದೆ, ಸೀಳುತ್ತದೆ, ರಕ್ತವು ಸುರಿಯುತ್ತದೆ. ಭಾರ ಹೊರುವ ಹೆಗಲು ನೋವಾಗುತ್ತದೆ

ಅದರಲ್ಲಿ ಹುಳಗಳು ಬೀಳುತ್ತವೆ. ಬೆನ್ನಿನಲ್ಲಿ ಬಾರಕೋಲಿನಿಂದ ಹೊಡೆಯುವುದರಿಂದ ರಕ್ತವು ಚಿಮ್ಮುತ್ತದೆ. ತೀವ್ರ ವೇದನೆಯು ಉಂಟಾಗುತ್ತದೆ. ಆದರೆ ಯಾರೂ ಭಾರ ಹೊರುವುದನ್ನು ಕಡಿಮೆ ಮಾಡುವದಿಲ್ಲ. ಅತಿಶಯವಾದ ಹೊರೆಯನ್ನು ಬೆನ್ನಿನ ಮೇಲೆ ಹೇರುವುದರಿಂದಲೂ ಬಂಡಿಯಲ್ಲಿ ಹಾಕುವುದರಿಂದಲೂ ಅದನ್ನು ತಕ್ಕೊಂಡು ಹೋಗುವ ಶಕ್ತಿಯು ಮೈಯಲ್ಲಿ ಇರುವದಿಲ್ಲ ಆಗ ಎಳೆಯದಿದ್ದರೆ ಬಾರಕೋಲಿನಿಂದ ಹೊಡೆದರೆಂದೇ ತಿಳಿಯಬೇಕು ಮೇಲಾಗಿ ಬಾಯಿಂದ ಕೆಟ್ಟ ಕೆಟ್ಟ ಶಬ್ದಗಳನ್ನೂ ಸಹ ಉಚ್ಚರಿಸುತ್ತಾರೆ. ಕಾರಣವಿಲ್ಲದೆ ಸಿಟ್ಟಿಗೆ ಬಂದು, ನಡೆಯಲಿಕ್ಕೆ ಶಕ್ತಿಯಿಲ್ಲದ ಪಶುವನ್ನು ಆಗ್ರಹದಿಂದ ನಡೆಯಲಿಕ್ಕೆ ಹಚ್ಚುವುದನ್ನು ಬಿಡುವದಿಲ್ಲ ನಡೆಯದಿದ್ದರೆ ಹೊಡೆಯುತ್ತಾರೆ. ಮೂಗಿನ ದಾರವನ್ನು ಮೇರೆ ಇಲ್ಲದಷ್ಟು ಎಳೆಯುತ್ತಾರೆ ದೊಡ್ಡ ದೊಡ್ಡ ಸರಪಳಿಯಿಂದ ಗೋಣು ಮೇಲೆತ್ತಲಿಕ್ಕೆ ಬಾರದಂತೆ ಕಟ್ಟಿ ಹಾಕುವರು. ಈ ಪ್ರಕಾರ ತಿರ್ಯಂಚ ಜೀವಗಳಿಗೆ ಆಗುವ ದುಃಖವು ನಿಮಗೆ ಪ್ರತ್ಯಕ್ಷ ಕಾಣಿಸುತ್ತಲೇ ಇರುತ್ತದೆ ಅವುಗಳ ಮಾನದಿಂದ ನಿಮಗೆ ದುಃಖವು ಎಷ್ಟಿದೆ?

**ಅರಣ್ಯದೊಳಗಿನ ಪಶು ಪಕ್ಷಿಗಳ ದುಃಖದ ಕಲ್ಪನೆ**—ಆಕಾಶದಲ್ಲಿ ಹಾರಾಡುವಂಥ, ನೀರಲ್ಲಿ ಸಂಚರಿಸುವಂಥ ಮತ್ತು ಅರಣ್ಯದಲ್ಲಿ ವಾಸ ಮಾಡುವಂಥ ಪಕ್ಷಿ ಹಾಗೂ ಪಶುಗಳು ಪರಸ್ಪರ ಭಕ್ಷಣ ಮಾಡುತ್ತವೆ. ತಮ್ಮ ಆಹಾರವನ್ನು ಶೋಧಿಸುತ್ತಿರುವಾಗ ತಮಗಿಂತ ಅಶಕ್ತವಾದ ಪಶುಪಕ್ಷಿಗಳು ಎಲ್ಲಿಯಾದರೂ ಅಡಗಿ ಕುಳಿತಿದ್ದರೆ ಅವುಗಳನ್ನು ಶೋಧಿಸಿ ತೆಗೆಯುತ್ತವೆ ನಿರ್ಬಲ ಪ್ರಾಣಿಗಳು ಬಲವಾನ್ ಪ್ರಾಣಿಗಳ ಆಹಾರವಾಗುತ್ತವೆ ಬೇಟೆಯನ್ನು ಆಡುವ ಭಿಲ್ಲರು, ಬಲೆಗಾರರು ಹೋಗಿ ಅರಣ್ಯದೊಳಗಿನ ಚಿಗರೆ ಮೊದಲಾದ ಪ್ರಾಣಿಗಳನ್ನು ಹಿಡಿದು ತರುತ್ತಾರೆ ಅವುಗಳನ್ನು ಕೊಲ್ಲುತ್ತಾರೆ ಅವುಗಳ ಮಾಂಸವನ್ನು ಕುದಿಸುತ್ತಾರೆ ಮಸಾಲೆಯಲ್ಲಿ ಹಾಕಿ ತಿನ್ನುತ್ತಾರೆ ಇಂಥ ಪ್ರಾಣಿಗಳ ಮೇಲೆ ಯಾರು ದಯೆಯನ್ನು ತೋರಿಸುತ್ತಾರೆ? ಈ ಮೊದಲು ಯಾರು ದಯಾಧರ್ಮವನ್ನು ಸ್ವೀಕರಿಸಿಲ್ಲವೋ ಮತ್ತು ದ್ರವ್ಯ ಲೋಭದಿಂದ ಅನೇಕ ಪ್ರಸಂಗಗಳಲ್ಲಿ ಸುಳ್ಳು ಮಾತನಾಡಿ, ಮಾಯಾಚಾರಗಳನ್ನು ಹೂಡಿ, ವಿಶ್ವಾಸ ಘಾತ ಮಾಡಿ, ದ್ರವ್ಯ ಸಂಪಾದನೆಯನ್ನು ಮಾಡಿರುವರೋ ಅವರು ತಮ್ಮ ಕೃತ್ಯಗಳ ಫಲವೆಂದು ತಿರ್ಯಂಚ ಯೋನಿಯಲ್ಲಿ ಜನ್ಮ ತಕ್ಕೊಂಡು ದುಃಖ ಭೋಗಿಸ ಬೇಕಾಗುತ್ತದೆ ಹೀಗೆ ಮನಸ್ಸಿನಲ್ಲಿ ವಿಚಾರ ಮಾಡಿ, ಪ್ರಾಪ್ತವಾದಂಥ ಸಂಕಟದಲ್ಲಿ ದುಃಖ ಮಾಡುವದನ್ನು ಬಿಟ್ಟು ಬಿಡಿರಿ

**ಮಾನವನಿಗೆ ಆಗುವ ದುಃಖ**—ಮನುಷ್ಯ ಯೋನಿಯಲ್ಲಿ ಇಷ್ಟ ವಿಯೋಗ ಮತ್ತು ಅನಿಷ್ಟ ಸಂಯೋಗಗಳಿಂದ ಅನಂತ ದುಃಖವು ಪ್ರಾಪ್ತವಾಗುತ್ತದೆ ಇದಲ್ಲದೆ ನಿರ್ಧನತೆ, ಪರಾಧೀನತೆ, ಸೆರೆಮನೆವಾಸ, ಅಪಮಾನ, ಹೊಡೆತ, ಒದೆತ, ರೋಗ, ಮುಪ್ಪು, ಕುರುಡತ್ವ, ಕಿವುಡತನ, ಕುಂಟುತನ, ಹಸಿವು, ನೀರಡಿಕೆ, ಚಳಿ, ಉಷ್ಣ, ನೀಚಕುಲದಲ್ಲಿ ಜನ್ಮ, ನೀಚ ಕ್ಷೇತ್ರದಲ್ಲಿ ಜನ್ಮ, ಅಂಗೋಪಾಂಗಗಳು ಸೋತು ಹೋಗುವುದು, ಇಚ್ಛಿಸಿದ ಆಹಾರವು ಪ್ರಾಪ್ತವಾಗದೆ ಇರುವುದು ಮೊದಲಾದ ಸಂಗತಿಗಳ ಮೂಲಕ ಘೋರ ದುಃಖವನ್ನು ಭೋಗಿಸಿರಿ. ಇವುಗಳನ್ನೆಲ್ಲ ನೆನೆಯಿರಿ ಅವುಗಳಿಗಿಂತ ಈಗ ಹೆಚ್ಚಿನ ದುಃಖವು ಯಾವುದಿದೆ ನೋಡಿರಿ

**ಮಾನಸಿಕ ದುಃಖ**—ಈ ಪ್ರಕಾರ ನರಕ ತಿರ್ಯಂಚಗತಿಯೊಳಗಿನ ದುಃಖಕ್ಕೆ ಅಳತೆಯೇ ಇಲ್ಲ. ಆದರೆ ಪಾಪದ ಉದಯವಾದಾಗ ಮನುಷ್ಯ ಗತಿಯಲ್ಲಿಯೂ ಸಹ ಬಹಳ ದುಃಖವನ್ನು ಸಹಿಸಬೇಕಾಗುತ್ತದೆ ಅಜ್ಞಾನದಿಂದ, ಕಷಾಯ ಹಾಗೂ ಅಭಿಮಾನದ ವಶವಾಗುವುದರಿಂದ ಆಗುವ ಮಾನಸಿಕ ದುಃಖದ ಕಲ್ಪನೆಯನ್ನು ಮಾಡಲಿಕ್ಕೆ ಬರುವದಿಲ್ಲ ಕರ್ಮದ ಶಕ್ತಿಯು ಅಪರಿಮಿತವಾಗಿದೆ ಯಾರ ಶಬ್ದಗಳನ್ನು ಕೇಳಿದೊಡನೆಯೇ ತಲೆಯಲ್ಲಿ ಶೂಲಿಯು ಏಳುವುದೋ ಅಂಥವರ ಸಹವಾಸದಲ್ಲಿ ಹಗಲಿರುಳೂ ಇರಬೇಕಾಗುತ್ತದೆ ಅವರು ಮಹಾದುಷ್ಟ, ನಿರ್ದಯಿ, ಅಧಮ, ಅನ್ಯಾಯ ಮಾರ್ಗಿಗಳಿರುತ್ತಾರೆ ಕರ್ಮವು ಅವರ ಸಹವಾಸದಲ್ಲಿ ಇರುತ್ತದೆ. ಮನದೊಳಗಿನ ಹೆದರಿಕೆಯು ಇಲ್ಲದಂತೆ ಆಗುವದಿಲ್ಲ ತಮ್ಮ ಮೇಲೆ ಉಪಕಾರ ಮಾಡುವ, ತಮ್ಮನ್ನು ಜೀವ-ಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಜನರ ವಿಯೋಗದಿಂದ ದುಃಖವಾಗುತ್ತದೆ ಯಾರ ಸಂಯೋಗದಿಂದ ತಮ್ಮ ಪರಸ್ಪರ ಜೀವನವು ಸಾರ್ಥಕವೆಂದು ತಿಳಿದಿರುವರೋ ಅಂಥವರ ಅಗಲುವಿಕೆಯು ದುಃಖದಾಯಕವಾಗಿದೆ. ಬಾಲ್ಯಾವಸ್ಥೆಯಲ್ಲಿ ತಮ್ಮ ಹೆಣ್ಣು ಮಕ್ಕಳು ವಿಧವೆಯರಾಗುವುದು, ತಮ್ಮ ಜೀವನ ಸಾಧನವು ನಷ್ಟವಾಗುವುದು, ತಮ್ಮ ಧನವು ನಷ್ಟವಾಗಿ ಹೋಗುವುದು, ಅತಿ ಬಡತನವು ಬರುವುದು, ಹಗಲಿರುಳೂ ದುಡಿದು ಹೊಟ್ಟೆ ತುಂಬ ಅನ್ನವನ್ನು ಪಡೆಯದೆ ಇರುವುದು, ಕರ್ಕಶ ಸ್ತ್ರೀ, ದುರಾಚಾರಿ ಪುತ್ರ, ಅಣ್ಣ–ತಮ್ಮಂದಿರಲ್ಲಿ ವೈರ, ಗುಣವಾನ್

ಒಡೆಯನ ವಿಯೋಗ, ಕಾರಣವಿಲ್ಲದೆ ತನ್ನ ಮೇಲೆ ಅಪವಾದ ಉಂಟಾಗುವುದರಿಂದ ಅತಿಶಯ ದುಃಖವಾಗುತ್ತದೆ ಎಲೈ ಧೀರ ಪುರುಷನೇ! ಇದಕ್ಕಿಂತಲೂ ನಿನಗೆ ಈ ಸನ್ಯಾಸ ಪ್ರಸಂಗದಲ್ಲಿ ಆಗುತ್ತಿರುವ ವೇದನೆಯು ಹೆಚ್ಚು ದುಃಖದಾಯಕವಾಗಿದೆಯೆ?

**ಪರಾಧೀನತೆಯ ದುಃಖ**—ಕರ್ಮೋದಯದಿಂದ ಮಾನವ ಜನ್ಮದಲ್ಲಿ ಹುಟ್ಟಿರುವಿ ಆದರೂ ಅಗ್ನಿಯಲ್ಲಿ ಸುಟ್ಟು ಸಾಯಬೇಕಾಯಿತು ಸಿಂಹ, ಹುಲಿ, ಹಾವು ಮೊದಲಾದ ದುಷ್ಟ ಪ್ರಾಣಿಗಳು ಅನೇಕ ಪ್ರಸಂಗಗಳಲ್ಲಿ ನಿಮ್ಮನ್ನು ಭಕ್ಷಣ ಮಾಡಿದವು. ಹಲವು ಸಲ ಕೈ, ಕಾಲು, ಕಿವಿ, ಮೂಗುಗಳನ್ನು ಕೊರೆದು ಶೂಲದ ಮೇಲೆ ಏರಿಸಿ, ಕಣ್ಣು ನಾಲಿಗೆಗಳನ್ನು ಕಿತ್ತಿದ್ದಾರೆ ಈ ಪ್ರಕಾರ ಮನುಷ್ಯ ಜನ್ಮದಲ್ಲಿ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಯಿತು. ಬಲವಂತನಾದ ಶತ್ರುವು ಕಟ್ಟಿಗೆ-ಬೆತ್ತುಗಳಿಂದ ಹೊಡೆದನು, ಮುಷ್ಟಿ-ಗದೆಗಳಿಂದ ಗುದ್ದಿದನು, ಬಾರಕೋಲು, ಕಬ್ಬಿಣ ಸಲಾಕೆಗಳಿಂದ ತಿವಿದನು, ಶಸ್ತ್ರಗಳಿಂದ ಕಡಿದನು. ಹಲವು ಸಲ ಒದೆತ-ಗಳನ್ನು ಸಹಿಸಬೇಕಾಯಿತು. ಕೆಲವು ಸಲ ಬೀಸುವವನ್ನೂ ಕಟ್ಟುವದನ್ನೂ ಸಹ ಮಾಡಬೇಕಾಯಿತು. ಇವೆಲ್ಲವುಗಳೂ ಪರಾಧೀನತೆಯಿಂದ ಸಂಭವಿಸಿದವು ಈಗ ಧೈರ್ಯ ಧಾರಣ ಮಾಡಿ, ಕರ್ಮೋದಯದಿಂದ ಪ್ರಾಪ್ತವಾದಂಥ ದುಃಖವನ್ನು ಶಾಂತ ರೀತಿಯಿಂದ ಒಮ್ಮೆ ಭೋಗಿಸಿದರೆ ಪುನಃ ನಿಮಗೆ ಇಂಥ ಪರಾಧೀನತೆಯ ದುಃಖವನ್ನು ಅನುಭವಿಸುವ ಅವಶ್ಯಕತೆಯು ಉಂಟಾಗುವದಿಲ್ಲ

**ರೋಗದ ಪೀಡೆಯನ್ನು ಸಹಿಸಿರಿ.** ಇಲ್ಲಿಯ ವರೆಗೆ ಎಲ್ಲ ಪ್ರಕಾರದ ರೋಗವನ್ನು ನೀವು ಅನೇಕ ಸಲ ಅನುಭವಿಸಿದ್ದೀರಿ. ಈಗ ನಿಮಗೆ ಪ್ರಾಪ್ತವಾಗಿರುವ ರೋಗವು ಬೇಗನೆ ಇಲ್ಲದಂತೆ ಆದೀತು. ರೋಗವಿಲ್ಲದೆ ಈ ಜೀರ್ಣವಾದ ಹಾಗೂ ಮಲ ಮೂತ್ರಗಳಿಂದ ತುಂಬಿದ ಶರೀರವು ನಷ್ಟವಾಗಲಾರದು. ಅಲ್ಲದೆ ಈ ದೇಹದ ಮೇಲಿನ ನಿಮ್ಮ ಮಮತೆಯೂ ಕಡಿಮೆಯಾಗಲಾರದು. ಈ ರೋಗದಿಂದಲೇ ಧರ್ಮದ ಮೇಲೆ ನಿಮ್ಮ ಶ್ರದ್ಧೆಯು ಅಚಲವಾಗಿ ಕೂಡುವುದು. ಅಲ್ಲದೆ ಈ ರೋಗ ಜನಿತ ವೇದನೆಯೇ ನಿಮ್ಮ ಮೇಲೆ ಉಪಕಾರ ಮಾಡುವದಕ್ಕೆ ಉಂಟಾಗಿದೆ ಎಂಬುದು ಹಿಂದಿನಿಂದ ಗೊತ್ತಾದೀತು. ಆಗ ನಿಮ್ಮ ಆನಂದವು ಆಕಾಶದಲ್ಲಿಯೂ ಹಿಡಿಸಲಿಕ್ಕಿಲ್ಲ! ಅಣ್ಣಗಳಿರಾ! ನೀವು ಇಲ್ಲಿಯ ವರೆಗೆ ಸಂಸಾರದಲ್ಲಿ ಯಾವ ಯಾವ ದುಃಖಗಳನ್ನು ಭೋಗಿಸಿದಿರೋ ಅವಲ್ಲವುಗಳ ಅನಂತನೆಯ ಭಾಗ-ದಷ್ಟೂ ಈ ದುಃಖವಿಲ್ಲ ಅಂದ ಮೇಲೆ ಈ ಸಮಯದಲ್ಲಿ ಭಯಭೀತರಾಗಿ ಧರ್ಮಪರಾಙ್ಮುಖರಾಗುವ ಕಾರಣವೇನು?

**ವೇದನೆಗೆ ಹೆದರ ಬೇಡಿರಿ.** ನೀವು ಕರ್ಮದ ವಶರಾಗಿ ಚತುರ್ಗತಿಯೊಳಗಿನ ದುಃಖಗಳನ್ನು ಭೋಗಿಸುತ್ತಲಿರುವಿರಿ. ಈಗ ಈ ಧರ್ಮವನ್ನು ಸ್ವೀಕರಿಸಿ ವ್ರತ ಸಂಯಮಗಳನ್ನು ಧಾರಣ ಮಾಡಿರುವಿರಿ. ಇಂಥ ಪ್ರಸಂಗದಲ್ಲಿ ವೇದನೆಯುಂಟಾಯಿತೆಂದು ಅದಕ್ಕೆ ಹೆದರುವ ಕಾರಣವೇನು? ಕರ್ಮವಶದಿಂದ ಇಲ್ಲಿಯ ವರೆಗೆ ಅನುಭವಿಸಿದ ದುಃಖವನ್ನು ಈಗ ಒಮ್ಮೆ ಧರ್ಮಕ್ಕಾಗಿ ಶಾಂತಭಾವದಿಂದ ಭೋಗಿಸಿದ್ದಾದರೆ ಕರ್ಮದ ನಿರ್ಜರೆಯಾಗಿ ಪುನಃ ಇಂಥ ಪ್ರಸಂಗವೇ ಬರಲಿಕ್ಕಿಲ್ಲ. ಅದಕ್ಕಾಗಿ ಧೀರ ಪುರುಷರಿರಾ! ನೀವು ಈಗ ಸಮಾಧಿ ಮರಣದ ಪ್ರಸಂಗದಲ್ಲಿ ಪ್ರಾಪ್ತವಾದಂಥ ವೇದನೆಯಿಂದ ಭಯ-ಭೀತರಾಗಬೇಡಿರಿ ನಿರ್ಭಯರಾಗಿ ಬಂದ ಪ್ರಸಂಗವನ್ನು ಸಾಮ್ಯಭಾವದಿಂದ ಎದುರುಗೊಳ್ಳಿರಿ ವೇದನೆಗೆ ಹೆದರಿ, ಅದು ಇಲ್ಲದಂತೆ ಆಗಬೇಕೆಂದು ಉಪಾಯಗಳನ್ನು ಮಾಡಹತ್ತಿದರೂ ಸಹ ಕರ್ಮದ ಉದಯವಿರುವ ವರೆಗೆ ವೇದನೆಯು ಕಡಿಮೆಯಾಗುವದಿಲ್ಲ ನೀವು ಉಪಾಯಗಳನ್ನು ಯೋಜಿಸಿರಿ, ಇಲ್ಲವೆ ಯೋಜಿಸದೆ ಇರ್ರಿ, ಕರ್ಮದ ಉದಯವು ಮಂದವಿದ್ದಲ್ಲಿ ವೇದನೆಯು ಕಡಿಮೆಯಾಗುತ್ತದೆ ಉಪಾಯವು ಸಫಲವೆನಿಸುತ್ತದೆ ಉಳಿದ ಹೊತ್ತಿನಲ್ಲಿ ಆಗುವದಿಲ್ಲ.

**ಶಕ್ತಿಯುಳ್ಳ ಔಷಧವು ಗುಣಕಾರಿಯೆನಿಸುವದಿಲ್ಲ.** ಕರ್ಮದ ಉದಯವು ಪ್ರಬಲವಾಗಿದ್ದರೆ ಎಂದ ಶಕ್ತಿಯುಳ್ಳ ಔಷಧವಿದ್ದರೂ ಸಹ ತನ್ನ ಗುಣವನ್ನು ತೋರಿಸುವದಿಲ್ಲ ಯಾರಿಗೆ ವ್ರತ, ತಪಸ್ಸುಗಳಿಲ್ಲವೋ ಅವರು ಹಗಲಿರುಳೂ ಯೋಗ್ಯಾಯೋಗ್ಯ, ಭಕ್ಷ್ಯಾಭಕ್ಷ್ಯಗಳ ವಿಚಾರ ಮಾಡದೆ ಮನಸ್ಸಿಗೆ ಬಂದುದನ್ನು ತಿನ್ನುತ್ತಲೇ ಇರುತ್ತಾರೆ ಅಂಥವರಿಗೆ ರೋಗವು ಪ್ರಾಪ್ತವಾದಲ್ಲಿ ಅನೇಕ ಉಪಾಯಗಳನ್ನು ಮಾಡುತ್ತಿದ್ದರೂ ಉಪಯೋಗವಾದದ್ದು ಕಂಡುಬರುವದಿಲ್ಲ ನೀವಂತೂ ವ್ರತ-ತಪಶ್ಚರಣಗಳನ್ನು ಸ್ವೀಕರಿಸಿ ಅಯೋಗ್ಯ ಕ್ರಿಯೆಗಳನ್ನು ತ್ಯಾಗ ಮಾಡಿರುವಿರಿ. ನಿಮಗೆ ರೋಗದಿಂದ ವೇದನೆಯು ಆಗುತ್ತಿರುವಾಗ ವ್ಯಾಕುಲರಾಗಿ ಅದಕ್ಕೆ ಪ್ರತೀಕಾರ ಮಾಡುವ ಇಚ್ಛೆಯಾದರೂ ಯಾಕೆ ಆಗಬೇಕು? ಎಲಾ! ಇಹಲೋಕದಲ್ಲಿ ರಾಜನಂತೆ ಸಕಲ ಸಾಮಗ್ರಿಗಳು

ಇನ್ನೊಬ್ಬರಿಗೆ ಉಪಲಬ್ಧವಿಲ್ಲವಷ್ಟೆ? ರಾಜರಿಗೆ ವ್ರತ, ಉಪವಾಸ, ಭಕ್ಷ್ಯಾಭಕ್ಷ್ಯ, ಯೋಗ್ಯಾಯೋಗ್ಯಗಳನ್ನು ನೋಡುವ ಕಾರಣವೂ ಇರುವದಿಲ್ಲ ಅನೇಕ ಪ್ರಕಾರದ ಹಿಂಸೆ, ಆರಂಭಗಳನ್ನು ಮಾಡುವುದರ ಹೆದರಿಕೆಯೂ ಇಲ್ಲ ಅವರ ಅಂತಃಕರಣದಲ್ಲಿ ದಯೆಯು ಇರುವದಿಲ್ಲ ಅವರ ಆಶ್ರಯದಲ್ಲಿ ದೊಡ್ಡ ದೊಡ್ಡ ಧನ್ವಂತರಿಗಳು ಇರುತ್ತಾರೆ. ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡಿ ತಪ್ಪದೆ ಗುಣಕೊಡುವಂಥ ಔಷಧಗಳನ್ನೂ ಅವರು ಸಿದ್ಧ ಮಾಡಿರುತ್ತಾರೆ ಆದರೆ ರಾಜನಿಗೆ ಕರ್ಮದ ಪ್ರಬಲ ಉದಯದಿಂದ ರೋಗವು ಉಂಟಾದಲ್ಲಿ ಅದನ್ನು ನಷ್ಟಗೊಳಿಸುವ ಸಾಮರ್ಥ್ಯವು ಆ ವೈದ್ಯರಲ್ಲಿಯೂ ಇಲ್ಲದೆ ಹೋಗುತ್ತದೆ ನೀವಂತೂ ತ್ಯಾಗಿ ಹಾಗೂ ವ್ರತಿಗಳೂ ಆಗಿದ್ದೀರಿ ನಿಮ್ಮ ಅಂತಃಕರಣದಲ್ಲಿ ದಯೆಯು ತುಂಬಿದೆ ವೈಯಾವೃತ್ಯವನ್ನು ಮಾಡುವ ಅನೇಕ ಜನರು ನಿಮ್ಮ ಹತ್ತರ ಇದ್ದಾರೆ. ಅವರೂ ಸಹ ನಿಮ್ಮ ವೇದನೆಯನ್ನೂ ಇಲ್ಲದಂತೆ ಮಾಡಲಾರರು. ನಿಮಗೆ ವೇದನೆಯನ್ನು ನಷ್ಟಗೊಳಿಸುವದಿದ್ದರೆ ಕೇವಲ ಜಿನೇಂದ್ರರ ವಚನವೆಂಬ ಅಮೃತವನ್ನೇ ಸೇವನ ಮಾಡಬೇಕಾದೀತು ಪರಮ ಶಾಂತಭಾವವೆಂಬ ರಸಾಯನವನ್ನು ಸ್ವೀಕರಿಸಬೇಕಾದೀತು ಪೂರ್ವ ಕರ್ಮದ ಉದಯರೂಪ ರಸವನ್ನು ಶಾಂತಭಾವದಿಂದ ಸಹನಮಾಡಿರಿ ಆದರಿಂದ ಅಶುಭಕರ್ಮವೆಂಬ ರಸವು ಇಲ್ಲದಂತಾಗಿ ಹೊಸ ಕರ್ಮವು ಕಟ್ಟಲಾರದು.

ಸಂಯಮಯುಕ್ತ ಸಾವನ್ನು ಸ್ವೀಕರಿಸಿರಿ. ಮರಣವು ಒಂದು ಪರ್ಯಾಯದಲ್ಲಿ ಒಮ್ಮೆ ಮಾತ್ರ ಎಂದಾದರೂ ಆಗುವದಿದೆ ಆದರೆ ಸಂಯಮದಿಂದ ಸಾವನ್ನು ಹೊಂದುವ ಪರ್ಯಾಯವು ಮಾನವನದಾಗಿದೆ ಆದರಿಂದ ಈ ಪ್ರಸಂಗಕ್ಕೆ ಬಹಳ ಮಹತ್ವವಿದೆ ಇಂಥ ಸಂದರ್ಭದಲ್ಲಿ ಸಾವಧಾನತೆಯನ್ನು ಹೊಂದಿ ಹರ್ಷದಿಂದ ಮರಣವನ್ನು ಸಾಧಿಸಬೇಕು. ಅಂದರೆ ಅನೇಕ ಜನ್ಮಗಳಲ್ಲಿ ಮೇಲಿಂದ ಮೇಲೆ ಸಾಯುವ ಪ್ರಸಂಗವು ಬರುವದಿಲ್ಲ ಅಲ್ಲದೆ ಅಲ್ಪಾಯುಷ್ಯದಲ್ಲಿ ಆರ್ತಪರಿಣಾಮದಲ್ಲಿ ಸಾಯುವ ಸಂದರ್ಭವೂ ಒದಗುವದಿಲ್ಲ. ಅಶುಭ ಕರ್ಮದ ಉದಯವನ್ನು ಪ್ರತಿಬಂಧಿಸಲಿಕ್ಕೆ ಇಂದ್ರಾದಿದೇವರೂ ಸಹ ಸಮರ್ಥರಿಲ್ಲ ಅಂದ ಮೇಲೆ ಈ ಅಲ್ಪ ಶಕ್ತಿಯನ್ನು ಧಾರಣ ಮಾಡುವ ಜನರು ನಿಮ್ಮನ್ನು ಹೇಗೆ ಉಳಿಸಲಿಕ್ಕೆ ಸಾಧ್ಯವಿದೆ?

ಕರ್ಮೋದಯವನ್ನು ಜಯಿಸಲಾಗದು. ಯಾವ ವೃಕ್ಷವನ್ನು ದೊಡ್ಡ ಆನೆಯೂ ಸಹ ಕಿತ್ತಲಾರದೋ ಅದು ಕ್ಷುಲ್ಲಕ ಶಕ್ತಿಯುಳ್ಳ ಮೊಲವು ಕೀಳುವುದು ಹೇಗೆ ಸಾಧ್ಯವಿದ? ಯಾವ ನದಿಯ ಪ್ರವಾಹದಲ್ಲಿ ದೊಡ್ಡ ಬಲಿಷ್ಠವಾದ ಆನೆಯೇ ಹರಿದು ಹೋಗುವುದೋ ಆ ಪ್ರವಾಹದಲ್ಲಿ ಮೊಲವು ಹೋದುದರಲ್ಲಿ ಆಶ್ಚರ್ಯವೇನು? ಯಾವ ಕರ್ಮದ ಉದಯವು ತೀರ್ಥಂಕರ, ಚಕ್ರವರ್ತಿ, ನಾರಾಯಣ, ಬಲಭದ್ರ ಮತ್ತು ಇಂದ್ರಾದಿ ದೇವರಂಥ ಪುಣ್ಯಶಾಲಿ ಪುರುಷರಿಗೂ ಅಜಿಂಕ್ಯವಾಗಿರುವುದೋ ಅಂಥ ಕರ್ಮದ ಉದಯವನ್ನು ನಮ್ಮ–ನಿಮ್ಮಂಥ ಸಾಮಾನ್ಯ ಜನರು ಹೇಗೆ ಗೆಲ್ಲಲಿಕ್ಕೆ ಸಾಧ್ಯವಿದೆ? ಒಟ್ಟಿನಲ್ಲಿ ಅಜಿಂಕ್ಯ ಕರ್ಮೋದಯವಿರುವಾಗ–ಅಸಾತಾ ಕರ್ಮದ ಉದಯವು ರಸವನ್ನು ಕೊಡುತ್ತಿರುವಾಗ–ಕ್ಲೇಶವನ್ನು ಹೊಂದಕೂಡದು. ಧೈರ್ಯವನ್ನು ಧಾರಣ ಮಾಡಿ ಸಾಮ್ಯಭಾವದಿಂದ ಅದರ ನಿರ್ಜರೆಯನ್ನು ಮಾಡಿರಿ. ಕರ್ಮೋದಯದಿಂದ ದುಃಖಿಗಳಾಗಿ ಅತ್ತು, ಶೋಕ ಮಾಡಿ, ದೈನ್ಯವನ್ನು ತೋರಿಸಿದರೂ ವೇದನೆಯೇನೂ ಇಲ್ಲದಂತೆ ಆಗುವದಿಲ್ಲ ಅದು ಕಡಿಮೆಯಾಗದೆ ಉಪಾಯಗಳಿಂದ ಹೆಚ್ಚುತ್ತಲೇ ಹೋದೀತು ಮೇಲಾಗಿ ವ್ರತ, ಸಂಯಮ, ಧರ್ಮ ಮತ್ತು ಕೀರ್ತಿಗಳು ನಾಶವಾದಾವು. ಅಲ್ಲದೆ ಆರ್ತಧ್ಯಾನದಲ್ಲಿ ಮರಣವು ಬಂದದ್ದಾದರೆ ತಿರ್ಯಂಚ ಯೋನಿಯಲ್ಲಿ ಜನ್ಮ ಧಾರಣ ಮಾಡಬೇಕಾದೀತು. ಇದೊಂದು ಹೆಚ್ಚಿನದೇ! ಅಸಾತಾ ಕರ್ಮದ ಉದಯವು ಪ್ರಾಪ್ತವಾದಾಗ ಅದು ಇಲ್ಲದಂತೆ ಆಗಿ ಸುಖವು ಲಭಿಸಬೇಕೆಂದು ವಿಲಾಪಿಸುವುದು, ಅಳುವುದು, ದೀನಮಾತುಗಳನ್ನಾಡುವುದು ಇದೆಲ್ಲ ಉಸುಬಿನೊಳಗಿನ ಎಣ್ಣೆಯನ್ನು ತೆಗೆಯಲಿಕ್ಕೆ ಪ್ರಯತ್ನ ಮಾಡಿದಂತೆ ಇದೆ; ನೀರಿನೊಳಗಿಂದ ಬೆಣ್ಣೆಯನ್ನು ತೆಗೆಯುವ ಯತ್ನ ಮಾಡಿದಂತಿದೆ; ಅಕ್ಕಿಗಾಗಿ ಹೊಟ್ಟನ್ನು ಕುಟ್ಟಿದಂತಿದೆ ಇವೆಲ್ಲ ಕ್ರಿಯೆಗಳು ನಿರುಪಯೋಗಿಯಲ್ಲವೆ? ಇವುಗಳಿಂದ ತಿರುಗಿ ತೀವ್ರ ಕರ್ಮಬಂಧವೇ ಆಗುವಂತಿರುತ್ತದೆ ಒಬ್ಬ ಮನುಷ್ಯನು ಪೂರ್ವಕಾಲದಲ್ಲಿ ಒಬ್ಬರಿಂದ ಸಾಲವನ್ನು ಪಡೆದು, ಅದನ್ನು ಯೋಗ್ಯ ಅವಧಿಯಲ್ಲಿ ತೀರಿಸಿ ಬಿಟ್ಟರೆ ತನ್ನ ತಲೆಯ ಮೇಲಿನ ಭಾರವು ಇಳಿಯಿತೆಂದು ಭಾವಿಸುತ್ತಾನೆ ಅದೇ ಪ್ರಕಾರ ಧರ್ಮವಂತ ಪುರುಷನೂ ಸಹ ಕರ್ಮೋದಯದಿಂದ ಪ್ರಾಪ್ತವಾದ ರೋಗ, ಬಡತನ, ಉಪಸರ್ಗ ಮತ್ತು ಪರೀಷಹ ಮೊದಲಾದವುಗಳು ಒದಗಿದಾಗ ಅವುಗಳ ಪೀಡೆಯನ್ನು ಶಾಂತ ಬಾವನೆಯಿಂದ ಸಹನ ಮಾಡಿದರೆ ಅದರಿಂದ ಋಣಮುಕ್ತನಾದಂತೆ ಆಯಿತು ಅದಕ್ಕಾಗಿ ದುಃಖವನ್ನು ಹೊಂದದೆ ಆನಂದವೆಂದೇ ಭಾವಿಸಬೇಕು.

ಸಂಕಟದಲ್ಲಿ ಧರ್ಮಾತ್ಮರನ್ನು ನೆನೆ. ನನಗೆ ಈಗ ಪೂರ್ವಕೃತ ಕರ್ಮವು ಉದಯಕ್ಕೆ ಬಂದು ದುಃಖವನ್ನು ಕೊಡುತ್ತಿದೆ. ಇದು ಬಹಳ ಒಳ್ಳೆಯದಾಯಿತು. ಯಾಕಂದರೆ ನನ್ನ ಹತ್ತಿರ ಜ್ಞಾನರೂಪೀ ಧನವು ಬೇಕಾದಷ್ಟಿದೆ ನನ್ನ ಅಂತಃಕರಣದಲ್ಲಿ ಯಾವಾಗಲೂ ಪಂಚ ಪರಮೇಷ್ಠಿಗಳ ಚಿಂತನೆಯು ನಡೆಯುತ್ತಲೇ ಇದೆ. ನನ್ನ ಧರ್ಮಬಾಂಧವರೂ ಸಹ ನನಗೆ ನೆರವಾಗಲು ಸಿದ್ಧರಿದ್ದಾರೆ. ಇಂಥ ಸಂದರ್ಭದಲ್ಲಿಯೇ ನನ್ನ ತಲೆಯ ಮೇಲಿನ ಸಾಲದ ಭಾರವನ್ನು ಇಳಿಸಿ ಹಗುರು ಮಾಡಿಕೊಳ್ಳುತ್ತೇನೆ, ಸುಖವನ್ನೂ ಹೊಂದುವೆ ಕಾಮ-ಕ್ರೋಧಾದಿ ಕಷಾಯಗಳಿಂದ ಕಟ್ಟಿದ ಕರ್ಮವು ಬಹಳ ಬಲಿಷ್ಠವಾಗಿರುತ್ತದೆ ಅದು ಬುದ್ಧಿ, ವಿದ್ಯೆ, ಧನಸಂಪತ್ತು, ಬಂಧು, ಶರೀರ ಮತ್ತು ದೇವ-ದಾನವರ ಸಹಾಯವನ್ನೂ ಬಲವನ್ನೂ ಕ್ಷಣಾರ್ಧದಲ್ಲಿ ನಷ್ಟಗೊಳಿಸಿ ಬಿಡುತ್ತದೆ ಕರ್ಮರೂಪೀ ಋಣವು ಇಂಥದಾಗಿದೆ. ಅದು ಬೇಗನೇ ಬಿಡುವಂಥದಲ್ಲ

ಉದಯವು ವ್ಯತ್ಯಾಸಗೊಳ್ಳದಂಥದು. ರೋಗ, ಶೋಕ, ಜೀವನ, ಮರಣ ಮೊದಲಾದವುಗಳು ಇನ್ನಾರಿಗೂ ಒದಗದೆ ನಿಮಗಷ್ಟೇ ಒದಗುತ್ತಿದ್ದರೆ ದುಃಖಮಾಡಲಿಕ್ಕೆ ಅಡ್ಡಿಯಿರಲಿಲ್ಲ. ಹಸಿವು, ನೀರಡಿಕೆ, ರೋಗ, ವಿಯೋಗ, ಜನ್ಮ, ಮುಪ್ಪು, ಮರಣ ಮೊದಲಾದವುಗಳು ಯಾರಿಗೆ ಕರ್ಮೋದಯದಿಂದ ಉತ್ಪನ್ನವಾಗುವದಿಲ್ಲ? ಇವುಗಳಿಂದ ಯಾರಿಗೆ ತೊಂದರೆಯಾಗುವದಿಲ್ಲ? ಇವುಗಳೆಲ್ಲವೂ ಸಂಸಾರೀ ಜೀವಗಳಿಗೆ ಇದ್ದೇ ಇರುತ್ತವೆ ಎಲ್ಲರೂ ಭೋಗಿಸಬೇಕಾಗುತ್ತದೆ. ಇಷ್ಟೇ ಅಲ್ಲ, ನಾಲ್ಕೂ ಗತಿಗಳಲ್ಲಿ ಕರ್ಮದ ಉದಯವು ಯಾರನ್ನೂ ಬಿಟ್ಟಿಲ್ಲ. ಆದಕ್ಕಂತಲೇ ಪೂರ್ವಕಾಲದಲ್ಲಿ ಕಟ್ಟಲ್ಪಟ್ಟ ಕರ್ಮದ ಉದಯವು ಪ್ರಾಪ್ತವಾದಾಗ ಆಕುಲತೆಯನ್ನು ಹೊಂದಬೇಡಿರಿ. ಧೈರ್ಯವನ್ನು ಧಾರಣಮಾಡಿ ಶಾಂತಪರಿಣಾಮದಿಂದ ಕರ್ಮವನ್ನು ಗೆಲ್ಲಬೇಕು. ಸರ್ವ ದುಃಖವನ್ನು ಗೆಲ್ಲುವಂಥ ಪ್ರಸಂಗದಲ್ಲಿ ಈಗ ಯಾವ ವಿಷಯದಲ್ಲಿ ನೀವು ದುಃಖಿಸುತ್ತಿದ್ದೀರೆಂಬುದು ತಿಳಿಯುವದಿಲ್ಲ

ಸಮಾಧಿ ಮರಣದ ಇಚ್ಛೆಯನ್ನು ಮಾಡಿರಿ. ಸಮ್ಯಗ್‌ದೃಷ್ಟಿ ಜೀವವಂತೂ ಹುಟ್ಟಿದಾಗಿನಿಂದಲೂ ಸಮಾಧಿಮರಣವು ಪ್ರಾಪ್ತವಾಗಬೇಕೆಂದೇ ಬಯಸುತ್ತಿರುತ್ತದೆ ಈಗ ಇಂಥ ಕಠಿಣ ಹಾಗೂ ದುರ್ಲಭ ಪ್ರಸಂಗವು ಪ್ರಾಪ್ತವಾಗಿದೆ; ಎಲ್ಲ ದುಃಖವು ನಾಶವಾಗುವ ವೇಳೆಯು ಒದಗಿದೆ, ಈಗ ದುಃಖವನ್ನು ಮಾಡುವ ಅವಶ್ಯಕತೆ ಇಲ್ಲ. ಇಷ್ಟೇ ಅಲ್ಲ, ವಿಷಾದವನ್ನು ಮನಸ್ಸಿನಲ್ಲಿ ತರುವುದೂ ಯೋಗ್ಯವಲ್ಲ. ಒಮ್ಮೆ ಈ ಸುಸಂದರ್ಭವು ಹೋಯಿತೆಂದರೆ ಮುಂದೆ ಅನಂತಕಾಲ ಕಳೆದರೂ ಇಂಥ ಶುಭಕಾಲವು ಒದಗಲಾರದು. ಅರಿಹಂತ, ಸಿದ್ಧ, ಆಚಾರ್ಯ ಮೊದಲಾದ ಪಂಚ ಪರಮೇಷ್ಠಿಗಳು ಮತ್ತು ಇತರ ಸರ್ವ ಧರ್ಮಬಾಂಧವರ ಸಾಕ್ಷಿಯಿಂದ ಯಾವ ವ್ರತ, ಸಂಯಮಗಳನ್ನು ಧಾರಣ ಮಾಡಿರುವಿಯೋ ಅವುಗಳನ್ನು ಭಂಗಮಾಡುವುದರಿಂದ ಪಂಚ ಪರಮೇಷ್ಠಿಗಳಲ್ಲಿರುವ ನಿಮ್ಮ ಭಕ್ತಿಗೆ ಕುಂದುಂಟಾಗುತ್ತದೆ, ನಿಮ್ಮ ಧರ್ಮಕ್ಕೂ ದೋಷ ತಟ್ಟುತ್ತದೆ, ಧರ್ಮಮಾರ್ಗದ ವಿರಾಧನೆಯಾಗುತ್ತದೆ; ಮತ್ತು ಸ್ವಂತದ ಇಹ-ಪರಗಳೂ ನಷ್ಟವಾಗಿ ಹೋದಾವು. ಇರಲಿ, ಇಷ್ಟೆಲ್ಲ ಮಾಡಿಯೂ ಕೂಡ ನಿಶ್ಚಿತವಾಗಿ ಬದುಕಿಯೇ ತೀರುತ್ತೇನೆಂಬ ಭರವಸೆಯಾದರೂ ಇದೆಯೇ? ಅದಂತೂ ಶಕ್ಯವಿಲ್ಲ, ಮರಣವಂತೂ ಒಮ್ಮೆ ಬಂದೇ ತೀರುವಂಥದು ಸಾವು ಮತ್ತು ದುಃಖಗಳು ಸಂಯಮ ಹಾಗೂ ವ್ರತಗಳನ್ನು ಬಿಟ್ಟನೆಂದು ದೂರವಾಗುವುದು ಅಷ್ಟರಲ್ಲಿಯೇ ಇದೆ ಯಾವ ಕಾರ್ಯವನ್ನು ರಾಜ, ಪಂಚ, ದೇವ ಇವರ ಸಾಕ್ಷಿಯಿಂದ ಮಾಡುವದಾಗಿ ಒಪ್ಪಿಕೊಂಡಾಗಿದೆಯೋ ಅದನ್ನು ಈ ಪ್ರಸಂಗದಲ್ಲಿ ಮಾಡದೆ ಇದ್ದರೆ ರಾಜನ ಹತ್ತಿರ ಇದು ಅಪರಾಧವೆನಿಸುತ್ತದೆ, ಜಗತ್ತಿನಲ್ಲಿ ತಿರಸ್ಕಾರವು ಉಂಟಾಗುತ್ತದೆ, ಪರಲೋಕದಲ್ಲಿ ಅನಂತಕಾಲ ಪರ್ಯಂತ ಜನ್ಮ, ಮರಣ, ರೋಗ, ಶೋಕ, ವಿಯೋಗ ಮೊದಲಾದ ದುಃಖಗಳಿಗೆ ಪಾತ್ರವಾಗಬೇಕಾಗುತ್ತದೆ ಯಾವ ಸಂಗತಿಯನ್ನು ಬಿಟ್ಟಿರುವೆವೋ ಅದನ್ನು ತಿರುಗಿ ಮಾಡುವುದು, ಯಾವ ವ್ರತವನ್ನು ಗ್ರಹಣ ಮಾಡಿರುವೆವೋ ಅದನ್ನು ಮುರಿಯುವುದು, ಇವೆರಡೂ ಅಪರಾಧಗಳೆನಿಸುತ್ತವೆ. ಯಾವನು ಯಾವ ವ್ರತವನ್ನೂ ಸ್ವೀಕರಿಸಿಲ್ಲವೋ ಅವನು ಅನಾದಿ ಸಂಸಾರಿಯೇ ಆಗಿರುತ್ತಾನೆ. ಅವನಿಗೆ ವ್ರತ-ಸಂಯಮಗಳು ಎಂದೂ ಪ್ರಾಪ್ತವಾಗಿರುವುದೇ ಇಲ್ಲ. ಆದರೆ ಯಾರು ವ್ರತವನ್ನು ಸ್ವೀಕರಿಸಿ ಅದನ್ನು ಭಂಗಗೊಳಿಸುವರೋ ಅವರಿಗೆ ಮಾತ್ರ ಮುಂದೆ ಅನಂತಾನಂತ ಕಾಲದ ವರೆಗೆ ಧರ್ಮಭಾವನೆಯು ಉತ್ಪನ್ನವಾಗುವುದು ಕಠಿಣವಾಗಿದೆ

ಆಹಾರದ ಆಸಕ್ತಿಯ ದೋಷ—ಆಹಾರದ ವಿಷಯದಲ್ಲಿ ಅತ್ಯಂತ ಆಸಕ್ತಿ ಇರುವುದು ಕೂಡ ಬಹಳ ಬಹಳ ನಿಂದ್ಯವಾಗಿದೆ. ಉತ್ತಮ ಪುರುಷರು ಹಸಿವೆಯು ಪ್ರಾಣ ಹರಣ ಮಾಡುವಂಥ ವೇದನೆಯನ್ನು ಕೊಡುತ್ತದೆಂದು ತಿಳಿದು ಕೇವಲ ಧರ್ಮ ಸಾಧನೆಗಾಗಿ ಶರೀರವು ಉಳಿಯಬೇಕೆಂದು ಮಾತ್ರ ಅಲ್ಪ ಆಹಾರವನ್ನು ಸ್ವೀಕರಿಸುತ್ತಾರೆ.

ಆದರಲ್ಲೂ ಕೂಡ ಅವನಿಗೆ ಬಹಳ ನಾಚಿಕೆ ಎನಿಸುತ್ತದೆ ಆಹಾರದ ವಿಷಯವನ್ನು ಮಾತನಾಡುವುದರಿಂದಲೂ ಕೂಡ ಪಾಪ ಬಂಧವಾಗುತ್ತದೆ ಅದಕ್ಕಾಗಿ ಅಂಥ ಮಾತುಗಳನ್ನು ಅವರು ಬಾಯಿಂದ ಉಚ್ಚರಿಸಲಿಕ್ಕೆ ಇಚ್ಛಿಸುವದಿಲ್ಲ. ಎಲವು, ಮಾಂಸ, ಕೀವು, ರಕ್ತಗಳಿಂದ ನಿರ್ಮಾಣವಾದ ದೇಹವು ಆಹಾರವಿಲ್ಲದೆ ತಾಳುವದಿಲ್ಲ ಈ ದೇಹವಿಲ್ಲದೆ, ತಪ, ವ್ರತ, ಸಂಯಮ ಸ್ವರೂಪಾತ್ಮಕ ರತ್ನತ್ರಯ ಮಾರ್ಗವನ್ನು ಪಾಲಿಸಲಿಕ್ಕೆ ಆಗುವದಿಲ್ಲ. ಅಂತಲೇ ಸರಸ–ನೀರಸ, ಮಧುರಾಮಧುರ, ಹುಳಿ–ಕಹಿ ಎಂಥದು ಹೊತ್ತಿಗೆ ಸಿಗುವುದೋ ಅಂಥದನ್ನು ನಿರ್ದೋಷ ರೀತಿಯಿಂದ ಗ್ರಹಣಮಾಡಿ ಹೊಟ್ಟೆಯ ಹಸಿವನ್ನು ಶಮನಮಾಡುವರು. ಎಂದೂ ರಸನೇಂದ್ರಿಯ ವಶವಾಗುವದಿಲ್ಲ. ಆಹಾರದ ವಿಷಯದಲ್ಲಿ ಉತ್ಪನ್ನವಾಗುವ ತೀವ್ರ ಇಚ್ಛೆಯನ್ನು ತಡೆದರೇನೇ ಮಾನವ ಜನ್ಮವು ಸಫಲವಾಯಿತು. ಇಲ್ಲದಿದ್ದರೆ ಪಶುಯೋನಿಯಲ್ಲಂತೂ ಇವುಗಳನ್ನು ಗೆಲ್ಲುವ ಸಾಮರ್ಥ್ಯವು ಇರುವದಿಲ್ಲ ಆ ಪರ್ಯಾಯದಲ್ಲಿ ಅವು ಪ್ರಬಲ-ವಿರುವುದರಿಂದ ಸಬಲವು ನಿರ್ಬಲವಾದುದನ್ನು ಭಕ್ಷಣಮಾಡಿ ಬಿಡುವವು ಇಷ್ಟೇ ಅಲ್ಲ, ಹೆತ್ತ ತಾಯಿಯೂ ಸಹ ಆಹಾರದ ಪ್ರಬಲ ಇಚ್ಛೆಯಿಂದ ತನ್ನ ಮರಿಗಳನ್ನು ತಿಂದು ಬಿಡುವುದು; ಮನುಷ್ಯ ಗತಿಯಲ್ಲಿಯೂ ಸಹ ಉಚ್ಚ, ನೀಚ, ಕುಲೀನ, ಕುಲಹೀನ ಮೊದಲಾದ ಭೇದಗಳೂ ಸಹ ಆಹಾರದಿಂದಲೇ ಆಗಿವೆ ಜಗತ್ತಿನಲ್ಲಿ ಆಗುವ ನಿಂದ್ಯ ಕಾರ್ಯಗಳೆಲ್ಲವೂ ಆಹಾರದ ವಿಚಾರವಿಲ್ಲದ ಪುರುಷರಿಂದಲೇ ನಡೆಯುತ್ತವೆ. ಇದಕ್ಕೆ ವಿರೋಧವಾಗಿ ಆಹಾರದ ಮೇಲೆ ಆಸಕ್ತಿ ಇಲ್ಲದಂಥವರು ನಿರ್ವಾಂಛಕ ಮತ್ತು ನಿರ್ಮಲ ಮನೋವೃತ್ತಿಯಿಂದ ಉತ್ತಮ ಪುರುಷರೆನಿಸುತ್ತಾರೆ. ಆಹಾರ ಲಂಪಟರಾದ ಪುರುಷರು ತೋಟ–ಪಟ್ಟಿಗಳಲ್ಲಿ ಹೋಗಿ ಆನಂದದಿಂದ ವನಭೋಜನ ಮಾಡುವ ಇಚ್ಛೆಯಿಂದ ಕೋಟ್ಯಾವಧಿ ತ್ರಸ ಜೀವಗಳ ಘಾತಮಾಡಲಿಕ್ಕೆ ಪ್ರವೃತ್ತರಾಗುತ್ತಾರೆ ದೊಡ್ಡ ದೊಡ್ಡ ಪಾಪಗಳಿಗೂ ಸಹ ಇದೇ ಹೇತುವಿನಿಂದ ಅನುಮೋದನ ಕೊಡುತ್ತಾರೆ; ಅಭಕ್ಷ್ಯ ಭಕ್ಷಣ ಮಾಡಲು ಸಿದ್ಧರಾಗುತ್ತಾರೆ, ಅಸತ್ಯ ಹಾಗೂ ಪಾಪ ಉತ್ಪನ್ನವಾಗುವಂಥ ಮಾತುಗಳನ್ನು ಆಡಲಿಕ್ಕೆ ಉದ್ಯುಕ್ತರಾಗುತ್ತಾರೆ, ಕಳವು ಮಾಡಲಿಕ್ಕೂ ಹಿಂದೆ ಮುಂದೆ ನೋಡುವದಿಲ್ಲ; ವ್ಯಭಿಚಾರ ಮಾಡುತ್ತಾರೆ, ಅತಿಶಯ ಪರಿಗ್ರಹವಿಡುವ ಇಚ್ಛೆಯು ಅವರಿಗೆ ಆಗುತ್ತದೆ, ಕೇವಲ ಮಿಷ್ಟಾನ್ನವು ತಿನ್ನಲಿಕ್ಕೆ ದೊರೆಯಬೇಕೆಂಬ ಹೇತುವಿನಿಂದಲೇ ಅವರು ಇತರ ಜೀವಗಳ ಘಾತಮಾಡುತ್ತಾರೆ. ಅಲ್ಲದೆ ಸುಳ್ಳು ಮಾತನಾಡಿಯೂ ಸಹ ಧನವನ್ನು ಸಂಪಾದಿಸುತ್ತಾರೆ ಇದೇ ಹೇತುವಿನಿಂದ ಅವರು ಕ್ರೋಧ, ಮಾನ, ಮಾಯಾ, ಲೋಭ, ಕಳವು ಮೊದಲಾದವುಗಳನ್ನು ಮಾಡ ಹತ್ತುತ್ತಾರೆ ತಮ್ಮ ಕುಲ ಕ್ರಮವನ್ನು ಬಿಟ್ಟು ನೀಚ ಜಾತಿಯವರ ಆಹಾರ ವಿಹಾರದಲ್ಲಿ ತಾವಾಗಿಯೇ ಹೋಗಿ ಕೂಡಿಕೊಳ್ಳುತ್ತಾರೆ. ಅವರ ಸೇವೆಯನ್ನು ಸ್ವೀಕರಿಸುತ್ತಾರೆ ನಿರ್ಲಜ್ಜರಾಗಿ ತಮ್ಮ ಸ್ಥಾನ–ಮಾನಗಳನ್ನು ತ್ಯಜಿಸಿ ನಿಂದ್ಯ ಆಚರಣೆಯನ್ನು ಮಾಡ ಹತ್ತುತ್ತಾರೆ ಆಗ ಅವರಿಗೆ ತಾವಾರು, ತಮ್ಮ ಕರ್ತವ್ಯವೇನೆಂಬುದರ ಮರೆವು ಉಂಟಾಗುತ್ತದೆ. ಕೇವಲ ಸವಿ–ಸವಿ ಪದಾರ್ಥಗಳ ಮೇಲಿನ ಇಚ್ಛೆಯಿಂದ ತಮ್ಮ ಮನಸ್ಸನ್ನು ಕೆಡಿಸಿಕೊಳ್ಳುತ್ತಾರೆ ಎಷ್ಟೋ ಸಿರಿವಂತ ಜನರಿಗೆ ತಮ್ಮ ಮನೆಯಲ್ಲಿ ಹೊಟ್ಟೆ ತುಂಬ ಆಹಾರವು ಬೇಕಾದಂಥದು ದೊರೆಯುತ್ತಿದ್ದರೂ ನೀಚ ಅಂತ್ಯಜರಲ್ಲಿಯೂ ಮ್ಲೇಂಛರಲ್ಲಿಯೂ ಹೋಗಿ ಊಟ ಮಾಡುವ ಇಚ್ಛೆಯು ಆಗುತ್ತಿರುತ್ತದೆ ಇದೇ ಪ್ರಕಾರ ಯಾರನ್ನು ಸ್ಪರ್ಶ ಸಹ ಮಾಡಲಾಗುವದಿಲ್ಲವೋ ಅಂಥ ಅಧಮ, ನೀಚ, ಕುಲಹೀನರು ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿ ಸಿದ್ಧ ಪಡಿಸಿದ ಪದಾರ್ಥಗಳನ್ನು—ಹೊಲೆಮಾದಿಗರು ಸ್ಪರ್ಶಮಾಡಿದಂಥವುಗಳನ್ನು—ಕೊಂಡು ತಿನ್ನುತ್ತಾರೆ ಆಹಾರ ಲಂಪಟಿಗಳಾದ ಮನುಷ್ಯರಿಗೆ ವ್ರತ, ಉಪವಾಸ, ಶೀಲ, ಸಂಯಮಗಳಲ್ಲಿ ಒಂದೂ ಸಾಧಿಸುವದಿಲ್ಲ. ಅವರಿಗೆ ತಮ್ಮ ಮಾನ–ಪಾನದ ದುಃಖ-ವಿರುವದಿಲ್ಲ ವೇಳೆ ವೇಳೆಗೆ ಅಭಕ್ಷ್ಯ, ಎಂಜಲು, ಮದ್ಯ–ಮಾಂಸ ಯಾವುದು ಸಿಕ್ಕೀತೂ ಅದನ್ನು ತಿನ್ನಲು ಸಿದ್ಧರು. ಈ ಪ್ರಕಾರ ಇವರು ತಮ್ಮ ಕುಲಕ್ರಮವನ್ನು ಬಿಡಲಿಕ್ಕೆ ಸಿದ್ಧರಾಗುತ್ತಾರೆ ಇದರ ಮೇಲಿಂದ ಜಿಹ್ವಾಲಂಪಟರಿಂದ ಎಂಥ ಅನರ್ಥಗಳು ಆಗಲಿಕ್ಕಿಲ್ಲ ನೋಡಿರಿ! ಅವರಿಗೆ ಯಾವ ಪದಾರ್ಥವನ್ನಾದರೂ ಶೋಧಿಸಿ, ನೋಡಿ ತಿನ್ನಬೇಕೆಂಬ ವಿಚಾರವೇ ಮನಸ್ಸಿನಲ್ಲಿ ಬರುವದಿಲ್ಲ. ಸವಿ–ಸವಿ ಪದಾರ್ಥಗಳು ಯಾವಾಗ ಸಿಕ್ಕಾವು, ಅವುಗಳನ್ನು ಯಾವಾಗ ಬಾಯಿಯಲ್ಲಿ ಹಾಕಿಯೇನು, ಎಂಬ ಆತುರತೆಯೇ ಹೆಚ್ಚಾಗಿರುತ್ತದೆ ಅಂಥಲ್ಲಿ ವಿಚಾರವೆಲ್ಲಿಯದು? ಮೊದಮೊದಲು ಇಂಥ ಜನರು ಬುದ್ಧಿಯಿಂದ ಚುರುಕರಾಗಿದ್ದರೂ ಮುಂದೆ ಮುಂದೆ ಮಂದ ಬುದ್ಧಿಯವರಾಗುತ್ತಾರೆ ಅಲ್ಲದೆ ಬುದ್ಧಿಯಲ್ಲಿ ವಿಪರೀತತೆಯೂ ಉಂಟಾಗುತ್ತದೆ ಸನ್ಮಾರ್ಗವನ್ನು ಬಿಟ್ಟು ಅವರು ದುರ್ಮಾರ್ಗದ ಕಡೆಗೆ ಧಾವಿಸ ಹತ್ತುತ್ತಾರೆ. ಧರ್ಮದಿಂದ ಪರಾವೃತ್ತರಾಗುತ್ತಾರೆ. ಇದನ್ನು ನಾವು ಪ್ರತ್ಯಕ್ಷ ಕಾಣುತ್ತೇವೆ. ಹಲವು ಜನರು

ಅನೇಕ ಶಾಸ್ತ್ರ ಪುರಾಣಗಳ ಅಧ್ಯಯನ ಮಾಡುತ್ತಾರೆ. ತಮ್ಮ ಅಮೃತದಂಥ ರಸಭರಿತವಾಣಿಯಿಂದ ಜನರಿಗೆ ಸನ್ಮಾರ್ಗದ ಉಪದೇಶವನ್ನೂ ಮಾಡುತ್ತಾರೆ ಕೆಲವರಂತೂ ಅನೇಕ ದಿನಗಳಿಂದ ಸಿದ್ಧಾಂತ ಶಾಸ್ತ್ರದ ಶ್ರವಣವನ್ನೂ ಮಾಡುತ್ತಿರುತ್ತಾರೆ ಆದರೆ ಅವರಿಗೆ ನಿಜವಾದುದು ಯಾವುದು, ಸುಳ್ಳು ಯಾವುದು, ತಮ್ಮ ಆಚರಣೆಯು ಹೇಗಿರಬೇಕು ಇದೆಲ್ಲಾ ತಿಳಿಯುತ್ತಿರುತ್ತದೆ. ಆದರೆ ಅಯೋಗ್ಯ ಮಾರ್ಗದಿಂದ ಪರಾವೃತ್ತರಾಗಲಿಕ್ಕೆ ಆಗುವದಿಲ್ಲ. ಇದಕ್ಕೆ ಕಾರಣವೆಂದರೆ ಅನ್ಯಾಯಾಚರಣ ಮತ್ತು ಅಭಕ್ಷ್ಯಾಭಕ್ಷಣಗಳೇ ಆಗಿವೆ : ಮುನೀಶ್ವರರಿಗಂತೂ, ಮುಖ್ಯವಾಗಿ ಆಹಾರ ಶುದ್ಧಿಯನ್ನು ಹೇಳಲಾಗಿದೆ ಶ್ರಾವಕರಿಗೂ ಕೂಡ ಶುದ್ಧ ಬುದ್ಧಿಯು ಉಳಿಯುವದಕ್ಕಾಗಿ ಅದರ ಅವಶ್ಯಕತೆಯಿದೆ.

ಆಹಾರ ಲಂಪಟರ ಅವಸ್ಥೆ—ಆಹಾರ ಲಂಪಟರಾದ ಪುರುಷರಿಗೆ ಯೋಗ್ಯಾಯೋಗ್ಯವಾದುದನ್ನು ನೋಡಿ, ಶೋಧಿಸಿ ತಿನ್ನುವಷ್ಟು ಸ್ಥಿರತೆಯು ಇರುವದಿಲ್ಲ. ಅವರಿಗೆ ಶಕ್ಯವಿದ್ದಷ್ಟು ಬೇಗನೆ ಹೇಗಾದರೂ ಏನಾದರೂ ತಿನ್ನಲಿಕ್ಕೆ ಸಿಗಬೇಕೆಂಬ ಅಪೇಕ್ಷೆಯು ಇರುತ್ತದೆ ಅವರಿಗೆ ತನ್ನನ್ನು ಸನ್ಮಾನಿಸಬೇಕು, ತನಗೆ ಉಚ್ಚಾಸನ ಕೊಡಬೇಕು ಎಂಬ ಅಪೇಕ್ಷೆಯೇ ಇರುವದಿಲ್ಲ. ಎಲ್ಲೆಲ್ಲಿ ಸವಿಯಾದ ಊಟವು ಲಭಿಸುವುದೋ ಅಲ್ಲಿ ಅವರಿಗೆ ನವನಿಧಿಗಳು ಪ್ರಾಪ್ತವಾದಷ್ಟು ಸಂತೋಷವಾಗುತ್ತದೆ ಅವರು ಯಾವಾಗಲೂ ಮಿಷ್ಟ ಭೋಜನವನ್ನು ಕೊಡುವವರ ದಾಸರಾಗಿರುತ್ತಾರೆ. ತಂದೆ, ತಾಯಿ, ಗುರು, ಸ್ವಾಮಿ ಇವರೆಲ್ಲರ ಉಪಕಾರವನ್ನೂ ಮರೆತು, ಶಕ್ಯವಿದ್ದಷ್ಟು ಅವರ ಮೇಲೆ ಅಪಕಾರ ಮಾಡಲಿಕ್ಕೆ ಸಿದ್ಧನಾಗುತ್ತಾರೆ. ಇಂಥ ಪುರುಷರ ಮರ್ಯಾದೆಯನ್ನು ಮನೆಯಲ್ಲಿ ಅವನ ಹೆಂಡರು ಮಕ್ಕಳೂ ಕೂಡ ಇಡುವದಿಲ್ಲ ಆಹಾರ ಲಂಪಟ ಪುರುಷರಿಗೆ ಧರ್ಮದ ಮೇಲೆಯೂ ಶ್ರದ್ಧೆ ಇರುವದಿಲ್ಲ. ಯಾಕಂದರೆ ಸಮ್ಯಗ್ದೃಷ್ಟಿ ಪುರುಷನು ಆತ್ಮಿಕ ಸುಖಕ್ಕೇನೇ ನಿಜವಾದ ಸುಖವೆಂದು ಮನ್ನಿಸುತ್ತಾನೆ ಅವನಿಗೆ ಇಂದ್ರಿಯ ಜನಿತ ವಿಷಯ ಸುಖದ ವಿಷಯದಲ್ಲಿ ಅತ್ಯಂತ ಅರುಚಿ ಇರುತ್ತದೆ. ಇವರಿಗಂತೂ ಮಿಷ್ಟ ಭೋಜನವನ್ನುಳಿದು ಎಲ್ಲಿಯೂ ಸುಖವೇ ಕಾಣುವದಿಲ್ಲ ಇವರಿಗೆ ಯಥಾರ್ಥ ಜ್ಞಾನವಿಲ್ಲದುದರಿಂದ ಸುಖವೆಲ್ಲಿಯದು? ಜಿಹ್ವಾಲಂಪಟಿಯಾದ ಮನುಷ್ಯನು ಉಚ್ಚಕುಲೀನ, ನೀಚಕುಲೀನ, ಮಹಾ ಅಭಿಮಾನಿ, ಇವರೆಲ್ಲರನ್ನೂ ಹೊಟ್ಟೆಯ ಸಲುವಾಗಿ ಒಂದೇ ಸವನೆ ಸ್ತುತಿಸುತ್ತಿರುತ್ತಾನೆ ದೀನ ಮುದ್ರೆಯಿಂದ ಇನ್ನೊಬ್ಬರ ಮುಖದ ಕಡೆಗೆ ನೋಡಿ, ಯಾಚನೆಯನ್ನು ಮಾಡುತ್ತಾನೆ ಕೇವಲ ಒಂದು ಭೋಜನದ ಇಚ್ಛೆಯಿಂದ ಏಳನೆಯ ನರಕಕ್ಕೆ ಹೋಗುತ್ತಾನೆ. ಚಿಕ್ಕ ಪುಟ್ಟ ಜಂತುಗಳನ್ನು ತಿನ್ನುವ ಮೀನುಗಳು ಅದಕ್ಕಿಂತ ಕಡಿಮೆ ದುಃಖವಿರುವ ನರಕಗಳಿಗೆ ಹೋಗುತ್ತವೆ ಸುಭೌಮನೆಂಬ ಹೆಸರಿನ ಚಕ್ರವರ್ತಿಗೆ ದೇವತೆಗಳು ಕೊಟ್ಟ ದಶಾಂಗ ಕಲ್ಪವೃಕ್ಷದ ಸುಖ ಭೋಗದಿಂದ ತೃಪ್ತಿಯು ಎನಿಸಲಿಲ್ಲ ಅವನು ಇನ್ನಾರೋ ತಂದ ಹಣ್ಣಿನ ರಸದ ಆಸಕ್ತಿಯಿಂದ ತನ್ನ ಕುಟುಂಬ ಸಹ ಸಮುದ್ರದಲ್ಲಿ ಮುಳುಗಿ ಏಳನೆಯ ನರಕಕ್ಕೆ ಹೋದನು. ಅಂದಮೇಲೆ ಅನ್ಯರ ಗತಿ ಏನು? ಈಗ ಜಿನವಚನವೆಂಬ ಅಮೃತವನ್ನು ನಿಮಗೆ ಕುಡಿಸುತ್ತ ಇದ್ದರೂ ಕೂಡ ನೀವು ಆಹಾರ, ರಸ, ಪಾನಗಳಲ್ಲಿಯ, ಆಸಕ್ತಿಯನ್ನು ಕಡಿಮೆ ಮಾಡದಿದ್ದರೆ ನಿಮಗೆ ಇನ್ನೂ ಅನಂತಾನಂತ ಕಾಲ ಸಂಸಾರದಲ್ಲಿ ನಿಃಸಂಶಯವಾಗಿಯೂ ಭ್ರಮಣಮಾಡುವದಿದೆ ಅಲ್ಲದೆ ಹಸಿವು, ನೀರಡಿಕೆ, ರೋಗ, ವಿಯೋಗ, ಜನ್ಮ, ಮರಣ ಇವುಗಳ ದುಃಖವನ್ನು ಅನಂತಕಾಲ ಭೋಗಿಸುವದಿದೆಯೆಂದೇ ತಿಳಿದುಕೊಳ್ಳಬೇಕಾಗುತ್ತದೆ.

ಆಹಾರದಿಂದ ಹಸಿವೆಯು ವೇದನೆಯು ಕಡಿಮೆಯಾಗುವದಿಲ್ಲ. ಆಹಾರವನ್ನು ತಕೊಳ್ಳುವುದರಿಂದ ಹಸಿವೆಯ ವೇದನೆಯು ಕಡಿಮೆಯಾದೀತೆಂಬ ತಿಳುವಳಿಕೆಯು ನಿಮ್ಮದಿರಬೇಕು. ಆದರೆ ಅದು ಸುಳ್ಳಾಗಿದೆ. ಆಹಾರದಿಂದ ಹಸಿವೆಯ ವೇದನೆಯು ಇಲ್ಲದಂತಾಗುವದಿಲ್ಲ ಹಸಿವೆ ನೀರಡಿಕೆಗಳ ವೇದನೆಯು ಅಸಾತಾ ಕರ್ಮದ ಉದಯವು ನಷ್ಟವಾಗುವುದರಿಂದ ಇಲ್ಲದಂತೆ ಆಗುವದಿರುತ್ತದೆ ಹಸಿವೆಯಾದಂತೆ ತಿನ್ನುತ್ತ ಹೋದರೆ ಹಸಿವೆಯು ಹಿಂಗುವದಿಲ್ಲ. ತಿರುಗಿ ಮೇಲಿಂದ ಮೇಲೆ ಹೆಚ್ಚಾದೀತು. ಬೆಂಕಿಯಲ್ಲಿ ಕಟ್ಟಿಗೆಯನ್ನೂ ಹಾಕುತ್ತ ಹೋದಂತೆ ಅದು ಶಾಂತವಾಗುವದಿಲ್ಲ ಸಮುದ್ರದಲ್ಲಿ ಸಾವಿರಾರು ನದಿಗಳು ಬಂದು ಸೇರಿದವೆಂದು ಅದು ತೃಪ್ತವಾಗುವದಿಲ್ಲ ಇದೇ ಪ್ರಕಾರ ಆಹಾರದಿಂದ ತೃಪ್ತಿಯು ಉಂಟಾಗುವದಿಲ್ಲ ಲಾಭಾಂತರಾಯ ಕರ್ಮದ ಕ್ಷಯೋಪಶಮದಿಂದ ಉತ್ಪನ್ನವಾಗುವ ಅತ್ಯಂತ ಬಲ, ತೇಜ, ವೀರ್ಯ ಕಾಂತಿ ಇವುಗಳನ್ನು ಹೆಚ್ಚಿಸುವ ಮಾನಸಿಕ ಆಹಾರವನ್ನು ಅಸಂಖ್ಯಾತ ಕಾಲದ ವರೆಗೆ ಸ್ವರ್ಗದಲ್ಲಿ ಇಂದ್ರನು ತಕೊಳ್ಳುತ್ತಿರುತ್ತಾನೆ ಆದರೂ ಅವನಿಗೆ ಹಸಿವೆ ಇಲ್ಲದಂಥ ತೃಪ್ತಿಯ ಸುಖವು ಲಭಿಸುವುದು ಅಷ್ಟರಲ್ಲಿಯೇ ಇದೆ. ಚಕ್ರವರ್ತಿ, ನಾರಾಯಣ, ಬಲಭದ್ರ, ಪ್ರತಿನಾರಾಯಣ

ಮತ್ತು ಭೋಗ ಭೂಮಿಯೊಳಗಿನ ಮನುಷ್ಯರೂ ಸಹ ಲಾಭಾಂತರಾಯ ಮತ್ತು ಭೋಗಾಂತರಾಯ ಕರ್ಮದ ಕ್ಷಯೋಪಶಮದಿಂದ ಪ್ರಾಪ್ತವಾಗುವ ಉತ್ತಮ ಆಹಾರವನ್ನು ಗ್ರಹಣ ಮಾಡುತ್ತಿದ್ದರೂ ಸಹ ಅವರ ಕ್ಷುಧೆಯ ವೇದನೆಯು ಇಲ್ಲದಂತಾಗುವದಿಲ್ಲ. ಅಂದಮೇಲೆ ಸ್ವಲ್ಪ ಅನ್ನದಿಂದ ನಿಮ್ಮ ಶಾಂತಿಯು ಹೇಗೆ ಇಲ್ಲದಂತಾದೀತು? ಅದಕ್ಕಾಗಿ ಧೀರತನವನ್ನು ತಾಳಿ, ಆಹಾರದ ಇಚ್ಛೆಯನ್ನು ಗೆಲ್ಲುವ ಪ್ರಯತ್ನ ಮಾಡಿರಿ ಈಗ ನೀವು ಆಹಾರವನ್ನು ತಕ್ಕೊಂಡರೆ ಎಷ್ಟು ತಕ್ಕೊಂಡೀರಿ? ಅದರ ಸ್ವಾದವು ಎಷ್ಟು ವೇಳೆ ನಿಂತೀತು? ನಾಲಿಗೆಯ ಮೇಲೆ ಇರುವ ವರೆಗೇ ಅನ್ನದ ರುಚಿಯು. ನುಂಗಿದ ಮೇಲೆ ಅದರ ಸ್ವಾದವು ಉಳಿದೀತೆ? ಬಾಯಿಯಲ್ಲಿ ಹಾಕುವ ಪೂರ್ವದಲ್ಲಾದರೂ ಸ್ವಾದವೆಲ್ಲಿರುತ್ತದೆ? ಕೇವಲ ನಿಮ್ಮ ವಿಪರೀತ ತೃಷ್ಣೆಯೇ ಎಲ್ಲ ಪ್ರಕಾರದ ಭಾವನೆಯನ್ನು ಉತ್ಪನ್ನ ಮಾಡುತ್ತದೆ. ಈ ಸರ್ವಪ್ರಕಾರದ ಆಹಾರವನ್ನು ನೀವು ಅನಾದಿ ಕಾಲದಿಂದಲೂ ಭಕ್ಷಣ ಮಾಡುತ್ತ ಬಂದಿದ್ದೀರಿ. ಇನ್ನೂ ಕೂಡ ನಿಮ್ಮ ತೃಪ್ತಿಯಾಗಿಲ್ಲ. ಈಗ ನಿಮ್ಮ ಪ್ರಾಣ ಹೋಗುವ ಕ್ಷಣವು ಬಂದು ನಿಂತಿದೆ ಈಗ ಸ್ವಲ್ಪ ಆಹಾರ ತಕ್ಕೊಂಡರೆ ನಿಮ್ಮ ತೃಪ್ತಿಯು ಹೇಗಾದೀತು? ಅದಕ್ಕಾಗಿ ವ್ರತದ ವಿಷಯಕ್ಕೆ ದೃಢ ನಿಶ್ಚಯವನ್ನು ಹೊಂದಿರಿ. ನೀವು ನಿಮ್ಮ ಆತ್ಮಹಿತವನ್ನು ಸಾಧಿಸಿರಿ. ಇಲ್ಲಿಯ ವರೆಗೆ ನೀವು ಯಾವುದರ ಸ್ವಾದವನ್ನು ತಕ್ಕೊಂಡಿಲ್ಲವೋ ಅಂಥ ಒಂದು ಅಪೂರ್ವ ಆಹಾರವು ಜಗತ್ತಿನಲ್ಲಿ ಉಳಿದಿಲ್ಲ. ಯಾವುದು ಸಂಪೂರ್ಣ ಸಮುದ್ರದ ನೀರನ್ನು ಕುಡಿದೂ ತೃಪ್ತಿಯನ್ನು ಹೊಂದಿಲ್ಲವೋ ಅದಕ್ಕೆ ನೀರಿನ ಹಣಿಗಳನ್ನು ನೆಕ್ಕುವುದರಿಂದ ತೃಪ್ತಿಯು ಹೇಗೆ ಲಭಿಸೀತು? ಈ ಮೊದಲು ನೀವು ಹಗಲಿರುಳೂ ಆಹಾರದ ಸಲುವಾಗಿ ದುಃಖಿಗಳಾಗಿ ಅನೇಕ ಜನ್ಮಗಳನ್ನು ಕಳೆದಿರಿ ಅನೇಕ ಕಾಲದ ವರೆಗೆ ಆಹಾರ ತಕ್ಕೊಳ್ಳುವ ಇಚ್ಛೆಯು ಉಳಿಯುತ್ತದೆ. ಇದೂ ಒಂದು ದುಃಖವೇ ಅವನು ಆಹಾರವನ್ನು ಸಂಪಾದಿಸುವದಕ್ಕಾಗಿ ಸೇವೆ, ವಾಣಿಜ್ಯ ಮೊದಲಾದ ಉಪಾಯಗಳನ್ನು ಯೋಜಿಸಿ ಧನವನ್ನು ಸಂಪಾದಿಸುವದು ಇನ್ನೊಂದು ವಿಧದ ದುಃಖವಾಗಿದೆ ಧನ ಸಂಪಾದಿಸುವದಕ್ಕಾಗಿ ದೈನ್ಯವನ್ನು ಧಾರಣಮಾಡಿ, ಪರಾಧೀನ ಇರಬೇಕಾಗುತ್ತದೆ ಇದು ಮೂರನೆಯ ಪ್ರಕಾರದ ದುಃಖವು. ಇಷ್ಟೆಲ್ಲ ಕಷ್ಟಮಾಡಿ ಸಂಪಾದಿಸಿದ ಎಲ್ಲ ಧನವನ್ನು ವೆಚ್ಚಮಾಡುವಾಗ ಆಗುವ ದುಃಖವು ಇನ್ನೊಂದು ಪ್ರಕಾರದ್ದಾಗಿದೆ, ತಾವು ಅಶಕ್ತರು, ಅಪ್ರಬುದ್ಧರು ಎನಿಸಿದಾಗ ಸ್ತ್ರೀ ಹಾಗೂ ಪುತ್ರರು ಧನವನ್ನು ಸಂಪಾದಿಸತೊಡಗುತ್ತಾರೆ. ಆಗ ಅವರ ಸ್ವಾಧೀನವಾಗಿ ಉಳಿಯಬೇಕಾಗುತ್ತದೆ. ಇದೂ ದುಃಖ ಕಾರಕವೇ. ಸ್ವತಃ ಅನ್ನವನ್ನು ಸಿದ್ಧಗೊಳಿಸ ಹತ್ತುವುದು, ಅದು ಸಿದ್ಧವಾಗುವ ವರೆಗೆ ಹಸಿವೆಯನ್ನು ತಡೆಯುವುದು ಇದೂ ಒಂದು ದುಃಖವೇ ಅಡಿಗೆಗಾಗಿ ಅನ್ನ ಸಾಮಗ್ರಿಯು ಇರದಿದ್ದರೆ ಅದನ್ನು ಪೇಟೆಯಿಂದ ಹೋಗಿ ತರುವ ದುಃಖ, ತನ್ನ ಇಚ್ಛೆಯಂತೆ ಎಲ್ಲ ಪದಾರ್ಥಗಳು ಸಿಗದೆ ಇರುವ ದುಃಖ, ನವಿಯಾದ ಆಹಾರವು ಹೆಚ್ಚಾಗಿ ಸಿಕ್ಕಾಗ ಹುಳಿ ಕಾರಗಳು ದೊರೆಯಬೇಕೆಂಬ ಅಪೇಕ್ಷೆಯುಂಟಾಗುವುದು, ಹುಳಿ ಕಾರಗಳು ದೊರೆಯುತ್ತಿರುವಾಗ ಮಿಷ್ಟಾನ್ನವು ದೊರೆಯಲೆಂಬ ಇಚ್ಛೆಯನ್ನು ತಾಳುವುದು, ಇದೂ ಒಂದು ದುಃಖ; ಈ ಪ್ರಕಾರ ಒಂದರ ಹಿಂದೊಂದು ಅನೇಕ ಪ್ರಕಾರದ ದುಃಖಗಳು ಆಗುತ್ತಿರುತ್ತವೆ. ಒಂದು ಕ್ಷಣವೂ ಕೂಡ ಇಚ್ಛೆಯು ಎಲ್ಲಿ ಕಡಿಮೆಯಾಗಿರುವುದಿಲ್ಲವೋ ಅಲ್ಲಿ ಸುಖವು ಎಲ್ಲಿಯದು? ಸ್ವಾದ ತಕ್ಕೊಳ್ಳುವಾಗ ಸುಖವಿದೆ ಎನ್ನೋಣವೆ? ತುತ್ತು ಬಾಯಲ್ಲಿ ಹೋದ ಮೇಲೆ ಬೇಗನೆ ಗಂಟಲೊಳಗೇ ಇಳಿಯ ಹತ್ತುತ್ತದೆ. ಒಂದು ಕ್ಷಣದಲ್ಲಿ ಅದು ನಾಲಿಗೆಯ ಮೂಲಕ್ಕೆ ಹೋಗಿ ಮುಟ್ಟುವುದು ಕೇವಲ ನಾಲಿಗೆಯ ತುದಿಗೇನೇ ಸ್ವಲ್ಪ ಕಾಲ ಏನಾದರೂ ರುಚಿಯು ಹತ್ತಿದರೆ ಹತ್ತಬೇಕು ನಾಲಿಗೆಗೆ ಮುಟ್ಟದ ವರೆಗಂತೂ ಸ್ವಾದವು ಇಲ್ಲವೇ ಇಲ್ಲ ನಾಲಿಗೆಯನ್ನು ದಾಟಿಹೋದ ಮೇಲಂತೂ ರುಚಿಯು ಇರುವದಿಲ್ಲ. ಒಂದು ನಿಮಿಷ ಮಾತ್ರ ಸ್ವಾದದ ನಶ್ವರತೆಯು ಇರುತ್ತದೆ ಇಷ್ಟಕ್ಕಾಗಿ ಅಂಥ ಭಯಂಕರ ದುರ್ಧ್ಯಾನವನ್ನು ಮಾಡಿ ಸಂಕಟವನ್ನು ಭೋಗಿಸುವುದು ಎಂಥ ಅಜ್ಞಾನವಾಗಿದೆ! ಇರಲಿ, ಒಂದು ವೇಳೆ ಆಹಾರವನ್ನು ಸ್ವೀಕರಿಸಿದಾಗ ಶಾಂತಿಯು ಪ್ರಾಪ್ತವಾಗುತ್ತದೆಂದರೆ ಹಾಗೆ ಮಾಡಲು ಅಡ್ಡಿಯಿರಲಿಲ್ಲ ಆದರೆ ಇಚ್ಛೆಯ ಅಭಾವವು ಮೇಲಿಂದ ಮೇಲೆ ಆಹಾರವನ್ನು ಸ್ವೀಕರಿಸುವುದರಿಂದಲೂ ಆಗುವದಿಲ್ಲ ಅದಕ್ಕಾಗಿ ಸದ್ಯಕ್ಕೆ ಆಹಾರವನ್ನು ತ್ಯಾಗ ಮಾಡುವ ಪ್ರಸಂಗವು ಒದಗಿದೆ, ಆಹಾರವಂತೂ ಕಷ್ಟ ಕೊಡುವಂಥದಿದೆ ಇದನ್ನರಿತು ಆಹಾರವನ್ನು ತ್ಯಜಿಸಿ ಅಕ್ಷಯ ಸುಖವನ್ನು ಹೊಂದಿರಿ. ಈ ಸಲ್ಲೇಖನ ಸಂದರ್ಭವು ಬಹಳ ಅಪೂರ್ವವಾದುದು ಈಗ ಆಹಾರ ಲಾಲಸೆಯನ್ನು ಅವಶ್ಯವಾಗಿ ತೊರೆಯಿರಿ ಪರಿಣಾಮದಲ್ಲಿ ದೃಢತೆಯನ್ನು ಇಡಿರಿ. ಆಹಾರದ ವಿಷಯಕ್ಕೆ ವಿರಕ್ತಿಯನ್ನು ಸ್ಥಿರಗೊಳಿಸಿರಿ. ಅಂದರೆ ನೀವು ಸ್ವರ್ಗದಲ್ಲಿ ಜನ್ಮವನ್ನು ಹೊಂದೀರಿ ಅಲ್ಲಿ ಸಾವಿರಾರು ವರ್ಷಗಳ ವರೆಗೆ ಹಸಿವು ನೀರಡಿಕೆಗಳ ವೇದನೆಯು

ಆಗಲಿಕ್ಕಿಲ್ಲ ಯಾಕಂದರೆ ಸ್ವರ್ಗದಲ್ಲಿ ಎಷ್ಟು ಸಾಗರ ವರ್ಷ ಆಯುಷ್ಯವು ಇರುವುದೋ ಅಷ್ಟು ಸಾವಿರ ವರ್ಷಗಳ ವರೆಗೆ ಹಸಿವೆಯ ವೇದನೆಯು ಆಗುವದಿಲ್ಲ ತರುವಾಯ ಸ್ವಲ್ಪ ಮಾತ್ರ ಆಗುತ್ತದೆ ಆಗ ಕಂಠದೊಳಗಿಂದ ಅಮೃತವು ಒಸರ ಹತ್ತುತ್ತದೆ. ಕೂಡಲೆ ಹಸಿವೆಯು ಇಲ್ಲದಂತಾಗುತ್ತದೆ ಈ ಎಲ್ಲ ಪ್ರಭಾವವೆಂದರೆ ಅಸಂಖ್ಯಾತ ವರ್ಷಗಳ ವರೆಗೆ ಹಸಿವೆಯು ಇಲ್ಲದಂತೆ ಇರುವುದಾಗಿದೆ ಇದು ಪೂರ್ವ ಜನ್ಮದಲ್ಲಿ ಆಹಾರದ ಮೇಲಿನ ಆಸಕ್ತಿಯನ್ನು ಬಿಟ್ಟು, ಅನಶನ, ಅವಮೌದರ್ಯ, ರಸಪರಿತ್ಯಾಗ ಇತ್ಯಾದಿ ತಪಶ್ಚರಣಗಳನ್ನು ಮಾಡಿದುದರ ಫಲವಾಗಿದೆ. ತಿರ್ಯಂಚ ಮತ್ತು ಮನುಷ್ಯ ಗತಿಗಳಲ್ಲಿ ಹಸಿವೆ ನೀರಡಿಕೆಗಳ ವೇದನೆಯನ್ನು ಅನಂತಕಾಲ ಹೊಂದಬೇಕಾಗುತ್ತದೆ. ಇದಕ್ಕೆ ಆಹಾರದ ಆಸಕ್ತಿಯೇ ಮುಖ್ಯಕಾರಣವು, ಯಾರು ಈ ಆಸಕ್ತಿಯನ್ನು ಬಿಟ್ಟಿರುವರೋ ಅವರು ಹಸಿವು, ನೀರಡಿಕೆ, ಕವಲಾಹಾರಗಳಿಲ್ಲದ ದೇವರಾಗುತ್ತಾರೆ. ಈಗ ನೀವು ಯಾವ ಹಸಿವೆಯ ವೇದನೆಯಿಂದ ದುಃಖಿಗಳಾಗು-ತ್ತಿದ್ದೀರೋ, ಆ ವೇದನೆಯನ್ನು ಸಹನ ಮಾಡಿ ಆಹಾರ ತ್ಯಾಗಮಾಡುವ ನಿಶ್ಚಯವನ್ನು ಸ್ಥಿರವಾಗಿ ಇಡಿರಿ. ಅಂದರೆ ಸ್ವಲ್ಪ ಹೊತ್ತಿನಲ್ಲಿ ವೇದನೆಯೇ ಇಲ್ಲದ ಕಲ್ಪವಾಸಿ ದೇವರಲ್ಲಿ ಹೋಗಿ ಜನ್ಮವೆತ್ತುವಿರಿ ಈಗ ವೇದನೆಯು ಇಲ್ಲದಂತೆ ಆಗಲೆಂದು ನೀವು ಅನ್ನವನ್ನು ಗ್ರಹಣ ಮಾಡಿದರೆ ಅದರಿಂದ ನಿಮ್ಮಲ್ಲಿಯ ವೇದನೆಯ ಕೀಟಕವು ಇಲ್ಲದಂತಾಗುವದಿಲ್ಲ.

ಶರೀರದ ಮಮತ್ವ ಬಿಡಬೇಕು. ಎಲ್ಲ ದುಃಖಕ್ಕೂ ಈ ಶರೀರದ ಮೇಲಿನ ಮಮತ್ವವೇ ಮೂಲ ಕಾರಣವಾಗಿದೆ. ಮಮತೆಯಿಂದಲೂ ದೇಹವನ್ನು ರಕ್ಷಿಸುವುದರಿಂದಲೂ ಅನಂತಕಾಲದ ವರೆಗೆ ಈ ಜೀವವು ದುಃಖವನ್ನು ಭೋಗಿಸಿದೆ ಹಸಿವು, ನೀರಡಿಕೆ, ರೋಗ, ಪರೀಷಹ ಈ ಎಲ್ಲ ದುಃಖಗಳು ಕೇವಲ ಶರೀರದ ಮೇಲೆ ಪ್ರೇಮ ಮಾಡುವುದರಿಂದಲೇ ಒದಗುತ್ತವೆ. ಸತ್ಪುರುಷರು ದೇಹದ ಮೇಲಿನ ಮಮತೆಯನ್ನು ಬಿಟ್ಟುಬಿಡುವುದು ಇದೇ ಕಾರಣಕ್ಕಾಗಿದೆ ಅವರಿಗೆ ಎಲುವು, ಮಾಂಸಗಳಿಂದ ಕೂಡಿದ ಈ ಶರೀರದ ಸಹವಾಸವು ಪುನಃ ಬೇಡವೆನಿಸು-ತ್ತದೆ. ಎಲ್ಲಿಯ ವರೆಗೆ ಸಂಸಾರದ ಕೊನೆಯು ಆಗಿರುವದಿಲ್ಲವೋ ಅಲ್ಲಿಯ ವರೆಗೆ ಇಂದ್ರಾದಿ ದೇವರ ದೇಹವು ಪ್ರಾಪ್ತವಾಗುತ್ತದೆ. ಯಾವಾಗ ಇದರ ಕೊನೆಯು ಬರುವುದೋ ಆಗ ಶೀಲ, ಸಂಯಮಗಳ ಸಾಮಗ್ರಿಯು ಉಪಲಬ್ಧವಾಗಿ ಜೀವವು ನಿರ್ವಾಣ ಪದವನ್ನು ಹೊಂದುತ್ತದೆ. ನಿಮಗೆ ಶರೀರದ ವೇದನೆಯ ದುಃಖವಿದ್ದರೆ ಕೂಡಲೆ ಈ ಶರೀರದ ಮೇಲಿನ ಮಮತೆಯನ್ನು ಬಿಟ್ಟು ಬಿಡಿರಿ. ಪುನಃ ದೇಹವು ಬೇಡವಾಗಿದ್ದರೆ ಮತ್ತು ಆಹಾರದ ಇಚ್ಛೆಯಿಂದ ತೀವ್ರ ದುಃಖವಾಗುತ್ತಿದ್ದರೆ ಆಹಾರವನ್ನೇ ಬಿಟ್ಟುಬಿಡಿರಿ. ಅಂದರೆ ಪುನಃ ಹಸಿವು ನೀರಡಿಕೆಯು ಆಗುವಂಥ ಶರೀರವೇ ಪ್ರಾಪ್ತವಾಗುವದಿಲ್ಲ. ಅಲ್ಲದೆ ಆಹಾರ ಗ್ರಹಣಮಾಡುವಂಥ ಪ್ರಸಂಗವೇ ಒದಗುವುದಿಲ್ಲ ಇನ್ನು ವಾತಪಿತ್ತಕಫಗಳ ವಿಕಾರವು ಮಂದವಾಗುತ್ತ ಹೋಗುವಂತೆ ಶರೀರವನ್ನು ಕೃಶಗೊಳಿಸಿರಿ ದಿನದಿನಕ್ಕೂ ಪರಿಣಾಮದ ಶುದ್ಧಿಯನ್ನು ಹೆಚ್ಚಿಸಿರಿ. ಇದರ ರೀತಿಯನ್ನು ಈ ಮೊದಲೇ ಸಲ್ಲೇಖನದ ವಿವರದಲ್ಲಿ ಹೇಳಲಾಗಿದೆ

ಮಹಾಮಂತ್ರದ ಸ್ಮರಣೆಯಲ್ಲಿ ದೇಹವನ್ನು ತ್ಯಜಿಸಿರಿ. ಕೊನೆಯ ಕಾಲದಲ್ಲಿ ನಿಮ್ಮಲ್ಲಿ ಎಷ್ಟು ಶಕ್ತಿ ಇರುವುದೋ ಅಷ್ಟೆಲ್ಲವನ್ನೂ ಒಟ್ಟುಗೂಡಿಸಿ, ಕಡೆಗೆ ನೀರನ್ನೂ ಸಹ ತ್ಯಾಗಮಾಡಬೇಕು ಬಾಯಿಂದ ಶಬ್ದವನ್ನು ಉಚ್ಚರಿಸುವ ಶಕ್ತಿಯು ಇರುವ ವರೆಗೂ ಪಂಚನಮಸ್ಕಾರ ಮಂತ್ರಗಳನ್ನು ಅನ್ನಿರಿ. ಹನ್ನೆರಡು ಭಾವನೆಗಳನ್ನೂ ಭಾವಿಸಿರಿ. ಶಬ್ದಗಳನ್ನು ಉಚ್ಚರಿಸುವ ಶಕ್ತಿಯೂ ಕೂಡ ಕಡಿಮೆಯಾದರೆ ಕೇವಲ ಅರಹಂತ ಸಿದ್ಧರನ್ನು ಮಾತ್ರ ಧ್ಯಾನಿಸಬೇಕು ಇದಕ್ಕಿಂತ ಶಕ್ತಿಯು ಕಡಿಮೆಯಾದಲ್ಲಿ ಧರ್ಮಾತ್ಮರೂ, ವಾತ್ಸಲ್ಯ ಅಂಗವನ್ನು ಧಾರಣಮಾಡುವವರೂ, ಸ್ಥಿತೀಕರಣ ಅಂಗದ ವಿಷಯದಲ್ಲಿ ಸಾವಧಾನತೆಯುಳ್ಳವರೂ ಆದಂಥ ಧರ್ಮಬಂಧುಗಳು ನಾಲ್ಕು ಆರಾಧನೆಗಳನ್ನೂ, ಪಂಚನಮಸ್ಕಾರ ಮಂತ್ರಗಳನ್ನೂ ಮಂಜುಳ ಶಬ್ದದಿಂದ ಹೇಳಿ, ಅವರು ಕೇಳುವಂತೆ ಮಾಡಬೇಕು ಆರಾಧನೆಯನ್ನು ಮಾಡುವಂಥ ಅಶಕ್ತ ಮನುಷ್ಯನ ಶರೀರ ಹಾಗೂ ಮಸ್ತಕದಲ್ಲಿ ಸಂಕಟವಾಗದಂತೆ ಮಂಜುಳ ಶಬ್ದಗಳಿಂದ ಧರ್ಮ ಶ್ರವಣವನ್ನು ಮಾಡಿಸಬೇಕು. ಅಂದರೆ ಅವರ ಚಿತ್ತವು ಆ ವಿಷಯದಲ್ಲಿ ಸ್ಥಿರವಾಗಿ ಉಳಿಯುತ್ತದೆ. ಹಲವು ಜನರು ಒತ್ತಟ್ಟಿಗೆ ನೇರಿ, ಒಮ್ಮೆಲೆ ಒದರಿ ಗೊಂದಲಮಾಡಕೂಡದು. ಪ್ರತಿಯೊಬ್ಬರು ಒಬ್ಬರ ತರುವಾಯ ಒಬ್ಬರಂತೆ ಜಿನೇಂದ್ರನ ಸ್ಮರಣೆಯನ್ನು ಮಾಡಬೇಕು ಇದಲ್ಲದೆ ಆರಾಧಕ ಪುರುಷನ ಹತ್ತರ ಹಲವು ಜನರು ಅಥವಾ ಅವನ ಪ್ರೇಮದ ಆಪ್ತೇಷ್ಟರು ಇಲ್ಲವೆ ನಿರರ್ಥಕ ಒದರಾಡುವವರು ಬಾರದಂತೆ ಎಚ್ಚರವಹಿಸಬೇಕು ಅವನ ಹತ್ತರ ಕುಳಿತು ಮಾಯೆ, ಮೋಹ, ಕ್ರೋಧ, ಲೋಭದ ಮಾತುಗಳನ್ನು ಆಡಕೂಡದು ಯಾವ ಮಾತುಗಳಿಂದ ಅವನ ಮೋಹವು

ನಷ್ಟವಾಗಿ ವೀತರಾಗ ಭಾವನೆಯು ಹೆಚ್ಚುವುದೋ ಅಂದ ಮಾತುಗಳನ್ನೇ ಆಡಬೇಕು ಆ ಸ್ಥಳದಲ್ಲಿ ನಾಲ್ಕಾರು ಧಾರ್ಮಿಕ ಪುರುಷರ ಹೊರತಾಗಿ ಇನ್ನುಳಿದವರು ಯಾರೂ ಇರಕೂಡದು

ವಡಿಯೇಂ ಜೀವದಯಾಮತಂ ವರಮಧರ್ಮಂ ತನ್ಮತಂ ಬೊರ್ದಿ ಮುಂ-
ಗಡೆ ನಿರ್ಗ್ರಂಥರಥಕ್ಕೆ ಸಂದ ಯತಿ ಸೂರ್ಯಂ ಬೊಲ್ಪವಾಂಭೋಧಿಯಂ ।
ಕಡುವೇಗಂ ಪರಿಲಂಘಿಪಂ ಸುಕೃತಕೃದ್ಧಾರ್ಹಸ್ಥ್ಯನುಂ ಧರ್ಮದಾ
ವಡಗಿಂ ಮೆಲ್ಲನೆ ದಾಂಟದೇ ಇರನಲಾ ರತ್ನಾಕರಾಧೀಶ್ವರಾ ॥

—ರತ್ನಾಕರ—ರತ್ನಾಕರ ಶತಕ ೪೩.

ಆರಾಧಕ ಪುರುಷನು ಸಲ್ಲೇಖನವನ್ನು ಮಾಡುವಾಗ ಅವನ ಐದು ದೋಷಗಳನ್ನು ದೂರಗೊಳಿಸಬೇಕು—

ಜೀವಿತಮರಣಾಶಂಸೇ ಭಯಮಿತ್ರಸ್ಮೃತಿನಿದಾನನಾಮಾನಃ ।
ಸಲ್ಲೇಖನಾತಿಚಾರಾಃ ಪಂಚ ಜಿನೇಂದ್ರೈಃ ಸಮಾದಿಷ್ಟಾಃ ॥ ೧೨೯ ॥[1]

ಅನ್ವಯಾರ್ಥ—(ಜೀವಿತಮರಣಾಶಂಸೇ) ಬಾಳಬೇಕೆಂಬ ಇಚ್ಛೆ, ಸಾಯಬೇಕೆಂಬ ಇಚ್ಛೆ (ಭಯ) ಹೆದರಿಕೆ (ಮಿತ್ರಸ್ಮೃತಿ) ಗೆಳೆಯರ ನೆನಹು (ನಿದಾನನಾಮಾನಃ) ಮುಂದಿನ ಕಾಲದ ಫಲದ ಅಪೇಕ್ಷೆ ಅಂದರೆ ನಿದಾನ ಎಂಬ ಹೆಸರಿನ—ಈ ಐದು—(ಸಲ್ಲೇಖನಾತಿಚಾರಾಃ) ಸಲ್ಲೇಖನದ ಅತಿಚಾರಗಳನ್ನು (ಜಿನೇಂದ್ರೈಃ ಸಮಾದಿಷ್ಟಾಃ) ಜಿನೇಂದ್ರದೇವನು ಹೇಳಿದ್ದಾನೆ.

ಅರ್ಥ—ಸಲ್ಲೇಖನವನ್ನು ಸ್ವೀಕರಿಸಿದ ತರುವಾಯವೂ ಸಹ ಎರಡು ದಿನ ಹೆಚ್ಚಿಗೆ ಬದುಕಿದರೆ ಒಳ್ಳೆಯದು ಎಂದು ಅಪೇಕ್ಷಿಸುವುದು 'ಜೀವಿತಾಶಂಸಾ' ಎಂಬ ಹೆಸರಿನ ಮೊದಲಿನ ದೋಷವಾಗಿದೆ. ಮರಣವು ಬೇಗನೆ ಬರಬೇಕು ಎಂದು ಇಚ್ಛಿಸುವುದು 'ಮರಣಾಶಂಸಾ' ಎಂಬ ಹೆಸರಿನ ದೋಷವಾಗಿದೆ. ಮರಣವು ಪ್ರಾಪ್ತವಾದಲ್ಲಿ ಇಷ್ಟು ದುಃಖವಾಗುವುದಲ್ಲ! ಅದು ನನಗೆ ಹೇಗೆ ಸಹನವಾದೀತು ಎಂದು ಹೆದರುವುದು ಮೂರನೆಯ ದೋಷವು. ಸಾಯುವಾಗ ತನ್ನ ಇಷ್ಟಮಿತ್ರ–ಪುತ್ರ ಮೊದಲಾದವರನ್ನು ಸ್ಮರಿಸುವುದು 'ಮಿತ್ರ–ಸ್ಮೃತಿ' ಎಂಬ ಹೆಸರಿನ ನಾಲ್ಕನೆಯ ದೋಷವಾಗಿದೆ ನಾನು ಇಂಥ ತಪಶ್ಚರ್ಯವನ್ನು ಮಾಡಿರುವೆ ಅದಕ್ಕೆ ಇಂಥಿಂಥ ಫಲಗಳು ದೊರೆಯಬೇಕೆಂದು ಅಪೇಕ್ಷಿಸುವುದು 'ನಿದಾನ' ಎಂಬ ಹೆಸರಿನ ಐದನೆಯ ದೋಷವಾಗಿದೆ. ಈ ಪ್ರಕಾರ ಇರುವ ಐದು ದೋಷಗಳನ್ನು ದೂರಗೊಳಿಸಬೇಕೆಂದು ಜಿನೇಂದ್ರ ಭಗವಾನ್‌ರು ಹೇಳಿದ್ದಾರೆ

ವಿಶೇಷಾರ್ಥ—ಸಲ್ಲೇಖನಾ ಮರಣವನ್ನು ಸಾಧಿಸುತ್ತಿರುವಾಗ ಎಲ್ಲ ಸಂಗತಿಗಳನ್ನೂ ತ್ಯಾಗಮಾಡಿ, ಕೇವಲ ತನ್ನ ಶುದ್ಧ ಜ್ಞಾಯಕ ಸ್ವಭಾವವನ್ನು ಮಾತ್ರ ಅವಲಂಬಿಸಬೇಕು ದೇಹಾದಿ ಎಲ್ಲ ಪರವಸ್ತುಗಳ ಮೇಲಿನ ಮಮತ್ವವನ್ನು ಬಿಟ್ಟು ಸನ್ಯಾಸವನ್ನು ಸ್ವೀಕರಿಸಿದಿರಿ ಅಂದರೂ ಕೂಡ ಬದುಕುವ ಇಲ್ಲವೆ ಸಾಯುವ ಇಚ್ಛೆಯನ್ನು ಮಾಡುವುದು, ಭಯವನ್ನು ಹೊಂದುವುದು, ಮಿತ್ರರ ಮೇಲೆ ಪ್ರೇಮವನ್ನು ಮಾಡುವುದು, ಮುಂದೆ ಇಂಥ ಸುಖ ಸಿಗಲೆಂದು ಅಪೇಕ್ಷಿಸುವುದು—ಇವೆಲ್ಲವುಗಳಿಂದ ಪರಿಣಾಮದ ಉಜ್ವಲತೆಯು ಇಲ್ಲದಂತಾಗುತ್ತದೆ ತಿರುಗಿ.ರಾಗ

---

1 ಆಯತವರ್ಮನು ಹೇಳುವುದು ಹೀಗೆ

ಕಂದ ॥ ಮರಣದ ಬಾಳ್ಕೆಯ ಬಯಕೆಯ ಭಯವಸಸಲ್ಲೇಖನೆಯೊಳ್ ಮಿತ್ರಸ್ಮೃತಿ ನಿದಾನ ತಾಂ ।
ನಿರುತಂನಿದಾನವೆಂದಕ್ಕಿವು ತಾವರ್ಹನ ಮತದಿಂದತಿಕ್ರಮಂಗಳಿ ಪಯ್ದುಂ ॥

ಗದ್ಯ ॥ ಈ ಅಯ್ದತಿಚಾರಂಗಳನಾಗಲೀಯದೆ ಸಫಲಮಕ್ಕುಮಲ್ಲಿ ಈ ಪರೀಷಹಮಂ ಸೈರಿಸಲದು ಸ್ಥಿತಮೆನಗೆ ಶೀಘ್ರ ಸಾವದೊಳೆತ್ತಾದಪ್ಪುದೆಂದು ಸಾವಂ ಬಯಸುವುದುಂ, ಶಸ್ತ್ರಾಗ್ನಿಗಿರಿನದನದಿಗಳಂಪಾಯ್ದು ವಿಷಮನಾಘ್ರಾಣಿಸಿಯುಂ, ಸಾಯೆನೆಂಬುದು ಮರಣಸಂಸೆಯಿಂ ಯೊಂದಪಮೃತ್ಯುವಂ ಕಳಿದೊಡೊಳ್ಳಿತ್ತಾದಪುದಾಗಮುಮೆಲ್ಲಮ ನೋಡುವೆ ನೋಡುವೆನೆಂದು ಬಾಳ್ಕೆಯಂ ಬಯಸುವುದುಂ, ತನ್ನ ಸಂಯಮಕ್ಕತಿಚಾರಮಪ್ಪಂತಿರೌಷಧಿಯಂ ಸೇವಿಸುವುದು ಮುಂತಾದೊಡಂ ಬಾಳ್ವೆನೆಂಬ ಜೀವಿತಾಸಂಸೆ ಈ ಭವದೊಳಪ್ಪ ಸಾವಂ ಕಾವರಿಲ್ಲೆಂಬುದರೊಳಪ್ಪಮರಯಿಸಿಲ್ಲೆಂಬುದರೊಳಪ್ಪ ಆಗಂತುಕದೊಳಪ್ಪ ಭಯಂಗಳುಮ ಸಾಗಿಸುವುದು ಭಯಂ ತನ್ನ ಕೆಳೆಯರಂ ನೆನೆವುದು ಮಿತ್ರಸ್ಮೃತಿ ಇಂದ್ರಾದಿ ಭೋಗಂಗಳೆನಗೆ ಸಲ್ಲೇಖನೆಯ ಫಲದೊಳು ಫಲಿಯಿಸುವುದಕ್ಕೆಂಬುದು ನಿದಾನಮೆಂಬುದು ಸಂಸಾರಕ್ಕೆ ಬಿತ್ತಾದುದು.

ದ್ವೇಷಗಳೂ ಉತ್ಪನ್ನವಾಗುತ್ತವೆ. ಅದಕ್ಕಾಗಿ ಸಲ್ಲೇಖನೆಯನ್ನು ಮಲಿನಗೊಳಿಸುವಂಥ ಈ ದೋಷಗಳನ್ನು ತ್ಯಾಗಮಾಡಬೇಕು ನಿರ್ದೋಷ ಸಮಾಧಿ ಮರಣವು ಒದಗಿದಲ್ಲಿ ಗೃಹಸ್ಥರಿಗೆ ಸ್ವರ್ಗದಲ್ಲಿ ಮಹಾನ್ ಋದ್ಧಿಧಾರಕ ದೇವಪದವು ಪ್ರಾಪ್ತವಾಗುತ್ತದೆ. ಮುಂದೆ ಕ್ರಮದಿಂದ ಸಂಯಮವನ್ನು ಧಾರಣಮಾಡಿ ಆ ಜೀವಕ್ಕೆ ನಿಃಶ್ರೇಯಸವನ್ನು—ಮೋಕ್ಷವನ್ನು—ಸಂಪಾದಿಸಲು ಬರುತ್ತದೆ.

ಅನಿಮಿಷರಾಜರಾಜ್ಯವರ ಭೋಗನೆ ಪಾಸಟಿಯಪ್ಪ ರಾಜ್ಯದೊಂ-
ದನುಪಮಸೌಖ್ಯಮಂ ನೆನೆಯದಿಂದ್ರವಧೂಟಿಯರಿಂದೆನಿಪ್ಪ ಕಾ- ।
ಮಿನಿಯರ ಕೂಟಮಂ ನೆನೆಯದಪ್ಪಲಿತರ್ ನೆನೆದರ್ ಜಿನೇಂದ್ರ ಪಾ-
ವನ ಪದಪಂಕಜದ್ವಯಮನಾವಗಮಾತವರೇಂ ಮಹಾತ್ಮರೋ ॥

—ಕಮಲಭವ—ಶಾಂತೀಶ್ವರ ಪುರಾಣಂ ೭, ೫೩

ಸಲ್ಲೇಖನ ವ್ರತದ ಫಲವನ್ನು ಹೇಳುವದಕ್ಕಾಗಿ ಈಗ ಆಚಾರ್ಯರು ಸೂತ್ರವನ್ನು ಹೇಳುತ್ತಾರೆ—

ನಿಃಶ್ರೇಯಸಮಭ್ಯುದಯಂ ನಿಸ್ತೀರಂ ದುಸ್ತರಂ ಸುಖಾಂಬುನಿಧಿಮ್ ।
ನಿಃಪಿಬತಿ ಪೀತಧರ್ಮಾ ಸರ್ವೈರ್ದುಃಖೈರನಾಲೀಢಃ ॥ ೧೩೦ ॥ [1]

ಅನ್ವಯಾರ್ಥ—(ಪೀತಧರ್ಮಾ) ಧರ್ಮಾಮೃತವನ್ನು ಸೇವಿಸಿದವನು—ಸಲ್ಲೇಖನವನ್ನು ಸ್ವೀಕರಿಸಿದ ವ್ಯಕ್ತಿಯು (ಸರ್ವೈಃ ದುಃಖೈಃ) ಎಲ್ಲ ದುಃಖಗಳಿಂದ (ಅನಾಲೀಢಃ ಸನ್) ರಹಿತನಾಗಿ (ಅಭ್ಯುದಯಂ) ಇಂದ್ರಾದಿಗಳ ವೈಭವವನ್ನು—ಹಾಗೆಯೇ—(ನಿಸ್ತೀರಂ) ಅಪಾರವಾದಂಥ (ದುಸ್ತರಂ) ಕಠಿಣವಾದಂಥ (ಸುಖಾಂಬುನಿಧಿಃ) ಸುಖದ ಸಮುದ್ರವೇ ಆಗಿರುವಂಥ (ನಿಃಶ್ರೇಯಸಂ) ಮೋಕ್ಷವನ್ನು (ನಿಷ್ಪಿಬತಿ) ಅನುಭವಿಸುತ್ತಾನೆ.

ಅರ್ಥ—ಧರ್ಮಾಮೃತವನ್ನು ಸೇವಿಸುವಂಥ ಯಾವನಾದರೂ ಸಲ್ಲೇಖನ ಧಾರಿಯಾದ ವ್ಯಕ್ತಿಯು ಸ್ವರ್ಗದೊಳಗಿನ ಅಹಮಿಂದ್ರ ಪದದ ಸುಖಪರಂಪರೆಯನ್ನು ಬಹು ದಿನಗಳ ವರೆಗೆ ಭೋಗಿಸುತ್ತಾನೆ. ಅಲ್ಲದೆ ಸಂಪೂರ್ಣ ದುಃಖದಿಂದ ಮುಕ್ತನಾಗಿ ಅಪಾರವಾದ ಸುಖದ ಸಮುದ್ರದಂತಿರುವ—ಸಂಪಾದಿಸಲು ಕಠಿಣವಾಗಿರುವ—ನಿರ್ವಾಣ ಪದದ ಅನುಭವವನ್ನು ಪಡೆಯುತ್ತಾನೆ

ವಿಶೇಷಾರ್ಥ—[ಇಲ್ಲಿ ಸಲ್ಲೇಖನ ಸಹಿತ ಧರ್ಮಾನುಷ್ಠಾನ ಮಾಡುವುದರ ಫಲವನ್ನು ಹೇಳಲಾಗಿದೆ. ಈ ಫಲಗಳನ್ನು ಎರಡು ವಿಧಗಳಾಗಿ ವಿಂಗಡಿಸಲಾಗಿದೆ ಒಂದು ಫಲ ನಿಃಶ್ರೇಯಸರೂಪದಲ್ಲಿದೆ ಇನ್ನೊಂದು ಫಲವು ಅಭ್ಯುದಯ ರೂಪದಲ್ಲಿದೆ ಎರಡಕ್ಕೂ ಸುಖ ಸಮುದ್ರವೆಂದು ಹೇಳಲಾಗಿದೆ. ಆದರೆ ಎರಡೂ ಸುಖ ಸಮುದ್ರಗಳಲ್ಲಿ ಅಂತರವಿದೆ. ಅಭ್ಯುದಯ ರೂಪ ಸಮುದ್ರವು ಪಾರಮಾರ್ಥಿಕವಾಗಿರದೆ ಸಾಂಸಾರಿಕವಾಗಿದೆ ಇದರಲ್ಲಿ ಶ್ರೇಷ್ಠವಾದ ಲೌಕಿಕ ಸುಖವೂ ಸಮಾವೇಶವಾಗುತ್ತದೆ ಆದರೆ ನಿರಾಕುಲತೆಯಿಂದ ಕೂಡಿದ ಸುಖದ ದೃಷ್ಟಿಯಿಂದ ಇದು ನಿಜವಾದ ಹಾಗೂ ಸ್ವಾಶ್ರಿತ ಮತ್ತು ಶುದ್ಧ ಸುಖವಾಗಿಲ್ಲ; ಪರಾಶ್ರಿತ ಮತ್ತು ಅಶುದ್ಧ ಸುಖವಾಗಿದೆ. ಅಲ್ಲದೆ ಅಸ್ಥಿರವೂ ಆಗಿದೆ ಇನ್ನು ನಿಃಶ್ರೇಯಸ ಸುಖವು ಯಾವಾಗಲೂ ಒಂದೇ ರೀತಿ ಇದ್ದಕ್ಕಿದ್ದಂತೆ ಸ್ಥಿರವಾಗಿರುತ್ತದೆ. ಇದರಲ್ಲಿ ವಿಕಾರದ ಹೇತುವು ಮೂಲದಲ್ಲಿಯೇ ನಾಶವಾಗಿರುತ್ತದೆ ಆದರಿಂದ ವಿಕೃತಿಯು ಉಂಟಾಗುವ ಕಾರಣವಿಲ್ಲ. ಇದರಿಂದ ನಿಃಶ್ರೇಯಸ ಸುಖಕ್ಕೇನೇ ಪ್ರಾಧಾನ್ಯವಿದೆಯೆಂಬುದು ಗೊತ್ತಾಗುತ್ತದೆ ಸೂತ್ರದಲ್ಲಿಯೂ ಸಹ ಇದನ್ನೇ ಮೊದಲು ಉಲ್ಲೇಖಿಸಲಾಗಿದೆ ಅಭ್ಯುದಯ ಸುಖದ ಸ್ವರೂಪವನ್ನೂ ಮುಂದೆ ೧೩೫ನೆಯ ಸೂತ್ರದಲ್ಲಿ ವಿವರಿಸಲಾಗಿದೆ. ಆದರಿಂದ ಸಾಕಷ್ಟು ಪೂಜೆ, ಧನ, ಆಜ್ಞೆ, ಬಲ, ಪರಿಜನ, ಕಾಮ ಮತ್ತು ಭೋಗ ಇವುಗಳ ಕೊರತೆಯಿಂದ ಆಗುವ ದುಃಖದ ಸೂಚನೆಯು ದೊರೆಯುತ್ತದೆ ಈ ಎಲ್ಲ ದುಃಖವು ಇಲ್ಲದಂತೆ ಆಗುವುದು—ಅವುಗಳ ಸ್ವಾಮಿಗೆ—

[1] ಆಯಾಕವರ್ಮನ ಪದ್ಯ ಹೀಗಿದೆ.

ಕಂದ ॥ ಆನಿಶ್ರೇಯಸಸುಖಮುಮನಾನಿರುಪಮಮುಪ್ಪಪೆಂಪಿನಭ್ಯುದಯಮುಮಂ ।
ಜೈನವಚೋಮೃತಸೇವನೆ ತಾನದು ದೊರೆಕೊಂಡದನುಭವಿಪ್ಪರು ಭವ್ಯರು ॥

ಸಾಧ್ಯವಿದೆಯೆಂಬುದನ್ನು ಇಲ್ಲಿಯ 'ಸರ್ವೈರ್ದುಃಖೈರನಾಲೀಢಃ' ಎಂಬ ಪದ ಸಮೂಹವು ಸೀಮಿತಗೊಳಿಸುತ್ತಿದೆ ಯಾಕೆಂದರೆ ಮುಂದಿನ ಸೂತ್ರದಲ್ಲಿ ಹೇಳಿದ ನಿಃಶ್ರೇಯಸ ಸುಖದ ಒಡೆಯನಾದ ಸಿದ್ಧಾತ್ಮನಿಗೆ ಇವೆಲ್ಲ ದುಃಖಗಳು ಇರುವದಿಲ್ಲ ಜನ್ಮ-ಜರಾ-ರೋಗ ಮತ್ತು ಮರಣದ ದುಃಖಗಳಿಂದಲೂ ಇಷ್ಟ ವಿಯೋಗಾದಿ ಕಾರಣಗಳಿಂದ ಉಂಟಾಗುವ ದುಃಖಗಳಿಂದಲೂ ಅವನು ದೂರನಿರುವನು. ಅವನು ಸಂಪೂರ್ಣವಾಗಿ ಎಲ್ಲ ಪ್ರಕಾರದ ದುಃಖಗಳಿಂದಲೂ ಮುಕ್ತನಾಗಿರುತ್ತಾನೆ. ಇನ್ನು ಈ ಕಾರಿಕೆಯಲ್ಲಿ ಎರಡೂ ಸುಖ ಸಾಗರಗಳನ್ನು ಉದ್ದೇಶಿಸಿ 'ನಿಸ್ತೀರ' ಮತ್ತು 'ದುಸ್ತರ' ಎಂಬ ಎರಡು ಬೇರೆ ಬೇರೆ ವಿಶೇಷಣಗಳು ಇವೆ ಇವುಗಳಿಗೂ ವಿಶಿಷ್ಟವಾದ ಅರ್ಥವಿದೆ. ನಿಃಶ್ರೇಯಸ ಸುಖ ಸಮುದ್ರವು 'ನಿಸ್ತೀರ'ವಾಗಿದೆ. ಅದಕ್ಕೆ ತೀರವೆಂಬುದೇ ಇಲ್ಲ ಅನಂತವಾಗಿದೆ. ಇದನ್ನು ದಾಟುವ ಅಪೇಕ್ಷೆಯೂ ಯಾರಿಗೆ ಇರುವುದು ಸಾಧ್ಯವಿಲ್ಲ ಅದು ತನ್ನಲ್ಲಿ ತಾನು ಪೂರ್ಣವಾಗಿದೆ. ಇನ್ನೊಂದು ಅಭ್ಯುದಯ ಸುಖ ಸಮುದ್ರವು ತೀರ ಉಳ್ಳುದ್ದಾಗಿದೆ, ಸೀಮೆಯುಳ್ಳುದಾಗಿದೆ ಇದನ್ನು ದಾಟಿ ನಿಃಶ್ರೇಯಸ ಸುಖವನ್ನು ಹೊಂದುವ ಅಪೇಕ್ಷೆಯು ಎಲ್ಲರಿಗೂ ಇರುವುದು ಸ್ವಾಭಾವಿಕವಾಗಿದೆ. ಆದರೆ ಆ ಕಾರ್ಯವು ಮಾತ್ರ ಬಹಳ ದುಸ್ತರವಾಗಿದೆ ಅದರಲ್ಲಿ ಈಸಲಿಕ್ಕೆ ಬಿದ್ದು, ವಿಷಯ ಭೋಗಗಳನ್ನೆಲ್ಲ ದೂರಗೊಳಿಸಿ ಹೊರ ಬೀಳುವದು ಬಹಳ ಕಠಿಣವಾಗಿದೆ ಎಲ್ಲಿಯಾದರೂ ಒಬ್ಬನು ಮಾತ್ರ ಇದರೊಳಗಿಂದ ಈಸಿ ಪಾರಾಗಲಿಕ್ಕೆ ಸಮರ್ಥನು ಕಂಡುಬಂದಾನು ಇದನ್ನು ಲಕ್ಷ್ಯಕ್ಕೆ ತಂದು ಆಚಾರ್ಯರು 'ದುಸ್ತರ'ವೆಂದು ಇಲ್ಲಿ ಹೇಳಿದ್ದಾರೆ. ಸ ಧ]

ತಪದ ಪೊಡರ್ಪು ಕೈಮಿಗೆ ಪರೀಷಹಮಂ ಸಲೆ ಗೆಲ್ದು ಚಿತ್ತದೊಳ್
ವಿಪುಳತೆವೆತ್ತ ಸಂಸರಣದಧ್ರುವಭಾವಮನಪ್ಪುಕೆಯ್ದು ನಿ- ।
ಷ್ಕಪಟತೆವೆತ್ತ ಸುವ್ರತಗುಣಂಗಳ ಸಂತತಿ ಸಾಜಮಾಗಿ ರಾ-
ಜಿಪರೆನಲಾತಪಸ್ವಿಗಳುದಾತ್ತಮನಸ್ವಿಗಳೇಂ ಮಹಾತ್ಮರೋ ॥

—ಕಮಲಭವ—ಶಾಂತೀಶ್ವರ ಪುರಾಣಂ ೭, ೫೪.

ಇನ್ನು ನಿಃಶ್ರೇಯಸ ಸುಖದ ಲಕ್ಷಣವನ್ನು ಈ ಸೂತ್ರದಲ್ಲಿ ಹೇಳುತ್ತಾರೆ—

ಜನ್ಮಜರಾಮಯಮರಣೈಃ ಶೋಕೈರ್ದುಃಖೈರ್ಭಯೈಶ್ಚ ಪರಿಮುಕ್ತಮ್ ।
ನಿರ್ವಾಣಂ ಶುದ್ಧಸುಖಂ ನಿಃಶ್ರೇಯಸಮಿಷ್ಯತೇ ನಿತ್ಯಮ್ ॥ ೧೩೧ ॥ [1]

ಅನ್ವಯಾರ್ಥ—(ಜನ್ಮಜರಾಮಯಮರಣೈಃ) ಹುಟ್ಟು, ಮುಪ್ಪು, ರೋಗ, ಸಾವು, (ಶೋಕೈಃ ದುಃಖೈರ್ಭಯೈಃ ಚ) ಶೋಕ, ದುಃಖ, ಭೀತಿ ಮೊದಲಾದವುಗಳು (ಪರಿಮುಕ್ತಂ) ಇಲ್ಲದಂಥ (ನಿತ್ಯಂ) ನಿತ್ಯ (ಶುದ್ಧಸುಖಂ) ಶುದ್ಧ, ಸುಖಸ್ವರೂಪ (ನಿರ್ವಾಣಂ) ಮೋಕ್ಷವು (ನಿಃಶ್ರೇಯಸಂ) ನಿಃಶ್ರೇಯಸ (ಇಷ್ಯತೇ) ಎನಿಸುತ್ತದೆ.

ಅರ್ಥ—ಹುಟ್ಟು, ಮುಪ್ಪು, ಬೇನೆ, ಸಾವು, ಶೋಕ ಹೆದರಿಕೆ ಮತ್ತು ದುಃಖ ಇವು ಎಲ್ಲಿ ಇಲ್ಲವೋ ಮತ್ತು ಉಪಾಧಿರಹಿತ ಸುಖವು ಎಲ್ಲಿ ಯಾವಾಗಲೂ ಇರುವುದೋ ಅದಕ್ಕೇನೇ ನಿರ್ವಾಣ, ಮೋಕ್ಷ, ನಿಃಶ್ರೇಯಸ ಸುಖವೆಂದು ಹೇಳಲಾಗುತ್ತದೆ.

ವಿಶೇಷಾರ್ಥ—ಇಲ್ಲಿ 'ಶುದ್ಧಸುಖ' ಮತ್ತು 'ನಿತ್ಯ' ಎನ್ನುವ ವಿಶೇಷಣಗಳು ನಿಃಶ್ರೇಯಸ ಸುಖದ ಸ್ವರೂಪವನ್ನು ಲೌಕಿಕ ಸುಖದಿಂದ ಭಿನ್ನಗೊಳಿಸುತ್ತವೆ. ಈ ಸುಖವು ಎಲ್ಲ ವಿಭಾವ ಭಾವದ ಅಭಾವದಿಂದ

---

1 ಆಯಾಚವರ್ಮನ ಗದ್ಯ ಹೀಗಿದೆ.

ಅವರೊಳು ಜನ್ಮಮುಂ ಜರೆಯುಮಾಮಯಮುಂ ಶೋಕಮುಂ ದುಃಖಮುಂ ಭಯಮುಮೆಂದಿವು ಮೊದಲಾಗೊಡೆಯ ದೋಷಂಗಳಿಂ ಪಿಂಗಿದುದುಮನಂತಜ್ಞಾನಮುಮನಂತದರ್ಶನಮುಮನಂತವೀರ್ಯಮುಮನಂತಸುಖಮುಂ ಸ್ವಭಾವದೆ ನೆಲಸುಗೆಯುಮನಂತತೃಪ್ತಿಯುಂ ಶುದ್ಧಿಕೆಯುಂ ಬೆಳಗುಂ ಪೆರತೊಂದುಪಸರ್ಗಿಸೆ ಪಡದುದುಂ ನಿರವಧಿಯುಮೆಂದೀ ಗುಣಂಗಳೊಳ್ಕೂಡಿದುದುಂ ನಿಶ್ರೇಯಸಸುಖಂ.

ಬಾಧಾರಹಿತವಾಗಿರುತ್ತದೆ. ಅಲ್ಲದೆ ಪರಮ ನಿರಾಕುಲಮಯವೂ ಸ್ವಾಧೀನವೂ ಸಹಜಾನಂದ ಸ್ವರೂಪವೂ ಆಗಿದೆ ಇದಕ್ಕೇನೇ ಮೋಕ್ಷ, ನಿಃಶ್ರೇಯಸ ಎಂದು ಹೇಳಿದೆ

ಪರಮಪವಿತ್ರಂ ಶಾಶ್ವತಮರುಜಮನಿಂದ್ರಿಯಮರುದ್ರಮಕ್ಷಯಮಜರಂ ।
ನಿರುಪದ್ರವಮದಚಲಮಸ್ವರಮಪುನರ್ಭವಮನಂತಮವ್ಯತನಿವಾಸಂ ॥

ಜನ್ನ—ಅನಂತನಾಥ ಪುರಾಣಂ ೧೪–೫೬.

ಈ ಸೂತ್ರದಲ್ಲಿ ನಿಃಶ್ರೇಯಸ ಸುಖವನ್ನು ಹೊಂದಿದ ಸಿದ್ಧರ ಸ್ಥಿತಿಯನ್ನು ಹೇಳಿದ್ದಾರೆ—

ವಿದ್ಯಾದರ್ಶನಶಕ್ತಿಸ್ವಾಸ್ಥ್ಯಪ್ರಹ್ಲಾದತೃಪ್ತಿಶುದ್ಧಿಯುಜಃ ।
ನಿರತಿಶಯಾ ನಿರವಧಯೋ ನಿಃಶ್ರೇಯಸಮಾವಸಂತಿ ಸುಖಮ್ ॥ ೧೩೨ ॥

ಅನ್ವಯಾರ್ಥ—(ವಿದ್ಯಾದರ್ಶನಶಕ್ತಿ) ಅನಂತ ಜ್ಞಾನ, ಅನಂತ ದರ್ಶನ, ಅನಂತ ವೀರ್ಯ (ಸ್ವಾಸ್ಥ್ಯಪ್ರಹ್ಲಾದತೃಪ್ತಿಶುದ್ಧಿಯುಜಃ) ಪರಮ ಸ್ವಾಸ್ಥ್ಯ, ಪರಮಾನಂದ, ಪೂರ್ಣ ತೃಪ್ತಿ, ಉತ್ಕೃಷ್ಟ ಶುದ್ಧಿ ಇವುಗಳಿಂದ ಕೂಡಿದ (ನಿರತಿಶಯಾಃ) ಜ್ಞಾನ ಮೊದಲಾದ ಗುಣಗಳ ಹೆಚ್ಚು ಕಡಿಮೆಯೆಂಬುದು ಇಲ್ಲದೆ (ನಿರವಧಯಃ) ಕಾಲಮರ್ಯಾದೆ ಇಲ್ಲದೆ–ಅನಂತಕಾಲದ ವರೆಗೆ ಇರವ–(ನಿಃಶ್ರೇಯಸಂ ಸುಖಂ) ಮೋಕ್ಷ ಸುಖದಲ್ಲಿ–ಮುಕ್ತಾತ್ಮರು–(ಆವಸಂತಿ) ವಾಸಿಸುತ್ತಾರೆ.

ಅರ್ಥ—ಅನಂತ ಜ್ಞಾನ, ಅನಂತ ದರ್ಶನ, ಅನಂತ ವೀರ್ಯ, ಪರಮೋದಾಸೀನತೆ, ಅನಂತ ಸುಖ, ವಿಷಯಗಳ ವಿಷಯದಲ್ಲಿ ನಿರ್ವಾಂಛಕತೆ, ದ್ರವ್ಯಭಾವ ಕರ್ಮಗಳೆಂಬ ಮಲದ ಅಭಾವ—ಈ ಗುಣಗಳಿಂದ ಕೂಡಿದಂಥ ಪುರುಷರು ಹೀನಾಧಿಕತೆಗಳಿಲ್ಲದೆ ಅನಂತಕಾಲದ ವರೆಗೆ ಮೋಕ್ಷಸ್ಥಾನದಲ್ಲಿರುತ್ತಾರೆ.

ವಿಶೇಷಾರ್ಥ—[ಇಲ್ಲಿ ನಿಃಶ್ರೇಯಸ ಸುಖವನ್ನು ಹೊಂದುವಂಥ ಸಿದ್ಧರ ವಿಶಿಷ್ಟ ಅವಸ್ಥೆಯ ಕೆಲವು ಗುಣಗಳನ್ನು ನಿರ್ದೇಶಿಸಲಾಗಿದೆ. ಇವುಗಳಲ್ಲಿ ಅವರು ನಿರತಿಶಯ ಮತ್ತು ನಿರವಧಿಗಳಾಗಿರುವ ಸಂಗತಿಯನ್ನು ವಿಶೇಷವಾಗಿ ಗಮನಿಸಬೇಕು ಯಾಕೆಂದರೆ ನಿಃಶ್ರೇಯಸ ಸುಖವನ್ನು ಸಂಪಾದಿಸುವಂಥ ಸಿದ್ಧರೆಲ್ಲರೂ ಜ್ಞಾನಾದಿ ಗುಣಗಳ ದೃಷ್ಟಿಯಿಂದ ಪರಸ್ಪರ ಸಮಾನವಾಗಿರುತ್ತಾರೆ, ಅವರಲ್ಲಿ ಹೆಚ್ಚು–ಕಡಿಮೆಗಳೆಂಬಿವು ಏನೂ ಇರುವದಿಲ್ಲ–ಮತ್ತು ಅವರೆಲ್ಲರೂ ಯಾವಾಗಲೂ ತಮ್ಮ ಗುಣಗಳಲ್ಲಿ ಸ್ಥಿರವಾಗಿರುವಂಥವರಾಗಿರುತ್ತಾರೆ ಅವರ ಸಿದ್ಧತ್ವ ಅಥವಾ ನಿಃಶ್ರೇಯಸತ್ವಕ್ಕೆ ಯಾವ ಸೀಮೆಯೂ ಇಲ್ಲ ನ ಥ] ಧರ್ಮದ ಪ್ರಭಾವದಿಂದ ಆತ್ಮನು ಮೋಕ್ಷದಲ್ಲಿ ಹೋಗಿ ನಿಲ್ಲುತ್ತಾನೆ. ಅಲ್ಲಿ ಕೇವಲ ಜ್ಞಾನ, ಕೇವಲ ದರ್ಶನ, ಅನಂತಶಕ್ತಿ, ಪರಮವೀತರಾಗತೆ, ನಿರಾಕುಲ ಸುಖ, ವಿಷಯಗಳ ಅನಿಚ್ಛೆ, ಕರ್ಮಮಲ ರಹಿತತ್ವ ಮೊದಲಾದ ಗುಣಗಳು ಪ್ರಕಟವಾಗುತ್ತವೆ ಆ ಗುಣಗಳಲ್ಲಿ ಹೀನಾಧಿಕತೆಯೂ ಕಾಲದ ಮರ್ಯಾದೆಯೂ ಇರುವದಿಲ್ಲ. ಇಂಥ ಸ್ಥಿತಿಯಲ್ಲಿ ಅನಂತಾನಂತ ಕಾಲ ಆತ್ಮನಿಗೆ ಇರಲಿಕ್ಕೆ ದೊರೆಯುತ್ತದೆ. ಇದೇ ಮೋಕ್ಷವೆನಿಸುತ್ತದೆ.

ನಿರವಯಮನಲ್ಲಿ ಪರಮಂ ಚರಮಶರೀರಂ ಪ್ರಮಾಣಮೇನಾನುಂಗುಂ- ।
ದಿರೆ ಜೀವಘನೀಭೂತಂ ನಿರುಪಮನಿಜರೂಪನಿತ್ಯಸುಖಮಯನಾದಂ ॥

—ಜನ್ನ–ಅನಂತನಾಥ ಪುರಾಣಂ ೧೪, ೫೭.

ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸುಖಸೋದ್ಭೂತನುಂ ಲೋಕಚೂಡಾ-
ಮಣಿಯುಂ ಶಶ್ವತ್ತ್ರಿಲೋಕೀ ಪ್ರಣುತನುಮತಿ ವಿಖ್ಯಾತನುಂ ಭವ್ಯಚಿಂತಾ- ।
ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ-
ತ್ತಣಿನಾದಿ ಬ್ರಹ್ಮನೇಕಕ್ಷಣದೊಳೆ ಪರಮಬ್ರಹ್ಮಸದ್ಮಕ್ಕೆ ಸಂದಂ ॥

—ಪಂಪ–ಆದಿಪುರಾಣ ೧೯, ೫೦.

ಈ ಸೂತ್ರದಲ್ಲಿ ಸಿದ್ಧಾತ್ಮರ ಗುಣಗಳಲ್ಲಿ ಯಾವ ವಿಕಾರವೂ ಇರುವದಿಲ್ಲವೆಂಬುದನ್ನು ಹೇಳುತ್ತಾರೆ—

ಕಾಲೇ ಕಲ್ಪಶತೇಽಪಿ ಚ ಗತೇ ಶಿವಾನಾಂ ನ ವಿಕ್ರಿಯಾ ಲಕ್ಷ್ಯಾ ।
ಉತ್ಪಾತೋಽಪಿ ಯದಿ ಸ್ಯಾತ್ತ್ರಿಲೋಕಸಂಭ್ರಾಂತಿಕರಣಪಟುಃ ॥ ೧೩೩ ॥

ಅನ್ವಯಾರ್ಥ—(ಯದಿ) ಒಂದು ವೇಳೆ (ತ್ರಿಲೋಕಸಂಭ್ರಾಂತಿಕರಣಪಟುಃ) ಮೂರು ಲೋಕವನ್ನು ಕಳವಳಗೊಳಿಸುವಂಥ (ಉತ್ಪಾತಃ ಅಪಿ) ಉತ್ಪಾತವು ಸಹ (ಸ್ಯಾತ್) ಆದರೂ ಕೂಡ (ಚ) ಮತ್ತು (ಕಲ್ಪಶತೇ ಕಾಲೇ ಗತೇ ಅಪಿ) ನೂರಾರು ಕಲ್ಪ ಕಾಲವು ಹೋದರೂ ಕೂಡ (ಶಿವಾನಾಂ) ಮುಕ್ತ ಜೀವಿಗಳಲ್ಲಿ (ವಿಕ್ರಿಯಾ) ವಿಕೃತಿಯು (ನ ಲಕ್ಷ್ಯಾ) ಕಂಡು ಬರುವದಿಲ್ಲ

ಅರ್ಥ—ಅನಂತಾನಂತ ಕಲ್ಪ ಕಾಲವು ಉರುಳಿ ಹೋದರೂ ಕೂಡ ಮುಕ್ತ ಜೀವಗಳಲ್ಲಿ ಯಾವ ವಿಕಾರವೂ ಆಗುವದಿಲ್ಲ ಮುಕ್ತಾತ್ಮರು ಬೇರೆ ಸ್ವರೂಪವನ್ನು ಹೊಂದುವದಿಲ್ಲ. ಮೂರೂ ಲೋಕಗಳನ್ನು ನಡುಗಿಸುವಂಥ ಭಯಂಕರ ಉತ್ಪಾತವಾದರೂ ಅದರಿಂದ ಸಿದ್ಧ ಜೀವರಲ್ಲಿ ಏನೂ ಕಳವಳವು ಉಂಟಾಗುವದಿಲ್ಲ

ವಿಶೇಷಾರ್ಥ—ಇಲ್ಲಿ ಬಹು ದೊಡ್ಡ ಉತ್ಪಾತದ ಕಲ್ಪನೆಯನ್ನು ಮಾಡಲಾಗಿದೆ. ಅದು ಮೂರು ಲೋಕದ ರಚನೆಯನ್ನೇ ತಲೆ ಕೆಳಗೆ ಮಾಡುವಂಥ ಅಸಾಧಾರಣವಾಗಿದೆಯೆಂದಿದೆ. ಇಂಥ ಸ್ಥಿತಿಯು ಒದಗಿದರೂ ಸಿದ್ಧರು ತಮ್ಮ ಸ್ಥಿತಿಯಲ್ಲಿ ಇದ್ದುದಿದ್ದಂತೆ ಇರುವರು ಅವರಲ್ಲಿ ಯಾವ ವಿಕಾರವೂ ಉಂಟಾಗುವದಿಲ್ಲ. ಹಲವು ಕಲ್ಪ ಕಾಲಗಳು ಕಳೆದರೂ ಕೂಡ ಅವರು ಹಾಗೆಯೇ ಇರಬಲ್ಲರು ಯಾಕಂದರೆ ಅವರಲ್ಲಿ ವಿಕೃತಿಯನ್ನು ಹೊಂದಿಸುವ ಮೂಲ ಕಾರಣವೇ ಸಂಪೂರ್ಣವಾಗಿ ನಷ್ಟ ಹೊಂದಿರುತ್ತದೆ

ಸನ್ನಿದಮನೆ ತಾಂ ತನ್ನಂ ತನ್ನಿಂದಂ ಕಂಡು ತನ್ನಗೆ ತನ್ನತ್ತಣಿನೇಂ ।
ತನ್ನಗುಣಂಗಳ್ ನೆಱೆದಿರೆ ತನ್ನೊಳೆನಿಂದನೊ ವಿನೇಯಜನಮುಖತಿಲಕಂ ॥

— ಜನ್ನ—ಅನಂತನಾಥ ಪುರಾಣಂ—೧೪, ೩೮

ಇಲ್ಲಿ ಆಚಾರ್ಯರು ಸಿದ್ಧರ ಸ್ವರೂಪವನ್ನು ಹೇಳುತ್ತಾರೆ—

ನಿಃಶ್ರೇಯಸಮಧಿಪನ್ನಾಸ್ತ್ರೈಲೋಕ್ಯಶಿಖಾಮಣಿಶ್ರಿಯಂ ದಧತೇ ।
ನಿಷ್ಕಿಟ್ಟಿಕಾಲಿಕಾಚ್ಛವಿಚಾಮೀಕರಭಾಸುರಾತ್ಮಾನಃ ॥ ೧೩೪ ॥

ಅನ್ವಯಾರ್ಥ—(ನಿಷ್ಕಿಟ್ಟಿಕಾಲಿಕಾಚ್ಛವಿಚಾಮೀಕರ ಭಾಸುರಾತ್ಮಾನಃ) ಮಲ ಹಾಗೂ ಕಪ್ಪು ಕಲೆ-ಗಳಿಲ್ಲದಂಥ ಕಾಂತಿಯಿಂದ ಕೂಡಿದ ಸುವರ್ಣದ ಹಾಗೆ ಪ್ರಕಾಶಮಾನವಾಗಿರುವಂಥ (ನಿಃಶ್ರೇಯಸಂ ಅಧಿಪನ್ನಾಃ) ಮೋಕ್ಷವನ್ನು ಹೊಂದಿದಂಥ ಜೀವವು (ತ್ರೈಲೋಕ್ಯಶಿಖಾಮಣಿಶ್ರಿಯಂ) ಮೂರು ಲೋಕದ ಶಿರೋಮಣಿಯಂತೆ ಶೋಭೆಯನ್ನು (ದಧತೆ) ಹೊಂದುತ್ತದೆ.

ಅರ್ಥ—ಸುವರ್ಣದೊಳಗಿನ ಹೊಲಸು ಮತ್ತು ಕಪ್ಪು ವರ್ಣಗಳು ಪೂರ್ಣ ಇಲ್ಲದಂತೆ ಆಗಲು ಅದರ ದೈದೀಪ್ಯಮಾನ ಕಾಂತಿಯು ಹೆಚ್ಚುತ್ತದೆ ಹಾಗೆಯೇ ಮೋಕ್ಷವಾಸಿ ಜೀವವು ಮೂರು ಲೋಕದ ಅಗ್ರ ಭಾಗದಲ್ಲಿ ಉತ್ಕೃಷ್ಟವಾದ ಶೋಭೆಯನ್ನು ಹೊಂದುತ್ತದೆ.

ವಿಶೇಷಾರ್ಥ—ನೆಲದಲ್ಲಿರುವ ಮೂಲ ಹೊನ್ನು ಮಣ್ಣುಗಳಲ್ಲಿ ಕೂಡಿರುವುದರಿಂದ ತನ್ನ ತನ್ನ ಸ್ವರೂಪವನ್ನು ಕಳೆದುಕೊಂಡು ತೇಜಹೀನವಾಗಿರುತ್ತದೆ. ಅದು ಅಗ್ನಿ ಮೊದಲಾದ ಸಂಸ್ಕಾರಗಳಿಂದ ಶುದ್ಧ ಗೊಳಿಸಲ್ಪಟ್ಟಾಗ ಹೊಳಪುಳ್ಳದಾಗುತ್ತದೆ ಇದೇ ಪ್ರಕಾರ ಸಂಸಾರದಲ್ಲಿರುವ ಆತ್ಮವು ದ್ರವ್ಯಕರ್ಮ, ಭಾವಕರ್ಮ, ನೋಕರ್ಮಗಳೆಂಬ ಮಲದಿಂದ ಕೂಡಿದ್ದು ತನ್ನ ಸ್ವರೂಪವನ್ನು ಕಳೆದುಕೊಂಡಿರುತ್ತದೆ. ನಿಸ್ತೇಜವೂ ಆಗಿರುತ್ತದೆ ಆದರೆ ಅದು ಯಾವಾಗ ಸದ್‌ವ್ರತ, ಸಲ್ಲೇಖನವೇ ಮೊದಲಾದ ಅನುಷ್ಠಾನಗಳೆಂಬ ಅಗ್ನಿಯಲ್ಲಿ ತನ್ನ

ಕರ್ಮಮಲವನ್ನು ಸುಟ್ಟು ಭಸ್ಮಗೊಳಿಸುವುದೋ ಆಗ ಅದು ತೇಜಃಪುಂಜವಾದ ಶುದ್ಧ ಸುವರ್ಣದಂತಾಗುತ್ತದೆ. ಸರ್ವೋತ್ಕೃಷ್ಟ ಪದವನ್ನು ಹೊಂದುತ್ತದೆ.

ಜನತಾಭ್ಯಂತರವೇದನೀಯವಶದಿಂ ಗತ್ಯಂತರಕ್ಕೈದು ಸಂ-
ಹನನಸ್ಥಾನನಿಬಂಧವರ್ಣರಸಗಂಧಸ್ಪರ್ಶನಾಮಂಗಳಿಂ- ।
ಬಿನಮೆಪ್ಪತ್ತೆರಡೆಂಬ ತತ್ಪ್ರಕೃತಿಯಿಂ ಬೇಱಿರ್ದು ವಾಕ್ಯಾರ್ಥದಿಂ
ಧ್ವನಿಬೇಱಿರ್ದೆನೆವಂತದೇನೆನೆದನೋ ಕಾಲಾಂತಕಾನಂತಕಂ ॥

—ಜನ್ನ-ಅನಂತನಾಥ ಪುರಾಣಂ-೧೪, ೫೨.

ಈ ಸೂತ್ರದಲ್ಲಿ ಅಭ್ಯುದಯ ಸುಖದ ಸ್ವರೂಪವನ್ನು ಹೇಳುತ್ತಾರೆ—

ಪೂಜಾರ್ಥಾಜ್ಞೈಶ್ವರ್ಯೈರ್ಬಲ-ಪರಿಜನ-ಕಾಮ-ಭೋಗ-ಭೂಯಿಷ್ಠೈಃ ।
ಅತಿಶಯಿತ-ಭುವನಮದ್ಭುತಮಭ್ಯುದಯಂ ಫಲತಿ ಸದ್ಧರ್ಮಃ ॥ ೧೩೫ ॥

ಅನ್ವಯಾರ್ಥ—(ಸದ್ಧರ್ಮಃ) ಸಲ್ಲೇಖನದ ಅನುಷ್ಠಾನದಿಂದ ಸಂಪಾದಿಸಿದ ಪುಣ್ಯ ವಿಶೇಷವು (ಪೂಜಾರ್ಥಾಜ್ಞೈಶ್ವರ್ಯೈಃ) ಪೂಜೆ, ಧನ, ಆಜ್ಞೆ, ಮತ್ತು ಐಶ್ವರ್ಯ-ಹಾಗೆಯೇ-(ಬಲ-ಪರಿಜನ ಕಾಮಭೋಗ ಭೂಯಿಷ್ಠೈಃ) ಸಾಮರ್ಥ್ಯ, ಸೇವಕರು, ಕಾಮ, ಭೋಗ ಇವುಗಳನ್ನು ವಿಪುಲವಾಗಿ (ಅತಿಶಯಿತಭುವನಂ) ಲೋಕದಲ್ಲಿ ಉತ್ಕೃಷ್ಟವೆನಿಸುವಂತೆ (ಅದ್ಭುತಂ) ಆಶ್ಚರ್ಯಕರವಾಗಿ (ಅಭ್ಯುದಯಂ) ಏಳಿಗೆಯನ್ನು ಹೊಂದುವಂತೆ (ಫಲತಿ) ಫಲವನ್ನು ಕೊಡುತ್ತದೆ

ಅರ್ಥ—ಈ ಸಲ್ಲೇಖನವೆಂಬ ಹೆಸರಿನ ಸದ್ಧರ್ಮದಿಂದ ಅದ್ಭುತವಾದಂಥ ಇಂದ್ರನ ವೈಭವವು ಪ್ರಾಪ್ತವಾಗುತ್ತದೆ ಅಲ್ಲಿ ಸನ್ಮಾನ, ದ್ರವ್ಯ, ಆಜ್ಞೆ, ಐಶ್ವರ್ಯ, ಶಕ್ತಿ, ಸೇವಕರು ಮತ್ತು ಕಾಮಭೋಗಗಳು ವಿಪುಲವಾಗಿರುತ್ತವೆ.

ವಿಶೇಷಾರ್ಥ—ಇಲ್ಲಿ ಸಮೀಚೀನ ಧರ್ಮದ ಅಭ್ಯುದಯ ಫಲವನ್ನು ನಿರ್ದೇಶಿಸಲಾಗಿದೆ. ಅಭ್ಯುದಯ ಫಲವು ಲೌಕಿಕ ಉತ್ಕರ್ಷಕ್ಕಾಗಿ ಇದೆ. ಇದು ಎಲ್ಲ ಜನರ ಅನುಭೂತಿಯ ವಿಷಯವಾಗಿದೆ. ಅದರಿಂದ ಹೆಚ್ಚಾಗಿ ವಿವರಿಸುವ ಅವಶ್ಯಕತೆಯು ಇಲ್ಲ. ಆದರೂ ಧರ್ಮದ ಫಲವು ಯಾವ ಪ್ರಮಾಣದಲ್ಲಿರುತ್ತದೆಂಬುದರ ಸಂಕೇತವು "ಭೂಯಿಷ್ಠೈಃ", "ಅತಿಶಯಿತ ಭುವನಂ" ಮತ್ತು "ಅದ್ಭುತಂ" ಎಂಬ ಪದಗಳಿಂದ ಲಭಿಸುತ್ತದೆ.

ಸಿರಿಯೊಳಗಂತದೇ ಸಿರಿ ಸುಖಕ್ಕದೆ ಸೌಖ್ಯಮನೇಕತತ್ತ್ವದಾ
ತಿರುಳದೆ ಜಾನೆ ಕಟ್ಟಕಡೆ ಸರ್ವವಿಚಾರಕೆ ಯೆಂತನಲ್ಕೆ ಸ- ।
ದ್ಗುರುಗಳು ಮೈಪರಿರ್ದರದರೊಳ್ವರ ದರ್ಶನ ಬೋಧವೃತ್ತಿಗಳ್
ಪರಮತಪಂಗಳಲ್ಲಿ ನೆಲೆಗೊಂಡುದರಿಂದಪರಾಜಿತೇಶ್ವರಾ ॥

—ರತ್ನಾಕರ-ಅಪರಾಜಿತ ಶತಕ ೧೦೬.

ಇನ್ನು ಶ್ರಾವಕ ಧರ್ಮದ ಹನ್ನೊಂದು ಪ್ರತಿಮೆಗಳ ಸ್ವರೂಪವನ್ನು ಹೇಳುತ್ತಾರೆ—

ಶ್ರಾವಕಪದಾನಿ ದೇವೈರೇಕಾದಶ ದೇಶಿತಾನಿ ಯೇಷು ಖಲು ।
ಸ್ವಗುಣಾಃ ಪೂರ್ವಗುಣೈಃ ಸಹ ಸಂತಿಷ್ಠಂತೇ ಕ್ರಮವಿವೃದ್ಧಾಃ[1] ॥ ೧೩೬ ॥

ಅನ್ವಯಾರ್ಥ—(ದೇವೈಃ) ಸರ್ವದರ್ಶಿಯಾದ ಭಗವಂತನು (ಶ್ರಾವಕಪದಾನಿ) ಶ್ರಾವಕರ ಪ್ರತಿಮೆ-ಗಳನ್ನು (ಏಕಾದಶ) ಹನ್ನೊಂದು-ಎಂದು-(ದೇಶಿತಾನಿ) ಹೇಳಿದ್ದಾನೆ (ಯೇಷು) ಇವುಗಳಲ್ಲಿ (ಖಲು) ನಿಜವಾಗಿಯೂ

[1] 'ಕ್ರಮಾದ್ ವೃದ್ಧಾಃ' ಎಂದು ಪಾಠಾಂತರವಿದೆ

(ಪೂರ್ವಗುಣೈಃ ಸಹ) ಮೊದಲು ಧಾರಣಮಾಡಿದ ಪ್ರತಿಮೆಗಳ ಗುಣ ಸಹಿತ (ಕ್ರಮವಿವೃದ್ಧಾಃ) ಕ್ರಮ ಕ್ರಮದಿಂದ ಹೆಚ್ಚಾಗುವಂಥದ್ದಾಗಿ (ಸ್ವಗುಣಾಃ) ಸ್ವೀಕರಿಸಿದ ಪ್ರತಿಮೆಯೊಳಗಿನ ಆಚಾರ ಧರ್ಮವು (ಸಂತಿಷ್ಠಂತೇ) ಇರುತ್ತದೆ

ಅರ್ಥ—ಸರ್ವಜ್ಞ ದೇವನು ಶ್ರಾವಕರ ಪ್ರಗತಿಯ ಮೆಟ್ಟಿಲುಗಳೆಂದರೆ ಹನ್ನೊಂದು ಪ್ರತಿಮೆಗಳೆಂದು ಹೇಳಿದ್ದಾನೆ ಯಾವುದೇ ಪ್ರತಿಮೆಯಿರಲಿ, ಅದರಲ್ಲಿ ಇರಬೇಕಾದ ಎಲ್ಲ ಗುಣಗಳು ಆ ನೆಲೆಯ ಶ್ರಾವಕನಲ್ಲಿರಬೇಕು. ಮೇಲಾಗಿ ಹಿಂದಿನ ಪ್ರತಿಮೆಗಳ ಸರ್ವಗುಣಗಳೂ ವಿಕಾಸ ಹೊಂದಿದ ಅವಸ್ಥೆಯಲ್ಲಿರುವವು. ಇಂಥ ಹನ್ನೊಂದು ಪ್ರತಿಮೆಗಳು ಹೀಗಿವೆ.—೧ ದರ್ಶನ, ೨ ವ್ರತ, ೩. ಸಾಮಾಯಿಕ, ೪. ಪ್ರೋಷಧೋಪವಾಸ, ೫. ಸಚಿತ್ತ ತ್ಯಾಗ, ೬. ರಾತ್ರಿಭೋಜನ, ೭ ಬ್ರಹ್ಮಚರ್ಯ, ೮. ಆರಂಭತ್ಯಾಗ, ೯. ಪರಿಗ್ರಹತ್ಯಾಗ, ೧೦ ಅನುಮತಿತ್ಯಾಗ, ೧೧ ಉದ್ದಿಷ್ಟಾಹಾರತ್ಯಾಗ ಇನ್ನು ಯಾರು ಅನುಕ್ರಮದಿಂದ ಮುಂದಿನ ಮೆಟ್ಟಿಲನ್ನು ಧಾರಣ ಮಾಡುವರೋ ಅವರು ಹಿಂದಿನ ಪ್ರತಿಮೆಗಳ ಗುಣವನ್ನು ಬಿಡುವದು ವಿಹಿತವಲ್ಲ ಉದಾಹರಣೆಗಾಗಿ ಬ್ರಹ್ಮಚರ್ಯ ಪ್ರತಿಮೆಯನ್ನು ಧಾರಣ ಮಾಡುವಂಥವನು ಅದಕ್ಕೂ ಮೊದಲಿನ ಆರೂ ಪ್ರತಿಮೆಯೊಳಗಿನ ಆಚರಣ, ನಿಯಮಗಳನ್ನು ಪೂರ್ಣ ಪಾಲಿಸಲಿಕ್ಕೇ ಬೇಕು. ಅಂದರೇನೇ ಅವನು ಎಂಟನೆಯ ಪ್ರತಿಮೆಯನ್ನು ಧಾರಣ ಮಾಡಲಿಕ್ಕೆ ಯೋಗ್ಯನಾಗುವನು.

ವಿಶೇಷಾರ್ಥ—[ಎಲ್ಲ ಕಡೆಗೂ ಶ್ರಾವಕನ ವಿಕಾಸ ಶ್ರೇಣಿಗಳಿಗೆ 'ಪ್ರತಿಮಾ' ಎಂಬ ಹೆಸರಿನಿಂದ ಕರೆಯಲಾಗಿದೆ. ಆದರೆ ಇಲ್ಲಿ ಅದಕ್ಕಾಗಿ 'ಶ್ರಾವಕಪದಾನಿ' ಎಂಬ ಪದವನ್ನು ಪ್ರಯೋಗಿಸಿ, 'ಶ್ರಾವಕಪದ'ವೆಂಬ ಹೆಸರಿನಿಂದ ಉಲ್ಲೇಖಿಸಲಾಗಿದೆ ಈ ಪದವು ವಿಷಯವನ್ನು ಇನ್ನೂ ಸುಸ್ಪಷ್ಟಗೊಳಿಸುತ್ತದೆ ಶ್ರಾವಕರ ಈ ಪದಗಳು ಆಗಮ ವಿಹಿತ ಸಂಖ್ಯೆಯಲ್ಲಿ ಹನ್ನೊಂದು ಮಾತ್ರ ಇರುತ್ತವೆ. ಎಲ್ಲ ಶ್ರಾವಕರು ಈ ಹನ್ನೊಂದು ವಿಭಾಗಗಳಲ್ಲಿ ವಿಂಗಡಿಸಲ್ಪಡುತ್ತಾರೆ. ಈ ತರಗತಿಗಳು ಗುಣಗಳನ್ನು ಅವಲಂಬಿಸಿವೆ. ಅದಕ್ಕಾಗಿ ಇವುಗಳಿಗೆ ಶ್ರಾವಕೀಯ ಗುಣಸ್ಥಾನವೆಂದೂ ಎನ್ನುವರು ಸುಪ್ರಸಿದ್ಧವಾಗಿರುವ ಶ್ರಾವಕರ ಹದಿನಾಲ್ಕು ಗುಣಸ್ಥಾನಗಳಲ್ಲಿ–ಶ್ರಾವಕರ ಸಂಬಂಧಿಸಿದ–'ದೇಶಸಂಯತ'ವೆಂಬ ಹೆಸರಿನ ಐದನೆಯ ಗುಣಸ್ಥಾನದ ಉಪಭೇದಗಳಾಗಿವೆ. ಅದರಿಂದ ಇವಿಷ್ಟು ಮಾತ್ರ ಸಲ್ಲೇಖನದ ಅನುಷ್ಠಾನ ಮಾಡುವವರಿಗೆ ಸಂಬಂಧಿಸುವುದಿಲ್ಲ[1] ಸಲ್ಲೇಖನದ ಅನುಷ್ಠಾನವಂತೂ ಪ್ರತಿಯೊಂದು ಪದದಲ್ಲಿರುವಂಥ ಶ್ರಾವಕರಿಗೆ ವಿಹಿತವಾಗಿದೆ. ಇದು ಚಾರಿತ್ರಸಾರದ "ಉಕ್ತೈರುಪಾಸಕೈರ್ಮಾರ-ಣಾಂತಿಕೀ ಸಲ್ಲೇಖನಾ ಪ್ರೀತ್ಯಾ ಸೇವ್ಯಾ ।" ಎಂಬ ವಾಕ್ಯದಿಂದಲೂ ತಿಳಿದು ಬರುತ್ತದೆ. ಇಲ್ಲಿ ಒಂದು ಮಾತನ್ನು ವಿಶೇಷವಾಗಿ ಗಮನದಲ್ಲಿಡಬೇಕು.–ಈ ಗುಣಸ್ಥಾನಗಳು ಗುಣದ ಕ್ರಮವಿವೃದ್ಧಿಗಾಗಿ ರೂಪಗೊಂಡಿವೆ. ಅದಕ್ಕಾಗಿ ಒಂದು ಗುಣಸ್ಥಾನವು ತನ್ನ ಮೊದಲಿನ ಎಲ್ಲ ಗುಣಸ್ಥಾನಗಳ ಗುಣಗಳನ್ನೂ ಒಳಗೊಂಡಿರುತ್ತದೆ. ಅಲ್ಲದೆ ಹೆಚ್ಚಿನ ತರಗತಿಯಲ್ಲಿ ಧಾರಣಮಾಡಿರುತ್ತದೆ ಈ ಚಾರಿತ್ರ ವಿಕಾಸ ಕ್ರಮದಲ್ಲಿ ಹಿಂದಿನದನ್ನು ಉಪೇಕ್ಷಿಸಿ ಮುಂದೆ ಸಾಗಲಿಕ್ಕೆ ಸಾಧ್ಯವಿಲ್ಲ. ಸ. ದ]

ದರ್ಶನಿಕನು ವ್ರತಿಕನು ಸಾಮಾಯಿಕ ಸುರುಚಿರ ಪ್ರೋಷಧನಿಯಮಿ
ವರಸಚ್ಚಿತ್ತವಿರತ ರಾತ್ರಿಭುಕ್ತನುಕರಮೆಸೆವಾ ಬ್ರಹ್ಮಚಾರಿ ।
ಪಿರಿದೆನಿಪಾರಂಭ ವಿರತನು ಪರಿಗ್ರಹವಿರತನುಮನುಮತಿವಿರತ
ವರಪುದ್ದಿಷ್ಟವಿರತನೆಂದು ಹನ್ನೊಂದು ಪರಿಯಿದು ಪೇಳ್ವ ಭೇದಗಳ ॥

—ಬಾಹುಬಲಿ ಕವಿ—ನಾಗಕುಮಾರ ಚರಿತಂ ೨೮–೩೯, ೪೦.

ಇನ್ನು ದರ್ಶನದ ಪ್ರತಿಮೆಯನ್ನು ಕುರಿತು ಆಚಾರ್ಯರು ಸೂತ್ರವನ್ನು ಹೇಳುತ್ತಾರೆ—

ಸಮ್ಯಗ್ದರ್ಶನಶುದ್ಧಃ ಸಂಸಾರಶರೀರಭೋಗನಿರ್ವಿಣ್ಣಃ ।
ಪಂಚಗುರುಚರಣಶರಣೋ ದರ್ಶನಿಕಸ್ತತ್ತ್ವಪಥಗೃಹ್ಯಃ ॥ ೧೩೭ ॥

ಅನ್ವಯಾರ್ಥ—(ಸಮ್ಯಗ್ದರ್ಶನಶುದ್ಧಃ) ಶುದ್ಧಸಮ್ಯಗ್ದೃಷ್ಟಿಯು (ಸಂಸಾರಶರೀರಭೋಗನಿರ್ವಿಣ್ಣಃ) ಸಂಸಾರ, ಶರೀರ ಮತ್ತು ಭೋಗ ಇವುಗಳಿಂದ ವಿರಕ್ತನಾದವನು (ಪಂಚಗುರುಚರಣಶರಣಃ) ಅರ್ಹಂತರೇ ಮೊದಲಾದ

---

[1] ಈ ವಿಷಯದಲ್ಲಿ ಟೀಕಾಕಾರ ಪ್ರಭಾಚಂದ್ರಾಚಾರ್ಯರು ಹೀಗೆ ಸ್ಪಷ್ಟಗೊಳಿಸಿದ್ದಾರೆ—"ಸಾಂಪ್ರತಂ ಯೋऽಸೌ ಸಲ್ಲೇಖನಾನುಷ್ಠಾತಾ ತಸ್ಯ ಕತಿ ಪ್ರತಿಮಾ ಭವಂತೀತ್ಯಾಶಂಕ್ಯಾಹ"—

ಪಂಚಪರಮೇಷ್ಠಿಗಳ ಚರಣಗಳೇ ಶರಣೆಂದು ತಿಳಿದವನು (ತತ್ವಪದಗೃಹ್ಯಃ) ತತ್ತ್ವ ಹಾಗೂ ವ್ರತಗಳ ಮಾರ್ಗವಾದಂಥ ಅಷ್ಟ ಮೂಲ ಗುಣಗಳನ್ನು ಧಾರಣಮಾಡುವವನು (ದರ್ಶನಿಕಃ) ದರ್ಶನ ಪ್ರತಿಮೆಯನ್ನು ಧಾರಣಮಾಡಿದ ಶ್ರಾವಕನೆನಿಸುತ್ತಾನೆ

ಅರ್ಥ—ಸಮ್ಯಗ್ದರ್ಶನದ ಇಪ್ಪತ್ತೈದು ದೋಷಗಳನ್ನು ನಷ್ಟಗೊಳಿಸಿ ಯಾವಾಗಲೂ ಸಂಸಾರ, ದೇಹ, ಇಂದ್ರಿಯಗಳ ವಿಷಯಗಳಲ್ಲಿ ವಿರಕ್ತಿಯನ್ನೂ ಪಂಚಪರಮೇಷ್ಠಿಗಳಿಗೆ ಶರಣುಹೋಗುವಿಕೆ ಮತ್ತು ಜೀವಾದಿ-ಸರ್ವಜ್ಞರು ಹೇಳಿದ-ತತ್ತ್ವಗಳ ಸತ್ಯಾರ್ಥದಲ್ಲಿ ಶ್ರದ್ಧೆಯನ್ನೂ ಇಡುವವನು ಮೊದಲನೆಯದೆನಿಸುವ ದರ್ಶನ ಪ್ರತಿಮಾಧಾರಿ ಶ್ರಾವಕನೆನಿಸುತ್ತಾನೆ

ಭಾವಾರ್ಥ—ಸ್ಯಾದ್ವಾದರೂಪ ಪರಮಾಗಮದ ಪ್ರಸಾದದಿಂದ, ನಿಶ್ಚಯ ವ್ಯವಹಾರ ರೂಪ ಎರಡೂ ನಯಗಳ ಅವಲಂಬನದಿಂದ, ನಿರ್ಣಯ ಪೂರ್ವಕವಾಗಿ ಸ್ವತತ್ತ್ವ ಹಾಗೂ ಪರತತ್ತ್ವಗಳನ್ನು ತಿಳಿದು ಪೂರ್ಣ ಶ್ರದ್ಧೆಯನ್ನು ಇಡುವಂಥವನು ಸಮ್ಯಗ್ದೃಷ್ಟಿ ಶ್ರಾವಕನೆನಿಸುತ್ತಾನೆ ಇವನು ಜಾತಿ ಕುಲಾದಿಗಳ ಗರ್ವವನ್ನು ತ್ಯಜಿಸಿ ನಿರಭಿಮಾನಿಯಾಗಿರುತ್ತಾನೆ ತನಗಿಂತಲೂ ಹೆಚ್ಚು ಗುಣವಂತರನ್ನು ಕಂಡು, ಅವರಿಗಿಂತ ತಾನು ತುಚ್ಛನೆಂದು ಭಾವಿಸುತ್ತಾನೆ ಅಪ್ರತ್ಯಾಖ್ಯಾನಾವರಣ ಕರ್ಮದ ಉದಯದಿಂದಲೂ ವಿಷಯಗಳ ಮೇಲಿನ ಪ್ರೀತಿಯು ಕಡಿಮೆಯಾಗದಿದ್ದರೆ ಮತ್ತು ಮನೆಯಲ್ಲಿ ಪಾಪ ಕ್ರಿಯೆಗಳು ನಡೆಯುತ್ತಿದ್ದರೆ ಇವೆಲ್ಲ ಮೋಹ ಕರ್ಮದ ಉದಯದಿಂದ ಸಂಭವಿಸುತ್ತವೆಂದು ತಿಳಿಯುತ್ತಾನೆ ಅಲ್ಲದೆ "ಇದೆಲ್ಲ ನನ್ನ ಅಜ್ಞಾನಭಾವ ಯಾವಾಗ ಇಲ್ಲದಂತೆ ಆದೀತು, ನಾನು ಇವುಗಳಿಂದ ಯಾವಾಗ ಬಿಡುಗಡೆಯನ್ನು ಹೊಂದೇನು, ಕರ್ಮದ ಉದಯವು ತೀವ್ರವಾಗಿರುವುದರಿಂದ ಇದೆಲ್ಲ ತಿಳಿಯುತ್ತಿದ್ದೂ ಕೂಡ ತ್ಯಾಗಮಾಡಲಿಕ್ಕೆ ಆಗದಲ್ಲ"—ಎಂದು ಚಿಂತಿಸುತ್ತಾನೆ. ಹೀಗೆ ಚಿಂತಿಸಿ ಪಶ್ಚಾತ್ತಾಪವನ್ನು ಹೊಂದುತ್ತಾನೆ ಧರ್ಮನಿಷ್ಠ ಪುರುಷರ ಗುಣವನ್ನೂ ಗ್ರಹಣ ಮಾಡುತ್ತಾನೆ. ರತ್ನತ್ರಯವನ್ನು ಧಾರಣಮಾಡುವಂಥ ಪುರುಷನ ಸನ್ಮಾನ ಮಾಡುತ್ತಾನೆ ಧರ್ಮಾತ್ಮರನ್ನು ಕಂಡು ರೋಮಾಂಚಿತನಾಗುತ್ತಾನೆ—ಇವೆಲ್ಲ ಗುಣಗಳು ದಾರ್ಶನಿಕ ಶ್ರಾವಕನಲ್ಲಿ ಇರುತ್ತವೆ [ಇಲ್ಲಿ ಹೇಳಿದ ಸಮ್ಯಗ್ದರ್ಶನದ ವಿಶುದ್ಧಿಯ ವಿಷಯವು ಈ ಗ್ರಂಥದ ಮೊದಲ ಭಾಗದಲ್ಲಿ ವಿಸ್ತಾರವಾಗಿ ಬಂದಿದೆ. ಅದಕ್ಕಾಗಿ ಇಲ್ಲಿ ಹೆಚ್ಚಾಗಿ ವಿವರಿಸುವ ಅವಶ್ಯಕತೆಯಿಲ್ಲ ಆದರೆ ಹಿಂದಿನ ಸೂತ್ರದಲ್ಲಿ, ಪ್ರತಿಯೊಂದು ಗುಣಸ್ಥಾನದೊಳಗಿನ ಗುಣಗಳು ಪೂರ್ವದ ಸ್ಥಾನಗಳ ಗುಣಗಳನ್ನೆಲ್ಲ ಒಳಗೊಂಡಿರುತ್ತವೆಂದು ಹೇಳಿವೆ ಅಂದಮೇಲೆ ದಾರ್ಶನಿಕ ಶ್ರಾವಕನ ಪೂರ್ವ ಪದಗಳು ಯಾವವು? ಅವು ಇವೆಯೋ ಇಲ್ಲವೋ? ಇದ್ದರೆ ಅವುಗಳ ಗುಣಗಳು ಯಾವವು?—ಇವೆಲ್ಲ ಇಲ್ಲಿ ವಿಚಾರಣೀಯ ಸಂಗತಿಗಳಾಗಿವೆ. ಇನ್ನು ಆ ಪೂರ್ವವರ್ತಿಗುಣಗಳು—ಚತುರ್ಥ ಗುಣಸ್ಥಾನದಲ್ಲಿರುವ—'ಅವ್ರತಸಮ್ಯಗ್ದೃಷ್ಟಿ'ಯ ಗುಣಗಳಾಗಿವೆ ಇದನ್ನು ಸೂಚಿಸಲಿಕ್ಕೆಂದೇ ಸೂತ್ರದ ಆರಂಭದಲ್ಲಿ ಆಚಾರ್ಯರು 'ಸಮ್ಯಗ್ದರ್ಶನ ಶುದ್ಧಃ ಎಂಬ ಪದವನ್ನು ಉದ್ದೇಶ ಪೂರ್ವಕವಾಗಿ ಪ್ರಯೋಗಿಸಿದ್ದಾರೆ. ಸಮ್ಯಗ್‌ದೃಷ್ಟಿಯುಳ್ಳ ಪುರುಷನು ಯಥಾರ್ಥ ದೃಷ್ಟಿಯುಳ್ಳವನಾಗುತ್ತಾನೆ. ಇವನ ದೃಷ್ಟಿಯಲ್ಲಿ ವಿಕಾರವು ಇರುವದಿಲ್ಲ ಅದರಿಂದ ಸಂಸಾರ, ಶರೀರ, ಭೋಗಗಳನ್ನೂ ಅವುಗಳ ಯಥಾರ್ಥ ಸ್ವರೂಪದಲ್ಲಿ ಕಾಣುತ್ತಾನೆ. ಇದರಿಂದಲೇ ಅವನು ಅವುಗಳಲ್ಲಿ ಆಸಕ್ತಿ ರಹಿತನಾಗಿ ಇರಲಿಕ್ಕೆ ಸಮರ್ಥನಾಗುತ್ತಾನೆ. ಈ ಗುಣವನ್ನು ಸಂಪಾದಿಸು-ತ್ತಾನೆ. ಈ ಗುಣವನ್ನು ಸಂಪಾದಿಸುವುದೇ ಮೊದಲಿನ ಗುಣಸ್ಥಾನಗಳಲ್ಲಿಯ ಶ್ರಾವಕರ ಆಚಾರದ ವಿಧಾನವಾಗಿದೆ ಇದರಿಂದ ಅವನು ಒಮ್ಮೆಲೇ ಸಂಸಾರ, ಶರೀರ, ಭೋಗಗಳ ಮೇಲಿನ ಆಸಕ್ತಿಯನ್ನು ನಷ್ಟಪಡಿಸಿ ವಿರಕ್ತನಾಗಬೇಕೆಂದೇನೂ ಅಲ್ಲ. ಅವುಗಳನ್ನೆಲ್ಲ ಭೋಗಿಸುತ್ತಿದ್ದೂ ಅವುಗಳಲ್ಲಿ ಆಸಕ್ತನಾಗದೆ-ಅನಾಸಕ್ತಿಯನ್ನು ಹೊಂದಿ—ಬಾಳಲಿಕ್ಕೆ ಪ್ರಯತ್ನಿಸಬೇಕೆಂದು ಹೇಳಲಾಗಿದೆ ಇಂಥ ಸಾಧಕನು ಕಾಲ ಕಾಲಕ್ಕೆ ಅನೇಕ ನಿಯಮಗಳನ್ನೂ ಸ್ವೀಕರಿಸುತ್ತಾನ ಅವನು ಹನ್ನೆರಡು ವ್ರತಗಳಲ್ಲಿ ಎಲ್ಲವನ್ನೂ ಸ್ವೀಕರಿಸಬಹುದು. ಒಮ್ಮೊಮ್ಮೆ ಅಂಶತಃ ಗ್ರಹಣಮಾಡಿ ಆಚರಿಸಲಿಕ್ಕೂ ಪ್ರಯತ್ನಿಸುತ್ತಾನೆ. ಯಾವ ವ್ರತಗಳ ನಿರತಿಚಾರ ಪಾಲನವನ್ನು ಮುಂದಿನ ಗುಣಸ್ಥಾನದಲ್ಲಿ ಮಾಡುವದಿದೆಯೋ ಅದರ ರೂಢಿಯನ್ನು ಈಗಲೇ ಮಾಡಿಕೊಳ್ಳುವನು ಹೀಗೆ ಆತ್ಮ ಶಕ್ತಿಯ ವಿಕಸನದಲ್ಲಿ ಸ್ಥಿರನಾಗುವ ಕೆಲ ಉಪಾಯಗಳನ್ನು ಈ ಗುಣಸ್ಥಾನದಲ್ಲಿ ಹೇಳಿದೆ ಇನ್ನು 'ಸಂಸಾರ ಶರೀರ ಭೋಗ-ನಿರ್ವಿಣ್ಣಃ' ಮತ್ತು 'ಪಂಚಗುರು-ಚರಣ-ಶರಣಃ' ಈ ಎರಡೂ ಪದಗಳ ಪ್ರಯೋಗದಿಂದ ನಿಯಮಿತವಾಗಿ ಮದ್ಯ-ಮಾಂಸಾದಿಗಳ ತ್ಯಾಗಸ್ವರೂಪದ ಅಷ್ಟ ಮೂಲ-ಗುಣಗಳ ಧಾರಣ ಹಾಗೂ ಪಂಚಪರಮೇಷ್ಠಿಗಳಿಗೆ ಶರಣುಹೋಗುವಿಕೆಗಳನ್ನು ವ್ಯಕ್ತಪಡಿಸಲಾಗಿದೆ

ಪಂಚಪರಮೇಷ್ಠಿಗಳೆಂದು ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಮತ್ತು ಸಾಧುಗಳು ಪ್ರಸಿದ್ಧರಾಗಿದ್ದಾರೆ. ಇವರ 'ಚರಣ'ಗಳಿಗೆ ಶರಣುಹೋಗುವುದೆಂದರೆ ಇಲ್ಲಿ ಕೇವಲ ಪಾದಗಳೆಂದಿಷ್ಟೇ ಅರ್ಥವಲ್ಲ. ಪಾದವೆಂದರೆ ಶರೀರದ ಒಂದು ಭಾಗ ಮಾತ್ರವಾದೀತು ಅಂದರೆ ಇಲ್ಲಿ 'ಆಚಾರ' ಎಂಬ ಅರ್ಥವು ಹೆಚ್ಚು 'ಚರಣ' ಪದಕ್ಕೆ ಮುಖ್ಯವಾಗಿದೆ. ಇದೇ ಗ್ರಂಥದಲ್ಲಿ ಹಿಂದೆ "ರಾಗ-ದ್ವೇಷ ನಿವೃತ್ಯೈ: ಚರಣಂ ಪ್ರತಿಪದ್ಯತೇ ಸಾಧುಃ", "ಸಕಲಂ ವಿಕಲಂ ಚರಣಂ" ಮತ್ತು "ಅಣು-ಗುಣ-ಶಿಕ್ಷಾ-ವ್ರತಾತ್ಮಕಂ ಚರಣಂ" ಈ ವಾಕ್ಯಗಳ ಪ್ರಯೋಗದಲ್ಲಿ ಇದೇ ಅರ್ಥ ಮುಖ್ಯವಾಗಿದೆ ಆಚಾರದಲ್ಲಿ ದರ್ಶನ, ಜ್ಞಾನ, ಚಾರಿತ್ರ, ತಪ ಮತ್ತು ವೀರ್ಯಗಳೆಂಬ ಐದೂ ಪ್ರಕಾರಗಳು ಸಮಾವೇಶಗೊಳ್ಳುತ್ತವೆ.[1] ತಮ್ಮ ತಮ್ಮ ಆಚಾರ ವಿಶೇಷತೆಗಳಿಂದಲೇ ಈ ಪಂಚ ಗುರುಗಳು ನಮಗೆ ಶರಣ್ಯರಾಗಿದ್ದಾರೆ ಇಂಥ ಪಂಚ ಗುರುಗಳ ಆಚಾರವನ್ನು ಅನುಸರಿಸುವುದು, ಅದನ್ನು ಸಾಧಿಸುವುದೇ ಜೀವನದ ಗುರಿಯೆಂದು ಭಾವಿಸಿ ಬಾಳುವುದು—ಪಂಚ ಪರಮೇಷ್ಠಿಗಳಿಗೆ ಶರಣು ಹೋಗುವುದರ ಅರ್ಥವಾಗಿದೆ ಈ ಅರ್ಥವನ್ನು 'ಚರಣ' ಪದಕ್ಕೆ ಭಾವಿಸಿದಾಗ 'ತತ್ತ್ವ-ಪಥಗೃಹ್ಯಃ' ಎಂಬ ವಿಶೇಷಣವೂ ಮಹತ್ವ ಪೂರ್ಣವಾಗಿದೆ ಎಂಬುದು ಗೊತ್ತಾಗುತ್ತದೆ. ಇದು ಶ್ರಾವಕನು ಅನೇಕಾಂತ ಹಾಗೂ ಅಹಿಂಸಾ ಇವೆರಡನ್ನೂ ಆಚರಿಸುತ್ತಾನೆ. ಇವು ಸನ್ಮಾರ್ಗದ ಅಥವಾ ಜಿನ ಶಾಸನದ ಎರಡು ಚರಣಗಳಾಗಿವೆ ಸ. ಧ.]

ವಿಶೇಷಾರ್ಥ—ರಾಗ, ದ್ವೇಷ, ಮೋಹ ಮತ್ತು ಶರೀರ ಇವೆಲ್ಲವುಗಳೊಡನೆ ಜ್ಞಾಯಕ ಸ್ವಭಾವವುಳ್ಳ ಆತ್ಮನು ತಾದಾತ್ಮ್ಯನಾಗಿದ್ದಾನೆ. ಆದರೂ ಪರಮ ಪವಿತ್ರವಾದ ಆತ್ಮನಿಂದ ರಾಗ-ದ್ವೇಷಾದಿ ವಿಕಾರಗಳು ಅತ್ಯಂತ ಭಿನ್ನವಾಗಿವೆ ಇದನ್ನು ಅನುಭವಿಸಬೇಕು ಅದರಂತೆಯೇ ಜೀವದೊಡನೆ ದೃಢ ಸಂಯೋಗ ಹಾಗೂ ಸಂಬಂಧ-ಗಳುಳ್ಳ ದೇಹವನ್ನು ನಾವು ತೊಡುವ ಬಟ್ಟೆಗಳಿಗೆ ಸಮಾನವೆಂದು ಭಾವಿಸಬೇಕು. ಹದಿನೆಂಟು ದೋಷಗಳಿಲ್ಲದ ಸರ್ವಜ್ಞ ವೀತರಾಗ ಪರಮೇಷ್ಠಿಗೇನೇ ದೇವನೆಂದು ತಿಳಿದು ಅವನಲ್ಲಿ ಪೂಜ್ಯತ್ವವನ್ನಿಡಬೇಕು ಇತರ ದೋಷಯುಕ್ತ ದೇವರಲ್ಲಿ ದೇವತ್ವ ಬುದ್ಧಿಯನ್ನು ಇಡಕೂಡದು ದಯೆಯೇ ಧರ್ಮವೆಂದು ನಂಬಿ, ಹಿಂಸೆಯಿಂದ ಧರ್ಮವು ಎಂದೂ ಸಂಭವಿಸಲಾರದೆಂದು ನಿಶ್ಚಯವಾಗಿ ತಿಳಿದುಕೊಳ್ಳಬೇಕು. ಆರಂಭ ಮತ್ತು ಪರಿಗ್ರಹಗಳಿಲ್ಲದವನೇ ಗುರು, ಅವನನ್ನುಳಿದು ಇತರರು ಗುರುಗಳಲ್ಲವೆಂದು ದೃಢವಾಗಿ ನಂಬಬೇಕು ಜೀವವನ್ನು ಯಾರೂ ಉಳಿಸುವವರೂ ಇಲ್ಲ, ಕೊಲ್ಲುವವರೂ ಇಲ್ಲ, ಸುಖ-ದುಃಖ, ಉಪಕಾರ-ಅಪಕಾರ, ಬಡವ-ಬಲ್ಲಿದರನ್ನು ಮಾಡುವವರು ಯಾರೂ ಇಲ್ಲ, ಜೀವವು ತನ್ನ ಪರಿಣಾಮದಿಂದಲೇ ಎಲ್ಲ ಪರ-ಪದಾರ್ಥಗಳನ್ನು ತನಗೆ ಸುಖ-ದುಃಖಗಳನ್ನು ಉತ್ಪನ್ನ ಮಾಡುವಂಥ-ವೆಂದು ತಿಳಿದು ಕರ್ಮಬಂಧವನ್ನು ಮಾಡಿಕೊಳ್ಳುತ್ತಾನೆ ಪರಿಪಾಕ ಕಾಲದಲ್ಲಿ ಕರ್ಮವು ಉದಯಕ್ಕೆ ಬಂದಾಗ ತಾನು ಸುಖಿ ಇಲ್ಲವೆ ದುಃಖಿಯಾದೆನೆಂದು ತಿಳಿಯುತ್ತಾನೆ. ಆದರೆ ಕರ್ಮೋದಯಕ್ಕೆ ಅನುಸರಿಸಿ ಸುಖ-ದುಃಖಗಳು ಪ್ರಾಪ್ತವಾಗುತ್ತವೆ. ಇದನ್ನರಿತುಕೊಂಡು ಅವುಗಳ ವಿಷಯದಲ್ಲಿ ಮಾಧ್ಯಸ್ಥ ಭಾವವನ್ನು ಇಡುವವನೇ ಸಮ್ಯಗ್ದೃಷ್ಟಿಯುಳ್ಳವನೆಂದು ತಿಳಿಯಬೇಕು ವ್ಯಂತರ ದೇವರ ಆರಾಧನೆಯನ್ನು ಅತಿಶಯ ಭಕ್ತಿಯಿಂದ ಮಾಡುವಂಥ-ವನು, ಮಂತ್ರ ತಂತ್ರಾದಿಗಳ ಮೇಲೆ ಶ್ರದ್ಧೆಯನ್ನು ಇಡುವವನು ಒಂದು ವೇಳೆ ಪುಣ್ಯ ಹೀನನಾಗಿದ್ದರೆ ಅವನಿಗೆ ಅವುಗಳಿಂದ ಏನೂ ಉಪಯೋಗವಾಗುವದಿಲ್ಲ. ಪುಣ್ಯವು ತೀರಿದರೆ ಎಲ್ಲ ಆಪ್ತಬಾಂಧವ, ಇಷ್ಟ-ಮಿತ್ರಗಳೆಲ್ಲರು ಶತ್ರುಗಳಾಗುತ್ತಾರೆ. ಪುಣ್ಯೋದಯವಿದ್ದರೆ ಮಣ್ಣು ಹೊನ್ನಾಗುತ್ತದೆ, ಕಲ್ಲಿನ ಮೂರ್ತಿಯೂ ಕೂಡ ಪ್ರತ್ಯಕ್ಷ ದೇವರ ರೂಪವನ್ನು ಹೊಂದಿ ಉಪಕಾರ ಮಾಡಲಿಕ್ಕೆ ಸಿದ್ಧವಾಗುತ್ತದೆ. ಯಾವ ಜೀವಕ್ಕೆ ಎಲ್ಲಿ, ಯಾವಾಗ, ಯಾವ ನಿಮಿತ್ತದಿಂದ ಜನ್ಮ ಇಲ್ಲವೆ ಮರಣವಾಗುತ್ತದೆ, ಸುಖ ಇಲ್ಲವೆ ದುಃಖವಾಗುತ್ತದೆ, ಲಾಭ ಇಲ್ಲವೆ ಹಾನಿಯಾಗುತ್ತದೆ—ಇವೆಲ್ಲವನ್ನು ಜಿನೇಂದ್ರ ಭಗವಾನ್‌ನು ತನ್ನ ದಿವ್ಯ ಜ್ಞಾನದಿಂದ ತಿಳಿದಿರುತ್ತಾನೆ ಅದರಂತೆಯೇ ಆ ಜೀವಕ್ಕೆ ಅಲ್ಲಿ, ಆ ಹೊತ್ತಿಗೆ, ಅದೇ ನಿಮಿತ್ತದಿಂದ ಜನ್ಮ, ಮರಣ, ಲಾಭಾಲಾಭಗಳು ನಿಯಮಪೂರ್ವಕವಾಗಿ ಒದಗುತ್ತವೆ. ಅವುಗಳನ್ನು ತೊಲಗಿಸುವುದಕ್ಕೆ ಇಂದ್ರ-ಧರಣೇಂದ್ರ, ಕ್ಷೇತ್ರಪಾಲ ಇಲ್ಲವೆ ಸ್ವತಃ ಜಿನೇಂದ್ರನಲ್ಲಿಯೂ ಸಹ ಸಾಮರ್ಥ್ಯವಿಲ್ಲ. ಇದನ್ನು ಸಮ್ಯಗ್ದೃಷ್ಟಿ ಜೀವವು ದೃಢವಾಗಿ ನಂಬಿರುತ್ತದೆ ಈ ಪ್ರಕಾರ ದ್ರವ್ಯದ ಎಲ್ಲ ಪರ್ಯಾಯಗಳನ್ನೂ ತಿಳಿದು, ಶ್ರದ್ಧೆಯನ್ನು ಇಡುವಂಥವನು ಮೊದಲನೆಯ ಪ್ರತಿಮೆಯನ್ನು ಧಾರಣಮಾಡುವ ದಾರ್ಶನಿಕ ಶ್ರಾವಕನೆನಿಸುತ್ತಾನೆ

---

1 ದಂಸಣ-ಣಾಣ-ಚರಿತ್ತೇ ತವ್ವೇ ವೀರಿಯಾಚರಮ್ಹಿ ಪಂಚವಿಹೇ । ಮೂಲಾಚಾರ ೫-೨.

ಮಾಡುವಂಥವನು (ಯಥಾಜಾತಃ) ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತೊರೆದವನೂ (ದ್ವಿನಿಷದ್ಯಃ) ಖಡ್ಗಾಸನ ಇಲ್ಲವೆ ಪದ್ಮಾಸನದಲ್ಲಿ ಕುಳಿತು (ತ್ರಿಯೋಗಶುದ್ಧಃ) ಮನ, ವಚನ, ಕಾಯಗಳಿಂದ ಶುದ್ಧನಾದಂಥವನಾಗಿ (ತ್ರಿಸಂಧ್ಯಂ) ಮೂರೂ ಹೊತ್ತು–ಮುಂಜಾನೆ, ಮಧ್ಯಾಹ್ನ, ಸಂಜೆ–(ಅಭಿವಂದೀ) ವಂದನೆ ಮಾಡುವಂಥವನು (ಸಾಮಾಯಿಕಃ) ಸಾಮಾಯಿಕ ಪ್ರತಿಮಾಧಾರಿ ಎನಿಸುತ್ತಾನೆ

ಅರ್ಥ—ಮುಂಜಾನೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಮನ–ವಚನ–ಕಾಯಗಳನ್ನು ಶುದ್ಧಮಾಡಿ, ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತ್ಯಜಿಸಿ, ಎರಡೂ ಕೈಗಳನ್ನು ಜೋಡಿಸಿ, ನಾಲ್ಕೂ ದಿಕ್ಕುಗಳಿಗೆ ಮುಖಮಾಡಿ ಮೂರು ಮೂರು ಸುತ್ತುಗಳನ್ನು ಹಾಕಿ ನಮಸ್ಕಾರ ಮಾಡಬೇಕು ಅಲ್ಲದೆ ಎರಡು ಸಲ–ಆರಂಭ ಹಾಗೂ ಕೊನೆ–ಕುಳಿತು ನಮಸ್ಕಾರ ಮಾಡುವುದು ಇದು ಮೂರನೆಯ ಪ್ರತಿಮೆಯಾದ ಸಾಮಾಯಿಕವೆನಿಸುತ್ತದೆ. ಇದರ ವಿಶೇಷ ವಿಧಿಯನ್ನು ಗುರುಗಳಿಂದ ಪ್ರತ್ಯಕ್ಷವಾಗಿ ತಿಳಿದುಕೊಂಡು ಆಚರಿಸಲಿಕ್ಕೆ ಕಲಿತುಕೊಳ್ಳಬೇಕು.

ವಿಶೇಷಾರ್ಥ—ಇಲ್ಲಿ ಆಗಮ–ವಿಹಿತ ಕೆಲವು ಸಮಯಾಚಾರಗಳ ಸಾಂಕೇತಿಕ ರೂಪದ ಉಲ್ಲೇಖವು ಇಲ್ಲಿದೆ. ಅದು ಆವರ್ತ, ಪ್ರಣಾಮ, ಕಾಯೋತ್ಸರ್ಗ ಹಾಗೂ ಉಪವೇಶನ ಮೊದಲಾದ ಪದಗಳಿಗೆ ಸಂಬಂಧಿಸಿದೆ. ಇವುಗಳ ವಿವರವನ್ನು ಗುರುಗಳಿಂದ ತಿಳಿದುಕೊಳ್ಳುವ ಅವಶ್ಯಕತೆಯಿದೆ ಆದರೂ ಶ್ರೀ ಪ್ರಭಾಚಂದ್ರರ ಟೀಕೆಯನ್ನು ಅನುಸರಿಸಿ ಸ್ವಲ್ಪ ವಿವರಣೆಯನ್ನು ಇಲ್ಲಿ ಕೊಡಲಿಕ್ಕೆ ಯತ್ನಿಸಲಾಗಿದೆ ಕಾಯೋತ್ಸರ್ಗ ವಿಧಾನದಲ್ಲಿ 'ಣಮೋ ಅರಹಂತಾಣಂ' ಮೊದಲಾದ ಸಾಮಾಯಿಕ ದಂಡಕ ಮತ್ತು 'ಥೋಸ್ಸಾಮಿ' ಇತ್ಯಾದಿ ಸ್ತವದಂಡಕದ ವ್ಯವಸ್ಥೆ ಇದೆ. ಇವೆರಡರ ಆರಂಭ ಹಾಗೂ ಅಂತ್ಯದಲ್ಲಿ ಮೂರು ಮೂರು ಆವರ್ತಗಳ ಜೊತೆಯಲ್ಲಿ ಒಂದೊಂದು ನಮಸ್ಕಾರವನ್ನು ಮಾಡಲಾಗುತ್ತದೆ ಹೀಗೆ ಹನ್ನೆರಡು ಆವರ್ತ ಮತ್ತು ನಾಲ್ಕು ನಮಸ್ಕಾರಗಳು ಆಗುತ್ತವೆ. ಇದರ ಜೊತೆಗೇನೇ, ದೇವವಂದನೆಯ ಆದಿ ಮತ್ತು ಅಂತ್ಯಗಳಲ್ಲಿ ಇರುವ ಎರಡು ಉಪವೇಶನ ಕ್ರಿಯೆಗಳನ್ನು ಸೂಚಿಸಿದೆ. ಅವುಗಳಲ್ಲಿ ಒಂದು ಆರಂಭದ ಇನ್ನೊಂದು ಕೊನೆಯ ಕ್ರಿಯೆಯಲ್ಲಿ ಕುಳಿತು ವಂದಿಸುವುದಾಗಿದೆ ಇದನ್ನು ಪಂಡಿತ ಆಶಾಧರನು ಮತಭೇದದ ರೂಪದಲ್ಲಿ ಉಲ್ಲೇಖಿಸಿದ್ದಾನೆ ಅವನು ಸಮಂತ ಭದ್ರರ ಮತದಿಂದ ವಂದನೆಯ ಆದಿ ಮತ್ತು ಸಮಾಪ್ತಿಯ ಸಂದರ್ಭಗಳಲ್ಲಿ ಎರಡು ನಮಸ್ಕಾರಗಳನ್ನು ಕುಳಿತು ಮಾಡಲಿಕ್ಕೆ ಸೂಚಿಸುತ್ತಾನೆ. ಇದಕ್ಕೆ ಆಧಾರವೆಂದು ಪ್ರಭಾಚಂದ್ರರ ಟೀಕೆಯನ್ನು ಉಲ್ಲೇಖಿಸುತ್ತಾನೆ [1] ಇದರಿಂದ ಹೀಗೆ ವ್ಯಕ್ತವಾಗುತ್ತದೆ.–ನಾಲ್ಕು ದಿಕ್ಕುಗಳಲ್ಲಿ ಮೂರು ಮೂರು ಆವರ್ತಗಳ ಜೊತೆಯಲ್ಲಿ ಒಂದೊಂದು ಪ್ರಣಾಮ ಮಾಡುವಂಥ ಪದ್ಧತಿಯು ಈಗ ಪ್ರಚಲಿತವಿದ್ದರೂ ಅದು ಪ್ರಭಾಚಂದ್ರಾಚಾರ್ಯರ ಅಭಿಪ್ರಾಯದ ಪ್ರಕಾರ ಸ್ವಾಮಿ ಸಮಂತಭದ್ರರಿಗೆ ಸಮ್ಮತವಿಲ್ಲ.

ಎರಡೂ ಕೈಗಳನ್ನು ಜೋಡಿಸಿ–ಕಮಲದ ಮೊಗ್ಗೆಯಂತೆ ಸ್ಥಿರಗೊಳಿಸಿ–ಪ್ರದಕ್ಷಿಣೆಯ ರೂಪದಲ್ಲಿ ಮೂರು ಸುತ್ತು ತಿರುಗುವುದಕ್ಕೆ ಆವರ್ತತ್ರಿತಯವೆನ್ನುವರು ಈಗ ವಂದನೆಯ ಸ್ಥಿತಿಯಲ್ಲಿ ಮೊಳಕೈಗಳು ಹೊಟ್ಟೆಯ ಮೇಲಿರುತ್ತವೆ ಇದು ಮನ–ವಚನ–ಕಾಯರೂಪದ ಯೋಗಗಳ ಪರಾವರ್ತನದ ಸೂಚಕವಾಗಿದೆ.[2] ಪರಾವರ್ತನ ಯೋಗದ ಸಂಯತಾವಸ್ಥೆಯ ದ್ಯೋತಕವು ಶುಭ ವ್ಯಾಪಾರವೆಂದು ಪಂ ಆಶಾಧರರು ಪ್ರಕಟಗೊಳಿಸಿದ್ದಾರೆ.[3] ಅಂದಮೇಲೆ 'ಆವರ್ತತ್ರಿತಯ' ಎಂಬ ಪದದ ಪ್ರಯೋಗವು ವಂದನೀಯ ವಿಷಯದಲ್ಲಿ ಭಕ್ತಿಯನ್ನು ವ್ಯಕ್ತಗೊಳಿಸುವ ಕ್ರಿಯೆಯೆಂದು ಪ್ರದಕ್ಷಿಣೆ ಹಾಕುವದೆಂದು ಹೇಳಲಿಕ್ಕೆಂದಿಲ್ಲ ತ್ರಿಯೋಗ ಶುದ್ಧಿಯ ದ್ಯೋತಕವಾಗಿದೆ ಆದರೆ

---

1 ಮತಾಂತರಮಾಹ–ಮತೇ ಇಷ್ಟೇ, ಕೇದ್ವೇ ನತೀ । ಕ್ವ? ಕೈಶ್ಚಿತ್ ಸ್ವಾಮಿಸಮಂತಭದ್ರಾದಿಭಿಃ । ಕಸ್ಮಾನ್ನಮನಾತ್ ಪ್ರಣಮನಾತ್ । ಕಿಂ ಕೃತ್ವಾ? ನಿವಿಶ್ಯ ಉಪವಿಶ್ಯ ಕಯೋಃ? ವಂದನಾದ್ಯಂತಯೋರ್ವಂದನಾಯಾಃ ಪ್ರಾರಂಭೇ ಸಮಾಪ್ತೌ ಚ ಯದಾಹುಸ್ತತ್ರ ಭಗವಂತಃ ಶ್ರೀಮತ್ಪ್ರಭೇಂದುದೇವಪಾದಾ ರತ್ನಕರಂಡಕಟೀಕಾಯಾಂ 'ಚತುರಾವರ್ತತ್ರಿತಯ' ಇತ್ಯಾದಿ ಸೂತ್ರೇ ದ್ವಿನಿಷದ್ಯ ಇತ್ಯಸ್ಯ ವ್ಯಾಖ್ಯಾನೇ 'ದೇವವಂದನಾಂ ಕುರ್ವತಾ ಹಿ ಪ್ರಾರಂಭೇ ಸಮಾಪ್ತೌ ಚೋಪವಿಶ್ಯ ಪ್ರಣಾಮಃ ಕರ್ತವ್ಯ ಇತಿ' ।
—ಅನಗಾರಧರ್ಮಾಮೃತಟೀಕಾ ಪು. ೬೦೮.

2 ಕಥಿತಾ ದ್ವಾದಶಾವರ್ತಾ ವಪುರ್ವಚನಚೇತಸಾಂ ।
ಸ್ತವ–ಸಾಮಾಯಿಕಾದ್ಯಂತಪರಾವರ್ತನಲಕ್ಷಣಾಃ ॥ —ಅಮಿತಗತಿಃ

3 ಶುಭಯೋಗ–ಪರಾವರ್ತಾನಾವರ್ತಾನ್ ದ್ವಾದಶಾದ್ಯಂತೇ ।
ಸಾಮ್ಯಸ್ಯ ಹಿ ಸ್ತವಸ್ಯ ಚ ಮನೋಙ್ಗಗೀಃ ಸಂಯತಂ ಪರಾವರ್ತ್ಯಮ್ ॥ —ಚಾರಿತ್ರಸಾರೆ.

'ತ್ರಿಯೋಗ ಶುದ್ಧಃ' ಎಂಬ ಪದದ ಪ್ರಯೋಗವೂ ಕೂಡ ಸ್ವತಂತ್ರವಾಗಿ ಈ ಸೂತ್ರದಲ್ಲಿದೆ. ತ್ರಿಯೋಗ ಶುದ್ಧಿಯನ್ನು ಎರಡು ಸಲ ಹೇಳುವ ಅವಶ್ಯಕತೆಯೇನು? ಈ ಪ್ರಶ್ನೆಗೆ ಸಮಾಧಾನವೆಂದು ಕೆಲವು ವಿದ್ವಾಂಸರು ಹೀಗೆ ಹೇಳುತ್ತಾರೆ– "ಆವರ್ತತ್ರಿತಯದಿಂದ ಸೂಚಿಸಿದ ಮನ–ವಚನ–ಕಾಯಗಳ ಶುದ್ಧಿಯು ಕೃತಿ–ಕರ್ಮಗಳ ಅಪೇಕ್ಷೆಯಿಂದ ಇದೆ. ಇಲ್ಲಿ ತ್ರಿಯೋಗ ಶುದ್ಧಃ ಎಂಬ ಪದದಿಂದ ಉಲ್ಲೇಖಿಸಿದ ಮನ–ವಚನ–ಕಾಯಗಳ ಶುದ್ಧಿಯು ಸಾಮಾಯಿಕದ 'ಅಪೇಕ್ಷೆಯಿಂದ ಇದೆ" ಆದರೆ ಕೃತಿಕರ್ಮ (ಕರ್ಮವಿಚ್ಛೇದನೋಪಾಯ) ವಂತೂ ಸಾಮಾಯಿಕದ ಅಂಗವಾಗಿದೆ. ಈ ಅಂಗದಲ್ಲಿ ದ್ವಾದಶಾವರ್ತದಿಂದ ಭಿನ್ನವಾದ ತ್ರಿಯೋಗಶುದ್ಧಿಯು ಇದೆ [1] ಇನ್ನು 'ಆವರ್ತತ್ರಿತಯ' ಪದವು ಮೂರು ಪ್ರದಕ್ಷಿಣೆಗಳ ದ್ಯೋತಕವಾಗಿದೆ ಇವುಗಳಲ್ಲಿ ಒಂದನೆಯದು ಮನಸ್ಸಿಗೆ, ಎರಡನೆಯದು ವಚನಕ್ಕೆ, ಮೂರನೆಯದು ಕಾಯಕ್ಕೆ ಸಂಬಂಧಿಸಿದ್ದಾಗಿದೆ ಇವು ಮೂರೂ ಸೇರಿ ತ್ರಿಯೋಗದ ಪ್ರವೃತ್ತಿಯನ್ನು ಅನುಕೂಲ-ಗೊಳಿಸುವ ಭಾವವನ್ನು ಸೂಚಿಸುತ್ತವೆ. ಇಲ್ಲಿ 'ಯಥಾಜಾತಃ' ಪದವೂ ವಿಚಾರಣೀಯವಾಗಿದೆ. ಜೈನ ಪರಿಭಾಷೆಗೆ ಅನುಸರಿಸಿ ಇದರ ಅರ್ಥವು ಜನ್ಮಸಮಯದ ಅವಸ್ಥೆ ಅಂದರೆ ನಗ್ನಾವಸ್ಥೆ ಎಂದಿದೆ. ಆದರೆ ಆಚಾರ್ಯ ಪ್ರಭಾಚಂದ್ರರು ತಮ್ಮ ಟೀಕೆಯಲ್ಲಿ 'ಬಾಹ್ಯಾಭ್ಯಂತರಪರಿಗ್ರಹಚಿಂತಾವ್ಯಾವೃತ್ತಃ' ಎಂಬ ಪದಗಳಿಂದ ಬಹಿರಂಗ–ಅಂತರಂಗ ಎರಡೂ ಪ್ರಕಾರದ ಪರಿಗ್ರಹಗಳ ಚಿಂತೆಯಿಂದ ವಿಮುಕ್ತ ಎಂದು ಹೇಳಿದ್ದಾರೆ. ಈಗ ಇದೇ ಅರ್ಥವು ವ್ಯವಹಾರದಲ್ಲಿ ರೂಢವಾಗಿದೆ. ಪರಿಸ್ಥಿತಿಗೆ ಅನುಸರಿಸಿ ಪಂ. ಆಶಾಧರರೂ ಇದನ್ನೇ ಗ್ರಹಿಸಿದ್ದಾರೆ. ಸ. ಥ]

ನಿಯತಂ ತ್ರಿಸಂಧ್ಯೆಯೊಳ್ ಸಮತೆಮಿನರುಹಪೂಜೆಯಿಂದಮಿಪ್ಪ್ಪತಂ ನಿ-
ಶ್ಚಯದಿಂ ಮೂಱನೆಯಂ ಸಾಮಯಿಕವ್ರತಧಾರಿ ಪೆಸಕೊಳಂ ಸಾಮಯಿಕಂ ।

—ಶಾಂತಿನಾಥ–ಸುಕುಮಾರ ಚರಿತಂ ೬–೨೮.

ಈ ಸೂತ್ರದಲ್ಲಿ ಪ್ರೋಷಧೋಪವಾಸ ಪ್ರತಿಮೆಯ ಸ್ವರೂಪವನ್ನು ಹೇಳುತ್ತಾರೆ—

ಪರ್ವದಿನೇಷು ಚತುರ್ಷ್ವಪಿ ಮಾಸೇ ಮಾಸೇ ಸ್ವಶಕ್ತಿಮನಿಗುಹ್ಯ ।
ಪ್ರೋಷಧನಿಯಮವಿಧಾಯೀ ಪ್ರಣಧಿಪರಃ ಪ್ರೋಷಧಾನಶನಃ ॥ ೧೪೦ ॥

ಅನ್ವಯಾರ್ಥ—(ಮಾಸೇ ಮಾಸೇ) ಪ್ರತಿಯೊಂದು ತಿಂಗಳಲ್ಲಿ (ಚತುರ್ಷು ಅಪಿ ಪರ್ವದಿನೇಷು) ನಾಲ್ಕೂ ಪರ್ವದಿನಗಳಲ್ಲಿ—ಎರಡು ಅಷ್ಟಮಿ, ಎರಡು ಚತುರ್ದಶಿ ತಿಥಿಗಳಲ್ಲಿ–(ಸ್ವಶಕ್ತಿ) ತನ್ನ ಶಕ್ತಿಯನ್ನು (ಅನಿಗುಹ್ಯ) ಮುಚ್ಚಿಡದೆ (ಪ್ರಣಧಿಪರಃ) ಶುಭ ಧ್ಯಾನದಲ್ಲಿ ತನ್ಮಯನಾಗಿ (ಪ್ರೋಷಧನಿಯಮವಿದಾಯೀ) ನಿಯಮದ ಪ್ರಕಾರ ಪ್ರೋಷಧೋಪವಾಸವನ್ನು ಮಾಡುವಂಥವನು (ಪ್ರೋಷಧಾನಶನಃ) ಪ್ರೋಷಧೋಪವಾಸ ಪ್ರತಿಮಾಧಾರಿ ಎನಿಸುತ್ತಾನೆ

ಅರ್ಥ—ಒಂದು ತಿಂಗಳಲ್ಲಿ ಎರಡು ಅಷ್ಟಮಿ, ಎರಡು ಚತುರ್ದಶಿ ಹೀಗೆ ನಾಲ್ಕು ಪರ್ವತಿಥಿಗಳು ಇರುತ್ತವೆ. ಆ ದಿನಗಳಲ್ಲಿ ತನ್ನ ಶಕ್ತಿಯನ್ನು ಬಚ್ಚಿಡದೆ ಆಹಾರ ಪಾನಗಳ ತ್ಯಾಗ ಮಾಡಬೇಕು ಇಲ್ಲವೆ ನೀರಸ ಆಹಾರ ತೆಕ್ಕೊಳ್ಳಬೇಕು ಅಥವಾ ಅಲ್ಪಾಹಾರವನ್ನು ತಕ್ಕೊಂಡರೂ ನಡೆದೀತು. ಶುಭಧ್ಯಾನದಲ್ಲಿ ಮನಸ್ಸನ್ನು ಲೀನಗೊಳಿಸಬೇಕು ಈ 'ವಿಧಿಗೆ' ಪ್ರೋಷಧಾನಶನ ಎಂಬ ಹೆಸರಿನ ನಾಲ್ಕನೆಯ ಪ್ರತಿಮೆ ಎನ್ನುವರು.

ವಿಶೇಷಾರ್ಥ—['ವ್ರತಿಕ' ಪ್ರತಿಮೆಯಲ್ಲಿ ಪ್ರೋಷಧೋಪವಾಸದ ನಿರತಿಚಾರ ವಿಧಾನವು ಬಂದು ಹೋಗಿದೆ ಅದನ್ನೇ ಇಲ್ಲಿ ತಿರುಗಿ ಇನ್ನೊಂದು ಸ್ವತಂತ್ರ ಪ್ರತಿಮೆಯ ರೂಪದಲ್ಲಿ ಹೇಳುವುದರ ಉದ್ದೇಶವೇನು?– ಇದೊಂದು ಪ್ರಶ್ನೆಯಾಗಿದೆ. ಇದಕ್ಕೊಂದು ಸಮಾಧಾನವೂ ಇದೆ ವ್ರತ ಪ್ರತಿಮೆಯಲ್ಲಿ ಪ್ರತಿಯೊಂದು ತಿಂಗಳ ಅಷ್ಟಮಿ—ಚತುರ್ದಶಿಗಳಲ್ಲಿ ಉಪವಾಸವನ್ನು ಮಾಡಿಯೇ ತೀರಬೇಕೆಂದೇನೂ ನಿರ್ಬಂಧವಿಲ್ಲ. ಈ ಪ್ರತಿಮೆಯಲ್ಲಿ

[1] ದ್ವಿನಿಷಣ್ಣಂ ಯಥಾಜಾತಂ ದ್ವಾದಶಾವರ್ತಮಿತ್ಯಪಿ ।
ಚತುರ್ನತಿ ತ್ರಿಶುದ್ಧಂ ಚ ಕೃತಿಕರ್ಮ ಪ್ರಯೋಜಯೇತ್ ॥

—ಚಾರಿತ್ರಸಾರ.

ಇದ್ದವರು ಮಾತ್ರ ತಮ್ಮ ಶರೀರದಲ್ಲಿ ಶಕ್ತಿಯು ಇದ್ದರೆ ಎಲ್ಲ ಅಷ್ಟಮಿ—ಚತುರ್ದಶಿಗಳಲ್ಲಿ ಉಪವಾಸ ಮಾಡಿಯೇ ತೀರಬೇಕಾಗುತ್ತದೆ ಅಲ್ಲದೆ ವ್ರತ ಪ್ರತಿಮೆಯಲ್ಲಿ ಅಣುವ್ರತದ ರಕ್ಷಣೆಗೆಂದು ಮಾತ್ರ ಪರ್ವತಿಥಿಗಳಲ್ಲಿ ಉಪವಾಸದ ಆಚರಣೆಯನ್ನು ಹೇಳಿದೆ ಅಲ್ಲಿ ಅದು ಶೀಲದ ರೂಪದಲ್ಲಿದೆ. ಇಲ್ಲಿ ಅದು ಸ್ವತಂತ್ರ ವ್ರತದ ರೂಪದಲ್ಲಿದೆ ಇದೇ ಎರಡೂ ಸ್ಥಾನಗಳಲ್ಲಿರುವ ಅಂತರವಾಗಿದೆ. ಇನ್ನು ಕವಿರಾಜಮಲ್ಲನು 'ಲಾಟೀಸಂಹಿತಾ'ದಲ್ಲಿ ಈ ಎರಡೂ ಪ್ರತಿಮೆಗಳಲ್ಲಿರುವ ಅಂತರವನ್ನು ಹೇಳುತ್ತ ಒಂದು ಸಂಗತಿಯನ್ನು ಸೂಚಿಸುತ್ತಾನೆ—ಎರಡನೆಯ ಪ್ರತಿಮೆಯಲ್ಲಿ ಈ ವ್ರತವು ಸಾತಿಚಾರವಾಗಿದೆ; ಇಲ್ಲಿ ನಿರತಿಚಾರವಾಗಿದೆ [1] ಇದು ಸ್ವಾಮೀ ಸಮಂತಭದ್ರರ ದೃಷ್ಟಿಯಲ್ಲಿ ಸಮರ್ಪಕ-ವೆನಿಸುವದಿಲ್ಲ ಯಾಕೆಂದರೆ ಅವರು ಎರಡನೆಯ ಪ್ರತಿಮೆಯಲ್ಲಿ 'ನಿರತಿಕ್ರಮಣಂ' ಪದವನ್ನು 'ಅಣುವ್ರತ ಪಂಚಕಂ' ಮತ್ತು 'ಶೀಲಸಪ್ತಕಂ' ಇವೆರಡಕ್ಕೂ ವಿಶೇಷಣ ರೂಪದಲ್ಲಿ ಇಟ್ಟಿದ್ದಾರೆ. ಅದರಿಂದ ಅಣುವ್ರತಗಳಂತೆ ಸಪ್ತ ಶೀಲಗಳನ್ನೂ ನಿರತಿಚಾರ ರೂಪದಲ್ಲಿ ಆಚರಿಸಲಿಕ್ಕೆ ಹೇಳಿದ್ದಾರೆ ವ್ರತ ಪ್ರತಿಮೆಯಲ್ಲಿ ಶೀಲ ಪ್ರಶವು ನಿರತಿಚಾರವಾಗಿರದಿದ್ದರೆ ದೇಶಾವಕಾಶಿಕ, ವೈಯಾವೃತ್ಯ ಮತ್ತು ಗುಣವ್ರತಗಳೂ ಸಹ ನಿರತಿಚಾರವೆಂದು ಹೇಗೆ ಸಿದ್ಧವಾದೀತು?—ಯಾವ ಪ್ರತಿಮೆಯೂ ಕೂಡ ತನ್ನ ವಿಧಾನಕ್ಕಾಗಿ ಮಾತ್ರ ರೂಪುಗೊಂಡುದಿಲ್ಲ. ಪಂ. ಆಶಾಧರರೂ ಕೂಡ ವ್ರತ ಪ್ರತಿಮೆಯಲ್ಲಿ ಹನ್ನೆರಡು ವ್ರತಗಳನ್ನು ನಿರತಿಚಾರ ರೂಪದಲ್ಲಿ ಪ್ರತಿಪಾದಿಸಿದ್ದಾರೆ. [2] ಇನ್ನು 'ಪ್ರೋಷಧನಿಯಮವಿಧಾಯೀ' ಎಂಬ ಪದವು ಉಪವಾಸದ ದಿವಸ ಯಾವ ಕಾರ್ಯವನ್ನು ಮಾಡಬೇಕು, ಯಾವುದನ್ನು ಮಾಡಕೂಡದು ಎಂಬುದನ್ನು ವಿಧಿಸುತ್ತದೆ. ಅದು ಈ ಗ್ರಂಥದಲ್ಲಿ ಶಿಕ್ಷಾವ್ರತವನ್ನು ವಿವರಿಸಿದಾಗ ಹೇಳಿದುದನ್ನು ಒಳಗೊಳ್ಳುತ್ತದೆ. ಸ. ಧ.]

ಅನಶನವಿಧಿಯಿಂ ತಿಂಗಳಿನ ನಾಲ್ಕು ಪರ್ವದೊಳಮಾಪ್ತ ಪೂಜಾವಿಧಿಯಿಂ ॥
ಮನಮೊನೆದಿರ್ಪಂ ನಾಲ್ಕನೆಯ ನೆಲೆಯವಂ ಪ್ರೋಷಧೋಪವಾಸಿಯೆನಿಕ್ಕುಂ ॥

—ಶಾಂತಿನಾಥ—ಸುಕುಮಾರಚರಿತಂ ೬—೫೯.

ಈ ಸೂತ್ರದಲ್ಲಿ ಸಚಿತ್ತವಿರತ ಪ್ರತಿಮೆಯ ಲಕ್ಷಣವನ್ನು ಹೇಳುತ್ತಾರೆ—

**ಮೂಲಫಲಶಾಕಶಾಖಾಕರೀರಕಂದಪ್ರಸೂನಬೀಜಾನಿ ।**
**ನಾಮಾನಿ ಯೋಽತ್ತಿ ಸೋಽಯಂ ಸಚಿತ್ತವಿರತೋ ದಯಾಮೂರ್ತಿಃ ॥ ೧೪೧ ॥**

ಅನ್ವಯಾರ್ಥ—(ಯಃ) ಯಾವನು (ದಯಾಮೂರ್ತಿಃ) ದಯಾಳುವು (ಆಮಾನಿ) ಹಸಿಯಾದ (ಮೂಲ—ಫಲ—ಶಾಕಶಾಖಾಕರೀರಕಂದಪ್ರಸೂನಬೀಜಾನಿ) ಬೇರು, ಹಣ್ಣು, ಎಲೆ, ಟೊಂಗೆ, ಕಬ್ಬಿನ ಗಂಟು, ಗಡ್ಡೆ, ಹೂವು ಮತ್ತು ಬೀಜಗಳನ್ನು (ನ ಅತ್ತಿ) ತಿನ್ನುವದಿಲ್ಲವೋ (ಸಃ ಅಯಂ) ಅವನು ಈ (ಸಚಿತ್ತವಿರತಃ) ಸಚಿತ್ತವಿರತ ಪ್ರತಿಮಾಧಾರಿ ಎನಿಸುತ್ತಾನೆ.

ಅರ್ಥ—ಯಾವ ದಯಾಳು ಮನುಷ್ಯನು ಬೇರು, ಹಣ್ಣು, ಎಲೆ, ಟೊಂಗೆ, ಕಬ್ಬಿನ ಗಂಟು, ಗಡ್ಡೆ, ಹೂವು ಹಾಗೂ ಬೀಜಗಳನ್ನು—ಹಸಿಯಾಗಿರುವಂಥವುಗಳನ್ನು–ಬೇಯಿಸದೆ ಇರುವಂಥವುಗಳನ್ನು—ತಿನ್ನುವದಿಲ್ಲವೋ ಅವನು ಸಚಿತ್ತತ್ಯಾಗ ಪ್ರತಿಮಾಧಾರೀ ಶ್ರಾವಕನೆನಿಸುತ್ತಾನೆ

ವಿಶೇಷಾರ್ಥ—ಇಲ್ಲಿ 'ಆಮಾನಿ' ಮತ್ತು 'ನ ಅತ್ತಿ' ಎಂಬೆರಡು ಪದಗಳನ್ನು ವಿಶೇಷವಾಗಿ ಗಮನದಲ್ಲಿಡ-ಬೇಕು. 'ಆಮಾನಿ' ಪದವು ಅಪಕ್ವ ಹಾಗೂ ಅಪ್ರಾಸುಕ ಅರ್ಥದ ದ್ಯೋತಕವಾಗಿದೆ. 'ನ ಅತ್ತಿ' ಎಂಬುದು ಭಕ್ಷಣದ ನಿಷೇಧವನ್ನು ಸೂಚಿಸುತ್ತದೆ. ಈ ನಿಷೇಧವು ಅಪ್ರಾಸುಕ (ಸಚಿತ್ತ) ಪದಾರ್ಥದ ಭಕ್ಷಣಕ್ಕೆ ಮಾತ್ರ

---

1 'ಸಾತಿಚಾರಂ ಚ ತತ್ರ ಸ್ಯಾದತ್ರಾತೀಚಾರವರ್ಜಿತಂ'

2 ಯಥಾ—'ಧಾರಯನ್ನುತ್ತರಗುಣಾನಸ್ಖಲನ್ವ್ರತಿಕೋ ಭವೇತ್।' ಟೀಕಾ—ಅಸ್ಖಲನ್ ನಿರತಿಚಾರಾನ್ ।

ಅನ್ವಯಿಸುತ್ತದೆ, ಸ್ಪರ್ಶನ ಮೊದಲಾದವುಗಳಿಗಲ್ಲ [8] ಈ ಸೂತ್ರದಲ್ಲಿ ಹೇಳಿದ ವಸ್ತುಗಳೆಲ್ಲ ವಾನಸ್ಪತಿಕಗಳಾಗಿವೆ. ಕಂದಮೂಲಗಳೂ ಸಮಾವೇಶವಾಗಿವೆ. ಇದರಿಂದ ಸ್ವಾಮಿ ಸಮಂತಭದ್ರರ ದೃಷ್ಟಿಯಲ್ಲಿ ಈ ಶ್ರಾವಕ ಪದ-ಪ್ರತಿಮಾ-ವು ಅಪ್ರಾಸುಕ ವನಸ್ಪತಿಯ ಭಕ್ಷಣ ತ್ಯಾಗಕ್ಕೆ ಮಾತ್ರ ಮರ್ಯಾದಿತವಾಗಿದೆ ಇಲ್ಲಿ. ಅಪ್ರಾಸುಕವನ್ನು ಪ್ರಾಸುಕಗೊಳಿಸಲಿಕ್ಕೂ ಪ್ರಾಸುಕ ವನಸ್ಪತಿಯನ್ನು ತಿನ್ನಲಿಕ್ಕೂ ನಿಷೇಧವಿಲ್ಲ. 'ಪ್ರಾಸುಕಸ್ಯ ಭಕ್ಷಣೇ ನೋ ಪಾಪಃ' ಈ ಉಕ್ತಿಗೆ ಅನುಸರಿಸಿ ಪ್ರಾಸುಕ (ಅಚಿತ್ತ) ಪದಾರ್ಥಗಳನ್ನು ತಿನ್ನುವುದರಿಂದ ಯಾವ ಪಾಪವೂ ಸಂಭವಿಸುವದಿಲ್ಲ. ಅಪ್ರಾಸುಕವು ಪ್ರಾಸುಕ ಹೇಗೆ ಆಗುತ್ತದೆ ಇಲ್ಲವೆ ಮಾಡಲಿಕ್ಕೆ ಬರುತ್ತದೆ ಎಂಬುದರ ವರ್ಣನೆಯನ್ನು ೮೫ನೆಯ ಸೂತ್ರದ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ ಸ ಫ.]

ಕುಸುಮಫಳಕಂದಮೂಲಪ್ರಸರಂಗಗಳನ್ನು ಪಕ್ವಮಲ್ಲದು ವನಪೇ-
ಕ್ಷಿಸಿಕೊಳ್ಳದನಯ್ದನೆಯಂ ಪೆಸರಿಂದಾತಂ ಸಚಿತ್ತವಿರತನೆನಿಕ್ಕುಂ ॥

—ಶಾಂತಿನಾಥ—ಸುಕುಮಾರಚರಿತಂ-೬—೩೦.

ಇಲ್ಲಿ ರಾತ್ರಿಭೋಜನತ್ಯಾಗ ಪ್ರತಿಮೆಯನ್ನು ವಿವರಿಸುತ್ತಾರೆ—

ಅನ್ನಂ ಪಾನಂ ಖಾದ್ಯಂ ಲೇಹ್ಯಂ ನಾಶ್ನಾತಿ ಯೋ ವಿಭಾವರ್ಯಾಮ್ ।
ಸ ಚ ರಾತ್ರಿಭುಕ್ತವಿರತಃ ಸತ್ತ್ವೇಷ್ವನುಕಂಪಮಾನಮನಾಃ ॥ ೧೪೨ ॥

ಅನ್ವಯಾರ್ಥ—(ಸತ್ತ್ವೇಷ್ವನುಕಂಪಮಾನಮನಾಃ ಯೋ) ಸರ್ವಪ್ರಾಣಿಗಳಲ್ಲಿ ದಯಾಬುದ್ಧಿಯುಳ್ಳನು ಯಾವನು (ವಿಭಾವರ್ಯಾಂ) ರಾತ್ರಿಯಲ್ಲಿ (ಅನ್ನಂ ಪಾನಂ ಖಾದ್ಯಂ ಚ ಲೇಹ್ಯಂ) ಅನ್ನ, ಪೇಯ, ತಿನಿಸು ಮತ್ತು ನೆಕ್ಕುವಂಥದನ್ನು (ನ ಅಶ್ನಾತಿ) ತಿನ್ನುವದಿಲ್ಲ (ಸಃ) ಅವನು (ರಾತ್ರಿಭುಕ್ತವಿರತಃ) ರಾತ್ರಿಭೋಜನ ತ್ಯಾಗಿ ಎಂಬ ಪ್ರತಿಮಾಧಾರಿ ಎನಿಸುವನು.

ಅರ್ಥ—ಸಮಸ್ತ ಪ್ರಾಣಿಗಳ ಮೇಲೆ ದಯೆ ಮಾಡುವಂಥವನು ರಾತ್ರಿಯಲ್ಲಿ ಅನ್ನ, ನೀರು, ಫಲಾಹಾರ ಮತ್ತು ಎಲೆಅಡಿಕೆ ಈ ನಾಲ್ಕು ಪ್ರಕಾರದ ಆಹಾರಗಳಲ್ಲಿ ಯಾವುದನ್ನೂ ತಿನ್ನುವದಿಲ್ಲ. ಇಂಥವನು ಆರನೆಯ ಪ್ರತಿಮೆಯ ಶ್ರಾವಕನೆನಿಸುತ್ತಾನೆ.

ವಿಶೇಷಾರ್ಥ—[ಇಲ್ಲಿ 'ಸತ್ತ್ವೇಷ್ವನುಕಂಪಮಾನಮನಾಃ' ಎಂಬ ಪದದ ಪ್ರಯೋಗದಿಂದ ಜೀವಗಳ ಮೇಲಿನ ದಯೆಯ ನಿರ್ದೇಶನವಿದೆ. ಅಲ್ಲದೆ 'ಸತ್ತ್ವೇಷು' ಪದಕ್ಕೆ ಯಾವ ವಿಶೇಷಣವೂ ಇಲ್ಲ ಅದರಿಂದ ಇಲ್ಲಿ ತನ್ನ ಜೀವವೂ ಕೂಡ ಸಮಾವೇಶಗೊಳ್ಳುತ್ತದೆ ರಾತ್ರಿಭೋಜನ ತ್ಯಾಗದಿಂದ ಅನ್ಯ ಜೀವಿಗಳ ಮೇಲೆ ಅನುಕಂಪವು ಉಂಟಾಗುವದಲ್ಲದೆ ತನ್ನ ಜೀವದ ಮೇಲಿನ ಅನುಕಂಪವೂ ಸಾಧಿಸುತ್ತದೆ ರಾತ್ರಿಯಲ್ಲಿ ಉಣ್ಣುವಾಗ ಜನಿಸುವ ಅನೇಕ ವಿಷ ಜಂತುಗಳು ಹೊಟ್ಟೆಯಲ್ಲಿ ಹೋಗಿ ವಿವಿಧ ಪ್ರಕಾರದ ರೋಗವನ್ನು ಹುಟ್ಟಿಸುತ್ತವೆ ಇದರಿಂದ ಶರೀರ ಮತ್ತು ಮನದ ಶುದ್ಧಿಗೆ ಹಾನಿಯು ಒದಗುತ್ತದೆ ಇದರಿಂದ ರಾತ್ರಿಭೋಜನ ತ್ಯಾಗವು ನಮ್ಮನ್ನು ಉಳಿಸುತ್ತದೆ. ಉಳಿದ ಇಂದ್ರಿಯಗಳ ಸಂಯಮವೂ ಸಾಧಿಸುತ್ತದೆ ಇದರಿಂದ ಆತ್ಮ ವಿಕಾಸಕ್ಕೆ ಸಹಾಯವೂ ಒದಗುತ್ತದೆ. ಆ ಮಾತು ಬೇರೆ ಈ ಪ್ರತಿಮೆಯನ್ನು ಧಾರಣ ಮಾಡುವ ಪೂರ್ವದಲ್ಲಿ ಜನರು ಬಹುತರ ಅನ್ನಾದಿಗಳನ್ನು ಮಾತ್ರ ಮೊದಲು ಅಂಶತಃ ತ್ಯಾಗಮಾಡಿ, ಈ ವ್ರತದ ಅಭ್ಯಾಸವನ್ನು ಮಾಡುತ್ತಾರೆ. ಸ ಫ.]

ದಿವದೊಳ್ ಸುರತವ್ಯಾಪಾರವಿನೋದಮನನ್ನಪಾನಮಂ ರಾತ್ರಿಮೊಳ್ಪಾ-
ಸೆವಡುವುದು ಮನುಬಿಡೆಸಗುವವಿವೇಕಿಯಾರನೆಯ ರಾತ್ರಿಭುಕ್ತವ್ರತಿಕಂ ॥

—ಶಾಂತಿನಾಥ—ಸುಕುಮಾರ ಚರಿತಂ—೬—೩೧.

---

[8] ಭಕ್ಷಣೇಽತ್ರ ಸಚಿತ್ತಸ್ಯ ನಿಯಮೋ ನ ತು ಸ್ಪರ್ಶನಂ ।
ತತ್ಸ್ವಹಸ್ತಾದಿನಾ ಕೃತ್ವಾ ಪ್ರಾಸುಕಂ ಚಾತ್ರ ಭೋಜಯೇತ್ ॥ ಲಾಟೀ ಸಂಹಿತಾ ೭–೧೭.

ಇನ್ನು ಆಚಾರ್ಯರು ಬ್ರಹ್ಮಚರ್ಯ ಪ್ರತಿಮೆಯನ್ನು ಕುರಿತು ಸೂತ್ರ ಹೇಳುತ್ತಾರೆ—

**ಮಲಬೀಜಂ ಮಲಯೋನಿಂ ಗಲನ್ಮಲಂ ಪೂತಿಗಂಧಿ ಬೀಭತ್ಸಮ್ ।**
**ಪಶ್ಯನ್ನಂಗಮನಂಗಾದ್ವಿರಮತಿ ಯೋ ಬ್ರಹ್ಮಚಾರೀ ಸಃ ॥ ೧೪೩ ॥**

ಅನ್ವಯಾರ್ಥ—(ಮಲಬೀಜಂ) ಮಲದ ಬೀಜವು (ಮಲ-ಯೋನಿ) ಮಲೋತ್ಪತ್ತಿಗೆ ಕಾರಣವು (ಗಲನ್ಮಲಂ) ಮಲವು ಒಸರುವಂತಹದು (ಪೂತಿಗಂಧಿ) ದುರ್ಗಂಧ ಯುಕ್ತವು (ಬೀಭತ್ಸ) ಹೇಸಿಕೆ ಬರುವಂಥ (ಅಂಗಂ) ಶರೀರವನ್ನು (ಪಶ್ಯನ್) ನೋಡುವಂಥವನು (ಯಃ) ಯಾವನು (ಅನಂಗಾತ್) ಕಾಮಭೋಗದಿಂದ (ವಿರಮತಿ) ವಿರಕ್ತನಾಗುತ್ತಾನೆಯೋ (ಸಃ) ಅವನು (ಬ್ರಹ್ಮಚಾರೀ) ಬ್ರಹ್ಮಚಾರಿ ಎನಿಸುತ್ತಾನೆ.

ಅರ್ಥ—ಯಾವ ಪುರುಷನು ತನ್ನ ಶರೀರವು ರಕ್ತ ಮತ್ತು ವೀರ್ಯಗಳಂಥ ಹೊಲಸು ಪದಾರ್ಥಗಳಿಂದ ಉತ್ಪನ್ನವಾದದ್ದು, ಮಲಿನತೆಗೆ ಕಾರಣ, ಮಲವು ಹರಿಯುವಂಥದು, ದುರ್ಗಂಧವು ಮತ್ತು ಹೇಸಿಕೆ ಉತ್ಪನ್ನವಾಗುವಂಥದಿದೆ ಇದನ್ನರಿತು ಕಾಮವಿಕಾರದ ತ್ಯಾಗವನ್ನು ಮಾಡುವಂಥನನು ಬ್ರಹ್ಮಚರ್ಯ ಪ್ರತಿಮಾಧಾರಿ ಶ್ರಾವಕನೆನಿಸುತ್ತಾನೆ [ಇಲ್ಲಿ ಕಾಮತೃಪ್ತಿಗಾಗಿ ಯಾವ ಅಂಗದೊಡನೆ ಪುರುಷನು ರಮಿಸಿ ಮೈಮರೆಯುತ್ತಾನೆಯೋ ಆ ಅಂಗದ ಸ್ವರೂಪವನ್ನು ಚೆನ್ನಾಗಿ ವಿಶ್ಲೇಷಣ ಮಾಡಿದ್ದಾನೆ. ಇಂಥ ಅಂಗವು ವಿವೇಕಿ ಪುರುಷರು ಭೋಗಿಸಿ ಸಂತೋಷಗೊಳ್ಳುವಂಥದಿರುವದಿಲ್ಲ . . . ಕಾಮಾಂಗವನ್ನು ಈ ದೃಷ್ಟಿಯಿಂದ ನೋಡುವ ಉಲ್ಲೇಖವು ಬಹು ಮಹತ್ವಪೂರ್ಣವಾಗಿದೆ. ಈ ದೃಷ್ಟಿಯಿಂದ ಆತ್ಮಜಾಗೃತಿಯನ್ನು ಹೊಂದಿ, ಅದಕ್ಕನುಕೂಲವಾದ ಭಾವನೆಗಳನ್ನು ಭಾವಿಸಿ ಯಾವನು ಬ್ರಹ್ಮಚರ್ಯವನ್ನು ಪಾಲಿಸುವನೋ ಅವನು ಆ ಪದದಲ್ಲಿ ಸ್ಥಿರವಾಗಿ ಉಳಿಯುತ್ತಾನೆ. ಈ ಪದದಲ್ಲಿರುವಂಥವನು ಯಾವ ರೀತಿಯಿಂದಲೂ ಸ್ತ್ರೀಯನ್ನು ಭೋಗಿಸುವದಿಲ್ಲ ಬ್ರಹ್ಮನಲ್ಲಿ—ಶುದ್ಧಾತ್ಮನಲ್ಲಿ—ತನ್ನ ಚರ್ಯವನ್ನು ಬೆಳೆಯಿಸಿ ತನ್ನ ಹೆಸರನ್ನು ಸಾರ್ಥಕಗೊಳಿಸುತ್ತಾನೆ ಸ ಧ.]

ವಿಶೇಷಾರ್ಥ—ಬ್ರಹ್ಮಚಾರಿ ಪುರುಷನು ತನ್ನ ವಿವಾಹಿತ ಸ್ತ್ರೀಯ ಭೋಗವನ್ನು ಸಹ ಮಾಡಕೂಡದು ಅವಳ ಕೂಡ ಒತ್ತಟ್ಟಿಗೆ ಮಲಗಬಾರದು. ಮೊದಲು ಭೋಗಿಸಿದ ಭೋಗವನ್ನೂ ಕೂಡ ನೆನೆಯಲಾಗದು. ಕಾಮೋದ್ದೀಪನ ಮಾಡುವಂಥ ಪೌಷ್ಟಿಕ ಆಹಾರವನ್ನೂ ಸಹ ತಕ್ಕೊಳ್ಳಬಾರದು. ರಾಗ (ಮೋಹ) ಉತ್ಪನ್ನ ಮಾಡುವಂಥ ವಸ್ತ್ರಾಭರಣ ಅಲಂಕಾರಗಳನ್ನು ಮೈಮೇಲೆ ಧರಿಸಕೂಡದು. ಕುಣಿತ, ಗಾಯನ, ವಾದ್ಯಗಳನ್ನು ನೋಡಬಾರದು, ಕೇಳಬಾರದು. ಹೂವಿನ ಹಾರ, ಸುಗಂಧ ದ್ರವ್ಯ ಮತ್ತು ಅತ್ತರಗಳನ್ನು ದೇಹಕ್ಕೆ ಹಚ್ಚಿಕೊಳ್ಳಕೂಡದು ಶೃಂಗಾರ ಕಥೆ, ಅಶ್ಲೀಲ ಸಾಹಿತ್ಯ, ಕಾವ್ಯ, ನಾಟಕಗಳ ವಾಚನ, ಕೇಳುವದನ್ನೂ ಮಾಡಬಾರದು. ಎಲೆಯಡಿಕೆ ಮೊದಲಾದವುಗಳು ವಿಷಯ ವಾಸನೆಯನ್ನು ಬೆಳೆಯಿಸುವಂಥವಿರುತ್ತವೆ ಅದಕ್ಕಾಗಿ ಅವುಗಳನ್ನು ತಿನ್ನಕೂಡದು. ಈ ರೀತಿ ಆಚರಿಸುವವರಿಗೆ ಬ್ರಹ್ಮಚರ್ಯವ್ರತ ಎಂಬ ಪ್ರತಿಮೆಯು ಸಾಧಿಸುತ್ತದೆ.

ಸಹಜಾಶುಚಿದೇಹಂ ಪ್ರಾಣಿಹತಿಪ್ರಾರಂಭಮೆಂದು ವನಿತಾರತಿನಿ-
ಸ್ಪೃಹನಾಗಿ ತೊಱೆದು ನೆಗಟ್ದಂ ಗೃಹಸ್ಥರೊಳ್ ಬ್ರಹ್ಮಚಾರಿಯೇಟಿನೆಯಾತಂ ॥

—ಶಾಂತಿನಾಥ-ಸುಕುಮಾರ ಚರಿತಂ ೬-೧೪೩.

ಇಲ್ಲಿ ಆರಂಭತ್ಯಾಗ ಪ್ರತಿಮೆಯನ್ನು ವಿವರಿಸಲಿಕ್ಕೆ ಸೂತ್ರವನ್ನು ಹೇಳಿದ್ದಾರೆ—

**ಸೇವಾಕೃಷಿವಾಣಿಜ್ಯಪ್ರಮುಖಾದಾರಂಭತೋ ವ್ಯುಪಾರಮತಿ ।**
**ಪ್ರಾಣಾತಿಪಾತಹೇತೋರ್ಯೋಽಸಾವಾರಂಭವಿನಿವೃತ್ತಃ ॥ ೧೪೪ ॥**

ಅನ್ವಯಾರ್ಥ—(ಪ್ರಾಣಾತಿಪಾತಹೇತೋಃ) ಪ್ರಾಣಿಯ ಘಾತಕ್ಕೆ ಕಾರಣವಾದಂಥ (ಸೇವಾಕೃಷಿವಾಣಿಜ್ಯಪ್ರಮುಖಾದಾರಂಭತಃ) ಸೇವೆ, ಒಕ್ಕಲತನ, ವ್ಯಾಪಾರ ಮೊದಲಾದ ಆರಂಭಗಳಿಂದ (ಯಃ) ಯಾವನು (ವ್ಯುಪಾರಮತಿ) ವಿರಕ್ತನಾಗುವನೋ (ಅಸೌ) ಅವನು ಈ (ಆರಂಭವಿನಿವೃತ್ತಃ) ಆರಂಭತ್ಯಾಗ ಪ್ರತಿಮಾಧಾರಿಯು—ಎನಿಸುತ್ತಾನೆ.

ಅರ್ಥ—ಹಿಂಸೆಗೆ ಕಾರಣವಾದಂಥ ಸೇವೆ, ಒಕ್ಕಲತನ, ವ್ಯಾಪಾರ ಮೊದಲಾದ ಆರಂಭಗಳನ್ನು ಯಾವನು ತ್ಯಾಗಮಾಡುವನೋ ಅವನು ಆರಂಭತ್ಯಾಗ ಪ್ರತಿಮಾಧಾರಿ ಶ್ರಾವಕನೆನಿಸುವನು. [ಇಲ್ಲಿ ತ್ಯಾಗಮಾಡತಕ್ಕ ಆರಂಭಕ್ಕೆ ಎರಡು ವಿಶೇಷಣಗಳಿವೆ ಒಂದು 'ಸೇವಾಕೃಷಿ–ವಾಣಿಜ್ಯ–ಪ್ರಮುಖಾತ್', ಇನ್ನೊಂದು 'ಪ್ರಾಣಾತಿಪಾತಹೇತೋಃ' ಎಂಬುದಾಗಿವೆ ಇನ್ನು ಮೊದಲನೆಯ ವಿಶೇಷಣದಲ್ಲಿ ಆರಂಭದ ಕೆಲವು ಪ್ರಕಾರಗಳನ್ನು ಉಲ್ಲೇಖಿಸಲಾಗಿದೆ ಅವುಗಳಲ್ಲಿ ಸೇವೆ, ಕೃಷಿ, ವಾಣಿಜ್ಯಗಳೆಂದು ಮೂರಿವೆ. ಇನ್ನುಳಿದ ಆರಂಭಗಳ ಸಂಕೇತವೆಂದು 'ಪ್ರಮುಖ' ಪದವನ್ನು ಇಡಲಾಗಿದೆ. ಇದು ಅಸ್ಪಷ್ಟವಾಗಿದೆ. ಟೀಕಾಕಾರ ಪ್ರಭಾಚಂದ್ರಾಚಾರ್ಯರೂ ಸಹ ಇದನ್ನು ಸ್ಪಷ್ಟಗೊಳಿಸಿಲ್ಲ. ಚಾಮುಂಡರಾಯನು ತನ್ನ 'ಚಾರಿತ್ರಸಾರ'ದಲ್ಲಿಯೂ ಈ ವಿಷಯದ ಸ್ಪಷ್ಟೀಕರಣವನ್ನು ಬಿಟ್ಟು ಬಿಟ್ಟಿದ್ದಾನೆ.[1] ಪಂಡಿತ ಆಶಾಧರನೂ ತನ್ನ ಸಾಗಾರಧರ್ಮಾಮೃತ ಟೀಕೆಯಲ್ಲಿಯೂ ಹೀಗೆಯೇ ಮಾಡಿದ್ದಾನೆ.[2] 'ಅನುಪ್ರೇಕ್ಷಾ' ಗ್ರಂಥದ ಕರ್ತೃವಾದ ಸ್ವಾಮಿಕಾರ್ತಿಕೇಯ ಹಾಗೂ ಲಾಟೀಸಂಹಿತೆಯ ಕರ್ತೃವಾದ ಕವಿರಾಜಮಲ್ಲರೂ ಆರಂಭದ ಪ್ರಕಾರಗಳ ವಿಷಯದಲ್ಲಿ ಮೌನ ತಾಳಿದ್ದಾರೆ ಆಚಾರ್ಯ ವಸುನಂದಿಯು ಮಾತ್ರ 'ಗೃಹಾರಂಭ' ಒಂದನ್ನು ಹೇಳಿ ಕೈಬಿಟ್ಟಿದ್ದಾನೆ. ಇಂಥ ಸ್ಥಿತಿಯಲ್ಲಿ 'ಪ್ರಮುಖ' ಶಬ್ದದಿಂದ ಗ್ರಂಥಕಾರರು ಯಾವ ಯಾವ ಆರಂಭಗಳನ್ನು ಸೂಚಿಸ ಬಯಸುತ್ತಾರೆಂಬುದು ವಿಚಾರಣೀಯ ವಿಷಯವಾಗಿದೆ. ಇನ್ನು ಇದರಲ್ಲಿ ಶಿಲ್ಪ, ಪಶುಪಾಲನೆಯಂಥವು ಸಮಾವೇಶ-ವಾಗಬಲ್ಲವು ಯಾಕಂದರೆ ಉಲ್ಲೇಖಿಸಿದ ಆರಂಭಗಳ ವಿಷಯವನ್ನು ತಿಳಿದರೆ ಅವೆಲ್ಲ ಉಪಜೀವನದ ಸಾಧನಗಳೇ ಆಗಿವೆ. ಅಂದಮೇಲೆ ದೊಡ್ಡ ದೊಡ್ಡ ಮಿಲ್ಲು-ಕಾರಖಾನೆಗಳ ಸಮಾವೇಶವಂತೂ ಸಹಜವಾಗಿಯೇ ಆಗುತ್ತದೆ. ಅದರಿಂದ ಈ ವ್ರತಧಾರಿಗಳಿಗೆ ಅವು ಸರ್ವಥಾ ತ್ಯಾಜ್ಯವಾಗಿವೆ. ಇನ್ನು ಇಲ್ಲಿ ಪಂಚಸೂನಗಳ ವಿಷಯ ಒಂದು ಉಳಿಯಿತು ಅದೂ ಗೃಹಸ್ಥ ಜೀವನದ ಅಂಗವಾಗಿದೆ. ಸೂಕ್ಷ್ಮ ದೃಷ್ಟಿಯಿಂದ ಅವುಗಳ ಸಮಾವೇಶವು ಆರಂಭದಲ್ಲಿ ಆಗಿ ಹೋಗುತ್ತದೆ. ಆದರೆ ಇದೇ ಗ್ರಂಥದಲ್ಲಿ ವೈಯಾವೃತ್ಯವನ್ನು ವರ್ಣಿಸುವಾಗ 'ಅಪಸೂನಾರಂಭಾಣಾ-ಮಾರ್ಯಾಣಾಮಿಷ್ಯತೇ ದಾನಂ' ಎಂಬ ವಾಕ್ಯದಲ್ಲಿ ಪ್ರಯೋಗಿಸಲ್ಪಟ್ಟ 'ಅಪಸೂನಾರಂಭಾಣಾಂ' ಪದದಲ್ಲಿ ಸೂನಗಳನ್ನು ಆರಂಭದಿಂದ ಭಿನ್ನವೆಂದು ತಿಳಿಯಲಾಗಿದೆ. ಸ್ಥೂಲ ದೃಷ್ಟಿಯಿಂದ ಸೂನಗಳು ಆರಂಭದಲ್ಲಿ ಸಮಾವೇಶವಾಗುವದಿಲ್ಲ. ಅಂದಮೇಲೆ ಇಲ್ಲಿ ಉಲ್ಲೇಖಿಸಿದ ಆರಂಭಗಳಲ್ಲಿ ಅವುಗಳ ಸಮಾವೇಶವು ಇದೆಯೋ ಇಲ್ಲವೋ ಎಂಬುದು ವಿಚಾರಣೀಯ ವಿಷಯವಾಗಿದೆ ಈ ವಿಷಯದ ವಿಶ್ಲೇಷಣವನ್ನು ವಿದ್ವಾಂಸರು ಸ್ವಾಮಿ ಸಮಂತಭದ್ರರ ದೃಷ್ಟಿಕೋಣದಿಂದಲೇ ಮಾಡಬೇಕಾಗುತ್ತದೆ ರಾಜಮಲ್ಲನು ಲಾಟೀಸಂಹಿತೆಯಲ್ಲಿ[3] ತೀರ ಸ್ವಲ್ಪ ಆರಂಭವೆನಿಸುತ್ತಿದ್ದರೂ ಸಹ–ಅದು ತನ್ನ ಸಲುವಾಗಿರಲಿ ಇಲ್ಲವೆ ಅನ್ಯರ ಸಲುವಾಗಿರಲಿ—ನಿಷೇಧವೆಂದು ಹೇಳಿದ್ದಾನೆ ಆದರೆ ಅವನೇ ಹೀಗೆಯೂ ಹೇಳುತ್ತಾನೆ.—ತನ್ನ ವಸ್ತ್ರಗಳನ್ನು ತಾನು ಸ್ವತಃ ಪ್ರಾಸುಕ ಜಲದಿಂದ ಸ್ವಚ್ಛಮಾಡಿಕೊಳ್ಳ ಬಹುದು ಇಲ್ಲವೆ ಯಾವನೊಬ್ಬ ಸಹಧರ್ಮಿಯಿಂದ ಮಾಡಿಸಿಕೊಳ್ಳಲೂ ಬಹುದು[4] ಅಂದಮೇಲೆ ಕುಕ್ಕರ—ಅಡಿಗೆಯನ್ನು ಮಾಡುವ ಒಂದು ವಿಧದ ಸುಧಾರಿಸಿದ ಪಾತ್ರೆ—ಮೊದಲಾದವುಗಳಿಂದ ಶುದ್ಧ ಅಗ್ನಿಯನ್ನು ಹೊತ್ತಿಸಿ ಸ್ವಂತಕ್ಕಾಗಿ ಅನ್ನವನ್ನು ಏಕೆ ಸಿದ್ಧಗೊಳಿಸಿಕೊಳ್ಳಬಾರದು?

ಎರಡನೆಯ ವಿಶೇಷಣವು ಆರಂಭತ್ಯಾಗದ ದೃಷ್ಟಿಯಿಂದ ಇದೆ. ಸೇವೆ, ಕೃಷಿ, ವ್ಯಾಪಾರಗಳಲ್ಲಿಯೂ ಕೂಡ ಪ್ರಾಣಘಾತಕ್ಕೆ ಕಾರಣವಾದಂಥವುಗಳನ್ನು ತ್ಯಾಗಮಾಡಬೇಕೆಂದು ಹೇಳಿದೆ ಅದಕ್ಕಾಗಿ ಹಿಂಸೆಯಾಗದ ಸೇವೆ ಮೊದಲಾದವು ತ್ಯಾಜ್ಯವಲ್ಲ. ಅದರಿಂದ ಸೇವಾದಿ ಆರಂಭಗಳಲ್ಲಿ—ಈ ಸೂತ್ರದಲ್ಲಿ ನಿರ್ದೇಶಿಸಿದವುಗಳಲ್ಲಿ—ಎರಡು ಭೇದಗಳು ಆಗುತ್ತವೆ ಒಂದು ವಿಧ ಹಿಂಸೆಗೆ ಕಾರಣವಾದಂಥದು, ಇನ್ನೊಂದು ವಿಧ ಹಿಂಸೆಗೆ ಕಾರಣವಾಗದಂಥದು

---

[1] ಅವನು ಇಷ್ಟೇ ಹೇಳಿದ್ದಾನೆ—"ಆರಂಭವಿನಿವೃತ್ತೋಽಸಿಮಸಿ–ಕೃಷಿ–ವಾಣಿಜ್ಯ–ಪ್ರಮುಖಾದಾರಂಭಾತ್ ಪ್ರಾಣಾತಿಪಾತಹೇತೋ ರ್ವಿರತೋ ಭವತಿ!" ಇಲ್ಲಿ ಸೇವೆಯ ಸ್ಥಾನದಲ್ಲಿ ಅಸಿ–ಮಸಿ ಕರ್ಮಗಳ ಸೂಚನೆಯಿದೆ. ಉಳಿದೆಲ್ಲವೂ ಇದ್ದಕ್ಕಿದ್ದಂತೆ ಇದೆ

[2] ಅವರು ತಮ್ಮ 'ಕೃಷ್ಯಾದೀನ್' ಪದದ ವ್ಯಾಖ್ಯೆಯನ್ನು ಮಾಡುವಾಗ ಬರೆಯುತ್ತಾರೆ—'ಕೃಷಿ–ಸೇವಾ–ವಾಣಿಜ್ಯಾದಿ-ವ್ಯಾಪಾರಾನ್ ।'

[3] "ಬಹುಪ್ರಲಪಿತೇನಾಲಮಾತ್ಮಾರ್ಥಂ ವಾ ಪರಾತ್ಮನೇ ।
ಯತ್ರಾರಂಭಸ್ಯ ಲೇಶೋಽಸ್ತಿ ನ ಕುರ್ಯಾತ್ತಾಮಪಿ ಕ್ರಿಯಾಮ್" —ಲಾಟೀ ಸಂಹಿತಾ.

[4] "ಪ್ರಕ್ಷಾಲನಂ ಚ ವಸ್ತ್ರಾಣಾಂ ಪ್ರಾಸುಕೇನ ಜಲಾದಿನಾ ।
ಕುರ್ಯಾದ್ವಾ ಸ್ವಸ್ಯ ಹಸ್ತಾಭ್ಯಾಂ ಕಾರಯೇದ್ವಾ ಸಧರ್ಮಿಣಾ ॥" —ಲಾಟೀ ಸಂಹಿತಾ.

ಪ್ರಾಣಘಾತಕ್ಕೆ ಕಾರಣವಾಗದಂಥ ಆರಂಭಗಳನ್ನು ತ್ಯಾಗಮಾಡಲಿಕ್ಕೆ ಇಲ್ಲಿ ಹೇಳಿಲ್ಲ ಈ ವಿಶೇಷಣದಿಂದ ವ್ರತಿಕನು ತನ್ನ ವಿವೇಕವನ್ನು ಉಪಯೋಗಿಸಿ ಕರ್ತವ್ಯಾಕರ್ತವ್ಯಗಳನ್ನು ನಿರ್ಣಯಿಸಲಿಕ್ಕೆ ಸ್ವಾತಂತ್ರ್ಯವನ್ನು ನೀಡಲಾಗಿದೆ. ಸ ಥ ]

ವಿಶೇಷಾರ್ಥ—ದ್ರವ್ಯವನ್ನು ಗಳಿಸುವದಕ್ಕೆ ಸಾಧನಗಳು ಸೇವೆ, ವ್ಯಾಪಾರ, ಒಕ್ಕಲತನಗಳಾಗಿವೆ ಇವುಗಳಲ್ಲಿ ಪಾಪವಂತೂ ಸಂಭವಿಸತಕ್ಕುದೇ. ಇವುಗಳನ್ನು ತ್ಯಜಿಸಿ ತನ್ನ ಧನವನ್ನು ಸ್ತ್ರೀ, ಪುತ್ರ, ಮಿತ್ರಾದಿಗಳಲ್ಲಿ ಹಂಚಿಬಿಡಬೇಕು ಸ್ವಲ್ಪ ಧನವನ್ನು ತನ್ನಲ್ಲಿಟ್ಟುಕೊಂಡು ಹೆಚ್ಚಿನದನ್ನು ಉಪಾರ್ಜನ ಮಾಡಬಾರದು. ತನ್ನಲ್ಲಿಟ್ಟು-ಕೊಂಡ ಅಲ್ಪ ಧನದೊಳಗಿಂದ ದುಃಖಿತರಿಗೂ ಹಸಿದವರಿಗೂ ಸಹಾಯಮಾಡುವದಕ್ಕಾಗಿ ಅವರಿಗೆ ದಾನಕೊಡಬೇಕು. ಇಲ್ಲವೆ ತನ್ನ ಶರೀರದಲ್ಲಿ ಏನಾದರೂ ರೋಗವು ಉತ್ಪನ್ನವಾದಲ್ಲಿ ಅದನ್ನು ನೆಟ್ಟಗೆ ಮಾಡಿಕೊಳ್ಳಲಿಕ್ಕೆ ವೆಚ್ಚಮಾಡಬೇಕು. ತನಗೆ ಬೇಕಾಗುವ ಅರಿವೆ-ಹೊದಿಕೆಗಳನ್ನೂ ಆ ಧನದಿಂದಲೇ ಕೊಳ್ಳಬೇಕು ತನ್ನಂತೆಯೇ ಯಾರಾದರೂ ದುಃಖಿಗಳಾಗಿದ್ದರೆ ಇಲ್ಲವೆ ತನಗೆ ಪ್ರೀತಿಯವರಿದ್ದರೆ ಅವರ ದುಃಖ ನಿವಾರಣ ಮಾಡಬೇಕು ಉಳಿದ ಪಾಪಕ್ರಿಯೆಗಳಲ್ಲಿ ತನ್ನ ದ್ರವ್ಯವನ್ನು ಉಪಯೋಗಿಸ ಕೂಡದು ತಾನು ಮರ್ಯಾದೆ ಮಾಡಿ ಇಟ್ಟುಕೊಂಡ ಸ್ವಲ್ಪ ದ್ರವ್ಯವನ್ನೂ ಕೂಡ ಕಳ್ಳರು ಅಪಹರಿಸಿದರೆ ಇಲ್ಲವೆ ರಾಜನು ಎತ್ತಿಹಾಕಿದರೆ ಆ ವಿಷಯದಲ್ಲಿ ಶೋಕಿಸಬಾರದು. ಅಲ್ಲದೆ ಅದನ್ನು ತಿರುಗಿ ಸಂಪಾದಿಸುವ ಪ್ರಯತ್ನವನ್ನೂ ಸಹ ಮಾಡಕೂಡದು "ಹೋದದ್ದು ಹೋಯಿತು, ಎಂದಾದರೂ ಅದನ್ನು ನಾನು ತ್ಯಜಿಸಲಿಕ್ಕೇ ಬೇಕಾಗಿತ್ತು ಮೋಹದಿಂದ ಸ್ವಲ್ಪ ಪರಿಗ್ರಹ ಇಟ್ಟುಕೊಂಡಿದ್ದೆ ಅದನ್ನು ಕರ್ಮವು ಇಲ್ಲದಂತೆ ಮಾಡಿ, ನನ್ನ ಮೇಲೆ ದೊಡ್ಡ ಉಪಕಾರವನ್ನೇ ಮಾಡಿದೆ ಇನ್ನು ರಾಗ ದ್ವೇಷ, ಆರಂಭ, ರಕ್ಷಣ, ಭಯ ಮೊದಲಾದ ಎಲ್ಲ ಕ್ಲೇಶಗಳಿಂದ ಮುಕ್ತನಾದೆ. ಇದು ದೊಡ್ಡ ಸುದಿನವು ಇಂದಿನಿಂದ ದ್ರವ್ಯದ ವಿಷಯದ ದುರ್ಧ್ಯಾನ ಮಾಡುವುದು ನಿಂತುಹೋಯಿತು"—ಹೀಗೆ ಉಚ್ಚ ವಿಚಾರಗಳನ್ನು ಮನಸ್ಸಿನಲ್ಲಿ ತಂದು ಶಾಂತಚಿತ್ತರಾಗಬೇಕು ಈ ಪ್ರಕಾರ ವಿಚಾರಿಸಿ ನಡೆಯುವವರೂ ಆರಂಭತ್ಯಾಗ ಪ್ರತಿಮಾಧಾರಿ ಶ್ರಾವಕರೆನಿಸುತ್ತಾರೆ.

ಘನತರಸಾವದ್ಯಕರಂ ನೆನೆವೊಡೆ ಷಟ್ಕರ್ಮಮೆಂದವಂ ತೊಱೆದವನೆಂ- ।
ಟನೆಯ ನೆಲೆಯಾತನಾರಂಭನಿವೃತ್ತನೆನಿಕುಮನುಪಮೋದ್ದಾಮಗುಣಂ ॥

— ಶಾಂತಿನಾಥ — ಸುಕುಮಾರಚರಿತಂ ೬-೩೩

ಇಲ್ಲಿ ಪರಿಗ್ರಹತ್ಯಾಗ ಪ್ರತಿಮೆಯನ್ನು ಕುರಿತು ಸೂತ್ರ ಹೇಳಿದ್ದಾರೆ—

ಬಾಹ್ಯೇಷು ದಶಸು ವಸ್ತುಷು ಮಮತ್ವಮುತ್ಸೃಜ್ಯ ನಿರ್ಮಮತ್ವರತಃ ।
ಸ್ವಸ್ಥಃ ಸಂತೋಷಪರಃ ಪರಿಚಿತ್ತಪರಿಗ್ರಹಾದ್ವಿರತಃ ॥ ೧೪೫ ॥

ಅನ್ವಯಾರ್ಥ—(ಬಾಹ್ಯೇಷು ದಶಸು ವಸ್ತುಷು) ಹೊರಗಿನ ಹತ್ತು ವಿಧದ ಪರಿಗ್ರಹಗಳ ಮೇಲಿನ (ಮಮತ್ವಂ) ಮೋಹ ಬುದ್ಧಿಯನ್ನು (ಉತ್ಸೃಜ್ಯ) ಬಿಟ್ಟು (ನಿರ್ಮಮತ್ವರತಃ) ವೈರಾಗ್ಯದಲ್ಲಿ ತನ್ಮಯನಾದವನು (ಸ್ವಸ್ಥಃ) ಮಾಯಾದಿಕಗಳಲ್ಲಿ ಮಗ್ನನಾಗದವನು (ಸಂತೋಷಪರಃ) ಸಂತುಷ್ಟನಾಗಿರುವಂಥವನು (ಪರಿಚಿತ್ತಪರಿಗ್ರಹಾತ್) ಸುತ್ತುವರಿದು ನೆಲಸಿದ ಪರಿಗ್ರಹಗಳಿಂದ (ವಿರತಃ) ವಿರಕ್ತನಾದವನು ಪರಿಗ್ರಹತ್ಯಾಗ ಪ್ರತಿಮಾಧಾರಿ ಎನಿಸುತ್ತಾನೆ.

ಅರ್ಥ—ಹೊರಗಿನ ಹತ್ತು ಪ್ರಕಾರದ ಪರಿಗ್ರಹಗಳ ಮೇಲಿನ ಮಮತ್ವವನ್ನು ಬಿಟ್ಟು, ಜಗತ್ತಿನಲ್ಲಿ ತನ್ನವರಾರೂ ಇಲ್ಲವೆಂದು ಪರಿಣಾಮವನ್ನು ಸ್ಥಿರವಾಗಿ ಇಟ್ಟುಕೊಳ್ಳಬೇಕು ಶರೀರವೇ ಮೊದಲಾದ ಎಲ್ಲ ಪರಪದಾರ್ಥಗಳ ಮೇಲಿನ ಮೋಹವನ್ನು ಬಿಟ್ಟು, ಅವಿನಾಶಿ ಜ್ಞಾಯಕ ಸ್ವರೂಪದ ವಿಚಾರಮಾಡುವುದರಲ್ಲಿ ಸ್ಥಿರಚಿತ್ತ-ರಾಗಬೇಕು. ಊಟ, ಅರಿವೆ, ಸ್ಥಾನ, ಮೊದಲಾದವುಗಳು ತಮ್ಮ ಕರ್ಮಕ್ಕನುಸರಿಸಿ ಪ್ರಾಪ್ತವಾದುದರಲ್ಲಿಯೇ ಸಂತೋಷ ಮನ್ನಿಸಿ ಹೆಚ್ಚಿನ ಇಚ್ಛೆಯನ್ನು ಮಾಡಕೂಡದು ದೈನ್ಯದ ತ್ಯಾಗವನ್ನು ಮಾಡಿ ನಿಲ್ಲಬೇಕು ಸಧ್ಯಕ್ಕೆ ಉಪಭೋಗಿಸುತ್ತಿರುವ ಪರಿಗ್ರಹಗಳ ಮೇಲೆಯೂ ಸಹ ಆಸಕ್ತಿಯನ್ನು ಇಡಕೂಡದು ವಿರಕ್ತನಾಗಿರಬೇಕು ಈ ಪ್ರಕಾರ ಇರುವವರಿಗೆ ಪರಿಗ್ರಹತ್ಯಾಗ ಎಂಬ ಒಂಭತ್ತನೆಯ ಪ್ರತಿಮೆಯು ಸಿದ್ಧಿಸುತ್ತದೆ [ಪರಿಗ್ರಹ ಪರಿಮಾಣ

ಎಂಬ ಅಣುವ್ರತವನ್ನು ಗ್ರಹಣಮಾಡುವಾಗ ಕೆಲವೊಂದು ಪರಿಗ್ರಹಗಳನ್ನು ಇಟ್ಟುಕೊಂಡಿರುತ್ತೇವೆ. ಅವುಗಳ ವಿಷಯದಲ್ಲಿ ಸ್ವಲ್ಪ ಮಮತ್ವವೂ ಇರುತ್ತದೆ ಅಂಥವುಗಳಿಗೆ ಇಲ್ಲಿ 'ಪರಿಚಿತ್ತಪರಿಗ್ರಹ' ಎಂದು ಹೇಳಲಾಗಿದೆ ಇವುಗಳಿಂದಲೂ ವಿರಕ್ತನಾಗಲಿಕ್ಕೆ ಈ ಒಂಭತ್ತನೆಯ ಪದದಲ್ಲಿರುವ ಶ್ರಾವಕನಿಗೆ ಅನುವುಮಾಡಿಕೊಟ್ಟಿದೆ ಈ ಪ್ರತಿಮಾಧಾರಿಗಳು ಇರುವ ಅಲ್ಪ ಸ್ವಲ್ಪ ಪರಿಗ್ರಹಗಳ ವಿಷಯದಲ್ಲಿ ಇದ್ದ ಮಮತ್ವ ಭಾವವನ್ನೂ ತೊರೆಯುವ ಸಾಧನೆಯನ್ನು ಮಾಡಬೇಕು. ಇದಕ್ಕಾಗಿ 'ಸ್ವಸ್ಥ' ಹಾಗೂ 'ಸಂತೋಷತತ್ಪರ'ರಾಗಿರುವುದು ಬಹಳ ಅವಶ್ಯಕವಾಗಿದೆ ಎಲ್ಲಿಯ ವರೆಗೆ ಸಾಧಕನು ತನ್ನ ಆತ್ಮನನ್ನು ತಿಳಿದು, ಅದರಲ್ಲಿಯೇ ತನ್ಮಯನಾಗಿರುವದಿಲ್ಲವೋ ಅಲ್ಲಿಯ ವರೆಗೆ ಅವನ ಮನಸ್ಸು ಹೊರಗೆ ಸುತ್ತಾಡುತ್ತಿರುವುದು. ಆಗ ಸಂತೋಷವೆಂಬುದು ಇರುವದಿಲ್ಲ. ಇಂಥ ಅಸಂತುಷ್ಟ ಸ್ಥಿತಿಯಲ್ಲಿ ಪರಿಗ್ರಹಗಳನ್ನು ತ್ಯಾಗಮಾಡಿದರೂ ಏನು ಲಾಭವಾದೀತು? ಅದು ಒಂದು ರೀತಿಯಿಂದ ವ್ಯರ್ಥವೇ ಆಗಿದೆ. ಸ. ಧ.]

ವಿಶೇಷಾರ್ಥ—ಒಂಭತ್ತನೆಯ ಪ್ರತಿಮಾಧಾರಿಯಾದ ಶ್ರಾವಕನು ರೂಪಾಯಿ, ಮೊಹರು, ಬಂಗಾರ, ಬೆಳ್ಳಿ, ಅಲಂಕಾರ, ವಸ್ತ್ರಾಭರಣ, ಸುಗಂಧ ದ್ರವ್ಯ ಮೊದಲಾದ ಎಲ್ಲ ವಸ್ತುಗಳನ್ನೂ ತ್ಯಾಗಮಾಡಬೇಕು. ಚಳಿ ಮತ್ತು ಬಿಸಿಲುಗಳ ವೇದನೆಯನ್ನು ಇಲ್ಲದಂತೆ ಮಾಡುವದಕ್ಕಾಗಿ ಕಡಿಮೆ ಬೆಲೆಯ ಮರ್ಯಾದಿತ ಪ್ರಮಾಣದ ವಸ್ತ್ರಗಳನ್ನು ಉಪಯೋಗಿಸಬೇಕು. ಕೈಕಾಲುಗಳನ್ನು ತೊಳೆಯಲಿಕ್ಕೂ ನೀರು ಕುಡಿಯಲಿಕ್ಕೂ ಬೇಕಾಗುವ ಒಂದು ಪಾತ್ರೆಯನ್ನು ಮಾತ್ರ ಪರಿಗ್ರಹವೆಂದು ಹತ್ತರ ಇಟ್ಟುಕೊಳ್ಳಬೇಕು ಈ ಪ್ರಕಾರದ ವೃತ್ತಿಗೆ ಪರಿಗ್ರಹತ್ಯಾಗ ಪ್ರತಿಮೆ ಎನ್ನುವರು ಇದಲ್ಲದೆ ಮನೆಯಲ್ಲಿ ಇಲ್ಲವೆ ಇನ್ನೊಂದು ಏಕಾಂತ ಸ್ಥಳದಲ್ಲಿ ಮಲಗುವುದು, ಕೂಡುವುದು, ಏಳುವುದು, ಊಟ-ವಸ್ತ್ರಗಳನ್ನು ಮನೆಯವರು ತಂದುಕೊಟ್ಟರೆ ಮಾತ್ರ ತಕ್ಕೊಳ್ಳುವುದು ಔಷಧ, ಆಹಾರ, ನೀರು, ಅರಿವೆಗಳನ್ನು ತಕ್ಕೊಳ್ಳುವ ಇಚ್ಛೆಯಾದರೆ ಇಲ್ಲವೆ ಮೈ ಮೊದಲಾದವುಗಳು ನೋಯುತ್ತಿದ್ದರೆ ತಮ್ಮ ಮನೆಯ ಹೆಂಡರು ಮಕ್ಕಳಿಗೆ ಹೇಳಬೇಕು. ಅವರು ವೈಯಾವೃತ್ಯವನ್ನು ಮಾಡಿದರೂ ಅಷ್ಟೇ, ಮಾಡದಿದ್ದರೂ ಅಷ್ಟೇ. ಮನದಲ್ಲಿ ವಿಕಲ್ಪವನ್ನು ತರಕೂಡದು. ಇನ್ನು "ಇದು ನನ್ನ ಮನೆ, ಈ ಎಲ್ಲ ಧನವನ್ನು ನಾನು ಸಂಪಾದನ ಮಾಡಿ ನಿಮಗೆ ಒಪ್ಪಿಸಿರುವೆ. ಹೀಗಿದ್ದೂ ನೀವು ನನ್ನ ಮಾತನ್ನು ಕೇಳುವದಿಲ್ಲವೆ!"—ಇವೇ ಮೊದಲಾದ ಶಬ್ದಗಳಿಂದ ಅವರ ಮನವನ್ನು ನೋಯಿಸಿ, ತನ್ನ ಪರಿಣಾಮದಲ್ಲಿ ಕ್ಲೇಶವನ್ನು ಉತ್ಪನ್ನವಾಗಗೊಡಬಾರದು. ಈ ಪ್ರವೃತ್ತಿಯಿಂದ ಇರುವ ಗೃಹಸ್ಥನ ಸಮಾವೇಶವು ಈ ಪ್ರತಿಮೆಯಲ್ಲಿ ಆಗುವದು.

> ಧನಧಾನ್ಯಾದಿ ಪರಿಗ್ರಹಮನಾವಗಂ ತೊಱೆದು ನೆಗೞ್ದ ಪಾಸಕನೊಂಬ- ।
> ತ್ತನೆಯ ಪರಿಮಿತ ಪರಿಗ್ರಹವಿನಿವೃತ್ತನುದಾತ್ತಧರ್ಮನಿರ್ಮಲಚಿತ್ತಂ ॥
>
> —ಶಾಂತಿನಾಥ—ಸುಕುಮಾರಚರಿತಂ ೬-೩೪.

ಈ ಸೂತ್ರದಲ್ಲಿ ಅನುಮತಿ ತ್ಯಾಗ ಪ್ರತಿಮೆಯನ್ನು ಆಚಾರ್ಯರು ವಿವರಿಸುತ್ತಾರೆ—

> ಅನುಮತಿರಾರಂಭೇ ವಾ ಪರಿಗ್ರಹೇ ವೈಹಿಕೇಷು ಕರ್ಮಸು ವಾ ।
> ನಾಸ್ತಿ ಖಲು ಯಸ್ಯ ಸಮಧೀರನುಮತಿವಿರತಃ ಸ ಮಂತವ್ಯಃ ॥ ೧೪೬ ॥

ಅನ್ವಯಾರ್ಥ—(ಆರಂಭೇ, ಪರಿಗ್ರಹೇ, ವಾ ಐಹಿಕೇಷು ಕರ್ಮಸು) ಆರಂಭ, ಪರಿಗ್ರಹ ಅಥವಾ ವಿವಾಹಾದಿ ಐಹಿಕ ಕಾರ್ಯಗಳ ಸಂಬಂಧದಲ್ಲಿ (ಖಲು) ನಿಶ್ಚಯದಿಂದ (ಯಸ್ಯ) ಯಾರ (ಅನುಮತಿಃ ನಾಸ್ತಿ) ಅನುಮತಿಯು ಇರುವದಿಲ್ಲವೋ (ಸ ಸಮಧೀಃ) ಅವನು ಸಮದೃಷ್ಟಿಯುಳ್ಳವನು (ಅನುಮತಿವಿರತಃ) ಅನುಮತಿವಿರತ-ನೆಂದು (ಮಂತವ್ಯಃ) ತಿಳಿಯಬೇಕು.

ಅರ್ಥ—ಆರಂಭವೆಂದರೆ ಒಕ್ಕಲತನ, ವ್ಯಾಪಾರ ಮೊದಲಾದ ಕ್ರಿಯೆಗಳು. ಪರಿಗ್ರಹವೆಂದರೆ ಧನ ಧಾನ್ಯಾದಿಗಳು. ಐಹಿಕ ಕಾರ್ಯಗಳೆಂದರೆ ಲಗ್ನಾದಿ ಕ್ರಿಯೆಗಳು. ಇವುಗಳ ವಿಷಯದಲ್ಲಿ ಸಮಬುದ್ಧಿಯನ್ನಿಡುವುದು ಹಾಗಂದರೇನೇ ಅನುಮತಿಕೊಡದಿರುವುದು ಇಂದವರಿಗೆ ಅನುಮತಿ ತ್ಯಾಗ ಪ್ರತಿಮಾಧಾರಿ ಎಂದು ಹೇಳುವರು. [ಇಲ್ಲಿ 'ಆರಂಭ' ಎಂಬ ಪದದಿಂದ ಸೂಚಿಸಿದ ಕ್ರಿಯೆಗಳು ಹಿಂಸೆಯ ಉದ್ದೇಶವುಳ್ಳವುಗಳು ಮಾತ್ರ ಆಗಿವೆ ಅಂದರೆ

ಒಂಭತ್ತನೆಯ ಪ್ರತಿಮೆಯಲ್ಲಿ ಯಾವ ಯಾವ ಕ್ರಿಯೆಗಳನ್ನು ಸ್ವತಃ ಮಾಡಲಾಗದೆಂದು ವ್ರತವನ್ನು ಸ್ವೀಕರಿಸಲಾಗುವುದೋ ಅವೆಲ್ಲ ಸಮಾವೇಶವಾಗುತ್ತದೆ ಈ ಪ್ರತಿಮೆಯಲ್ಲಿ ಅಂಥ ಕ್ರಿಯೆಗಳನ್ನು ಅನ್ಯರು ಮಾಡುವದಕ್ಕೂ ಸಮ್ಮತಿಸಕೂಡ-ದೆಂದು ವಿಧಿಸಿದೆ. ಇನ್ನು 'ಪರಿಗ್ರಹ' ಎಂಬ ಪದದಲ್ಲಿ ಹತ್ತು ವಿಧದ ಬಾಹ್ಯ ಪರಿಗ್ರಹಗಳೆಲ್ಲ ಸಮಾವೇಶವಾಗುತ್ತವೆ. 'ಐಹಿಕೇಷು ಕರ್ಮಸು' ಈ ಪದಗಳಿಂದ ಆರಂಭ ಮತ್ತು ಪರಿಗ್ರಹಗಳಿಂದ ಭಿನ್ನವಾದ ಲೌಕಿಕ ಕಾರ್ಯಗಳನ್ನು ಸೂಚಿಸಲಾಗಿದೆ ಧಾರ್ಮಿಕ ಅಥವಾ ಪಾರಲೌಕಿಕ ಕಾರ್ಯಗಳ ಸಮಾವೇಶವು ಇದರಲ್ಲಿ ಇಲ್ಲ. ಧಾರ್ಮಿಕ ಕ್ರಿಯೆಗಳಿಗೆ ಅನುಮತಿ ಕೊಡಲಿಕ್ಕೂ ಇನ್ನೊಬ್ಬರಿಗೆ ಹೇಳಿಸಿ ಮಾಡಿಸಲಿಕ್ಕೂ ಇವರಿಗೆ ಸ್ವಾತಂತ್ರ್ಯವಿದೆ. ಈ ಪದಧಾರಕರಿಗೆ 'ಸಮಧೀಃ' ಎಂದು ಹೇಳಿದ್ದು ತೀರ ಮಹತ್ವದ ಸಂಗತಿಯಾಗಿದೆ. ಇದು ಅನ್ಯರಿಂದ ಆಗುವ ಯಾವ ಲೌಕಿಕ ಕಾರ್ಯಗಳ ವಿಷಯದಲ್ಲಿಯೂ ಸಮಭಾವವನ್ನೇ ತಾಳುವನು. ಈ ಸಮಭಾವವಿಲ್ಲದಿದ್ದರೆ ರಾಗದ್ವೇಷದಲ್ಲಿ ಬೀಳಬೇಕಾಗುತ್ತದೆ. ಅದರಿಂದ ಸಮಭಾವವೇ ಈ ಪದದ ಮುಖ್ಯ ರಕ್ಷಕವೆನಿಸಿದೆ. ಸ ಧ]

ವಿಶೇಷಾರ್ಥ—ಊಟವು ಕಹಿ, ಹುಳಿ, ರುಚಿ, ಖಾರ, ಸವಿ ಅಥವಾ ರುಚಿ ಇಲ್ಲದುದು ಯಾವುದೇ ಇರಲಿ ಅದರ ವಿಷಯದಲ್ಲಿ ರಾಗ-ದ್ವೇಷಗಳ ವಿಕಾರವನ್ನು ಮೂಲದಲ್ಲಿಯೇ ಉತ್ಪನ್ನವಾಗಗೊಡತಕ್ಕದ್ದಲ್ಲ. ತನ್ನ ಮುಖದಿಂದ ಅದಕ್ಕೆ ಒಳ್ಳೆಯದು ಮತ್ತು ಕೆಟ್ಟದು ಎಂದು ಹೇಳಕೂಡದು ಇದೇ ಪ್ರಕಾರ ತನ್ನ ಮಗ ಇಲ್ಲವೆ ಮಗಳ ಲಾಭಾಲಾಭ, ಹಾನಿ-ವೃದ್ಧಿ, ಸುಖ-ದುಃಖ ಮೊದಲಾದ ಕಾರ್ಯಗಳಲ್ಲಿ ತಾನು ಹರ್ಷ ವಿಷಾದಗಳನ್ನು ಹೊಂದಕೂಡದು. ಅಲ್ಲದೆ ಅನುಮೋದವನ್ನು ಕೊಡಕೂಡದು. ಈ ಪ್ರಕಾರ ನಡೆದರೆ ಹತ್ತನೆಯ ಪ್ರತಿಮೆಯು ಸಿದ್ಧಿಸುತ್ತದೆ.

ತನಗೆಂದು ಮಾಡಿಸುತ್ತಂ ತನಗೆಲ್ಲಂ ತನ್ನನಟ್ಟಿಸಿ ಮಾಡಿದುದಂ ಕೊ- ।
ಳ್ಳೆನೆನಿಪ್ಪನಾತನನುಮೋದನವಿರತಂ ದೇಶವಿರತರೊಳ್ಪತ್ತನೆಯಂ ॥

—ಶಾಂತಿನಾಥ—ಸುಕುಮಾರ ಚರಿತಂ—೬-೩೫.

ಉದ್ದಿಷ್ಟಾಹಾರ ತ್ಯಾಗ ಪ್ರತಿಮೆಯನ್ನು ವಿವರಿಸಲು ಸೂತ್ರವನ್ನು ರಚಿಸುತ್ತಾರೆ—

ಗೃಹತೋ ಮುನಿವನಮಿತ್ವಾ ಗುರೂಪಕಂಠೇ ವ್ರತಾನಿ ಪರಿಗೃಹ್ಯ ।
ಭೈಕ್ಷ್ಯಾಶನಸ್ತಪಸ್ಯನ್ನುತ್ಕೃಷ್ಟಶ್ಚೇಲಖಂಡಧರಃ ॥ ೧೪೭ ॥

ಅನ್ವಯಾರ್ಥ—(ಗೃಹತಃ ಮುನಿವನಂ ಇತ್ವಾ) ಮನೆ ಸಂಸಾರಗಳನ್ನು ತ್ಯಾಗಮಾಡಿ ಮುನಿಯ ಆಶ್ರಮದಲ್ಲಿ ಹೋಗಿ (ಗುರೂಪಕಂಠೇ) ಗುರುವಿನ ಹತ್ತರ (ವ್ರತಾನಿ ಪರಿಗೃಹ್ಯ) ವ್ರತಗಳನ್ನು ಸ್ವೀಕರಿಸಿ (ತಪಸ್ಯನ್) ತಪಸ್ಸನ್ನು ಮಾಡುವಂಥವನು (ಭೈಕ್ಷ್ಯಾಶನಃ) ಭಿಕ್ಷೆಯಿಂದ ಊಟಮಾಡುವಂಥವನು (ಚೇಲಖಂಡಧರಃ) ಕೌಪೀನ ವಸ್ತ್ರವನ್ನು ಧರಿಸುವಂಥವನು (ಉತ್ಕೃಷ್ಟಃ) ಉತ್ಕೃಷ್ಟ ಶ್ರಾವಕನು.—ಇವನು ಹನ್ನೊಂದನೆಯ ಪ್ರತಿಮಾಧಾರಿಯು.

ಅರ್ಥ—ಮನೆಯಿಂದ ಹೊರಬಿದ್ದು, ಮುನಿಗಳಿರುವ ವನದಲ್ಲಿ ಹೋಗಿ ನಿಂತು, ಗುರುಗಳ ಹತ್ತರ ವ್ರತ ತಕ್ಕೊಂಡು, ಭಿಕ್ಷೆಯಿಂದ ಆಹಾರವನ್ನು ಸ್ವೀಕರಿಸುತ್ತ ತಪಶ್ಚರಣದಲ್ಲಿ ಲೀನನಾಗುತ್ತಾರೆ ಕೇವಲ ಲಂಗೋಟಿ ಹಾಗೂ ಅಪೂರ್ಣ ವಸ್ತ್ರವನ್ನು ಮಾತ್ರ ಧಾರಣಮಾಡುತ್ತಾರೆ. ಇವರು ಉದ್ದಿಷ್ಟ ಆಹಾರ ತ್ಯಾಗ ಪ್ರತಿಮಾಧಾರಿ ಶ್ರಾವಕನೆನಿಸುತ್ತಾರೆ.

ವಿಶೇಷಾರ್ಥ—[ಈ ಗ್ರಂಥವು ರಚನೆಯಾದ ಕಾಲದಲ್ಲಿ—ಕ್ರಿ. ಶ. ಆರಂಭದ ಶತಮಾನಗಳಲ್ಲಿ—ಮುನಿಗಳು ವನದಲ್ಲಿಯೇ ವಾಸಿಸುತ್ತಿದ್ದರು ಆಗ ಚೈತ್ಯವಾಸವು ರೂಢಿಯಲ್ಲಿರಲಿಲ್ಲ ಅದರಿಂದ ಇಲ್ಲಿ ಮುನಿಗಳ ಹತ್ತರ ವನಕ್ಕೆ ಹೋಗುವ ಮಾತು ಬರುತ್ತದೆ ಹನ್ನೊಂದನೆಯ ಪ್ರತಿಮಾಧಾರಿಯಾದ ಶ್ರಾವಕನು। ಮನೆಯಿಂದ ಹೊರಬಿದ್ದು ಮುನಿಗಳಿರುವ ವನಕ್ಕೆ ಹೋಗಿ ಆ ಪದಕ್ಕೆ ಅವಶ್ಯವಿರುವ ಎಲ್ಲ ವ್ರತಗಳನ್ನು ಸ್ವೀಕರಿಸುತ್ತಾನೆ. ಈ ಮೊದಲು ಸ್ವೀಕರಿಸಿದ ವ್ರತಗಳೆಲ್ಲ ಈಗ ಪುನರಾವೃತ್ತಿಗೊಳ್ಳುತ್ತವೆ. ಅಲ್ಲದೆ ಈ ವ್ರತಗಳ ಆಚರಣೆಯೆಲ್ಲ ಗುರುಗಳ ಸಾಂನಿಧ್ಯದಲ್ಲಿ ನಡೆಯುತ್ತದೆ. ಇಂದಿನ ಕಾಲದಲ್ಲಿ ಮುನಿಗಳು ಅನಗಾರಿತ್ವ ಧರ್ಮವನ್ನು ತೊರೆದು ಬಹುತರ ಜಿನಮಂದಿರ ಹಾಗೂ ಮಠಗಳಲ್ಲಿ ವಾಸಿಸುತ್ತಿದ್ದಾರೆ. ಅದರಿಂದ ಅಲ್ಲಿಯೇ ಹೋಗಿ ವ್ರತಗಳನ್ನು ಸ್ವೀಕರಿಸ-

ಬೇಕಾಗುತ್ತದೆ ಅದು ಸಾಧ್ಯವಾಗದಿದ್ದಲ್ಲಿ ಜಿನ ಪ್ರತಿಮೆಯನ್ನು ಸಾಕ್ಷಿಯನ್ನಾಗಿ ಇಟ್ಟುಕೊಂಡು ವ್ರತಗಳನ್ನು ಗ್ರಹಣ ಮಾಡಬೇಕು ಈ ಪದಧಾರಿಗಳ ವಿಷಯದಲ್ಲಿ 'ಭೈಕ್ಷ್ಯಾಸನಃ' 'ತಪಸ್ಯನ್' ಮತ್ತು 'ಚೇಲಖಂಡಧರಃ' ಎಂದು ಬಳಸಿದ ಮೂರೂ ವಿಶೇಷಣಗಳನ್ನು ಇಲ್ಲಿ ಲಕ್ಷ್ಯಪೂರ್ವಕವಾಗಿ ಗಮನಿಸಬೇಕು ಇವುಗಳಲ್ಲಿ ಮೊದಲನೆಯ ವಿಶೇಷಣವು ಅವರ ಊಟದ ಸ್ಥಿತಿಯನ್ನೂ, ಎರಡನೆಯದು ಸಾಧನೆಯ ಸ್ವರೂಪವನ್ನೂ, ಮೂರನೆಯದು ಅವರ ಬಾಹ್ಯ ವೇಷವನ್ನೂ ಸೂಚಿಸುತ್ತವೆ ಅವರ ಮೈಮೇಲಿನ ವಸ್ತ್ರವಂತೂ ಅಪೂರ್ಣವಾಗಿರುತ್ತದೆ. ತಲೆಯಿಂದ ಪಾದಗಳ ವರೆಗೆ ಹೊತ್ತುಕೊಳ್ಳಲಿಕ್ಕೆ ಬರುವಂತಿರುವದಿಲ್ಲ ಕಾಲು ಮುಚ್ಚಿದರೆ ಮುಖ ಹೊರಗೆ ಉಳಿಯುತ್ತದೆ ಮುಖಕ್ಕೆ ಆವರಣದಂತೆ ಹಾಕಿಕೊಂಡರೆ ಕಾಲುಗಳು ಹೊರಗೆ ಉಳಿಯುತ್ತವೆ. ಇಂಥ ಖಂಡ ವಸ್ತ್ರವು ಅವರ ಮೈಮೇಲೆ ಇರುತ್ತದೆ 'ಭೈಕ್ಷ್ಯ' ಶಬ್ದವು ಭಿಕ್ಷಾ ಮತ್ತು ಬಿಕ್ಷೆಯ ಸಮೂಹ ಈ ಎರಡೂ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. [1] ಪ್ರಭಾಚಂದ್ರನು ತನ್ನ ಟೀಕೆಯಲ್ಲಿ 'ಭಿಕ್ಷಾಣಾಂ ಸಮೂಹೋ ಭೈಕ್ಷ್ಯಂ' ಈ ನಿರುಕ್ತಿಯ ಮುಖಾಂತರ 'ಭಿಕ್ಷಾ ಸಮೂಹ' ಎಂಬ ಅರ್ಥವನ್ನೇ ಸ್ವೀಕರಿಸಿದ್ದಾನೆ. ಮತ್ತು ಅದು ಸಮರ್ಪಕವೂ ಎನಿಸುತ್ತದೆ ಯಾಕಂದರೆ ಸಮಂತಭದ್ರರಿಗೆ 'ಭಿಕ್ಷಾಸಮೂಹ' ಎಂಬ ಅರ್ಥವು ಸಮ್ಮತವಿರದಿದ್ದರೆ ನೇರವಾಗಿ 'ಭಿಕ್ಷಾಶನಃ' ಎಂಬ ಪದವನ್ನು ಇಟ್ಟು ಸಮಾಧಾನವನ್ನು ಅವರು ಹೊಂದುತ್ತಿದ್ದರು. ಇಷ್ಟರಿಂದಲೇ ಅವರ ಕಾರ್ಯವು ಸಫಲವಾಗುತ್ತಿತ್ತು. ಆ ಸ್ಥಾನದಲ್ಲಿ 'ಭೈಕ್ಷ್ಯಾಸನಃ'ದಂಥ ಕ್ಲಿಷ್ಟ ಪದವನ್ನು ಇಂಥ ಸೂತ್ರಾತ್ಮಕ ಲೇಖಕರು ಎಂದೂ ಇಡುತ್ತಿರಲಿಲ್ಲ. ಇಲ್ಲಿ ಛಂದಸ್ಸಿನ ದೃಷ್ಟಿಯಿಂದಲೂ ಹೀಗೆ ಮಾಡುವ ಆವಶ್ಯಕತೆಯು ತೋರುವದಿಲ್ಲ. ಶ್ರೀ ಕುಂದಕುಂದಾಚಾರ್ಯರು ತಮ್ಮ 'ಸುತ್ತಪಾಹುಡ'ದಲ್ಲಿ ಉತ್ಕೃಷ್ಟ ಶ್ರಾವಕನ ಲಕ್ಷಣವನ್ನು ಹೇಳುತ್ತಾರೆ ಆಗ ಅವರು 'ಭಿಕ್ಖಂ ಭಮೇಇ ಪತ್ತೋ'ದಂಥ ವಾಕ್ಯದಿಂದ ಭಿಕ್ಷಾ ಪಾತ್ರೆಯನ್ನು ತಕ್ಕೊಂಡು ಭಿಕ್ಷೆಗಾಗಿ ಭ್ರಮಣ ಮಾಡುವವರೆಂದು ಸೂಚಿಸಿದ್ದಾನೆ ಇದರಿಂದ ಪ್ರಾಚೀನ ಕಾಲದಲ್ಲಿ ಅನೇಕ ಮನೆಗಳಿಂದ ಭಿಕ್ಷೆಯನ್ನು ಸ್ವೀಕರಿಸುವ ಪದ್ಧತಿಯು ರೂಢಿಯಲ್ಲಿತ್ತೆಂಬುದು ಗೊತ್ತಾಗುತ್ತದೆ ಈ ಭ್ರಾಮರೀ ವೃತ್ತಿಯಿಂದ ಹಲವು ಮನೆಗಳಿಂದ ಆಹಾರವನ್ನು ಸ್ವೀಕರಿಸುವುದರ ಉದ್ದೇಶವು ಯಾರಿಗೂ ತೊಂದರೆಯಾಗಬಾರದೆಂದೇ ಇದೆ ಅಲ್ಲದೆ ಇದರಲ್ಲಿ ವಿಶೇಷ ಆಡಂಬರವೂ ಇರುವದಿಲ್ಲ ಭೋಜನವೂ ಅನುದ್ದಿಷ್ಟವಾಗಿರುತ್ತದೆ ಇನ್ನು 'ತಪಸ್ಯನ್' ಎಂಬ ಪದವು ಬಾಹ್ಯಾಭ್ಯಂತರ ತಪಶ್ಚರಣದ ದ್ಯೋತಕವಾಗಿದೆ. ಇದು ಕರ್ಮದ ನಿರ್ಮೂಲನವನ್ನು ಮಾಡಿ ಆತ್ಮವಿಕಾಸಕ್ಕೆ ಯಥಾಶಕ್ತಿ ಸಿದ್ಧಗೊಳಿಸುತ್ತದೆ ಇದರಲ್ಲಿ ಊಟ ಮೊದಲಾದ ಬಾಹ್ಯ ತಪಗಳಿಗಿಂತ ಸ್ವಾಧ್ಯಾಯ ಹಾಗೂ ಧ್ಯಾನಗಳಂಥ ಅಭ್ಯಂತರ ತಪಗಳಿಗೆ ಹೆಚ್ಚಿನ ಮಹತ್ವವಿದೆ. ಬಾಹ್ಯ ತಪವು ಅಭ್ಯಂತರ ತಪದ ವೃದ್ಧಿಗಾಗಿ ಯಾವಾಗಲೂ ಆಚರಿಸಲ್ಪಡುತ್ತದೆ ಇನ್ನು ಮೂಲದಲ್ಲಿ ಸೂತ್ರಕಾರರು ಈ ಪದಾಧಿಕಾರಿಗಳನ್ನು 'ಉತ್ಕೃಷ್ಟಃ' ಎಂಬ ಪದದಿಂದ ಸಂಬೋಧಿಸಿದ್ದಾರೆ ಅವರು ಉದ್ದಿಷ್ಟವಿರತ ಇಲ್ಲವೆ ಕ್ಷುಲ್ಲಕ ಎಂದು ಹೇಳಲಿಕ್ಕೆ ಮನಸ್ಸು ಮಾಡಿಲ್ಲ, ಇದರಲ್ಲಿಯೂ ಸಹ ವೈಶಿಷ್ಟ್ಯವಿದೆ ಈ ವ್ರತಧಾರಿಗಳನ್ನು 'ಉತ್ಕೃಷ್ಟ ಶ್ರಾವಕ'ರೆಂದೇ ಕರೆಯುವುದರಲ್ಲಿ ಸಫಲತೆಯನ್ನು ಅವರು ಕಂಡಿದ್ದಾರೆ. ಈ ಪದವು ಆರಂಭದಲ್ಲಿ ಏಕರೂಪದಲ್ಲಿ ಇತ್ತು. ಮುಂದಿನ ಕಾಲದಲ್ಲಿ 'ಕ್ಷುಲ್ಲಕ' ಮತ್ತು 'ಐಲಕ' ಎಂದು ಎರಡು ವಿಧದಲ್ಲಿ ವಿಂಗಡಿಸಲ್ಪಟ್ಟಿತು ಐಲಕ ಪದದ ಕಲ್ಪನೆಯು ಬಹಳ ಹಿಂದಿನದಾಗಿದೆ.[2] ಸ. ಥ] ಸಂಪೂರ್ಣ ಗೃಹ ಕುಟುಂಬಗಳ ವಿಷಯದಲ್ಲಿ ವಿರಕ್ತಿಯನ್ನು ಧಾರಣಮಾಡಿ, ಅರಣ್ಯದಲ್ಲಿ ಹೋಗಿ ಯಾವನು ಮುನೀಶ್ವರರ ಹತ್ತರ ದೀಕ್ಷೆಯನ್ನು ಸ್ವೀಕರಿಸುತ್ತಾನೆಯೋ ಅವನು ಹನ್ನೊಂದನೆಯ ಪ್ರತಿಮಾಧಾರಿಯಾದ ಉತ್ಕೃಷ್ಟ ಶ್ರಾವಕನೆನಿಸುತ್ತಾನೆ. ಇವನು ಕೌಪೀನವನ್ನೂ ಅಪೂರ್ಣ ವಸ್ತ್ರವೊಂದನ್ನೂ ಮಾತ್ರ ಧರಿಸುತ್ತಾನೆ. ಉಳಿದದ್ದನ್ನೆಲ್ಲ ತ್ಯಾಗ ಮಾಡುತ್ತಾನೆ. ಸೊಣ, ಗುಂಗಾಡು, ಚಳಿ, ಬಿಸಿಲು, ಗಾಳಿ, ಮಳೆ ಮೊದಲಾದವುಗಳಿಂದ ಆಗುವ ಪರೀಷಹಗಳನ್ನು ಸಹನ ಮಾಡುವ ಶಕ್ತಿಯು ಇರುವದಿಲ್ಲವೆಂದೇ ವಸ್ತ್ರವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಭಿಕ್ಷೆಯಿಂದ ಊಟವನ್ನು ಸ್ವೀಕರಿಸಲಿಕ್ಕೆ ಬೇಕು ಆದರೆ ಅದು ಅಯಾಚಕ ವೃತ್ತಿಯಾಗಿರಬೇಕು ಅದಕ್ಕಾಗಿ ಮೌನ ವ್ರತಧಾರಣ ಮಾಡಲಾಗುತ್ತದೆ.

---

[1] "ಭಿಕ್ಷೈವ ತತ್ಸಮೂಹೋ ವಾ ಅಣ್"— ವಾಮನ ಶಿವರಾಮ ಆಪ್ಟೆ ಅವರ ಸಂಸ್ಕೃತ ಇಂಗ್ಲಿಷ್ ಡಿಕ್ಷನರಿ.

[2] 'ಅನೇಕಾಂತ' ವರ್ಷ ೧೨; ೧೧—೧೨ ಸಂಯುಕ್ತ ಸಂಚಿಕೆಯಲ್ಲಿ ಪ್ರಕಟವಾದ 'ಐಲಕ-ಪದ-ಕಲ್ಪನಾ' ಎಂಬ ಪ್ರಬಂಧವನ್ನು ವಿವರಗಳಿಗೆ ನೋಡಬಹುದು

ಆ ವೇಳೆಗೆ ನಮಗಾಗಿ ಬುದ್ಧಿಪೂರ್ವಕವಾಗಿ ಯಾರಾದರೂ ಆಹಾರವನ್ನು ಸಿದ್ಧಗೊಳಿಸುತ್ತಾರೆಂದರೆ ಅದನ್ನು ಸ್ವೀಕರಿಸಕೂಡದು ತಮ್ಮ ಸಲುವಾಗಿ ಯಾರಾದರೂ ಆರಂಭ ಮಾಡುತ್ತಿದ್ದಾರೆಂದು ತಿಳಿದೊಡನೆಯೇ ಊಟವನ್ನು ಬಿಟ್ಟು ಬಿಡಬೇಕು ಆಮಂತ್ರಣ ಕೊಡಲಿಕ್ಕೆ ಬಂದವರ ಮನೆಗೆ ಹೋಗಬಾರದು ವನ ಇಲ್ಲವೆ ಊರ ಹೊರಗಿನ ಸ್ಥಳದಲ್ಲಿ ವಾಸಿಸಬೇಕು ಅಲ್ಲಿ ಉಪಸರ್ಗವು ಪ್ರಾಪ್ತವಾದರೆ ನಿರ್ಭಯವಾಗಿ ಅದನ್ನು ಸಹನ ಮಾಡಬೇಕು. ಆಗ ಗಾಬರಿಯಾಗಿ ದೀನನಾಗಕೂಡದು ಧ್ಯಾನ ಸ್ವಾಧ್ಯಾಯಗಳಲ್ಲಿ ಯಾವಾಗಲೂ ಮಗ್ನನಾಗಿರಬೇಕು. ಗೃಹಸ್ಥರ ಮನೆಯಲ್ಲಿ ಭಿಕ್ಷೆಗಾಗಿ ಆಮಂತ್ರಣವಿಲ್ಲದೇನೇ ಹೋಗಬೇಕು ಅವನು ತನಗಾಗಿ ಸಿದ್ಧಗೊಳಿಸಿದ ಅನ್ನದಲ್ಲಿ ಭಕ್ತಿಯಿಂದ ಎಷ್ಟನ್ನು ಕೊಡುವನೋ ಅಷ್ಟನ್ನೂ ಮಾತ್ರ ಸ್ವೀಕರಿಸಬೇಕು. ಅದು ಸರಸವಿರಲಿ, ನೀರಸವಿರಲಿ, ಹುಳಿಯಿರಲಿ, ಕಾರವಿರಲಿ, ಕಹಿಯಿರಲಿ ಎಂಥದಿದ್ದರೂ ಸಾಮ್ಯಭಾವದಿಂದ ಸ್ವೀಕರಿಸಬೇಕು. ಪ್ರತಿದಿನವೂ ಒಂದು ಹೊತ್ತು ಮಾತ್ರ ಆಹಾರವನ್ನು ಸ್ವೀಕರಿಸಬೇಕು ಅಂತರಾಯವಾದರೆ ಉಪೋಷಣವನ್ನು ಮಾಡಬೇಕು. ಅನಶನಾದಿ ತಪಶ್ಚರಣವನ್ನೂ ತನ್ನ ಶಕ್ತಿಗನುಸರಿಸಿ ಮಾಡುತ್ತಲೇ ಇರಬೇಕು ಈ ಪ್ರಕಾರ ನಡೆಯುವವರಿಗೆ ಉದ್ದಿಷ್ಟಾಹಾರ ತ್ಯಾಗ ಪ್ರತಿಮೆಯು ಸಿದ್ಧಿಸುತ್ತದೆ.

ಇವು ಶ್ರಾವಕ ಧರ್ಮದ ಹನ್ನೊಂದು ಮೆಟ್ಟಲುಗಳಾಗಿವೆ ತಮ್ಮ ತಮ್ಮ ಶಕ್ತಿಗಳಿಗೆ ಅನುಸರಿಸಿ ಇವುಗಳನ್ನು ಧಾರಣ ಮಾಡಬೇಕು

ವಿಶದಯಶೋನಿಳಯಂ ವಿಮಳಶೀಲಸಂಪನ್ನನುಚಿತಭೈಕ್ಷಾನೀಕಂ
ನಿಶಿತಮತಿಯುಕ್ತನೇಕಾದಶಸ್ಥನುದ್ದಿಷ್ಟದೇಶವಿರತಂ ಪೆಸರಿಂ ।
ಶ್ರಾವಕರೊಳನುಕ್ರಮಣಂ ಭಾವಿಪೊಡೆ ಜಘನ್ಯರಱವರಲ್ಲಿಂದತ್ತ-
ಲ್ಮೂವರ್ಮಧ್ಯಮರತ್ತಲ್ ತಾವುತ್ತಮರಿರ್ವರಮಗಳ ಚಾರುಚರಿತ್ರರ್ ॥

—ಶಾಂತಿನಾಥ–ಸುಕುಮಾರ ಚರಿತಂ—೬–೩೬–೩೭

ಇನ್ನು ಶ್ರೇಷ್ಠ ಜ್ಞಾತೃವಿನ ಲಕ್ಷಣವನ್ನು ಹೇಳುತ್ತಾರೆ—

**ಪಾಪಮರಾತಿರ್ಧರ್ಮೋ ಬಂಧುರ್ಜೀವಸ್ಯ ಚೇತಿ ನಿಶ್ಚಿನ್ವನ್ ।**
**ಸಮಯಂ ಯದಿ ಜಾನೀತೇ ಶ್ರೇಯೋ ಜ್ಞಾತಾ ಧ್ರುವಂ[1] ಭವತಿ ॥ ೧೪೮ ॥**

**ಅನ್ವಯಾರ್ಥ**—(ಪಾಪಂ) ಪಾಪವು (ಜೀವಸ್ಯ) ಜೀವದ (ಅರಾತಿಃ) ವೈರಿಯು. (ಚ) ಮತ್ತು (ಧರ್ಮಃ ಬಂಧುಃ) ಧರ್ಮವು ಬಂಧುವು (ಇತಿ ನಿಶ್ಚಿನ್ವನ್) ಈ ಪ್ರಕಾರ ನಿಶ್ಚಯ ಮಾಡುವಂಥವನೂ (ಯದಿ ಸಮಯಂ ಜಾನೀತೇ) ಯಾವನು ಶಾಸ್ತ್ರವನ್ನು ತಿಳಿಯುವನೋ ಅವನು (ಧ್ರುವಂ) ನಿಶ್ಚಯವಾಗಿ (ಶ್ರೇಯೋ ಜ್ಞಾತಾ ಭವತಿ) ಉತ್ಕೃಷ್ಟ ಜ್ಞಾತೃವೆನಿಸುತ್ತಾನೆ

**ಅರ್ಥ**—ಪಾಪವು ಜೀವದ ಶತ್ರುವಾಗಿದೆ; ಧರ್ಮವು ಬಂಧುವಾಗಿದೆ. ಇದನ್ನು ನಿಶ್ಚಯಿಸಿ ಯಾವನು ಆಗಮವನ್ನು ತಿಳಿಯುವನೋ ಅವನ ಕಲ್ಯಾಣವು ನಿಶ್ಚಯವಾಗಿಯೂ ಆಗುತ್ತದೆ. [ಇಲ್ಲಿ ಗ್ರಂಥದ ಉಪಸಂಹಾರವನ್ನು ಮಾಡುತ್ತ ಆಚಾರ್ಯ ಸಮಂತಭದ್ರರು ಆತ್ಮಹಿತವನ್ನು ತಿಳಿಯುವಂಥವನು–ಜ್ಞಾತಾ–ಯಾವನೆಂಬುದರ ಬಗ್ಗೆ ವ್ಯಾಖ್ಯೆಯನ್ನು ಮಾಡಿದ್ದಾರೆ–ಯಾವನ ಶಾಸ್ತ್ರಜ್ಞಾನವು ಮಿಥ್ಯಾದರ್ಶನಾದಿ ರೂಪ ಪಾಪಕರ್ಮವು ಈ ಜೀವದ ಶತ್ರುವಾಗಿದೆ, ಸಮ್ಯಗ್ದರ್ಶನಾದಿ ರೂಪ ಧರ್ಮಕರ್ಮವು ಈ ಜೀವದ ಮಿತ್ರವಾಗಿದೆ ಎಂದು ನಿಶ್ಚಯವಾಗಿಯೂ ಅರಿಯುವನೋ ಅವನೇ ಜ್ಞಾತೃವು ಇನ್ನು ಯಾರ ಶಾಸ್ತ್ರಾಧ್ಯಯನವು ಈ ನಿರ್ಣಯಕ್ಕೆ ಬರುವದಿಲ್ಲವೋ ಅವನು 'ಶ್ರೇಯೋ ಜ್ಞಾತಾ' ಪದಕ್ಕೆ ಯೋಗ್ಯನೆನಿಸಲಾರನು ಈ ಪ್ರಕಾರ ರತ್ನಕರಂಡಕಶ್ರಾವಕಾಚಾರದ ಅಧ್ಯಯನದ ದೃಷ್ಟಿಯನ್ನು ಸ್ಪಷ್ಟಗೊಳಿಸಿದ್ದಾರೆ. ಸ. ಧ]

---

[1] 'ಸದಾ' ಎಂದೂ ಪಾಠಾಂತರವಿದೆ.

ವಿಶೇಷಾರ್ಥ—ಸಂಸಾರದಲ್ಲಿ ಜೀವಕ್ಕೆ ದುಃಖ ಕೊಡುವಂದದು ಪಾಪದ ಹೊರತಾಗಿ ಇನ್ನೊಂದು ಪ್ರಬಲ ಶತ್ರುವು ಇಲ್ಲ. ಈ ಪಾಪವು ವಿಷಯ ಕಷಾಯವನ್ನು ಮರ್ಯಾದೆಯಿಲ್ಲದೆ ಸೇವಿಸುವುದರಿಂದ ಉಂಟಾಗುತ್ತದೆ. ಇತರ ಸರ್ವ ಪದಾರ್ಥಗಳು ಬಾಹ್ಯ ನಿಮಿತ್ತ ಮಾತ್ರವಾಗಿವೆ ಯಾರಾದರೂ ನಮಗೆ ಕೆಟ್ಟ ಮಾತುಗಳನ್ನು ಆಡಬಹುದು, ಯಾರಾದರೂ ನಮ್ಮಲ್ಲಿರುವ ದೋಷಗಳನ್ನು ಜನರಲ್ಲಿ ತೆರೆದಿಡಬಹುದು, ಇನ್ನಾರಾದರೂ ನಮ್ಮ ಉಪಜೀವನದ ಸಾಧನವನ್ನೇ ಅಪಹರಿಸಬಹುದು, ಅದರಂತೆ ದ್ರವ್ಯವನ್ನೂ ಎತ್ತಿ ಹಾಕಿಯಾರು—ಇವೆಲ್ಲ ಪಾಪದ ಉದಯದಿಂದ ತನ್ನಿಂದ ತಾನೇ ಸಂಭವಿಸುವಂದವಾಗಿವೆ ತನ್ನ ಪಾಪ ಕರ್ಮದ ಹೊರತಾಗಿ ಉಳಿದ ಪದಾರ್ಥಗಳನ್ನು ತನ್ನ ಶತ್ರುವೆಂದು ತಿಳಿಯುವುದು ಮೂರ್ಖತನವಾಗಿದೆ. ಅವರಿಗೆ ಜಿನಾಗಮದ ರಹಸ್ಯವು ಮೂಲದಲ್ಲಿಯೇ ತಿಳಿದಿಲ್ಲವೆನ್ನಬೇಕು. ಇದೇ ಪ್ರಕಾರ ಜೀವದ ಮೇಲೆ ಬಂಧುಗಳಂತೆ ಉಪಕಾರ ಮಾಡುವಂದದು ಪುಣ್ಯಕರ್ಮವಾಗಿದೆ ಇದು ಧರ್ಮವು. ಈ ಧರ್ಮವನ್ನುಳಿದು ಇನ್ನಾರನ್ನಾದರೂ ಉಪಕಾರಕರೆಂದು ತಿಳಿದರೆ ಅವನೂ ಸಹ ಭಗವಂತನು ಉಪದೇಶಿಸಿದ ಆಗಮವನ್ನು ಯಥಾರ್ಥವಾಗಿ ಅರಿತುಕೊಂಡಿಲ್ಲವೆಂದು ತಿಳಿಯಬೇಕು —ಈ ಪ್ರಕಾರ ಶ್ರಾವಕರಿಗೆ ಉಪದೇಶ ಮಾಡುವ ವಚನಗಳನ್ನು ಆಚಾರ್ಯರು ಇಲ್ಲಿಗೆ ಮುಗಿಸಿದ್ದಾರೆ

> ವಿಜ್ಞಾನಂ ಕ್ಷಮೆ ಶಕ್ತಿ ಭಕ್ತಿದಯೆ ನಿರ್ಲೋಭಂ ದೃಢಂಗೂಡಿಯಾ-
> ತ್ಮ ಜ್ಞಾನಾನ್ವಿತಯೋಗಿನನ್ನಮನಲಂಪಿಂದಿತ್ತಮಾ ಕೂಡೆ ತಾಂ ।
> ಸುಜ್ಞಾನಂ ಬಡೆದಂ ಸುಖಂ ಬಡೆದನೊಳ್ಪಂ ಪೆತ್ತನೇ ಮಾತೊ ಸ-
> ರ್ವಜ್ಞಾ ನಿಮ್ಮಸೆ ಕಂಡನಿನ್ನುಳಿದುನೇಂ ರತ್ನಾಕರಾಧೀಶ್ವರಾ ॥

—ರತ್ನಾಕರ–ರತ್ನಾಕರ ಶತಕ–೧೦೪.

ಈ ಶ್ಲೋಕದಲ್ಲಿ ಸಮಂತಭದ್ರಾಚಾರ್ಯರು ಈ ಗ್ರಂಥದ ಫಲವನ್ನು ನಿರ್ದೇಶಿಸುತ್ತಾರೆ—

> ಯೇನ ಸ್ವಯಂ ವೀತಕಲಂಕವಿದ್ಯಾದೃಷ್ಟಿಕ್ರಿಯಾರತ್ನಕರಂಡಭಾವಮ್ ।
> ನೀತಸ್ತಮಾಯಾತಿ ಪತೀಚ್ಛಯೇವ ಸರ್ವಾರ್ಥಸಿದ್ಧಿಸ್ತ್ರಿಷು ವಿಷ್ಟಪೇಷು ॥ ೧೪೯ ॥[1]

ಅನ್ವಯಾರ್ಥ—(ಯೇನ) ಯಾವನು (ಸ್ವಯಂ) ಸ್ವತಃ–ತನ್ನನ್ನು–(ವೀತಕಲಂಕವಿದ್ಯಾದೃಷ್ಟಿಕ್ರಿಯಾ-ರತ್ನಕರಂಡಭಾವಂ ನೀತಃ) ಸಮ್ಯಗ್ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್‌ಚಾರಿತ್ರಗಳೆಂಬ ರತ್ನದ ಕರಂಡಕವನ್ನಾಗಿ ಮಾಡಿಕೊಂಡಿದ್ದಾನೆಯೋ (ತಂ) ಅವನಿಗೆ (ತ್ರಿಷು ವಿಷ್ಟಪೇಷು) ಈ ಮೂರು ಲೋಕದಲ್ಲ (ಪತೀಚ್ಛಯಾ ಇವ) ಪತಿಯನ್ನು ಇಚ್ಛಿಸುವ ಸ್ತ್ರೀಯಂತೆ (ಸರ್ವಾರ್ಥಸಿದ್ಧಿಃ) ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಈ ನಾಲ್ಕು ಪುರುಷಾರ್ಥಗಳ ಸಿದ್ಧಿಯು (ಆಯಾತಿ) ಪ್ರಾಪ್ತವಾಗುತ್ತವೆ

ಅರ್ಥ—ಯಾವನು ತನ್ನ ಆತ್ಮವನ್ನು ನಿರ್ಮಲ ಜ್ಞಾನದರ್ಶನಚಾರಿತ್ರರೂಪ ರತ್ನಗಳನ್ನು ಇಡುವ ಕರಂಡಕವನ್ನಾಗಿ ಮಾಡುವನೋ ಆ ಪುರುಷನಿಗೆ ಮೂರು ಲೋಕದಲ್ಲಿ ಅವನ ಇಚ್ಛೆಗನುಸರಿಸಿ ಅರ್ಥಗಳ ಸಿದ್ಧಿಯು ಆಗುತ್ತದೆ. ಈ ಅರ್ಥಸಿದ್ಧಿಯೇ ಒಂದು ಸ್ತ್ರೀ. ಅವಳು ಪತಿಗೆ ಪುಷ್ಪ ಹಾರವನ್ನು ಹಾಕಿದಂತೆ ಇಂಥ ಪುರುಷರನ್ನು ಸ್ವೀಕರಿಸುವಳು

---

[1] ಆಯತವರ್ಮನು ಹೇಳುವದು ಹೀಗೆ

ಗದ್ಯ ॥ ಪೂಜೆಯುಮರ್ಥಮುಮಾಜ್ಞೆಯುಮಯಿಶ್ವರಿಯಮುಂ ಬೋಗೋಪಬೋಗಂಗಳುಂ ಶುಭಾಯುಷ್ಯಮುಂ ಶುಭ-ಕಾಮಮುಮುಚ್ಛ್ರೈಗೋತ್ರಮುಂ ಸದ್ವಿದ್ಯೆಯುಮೆಂದಿವು ಸಂಸಾರ ಸುಖಂಗಳೆಲ್ಲಮಭ್ಯುದಯ ಸುಖಂಗಳೆಂತೀಯಿತ್ತರದ ಸುಖಂ-ಗಳುಮಂ ರತ್ನತ್ರಯಶುದ್ಧರಪ್ಪವರ್ಗಳೆಯ್ದುವರಿಂತೀ ರತ್ನತ್ರಯಂಗಳಂ ಕರಂಡಕಸ್ವರೂಪಮುಸುಳ್ಳುದಪ್ಪುದರಿಂದೀ ಗ್ರಂಥಕ್ಕೆ ರತ್ನಕರಂಡಕವೆಂಬುದು ಪೆಸರಾದುದಿದ ನೋಡುವರುಂ ಬರೆವರುಂ ಬಾಜಿಸುವರುಂ ಕೇಳ್ವರುಂ ಚಿಂತಿಸುವರುಂ ಮೋಕ್ಷಲಕ್ಷ್ಮಿಯು-ನೆಯ್ದುಗುಂ

ವಿಶೇಷಾರ್ಥ—[ಇಲ್ಲಿ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರ ರೂಪ ರತ್ನತ್ರಯ ಧರ್ಮವನ್ನು ಧರಿಸಿದವನಿಗೆ ಸಪಾರ್ಥಸಿದ್ಧಿಗಳು ತನ್ನಿಂದ ತಾನೇ ಪ್ರಾಪ್ತವಾಗುತ್ತವೆಂದು ಸೂಚಿಸಲಾಗಿದೆ. ಈ ಪ್ರಕಾರ ಧರ್ಮದ ಎಲ್ಲ ಫಲಗಳೂ ಪ್ರಾಪ್ತವಾಗುತ್ತವೆಂಬುದನ್ನು ಚಾತುರ್ಯದಿಂದ ಒಂದೇ ಸೂತ್ರದಲ್ಲಿ ಹೆಣೆಯಲಾಗಿದೆ. ಮೇಲಾಗಿ ಗ್ರಂಥದ ಇನ್ನೊಂದು ಹೆಸರಾದ 'ರತ್ನಕರಂಡ' ಎಂಬುದನ್ನೂ ಶ್ಲೇಷಾಲಂಕಾರದಿಂದ ಸೂಚಿಸಲಾಗಿದೆ ಸ. ಧ ] ರತ್ನತ್ರಯಗಳೆಂಬ ರತ್ನವನ್ನು ಇಡುವ ಕರಂಡದಂತೆ ತನ್ನ ಆತ್ಮವನ್ನು ಸಿದ್ಧಗೊಳಿಸಿಕೊಂಡಂಥವನಿಗೆ ಮೂರೂ ಲೋಕದೊಳಗಿನ ಸರ್ವೋತ್ಕೃಷ್ಟ ಪದಾರ್ಥಗಳೆಲ್ಲ ಪ್ರಾಪ್ತವಾಗುತ್ತವೆ

ಧರ್ಮಂ ವಿಶ್ರುತಸಶ್ರುತಾತಿಶಯಮಂ ಧರ್ಮಂ ಬೃಹದ್ಭಾಗ್ಯಮಂ
ಧರ್ಮಂ ನಿರ್ಭರನಾರ್ವಭೌಮಪದಮಂ ಧರ್ಮಂ ಸುರೇಂದ್ರತ್ವಮಂ ।
ಧರ್ಮಂ ನಿರ್ಮಲಸದ್ಗುಣಪ್ರಕರಮಂ ಧರ್ಮಂ ತಪಃ ಖ್ಯಾತಿಯಂ
ಧರ್ಮಂ ಧಾರ್ಮಿಕನಪ್ಪವಂಗೆ ಕುಡುಗುಂ ನಿರ್ವಾಣ ಕಲ್ಯಾಣಮಂ ॥

— ಶಾಂತಿನಾಥ-ಸುಕುಮಾರಚರಿತಂ-೯—೬೨

ಗ್ರಂಥಕರ್ತರ ಅಂತಿಮ ಪ್ರಾರ್ಥನೆಯು ಹೀಗಿದೆ—

ಸುಖಯತು ಸುಖಭೂಮಿಃ ಕಾಮಿನಂ ಕಾಮಿನೀವ
ಸುತಮಿವ ಜನನೀ ಮಾಂ ಶುದ್ಧಶೀಲಾ ಭುನಕ್ತು ।

ಕುಲಮಿವ ಗುಣಭೂಷಾ ಕನ್ಯಕಾ ಸಂಪುನೀತಾಜ್-
ಜಿನ-ಪತಿ-ಪದ-ಪದ್ಮ-ಪ್ರೇಕ್ಷಿಣೀ ದೃಷ್ಟಿಲಕ್ಷ್ಮೀಃ ॥ ೧೫೦ ॥ [1]

ಅನ್ವಯಾರ್ಥ—(ಜಿನಪತಿಪದಪದ್ಮಪ್ರೇಕ್ಷಿಣೀ) ಜಿನೇಂದ್ರ ಭಗವಂತನ ಪಾದ ಕಮಲಗಳನ್ನು ನೋಡುವಂಥ (ದೃಷ್ಟಿಲಕ್ಷ್ಮೀಃ) ಸಮ್ಯಗ್ದರ್ಶನವೆಂಬ ಲಕ್ಷ್ಮಿಯು (ಸುಖಭೂಮಿಃ ಕಾಮಿನೀ ಕಾಮಿನಂ ಇವ) ಕಾಮುಕ ಪುರುಷನು ಸುಖದ ಭೂಮಿಯೆಂದು ತಿಳಿದ ಸ್ತ್ರೀಯು ಅವನಿಗೆ ಸುಖವನ್ನು ಕೊಡುವಂತೆ (ಮಾಂ ಸುಖಯತು) ನನಗೆ ಸುಖವನ್ನು ಕೊಡಲಿ. (ಶುದ್ಧಶೀಲಾ ಜನನೀ) ಶುದ್ಧ ಚಾರಿತ್ರವುಳ್ಳ ಮಾತೆಯು (ಸುತಮಿವ) ತನ್ನ ಮಗನನ್ನು ರಕ್ಷಣ ಮಾಡುವಂತೆ (ಮಾಂ ಭುನಕ್ತು) ನನ್ನನ್ನು ರಕ್ಷಿಸಲಿ (ಗುಣಭೂಷಾ) ಗುಣವೇ ಭೂಷಣವೆಂದು ನಂಬಿದ (ಕನ್ಯಕಾ) ಕನ್ಯೆಯು (ಕುಲಮಿವ) ಕುಲವನ್ನು ಪವಿತ್ರಗೊಳಿಸುವಂತೆ (ಮಾಂ) ನನ್ನನ್ನು (ಸಂಪುನೀಯಾತ್) ಪವಿತ್ರಗೊಳಿಸಲಿ.

ಅರ್ಥ—ಜಿನೇಂದ್ರ ಭಗವಂತನ ಚರಣ ಕಮಲಗಳನ್ನು ಅವಲೋಕಿಸುವಂಥ ಸಮ್ಯಗ್ದರ್ಶನ ರೂಪಿಯಾದ ಲಕ್ಷ್ಮಿಯು, ಕಾಮುಕ ಪುರುಷನಿಗೆ ಸುಖದ ಆಗರವೆನಿಸುವಂಥ ಸ್ತ್ರೀಯು ಹೇಗೆ ಸುಖವನ್ನು ಒದಗಿಸುತ್ತಾಳೆಯೋ

---

1 ಆಯತವರ್ಮನ ಅಂತ್ಯ ಮಂಗಲ ಹೀಗಿದೆ

ಕಂದ ॥ ಅಮರೇಂದ್ರ ನರೇಂದ್ರ ಮುನೀಂ . . . . ದ್ರವಿಭೂತಿಗಳು ಮನೆಯ್ದಿಪ ಸಾಮರ್ಥ್ಯಮನುಳ್ಳ ರತ್ನತ್ರಯಮಮೋಘಂ ಶರಣಮಕ್ಕೆ ಭವ್ಯಾವಳಿಗೆ ॥

ಗದ್ಯ ॥ ಇದು ಭಗವದರ್ಹತ್ಪರಮೇಶ್ವರ ಪರಮ ಭಟ್ಟಾರಕ ವೀತರಾಗ ಸರ್ವಜ್ಞ ವದನ ವನಜ ಸಮುದ್ಗತ ಸದಸದಾತ್ಮಕ ಪರಮತತ್ವ ಭಾವನಾ ಭಾವಿಕ ಸ್ವಾಂತ ಶ್ರೀ ವರ್ಧಮಾನ ಸಿದ್ಧಾಂತದೇವ ಚರಣ ಸರಸೀರುಹ ಸ್ಮರಣ ಪರೀತಾಂತಃಕರಣ ಕುಶೇಶಯ ಶ್ರೀಮದಾಯತವರ್ಮವಿರಚಿತಮಪ್ಪ ರತ್ನಕರಂಡಕದೊಳು ಸಮ್ಯಕ್ಚಾರಿತ್ರ ಸ್ವರೂಪ ನಿರೂಪಣಂ ತೃತೀಯ ಪರಿಚ್ಛೇದಃ ॥

ಶ್ರೀ ವೀತರಾಗಾಯನಮಃ ವರ್ಧತಾಂ ಜೈನ ಶಾಸನಂ ಕನ್ನಡ ರತ್ನಕರಂಡಕಸ್ಸಮಾಪ್ತೋಭೂತ್. ಸದ್ಧರ್ಮವೆ ಶರಣು ಕರಕೃತಮಪರಾಧಂ ಕ್ಷಂತುಮರ್ಹಂತಿ ಸಂತಃ ಶ್ರೀಮತ್ಕನಕ ಗಿರಿ ವಿಜಯ ಪಾರ್ಶ್ವ ತೀರ್ಥಂಕರ ಪರಮ ದೇವೇಭ್ಯೋನಮಃ. ಶಾಲಿವಾಹನ ಶಕಾಬ್ದಾಃ ೧೭೫೭ ಯುವ ಸಂವತ್ಸರ ಭಾದ್ರಪದ ಕೃಷ್ಣದಶಮೀ ಭಾರ್ಗವ ವಾಸರೇ ರತ್ನಕರಂಡಕಮಿದಂ ಗ್ರಂಥಂ ಪರಿಸಮಾಪ್ತೋಭೂತ್. ಶ್ರೀವರ್ಧಮಾನ ಸಿದ್ಧಾಂತದೇವ ಚರಣ ಸರಸೀರುಹೇಭ್ಯೋನಮೋಸ್ತು.

ಭದ್ರಂ ಭೂಯಾತ್ ಶ್ರೀ . . . .

ಹಾಗೆಯೇ ನನಗೆ ಸುಖವನ್ನು ಒದಗಿಸಲಿ ಇಲ್ಲವೆ ಶುದ್ಧ ಮನಸ್ಸಿನ ತಾಯಿಯು ತನ್ನ ಮಗನನ್ನು ಜೋಪಾನ ಮಾಡುವಂತೆ ನನ್ನನ್ನು ರಕ್ಷಿಸಲಿ ಅಥವಾ ಶೀಲವೇ ತನ್ನ ಅಲಂಕಾರವೆಂದು ತಿಳಿಯುವ ಕನ್ಯೆಯು ತನ್ನ ಕುಲವನ್ನು ಪವಿತ್ರಗೊಳಿಸುವಂತೆ ಈ ಲಕ್ಷ್ಮಿಯು ನನ್ನ ಅಂತಃಕರಣವನ್ನು ಪವಿತ್ರಗೊಳಿಸಲಿ.

ವಿಶೇಷಾರ್ಥ—[ಈ ಪದ್ಯವು ಅಂತ್ಯಮಂಗಲ ರೂಪದಲ್ಲಿದೆ ಇದರಲ್ಲಿ ಗ್ರಂಥಕಾರರು–ಸ್ವಾಮಿ ಸಮಂತಭದ್ರಾಚಾರ್ಯರು–ಯಾವ ಲಕ್ಷ್ಮಿಯು ತಮಗೆ ಸುಖವನ್ನು ಕೊಡಲೆಂದು ಭಾವಿಸಿರುವರೋ ಆ ಲಕ್ಷ್ಮಿಯು ಭೌತಿಕ ಧನಸಂಪತ್ತು ಅಲ್ಲ. ಅದು ಸದ್ದೃಷ್ಟಿ ಎಂಬುದಾಗಿದೆ ಈ ಗ್ರಂಥದಲ್ಲಿ ವರ್ಣಿಸಿದ ಧರ್ಮದ ಮೂಲ ಪ್ರಾಣವು ಇದಾಗಿದೆ ಆತ್ಮೋತ್ಥಾನದ ಅನುಪಮ ಅರಿವೂ ಆಗಿದೆ. ಇದು ಯಾವಾಗಲೂ ಜಿನೇಂದ್ರ ದೇವನ ಚರಣ ಕಮಲವನ್ನು–ಅವನ ಆಗಮಗತ ಪದ–ವಾಕ್ಯಗಳ ಶೋಭೆಯನ್ನು–ನಿರೀಕ್ಷಣ ಮಾಡುತ್ತಿರುತ್ತದೆ. ಆದರಿಂದಲೇ ಅದು ವಿಕಾಸವನ್ನೂ ಪ್ರಸನ್ನತೆಯನ್ನೂ ಧಾರಣಮಾಡಿ ವಿಶುದ್ಧಿಯ ವೃದ್ಧಿಯನ್ನು ಹೊಂದುತ್ತದೆ. ಅದು ಸ್ವತಃ ಶೋಭೆಯಿಂದ ಕೂಡಿರುವುದರಿಂದ ಇಲ್ಲಿ ಲಕ್ಷ್ಮಿಯ ಉಪಮೆಯನ್ನು ಕೊಡಲಾಗಿದೆ ಈ ದೃಷ್ಟಿಲಕ್ಷ್ಮಿಯ ರೂಪಗಳು ಮೂರಾಗಿವೆ ಒಂದು ಕಾಮಿನಿಯದು, ಇನ್ನೊಂದು ಜನನಿಯದು, ಮತ್ತೊಂದು ಕನ್ಯೆಯದು ಇವು ಕ್ರಮವಾಗಿ ಸುಖಭೂಮಿ, ಶುದ್ಧ ಶೀಲಾ, ಗುಣಭೂಷಾ ಎಂಬ ವಿಶೇಷಣಗಳಿಂದ ಕೂಡಿವೆ ಕಾಮಿನಿಯ ರೂಪದಲ್ಲಿ ಸ್ವಾಮಿಯವರು ಇಲ್ಲಿ ಯಾವ ತಮ್ಮ ದೃಷ್ಟಿ ಸಂಪತ್ತಿಯನ್ನು ಉಲ್ಲೇಖಿಸಿರುವರೋ ಅದು ಅವರಿಗೆ ಪ್ರಾಪ್ತವಾಗಿದೆ ಅದು ಅವರ ಇಚ್ಛೆಯನ್ನು ಪೂರ್ಣ ಮಾಡುತ್ತಿರುತ್ತದೆ, ಅವರನ್ನು ಸುಖದಲ್ಲಿಯೂ ಇಟ್ಟಿರುತ್ತದೆ. ಇದರ ಸಂಪರ್ಕವು ಸರಿಯಾಗಿರಲೆಂದು ಅವರ ಮೊದಲನೆಯ ಭಾವನೆಯಾಗಿದೆ ಇನ್ನು ಜನನೀಯ ರೂಪದಲ್ಲಿ ಯಾವ ಮೂಲ ದೃಷ್ಟಿಯನ್ನು ಇಲ್ಲಿ ಉಲ್ಲೇಖಿಸಿರುವರೋ ಅದಂತೂ ಸ್ವಾಮೀಜಿಯವರನ್ನು ಆರಂಭದಿಂದಲೂ ರಕ್ಷಿಸಿ ಪೋಷಿಸುತ್ತ ಬಂದಿದೆ ಇದರಿಂದ ಅವರ ಶುದ್ಧ ಶೀಲವು ವೃದ್ಧಿಯನ್ನು ಹೊಂದುತ್ತಲಿದೆ ಈ ಮೂಲ ದೃಷ್ಟಿಯು ಅವರನ್ನು ಮುಂದೆಯೂ ರಕ್ಷಣೆಮಾಡುತ್ತ ಹೋಗುವದೆಂಬುದು ಅವರ ಇನ್ನೊಂದು ಭಾವನೆಯಾಗಿದೆ. ತರುವಾಯ ಕನ್ಯೆಯ ರೂಪದಲ್ಲಿ ಯಾವ ತಮ್ಮ ಉತ್ತರವರ್ತಿನಿ ದೃಷ್ಟಿಯ ಉಲ್ಲೇಖವನ್ನು ಮಾಡಿರುವರೋ ಅದು ಅವರ ವಿಚಾರ ಶೀಲತೆಯಿಂದ ಉತ್ಪನ್ನವಾದುದಿದೆ ತತ್ತ್ವಮಂಥನವನ್ನು ಆಳವಾಗಿ ಮಾಡಿ ಅದನ್ನವರು ಹೊರಗೆಳೆದಿದ್ದಾರೆ. ಆದರಿಂದ ಅವರೇ ಅದರ ಜನಕರು ಅದು ನಿಃಶಂಕಿತಾದಿ ಗುಣಗಳಿಂದ ವಿಭೂಷಿತವಾದಂಥ ದೃಷ್ಟಿಯು ತಮ್ಮನ್ನು ಪವಿತ್ರಗೊಳಿಸಲಿ ಮತ್ತು ತಮ್ಮ ಗುರುಕುಲವನ್ನು ಉಚ್ಚಸ್ಥಾನಕ್ಕೆ ಏರಿಸಿ ಅದರ ಪ್ರತಿಷ್ಠೆಯನ್ನು ಬೆಳೆಸಲು ಸಮರ್ಥವಾಗಲಿ, ಇದು ಅವರ ಮೂರನೆಯ ಭಾವನೆಯಾಗಿದೆ ದೃಷ್ಟಿ ಲಕ್ಷ್ಮಿಯು ತನ್ನ ಈ ಮೂರೂ ರೂಪಗಳಲ್ಲಿ ಜಿನೇಂದ್ರ ಭಗವಂತರ ಚರಣಕಮಲಗಳನ್ನು–ಅವರ ಪದ–ವಾಕ್ಯಗಳನ್ನು–ಸರಿಯಾಗಿ ಕಾಣುತ್ತಾಳೆ. ಅದರಿಂದ ಅನುಪ್ರಾಣಿತವಾಗಿ ಯಾವಾಗಲೂ ಪ್ರಸನ್ನ ಹಾಗೂ ವಿಕಸಿತಗೊಳ್ಳುತ್ತಾಳೆ ಈ ದೃಷ್ಟಿಯು ನಿಜವಾದ ಭಕ್ತಿಯ ಸುಂದರ ರೂಪವಾಗಿದೆ. ಸುಶ್ರದ್ಧೆಯಿಂದ ಈ ಒಳ್ಳೆಯ ಹಾಗೂ ಸವಿವೇಕ ಭಕ್ತಿಯಿಂದ ಸುಖವು ಲಭಿಸುತ್ತದೆ, ಶುದ್ಧ ಶೀಲವೇ ಮೊದಲಾದ ಸದ್ಗುಣಗಳ ಸಂರಕ್ಷಣ ಮತ್ತು ಸಂವರ್ಧನವಾಗುತ್ತದೆ, ಆತ್ಮನಲ್ಲಿ ಉತ್ತರೋತ್ತರ ಪವಿತ್ರತೆಯು ಒದಗುತ್ತದೆ ಅದಕ್ಕಾಗಿ ಸ್ವಾಮಿ ಸಮಂತಭದ್ರರು ಗ್ರಂಥದ ಕೊನೆಯಲ್ಲಿ ಈ ಭಕ್ತಿದೇವಿಯನ್ನು ಬಹು ಅಲಂಕಾರಿಕ ರೂಪದಲ್ಲಿ ಗೌರವಯುಕ್ತವಾಗಿ ಸ್ಮರಣಮಾಡಿದ್ದಾರೆ. ಅಲ್ಲದೆ ಭಕ್ತಿಯ ವಿಷಯದಲ್ಲಿರುವ ತಮ್ಮ ಮನೋಭಾವವನ್ನೂ ವ್ಯಕ್ತಗೊಳಿಸಿದ್ದಾರೆ. ತಮ್ಮ ಇನ್ನೊಂದು ಗ್ರಂಥವಾದ 'ಯುಕ್ತ್ಯನು-ಶಾಸನ'ದ ಕೊನೆಯಲ್ಲಿಯೂ ಅವರು ವೀರ–ಸ್ತುತಿಯನ್ನು ಸಮಾಪ್ತಿಗೊಳಿಸುತ್ತಲೂ ಈ ಭಕ್ತಿಯನ್ನು ಸ್ಮರಿಸಿದ್ದಾರೆ. ಆಗ 'ವಿಧೇಯಾ ಮೇ ಭಕ್ತಿಃಪಥಿ ಭವತ ಏವಾಽಪ್ರತಿನಿಧೌ' ಈ ವಾಕ್ಯದ ಮುಖಾಂತರ ವೀರ ಜಿನೇಂದ್ರನ ವಿಷಯದಲ್ಲಿ ಈ ಭಾವನೆಯನ್ನು ವ್ಯಕ್ತಗೊಳಿಸಿದ್ದಾರೆ–'ತಾವು ತಮ್ಮದೇ ಆದ ಮಾರ್ಗದಲ್ಲಿ,–ಅದಕ್ಕೆ ಸಮಾನವಾದ ನಿರ್ಬಾಧ ಮಾರ್ಗವು ಇನ್ನೊಂದಿಲ್ಲ–ನನ್ನ ಭಕ್ತಿಯನ್ನು ಸವಿಶೇಷ ರೂಪದಲ್ಲಿ ಚರಿತಾರ್ಥಗೊಳಿಸಿರಿ. ತಮ್ಮ ಮಾರ್ಗದ ಅಮೋಘತೆಯನ್ನೂ ಇದರಿಂದ ಒದಗುವ ಅಭಿಮತ ಫಲದ ಸಿದ್ಧಿಯನ್ನೂ ಕಂಡು ಅನುರಾಗವು–ಭಕ್ತಿಭಾವವು–ಅದರ ವಿಷಯದಲ್ಲಿ ಉತ್ತರೋತ್ತರ ಹೆಚ್ಚಾಗಲಿ. ಅದರಿಂದ ನಾನೂ ಅದೇ ಮಾರ್ಗವನ್ನು ಪೂರ್ಣವಾಗಿ ಆರಾಧಿಸುತ್ತಲೂ ಸಾಧನೆಯನ್ನೂ ಮಾಡುತ್ತಲೂ ಕರ್ಮ ಶತ್ರುವಿನ ಸೈನ್ಯವನ್ನು ಗೆಲ್ಲಲಿಕ್ಕೆ ಸಮರ್ಥನಾಗುವೆ, ನಿಃಶ್ರೇಯಸ (ಮೋಕ್ಷ) ಪದವನ್ನು ಪಡೆದು ಸಫಲ ಮನೋರಥನಾಗುವೆ. ಸ. ಧ] ಕಾಮವೇದನೆಯಿಂದ ವ್ಯಾಕುಲನಾದಂಥ ಪುರುಷನನ್ನು

ಸ್ತ್ರೀಯು ಹೇಗೆ ಸುಖಿಯನ್ನಾಗಿ ಮಾಡುವಳೋ, ಶುದ್ಧ ಸ್ವಭಾವವುಳ್ಳ ತಾಯಿಯು ಹೇಗೆ ತನ್ನ ಪುತ್ರನನ್ನು ಪಾಲನ ಮಾಡುವಳೋ, ಶೀಲವತಿಯಾದ ಕನ್ಯೆಯು ಹೇಗೆ ತನ್ನ ಕುಲವನ್ನು ಪವಿತ್ರಗೊಳಿಸುವಳೋ ಹಾಗೆಯೇ ಶುದ್ಧ ಆತ್ಮಸ್ವಭಾವವನ್ನು ಅವಲೋಕಿಸುವಂಥ ಸಮ್ಯಗ್ದರ್ಶನರೂಪೀ ಲಕ್ಷ್ಮಿಯು ನನ್ನ ಮಿಥ್ಯಾಜ್ಞಾನ ಜನಿತ ಸಂತಾಪವನ್ನು ದೂರಗೊಳಿಸಿ, ನನ್ನ ಅನಂತ ಚತುಷ್ಟಯ ಸ್ವರೂಪವನ್ನು ಪುಷ್ಟಿಗೈಯಲಿ. ಅದರಂತೆ ರಾಗ-ದ್ವೇಷ ಮೋಹ ರೂಪೀ ದೋಷವನ್ನೂ ನಷ್ಟಗೊಳಿಸಿ, ನನ್ನ ಆತ್ಮ ಸ್ವರೂಪವನ್ನು ನಿರ್ಮಲಗೊಳಿಸಲಿ.

ಬಂದೊಲವಿಂದೆ ನಿನ್ನಿದಿರೊಳೊಪ್ಪದೆ ನಿಂದು ಕರಂಗಳಂ ನೊಸ-
ಲ್ಗೊಂದಿಸಿ ದೇವದೇವ ಕರುಣಾಕರ ಬಿನ್ನಪವಾತ್ಮಸಿದ್ಧಿಯಿ- ।
ನ್ನೆಂದೆನಗಪ್ಪುದೆಂದೊಡೆವೆ ಕಂದ ಕಡಂಗದಿರಿಂದ ನಾಳೆಯೆ-
ಮ್ಮಂದನೆಯುಪ್ಪೆಯೆಂಬ ನುಡಿಗೇಳ್ವೆನದೆಂದಪರಾಜಿತೇಶ್ವರಾ ॥

—ರತ್ನಾಕರ-ಅಪರಾಜಿತ ಶತಕ-೧೨೫

---

## ಪರಿಶಿಷ್ಟ—೧

# ಜೈನ ಧರ್ಮ, ಸಾಹಿತ್ಯ ಮತ್ತು ಸಿದ್ಧಾಂತ

ಮಾನವೀಯ ಸಂಸ್ಕೃತಿಯ ವಿಕಾಸವು ಯಾವ ಯಾವ ಸಂಸ್ಥೆಗಳಿಗೆ ಜನ್ಮಕೊಟ್ಟಿದೆಯೋ ಅವುಗಳಲ್ಲಿ ಧರ್ಮಕ್ಕೆ ಬಹಳ ಮಹತ್ವಪೂರ್ಣವಾದ ಸ್ಥಾನವಿದೆ. ನಾವು ಎಷ್ಟೆಷ್ಟು ಪ್ರಾಚೀನ ಕಾಲಕ್ಕೆ ಹೋಗುತ್ತೇವೆಯೋ ಅಷ್ಟೂ ಕೂಡ ಮಾನವ ಜೀವನದಲ್ಲಿ ಸ್ವಲ್ಪಿಲ್ಲ ಸ್ವಲ್ಪ ಧಾರ್ಮಿಕ ಪ್ರವೃತ್ತಿಗಳನ್ನು ಕಾಣುತ್ತೇವೆ ಯಾವ ದೇಶ ಪ್ರದೇಶಗಳ ಇತಿಹಾಸದ ಮೇಲೆ ದೃಷ್ಟಿಯನ್ನು ಬೀರಿದರೂ ಅಲ್ಲಿ ಧರ್ಮದ ಪ್ರಭಾವವನ್ನು ಕಾಣದೆ ಇರುವದಿಲ್ಲ. ಆದರೆ ಧರ್ಮದ ಸ್ವರೂಪವು ಎಲ್ಲಿಯೂ ಎಂದೂ ಒಂದೇ ರೂಪದಲ್ಲಿ ಇಲ್ಲ ಅದು ದೇಶ ಕಾಲಕ್ಕನುಸರಿಸಿ ಯಾವಾಗಲೂ ಬದಲಾಗುತ್ತಲಿದೆ ಜಗತ್ತಿನೊಳಗಿನ ಎಲ್ಲ ಧರ್ಮಗಳನ್ನು ಎಣಿಕೆಮಾಡುತ್ತ ಹೋದರೆ ನೂರಾರಲ್ಲ, ಸಾವಿರಾರು ಆಗಬಹುದು. ಆದರೆ ಕೋಟ್ಯವಧಿ ಅನುಯಾಯಿಗಳುಳ್ಳ ಧರ್ಮಗಳು ಈಸಾಯಿ, ಇಸ್ಲಾಂ, ಬೌದ್ಧ ಮತ್ತು ಹಿಂದೂ ಎಂಬಿವು ಸುಪ್ರಸಿದ್ಧವಾಗಿವೆ, ಅಲ್ಲದೆ ಪ್ರಪಂಚದಲ್ಲಿ ಪ್ರಚಲಿತವೂ ಆಗಿವೆ

ವೈದಿಕ ಧರ್ಮ—ಬ್ರಾಹ್ಮಣ, ಬೌದ್ಧ ಮತ್ತು ಜೈನ ಇವು ಮೂರು ಭಾರತದ ಪ್ರಾಚೀನ ಧರ್ಮಗಳಲ್ಲಿ ಪ್ರಮುಖವಾಗಿವೆ ಬ್ರಾಹ್ಮಣ ಧರ್ಮಕ್ಕೆ ಮುಸಲ್ಮಾನರ ಕಾಲದಲ್ಲಿ ಹಿಂದೂ ಧರ್ಮವೆಂದೂ ಹೆಸರಾಯಿತು. ದೇಶದಲ್ಲಿ ಈ ಧರ್ಮದ ಪ್ರಭಾವವು ಗಂಭೀರವೂ ವ್ಯಾಪಕವೂ ಆಗಿದೆ ಈ ಧರ್ಮದ ಪ್ರಾಚೀನತಮ ಗ್ರಂಥಗಳು ಋಗ್, ಯಜುಃ, ಸಾಮ, ಅಥರ್ವಗಳೆಂದು ನಾಲ್ಕು ವೇದಗಳಾಗಿವೆ ಇವುಗಳಲ್ಲಿ ಇಂದ್ರ, ವರುಣ, ಅಗ್ನಿ, ಮಿತ್ರ, ಉಷಃ ಮೊದಲಾದ ಅನೇಕ ದೇವ ದೇವತೆಗಳ ಸ್ತುತಿಗಳು ಇವೆ ಇವುಗಳನ್ನು ಯಜ್ಞ ಮೊದಲಾದ ಸಂದರ್ಭಗಳಲ್ಲಿ ಹಾಡಲಾಗುತ್ತಿತ್ತು. ಯಜ್ಞಗಳಲ್ಲಿ ಕೆಲವೊಂದು ಪಶುಗಳನ್ನು ಬಲಿ ಕೊಟ್ಟು ದೇವತೆಗಳಿಗೆ ಅರ್ಪಿಸುತ್ತಿದ್ದರು ಸೋಮರಸವನ್ನು ತೆಗೆದು ಅದನ್ನು ಕುಡಿಯುತ್ತಿದ್ದರು. ಈ ಪ್ರಕಾರ ದೇವತೆಗಳನ್ನು ಪ್ರಸನ್ನಗೊಳಿಸಿ, ಅವರಿಂದ ತಮ್ಮ ವಿಜಯ, ಶತ್ರುಗಳ ಪರಾಜಯ ಮತ್ತು ನಾಶ ಹಾಗೂ ಧನ-ಧಾನ್ಯ ಮತ್ತು ಪುತ್ರ ಪೌತ್ರಾದಿಕರ ವೃದ್ಧಿಯಾಗಲೆಂದು ಪ್ರಾರ್ಥಿಸುತ್ತಿದ್ದರು. ಇವೆಲ್ಲ ಕ್ರಿಯಾಕಾಂಡಗಳು ವೇದಗಳನ್ನು ಆಶ್ರಯಿಸಿದುದರಿಂದ ಈ ಧರ್ಮಕ್ಕೆ ವೈದಿಕ ಧರ್ಮ-ವೆಂದು ಹೆಸರಾಗಿತ್ತು ಮುಂದೆ ಚಿಂತನಶೀಲತೆಯು ಹೆಚ್ಚಾದಂತೆ ಉಪನಿಷದ್ ಗ್ರಂಥಗಳ ರಚನೆಯಾಯಿತು ಇವುಗಳಲ್ಲಿ ಕರ್ಮಕಾಂಡಕ್ಕೆ ಮಹತ್ವವನ್ನು ಕೊಡದೆ ಪ್ರಕೃತಿ ಮತ್ತು ಜೀವನದ ವಿಷಯದಲ್ಲಿ ಮೇಲಿನ ತತ್ತ್ವಗಳನ್ನು ತಿಳಿಸಿ ಕೊಡುವ ಪ್ರಯತ್ನಮಾಡಲಾಗಿದೆ ಈ ಬೌದ್ಧಿಕ ಪ್ರಯತ್ನಶೀಲತೆಯ ಫಲವಾಗಿ ಆರು ದರ್ಶನಗಳ ಉತ್ಪತ್ತಿಯಾಯಿತು. ಅವು ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸಾ ಮತ್ತು ವೇದಾಂತ ಎಂದು ಪ್ರಸಿದ್ಧವಾಗಿವೆ. ಇವುಗಳಿಗೂ ವೈದಿಕ ಷಡ್‌ದರ್ಶನಗಳೆಂದು ಹೇಳಲಾಗುತ್ತದೆ ಇವುಗಳಲ್ಲಿ ವೇದಾಂತ ದರ್ಶನದ ಪ್ರಭಾವ ಹಾಗೂ ಪ್ರಚಾರಗಳು ಎಲ್ಲಕ್ಕೂ ಹೆಚ್ಚಾಗಿವೆ ಈ ದರ್ಶನಕ್ಕೆ ಅನುಸರಿಸಿ ಜೀವನ ಮತ್ತು ಪ್ರಕೃತಿಯ ಆದಿಯು ಒಂದೇ ತತ್ತ್ವದಿಂದಾಗಿದೆ, ಅದೇ ಬ್ರಹ್ಮ—ಎಂದಿದೆ ಇದೇ ಬ್ರಹ್ಮವು ಸೃಷ್ಟಿಯಲ್ಲಿ ಮಾಯಾರೂಪೀ ಶಕ್ತಿಯಿಂದ ನಾನಾ ಪ್ರಕಾರವಾಗಿ ವ್ಯಕ್ತವಾಗುತ್ತದೆ ಇದರ ವಿವಿಧ ರೂಪಗಳನ್ನು ಸತ್ಯ ಹಾಗೂ ತಥ್ಯವೆಂದು ತಿಳಿಯುವಂಥವರು ಅಜ್ಞಾನಿಗಳು ಮೇಲಾಗಿ ಇವರು ಸಂಸಾರದ ಬಂಧನದಲ್ಲಿ ಸಿಕ್ಕುಬೀಳುತ್ತಾರೆ. ಆದರೆ ಯಾರು ಈ ನಾನಾ ರೂಪಗಳನ್ನು ಮಿಥ್ಯೆಯೆಂದು ತಿಳಿಯುತ್ತಾರೆಯೋ—ಆ ಅಚಲವಾದ ತತ್ತ್ವ—ಬ್ರಹ್ಮವನ್ನು—ಅರಿಯು-ತ್ತಾರೆಯೋ—ಅವರು ಜ್ಞಾನಿಗಳು ಮತ್ತು ಜೀವನ್ಮುಕ್ತರಾಗಿದ್ದಾರೆ

ವೈದಿಕ ಧರ್ಮದಲ್ಲಿ ಜೀವನದ ವಿಭಾಗ ಹಾಗೂ ಸಮಾಜ ರಚನೆಯ ಪ್ರಯತ್ನವನ್ನೂ ಕೂಡ ಮಾಡಲಾಗಿದೆ. ಇದಕ್ಕೆ ವರ್ಣಾಶ್ರಮ ವ್ಯವಸ್ಥೆಯೆಂದು ಹೇಳಲಾಗುತ್ತದೆ ಇದಕ್ಕೆ ಅನುಸರಿಸಿ ಪ್ರತಿಯೊಬ್ಬ ವ್ಯಕ್ತಿಯೂ ಕ್ರಮವಾಗಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸದ ಪಾಲನಮಾಡಲಿಕ್ಕೆ ಬೇಕು. ಇವೇ ಜೀವನದ ನಾಲ್ಕು ಆಶ್ರಮಗಳಾಗಿವೆ ಇವುಗಳನ್ನು ಒಳ್ಳೆಯ ರೀತಿಯಿಂದ ಪಾಲನಮಾಡುವುದರಲ್ಲಿಯೇ ಜೀವನದ ಸಫಲತೆಯಿದೆ. ಮಾನವ ಸಮಾಜವು ಗುಣ ಮತ್ತು ಕರ್ಮಗಳಿಗೆ ಅನುಸಾರವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂದು ನಾಲ್ಕು ವರ್ಣಗಳಲ್ಲಿ ವಿಭಾಗಿಸಲ್ಪಟ್ಟಿದೆ ಬ್ರಾಹ್ಮಣರ ಕರ್ತವ್ಯವು ವೇದಾಧ್ಯಯನ ಹಾಗೂ

ಧರ್ಮಾನುಷ್ಠಾನವಾಗಿದೆ ಕ್ಷತ್ರಿಯರ ಧರ್ಮವು ದೇಶ ಹಾಗೂ ಸಮಾಜಗಳನ್ನು ರಕ್ಷಿಸುವುದಾಗಿದೆ ವೈಶ್ಯರ ಕರ್ತವ್ಯವು ಕೃಷಿ–ವಾಣಿಜ್ಯಗಳ ಮುಖಾಂತರ ಸಮಾಜವನ್ನು ಸುಖಿಯೂ ಧನಸಂಪನ್ನವೂ ಮಾಡುವುದಾಗಿದೆ ಹಾಗೆಯೇ ಶೂದ್ರರ ಕರ್ತವ್ಯವು ಉಳಿದ ವರ್ಣಗಳನ್ನು ವಿಧಿವತ್ ಸೇವಿಸುವುದಾಗಿದೆ. ಈ ವರ್ಣಾಶ್ರಮ ಧರ್ಮದ ವರ್ಣನೆಯು ಮನು, ಯಾಜ್ಞವಲ್ಕ್ಯ ಮೊದಲಾದ ಸ್ಮೃತಿ ಗ್ರಂಥಗಳಲ್ಲಿ ವಿಸ್ತಾರವಾಗಿ ಬಂದಿದೆ.

ವೈದಿಕ ಸಂಪ್ರದಾಯದ ಸಂಸ್ಕೃತ ಸಾಹಿತ್ಯವು ಬಹು ವಿಶಾಲವಾಗಿದೆ ಇದರಲ್ಲಿ ರಾಮಾಯಣ, ಮಹಾಭಾರತ ಗ್ರಂಥಗಳು ಬಹು ಪ್ರಾಚೀನವೂ ಲೋಕಪ್ರಿಯವೂ ಆದ ರಚನೆಗಳಾಗಿವೆ ಕಾಲಿದಾಸಾದಿ ಮಹಾಕವಿಗಳಿಂದ ರಚಿಸಲ್ಪಟ್ಟ ಕಾವ್ಯ ಹಾಗೂ ನಾಟಕಗಳೂ ವಿಪುಲವಾಗಿವೆ ಅನೇಕ ಪುರಾಣಗಳಲ್ಲಿ ಇತಿಹಾಸಾತೀತ ಕಾಲದಿಂದಲೂ ರಾಜ ಹಾಗೂ ಮಹರ್ಷಿಗಳ ವಂಶಾವಳಿಗಳು ನೋಡಲಿಕ್ಕೆ ಸಿಕ್ಕುತ್ತವೆ. ಆದರೆ ಈ ಸಾಹಿತ್ಯದೊಳಗಿನ ಕೆಲವೊಂದು ದೇವ ದೇವತೆಗಳು ವೇದದೊಳಗಿನ ದೇವತೆಗಳಿಂದ ಭಿನ್ನವಾಗಿವೆ ಇಲ್ಲಿ ವಿಷ್ಣು ಮತ್ತು ಶಿವ ಹಾಗೆಯೇ ಕಾಲಿ ಮತ್ತು ದುರ್ಗಾ ಇವರ ಪೂಜೆಗೆ ಪ್ರಾಧಾನ್ಯವಿದೆ ಈಗ ಹಿಂದೂ ಧರ್ಮದ ವಿವಿಧ ಸಂಪ್ರದಾಯಗಳು ದೇಶದಲ್ಲಿ ತುಂಬಿ ಪಸರಿಸಿವೆ. ಆದರೆ ಸ್ಥೂಲ ರೂಪದಿಂದ ಉತ್ತರ ಭಾರತದಲ್ಲಿ ವೈಷ್ಣವ ಸಂಪ್ರದಾಯವೂ, ದಕ್ಷಿಣದಲ್ಲಿ ಶೈವ ಸಂಪ್ರದಾಯವೂ, ಪೂರ್ವದಲ್ಲಿ ಬಂಗಾಲದ ಸುತ್ತುಮುತ್ತ ಕಾಲೀ ಪೂಜೆಯು ಹೆಚ್ಚು ಪ್ರಚಾರದಲ್ಲಿವೆ

ಬೌದ್ಧ ಧರ್ಮ— ಪ್ರಾಚೀನ ಸಾಹಿತ್ಯದಲ್ಲಿಯೂ ಹಾಗೆಯೇ ಅಶೋಕನ ಪ್ರಶಸ್ತಿಗಳಲ್ಲಿಯೂ ನಮಗೆ ಬ್ರಾಹ್ಮಣ ಮತ್ತು ಶ್ರಮಣ ಈ ಎರಡು ಸಂಸ್ಕೃತಿಗಳ ಉಲ್ಲೇಖವು ದೊರೆಯುತ್ತದೆ ಬ್ರಾಹ್ಮಣ ಧರ್ಮದ ವರ್ಣನೆಯನ್ನು ಈ ಮೊದಲು ಮಾಡಲಾಗಿದೆ. ಶ್ರಮಣ ಸಂಪ್ರದಾಯದ ಅನುಯಾಯಿಗಳು ವೇದಗಳ ಪ್ರಾಮಾಣಿಕತೆಯನ್ನು ಸ್ವೀಕರಿಸುತ್ತಿರಲಿಲ್ಲ. ಅದರಂತೆ ಯಜ್ಞಗಳ ಕ್ರಿಯಾಕಾಂಡವನ್ನೂ ಒಪ್ಪುತ್ತಿರಲಿಲ್ಲ ಮೇಲಾಗಿ ವರ್ಣಾಶ್ರಮ ವ್ಯವಸ್ಥೆಯನ್ನು ಇದ್ದಕ್ಕಿದ್ದಂತೆ ಅನುಸರಿಸಲಿಕ್ಕೆ ಸಿದ್ಧರಿರಲಿಲ್ಲ. ಶ್ರಮಣರು ಮನ, ವಚನ ಮತ್ತು ಕಾಯಗಳ ಪ್ರವೃತ್ತಿಯನ್ನು ಶುದ್ಧಗೊಳಿಸುವುದರ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸುತ್ತಿದ್ದರು. ಇಂದ್ರಿಯ ನಿಗ್ರಹ ಹಾಗೂ ಪರಿಗ್ರಹ ತ್ಯಾಗಗಳನ್ನು ಆತ್ಮಿಕ ಶುದ್ಧಿಗಾಗಿ ಅವಶ್ಯಕವೆಂದು ತಿಳಿಯುತ್ತಿದ್ದರು ಮೇಲಾಗಿ ಅಹಿಂಸೆಯನ್ನು ಧರ್ಮದ ಅನಿವಾರ್ಯ ಅಂಗವೆಂದು ಭಾವಿಸುತ್ತಿದ್ದರು. ಈ ಮೇಲಿನ ಸಿದ್ಧಾಂತಗಳನ್ನು ಸ್ವೀಕರಿಸಿಯೂ ಶ್ರಮಣರ ಆಚರಣೆ-ಗಳಲ್ಲಿಯೂ ವಿವಿಧ ಭೇದಗಳಿದ್ದುವು. ಅವುಗಳ ಪ್ರಚಾರವು ಭಾರತದ ಪೂರ್ವಭಾಗದಲ್ಲಿಯೂ, ಮಗಧ ಹಾಗೂ ಬಿಹಾರದ ಪ್ರದೇಶದಲ್ಲಿಯೂ ವಿಶೇಷ ರೂಪದಲ್ಲಿತ್ತು ಕಪಿಲವಸ್ತುವಿನ ರಾಜಕುಮಾರನಾದ ಗೌತಮ ಬುದ್ಧನ ಮೇಲೆ ಈ ಶ್ರಮಣ ಪರಂಪರೆಯ ಗಾಢ ಪ್ರಭಾವವು ಬಿದ್ದಿತ್ತು ಅವನು ಸಂಸಾರದಲ್ಲಿ ಉದಾಸೀನನಾಗಿ ತ್ಯಾಗಿಯಾಗಿ ಹೋದನು. ಅವನು ಕಠೋರ ಸಂಯಮವನ್ನು ಪಾಲಿಸಿದನು, ತಪಸ್ಸನ್ನಾಚರಿಸಿದನು, ಉಪವಾಸವನ್ನು ಸ್ವೀಕರಿಸಿದನು. ಇದರಿಂದ ಅವನ ಶರೀರವು ಅತ್ಯಂತ ಕ್ಷೀಣವಾಯಿತು ಒಂದು ದೀರ್ಘ ಉಪವಾಸದಿಂದುಂಟಾದ ದುರ್ಬಲತೆಯಿಂದ ಮೂರ್ಛೆಯನ್ನು ಹೊಂದಿ ಎಚ್ಚರಗೊಂಡನು ಆಗ ಅವನು ಹೀಗೆ ವಿಚಾರಿಸ ಹತ್ತಿದನು— ಆತ್ಮಕಲ್ಯಾಣಕ್ಕಾಗಿ ಇಷ್ಟೆಲ್ಲ ಕಾಯಕ್ಲೇಶವು ಅವಶ್ಯಕವಿದೆಯೆ? ಅಯಿತು; ಈ ಪ್ರಶ್ನೆಗೆ ಲಭಿಸಿದ ಉತ್ತರವೇ ಅವನ 'ಬೋಧಿ' ಅಥವಾ 'ಜ್ಞಾನ'ವಾಗಿತ್ತು. ತನ್ನ ಶರೀರಕ್ಕೆ ಅನಾವಶ್ಯಕ ಕ್ಲೇಶ ಕೊಡುವುದೂ ಕೂಡ ಇನ್ನೊಬ್ಬರಿಗೆ ಕ್ಲೇಶ ಕೊಟ್ಟಷ್ಟು, ಇಂದ್ರಿಯ ಲೋಲುಪತೆಯಲ್ಲಿ ಆಸಕ್ತರಾದಷ್ಟು ಕೆಡಕಾಗಿದೆ—ಎಂದು ಅವನು ಅರಿತನು ಅದರಿಂದ ಅವನು ಇಂದ್ರಿಯ ಲಾಲಸೆ ಹಾಗೂ ಕಾಯಕ್ಲೇಶಗಳೆರಡನ್ನೂ ಪರಿತ್ಯಾಗ ಮಾಡಿ 'ಮಧ್ಯಮ ಪಥ'ವನ್ನು ಆವಿಷ್ಕಾರಗೊಳಿಸಿದನು. ಅದಕ್ಕೇನೇ ಬೌದ್ಧ ಧರ್ಮವೆಂದು ಹೆಸರಾಯಿತು. ಮಹಾತ್ಮಾ ಬುದ್ಧನು ಬನಾರಸದ ಸಮೀಪದಲ್ಲಿರುವ ಸಾರನಾಥದಲ್ಲಿ ತನ್ನ 'ಧರ್ಮಚಕ್ರ ಪ್ರವರ್ತನ'ಗೊಳಿಸಿದನು ಅದರ ಸಾರವು ನಾಲ್ಕು ಆರ್ಯಸತ್ಯ ಮತ್ತು ಅಷ್ಟಾಂಗಿಕ ಮಾರ್ಗದಲ್ಲಿ ಸಮಾವೇಶವಾಗಿದೆ ದುಃಖ, ದುಃಖ ಸಮುದಯ, ದುಃಖ ನಿರೋಧ ಮತ್ತು ದುಃಖ ನಿರೋಧಗಾಮಿನೀ ಪ್ರತಿಪದಾ ಇವು ಮ. ಬುದ್ಧನ ನಾಲ್ಕು ಆರ್ಯಸತ್ಯಗಳಾಗಿವೆ ಅರ್ಥಾತ್ ಜೀವನವು ದುಃಖಮಯವಾಗಿದೆ— ಜನ್ಮ, ಜರಾ, ಮರಣ, ಶೋಕ, ಪರಿವೇದ, ದೌರ್ಮನಸ್ಯ, ಉಪಾಯಾಸ, ಇಷ್ಟವಿಯೋಗ ಮತ್ತು ಅನಿಷ್ಟ ಸಂಯೋಗ, ರೂಪ, ವೇದನಾ, ಸಂಜ್ಞಾ, ಸಂಸ್ಕಾರ, ವಿಜ್ಞಾನ ಈ ಐದು ಸ್ಕಂದಗಳೆಲ್ಲವೂ ದುಃಖ-ರೂಪವಾಗಿವೆ. ಈ ಸಂಸಾರದ ಸಮಸ್ತ ದುಃಖಗಳಿಗೂ ನಮ್ಮ ತೃಷ್ಣೆಯೇ ಕಾರಣವಾಗಿದೆ. ಇದು ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ ಎಂದು ಮೂರು ವಿಧವಾಗಿದೆ ದುಃಖದಿಂದ ಮುಕ್ತಿಯನ್ನು ಹೊಂದುವದಕ್ಕಾಗಿ ಇದೇ

ತೃಷ್ಣೆಯನ್ನು ನಿರೋಧಿಸುವ ಆವಶ್ಯಕತೆಯಿದೆ. ಈ ಕಾರ್ಯವು ಸಮ್ಯಗ್‌ದೃಷ್ಟಿ, ಸಮ್ಯಕ್ ಸಂಕಲ್ಪ, ಸಮ್ಯಕ್‌ವಾಚಾ, ಸಮ್ಯಕ್ ಕರ್ಮಾಂತ, ಸಮ್ಯಕ್ ಆಜೀವ, ಸಮ್ಯಗ್ ವ್ಯಾಯಾಮ, ಸಮ್ಯಗ್‌ಸ್ಮೃತಿ, ಸಮ್ಯಕ್ ಸಮಾಧಿ—ಈ ಎಂಟು ಸಮ್ಯಕ್ತ್ವಗಳ ಮುಖಾಂತರವೇ ಸಂಪನ್ನವಾಗುತ್ತದೆ ತನ್ನ ಮುಕ್ತಿ ಮಾರ್ಗದ ಅನುಪಾಲನದಲ್ಲಿ ಭ. ಬುದ್ಧನು ಯಾವ ವರ್ಣ ಹಾಗೂ ಜಾತಿಭೇದಗಳನ್ನು ಒಪ್ಪಲಿಲ್ಲ. ಇವನ ಉಪದೇಶವನ್ನು ಜನರು ಬಹಳ ಆದರದಿಂದ ಸ್ವಾಗತಿಸಿದರು. ಅವನ ಕಾಲದಲ್ಲಿಯೇ ಅನೇಕ ರಾಜರೂ ಸಿರಿವಂತರೂ ಅದನ್ನು ಸ್ವೀಕರಿಸಿದರು. ಬುದ್ಧ ನಿರ್ವಾಣದ ತರುವಾಯ ಎರಡು ಮೂರು ಶತಕಗಳಲ್ಲಿ ಆಗಿ ಹೋದ ಮೌರ್ಯ ಸಮ್ರಾಟ್ ಅಶೋಕನು ಕಲಿಂಗ ವಿಜಯದಲ್ಲಿ ಆದ ಹಿಂಸೆಯ ಪ್ರಾಯಶ್ಚಿತ್ತವೆಂದು ಕ್ರಮವಾಗಿ ಬೌದ್ಧ ಧರ್ಮವನ್ನು ಸ್ವೀಕರಿಸಿದನು ಅಲ್ಲದೆ ಆ ದರ್ಮದ ಪ್ರಸಾರವನ್ನೂ ಬಹಳಷ್ಟು ಮಾಡಿದನು ನಾವಕಾಶವಾಗಿ ಈ ಧರ್ಮವು ಭಾರತದ ಸೀಮೆಯನ್ನು ಉಲ್ಲಂಘಿಸಿ ಲಂಕಾ, ಸಯಾಮ, ತಿಬೇಟ ಮತ್ತು ಚೀನ ಮೊದಲಾದ ದೇಶಗಳಲ್ಲಿಯೂ ಸಹ ಪಸರಿಸಿತು. ಅಲ್ಲಿ ಅದು ಇನ್ನೂ ಚೆನ್ನಾಗಿ ಪ್ರಚಾರದಲ್ಲಿಯೂ ಇದೆ

ಬೌದ್ಧ ಧರ್ಮದ ಮುಖ್ಯ ಗ್ರಂಥಗಳಿಗೆ ತ್ರಿಪಿಟಕಗಳೆಂದು ಹೇಳುವರು ಯಾಕೆಂದರೆ ಅವುಗಳನ್ನು ಆರಂಭದಲ್ಲಿ ಮೂರು ಬೇರೆ ಬೇರೆ ಪೆಟ್ಟಿಗೆಗಳಲ್ಲಿ ಹಾಕಿ ಇಡಲಾಗುತ್ತಿತ್ತೆಂದು ಅನುಮಾನಿಸಲಾಗುತ್ತಿದೆ ಮೊದಲನೆಯ-ದಾದ ವಿನಯ ಪಿಟಕದಲ್ಲಿ ಬೌದ್ಧ ಸಾಧುಗಳು ಆಚರಿಸಲಿಕ್ಕೆ ಯೋಗ್ಯವಾದ ನಿಯಮಗಳ ಸಂಕಲನವಿದೆ. ಎರಡನೆಯದಾದ ಸೂತ್ರ ಪಿಟಕದಲ್ಲಿ ಬುದ್ಧ ಭಗವಾನ್ ಮತ್ತು ಅವನ ಪ್ರಮುಖ ಶಿಷ್ಯರ ಉಪದೇಶಗಳ ಆಖ್ಯಾನದ ಸಂಗ್ರಹ ಮಾಡಲಾಗಿದೆ ಇವು ದೀಘನಿಕಾಯ, ಮಜ್ಝಿಮನಿಕಾಯ, ಅಂಗುತ್ತರನಿಕಾಯಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ ಇದೇ ಪಿಟಕದಲ್ಲಿ ಸಮಾವೇಶವಾಗುವ ಖುದ್ದಕನಿಕಾಯದಲ್ಲಿ ಐದುನೂರಕ್ಕಿಂತ ಹೆಚ್ಚಾಗಿ ಜಾತಕ ಕಥೆಗಳು ಇವೆ ಈ ಕಥೆಗಳು ಪ್ರಪಂಚದ ಕಥಾಸಾಹಿತ್ಯದಲ್ಲಿ ತನ್ನ ಪ್ರಾಚೀನತೆ, ನೈತಿಕತೆ, ಚಾತುರ್ಯ ಮೊದಲಾದ ಗುಣಗಳಿಗಾಗಿ ಸುಪ್ರಸಿದ್ಧವಾಗಿವೆ ಇನ್ನು ಮೂರನೆಯದಾದ ಅಭಿಧಮ್ಮ ಪಿಟಕದಲ್ಲಿ ಬೌದ್ಧ ಧರ್ಮದ ಸಿದ್ಧಾಂತಗಳ ಸಂಗ್ರಹವಿದೆ ಈ ಎಲ್ಲ ಸಾಹಿತ್ಯವು ಪಾಲೀ ಭಾಷೆಯಲ್ಲಿದೆ. ಸುಧಾರಿಸಿದ ಸ್ಥಿತಿಯಲ್ಲಿರುವ ಈಗಿನ ಉಪಲಬ್ಧ ಈ ಸಾಹಿತ್ಯವು ಲಂಕಾದ್ವೀಪದಿಂದ ಇಲ್ಲಿ ಬಂದುದಾಗಿದೆ ಇದನ್ನು 'ಹೀನಯಾನ' ಸಂಪ್ರದಾಯದ ಸಾಹಿತ್ಯವೆಂದು ತಿಳಿಯಲಾಗುತ್ತದೆ 'ಮಹಾಯಾನ' ಸಂಪ್ರದಾಯವು ಉತ್ತರದಲ್ಲಿ ಕಾಶ್ಮೀರ, ತೀಬೇಟ, ಮಧ್ಯ ಏಶಿಯಾಗಳ ಕಡೆಗೆ ಹಬ್ಬಿತು ಇವರು ತಮ್ಮ ಸಾಹಿತ್ಯವನ್ನು ಸಂಸ್ಕೃತದಲ್ಲಿ ಸಿದ್ಧಗೊಳಿಸಿದರು. ಆದರೆ ಅವರಲ್ಲಿ ಪೂರ್ಣ ತ್ರಿಪಿಟಕಗಳು ದೊರೆಯುವದಿಲ್ಲ ಅನೇಕ ಬೌದ್ಧಗ್ರಂಥಗಳ ಚೀನೀ ಹಾಗೂ ತಿಬೇಟ ಭಾಷೆಯ ಅನುವಾದಗಳು ಲಭಿಸುತ್ತವೆ. ಆದರೆ ಮೂಲ ಭಾರತೀಯ ಬಾಷೆಯಲ್ಲಿ ರಚಿಸಲ್ಪಟ್ಟ ಅವುಗಳ ಮೂಲ ಗ್ರಂಥಗಳು ಉಪಲಬ್ಧವಿಲ್ಲ ವಸುಬಂಧು ಕೃತ ಅಭಿಧರ್ಮಕೋಶದಂಥ ಸುವಿಖ್ಯಾತ ಗ್ರಂಥವನ್ನೂ ಕೂಡ ಅದರ ತಿಬೇಟ ಬಾಷೆಯ ಅನುವಾದದ ಮೇಲಿಂದ ರೂಪುಗೊಳಿಸಬೇಕಾಯಿತು.

ಜೈನಧರ್ಮದ ತೀರ್ಥಂಕರರು—ಬೌದ್ಧ ಧರ್ಮಕ್ಕಿಂತಲೂ ಬಹು ಪ್ರಾಚೀನವಾದ ಶ್ರಮಣ ಸಂಪ್ರದಾಯವು ಜೈನಧರ್ಮವಿದೆ. ಜೈನಧರ್ಮದ ಪ್ರಥಮ ತೀರ್ಥಂಕರರಾದ ಋಷಭನಾಥನ ಉಲ್ಲೇಖವು ವೈದಿಕ ಸಾಹಿತ್ಯದಲ್ಲಿಯೂ ನೋಡಲಿಕ್ಕೆ ಸಿಕ್ಕುತ್ತದೆ. ಭಾಗವತ ಪುರಾಣದಲ್ಲಿಯಂತೂ ಅವನು ಸ್ವಯಂಭೂ ಮನುವಿನ ವಂಶದಲ್ಲಿ ಐದನೆಯ ತಲೆಯವನಾಗಿ ಜನಿಸಿದನೆಂದು ಹೇಳಲಾಗಿದೆ ಹಾಗೂ ಅವನ ತಪಸ್ಯೆ ಮತ್ತು ಕೈವಲ್ಯ ಪ್ರಾಪ್ತಿಯ ವರ್ಣನೆಯನ್ನು ಸವಿಸ್ತರವಾಗಿ ಮಾಡಲಾಗಿದೆ. ಜೈನ ಪರಂಪರೆಗೆ ಅನುಸರಿಸಿ ಋಷಭನಾಥನ ತರುವಾಯ ಇಪ್ಪತ್ತು ಮೂವರು ತೀರ್ಥಂಕರರು ಆದರು ಅವರು ತಮ್ಮ ತಮ್ಮ ಕಾಲದಲ್ಲಿ ಜೈನಧರ್ಮದ ಉಪದೇಶ ಮತ್ತು ಪ್ರಚಾರ ಮಾಡಿದರು ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನು ಕೃಷ್ಣನ ಕಕ್ಕನ ಮಗನಾಗಿದ್ದನು ಅವನು ತನ್ನ ಲಗ್ನದ ಸಮಯದಲ್ಲಿ ಯಾದವ ವಂಶೀಯರಿಗೆಲ್ಲ ಊಟಕ್ಕೆ ಹಾಕಲೆಂದು ಸಂಹಾರ ಮಾಡಲಾಗುವ ಪಶು ಸಮೂಹವನ್ನು ಕಂಡು ವೈರಾಗ್ಯ ಧಾರಣಮಾಡಿದನು. ಸೌರಾಷ್ಟ್ರದ ಗಿರನಾರ ಪರ್ವತದ ಮೇಲೆ ತಪಶ್ಚರ್ಯವನ್ನು ಮಾಡಿದನು ಈ ಪರ್ವತವು ಈಗಲೂ ಅವನ ಮುಕ್ತಿಸ್ಥಾನವೆಂದು ಪವಿತ್ರವೆನಿಸಿದೆ ಇಪ್ಪತ್ತಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನ ಜನ್ಮವು ಬನಾರಸದ ರಾಜವಂಶದಲ್ಲಿ ಆಗಿತ್ತು ಇವನು ಜೈನಧರ್ಮವನ್ನು ಬಹಳ ಸುಸಂಘಟಿತಗೊಳಿಸಿದನು ಬಹುತರ ಅದು ಇಂದಿನ ವರೆಗೂ ಅದೇ ರೂಪದಲ್ಲಿ ನಡೆಯುತ್ತ ಬಂದಿದೆ ಬಹಳಷ್ಟು

ಜೈನಮಂದಿರಗಳಲ್ಲಿ ಪಾರ್ಶ್ವನಾಥನ ಪೂಜೆಯು ನಡೆಯುತ್ತದೆ. ಸಾಮಾನ್ಯವಾಗಿ ಜೈನರನ್ನು ಪಾರ್ಶ್ವನಾಥನ ಉಪಾಸಕರೆಂದು ತಿಳಿಯುತ್ತಾರೆ ಪಾರ್ಶ್ವನಾಥನ ತರುವಾಯ ಅಂತಿಮ ತೀರ್ಥಂಕರನಾದ ವರ್ಧಮಾನ ಮಹಾವೀರನಾದನು ಇವನ ಜನ್ಮವು ಬಿಹಾರ ಪ್ರದೇಶದ ಕುಂಡನಪುರದ ರಾಜನಾದ ಸಿದ್ಧಾರ್ಥ ಹಾಗೂ ರಾಣಿ ತ್ರಿಶಲಾದೇವಿ ಇವರಿಂದ ಆಯಿತು ಚೈತ್ರ ಶುಕ್ಲ ತ್ರಯೋದಶಿ ದಿನವು ಇವನ ಜನ್ಮ ತಿಥಿಯಾಗಿದೆ ಈ ದಿನವು ಈಗಲೂ ಜೈನರಿಂದ ಪವಿತ್ರವೆಂದು ಮನ್ನಿಸಲ್ಪಡುತ್ತದೆ. ಅಂದು ದೇಶದ ತುಂಬೆಲ್ಲ 'ಮಹಾವೀರ ಜಯಂತಿ'ಯನ್ನು ಆಚರಿಸಲಾಗುತ್ತದೆ. ಮಹಾವೀರನು ತನ್ನ ಬಾಲ್ಯಕಾಲದ ಮೂವತ್ತು ವರ್ಷಗಳನ್ನು ರಾಜಭವನದಲ್ಲಿ ಸುಖದಿಂದ ಕಳೆದನು. ಆಗ ವಿದ್ಯಾಧ್ಯಯನವನ್ನು ಮಾಡಿ ಮುಂದೆ ತಪಸ್ಸಿಗೆ ತೆರಳಿದನು ಹನ್ನೆರಡು ವರ್ಷಗಳ ಕಠೋರ ತಪಶ್ಚರಣದಿಂದಲೂ ಆತ್ಮ ಚಿಂತನೆಯಿಂದಲೂ ಕೇವಲ ಜ್ಞಾನವನ್ನು ಪ್ರಾಪ್ತಮಾಡಿಕೊಂಡನು. ಮುಂದೆ ಮೂವತ್ತು ವರ್ಷಗಳ ವರೆಗೆ ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ ಧರ್ಮ ಪ್ರಚಾರವನ್ನು ಮಾಡಿದನು ಈ ಪ್ರಕಾರ ಎಪ್ಪತ್ತೆರಡು ವರ್ಷಗಳ ಆಯುಷ್ಯವನ್ನು ಪೂರ್ಣಗೊಳಿಸಿ ಕಾರ್ತಿಕ ಕೃಷ್ಣ ಚತುರ್ದಶಿಯ ದಿನ ಅವನು ನಿರ್ವಾಣವನ್ನು ಹೊಂದಿದನು ಇದೇ ದಿನದ ನಿರ್ವಾಣೋತ್ಸವವನ್ನು ದೀಪಾವಳಿಯ ರೂಪದಲ್ಲಿ ಬಹು ವೈಭವದಿಂದ ಇಂದಿಗೂ ಆಚರಿಸಲಾಗುತ್ತಿದೆ. ಪ್ರಚಲಿತ ಮಾನ್ಯತೆಗೆ ಅನುಸರಿಸಿ ಭಗವಾನ್ ಮಹಾವೀರನ ನಿರ್ವಾಣವು ವಿಕ್ರಮ ಸಂವತಕ್ಕೆ ಪೂರ್ವದಲ್ಲಿ ೪೭೦ ವರ್ಷ, ಶಕಸಂವತ್ಸರದಿಂದ ೬೦೫ ವರ್ಷ ಪೂರ್ವ, ಇಸ್ವಿ ಸನ್ ೫೨೭ ಪೂರ್ವದಲ್ಲಿ ಆಯಿತು ಇದಕ್ಕನುಸರಿಸಿ ಮಹಾವೀರ ನಿರ್ವಾಣ ಸಂವತ್ಸರವು ಸ್ಥಾಪನೆಯಾಯಿತು

ಭಗವಾನ್ ಮಹಾವೀರನ ತಾಯಿಯಾದ ತ್ರಿಶಲೆಯ ಕಿರಿಯ ತಂಗಿಯಾದ ಚೇಳನಾದೇವಿಯ ವಿವಾಹವು ಆ ಕಾಲದ ಮಗಧದ ಚಕ್ರವರ್ತಿಯಾದ ಬಿಂಬಿಸಾರ–ಶ್ರೇಣಿಕ–ನ ಕೂಡ ಆಗಿದ್ದಿತು. ರಾಣಿ ಚೇಳನಾದೇವಿಯ ಪ್ರಯತ್ನದಿಂದ ಶ್ರೇಣಿಕನು ಮಹಾವೀರನ ಪರಮ ಉಪಾಸಕನಾದನು. ಅವನ ಪ್ರಶ್ನೆಗಳಿಗೆ ಉತ್ತರಕೊಡಲಿಕ್ಕೆಂದೇ ಜೈನಶಾಸ್ತ್ರ ಮತ್ತು ಪುರಾಣಗಳು ಬಹಳಷ್ಟು ರೂಪುಗೊಂಡವು ಈ ಮಾತನ್ನು ಬಹು ಜನರು ಸ್ವೀಕರಿಸುತ್ತಾರೆ

ಜೈನಾಗಮ—ಭಗವಾನ್ ಮಹಾವೀರನ ಉಪದೇಶದ ಸಂಗ್ರಹವನ್ನು ಅವನ ಶಿಷ್ಯರು ಹನ್ನೆರಡು ಶ್ರುತಾಂಗಗಳಲ್ಲಿ ಮಾಡಿದರು. ಅವುಗಳ ಪರಂಪರಾಗತ ಹೆಸರುಗಳನ್ನೂ ಅವುಗಳ ವಿಷಯಗಳನ್ನೂ ಕೆಳಗೆ ಕಾಣಿಸಿದೆ–

೧. ಆಚಾರಂಗದಲ್ಲಿ ಮುನಿಗಳ ಚಾರಿತ್ರಕ್ಕೆ ಸಂಬಂಧಿಸಿದ ನಿಯಮಗಳ ವರ್ಣನೆಯಿದೆ.

೨. ಸೂತ್ರಕೃತಾಂಗದಲ್ಲಿ ಮುನಿಗಳ ಆಚರಣಕ್ಕೆ ಸಂಬಂಧಿಸಿದ ಇನ್ನೂ ಹೆಚ್ಚಿನ ಆದೇಶಗಳು ಇವೆ. ಇದರಲ್ಲಿ ಅನೇಕ ಅನ್ಯ ದರ್ಶನಗಳ ವರ್ಣನೆಯೂ ಇವೆ

೩. ಸ್ಥಾನಾಂಗದಲ್ಲಿ ತತ್ತ್ವಗಳ ಭೇದ ಪ್ರಭೇದಗಳನ್ನು ಅವುಗಳ ಸಂಖ್ಯಾಕ್ರಮದಿಂದ ನಿರೂಪಿಸಲಾಗಿದೆ. ಹೇಗೆಂದರೆ ಚೈತನ್ಯದ ಅಪೇಕ್ಷೆಯಿಂದ ಜೀವವು ಒಂದಾಗಿದೆ ಜ್ಞಾನ ಮತ್ತು ದರ್ಶನಗಳ ಭೇದದಿಂದ ಅದು ಎರಡು ವಿಧವಾಗಿದೆ ಉತ್ಪಾದ, ವ್ಯಯ, ಧ್ರೌವ್ಯಗಳ ಭೇದದಿಂದ ಅದು ಮೂರು ಪ್ರಕಾರವಾಗಿದೆ. ದೇವ, ಮನುಷ್ಯ ಮೊದಲಾದ ಗತಿಗಳಲ್ಲಿ ಪರಿಭ್ರಮಣ ಮಾಡುತ್ತಿರುವ ಅಪೇಕ್ಷೆಯಿಂದ ಅದು ನಾಲ್ಕು ಪ್ರಕಾರವುಳ್ಳದ್ದಾಗಿದೆ. ಇತ್ಯಾದಿ.

೪. ಸಮವಾಯಾಂಗದಲ್ಲಿ ತತ್ತ್ವಗಳ ನಿರೂಪಣೆಯನ್ನು ಅವುಗಳ ಸಮವಾಯ ಅರ್ಥಾತ್ ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವಗಳ ಅಪೇಕ್ಷೆಯಿಂದ ಸಮಾನತೆಗೆ ಅನುಸರಿಸಿ ಮಾಡಲಾಗಿದೆ ಹೇಗೆಂದರೆ ದ್ರವ್ಯ ಸಮವಾಯದ ಅಪೇಕ್ಷೆಯಿಂದ ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಲೋಕಾಕಾಶ ಮತ್ತು ಒಂದು ಜೀವದ ಪ್ರದೇಶ ಇವು ಸಮಾನವಾಗಿವೆ. ಕ್ಷೇತ್ರ ಸಮವಾಯದ ಅಪೇಕ್ಷೆಯಿಂದ ಪ್ರಥಮ ನರಕದ ಪ್ರಥಮ ಪಟಲದ ಸೀಮಂತಕನೆಂಬ ಹೆಸರಿನ ಬಿಲ, ಎರಡೂ ಅರ್ಧ ದ್ವೀಪ ಪ್ರಮಾಣದ ಮನುಷ್ಯ ಕ್ಷೇತ್ರ, ಪ್ರಥಮ ಸ್ವರ್ಗದ ಪ್ರಥಮ ಪಟಲದ ಋಜುವೆಂಬ ವಿಮಾನ ಮತ್ತು ಸಿದ್ಧ ಕ್ಷೇತ್ರಗಳು ಸಮಾನವಾಗಿವೆ ಇತ್ಯಾದಿ

೫. ವ್ಯಾಖ್ಯಾಪ್ರಜ್ಞಪ್ತಿಯಲ್ಲಿ ಪ್ರಶ್ನೋತ್ತರ ಕ್ರಮದಿಂದ ಜೀವಾದಿ ಪದಾರ್ಥಗಳ ವ್ಯಾಖ್ಯಾನವು ನೋಡಲಿಕ್ಕೆ ಸಿಕ್ಕುತ್ತದೆ.

೬. ಜ್ಞಾತೃಧರ್ಮಕಥಾ ಎಂಬುದರಲ್ಲಿ ಧರ್ಮೋಪದೇಶ ಹಾಗೂ ಬಹುವಿಧ ಕಥೆಗಳು ಇರುತ್ತವೆ.

೭. ಉಪಾಸಕಾಧ್ಯಾಯನದಲ್ಲಿ ಗೃಹಸ್ಥನು ಪಾಲಿಸಲಿಕ್ಕೆ ಯೋಗ್ಯವಾದ ಧರ್ಮದ ವಿಧಾನವಿದೆ.

೮. ಅಂತಕೃದ್ದಶಾಂಗದಲ್ಲಿ ಅನೇಕ ಉಪಸರ್ಗಗಳನ್ನು ಸಹನಮಾಡಿ ಸಂಸಾರದಲ್ಲಿ ಮುಕ್ತಿಯನ್ನು ಹೊಂದಿದ ಹತ್ತು ಜನ ಮುನಿಗಳ ಚರಿತ್ರೆಯನ್ನು ವರ್ಣಿಸಲಾಗಿದೆ

೯. ಅನುತ್ತರೌಪಪಾತಿಕದಲ್ಲಿ ಅನೇಕ ಘೋರ ಉಪಸರ್ಗಗಳನ್ನು ಸಹನಮಾಡಿ ವಿಜಯ ಮೊದಲಾದ ಅನುತ್ತರ ವಿಮಾನಗಳಲ್ಲಿ ದೇವ ಪದವನ್ನು ಹೊಂದಿದ ಹತ್ತು ಜನ ಮುನಿಗಳ ಚಾರಿತ್ರಗಳನ್ನು ವರ್ಣಿಸಲಾಗಿದೆ

೧೦. ಪ್ರಶ್ನವ್ಯಾಕರಣದಲ್ಲಿ ತಮ್ಮ ಧರ್ಮಕ್ಕೆ ಪುಷ್ಟಿಯನ್ನೂ ಅನ್ಯಧರ್ಮದ ಖಂಡನೆಯನ್ನೂ ಮಾಡುವ ವರ್ಣನೆಗಳೂ ಕಥೆಗಳೂ ಇವೆ

೧೧. ವಿಪಾಕಸೂತ್ರದಲ್ಲಿ ಪುಣ್ಯ ಹಾಗೂ ಪಾಪಗಳ ಫಲದ ವರ್ಣನೆ ಇದೆ

೧೨. ದೃಷ್ಟಿವಾದದಲ್ಲಿ ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕಾ ಈ ಪ್ರಕಾರ ಐದು ಖಂಡಗಳಿವೆ ಪರಿಕರ್ಮದಲ್ಲಿ ಚಂದ್ರ, ಸೂರ್ಯ, ಜಂಬೂದ್ವೀಪ, ದ್ವೀಪಸಾಗರಗಳ ವಿವರಣ ಹಾಗೂ ದ್ರವ್ಯದ ವಿಶೇಷ ನಿರೂಪಣವನ್ನೂ ಮಾಡಲಾಗಿದೆ. ಸೂತ್ರಗಳಲ್ಲಿ ಪ್ರಾಚೀನ ಕಾಲದಲ್ಲಿ ಪ್ರಚಲಿತವಿರುವ ೩೬೩ ಮತಗಳ ವಿವೇಚನವಿದೆ ಪ್ರಥಮಾನುಯೋಗದಲ್ಲಿ ರಾಜ ಮತ್ತು ಋಷಿಗಳ ವಂಶಾನುಕ್ರಮಗಳ ಪುರಾಣವು ವರ್ಣಿಸಲ್ಪಟ್ಟಿದೆ ಪೂರ್ವಗತದಲ್ಲಿ ಹದಿನಾಲ್ಕು ಪೂರ್ವಗಳು–ಪ್ರಾಚೀನ ಪರಂಪರಾಗತ ಮತ ಹಾಗೂ ವಾದಗಳ ವಿವರಣವಿತ್ತು—(೧) ಅಗ್ರಾಯಣೀ (೨) ಉತ್ಪಾದ (೩) ವೀರ್ಯಾನು ಪ್ರವಾದ (೪) ಅಸ್ತಿ–ನಾಸ್ತಿ ಪ್ರವಾದ (೫) ಜ್ಞಾನ–ಪ್ರವಾದ (೬) ಸತ್ಯ–ಪ್ರವಾದ (೭) ಆತ್ಮ ಪ್ರವಾದ (೮) ಕರ್ಮ ಪ್ರವಾದ (೯) ಪ್ರತ್ಯಾಖ್ಯಾನವಾದ (೧೦) ವಿದ್ಯಾನುವಾದ (೧೧) ಕಲ್ಯಾಣವಾದ (೧೨) ಪ್ರಾಣವಾದ (೧೩) ಕ್ರಿಯಾವಿಶಾಲ ಮತ್ತು (೧೪) ಲೋಕ ಬಿಂದುಸಾರ. ಚೂಲಿಕಾದಲ್ಲಿ ಜಲ, ಸ್ಥಲ, ಮಾಯಾ, ರೂಪ ಮತ್ತು ಆಕಾಶಗತ ನಾನಾ ಮಂತ್ರ ತಂತ್ರಗಳ ವಿವರಣವಿತ್ತು.

ಈ ದ್ವಾದಶಾಂಗ ಆಗಮವು ಶ್ರುತಜ್ಞಾನದ ರೂಪದಲ್ಲಿ ಗುರು–ಶಿಷ್ಯಪರಂಪರೆಯಿಂದ ಪ್ರಚಲಿತವಾಗಿತ್ತು. ಆದರೆ ಈ ಪ್ರಕಾರ ಅದು ಚಿರಕಾಲ ನಿಲ್ಲಲು ಸಾಧ್ಯವಿರಲಿಲ್ಲ. ಮಹಾವೀರ ಭಗವಾನ್‌ರ ನಿರ್ವಾಣದಿಂದ ೧೬೨ ವರ್ಷಗಳ ತರುವಾಯ ಶ್ರುತಕೇವಲಿ ಭದ್ರಬಾಹುವಿನ ವರೆಗೆ ಅದು ಪೂರ್ಣ ಶ್ರುತಜ್ಞಾನವಾಗಿತ್ತು. ಅದರ ತರುವಾಯ ಹನ್ನೆರಡನೆಯ ಅಂಗವಾದ ದೃಷ್ಟಿವಾದದ ಜ್ಞಾನವು ಹ್ರಾಸವಾಯಿತು ಮತ್ತು ಅದೇ ಪ್ರಕಾರ ಉಳಿದ ಅಂಗಗಳ ಜ್ಞಾನವೂ ವ್ಯುಚ್ಛಿನ್ನ ಹಾಗೂ ತ್ರುಟಿತವಾಗುತ್ತ ಹೋಯಿತು. ಅದು ವೀರ ನಿರ್ವಾಣದ ೬೮೩ ವರ್ಷಗಳ ತರುವಾಯ ಸ್ವಲ್ಪ ಆಚಾರ್ಯರಲ್ಲಿ ಮಾತ್ರ ಈ ಶ್ರುತಾಂಗದ ಜ್ಞಾನವು ಹರಕು ಮುರುಕಾಗಿ ಉಳಿಯಿತು. ಇಂಥ ಅಪೂರ್ಣ ಶ್ರುತಾಂಗ ಧಾರಿಗಳಲ್ಲಿಯೇ ಆಚಾರ್ಯ ಧರಸೇನರಾದರು. ಅವರು ಸೌರಾಷ್ಟ್ರದ ಗಿರಿನಗರದಲ್ಲಿರುವ ಚಂದ್ರ ಗುಹೆಯಲ್ಲಿರುತ್ತಿದ್ದರು ಅವರು ತಮ್ಮ ಆಯುಷ್ಯದ ಕೊನೆಯಲ್ಲಿ ತಮ್ಮ ಜ್ಞಾನವನ್ನು ಆಚಾರ್ಯ ಪುಷ್ಪದಂತ ಹಾಗೂ ಭೂತಬಲಿಗಳಿಗೆ ನೀಡಿದರು. ಈ ಆಚಾರ್ಯರು ತಮ್ಮ ಶ್ರುತಜ್ಞಾನವನ್ನು ಕರ್ಮಪ್ರಾಭೃತ–ಷಟ್‌-ಖಂಡಾಗಮಸೂತ್ರ ರೂಪದಲ್ಲಿ ಭಾಷಾ–ನಿಬದ್ಧಗೊಳಿಸಿದರು ಈ ಗ್ರಂಥ ರಚನೆಯು ಜ್ಯೇಷ್ಠ ಶುಕ್ಲ ಪಂಚಮಿಗೆ ಪೂರ್ಣವಾಯಿತು ಇದೇ ಕಾರಣಕ್ಕಾಗಿ ಜೈನರು ಈ ತಿಥಿಯನ್ನು ಶ್ರುತಪಂಚಮಿಯೆಂದು ಆಚರಿಸುತ್ತಾರೆ. ಅಂದು ಆಗಮ–ಶ್ರುತದ–ಪೂಜೆಯನ್ನೂ ಮಾಡುತ್ತಾರೆ. ಇದೇ ಪ್ರಕಾರ ಇನ್ನೊಬ್ಬ ಶ್ರುತಜ್ಞಾನಿಯಾದ ಆಚಾರ್ಯನು–ಗುಣಧರನು–ಕಷಾಯಪ್ರಾಭೃತ ಗ್ರಂಥವನ್ನು ರಚಿಸಿದನು. ಒಂಬತ್ತನೆಯ ಶತಮಾನದಲ್ಲಿ ಆಚಾರ್ಯ ವೀರಸೇನನು 'ಷಟ್‌ಖಂಡಾಗಮ' ಸೂತ್ರದ ಮೇಲೆ ಧವಲಾ ಎಂಬ ಹೆಸರಿನ ಟೀಕಾಗ್ರಂಥವನ್ನು ರಚಿಸಿದನು. ಕಷಾಯ ಪ್ರಾಭೃತದ ಮೇಲೆ ವೀರಸೇನ ಹಾಗೂ ಅವನ ಶಿಷ್ಯ ಜಿನಸೇನರು ಸೇರಿ ಜಯಧವಲಾ ಎಂಬ ಹೆಸರಿನ ಟೀಕಾ ಗ್ರಂಥವನ್ನೂ ರಚಿಸಿದರು ಈ ಟೀಕಾ ಗ್ರಂಥಗಳು 'ಮಣಿಪ್ರವಾಲನ್ಯಾಯ'ದಂತೆ ಹೆಚ್ಚಾಗಿ ಪ್ರಾಕೃತದಲ್ಲಿಯೂ ನಡು ನಡುವೆ ಸಂಸ್ಕೃತ ಮಿಶ್ರಿತ ಭಾಷೆಯಲ್ಲಿಯೂ ಇವೆ ಇವೇ ಗ್ರಂಥಗಳು ದಿಗಂಬರ ಜೈನ ಸಂಪ್ರದಾಯದಲ್ಲಿ ಧವಲಸಿದ್ಧಾಂತ ಮತ್ತು ಜಯಧವಲ ಸಿದ್ಧಾಂತ ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ ಪ್ರಾಮಾಣಿಕವೂ ಎನಿಸಿವೆ ಷಟ್‌ಖಂಡಾಗಮದ ಆರನೆಯ ಖಂಡವು ಭೂತಬಲಿ ಆಚಾರ್ಯಕೃತ ಮಹಾಬಂಧವಾಗಿದೆ ಇದು ಮಹಾಧವಲವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಗ್ರಂಥಗಳ ಮೂಲ ಸೂತ್ರ ಹಾಗೂ ಟೀಕೆಗಳ ಭಾಷೆಯನ್ನು 'ಜೈನ ಶೌರಸೇನೀ' ಎಂದು ಕರೆಯುತ್ತಾರೆ.

ಇದು ದಿಗಂಬರ ಸಂಪ್ರದಾಯದ ಸಂಕ್ಷಿಪ್ತ ವಿವರಣವಾಗಿದೆ. ಶ್ವೇತಾಂಬರ ಪರಂಪರೆಗೆ ಅನುಸರಿಸಿ ದ್ವಾದಶಾಂಗ ಆಗಮಗಳು ಸಂಪೂರ್ಣವಾಗಿ ಲುಪ್ತವಾಗಿಲ್ಲವೆಂದಿದೆ. ವೀರ ನಿರ್ವಾಣದ ತರುವಾಯ ಅನೇಕಸಲ ಆಗಮಗಳನ್ನು ಸುವ್ಯವಸ್ಥಿತಗೊಳಿಸುವದಕ್ಕಾಗಿ ಮುನಿಸಂಘಗಳ ಸಮ್ಮೇಲನವು ಸೇರಿತ್ತು. ಕೊನೆಯಸಲ ವೀರ ನಿರ್ವಾಣದ ೯೮೦ ವರ್ಷಗಳ ತರುವಾಯ ವಿಕ್ರಮ ಸಂ ೫೧೦ರಲ್ಲಿ ವಲಭಿಯೊಳಗೆ (ಗುಜರಾಥ) ದೇವರ್ಧಿಗಣಿ ಕ್ಷಮಾಶ್ರಮಣರ ಅಧ್ಯಕ್ಷತೆಯಲ್ಲಿ ಮುನಿಸಂಘಗಳು ನೇರಿದವು ಆ ಸಮ್ಮೇಲನದಲ್ಲಿ ಸಂಗ್ರಹಿಸಿದ ಗ್ರಂಥಗಳ ನಾಮಾವಲಿಯನ್ನು ದೇವರ್ಧಿಗಣಿ ಕೃತ ನಂದಿಸೂತ್ರದಲ್ಲಿ ಕೊಡಲಾಗಿದೆ. ಸದ್ಯಕ್ಕೆ ಉಪಲಬ್ಧವಿರುವ ೪೫ ಗ್ರಂಥರೂಪ ಆಗಮಗಳಲ್ಲಿಯೂ ಇದಕ್ಕೂ ಅನೇಕ ವಿಧ ಅಂತರವಿದೆ ಇವುಗಳಲ್ಲಿ ಮೊದಲು ಹೇಳಿದ ಹನ್ನೊಂದು ಅಂಗಗಳ ಹೊರತಾಗಿ ೧೨ ಉಪಾಂಗ, ೧೦ ಪ್ರಕೀರ್ಣಕ, ೬ ಛೇದಸೂತ್ರ, ೪ ಮೂಲಸೂತ್ರ ಮತ್ತು ೨ ಚೂಲಿಕಾ ಸೂತ್ರಗಳಿವೆ. ಅವುಗಳ ಹೆಸರುಗಳು ಕ್ರಮದಿಂದ ಹೀಗಿವೆ—

೧. ಮೇಲೆ ಹೇಳಿದಂತೆ ಹನ್ನೊಂದು ಅಂಗಗಳು.

೨. **ಹನ್ನೆರಡು ಉಪಾಂಗಗಳು**—(೧) ಔಪಪಾತಿಕ ಸೂತ್ರ, (೨) ರಾಯಪಸೇಣೀ, (೩) ಜೀವಾಭಿಗಮ, (೪) ಪಣ್ಣವಣಾ, (೫) ಸೂರ್ಯಪ್ರಜ್ಞಪ್ತಿ, (೬) ಜಂಬೂದ್ವೀಪ ಪ್ರಜ್ಞಪ್ತಿ, (೭) ಚಂದ್ರ ಪ್ರಜ್ಞಪ್ತಿ, (೮) ನಿರಯಾವಲೀ, (೯) ಕಲ್ಪಾವತಂಸಿಕಾ, (೧೦) ಪುಷ್ಪಿಕಾ, (೧೧) ಪುಷ್ಪಚೂಲಿಕಾ, (೧೨) ವೃಷ್ಣಿದಶಾ.

೩. **ದಶ ಪ್ರಕೀರ್ಣಕ**—(೧) ಚತುಃಶರಣ, (೨) ಆತುರ ಪ್ರತ್ಯಾಖ್ಯಾನ, (೩) ಭಕ್ತಪರಿಜ್ಞಾ, (೪) ಸಂಸ್ತಾರ, (೫) ತಂದುಲ ವೈಚಾರಿಕ, (೬) ಚಂದ್ರಕವೇಧ್ಯಕ, (೭) ದೇವೇಂದ್ರಸ್ತವ, (೮) ಗಣಿವಿದ್ಯಾ, (೯) ಮಹಾ ಪ್ರತ್ಯಾಖ್ಯಾನ, (೧೦) ವೀರಸ್ತವ.

೪. **ಆರು ಛೇದ ಸೂತ್ರ**—(೧) ನಿಶೀಥ, (೨) ಮಹಾನಿಶೀಥ, (೩) ವ್ಯವಹಾರ, (೪) ಆಚಾರದಶಾ, (೫) ಕಲ್ಪ, (೬) ಪಂಚಕಲ್ಪ, (ಅಥವಾ ಜೀತಕಲ್ಪ)

೫. **ನಾಲ್ಕು ಮೂಲಸೂತ್ರ**—(೧) ಉತ್ತರಾಧ್ಯಯನ, (೨) ಆವಶ್ಯಕ, (೩) ದಶವೈಕಾಲಿಕ, (೪) ಪಿಂಡನಿರ್ಯುಕ್ತಿ

೬. **ಎರಡು ಚೂಲಿಕಾ ಸೂತ್ರಗಳು**—(೧) ನಂದೀಸೂತ್ರ (೨) ಅನುಯೋಗ ದ್ವಾರ.

ಈ ಆಗಮಗಳನ್ನು ದಿಗಂಬರ ಸಂಪ್ರದಾಯದವರು ಪ್ರಾಮಾಣಿಕವೆಂದು ತಿಳಿಯುವದಿಲ್ಲ. ಹನ್ನೊಂದು ಅಂಗಗಳು ಸ್ವತಃ ಅವುಗಳಲ್ಲಿಯೇ ಕೊಟ್ಟ ವರ್ಣನೆಗೆ ಅನುಸರಿಸಿ ವಿಷಯ ಹಾಗೂ ವಿಸ್ತಾರದಲ್ಲಿ—ಈ ಎರಡೂ ದೃಷ್ಟಿಯಿಂದ—ದ್ವಾದಶಾಂಗ ಶ್ರುತವು ಮೂಲದಲ್ಲಿ ರಚನೆಯಾದಂತೆ ಇಲ್ಲ. ವಿಶೇಷವಾಗಿ ಸ್ಥಾನಾಂಗ, ಸಮವಾಯಾಂಗ ಮತ್ತು ನಂದಿಸೂತ್ರದಲ್ಲಿ ಬರುವ ವರ್ಣನೆಗಳು ಈಗಿರುವ ಆಗಮದ ವಿಷಯಗಳಿಗೆ ಪರಸ್ಪರ ಹೊಂದಿಕೆಯಿಲ್ಲ. ವರ್ಗೀಕರಣದ ವಿಷಯದಲ್ಲಿಯೂ ಮತಭೇದವು ಕಂಡುಬರುತ್ತದೆ ಉದಾಹರಣೆಗಾಗಿ ಛೇದ ಸೂತ್ರದಲ್ಲಿ ಪಂಚಕಲ್ಪದ ಸ್ಥಾನದಲ್ಲಿ ಜೀತಕಲ್ಪದ ಹೆಸರು ಇದೆ. ಈ ಪ್ರಕಾರ ವಿಕಲ್ಪದಿಂದ ಉಂಟಾದ ಗ್ರಂಥಗಳಿಗೆ ಆಗಮಗಳಲ್ಲಿ ಸ್ಥಾನವನ್ನು ಕೊಡುವುದರಿಂದ ಒಟ್ಟು ಗ್ರಂಥಗಳ ಸಂಖ್ಯೆಯು ೫೦ಕ್ಕೆ ಹೋಗಿ ತಲಪುವದು. ಅನೇಕ ಗ್ರಂಥಗಳ ಕರ್ತೃವಿನ ಹೆಸರೂ ಸಹ ದೊರೆಯುತ್ತದೆ. ನಾಲ್ಕನೆಯ ಉಪಾಂಗವಾದ ಪ್ರಜ್ಞಾಪನಾದ ಕರ್ತೃವು ಶ್ಯಾಮಾಚಾರ್ಯನು, ಜೀತಕಲ್ಪದ ಕರ್ತೃವು ಜಿನಭದ್ರನು; ಪಂಚಮ ಛೇದಸೂತ್ರ ಕಲ್ಪದ ಕರ್ತೃವು ಭದ್ರಬಾಹುವು; ತೃತೀಯ ಮೂಲಸೂತ್ರ ದಶವೈಕಾಲಿಕಗಳ ಕರ್ತೃವು ಸೇಜ್ಜಂಭವ ಅಥವಾ ಸ್ವಯಂಭವನು; ನಂದಿಸೂತ್ರದ ಕರ್ತೃವು ಸ್ವತಃ ದೇವರ್ಧಿಗಣಿಯು. ಭಾಷೆ ಹಾಗೂ ಶೈಲಿಯ ದೃಷ್ಟಿಯಿಂದಲೂ ಈ ಗ್ರಂಥಗಳು ಭಿನ್ನ ಭಿನ್ನ ಕಾಲದಲ್ಲಿ ರಚನೆಯಾದವುಗಳೆಂದೂ ಗೊತ್ತಾಗುತ್ತದೆ. ಆಚಾರಾಂಗವು ವಿಷಯ, ಭಾಷೆ, ಶೈಲಿ ಇವೆಲ್ಲವುಗಳ ದೃಷ್ಟಿಯಿಂದಲೂ ಅನ್ಯ ಗ್ರಂಥಗಳಿಗಿಂತ ತೀರ ಪ್ರಾಚೀನವೆಂದು ತೋರುತ್ತದೆ. ಉತ್ತರಾಧ್ಯಯನದಲ್ಲಿಯೂ ಹೆಚ್ಚು ಪ್ರಾಚೀನ ಭಾಗಗಳು ಸಮಾವೇಶವಾಗಿವೆ ಹೀಗಾಗಿ ಈ ಆಗಮ ಗ್ರಂಥಗಳಲ್ಲಿ ತೀರ ಪ್ರಾಚೀನ ಅಂಶಗಳೂ ಇವೆ ಅದರಂತೆ ದೇವರ್ಧಿಗಣಿಯ ಕಾಲದ ವರೆಗಿನ ರಚನೆಗಳೂ ಇವೆ.

**ಆಗಮಗಳ ಭಾಷೆ ಮತ್ತು ಅನ್ಯ ಪ್ರಾಕೃತ**—ಈ ಗ್ರಂಥಗಳ ಭಾಷೆಯು 'ಆರ್ಷ' ಅಥವಾ 'ಅರ್ಧ-ಮಾಗಧೀ' ಎಂದು ಹೇಳಲಾಗುತ್ತದೆ. ಆರ್ಯ ಪರಿವಾರದ ಭಾರತೀಯ ಭಾಷೆಗಳಲ್ಲಿ ಎಲ್ಲಕ್ಕೂ ಪ್ರಾಚೀನ ಭಾಷೆಯು ವೇದಗಳಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ. ವೇದಗಳ ಭಾಷೆಯನ್ನು ಸಂಸ್ಕರಿಸಿ ಸಂಸ್ಕೃತವನ್ನು ಸಿದ್ಧಗೊಳಿಸಲಾಯಿತು.

ಜನರಾಡುವ ಲೋಕಭಾಷೆಯು 'ಪ್ರಾಕೃತ'ವೆಂದು ಕರೆಯಲ್ಪಟ್ಟಿತು ಇದರಲ್ಲಿ ದೇಶಭೇದಕ್ಕೆ ಅನುಸರಿಸಿ ಅನೇಕ ಪ್ರಕಾರಗಳುಂಟಾದವು ಮಗಧ ದೇಶದಲ್ಲಿ ಪ್ರಚಲಿತವಿರುವ ಭಾಷೆಯು ಮಾಗಧೀ ಎಂದು ಹೆಸರನ್ನು ಹೊಂದಿತು. ಮಥುರೆಯ ಸುತ್ತಲೂ ಪ್ರಚಾರದಲ್ಲಿರುವ ಬಾಷೆಯು ಶೌರಸೇನೀ ಎಂದಾಯಿತು ಮಹಾರಾಷ್ಟ್ರದಲ್ಲಿ ಪ್ರಚಲಿತವಿರುವ ಪ್ರಾಕೃತವು ಮಹಾರಾಷ್ಟ್ರೀ ಎನಿಸಿಕೊಂಡಿತು ಈ ಎಲ್ಲ ಬಾಷೆಗಳಲ್ಲಿ ಉಚ್ಚಾರ ಮೊದಲಾದ ಸಂಗತಿಗಳಲ್ಲಿ ಪರಸ್ಪರ ಸ್ವಲ್ಪ ಅಂತರವಿದೆ. ಆದರೆ ಒಂದೇ ಬಾಷೆಯು ಭಿನ್ನಪ್ರದೇಶ, ಭಿನ್ನಕಾಲಗಳಲ್ಲಿ ಹೊಂದುವ ವ್ಯತ್ಯಾಸದಂತೆ ಈ ಅಂತರವು ಇದೆ ಮಗಧ ಹಾಗೂ ಶೂರಸೇನಗಳ ಸೀಮೆಯಲ್ಲಿ ಪ್ರಚಲಿತವಿರುವ ಭಾಷೆಯು ಅರ್ಧಮಾಗಧೀ ಎನಿಸಿ-ಕೊಂಡಿತು. ಈ ಭಾಷೆಯು ಸೀಮಾಪ್ರದೇಶದಲ್ಲಿ ಪ್ರಚಲಿತವಾಗಿರುವುದರಿಂದ ಎರಡೂ ಬಾಷೆಗಳಲ್ಲಿಯ ವಾಕ್ ಪ್ರಚಾರಗಳೂ ರೀತಿನೀತಿಗಳೂ ಇದರಲ್ಲಿ ಸಮಾವೇಶವಾಗಿವೆ ಭಗವಾನ್ ಮಹಾವೀರರ ಉಪದೇಶವೂ ಅರ್ಧಮಾಗಧೀ ಭಾಷೆಯಲ್ಲಿಯೇ ನಡೆಯುತ್ತಿತ್ತೆಂದು ಹೇಳಲಾಗುತ್ತದೆ ಆದರಿಂದ ಎರಡೂ ಪ್ರದೇಶಗಳ ಜನರು ಬಹಳ ಚನ್ನಾಗಿ ಅದನ್ನು ತಿಳಿದುಕೊಳ್ಳುತ್ತಿದ್ದರು ಮಾಗಧೀ ಭಾಷೆಗೆ ಮುಖ್ಯವಾಗಿ ಮೂರು ವೈಶಿಷ್ಟ್ಯಗಳಿವೆ (೧) 'ರ'ದ ಸ್ಥಾನದಲ್ಲಿ ಎಲ್ಲೆಡೆಗೂ 'ಲ'ದ ಉಚ್ಚಾರವು (೨) ಶ, ಷ ಮತ್ತು ಸಗಳ ಸ್ಥಾನದಲ್ಲಿ ಎಲ್ಲೆಡೆಗೂ 'ಶ'ದ ಉಚ್ಚಾರವು. (೩) ಅಕಾರಾಂತ ನಾಮಗಳ ಕರ್ತೃಕಾರಕವುಳ್ಳ ಏಕವಚನದ ಪ್ರತ್ಯಯವು 'ಎ' ಎಂದಿರುತ್ತದೆ ಆದರಿಂದ ಸಂಸ್ಕೃತದ 'ನರಃ' ಎಂಬುದು ಮಾಗಧಿಯಲ್ಲಿ 'ಣಲೆ' ಎಂದಾಗುವುದು 'ಪುರುಷಃ' ಎಂಬುದು ಮಾಗಧಿಯಲ್ಲಿ 'ಪುಲಿಶೆ' ಎಂದಾಗುತ್ತದೆ ಶೌರಸೇನೀ ಪ್ರಾಕೃತದಲ್ಲಿ 'ರ' ಉಚ್ಚಾರವು 'ರ' ಎಂದೇ ಆಗುತ್ತದೆ ಶ, ಷ, ಸಗಳ ಸ್ಥಾನದಲ್ಲಿ ಎಲ್ಲೆಡೆಗೂ 'ಸ'ವೇ ಬರುತ್ತದೆ. ಹಾಗೆಯೇ ಪ್ರಥಮಾ ವಿಭಕ್ತಿಯ ಏಕವಚನದ ಪ್ರತ್ಯಯವು 'ಎ' ಆಗದೆ 'ಓ' ಆಗುತ್ತದೆ ಉದಾಹರಣೆಗಾಗಿ 'ಣರೊ' 'ಪುರಿಸೊ' ಇತ್ಯಾದಿ. ಈ ಲಕ್ಷಣಗಳಲ್ಲಿ ಆಗಮದ ಭಾಷೆಯಲ್ಲಿ ಶೌರಸೇನಿಯ 'ಸ', ಮಾಗಧಿಯ 'ಎ' ಎರಡೂ ಕಂಡುಬರುತ್ತವೆ ಹಾಗೆಯೇ ಶೌರಸೇನಿಯ 'ಓ' ಹಾಗೂ 'ರ'ದ ಸ್ಥಾನದಲ್ಲಿ 'ಲ'ವೂ ಎಲ್ಲಿಯಾದರೂ ಕಂಡು ಬರುತ್ತವೆ

ಕ್ರಮವಾಗಿ ಕೆಲವು ಆಗಮಗಳ ಮೇಲೆ 'ನಿರ್ಯುಕ್ತಿ' 'ಚೂರ್ಣಿ' 'ಟೀಕಾ' ಮತ್ತು 'ಬಾಷ್ಯ' ಎಂಬ ಹೆಸರಿನ ವಿವರಣ ಗ್ರಂಥಗಳ ರಚನೆಯಾಯಿತು ಅವು ಭಿನ್ನ ಭಿನ್ನ ಕಾಲದವುಗಳಾಗಿವೆ ಅಲ್ಲದೆ ಭಾಷೆ, ಸಾಹಿತ್ಯ, ಇತಿಹಾಸದ ದೃಷ್ಟಿಯಿಂದ ಮಹತ್ವಪೂರ್ಣವೂ ಆಗಿವೆ. ಆಗಮಗಳ ಮೇಲೆ ಸಂಸ್ಕೃತ ಟೀಕಾಗ್ರಂಥಗಳು ಎಂಟನೆಯ ಶತಮಾನದ ಪೂರ್ವದವು ಇಲ್ಲ ಹರಿಭದ್ರ ಸೂರಿಯ ಟೀಕಾ ಗ್ರಂಥಗಳೇ ಸಂಸ್ಕೃತದಲ್ಲಿ ತೀರ ಮೊದಲಿನವೆನಿಸುತ್ತವೆ

ಸೈದ್ಧಾಂತಿಕ ಸಾಹಿತ್ಯ—ಸಿದ್ಧಾಂತದ ದೃಷ್ಟಿಯಿಂದ ಪ್ರಾಕೃತ ಬಾಷೆಯ ಪ್ರಕಟವಾದ ಸಾಹಿತ್ಯದಲ್ಲಿ ಶ್ವೇತಾಂಬರ ಸಂಪ್ರದಾಯದ ವಿಶೇಷವಾಗಿ ಜಿನಭದ್ರಗಣಿ ಕ್ಷಮಾಶ್ರಮಣಕೃತ ವಿಶೇಷಾವಶ್ಯಕ ಭಾಷ್ಯ, ಚಂದ್ರರ್ಷಿ ಮಹತ್ತರ ಹಾಗೂ ಅನ್ಯ ಆಚಾರ್ಯಕೃತ ಆರು ಕರ್ಮಗ್ರಂಥಗಳು ಬಹಳ ಮಹತ್ವಪೂರ್ಣವಾಗಿವೆ ಇದೇ ಪ್ರಕಾರ ಆಚಾರದ ದೃಷ್ಟಿಯಿಂದ ಮುನಿಗಳ ಆಚಾರಕ್ಕೆಂದು ಕಲ್ಪಸೂತ್ರ ಮತ್ತು ಶ್ರಾವಕಾಚಾರಕ್ಕೆಂದು ಹರಿಭದ್ರಕೃತ ಶ್ರಾವಕ ಪ್ರಜ್ಞಪ್ತಿಗಳು ಉಲ್ಲೇಖನೀಯವಾಗಿವೆ ದಿಗಂಬರ ಸಂಪ್ರದಾಯದಲ್ಲಿ ಮೇಲೆ ಹೇಳಿದ ಕರ್ಮಪ್ರಾಭೃತ ಮತ್ತು ಕಷಾಯಪ್ರಾಭೃತ ಹಾಗೂ ಅವುಗಳ ಟೀಕಾಗ್ರಂದಗಳು ಹೆಸರಾಗಿವೆ. ಇವಲ್ಲದೆ ನೇಮಿಚಂದ್ರಾಚಾರ್ಯಕೃತ **ಗೊಮ್ಮಟಸಾರ (ಜೀವಕಾಂಡ ಮತ್ತು ಕರ್ಮಕಾಂಡ)** ಲಬ್ಧಿಸಾರ, ಕ್ಷಪಣಾಸಾರ, ದ್ರವ್ಯಸಂಗ್ರಹ ಗ್ರಂಥಗಳು ಜೈನ ಸಿದ್ಧಾಂತವನ್ನು ಸುವ್ಯವಸ್ಥಿತವಾಗಿ ಪ್ರತಿಪಾದಿಸುತ್ತವೆ ಇದೇ ಪ್ರಕಾರ ತ್ರೈಲೋಕ್ಯದ ಸ್ವರೂಪವನ್ನು ವರ್ಣಿಸುವ ಯತಿವೃಷಭಕೃತ ತಿಲೋಯ ಪಣ್ಣತ್ತಿ ಮತ್ತು ನೇಮಿಚಂದ್ರಕೃತ ತ್ರಿಲೋಕಸಾರಗಳಲ್ಲಿ ಪರಿಪೂರ್ಣತೆ-ಯನ್ನು ಕಾಣುತ್ತೇವೆ ಮುನಿಗಳ ಆಚರಣಕ್ಕಾಗಿ ಶಿವಾರ್ಯಕೃತ ಭಗವತೀ ಆರಾಧನಾ ಮತ್ತು ವಟ್ಟಕೇರಕೃತ ಮೂಲಾಚಾರಗಳು ಪ್ರಸಿದ್ಧವಾಗಿವೆ ಶ್ರಾವಕರ ಆಚಾರವನ್ನು ವಿವರಿಸುವ ವಸುನಂದಿಕೃತ ಶ್ರಾವಕಾಚಾರವು ಪ್ರಸಿದ್ಧವಾಗಿದೆ. ಜೈನ ಸ್ಯಾದ್ವಾದ ಮತ್ತು ನಯ ವಾದಗಳಿಗಾಗಿ ದೇವಸೇನಕೃತ ನಯಚಕ್ರವು ಉಲ್ಲೇಖನೀಯವಾಗಿದೆ ಇದಲ್ಲದೆ ಕುಂದಕುಂದಾಚಾರ್ಯಕೃತ ಸಮಯಸಾರ, ಪ್ರವಚನಸಾರ, ನಿಯಮಸಾರ, ಬಾರಸ ಅಣುವೇಕ್ಖಾ ಮತ್ತು ಅಷ್ಟಪಾಹುಡ ಗ್ರಂಥ ಹಾಗೂ ಸ್ವಾಮಿ ಕಾರ್ತಿಕೇಯ ಕೃತ ಅನುಪ್ರೇಕ್ಷಾಗಳು ವಿಶೇಷವಾಗಿ ಜೈನ ಅಧ್ಯಾತ್ಮವನ್ನು ಪ್ರತಿಪಾದಿಸುವ ಗ್ರಂಥಗಳೆಂದು ಪ್ರಸಿದ್ಧವಾಗಿವೆ ಇವೆಲ್ಲ ಪ್ರಾಕೃತ ಗ್ರಂಥಗಳು ಬಹುತರ ವಿಕ್ರಮ ಪ್ರಥಮ ಶತಮಾನಕ್ಕೆ ಮೊದಲೇ ರಚನೆಯಾಗಿವೆ

**ಶ್ರಾವಕ ಹಾಗೂ ಮುನಿಗಳ ಆಚಾರ**—ಧಾರ್ಮಿಕ ಸಿದ್ಧಾಂತದಲ್ಲಿ ಬಹುತರ ಆಚಾರ ಮತ್ತು ದರ್ಶನ ಈ ಎರಡು ಪ್ರಕಾರದ ಶಾಸ್ತ್ರಗಳ ಸಮಾವೇಶವಾಗುತ್ತದೆ ಜೈನ ಆಚಾರದ ಮೂಲ ಭಿತ್ತಿಯು ಅಹಿಂಸೆಯಾಗಿದೆ. ಅದಕ್ಕಾಗಿಯೇ ಇಲ್ಲಿ ಅಹಿಂಸೆಯ ಸೂಕ್ಷ್ಮ ವಿವೇಚನೆಯನ್ನು ಮಾಡಲಾಗಿದೆ ಹಿಂಸೆಯು ಕೇವಲ ಒಂದು ಜೀವವನ್ನು ಘಾತಮಾಡುವುದರಿಂದ ಇಲ್ಲವೆ ಅದಕ್ಕೆ ಕಷ್ಟಕೊಡುವುದರಿಂದ ಮಾತ್ರ ಆಗುವದಿಲ್ಲ. ಆದರೆ ಯಾವುದೇ ರೀತಿಯಿಂದ ತೀರ ಅಲ್ಪ ಹಾನಿಯಾದರೂ ಸಹ ಇಲ್ಲವೆ ಹಾನಿಯನ್ನು ಮಾಡುವ ವಿಚಾರವನ್ನು ಮಾಡಿದರೂ ಸಹ ಹಿಂಸೆಯು ಆಗುತ್ತದೆ. ಈ ಅಹಿಂಸಕ ಭಾವನೆಯು ಕೇವಲ ಮನುಷ್ಯ ಮಾತ್ರರಲ್ಲಿ ಇಟ್ಟರೆ ಆಗಲಿಲ್ಲ. ಚಿಕ್ಕ ಚಿಕ್ಕ ಪ್ರಾಣಿಗಳ ವಿಷಯದಲ್ಲಿಯೂ ಇಡಬೇಕಾಗುತ್ತದೆ. ಮನ, ವಚನ, ಕಾಯಗಳಿಂದ ಮಾಡಿದ, ಮಾಡಿಸುವ, ಅನುಮೋದಿಸುವ ಹಿಂಸೆಯೂ ಸಹ ಪಾಪಕಾರಕವಾಗಿದೆ ಜೈನ ಶಾಸ್ತ್ರಗಳಲ್ಲಿ ಧಾರ್ಮಿಕ ಜೀವನಕ್ಕಾಗಿ ಇದೇ ಒಂದು ಶ್ರೇಷ್ಠ ಪರಿಗಲ್ಲೆಂದು ತಿಳಿಯಲಾಗಿದೆ ಎಲ್ಲ ಪ್ರಾಣಿಗಳ ವಿಷಯಕ್ಕೆ ಹಿಂಸೆಯ ಭಾವ ಇಲ್ಲದವನೇ ಸಭ್ಯ ಪುರುಷನೆನಿಸುತ್ತಾನೆ ಹಿಂಸೆಯು ಅಹಿಂಸೆಯ ನಿಷೇಧಾತ್ಮಕ ರೂಪವಾಗಿದೆ ಇದರ ವಿಧಾನಾತ್ಮಕ ಸ್ವರೂಪವು ಪ್ರಾಣಿಮಾತ್ರದಲ್ಲಿ ಇಡುವ ಮೈತ್ರೀ ಹಾಗೂ ಪರೋಪಕಾರ ಭಾವದಲ್ಲಿದೆ. 'ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಮ್' ಮತ್ತು 'ಅಹಿಂಸಾ ಪರಮೋ ಧರ್ಮಃ' ಇವು ಜೈನ ಆಚಾರದ ಮಂತ್ರಗಳಾಗಿವೆ.

ಈ ಅಹಿಂಸಾತ್ಮಕ ವೃತ್ತಿಯನ್ನು ಜೀವನದಲ್ಲಿ ವ್ಯಕ್ತಪಡಿಸಲಿಕ್ಕೆಂದು ಐದು ವ್ರತಗಳ ವಿಧಾನವಿದೆ. ಅಹಿಂಸಾ, ಅಮೃಷಾ, ಅಚೌರ್ಯ, ಅಮೈಥುನ ಮತ್ತು ಅಪರಿಗ್ರಹ ಇವು ಐದು ವ್ರತಗಳಾಗಿವೆ ನಾವು ಸಮಾಜದಲ್ಲಿ ನಡೆಯುವ ಸಂಘರ್ಷ ಮತ್ತು ಸಭ್ಯ ಸಂಸಾರದ ದಂಡ ವಿಧಾನಗಳನ್ನು ವಿಶ್ಲೇಷಿಸಿದರೆ ಅವುಗಳ ಮೂಲದಲ್ಲಿ ಈ ವ್ರತಗಳನ್ನು ಪಾಲಿಸದೆ ಇದ್ದುದೇ ಒಂದಿಲ್ಲ ಒಂದು ರೀತಿಯಿಂದ ಕಾರಣವಾಗಿರುತ್ತದೆ ಮನುಷ್ಯ ಕೃತ ಸಮಸ್ತ ಅಪರಾಧವು ಇನ್ನೊಬ್ಬರಿಗೆ ನೋವನ್ನುಂಟು ಮಾಡುವುದು, ಇನ್ನೊಬ್ಬರ ಆಸ್ತಿಯನ್ನು ಅಪಹರಿಸುವುದು, ಯಾವುದಾದ-ರೊಂದು ಸ್ವಾರ್ಥಕ್ಕಾಗಿ ಸುಳ್ಳು ಮಾತನಾಡುವುದು, ದುರಾಚಾರ ಮಾಡುವುದು, ಅಮರ್ಯಾದಿತ ಧನ ಸಂಚಯ ಮಾಡುವುದು ಇವುಗಳಿಂದ ಉಂಟಾಗುತ್ತದೆ. ಸಮಾಜದಲ್ಲಿರುವ ಈ ದೋಷಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡೇ ಈ ಪಂಚವ್ರತಗಳನ್ನು ಪ್ರತಿಪಾದಿಸಲಾಗಿದೆ ಗೃಹಸ್ಥನಾದ ಶ್ರಾವಕನು ಈ ವ್ರತಗಳನ್ನು ಸ್ಥೂಲರೂಪದಲ್ಲಿ ಪಾಲಿಸುವನು. ಅದರಿಂದ ಈ ಐದೂ ವ್ರತಗಳ ವಿಧಾನವನ್ನು ಶ್ರಾವಕಾಚಾರದಲ್ಲಿ 'ಅಣುವ್ರತ'ಗಳ ರೂಪದಲ್ಲಿ ಹೇಳಲಾಗಿದೆ. ಉಳಿದ ಗುಣವ್ರತ ಮತ್ತು ಶಿಕ್ಷಾವ್ರತಗಳ ಉಪದೇಶವನ್ನು ಇದೇ ಮೂಲವ್ರತಗಳನ್ನು ಪರಿಪಾಲಿಸುವ ಮನೋವೃತ್ತಿಯನ್ನು ಸಿದ್ಧಗೊಳಿಸಲಿಕ್ಕೂ ತ್ಯಾಗವೃತ್ತಿಯು ಹೆಚ್ಚಾಗಲಿಕ್ಕೂ ಅನುಕೂಲವಾಗಲೆಂದು ಮಾಡಲಾಗಿದೆ. ಈ ಕಾರ್ಯವು ಕ್ರಮದಿಂದ ಆಗಿ ಅದೊಂದು ಜೀವನದ ಸ್ಥಿರವಾದ ಧರ್ಮವಾಗಿ ನಿಲ್ಲುತ್ತದೆ. ಇದಕ್ಕಾಗಿ ಶ್ರಾವಕನಿಗೆ ಹನ್ನೊಂದು ಪ್ರತಿಮೆಗಳ ಮೆಟ್ಟಿಲುಗಳನ್ನು ಪ್ರತಿಪಾದಿಸಲಾಗಿದೆ

ಶ್ರಾವಕನ ಹನ್ನೊಂದು ಪ್ರತಿಮೆಗಳ ಅಭ್ಯಾಸವು ಕ್ರಮಬದ್ಧವಾಗಿ ಆದ ಮೇಲೆಯೇ ಅನಗಾರವೃತ್ತಿ ಅರ್ಥಾತ್ ಮುನಿ ಆಚಾರದ ಪಾಲನೆಯು ಸಾಧ್ಯವಾಗುತ್ತದೆ ಎಲ್ಲಿಯ ವರೆಗೆ ಲೇಶ ಮಾತ್ರವಾದರೂ ಪರಿಗ್ರಹ ಇರುವುದೋ—ಸಂಸಾರದ ಸಚಿತ್ತ ಮತ್ತು ಅಚಿತ್ತ ಸೃಷ್ಟಿಯಲ್ಲಿ ಆಸಕ್ತಿಯು ಇರುವುದೋ—ಅಲ್ಲಿಯ ವರೆಗೆ ಮುನಿವೃತ್ತಿಯ ಪಾಲನವಾಗುವುದು ಅಶಕ್ಯವಾಗಿದೆ. ಮುನಿಧರ್ಮದಲ್ಲಿ ಮೇಲೆ ಹೇಳಿದ ಐದೂ ವ್ರತಗಳನ್ನು 'ಮಹಾವ್ರತ'ಗಳ ರೂಪದಲ್ಲಿ ಪಾಲಿಸಬೇಕಾಗುತ್ತದೆ ಇಲ್ಲಿ ಸಾಧಕನ ಅಹಿಂಸಾತ್ಮಕ ವೃತ್ತಿಯು—ಸ್ವಪರ ಕಲ್ಯಾಣ ಬುದ್ಧಿಯು—ಅದರ ಪರಮ ಸೀಮೆಗೆ ಮುಟ್ಟಿರುತ್ತದೆ ಅವನು ಧರ್ಮಸಾಧನೆಗೆ ಯೋಗ್ಯವಾಗುವಂತೆ ತನ್ನ ಶರೀರವನ್ನು ಕಾಯ್ದುಕೊಳ್ಳುವದಕ್ಕಾಗಿ ಸಮಾಜದಿಂದ ಶುದ್ಧ ಆಹಾರವನ್ನು ಭಿಕ್ಷೆಯ ರೂಪದಿಂದ ಸ್ವೀಕರಿಸುತ್ತಾನೆ. ತನ್ನ ಸಮಗ್ರ ಶಕ್ತಿ ಹಾಗೂ ಕಾಲವನ್ನೆಲ್ಲ ಆತ್ಮಕಲ್ಯಾಣ ಮತ್ತು ವಿಶ್ವಹಿತದ ಚಿಂತನ, ಪರೀಕ್ಷಣ, ಪ್ರವರ್ತನಗಳಲ್ಲಿ ತೊಡಗಿಸುತ್ತಾನೆ ಮುನಿಯ ಸಮಸ್ತ ಮೂಲ ಮತ್ತು ಉತ್ತರ ಗುಣಗಳ ಉದ್ದೇಶವು ಅವನನ್ನು ಕ್ರಮದಿಂದ ಅನಾಸಕ್ತ, ವೀತರಾಗ ಮತ್ತು ಜ್ಞಾನಿಯನ್ನಾಗಿ ರೂಪಿಸುವುದಾಗಿದೆ, ಇದೇ ಅವರ ಮುಕ್ತಿ ಮತ್ತು ಸಿದ್ಧಿಯಾಗಿದೆ.

**ಜೈನ ದರ್ಶನ**—ಈ ಆಚಾರವು ಯಾವ ದರ್ಶನ ಶಾಸ್ತ್ರವನ್ನು ಅವಲಂಬಿಸಿದೆಯೋ ಆ ಜೈನ ಧರ್ಮವನ್ನು ಏಳು ತತ್ತ್ವಗಳ ಮುಖಾಂತರ ಪ್ರತಿಪಾದಿಸಲಾಗಿದೆ. ಆ ತತ್ತ್ವಗಳ ಸಾರವು ಈ ಪ್ರಕಾರವಾಗಿದೆ—ಜೀವ ಮತ್ತು ಅಜೀವ ಎಂದು ಸಂಸಾರದ ಮೂಲ ದ್ರವ್ಯಗಳು ಎರಡು ಇವೆ ಸ್ವ–ಪರ ಬೋಧ ಅರ್ಥಾತ್ ಚೈತನ್ಯ ಮತ್ತು ಜ್ಞಾನ

ಇಲ್ಲವೆ ದರ್ಶನೋಪಯೋಗ ಮತ್ತು ಜ್ಞಾನೋಪಯೋಗವಾಗುವುದು ಜೀವದ ಮುಖ್ಯ ಲಕ್ಷಣವಾಗಿದೆ ವ್ಯವಹಾರದಲ್ಲಿ ಎಲ್ಲಿ ಸ್ಪರ್ಶಾದಿ ಇಂದ್ರಿಯಗಳು, ಮನ–ವಚನ–ಕಾಯಗಳ ಪ್ರವೃತ್ತಿಗಳು, ಜೀವನ ಕಾಲದ ಮರ್ಯಾದೆ ಅಂದರೆ ಆಯುಷ್ಯ, ಶ್ವಾಸೋಚ್ಛ್ವಾಸಗಳು ನೋಡಲಿಕ್ಕೆ ಸಿಕ್ಕುತ್ತವೆಯೋ ಅಲ್ಲಿ ಜೀವವಿದೆಯೆಂದು ಭಾವಿಸಲಾಗುತ್ತದೆ ಇಂಥ ಜೀವಗಳು ಸಂಸಾರದಲ್ಲಿ ಅನಂತವಾಗಿವೆ ಇನ್ನು ಅಜೀವ ದ್ರವ್ಯವು ಮೂರ್ತಿಕ ಮತ್ತು ಅಮೂರ್ತಿಕ ರೂಪದಿಂದ ಎರಡು ವಿಧವಾಗಿದೆ. ಮೂರ್ತಿಕ ದ್ರವ್ಯಕ್ಕೆ ಪುದ್ಗಲವೆಂದು ಹೇಳಲಾಗುತ್ತಿದೆ. ಇದರಲ್ಲಿ ನಾನಾ ಪ್ರಕಾರದ ವರ್ಣ, ರಸ, ಗಂಧ, ಸ್ಪರ್ಶ, ರೂಪ, ಗುಣ ಇವು ನೋಡಲಿಕ್ಕೆ ಸಿಗುತ್ತವೆ. ಪುದ್ಗಲದ ತೀರ ಚಿಕ್ಕ ಅಂಶವು ಪರಮಾಣು ಎನಿಸಿಕೊಳ್ಳುತ್ತದೆ. ಎಲ್ಲಕ್ಕೂ ದೊಡ್ಡ ಅಂಶವು ಮಹಾಸ್ಕಂಧ ರೂಪದ ಪೃಥ್ವಿಯಂಥದು ಆಗಿದೆ. ಪೃಥ್ವಿ, ಜಲ, ಅಗ್ನಿ ಮತ್ತು ವಾಯು ಇವೆಲ್ಲ ಪುದ್ಗಲದ ಪರ್ಯಾಯಗಳೇ ಆಗಿವೆ. ಅಮೂರ್ತ ಜೀವದ ಶರೀರವೂ ಕೂಡ ಈ ಪುದ್ಗಲ ಪರಮಾಣುಗಳಿಂದಲೇ ನಿರ್ಮಾಣವಾಗುತ್ತದೆ ಅಮೂರ್ತಿಕ ಅಜೀವ ದ್ರವ್ಯವು ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂದು ನಾಲ್ಕು ವಿಧವಾಗಿದೆ ಆಕಾಶವನ್ನು ನಾವೆಲ್ಲರೂ ಅರಿತಿದ್ದೇವೆ. ಅದೇ ಆ ದ್ರವ್ಯವಾಗಿದೆ. ಇದು ಉಳಿದ ಎಲ್ಲ ದ್ರವ್ಯಗಳ ಇರುವಿಕೆಗೆ ಅವಕಾಶವನ್ನು ಕಲ್ಪಿಸಿಕೊಡುತ್ತದೆ ಈ ಆಕಾಶವೂ ಅನಂತವಾಗಿದೆ. ಆದರೆ ಇದರ ಯಾವ ಭಾಗದಲ್ಲಿ ಜೀವ ಪುದ್ಗಲಾದಿ ದ್ರವ್ಯಗಳು ಇರುವವೋ ಆ ಪರಿಮಿತ ಭಾಗಕ್ಕೆ ಲೋಕಾಕಾಶವೆಂದು ಹೇಳುವರು ಜೀವ ಪುದ್ಗಲಾದಿ ದ್ರವ್ಯಗಳಿಲ್ಲದ ಅನಂತವಾದ ಆಕಾಶದ ಭಾಗಕ್ಕೆ ಅಲೋಕಾಕಾಶವೆನ್ನುವರು. ಲೋಕಾಕಾಶವು ಅನಂತಜೀವ ಪುದ್ಗಲ ಮೊದಲಾದ ಮೂರ್ತಿಕ ವಸ್ತುಗಳಿಂದ ತುಂಬಿದ್ದಲ್ಲದೆ ಅನ್ಯ ಮೂರು ದ್ರವ್ಯಗಳಿಂದಲೂ ವ್ಯಾಪ್ತವಾಗಿದೆ. ಈ ದ್ರವ್ಯಗಳ ನಿಮಿತ್ತದಿಂದಲೇ ಜೀವಗಳ ಗಮನಾಗಮನವು ಲೋಕಾಕಾಶದಲ್ಲಿ ಸಾಧ್ಯವಿದೆ ಜೀವ ಪುದ್ಗಲಗಳ ಗಮನಾಗಮನಕ್ಕೆ ಸಹಾಯಕ ದ್ರವ್ಯವು 'ಧರ್ಮ' ಎಂಬುದಾಗಿದೆ. ಅವುಗಳ ಸ್ಥಿರತ್ವಕ್ಕೆ ಕಾರಣವಾದ ದ್ರವ್ಯವು 'ಅಧರ್ಮ' ಎಂಬುದಾಗಿದೆ ಇಲ್ಲಿ ದ್ರವ್ಯವಾಚಕ ಈ ಧರ್ಮ, ಅಧರ್ಮಗಳನ್ನು ಕರ್ತವ್ಯಾಕರ್ತವ್ಯಗಳೆಂದು ತಿಳಿದುಕೊಳ್ಳುವ ಭ್ರಾಂತಿಗೆ ಬೀಳಕೂಡದು. ಸೂರ್ಯ ಕಿರಣಗಳೂ ವಿದ್ಯುತ್ತಿನ ತೆರೆಗಳೂ ಯಾವ 'ಈಥರ'ದ ನೆರವಿನಿಂದ ಪ್ರವಹಿಸುತ್ತವೆಯೋ ಅದೇ ದ್ರವ್ಯವು ಜೈನ ದಾರ್ಶನಿಕರ ದೃಷ್ಟಿಯಲ್ಲಿ ಧರ್ಮ ದ್ರವ್ಯವೆನಿಸಿದೆ ಕಾಲವನ್ನು ನಾವೆಲ್ಲರೂ ಅರಿತಿದ್ದೇವೆ ಅದರಿಂದ ಪದಾರ್ಥದ ವರ್ತನವನ್ನೂ ನಾವು ಅಳೆಯುತ್ತೇವೆ ಇದೂ ಕೂಡ ಲೋಕಾಕಾಶ ತುಂಬ ವ್ಯಾಪಿಸಿದ ಸ್ವತಂತ್ರ ದ್ರವ್ಯವೆಂದು ಮನ್ನಿಸಲಾಗಿದೆ. ಪ್ರತಿಯೊಂದು ಲೋಕಾಕಾಶದ ಪ್ರದೇಶದ ಮೇಲೆ ಇದರ ಒಂದೊಂದು ಅಣುವು ವಿದ್ಯಮಾನವಾಗಿರುವುದರಿಂದಲೇ ಪದಾರ್ಥಗಳಲ್ಲಿ ಪರಿವರ್ತನವಾಗುತ್ತಿರುತ್ತದೆ ಯಾವ ಪದಾರ್ಥವೂ ಕೂಡ ಏಕರೂಪದಲ್ಲಿ ಇದರಿಂದ ಇರುವದಿಲ್ಲ. ಬೌದ್ಧ ದರ್ಶನದಲ್ಲಿ ಈ ಪದಾರ್ಥಕ್ಕೆ ಕ್ಷಣಿಕತ್ವವೆಂದು ಹೇಳಿದ್ದಾರೆ. ಅದು ಜೈನದರ್ಶನದಲ್ಲಿ ಕಾಲ ದ್ರವ್ಯದ ಕರ್ತೃತ್ವವಾಗಿದೆ

ಪುದ್ಗಲದ ಸೂಕ್ಷ್ಮತಮ ರೂಪವನ್ನು ಪರಮಾಣುವೆಂದು ಹೇಳಲಾಯಿತು ಈ ಪರಮಾಣುಗಳ ಸೂಕ್ಷ್ಮ ರಚನೆಯು ನಾನಾ ವಿಧವಾಗಿ ಆಗುತ್ತಿರುತ್ತದೆ ಇದಕ್ಕೆ 'ವರ್ಗಣಾ' ಎಂದು ಹೇಳುತ್ತಾರೆ. ಇವುಗಳಲ್ಲಿಯೇ ಒಂದು 'ಕಾರ್ಮಣ ವರ್ಗಣಾ' ಎಂಬುದೂ ಇದೆ ಈ ಕಾರ್ಮಣ ವರ್ಗಣಾತ್ಮಕ ಪರಮಾಣುಗಳು ಜೀವ ಪ್ರದೇಶಗಳ ಸಂಪರ್ಕದಲ್ಲಿ ಬರುವದಕ್ಕೇನೇ 'ಆಸ್ರವ' ಎಂದು ಹೇಳುವರು ಆ ಸಮಯದಲ್ಲಿ ಜೀವದ ಮನಸ್ಸಿನಲ್ಲಿ ಹಾಗೂ ಕಾಯ–ವಚನಗಳಲ್ಲಿ ರಾಗ–ದ್ವೇಷಾತ್ಮಕ ವಿಕಾರವು ಇದ್ದರೆ ಆ ಕಾರ್ಮಣ ವರ್ಗಣಾಗಳ 'ಬಂಧ'ವು ಜೀವ ಪ್ರದೇಶದೊಡನೆ ಆಗುತ್ತದೆ. ಇದಕ್ಕೆ ಪ್ರದೇಶ ಬಂಧವೆಂದು ಹೇಳುವರು ಇದೇ ಬಂಧವು ಭಾವಕ್ಕೆ ಅನುಸರಿಸಿ ಜ್ಞಾನಾವರಣೀಯವೇ ಮೊದಲಾದ ಎಂಟು ಕರ್ಮಗಳ ರೂಪದಲ್ಲಿ ಪರಿವರ್ತನ ಹೊಂದುತ್ತದೆ. ಇದಕ್ಕೇನೇ 'ಪ್ರಕೃತಿಬಂಧ' ಎಂದು ಹೇಳಲಾಗುತ್ತದೆ ಭಾವದ ತೀವ್ರತೆ ಹಾಗೂ ಮಂದತೆಗಳಿಗೆ ಅನುಸರಿಸಿ ಈ ಬಂಧದಲ್ಲಿ ತೀವ್ರ ಇಲ್ಲವೆ ಮಂದ ರಸವನ್ನು ಒದಗಿಸುವ ಶಕ್ತಿಯು ಹೆಚ್ಚುತ್ತಿದೆ. ಇದಕ್ಕೇನೇ ಅನುಭಾಗ ಬಂಧವೆಂದು ಹೇಳಲಾಗುತ್ತದೆ ಇದಕ್ಕೆ ಅನುಸರಿಸಿ ಯಾವ ಕರ್ಮ ಪರಮಾಣುಗಳು ಜೀವಗಳ ಜೊತೆಯಲ್ಲಿ ಸಂಲಗ್ನವಾಗಿರುವ ಅವಕಾಶವು ಹೆಚ್ಚು ಕಡಿಮೆ ಕಾಲವಾಗುತ್ತದೆ ಇದಕ್ಕೇನೇ ಸ್ಥಿತಿಬಂಧವೆಂದು ಹೇಳುವರು. ಇದೇ ಕರ್ಮಬಂಧವು ಜೀವವನ್ನು ನಾನಾ ಗತಿ, ಯೋನಿ ಹಾಗೂ ಅನುಭವಗಳಲ್ಲಿ ಒಯ್ಯುವುದು ಈ ಕ್ರಿಯೆಯಲ್ಲಿ ಯಾವ ಈಶ್ವರ ಇಲ್ಲವೆ ಪರಮಾತ್ಮನು ಭಾಗವಹಿಸುವದಿಲ್ಲ. ಸ್ವಯಂ ಜೀವವು ತನ್ನ ಶುದ್ಧ ಇಲ್ಲವೆ ಅಶುದ್ಧ ಭಾವಕ್ಕನುಸರಿಸಿ ಕರ್ಮ ಬಂಧದಲ್ಲಿ ಉತ್ಕರ್ಷ ಅಪಕರ್ಷ ಆದಿ ಕ್ರಿಯೆಗಳನ್ನು ಹೊಂದುತ್ತಿರುತ್ತದೆ

ಯಾವಾಗ ಜೀವವು ಸಶರ್ಕವಾಗಿ ತನ್ನ ಭಾವದಲ್ಲಿ ರಾಗ–ದ್ವೇಷಾತ್ಮಕ ವಿಕಾರಗಳನ್ನು ಉತ್ಪನ್ನವಾಗಗೊಡುವದಿಲ್ಲವೋ ಆಗ ಮೇಲೆ ಹೇಳಿದ ಆಸ್ರವ ಹಾಗೂ ಬಂಧ ಕ್ರಿಯೆಗಳ ಅವರೋಧವು ಆಗುತ್ತದೆ. ಅದಕ್ಕೇನೇ ಸಂವರ ಎಂದು ಹೇಳುವರು ಮೇಲೆ ಹೇಳಿದ ಐದು ವ್ರತಗಳು, ಅವುಗಳನ್ನು ಅನುಸರಿಸಿದ ಅನ್ಯ ನಿಯಮಗಳು ಇವುಗಳ ಪಾಲನ ಹಾಗೂ ದಶಧರ್ಮಗಳ ಅಭ್ಯಾಸ, ಅನಿತ್ಯವೇ ಮೊದಲಾದ ಹನ್ನೆರಡು ಭಾವನೆಗಳ ಚಿಂತನ, ಹಸಿವು-ನೀರಡಿಕೆ ಮೊದಲಾದ ಪರೀಷಹಗಳ ವಿಜಯ, ಧರ್ಮ ಮತ್ತು ಶುಕ್ಲ ಧ್ಯಾನಗಳ ಅನುಷ್ಠಾನ ಇವೆಲ್ಲವುಗಳ ಹೇತುವು ಆಸ್ರವ, ಬಂಧಗಳ ಅವರೋಧರೂವ ಸಂವರವನ್ನು ಪ್ರಾಪ್ತಮಾಡುವುದೇ ಆಗಿದೆ. ಇದರ ಜೊತೆಗೇನೇ ಮೇಲೆ ಹೇಳಿದ ಸತ್‌ಕ್ರಿಯೆಗಳಿಂದ ಈ ಮೊದಲು ಕಟ್ಟಿದ ಕರ್ಮಗಳ ಕ್ಷಯವೂ ಆಗುತ್ತದೆ. ಇದಕ್ಕೆ 'ನಿರ್ಜರಾ' ಎಂದು ಹೇಳುತ್ತಾರೆ ಪ್ರತಿಯೊಂದು ಕರ್ಮವು ತನ್ನ ಕಾಲ ಮರ್ಯಾದೆಯಲ್ಲಿ ತಾನು ಉಚಿತ ಫಲವನ್ನು ಕೊಟ್ಟು ಆತ್ಮ ಪ್ರದೇಶದಿಂದ ಬೇರೆಯಾಗಿ ಹೋಗುವದು. ಆದರೆ ಈ 'ಸಪಾಕ ನಿರ್ಜರಾ'ದಿಂದ ಜೀವದ ಕಲ್ಯಾಣವು ಆಗುವದಿಲ್ಲ. ಯಾಕಂದರೆ ತನ್ನ ಸ್ವಾಭಾವಿಕ ಫಲವನ್ನು ಒದಗಿಸಿ ಹೋಗುವ ಕರ್ಮವು ಜೀವದಲ್ಲಿ ವಿಕಾರವನ್ನು ಉಂಟುಮಾಡುತ್ತದೆ ಅದರಿಂದ ಹೊಸ ಕರ್ಮಬಂಧವು ಆಗುತ್ತ ಹೋಗುತ್ತದೆ. ಹೀಗಾಗಿ ಜೀವವು ತನ್ನ ದುಃಖಾನುಭವದಿಂದ ಮುಕ್ತವಾಗುವದಿಲ್ಲ ಆದರೆ ಈ ಮೊದಲು ಹೇಳಿದ ಧರ್ಮಾನುಷ್ಠಾನಗಳಿಂದ ಆಸ್ರವದ ನಿರೋಧ ಮತ್ತು ಕರ್ಮದ ಕ್ಷಯವನ್ನು ಮಾಡಿಕೊಂಡದ್ದಾದರೆ 'ಅಪಾಕ ನಿರ್ಜರಾ' ಆಗುತ್ತದೆ ಇದರಿಂದ ಜೀವಕ್ಕೆ ಕರ್ಮದಿಂದ ಬಿಡುಗಡೆಯು ಒದಗುತ್ತದೆ. ಮತ್ತು ಆತ್ಮನ ಸ್ವಾಭಾವಿಕ ಗುಣಗಳಾದ ದರ್ಶನ ಜ್ಞಾನಗಳು ಪ್ರಕಟಗೊಳ್ಳುತ್ತವೆ.

'ಸಂವರ'ದಿಂದ ಯಾವಾಗ ಕರ್ಮಬಂಧವು ಪೂರ್ಣ ತಡೆಯಲ್ಪಡುವುದೋ—'ನಿರ್ಜರಾ'ದಿಂದ ಯಾವಾಗ ಪೂರ್ವ ಸಂಚಿತ ಕರ್ಮವು ಸಂಪೂರ್ಣ ನಷ್ಟವಾಗುವುದೋ—ಆಗ ಆತ್ಮನ ಸ್ವಾಭಾವಿಕ ಗುಣಗಳಾದ ಅನಂತಜ್ಞಾನ, ಅನಂತ ದರ್ಶನ, ಅನಂತ ಸುಖ ಮತ್ತು ಅನಂತ ವೀರ್ಯಗಳು ತಮ್ಮ ಪರಿಪೂರ್ಣ ಅವಸ್ಥೆಯಲ್ಲಿ ಪ್ರಕಟಗೊಳ್ಳುತ್ತವೆ ಇದೇ ಮೋಕ್ಷವಾಗಿದೆ ಜೀವದ ಪರಮಾತ್ಮತ್ತ್ವದ ಪ್ರಾಪ್ತಿಯಾಗಿದೆ.

ಜೈನಧರ್ಮದ ಏಳೂ ತತ್ತ್ವಗಳ ನಿರೂಪಣೆಯು ಆಯಿತು. ಇದನ್ನು ಸಂಗ್ರಹರೂಪದಲ್ಲಿ ಹೀಗೆ ಹೇಳಬಹುದಾಗಿದೆ–ಜೀವ, ಅಜೀವಗಳು ಎರಡು ದ್ರವ್ಯಗಳಾಗಿವೆ ಇವೆರಡರ ಪರಸ್ಪರ ಸಂಪರ್ಕರೂಪವು ಆಸ್ರವವು. ಕೂಡುವಿಕೆಯು ಬಂಧವಾಗಿದೆ. ಇದರಿಂದ ಜೀವವು ನಾನಾ ಪ್ರಕಾರದ ಸುಖ ದುಃಖಗಳನ್ನು ಅನುಭವಿಸುತ್ತದೆ ಯಾವಾಗ ಈ ಸಂಪರ್ಕದ ಅವರೋಧ ಅರ್ಥಾತ್ ಸಂವರವು ಆಗಿ, ಸಂಚಿತ ಕರ್ಮವೂ ಕೂಡ ಧಾರ್ಮಿಕ ಕ್ರಿಯೆಗಳಿಂದ 'ನಿರ್ಜರಾ' ಆಗಿ ಹೋಗುವುದೋ ಆಗ ಜೀವವು ಮೋಕ್ಷವನ್ನು ಹೊಂದುತ್ತದೆ ಆಗ ಅದಕ್ಕೆ ಅನಂತಚತುಷ್ಟಯಗಳು ಪ್ರಾಪ್ತವಾಗುತ್ತವೆ

**ಆಧ್ಯಾತ್ಮಿಕ ಉನ್ನತಿಯ ಮೆಟ್ಟಿಲುಗಳು**—ಕರ್ಮಬಂಧದ ಘೋರತಮ ಅಂಧಕಾರದಿಂದ ಹೊರಬಿದ್ದು, ಮೋಕ್ಷದ ವರೆಗೆ ತಲುಪುವುದಕ್ಕಾಗಿ ಯಾವ ಯಾವ ಆತ್ಮೋತ್ಕರ್ಷದ ಅವಶ್ಯಕತೆಯು ಇದೆಯೋ ಅವುಗಳನ್ನು ಹದಿನಾಲ್ಕು ಭಾಗಗಳಲ್ಲಿ ವಿಂಗಡಿಸಿದ್ದಾರೆ ಇವುಗಳಿಗೆ ಗುಣಸ್ಥಾನವೆಂದು ಹೇಳುವರು. ಎಲ್ಲಕ್ಕೂ ಕೆಳಗಿನ ಗುಣಸ್ಥಾನವು ಅನಂತ ಜೀವಗಳದ್ದಾಗಿದೆ. ಇವು ಸ್ವ–ಪರ, ಆತ್ಮ-ಅನಾತ್ಮ, ಚಲೋ–ಕೆಟ್ಟ ಇವುಗಳ ವಿವೇಕ ರಹಿತವಾಗಿವೆ ಇದು ಮಿಥ್ಯಾತ್ವ ಗುಣಸ್ಥಾನವಾಗಿದೆ ಯಾವ ಕಾಲದಲ್ಲಿ ಜೀವಕ್ಕೆ ತಾತ್ವಿಕ ದೃಷ್ಟಿಯು ಪ್ರಾಪ್ತವಾಗುತ್ತದೆಯೋ ಆಗ ಅದಕ್ಕೆ ಸಮ್ಯಕ್ತ್ವವೆಂಬ ಹೆಸರಿನ ನಾಲ್ಕನೆಯ ಗುಣಸ್ಥಾನವು ಪ್ರಾಪ್ತವಾಗುತ್ತದೆ ಒಮ್ಮೊಮ್ಮೆ ಈ ಸಮ್ಯಕ್ತ್ವದ ಪ್ರಾಪ್ತಿಯು ತಾತ್ವಿಕ ದೃಷ್ಟಿಯನ್ನು ಮುಚ್ಚುವಂಥ ಕರ್ಮದ ಕ್ಷಯದಿಂದ ಅರ್ಥಾತ್ ಕ್ಷಾಯಿಕವಾಗದೆ ಕೇವಲ ಆ ಕರ್ಮಗಳ ತಾತ್ಕಾಲಿಕ ಉಪಶಮ ಅಥವಾ ಕ್ಷಯೋಪಶಮದಿಂದ ಉಂಟಾದದ್ದಾರೆ ಜೀವವು ಸಮ್ಯಕ್ತ್ವದಿಂದ ಪುನಃ ಪತಿತವಾಗುವ ಸಂಭವವಿರುತ್ತದೆ. ಸಮ್ಯಕ್ತ್ವದಿಂದ ಪತಿತನಾಗಿ ಮಿಥ್ಯಾತ್ವಕ್ಕೆ ಹೋಗಿ ತಲುಪುವ ವರೆಗೆ ಆಗುವ ಆಧ್ಯಾತ್ಮಿಕ ಅವಸ್ಥೆಗೆ ಸಾಸಾದನ ಎಂದು ಕರೆಯುವರು ಇದು ಎರಡನೆಯ ಗುಣಸ್ಥಾನವಾಗಿದೆ ಒಮ್ಮೊಮ್ಮೆ ಸಮ್ಯಕ್ತ್ವದ ಜೊತೆಯಲ್ಲಿ ಕೆಲವೊಂದು ಮಿಥ್ಯಾತ್ವದ ಅಂಶವೂ ಸಮಾವೇಶವಾಗುತ್ತದೆ. ಇದು ಸಮ್ಯಗ್‌ಮಿಥ್ಯಾತ್ವ ಅಥವಾ ಮಿಶ್ರ ಗುಣಸ್ಥಾನವೆನಿಸುತ್ತದೆ ಇದು ಮೂರನೆಯ ಗುಣಸ್ಥಾನವಾಗಿದೆ ಸಮ್ಯಕ್ತ್ವ ಉಂಟಾದ ಮೇಲೆ ಕೆಲವೊಂದು ಸಂಯಮ ಭಾವವು ಜಾಗೃತಹೊಂದುತ್ತದೆ ಜೀವವು ಕ್ರಮದಿಂದ ಶ್ರಾವಕರ ವ್ರತಗಳನ್ನು ಪಾಲಿಸತೊಡಗುತ್ತದೆ ಆಗ ಅದಕ್ಕೆ ದೇಶ–ವಿರತ ಅಥವಾ ಸಂಯಮಾಸಂಯಮ ಎಂಬ ಹೆಸರಿನ

ಐದನೆಯ ಗುಣಸ್ಥಾನವು ಪ್ರಾಪ್ತವಾಗುತ್ತದೆ ಮಹಾವ್ರತಗಳ ಪಾಲಕನು ಆರನೆಯ ಗುಣಸ್ಥಾನವರ್ತಿ ಸಂಯತ ಅಥವಾ ಪ್ರಮತ್ತವಿರತನೆನಿಸುತ್ತಾನೆ. ಸಂಯಮದಿಂದ ಯಾವಾಗ ಹದಿನೈದು ಪ್ರಕಾರದ ಪ್ರಮಾದಗಳೂ ದೂರವಾಗುತ್ತವೆಯೋ ಆಗ ಅಪ್ರಮತ್ತ ಎಂಬ ಏಳನೆಯ ಗುಣಸ್ಥಾನವು ಪ್ರಾಪ್ತವಾಗುತ್ತದೆ. ಇದಕ್ಕೂ ಮುಂದೆ ಹೋಗಿ ಜೀವವು ತನ್ನ ಘಾತಕ ಕರ್ಮಪ್ರಕೃತಿಗಳ ಉಪಶಮ ಮಾಡಿಕೊಳ್ಳ ಹತ್ತುವುದೋ ಆಗ ಅದು ಅಪೂರ್ವಕರಣ, ಅನಿವೃತ್ತಿಕರಣ ಮತ್ತು ಸೂಕ್ಷ್ಮಸಾಂಪರಾಯ ಈ ಎಂಟನೆಯ, ಒಂಭತ್ತನೆಯ, ಹತ್ತನೆಯ ಗುಣಸ್ಥಾನಗಳಲ್ಲಿ 'ಉಪಶಾಂತ ಮೋಹರೂಪ'ನಾಗಿ ವೀತರಾಗತ್ವವನ್ನು ಹೊಂದುತ್ತದೆ. ಒಮ್ಮೊಮ್ಮೆ ಕ್ಷಣಾರ್ಧದಲ್ಲಿ ಅರ್ಥಾತ್ ಅಂತರ್ ಮುಹೂರ್ತದಲ್ಲಿಯೇ ಕೆಳಗೆ ಉರುಳುತ್ತದೆ. ಇದಕ್ಕೆ ಉಪಶಮ ಶ್ರೇಣಿಯೆಂದು ಹೇಳುವರು ಆದರೆ ಯಾವಾಗ ಜೀವವು ಆ ಮೂರು ಗುಣಸ್ಥಾನಗಳಲ್ಲಿ ತನ್ನ ಘಾತಕ ಕರ್ಮಪ್ರಕೃತಿಗಳನ್ನು ಕ್ಷಯ ಮಾಡುತ್ತ ಪ್ರಗತಿಯನ್ನು ಸಾಧಿಸುತ್ತಿರುವುದೋ ಅದು ಹನ್ನೊಂದನೆಯ ಗುಣಸ್ಥಾನವನ್ನು ಹೊಂದದೆ ಒಮ್ಮೆಲೇ 'ಕ್ಷೀಣಮೋಹ'ವೆಂಬ ಹನ್ನೆರಡೆಯ ಗುಣಸ್ಥಾನವನ್ನು ಹೊಂದಿದ್ದಾದರೆ ಅಲ್ಲಿಂದ ಅದು ಕೇವಲ ಜ್ಞಾನವನ್ನು ಸಂಪಾದಿಸಿ 'ಸಂಯೋಗ ಕೇವಲಿ' ಎಂಬ ಹೆಸರಿನ ಹದಿಮೂರನೆಯ ಗುಣಸ್ಥಾನವನ್ನು ಹೊಂದುತ್ತದೆ ಅಲ್ಲಿಂದ 'ಅಯೋಗ ಕೇವಲಿ' ಎಂಬ ಹೆಸರಿನ ಹದಿನಾಲ್ಕನೆಯ ಗುಣಸ್ಥಾನವನ್ನು ಹೊಂದುವುದು. ಮುಂದೆ ಅಲ್ಪಕಾಲದಲ್ಲಿ ಶರೀರವನ್ನು ತ್ಯಜಿಸಿ ಸಿದ್ಧ, ಮುಕ್ತ, ಪರಮಾತ್ಮನಾಗಿ ಬಿಡುತ್ತದೆ. ಯಾವ ಕಾಲದಲ್ಲಿ ಜೀವವು ಹದಿಮೂರನೆಯ ಗುಣಸ್ಥಾನದಲ್ಲಿ ಇರುವುದೋ ಆಗ ಅದು ತನ್ನ ಪುಣ್ಯದಿಂದ ತೀರ್ಥಂಕರ ಗೋತ್ರವನ್ನು ಕಟ್ಟಿಕೊಂಡಿದ್ದರೆ ಮಾತ್ರ ಅದು ತೀರ್ಥಂಕರ ಪದವನ್ನು ಹೊಂದುತ್ತದೆ ಆಗ ಅದು ಜೀವಗಳಿಗೆ ಸನ್ಮಾರ್ಗದ ಉಪದೇಶವನ್ನು ಮಾಡುತ್ತದೆ.

ಜೀವ ಜಗತ್ತುಗಳ ಪರ್ಯಾಲೋಚನ—ಜೀವದ ವಿಶೇಷ ಪರಿಸ್ಥಿತಿಗಳ ಅಧ್ಯಯನ ಮಾಡುವ ಹದಿನಾಲ್ಕು ದಿಶೆಗಳನ್ನು ಸ್ವೀಕರಿಸಲಾಗಿದೆ. ಇವುಗಳಿಗೆ 'ಮಾರ್ಗಣಾಸ್ಥಾನ'ವೆನ್ನುವರು. ನರಕ, ತಿರ್ಯಂಚ, ಮನುಷ್ಯ ಮತ್ತು ದೇವ ಇವು ನಾಲ್ಕು ಗತಿಗಳಾಗಿವೆ. ಇವುಗಳಲ್ಲಿ ಆಗುವ ಜೀವಗಳ ಸ್ಥಿತಿಗತಿಗಳೇನು? ಇವುಗಳಲ್ಲಿ ಎಷ್ಟು ಗುಣಸ್ಥಾನಗಳನ್ನು ಪ್ರಾಪ್ತಮಾಡುವುದು ಸಾಧ್ಯವಿದೆ—ಇವುಗಳ ವಿಚಾರವು ಮೊದಲನೆಯದಾದ ಗತಿಮಾರ್ಗಣಾದಲ್ಲಿ ಆಗುತ್ತದೆ ಕೆಲವು ಜೀವಗಳು ಪೃಥ್ವಿ, ಅಪ, ತೇಜ, ವಾಯು ಮತ್ತು ವನಸ್ಪತಿ ಕಾಯಿಕಗಳು ಸ್ಪರ್ಶ ಇಂದ್ರಿಯಗಳು ಮಾತ್ರ ವಿಕಸಿತ ಹೊಂದಿರುವುದರಿಂದ ಏಕೇಂದ್ರಿಯಗಳೆನಿಸುತ್ತವೆ. ಕೆಲವುಗಳಿಗೆ ಸ್ಪರ್ಶ ಮತ್ತು ನಾಲಿಗೆ ಇವೆರಡು ಇಂದ್ರಿಯಗಳಿರುತ್ತವೆ. ಮತ್ತೆ ಕೆಲವುಗಳಿಗೆ ಮೂಗೂ ಇರುವುದರಿಂದ ತ್ರೀಂದ್ರಿಯಗಳೆನಿಸುತ್ತವೆ. ಕೆಲವುಗಳಿಗೆ ಕಣ್ಣುಗಳೂ ಇರುವುದರಿಂದ ಚತುರೇಂದ್ರಿಯಗಳೆನಿಸುತ್ತವೆ ಇನ್ನು ಕೆಲವು ಶ್ರೋತ್ರ ಸಹಿತ ಪಂಚೇಂದ್ರಿಯವೆನಿಸುತ್ತವೆ ಈ ಜೀವಗಳ ಸ್ಥಿತಿ ಮತ್ತು ಯೋಗ್ಯತೆ ಮೊದಲಾದವುಗಳ ವಿಚಾರವನ್ನು ಎರಡನೆಯದಾದ 'ಇಂದ್ರಿಯಮಾರ್ಗಣಾ'ದಲ್ಲಿ ಮಾಡಲಾಗಿದೆ ಪೃಥ್ವಿ ಮೊದಲಾದ ಏಕೇಂದ್ರಿಯ ಜೀವಗಳ ಶರೀರವು ಸ್ಥಾವರ ಮತ್ತು ದ್ವೀಂದ್ರಿಯಾದಿ ಜೀವಗಳ ಶರೀರವು ತ್ರಸವೆಂದು ಹೇಳಲಾಗುತ್ತದೆ ಏಕೇಂದ್ರಿಯದಲ್ಲಿಯೂ ಕೂಡ ವನಸ್ಪತಿಗಳಲ್ಲಿ ಪ್ರತ್ಯೇಕ ಮತ್ತು ಸಾಧಾರಣ, ಸಪ್ರತಿಷ್ಠಿತ ಮತ್ತು ಅಪ್ರತಿಷ್ಠಿತ ಮೊದಲಾದ ಬೇದಗಳು ಆಗುತ್ತವೆ ಇವೆಲ್ಲವುಗಳ ವಿಚಾರವು 'ಕಾಯಮಾರ್ಗಣಾ' ಎಂಬ ಹೆಸರಿನ ಮೂರನೆಯ ಮಾರ್ಗಣಾದಲ್ಲಿ ಮಾಡಲಾಗಿದೆ. ಮನ–ವಚನ–ಕಾಯಗಳ ಕ್ರಿಯೆಗೆ ಯೋಗವೆಂದು ಹೆಸರು. ಇನ್ನು ನಾಲ್ಕನೆಯದಾದ ಯೋಗ ಮಾರ್ಗಣಾದಲ್ಲಿ ಜೀವಗಳ ಇವೇ ಕ್ರಿಯೆಗಳ ವಿಚಾರ ಮಾಡಲಾಗಿದೆ. ಜೀವಗಳು ಪುಲ್ಲಿಂಗಿ, ಸ್ತ್ರೀಲಿಂಗಿ, ನಪುಂಸಕಲಿಂಗಿಗಳಾಗಿರುತ್ತವೆ. ಇವುಗಳ ವಿಚಾರಕ್ಕಾಗಿ ಐದನೆಯದಾದ ವೇದ ಮಾರ್ಗಣಾ ಇದೆ. ಕ್ರೋಧ, ಮಾನ, ಮಾಯಾ ಮತ್ತು ಲೋಭಗಳು ಜೀವದ ಕಷಾಯರೂಪ ವಿಕಾರಗಳಾಗಿವೆ ಇವುಗಳ ಜ್ಞಾನವನ್ನು ವಿಧಿವತ್ತಾಗಿ ಮಾಡಿಕೊಡುವುದು ಆರನೆಯದಾದ ಕಷಾಯ ಮಾರ್ಗಣಾ ಆಗಿದೆ. ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲ ಇವು ಜ್ಞಾನದ ಐದು ಭೇದಗಳಾಗಿವೆ ಇವುಗಳ ಸೂಕ್ಷ್ಮ ವಿಚಾರವು ಏಳನೆಯದಾದ ಜ್ಞಾನ ಮಾರ್ಗಣಾದಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ. ವ್ರತಾಚರಣ, ಸಮಿತಿ ಪಾಲನ, ಕಷಾಯಗಳ ನಿಗ್ರಹ, ಮನ–ವಚನ–ಕಾಯಗಳ ಅಸತ್ ಪ್ರವೃತ್ತಿಗಳ ತ್ಯಾಗ ಮತ್ತು ಇಂದ್ರಿಯಗಳ ನಿಗ್ರಹ ಇವು ಸಂಯಮದ ಕಾರ್ಯಗಳಾಗಿವೆ. ಇವುಗಳ ವಿಚಾರವು ಎಂಟನೆಯದಾದ ಸಂಯಮ ಮಾರ್ಗಣಾದಲ್ಲಿದೆ. ಜ್ಞಾನ ಪೂರ್ವಕವಾಗಿ ಚೇತನಗೆ ಪದಾರ್ಥಗಳ ವಿಷಯಕ್ಕೆ ಉಂಟಾಗುವ ಅವಧಾನಕ್ಕೆ ದರ್ಶನವೆಂದು ಹೆಸರು. ಈ ದರ್ಶನವು ಚಕ್ಷು, ಅಚಕ್ಷು, ಅವಧಿ ಮತ್ತು ಕೇವಲವೆಂದು ನಾಲ್ಕು ಪ್ರಕಾರವಾಗಿದೆ.

ಇದರ ವಿಚಾರವು ಒಂಭತ್ತನೆಯದಾದ ದರ್ಶನ ಮಾರ್ಗಣಾದ ವಿಷಯವಾಗಿದೆ ಕ್ರೋಧ, ಮಾನಾದಿ ಕಷಾಯಗಳ ಉದಯ ಸಹಿತ ಇಲ್ಲವೆ ಉದಯವಿಲ್ಲದೆಯೂ ಮನ–ವಚನ-ಕಾಯಗಳ ಪ್ರವೃತ್ತಿಯಲ್ಲಿ ಉಂಟಾಗುವ ತೀವ್ರತೆ ಮತ್ತು ಮಂದತೆಗಳು ಇವೆ. ಇವುಗಳಿಗೆ ಲೇಶ್ಯಾ ಎಂದು ಹೆಸರು ಯಾಕೆಂದರೆ ಇವುಗಳಿಂದ ಜೀವಗಳ ಮೇಲೆ ಕರ್ಮದ ಲೇಪನ-ವುಂಟಾಗುವದು ಕಷಾಯಗಳ ಏರಿಳಿತಗಳ ಮೇಲಿಂದ ಇದರಲ್ಲಿ ಆರು ಭೇದಗಳು ಆಗುತ್ತವೆ. ಅವು ಕೃಷ್ಣ, ನೀಲ, ಕಾಪೋತ, ಪೀತ, ಪದ್ಮ ಮತ್ತು ಶುಕ್ಲ ಎಂದಿವೆ. ಇವುಗಳ ವಿಚಾರವು ಹತ್ತನೆಯದಾದ ಲೇಶ್ಯಾ ಮಾರ್ಗಣಾದಲ್ಲಿ ಬರುತ್ತದೆ ಕೆಲವೊಂದು ಜೀವಗಳು ಸದ್‌ದೃಷ್ಟಿಯನ್ನು ಹೊಂದಿ ಸಿದ್ಧತ್ವವನ್ನು ಹೊಂದಲಿಕ್ಕೆ ಯೋಗ್ಯವಾಗಿರುತ್ತವೆ ಇವು ಭವ್ಯ, ಉಳಿದವು ಅಭವ್ಯ ಜೀವಗಳ ಇದೇ ಭೇದಗಳ ವಿವರಣೆಯು ಹನ್ನೊಂದನೆಯದಾದ ಭವ್ಯತ್ವ ಮಾರ್ಗಣಾದಲ್ಲಿ ಬರುತ್ತದೆ. ಯಾವ ಗುಣವನ್ನು ಸಂಪಾದಿಸುವುದರಿಂದ ಜೀವವು ಮಿಥ್ಯಾತ್ವವನ್ನು ಬಿಟ್ಟು ಶ್ರದ್ಧೆಯುಳ್ಳದಾಗಿ ತನ್ನ ಹಾಗೂ ಅನ್ಯ ಜೀವಗಳ ಕಲ್ಯಾಣವನ್ನು ಮಾಡ ಹತ್ತುವುದೋ ಆ ಗುಣಕ್ಕೆ ಸಮ್ಯಕ್ತ್ವವೆಂದು ಹೇಳುವರು ಇದರ ಸ್ವರೂಪದ ಅಧ್ಯಯನವು ಸಮ್ಯಕ್ತ್ವ ಮಾರ್ಗಣಾದಲ್ಲಿದೆ ಏಕೇಂದ್ರಿಯಗಳಿಂದ ಚತುರಿಂದ್ರಿಯಗಳ ವರೆಗಿನ ಎಲ್ಲ ಜೀವಗಳೂ ಪಂಚೇಂದ್ರಿಯದೊಳಗಿನ ಕೆಲವು ಜೀವಗಳೂ ಶಿಕ್ಷಾ, ಕ್ರಿಯಾ, ಆಲಾಪ ಮತ್ತು ಉಪದೇಶಗಳನ್ನು ಗ್ರಹಣಮಾಡುವ ಶಕ್ತಿಯನ್ನು ಹೊಂದಿರುವದಿಲ್ಲ ಇಂಥ ಜೀವಗಳು ಅಸಂಜ್ಞೀ ಎನಿಸುತ್ತವೆ ಶಿಕ್ಷಾದಿಗಳನ್ನು ಗ್ರಹಣಮಾಡುವ ಜೀವಗಳು ಸಂಜ್ಞೀ ಎನಿಸುತ್ತವೆ. ಇವುಗಳ ವಿವರಣವು ಸಂಜ್ಞಾ ಮಾರ್ಗಣಾದಲ್ಲಿ ಬರುತ್ತದೆ ನವೀನ ಶರೀರವನ್ನು ಧಾರಣಮಾಡುವದಕ್ಕಾಗಿ ಗಮನಮಾಡುವ ಅವಸ್ಥೆಯೊಂದಿದೆ ಜೀವವು ತನ್ನ ಅಂಗೋಪಾಂಗಗಳನ್ನು ಪೋಷಣ ಮಾಡುವದಕ್ಕೆ ಯೋಗ್ಯವಾದ ನೋಕರ್ಮವರ್ಗಣಾರೂಪ ಪುದ್ಗಲ ದ್ರವ್ಯವನ್ನು ಆಹಾರರೂಪದಲ್ಲಿ ಗ್ರಹಣಮಾಡದೆಯೂ ಒಮ್ಮೊಮ್ಮೆ ಹೋಗುತ್ತದೆ. ಕೆಲವೊಂದು ಅವಸ್ಥೆಯಲ್ಲಿ ನಿರಂತರವೂ ಆಹಾರವನ್ನು ಗ್ರಹಣಮಾಡುತ್ತಿರುತ್ತದೆ. ಜೀವದ ಈ ಆಹಾರಕ ಮತ್ತು ಅನಾಹಾರಕ ಅವಸ್ಥೆಗಳ ವಿಚಾರವು ಹದಿನಾಲ್ಕನೆಯದಾದ ಆಹಾರ ಮಾರ್ಗಣಾದಲ್ಲಿ ಕಂಡುಬರುತ್ತದೆ ಈ ಪ್ರಕಾರ ಪ್ರಾಣಿವರ್ಗದ ಅಧ್ಯಯನವನ್ನು ಹೀಗೆ ಹದಿನಾಲ್ಕು ಮಾರ್ಗಣಾಗಳಲ್ಲಿ ಮಾಡಲಾಗಿದೆ.

ವಿರೋಧದಲ್ಲಿ ಸಾಮಂಜಸ್ಯ—ಯಾವ ಧರ್ಮವು ಜೀವಮಾತ್ರದಲ್ಲಿ ಮೈತ್ರಿಯನ್ನು ಇಡಲಿಕ್ಕೂ ಉತ್ತಮ ಕ್ಷಮೆಯ ಅಭ್ಯಾಸವನ್ನೂ ಮಾಡಲಿಕ್ಕೂ ಬೋಧಿಸುತ್ತಿದೆಯೋ ಅದು ತನ್ನ ವಿಚಾರ ಕ್ಷೇತ್ರದಲ್ಲಿ ಉದಾರ ಮತ್ತು ಸಾಮಂಜಸ್ಯ ದೃಷ್ಟಿಗೆ ಪೋಷಕವಾಗಿರಬೇಕಾಗುತ್ತದೆ. ಜೈನಧರ್ಮದ ಈ ಉದಾರತೆ ಹಾಗೂ ಸಾಮಂಜಸ್ಯ ದೃಷ್ಟಿಗಳು ಅದರ ಸ್ಯಾದ್ವಾದ ಮತ್ತು ನಯವಾದಗಳಲ್ಲಿ ಕಂಡುಬರುತ್ತವೆ. ಮೊದಲನೆಯದಾಗಿ ಈ ಸಂಸಾರವು ದೊಡ್ಡ ವಿಚಿತ್ರ ಹಾಗೂ ನಾನಾವಿಧ ಮತ್ತು ವಿಷಮ ಶೀಲವಾಗಿದೆ. ಎರಡನೆಯದಾಗಿ ಜೀವಗಳು ಇರುವಷ್ಟೂ ಎಲ್ಲವೂ ತಮ್ಮ ತಮ್ಮ ಭಿನ್ನ ಭಿನ್ನ ಪರಿಸ್ಥಿತಿಗೆ ಒಳಗಾಗಿವೆ. ಅದರಿಂದ ತಮ್ಮ ತಮ್ಮ ಬೇರೆ ಬೇರೆ ದೃಷ್ಟಿಕೋಣಗಳುಳ್ಳವಾಗಿವೆ. ಮೂರನೆಯದಾಗಿ ಕಾಲವು ತನ್ನ ಪರಿವರ್ತನ ಶೀಲತೆಯಿಂದ ಯಾವ ಸಜೀವ ಮತ್ತು ಅಜೀವ ಪದಾರ್ಥಗಳನ್ನು ಹೆಚ್ಚು ಸಮಯದ ವರೆಗೆ ಒಂದೇ ರೂಪದಲ್ಲಿ ಇರಗೊಡುವದಿಲ್ಲ ನಾಲ್ಕನೆಯದಾಗಿ ಪ್ರತ್ಯೇಕ ವಸ್ತುಗಳು ತಮ್ಮ ಅನಂತ ಗುಣ-ಧರ್ಮಗಳನ್ನು ಕಾಯ್ದುಕೊಳ್ಳುತ್ತವೆ, ಮತ್ತು ಅನಂತ ಪರ್ಯಾಯಗಳಲ್ಲಿ ವ್ಯತ್ಯಾಸಹೊಂದುತ್ತಿರುತ್ತವೆ. ಇಂಥ ಅವಸ್ಥೆಯಲ್ಲಿ ಯಾವುದೇ ವಸ್ತುವಿನ ವಿಷಯದಲ್ಲಿ ದೇಶ ಕಾಲಾದಿಗಳ ವಿಚಾರವನ್ನು ಮಾಡದೆ ಯಾವದಾದರೊಂದು ಮಾತನ್ನು ಏಕಾಂತ ಬುದ್ಧಿಯಿಂದ ಹೇಳಿದಲ್ಲಿ ಅದು ಸಂಪೂರ್ಣ ಸತ್ಯವಾಗಲಾರದು ಅದು ಕುರುಡರು ಒಂದೊಂದಂಗ-ಗಳನ್ನು ಮಾತ್ರ ಮುಟ್ಟಿ ಸಂಪೂರ್ಣ ಆನೆಯ ಜ್ಞಾನವನ್ನು ಹೊಂದಿದೆವೆನ್ನುವಂತಾಗುತ್ತದೆ. ಆದರೆ ನಾವು ವಸ್ತುವಿನ ಸಮಸ್ತಧರ್ಮಗಳನ್ನು ಒಮ್ಮೆಲೇ ವಿಚಾರಿಸಲಿಕ್ಕೂ ಹೇಳಲಿಕ್ಕೂ ಸಹ ಸಮರ್ಥರಿಲ್ಲ. ಒಂದು ಸಮಯದಲ್ಲಿ ಯಾವುದಾದರೊಂದೇ ಧರ್ಮದ ವಿಚಾರಮಾಡುವುದು ಸಾಧ್ಯವಿದೆ ಅಂದಮೇಲೆ ನಾವು ಯಾವಾಗ ಒಂದು ವಸ್ತುವಿನ ಸ್ವರೂಪ ವಿಶೇಷದ ಮೇಲೆ ದೃಷ್ಟಿಯನ್ನು ಇಟ್ಟು ಉಳಿದ ಎಲ್ಲ ಸಂಭವನೀಯ ಅಂಶಗಳನ್ನೆಲ್ಲ ಲಕ್ಷ್ಯಕ್ಕೆ ತಾರದೆ ವಿವರಿಸುತ್ತೇವೆಯೋ ಆ ವಿವರಣವು ಏಕಾಂತದಿಂದ ದೂಷಿತವಾಗುತ್ತದೆ ಅದೇ ಅನ್ಯ ಸಂಭಾವ್ಯ ಸಂಗತಿಗಳನ್ನೆಲ್ಲ ಧ್ಯಾನದಲ್ಲಿಟ್ಟುಕೊಂಡು ಕೆಲವೊಂದು ಮಾತುಗಳನ್ನು ಹೇಳಿದರೆ ಅದು ಅನೇಕಾಂತ ವಾದವೆನಿಸುತ್ತದೆ; ಸತ್ಯವೂ ಆಗಿರುತ್ತದೆ. ಈ ದೃಷ್ಟಿಯಿಂದ ಸಂಸಾರದ ಎಷ್ಟು ಪ್ರವೃತ್ತಿಗಳಿರುವವೋ ಅವೆಲ್ಲವೂ ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಕಾಯ್ದುಕೊಳ್ಳುತ್ತವೆ. ಅವವುಗಳ ಪರಿಸ್ಥಿತಿಯಲ್ಲಿ ಅದು ಉಚಿತವೂ ಇರುತ್ತದೆ. ಆದರೆ ಅವು ಯಾವಾಗ ತಮ್ಮ ದೇಶ, ಕಾಲ ಮೊದಲಾದ ಮರ್ಯಾದೆಗಳನ್ನು ಉಲ್ಲಂಘನ ಮಾಡಹತ್ತುವವೋ ಆಗ ಮಾತ್ರ ದೂಷಿತವೆನಿಸುತ್ತವೆ.

ಸ್ಯಾದ್ವಾದ ಮತ್ತು ಅನೇಕಾಂತಗಳಲ್ಲಿ ವಸ್ತುಸ್ವರೂಪವನ್ನು ಹೇಳುವಾಗ ಇದೇ ವಿಶೇಷ ದೃಷ್ಟಿಕೋಣದ ಮೇಲೆ ಹೆಚ್ಚು ಗಮನವಿಡಲಾಗಿದೆ. ಅದರಿಂದ ಈ ವಿಚಾರ ಸರಣಿಯಿಂದ ನಾವು ವಿರುದ್ಧವೆಂದು ಕಂಡುಬರುವ ಸಂಗತಿಗಳಲ್ಲಿಯೂ ಪರಸ್ಪರ ಸಾಮಂಜಸ್ಯವನ್ನು ಸ್ಥಾಪಿತಗೊಳಿಸುವುದಕ್ಕೆ ಸಾಧ್ಯವಿದೆ ಒಬ್ಬರು ಒಂದು ವಸ್ತುವನ್ನು ಅದರ ವಿಶಿಷ್ಟ ಗುಣವೊಂದನ್ನು ಲಕ್ಷದಲ್ಲಿಟ್ಟು 'ಇದೆ' ಎಂದು ಹೇಳುತ್ತಾರೆ ಇನ್ನು ಕೆಲವರು ಅದರ ಬೇರೆ ಗುಣವನ್ನು ಲಕ್ಷ್ಯವಾಗಿಟ್ಟು-ಕೊಂಡು 'ಇಲ್ಲ' ಎಂದು ಹೇಳುವರು ಇವರಿಬ್ಬರ ಲಕ್ಷ್ಯಗಳನ್ನೂ ಗಮನಿಸಿದಲ್ಲಿ 'ಇದೆ' ಮತ್ತು 'ಇಲ್ಲ' ಎಂಬುದರಲ್ಲಿ ವಿರೋಧವು ಕಂಡುಬಾರದೆ ಸಾಮಂಜಸ್ಯ ಹಾಗೂ ಪರಿಪೂರಕತೆಗಳೇ ಕಂಡುಬರುತ್ತವೆ ಇದಕ್ಕಾಗಿಯೇ ಜೈನರು ತಮ್ಮ ಅನೇಕಾಂತ ದೃಷ್ಟಿಯಿಂದ ಸಮಸ್ತ ಮಿಥ್ಯಾ ಮತಗಳ ಸಮೂಹದಲ್ಲಿಯೂ ಸಹ ಪೂರ್ಣ ಸತ್ಯವನ್ನು ಕಾಣಲು ಪ್ರಯತ್ನಿಸುತ್ತಾರೆಂದು ಹೇಳಲಾಗುತ್ತದೆ ಇಂದಿನ ವಿರೋಧ ಮತ್ತು ಕಷಾಯಗ್ರಸ್ತ ಸಂಸಾರದಲ್ಲಿ ಈ ಅನೇಕಾಂತಾತ್ಮಕ ವಿಚಾರಸರಣಿ ಮತ್ತು ಅಹಿಂಸಾತ್ಮಕ ವೃತ್ತಿಗಳನ್ನು ಮೈಗೂಡಿಸಿಕೊಂಡಲ್ಲಿ ಸಮಸ್ತ ದುಃಖಗಳು ದೂರವಾಗುತ್ತವೆ ಅಲ್ಲದೆ ಮಾನವ ಸಮಾಜದಲ್ಲಿ ಶಾಂತಿ, ಸುಖ ಮತ್ತು ಬಂಧುತ್ವಗಳ ಸ್ಥಾಪನೆಯಾಗುವುದು

## ಪರಿಶಿಷ್ಟ—೨

# ತತ್ತ್ವ-ಸಮುಚ್ಚಯ

### ಮಂಗಲಾಚರಣ

ಅರಿಹಂತರಿಗೆ ನಮಸ್ಕಾರವು ಸಿದ್ಧರಿಗೆ ನಮಸ್ಕಾರವು ಆಚಾರ್ಯರಿಗೆ ನಮಸ್ಕಾರವು ಉಪಾಧ್ಯಾಯರಿಗೆ ನಮಸ್ಕಾರವು ಲೋಕದ ಎಲ್ಲ ಸಾಧುಗಳಿಗೆ ನಮಸ್ಕಾರವು ॥ ೧ ॥

ಈ ಪಂಚ ನಮಸ್ಕಾರವು ಎಲ್ಲ ಪಾಪಗಳ ನಾಶಕವಾಗಿದೆ ಎಲ್ಲ ಮಂಗಲಗಳಲ್ಲಿ ಪ್ರಥಮ ಮಂಗಲವಾಗಿದೆ ॥ ೨ ॥

ನಾಲ್ಕು ಮಂಗಲಗಳಾಗಿವೆ—ಅರಿಹಂತ ಮಂಗಲ ಸಿದ್ಧ ಮಂಗಲ ಸಾಧು ಮಂಗಲ ಕೇವಲಿ-ಪ್ರಣೀತ ಧರ್ಮ ಮಂಗಲ ॥ ೩ ॥

ನಾಲ್ಕು ಲೋಕೋತ್ತಮಗಳಾಗಿವೆ —ಅರಿಹಂತ ಲೋಕೋತ್ತಮ ಸಿದ್ಧ ಲೋಕೋತ್ತಮ ಸಾಧು ಲೋಕೋತ್ತಮ. ಕೇವಲಿ-ಪ್ರಣೀತ ಧರ್ಮ ಲೋಕೋತ್ತಮ. ॥ ೪ ॥

ನಾನು ಈ ನಾಲ್ಕಕ್ಕೆ ಶರಣು ಹೋಗುತ್ತೇನೆ —ಅರಿಹಂತರಿಗೆ ಶರಣುಹೋಗುವೆ ಸಿದ್ಧರಿಗೆ ಶರಣು ಹೋಗುವೆ. ಸಾಧುಗಳಿಗೆ ಶರಣುಹೋಗುವೆ. ಕೇವಲಿ-ಪ್ರಣೀತ ಧರ್ಮಕ್ಕೆ ಶರಣುಹೋಗುವೆ ॥ ೫ ॥

### ೧. ಲೋಕಸ್ವರೂಪ

ಭವ್ಯ ಜನರಿಗೆ ಆನಂದವನ್ನು ನೀಡುವ 'ತ್ರಿಲೋಕ ಪ್ರಜ್ಞಪ್ತಿ' ಎಂಬ ಶಾಸ್ತ್ರವನ್ನು ನಾನು ಅತಿಶಯ ಭಕ್ತಿಯಿಂದ ಪ್ರಸನ್ನಗೊಂಡ ಪರಮ ಗುರುಗಳ ಚರಣ ಪ್ರಭಾವದಿಂದ ಹೇಳುವೆ ॥ ೧ ॥ ಅನಂತಾನಂತ ಅಲೋಕಾಕಾಶದ ನಟ್ಟನಡುವೆ ಈ ಲೋಕಾಕಾಶವು ಜೀವಾದಿ ಐದು ದ್ರವ್ಯಗಳಿಂದ ತುಂಬಿದ್ದು, ಜಗಶ್ರೇಣಿಯ ಘನ ಪ್ರಮಾಣದಲ್ಲಿದೆ ॥ ೨ ॥ ಈ ಲೋಕವು ಆದಿ ಮತ್ತು ಅಂತ ರಹಿತವಾಗಿದೆ. ಪ್ರಕೃತಿಯಿಂದಲೇ ಉತ್ಪನ್ನವಾಗಿದೆ ಜೀವ ಅಜೀವ ದ್ರವ್ಯಗಳಿಂದ ಸಮೃದ್ಧವಾಗಿದೆ. ಇದನ್ನು ಸರ್ವಜ್ಞ ಭಗವಾನನು ಕಂಡಿದ್ದಾನೆ ॥ ೩ ॥ ಆಕಾಶದ ಎಷ್ಟು ಭಾಗದಲ್ಲಿ ಧರ್ಮ ಅಧರ್ಮ ದ್ರವ್ಯಗಳ ನಿಮಿತ್ತದಿಂದ ಜೀವ ಮತ್ತು ಪುದ್ಗಲಗಳ ಗತಿಯು ಇಲ್ಲವೆ ಸ್ಥಿತಿಯು ಇರುವುದೋ ಆ ಭಾಗಕ್ಕೆ ಲೋಕಾಕಾಶವೆನ್ನುವರು. ॥ ೪ ॥ ಮೂರು ಲೋಕಗಳು— ಇದರಲ್ಲಿ ಅಧೋಲೋಕದ ಆಕಾರವು ಸ್ವಾಭಾವಿಕವಾಗಿಯೇ ವೇತ್ರಾಸನದಂತೆಯೂ, ಮಧ್ಯಲೋಕದ ಆಕಾರವು ನಿಲ್ಲಿಸಿದ ಮೃದಂಗದ ಅರ್ಧ ಭಾಗದಂತೆಯೂ ಇದೆ. ॥ ೫ ॥ ಊರ್ಧ್ವಲೋಕದ ಆಕಾರವು ನಿಲ್ಲಿಸಿದ ಮೃದಂಗದಂತಿದೆ ಹೀಗೆ ಈ ಮೂರೂ

ಲೋಕಗಳ ಸಂಸ್ಥಾನವನ್ನು ಹೇಳಲಾಗಿದೆ ॥ ೬ ॥ ಅಧೋಲೋಕದ ಎತ್ತರವು ಕ್ರಮದಿಂದ ಏಳು ರಜ್ಜುವು, ಮಧ್ಯಲೋಕದ ಎತ್ತರವು ಒಂದು ಲಕ್ಷ ಯೋಜನವು, ಊರ್ಧ್ವಲೋಕದ ಎತ್ತರವು ಏಳು ರಜ್ಜುವಿಗೆ ಒಂದು ಲಕ್ಷ ಯೋಜನ ಕಡಿಮೆಯಾಗಿದೆ. ॥ ೭ ॥ ಏಳು ನರಕಗಳು— ಈ ಮೂರು ಲೋಕಗಳಲ್ಲಿಯೇ ಅರ್ಧ ಮೃದಂಗಾಕಾರದ ಅಧೋಲೋಕದಲ್ಲಿ ರತ್ನಪ್ರಭಾ, ಶರ್ಕರಾಪ್ರಭಾ, ವಾಲುಕಾಪ್ರಭಾ, ಪಂಕಪ್ರಭಾ, ಧೂಮಪ್ರಭಾ, ತಮಃಪ್ರಭಾ ಮತ್ತು ಮಹಾತಮಃಪ್ರಭಾ, ಈ ಏಳು ಪೃಥ್ವಿಗಳು ಒಂದೊಂದು ರಜ್ಜುವಿನ ಅಂತರದಲ್ಲಿವೆ. ॥ ೮ ॥ ಈ ಪೃಥ್ವಿಗಳ ಗೋತ್ರ ನಾಮಗಳು ಕ್ರಮದಿಂದ ಧರ್ಮಾ, ವಂಶಾ, ಮೇಘಾ, ಅಂಜನಾ, ಅರಿಷ್ಟಾ, ಮಘವೀ ಮತ್ತು ಮಾಘವೀ ಎಂದಿವೆ. ॥ ೯ ॥ ಎಲ್ಲ ಪೃಥ್ವಿಗಳಲ್ಲಿ ಸೇರಿ ಎಂಬತ್ತುನಾಲ್ಕು ಲಕ್ಷ ನಾರಕಿಗಳ ಬಿಲಗಳಿವೆ ಇನ್ನು ಪ್ರತಿಯೊಂದು ಪೃಥ್ವಿಯಲ್ಲಿಯ ಬಿಲಗಳ ಪ್ರಮಾಣವನ್ನು ನಿರೂಪಿಸಲಾಗುವದು ॥ ೧೦ ॥ ರತ್ನಪ್ರಭವೇ ಮೊದಲಾದ ನರಕ ಭೂಮಿಗಳಲ್ಲಿ ಕ್ರಮದಿಂದ ಮೂವತ್ತು ಲಕ್ಷ, ಇಪ್ಪತ್ತೈದು ಲಕ್ಷ, ಹದಿನೈದು ಲಕ್ಷ, ಹತ್ತು ಲಕ್ಷ, ಮೂರು ಲಕ್ಷ, ಐದು ಕಡಿಮೆ ಒಂದು ಲಕ್ಷ ಮತ್ತು ಕೇವಲ ಐದು, ಹೀಗೆ ನಾರಕಿಗಳ ಬಿಲಗಳಿವೆ. ॥ ೧೧ ॥ ಮದ್ಯ ಸೇವಿಸುವವರು, ಮಾಂಸವನ್ನು ತಿನ್ನುವವರು, ಜೀವಗಳ ಘಾತಮಾಡುವವರು, ಬೇಟೆಯಿಂದ ತೃಪ್ತರಾಗುವವರು— ಇವರೆಲ್ಲರೂ ಕ್ಷಣದ ಸುಖಕ್ಕಾಗಿ ಪಾಪವನ್ನು ಮಾಡುವರು, ನರಕದಲ್ಲಿ ಅನಂತ ದುಃಖವನ್ನು ಹೊಂದುವರು. ॥ ೧೨ ॥ ಯಾವ ಜೀವಗಳು ಲೋಭ, ಕ್ರೋಧ, ಭಯ ಅಥವಾ ಮೋಹಕ್ಕೆ ವಶವಾಗಿ ಅಸತ್ಯ ವಚನಗಳನ್ನು ಆಡುವರೋ, ಅವರು ನಿರಂತರ ಭಯವನ್ನು ಉತ್ಪನ್ನಮಾಡುವಂಥದ್ದೂ ಭಯಂಕರ ಕಷ್ಟಕಾರಕವೂ ಮತ್ತು ಅತ್ಯಂತ ಭಯಾನಕ ನರಕದಲ್ಲಿ ಬೀಳುವರು ॥ ೧೩ ॥ ಐದು ಪ್ರಕಾರದ ಜ್ಯೋತಿಷೀ ದೇವರು— ಚಂದ್ರ, ಸೂರ್ಯ, ಗ್ರಹ, ನಕ್ಷತ್ರ ಮತ್ತು ಪ್ರಕೀರ್ಣಕ ತಾರೆಗಳೆಂದು ಜ್ಯೋತಿಷೀ ದೇವರ ಐದು ಸಮೂಹಗಳಿವೆ ಈ ಜ್ಯೋತಿಷೀ ದೇವರು ಲೋಕದ ಕೊನೆಯಲ್ಲಿರುವ ಘನೋದಧಿ ವಾತವಲಯವನ್ನು ಸ್ಪರ್ಶಿಸುತ್ತಾರೆ ॥ ೧೪ ॥ ಇಪ್ಪತ್ತೆಂಟು ನಕ್ಷತ್ರಗಳು— ಒಬ್ಬೊಬ್ಬ ಚಂದ್ರನಿಗೆ ಇಪ್ಪತ್ತೆಂಟು ನಕ್ಷತ್ರಗಳಿವೆ. ಇಲ್ಲಿ ಕ್ರಮದಿಂದ ಅವುಗಳ ಹೆಸರುಗಳನ್ನು ಹೇಳಲಾಗುತ್ತದೆ. ॥ ೧೫ ॥ ಕೃತಿಕಾ, ರೋಹಿಣಿ, ಮೃಗಶೀರ್ಷಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಘಾ, ಪೂರ್ವಾಫಲ್ಗುನೀ, ಉತ್ತರಾಫಲ್ಗುನೀ, ಹಸ್ತ, ಚಿತ್ರಾ, ಸ್ವಾತಿ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಮೂಲ, ಪೂರ್ವಾಷಾಢಾ, ಉತ್ತರಾ-ಷಾಢಾ, ಅಭಿಜಿತ್, ಶ್ರವಣ, ಧನಿಷ್ಠಾ, ಶತಭಿಷಾ, ಪೂರ್ವ–ಭಾದ್ರಪದಾ, ಉತ್ತರ–ಭಾದ್ರಪದಾ, ರೇವತೀ, ಅಶ್ವಿನಿ ಮತ್ತು ಭರಣಿ ಇವು ನಕ್ಷತ್ರಗಳ ಹೆಸರುಗಳಾಗಿವೆ ॥ ೧೬–೧೮ ॥ ಹನ್ನೆರಡು ಸ್ವರ್ಗ— ಕೆಲವು ಆಚಾರ್ಯರು ಹನ್ನೆರಡು ಕಲ್ಪಗಳೆಂದೂ, ಕೆಲವರು ಹದಿನಾರು ಕಲ್ಪಗಳೆಂದೂ ಹೇಳುವರು ಕಲ್ಪಾತೀತ ಪಟಲಗಳು ಮೂರು ಪ್ರಕಾರದವೆಂದು ಹೇಳಲಾಗಿದೆ ॥ ೧೯ ॥ ಸೌಧರ್ಮ, ಈಶಾನ, ಸಾನತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂತವ, ಮಹಾಶುಕ್ರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತ ಈ ಪ್ರಕಾರ ಇವು ಹನ್ನೆರಡು ಕಲ್ಪಗಳಿವೆ. ॥ ೨೦ ॥ ಹದಿನಾರು ಸ್ವರ್ಗಗಳು— ಸೌಧರ್ಮ, ಈಶಾನ, ಸಾನತ್ಕುಮಾರ. ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತ ಈ ಪ್ರಕಾರ ಹದಿನಾರು ಕಲ್ಪಗಳನ್ನು ಕೆಲವು ಆಚಾರ್ಯರು ಹೇಳುತ್ತಾರೆ ॥ ೨೧–೨೨ ॥ ಒಂಭತ್ತು ಗ್ರೈವೇಯಕಗಳು— ಕಲ್ಪಾತೀತದಲ್ಲಿ ಅಧಸ್ತನ–ಅಧಸ್ತನ, ಅಧಸ್ತನ-ಮಧ್ಯಮ, ಅಧಸ್ತನ–ಉಪರಿಮ, ಮಧ್ಯಮ–ಅಧಸ್ತನ, ಮಧ್ಯಮ-ಮಧ್ಯಮ, ಮಧ್ಯಮ–ಉಪರಿಮ, ಉಪರಿಮ-ಅಧಸ್ತನ, ಉಪರಿಮ–ಮಧ್ಯಮ ಮತ್ತು ಉಪರಿಮ–ಉಪರಿಮ ಇವು ಒಂಬತ್ತು ಗ್ರೈವೇಯಕ ವಿಮಾನಗಳಿವೆ ॥ ೨೩–೨೪ ॥ ಸರ್ವಾರ್ಥಸಿದ್ಧಿ ಎಂಬ ಹೆಸರಿನ ಇಂದ್ರಕದ ಪೂರ್ವ, ಪಶ್ಚಿಮ, ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಕ್ರಮದಿಂದ ವಿಜಯಂತ, ವೈಜಯಂತ, ಜಯಂತ ಮತ್ತು ಅಪರಾಜಿತ ಎಂಬ ಹೆಸರಿನ ವಿಮಾನಗಳಿವೆ ॥ ೨೫ ॥ ಮನುಷ್ಯಲೋಕದ ಪ್ರಮಾಣದಲ್ಲಿರುವ ತನುವಾತದ ಉಪರಿಮ ಭಾಗದಲ್ಲಿ ಎಲ್ಲ ಸಿದ್ಧರ ಸಿರಗಳು ಸದೃಶವಾಗಿವೆ ಆದರೆ ಅಧಸ್ತನ ಬಾಗದಲ್ಲಿ ಕೆಲವೊಂದು ವಿಸದೃಶವಾಗಿಯೂ ಇರುತ್ತವೆ. ॥ ೨೬ ॥ ಎಷ್ಟು ಮಾರ್ಗವು ಕ್ರಮಿಸಲಿಕ್ಕೆ ಯೋಗ್ಯವಾಗಿದೆಯೋ ಅಷ್ಟು ಕ್ರಮಿಸಿ, ಲೋಕದ ತುತ್ತತುದಿಯಲ್ಲಿ ಎಲ್ಲ ಸಿದ್ಧರೂ ಆಶೆ, ಅಭಿಲಾಷೆ, ಹಸಿವು, ನೀರಡಿಕೆಗಳನ್ನುಳಿದು ಆಕಾಶಕ್ಕೆ ಸಮಾನವಾಗಿ ನಿಲ್ಲುತ್ತಾರೆ ॥ ೨೭ ॥ ಶುದ್ಧೋಪಯೋಗ-ದಿಂದ ಉತ್ಪನ್ನವಾದ ಅರ್ಹಂತ ಮತ್ತು ಸಿದ್ಧ ಜೀವಿಗಳಿಗೆ ಅತಿಶಯ, ಆತ್ಮೋತ್ಥ, ವಿಷಯಾತೀತ, ಅನುಪಮ, ಅನಂತ ಮತ್ತು ವಿಚ್ಛೇದ ರಹಿತ ಸುಖವು ಪ್ರಾಪ್ತವಾಗುತ್ತದೆ ॥ ೨೮ ॥ ಜಂಬೂ ದ್ವೀಪ— ಮನುಷ್ಯ ಕ್ಷೇತ್ರದ ಮಧ್ಯದಲ್ಲಿ

ಒಂದು ಲಕ್ಷ ಯೋಜನ ವಿಸ್ತಾರವಾದಂಥ ಗೋಲ ಸದೃಶ ಹಾಗೂ ಜಂಬೂದ್ವೀಪವೆಂಬ ಹೆಸರಿನ ದ್ವೀಪವು ಪ್ರಸಿದ್ಧವಾಗಿದೆ ॥ ೨೯ ॥ ಈ ಜಂಬೂ ದ್ವೀಪದಲ್ಲಿ ಏಳು ಪ್ರಕಾರದ ಶ್ರೇಷ್ಠ ಜನಪದಗಳಿವೆ ಈ ಜನಪದಗಳಲ್ಲಿ ಆರು ಕುಲಾಚಲಗಳು ಶೋಭಿಸುತ್ತಿವೆ ॥ ೩೦ ॥ ಏಳು ಕ್ಷೇತ್ರಗಳು—ದಕ್ಷಿಣದಿಂದ ಭರತ, ಹೈಮವತ, ಹರಿ, ವಿದೇಹ, ರಮ್ಯಕ, ಹೈರಣ್ಯವತ, ಐರಾವತ ಈ ಏಳು ಕ್ಷೇತ್ರಗಳಿವೆ ಇವು ಕುಲಾಚಲಗಳಿಂದ ವಿಭಕ್ತವಾಗಿವೆ ॥ ೩೧ ॥ ಆರು ಪರ್ವತಗಳು—ಹಿಮವಾನ್, ಮಹಾ ಹಿಮವಾನ್, ನಿಷಧ, ನೀಲ, ರುಕ್ಮಿ ಮತ್ತು ಶಿಖರಿ ಈ ಆರು ಕುಲ ಪರ್ವತಗಳು ಕೆಳಗಿನಿಂದ ಮೇಲಿನ ವರೆಗೆ ಸಮಾನ ವಿಸ್ತಾರದಿಂದ ಕೂಡಿವೆ ಅಲ್ಲದೆ ಪೂರ್ವಾಪರ ಸಮುದ್ರಗಳಿಗೆ ಹತ್ತಿವೆ ॥ ೩೨ ॥ ಭರತ ಕ್ಷೇತ್ರ—ಭರತ ಕ್ಷೇತ್ರದ ನಟ್ಟನಡುವೆ ರಜತಮಯ ಮತ್ತು ನಾನಾ ಪ್ರಕಾರದ ಉತ್ತಮ ರತ್ನಗಳಿಂದ ರಮಣೀಯವಾದ ವಿಜಯಾರ್ಧವೆಂಬ ಹೆಸರಿನ ಉನ್ನತ ಪರ್ವತವಿದೆ. ॥ ೩೩ ॥ ಗಂಗಾ—ಹಿಮವತ್ ಪರ್ವತದ ಮಧ್ಯದಲ್ಲಿ ಪೂರ್ವ ಪಶ್ಚಿಮವಾಗಿ ಹಬ್ಬಿರುವ ಪದ್ಮ ಸರೋವರವಿದೆ. ಇದರ ಪೂರ್ವ ಭಾಗದಿಂದ ಗಂಗೆಯು ಹೊರಡುತ್ತದೆ ॥ ೩೪ ॥ ಸಿಂಧು—ಪದ್ಮ ಸರೋವರದ ಪಶ್ಚಿಮ ದ್ವಾರದಿಂದ ಸಿಂಧೂ ನದಿಯು ಹೊರಡುತ್ತದೆ ಅದು ಹದಿನಾಲ್ಕು ಸಾವಿರ ನದಿಗಳ ಪರಿವಾರ ಸಹಿತ ಸಮುದ್ರವನ್ನು ಪ್ರವೇಶಿಸುತ್ತದೆ. ॥ ೩೫ ॥ ಆರು ಖಂಡಗಳು—ಗಂಗಾ, ಸಿಂಧೂ ನದಿಗಳು, ವಿಜಯಾರ್ಧ ಪರ್ವತ ಇವುಗಳಿಂದ ಭರತ ಕ್ಷೇತ್ರದಲ್ಲಿ ಆರು ಖಂಡಗಳಾಗಿವೆ ಅವುಗಳ ಭಾಗಗಳನ್ನು ಹೇಳಲಾಗುತ್ತದೆ ॥ ೩೬ ॥ ಉತ್ತರ ಮತ್ತು ದಕ್ಷಿಣ ಭರತ ಕ್ಷೇತ್ರದಲ್ಲಿ ಪ್ರತಿಯೊಂದರಲ್ಲಿ ಮೂರು ಮೂರು ಖಂಡಗಳಿವೆ. ಇವುಗಳಲ್ಲಿ ದಕ್ಷಿಣ ಭಾರತದ ಮೂರು ಖಂಡಗಳಲ್ಲಿ ಮಧ್ಯದಲ್ಲಿ ಆರ್ಯ ಖಂಡವಿದೆ ॥ ೩೭ ॥ ಭರತ ಕ್ಷೇತ್ರದ ಆರ್ಯ ಖಂಡದಲ್ಲಿ ಕಾಲ ವಿಭಾಗಗಳು ಹೀಗಿವೆ—ಇಲ್ಲಿ ಭಿನ್ನಭಿನ್ನವಾಗಿ ಅವಸರ್ಪಿಣಿ ಮತ್ತು ಉತ್ಸರ್ಪಿಣಿಯ ರೂಪ ಎರಡು ಪ್ರಕಾರದ ಕಾಲಗಳು ಪರಿವರ್ತನ ಹೊಂದುತ್ತಿರುತ್ತವೆ ॥ ೩೮ ॥ ಆರು ಕಾಲಗಳು—ಅವಸರ್ಪಿಣಿ ಮತ್ತು ಉತ್ಸರ್ಪಿಣಿ ಇವೆರಡೂ ಕಾಲ ವಿಭಾಗಗಳು ಸೇರಿ ಒಂದು ಕಲ್ಪಕಾಲವಾಗುತ್ತದೆ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಆರಾರು ಭೇದಗಳಿವೆ—ಸುಷಮ ಸುಷಮಾ, ಸುಷಮಾ, ಸುಷಮ-ದುಷಮಾ, ದುಷಮ-ಸುಷಮಾ, ದುಷಮಾ ಮತ್ತು ಅತಿದುಷಮಾ ಇವುಗಳಲ್ಲಿ ಮೊದಲನೆಯದಾದ ಸುಷಮ-ಸುಷಮ ಕಾಲದಲ್ಲಿ ನಿಯಮದಿಂದ ಪರಸ್ತ್ರೀರಮಣ ಮತ್ತು ಪರಧನಹರಣಗಳು ಆಗುವದಿಲ್ಲ ॥ ೩೯-೪೦ ॥ ಮೂರು ಕೋಟಾ ಕೋಟೀ ಸಾಗರೋಪಮ ಪ್ರಮಾಣ ಸುಷಮಾ ಎಂಬ ಹೆಸರಿನ ಕಾಲದಲ್ಲಿ ಮೊದಲನೆಯ ಕಾಲದ ದೃಷ್ಟಿಯಿಂದ ಉತ್ಸೇಧ (ಎತ್ತರ), ಆಯು, ಬಲ, ಋದ್ಧಿ ಮತ್ತು ತೇಜ ಇತ್ಯಾದಿಗಳು ಕ್ರಮದಿಂದ ಹೀನವಾಗುತ್ತ ಹೋಗುತ್ತವೆ. ॥ ೪೧ ॥ ಉತ್ಸೇಧಾದಿಕಗಳು ಕ್ಷೀಣವಾಗುವುದರಿಂದ ಸುಷಮ-ದುಷಮಾ ಕಾಲವು ಪ್ರವೇಶವಾಗುತ್ತದೆ ಈ ಕಾಲದಲ್ಲಿ ಸ್ತ್ರೀಯರು ಅಪ್ಸರೆಯರಿಗೆ ಸಮಾನರೂ ಪುರುಷರು ದೇವತೆಗಳಿಗೆ ಸಮಾನರೂ ಆಗಿರುತ್ತಾರೆ ॥ ೪೨ ॥ ಹದಿನಾಲ್ಕು ಕುಲಕರರು—ಪ್ರತಿಶ್ರುತಿಯನ್ನು ಮೊದಲು ಮಾಡಿಕೊಂಡು ನಾಭಿರಾಜನ ವರೆಗೆ ಅರ್ಥಾತ್ ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಾನ್, ಯಶಸ್ವೀ, ಅಭಿಚಂದ್ರ, ಚಂದ್ರಾಭ, ಮರುದೇವ, ಪ್ರಸೇನಜಿತ್ ಮತ್ತು ನಾಭಿರಾಯ, ಈ ಹದಿನಾಲ್ಕು ಮನುಗಳು ಪೂರ್ವಭವದಲ್ಲಿ ವಿದೇಹ ಕ್ಷೇತ್ರದ ಮಹಾಕುಲಗಳಲ್ಲಿ ರಾಜಕುಮಾರರಾಗಿದ್ದರು. ॥ ೪೩ ॥ ಇವರೆಲ್ಲರೂ ಕುಲವನ್ನು ಧಾರಣ-ಮಾಡುವುದರಿಂದ 'ಕುಲಧರ' ಎಂಬ ಹೆಸರಿನಿಂದಲೂ, ಕುಲಗಳನ್ನು ರೂಪಿಸುವುದರಲ್ಲಿ ಕುಶಲರಾಗಿರುವುದರಿಂದ 'ಕುಲಕರ' ಎಂಬ ಹೆಸರಿನಿಂದಲೂ ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ ॥ ೪೪ ॥ ಇನ್ನು ಇಲ್ಲಿಂದ ಮುಂದೆ—ನಾಭಿರಾಯ ಕುಲಕರನ ತರುವಾಯ—ಪುಣ್ಯೋದಯದಿಂದ ಭರತ ಕ್ಷೇತ್ರದ ಮನುಷ್ಯರಲ್ಲಿ ಶ್ರೇಷ್ಠ ಹಾಗೂ ಸಮಸ್ತ ಭುವನ ವಿಖ್ಯಾತ ತ್ರಿಷಷ್ಠಿ ಶಲಾಕಾಪುರುಷರು ಜನ್ಮತಾಳುತ್ತಾರೆ ॥ ೪೫ ॥ ಈ ಶಲಾಕಾ ಪುರುಷರು ತೀರ್ಥಂಕರ, ಚಕ್ರವರ್ತಿ, ಬಲಭದ್ರ, ಹರಿ (ನಾರಾಯಣ) ಮತ್ತು ಪ್ರತಿಶತ್ರು (ಪ್ರತಿನಾರಾಯಣ), ಈ ಹೆಸರುಗಳಿಂದ ಪ್ರಸಿದ್ಧ-ರಾಗಿದ್ದಾರೆ; ಇವರಲ್ಲಿ ತೀರ್ಥಂಕರರು ಹನ್ನೆರಡರ ಎರಡಷ್ಟು ಅಂದರೆ ಇಪ್ಪತ್ನಾಲ್ಕು, ಚಕ್ರವರ್ತಿಗಳು ಹನ್ನೆರಡು, ಬಲಭದ್ರರು ಒಂಬತ್ತು (ಪದಾರ್ಥ), ನಾರಾಯಣರು ಒಂಭತ್ತು (ನಿಧಿ) ಮತ್ತು ಪ್ರತಿಶತ್ರುಗಳೂ ಒಂಭತ್ತು (ರಂಧ್ರ) ಹೀಗೆ ಸಂಖ್ಯೆಯಲ್ಲಿ ಇವೆ. ॥ ೪೬ ॥ ಇಪ್ಪತ್ತುನಾಲ್ಕು ತೀರ್ಥಂಕರರು—ಇವರಲ್ಲಿ ಋಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನ,

ಇವರು ಭರತಕ್ಷೇತ್ರದಲ್ಲಿ ಜನ್ಮತಾಳಿದಂಥ ಈ ಇಪ್ಪತ್ತನಾಲ್ಕು ತೀರ್ಥಂಕರರಿಗೆ ನಮಸ್ಕಾರ ಮಾಡೋಣ ಇವರು ಜ್ಞಾನರೂಪೀ ಖಡ್ಗದಿಂದ ಭವ್ಯಜೀವಗಳ ಸಂಸಾರರೂಪೀ ವೃಕ್ಷವನ್ನು ಕಡಿಯುತ್ತಾರೆ. ॥ ೪೭–೪೯ ॥ ಹನ್ನೆರಡು ಜನ ಚಕ್ರವರ್ತಿಗಳು—ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ ಈ ಚಕ್ರವರ್ತಿಗಳು ಆರು ಖಂಡರೂಪ ಪೃಥ್ವಿಮಂಡಲವನ್ನು ಸಿದ್ಧ ಮಾಡುವವರು ಮತ್ತು ಕೀರ್ತಿಯಿಂದ ಭುವನ ತಲವನ್ನು ತುಂಬುವಂಥವರು ಇವರು ಭರತ ಕ್ಷೇತ್ರದಲ್ಲಿ ಉತ್ಪನ್ನರಾದರು. ॥ ೫೦–೫೧ ॥ ಒಂಭತ್ತು ಬಲದೇವರು—ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ ಮತ್ತು ಪದ್ಮ, ಈ ಒಂಭತ್ತು ಜನ ಬಲದೇವರು ಭರತಕ್ಷೇತ್ರದಲ್ಲಿ ಆಗಿ ಹೋದರು ॥ ೫೨ ॥ ಒಂಬತ್ತು ನಾರಾಯಣರು—ಇದೇ ಪ್ರಕಾರ ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, (ಪುರುಷ-) ಪುಂಡರೀಕ, (ಪುರುಷ-) ದತ್ತ, ನಾರಾಯಣ (ಲಕ್ಷ್ಮಣ) ಮತ್ತು ಕೃಷ್ಣ, ಈ ಒಂಭತ್ತು ವಿಷ್ಣು (ನಾರಾಯಣ) ಗಳು ಆದರು. ॥ ೫೩ ॥ ಒಂಭತ್ತು ಪ್ರತಿನಾರಾಯಣರು—ಅಶ್ವಗ್ರೀವ, ತಾರಕ, ಮೇರಕ, ಮಧುಕೈಟಭ, ನಿಶುಂಭ, ಬಲಿ, ಪ್ರಹರಣ, ರಾವಣ ಮತ್ತು ಜರಾಸಂಧ ಈ ಒಂಭತ್ತು ಪ್ರತಿಶತ್ರು ಅಥವಾ ಪ್ರತಿನಾರಾಯಣರಾದರು ॥ ೫೪ ॥ ಹನ್ನೊಂದು ರುದ್ರರು-ಭೀಮಾವಲಿ, ಜಿತಶತ್ರು, ರುದ್ರ, ವಿಶ್ವಾನಲ, ಸುಪ್ರತಿಷ್ಠ, ಅಚಲ, ಪುಂಡರೀಕ, ಅಜಿತಂಧರ, ಅಜಿತನಾಭಿ, ಪೀಠ ಮತ್ತು ಸಾತ್ಯಕಿಸುತ ಈ ಹನ್ನೊಂದು ಜನರು ತೀರ್ಥಂಕರರ ಕಾಲದಲ್ಲಿ ರುದ್ರರಾಗಿ ಹೋಗಿದ್ದಾರೆ. ಇವರು ಅಧರ್ಮ ಪೂರ್ಣ ವ್ಯವಹಾರದಲ್ಲಿ ತೊಡಗಿ ರೌದ್ರಕರ್ಮಗಳನ್ನು ಮಾಡುತ್ತಾರೆ ॥ ೫೫–೫೬ ॥ ಮಹಾವೀರ-ಭಗವಾನ್ ಮಹಾವೀರನು ಕುಂಡಲ ನಗರದಲ್ಲಿ, ತಂದೆ ಸಿದ್ಧಾರ್ಥ ತಾಯಿ ಪ್ರಿಯಕಾರಿಣೀ ದೇವಿಯಿಂದ ಚೈತ್ರ ಶುಕ್ಲತ್ರಯೋದಶಿಯ ದಿನ, ಉತ್ತರಾಫಾಲ್ಗುನೀ ನಕ್ಷತ್ರದಲ್ಲಿ ಜನ್ಮ ತಾಳಿದನು ॥ ೫೭ ॥ ಭಗವಾನ್ ಪಾರ್ಶ್ವನಾಥನ ಉತ್ಪತ್ತಿಯ ತರುವಾಯ ಎರಡುನೂರ ಎಪ್ಪತ್ತೆಂಟು ವರ್ಷಗಳು ಕಳೆದ ಮೇಲೆ ವರ್ಧಮಾನ ತೀರ್ಥಂಕರನು ಅವತರಿಸಿದನು. ॥ ೫೮ ॥ ಭಗವಾನ್ ವರ್ಧಮಾನನು ಮಾರ್ಗಶಿರ ತಿಂಗಳ ಕೃಷ್ಣ ಪಕ್ಷ ದಶಮಿಯ ದಿನ ಮಧ್ಯಾಹ್ನದಲ್ಲಿ ಉತ್ತರಾ ನಕ್ಷತ್ರವು ಇರುವಾಗ ನಾಥವನದಲ್ಲಿ ಮೂರನೆಯ ಭಕ್ತದ ಜೊತೆಯಲ್ಲಿ ಮಹಾವ್ರತವನ್ನು ಗ್ರಹಣಮಾಡಿದನು ॥ ೫೯ ॥ ಭಗವಾನ್ ನೇಮಿನಾಥ, ಮಲ್ಲಿನಾಥ, ಮಹಾವೀರ, ವಾಸುಪೂಜ್ಯ ಮತ್ತು ಪಾರ್ಶ್ವನಾಥ ಈ ಐದು ಜನ ತೀರ್ಥಂಕರರು ಕುಮಾರಾವಸ್ಥೆಯಲ್ಲಿಯೂ ಉಳಿದ ತೀರ್ಥಂಕರರು ರಾಜ್ಯವಾಳಿ ಕೊನೆಗೆ ತಪಸ್ಸಿಗೆ ತೆರಳಿದರು ॥ ೬೦ ॥ ಮಹಾವೀರ ಭಗವಂತರಿಗೆ ವೈಶಾಖ ಶುಕ್ಲ ದಶಮಿಯ ಮಧ್ಯಾಹ್ನದಲ್ಲಿ ಮಘಾ ನಕ್ಷತ್ರವಿರುವಾಗ ಋಜುಕೂಲಾ ನದಿಯ ತೀರದಲ್ಲಿ ಕೇವಲ ಜ್ಞಾನವು ಉತ್ಪನ್ನವಾಯಿತು ॥ ೬೧ ॥ ಭಗವಾನ್ ವೀರೇಶ್ವರರು (ಮಹಾವೀರ) ಕಾರ್ತಿಕ ಕೃಷ್ಣ ಚತುರ್ದಶಿಯ ದಿನ ಉಷಃಕಾಲದಲ್ಲಿ ಸ್ವಾತೀ ನಕ್ಷತ್ರವು ಇರುವಾಗ ಪಾವಾನಗರದಲ್ಲಿ ಒಬ್ಬೊಂಟಿಗರಾಗಿಯೇ ಸಿದ್ಧರಾದನು ॥ ೬೨ ॥ ಮೂರನೆಯ ಕಾಲದಲ್ಲಿ ಮೂರು ವರ್ಷ, ಎಂಟು ತಿಂಗಳ ಮತ್ತು ಒಂದು ಪಕ್ಷ ಮಾತ್ರ ಉಳಿದಿರುವಾಗ ಋಷಭ ಜಿನೇಂದ್ರನು, ಮತ್ತು ಇಷ್ಟೇ ಕಾಲವು ಚತುರ್ಥ ಕಾಲದಲ್ಲಿ ಉಳಿದಿರುವಾಗ ವೀರಪ್ರಭುವು ಸಿದ್ಧ ಪದವನ್ನು ಹೊಂದಿದರು ॥ ೬೩ ॥ ವೀರ ಭಗವಂತನು ನಿರ್ವಾಣ ಹೊಂದಿ ಮೂರು ವರ್ಷ, ಎಂಟು ತಿಂಗಳು, ಒಂದು ಪಕ್ಷ ಉರುಳಿದ ತರುವಾಯ ಐದನೆಯದಾದ ದುಷಮಾಕಾಲವು ಪ್ರವೇಶಿಸುವುದು ॥ ೬೪ ॥ ಮೂವರು ಕೇವಲಿಗಳು—ಯಾವ ದಿನ ಭಗವಾನ್ ಮಹಾವೀರರು ಸಿದ್ಧರಾದರೋ ಅದೇ ದಿನ ಗೌತಮ ಗಣಧರರು ಪರಮಜ್ಞಾನಿ ಅಥವಾ ಕೇವಲಿಗಳಾದರು; ಮತ್ತು ಗೌತಮರು ಸಿದ್ಧರಾಗಲು ಸುಧರ್ಮಾ ಎಂಬವರು ಕೇವಲಿಗಳಾದರು ॥ ೬೫ ॥ ಸುಧರ್ಮಾ ಸ್ವಾಮಿಯು ಕರ್ಮನಾಶ ಮಾಡಿದ ಮೇಲೆ ಅರ್ಥಾತ್ ಮುಕ್ತನಾದ ಮೇಲೆ ಜಂಬೂ ಸ್ವಾಮಿಯು ಕೇವಲಿಯಾದನು. ಇವನೂ ಸಿದ್ಧನಾದ ತರುವಾಯ ತಿರುಗಿ ಯಾರೂ ಅನುಬದ್ಧ ಕೇವಲಿಗಳಾಗಲಿಲ್ಲ ॥ ೬೬ ॥ ಶಕರಾಜವೀರ ಜಿನೇಂದ್ರನು ಮುಕ್ತಿಯನ್ನು ಹೊಂದಿದ ಮೇಲೆ ನಾಲ್ಕುನೂರಾ ಅರವತ್ತೊಂದು ವರ್ಷಗಳ ತರುವಾಯ ಇಲ್ಲಿ ಶಕರಾಜನು (ವಿಕ್ರಮಾದಿತ್ಯ?) ಉತ್ಪನ್ನನಾದನು ಅಥವಾ ವೀರ ಭಗವಂತನ ನಿರ್ವಾಣದ ನಂತರ ಆರುನೂರಾ ಐದು ವರ್ಷ ಮತ್ತು ಐದು ತಿಂಗಳುಗಳು ಉರುಳಿದ ಮೇಲೆ ಶಕನೃಪನಾದನು ವೀರ ಭಗವಂತನ ನಿರ್ವಾಣದ ತರುವಾಯ ನಾಲ್ಕುನೂರ ಅರವತ್ತೊಂದು ವರ್ಷಗಳು ಕಳೆದ ಮೇಲೆ ಶಕನರೇಂದ್ರನು ಉತ್ಪನ್ನನಾದನು ಈ ವಂಶದ ರಾಜ್ಯಕಾಲದ ಪ್ರಮಾಣವು ಎರಡುನೂರಾ ನಲವತ್ತೆರಡು ವರ್ಷವಿದೆ ॥ ೬೭–೬೮–೬೯ ॥ ಗುಪ್ತರ ರಾಜ್ಯಕಾಲದ ಪ್ರಮಾಣವು ಎರಡುನೂರಾ ಐವತ್ತೈದು

ವರ್ಷವು ಚತುರ್ಮುಖನ ರಾಜ್ಯಕಾಲದ ಪ್ರಮಾಣವು ನಲವತ್ತೆರಡು ವರ್ಷವು. ಇವೆಲ್ಲವನ್ನು ಸೇರಿಸಿದಲ್ಲಿ (೪೬೧+೨೪೨+೨೫೫+೪೨) ಒಂದು ಸಾವಿರ ವರ್ಷವಾಗುತ್ತದೆ ಹೀಗೆ ಅನೇಕ ಆಚಾರ್ಯರು ನಿರೂಪಿಸಿದ್ದಾರೆ ॥ ೭೦ ॥ ಯಾವ ಕಾಲದಲ್ಲಿ ಮಹಾವೀರ ಭಗವಂತನು ಮೋಕ್ಷವನ್ನು ಹೊಂದಿದನೋ ಅದೇ ಕಾಲಕ್ಕೆ ಅವಂತಿಸುತ ಪಾಲಕನ ರಾಜ್ಯಾಭಿಷೇಕವಾಯಿತು ॥ ೭೧ ॥ ಅರವತ್ತು ವರ್ಷ ಪಾಲಕನದು, ಒಂದುನೂರ ಐವತ್ತೈದು ವರ್ಷ ವಿಜಯವಂಶಿಯರದು, ನಲವತ್ತು ವರ್ಷ ಮುರುಂಡವಂಶಿಯರದು, ಮೂವತ್ತು ವರ್ಷ ಪುಷ್ಯಮಿತ್ರನ ರಾಜ್ಯವು ಉಳಿದವು. ॥ ೭೨ ॥ ಇದರ ತರುವಾಯ ಅರವತ್ತು ವರ್ಷ ವಸುಮಿತ್ರ-ಅಗ್ನಿಮಿತ್ರ, ಒಂದು ನೂರು ವರ್ಷ ಗಂಧರ್ವ, ನಲವತ್ತು ವರ್ಷ ನರವಾಹನ ಇವರು ರಾಜ್ಯವಾಳುತ್ತಿದ್ದರು. ತರುವಾಯ ಭೃತ್ಯ-ಆಂಧ್ರರು (ಆಂಧ್ರ ಭೃತ್ಯ?) ಉತ್ಪನ್ನವಾದರು ॥ ೭೩ ॥ ಈ ಆಂಧ್ರಭೃತ್ಯರ ಕಾಲವು ಎರಡು ನೂರಾ ನಲವತ್ತೆರಡು ವರ್ಷಗಳಷ್ಟಿದೆ ಇವರ ತರುವಾಯ ಗುಪ್ತವಂಶೀಯರಾದರು ಇವರ ರಾಜ್ಯ ಕಾಲದ ಪ್ರಮಾಣವು ಎರಡು ನೂರಾ ಮೂವತ್ತೊಂದು ವರ್ಷವಿದೆ ॥ ೭೪ ॥ ಅನಂತರ ಇಂದ್ರನ ಮಗನಾದ ಕಲ್ಕಿಯು ಉತ್ಪನ್ನನಾದನು ಇವನ ಹೆಸರು ಚತುರ್ಮುಖ, ಆಯುಷ್ಯವು ಎಪ್ಪತ್ತು ವರ್ಷವು, ರಾಜ್ಯ ಕಾಲವು-ಇಪ್ಪತ್ತೊಂದರ ಎರಡಷ್ಟು-ನಲವತ್ತೆರಡು ವರ್ಷ ಇತ್ತು. ॥ ೭೫ ॥ ಕಲ್ಕಿಯು ಪ್ರಯತ್ನ ಪೂರ್ವಕವಾಗಿ ತನಗೆ ಯೋಗ್ಯವಾದ ಜನಪದಗಳನ್ನು ವಶಮಾಡಿಕೊಂಡು ಲೋಭಿಯಾದನು ಮುನಿಗಳ ಆಹಾರದ ಮೇಲೆಯೂ ಸಹ ಅಗ್ರಪಿಂಡದ ಶುಲ್ಕವನ್ನು ಬೇಡ ಹತ್ತಿದನು ॥ ೭೬ ॥ ಆಗ ಅಸುರ ದೇವನು ಅವಧಿಜ್ಞಾನದಿಂದ ಮುನಿಗಣದ ಉಪಸರ್ಗವನ್ನು ತಿಳಿದು ಮತ್ತು ಕಲ್ಕಿಯನ್ನು ಧರ್ಮದ್ರೋಹಿಯೆಂದು ನಿಶ್ಚಯಿಸಿ ಕೊಂದು ಹಾಕಿದನು. ॥ ೭೭ ॥ ಆ ಕಲ್ಕಿಯ ಮಗನಾದ ಅಜಿತಂಜಯನೆಂಬವನು 'ನನ್ನನ್ನು ರಕ್ಷಿಸು' ಎಂದು ಹೇಳಿ ಆ ದೇವನಿಗೆ ಶರಣು ಬಂದನು; ಮತ್ತು ಅವನ ಪಾದಗಳಿಗೆ ನಮಸ್ಕರಿಸಿದನು ಆಗ ಆ ದೇವನು 'ಧರ್ಮಪೂರ್ವಕ ರಾಜ್ಯವಾಳು' ಎಂದು ಹೇಳಿ ಅವನನ್ನು ರಕ್ಷಿಸಿದನು ॥ ೭೮ ॥ ಅಂದಿನಿಂದ ಎರಡು ವರ್ಷಗಳ ವರೆಗೆ ಜನತೆಯಲ್ಲಿ ಸಮೀಚೀನ ಧರ್ಮದ ಪ್ರವೃತ್ತಿಯು ಉಳಿಯಿತು. ತಿರುಗಿ ಕ್ರಮವಾಗಿ ಕಾಲದ ಮಹಿಮೆಯಿಂದ ಅದು ಪ್ರತಿದಿನ ಹೀನವಾಗುತ್ತ ಹೋಯಿತು ॥ ೭೯ ॥

—ಯತಿವೃಷಭಕೃತ ತ್ರಿಲೋಕಪ್ರಜ್ಞಪ್ತಿ.

## ೨. ಗೃಹಸ್ಥಧರ್ಮ

ಭಾಗ ೧. ಅರಹಂತರಿಗೆ ವಂದನೆ ಮಾಡಿ ಹನ್ನೆರಡು ವಿಧ ಶ್ರಾವಕ ಧರ್ಮಗಳನ್ನು ಗುರುವಿನ ಉಪದೇಶಕ್ಕೆ ಅನುಸರಿಸಿ ಸಂಗ್ರಹ ರೂಪದಲ್ಲಿ ಹೇಳುವೆ. ॥ ೧ ॥ ಸಮ್ಯಕ್ ದರ್ಶನಾದಿಗಳನ್ನು ಪ್ರಾಪ್ತಮಾಡಿ-ಕೊಂಡು ಯಾವನು ಮುನಿಗಳ ಹತ್ತರ ಉತ್ತಮ ಸಮಾಚಾರಿಯಾಗುವದನ್ನು (ಸದಾಚಾರಿ) ಸ್ವೀಕರಿಸುತ್ತಾನೆಯೋ ಅವನು ಶ್ರಾವಕನೆನಿಸುತ್ತಾನೆ. ॥ ೨ ॥ ಐದು ಅಣುವ್ರತ, ಮೂರು ಗುಣವ್ರತ, ನಾಲ್ಕು ಶಿಕ್ಷಾವ್ರತ-ಈ ಪ್ರಕಾರ ಶ್ರಾವಕ ಧರ್ಮವು ಹನ್ನೆರಡು ಪ್ರಕಾರವಾಗಿದೆ ॥ ೩ ॥ ಅಹಿಂಸಾ—ಸ್ಥೂಲರೂಪದಿಂದ ಪ್ರಾಣಿ ಹಿಂಸೆಯ ತ್ಯಾಗವೇ ಮೊದಲಾದ (ಅರ್ಥಾತ್ ಸುಳ್ಳು, ಕಳವು, ಕೆಟ್ಟ ನಡತೆ, ಪರಿಗ್ರಹಗಳನ್ನು ಸ್ಥೂಲರೂಪದಿಂದ ತ್ಯಜಿಸುವುದು.) ಐದು ಅಣು ವ್ರತಗಳಿವೆ. ಇವುಗಳಲ್ಲಿ ಮೊದಲನೆಯದಾದ ಸ್ಥೂಲ ಅಹಿಂಸೆಯ ಸ್ವರೂಪವನ್ನು ವೀತರಾಗ ಭಗವಂತನು ಈ ಪ್ರಕಾರ ಹೇಳಿದ್ದಾನೆ ಸ್ಥೂಲ ರೂಪದಿಂದ ಪ್ರಾಣವಧೆಯು ಎರಡು ವಿಧವಾಗಿದೆ-ಒಂದು ಸಂಕಲ್ಪ, ಇನ್ನೊಂದು ಆರಂಭ ಶ್ರಾವಕನು ಸಂಕಲ್ಪ ಪೂರ್ವಕ ವಧೆಯ ಪರಿತ್ಯಾಗವನ್ನು ಮಾಡುತ್ತಾನೆ ॥ ೪-೫ ॥ ಇನ್ನು ಈರ್ಯಾ ಸಮಿತಿ ಸಹಿತ ನಡೆಯುತ್ತಿರುವ ಸಾಧುವು ತನ್ನ ಪಾದಗಳನ್ನು ಎತ್ತಿಡುವಾಗ ಹೆಜ್ಜೆಯ ಕೆಳಗೆ ಸಿಕ್ಕು ದ್ವೀಂದ್ರಿಯ (ದ್ವೀಂದ್ರಿಯಾದಿ ಜೀವಗಳು) ಪ್ರಾಣಿಗಳು ಸತ್ತಲ್ಲಿ, ಆ ಸಾಧುವಿಗೆ ಆ ವಧೆಯಿಂದ ಸೂಕ್ಷ್ಮರೂಪದಲ್ಲಿಯೂ ಕರ್ಮಬಂಧವಾಗುವದಿಲ್ಲವೆಂದು ಶಾಸ್ತ್ರವು ಹೇಳುತ್ತದೆ. ಯಾಕೆಂದರೆ ಆ ಸಾಧುವು ಪ್ರಮಾದ ರಹಿತ ಆಚರಣೆ-ಯುಳ್ಳವನಿರುತ್ತಾನೆ ಹಿಂಸೆಯಂತೂ ಪ್ರಮಾದದಿಂದ ಸಂಭವಿಸುತ್ತದೆ ಹೀಗೆ ಹೇಳಲಾಗಿದೆ. ॥ ೬-೭ ॥ ಈ ಅಹಿಂಸಾಣುವ್ರತವನ್ನು ಧರಿಸಿ ಅದನ್ನು ಪೂರ್ಣವಾಗಿ ಪಾಲಿಸುವದಕ್ಕಾಗಿ ಅದಕ್ಕೆ ಸಂಬಂಧಿಸಿದ ಅತಿಚಾರಗಳನ್ನು ವಿಧಿಪೂರ್ವಕವಾಗಿ ತಿಳಿದುಕೊಂಡು, ಅದನ್ನು ಪ್ರಯತ್ನ ಪೂರ್ವಕ ನಿವಾರಿಸಿಕೊಳ್ಳಲಿಕ್ಕೆಬೇಕು. ॥ ೮ ॥ ಕ್ರೋಧಾದಿಗಳಿಂದ ದೂಷಿತ ಮನಸ್ಸಿನವನಾಗಿ ಆಕಳು ಮತ್ತು ಮನುಷ್ಯ ಮೊದಲಾದವುಗಳನ್ನು ಕಟ್ಟಿ ಹಾಕಬಾರದು,

ಅವುಗಳನ್ನು ಹೊಡೆಯ ಕೂಡದು, ಅವಯುವಗಳನ್ನು ಕಡಿಯ ಕೂಡದು, ಹೆಚ್ಚು ಭಾರಗಳನ್ನು ಹೇರ ಕೂಡದು. ಅಲ್ಲದೆ ಅವುಗಳಿಗೆ ನೀರು, ಅನ್ನ ಕೊಡದೆ, ಇಡಕೂಡದು ॥ ೯ ॥ ತ್ರಸ ಜೀವಿಗಳ ರಕ್ಷಣೆಗಾಗಿ ಜಲವನ್ನು ಪರಿಶುದ್ಧಗೊಳಿಸಿ ಕುಡಿಯಲಿಕ್ಕೆಬೇಕು. ಹಾಗೆಯೇ ಕಟ್ಟಿಗೆ, ಧಾನ್ಯ ಮೊದಲಾದವುಗಳನ್ನು ಸ್ವೀಕರಿಸಿ ವಿಧಿ ಪೂರ್ವಕವಾಗಿ ಉಪಭೋಗಿಸಬೇಕು. ॥ ೧೦ ॥ ಸತ್ಯ—ಎರಡನೆಯದಾದ ಮೃಷಾತ್ಯಾಗ ಅಣುವ್ರತವು ಐದು ಪ್ರಕಾರವಿದೆ-ಕನ್ಯಾನೃತ, ಗೌಅನೃತ, ಭೂಮಿ ಅನೃತ, ನ್ಯಾಸಹರಣ ಮತ್ತು ಕೂಟಸಾಕ್ಷಿತ್ವ ಇವುಗಳ ತ್ಯಾಗ ವ್ರತವನ್ನು ಗ್ರಹಣ ಮಾಡಿ, ಅದನ್ನು ಪೂರ್ಣ ಪಾಲಿಸುವದಕ್ಕಾಗಿ ಆಯಾ ವ್ರತಗಳಿಗೆ ಸಂಬಂಧಿಸಿದ ಅತಿಚಾರಗಳನ್ನು ಯಥಾವಿಧಿ ತಿಳಿದು ಅವುಗಳನ್ನು ಪ್ರಯತ್ನ ಪೂರ್ವಕ ನಿವಾರಿಸಲಿಕ್ಕೆಬೇಕು ॥ ೧೧-೧೩ ॥ ಸಾಮಾನ್ಯವಾಗಿ ಅಭ್ಯಾಖ್ಯಾನ, ರಹಸ್ಯ-ಅಭ್ಯಾಖ್ಯಾನ, ಸ್ವದಾರಾಮಂತ್ರಭೇದ, ಮೃಷೋಪದೇಶ, ಕೂಟಲೇಖಕರಣ ಈ ಅತಿಚಾರಗಳಿಂದ ಪಾರಾಗಲಿಕ್ಕೆಬೇಕು ॥ ೧೪ ॥ ಬುದ್ಧಿ ಪೂರ್ವಕ ವಿಚಾರಮಾಡಿ, ಈ ಲೋಕಕ್ಕೂ ಪರಲೋಕಕ್ಕೂ ವಿರುದ್ಧವಾದ ವಚನಗಳನ್ನು ಆಡಕೂಡದು. ತನಗೂ ಅನ್ಯರಿಗೂ ಪೀಡೆಯನ್ನುಂಟುಮಾಡುವ ವಚನಗಳನ್ನಾಡಬಾರದು. ॥ ೧೫ ॥ ಅಚೌರ್ಯ—ಮೂರನೆಯಾದಾದ ಅದತ್ತಾದಾನ-ತ್ಯಾಗ-ಅಣುವ್ರತದಲ್ಲಿ ಸಚಿತ್ತ ಮತ್ತು ಅಚಿತ್ತದ ವಿಷಯಕ್ಕನು-ಸರಿಸಿ ವೀತರಾಗ ಭಗವಂತನು ಎರಡು ಪ್ರಕಾರಗಳನ್ನು ಹೇಳಿದ್ದಾನೆ. ಇದಕ್ಕೆ ಅತಿಚಾರಗಳು ಸ್ತೇನಾಹೃತ, ತಸ್ಕರ ಪ್ರಯೋಗ, ವಿರುದ್ಧರಾಜ್ಯಾತಿಕ್ರಮ, ಕೂಟ ತೂಕ ಮಾಪ ಮತ್ತು ಮೇಲೆ ಸುಂದರ ಕಂಡು ಒಳಗೆ ಕೆಡಕು ಇರುವ ವಸ್ತುಗಳ ವ್ಯವಹಾರ ಎಂದಿರುತ್ತವೆ ಇವುಗಳ ತ್ಯಾಗ ಮಾಡಬೇಕು ॥ ೧೫-೧೫ ॥ ಬ್ರಹ್ಮಚರ್ಯ—ನಾಲ್ಕನೆಯ ಅಣುವ್ರತವು ಪರದಾರಪರಿತ್ಯಾಗ ಮತ್ತು ಸ್ವದಾರ-ಸಂತೋಷವೆಂಬುದಿದೆ ಇದು ಔದಾರಿಕ ಮತ್ತು ವೈಕ್ರಿಯಿಕ ಶರೀರದ ಭೇದದಿಂದ ಎರಡು ವಿಧವಾಗಿದೆ. ಇತ್ವರಿಕಾ-ಪರಿಗೃಹಿತಾ-ಗಮನ, ಅಪರಿಗೃಹೀತಾಗಮನ, ಅನಂಗಕ್ರೀಡಾ, ಪರವಿವಾಹಕರಣ, ಕಾಮತೀವ್ರಾಭಿಲಾಷ ಇವು ಐದು ಬ್ರಹ್ಮಚರ್ಯ ವ್ರತದ ಅತಿಚಾರಗಳಾಗಿವೆ. ಇವುಗಳನ್ನೂ ಹಾಗೆಯೇ ಮೋಹವನ್ನು ಉಂಟುಮಾಡುವಂಥ ಪರಯುವತಿಯನ್ನು ವಿಕಾರವಶನಾಗಿ ನೋಡುವುದನ್ನೂ ಸಹ ತ್ಯಾಗ ಮಾಡಬೇಕು. ಈ ಕಾಮನ ಬಾಣವು ಚಾರಿತ್ರವೆಂಬ ಪ್ರಾಣವನ್ನು ನಷ್ಟಗೊಳಿಸುತ್ತದೆ. ॥ ೧೬-೧೮ ॥ ಅಪರಿಗ್ರಹ—ಸಚಿತ್ತ ಮತ್ತು ಅಚಿತ್ತ ಸಂಪತ್ತಿಗಳಲ್ಲಿ ತನ್ನ ಇಚ್ಛೆಯನ್ನು ಒಂದು ಪ್ರಮಾಣದಲ್ಲಿಡುವುದಕ್ಕೆ ಅನಂತ ಜ್ಞಾನಿಗಳು ಐದನೆಯದಾದ ಅಪರಿಗ್ರಹ ಅಣುವ್ರತವೆಂದು ಹೇಳಿದ್ದಾರೆ. ಒಳ್ಳೇ ರೀತಿಯಿಂದ ಶುದ್ಧ ಚಿತ್ತನಾಗಿ ಕ್ಷೇತ್ರ, ಸುವರ್ಣ, ಧನ, ದ್ವಿಪದ ಹಾಗೂ ಕುಪ್ಯ (ಪಾತ್ರೆ ಮೊದಲಾದವು) ಇತ್ಯಾದಿ ಪದಾರ್ಥಗಳಲ್ಲಿ ಪ್ರಮಾಣವನ್ನು ಮೀರಕೂಡದು. ಹಾಗೆಯೇ ಸಂತೋಷ ಭಾವನೆಯನ್ನು ಇಡಬೇಕು. ಅಲ್ಲದೆ ನಾನು ತಿಳಿಯಲಾರದೆ ಈ ಕೆಲವೊಂದು ಪದಾರ್ಥಗಳನ್ನು ಸ್ವೀಕರಿಸಿದ್ದೇನೆ, ಇನ್ನೂ ಪುನಃ ಸ್ವೀಕರಿಸಲಾರೆ-ಎಂದು ವಿಚಾರ ಮಾಡುತ್ತಿರಬೇಕು. ॥ ೧೯-೨೧ ॥ ದಿಗ್ವ್ರತ—ಊರ್ಧ್ವ, ಅಧಃ, ತಿರ್ಯಗ್ ದಿಕ್ಕುಗಳಲ್ಲಿ ಗಮನಾಗಮನಗಳ ಪ್ರಮಾಣವನ್ನು ಮಾಡುವುದಕ್ಕೆ ಭಗವಾನ್ ಮಹಾವೀರನು ಶ್ರಾವಕ ಧರ್ಮದ ಪ್ರಥಮ ಗುಣವ್ರತವೆಂದು ಹೇಳಿದ್ದಾನೆ. ॥ ೨೨ ॥ ಮೇಲೆ ಕೆಳಗೆ ಮತ್ತು ಸುತ್ತಲಿನ ದಿಕ್ಕುಗಳಲ್ಲಿ ಗೊತ್ತು ಮಾಡಿದ ಪ್ರಮಾಣವನ್ನು ಮೀರುವುದು, ಹಾಗೆಯೇ ಕ್ಷೇತ್ರ ವೃದ್ಧಿ, ವಿಸ್ಮರಣ ಇವು ಈ ವ್ರತದ ಅತಿಚಾರಗಳಾಗಿವ ಇವುಗಳಿಂದ ಉಳಿಯಲಿಕ್ಕೆಬೇಕು. ॥ ೨೩ ॥ ಭೋಗೋಪಭೋಗ ಪರಿಮಾಣ—ಉಪಭೋಗ ಮತ್ತು ಪರಿಭೋಗಗಳ ಪ್ರಮಾಣವನ್ನು ಮಾಡುವುದಕ್ಕೆ ಎರಡನೆಯ ಗುಣವ್ರತವೆನ್ನುವರು. ಈ ವ್ರತವನ್ನು ಸ್ವೀಕರಿಸುವುದರಿಂದ ನಿಯಮವಿಲ್ಲದುದರಿಂದ ಉಂಟಾಗುವ ವ್ಯಾಪಕ ದೋಷವು ಇಲ್ಲದಂತಾಗುತ್ತದೆ ಇದು ಇದರ ಗುಣಭಾವವಾಗಿದೆ. ॥ ೨೪ ॥ ಸಚಿತ್ತಾಹಾರ, ಸಚಿತ್ತಪ್ರತಿಬದ್ಧಾಹಾರ ಹಾಗೂ ಅಪಕ್ವ, ದುಷ್ಪಕ್ವ ಮತ್ತು ತುಚ್ಛ ಔಷಧಗಳನ್ನು ತಿನ್ನುವುದು, ಈ ಅತಿಚಾರಗಳನ್ನು ಒಳ್ಳೆಯ ರೀತಿಯಿಂದ ನಿವಾರಿಸಲಿಕ್ಕೆಬೇಕು ॥ ೨೫ ॥ ಅನರ್ಥದಂಡವ್ರತ—ಇದ್ದಲಿ, ಕಾಡು, ಬಂಡಿ, ಬಾಡಿಗೆ, ಮದ್ದು ಇವುಗಳ ಉದ್ಯೋಗವನ್ನು ಮಾಡಕೂಡದು. ಹಾಗೆಯೇ ಹಲ್ಲು, ಅರಗು, ರಸ, ಕೂದಲು ಮತ್ತು ವಿಷ ಇವುಗಳ ವ್ಯಾಪಾರ ಮಾಡಬಾರದು. ಯಂತ್ರಪೀಡನ, ನಿರ್ಲಾಂಛನ, ದಾವಾಗ್ನಿಗೆ ಸಂಬಂಧಿಸಿದ ಕಾರ್ಯ, ಸರೋವರ, ಕೆರೆ, ಕಟ್ಟೆಗಳನ್ನು ಒಡೆಯುವುದು, ಒಣಗಿಸುವುದು ಇತ್ಯಾದಿಗಳನ್ನು ತ್ಯಜಿಸಲಿಕ್ಕೆಬೇಕು ॥ ೨೬-೨೭ ॥ ಮೂರನೆಯ ಗುಣವ್ರತವಾದ ಈ ಅನರ್ಥದಂಡ ವ್ರತವು ಅಪಧ್ಯಾನ, ಪ್ರಮಾದಾಚರಿತ, ಹಿಂಸಾಪ್ರದಾನ, ಪಾಪೋಪದೇಶ ಎಂದು ನಾಲ್ಕು ಪ್ರಕಾರವಾಗಿದೆ ॥ ೨೭ ॥ ಜೀವವು ಪ್ರಯೋಜನವುಳ್ಳ ಕಾರ್ಯಗಳಿಂದ ಕಟ್ಟಿಕೊಳ್ಳುವ ಕರ್ಮಕ್ಕಿಂತ ಹೆಚ್ಚಾಗಿ ನಿಷ್ಪ್ರಯೋಜಕ ಕೆಲಸಗಳಿಂದ

ಕರ್ಮವನ್ನು ಕಟ್ಟಿಕೊಳ್ಳುತ್ತದೆ ಯಾಕಂದರೆ ಸಪ್ರಯೋಜಕ ಕ್ರಿಯೆಗಳಿಂದ ಕಾಲಾದಿಗಳ ನಿಯಮತ್ವ ಉಂಟಾಗುತ್ತದೆ. ಅನರ್ಥ ಕಾರ್ಯಗಳಲ್ಲಿ ಇವಾವ ನಿಯಮಗಳೂ ಇರುವದಿಲ್ಲ ॥ ೨೮ ॥ (ಕಂದರ್ಪ ರಾಗೋದ್ದೀಪಕ ಪರಿಹಾಸ), ಕೌತ್ಕುಚ್ಯ (ವಿಕಾರೋತ್ಪಾದಕ ವಚನ ಹಾಗೂ ಅಂಗಚೇಷ್ಟೆ), ಮೌಖರ್ಯ (ನಿರರ್ಥಕ ನಿರ್ಲಜ್ಜವಾದ), ಸಂಯುಕ್ತಾಧಿಕರಣ (ಹಿಂಸೆಯ ಉಪಕರಣಗಳ ಸಂಯೋಗ), ಉಪಭೋಗ-ಪರಿಭೋಗಾತಿರೇಕ (ಅವಶ್ಯಕತೆಗಿಂತ ಹೆಚ್ಚಿನ ವಿಲಾಸ ಸಾಮಗ್ರಿಗಳನ್ನು ಕೂಡ ಹಾಕುವುದು) ಇವು ಅನರ್ಥದಂಡ ವ್ರತದ ಅತಿಚಾರಗಳಾಗಿವೆ ಇವುಗಳ ನಿವಾರಣೆಯನ್ನು ಮಾಡಲಿಕ್ಕೆ ಬೇಕು ॥ ೨೯ ॥ ಸಾಮಾಯಿಕ—ಶಿಕ್ಷಾವ್ರತಗಳಲ್ಲಿ ಮೊದಲನೆಯ ವ್ರತವು ಸಾಮಾಯಿಕವಾಗಿದೆ ಇದರಿಂದ ಪಾಪಕ್ರಿಯೆಗಳ ಪರಿತ್ಯಾಗ, ನಿಷ್ಪಾಪ ಯೋಗದ ಆಸೇವನ ರೂಪಗಳನ್ನು ತಿಳಿಯಲಿಕ್ಕೆಬೇಕು ॥ ೩೦ ॥ ಸಾಮಾಯಿಕ ಮಾಡುವಾಗ ಶ್ರಾವಕನು ಶ್ರಮಣನ ಸಮಾನನಾಗುತ್ತಾನೆ ಅದಕ್ಕಾಗಿ ಸಾಮಾಯಿಕವು ಅನೇಕ ಸಲ ಮಾಡಲಿಕ್ಕೆ ಯೋಗ್ಯವಾಗಿದೆ. ॥ ೩೧ ॥ ದೇಶಾವಕಾಶಿಕ—ದಿಗ್ವ್ರತದಲ್ಲಿ ವಿವಿಧ ದಿಕ್ಕುಗಳಲ್ಲಿ ಗಮನಾಗಮನದ ಪ್ರಮಾಣವನ್ನು ಸ್ವೀಕಾರ ಮಾಡಿರುತ್ತದೆ ಇದರಲ್ಲಿ ಪ್ರತಿದಿನವೂ ಸ್ವಲ್ಪ ಸ್ವಲ್ಪ ಕಡಿಮೆ ಮಾಡುತ್ತ ಹೋಗುವುದು ಎರಡನೆಯ ಶಿಕ್ಷಾವ್ರತವೆನಿಸುತ್ತದೆ ಈ ವ್ರತದ ಹೆಸರು ದೇಶಾವಕಾಶಿಕವಾಗಿದೆ ಇದನ್ನು ಸರ್ಪವಿಷ ನ್ಯಾಯಕ್ಕೆ ಅನುಸರಿಸಿ, ಹೃದಯದ ಶುದ್ಧಿ ಸಹಿತ ಹಿತಕಾರಿ ಎಂದು ತಿಳಿದು ಪ್ರಯತ್ನಪೂರ್ವಕ ಪಾಲನ ಮಾಡಲಿಕ್ಕೆ ಬೇಕು ॥ ೩೨–೩೩ ॥ [ಸರ್ಪವು ಬೆರಳಿಗೆ ಕಚ್ಚಿದರೆ ಆ ಬೆರಳನ್ನು ಗಟ್ಟಿಯಾಗಿ ಕಟ್ಟಿ ಹಾಕುವರು ಅವಶ್ಯ ಕಂಡರೆ ಕಡಿದೂ ಬಿಡುವುದಕ್ಕೆ ಹಿಂದೆ ಮುಂದೆ ನೋಡುವದಿಲ್ಲ ಇದರ ಉದ್ದೇಶವು ಆ ವಿಷವು ದೇಹದ ಉಳಿದ ಭಾಗದಲ್ಲಿ ಪಸರಿಸಬಾರದೆಂದೇ ಇರುತ್ತದೆ. ಇದೇ ಪ್ರಕಾರ ಅಸಂಯಮ ವೃತ್ತಿಯನ್ನು ಸೀಮಿತಗೊಳಿಸಿ, ಅಧಿಕ ಕರ್ಮಬಂಧದಿಂದ ಉಳಿಯಲಿಕ್ಕೆಬೇಕು. ಇದಕ್ಕೆ ಸರ್ಪ-ವಿಷನ್ಯಾಯವೆನ್ನುವರು ಆನಯನ ಪ್ರಯೋಗ, ಪ್ರೇಷ್ಯ ಪ್ರಯೋಗ, ಶಬ್ದಾನುಪಾತ, ರೂಪಾನುಪಾತ ಮತ್ತು ಪುದ್ಗಲಕ್ಷೇಪ ಇವು ದೇಶಾವಕಾಶಿಕ ವ್ರತಕ್ಕೆ ಅತಿಚಾರಗಳಾಗಿವೆ ಇವುಗಳನ್ನು ನಿವಾರಿಸಲಿಕ್ಕೆಬೇಕು. ॥ ೩೨೦ ॥] ಪ್ರೋಷಧೋಪವಾಸ—ಆಹಾರ ಪ್ರೋಷಧ, ಶರೀರ ಸತ್ಕಾರ ಪ್ರೋಷಧ, ಬ್ರಹ್ಮಚರ್ಯ ಪೋಷಧ ಮತ್ತು ಅವ್ಯಾಪಾರ ಪ್ರೋಷಧ ಇವು ಪ್ರೋಷಧೋಪವಾಸವೆಂಬ ಹೆಸರಿನ ಮೂರನೆಯ ಗುಣ ವ್ರತದ ಪ್ರಕಾರ-ಗಳಾಗಿವೆ ॥ ೩೪ ॥ ಅಪ್ರತ್ಯವೇಕ್ಷಿತ, ದುಷ್ಪ್ರತ್ಯವೇಕ್ಷಿತ ಶಯ್ಯಾ ಮತ್ತು ಸಂಸ್ತರ ಹಾಗೂ ಅಪ್ರಮಾರ್ಜಿತ ಮತ್ತು ದುಷ್ಪ್ರಮಾರ್ಜಿತ ಉಚ್ಚಾರ ಭೂಮಿಗಳನ್ನು ನಿವಾರಣ ಮಾಡಲಿಕ್ಕೆಬೇಕು ಇದೇ ಪ್ರಕಾರ ಈ ಪ್ರೋಷಧೋಪವಾಸ ವ್ರತದಲ್ಲಿ ವಿಧಿಪೂರ್ವಕ ಪ್ರವೃತ್ತನಾಗಿ ಎಲ್ಲ ಆಹಾರಾದಿಗಳನ್ನು ಪ್ರೋಷಧ ಕಾಲದಲ್ಲಿ ಒಳ್ಳೆಯ ರೀತಿಯಿಂದ ತ್ಯಜಿಸಬೇಕು ಹೀಗಾದರೇನೇ ಈ ವ್ರತದ ಅತಿಚಾರದಿಂದ ಉಳಿಯಲಿಕ್ಕೆ ಬರುತ್ತದೆ ॥ ೩೫–೩೬ ॥ ಅತಿಥಿ ಸಂವಿಭಾಗ—ನ್ಯಾಯೋಪಾರ್ಜಿತ ಮತ್ತು ಕಲ್ಪನೀಯ ಅನ್ನಾದಿಗಳನ್ನು ದೇಶ, ಕಾಲ, ಶ್ರದ್ಧೆ, ಸತ್ಕಾರ ಕ್ರಮಗಳಿಗೆ ಅನುಸರಿಸಿ, ಪರಮ ಭಕ್ತಿಯಿಂದ ಆತ್ಮ ಮತ್ತು ಅನುಗ್ರಹ ಬುದ್ಧಿ ಪೂರ್ವಕ ಸಂಯಮಿಗಳಿಗೆ ದಾನಕೊಡುವುದು ಇದಕ್ಕೆ ಜಿನೇಂದ್ರ ಭಗವಾನ್‌ರು ಗೃಹಸ್ಥನ ಅಂತಿಮ ಶಿಕ್ಷಾವ್ರತವಾದ ಅತಿಥಿಸಂವಿಭಾಗವೆಂದು ಹೇಳಿದ್ದಾರೆ ॥ ೩೭–೩೮ ॥ ಈ ಪ್ರಕಾರ ಇಲ್ಲಿ ಶ್ರಮಣೋಪಾಸಕ ಅರ್ಥಾತ್ ಗೃಹಸ್ಥ ಧರ್ಮದಲ್ಲಿ ಅಣುವ್ರತ, ಗುಣವ್ರತ, ಶಿಕ್ಷಾವ್ರತ ಹಾಗೂ ಅವುಗಳಿಗೆ ಸಂಬಂಧಿಸಿದ ಅನ್ಯ ವ್ರತಗಳ ಕಥನ ಮಾಡಲಾಗಿದೆ ॥ ೩೯ ॥ ಪುಷ್ಪದ ಸಂಪರ್ಕದಿಂದ ಎಳ್ಳಿನ ಎಣ್ಣೆಯೂ ಸಹ ಸುಗಂಧದಿಂದ ಕೂಡಿದ್ದಾಗುತ್ತದೆ. ವೀತರಾಗ ಅರ್ಹಂತನು ಇದೇ ಉಪಮೆಯೊಡನೆ ಬೋಧಿ ಅರ್ಥಾತ್ ಜ್ಞಾನದ ಪ್ರರೂಪಣ ಮಾಡಿದ್ದಾನೆ. ಅರ್ಥಾತ್ ಹೂವಿನ ವಾಸನೆಯಿಂದ ಕೂಡಿದ ಎಳ್ಳಿನ ಎಣ್ಣೆಯೂ ಸಹ ಸುಗಂಧಿತವಾಗುವಂತೆ ಜೈನ ಧರ್ಮದ ಅಭ್ಯಾಸದಿಂದ ಜೀವಗಳಲ್ಲಿ ಉತ್ತಮ ಭಾವವು ಉತ್ಪನ್ನವಾಗುತ್ತದೆ. ಇದರ ಫಲಸ್ವರೂಪವಾಗಿ ಸಮ್ಯಗ್‌ಜ್ಞಾನವು ಪ್ರಾಪ್ತವಾಗುತ್ತದೆ. ॥ ೪೦ ॥

—ಹರಿಭದ್ರಸೂರಿಕೃತ ಶ್ರಾವಕಪ್ರಜ್ಞಪ್ತಿ.

## ೩ ಗೃಹಸ್ಥ-ಧರ್ಮ

ಭಾಗ ೨—ಯಾರು ಭವ್ಯ ಜನರಿಗೆ ಸಾಗಾರ ಮತ್ತು ಅನಗಾರ ಧರ್ಮದ ಉಪದೇಶವನ್ನು ಮಾಡಿರು-ವರೋ ಆ ಜಿನೇಂದ್ರ ಭಗವಂತನಿಗೆ ನಮಸ್ಕಾರ ಮಾಡಿ, ಶ್ರಾವಕ ಧರ್ಮದ ಪ್ರರೂಪಣ ಮಾಡುವೆ. ॥ ೧ ॥

ದರ್ಶನ, ವ್ರತ, ಸಾಮಾಯಿಕ, ಪ್ರೋಷಧೋಪವಾಸ, ಸಚಿತ್ತ-ತ್ಯಾಗ, ರಾತ್ರಿಭೋಜನತ್ಯಾಗ, ಬ್ರಹ್ಮಚರ್ಯ, ಆರಂಭ–ತ್ಯಾಗ, ಪರಿಗ್ರಹ–ತ್ಯಾಗ, ಅನುಮತಿ–ತ್ಯಾಗ ಮತ್ತು ಉದ್ದಿಷ್ಟ ಆಹಾರ ತ್ಯಾಗ ಇವು ದೇಶವಿರತ, ಶ್ರಾವಕನ ಹನ್ನೊಂದು ಪ್ರತಿಮೆಗಳು ಅರ್ಥಾತ್ ತರಗತಿಗಳು ಇವೆ ಸಮ್ಯಕ್ತ್ವವಿಲ್ಲದವರಿಗೆ ಈ ಹನ್ನೊಂದು ತರಗತಿಗಳು ಉಂಟಾಗುವದಿಲ್ಲ ಅದಕ್ಕಾಗಿ ನಾನು ಸಮ್ಯಕ್ತ್ವದ ವರ್ಣನೆಯನ್ನು ಮಾಡುತ್ತೇನೆ. ನೀವು ಕೇಳಿರಿ ॥ ೨–೩ ॥ ಆಪ್ತ, ಆಗಮ ಮತ್ತು ತತ್ತ್ವಗಳಲ್ಲಿ ಸಂಶಯ ಮೊದಲಾದ ದೋಷ ರಹಿತ ನಿರ್ಮಲ ಶ್ರದ್ಧೆಯನ್ನು ಇಡುವದಕ್ಕೆ ಸಮ್ಯಕ್ತ್ವವೆಂದು ತಿಳಿಯಬೇಕು ॥ ೪ ॥ ನಿಃಶಂಕಾ, ನಿಷ್ಕಾಂಕ್ಷಾ, ನಿರ್ವಿಚಿಕಿತ್ಸಾ, ಅಮೂಢದೃಷ್ಟಿ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಪ್ರಭಾವನಾ ಇವು ಸಮ್ಯಕ್ತ್ವದ ಎಂಟು ಅಂಗಗಳಾಗಿವೆ. ॥ ೫ ॥ ಸಂವೇಗ ನಿರ್ವೇಗ, ನಿಂದಾ, ಗರ್ಹಾ, ಉಪಶಮ, ಭಕ್ತಿ, ವಾತ್ಸಲ್ಯ, ಅನುಕಂಪಾ— ಇವು ಸಮ್ಯಕ್ತ್ವದ, ಎಂಟು ಗುಣಗಳಾಗಿವೆ ॥ ೬ ॥ ಪದಾರ್ಥಗಳಲ್ಲಿ ಶ್ರದ್ಧೆಯನ್ನು ಇಡುವಂಥವನು ಮೇಲಿನ ಎಂಟು ಗುಣಗಳಿಂದ ಕೂಡಿದ್ದು, ದೃಢಚಿತ್ತನಾಗಿ ಸಮ್ಯಕ್ತ್ವವನ್ನು ಸ್ವೀಕರಿಸಿದಲ್ಲಿ ಅವನು ಸಮ್ಯಕ್‌ದೃಷ್ಟಿ ಎನಿಸುತ್ತಾನೆ. ॥ ೭ ॥ ದರ್ಶನ—ಐದು ಔದುಂಬರ ಮತ್ತು ಏಳು ವ್ಯಸನಗಳನ್ನು ಯಾವ ಸಮ್ಯಕ್ ದೃಷ್ಟಿಯು ತ್ಯಾಗ ಮಾಡುವನೋ ಅವನಿಗೆ ದರ್ಶನ ಶ್ರಾವಕನೆನ್ನುತ್ತಾರೆ ಅರ್ಥಾತ್ ಅವನು ಮೊದಲನೆಯ ಪ್ರತಿಮಾಧಾರಿಯಾಗುತ್ತಾನೆ. ॥ ೮ ॥ ಅತ್ತಿ, ಆಲ, ಬಸರಿ, ಅಂಜೂರ ಮತ್ತು ಬೋರಿ ಈ ಐದು ಫಲಗಳಲ್ಲಿ ಮತ್ತು ಗಿಡಗಳ ಹೂವುಗಳಲ್ಲಿ ಯಾವಾಗಲೂ ತ್ರಸ ಜೀವಿಗಳ ಉತ್ಪತ್ತಿಯಾಗುತ್ತದೆ ಅದರಿಂದ ಇವೆಲ್ಲವೂ ತ್ಯಾಗಮಾಡಲಿಕ್ಕೆ ಯೋಗ್ಯವಾಗಿವೆ. ॥ ೯ ॥ ಜೂಜು, ಮದ್ಯ, ಮಾಂಸ, ವೇಶ್ಯಾ, ಬೇಟೆ, ಕಳವು ಮತ್ತು ಪರಸ್ತ್ರೀ ಇವು ಏಳು ಕೆಟ್ಟ ವ್ಯಸನಗಳು, ಮಾನವನನ್ನು ದುರ್ಗತಿಗೆ ಒಯ್ಯುವಂಥವು ಇವೆ ॥ ೧೦ ॥ ವ್ರತ—ಐದು ಅಣುವ್ರತ, ಗುಣವ್ರತ, ನಾಲ್ಕು ಶಿಕ್ಷಾವ್ರತಗಳನ್ನು ಯಾವನು ಪಾಲಿಸುವನೋ ಅವನು ಎರಡನೆಯ ಪ್ರತಿಮಾಧಾರಿಯು ॥ ೧೧ ॥ ಜೀವಹಿಂಸೆ, ಅಸತ್ಯ, ಕಳವು, ಬ್ರಹ್ಮಚರ್ಯದ ಸ್ಥೂಲರೂಪದ ತ್ಯಾಗ, ಇಚ್ಛೆಗನುಸರಿಸಿ ಪರಿಗ್ರಹ ಪರಿಮಾಣವನ್ನು ಮಾಡುವುದು, ಇವು ಐದು ಅಣುವ್ರತಗಳಾಗಿವೆ ॥ ೧೨ ॥ ಪೂರ್ವ, ಉತ್ತರ, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಯೋಜನದ ಪ್ರಮಾಣಮಾಡಿ ಅದರಿಂದ ಹೊರಗೆ ಹೋಗುವದನ್ನು ತ್ಯಾಗಮಾಡುವುದು ಪ್ರಥಮ ಗುಣವ್ರತವಾಗಿದೆ ಅರ್ಥಾತ್ ದಿಗ್ವ್ರತವಾಗಿದೆ ॥ ೧೩ ॥ ಯಾವ ಪ್ರದೇಶದಲ್ಲಿ ವ್ರತದ ಭಂಗವಾಗುವುದೋ ಆ ದೇಶದಲ್ಲಿ ಹೋಗುವದನ್ನು ನಿಯಮದಿಂದ ತ್ಯಾಗ ಮಾಡುವುದು ಎರಡನೆಯ ಗುಣವ್ರತವಾಗಿದೆ. ಅರ್ಥಾತ್ ದೇಶವ್ರತವಾಗಿದೆ. ॥ ೧೪ ॥ ಧಾತುವಿನ ತುಂಡು, ಖಡ್ಗ, ಕಟ್ಟಿಗೆ (ಬಡಿಗೆ) ಉರುಲು ಮೊದಲಾದವುಗಳನ್ನು ಒದಗಿಸದಿರುವುದು ಹಾಗೂ ಹೆಚ್ಚು ಕಡಿಮೆಯಾಗಿ ತೂಗುವ ತಕ್ಕಡಿ, ಸರಿಯಾಗಿಲ್ಲದ ಮಾಪು, ಕ್ರೂರ ಪ್ರಾಣಿ ಇವುಗಳನ್ನು ಇಡದೆ ಇರುವುದಕ್ಕೆ ಮೂರನೆಯ ಗುಣವ್ರತವೆನ್ನುವರು ಅರ್ಥಾತ್ ಇದು ಅನರ್ಥದಂಡ ತ್ಯಾಗವಾಗಿದೆ. ॥ ೧೫ ॥ ಶರೀರಕ್ಕೆ ಶೋಭೆಯನ್ನು ಕೊಡುವಂಥ ಪದಾರ್ಥ, ತಾಂಬೂಲ, ಸುಗಂಧ ಮತ್ತು ಪುಷ್ಪಮೊದಲಾದವುಗಳ ಪರಿಮಾಣ ಮಾಡುವುದು ಭೋಗವಿರತಿ ಎಂಬ ಹೆಸರಿನ ಮೊದಲನೆಯ ಶಿಕ್ಷಾವ್ರತವಾಗಿದೆ ॥ ೧೬ ॥ ತನ್ನ ಶಕ್ತಿಗೆ ಅನುಸರಿಸಿ ಸ್ತ್ರೀ, ವಸ್ತ್ರ, ಆಭರಣ, ಇವೇ ಮೊದಲಾದವುಗಳ ಪ್ರಮಾಣಮಾಡುವುದು ಉಪಭೋಗ ನಿವೃತ್ತಿ ಎಂಬ ಹೆಸರಿನ ಎರಡನೆಯ ಶಿಕ್ಷಾವ್ರತವಾಗಿದೆ ॥ ೧೭ ॥ ಮನೆಗೆ ಬಂದಂಥ ಅತಿಥಿಗಳಿಗೆ ಯಥೋಚಿತವಾಗಿ ಆಹಾರಾದಿ ದಾನಗಳನ್ನೂ ಕೊಟ್ಟು ಸತ್ಕರಿಸುವುದು ಅತಿಥಿ ಸಂವಿಭಾಗ ಎಂಬ ಹೆಸರಿನ ಮೂರನೆಯ ಶಿಕ್ಷಾವ್ರತವಾಗಿದೆ ತಮ್ಮ ಮನೆಯಲ್ಲಾಗಲಿ, ಜಿನಮಂದಿರದಲ್ಲಾಗಲಿ ಇದ್ದು, ಮೂರು ಪ್ರಕಾರದ ಆಹಾರಗಳನ್ನು ತ್ಯಾಗ ಮಾಡಿ, ಯಾವನು ಗುರುವಿನ ಹತ್ತರ ಒಳ್ಳೆಯ ರೀತಿಯಿಂದ ಮನ, ವಚನ, ಕಾಯಪೂರ್ವಕ ಆಲೋಚನೆಯನ್ನು ಮಾಡುವನೋ ಅವನು ಸಲ್ಲೇಖನ ಎಂಬ ಹೆಸರಿನ ನಾಲ್ಕನೆಯ ಶಿಕ್ಷಾವ್ರತವಾಗಿದೆ ॥ ೧೮–೧೯ ॥ ಸಾಮಾಯಿಕ—ಶುದ್ಧವಾಗಿ ಅರ್ಥಾತ್ ಸ್ನಾನ ಮೊದಲಾದವುಗಳನ್ನು ಮಾಡಿ ತಮ್ಮ ಮನೆಯಲ್ಲಿ ಇಲ್ಲವೆ ಚೈತ್ಯದ ಎದುರಿಗೆ ಪೂರ್ವ ಇಲ್ಲವೆ ಉತ್ತರ ದಿಕ್ಕುಗಳಿಗೆ ಮುಖಮಾಡಿ, ಕಾಯೋತ್ಸರ್ಗ ಮುದ್ರೆಯಿಂದ ಎದ್ದು ನಿಂತು ಯಾವನು ಲಾಭ–ಹಾನಿ ಹಾಗೂ ಶತ್ರು–ಮಿತ್ರರನ್ನು ಸಮತಾಭಾವದಿಂದ ನೋಡುವನೋ–ಮನಸ್ಸಿನಲ್ಲಿ ಪಂಚ ನಮೋಕಾರ ಮಂತ್ರಗಳನ್ನು ಜಪಮಾಡಿ ಸಿದ್ಧರ ಸ್ವರೂಪವನ್ನು ಧ್ಯಾನ ಮಾಡುವನೋ–ವೈರಾಗ್ಯಭಾವ ಸಹಿತ ಧರ್ಮಧ್ಯಾನ ಇಲ್ಲವೆ ಶುಕ್ಲ ಧ್ಯಾನವನ್ನು ಮಾಡುವನೋ– ಈ ಅವಸ್ಥೆಯಲ್ಲಿ ನಿಶ್ಚಲಾಂಗನಾಗಿ ಕ್ಷಣಮಾತ್ರ ನಿಂತರೂ ಅವನು ಉತ್ತಮ ಸಾಮಾಯಿಕ ವ್ರತದ ಧಾರಕನೆನಿಸುತ್ತಾನೆ

॥ ೨೦-೨೨ ॥ ಪ್ರೋಷಧೋಪವಾಸ—ಉತ್ತಮ, ಮಧ್ಯಮ ಮತ್ತು ಜಘನ್ಯ ಹೀಗೆ ಮೂರು ಪ್ರಕಾರದ ಪ್ರೋಷಧ ಉಪವಾಸ ಹೇಳಲಾಗಿದೆ ಒಂದು ತಿಂಗಳಲ್ಲಿ ಬರುವ ನಾಲ್ಕೂ ಪರ್ವಗಳಲ್ಲಿ-ಅರ್ಥಾತ್ ಎರಡೂ ಪಕ್ಷಗಳ ಅಷ್ಟಮಿ ಚತುರ್ದಶಿಗಳಲ್ಲಿ-ತಮ್ಮ ಶಕ್ತಿಗೆ ಅನುಸರಿಸಿ ಉಪವಾಸ ಮಾಡಲಿಕ್ಕೆಬೇಕು ಇದು ಉತ್ತಮ ಪ್ರೋಷಧೋಪವಾಸವಾಗಿದೆ ಉತ್ಕೃಷ್ಟ ಪ್ರೋಷಧೋಪವಾಸದ ವಿಧಿಯೇ ಮಧ್ಯಮ ಪ್ರೋಷಧೋಪವಾಸದ್ದೆಂದು ತಿಳಿಯಬೇಕು ಆದರೆ ಮಧ್ಯಮ ಉಪವಾಸದಲ್ಲಿ ನೀರನ್ನು ಮಾತ್ರ ಸ್ವೀಕರಿಸಲಾಗುತ್ತದೆ ॥ ೨೩-೨೪ ॥ ದೊಡ್ಡ ಆವಶ್ಯಕ ಕಾರ್ಯಗಳನ್ನು ತಿಳಿದು ಪಾಪವು ಸಂಭವಿಸದಂತೆ ಅನಾರಂಭಭಾವದಿಂದಲೇ ತನ್ನ ಕಾರ್ಯಗಳನ್ನೂ ಕೂಡ ಮಾಡುತ್ತ ಉಪವಾಸ ಇರುವಂಥವನು ಜಘನ್ಯ ಪ್ರೋಷಧೋಪವಾಸಿ ಎನಿಸುವನು ॥ ೨೫ ॥ ಸಚಿತ್ತ ತ್ಯಾಗ—ಪತ್ರ, ಅಂಕುರ, ಕಂದ, ಫಲ, ಬೀಜ ಮೊದಲಾದ ಹರಿತ ಪದಾರ್ಥ ಹಾಗೂ ಅಪ್ರಾಸುಕ ಜಲ ಇವುಗಳನ್ನು ತ್ಯಾಗಮಾಡುವುದು ಸಚಿತ್ತ-ತ್ಯಾಗ ಪ್ರತಿಮೆಯಾಗಿದೆ ॥ ೨೬ ॥ ಹಗಲು ಬ್ರಹ್ಮಚರ್ಯ ಹಾಗೂ ರಾತ್ರಿ-ಯೂಟ—ಮನ, ವಚನ, ಕಾಯ ಮತ್ತು ಕೃತ, ಕಾರಿತ, ಅನುಮೋದನ ಹೀಗೆ ಒಂಬತ್ತು ರೀತಿಯಿಂದಲೂ ಹಗಲಿನಲ್ಲಿ ಮೈಥುನದ ತ್ಯಾಗವನ್ನು ಯಾವನು ಮಾಡುವನೋ ಅವನು ಆರನೆಯ ಪ್ರತಿಮಾಧಾರಿ ಎನಿಸುತ್ತಾನೆ. ॥ ೨೭ ॥ ಯಾವನು ರಾತ್ರಿಯಲ್ಲಿ ಊಟ ಮಾಡುವನೋ ಅವನು ಹನ್ನೊಂದು ಪ್ರತಿಮೆಗಳಲ್ಲಿ ಒಂದನೆಯ ಪ್ರತಿಮಾಧಾರಿ ಶ್ರಾವಕನೂ ಕೂಡ ಆಗಲಾರನು. ಅದಕ್ಕಾಗಿ ರಾತ್ರಿ ಭೋಜನವನ್ನು ನಿಯಮದಿಂದ ತ್ಯಾಗಮಾಡಲಿಕ್ಕೆಬೇಕು ॥ ೨೮ ॥ ಇರುಳು ಹೊತ್ತಿನಲ್ಲಿ ತೊಗಲು, ಎಲುವು, ಹುಳ, ಇಲಿ, ಹಾವು ಮೊದಲಾದವುಗಳು ಅನ್ನದಲ್ಲಿ ಬೀಳುತ್ತವೆ ಅವು ಕಾಣಿಸುವದಿಲ್ಲ. ಅವನ್ನೆಲ್ಲ ನಾವು ತಿಂದು ಬಿಡುತ್ತೇವೆ. ॥ ೨೯ ॥ ಈ ಪ್ರಕಾರ ರಾತ್ರಿ ಭೋಜನದಲ್ಲಿ ಬಹಳಷ್ಟು ದೋಷಗಳಿವೆ ಇವನ್ನು ಅರಿತು ಮನ, ವಚನ, ಕಾಯದಿಂದ ರಾತ್ರಿ ಬೋಜನದ ತ್ಯಾಗವನ್ನು ಮಾಡಲಿಕ್ಕೆಬೇಕು ॥ ೩೦ ॥ ಬ್ರಹ್ಮಚರ್ಯ—ಈ ಮೊದಲು ಹೇಳಿದ ಒಂಬತ್ತು ಪ್ರಕಾರದ ಮೈಥುನವನ್ನು ತ್ಯಜಿಸಿ, ಸ್ತ್ರೀಕಥೆಯನ್ನೂ ಸಹ ತ್ಯಾಗಮಾಡುವಂಥವನು ಏಳನೆಯದಾದ ಬ್ರಹ್ಮಚರ್ಯ ಪ್ರತಿಮಾಧಾರಿ ಎನಿಸುತ್ತಾನೆ. ॥ ೩೧ ॥ ಆತ್ಮತ್ಯಾಗ—ತೀರ ಸ್ವಲ್ಪ ಸಹ ಆರಂಭವಾಗುವಂಥ-ಮನೆತನಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಯಾವಾಗಲೂ ಪರಿತ್ಯಾಗ ಮಾಡುವವನು ಆರಂಭ-ತ್ಯಾಗ ಪ್ರತಿಮಾಧಾರಿ ಎನಿಸುತ್ತಾನೆ ॥ ೩೨ ॥ ಪರಿಗ್ರಹ-ತ್ಯಾಗ—ವಸ್ತ್ರ-ಮಾತ್ರ ಪರಿಗ್ರಹವನ್ನು ಇಟ್ಟುಕೊಂಡು ಉಳಿದೆಲ್ಲ ಪರಿಗ್ರಹವನ್ನು ತ್ಯಾಗಮಾಡಿ, ಇದ್ದ ಪರಿಗ್ರಹ-ದಲ್ಲಿಯೂ ಮಮತ್ವವನ್ನು ತ್ಯಾಗಮಾಡುವುದು ಒಂಬತ್ತನೆಯ ಪ್ರತಿಮೆಯ ಶ್ರಾವಕನ ಲಕ್ಷಣವಾಗಿದೆ ॥ ೩೩ ॥ ಅನುಮತಿ ತ್ಯಾಗ-ತನ್ನ ಹಾಗೂ ಅನ್ಯರ ಮನೆತನಗಳಿಗೆ ಸಂಬಂಧಿಸಿದ ಕಾರ್ಯಗಳಿಗೆ ಯಾವನು ಅನುಮೋದನವನ್ನು ಕೊಡುವದಿಲ್ಲವೋ-ಆ ಕಾರ್ಯಗಳನ್ನು ಮಾಡಲಿಕ್ಕೆ ಅನುಮತಿಯನ್ನು ಕೊಡುವದಿಲ್ಲವೋ-ಅವನು ಹತ್ತನೆಯ ಪ್ರತಿಮಾಧಾರಿ ಶ್ರಾವಕನೆನಿಸುತ್ತಾನೆ ॥ ೩೪ ॥ ಉದ್ದಿಷ್ಟತ್ಯಾಗ—ಹನ್ನೊಂದನೆಯ ಪ್ರತಿಮೆಯ ಶ್ರಾವಕನು ಉತ್ಕೃಷ್ಟ ಶ್ರಾವಕನೆನಿಸುತ್ತಾನೆ ಇಂದವರಲ್ಲಿ ಎರಡು ಭೇದಗಳಿವೆ—ಮೊದಲನೆಯವನು ಒಂದು ವಸ್ತ್ರವನ್ನು ಇಟ್ಟುಕೊಳ್ಳುವಂಥವನು, ಎರಡನೆಯವನು ಕೌಪೀನವನ್ನು ಮಾತ್ರ ಧರಿಸುವಂಥವನು. ॥ ೩೫ ॥ ಮೊದಲನೆಯ ತರಗತಿಯವನು ತನ್ನ ಕೂದಲುಗಳನ್ನು ಕತ್ತಿ ಹಾಗೂ ಕತ್ತರಿಗಳಿಂದ ತೆಗೆದುಕೊಳ್ಳುತ್ತಾನೆ ಅಲ್ಲದೆ ಪ್ರಯತ್ನ ಪೂರ್ವಕವಾಗಿ ತನ್ನ ಉಪಕರಣ ಮೊದಲಾದವುಗಳನ್ನು ಸ್ವಚ್ಛಮಾಡಿಕೊಳ್ಳುತ್ತಾನೆ ಕೈಯಲ್ಲಿ ಹಾಗೂ ಪಾತ್ರೆಯಲ್ಲಿ ಊಟ ಮಾಡುತ್ತಾನೆ ಮೇಲಾಗಿ ನಾಲ್ಕೂ ಪರ್ವಗಳಲ್ಲಿ ನಿಯಮ ಸಹಿತ ಉಪವಾಸವನ್ನು ಮಾಡುತ್ತಾನೆ ॥ ೩೬-೩೭ ॥ ಎರಡನೆಯ ತರಗತಿಯವನ ಕ್ರಿಯೆಗಳೂ ಸಹ ಇವೇ ಆಗಿವೆ ಆದರೆ ಭೇದವಿಷ್ಟೇ ಇದೆ—ಅವನು ನಿಯಮದಿಂದ ಕೇಶವಲೋಚಮಾಡಿಕೊಳ್ಳುವನು ಪಿಂಛಿಯನ್ನೂ ಇಟ್ಟುಕೊಳ್ಳುವನು, ಕರಪಾತ್ರದಲ್ಲಿ ಊಟವನ್ನು ಮಾಡುವನು ॥ ೩೮ ॥

—ವಸುನಂದಿಕೃತ ಶ್ರಾವಕಾಚಾರ

## ೪. ಮುನಿಧರ್ಮ

ಭಾಗ ೧.—ಯಾರ ಆತ್ಮವು ಸಂಯಮದಲ್ಲಿ ಸುಸ್ಥಿರವಾಗಿದೆಯೋ, ಯಾರು ಸಾಂಸಾರಿಕ ವಾಸನೆ ಮತ್ತು ಆಂತರಿಕ ಹಾಗೂ ಬಾಹ್ಯ ಪರಿಗ್ರಹಗಳಿಂದ ಮುಕ್ತನಾಗಿರುವನೋ, ಯಾರು, ತನ್ನ ಹಾಗೂ ಅನ್ಯರ ಆತ್ಮಗಳನ್ನು

ಕುಮಾರ್ಗದಿಂದ ಉಳಿಸುವರೋ, ಯಾರು ಷಟ್ಕಾಯ ಜೀವಗಳ ರಕ್ಷಕರಿರುವರೋ, ಯಾರು ಆಂತರಿಕ ಗ್ರಂಥಿಯಿಂದ ರಹಿತರಾಗಿರುವರೋ ಆ ಮಹರ್ಷಿಗಳಿಗಾಗಿ ಇವು ಅನಾಚರಣೀಯವಾಗಿವೆ–॥ ೧ ॥ ಔದ್ದೇಶಿಕ (ಅವನಿಗಾಗಿ ಸಿದ್ಧ ಮಾಡಿದ ಊಟ), ಕ್ರೀತಕೃತ (ಸಾಧುಗಳಿಗೆಂದೇ ಕೊಂಡ ತಂದ ಆಹಾರ), ನಿತ್ಯಕ (ಯಾವಾಗಲೂ ಒಂದೇ ಮನೆಯ ಊಟ), ಅಭಿಕೃತ (ದೂರಿನಿಂದ ತಂದ ಊಟ), ರಾತ್ರಿಭುಕ್ತಿ, ಸ್ನಾನ, ಚಂದನಾದಿ ಸುಗಂದಿತ ಪದಾರ್ಥ, ಪುಷ್ಪ ಮಾಲಾ, ಗಾಳಿಯನ್ನು ಬೀಸಿಕೊಳ್ಳುವಿಕೆ ॥ ೨ ॥ ಸಂನಿಧಿ (ಕೂಡಹಾಕಿದ ಆಹಾರ ಹಾಗೂ ಇತರ ಪದಾರ್ಥ), ಗೃಹೀಮಾತ್ರ (ಗೃಹಸ್ಥರಿಗೆ ಯೋಗ್ಯವಾದ ಸಾಮಗ್ರಿ), ರಾಜಪಿಂಡ (ರಾಜನಲ್ಲಿಯ ಆಹಾರ), ಕಿಮಿಚ್ಛಕ (ಬೇಕಾದುದನ್ನು ಒಯ್ಯಿರಿ ಎಂದಿರುವ ದಾನ ಶಾಲೆಯಿಂದ ತಂದ ಊಟ), ಸಂವಾಹನ (ಎಣ್ಣೆ ಮೊದಲಾದವುಗಳನ್ನು ಹಚ್ಚಿಕೊಳ್ಳುವದು), ದಂತಪ್ರಧಾವನ (ಹಲ್ಲುಗಳನ್ನು ತಿಕ್ಕಿಕೊಳ್ಳುವುದು,) ಸಂಪ್ರಶ್ನೆ (ಕೌತುಕವಾಗಿ ಪ್ರಶ್ನೆ ಕೇಳುವುದು ), ದೇಹ ಪ್ರಲೋಕನ (ಕನ್ನಡಿಯಲ್ಲಿ ತನ್ನ ದೇಹ ಸೌಂದರ್ಯವನ್ನು ನೋಡುವುದು), ॥ ೩ ॥ ಅಷ್ಟಾಪದ (ಜೂಜನ್ನಾಡುವದು), ನಾಲಿಕಾ (ಲೆತ್ತಮೊದಲಾದ ಆಟಗಳನ್ನು ಆಡುವದು), ಛತ್ರವನ್ನು ಧರಿಸುವುದು, ಚಿಕಿತ್ಸಾ (ಹಿಂಸೆಯಾಗುವ ಔಷಧೋಪಚಾರಗಳನ್ನು ಮಾಡುವದು,) ಕಾಲಲ್ಲಿ ತೊಗಲಿನ ಜೋಡುಗಳನ್ನು ಹಾಕಿಕೊಳ್ಳುವುದ), ಬೆಂಕಿಯನ್ನು ಉರಿಸುವುದು ॥ ೪ ॥ ಶಯ್ಯಾಕರ ಪಿಂಡ (ನಿಲ್ಲಲಿಕ್ಕೆ ಆಶ್ರಯವಿತ್ತವರಲ್ಲಿಯೇ ಊಟಮಾಡುವುದು, ಆಸಂದೀ ಪರ್ಯಂಕ (ಕುರ್ಚಿ, ಪಲಂಗಗಳ ಉಪಯೋಗ), ಗೃಹಾಂತರ ನಿಷದ್ಯಾ (ಮನೆಯ ನಡುವೆ ಕೂಡುವುದು), ಶರೀರದ ಉದ್ವರ್ತನ ಮಾಡುವುದು (ಸ್ನಾನಕ್ಕೂ ಮೊದಲು ಮೈಗೆ ಹಚ್ಚಿಕೊಳ್ಳುವ ಎಣ್ಣೆ ಮೊದಲಾದವುಗಳನ್ನು ಹಚ್ಚಿಕೊಳ್ಳುವುದು ) ॥ ೫ ॥ ಗೃಹಸ್ಥ–ವೈಯಾವೃತ್ಯ (ಗಹೃಸ್ಥನ ಸೇವೆ ಮಾಡುವದು), ಆಜೀವ–ವೃತ್ತಿ (ಪ್ರತಿ, ಫಲ ತಕ್ಕೊಂಡು ಕೆಲಸ ಮಾಡುವುದು), ತಪ್ತಾನಿವೃತಭೋಜಿತ್ವ (ಸಚಿತ್ತ ಜಲವನ್ನು ಸ್ವೀಕರಿಸುವುದು), ಆತುರಸ್ಮರಣ (ರೋಗ, ಹಸಿವುಗಳಂಥ ಪೀಡೆಯು ಉತ್ಪನ್ನವಾದಾಗ ತನ್ನ ಪ್ರಿಯ ಜನರನ್ನು ನೆನೆಯುವುದು, ಅನ್ಯರಿಗೆ ಶರಣು ಹೋಗುವುದು, ಒಳ್ಳೆಯ ಆಹಾರದ ನೆನಪುಮಾಡುವುದು) ॥ ೬ ॥ ಸಚಿತ್ತ ಮೂಲಂಗಿ, ಸಚಿತ್ತ ಶುಂಠಿ, ಉಳ್ಳೇಗಡ್ಡಿ, ಬೆಳ್ಳುಳ್ಳಿ, ಗಡ್ಡೆಗೆಣಸುಗಳು, ಸಚಿತ್ತ ಫಲ, ಸಚಿತ್ತ ಬೀಜ ॥ ೭ ॥ ಮಣ್ಣುಪ್ಪು, ಸೈಂಧವ ಲವಣ, ಸಮುದ್ರದ ಉಪ್ಪು, ರೋಮ ದೇಶದ ಉಪ್ಪು, ಇನ್ನುಳಿದ ಉಪ್ಪುಗಳು, ಹಪ್ಪಳ ಖಾರ ಇತ್ಯಾದಿ ಸಚಿತ್ತ ಪದಾರ್ಥಗಳು ॥ ೮ ॥ ಧೂಪನ (ಹೊಗೆಬತ್ತಿ ಸೇದುವದು), ವಮನ (ಔಷಧ ಕೊಟ್ಟು ಕಾರಿಕೊಳ್ಳಲಿಕ್ಕೆ ಹಚ್ಚುವದು), ಬಸ್ತಿಕರ್ಮ (ಗುದದ ದ್ವಾರದಿಂದ ನೀರು ಮೊದಲಾದವುಗಳನ್ನು ಏರಿಸಿಕೊಂಡು ಹೊಟ್ಟೆಯನ್ನು ಸ್ವಚ್ಛಮಾಡಿಸಿ-ಕೊಳ್ಳುವಿಕೆ), ವಿರೇಚನ (ಹೊಟ್ಟೆ ತೊಳೆಯುವದಕ್ಕೆ ಜುಲಾಬು ತಕ್ಕೊಳ್ಳುವದು), ಕಣ್ಣಿನ ಶೋಭೆ ಹೆಚ್ಚಾಗಲೆಂದು ಅಂಜನ ಮೊದಲಾದವುಗಳನ್ನು ಹಚ್ಚಿಕೊಳ್ಳುವುದು, ಹಲ್ಲುಗಳಿಗೆ ಬಣ್ಣ ಹಚ್ಚಿಕೊಳ್ಳುವುದು, ಗಾತ್ರಾಭ್ಯಂಗ ವಿಭೂಷಣ (ಮೈಗೆ ಎಣ್ಣೆ ಹಚ್ಚಿ ತಿಕ್ಕಿಕೊಳ್ಳುವುದು, ಸಿಂಗರಿಸಿಕೊಳ್ಳುವುದು) ॥ ೯ ॥ ಸಂಯಮದಿಂದ ಕೂಡಿದ ಮತ್ತು ದ್ರವ್ಯ (ಉಪಕರಣ) ಹಾಗೂ ಭಾವ (ಕ್ರೋಧಾದಿ ಕಷಾಯ) ಗಳಿಂದ ಹಗುರಾಗಿ ವಿಹಾರ ಮಾಡುತ್ತಿರುವ ನಿರ್ಗ್ರಂಥ ಮುನಿಗಳ ಸಲುವಾಗಿ ಮೇಲೆ ಹೇಳಿದ ಈ ಐವತ್ತೆರಡು ಪ್ರಕಾರದ ಕ್ರಿಯೆಗಳು ಆಚರಿಸಲಿಕ್ಕೆ ಅಯೋಗ್ಯವಾಗಿವೆ. ॥ ೧೦ ॥ ಐದು (ಇಂದ್ರಿಯ) ಆಸ್ರವ ದ್ವಾರಗಳನ್ನು ತ್ಯಜಿಸಿದವನು, ಮನ, ವಚನ, ಕಾಯ ಈ ಮೂರು ಗುಪ್ತಿಗಳಿಂದ ಗುಪ್ತ (ಸುರಕ್ಷಿತ), ಷಟ್‌ಕಾಯ ಜೀವಗಳ ಪ್ರತಿಪಾಲಕ (ರಕ್ಷಕ), ಪಂಚೇಂದ್ರಿಯಗಳನ್ನು ದಮನ ಮಾಡುವಂಥವನು, ಧೀರ ಹಾಗೂ ಸರಳ ಸ್ವಭಾವಿಯಾದವನು ನಿರ್ಗ್ರಂಥ ಮುನಿಯೆನಿಸುವನು ॥ ೧೧ ॥ ಸಮಾಧಿಯಿಂದ ಕೂಡಿದ ಸಂಯಮಿಯು ಗ್ರೀಷ್ಮ ಋತುವಿನಲ್ಲಿ ಉಗ್ರವಾದ ಬಿಸಿಲನ್ನು ಸಹನಮಾಡುತ್ತಾನೆ. ಹೇಮಂತ ಋತುವಿನಲ್ಲಿ ವಸ್ತ್ರವಿಲ್ಲದೆ ಚಳಿಯನ್ನು ಸಹಿಸುತ್ತಾನೆ ಮಳೆಗಾಲದಲ್ಲಿ ಮಾತ್ರ ತಮ್ಮ ಸ್ಥಾನದಲ್ಲಿಯೇ ಅಂಗೋಪಾಂಗಗಳನ್ನು ಸಂವರಣ ಮಾಡಿಕೊಂಡು ಕುಳಿತಿರುತ್ತಾನೆ ॥ ೧೨ ॥ (ಅಕಸ್ಮಾತ್ತಾಗಿ ಬರುವಂಥ) ಸಂಕಟ ರೂಪೀ ಶತ್ರುಗಳನ್ನು ದಮನ ಮಾಡುವಂಥವನು, ಮೋಹವನ್ನು ದೂರಮಾಡುವಂಥವನು, ಜಿತೇಂದ್ರಿಯನಾದಂಥ ಮಹರ್ಷಿಯು ಸರ್ವ ದುಃಖ-ಗಳನ್ನು ನಾಶಮಾಡುವದಕ್ಕಾಗಿ ಸಂಯಮ ಅರ್ಥಾತ್ ತಪದಲ್ಲಿ ಪ್ರವೃತ್ತನಾಗುತ್ತಾನೆ. ॥ ೧೩ ॥ ಇಂಥವರಲ್ಲಿ ಬಹಳಷ್ಟು ಸಾಧುಗಳಾದ ಮಹಾತ್ಮರು ಕಠಿಣವಾದ ತಪಸ್ಸನ್ನು ಮಾಡಿ, ಅನೇಕ ಅಸಹ್ಯ ಕಷ್ಟಗಳನ್ನು ಸಹಿಸಿ, ದೇವಲೋಕದಲ್ಲಿ ಹೋಗುತ್ತಾರೆ. ಕರ್ಮರೂಪದ ಮಲದಿಂದ ಬಹಳಷ್ಟು ಮುಕ್ತರಾಗಿ ಬಿಡುತ್ತಾರೆ. ಸಂಪೂರ್ಣ ಕರ್ಮವನ್ನು ನಷ್ಟಗೊಳಿಸಿ ಸಿದ್ಧ ಪರಮಾತ್ಮರೂ ಆಗುತ್ತಾರೆ, ॥ ೧೪ ॥ ದೇವಗತಿಯಲ್ಲಿ ಹೋದ ಸಂಯಮಿ

ಪುರುಷರು ತಿರುಗಿ ಮರ್ತ್ಯಲೋಕದಲ್ಲಿ ಬಂದು, ಷಟ್‌ಕಾಯ ಜೀವಗಳ ಸಂರಕ್ಷಕರಾಗಿ, ಸಂಯಮ ಹಾಗೂ ಹಾಗೂ ತಪಶ್ಚರ್ಯಗಳಿಂದ ಪೂರ್ವ ಸಂಚಿತ ಸಮಸ್ತ ಕರ್ಮಗಳನ್ನು ಕ್ಷಯಗೊಳಿಸಿ, ಸಿದ್ಧ ಮಾರ್ಗದ ಆರಾಧನೆಯನ್ನು ಮಾಡುತ್ತಾರೆ. ಕ್ರಮದಿಂದ ನಿರ್ವಾಣವನ್ನು ಹೊಂದುತ್ತಾರೆ. ॥ ೧೫ ॥

—ದಶವೈಕಾಲಿಕ ಸೂತ್ರ ೩

## ೫. ಮುನಿಧರ್ಮ

ಭಾಗ ೨—ಮೂಲಗುಣಗಳ ಪಾಲನೆಯಿಂದ ನಿರ್ಮಲರಾದ ಎಲ್ಲ ಸಂಯಮಿಗಳಿಗೆ ವಂದಿಸಿ, ಈ ಲೋಕ ಮತ್ತು ಪರಲೋಕಗಳಿಗೆ ಹಿತಕಾರಿಯಾದಂಥ ಮೂಲಗುಣಗಳನ್ನು ಹೇಳುವೆ ॥ ೧ ॥ ಜಿನೇಂದ್ರ ಭಗವಂತನಿಂದ ನಿರ್ದಿಷ್ಟಗೊಳಿಸಿದ ಐದು ಮಹಾವ್ರತ, ಐದು ಸಮಿತಿಗಳು, ಪಂಚೇಂದ್ರಿಯ ನಿರೋಧ, ಆರು ಆವಶ್ಯಕಗಳು, ಲೋಚ, ಆಚೇಲಕ್ಯ, ಅಸ್ನಾನ, ಪೃಥಿವೀಶಯನ, ಅದಂತಘರ್ಷಣ, ಸ್ಥಿತಿಭೋಜನ ಮತ್ತು ಏಕಭುಕ್ತ ಇವೇ ಜೈನ ಸಾಧುಗಳ ಇಪ್ಪತ್ತೆಂಟು ಮೂಲಗುಣಗಳಾಗಿವೆ. ॥ ೨–೩ ॥ ಐದು ಮಹಾವ್ರತಗಳು—ಹಿಂಸೆಯ ತ್ಯಾಗ, ಸತ್ಯ, ಚೌರ್ಯದ ತ್ಯಾಗ, ಬ್ರಹ್ಮಚರ್ಯ ಮತ್ತು ಪರಿಗ್ರಹದ ತ್ಯಾಗ ಇವು ಐದು ಮಹಾವ್ರತಗಳಾಗಿವೆ. ॥ ೪ ॥ ಅಹಿಂಸಾ—ಕಾಯ, ಇಂದ್ರಿಯ, ಗುಣಸ್ಥಾನ, ಮಾರ್ಗಣಾಸ್ಥಾನ, ಕುಲ, ಆಯು, ಯೋನಿ—ಈ ಎಲ್ಲ ಸ್ಥಾನಗಳಲ್ಲಿ ಸರ್ವ ಜೀವಗಳನ್ನು ತಿಳಿದು, ಏಳುವುದು, ಕೂಡುವುದು, ಮೊದಲಾದ ಕ್ರಿಯೆಗಳಲ್ಲಿ ಹಿಂಸೆಯನ್ನು ತ್ಯಜಿಸುವುದು ಅಹಿಂಸಾ ಮಹಾವ್ರತವಾಗಿದೆ ॥ ೫ ॥ ಸತ್ಯ—ರಾಗ, ದ್ವೇಷ, ಮೋಹಾದಿ ಕಾರಣಗಳಿಂದ ಅಸತ್ಯ ವಚನಗಳನ್ನು ಹಾಗೂ ಅನ್ಯರಿಗೆ ದುಃಖ ಕೊಡುವ ಸತ್ಯ ವಚನಗಳನ್ನು ಮಾತನಾಡದೆ ಇರುವದು, ದ್ವಾದಶಾಂಗ ಶಾಸ್ತ್ರದ ಅರ್ಥ ಹೇಳುವಲ್ಲಿ ಅಯಥಾರ್ಥ ವಚನಗಳನ್ನು ಆಡದಿರುವದು ಸತ್ಯ ಮಹಾವ್ರತವಾಗಿದೆ. ॥ ೬ ॥ ಅಚೌರ್ಯ—ಊರು ದಾರಿ ಮೊದಲಾದವುಗಳಲ್ಲಿ ಬಿದ್ದ, ಮರೆತ, ಇಟ್ಟು ಹೋದ ಪದಾರ್ಥಗಳು ಅವು ಕಡಿಮೆ ಇರಲಿ ಹೆಚ್ಚಿರಲಿ ಅವುಗಳನ್ನು ಸ್ವೀಕರಿಸಕೂಡದು ಹಾಗೆಯೇ ಇನ್ನೊಬ್ಬರಿಂದ ಸಂಚಿತ ಪರದ್ರವ್ಯಗಳನ್ನೂ ಸ್ವೀಕರಿಸಬಾರದು ಇದು ಅದತ್ತ ತ್ಯಾಗ ಅರ್ಥಾತ್ ಅಚೌರ್ಯ ಮಹಾವ್ರತವಾಗಿದೆ ॥ ೭ ॥ ಬ್ರಹ್ಮಚರ್ಯ—ಮುದುಕಿ, ಕುಮಾರಿ ಮತ್ತು ತರುಣಿ ಇವರನ್ನು ಇಲ್ಲವೆ ಅವರ ಚಿತ್ರಗಳನ್ನು ನೋಡಿ, ಅವರನ್ನು ತಾಯಿ, ಮಗಳು, ತಂಗಿ ಎಂದು ತಿಳಿದು ಅವರಿಗೆ ಸಂಬಂಧಿಸಿದ ಕಥೆ, ಮೃದುವಚನ, ಸ್ಪರ್ಶ, ರೂಪವನ್ನು ನೋಡುವುದು, ಮೊದಲಾದ ರಾಗ ಕ್ರಿಯೆಗಳನ್ನು ಪರಿತ್ಯಜಿಸುವುದು ಈ ಮೂರೂ ಲೋಕದಲ್ಲಿ ಪೂಜ್ಯವಾದಂಥ ಬ್ರಹ್ಮಚರ್ಯ ಮಹಾವ್ರತವಾಗಿದೆ ॥ ೮ ॥ ಅಪರಿಗ್ರಹ—ಜೀವವನ್ನು ಆಶ್ರಯಿಸಿದ ರಾಗ-ದ್ವೇಷಾದಿ ಅಂತರಂಗ ಪರಿಗ್ರಹ, ಜೀವಕ್ಕೆ ಕಟ್ಟಿದಂಥ ಧನಧಾನ್ಯಾದಿ ಅಚೇತನ ಪರಿಗ್ರಹ, ಜೀವದಿಂದ ಉತ್ಪತ್ತಿಯಾಗುವಂಥ ಮುತ್ತು, ಶಂಖ, ಹಲ್ಲು ಇತ್ಯಾದಿಗಳನ್ನು ತ್ಯಜಿಸುವುದು, ಇವುಗಳ ಸ್ವಚ್ಛತೆಗಾಗಿ ಇರುವ ಅಲ್ಲದೆ ಇತರ ಉಪಕರಣಗಳಲ್ಲಿ ಮಮತ್ವವನ್ನು ಇಡದೆ ಇರುವುದು. ಸಂಯಮ, ಜ್ಞಾನ, ಶೌಚ ಇವುಗಳಿಗೆ ಪೋಷಕವಾದ ಉಪಕರಣಗಳಲ್ಲಿಯೂ ಸಹ ಮಮತ್ವವನ್ನು ಇಡದೆ ಇರುವುದು, ಇದಕ್ಕೆ ಅಸಂಗ ಅರ್ಥಾತ್ ಪರಿಗ್ರಹ ತ್ಯಾಗ ಮಹಾವ್ರತವೆನ್ನುವರು. ॥ ೯ ॥ ಐದು ಸಮಿತಿಗಳು—ಈರ್ಯಾಸಮಿತಿ (ಗಮನಾಗಮನದ ಎಚ್ಚರಿಕೆ), ಭಾಷಾ ಸಮಿತಿ, ಏಷಣಾ ಸಮಿತಿ (ಆಹಾರದಲ್ಲಿ ಎಚ್ಚರ), ಆದಾನ ನಿಕ್ಷೇಪಣ ಸಮಿತಿ (ಉಪಕರಣ ಎತ್ತಿಡುವುದರಲ್ಲಿ ಎಚ್ಚರಿಕೆ), ಮೂತ್ರ ವಿಷ್ಠಾದಿಗಳನ್ನು ಶುದ್ಧ ಭೂಮಿಯಲ್ಲಿ ಪ್ರತಿಷ್ಠಾಪನಾ ಸಮಿತಿ—ಇವು ಐದು ಸಮಿತಿಗಳಾಗಿವೆ. ॥ ೧೦ ॥ ಈರ್ಯಾ—ಜೀವಗಳು ಇಲ್ಲದಿರುವ ಮಾರ್ಗದಿಂದ ಹಗಲು ನಾಲ್ಕು ಮೊಳದಷ್ಟು ಮುಂದೆ ನೋಡಿ, ಕಾರ್ಯಕ್ಕಾಗಿ ಮಾತ್ರ ಪ್ರಾಣಿಗಳಿಗೆ ಪೀಡೆಯನ್ನು ಕೊಡದಂತೆ ನಡೆಯುವುದು ಈರ್ಯಾ ಸಮಿತಿಯಾಗಿದೆ ॥ ೧೧ ॥ ಭಾಷಾ—ಸುಳ್ಳು, ದೋಷ ಹೊರಿಸುವ ಪಿಶುನತನ, ವ್ಯರ್ಥ ನಗುವುದು, ಕಠೋರ ವಚನ, ಅನ್ಯರ ದೋಷಗಳನ್ನು ಪ್ರಕಟಿಮಾಡುವಂಥ ಪರನಿಂದೆ, ತನ್ನ ಪ್ರಶಂಸಾ, ಸ್ತ್ರೀಕಥಾ, ಭೋಜನಕಥಾ, ರಾಜಕಥಾ, ಚೋರಕಥಾ ಇತ್ಯಾದಿ ವಚನಗಳನ್ನು ತ್ಯಜಿಸಿ, ತನ್ನ ಹಾಗೂ ಅನ್ಯರ ಹಿತಕ್ಕಾಗಿ ಮಾತ್ರ ಮಾತುಗಳನ್ನು ಆಡುವುದು ಭಾಷಾ ಸಮಿತಿಯಾಗಿದೆ ॥ ೧೨ ॥ ಏಷಣಾ—ಉದ್ಗಮಾದಿ ನಲವತ್ತಾರು ದೋಷರಹಿತ, ಹಸಿವನ್ನು ಹಿಂಗಿಸುವ, ಧರ್ಮಸಾಧನಕ್ಕೆ ಕಾರಣವಾದ, ಕೃತಕಾರಿತವೇ ಮೊದಲಾದ ಒಂಬತ್ತು ವಿಕಲ್ಪಗಳಿಂದ ವಿಶುದ್ಧ, ತಂಪು-ಬಿಸಿ ಅನ್ನಗಳಲ್ಲಿ ರಾಗ-ದ್ವೇಷ ರಹಿತ ಸಮಭಾವದಿಂದ ಊಟಮಾಡುವುದು ನಿರ್ಮಲ ಏಷಣಾ ಸಮಿತಿಯಾಗಿದೆ. ॥ ೧೩ ॥

ಆದಾನ ನಿಕ್ಷೇಪ—ಜ್ಞಾನದ ಸಾಧನಗಳಾದ ಪುಸ್ತಕ ಮೊದಲಾದ ಉಪಕರಣ ರೂಪ ಜ್ಞಾನೋಪಾಧಿ, ಪಾಪಕ್ರಿಯೆಗಳ ನಿವೃತ್ತಿಗಾಗಿ ಸಂಯಮಕ್ಕೆಂದು ಇಡುವ ಪಿಂಛಿ ಮೊದಲಾದ ಸಂಯಮೋಪಾಧಿ, ಮೂತ್ರವಿಷ್ಠಾ ಮೊದಲಾದ ದೇಹ ಮಲವನ್ನು ಪ್ರಕ್ಷಾಲನ ಮಾಡಿಕೊಳ್ಳುವದಕ್ಕಾಗಿ ಇಡುವ ಶೌಚದ ಉಪಕರಣಗಳಾದ ಕಮಂಡಲು ಮೊದಲಾದ ಶೌಚೋಪಾಧಿ, ಉಳಿದ ಉಪಕರಣರೂಪ ಅನ್ಯೋಪಾಧಿ ಇವುಗಳನ್ನು ಯತ್ನ ಪೂರ್ವಕ ನೋಡಿ, ಶೋಧಿಸಿ ಎತ್ತುವದು ಇಡುವುದು ಇದು ಆದಾನ-ನಿಕ್ಷೇಪಣ ಸಮಿತಿ ಎನಿಸುವದು ॥ ೧೪ ॥ ಪ್ರತಿಷ್ಠಾಪನ—ಅಸಂಯಮಿ ಜನರು ಬರದಂಥ ಏಕಾಂತಸ್ಥಾನ, ಹರಿತಕಾಯ ಮತ್ತು ತ್ರಸಕಾಯ ರಹಿತ ಅಚಿತ್ತಸ್ಥಾನ, ದೂರ, ಮುಚ್ಚಿದ, ತೂತು ಬಿಲಗಳಿಲ್ಲದ, ಜನರು ನಿಂದೆ ವಿರೋಧಗಳನ್ನು ಮಾಡದಂಥ ಸ್ಥಾನದಲ್ಲಿ ಮಲಮೂತ್ರಗಳನ್ನು ವಿಸರ್ಜಿಸಬೇಕು. ಇದಕ್ಕೆ ಪ್ರತಿಷ್ಠಾಪನಾ ಸಮಿತಿ ಎನ್ನುವರು ॥ ೧೫ ॥ ಪಂಚೇಂದ್ರಿಯ ನಿಗ್ರಹ—ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ ಈ ಐದು ಇಂದ್ರಿಯಗಳನ್ನು ಅವುಗಳ ರೂಪ, ಶಬ್ದ, ಗಂಧ, ರಸ, ತಂಪು, ಉಷ್ಣ ಇತ್ಯಾದಿ ಸ್ಪರ್ಶ ಈ ವಿಷಯಗಳಲ್ಲಿ ಯಾವಾಗಲೂ ಸಾಧುಗಳು ಸಂಯಮಿಗಳಾಗಿರಬೇಕು ॥ ೧೬ ॥ ಚಕ್ಷುನಿಗ್ರಹ—ಸಜೀವ ಮತ್ತು ನಿರ್ಜೀವ ಪದಾರ್ಥಗಳ ಗೀತ ನೃತ್ಯಾದಿಗಳ ಕ್ರಿಯಾಭೇದ, ಸಮಚತುರಸ್ರಾದಿ ಸಂಸ್ಥಾನ ಭೇದ, ಕೆಂಪು ಕಪ್ಪುಗಳೆಂಬ ವರ್ಣಭೇದ, ಈ ಪ್ರಕಾರ ಸುಂದರ ಕುರೂಪ ಇತ್ಯಾದಿ ಭೇದಗಳಲ್ಲಿ ರಾಗ-ದ್ವೇಷಾದಿ ಭಾವನೆಗಳನ್ನು ನಿರೋಧಿಸುವುದು ಮುನಿಗಳ ಚಕ್ಷುನಿರೋಧ ವ್ರತವೆನಿಸುತ್ತದೆ ॥ ೧೭ ॥ ಶ್ರೋತ್ರನಿರೋಧ—ಷಡ್ಜ, ಋಷಭ, ಗಾಂಧಾರ ಮೊದಲಾದ ಸ್ವರರೂಪ ಜೀವ ಶಬ್ದ ಮತ್ತು ವೀಣೆ ಮೊದಲಾದವುಗಳಿಂದ ಉತ್ಪನ್ನವಾಗುವ ಅಜೀವ ಶಬ್ದ, ಈ ಎರಡೂ ಪ್ರಕಾರದ ಶಬ್ದಗಳು ರಾಗಾದಿಗಳಿಗೆ ನಿಮಿತ್ತ ಕಾರಣವಾಗಿವೆ ಅದಕ್ಕಾಗಿ ಇವುಗಳನ್ನು ಕೇಳಕೂಡದು. ಇದು ಶ್ರೋತ್ರ ನಿರೋಧವಾಗಿದೆ. ॥ ೧೮ ॥ ಘ್ರಾಣನಿರೋಧ—ಸ್ವಾಭಾವಿಕವಾಗಿ ಸುಗಂಧವಾಗಿರುವ ಹಾಗೂ ಅನ್ಯ ಸುಗಂಧ ದ್ರವ್ಯದಿಂದ ಸಂಸ್ಕಾರ ಹೊಂದಿದ ಸುಗಂಧಾದಿ ಸ್ವರೂಪ, ಇಂಥ ಸುಖ-ದುಃಖಗಳಿಗೆ ಕಾರಣವಾದ ಜೀವ ಅಜೀವ ಸ್ವರೂಪ ಪುಷ್ಪ, ಚಂದನ ಮೊದಲಾದ ದ್ರವ್ಯಗಳಲ್ಲಿ ರಾಗ-ದ್ವೇಷಗಳನ್ನು ಇಡಕೂಡದು ಇದು ಮುನಿಗಳ ಘ್ರಾಣ ನಿರೋಧವಾಗಿದೆ ॥ ೧೯ ॥ ಜಿಹ್ವಾನಿರೋಧ—ಅನ್ನ ಮೊದಲಾದ ಆಹಾರ, ಹಾಲು ಮೊದಲಾದ ಪೇಯಗಳು, ಉಂಡಿ ಮೊದಲಾದ ತಿನ್ನುವ ಪದಾರ್ಥಗಳು, ಯಾಲಕ್ಕಿಯಂಥ ಬಾಯಾಡಿಸುವ ವಸ್ತುಗಳು, ಇವು ನಾಲ್ಕು ಪ್ರಕಾರದವುಗಳಲ್ಲದೆ ಖಾರ, ಕಹಿ, ಹುಳಿ, ಒಗರು, ಮಧುರ ಈ ಐದು ರಸರೂಪ ಆಹಾರಗಳನ್ನು ದಾತೃಗಳು ಕೊಟ್ಟಲ್ಲಿ ಆಕಾಂಕ್ಷಾ ರಹಿತ ಪರಿಣಾಮದಲ್ಲಿರುವುದು ಜಿಹ್ವಾಜಯ ಎಂಬ ಹೆಸರಿನ ವ್ರತವಾಗಿದೆ. ॥ ೨೦ ॥ ಸ್ಪರ್ಶ ನಿರೋಧ—ಚೈತನ್ಯವುಳ್ಳ ಸ್ತ್ರೀ ಇತ್ಯಾದಿ ಜೀವಗಳಲ್ಲಿಯೂ, ಶಯ್ಯಾ ಮೊದಲಾದ ಅಚೇತನಗಳಲ್ಲಿಯೂ ಉತ್ಪನ್ನವಾದ ಮೃದು, ಕಠಿಣ ಮೊದಲಾದ ಎಂಟು ಪ್ರಕಾರದ ಸುಖರೂಪ ಅಥವಾ ದುಃಖರೂಪ ಸ್ಪರ್ಶದಲ್ಲಿ ಹರ್ಷ ವಿಷಾದಗಳನ್ನು ಹೊಂದದೆ ಇರುವುದು ಸ್ಪರ್ಶನ ಇಂದ್ರಿಯ ನಿರೋಧ ವ್ರತವಾಗಿದೆ ॥ ೨೧ ॥ ಆರು ಆವಶ್ಯಕಗಳು—ಸಾಮಾಯಿಕ ಚತುರ್ವಿಂಶತಿಸ್ತವ, ವಂದನಾ, ಪ್ರತಿಕ್ರಮಣ, ಪ್ರತ್ಯಾಖ್ಯಾನ ಮತ್ತು ಕಾಯೋತ್ಸರ್ಗ ಇವು ಆರು ಆವಶ್ಯಕಗಳನ್ನು ಯಾವಾಗಲೂ ಆಚರಿಸಲಿಕ್ಕೆ ಬೇಕು ॥ ೨೨ ॥ ಸಾಮಾಯಿಕ—ದೇಹವನ್ನು ಧರಿಸಿ ಇರುವಂಥ ಜೀವನ, ಪ್ರಾಣವಿಯೋಗ ರೂಪ ಮರಣ, ಇವೆರಡರಲ್ಲಿಯೂ ಇಚ್ಛಿಸಿದ ವಸ್ತುವು ಲಭಿಸುವುದರಲ್ಲಿಯೂ ಲಭಿಸದೆ ಇರುವುದರಲ್ಲಿಯೂ ಇಷ್ಟಾನಿಷ್ಟದ ಸಂಯೋಗ-ವಿಯೋಗಗಳಲ್ಲಿಯೂ ಸ್ವಜನ ಮಿತ್ರಾದಿಕ ಬಂಧು, ಶತ್ರುದುಷ್ಟಾದಿಕ ವೈರಿ ಇವರಿಬ್ಬರಲ್ಲಿಯೂ ಸುಖ-ದುಃಖಗಳಲ್ಲಿ, ಹಸಿವು ನೀರಡಿಕೆಗಳಲ್ಲ, ಶೀತೋಷ್ಣಗಳ ಬಾಧೆಯಲ್ಲಿ ರಾಗ-ದ್ವೇಷ ರಹಿತನಾಗಿ ಸಮಾನ ಪರಿಣಾಮಿ-ಯಾಗಿರುವುದು ಸಾಮಾಯಿಕವೆನಿಸುತ್ತದೆ ॥ ೨೩ ॥ ಸ್ತವನ—ಋಷಭ, ಅಜಿತ ಮೊದಲಾದ ಇಪ್ಪತ್ನಾಲ್ಕು ತೀರ್ಥಂಕರರ ನಾಮಗಳನ್ನು ಉಚ್ಚರಿಸುವುದು, ಆ ಹೆಸರುಗಳಿಗೆ ಅನುಸರಿಸಿ ಅರ್ಥವನ್ನು ಮಾಡುವುದು, ಅವರ ಅಸಾಧಾರಣ ಗುಣಗಳನ್ನು ಪ್ರಶಂಸಿಸುವುದು, ಅವರ ಪಾದ-ಕಮಲಗಳನ್ನು ಪೂಜಿಸಿ, ಮನ-ವಚನ-ಕಾಯಗಳ ಶುದ್ಧಿಯಿಂದ ಅವರಿಗೆ ವಂದಿಸುವುದು ಇದಕ್ಕ ಚತುರ್ವಿಂಶಸ್ತವವೆಂದು ಹೇಳಲಾಗುವದು ॥ ೨೪ ॥ ವಂದನ—ಅರಹಂತ ಪ್ರತಿಮಾ, ಸಿದ್ಧ ಪ್ರತಿಮಾ, ಅನಶನಾದಿ ಹನ್ನೆರಡು ತಪಗಳಿಗಿಂತಲೂ ಹೆಚ್ಚಿನ, ತಪಗುರು; ಅಂಗಪೂರ್ವಾದಿ ರೂಪ ಆಗಮ ಜ್ಞಾನಕ್ಕಿಂತ ಹೆಚ್ಚಿನ ಶ್ರುತಗುರು, ವ್ಯಾಕರಣ, ನ್ಯಾಯ ಮೊದಲಾದ ಜ್ಞಾನದ ವಿಶೇಷರೂಪ ಗುಣಕ್ಕಿಂತ ಹೆಚ್ಚಿನ ಗುಣಗುರು, ತನಗೆ ದೀಕ್ಷೆಯನ್ನು ಕೊಡುವ ದೀಕ್ಷಾಗುರು, ತನಗಿಂತ ಪೂರ್ವದಲ್ಲಿ ದೀಕ್ಷೆಯನ್ನು ಹೊಂದಿದ ಗುರು, ಇವರಿಗೆಲ್ಲ ಕಾಯೋತ್ಸರ್ಗಾದಿ ಸಿದ್ಧ ಭಕ್ತಿ ಗುರುಭಕ್ತಿ ರೂಪ ಕ್ರಿಯಾಕರ್ಮದಿಂದ ಹಾಗೂ ಶ್ರುತಭಕ್ತಿ ಆದಿ

ಕ್ರಿಯೆಗಳ ಹೊರತಾಗಿಯೂ ತಲೆಯನ್ನು ಬಾಗಿಸುವುದೂ, ಮನ-ವಚನ-ಕಾಯಗಳ ಶುದ್ಧಿಯಿಂದ ನಮಸ್ಕಾರ ಮಾಡುವುದು—ಇದು ವಂದನಾ ಎಂಬ ಹೆಸರಿನ ಮೂಲ ಗುಣವಾಗಿದೆ. ॥ ೨೫ ॥ ಪ್ರತಿಕ್ರಮಣ—ಆಹಾರ ಶರೀರ ಮೊದಲಾದ ದ್ರವ್ಯಗಳಲ್ಲಿ, ವಸತಿ, ಶಯನಾದಿ ಕ್ಷೇತ್ರಗಳಲ್ಲಿ, ಪ್ರಾತಃಕಾಲವೇ ಮೊದಲಾದ ಕಾಲಗಳಲ್ಲಿ, ಚಿತ್ತದ ವ್ಯಾಪಾರ ರೂಪ ಭಾವದಲ್ಲಿ (ಪರಿಣಾಮ) ಮಾಡಿದ ದೋಷಗಳಲ್ಲಿ ಮನ-ವಚನ-ಕಾಯಗಳಲ್ಲಿ ಶುಭವನ್ನು ಶೋಧಿಸುವುದು, ತನ್ನ ದೋಷವನ್ನು ಸ್ವಯಂ ನೆನೆದು ಕೊರಗುವುದು, ಆತ್ಮನಿಂದೆಯನ್ನು ಮಾಡಿಕೊಳ್ಳುವುದು—ಇದು ಪ್ರತಿಕ್ರಮಣ ಗುಣವಾಗಿದೆ ॥ ೨೬ ॥ ಪ್ರತ್ಯಾಖ್ಯಾನ—ನಾಮ, ಸ್ಥಾಪನಾ, ದ್ರವ್ಯ, ಕ್ಷೇತ್ರ, ಕಾಲ, ಭಾವ ಈ ಆರರಲ್ಲಿ ಶುಭ ಮನ, ವಚನ, ಕಾಯಗಳಿಂದ ಭವಿಷ್ಯತ್ ಕಾಲಕ್ಕಾಗಿ ಅಯೋಗ್ಯವಾದುದನ್ನು ತ್ಯಾಗಮಾಡುವುದು, ಅರ್ಥಾತ್ ಅಯೋಗ್ಯ ನಾಮವನ್ನು ಮಾಡದಿರುವುದು, ಹೇಳದಿರುವುದು ಮತ್ತು ಚಿಂತಿಸದಿರುವುದು ಇತ್ಯಾದಿ ತ್ಯಾಗಕ್ಕೆ ಪ್ರತ್ಯಾಖ್ಯಾನವೆನ್ನುವರು ॥ ೨೭ ॥ ವಿಸರ್ಗ—ಹಗಲಿನಲ್ಲಿ ನಡೆಯುವ ದೈವಸಿಕ ಆದಿ ನಿಶ್ಚಯ ಕ್ರಿಯೆಗಳಲ್ಲಿ, ಅರ್ಹಂತರು ಹೇಳಿದ ಇಪ್ಪತ್ತೈದು, ಇಪ್ಪತ್ತೇಳು, ಒಂದು ನೂರಾ ಎಂಟು ಉಚ್ಛ್ವಾಸ ಮೊದಲಾದ ಪರಿಣಾಮದಿಂದ ಹೇಳಿದ ತಮ್ಮ ತಮ್ಮ ಕಾಲದಲ್ಲಿ ದಯಾ, ಕ್ಷಮಾ, ಸಮ್ಯಗ್ದರ್ಶನ, ಅನಂತ ಜ್ಞಾನಾದಿ ಚತುಷ್ಟಯ ಇತ್ಯಾದಿ ಜಿನಗುಣಗಳ ಭಾವನೆ ಸಹಿತ ದೇಹದ ಮೇಲಿನ ಮಮತ್ವವನ್ನು ಬಿಡುವುದು ಕಾಯೋತ್ಸರ್ಗವೆನಿಸುವದು ॥ ೨೮ ॥ ಲೋಚ—ಎರಡು, ಮೂರು, ನಾಲ್ಕು ತಿಂಗಳುಗಳ ತರುವಾಯ ಉತ್ಕೃಷ್ಟ, ಮಧ್ಯಮ ಮತ್ತು ಜಘನ್ಯರೂಪ ಮತ್ತು ಪ್ರತಿಕ್ರಮಣ ಸಹಿತ ಆ ದಿನದಲ್ಲಿ ಉಪವಾಸ ಸಹಿತವಿದ್ದು, ತನ್ನ ಕೈಗಳಿಂದಲೇ ತಲೆ, ಗಡ್ಡಗಳ ಕೂದಲುಗಳನ್ನು ಕಿತ್ತುಕೊಳ್ಳುವುದು. ಇದಕ್ಕೆ ಲೋಚವೆಂಬ ಹೆಸರಿನ ಮೂಲ ಗುಣವೆನ್ನುವರು. ಅಚೇಲಕತ್ವ—ಹತ್ತಿ, ರೇಷ್ಮೆ, ಕೂದಲುಗಳಿಂದ ನಿರ್ಮಿಸಿದ ವಸ್ತ್ರಗಳನ್ನಾಗಲಿ, ಮೃಗದ ಚರ್ಮವನ್ನಾಗಲಿ, ಗಿಡದ ತೊಗಟೆಯಿಂದ ಮಾಡಿದ್ದನ್ನಾಗಲಿ, ಹುಲ್ಲು ಎಲೆಗಳಿಂದ ನಿರ್ಮಿಸಿಯಾಗಲಿ ಶರೀರದ ಅಚ್ಛಾದನವನ್ನು ಮಾಡಿಕೊಳ್ಳಕೂಡದು ಹಾರ, ಆಭರಣಗಳಿಂದ ವಿಭೂಷಿತನಾಗ ಕೂಡದು. ಸಂಯಮವನ್ನು ನಷ್ಟಗೊಳಿಸುವ ದ್ರವ್ಯದಿಂದ ದೂರನಾಗಿರುವುದು ಇಂದ ಜಗತ್ ಪೂಜ್ಯ ನಿರ್ಗ್ರಂಥ ರೂಪ ಅಚೇಲಕ ವ್ರತವು ಮೂಲಗುಣವಾಗಿದೆ. ॥ ೩೦ ॥ ಅಸ್ನಾನ—ಜಲದಿಂದ ಮಾಡುವ ಸ್ನಾನ ಹಾಗೂ ಒದ್ದೆ ಅರಿವೆಯಿಂದ ಮೈಯನ್ನು ಸ್ವಚ್ಛಮಾಡಿಕೊಳ್ಳುವುದನ್ನು ತ್ಯಜಿಸಬೇಕು ಚಂದನ ಲೇಪನಾದಿ ಕ್ರಿಯೆಗಳನ್ನು ಬಿಟ್ಟುಬಿಡಬೇಕು ಇದರಿಂದ ಜಲ್ಲ (ಸರ್ವಾಂಗ ಪ್ರಚ್ಛಾದಕ ಮಲ) ಮಲ್ಲ (ಅಂಗೈಕದೇಶ ಪ್ರಚ್ಛಾದಕ ಮಲ) ಸ್ವೇದ (ಬೆವರು) ಇವುಗಳಿಂದ ಸಂಪೂರ್ಣ ಶರೀರವು ಮಲಿನವಾಗಿ ಹೋಗುವುದು ಅಸ್ನಾನವೆಂಬ ಮೂಲಗುಣವಾಗಿದೆ ಇದೊಂದು ಮುನಿಯ ಮಹಾನ್ ಗುಣವಾಗಿದೆ ಇದರಿಂದ ಕಷಾಯ ನಿಗ್ರಹರೂಪ ಪ್ರಾಣ ಸಂಯಮ, ಇಂದ್ರಿಯ ನಿಗ್ರಹರೂಪ ಇಂದ್ರಿಯ ಸಂಯಮ ಇವೆರಡರ ರಕ್ಷಣೆಯಾಗುತ್ತದೆ. ॥ ೩೧ ॥ ಕ್ಷಿತಿಶಯನ—ಜೀವಬಾಧಾರಹಿತ, ಅಲ್ಪ ಸಂಸ್ತರ ರಹಿತ, (ಅಥವಾ ಅಲ್ಪ ಸಂಸ್ತರಯುಕ್ತ) ಅಸಂಯಮಿಯು ಬಾರದೆ ಇರುವಂಥ ಪ್ರಚ್ಛನ್ನ ಭೂಮಿಯಲ್ಲಿ ಕಟ್ಟಿಗೆಯಂತೆ ಇಲ್ಲವೆ ಬಿಲ್ಲಿಗೆ ಸಮಾನವಾಗಿ ಒಂದು ಮಗ್ಗುಲಿನ ಮೇಲೆ ಮಾತ್ರ ಮಲಗುವದು. ಇದು ಕ್ಷಿತಿಶಯನ-ಮೂಲಗುಣವಾಗಿದೆ. ॥ ೩೨ ॥ ಅದಂತಧಾವನ—ಬೆರಳು, ಉಗುರು, ಹುಲ್ಲು, ಕಡ್ಡಿ, ಗಿಡದ ತೊಗಟೆ, ದಂತಮಂಜನ ಇತ್ಯಾದಿಗಳಿಂದ ಹಲ್ಲುಗಳನ್ನು ತಿಕ್ಕಿಕೊಳ್ಳದೆ ಇರುವದು. ಇದು ಇಂದ್ರಿಯ ನಿಗ್ರಹವನ್ನು ರಕ್ಷಣೆಮಾಡುವಂತ ಅದಂತಧಾವನ ಮೂಲ ಗುಣವ್ರತವಾಗಿದೆ ॥ ೩೩ ॥ ಸ್ಥಿತಿ ಭೋಜನ—ತನ್ನ ಬೆರಳಿನ ಬೊಗಸೆಯಿಂದ ಊಟಮಾಡುವದು ಆಗ ನಾಲ್ಕು ಬೆರಳು ಅಂತರದ ಮೇಲೆ ಸಮಪಾದಗಳನ್ನು ಇಟ್ಟು, ಎದ್ದು ನಿಂತಿರಬೇಕು ಗೋಡೆ ಮೊದಲಾದವುಗಳನ್ನು ಆಶ್ರಯಿಸಿರಕೂಡದು ಹೀಗೆ ಆಹಾರವನ್ನು ಸ್ವೀಕರಿಸುವಾಗ ತಾನು ನಿಂತ ನೆಲ, ತನ್ನ ಕೈಯೊಳಗಿನ ಆಹಾರ ಬೀಳುವ ನೆಲ, ಆಹಾರ ದಾನಕೊಡುವವರು ನಿಲ್ಲುವ ನೆಲ ಈ ಮೂರೂ ಭೂಮಿಗಳು ಶುದ್ಧವಾಗಿರಬೇಕು ಹೀಗೆ ಆಹಾರ ತಕ್ಕೊಳ್ಳುವದಕ್ಕೆ ಸ್ಥಿತಿ-ಭೋಜನ ಮೂಲಗುಣವೆನ್ನುವರು ॥ ೩೪ ॥ ಏಕಭುಕ್ತ—ಸೂರ್ಯನ ಉದಯ, ಅಸ್ತಕಾಲ ಇವುಗಳಿಂದ ಮೂರು ಘಳಿಗೆಗಳನ್ನು ಬಿಟ್ಟು, ಮಧ್ಯಕಾಲದಲ್ಲಿ ಒಂದು ಮುಹೂರ್ತ, ಎರಡು ಮುಹೂರ್ತ ಇಲ್ಲವೆ ಮೂರು ಮುಹೂರ್ತ ಕಾಲದಲ್ಲಿ ಒಂದು ಸಲ ಮಾತ್ರ ಊಟಮಾಡಬೇಕು ಇದು ಏಕಭುಕ್ತ ಮೂಲಗುಣವಾಗಿದೆ ॥ ೩೫ ॥ ಈ ಪ್ರಕಾರ ಮೂಲಗುಣಗಳನ್ನು ವಿಧಿಯುಕ್ತವಾಗಿ ಮನ-ವಚನ-ಕಾಯಗಳಿಂದ ಯಾವನು ಪಾಲಿಸುವನೋ ಅವನು ಮೂರು ಲೋಕದಲ್ಲಿ ಪೂಜ್ಯನಾಗಿ ಅಕ್ಷಯ ಸುಖರೂಪ ಮೋಕ್ಷವನ್ನು ಹೊಂದುತ್ತಾನೆ ॥ ೩೬ ॥

—ವಟ್ಟಕೇರಕೃತ ಮೂಲಾಚಾರ.

## ೬. ಧರ್ಮಾಂಗ

ಉತ್ತಮ ಕ್ಷಮಾ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಆಕಿಂಚನ್ಯ ಮತ್ತು ಬ್ರಹ್ಮಚರ್ಯ ಇವು ಹತ್ತು ಮುನಿಧರ್ಮದ ಭೇದಗಳಾಗಿವೆ ॥ ೧ ॥ ಸಿಟ್ಟು ಉತ್ಪನ್ನವಾಗುವಂಥ ಬಾಹ್ಯ ಕಾರಣವು ಪ್ರತ್ಯಕ್ಷವಾಗಿದ್ದರೂ ಯಾವನು ಸ್ವಲ್ಪವೂ ಸಹ ಸಿಟ್ಟನ್ನು ಮಾಡುವದಿಲ್ಲವೋ ಅವನಿಗೆ ಉತ್ತಮ ಕ್ಷಮಾ ಧರ್ಮವು ಸಾಧಿಸುತ್ತದೆ ॥ ೨ ॥ ಯಾವನು ಮನಃಪೂರ್ವಕವಾಗಿ ಕುಲ, ರೂಪ, ಜಾತಿ, ಬುದ್ಧಿ, ತಪ, ಶಾಸ್ತ್ರ ಮತ್ತು ಶೀಲಾದಿಗಳ ವಿಷಯದಲ್ಲಿ ಸ್ವಲ್ಪವೂ ಗರ್ವವನ್ನು ಮಾಡುವದಿಲ್ಲವೋ ಅವನಿಗೆ ಮಾರ್ದವ ಧರ್ಮವು ಸಿದ್ಧಿಸುತ್ತದೆ. ॥ ೩ ॥ ಯಾವ ಶ್ರಮಣನು ಮಾಯಾಚಾರವನ್ನು ಸಂಪೂರ್ಣವಾಗಿ ಬಿಟ್ಟು ಶುದ್ಧ ಹೃದಯದಿಂದ ಚಾರಿತ್ರವನ್ನು ಪಾಲನ ಮಾಡುವನೋ ಅವನಿಗೆ ನಿಯಮದಿಂದ ಆರ್ಜವ ಧರ್ಮವು ಸಾಧಿಸುತ್ತದೆ ॥ ೪ ॥ ಯಾವ ಮುನಿಯು ಅನ್ಯರಿಗೆ ಕ್ಲೇಶವು ತಗಲದಂತೆ ತನ್ನ ಹಾಗೂ ಅನ್ಯರ ಹಿತವನ್ನು ಮಾಡುವ ವಚನಗಳನ್ನು ಆಡುವನೋ ಅವನಿಗೆ ಸತ್ಯ ಧರ್ಮವು ಸಿದ್ಧಿಸುತ್ತದೆ ॥ ೫ ॥ ಯಾವ ಪರಮ ಮುನಿಯು ಇಚ್ಛೆಯನ್ನು ತಡೆದು, ವೈರಾಗ್ಯರೂಪ ವಿಚಾರಗಳಿಂದ ಯುಕ್ತನಾಗಿ ಆಚಾರ ಶೀಲನಾಗುವನೋ ಅವನಿಗೆ ಶೌಚ ಧರ್ಮವು ಸಂಭವಿಸುತ್ತದೆ ॥ ೬ ॥ ವ್ರತ ಹಾಗೂ ಸಮಿತಿಗಳ ಪಾಲನರೂಪ, ದಂಡ ತ್ಯಾಗ ಅರ್ಥಾತ್ ಮನ, ವಚನ, ಕಾಯಗಳ ಪ್ರವೃತ್ತಿಯನ್ನು ತಡೆದು, ಪಂಚೇಂ-ದ್ರಿಯಗಳನ್ನು ಗೆದ್ದಂಥ ಪರಿಣಾಮವು ಯಾವ ಜೀವಕ್ಕೆ ಉಂಟಾಗುವದೋ ಅದಕ್ಕೆ ಸಂಯಮ ಧರ್ಮವು ನಿಯಮದಿಂದ ಉಂಟಾಗುತ್ತದೆ. ॥ ೭ ॥ ಐದೂ ಇಂದ್ರಿಯಗಳ ವಿಷಯಗಳನ್ನೂ ನಾಲ್ಕು ಕಷಾಯಗಳನ್ನೂ ಶುಭಧ್ಯಾನದ ಪ್ರಾಪ್ತಿಗಾಗಿ ತಡೆದು, ತನ್ನ ಆತ್ಮ ಚಿಂತನೆಯನ್ನು ಮಾಡುವುದು ತಪಧರ್ಮವಾಗಿದೆ. ॥ ೮ ॥ ಸಮಸ್ತ ಪರದ್ರವ್ಯಗಳ ಮೋಹವನ್ನು ತ್ಯಜಿಸಿ ಯಾವ ಜೀವವು ಸಂಸಾರ, ದೇಹ, ಭೋಗಗಳಿಂದ ಉದಾಸೀನನಾಗಿರುವದೋ ಅದು ತ್ಯಾಗ ಧರ್ಮವನ್ನು ಪಡೆದಂತೆನಿಸುತ್ತದೆ. ॥ ೯ ॥ ಯಾವ ಮುನಿಯು ಎಲ್ಲ ಪ್ರಕಾರದ ಪರಿಗ್ರಹಗಳಿಂದ ರಹಿತನಾಗಿ ಸುಖ-ದುಃಖಗಳನ್ನು ಕೊಡುವಂಥ ಕರ್ಮಜನ್ಯ ಭಾವಗಳನ್ನು ತಡೆದು ನಿರ್ದ್ವಂದ್ವನಾಗಿ ಅರ್ಥಾತ್ ನಿರಾಕುಲ ಭಾವದಿಂದ ಆಚಾರಶೀಲನಾಗುತ್ತಾನೆಯೋ ಅವನು ಆಕಿಂಚನ್ಯ ಧರ್ಮವನ್ನು ಪಾಲಿಸಿದಂತೆ ಆಗುತ್ತದೆ ॥ ೧೦ ॥ ಯಾವ ಪುಣ್ಯಾತ್ಮನು ಸ್ತ್ರೀಯರ ಸುಂದರ ಅಂಗಗಳನ್ನು ನೋಡಿಯೂ ಕೂಡ ಅವುಗಳಲ್ಲಿ ರಾಗರೂಪ ದುರ್ಭಾವವನ್ನು ತಳೆಯುವದಿಲ್ಲವೋ ಅವನು ದುರ್ಧರ ಬ್ರಹ್ಮಚರ್ಯ ಧರ್ಮವನ್ನು ಧಾರಣಮಾಡುವನು ॥ ೧೧ ॥

—ಕುಂದಕುಂದಾಚಾರ್ಯಕೃತ ಬಾರಸಅಣುವೆಕ್ಖಾ.

## ೭. ಭಾವನಾ

ಮೂರೂ ಲೋಕದ ತಿಲಕದಂತಿರುವ ಹಾಗೂ ಮೂರು ಲೋಕದ ಇಂದ್ರರಿಂದ ಪೂಜ್ಯನೀಯನಾದಂಥ ದೇವನಿಗೆ ವಂದನೆಯನ್ನು ಮಾಡಿ ಭವ್ಯ ಜೀವಗಳಿಗೆ ಆನಂದವನ್ನು ಕೊಡುವಂಥ ಅನುಪ್ರೇಕ್ಷೆಗಳ ವರ್ಣನೆಯನ್ನು ಮಾಡುತ್ತೇನೆ. ॥ ೧ ॥ ಅಧ್ರುವ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ ಮತ್ತು ಧರ್ಮ ಇವು ಹನ್ನೆರಡು ಅನುಪ್ರೇಕ್ಷೆಗಳಾಗಿವೆ. ಇವುಗಳನ್ನು ತಿಳಿದುಕೊಂಡು ನಿತ್ಯವೂ ಮನ, ವಚನ, ಕಾಯಗಳ ಶುದ್ಧಿ ಸಹಿತ ಅವುಗಳನ್ನು ಭಾವಿಸಬೇಕು. ॥ ೨-೩ ॥ ಅಧ್ರುವ ಭಾವನಾ—ಯಾವುದು ಉತ್ಪನ್ನವಾಗಿದೆಯೋ ಅದು ನಿಯಮದಿಂದ ನಾಶಹೊಂದುತ್ತದೆ. ಪರಿಣಮನ ಸ್ವರೂಪವಾಗುವುದರಿಂದ ಯಾವುದೂ ಶಾಶ್ವತವಲ್ಲ ॥ ೪ ॥ ಜನ್ಮವು ಮರಣದಿಂದ ಕೂಡಿದೆ, ಯೌವನವು ಮುಪ್ಪಿನಿಂದ ಕೂಡಿದೆ ಈ ಪ್ರಕಾರ ಎಲ್ಲ ಪದಾರ್ಥಗಳೂ ಕ್ಷಣ ಭಂಗುರವಾಗಿವೆ ಇದನ್ನರಿಯಬೇಕು ॥ ೫ ॥ ಹೊಸ ಮೋಡವು ಹುಟ್ಟಿ ಕ್ಷಣದಲ್ಲಿ ನಷ್ಟವಾಗುವಂತೆ ಈ ಸಂಸಾರದಲ್ಲಿ ಪರಿವಾರ, ಬಾಂಧವರು, ಪುತ್ರ, ಸ್ತ್ರೀ, ಮಿತ್ರರು, ಶರೀರ ಸೌಂದರ್ಯ, ಮನೆ, ಗೋಧನ ಇತ್ಯಾದಿ ಸಮಸ್ತ ಪದಾರ್ಥಗಳು ಅಸ್ಥಿರವಾಗಿವೆ ॥ ೬ ॥ ಈ ಜಗತ್ತಿನಲ್ಲಿ ಇಂದ್ರಿಯಗಳ ವಿಷಯ, ಮಿತ್ರವರ್ಗ, ಉತ್ತಮ ಕುದುರೆ, ಆನೆ, ರಥ ಮೊದಲಾದವುಗಳೆಲ್ಲವೂ ಇಂದ್ರ ಧನುಷ್ಯದಂತೆಯೂ ಆಕಾಶದೊಳಗಿನ ಮಿಂಚಿನಂತೆಯೂ ಚಂಚಲವಾಗಿವೆ ಅವು ಕಣ್ಣಿಗೆ ಕಂಡು ಬೇಗನೆ ನಷ್ಟ ಹೊಂದುತ್ತವೆ ॥ ೭ ॥ ಭವ್ಯ ಜೀವಿಗಳಿರಾ, ನೀವು ಸಮಸ್ತ ವಿಷಯವನ್ನು ಕ್ಷಣ ಭಂಗುರವೆಂದು ತಿಳಿದು ಮೋಹವನ್ನು ತ್ಯಜಿಸಿರಿ; ನಿಮ್ಮ ಮನಸ್ಸನ್ನು ವಿಷಯಗಳಿಂದ ದೂರವಿಡಿರಿ ಇದರಿಂದ ಉತ್ತಮ ಸುಖವು ಪ್ರಾಪ್ತವಾಗುತ್ತದೆ. ॥ ೮ ॥ ಅಶರಣ

ಭಾವನಾ—ಈ ಸಂಸಾರದಲ್ಲಿ ದೇವತೆಗಳು, ಇಂದ್ರರು ಸಹ ನಾಶ ಹೊಂದುವದನ್ನು ಕಾಣುತ್ತೇವೆ. ಹರಿ ಹರ ಬ್ರಹ್ಮಾದಿಗಳಂಥ ದೊಡ್ಡ ದೊಡ್ಡ ದೇವರೂ ಸಹ ಕಾಲನ ದವಡೆಯಲ್ಲಿ ಸಿಕ್ಕು ನುಗ್ಗಾಗಿ ಹೋಗಿದ್ದಾರೆ. ಇಂದಲ್ಲಿ ಶರಣ (ಆಶ್ರಯ) ಎಂಬುದು ಎಲ್ಲಿದೆ? ॥ ೯ ॥ ಸಿಂಹದ ಕೈಯಲ್ಲಿ ಸಿಕ್ಕ ಜಿಗರೆಯನ್ನು ರಕ್ಷಣೆ ಮಾಡುವವರು ಯಾರೂ ಇಲ್ಲ ಇದೇ ಪ್ರಕಾರ ಸಂಸಾರದಲ್ಲಿ ಮೃತ್ಯುವು ನುಂಗುವ ಪ್ರಾಣಿಯನ್ನೂ ರಕ್ಷಿಸುವವರು ಯಾರೂ ಇಲ್ಲ ॥ ೧೦ ॥ ಯಾವನು ತನ್ನ ಕ್ಷಮಾದಿ ದಶಲಕ್ಷಣ ರೂಪ ಭಾವದಿಂದ ಪರಿಣತಿಯನ್ನು ಸಾಧಿಸಿರುವನೋ ಅವನು ತನಗೆ ತಾನೇ ಶರಣನಾಗಿದ್ದಾನೆ ಆದರೆ ಯಾವನು ತೀವ್ರ ಕಷಾಯಗಳಿಂದ ವ್ಯಾಪಿಸಿರುವನೋ ಅವನು ತನ್ನ ಘಾತವನ್ನು ತಾನೇ ಮಾಡಿಕೊಳ್ಳುತ್ತಾನೆ ॥ ೧೧ ॥ ಸಂಸಾರ ಭಾವನಾ—ಜೀವವು ಒಂದು ಶರೀರವನ್ನು ಬಿಡುತ್ತದೆ, ಮತ್ತು ಇನ್ನೊಂದನ್ನು ಸ್ವೀಕರಿಸುತ್ತದೆ. ತಿರುಗಿ ಆ ಹೊಸ ದೇಹವನ್ನೂ ಬಿಟ್ಟು ಮತ್ತೊಂದನ್ನೂ ಹೊಂದುತ್ತದೆ ಹೀಗೆ ಅನೇಕ ಸಲ ಹಲವು ಶರೀರಗಳನ್ನು ಹೊಂದುತ್ತ ಬಂದಿದೆ. ॥ ೧೨ ॥ ಮಿಥ್ಯಾತ್ವ ಅರ್ಥಾತ್ ವಿಪರೀತ ಮತ್ತು ಏಕಾಂತಾದಿ ರೂಪಗಳಿಂದ ವಸ್ತುವಿನಲ್ಲಿ ಶ್ರದ್ಧೆಯನ್ನೂ ಇಡುವುದು; ಕಷಾಯಗಳಿಂದ-ಕ್ರೋಧ, ಮಾನ, ಮಾಯಾ, ಲೋಭ ಇವುಗಳಿಂದ—ಕೂಡಿರುವುದು, ಇವುಗಳಿಂದಾಗಿ ಜೀವವು ಅನೇಕ ಯೋನಿಗಳಲ್ಲಿ ಭ್ರಮಣ ಮಾಡುತ್ತದೆ. ಇದೇ ಸಂಸಾರವಾಗಿದೆ ॥ ೧೩ ॥ ಈ ಪ್ರಕಾರ ಸಂಸಾರದ ಸ್ವರೂಪವನ್ನು ತಿಳಿದು, ಎಲ್ಲ ಪ್ರಕಾರದ ಪ್ರಯತ್ನ-ದಿಂದಲೂ ಮೋಹವನ್ನು ಬಿಡು ಎಲೈ ಭವ್ಯನೇ, ಈ ಆತ್ಮ ಸ್ವಭಾವದ ಧ್ಯಾನವನ್ನು ಮಾಡು ಇದರಿಂದ ಸಂಸಾರ ಭ್ರಮಣವು ನಷ್ಟ ಹೊಂದಲಿ ॥ ೧೪ ॥ ಏಕತ್ವ ಭಾವನಾ—ಜೀವನು ತನ್ನಷ್ಟಕ್ಕೆ ತಾನೊಬ್ಬನೇ ಜನಿಸುತ್ತಾನೆ ಒಬ್ಬೊಂಟಿಗನಾಗಿಯೇ ಗರ್ಭದಲ್ಲಿ ದೇಹವನ್ನು ಧಾರಣಮಾಡುತ್ತಾನೆ ತಾನೇ ಬಾಲಕ, ಯುವಕ, ಮುದುಕ-ನಾಗುತ್ತಾನೆ ॥ ೧೫ ॥ ಅವನೊಬ್ಬನೇ ರೋಗಿಯಾಗುತ್ತಾನೆ. ಶೋಕಮಾಡುತ್ತಾನೆ ತನ್ನಷ್ಟಕ್ಕೆ ತಾನೇ ಮಾನಸಿಕ ದುಃಖದಲ್ಲಿ ತಪ್ತಾಯಮಾನನಾಗುತ್ತಾನೆ ಪಾಪ ತಾನೊಬ್ಬನೇ ಸಾಯುತ್ತಾನೆ ಅಲ್ಲದೆ ತನ್ನಷ್ಟಕ್ಕೆ ತಾನೇ ನರಕದ ದುಃಖವನ್ನು ಭೋಗಿಸುತ್ತಾನೆ ॥ ೧೬ ॥ ಹೇ ಭವ್ಯ, ನೀವು ಎಲ್ಲ ಪ್ರಕಾರದಿಂದ ಪ್ರಯತ್ನಮಾಡಿ ಜೀವವು ದೇಹದಿಂದ ಭಿನ್ನವೆಂಬುದನ್ನು ತಿಳಿದುಕೊಳ್ಳು ಒಬ್ಬನೇ ಎಂದು ಬಾವಿಸು ಜೀವನನ್ನು ಈ ಪ್ರಕಾರ ತಿಳಿದುಕೊಂಡ ಮೇಲೆ ಸಮಸ್ತ ಪರದ್ರವ್ಯಗಳು ಕ್ಷಣಮಾತ್ರದಲ್ಲಿ ಹೇಯವೆನಿಸುತ್ತವೆ ॥ ೧೭ ॥ ಅನ್ಯತ್ವ ಭಾವನಾ—ಈ ಜೀವವು ಒಂದು ಶರೀರವನ್ನು ಬಿಟ್ಟು ತನ್ನ ಕರ್ಮಕ್ಕನುಸರಿಸಿ ಇನ್ನೊಂದು ಶರೀರವನ್ನು ಗ್ರಹಣಮಾಡುತ್ತದೆ ಹಾಗೆಯೇ ಎರಡನೆಯ ಜೀವಗಳೂ ಸಹ ಅವನ ಹೆಂಡತಿ ಹಾಗೂ ತಾಯಿಂದಿರಾಗುತ್ತಾರೆ ಅನ್ಯ ಜೀವವೇ ಪುತ್ರನಾಗಿಯೂ ಬರುತ್ತದೆ ॥ ೧೮ ॥ ಈ ಪ್ರಕಾರ ಈ ಜೀವವು ಎಲ್ಲ ವಸ್ತುಗಳನ್ನು ಆತ್ಮನಿಂದ ಬಿನ್ನವೆಂದು ತಿಳಿಯುತ್ತದೆ ತಿಳಿದೂ ಕೂಡ ಅದು ಪರದ್ರವ್ಯದಲ್ಲಿ ರಾಗವನ್ನು ಇಡುತ್ತದೆ ಇದು ಅದರ ಮೂರ್ಖತೆಯಾಗಿದೆ ॥ ೧೯ ॥ ಯಾರು ದೇಹ ಜೀವಗಳು ತತ್ತ್ವತಃ ಭಿನ್ನನೆಂದು ತಿಳಿದು, ಆತ್ಮ ಸ್ವರೂಪವನ್ನೇ ಸೇವಿಸುವರೋ ಅವರು ನಿಜವಾಗಿಯೂ ಅನ್ಯತ್ವ ಭಾವನೆಯನ್ನು ಹೊಂದಿದಂತಿರುತ್ತದೆ ॥ ೨೦ ॥ ಅಶುಚಿ ಭಾವನಾ—ಎಲೈ ಭವ್ಯ! ನೀನು ಈ ದೇಹವನ್ನು ಅಪವಿತ್ರವೆಂದು ತಿಳಿ. ಈ ದೇಹವು ಸಮಸ್ತ ಹೇಯ ವಸ್ತುಗಳ ಪಿಂಡವಾಗಿದೆ, ಕ್ರಿಮಿ ಸಮೂಹದಿಂದ ತುಂಬಿದೆ, ಅಪೂರ್ವ ದುರ್ಗಂಧಯುಕ್ತವಾಗಿದೆ, ಮಲಮೂತ್ರದ ನಿವಾಸವಾಗಿದೆ, ॥ ೨೧ ॥ ಬಹಳ ಪವಿತ್ರವೂ ಸುರಸ, ಸುಗಂಧಯುಕ್ತವೂ ಆದ ಪದಾರ್ಥಗಳು ದೇಹದ ಸಂಸರ್ಗದಿಂದ ಇಲ್ಲವೆ ದೇಹದಲ್ಲಿ ಪ್ರವೇಶಿಸುವುದರಿಂದ-ಅತ್ಯಂತ ದುರ್ಗಂಧಯುಕ್ತವಾಗುತ್ತವೆ ॥ ೨೨ ॥ ಯಾವ ಮನುಷ್ಯನು ಅನ್ಯರ ದೇಹ ಅರ್ಥಾತ್ ಸ್ತ್ರೀ ಮೊದಲಾದವರ ದೇಹದ ಮೇಲಿನ ಅನುರಾಗವನ್ನು ಳಿದು, ತನ್ನ ಶರೀರದ ಮೇಲಿನ ಮೋಹವನ್ನೂ ಸಹ ತ್ಯಜಿಸಿ, ಕೇವಲ ಆತ್ಮಸ್ವರೂಪದಲ್ಲಿ ಅನುರಕ್ತನಾದಲ್ಲಿ ಅವನ ಅಶುಚಿ ಬಾವನೆಯು ಸಾರ್ಥಕವಾಗುತ್ತದೆ ॥ ೨೩ ॥ ಆಸ್ರವ ಭಾವನಾ—ಮನ, ವಚನ ಮತ್ತು ಕಾಯಗಳು ಯೋಗವೆನಿಸುತ್ತವೆ ಯಾವ ಜೀವ ಪ್ರದೇಶವು ಸ್ಪಂದನ ವಿಶೇಷದಿಂದ ಕೂಡಿದೆಯೋ ಅದು ಆಸ್ರವವಾಗಿದೆ ಅದು ಮೋಹ ಕರ್ಮದ ಉದಯರೂಪ ಮಿಥ್ಯಾತ್ವ ಮತ್ತು ಕಷಾಯಗಳಿಂದಲೂ ಕೂಡಿರುತ್ತದೆ ಒಮ್ಮೊಮ್ಮೆ ಮೋಹದ ಉದಯದಿಂದ ರಹಿತವಾಗಿಯೂ ಇರುತ್ತದೆ. ॥ ೨೪ ॥ ಕರ್ಮವು ಪುಣ್ಯ ಹಾಗೂ ಪಾಪವೆಂದು ಎರಡು ವಿಧವಾಗಿದೆ ಅದರ ಕಾರಣಗಳೂ ಸಹ ಎರಡುವಿಧವಾಗಿವೆ ಒಂದು ಪ್ರಶಸ್ತ ಮತ್ತು ಇನ್ನೊಂದು ಅಪ್ರಶಸ್ತ ಮಂದ ಕಷಾಯರೂಪ ಪರಿಣಾಮವು ಪ್ರಶಸ್ತವೆನಿಸುತ್ತದೆ ತೀವ್ರ ಕಷಾಯರೂಪ ಪರಿಣಾಮವು ಅಪ್ರಶಸ್ತವೆನಿಸುತ್ತದೆ ಇವೆರಡೂ ಕರ್ಮಾಸ್ರವದ ಕಾರಣಗಳಾಗಿವೆ. ॥ ೨೫ ॥ ಎಲ್ಲೆಲ್ಲಿಯ...

ಶತ್ರು ಮಿತ್ರರಲ್ಲಿ–ಯಾವಾಗಲೂ ಪ್ರಿಯ, ಹಿತ ವಚನಗಳನ್ನೇ ಆಡಬೇಕು ದುರ್ವಚನಗಳನ್ನು ಕೇಳಿಯೂ ಕೂಡ ದುಷ್ಟರನ್ನು ಕ್ಷಮಿಸಬೇಕು ಎಲ್ಲ ಜೀವಗಳ ಸದ್ಗುಣಗಳನ್ನೇ ಗ್ರಹಿಸಬೇಕು ಇದು ಮಂದ ಕಷಾಯಿ ಜೀವಗಳ ಲಕ್ಷಣವಾಗಿದೆ ॥ ೨೬ ॥ - ತನ್ನನ್ನು ತಾನೇ ಹೊಗಳಿಕೊಳ್ಳುವುದು, ಪೂಜ್ಯ ಪುರುಷರ ದೋಷಗಳನ್ನು ಹೇಳುವ ಸ್ವಭಾವ, ದೀರ್ಘ ಕಾಲದ ವರೆಗೆ ವೈರವನ್ನು ಧಾರಣ ಮಾಡುವುದು, ಇವು ತೀವ್ರ ಕಷಾಯಿ ಜೀವಗಳ ಲಕ್ಷಣವಾಗಿವೆ. ॥ ೨೭ ॥ ಯಾವ ಪುರುಷನು ಪೂರ್ವಕಾಲದ ಮೋಹದ ಕಾರಣದಿಂದ ಉದಯವಾಗುವ ಮಿಥ್ಯಾತ್ವ ಮೊದಲಾದ ಪರಿಣಾಮಗಳನ್ನು ಬಿಟ್ಟುಕೊಡುತ್ತಾನೆಯೋ ಮತ್ತು ಉಪಶಮ ಅರ್ಥಾತ್ ಶಾಂತ ಪರಿಣಾಮದಲ್ಲಿ ಲೀನನಾಗುವನೋ ಅವನಿಗೆ ಆಸ್ರವಾನುಪ್ರೇಕ್ಷೆಯು ಸಂಭವಿಸುತ್ತದೆ ಆದರೆ ಇವನು ಮಿಥ್ಯಾತ್ವಾದಿ ಭಾವನೆಗಳನ್ನು ಹೇಯವೆಂದು ತಿಳಿದಿರಲಿಕ್ಕೆಬೇಕು ॥ ೨೮ ॥ ಸಂವರ ಭಾವನಾ—ಸಮ್ಯಕ್ತ್ವ, ದೇಶವ್ರತ, ಮಹಾವ್ರತ, ಕಷಾಯಗಳನ್ನು ಅರ್ಥಾತ್ ಯೋಗಗಳ ಅಭಾವ ಇವೆಲ್ಲವೂ ಸಂವರವೆನಿಸುತ್ತವೆ. ॥ ೨೯ ॥ ಮನ, ವಚನ, ಕಾಯಗಳ ಗುಪ್ತಿ; ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ ಮತ್ತು ಪ್ರತಿಷ್ಠಾಪನ ಇವೈದು ಸಮಿತಿಗಳು, ಉತ್ತಮ ಕ್ಷಮಾದಿ ದಶಲಕ್ಷಣ ಧರ್ಮ, ಅನಿತ್ಯವೇ ಮೊದಲಾದ ಹನ್ನೆರಡು ಅನುಪ್ರೇಕ್ಷಾ, ಹಸಿವು ಮೊದಲಾದ ಇಪ್ಪತ್ತೆರಡು ಪರೀಷಹಗಳನ್ನು ಗೆಲ್ಲುವುದು; ಸಾಮಾಯಿಕವೇ ಇತ್ಯಾದಿ ಐದು ಪ್ರಕಾರದ ಉತ್ಕೃಷ್ಟ ಚಾರಿತ್ರ; ಇವು ವಿಶೇಷವಾಗಿ ಸಂವರದ ಕಾರಣಗಳಾಗಿವೆ. ॥ ೩೦ ॥ ಯಾವ ಪುರುಷನು ಸಂಯಮದ ಈ ಕಾರಣಗಳನ್ನು ತಿಳಿದೂ ಸಹ ಸದಾಚಾರವನ್ನು ಇಟ್ಟುಕೊಳ್ಳುವದಿಲ್ಲವೋ ಅವನು ದುಃಖದಿಂದ ಬೆಂದು, ಬಹುಕಾಲದ ವರೆಗೂ ಸಂಸಾರದಲ್ಲಿ ಭ್ರಮಣ ಮಾಡುತ್ತಾನೆ ॥ ೩೧ ॥ ಯಾವ ಮುನಿಯು ಇಂದ್ರಿಯಗಳ ವಿಷಯದಿಂದ ವಿರಕ್ತನಾಗಿ, ಮನೋಹರ ಇಂದ್ರಿಯ ವಿಷಯಗಳಿಂದ ಆತ್ಮವನ್ನು ಯಾವಾಗಲೂ ಸಂವೃತ್ತಗೊಳಿಸುತ್ತಾನೆಯೋ ಅವನಿಗೆ ಸ್ಪಷ್ಟವಾಗಿ ಸಂವರ ಭಾವನೆಯು ಸಂಭವಿಸುತ್ತದೆ ॥ ೩೨ ॥ ನಿರ್ಜರಾ ಭಾವನಾ—ಜ್ಞಾನೀ ಹಾಗೂ ನಿರಹಂಕಾರೀ ಜೀವಗಳು ನಿದಾನವಿಲ್ಲದೆ ಹಾಗೂ ವೈರಾಗ್ಯಭಾವದಿಂದ ಕೂಡಿ, ಹನ್ನೆರಡು ಪ್ರಕಾರದ ತಪವನ್ನೂ ಆಚರಿಸುವುದರಿಂದ ಕರ್ಮದ ನಿರ್ಜರೆಯು ಆಗುತ್ತದೆ ॥ ೩೩ ॥ ಸಮಸ್ತ ಜ್ಞಾನಾವರಣಾದಿ ಎಂಟೂ ಕರ್ಮಗಳ ಫಲಕೊಡುವ ಶಕ್ತಿಗೆ ವಿಪಾಕವೆನ್ನುವರು ಇದಕ್ಕೇನೆ ಉದಯದ ಅನುಭಾಗವೆಂದೂ ಹೇಳುವರು ಕರ್ಮವು ಉದಯ ಹೊಂದಿ ತರುವಾಯವೇ ಕ್ಷಯಿಸುವುದಕ್ಕೆ ಕರ್ಮದ ನಿರ್ಜರೆ ಎನ್ನುವರು ॥ ೩೪ ॥ ಈ ನಿರ್ಜರೆಯು ಎರಡು ವಿಧವಾಗಿದೆ– ಒಂದನೆಯದು ಸ್ವಕಾಲದಲ್ಲಿ ಪ್ರಾಪ್ತವಾಗುವಂಥದು, ಇನ್ನೊಂದು ತಪಸ್ಸಿನಿಂದ ಆಗುವಂಥದು ಇವುಗಳಲ್ಲಿ ಸ್ವಕಾಲಕ್ಕೆ ಉಂಟಾಗುವ ನಿರ್ಜರೆಯು ನಾಲ್ಕೂ ಗತಿಯೊಳಗಿನ ಜೀವಗಳಿಗೆ ಉಂಟಾಗುತ್ತದೆ ಇನ್ನು ತಪಸ್ಸಿನಿಂದ ಆಗುವ ನಿರ್ಜರೆಯು ವ್ರತಿಕ ಜೀವಗಳಿಗೇನೇ ಆಗುತ್ತದೆ ॥ ೩೫ ॥ ಯಾವ ಮುನಿಯು ಸಮತಾಭಾವರೂಪ ಸುಖದಲ್ಲಿ ಲೀನನಾಗಿ ಆತ್ಮನ ಸ್ಮರಣೆಯನ್ನು ಮಾಡುತ್ತ ಇಂದ್ರಿಯ ಹಾಗೂ ಕಷಾಯಗಳನ್ನೂ ಗೆಲ್ಲುವನೋ ಅವನಿಗೆ ಉತ್ಕೃಷ್ಟ ನಿರ್ಜರೆಯು ಆಗುತ್ತದೆ ॥ ೩೬ ॥ ಲೋಕ ಭಾವನಾ—ಸಮಸ್ತ ಆಕಾಶವು ಅನಂತವಾಗಿದೆ. ಅದರ ನಟ್ಟ ನಡುವೆ ಲೋಕವು ಇದೆ ಅದನ್ನು ಯಾರೂ ಹರಿ ಹರ ಮೊದಲಾದವರು ನಿರ್ಮಿಸಿಲ್ಲ ಅದನ್ನು ಯಾರೂ ಧರಿಸಿಲ್ಲ ॥ ೩೭ ॥ ಇದರಲ್ಲಿ ಜೀವಾದಿ ಪದಾರ್ಥಗಳು ಇರುತ್ತವೆ ಈ ಭಾಗಕ್ಕೇನೇ ಲೋಕವೆನ್ನುವರು ಇದರ ತುತ್ತತುದಿಯಲ್ಲಿ ಅನಂತ ಸಿದ್ಧರು ವಿರಾಜಮಾನರಾಗಿದ್ದಾರೆ ॥ ೩೮ ॥ ಲೋಕದಲ್ಲಿರುವಂಥ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ದ್ರವ್ಯಗಳು ಕಾಲಕಾಲಕ್ಕೆ ಪರಿಣಮನ (ಪರಿವರ್ತನ) ಹೊಂದು-ತ್ತಿರುತ್ತವೆ ಇದರ ಪರಿಣಾಮದಿಂದಲೇ ಲೋಕದ ಪರಿಣಮನವೂ ಆಗುತ್ತದೆ ಹೀಗೆ ತಿಳಿಯಬೇಕು ॥ ೩೯ ॥ ಈ ಪ್ರಕಾರ ಇರುವ ಲೋಕ ಸ್ವರೂಪವನ್ನು ಉಪಶಮ ಭಾವದಿಂದ ಧ್ಯಾನಮಾಡಬೇಕು ಅಂಥವನೇ ಕರ್ಮ ಸಮೂಹವನ್ನು ನಾಶಮಾಡಿ, ಅದೇ ಲೋಕದ ಶಿಖಾಮಣಿಯಾಗುತ್ತಾನೆ ಅರ್ಥಾತ್ ಸಿದ್ಧನಾಗುತ್ತಾನೆ. ॥ ೪೦ ॥ ಬೋಧಿ–ದುರ್ಲಭ ಭಾವನಾ—ಈ ಜೀವವು ಅನಾದಿ ಕಾಲದಿಂದ ಅನಂತ ಕಾಲದ ವರೆಗೆ ಈ ಸಂಸಾರದ ನಿಗೋದ ಯೋನಿಯಲ್ಲಿ ವಾಸಮಾಡುತ್ತದೆ. ಈ ಯೋನಿಯಂತೂ ಒಂದು ಶರೀರದಲ್ಲಿ ಅನಂತ ಜೀವಿಗಳಿರುವ ಸ್ಥಾನವಾಗಿದೆ. ಅಲ್ಲಿಂದ ಹೊರಟು ಅದು ಪೃಥ್ವೀಕಾಯಾದಿ ಪರ್ಯಾಯಗಳನ್ನು ಧಾರಣ ಮಾಡುತ್ತದೆ ॥ ೪೧ ॥ ಸಮುದ್ರದಲ್ಲಿ ಬಿದ್ದ ರತ್ನವನ್ನು ತಿರುಗಿ ಸಂಪಾದಿಸುವದು ಅತ್ಯಂತ ಕಠಿಣವಾಗಿದೆ ಅದೇ ಪ್ರಕಾರ ಮನುಷ್ಯ ಪರ್ಯಾಯವನ್ನು ಹೊಂದುವದೂ ತೀರ ದುರ್ಲಭವಾಗಿದೆ ಈ ಮಾನವಗತಿಯಲ್ಲಿಯೂ ಸಹ (ಶುಭ) ಧ್ಯಾನವು ಪ್ರಾಪ್ತವಾಗುತ್ತದೆ.

ಆದೇ ಮನುಷ್ಯ ಗತಿಯಿಂದಲೂ ನಿರ್ವಾಣವು-ಮೋಕ್ಷವು-ಲಭಿಸುತ್ತದೆ. ॥ ೪೨ ॥ ಈ ಪ್ರಕಾರ ಈ ಮನುಷ್ಯ ಗತಿಯನ್ನು ದುರ್ಲಭದಲ್ಲಿಯೂ ಅತಿ ದುರ್ಲಭವೆಂದು ತಿಳಿದು ಅದೇ ಪ್ರಕಾರ ದರ್ಶನ, ಜ್ಞಾನ, ಚಾರಿತ್ರಗಳನ್ನೂ ದುರ್ಲಭದಲ್ಲಿ ದುರ್ಲಭವೆಂದು ದರ್ಶನ, ಜ್ಞಾನ, ಚಾರಿತ್ರಗಳನ್ನು ಬಹು ಆದರದಿಂದ ಕಾಣಬೇಕು ॥ ೪೩ ॥ ಧರ್ಮ ಭಾವನಾ—ಯಾವನು ಲೋಕಾಲೋಕವನ್ನು ಅದರ ತ್ರಿಕಾಲ ಗೋಚರ ಸಮಸ್ತ ಗುಣಪರ್ಯಾಯಗಳ ಸಹಿತ ತಿಳಿಯುವನೋ ಅವನೇ ಸರ್ವಜ್ಞ ದೇವನು. ॥ ೪೪ ॥ ಸರ್ವಜ್ಞನಿಂದ ಉಪದೇಶಿಸಿದ ಧರ್ಮವು ಎರಡು ವಿಧವಾಗಿದೆ-ಒಂದು ಸಂಗಾಸಕ್ತ (ಗೃಹಸ್ಥ); ಇನ್ನೊಂದು ಅಸಂಗ (ಮುನಿ) ಇವುಗಳಲ್ಲಿ ಮೊದಲನೆಯದಾದ ಗೃಹಸ್ಥ ಧರ್ಮವು ಹನ್ನೆರಡು ಭೇದಗಳಿಂದ ಕೂಡಿದೆ. ಎರಡನೆಯದಾದ ಮುನಿಧರ್ಮವು ದಶವಿಧವಾಗಿದೆ. ॥ ೪೫ ॥ ಈ ಅನುಪ್ರೇಕ್ಷೆಗಳನ್ನು ಕುಮಾರ ಸ್ವಾಮಿಯು ಜಿನವಚನಗಳ ಭಾವನೆಗಾಗಿಯೂ ಚಂಚಲ ಮನಸ್ಸನ್ನೂ ಅವರೋಧ ಮಾಡುವದಕ್ಕಾಗಿಯೂ ಪರಮ ಶ್ರದ್ಧೆಯಿಂದ ರಚಿಸಿದ್ದಾನೆ ॥ ೪೬ ॥ ಈ ಹನ್ನೆರಡು ಅನುಪ್ರೇಕ್ಷೆಗಳನ್ನು ಜಿನಾಗಮಕ್ಕೆ ಅನುಸರಿಸಿ ವರ್ಣಿಸಲಾಗಿದೆ ಇವುಗಳನ್ನು ಪಾರಮಾಡುವವನೂ ಪಾರಮಾಡಿದ್ದನ್ನು ಕೇಳುವವನೂ ಪರಮಸುಖವನ್ನು ಹೊಂದುವನು. ॥ ೪೭ ॥

—ಸ್ವಾಮಿ ಕಾರ್ತಿಕೇಯಕೃತ ಅನುಪ್ರೇಕ್ಷಾ

## ೮. ಪರೀಷಹಗಳು

ಉತ್ತರಾಧ್ಯಯನ ಸೂತ್ರ—[ಸುಧರ್ಮ ಸ್ವಾಮಿಯು ಜಂಬೂ ಸ್ವಾಮಿಗೆ ಉಪದೇಶ ಮಾಡುತ್ತಾನೆ—] ಎಲೈ ಜಂಬೂ, ಪರೀಷಹಗಳ ಯಾವ ವಿಭಾಗವನ್ನು ಭಗವಾನ್ ಕಾಶ್ಯಪನು ವರ್ಣನೆಯನ್ನು ಮಾಡಿರುವನೋ ಅದನ್ನು ನಾನು ನಿನಗೆ ಹೇಳುನೆನು ನೀನು ಇದನ್ನು ಲಕ್ಷ್ಯವಿಟ್ಟು ಕೇಳು ॥ ೧ ॥ ಕ್ಷುಧಾ ಪರೀಷಹ—ಅತ್ಯಂತ ಹಸಿವೆಯಿಂದ ಶರೀರವು ಪೀಡಿತವಾಗಿದ್ದರೂ ಆತ್ಮ ಶಕ್ತಿಧಾರಿಯಾದ ತಪಸ್ವೀ ಭಿಕ್ಷುಕನು ಯಾವ ವನಸ್ಪತಿಯನ್ನು ಸ್ವತಃ ತಾನು ಕಡಿಯುವದಿಲ್ಲ, ಅನ್ಯರಿಂದ ಕಡಿಯಿಸುವುದೂ ಇಲ್ಲ ಅಲ್ಲದೆ ತಾನು ಬೇಯಿಸುವದಿಲ್ಲ, ಇನ್ನೊಬ್ಬರಿಂದ ಬೇಯಿಸಹಚ್ಚುವುದೂ ಇಲ್ಲ ॥ ೨ ॥ ಶರೀರದ ಭಾಗಗಳೆಲ್ಲವೂ ಕೃಶವೂ ರಕ್ತ ಪ್ರವಾಹವು ತಡೆಯುವಂತೆಯೂ ಆದರೂ ಸಹ ಆಹಾರ ನೀರುಗಳಿಗಾಗಿ ಸಾಧುವು ದೀನ ಮನಸ್ಸಿನವನಾಗದೆ ವಿಹರಿಸುತ್ತಾನೆ. ॥ ೩ ॥ ತೃಷಾ ಪರೀಷಹ—ಅತ್ಯಂತ ನೀರಡಿಕೆಯಾದರೂ ಸಹ ಅನಾಚಾರಕ್ಕೆ ಹೆದರುವ ಹಾಗೂ ಅಸಂಯಮದ ಲಜ್ಜೆಯಿರುವ ಸಾಧುವು ತಣ್ಣೀರನ್ನು (ಸಚಿತ್ತ) ಎಂದೂ ಕುಡಿಯುವದಿಲ್ಲ ಅಚಿತ್ತ (ಜೀವ ರಹಿತ ಉಷ್ಣ) ಜಲ ಲಭಿಸುವಂತಿದ್ದರೆ ಶೋಧಮಾಡುವನು ॥ ೪ ॥ ನಿರ್ಜನವಾದ ಮಾರ್ಗದಲ್ಲಿ ನೀರಡಿಕೆಯಿಂದ ಕಳವಳಿಸಿದರೂ, ಬಾಯಿ ಒಣಗಿದರೂ ಸಹ ಸಾಧುವು ಮನಸ್ಸಿನಲ್ಲಿ ದೈನ್ಯ ಭಾವವನ್ನು ತಾರದೆ ಈ ಪರೀಷಹವನ್ನು ಪ್ರಸನ್ನಭಾವದಿಂದ ಸಹನಮಾಡುವನು. ॥ ೫ ॥ ಶೀತ ಪರೀಷಹ—ಹಳ್ಳಿ ಹಳ್ಳಿ ತಿರುಗುವಂದ ಮತ್ತು ಹಿಂಸಾದಿ ವ್ಯಾಪಾರವನ್ನು ಪೂರ್ಣ ತ್ಯಜಿಸಿದಂಥ ರೂಕ್ಷ (ಒಣಗಿದ) ಶರೀರಧಾರೀ ಭಿಕ್ಷುವು ಯಾವಾಗಾದರೊಮ್ಮೆ ಚಳಿಯು ಹತ್ತಿದರೆ ಅವನು ಜೈನ ಶಾಸನವನ್ನು ನೆನೆದು ಕಾಲಾತಿಕ್ರಮವನ್ನು—ಸ್ವರ್ದ ಸಮಯ ಕಳೆಯುವದನ್ನು—ಎಂದೂ ಮಾಡಲಾರನು ॥ ೬ ॥ ಚಳಿಯನ್ನು ನಿವಾರಿಸಿಕೊಳ್ಳಲಿಕ್ಕೆ ಯೋಗ್ಯ ಸ್ಥಾನವಿಲ್ಲ, ಶರೀರವನ್ನು ರಕ್ಷಿಸಿಕೊಳ್ಳಲಿಕ್ಕೆ ಯೋಗ್ಯ ಉಪಕರಣಗಳೂ ಇಲ್ಲ, ಅದಕ್ಕಾಗಿ ಬೆಂಕಿಯಿಂದ ಕಾಯಿಸಿಕೊಂಡು ಚಳಿಯನ್ನು ನಿವಾರಿಸಿಕೊಳ್ಳುನೆನೆಂದು ಭಿಕ್ಷುಕನು ಎಂದೂ ವಿಚಾರಮಾಡನು. ॥ ೭ ॥ ಉಷ್ಣ ಪರೀಷಹ—ಪರಿತಾಪದ ಉಷ್ಣತೆಯಿಂದ, ಉರಿಯಿಂದ ಇಲ್ಲವೆ ಬೇಸಿಗೆಯ ಕಾಲದ ಕಾವಿನಿಂದ ವ್ಯಾಕುಲನಾಗಿ ಸಾಧುವು ಸುಖದ ಪರಿವೇದನಾ—(ಹಾಯ್, ಈ ತಾಪವು ಯಾವಾಗ ಶಾಂತವಾದೀತು' ಎಂಬ ಕ್ಲಾಂತ ವಚನ)—ಮಾಡಲಾರನು ॥ ೮ ॥ ತತ್ತ್ವಜ್ಞಾನಿಯಾದ ಮುನಿಯು ಉಷ್ಣತೆಯಿಂದ ಸಂತಾಪಗೊಂಡು ಸ್ನಾನಮಾಡುವ ಇಚ್ಛೆಯನ್ನು ಸಹ ಮಾಡಲಾರನು ಅಲ್ಲದೆ ತನ್ನ ಮೈಮೇಲೆ ನೀರನ್ನೂ ಸಿಂಪಡಿಸಿಕೊಳ್ಳಲಾರನು. ತನ್ನ ಮೇಲೆ ಗಾಳಿಯನ್ನೂ ಹಾಕಿಕೊಳ್ಳಲಾರನು ॥ ೯ ॥ ದಂಶಮಶಕ ಪರೀಷಹ—ಮಳೆಗಾಲದಲ್ಲಿ ಗುಂಗಾಡು ಸೊಣಗಳು ಕಡಿಯುವುದರಿಂದ ಮುನಿಗಳಿಗೆ ಎಷ್ಟೇ ಕಷ್ಟವಾಗಲಿ ಅವರು ಸಮಭಾವವನ್ನು ಕಾಯ್ದುಕೊಂಡೇ ಹೋಗುವರು ಕ್ರೋಧವೆಂಬ ಶತ್ರುವನ್ನು ಕೊಲ್ಲಲಿಕ್ಕೆ ರಣಭೂಮಿಯ ಮೇಲೆ ಮುಂದೆ ನಿಲ್ಲುವ ಆನೆಗಳಂತೆ ಧೀರರಾಗಿರುವರು ॥ ೧೦ ॥ ಧ್ಯಾನಾವಸ್ಥೆಯಲ್ಲಿ ತಮ್ಮ ರಕ್ತ ಹಾಗೂ ಮಾಂಸಗಳನ್ನು ತಿನ್ನುವ ಆ ಕ್ಷುದ್ರ

ಜೀವಿಗಳಿಗೆ ಆ ಸಾಧುವು ಕಷ್ಟಕೊಡುವದಿಲ್ಲ ಅವುಗಳನ್ನು ನಿವಾರಿಸುವದಿಲ್ಲ. ಅಲ್ಲದೆ ಸ್ವಲ್ಪವೂ ಕೂಡ ಅವುಗಳನ್ನು ದ್ವೇಷಿಸುವದಿಲ್ಲ. ಅದಕ್ಕಾಗಿ ಅವನು ಅವುಗಳನ್ನು ಉಪೇಕ್ಷಿಸುವನು. ಆದರೆ ಹಿಂಸೆಯನ್ನು ಎಂದೂ ಮಾಡನು. ॥೧೧॥ **ಅಚೇಲ ಪರೀಷಹ**—ವಸ್ತ್ರಗಳು ತೀರ ಹಳೆಯವಾದಾಗ ನಾನು ಅಚೇಲಕನಾಗುವೆ. ಇಲ್ಲವೆ ಸಚೇಲಕ ನಿಂತೇನು—ಇಂಥ ಚಿಂತೆಯನ್ನು ಸಾಧುವು ಎಂದೂ ಮಾಡಲಾರನು. ॥ ೧೨ ॥ ಕೆಲವೊಂದು ಅವಸ್ಥೆಯಲ್ಲಿ ವಸ್ತ್ರ ರಹಿತನಾಗಿರಲಿ, ಇನ್ನೂ ಕೆಲ ಅವಸ್ಥೆಗಳಲ್ಲಿ ವಸ್ತ್ರ ಸಹಿತನಾಗಿರಲಿ ಅವನ ಈ ಎರಡೂ ಸ್ಥಿತಿಗಳು ಧರ್ಮಕ್ಕಾಗಿ ಹಿತಕಾರಿಗಳಾಗಿವೆ ಇದನ್ನರಿತು ಜ್ಞಾನಿಗಳಾದ ಮುನಿಗಳು ದುಃಖವನ್ನು ಮಾಡಲಾರರು ॥ ೧೩ ॥ **ಅರತಿ ಪರೀಷಹ**—ಊರೂರು ತಿರುಗುವಂಥ, ಯಾವ ಒಂದು ಸ್ಥಳದಲ್ಲಿಯೂ ನಿಲ್ಲದಂಥ, ಪರಿಗ್ರಹರಹಿತ ಮುನಿಗಳಿಗೆ ಯಾವಗಾದರೊಮ್ಮೆ ಸಂಯಮದಿಂದ ಅರುಚಿಯು ಉತ್ಪನ್ನವಾದಲ್ಲಿ ಅದನ್ನು ಅವನು ಸಹನಮಾಡುವನು ॥ ೧೪ ॥ ವೈರಾಗ್ಯವಂತನೂ ಆತ್ಮಭಾವವನ್ನು ರಕ್ಷಿಸುವದರಲ್ಲಿ ನಿರತನೂ ಆರಂಭತ್ಯಾಗಿಯೂ ಕ್ರೋಧಾದಿ ಕಷಾಯಗಳಿಂದ ಶಾಂತನಾದ ಮುನಿಯು ಅರತಿಯನ್ನು ತ್ಯಜಿಸಿ, ಧರ್ಮವೆಂಬ ವನದಲ್ಲಿ ವಿಹರಿಸುತ್ತಾನೆ. ॥ ೧೫ ॥ **ಸ್ತ್ರೀ ಪರೀಷಹ**—ಈ ಸಂಸಾರದಲ್ಲಿ ಸ್ತ್ರೀಯರು ಪುರುಷನ ಆಸಕ್ತಿಸ್ಥಾನವಾಗಿದ್ದಾರೆ. ಇದನ್ನರಿತ ತ್ಯಾಗಿಯ ಸಾಧುತ್ವವು ಸಫಲವಾಗುತ್ತದೆ. ॥ ೧೬ ॥ ಹೀಗೆ ಭಾವಿಸಿ ಕುಶಲ ಸಾಧುವು ಸ್ತ್ರೀಯರ ಸಂಗವು ಮಲಿನವೆಂದು ತಿಳಿದು, ಅದರಲ್ಲಿ ತೊಡಗಲಾರನು. ಆತ್ಮವಿಕಾಸದ ಮಾರ್ಗವನ್ನು ಶೋಧಿಸಿ ಸಂಯಮದಲ್ಲಿಯೇ ಬಾಳುವನು ॥ ೧೭ ॥ **ಚರ್ಯಾ ಪರೀಷಹ**—ಸಂಯಮಿಯಾದ ಸಾಧುವು ಪರೀಷಹಗಳನ್ನು ಗೆದ್ದು ಹಳ್ಳಿ, ಪಟ್ಟಣ, ವ್ಯಾಪಾರಕೇಂದ್ರ, ರಾಜಧಾನಿಗಳಲ್ಲಿ ಒಬ್ಬನೇ ಸಂಚರಿಸುವನು. ॥ ೧೮ ॥ ಯಾರೊಡನೆಯೂ ಸಮಾನತೆಯ ಭಾವವನ್ನು ತಾಳದೆ ಭಿಕ್ಷುವು ಏಕಾಕಿಯಾಗಿ—ರಾಗದ್ವೇಷ ರಹಿತನಾಗಿ—ವಿಹಾರಮಾಡುವನು. ಅವನು ಯಾವ ಸ್ಥಾನದ ಮೇಲೆಯೂ ಮಮತೆಯನ್ನು ಮಾಡುವದಿಲ್ಲ. ಅಲ್ಲದೆ ಗೃಹಸ್ಥರಿಂದ ಅನಾಸಕ್ತನಾಗಿರುವನು ಮೇಲಾಗಿ ದೇಶ, ಕಾಲಗಳ ಪ್ರಮಾಣವನ್ನು ಮಾಡದೆ ಪ್ರಯಾಣವನ್ನು ಮಾಡಲಾರನು. ॥ ೧೯ ॥ **ನಿಷದ್ಯಾ ಪರೀಷಹ**—ಸ್ಮಶಾನ, ಶೂನ್ಯ (ನಿರ್ಜನ) ಗೃಹ ಅಥವಾ ಗಿಡದ ಆಶ್ರಯದಲ್ಲಿ ಒಬ್ಬೊಂಟಿಗನಾಗಿ ಸಾಧುವು ಶರೀರದ ಕುಚೇಷ್ಟೆಗಳನ್ನೆಲ್ಲ ನಿಲ್ಲಿಸಿ, ಸ್ಥಿರ ಆಸನದಿಂದ ಕುಳಿತುಕೊಳ್ಳಬೇಕು. ಅನ್ಯರಿಗೆ ಸ್ವಲ್ಪವೂ ಸಹ ಕಷ್ಟವನ್ನು ಕೊಡಕೂಡದು ॥ ೨೦ ॥ ಹಾಗೆ ಕುಳಿತಲ್ಲಿ ಅವನ ಮೇಲೆ ಉಪಸರ್ಗವು—ತಿಳಿದೂ ತಿಳಿದೂ ಅನ್ಯರು ಕೊಟ್ಟ ಕಷ್ಟ—ಒದಗಿದಲ್ಲಿ ಅದನ್ನು ದೃಢ ಮನಸ್ಸಿನಿಂದ ಸಹನಮಾಡಬೇಕು ಆದರೆ ವಿಪತ್ತಿಯ ಸಂಶಯದಿಂದ ಹೆದರಿ ಇನ್ನೊಂದು ಸ್ಥಳಕ್ಕೆ ಹೋಗಕೂಡದು ಇಲ್ಲವೆ ಸ್ಥಳ ಬಿಟ್ಟು ಅನ್ಯ ಆಸನವನ್ನು ಸ್ವೀಕರಿಸ-ಕೂಡದು. ॥ ೨೧ ॥ **ಶಯ್ಯಾ ಪರೀಷಹ**—ಸಾಮರ್ಥ್ಯವುಳ್ಳ ತಪಸ್ವಿಯು ತನಗೆ ಅನುಕೂಲ ಅಥವಾ ಪ್ರತಿಕೂಲ ಹಾಸಿಗೆಯು ಲಭಿಸಿದರೂ ಸಹ ಅವನು ಕಾಲಧರ್ಮದ ಭಂಗವನ್ನು—ಕಾಲಾತಿಕ್ರಮ—ಮಾಡಲಾರನು ಯಾಕಂದರೆ "ಈ ಸ್ಥಾನವು ಚೆನ್ನಾಗಿದೆ, ಇಲ್ಲಿ ಹೆಚ್ಚು ಕಾಲ ಉಳಿಯಬೇಕು, ಇಲ್ಲಿ ಸ್ಥಾನವು ಒಳ್ಳೆಯದಿಲ್ಲ ಇದರಿಂದ ಬೇಗನೇ ಹೋಗೋಣ . . ."'—ಎಂಬ ಪಾಪ ದೃಷ್ಟಿಯನ್ನು ಇಟ್ಟುಕೊಳ್ಳುವಂಥ ಸಾಧುವು ಕೊನೆಗೆ ಆಚಾರದಲ್ಲಿ ಶಿಥಿಲನಾಗಿ ಹೋಗುತ್ತಾನೆ ॥ ೨೨ ॥ ಶೂನ್ಯ ಹಾಗೂ ತ್ಯಕ್ತ ಗೃಹವನ್ನು ನೋಡಿ ಅದು ಒಳ್ಳೆಯದಿರಲಿ, ಕೆಟ್ಟದ್ದೇ ಇರಲಿ ಅಲ್ಲಿ ವಾಸಿಸಬೇಕು. "ಇಲ್ಲಿ ಒಂದು ರಾತ್ರಿಯನ್ನು ಕಳೆಯುವುದರಿಂದ ನನಗೇನು ಅಂಥ ದುಃಖವಾಗುವದಿದೆ?"—ಎಂಬ ಭಾವನೆಯನ್ನು ಇಟ್ಟು ಅಲ್ಲಿ ವಾಸಮಾಡಬೇಕು. ॥ ೨೩ ॥ **ಆಕ್ರೋಶ ಪರೀಷಹ**—ಯಾರಾದರೂ ಭಿಕ್ಷುವಿಗೆ ಕೆಟ್ಟ ಶಬ್ದಗಳನ್ನು ಆಡಿದರೆ ಸಾಧುವು ತಿರುಗಿ ಅವರಿಗೆ ಕಠೋರ ಶಬ್ದಗಳನ್ನು ಆಡಕೂಡದು. ಸಿಟ್ಟನ್ನೂ ಸಹ ಮಾಡಕೂಡದು ಯಾಕಂದರೆ ಹಾಗೆ ಮಾಡುವುದರಿಂದ ಅವನೂ ಕೂಡ ಆ ಹೀನರ ಸಮಾನನೇ ಆಗುವನು ,ಅದಕ್ಕಾಗಿ ತಿಳುವಳಿಕೆಯುಳ್ಳ ಭಿಕ್ಷುವು ಸಿಟ್ಟನ್ನು ಮಾಡುವದಿಲ್ಲ ॥ ೨೪ ॥ ಕಠೋರ, ಭಯಂಕರ ಹಾಗೂ ಕೇಳಲಿಕ್ಕೆ ಕಷ್ಟಕರವಾದ ಮಾತುಗಳನ್ನು ಕೇಳಿ ಭಿಕ್ಷುವು ಮೌನ. ಧಾರಣಮಾಡಬೇಕು. ಆ ಮಾತುಗಳನ್ನು ಉಪೇಕ್ಷಿಸಬೇಕು ಅವುಗಳಿಗೆ ಮನಸ್ಸಿನಲ್ಲಿ ಸ್ಥಾನವನ್ನೂ ಕೊಡಕೂಡದು ॥ ೨೫ ॥ **ವಧ ಪರೀಷಹ**—ಯಾರು ಹೊಡೆದರೂ ಬಡೆದರೂ ಸಹ ಸಾಧುವು ಮನಸ್ಸಿನಲ್ಲಿ ಸಿಟ್ಟಿಗೆ ಬರುವದಿಲ್ಲ. ಅಲ್ಲದೆ ಹೊಡೆಯುವವರ ವಿಷಯದಲ್ಲಿ ಸ್ವಲ್ಪವೂ ಕೂಡ ದ್ವೇಷವನ್ನು ಮಾಡುವದಿಲ್ಲ ಸಹನ ಶೀಲತೆಯೇ—ತಿತಿಕ್ಷಾ—ಉತ್ತಮ ಧರ್ಮವೆಂದು ನಂಬಿ ಅದನ್ನಾಚರಿಸುತ್ತಾರೆ. ॥ ೨೬ ॥ ಸಂಯಮಿಯೂ ಮತ್ತು ದಾಂತ (ಇಂದ್ರಿಯಗಳನ್ನು ದಮನಮಾಡುವಂಥವ) ಸಾಧುವನ್ನು ಯಾವನಾದರೂ ಹೊಡೆಯಲಿ ಇಲ್ಲವ ಕೊಲ್ಲಲಿ, ಅವನು ಮನಸ್ಸಿನಲ್ಲಿ 'ಈ ಆತ್ಮವು ಎಂದೂ ನಾಶಹೊಂದುವದಿಲ್ಲ'

ಎಂಬ ಭಾವನೆಯನ್ನಿಟ್ಟು ಸಂಯಮವನ್ನು ಪಾಲಿಸುವನು. ‖ ೨೭ ‖ ಯಾಚನಾ ಪರೀಷಹ—ಗೃಹತ್ಯಾಗಿಯಾದ ಭಿಕ್ಷುಕನ ಜೀವನವು ಯಾವಾಗಲೂ ಕಠಿಣವಾಗಿರುತ್ತದೆ ಯಾಕಂದರೆ ಅವನು ಎಲ್ಲವನ್ನೂ ಬೇಡಿಯೇ ಪಡೆಯ-ಬೇಕಾಗುತ್ತದೆ. ಅವನು ಬೇಡದ ಹೊರತಾಗಿ ಏನೂ ಲಭಿಸುವದಿಲ್ಲ. ‖ ೨೮ ‖ ಭಿಕ್ಷೆಗಾಗಿ ಗೃಹಸ್ಥನ ಮನೆಗೆ ಹೋಗಿ ಭಿಕ್ಷುವು ಕೈಯನ್ನು ನೀಡಬೇಕಾಗುತ್ತದೆ ಇದು ರುಚಿಕರ ಕಾರ್ಯವಲ್ಲ ಅದಕ್ಕಾಗಿ ಸಾಧುತ್ವಕ್ಕಿಂತ ಗೃಹ ಜೀವನವೇ ಒಳ್ಳೆಯದೆಂದು ಸಾಧುಗಳು ಎಂದೂ ಭಾವಿಸಕೂಡದು ‖ ೨೯ ‖ ಅಲಾಭ ಪರೀಷಹ—ಗೃಹಸ್ಥರಲ್ಲಿ (ಬೇರೆ ಬೇರೆ ಸ್ಥಳಗಳಲ್ಲಿ) ಊಟಕ್ಕೆ ಸಿದ್ಧವಾಗುವ ಸಮಯದಲ್ಲಿ ಸಾಧುವು ಭಿಕ್ಷಾಚಾರಿಯಾಗಿ ಹೋಗಬೇಕು ಆದರೆ ಅಲ್ಲಿ ಭಿಕ್ಷೆ ಸಿಗಲಿ, ಸಿಗದೆ ಇರಲಿ, ಆದರೂ ಬುದ್ಧಿವಂತನಾದ ಭಿಕ್ಷುಕನು ದುಃಖದಿಂದ ಖಿನ್ನವಾಗುವದಿಲ್ಲ ‖ ೩೦ ‖ “ಇಂದು ನನಗೆ ಊಟ ಸಿಕ್ಕಲಿಲ್ಲ, ನಾಳೆ ಸಿಕ್ಕೀತು, ಹೋಗಲಿ ಒಂದು ದಿನ ಊಟ ಸಿಕ್ಕದಿದ್ದರೆ ಏನಾಗುವದು?”—ಹೀಗೆ ನಿಶ್ಚಿತವಾಗಿ ವಿಚಾರಮಾಡುವ ಸಾಧುವು ತನಗೆ ಆಹಾರ ಸಿಗದೆ ಇದ್ದುದಕ್ಕೆ ಎಂದೂ ದುಃಖ ಪಡುವದಿಲ್ಲ. ‖ ೩೧ ‖ ರೋಗ ಪರೀಷಹ—ಬೇನೆಯಿಂದ ಪೀಡಿತನಾದ ಭಿಕ್ಷುವು ಉತ್ಪನ್ನವಾದ ದುಃಖವನ್ನು ತಿಳಿದು ಮನಸ್ಸಿನಲ್ಲಿ ಸ್ವಲ್ಪವೂ ದೀನತೆಯನ್ನು ಹೊಂದುವದಿಲ್ಲ ತನ್ನ ಚಿತ್ತವನ್ನು ಅವಿಚಲಿತವಾಗಿ ಇಟ್ಟುಕೊಳ್ಳುವನು ಆ ರೋಗದಿಂದ ಹುಟ್ಟುವ ದುಃಖವನ್ನು ಸಮಭಾವದಿಂದ ಸಹನಮಾಡುವನು. ‖ ೩೨ ‖ ಭಿಕ್ಷುವು ಔಷಧದ ಇಚ್ಛೆಯನ್ನು ಮಾಡುವದಿಲ್ಲ ಆದರೆ ಆತ್ಮಶೋಧಕನಾಗಿ ಶಾಂತನಾಗಿರುವನು. ಸ್ವತಃ ಚಿಕಿತ್ಸೆಯನ್ನು ಮಾಡುವದಿಲ್ಲ, ಮಾಡಿಸಿಕೊಳ್ಳುವುದೂ ಇಲ್ಲ ಇದರಲ್ಲಿಯೇ ಅವನ ನಿಜವಾದ ಸಾಧುತ್ವವಿದೆ ‖ ೩೩ ‖ ತೃಣಸ್ಪರ್ಶ ಪರೀಷಹ—ವಸ್ತ್ರಗಳಿಲ್ಲದೆ ಇರುವಂಥವನೂ ರುಕ್ಷ ಶರೀರಿಯೂ ಆದ ಸಾಧುವು ಹುಲ್ಲಿನ ಮೇಲೆ ಮಲಗುವುದರಿಂದ ಶರೀರಕ್ಕೆ ಪೀಡೆಯು ಉಂಟಾಗುತ್ತದೆ ಹುಲ್ಲು ಮೈಗೆ ಚುಚ್ಚುತ್ತದೆ ಬಹಳ ಕಷ್ಟವಾಗುತ್ತದೆ, ನೋವಾಗುತ್ತದೆ, ಎಂದು ತಿಳಿದು ಹೆದರಿ ಸಾಧುವು ವಸ್ತ್ರ ಧಾರಣಮಾಡುವದಿಲ್ಲ ‖ ೩೪–೩೫ ‖ ಮಲ ಪರೀಷಹ—ಬೇಸಿಗೆ ಮಳೆಗಾಲಗಳಲ್ಲಿ ಬೆವರು, ಕೆಸರುಗಳಿಂದ ಮೈಯು ಮಲಿನವಾದಲ್ಲಿ ಬುದ್ಧಿವಂತನಾದ ಭಿಕ್ಷುವು ಸುಖಕ್ಕಾಗಿ ವ್ಯಗ್ರನಾಗದೆ—ಈ ಮಲವು ಹೇಗೆ ಹೋದೀತೆಂದು ಚಿಂತಿಸದೆ—ಇರುವನು ‖ ೩೬ ‖ ತನ್ನ ಕರ್ಮಕ್ಷಯದ ಇಚ್ಛೆಯುಳ್ಳ ಭಿಕ್ಷುವು ತನ್ನ ಅನುಪಮ ಆರ್ಯಧರ್ಮವನ್ನು ತಿಳಿದುಕೊಂಡು ಶರೀರದ ನಾಶವಾಗುವ ವರೆಗೂ ಮೈಮೇಲೆ ಮಲವನ್ನು ಧಾರಣಮಾಡುವನು ‖ ೩೭ ‖ ಸತ್ಕಾರ-ಪುರಸ್ಕಾರ ಪರೀಷಹ—ರಾಜ ಮಹಾರಾಜರೂ ಸಿರಿವಂತರೂ ನನಗೆ ವಂದಿಸಲಿ. ನನ್ನ ಸನ್ಮಾನಕ್ಕಾಗಿ ಎದುರುಗೊಳ್ಳಲಿಕ್ಕೆ ಬರಲಿ, ಊಟ ಮೊದಲಾದವುಗಳಿಗೆ ಆಮಂತ್ರಣ ಕೊಡಲಿ—ಇವೇ ಮೊದಲಾದ ಪ್ರಕಾರದ ಇಚ್ಛೆಯನ್ನು ಮಾಡಕೂಡದು ಹಾಗೆಯೇ ತನ್ನ ಸೇವೆಯನ್ನು ಮಾಡುವವರನ್ನು ಪ್ರೀತಿಸಕೂಡದು ‖ ೩೮ ‖ ಅಲ್ಪ ಕಷಾಯ ಹಾಗೂ ಅಲ್ಪ ಇಚ್ಛೆಯುಳ್ಳ, ಅಜ್ಞಾನ ಗೃಹಸ್ಥನಲ್ಲಿ ಗೋಚರಿಗಾಗಿ ಹೋಗುವಂಥವನೂ ಅಲ್ಲದೆ ಸ್ವಾದಿಷ್ಟ ಪಕ್ವಾನ್ನದ ಲೋಲುಪತೆಯು ಇಲ್ಲದವನೂ ಆದ ಪ್ರಜ್ಞಾವಾನ್ ಭಿಕ್ಷುಕನು ರಸಗಳಲ್ಲಿ ಆಸಕ್ತನಾಗಿರುವದಿಲ್ಲ ಆಹಾರವು ಲಭಿಸದಿದ್ದರೂ ದುಃಖವನ್ನು ಹೊಂದುವದಿಲ್ಲ ಅನ್ಯ ಯಾವ ಸಾಧುವಿನ ಉತ್ಕರ್ಷವನ್ನು ಕಂಡು ಇವನು ಈರ್ಷ್ಯಾ ಭಾವವನ್ನು ಹೊಂದುವದಿಲ್ಲ ‖ ೩೯ ‖ ಪ್ರಜ್ಞಾ-ಪರೀಷಹ—ಅಜ್ಞಾತವಾಗಿದ್ದು ಫಲವನ್ನು ಕೊಡುವಂಥ ಕರ್ಮವನ್ನು ನಾನು ಮಾಡಿದ್ದೇನೆ ಅದರಿಂದ ಯಾರು ಏನು ಹೇಳಿದರೂ ಅದು ನನಗೆ ತಿಳಿಯುವದಿಲ್ಲ. ಅದರ ಉತ್ತರವನ್ನೂ ನನಗೆ ಕೊಡಲಿಕ್ಕೆ ಆಗುವದಿಲ್ಲ ‖ ೪೦ ‖ ಆದರೆ ಮುಂದೆ ಜ್ಞಾನವನ್ನು ಒದಗಿಸುವ ಕರ್ಮದ ಉದಯವಾಗುವದು—ಈ ಪ್ರಕಾರ ಕರ್ಮವಿಪಾಕವನ್ನು ಚಿಂತಿಸಿ ಭಿಕ್ಷುವು ತನ್ನ ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳಬೇಕು ‖ ೪೧ ‖ ಅಜ್ಞಾನ ಪರೀಷಹ—“ನಾನು ವ್ಯರ್ಥವಾಗಿ ಮೈಥುನದಿಂದ ನಿವೃತ್ತನಾದೆ—ಗೃಹಸ್ಥಾಶ್ರಮವನ್ನು ಬಿಟ್ಟು ಬ್ರಹ್ಮಚರ್ಯವನ್ನು ಧಾರಣಮಾಡಿದೆ—ಇಂದ್ರಿಯಗಳ ದಮನವನ್ನು ವ್ಯರ್ಥವಾಗಿ ಮಾಡಿದೆ, ಧರ್ಮವು ಕಲ್ಯಾಣಕಾರಿಯೋ ಅಕಲ್ಯಾಣಕಾರಿಯೋ ಇದು ಪ್ರತ್ಯಕ್ಷ ರೂಪದಿಂದ ಏನೂ ತಿಳಿದು ಬರುವದಿಲ್ಲ, ಅಂದ ಮೇಲೆ ಕಷ್ಟವನ್ನು ಏಕೆ ಮಾಡಬೇಕು? ತಪಸ್ಸನ್ನು ಆಚರಿಸಿಯೂ ಕೂಡ ಸಾಧುವಾಗಿ ಸಂಚರಿಸಿದರೂ ಸಹ ನನ್ನ ಅಜ್ಞಾನವು ಏಕೆ ದೂರವಾಗುವದಿಲ್ಲ? ಅದಕ್ಕೆಂದೇ ಪರಲೋಕವೂ ಇಲ್ಲ, ತಪಸ್ಸಿನ ಋದ್ಧಿ ಸಿದ್ಧಿಗಳೆಂಬಿವೂ ಇಲ್ಲ, ಸಾಧುತ್ವವನ್ನು ಸ್ವೀಕರಿಸಿ ಮೋಸ ಹೋದೆ—ಈ ಪ್ರಕಾರ ವಿಚಾರಗಳನ್ನು ಸಾಧುವು ಮನಸ್ಸಿನಲ್ಲಿ ಎಂದೂ ತರಕೂಡದು ‖ ೪೨–೪೩–೪೪ ‖ ಅದರ್ಶನ ಪರೀಷಹ—ಬಹಳ ಜನ ತೀರ್ಥಂಕರರು ಆಗಿದ್ದಾರೆ, ಆಗುತ್ತಿದ್ದಾರೆ, ಆದಾರು, ಹೀಗೆ ಯಾರು ಹೇಳುವರೋ ಅದು

ಸುಳ್ಳಿದೆ—ಇಂದೆ ವಿಚಾರವನ್ನು ಭಿಕ್ಷುವು ಎಂದೂ ಮಾಡನು ॥ ೪೫ ॥ ಕಾಶ್ಯಪ ಭಗವಾನ್ ಮಹಾವೀರನು ಈ ಎಲ್ಲ ಪರೀಷಹಗಳನ್ನು ಹೇಳಿದ್ದಾನೆ ಇವುಗಳಲ್ಲಿ ಯಾವುದೇ ಪರೀಷಹದಿಂದ ಪೀಡಿತನಾಗಿ ಭಿಕ್ಷುವು ತನ್ನ ಸಂಯಮವನ್ನು ಘಾತಮಾಡಿಕೊಳ್ಳಕೂಡದು. ॥ ೪೬ ॥

—ಉತ್ತರಾಧ್ಯಯನ ಸೂತ್ರ–೨

## ೯. ಆರು ದ್ರವ್ಯ, ಏಳು ತತ್ತ್ವ ಮತ್ತು ಒಂಭತ್ತು ಪದಾರ್ಥ

ಯಾರು ಜೀವ ಮತ್ತು ಅಜೀವ ದ್ರವ್ಯಗಳ ನಿರೂಪಣೆಯನ್ನು ಮಾಡಿರುವರೋ, ಯಾರಿಗೆ ದೇವ ಹಾಗೂ ಇಂದ್ರರ ಸಮೂಹವು ನಮಸ್ಕಾರ ಮಾಡುವುದೋ ಆ ಜಿನೇಂದ್ರ ಭಗವಾನರಿಗೆ ನಿತ್ಯವೂ ನಮಸ್ಕಾರ ಮಾಡುವೆ ॥ ೧ ॥ ಜೀವ—ಜೀವವು ದರ್ಶನ ಮತ್ತು ಜ್ಞಾನರೂಪ ಉಪಯೋಗಮಯವಾಗಿದೆ, ಅಮೂರ್ತಿಕವಾಗಿದೆ, ಕರ್ಮದ ಕರ್ತೃವಾಗಿದೆ, ಸ್ವದೇಹ ಪರಿಮಾಣವಾಗಿದೆ, ಕರ್ಮಫಲದ ಭೋಕ್ತೃವಾಗಿದೆ ಜನ್ಮಮರಣರೂಪ ಸಂಸಾರದಲ್ಲಿದೆ, ಸಿದ್ಧನಾದ ಮೇಲೆ ಸ್ವಭಾವತಃ ಊರ್ಧ್ವಗಾಮಿಯಾಗಿದೆ. ॥ ೨ ॥ ಅದರ ಭೂತ, ವರ್ತಮಾನ, ಭವಿಷ್ಯಕಾಲಗಳಲ್ಲಿ ಸ್ಪರ್ಶನವೇ ಮೊದಲಾದ ಐದು ಇಂದ್ರಿಯಗಳೂ, ಮನ, ವಚನ ಮತ್ತು ಕಾಯರೂಪ ಬಲವೂ, ಭವಧಾರಣೆಯ ಶಕ್ತಿರೂಪ ಆಯುಷ್ಯವೂ, ಶ್ವಾಸೋಚ್ಛ್ವಾಸರೂಪ ಆನಪ್ರಾಣವೂ ಇರುತ್ತವೆ ಈ ನಾಲ್ಕು ಪ್ರಕಾರದ ಪ್ರಾಣಗಳುಳ್ಳುದಕ್ಕೆ ವ್ಯವಹಾರ ನಯದ ಅಪೇಕ್ಷೆಯಿಂದ ಜೀವವೆನ್ನುವರು. ಆದರೆ ನಿಶ್ಚಯ ನಯದ ದೃಷ್ಟಿಯಿಂದ ಚೈತನ್ಯಮಯವಾದುದು ಜೀವವೆಂದು ಹೇಳಲಾಗಿದೆ ॥ ೩ ॥ ಉಪಯೋಗವು ಎರಡು ವಿಧವಾಗಿದೆ–ದರ್ಶನ ಮತ್ತು ಜ್ಞಾನ. ದರ್ಶನದಲ್ಲಿ ಚಕ್ಷು ದರ್ಶನ, ಅಚಕ್ಷು ದರ್ಶನ, ಅವಧಿ ದರ್ಶನ ಮತ್ತು ಕೇವಲ ದರ್ಶನವೆಂದು ನಾಲ್ಕು ಪ್ರಕಾರಗಳಾಗಿವೆ. ॥ ೪ ॥ ಇನ್ನು ಜ್ಞಾನವು ಎಂಟು ವಿಧವಾಗಿದೆ—(೧) ಮತಿ ಅಜ್ಞಾನ, (೨) ಶ್ರುತ ಅಜ್ಞಾನ, (೩) ಅವಧಿ ಅಜ್ಞಾನ, (೪) ಮತಿ ಜ್ಞಾನ, (೫) ಶ್ರುತ ಜ್ಞಾನ, (೬) ಅವಧಿ ಜ್ಞಾನ, (೭) ಮನಃ ಪರ್ಯಾಯ ಜ್ಞಾನ, (೮) ಕೇವಲ ಜ್ಞಾನ. ಈ ಜ್ಞಾನಗಳು ಪ್ರತ್ಯಕ್ಷ ಹಾಗೂ ಪರೋಕ್ಷಗಳ ಭೇದದಿಂದ ಎರಡು ವಿಧವಾಗಿವೆ ಮತಿ ಮತ್ತು ಶ್ರುತ ಜ್ಞಾನಗಳು ಇಂದ್ರಿಯ ಹಾಗೂ ಮನಸ್ಸಿನ ಸಹಾಯದಿಂದ ಆಗುವವು ಅದರಿಂದ ಅವು ಪರೋಕ್ಷ ಜ್ಞಾನಗಳಾಗಿವೆ ಅವಧಿ, ಮನಃಪರ್ಯಯ, ಕೇವಲ ಜ್ಞಾನಗಳು ಪ್ರತ್ಯಕ್ಷ ಆತ್ಮನ ವಿಶುದ್ಧಿಯಿಂದ ಉತ್ಪನ್ನವಾಗುತ್ತವೆ ಅದರಿಂದ ಪ್ರತ್ಯಕ್ಷವೆಂದು ಹೇಳಲಾಗಿದೆ ॥ ೫–೬ ॥ ಹಸಿರು, ಹಳದಿ, ನೀಲಿ, ಕೆಂಪು ಮತ್ತು ಕಪ್ಪು ಇವು ಐದು ವರ್ಣ, ಖಾರ, ಕಹಿ, ಉಪ್ಪು, ಸೀ, ಹುಳಿ ಇವು ಐದು ರಸಗಳು; ಸುಗಂಧ ಮತ್ತು ದುರ್ಗಂಧ ಎಂಬೆರಡು ರಸಗಳು, ಹಾಗೆಯೇ ಶೀತ, ಉಷ್ಣ, ಜಿಗಟು, ಒಣ, ಕೋಮಲ, ಕಠೋರ, ಹಗುರು, ಜಡ ಇವು ಎಂಟು ಸ್ಪರ್ಶಗಳು; ಇವು ಇಪ್ಪತ್ತು ಅಜೀವ ಮೂರ್ತಿಕ ಪದಾರ್ಥದ ಗುಣಗಳು ಜೀವದಲ್ಲಿ ಇಲ್ಲ. ಅದಕ್ಕಾಗಿಯೇ ಜೀವವು ಅಮೂರ್ತಿಕವೆನಿಸಿದೆ ಆದರೆ ವ್ಯವಹಾರ ನಯದ ಅಪೇಕ್ಷೆಯಿಂದ ಜೀವದಲ್ಲಿ ಪುದ್ಗಲ ಕರ್ಮ ಪರಮಾಣುಗಳ ಬಂಧವಾಗುತ್ತದೆ ಇದರಿಂದ ಅದಕ್ಕೆ ಶರೀರ, ಇಂದ್ರಿಯ ಮೊದಲಾದವುಗಳ ಉತ್ಪತ್ತಿಯಾಗುತ್ತದೆ. ಈ ಅಪೇಕ್ಷೆಯಿಂದ ಜೀವವು ಮೂರ್ತಿಮಾನ್ ಎಂದೂ ಹೇಳಲಾಗುತ್ತದೆ. ॥ ೭ ॥ ವ್ಯವಹಾರ ನಯದ ಅಪೇಕ್ಷೆಯಿಂದ ಜೀವವು ಪುದ್ಗಲ ಕರ್ಮಾದಿಗಳ ಕರ್ತೃವಾಗಿದೆ ನಿಶ್ಚಯ ನಯದ ಅಪೇಕ್ಷೆಯಿಂದ ಜೀವವು ಚೇತನ ಕರ್ಮ ಅರ್ಥಾತ್ ಚಿಂತನಾತ್ಮಕ ಕ್ರಿಯೆಗಳ ಕರ್ತೃವಾಗಿದೆ ಶುದ್ಧ ನಯದ ಅಪೇಕ್ಷೆಯಿಂದ ಜೀವವು ಶುದ್ಧ ಭಾವಗಳ ಕರ್ತೃವಾಗಿದೆ ॥ ೮ ॥ ಜೀವವು ಎರಡು ಪ್ರಕಾರವೆನಿಸುತ್ತದೆ—ಸ್ಥಾವರ ಮತ್ತು ತ್ರಸ. ಪೃಥ್ವಿಕಾಯಿಕ, ಜಲಕಾಯಿಕ, ಅಗ್ನಿಕಾಯಿಕ, ವಾಯುಕಾಯಿಕ ಮತ್ತು ವನಸ್ಪತಿ ಕಾಯಿಕ ಈ ನಾನಾ ಪ್ರಕಾರದ ಏಕೇಂದ್ರಿಯ ಜೀವಗಳು ಸ್ಥಾವರವೆನಿಸುತ್ತವೆ ಹಾಗೆಯೇ ಶಂಖಾದಿಕ ದ್ವೀಂದ್ರಿಯ, ಇರುವೆ ಮೊದಲಾದ ತ್ರೀಂದ್ರಿಯ, ಭ್ರಮರ ಮೊದಲಾದ ಚತುರಿಂದ್ರಿಯ, ಪಶು ಪಕ್ಷಿಗಳಾದಿ ಪಂಚೇಂದ್ರಿಯ ಜೀವಗಳು ತ್ರಸ ಎನಿಸುತ್ತವೆ ॥ ೯ ॥ ಅಜೀವ—ಈ ದ್ರವ್ಯವು ಐದು ವಿಧವಾಗಿದೆ—ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ. ಇವುಗಳಲ್ಲಿ ಪುದ್ಗಲವು ಮೂರ್ತಿಕವಾಗಿದೆ. ಇದರಲ್ಲಿ ಐದು ವರ್ಣ, ಐದು ರಸ, ಎರಡು ಗಂಧ ಎಂಟು ಸ್ಪರ್ಶರೂಪ ಗುಣಗಳು ಕಂಡು ಬರುತ್ತವೆ. ಉಳಿದ ಧರ್ಮಾದಿ ದ್ರವ್ಯಗಳು ಅಮೂರ್ತವಾಗಿವೆ ॥ ೧೦ ॥ ಪುದ್ಗಲ—ಶಬ್ದ, ಬಂಧ, ಸೂಕ್ಷ್ಮ, ಸ್ಥೂಲ, ಸಂಸ್ಥಾನ, ಭೇದ, ಅಂಧಕಾರ, ಛಾಯಾ, ಉದ್ಯೋತ, ಆತಪ ಇವೆಲ್ಲವೂ ಪುದ್ಗಲ ದ್ರವ್ಯದ

ಪರ್ಯಾಯಗಳೇ ಆಗಿವೆ. ॥ ೧೧ ॥ ಧರ್ಮ—ಗಮನ ಮಾಡಲಪೇಕ್ಷಿಸುವ ಮೀನುಗಳಿಗೆ ನೀರು ಸಹಾಯಕ-ವಾಗಿರುವಂತೆ ಗತಿ ಕರ್ಮದಲ್ಲಿ ಪ್ರವೃತ್ತವಾಗಿರುವ ಪುದ್ಗಲ ಮತ್ತು ಜೀವಗಳ ಗಮನ ಕ್ರಿಯೆಗಳಲ್ಲಿ ಸಹಾಯಕವಾಗಿರುವ ದ್ರವ್ಯವು ಧರ್ಮವೆನಿಸುತ್ತದೆ. ಆದರೆ ಸ್ಥಿರವಾಗಿರುವ ಜೀವ ಮತ್ತು ಪುದ್ಗಲಗಳಿಗೆ ಅದು ಗಮನ ಮಾಡಿಸುವದಿಲ್ಲ ॥ ೧೨ ॥ ಅಧರ್ಮ—ದಾರಿಕಾರನಿಗೆ ಯಾವ ಪ್ರಕಾರ ನೆರಳು ನಿಲ್ಲಲಿಕ್ಕೆ ಕಾರಣವಾಗುತ್ತದೆಯೋ ಅದೇ ಪ್ರಕಾರ ಜೀವ ಹಾಗೂ ಪುದ್ಗಲ ದ್ರವ್ಯಗಳಿಗೆ ನಿಲ್ಲುವುದರಲ್ಲಿ ಅಧರ್ಮ ದ್ರವ್ಯವು ಸಹಕಾರಿ ಕಾರಣವಾಗಿದೆ ಆದರೆ ಅದು ಗಮನ ಮಾಡುವಂಥ ಜೀವವನ್ನು ಇಲ್ಲವೆ ಪುದ್ಗಲವನ್ನು ತಡೆದು ನಿಲ್ಲಿಸುವದಿಲ್ಲ. ॥ ೧೩ ॥ ಆಕಾಶ—ಜೀವಾದಿ ದ್ರವ್ಯಗಳಿಗೆ ಅವಕಾಶ ಕೊಡುವುದರಲ್ಲಿ ಸಮರ್ಥವಾದ ದ್ರವ್ಯವು ಆಕಾಶವೆನಿಸುತ್ತದೆ ಈ ಆಕಾಶವು ಎರಡು ವಿಧವಾಗಿದೆ—ಲೋಕಾಕಾಶ ಮತ್ತು ಅಲೋಕಾಕಾಶ ಆಕಾಶದ ಯಾವ ಭಾಗದಲ್ಲಿ ಧರ್ಮ, ಅಧರ್ಮ, ಕಾಲ, ಪುದ್ಗಲ ಮತ್ತು ಜೀವ ಈ ದ್ರವ್ಯಗಳು ಇರುವವೋ ಅದಕ್ಕೆ ಲೋಕವೆನ್ನುವರು ಇದನ್ನುಳಿದು ಇರುವ ಆಕಾಶದ ಭಾಗಕ್ಕೆ ಅಲೋಕಾಕಾಶವೆನ್ನುವರು ॥ ೧೪ ॥ ಕಾಲ—ದ್ರವ್ಯದ ಪರಿವರ್ತನವನ್ನು ಸೂಚಿಸುವಂದದು ಕಾಲವಾಗಿದೆ ಪದಾರ್ಥಗಳಲ್ಲಿ ಹಳೆ, ಹೊಸ ಭೇದಗಳನ್ನು ಪ್ರಕಟ ಮಾಡುವಂಥ ಪಲ, ಘಟಿಕಾ ಮೊದಲಾದವುಗಳು ಕಾಲ ವಿಭಾಗವಾಗುತ್ತವೆ. ಇದು ವ್ಯವಹಾರ ಕಾಲವೆನಿಸುತ್ತದೆ ಹಾಗೆಯೇ ಇದು ಅನ್ಯ ದ್ರವ್ಯಗಳ ಪರಿವರ್ತನದಲ್ಲಿ ಸಹಕಾರೀ ಕಾರಣವಾಗಿರುತ್ತದೆ ಇದೂ ಇದರ ಲಕ್ಷಣವಾಗಿರುತ್ತದೆ ಆದರೆ ಇದು ಪರಮಾರ್ಥ ಇಲ್ಲವೆ ನಿಶ್ಚಯಕಾಲವಾಗಿದೆ ॥ ೧೬ ॥ ಲೋಕಾಕಾಶದ ಪ್ರತಿಯೊಂದು ಪ್ರದೇಶದ ಮೇಲೆ ಒಂದೊಂದು ರತ್ನದ ರಾಶಿಗೆ ಸಮಾನವಾಗಿರುವ ಕಾಲಾಣು ದ್ರವ್ಯವು ಅಸಂಖ್ಯವಾಗಿದೆ ॥ ೧೭ ॥ ಇದು ದ್ರವ್ಯವಾಗಿದೆ ಅದಕ್ಕಾಗಿ ಜಿನೇಂದ್ರ ಭಗವಾನನು ಇದಕ್ಕೆ 'ಅಸ್ತಿ' ಎಂದು ಹೇಳುತ್ತಾನೆ. ಮತ್ತು ಇದು ಕಾಯದಂತೆ ಬಹು ಪ್ರದೇಶ ಉಳ್ಳದಾಗಿದೆ ಅದರಿಂದ ಇದು ಕಾಯವೆನಿಸುತ್ತದೆ. ಅಂದ ಮೇಲೆ ಯಾವ ದ್ರವ್ಯಗಳಲ್ಲಿ ಈ ಅಸ್ತಿತ್ವ ಮತ್ತು ಕಾಯತ್ವ ಈ ಎರಡೂ ಗುಣಗಳಿರುತ್ತವೆಯೋ ಅವು 'ಅಸ್ತಿಕಾಯ'ಗಳೆನಿಸುತ್ತವೆ ॥ ೧೮ ॥ ಪ್ರತಿಯೊಂದು ಜೀವದಲ್ಲಿಯೂ ಅಸಂಖ್ಯ ಪ್ರದೇಶಗಳು ಇವೆ ಹಾಗೆಯೇ ಧರ್ಮ, ಅಧರ್ಮ, ಆಕಾಶಗಳಲ್ಲಿ ಅನಂತ ಪ್ರದೇಶಗಳಿವೆ ಹೀಗಾಗಿ ಮೂರ್ತಿಕ ಪುದ್ಗಲ ದ್ರವ್ಯಗಳಲ್ಲಿ ಸಂಖ್ಯ, ಅಸಂಖ್ಯ ಮತ್ತು ಅನಂತ ಈ ಮೂರೂ ಪ್ರಕಾರದ ಪ್ರದೇಶಗಳು ನೋಡಲಿಕ್ಕೆ ದೊರೆಯುತ್ತವೆ ಆದರೆ ಕಾಲ ದ್ರವ್ಯವು ಏಕಪ್ರದೇಶಾತ್ಮಕವಾಗಿರುತ್ತದೆ ಆದರಿಂದ ಕಾಲವು 'ಅಕಾಯ'-ವೆನಿಸುತ್ತದೆ ॥ ೧೯ ॥ ಅಣುವು ಏಕ ಪ್ರದೇಶಿಯಾಗಿದೆ ಮತ್ತು ಎರಡು ಅಣುವೇ ಮೊದಲಾದ ಸ್ಕಂಧ ಪ್ರದೇಶದ ಭೇದದಿಂದ ಪುದ್ಗಲವು ಬಹು ಪ್ರದೇಶಿಯೂ ಆಗಿದೆ. ಹೀಗಾಗಿ ಅದು ಕಾಯದಂತೆ ಬಹು ಪ್ರದೇಶದ ಸಂಚಯರೂಪವಾಗಿರುವುದರಿಂದ ಸರ್ವಜ್ಞರು ಇದಕ್ಕೆ ಉಪಚಾರಕ್ಕಾಗಿ 'ಕಾಯ' ಎಂದು ಹೇಳುತ್ತಾರೆ. ॥ ೨೦ ॥ ಇನ್ನು ಜೀವ ಮತ್ತು ಅಜೀವ ದ್ರವ್ಯಗಳಿಗೆ ಆಗುವ ಆಸ್ರವ, ಬಂಧ, ಸಂವರ, ನಿರ್ಜರಾ, ಮೋಕ್ಷ, ಪುಣ್ಯ ಮತ್ತು ಪಾಪ ರೂಪದ ವಿಶೇಷ ಪರ್ಯಾಯಗಳನ್ನೂ ಸಂಕ್ಷೇಪವಾಗಿ ಹೇಳುವೆ ॥ ೨೧ ॥ ಆಸ್ರವ—ಜೀವವು ತನ್ನ ಯಾವ ಪರಿಣಾಮದಿಂದ ಕರ್ಮದ ಆಸ್ರವವನ್ನು ಮಾಡುವುದೋ ಅದಕ್ಕೆ ಜಿನ ಭಗವಾನನು ಭಾವಾಸ್ರವವೆಂದು ಹೇಳಿದ್ದಾನೆ ಹಾಗೂ ಈ ಪರಿಣಾಮದ ನಿಮಿತ್ತದಿಂದ ಯಾವ ಪುದ್ಗಲದ ಆಸ್ರವವಾಗುತ್ತದೆಯೋ ಅದು ದ್ರವ್ಯಾಸ್ರವವಾಗಿದೆ ॥ ೨೨ ॥ ಐದು ಪ್ರಕಾರದ ಮಿಥ್ಯಾತ್ವ (ವಿಪರೀತ, ಏಕಾಂತ, ವಿನಯ, ಸಂಶಯ ಮತ್ತು ಅಜ್ಞಾನ), ಐದು ಪ್ರಕಾರದ ಅವಿರತಿ (ಹಿಂಸೆ, ಕಳವು, ಸುಳ್ಳು, ಕುಶೀಲ, ಪರಿಗ್ರಹ), ಹದಿನೈದು ಪ್ರಕಾರದ ಪ್ರಮಾದಗಳು (ನಾಲ್ಕು ವಿಕಥೆ-ಸ್ತ್ರೀ ಕಥೆ, ಭಕ್ತ ಕಥೆ, ರಾಷ್ಟ್ರಕಥೆ, ರಾಜಕಥೆ; ನಾಲ್ಕು ಕಷಾಯ-ಕ್ರೋಧ, ಮಾನ, ಮಾಯಾ, ಮತ್ತು ಲೋಭಗಳ ಮಂದ ಉದಯ, ಐದು ಇಂದ್ರಿಯ-ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರ ಇವುಗಳ ಪ್ರವೃತ್ತಿ; ನಿದ್ರೆ ಮತ್ತು ಪ್ರಣಯ), ಮೂರು ಯೋಗಗಳು (ಮನ, ವಚನ, ಕಾಯಗಳ ಪ್ರವೃತ್ತಿಗಳು), ನಾಲ್ಕು ಕಷಾಯಗಳು (ಕ್ರೋಧ, ಮಾನ, ಮಾಯಾ, ಲೋಭಗಳ ತೀವ್ರ ಉದಯ) ಇವು ಮೇಲೆ ಹೇಳಿದ ಭಾವಾಸ್ರವದ ಭೇದಗಳಾಗಿವೆ ॥ ೨೩ ॥ ಜ್ಞಾನಾವರಣಾದಿ ಎಂಟು ಕರ್ಮಗಳ ಯೋಗ್ಯ ಪುದ್ಗಲ ದ್ರವ್ಯಗಳ ಆಸ್ರವವು ಅರ್ಥಾತ್ ಗ್ರಹಣ ಮಾಡುವಿಕೆಯು ದ್ರವ್ಯಾಸ್ರವವೆನಿಸುತ್ತದೆ ಇದರಲ್ಲಿ ಜಿನೇಂದ್ರ ಭಗವಾನನು ಅನೇಕ ಭೇದಗಳನ್ನು ಹೇಳಿದ್ದಾನೆ ॥ ೨೪ ॥ ಬಂಧ—ಯಾವ ಚೇತನ ಭಾವ ಅರ್ಥಾತ್ ಜೀವದ ಪರಿಣಾಮದಿಂದ ಕರ್ಮಬಂಧ-ವಾಗುವುದೋ ಅದಕ್ಕೆ ಭಾವಬಂಧವೆನ್ನುವರು ಕರ್ಮ ಮತ್ತು ಆತ್ಮ ಪ್ರದೇಶಗಳಲ್ಲಿ ಅನ್ಯೋನ್ಯ ಪ್ರವೇಶವು

ಯಾವುದರಿಂದ ಆಗುವುದೋ ಅದು ದ್ರವ್ಯಬಂಧವಾಗಿದೆ ॥ ೨೫ ॥ ಬಂಧವು ನಾಲ್ಕು ವಿಧವಾಗಿರುತ್ತದೆ–ಗ್ರಹಣ ಮಾಡಿದ ಪುದ್ಗಲ ಪರಮಾಣುಗಳಲ್ಲಿ ಜ್ಞಾನಾವರಣೀಯವೇ ಮೊದಲಾದ ವಿವಿಧ ಶಕ್ತಿಗಳು ಉತ್ಪನ್ನವಾಗುವುದು ಪ್ರಕೃತಿಬಂಧವಾಗಿದೆ, ಆ ಪರಮಾಣುಗಳು ಆತ್ಮಪ್ರದೇಶದೊಡನೆ ನಿಲ್ಲುವ ಕಾಲ ಮರ್ಯಾದೆಯು ನಿಶ್ಚಿತವಾಗುವುದು ಸ್ಥಿತಿಬಂಧವು, ಆ ಕರ್ಮಗಳಲ್ಲಿ ಹೆಚ್ಚು–ಕಡಿಮೆ ಫಲಕೊಡುವ ಶಕ್ತಿಯು ಉತ್ಪನ್ನವಾಗುವುದು ಅನುಭಾಗಬಂಧವಾಗಿದೆ; ಮತ್ತು ಗ್ರಹಣ ಮಾಡಿದ ಪರಮಾಣುಗಳ ಸಂಖ್ಯೆಯನ್ನು ನಿರ್ಧರಿಸುವದು ಪ್ರದೇಶಬಂಧವೆನಿಸುತ್ತದೆ. ಇವುಗಳಲ್ಲಿ ಪ್ರಕೃತಿ ಹಾಗೂ ಪ್ರದೇಶ ಬಂಧವು ಮನ, ವಚನ, ಕಾಯ ರೂಪ ಪ್ರವೃತ್ತಿರೂಪ ಯೋಗದಿಂದ ಉತ್ಪನ್ನ-ವಾಗುತ್ತದೆ ಇದು ಇನ್ನು ಸ್ಥಿತಿ ಹಾಗೂ ಅನುಭಾಗ ಬಂಧಗಳು ಕ್ರೋಧ, ಮಾನ, ಮಾಯಾ ಮತ್ತು ಲೋಭ ಕಷಾಯಗಳ ಉದಯಕ್ಕೆ ಅನುಸಾರವಾಗಿ ಆಗುತ್ತವೆ ॥ ೨೬ ॥ ಸಂವರ—ಜೀವದ ಯಾವ ಚೇತನ-ಭಾವ ಕರ್ಮದ ಆಸ್ರವವನ್ನು ತಡೆಯುವದರಲ್ಲಿ ಹೇತುವಾಗಿರುವುದೋ ಅದು ಭಾವ–ಸಂವರವಾಗಿದೆ ಯಾವುದು ಕರ್ಮ ಪರಮಾಣುಗಳ ಗ್ರಹಣ ಕ್ರಿಯೆಗೆ ಅವಿರೋಧವಾಗಿರುವುದೋ ಅದು ದ್ರವ್ಯ ಸಂವರವಾಗಿದೆ ॥ ೨೭ ॥ ಐದು ವ್ರತ, ಐದು ಸಮಿತಿ, ಮೂರು ಗುಪ್ತಿ, ಹತ್ತು ಧರ್ಮ, ಹನ್ನೆರಡು ಅನುಪ್ರೇಕ್ಷೆ ಹಾಗೂ ಇಪ್ಪತ್ತೆರಡು ಪರೀಷಹಗಳ ಜಯ, ಈ ನಾನಾ ಭೇದರೂಪ ಚಾರಿತ್ರವು ಬಾವ ಸಂವರದ ಪ್ರಕಾರವೆಂದು ತಿಳಿಯಬೇಕು. ॥ ೨೮ ॥ ನಿರ್ಜರಾ–ಜೀವದ ಯಾವ ಚೇತನ ಭಾವದಿಂದ ಕರ್ಮ ಪುದ್ಗಲವು ಕಳಚಿ ಹೋಗುವದೋ, ಅರ್ಥಾತ್ ಜೀವ ಪ್ರದೇಶದಿಂದ ಭಿನ್ನವಾಗಿ ಹೋಗುವುದೋ ಅದಕ್ಕೆ ಭಾವ ನಿರ್ಜರೆಯೆಂದು ಹೇಳುತ್ತಾರೆ ಈ ಭಿನ್ನವಾಗುವ ಕ್ರಿಯೆಗೆ ದ್ರವ್ಯ ನಿರ್ಜರೆ ಎನ್ನುವರು ಈ ನಿರ್ಜರೆಯು ಎರಡು ಕಾರಣಗಳಿಂದ ಆಗುತ್ತದೆ–ಒಂದು ಕರ್ಮದ ಕಾಲವು ತೀರಿದೊಡನೆ ನಿರ್ಜರೆಯಾಗುವುದು ಸವಿಪಾಕ ನಿರ್ಜರೆ ಎನಿಸುತ್ತದೆ ಇನ್ನೊಂದು ತಪದಿಂದ ಕಾಲಮರ್ಯಾದೆಯೂ ಪೂರ್ಣ-ವಾಗುವ ಪೂರ್ವದಲ್ಲಿಯೇ ನಿರ್ಜರೆಯಾಗುವದು ಅವಿಪಾಕ ನಿರ್ಜರೆಯಾಗಿದೆ ಇವೇ ನಿರ್ಜರೆಗಳು ಆತ್ಮ ವಿಶುದ್ಧಿಯಲ್ಲಿ ಕಾರಣವಾಗುತ್ತವೆ ॥ ೨೯ ॥ ಮೋಕ್ಷ—ಜೀವದ ಯಾವ ಪರಿಣಾಮವು ಸಮಸ್ತ ಕರ್ಮಗಳ ಕ್ಷಯಕ್ಕೆ ಕಾರಣೀಭೂತವಾಗುವುದೇ ಅದು ಭಾವಮೋಕ್ಷವೆನಿಸುತ್ತದೆ ಜೀವದಿಂದ ಕರ್ಮ ಪ್ರದೇಶಗಳು ಭಿನ್ನವಾಗುವುದು ದ್ರವ್ಯಮೋಕ್ಷವಾಗಿದೆ. ॥ ೩೦ ॥ ಪುಣ್ಯ ಪಾಪ—ಶುಭ ಭಾವದಿಂದ ಕೂಡಿದ ಜೀವವು ಪುಣ್ಯ ರೂಪವು ಮತ್ತು ಅಶುಭ ಭಾವದಿಂದ ಬೆರೆತ ಜೀವವು ಪಾಪರೂಪವಾಗುತ್ತದ ಜ್ಞಾನಾವರಣೀಯವೇ ಮೊದಲಾದ ಎಂಟು ಕರ್ಮಗಳ ಭೇದದಿಂದ ಸಾತಾವೇದನೀಯ, ಶುಭ ಅರ್ಥಾತ್ ತಿರ್ಯಗ್, ಮನುಷ್ಯ ಮತ್ತು ದೇವ ಈ ಮೂರು ಆಯುಷ್ಯಗಳು, ಮೂವತ್ತಾರು ಪ್ರಕಾರದ ಶುಭ ನಾಮ (ಮನುಷ್ಯ ಮತ್ತು ದೇವಗತಿಗಳು, ಪಂಚೇಂದ್ರಿಯ ಜಾತಿ, ಐದು ಶರೀರ, ಮೂರು ಅಂಗೋಪಾಂಗ ಇತ್ಯಾದಿ) ಮತ್ತು ಉಚ್ಚಗೋತ್ರ ಇವು ಪುಣ್ಯ ಕರ್ಮಪ್ರಕೃತಿಗಳಾಗಿವೆ. ಉಳಿದ ಜ್ಞಾನವರಣೀಯವೇ ಮೊದಲಾದ ಎಲ್ಲ ಪ್ರಕೃತಿಗಳು ಪಾಪವೆನಿಸುತ್ತವೆ ॥ ೩೧ ॥ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್ ಚಾರಿತ್ರ ಇವು ವ್ಯವಹಾರ ನಯದ ಅಪೇಕ್ಷೆಯಿಂದ ಮೋಕ್ಷಕ್ಕೆ ಕಾರಣವೆಂದು ತಿಳಿಯಬೇಕು ನಿಶ್ಚಯ ನಯದ ಅಪೇಕ್ಷೆಯಿಂದ ಈ ಮೂರೂ ಗುಣಗಳಿಂದ ಕೂಡಿದ ನಮ್ಮ ಆತ್ಮವೇ ಮೋಕ್ಷಕ್ಕೆ ಕಾರಣವಾಗಿದೆ ॥ ೩೨ ॥ ಜೀವವನ್ನುಳಿದು ಇನ್ನಾವ ದ್ರವ್ಯದಲ್ಲಿಯೂ ಸಮ್ಯಗ್‌ದರ್ಶನವೇ ಮೊದಲಾದ ರತ್ನತ್ರಯ-ಗಳು ಉಂಟಾಗುವದಿಲ್ಲ ಅದಕ್ಕಾಗಿ ಈ ಮೂರು ಗುಣಗಳಿಂದ ಕೂಡಿದ ಆತ್ಮವೇ ಮೋಕ್ಷಕ್ಕೆ ಕಾರಣವಾಗಿದೆ. ॥ ೩೩ ॥ ಜೀವಾದಿ ತತ್ತ್ವಗಳಲ್ಲಿ ಶ್ರದ್ಧೆಯನ್ನು ಇಡುವುದೇ ಸಮ್ಯಗ್‌ದರ್ಶನವಾಗಿದೆ ಮತ್ತು ಇದೇ ಆತ್ಮಸ್ವರೂಪವು ಅರ್ಥಾತ್ ಸ್ವರೂಪಾಚರಣ ಸಮ್ಯಕ್ತ್ವವಾಗಿದೆ. ಈ ಸಮ್ಯಕ್ತ್ವವಾದ ಮೇಲೆ ದುರಭಿನಿವೇಶ, ಸಂಶಯ, ವಿಮೋಹ, ವಿಭ್ರಮಗಳಿಂದ ರಹಿತ ಆತ್ಮ ಮತ್ತು ಪರ ಅರ್ಥಾತ್ ಜೀವ ಮತ್ತು ಅಜೀವ ದ್ರವ್ಯಗಳ ನಿಜ ಸ್ವರೂಪವು ಗ್ರಹಣವಾಗುವದು ಇದೇ ಸಾಕಾರ ಸಮ್ಯಗ್‌ಜ್ಞಾನವಾಗಿದೆ ಅದು ಮತಿ, ಶ್ರುತ ಇತ್ಯಾದಿ ಭೇದ ಪ್ರಭೇದಗಳಿಂದ ಅನೇಕ ಪ್ರಕಾರವಾಗಿದೆ. ॥ ೩೪–೩೫ ॥ ಅಶುಭ ಕಾರ್ಯಗಳಿಂದ ನಿವೃತ್ತಿ ಮತ್ತು ಶುಭಕಾರ್ಯಗಳಲ್ಲಿ ಪ್ರವೃತ್ತಿ ಇದಕ್ಕೆ ಸಮ್ಯಕ್‌ಚಾರಿತ್ರವೆನ್ನುವರು. ವ್ಯವಹಾರ ನಯದ ಅಪೇಕ್ಷೆಯಿಂದ ಜಿನ ಭಗವಂತನು ವ್ರತ, ಸಮಿತಿ, ಗುಪ್ತಿಗಳಿಗೆ ಸಮ್ಯಕ್ ಚಾರಿತ್ರವೆಂದು ಹೇಳಿದ್ದಾನೆ. ॥ ೩೬ ॥

—ನೇಮಿಚಂದ್ರಕೃತ ದವ್ವಸಂಗಹಂ.

## ೧೦. ಕರ್ಮ ಪ್ರಕೃತಿ

ಯಾವುದರಿಂದ ಕಟ್ಟಲ್ಪಟ್ಟ ಈ ಜೀವವು ಸಂಸಾರದಲ್ಲಿ ಪರಿಭ್ರಮಣ ಮಾಡುತ್ತಿದೆಯೋ ಆ ಎಂಟು ಕರ್ಮವನ್ನು ಕ್ರಮದಿಂದ ವರ್ಣಿಸುತ್ತೇನೆ ಅದನ್ನು ಧ್ಯಾನಕೊಟ್ಟು ಕೇಳಿರಿ ॥ ೧ ॥ ಜ್ಞಾನಾವರಣೀಯ, ದರ್ಶನಾವರಣೀಯ, ವೇದನೀಯ, ಮೋಹನೀಯ, ಆಯುಕರ್ಮ, ನಾಮಕರ್ಮ, ಗೋತ್ರಕರ್ಮ, ಅಂತರಾಯ ಕರ್ಮ—ಇವು ಎಂಟು ಕರ್ಮಗಳಾಗಿವೆ ॥ ೨-೩ ॥ ಐದು ಜ್ಞಾನಾವರಣೀಯ ಕರ್ಮಗಳು—(೧) ಮತಿ-ಜ್ಞಾನಾವರಣೀಯ, (೨) ಶ್ರುತಜ್ಞಾನಾವರಣೀಯ, (೩) ಅವಧಿ ಜ್ಞಾನಾವರಣೀಯ, (೪) ಮನಃಪರ್ಯಾಯ ಜ್ಞಾನಾವರಣೀಯ ಇವು ಐದು ಜ್ಞಾನಾವರಣೀಯದ ಭೇದಗಳಾಗಿವೆ ॥ ೪ ॥ ಒಂಭತ್ತು ದರ್ಶನಾವರಣೀಯ ಕರ್ಮಗಳು—(೧) ನಿದ್ರಾ, (೨) ಪ್ರಚಲಾ, (೩) ನಿದ್ರಾನಿದ್ರಾ, (೪) ಪ್ರಚಲಾಪ್ರಚಲಾ, (೫) ಸ್ತ್ಯಾನಗೃದ್ಧಿ, (೬) ಚಕ್ಷುದರ್ಶನಾವರಣೀಯ, (೭) ಅಚಕ್ಷುದರ್ಶನಾವರಣೀಯ, (೮) ಅವಧಿ ಜ್ಞಾನಾವರಣೀಯ, (೯) ಕೇವಲ ದರ್ಶನಾವರಣೀಯ ಇವು ದರ್ಶನಾವರಣೀಯ ಕರ್ಮದ ಒಂಭತ್ತು ಭೇದಗಳಾಗಿವೆ ॥ ೫-೬ ॥ ಎರಡು ವೇದನೀಯ ಕರ್ಮಗಳು—ಸಾತಾ ವೇದನೀಯ (ಭೋಗಿಸುವಾಗ ಸುಖ ಉತ್ಪನ್ನವಾಗುವಂಥದು) ಹಾಗೂ ಅಸಾತಾವೇದನೀಯ (ದುಃಖಕ್ಕೆ ಕಾರಣವಾದುದು) ಇವೆರಡೂ ವೇದನೀಯ ಕರ್ಮದ ಭೇದಗಳಾಗಿವೆ. ಇವೆರಡರಲ್ಲಿ ಅನೇಕ ಭೇದಗಳೂ ಇವೆ. ॥ ೭ ॥ ಇಪ್ಪತ್ತೈದು ಮೋಹನೀಯ ಕರ್ಮಗಳು—ಮೋಹನೀಯ ಕರ್ಮದಲ್ಲಿ ದರ್ಶನ ಮೋಹನೀಯ, ಚಾರಿತ್ರ ಮೋಹನೀಯ ವೆಂದು ಎರಡು ಭೇದಗಳಿವೆ. ದರ್ಶನ ಮೋಹನೀಯದಲ್ಲಿ ಮೂರು, ಚಾರಿತ್ರ ಮೋಹನೀಯದಲ್ಲಿ ಎರಡು ಉಪಭೇದಗಳಿವೆ ॥ ೮ ॥ ದರ್ಶನ ಮೋಹನೀಯದಲ್ಲಿ ಸಮ್ಯಕ್ತ್ವ ಮೋಹನೀಯ, ಮಿಥ್ಯಾತ್ವ ಮೋಹನೀಯ, ಸಮ್ಯಕ್ತ್ವ-ಮಿಥ್ಯಾತ್ವ ಮೋಹನೀಯ ಎಂಬ ಮೂರು ಭೇದಗಳಿವೆ ॥ ೯ ॥ ಚಾರಿತ್ರ ಮೋಹನೀಯದಲ್ಲಿ ಕಷಾಯ ಮೋಹನೀಯ ಹಾಗೂ ನೋಕಷಾಯ ಮೋಹನೀಯ ಎಂಬ ಎರಡು ಭೇದಗಳಿವೆ ॥ ೧೦ ॥ ಕ್ರೋಧ, ಮಾನ, ಮಾಯಾ ಮತ್ತು ಲೋಭ ಈ ನಾಲ್ಕು ಕಷಾಯಗಳ ಪ್ರತ್ಯೇಕ ಅನಂತಾನುಬಂಧೀ, ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಮತ್ತು ಸಂಜ್ವಲನದ ಭೇದದಿಂದ ಕಷಾಯಗಳಿಂದ ಹುಟ್ಟುವ ಕರ್ಮಗಳು ಹದಿನಾರು ಪ್ರಕಾರವಾಗಿರುತ್ತವೆ ಹಾಗೆಯೇ ಹಾಸ್ಯ, ರತಿ, ಅರತಿ, ಭೇದ, ಭಯ, ಗ್ಲಾನಿ, ವೇದ ಈ ಭೇದಗಳಿಂದ ಏಳು ವಿಧವಾಗಿರುತ್ತದೆ. ಅದರಂತೆಯೇ ವೇದದಲ್ಲಿಯೂ ಪುರುಷ, ಸ್ತ್ರೀ ಮತ್ತು ನಪುಂಸಕ ಭೇದದಿಂದ ಒಂಬತ್ತು ಪ್ರಕಾರ ನೋಕಷಾಯಗಳಿಂದ ಹುಟ್ಟಿದ ಕರ್ಮವಾಗಿದೆ ॥ ೧೧ ॥ ನಾಲ್ಕು ಪ್ರಕಾರದ ಆಯು ಕರ್ಮಗಳು—ನರಕಾಯು, ತಿರ್ಯಗಾಯು, ಮನುಷ್ಯಾಯು ಮತ್ತು ದೇವ ಆಯು ಇವು ಆಯು ಕರ್ಮದ ನಾಲ್ಕು ಭೇದಗಳಾಗಿವೆ ॥ ೧೨ ॥ ತೊಂಭತ್ತು ಮೂರು ನಾಮ ಕರ್ಮಗಳು—ನಾಮ ಕರ್ಮವು ಎರಡು ವಿಧ-ವಾಗಿದೆ—ಶುಭ ಮತ್ತು ಅಶುಭ ಇವೆರಡರಲ್ಲಿಯೂ ಅನೇಕ ಉಪಬೇದಗಳಿವೆ ॥ ೧೩ ॥ ನಾಮ ಕರ್ಮದಲ್ಲಿ ನಲವತ್ತೆರಡು, ಉಪಭೇದಗಳ ಅಪೇಕ್ಷೆಯಿಂದ ತೊಂಭತ್ತು ಮೂರು ಭೇದಗಳು ಈ ಪ್ರಕಾರ ಇರುತ್ತವೆ—(೧) ನಾಲ್ಕು ಗತಿಗಳು (ನರಕ, ತಿರ್ಯಕ್, ಮನುಷ್ಯ ಮತ್ತು ದೇವ), (೨) ಐದು ಜಾತಿಗಳು (ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ), (೩) ಐದು ಶರೀರ (ಔದಾರಿಕ, ವೈಕ್ರಿಯಿಕ, ಆಹಾರಕ, ತೈಜಸ ಮತ್ತು ಕಾರ್ಮಣ), (೪) ಔದಾರಿಕವೇ ಮೊದಲಾದ ಐದು ಶರೀರಗಳ ಐದು ಬಂಧನ ಮತ್ತು (೫) ಐದು ಸಂಘಾತ, (೬) ಆರು ಶರೀರ ಸಂಸ್ಥಾನ (ಸಮಚತುರಸ್ರ, ನ್ಯಗ್ರೋಧ ಪರಿಮಂಡಲ, ಸ್ವಾತಿ, ಕುಬ್ಜ, ವಾಮನ ಮತ್ತು ಹುಂಡ), (೭) ಮೂರು ಶರೀರಾಂಗೋಪಾಂಗ (ಔದಾರಿಕ, ವೈಕ್ರಿಯಿಕ, ಆಹಾರಕ), (೮) ಆರು ಸಂಹನನ-ಗಳು (ವಜ್ರ-ವೃಷಭ-ನಾರಾಚ, ನಾರಾಚ-ನಾರಾಚ, ನಾರಾಚ, ಅರ್ಧನಾರಾಚ, ಕೀಲಿತ, ಅಸಂಪ್ರಾಪ್ತಾಸ್ರಪಾಟಿಕಾ); (೯) ಐದು ವರ್ಣಗಳು (ಕೃಷ್ಣ, ನೀಲ, ರಕ್ತ, ಹರಿತ ಮತ್ತು ಶುಕ್ಲ), (೧೦) ಎರಡು ಗಂಧಗಳು (ಸುಗಂಧ ಮತ್ತು ದುರ್ಗಂಧ), (೧೧) ಐದು ರಸ (ಕಾರ, ಕಹಿ, ಹುಳಿ, ಸೀ, ಉಪ್ಪು); (೧೨) ಎಂಟು ಸ್ಪರ್ಶಗಳು (ಬಿರುಸು, ಮೆತ್ತಗೆ; ಜಡ, ಹಗುರು; ಒಣ, ಹಸಿ, ತಂಪು ಮತ್ತು ಕಾವು), ನಾಲ್ಕು ಆನುಪೂರ್ವಿಗಳು (ನರಕಗತಿಯೋಗ್ಯ, ತಿರ್ಯಗ್ಗತಿ ಯೋಗ್ಯ, ಮನುಷ್ಯ ಗತಿಯೋಗ್ಯ ಮತ್ತು ದೇವಗತಿಯೋಗ್ಯ), (೧೪) ಅಗುರುಲಘು, (೧೫) ಉಪಘಾತ, (೧೬) ಪರಘಾತ, (೧೭) ಉಚ್ಛ್ವಾಸ, (೧೮) ಆತಾಪ, (೧೯) ಉದ್ಯೋತ, (೨೦) ಎರಡು ವಿಹಾಯೋಗತಿ (ಪ್ರಶಸ್ತ ಮತ್ತು ಅಪ್ರಶಸ್ತ), (೨೧) ತ್ರಸ, (೨೨) ಸ್ಥಾವರ, (೨೩) ಬಾದರ, (೨೪) ಸೂಕ್ಷ್ಮ, (೨೫) ಪರ್ಯಾಪ್ತ, (೨೬)

ಅಪರ್ಯಾಪ್ತ, (೨೭) ಪ್ರತ್ಯೇಕ ಶರೀರ, (೨೮) ಸಾಧಾರಣ ಶರೀರ, (೨೯) ಸ್ಥಿರ, (೩೦) ಅಸ್ಥಿರ, (೩೧) ಶುಭ, (೩೨) ಅಶುಭ, (೩೩) ಸುಭಗ, (೩೪) ದುರ್ಭಗ (೩೫) ಸುಸ್ವರ, (೩೬) ದುಃಸ್ವರ, (೩೭) ಆದೇಯ, (೩೮) ಅನಾದೇಯ, (೩೯) ಯಶಃಕೀರ್ತಿ, (೪೦) ಅಯಶಃಕೀರ್ತಿ, (೪೧) ನಿರ್ಮಾಣ ಮತ್ತು (೪೨) ತೀರ್ಥಂಕರ. ಇನ್ನು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ ಇವು ನಾಲ್ಕಂತೂ ಜೀವದ ಗುಣವನ್ನು ಘಾತಮಾಡುವಂಥವಾಗಿವೆ. ಅದರಿಂದ ಇವುಗಳ ಉತ್ತರ ಪ್ರಕೃತಿಗಳೆಲ್ಲವೂ ಅಶುಭವಾಗಿವೆ ಎರಡು ಗೋತ್ರ ಕರ್ಮಗಳು—ಉಚ್ಚ ಮತ್ತು ನೀಚವೆಂದು ಗೋತ್ರಕರ್ಮದಲ್ಲಿ ಎರಡು ಭೇದಗಳಿವೆ ಜಾತಿ, ಕುಲ, ಧನ, ಪ್ರಭುತ್ವ, ರೂಪ, ಬಲ, ವಿದ್ಯೆ ಮತ್ತು ತಪ ಇವುಗಳ ಶ್ರೇಷ್ಠತೆಗೆ ಅನುಸರಿಸಿ ಉಚ್ಚ ಗೋತ್ರವು ಎಂಟು ಪ್ರಕಾರವಾಗಿದೆ ಹಾಗೆಯೇ ಇವುಗಳ ಹೀನತ್ವಕ್ಕೆ ಅನುಸರಿಸಿ ನೀಚ ಗೋತ್ರಗಳೂ ಸಹ ಎಂಟು ವಿಧವಾಗಿರುತ್ತವೆ. ॥ ೧೪ ॥ ಐದು ಅಂತರಾಯ ಕರ್ಮಗಳು—ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ಮತ್ತು ವೀರ್ಯಾಂತರಾಯ ಇವು ಅಂತರಾಯ ಕರ್ಮದ ಭೇದಗಳೆಂದು ಸಂಗ್ರಹವಾಗಿ ಹೇಳಲಾಗಿದೆ ॥ ೧೫ ॥ ಈ ಪ್ರಕಾರ ಎಂಟು ಕರ್ಮ ಮತ್ತು ಅವುಗಳ ಉತ್ತರ ಪ್ರಕೃತಿಗಳ ವರ್ಣನೆಯನ್ನು ಮಾಡಿತು. ಇನ್ನು ಅವುಗಳ ಪ್ರದೇಶ, ಕ್ಷೇತ್ರ, ಕಾಲ ಹಾಗೂ ಭಾವಗಳ ವರ್ಣನೆಯನ್ನು ಕೇಳಿರಿ ॥ ೧೬ ॥ ಕರ್ಮ ಪ್ರದೇಶ—ಎಂಟೂ ಕರ್ಮಗಳ ಪ್ರದೇಶಗಳು ಅನಂತವಾಗಿವೆ ಸಂಖ್ಯೆಯಲ್ಲಿ ಅವುಗಳ ಪ್ರಮಾಣವು ಪ್ರಪಂಚದೊಳಗಿನ ಅಭವ್ಯ ಜೀವಗಳ ಸಂಖ್ಯೆಗಿಂತ ಅನಂತ ಪಟ್ಟಾಗಿದೆ. ಅದರಂತೆ ಸಿದ್ಧ ಭಗವಾನರ ಸಂಖ್ಯೆಯ ಅನಂತನೆಯ ಭಾಗವಾಗಿದೆ. ॥ ೧೭ ॥ ಕರ್ಮ ಕ್ಷೇತ್ರ—ಎಲ್ಲ ಜೀವಗಳಿಗೆ ಕರ್ಮವು-ಸಂಪೂರ್ಣ ಲೋಕದ ಅಪೇಕ್ಷೆಯಿಂದ—ಆರೂ ದಿಸೆಗಳಲ್ಲಿ ಎಲ್ಲ ಆತ್ಮ ಪ್ರದೇಶಗಳೊಡನೆ ಎಲ್ಲ ರೀತಿಯಿಂದ ಕಟ್ಟುತ್ತದೆ. ॥ ೧೮ ॥ ಕರ್ಮ ಸ್ಥಿತಿ—ಎಂಟು ಕರ್ಮಗಳಲ್ಲಿಯ ಜ್ಞಾನಾವರಣೀಯ, ದರ್ಶನಾವರಣೀಯ, ವೇದನೀಯ ಮತ್ತು ಅಂತರಾಯ ಕರ್ಮಗಳ ಜಘನ್ಯ ಸ್ಥಿತಿಯು ಅಂತರ್ ಮುಹೂರ್ತವಾಗಿದೆ, ಉತ್ಕೃಷ್ಟ ಸ್ಥಿತಿಯು ಮೂವತ್ತು ಕೋಡಾ ಕೋಡಿ ಸಾಗರವೆಂದು ಹೇಳಲಾಗಿದೆ ॥ ೧೯-೨೦ ॥ ಮೋಹನೀಯ ಕರ್ಮದ ಜಘನ್ಯ ಸ್ಥಿತಿಯು ಅಂತರ್ಮುಹೂರ್ತವಾಗಿದೆ, ಉತ್ಕೃಷ್ಟ ಸ್ಥಿತಿಯು ಎಪ್ಪತ್ತು ಕೋಡಾ ಕೋಡಿ ಸಾಗರವಾಗಿದೆ. ॥ ೨೧ ॥ ಆಯು ಕರ್ಮದ ಜಘನ್ಯ ಸ್ಥಿತಿಯು ಅಂತರ್ಮುಹೂರ್ತವು; ಉತ್ಕೃಷ್ಟ ಸ್ಥಿತಿಯು ಮೂವತ್ತು ಮೂರು ಸಾಗರವಾಗಿದೆ ॥ ೨೨ ॥ ನಾಮ ಮತ್ತು ಗೋತ್ರ ಈ ಎರಡೂ ಕರ್ಮಗಳ ಜಘನ್ಯ ಸ್ಥಿತಿಯು ಎಂಟು ಅಂತರ್ಮುಹೂರ್ತದ್ದಾಗಿದೆ, ಉತ್ಕೃಷ್ಟ ಆಯುವು ಇಪ್ಪತ್ತು ಕೋಡಾ ಕೋಡಿ ಸಾಗರವಾಗಿದೆ. ॥ ೨೩ ॥ ಕರ್ಮಗಳ ಅನುಭಾಗ—ಎಲ್ಲ ಕರ್ಮಸ್ಕಂಧಗಳ ಅನುಭಾಗವು (ಪರಿಣಾಮ ಇಲ್ಲವೆ ರಸಕೊಡುವ ಶಕ್ತಿಯು) ಪ್ರಮಾಣದಲ್ಲಿ ಸಿದ್ಧಗತಿಯನ್ನು ಹೊಂದಿದ ಅನಂತ ಜೀವಗಳ ಸಂಖ್ಯೆಯ-ಅನಂತನೆಯ ಭಾಗವಾಗಿದೆ. ಆದರೆ ಎಲ್ಲ ಕರ್ಮಗಳ ಪರಮಾಣುಗಳ ಅಪೇಕ್ಷೆಯಿಂದ ಹೇಳುವದಾದಲ್ಲಿ ಅದರ ಪ್ರಮಾಣವು ಯಾವನ್ಮಾತ್ರ ಜೀವಗಳ ಸಂಖ್ಯೆಗಿಂತಲೂ ಹೆಚ್ಚಾಗುತ್ತದೆ ॥ ೨೪ ॥ ಈ ಪ್ರಕಾರ ಕರ್ಮಗಳ ರಸಗಳನ್ನು ತಿಳಿದು, ಮುಮುಕ್ಷು ಜೀವವು ಕರ್ಮಬಂಧವಾಗದಂತೆಯೂ ಮೊದಲು ಕಟ್ಟಿದ ಕರ್ಮಗಳು ಕ್ಷಯಿಸುವಂತೆಯೂ ಯಾವಾಗಲೂ ಪ್ರಯತ್ನಿಸುತ್ತಿರಬೇಕು ॥ ೨೫ ॥

—ಉತ್ತರಾಧ್ಯಯನ ಸೂತ್ರ–೩೩

## ೧೧. ಗುಣಸ್ಥಾನ

ದರ್ಶನ ಮೋಹನೀಯಾದಿ ಕರ್ಮಗಳ ಉದಯ, ಉಪಶಮ, ಕ್ಷಯ, ಕ್ಷಯೋಪಶಮ ಮೊದಲಾದ ಅವಸ್ಥೆಗಳಿಗೆ ಅನುಸರಿಸಿ ಆಗುವಂಥ ಪರಿಣಾಮದಿಂದ ಕೂಡಿದ ಜೀವಗಳಿಗೆ ಸರ್ವಜ್ಞ ದೇವನು ಆಯಾ ಗುಣಸ್ಥಾನವರ್ತಿ ಜೀವಗಳೆಂದು ಹೇಳುತ್ತಾನೆ ಅದರಂತೆ ಆ ಪರಿಣಾಮಗಳಿಗೆ ಗುಣಸ್ಥಾನವೆನ್ನುವನು ॥ ೧ ॥ ಮಿಥ್ಯಾತ್ವ, ಸಾಸಾದನ, ಮಿಶ್ರ, ಅವಿರತ ಸಮ್ಯಗ್‌ದೃಷ್ಟಿ, ದೇಶವಿರತ, ಪ್ರಮತ್ತವಿರತ, ಅಪ್ರಮತ್ತವಿರತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮಸಾಂಪರಾಯ, ಉಪಶಾಂತಮೋಹ, ಕ್ಷೀಣಮೋಹ, ಸಯೋಗ ಕೇವಲೀ ಮತ್ತು ಅಯೋಗ ಕೇವಲೀ, ಇವು ಹದಿನಾಲ್ಕು ಜೀವಸಮಾಸ (ಗುಣಸ್ಥಾನ) ಇವೆ ಇವುಗಳ ಮೇಲೆ ಸಿದ್ಧ ಜೀವಗಳಿವೆ. ॥ ೨-೩ ॥ [ಇಲ್ಲಿ ನಾಲ್ಕನೆಯ ಗುಣಸ್ಥಾನದ ಜೊತೆಗೆ ಅವಿರತ ಶಬ್ದವು ಅಂತ್ಯದೀಪಕವಾಗಿದೆ ಅದರಿಂದ ಮೊದಲಿನ ಮೂರು ಗುಣಸ್ಥಾನಗಳಲ್ಲಿಯೂ ಅವಿರತಭಾವವಿದೆಯೆಂದು ಭಾವಿಸಬೇಕು. ಹಾಗೆಯೇ ಆರನೆಯ ಗುಣಸ್ಥಾನದ ಜೊತೆಯಲ್ಲಿರುವ

ವಿರತ ಪದವು ಆದಿ ದೀಪಕವಾಗಿದೆ  ಇಲ್ಲಿಂದ ಮುಂದಿನ ಎಲ್ಲ ಗುಣಸ್ಥಾನಗಳೂ ವಿರತವಾಗಿರುತ್ತವೆ  ಇದನ್ನರಿಯ ಬೇಕು ]  ಮಿಥ್ಯಾತ್ವ—ಮಿಥ್ಯಾತ್ವ ಪ್ರಕೃತಿಯ ಉದಯದಿಂದ ತತ್ತ್ವಾರ್ಥದಲ್ಲಿ ಉಂಟಾಗುವ ವಿಪರೀತ ಶ್ರದ್ಧೆಗೆ ಮಿಥ್ಯಾತ್ವವೆನ್ನುವರು.  ಇದರಲ್ಲಿ ಐದು ಭೇದಗಳಿವೆ—ಏಕಾಂತ, ವಿಪರೀತ, ವಿನಯ, ಸಂಶಯ ಮತ್ತು ಅಜ್ಞಾನ ॥ ೪ ॥  ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಉತ್ಪನ್ನವಾಗುವ ಮಿಥ್ಯಾ ಪರಿಣಾಮಗಳನ್ನು ಅನುಭವಿಸುವ ಜೀವವು ವಿಪರೀತ ಶ್ರದ್ಧೆಯುಳ್ಳುದೆನಿಸುತ್ತದೆ  ಅದಕ್ಕೆ ಪಿತ್ತಜ್ವರಯುಕ್ತ ಜೀವಕ್ಕೆ ಸವಿಯಾದ ರಸವೂ ಸಹ ಸೀ ಹತ್ತುವದಿಲ್ಲ. ಅದೇ ಪ್ರಕಾರ ಮಿಥ್ಯಾತ್ವ ಜೀವಕ್ಕೆ ಯಥಾರ್ಥ ಧರ್ಮವು ರುಚಿಕರವೆನಿಸುವದಿಲ್ಲ ॥ ೫ ॥ ಸಾಸಾದನ—ಸಮ್ಯಕ್ತ್ವವೆಂಬ ರತ್ನ ಪರ್ವತದ ಶಿಖರದಿಂದ ಉರುಳಿ ಯಾವ ಜೀವವು ಮಿಥ್ಯಾತ್ವ ರೂಪ ಭೂಮಿಗೆ ಬೀಳ ತೊಡಗುವುದೋ ಅದಕ್ಕೆ ಸಾಸನ ಅಥವಾ ಸಾಸಾದನ ಗುಣಸ್ಥಾನವರ್ತಿ ಜೀವವೆನ್ನುವರು. (ಈ ಜೀವದ ಸಮ್ಯಕ್ತ್ವವು ನಷ್ಟವಾಗುತ್ತದೆ. ಆದರೆ ಮಿಥ್ಯಾತ್ವವನ್ನು ಅದು ಸಂಪಾದಿಸಿರುವದಿಲ್ಲ.) ॥ ೬ ॥ ಸಮ್ಯಕ್ ಮಿಥ್ಯಾತ್ವ— ಆತ್ಮನ ಗುಣಗಳನ್ನು ಸರ್ವಥಾ ಘಾತಮಾಡುವ ಕಾರ್ಯವು ಬೇರೆಯಾದ ಸರ್ವಘಾತಿ ಪ್ರಕೃತಿಯ ವಿಲಕ್ಷಣ ಜಾತಿಯದಾಗಿದೆ ಆ ಜಾತ್ಯಂತರ ಸರ್ವಘಾತಿ ಸಮ್ಯಕ್ ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಕೇವಲ ಸಮ್ಯಕ್ತ್ವರೂಪ ಇಲ್ಲವೆ ಮಿಥ್ಯಾತ್ವರೂಪ ಪರಿಣಾಮವಾಗದೆ ಒಂದು ರೀತಿಯ ಮಿಶ್ರರೂಪ ಪರಿಣಾಮವಾಗುತ್ತದೆ. ಇದಕ್ಕೇನೇ ಮೂರನೆಯ ಗುಣಸ್ಥಾನವೆಂದು ಹೇಳಲಾಗುತ್ತದೆ ॥ ೭ ॥ ಬೆಲ್ಲ ಮತ್ತು ಮೊಸರನ್ನು ಪರಸ್ಪರ ಮಿಶ್ರಮಾಡಿದಲ್ಲಿ ಅದನ್ನು ತಿರುಗಿ ಭಿನ್ನ ಭಿನ್ನಗೊಳಿಸಲಿಕ್ಕೆ ಬರುವದಿಲ್ಲ  ಆ ದ್ರವ್ಯಗಳ ಪ್ರತ್ಯೇಕ ಪರಮಾಣುಗಳ ರಸವು ಮಿಶ್ರರೂಪ—ಹುಳಿ ಸೀಗಳಿಂದ ಕೂಡಿದ—ಆಗುತ್ತದೆ. ಇದೇ ಪ್ರಕಾರ ಮಿಶ್ರ ಪರಿಣಾಮದಿಂದಲೂ ಒಂದೇ ಕಾಲದಲ್ಲಿ ಸಮ್ಯಕ್ತ್ವ ಮತ್ತು ಮಿಥ್ಯಾತ್ವರೂಪ ಪರಿಣಾಮವಾಗುತ್ತದೆ ಇದನ್ನರಿಯಬೇಕು ॥ ೮ ॥ ಸಮ್ಯಕ್-ಮಿಥ್ಯಾತ್ವ ಗುಣಸ್ಥಾನದಲ್ಲಿರುವ ಜೀವವು ಸಕಲ ಸಂಯಮ ಇಲ್ಲವೆ ದೇಶ ಸಂಯಮವನ್ನು ಗ್ರಹಣಮಾಡುವದಿಲ್ಲ. ಈ ಗುಣಸ್ಥಾನದಲ್ಲಿ ಆಯು ಕರ್ಮದ ಬಂಧವೂ ಆಗುವದಿಲ್ಲ  ಈ ಗುಣಸ್ಥಾನದಲ್ಲಿರುವಂಥ ಜೀವವು ಯಾವಾಗ ಮರಣವನ್ನು ಹೊಂದುವದೋ ಆಗ ನಿಯಮದಿಂದ ಸಮ್ಯಕ್ತ್ವ ಇಲ್ಲವೆ ಮಿಥ್ಯಾತ್ವರೂಪ ಪರಿಣಾಮಗಳನ್ನು ಹೊಂದಿಯೇ ಮರಣವನ್ನು ಹೊಂದುತ್ತದೆ ಆದರಿಂದ ಈ ಸ್ಥಾನದಲ್ಲಿ ಮರಣವಾಗುವದಿಲ್ಲ ॥ ೯ ॥ ಅವಿರತ ಸಮ್ಯಕ್ತ್ವ—ಸಮ್ಯಕ್ತ್ವ ಗುಣವನ್ನು ವಿಪರೀತಗೊಳಿಸುವಂಥ ಪ್ರಕೃತಿಗಳಲ್ಲಿಯದೇ ಆದ ದೇಶಘಾತಿ ಸಮ್ಯಕ್ತ್ವ ಪ್ರಕೃತಿಯು ಉದಯಹೊಂದುವದರಿಂದ (ಅನಂತಾನುಬಂಧೀ ಚತುಷ್ಕ ಮತ್ತು ಮಿಥ್ಯಾತ್ವ ಹಾಗೂ ಮಿಶ್ರ ಪ್ರಕೃತಿಗಳ ಆಗಾಮೀ ನಿಷೇಕದ ಸದವಸ್ಥಾರೂಪ ಉಪಶಮ ಮತ್ತು ವರ್ತಮಾನ ನಿಷೇಕಗಳು ಫಲಕೊಡದೆಯೂ ನಿರ್ಜರಾ ಹೊಂದಿದ ಮೇಲೆ) ಯಾವ ಆತ್ಮನ ಪರಿಣಾಮವಾಗುವುದೋ ಅದಕ್ಕೆ ವೇದಕ ಇಲ್ಲವೆ ಕ್ಷಾಯೋಪಶಮಿಕ ಸಮ್ಯಗ್ದರ್ಶನವೆಂದು ಹೇಳಲಾಗುತ್ತದೆ ಈ ಪರಿಣಾಮಗಳು ಚಲ, ಮಲಿನ, ಅಗಾಢ ಇದ್ದರೂ ಕೂಡ ನಿತ್ಯವೂ (ಅರ್ಥಾತ್ ಜಘನ್ಯ ಅಂತರ್ಮುಹೂರ್ತದಿಂದ ಉತ್ಕೃಷ್ಟ ಅರವತ್ತಾರು ಸಾಗರ ವರೆಗೆ) ಕರ್ಮದ ನಿರ್ಜರೆಗೆ ಕಾರಣವಾಗಿದೆ ॥ ೧೦ ॥ ಮೂರು ದರ್ಶನ ಮೋಹನೀಯ, ಅರ್ಥಾತ್ ಮಿಥ್ಯಾತ್ವ, ಮಿಶ್ರ ಮತ್ತು ಸಮ್ಯಕ್ತ್ವ, ಹಾಗೆಯೇ ನಾಲ್ಕು ಅನಂತಾನುಬಂಧೀ ಕಷಾಯ ಈ ಏಳು ಪ್ರಕೃತಿಗಳ ಉಪಶಮದಿಂದ ಉಪಶಮ, ಸಂಪೂರ್ಣ ಕ್ಷಯದಿಂದ ಕ್ಷಾಯಿಕ ಸಮ್ಯಗ್ದರ್ಶನವು ಆಗುತ್ತದೆ ಈ ಚತುರ್ಥ ಗುಣಸ್ಥಾನದಲ್ಲಿರುವ ಸಮ್ಯಗ್ದರ್ಶನದ ಜೊತೆಯಲ್ಲಿ ಸಂಯಮವು ಸ್ವಲ್ಪವೂ ಇರುವದಿಲ್ಲ, ಯಾಕೆಂದರೆ ಇಲ್ಲಿ ಬೇರೆಯಾದ ಅಪ್ರತ್ಯಾಖ್ಯಾನಾವರಣ ಕಷಾಯದ ಉದಯವಿರುತ್ತದೆ. ಅಂತೂ ಈ ಗುಣಸ್ಥಾನದಲ್ಲಿರುವ ಜೀವಗಳಿಗೆ ಅಸಂಯತ ಸಮ್ಯಗ್ದೃಷ್ಟಿ ಎಂದು ಹೇಳುವರು ॥ ೧೧ ॥ ಸಮ್ಯಗ್ದೃಷ್ಟಿ ಜೀವಗಳು ಆಚಾರ್ಯರು ಉಪದೇಶಿಸಿದ ಪ್ರವಚನದ ಮೇಲೆ ಶ್ರದ್ಧೆಯನ್ನು ಇಡುತ್ತಾರೆ  ಆದರೆ ಅಜ್ಞಾನಕ್ಕೆ ವಶನಾಗಿ ಗುರುಗಳ ಉಪದೇಶಕ್ಕಿಂತ ಭಿನ್ನವಾದ ಅರ್ಥದ ಮೇಲೆಯೂ ಶ್ರದ್ಧೆಯನ್ನು ಇಡುತ್ತಾನೆ ॥ ೧೨ ॥ ಯಾವನು ಇಂದ್ರಿಯಗಳ ವಿಷಯಗಳಿಂದ ಹಾಗೂ ತ್ರಸ-ಸ್ಥಾವರ ಜೀವಗಳ ಹಿಂಸೆಯಿಂದ ವಿರಕ್ತನಾಗುವದಿಲ್ಲವೋ ಅವನು—ಜಿನೇಂದ್ರ ದೇವನ ವಚನಗಳಲ್ಲಿ ಶ್ರದ್ಧೆ ಇದ್ದವನು—ಅವಿರತ ಸಮ್ಯಗ್‌ದೃಷ್ಟಿ ಎನಿಸುತ್ತಾನೆ ॥ ೧೩ ॥ ದೇಶವಿರತ—ಯಾವ ಜೀವವು ಜಿನೇಂದ್ರ ದೇವನಲ್ಲಿ ಅದ್ವಿತೀಯ ಶ್ರದ್ಧೆಯನ್ನಿಟ್ಟು ತ್ರಸಹಿಂಸೆಯಿಂದ ವಿರತ ಮತ್ತು ಅದೇ ಸಮಯದಲ್ಲಿ ಸ್ಥಾವರ ಹಿಂಸೆಯಿಂದ ಅವಿರತವಾಗುವದೋ ಆ ಜೀವಕ್ಕೆ ವಿರತಾವಿರತವೆಂದು ಹೇಳುವರು. ॥ ೧೪ ॥ ಪ್ರಮತ್ತ ವಿರತ—ಸಕಲ ಸಂಯಮವನ್ನು ತಡೆಯುವಂಥ ಪ್ರತ್ಯಾಖ್ಯಾನಾವರಣ ಕಷಾಯದ ಉಪಶಮವಾಗುವದರಿಂದ ಪೂರ್ಣ ಸಂಯಮ-

ವಂತೂ ಆಗಿ ಹೋಗಿರುತ್ತದೆ ಆದರೆ ಆ ಸಂಯಮದ ಜೊತೆಯಲ್ಲಿ ಸಂಜ್ವಲನ ಮತ್ತು ನೋಕಷಾಯದ ಉದಯದಿಂದ ಸಂಯಮದಲ್ಲಿ ಮಲವನ್ನು ಉತ್ಪನ್ನಮಾಡುವಂಥ ಪ್ರಮಾದವೂ ಕೂಡ ಆಗುತ್ತದೆ ಹೀಗಾಗಿ ಈ ಗುಣಸ್ಥಾನಕ್ಕೆ ಪ್ರಮತ್ತ–ವಿರತವೆಂದು ಹೇಳುವರು. ॥ ೧೫ ॥ ನಾಲ್ಕು ವಿಕಥಾ (ಸ್ತ್ರೀಕಥಾ, ಭಕ್ತಕಥಾ, ರಾಷ್ಟ್ರಕಥಾ, ಅವನಿಪಾಲಕಥಾ) ನಾಲ್ಕು ಕಷಾಯ (ಕ್ರೋಧ, ಮಾನ, ಮಾಯಾ, ಲೋಭ) ಐದು ಇಂದ್ರಿಯ (ಸ್ಪರ್ಶ, ರಸ, ಘ್ರಾಣ, ಚಕ್ಷು, ಶ್ರೋತ್ರ) ನಿದ್ರೆ ಹಾಗೂ ಪ್ರಣಯ (ಸ್ನೇಹ) ಇವು ಹದಿನೈದು ಪ್ರಮಾದಗಳಾಗಿವೆ. ॥ ೧೬ ॥ ಅಪ್ರಮತ್ತ— ಯಾವ ಸಂಯತನ ಸಂಪೂರ್ಣ ಪ್ರಮಾದವು ನಷ್ಟವಾಗಿ ಹೋಗಿರುವುದೋ, ಯಾವನು ಪಂಚಮಹಾವ್ರತ ಹಾಗೂ ೨೮ ಮೂಲಗುಣಗಳೆಂಬ ಶೀಲದಿಂದ ಮಂಡಿತನಾಗಿ ಧ್ಯಾನಿಯಾಗಿರುವನೋ ಅವನು ಏಳನೆಯ ಗುಣಸ್ಥಾನದಲ್ಲಿರುವ ಅಪ್ರಮತ್ತ ಸಂಯತನೆನಿಸುತ್ತಾನೆ. ಆದರೆ ಇವನು ಇನ್ನೂ ಕರ್ಮದ ಉಪಶಮನ ಇಲ್ಲವೆ ಕ್ಷಪಣದಲ್ಲಿ ಪ್ರವೃತ್ತನಾಗಿರುವುದಿಲ್ಲ' ಅರ್ಥಾತ್ ಉಪಶಮ ಅಥವಾ ಕ್ಷಪಕ ಶ್ರೇಣಿಯನ್ನು ಹತ್ತಿರುವದಿಲ್ಲ ॥ ೧೭ ॥ ಅಪೂರ್ವಕರಣ— ಅಂತರ್ಮುಹೂರ್ತಕಾಲ ಮಾತ್ರ ಅಧಃಪ್ರವೃತ್ತಕರಣ ಇದ್ದುದನ್ನು ಕಳೆದು, ಅವನು ಸಾತಿಶಯ ಅಪ್ರಮತ್ತ ಪ್ರತಿ ಸಮಯದಲ್ಲಿ ಅನಂತಗುಣಿ ವಿಶುದ್ಧಿಯನ್ನು ಹೊಂದುತ್ತಾನೆ. ಇಂಥವನು ಅಪೂರ್ವಕರಣವೆಂಬ ಹೆಸರಿನ ಎಂಟನೆಯ ಗುಣಸ್ಥಾನವನ್ನು ಹೊಂದುತ್ತಾನೆ ॥ ೧೮ ॥ ಈ ಗುಣಸ್ಥಾನದಲ್ಲಿ ಭಿನ್ನ ಸಮಯವರ್ತಿ ಜೀವ, ಭಿನ್ನ ಹಾಗೂ ಪೂರ್ವ ಸಮಯದಲ್ಲಿ ಎಂದೂ ಪ್ರಾಪ್ತವಾಗದಂಥ ಅಪೂರ್ವ ಪರಿಣಾಮವನ್ನು ಧಾರಣಮಾಡಿರುತ್ತದೆ ಅದಕ್ಕಾಗಿ ಈ ಗುಣಸ್ಥಾನಕ್ಕೆ ಅಪೂರ್ವಕರಣ ಎಂದು ಹೆಸರಿದೆ. ॥ ೧೯ ॥ ಅನಿವೃತ್ತಿಕರಣ—ಅಂತರ್ಮುಹೂರ್ತ ಮಾತ್ರ ಅನಿವೃತ್ತಿಕರಣ ಕಾಲದಲ್ಲಿಯ ಆದಿ ಇಲ್ಲವೆ ಮಧ್ಯ ಅಥವಾ ಅಂತದ ಒಂದು ಸಮಯದಲ್ಲಿರುವ ಅನೇಕ ಜೀವಗಳಲ್ಲಿ ಯಾವ ಪ್ರಕಾರ ಶರೀರದ ಅವಗಾಹನಾ ಮೊದಲಾದ ಬಾಹ್ಯ ಕಾರಣಗಳಿಂದ ಹಾಗೂ ಜ್ಞಾನಾವರಣಾದಿ ಕರ್ಮದ ಕ್ಷಯೋಪಶಮವೇ ಆದಿ ಅಂತರಂಗ ಕಾರಣಗಳಿಂದ ಪರಸ್ಪರರಲ್ಲಿ ಭೇದವನ್ನು ಕಾಣಲಾಗುತ್ತದೆ ಈ ಪ್ರಕಾರ ಯಾವ ಪರಿಣಾಮದ ನಿಮಿತ್ತದಿಂದ ಪರಸ್ಪರರಲ್ಲಿ ಭೇದವು ಕಂಡುಬರುವದಿಲ್ಲವೋ ಅದಕ್ಕೆ ಅನಿವೃತ್ತಿಕರಣ ಪರಿಣಾಮವೆಂದು ಹೇಳುವರು ಇನ್ನು ಅನಿವೃತ್ತಿಕರಣದ ಕಾಲವು ಎಷ್ಟಿರುವುದೋ ಅಷ್ಟೇ ಅದರ ಪರಿಣಾಮವಿರುತ್ತದೆ ಅದಕ್ಕಾಗಿ ಅದರ ಕಾಲದ ಪ್ರತಿಯೊಂದು ಸಮಯದಲ್ಲಿ ಅನಿವೃತ್ತಿಕರಣದ ಒಂದೇ ಪರಿಣಾಮವಾಗುತ್ತದೆ. ಹಾಗೂ ಈ ಪರಿಣಾಮವು ಅತ್ಯಂತ ನಿರ್ಮಲಧ್ಯಾನರೂಪ ಅಗ್ನಿಯ ಸಹಾಯದಿಂದ ಕರ್ಮವನವನ್ನು ಭಸ್ಮಮಾಡಿ' ಬಿಡುತ್ತದೆ. ॥ ೨೦-೨೧ ॥ ಸೂಕ್ಷ್ಮ ಸಾಂಪರಾಯ— ಯಾವ ಪ್ರಕಾರ ಸ್ವಚ್ಛಗೊಳಿಸಿದ ಕೇಶರೀ ವಸ್ತ್ರದಲ್ಲಿ ಸೂಕ್ಷ್ಮ ಪ್ರಕಾರದ ಕೆಂಗಾತಿಯು ನಿಲ್ಲುವುದೋ ಹಾಗೆಯೇ ಯಾರು ಅತ್ಯಂತ ಸೂಕ್ಷ್ಮರಾಗ (ಲೋಭ ಕಷಾಯ) ದಿಂದ ಕೂಡಿರುವರೋ ಅವರಿಗೆ ಸೂಕ್ಷ್ಮ ಸಾಂಪರಾಯ ಎಂಬ ಹೆಸರಿನ ಗುಣಸ್ಥಾನದಲ್ಲಿರುವವರೆಂದು ಹೇಳುವರು ॥ ೨೨ ॥ ಉಪಶಮ ಶ್ರೇಣಿಯನ್ನು ಏರುವಂಥವನು ಇಲ್ಲವೆ ಕ್ಷಪಕಶ್ರೇಣಿಯನ್ನು ಏರುವಂಥವನು ಯಾವನೇ ಇರಲಿ ಯಾವ ಜೀವವು ಸೂಕ್ಷ್ಮ ಲೋಭದ ಉದಯವನ್ನು ಅನುಭವಿಸುತ್ತಿರುವುದೋ ಅದು ಹತ್ತನೆಯ ಗುಣಸ್ಥಾನದಲ್ಲಿರುವ ಜೀವವೆನಿಸುತ್ತದೆ ಈ ಜೀವವು ಯಥಾಖ್ಯಾತ ಚಾರಿತ್ರದಿಂದ ಸ್ವಲ್ಪ ನ್ಯೂನತೆಯುಳ್ಳುದಾಗಿರುತ್ತದೆ ॥ ೨೩ ॥ ಉಪಶಾಂತ ಮೋಹ— ನಿರ್ಮಲ ಸರೋವರದಂತೆ ಇಲ್ಲವೆ ಶರದ್ ಋತುವಿನಲ್ಲಿಯ ಸರೋವರದ ಜಲಕ್ಕೆ ಸಮಾನವಾಗಿ ಯಾರ ಮೋಹನೀಯ ಕರ್ಮವು ಉಪಶಮದಿಂದ ಉತ್ಪನ್ನವಾಗುವ ನಿರ್ಮಲ ಪರಿಣಾಮ ಉಳ್ಳುದಾಗಿರುವುದೋ ಅದು ಹನ್ನೊಂದನೆಯ ಗುಣಸ್ಥಾನದಲ್ಲಿರುವ ಉಪಶಾಂತ ಕಷಾಯವೆನಿಸುತ್ತದೆ ॥ ೨೪ ॥ ಕ್ಷೀಣ ಮೋಹ—ಯಾವ ನಿರ್ಗ್ರಂಥರ ಚಿತ್ತವು ಮೋಹನೀಯ ಕರ್ಮವು ಸಂಪೂರ್ಣ ಕ್ಷೀಣವಾದುದರಿಂದ ಸ್ಫಟಿಕದ ನಿರ್ಮಲ ಪಾತ್ರೆಯಲ್ಲಿಟ್ಟ ಜಲಕ್ಕೆ ಸಮಾನವಾಗಿ ನಿರ್ಮಲವಾಗಿರುತ್ತದೆಯೋ ಅದಕ್ಕೆ ವೀತರಾಗ ದೇವನು ಕ್ಷೀಣ ಕಷಾಯವೆಂಬ ಹೆಸರಿನ ಹನ್ನೆರಡನೆಯ ಗುಣಸ್ಥಾನವರ್ತಿ ಎಂದು ಹೇಳುತ್ತಾನೆ ॥ ೨೫ ॥ ಸಯೋಗ ಕೇವಲೀ—ಕೇವಲ ಜ್ಞಾನರೂಪೀ ಸೂರ್ಯನ ಕಿರಣಸಮೂಹದಿಂದ ಯಾರ ಅಜ್ಞಾನಾಂಧಕಾರವು ಸಂಪೂರ್ಣವಾಗಿ ನಷ್ಟವಾಗಿರುವುದೋ, ಯಾರಿಗೆ ನವ ಕೇವಲ ಲಬ್ಧಿಗಳು (ಕ್ಷಾಯಿಕ ಸಮ್ಯಕ್ತ್ವ, ಚರಿತ್ರ, ಜ್ಞಾನ, ದರ್ಶನ, ದಾನ, ಲಾಭ, ಭೋಗ, ಉಪಭೋಗ ಮತ್ತು ವೀರ್ಯ) ಪ್ರಕಟವಾಗುವುದರಿಂದ 'ಪರಮಾತ್ಮಾ' ಎಂಬ ಸಂಜ್ಞೆಯು ಪ್ರಾಪ್ತವಾಗಿರುವುದೋ, ಅವರು ಇಂದ್ರಿಯ ಆಲೋಕ ಮೊದಲಾದವುಗಳ ಅಪೇಕ್ಷೆಯನ್ನು ಮಾಡದೆ ಇರುವಂಥ ಜ್ಞಾನ–ದರ್ಶನಗಳಿಂದ ಕೂಡಿರುವುದರಿಂದ ಕೇವಲಿ ಎನಿಸುವರು ಇವರು ಕಾಯ ಯೋಗದಿಂದ ಯುಕ್ತವಾಗಿರುವುದರಿಂದ ಸಯೋಗಿ (ಹಾಗೆಯೇ ಘಾತಿ ಕರ್ಮಗಳನ್ನು

ಗೆದ್ದಿರುವ ಕಾರಣದಿಂದ) ಜಿನನೆಂದು ಹೇಳಲಾಗುತ್ತದೆ ಹೀಗೆ ಅನಾದಿನಿಧನ ಆರ್ಷ ಆಗಮದಲ್ಲಿ ಹೇಳಲಾಗಿದೆ ॥ ೨೬-೨೭ ॥ ಅಯೋಗ ಕೇವಲೀ—ಯಾವ ಜೀವವು ಹದಿನೆಂಟು ಸಾವಿರ ಶೀಲಗಳ ಒಡೆಯನಾಗಿರುವನೋ, ಯಾವನಿಗೆ ಕರ್ಮವು ಬರುವ ಅನೇಕ ದ್ವಾರರೂಪ ಆಸ್ರವವು ಸಂಪೂರ್ಣ ನಿಂತಿರುವುದೋ, ಯಾವನ ಕರ್ಮ ರೂಪೀ ರಜವು ಸಂಪೂರ್ಣ ನಿರ್ಜರೆಯನ್ನು ಹೊಂದಿರುವುದೋ, ಯಾವನ ಕಾಯಯೋಗವೂ ಸಹ ಇಲ್ಲದಂತಾಗಿರುವುದೋ, ಅವನು ಹದಿನಾಲ್ಕನೆಯ ಗುಣಸ್ಥಾನದಲ್ಲಿರುವ ಅಯೋಗ ಕೇವಲೀ ಎನಿಸುತ್ತಾನೆ ॥ ೨೮ ॥ ಸಿದ್ಧ—ಜ್ಞಾನಾವರಣಾದಿ ಎಂಟು ಕರ್ಮಗಳಿಂದ ರಹಿತರಾದವರು ಸಿದ್ಧರು. ಇವರು ಅನಂತಸುಖರೂಪೀ ಅಮೃತವನ್ನು ಅನುಭವಮಾಡುವಂಥ ಶಾಂತಿಮಯ ಅವಸ್ಥೆಯಲ್ಲಿರುತ್ತಾರೆ ಅಲ್ಲದೆ ನವೀನ ಕರ್ಮಗಳಿಗೆ ಕಾರಣವಾಗುವ ಮಿಥ್ಯಾದರ್ಶನವೇ ಆದಿ ಭಾವ ಕರ್ಮರೂಪೀ ಅಜ್ಞಾನದಿಂದ ರಹಿತರಾಗಿರುತ್ತಾರೆ ನಿತ್ಯರಾಗಿರುತ್ತಾರೆ ಜ್ಞಾನ, ದರ್ಶನ, ಸುಖ, ವೀರ್ಯ, ಅವ್ಯಾಬಾಧ, ಅವಗಾಹನ, ಸೂಕ್ಷ್ಮತ್ವ, ಅಗುರುಲಘು ಈ ಎಂಟು ಮುಖ್ಯಗುಣಗಳು ಅವರಿಗೆ ಪ್ರಕಟವಾಗಿರುತ್ತವೆ ಅವರು ಕೃತಕೃತ್ಯರಾಗಿರುತ್ತಾರೆ ಲೋಕದ ಅಗ್ರಭಾಗದಲ್ಲಿ ವಾಸಿಸುತ್ತಾರೆ ಅವರಿಗೆ ಸಿದ್ಧರೆಂದು ಹೇಳುತ್ತಾರೆ ॥ ೨೯ ॥

—ನೇಮಿಚಂದ್ರಾಚಾರ್ಯಕೃತ ಜೀವಕಾಂಡ

## ೧೨. ಮಾರ್ಗಣಾ ಸ್ಥಾನ

ಯಾವ ಭಾವದಿಂದ ಯಾವ ಪರ್ಯಾಯದಲ್ಲಿ ಜೀವವು ಎಂಥ ಪರಿಣಾಮವನ್ನು ಹೊಂದುವದೆಂಬುದನ್ನು ಶ್ರುತಜ್ಞಾನದಲ್ಲಿ ವಿಚಾರಮಾಡಲಾಗಿದೆ ಇದು ನಿರ್ದಿಷ್ಟಗೊಳಿಸಿದ ಹದಿನಾಲ್ಕು ಮಾರ್ಗಣಾಸ್ಥಾನಗಳ ವಿವರಣೆಯಾಗಿದೆ ಇದೂ ತಿಳಿದು ಕೊಳ್ಳಲಿಕ್ಕೆ ಯೋಗ್ಯವಾಗಿದೆ ॥ ೧ ॥ ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಾ, ಮತ್ತು ಆಹಾರ, ಇವು ಹದಿನಾಲ್ಕು ಮಾರ್ಗಣಾಗಳಾಗಿವೆ ॥ ೨ ॥ ಗತಿ ಮಾರ್ಗಣಾ—ಗತಿ ನಾಮ ಕರ್ಮದ ಉದಯದಿಂದ ಉಂಟಾಗುವ ಜೀವದ ಪರ್ಯಾಯಗಳಿಗೆ ಇಲ್ಲವೆ ನಾಲ್ಕು ಗತಿಗಳಲ್ಲಿ ಗಮನ ಮಾಡುವ ಜೀವದ ಕಾರಣಕ್ಕೆ ಗತಿ ಎಂದು ಹೇಳುತ್ತಾರೆ ಇದರಲ್ಲಿ ನರಕಗತಿ, ತಿರ್ಯಗ್‌ಗತಿ, ಮನುಷ್ಯಗತಿ, ದೇವಗತಿಗಳೆಂದು ನಾಲ್ಕು ಪ್ರಕಾರಗಳಿವೆ ॥ ೩ ॥ ಇಂದ್ರಿಯ ಮಾರ್ಗಣಾ—ಇಂದ್ರಿಯಗಳಲ್ಲಿ ಎರಡು ಭೇದಗಳು ಒಂದು ಭಾವೇಂದ್ರಿಯ, ಇನ್ನೊಂದು ದ್ರವ್ಯೇಂದ್ರಿಯ ಮತಿಜ್ಞಾನಾವರಣ ಕರ್ಮದ ಕ್ಷಯೋಪಶಮದಿಂದ ಉತ್ಪನ್ನವಾಗುವ ವಿಶುದ್ಧಿ ಇಲ್ಲವೆ ಆ ವಿಶುದ್ಧಿಯಿಂದ ಉತ್ಪನ್ನ-ವಾಗುವ ಉಪಯೋಗಾತ್ಮಕ ಜ್ಞಾನಕ್ಕೆ ಭಾವೇಂದ್ರಿಯ ಎಂದು ಹೇಳುತ್ತಾರೆ ಇನ್ನು ಶರೀರನಾಮ ಕರ್ಮದ ಉದಯದಿಂದ ಉಂಟಾಗುವ ಶರೀರದ ಚಿಹ್ನ ವಿಶೇಷಕ್ಕೆ ದ್ರವ್ಯೇಂದ್ರಿಯ ಎಂದು ಹೇಳುತ್ತಾರೆ. ॥ ೪ ॥ ಜೀವಗಳ ಬಾಹ್ಯ ಚಿಹ್ನ ಅರ್ಥಾತ್ ದ್ರವ್ಯೇಂದ್ರಿಯ ಮತ್ತು ಅವುಗಳ ಮುಖಾಂತರ ಆಗುವ ಸ್ಪರ್ಶ, ರಸ, ಗಂಧ, ರೂಪ ಮತ್ತು ಶಬ್ದ ಇವುಗಳ ಜ್ಞಾನಗಳಿಂದ ಕ್ರಮವಾಗಿ ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಜೀವಗಳೆಂದು ಹೇಳಲಾಗುತ್ತದೆ. ಇವುಗಳಲ್ಲಿಯೂ ಅನೇಕ ಆಂತರಿಕ ಭೇದಗಳಿವೆ. ॥ ೫ ॥ ಕಾಯ ಮಾರ್ಗಣಾ—ಜಾತಿ ನಾಮಕರ್ಮದ ಅವಿನಾಭಾವೀ ತ್ರಸ ಮತ್ತು ಸ್ಥಾವರ ನಾಮಕರ್ಮದ ಉದಯದಿಂದ ಆಗುವ ಆತ್ಮದ ಪರ್ಯಾಯಗಳಿಗೆ ಜಿನಮತದಲ್ಲಿ ಕಾಯವೆಂದು ಹೇಳಲಾಗುತ್ತದೆ. ಇದರಲ್ಲಿ ಪೃಥ್ವಿ, ಜಲ, ಅಗ್ನಿ, ವಾಯು, ವನಸ್ಪತಿ ಮತ್ತು ತ್ರಸ ಎಂದು ಆರು ಭೇದಗಳಿವೆ ॥ ೬ ॥ ಪೃಥಿವಿ, ಅಪ್, ತೇಜ (ಅಗ್ನಿ) ವಾಯು ಇವುಗಳ ಶರೀರ ನಿಯಮಕ್ಕೆ ಅನುಸರಿಸಿ, ಅವವುಗಳ ಪೃಥ್ವಿಯೇ ಮೊದಲಾದ ನಾಮ ಕರ್ಮದ ಉದಯದಿಂದ ತಮ್ಮ ತಮ್ಮ ಯೋಗ್ಯ ರೂಪ, ರಸ, ಗಂಧ ಮತ್ತು ಸ್ಪರ್ಶ ಈ ನಾಲ್ಕು ಗುಣಗಳಿಂದ ಕೂಡಿದ ಪೃಥ್ವಿಯೇ ಮೊದಲಾದವುಗಳಲ್ಲಿಯೂ ರೂಪವನ್ನು ಧರಿಸುತ್ತವೆ ॥ ೭ ॥ ಎರಡು, ಮೂರು, ನಾಲ್ಕು ಮತ್ತು ಐದು ಇಂದ್ರಿಯಗಳಿಂದ ಕೂಡಿದ ಜೀವಗಳಿಗೆ ವೀರ ಭಗವಂತನು ತ್ರಸಕಾಯವೆಂದು ಹೇಳಿದ್ದಾನೆ ॥ ೮ ॥ ಯೋಗ ಮಾರ್ಗಣಾ—ಪುದ್ಗಲ ವಿಪಾಕೀ ಶರೀರನಾಮ ಕರ್ಮದ ಉದಯದಿಂದ ಮನ, ವಚನ, ಕಾಯಗಳಿಂದ ಕೂಡಿದ ಜೀವಕ್ಕೆ ಕರ್ಮವನ್ನು ಗ್ರಹಣ ಮಾಡುವದಕ್ಕೆ ಕಾರಣವಾದ ಶಕ್ತಿಗೆ ಯೋಗವೆಂದು ಹೇಳಲಾಗಿದೆ. ॥ ೯ ॥ ಸತ್ಯ, ಅಸತ್ಯ, ಉಭಯ ಮತ್ತು ಅನುಭಯ ಈ ನಾಲ್ಕು ಪ್ರಕಾರದ ಪದಾರ್ಥಗಳಲ್ಲಿಯ ಯಾವ ಪದಾರ್ಥವನ್ನು ತಿಳಿಯಲಿಕ್ಕೂ ಹೇಳಲಿಕ್ಕೂ ಮನ, ವಚನಗಳ ಯಾವ ಪ್ರವೃತ್ತಿಯಾಗುವುದೋ ಆ ಸಮಯದಲ್ಲಿ ಮನ, ವಚನಗಳಿಗೆ ಅದೇ ಹೆಸರಾಗುತ್ತದೆ ಹಾಗೂ

ಅವುಗಳ ಸಂಬಂಧದಿಂದ ಆ ಪ್ರವೃತ್ತಿಗಳಿಗೂ ಅದೇ ಹೆಸರಾಗುತ್ತದೆ. ॥ ೧೦ ॥ ಸಮೀಚೀನ ಭಾವಮನಕ್ಕೆ (ಪದಾರ್ಥಗಳನ್ನು ತಿಳಿಯುವ ಶಕ್ತಿರೂಪ ಜ್ಞಾನಕ್ಕೆ) ಅರ್ಥಾತ್ ಸಮೀಚೀನ ಪದಾರ್ಥಗಳ ವಿಷಯವನ್ನು ಮಾಡುವ ಮನಕ್ಕೆ ಸತ್ಯಮನವೆಂದು ಹೇಳಲಾಗುತ್ತದೆ. ಮತ್ತು ಇದರ ಮುಖಾಂತರ ಆಗುವ ಯೋಗಕ್ಕೆ ಸತ್ಯಮನೋ-ಯೋಗವೆಂದು ಹೇಳುವರು. ಸತ್ಯಕ್ಕೆ ವಿಪರೀತವಾದುದಕ್ಕೆ ಮಿಥ್ಯಾ ಎಂದು ಎನ್ನುತ್ತಾರೆ. ಇನ್ನು ಸತ್ಯ ಮತ್ತು ಮಿಥ್ಯಾ ಈ ಎರಡೂ ಪ್ರಕಾರದ ಮನಕ್ಕೆ ಉಭಯಮನವೆನ್ನುವರು. ॥ ೧೧ ॥ ಯಾವುದು ಸತ್ಯವೂ ಅಲ್ಲವೋ ಮೃಷೆಯೂ ಅಲ್ಲವೋ ಅದು ಅಸತ್ಯಮೃಷಾ ಮನವಾಗಿದೆ. ಇದರ ಮುಖಾಂತರ ಯಾವ ಯೋಗವಾಗುವುದೋ ಅದಕ್ಕೆ ಅಸತ್ಯಮೃಷಾಮನೋಯೋಗ ಎಂದು ಹೇಳುವರು. ॥ ೧೨ ॥ ಹತ್ತು ಪ್ರಕಾರದ ಸತ್ಯ ಅರ್ಥವನ್ನು ಹೇಳುವ ವಚನಗಳಿಗೆ ಸತ್ಯವಚನವೆನ್ನುವರು ಇದರಿಂದುಂಟಾಗುವ ಯೋಗಕ್ಕೆ ಸತ್ಯವಚನಯೋಗವೆಂದು ಹೇಳುವರು. ಇದಕ್ಕೆ ವಿಪರೀತವಾದುದು ಮೃಷಾಯೋಗವು. ಇನ್ನು ಕೆಲ ಭಾಗ ಸತ್ಯ ಕೆಲ ಭಾಗ ಮೃಷಾ ಸೇರಿದ್ದು ಉಭಯ ವಚನಯೋಗವೆಂದು ತಿಳಿಯಬೇಕು. ॥ ೧೩ ॥ ಯಾವುದು ಸತ್ಯವೂ ಅಲ್ಲ, ಅಸತ್ಯವೂ ಅಲ್ಲವೋ ಅದು ಅನುಭಯ ವಚನಯೋಗವಾಗಿದೆ ಅಸಂಜ್ಞಿಗಳ ಸಮಸ್ತ ಭಾಷೆ ಮತ್ತು ಸಂಜ್ಞಿಗಳ ಆಮಂತ್ರಣೀ ಮೊದಲಾದ ಭಾಷೆಗಳು ಅನುಭಯ ಭಾಷೆಗಳೆಂದು ಹೇಳಲಾಗುತ್ತದೆ ॥ ೧೪ ॥ ಜನಪದ ಸತ್ಯ, ಸಮ್ಮತಿ ಸತ್ಯ, ಸ್ಥಾಪನಾ ಸತ್ಯ, ನಾಮ ಸತ್ಯ, ರೂಪ ಸತ್ಯ, ಪ್ರತೀತ್ಯ ಸತ್ಯ, ವ್ಯವಹಾರ ಸತ್ಯ, ಸಂಭಾವನಾ ಸತ್ಯ, ಭಾವ ಸತ್ಯ, ಉಪಮಾಸತ್ಯ, ಈ ಪ್ರಕಾರ ಸತ್ಯವು ಹತ್ತು ವಿಧವಾಗಿದೆ ॥ ೧೫ ॥ ಬೇಯಿಸಿದ ಅಕ್ಕಿಗೆ ಅನ್ನವೆನ್ನಲಾಗುವುದು, ರಾಣಿಗೆ ದೇವಿ ಎನ್ನುವರು, ಪಾಷಾಣಾದಿ ಪ್ರತಿಮೆಗಳಿಗೆ ಚಂದ್ರಪ್ರಭು ಭಗವಾನ್ ಎನ್ನುವುದು, ಯಾವನೊಬ್ಬ ಪುರುಷನಿಗೆ ಜಿನದತ್ತ ಎಂದು ಹೆಸರಿಡುವುದು, ಬಣ್ಣಕ್ಕೆ ಅನುಸರಿಸಿ ಒಂದು ವಸ್ತುವಿಗೆ ಬಿಳಿಯನ್ನುವುದು, ಅಪೇಕ್ಷಿತ ಉದ್ದಳತೆಗೆ ಉದ್ದವೆನ್ನುವುದು, ಉರುವಲು ತರುವ, ಬೆಂಕಿಯನ್ನು ಉರಿಸುವ ಮನುಷ್ಯನಿಗೆ 'ಅನ್ನಮಾಡುವ'ನೆಂದು ಹೇಳುವುದು, (ಇದು ಶಕ್ಯತೆಯ ವಿಚಾರದಿಂದಾಗಿದೆ) ಇಂದ್ರನು ಜಂಬೂದ್ವೀಪವನ್ನು ಬದಲಿಸುವನೆನ್ನುವುದು, ಆಗಮಕ್ಕೆ ಅನುಸರಿಸಿ ಕೆಲವರಿಗೆ ಪಾಪಕರ್ಮವನ್ನು ತಡೆಯಲಿಕ್ಕೆ ಹೇಳುವುದು, ಪಲ್ಯೋಪಮ ಅಳತೆಗೆ ಅನುಸರಿಸಿ ಹಾಗೆ ಹೇಳುವುದು, ಇವು ಕ್ರಮವಾಗಿ ಹತ್ತು ಪ್ರಕಾರದ ಸತ್ಯವಚನಗಳಿಗೆ ದೃಷ್ಟಾಂತಗಳಾಗಿವೆ ॥ ೧೬-೧೭ ॥ ಆಮಂತ್ರಣೀ, ಆಜ್ಞಾಪನೀ, ಯಾಚನೀ, ಆಪೃಚ್ಛನೀ, ಪ್ರಜ್ಞಾಪನೀ, ಪ್ರತ್ಯಾಖ್ಯಾನೀ, ಸಂಶಯವಚನೀ, ಇಚ್ಛಾನುಲೋಮೀ ಮತ್ತು ಅನಕ್ಷರಗತಾ, ಇವು ಒಂಭತ್ತು ಪ್ರಕಾರದ ಅನುಭಯಾತ್ಮಕ ಭಾಷೆಗಳಾಗಿವೆ ಯಾಕಂದರೆ ಇವುಗಳನ್ನು ಕೇಳುವವರಿಗೆ ವ್ಯಕ್ತ ಮತ್ತು ಅವ್ಯಕ್ತ ಎರಡೂ ಪ್ರಕಾರದ ಅಂಶ ಜ್ಞಾನವಿರುತ್ತದೆ ॥ ೧೮-೧೯ ॥ ಔದಾರಿಕ, ವೈಕ್ರಿಯಿಕ, ಆಹಾರಕ ಮತ್ತು ಮತ್ತು ತೈಜಸನಾಮ ಕರ್ಮದ ಉದಯದಿಂದ ಆಗುವ ಜ್ಞಾನಾವರಣಾದಿ ಎಂಟು ಕರ್ಮಗಳ ಸಮೂಹಗಳಿಗೆ ಕಾರ್ಮಣ ಶರೀರವೆಂದು ಹೇಳುವರು ॥ ೨೦ ॥ **ವೇದ ಮಾರ್ಗಣಾ**—ಪುರುಷ, ಸ್ತ್ರೀ, ನಪುಂಸಕರು ವೇದ ಕರ್ಮದ ಉದಯದಿಂದ ಭಾವ ಪುರುಷ, ಭಾವ ಸ್ತ್ರೀ, ಭಾವ ನಪುಂಸಕರಾಗುತ್ತಾರೆ. ಇನ್ನು ನಾಮ ಕರ್ಮದ ಉದಯದಿಂದ ದ್ರವ್ಯಪುರುಷ, ದ್ರವ್ಯಸ್ತ್ರೀ ಮತ್ತು ದ್ರವ್ಯನಪುಂಸಕರಾಗುತ್ತಾರೆ ಈ ಭಾವವೇದ ಮತ್ತು ದ್ರವ್ಯವೇದಗಳು ಬಹುತರವಾಗಿ ಸಮಾನವಾಗಿರುತ್ತವೆ. ಒಮ್ಮೊಮ್ಮೆ ವಿಷಮವೂ ಆಗುವವು (ಹೇಗೆಂದರೆ ನಪುಂಸಕ ವೇದದ ಉದಯವು ನಾರಕಿ ಮತ್ತು ಸಮ್ಮೂರ್ಛನ ದ್ರವ್ಯ ನಪುಂಸಕದ ಹೊರತಾಗಿ ಪುರುಷ ಶರೀರೀ ಮತ್ತು ಸ್ತ್ರೀ ಶರೀರೀ ಜೀವಗಳಲ್ಲಿಯೂ ಉಂಟಾಗುತ್ತದೆ) ॥ ೨೧ ॥ **ಕಷಾಯ ಮಾರ್ಗಣಾ**—ಜೀವದ ಸುಖ ದುಃಖಾದಿ ಅನೇಕ ಪ್ರಕಾರದ ಧಾನ್ಯವನ್ನು ಉತ್ಪನ್ನ ಮಾಡುವಂಥದೂ ಯಾರ ಸಂಸಾರ ರೂಪೀ ಕ್ಷೇತ್ರದ ಮರ್ಯಾದೆಯು ಅತ್ಯಂತ ದೂರವಿರುವುದೋ ಅವರ ಆ ಕ್ಷೇತ್ರದ ಕರ್ಷಣವನ್ನು ಇಲ್ಲಿ ಮಾಡುವಂಥದೂ ಆದುದರಿಂದ ಕಷಾಯವೆಂದು ಹೇಳಲಾಗುವುದು ॥ ೨೨ ॥ ಕ್ರೋಧವು ನಾಲ್ಕು ಪ್ರಕಾರದ್ದಾಗಿದೆ ಒಂದು ಕಲ್ಲಿನ ರೇಖೆಯಂತೆ, ಇನ್ನೊಂದು ಪೃಥ್ವಿಯ ರೇಖೆಯಂತೆ, ಮೂರನೆಯದು ಧೂಳಿಯೊಳಗಿನ ರೇಖೆಯಂತೆ, ಇನ್ನು ನಾಲ್ಕನೆಯದು ನೀರಿನೊಳಗಿನ ರೇಖೆಯಂತೆ ಇರುತ್ತವೆ ಈ ನಾಲ್ಕೂ ಪ್ರಕಾರದ ಕ್ರೋಧಗಳು ಕ್ರಮದಿಂದ ನರಕ, ತಿರ್ಯಕ್, ಮನುಷ್ಯ ಹಾಗೂ ದೇವ ಗತಿಗಳಲ್ಲಿ ಉತ್ಪನ್ನ ಮಾಡುವಂಥವಾಗಿವೆ. ॥ ೨೩ ॥ ಮಾನವೂ ನಾಲ್ಕುವಿಧವಾಗಿದೆ. ಕಲ್ಲು, ಎಲುಬು, ಕಟ್ಟಿಗೆ, ಬೆತ್ತ, ಇವುಗಳಿಂದ ಸಮಾನವಾಗಿರುತ್ತವೆ ಈ ನಾಲ್ಕು ಪ್ರಕಾರದ ಮಾನಗಳೂ ಕ್ರಮದಿಂದ ನರಕ, ತಿರ್ಯಕ್, ಮನುಷ್ಯ, ದೇವಗತಿಗಳಲ್ಲಿ ಹುಟ್ಟಲಿಕ್ಕೆ ಕಾರಣವಾಗುತ್ತವೆ ॥ ೨೪ ॥ ಮಾಯೆಯೂ ನಾಲ್ಕು

ವಿಧವಾಗಿದೆ ಬಿದರಿನ ಬೇರು, ಟಗರಿನ ಕೋಡು, ಗೋಮೂತ್ರ, ಬಾಯಿಗುದ್ದಲಿ ಇವುಗಳಿಗೆ ಈ ಮಾಯೆಯು ಪ್ರಕಾರಗಳನ್ನು ಹೋಲಿಸಬಹುದಾಗಿದೆ. ಈ ನಾಲ್ಕು ವಿಧದ ಮಾಯೆಗಳೂ ಸಹ ಜೀವಕ್ಕೆ ನರಕ, ತಿರ್ಯಕ್, ಮನುಷ್ಯ ಮತ್ತು ದೇವಗತಿಗಳಲ್ಲಿ ಒಯ್ಯುತ್ತವೆ. ॥ ೨೫ ॥ ಲೋಭ ಕಷಾಯವೂ ನಾಲ್ಕು ವಿಧವಾಗಿದೆ-ಕ್ರಿಮಿ ರೋಗಕ್ಕೆ ಸಮಾನವಾದುದು, ಚಕ್ರಮಲಕ್ಕೆ (ಬಂಡಿಯ ಗಾಲಿಗೆ ಹಾಕುವ ಎಣ್ಣೆಗೆ) ಸಮಾನವಾದುದು, ಶರೀರದ ಮಲಕ್ಕೆ ಸಮಾನವಾದುದು ಮತ್ತು ಅರಿಸಿಣಕ್ಕೆ ಸಮಾನವಾದುದು. ಇವೂ ಕ್ರಮದಿಂದ ನರಕ, ತಿರ್ಯಕ್ ಮನುಷ್ಯ ಮತ್ತು ದೇವ ಗತಿಗಳಿಗೆ ಕಾರಣವಾಗಿವೆ. ॥ ೨೬ ॥ ನರಕ, ತಿರ್ಯಂಚ, ಮನುಷ್ಯ ಹಾಗೂ ದೇವಗತಿಗಳಲ್ಲಿ ಉತ್ಪನ್ನವಾಗುವ ಪ್ರಥಮ ಸಮಯದಲ್ಲಿ ಕ್ರಮದಿಂದ ಕ್ರೋಧ, ಮಾನ, ಮಾಯಾ ಮತ್ತು ಲೋಭಗಳ ಉದಯವಾಗುತ್ತವೆ ಇಲ್ಲವೆ ಅನಿಯಮವೂ ಇರುತ್ತದೆ ॥ ೨೭ ॥ **ಜ್ಞಾನ ಮಾರ್ಗಣಾ**—ಜ್ಞಾನದಲ್ಲಿ ಮತಿ, ಶ್ರುತಿ, ಅವಧಿ, ಮನಃಪರ್ಯಾಯ ಹಾಗೂ ಕೇವಲ ಎಂದು ಐದು ಭೇದಗಳಿವೆ ಇವುಗಳಲ್ಲಿ ಮೊದಲಿನ ನಾಲ್ಕು ಕ್ಷಾಯೋಪಶಮಿಕವಾಗಿವೆ ಕೇವಲ ಜ್ಞಾನವು ಕ್ಷಾಯಿಕವಾಗಿದೆ. ॥ ೨೮ ॥ ಇಂದ್ರಿಯ ಮತ್ತು ಅನಿಂದ್ರಿಯ (ಮನಸ್ಸು) ಇವುಗಳ ಸಹಾಯದಿಂದ ಅಭಿಮುಖ ಮತ್ತು ನಿಯಮಿತ ಪದಾರ್ಥಗಳ ಯಾವ ಜ್ಞಾನವಾಗುವುದೋ ಅದಕ್ಕೆ ಆಭಿನಿಬೋಧಿಕ ಎಂದು ಹೇಳುವರು ಇದರಲ್ಲಿ ಪ್ರತಿಯೊಂದಕ್ಕೂ ಅವಗ್ರಹ, ಈಹಾ, ಅವಾಯ, ಧಾರಣಗಳೆಂದು ನಾಲ್ಕು ಭೇದಗಳಿವೆ ॥ ೨೯ ॥ ಪದಾರ್ಥಗಳು ಮತ್ತು ಇಂದ್ರಿಯಗಳು ಇವುಗಳ ಯೋಗ್ಯ ಕ್ಷೇತ್ರದಲ್ಲಿ ಅವಸ್ಥಾನರೂಪ ಸಂಯೋಗವಾಗುವುದರಿಂದ ನಿಯಮವಾಗಿ ಅವಗ್ರಹರೂಪ ಮತಿಜ್ಞಾನವು ಉಂಟಾಗುತ್ತದೆ. ಅವಗ್ರಹ ಜ್ಞಾನದ ಮುಖಾಂತರ ಗ್ರಹಣ ಮಾಡಿದ ಪದಾರ್ಥದಲ್ಲಿ ವಿಶೇಷವಾಗಿ ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯು ಈಹಾ ಮತಿಜ್ಞಾನವೆನಿಸುತ್ತದೆ. ॥ ೩೦ ॥ ಈಹಾ ಜ್ಞಾನದ ತರುವಾಯ ವಸ್ತುವಿನ ವಿಶೇಷ ಚಿಹ್ನಗಳನ್ನು ನೋಡಿ ಒಂದು ವಿಶಿಷ್ಟವಾದ ನಿರ್ಣಯಕ್ಕೆ ಬರುವುದು ಅವಾಯವೆನಿಸುತ್ತದೆ ಇದರ ಮುಖಾಂತರ ನಿರ್ಣಯಿಸಲ್ಪಟ್ಟ ವಸ್ತುವು ಕಾಲಾಂತರದಲ್ಲಿಯೂ ಮರೆಯದೆ ಇರುವುದು ಧಾರಣಾ ಜ್ಞಾನವೆನಿಸುತ್ತದೆ ॥ ೩೧ ॥ ಮತಿ ಜ್ಞಾನಕ್ಕೆ ವಿಷಯವಾದ ಪದಾರ್ಥದ ಆಧಾರದಿಂದ ಆಗುವ ಬೇರೊಂದು ಪದಾರ್ಥದ ಜ್ಞಾನಕ್ಕೆ ಶ್ರುತಜ್ಞಾನವೆಂದು ಹೇಳಲಾಗುವುದು. ಈ ಜ್ಞಾನವು ನಿಯಮದಿಂದ ಮತಿ-ಜ್ಞಾನ ಪೂರ್ವಕವಾಗುತ್ತದೆ ಈ ಶ್ರುತಜ್ಞಾನದಲ್ಲಿ ಅಕ್ಷರಾತ್ಮಕ, ಅನಕ್ಷರಾತ್ಮಕವೆಂದೂ ಅಥವಾ ಶಬ್ದಜನ್ಯ ಮತ್ತು ಲಿಂಗಜನ್ಯವೆಂದೂ ಎರಡು ಭೇದಗಳಾಗುತ್ತವೆ. ಇವುಗಳಲ್ಲಿ ಮುಖ್ಯವಾದುದು ಶಬ್ದಜನ್ಯ ಶ್ರುತಜ್ಞಾನವಾಗಿದೆ ॥ ೩೨ ॥ ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವಗಳ ಅಪೇಕ್ಷೆಯಿಂದ ಯಾವುದರ ವಿಷಯದ ಸೀಮೆಯಾಗುವುದೋ-ಇಂದ್ರಿಯಗಳ ಸಹಾಯವಿಲ್ಲದೆ ಸಾಕ್ಷಾತ್ ಆತ್ಮ ವಿಶುದ್ಧಿಯಿಂದ ಯಾವ ಜ್ಞಾನವಾಗುವುದೋ-ಅದಕ್ಕೆ ಅವಧಿ ಜ್ಞಾನವೆಂದು ಹೇಳಲಾಗುತ್ತದೆ. ಅದಕ್ಕಾಗಿಯೇ ಪರಮಾಗಮದಲ್ಲಿ ಇದಕ್ಕೆ ಸೀಮಾಜ್ಞಾನವೆಂದು ಹೇಳಿದ್ದಾರೆ ಈ ಜ್ಞಾನದಲ್ಲಿ ಜಿನೇಂದ್ರದೇವನು ಭವಪ್ರತ್ಯಯ ಮತ್ತು ಗುಣಪ್ರತ್ಯಯವೆಂದು ಎರಡು ಭೇದಗಳನ್ನು ಹೇಳಿದ್ದಾನೆ ॥ ೩೩ ॥ ಚಿಂತಿಸಿದ್ದು, ಚಿಂತಿಸದೆ ಇದ್ದುದು, ಸದ್ಯದಲ್ಲಿ ಕೆಲವೊಂದು ಭಾಗ ಚಿಂತಿಸಿದುದು, ಇತ್ಯಾದಿ ಅನೇಕ ಭೇದಸ್ವರೂಪವುಳ್ಳುದೂ ಇನ್ನೊಬ್ಬರ ಮನಸ್ಸಿನಲ್ಲಿದ್ದುದನ್ನು ತಿಳಿದುಕೊಳ್ಳುವ ಜ್ಞಾನವು ಮನಃಪರ್ಯಾಯ ಜ್ಞಾನವಾಗಿದೆ ಈ ಮನಃಪರ್ಯಾಯ ಜ್ಞಾನವು ಮಾನವ ಕ್ಷೇತ್ರದಲ್ಲಿಯೇ ಆಗುತ್ತದೆ ಬೇರೆ ಕಡೆಗೆ ಆಗದು. ॥ ೩೪ ॥ ಯಾವ ಜ್ಞಾನವು ಸಂಪೂರ್ಣ, ಸಮಗ್ರ, ಕೇವಲ, ಪ್ರತಿಪಕ್ಷ ರಹಿತ, ಸರ್ವ ಪದಾರ್ಥಗತ, ಲೋಕಾಲೋಕಗಳಲ್ಲಿ ಅಂಧಕಾರವಿಲ್ಲದುದಾಗಿದೆಯೋ ಅದು ಕೇವಲಜ್ಞಾನವಾಗಿದೆ ॥ ೩೫ ॥ **ಸಂಯಮ ಮಾರ್ಗಣಾ**—ಅಹಿಂಸಾ, ಅಚೌರ್ಯ, ಸತ್ಯ, ಶೀಲ (ಬ್ರಹ್ಮಚರ್ಯ) ಮತ್ತು ಅಪರಿಗ್ರಹ ಈ ಐದು ಮಹಾವ್ರತಗಳನ್ನು ಧಾರಣ ಮಾಡುವುದು, ಈರ್ಯಾ, ಭಾಷಾ, ಏಷಣಾ, ಆದಾನ-ನಿಕ್ಷೇಪಣ ಮತ್ತು ಉತ್ಸರ್ಗ ಈ ಐದು ಸಮಿತಿಗಳನ್ನು ಪಾಲಿಸುವುದು, ನಾಲ್ಕು ಪ್ರಕಾರದ ಕಷಾಯಗಳನ್ನು ನಿಗ್ರಹಿಸುವುದು; ಮನ, ವಚನ, ಕಾಯರೂಪ ದಂಡವನ್ನು ತ್ಯಾಗಮಾಡುವುದು; ಹಾಗೆಯೇ ಐದು ಇಂದ್ರಿಯಗಳನ್ನು ಗೆಲ್ಲುವುದು, ಇವುಗಳಿಗೆ ಸಂಯಮವೆನ್ನುವರು **ದರ್ಶನ ಮಾರ್ಗಣಾ**—ಸತ್ತಾತ್ಮಕ ವಸ್ತುವಿನ ಆಕಾರದ ತಿಳುವಳಿಕೆ ಆಗದೆಯೂ, ಪದಾರ್ಥದ ವಿಶೇಷತೆಯನ್ನು ಅರಿಯದೆಯೂ, ಯಾವ ಆತ್ಮಾವಭಾಸರೂಪ ಸಾಮಾನ್ಯ ಗ್ರಹಣವಾಗುವುದೋ ಅದನ್ನು ಜೈನ ಸಿದ್ಧಾಂತದಲ್ಲಿ ದರ್ಶನವೆಂದು ಹೇಳುತ್ತಾರೆ ॥ ೩೬ ॥ ಯಾವ ಆತ್ಮಾವಭಾಸವು ಚಕ್ಷುರಿಂದ್ರಿಯದ ಮುಖಾಂತರ ಪ್ರಕಾಶಿತವಾಗುವುದೋ, ಅದವಾ ಪದಾರ್ಥವನ್ನು ಕಣ್ಣಿನಿಂದ ಕಂಡಾಗ ಚಕ್ಷುದರ್ಶನವೆನಿಸುತ್ತದೆ ಇನ್ನು ಕಣ್ಣುಗಳನ್ನುಳಿದು

ಬೇರೆ ನಾಲ್ಕು ಇಂದ್ರಿಯಗಳ ಇಲ್ಲವೆ ಮನಸ್ಸಿನ ಮುಖಾಂತರ ಪ್ರಕಟಗೊಳ್ಳುವುದು ಅಚಕ್ಷು ದರ್ಶನವಾಗಿದೆ ॥ ೩೮ ॥ ಅವಧಿಜ್ಞಾನವಾಗುವ ಪೂರ್ವದಲ್ಲಿ ಅವಧಿಗೆ ವಿಷಯವಾದಂಥ ಪರಮಾಣುವನ್ನು ಮೊದಲು ಮಾಡಿಕೊಂಡು ಮಹಾಸ್ಕಂಧದ ವರೆಗೆ ಇರುವ ಮೂರ್ತದ್ರವ್ಯವನ್ನು ಯಾವುದು ಕಾಣುವುದೋ ಅದು ಅವಧಿದರ್ಶನವಾಗಿದೆ. ॥ ೩೯ ॥ ತೀವ್ರ, ಮಂದ ಮತ್ತು ಮಧ್ಯಮ ಮೊದಲಾದ ಅನೇಕ ಅವಸ್ಥೆಗಳ ಅಪೇಕ್ಷೆಯಿಂದ ಹಾಗೂ ಚಂದ್ರ, ಸೂರ್ಯ ಆದಿ ಪದಾರ್ಥಗಳ ಅಪೇಕ್ಷೆಯಿಂದ ಅನೇಕ ಪ್ರಕಾರದ ಪ್ರಕಾಶವು ಜಗತ್ತಿನಲ್ಲಿ ಪರಿಮಿತ ಕ್ಷೇತ್ರದಲ್ಲಿ ಇರುತ್ತದೆ. ಇನ್ನು ಯಾವುದು ಲೋಕಾಲೋಕವನ್ನು ಪ್ರಕಾಶಿಸುವುದೋ ಅದು ಕೇವಲ ದರ್ಶನವಾಗಿದೆ. ॥ ೪೦ ॥ ಲೇಶ್ಯಾ ಮಾರ್ಗಣಾ —ಲೇಶ್ಯೆಗಳ ಗುಣಗಳನ್ನು (ಸ್ವರೂಪ) ತಿಳಿದಿರುವ ಗಣಧರಾದಿ ದೇವರು ಲೇಶ್ಯೆಗಳ ಸ್ವರೂಪವನ್ನು ಹೀಗೆ ಹೇಳಿದ್ದಾರೆ– ಯಾವುದರಿಂದ ಜೀವವು ತನ್ನನ್ನು ಪುಣ್ಯಪಾಪಗಳ ಆಧೀನಮಾಡಿಕೊಳ್ಳುವುದೋ ಅಂದರೆ ಪುಣ್ಯಪಾಪಗಳ ಲೇಪವನ್ನು ಹೊಂದುವುದೊ ಅದಕ್ಕೆ ಲೇಶ್ಯೆಯೆಂದು ಹೇಳಲಾಗುವುದು ॥ ೪೧ ॥ ಕಷಾಯೋದಯದಿಂದ ಅನುರಕ್ತ ಯೋಗ ಪ್ರವೃತ್ತಿಗೇ ಲೇಶ್ಯಾ ಎಂದು ಹೇಳುತ್ತಾರೆ. ಇದರಿಂದ ಎರಡರ ಕಾರ್ಯವು ಪ್ರಕೃತಿ, ಸ್ಥಿತಿ, ಅನುಭಾಗ ಮತ್ತು ಪ್ರದೇಶ ಈ ನಾಲ್ಕು ಪ್ರಕಾರದ ಬಂಧವೆನಿಸುವದೆಂದು ಹೇಳಲಾಗಿದೆ ॥ ೪೨ ॥ ಲೇಶ್ಯೆಗಳ ನಿಯಮದಿಂದ ಕೃಷ್ಣ, ನೀಲ ಕಾಪೋತ, ತೇಜ (ಪೀತ) ಪದ್ಮ ಮತ್ತು ಶುಕ್ಲ ಎಂದು ಲೇಶ್ಯೆಗಳನ್ನು ಆರು ವಿಧವಾಗಿ ನಿರ್ದೇಶ ಮಾಡಲಾಗಿದೆ. ॥ ೪೩ ॥ ಅಶುಭ ಲೇಶ್ಯೆಯನ್ನು ಕುರಿತು ತೀವ್ರತಮ, ತೀವ್ರತರ ಮತ್ತು ತೀವ್ರ ಈ ಮೂರು ಸ್ಥಾನ, ಹಾಗೆಯೇ ಶುಭ ಲೇಶ್ಯೆಗಳ ಬಗ್ಗೆ ಮಂದ, ಮಂದತರ, ಮಂದತಮ ಎಂಬ ಮೂರು ಸ್ಥಾನಗಳೂ ಆಗುತ್ತವೆ ಯಾಕಂದರೆ ಕೃಷ್ಣಲೇಶ್ಯಾದಿ ಆರು ಲೇಶ್ಯೆಗಳಿಗೆ ಶುಭಸ್ಥಾನದಲ್ಲಿ ಜಘನ್ಯದಿಂದ ಉತ್ಕೃಷ್ಟದ ವರೆಗೆ ಮತ್ತು ಅಶುಭ ಸ್ಥಾನದಲ್ಲಿ ಉತ್ಕೃಷ್ಟದಿಂದ ಜಘನ್ಯದ ವರೆಗೆ ಪ್ರತಿಯೊಂದರಲ್ಲಿ ಷಟ್‌ಸ್ಥಾನಪತಿತ, ಹಾನಿವೃದ್ಧಿಗಳುಂಟಾಗುತ್ತವೆ. ॥ ೪೪ ॥ ಕೃಷ್ಣ ಆದಿ ಆರು ಲೇಶ್ಯೆಗಳುಳ್ಳ ಆರು ಜನ ಪಥಿಕರು ವನದಲ್ಲಿ ಮಾರ್ಗಭ್ರಷ್ಟರಾಗಿ ತಿರುಗುತ್ತ ಫಲಭರಿತವಾದ ವೃಕ್ಷ ಒಂದನ್ನು ನೋಡಿ ಮನದಲ್ಲಿ ಹೀಗೆ ವಿಚಾರಿಸುತ್ತಾರೆ ಕೃಷ್ಣ ಲೇಶ್ಯೆಯವನು ನಾನು ಈ ಗಿಡವನ್ನು ಬೇರು ಸಹಿತ ಕಿತ್ತಿ ಇದರ ಫಲವನ್ನು ತಿನ್ನುವೆನೆನ್ನುವನು. ನೀಲ ಲೇಶ್ಯೆಯವನು ಇದರ ಬೊಡ್ಡೆಯನ್ನೇ ಮುರಿದು ಫಲಗಳನ್ನು ಭಕ್ಷಿಸುವ ವಿಚಾರ ಮಾಡುವನು ಕಾಪೋತಲೇಶ್ಯೆಯವನು ಇದರ ದೊಡ್ಡ ದೊಡ್ಡ ಟೊಂಗೆಗಳನ್ನು ಕಡಿದು ಫಲಗಳನ್ನು ತಿನ್ನುವ ವಿಚಾರದಲ್ಲಿರುವನು ಪೀತ ಲೇಶ್ಯೆಯವನು ಈ ವೃಕ್ಷದ ಚಿಕ್ಕ ಚಿಕ್ಕ ಟೊಂಗೆಗಳನ್ನು ಮುರಿದು ಹಣ್ಣುಗಳನ್ನು ತಕ್ಕೊಂಡೇನೆಂದು ಬಯಸುವನು ಪದ್ಮಲೇಶ್ಯೆಯವನು ಈ ಗಿಡದ ಹಣ್ಣುಗಳನ್ನು ಹರಿದು ತಿನ್ನುವೆನೆನ್ನುವನು ಶುಕ್ಲ ಲೇಶ್ಯೆಯವನು ಈ ವೃಕ್ಷದ ಹಣ್ಣು ತಾನಾಗಿಯೇ ಉದುರಿ ಬಿದ್ದಾಗ ತಿಂದೇನೆನ್ನುವನು. ಈ ಪ್ರಕಾರ ಮನಃಪೂರ್ವಕವಾಗಿ ಯಾವ ವಚನ ಹಾಗೂ ಕಾಯಗಳ ಪ್ರವೃತ್ತಿಯು ಉಂಟಾಗುವುದೋ ಅದು ಲೇಶ್ಯೆಯ ಕರ್ಮವಾಗಿದೆ ॥ ೪೫–೪೬ ॥ ತೀವ್ರ ಕ್ರೋಧ, ವೈರವನ್ನು ಬಿಡದ ಸ್ವಭಾವ, ಹೋರಾಡುವ ಪ್ರವೃತ್ತಿ, ಧರ್ಮ ಮತ್ತು ದಯೆಗಳಿಲ್ಲದಿರುವಿಕೆ, ದುಷ್ಟತನ, ಅನ್ಯರ ವಶನಾಗದಿರುವುದು ಇವೆಲ್ಲ ಕೃಷ್ಣಲೇಶ್ಯೆಯವರ ಲಕ್ಷಣಗಳಾಗಿವೆ ॥ ೪೭ ॥ ಕಾರ್ಯ ಮಾಡುವುದರಲ್ಲಿ ಮಂದತ್ವ, ಬುದ್ಧಿವಿಹೀನತ್ವ, ಕಲಾ–ಚಾತುರ್ಯವಿಲ್ಲದಿರುವಿಕೆ, ಪಂಚೇಂದ್ರಿಯಗಳ ವಿಷಯಗಳಲ್ಲಿ ಲೋಲುಪತೆ ಇವು ಸಾಮಾನ್ಯವಾಗಿ ನೀಲಲೇಶ್ಯೆಯ ಲಕ್ಷಣವೆಂದು ಹೇಳಿದೆ ॥ ೪೮ ॥ ಇನ್ನೊಬ್ಬರ ಮೇಲೆ ಸಿಟ್ಟು ಮಾಡುವುದು, ಅನ್ಯರನ್ನು ನಿಂದಿಸುವುದು, ವಿವಿಧ ಪ್ರಕಾರದಿಂದ ಬೇರೆಯವರಿಗೆ ದೋಷ ಅಂಟಿಸುವದು, ಸ್ವತಃ ಬಹಳ ದುಃಖಿಯೂ ಭಯಗ್ರಸ್ತನೂ ಆಗಿರುವುದು, ಕಾರ್ಯಾಕಾರ್ಯಗಳ ವಿಚಾರ ಮಾಡದಿರುವದು, ಇವೆಲ್ಲ ಕಾಪೋತ ಲೇಶ್ಯೆಯವನ ಲಕ್ಷಣಗಳಾಗಿವೆ ॥ ೪೯ ॥ ತನ್ನ ಕಾರ್ಯ, ಅಕಾರ್ಯ ಮತ್ತು ಶ್ರೇಯ, ಅಶ್ರೇಯಗಳನ್ನು ತಿಳಿಯುವಂಥವನು, ಎಲ್ಲರ ವಿಷಯದಲ್ಲಿಯೂ ಸಮದರ್ಶಿ, ದಯಾ ದಾನಗಳಲ್ಲಿ ತತ್ಪರ, ಕೋಮಲ ಪರಿಣಾಮ ಉಳ್ಳವನು ಪೀತ ಲೇಶ್ಯೆಯವನಾಗಿರುವನು. ॥ ೫೦ ॥ ದಾನಶೀಲ, ಸಜ್ಜನ, ವಿಶುದ್ಧ, ಕರ್ಮಶೀಲ, ಅನ್ಯರ ಬಹಳ ಅಪರಾಧಗಳನ್ನೂ ಕ್ಷಮಿಸುವಂಥವನು, ಸಾಧು ಮತ್ತು ಗುರುಜನರನ್ನು ಆದರಿಸಿ ಅದರಲ್ಲಿ ಸುಖವನ್ನು ಕಾಣುವವನು ಪದ್ಮಲೇಶ್ಯೆಯವನು ॥ ೫೧ ॥ ಪಕ್ಷಪಾತ ಮಾಡದಿರುವಿಕೆ, ತನ್ನ ಸ್ವಾರ್ಥ ಸಾಧಿಸದಿರುವಿಕೆ, ಈ ಎಲ್ಲ ಜೀವಗಳಲ್ಲಿ ಸಮಭಾವ ಇಡುವಿಕೆ, ಇಷ್ಟದಲ್ಲಿ ರಾಗ, ಅನಿಷ್ಟದಲ್ಲಿ ವಿದ್ವೇಷ, ಕುಟುಂಬಾದಿಗಳಲ್ಲಿ ಆಸಕ್ತಿ ಇಲ್ಲದಿರುವಿಕೆ ಇವು ಶುಕ್ಲ ಲೇಶ್ಯೆಯವರ ಲಕ್ಷಣ- ಗಳಾಗಿವೆ. ॥ ೫೨ ॥ ಭವ್ಯತ್ವ ಮಾರ್ಗಣಾ—ಯಾವ ಜೀವಕ್ಕೆ ಅನಂತ ಜ್ಞಾನ, ದರ್ಶನ, ಸುಖ ಮತ್ತು ವೀರ್ಯ ರೂಪ ಅನಂತ ಚತುಷ್ಟಯಗಳ ಸಿದ್ಧಿಯಾಗುವದಿದೆಯೋ ಅದು ಭವ್ಯಸಿದ್ಧ ಇದಕ್ಕೆ ವಿಪರೀತವಾದುದು ಅರ್ಥಾತ್

ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಎಂದೂ ಸಿದ್ಧತ್ವವನ್ನು ಹೊಂದದೆ ಇರುವಂಥ ಜೀವವು ಅಭವ್ಯವಾಗಿದೆ. ॥ ೫೩ ॥ ಸಮ್ಯಕ್ತ್ವ ಮಾರ್ಗಣಾ—ಆರು ದ್ರವ್ಯ, ಐದು ಅಸ್ತಿಕಾಯ, ನವ ಪದಾರ್ಥ ಇವುಗಳನ್ನು ಜಿನ ಭಗವಂತನು ಯಾವ ಪ್ರಕಾರ ವರ್ಣಿಸಿರುವನೋ ಆ ಪ್ರಕಾರ ಶ್ರದ್ಧೆಯನ್ನು ಇಡುವುದು ಸಮ್ಯಕ್ತ್ವವಾಗಿದೆ ಇದರಲ್ಲಿ ಎರಡು ಪ್ರಕಾರವಿದೆ ಒಂದು ಕೇವಲ ಆಜ್ಞೆಯಿಂದ ಅರ್ಥಾತ್ ಆಗಮ ವಾಕ್ಯದಿಂದ ಶ್ರದ್ಧೆಯು ಉತ್ಪನ್ನವಾಗುವುದು ಇನ್ನೊಂದು ಅಧಿಗಮ ಸಮ್ಯಕ್ತ್ವ ಇದು ಯುಕ್ತಿ ತರ್ಕಸಹಿತ ಪರೀಕ್ಷಾ ಪೂರ್ವಕ ಶ್ರದ್ಧೆಯನ್ನು ಇಡುವುದು ॥ ೫೪ ॥ ದರ್ಶನ ಮೋಹನೀಯ ಕರ್ಮವು ಕ್ಷೀಣವಾದ ಮೇಲೆ ನಿರ್ಮಲ ಶ್ರದ್ಧೆಯುಂಟಾಗುತ್ತದೆ ಇದಕ್ಕೆ ಕ್ಷಾಯಿಕ ಸಮ್ಯಕ್ತ್ವವೆಂದು ಹೇಳುವರು ಈ ಸಮ್ಯಕ್ತ್ವವು ನಿತ್ಯ ಅನ್ಯ ಕರ್ಮಗಳ ಕ್ಷಯಕ್ಕೆ ಕಾರಣವಾಗಿದೆ ॥ ೫೫ ॥ ದರ್ಶನ ಮೋಹನೀಯ ಕರ್ಮದ ಸಮ್ಯಕ್ತ್ವ ಪ್ರಕೃತಿಯ ಉದಯದಿಂದ ಪದಾರ್ಥದ ಯಾವ ಚಲ, ಮಲಿನ, ಅಗಾಢ ರೂಪ ಶ್ರದ್ಧೆಯು ಉಂಟಾಗುವುದೋ ಅದಕ್ಕೆ ವೇದಕ ಸಮ್ಯಕ್ತ್ವವೆಂದು ಹೇಳುತ್ತಾರೆ ॥ ೫೬ ॥ ದರ್ಶನ ಮೋಹನೀಯ ಕರ್ಮದ ಉಪಶಮದಿಂದ ಪದಾರ್ಥದ ಯಾವ ಶ್ರದ್ಧೆಯು ಉಂಟಾಗುವದೋ ಅದಕ್ಕೆ ಉಪಶಮ ಸಮ್ಯಕ್ತ್ವವೆಂದು ಹೇಳಲಾಗುವದು ನೀರಿನಲ್ಲಿ ಕೂಡಿದ ರೇವೆಯು ನಿರ್ಮಲೀಕರಣದಿಂದ ತಳಕ್ಕೆ ಕುಳಿತು ಸ್ವಚ್ಛವಾಗುವಂತೆ ಈ ಸಮ್ಯಕ್ತ್ವವು ನಿರ್ಮಲವಾಗುತ್ತದೆ ॥ ೫೭ ॥ ಒಂದು ಜೀವವು ಸಮ್ಯಕ್ತ್ವದಿಂದ ಚ್ಯುತವಾಗಿರುತ್ತದೆ ಆದರೆ ಮಿಥ್ಯಾತ್ವವನ್ನು ಹೊಂದಿರುವದಿಲ್ಲ ಇಂಥದಕ್ಕೆ ಸಾಸನ ಎಂದು ಹೇಳುವರು. ಈ ಜೀವವು ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಬಾವಗಳಲ್ಲಿ ಐದನೆಯದಾದ ಪಾರಿಣಾಮಿಕ ಭಾವದಿಂದ ಕೂಡಿರುತ್ತದೆ. ॥ ೫೮ ॥ ಯಾವ ಜೀವಕ್ಕೆ ತತ್ತ್ವಗಳ ವಿಷಯದಲ್ಲಿ ಶ್ರದ್ಧೆ, ಅಶ್ರದ್ಧೆ-ಗಳೆರಡೂ ಇರುವವೋ ಅವಕ್ಕೆ ಸಮ್ಯಗ್ಮಿಥ್ಯಾದೃಷ್ಟಿ ಎಂದು ತಿಳಿಯಬೇಕು ॥ ೫೯ ॥ ಯಾವ ಜೀವವು ಜಿನೇಂದ್ರ ದೇವನು ಹೇಳಿದ ಆಪ್ತ, ಆಗಮ, ಪದಾರ್ಥಗಳಲ್ಲಿ ಶ್ರದ್ಧೆಯನ್ನು ಇಡುವದಿಲ್ಲವೋ, ಕುಗುರುಗಳು ಹೇಳಿದ ಹಾಗೂ ಹೇಳದೆ ಇರುವ ಮಿಥ್ಯಾ ಪದಾರ್ಥಗಳಲ್ಲಿ ಶ್ರದ್ಧೆಯನ್ನು ಇಡುವನೋ ಅದಕ್ಕೆ ಮಿಥ್ಯಾದೃಷ್ಟಿ ಎಂದು ಹೇಳಲಾಗುತ್ತದೆ ॥ ೬೦ ॥ ಸಂಜ್ಞಾ ಮಾರ್ಗಣಾ—ನೋಇಂದ್ರಿಯಾವರಣ ಕರ್ಮದ ಕ್ಷಯೋಪಶಮಕ್ಕೆ ಮತ್ತು ಅದರಿಂದ ಹುಟ್ಟುವ ಜ್ಞಾನಕ್ಕೆ ಸಂಜ್ಞೆ ಎಂದು ಹೇಳಲಾಗುವದು ಯಾವ ಜೀವಗಳಿಗೆ ಈ ಸಂಜ್ಞೆಯು ಇರುವದಿಲ್ಲವೋ, ಆದರೆ ಕೇವಲ ಇಂದ್ರಿಯಜನ್ಯ ಜ್ಞಾನಮಾತ್ರ ಇರುವುದೋ ಅವುಗಳಿಗೆ ಅಸಂಜ್ಞಿಗಳೆಂದು ಹೇಳುವರು ॥ ೬೧ ॥ ಹಿತವಾದುದನ್ನು ಗ್ರಹಿಸುವುದು, ಅಹಿತವಾದುದನ್ನು ತ್ಯಾಗಮಾಡುವ ಪ್ರಕಾರಕ್ಕೆ ಶಿಕ್ಷಾ ಎಂದು ಹೇಳಲಾಗುವದು ಇಚ್ಛಾ ಪೂರ್ವಕವಾಗಿ ಕೈಕಾಲುಗಳೇ ಮೊದಲಾದ ಅವಯವಗಳ ಚಲನವಲನವನ್ನು ಮಾಡುವುದಕ್ಕೆ ಕ್ರಿಯೆ ಎಂದು ಹೇಳುವರು ವಚನರೂಪದಲ್ಲಿ ಹೇಳಿದ ವಸ್ತುವಿನ ಸ್ವರೂಪ ಹಾಗೂ ಕರ್ತವ್ಯಗಳಿಗೆ ಉಪದೇಶವೆಂದು ಹೇಳುವರು. ಶ್ಲೋಕಾದಿಗಳ ಪಾಠಕ್ಕೆ ಆಲಾಪವೆಂದು ಹೇಳುವರು ಇನ್ನು ಯಾವ ಜೀವವು ಈ ಶಿಕ್ಷಾದಿಗಳನ್ನು ಮನಸ್ಸಿನ ಅವಲಂಬನದಿಂದ ಗ್ರಹಣ-ಧಾರಣಗಳನ್ನು ಮಾಡುವ ಯೋಗ್ಯತೆಯನ್ನು ಹೊಂದಿರುವುದೋ ಅದಕ್ಕೆ ಸಂಜ್ಞಿ ಎಂದು ಹೇಳುವರು ಈ ಯೋಗ್ಯತೆ ಇಲ್ಲದ ಜೀವಗಳು ಅಸಂಜ್ಞೀ ಎನಿಸುತ್ತವೆ. ॥ ೬೨ ॥ ಯಾವ ಜೀವವು ಕಾರ್ಯ ಪ್ರವೃತ್ತಿಯನ್ನು ಹೊಂದುವ ಪೂರ್ವದಲ್ಲಿ ಕರ್ತವ್ಯಾಕರ್ತವ್ಯದ ವಿಚಾರಮಾಡುವರೋ ಅದು ಸಮನಸ್ಕವು ಇಂದ ಜೀವವು ತತ್ತ್ವ, ಅತತ್ತ್ವಗಳ ಸ್ವರೂಪವನ್ನು ತಿಳಿಯುತ್ತದೆ, ತನಗೆ ಇಟ್ಟ ಹೆಸರಿನಿಂದ ಕರೆದರೆ ಬರುತ್ತದೆ. ಇದಕ್ಕೆ ವಿಪರೀತವಾದುದು ಅಮನಸ್ಕ ಅಥವಾ ಅಸಂಜ್ಞಿ ಎನಿಸುತ್ತದೆ ॥ ೬೩ ॥ ಆಹಾರ ಮಾರ್ಗಣಾ—ಶರೀರ ನಾಮಕ ನಾಮಕರ್ಮದ ಉದಯದಿಂದ ದ್ರವ್ಯಾತ್ಮಕ ದೇಹ, ವಚನ ಮತ್ತು ಮನಗಳು ರೂಪುಗೊಳ್ಳಲಿಕ್ಕೆ ಬೇಕಾಗುವ ಯೋಗ್ಯ ಪುದ್ಗಲದ ನೋಕರ್ಮ ವರ್ಗಣಾಗಳನ್ನು ಗ್ರಹಣಮಾಡುವುದೇ ಆಹಾರವೆನಿಸುತ್ತದೆ ॥ ೬೪ ॥ ವಿಗ್ರಹಗತಿ ಅರ್ಥಾತ್ ಒಂದು ಶರೀರವನ್ನು ಬಿಟ್ಟು ಇನ್ನೊಂದು ಶರೀರವನ್ನು ಗ್ರಹಣಮಾಡುವದಕ್ಕಾಗಿ ಗಮನವನ್ನು ಹೊಂದು-ವಂಥ—ನಾಲ್ಕೂ ಗತಿಗಳಿಗೆ ಸಂಬಂಧಿಸಿದಂಥ—ಜೀವವು, ಪ್ರತರ (ಅರ್ಥಾತ್ ವರ್ಗ ಪ್ರದೇಶಾನುಸಾರ) ಮತ್ತು ಲೋಕಪೂರಣ (ಅರ್ಥಾತ್ ಘನ ಪ್ರದೇಶಾನುಸಾರ) ತನ್ನ ಆತ್ಮ ಪ್ರದೇಶದ ಮುಖಾಂತರ ಸಮಸ್ತ ಲೋಕವನ್ನು ತುಂಬಿಬಿಡುವ ರೂಪ ಸಮುದ್ಘಾತವನ್ನು ಹೊಂದುವಂದ ಸಯೋಗ ಕೇವಲೀ, ಅಯೋಗ ಕೇವಲಿ ಮತ್ತು ಸಿದ್ಧ ಈ ಜೀವಗಳಂತೂ ಅನಾಹಾರಕವಾಗಿರುತ್ತವೆ ಇವುಗಳನ್ನುಳಿದು ಎಲ್ಲ ಜೀವಗಳು ಆಹಾರಕ ಎನಿಸುತ್ತವೆ ॥ ೬೫ ॥

—ನೇಮಿಚಂದ್ರಾಚಾರ್ಯಕೃತ ಜೀವಕಾಂಡ.

## ೧೩. ಧ್ಯಾನ

ಅಭೇದ್ಯ ಕವಚದಿಂದ ಸುರಕ್ಷಿತನಾದ ಸೈನಿಕನು ರಣಭೂಮಿಯ ಮುಂಭಾಗದಲ್ಲಿದ್ದು ಯುದ್ಧ ಮಾಡುತ್ತಿದ್ದರೂ ಶತ್ರುವಿಗೆ ಅಲಂಘ್ಯನೆನಿಸುತ್ತಾನೆ. ಅಲ್ಲದೆ ಹೋರಾಟದಲ್ಲಿ ಪ್ರವೀಣನಾಗಿ ವೈರಿಗಳನ್ನು ಗೆಲ್ಲುತ್ತಾನೆ ಇದೇ ಪ್ರಕಾರ ಕರ್ಮದ ಕ್ಷಯಮಾಡುವುದರಲ್ಲಿ ಪ್ರವೃತ್ತನಾದಂಥ ಸಾಧುವು ಧೈರ್ಯ ರೂಪೀ ಕವಚದಿಂದ ಸುಸಜ್ಜಿತ-ನಾಗಿ ಪರೀಷಹಗಳೆಂಬ ವೈರಿಗಳಿಂದ ಅಲಂಘ್ಯನೆನಿಸುತ್ತಾನೆ ಹಾಗೆಯೇ ಧ್ಯಾನದಲ್ಲಿ ಸಮರ್ಥನಾಗಿ ವೈರಿಗಳನ್ನು ಗೆಲ್ಲುತ್ತಾನೆ ‖ ೧-೨ ‖ ಧ್ಯಾನದಲ್ಲಿ ತಲ್ಲೀನನಾದಂಥ ಪುರುಷನು ಯಾವಾಗಲೂ ರಾಗ, ದ್ವೇಷ, ಇಂದ್ರಿಯ, ಭಯ ಕಷಾಯಗಳನ್ನು ಗೆಲ್ಲುತ್ತಾನೆ. ಹಾಗೆಯೇ ರತಿ, ಅರತಿ, ಮೋಹಗಳನ್ನು ವಿನಾಶಗೊಳಿಸುತ್ತಾನೆ. ‖ ೩ ‖ ಧರ್ಮಧ್ಯಾನವು ನಾಲ್ಕು ವಿಧವಾಗಿದೆ. ಅದರಂತೆ ಶುಕ್ಲಧ್ಯಾನವೂ ನಾಲ್ಕು ವಿಧವಾಗಿದೆ ಈ ಧ್ಯಾನಗಳು ದುಃಖವನ್ನು ದೂರಗೊಳಿಸುವಂಥವಾಗಿವೆ ಅದರಿಂದ ಸಂಸಾರದ ಜನ್ಮ, ಜರಾ, ಮತ್ತು ಮರಣ ಮೊದಲಾದ ದುಃಖದಿಂದ ಭಯಭೀತನಾದಂಥ ಪುರುಷನು ಈ ಎರಡೂ ಧ್ಯಾನಗಳ ಅಭ್ಯಾಸಮಾಡಲಿಕ್ಕೆ ಯತ್ನಿಸುತ್ತಾನೆ. ‖ ೪ ‖ ಅಶುಭ ಧ್ಯಾನ—ಹಸಿವು, ನೀರಡಿಕೆ ಮೊದಲಾದ ಪರೀಷಹಗಳಿಂದ ತ್ರಾಸಿತನಾದಾಗಲೂ ಆರ್ತ ಮತ್ತು ರೌದ್ರ ಈ ಎರಡು ಧ್ಯಾನಗಳಲ್ಲಿ ಎಂದೂ ಪ್ರವೃತ್ತನಾಗಕೂಡದು. ಯಾಕಂದರೆ ಬಹಳ ತಪಸ್ಸನ್ನು ಮಾಡಿದ ಸಾಧುಗಳನ್ನೂ ಸಹ ಆರ್ತ ಮತ್ತು ರೌದ್ರ ಧ್ಯಾನಗಳು ನಷ್ಟಮಾಡಿ ಬಿಡುತ್ತವೆ ‖ ೫ ‖ ಆರ್ತಧ್ಯಾನ—ಆರ್ತಧ್ಯಾನವು ನಾಲ್ಕು ವಿಧವಾಗಿದೆ. ಅದರಂತೆ ರೌದ್ರಧ್ಯಾನವೂ ನಾಲ್ಕು ವಿಧವಾಗಿದೆ ಸಂಸ್ತರ ಅರ್ಥಾತ್ ಶಯ್ಯಾಗತ ಕ್ಷಪಕ ಧ್ಯಾನದಿಂದ ಈ ಎಲ್ಲ ಭೇದಗಳನ್ನು ಪೂರ್ಣರೂಪದಿಂದ ತಿಳಿದುಕೊಳ್ಳಬೇಕು ಅಮನೋಜ್ಞ, ಅರ್ಥಾತ್ ಅನಿಷ್ಟದ ಪ್ರಾಪ್ತಿಯಿಂದ, ಇಷ್ಟ ವಿಯೋಗದಿಂದ, ಪರೀಷಹಗಳ (ದುಃಖ) ವೇದನೆಯಿಂದ ಹಾಗೆಯೇ ಭೋಗದ ಅಭಿಲಾಷೆಯಿಂದ ಉಂಟಾಗುವ ಕಷಾಯಯುಕ್ತ ಭಾವವು ನಾಲ್ಕು ವಿಧದ ಆರ್ತಧ್ಯಾನವಾಗಿದೆ ‖ ೬-೭ ‖ ರೌದ್ರಧ್ಯಾನ—ಸ್ತೈನಿಕ್ಯ ಅರ್ಥಾತ್ ಕಳವು, ಸುಳ್ಳು,ತನ್ನ ಸುರಕ್ಷಿತತೆ, ಈ ಕಾರ್ಯಗಳಲ್ಲಿ ಹಾಗೂ ಜಲ, ಅಗ್ನಿ, ವಾಯು ವನಸ್ಪತಿ ಮೊದಲಾದ ದ್ವೀಂದ್ರಿ-ಯಾದಿ ತ್ರಸ ಈ ಆರು ಕಾಯಗಳ ಜೀವಗಳನ್ನು ಘಾತಮಾಡುವುದರಲ್ಲಿ ಆಗುವ ಕಷಾಯಯುಕ್ತ ಪರಿಣಾಮವು ರೌದ್ರಧ್ಯಾನವೆನಿಸುತ್ತದೆ. ‖ ೮ ‖ ಈ ಎರಡೂ ಆರ್ತ ಮತ್ತು ರೌದ್ರ ಧ್ಯಾನಗಳು ಮಹಾಭಯಕಾರಿ ಹಾಗೂ ಸ್ವರ್ಗಾದಿ ಸದ್ಗತಿಯ ಪ್ರಾಪ್ತಿಯಲ್ಲಿ ವಿಘ್ನಕಾರಿಯಾಗಿವೆ. ಅದಕ್ಕಾಗಿ ಇವುಗಳ ಅಪಹರಣಮಾಡಿ ಯಾವಾಗಲೂ ಧರ್ಮ, ಶುಕ್ಲ ಧ್ಯಾನಗಳಲ್ಲಿ ತಮ್ಮ ಚಿತ್ತ ವೃತ್ತಿಯನ್ನು ನಿಲ್ಲಿಸಬೇಕು ‖ ೯ ‖ ಶುಭಧ್ಯಾನ—ಸ್ಪರ್ಶಾದಿ ಇಂದ್ರಿಯಗಳು, ಕ್ರೋಧಾದಿ ಕಷಾಯಗಳು ಮತ್ತು ಮನ, ವಚನ, ಕಾಯಗಳ ಪ್ರವೃತ್ತಿ ರೂಪ ಯೋಗದ ನಿರೋಧದ ಇಚ್ಛೆಯನ್ನು ಮಾಡುವಾಗ, ಕರ್ಮದ ಹೆಚ್ಚೆಚ್ಚು ನಿರ್ಜರಾ, ಚಿತ್ತದ ವಶೀಕರಣ, ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳೆಂಬ ಸನ್ಮಾರ್ಗದ ಅವಿನಾಶದ ವಿಚಾರಗಳನ್ನು ಮಾಡುವಾಗ, ಸಾಧುಗಳು ತಮ್ಮ ದೃಷ್ಟಿಯಲ್ಲಿ ಬಾಹ್ಯ ಪದಾರ್ಥಗಳ ವಿಚಾರವು ಸುಳಿಯದಂತೆ ನೋಡಿ, ಧ್ಯಾನದಲ್ಲಿ ತೊಡಗಬೇಕು ಸಂಸಾರದಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿ ಆತ್ಮನನ್ನು ಸ್ಮರಿಸಬೇಕು. ತನ್ನ ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂದುರುಗಿಸಬೇಕು ಮನಸ್ಸಿನ ಪ್ರವೃತ್ತಿಯನ್ನು ಇಂದ್ರಿಯಗಳ ವ್ಯಾಪಾರ-ದಿಂದ ತಡೆಯಬೇಕು, ಅದನ್ನು ಆತ್ಮಚಿಂತನೆಯಲ್ಲಿ ತೊಡಗಿಸಬೇಕು ಈ ಪ್ರಕಾರ ಮನ, ವಚನ ಮತ್ತು ಕಾಯಗಳ ಸಮಸ್ತ ಬಾಹ್ಯ ಪ್ರವೃತ್ತಿಗಳನ್ನು ತಡೆದು ಅವುಗಳನ್ನೆಲ್ಲ ಆತ್ಮ ಧ್ಯಾನದಲ್ಲಿಯೇ ನಿಲ್ಲಿಸಬೇಕು ‖ ೧೦-೧೨ ‖ ಧರ್ಮಧ್ಯಾನ—ಹಿಂದೆ ಹೇಳಿದ ಪ್ರಕಾರ ಏಕಾಗ್ರತೆಯನ್ನು ಹೊಂದಿ, ಮನಸ್ಸಿನ ಚಂಚಲತೆಯನ್ನು ನಿರೋಧಿಸಿ ನಾಲ್ಕು ಪ್ರಕಾರದ ಧರ್ಮಧ್ಯಾನವನ್ನು ಮಾಡಬೇಕು ಆಜ್ಞಾ (ಆಗಮೋಪದೇಶ), ಅಪಾಯ (ಪಾಪ ಹಾಗೂ ಪುಣ್ಯಗಳ ವಿಚಾರ), ವಿಪಾಕ (ನಾನಾ ಕರ್ಮದ ನಾನಾ ಪ್ರಕಾರದ ಫಲ), ಸಂಸ್ಥಾನ (ಲೋಕ ರಚನೆಯ ಸ್ವರೂಪ), ಇವುಗಳನ್ನು ಮನಸ್ಸಿನಲ್ಲಿ ವಿಚಾರಪೂರ್ವಕ ಶೋಧಮಾಡುವುದು—ಇದೇ ನಾಲ್ಕು ವಿಧದ ಧರ್ಮಧ್ಯಾನವಾಗಿದೆ. ‖ ೧೩ ‖ ಧರ್ಮದ ಲಕ್ಷಣವು ಈ ಪ್ರಕಾರವಾಗಿದೆ—ಆರ್ಜವ ಅರ್ಥಾತ್ ನಿಷ್ಕಪಟ ಸರಳ ಭಾವ, ಲಘುತಾ ಅರ್ಥಾತ್ ನಿಷ್ಪರಿಗ್ರಹ, (ಇದಕ್ಕೇನೇ ಅಲ್ಪ ಪರಿಗ್ರಹ ವೃತ್ತಿ ಎನ್ನಬಹುದು ) ಮಾರ್ದವ ಅರ್ಥಾತ್ ಎಂಟು ಪ್ರಕಾರದ ಮದಗಳಿಲ್ಲದ ಕೋಮಲ ವೃತ್ತಿ, ಉಪಶಮ ಅರ್ಥಾತ್ ಕ್ರೋಧಾದಿ ಕಷಾಯಗಳಿಲ್ಲದ ಶಾಂತಭಾವ, ಹಾಗೆಯೇ ಶಾಸ್ತ್ರದ ಉಪದೇಶದಿಂದ ಇಲ್ಲವೆ ಸ್ವಾಭಾವಿಕವಾಗಿ ಪದಾರ್ಥಗಳ ಸ್ವರೂಪವನ್ನು ತಿಳಿಯುವ ರುಚಿ ಅಂದರೆ ತತ್ತ್ವ ಜಿಜ್ಞಾಸಾ —ಈ ಧರ್ಮದ

ಲಕ್ಷಣಯುಕ್ತನಾದವನೇ ಧರ್ಮಧ್ಯಾನಕ್ಕೆ ಪಾತ್ರನಾಗುತ್ತಾನೆ. ॥ ೧೪ ॥ ಧರ್ಮಧ್ಯಾನದ ಅವಲಂಬನವು ಐದು ವಿಧವಾಗಿದೆ —ವಾಚನಾ, ಪೃಚ್ಛನಾ, ಪರಿವರ್ತನ ಅರ್ಥಾತ್ ಪಾಠದ ಪುನರಾವೃತ್ತಿ ಇಲ್ಲವೆ ಆಮ್ನಾಯ, ಅನುಪ್ರೇಕ್ಷಾ ಅರ್ಥಾತ್ ಪ್ರಾಪ್ತಮಾಡಿದ ಪದಾರ್ಥಜ್ಞಾನದ ಅನುಚಿಂತನೆ, ಮತ್ತು ಶಾಸ್ತ್ರಕ್ಕೆ ಅವಿರುದ್ಧವಾದ ಧರ್ಮಕಥಾ ಇತ್ಯಾದಿ ಎಲ್ಲ ಮಾತುಗಳ ವಿಚಾರ. ॥ ೧೫ ॥ ಐದು ಅಸ್ತಿಕಾಯ, ಆರು ಜೀವನಿಕಾಯ, ಆರು ದ್ರವ್ಯ, ಅಲ್ಲದೆ ಅನ್ಯ ಪದಾರ್ಥಗಳ ಸ್ವರೂಪವನ್ನು ಶಾಸ್ತ್ರ ವಚನಗಳ ಮುಖಾಂತರವೇ ಯಾವನು ಗ್ರಹಣ ಮಾಡುವನೋ ಅವನು 'ಆಜ್ಞಾ ವಿಚಯ' ಧರ್ಮಧ್ಯಾನಿಯೆನಿಸುತ್ತಾನೆ. ॥ ೧೬ ॥ ಜೈನಮತಕ್ಕೆ ಅನುಸರಿಸಿ ಕಲ್ಯಾಣಕಾರಿಯಾದ ಮಾರ್ಗದ ಉಪಾಯ ಹಾಗೂ ಅಪಾಯ, ವಿಘ್ನ ಅಲ್ಲದೆ ಜೀವಗಳ ಶುಭ, ಅಶುಭ ಪರಿಣಾಮಗಳ ವಿಚಾರ ಮಾಡುವುದು 'ಅಪಾಯ ವಿಚಯ' ಧರ್ಮಧ್ಯಾನವಾಗಿದೆ. ॥ ೧೭ ॥ ಜೀವದ ಒಂದು ಇಲ್ಲವೆ ಅನೇಕ ಭವಗಳಲ್ಲಿಯ ಪಾಪ-ಪುಣ್ಯದ ಫಲಗಳ ವಿಚಾರ ಹಾಗೂ ಕರ್ಮದ ಉದಯ, ಉದೀರಣಾ, ಸಂಕ್ರಮಣ, ಬಂಧ ಮತ್ತು ಮೋಕ್ಷರೂಪ ಅವಸ್ಥೆಗಳ ಚಿಂತನೆಯು 'ವಿಪಾಕ ವಿಚಯ' ಎಂಬ ಹೆಸರಿನ ಧರ್ಮಧ್ಯಾನವಾಗಿದೆ. ॥ ೧೮ ॥ ಅಧೋಲೋಕ, ತಿರ್ಯಗ್‌ಲೋಕ, ಊರ್ಧ್ವಲೋಕ ಈ ಮೂರೂ ಲೋಕಗಳ ಭೇದೋಪಭೇದ, ಆಕಾರಾದಿ ಸಂಸ್ಥಾನ, ಅವುಗಳಿಗೆ ಆನುಷಾಂಗಿಕ ಹನ್ನೆರಡು ಅನುಪ್ರೇಕ್ಷೆಗಳ ಚಿಂತನ ಮಾಡುವುದು 'ಸಂಸ್ಥಾನ ವಿಚಯ' ಎಂಬ ಹೆಸರಿನ ಧರ್ಮಧ್ಯಾನವೆನಿಸುತ್ತದೆ. ॥ ೧೯ ॥ ಆ ಹನ್ನೆರಡು ಅನುಪ್ರೇಕ್ಷೆಗಳು ಹೀಗಿವೆ—ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಸಂಸಾರ, ಲೋಕ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಧರ್ಮ ಮತ್ತು ಬೋಧ ಇವುಗಳ ವಿಚಾರವನ್ನೂ ಸಂಸ್ಥಾನ-ವಿಚಯ ಧರ್ಮಧ್ಯಾನದಲ್ಲಿ ಮಾಡಲಾಗುತ್ತದೆ ॥ ೨೦ ॥ ಶುಕ್ಲಧ್ಯಾನ—ಹಿಂದೆ ಹೇಳಿದ ಪ್ರಕಾರ ಧರ್ಮಧ್ಯಾನವನ್ನು ಮಾಡಿ ಕ್ಷಪಕನು ಯಾವ ಲೇಶ್ಯೆಗಳ ಉಜ್ವಲತೆಯನ್ನು ಪಡೆಯುವನೋ ಆಗ ಅವನು ಧರ್ಮಧ್ಯಾನವನ್ನು ಉಲ್ಲಂಘಿಸಿ ಶುಕ್ಲಧ್ಯಾನವನ್ನು ಮಾಡಲಿಕ್ಕೆ ಪ್ರಾರಂಭಿಸುತ್ತಾನೆ. ॥ ೨೧ ॥ ಶುಕ್ಲಧ್ಯಾನವು ನಾಲ್ಕು ವಿಧವಾಗಿದೆ. ಮೊದಲನೆಯ ಪೃಥಕ್ತ್ವ-ವಿತರ್ಕ ವಿಚಾರ, ಎರಡನೆಯದು ಏಕತ್ವ-ವಿತರ್ಕವಿಚಾರ, ಮೂರನೆಯದು ಸೂಕ್ಷ್ಮಕ್ರಿಯಾ, ನಾಲ್ಕನೆಯದು ಸಮುಚ್ಛಿನ್ನ ಕ್ರಿಯಾ ॥ ೨೨-೨೩ ॥ ಮೋಹನೀಯ ಕರ್ಮವು ಉಪಶಾಂತವಾದಂಥ ಸಾಧುವು ಅನೇಕ ದ್ರವ್ಯಗಳನ್ನು ತನ್ನ ಮನವಚನ ಕಾಯರೂಪ ಯೋಗಗಳ ಮುಖಾಂತರ ಧ್ಯಾನಮಾಡುತ್ತಾನೆ. ಆ ಕಾರಣದಿಂದ ಅದಕ್ಕೆ ಅವನು ಪೃಥಕ್ತ್ವವೆಂದು ಹೇಳುವನು ಇನ್ನು ಪೂರ್ವಗಳ ಶ್ರುತಾಂಗದ ಅರ್ಥವನ್ನು ಮಾಡುವುದರಲ್ಲಿ ಕುಶಲಮತಿಗಳಾದ ಶ್ರುತಕೇವಲೀ ಸಾಧುಗಳು ವಿತರ್ಕ ಅರ್ಥಾತ್ ಶ್ರುತದ ಆಧಾರದಿಂದ ವಿಚಾರ ಮಾಡುತ್ತಾರೆ. ಅದರಿಂದ ಈ ಧ್ಯಾನವು ವಿತರ್ಕ ರೂಪವಾಗಿದೆ ಅರ್ಥ ಅಂದರೆ ಧ್ಯೇಯದ್ರವ್ಯ ಇದರ ಪರ್ಯಾಯ ವಿಶೇಷಗಳು, ವ್ಯಂಜನ ಅಂದರೆ ಪದಾರ್ಥಗಳನ್ನು ಪ್ರಕಟಗೊಳಿಸುವ ವಚನಗಳು, ಯೋಗ ಅಂದರೆ ಮನ, ವಚನ, ಕಾಯಗಳ ಪ್ರವೃತ್ತಿ, ಇವುಗಳಲ್ಲಿ ಕ್ರಮವಾಗಿ—ಒಂದರಿಂದ ಇನ್ನೊಂದರ ಮೇಲೆ ಧ್ಯಾನವು ಪರಿವರ್ತನ ಹೊಂದುವ ವೀಚಾರವಿರುವುದರಿಂದ ಸೂತ್ರದಲ್ಲಿ ಇದಕ್ಕೆ ವೀಚಾರ ಎಂದೂ ಹೇಳಿದೆ. ಈ ಧ್ಯಾನದಲ್ಲಿ ದ್ರವ್ಯದಿಂದ ಪರ್ಯಾಯ ಮತ್ತು ಪರ್ಯಾಯದಿಂದ ದ್ರವ್ಯಕ್ಕೆ, ಒಂದು ಶ್ರುತವಚನದಿಂದ ಇನ್ನೊಂದು ಶ್ರುತವಚನಕ್ಕೆ, ಒಂದು ಯೋಗದಿಂದ ಇನ್ನೊಂದು ಯೋಗಕ್ಕೆ ಧ್ಯಾನವು ಪರಿವರ್ತನ ಹೊಂದುತ್ತಿರುತ್ತದೆ. ಇದು ಪೃಥಕ್ತ್ವ-ವಿತರ್ಕ-ವೀಚಾರ ಎಂಬ ಹೆಸರಿನ ಪ್ರಥಮ ಶುಕ್ಲಧ್ಯಾನವಾಗಿದೆ ॥ ೨೪-೨೬ ॥ ಕ್ಷೀಣ ಕಷಾಯ ಸಾಧುವು ಒಂದೇ ದ್ರವ್ಯ ಇಲ್ಲವೆ ದ್ರವ್ಯ ಪರ್ಯಾಯದ ಯಾವದಾದರೂ ಯೋಗದ ಮುಖಾಂತರ ಧ್ಯಾನಮಾಡುವನು ಅದಕ್ಕಾಗಿ ಅದು ಏಕತ್ವವೆನಿಸುತ್ತದೆ ಮೇಲೆ ಹೇಳಿದಂತೆ ಶ್ರುತ ಕೇವಲೀ ಸಾಧುವು ಶ್ರುತದ ಆಧಾರದಿಂದ ವಿಚಾರಮಾಡುತ್ತಾನೆ ಅದರಿಂದ ಅದು ವಿತರ್ಕರೂಪ-ವಾಗಿದೆ ಅರ್ಥ, ವ್ಯಂಜನ ಮತ್ತು ಯೋಗದ ಸಂಕ್ರಮವಾಗದುದು ಅವೀಚಾರವಾಗಿದೆ ಒಟ್ಟಿನಲ್ಲಿ ಧ್ಯಾನದಲ್ಲಿ ಶ್ರುತಚಿಂತನವು ಅರ್ಥಾತ್ ವಿತರ್ಕವಂತೂ ಆಗುತ್ತದೆ ಆದರೆ ಧ್ಯಾನದ ವಿಷಯವೆನಿಸುವಂಥ ದ್ರವ್ಯವೂ ಚಿಂತನೆಯ ಸಾಧನವಾದ ಯೋಗವೂ ಒಂದೇ ಆಗಿರುತ್ತದೆ. ಅಂದರೆ ಆದರ ವೀಚಾರ ಅರ್ಥಾತ್ ವಿಪರಿವರ್ತನವಾಗುವದಿಲ್ಲ ಇದು ಏಕತ್ವ-ವಿತರ್ಕ-ಅವೀಚಾರ ಎಂಬ ಹೆಸರಿನ ಎರಡನೆಯ ಶುಕ್ಲಧ್ಯಾನವಾಗಿದೆ ॥ ೨೭-೨೯ ॥ ಆದರೆ ಮೂರನೆಯ ಶುಕ್ಲಧ್ಯಾನದಲ್ಲಿ ವಿತರ್ಕ ಮತ್ತು ವೀಚಾರಗಳು ಇರುವದಿಲ್ಲ ಆದರೆ ಸೂಕ್ಷ್ಮ ಕಾಯಯೋಗವು ಇರುವುದರಿಂದ ಸೂಕ್ಷ್ಮಕ್ರಿಯೆಯನ್ನು ಮಾತ್ರ ಅವಲಂಬಿಸಬೇಕಾಗುತ್ತದೆ. ಆದರೂ ಧ್ಯಾನದ ವಿಷಯವು ಸಂಪೂರ್ಣ ದ್ರವ್ಯ ಮತ್ತು ಪರ್ಯಾಯಗಳು ಏಕಕಾಲದಲ್ಲಿ ಆಗುತ್ತವೆ ಇದು ಸೂಕ್ಷ್ಮಕ್ರಿಯಾ ಪ್ರತಿಪಾತಿ ಎಂಬ ಹೆಸರಿನ ಶುಕ್ಲ

ಧ್ಯಾನವಾಗಿದೆ ॥ ೩೦ ॥ ವಿತರ್ಕರಹಿತ, ವೀಚಾರರಹಿತ, ಕ್ರಿಯಾರಹಿತ, ಸಮಸ್ತಶೀಲದ ಪೂರ್ಣತೆಯ ಸಹಭಾವಿ, ಹಾಗೂ ಯೋಗದ ನಿರೋಧದೊಡನೆ ಯಾವ ಧ್ಯಾನವು ಆಗುವುದೋ ಅದು ಅಂತಿಮ ವ್ಯುವರತಕ್ರಿಯಾನಿವೃತ್ತಿ ಎಂಬ ಹೆಸರಿನ ನಾಲ್ಕನೆಯ ಉತ್ತಮ ಶುಕ್ಲಧ್ಯಾನವಾಗಿದೆ ಈ ಅಂತಿಮ ಹಾಗೂ ಅಪ್ರತಿಪಾತಿ—ಎಂದೂ ಬಿಡದ—ಶುಕ್ಲ-ಧ್ಯಾನವನ್ನು—ಯೋಗದ ನಿರೋಧ ಮತ್ತು ಔದಾರಿಕ, ತೈಜಸ ಮತ್ತು ಕಾರ್ಮಣ ಈ ಮೂರೂ ಶರೀರಗಳ ನಾಶವನ್ನು ಮಾಡುವಂಥ-ಹದಿನಾಲ್ಕನೆಯ ಗುಣಸ್ಥಾನದಲ್ಲಿರುವ ಅಯೋಗ ಕೇವಲಿಗಳು ಮಾಡುತ್ತಾರೆ ॥ ೩೧-೩೨ ॥ ಈ ಪ್ರಕಾರ ಕ್ರೋಧಾದಿ ಕಷಾಯಗಳ ಜೊತೆಯಲ್ಲಿ ಯುದ್ಧ ಮಾಡುವುದರಲ್ಲಿ ಕ್ಷಪಕನಿಗೆ ಧ್ಯಾನವೇ ಆಯುಧವಾಗಿದೆ. ಧ್ಯಾನರಹಿತ ಸಾಧುವು ಆಯುಧವಿಲ್ಲದ ಯೋಧನಂತೆ ಅಸಫಲನಾಗುತ್ತಾನೆ ॥ ೩೩ ॥ ರಣಭೂಮಿಯಲ್ಲಿ ರಕ್ಷಣೆಯ ಸಾಧನವು ಕವಚವಾಗಿದೆ ಹಾಗೆಯೇ ಕಷಾಯಗಳ ಕೂಡ ಯುದ್ಧ ಮಾಡುವುದರಲ್ಲಿ ಧ್ಯಾನವೇ ಆತ್ಮರಕ್ಷಣೆಯ ಸಾಧನವಾಗಿದೆ. ಯುದ್ಧದಲ್ಲಿ ಕವಚವಿಲ್ಲದ ಸೈನಿಕನು ನಾಶಹೊಂದುವಂತೆಯೇ ಧ್ಯಾನವನ್ನು ಮಾಡದ ಕ್ಷಪಕನು ತನ್ನನ್ನು ಕಷಾಯದಿಂದ ರಕ್ಷಿಸಿಕೊಳ್ಳಲಾರನು ॥ ೩೪ ॥

—ಶಿವಾರ್ಯಕೃತ ಭಗವತೀಆರಾಧನಾ.

## ೧೪. ಸ್ಯಾದ್ವಾದ

ಜೀವಾದಿ ದ್ರವ್ಯಗಳ ಸಮೂಹವು ನಾನಾ ಪ್ರಕಾರದ ಭಾವಗಳಿಂದ ಕೂಡಿದ್ದೆಂದು ಹೇಳಲಾಗಿದೆ ಅದರ ಸ್ಪಷ್ಟೀಕರಣದ ಹೇತುವೆನಿಸುವ ಪ್ರಮಾಣ ಮತ್ತು ನಯಗಳ ಲಕ್ಷಣವನ್ನೂ ಹೇಳಲಾಗಿದೆ. ॥ ೧ ॥ ದ್ರವ್ಯದ ಎಲ್ಲ ಸ್ವಭಾವಗಳಲ್ಲಿ ಎಲ್ಲಕ್ಕೂ ವ್ಯಾಪಕ ಸ್ವಭಾವವು ಅಸ್ತಿತ್ವವಾಗಿದೆ ಯಾಕಂದರೆ ಎಲ್ಲ ದ್ರವ್ಯಗಳಲ್ಲಿಯೂ 'ಅಸ್ತಿ' ಅರ್ಥಾತ್ ಭಾವಾತ್ಮಕ ಸತ್ತೆಯು ನೋಡಲಿಕ್ಕೆ ಸಿಕ್ಕುತ್ತದೆ. ಮತ್ತು ಅಸ್ತಿತ್ವ 'ಗುಣವು' ಸಮಸ್ತ ಭಾವಾತ್ಮಕ ಪದಾರ್ಥಗಳಲ್ಲಿ ವಿದ್ಯಮಾನವಾಗಿವೆ ॥ ೨ ॥ ಈ ಪ್ರಕಾರ ಯಾವ ದ್ರವ್ಯವು ಸತ್ತಾರೂಪವಾಗಿದೆಯೋ ಅದು ಪ್ರಮಾಣದ ವಿಷಯವಾಗಿದೆ. ಅದರ ಪೂರ್ಣ ತಿಳುವಳಿಕೆಯು ಪ್ರಮಾಣದ ಮುಖಾಂತರವೇ ಪ್ರಾಪ್ತವಾಗುತ್ತದೆ. ಇದೇ ಪ್ರಮಾಣಜ್ಞಾನದ ಒಂದು ಅಂಶಕ್ಕೆ ನಯವೆಂದು ಹೇಳಲಾಗುತ್ತದೆ. ಇನ್ನು ನಯದ ಈ ಆಂಶಿಕ ಜ್ಞಾನಾತ್ಮ-ಕತೆಯು ಶಬ್ದಗಳಲ್ಲಿ 'ಸ್ಯಾತ್' ವಚನದಿಂದ ಪ್ರಕಟಿಮಾಡಲಾಗುತ್ತದೆ ॥ ೩ ॥ ಯಾವುದೇ ದ್ರವ್ಯದ ಜ್ಞಾನವು ಸಾಮಾನ್ಯ ಮತ್ತು ವಿಶೇಷರೂಪದಲ್ಲಿ ಇರುತ್ತದೆ ಮತ್ತು ಈ ಎರಡೂ ಪ್ರಕಾರದ ಜ್ಞಾನಗಳಲ್ಲಿ ಯಾವ ವಿರೋಧವೂ ಇಲ್ಲ ಪದಾರ್ಥಗಳ ಈ ದ್ವಿರೂಪಕತೆ ಮತ್ತು ಅವುಗಳಲ್ಲಿಯ ಅವಿರೋಧದ ಸಿದ್ಧಿಯು ಸಮ್ಯಕ್ತ್ವ ಎಂದರೆ ಶುದ್ಧ ದೃಷ್ಟಿಯಿಂದಲೇ ಸಾಧ್ಯವಾಗುತ್ತದೆ ಸಮ್ಯಕ್ತ್ವಕ್ಕೆ ವಿಪರೀತವಾದ ಮಿಥ್ಯಾದೃಷ್ಟಿಯಿಂದ ಇದು ಸಿದ್ಧವಾಗುವದಿಲ್ಲ. ॥ ೪ ॥ ಈ ಸಮ್ಯಗ್‌ದೃಷ್ಟಿಯ ಅಪೇಕ್ಷೆಯ ವಾಚಕ 'ಸ್ಯಾತ್' ಶಬ್ದವು ಪ್ರಯೋಗಗೊಂಡಿದೆ ಇದರ ಪ್ರಯೋಗವನ್ನು ಮಾಡದೆ ಇದ್ದಲ್ಲಿ ಅದು ಅಪೇಕ್ಷಾರಹಿತ ಏಕಾಂತರೂಪ ವಚನವಾಗುವುದರಿಂದ ಮಿಥ್ಯಾದೃಷ್ಟಿಯು ಉತ್ಪನ್ನವಾಗುತ್ತದೆ ಒಟ್ಟಿನಲ್ಲಿ ಸಾಮಾನ್ಯ ಮತ್ತು ವಿಶೇಷ, ಇವೆರಡರ ವಿಷಯವೂ 'ಸ್ಯಾತ್' ಶಬ್ದದ ಪ್ರಯೋಗದ ಮುಖಾಂತರ ತಿಳಿಯಲಿಕ್ಕಾಗುತ್ತದೆ ಯಾವಾಗ ಯಾವ ವಸ್ತುವಿನ ವಿಷಯದಲ್ಲಿ ಯಾವುದಾದರೊಂದು ವಿಶೇಷ ಮಾತನ್ನು ಹೇಳುವದಾದಲ್ಲಿ 'ಸ್ಯಾತ್' ಶಬ್ದದ ಮುಖಾಂತರವೇ ಅದನ್ನು ಪ್ರಕಟಗೊಳಿಸುವುದು ಉಚಿತವಾಗಿದೆ ಒಂದು ಅಪೇಕ್ಷೆಯ ದೃಷ್ಟಿಯಿಂದ ಆ ವಸ್ತುವಿನ ಈ ಸ್ವರೂಪವು ಹೀಗಿರುತ್ತದೆಂದು ಹೇಳಿದಾಗ ಅನ್ಯ ಸಾಮಾನ್ಯ ಗುಣಗಳೂ ಆ ವಸ್ತುವಿನಲ್ಲಿ ಇರುತ್ತವೆಂದಾಯಿತು ॥ ೫ ॥ ವಸ್ತುವಿನ ಗುಣ-ಧರ್ಮಗಳು ನಯ ವಿಷಯಕ್ಕಿರಲಿ, ಪ್ರಮಾಣ ವಿಷಯಕ್ಕಿರಲಿ ಅವು ಪರಸ್ಪರ ಸಾಪೇಕ್ಷವೇ ಆಗಿರುತ್ತವೆ ಅಂದಮೇಲೆ ಸಾಪೇಕ್ಷತ್ವವೇ ತತ್ತ್ವವಾಗಿದೆ. ಅದರಂತೆ ನಿರಪೇಕ್ಷತೆಯು—ಅದಕ್ಕೆ ವಿಪರೀತವಾದುದು—ಅತತ್ತ್ವವಾಗಿದೆ ॥ ೬ ॥ ಇಲ್ಲಿ ಪ್ರಯೋಗಿಸಲ್ಪಡುವ 'ಸ್ಯಾತ್' ಶಬ್ದವು ಪ್ರಕೃತಿ ಪ್ರತ್ಯಯಗಳ ವಿವೇಕದ ರೂಢಿಯಿಂದಲೇ ವಸ್ತುವಿನ ವಿಧಿ ಮತ್ತು ನಿಷೇಧಾತ್ಮಕ ಸ್ವರೂಪ-ವನ್ನು ಪ್ರಕಟಗೊಳಿಸುವದೆಂದು ತಿಳಿಯಲಾಗಿದೆ ಅದರಿಂದ ಈ ಶಬ್ದವು ವಾಕ್ಯಾರ್ಥದಲ್ಲಿ ಸಾಪೇಕ್ಷತೆಯನ್ನು ಸಿದ್ಧಗೊಳಿಸುತ್ತದೆ ॥ ೭ ॥ ಪ್ರಮಾಣ, ನಯ, ದುರ್ನಯಗಳಿಂದ ಕೂಡಿದ ವಸ್ತುವಿನ ಸ್ವರೂಪವನ್ನು ಪ್ರಕಟ ಮಾಡುವಂಥ ಏಳೂ ಭಂಗಗಳು ಅರ್ಥಾತ್ ವಚನದ ಶೈಲಿಗಳು ಆಗುತ್ತವೆ. ಇವುಗಳಲ್ಲಿ ಸ್ಯಾತ್ ಶಬ್ದದ ಪ್ರಯೋಗದಿಂದ ಪರಸ್ಪರ ಸಾಪೇಕ್ಷತೆಯು ಸ್ಥಾಪಿತಗೊಳ್ಳುತ್ತದೆ, ಮತ್ತು ವಚನ ಪ್ರಮಾಣರೂಪವಾಗುತ್ತದೆ

ಅವುಗಳ ಒಂದೊಂದು ವಚನವು ಭಂಗ ನಯದಿಂದ ಯಾವುದೇ ಒಂದು ಅಂಶ ವಿಶೇಷವನ್ನು ಸಾಪೇಕ್ಷರೂಪದಿಂದ ಪ್ರಕಟಮಾಡುವ ಕಾರಣದಿಂದ ಈ ಎಲ್ಲ ವಾಕ್ಯಗಳು ನಯರೂಪವಾಗಿವೆ. ಆದರೆ ಯಾವಾಗ ಅವುಗಳಲ್ಲಿ ಸ್ಯಾತ್ ಶಬ್ದದ ಅಭಾವವಿರುವುದೋ ಆಗ ಅವುಗಳಲ್ಲಿ ಸಾಪೇಕ್ಷತ್ವವು ಉಳಿಯುವದಿಲ್ಲ ಆಗ ಅದು ಏಕಾಂತ ಅರ್ಥವನ್ನು ಪ್ರಕಟಿಸುವುದು. ಅದೇ ಅದರ ದುರ್ನಯ ರೂಪವಾಗಿದೆ ॥ ೮ ॥ ಆ ಏಳು ಪ್ರಮಾಣ-ಭಂಗಿಗಳು ಹೀಗೆ ಇವೆ—೧ ಸ್ಯಾದ್ ಅಸ್ತಿ, ೨ ಸ್ಯಾದ್ ನಾಸ್ತಿ, ೩ ಸ್ಯಾದ್ ಅಸ್ತಿ-ನಾಸ್ತಿ, ೪ ಸ್ಯಾದ್ ಅವಕ್ತವ್ಯ, ೫ ಸ್ಯಾದ್ ಅಸ್ತಿ ಅವಕ್ತವ್ಯ, ೬. ಸ್ಯಾದ್ ನಾಸ್ತಿ ಅವಕ್ತವ್ಯ, ೭ ಸ್ಯಾದ್ ಅಸ್ತಿ-ನಾಸ್ತಿ-ಅವಕ್ತವ್ಯ ॥ ೯ ॥ 'ಸತ್' ದ್ರವ್ಯದ ಲಕ್ಷಣವಾಗಿದೆ ಪ್ರತಿಯೊಂದು ದ್ರವ್ಯವೂ ತನ್ನ ತನ್ನ ಸತ್ತೆಯ ಅಪೇಕ್ಷೆಯಿಂದ 'ಅಸ್ತಿ' ಸ್ವಭಾವಯುಕ್ತವಾಗಿದೆ. ಆದರೆ ಅದೇ ದ್ರವ್ಯವು ಪರದ್ರವ್ಯಾದಿಗಳ ಅಪೇಕ್ಷೆಯಿಂದ 'ನಾಸ್ತಿ' ಸ್ವಭಾವವಾಗಿದೆ ॥ ೧೦ ॥ ಯಾವಾಗ 'ಸ್ವ' ಮತ್ತು 'ಪರ' ಈ ಎರಡೂ ನಯಗಳ ಅಪೇಕ್ಷೆಯಿಂದ ಕಥನಮಾಡ ಹೋದಲ್ಲಿ ಆ ದ್ರವ್ಯವು 'ಅಸ್ತಿ-ನಾಸ್ತಿ' ರೂಪದಲ್ಲಿದೆ ಎಂದು ಹೇಳಲಾಗುತ್ತದೆ ಈ ಎರಡೂ ದೃಷ್ಟಿಗಳನ್ನು ಯಾವ ವಸ್ತುವಿನ ವಿಷಯದಲ್ಲಿ ಒಮ್ಮೆಲೇ ಗ್ರಹಣ ಮಾಡಲಿಕ್ಕೆ ಆಗುವದಿಲ್ಲವೋ ಆ ವಸ್ತುವು 'ಅವಕ್ತವ್ಯ' ಎಂದು ಹೇಳಬೇಕಾಗುತ್ತದೆ ಯಾವಾಗ ಈ ಅವಕ್ತವ್ಯತೆಯ ಮೇಲೆ, ಮೇಲಿನ ಮೂರೂ ನಯಗಳ-ಜೊತೆ ಜೊತೆಗೇನೇ—ದೃಷ್ಟಿಯನ್ನು ಇಡಬೇಕಾಗುವದೋ ಆಗ 'ಅಸ್ತಿ-ಅವಕ್ತವ್ಯ' 'ನಾಸ್ತಿ-ಅವಕ್ತವ್ಯ' ಮತ್ತು 'ಅಸ್ತಿ-ನಾಸ್ತಿ-ಅವಕ್ತವ್ಯ' ಈ ಮೂರು ಭಂಗಗಳು ಉತ್ಪನ್ನ-ವಾಗುತ್ತವೆ. ॥ ೧೧ ॥ ಇವೇ ಅಸ್ತಿ, ನಾಸ್ತಿ, ಅಸ್ತಿ-ನಾಸ್ತಿ, ಅವಕ್ತವ್ಯ ಹಾಗೂ ಅಸ್ತಿ ಅವಕ್ತವ್ಯ, ನಾಸ್ತಿ ಅವಕ್ತವ್ಯ ಮತ್ತು ಅಸ್ತಿ-ನಾಸ್ತಿ-ಅವ್ಯಕ್ತವ್ಯ ರೂಪದಲ್ಲಿರುವ ವಚನ-ಭಂಗವು ಯಾವಾಗ 'ಸ್ಯಾತ್' ಶಬ್ದದಿಂದ ರಹಿತವಾಗುವಾಗ ನಯ ಸಾಪೇಕ್ಷವಾಗದೆ ನಿರಪೇಕ್ಷವಾಗುತ್ತದೆ ಆಗ ಅದು ದುರ್ನಯಭಂಗ ಅರ್ಥಾತ್ ಅಶುದ್ಧ ಮತ್ತು ದೂಷಿತ ವಚನಭಂಗವೆಂದು ಹೇಳಲ್ಪಡುತ್ತದೆ ॥ ೧೨ ॥ ಯಾವಾಗ ಸ್ವ, ಪರ ಮೊದಲಾದ ಅನೇಕ ವಿವಕ್ಷಾಗಳಲ್ಲಿಂದ 'ಅಸ್ತಿ' 'ನಾಸ್ತಿ' ರೂಪಗಳಲ್ಲಿ ಒಂದು ವಿವಕ್ಷಾ ಸ್ವೀಕಾರ ಮಾಡಲಾಗುತ್ತದೆಯೋ, ಆಗ ಅದರ ಪ್ರತಿಪಕ್ಷೀ ಸ್ವಭಾವವೂ ಆನುಷಂಗಿಕ ರೂಪದಿಂದ ಅದರ ಅನುಕರಣ ಮಾಡುತ್ತದೆ ಹೀಗಾಗಿ ಎಲ್ಲ ವಸ್ತುಗಳ ಸ್ವಭಾವ ಕಥನದಲ್ಲಿ ಈ ಸಾಪೇಕ್ಷತ್ವವನ್ನು 'ಸ್ಯಾತ್', ಶಬ್ದದ ಮುಖಾಂತರ ಅವಶ್ಯ ಸಾಧಿಸಲಿಕ್ಕೆ ಬೇಕು ॥ ೧೩ ॥ ದ್ರವ್ಯವು ಧರ್ಮಿಯಾಗಿದೆ. ಧರ್ಮಸ್ವಭಾವ, ಗುಣಾತ್ಮಕತೆಗಳು—ನಾನಾ ಗುಣಗಳ ಸಮೂಹರೂಪ—ದ್ರವ್ಯದ ಲಕ್ಷಣವಾಗಿವೆ ಆ ಅನೇಕ ಧರ್ಮಗಳು ಒಂದೊಂದು ಸ್ವರೂಪದಲ್ಲಿ ಆ ವಸ್ತುವಿನಲ್ಲಿ ಇದ್ದೂ ಕೂಡ ಪರಸ್ಪರ ಒಂದರಿಂದ ಇನ್ನೊಂದು ಭಿನ್ನವಾಗಿವೆ ಅದರಿಂದ ಅವವುಗಳನ್ನು ಅವುಗಳ ಗೌಣ ಮತ್ತು ಮುಖ್ಯ ಭಾವಗಳಿಂದ ತಿಳಿದುಕೊಳ್ಳಬೇಕು ಯಾವಾಗ ಒಮ್ಮೆ ಒಂದು ಧರ್ಮದ ಮೇಲೆ ದೃಷ್ಟಿಯು ಕೇಂದ್ರೀಕೃತವಾಗುವುದೋ ಅದೇ ಧರ್ಮವು ಮುಖ್ಯವೆನಿಸುತ್ತದೆ ಆಗ ಎಲ್ಲ ಧರ್ಮಗಳು ಗೌಣವೆನಿಸುತ್ತವೆ ॥ ೧೪ ॥ ವಸ್ತು-ಸ್ವರೂಪದ ಕಥನದಲ್ಲಿ ಅನೇಕ ನಯಗಳನ್ನು ಅವಲಂಬಿಸ-ಲಾಗುತ್ತದೆ ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಸ್ಯಾತ್ ಶಬ್ದವನ್ನು ಪ್ರಯೋಗಿಸಲಾಗುತ್ತದೆ ಆಗ ಅದು ದ್ರವ್ಯದ ಸ್ವಭಾವವನ್ನು ಯಥಾರ್ಥ ರೂಪದಲ್ಲಿ ಪ್ರಕಟಗೊಳಿಸುತ್ತದೆ. ಯಾವಾಗ ನಯ ಮತ್ತು ಪ್ರಮಾಣಗಳು ಶುದ್ಧವಾಗುವವೋ ಆಗ ಅವು ಯುಕ್ತರೂಪ ಎನಿಸುತ್ತವೆ ಯುಕ್ತಿಯಿಲ್ಲದೆ ತತ್ತ್ವದ ನಿರೂಪಣೆಯು ಆಗುವದಿಲ್ಲ ॥ ೧೫ ॥ ತತ್ತ್ವವು ಹೇಯ ಮತ್ತು ಉಪಾದೇಯ ಎರಡೂ ಪ್ರಕಾರವಾಗಿದೆ. ಇವುಗಳಲ್ಲಿ ಪರದ್ರವ್ಯವಂತೂ ನಿಶ್ಚಯವಾಗಿಯೂ ಹೇಯವೆಂದೇ ಹೇಳಲಾಗಿದೆ ಆದರೆ ಸ್ವದ್ರವ್ಯವೂ ಸಹ ನಯಕ್ಕೆ ಅನುಸರಿಸಿ ಹೇಯ ಇಲ್ಲವೆ ಉಪಾದೇಯವೆಂದು ಅನಿಸುತ್ತವೆ. ॥ ೧೬ ॥ ಏಕಾಂತ, ವಿಪರೀತ ಮೊದಲಾದ ಮಿಥ್ಯಾ ಜ್ಞಾನದಿಂದ ಕೂಡಿದ ಹಾಗೂ ರಾಗದ್ವೇಷಾದಿವೃತ್ತಿ ಸಹಿತ ಆತ್ಮರೂಪವೂ ಸಹ ನಿಯಮದಿಂದ ತ್ಯಾಗಮಾಡಲು ಯೋಗ್ಯವಾಗಿದೆ ಇದಕ್ಕೆ ವಿಪರೀತವಾಗಿ ಶುದ್ಧ ಜ್ಞಾನಮಯ ವೀತರಾಗ ಆತ್ಮನು ಧ್ಯಾನಮಾಡಲಿಕ್ಕೆ ಯೋಗ್ಯನಾಗಿದ್ದಾನೆ ಹೀಗೆ ಸಿದ್ಧಿಯ ಅಭಿಲಾಷಿಯು ಜೀವವನ್ನು ತಿಳಿಯಲಿಕ್ಕೆ ಬೇಕು ॥ ೧೭ ॥ ಯಾವ ನಯದ ಮುಖಾಂತರ ಒಂದು ವಸ್ತುವಿನ ಅನೇಕ ಧರ್ಮಗಳಲ್ಲಿ 'ಸ್ಯಾತ್' ಶಬ್ದದ ಪ್ರಯೋಗದಿಂದ ಭೇದವನ್ನು ಪ್ರದರ್ಶಿಸಲಾಗುವುದೋ ಅದು 'ವ್ಯವಹಾರ ನಯ'ವೆನಿಸುತ್ತದೆ ಇನ್ನು ಇದಕ್ಕೆ ವಿಪರೀತವಾಗಿ ಯಾವ ನಯದಲ್ಲಿ ವಸ್ತುವಿನ ಮೂಲ ಸ್ವರೂಪದ ಮೇಲೆ ದೃಷ್ಟಿಯನ್ನಿಟ್ಟು ಅಭೇದವನ್ನು ಸ್ಥಾಪಿಸಲಾಗುವುದೋ ಅದು ನಿಶ್ಚಯನಯವಾಗಿದೆ ॥ ೧೮ ॥ ನಿಶ್ಚಯ ನಯಕ್ಕೆ ಅನುಸರಿಸಿ ಯಾವುದು ಏಕರೂಪ ಮತ್ತು ಧ್ಯೇಯರೂಪ ಆಗಿದೆಯೋ ಅದೇ ವ್ಯವಹಾರ ನಯಕ್ಕೆ ಅನುಸರಿಸಿ ಅನ್ಯ

ಪ್ರಕಾರ ಅರ್ಥಾತ್ ನಾನಾ ರೂಪ ಮತ್ತು ಅಧ್ಯೇಯ ಎಂದು ಹೇಳಲಾಗಿದೆ. ನಿಶ್ಚಯ ನಯಕ್ಕೆ ಅನುಸರಿಸಿ ನಿಜವಾದ ಆತ್ಮನು ಸಮ್ಯಗ್‌ದರ್ಶನ, ಜ್ಞಾನ ಮತ್ತು ಚಾರಿತ್ರ ಈ ಮೂರು ಗುಣಗಳಿಂದಾಗಿ ಸಿದ್ಧರೂಪಿಯೂ ಆಗಿದ್ದಾನೆ ಹಾಗೆಯೇ ವ್ಯವಹಾರ ನಯಕ್ಕೆ ಅನುಸರಿಸಿ ಸಂಸಾರೀ ಆತ್ಮನು ತನ್ನ ರಾಗಾದಿ ವಿಭಾವಮೂಲಕ ಸಿದ್ಧನೆನಿಸುವದಿಲ್ಲ. ಸಂಸಾರೀ ಮತ್ತು ಸಿದ್ಧ ಜೀವಗಳು ಭಿನ್ನ ಭಿನ್ನವಾಗಿವೆ ॥ ೧೯ ॥ ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ ಮತ್ತು ವ್ಯವಹಾರ ಈ ಮೂರು ನಯಗಳು ಭೂತಾರ್ಥ ಅರ್ಥಾತ್ ವಸ್ತುಸ್ವರೂಪವನ್ನು ಪ್ರಕಟಗೊಳಿಸುವಂಥವಾಗಿವೆ. ಅನ್ಯ ಅನೇಕ ನಯಗಳನ್ನು ವ್ಯವಹಾರಕ್ಕೆ ಅನುಸರಿಸಿ ಹೇಳಲಾಗಿದೆ ಆದರೆ ಶುದ್ಧರೂಪದಿಂದ ನಯಗಳು ಎರಡೇ ಇವೆ ಅವು ನಿಶ್ಚಯ ಮತ್ತು ವ್ಯವಹಾರಗಳೆಂದಿವೆ ಹಾಗೆಯೇ ವಸ್ತುವಿನ ಅಸ್ತಿತ್ವ, ದ್ರವ್ಯತ್ವ ಮೊದಲಾದ ಉತ್ಕೃಷ್ಟ ಸ್ವರೂಪದ ಬೋಧಮಾಡುವಂಥದು ನಿಶ್ಚಯನಯವೆನಿಸುತ್ತದೆ ॥ ೨೦ ॥ ಯಾವ ಭಾವವು ಯಾವ ವಸ್ತುವಿನದೆಂದು ಹೇಳಲಾಗುತ್ತದೆಯೋ ಅದು ಮುಖ್ಯವಾಗಿ ದ್ರವ್ಯರೂಪವೇ ಆಗಿದೆ. ಅದಕ್ಕಾಗಿ ಅದೇ ಭಾವಕ್ಕೆ ಧ್ಯೇಯವೆಂದು ಹೇಳಿದೆ. ಇದು ಪರಮ ಭಾವಗ್ರಾಹಿಯಾದ ನಿಶ್ಚಯನಯದ ವಿಷಯವಾಗಿದೆ ॥ ೨೧ ॥ ತತ್ತ್ವಾನ್ವೇಷಣ ಮಾಡುವ ಕಾಲದಲ್ಲಿ ಈ ನಯ ವಿಷಯದ ನ್ಯಾಯ ಶಾಸ್ತ್ರವನ್ನು ಯುಕ್ತಿಪೂರ್ವಕವಾಗಿ ತಿಳಿದುಕೊಳ್ಳಲಿಕ್ಕೆ ಬೇಕು ಯಾಕಂದರೆ ಅಭ್ಯಾಸ ಕಾಲದಲ್ಲಿ ವಸ್ತು ಸ್ವರೂಪದ ಸಾಕ್ಷಾತ್ ಅನುಭವವು ಉಂಟಾಗುವದಿಲ್ಲ (ಏನೋ ಉಂಟಾದ ಸ್ವಲ್ಪ ಜ್ಞಾನವು ಶ್ರುತದ ಆಧಾರದಿಂದ ಆಗಿರುತ್ತದೆ) ॥ ೨೨ ॥ ವಸ್ತುವಿನ ಅನ್ಯ ಧರ್ಮಗಳ ಅಪೇಕ್ಷೆಯನ್ನು ಮಾಡದೆ ಏಕಾಂತ ರೂಪದಿಂದ ಒಂದು ಧರ್ಮವನ್ನು ಗ್ರಹಣಮಾಡುವುದರಿಂದ ವಿವಿಧ ಧರ್ಮಯುಕ್ತ ದ್ರವ್ಯದ ಯಥಾರ್ಥ ಜ್ಞಾನವು ಸಿದ್ಧಿಸುವದಿಲ್ಲ. ಯಥಾರ್ಥ ಜ್ಞಾನವು ಅನೇಕಾಂತದಿಂದಲೇ ಆಗುತ್ತದೆ ಅದರಿಂದ 'ಸ್ಯಾತ್' ಶಬ್ದದಿಂದ ಪ್ರಕಟವಾಗುವ ಅನೇಕಾಂತವನ್ನು ಚೆನ್ನಾಗಿ ತಿಳಿದುಕೊಳ್ಳಲಿಕ್ಕೆ ಬೇಕು ॥ ೨೩ ॥

ದೇವಸೇನಕೃತ ನಯಚಕ್ರ ೨೪೫–೨೬೭.

## ೧೫. ನಯವಾದ

ಇಂದ್ರಿಯ ವಿಷಯಗಳಿಂದ ವಿರಕ್ತ, ಸಮಸ್ತ ಕರ್ಮಮಲದಿಂದ ವಿಮುಕ್ತ ಹಾಗೂ ವಿಶುದ್ಧ, ಕೇವಲ ಜ್ಞಾನದಿಂದ ಕೂಡಿದ ವೀರ ಜಿನೇಂದ್ರನಿಗೆ ವಂದಿಸಿದ ತರುವಾಯ ನಯದ ಲಕ್ಷಣವನ್ನು ಹೇಳುವೆ ॥ ೧ ॥ ನಯಲಕ್ಷಣ-ವಸ್ತುವಿನ ಯಾವುದೇ ಒಂದು ಅಂಶವನ್ನು ಬೋಧಿಸುವಂಥ ಯಾವ ಶ್ರುತಭೇದವು ಜ್ಞಾನಿಗಳಿಂದ ವಿಕಲ್ಪರೂಪದಿಂದ ಗ್ರಹಿಸಲ್ಪಡುವುದೋ ಅದಕ್ಕೆ ಇಲ್ಲಿ ನಯವೆಂದು ಹೇಳಲಾಗಿದೆ ಇದೇ ನಯರೂಪ ಜ್ಞಾನ ಪ್ರಣಾಲಿಯ ಮುಖಾಂತರ ಮನುಷ್ಯನು ಜ್ಞಾನಿಯಾಗುತ್ತಾನೆ ॥ ೨ ॥ ನಯಜ್ಞಾನದ ಹೊರತಾಗಿ ಮನುಷ್ಯನಿಗೆ ಸ್ಯಾದ್ವಾದ ಸ್ವರೂಪದ ಬೋಧವಾಗುವದಿಲ್ಲ. ಅದರಿಂದ ಯಾವನು ಏಕಾಂತರೂಪದ ಮಿಥ್ಯಾಜ್ಞಾನದ ವಿನಾಶಮಾಡಲಿಕ್ಕೆ ಇಚ್ಛಿಸುವನೋ ಅವನು ನಯದ ಸ್ವರೂಪವನ್ನು ಅವಶ್ಯವಾಗಿ ತಿಳಿಯಲಿಕ್ಕೆ ಬೇಕು ॥ ೩ ॥ ಧರ್ಮವಿಹೀನ ಮನಷ್ಯನು ಸುಖದ ಅಪೇಕ್ಷೆಯನ್ನೂ ಮಾಡಿದರೆ ಅದು ಅವನಿಗೆ ಲಭಿಸುವದಿಲ್ಲ ನೀರನ್ನುಳಿದು ನೀರಡಿಕೆಯನ್ನು ಹಿಂಗಿಸಿಕೊಳ್ಳುವೆನೆನ್ನು-ವುದು ಅಸಫಲವಾಗಿದೆ. ಹಾಗೆಯೇ ನಯಜ್ಞಾನವಿಲ್ಲದೆ ಮೂರ್ಖ ಮನುಷ್ಯನು ದ್ರವ್ಯಗಳ ನಿಶ್ಚಿತ ಜ್ಞಾನವನ್ನು ಅಪೇಕ್ಷಿಸಿದಲ್ಲಿ ಅದು ಎಂದೂ ಸಫಲವಾಗಲಾರದು ॥ ೪ ॥ ಮೂಲ ನಯಗಳೆಂದು ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕಗಳನ್ನು ಹೇಳಲಾಗಿದೆ. ಉಳಿದ ಅನೇಕ ಲೆಕ್ಕವಿಲ್ಲದಷ್ಟು ನಯಗಳನ್ನು ಸ್ವೀಕರಿಸಲಾಗಿದೆ. ಅವೆಲ್ಲವೂ ಈ ಎರಡು ಮುಖ್ಯ ನಯಗಳ ಭೇದೋಪಭೇದಗಳೇ ಆಗಿವೆ ॥ ೫ ॥ ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ಇವೆರಡು ಮುಖ್ಯ ನಯಗಳು, ಹಾಗೂ ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ ಮತ್ತು ಏವಂಭೂತ ಈ ಏಳು ನಯಗಳು ಹೀಗೆ ನಯದಲ್ಲಿ ಒಂಭತ್ತು ಭೇದಗಳಿವೆ ಮೂರು ಉಪ-ನಯಗಳು ಎನಿಸುತ್ತವೆ ॥ ೬ ॥ ದ್ರವ್ಯಾರ್ಥಿಕ ನಯದಲ್ಲಿ ಹತ್ತು ಭೇದಗಳಿವೆ ಪರ್ಯಾಯಾರ್ಥಿಕದಲ್ಲಿ ಆರು, ನೈಗಮ ನಯದಲ್ಲಿ ಮೂರು, ಸಂಗ್ರಹ ನಯದಲ್ಲಿ ಎರಡು, ವ್ಯವಹಾರ ಋಜುಸೂತ್ರಗಳಲ್ಲಿಯೂ ಎರಡೆರಡು ಭೇದಗಳಿವೆ ಉಳಿದ ಎಲ್ಲ ನಯಗಳು ಒಂದೊಂದೇ ಆಗಿವೆ. ಈ ನಯಗಳು ೧೦+೬+೩+೨+೨+೨+೩=೨೮ ಭೇದಗಳಾಗಿವೆ. ಇನ್ನು ಉಪನಯದ ಭೇದಗಳನ್ನು ಹೇಳಲಾಗುತ್ತದೆ ॥ ೬-೮ ॥ ಸದ್‌ಭೂತ, ಅಸದ್‌ಭೂತ ಮತ್ತು ಉಪಚರಿತ ಇವು ಉಪನಯದ ಮೂರು ಭೇದಗಳಾಗಿವೆ. ಇವುಗಳಿಂದ ಸದ್‌ಭೂತವು ಎರಡು ವಿಧ,

ಅಸದ್‌ಭೂತವು ಮೂರು ವಿಧ, ಉಪಚಾರಿತವೂ ಮೂರು ವಿಧವಾಗಿದೆ ಈ ಪ್ರಕಾರ ಉಪನಯದ ಭೇದೋಪ-ಭೇದಗಳು ೨+೩+೩=೮ ಆಗುತ್ತವೆ ॥ ೯ ॥ ದ್ರವ್ಯಾರ್ಥಿಕ ನಯದ ವಿಷಯವು ದ್ರವ್ಯವೇ ಆಗುತ್ತದೆ. ಪರ್ಯಾಯಾರ್ಥಿಕ ನಯದ ವಿಷಯವು ದ್ರವ್ಯದ ಪರ್ಯಾಯವಾಗುತ್ತದೆ ಹಾಗೆಯೇ ಸದ್‌ಭೂತ ಉಪನಯದ ವಿಷಯವು ಎರಡು ಪ್ರಕಾರದ ಪದಾರ್ಥ, ಅಸದ್‌ಭೂತ ಉಪನಯದ ವಿಷಯವು ಒಂಭತ್ತು ಪ್ರಕಾರದ ಪದಾರ್ಥ, ಉಪಚರಿತ ಉಪನಯದ ವಿಷಯವು ಮೂರು ಪ್ರಕಾರದ ಪದಾರ್ಥಗಳು ಆಗುತ್ತದೆ. ॥ ೧೦ ॥ ಲೌಕಿಕ ವಿಷಯದಲ್ಲಿ ಯಾವ ಪದಾರ್ಥಗಳನ್ನು ಗೌಣವೆಂದು ತಿಳಿದು, ದ್ರವ್ಯವು ಮುಖ್ಯವೆಂದು ಗ್ರಹಣಮಾಡಲಾಗುತ್ತದೆಯೋ ಅದಕ್ಕೆ ದ್ರವ್ಯಾರ್ಥಿಕ ನಯವೆಂದು ಹೆಸರು ಇನ್ನು ಇದಕ್ಕೆ ವಿಪರೀತವಾಗಿ ದ್ರವ್ಯವನ್ನು ಗೌಣವೆಂದು ತಿಳಿದು, ಪರ್ಯಾಯವನ್ನು ಮುಖ್ಯವೆಂದು ಭಾವಿಸುವುದಕ್ಕೆ ಪರ್ಯಾಯಾರ್ಥಿಕ ನಯವೆಂದು ಹೇಳಲಾಗುತ್ತದೆ. ॥ ೧೧ ॥ ಹತ್ತು ದ್ರವ್ಯಾರ್ಥಿಕ ನಯಗಳು ಕರ್ಮದ ಮಧ್ಯದಲ್ಲಿ ಸಿಕ್ಕ ಜೀವವನ್ನು ಯಾವುದು ಸಿದ್ಧ ಹಾಗೂ ಮುಕ್ತ ಜೀವಕ್ಕೆ ಸಮಾನವೆಂದು ಗ್ರಹಣಮಾಡಲಾಗುತ್ತದೆಯೋ ಅದು ಕರ್ಮೋಪಾಧಿ ನಿರಪೇಕ್ಷ ಶುದ್ಧ ದ್ರವ್ಯಾರ್ಥಿಕ ನಯವಾಗಿದೆ ॥ ೧೨ ॥ ಉತ್ಪಾದ ಹಾಗೂ ವ್ಯಯಗಳನ್ನು ಗೌಣವಾಗಿಟ್ಟು, ಕೇವಲ ಸತ್ತೆಯನ್ನು ಮಾತ್ರ ಗ್ರಹಣಮಾಡುವಿಕೆಯು ಸತ್ತಾಗ್ರಾಹಕ ಶುದ್ಧ ದ್ರವ್ಯಾರ್ಥಿಕ ನಯವಾಗಿದೆ. ॥ ೧೩ ॥ ಗುಣ, ಗುಣಿ, ದ್ರವ್ಯ, ಪರ್ಯಾಯ ಈ ನಾಲ್ಕು ಪ್ರಕಾರದ ಪದಾರ್ಥಗಳಲ್ಲಿ ಯಾವುದು ಭೇದವನ್ನು ಮಾಡುವದಿಲ್ಲವೋ ಅದು ಭೇದವಿಕಲ್ಪನಿರಪೇಕ್ಷ ಶುದ್ಧ ದ್ರವ್ಯಾರ್ಥಿಕ ನಯವಾಗಿದೆ ॥ ೧೪ ॥ ಜೀವದ ಯಾವ ಜ್ಞಾನ, ದರ್ಶನ ಮೊದಲಾದ ಭಾವಗಳಿವೆಯೋ ಅವುಗಳಲ್ಲಿ ರಾಗಾದಿ ವಿಭಾವಗಳನ್ನೂ ಸಹ ಜೀವದ ಭಾವಗಳೆಂದೇ ಹೇಳುವ ಕ್ರಮವು ಕರ್ಮೋಪಾಧಿಸಾಪೇಕ್ಷ ಅಶುದ್ಧ ದ್ರವ್ಯಾರ್ಥಿಕ ನಯವಾಗಿದೆ ॥ ೧೫ ॥ ಉತ್ಪಾದ ಮತ್ತು ವ್ಯಯಸಹಿತ ಸತ್ತೆಯನ್ನು ಗ್ರಹಣಮಾಡಿ ಯಾವುದು ದ್ರವ್ಯದಲ್ಲಿ ಒಂದೇ ಸಮಯದಲ್ಲಿ ಮೂರೂ ಧರ್ಮಗಳನ್ನು—ಉತ್ಪಾದ, ವ್ಯಯ, ಧ್ರೌವ್ಯಗಳನ್ನು—ಸ್ವೀಕಾರ ಮಾಡುವುದೋ ಅದು ಉತ್ಪಾದವ್ಯಯಸಾಪೇಕ್ಷ ಅಶುದ್ಧ ದ್ರವ್ಯಾರ್ಥಿಕ ನಯವಾಗಿದೆ ॥ ೧೬ ॥ ಗುಣ ಮತ್ತು ಗುಣೀ ಮೊದಲಾದವುಗಳಲ್ಲಿ ಪರಸ್ಪರ ಭೇದವಿದ್ದೂ ಸಹ ಯಾವುದು ದ್ರವ್ಯದಲ್ಲಿ ಅದರ ಸಂಬಂಧವನ್ನು ಸ್ಥಾಪಿಸುವುದೋ ಅದು ಭೇದಕಲ್ಪನಾಸಾಪೇಕ್ಷ ಅಶುದ್ಧ ದ್ರವ್ಯಾರ್ಥಿಕ ನಯವಾಗಿದೆ ॥ ೧೭ ॥ ಗುಣ ಮತ್ತು ಪರ್ಯಾಯರೂಪ ಸಮಸ್ತ ವಸ್ತು ಭಾವಗಳಲ್ಲಿ ಯಾವುದು ಅನ್ವಯರೂಪದಿಂದ ಇದೂ ದ್ರವ್ಯವಾಗಿದೆ, ಅದೂ ದ್ರವ್ಯವೂ ಆಗಿದೆ ಈ ಪ್ರಕಾರ ದ್ರವ್ಯವನ್ನೇ ಸ್ಥಾಪನಮಾಡುವುದೋ ಅದನ್ನು ಅನ್ವಯ ದ್ರವ್ಯಾರ್ಥಿಕ ನಯವೆಂದು ಹೇಳಲಾಗಿದೆ ॥ ೧೮ ॥ ಯಾವುದು ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ ಮತ್ತು ಸ್ವಭಾವ ಈ ನಾಲ್ಕು ಸ್ವಚತುಷ್ಟಯದ ಅಪೇಕ್ಷೆಯಿಂದ ದ್ರವ್ಯದ ಸತ್‌ರೂಪವನ್ನು ಗ್ರಹಣಮಾಡುವುದೋ ಅದು ಸ್ವದ್ರವ್ಯಾದಿಗ್ರಾಹಕ ದ್ರವ್ಯಾರ್ಥಿಕ ನಯವಾಗಿದೆ ಹಾಗೆಯೇ ಇದಕ್ಕೆ ವಿಪರೀತವಾಗಿ ಯಾವುದು ಪರದ್ರವ್ಯ, ಪರಕ್ಷೇತ್ರ, ಪರಕಾಲ ಮತ್ತು ಪರಭಾವ ಈ ಪರಚತುಷ್ಟಯದ ಅಪೇಕ್ಷೆಯಿಂದ ದ್ರವ್ಯದ ಅಸತ್‌ರೂಪವನ್ನು ಗ್ರಹಣಮಾಡುವುದೋ ಅದು ಪರದ್ರವ್ಯಾದಿಗ್ರಾಹಕ ದ್ರವ್ಯಾರ್ಥಿಕ ನಯವಾಗಿದೆ. ॥ ೧೯ ॥ ಯಾವುದು ದ್ರವ್ಯದ ಸ್ವಭಾವವನನ್ನು ಅದರ ಅಶುದ್ಧ, ಶುದ್ಧ ಮತ್ತು ಉಪಚಾರ ಸ್ವರೂಪದಿಂದ ರಹಿತ ಕೇವಲ ಪರಮ ಅರ್ಥಾತ್ ಪ್ರಮುಖ ಭಾವರೂಪವನ್ನು ಮಾತ್ರ ಗ್ರಹಣಮಾಡುವುದೋ ಅದಕ್ಕೆ—ಸಿದ್ಧಿಯ ಅಭಿಲಾಷೆಯನ್ನು ಇಟ್ಟುಕೊಂಡಿರುವುದಕ್ಕೆ-ಪರಮ ಭಾವಗ್ರಾಹಕ ದ್ರವ್ಯಾರ್ಥಿಕ ನಯವೆಂದು ತಿಳಿಯಲಾಗುವುದು. ॥ ೨೦ ॥ ಆರು ಪರ್ಯಾಯಾರ್ಥಿಕ ನಯಗಳು—ಚಂದ್ರ, ಸೂರ್ಯ ಆದಿ ಪರ್ಯಾಯಗಳನ್ನು ಅಕೃತ್ರಿಮ, ಅನಾದಿ, ಅನಿಧನ ಮತ್ತು ಅನಂತವೆಂದು ಸ್ವೀಕಾರ ಮಾಡುವುದಕ್ಕೆ ಜಿನ ಭಗವಂತನು ಅನಾದಿ ನಿತ್ಯ ಪರ್ಯಾಯಾರ್ಥಿಕ ನಯವೆಂದು ಹೇಳಿದ್ದಾನೆ. ॥ ೨೧ ॥ ಕರ್ಮದ ಕ್ಷಯವಾದ ಮೇಲೆ ವಿನಾಶದ ಕಾರಣವು ಉಳಿಯುವದಿಲ್ಲ. ಆಗ ಜೀವವು ಅವಿನಾಶಿಯಾಗುತ್ತದೆ ಈ ಪ್ರಕಾರ ಯಾವುದು ಜೀವದ ಮುಕ್ತ ಪರ್ಯಾಯವನ್ನು ಸಾದಿ ಮತ್ತು ನಿತ್ಯವೆಂದು ಹೇಳುವುದೋ ಅದು ಸಾದಿನಿತ್ಯ ಪರ್ಯಾಯಾರ್ಥಿಕ ನಯವಾಗಿದೆ. ॥ ೨೨ ॥ ಯಾವುದು ಸತ್ತೆಯನ್ನು ಅಮುಖ್ಯಗೊಳಿಸಿ ದ್ರವ್ಯದ ಉತ್ಪಾದ ಮತ್ತು ವ್ಯಯ ಅವಸ್ಥೆಗಳನ್ನೇ ಗ್ರಹಣ ಮಾಡುತ್ತದೆಯೋ ಮತ್ತು ಅದಕ್ಕಾಗಿ ದ್ರವ್ಯವನ್ನು ಅನಿತ್ಯ ಸ್ವಭಾವ ಉಳ್ಳದೆಂದು ಹೇಳುತ್ತದೆಯೋ ಅದು ಅನಿತ್ಯಶುದ್ಧ ಪರ್ಯಾಯಾರ್ಥಿಕ ನಯವೆಂದು ಹೇಳಿದೆ. ॥ ೨೩ ॥ ಯಾವುದು ದ್ರವ್ಯವನ್ನು ಒಂದೇ ಕಾಲದಲ್ಲಿ ಉತ್ಪಾದ, ವ್ಯಯ ಮತ್ತು ಧ್ರೌವ್ಯ ಈ ಮೂರೂ ಗುಣಗಳಿಂದ ಸಂಯುಕ್ತವೆಂದು ತಿಳಿಯುವುದೋ ಅದು ಅನಿತ್ಯ-ಅಶುದ್ಧ ಪರ್ಯಾಯಾರ್ಥಿಕ ನಯವಾಗಿದೆ. ॥ ೨೪ ॥

ಯಾವುದು ಸಮಸ್ತ ಸಂಸಾರೀ ಜೀವಗಳ ಪರ್ಯಾಯಗಳನ್ನು ಸಿದ್ಧರಿಗೆ ಸಮಾನ ಶುದ್ಧವೆಂದು ಹೇಳುವುದೋ ಅದು ಅನಿತ್ಯ–ಶುದ್ಧ ಪರ್ಯಾಯಾರ್ಥಿಕ ನಯವಾಗಿದೆ. ॥ ೨೫ ॥ ನಾಲ್ಕು ಗತಿಯೊಳಗಿನ ಜೀವಗಳ ಪರ್ಯಾಯಗಳನ್ನು ಯಾವುದು ಕರ್ಮದ ಉಪಾಧಿಯ ಸಂಯೋಗದ ಕಾರಣದಿಂದ ಅನಿತ್ಯ ಮತ್ತು ಅಶುದ್ಧ ಎಂದು ಹೇಳುವುದೋ ಅದು **ವಿಭಾವ–ಅನಿತ್ಯ–ಅಶುದ್ಧ ಪರ್ಯಾಯಾರ್ಥಿಕ ನಯವಾಗಿದೆ** ॥ ೨೬ ॥ **ಮೂರು ನೈಗಮ ನಯಗಳು**—ಯಾವ ದ್ರವ್ಯ ಅಥವಾ ಕಾರ್ಯವು ಪೂರ್ವಕಾಲದಲ್ಲಿ ಸಮಾಪ್ತವಾಗಿದೆಯೋ ಅದನ್ನು ವರ್ತಮಾನ ಕಾಲದಲ್ಲಿ ಇದೆ ಎಂದು ಗ್ರಹಣ ಮಾಡುವಂಥದು ಭೂತ ನೈಗಮ ನಯವಾಗಿದೆ. ಹೇಗೆಂದರೆ ಸಾವಿರಾರು ವರ್ಷ ಪೂರ್ವದಲ್ಲಿ ಆದ ಭಗವಾನ್ ಮಹಾವೀರನ ನಿರ್ವಾಣವನ್ನು ನಿರ್ವಾಣಚತುರ್ದಶಿಯ ದಿನವೆಂದು ಹೇಳಿ 'ಇಂದು ಭಗವಾನ್ ಮಹಾವೀರನ ನಿರ್ವಾಣವಿದೆ' ಎನ್ನುವುದು ಈ ನಯವೆನಿಸುತ್ತದೆ ॥ ೨೭ ॥ ಯಾವ ಕಾರ್ಯವು ಈಗ ಆರಂಭವಾಗಿದ್ದು ಅದನ್ನು ಜನರು ಕೇಳಿದರೆ ಪೂರ್ಣ ಆಯಿತೆಂದು ಹೇಳುವುದು **ವರ್ತಮಾನ ನೈಗಮ ನಯವಾಗಿದೆ.** ಇದಕ್ಕೆ ಉದಾಹರಣೆಯೆಂದು ಅನ್ನವನ್ನು ಮಾಡಲಿಕ್ಕೆ ಆರಂಭಿಸಿದಾಗ 'ಇಂದು ಅನ್ನವನ್ನು ಮಾಡಿದೆ' ಎಂದು ಹೇಳುವಿಕೆಯಾಗಿದೆ ॥ ೨೮ ॥ ಯಾವ ಕಾರ್ಯವು ಭವಿಷತ್ ಕಾಲದಲ್ಲಿ ಆಗುವಂಥದಿದೆಯೋ ಅದು ಇನ್ನೂ ನಿಷ್ಪನ್ನವಾಗದಿದ್ದರೂ ನಿಷ್ಪನ್ನವಾಯಿತೆಂದು ಹೇಳುವಿಕೆಯು **ಭಾವಿ ನೈಗಮ ನಯವಾಗಿದೆ** ಇನ್ನೂ ಹೋಗದೆ ಇದ್ದವನನ್ನು ಹೋದನೆಂದು ಹೇಳುವುದು ಈ ನಯದ ಮಾದರಿಯಾಗಿದೆ. ॥ ೨೯ ॥ **ಎರಡು ಸಂಗ್ರಹ ನಯಗಳು**—ಭಿನ್ನ ಭಿನ್ನ ವಸ್ತುಗಳಲ್ಲಿ ಅವುಗಳ ವಿಶೇಷ ಗುಣಧರ್ಮಗಳಿಂದಾಗಿ ದೊಡ್ಡ ವಿರೋಧವಾಗಿದ್ದರೂ ಅವುಗಳನ್ನು ಸಾಮಾನ್ಯ 'ಸತ್ತಾ' ಗುಣಕ್ಕಾಗಿ ಎಲ್ಲವನ್ನೂ ಅಸ್ತಿರೂಪವೆಂದು ತಿಳಿಯುವುದು **ಶುದ್ಧ ಸಂಗ್ರಹ ನಯವಾಗಿದೆ** ಹಾಗೆಯೇ ಆ ವಸ್ತುಗಳಲ್ಲಿ ಅವಾಂತರ ಸಮಾನತೆಗಳ ಆಧಾರದಿಂದ ಒಂದನ್ನು ಭಿನ್ನ ಜಾತಿ ವಿಶೇಷವೆಂದು ಗ್ರಹಣಮಾಡುವುದು **ಅಶುದ್ಧ ಸಂಗ್ರಹ ನಯವಾಗಿದೆ** ॥ ೩೦ ॥ **ಎರಡು ವ್ಯವಹಾರ ನಯಗಳು**—ಸಂಗ್ರಹ ನಯದ ಮುಖಾಂತರ ಗ್ರಹಣಮಾಡಿದ ಸಮಸ್ತ ದ್ರವ್ಯವನ್ನು ಒಂದು ಜಾತಿಯಲ್ಲಿ ವಿಧಿಪೂರ್ವಕವಾಗಿ ಭೇದಮಾಡುವಂಥದು ಶುದ್ಧಾರ್ಥಭೇದಕ ವ್ಯವಹಾರ ನಯವಾಗಿದೆ ದ್ರವ್ಯದಲ್ಲಿ ಜೀವ ಮತ್ತು ಅಜೀವ ಎಂದು ಎರಡು ಭೇದಗಳಿವೆ. ಈ ಅವಾಂತರ ಜಾತಿಯಲ್ಲಿಯೂ ಉಪಭೇದಗಳನ್ನು ಮಾಡುವಂಥದು **ಅಶುದ್ಧಾರ್ಥಭೇದಕ ವ್ಯವಹಾರ ನಯವಾಗಿದೆ** ಹೇಗೆಂದರೆ ಜೀವದ ಎರಡು ಭೇದಗಳು ಸಂಸಾರೀ ಮತ್ತು ಮುಕ್ತ ಎಂದಿವೆ. ॥ ೩೧ ॥ **ಎರಡು ಋಜುಸೂತ್ರ ನಯಗಳು**—ಋಜುಸೂತ್ರದ ವಿಷಯವು ವಸ್ತುವಿನ ವರ್ತಮಾನ ಪರ್ಯಾಯ ಮಾತ್ರ ಆಗಿದೆ ಅದರಲ್ಲಿ ಯಾವುದು ಒಂದು ಸಮಯದೊಳಗಿನ ಪರ್ಯಾಯವನ್ನು ಮಾತ್ರ ಗ್ರಹಣಮಾಡುವುದೋ ಅದು ಸೂಕ್ಷ್ಮ ಋಜುಸೂತ್ರ ನಯವಾಗಿದೆ ಉದಾಹರಣೆಯೆಂದು ಇದಕ್ಕೆ ಶಬ್ದವು ಕ್ಷಣಿಕವೆಂದು ಹೇಳುವುದಾಗಿದೆ. ಇನ್ನು ಯಾವುದು ದ್ರವ್ಯದ ಪರಿಮಿತ ಕಾಲದಲ್ಲಿರುವ ಸ್ಥಿತಿ–ವಿಶೇಷವನ್ನು ಗ್ರಹಣ ಮಾಡುವುದೋ ಅದ ಸ್ಥೂಲ ಋಜುಸೂತ್ರ ನಯವಾಗಿದೆ ಹೇಗೆಂದರೆ ಮನುಷ್ಯ ಎಂದು ಹೇಳುವುದರಲ್ಲಿ ಮನುಷ್ಯನ ಆಯುಷ್ಯದ ತುಂಬ ಇರುವ ಪರ್ಯಾಯವನ್ನು ಲಕ್ಷ್ಯದಲ್ಲಿ ಇಡಲಾಗುತ್ತದೆ ॥ ೩೨–೩೩ ॥ **ಶಬ್ದನಯ**—ಒಂದೇ ಅರ್ಥವನ್ನು ಹೇಳುವ ಶಬ್ದಗಳಲ್ಲಿಯೂ ಲಿಂಗಭೇದದಿಂದ ಅರ್ಥಭೇದವನ್ನು ಸ್ವೀಕಾರ ಮಾಡುವುದು ಶಬ್ದನಯವಾಗಿದೆ ಹೇಗೆಂದರೆ ಪುಷ್ಯ ಶಬ್ದವು ಪುಲ್ಲಿಂಗವಿದ್ದಾಗ ಒಂಭತ್ತನೆಯ ನಕ್ಷತ್ರವಾಗಿದೆ ಪುಷ್ಯಾ ಎಂದು ಸ್ತ್ರೀಲಿಂಗವಾದಾಗ ಒಂದು ತಾರೆ ಎನಿಸುತ್ತದೆ. ॥ ೩೪ ॥ ಇಲ್ಲವೆ ವ್ಯಾಕರಣದಿಂದ ಸಿದ್ಧವಾದ ಶಬ್ದಗಳಲ್ಲಿ ಯಾವ ಅರ್ಥದ ರೂಢಿಯಿದೆಯೋ ಅದೇ ಅರ್ಥವನ್ನು ಆ ಶಬ್ದದ ಮುಖಾಂತರ ಪ್ರತಿಪಾದಿಸುವುದು ಶಬ್ದನಯವಾಗಿದೆ ಹೇಗೆಂದರೆ ದೇವ ಶಬ್ದದಿಂದ ಅದರ ಸುಗೃಹೀತ ಅರ್ಥ ದೇವ ಅರ್ಥಾತ್ ಸುರ ಎಂದೇ ಗ್ರಹಣ ಮಾಡುವುದಾಗಿದೆ ॥ ೩೫ ॥ **ಸಮಭಿರೂಢನಯ**–ಪ್ರತಿಯೊಂದು ಪದಾರ್ಥವೂ ತನ್ನ ವಾಚಕ ಶಬ್ದದಲ್ಲಿ ಆರೂಢವಾಗಿದೆ ಇದರಿಂದ ಅದರಂತೆಯೇ ಪ್ರತಿಯೊಂದು ಶಬ್ದವೂ ತನ್ನ ತನ್ನ ಅರ್ಥದಲ್ಲಿ ಆರೂಢವಾಗಿದೆ. ಶಬ್ದಭೇದದ ಜೊತೆಯಲ್ಲಿ ಅರ್ಥಭೇದವೂ ಆಗುತ್ತದೆ ಉದಾಹರಣೆಗಾಗಿ ಇಂದ್ರ, ಪುರಂದರ, ಶಕ್ರ ಈ ಮೂರೂ ಪದಗಳು ದೇವತೆಗಳ ರಾಜನೆಂದೇ ಸಾಮಾನ್ಯವಾಗಿ ಅರ್ಥ ಉಳ್ಳವುಗಳಾಗಿವೆ ಆದರೆ ಇಂದ್ರ ಪದವು ಅವನ ಐಶ್ವರ್ಯವನ್ನೂ, ಪುರಂದರ ಪದವು ಅವನು ಶತ್ರುಗಳ ಪುರಗಳನ್ನು ನಾಶಮಾಡಿದುದನ್ನೂ, ಶಕ್ರಪದವು ಅವನು ದೊಡ್ಡ ಸಾಮರ್ಥ್ಯ ಉಳ್ಳವನೆಂದೂ ಅರ್ಥಗಳು ಧ್ವನಿತವಾಗುತ್ತವೆ ಈ ಪ್ರಕಾರ ಶಬ್ದ ಭೇದದಿಂದ ಅರ್ಥಭೇದ ಮಾಡುವಂಥದು ಸಮಭಿರೂಢ ನಯವಾಗಿದೆ ॥ ೩೬ ॥ **ಏವಂಭೂತನಯ**—ಜೀವವು ತನ್ನ ಮನ, ವಚನ

ಕಾಯಗಳಿಂದ ಯಾವ ಯಾವ ಕ್ರಿಯೆಗಳನ್ನು ಮಾಡುವುದೋ ಆ ಪ್ರತಿಯೊಂದು ಕ್ರಿಯೆಯನ್ನು ಬೋಧಿಸಲಿಕ್ಕೆ ಭಿನ್ನ ಭಿನ್ನ ಶಬ್ದಗಳಿವೆ ಅವುಗಳನ್ನು ಆಯಾ ಸಮಯದಲ್ಲಿ ಪ್ರಯೋಗಿಸುವುದು ಏವಂಭೂತ ನಯವಾಗಿದೆ ಹೇಗೆಂದರೆ ಮನುಷ್ಯನು ಪೂಜೆ ಮಾಡುವಾಗ ಪೂಜಾರಿಯು, ಯುದ್ಧ ಮಾಡುವಾಗ ಯೋಧನೂ ಎಂದು ಹೇಳಲ್ಪಡುತ್ತಾನೆ. ॥ ೩೭ ॥ ಈ ನೈಗಮಾದಿ ನಯಗಳಲ್ಲಿ ಮೊದಲಿನ ಮೂರು ದ್ರವ್ಯಾರ್ಥಿಕ ಮತ್ತು ಉಳಿದ ನಾಲ್ಕು ಪರ್ಯಾಯಾರ್ಥಿಕ-ಗಳೆಂದು ಹೇಳಲಾಗಿದೆ. ಅವುಗಳಲ್ಲಿ ಮೊದಲಿನ ನಾಲ್ಕು ಅರ್ಥಾತ್ ನೈಗಮ, ಸಂಗ್ರಹ, ವ್ಯವಹಾರ ಮತ್ತು ಋಜುಸೂತ್ರ ಇವು ಅರ್ಥ ಪ್ರಧಾನವಾಗಿವೆ. ಉಳಿದ ಮೂರು-ಶಬ್ದ, ಸಮಭಿರೂಢ ಮತ್ತು ಏವಂಭೂತ-ಇವು ಶಬ್ದ ಪ್ರಧಾನವಾಗಿವೆ ॥ ೩೮ ॥ ಉಪನಯ-ಎರಡು ಸದ್ಭೂತ ಉಪನಯ—ಉಪನಯದಲ್ಲಿ ಮೂರು ಭೇದಗಳು ಅವು ಸದ್ಭೂತ, ಅಸದ್ ಭೂತ, ಉಪಚರಿತ ಎಂದಿವೆ. ಗುಣ, ಗುಣಿ, ಪರ್ಯಾಯ, ದ್ರವ್ಯ ಹಾಗೂ ಕಾರಕ ಮತ್ತು ಸ್ವಭಾವದ ಭೇದದಿಂದ ವಸ್ತುವಿನಲ್ಲಿ ನಾಮಾದಿಗಳ ಮುಖಾಂತರ ಭೇದ ಮಾಡುವಂಥದು ಸದ್ಭೂತ ಉಪನಯವು ಇದರಲ್ಲಿಯೂ ಎರಡು ಭೇದಗಳಿವೆ ಶುದ್ಧ ಗುಣ ಗುಣಿ ಮೊದಲಾದ ವಿಷಯ ಉಳ್ಳದು ಶುದ್ಧ ಸದ್ಭೂತ ಉಪನಯವು ಇನ್ನು ಅಶುದ್ಧ ಗುಣ ಗುಣಿ ಮೊದಲಾದ ವಿಷಯ ಉಳ್ಳದು ಅಶುದ್ಧ ಸದ್ಭೂತ ಉಪನಯವಾಗಿದೆ. ॥ ೩೯ ॥ ಮೂರು ಅಸದ್ಭೂತ ಉಪನಯ—ಪರಪದಾರ್ಥದ ಗುಣಗಳನ್ನು ಆತ್ಮ ಗುಣವೆಂದು ಹೇಳುವುದು ಅಸದ್ಭೂತ ಉಪನಯವಾಗಿದೆ. ಇದರಲ್ಲಿ ಸ್ವಜಾತಿ, ವಿಜಾತಿ, ಮಿಶ್ರ ಎಂದು ಮೂರು ಭೇದಗಳಿವೆ ಈ ಮೂರರಲ್ಲಿಯೂ ಪ್ರತಿಯೊಂದರಲ್ಲಿ ಮತ್ತೆ ಮೂರು ಭೇದಗಳಿವೆ. ॥ ೪೦ ॥ ಯಾವದಾದರೊಂದು ವಸ್ತುವಿನ ಪ್ರತಿಬಿಂಬವನ್ನು ಕಂಡು ಅದು ಆ ವಸ್ತುವೇ ಇದೆ ಎಂದು ಹೇಳುವುದು ದ್ರವ್ಯ ಮತ್ತು ಪರ್ಯಾಯಗಳಲ್ಲಿ ಅಭೇದವನ್ನು ಮಾಡುವ ಸ್ವಜಾತಿ ಅಸದ್ ಭೂತ ಉಪನಯವಾಗಿದೆ. ॥ ೪೧ ॥ ಇನ್ನು ಏಕೇಂದ್ರಿಯ, ದ್ವೀಂದ್ರಿಯ ಮೊದಲಾದ ಶರೀರಗಳು ಪುದ್ಗಲ ಕಾಯದ ಸಂಬಂಧವನ್ನು ಇಟ್ಟುಕೊಳ್ಳುತ್ತವೆ ಆದರೂ ಅವುಗಳಿಗೆ 'ಇದು ಏಕೇಂದ್ರಿಯ ಜೀವವಿದೆ' ಎಂದಿತ್ಯಾದಿಯಾಗಿ ಹೇಳುತ್ತೇವೆ ಇದು ವಿಜಾತಿ ಅಸದ್ ಭೂತ ಉಪನಯ-ವಾಗಿದೆ. ॥ ೪೨ ॥ ಜೀವವು ಜ್ಞೇಯವಾಗಿದೆ ಅಜೀವವೂ ಜ್ಞೇಯವಾಗಿದೆ. ಇವೆರಡೂ ಜ್ಞಾನದ ವಿಷಯ-ವಾಗಿರುವುದರಿಂದ ಜ್ಞಾನರೂಪವೂ ಆಗಿವೆ ಈ ಪ್ರಕಾರ ಜ್ಞಾನವನ್ನು ಸ್ವಜಾತಿ ಜೀವ ಹಾಗೂ ವಿಜಾತಿ ಅಜೀವ ಇದರಿಂದ ಅಭಿನ್ನವೆಂದು ಹೇಳುವುದು ಸ್ವಜಾತಿ-ವಿಜಾತಿ ಇಲ್ಲವೆ ಮಿಶ್ರ ಅಸದ್ ಭೂತ ಉಪನಯವಾಗಿವೆ ॥ ೪೩ ॥ [ಈ ಪ್ರಕಾರ ಸ್ವಜಾತಿ, ವಿಜಾತಿ, ಮಿಶ್ರರೂಪದಿಂದ ದ್ರವ್ಯದಲ್ಲಿ ದ್ರವ್ಯದ, ದ್ರವ್ಯದಲ್ಲಿ ಗುಣದ, ದ್ರವ್ಯದಲ್ಲಿ ಪರ್ಯಾಯದ, ಹಾಗೆಯೇ ಗುಣದಲ್ಲಿ ದ್ರವ್ಯದ, ಗುಣದಲ್ಲಿ ಗುಣದ, ಗುಣದಲ್ಲಿ ಪರ್ಯಾಯದ, ಮತ್ತು ಪರ್ಯಾಯದಲ್ಲಿ ಪರ್ಯಾಯದ, ಈ ಒಂಭತ್ತು ಪ್ರಕಾರದ ಆರೋಪಮಾಡಲಾಗುತ್ತದೆ. ಇದರಿಂದ ಅಸದ್ಭೂತ ಉಪನಯದಲ್ಲಿ ಇಪ್ಪತ್ತೇಳು ಬೇದಗಳಾಗುತ್ತವೆ.] ಮೂರು ಉಪಚರಿತ ಉಪನಯಗಳು—ಪರಸ್ಪರ ಎರಡು ಭಿನ್ನ ಸತ್ಯಾಸತ್ಯರೂಪ ವಸ್ತುಗಳಲ್ಲಿ ಯಾವುದಾದರೊಂದು ಪ್ರಯೋಜನ ಮತ್ತು ನಿಮಿತ್ತ ವಶವಾಗಿ ಅಭೇದವನ್ನು ಸ್ಥಾಪಿಸುವುದು ಉಪಚರಿತ ಉಪನಯವಾಗಿದೆ ಇದಕ್ಕೆ ಸ್ವಜಾತಿ, ವಿಜಾತಿ, ಮಿಶ್ರರೂಪದಿಂದ ಭೇದಗಳಾಗುತ್ತವೆ ॥ ೪೪ ॥ ನನ್ನ ಮಕ್ಕಳು ಮೊದಲಾದ ಬಂಧು ವರ್ಗ ಮತ್ತು ನಾನು ಒಂದೇ ಆಗಿದ್ದೇವೆ. ಅವರು ನನ್ನ ಸಂಪತ್ತಿರೂಪವಾಗಿದ್ದಾರೆ ಇತ್ಯಾದಿ ಪ್ರಕಾರದಿಂದ ಸ್ವಜಾತೀಯ ಜೀವ ಪದಾರ್ಥಗಳಿಂದ ಅಭೇದ ಉತ್ಪನ್ನ ಮಾಡುವಂಥದು ಸ್ವಜಾತಿ ಅಸದ್ ಭೂತ ಉಪಚರಿತ ಉಪನಯವಾಗಿದೆ ॥ ೪೫ ॥ ಆಭರಣ, ಸುವರ್ಣ, ರತ್ನ ಹಾಗೂ ವಸ್ತ್ರಾದಿಗಳು ನನ್ನವೇ ಆಗಿವೆ ಈ ಪ್ರಕಾರ ಸಚಿತ್ತವನ್ನು ಅಚಿತ್ತ ವಿಜಾತಿಯ ಜೊತೆಯಲ್ಲಿ ಸಂಬಂಧವನ್ನು ಸ್ಥಾಪಿಸುವುದು ವಿಜಾತಿ ಅಸದ್ಭೂತ ಉಪಚರಿತ ಉಪನಯವಾಗಿದೆ ॥ ೪೬ ॥ ದೇಶ, ರಾಜ್ಯ ಮತ್ತು ದುರ್ಗ ಇವೆಲ್ಲವೂ ನನ್ನವಾಗಿವೆ. ಹೀಗೆ ಹೇಳು-ವವನು ಆ ದೇಶ ಮೊದಲಾದ ಜೀವ-ಅಜೀವ ಉಭಯರೂಪವಾಗುವ ಕಾರಣದಿಂದ ಸ್ವಜಾತಿ-ವಿಜಾತಿ ಅರ್ಥಾತ್ ಮಿಶ್ರ ದ್ರವ್ಯಗಳೊಡನೆ ತನ್ನ ಸಂಬಂಧ ಸ್ಥಾಪಿಸಿಕೊಳ್ಳುವ ಕಾರಣದಿಂದ ಮಿಶ್ರ ಅಸದ್ಭೂತ ಉಪಚರಿತ ಉಪನಯದ ಅಂತರ್ಗತವಾಗಿದೆ ॥ ೪೭ ॥ ದ್ರವ್ಯವು ನಾನಾ ಪ್ರಕಾರದ ಭಾವಗಳಿಂದ ಕೂಡಿದೆ ಅದಕ್ಕಾಗಿ ಅದರ ಯಥಾರ್ಥ ಜ್ಞಾನದ ಸಿದ್ಧಿಯು ನಿರಪೇಕ್ಷ ಏಕಾಂತದಿಂದ ಎಂದೂ ಆಗದು ಅದು ಅನೇಕಾಂತರೂಪ ವಚನದಿಂದಲೇ ಆಗುವುದು ಸಾಧ್ಯವಿದೆ ಮತ್ತು ಅದು ಅನೇಕಾಂತ 'ಸ್ಯಾತ್' ಶಬ್ದದ ಮುಖಾಂತರ ಸಾಧಿಸುತ್ತದೆಂದು ತಿಳಿಯಬೇಕು ॥ ೪೮ ॥ ಯಾವ ಪ್ರಕಾರ ರಸಸಿದ್ಧ ವೈದ್ಯನು ಸುವರ್ಣವನ್ನು ಸಿದ್ಧಗೊಳಿಸಿ ಸುಖವನ್ನು ಭೋಗಿಸುತ್ತಾನೆ ಇದೇ ಪ್ರಕಾರ

ಯೋಗಿಯು ನಯಗಳ ಸ್ವರೂಪವನ್ನು ಬಹಳ ಚೆನ್ನಾಗಿ ತಿಳಿದುಕೊಂಡು ಮತ್ತು ಅವುಗಳಲ್ಲಿ ಪ್ರವೀಣನಾಗಿ ಚಿರಕಾಲ ಆತ್ಮನ ಅನುಭವವನ್ನು ಹೊಂದುತ್ತಾನೆ. ॥ ೪೯ ॥

—ದೇವಸೇನಕೃತ ನಯಚಕ್ರ

## ೧೬. ನಿಕ್ಷೇಪ

ಕಾರ್ಯವಾಗುವದಕ್ಕಾಗಿ ಅರ್ಥಾತ್ ವ್ಯವಹಾರ ನಡೆಯುವುದರ ಹೇತುವಿನ ಯುಕ್ತಿಯಲ್ಲಿ ಸುಯುಕ್ತಿ ಮಾರ್ಗಕ್ಕೆ ಅನುಸರಿಸಿ ಯಾವುದರಲ್ಲಿ ಅರ್ಥದ ನಾಮ ಮೊದಲಾದ ನಾಲ್ಕು ಪ್ರಕಾರಗಳನ್ನು ಆರೋಪಿಸಲಾಗುವುದೋ ಅದು ನ್ಯಾಯ ಶಾಸ್ತ್ರದಲ್ಲಿ ನಿಕ್ಷೇಪ ಎನಿಸುತ್ತದೆ ॥ ೧ ॥ ದ್ರವ್ಯದ ಸ್ವಭಾವವು ನಾನಾ ಪ್ರಕಾರವಾಗಿದೆ. ಸ್ವಭಾವದ ಅಪೇಕ್ಷೆಯಿಂದ ಅದೇ ಸ್ವಭಾವವನ್ನೂ ನಿಮಿತ್ತ ಮಾಡಿಕೊಂಡು ಆ ಒಂದು ದ್ರವ್ಯದಲ್ಲಿಯೇ ನಾಲ್ಕು ಭೇದರೂಪಗಳಾಗುತ್ತವೆ ॥ ೨ ॥ ನಾಮ, ಸ್ಥಾಪನಾ, ದ್ರವ್ಯ ಮತ್ತು ಭಾವ ಇವು ನಾಲ್ಕು ನಿಕ್ಷೇಪಗಳಾಗಿವೆ. ಯಾವದಾದರೊಂದು ವಸ್ತುವಿಗೆ ಏನಾದರೊಂದು ಹೆಸರಿಡುವುದು ನಾಮ ನಿಕ್ಷೇಪವಾಗಿದೆ ಇದು ಎರಡು ಪ್ರಕಾರದಿಂದ ಪ್ರಸಿದ್ಧವಾಗಿದೆ ॥ ೩ ॥ ನಾಮ ನಿಕ್ಷೇಪ—ಮೋಹಕರ್ಮ, ಮತ್ತು ಅಜ್ಞಾನ ಹಾಗೆಯೇ ಅಂತರಾಯ ಕರ್ಮದ ವಿನಾಶ ಮಾಡುವುದರ ರೂಪ ಗುಣಗಳಿಗನುಸರಿಸಿ ಇಲ್ಲವೆ ಪೂಜನೀಯವಾಗುವ ಕಾರಣದಿಂದ ಕೇವಲೀ ಭಗವಂತನಿಗೆ 'ಅರಿಹಂತ' ಎಂಬುದು ಗುಣನಾಮವಾಗಿದೆ. ಇನ್ನು ಸಂಜ್ಞೆ ಹಾಗೂ ವಸ್ತುವಿನ ಗುಣದ ಅಪೇಕ್ಷೆಯನ್ನು ಮಾಡದೆ, ಕೇವಲ ಲೋಕ ವ್ಯವಹಾರಕ್ಕಾಗಿ ಇಡುವ ಹೆಸರು ರೂಢನಾಮ ಎನಿಸುತ್ತದೆ. ಒಂದು ಪ್ರಾಣಿ ವಿಶೇಷಕ್ಕೆ ಕುದುರೆ ಎಂದು ಹೇಳುವುದು ರೂಢಿಯಾಗಿದೆ ॥ ೪ ॥ ಸ್ಥಾಪನಾ ನಿಕ್ಷೇಪ—ಎಲ್ಲಿ ಒಂದು ವಸ್ತುವನ್ನು ಯಾವುದೋ ಬೇರೊಂದು ವಸ್ತುವಿನಲ್ಲಿ ಆರೋಪಿಸುವಲ್ಲಿ ಸ್ಥಾಪನಾ ನಿಕ್ಷೇಪವಾಗುತ್ತದೆ. ಇದು ಸಾಕಾರ ಸ್ಥಾಪನಾ, ನಿರಾಕಾರ ಸ್ಥಾಪನಾ ಎಂದು ಎರಡು ವಿಧವಾಗಿದೆ. ಕೃತ್ರಿಮ ಮತ್ತು ಅಕೃತ್ರಿಮ ಅರಿಹಂತರ ಪ್ರತಿಮೆಯು ಸಾಕಾರ ಸ್ಥಾಪನೆಯಾಗಿದೆ. ಹಾಗೆಯೇ ಯಾವುದೋ ಒಂದು ಅನ್ಯ ಪದಾರ್ಥದಲ್ಲಿ ಅರಿಹಂತರನ್ನು ಸ್ಥಾಪಿಸುವುದು ನಿರಾಕಾರ ಸ್ಥಾಪನೆ ಎನಿಸುತ್ತದೆ ॥ ೬ ॥ ದ್ರವ್ಯ ನಿಕ್ಷೇಪ—ವಸ್ತುವಿನ ವರ್ತಮಾನ ಅವಸ್ಥೆಯನ್ನು ಉಲ್ಲಂಘಿಸಿ ಅದರ ಭೂತಕಾಲದ ಇಲ್ಲವೆ ಭಾವೀ ಸ್ವರೂಪಕ್ಕೆ ಅನುಸರಿಸಿ ವ್ಯವಹಾರ ಮಾಡಿದಾಗ ಅದು ದ್ರವ್ಯ ನಿಕ್ಷೇಪ ಎನಿಸುತ್ತದೆ. ಇದರಲ್ಲಿ ಆಗಮ ಮತ್ತು ನೋಆಗಮ ಎಂದು ಎರಡು ಭೇದಗಳಿವೆ ಅರಿಹಂತರು ಹೇಳಿದ ಶಾಸ್ತ್ರವನ್ನು ತಿಳಿದುಕೊಂಡು ಯಾವ ಕಾಲದಲ್ಲಿ ಆ ಶಾಸ್ತ್ರದಲ್ಲಿ ತನ್ನ ಉಪಯೋಗವು ಲಭಿಸುವದಿಲ್ಲವೋ ಆಗ ಅದು ಆಗಮ ದ್ರವ್ಯ ನಿಕ್ಷೇಪದಿಂದ ಅರಿಹಂತವಾಗಿದೆ. ನೋಆಗಮ ದ್ರವ್ಯ ನಿಕ್ಷೇಪದಲ್ಲಿ ಜ್ಞಾಯಕ ಶರೀರ, ಭಾವಿ, ಮತ್ತು ಕರ್ಮ ಎಂದು ಮೂರು ಭೇದಗಳಿವೆ ಎಲ್ಲಿ ವಸ್ತುವನ್ನು ತಿಳಿದುಕೊಳ್ಳುವವನ ಶರೀರವೇ ಆ ವಸ್ತುವೆಂದು ತಿಳಿಯಲಾಗುವುದೋ ಅಲ್ಲಿ ಜ್ಞಾಯಕ ಶರೀರ ನೋಆಗಮ ದ್ರವ್ಯನಿಕ್ಷೇಪವಿದೆ ಹೇಗೆಂದರೆ ರಾಜ ನೀತಿಜ್ಞನ ಮೃತ ಶರೀರವನ್ನು ಕಂಡು ರಾಜ ನೀತಿಯು ಸತ್ತು ಹೋಯಿತೆಂದು ಹೇಳುವರು ಜ್ಞಾಯಕ ಶರೀರವೂ ಭೂತ, ವರ್ತಮಾನ ಮತ್ತು ಭವಿಷ್ಯದ ಅಪೇಕ್ಷೆಯಿಂದ ಮೂರು ಪ್ರಕಾರವೂ ಹಾಗೆಯೇ ಭೂತಜ್ಞಾಯಕ ಶರೀರ ಚ್ಯುತ, ತ್ಯಕ್ತ ಮತ್ತು ಚ್ಯಾವಿತ ರೂಪದಿಂದ ಮತ್ತೆ ಮೂರು ವಿಧವಾಗಿದೆ ಭವಿಷ್ಯದಲ್ಲಿ ವಸ್ತುವಿಗೆ ಪ್ರಾಪ್ತವಾಗುವ ಸ್ವರೂಪವನ್ನು ನೆನೆದು ವರ್ತಮಾನ ಕಾಲದಲ್ಲಿಯೇ ಆ ರೂಪವನ್ನು ಭಾವಿಸುವುದು ಭಾವಿ ನೋಆಗಮ ದ್ರವ್ಯ ನಿಕ್ಷೇಪ ಎನಿಸುತ್ತದೆ ಉದಾಹರಣೆಗಾಗಿ ಯುವರಾಜನನ್ನು ರಾಜನೆಂದು ಮನ್ನಿಸುವದಾಗಿದೆ. ಯಾವ ವ್ಯಕ್ತಿಯ ಕರ್ಮವು ಹೇಗೇ ಇರಲಿ, ವಸ್ತುವಿನ ವಿಷಯದಲ್ಲಿ ಲೌಕಿಕ ಮಾನ್ಯತೆಯು ಹೇಗೇ ಇರಲಿ, ಅದಕ್ಕನುಸರಿಸಿ ಗ್ರಹಣ ಮಾಡುವುದು ಕರ್ಮ ಇಲ್ಲವೆ ತದವ್ಯತಿರಿಕ್ತ ನೋಆಗಮ ದ್ರವ್ಯ ನಿಕ್ಷೇಪವಾಗಿದೆ. ಹೇಗೆಂದರೆ ಯಾವ ವ್ಯಕ್ತಿಯಲ್ಲಿ ದರ್ಶನ ವಿಶುದ್ಧಿ, ವಿನಯ ಮೊದಲಾದ ತೀರ್ಥಂಕರ ನಾಮ ಕರ್ಮದ ಬಂಧವನ್ನು ಮಾಡುವ ಲಕ್ಷಣಗಳು ಕಂಡು ಬರಲು ಅವನಿಗೆ ತೀರ್ಥಂಕರನೆಂದೇ ಹೇಳುವುದು, ಇಲ್ಲವೆ ತುಂಬಿದ ಕಲಶ, ದರ್ಪಣ, ಮೊದಲಾದ ಪದಾರ್ಥಗಳನ್ನು ಲೋಕ ಮಾನ್ಯತೆಗೆ ಅನುಸರಿಸಿ ಮಂಗಲದಾಯಕವೆಂದು ತಿಳಿಯುವದು. ॥ ೬-೭ ॥ ಭಾವ ನಿಕ್ಷೇಪ—ತತ್ಕಾಲದಲ್ಲಿರುವ ಪರ್ಯಾಯಕ್ಕೆ ಅನುಸರಿಸಿಯೇ ವಸ್ತುವನ್ನು ಸಂಬೋಧಿಸುವುದು ಇಲ್ಲವೆ ಮನ್ನಿಸುವುದು ಭಾವ ನಿಕ್ಷೇಪವಾಗಿದೆ. ಇದರಲ್ಲಿಯೂ ದ್ರವ್ಯ ನಿಕ್ಷೇಪದಂತೆ ಆಗಮ ಭಾವ ನಿಕ್ಷೇಪ ಮತ್ತು ನೋಆಗಮ ಭಾವ

ನಿಕ್ಷೇಪ ಎಂದು ಎರಡು ಭೇದಗಳಿವೆ ಅರಹಂತ-ಶಾಸ್ತ್ರದ ಜ್ಞಾಯಕನು ಯಾವ ಸಮಯದಲ್ಲಿ ಆ ಜ್ಞಾನದಲ್ಲಿ ತನ್ನ ಉಪಯೋಗವಾಗುವುದೋ ಅದೇ ಸಮಯದಲ್ಲಿ ಅರಿಹಂತನಿದ್ದಾನೆ, ಇದು ಆಗಮ ಭಾವ ನಿಕ್ಷೇಪವಾಗಿದೆ. ಹಾಗೆಯೇ ಯಾವ ಸಮಯದಲ್ಲಿ ಅದರಲ್ಲಿ ಅರಿಹಂತನ ಸಮಸ್ತ ಗುಣಗಳು ಪ್ರಕಟವಾಗುವವೋ ಆಗ ಅರಿಹಂತನೆಂದು ಹೇಳುವುದು, ಮತ್ತು ಆ ಗುಣಗಳಲ್ಲಿ ಯುಕ್ತನಾಗಿ ಧ್ಯಾನ ಮಾಡುವವನಿಗೆ ಕೇವಲ ಜ್ಞಾನಿ ಎನ್ನುವುದು ನೋಆಗಮ ಭಾವ ನಿಕ್ಷೇಪವಾಗಿದೆ. ॥ ೮-೯ ॥ ಬೇರೆ ಯಾವ ಆಚಾರ್ಯರು ದ್ರವ್ಯವನ್ನು ಗುಣ ಮತ್ತು ಪರ್ಯಾಯ-ವುಳ್ಳುದೆಂದು ಹೇಳಿದ್ದಾರೆ. ಅವರು ಹೇಳಿದ ಆ ವಸ್ತುವಿನ ಸ್ವರೂಪವೂ ಇದೇ ಪ್ರಕಾರ ಇದೆ ಎಂದು ತಿಳಿಯಬೇಕು. ॥ ೧೦ ॥ ಈ ನಿಕ್ಷೇಪಗಳಲ್ಲಿ ತನ್ನ ಇಷ್ಟ ವಿಷಯಗಳನ್ನು ವಿಭಾಗಿಸಿ ಹೇಳಲಿಕ್ಕಿಬೇಕು ಇದನ್ನು ಹೇಳುವದಕ್ಕಾಗಿ ಇಲ್ಲಿ ನಿಕ್ಷೇಪದ ವ್ಯಾಖ್ಯೆಯನ್ನು ಸೂತ್ರರೂಪದಲ್ಲಿ ಹೇಳಲಾಗಿದೆ ॥ ೧೧ ॥ ಈ ನಿಕ್ಷೇಪಗಳನ್ನು ನಯಗಳಲ್ಲಿ ಅಂತರ್ಭಾವಗೊಳಿಸಿ ಹೀಗೆ ತಿಳಿದುಕೊಳ್ಳಬಹುದಾಗಿದೆ—ನಾಮ ನಿಕ್ಷೇಪದ ಅಂತರ್ಭಾವವು ಶಬ್ದನಯದಲ್ಲಿ, ಸ್ಥಾಪನಾ ನಿಕ್ಷೇಪವು ಸ್ಥೂಲ ಋಜುಸೂತ್ರ ನಯದಲ್ಲಿ, ದ್ರವ್ಯ ನಿಕ್ಷೇಪವು ಉಪಚರಿತ ಉಪನಯದಲ್ಲಿ, ಹಾಗೂ ಭಾವ ನಿಕ್ಷೇಪವು ಪರ್ಯಾಯಾರ್ಥಿಕ ನಯದಲ್ಲಿ ಅಂತರ್ಭಾವವಾಗುತ್ತವೆ ॥ ೧೨ ॥ ಯಾವನು ನಿಕ್ಷೇಪ, ನಯ ಮತ್ತು ಪ್ರಮಾಣಗಳ ಸ್ವರೂಪವನ್ನು ತಿಳಿದು ತತ್ತ್ವದ ವಿಚಾರವನ್ನು ಮಾಡುವನೋ ಅವನು ತಥ್ಯ ಮತ್ತು ತತ್ತ್ವದ ಸಂಶೋಧನೆಯಲ್ಲಿ ಚೆನ್ನಾಗಿ ಮುಂದರಿಯುತ್ತಾನೆ ಮೇಲಾಗಿ ತಥ್ಯವನ್ನು ತತ್ತ್ವಗಳನ್ನೂ ಪ್ರಾಪ್ತಮಾಡಿಕೊಳ್ಳುತ್ತಾನೆ ॥ ೧೩ ॥ ಯಾವನು ಗುಣ ಮತ್ತು ಪರ್ಯಾಯದ ಲಕ್ಷಣ ಹಾಗೂ ಸ್ವಭಾವ, ನಿಕ್ಷೇಪ, ನಯ, ಪ್ರಮಾಣದ ಸ್ವರೂಪಗಳನ್ನೂ ಅವುಗಳ ಭೇದೋಪಭೇದ ಸಹಿತ ತಿಳಿದುಕೊಳ್ಳುವನೋ ಅವನಿಗೆ ದ್ರವ್ಯದ ಸ್ವಭಾವದ ಜ್ಞಾನವಾಗುತ್ತದೆ ॥ ೧೪ ॥

—ದೇವಸೇನ ಕೃತ ನಯಚಕ್ರ

ಪರಿಶಿಷ್ಟ—೩

# ತತ್ತ್ವಸಮುಚ್ಚಯದ ಶಬ್ದಕೋಷ

[ಇಲ್ಲಿ ಮೊದಲು ಮೂಲ ಶಬ್ದವನ್ನು ಕೊಡಲಾಗಿದೆ ಅದರ ಜೊತೆಯಲ್ಲಿಯೇ ಮುಂದೆ ಅದರ ಪ್ರಾಕೃತ ರೂಪವನ್ನೂ ಕಂಸಿನಲ್ಲಿ ಕೊಟ್ಟಿದೆ. ಆ ಮೇಲೆ ಅರ್ಥವನ್ನು ವಿವರಿಸಿದೆ ಕೊನೆಯಲ್ಲಿ ಅಧ್ಯಾಯದ ಸಂಖ್ಯೆಯನ್ನೂ ಅದರ ತರುವಾಯ ಶ್ಲೋಕ ಸಂಖ್ಯೆಯನ್ನೂ ಸೂಚಿಸಿದೆ ]

## [ಅ]

ಅಗತಿ—ಅಧರ್ಮ ದ್ರವ್ಯದ ಕಾರ್ಯ ೧—೪

ಅಗ್ನಿಮಿತ್ರ (ಅಗ್ಗಿಮಿತ್ತ)—ವಸುಮಿತ್ರ ಸಹಿತ ಅರವತ್ತು ವರ್ಷ ರಾಜ್ಯಕಾಲ ೧—೭೩

ಅಚಕ್ಷು ಆ (ಅಚಕ್ಖು)—ದರ್ಶನಾವರಣ ಕರ್ಮದ ಭೇದ ೧೦—೬

ಅಚಕ್ಷುದರ್ಶನ (ಅಚಕ್ಖುದಂಸಣ)—ದರ್ಶನದ ಒಂದು ಭೇದ ೧೦—೬, ೧೨—೩೮.

ಅಚಲ (ಅಚಲ)—ಎರಡನೆಯ ಬಲದೇವ ೧—೫೨,—ಆರನೆಯ ರುದ್ರ ೧—೫೫.

ಅಚಿತ್ತಗತ (ಗದ)—ಕಳುವಿನ ಒಂದು ಭೇದ ೨—೧೪

ಅಚೇಲ ಪರೀಷಹ—೮—೧೨, ೧೩

ಅಚೇಲಕತ್ವ (ಅಚ್ಚೇಲಕ್ಕ)—ಮುನಿಯ ಒಂದು ಮೂಲ ಗುಣ ೫—೩೦.

ಅಚ್ಯುತ (ಅಚ್ಚುದ)—ಹನ್ನೆರಡನೆಯ ಸ್ವರ್ಗ ೧—೨೦,—ಹದಿನಾರನೆಯ ಸ್ವರ್ಗ ೧—೨೨.

ಅಜಿತ (ಅಜಿಯ)—ಎರಡನೆಯ ತೀರ್ಥಂಕರ ೧—೪೭

ಅಜಿತನಾಭಿ (ಅಜಿಯಣಾಭಿ)—ಒಂಭತ್ತನೆಯ ರುದ್ರ ೧—೫೫

ಅಜಿತಂಜಯ—ಕಲ್ಕಿಯ ಮಗ ೧—೭೮

ಅಜಿತಂಧರ (ಅಜಿಯಂಧರ)—ಎಂಟನೆಯ ರುದ್ರ ೧—೫೫

ಅಜೀವ (ಅಜ್ಜೀವೋ)—೧—೩, ೯—೧೦

ಅಂಜನ (ಅಂಜಣ)—ಮುನಿಗಳು ತ್ಯಜಿಸಬೇಕಾದ ವಸ್ತು ೪—೯

ಅಂಜನಾ (ಅಂಜಣಾ)—ನಾಲ್ಕನೆಯ ಪೃಥ್ವಿಯ ಗೋತ್ರ ನಾಮ ೧—೯

ಅಣು—ಒಂದು ಪ್ರದೇಶ ೯—೨೦

ಅಣುವ್ರತ (ಅಣುವ್ವಯ)—ಐದು ಪ್ರಕಾರದ ೨—೩, ೪

ಅಜ್ಞಾನ (ಅಣ್ಣಾಣ)—ಮಿಥ್ಯಾತ್ವದ ಭೇದ ೧೧—೪

ಅಜ್ಞಾನ ಪರೀಷಹ ೮—೪೨, ೪೩, ೪೪

ಅತಿಚಾರ (ಅಇಯಾರ)—ಹಿಂಸೆಯ ೨—೮

ಅತಿಥಿ ಸಂವಿಭಾಗ (ಅತಿಹಿ—)—ನಾಲ್ಕನೆಯ ಶಿಕ್ಷಾವ್ರತ, ೨—೩೭, ಮೂರನೆಯ ಶಿಕ್ಷಾವ್ರತ, ವ್ರತ ಪ್ರತಿಮೆಯ ಅಂಗ ೩—೧೮

ಅತಿದುಷಮಾ (ಅದಿದುಸ್ಸಮ)—ಅವಸರ್ಪಿಣೀ ಕಾಲದ ಆರನೆಯ ಭಾಗ ೧—೪೦.

ಅತಿಭಾರ (ಅಇಭಾರ)—ಅಹಿಂಸಾಣುವ್ರತದ ಅತಿಚಾರ ೨—೯

ಅದತ್ತವರ್ಜನ (ಅದತ್ತವಜ್ಜಣ)—ವ್ರತ ಪ್ರತಿಮೆಯ ಅಂಗ ೩—೧೨, ಮಹಾವ್ರತ ೫—೭

ಅದತ್ತಾದಾನ—ಮೂರನೆಯ ಅಣುವ್ರತ ೨—೧೪.

ಅದಂತ-ಧಾವನ (ಅದಂತವಣ)—ಮುನಿಯ ಒಂದು ಮೂಲ ಗುಣ ೫—೩೩

ಅದರ್ಶನ ಪರೀಷಹ ೮—೪೫, ೪೬

ಅಧರ್ಮ (ಅಧಮ್ಮ)—ದ್ರವ್ಯವಿಶೇಷ ೧—೪, ೯—೧೮

ಅಧಿಗಮ ಸಮ್ಯಕ್ತ್ವ (ಅಹಿಗಮ ಸಮ್ಮತ್ತ)—೧೨—೫೪.

ಅಧೋದಿಶಾ ಪ್ರಮಾಣಾತಿಕ್ರಮ (ಅಹದಿಸಾಪಮಾಣಾಇಕ್ಕಮ)—ದಿಗ್ವ್ರತದ ಅತಿಚಾರ ೨—೨೨.

ಅಧೋಲೋಕ (ಹಟ್ಠಿಮಲೋಯ)—ವೇತ್ರಾಸನಾಕಾರ—೧—೫,—ಎತ್ತರ ಏಳು ರಜ್ಜು ೧—೭.

ಅಧಃಪ್ರವೃತ್ತಕರಣ (ಅಧಾಪವತ್ತ)—೧೧—೧೮.

ಅಧ್ರುವ (ಅದ್ಧುವ) ಅನಿತ್ಯ, ಪ್ರಥಮಭಾವನಾ ೭—೨

ಅನಕ್ಷರಗತಾ (ಅಣಕ್ಖರಗದಾ)—ಅಸತ್ಯ-ಮೃಷಾಭಾಷೆಯ ಭೇದ ೧೨—೧೮

ಅನಗಾರ (ಅಣಯಾರ)—ಧರ್ಮ ೩—೧.

ಅನನುಪಾಲನ—ಪ್ರೋಷಧೋಪವಾಸದ ಅತಿಚಾರ ೨—೩೬.

ಅನಂಗಕ್ರೀಡಾ (ಅಣಂಗಕೀಡ)—ಬ್ರಹ್ಮಚರ್ಯಾಣುವ್ರತದ ಅತಿಚಾರ ೨—೧೭

ಅನಂತ (ಅಣಂತ)—೧೪ನೆಯ ತೀರ್ಥಂಕರ ೧—೪೮

ಅನಂತಾನಂತ (ಅಣಂತಾಣಂತ)—ಅನಂತದ ಸರ್ವೋತ್ಕೃಷ್ಟ ಪ್ರಮಾಣ ೧—೨

ಅನರ್ಥದಂಡ (ಅಣತ್ಥದಂಡ)—ಮೂರನೆಯ ಗುಣವ್ರತ ೨—೨೭, ವ್ರತಪ್ರತಿಮೆಯ ಅಂಗ ೩—೧೫

ಅನಾದಿನಿತ್ಯ (ಅಣಾಇಣಿಚ್ಚ) ಪರ್ಯಾಯಾರ್ಥಿಕ ನಯದ ಭೇದ ೧೫—೨೧.

ಅನಾಹಾರಕ (ಅಣಾಹಾರ)—ಜೀವ, ಹದಿನಾಲ್ಕನೆಯ ಮಾರ್ಗಣಾ ೧೨—೬೫.

ಅನಿತ್ಯ-ಅಶುದ್ಧ (ಅಣಿಚ್ಚ-ಅಸುದ್ಧ)—ಪರ್ಯಾಯಾರ್ಥಿಕ ನಯದ ಭೇದ ೧೫—೨೪

ಅನಿತ್ಯ-ಶುದ್ಧ (ಅಣಿಚ್ಚ-ಸುದ್ಧ)—ಪರ್ಯಾಯಾರ್ಥಿಕ ನಯದ ಭೇದ ೧೫—೨೧

ಅನಿವೃತ್ತಿಕರಣ—ಒಂಭತ್ತನೆಯ ಗುಣಸ್ಥಾನ ೧೧—೨೦

ಅನುಕಂಪಾ (ಅಣುಕಂಪಾ)—ಸಮ್ಯಕ್ತ್ವದ ಎಂಟನೆಯ ಗುಣ ೩—೬

ಅನುಪ್ರೇಕ್ಷಾ (ಅಣುಪೇಹಾ)—ಭಾವನಾ ೭—೧; ಭಾವ ಸಂವರದ ಭೇದ ೯—೨೮

ಅನುಭಾಗ (ಅಣುಭಾಅ) ಕರ್ಮಗಳ ಶಕ್ತಿಯ ವಿಪಾಕ ೭—೩೪, ಬಂಧ ೯—೨೬, ೧೦—೩೪

ಅನುಮತಿ ತ್ಯಾಗ (ಅನುಮದ ಅಣುಮಣಣ) ಹತ್ತನೆಯ ಪ್ರತಿಮಾ ೩—೨, ೩—೩೪.

ಉತ್ಸರ್ಪಿಣೀ (ಉಸ್ಸಪ್ಪಿಣೀ)—ಕಲ್ಪದ ಅರ್ಧಭಾಗ, ಈ ಕಾಲ ಭಾಗದಲ್ಲಿ ಶರೀರದ ಪರಿಮಾಣ, ಆಯು, ಬಲ, ಬುದ್ಧಿ ಮತ್ತು ತೇಜ ಮೊದಲಾದವುಗಳು ವೃದ್ಧಿ-ಹೊಂದುತ್ತ ಹೋಗುತ್ತವೆ ೧—೩೮

ಉದಧಿ ಸದೃಶನಾಮ (ಉದಹಿಸರಿಸಣಾಮ)—ಸಾಗರೋಪಮ ೧೦—೧೯, ೪೧

ಉದಯ (ಉದಯ)—ಕರ್ಮದ ಒಂದವಸ್ಥೆ ೧೧—೧, ೧೫

ಉದುಂಬರ—ಉದುಂಬರ ಫಲ ವಿಶೇಷ ೩—೯

ಉದ್ದಿಷ್ಟ ತ್ಯಾಗ (ಉದ್ದಿಟ್ಠ)—ಹನ್ನೆರಡನೆಯ ಪ್ರತಿಮೆ ೩—೨, ೩೫

ಉದ್ಯೋತ (ಉಜ್ಜೋದ)—ಪುದ್ಗಲ ಪರ್ಯಾಯ ೯—೧೧

ಉಪಗೂಹನ (ಉವಗೂಹಣ)—ಸಮ್ಯಕ್ತ್ವದ ಐದನೆಯ ಅಂಗ ೩—೫

ಉಪಚರಿತ (ಉವಯರಿಯ)—ನಯಭೇದ, ಮೂರು ಪ್ರಕಾರದ ೧೫—೯

ಉಪದೇಶ (ಉಪದೇಸ)—ಸಂಜ್ಞೀ ಜೀವನದಿಂದ ಸ್ವೀಕೃತ ೧೨-೬೨

ಉಪನಯ (ಉವಣಯ)—ಮೂರು ವಿಧದ ೧೫—೬ ೧೨-೬೨

ಉಪಭೋಗ ಅಂ. (ಉವಭೋಗ)—ಅಂತರಾಯ ಕರ್ಮದ ಭೇದ ೧೦—೧೫

ಉಪಭೋಗ ಪರಿಭೋಗ ಪರಿಮಾಣ—ಎರಡನೆಯ ಗುಣ ವ್ರತ ೨-೨೩

ಉಪಭೋಗ ಪರಿಭೋಗಾತಿರೇಕ (ಉವಭೋಗಪರಿಬೋಗಾಇರೇಯ)—ಅನರ್ಥದಂಡ ವ್ರತದ ಅತಿಚಾರ ೨—೨೯

ಉಪಮಾ (ಉವಮಾ)—ಸತ್ಯ ವಚನ ಯೋಗದ ಒಂದು ಬೇಧ

ಉಪಯೋಗ (ಉವಯೋಗ)—ಎರಡು ಪ್ರಕಾರ—ದರ್ಶನ ೯—೨, ಜ್ಞಾನ ೯—೪

ಉಪಶಮ (ಉವಸಮ)—ಸಮ್ಯಕ್ತ್ವದ ಐದನೆಯ ಗುಣ ೩—೬, ೭—೨೮
—ಕರ್ಮದ ಒಂದು ಅವಸ್ಥೆ ೧೧—೧೧

ಉಪಶಮ ಸಮ್ಯಕ್ತ್ವ (ಉವಸಮ—ಸಮ್ಮತ್ತ)—೧೨—೫೭

ಉಪಶಾಂತ ಮೋಹ (ಉವಸಂತ ಮೋಹ) ಹನ್ನೆರಡನೆಯ ಗುಣಸ್ಥಾನ ೧೧—೨೪

ಉಪಶ್ಯಾಮಕ (ಉವಸಾಮಗ)—೧೧ನೆಯ ಗುಣಸ್ಥಾನದಲ್ಲಿರುವ ಜೀವ ೧೧—೪೩

ಉಪಾಧ್ಯಾಯ (ಉವಜ್ಝಾಯ)—ಮಂ ೧

ಉಷ್ಣ ಪರೀಷಹ—೮-೮, ೯

## [ಊ]

ಊರ್ಧ್ವದಿಶಾ ಪ್ರಮಾಣಾತಿಕ್ರಮ (ಉಡ್ಢದಿಸಾಪಮಾಣಾಇಕ್ಕಮ)—ದಿಗ್ವ್ರತದ ಅತಿಚಾರ ೨-೨೨ ಕ

ಊರ್ಧ್ವಲೋಕ (ಉವರಿಮಲೋಯ)—ನಿಲ್ಲಿಸಿದ ಮೃದಂಗದ ಆಕಾರ ಉಳ್ಳುದು ೧—೬—ಎತ್ತರಕ್ಕೆ ಒಂದು ಲಕ್ಷ ಯೋಜನ ಕಡಿಮೆಯಿರುವ ಏಳು ರಜ್ಜು ೧—೭

## [ಋ]

ಋಜುಸೂತ್ರನಯ (ರಿದುಸುತ್ತ)—ಎರಡು ಪ್ರಕಾರದ ೧೫—೩೨

ಋಷಭ (ಉಸಹ)—ಮೊದಲನೆಯ ತೀರ್ಥಂಕರ ೧—೪೭. ಸಿದ್ಧನಾದುದು ಮೂರನೆಯ ಕಾಲ ಅರ್ಥಾತ್ ಸುಷಮಾ ದುಷಮಾ ಕಾಲದ ಮೂರುವರ್ಷ ಎಂಟು ತಿಂಗಳು ೧ ಪಕ್ಷ ಉಳಿದಾಗ ೧—೬೩

## [ಏ]

ಏಕತ್ವಭಾವನಾ—೭—೨

ಏಕತ್ವವಿತರ್ಕವೀಚಾರ (ಸವಿಯಕ್ಕೇಗತ್ತ-ವಿಚಾರ)—ಧ್ಯಾನ ವಿಶೇಷ ೧೩—೩೭, ೨೮

ಏಕಭುಕ್ತ—ಮುನಿಯ ಒಂದು ಮೂಲಗುಣ ೫—೩೫

ಏಕಾಂತ (ಏಯಂತ)—ಮಿಥ್ಯಾತ್ವದ ಭೇದ ೧೧—೪, ೧೫—೩

ಏಕೇಂದ್ರಿಯ ಜೀವ ೯—೯.

ಏವಂಭೂತ (ಏವಂಭೂಯ)—ನಯ ೧೫—೬

ಏಷಣಾ ಸಮಿತಿ (ಏಸಣಾ)—ಉದ್ಗಮಾದಿ ೪೬ ದೋಷ ರಹಿತ ೫—೧೩.

## [ಐ]

ಐರಾವತ (ಎರಾವದ)—ಜಂಬೂದ್ವೀಪದ ಏಳನೆಯ ಕ್ಷೇತ್ರ ೧—೩೧

ಐಶಾನ (ಈಸಾಣ)—ಎರಡನೆಯ ಸ್ವರ್ಗ ೧—೩೦, ೩೧

## [ಔ]

ಔದಾರಿಕ (ಉರಾಲ)—ಪರಸ್ತ್ರಿಯರ ಒಂದು ಬೇದ ೩-೧೬
(ಓರಾಲಿಯ)—ಕಾಯಯೋಗದ ಬೇದ ೧೭—೩೦

ಔದ್ದೇಶಿಕ (ಉದ್ದೇಸಿಯ)—ಮುನಿಯು ತ್ಯಜಿಸುವ ಅನ್ನ ೪—೨

## [ಕ]

ಕಂದ—ಸಚಿತ್ತ, ಮುನಿಯು ತ್ಯಜಿಸಬೇಕಾದುದು ೪—೭

ಕಂದರ್ಪ (ಕಂದಪ್ಪ)—ಅನರ್ಥದಂಡ ವ್ರತದ ಅತಿಚಾರ ೩—೨೯.

ಕನ್ಯಾ (ಕನ್ನಾ)—ಸತ್ಯಾಣುವ್ರತದ ಅತಿಚಾರ ೨—೧೧

ಕರ್ಕಶ (ಕಕ್ಕಸ)—ಭಾಷೆಯ ಒಂದು ಬೇದ ೫—೧೭

ಕರ್ತಾ (ಕತ್ತಾ)—೯—೩

ಕರ್ಮ (ಕಮ್ಮ)—೭—೨೪, ಎಂಟು ಬೇದ ೧೦—೧, ನೋಕರ್ಮ ದ್ರವ್ಯನಿಕ್ಷೇಪ ಭೇದ ೧೬—೭

ಕರ್ಮಾಸ್ರವ (ಕಮ್ಮಾಸವ)—೯—೩೯

ಕರ್ಮೋಪಾಧಿನಿರಪೇಕ್ಷನಯ (ಕಮ್ಮೋವಾಹಿಣಿರವೇಕ್ಖೋ)—ಶುದ್ಧ ದ್ರವ್ಯಾರ್ಥಿಕ ನಯದ ಬೇದ ೧೪—೧೨

ಕರ್ಮೋಪಾಧಿಸಾಪೇಕ್ಷನಯ (ಕಮ್ಮಾಣೋವಾಹಿಸಾವೇಕ್ಖೋ)—ಅಶುದ್ಧ ದ್ರವ್ಯಾರ್ಥಿಕ ನಯದ ಭೇದ ೧೫—೧೫

ಕಲ್ಕಿ (ಕಕ್ಕೀ) ಇಂದ್ರಸುತ, ನಾಮ ಚತುರ್ಮುಖ, ಆಯು ೭೦ ವರ್ಷ, ರಾಜ್ಯಕಾಲ ೪, ವರ್ಷ ೧—೭೫ ಜನಪದ

ಕ್ಷೇಮಂಧರ—ನಾಲ್ಕನೆಯ ಕುಲಂಕರ ಮತ್ತು ಮನು ಪು ೭ ಟಿಪ್ಪಣಿ.

[ಗ]

ಗತಿ (ಗದಿ)—ಧರ್ಮದ್ರವ್ಯದಿಂದ ಜನಿಸಿದ್ದು
ಗತಿಮಾರ್ಗಣಾ (ಗಈ)—ಮೊದಲನೆಯ ಮಾರ್ಗಣಾ ೧–೪ ೧೨–೩
ಗಂಗಾ—ನದಿ ೧–೩೪.
ಗಂಧ—ಮುನಿಗಳು ತ್ಯಜಿಸಬೇಕಾದುದು ೪–೨ —ಎರಡು ವಿಧ ೯–೭, ಘ್ರಾಣೇಂದ್ರಿಯದ ವಿಷಯ ೧೨–೫
ಗಂಧರ್ವ (ಗಂಧವ್ವಯ)—ರಾಜ್ಯಕಾಲ ೧೦೦ ವರ್ಷ ೧–೭೩
ಗರ್ಹಾ (ಗರಹಾ) ಸಮ್ಯಕ್ತ್ವದ ನಾಲ್ಕನೆಯ ಗುಣ ೩–೬
ಗಾತ್ರಾಭ್ಯಂಗ ವಿಭೂಷಣ (ಗಾಯಾಭಂಗವಿಭೂಸಣ)—ಮುನಿಗಳಿಗೆ ವರ್ಜ್ಯ ೪–೯
ಗಾತ್ರೋದ್ವರ್ತನ (ಗಾಯುಸ್ಸುವ್ವಟ್ಟಣ)—ಮುನಿಗೆ ತ್ಯಾಜ್ಯ ೪–೫
ಗುತ್ತ (ಗುತ್ತ)—ರಾಜ್ಯಕಾಲ ೨೩೧ ವರ್ಷ ೧–೭೪
ಗುಣವ್ರತ (ಗುಣವ್ವಯ) ಮೂರು ವಿಧದ ೨–೩. ಎರಡನೆಯ ಪ್ರತಿಮೆಯ ಅಂಗ ೩–೧೧
ಗುಣಸ್ಥಾನ (ಗುಣಸಣ್ಣಾ)—೧೧–೧
ಗುಪ್ತನರೇಶ (ಗುತ್ತ)—ವಂಶದ ರಾಜ್ಯಕಾಲ ೨೫೫ ವರ್ಷ ೧–೭೦
ಗುಪ್ತಿ (ಗುತ್ತೀ)—೭–೩೦.
ಗುಪ್ತಿ (ಗುತ್ತೀ)—ಭಾವಸಂವರದ ಭೇದ ೯–೨೮
ಗೃಹಸ್ಥವೈಯ್ಯಾವೃತ್ಯ (ಗಿಹಿ–ವೇಯಾವಡಿಯ)—ಮುನಿಗಾಗಿ ತ್ಯಾಜ್ಯ ೪–೬
ಗೃಹಾಂತರ ನಿಷದ್ಯಾ (ಗಿಹಂತರ ನಿಸೆಜ್ಜಾ)—ಮುನಿಗೆ ತ್ಯಾಜ್ಯ ೪–೫.
ಗೃಹಾರಂಭ (ಗಿಹಾರಂಭ)—ಗೃಹಸ್ಥನ ಕಾರ್ಯ ೩–೨
ಗೃಹೀಮಾತ್ರ (ಗಿಹಿಮತ್ತ) ಮುನಿಗಳು ಸಾಂನಿಧ್ಯದಲ್ಲಿ ಇರಕೂಡದ ೮–೩
ಗೋತ್ರಕರ್ಮ (ಗೋಯ)—೧೦–೧೪
ಗೋ (ಗೋ)—ಸತ್ಯಾಣುವ್ರತದ ಅತಿಚಾರ ೨–೧೧
ಗೌಣಮುಖ್ಯ ಭಾವ (ಗಉಣ ಮುಖ್ಯ–)—೧೪–೧೪
ಗೌತಮ (ಗೋದಮ)—೨೪ನೆಯ ತೀರ್ಥಂಕರ ಮಹಾವೀರರ ಮುಖ್ಯ ಗಣಧರ, ವೀರ ನಿರ್ವಾಣ ದಿನದಲ್ಲಿ ಕೇವಲ ಜ್ಞಾನ ಪ್ರಾಪ್ತವಾಯಿತು, ೧–೬೫.
ಗ್ರಹ (ಗಹ)—ಜ್ಯೋತಿಷೀ ದೇವ ೧–೧೪
ಗ್ರಂಥ ಪರಿಮಾಣ (ಗಂಧ)—ವ್ರತ ಪ್ರತಿಮೆಯ ಅಂಗ ೩–೧೨
ಗ್ರಂಥಿಸತ್ತ್ವ (ಗಂಠಿಯ ಸತ್ತ)—ಅಭವ್ಯಜೀವ ೩–೧೨
ಗ್ರೈವೇಯಕ (ಗೇವಜ್ಜ)—ಸ್ವರ್ಗದ ಮೇಲಿನ ದೇವ ೧–೨೩

[ಘ]

ಘರ್ಮಾ (ಘಮ್ಮಾ)—ಮೊದಲನೆಯ ಪೃಥ್ವಿಯ ಗೋತ್ರ ನಾಮ ೧–೯
ಘ್ರಾಣನಿರೋಧ (ಘಾಣ–)—೫–೧೯.

[ಚ]

ಚಕ್ರವರ್ತಿ (ಚಕ್ಕಹರ)—೧–೫೧.
ಚಕ್ಷು-ಆವರಣ—ದರ್ಶನಾವರಣ ಕರ್ಮದ ಬೇದ ೧೦–೬
ಚಕ್ಷುದರ್ಶನ (ಚಕ್ಖುದಂಸಣ)—೯–೪, ೧೨–೩೮
ಚಕ್ಷುನಿರೋಧ (ಚಕ್ಖು)—೫–೧೭
ಚಕ್ಷುಷ್ಮಾನ—೮ನೆಯ ಕುಲಂಕರ ಮತ್ತು ಮನು ಪು ೭ ಟಿಪ್ಪಣಿ
ಚತುರಿಂದ್ರಿಯಜೀವ—೯–೯
ಚತುರ್ಮುಖ (ಚಉಮುಹ)—ರಾಜ್ಯಕಾಲ ೪೨ ವರ್ಷ ೧–೭೦ —ಕಲ್ಕೀ ಇಂದ್ರನ ಮಗ, ಆಯು ೭೦ ವರ್ಷ ೧–೭೫
ಚನ್ದ್ರ (ಚಂದಾ)—ಜ್ಯೋತಿಷೀ ದೇವ ೧–೧೪
ಚನ್ದ್ರಪ್ರಭ (ಚಂದಪ್ಪಹ)—೮ನೆಯ ತೀರ್ಥಂಕರ ೧–೪೭
ಚನ್ದ್ರಾಭ—೧೧ನೆಯ ಕುಲಂಕರ ಇಲ್ಲವೆ ಮನು ಪು ೭ ಟಿಪ್ಪಣಿ
ಚರ್ಯಾಪರೀಷಹ—೮–೧೮, ೧೯
ಚಾರಿತ್ರ (ಚಾರಿತ್ತ)—ಭಾವಸಂವರದ ಭೇದ—೯–೨೮.
ಚಾರಿತ್ರ ಮೋಹನೀಯ—ಎರಡು ಪ್ರಕಾರದ, ಕಷಾಯ ಮತ್ತು ನೋಕಷಾಯ ೧೦–೧೦.
ಚಿಕಿತ್ಸಾ (ತಿಗಿಚ್ಛ)—ಮುನಿಗಾಗಿ ವರ್ಜ್ಯ ೪–೪
ಚಿತ್ರಾ (ಚಿತ್ತಾ)—ನಕ್ಷತ್ರ ೧–೧೭
ಚೇತನಾ (ಚೇದಣಾ)—ಜೀವಲಕ್ಷಣ ೯–೩
ಚೈತ್ಯಗೃಹ (ಚೇಇಯಗಿಹ)—ಸಾಮಾಯಿಕದ ಯೋಗ್ಯ ಸ್ಥಳ ೩–೨೦
ಚೌರ್ಯ (ಚೋರ)—೬ನೆಯ ವ್ಯಸನ ೩–೧೦
ಚ್ಯಾವಿತ (ಚಾವಿದ)—ಜ್ಞಾಯಕ ಶರೀರ ನೋ ಆಗಮ ದ್ರವ್ಯ ನಿಕ್ಷೇಪ-ಭೇದ ೧೬–೭.
ಚ್ಯುತ (ಚುದ)—ಜ್ಞಾಯಕ ಶರೀರ ನೋ ಆಗಮ ದ್ರವ ನಿಕ್ಷೇಪ–ಭೇದ ೧೫–೭

[ಛ]

ಛತ್ರಧಾರಣ—(ಛತ್ತ)—ಮುನಿಗಾಗಿ ತ್ಯಾಜ್ಯ ೪–೪.
ಛವಿವಿಚ್ಛೇದ—ಅಂಗಛೇದನ, ಅಹಿಂಸಾಣುವ್ರತದ ಅತಿಚಾರ ೨–೯
ಛಾಯಾ—ಪುದ್‌ಗಲ ಪರ್ಯಾಯ ೯–೧೧

[ಜ]

ಜಗಶ್ರೇಣಿ (ಜಗಸೇಢಿ)—ಏಳು ರಜ್ಜುವಿನ ಪ್ರಮಾಣ ೧–೨.
ಜಘನ್ಯ ಕರ್ಮಸ್ಥಿತಿ (ಜಹಣ್ಣಯಾ)—೧೦–೧೯
ಜನಪದ (ಜಣಪದ)—ದೇಶ ೧–೩೦
—ಸತ್ಯ ಭೇದ ೧೨–೧೫
ಜಮ್ಬೂದ್ವೀಪ (—ದೀಅ) ೧–೨೯, ೩೦.
ಜಮ್ಬೂಸ್ವಾಮಿನ್ (ಜಂಬೂ ಸಾಮಿ)—ಸುಧರ್ಮಸ್ವಾಮಿಯ ನಿರ್ವಾಣ ದಿನದಲ್ಲಿ ಕೇವಲತ್ವ ಪ್ರಾಪ್ತಿ, ಅಂತಿಮ್ಮ ಕೇವಲಿ ೧–೬೬

ದೇವಾಯು (ದೇವಾಉಯು)—ಆಯುಕರ್ಮದ ಬೇದ ೧೦–೧೨
ದೇಶವಿರತ (ದೇಸವಿರದ)—೫ನೆಯ ಗುಣಸ್ಥಾನ ೩–೨, ೧೧–೧೪.
ದೇಶವ್ರತ (ದೇಸವ್ವಯು)—ಎರಡನೆಯ ಗುಣವ್ರತ, ವ್ರತ ಪ್ರತಿಮಾದ ಅಂಗ ೩–೧೪, ೭–೨೯
ದೇಶಸಂಯಮ (ದೇಸಜಮ)—ಆಂಶಿಕ ಸಂಯಮ ೧೧–೯
ದೇಶಾವಕಾಶಿಕ (ದೇಸಾವಗಾಸಿಯು)—ಎರಡನೆಯ ಶಿಕ್ಷಾವ್ರತ ೨–೩೩
ದೇಹಪ್ರಲೋಕನ (ದೇಹಪಲೋಯಣ)—ಮುನಿಗೆ ತ್ಯಾಜ್ಯ ೪–೩
ದೇಹಸತ್ಕಾರ-ಪ್ರೋಷಧ (ಸರೀರ–ಸಕ್ಕಾರ–ಪೋಸಹ)—ಪ್ರೋಷಧೋಪವಾಸದ ಭೇದ ೨–೩೪
ದ್ಯೂತ (ಜೂಯು)—ಮೊದಲ ವ್ಯಸನ ೩–೧೦
ದ್ರವ್ಯ (ದವ್ವ)—೭–೩೯, ೧೬–೧೦
ದ್ರವ್ಯನಿಕ್ಷೇಪ (ದವ್ವ)—ನಿಕ್ಷೇಪಭೇದ ೧೬–೩
ದ್ರವ್ಯಬಂಧ—ಆತ್ಮನೊಡನೆ ಕರ್ಮಪ್ರದೇಶದ ಬಂಧ ೯–೨೫
ದ್ರವ್ಯಮೋಕ್ಷ (ದವ್ವವಿಮೊಕ್ಖ)—ಆತ್ಮನಿಂದ ಕರ್ಮಪ್ರದೇಶವು ಬೇರೆಯಾಗುವಿಕೆ ೯–೩೦.
ದ್ರವ್ಯಸಂವರ (ದವ್ವ)—ಕರ್ಮಪ್ರದೇಶದ ನಿರೋಧ ೯–೨೭
ದ್ರವ್ಯಾರ್ಥಿಕ ನಯ (ದವ್ವತ್ಥ—)—ಹತ್ತು ಬೇದಗಳು ೧೫–೫, ೭.
ದ್ರವ್ಯಾಸ್ರವ (ದವ್ವಾಸವ)—ಕರ್ಮಪ್ರದೇಶವು ಆತ್ಮನಲ್ಲಿ ಸೇರುವಿಕೆ ೯–೨೪
ದ್ರವ್ಯೇಂದ್ರಿಯ (ದವ್ವಿಂದಿಯ)—ಇಂದ್ರಿಯಗಳ ಅಂಗರೂಪ ರಚನೆ ೧೨–೪
ದ್ವಿಪದ (ದುಪಾಯ)—ಅಪರಿಗ್ರಹಾಣುವ್ರತದ ಅತಿಚಾರ ೨–೨೦
ದ್ವಿಪ್ರಷ್ಠ (ದುವಿಟ್ಠ)—ಎರಡನೆಯ ನಾರಾಯಣ ೧–೫೩
ದ್ವೀಂದ್ರಿಯ—ಜೀವ—೯–೯

## [ಧ]

ಧನ—ಅಪರಿಗ್ರಹಾಣುವ್ರತದ ಅತಿಚಾರ ೨–೨೦
ಧನಿಷ್ಠಾ (ಧನಿಟ್ಠಾ)—ನಕ್ಷತ್ರ ೧–೧೮.
ಧರ್ಮ (ಧಮ್ಮ)—ದ್ರವ್ಯ ವಿಶೇಷ ೧–೪; ೯–೧೦, ೧೭. —೧೫ನೆಯ ತೀರ್ಥಂಕರ ೧–೪೮.—ಸರ್ವಜ್ಞೋಪದಿಷ್ಟ ೭–೪೫.—ಮಂಗಲಾ—೩, ೪, ೫ —ಭಾವಸಂವರದ ಭೇದ ೯–೨೮ —ದ್ರವ್ಯದ ಗುಣ ೧೪–೧೪.
ಧರ್ಮಧ್ಯಾನ (ಧಮ್ಮ–ಝಾಣ)—ನಾಲ್ಕು ವಿಧ ೧೩–೧೩
ಧರ್ಮಿನ್ (ಧಮ್ಮಿ)—ದ್ರವ್ಯ ೧೪–೧೪.
ಧಾರಣಾ—ಮತಿಜ್ಞಾನದ ಭೇದ ೧೨–೩೧
ಧೂಪನ (ಧೂವಣ)—ಮುನಿಗಾಗಿ ತ್ಯಾಜ್ಯ ೪–೯
ಧೂಮಪ್ರಭಾ (ಧೂಮಪಹಾ)—೫ನೆಯ ನರಕ ೧–೮
ಧ್ಯಾನ (ಝಾಣ)—೧೩–೨.

## [ನ]

ನಕ್ಷತ್ರ (ಣಕ್ಖತ್ತ)—ಜ್ಯೋತಿಷೀ ದೇವ ೧–೧೪
ನನ್ದಿಮಿತ್ರ (ಣಂದಿಮಿತ್ತ)—೭ನೆಯ ಬಲದೇವ ೧–೫೨.
ನನ್ದೀ (ಣಂದೀ)—೬ನೆಯ ಬಲದೇವ ೧–೫೨.
ನಪುಂಸಕ ವೇದ (ಷಂಢ)—೧೨–೨೧
ನಮಿ (ಣಮಿ)—೨೧ನೆಯ ತೀರ್ಥಂಕರ ೧–೪೮
ನಮೋಕಾರ ಪಂಚ (ಣವಕಾರ ಪಂಚ)—ಸಾಮಾಯಿಕೋಚಿತ ಬಾವ ೩–೨೧
ನಯ (ಣಯ)—೧೪–೧, ೧೫–೨
ನಯ-ವಿಷಯ (ಣಯ–ವಿಸಯ)—೧೪–೩
ನರಕ-ಬಿಲ (ಣಿರಯ)—ನಾರಕೀ ಜೀವಗಳ ಸ್ಥಾನ ೧–೧೦
ನರಕಾಯು (ನೆರಇಯ)—ಆಯುಕರ್ಮದ ಭೇದ ೧೦–೧೨
ನರವಾಹನ (ಣರವಾಹನ)—ರಾಜ್ಯ ಕಾಲ ೪೦ ವರ್ಷ ೧–೭೩
ನಾಭಿರಾಯ—ಹದಿನಾಲ್ಕನೆಯ ಕುಲಂಕರ ಮತ್ತು ಮನು ೧–೪೩, ಪುಟ ೭ ಟಿ
ನಾಮಕರ್ಮ (ಕಮ್ಮ)—ಎರಡು ವಿದ ೧೦–೧೩
ನಾಮ ನಿಕ್ಷೇಪ—ನಿಕ್ಷೇಪ ಭೇದ ೧೬–೩
ನಾಮ ಸತ್ಯ—೧೨–೧೫
ನಾರಕ (ಣಾರಯ)—ಗತಿಭೇದ ೧೨–೩
ನಾರಾಯಣ—೭ನೆಯ ನಾರಾಯಣ ೧–೫೩, ಹರಿ ೭–೯
ನಾಲಿಕಾ (ನಾಲೀ)—ಮುನಿಗಾಗಿ ವರ್ಜ್ಯ ೪–೪
ನಿಕ್ಷೇಪ (ಣಿಕ್ಖೇವ)—ನಾಲ್ಕು ಪ್ರಕಾರ ೧೬–೧.
ನಿಗೋದ (ಣಿಗೋಅ)—ಜೀವ ಭೇದ, ಸಾಧಾರಣ ಜೀವ ೭–೪೧.
ನಿತ್ಯಕ (ನಿಯಾಗ)—ಮುನಿಗಾಗಿ ತ್ಯಾಜ್ಯ ಬೋಜನ ೪–೨
ನಿದಾನ (ಣಿಯಾಣ)—ತಪದ ಪಲೇಚ್ಛೆ ೭–೩೩ —ಆರ್ತಧ್ಯಾನದ ಭೇದ ೧೩–೭
ನಿದ್ರಾ (ನಿದ್ದಾ)—ದರ್ಶನಾವರಣ ಕರ್ಮದ ಬೇದ ೧೦–೫. —ಪ್ರಮಾದ ಭೇದ ೧೧–೧೬
ನಿದ್ರಾನಿದ್ರಾ (ನಿದ್ದಾನಿದ್ದಾ)—ದರ್ಶನಾವರಣ ಕರ್ಮದ ಭೇದ ೧೦–೫
ನಿನ್ದಾ (ಣಿಂದಾ)—ಸಮ್ಯಕ್ತ್ವದ ಮೂರನೆಯ ಗುಣ ೩–೬.
ನಿರಾಕಾರ ಸ್ಥಾಪನಾ (ರವಣಾ)—೧೬–೫
ನಿರ್ಗ್ರಂಥ (ನಿಗ್ಗಂದ)—೪–೧
ನಿರ್ಜರಾ (ಣಿಜ್ಜರ)—ಭಾವನಾ ೭–೨ —ಎರಡು ಪ್ರಕಾರದ ಕರ್ಮಕ್ಷಯ, ಭಾವ ಮತ್ತು ದ್ರವ್ಯ ೯–೨೯.
ನಿರ್ವಿಚಿಕಿತ್ಸಾ (ಣಿವ್ವಿದಿಗಿಛಾ)—ಸಮ್ಯಕ್ತ್ವದ ಮೂರನೆಯ ಅಂಗ ೩–೫
ನಿರ್ವೇದ (ಣಿವ್ವೇಅ)—ಸಮ್ಯಕ್ತ್ವದ ೨ನೆಯ ಗುಣ ೩–೬.
ನಿಃಶಂಕಾ (ಣಿಸ್ಸಂಕಾ)—ಸಮ್ಯಕ್ತ್ವದ ಪ್ರಥಮ ಅಂಗ ೩–೫
ನಿಶಿ ಭೋಜನ ತ್ಯಾಗ (ಣಿಸಿ ಭೋಯಣ)—೬ನೆಯ ಪ್ರತಿಮಾ ೩–೨೮
ನಿಶುಂಭ (ಣಿಸುಂಬ)—೫ನೆಯ ಪ್ರತಿ ನಾರಾಯಣ ೧–೫೪
ನಿಶ್ಚಯ ಜೀವ (ಣಿಚ್ಛಯ ಜೀವ)—ಚೇತನಾಯುಕ್ತ ದ್ರವ್ಯ ೯–೩ (ಣಿಚ್ಛಯ ನಯ)—೯–೩, ೧೪–೧೮

[ಪ]



[ಫ]



[ಬ]

## [ವ]



## [ಶ]

## [ಸ]

ಸಮ್ಯಕ್ತ್ವ (ಸಮ್ಮತ್ತ)—ಹನ್ನೆರಡು ಪ್ರತಿಮೆಗಳಿಗೆ ಮೂಲ ೩–೩, ೪, ೭–೨೯ —ದರ್ಶನ ಮೋಹನೀಯದ ಭೇದ ೧೦–೯.—ಹನ್ನೆರಡನೆಯ ಮಾರ್ಗಣಾ ೧೨–೫೪

ಸಮ್ಯಗ್‌ಜ್ಞಾನ (ಣಾಣ)—ಮೋಕ್ಷಕ್ಕೆ ಕಾರಣ ೯–೩೨

ಸಮ್ಯಗ್‌ದರ್ಶನ—ಮೋಕ್ಷಕ್ಕೆ ಕಾರಣ ೯–೩೨.

ಸಮ್ಯಗ್ ದೃಷ್ಟಿ (ಸಮ್ಮಾದಿಟ್ಠಿ)—೩–೭, ೧೨–೧೨, ೧೩.

ಸಮ್ಯಗ್ ಮಿಥ್ಯಾತ್ವ (ಸಮ್ಮಾಮಿಚ್ಛತ್ತ)–ದರ್ಶನ ಮೋಹನೀಯದ ಭೇದ ೧೦–೯.—ಸಮ್ಯಕ್ತ್ವದ ಭೇದ ೧೨–೫೯

ಸಂಯಮ (ಸಂಜಮ)—೪–೧, ೬–೧, ೧೧–೯.–ಎಂಟನೆಯ ಮಾರ್ಗಣಾ ೧೨–೩೬.

ಸಂಯಮೋಪಧಿ (ಸಂಜಮುವಹಿ)–ಪಿಂಛಿ ಮೊದಲಾದವುಗಳು, ಮುನಿಗಳಿಂದ ಗ್ರಾಹ್ಯ ೫–೧೪.

ಸಂಯುಕ್ತಾಧಿಕರಣ (ಸಂಜುಯಾಹಿಗರಣ)–ಅನರ್ಥದಂಡ ವ್ರತದ ಅತಿಚಾರ ೨–೨೯

ಸಂಯೋಗ ಕೇವಲೀ (ಸಜೋಗ ಕೇವಲಿ)—ಹದಿಮೂರನೆಯ ಗುಣಸ್ಥಾನ ೧೧–೧೬ ೨೭.

ಸರ್ಪವಿಷ ನ್ಯಾಯ (ಸಪ್ಪವಿಸಣಾಯ)—೨–೨೩

ಸರ್ವಘಾತಿ (ಸವ್ವಘಾದಿ)—ಫಲದ ಅಪೇಕ್ಷೆಯಿಂದ ಕರ್ಮ ಭೇದ ೧೧–೭.

ಸರ್ವಜ್ಞ (ಸವ್ವಣ್ಹು)—೧–೩, ೭–೪೪

ಸಲ್ಲೇಖನಾ (ಸಲ್ಲೇಖಣ)—ನಾಲ್ಕನೆಯ ಶಿಕ್ಷಾವ್ರತ, ವ್ರತ ಪ್ರತಿಮೆಯ ಅಂಗ ೩–೧೯.

ಸಂವರ (ಸಂವರ)—ಭಾವನಾ ೭–೨, ೨೯

ಸಂವಾಹನ (ಸಂವಾಹಣ)—ಮುನಿಗಳಿಗೆ ತ್ಯಾಜ್ಯ ೪–೩

ಸಂವೇಗ (ಸಂವೇಅ)—ಸಮ್ಯಕ್ತ್ವದ ಮೊದಲ ಗುಣ ೩–೬

ಸಂಶಯ (ಸಂಸಯ)—ಜ್ಞಾನ–ದೋಷ ೯–೩೫.

ಸಂಶಯ ವಚನೀ (ಸಂಸಯ ವಯಣೀ)—ಅಸತ್ಯ ಮೃಷಾ ಭಾಷೆಯ ಭೇದ ೧೨–೧೮.

ಸಂಸಾರ (ಸಂಸಾರ)—ಭಾವನಾ ೭–೨, ೧೨

ಸಂಸ್ಥಾನ (ಸಂಠಾನ)—ಪುದ್ಗಲ ಪರ್ಯಾಯ ೯–೧೧

ಸಂಸ್ಥಾನ ವಿಚಯ (ಸಂಠಾಣವಿಚಯ)—ಧರ್ಮಧ್ಯಾನದ ಭೇದ ೧೩–೧೯

ಸಹಸಾಭ್ಯಾಖ್ಯಾನ (ಅಬ್ಭಕ್ಖಾಣ)—ಸತ್ಯಾಣುವ್ರತದ ಅತಿಚಾರ ೨–೧೩

ಸಹಸ್ರಾರ (ಸಹಸ್ಸಾರ)—ಎಂಟನೆಯ ಸ್ವರ್ಗ ೧–೨೦ — ಹನ್ನೆರಡನೆಯ ಸ್ವರ್ಗ ೧–೨೨

ಸಾಕಾರ ಸ್ಥಾಪನಾ (ಸಾಯಾರ ಠವಣಾ)—೧೬–೫

ಸಾಗರೋಪಮ (ಸಾಗರೋವಮ) — ಉಪಮಾಮಾನ ೧೦–೨೨

ಸಾಗಾರ (ಸಾಯಾರ)—ಗೃಹಸ್ಥ ಧರ್ಮ ೩–೧.

ಸಾತಾ (ಸಾಯ)—ವೇದನೀಯ ಕರ್ಮದ ಭೇದ ೧೦೭.

ಸಾತ್ಯಕಿಸುತ (ಸಚ್ಚಇಸುದೊ)—೧೧ನೆಯ ರುದ್ರ ೮–೫೬.

ಸಾದಿನಿತ್ಯ (ಸಾಈಣಿಚ್ಚ)–ಪರ್ಯಾಯಾರ್ಥಿಕ ನಯದ ಬೇದ ೧೫–೨೨

ಸಾಧು (ಸಾಹು)—ಮಂ. ೧–೩–೪–೫

ಸಾನತ್ಕುಮಾರ (ಸಣಕ್ಕುಮಾರ)—೩ನೆಯ ಸ್ವರ್ಗ— ೧–೨೦, ೨೧

ಸಾಮಾಚಾರಿ (ಸಾಮಾಯಾರಿ)—ಶ್ರಾವಕನಿಗೆ ಯೋಗ್ಯ ೨–೩.

ಸಾಮಾಯಿಕ (ಸಾಮಾಇಯ)—ಪ್ರಥಮ ಶಿಕ್ಷಾವ್ರತ ೨-೩೦. — ಮೂರನೆಯ ಪ್ರತಿಮಾ ೩–೨.

ಸಾಸಾದನ (ಸಾಸಣ)—ಎರಡನೆಯ ಗುಣಸ್ಥಾನ ೧೧–೬.

ಸಾಸಾದನ ಸಮ್ಯಕ್ತ್ವ (ಸಾಸಣ)—೧೨–೫೮.

ಸಾಮುದ್ರ ನಮಕ (ಸಾಮುದ್ದ)—ಮುನಿಗಾಗಿ ತ್ಯಾಜ್ಯ ೪–೮

ಸಾವದ್ಯ (ಸಾವಜ್ಜ)—ಸದೋಷ ಆಚರಣ ೩–೨೫

ಸಾಂಶಯಿಕ (ಸಂಸಯಿದ)—ಮಿಥ್ಯಾತ್ವದ ಭೇದ ೧೧–೪.

ಸ್ಕಂಧ (ಖಂಧ)—೯–೨೦

ಸ್ತ್ರೀ (ಇತ್ಥಿ)—ಪರೀಷಹ ೮–೧೬, ೧೭ — ವೇದ ೧೨–೨೧

ಸ್ತವ (ಥಓ)—ದ್ವಿತೀಯ ಆವಶ್ಯಕ ೫–೨೪

ಸ್ತೇನಾಹೃತ (ತೇಣಾಹಡ)—ಅಚೌರ್ಯಾಣು ವ್ರತದ ಅತೀಚಾರ ೨–೧೫.

ಸ್ತ್ಯಾನಗೃದ್ಧೀ (ಥೀಣಗಿದ್ಧೀ)—ದರ್ಶನಾವರಣ ಕರ್ಮದ ಭೇದ ೧೦–೫

ಸ್ಥಾಪನಾ (ದ್ವವಣ)—ನಿಕ್ಷೇಪ ಭೇದ ೧೬–೩, ಸತ್ಯಭೇದ ೧೨–೧೫

ಸ್ಥಾವರ (ಥಾವರ)—ಜೀವಭೇದ ೯–೯, ಕಾಯಭೇದ ೧೨–೬.

ಸ್ಥಿತಿ (ಠಿಈ)—ಕರ್ಮದ ಉತ್ಕೃಷ್ಟ ಮತ್ತು ಜಘನ್ಯ ೧೦–೧೯

ಸ್ಥಿತಿಕರಣ (ಠಿದಿಯರಣ)—ಸಮ್ಯಕ್ತ್ವದ ಆರನೆಯ ಅಂಗ ೩–೫

ಸ್ಥಿತಿಬಂಧ (ಟ್ಠಿದಿ)—೯–೨೬

ಸ್ಥಿತಿ-ಭೋಜನ (ಠಿದಿಭೋಯಣ)—ಮುನಿಯ ಒಂದು ಮೂಲಗುಣ ೫–೩೪

ಸ್ಥೂಲ (ಥೂಲ)—ಪುದ್‌ಗಲ ಪರ್ಯಾಯ ೯–೧೧.

ಸ್ಥೂಲ ಋಜು ಸೂತ್ರ (ದೂಲ ರಿಉಸುತ್ತ)—ಋಜುಸೂತ್ರ ನಯದ ಭೇದ ೧೫–೩೩

ಸ್ಥೂಲ ಪ್ರಾಣಿವಧ ವಿರಮಣ (ಥೂಲಗ ಪಾಣಿವಹ ವಿರಮಣ)—ಅಹಿಂಸಾಣು ವ್ರತ ೨–೪.

ಸ್ನಾನ (ಸಹಾಣ)—ಮುನಿಗಳಿಗೆ ತ್ಯಾಜ್ಯ ೪–೨.

ಸ್ಪರ್ಶ (ಫಾಸ)—ಎಂಟು ವಿಧ ೯–೭ —ಸ್ಪರ್ಶೇಂದ್ರಿಯದ ವಿಷಯ ೧೨–೫

ಸ್ಪರ್ಶನಿರೋಧ—(ಫಾಸ)—೫–೨೧

ಸ್ಮೃತ್ಯರ್ಧಾನ (ಸಇಅಂತರದ್ಧ)— ದಿಗ್ವ್ರತದ ಅತೀಚಾರ ೨–೨೨ ಕ.

ಸ್ಯಾತ್‌ಅಸ್ತಿ (ಅತ್ಥಿ) ಸ್ಯಾದ್ವಾದದ ಮೊದಲ ಭಂಗ ೧೪–೯.

ಸ್ಯಾತ್ ಅಸ್ತಿ ನಾಸ್ತಿ (ಅತ್ಥಿ ಣತ್ಥಿ)—ಸ್ಯಾದ್ವಾದದ ಮೂರನೆಯ ಭಂಗ ೧೪–೯

ಸ್ಯಾತ್ ಅವಕ್ತವ್ಯ (ಅವ್ವತ್ತವ್ವ)—ಸ್ಯಾದ್ವಾದದ ನಾಲ್ಕನೆಯ ಭಂಗ ೧೪–೯

ಸ್ಯಾತ್ ಅಸ್ತಿ ಅವಕ್ತವ್ಯ—ಸ್ಯಾದ್ವಾದ ಆರನೆಯ ಭಂಗ ೧೪–೧೧,

## ಪರಿಶಿಷ್ಟ—ಳ

# ತತ್ತ್ವಸಮುಚ್ಚಯದ ಗ್ರಂಥ ಪರಿಚಯ

[ಈ 'ಶ್ರಾವಕಾಚಾರ'ಕ್ಕೆ ತಾತ್ತ್ವಿಕ ಹಿನ್ನೆಲೆ ಏನೆಂಬುದನ್ನು ಸೂಚಿಸಲಿಕ್ಕೆ ಇಲ್ಲಿ ವಿವಿಧ ಆಗಮಗಳಿಂದ ಆಯ್ದ 'ತತ್ತ್ವಸಮುಚ್ಚಯ'ವನ್ನು ಪರಿಶಿಷ್ಟ ಎರಡರಲ್ಲಿ ಕೊಡಲಾಗಿದೆ ಅಲ್ಲಿ ಆಯ್ಕೆಗೆ ಉಪಯೋಗಿಸಿಕೊಂಡ ಗ್ರಂಥಗಳ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ ]

**ತಿಲೋಯ ಪಣ್ಣತ್ತಿ.** ಇದು ಯತಿವೃಷಭಾಚಾರ್ಯರ ಗ್ರಂಥ ಇದರಿಂದ ಲೋಕ ಸ್ವರೂಪಕ್ಕೆ ಸಂಬಂಧಿಸಿದ ವಿಷಯಗಳನ್ನು ಸಂಗ್ರಹಿಸಿ ಕೊಡಲಾಗಿದೆ ದಿಗಂಬರ ಜೈನ ಪರಂಪರೆಗೆ ಅನುಸರಿಸಿ ಭ ಮಹಾವೀರ ತೀರ್ಥಂಕರ ಗಣಧರರಾದ ಗೌತಮ ಸ್ವಾಮಿಯು ದ್ವಾದಶಾಂಗ ಆಗಮ ಗ್ರಂಥಗಳನ್ನು ರಚಿಸಿದನು ಅವುಗಳಲ್ಲಿ ಹನ್ನೆರಡನೆಯ ಅಂಗವು ದೃಷ್ಟಿವಾದ ಎಂದಿವೆ ಇದರಲ್ಲಿ ಐದು ವಿಭಾಗಗಳೆಂದು ತಿಳಿಯಲಾಗಿದೆ ಅವು ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕೆ ಎಂದು ಇವೆ ಇವುಗಳಲ್ಲಿಯ ಪರಿಕರ್ಮ ವಿಭಾಗದಲ್ಲಿ ಚಂದಪಣ್ಣತ್ತಿ, ಸೂರಪಣ್ಣತ್ತಿ, ಜಂಬೂದೀವಪಣ್ಣತ್ತಿ, ದೀವ-ಸಾಯರಪಣ್ಣತ್ತಿ ಮತ್ತು ವಿಹಾಯಪಣ್ಣತ್ತಿ ಎಂದು ಮತ್ತೆ ಐದು ಉಪಭೇದಗಳಿರುತ್ತವೆ ಈ ಪ್ರಕಾರ ದ್ವಾದಶಾಂಗ ಶಾಸ್ತ್ರಗಳಲ್ಲಿ ಹನ್ನೆರಡನೆಯ ಅಂಗವಾದ ದೃಷ್ಟಿವಾದದ ಪ್ರಥಮ ಭಾಗವೆನಿಸುವ ಪರಿಕರ್ಮದಲ್ಲಿ ಎಲ್ಲಕ್ಕೂ ಪ್ರಾಚೀನವಾದ ಜೈನ ಭೂಗೋಲ ಮತ್ತು ಜ್ಯೋತಿಷದ ಪ್ರತಿಪಾದನ ಮಾಡಲಾಗಿದೆ. ಆದರೆ ಈ ಎಲ್ಲ ಸಾಹಿತ್ಯವು ಈಗ ಉಪಲಬ್ಧವಿಲ್ಲ. ಶ್ವೇತಾಂಬರ ಪರಂಪರೆಗೆ ಅನುಸರಿಸಿ ಸೂರಪಣ್ಣತ್ತಿ, ಜಂಬೂದೀವಪಣ್ಣತ್ತಿ, ಚಂದಪಣ್ಣತ್ತಿಗಳು ಕ್ರಮವಾಗಿ ಐದನೆಯ, ಆರನೆಯ, ಏಳನೆಯ ಉಪಾಂಗ-ಗಳೆಂದು ಮನ್ನಿಸಲ್ಪಡುತ್ತವೆ ಅಲ್ಲದೆ ಈ ಗ್ರಂಥಗಳು ಉಪಲಬ್ಧವೂ ಇವೆ ದಿಗಂಬರ ಪರಂಪರೆಯ ಉಪಲಬ್ಧ ಸಾಹಿತ್ಯದಲ್ಲಿ ಲೋಕಸ್ವರೂಪದ ಪೂರ್ಣ ವರ್ಣನೆಯು ತಿಲೋಯಪಣ್ಣತ್ತಿಯಲ್ಲಿಯೇ ದೊರೆಯುತ್ತದೆ ಈ ಗ್ರಂಥದಲ್ಲಿ ದಿಟ್ಠಿವಾದ ಮತ್ತು ಪರಿಕರ್ಮಗಳನ್ನುಳಿದು ಮತ್ತೆ ಕೆಲವು ಲೋಕ ವರ್ಣನಪರ ಗ್ರಂಥಗಳ ಉಲ್ಲೇಖವೂ ಇದೆ. ಅಂಥವುಗಳಲ್ಲಿ 'ಲೋಯವಿಭಾಗ'ವೂ ಒಂದಾಗಿದೆ. ಆದರೆ ಪ್ರಾಚೀನವಾದ ಈ ಪ್ರಾಕೃತ 'ಲೋಯ-ವಿಭಾಗ'ವು ಈಗ ಉಪಲಬ್ಧವಿಲ್ಲ. ಸಿಂಹಸೂರಿಕೃತ ಅದರ ಸಂಸ್ಕೃತ ರೂಪಾಂತರವು ದೊರಕಿದೆ. ಅದರಲ್ಲಿ ಪ್ರಾಕೃತ 'ಲೋಯ ವಿಭಾಗ'ವನ್ನು ಶಕ ಸಂವತ್ ೩೮೦ರಲ್ಲಿ ಕಾಂಚಿಯ ದೊರೆಯಾದ ಸಿಂಹವರ್ಮನ ರಾಜ್ಯಕಾಲದ ೨೨ನೆಯ ವರ್ಷದಲ್ಲಿ ಸರ್ವನಂದಿಯು ರಚಿಸಿದ್ದನು, ಅದರ ರೂಪಾಂತರವನ್ನೇ ಸಿಂಹಸೂರಿಯು ಸಂಸ್ಕೃತದಲ್ಲಿ ಮಾಡಿದನೆಂದು ಹೇಳಿದೆ ಸ್ವತಃ 'ತಿಲೋಯ-ಪಣ್ಣತ್ತಿ'ಯಲ್ಲಿ ಭಗವಾನ್ ಮಹಾವೀರನ ನಿರ್ವಾಣದಿಂದ ಕಲ್ಕಿಯ ವರೆಗಿನ ಸಾವಿರ ವರ್ಷಗಳ ಅವಧಿಯ ರಾಜ ಪರಂಪರೆಯನ್ನು ವಿವರಿಸಲಾಗಿದೆ ಹೀಗಾಗಿ ಈ ಗ್ರಂಥದ ರಚನೆಯು ೧೦೦೦-೫೨೭=೪೭೩ ಇಸ್ವಿಯ ತರುವಾಯ ಆಯಿತು ಷಟ್‌ಖಂಡಾಗಮದ ಟೀಕಾಕಾರನಾದ ವೀರಸೇನಾಚಾರ್ಯನು ತನ್ನ 'ಧವಲಾ' ಟೀಕೆಯನ್ನು ಕ್ರಿ ಶ ೮೧೬ರಲ್ಲಿ ಪೂರ್ಣಗೊಳಿಸಿದನು ಈ ಟೀಕಾ ಗ್ರಂಥದಲ್ಲಿ ಯತಿವೃಷಭನಿಗೆ 'ಅಜ್ಜಮಂಖು' ಮತ್ತು 'ನಾಗಹತ್ಥಿ'ಯ ಶಿಷ್ಯ ಎಂದು ಹೇಳಲಾಗಿದೆ ಹಾಗೆಯೇ ತಿಲೋಯಪಣ್ಣತ್ತಿಯ ಉಲ್ಲೇಖವೂ ಹಲವು ಸಲ ಬಂದಿದೆ ಒಟ್ಟಿನಲ್ಲಿ ಈ ಗ್ರಂಥ ರಚನೆಯ ಕಾಲವು ೪೭೩ ಮತ್ತು ೮೧೬ ಇಸ್ವಿಯ ನಡುವಿನದೆಂದು ಸ್ವೀಕರಿಸಲಾಗಿದೆ ಇದಕ್ಕಿಂತಲೂ ಹೆಚ್ಚು ಸೂಕ್ಷ್ಮ ಕಾಲ ನಿರ್ಣಯವನ್ನು ಮಾಡಲಿಕ್ಕೆ ನಮ್ಮ ಹತ್ತರ ಯಾವ ಸಾಧನಗಳೂ ಇಲ್ಲ. ಯತಿವೃಷಭನ ಇನ್ನೊಂದು ಗ್ರಂಥವೂ ಇದೆ ಅದು ಗುಣಧರ ಆಚಾರ್ಯಕೃತ 'ಕಷಾಯ ಪ್ರಾಭೃತ' ಎಂಬ ಸಿದ್ಧಾಂತ ಗ್ರಂಥದ ಮೇಲಿನ 'ಚೂರ್ಣಿ' ಎಂಬ ಹೆಸರಿನ ಟೀಕಾ ಗ್ರಂಥವಾಗಿದೆ ಈ ಕೃತಿಯಿಂದಲೂ ಕರ್ತೃವಿನ ಕಾಲ ವಿಚಾರದ ಮೇಲೆ ಹೆಚ್ಚು ಪ್ರಕಾಶವು ಬೀಳುವದಿಲ್ಲ.

ತಿಲೋಯ ಪಣ್ಣತ್ತಿಯ ಪ್ರಮಾಣವು ೮೦೦೦ ಶ್ಲೋಕ ಪ್ರಮಾಣವೆಂದು ಹೇಳಲಾಗಿದೆ ಬಹುತರ ಇದರ ರಚನೆಯು ಗಾಥಾದಲ್ಲಿದೆ ಆದರೂ ಕೆಲವೆಡೆಯಲ್ಲಿ ಪ್ರಾಕೃತ ಗದ್ಯವೂ ಇಲ್ಲದಿಲ್ಲ ಕೆಲವೊಂದು ಪ್ರಕರಣಗಳು ಧವಲಾಕಾರನ ತರುವಾಯ ಸೇರಿಸಿದವೂ ಇವೆ ಗ್ರಂಥದಲ್ಲಿ ಒಂಭತ್ತು ಮಹಾಧಿಕಾರಗಳು ಇರುತ್ತವೆ. ಅವುಗಳಲ್ಲಿ ಕ್ರಮವಾಗಿ ಲೋಕ ಸಾಮಾನ್ಯ, ನರಕ, ಭವನವಾಸಿ ಲೋಕ, ಮನುಷ್ಯ ಲೋಕ, ತಿರ್ಯಗ್ ಲೋಕ, ವ್ಯಂತರ

ಲೋಕ, ಜ್ಯೋತಿರ್‌ಲೋಕ, ದೇವಲೋಕ, ಮತ್ತು ಸಿದ್ಧ ಲೋಕಗಳ ವರ್ಣನೆ ಇದೆ. ಇದರ ಸಂಪಾದನೆಯನ್ನು ಮೊದಲ ಸಲ ಡಾ ಹಿರಲಾಲ ಜೈನ ಹಾಗೂ ಡಾ. ಆದಿನಾಥ ನೇಮಿನಾಥ ಉಪಾಧ್ಯೆ ಇವರು ಮಾಡಿದ್ದಾರೆ ಅದು ಎರಡು ಭಾಗಗಳಲ್ಲಿ ಜೈನ ಸಂಸ್ಕೃತಿ ಸಂರಕ್ಷಕ ಸಂಘ, ಸೊಲಾಪುರ, ಇವರಿಂದ ಕ್ರಮವಾಗಿ ಕ್ರಿ. ಶ. ೧೯೪೩ ಮತ್ತು ೧೯೫೧ರಲ್ಲಿ ಪ್ರಕಟವಾಗಿದೆ.

ಸಾವಯಪಣ್ಣತ್ತಿ. (ಶ್ರಾವಕಪ್ರಜ್ಞಪ್ತಿ) ಗೃಹಸ್ಥ ಧರ್ಮ ಎಂಬ ವಿಷಯವನ್ನು ಈ ಗ್ರಂಥದಿಂದ ಸಂಗ್ರಹಿಸಿ ಕೊಡಲಾಗಿದೆ. ಶ್ರಾವಕ ಧರ್ಮದ ಎಲ್ಲಕ್ಕೂ ಪ್ರಾಚೀನ ವರ್ಣನೆಯು ಏಳನೆಯ ಶ್ರುತಾಂಗವಾದ 'ಉವಾಸಗ–ದಸಾಓ'ದಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ ಅದರ ತರುವಾಯ ಪ್ರಾಕೃತ ಸಾಹಿತ್ಯದಲ್ಲಿ ಸ್ವತಂತ್ರವಾಗಿ ಶ್ರಾವಕಾಚಾರವನ್ನು ವರ್ಣಿಸುವಂಥ ಗ್ರಂಥವು ಶ್ರಾವಕಪ್ರಜ್ಞಪ್ತಿಯೇ ಆಗಿದೆ. ಈ ಗ್ರಂಥವು ಪ್ರಾಕೃತ ಗಾಥೆ ಹಾಗೂ ಸಂಸ್ಕೃತ ಟೀಕೆಯಿಂದ ಕೂಡಿದುದಾಗಿದೆ. ಮೂಲ ಪ್ರಾಕೃತ ಗಾಥೆಗಳ ಕರ್ತೃತ್ವದ ವಿಷಯದಲ್ಲಿ ಕೆಲವು ಅನಿಶ್ಚಯ ಮತ್ತು ಮತಭೇದಗಳು ಇವೆ. ಒಂದು ಮತವು ಪ್ರಾಕೃತ ಗ್ರಂಥವು ಉಮಾಸ್ವಾಮಿ ಕೃತವೆಂದೂ ಅದರ ಸಂಸ್ಕೃತ ಟೀಕೆಯು ಹರಿಭದ್ರನದೆಂದೂ ಇದೆ ಆದರೆ ಅನೇಕ ಪ್ರಾಚೀನ ಗ್ರಂಥ, ಉಲ್ಲೇಖ, ಭಾಷೆ, ಶೈಲಿ ಮೊದಲಾದವುಗಳನ್ನು ನಿರೀಕ್ಷಿಸಿದಲ್ಲಿ ಬಹುತರ ಮೂಲ ಗ್ರಂಥ ಹಾಗೂ ಟೀಕೆಗಳೆರಡೂ ಹರಿಭದ್ರನವೆಂದು ಕಂಡುಬರುತ್ತದೆ [ಪ್ರಕಾಶಿತ ಜೈನ ಜ್ಞಾನ ಪ್ರಸಾರಕ ಮಂಡಲ, ಮುಂಬಯಿ ೧೯೦೫] ಹರಿಭದ್ರನ ಅನೇಕ ಸಂಸ್ಕೃತ ಮತ್ತು ಪ್ರಾಕೃತ ರಚನೆಗಳು ಜೈನ ಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿವೆ. ಇವನ ಪ್ರಾಕೃತ ಧರ್ಮಕಥಾ 'ಸಮರಾಇಚ್ಚಕಹಾ' ಪ್ರಾಕೃತ ಸಾಹಿತ್ಯದ ಒಂದು ವಿಶೇಷ ನಿಧಿಯಾಗಿದೆ. ಇವನು ಕುವಲಯಮಾಲಾ ಗ್ರಂಥದ ಕರ್ತೃವು ಉದ್ಯೋತನ ಸೂರಿಯ ಗುರುವಾಗಿದ್ದನು. ಉದ್ಯೋತನ ಸೂರಿಯು ತನ್ನ ಗ್ರಂಥವನ್ನು ಶಕ ಸಂವತ್ ೭೦೦ರಲ್ಲಿ ಬರೆದು ಮುಗಿಸಿದ್ದಾನೆ ಅದರಿಂದ ಹರಿಭದ್ರನ ಕಾಲವು ಇದಕ್ಕೂ ಪೂರ್ವದ್ದೆಂದು ಸುನಿಶ್ಚಿತವಾಗುತ್ತದೆ. ಹರಿಭದ್ರನು ತನ್ನ ಗ್ರಂಥದಲ್ಲಿ ಹರ್ಷ, ದಿಙ್‌ನಾಗ, ಧರ್ಮಕೀರ್ತಿ, ಭರ್ತೃಹರಿ, ಕುಮಾರಿಲ, ಜಿನದಾಸಗಣಿ ಮೊದಲಾದ ಸುವಿಖ್ಯಾತ ಗ್ರಂಥಕಾರರ ಇಲ್ಲವೆ ಅವರ ಗ್ರಂಥಗಳ ಉಲ್ಲೇಖಮಾಡಿದ್ದಾನೆ. ಇದರಿಂದ ತನ್ನ ಪರಿಚಯವನ್ನು ವ್ಯಕ್ತಗೊಳಿಸಿದಂತಾಗಿದೆ. ಈ ಎಲ್ಲ ಗ್ರಂಥಕಾರರು ಸನ್ ೭೦೦ರ ಪೂರ್ವದವರಾಗಿದ್ದಾರೆ ಒಟ್ಟಿನಲ್ಲಿ ಹರಿಭದ್ರನ ಕಾಲವು ಕ್ರಿ. ಶ. ೭೦೦ ಮತ್ತು ೭೭೫ರ ನಡುವಿನದೆಂದು ಸಿದ್ಧವಾಗುತ್ತದೆ.

ಶ್ರಾವಕಪ್ರಜ್ಞಪ್ತಿಯಲ್ಲಿ ೪೦೧ ಪ್ರಾಕೃತ ಗಾಥೆಗಳು ಇವೆ ಅವುಗಳಲ್ಲಿ ಕ್ರಮವಾಗಿ ಶ್ರಾವಕರ ಅಹಿಂಸೆಯೇ ಮೊದಲಾದ ಹನ್ನೆರಡು ವ್ರತಗಳ ವರ್ಣನೆಯನ್ನು ವಿಧಿ ಪೂರ್ವಕವಾಗಿ ಮಾಡಲಾಗಿದೆ

ಶ್ರಾವಕಾಚಾರ. ಗೃಹಸ್ಥ ಧರ್ಮದ ಎರಡನೆಯ ಭಾಗವು ವಸುನಂದಿ ಕೃತ ಶ್ರಾವಕಾಚಾರದಿಂದ ಆಯ್ದುದಾಗಿದೆ. ಈ ಗ್ರಂಥದಲ್ಲಿ ೫೪೬ ಗಾಥಾಗಳಿವೆ ಇದರಲ್ಲಿ ಕ್ರಮವಾಗಿ ಶ್ರಾವಕರ ಹನ್ನೊಂದು ಪ್ರತಿಮೆಗಳ ಅರ್ಥಾತ್ ತರಗತಿಗಳ ವಿಸ್ತಾರವಾದ ವರ್ಣನೆಯು ಇದೆ. ಗ್ರಂಥದ ಕೊನೆಯ ಏಳು ಗಾಥಾಗಳಲ್ಲಿ ಕರ್ತೃವು ತನ್ನ ಪರಿಚಯ ಮತ್ತು ಗ್ರಂಥ ಪರಿಮಾಣಗಳ ಪರಿಚಯವನ್ನು ಈ ಪ್ರಕಾರ ಸೂಚಿಸಿದ್ದಾನೆ—

ಆಸೀ ಸಸಮಯ–ಪರಸಮಯವಿದ್ ಸಿರಿಕುಂದಕುಂದಸಂತಾಣೇ ।
ಭವ್ವಯಣ–ಕುಮುಯ–ವಣಸಿಸಿರಯರೋ ಸಿರಿಣಂದಿಣಾಮೇಣ ॥ ೫೪೨ ॥

ಕಿತ್ತೀ ಜಸ್ಸೇಂದುಸುಬ್ಭಾ ಸಯಲಭುವಣಮಜ್ಝೇ ಜಹಿಚ್ಛಂ ಭಮಿತ್ತಾ
ಣಿಚ್ಚಂ ಸಾ ಸಜ್ಜಣಾಣಂ ಹಿಯಯವಯಣಸೋಎ ಣಿವಾಸಂ ಕರೇಇ ।
ಜೋ ಸಿದ್ಧಂತಂಬುರಾಸಿಂ ಸುಣಯತರಣಮಾಸೆಜ್ಜ ಲೀಲಾವತಿಣ್ಣೋ
ವಣ್ಣೇಉಂ ಕೋ ಸಮತ್ಥೋ ಸಯಲಗುಣಗಣಂ ಸೇವಿಯಂ ತೋವಿಲೋಎ ॥ ೫೪೩ ॥

ಸಿಸ್ಸೋ ತಸ್ಸ ಜಿಣಿಂದಸಾಸಣರಓ ಸಿದ್ಧಂತಪಾರಂಗಓ
ಖಂತೀ-ಮದ್ದವ-ಲಾಹ-ವಾಇ-ದಸಹಾ ಧಮ್ಮಮ್ಮಿ ಣಿಚ್ಚೊಜ್ಜಓ ।
ಪುಣ್ಣಿಂದುಜ್ಜಲಕಿತ್ತಿಪೂರಿಯಜಓ ಚಾರಿತ್ತಲಚ್ಛೀಹರೋ
ಸಂಜಾಓ ಣಯಣಂದಿ ಣಾಮಮುಣಿಣೊ ಭವ್ವಾಸಯಾಣಂದಓ ॥ ೫೪೪ ॥

ಸಿಸ್ಸೋ ತಸ್ಸ ಜಿಣಾಗಮ–ಜಲಣಿಹಿವೇಲಾ–ತರಂಗ–ಧುಯಮಾಣೊ ।
ಸಂಜಾಓ ಸಯಲಜಏ ವಿಕ್ಖಾಓ ಣೇಮಿಚಂದೊ ತ್ತಿ ॥ ೫೪೫ ॥

ತಸ್ಸ ಪಸಾಏಣ ಮಏ ಆಯರಿಯಪರಂಪರಾಗಯಂ ಸಿಯಂ ।
ವಚ್ಛಲ್ಲಯರರಇಯಂ ಭವಿಯಾಣಮುವಾಸಯಜ್ಝಯಣಂ ॥ ೫೪೬ ॥

ಜಂ ಕಿಂ ಪಿ ಎತ್ಥ ಭಣಿಯಂ ಅಯಾಣಮಾಣೇಣ ಪವಯಣವಿರುದ್ಧಂ ।
ಖಮಿಊಣ ಪವಯಣಾಣಊ ಸೋಹಿತ್ತಾ ತಂ ಪಯಾಸಂತು ॥ ೫೪೭ ॥

ಛಚ್ಚ ಸಯಾ ಪಣ್ಣಾಸುತ್ತರಾಣಿ ಏಯಸ್ಸ ಗಂಥಪರಿಮಾಣಂ ।
ವಸುಣಂದಿಣಾ ಣಿಬದ್ಧಂ ವಿತ್ಥರಿಯವ್ವಂ ವಿಯಡ್ಢೇಹಿಂ ॥ ೫೪೮ ॥

ಈ ಪ್ರಶಸ್ತಿಯಲ್ಲಿ ವಸುನಂದಿಯು ತನ್ನ ಗುರು ಪರಂಪರೆಯನ್ನು ಹೀಗೆ ಹೇಳಿದ್ದಾನೆ–ಕುಂದಕುಂದಾಮ್ನಾಯ-ದಲ್ಲಿ ಕ್ರಮವಾಗಿ ಶ್ರೀನಂದಿ, ನಯನಂದಿ, ನೇಮಿಚಂದ್ರ, ವಸುನಂದಿಗಳು ಆದರು. ವಸುನಂದಿಯು ಈ 'ಉಪಾಸಕಾಧ್ಯಯನ'ವನ್ನು ತನ್ನ ಗುರುವಾದ ನೇಮಿಚಂದ್ರನ ಪ್ರಸಾದದಿಂದ ವಾತ್ಸಲ್ಯಭಾವದಿಂದ ಪ್ರೇರಿತನಾಗಿ ಭವ್ಯರಿಗೆ ಉಪಕಾರಮಾಡುವದಕ್ಕಾಗಿ ನಿರ್ಮಿಸಿದನು ಇದರಲ್ಲಿ ೬೫೦ ಶ್ಲೋಕಗಳು ಇವೆ ಒಂದೊಂದು ಶ್ಲೋಕವು ಮೂವತ್ತೆರಡು ಅಕ್ಷರಗಳಿಂದ ಕೂಡಿವೆ. ಈ ಗ್ರಂಥದ ವಿಷಯವು ಈ ಆಚಾರ್ಯರಿಗೆ ಪರಂಪರೆಯಿಂದ ಲಭಿಸಿತ್ತು; ಇದರ ಉಲ್ಲೇಖವನ್ನು ೫೪೬ನೆಯ ಶ್ಲೋಕದಲ್ಲಿ ಮಾಡಲಾಗಿದೆ ಗ್ರಂಥಾರಂಭದ ಮೂರನೆಯ ಗಾಥಾದಲ್ಲಿ ಹೀಗೆ ಹೇಳಿದೆ–ವಿಪುಲಾಚಲ ಪರ್ವತದ ಮೇಲೆ ಭಗವಾನ್ ಮಹಾವೀರನ ಮುಖ್ಯ ಗಣಧರ ಇಂದ್ರಭೂತಿಯು ಶ್ರೇಣಿಕ ರಾಜನಿಗೆ ಮಾಡಿದ ಉಪದೇಶವೇ ಪರಂಪರೆಯಿಂದ ಲಭಿಸಿತು ಅದನ್ನೇ ಇಲ್ಲಿ ಹೇಳಿದೆ ಕೇಳಿರಿ—

ವಿಉಲಗಿರಿಪವ್ವಯೆ ಯಂ ಇಂದಭೂಇಣಾ ಸೇಣಿಯಸ್ಸ ಜಹ ದಿಟ್ಠಂ ।
ತಹ ಗುರುಪರಿವಾಡೀಏ ಭಣಿಜ್ಜಮಾಣಂ ಣಿಸಾಮೇಹ ॥ ೩ ॥

ಇದರಿಂದ ಗ್ರಂಥಕಾರರ ಮನಸ್ಸಿನಲ್ಲಿ ಏಳನೆಯ ಶ್ರುತಾಂಗವಾದ ಉಪಾಸಕಾಧ್ಯಯನವು ಪರಂಪರೆಯಿಂದ ನೆಲೆಯೂರಿತ್ತು ಅವನು ತನ್ನ ಗ್ರಂಥದ ಹೆಸರನ್ನೂ ಸಹ ಅದನ್ನೇ ಇಟ್ಟಿದ್ದನು ವಸುನಂದಿಯು ತನ್ನ ಗುರು ಪರಂಪರೆಯಲ್ಲಿ ಪ್ರಕಟಗೊಳಿಸಿದ 'ನಯನಂದಿ' ಮತ್ತು 'ನೇಮಿಚಂದ್ರ' ಈ ಹೆಸರುಗಳಂತೂ ಜೈನ ಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿವೆ ಆದರೆ ಅವು ಪರಂಪರಾ ಕ್ರಮದಲ್ಲಿಯೇ ಉಲ್ಲೇಖಿಸಲ್ಪಟ್ಟಿವೆಯೆಂದು ಹೇಳಲಾಗುವದಿಲ್ಲ ಅದರಿಂದ ವಸುನಂದಿಯ ಕಾಲ ನಿರ್ದೇಶವನ್ನು ಮಾಡುವುದು ಕಠಿಣವಾಗಿದೆ

ವಸುನಂದಿ ಶ್ರಾವಕಾಚಾರವು ಹಿಂದೀ ಅನುವಾದ ಸಹಿತ ಸಂವತ್ ೧೯೬೬ರಲ್ಲಿ ಜೈನ ಸಿದ್ಧಾಂತ ಪ್ರಚಾರಕ ಮಂಡಲಿ, ದೇವಬಂದ, ಇವರಿಂದ ಪ್ರಕಟವಾಗಿದೆ ಇದನ್ನು ಇನ್ನೂ ಚೆನ್ನಾಗಿ ಸಂಪಾದಿಸಿ ಪ್ರಕಟಿಸುವ ಅವಶ್ಯಕತೆಯು ಇತ್ತು ಇತ್ತೀಚೆಗೆ ಇದು ಪಂ ಹೀರಾಲಾಲ ಶಾಸ್ತ್ರಿಗಳವರಿಂದ ಸಂಪಾದಿಸಲ್ಪಟ್ಟು ಭಾರತೀಯ ಜ್ಞಾನ ಪೀಠ, ಕಾಶೀ, ಇವರಿಂದ ಪ್ರಕಟವಾಗಿದೆ

**ದಶವೈಕಾಲಿಕ ಸೂತ್ರ.** ಇದು ಶ್ವೇತಾಂಬರ ಆಗಮದ ಪ್ರಮುಖ ಗ್ರಂಥವಾಗಿದೆ ಇದರ ಮೂರನೆಯ ಅಧ್ಯಯನದಿಂದ ಮುನಿಧರ್ಮ ಎಂಬುದರ ಮೊದಲ ಭಾಗವನ್ನು ಆಯ್ದುಕೊಂಡಿದೆ ದಶವೈಕಾಲಿಕವು ನಾಲ್ಕು ಮೂಲ ಸೂತ್ರಗಳಲ್ಲಿ ಒಂದಾಗಿದೆ ಸೆಜ್ಜಂಭವನು ತನ್ನ ಪತ್ನಿಯನ್ನು ಗರ್ಭವತಿಯಾಗಿದ್ದಾಗ ಬಿಟ್ಟು ಹೋಗಿ ಮುನಿಯಾಗಿದ್ದನು ಹೀಗೊಂದು ಅನುಶ್ರುತಿಯಿದೆ ಅವನ ಮಗ 'ಮನಕ' ಎಂಬವನು ದೊಡ್ಡವನಾಗಿ ತನ್ನ ತಂದೆಯ ಶಿಷ್ಯನಾಗಲಿಕ್ಕೆಂದು ಹೋದನು ಆಗ ಅವನಿಗೆ ಉಪದೇಶ ಮಾಡಲಿಕ್ಕೆಂದು ಈ ಗ್ರಂಥದ ನಿರ್ಮಿತಿಯಾಯಿತು. ಈ ಘಟನೆಯು ಭ ಮಹಾವೀರ ನಿರ್ವಾಣದ ತರುವಾಯ ಸುಮಾರು ನೂರು ವರ್ಷಗಳಲ್ಲಿ ನಡೆಯಿತೆಂದು ಹೇಳ-ಲಾಗುತ್ತದೆ ಈ ಗ್ರಂಥದಲ್ಲಿ ಒಟ್ಟು ಹನ್ನೆರಡು ಅಧ್ಯಯನಗಳಿವೆ ಇವುಗಳಲ್ಲಿ ನಾಲ್ಕು ಮತ್ತು ಒಂಭತ್ತನೆಯ ಅಧ್ಯಾಯಗಳಲ್ಲಿ ಗದ್ಯದ ಅಂಶವೂ ಇದೆ ಉಳಿದ ಭಾಗವೆಲ್ಲ ಪ್ರಾಕೃತ ಪದ್ಯಮಯವಾಗಿದೆ. ಮುನಿಯ ಸಾಧನೆಗಳಲ್ಲಿ ಶರೀರ ಸಂಸ್ಕರಣದ ಪರಿತ್ಯಾಗ ಮತ್ತು ಭಕ್ಷ್ಯಾಭಕ್ಷ್ಯಗಳ ವಿಚಾರವು ಒಂದು ಪ್ರಮುಖವಿಷಯವಾಗಿದೆ ಈ ಅಧ್ಯಯನದಲ್ಲಿ ಇದೇ ವಿಷಯವನ್ನು ವರ್ಣಿಸಲಾಗಿದೆ.

ದಶವೈಕಾಲಿಕದ ಅನೇಕ ಆವೃತ್ತಿಗಳು ಪ್ರಕಟವಾಗಿವೆ. ಡಾ. ಲಾಯಮನನಿಂದ ಸಂಪಾದಿಸಲ್ಪಟ್ಟು, ಹ್ಯಾಂಬುರ್ಗದಲ್ಲಿ ಕ್ರಿ ಶ ೧೯೩೨ರಲ್ಲಿ ಪ್ರಕಟಿಸಲ್ಪಟ್ಟಿದೆ

**ಮೂಲಾಚಾರ.** ಮುನಿಧರ್ಮದ ಎರಡನೆಯ ಭಾಗವನ್ನು ಈ ಗ್ರಂಥದಿಂದ ಸಂಗ್ರಹಿಸಿ ಕೊಡಲಾಗಿದೆ ಇದನ್ನು ವಟ್ಟಕೇರಸ್ವಾಮಿಯು ರಚಿಸಿದನು ಇದು ಅತಿ ಪ್ರಾಚೀನ ಗ್ರಂಥವು, ಆದರೆ ಇದರ ಕಾಲನಿರ್ಣಯವು ಇನ್ನೂ ವರೆಗೆ ಆಗಲಿಲ್ಲ. ದಿಗಂಬರ ಸಂಪ್ರದಾಯದಲ್ಲಿ ಮುನಿಧರ್ಮವನ್ನು ನಿರೂಪಿಸುವ ಶ್ರೇಷ್ಠಗ್ರಂಥನೆಂದು ಇದನ್ನು ತಿಳಿಯುತ್ತಾರೆ ದ್ವಾದಶಾಂಗದಲ್ಲಿ ಮುನಿಧರ್ಮದ ವರ್ಣನೆಯನ್ನು ಮಾಡುವಂಥ ಪ್ರಥಮ ಶ್ರುತಾಂಗವು 'ಆಚಾರಾಂಗ'ವಾಗಿದೆ ದಿಗಂಬರ ಸಂಪ್ರದಾಯದಲ್ಲಿ ಇದು ಲೋಪವಾಗಿದೆಯೆಂದು ತಿಳಿಯಲಾಗುತ್ತದೆ. ಆದರೆ 'ಆಚಾರಾಂಗ'ದೊಳಗಿನ ವಿಷಯವೆಲ್ಲ ಈ ಮೂಲಾಚಾರದಲ್ಲಿ ಉದ್ಧೃತವಾಗಿದೆ. ಅದಕ್ಕಾಗಿಯೇ ಧವಲಕಾರನಾದ ವೀರಸೇನನು ಮೂಲಾರವನ್ನು 'ಆಚಾರಾಂಗ' ಎಂಬ ಹೆಸರಿನಿಂದ ಉಲ್ಲೇಖ ಮಾಡಿದ್ದಾನೆ

ಈ ಗ್ರಂಥದಲ್ಲಿ ಒಟ್ಟು ೧೨೪೩ ಪ್ರಾಕೃತ ಗಾಥೆಗಳು ಇವೆ ಅವುಗಳನ್ನು ಮೂಲಗುಣ, ಬೃಹತ್ ಪ್ರತ್ಯಾಖ್ಯಾನ, ಸಂಕ್ಷೇಪ ಪ್ರತ್ಯಾಖ್ಯಾನ, ಸಾಮಾಚಾರ, ಪಂಚಾಚಾರ, ಪಿಂಡಶುದ್ಧಿ, ಷಡಾವಶ್ಯಕ, ದ್ವಾದಶಾನುಪ್ರೇಕ್ಷಾ, ಅನಗಾರಭಾವನಾ, ಸಮಯಸಾರ, ಶೀಲಗುಣಪ್ರಸ್ತಾರ ಮತ್ತು ಪರ್ಯಾಪ್ತಿ ಈ ಹನ್ನೆರಡು ಅಧಿಕಾರಗಳಲ್ಲಿ ವಿಭಾಗಿಸ-ಲಾಗಿದೆ ಇವೆಲ್ಲವೂ ಯಥಾರ್ಥವಾಗಿ ಮುನಿಗಳ ಇಪ್ಪತ್ತೆಂಟು ಗುಣಗಳ ವಿಸ್ತಾರವೇ ಆಗಿದೆ. ಮೊದಲನೆಯ ಅಧಿಕಾರದಲ್ಲಿ ಅದನ್ನು ಸಂಗ್ರಹವಾಗಿ ಹೇಳಿ, ಮುಂದಿನ ಅಧಿಕಾರಗಳಲ್ಲಿ ಅದನ್ನೇ ವಿಸ್ತರಿಸಲಾಗಿದೆ. ಇಲ್ಲಿ ಮಾತ್ರ ಮೊದಲನೆಯ ಅಧಿಕಾರವನ್ನು ಪೂರ್ಣವಾಗಿ ಕೊಡಲಾಗಿದೆ

ಇದು ಕ್ರಿ ಶ. ೧೯೧೯ರಲ್ಲಿ ಅನಂತಕೀರ್ತಿ ಗ್ರಂಥಮಾಲೆಯ ಮೊದಲನೆಯ ಪುಷ್ಪವಾಗಿ ಮೂಲ ಹಾಗೂ ಹಿಂದೀ ಅನುವಾದ ಸಹಿತ ಮುಂಬಯಿಯಿಂದ ಪ್ರಕಟವಾಗಿದೆ. ಹಾಗೆಯೇ ಮಾಣಿಕಚಂದ್ರ ದಿಗಂಬರ ಜೈನ ಗ್ರಂಥಮಾಲೆಯ ೧೯ ಹಾಗೂ ೨೩ನೆಯ ಕುಸುಮಗಳೆಂದು ಎರಡು ಭಾಗಗಳಲ್ಲಿ ವಸುನಂದಿಕೃತ ಸಂಸ್ಕೃತ ಟೀಕೆ ಸಹಿತ ವಿ ಸಂ. ೧೯೭೭ ಮತ್ತು ೧೯೮೦ರಲ್ಲಿ ಮುಂಬಯಿಯಿಂದ ಪ್ರಕಟವಾಗಿದೆ

**ಬಾರಸ ಅಣುವೆಕ್ಖಾ.** (ದ್ವಾದಶಾನುಪ್ರೇಕ್ಷಾ) ಇದರಿಂದ ಧರ್ಮಾಂಗ ಎಂಬ ವಿಷಯವನ್ನು ಆಯ್ದುಕೊಳ್ಳಲಾಗಿದೆ ಈ ಗ್ರಂಥವನ್ನು ರಚಿಸಿದವನು ಕುಂದಕುಂದಾಚಾರ್ಯನು. ಇವನ ಪ್ರಾಕೃತ ಗ್ರಂಥಗಳ ಸ್ಥಾನವು ದಿಗಂಬರ ಸಂಪ್ರದಾಯದಲ್ಲಿ ಅದ್ವಿತೀಯವಾಗಿದೆ ಈ ಸಂಪ್ರದಾಯದಲ್ಲಿ ಈ ಮಂಗಲ ಶ್ಲೋಕವು ಬಹಳ ಪ್ರಚಾರದಲ್ಲಿದೆ—

ಮಂಗಲಂ ಭಗವಾನ್ ವೀರೋ ಮಂಗಲಂ ಗೌತಮೋ ಗಣೀ ।
ಮಂಗಲಂ ಕುಂದಕುಂದಾದ್ಯಾ ಜೈನಧರ್ಮೋಽಸ್ತು ಮಂಗಲಮ್ ॥

ದ್ವಾದಶಾನುಪ್ರೇಕ್ಷೆಯನ್ನುಳಿದು ಕುಂದಕುಂದಾಚಾರ್ಯನ ಅಷ್ಟಪಾಹುಡ, ಪ್ರವಚನಸಾರ, ಪಂಚಾಸ್ತಿ-ಕಾಯ, ಸಮಯಸಾರ ಮತ್ತು ನಿಯಮಸಾರ ಈ ಹನ್ನೆರಡು ಗ್ರಂಥಗಳು ಬಹಳ ಪ್ರಸಿದ್ಧವಾಗಿವೆ ಇವಲ್ಲದೆ ರಯಣಸಾರ ಮತ್ತು ದಶಭಕ್ತಿ ಮೊದಲಾದ ಕೆಲವು ಗ್ರಂಥಗಳೂ ಕುಂದಕುಂದಾಚಾರ್ಯಕೃತವೆಂದು ಹೇಳಲಾಗುತ್ತಿದೆ ಆದರೆ ಅವುಗಳ ಕರ್ತೃತ್ವದ ವಿಷಯದಲ್ಲ ಮತಭೇದವಿದೆ ಷಟ್‌ಖಂಡಾಗಮದ 'ಪರಿಕರ್ಮ' ಎಂಬ ಟೀಕೆಯನ್ನೂ ಸಹ ಕುಂದಕುಂದಾಚಾರ್ಯರು ರಚಿಸಿದ್ದರೆಂದು ಹೇಳಲಾಗುತ್ತದೆ ಆದರೆ ಆ ಗ್ರಂಥವೂ ಅದರ ವಿಷಯವೂ ವಿಶೇಷವಾಗಿ ದೊರೆತುದಿಲ್ಲ.

'ಷಟ್‌ಖಂಡಾಗಮ'ದ ರಚನೆಯು ವೀರ ನಿರ್ವಾಣದಿಂದ ೬೮೩ ವರ್ಷಗಳ ನಂತರ ಆಗಿದೆ. ಈ ಷಟ್‌ಖಂಡಾಗಮದ ಮೇಲೆ ಕುಂದಕುಂದಾಚಾರ್ಯರು ಟೀಕೆಯನ್ನು ರಚಿಸಿದರೆಂಬ ಮಾತನ್ನೂ ಗಮನಿಸಿದಲ್ಲಿ ಈ ಆಚಾರ್ಯನ ಕಾಲವು ಅದರ ಈಚಿನದೆಂದು ತಿಳಿಯಲಿಕ್ಕೆಬೇಕು ಇನ್ನು ನಮಗೆ ದೊರೆತಿರುವ ಮರ್ಕರಾ ಅಥವಾ ಮಡಿಕೇರಿ ತಾಮ್ರ ಪತ್ರವು ಶಕ ೩೮೮ರಲ್ಲಿಯದಿದ್ದು, ಅದರಲ್ಲಿ ಕುಂದಕುಂದಾಚಾರ್ಯರ ಉಲ್ಲೇಖವಿದೆ ಹೀಗಾಗಿ ಕುಂದಕುಂದಾಚಾರ್ಯರ ಕಾಲವು ಎರಡು ಮತ್ತು ಐದನೆಯ ಶತಮಾನದ ಮಧ್ಯದಲ್ಲಿ ಸಲ್ಲುವದೆಂದು ಹೇಳಬಹುದಾಗಿದೆ

ಬಾರಸ ಅಣುವೆಕ್ಖಾದಲ್ಲಿ ೯೧ ಪ್ರಾಕೃತ ಗಾಥೆಗಳು ಇವೆ ಅವುಗಳಲ್ಲಿ ಹನ್ನೆರಡನೆಯ ಭಾವನಾ ಧರ್ಮದ ವಿವರಣದಲ್ಲಿ ಪ್ರಸ್ತುತ ದಶಧರ್ಮದ ವರ್ಣನೆಯು ಬಂದಿದೆ. ಇದು ಮುನಿಧರ್ಮದ ಪಾಲನೆಗಾಗಿ ಅತ್ಯಂತ

ಅವಶ್ಯಕವಾಗಿದೆ. ಅಲ್ಲದೆ ಸಾಮಾನ್ಯವಾಗಿ ಧಾರ್ಮಿಕ ಜೀವನಕ್ಕಾಗಿ ಬಹಳ ಉಪಯುಕ್ತವೆಂದು ತಿಳಿಯಲಾಗಿದೆ ಈ ಸಂದರ್ಭದಲ್ಲಿ, ಮನುಸ್ಮೃತಿಕಾರನೂ ಸಹ ಧರ್ಮಕ್ಕೆ ಹತ್ತು ಅಂಗಗಳನ್ನು ಹೇಳುತ್ತಾನೆಂಬುದನ್ನು ನೆನೆಯಬೇಕು ನೋಡಿರಿ—

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥

ಮನುಸ್ಮೃತಿ ೬, ೯೨

ಇದೇ ಪ್ರಕಾರ ಬೌದ್ಧ ಧರ್ಮಕ್ಕೆ ಹತ್ತು 'ಪರಿಮಿತಾ'ಗಳೂ ಇವೆ ಅವುಗಳ ಪಾಲನೆಯಿಂದಲೇ ಮನುಷ್ಯನು 'ಬುದ್ಧ'ನಾಗಲು ಸಾಧ್ಯವಿದೆ ದಾನ, ಶೀಲ, ನೈಷ್ಕರ್ಮ್ಯ, ಪ್ರಜ್ಞಾ, ವೀರ್ಯ, ಕ್ಷಾಂತಿ, ಸತ್ಯ, ಅಧಿಷ್ಠಾನ, ಮೈತ್ರೀ ಮತ್ತು ಉಪೇಕ್ಷಾ ಇವು ಹತ್ತು ಪಾರಮಿತಾಗಳೆನಿಸುತ್ತವೆ

ಇಷ್ಟೇ ಅಲ್ಲ, ಬಾಯಬಲದಲ್ಲಿ ಈಸಾಯಿ ಧರ್ಮದ ಪ್ರಾಣಸ್ವರೂಪವೆನಿಸುವ ಹತ್ತು ಆದೇಶಗಳನ್ನು ಕೊಡಲಾಗಿದೆ. ಅವು ಈ ಪ್ರಕಾರ ಇವೆ—

1. Thou shalt not have strange Gods before me.
2. Thou shalt not take the name of the lord thy God in vain
3. Remember thou keep holy the Sabbath Day
4 Honour thy father and thy mother
5. Thou shalt not kill.
6. Thou shalt not commit adultery
7. Thou shalt not steal
8. Thou shalt not bear false witness against thy neighbour.
9 Thou shalt not covet thy neighbour's house
10 Thou shalt not covet thy neighbour's wife

ಈ ಧರ್ಮ ಲಕ್ಷಣಗಳಲ್ಲಿ ಪರಸ್ಪರ ನಾಮಭೇದಗಳಲ್ಲಿ ಅಂತರವು ಕಂಡುಬರುತ್ತದೆ ಇದರಲ್ಲೇನೂ ಆಶ್ಚರ್ಯವಿಲ್ಲ ಆದರೆ ಧರ್ಮದ ಹತ್ತು ಅಂಗಗಳು ಮಾತ್ರ ಎಲ್ಲ ಧರ್ಮಗಳಲ್ಲಿಯೂ ಸಾಮಾನ್ಯವಾಗಿರುವುದೇ ಆಶ್ಚರ್ಯಕರವಾಗಿದೆ ಅಲ್ಲದೆ ಅವುಗಳಲ್ಲಿ ಅಸಾಧಾರಣವಾದ ಸಮಾನತೆಯೂ ಇದೆ.

[ಬಾರಸ ಅಣುವೇಕ್ಖಾ, ಹಿಂದಿ ಅನುವಾದ ಸಹಿತ, ಜೈನ ಗ್ರಂಥ ರತ್ನಾಕರ ಕಾರ್ಯಾಲಯ, ಮುಂಬೈ, ಇವರಿಂದ ಕ್ರಿ ಶ. ೧೯೧೦ರಲ್ಲಿ ಪ್ರಕಟವಾಗಿದೆ ಕುಂದಕುಂದರು ಹಾಗೂ ಅವರ ಗ್ರಂಥಗಳ ವಿಷಯದಲ್ಲಿ ವಿಸ್ತಾರವಾದ ವಿವೇಚನೆಯನ್ನು 'ಪ್ರವಚನಸಾರ'ದ ಭೂಮಿಕೆಯಲ್ಲಿ ನೋಡಬಹುದು ಅದನ್ನು ಡಾ. ಎ. ಎನ್. ಉಪಾಧ್ಯೆ ಇವರು ಸಂಪಾದಿಸಿ, ರಾಯಚಂದ್ರ ಜೈನ ಶಾಸ್ತ್ರ ಮಾಲಾ, ೯, ಮುಂಬೈ ಇದರ ಮುಖಾಂತರ ೧೯೩೫ರಲ್ಲಿ ಪ್ರಕಟಿಸಿದ್ದಾರೆ.]

ಸ್ವಾಮಿಕಾರ್ತಿಕೇಯಾನುಪ್ರೇಕ್ಷಾ. ಈ ಗ್ರಂಥದಿಂದ ಭಾವನಾ ಎಂಬ ಭಾಗವನ್ನು ಸಂಗ್ರಹಿಸಿ ಕೊಟ್ಟಿದೆ ಈ ಗ್ರಂಥದ ಕರ್ತೃವು ಕೊನೆಯಲ್ಲಿ ತನ್ನ ರಚನೆಯನ್ನು ಕುರಿತು ಇಷ್ಟು ಹೇಳಿದ್ದಾನೆ—

ಜಿಣವಯಣಭಾವಣಟ್ಠಂ ಸಾಮಿಕುಮಾರೇಣ ಪರಮಸದ್ಧಾಏ ।
ರಇಯಾ ಅಣುವೇಕ್ಖಾಓ ಚಂಚಲ–ಮಣ–ರುಂಭಣಟ್ಠಂಚ ॥ ೪೮೭ ॥

ಬಾರಸ ಅಣುವೇಕ್ಖಾಓ ಭಣಿಯಾ ಹು ಜಿಣಾಗಮಾಣುಸಾರೇಣ ।
ಜೋ ಪಢಇ ಸುಣಇ ಭಾವಇ ಸೋ ಪಾವಇ ಉತ್ತಮಂ ಸೊಕ್ಖಂ ॥ ೪೮೮ ॥

ತಿಹುಯಣ–ಪಹಾಣಸಾಮಿಂ ಕುಮಾರಕಾಲೇ ವಿ ತವಿಯ–ತವಯರಣಂ ।
ವಸುಪುಜ್ಜಸುಯಂ ಮಲ್ಲಿಂ ಚರಿಮತಿಯಂ ಸಂಥುವೇ ಣಿಚ್ಚಂ ॥ ೪೮೯ ॥

ಈ ಶ್ಲೋಕಗಳಿಂದ ಕರ್ತೃವಿನ ಸಂಬಂಧದಲ್ಲಿ ಇಷ್ಟು ಮಾತ್ರ ಗೊತ್ತಾಗುತ್ತದೆ—ಅವನ ಹೆಸರು 'ಸ್ವಾಮಿ ಕುಮಾರ' ಎಂದಿತ್ತು ಅವನು ಬಹುತರ ಬಾಲಬ್ರಹ್ಮಚಾರಿಯಾಗಿದ್ದನು. 'ಕುಮಾರ' ಮತ್ತು 'ಕಾರ್ತಿಕೇಯ' ಈ ಪದಗಳು ಒಂದೇ ಅರ್ಥವನ್ನು ಕೊಡುವುದರಿಂದ ಅವನ ಹೆಸರು ಕಾರ್ತಿಕೇಯನೆಂದೂ ಪ್ರಸಿದ್ಧವಾಗಿತ್ತು. ಇದನ್ನು ನಾವು ಈ ಗ್ರಂಥದ ಹೆಸರಿನಲ್ಲಿಯೂ ಕಾಣುತ್ತೇವೆ ಕುಂದಕುಂದಕೃತ ಬಾರಸಅಣುವೆಕ್ಖಾ ಮತ್ತು ಈ ಗ್ರಂಥದ ವಿಷಯ ಮತ್ತು ಭಾಷಾ ಶೈಲಿ ಮೊದಲಾದ ವಿಷಯಗಳಲ್ಲಿ ಬಹಳಷ್ಟು ಸಾಮ್ಯವಿದೆ ಒಂದು ಇನ್ನೊಂದರ ವಿಸ್ತೃತ ಇಲ್ಲವೆ ಸಂಕ್ಷಿಪ್ತ ರೂಪಾಂತರವೆಂದು ಹೇಳಿದರೆ ಆಶ್ಚರ್ಯವೇನೂ ಆಗದು ಆದರೆ ಸದ್ಯಕ್ಕೆ ಅವುಗಳ ಪೂರ್ವಾ-ಪರತ್ವದ ಸಂಬಂಧದಲ್ಲಿ ಆಧಾರಗಳಿಲ್ಲದೆ ಇರುವುದರಿಂದ ಏನೂ ಹೇಳಲಿಕ್ಕೆ ಬರುವದಿಲ್ಲ ಈ ಗ್ರಂಥದಲ್ಲಿ ೪೮೯ ಗಾಥಾಗಳು ಇರುತ್ತವೆ. ಇವುಗಳಲ್ಲಿ ಹನ್ನೆರಡೂ ಭಾವನೆಗಳ ವರ್ಣನೆಯು ವಿಸ್ತಾರವಾಗಿ ಬಂದಿದೆ ಇದು ಜೈನ ಗ್ರಂಥ ರತ್ನಾಕರ ಕಾರ್ಯಾಲಯದಿಂದ—ಮುಂಬೈ—೧೯೦೪ರಲ್ಲಿ ಹಿಂದಿ ಅನುವಾದ ಸಹ ಪ್ರಕಟವಾಗಿದೆ.

ಉತ್ತರಾಧ್ಯಯನ ಸೂತ್ರ. ಇದರಿಂದ ಪರೀಷಹ ಎಂಬ ಅಧ್ಯಾಯವನ್ನು ಇಲ್ಲಿ ಆಯ್ದು ಕೊಡಲಾಗಿದೆ. ಇದು ಎರಡನೆಯ ಅಧ್ಯಯನದ ಪೂರ್ಣ ಪದ್ಯಮಯ ಭಾಗವಾಗಿದೆ ಈ ಸೂತ್ರವು ಶ್ವೇತಾಂಬರ ಆಗಮಗಳಲ್ಲಿ ಪ್ರಸಿದ್ಧ-ವಾದ ನಾಲ್ಕು ಮೂಲಸೂತ್ರಗಳಲ್ಲಿ ಪ್ರಧಾನವೆನಿಸುತ್ತದೆ ಇದು ಇದರಲ್ಲಿಯ ಅನೇಕ ಸೂಕ್ತಗಳು ಭ. ಮಹಾವೀರರಿಂದ ಉಪದೇಶಿಸಲ್ಪಟ್ಟುವೆಂದು ತಿಳಿಯಲಾಗುತ್ತದೆ. ಉತ್ತರಾಧ್ಯಯನದಲ್ಲಿ ಒಟ್ಟು ಮೂವತ್ತಾರು ಅಧ್ಯಯನಗಳು ಇವೆ. ೨ನೆಯ ಅಧ್ಯಯನ ಪೂರ್ಣ ಮತ್ತು ಉಳಿದ ಕೆಲವು ಅಧ್ಯಯನಗಳ ಪ್ರಾಸ್ತಾವಿಕ ಭಾಗವು ಗದ್ಯದಲ್ಲಿದೆ ಉಳಿದುದೆಲ್ಲ ರಚನೆಯು ಪದ್ಯಾತ್ಮಕವಾಗಿದೆ. ಕೆಲವು ಅಧ್ಯಯನಗಳು ಕಥಾತ್ಮಕವಾಗಿವೆ ಕಾವ್ಯ ಗುಣಗಳಿಂದ ಕೂಡಿದುವೂ ಆಗಿವೆ ಕೊನೆಯ ಅಧ್ಯಯನಗಳು ವಿಶೇಷತಃ ಸೈದ್ಧಾಂತಿಕವಾಗಿದೆ ಅನೇಕ ಗಾಥೆಗಳು ವೈದಿಕ ಹಾಗೂ ಬೌದ್ಧ ಸಾಹಿತ್ಯಗಳ ಆಧ್ಯಾತ್ಮಿಕ ವಿಷಯಗಳಿಗೆ ಸಾಮ್ಯವನ್ನು ಪ್ರದರ್ಶಿಸುತ್ತವೆ. ಉದಾಹರಣೆಗೆಂದು ಒಂಭತ್ತನೆಯ ಅಧ್ಯಯನ 'ನಮಿ-ಪವ್ವಜ್ಜಾ' ಮತ್ತು ವಿಶೇಷವಾಗಿ ಅದರ ೧೪ನೆಯ ಗಾಥೆಯು ಈ ಪ್ರಕಾರವಾಗಿದೆ—

ಸುಹಂ ವಸಾಮೊ ಜೀವಾಮೊ ಜೆಸಿ ಮೊ ನತ್ಥಿ ಕಿಂಚಣ ।
ಮಿಹಿಲಾಏ ಡಜ್ಝಮಾಣೀಏ ನ ಮೇ ಡಜ್ಝಇ ಕಿಂಚಣ ॥

ಈ ಗಾಥೆಯು ಬಹುತರ ಇದೇ ರೂಪದಲ್ಲಿ ಪಾಲೀ ಸಾಹಿತ್ಯದಲ್ಲಿಯೂ ನೋಡಲಿಕ್ಕೆ ಸಿಕ್ಕುತ್ತದೆ. ಇದರ ಮೊದಲನೆಯ ಚರಣದಲ್ಲಿ ಸ್ವಲ್ಪ ಹೆಚ್ಚು-ಕಡಿಮೆಯಾದ ರೂಪದಲ್ಲಿ—'ಸುಸುಖಂ ಬತ ಜೀವಾಮ'—ಧಮ್ಮಪದದ 'ಸುಖವಗ್ಗ'ದ ನಾಲ್ಕು ಗಾಥಾಗಳಲ್ಲಿ ಬಂದಿದೆ. ಒಂದು ಗಾಥೆಯ ಪ್ರಥಮ ಚರಣವಂತೂ 'ಸುಸುಖಂ ವತ ಜೀವಾಮ ಯೇಸಂ ನೋ ನತ್ಥಿ ಕಿಂಚನ' ಎಂದಿದೆ. ಯೋಗವಾಸಿಷ್ಠದ 'ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತೇ' ಎಂಬುದು ಸುಪ್ರಸಿದ್ಧವಾಗಿದೆ.

ಉತ್ತರಾಧ್ಯಯನದ ಅನೇಕ ಆವೃತ್ತಿಗಳು ಪ್ರಕವಾಗಿವೆ ಡಾ. ಜಾರ್ಲ ಚಾರ್ಪೆಂಟಿಯರರ ಸಂಸ್ಕರಣವು ಉಪಸಲಾ (ಜರ್ಮನಿ) ದಿಂದ ಕ್ರಿ. ಶ. ೧೯೨೨ರಲ್ಲಿ ಪ್ರಕಟವಾಗಿದೆ.

ಇದೇ ಗ್ರಂಥದ ಮೂವತ್ತು ಮೂರನೆಯ ಅಧ್ಯಯನದಿಂದ 'ಕರ್ಮಪ್ರಕೃತಿ' ಎಂಬ ಭಾಗವನ್ನು ಆಯ್ದು ಕೊಡಲಾಗಿದೆ.

ದ್ರವ್ಯ ಸಂಗ್ರಹ. ಇದರಿಂದ 'ಆರು ದ್ರವ್ಯ, ಏಳು ತತ್ವ, ನವ ಪದಾರ್ಥ' ಎಂಬ ಭಾಗವನ್ನು ಆಯ್ದು ಕೊಡಲಾಗಿದೆ. ಈ ಗ್ರಂಥದ ಕರ್ತೃವು ಆಚಾರ್ಯ ನೇಮಿಚಂದ್ರನಾಗಿದ್ದಾನೆ. ಗಂಗರಸನಾದ ಎರಡನೆಯ ಮಾರಸಿಂಹ ಹಾಗೂ ಅವನ ಉತ್ತರಾಧಿಕಾರಿಯಾದ ಎರಡನೆಯ ರಾಜಮಲ್ಲ ಇವರ ಮಂತ್ರಿಯೂ ಸೇನಾಪತಿಯೂ ಆದ ಚಾಮುಂಡರಾಯನ ಗುರುವು ಈ ನೇಮಿಚಂದ್ರನಾಗಿದ್ದನು. ಇವನ ಕಾಲದಲ್ಲಿಯೇ ಚಾಮುಂಡರಾಯನಿಂದ ಶ್ರವಣ ಬೆಳ್ಗೊಳದ ಬಾಹುಬಲಿ ವಿಗ್ರಹದ ಪ್ರತಿಷ್ಠೆಯಾಯಿತು. ಎರಡನೆಯ ಮಾರಸಿಂಹನ ಮೃತ್ಯುವು ಶಿಲಾಲೇಖಗಳ ಆಧಾರದಿಂದ ಕ್ರಿ. ಶ. ೯೭೫ರಲ್ಲಿ ಆಯಿತು 'ಚಾಮುಂಡರಾಯ ಪುರಾಣ'ದಲ್ಲಿ ಅದು ಪೂರ್ಣವಾದ ಶಕೆಯು ೯೦೦ ಇಸ್ವಿ ಸನ್ ೯೭೮ ಎಂದಿದೆ ಸಾಮಾನ್ಯವಾಗಿ ಇದೇ ಕಾಲವು ನೇಮಿಚಂದ್ರಾಚಾರ್ಯರದಾಗಿದೆ

ದ್ರವ್ಯ ಸಂಗ್ರಹದಲ್ಲಿ ಒಟ್ಟು ೫೮ ಗಾಥಾಗಳಿವೆ ಇಷ್ಟರಲ್ಲಿ ಜೈನ ತತ್ವಜ್ಞಾನವನ್ನು ಬಹು ಸುಂದರತರವಾಗಿ ನಿರೂಪಿಸಲಾಗಿದೆ

ಗೊಮ್ಮಟಸಾರ. (ಜೀವಕಾಂಡ) ಈ ಗ್ರಂಥದಿಂದ 'ಗುಣಸ್ಥಾನ' ಎಂಬ ಭಾಗವನ್ನು ಆಯ್ದು ಕೊಡಲಾಗಿದೆ. ಇದರ ಕರ್ತೃವೂ 'ದ್ರವ್ಯ ಸಂಗ್ರಹ'ದ ಕರ್ತೃವಾದ ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯನೇ ಆಗಿದ್ದಾನೆ ಗೊಮ್ಮಟವೆಂದರೆ ಸುಂದರ ರೂಪ ಸೌಂದರ್ಯಗಳಿಗಾಗಿ ಚಾಮುಂಡರಾಯನಿಗೆ ಗೊಮ್ಮಟನೆಂದೂ ಬಹುತರ ಕರೆಯುತ್ತಿರಬೇಕು. ಅವನಿಂದ ಪ್ರತಿಷ್ಠಿಸಲ್ಪಟ್ಟ ಶ್ರವಣ ಬೆಳ್ಗೊಳದ ಬಾಹುಬಲಿ ಮೂರ್ತಿಯ ಗೊಮ್ಮಟೇಶ್ವರನೆಂದು ಪ್ರಸಿದ್ಧಿಯನ್ನು ಹೊಂದಿತು ನೇಮಿಚಂದ್ರಾಚಾರ್ಯನು ಷಟ್‌ಖಂಡಾಗಮ ಹಾಗೂ ಅದರ ಟೀಕೆಯಾದ ಧವಲಾ ಗ್ರಂಥದ ಸಾರವನ್ನು ಗ್ರಹಿಸಿ ಗೊಮ್ಮಟರಾಯನ ಪ್ರೇರಣೆಯಿಂದ 'ಗೊಮ್ಮಟಸಾರ' ಗ್ರಂಥವನ್ನು ರಚಿಸಿದನು ಅದರ ಕೊನೆಗೆ ಅವನು ಹೀಗೆ ಹೇಳಿದ್ದಾನೆ—

ಗೊಮ್ಮಟಸಂಗಹಸುತ್ತಂ ಗೊಮ್ಮಟಸಿಹರುವರಿ ಗೊಮ್ಮಟ ಜಿಣೋ ಯ ।
ಗೊಮ್ಮಟರಾಯ–ವಿಣಿಮ್ಮಿಯ ದಕ್ಖಿಣಕುಕ್ಕುಡ ಜಿಣೋ ಜಯಉ ॥

—ಕರ್ಮಕಾಂಡ ೯೬೮.

ಗೊಮ್ಮಟಸಾರವು ಎರಡುಭಾಗಗಳಲ್ಲಿ ವಿಭಾಗಿಸಲ್ಪಟ್ಟಿದೆ ಮೊದಲನೆಯ ಭಾಗವು ಜೀವಕಾಂಡ ಎಂಬುದು ೭೩೩ ಗಾಥೆಗಳಲ್ಲಿ ಹದಿನಾಲ್ಕು ಗುಣಸ್ಥಾನ ಮತ್ತು ಹದಿನಾಲ್ಕು ಮಾರ್ಗಣಾಸ್ಥಾನಗಳ ವರ್ಣನೆಯನ್ನು ಅತಿ ಸುವ್ಯವಸ್ಥಿತವಾಗಿ ಮಾಡಲಾಗಿದೆ ಎರಡನೆಯ ವಿಭಾಗವು ಕರ್ಮಕಾಂಡವು ಇದರಲ್ಲಿ ೯೭೨ ಪದ್ಯಗಳು ಇದರಲ್ಲಿ ಕರ್ಮಸಿದ್ಧಾಂತದ ಅತಿ ಸೂಕ್ಷ್ಮ, ಗಹನ ಮತ್ತು ವಿಸ್ತಾರವಾದ ವರ್ಣನೆಯನ್ನು ಮಾಡಲಾಗಿದೆ

ಗೊಮ್ಮಟಸಾರ ಜೀವಕಾಂಡವು ಹಿಂದೀ ಅನುವಾದ ಸಹಿತ ರಾಯಚಂದ್ರ ಜೈನ ಶಾಸ್ತ್ರಮಾಲಾ ಮುಂಬೈ ಇವರಿಂದ ಶ್ರೀ ಶ ೧೯೨೭ರಲ್ಲಿ ಪ್ರಕಟವಾಗಿದೆ ಇಂಗ್ಲಿಷ ಅನುವಾದ ಸಹ **Sacred Books of the Jainas Series, Lucknow** ದಿಂದ ಪ್ರಕಟವಾಗಿದೆ.

ಆರಾಧನಾ. ಧ್ಯಾನಕ್ಕೆ ಸಂಬಂಧಿಸಿದ ವಿಷಯವನ್ನು ಇದರಿಂದ ಸಂಗ್ರಹಿಸಿ ಕೊಡಲಾಗಿದೆ. ಇದಕ್ಕೆ ಭಗವತೀ ಆರಾಧನಾ ಎಂದೂ ಹೆಸರಿದೆ ಇದರಲ್ಲಿ ೨೧೬೬ ಗಾಥೆಗಳು ಇವೆ ಇವುಗಳಿಂದ ಬಹು ವಿಸ್ತಾರವಾಗಿ ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ನಾಲ್ಕು ಈ ಆರಾಧನೆಗಳನ್ನು ವರ್ಣಿಸಲಾಗಿದೆ ಈ ಗ್ರಂಥಕ್ಕೆ ಭಗವತೀ ಎಂಬುದು ವಿಶೇಷಣವಾಗಿದೆ ಅದು ಗ್ರಂಥದ ಈ ಮೊದಲನೆಯ ಗಾಥಾದಿಂದ ಸ್ಪಷ್ಟವಾಗುತ್ತದೆ.

ಸಿದ್ಧೇ ಜಯಪ್ಪಸಿದ್ಧೇ ಚಉವ್ವಿಹಾರಾಹಣಾಫಲಂ ಪತ್ತೇ ।
ವಂದಿತ್ತಾ ಅರಿಹಂತೇ ವುಚ್ಛಂ ಆರಾಹಣಾ ಕಮಸೋ ॥ ೧ ॥

ಇದೇ ಪ್ರಕಾರ ೨೧೬೨ನೆಯ ಗಾಥಾದಲ್ಲಿ ಹೇಳಿದೆ—

ಆರಾಹಣಾ ಸಿವಜ್ಜೇಣ ಪಾಣಿದಲಭೋಇಣಾ ರಇದಾ ।

ಮತ್ತು ೨೧೬೪ನೆಯ ಗಾಥಾ ಇದೆ—

ಆರಾಧಣಾ ಭಗವದೀ ಏವಂ ಭತ್ತೀಏ ವಣ್ಣಿದಾ ಸಂತೀ ।
ಸಂಘಸ್ಸ ಸಿವಜ್ಜಸ್ಸ ಯ ಸಮಾಧಿವರಮುತ್ತಮಂ ದೇಉ ॥

ಗ್ರಂಥ ಕರ್ತೃವು ತನ್ನ ಪರಿಚಯವನ್ನು ಗಾಥಾ ೨೧೬೧–೬೨ರಲ್ಲಿ ಈ ಪ್ರಕಾರ ಕೊಟ್ಟಿದ್ದಾನೆ—

ಅಜ್ಜ ಜಿಣಣಂದಿಗಣಿ–ಸವ್ವಗುತ್ತಗಣಿ–ಅಜ್ಜ ಮಿತ್ತಣಂದೀಣಂ ।
ಅವಗಮಿಯ ಪಾದಮೂಲೇ ಸಮ್ಮಂ ಸುತ್ತಂ ಚ ಅತ್ಥಂ ಚ ॥
ಪುವ್ವಾಯರಿಯಣಿಬದ್ಧಾ ಉವಜೀವಿತ್ತಾ ಇಮಾ ಸಸತ್ತೀಏ ।
ಆರಾದಣಾ ಸಿವಜ್ಜೇಣ ಪಾಣಿದಲಭೋಇಣಾ ರಇದಾ ॥

ಇದರಿಂದ ಇಷ್ಟು ಸಂಗತಿಯು ಮಾತ್ರ ಗೊತ್ತಾಗುತ್ತದೆ–'ಸಿವಜ್ಜ'–ಶಿವಾರ್ಯನು ಆರ್ಯ ಜಿನನಂದಿ ಗಣೀ, ಸರ್ವಗುಪ್ತಗಣೀ, ಮತ್ತು ಆರ್ಯಮಿತ್ರನಂದಿಯಿಂದ ಆಗಮವನ್ನು ಕಲಿತು ಪಾಗೆಯೇ ತನ್ನ ಶಕ್ತಿಗನುಸರಿಸಿ

ಪೂರ್ವಾಚಾರ್ಯರಿಂದ ರಚಿಸಲ್ಪಟ್ಟ ಗ್ರಂಥಗಳ ಆಧಾರವನ್ನು ತಕ್ಕೊಂಡು ಈ 'ಆರಾಧನಾ, ಎಂಬ ಗ್ರಂಥವನ್ನು ರಚಿಸಿದನು ಶಿವಭೂತಿ ಎಂಬ ಹೆಸರಿನ ಒಬ್ಬ ಆಚಾರ್ಯನ ಹೆಸರು ಕಲ್ಪಸೂತ್ರದ ಸ್ಥವಿರಾವಲಿಯಲ್ಲಿ ನೋಡಲಿಕ್ಕೆ ದೊರೆಯುತ್ತದೆ. ಆವಶ್ಯಕ ಮೂಲ ಭಾಷ್ಯದ ಗಾಥಾ ೧೪೫–೧೪೮ರಲ್ಲಿಯೂ ಶಿವಭೂತಿಯ ಉಲ್ಲೇಖವಿದೆ. ಅದರಿಂದ ವೀರ ನಿರ್ವಾಣದಿಂದ ೬೦೯ ವರ್ಷಗಳ ತರುವಾಯ 'ಬೋಡಿಕ' (ದಿಗಂಬರ) ಸಂಘದ ಉತ್ಪತ್ತಿಯನ್ನೂ ಸೂಚಿಸಲಾಗಿದೆ. ಕುಂದಕುಂದಾಚಾರ್ಯರು ತಮ್ಮ 'ಭಾವಪಾಹುಡ'ದ ಗಾಥೆ ೫೩ರಲ್ಲಿ ಶಿವಭೂತಿಯ ಭಾವಶುದ್ಧಿಯ ಮುಖಾಂತರ ಕೇವಲಜ್ಞಾನವನ್ನು ಸಂಪಾದಿಸುವ ಸಂಗತಿಯನ್ನೂ ಹೇಳಿದ್ದಾರೆ ಹಾಗೆಯೇ ಜಿನಸೇನಕೃತ ಹರಿವಂಶ ಪುರಾಣ ೬೬–೨೫ರಲ್ಲಿ ಲೋಹಾರ್ಯನು (ವೀ ನಿ ೬೮೩) ತರುವಾಯದ ಆಚಾರ್ಯರಲ್ಲಿ ಶಿವಗುಪ್ತ ಮುನೀಶ್ವರನ ಉಲ್ಲೇಖವು ಬಂದಿದೆ ಇವನು ತನ್ನ ಗುಣಗಳಿಂದ ಅರ್ಹದ್‌ಬಲಿ ಪದವನ್ನು ಪ್ರಾಪ್ತಮಾಡಿಕೊಂಡಿದ್ದನು ಆದಿಪುರಾಣದ ಆರಂಭದ ೪೯ನೆಯ ಶ್ಲೋಕದಲ್ಲಿ ಶಿವಕೋಟಿ ಮುನೀಶ್ವರ ಮತ್ತು ಅವನ ಚತುಷ್ಟಯ ಮೋಕ್ಷ ಮಾರ್ಗದ 'ಆರಾಧನಾ'ಗಳ ಬಗ್ಗೆ ಹಿತಕಾರಿ ವಾಣಿಯು ಉಲ್ಲೇಖವಿದೆ ಪ್ರಭಾಚಂದ್ರನ ಆರಾಧನಾ ಕಥಾಕೋಷ ಮತ್ತು ದೇವ ಚಂದ್ರಕೃತ ರಾಜಾವಳೀ ಕಥೆಗಳಲ್ಲಿ ಶಿವಕೋಟಿಯನ್ನು ಸ್ವಾಮಿ ಸಮಂತಭದ್ರರ ಶಿಷ್ಯರೆಂದು ಹೇಳಿದೆ. ನಿಶ್ಚಯವಾಗಿ ಹೇಳಲಿಕ್ಕೆ ಬಾರದಿದ್ದರೂ ಈ ಉಲ್ಲೇಖಗಳಿಗೆ ಆಧಾರಭೂತವಾಗಿರುವ ಆಚಾರ್ಯನು ಇದೇ ಭಗವತೀ ಆರಾಧನಾದ ಕರ್ತೃವಾದ ಶಿವಾರ್ಯನೇ ಇರಬೇಕು ಇವನು ಕ್ರಿ. ಶ ಎರಡನೆಯ ಶತಮಾನದ ಸುಮಾರಿಗೆ ಇದ್ದಿರಬೇಕೆಂದು ಅನುಮಾನಿಸಬಹುದಾಗಿದೆ ಏನೇ ಇರಲಿ, ಈ ಗ್ರಂಥವು ಬಹಳ ಪ್ರಾಚೀನವೂ ಸುಪ್ರಸಿದ್ಧವೂ ಆದ ಮಹತ್ವಪೂರ್ಣ, ಪ್ರಾಕೃತ ಗ್ರಂಥವಾಗಿದೆ. ಜೈನ ಪರಂಪರೆಯ ದಿಗಂಬರ ಮತ್ತು ಶ್ವೇತಾಂಬರ ಪಂಥಗಳಲ್ಲದೆ ಪ್ರಾಚೀನ ಕಾಲದಲ್ಲಿ 'ಯಾಪನೀಯ' ಎಂಬ ಒಂದು ಪಂಥವಿತ್ತು ಅದು ದಿಗಂಬರ ಸಂಪ್ರದಾಯದ ಅಚೇಲ-ಕತ್ವವನ್ನೂ ಶ್ವೇತಾಂಬರ ಪಂಥದ ಸ್ತ್ರೀ ಮುಕ್ತಿಯ ಮಾನ್ಯತೆಯನ್ನು ಸ್ವೀಕರಿಸುತ್ತಿದ್ದಿತು. ಈ ಗ್ರಂಥವು ಈ ಪಂಥದ ಸಾಹಿತ್ಯವಾಗಿರಬೇಕೆಂದು ಕೆಲವರ ಅಭಿಪ್ರಾಯವಾಗಿದೆ. [ವಿಸ್ತಾರವಾದ ವಿವೇಚನೆಗಾಗಿ ಜೈನ ಸಾಹಿತ್ಯ ಮತ್ತು ಇತಿಹಾಸ, ಪಂಡಿತ ನಾಥೂರಾಮ ಪ್ರೇಮಿ ಕೃತ ಪು ೨೯ ಮೊದಲಾದವುಗಳನ್ನು ನೋಡಬಹುದು ] ಈ ಭಗವತೀ ಆರಾಧನಾ ಗ್ರಂಥವು ಹಿಂದಿ ಅನುವಾದ ಸಹಿತ ಮುಂಬೈ ಅನಂತ ಕೀರ್ತಿ ಗ್ರಂಥ ಮಾಲೆಯ ೮ ಪುಷ್ಪವೆಂದು ೧೯೮೯ರಲ್ಲಿ ಪ್ರಕಟವಾಗಿದೆ

ನಯಚಕ್ರ. ಈ ಗ್ರಂಥದಿಂದ 'ಸ್ಯಾದ್ವಾದ' ಮತ್ತು 'ನಿಕ್ಷೇಪ' ಎಂಬ ವಿಭಾಗಗಳನ್ನು ಆಯ್ದು ಕೊಡಲಾಗಿದೆ ಇದು ದೇವಸೇನನ ಕೃತಿಯು ಇದೇ ಲೇಖಕನ 'ಲಘು ನಯಚಕ್ರ'ಕ್ಕಿಂತ ಇದು ದೊಡ್ಡದಾದುದರಿಂದ 'ಬೃಹತ್ ನಯಚಕ್ರ'ವೆಂದು ಇದಕ್ಕೆ ಹೇಳುತ್ತಾರೆ ಇದರಲ್ಲಿ ೪೨೩ ಗಾಥೆಗಳು ಇವೆ ಗ್ರಂಥದ ಕೊನೆಯ ಗಾಥೆಗಳಲ್ಲಿ ಈ ರಚನೆಯ ಸಂಬಂಧದಲ್ಲಿ ಕೆಲವು ಮಹತ್ವದ ಮಾತುಗಳನ್ನು ಹೇಳಿದೆ. ಆ ಗಾಥೆಗಳು ಹೀಗಿವೆ—

ಜಇ ಇಚ್ಛಹ ಉತ್ತರಿದುಂ ಅಣ್ಣಾಣಮಹೋವಹಿಂ ಸುಲೀಲಾಏ ।
ತಾ ಣಾದುಂ ಕುಣಹ ಮಇಂ ಣಯಚಕ್ಕೇ ದುಣಯತಿಮಿರಮತ್ತಣ್ಡೇ ॥ ೪೧೬ ॥

ಸುಣಿಊಣ ದೋಹರತ್ಥಂ ಸಿಗ್ಘಂ ಹಸಿಊಣ ಸುಹಕರೋ ಭಣಇ ।
ಎತ್ಥ ಣ ಸೋಹಇ ಅತ್ಥೋ ಗಾಹಾಬಂಧೇಣ ತಂ ಭಣಹ ॥ ೪೧೮ ॥

ಸಿಯಸದ್ದ–ಸುಣಯ–ದುಣ್ಣಯ–ದಣು–ದೇಹ–ವಿದಾರಣೆಕ್ಕ–ವರವೀರಂ ।
ತಂ ದೇವಸೇಣದೇವಂ ಣಯಚಕ್ಕಯರಂ ಗುರುಂ ಣಮಹ ॥ ೪೨೧ ॥

ದವ್ವಸಹಾವಪಯಾಸಂ ದೋಹಯಬಂಧೇಣ ಆಸಿ ಜಂ ದಿಟ್ಠಂ ।
ಗಾಹಾಬಂಧೇಣಪುಣೋ ರಇಯಂ ಮಾಹಲ್ಲಧವಲೇಣ ॥ ೪೨೨ ॥

ದುಸಮೀರಣೇಣ ಪೋಯಪ್ಪೇರಿಯ ಸಂತಂ ಜಹ ಚಿರಂ ಣಟ್ಠಂ ।
ಸಿರಿದೇವಸೇಣಮುಣಿಣಾ ತಹ ಣಯಚಕ್ಕಂ ಪುಣೋ ರಇಯಂ ॥ ೪೨೩ ॥

ಈ ಗಾಥಾಗಳಿಂದ ಇಷ್ಟು ಸಂಗತಿಯು ಗೊತ್ತಾಗುತ್ತದೆ—ಈ ನಯಚಕ್ರವು ಮೊದಲು 'ದವ್ವಸಹಾವ—ಪಯಾಸ' (ದ್ರವ್ಯ ಸ್ವಭಾವ ಪ್ರಕಾಶ) ಎಂಬ ಹೆಸರಿನಿಂದ ದೋಹಾಬದ್ಧವಾಗಿ ರಚಿಸಲ್ಪಟ್ಟಿತು ಇದನ್ನು ಕೇಳಿ

'ಯಾವನೋ 'ಶುಭಕರ'ನು ನಕ್ಕು ಹೀಗೆಂದನು—ಈ ಅರ್ಥವು ದೋಹಾ ಛಂದದಲ್ಲಿ ಚೆನ್ನಾಗಿ ಶೋಭೆಯನ್ನು ಕೊಡಲಾರದು ಇದನ್ನು ಗಾಥಾಬದ್ಧಗೊಳಿಸಬೇಕು ಹೀಗಾಗಿ ದೋಹಕ ಬದ್ಧದಲ್ಲಿ ರಚಿಸಿದ ದ್ರವ್ಯಸ್ವಭಾವ ಪ್ರಕಾಶವು ಮಾಇಲ್ಲದೇವನಿಂದ—ಮಾಹಲ್ಲ ಧವಲನೆಂದೂ ಪಾರವಿದೆ—ಗಾಥಾ ಬದ್ಧವಾಗಿ ರಚಿಸಲ್ಪಟ್ಟಿತು ಇದರಿಂದ ಈ ಗ್ರಂಥವು ಮೊದಲು ಅಪಭ್ರಂಶ ಪ್ರಾಕೃತದಲ್ಲಿ ರಚಿಸಲ್ಪಟ್ಟಿರಬೇಕೆಂದು ಅನುಮಾನವು ಉಂಟಾಗುತ್ತದೆ ಯಾಕೆಂದರೆ ದೋಹಾ ಛಂದದ ಪ್ರಯೋಗವು ಮೊಟ್ಟಮೊದಲು ಅಪಭ್ರಂಶದಲ್ಲಿಯೇ ನೋಡಲಿಕ್ಕೆ ದೊರೆಯುತ್ತದೆ ಇನ್ನು ಶುಭಕರ ಎಂಬ ಯಾರೋ ಪ್ರಾಚೀನ ಪ್ರಣಾಲಿಯ ಪಕ್ಷಪಾತಿಯಾಗಿರಬೇಕು ಅವನು ಈ ವಿದ್ವತ್ಪೂರ್ಣ ಗಂಭೀರ ವಿವೇಚನೆಗಾಗಿ ಅಪಭ್ರಂಶದಂಥ ಜನರ ಬಾಯಿ ಮಾತಾಗಿರುವ ಭಾಷೆಯು ಅನುಪಯುಕ್ತವೆಂದು ತಿಳಿದಿರಬೇಕು ಹೀಗಾಗಿ ದೇವಸೇನನ ಯಾವನೋ ಒಬ್ಬ ಶಿಷ್ಯನು—ಮಾಹಲ್ಲದೇವ—ಅದನ್ನು ಗಾಥಾಬದ್ಧ-ಗೊಳಿಸಲು ಕರ್ತೃವಿಗೆ ನೆರವನ್ನು ನೀಡಿರಬೇಕು.

ದೇವಸೇನನ ಅನೇಕ ಅನ್ಯ ಪ್ರಾಕೃತ ರಚನೆಗಳು ನೋಡಲಿಕ್ಕೆ ದೊರೆಯುತ್ತವೆ ಅವನ ದರ್ಶನಸಾರ ಎಂಬ ಗ್ರಂಥದಲ್ಲಿ ಜೈನ ಸಂಪ್ರದಾಯದ ಇತಿಹಾಸದ ವಿಷಯದಲ್ಲಿ ಹಲವು ಸಂಗತಿಗಳು ಲಭಿಸುತ್ತವೆ ಅದರ ಕೊನೆಯಲ್ಲಿ ಅವನು ಹೀಗೆ ಹೇಳಿದ್ದಾನೆ—

ಪುವ್ವಾಯರಿಯಕಯಾಣಂ ಗಾಹಾಇಂ ಸಂಚಿಊಣ ಏಯತ್ಥ ।
ಸಿರಿದೇವಸೇಣಗಣಿಣಾ ಧಾರಾಏ ಸಂವಸಂತೇಣ ॥ ೪೯ ॥

ರಇಓ ದಂಸಣಸಾರೋ ಹಾರೋ ಭವ್ವಾಣ ಣವಸಏ ಣವಏ ।
ಸಿರಿಪಾಸಣಾಹಗೇಹೇ ಸುವಿಸುದ್ಧೇ ಮಾಹಸುದ್ಧದಸಮೀಏ ॥ ೫೦ ॥

ಈ ಗಾಥಾಗಳಿಂದ ನಾವು ಇಷ್ಟನ್ನು ತಿಳಿಯುತ್ತೇವೆ—ದೇವಸೇನನು ಧಾರಾನಗರದಲ್ಲಿ ಇರುತ್ತಿದ್ದಾಗ ದರ್ಶನಸಾರದ ರಚನೆಯನ್ನು ವಿಕ್ರಮ ಸಂವತ್ ೯೯೦ರಲ್ಲಿ ಪೂರ್ಣಗೊಳಿಸಿದನು ಅವನ ಇನ್ನೊಂದು ರಚನೆಯಾದ ಭಾವಸಂಗ್ರಹದಲ್ಲಿ ತನ್ನ ಪರಿಚಯವನ್ನು ಈ ಪ್ರಕಾರ ಕೊಟ್ಟಿದ್ದಾನೆ –

ಸಿರಿವಿಮಲಸೇಣಗಣಹರ-ಸಿಸ್ಸೋ ಣಾಮೇಣ ದೇವಸೇಣು ತ್ತಿ ।
ಅಬುಹಜಣ-ಬೋಹಣತ್ಥಂ ತೇಣೇಯಂ ವಿರಇಯಂ ಸುತ್ತಂ ॥

ಇದರಿಂದ ದೇವಸೇನನ ಗುರುವಿನ ಹೆಸರು ವಿಮಲಸೇನ ಗಣಿ ಎಂದು ಗೊತ್ತಾಗುತ್ತದೆ

ಲಘು ನಯಚಕ್ರ. ನಯವಾದ ಎಂಬ ಭಾಗವನ್ನು ಈ ಗ್ರಂಥದಿಂದ ಸಂಗ್ರಹಿಸಿದೆ. ಇದನ್ನೂ ದೇವಸೇನನು ರಚಿಸಿದ್ದಾನೆ ಇದರಲ್ಲಿ ಒಟ್ಟು ೮೭ ಪ್ರಾಕೃತ ಗಾಥೆಗಳು ಇವೆ. ಇವುಗಳಲ್ಲಿ ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ಈ ಎರಡು ನಯಗಳ ಮೌಲಿಕತೆಯನ್ನು ಹೇಳಿ, ಅವುಗಳ ಹಾಗೂ ನೈಗಮಾದಿ ಒಂಭತ್ತು ನಯಗಳ ಭೇದ ಪ್ರಭೇದಗಳನ್ನು ಉದಾಹರಣೆ ಸಹಿತ ಸಂಕ್ಷೇಪದಲ್ಲಿ ತಿಳಿಸಿ ಹೇಳಲಾಗಿದೆ

ನಯಚಕ್ರ ಹಾಗೂ ಲಘುನಯಚಕ್ರ ಮತ್ತು ದೇವಸೇನನ ಆಲಾಪಪದ್ಧತಿ ಸಹಿತ ಮಾಣಿಕಚಂದ್ರ ದಿಗಂಬರ ಜೈನ ಗ್ರಂಥ ಮಾಲೆಯ ೧೬ ನೆಯ ಪುಷ್ಪವೆಂದು 'ನಯಚಕ್ರಸಂಗ್ರಹ' ಎಂಬ ಹೆಸರಿನಿಂದ ಮುಂಬೈಯಲ್ಲಿ ಕ್ರಿ. ಶ. ೧೯೨೦ರಲ್ಲಿ ಪ್ರಕಟವಾಗಿದೆ.

---

# ರತ್ನಕರಂಡಕ–ಶ್ರಾವಕಾಚಾರ ಸೂತ್ರ ಸೂಚೀ

# ಉದಾಹೃತ ಕನ್ನಡ ಪದ್ಯಗಳ ಸೂಚೀ

# ವಿಶಿಷ್ಟ ಶಬ್ದ ಸೂಚೀ

